ಎಸ್. ನಿಜಲಿಂಗಪ್ಪ ಜನ್ಮಶತಮಾನೋತ್ಸವ ಸಂಸ್ಮರಣೆ

# ಕರ್ನಾಟಕ ರಾಜಕೀಯ ಚಿಂತನೆ

ಎಸ್. ಎನ್. ಸಂಸ್ಮರಣ ಗ್ರಂಥ

ಪ್ರಧಾನ ಸಂಪಾದಕರು

**ಡಾ। ದೇಜಗೌ**

ಸಂಪಾದಕರು

**ಕೆ. ಆರ್. ಕಮಲೇಶ್**

ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ

ಬೆಂಗಳೂರು

**KARNATAKA RAJAKEEYA CHINTANE**
Development of Political thoughts in Karnataka
brought out on the occasion of S. Nijalingappa Birth Centenary Celebrations
Chief Editor : Dr. D. Javare Gowda and Editor : K. R. Kamalesh
Published by S. Nijalingappa National Foundation
Chinnaswamy Cricket Stadium, M. G. Road, Bangalore - 560 001, KARNATAKA

*Pages* : xx + 812

First Impression : April 2003
Second Impression : Nov. 2006



ಈ ಗ್ರಂಥದ ಲೇಖನಗಳಲ್ಲಿನ ಅಭಿಪ್ರಾಯಗಳು ಆಯಾ ಲೇಖಕರ ಸ್ವಂತ ಅಭಿಪ್ರಾಯಗಳಾಗಿರುತ್ತವೆ.
ಇದಕ್ಕೆ ಪ್ರಕಾಶಕರಾಗಲಿ ಅಥವಾ ಸಂಪಾದಕರಾಗಲಿ ಜವಾಬ್ದಾರರಲ್ಲ.

Cover Design : Sri Sripad

Price : Rs. 750/-

*ಈ ಗ್ರಂಥ ಪ್ರಕಟಣೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಆರ್ಥಿಕ ನೆರವನ್ನು ನೀಡಿರುತ್ತದೆ.*

ಲಕ್ಷ್ಮಿ ಮುದ್ರಣಾಲಯ
LAKSHMI MUDRANALAYA
ಚಾಮರಾಜಪೇಟೆ, ಬೆಂಗಳೂರು - ೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಎರಡು ಮಾತು

೧೯೫೬ ಕರ್ನಾಟಕ ಏಕೀಕರಣವಾದ ವರ್ಷ. ಈ ಏಕೀಕರಣಕ್ಕಾಗಿ ನಡೆದ ಹೋರಾಟ, ಅದರ ಫಲವಾಗಿ ಏಕೀಕರಣ ಕೈಗೂಡಿದ ಶುಭಗಳಿಗೆಯಲ್ಲಿ ನಾಡು ಸಂಭ್ರಮಿಸಿದ ರೀತಿಯನ್ನು ಕಂಡವರು-ಅನುಭವಿಸಿದವರು ಇಂದಿಗೂ ನಮ್ಮೊಡನೆ ಸಾಕಷ್ಟು ಜನರಿದ್ದಾರೆ.

೨೦೦೬ ಏಕೀಕರಣದ ಸುವರ್ಣ ಮಹೋತ್ಸವದ ಆಚರಣೆ ಎಲ್ಲೆಡೆ ಕಾಣಬರುತ್ತಿದೆ. ಇಂತಹ ಸುವರ್ಣ ಮಹೋತ್ಸವದ ಆಚರಣೆಗೆ ಮೂಲ ಪ್ರೇರಕ ಸಂಗತಿ ಹರಿದು ಹಂಚಿಹೋಗಿದ್ದ ಕನ್ನಡ ನಾಡನ್ನು ಒಂದುಗೂಡಿಸಿದ್ದು ಎಂಬುದು ನೆನಪಿಗೆ ಅರ್ಹವಾದ ವಿಚಾರ. ಕರ್ನಾಟಕದ ಏಕೀಕರಣದ ರೂವಾರಿ ಸಿದ್ದವನಹಳ್ಳಿ ನಿಜಲಿಂಗಪ್ಪನವರನ್ನು ಕೃತಜ್ಞತೆಯಿಂದ ನೆನೆಯುವುದು ನಾಡಿನ ಸುಸಂಸ್ಕೃತರ ಲಕ್ಷಣವಾಗಿದೆ.

೨೦೦೩ರಲ್ಲಿ ಸಿದ್ದವನಹಳ್ಳಿ ನಿಜಲಿಂಗಪ್ಪನವರ ಶತಮಾನೋತ್ಸವವನ್ನು ಆಚರಿಸುವ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಸಹಯೋಗದೊಂದಿಗೆ ಪ್ರೊ. ದೇಜಗೌ ಅವರ ಪ್ರಧಾನ ಸಂಪಾದಕತ್ವದಲ್ಲಿ ''ಕರ್ನಾಟಕ ರಾಜಕೀಯ ಚಿಂತನೆ'' ಎಂಬ ಆಕರ ಗ್ರಂಥವನ್ನು ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ ಪ್ರಕಟಿಸಿತ್ತು.

ಕರ್ನಾಟಕದ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ಈ ಗ್ರಂಥ ಅತ್ಯಂತ ಉಪಯುಕ್ತವಾಗಿದೆಯೆಂದು ಎಲ್ಲಾ ವಿದ್ವಾಂಸರು ಅಭಿಪ್ರಾಯಪಟ್ಟಿದ್ದರು. ಪತ್ರಿಕೆಗಳು ಕೂಡ ಇದೇ ರೀತಿ ವಿಮರ್ಶೆಯನ್ನು ಪ್ರಕಟಿಸಿದ್ದವು. ಈ ಹಿನ್ನೆಲೆಯಲ್ಲಿ ಈ ಗ್ರಂಥವನ್ನು ರಾಜ್ಯದ ಎಲ್ಲ ಗ್ರಂಥಾಲಯಗಳಿಗೆ ಸರಬರಾಜು ಮಾಡಬೇಕೆಂದು ಇತ್ತೀಚೆಗೆ ಕರ್ನಾಟಕ ಸರ್ಕಾರ ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನಕ್ಕೆ ಆದೇಶ ನೀಡಿದೆ. ಈ ಮಹತ್ವದ ಕಾರ್ಯಕ್ಕೆ ಒತ್ತಾಸೆ ನೀಡಿದವರು, ಕೇಂದ್ರ ಯೋಜನಾ ರಾಜ್ಯ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್, ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಹಣಕಾಸು ಸಚಿವರಾದ ಶ್ರೀ ಬಿ.ಎಸ್. ಯಡಿಯೂರಪ್ಪ ಹಾಗೂ ಮಾನ್ಯ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಬಸವರಾಜ ಎಸ್. ಹೊರಟ್ಟಿ. ಪ್ರತಿಷ್ಠಾನ ಈ ಮಹನೀಯರುಗಳಿಗೆ ಕೃತಜ್ಞತೆ ಅರ್ಪಿಸುತ್ತದೆ.

ಈ ಮಹತ್ವದ ಸಾಂಸ್ಕೃತಿಕ ಕೆಲಸದಲ್ಲಿ ವಿಶೇಷ ಆಸಕ್ತಿ ವಹಿಸಿ ಸಹಕರಿಸಿದವರು ಶ್ರೀ ಸಿದ್ದಯ್ಯ, ಐ.ಎ.ಎಸ್., ಉಪ ಮುಖ್ಯಮಂತ್ರಿಗಳ ಕಾರ್ಯದರ್ಶಿ, ಡಾ. ಎ.ಆರ್. ಮಂಜುನಾಥ್, ಪ್ರಾಥಮಿಕ ಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿ, ಶ್ರೀ ರಾಜೇಂದ್ರ ಕುಮಾರ್, ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಹಾಗೂ ಪ್ರಾಥಮಿಕ ಶಿಕ್ಷಣ ಸಚಿವಾಲಯದ ಎಲ್ಲಾ ಅಧಿಕಾರಿಗಳು.

ಈ ಗ್ರಂಥದ ಸಂಪಾದಕರಾದ ಕೆ.ಆರ್. ಕಮಲೇಶ್ ಅವರು ಹಿಂದಿನಂತೆ ಮುದ್ರಣ ಕಾರ್ಯಕ್ಕೆ ಸಹಕರಿಸಿದ್ದಾರೆ. ಲಕ್ಷ್ಮೀ ಮುದ್ರಣಾಲಯದವರಿಗೆ ಧನ್ಯವಾದಗಳು. ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನದ ಎಲ್ಲ ಧರ್ಮದರ್ಶಿ ಹಾಗೂ ಕಾರ್ಯದರ್ಶಿಗಳಿಗೆ ಕೃತಜ್ಞತೆಗಳು. ಈ ಗ್ರಂಥದ ವೈಚಾರಿಕ ಲಾಭವನ್ನು ಕನ್ನಡ ಜನತೆ ಪಡೆದುಕೊಳ್ಳಲೆಂದು ಈ ಮೂಲಕ ಆಶಿಸುತ್ತೇನೆ.

೨೬-೮-೦೬

**ವೈ. ರಾಮಚಂದ್ರ**
ಅಧ್ಯಕ್ಷರು
ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ
ಬೆಂಗಳೂರು

# ಪ್ರಧಾನ ಸಂಪಾದಕರ ಅನಿಸಿಕೆಗಳು

'ರಾಷ್ಟ್ರನಾಯಕ, ತತ್ವನಿಷ್ಠ ಹಾಗೂ ಮುತ್ಸದ್ದಿಗಳಾಗಿದ್ದ ಎಸ್. ನಿಜಲಿಂಗಪ್ಪ ಅವರ ಜನ್ಮ ಶತಮಾನೋತ್ಸವವನ್ನು ನಾಡು ಶ್ರದ್ಧಾಭಕ್ತಿಗಳಿಂದ ಆಚರಿಸುತ್ತಿದೆ. ಸ್ವಾತಂತ್ರ್ಯ ಹೋರಾಟಗಾರರಾದ ನಿಜಲಿಂಗಪ್ಪ ಅವರು ಹರಿದು ಹಂಚಿಹೋಗಿದ್ದ ಕರ್ನಾಟಕವನ್ನು ಒಂದುಗೂಡಿಸಿದ ಕಾರಣಕ್ಕಾಗಿ 'ಏಕೀಕರಣ ಶಿಲ್ಪಿ' ಎಂದೇ ಖ್ಯಾತರಾಗಿದ್ದಾರೆ. ಕರ್ನಾಟಕದ ಮುಖ್ಯಮಂತ್ರಿಗಳಾಗಿ ನೀರಾವರಿ, ಕೃಷಿ, ಗ್ರಾಮೀಣಾಭಿವೃದ್ಧಿ, ಕೈಗಾರಿಕೆ, ಕ್ರೀಡೆ ಮೊದಲಾದ ಕ್ಷೇತ್ರಗಳಿಗೆ ಅವರು ಕೊಟ್ಟ ಕೊಡುಗೆ ಅನನ್ಯವಾದುದು.

ಶ್ರೀ ಎಸ್. ನಿಜಲಿಂಗಪ್ಪನವರ ಪತ್ರಗಳನ್ನು, ಭಾಷಣಗಳನ್ನು, ದಿನಚರಿಗಳನ್ನು ಹಾಗೂ ಸ್ವಾತಂತ್ರ್ಯ ಸಮರದ ಹೋರಾಟಗಾರರಾಗಿ, ಮೈಸೂರು ಕಾಂಗ್ರೆಸ್, ಕರ್ನಾಟಕ ಕಾಂಗ್ರೆಸ್, ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾಗಿ, ಮುಖ್ಯಮಂತ್ರಿಗಳಾಗಿ ಅವರು ಈಡೇರಿಸಿದ ಸಾಧನೆ ಸಿದ್ಧಿಗಳನ್ನು ಕುರಿತು ಅಧ್ಯಯನ ಹಾಗೂ ಸಂಶೋಧನೆ ಮುಂದೆ ನಡೆಯಬೇಕಾಗಿದೆ. ಮಹಾಕಾವ್ಯವೂ ಸೇರಿದಂತೆ, ಜೀವನ ಚರಿತ್ರೆ ಹಾಗೂ ವಿವಿಧ ಬಗೆಯ ಸಾಹಿತ್ಯ ಕೃತಿಗಳು ಬರಬೇಕಾಗಿದೆ. ಅಂಥ ಸಂಶೋಧನೆಗೆ, ಅಧ್ಯಯನಕ್ಕೆ ಹಾಗೂ ಸಾಹಿತ್ಯ ಸೃಷ್ಟಿಗೆ, ಶತಮಾನೋತ್ಸವ ಸಂದರ್ಭದಲ್ಲಿ ಪ್ರಕಟವಾಗುತ್ತಿರುವ ಈ ಸಂಪುಟಗಳು ಮುಂದಿನ ವಿದ್ಯಾರ್ಥಿ, ವಿದ್ವಾಂಸವೃಂದಕ್ಕೆ ಅಮೂಲ್ಯ ಆಧಾರ ಹಾಗೂ ಆಕರ ಗ್ರಂಥಗಳಾಗಿ ಪರಿಣಮಿಸುತ್ತವೆಂಬ ದೃಢವಿಶ್ವಾಸ ನನ್ನದಾಗಿದೆ.

ಕನ್ನಡನಾಡಿನ ಗಣ್ಯರು ಮಾತ್ರವಲ್ಲ, ಶ್ರೀ ಆರ್. ವೆಂಕಟರಾಮನ್, ಡಾ। ಕರಣ್ ಸಿಂಗರಂಥ ರಾಷ್ಟ್ರನಾಯಕರ ಮುಕ್ತಕಂಠದ ಪ್ರಶಂಸೆಯೇ ನಿಜಲಿಂಗಪ್ಪನವರ ವೈಭವೋಪೇತ ನಿಷ್ಕಳಂಕ ಪರಿಪೂರ್ಣ ವ್ಯಕ್ತಿತ್ವಕ್ಕೆ ನಿಚ್ಚಳ ನಿದರ್ಶನವಾಗಿದೆಯೆಂಬ ಸಂಗತಿ ಶ್ರೀ ನಿಜಲಿಂಗಪ್ಪ ಶತಮಾನೋತ್ಸವ ಸಂಸ್ಮರಣ ಗ್ರಂಥದ ಪ್ರಥಮ ಸಂಪುಟ 'ರಾಷ್ಟ್ರಭೂಷಣ'ದಲ್ಲಿ ನಿರೂಪಣೆಗೊಂಡಿದೆ.

ಭರತ ಖಂಡದ ಆಧುನಿಕ ರಾಜಕೀಯ ಚಿಂತನೆ, ಪ್ರಾಚೀನ ಅರ್ವಾಚೀನ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹುದುಗಿರುವ ರಾಜಕೀಯ ವಿಚಾರ ಮತ್ತು ಕರ್ನಾಟಕದ ರಾಜಕೀಯ ಪಕ್ಷ ಹಾಗೂ ವಿವಿಧ ಚಳವಳಿಗಳ ಜನನ ವಿಕಾಸ-ಅವಸಾನ ಹಾಗೂ ಅವುಗಳ ಧ್ಯೇಯೋದ್ದೇಶ ಸಾಧನೆ, ಅವುಗಳ ಸೋಲುಗೆಲವು - ಇವುಗಳ ಸ್ಥೂಲ ಪರಿಚಯ ಪ್ರಸ್ತುತ ಸಂಪುಟದಲ್ಲಿ ಪ್ರಾಮುಖ್ಯತೆ ಪಡೆದಿದೆ.

ಭರತ ಖಂಡದ ಆಧುನಿಕ ರಾಜಕೀಯ ಚಿಂತನೆಯನ್ನು ಕುರಿತು ಔತ್ತರೇಯ ವಿದ್ವಾಂಸರು ರಚಿಸಿದ ಗ್ರಂಥಗಳಲ್ಲಿ ದಾಕ್ಷಿಣಾತ್ಯ ನಾಯಕರ, ಕ್ರಾಂತಿಕಾರರ, ಕವಿಗಳ ರಾಜಕೀಯ ಚಿಂತನೆಗೆ ಸ್ಥಳಾವಕಾಶವೇ ಇಲ್ಲ. ಪೆರಿಯಾರ್ ರಾಮಸ್ವಾಮಿ ನಾಯಕರಂಥ ಕ್ರಾಂತಿವೀರರ ಹಾಗೂ ನಂಬೂದರಿಪಾದ್, ರಾಜಗೋಪಾಲಾಚಾರಿಯವರಂಥ ಶ್ರೇಷ್ಠ ನಾಯಕರ ವಿಚಾರ ಧಾರೆಯನ್ನು ಗೌರವಿಸದ, ಕುವೆಂಪು, ಕಾರಂತ, ಭಾರತಿದಾಸನ್‌ರಂಥ ಶ್ರೇಷ್ಠ ಚಿಂತಕರ ರಾಜಕೀಯ ವಿಚಾರಗಳಿಗೆ ಅವಕಾಶವಿಲ್ಲದ ಗ್ರಂಥ ಪಾರ್ಶ್ವವಾಯು ಪೀಡಿತವಾದದ್ದೆಂದೇ ಹೇಳುವಂತಾಗುತ್ತದೆ. ಔತ್ತರೇಯ

ರಾಜಕೀಯ ಚಿಂತಕರ ಜತೆಗೆ, ಕೇವಲ ಪ್ರಾತಿನಿಧಿಕವಾಗಿ, ದಿಗ್ದರ್ಶನಾರ್ಥವಾಗಿ ದಕ್ಷಿಣದ ಕೆಲವೇ ಕೆಲವು ರಾಜಕೀಯ ದಾರ್ಶನಿಕರ ವಿಚಾರ ಕ್ರಮವನ್ನು ಲೇಖನವೊಂದರಲ್ಲಿ ಜೋಡಿಸಲಾಗಿದೆ.

ಪ್ರಾಚೀನ ಕನ್ನಡ ಸಾಹಿತ್ಯ ಹಾಗೂ ಸಾಂಪ್ರತಯುಗದ ಸಕಲ ಸಾಹಿತ್ಯ ಪ್ರಕಾರದ ಅದಿರುಗಳಲ್ಲಿ ಅಡಕಗೊಂಡಿರುವ ರಾಜಕೀಯ ಸಂಗತಿಗಳನ್ನು ಸೋಸಿ, ಹೊರತೆಗೆದು, ಅವುಗಳ ಸಮೀಕ್ಷೆಯನ್ನು ಪ್ರಕಟಿಸುವ ಅಭಿಲಾಷೆ ಪ್ರಧಾನ ಸಂಪಾದಕರಿಗಿತ್ತು. ಪ್ರತಿಯೊಬ್ಬ ಸಾಹಿತಿಯೂ ಪರಿಸರದ ಶಿಶುವಾಗಿ, ರಾಜಕೀಯದಲ್ಲಿ ತೊಡಗಿಸಿಕೊಳ್ಳದಿದ್ದರೂ ರಾಜಕೀಯ ವ್ಯವಹಾರಗಳ ಮಧ್ಯೆಯಿದ್ದು, ಸಾಕ್ಷೀಭೂತನಾಗಿ ಅವುಗಳ ಒಳಹೊಕ್ಕು ನೋಡುತ್ತ, ತನ್ನದೇ ಆದ ಅಭಿಪ್ರಾಯವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ, ಧ್ವನಿ ವ್ಯಂಗ್ಯ ವಿಡಂಬನೆಗಳ ಮೂಲಕವೋ ಅಭಿವ್ಯಕ್ತಗೊಳಿಸುತ್ತಾನಷ್ಟೆ. ಸಾಮಾನ್ಯ ಜನರಿಗೆ ಸಾಹಿತಿಗಳ ರಾಜಕೀಯ ದರ್ಶನದ ಅರಿವು ಅಗತ್ಯ. ಈ ದೃಷ್ಟಿಯಿಂದ ಪ್ರಮುಖ ಪ್ರಾಚೀನ ಕವಿಗಳ ಕೃತಿಗಳಲ್ಲಿ, ಅರ್ವಾಚೀನ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಅಡಕಗೊಂಡಿರುವ ರಾಜಕೀಯ ಸಂಗತಿಗಳ ಸಮೀಕ್ಷೆಯನ್ನು ಅಣಿಗೊಳಿಸಿಕೊಡುವಂತೆ ಲೇಖಕರನ್ನು ಕೇಳಿಕೊಳ್ಳಲಾಗಿತ್ತು. ಆದರೆ ಸಮಯಕ್ಕೆ ಸರಿಯಾಗಿ ಬಂದ ಹಾಗೂ ಪ್ರಸ್ತುತ ವಿಷಯಕ್ಕೆ ಹೊಂದಿಕೊಳ್ಳುವ ಕೇವಲ ಕೆಲವು ಲೇಖನಗಳು ಈ ಭಾಗದಲ್ಲಿ ಸೇರ್ಪಡೆಗೊಂಡಿವೆ. ಈ ಮಟ್ಟಿಗೆ ಈ ಭಾಗ ಅಪೂರ್ಣ.

ಕಳೆದ ಶತಮಾನದ ಕರ್ನಾಟಕದಲ್ಲಿ ನಡೆದ ಚಳವಳಿಗಳು ಅನೇಕ ಹಾಗೂ ವೈವಿಧ್ಯಮಯ. ಅವುಗಳ ಸ್ವರೂಪ ತೀವ್ರತೆ ಪರಿಣಾಮ ಆಯಾಮಗಳ ನಡುವೆ ಅಜಗಜಾಂತರವಿದ್ದರೂ, ಸ್ವಾತಂತ್ರ್ಯ ಹೋರಾಟಕ್ಕೆ, ಏಕೀಕರಣ ಚಳುವಳಿಗೆ, ರಾಜಕೀಯ ವಿಚಾರಧಾರೆಗೆ ಅವು ಅಮೂಲ್ಯ ಕೊಡುಗೆಗಳನ್ನು ನೀಡಿವೆಯೆಂದೇ ಹೇಳಬೇಕು. ರೈತ ಚಳವಳಿ, ಕನ್ನಡ ಚಳವಳಿ, ಭಾಷಾ ಚಳವಳಿ, ಕಾರ್ಮಿಕ ಚಳವಳಿ, ವಿದ್ಯಾರ್ಥಿ ಚಳವಳಿ, ನೆಲ ಜಲ ಗಡಿ ಚಳವಳಿ, ದಲಿತ ಚಳವಳಿ, ಮಹಿಳಾ ಚಳವಳಿ, ಅಲ್ಪ ಸಂಖ್ಯಾತರ ಸಂಘಟನೆ-ಇಂತಹ ಹಲವು ಚಳವಳಿಗಳ ಸ್ಥೂಲ ರೂಪರೇಷೆಗಳನ್ನು ಇಲ್ಲಿಯ ಲೇಖನಗಳಲ್ಲಿ ಗುರುತಿಸಬಹುದು. ಇತರ ಭಾಗಗಳ ಲೇಖನ ಸಂಪಾದನೆಗಿದ್ದ ತೊಡಕುಗಳೇ ಇಲ್ಲಿಯೂ ಇದ್ದುವೆಂಬುದನ್ನೊಪ್ಪಿಕೊಳ್ಳಬೇಕಾಗಿದೆ. ತಜ್ಞರ ಅಭಾವದ ಜತೆಗೆ ಅವರ ಸಮಯಪ್ರಜ್ಞೆಯ ಗೈರುಹಾಜರಿಯೂ ಪ್ರಮುಖ ತೊಡಕುಗಳು.

ಈ ಸಂಪುಟದ ಮಹತ್ವಪೂರ್ಣ ಹಾಗೂ ಅಭೂತಪೂರ್ವ ಸಂಗ್ರಹವೆಂದರೆ ರಾಜಕೀಯ ಪಕ್ಷಗಳ ವಿಶ್ಲೇಷಣೆ. ಭಾರತದ ಬೇರೆ ರಾಜ್ಯಗಳಂತೆ ಕರ್ನಾಟಕದಲ್ಲಿಯೂ ಹತ್ತಾರು ರಾಜಕೀಯ ಪಕ್ಷಗಳು ಹುಟ್ಟಿಕೊಂಡದ್ದುಂಟು. ಅವುಗಳಲ್ಲಿ ಕೆಲವು ಅಲ್ಪಜೀವಿಗಳು, ಮತ್ತೆ ಕೆಲವು ಹೇಗೋ ಜೀವ ಹಿಡಿದುಕೊಂಡಿವೆ. ಬೆರಳೆಣಿಕೆಯಷ್ಟು ಮಾತ್ರ ಕ್ರಿಯಾಶೀಲವಾಗಿದೆ. ಪ್ರಬಲವಾದ ಪ್ರಾದೇಶಿಕ ಪಕ್ಷವೊಂದು ಇಲ್ಲದ್ದರಿಂದ ರಾಜ್ಯಕ್ಕೆ ಅನ್ಯಾಯವಾಗುತ್ತಿದೆ. ಸ್ಪರ್ಧೆ, ಸವಾಲು, ಮಾತ್ಸರ್ಯ, ಅಹಂಕಾರ, ತತ್ತ್ವನಿಷ್ಠೆಯಿಲ್ಲದ ಸ್ವಪ್ರತಿಷ್ಠೆಗಳೇ ಪಕ್ಷಗಳ ಉದಯಕ್ಕೆ ಹಾಗೂ ಮರಣಕ್ಕೆ ಕಾರಣ.

ರಾಜಕೀಯ ಶಾಸ್ತ್ರಜ್ಞರು, ಪ್ರಾಧ್ಯಾಪಕರು ಅವುಗಳನ್ನು ಬಿಡಿಬಿಡಿಯಾಗಿ, ಇಡಿಇಡಿಯಾಗಿ, ತೌಲನಿಕವಾಗಿ ಅಧ್ಯಯನ ಮಾಡಬೇಕಾದ್ದು ಅವರ ಕರ್ತವ್ಯ. ಸಾಮಾನ್ಯ ಹಾಗೂ ರಾಜಕೀಯ ಇತಿಹಾಸದ ರಚನೆಯ ದೃಷ್ಟಿಯಿಂದ ಜನತೆಯ ರುಚಿ ಅಭಿರುಚಿ ಮನೋಧರ್ಮ ಆಶೋತ್ತರ ಶೀಲಸ್ವಭಾವ ಜೀವನವಿಧಾನ ಮೌಲ್ಯಪ್ರಜ್ಞೆ ಯುಗಧರ್ಮ ವಿಚಾರ ಧೋರಣೆ ಸಾಂಸ್ಕೃತಿಕ-ಸಾಮಾಜಿಕ ಏಳುಬೀಳುಗಳು ರೂಢಿ ಸಂಪ್ರದಾಯಗಳು - ಇವನ್ನರಿಯುವ ಕಾರಣಕ್ಕಾಗಿ ಅವುಗಳ ಅಧ್ಯಯನ ಅನಿವಾರ್ಯ. ರಾಜಕೀಯಶಾಸ್ತ್ರ ವಿಚಾರವನ್ನು ಬಳಸಿಕೊಂಡು ತಜ್ಞರಿಂದ ಪ್ರಬಂಧಗಳನ್ನು ಬರೆಸಿದರೆ ಕರ್ನಾಟಕದ ಇತಿಹಾಸಕ್ಕೆ ಅದೊಂದು ಅಮೂಲ್ಯ ಕೊಡುಗೆಯಾಗುತ್ತದೆ, ವಿದ್ವಾಂಸರಿಗೆ ನೂತನ ಕ್ಷೇತ್ರದಲ್ಲಿ ಅಧ್ಯಯನ - ಸಂಶೋಧನೆ ನಡೆಸಿದ ಅನುಭವ ಆನಂದಗಳೊದಗುತ್ತವೆ, ರಾಷ್ಟ್ರನಾಯಕ ನಿಜಲಿಂಗಪ್ಪನವರಿಗೆ ವಿಶೇಷ ಗೌರವ ಸಲ್ಲಿಸಿದಂತಾಗುತ್ತದೆನ್ನುವ ಹಂಬಲದಿಂದ ಕೇವಲ ತಜ್ಞತೆ ಹಾಗೂ ಶಾಸ್ತ್ರೀಯತೆಯ ದೃಷ್ಟಿಯಿಂದ ಈ ಯೋಜನೆಯನ್ನು ತಯಾರಿಸಲಾಯಿತೆಂದು ಈ ಸಂದರ್ಭದಲ್ಲಿ ಸ್ಪಷ್ಟಪಡಿಸಬೇಕಾಗಿದೆ.

ತಜ್ಞರು ರಾಜಕೀಯ ಪಕ್ಷಗಳ ಸಮೀಕ್ಷೆ ನಡೆಸಬೇಕು, ರಾಜಕೀಯ ನಾಯಕರು ಅವುಗಳ ಮೇಲೆ ಕಣ್ಣಾಡಿಸಬೇಕೆಂದು ರಾಮಕೃಷ್ಣ ಹೆಗಡೆ ಮೊದಲಾದವರ ಸಲಹೆಯ ಮೇರೆಗೆ ಪೂರ್ವಸಿದ್ಧತಾ ಸಮಿತಿ ಸಭೆಯಲ್ಲಿ ನಿರ್ಣೀತವಾಗಿತ್ತು. ನಾಡಿನ ವಿಶ್ವವಿದ್ಯಾನಿಲಯಗಳ

ರಾಜಕೀಯಶಾಸ್ತ್ರದ ಪ್ರಾಧ್ಯಾಪಕರಿಗೆ ರಾಜಕೀಯ ಪಕ್ಷಗಳ ಇತಿಹಾಸ ಕರತಲಾಮಲಕವಾಗಿರಬೇಕೆಂಬ ಭರವಸೆಯಿಂದ ಮೂರ್‍ನಾಲ್ಕು ಮಂದಿ ಪ್ರಾಧ್ಯಾಪಕರನ್ನು ಈ ಬಗ್ಗೆ ಸಹಾಯ ಮಾಡಬೇಕೆಂದು ಕೇಳಿಕೊಂಡೆ. ಅವರಲ್ಲೊಬ್ಬರೂ ಈ ಕೆಲಸಕ್ಕೆ ಹೆಗಲು ಕೊಡಲೊಪ್ಪಲಿಲ್ಲ. ಈ ಕೆಲಸ ಭಾರಿ ಸಂಶೋಧನೆಯನ್ನಪೇಕ್ಷಿಸುತ್ತದೆ, ಯಾರಿಗೂ ಪುರುಸೊತ್ತಿಲ್ಲವೆಂದವರು ಹೇಳಿಬಿಟ್ಟರು. ಅಧ್ಯಯನಕ್ಕೆ, ಅನ್ವೇಷಣೆಗೆ, ಚಿಂತನೆಗೆ, ವಿನೂತನಾನುಭವ ಸಂಪಾದನೆಗೆ, ಜ್ಞಾನಾರ್ಜನೆಗೆ ಇದೊಂದು ಅಯಾಚಿತ ಸುಲಭ ಸದವಕಾಶವೆಂದು ನಮ್ಮ ರಾಜಕೀಯಶಾಸ್ತ್ರದ ವಿದ್ವಾಂಸರು ತಿಳಿದು, ಗಬಕ್ಕನೆ ಬಾಚಿಕೊಳ್ಳುತ್ತಾರೆಂದು ತಿಳಿದಿದ್ದ ನನಗೆ ನಿರಾಶೆಯಾಯಿತು. ವಿಶ್ವವಿದ್ಯಾನಿಲಯಗಳ ವಿದ್ವತ್ ಕೃಷಿ ಯಾವ ಮಟ್ಟಕ್ಕಿಳಿಯಿತೆಂದು ನನಗೆ ದುಃಖವಾಯಿತು.

ಎಚ್. ಆರ್. ದಾಸೇಗೌಡ, ಎಚ್ಚೆಸ್ಕೆಯರಂಥ ಕೆಲವು ಮಿತ್ರರನ್ನೂ, ರಾಮಕೃಷ್ಣ ಹೆಗಡೆ, ಮೊಯಿಲಿ, ಶಂಕರ್‌ರಂಥ ನಾಯಕರನ್ನೂ ಆಶ್ರಯಿಸುವುದೊಂದೇ ನನಗೆ ಉಳಿದಿದ್ದ ಮಾರ್ಗ. ಅವರಿಗೆ ಮಾಹಿತಿಯನ್ನೊದಗಿಸಿದರೆ ಮಾತ್ರ ಲೇಖನಗಳನ್ನು ನಿರೀಕ್ಷಿಸಬಹುದಿತ್ತು. ಮಾಹಿತಿ ಸಂಗ್ರಹವು ಸಂಶೋಧನೆಯಷ್ಟೇ ಭಯಂಕರ ಸಾಹಸ ಕಾರ್ಯ. ಅಂಥ ಕಾರ್ಯಕ್ಕೆ ಕೆ. ಆರ್. ಕಮಲೇಶ್ ಸರ್ವಯೋಗ್ಯರೆಂದು ೨೦-೨೫ ವರ್ಷಗಳ ಸಂಪರ್ಕದಿಂದ ತಿಳಿದುಕೊಂಡಿದ್ದೆ. ಅವರು ಇತಿಹಾಸದಲ್ಲಿ ಸ್ನಾತಕೋತ್ತರ ಪದವಿ ಪಡೆದು, ಪದವಿಪೂರ್ವ ಕಾಲೇಜಿನಲ್ಲಿ ಅಧ್ಯಾಪಕರಾಗಿ, ಕೆಲವು ವರ್ಷಗಳಿಂದ ಮಂತ್ರಿ ಮತ್ತು ಮುಖ್ಯಮಂತ್ರಿಗಳ ಆಪ್ತ ಸಹಾಯಕರಾಗಿ, ವಿಶೇಷಾಧಿಕಾರಿಗಳಾಗಿ ಅಪೂರ್ವ ಸೇವೆ ಸಲ್ಲಿಸುತ್ತಿದ್ದಾರೆ. ಅವರನ್ನು ವಿದ್ಯಾರ್ಥಿ ದೆಸೆಯಿಂದ ಬಲ್ಲೆ. ಅವರ ಬುದ್ಧಿ ಕೌಶಲ, ಅಧ್ಯಯನಶೀಲತೆ, ಶ್ರಮ ಸ್ವಭಾವ ಮತ್ತು ಕರ್ತೃತ್ವ ಶಕ್ತಿಗಳು ನನಗೆ ಗೊತ್ತಿದ್ದುವು. ಅಭಿನಂದನ ಸ್ಮಾರಕ ಗ್ರಂಥಗಳ ಸಂಪಾದನೆ ಹಾಗೂ ಸಿದ್ಧತೆಯಲ್ಲಿ, ಸಾಂಸ್ಕೃತಿಕ ಕಾರ್ಯಕ್ರಮಗಳ ಕಲ್ಪನೆ, ಯೋಜನೆ, ನಿರ್ವಹಣೆಯಲ್ಲವರು ಸಿದ್ಧಹಸ್ತರು. ಹರಿತವಾದ ಬುದ್ಧಿ, ಸಹನೆಯಿಂದ ಕೂಡಿದ ಶ್ರಮ, ಕ್ರಿಯಾಕೌಶಲ್ಯ, ವಿಶ್ಲೇಷಣ ಸಾಮರ್ಥ್ಯ ಸಮನ್ವಿತವಾದ ಪಾಂಡಿತ್ಯಗಳು ವಿಶೇಷ ಪ್ರಮಾಣದಲ್ಲಿದ್ದರೆ ಮಾತ್ರ ಸಾಧ್ಯವಾಗುವ ಈ ಪುಣ್ಯಕಾರ್ಯಕ್ಕೆ ನೀವು ಹಿಂದಿನಂತೆಯೇ ಈ ಸಲವೂ ನೆರವು ನೀಡಬೇಕು ಎಂದವರನ್ನು ಕೇಳಿದೆ. ಮರುಮಾತಿಲ್ಲದೆ ಒಪ್ಪಿದರು. ಸಾಧ್ಯವಾದಷ್ಟು ಪಕ್ಷಗಳ ಬಗ್ಗೆ ಮಾಹಿತಿ ಸಂಗ್ರಹಿಸಿ, ಗಣ್ಯರನ್ನು ಆಶ್ರಯಿಸಿ, ಲೇಖನಗಳನ್ನು ಬರೆಯಿಸಿದ ಕಮಲೇಶ್ ಈ ಕಾರ್ಯವನ್ನು ತುಂಬ ಜವಾಬ್ದಾರಿಯಿಂದ ನಿರ್ವಹಿಸಿದ್ದಾರೆ.

'ಅಖಿಲ ಭಾರತ ಕಾಂಗ್ರೆಸ್', 'ಪ್ರಜಾಪಕ್ಷ', 'ಪ್ರಜಾ ಮಿತ್ರಮಂಡಳಿ', 'ಆಡಳಿತ ಕಾಂಗ್ರೆಸ್', 'ಸಂಸ್ಥಾ ಕಾಂಗ್ರೆಸ್', 'ಕಾಂಗ್ರೆಸ್ (ಐ)', 'ರೆಡ್ಡಿ ಕಾಂಗ್ರೆಸ್', 'ಅರಸು ಕಾಂಗ್ರೆಸ್', 'ಇಂದಿರಾ ಕಾಂಗ್ರೆಸ್', (ಆರ್. ಗುಂಡೂರಾವ್), 'ಕರ್ನಾಟಕ ಕಾಂಗ್ರೆಸ್ ಪಕ್ಷ' (ಎಸ್. ಬಂಗಾರಪ್ಪ), 'ತಿವಾರಿ ಕಾಂಗ್ರೆಸ್', 'ಸ್ವತಂತ್ರ ಪಕ್ಷ', 'ಜನತಾ ಪಕ್ಷ', 'ಸಮಾಜವಾದಿ ಜನತಾ ಪಕ್ಷ', 'ಜನತಾದಳ', 'ಜಾತ್ಯತೀತ ಜನತಾದಳ', 'ಸಂಯುಕ್ತ ಜನತಾದಳ', 'ಲೋಕಶಕ್ತಿ', 'ಜನಸಂಘ', 'ಬಿಜೆಪಿ', 'ಸಿಪಿಐ', 'ಸಿಪಿಐ(ಎಂ)', 'ಸಮಾಜವಾದಿ ಪಕ್ಷ', 'ಪಿಎಸ್‌ಪಿ', 'ಎಸ್‌ಎಸ್‌ಪಿ', 'ಎಸ್. ಪಿ', 'ಮರಾಠಿ ಮೂಲದ ಪಕ್ಷ', 'ಸುರಾಜ್ ಪಕ್ಷ', 'ಬಹುಜನ ಸಮಾಜ', 'ಆರ್‌ಪಿಐ', 'ಕರ್ನಾಟಕ ರಾಜ್ಯ ರೈತ ಸಂಘ,' 'ಕನ್ನಡ ಚಳವಳಿಗಾರರು', 'ತಮಿಳುಮೂಲದ ಪಕ್ಷಗಳು' - ಹೀಗೆ ಸುಮಾರು ಮೂವತ್ತೂರು ರಾಜಕೀಯ ಪಕ್ಷಗಳ ಇತಿಹಾಸವನ್ನು ಇಲ್ಲಿ ಅವಲೋಕನ ಮಾಡಲಾಗಿದೆ.

ಚುನಾವಣಾ ಹೋರಾಟದಲ್ಲಿ ಪ್ರತಿಯೊಂದು ರಾಜಕೀಯ ಪಕ್ಷಗಳ ಗೆದ್ದ ಅಭ್ಯರ್ಥಿಗಳು ಹಾಗೂ ಅವರು ಗಳಿಸಿದ ಶೇಕಡಾವಾರು ಮತಗಳ ವಿವರಗಳನ್ನು ಒದಗಿಸಲಾಗಿದೆ. ಧ್ಯೇಯೋದ್ದೇಶಗಳನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ರಾಷ್ಟ್ರೀಯ ಪಕ್ಷಗಳ ಅಖಿಲ ಭಾರತ ಮಟ್ಟದ ಧ್ಯೇಯೋದ್ದೇಶಗಳನ್ನೇ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಚುನಾವಣಾ ಸಂದರ್ಭದಲ್ಲಿ ಪಕ್ಷ ನಡೆಸಿದ ಹೋರಾಟ, ಸಂಘಟನೆ, ಚುನಾವಣಾ ಸಭೆ, ನಾಯಕರ ಪ್ರವಾಸ ಮುಂತಾದ ವಿಚಾರಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ. ರಾಜಕೀಯ ಪಕ್ಷಗಳ ವಿಭಜನೆ ಅತ್ಯಂತ ಪ್ರಮುಖ ಘಟ್ಟವಾಗಿದ್ದು ಅದರ ಅಧ್ಯಯನವನ್ನು ವಿಶೇಷ ಮಹತ್ವದೊಡನೆ ವಿಶ್ಲೇಷಿಸಲಾಗಿದೆ. ಆ ಕಾಲದ ರಾಜಕೀಯ ಪರಿಸ್ಥಿತಿಯನ್ನು ವಿಶ್ಲೇಷಿಸಿ ಈ ವಿಭಜನೆಯ ಪ್ರಭಾವವನ್ನು ಆಯಾ ರಾಜಕೀಯ ಪಕ್ಷಗಳ ಬೆಳವಣಿಗೆಯೊಡನೆ ಹೋಲಿಸಿ ಒಟ್ಟಾರೆ ಈ ವಿಭಜನೆಯಿಂದ ರಾಜ್ಯದ ರಾಜಕೀಯ ಕ್ಷೇತ್ರಕ್ಕಾದ ಲಾಭ ಮತ್ತು ನಷ್ಟವನ್ನು ವಿಶೇಷವಾಗಿ ಅಧ್ಯಯನ ಮಾಡಲಾಗಿದೆ. ರಾಜಕೀಯ ಪಕ್ಷಗಳು ಚುನಾವಣಾ ಪೂರ್ವದಲ್ಲಿ ಅಥವಾ ಚುನಾವಣೆಯ ನಂತರ ಇತರ ಪಕ್ಷಗಳೊಡನೆ ವಿಲೀನವಾದರೆ ಅದಕ್ಕಿರುವ ಕಾರಣಗಳನ್ನು ಹೆಕ್ಕಿ ತೆಗೆಯಲಾಗಿದೆ. ಇಂತಹ ವಿಲೀನ ಪಕ್ರಿಯ ರಾಜಕಾರಣದ ಮೇಲೆ ಮಾಡಿದ ಪ್ರಭಾವವನ್ನು ದಾಖಲು ಮಾಡಲಾಗಿದೆ. ಈ ರೀತಿಯ

ಲೇಖನಗಳನ್ನು ಸಿದ್ಧಪಡಿಸಲು ಸಾಕಷ್ಟು ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಕಾರ್ಯಕ್ರಮ ವಿಧಾನಗಳನ್ನು ರೂಪಿಸಿಕೊಳ್ಳಲಾಗಿದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ :

ಪ್ರತಿಯೊಂದು ರಾಜಕೀಯ ಪಕ್ಷಗಳ ಇತಿಹಾಸ ಬರೆಯಲು ಆಯಾ ರಾಜಕೀಯ ಪಕ್ಷದ ಉನ್ನತ ಮಟ್ಟದ ನಾಯಕರುಗಳ ಸಂದರ್ಶನ ಮಾಡಲಾಗಿದೆ; ಪ್ರಜಾವಾಣಿ, ಕರ್ಮವೀರ, ಪ್ರಪಂಚ, ಸಂಯುಕ್ತ ಕರ್ನಾಟಕ, ಕನ್ನಡ ಪ್ರಭ, ಡೆಕ್ಕನ್ ಹೆರಾಲ್ಡ್, ದಿ ಹಿಂದೂ ಮುಂತಾದ ಪ್ರಮುಖ ದಿನಪತ್ರಿಕೆಗಳನ್ನು ವ್ಯಾಸಂಗ ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ; ಆಯಾ ರಾಜಕೀಯ ಪಕ್ಷಗಳ ಏಳು-ಬೀಳು ತಿಳಿಯಲು ಪತ್ರಿಕೆಗಳಲ್ಲಿನ ಸಂಪಾದಕೀಯ, ಸಂದರ್ಶನ, ವಾಚಕರವಾಣಿ, ತಜ್ಞರ ರಾಜಕೀಯ ವಿಶ್ಲೇಷಣೆ ಮೊದಲಾದವುಗಳನ್ನು ಪರಿಶೀಲಿಸಲಾಗಿದೆ; ೧೯೫೨ ರಿಂದ ೧೯೯೯ರ ವರೆಗೆ ನಡೆದ ರಾಜ್ಯ ಲೋಕಸಭಾ ಹಾಗೂ ವಿಧಾನಸಭೆಗಳ ಚುನಾವಣೆಗಳಲ್ಲಿನ ಎಲ್ಲ ರಾಜಕೀಯ ಪಕ್ಷಗಳ ಚುನಾವಣಾ ಪ್ರಣಾಳಿಕೆಯನ್ನು ಗಮನಿಸಿ ಅವುಗಳನ್ನು ವಿಶ್ಲೇಷಿಸಲಾಗಿದೆ; ಕರ್ನಾಟಕದ ಪ್ರಮುಖ ಹಿರಿಯ ಪತ್ರಕರ್ತರಾದ ತಿ. ತಾ. ಶರ್ಮ, ಟೀಯೆಸ್ಸಾರ್, ಪಿ. ಆರ್. ರಾಮಯ್ಯ, ಖಾದ್ರಿ ಶಾಮಣ್ಣ, ಅರ್ಜುನ್‌ದೇವ್, ಎಸ್.ಜಿ. ಮೈಸೂರುಮಠ್, ಬಿ.ವಿ. ವೈಕುಂಠರಾಜು, ಪಿ. ಲಂಕೇಶ್, ವಡ್ಡರ್ಸೆ ರಘುರಾಮಶೆಟ್ಟಿ, ವಿ.ಎನ್. ಸುಬ್ಬರಾವ್, ಎಸ್.ವಿ. ಜಯಶೀಲರಾವ್, ಆರ್. ಪಿ. ಜಗದೀಶ್ ಮೊದಲಾದವರ ಅಭಿಪ್ರಾಯಗಳನ್ನು ಸಂಗ್ರಹಿಸಿ ರಾಜಕೀಯ ವಿಶ್ಲೇಷಣೆಯನ್ನು ಕೊಡಲಾಗಿದೆ; ರಾಜ್ಯ ಪತ್ರಾಗಾರ ಇಲಾಖೆ ಹಾಗೂ ಕರ್ನಾಟಕ ರಾಜ್ಯ ಗೆಜೆಟಿಯರ್ ಇಲಾಖೆಯಲ್ಲಿರುವ ಅಮೂಲ್ಯ ದಾಖಲೆಗಳನ್ನು ಪರಿಶೀಲಿಸಿ ಅವುಗಳ ಸಹಾಯ ಪಡೆಯಲಾಗಿದೆ; ಚುನಾವಣಾ ಆಯೋಗವು ಪ್ರತಿ ಸಾರ್ವತ್ರಿಕ ಚುನಾವಣೆ ಸಂದರ್ಭದಲ್ಲಿ ಫಲಿತಾಂಶ ಕುರಿತಂತೆ ಪ್ರಕಟಿಸುವ ಅಧಿಕೃತ ದಾಖಲೆಗಳನ್ನು ಕೂಡ ಇಲ್ಲಿ ಬಳಸಿಕೊಳ್ಳಲಾಗಿದೆ.

ಈ ಎಲ್ಲಾ ಅಂಶಗಳನ್ನೊಳಗೊಂಡಂತೆ ಸಿದ್ಧಮಾಡಿದ ಹಸ್ತಪ್ರತಿಯನ್ನು ಹಿರಿಯ ರಾಜಕೀಯ ಮುತ್ಸದ್ದಿಗಳಿಗೆ ಪರಿಶೀಲನೆಗೆ ನೀಡಿ, ಅವರ ಅಭಿಪ್ರಾಯಗಳನ್ನು ಆಧರಿಸಿ ಲೇಖನಗಳನ್ನು ಸಿದ್ಧಮಾಡಲಾಗಿದೆ.

ಆದರೆ, ಒಂದು ಮಾತು. ಕರ್ನಾಟಕದ ರಾಜಕೀಯ ಚಿಂತನೆಯಲ್ಲಿ ಬರುವ ರಾಜಕೀಯ ಪಕ್ಷಗಳ ಇತಿಹಾಸ ಪರಿಪೂರ್ಣವಂತೂ ಅಲ್ಲ. ಪ್ರಾಜ್ಞರು ಅದರಲ್ಲಿ ಅನೇಕ ಅರೆಕೊರೆಗಳನ್ನು ಹೆಕ್ಕಿ ತೆಗೆಯಬಹುದಾಗಿದೆ. ಇಲ್ಲಿ ಗಮನಿಸಬಹುದಾದ ಕೆಲವೇ ಉದಾಹರಣೆಗಳೆಂದರೆ:

ಚುನಾವಣೆಯ ನಂತರ ಪ್ರತಿಯೊಂದು ರಾಜಕೀಯ ಪಕ್ಷ ನಡೆಸಿದ ಸಂಘಟನೆ ಕುರಿತು ಅಧಿಕೃತವಾಗಿ ಏನನ್ನೂ ಪ್ರಸ್ತಾಪಿಸಲು ಸಾಧ್ಯವಾಗಿಲ್ಲ. ಈ ಬಗ್ಗೆ ಯಾವುದೇ ರಾಜಕೀಯ ಪಕ್ಷದಲ್ಲಿ ಮಾಹಿತಿ ಕೂಡಾ ಇಲ್ಲ; ಚುನಾಯಿತ ಶಾಸಕ, ಲೋಕಸಭಾ ಸದಸ್ಯರನ್ನು ಹೊರತುಪಡಿಸಿ ಪಕ್ಷಗಳಲ್ಲಿರುವ ಪ್ರಮುಖ ವ್ಯಕ್ತಿಗಳನ್ನು ಹಾಗೂ ಅವರ ಸಾಧನೆಗಳನ್ನು ಗುರುತಿಸಲು ಸಾಧ್ಯವಾಗಿಲ್ಲ; ವಿಶೇಷವಾಗಿ ಪಕ್ಷಾಂತರ, ಹಣ ಹಾಗೂ ಜಾತಿ ರಾಜಕೀಯ ಪಕ್ಷಗಳ ಸೋಲು ಗೆಲುವಿಗೆ ಕಾರಣವಾದ ಅಂಶ, ಇವುಗಳನ್ನು ಆಯಾ ರಾಜಕೀಯ ಪಕ್ಷದ ಇತಿಹಾಸದಲ್ಲಿ ಸಮರ್ಪಕವಾಗಿ ಸೇರಿಸಲು ಸಾಧ್ಯವಾಗಿಲ್ಲ; ಚುನಾವಣೆಯ ನಂತರ ರಾಜಕೀಯ ಪಕ್ಷಗಳು ನಡೆಸಿದ ತಾತ್ವಿಕ ಸಂಘರ್ಷವನ್ನು ದಾಖಲು ಮಾಡಬೇಕಾಗಿತ್ತು. ಪ್ರತಿಯೊಂದು ಚುನಾವಣೆಯಲ್ಲೂ ಕೆಲವು ಜಿಲ್ಲೆಗಳು ಒಂದೊಂದು ರಾಜಕೀಯ ಪಕ್ಷಕ್ಕೆ ಬೆಂಬಲ ಕೊಟ್ಟವೆ. ಅದಕ್ಕೆ ಕಾರಣವಾದ ಅಂಶಗಳನ್ನು ದಾಖಲು ಮಾಡಬೇಕಾಗಿತ್ತು. ಇದಕ್ಕೆ ತಾಲ್ಲೂಕು ಮಟ್ಟದಲ್ಲೂ ಕ್ಷೇತ್ರಕಾರ್ಯ ಮಾಡಿದ್ದರೆ ತುಂಬಾ ಅನುಕೂಲವಾಗುತ್ತಿತ್ತು, ಅದು ಸಾಧ್ಯವಾಗಿಲ್ಲ; ಅನೇಕ ರಾಜಕೀಯ ಮುಖಂಡರು ಅನಿರೀಕ್ಷಿತವಾಗಿ ಅಪಜಯ ಗೊಂಡಿದ್ದಾರೆ. ಉದಾ : ಹೊಸದುರ್ಗದಿಂದ ನಿಜಲಿಂಗಪ್ಪ, ಮಂಡ್ಯದಿಂದ ಕೆ. ವಿ. ಶಂಕರಗೌಡ, ಗದಗ್‌ನಿಂದ ಕೆ. ಎಚ್. ಪಾಟೀಲ್, ಹೊಳೇನರಸೀಪುರದಿಂದ ಎಚ್. ಡಿ. ದೇವೇಗೌಡ, ಬಾಗಲಕೋಟೆಯಿಂದ ರಾಮಕೃಷ್ಣ ಹೆಗಡೆ, ಮದ್ದೂರಿನಿಂದ ಎಸ್. ಎಂ. ಕೃಷ್ಣ, ಚಿಕ್ಕಮಗಳೂರಿನಿಂದ ವೀರಪ್ಪ ಮೊಯ್ಲಿ ಇತ್ಯಾದಿ. ಇವರ ಸೋಲನ್ನು ರಾಜಕೀಯದ ಹಿನ್ನೆಲೆಯಿಂದ ವಿಶ್ಲೇಷಿಸಲು ಸಾಧ್ಯವಾಗಿಲ್ಲ. ರಾಜ್ಯದ ಚುನಾವಣೆಗಳಲ್ಲಿ ಪಾಲುಗೊಂಡ ಪಕ್ಷೇತರರ ಬಗ್ಗೆ ವಿಶೇಷವಾಗಿ ಅಧ್ಯಯನ ನಡೆಸುವ ಅಗತ್ಯವಿದೆ; ಚುನಾವಣೆಯಲ್ಲಿ ಸ್ಪರ್ಧಿಸದಿದ್ದರೂ ರಾಜಕೀಯ ಕ್ಷೇತ್ರದ ಮೇಲೆ ಪ್ರಭಾವ ಬೀರಿದ ದಲಿತ ಸಂಘರ್ಷ ಸಮಿತಿ, ಕನ್ನಡ ಚಳವಳಿ ಪಕ್ಷ ಇತ್ಯಾದಿಗಳ ಪ್ರಭಾವಗಳನ್ನೂ ವಿಶ್ಲೇಷಿಸುವ ಅಗತ್ಯವಿತ್ತು. ಕಾಲ ಮಿತಿ, ತಜ್ಞರ ಅಸಹಕಾರ, ಮಾನವ ಸಹಜ ಆಲಸ್ಯ - ಇವೇ ಮೊದಲಾದ

ಕಾರಣಗಳಿಂದಾಗಿ ಈ ಲೇಖನಗಳಲ್ಲಿ ನ್ಯೂನತೆಗಳು ಉಳಿದಿರಬಹುದು, ಕೆಲವು ಪಕ್ಷಗಳು ಬಿಟ್ಟುಹೋಗಿರಲೂಬಹುದು. ಈ ನ್ಯೂನತೆಗಳು ಉದ್ದೇಶಪೂರಿತವಾದುವೆಂದು ಖಂಡಿತ ತಿಳಿಯಬಾರದೆಂದು ನಾನು ವಿನಮ್ರನಾಗಿ ವಿಜ್ಞಾಪಿಸಿಕೊಳ್ಳುತ್ತೇನೆ.

ರಾಜಕೀಯ ಪಕ್ಷಗಳ ಸಮಗ್ರ ಇತಿಹಾಸ ರಚನೆ ಇಲ್ಲಿಯ ಲೇಖನಗಳ ಗುರಿಯಿಲ್ಲ. ಇವು ಸ್ಥೂಲ ಪರಿಚಯ ರೂಪದಲ್ಲಿದ್ದು, ಶ್ರೀಸಾಮಾನ್ಯರ ಜ್ಞಾನ ಸಂಪಾದನೆಗೆ ಅನುವಾಗಬೇಕು, ಮುಂದಿನ ಸಂಶೋಧಕರಿಗೆ ಮಾರ್ಗದರ್ಶಿ ಯಾಗಬೇಕೆನ್ನುವುದು ಇವನ್ನು ರಚಿಸಿರುವವರ ಉದ್ದೇಶ. ಲೇಖನಗಳಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳಿಗೆ ಲೇಖಕರು ಹೊಣೆಗಾರರೇ ಹೊರತು ಸಂಪಾದಕರೂ ಅಲ್ಲ, ಪ್ರಕಾಶಕರೂ ಅಲ್ಲವೆಂದು ನಮ್ರತೆಯಿಂದ ನಿವೇದಿಸಿಕೊಳ್ಳುತ್ತೇನೆ. ಆದರೆ ನಮ್ಮೊಡನೆ ಸಹಕರಿಸಿದ ನಾಯಕರು ಮತ್ತು ಲೇಖಕರು ಪ್ರಾಜ್ಞರು, ಸಜ್ಜನರು, ಪ್ರಾಮಾಣಿಕರಾದ್ದರಿಂದ ಪ್ರಮಾದಗಳಿಗೆ ಅವಕಾಶವಿಲ್ಲವೆಂದೇ ನನ್ನ ಭಾವನೆ. ಹೋಮರನೂ ತೂಕಡಿಸುತ್ತಾನೆಂಬ ಗಾದೆಯೂ ಇದೆಯಷ್ಟೆ. ಈ ಲೇಖಕರನ್ನು ಕೃತಜ್ಞತೆಯಿಂದ ವಂದಿಸಲೇಬೇಕಾದ್ದು ನನ್ನ ಕರ್ತವ್ಯ.

ನಾನಾಗಲಿ, ಕಮಲೇಶ್ ಆಗಲಿ ರಾಜಕೀಯದಿಂದ ಯೋಜನ ಯೋಜನ ದೂರ. ಅದರಲ್ಲಿ ನಮಗೆ ಎಳ್ಳಷ್ಟೂ ಆಸಕ್ತಿಯಿಲ್ಲ. ರಾಜ್ಯಶಾಸ್ತ್ರದ ಬಗ್ಗೆ ವಿಶ್ವಾಸವುಂಟು. ತಜ್ಞರಂತೆ, ಪಂಡಿತರಂತೆ, ಜ್ಞಾನ ತೃಷಿತರಂತೆ ನಮಗೆ ರಾಜಕೀಯ ಶಾಸ್ತ್ರದಲ್ಲಿ ಮಾತ್ರ ತೀವ್ರಾಸಕ್ತಿ, ರಾಜಕೀಯ-ರಾಜ್ಯಶಾಸ್ತ್ರಗಳಿಗೆ ಕರುಳುಬಳ್ಳಿಯ ನೆಂಟಸ್ತಿಕೆಯಿದ್ದರೂ ರಾಜಕೀಯಶಾಸ್ತ್ರ ರಾಷ್ಟ್ರಕರೆಲ್ಲರೂ ಒಂದಲ್ಲ ಒಂದು ಪ್ರಮಾಣದಲ್ಲಿ ತಿಳಿದುಕೊಂಡಿರಬೇಕಾದ ಅಮೂಲ್ಯ ಜ್ಞಾನ ಸಂಪತ್ತು. ಲೈಂಗಿಕ ಜ್ಞಾನ-ಲೈಂಗಿಕ ಕ್ರಿಯೆ, ಅಪರಾಧ ಶಾಸ್ತ್ರ- ಅಪರಾಧಕ್ಕೂ ಇರುವ ಸಂಬಂಧ ರಾಜ್ಯಶಾಸ್ತ್ರ-ರಾಜಕೀಯಗಳ ನಡುವೆಯಿದೆ ಎಂಬುದನ್ನೂ, ಜಗತ್ತಿನ ಅನೇಕ ಶ್ರೇಷ್ಠ ರಾಜಕೀಯ ತತ್ತ್ವಜ್ಞರು ರಾಜಕೀಯ ನಾಯಕರಾಗಿರಲಿಲ್ಲವೆಂಬುದನ್ನೂ ಪ್ರಾಜ್ಞರು ಅರಿಯಬೇಕು. ಇಂಥ ಅಮೂಲ್ಯ ಜ್ಞಾನ ಸಮೃದ್ಧ ಲೇಖನಗಳನ್ನೊಳಗೊಂಡ ಈ ಗ್ರಂಥ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ಪ್ರಾಧ್ಯಾಪಕರಿಗೆ, ಜ್ಞಾನ ಭಿಕ್ಷುಗಳಿಗೆ ಉತ್ತಮ ಪರಾಮರ್ಶನ ಆಕರ ಗ್ರಂಥವಾಗುವುದರಲ್ಲಿ ಸಂದೇಹವಿಲ್ಲ. ರಾಜಕೀಯ ಶಿಕ್ಷಣಕ್ಕೂ ಇದು ಅನುಕೂಲವಾದ ಹೊತ್ತಗೆಯಾಗುತ್ತದೆ. ಪ್ರಬಂಧಗಳು ರಾಜಕೀಯ ತತ್ತ್ವಕ್ಕೆ ಸಂಬಂಧಿಸಿದಂಥವೇ ಹೊರತು, ರಾಜಕೀಯಕ್ಕೂ ಇವುಗಳಿಗೂ ಎಳ್ಳಷ್ಟೂ ಸಂಬಂಧವಿಲ್ಲವೆಂಬ ಸತ್ಯ ಪ್ರಾಜ್ಞರಿಗೆ ಹಾಗೂ ವಿವೇಕಿಗಳಿಗೆ ಮಾತ್ರ ಮನವರಿಕೆಯಾದೀತು. ಇಲ್ಲಿಯ ಅನೇಕ ಲೇಖನಗಳಲ್ಲಿ ಕಮಲೇಶರ ಶ್ರಮವೂ ಹರಿಯುತ್ತಿದೆಯೆಂಬ ಕಾರಣದಿಂದ ಅವರಿಗೆ ನನ್ನ ಕೃತಜ್ಞತೆ ಸಲ್ಲಬೇಕಾಗಿದೆ. ನಿಜ ಹೇಳಬೇಕಾದರೆ, ಅವರೇ ಈ ಸಂಪುಟದ ಕ್ರಿಯಾಶೀಲ ಸಂಪಾದಕರು. ಶ್ರೀ ಎಂ. ವಿ. ವೆಂಕಟಪ್ಪ, ಅಧ್ಯಕ್ಷರು, ಕರ್ನಾಟಕ ವಿಧಾನಸಭೆ; ಶ್ರೀ ಬಿ. ಎಲ್. ಶಂಕರ್, ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್; ಶ್ರೀ ಎಂ. ವಿ. ರಾಜಶೇಖರನ್, ರಾಜ್ಯಸಭಾ ಸದಸ್ಯರು; ನಿಜಲಿಂಗಪ್ಪ ಪ್ರತಿಷ್ಠಾನದ ಕಾರ್ಯಾಧ್ಯಕ್ಷರಾದ ವೈ. ರಾಮಚಂದ್ರ ಇವರ ನೆರವನ್ನಂತೂ ಮರೆಯುವಂತಿಲ್ಲ.

ಕರ್ನಾಟಕದ ರಾಜಕೀಯ ಪಕ್ಷಗಳನ್ನು ಕುರಿತಂತೆ ಶ್ರೀವತ್ಸರು ಮಾಡಿರುವ ಅಧ್ಯಯನವನ್ನು ಗಮನಿಸಿದಾಗ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರ ನೆನಪಾಗುತ್ತದೆ. ಯಾವ ಪಕ್ಷ ಅಥವಾ ನಾಯಕರ ಬಗ್ಗೆಯೂ ಅವರಿಗೆ ಪಕ್ಷಪಾತವಿಲ್ಲ. ಎಲ್ಲರ ಬಗ್ಗೆಯೂ ಗೌರವವಿದೆ. ಆ ನಾಯಕರು ದೇಶಕ್ಕೆ ಸಲ್ಲಿಸಿರುವ ಸೇವೆಯ ಬಗ್ಗೆ ಹೆಮ್ಮೆಯಿದೆ. ಆದರವರು ವಾಸ್ತವ ಸತ್ಯಕ್ಕೆ, ವಿಜ್ಞಾನಿಯ ನಿಖರತೆಗೆ ಕಟ್ಟುಬಿದ್ದಿದ್ದಾರೆ. ಇಂಥ ಶಾಸ್ತ್ರೀಯ ಪ್ರಬಂಧವನ್ನು ಸಿದ್ಧಪಡಿಸಿದ ಶ್ರೀವತ್ಸರು ಸರ್ವರ ಉತ್ತೇಜನಕ್ಕೆ ಅರ್ಹರಾಗಿದ್ದಾರೆ.

ಇಂಥದೊಂದು ಗ್ರಂಥ ಕನ್ನಡದಲ್ಲಿ ಬರಬೇಕು, ಅದು ರಾಜಕಾರಣಿಗಳ ಕೈಪಿಡಿಯಾಗಬೇಕು, ರಾಜಕೀಯ ಆಕಾಂಕ್ಷೆಯಿರುವ ತರುಣರ ಪಠ್ಯವಾಗಬೇಕು, ವಿದ್ಯಾರ್ಥಿಗಳಿಗೆ ಮತ್ತು ಸಂಶೋಧಕರಿಗೆ ದಾರಿತೋರುವ ಕೈಮರವಾಗಬೇಕು ಎಂಬುದು ನನ್ನ ಬಹುದಿನದ ಆಶೆ. ನಾನು ರೂಪಿಸಿದ ಯೋಜನೆಯನ್ನಂಗೀಕರಿಸಿದ್ದ ನಾಯಕರಿಗೆ, ಆ ಯೋಜನಾನುಗುಣವಾಗಿ ಲೇಖನಗಳನ್ನು ಬರೆದುಕೊಟ್ಟ ಲೇಖಕ ಮಿತ್ರರಿಗೆ ನನ್ನ ಮಣಿಹ ಸಲ್ಲುತ್ತದೆ. ಕಾಲದ ಮಿತಿಯಲ್ಲಿ ಸಿದ್ಧವಾದ ಈ ಗ್ರಂಥದಲ್ಲಿ ನ್ಯೂನತೆಗಳಿಗೆ ಅವಕಾಶವಿದೆಯೆಂದು ನಾನು ಒಪ್ಪಿಕೊಳ್ಳುತ್ತೇನೆ.

ಈ ಸಂಪುಟದ ಸಿದ್ಧತೆಯಲ್ಲಿ ಡಾ। ಮಂಜುಳಾ ಹುಲ್ಲಹಳ್ಳಿಯವರು ಶ್ರೀ ಕಮಲೇಶರಿಗೆ ಸಂಪೂರ್ಣ ಸಹಾಯ ಸಹಕಾರ ನೀಡಿದ್ದಾರೆಂಬುದು ನನಗೆ ಸಂತೋಷವುಂಟುಮಾಡಿದೆ. ಅವರೂ ಬುದ್ಧಿಯಲ್ಲಿ, ಅನುಭವದಲ್ಲಿ, ಕ್ರಿಯಾಶೀಲತೆಯಲ್ಲಿ ಬಲ್ಲಿದರು.

ಅವರನ್ನು ವಾಣಿಜ್ಯ ಇಲಾಖೆಯಿಂದ ತಮ್ಮ ಇಲಾಖೆಗೆ ತಾತ್ಕಾಲಿಕವಾಗಿ ಕರೆಸಿಕೊಂಡು, ನನಗೆ ಉಪಕಾರ ಮಾಡಿದ ಸನ್ಮಾನ್ಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರನ್ನು, ನಿರ್ದೇಶಕರಾದ ಶ್ರೀ ಸಿ. ಸೋಮಶೇಖರ ಅವರನ್ನು ನೆನೆಯಲೇಬೇಕು. ಈ ಸಂದರ್ಭದಲ್ಲಿ ಡಾ। ಎ. ಆರ್. ಮಂಜುನಾಥ್ ಅವರ ಉಪಕಾರ ನನ್ನ ಮಾತಿಗೆ ಮೀರಿದ್ದು.

ಎಸ್. ನಂಜುಂಡಸ್ವಾಮಿ, ಮೋಹನ್ ವರ್ಣೇಕರ್, ರಘು ಎಸ್. ಶೆಟ್ಟಿಗಾರ್, ಶ್ರೀಮತಿ ಎನ್. ಭಾರತಿ ಇವರ ಸಮೃದ್ಧ ಸಲಹೆ ಸಹಕಾರ ಸಹಭಾಗಿತ್ವಗಳು ಈ ಸಂಪುಟಕ್ಕೆ ಸಿಕ್ಕಿವೆ. ಅಕ್ಷರ ಜೋಡಣೆ ಮತ್ತು ಮುದ್ರಣ ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದವರು ಲಕ್ಷ್ಮಿಮುದ್ರಣಾಲಯದ ಅಶೋಕ್‌ಕುಮಾರ್ ಮತ್ತು ಸಿಬ್ಬಂದಿ ವರ್ಗದವರು, ಶ್ರದ್ಧೆಯಿಂದ ಕರಡು ತಿದ್ದಿದ ಡಾ। ಬೈರಮಂಗಲ ರಾಮೇಗೌಡ ಹಾಗೂ ಬಿ. ಎಸ್. ಸತ್ಯನಾರಾಯಣ, ರಕ್ಷಾಪುಟ ಕಲಾವಿದರಾದ ಶ್ರೀಪಾದ್ ಇವರೆಲ್ಲರಿಗೂ ನನ್ನ ಕೃತಜ್ಞತೆಗಳು.

ಮೇಲೆ ಹೇಳಿದಂತೆ, ಕಮಲೇಶ್, ಡಾ। ಮಂಜುಳಾ ಮತ್ತು ಡಾ। ಎ. ಆರ್. ಮಂಜುನಾಥ್ ನನಗೆ ನಾನಾರೀತಿಯಲ್ಲಿ ಸಹಕರಿಸಿದ್ದಾರೆ. ಕಮಲೇಶ್ ಸಂಪಾದಕರೇ ಆಗಿ, ಸಂಪಾದಕರಿಗಿಂತ ಮಿಗಿಲಾಗಿ ಮುದ್ರಣವೂ ಸೇರಿದಂತೆ, ಪ್ರತಿಯೊಂದು ಹಂತದಲ್ಲಿಯೂ ನನಗಾಗಿ, ನಿಜಲಿಂಗಪ್ಪನವರ ಮೇಲಣ ಗೌರವದಿಂದ ಹಗಲಿರುಳೆನ್ನದೆ ದುಡಿದಿದ್ದಾರೆ. ಇಂಥ ಸಾಂಸ್ಕೃತಿಕ, ಸಾಹಿತ್ಯಿಕ ಕಾರ್ಯಗಳನ್ನು ಕೈಗೊಂಡಾಗ ಅವರ ಉತ್ಸಾಹ ನೆರೆಯೇರುತ್ತದೆ. ಇದು ಅವರ ಹುಟ್ಟು ಗುಣ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕ ಆಡಳಿತ ನಿಪುಣ ಸಿ. ಸೋಮಶೇಖರ್ ಅವರ, ಜಂಟಿ ನಿರ್ದೇಶಕ, ಸಾಹಿತಿ ಬಂಧು ಕಾ.ತ. ಚಿಕ್ಕಣ್ಣ ಇವರ ಸಹಕಾರವನ್ನು ಸದಾ ನೆನೆಯುತ್ತೇನೆ. ಚಿತ್ರದುರ್ಗದ ಎಸ್. ಜಿ. ಮಂಜುನಾಥ ಅವರ ಪ್ರೇರಣೆ, ಕಾಳಜಿಗಳನ್ನು ಮರೆಯಲಾದೀತೆ?

ಕೊನೆಯದಾಗಿ ಕರ್ನಾಟಕ ಸರ್ಕಾರಕ್ಕೆ, ಮುಖ್ಯವಾಗಿ ಸನ್ಮಾನ್ಯ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರಿಗೂ, ಮಾನ್ಯ ಅರಣ್ಯ ಸಚಿವರಾದ ಕೆ. ಎಚ್. ರಂಗನಾಥ ಅವರಿಗೂ ಮತ್ತು ಶ್ರೀ ನಿಜಲಿಂಗಪ್ಪ ಟ್ರಸ್ಟಿನ ಪದಾಧಿಕಾರಿಗಳಿಗೂ ನನ್ನ ಹೃತ್ಪೂರ್ವಕವಾದ ಧನ್ಯವಾದಗಳು. ಈ ಪವಿತ್ರ ಕಾರ್ಯದಲ್ಲಿ ನನಗೆ ನೆರವಾದ ಸರ್ವರಿಗೂ ನನ್ನ ನಮನಗಳು.

೧.೧.೨೦೦೩ **ದೇಜಗೌ**
ಮೈಸೂರು - ೧೨

# ಪ್ರಕಾಶಕರ ಮಾತು

ಎಸ್. ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ ೧೭.೧.೧೯೯೪ರಲ್ಲಿ ಅಸ್ತಿತ್ವಕ್ಕೆ ಬಂದಿತು. ಬೆಂಗಳೂರಿನ ಚಿನ್ನಸ್ವಾಮಿ ಕ್ರಿಕೆಟ್ ಕ್ರೀಡಾಂಗಣದಲ್ಲಿ ಅದರ ಕೇಂದ್ರ ಕಚೇರಿ ಪ್ರಾರಂಭವಾಯಿತು. ಮಾಜಿ ಶಿಕ್ಷಣ ಸಚಿವರೂ, ಮಾಜಿ ಲೋಕಸಭಾ ಸದಸ್ಯರೂ ಮತ್ತು ನಿಜಲಿಂಗಪ್ಪನವರ ಆಪ್ತರೂ ಆದ ಎ. ಆರ್. ಬದರಿನಾರಾಯಣ ಅವರು ಇದರ ಅಧ್ಯಕ್ಷರಾದರು. ಮಾಜಿ ಲೋಕಸಭಾ ಸದಸ್ಯರೂ, ದಾವಣಗೆರೆ ಬಾಪೂಜಿ ವಿದ್ಯಾಸಂಸ್ಥೆಯ ಕಾರ್ಯದರ್ಶಿಗಳೂ ಆದ ಶಾಮನೂರು ಶಿವಶಂಕರಪ್ಪ ಹಾಗೂ ನಾವು ಉಪಾಧ್ಯಕ್ಷರಾದೆವು. ಎಲ್. ಎಸ್. ಚಂದ್ರಶೇಖರ್ ಅವರು ಕಾರ್ಯದರ್ಶಿಯಾದರೆ, ಕರ್ನಾಟಕ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿ ಬಿ. ಎಸ್. ಮುದ್ದಪ್ಪ ಅವರು ಖಜಾಂಚಿಗಳಾದರು. ಉದ್ಯಮಿಗಳಾದ ಆರ್. ಎನ್. ಶೆಟ್ಟಿ, ವೈ. ಎಸ್. ಗಂಗಾಧರಶೆಟ್ಟಿ - ಲೋಕಸಭಾ ಸದಸ್ಯರಾದ ಉದ್ಯಮಿ ವಿಜಯ ಸಂಕೇಶ್ವರ್ ಹಾಗೂ ಶಾಸಕರಾದ ಚಂದ್ರಕಾಂತ ಬೆಲ್ಲದ ಅವರು ಪ್ರತಿಷ್ಠಾನದ ಧರ್ಮದರ್ಶಿಗಳಾದರು. ಪ್ರದೇಶ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದ ಅಲ್ಲಂ ವೀರಭದ್ರಪ್ಪ, ರಾಜ್ಯಸಭಾ ಸದಸ್ಯರಾದ ಎಂ. ವಿ. ರಾಜಶೇಖರನ್, ಕೇರಳದ ರಾಜ್ಯಪಾಲರಾದ ಸಿಕಂದರ್ ಭಕ್ತ್, ಮಹಾರಾಷ್ಟ್ರದ ಮಾಜಿ ಮುಖ್ಯಮಂತ್ರಿ ಎ.ಆರ್. ಅಂತುಳೆ, ಹರಿಯಾಣದ ಮಾಜಿ ಮುಖ್ಯಮಂತ್ರಿ ಬನ್ಸಿಲಾಲ್, ಮಾಜಿ ಸಚಿವರೂ ಹಾಗೂ ಶಾಸಕರೂ ಆದ ಎ. ಬಿ. ಪಾಟೀಲ್, ಮಾಜಿ ಶಿಕ್ಷಣ ಸಚಿವರಾದ ಎಚ್. ಜಿ. ಗೋವಿಂದಗೌಡ, ನಿಜಲಿಂಗಪ್ಪನವರ ಮಗ ಎಸ್. ಎನ್. ಕಿರಣ್‌ಶಂಕರ್, ಎಫ್.ಸಿ.ಎ.ನ ಎಚ್. ಶಿವಲಿಂಗಯ್ಯ, ಬಸವರಾಜ್ ಎಸ್. ಬಿ. ಮಳ್ಳಿ, ಶ್ರೀಮತಿ ಪ್ರತಿಭಾದೇವಿ ಮುದ್ದಪ್ಪ, ಡಾ। ಮಂಗಳ ವಿ. ಬೆಟ್‌ಕೆರೂರ್ ಹಾಗೂ ಸತೀಶಚಂದ್ರ ಹೆಗಡೆ ಇವರುಗಳನ್ನು ಪ್ರತಿಷ್ಠಾನದ ಸಹಧರ್ಮದರ್ಶಿಗಳಾಗಿ ಸೇರ್ಪಡೆ ಮಾಡಿಕೊಳ್ಳಲಾಯಿತು.

ರಾಷ್ಟ್ರೀಯ ನಾಯಕರಾದ ಎಸ್. ನಿಜಲಿಂಗಪ್ಪನವರ ಬದುಕು ಹಾಗೂ ಸಾಧನೆಯನ್ನು ದೇಶದ ಜನತೆಗೆ ಪರಿಚಯ ಮಾಡಿಕೊಡುವುದು, ಅವರ ಆಶಯಗಳನ್ನು ಜನತೆಗೆ ತಿಳಿಸುವುದು, ಜೊತೆಗೆ ಜನಜಾಗೃತಿ ಮೂಡಿಸುವುದು 'ನಿಜಲಿಂಗಪ್ಪ ರಾಷ್ಟ್ರೀಯ ಪ್ರತಿಷ್ಠಾನ'ದ ಮುಖ್ಯ ಗುರಿಯಾಗಿದೆ. ನಾನು ಪ್ರಾರಂಭದಲ್ಲಿ ಪ್ರತಿಷ್ಠಾನಕ್ಕೆ ಐವತ್ತು ಸಾವಿರ ರೂಪಾಯಿಗಳ ಠೇವಣಿ ನೀಡಿದೆ. ಅದರ ಮೂಲಕ ಪದವಿಪೂರ್ವ ಹಾಗೂ ಪದವಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಕಳೆದ ಮೂರು ವರ್ಷಗಳಿಂದ ವಿದ್ಯಾರ್ಥಿವೇತನವನ್ನು ಕೊಡಲಾಗುತ್ತಿವೆ. ಹಾಗೆಯೇ ನಿಜಲಿಂಗಪ್ಪ ದತ್ತಿ ಉಪನ್ಯಾಸ ಮಾಲಿಕೆಯಲ್ಲಿ ಈ ತನಕ ಮೂರು ಉಪನ್ಯಾಸಗಳು ಜರುಗಿವೆ. ನಿವೃತ್ತ ಮುಖ್ಯ ನ್ಯಾಯಾಧೀಶರಾದ ಡಿ. ಎಂ. ಚಂದ್ರಶೇಖರ್ ಅವರು 'ಮಹಾತ್ಮ ಗಾಂಧೀಜಿ', ನಿಟ್ಟೂರು ಶ್ರೀನಿವಾಸರಾವ್ ಅವರು 'ಸರ್ದಾರ್ ವಲ್ಲಭಭಾಯಿ ಪಟೇಲ್' ಹಾಗೂ ಎಂ. ರಾಮಾಜೋಯಿಸ್ ಅವರು 'ಭಾರತೀಯ ಜೀವನ ಮೌಲ್ಯಗಳು' ಎಂಬ ವಿಷಯಗಳ ಬಗ್ಗೆ ಉಪನ್ಯಾಸಗಳನ್ನು ನೀಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ ಡಾ। ಕೆ. ರಾಘವೇಂದ್ರರಾವ್ ಅವರು ರಚಿಸಿದ 'ರಾಷ್ಟ್ರಬಂಧು ಎಸ್. ನಿಜಲಿಂಗಪ್ಪ - ಮ್ಯಾನ್ ಅಂಡ್ ಸ್ಟೇಟ್ಸ್‌ಮನ್' ಎಂಬ ಉದ್ಗ್ರಂಥವನ್ನು ಪ್ರತಿಷ್ಠಾನ ಬಿಡುಗಡೆ ಮಾಡಿದೆ. ಇದರ ಸುಲಭ

ಕನ್ನಡ ಆವೃತ್ತಿಯ ಬಿಡುಗಡೆಗೆ ಸಿದ್ಧತೆ ನಡೆದಿದೆ. ಪ್ರತಿಷ್ಠಾನ ಗ್ರಾಮಾಂತರ ಪ್ರದೇಶದಲ್ಲಿ ಉಚಿತ ವೈದ್ಯಕೀಯ ಶಿಬಿರಗಳನ್ನು ಏರ್ಪಡಿಸುತ್ತಿದೆ. ಎಸ್. ನಿಜಲಿಂಗಪ್ಪನವರ ಮೂಲ ಆಶಯವಾದ ಜನಸ್ಪಂದನೆಗೆ ಪ್ರತಿಷ್ಠಾನ ಮುಂದಾಗಿದೆ. ರಾಜಾಜಿನಗರದಲ್ಲಿ ಸಾರ್ವಜನಿಕರ ಕುಂದುಕೊರತೆಗಳ ಸಮಿತಿಯನ್ನು ರಚಿಸಿ ಆ ಮೂಲಕ ಅರ್ಹರಿಗೆ ಸರ್ಕಾರ ಹಾಗೂ ಇತರ ಕಡೆಯಿಂದ ಸಹಾಯ ದೊರೆಯುವಂತೆ ಮಾಡಿದೆ. ಆರ್. ವಿ. ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಡಾ। ಶರ್ಮಾರವರು ಗ್ರಾಮೀಣ ಯುವಜನತೆ ಸ್ವಾವಲಂಬಿತ ಉದ್ಯೋಗ ಪಡೆಯಲು ಅನುಕೂಲವಾಗುವಂತೆ ವಿಶೇಷ ಯೋಜನೆಯೊಂದನ್ನು ಪ್ರತಿಷ್ಠಾನಕ್ಕೆ ಮಾಡಿಕೊಟ್ಟಿದ್ದಾರೆ. ಇದರ ಅನುಷ್ಠಾನಕ್ಕೆ ಬೇಕಾದ ಆರ್ಥಿಕ ಸಹಾಯಕ್ಕಾಗಿ ಜಿಂದಾಲ್ ಸಂಸ್ಥೆಯ ನೆರವನ್ನು ಕೋರಲಾಗಿದೆ. ನಿಜಲಿಂಗಪ್ಪನವರಿಗೆ ಪ್ರಿಯವಾದ ಕೃಷಿ ಕ್ಷೇತ್ರದಲ್ಲಿ ಒಂದಿಷ್ಟು ಕೆಲಸ ಮಾಡುವ ಉದ್ದೇಶದಿಂದ ಕೃಷಿ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾದ ಡಾ। ಮಹದೇವ್ ಅವರ ನೇತೃತ್ವದಲ್ಲಿ 'ಬತ್ತ ಸಂಶೋಧನಾ ಕೇಂದ್ರ'ವನ್ನು ಪ್ರಾರಂಭಿಸಲಾಗಿದೆ. ರೈತರ ಬದುಕಿಗೆ ಅನುಕೂಲಕರವಾದ ಈ ಯೋಜನೆಯ ಅನುಷ್ಠಾನಕ್ಕೆ ರಾಜ್ಯಸರ್ಕಾರದ ನೆರವನ್ನು ಪ್ರಾರ್ಥಿಸಲಾಗಿದೆ.

ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ನಿಜಲಿಂಗಪ್ಪನವರ ದಿನಚರಿಗಳನ್ನು ಸಂರಕ್ಷಿಸಿ ಇಡಲಾಗಿದೆ. ನಿಜಲಿಂಗಪ್ಪ ಮತ್ತು ಡಾ। ದೇಜಗೌ ನಡುವಣ ಸಂದರ್ಶನ ಒಂದು ಅಮೂಲ್ಯ ದಾಖಲೆಯಾಗಿದ್ದು ಅದು ರಾಜ್ಯದ ಪತ್ರಾಗಾರ ಇಲಾಖೆಯಲ್ಲಿದೆ. ೧೯೯೮ ನವೆಂಬರ್ ೧೪ ಹಾಗೂ ೧೭ರಂದು ಬೆಂಗಳೂರು ದೂರದರ್ಶನ ಕೇಂದ್ರ ನಿಜಲಿಂಗಪ್ಪನವರ ಬದುಕು ಹಾಗೂ ಸಾಧನೆಯನ್ನು ಪ್ರತಿಬಿಂಬಿಸುವ 'ಪುರುಷ-ಯುಗಪುರುಷ' ಎಂಬ ವಿಶೇಷ ಮಾಲಿಕೆಯನ್ನು ಪ್ರಸಾರ ಮಾಡಿತ್ತು. ಅದು ಈಗಾಗಲೇ ಬಹುಜನರ ಮೆಚ್ಚುಗೆ ಗಳಿಸಿದೆ. ತಾಲ್ಲೂಕು, ಹೋಬಳಿ ಹಾಗೂ ಗ್ರಾಮಗಳಲ್ಲಿ ಅದನ್ನು ಪ್ರಸಾರ ಮಾಡಬೇಕೆಂಬ ಧ್ಯೇಯ ಪ್ರತಿಷ್ಠಾನದ್ದು. ತಮಿಳುನಾಡಿನ 'ಗಾಂಧಿಗ್ರಾಮ'ದಲ್ಲಿ ಗ್ರಾಮೀಣ ಯುವಜನತೆಗೆ ತರಬೇತಿ ಕೊಡುವ ವಿಶೇಷ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ಇದೇ ಮಾದರಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಬನವಾಸಿಯಲ್ಲಿ ಇಂತಹ ತರಬೇತಿ ಕೇಂದ್ರವನ್ನು ಪ್ರಾರಂಭಿಸುವ ಆಶಯ ಪ್ರತಿಷ್ಠಾನದ್ದು.

ರಾಜ್ಯದ ಅಭಿವೃದ್ಧಿಗೆ ನಿಜಲಿಂಗಪ್ಪನವರ ಕೊಡುಗೆ ಅನನ್ಯವಾದದ್ದು. ಎಲ್ಲ ನೀರಾವರಿ ಯೋಜನೆಗಳ ಜೊತೆಗೆ ಕಾರವಾರ ಹಾಗೂ ಮಂಗಳೂರು ಬಂದರು, ಕಾರವಾರ-ಹುಬ್ಬಳ್ಳಿ ರೈಲ್ವೆ ಯೋಜನೆಗಳ ಹಿಂದೆ ನಿಜಲಿಂಗಪ್ಪನವರ ಗಣನೀಯ ಪ್ರಯತ್ನ ಇದೆ. ಇಂತಹ ಅಮೂಲ್ಯ ದಾಖಲೆಗಳು ದೆಹಲಿಯ ರಾಷ್ಟ್ರೀಯ ವಸ್ತುಸಂಗ್ರಹಾಲಯದಲ್ಲಿವೆ. ಇವುಗಳನ್ನು ಪ್ರತಿಷ್ಠಾನಕ್ಕೆ ಪಡೆಯಲಾಗುವುದು.

ಕರ್ನಾಟಕ ಸರ್ಕಾರ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿದೆ. ವಿಧಾನಸೌಧದ ಪಶ್ಚಿಮದ್ವಾರದಲ್ಲಿ ನಿಜಲಿಂಗಪ್ಪನವರ ಪ್ರತಿಮೆ ಅನಾವರಣ ಮಾಡಲಾಗಿದೆ. ಈ ಸಂಬಂಧ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು 'ರಾಷ್ಟ್ರಭೂಷಣ', 'ಎಸ್. ಎನ್. ಚಿತ್ರಸಂಪುಟ', 'ಎಸ್. ಎನ್. ಫೋಟೋ ಆಲ್ಬಮ್' ಹಾಗೂ 'ಎಸ್. ನಿಜಲಿಂಗಪ್ಪ : ಎ ವಿಶನರಿ ವಿತ್ ಎ ಮಿಶನ್' ಎಂಬ ಮೂರು ಸಂಸ್ಮರಣ ಗ್ರಂಥಗಳನ್ನು ಡಾ। ದೇಜಗೌ ಅವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟಿಸಿದೆ. ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸಿದ ಕರ್ನಾಟಕ ಸರ್ಕಾರಕ್ಕೆ ನಮ್ಮ ಧನ್ಯವಾದಗಳು. ವಿಶೇಷವಾಗಿ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರಾದ ಶ್ರೀಮತಿ ರಾಣಿ ಸತೀಶ್ ಅವರಿಗೆ ಅಭಿನಂದನೆಗಳನ್ನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವದ ಅಂಗವಾಗಿ ಇದೀಗ ಡಾ। ದೇಜಗೌ ಅವರ ಪ್ರಧಾನ ಸಂಪಾದಕತ್ವದಲ್ಲಿ 'ಕರ್ನಾಟಕ ರಾಜಕೀಯ ಚಿಂತನೆ' ಎಂಬ ಬೃಹತ್ ಎಸ್. ಎನ್. ಸಂಸ್ಮರಣ ಗ್ರಂಥ ಪ್ರಕಟವಾಗುತ್ತಿದೆ. ಕಳೆದ ಐವತ್ತು ವರ್ಷಗಳ ಕರ್ನಾಟಕದ ರಾಜಕೀಯ ಕ್ಷೇತ್ರದ ಸೂಕ್ಷ್ಮ ಅಧ್ಯಯನ ಇಲ್ಲಿದೆ. ಯಾವುದೇ ರಾಜಕೀಯ ಪಕ್ಷಗಳ ಬಗ್ಗೆ ಸಮರ್ಪಕ ಮಾಹಿತಿ ದೊರೆಯದ ಈ ಸಂದರ್ಭದಲ್ಲಿ ಎಲ್ಲ ರಾಜಕೀಯ ಪಕ್ಷಗಳ ಬೆಳವಣಿಗೆಯನ್ನು ಸಮರ್ಪಕವಾಗಿ ಇಲ್ಲಿ ದಾಖಲು ಮಾಡಿರುವುದು ದೊಡ್ಡ ಸಾಹಸವಾಗಿದೆ. ಇದರ ಜತೆಗೆ ಕನ್ನಡ ಸಾಹಿತ್ಯದಲ್ಲಿ ರಾಜಕೀಯ ಪ್ರಜ್ಞೆ ಹಾಗೂ ಕರ್ನಾಟಕದಲ್ಲಿ ನಡೆದ ಪ್ರಮುಖ ಚಳವಳಿಗಳ ಬಗ್ಗೆ ವಿಶೇಷವಾದ ಅಧ್ಯಯನ ಕೈಗೊಳ್ಳಲಾಗಿದೆ. ಇಂತಹ ಮಹತ್ವದ ಯೋಜನೆಗೆ ಕಾರಣಕರ್ತರಾದ - ಗ್ರಂಥದ ಪ್ರಧಾನ ಸಂಪಾದಕರೂ, ಖ್ಯಾತ ಸಾಹಿತಿಗಳೂ ಆದ ಡಾ। ದೇಜಗೌ ಅವರನ್ನು ಪ್ರತಿಷ್ಠಾನ ಕೃತಜ್ಞತೆಯಿಂದ ನೆನೆಯುತ್ತದೆ.

ಶ್ರೀ ಕೆ. ಆರ್. ಕಮಲೇಶ್ ಅವರು ಸಂಪಾದಕರಾಗಿ ಈ ಗ್ರಂಥವನ್ನು ಹೊರತಂದಿದ್ದಾರೆ. ಇಲ್ಲಿಯ ಅನೇಕ ಲೇಖನಗಳನ್ನು ಒದಗಿಸಿಕೊಡಲು ಡಾ। ಮಂಜುಳಾ ಹುಲ್ಲಹಳ್ಳಿ ಅವರು ಸಹಾಯ ನೀಡಿದ್ದಾರೆ. ಎಸ್. ನಂಜುಂಡಸ್ವಾಮಿ, ಮೋಹನ್ ವರ್ಣೇಕರ್ ಹಾಗೂ ರಘು ಎಸ್. ಶೆಟ್ಟಿಗಾರ್ ಅವರುಗಳು ಈ ಗ್ರಂಥದಲ್ಲಿನ ಲೇಖನಗಳ ಪರಿಷ್ಕರಣೆಗೆ ಸಹಾಯ ಹಸ್ತ ಚಾಚಿದ್ದಾರೆ.

ಇಂತಹ ಬೃಹತ್ ಗ್ರಂಥವನ್ನು ಪ್ರಕಟಿಸುವುದು ದೊಡ್ಡ ಸಾಹಸವೇ ಸರಿ. ಇದಕ್ಕೆ ಆರ್ಥಿಕ ಸಹಾಯ ನೀಡಿದವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು. ಶ್ರೀಮತಿ ರಾಣಿ ಸತೀಶ್ ಅವರು ನಿಜಲಿಂಗಪ್ಪನವರ ಬಗ್ಗೆ ಅಸಾಧಾರಣ ಗೌರವ ಭಾವನೆಯುಳ್ಳವರು. ಅವರ ಆಪ್ತ ಕಾರ್ಯದರ್ಶಿ ಡಾ। ಎ. ಆರ್. ಮಂಜುನಾಥ್ ಅವರು ಸದಾ ಉತ್ತಮ ಕೆಲಸಗಳನ್ನು ಪ್ರೋತ್ಸಾಹಿಸುವವರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಗಳಾದ ಸಿ. ಎಸ್. ಕೇದಾರ್, ನಿರ್ದೇಶಕರಾದ ಸಿ. ಸೋಮಶೇಖರ ಹಾಗೂ ಜಂಟಿ ನಿರ್ದೇಶಕರಾದ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರುಗಳಾದ ಜೆ. ಎನ್. ಶಾಮರಾವ್, ವೈ. ಎಸ್. ವಿಜಯಲಕ್ಷ್ಮಿ ಅವರುಗಳು ಗ್ರಂಥ ಪ್ರಕಟಣೆಗೆ ತುಂಬ ಸಹಾಯ ನೀಡಿದ್ದಾರೆ. ಅವರುಗಳ ಈ ಸಹಾಯವನ್ನು ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ನೆನೆಸಿಕೊಳ್ಳಲಾಗಿದೆ.

ಈ ಬೃಹತ್ ಗ್ರಂಥದ ಕರಡನ್ನು ತಿದ್ದಿದ ಡಾ। ಬೈರಮಂಗಲ ರಾಮೇಗೌಡ, ಸುಂದರ ರಕ್ಷಾಪುಟ ರಚಿಸಿಕೊಟ್ಟ ಶ್ರೀಪಾದ್, ಲಕ್ಷ್ಮಿ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್, ವ್ಯವಸ್ಥಾಪಕ ಶ್ರೀ ಕೃಷ್ಣಮೂರ್ತಿ, ಸಿಬ್ಬಂದಿಗಳಾದ ಶ್ರೀಮತಿ ಸತ್ಯಕುಮಾರಿ, ಎಸ್. ಮಂಜುನಾಥ ತುಸುವೂ ಬೇಸರಿಸಿಕೊಳ್ಳದೆ ಈ ಗ್ರಂಥ ಪ್ರಕಟಣೆಗೆ ದುಡಿದಿದ್ದಾರೆ. ಮತ್ತೊಮ್ಮೆ ಈ ಗ್ರಂಥ ಪ್ರಕಟಣೆಗೆ ಸಹಾಯ ಮಾಡಿದ ಎಲ್ಲರನ್ನೂ ಪ್ರತಿಷ್ಠಾನ ನೆನೆಸಿಕೊಳ್ಳುತ್ತದೆ. ಎಸ್. ನಿಜಲಿಂಗಪ್ಪನವರ ಸದ್ವಿಚಾರಗಳು ನಾಡಿನ ಎಲ್ಲೆಡೆ ಪ್ರಸಾರವಾಗಲಿ ಎಂಬುದೇ ಪ್ರತಿಷ್ಠಾನದ ಆಶಯ.

ಬೆಂಗಳೂರು
೩೦.೧.೨೦೦೩

**ವೈ. ರಾಮಚಂದ್ರ**
ಕಾರ್ಯಾಧ್ಯಕ್ಷರು

# ರಾಷ್ಟ್ರಬಂಧು ಸಿದ್ದವನಹಳ್ಳಿ ನಿಜಲಿಂಗಪ್ಪ ಅವರ ಜನ್ಮಶತಮಾನೋತ್ಸವ ಆಚರಣೆ

ದಿನಾಂಕ ೧೭.೧.೨೦೦೩ರಂದು ಬೆಂಗಳೂರಿನ ವಿಧಾನಸೌಧದ ಬಾಂಕ್ವೆಟ್ ಹಾಲ್‌ನಲ್ಲಿ ಸಡಗರ ಸಂಭ್ರಮದ ವಾತಾವರಣ. ರಾಷ್ಟ್ರನಾಯಕ, ತತ್ವನಿಷ್ಠ, ಹಿರಿಯ ಗಾಂಧೀವಾದಿ ಆಗಿದ್ದ ಎಸ್. ನಿಜಲಿಂಗಪ್ಪನವರ (ಜನನ ೧೯೦೨ ಡಿಸೆಂಬರ್ ೧೦ - ಮರಣ ೨೦೦೦ ಜೂನ್ ೦೮) ಜನ್ಮಶತಮಾನೋತ್ಸವದ ಉದ್ಘಾಟನಾ ಕಾರ್ಯಕ್ರಮಕ್ಕೆ ಸಕಲ ಸಿದ್ಧತೆಗಳು ಪೂರ್ಣಗೊಂಡಿದ್ದವು. ಮಧ್ಯಾಹ್ನ ೩.೩೦ ಘಂಟೆಗೆ ಕರ್ನಾಟಕ ಸರ್ಕಾರದ ವಾರ್ತಾ ಇಲಾಖೆ ಏರ್ಪಡಿಸಿದ್ದ ಎಸ್. ನಿಜಲಿಂಗಪ್ಪನವರ ಛಾಯಾಚಿತ್ರ ಪ್ರದರ್ಶನವನ್ನು ಉದ್ಘಾಟಿಸಿದ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಅವರು ತಮ್ಮ ಸಹಪಾಠಿ, ಬಾಲ್ಯಮಿತ್ರ, ತಾವು ಹಂಗಾಮಿ ರಾಜ್ಯಪಾಲರಾಗಿದ್ದಾಗ ಮುಖ್ಯಮಂತ್ರಿಯಾಗಿದ್ದ ನಿಜಲಿಂಗಪ್ಪನವರ ಗುಣಗಾನ ಮಾಡಿದರು. ಸುಮಾರು ೨೫೦ಕ್ಕೂ ಹೆಚ್ಚಿನ ಅಪರೂಪದ ಛಾಯಾಚಿತ್ರಗಳು ಇಲ್ಲಿ ಪ್ರದರ್ಶನಗೊಂಡಿದ್ದವು. ಸ್ವಾತಂತ್ರ್ಯ ಹೋರಾಟದಲ್ಲಿ ಎಸ್. ನಿಜಲಿಂಗಪ್ಪನವರು ಪಾಲ್ಗೊಂಡಿದ್ದರಿಂದ ಹಿಡಿದು ಅವರು ಮುಖ್ಯಮಂತ್ರಿ ಹಾಗೂ ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದಾಗ ಕೈಗೊಂಡ ಅನೇಕ ಕಾರ್ಯಕ್ರಮಗಳ ವಿವಿಧ ಛಾಯಾಚಿತ್ರಗಳು ಇಲ್ಲಿ ಪ್ರದರ್ಶನಗೊಂಡು ಅವರ ಸಮಗ್ರ ವ್ಯಕ್ತಿತ್ವ ನೋಡುಗರ ಕಣ್ಮುಂದೆ ಮೂಡಿಬರುತ್ತಿತ್ತು. ರಾಜ್ಯ ಪತ್ರಾಗಾರ ಇಲಾಖೆಯವರು ನಿಜಲಿಂಗಪ್ಪನವರೊಡನೆ ಈ ಹಿಂದೆ ಡಾ। ದೇಜಗೌ ಅವರು ನಡೆಸಿದ ಸಂದರ್ಶನದ ಭಾಗಗಳನ್ನು ಪ್ರಸಾರ ಮಾಡುತ್ತಿದ್ದರು. ನಿಜಲಿಂಗಪ್ಪನವರ ಧ್ವನಿಯನ್ನು ಕೇಳುತ್ತ ಛಾಯಾಚಿತ್ರಗಳನ್ನು ನೋಡುತ್ತಿದ್ದ ಸಹೃದಯ ಅಭಿಮಾನಿಗಳ ಮಧುರ ಭಾವನೆಯನ್ನು ವರ್ಣಿಸಲು ಅಸಾಧ್ಯವಾಗಿತ್ತು. ರಾಜ್ಯ ಪತ್ರಾಗಾರ ಇಲಾಖೆಯವರು ನಿಜಲಿಂಗಪ್ಪನವರ ದಿಚರಿಯಿಂದ ಆಯ್ದ ಭಾಗಗಳನ್ನು ಪ್ರದರ್ಶಿಸಿದ್ದರು. ಈ ದಿನಚರಿಯು ಎಸ್. ಎನ್. ಅವರ ಕೈಬರಹದಿಂದ ಕೂಡಿತ್ತು. ನಿಜಲಿಂಗಪ್ಪನವರ ನಿಷ್ಠುರ ವ್ಯಕ್ತಿತ್ವಕ್ಕೆ ಸಾಕ್ಷ್ಯ ನೀಡುವಂತೆ ಮೂರು ಅಮೂಲ್ಯ ಪತ್ರಗಳು ಅಲ್ಲಿ ಪ್ರದರ್ಶನಗೊಂಡಿದ್ದವು. ೧೯೮೮ರಲ್ಲಿ ಮುಖ್ಯಮಂತ್ರಿಯಾಗಿದ್ದ ಎಸ್. ಆರ್. ಬೊಮ್ಮಾಯಿಯವರು ''ನೀವು ಬೆಂಗಳೂರಿಗೆ ಬನ್ನಿ. ಸರ್ಕಾರ ನಿಮಗೆ ಎಲ್ಲ ಸೌಕರ್ಯಗಳನ್ನು ಕಲ್ಪಿಸುತ್ತದೆ'' ಎಂದಿದ್ದರು. ಆದರೆ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳ ಆಹ್ವಾನವನ್ನು ನಯವಾಗಿ ತಿರಸ್ಕರಿಸಿ ಪತ್ರ ಬರೆದಿದ್ದರು. ಸರ್ದಾರ್ ವಲ್ಲಭಭಾಯ್ ಪಟೇಲ್ ಟ್ರಸ್ಟ್‌ನ ಕಾರ್ಯದರ್ಶಿ ಡಾ। ಛೋಪ್ರಾ ಅವರು ನಿಜಲಿಂಗಪ್ಪನವರಿಗೆ 'ಭಾರತರತ್ನ' ಪ್ರಶಸ್ತಿ ಕೊಡುವಂತೆ ರಾಷ್ಟ್ರಪತಿ ಕೆ.ಆರ್. ನಾರಾಯಣನ್ ಅವರಿಗೆ ಪತ್ರ ಬರೆದಿದ್ದರು. ''ಈ ವಿಚಾರ ನನ್ನ ಗಮನಕ್ಕೇ ಬಂದಿಲ್ಲವಾಗಿ ದಯಮಾಡಿ ನನ್ನ ಹೆಸರನ್ನು 'ಭಾರತರತ್ನ' ಪ್ರಶಸ್ತಿಗೆ ಪರಿಗಣಿಸಬೇಡಿ'' ಎಂದು ಸ್ವತಃ ನಿಜಲಿಂಗಪ್ಪನವರು ರಾಷ್ಟ್ರಪತಿಗಳಿಗೆ ಮತ್ತೊಂದು ಪತ್ರವನ್ನು ಬರೆದಿದ್ದರು. ಅವರ ಪತ್ರವನ್ನು ಕಂಡು ಆಶ್ಚರ್ಯಚಕಿತರಾದ ರಾಷ್ಟ್ರಪತಿ ಕೆ.ಆರ್. ನಾರಾಯಣನ್ ಅವರು ತಮ್ಮಂಥ ಅಪರೂಪದ ವ್ಯಕ್ತಿಗಳು ಇರುವುದರಿಂದಲೇ ನಮ್ಮ ಸಮಾಜದಲ್ಲಿ ಇನ್ನೂ ಮೌಲ್ಯಗಳು ಉಳಿದಿರುವುದು ಎಂದು ಪ್ರತ್ಯುತ್ತರ ನೀಡಿದ್ದರು. ಈ ಮೂರು ಪತ್ರಗಳು ನಿಜಲಿಂಗಪ್ಪನವರ ಮನೋಧರ್ಮವನ್ನು ತಿಳಿಯಲು ಸಹಾಯಕವಾಗಿದ್ದವು. ಪ್ರತಿಯೊಂದು ಛಾಯಾಚಿತ್ರವೂ

ಅವರ ಸುಖೀ ಕುಟುಂಬದ ಕತೆಯನ್ನು ಹೆಮ್ಮೆಯಿಂದ ಹೇಳುತ್ತಿದ್ದವು. ಛಾಯಾಚಿತ್ರ, ದಿನಚರಿ, ಪತ್ರ ಹಾಗೂ ಧ್ವನಿಗಳ ಸಹಾಯದಿಂದ ಇಂದು ನಮ್ಮೊಡನೆ ಇಲ್ಲದ ಪೂಜ್ಯ ನಿಜಲಿಂಗಪ್ಪನವರನ್ನು ಸಮರ್ಥವಾಗಿ ಕಲ್ಪಿಸಿಕೊಳ್ಳಬಹುದಾಗಿತ್ತು, ಅವರ ಆದರ್ಶಗಳನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳಬಹುದಾಗಿತ್ತು.

ವಿಧಾನಸೌಧದ ಪಶ್ಚಿಮ ದ್ವಾರದಲ್ಲಿ ನಿಜಲಿಂಗಪ್ಪನವರ ಆಳೆತ್ತರ ಕಂಚಿನ ಪ್ರತಿಮೆಯನ್ನು ಅನಾವರಣ ಮಾಡಿದ ಉಪರಾಷ್ಟ್ರಪತಿ ಶ್ರೀ ಭೈರೋನ್‌ಸಿಂಗ್ ಶೆಖಾವತ್ ಅವರು ಸರಿಯಾದ ವೇಳೆಗೆ ವೇದಿಕೆಗೆ ಆಗಮಿಸಿದರು. ಖ್ಯಾತ ಹಿಂದೂಸ್ತಾನಿ ಸಂಗೀತ ವಿದುಷಿ ಶ್ರೀಮತಿ ಸಂಗೀತಾ ಕುಲಕರ್ಣಿ (ಕಟ್ಟಿ) ಅವರು 'ವಂದೇ ಮಾತರಂ' 'ಜಯ ಭಾರತ ಜನನಿಯ ತನುಜಾತೆ' ಎಂಬ ಗೀತೆಗಳನ್ನು ಸುಮಧುರವಾಗಿ ಹಾಡಿ ಪ್ರಾರ್ಥನೆ ಮಾಡಿದರು. ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರು ''ಕರ್ನಾಟಕ ಸರ್ಕಾರ ಯುವಜನತೆ ಹಾಗೂ ದೇಶಕ್ಕೆ ಆದರ್ಶ ವ್ಯಕ್ತಿತ್ವವೊಂದನ್ನು ಪರಿಚಯಿಸಲು ನಿಶ್ಚಯಿಸಿ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವವನ್ನು ಆಚರಿಸಲು ನಿರ್ಧಾರ ಕೈಗೊಂಡಿತು. ಅದರ ಅಂಗವಾಗಿ 'ರಾಷ್ಟ್ರಭೂಷಣ' 'ಎಸ್. ಎನ್. ಚಿತ್ರಸಂಪುಟ' ಹಾಗೂ 'ಎ ವಿಜನರಿ ವಿತ್ ಎ ಮಿಷನ್' ಎಂಬ ಮೂರು ಸಂಸ್ಮರಣ ಗ್ರಂಥಗಳು ಈಗ ಹೊರಬರುತ್ತಿವೆ. ಈ ಗ್ರಂಥಗಳ ಮೂಲಕ ನಾಡಿನ ಖ್ಯಾತ ಲೇಖಕರು, ಚಿಂತಕರು ಹಾಗೂ ರಾಜಕಾರಣಿಗಳು ನಿಜಲಿಂಗಪ್ಪನವರ ಸಾಧನೆ ಹಾಗೂ ಸಿದ್ಧಿಯನ್ನು ಅರ್ಥಪೂರ್ಣವಾಗಿ ಕಂಡರಿಸಿದ್ದಾರೆ. ಈ ಯೋಜನೆಯ ಅನುಷ್ಠಾನಕ್ಕೆ ವಿಶೇಷ ಆಸಕ್ತಿ ತೋರಿಸಿ ಮಾರ್ಗದರ್ಶನ ನೀಡಿದವರು ನಮ್ಮ ಮುಖ್ಯಮಂತ್ರಿಗಳಾದ ಎಸ್.ಎಂ. ಕೃಷ್ಣ ಹಾಗೂ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ ಸಮಿತಿಯ ಅಧ್ಯಕ್ಷರಾದ ಶ್ರೀ ಕೆ. ಹೆಚ್. ರಂಗನಾಥ್ ಅವರು. ಈ ಸಂಸ್ಮರಣ ಗ್ರಂಥಗಳು ಇಷ್ಟೊಂದು ಅಚ್ಚುಕಟ್ಟಾಗಿ ಹೊರಬರಲು ಕಾರಣರಾದವರು ಅದರ ಪ್ರಧಾನ ಸಂಪಾದಕರಾದ ಡಾ। ದೇಜಗೌ ಹಾಗೂ ಅವರ ಮಿತ್ರರು'' ಎಂದರು.

ಪ್ರಧಾನ ಸಂಪಾದಕರಾದ ಡಾ। ದೇಜಗೌ ಅವರು ಪ್ರಾಸ್ತಾವಿಕ ನುಡಿಗಳನ್ನಾಡುತ್ತ ''ರಾಷ್ಟ್ರ ನಾಯಕರಾದ ಎಸ್. ನಿಜಲಿಂಗಪ್ಪ ಅವರದ್ದು ಸುಸಂಸ್ಕೃತ, ತತ್ವನಿಷ್ಠ, ಮುಕ್ತಮನಸ್ಸಿನ ಅಸಾಧಾರಣ ವ್ಯಕ್ತಿತ್ವ. ಅವರ ಕನಸು ಹಾಗೂ ಅವರು ರಾಜ್ಯಕ್ಕೆ ರೂಪಿಸಿದ ಯೋಜನೆಗಳಿಂದಲೇ ಅದರ ಮಹತ್ವವನ್ನು ಮನಗಾಣಬಹುದು. ಅವರ ಜೀವನಚರಿತ್ರಕಾರನಾಗಿ ಅವರನ್ನು ಬಹಳ ಹತ್ತಿರದಿಂದ ನಾನು ನೋಡಿದ್ದೇನೆ. ಅವರ ವಿಚಾರಧಾರೆಗಳು ರಾಷ್ಟ್ರದ ಯಾವ ನಾಯಕರಿಗೂ ಕಡಿಮೆ ಇಲ್ಲದಂಥಾದ್ದು. ಈ ಸಂಸ್ಮರಣ ಗ್ರಂಥಗಳು ಅವರ ವ್ಯಕ್ತಿತ್ವವನ್ನು ಸಮರ್ಥವಾಗಿ ಪ್ರತಿಬಿಂಬಿಸುತ್ತವೆ. ಅವರ ಆಲೋಚನೆಗಳನ್ನು ಇಲ್ಲಿ ಅರ್ಥಪೂರ್ಣವಾಗಿ ಸಂಗ್ರಹಿಸಲಾಗಿದೆ. ಅವುಗಳಿಂದ ಇನ್ನುಮುಂದೆ ಅವರನ್ನು ಕುರಿತಾದ ಕತೆ, ಕಾದಂಬರಿ ಹಾಗೂ ಮಹಾಕಾವ್ಯಗಳು ರಚನೆಯಾಗಬೇಕು ಎಂಬುದು ನನ್ನ ಆಶಯ. ಈ ಗ್ರಂಥಗಳು ಇಷ್ಟೊಂದು ಅಚ್ಚುಕಟ್ಟಾಗಿ ಹೊರಬರಲು ಕಾರಣರಾದವರು ಅದರ ಸಂಪಾದಕರಾದ ಡಾ। ಎ.ಆರ್. ಮಂಜುನಾಥ್, ಕೆ.ಆರ್. ಕಮಲೇಶ್, ಕಾ.ತ. ಚಿಕ್ಕಣ್ಣ ಹಾಗೂ ಡಾ। ಮಂಜುಳ ಹುಲ್ಲಹಳ್ಳಿ ಇವರುಗಳು. ಡಾ। ಟಿ.ಸಿ. ಪೂರ್ಣಿಮಾ, ವಿದ್ವಾನ್ ಶಿವಕುಮಾರಸ್ವಾಮಿಯವರು ಸಕಾಲಿಕ ನೆರವು ನೀಡಿದ್ದಾರೆ. ರಾಜ್ಯಸಭಾ ಸದಸ್ಯರೂ, ಸಜ್ಜನಿಕೆಗೆ ಮತ್ತೊಂದು ಹೆಸರಾದ ಶ್ರೀ ಎಂ. ವಿ. ರಾಜಶೇಖರನ್ ಅವರು ಈ ಗ್ರಂಥ ಇಷ್ಟೊಂದು ಸುಂದರವಾಗಿ ಬರಲು ಕಾರಣೀಭೂತರಾಗಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಈ ಗ್ರಂಥ ಪ್ರಕಟವಾಗಲು ಮುಖ್ಯವಾಗಿ ಕಾರಣಕರ್ತರಾದವರು ಮುಖ್ಯಮಂತ್ರಿಗಳಾದ ಸನ್ಮಾನ್ಯ ಎಸ್. ಎಂ. ಕೃಷ್ಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್, ಮಾನ್ಯ ಅರಣ್ಯ ಸಚಿವರೂ ಹಾಗೂ ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ ಸಮಿತಿಯ ಅಧ್ಯಕ್ಷರೂ ಆದ ಶ್ರೀ ಕೆ. ಹೆಚ್. ರಂಗನಾಥ್ ಅವರು ಸೂಕ್ತ ಮಾರ್ಗದರ್ಶನ ನೀಡಿದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಸಿ. ಸೋಮಶೇಖರ್, ಕಾರ್ಯದರ್ಶಿಯವರಾದ ಶ್ರೀ ಸಿ. ಎಸ್. ಕೇದಾರ್ ಅವರ ನೆರವನ್ನು ಮರೆಯುವಂತಿಲ್ಲ'' ಎಂಬುದಾಗಿ ಅವರು ಕೃತಜ್ಞತೆಯನ್ನು ಅರ್ಪಿಸಿದರು.

ಎಸ್. ಎನ್. ಅವರ ಚಿತ್ರಸಂಪುಟವನ್ನು ಬಿಡುಗಡೆ ಮಾಡಿದ ಮಾನ್ಯ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರು ''ಈ ಚಿತ್ರ ಸಂಪುಟ ಎಸ್. ನಿಜಲಿಂಗಪ್ಪನವರ ಸಮಗ್ರ ವ್ಯಕ್ತಿತ್ವವನ್ನು ತಿಳಿಯಲು ಸಹಾಯಕವಾಗಿದೆ. ೧೯೬೨ರಲ್ಲಿ ನಾನು ವಿಧಾನ ಸಭೆಯನ್ನು ಪ್ರವೇಶಿಸಿದಾಗ ಈ ರಾಜ್ಯದ ಮುಖ್ಯಮಂತ್ರಿಯಾಗಿದ್ದವರು ಎಸ್. ನಿಜಲಿಂಗಪ್ಪನವರು. ವಿರೋಧಪಕ್ಷದ ಸದಸ್ಯನಾಗಿ ನಾನು ವಿಧಾನಸಭೆಯಲ್ಲಿ ನಿಜಲಿಂಗಪ್ಪನವರ ವಿರುದ್ಧ ಸಾಕಷ್ಟು ಮಾತನಾಡಿದ್ದೇನೆ. ಟೀಕೆಗಳನ್ನು ಅವರು ಎಂದೂ ವೈಯಕ್ತಿಕ ಮಟ್ಟದಲ್ಲಿ ತೆಗೆದುಕೊಂಡವರಲ್ಲ. ಟೀಕೆಗಳಲ್ಲಿನ ಗುಣಗಳನ್ನು ಗ್ರಹಿಸಿ ರಚನಾತ್ಮಕ ಕೆಲಸಗಳನ್ನು ಮಾಡುವ ಮೂಲಕ ಆ ಟೀಕೆಗೆ ಒಂದು ಅರ್ಥವನ್ನು

ಅವರು ಕೊಡುತ್ತಿದ್ದರು. ರಾಜ್ಯದ ಎಲ್ಲ ನೀರಾವರಿ ಯೋಜನೆಗಳಿಗೂ ಅವರು ಅಸ್ತಿಭಾರ ಹಾಕಿದವರು. ಅಂದು ಪ್ರಧಾನಿಯಾಗಿದ್ದ ಲಾಲ್ ಬಹದ್ದೂರ್ ಶಾಸ್ತ್ರಿ ಅವರಿಂದ ಎಸ್. ನಿಜಲಿಂಗಪ್ಪನವರು ಆಲಮಟ್ಟಿ ಜಲಾಶಯಕ್ಕೆ ಶಂಕುಸ್ಥಾಪನೆಯನ್ನು ಮಾಡಿಸಿದರು. ಇಂದು ಅಲ್ಲಿ ನೀರು ಸಂಗ್ರಹವಾಗಿದೆ. ಇದಕ್ಕೆ ಕಾರಣರಾದ ಎಸ್. ನಿಜಲಿಂಗಪ್ಪ ಅವರನ್ನು ನಾಡು ಕೃತಜ್ಞತೆಯಿಂದ ನೆನೆಯಬೇಕು. ಇಂತಹ ಎಷ್ಟೋ ಸಂದರ್ಭಗಳನ್ನು ಉಲ್ಲೇಖಿಸಬಹುದು. ರಾಜ್ಯಗಳಿಗೆ ಹೆಚ್ಚಿನ ಸ್ವಾಯತ್ತತೆಯನ್ನು ಕೊಡಬೇಕು ಎಂಬುದು ಅವರ ಮೂಲಭೂತ ಆಶಯವಾಗಿತ್ತು. ೧೯೯೮ರಲ್ಲಿ ಚಿತ್ರದುರ್ಗದಲ್ಲಿ ಅವರ ನಿವಾಸದಲ್ಲಿ ನಮ್ಮ ಪಕ್ಷದ ಅಧ್ಯಕ್ಷರಾದ ಶ್ರೀಮತಿ ಸೋನಿಯಾ ಗಾಂಧಿಯವರೊಡನೆ ಅವರನ್ನು ನಾನು ಭೇಟಿಯಾಗಿದ್ದೆ. ಆಗ ನಿಜಲಿಂಗಪ್ಪನವರು ಶ್ರೀಮತಿ ಸೋನಿಯಾ ಗಾಂಧಿಯವರಿಗೆ ಭಾರತ ಸಂವಿಧಾನದ ಪ್ರತಿಯನ್ನು ನೀಡಿ ಸಂವಿಧಾನದ ನಿರ್ದೇಶಕ ಸೂತ್ರಗಳಲ್ಲಿರುವಂತೆ ರಾಜ್ಯದ ಸ್ವಾಯತ್ತತೆಗೆ ಸಂಬಂಧಿಸಿದ ವಿಧಿಗಳತ್ತ ಅವರ ಗಮನ ಸೆಳೆದಿದ್ದರು. ಒಕ್ಕೂಟ ವ್ಯವಸ್ಥೆ ಸಾಕಷ್ಟು ಬೆಳೆಯಲು ರಾಜ್ಯಗಳು ಪರಿಪೂರ್ಣವಾಗಿ ಬೆಳೆಯಬೇಕು ಎಂಬ ರಾಜಕೀಯ ಮುತ್ಸದ್ದಿತನ ಅವರದ್ದಾಗಿತ್ತು'' ಎಂದರು.

'ಎ ವಿಜನರಿ ವಿತ್ ಎ ಮಿಷನ್' ಎಂಬ ಇಂಗ್ಲಿಷ್ ಭಾಷೆಯಲ್ಲಿನ ಸಂಸ್ಮರಣ ಗ್ರಂಥವನ್ನು ಬಿಡುಗಡೆ ಮಾಡಿದ ಕರ್ನಾಟಕದ ರಾಜ್ಯದ ರಾಜ್ಯಪಾಲರಾದ ಶ್ರೀ ಟಿ. ಎನ್. ಚತುರ್ವೇದಿಯವರು ''ಕನ್ನಡೇತರರು ಶ್ರೀ ಎಸ್. ನಿಜಲಿಂಗಪ್ಪನವರ ಮಹಾನ್ ವ್ಯಕ್ತಿತ್ವವನ್ನು ತಿಳಿಯಲು ಈ ಗ್ರಂಥ ತುಂಬಾ ಸಹಾಯಕವಾಗಿದೆ. ಇದರಲ್ಲಿ ಎಸ್. ಎನ್. ಅವರ ಭಾಷಣ ಹಾಗೂ ಪತ್ರಗಳನ್ನು ಕೊಟ್ಟಿರುವುದು ಉಲ್ಲೇಖಾರ್ಹವಾದ ವಿಚಾರ. ಪ್ರತಿಯೊಂದು ಲೇಖನವೂ ಎಸ್. ಎನ್. ಅವರ ಬದುಕು ಹಾಗೂ ಸಾಧನೆಯನ್ನು ಸಮರ್ಪಕವಾಗಿ ಪರಿಚಯಿಸುತ್ತದೆ. ಅರವತ್ತರ ದಶಕದಲ್ಲಿ ನಾನು ರಾಜಸ್ತಾನದ ಮುಖ್ಯಮಂತ್ರಿಯಾಗಿದ್ದ ಮೋಹನ್‌ಲಾಲ್ ಸುಖಾಡಿಯಾ ಅವರ ಕಾರ್ಯದರ್ಶಿಯಾಗಿದ್ದೆ. ಆಗ ನಿಜಲಿಂಗಪ್ಪನವರ ಸಂಪರ್ಕ ನನಗೆ ಒದಗಿತ್ತು. ಆ ಹೊತ್ತಿಗೆ ನಿಜಲಿಂಗಪ್ಪನವರು ಕಾಂಗ್ರೆಸ್ ಸಂಸ್ಥೆಯ ನೀತಿ ನಿರೂಪಕರಲ್ಲಿ ಒಬ್ಬರಾಗಿದ್ದರು. ಸರಳತೆ, ಮುಕ್ತಮನಸ್ಸು, ಜನಪರ ಚಿಂತನೆ ಮೊದಲಾದ ಉತ್ಕೃಷ್ಟ ಗುಣಗಳಿಂದಾಗಿ ಅವರು ರಾಷ್ಟ್ರದ ಪ್ರಜ್ಞಾವಂತರ ಗಮನ ಸೆಳೆದಿದ್ದರು. ಅವರಿಗೆ ಎರಡು ವಿಚಾರಗಳಲ್ಲಿ ಅಚಲವಾದ ನಂಬಿಕೆ ಇತ್ತು. ಅವೆಂದರೆ ಮನುಷ್ಯ ಪ್ರಯತ್ನ ಹಾಗೂ ಪ್ರಾಮಾಣಿಕ ದುಡಿಮೆ. ಅವರಲ್ಲಿನ ಆತ್ಮವಿಶ್ವಾಸ ಸಾಮಾನ್ಯವಾದುದಲ್ಲ. ಅದೇ ರೀತಿ ಸ್ವಾಭಿಮಾನ ಕೂಡ ಅವರ ವ್ಯಕ್ತಿತ್ವದ ವಿಶೇಷಣ ಆಗಿತ್ತು. ಕರ್ನಾಟಕದ ನಿರ್ಮಾಣದಲ್ಲಿ ಅವರ ಕೊಡುಗೆ ಅಪಾರ. ನೀರಾವರಿ, ಕೃಷಿ, ಗ್ರಾಮೀಣಾಭಿವೃದ್ಧಿ ಹಾಗೂ ಶಿಕ್ಷಣಕ್ಕೆ ಅವರು ಆದ್ಯತೆ ಕೊಟ್ಟಿದ್ದರಿಂದಲೇ ಇಂದು ಕರ್ನಾಟಕ ಪ್ರಗತಿಪಥದಲ್ಲಿ ಇರಲು ಸಾಧ್ಯವಾಗಿದೆ'' ಎಂದರು.

ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ ಸಮಾರಂಭವನ್ನು ಉದ್ಘಾಟಿಸಿ ಅನಂತರ 'ರಾಷ್ಟ್ರಭೂಷಣ' ಎಂಬ ಕನ್ನಡ ಸಂಸ್ಮರಣ ಗ್ರಂಥವನ್ನು ಬಿಡುಗಡೆ ಮಾಡಿದ ಉಪರಾಷ್ಟ್ರಪತಿ ಶ್ರೀ ಭೈರೋನ್‌ಸಿಂಗ್ ಶೆಖಾವತ್ ಅವರು ''೧೯೬೯ರಲ್ಲಿ ರಾಷ್ಟ್ರಪತಿ ಹುದ್ದೆಗೆ ಸ್ಪರ್ಧಿಸಿದ್ದ ನೀಲಂ ಸಂಜೀವರೆಡ್ಡಿ ಅವರ ಪರವಾಗಿ ಚುನಾವಣಾ ಪ್ರಚಾರ ಮಾಡಲು ನಿಜಲಿಂಗಪ್ಪನವರು ಜೈಪುರಕ್ಕೆ ಬಂದಿದ್ದರು. ಆಗ ನಾನು ಅಂದಿನ ವಿರೋಧಪಕ್ಷವಾದ ಜನಸಂಘದಲ್ಲಿದ್ದೆ. ನಾವಿಬ್ಬರೂ ಬೇರೆಬೇರೆ ಪಕ್ಷದಲ್ಲಿದ್ದರೂ ನಮ್ಮೊಡನೆ ಸ್ನೇಹಭಾವ ಇತ್ತು. ಅವರು ಪಕ್ಷ ರಾಜಕೀಯವನ್ನೇ ಸರ್ವಸ್ವವೆಂದು ಪರಿಗಣಿಸಿದವರಲ್ಲ. ಅದಕ್ಕಿಂತ ಹೆಚ್ಚಿಗೆ ಮಾನವೀಯ ಮೌಲ್ಯಗಳಿಗೆ ಬೆಲೆ ಕೊಟ್ಟಿದ್ದರು. ಅವರು ಒಬ್ಬ ಶ್ರೇಷ್ಠ ಪ್ರಜಾಪ್ರಭುತ್ವ ಪ್ರೇಮಿ. ಅವರು ಅಖಿಲಭಾರತ ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ತಮ್ಮ ಪಕ್ಷದ ವಿರುದ್ಧವೇ ಎ.ಐ.ಸಿ.ಸಿ.ಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿ ತಾತ್ಕಾಲಿಕ ಸರ್ಕಾರಕ್ಕಿಂತ ಪಕ್ಷ ಎಂಬ ಸಂಸ್ಥೆ ದೊಡ್ಡದು ಎಂಬುದನ್ನು ನಿರೂಪಿಸಿದ್ದರು. ಅವರಿಗೆ ಸಂಸ್ಥೆಯನ್ನು ಕಟ್ಟಿ ಬೆಳೆಸುವುದು ಮುಖ್ಯವಾಗಿತ್ತೇ ಹೊರತು ಅಧಿಕಾರವನ್ನು ಕಬಳಿಸುವುದು ಮುಖ್ಯವಾಗಿರಲಿಲ್ಲ. ಬಡ ಕುಟುಂಬದಲ್ಲಿ ಜನಿಸಿದ ಎಸ್. ನಿಜಲಿಂಗಪ್ಪನವರು ಆಧುನಿಕ ಕರ್ನಾಟಕದ ಶಿಲ್ಪಿ. ಗಾಂಧೀಜಿಯವರ ಗ್ರಾಮಸ್ವರಾಜ್ಯ, ಬಡತನ ನಿರ್ಮೂಲನ ತತ್ವಗಳಿಗೆ ಬದ್ಧರಾಗಿದ್ದ ಅವರು ಪ್ರಧಾನಿ ನೆಹರೂ ಅವರ ಆಧುನೀಕರಣ ತತ್ವವನ್ನು ಒಪ್ಪಿರಲಿಲ್ಲ. ಸ್ವದೇಶಿ ತತ್ವದಿಂದ ಮಾತ್ರ ಭಾರತದ ಅಭಿವೃದ್ಧಿ ಸಾಧ್ಯವೆಂದು ಅವರು ನಂಬಿದ್ದರು. ದರಿದ್ರ ನಾರಾಯಣನ ಸೇವೆ ಮಾಡುವುದೇ ನಾವು ಮಹಾನ್ ನಾಯಕ ನಿಜಲಿಂಗಪ್ಪನವರಿಗೆ ಸಲ್ಲಿಸಬಹುದಾದ ಗೌರವ. ಅರ್ಥಪೂರ್ಣವಾಗಿ ನಿಜಲಿಂಗಪ್ಪನವರ ಜನ್ಮಶತಮಾನೋತ್ಸವವನ್ನು ಆಚರಿಸುತ್ತಿರುವ ಕರ್ನಾಟಕ ಸರ್ಕಾರವನ್ನು ನಾನು ಈ ಸಂದರ್ಭದಲ್ಲಿ ಹಾರ್ದಿಕವಾಗಿ ಅಭಿನಂದಿಸುತ್ತೇನೆ'' ಎಂದರು. ವೇದಿಕೆ ಮೇಲೆ ಲೋಕಸಭಾ ಸದಸ್ಯರಾದ ಸಿ. ಕೆ. ಜಾಫರ್ ಷರೀಫ್, ಶಾಸಕರಾದ ಕಟ್ಟಾ ಸುಬ್ರಹ್ಮಣ್ಯ ನಾಯಿಡು, ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿ ಬಿ. ಎಸ್. ಪಾಟೀಲ್ ಉಪಸ್ಥಿತರಿದ್ದರು. ಸಮಾರಂಭದ ಕೊನೆಯಲ್ಲಿ ಸರ್ಕಾರದ ಕಾರ್ಯದರ್ಶಿ ಸಿ. ಎಸ್. ಕೇದಾರ್ ಅವರು ವಂದನೆಗಳನ್ನು ಅರ್ಪಿಸಿದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕರಾದ ಸಿ. ಸೋಮಶೇಖರ ಅವರು ಅತಿಥಿಗಳಿಗೆ ಪುಷ್ಪಗುಚ್ಛ ಅರ್ಪಿಸಿದರು.

ಸಮಾರಂಭದಲ್ಲಿ ಕೇಂದ್ರದ ಮಾಜಿ ಸಚಿವರಾದ ಎಂ. ಎಸ್. ಗುರುಪಾದಸ್ವಾಮಿ, ಮಾಜಿ ಮುಖ್ಯಮಂತ್ರಿಗಳಾದ ಎಸ್. ಆರ್. ಬೊಮ್ಮಾಯಿ, ಎಂ. ವೀರಪ್ಪ ಮೊಯಿಲಿ, ಕರ್ನಾಟಕ ವಿಧಾನಸಭೆಯ ಅಧ್ಯಕ್ಷರಾದ ಎಂ. ವಿ. ವೆಂಕಟಪ್ಪ, ವಿಧಾನ ಪರಿಷತ್ತಿನ ಸಭಾಪತಿಗಳಾದ ಬಿ. ಎಲ್. ಶಂಕರ್, ಸಚಿವರುಗಳಾದ ಎಂ. ವೈ. ಘೋರ್ಪಡೆ, ಎಂ.ಎಲ್. ಉಸ್ತಾದ್, ಕರ್ನಾಟಕ ಪ್ರದೇಶ ಕಾಂಗ್ರೆಸ್‌ನ ಅಧ್ಯಕ್ಷರಾದ ಅಲ್ಲಂ ವೀರಭದ್ರಪ್ಪ, ನ್ಯಾಯಮೂರ್ತಿಗಳಾದ ಡಿ. ಎಂ. ಚಂದ್ರಶೇಖರ್ ಮತ್ತು ವಿ. ಎಸ್. ಮಳೀಮಠ್, ರಾಜ್ಯದ ಹಿರಿಯ ನಾಗರಿಕರಾದ ಡಾ। ಎಚ್. ನರಸಿಂಹಯ್ಯ, ಜಿ. ನಾರಾಯಣ, ಮಾಜಿ ಶಿಕ್ಷಣ ಸಚಿವ ಎಂ. ಚಂದ್ರಶೇಖರ್, ಎಚ್. ಏಕಾಂತಯ್ಯ ಹಾಗೂ ಹಾರ್ನಳ್ಳಿ ರಾಮಸ್ವಾಮಿ, ನಿಜಲಿಂಗಪ್ಪನವರ ಜನ್ಮಶತಾಬ್ದಿ ಸಮಿತಿಯ ಸದಸ್ಯರಾದ ವೈ. ರಾಮಚಂದ್ರ, ಹೆಚ್. ಜಿ. ಗೋವಿಂದಗೌಡ, ರಾಜ್ಯ ಯೋಜನಾ ಆಯೋಗದ ಉಪಾಧ್ಯಕ್ಷರಾದ ಹೆಚ್. ಹನುಮಂತಪ್ಪ, ಶಾಸಕರುಗಳಾದ ಪಿ.ಜಿ.ಆರ್. ಸಿಂಧ್ಯಾ, ಬಿ. ಎಸ್. ಯಡಿಯೂರಪ್ಪ, ಡಾ। ಎಂ.ವಿ. ನಾಡಗೌಡ ಮೊದಲಾದ ಅನೇಕ ನಾಯಕರುಗಳು ಈ ಸಮಾರಂಭದಲ್ಲಿ ಪಾಲ್ಗೊಂಡಿದ್ದರು.

ನಿಜಲಿಂಗಪ್ಪನವರ ಅಳಿಯಂದಿರಾದ ಎಂ. ವಿ. ರಾಜಶೇಖರನ್, ಬಿ. ಎಸ್. ಮುದ್ದಪ್ಪ, ಮಗ ಎಸ್. ಎನ್. ಕಿರಣ್ ಶಂಕರ್ ಸೇರಿದಂತೆ ನಿಜಲಿಂಗಪ್ಪನವರ ಮಕ್ಕಳು, ಮೊಮ್ಮಕ್ಕಳು ಹಾಗೂ ಮರಿಮಕ್ಕಳು ಉತ್ಸಾಹದಿಂದ ಈ ಸಮಾರಂಭದಲ್ಲಿ ಪಾಲ್ಗೊಂಡಿದ್ದರು. ನಿಜಲಿಂಗಪ್ಪನವರ ಸಂಸ್ಮರಣ ಗ್ರಂಥಗಳು ಹೊರಬರಲು ಕಾರಣಕರ್ತರಾದ ಚಿತ್ರದುರ್ಗದ ಎಸ್. ಜಿ. ಮಂಜುನಾಥ್ ಹಾಗೂ ಎಸ್. ಷಣ್ಮುಖಪ್ಪ ಅವರು ವಿಶೇಷ ಆಸಕ್ತಿಯಿಂದ ಸಮಾರಂಭದ ಸಿದ್ಧತೆಗೆ ನೆರವು ನೀಡಿದ್ದರು. ಸಮಾರಂಭದ ಭವ್ಯ ವೇದಿಕೆಯನ್ನು ರಂಗಕರ್ಮಿ ಹೆಚ್. ವಿ. ನಾಗರಾಜಮೂರ್ತಿ ಹಾಗೂ ಅವರ ತಂಡದವರು ಸಿದ್ಧ ಮಾಡಿದ್ದರು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಜಂಟಿ ನಿರ್ದೇಶಕರಾದ ಡಾ। ಎಸ್.ಆರ್. ಹೊನ್ನಲಿಂಗಯ್ಯ, ಸಹಾಯಕ ನಿರ್ದೇಶಕರಾದ ಜೆ. ಎನ್. ಶಾಮರಾವ್, ಶ್ರೀಮತಿ ವೈ. ಎಸ್. ವಿಜಯಲಕ್ಷ್ಮಿ ಹಾಗೂ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ರಿಜಿಸ್ಟ್ರಾರ್ ಎನ್. ಮರಿಶಾಮಾಚಾರ್ ಅವರುಗಳ ದುಡಿಮೆ ಸ್ಮರಣಾರ್ಹವಾದದ್ದು. ಮೂರೂ ಸಂಸ್ಮರಣ ಗ್ರಂಥಗಳ ಆಕರ್ಷಣೆಗೆ ಅದರ ಲೇಖಕರುಗಳು, ಸಂಪಾದಕರು, ಕಲಾವಿದರು ಹಾಗೂ ಮುದ್ರಣಾಲಯದ ಸಿಬ್ಬಂದಿಯವರು ಕಾರಣಕರ್ತರಾಗಿದ್ದು ಅವರುಗಳಿಗೆ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ ಸಮಿತಿಯು ಕೃತಜ್ಞತೆಗಳನ್ನು ಅರ್ಪಿಸಿತು.

ವರದಿ : **ಕೆ. ಆರ್. ಕಮಲೇಶ್**

# ರಾಷ್ಟ್ರಬಂಧು ಎಸ್. ನಿಜಲಿಂಗಪ್ಪ ಜನ್ಮಶತಮಾನೋತ್ಸವ ಆಚರಣೆ



ದಿನಾಂಕ ೨೯-೧೨-೨೦೦೨ರಂದು ಚಿತ್ರದುರ್ಗದಲ್ಲಿ ಎಸ್. ನಿಜಲಿಂಗಪ್ಪನವರ ಜನ್ಮಶತಮಾನೋತ್ಸವ ಆಚರಣೆ.
ಎಡದಿಂದ ಎಚ್. ಎಸ್. ಶಿವಶಂಕರ್, ವಿಧಾನ ಪರಿಷತ್ ಸದಸ್ಯರು, ಎಂ.ಪಿ. ಪ್ರಕಾಶ್, ಮಾಜಿ ಸಚಿವರು ಹಾಗೂ ವಿಧಾನ ಪರಿಷತ್ ಸದಸ್ಯರು
ಎಚ್. ಹನುಮಂತಪ್ಪ, ಮಾಜಿ ಸಂಸದರು ಹಾಗೂ ಉಪಾಧ್ಯಕ್ಷರು, ರಾಜ್ಯ ಯೋಜನಾ ಆಯೋಗ, ಎಚ್. ಏಕಾಂತಯ್ಯ, ಮಾಜಿ ಸಚಿವರು
ಎಂ. ವಿ. ರಾಜಶೇಖರನ್, ರಾಜ್ಯಸಭಾ ಸದಸ್ಯರು.



೧೭-೧-೨೦೦೩ರಂದು ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ನಿಜಲಿಂಗಪ್ಪನವರ ಛಾಯಾಚಿತ್ರ ಪ್ರದರ್ಶನ ಉದ್ಘಾಟನೆ
ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್, ಜೊತೆಯಲ್ಲಿ ಬಿ.ಎಸ್.ಎಸ್. ರೆಡ್ಡಿ, ನಿರ್ದೇಶಕರು, ವಾರ್ತಾ ಇಲಾಖೆ, ಜಿ. ನಾರಾಯಣ
ಶ್ರೀಮತಿ ರಾಣಿ ಸತೀಶ್, ಸಚಿವರು, ಎಚ್. ಹನುಮಂತಪ್ಪ ಉಪಾಧ್ಯಕ್ಷರು, ರಾಜ್ಯ ಯೋಜನಾ ಆಯೋಗ
ಕೆ. ಎಚ್.ರಂಗನಾಥ್, ಸಚಿವರು, ಸಿ. ಎಸ್. ಕೇದಾರ್, ಕಾರ್ಯದರ್ಶಿ, ಸಿ. ಸೋಮಶೇಖರ್, ನಿರ್ದೇಶಕರು-ಕನ್ನಡ ಮತ್ತು ಸಂಸ್ಕೃತಿ ಇಲಾಖೆ



ವಿಧಾನಸೌಧದ ಪಶ್ಚಿಮ ದ್ವಾರದಲ್ಲಿ ಉಪರಾಷ್ಟ್ರಪತಿ ಭೈರೋನ್ ಸಿಂಗ್ ಶೆಖಾವತ್ ಅವರಿಂದ ಎಸ್. ನಿಜಲಿಂಗಪ್ಪನವರ ಪುತ್ಥಳಿಯ ಅನಾವರಣ. ಎಡದಿಂದ ರಾಜ್ಯಸಭಾ ಸದಸ್ಯರಾದ ಎಂ.ವಿ. ರಾಜಶೇಖರನ್, ರಾಜ್ಯ ಯೋಜನಾ ಆಯೋಗದ ಉಪಾಧ್ಯಕ್ಷರಾದ ಎಚ್. ಹನುಮಂತಪ್ಪ, ಮುಖ್ಯ ಕಾರ್ಯದರ್ಶಿ ಬಿ.ಎಸ್. ಪಾಟೀಲ್, ಅರಣ್ಯ ಸಚಿವ ಕೆ.ಎಚ್. ರಂಗನಾಥ್, ಘನತೆವೆತ್ತ ರಾಜ್ಯಪಾಲರಾದ ಟಿ.ಎನ್. ಚತುರ್ವೇದಿ, ಮುಖ್ಯಮಂತ್ರಿ ಎಸ್.ಎಂ. ಕೃಷ್ಣ, ಶಾಸಕರಾದ ಕಟ್ಟಾ ಸುಬ್ರಹ್ಮಣ್ಯಂ ನಾಯ್ಡು ಹಾಗೂ ವಿಧಾನ ಪರಿಷತ್ತಿನ ಸಭಾಪತಿ ಬಿ.ಎಲ್. ಶಂಕರ್.



ರಾಷ್ಟ್ರಬಂಧು ಎಸ್. ನಿಜಲಿಂಗಪ್ಪ ಜನ್ಮಶತಮಾನೋತ್ಸವನ್ನು ಉದ್ಘಾಟಿಸಿದ ಉಪರಾಷ್ಟ್ರಪತಿ ಭೈರೋನ್ ಸಿಂಗ್ ಶೆಖಾವತ್ ಬಲಗಡೆಯಿಂದ ಸಚಿವೆ ಶ್ರೀಮತಿ ರಾಣಿ ಸತೀಶ್, ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಘನತೆವೆತ್ತ ರಾಜ್ಯಪಾಲ ಟಿ.ಎನ್. ಚತುರ್ವೇದಿ ಹಾಗೂ ಸಿ. ಸೋಮಶೇಖರ



ಎಸ್. ಎನ್. ಇಂಗ್ಲಿಷ್ ಸಂಸ್ಮರಣ ಗ್ರಂಥ ಬಿಡುಗಡೆ : ರಾಜ್ಯಪಾಲರಾದ ಚತುರ್ವೇದಿಯವರಿಂದ
''ಎ ವಿಷನರಿ ವಿತ್ ಎ ಮಿಷನ್''. ಸಚಿವ ಕೆ.ಎಚ್. ರಂಗನಾಥ್ ಅವರಿಂದ ''ರಾಷ್ಟ್ರಭೂಷಣ''




ಎಸ್. ಎನ್. ಚಿತ್ರಸಂಪುಟ ಬಿಡುಗಡೆ - ಮುಖ್ಯಮಂತ್ರಿ ಎಸ್. ಎಂ. ಕೃಷ್ಣ, ಜೊತೆಯಲ್ಲಿ ಸಚಿವೆ ಶ್ರೀಮತಿ ರಾಣಿ ಸತೀಶ್.



ಸಮಾರಂಭಕ್ಕೆ ಸ್ವಾಗತ ಬಯಸುತ್ತಿರುವ ಸಚಿವೆ ರಾಣಿ ಸತೀಶ್

ಪ್ರಧಾನ ಸಂಪಾದಕ ಡಾ. ದೇಜಗೌ ಅವರಿಂದ ಪ್ರಾಸ್ತಾವಿಕ




ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರ ಅನಿಸಿಕೆ

ಉಪರಾಷ್ಟ್ರಪತಿ ಸನ್ಮಾನ್ಯ ಶ್ರೀ ಭೈರೋನ್ ಸಿಂಗ್ ಶೆಖಾವತ್ ಅವರಿಂದ ಉದ್ಘಾಟನಾ ಭಾಷಣ

# ಪರಿವಿಡಿ

## ರಾಜಕೀಯ ಪಕ್ಷಗಳು



## ಸಮೀಕ್ಷೆ

# ಎಸ್. ಎನ್. ಜೀವನ ದರ್ಶನ

**ಬಿ. ಪುಟ್ಟಸ್ವಾಮಯ್ಯ**

## ಜನನ, ಬಾಲ್ಯ, ವಿದ್ಯಾಭ್ಯಾಸ

ಶ್ರೀ ನಿಜಲಿಂಗಪ್ಪನವರು ಬಳ್ಳಾರಿ ಜಿಲ್ಲೆಯ ಹಡಗಲಿ ತಾಲ್ಲೂಕು ಹಲುವಾಗಲು ಗ್ರಾಮದ ಒಂದು ಬಡ ರೈತ ಕುಟುಂಬದಲ್ಲಿ ಶ್ರೀ ಅಬ್ಬಲೂರು ಅಡಿವೆಪ್ಪ ಮತ್ತು ಶ್ರೀಮತಿ ನೀಲಮ್ಮ ದಂಪತಿಗಳ ಪುತ್ರರಾಗಿ ೧೯೦೨ ನೇ ಇಸವಿಯ ಡಿಸೆಂಬರ್ ೧೦ ರಂದು ಜನ್ಮ ತಳೆದರು. ಎಳೆತನದಲ್ಲಿ ಅವರ ಚೆಲುವಾದ ದುಂಡು ಮುಖ, ಹೊಂಬಣ್ಣದ ದೇಹಕಾಂತಿ, ತಂದೆತಾಯಿಗಳಂತೆ ನೆರೆಹೊರೆಯವರ ಪ್ರೇಮಾದರಗಳನ್ನು ಪಡೆದಿತ್ತೆಂದು ತಿಳಿದವರು ಹೇಳಿದ್ದನ್ನು ಕೇಳಿದ್ದೇನೆ. ನಿಜಲಿಂಗಪ್ಪನವರು ತಮ್ಮ ಎಳೆತನದ ಮೊದಲ ಮೂರು ವರ್ಷಗಳನ್ನು ಗ್ರಾಮವಾಸಿಗಳ ಕಣ್ಣೊಂಬೆಯಾಗಿ ಕಳೆದರು. ತಂದೆತಾಯಿಗಳಿಗೆ ಬಡತನದಲ್ಲಿಯೂ ಸಂತೃಪ್ತಿಯನ್ನು ತಂದರು. ಆದರೆ ವಿಧಿವಿಲಾಸ! ಆ ಸಂತೃಪ್ತಿ ಹೆಚ್ಚುದಿನ ಉಳಿಯಲಿಲ್ಲ.

ನಿಜಲಿಂಗಪ್ಪನವರು ಐದು ವರ್ಷದ ಮಗುವಾಗಿದ್ದಾಗ ಮನೆಯ ಆಧಾರಸ್ತಂಭದಂತಿದ್ದ ಅವರ ತಂದೆ ಶಿವೈಕ್ಯರಾದರು. ವಾಸಕ್ಕೆ ಒಂದು ಸಾಮಾನ್ಯ ಮನೆ, ಒಂದೆರಡು ಎಕರೆ ಜಮೀನು. ಅದರಲ್ಲಿ ತಾವೇ ಬೇಸಾಯ ಮಾಡಿ ಸಂಸಾರ ನಿರ್ವಹಿಸುತ್ತಿದ್ದ ಅಡಿವೆಪ್ಪನವರು ಹೆಂಡತಿ ಮಕ್ಕಳಿಗೆ ಯಾವ ಆಸ್ತಿಯನ್ನೂ ಬಿಟ್ಟುಹೋಗಿರಲಿಲ್ಲ. ಅವರ ತಾಯಿ ನೀಲಮ್ಮನವರು ಇದಕ್ಕಾಗಿ ಬೇಸರ ಪಡಲಿಲ್ಲ, ಧೈರ್ಯಗೆಡಲಿಲ್ಲ. ಮಳೆ ಬಿಸಿಲು ಗಾಳಿಯೆನ್ನದೆ ಹೊಲದಲ್ಲಿ ದುಡಿದು ಮಕ್ಕಳನ್ನು ಪೋಷಿಸಿದರು.

ಈ ಕಷ್ಟಪರಂಪರೆಯಲ್ಲಿಯೇ ನಿಜಲಿಂಗಪ್ಪನವರು ತಮ್ಮ ಪ್ರಾಥಮಿಕ ಶಾಲಾಭ್ಯಾಸಗಳನ್ನು ಆರಂಭಿಸಿದರು. ಅರವತ್ತು ವರ್ಷಗಳ ಹಿಂದಿನ ಸಾಮಾನ್ಯ ಗ್ರಾಮಾಂತರ ಪಾಠಶಾಲೆಯೊಂದರಲ್ಲಿ ಅವರಿಗೆ ದೊರಕಬಹುದಾಗಿದ್ದ ವಿದ್ಯಾಭ್ಯಾಸ ಎಂತಹುದೆಂಬುದನ್ನು ಊಹಿಸಿ ತಿಳಿಯಬಹುದು. ಈ ಪರಿಸ್ಥಿತಿಯ ಬಿಡುಗಡೆ ಎಷ್ಟು ಅನಿರೀಕ್ಷಿತವೋ ಅಷ್ಟೇ ಸಹಜವಾಗಿ ಬಂದೊದಗಿತು ನಿಜಲಿಂಗಪ್ಪನವರಿಗೆ. ಅವರ ಚಿಕ್ಕಪ್ಪನವರಾದ ಶ್ರೀ ರುದ್ರಪ್ಪನವರು ಚಿತ್ರದುರ್ಗ ಜಿಲ್ಲೆಯ ಸಿದ್ದವ್ವನಹಳ್ಳಿ ಗ್ರಾಮದಲ್ಲಿ ರೈತರಾಗಿ ನೆಲಸಿದ್ದರು. ತಾಯಿ ಮಕ್ಕಳ ಕಠಿಣ ವ್ರತಗಳನ್ನು ಕಂಡು ಕೇಳಿದ ರುದ್ರಪ್ಪನವರು ಎಲ್ಲರನ್ನೂ ತಮ್ಮೆಡೆಗೆ ಕರೆಸಿಕೊಂಡರು. ಅಂದಿನಿಂದ ನಿಜಲಿಂಗಪ್ಪನವರು ಸಿದ್ದವ್ವನಹಳ್ಳಿಯವರಾದರು. ಚಿತ್ರದುರ್ಗ ಜಿಲ್ಲೆಯ ವ್ಯಾಪಾರೀ ಕೇಂದ್ರವಾದ ದಾವಣಗೆರೆಯಲ್ಲಿ ಅವರ ವಿದ್ಯಾಭ್ಯಾಸ ಮುಂದುವರೆದು ೧೯೧೬ರಲ್ಲಿ ಮಾಧ್ಯಮಿಕ ಶಿಕ್ಷಣಕ್ಕೆ ಚಿತ್ರದುರ್ಗದ ಹೈಸ್ಕೂಲನ್ನು ಸೇರಿದರು. ೧೯೧೮ರಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಆಗ ಹಿರಿಯರೂ ಹಿತೈಷಿಗಳೂ ಅವರನ್ನು ಯಾವುದಾದರೊಂದು ನೌಕರಿಗೆ ಸೇರಿಸಲು ಅಥವಾ ವಾಣಿಜ್ಯದಲ್ಲಿ ತೊಡಗಿಸಲು ಪ್ರಯತ್ನಿಸಿದರು. ಆದರೆ ನಿಜಲಿಂಗಪ್ಪನವರ ಆಕಾಂಕ್ಷೆ ಮೆಟ್ರಿಕ್ಯುಲೇಷನ್ನಿಗೆ ಮುಗಿಯುವಂತಹುದಾಗಿರಲಿಲ್ಲ. ವಿಜ್ಞಾನ, ಭೌತಶಾಸ್ತ್ರಗಳಲ್ಲಿ ಆಸಕ್ತಿ ಬೆಳಸಿಕೊಂಡಿದ್ದ ಅವರು ಕಾಲೇಜ್ ವ್ಯಾಸಂಗಕ್ಕಾಗಿ ಹಾತೊರೆದರು. ವಿಜ್ಞಾನವನ್ನು ಬೋಧಿಸುವ

ಪ್ರೌಢಶಾಲೆ ಆಗ ಇದ್ದದ್ದು ಬೆಂಗಳೂರಲ್ಲಿ ಮಾತ್ರ. ಬೆಂಗಳೂರಿನಂಥ ದೊಡ್ಡ ನಗರದಲ್ಲಿ ಕಾಲೇಜು ವಿದ್ಯಾಭ್ಯಾಸಕ್ಕೆ ಬೇಕಾಗುವ ಹಣ ನಿಜಲಿಂಗಪ್ಪನವರಲ್ಲಿ ಇರಲಿಲ್ಲ. ಈ ಪರಿಸ್ಥಿತಿಯಲ್ಲಿ ಚಿತ್ರದುರ್ಗದ ಬೃಹನ್ಮಠಾಧೀಶ ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳೂ, ಸಾಹುಕಾರ್ ವೀರಭದ್ರಪ್ಪನವರೂ ನಿಜಲಿಂಗಪ್ಪನವರ ಸಹಾಯಕ್ಕೆ ಬಂದರು.

ಈ ಇಬ್ಬರು ಮಹಾನುಭಾವರ ಆಶೀರ್ವಾದ. ಧನಸಹಾಯಗಳನ್ನು ಪಡೆದು ನಿಜಲಿಂಗಪ್ಪನವರು ಬೆಂಗಳೂರಿಗೆ ಬಂದು ಎಂಟ್ರೆನ್ಸ್ ತರಗತಿಗೆ ಸೇರಿದರು. ಕೆಲವು ವರ್ಷಗಳ ಹಿಂದೆ ಸ್ಥಾಪಿತವಾಗಿದ್ದ ಗುಬ್ಬಿ ತೋಟದಪ್ಪನವರ ವಿದ್ಯಾರ್ಥಿನಿಲಯದಲ್ಲಿ ಊಟ ಹಾಗೂ ವಸತಿಗಳು ದೊರಕಿದವು.

ಆಗಿನ ಬೆಂಗಳೂರು ನಗರ ಈಗಿನಷ್ಟು ವಿಶಾಲವೂ ವೈಭವಪೂರ್ಣವೂ ಆಗಿಲ್ಲದಿದ್ದರೂ ವಿದ್ಯಾರ್ಥಿಗಳ ಮನಸೆಳೆಯುವ ಆಮಿಷ ಆಕರ್ಷಣೆಗಳಿಗೆ ಕೊರತೆಯಿರಲಿಲ್ಲ. ನಾಲ್ಕಾರು ಸಿನಿಮಾ ಮಂದಿರಗಳೂ ಉಪಾಹಾರಗೃಹಗಳೂ ಇದ್ದವು. ವಿದ್ಯಾರ್ಜನೆಯನ್ನೇ ಗುರಿಯಾಗಿಟ್ಟುಕೊಂಡಿದ್ದ ನಿಜಲಿಂಗಪ್ಪನವರು ಈ ಆಸೆ ಆಮಿಷಗಳಿಗೆ ಮನಸೋಲದೆ, ವಿದ್ಯಾರ್ಥಿನಿಲಯಗಳ ನಿಬಂಧನೆಗಳಿಗೆ ಅಧೀನರಾಗಿ ನಡೆದುಕೊಳ್ಳುತ್ತ ೧೯೨೦ರಲ್ಲಿ ಎಂಟ್ರೆನ್ಸ್ ಪರೀಕ್ಷೆ ಮುಗಿಸಿ ಸೆಂಟ್ರಲ್ ಕಾಲೇಜಿಗೆ ಸೇರಿದರು. ಪ್ರೊಫೆಸರ್ ಮೆಟ್ಕಾಫ್ ಎಂಬ ಆಂಗ್ಲ ವಿದ್ವಾಂಸರು ಆಗ ಕಾಲೇಜಿನ ಮುಖ್ಯಾಧಿಕಾರಿಯಾಗಿದ್ದರು. ಮೆಕಾಲ್ವೈನ್, ಅಷರ್, ಟೇಟ್, ಸೆಲ್, ವೆಂಕಟನಾರಣಪ್ಪ, ಶ್ರೀನಿವಾಸರಾವ್, ಸಂಜೀವರಾವ್, ವೆಂಕಟೇಶಾಚಾರ್, ನಾಗೇಶರಾವ್ ಮುಂತಾದವರು ಕಾಲೇಜಿನ ಇತರ ಪ್ರಾಧ್ಯಾಪಕರು. ಪಾಠ ಪ್ರವಚನಗಳಲ್ಲಿ ಏಕಾಗ್ರತೆ, ಶಿಸ್ತು, ಗೊತ್ತಾದ ಕಾಲದಲ್ಲಿ ಕೆಲಸ ಮಾಡುವ ನಿಯತಕಾಲಿಕತೆ, ಈ ವಿಶಿಷ್ಟ ಗುಣಗಳನ್ನು ನಿಜಲಿಂಗಪ್ಪನವರು ಅಳವಡಿಸಿಕೊಂಡಿದ್ದು ಕಾಲೇಜು ವ್ಯಾಸಂಗ ಕಾಲದಲ್ಲಿಯೇ.

ಆಗ ಅವರು ಗುಬ್ಬಿ ತೋಟದಪ್ಪನವರ ವಿದ್ಯಾರ್ಥಿನಿಲಯವನ್ನು ಬಿಟ್ಟು ಆಗ ತಾನೇ ಹೊಸದಾಗಿ ನಿರ್ಮಾಣವಾಗಿದ್ದ ಶ್ರೀ ಜಯದೇವ ವಿದ್ಯಾರ್ಥಿನಿಲಯಕ್ಕೆ ಬಂದರು. ಅದರ ಸ್ಥಾಪಕರಾದ ಶ್ರೀ ಜಯದೇವ ಮುರುಘರಾಜೇಂದ್ರ ಸ್ವಾಮಿಗಳವರು ತರುಣ ವಯಸ್ಸಿನ ನಿಜಲಿಂಗಪ್ಪನವರ ಮೇಲೆ ಪ್ರಭಾವ ಬೀರಿದ ಘನವ್ಯಕ್ತಿಗಳಲ್ಲೊಬ್ಬರು. ವಿದ್ಯಾಭ್ಯಾಸದಿಂದ ಮಾತ್ರವೇ ದೇಶದ ಪ್ರಗತಿ ಸಾಧ್ಯವೆಂಬುದನ್ನು ಅರಿತು ಮೈಸೂರು ಸಂಸ್ಥಾನದ ಅನೇಕ ಕಡೆಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿ ವಿದ್ಯಾದಾನದಲ್ಲಿ ಗುರುಪೀಠಗಳ ಪಾತ್ರವನ್ನು ರೂಪಿಸಿದ ಕೀರ್ತಿ ಶ್ರೀ ಮುರುಘರಾಜೇಂದ್ರ ಮಹಾಸ್ವಾಮಿಗಳಿಗೆ ಸಲ್ಲುತ್ತದೆ. ಜಾತೀಯತೆಯ ಅಂಧಾನುಕರಣೆ ಪ್ರಬಲವಾಗಿದ್ದ ಆ ಕಾಲದಲ್ಲಿ ಮಹಾಸ್ವಾಮಿಗಳವರು ಜಾತಿ ಪಂಥಗಳ ಭೇದವಿಲ್ಲದೆ ಎಲ್ಲಾ ಮತೀಯರಿಗೂ ಮುಕ್ತ ಹಸ್ತದಿಂದ ವಿದ್ಯಾದಾನ ಮಾಡುವ ಕ್ರಾಂತಿಕಾರಕ ಆದರ್ಶವನ್ನು ಪ್ರಚಾರಕ್ಕೆ ತಂದರು. ಈ ಆದರ್ಶ ಯತಿವರ್ಯರ ಪ್ರಭಾವದಿಂದ ನಿಜಲಿಂಗಪ್ಪನವರಲ್ಲಿ ಹುಟ್ಟಿದ ಜಾತ್ಯತೀತವಾದ ಮನೋಭಾವನೆ ವ್ಯಾಪಕವಾಗಿ ಬೆಳೆದು ಆಮೇಲಿನ ಅವರ ಬದುಕಿನ ಎಲ್ಲಾ ಕಾರ್ಯಕ್ಷೇತ್ರಗಳಲ್ಲಿಯೂ ತನ್ನ ಪರಿಮಳ ಹರಡಿದುದನ್ನು ನಾವು ಕಾಣುತ್ತೇವೆ.

೧೯೨೪ರಲ್ಲಿ ಅವರು ಕಾಲೇಜು ವ್ಯಾಸಂಗವನ್ನು ಯಶಸ್ವಿಯಾಗಿ ಮುಗಿಸಿ ಪದವೀಧರರಾದರು. ವಿಜ್ಞಾನ, ಭೌತಶಾಸ್ತ್ರಗಳಲ್ಲಿ ಅವರ ಒಲವು ಸ್ನಾತಕೋತ್ತರ ವಿದ್ಯಾಭ್ಯಾಸದ ಕಡೆಗೆ ಬೆಳೆಯಿತಾದರೂ ಗುರುಹಿರಿಯರ ಒತ್ತಾಯದಿಂದ ನ್ಯಾಯಶಾಸ್ತ್ರಾಭ್ಯಾಸಕ್ಕಾಗಿ ಪೂನಾ ನಗರದ ಫರ್ಗೂಸನ್ ಕಾಲೇಜನ್ನು ಸೇರುವುದು ಅನಿವಾರ್ಯವಾಯಿತು. ಎರಡು ವರ್ಷಗಳ ಅನಂತರ ಎಲ್.ಎಲ್.ಬಿ. ಪದವೀಧರರಾಗಿ ವಿದ್ಯಾಭ್ಯಾಸದ ಹಂತಗಳನ್ನು ಮುಗಿಸಿ ಬಾಳುವೆಯ ವಿಶಾಲ ಜಗತ್ತಿನಲ್ಲಿ ಪದಾರ್ಪಣೆ ಮಾಡಿದರು.

## ವಕೀಲರಾಗಿ ರಾಜಕೀಯದ ಹಾದಿಯಲ್ಲಿ

ಆಂಗ್ಲರ ರಾಜ್ಯಭಾರದೊಡನೆ ಕಾಯಿದೆ, ಕಾನೂನು ಘಟನೆ ಮುಂತಾದವುಗಳೂ ಸ್ಥಾಪಿತವಾದಾಗ, ನಾಡಿನ ಸ್ವಾತಂತ್ರ್ಯ ಸಾಧನೆಯೂ ಘಟನಾತ್ಮಕವಾಗಿ ನಡೆಯಬೇಕೆಂಬ ಇಚ್ಛೆಯಿಂದ ಆಂಗ್ಲ ವಿದ್ಯಾಭ್ಯಾಸ ಪಡೆದ ಹಿರಿಯ ರಾಜಕಾರಣಿಗಳಲ್ಲಿ ಹೆಚ್ಚು ಮಂದಿ ವಕೀಲರೇ ಆಗಿದ್ದರು. ವಕೀಲ ವೃತ್ತಿಯು ಸ್ವತಂತ್ರ ವೃತ್ತಿಯಷ್ಟೇ ಅಲ್ಲದೆ ಸರ್ಕಾರವನ್ನು ಎದುರಿಸಲು ಬೇಕಾದ ಶಸ್ತ್ರಗಳನ್ನು ಪಡೆದಿತ್ತೆಂಬುದು ಇದರಿಂದ ವಿದಿತವಾಗುತ್ತದೆ.

ಸರ್ಕಾರದ ಉನ್ನತ ನೌಕರಿಗಳು ಕಾದಿದ್ದರೂ ನಿಜಲಿಂಗಪ್ಪನವರು ಅವೆಲ್ಲವನ್ನೂ ಕಡೆಗಣಿಸಿ ವಕೀಲ ವೃತ್ತಿಯನ್ನೇ ಅವಲಂಬಿಸಿದರು. ಯಾರಾದರೊಬ್ಬ ಹಿರಿಯ ವಕೀಲರ ಕಚೇರಿಯಲ್ಲಿ ಕೆಲವು ವರ್ಷಗಳ ಕಾಲ ಕೆಲಸ ಮಾಡುವುದು ಈಗಿನಂತೆ ಆಗಲೂ ವೃತ್ತಿಗಿಳಿಯುವ ಹೊಸಬರಿಗೆ ಅಗತ್ಯವಾಗಿತ್ತು. ನಿಜಲಿಂಗಪ್ಪನವರು ಪರಾನುಕರಣದ ಈ ಸಂಪ್ರದಾಯದ ಮಾರ್ಗವನ್ನು

ಹಿಡಿಯದೆ ಚಿತ್ರದುರ್ಗದ ಸಂತೇಪೇಟೆಯಲ್ಲಿ ಸ್ವತಂತ್ರರಾಗಿ ತಮ್ಮ ವೃತ್ತಿಯನ್ನು ಪ್ರಾರಂಭಿಸಿದರು. ಈ ತರುಣದಲ್ಲಿಯೇ ದಾವಣಗೆರೆಯ ಶ್ರೀಮಂತ ಮನೆತನದ ಶ್ರೀಮತಿ ಮುರಿಗೆಮ್ಮನವರೊಡನೆ ನಿಜಲಿಂಗಪ್ಪನವರ ವಿವಾಹ ನಡೆಯಿತು.

ವೃತ್ತಿಯನ್ನು ಪ್ರಾರಂಭಿಸಿದ ಕೆಲವೇ ವರುಷಗಳಲ್ಲಿ ನಿಜಲಿಂಗಪ್ಪನವರು ವಕೀಲ ವೃಂದದಲ್ಲಿ ಗಣ್ಯಸ್ಥಾನವನ್ನು ಪಡೆದರು. ಅವರ ವ್ಯವಹಾರದ ವ್ಯಾಪ್ತಿ ಸ್ಥಳೀಯ ನ್ಯಾಯಾಸ್ಥಾನಗಳನ್ನಷ್ಟೇ ಅಲ್ಲದೆ ಬೆಂಗಳೂರಿನ ಹೈಕೋರ್ಟಿಗೂ ಹರಡಿತು. ತಮ್ಮಲ್ಲಿಗೆ ಬಂದ ವ್ಯವಹಾರದ ವಿವರಗಳನ್ನು ಶ್ರದ್ಧೆಯಿಂದ ಓದಿ, ಮುಖ್ಯಾಂಶಗಳನ್ನು ಗ್ರಹಿಸಿ ನ್ಯಾಯಾಸ್ಥಾನಗಳಲ್ಲಿ ಪರಿಣಾಮಕಾರಿಯಾಗಿ ವಾದಿಸುವ ಜಾಣ್ಮೆ ಅವರಿಗೆ ಹಸ್ತಗತವಾಯಿತು. ಸರಳ ಜೀವನ, ಕಕ್ಷಿಗಾರರೊಡನೆ ಹಸನ್ಮುಖದ ಅನೌಪಚಾರಿಕ ಒಡನಾಟ, ವೈಚಾರಿಕ ಏಕಾಗ್ರತೆ ಈ ಗುಣಗಳು ಅವರಿಗೆ ಶೀಘ್ರವಾಗಿ ಯಶಸ್ಸನ್ನು ತಂದವು. ಜಿಲ್ಲೆಯ ಜನತೆಯಲ್ಲಿ ನಿಜಲಿಂಗಪ್ಪನವರು ''ದುರ್ಗದ ವಕೀಲರು'' ಎಂದು ಹೆಸರಾದರು. ಕಕ್ಷಿ ಪ್ರತಿಕಕ್ಷಿಗಳಂತೆ ಸಹೋದ್ಯೋಗಿ ನ್ಯಾಯಾಧೀಶರನ್ನು ಬೆರಗುಗೊಳಿಸುವ ವಾಗ್ಮಿತ್ವ ಅವರದಾಗಿತ್ತು. ಕಠಿಣವಾದ ವ್ಯವಹಾರಗಳನ್ನೂ ಅವರು ಚಾಣಾಕ್ಷತೆಯಿಂದ ಗೆಲ್ಲುತ್ತಿದ್ದರು. ವ್ಯವಹಾರಕ್ಕಾಗಿ ಮೊಕದ್ದಮೆಗಳನ್ನು ಅಂಗೀಕರಿಸುವುದರಲ್ಲಿ ಅವರ ವಿವೇಚನೆ ಆದರ್ಶ ಪ್ರಾಯವಾಗಿತ್ತು. ನ್ಯಾಯನೀತಿಗಳಿಗೆ ಹೊರತಾದ ಮೊಕದ್ದಮೆಗಳನ್ನು ಅವರು ತಿರಸ್ಕರಿಸುತ್ತಿದ್ದರು. ಕಡುಬಡವರಾದ ಕಕ್ಷಿಗಾರರಿಂದ ಪ್ರತಿಫಲದ ನಿರೀಕ್ಷೆಯಿಲ್ಲದೆ ವ್ಯವಹಾರ ನಡೆಸುತ್ತಿದ್ದರು.

### ಕಾಂಗ್ರೆಸ್ ಸ್ವಯಂಸೇವಕ

ಅಖಿಲ ಭಾರತ ಕಾಂಗ್ರೆಸ್ ಮಹಾಸಭೆಯ ಅಧಿವೇಶನ ೧೯೨೪ರಲ್ಲಿ ಮಹಾತ್ಮ ಗಾಂಧಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ನಡೆದಾಗ ನಿಜಲಿಂಗಪ್ಪನವರು ಸ್ವಯಂಸೇವಕರಾಗಿ ಅಲ್ಲಿಗೆ ಹೋಗಿದ್ದರು. ಕಾಂಗ್ರೆಸ್ಸಿನ ನಿಸ್ವಾರ್ಥ ಸೇವೆ, ಭಾರತ ಸ್ವಾತಂತ್ರ್ಯಕ್ಕಾಗಿ ಅದು ನಡೆಸುತ್ತಿದ್ದ ಅಹಿಂಸಾತ್ಮಕ ಹೋರಾಟ ಇವುಗಳಿಂದ ಪ್ರಭಾವಿತರಾಗಿ ನಿಜಲಿಂಗಪ್ಪನವರು ಚಿತ್ರದುರ್ಗಕ್ಕೆ ಹಿಂದಿರುಗಿದಾಗ ಅವರಲ್ಲಿ ಒಂದು ಬಗೆಯ ಪರಿವರ್ತನೆ ತಲೆದೋರಿತು.

ವಕೀಲರಾದ ಮೇಲೆ ಬಡತನದ ಬವಣೆಯಿಂದ ಪಾರಾಗಿ ಸುಖಜೀವನವ ನಡೆಸುವ ಭಾಗ್ಯ ಒದಗಿದ್ದರೂ ದೇಶದ ಪಾರತಂತ್ರ್ಯ, ಅದಕ್ಕಾಗಿ ಇದುವರೆಗೆ ತಮ್ಮಿಂದ ಯಾವ ಸೇವೆಯೂ ಸಂದಿಲ್ಲವೆಂಬ ಕೊರಗು, ನಿಜಲಿಂಗಪ್ಪನವರ ಬದುಕನ್ನು ನಿಸ್ತೇಜವಾಗಿ ಮಾಡಿತ್ತು. ಮಹಾತ್ಮ ಗಾಂಧಿಯವರ ಬರಹಗಳಿಂದ ಉತ್ತಾಹಿತರಾಗಿದ್ದ ಅವರು ಕರ್ತವ್ಯ ಮತ್ತು ವೃತ್ತಿಯ ನಡುವಿನ ತಾಕಲಾಟದಲ್ಲಿ ಸಿಲುಕಿದ್ದರು. ಶುಭ್ರ ಖಾದಿಧಾರಿಗಳಾಗಿದ್ದರೂ ರಾಜಕೀಯದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸಲಿಲ್ಲವೆಂಬ ಚಿಂತೆ ಅವರಲ್ಲಿ ಮನೆ ಮಾಡಿತ್ತು. ಗಾಂಧೀಜಿಯವರ ದಂಡೀಯಾತ್ರೆ, ತತ್ಫಲವಾಗಿ ಉದ್ಭವಿಸಿದ ಉಪ್ಪಿನ ಸತ್ಯಾಗ್ರಹಗಳ ವರದಿಗಳಿಂದ ಉದ್ಬೋಧಿತರಾಗಿ ನಿಜಲಿಂಗಪ್ಪನವರು ೧೯೩೧ರಿಂದಲೂ ಕಾಂಗ್ರೆಸ್ ಸಂಸ್ಥೆಯ ಸದಸ್ಯರೂ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯರೂ ಆಗಿದ್ದರು.

ಕೆಲವು ವರ್ಷಗಳ ಅನಂತರ ಈ ಡೋಲಾಯಮಾನ ಪರಿಸ್ಥಿತಿ ಕೊನೆಮುಟ್ಟುವ ಕಾಲ ಬಂದಿತು. ಭಾರತ ಸೇವಾದಳದ ಸಂಸ್ಥಾಪಕರೂ, ಹಿರಿಯ ಕಾಂಗ್ರೆಸ್ ನಾಯಕರೂ ಆಗಿದ್ದ ಡಾ। ಹರ್ಡೀಕರ್ ನಾರಾಯಣರಾಯರು ಮೈಸೂರು ದೇಶದ ರಾಜಕೀಯ ಪರಿಸ್ಥಿತಿಯ ಅಭ್ಯಾಸಕ್ಕಾಗಿ ೧೯೩೬ರಲ್ಲಿ ಸಂಸ್ಥಾನಕ್ಕೆ ಭೇಟಿಯಿತ್ತರು. ಅವರ ಚಿತ್ರದುರ್ಗ ಜಿಲ್ಲೆಯ ಪ್ರವಾಸ ಸಮಯದಲ್ಲಿ ನಿಜಲಿಂಗಪ್ಪನವರು ಅವರೊಡನಿದ್ದರು. ಇದರ ಪರಿಣಾಮವಾಗಿ ಭಾರತದ ರಾಜಕೀಯಾಂದೋಳನ, ಮೈಸೂರಿನ ಪ್ರಚಲಿತ ರಾಜಕೀಯ, ಸಂಸ್ಥಾನಗಳ ರಾಜಕೀಯ ಪರಿಸ್ಥಿತಿ, ಮಹಾತ್ಮರ ಮನೋರಂಗ ಮುಂತಾದ ವಿಚಾರಗಳಲ್ಲಿ ನಿಷ್ಠಾವಂತರಾಗಿದ್ದ ನಿಜಲಿಂಗಪ್ಪನವರಿಗೆ ತಮ್ಮ ಕರ್ತವ್ಯದ ಪ್ರಚೋದನೆ ದೊರಕಿತು. ಇಲ್ಲಿಯವರೆಗೆ ಬಿರುಗಾಳಿಗೆ ಮುನ್ನಿನ ಪ್ರಶಾಂತ ಸಾಗರದಂತಿದ್ದ ನಿಜಲಿಂಗಪ್ಪನವರ ಜೀವನ ಮುಂದೆ ಕ್ರಾಂತಿಕಾರಕವಾಯಿತು. ಈ ರೀತಿ ಅವರು ರಾಜಕೀಯಕ್ಕೆ ಅಭ್ಯಾಗತರಂತೆ ಬಂದರು. ಸ್ವಾರ್ಥಸಾಧನೆಯ ಯಾವ ಬಗೆಯ ಅಪೇಕ್ಷೆಯೂ ಆಗ ಅವರಿಗಿರಲಿಲ್ಲ. ಸ್ವಾತಂತ್ರ್ಯಸಮರದ ಶಿಸ್ತಿನ ಸಿಪಾಯಿಯಂತೆ ಸ್ವರಾಜ್ಯ ಸಾಧನೆಗಾಗಿ ದುಡಿಯಲೆಂದೇ ಅವರು ರಾಜಕೀಯ ರಂಗವನ್ನು ಪ್ರವೇಶಿಸಿದರು.

ತಮ್ಮನ್ನೇ ನಂಬಿ ತಮ್ಮ ಆಶ್ರಯದಲ್ಲಿದ್ದ ಸಂಸಾರವನ್ನು ಕಷ್ಟದಲ್ಲಿ ಹಾಕಿ, ಅಸೀಮ ತ್ಯಾಗದಿಂದ ಸ್ವರಾಜ್ಯ ಸಾಧನೆಯ ಮುಳ್ಳಿನ ಹಾದಿಯಲ್ಲಿ ಹೆಜ್ಜೆಯಿಟ್ಟ ಅವರ ನಿಲುವು ಕೆಲವರಿಗೆ ಮಾತ್ರವೇ ಸಾಧ್ಯ.

ನಿಜಲಿಂಗಪ್ಪನವರು ಆ ಸಂದರ್ಭದಲ್ಲಿ ಕೈಕೊಂಡ ನಿಲುವಿನ ಬಗೆಗೆ ಯಾವಾಗಲೂ ಅವರು ಪರಿತಪಿಸಿದವರಲ್ಲ. ಅಡ್ಡಿ ಆತಂಕಗಳು ಎದುರಿಗೆ ನಿಂತಾಗಲೂ ಅವರು ತಮ್ಮ ಗುರಿಯಿಂದ ಚಲಿಸಲಿಲ್ಲ. ಉಪವಾಸ ವನವಾಸಗಳ ಜೊತೆಗಾರರಾದಾಗಲೂ ಅವರ

ಮನಸ್ಥೈರ್ಯ ಮಸುಕಾಗಲಿಲ್ಲ. ಆಸೆ ಆಮಿಷಗಳಿಗೆ ಬಲಿಯಾಗದೆ, ಅಧಿಕಾರಕ್ಕೆ ಹಾತೊರೆಯದೆ, ಸ್ಥಾನಮಾನಗಳ ದಾಹವಿಲ್ಲದ ನಿಷ್ಠುರವಾದಿ ನಿಜಲಿಂಗಪ್ಪನವರು. ''ನಿರ್ಧಾರ ತೆಗೆದುಕೊಳ್ಳುವುದು ನಿಧಾನ. ಆದರೆ ಒಂದು ಸಾರಿ ನಿರ್ಧಾರ ತೆಗೆದುಕೊಂಡರೆ ಮುಗಿಯಿತು. ಎಂತಹ ಸಂದರ್ಭದಲ್ಲಿಯೂ ಅಚಲರಾಗಿ ನಿರ್ಧಾರದಂತೆ ನಡೆಯುವರು'' ಎಂದು ಜನ ನಿಜಲಿಂಗಪ್ಪನವರ ಬಗೆಗೆ ಹೇಳುವ ಮಾತು ನೂರಕ್ಕೆ ನೂರು ಪಾಲು ಸತ್ಯ.

## ಮೈಸೂರು ಕಾಂಗ್ರೆಸ್ಸಿನ ಹೊಸ ನಿಲುವು

ದೇಶೀಯ ಸಂಸ್ಥಾನಗಳಲ್ಲಿ ಸ್ವಾತಂತ್ರ್ಯ ಚಳುವಳಿಯನ್ನು ಪ್ರಾರಂಭಿಸಿ ಯಶಸ್ವಿಯಾಗಿ ನಡೆಸುವುದು ಆಗಿನ ಕಾಲಕ್ಕೆ ಕಷ್ಟಸಾಧ್ಯವಾದ ಕೆಲಸವಾಗಿತ್ತು. ಸ್ವತಃ ಸ್ವಾತಂತ್ರ್ಯವನ್ನು ಕಳೆದುಕೊಂಡು ಬ್ರಿಟಿಷ್ ಸರ್ಕಾರದ ಅಡಿಯಾಳುಗಳಂತೆ ನಡೆದುಕೊಳ್ಳುತ್ತಿದ್ದ ಸಂಸ್ಥಾನಗಳ ಸರ್ಕಾರಗಳು ಬ್ರಿಟಿಷರ ಹಿತಾಸಕ್ತಿಗಳ ರಕ್ಷಣೆಯಲ್ಲಿ ಬ್ರಿಟಿಷ್ ಅಧಿಕಾರಿಗಳಿಗಿಂತ ಹೆಚ್ಚಿನ ಶ್ರದ್ಧಾಸಕ್ತಿಗಳನ್ನು ತೋರಿಸಲು ಪ್ರಯತ್ನಿಸುತ್ತಿದ್ದವು. ಸಂಸ್ಥಾನದ ಪ್ರಜೆಗಳು ಒಂದು ಕಡೆ ಬ್ರಿಟಿಷ್ ಸರ್ಕಾರ, ಇನ್ನೊಂದು ಕಡೆ ಸಂಸ್ಥಾನದ ಸರ್ಕಾರ, ಹೀಗೆ ಎರಡು ಪ್ರಭುತ್ವಗಳ ಒತ್ತಡ, ದಬ್ಬಾಳಿಕೆಗಳನ್ನು ಸಹಿಸಬೇಕಾಗಿತ್ತು. ಬ್ರಿಟಿಷರ ಆಡಳಿತದಲ್ಲಿದ್ದ ಪ್ರಾಂತಗಳ ಪ್ರಜೆಗಳಲ್ಲಿ ವೈಚಾರಿಕ ಸ್ವಾತಂತ್ರ್ಯ ಸ್ವಲ್ಪಮಟ್ಟಿಗಾದರೂ ಉಳಿದಿತ್ತು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಚಳುವಳಿ ಹೂಡಲು ಅವರು ಶಕ್ತರಾಗಿದ್ದರು. ''ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು'' ಎಂದು ಲೋಕಮಾನ್ಯ ತಿಲಕರು ನ್ಯಾಯಾಸ್ಥಾನದಲ್ಲಿ ಘೋಷಿಸಿದ್ದುಂಟು. ಆದರೆ ಜನರ ವೈಚಾರಿಕ ಶಕ್ತಿಯನ್ನು ಕುಂಠಿತಗೊಳಿಸಿ ನಿರಂಕುಶವಾದ ಆಡಳಿತ ನಡೆಸುವುದು ಬ್ರಿಟಿಷರಲ್ಲಿ ತಮಗಿದ್ದ ಭಕ್ತಿಯ ಸೂಚಕವೆಂದು ಸಂಸ್ಥಾನಗಳ ಸರಕಾರಗಳು ತಿಳಿದಿದ್ದುವು. ''ನಾಭಾ'' ಎಂಬ ಹೆಸರಿನ ಒಂದು ಪುಟ್ಟ ಸಂಸ್ಥಾನದಲ್ಲಿ ತಾವು ಅನುಭವಿಸಿದ ಕಿರುಕುಳ ಯಾತನೆಗಳನ್ನು ಪಂಡಿತ ನೆಹರೂ ಅವರು ತಮ್ಮ ಆತ್ಮಕತೆಯಲ್ಲಿ ವಿವರಿಸಿದ್ದಾರೆ. ಈ ದ್ವಿಮುಖ ದಬ್ಬಾಳಿಕೆಯ ಪರಿಸ್ಥಿತಿಯಲ್ಲಿ ಚಳುವಳಿ ಹೂಡುವ ಸ್ವಾತಂತ್ರ್ಯಯೋಧನಿಗೆ ಇರಬೇಕಾದ ಶಿಸ್ತು, ಸಂಯಮ, ಕರ್ತವ್ಯನಿಷ್ಠೆಗಳು ಉನ್ನತ ಮಟ್ಟದ್ದಾಗಿದ್ದರೆ ಮಾತ್ರವೇ ಚಳುವಳಿ ಯಶಸ್ವಿ ಆಗುವುದೆಂದು ನಿಜಲಿಂಗಪ್ಪನವರು ತಿಳಿದಿದ್ದರು.

ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯು ನೇರವಾಗಿ ಸಂಸ್ಥಾನಗಳ ರಾಜಕೀಯದಲ್ಲಿ ತಲೆಹಾಕಲು ನಿರಾಕರಿಸಿದುದರಿಂದ ಸಂಸ್ಥಾನಿಕರ ದಬ್ಬಾಳಿಕೆ ಸುಲಭವಾಗಿತ್ತು. ಬ್ರಿಟಿಷ್ ಪ್ರಾಂತ್ಯಗಳಲ್ಲಿದ್ದಂತೆ ಸ್ವತಂತ್ರ ನ್ಯಾಯಾಸ್ಥಾನಗಳಾಗಲೀ. ರಾಜಕೀಯ ಕೈದಿಗಳ ಹಿತರಕ್ಷಣೆಯ ಕಾನೂನು ರಿಯಾಯಿತಿಗಳಾಗಲೀ ಸಂಸ್ಥಾನಗಳಲ್ಲಿ ಜಾರಿಯಲ್ಲಿರಲಿಲ್ಲ. ಈ ಬಗೆಯ ಕಠಿಣ ಸನ್ನಿವೇಶದಲ್ಲಿ ಚಳುವಳಿಗಾರರು ಎಲ್ಲಾ ಬಗೆಯ ಕಷ್ಟಕಾರ್ಪಣ್ಯಗಳಿಗೂ, ತ್ಯಾಗಕ್ಕೂ ಸಿದ್ಧರಾಗಿರಬೇಕಾಗಿತ್ತು. ಇದೆಲ್ಲವನ್ನು ತಿಳಿದಿದ್ದ ನಿಜಲಿಂಗಪ್ಪನವರು ಸಾಧಕ ಬಾಧಕಗಳನ್ನು ದೀರ್ಘವಾಗಿ ಪರ್ಯಾಲೋಚಿಸಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವ ನಿರ್ಧಾರಕ್ಕೆ ಬಂದರು.

## ಕಾಂಗ್ರೆಸ್ ಸಂಸ್ಥೆಯ ಪುನರ್ಘಟನೆ

ಆಗ ಮೈಸೂರು ರಾಜ್ಯದ ರಾಜಕೀಯ ರಂಗದಲ್ಲಿ ಕಾಂಗ್ರೆಸ್ ಸಂಸ್ಥೆಯೊಂದೇ ಅಲ್ಲದೆ ಇತರ ರಾಜಕೀಯ ಪಕ್ಷಗಳೂ ಇದ್ದವು. ಜವಾಬ್ದಾರೀ ಸರ್ಕಾರ ಈ ಪಕ್ಷಗಳ ಗುರಿಯಾಗಿದ್ದರೂ ಸರ್ಕಾರ ಅನುಸರಿಸುತ್ತಿದ್ದ ''ವಿಭಜಿಸಿ ಆಳುವ'' ಚಾಣಾಕ್ಷ ನೀತಿಯಿಂದ ಅದುವರೆಗೆ ಏನನ್ನೂ ಸಾಧಿಸಲು ಅವು ಶಕ್ತವಾಗಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಮೈಸೂರು ಕಾಂಗ್ರೆಸ್ ಸಂಸ್ಥೆಯ ಮುಂದೆ ಎರಡು ತೊಡಕುಗಳು ಇದ್ದವು. ಒಂದು ಕಡೆ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆ ಮೈಸೂರು ಕಾಂಗ್ರೆಸ್‌ಗೆ ನೆರವು ನೀಡುವುದಿಲ್ಲವೆಂಬ ನಿರ್ಲಕ್ಷ್ಯ ನೀತಿ, ಇನ್ನೊಂದು- ಸರ್ಕಾರಕ್ಕೆ ಬೆಂಬಲ ಕೊಡುತ್ತಿದ್ದ ವಿರೋಧ ಪಕ್ಷದೊಡನೆ ಹೋರಾಟ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಮೈಸೂರು ಕಾಂಗ್ರೆಸ್ ಸಂಸ್ಥೆಯ ಅಸ್ತಿತ್ವ ಉಳಿಯಬೇಕಾದರೆ ವಿರೋಧಪಕ್ಷಗಳಾಗಿದ್ದ ಪ್ರಜಾಪಕ್ಷ ಮತ್ತು ಪ್ರಜಾಮಿತ್ರಮಂಡಲಿಗಳನ್ನು ಕಾಂಗ್ರೆಸ್‌ನಲ್ಲಿ ಸಮಾವೇಶಗೊಳಿಸುವುದು ಅಗತ್ಯವೆಂದು ಮೈಸೂರು ಕಾಂಗ್ರೆಸ್ ನಾಯಕರು ಭಾವಿಸಿದರು. ಅದಕ್ಕಾಗಿ ಅವರು ವಾರ್ಧಾಕ್ಕೆ ಹೋಗಿ ಮಹಾತ್ಮ ಗಾಂಧಿಯವರ ಸಲಹೆ, ಆಶೀರ್ವಾದಗಳನ್ನೂ ಪುನರ್ಘಟಿತ ಮೈಸೂರು ಕಾಂಗ್ರೆಸ್‌ಗೆ ಅಖಿಲ ಕಾಂಗ್ರೆಸ್ ಬೆಂಬಲ ದೊರಕಿಸಿಕೊಡುವ ಭರವಸೆಯನ್ನೂ ಪಡೆದು ಹಿಂದಿರುಗಿ ವಿರೋಧ ಪಕ್ಷಗಳೊಡನೆ ಸಂಧಾನ ನಡೆಸಿದರು. ಪ್ರಜಾಪಕ್ಷ-ಪ್ರಜಾಮಿತ್ರ ಮಂಡಲಿ ಈ ಎರಡು ಸಂಸ್ಥೆಗಳನ್ನು ರದ್ದುಗೊಳಿಸಿ, ಆ ಸಂಸ್ಥೆಗಳ ಸದಸ್ಯರು ಸಾಮೂಹಿಕವಾಗಿ ಕಾಂಗ್ರೆಸ್‌ಗೆ ಸೇರತಕ್ಕದ್ದೆಂದೂ, ಈ ರೀತಿ ಪುನರ್ಘಟಿತವಾದ ಕಾಂಗ್ರೆಸ್ ಸಂಸ್ಥೆ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಸತಕ್ಕದ್ದೆಂದೂ ತೀರ್ಮಾನವಾಯಿತು. ವಿಲೀನೀಕರಣದ ಈ ನಿರ್ಧಾರಗಳನ್ನು ಯಶಸ್ವಿಯಾಗಿ ಆಚರಣೆಗೆ ತಂದು ಮೈಸೂರು ಕಾಂಗ್ರೆಸ್ಸನ್ನು ಪುನರ್ಘಟಿಸುವ ಈ ಮಹತ್ ಕಾರ್ಯದಲ್ಲಿ ನಿಜಲಿಂಗಪ್ಪನವರ ಹಾಗೂ ಚಿತ್ರದುರ್ಗ ಜಿಲ್ಲೆಯ ಪಾತ್ರ, ಇತಿಹಾಸ ಪ್ರಸಿದ್ಧವಾದದ್ದು.

## ಜವಾಬ್ದಾರಿ ಸರ್ಕಾರಕ್ಕೆ ಹೋರಾಟ

೧೯೩೭ರಲ್ಲಿ ಏಪ್ರಿಲ್ ೧೭ರಂದು ಚಿತ್ರದುರ್ಗದಲ್ಲಿ ನಡೆದ ವಿಲೀನೀಕರಣ ಸಮಾರಂಭಕ್ಕೆ ಕೆ. ಸಿ. ರೆಡ್ಡಿಯವರು ಅಧ್ಯಕ್ಷರೂ, ನಿಜಲಿಂಗಪ್ಪನವರು ಸ್ವಾಗತ ಸಮಿತಿಯ ಅಧ್ಯಕ್ಷರೂ ಆಗಿದ್ದರು. ಈ ಇಬ್ಬರು ಮುಂದಾಳುಗಳ ನೇತೃತ್ವದಲ್ಲಿ ಸಮಾರಂಭ ಅತ್ಯಂತ ಯಶಸ್ವಿಯಾಗಿ ನಡೆದು ಅಲ್ಲಿಯವರೆಗೆ ಸುಪ್ತಪ್ರಾಯವಾಗಿದ್ದ ಮೈಸೂರು ಕಾಂಗ್ರೆಸ್ ಸಂಸ್ಥೆ ಪುನರ್ಘಟಿತವಾಗಿ ನವಚೈತನ್ಯ ಪಡೆಯಿತು. ಮುಂದೆ ಸಂಸ್ಥಾನಾದ್ಯಂತ ನಡೆದ ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಚಿತ್ರದುರ್ಗದ ವಿಲೀನೀಕರಣ ಸಮಾರಂಭ ನಾಂದಿಯಾಯಿತು.

ಸ್ವರಾಜ್ಯ ಸಾಧನೆಗಾಗಿ ನಡೆದ ಅಹಿಂಸಾತ್ಮಕ ಹೋರಾಟದಲ್ಲಿ ಅ.ಭಾ. ಕಾಂಗ್ರೆಸ್ ನಾಯಕರು ತೋರಿದ ಕಷ್ಟ ಸಹಿಷ್ಣುತೆ, ಅಪೂರ್ವ ತ್ಯಾಗದ ವಿವರಗಳನ್ನೂ, ಅದರ ಫಲವಾಗಿ ಬ್ರಿಟಿಷ್ ಹಿಂದೂಸ್ಥಾನದ ಏಳು ಪ್ರಾಂತಗಳಲ್ಲಿ ಕಾಂಗ್ರೆಸ್ಸಿಗರು ಸರ್ಕಾರ ರಚಿಸಿ ಆಡಳಿತ ನಡೆಸುತ್ತಿರುವುದನ್ನೂ ಅಭಿನಂದಿಸಿ ನಿಜಲಿಂಗಪ್ಪನವರು ಸಭೆಯಲ್ಲಿ ಮಾಡಿದ ಭಾಷಣ ಮುಂದೆ ಮೈಸೂರಲ್ಲಿ ನಡೆದ ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಸ್ಫೂರ್ತಿಯಿತ್ತು ಮಾರ್ಗದರ್ಶಕವಾಯಿತು.

ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿತವಾಗಬೇಕೆಂಬ ನಿರ್ಣಯ ಈ ಮೊದಲೇ ಅನೇಕ ಸಾರಿ ಆಗಿನ ಪ್ರಜಾಪ್ರತಿನಿಧಿ ಮತ್ತು ನ್ಯಾಯ ವಿಧಾಯಕ ಸಭೆಗಳಲ್ಲಿ ಬೇಡಿಕೆಯ ರೂಪದಲ್ಲಿ ಮಂಡಿಸಲ್ಪಟ್ಟಿತ್ತಾದರೂ ಪ್ರಭುತ್ವದ ಧೋರಣೆ, ರೀತಿನೀತಿಗಳಲ್ಲಿ ಯಾವ ಬದಲಾವಣೆಗಳೂ ಆಗಿರಲಿಲ್ಲ. ನಿರಂಕುಶ ದಬ್ಬಾಳಿಕೆಯ ಪ್ರಭುತ್ವ ರಥ ಎಂದಿನಂತೆ ವೈಭವ ವಿಲಾಸಗಳಿಂದ ನಡೆದಿತ್ತು. ಈ ಪರಿಸ್ಥಿತಿಯಲ್ಲಿ ಜನ್ಮ ತಳೆದ ಮೈಸೂರು ಕಾಂಗ್ರೆಸ್ ಸಂಸ್ಥೆ ಚಿತ್ರದುರ್ಗದಲ್ಲಿ ಸಭೆ ನಡೆಸಿ ''ಸಂಸ್ಥಾನದಲ್ಲಿ ಪೂರ್ಣ ಜವಾಬ್ದಾರಿ ಸರಕಾರದ ಸ್ಥಾಪನೆಯೇ ತನ್ನ ಪರಮ ಧ್ಯೇಯ''ವೆಂದು ಒಕ್ಕೊರಲಿನಿಂದ ಘೋಷಿಸಿತು.

ಕಾಂಗ್ರೆಸ್ ಇತಿಹಾಸವನ್ನು ರಚಿಸಿದ ಡಾ। ಪಟ್ಟಾಭಿ ಸೀತಾರಾಮಯ್ಯನವರು ಚಿತ್ರದುರ್ಗದಲ್ಲಿ ನಡೆದ ಈ ಚರಿತ್ರಾರ್ಹ ಸಮಾರಂಭಕ್ಕೆ ಹೆಚ್ಚಿನ ಮಹತ್ವ ಕೊಟ್ಟು ''ಈ ಸಂದರ್ಭವು ರಾಜ್ಯದಲ್ಲಿ ರಾಜಕೀಯ ಪಕ್ಷಗಳ ಬೆಳವಣಿಗೆಯನ್ನು ಪೂರ್ಣಗೊಳಿಸಿ ಇತರ ಪಕ್ಷಗಳನ್ನು ಕಾಂಗ್ರೆಸ್‌ನಲ್ಲಿ ವಿಲೀನ ಮಾಡಿಕೊಂಡು ರಾಷ್ಟ್ರೀಯತೆಯನ್ನು ಸಾರಿತು'' ಎಂದು ಹೇಳಿ ಮೈಸೂರಿನ ಜವಾಬ್ದಾರಿ ಸರ್ಕಾರ ಚಳವಳಿಯ ರಾಷ್ಟ್ರೀಯ ರೂಪದ ಕಡೆಗೆ ಗಮನ ಸೆಳೆದಿದ್ದಾರೆ. ಈ ಮುಂದೆ ಮೈಸೂರು ಕಾಂಗ್ರೆಸ್ ಅನುಕ್ರಮವಾಗಿ ಬೆಳೆಯುತ್ತಾ ಬಂದು ಅಖಿಲ ಭಾರತ ಕಾಂಗ್ರೆಸ್‌ನೊಡನೆ ವಿಲೀನವಾದುದನ್ನು ನಿಜಲಿಂಗಪ್ಪನವರ ರಾಜಕೀಯ ಜೀವನದ ಸಿದ್ಧಿ ಸಾಧನೆಗಳಲ್ಲಿ ಗುರುತಿಸಬಹುದು.

## ದಬ್ಬಾಳಿಕೆಯ ಉಗ್ರರೂಪ

೧೯೩೫ರಲ್ಲಿ ಭಾರತ ರಾಜ್ಯಾಂಗ ಘಟನೆಗನುಸಾರವಾಗಿ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಅಖಿಲ ಭಾರತ ಕಾಂಗ್ರೆಸ್ ಭಾಗವಹಿಸಿ ಪ್ರಾಂತ ಸರ್ಕಾರಗಳನ್ನು ರಚಿಸಿದ್ದರ ಪರಿಣಾಮವಾಗಿ ಮೈಸೂರು ಕಾಂಗ್ರೆಸ್ ಸಂಸ್ಥೆಯು ಚುನಾವಣೆಗಳಲ್ಲಿ ಭಾಗವಹಿಸಲು ನಿರ್ಧರಿಸಿ, ಚುನಾವಣಾ ಪ್ರಚಾರಕ್ಕಾಗಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಅವರನ್ನು ಆಹ್ವಾನಿಸಿತು. ಆದರೆ ಅವರು ಬಹಿರಂಗ ಸಭೆಯಲ್ಲಿ ಮಾತನಾಡಕೂಡದೆಂದು ಮೈಸೂರು ಸರಕಾರ ನಿರ್ಬಂಧ ಹಾಕಿದುದರಿಂದ ಬೊಂಬಾಯಿ ನಗರದ ತರುಣ ಮುಂದಾಳುಗಳಾದ ವೀರ ನಾರಿಮನ್ನರು ಆ ಕಾರ್ಯಕ್ಕಾಗಿ ಆಹ್ವಾನಿಸಲ್ಪಟ್ಟರು. ನಾರಿಮನ್ನರು ಬೆಂಗಳೂರಿಗೆ ಆಗಮಿಸಿ ಬನಪ್ಪ ಪಾರ್ಕಿನಲ್ಲಿ ಬಹಿರಂಗ ಸಭೆಯಲ್ಲಿ ಭಾಷಣ ಮಾಡಲು ಪ್ರಯತ್ನಿಸಿದಾಗ ಪೊಲೀಸರು ಅವರನ್ನು ಬಂಧಿಸಿದರು. ನೆರೆದಿದ್ದ ಜನ ರೊಚ್ಚಿಗೆದ್ದು ಕಲ್ಲು, ಕೆರಗಳನ್ನು ಪೊಲೀಸರ ಕಡೆಗೆ ತೂರಿದಾಗ ಗೋಲಿಬಾರು ನಡೆಯಿತು. ಸರಕಾರದ ಈ ಅವಿಚಾರ ವರ್ತನೆಯಿಂದ ನಾರಿಮನ್ನರ ಭಾಷಣಕ್ಕಿಂತ ನೂರುಪಾಲು ಹೆಚ್ಚಿನ ಪ್ರಚಾರ ದೊರಕಿದಂತಾಗಿ ಚುನಾವಣೆಗಳಲ್ಲಿ ಕಾಂಗ್ರೆಸ್ ವಿಜಯಶಾಲಿಯಾಗಿ ಉಭಯ ಶಾಸನಸಭೆಗಳಲ್ಲಿ ಬಹುಮತ ಗಳಿಸಿತು. ನಿಜಲಿಂಗಪ್ಪನವರು ಚಿತ್ರದುರ್ಗ ಜಿಲ್ಲೆಯಿಂದ ನ್ಯಾಯವಿಧಾಯಕ ಸಭೆಗೆ ಅವಿರೋಧವಾಗಿ ಚುನಾಯಿತರಾದರು.

ಮೈಸೂರು ಕಾಂಗ್ರೆಸ್‌ಗೆ ಪ್ರಥಮ ಪ್ರಯತ್ನದಲ್ಲಿಯೇ ದೊರೆತ ಈ ಮಹಾವಿಜಯದಿಂದ ಜನತೆಯ ರಾಜಕೀಯ ಜಾಗೃತಿ ಎಚ್ಚೆತ್ತಿತು. ಜವಾಬ್ದಾರಿ ಸರ್ಕಾರ ಚಳವಳಿ ಬಲಗೊಂಡಿತು. ಚುನಾವಣೆಯ ಅನಂತರ ೧೯೩೮ನೇ ಇಸವಿಯ ಏಪ್ರಿಲ್ ತಿಂಗಳಲ್ಲಿ ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕು ಶಿವಪುರ ಗ್ರಾಮದಲ್ಲಿ ಮೈಸೂರು ಕಾಂಗ್ರೆಸ್ ಪ್ರಥಮ ಮಹಾಧಿವೇಶನ ಟಿ. ಸಿದ್ದಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಸಮಾವೇಶಗೊಂಡಾಗ ಕಾಂಗ್ರೆಸ್ ಧ್ವಜವನ್ನು ಮೈಸೂರು ಸಂಸ್ಥಾನದಲ್ಲಿ ಎಲ್ಲಿಯೂ ಆರೋಹಣ ಮಾಡಬಾರದೆಂದು ಮೈಸೂರು ಸರ್ಕಾರ ನಿರ್ಬಂಧ ಹಾಕಿತು. ಇದರ ಪರಿಣಾಮವಾಗಿ ಸಂಸ್ಥಾನಾದ್ಯಂತ ಸ್ವಾತಂತ್ರ್ಯದ ಕಿಚ್ಚು ಹರಡಿ

ನಿರ್ಬಂಧಾಜ್ಞೆಯನ್ನು ಉಲ್ಲಂಘಿಸಲು ಜನರು ಮುಂದಾದರು. ಕೋಲಾರ ಜಿಲ್ಲೆಯ ವಿದುರಾಶ್ವತ್ಥದಲ್ಲಿ ಗೋಲೀಬಾರು, ಮೈಸೂರು ನಗರದ ಹ್ಯಾಮಿಲ್ಟನ್ ಪೊಲೀಸ್ ಕಛೇರಿಯ ಮುಂದೆ ಸತ್ಯಾಗ್ರಹ, ಪತ್ರಿಕಾ ಸ್ವಾತಂತ್ರ್ಯದ ಮುಟ್ಟುಗೋಲು, ನಾಯಕರ ದಸ್ತಗಿರಿ, ಪ್ರಮುಖ ಕಾಂಗ್ರೆಸ್ಸಿಗರನ್ನು ಸಂಸ್ಥಾನದಿಂದ ಹೊರಗಟ್ಟುವ ಪ್ರತಿಬಂಧಕ ಆಜ್ಞೆಗಳ ಜಾರಿ- ಇವು ಶಿವಪುರದಲ್ಲಿ ಪ್ರಾರಂಭವಾದ ಧ್ವಜ ಸತ್ಯಾಗ್ರಹದ ಪ್ರಮುಖ ಘಟನೆಗಳು. ಈ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ೧೯೩೯ರ ದಿನಾಂಕ ಫೆಬ್ರವರಿ ೨೬ರಲ್ಲಿ ಬೆಂಗಳೂರಿನಲ್ಲಿ ಸಮಾವೇಶವಾದ ಮೈಸೂರು ಕಾಂಗ್ರೆಸ್ ಮಹಾಧಿವೇಶನದಲ್ಲಿ ಸರಕಾರದ ಕಟು ಧೋರಣೆಯನ್ನು ಪ್ರತಿಭಟಿಸಲು ಕಾಂಗ್ರೆಸ್ ಸದಸ್ಯರು ಶಾಸನಸಭೆಗಳಿಗೆ ರಾಜೀನಾಮೆ ಕೊಡಬೇಕೆಂಬ ಅಸಹಕಾರ ನಿರ್ಣಯ ಅಂಗೀಕರಿಸಲ್ಪಟ್ಟಿತು. ಸಂಸ್ಥೆಯ ಆದೇಶದಂತೆ ಕಾಂಗ್ರೆಸ್ ಸದಸ್ಯರು ರಾಜೀನಾಮೆಯಿತ್ತರು.

## ಪ್ರಭುತ್ವ ಮಣಿಯಿತು

ಈ ಗೊಂದಲದ ಘಟನೆಗಳಿಂದ ಮೈಸೂರು ಸರ್ಕಾರ ಕನಲಿ ಕಂಗೆಟ್ಟು ಮುಂದೇನು ಮಾಡಬೇಕೆಂದು ತಿಳಿಯದೆ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯ ಸಹಾಯ ಬೇಡಿತು. ತತ್ಪರಿಣಾಮವಾಗಿ ಸರ್ದಾರ್ ಪಟೇಲ್ ಮತ್ತು ಆಚಾರ್ಯ ಕೃಪಲಾನಿಯವರು ಮಧ್ಯಸ್ಥಗಾರರಾಗಿ ಮೈಸೂರಿಗೆ ಬಂದು ದಿವಾನ್ ಮಿರ್ಜಾರೊಡನೆ ಮಾತುಕತೆ ನಡೆಸಿದರು. ಆಗ ನಡೆದ ಒಪ್ಪಂದದಲ್ಲಿ ಮೈಸೂರು ಸರ್ಕಾರ ಎಲ್ಲಾ ಪ್ರತಿಬಂಧಕಾಜ್ಞೆಗಳನ್ನು ಹಿಂದಕ್ಕೆ ತೆಗೆದುಕೊಳ್ಳುವುದು, ರಾಜಕೀಯ ಬಂದಿಗಳ ಬಿಡುಗಡೆ, ಆಗತಾನೆ ರಚಿತವಾದ ರಾಜಕೀಯ ಸುಧಾರಣೆ ಸಮಿತಿಗೆ ಮೈಸೂರು ಕಾಂಗ್ರೆಸ್‌ನ ಪರವಾಗಿ ೭ ಮಂದಿ ಸದಸ್ಯರ ನೇಮಕ, ಸಾರ್ವಜನಿಕ ಸಮಾರಂಭಗಳಲ್ಲಿ ಮೈಸೂರು ಧ್ವಜದೊಡನೆ ಕಾಂಗ್ರೆಸ್ ಧ್ವಜಗಳನ್ನು ಏರಿಸುವುದು, ದೇಶಭ್ರಷ್ಟ ಆಜ್ಞೆಗಳ ಉಪಸಂಹಾರ, ಮೈಸೂರು ಕಾಂಗ್ರೆಸ್ ಘಟನಾತ್ಮಕ ಸಂಸ್ಥೆಯೆಂದು ಸಾರುವುದು ಇವೇ ಮುಂತಾದ ವಿಷಯಗಳು ಸೇರಿದ್ದವು.

ಮಧ್ಯಸ್ಥಿಕೆಯ ಮಾತುಕತೆಗಳಲ್ಲಿ ಮೈಸೂರು ಸರ್ಕಾರ ಈ ಎಲ್ಲಾ ಷರತ್ತುಗಳಿಗೆ ಒಪ್ಪಿಗೆ ಕೊಟ್ಟಿತ್ತಾದರೂ ಅವುಗಳನ್ನು ಕಾರ್ಯ ರೂಪಕ್ಕೆ ತರಲಿಲ್ಲ. ಅಸಹಕಾರ ನಿರ್ಣಯದಂತೆ ರಾಜೀನಾಮೆಯಿತ್ತ ನ್ಯಾಯವಿಧಾಯಕ, ಪ್ರಜಾಪ್ರತಿನಿಧಿ ಸಭೆಗಳ ಕಾಂಗ್ರೆಸ್ ಸದಸ್ಯರು ಹೊರಗುಳಿದರು. ಜಿಲ್ಲಾ ಬೋರ್ಡು, ಪೌರಸಭೆ, ಗ್ರಾಮ ಪಂಚಾಯಿತಿಗಳ ಕಾಂಗ್ರೆಸ್ ಸದಸ್ಯರೂ ತಮ್ಮ ಸ್ಥಾನಗಳಿಗೆ ರಾಜೀನಾಮೆಯಿತ್ತು ಅಸಹಕಾರ ನಿರ್ಣಯಕ್ಕೆ ಬೆಂಬಲ ಕೊಟ್ಟರು. ಇಷ್ಟೆಲ್ಲಾ ನಡೆಯುತ್ತಿದ್ದರೂ ಒಪ್ಪಂದವನ್ನು ಮುರಿದ ವಚನಭ್ರಷ್ಟ ಸರ್ಕಾರ ಎಚ್ಚೆತ್ತುಕೊಳ್ಳಲಿಲ್ಲ. ಕಾಂಗ್ರೆಸ್ ನಾಯಕರನ್ನು ಪ್ರತಿಬಂಧಿಸುವ, ಪತ್ರಿಕಾ ಸ್ವಾತಂತ್ರ್ಯವನ್ನು ಮೊಟಕು ಮಾಡುವ ಹೊಸ ಆಜ್ಞೆಗಳು ಜಾರಿಗೆ ಬಂದವು.

## ಅಹಿಂಸಾತ್ಮಕ ಹೋರಾಟ

ಘಟನಾತ್ಮಕ ಚಳವಳಿಯಿಂದ ಜವಾಬ್ದಾರಿ ಸರ್ಕಾರ ದೊರಕುವುದಿಲ್ಲವೆಂಬ ಕಟುಸತ್ಯ ಸರಕಾರದ ಈ ವರ್ತನೆಯಿಂದ ಕಾಂಗ್ರೆಸ್ಸಿಗೆ ಮನವರಿಕೆಯಾಯಿತು. ಆಗ ಅದಕ್ಕೆ ಉಳಿದಿದ್ದ ಮಾರ್ಗ ಪ್ರತಿಬಂಧಕಾಜ್ಞೆಗಳ ಉಲ್ಲಂಘನೆ ಮತ್ತು ಸತ್ಯಾಗ್ರಹ ಇವೆರಡೇ ಆಗಿದ್ದವು. ಈ ಮೊದಲೇ ಅಂಗೀಕರಿಸಲ್ಪಟ್ಟಿದ್ದ ನಿರ್ಣಯಗಳನ್ನು ಕಾರ್ಯಗತ ಮಾಡಲು ಕಾಂಗ್ರೆಸ್ ಸಂಸ್ಥೆ ಶಿವಪುರದ ಮಹಾಧಿವೇಶನದಲ್ಲಿ ಅಧ್ಯಕ್ಷರಾಗಿದ್ದ ಟಿ. ಸಿದ್ಧಲಿಂಗಯ್ಯನವರನ್ನು ಪ್ರಥಮ ಸರ್ವಾಧಿಕಾರಿಯನ್ನಾಗಿ ನೇಮಿಸಿತು. ಅಹಿಂಸಾತ್ಮಕ ಹೋರಾಟಕ್ಕೆ ಕಾಂಗ್ರೆಸ್ ಯೋಧರು ಸಿದ್ಧರಾಗಿ ಮುಂದೆ ಬಂದರು. ಸಿದ್ಧಲಿಂಗಯ್ಯನವರ ಬಂಧನ, ಶಿಕ್ಷೆಗಳ ಅನಂತರ ಅವರ ಸ್ಥಾನಕ್ಕೆ ಎಡಬಿಡದೆ ಬಂದ ನಾಯಕರು ಸ್ಥಾನಬದ್ಧರಾದರು. ಸಂಸ್ಥಾನದ ಎಲ್ಲಾ ಕಡೆಗಳಲ್ಲಿಯೂ ಹೋರಾಟ ನಡೆದು ಬಂಧನ, ಶಿಕ್ಷೆಗಳು ಪ್ರತಿನಿತ್ಯದ ಮಾತಾದವು.

## ಅರಣ್ಯ ಸತ್ಯಾಗ್ರಹ

ಈ ಹೋರಾಟದಲ್ಲಿ ಕಂಕಣಬದ್ಧರಾದ ನಿಜಲಿಂಗಪ್ಪನವರ ಪಾತ್ರ ವಿಶಿಷ್ಟವಾದದ್ದು. ಶುದ್ಧ ಬಿಳಿಯ ಖಾದಿ ಉಡುಪನ್ನು ಧರಿಸಿ, ತಮ್ಮ ಬೆಂಬಲಿಗರಾದ ಹಲವರನ್ನು ಕೂಡಿಕೊಂಡು ಹೆಗಲುಗಳ ಮೇಲೆ ಕೊಡಲಿಗಳನ್ನು ಹೊತ್ತುಕೊಂಡು ಚಿತ್ರದುರ್ಗದ ಬಳಿಯ ತುರವನೂರಿನ ಈಚಲು ವನಕ್ಕೆ ಸೇರಿದ ಗಿಡಗಳನ್ನು ಕಡಿಯಲು ಅವರು ಸನ್ನದ್ಧರಾಗಿ ಹೊರಟರು. ಅವರ ಈ ಅರಣ್ಯ ಸತ್ಯಾಗ್ರಹ ಬಾಬು ರಾಜೇಂದ್ರಪ್ರಸಾದರು ಚಂಪಾರಣ್ಯದಲ್ಲಿ, ಸರ್ದಾರ್ ಪಟೇಲರು ಬಾರ್ಡೋಲಿಯಲ್ಲಿ ನಡೆಸಿದ ಸತ್ಯಾಗ್ರಹಗಳಷ್ಟೇ ಚರಿತ್ರಾರ್ಹ ವಾದದ್ದು. ನಿರ್ಬಂಧಾಜ್ಞೆಯನ್ನು ಮುರಿದ ಆರೋಪಕ್ಕಾಗಿ ಸರ್ಕಾರ ನಿಜಲಿಂಗಪ್ಪನವರನ್ನು ಬಂಧಿಸಿ ಒಂದೂವರೆ ವರ್ಷ ಸಶ್ರಮ ಕಾರಾಗೃಹ ಶಿಕ್ಷೆ ವಿಧಿಸಿತು. ನಿಜಲಿಂಗಪ್ಪನವರಿಗೆ ಹಾರ್ದಿಕ ಸ್ವಾಗತ ನೀಡಿ ಸರ್ಕಾರದ ಆಜ್ಞೆಯನ್ನು ಮುರಿಯಲು ನೆರವಾದ ತರುವನೂರು ಗ್ರಾಮಸ್ಥರ ಮೇಲೆ ಸರ್ಕಾರ ಪುಂಡುಗಂದಾಯ ಹೇರಿತು.

ಹೀಗೆ ಮೊದಲ ಸಾರಿ ಕಾರಾಗೃಹವಾಸದ ಕಠಿಣ ವ್ರತದಲ್ಲಿ ದೀಕ್ಷಿತರಾಗಿ, ತಮ್ಮ ಮಡದಿ ಮಕ್ಕಳು ಬಂಧುಬಾಂಧವ ಹಿತೈಷಿಗಳಿಂದ ಬೀಳ್ಕೊಂಡಾಗ ನಿಜದಲಿಂಗಪ್ಪನವರಿಗೆ ಮೂವತ್ತೇಳು ವರುಷದ ಹರೆಯ. ಬೀಳ್ಕೊಡುವಾಗ ಮಡದಿ ಮಕ್ಕಳು ಒಂದು ಹನಿಯೂ ಕಣ್ಣೀರಿಡದೆ ಶುಭಕೋರಿ ಹರಕೆ ಹೊತ್ತರು. ಅಣುಮಾತ್ರವೂ ವಿಚಲಿತರಾಗಲಿಲ್ಲ. ಆತ್ಮೀಯ ಸತೀಸುತರ ಸ್ವಾರ್ಥ ತ್ಯಾಗ, ಮಮತೆ ವಿಶ್ವಾಸಗಳು ನಮ್ಮ ರಾಜಕೀಯ ಜೀವಾಳಕ್ಕೆ ಬೆಂಬಲದ ನೀರೆರೆದು ಪೋಷಿಸಿತೆಂದು ನಿಜಲಿಂಗಪ್ಪನವರೇ ಕೆಲವೊಮ್ಮೆ ಹೇಳುತ್ತಿದ್ದುದುಂಟು.

ಮೈಸೂರು ಸರ್ಕಾರದ ಈ ಉಗ್ರ ಕ್ರಮವನ್ನು ಅಖಿಲ ಭಾರತ ಕಾಂಗ್ರೆಸ್ ನಾಯಕರು ಒಕ್ಕೊರಲಿನಿಂದ ಖಂಡಿಸಿದರು. ಮೈಸೂರು ಕಾಂಗ್ರೆಸ್‌ನ ಅಹಿಂಸಾತ್ಮಕ ಹೋರಾಟದ ಬಗೆಗೆ ಮಹಾತ್ಮ ಗಾಂಧಿಯವರು ಪ್ರಶಂಸೆಯನ್ನು ವ್ಯಕ್ತಪಡಿಸಿ, ಸಂಸ್ಥಾನದ ರಾಜಕೀಯ ಪರಿಸ್ಥಿತಿಯನ್ನು ಸ್ವತಃ ಪರಿಶೀಲಿಸಿ ಅರಿತುಕೊಳ್ಳಲು ತಮ್ಮ ಆಪ್ತ ಕಾರ್ಯದರ್ಶಿ ಮಹದೇವ ದೇಸಾಯಿರನ್ನು ಕಳುಹಿಸಿದರು.

## ಕಾರಾಗೃಹ ವಾಸ

ಮೈಸೂರು ಕಾಂಗ್ರೆಸ್‌ನ ಹಿರಿಯ ನಾಯಕರೆಲ್ಲರೂ ಕಾರಾಗೃಹವಾಸಿಗಳಾಗಿದ್ದು ಈ ಅಸಾಮಾನ್ಯ ಪರಿಸ್ಥಿತಿಯಲ್ಲಿ ಮೈಸೂರು ರತ್ನ ಸಿಂಹಾಸನಾಧೀಶ್ವರ ಶ್ರೀ ಜಯಚಾಮರಾಜ ಒಡೆಯರ ಸಿಂಹಾಸನಾರೋಹಣವು ದಿನಾಂಕ ಸೆಪ್ಟೆಂಬರ್ ೮, ೧೯೪೦ರಲ್ಲಿ ನಡೆಯಿತು. ಈ ಸಂದರ್ಭದಲ್ಲಿ ನಿಜಲಿಂಗಪ್ಪನವರ, ಮತ್ತಿತರ ರಾಜಕೀಯ ಬಂದಿಗಳ ಬಿಡುಗಡೆಯಾಯಿತು.

ಜನತೆಯ ಎದುರು ಸರ್ಕಾರದ ಉದಾರ ವರ್ತನೆಯನ್ನು ಮೆರೆಸಲು ಯೋಜಿತವಾಗಿದ್ದ ಬಿಡುಗಡೆಯ ಆಜ್ಞೆಯನ್ನು ಮೆರೆಸುವ ಇನ್ನೊಂದು ಆಜ್ಞೆಯೂ ಆ ಸಂದರ್ಭದಲ್ಲಿ ಹೊರಬಿತ್ತು. ನಿಜಲಿಂಗಪ್ಪನವರ ಜೀವನಾಧಾರವಾಗಿದ್ದ ವಕೀಲ ವೃತ್ತಿಯ ಸನ್ನದನ್ನು ಸರ್ಕಾರ ಹಿಂದಕ್ಕೆ ತೆಗೆದುಕೊಂಡಿತು. ಆರು ಮಕ್ಕಳ ತಂದೆಯಾಗಿದ್ದ ನಿಜಲಿಂಗಪ್ಪನವರು ಆ ಸಮಯದಲ್ಲಿ ಧೈರ್ಯಸ್ಥೈರ್ಯಗಳಿಂದ ಬಡತನವನ್ನು ಅನುಭವಿಸಿದರು. ಮಡದಿ ಮಕ್ಕಳ ನಿಶ್ಚಲತೆಯಿಂದಲೂ, ಬಂಧು ಬಾಂಧವರ ನೆರವಿನಿಂದಲೂ ಹಿತೈಷಿ ಹಾಗೂ ಪ್ರಜಾಸ್ತೋಮದ ಸಹಾನುಭೂತಿಯಿಂದಲೂ ತಮಗೆ ಅದು ಸಾಧ್ಯವಾಯಿತೆಂದು ಸ್ವತಃ ನಿಜಲಿಂಗಪ್ಪನವರೇ ಅನೇಕ ಸಾರಿ ಹೇಳಿದ್ದಾರೆ. ತೃಪ್ತಿ ಮತ್ತು ಹರ್ಷ ಮನೋಭಾವನೆಗಳು ಮಾನವ ಜೀವನದಲ್ಲಿ ಎಂತಹ ತಾರಕ ಮಂತ್ರಗಳೆಂಬುದನ್ನು ಸರ್ಕಾರದ ಆಜ್ಞೆ ತಮಗೆ ಅನುಭವ ಮಾಡಿಕೊಟ್ಟಿತೆಂದು ನುಡಿದಿದ್ದಾರೆ.

ಕಾರಾಗೃಹವಾಸದಿಂದಾಗಲೀ, ಸಂಸಾರ ನಿರ್ವಹಣೆಯ ಕಷ್ಟಕಾರ್ಪಣ್ಯಗಳಿಂದಾಗಲೀ ನಿಜಲಿಂಗಪ್ಪನವರು ಎಂದಿಗೂ ಕುಗ್ಗಿದವರಲ್ಲ. ಸಂತೃಪ್ತಿ ಸಮಾಧಾನಗಳನ್ನು ಒಂದೇ ಸೂತ್ರದಿಂದ ಬಂಧಿಸಿದ್ದ ನಿರ್ಲಿಪ್ತ ಚಿತ್ತವೃತ್ತಿಯೇ ಅವರ ದೇಹಾರೋಗ್ಯ ಮತ್ತು ಮನಃಶಕ್ತಿಯ ಮೂಲ.

ಸಾಳೆ ಬಹುದು ನಮಗಿಂದೇ ಬರಲಿ,
ಇಂದು ಬಹುದು ನಮಗೀಗಲೇ ಬರಲಿ,
ಅದಕಾರಂಜುವರು, ಅದಕಾರಳಕುವರು

-ಎಂಬ ನಿಷ್ಠುರ ವರ್ತನೆಯ ಸರಳ ಜೀವನ ಅವರದು.

"ನನ್ನಿಂದ ನನ್ನ ನಾಡಿನ ಜನತೆಗೆ ಹೇಗೋ ಎಂತೋ ಕಿಂಚಿತ್ ಸೇವೆಯಾದರೆ ನನ್ನ ಬಾಳು ಸಾರ್ಥಕ. ಅದಕ್ಕಿಂತ ಹೆಚ್ಚಿನದೇನನ್ನೂ ನಾನು ಬಯಸುವುದಿಲ್ಲ."

-ಎಂದು ಅನೇಕ ಸಾರಿ ತಮ್ಮ ಆಪ್ತೇಷ್ಟರಿಗೆ ಹೇಳುತ್ತಿದ್ದುದುಂಟು.

## ರಚನಾತ್ಮಕ ಕಾರ್ಯ

ಕಾರಾಗೃಹದಿಂದ ಹೊರಬಂದ ನಿಜಲಿಂಗಪ್ಪನವರು ಕೆಲವು ದಿನಗಳ ವಿಶ್ರಾಂತಿಯನ್ನೂ ಬಯಸದೆ ಕಾಂಗ್ರೆಸ್ ಸಂಸ್ಥೆಯ ರಚನಾತ್ಮಕ ಕಾರ್ಯಗಳಲ್ಲಿ ಪ್ರವೃತ್ತರಾದರು. ಪ್ರಭುತ್ವದ ದಬ್ಬಾಳಿಕೆ ದೌರ್ಜನ್ಯಗಳ ಕಮ್ಮಟದಿಂದ ಹೊರಬಂದಮೇಲೆ ಕಾಂಗ್ರೆಸ್ ಸಂಸ್ಥೆಯ ಧ್ಯೇಯಾದರ್ಶಗಳು ಮತ್ತಷ್ಟು ಉಜ್ವಲವಾಗಿ ಜನತೆಯ ಆದರಾಭಿಮಾನಗಳನ್ನು ಗಳಿಸಿತು. ನಿಜಲಿಂಗಪ್ಪನವರು ಜನಜೀವನದಲ್ಲಿ

ಒಂದಾದರು. ದಬ್ಬಾಳಿಕೆಗೆ ಜಗ್ಗದ ಅವರನ್ನು ಆಮಿಷದ ಆಸೆ ತೋರಿಸಿ ಒಲಿಸಿಕೊಳ್ಳಲು ಪ್ರಯತ್ನಗಳು ನಡೆದವು. ಕಾಂಗ್ರೆಸ್ ಸಂಸ್ಥೆಯ ಧ್ಯೇಯಾದರ್ಶ, ತ್ಯಾಗನಿಷ್ಠೆಗಳನ್ನು ರಕ್ತಗತವಾಗಿ ಮಾಡಿಕೊಂಡಿದ್ದ ನಿಜಲಿಂಗಪ್ಪನವರು ಇಂತಹ ಸಮಯಸಾಧಕರ ಕಿವಿಮಾತುಗಳನ್ನು ಮುಗುಳುನಗೆಯಿಂದ ಕಡೆಗಣಿಸಿದರು. ತಮ್ಮ ಜೀವನದಲ್ಲಿ ನಿಜಲಿಂಗಪ್ಪನವರು ಇಂತಹ ಎಷ್ಟೋ ಸಂದರ್ಭಗಳನ್ನು ನಿರ್ಲಕ್ಷ್ಯದಿಂದ ಎದುರಿಸಿ ಜಯಶಾಲಿಗಳಾಗಿರುವರೆಂಬುದನ್ನು ಅವರ ಸ್ನೇಹಿತರೆಲ್ಲರೂ ಬಲ್ಲರು.

ಈ ಸಮಯಕ್ಕೆ ಸರಿಯಾಗಿ ಮೈಸೂರು ಕಾಂಗ್ರೆಸ್ಸಿನ ಮೂರನೆಯ ಮಹಾಧಿವೇಶನ ಶಿವಮೊಗ್ಗದಲ್ಲಿ ನಡೆಯಿತು. ದಿವಂಗತ ಕೆ.ಟಿ. ಭಾಷ್ಯಂ ಅವರು ಅಧಿವೇಶನದ ಅಧ್ಯಕ್ಷರಾಗಿದ್ದರು. ಮಹದೇವ ದೇಸಾಯಿ ಅವರು ಅಧಿವೇಶನದ ಅಧ್ಯಕ್ಷರಾಗಿದ್ದರು. ಮಹದೇವ ದೇಸಾಯಿ ಅವರು ಸಂಸ್ಥಾನಾದ್ಯಂತ ಸಂಚಾರಮಾಡಿ ವರದಿಯೊಪ್ಪಿಸಿದ ಬಳಿಕ ಮಹಾತ್ಮ ಗಾಂಧಿಯವರು ಮೈಸೂರು ಕಾಂಗ್ರೆಸ್‌ಗೆ ಕಳುಹಿಸಿದ ಆದೇಶವೇ ಶಿವಮೊಗ್ಗೆಯ ಅಧಿವೇಶನದಲ್ಲಿ ಚರ್ಚಿಸಬೇಕಾದ ಮುಖ್ಯ ವಿಷಯವಾಗಿತ್ತು. ಸತ್ಯಾಗ್ರಹವನ್ನು ನಿಲ್ಲಿಸಿ ಮುಂದೆ ಬರಲಿದ್ದ ಚುನಾವಣೆಯಲ್ಲಿ ಮೈಸೂರು ಕಾಂಗ್ರೆಸ್ ಸ್ಪರ್ಧಿಸಿ ಘಟನಾತ್ಮಕ ಕಾರ್ಯಕ್ಕೆ ತೊಡಗಬೇಕೆಂಬ ಮಹಾತ್ಮರ ಸಲಹೆ ಅಧಿವೇಶನದಲ್ಲಿ ಅಂಗೀಕರಿಸಲ್ಪಟ್ಟು ನಿರ್ಣಯದ ರೂಪ ತಾಳಿತು.

## ಚುನಾವಣೆಯಲ್ಲಿ ವಿಜಯ

ಈ ವೇಳೆಗೆ ಮೈಸೂರು ಸುಧಾರಣಾ ಸಮಿತಿಯ ವರದಿ ಸಿದ್ಧವಾಗಿ ಸರ್ಕಾರದ ಕೈ ಸೇರಿತ್ತು. ಸಮಿತಿಯಲ್ಲಿ ಮೈಸೂರು ಕಾಂಗ್ರೆಸ್‌ಗೆ ಪ್ರಾತಿನಿಧ್ಯವಿಲ್ಲದಿದ್ದರೂ ಸುಧಾರಣೆಗಳನ್ನು ಒಪ್ಪಿಕೊಳ್ಳದೆ ಗತ್ಯಂತರವಿರಲಿಲ್ಲ. ಶಿವಮೊಗ್ಗೆಯ ಮಹಾಧಿವೇಶನ ನಡೆದಾಗ ಕಾರಾಗೃಹದಲ್ಲಿದ್ದ ನಿಜಲಿಂಗಪ್ಪನವರು ಚುನಾವಣೆಯ ವೇಳೆಗೆ ಮುಕ್ತರಾಗಿ ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡಿನ ಪ್ರತಿನಿಧಿಯಾಗಿ ಸಂಸ್ಥಾನಾದ್ಯಂತ ಪ್ರವಾಸ ಮಾಡಿದರು. ಚುನಾವಣೆಯಲ್ಲಿ ಕಾಂಗ್ರೆಸ್ ಜಯಶಾಲಿಯಾಗಿ ಉಭಯ ಶಾಸನಸಭೆಗಳಲ್ಲಿ ಸಂಖ್ಯಾಬಲವನ್ನು ಪಡೆಯಿತಾದರೂ ಪ್ರಜಾಪ್ರಭುತ್ವ ತತ್ವಗಳಿಗನ್ವಯ ಮಂತ್ರಿಮಂಡಲ ರಚಿಸುವ ಅಧಿಕಾರವನ್ನು ಕಾಂಗ್ರೆಸ್‌ಗೆ ಕೊಡಲು ಮೈಸೂರು ಸರ್ಕಾರ ನಿರಾಕರಿಸಿತು.

ಈ ತರುವಾಯ ಚಿತ್ರದುರ್ಗ ಜಿಲ್ಲೆಯ ಹರಪುರ ಗ್ರಾಮದಲ್ಲಿ ನಡೆದ ಮೈಸೂರು ಕಾಂಗ್ರೆಸ್‌ನ ನಾಲ್ಕನೆಯ ಮಹಾಧಿವೇಶನದ ಸಿದ್ಧತೆಯ ಹೊಣೆ ಸ್ವಾಗತಾಧ್ಯಕ್ಷರಾಗಿದ್ದ ನಿಜಲಿಂಗಪ್ಪನವರ ಮೇಲೆ ಬಿದ್ದಿತು. ಕರ್ನಾಟಕದ ಉಕ್ಕಿನ ಮನುಷ್ಯರೆಂದು ಹೆಸರಾಗಿದ್ದ ದಿವಂಗತ ಎಚ್. ಸಿದ್ಧಯ್ಯನವರು ಅಧ್ಯಕ್ಷರಾಗಿದ್ದ ಈ ಮಹಾಧಿವೇಶನದ ವಿಶೇಷವೆಂದರೆ ಅಖಿಲ ಭಾರತ ಕಾಂಗ್ರೆಸ್‌ನ ಪ್ರತಿನಿಧಿಯಾಗಿ ದಿವಂಗತದ ಬಾಬು ರಾಜೇಂದ್ರಪ್ರಸಾದರು ಕಾರ್ಯಕಲಾಪಗಳಲ್ಲಿ ಭಾಗವಹಿಸಿದ್ದುದು ಅವರು ಮಹಾತ್ಮ ಗಾಂಧಿಯವರ ಸಂದೇಶವನ್ನು ಸಭೆಯಲ್ಲಿ ಓದಿ ಮುಂದೆ ಮೈಸೂರು ಕಾಂಗ್ರೆಸ್ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದೂ, ಇದರಿಂದ ಕಾಂಗ್ರೆಸ್ ಮತ್ತು ಜನತೆಯ ನಡುವೆ ನಿಕಟ ಸಂಪರ್ಕ ಏರ್ಪಡುವುದೆಂದೂ ಸಲಹೆ ಮಾಡಿದರು.

## ಕರ್ನಾಟಕದ ವಿನೋಬಾ

ಈ ಸಮ್ಮೇಳನಕ್ಕೆ ದೊರಕಿದ ಯಶಸ್ಸು ನಿಜಲಿಂಗಪ್ಪನವರಿಗೆ ಸ್ಫೂರ್ತಿದಾಯಕವಾಯಿತು. ಜನರ ಮೇಲೆ ಅವರ ಪ್ರಭಾವ ನೂರ್ಮಡಿಯಾಗಿ ಬೆಳೆಯಿತು. ಮಹಾಧಿವೇಶನದ ಸಭಾಂಗಣಕ್ಕೆ ಅವರ ಹೆಸರಿಟ್ಟಿದುದರ ಔಚಿತ್ಯವನ್ನು ಉಲ್ಲೇಖಿಸಿ ಜನಪ್ರಿಯ ವಾರಪತ್ರಿಕೆಯಾದ 'ಪ್ರಜಾಮತ' ಈ ರೀತಿ ಬರೆಯಿತು:

''ಅಪಾರವಾದ ವಿದ್ವತ್ತು ಅಪ್ರತಿಮವಾದ ಸತ್ಯ ಪ್ರೇಮ, ವಿಶಾಲವಾದ ಅಂತಃಕರಣ, ಎಲೆಯ ಮರೆಯ ಕಾಯಂತಿದ್ದು ಜನತೆಯ ಹಿತಕ್ಕಾಗಿ ನಿರಂತರವಾಗಿ ದುಡಿಯುವ ಸೇವಾಬುದ್ಧಿ ಇವು ವಿನೋಬಾರವರ ಗುಣಗಳು. ನಮ್ಮ ಮೈಸೂರು ನಾಯಕ ವರ್ಗದ ಕಡೆ ತಿರುಗಿದರೆ ಅಲ್ಲಿ ಕೂಡಾ ವಿನೋಬಾ ವ್ಯಕ್ತಿತ್ವದ ಪ್ರತಿಬಿಂಬದಂತೆ ಕಾಣುವ ವ್ಯಕ್ತಿಯೊಬ್ಬರಿದ್ದಾರೆ. ಶ್ರೀ ನಿಜಲಿಂಗಪ್ಪನವರನ್ನು ವ್ಯಕ್ತಿಶಃ ಬಲ್ಲವರೆಲ್ಲರೂ ಮೇಲೆ ಹೇಳಿದ ಉಪಮಾನದ ಸಹಜತೆಯನ್ನು ಮನಗಾಣಬಲ್ಲರು. ಸರಳ ಜೀವನ, ನಿಷ್ಕಾಮ ಕರ್ಮ, ಅಮಿತ ಸೇವಾಶಕ್ತಿ ಇವು ನಿಜಲಿಂಗಪ್ಪನವರ ಹುಟ್ಟುಗುಣಗಳು.''

ಇಂದಿಗೂ ಕಾಲುಶತಮಾನದ ರಾಜಕೀಯ ಜೀವನದ ಏಳು ಬೀಳು, ಪುರಸ್ಕಾರ ತಿರಸ್ಕಾರಗಳನ್ನು ಅನುಭವಿಸಿದ ಅನಂತರವೂ ಈ ಉಪಮಾನದ ವಾಸ್ತವತೆ ಔಚಿತ್ಯಗಳಲ್ಲಿ ಅಣುಮಾತ್ರವೂ ಲೋಪವಾಗಿಲ್ಲವೆಂಬುದು ನಿಜಲಿಂಗಪ್ಪನವರ ಉಜ್ವಲವ್ಯಕ್ತಿತ್ವ, ಅಂತಃಶಕ್ತಿಗಳಿಗೆ ನಿದರ್ಶನವಾಗಿರುತ್ತದೆ.

ನಾಲ್ಕನೆಯ ಮಹಾಧಿವೇಶನದ ಅನಂತರ ನಿಜಲಿಂಗಪ್ಪನವರು ರಚನಾತ್ಮಕ ಕಾರ್ಯಗಳನ್ನು ಕೈಗೊಂಡರು. ಇದರ ಫಲವಾಗಿ ಅಖಿಲ ಮೈಸೂರು ನೂಲುವವರ ಸಂಘ ಸ್ಥಾಪಿಸಲ್ಪಟ್ಟಿತು.

ಈ ಮಧ್ಯೆ ದ್ವಿತೀಯ ಮಹಾಯುದ್ಧದ ಬಿಸಿ ಭಾರತವನ್ನೂ ಮುಟ್ಟಿತ್ತು. ಒಂದು ಕಡೆ ಜಪಾನಿನ ಭಯ, ಇನ್ನೊಂದು ಕಡೆ ಯುದ್ಧದಲ್ಲಿ ಜರ್ಮನಿಯ ಮುನ್ನಡೆ ಈ ಎರಡೂ ಆಘಾತಗಳಿಂದ ಬ್ರಿಟಿಷ್ ಸಾಮ್ರಾಜ್ಯದ ಅಸ್ತಿಭಾರ ಕುಸಿಯಿತು. ಸ್ವಾತಂತ್ರ್ಯ ಕೊಟ್ಟರೆ ಮಾತ್ರವೇ ಬ್ರಿಟಿಷರಿಗೆ ನೆರವು ನೀಡುವುದಾಗಿ ಅಖಿಲ ಭಾರತ ಕಾಂಗ್ರೆಸ್ ಘೋಷಿಸಿತ್ತು. ಪ್ರಾಂತ್ಯಗಳಲ್ಲಿ ಸ್ಥಾಪಿತವಾಗಿದ್ದ ಕಾಂಗ್ರೆಸ್ ಸರಕಾರಗಳು ರಾಜೀನಾಮೆ ಕೊಟ್ಟಿದ್ದವು.

## 'ಕ್ವಿಟ್ ಇಂಡಿಯಾ' ಚಳುವಳಿ

ಇಂತಹ ಅನಿಶ್ಚಿತ ವಾತಾವರಣದಲ್ಲಿ ಮೈಸೂರು ಕಾಂಗ್ರೆಸ್‌ನ ಐದನೆಯ ಮಹಾಧಿವೇಶನ ೧೯೪೨ ನೇ ಇಸವಿಯ ಏಪ್ರಿಲ್ ತಿಂಗಳಲ್ಲಿ ಟಿ. ಸುಬ್ರಹ್ಮಣ್ಯಂ ಇವರ ಅಧ್ಯಕ್ಷತೆಯಲ್ಲಿ ಸೇರಿ ಅಖಿಲ ಭಾರತ ಕಾಂಗ್ರೆಸ್ ನಿಲುವನ್ನು ಸಮರ್ಥಿಸಿ ಅದರಂತೆ ನಡೆಯಲು ನಿರ್ಧರಿಸಿತು. ಈ ಬಿಕ್ಕಟ್ಟಿನ ಪ್ರಸಂಗದಲ್ಲಿ ಅಖಿಲ ಭಾರತ ಕಾಂಗ್ರೆಸ್‌ನ ಕಾರ್ಯಕಾರಿ ಸಮಿತಿಯು ೧೯೪೨ನೇ ಇಸವಿಯ ಆಗಸ್ಟ್ ತಿಂಗಳಲ್ಲಿ ಬೊಂಬಾಯಿ ನಗರದಲ್ಲಿ ಸಭೆ ಸೇರಿತು. ಸ್ವತಃ ಗಾಂಧೀಜಿಯವರು ಉಪಸ್ಥಿತರಿದ್ದ ಈ ಸಭೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯ ಶಾಹಿಗೆ ಕೊನೆಯ ಎಚ್ಚರಿಕೆ ನೀಡಿ ಬ್ರಿಟಿಷರನ್ನು ಭಾರತದಿಂದ ಹೊರದೂಡುವ 'ಕ್ವಿಟ್ ಇಂಡಿಯಾ' ನಿರ್ಣಯ ಅಂಗೀಕರಿಸಲ್ಪಟ್ಟಿತು. ಐತಿಹಾಸಿಕ ಸಭೆಗೆ ಮೈಸೂರು ಕಾಂಗ್ರೆಸ್ಸಿನ ಪ್ರತಿನಿಧಿಗಳಾಗಿ ತೆರಳಿದ್ದ ನಾಯಕರಲ್ಲಿ ನಿಜಲಿಂಗಪ್ಪನವರೂ ಒಬ್ಬರು. ನಿರ್ಣಯವನ್ನು ಕಾರ್ಯಗತ ಮಾಡಲು ಮೈಸೂರಿಗೆ ಹಿಂತಿರುಗುತ್ತಿದ್ದಾಗ ರಾಜ್ಯದ ಗಡಿಯಲ್ಲಿ ಅವರನ್ನು ದಸ್ತಗಿರಿ ಮಾಡಿ ವಿಚಾರಣೆ ನಡೆಸದೆ ಸ್ಥಾನಬದ್ಧತೆಯಲ್ಲಿ ಇಡಲಾಯಿತು. ಎರಡು ವರ್ಷಗಳ ಕಾರಾಗೃಹವಾಸದಲ್ಲಿಟ್ಟು ಸರ್ಕಾರ ಅವರನ್ನು ೧೯೪೪ರಲ್ಲಿ ಬಿಡುಗಡೆ ಮಾಡಿತು.

ಆ ವೇಳೆಗೆ ಸಂಗ್ರಾಮ, ಆಂದೋಳನಗಳಿಂದ ಜರ್ಝರಿತವಾಗಿದ್ದ ಬ್ರಿಟಿಷ್ ಸರ್ಕಾರ ಸಂಧಾನಕ್ಕಿಳಿದು ಕಾಂಗ್ರೆಸ್ ನಾಯಕರೊಡನೆ ಭಾರತದ ಭವಿಷ್ಯವನ್ನು ಕುರಿತು ಚರ್ಚಿಸಲು ಸಭೆ ನಡೆಸಿತು. ಸಂಪೂರ್ಣ ಸ್ವಾತಂತ್ರ್ಯದ ಬೇಡಿಕೆಯನ್ನು ಕಾಂಗ್ರೆಸ್ ನಾಯಕರು ಸರ್ಕಾರದ ಮುಂದಿಟ್ಟರು. ಇಂಗ್ಲೆಂಡಿನಲ್ಲಿ ಲೇಬರ್ ಸರ್ಕಾರದ ರಚನೆಯಿಂದ ಈ ಬೇಡಿಕೆಗೆ ಉತ್ತೇಜನ ಸಿಕ್ಕಿತು.

## ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿ

ಈ ಮಧ್ಯೆ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಟಿ. ಸುಬ್ರಹ್ಮಣ್ಯಂ ಅವರ ಅಧಿಕಾರಾವಧಿ ಮುಗಿದು ನಿವೃತ್ತರಾದರು. ಶ್ರೀಗಳಾದ ಟಿ. ಸಿದ್ಧಲಿಂಗಯ್ಯ, ಹೆಚ್. ಸಿ. ದಾಸಪ್ಪ, ಕೆ. ಟಿ. ಭಾಷ್ಯಂ, ಹೆಚ್. ಸಿದ್ದಯ್ಯ, ಟಿ. ಸುಬ್ರಹ್ಮಣ್ಯಂ ಈ ಮಹನೀಯರ ನೇತೃತ್ವದಲ್ಲಿ ನಡೆದುಬಂದ ಮೈಸೂರು ಕಾಂಗ್ರೆಸ್‌ನ ಅಧ್ಯಕ್ಷ ಪೀಠಕ್ಕೆ ಶ್ರೀ ನಿಜಲಿಂಗಪ್ಪನವರು ಆರನೆಯ ಅಧ್ಯಕ್ಷರಾಗಿ ಆಯ್ಕೆ ಆದದ್ದು ಅವರ ಕರ್ತವ್ಯನಿಷ್ಠೆ, ಜನತೆಯಲ್ಲಿ ಅವರು ಗಳಿಸಿಕೊಂಡಿದ್ದ ವಿಶ್ವಾಸ, ಗೌರವಗಳ ಅಮೋಘ ನಿದರ್ಶನವಾಗಿದೆ.

ಇಲ್ಲಿಂದ ಮುಂದೆ ನಿಜಲಿಂಗಪ್ಪನವರು ಭಾರತದ ಮುಖಂಡರ ಸಾಲಿಗೆ ಸೇರುವ ಘಟ್ಟವನ್ನು ತಲಪುತ್ತಾರೆ. ರಾಜ್ಯದ ನಾಯಕಮಣಿ ಪ್ರಾಂತೀಯ ಮುಖಂಡತ್ವದಿಂದ ಅಖಿಲ ಭಾರತ ನಾಯಕರ ಶ್ರೇಣಿಯನ್ನು ಸೇರುವ ರೋಮಾಂಚಕಾರಿ ಕತೆಯೇ ಕರ್ನಾಟಕ ಏಕೀಕರಣದ ಇತಿಹಾಸ.

## ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷಸ್ಥಾನ

೧೯೪೬ರಲ್ಲಿ ನಿಜಲಿಂಗಪ್ಪನವರು ಮೈಸೂರು ಕಾಂಗ್ರೆಸ್ ಅಧ್ಯಕ್ಷ ಪದವಿಯಿಂದ ನಿವೃತ್ತರಾದರು. ಅವರ ತ್ಯಾಗ ಜೀವನ, ವಿಚಾರ ಸ್ವಾತಂತ್ರ್ಯ, ನಿಸ್ವಾರ್ಥ ಸೇವೆ, ಕಾರ್ಯದಕ್ಷತೆ, ಈ ಶ್ರೇಷ್ಠ ಗುಣಗಳನ್ನು ಅರಿತುಕೊಂಡಿದ್ದ ಕರ್ನಾಟಕ ಪ್ರಾಂತ್ಯ ಸಮಿತಿಯು ಕೂಡಲೇ ಅವರನ್ನು ಅಧ್ಯಕ್ಷರನ್ನಾಗಿ ಚುನಾಯಿಸಿಕೊಂಡಿತು. ಮುಂದಿನ ವರ್ಷಗಳಲ್ಲಿ ಈ ಆಯ್ಕೆ ಹೇಗೆ ಇತಿಹಾಸ ಪ್ರಸಿದ್ಧ ವಾಯಿತೆಂಬುದನ್ನು ಈ ಸಂದರ್ಭದಲ್ಲಿ ತಿಳಿಸಬೇಕಾಗಿದೆ.

ಮೈಸೂರು ಮತ್ತು ಬೊಂಬಾಯಿ ಕರ್ನಾಟಕ ಪ್ರಾಂತ್ಯಗಳು ಒಂದೇ ವಿಶಾಲ ಕರ್ನಾಟಕದ ಅಂಗಗಳಾಗಿದ್ದರೂ ಧರ್ಮ ಕರ್ಮ ಸಂಯೋಗದಿಂದ ಭಾವೈಕ್ಯತೆ ಸಾಧಿಸಲಾಗದೆ ಬೇರೆಬೇರೆಯಾಗಿಯೇ ಉಳಿದಿದ್ದವು. ಬ್ರಿಟಿಷ್ ಪ್ರಾಂತ್ಯಗಳ ದಕ್ಷ ಆಡಳಿತ, ಅಖಿಲ ಭಾರತ ಕಾಂಗ್ರೆಸ್ ಮಹಾಸಂಸ್ಥಾನಿಕ ಸ್ವರಾಜ್ಯಕ್ಕಾಗಿ ಅದು ನಡೆಸಿದ ಹೋರಾಟ, ಈ ಎಲ್ಲಾ ಘಟಕಗಳೊಡನೆ ನೇರವಾದ ನಿಕಟವಾದ ಸಂಬಂಧ ಪಡೆದಿದ್ದ ಬೊಂಬಾಯಿ ಕರ್ನಾಟಕದ ಜನರು ವಿದ್ಯೆ, ವಾಣಿಜ್ಯಗಳಲ್ಲಿ ಮೈಸೂರಿನ ಜನತೆಗಿಂತ ಹೆಚ್ಚಿನ ಪ್ರಗತಿ ಸಾಧಿಸಿದ್ದರು.

ಅವರ ರಾಜಕೀಯ ಜಾಗೃತಿ ಮೈಸೂರಿನವರಿಗಿಂತ ಹೆಚ್ಚಿನದಾಗಿತ್ತು. ಬೆಳಗಾವಿಯ ಕಾಂಗ್ರೆಸ್ ಮಹಾಧಿವೇಶನದ ನಂತರ, ಹರಿದು ಹಂಚಿಹೋಗಿದ್ದ ಕನ್ನಡನಾಡಿನ ಬೇರೆಬೇರೆ ಪ್ರದೇಶಗಳನ್ನು ಒಂದುಗೂಡಿಸುವ ಆಕಾಂಕ್ಷೆ ಅಲ್ಲಿನ ಜನತೆಯಲ್ಲಿ ಉದ್ಭವಿಸಿತು. ಅಲ್ಲಿಯ ಸಂಘ ಸಂಸ್ಥೆಗಳು ಈ ಆಕಾಂಕ್ಷೆಯನ್ನು ಕಾರ್ಯಗತ ಮಾಡಬಲ್ಲ ಸಮರ್ಥ ನಾಯಕರನ್ನು ಹುಡುಕುತ್ತಿದ್ದವು. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಮೈಸೂರು ಕಾಂಗ್ರೆಸ್ ನಡೆಸಿದ ಚಳವಳಿಯು ಬಹುಕಾಲ ಸಫಲವಾಗದಿರಲು ಜನತೆಯ ನಿರುತ್ಸಾಹವೇ ಕಾರಣವೆಂಬ ಟೀಕೆಯೂ ಇದ್ದಿತು.

ಈ ಪರಿಸ್ಥಿತಿಯಲ್ಲಿ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯು ನಿಜಲಿಂಗಪ್ಪನವರನ್ನು ಅಧ್ಯಕ್ಷರಾಗಿ ಆರಿಸಿಕೊಂಡಿದ್ದರ ಔಚಿತ್ಯ, ದೂರದರ್ಶಿತ್ವಗಳನ್ನು ರಾಷ್ಟ್ರೀಯ ದೃಷ್ಟಿಯಿಂದ ಗುರುತಿಸಬೇಕಾಗಿದೆ. ಮೊಟ್ಟಮೊದಲಿಗೆ ಮೈಸೂರಿನವರೊಬ್ಬರಿಗೆ ದೊರೆತ ಈ ಗೌರವ ಕನ್ನಡ ಪ್ರದೇಶಗಳ ಭಾವೈಕ್ಯತೆಯನ್ನು ಮೂಡಿಸುವ ಮಾರ್ಗವನ್ನು ತೋರಿಸಿತು. ಕರ್ನಾಟಕ ಏಕೀಕರಣಕ್ಕೆ ನಾಂದಿಯಾಯಿತು. ಇಲ್ಲಿಂದ ಮುಂದೆ ನಿಜಲಿಂಗಪ್ಪನವರು ಕರ್ನಾಟಕ ಏಕೀಕರಣದ ಅಧ್ವರ್ಯುಗಳಾಗಿ, ಕಾರಣಪುರುಷರಾಗಿ, ಇತಿಹಾಸ ಪ್ರಸಿದ್ಧ ವ್ಯಕ್ತಿಯಾಗಿ ಉಳಿಯುವ ಮಹತ್ತರ ಸಾಧನೆಯನ್ನು ಮಾಡಿದ್ದಾರೆ. ಕನ್ನಡನಾಡಿನ ಅನಭಿಷಿಕ್ತ ದೊರೆಯಾಗಿ, ಜನಪ್ರಿಯ ನಾಯಕರಾಗಿ ತಮ್ಮ ವ್ಯಕ್ತಿತ್ವದ ಘನತೆಯನ್ನು ಮತ್ತಷ್ಟು ಹೆಚ್ಚಿಸಿಕೊಂಡಿದ್ದಾರೆ. ಕನ್ನಡದ ಜ್ಯೋತಿಯನ್ನು ಭಾರತದಲ್ಲಿ ಬೆಳಗಿ ಕನ್ನಡನಾಡಿಗೆ ಕೀರ್ತಿ ತಂದಿದ್ದಾರೆ.

ರಾಷ್ಟ್ರ ವಿಮೋಚನೆಗಾಗಿ ಹಗಲಿರುಳು ಶ್ರಮಿಸಿದ ರಾಷ್ಟ್ರನಾಯಕರ, ರಾಷ್ಟ್ರಾಭಿಮಾನಿಗಳ ಶ್ರಮಕ್ಕೆ ಸಾರ್ಥಕವೊದಗಿ ೧೯೪೭ರ ಆಗಸ್ಟ್ ೧೫ ರಂದು ಭಾರತಕ್ಕೆ ಸ್ವಾತಂತ್ರ್ಯ ಬಂದಿತು. ಆದರೆ ಸ್ವಾತಂತ್ರ್ಯ ಬರುವ ಮುನ್ನ ನಿರಪರಾಧಿ ಜನರ ರಕ್ತ ಹರಿದು, ದೇಶ ಇಬ್ಭಾಗವಾಗಿ ಭಾರತ ಮತ್ತು ಪಾಕಿಸ್ತಾನಗಳು ಉದ್ಭವಿಸಿದವು.

## ಏಕೀಕರಣದ ಕಾರಣಪುರುಷ

ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ಕನ್ನಡಿಗರ ಮುಂದೆ ನಿಂತ ಮುಖ್ಯ ಪ್ರಶ್ನೆ ಕರ್ನಾಟಕ ಏಕೀಕರಣ. ಈ ವಿಚಾರದಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯ ನೀತಿಯೇನೆಂಬುದು ೧೯೩೮ರಲ್ಲಿ ಸ್ಪಷ್ಟವಾಗಿತ್ತು. ''ಕರ್ನಾಟಕವನ್ನು ಪ್ರತ್ಯೇಕ ಪ್ರಾಂತ್ಯವಾಗಿ ರಚಿಸುವುದನ್ನು ನಾವಿನ್ನು ವಿರೋಧಿಸಲಾಗದು. ಕರ್ನಾಟಕ ಏಕೀಕೃತವಾಗಬೇಕೆಂಬುದೇ ನನ್ನ ಮಹದಾಶಯ'' ಎಂದು ಸ್ವತಃ ಗಾಂಧಿಯವರೇ ಕಾರ್ಯಕಾರಿ ಸಮಿತಿಯಲ್ಲಿ ಸಾರಿದ್ದರು. ಆದರೆ ಆ ನಿರ್ಧಾರವನ್ನು ಕಾರ್ಯಗತಮಾಡುವ ಪ್ರಯತ್ನ ಆಮೇಲೆ ನಡೆಯದಿದ್ದುದನ್ನು ಕಂಡು ನಿರಾಶೆಗೊಂಡ ಏಕೀಕರಣವಾದಿಗಳು ನಿಜಲಿಂಗಪ್ಪನವರ ಸಲಹೆಯಂತೆ ೧೯೪೬ರ ಆಗಸ್ಟ್ ತಿಂಗಳಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಭೆ ಬೊಂಬಾಯಿಯಲ್ಲಿ ನಡೆದಾಗ ಏಕೀಕರಣದ ಪರಿಷತ್ತಿನ ಸಭೆಯನ್ನು ನಡೆಸಲು ಏರ್ಪಡಿಸಿದರು. ಆ ಸಂದರ್ಭದಲ್ಲಿ ಪರಿಷತ್ ಅಧಿವೇಶನವನ್ನು ಉದ್ದೇಶಿಸಿ ಮಾತನಾಡಿದ ಉಪಪ್ರಧಾನಿ ಸರ್ದಾರ್ ಪಟೇಲರು ''ಹರಿದು ಹಂಚಿಹೋಗಿರುವ ಕನ್ನಡ ಪ್ರದೇಶಗಳೆಲ್ಲಾ ಒಂದಾಗಿ, ಏಕೀಕೃತ ಕರ್ನಾಟಕ ಪ್ರಾಂತ್ಯ ರಚನೆಯಾಗುವುದರಿಂದ ಕನ್ನಡ ಜನರು ತಮ್ಮದೇ ಸರ್ಕಾರ, ವಿಶ್ವವಿದ್ಯಾನಿಲಯಗಳನ್ನು ಕಾಣುವ ದಿನ ದೂರದಲ್ಲಿಲ್ಲ. ಬ್ರಿಟಿಷರ ಕುತಂತ್ರದ ಫಲವಾಗಿ ಹರಿದು ಹಂಚಿಹೋಗಿರುವ ಭಾಷಾವಾರು ಪ್ರಾಂತ್ಯಗಳನ್ನು ಒಂದುಗೂಡಿಸುವುದು ಸ್ವತಂತ್ರ ಭಾರತದ ಆದ್ಯ ಕರ್ತವ್ಯ'' ಎಂದು ಹೇಳಿ ಭರವಸೆಯಿತ್ತರು. ಏಕೀಕರಣವಾದಿಗಳೆಲ್ಲರಿಗೂ ಪುನಃ ಉತ್ಸಾಹ ಮೂಡಿತು. ಏಕೀಕರಣ ಪ್ರಶ್ನೆ ಈ ಮಹತ್ವದ ಘಟ್ಟವನ್ನು ತಲುಪಿದಾಗ ನಿಜಲಿಂಗಪ್ಪನವರು ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನಕ್ಕೆ ಬಂದರು. ಕರ್ನಾಟಕ ಏಕೀಕರಣ ಮುಂದೆ ಅವರ ಜೀವನದ ಪರಮ ಧ್ಯೇಯವಾಯಿತು.

## ಏಕೀಕರಣದ ನಿಜಲಿಂಗಪ್ಪ

ನಿಜಲಿಂಗಪ್ಪನವರು-ಕರ್ನಾಟಕ ಏಕೀಕರಣ ಇವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ದೆಹಲಿಯ ರಾಜಕೀಯ ವೃತ್ತಗಳಲ್ಲಿ ಅವರು 'ಏಕೀಕರಣದ ನಿಜಲಿಂಗಪ್ಪ' ಎಂದೇ ಪರಿಚಿತರಾಗಿದ್ದರು. ಜಗತ್ತಿನ ಯಾವ ಶಕ್ತಿಯೂ ಅವರನ್ನು ಈ ಪದದಿಂದ ಹಿಂತೆಗೆಯುವಂತೆ ಮಾಡಲಿಲ್ಲ. ತಮ್ಮ ಈ ದಿಟ್ಟ ನಿಲುವಿನ ಫಲವಾಗಿ ನಿಜಲಿಂಗಪ್ಪನವರು ಕೆಲವು ವೇಳೆ ನಿರಾಶೆ, ಸೋಲು, ಸಂಕಷ್ಟ, ತಿರಸ್ಕಾರಗಳಿಗೆ ಎದುರಾಗಬೇಕಾಯಿತು. ಆದರೂ ಅವರು ಎದೆಗುಂದಲಿಲ್ಲ. ಘಟನಾ ಸಭೆಯಲ್ಲಿ ಮೇಲಿಂದ ಮೇಲೆ ಏಕೀಕರಣ ಪ್ರಶ್ನೆಯನ್ನೆತ್ತಿದ್ದರು. ಭಾಷಾವಾರು ಪ್ರಾಂತ್ಯ ತತ್ವಕ್ಕೆ ದಶಕಗಳ ಹಿಂದೆಯೇ ಒಪ್ಪಿಗೆ ನೀಡಿದ್ದ ಕಾಂಗ್ರೆಸ್‌ಗೆ ಈಗ ಅದು ನುಂಗಲಾರದ ತುತ್ತಾಗಿತ್ತು. ಆದರೆ ಕರ್ನಾಟಕಾದ್ಯಂತ ಏಕೀಕರಣದ ಬೇಡಿಕೆಗೆ ಕಾವೇರುತ್ತಿದ್ದುದರಿಂದ ಕೇಂದ್ರ ಸರ್ಕಾರಕ್ಕೆ ಬೇರೆ ಮಾರ್ಗವಿಲ್ಲದೆ

ಹೋಯಿತು. ಈ ಪ್ರಶ್ನೆಯನ್ನು ಬಗೆಹರಿಸಲು ಘಟನಾ ಸಭೆ ೧೯೪೮ರಲ್ಲಿ ಧಾರ್ ಸಮಿತಿಯನ್ನು ನೇಮಿಸಿತು. ಅದೇ ವರ್ಷ ಡಿಸೆಂಬರ್ ತಿಂಗಳಲ್ಲಿ ಸಮಿತಿಯು ಒಪ್ಪಿಸಿದ ವರದಿಯಲ್ಲಿ ಮೈಸೂರು ಸಂಸ್ಥಾನವನ್ನೊಳಗೊಂಡ ಕರ್ನಾಟಕ ಪ್ರಾಂತ್ಯ ರಚನೆಯಾಗಬೇಕೆಂದು ಒಪ್ಪಿತ್ತಾದರೂ, ಏಕೀಕರಣಕ್ಕೆ ಮೈಸೂರು ಇನ್ನೂ ಸಿದ್ಧವಾಗಿಲ್ಲವೆಂದು ವಾದಿಸಿ ಪ್ರಶ್ನೆಯನ್ನು ಮುಂದಕ್ಕೆ ಹಾಕಬೇಕೆಂದು ಅಭಿಪ್ರಾಯ ಪಟ್ಟಿತು. ಆದರೆ ಆ ವೇಳೆಗೆ ಮೈಸೂರು ಸಂಸ್ಥಾನ ಭಾರತದಲ್ಲಿ ವಿಲೀನವಾಗಿದ್ದುದರಿಂದ ಸಿದ್ಧತೆಯ ನೆಪ ಪ್ರಾಮುಖ್ಯವಲ್ಲವೆಂಬುವುದು ನಿಜಲಿಂಗಪ್ಪನವರ ವಾದವಾಗಿತ್ತು. ಆ ಮೊದಲೇ ಮೈಸೂರು ಕಾಂಗ್ರೆಸ್ ಮತ್ತು ಘಟನಾಸಭೆಗಳು ಏಕೀಕರಣಕ್ಕೆ ಬೆಂಬಲ ನೀಡಿ ನಿರ್ಣಯ ಮಾಡಿದ್ದವು. ದಿನಾಂಕ ೧೯೪೯ನೆಯ ಜನವರಿ ೧೯ರಲ್ಲಿ ಕರ್ನಾಟಕ ಕಾಂಗ್ರೆಸ್ ಸಮಿತಿಯು ಈ ಎಲ್ಲಾ ವಿಷಯಗಳನ್ನೂ ವಿಶದೀಕರಿಸಿ, ಕರ್ನಾಟಕ ಪ್ರಾಂತ್ಯ ನಿರ್ಮಾಣ ಕೂಡಲೇ ನಡೆಯಬೇಕೆಂದು ಸೂಚಿಸುವ ನಿರ್ಣಯವನ್ನು ಅಂಗೀಕರಿಸಿತು.

ಈ ಮಧ್ಯೆ ಧಾರ್ ಸಮಿತಿಯ ವರದಿಯಿಂದ ನಿರಾಶೆಗೊಂಡ ಕನ್ನಡ ಜನ ದೇಶಾದ್ಯಂತ ಸಭೆ ಸಮ್ಮೇಳನಗಳನ್ನು ನಡೆಸಿ ಕಾಂಗ್ರೆಸ್ ನಾಯಕರ ಗಮನವನ್ನು ಪುನಃ ಏಕೀಕರಣದ ಕಡೆಗೆ ಸೆಳೆದರು. ಡಾ। ಪಟ್ಟಾಭಿ ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಜಯಪುರದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಸಮಸ್ಯೆಯನ್ನು ಪರಿಹರಿಸಲು ಜವಹರಲಾಲ್ ನೆಹರೂ, ಸರ್ದಾರ್ ಪಟೇಲ್ ಮತ್ತು ಪಟ್ಟಾಭಿ ಸೀತಾರಾಮಯ್ಯನವರನ್ನೊಳಗೊಂಡ ತ್ರಿಮೂರ್ತಿ ಸಮಿತಿ ರಚಿಸಲ್ಪಟ್ಟಿತು. ಈ ಸಮಿತಿಯ ವರದಿಯು ಹೆಚ್ಚು ಕಡಿಮೆ ಧಾರ್ ಸಮಿತಿಯ ವಾದವನ್ನೇ ಎತ್ತಿ ಹಿಡಿದಿದ್ದುದರಿಂದ ಭಾಷಾವಾರು ಪ್ರಾಂತ್ಯ ನಿರ್ಮಾಣ ಕಾರ್ಯ ಅನಿವಾರ್ಯವಾಗಿ ಅನಿರ್ದಿಷ್ಟ ಕಾಲ ಮುಂದೆ ಹಾಕಲ್ಪಟ್ಟಿತು.

## ನಾಯಕತ್ವದ ಪರೀಕ್ಷಾ ಕಾಲ

ಜಯಪುರ ಕಾಂಗ್ರೆಸ್‌ನ ಈ ನಿರ್ಧಾರ ನಿಜಲಿಂಗಪ್ಪನವರನ್ನು ಅತ್ಯಂತ ಕ್ಲಿಷ್ಟವಾದ ಕಗ್ಗಂಟಿನ ತೊಡಕಿನಲ್ಲಿ ತಂದುಹಾಕಿತು. ಈ ತೀರ್ಮಾನದಿಂದ ಕನ್ನಡಿಗರು ಪೂರ್ಣ ನಿರಾಶರಾಗಿ ಉಗ್ರ ಚಳವಳಿಗೆ ತೊಡಗದಂತೆ ತಡೆಯುವುದು, ಏಕೀಕರಣವನ್ನು ಶೀಘ್ರದಲ್ಲಿ ಕಾರ್ಯಗತ ಮಾಡುವ ಅವಶ್ಯಕತೆಯನ್ನು ಕೇಂದ್ರ ಸರ್ಕಾರಕ್ಕೆ ಮನವರಿಕೆ ಮಾಡಿಕೊಡುವುದು, ಏಕೀಕರಣ ವಿರೋಧಿಗಳು ತಮ್ಮ ಮೇಲೆ ಅವ್ಯಾಹತವಾಗಿ ನಡೆಸುತ್ತಿದ್ದ ಅಪಪ್ರಚಾರಗಳನ್ನು ತುಳಿಯುವದು- ಈ ಮೂರು ಮುಖ್ಯ ಕಾರ್ಯಗಳನ್ನು ಅವರು ಏಕಕಾಲದಲ್ಲಿ ನಿರ್ವಹಿಸಬೇಕಾಗಿತ್ತು. ಕಾಂಗ್ರೆಸ್ಸಿನ ವಿಳಂಬನೀತಿ, ವಿರೋಧಿಗಳ ಅಪಪ್ರಚಾರ ಇವು ಏಕೀಕರಣಕ್ಕೆ ಬೆಂಬಲ ಕೊಟ್ಟಿದ್ದ ನಾಯಕರನ್ನು ನಿಸ್ತೇಜಗೊಳಿಸಿದ್ದವು. ಅವರು ತಟಸ್ಥರಾಗಿ ಮುಂದೇನು ನಡೆಯುವುದೆಂಬುದನ್ನು ನೋಡುತ್ತಿದ್ದರು. ಈ ಪರಿಸ್ಥಿತಿಯಲ್ಲಿ ನಿಜಲಿಂಗಪ್ಪನವರೊಬ್ಬರೇ ಕನ್ನಡಿಗರ ಆಶಾದೀಪವಾಗಿ ಉಳಿದರು. ಏಕೀಕರಣ ಚಳವಳಿಯ ಎಲ್ಲಾ ಮುಖದ ಕಾರ್ಯಭಾರಗಳು ಅವರ ಮಾರ್ಗದರ್ಶನಕ್ಕಾಗಿ ಕಾದಿದ್ದವು. ಜನರ ಅಪೇಕ್ಷೆಯಂತೆ ಅವರು ಕರ್ನಾಟಕದ ಮೂಲೆಮೂಲೆಗಳಲ್ಲಿಯೂ ಸಂಚಾರ ಮಾಡಿ ನಿರಾಶೆಯಿಂದ ಸುಪ್ತವಾಗಿದ್ದ ಆಶೋತ್ತರಗಳನ್ನು ಎಚ್ಚರಿಸಿ ಜನತೆಯಲ್ಲಿ ನವಚೈತನ್ಯವನ್ನುಂಟುಮಾಡಿದರು.

## ಕಾರ್ಯಕಾರಿ ಸಮಿತಿಯ ಸದಸ್ಯತ್ವ

ಇದೇ ಸಮಯಕ್ಕೆ ಅವರ ತ್ಯಾಗ, ನಿಷ್ಠೆ, ಜನ ಬೆಂಬಲಗಳನ್ನು ಕಂಡು ಪ್ರಭಾವಿತರಾದ ಕಾಂಗ್ರೆಸ್‌ನ ಹಿರಿಯರು ನಿಜಲಿಂಗಪ್ಪನವರನ್ನು ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಆರಿಸಿಕೊಂಡರು, ದಿವಂಗತ ಗಂಗಾಧರರಾವ್ ದೇಶಪಾಂಡೆ ಅವರ ಅನಂತರ ಕಾರ್ಯಕಾರಿ ಸಮಿತಿಗೆ ಆರಿಸಲ್ಪಟ್ಟ ಕನ್ನಡಿಗರು ಶ್ರೀ ನಿಜಲಿಂಗಪ್ಪನವರೇ ಆಗಿದ್ದರು. ಇದು ಕಾಂಗ್ರೆಸ್ ಮಹಾಸಂಸ್ಥೆ ನಿಜಲಿಂಗಪ್ಪನವರಿಗೆ ಸಲ್ಲಿಸಿದ ವೈಯಕ್ತಿಕ ಗೌರವವಷ್ಟೇ ಅಲ್ಲದೆ ಭಾರತ ರಾಜಕೀಯದಲ್ಲಿ ಕರ್ನಾಟಕದ ಸ್ಥಾನವನ್ನು ಗುರುತಿಸುವ ಸಂಕೇತವೂ ಆಯಿತು.

ತ್ರಿಮೂರ್ತಿ ಸಮಿತಿಯ ನಿರ್ಣಯದ ಬಗ್ಗೆ ಕನ್ನಡ ಜನತೆಯ ಅಸಮಾಧಾನವನ್ನು ವ್ಯಕ್ತಪಡಿಸಲು ಕನ್ನಡ ಪ್ರಾಂತ್ಯಗಳ ಶಾಸನ ಸಭಾ ಸದಸ್ಯರು ತಮ್ಮ ಸ್ಥಾನಗಳಿಗೆ ರಾಜೀನಾಮೆ ಕೊಡಬೇಕೆಂದು ೮:೧೧.೪೯ರಲ್ಲಿ ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿ ನಿರ್ಣಯ ಮಾಡಿತು. ಅದರಂತೆ ಸದಸ್ಯರು ರಾಜೀನಾಮೆ ಕೊಟ್ಟರು. ಆದರೆ ರಾಜೀನಾಮೆಗಳನ್ನು ಸ್ವೀಕರಿಸಲು ಶಾಸನಸಭೆಗಳು ನಿರಾಕರಿಸಿದ್ದರಿಂದ ೧೯೫೦ರಲ್ಲಿ ಗದಗಿನಲ್ಲಿ ನಡೆದ ಪ್ರಾಂತ್ಯ ಕಾಂಗ್ರೆಸ್ ಸಮಿತಿ ಪುನಃ ಅದೇ ನಿಲುವನ್ನು ಸಮರ್ಥಿಸಿ ರಾಜೀನಾಮೆಗಳನ್ನು ಒತ್ತಾಯಪಡಿಸಿತು. ೧೯೫೧ರಲ್ಲಿ ಬೆಂಗಳೂರಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿ ಅಧಿವೇಶನದಲ್ಲೂ ಆ ನಿರ್ಣಯಕ್ಕೆ ಸರ್ವತೋಮುಖವಾದ ಬೆಂಬಲ ದೊರಕಿತು. ಆಮೇಲೆ ನಡೆದ ಪ್ರಥಮ ಮಹಾ ಚುನಾವಣೆಯಲ್ಲಿಯೂ ಏಕೀಕರಣದ ಪ್ರಶ್ನೆಯ ಬಲದಿಂದಲೇ ಕಾಂಗ್ರೆಸ್ ಪ್ರಚಂಡ ಬಹುಮತ ಪಡೆಯಿತು. ಇಷ್ಟಾದರೂ

ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಏಕೀಕರಣದ ಬಗ್ಗೆ ಕನ್ನಡಿಗರ ಪ್ರಗಾಢ ನಿಷ್ಠೆಯನ್ನು ಅರ್ಥ ಮಾಡಿಕೊಳ್ಳಲು ಅಸಮರ್ಥವಾಗಿ ತನ್ನ ವಿಳಂಬ ನೀತಿಯನ್ನೇ ಮುಂದುವರಿಸಿತು. ಇದರ ಪರಿಣಾಮವಾಗಿ ನಿಜಲಿಂಗಪ್ಪನವರ ನಾಯಕತ್ವವನ್ನು ಪ್ರಶ್ನಿಸುವ ಅಪ್ರೀತಿಕರ ಪ್ರಸಂಗಗಳು ಎದುರಾದವು. ಕೇಂದ್ರದ ನಾಯಕರಿಗೆ ಅಂಜಿ ನಿಜಲಿಂಗಪ್ಪನವರು ಸುಮ್ಮನಿದ್ದಾರೆ ಎಂಬ ಅಪಪ್ರಚಾರ ಪ್ರಾರಂಭ ವಾಯಿತು. ಕೇಂದ್ರ ನಾಯಕರ ಕೃಪಾದೃಷ್ಟಿಯ ಪ್ರತ್ಯಾಶೆಯಿಂದ ಏಕೀಕರಣ ಪ್ರಶ್ನೆಯನ್ನೇ ಮರೆತು ಕೇಂದ್ರದ ವಿಳಂಬ ನೀತಿಗೆ ಅಪ್ರತ್ಯಕ್ಷ ಕಾರಣರಾಗಿದ್ದವರೇ ಈ ಅಪಪ್ರಚಾರದ ಪ್ರೋತ್ಸಾಹಕರಾಗಿದ್ದರೆಂಬುದರಿಂದ ಇಂದಿನ ಪರಿಸ್ಥಿತಿಯ ವಿಷಮತೆಯನ್ನು ಗುರುತಿಸಬಹುದು. ಆಮೇಲಿನ ಕೆಲವು ತಿಂಗಳುಗಳು ನಿಜಲಿಂಗಪ್ಪನವರ ಜೀವನದಲ್ಲಿ ವಿಷಮ ಪರೀಕ್ಷಾಕಾಲವಾಗಿ ಪರಿಣಮಿಸಿದುದನ್ನು ಕಾಣುತ್ತೇವೆ.

## ಕಾಂಗ್ರೆಸ್ಸಿನ ವಿಳಂಬನೀತಿ

ಈ ಅಂತರದಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ವಾರ್ಷಿಕಾಧಿವೇಶನ ೧೯೫೩ರಲ್ಲಿ ಹೈದರಾಬಾದಿನಲ್ಲಿ ನಡೆದು ಸದ್ಯದಲ್ಲಿ ಆಂಧ್ರದ ಹೊರತಾಗಿ ಮತ್ತಾವ ಭಾಷಾವಾರು ಪ್ರಾಂತ್ಯವನ್ನೂ ರಚಿಸಲಾಗುವುದಿಲ್ಲ ಎಂಬ ನಿರ್ಣಯ ಅಂಗೀಕರಿಸಲ್ಪಟ್ಟಿತು. ವಿಳಂಬ ವಾಗಿಯಾದರೂ ಕರ್ನಾಟಕ ಪ್ರಾಂತ್ಯ ರಚನೆಯಾಗುವುದೆಂದು ತ್ರಿಮೂರ್ತಿ ಸಮಿತಿ ಕೊಟ್ಟಿದ್ದ ಭರವಸೆಯ ಮೂಲವನ್ನೇ ಛೇದಿಸಿ ಭಾಷಾವಾರು ಪ್ರಾಂತ್ಯಗಳ ನಿರ್ಮಾಣವನ್ನೇ ಕೈಬಿಡುವ ಈ ತೀರ್ಮಾನದಿಂದ ಕನ್ನಡಿಗರಿಗೆ ಅತಿಶಯ ನಿರಾಶೆಯಾಯಿತು.

ಕಾರ್ಯಕಾರಿ ಸಮಿತಿಯಲ್ಲಿ, ಬಹಿರಂಗ ಅಧಿವೇಶನದಲ್ಲಿ, ನಿರ್ಣಯವನ್ನು ವಿರೋಧಿಸಿ ನಿಜಲಿಂಗಪ್ಪನವರು ಮಾಡಿದ ಪ್ರಯತ್ನಗಳು ನೀರಿನಲ್ಲಿ ಹೋಮ ಮಾಡಿದಂತೆ ವಿಫಲವಾದವು. ಭಾಷಾವಾರು ಪ್ರಾಂತ್ಯಗಳ ಬಗ್ಗೆ ಕಾಂಗ್ರೆಸ್ಸಿನ ಈ ದ್ವಿಮುಖ ನೀತಿಗೆ ಕಾರಣರಾದ ಏಕೀಕರಣ ವಿರೋಧಿಗಳು ನಿಜಲಿಂಗಪ್ಪನವರು ಏಕೀಕರಣ ಪ್ರಶ್ನೆಯನ್ನು ಸಮರ್ಪಕವಾಗಿ ಸಭೆಯ ಮುಂದಿಡ ಲಿಲ್ಲವೆಂದು ಆಕ್ಷೇಪಿಸತೊಡಗಿದರು. ರಾಜಕೀಯ ಕುಟಿಲತೆಯ ಈ ತಂತ್ರವನ್ನು ತಿಳಿದುಕೊಳ್ಳಲಾರದೆ ಜನಸಾಮಾನ್ಯರು ಆಕ್ಷೇಪವನ್ನು ನಿಜವೆಂದೇ ನಂಬಿದುದರಲ್ಲಿ ಆಶ್ಚರ್ಯವೇನೂ ಇಲ್ಲ. ವಾಸ್ತವಕ್ಕೆ ದೂರವಾದ ಈ ಅಪಪ್ರಚಾರವನ್ನು ತಡೆಗಟ್ಟಿ ಕಾಂಗ್ರೆಸ್ಸಿನ ನೀತಿ ಪರಿವರ್ತನೆಯ ಕಾರಣಗಳನ್ನು ವಿಶದಪಡಿಸಲು ನಿಜಲಿಂಗಪ್ಪನವರು ಸುಮ್ಮನಿದ್ದಾರೆ ಎಂಬ ಅಪಪ್ರಚಾರ ಪ್ರಾರಂಭವಾಯಿತು. ಕೇಂದ್ರ ನಾಯಕರ ಕೃಪಾದೃಷ್ಟಿಯ ಪ್ರತ್ಯಾಶೆಯಿಂದ ಏಕೀಕರಣ ಪ್ರಶ್ನೆಯನ್ನೇ ಮರೆತು ಕೇಂದ್ರದ ವಿಳಂಬ ನೀತಿಗೆ ಅಪ್ರತ್ಯಕ್ಷ ಕಾರಣರಾಗಿದ್ದವರೇ ಈ ಅಪಪ್ರಚಾರದ ಪ್ರೋತ್ಸಾಹಕರಾಗಿದ್ದರೆಂಬುದರಿಂದ ಅಂದಿನ ಪರಿಸ್ಥಿತಿಯ ವಿಷಮತೆಯನ್ನು ಗುರುತಿಸಬಹುದು. ಆಮೇಲಿನ ಕೆಲವು ತಿಂಗಳುಗಳು ನಿಜಲಿಂಗಪ್ಪನವರ ಜೀವನದಲ್ಲಿ ವಿಷಮ ಪರೀಕ್ಷ ಕಾಲವಾಗಿ ಪರಿಣಮಿಸಿದುದನ್ನು ಕಾಣುತ್ತೇವೆ.

## ವಿಶಾಲ ಕರ್ನಾಟಕದ ಪ್ರಥಮ ಮುಖ್ಯಮಂತ್ರಿ

ಫಜಲ್ ಅಲಿ ಸಮಿತಿಯು ಒಪ್ಪಿಸಿದ ವರದಿಯ ಆಧಾರದ ಮೇಲೆ ರಚಿತವಾದ ವಿಶಾಲ ಕರ್ನಾಟಕ ಪ್ರಾಂತ್ಯ ಅನೇಕ ವರ್ಷಗಳ ಪ್ರಯತ್ನದ ನಂತರ ೧೯೫೬ನೆಯ ನವೆಂಬರ್ ತಿಂಗಳ ದಿನಾಂಕ ೧ ರಂದು ರಚಿವಾಯಿತು. ಕುಹಕ, ಕುಟಿಲ, ದ್ರೋಹ, ಜಾತೀಯ ಭಾವನೆಯ ಹಾಲಾಹಲವನ್ನು ನುಂಗಿ ಹರಿದು ಹಂಚಿಹೋಗಿದ್ದ ಕನ್ನಡ ಪ್ರದೇಶಗಳೆಲ್ಲಾ ಒಂದಾದವು.

ಭಾರತದ ಇತಿಹಾಸದಲ್ಲಿ, ಕರ್ನಾಟಕದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಬೇಕಾದ ಮಹಾದಿನ ನವೆಂಬರ್ ೧, ೧೯೫೬. ಶತಮಾನಗಳ ಕನ್ನಡಿಗರ ಕನಸು ಅಂದು ನನಸಾಯಿತು.

ಕೆಲವೇ ವರ್ಷಗಳ ಪರಿಶ್ರಮದಿಂದ, ಅಭೂತಪೂರ್ವವಾದ ಸ್ವಾರ್ಥತ್ಯಾಗದಿಂದ, ಒಂದೆರಡು ಘಟ್ಟಗಳಲ್ಲಿ ಇದು ದುಸ್ಸಾಧ್ಯ ವೆಂದು ಹಿರಿಯ ನಾಯಕರು ಕೈಬಿಟ್ಟಿದ್ದ ಕರ್ನಾಟಕ ಪ್ರಾಂತ್ಯ ರಚನೆಯ ಕನಸನ್ನು ಭವ್ಯರೂಪದ ನನಸಾಗಿ ಮಾಡಿದ ಐತಿಹಾಸಿಕ ವ್ಯಕ್ತಿ ನಿಜಲಿಂಗಪ್ಪನವರನ್ನು ಕನ್ನಡ ಜನತೆ ವಿಶಾಲ ಕರ್ನಾಟಕದ ಪ್ರಥಮ ಮುಖ್ಯಮಂತ್ರಿಯಾಗಿ ಆರಿಸಿಕೊಂಡಿತು. ಭಾರತದ ರಾಷ್ಟ್ರಪತಿ ಡಾ। ರಾಜೇಂದ್ರ ಪ್ರಸಾದರು ಸ್ವತಃ ಬೆಂಗಳೂರಿಗೆ ಆಗಮಿಸಿ ರಾಜ್ಯ ನಿರ್ಮಾಣದ ಉದ್ಘಾಟನೆ ಮಾಡಿದರು. ಇದು ಇನ್ನಾವ ರಾಜ್ಯಕ್ಕೂ ಸಲ್ಲದಿದ್ದ ಅಪೂರ್ವ ಸನ್ಮಾನ. ಕನ್ನಡಿಗರು ಹೆಮ್ಮೆಯಿಂದ ನೆನಸಿಕೊಳ್ಳಬೇಕಾದ ಸನ್ಮಾನ. ನಿಜಲಿಂಗಪ್ಪನವರ ಕಾಂಗ್ರೆಸ್ ನಿಷ್ಠೆ, ಗಾಢಸ್ನೇಹ, ಕರ್ತವ್ಯ ಪರಾಯಣತೆ, ಪ್ರಾಮಾಣಿಕ ವರ್ತನೆ ಮುಂತಾದ ಅಮೋಘ ಗುಣಗಳಿಗೆ ಮಾರುಹೋಗಿದ್ದ ಡಾ। ಪ್ರಸಾದರು ಉದ್ಘಾಟನಾ ಸಮಾರಂಭಗಳನ್ನು ತಾವೇ ನೆರವೇರಿಸಲು ಒಪ್ಪಿದುದು ಕನ್ನಡಿಗರ ಪುಣ್ಯವಷ್ಟೇ ಅಲ್ಲ, ನಿಜಲಿಂಗಪ್ಪನವರ ಪ್ರತಿಭೆ ಪ್ರಭಾವಗಳ ಪ್ರತೀಕವೂ ಆಗಿರುತ್ತದೆ.

ನಿಜಲಿಂಗಪ್ಪನವರ ಚಿರಸ್ಮರಣೀಯವಾದ ಸೇವೆಗೆ ಸಲ್ಲಬೇಕಾದ ಸನ್ಮಾನಗಳನ್ನು ಸಲ್ಲಿಸಿ ಕನ್ನಡನಾಡು ಧನ್ಯವಾಯಿತು.

ರಾಜ್ಯದ ಮೂಲೆಮೂಲೆಗಳಲ್ಲಿಯೂ ಸುತ್ತಾಡಿ ಜನತೆಯ ಆಸೆ ಆಕಾಂಕ್ಷೆಗಳನ್ನು ತಿಳಿದು ಅದನ್ನು ಕಾರ್ಯರೂಪಕ್ಕಿಳಿಸಿ ಕರ್ನಾಟಕ ರಾಜ್ಯವನ್ನು ರೂಪಿಸಿದ ಅಪೂರ್ವ ಸಿದ್ಧಿ ನಿಜಲಿಂಗಪ್ಪನವರದು. ಪ್ರತಿಷ್ಠೆ, ದುರಭಿಮಾನ, ಸ್ವಾರ್ಥಸಾಧನೆ, ಅಧಿಕಾರ ಲಾಲಸೆ ಮುಂತಾದ ಆಮಿಷಗಳಿಗೆ ಸೆರಗೊಡ್ಡಿದ ಕೆಲವಾರು ನಾಯಕರು ಇದನ್ನು ಕಡೆಗಣಿಸಿದರೂ ಸಾಮಾನ್ಯ ಜನತೆ ಮರೆಯಲಿಲ್ಲವೆಂಬುದು ಸ್ವಲ್ಪ ಕಾಲಾನಂತರ ೧೯೫೭ರಲ್ಲಿ ನಡೆದ ದ್ವಿತೀಯ ಮಹಾಚುನಾವಣೆಯಲ್ಲಿ ಸುವ್ಯಕ್ತವಾಯಿತು. ಹೊಸ ಮೈಸೂರು ರಾಜ್ಯದ ಎಲ್ಲಾ ಕಡೆಗಳಲ್ಲಿಯೂ ಕಾಂಗ್ರೆಸ್ ಪ್ರತಿನಿಧಿಗಳು ಅಧಿಕ ಸಂಖ್ಯೆಯಲ್ಲಿ ಚುನಾಯಿತರಾದರು. ಕಾಂಗ್ರೆಸ್ ಪ್ರಚಂಡ ಬಹುಮತ ಗಳಿಸಿತು. ನಿಜಲಿಂಗಪ್ಪನವರು ಸರ್ವಾನುಮತದಿಂದ ಮುಖ್ಯಮಂತ್ರಿಗಳಾಗಿ ಆರಿಸಲ್ಪಟ್ಟರು.

### ತ್ಯಾಗಮೂರ್ತಿಯಾಗಿ

ಹಲವು ವರ್ಷಗಳ ದೀರ್ಘ ತಪಸ್ಸು ಸಿದ್ಧಿಸಿದ ಸಾಧಕ, ತನ್ನ ಕನಸನ್ನೆಲ್ಲ ಅಲ್ಪಕಾಲದಲ್ಲೇ ಆಗಗೊಳಿಸುವ ಅನಂತ ಉತ್ಸಾಹದಿಂದ ಮುನ್ನಡೆಯುವುದು ಸ್ವಾಭಾವಿಕ, ಆಗ ಆ ರಥದ ವೇಗವನ್ನು ಅನುಸರಿಸಲಾಗದವರು ಹಿಂದುಳಿಯುವುದೂ, ಕೆಲವೊಮ್ಮೆ ರಥವನ್ನು ಹಿನ್ನೆಳೆಯಲೆತ್ನಿಸುವುದೂ, ಆದಾಗದಾಗ ವೇಗವನ್ನೇ ಖಂಡಿಸುವುದೂ ವಾಸ್ತವ. ಅದು ಕಾಲಧರ್ಮ. ಅದಕ್ಕೆ ಅಪವಾದನೆನಿಸಿದಂತೆ, ಅಖಂಡ ಕರ್ನಾಟಕ ಮಹಾರಥವನ್ನು ಮುನ್ನಡೆಸುತ್ತಿದ್ದ ನಾಡ ಮಹಾರಥಿ ನಿಜಲಿಂಗಪ್ಪನವರು ಹದಿನೆಂಟು ತಿಂಗಳ ಕಾಲ ಮುನ್ನಡೆದ ತಮ್ಮ ರಾಜ್ಯರಥವು ಜಗ್ಗುತ್ತಿರುವುದನ್ನು ಕಂಡರು. ಕಾಣದ ಕೈ ತನ್ನನ್ನು ಎಚ್ಚರಿಸುತ್ತಿದೆ ಎಂದು ಆ ಸಾಧಕ ಅರಿತರು. ರಥವನ್ನೇರಿದ ನಿಷ್ಕಾಮ ಕರ್ಮಯೋಗಿ ಅದೇ ಭಾವನೆಯಿಂದ ರಥದಿಂದಿಳಿದರು. ಗೀತಾಚಾರ್ಯನ ಸಂದೇಶವನ್ನು ಕೃತಿಗಿಳಿಸಿದರು. ವಿಶಾಲ ಕರ್ನಾಟಕದ ಪ್ರಪ್ರಥಮ ಮುಖ್ಯಮಂತ್ರಿ ಪದವಿಗೆ ನಿಜಲಿಂಗಪ್ಪನವರು ರಾಜೀನಾಮೆ ಕೊಟ್ಟರು. ಅಧಿಕಾರ ಸ್ವೀಕಾರದಷ್ಟೇ ಗಂಭೀರವಾಗಿ ಅಧಿಕಾರವನ್ನು ತ್ಯಜಿಸಿದ ನಿಜಲಿಂಗಪ್ಪನವರ ನಿಲುವು ಚಿರಸ್ಮರಣೀಯ ಆದರ್ಶ, ಮಹೋನ್ನತ ಉದಾಹರಣೆ. ಜನಸೇವೆಯೇ ಬಾಳ ಗುರಿಯಾದ ಅವರಿಗೆ ಜನತೆಯಲ್ಲಿ ಇನ್ನೂ ಅಧಿಕವಾಗಿ ಬೆರೆತು ದುಡಿಯುವ ಬಾಳಿನ ಅವಕಾಶ ದೊರೆಯಿತೆಂದು ಆನಂದವಾಗಿತ್ತು.

೧೬.೫.೫೮ರಲ್ಲಿ ಜತ್ತಿಯವರಿಗೆ ಅಧಿಕಾರ ವಹಿಸಿಕೊಟ್ಟ ಮೇಲೆ ನಡೆದ ಪತ್ರಿಕಾ ಗೋಷ್ಠಿಯಲ್ಲಿ ನಿಜಲಿಂಗಪ್ಪನವರು ಆಡಿದ ನುಡಿಗಳು ಅವರ ಸದಿಚ್ಛೆ, ಸ್ವಾರ್ಥತ್ಯಾಗ, ಸೇವಾಮನೋಭಾವಗಳನ್ನು ವ್ಯಕ್ತಪಡಿಸುತ್ತವೆ. ''ಕರ್ನಾಟಕ ಉದಯವಾದ ಮೇಲೆ ಒಂದೂವರೆ ವರ್ಷಕಾಲ ನೂತನ ರಾಜ್ಯದ ಆಡಳಿತವನ್ನು ನಿರ್ವಹಿಸಿ ಭದ್ರವಾದ ಬುನಾದಿಯನ್ನು ಹಾಕಿದ್ದೇವೆ'' ಎಂದು ಹೆಮ್ಮೆಯೊಡನೆ ಅಂದಿನಿಂದ ಅಧಿಕಾರ ಸ್ಥಾನವನ್ನು ಬಿಟ್ಟುಕೊಟ್ಟ ಮಾಜಿ ಮುಖ್ಯಮಂತ್ರಿ ನಿಜಲಿಂಗಪ್ಪನವರು ''ಈ ಉತ್ತಮ ಕಾರ್ಯವನ್ನು ಮುಂದುವರೆಸಲು ನಾವು ಸಹಾಯ ಮಾಡಬೇಕು'' ಎಂದು ರಾಜ್ಯದ ಜನತೆಯನ್ನು ಪ್ರಾರ್ಥಿಸಿದರು. ದೆಹಲಿಯಲ್ಲಿ ನಡೆದ ಅ.ಭಾ. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲಿ ಭಾಗವಹಿಸಿ ಹಿಂದಿರುಗಿದ್ದ ಅವರು ಪ್ರಶ್ನೆಗಳಿಗೆ ಉತ್ತರ ಕೊಡುತ್ತಾ ಕಾಂಗ್ರೆಸ್ ಪಕ್ಷದಲ್ಲಿ ತಮ್ಮ ಗುಂಪೊಂದಿದೆಯೆಂಬ ಆಪಾದನೆಯನ್ನು ನಿರಾಕರಿಸಿ ಇವೆಲ್ಲಕ್ಕಿಂತ ಮಿಗಿಲಾಗಿ ರಾಜ್ಯದಲ್ಲಿ ಸುಭದ್ರ ಸರ್ಕಾರ ಸ್ಥಾಪಿಸಬೇಕೆಂಬ ಇಚ್ಛೆಯೇ ರಾಜೀನಾಮೆಯ ಕಾರಣವೆಂದು ಸ್ಪಷ್ಟಪಡಿಸಿದರು. ಈ ರಾಜೀನಾಮೆಯ ಸುದ್ದಿ ಕೇಳಿ ಕೇಂದ್ರ ಸರಕಾರ ಬೆರಗಾಯಿತು. ನಿಜಲಿಂಗಪ್ಪನವರ ಸೇವೆಯನ್ನು ಕಾತುರದಿಂದ ಪ್ರತೀಕ್ಷಿಸುತ್ತಿದ್ದ ಕನ್ನಡ ಜನತೆ ತಲ್ಲಣಿಸಿತು. ಜನತೆ ಇಂತಹ ಅನುಪಮ ತ್ಯಾಗದ ಸೇವೆಯನ್ನು ಪಡೆಯಲಾರದೆ ಹೋದ ಕನ್ನಡಿಗರ ದೌರ್ಭಾಗ್ಯವನ್ನು ಕಂಡು ರಾಷ್ಟ್ರನಾಯಕರು ನೊಂದರು. ಸಾಂತ್ವನಪರ ಸಂದೇಶಗಳ ಸುರಿಮಳೆಯೇ ಆಯಿತು. ಈ ಸಂದರ್ಭದಲ್ಲಿ ಅಖಿಲ ಭಾರತೀಯ ಪತ್ರಿಕೆಗಳಾದ ''ಸ್ಟೇಟ್ಸ್‌ಮನ್, ಟೈಂಸ್ ಆಫ್ ಇಂಡಿಯಾ, ಹಿಂದೂ, ಮೆಯ್ಸ್, ಟ್ರಿಬ್ಯೂನ್, ಹಿಂದೂಸ್ಥಾನ್ ಟೈಂಸ್ ಮುಂತಾದವು ಪ್ರಶಂಸಾ ಲೇಖನಗಳನ್ನು ಬರೆದುದು ಗಮನಾರ್ಹ.

ಹನ್ನೊಂದು ತಿಂಗಳ ಹಿಂದೆ ಮಹಾಚುನಾವಣೆಗಳ ನಂತರ ನಿಜಲಿಂಗಪ್ಪನವರು ಹಸನ್ಮುಖರಾಗಿ ಹೇಗೆ ಮುಖ್ಯಮಂತ್ರಿ ಪದವಿಯನ್ನು ವಹಿಸಿಕೊಂಡರೋ ಹಾಗೆಯೇ ಅವರು ರಾಜೀನಾಮೆಯ ಬಳಿಕ ಮುಖ್ಯಮಂತ್ರಿಯ ಅಧಿಕೃತ ನಿವಾಸವನ್ನು ಬಿಟ್ಟು ವಿಧಾನಸಭೆಯ ಸಾಮಾನ್ಯ ಸದಸ್ಯರಂತೆ ಗೆಳೆಯರೊಬ್ಬರ ಕಾರಿನಲ್ಲಿ ಸ್ವಸ್ಥಳವಾದ ಚಿತ್ರದುರ್ಗಕ್ಕೆ ತೆರಳಿದರು. ಅದಕ್ಕಾಗಿ ಅವರು ಸರ್ಕಾರೀ ಕಾರನ್ನು ಉಪಯೋಗಿಸಿಕೊಳ್ಳಬಹುದಾಗಿದ್ದರೂ ಹಾಗೆ ಮಾಡುವುದು ಪ್ರಾಮಾಣಿಕ ವರ್ತನೆಯಲ್ಲವೆಂದು

ಭಾವಿಸಿದುದು ಅವರ ನಿಸ್ವಾರ್ಥ ಸೇವಾಬುದ್ಧಿಯ ದ್ಯೋತವಾಗಿದೆ. ಆಗ ಅವರಲ್ಲಿ ಯಾವ ದುಗುಡ ದುಮ್ಮಾನಗಳೂ ತೋರಲಿಲ್ಲ. ಯಾವುದೋ ಭಾರವಾದ ಹೊರೆ ಇಳಿಸಿದವರಂತೆ, ಪಂಜರದಿಂದ ಹೊರಬಿದ್ದ ಹಕ್ಕಿಯಂತೆ ಹೊರಟಿದ್ದರು. ಅದಕ್ಕೆ ಕೊಂಚ ಮೊದಲು ಅವರ ಗೆಳೆಯರೂ ಹಿತೈಷಿಗಳೂ ಅವರನ್ನು ಬೀಳ್ಕೊಳ್ಳಲು ಮುಖ್ಯಮಂತ್ರಿಯ ಅಧಿಕೃತ ನಿವಾಸಕ್ಕೆ ಬಂದಾಗ ಊಟ ಮಾಡಿ ಸುಖನಿದ್ದೆಯಲ್ಲಿದ್ದ ಅವರು ಆ ಗೆಳೆಯರ ದೃಷ್ಟಿಗೆ ತ್ಯಾಗದ ಮೂರ್ತಿಯಂತೆ ಕಂಡಿದ್ದರಲ್ಲಿ ಆಶ್ಚರ್ಯವಿಲ್ಲ. ಕರ್ನಾಟಕಕ್ಕೆ ಆದ ಹಾನಿ ಭಾರತಕ್ಕೆ ಲಾಭವಾಗಿ ಪರಿಣಮಿಸಿತು. ಕೇಂದ್ರ ಸರ್ಕಾರ ನಿಜಲಿಂಗಪ್ಪನವರ ಸೇವೆಯನ್ನು ಬಳಸಿಕೊಳ್ಳಬಯಸಿ, ಸಹಕಾರಿ ಕೃಷಿ ಪದ್ಧತಿಯ ಅಧ್ಯಯನ ತಂಡದ ಮುಖ್ಯಸ್ಥರನ್ನಾಗಿ ನೇಮಿಸಿತು. ಆ ವಿಚಾರದಲ್ಲಿ ನಿಜಲಿಂಗಪ್ಪನವರು ಒಂದು ಸುದೀರ್ಘ ಸಮಗ್ರ ವರದಿಯನ್ನು ಒಪ್ಪಿಸಿದರು. ಆಮೇಲೆ ಅವರು 'ದಿ ಇಂಡಿಯನ್ ಆಯಿಲ್ ಕಂಪನಿ'ಯ ಗೌರವ ಅಧ್ಯಕ್ಷರಾಗಿ ಕೆಲವು ವರ್ಷಗಳ ಕಾಲ ದುಡಿದರು.

## ಭಾವೈಕ್ಯ ಸಾಧನೆ

ಯಾವ ಮಹದುದ್ದೇಶದಿಂದ ನಿಜಲಿಂಗಪ್ಪನವರು ಮುಖ್ಯಮಂತ್ರಿ ಪದವಿಗೆ ರಾಜೀನಾಮೆ ಕೊಟ್ಟರೋ ಆ ಉದ್ದೇಶ ಸಫಲವಾಗುವ ಲಕ್ಷಣಗಳು ಆಮೇಲಿನ ಬೆಳವಣಿಗೆಯಲ್ಲಿ ಕಂಡುಬರಲಿಲ್ಲ. ಹೊಸ ಮೈಸೂರು ರಾಜ್ಯದಲ್ಲಿ ವಿಲೀನವಾದ ಕನ್ನಡ ಪ್ರದೇಶಗಳ ಜನರಲ್ಲಿ ಭಾವೈಕ್ಯತೆ ಮೂಡುವ ಪ್ರತಿಯಾಗಿ ಭಿನ್ನ ಭೇದಗಳು ಹೆಚ್ಚುತ್ತಿದ್ದವು. ಶಾಸನಸಭೆಯ ಕಾಂಗ್ರೆಸ್ ಪಕ್ಷದಲ್ಲಿ ಗುಂಪು ಭಾವನೆ ಬೆಳೆದು ಖಚಿತ ರೂಪ ತಳೆಯಬಹುದಾದ ಭೀತಿ ತಲೆದೋರಿ ನಿಷ್ಠಾವಂತ ಕಾಂಗ್ರೆಸ್ಸಿಗರನ್ನು ಚಿಂತೆಗೆ ಗುರಿಪಡಿಸಿತು. ಮೈಸೂರು ಕಾಂಗ್ರೆಸ್ ಸಮಿತಿ ಮತ್ತು ಕಾಂಗ್ರೆಸ್ ಮಂತ್ರಿಮಂಡಲದ ನಡುವೆ ಸಾಮರಸ್ಯವಿಲ್ಲದೆ ಅದರ ಪರಿಣಾಮವಾಗಿ ಕಾಂಗ್ರೆಸ್ ಸಂಸ್ಥೆ ದುರ್ಬಲವಾಗಿ ಪ್ರಜಾಕೋಟಿಯೊಡನೆ ಸಂಬಂಧ ಸಡಿಲವಾಗಬಹುದಾದ ಲಕ್ಷಣಗಳು ಕಂಡುಬರುತ್ತಿದ್ದವು. ಸಂಸ್ಥೆಗಿಂತ ಸರ್ಕಾರವೇ ಹೆಚ್ಚಿನದೆಂಬ ಭಾವನೆ ಬೇರೂರಿತು. ಈ ಪರಿಸ್ಥಿತಿಯಲ್ಲಿ ಮೈಸೂರಿನ ನಿಷ್ಠಾವಂತ ಕಾಂಗ್ರೆಸ್ಸಿಗರು ಸಂಸ್ಥೆಗೆ ನಿಜಲಿಂಗಪ್ಪನವ ರಂತಹ ಪ್ರಭಾವಶಾಲಿ ನೇತಾರರ ಅವಶ್ಯಕತೆಯನ್ನು ಮನಗಂಡು ೧೯೬೦ರಲ್ಲಿ ನಡೆಯಬೇಕಾಗಿದ್ದ ಅಧ್ಯಕ್ಷ ಚುನಾವಣೆಗೆ ಅಭ್ಯರ್ಥಿಯಾಗಿ ನಿಲ್ಲುವಂತೆ ಅವರನ್ನು ಒತ್ತಾಯಪಡಿಸಿದರು. ಕಾಂಗ್ರೆಸ್ ಸಂಸ್ಥೆಯ ಹಿತಾಸಕ್ತಿಗಾಗಿ ತಮ್ಮ ಜೀವನವನ್ನೇ ಧಾರೆಯೆರೆದಿದ್ದ ನಿಜಲಿಂಗಪ್ಪನವರು ಈ ಒತ್ತಾಯಕ್ಕೆ ಮಣಿಯಲೇಬೇಕಾಯಿತು. ಯಾವ ದೃಷ್ಟಿಯಿಂದಲೇ ಆಗಲಿ ಮೈಸೂರು ಕಾಂಗ್ರೆಸ್ ಸಂಸ್ಥೆ ದುರ್ಬಲಗೊಳ್ಳುವುದು ಅವರಿಗೆ ಇಷ್ಟವಿರಲಿಲ್ಲ.

ಅನಂತರ ನಡೆದ ಚುನಾವಣೆಯಲ್ಲಿ ನಿಜಲಿಂಗಪ್ಪನವರು ಅಪೂರ್ವ ವಿಜಯಗಳಿಸಿ ಎರಡನೆಯ ಸಾರಿ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದರು. ವಿಶಾಲ ಕರ್ನಾಟಕದ ಎಲ್ಲಾ ಕಡೆಗಳಲ್ಲಿ ಪ್ರವಾಸ ಮಾಡಿ ನೂತನ ರಾಜ್ಯದ ಸಮಸ್ಯೆಗಳನ್ನು ತಿಳಿದರು. ಕಾಂಗ್ರೆಸ್ಸಿಗರಲ್ಲಿ ತಲೆಹಾಕಿದ್ದ ಭಿನ್ನಪ್ರವೃತ್ತಿಗಳನ್ನು ಪರಿಹರಿಸಿ ಒಗ್ಗಟ್ಟು ಹೊಂದಾಣಿಕೆಗಳು ನೆಲೆಸಲು ಸರ್ವಪ್ರಯತ್ನ ಮಾಡಿದರು. ವಿವಿಧ ಪ್ರದೇಶಗಳ ಭಾವೈಕ್ಯ ಸಾಧನೆಯೇ ರಾಜ್ಯದ ಅಭ್ಯುದಯದ ಅಸ್ತಿಭಾರವೆಂಬುದನ್ನು ಜನರಿಗೆ ಮನವರಿಕೆ ಮಾಡಿಕೊಟ್ಟರು. ಸಂಸ್ಥೆ ಮತ್ತು ಮಂತ್ರಿ ಮಂಡಲದ ನಡುವೆ ಸಾಮರಸ್ಯವನ್ನುಂಟುಮಾಡಲು ನಿಷ್ಠೆಯಿಂದ ಪ್ರಯತ್ನಿಸಿದರು. ಈ ಪರಿಶ್ರಮದಿಂದ ಮೈಸೂರು ಕಾಂಗ್ರೆಸ್ ಸಂಸ್ಥೆ ಬಲಗೊಂಡಿತು. ನಿಜಲಿಂಗಪ್ಪನವರ ವ್ಯಕ್ತಿತ್ವದ ಹಿರಿಮೆ ಹೆಚ್ಚಿತು.

ತರುವಾಯ ೧೯೬೧ರಲ್ಲಿ ದೆಹಲಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಮಹಾಧಿವೇಶನದಲ್ಲಿ ನಿಜಲಿಂಗಪ್ಪನವರು ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡಿಗೆ ಸದಸ್ಯರಾಗಿ ಆಯ್ಕೆಯಾದರು. ಇದಕ್ಕಾಗಿ ನಡೆದ ಚುನಾವಣೆಯಲ್ಲಿ ಅತ್ಯಧಿಕ ಮತಗಳಿಸಿದವರು ಇಂದಿರಾ ಗಾಂಧಿಯವರು. ಅವರಿಗಿಂತ ಕೆಲವೇ ಮತಗಳನ್ನು ಕಡಿಮೆ ಪಡೆದ ನಿಜಲಿಂಗಪ್ಪನವರು ಎರಡನೆಯವರು. ಅಖಿಲ ಭಾರತ ರಂಗದಲ್ಲಿ ಅವರು ಅಷ್ಟು ಪ್ರಭಾವಶಾಲಿಗಳಾಗಿದ್ದರು.

## ಕಾಂಗ್ರೆಸ್ ಬೋರ್ಡಿನ ಹೊಣೆಗಾರಿಕೆ

೧೯೬೧ರಲ್ಲಿ ನಡೆಯಬೇಕಾಗಿದ್ದ ತೃತೀಯ ಮಹಾಚುನಾವಣೆಗೆ ಅಭ್ಯರ್ಥಿಗಳನ್ನು ಆರಿಸುವುದು ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡಿನ ಹೊಣೆಯಾಗಿತ್ತು. ಪ್ರದೇಶ ಕಾಂಗ್ರೆಸ್ ಸಮಿತಿಗಳು ತಯಾರಿಸಿದ ಅಭ್ಯರ್ಥಿ ಪಟ್ಟಿಯನ್ನು ಪರಿಶೀಲಿಸಿ, ಸ್ಥಳೀಯ ಮುಂದಾಳುಗಳೊಡನೆ ಪರ್ಯಾಲೋಚನೆ ನಡೆಸಿ ಪ್ರಾಂತ್ಯದ ಹಿತಾಸಕ್ತಿಗಳಿಗೆ ಗಮನವಿತ್ತು ಅರ್ಹರಾದ ಅಭ್ಯರ್ಥಿಗಳನ್ನು ಆರಿಸುವ ಹೊಣೆ

ಗಾರಿಕೆ ಎಷ್ಟೊಂದು ಕಠಿಣವೂ, ಮಹತ್ವದ್ದೂ ಆದುದೆಂಬುದನ್ನು ಊಹಿಸಿ ತಿಳಿಯಬಹುದು. ಅನೇಕ ಸಂದರ್ಭಗಳಲ್ಲಿ ತಿರಸ್ಕೃತರಾದ ಅಭ್ಯರ್ಥಿಗಳು ಪ್ರದೇಶ ಕಾಂಗ್ರೆಸ್ ಸಮಿತಿ ಮತ್ತು ಪಾರ್ಲಿಮೆಂಟರಿ ಬೋರ್ಡಿನ ಮೇಲೆ ಕುಪಿತರಾಗಿ ವಿರುದ್ಧ ಪ್ರಚಾರಕ್ಕೆ ತೊಡಗುತ್ತಿದ್ದರು. ಬೋರ್ಡು ಸದಸ್ಯರ ಮೇಲೆ ವೈಯಕ್ತಿಕ ವಿರೋಧ ಪ್ರದರ್ಶನಕ್ಕೂ ಹಿಂದೆಗೆಯುತ್ತಿರಲಿಲ್ಲ. ಈ ನಿಂದೆ ತಿರಸ್ಕಾರಗಳಿಗೆ ಹೆದರದೆ ಅಲಿಪ್ತರಾಗಿ ಎಲ್ಲಾ ದೃಷ್ಟಿಯಿಂದಲೂ ಅರ್ಹರಾದ ಅಭ್ಯರ್ಥಿಗಳನ್ನು ಆರಿಸುವುದು ಬೋರ್ಡಿನ ಕರ್ತವ್ಯವಾಗಿತ್ತು. ನಿಜಲಿಂಗಪ್ಪನವರು ತಮ್ಮ ಕರ್ತವ್ಯವನ್ನು ನಿಷ್ಠೆ, ಪ್ರಾಮಾಣಿಕತೆಗಳಿಂದ ನಿರ್ವಹಿಸಿದರು. ಮೈಸೂರು ರಾಜ್ಯದ ಅಭ್ಯರ್ಥಿಗಳ ಪಟ್ಟಿಯನ್ನು ಪರಿಷ್ಕರಿಸುವ ಸಂದರ್ಭದಲ್ಲಿ ಅವರು ಸಂಸ್ಥೆಯ ಹಿತಾಸಕ್ತಿ, ಪ್ರಾದೇಶಿಕ ಆದರಾಭಿಮಾನಗಳು, ಭಿನ್ನಮತೀಯರ ಪ್ರಾತಿನಿಧ್ಯ, ಮತದಾರರ ಒಲವು ಇವೆಲ್ಲದರ ಸಮನ್ವಯ ಸಾಧಿಸುವುದರಲ್ಲಿ ಕಟ್ಟುನಿಟ್ಟಾಗಿ ನಡೆಯಬೇಕಾಯಿತು.

ನಿಜಲಿಂಗಪ್ಪನವರ ಕರ್ತವ್ಯನಿಷ್ಠೆಯಿಂದ 'ಟಿಕೆಟ್' ಪಡೆಯದಿದ್ದವರು ಅಸಮಾಧಾನಗೊಂಡರು. ವಿರುದ್ಧ ಪ್ರಚಾರಕ್ಕೆ ತೊಡಗಿದರು, ಚುನಾವಣೆಯಲ್ಲಿ ನಿಜಲಿಂಗಪ್ಪನವರು ಸ್ಪರ್ಧಿಸಿದ್ದ ಹೊಸದುರ್ಗ ಕ್ಷೇತ್ರದಲ್ಲಿ ವಿರುದ್ಧ ಪ್ರಚಾರ ಉಗ್ರರೂಪ ತಾಳಿತು. ವ್ಯಕ್ತಿನಿಂದೆ, ಕೋಮುವಾರು ಪ್ರಚೋದನೆ, ಭ್ರಷ್ಟಾಚಾರ, ಇವೆಲ್ಲ ಅಸ್ತ್ರಗಳನ್ನು ಧಾರಾಳವಾಗಿ ಉಪಯೋಗಿಸಲಾಯಿತು, ಈ ವಿರೋಧ ಪ್ರದರ್ಶನದಲ್ಲಿ ಕಾಂಗ್ರೆಸ್ಸಿಗರೂ ಇದ್ದರೆಂಬುದು ವಿಷಾದನೀಯ. ಉಭಯ ಸಭೆಗಳಲ್ಲಿ ಕಾಂಗ್ರೆಸ್ ಸಂಸ್ಥೆ ಅತ್ಯಧಿಕ ಬಹುಮತಗಳಿಸಿತು, ಆದರೆ ಅಂತಃಶತ್ರುಗಳ ಕೈವಾಡದಿಂದ ನಿಜಲಿಂಗಪ್ಪನವರು ಚುನಾವಣೆಯಲ್ಲಿ ಪರಾಜಿತರಾದರು.

ಈ ಸೋಲಿನ ಕಾರಣಗಳನ್ನು ತಿಳಿದಿದ್ದ ಶಾಸನಸಭಾ ಕಾಂಗ್ರೆಸ್ ಪಕ್ಷದ ಸದಸ್ಯರು ನಿಜಲಿಂಗಪ್ಪನವರನ್ನು ನಾಯಕರಾಗಿ ಆರಿಸಲು ಪಣತೊಟ್ಟರು. ನಾಯಕರಾಗಿ ಆರಿಸಲ್ಪಟ್ಟವರು ಶಾಸನದನ್ವಯ ಆರುತಿಂಗಳ ಅವಧಿಯಲ್ಲಿ ಚುನಾವಣೆಗೆ ನಿಂತು ಗೆಲ್ಲಬಹುದಾಗಿತ್ತು. ಆದರೆ ಆ ಅವಕಾಶವನ್ನು ಉಪಯೋಗಿಸಿಕೊಳ್ಳುವುದು ಪ್ರಾಮಾಣಿಕತೆಗೆ ಸಲ್ಲದು ಎಂದು ಭಾವಿಸಿದ ನಿಜಲಿಂಗಪ್ಪನವರು ಅಭಿಮಾನಿಗಳ ಒತ್ತಾಯಕ್ಕೆ ಮಣಿಯಲಿಲ್ಲ. ಈ ಸಂದರ್ಭದಲ್ಲಿ ಶಾಸನಸಭಾ ಕಾಂಗ್ರೆಸ್ ಪಕ್ಷದ ಸದಸ್ಯರು ತಳೆದ ನಿಲುವು ಕಾಂಗ್ರೆಸ್ ಇತಿಹಾಸದಲ್ಲಿ ಒಂದು ಅಪೂರ್ವ ವಿಚಿತ್ರ ಸನ್ನಿವೇಶ. ಗೆದ್ದವನನ್ನು ಹಿಂಬಾಲಿಸುವ ರಾಜಕೀಯ ಪ್ರವೃತ್ತಿ ಸೋತವರ ಕಡೆ ತಿರುಗಿದುದು ಅರ್ಥಪೂರ್ಣವಾದ ಮಹತ್ವದ ಘಟನೆ. ನಿಜಲಿಂಗಪ್ಪನವರಂತಹ ನಿಷ್ಠಾವಂತನಾಯಕರು ರಾಜ್ಯದ ಪ್ರಗತಿ, ಅಭ್ಯುದಯಗಳಿಗೆ ಅಗತ್ಯವೆಂದು ಶಾಸಕರು ಭಾವಿಸಿದುದು ಆಗಿನ ಪರಿಸ್ಥಿತಿಯಲ್ಲಿ ಯೋಗ್ಯವೂ, ಅನಿವಾರ್ಯವೂ ಆಗಿತ್ತು. ಶಾಸಕರು ತಳೆದ ನಿಲುವು ಕೇಂದ್ರದ ನಾಯಕರಿಗೂ ವಿಲಕ್ಷಣವಾಗಿ ಕಂಡಿತು. ಆಮೇಲೆ ನಡೆದ ಶಾಸನಸಭಾ ಕಾಂಗ್ರೆಸ್ ಪಕ್ಷದ ನಾಯಕ ಚುನಾವಣೆಯಲ್ಲಿ ವೀಕ್ಷಕರಾಗಿ ಸಲಹೆ ಕೊಡಲು ಗೃಹಮಂತ್ರಿ ಲಾಲ್‌ಬಹದ್ದೂರ್ ಶಾಸ್ತ್ರಿಯವರು ಕಳುಹಿಸಲ್ಪಟ್ಟರು. ಶಾಸಕರು ತಮ್ಮ ನಿರ್ಧಾರದಿಂದ ಚಲಿಸಲಿಲ್ಲ. ಆಗ ನಿಜಲಿಂಗಪ್ಪನವರು ಪರಿಸ್ಥಿತಿಯನ್ನು ಆಳವಾಗಿ ಆಲೋಚಿಸಿ ಪ್ರಧಾನಿ ನೆಹರೂರವರೊಡನೆ ಪರ್ಯಾಲೋಚನೆ ನಡೆಸಿ ತಮ್ಮ ಪರವಾಗಿ ತಾವು ಯಾರಾದರೊಬ್ಬ ಅಭ್ಯರ್ಥಿಯನ್ನು ನಿಲ್ಲಿಸಲು ಅನುಮತಿ ಪಡೆದರು. ಅದೊಂದು ಅವಿಸ್ಮರಣೀಯ ಪ್ರಾತಃಕಾಲ. ರೆಸಿಡೆನ್ಸಿ ಭವನದ ಸಭಾಂಗಣದಲ್ಲಿ ನಾಯಕ ಚುನಾವಣೆಗಾಗಿ ಶಾಸಕರ ಸಭೆ ನಡೆದಿತ್ತು. ಹೊರಗೆ ಮೈದಾನದ ತುಂಬಾ ಆಸಕ್ತ ಜನರು ಗುಂಪುಗುಂಪಾಗಿ ನೆರೆದಿದ್ದರು. ದೆಹಲಿಯಿಂದ ಕಾಂಗ್ರೆಸ್ ಪ್ರತಿನಿಧಿಯಾಗಿ ಬಂದಿದ್ದ ಲಾಲ್ ಬಹದ್ದೂರ್ ಶಾಸ್ತ್ರಿಯವರ ಸಮಕ್ಷಮ ಚುನಾವಣೆ ಆರಂಭವಾಯಿತು. ನಿಜಲಿಂಗಪ್ಪನವರು ತಮ್ಮ ಪರವಾಗಿ ಸೂಚಿಸಿದ ಎಸ್. ಆರ್. ಕಂಠಿಯವರನ್ನು ಶಾಸಕರು ಕಾಂಗ್ರೆಸ್ ಪಕ್ಷದ ನಾಯಕರಾಗಿ ಅತ್ಯಧಿಕ ಬಹುಮತದಿಂದ ಆರಿಸಿದರು. ಮಂತ್ರಿಮಂಡಲ ರಚಿತವಾಗಿ ಆಡಳಿತ ವಹಿಸಿಕೊಂಡಿತು. ಆ ಸಂದರ್ಭದಲ್ಲಿ ಕಂಠಿಯವರು ಸುದ್ದಿಗಾರರಿಗೆ ಕೊಟ್ಟ ಹೇಳಿಕೆಯ ಅಭಿಪ್ರಾಯ ಈ ರೀತಿ ಇತ್ತು: ''ಇದು ನನ್ನ ವಿಜಯವಲ್ಲ, ನಿಜಲಿಂಗಪ್ಪನವರ ವಿಜಯ.'' ''ಕಾಂಗ್ರೆಸ್ ಪಕ್ಷದ ನಾಯಕನಾಗಿ ಆಯ್ಕೆಯಾಗಿರುವುದಕ್ಕೆ ನಮ್ಮ ನಾಯಕರಾದ ನಿಜಲಿಂಗಪ್ಪನವರು ನನ್ನ ಮೇಲೆ ಇಟ್ಟಿರುವ ಪ್ರೀತಿ, ವಿಶ್ವಾಸಗಳು ಕಾರಣ. ನಾನು ನಾಯಕನಾಗಿರುವುದು ತಾತ್ಕಾಲಿಕವಾಗಿ ಮಾತ್ರ. ನಿಜಲಿಂಗಪ್ಪನವರು ಸದಸ್ಯರಾಗಿ ಚುನಾಯಿತರಾಗಿ ಬಂದ ಕೂಡಲೇ ಸ್ಥಾನವನ್ನು ಬಿಟ್ಟು ಕೊಡುತ್ತೇನೆ.''

ಮುಂದೆ ಮೂರು ತಿಂಗಳುಗಳಲ್ಲಿ ನಿಜಲಿಂಗಪ್ಪನವರು ಬಿಜಾಪುರ ಜಿಲ್ಲೆಯ ಬಾಗಲಕೋಟೆ ಕ್ಷೇತ್ರದಿಂದ ಅವಿರೋಧವಾಗಿ ವಿಧಾನಸಭೆಗೆ ಚುನಾಯಿಸಲ್ಪಟ್ಟು ೧೯೬೨ರ ಜೂನ್ ತಿಂಗಳಲ್ಲಿ ಮುಖ್ಯಮಂತ್ರಿಯ ಅಧಿಕಾರಗಳನ್ನು ವಹಿಸಿಕೊಂಡರು. ಈ ಪ್ರಸಂಗದಲ್ಲಿ ಕಂಠಿಯವರ ಪಾತ್ರವನ್ನು ಪತ್ರಿಕೆಗಳು ಭರತನಿಗೆ ಹೋಲಿಸಿದ್ದು ಉಚಿತವಾಗಿದೆ.

**ಚೀಣೀ ಆಕ್ರಮಣ**

ನಿಜಲಿಂಗಪ್ಪನವರು ಮಂತ್ರಿ ಪದವಿ ವಹಿಸಿಕೊಂಡ ಕೆಲವೇ ತಿಂಗಳುಗಳಲ್ಲಿ, ಅಂದರೆ ಅಕ್ಟೋಬರ್ ೨೦ರಂದು, ಅದುವರೆಗೆ ಮಿತ್ರರಂತೆ ನಟಿಸುತ್ತಿದ್ದ ಚೀನಿಯರು ಭಾರತದ ಮೇಲೆ ಧಾಳಿಯನ್ನು ಆರಂಭಿಸಿದರು. ನೆರೆ ರಾಜ್ಯಗಳೊಡನೆ ಶಾಂತಿಯುತ ಸಹಬಾಳ್ವೆಯನ್ನು ಪ್ರತಿಪಾದಿಸುತ್ತಿದ್ದ ಪ್ರಧಾನಿ ನೆಹರೂರವರೂ, ಏಷ್ಯಾಖಂಡದ ರಾಷ್ಟ್ರಗಳ ಮೈತ್ರಿಯುತ ಸಂಬಂಧಗಳಿಗಾಗಿ ಪರಿಶ್ರಮಿಸುತ್ತಿದ್ದ ಇತರ ರಾಷ್ಟ್ರಗಳೂ ಚೀಣೀಯರ ವಿಶ್ವಾಸಘಾತಕತನದಿಂದ ಕನಲಿದರು. ಯುದ್ಧವನ್ನೇ ಪರಿತ್ಯಜಿಸಿ, ಪಂಚವಾರ್ಷಿಕ ಯೋಜನೆಗಳ ಮೂಲಕ ರಾಷ್ಟ್ರದ ಆರ್ಥಿಕ ಅಭ್ಯುದಯ ಸಾಧಿಸಲೆಳಸಿದ ಭಾರತದಲ್ಲಿ ಆಕ್ರಮಣಗಳನ್ನು ತಡೆಗಟ್ಟಲು ಬೇಕಾದ ಶಸ್ತ್ರಾಸ್ತ್ರಗಳೇ ಮೊದಲಾದ ಯುದ್ಧ ಸಾಮಗ್ರಿಗಳ ಕೊರತೆಯಿದ್ದಿತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಜಗತ್ತಿನ ಅನೇಕ ರಾಷ್ಟ್ರಗಳು, ಮುಖ್ಯವಾಗಿ ಅಮೆರಿಕಾ ಮತ್ತು ಬ್ರಿಟನ್‌ಗಳು ಭಾರತಕ್ಕೆ ನೆರವು ನೀಡಲು ಮುಂದಾದವು. ಈ ಎಲ್ಲಾ ಸಹಾಯಗಳು ದೊರಕಿದ ಮೇಲೂ ಸೈನ್ಯಕ್ಕೆ ಬೇಕಾದ ಸಾಧನ ಸಲಕರಣೆಗಳನ್ನು ಒದಗಿಸಲು ಅಪಾರ ಹಣದ ಅಗತ್ಯವಿತ್ತು. ಯುದ್ಧದ ಹಂಬಲವನ್ನೇ ತೊರೆದಿದ್ದ ಭಾರತ ಸರ್ಕಾರದಲ್ಲಿ ಸಾಕಾದಷ್ಟು ರಕ್ಷಣಾನಿಧಿಯಿರಲಿಲ್ಲ. ಈ ಪರಿಸ್ಥಿತಿಯಲ್ಲಿ ಭಾರತದ ಜನತೆ ತಮ್ಮ ಸರ್ಕಾರದ ಹಾಗೂ ನಾಯಕರ ಬೆಂಬಲವಾಗಿ ನಿಂತಿತು. ಧನಕನಕ ಹಾಗೂ ಇತರ ವಸ್ತುಗಳನ್ನು ಸಂಗ್ರಹಿಸಿ ರಾಷ್ಟ್ರ ರಕ್ಷಣೆಗೆ ನೆರವಾಯಿತು. ನಿಜಲಿಂಗಪ್ಪನವರು ಕರ್ನಾಟಕದ ಆದ್ಯಂತ ಪ್ರವಾಸಮಾಡಿ ಕೇವಲ ಕೆಲವೇ ತಿಂಗಳುಗಳಲ್ಲಿ ಸುಮಾರು ಎರಡು ಕೋಟಿ ರೂಪಾಯಿಗಳನ್ನು ಯುದ್ಧ ನಿಧಿ ಸಂಗ್ರಹಿಸಿ ನೆರೆಯ ರಾಜ್ಯಗಳಿಗೆ ಮಾರ್ಗದರ್ಶಕರಾದರು.

**ವಿಶಿಷ್ಟ ತುಲಾಭಾರ**

ಯುದ್ಧನಿಧಿ ಸಂಗ್ರಹದ ಈ ಕಾರ್ಯಕ್ಕೆ ಮೈಸೂರು ರಾಜ್ಯದ ವಿಜಾಪುರ, ಬೆಳಗಾವಿ ಜಿಲ್ಲೆಗಳ ಕನ್ನಡಿಗರು ಎಂದಿಗೂ ಮರೆಯಲಾಗದ ಹೊಸ ರೂಪ ಕೊಟ್ಟರು. ಪ್ರಧಾನಿ ನೆಹರೂರವರ ತೂಕದಷ್ಟು ಧನಕನಕಗಳನ್ನು ಯುದ್ಧನಿಧಿಗೆ ದಾನಮಾಡಿದ ಪಂಜಾಬಿನ ಜನತೆ ಆಗತಾನೆ ಇತಿಹಾಸ ಪ್ರಸಿದ್ಧವಾಗಿತ್ತು. ಈ ವಾರ್ತೆಯಿಂದ ಉತ್ತೇಜಿತರಾದ ಬೆಳಗಾವಿ ಜಿಲ್ಲೆಯ ಜನರು ನಿಜಲಿಂಗಪ್ಪನವರ ತೂಕದಷ್ಟು ರೂಪಾಯಿ ನೋಟುಗಳನ್ನು ಯುದ್ಧ ನಿಧಿಗೆ ಕೊಟ್ಟರು. ಬಿಜಾಪುರ ಜಿಲ್ಲೆಯ ಜನರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಆಗ ಕಾಂಗ್ರೆಸ್ ಅಧ್ಯಕ್ಷ ರಾಗಿದ್ದ ಇಂದಿರಾ ಗಾಂಧಿ ಮತ್ತು ನಮ್ಮ ನೆಚ್ಚಿನ ಮುಖ್ಯಮಂತ್ರಿ ನಿಜಲಿಂಗಪ್ಪ ಈ ಇಬ್ಬರು ಮಹಿಮಾನ್ವಿತರ ತೂಕದಷ್ಟು ಬಂಗಾರವನ್ನು ಯುದ್ಧ ನಿಧಿಗೆ ಅರ್ಪಿಸಿದರು. ಇಂತಹ ತುಲಾಭಾರಗಳ ವರ್ಣನೆ ಭಾರತೀಯ ಪುರಾಣ, ಇತಿಹಾಸಗಳಲ್ಲಿ ದೊರಕುತ್ತದೆ. ಆದರೆ ಜನಪ್ರಿಯತೆಯ ಸಂಕೇತವಾದ ಈ ಮಹಾಗೌರವ ದಕ್ಷಿಣ ಭಾರತದ ಜನನಾಯಕರೊಬ್ಬರಿಗೆ ದೊರಕಿದುದು ಇದೇ ಮೊದಲ ಸಾರಿ.

**ಸಿದ್ಧಿ ಸಾಧನೆಗಳು**

೧೯೬೨ನೆಯ ಜೂನ್ ತಿಂಗಳಲ್ಲಿ ಅಧಿಕಾರ ವಹಿಸಿಕೊಂಡ ನಿಜಲಿಂಗಪ್ಪನವರು ೧೯೬೮ರಲ್ಲಿ ಮೇ ತಿಂಗಳ ಮಧ್ಯದವರೆಗೆ ಮುಖ್ಯಮಂತ್ರಿಯಾಗಿ ಆಡಳಿತ ನಡೆಸಿದರು. ಐದು ವರ್ಷ ಹನ್ನೊಂದು ತಿಂಗಳ ಈ ಅಲ್ಪಾವಧಿಯಲ್ಲಿ ಮೈಸೂರು ರಾಜ್ಯದ ಶ್ರೇಯಪ್ರೇಯ ಅಭ್ಯುದಯಗಳಿಗಾಗಿ ಅವರು ಕೈಗೊಂಡ ಕೆಲವು ಕಾರ್ಯಗಳನ್ನು ಸಿಂಹಾವಲೋಕನ ದೃಷ್ಟಿಯಿಂದ ಈಗ ಪರಿಶೀಲಿಸಬೇಕಾಗಿದೆ.

**ಕರ್ನಾಟಕ ಏಕೀಕರಣ**

ಕನ್ನಡ ಜನತೆಯ ಆಶೋತ್ತರಗಳನು ಕೃತಿಗಳಿಸಿ, ಕನ್ನಡ ರಾಜ್ಯವೊಂದು ರೂಪುತಳೆಯಲು ಕಾರಣರಾದವರಲ್ಲಿ ನಿಜಲಿಂಗಪ್ಪನವರು ಅತ್ಯಂತ ಪ್ರಮುಖರು. ನಾಡಿನ ಇತಿಹಾಸಕಾರ ಅವರನ್ನು 'ನವಕರ್ನಾಟಕದ ಶಿಲ್ಪಿ' ಎಂದು ಕರೆಯುವುದು ಉಚಿತ. ರಾಷ್ಟ್ರದ ಸಮಗ್ರತೆಯನ್ನೂ, ಐಕ್ಯತೆಯನ್ನೂ ದೃಷ್ಟಿಯಲ್ಲಿಟ್ಟು ದುಡಿದು, ಸ್ವಾತಂತ್ರ್ಯ ಪ್ರಾಪ್ತಿಯ ಅನಂತರದ ಕಷ್ಟದ ವರ್ಷಗಳಲ್ಲಿ ಭಾರತೀಯ ಪ್ರಜಾಪ್ರಭುತ್ವವನ್ನು ಸುಭದ್ರವಾದ ತಳಹದಿಯ ಮೇಲೆ ಕಟ್ಟಲು ಅವರು ನೆರವಾದರು.

**ಶರಾವತಿ ವಿದ್ಯುದ್ಯೋಜನೆ**

ಏಷ್ಯಾ ಖಂಡದಲ್ಲಿಯೇ ಅತ್ಯಂತ ದೊಡ್ಡದಾದ ಈ ವಿದ್ಯುದುತ್ಪಾದನಾ ಯೋಜನೆ ನಿಜಲಂಗಪ್ಪನವರು ಕರ್ನಾಟಕ್ಕೆ ಸಲ್ಲಿಸಿದ ಇನ್ನೊಂದು ಮಹತ್ಸಾಧನೆ. ಈ ಯೋಜನೆಯನ್ನು ಅವರು ೧೯೫೮ರಲ್ಲಿ ಆಗ್ಗೆ ಕೇಂದ್ರದ ನೀರಾವರಿ ಮತ್ತು ವಿದ್ಯುತ್ ಖಾತೆಯ

ಮಂತ್ರಿಯಾಗಿದ್ದ ಎಸ್. ಕೆ. ಪಾಟೀಲರಿಂದ ಉದ್ಘಾಟಿಸಿ, ೧೯೬೫ರ ಜನವರಿಯಲ್ಲಿ ಪ್ರಧಾನಮಂತ್ರಿ ಲಾಲ್‌ಬಹದ್ದೂರ್ ಶಾಸ್ತ್ರಿಯವರ ಅಮೃತಹಸ್ತದಿಂದ ವಿದ್ಯುತ್ ಸರಬರಾಜಿನ ಪ್ರಥಮ ಹಂತದ ಸಮಾರಂಭವನ್ನು ನೆರವೇರಿಸಿದರು. ತಮ್ಮ ವೈಯಕ್ತಿಕ ಜಾಣ್ಮೆ, ಪ್ರತಿಭೆ ಪ್ರಭಾವಗಳಿಂದ ಕೇಂದ್ರ ಸರ್ಕಾರದ ಮನವೊಲಿಸಿ ಯೋಜನೆಗೆ ಅಗತ್ಯವಾಗಿದ್ದ ವಿದೇಶೀ ವಿನಿಮಯ ಸಲಕರಣೆಗಳನ್ನು ಪಡೆಯಲು ನೆರವಾದರು. ಶಾಸನಸಭೆಗಳಲ್ಲಿ, ಸಾರ್ವಜನಿಕ ವೇದಿಕೆಗಳಲ್ಲಿ ಈ ಯೋಜನೆಯ ಬಗ್ಗೆ ನಿಜಲಿಂಗಪ್ಪನವರ ಮೇಲೆ ಅಲ್ಲ ಸಲ್ಲದ ಆರೋಪಗಳು ಬಂದವು. ಪರಿಣಿತರು, ತಜ್ಞರು ಪರಿಶೀಲಿಸಿ ಆರೋಪಗಳು ನಿರಾಧಾರವೆಂದು ಬಾರಿಬಾರಿಗೆ ಸಾರಿದರೂ ವಿರೋಧಿಗಳಿಗೆ ಸಮಾಧಾನವಾಗಲಿಲ್ಲ. ಆರೋಪಗಳ ಪುನರಾವರ್ತನೆ ವೈಯಕ್ತಿಕ ವಿದ್ವೇಷದ ಉಗ್ರರೂಪ ತಾಳಿದಾಗ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿಯವರು ಸಂಬಂಧಪಟ್ಟ ಕಾಗದ ಪತ್ರಗಳನ್ನು ಪುನಃ ಪರಿಶೀಲಿಸಿ ಆರೋಪಗಳನ್ನು ಸಮರ್ಥಿಸುವ ತಥ್ಯಗಳೇನೂ ಇಲ್ಲವೆಂದು ಘೋಷಿಸಿ ಆರೋಪಗಳನ್ನು ತಳ್ಳಿಹಾಕಿದರು.

### ಬೆಂಗಳೂರಿಗೆ ಕಾವೇರಿಯ ನೀರು

ನಿಜಲಿಂಗಪ್ಪನವರ ಮತ್ತೊಂದು ಮಹತ್ಸಾಧನೆಯೆಂದರೆ ಬೆಂಗಳೂರು ಮಹಾನಗರಕ್ಕೆ ಕುಡಿಯುವ ನೀರನ್ನು ಸರಬರಾಜು ಮಾಡುವ ಕಾವೇರಿ ಯೋಜನೆ. ಕೇಂದ್ರ ಯೋಜನಾ ಮಂಡಳಿಯು ಈ ಯೋಜನೆಗೆ ಆದ್ಯತೆಯಿತ್ತು, ಪ್ರಪ್ರಥಮವಾಗಿ ಕಾರ್ಯ ರೂಪಕ್ಕೆ ತಂದದ್ದು ನಿಜಲಿಂಗಪ್ಪನವರ ಸತತ ಪರಿಶ್ರಮದಿಂದಲೇ ಆಗಿರುತ್ತದೆ. ಕಾಂಗ್ರೆಸ್ ಅಧ್ಯಕ್ಷ ಕಾಮರಾಜರ ಅಧ್ಯಕ್ಷತೆಯಲ್ಲಿ ಲಾಲ್‌ಬಹದ್ದೂರ್ ಶಾಸ್ತ್ರಿಯವರು ೧೯೬೪ರಲ್ಲಿ ಈ ಯೋಜನೆಯನ್ನು ಆರಂಭಗೊಳಿಸಿದರು. ಈ ಸಂಸ್ಮರಣೀಯ ಕಾರ್ಯಕ್ಕಾಗಿ ಬೆಂಗಳೂರಿನ ನಾಗರಿಕರು ನಿಜಲಿಂಗಪ್ಪನವರಿಗೆ ಕೃತಜ್ಞತೆಯನ್ನು ಸಲ್ಲಿಸಬೇಕಾಗಿದೆ.

### ಕನ್ನಡಕ್ಕೆ ಆದ್ಯತೆ

ಕನ್ನಡನಾಡು ಒಂದಾದ ಮೇಲೆ ಪ್ರಾದೇಶಿಕ ಭಾಷೆಯಾದ ಕನ್ನಡವು ಆಡಳಿತ ಭಾಷೆಯಾಗಬೇಕಾದುದು ಅಗತ್ಯವೆಂದು ೧೯೫೬ರಲ್ಲಿಯೇ ಪ್ರತಿಪಾದಿಸಲ್ಪಟ್ಟಿತ್ತಾದರೂ ಆಂಗ್ಲಭಾಷಾಭಿಮಾನಿಗಳ ವಿರೋಧದಿಂದಾಗಿ ಸಮಸ್ಯೆಯಾಗಿಯೇ ಉಳಿದಿತ್ತು. ಈ ವಿಚಾರದಲ್ಲಿ ಎಷ್ಟೇ ಅಡಚಣೆಗಳು ಬಂದರೂ, ಪಟ್ಟಭದ್ರರು ವಿರೋಧಿಸಿದರೂ ವಿಚಲಿತರಾಗದೆ ನಿಜಲಿಂಗಪ್ಪನವರು ಕನ್ನಡವೇ ಸರ್ಕಾರೀ ಭಾಷೆಯಾಗಬೇಕೆಂಬ ಮಸೂದೆಯನ್ನು ಮಂಡಿಸಿ ಜಾರಿಗೆ ತಂದರು.

### ಮಂಗಳೂರು ಬಂದರಿನ ಪುನರ್ರಚನೆ

ಮಂಗಳೂರು ಬಂದರನ್ನು ಎಲ್ಲಾ ಋತುಗಳಲ್ಲಿ ಉಪಯೋಗಿಸಲ್ಪಡಬಹುದಾದ ಪ್ರಥಮ ದರ್ಜೆಯ ಬಂದರಾಗಿ ಪುನರ್ರಚಿಸಿ ಮಲೆನಾಡಿನ ಖನಿಜ ಸಂಪತ್ತು ಮತ್ತು ಇತರ ಸರಕುಗಳನ್ನು ಸಾಗಿಸಲು ಹಾಸನ - ಮಂಗಳೂರು ರೈಲುಮಾರ್ಗಗಳನ್ನು ನಿರ್ಮಿಸುವ ಬೃಹದ್ಯೋಜನೆ ನಿಜಲಿಂಗಪ್ಪನವರ ಸಾಧನೆಗಳಲ್ಲಿ ವಾಣಿಜ್ಯ ದೃಷ್ಟಿಯಿಂದ ಅತಿ ಮುಖ್ಯವಾದದ್ದು. ಇದರಿಂದ ಮಂಗಳೂರು ಬಂದರು ಕರ್ನಾಟಕದ ಮಹಾದ್ವಾರವಾಗುವುದಲ್ಲದೆ ಪಶ್ಚಿಮ ಕರಾವಳಿಗೂ ಮೈಸೂರಿನ ಬಯಲುಸೀಮೆಗೂ ಸಂಪರ್ಕ ಏರ್ಪಟ್ಟು ಕೈಗಾರಿಕೆ ಉದ್ಯಮ ವಾಣಿಜ್ಯಗಳು ಅಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

### ಕೃಷ್ಣಾ ಯೋಜನೆ

ಬಿಜಾಪುರ, ಗುಲ್ಬರ್ಗ ಜಿಲ್ಲೆಗಳ ನೀರಾವರಿ ಸೌಕರ್ಯಗಳನ್ನು ಉತ್ತಮಪಡಿಸಲು ಕೃಷ್ಣ ಮೇಲ್ದಂಡೆಯಲ್ಲಿ ಎರಡು ಕಟ್ಟೆಗಳನ್ನು ಕಟ್ಟುವ ಯೋಜನೆ ಆ ಜಿಲ್ಲೆಗಳ ವ್ಯವಸಾಯಾಭಿವೃದ್ಧಿಗೆ ಅಗತ್ಯವಾಗಿತ್ತು. ಆ ಪ್ರಾಂತ್ಯದ ರೈತರ ಬಹುವರ್ಷಗಳ ಬೇಡಿಕೆಯನ್ನು ಈಗ ನಿಜಲಿಂಗಪ್ಪನವರು ಈಡೇರಿಸಿ ಯೋಜನೆಯನ್ನು ಕಾರ್ಯಗತಮಾಡಿದರು.

### ಕೃಷಿ ವಿಶ್ವವಿದ್ಯಾನಿಲಯ

ಅಮೆರಿಕಾ ನೆರವಿನಿಂದ ಬೆಂಗಳೂರಲ್ಲಿ ಸ್ಥಾಪಿತವಾದ ವ್ಯವಸಾಯ ವಿಶ್ವವಿದ್ಯಾನಿಲಯ ದಕ್ಷಿಣ ಭಾರತದಲ್ಲಿ ಮೊದಲನೆಯದು. ಅತ್ಯಲ್ಪ ಅವಧಿಯಲ್ಲಿ ಈ ಸಂಸ್ಥೆ ಸ್ಥಾಪಿತವಾಗಿ ವ್ಯವಸಾಯದಲ್ಲಿ ಅತ್ಯಾಧುನಿಕ ಕ್ರಮಗಳನ್ನು ಆಚರಣೆಗೆ ತರಬಲ್ಲ ಪದವೀಧರರನ್ನು ಸೃಷ್ಟಿಸುತ್ತಿರುವುದು ನಿಜಲಿಂಗಪ್ಪನವರ ಆಸಕ್ತಿಯ ಫಲವಾಗಿಯೇ ಎನ್ನಬಹುದು. ಬೆಂಗಳೂರು ವಿಶ್ವವಿದ್ಯಾನಿಲಯ, ಹಾಲು ಸರಬರಾಜು ಕೇಂದ್ರ, ಜರ್ಮನ್ ನೆರವಿನಿಂದ ಹೊಸ ಎಲೆಕ್ಟ್ರಿಕ್ ಕಾರಖಾನೆಯ ಸ್ಥಾಪನೆ, ಅಲ್ಯೂಮಿನಿಯಂ ಕಾರ್ಖಾನೆ, ರೇಯಾನ್ ನೂಲು,

ಹಾರ್ಡ್ ಬೋರ್ಡು ಮತ್ತು ಸಕ್ಕರೆ ತಯಾರಿಕೆಗಾಗಿ ಕಾರ್ಖಾನೆಗಳನ್ನು ಸ್ಥಾಪಿಸಲು ವಿವರಗಳ ಕರಡು ಈಗ ಸಿದ್ಧವಾಗಿದೆ. ನಿಜಲಿಂಗಪ್ಪನವರು ಯೋಚಿಸಿದ ಈ ಅಭಿವೃದ್ಧಿ ಯೋಜನೆಗಳನ್ನು ಹೊಸ ಮಂತ್ರಿಮಂಡಲ ಕಾರ್ಯಗತ ಮಾಡಬೇಕಾಗಿರುತ್ತದೆ. ಕೈಗಾರಿಕೆಗಳ ಬಗ್ಗೆ ನಿಜಲಿಂಗಪ್ಪನವರಿಗೆ ಅಪಾರ ಜ್ಞಾನ ಮತ್ತು ಅನುಭವವಿದೆಯೆಂಬುದು ಅನೇಕರಿಗೆ ತಿಳಿಯದು. ಅವರ ಈ ಪರಿಣತಿ ಕೆಲವೊಮ್ಮೆ ವಿದೇಶೀ ಕೈಗಾರಿಕೋದ್ಯಮಿಗಳನ್ನೂ ಬೆರಗುಗೊಳಿಸಿದೆ. ರಾಜಕೀಯ ತುಮುಲಗಳ ಒತ್ತಡಕ್ಕೆ ಸಿಕ್ಕದೇ ಇದ್ದಿದ್ದರೆ ಮೈಸೂರು ರಾಜ್ಯದ ಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರ ನಿಜಲಿಂಗಪ್ಪನವರಿಂದ ಇನ್ನೂ ಹೆಚ್ಚಿನ ಪ್ರಯೋಜನ ಪಡೆಯಬಹುದಾಗಿತ್ತು.

### ಕಾಂಗ್ರೆಸ್ಸಿನ ಕರೆ

ಮೈಸೂರಿನ ಈ ಪ್ರಗತಿ ನೆರೆಯ ರಾಜ್ಯದ ರಾಜಕಾರಣಿಗಳ ಅಸೂಯೆ ಅಸಂತೃಪ್ತಿಗಳನ್ನೂ ಕೆರಳಿಸಿತು. ಮುಖ್ಯಮಂತ್ರಿ ಸ್ಥಾನದಿಂದ ನಿಜಲಿಂಗಪ್ಪನವರನ್ನು ಉಚ್ಚಾಟಿಸುವ ಸಂಧಾನ ತೆರೆಯ ಮರೆಯಲ್ಲಿ ನಡೆಯಿತು. ಪರಿಣಾಮದಲ್ಲಿ ಇದು ಅಖಿಲ ಭಾರತ ಅಧ್ಯಕ್ಷಸ್ಥಾನಕ್ಕೆ ನಿಜಲಿಂಗಪ್ಪನವರನ್ನು ಆರಿಸಿಕೊಳ್ಳುವುದರಲ್ಲಿ ಮುಕ್ತಾಯಗೊಂಡಿತು. ಕಾಂಗ್ರೆಸ್ ಸಂಸ್ಥೆಯ ಇತಿಹಾಸದಲ್ಲಿ ಅದೊಂದು ಪರೀಕ್ಷಾಕಾಲ. ೧೯೬೭ರ ಮಹಾಚುನಾವಣೆಯಲ್ಲಿ ಸೋಲಿನ ಕಹಿಯನ್ನು ಅನುಭವಿಸಿದ ಕಾಂಗ್ರೆಸ್ ಸಂಸ್ಥೆ ಸಂಸತ್ ಸಭೆಯಲ್ಲಿ ತನ್ನ ಸಂಖ್ಯಾಬಲವನ್ನು ಕಳೆದುಕೊಂಡು ಅಧಿಕಾರ ಸ್ವೀಕಾರಕ್ಕೆ ಬೇಕಾದ ನಿಚ್ಚಳ ಬಹುಮತಕ್ಕಿಂತ ಕೆಲವೇ ಸ್ಥಾನಗಳನ್ನು ಹೆಚ್ಚಿಗೆ ಪಡೆದಿತ್ತು. ಭಾರತದ ಏಳು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ಸೇತರ ಪಕ್ಷಗಳ ಸಂಯುಕ್ತ ಸರ್ಕಾರಗಳು ಸ್ಥಾಪಿತವಾಗಿ ಆಡಳಿತ ನಡೆಸುತ್ತಿದ್ದವು. ಮದರಾಸಿನ ಪ್ರಭಾವಶಾಲಿ ಜನಪ್ರಿಯ ನಾಯಕರೂ, ಆಗ ಕಾಂಗ್ರೆಸ್ ಅಧ್ಯಕ್ಷರೂ ಆಗಿದ್ದ ಕಾಮರಾಜರು ಚುನಾವಣೆಯಲ್ಲಿ ಪರಾಜಿತರಾಗಿದ್ದರು. ಅಧ್ಯಕ್ಷ ಸ್ಥಾನಕ್ಕೆ ಹೊಸ ನಾಯಕರನ್ನು ಆರಿಸುವ ಕಾರ್ಯ ನಡೆಯಬೇಕಾಗಿತ್ತು. ಅದಕ್ಕಾಗಿ ಕಾಂಗ್ರೆಸ್ ಸಂಸ್ಥೆಯ ನಾಯಕ ವರ್ಗದಲ್ಲಿ ಕೆಲವು ತಿಂಗಳು ಮೊದಲಿನಿಂದ ಸಂಧಾನ ನಡೆದಿತ್ತು. ಹಿರಿಯ ನಾಯಕರಲ್ಲಿ ಅನೇಕರು ಅಧ್ಯಕ್ಷ ಸ್ಥಾನಕ್ಕೆ ನಿಜಲಿಂಗಪ್ಪನವರ ಹೆಸರನ್ನು ಸೂಚಿಸಿ ಅವರನ್ನು ಒಪ್ಪಿಸಲು ಪ್ರಯತ್ನಿಸಿದ್ದರು. ಆದರೆ ನಿಜಲಿಂಗಪ್ಪನವರು ಒತ್ತಾಯಕ್ಕೆ ಮಣಿದಿರಲಿಲ್ಲ; ಒಪ್ಪಿಗೆ ನೀಡಿರಲಿಲ್ಲ. ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ತಾವು ಪ್ರಾರಂಭಿಸಿದ ಅಭಿವೃದ್ಧಿ ಕಾರ್ಯಗಳು ಇನ್ನೂ ಮುಗಿಯದಿರುವುದರಿಂದ ಕಾಂಗ್ರೆಸ್ ಅಧ್ಯಕ್ಷ ಸ್ಥಾನ ತಮಗೆ ಬೇಡವೆಂಬುದು ನಿಜಲಿಂಗಪ್ಪನವರ ಉತ್ತರವಾಗಿತ್ತು. ಕಾಂಗ್ರೆಸ್ ಸಂಸ್ಥೆಯ ಪರೀಕ್ಷಾ ಕಾಲದಲ್ಲಿ ಭಾರತದಲ್ಲಿ ಎಲ್ಲಾ ಪ್ರಾಂತ್ಯಗಳ ಗೌರವ ವಿಶ್ವಾಸಗಳಿಗೆ ಪಾತ್ರರಾದ ಪ್ರಭಾವಶಾಲಿ, ಕರ್ತವ್ಯನಿಷ್ಠ ಪ್ರಾಮಾಣಿಕ ನಾಯಕರು ನಿಜಲಿಂಗಪ್ಪನವರೊಬ್ಬರೇ ಎಂದೂ ಕಾಂಗ್ರೆಸ್ ಸಂಸ್ಥೆಯ ಸ್ಥಾನಮಾನ ಪ್ರತಿಷ್ಠೆಗಳನ್ನು ಪುನರುಜ್ಜೀವನಗೊಳಿಸಿ ತರುಣ ಜನಾಂಗದಲ್ಲಿ ಹೊಸ ಹುರುಪನ್ನು ತುಂಬಲು ಸಂಸ್ಥೆಗೆ ಅವರ ಸೇವೆ ಅಗತ್ಯವೆಂದೂ ಕಾಂಗ್ರೆಸ್ ಕಾರ್ಯಕಾರೀ ಸಮಿತಿಯ ಬಹುಮಂದಿ ಸದಸ್ಯರ ವಾದವಾಗಿತ್ತು. ಕಾಂಗ್ರೆಸ್ ಅಧ್ಯಕ್ಷ, ಮೈಸೂರು ರಾಜ್ಯದ ಮುಖ್ಯಮಂತ್ರಿ ಈ ಎರಡೂ ಸ್ಥಾನಗಳನ್ನೂ ಏಕಕಾಲದಲ್ಲಿ ಒಬ್ಬರೇ ನಿರ್ವಹಿಸುವುದು ಸಾಧ್ಯವಿಲ್ಲವೆಂಬುದು ಎಲ್ಲರಿಗೂ ತಿಳಿದಿತ್ತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ನಿಜಲಿಂಗಪ್ಪನವರವನ್ನು ಅಧ್ಯಕ್ಷ ಸ್ಥಾನಕ್ಕೆ ಒಪ್ಪಿಸುವುದು ಎಂತಹ ಕಠಿಣ ಕಾರ್ಯವಾಗಿತ್ತೆಂಬುದನ್ನು ಆಯ್ಕೆಯ ಹಿಂದಿನ ಕೆಲವು ವಾರಗಳ ಪತ್ರಿಕಾ ವಾರ್ತೆಗಳಿಂದ ತಿಳಿಯಬಹುದು. ಆದರೂ ಕೊನೆಗೆ ಕಾರ್ಯಕಾರೀ ಸಮಿತಿಯ ವರಿಷ್ಠ ನಾಯಕರ ಒತ್ತಡಕ್ಕೆ ಮಣಿಯುವುದು ನಿಜಲಿಂಗಪ್ಪನವರಿಗೆ ಅನಿವಾರ್ಯವಾಯಿತು. ಮೈಸೂರು ರಾಜ್ಯದ ಹೊಸ ಕಾಂಗ್ರೆಸ್ ನಾಯಕರ ಚುನಾವಣೆ ಮುಗಿಯುವವರೆಗೆ ಕಾಂಗ್ರೆಸ್ ಅಧ್ಯಕ್ಷ, ಮುಖ್ಯಮಂತ್ರಿ ಈ ಎರಡೂ ಸ್ಥಾನಗಳಲ್ಲಿದ್ದು ಕಾರ್ಯ ನಡೆಸುವ ಅವಕಾಶ ತಮಗಿರಬೇಕೆಂಬ ಷರತ್ತಿನಿಂದ ನಿಜಲಿಂಗಪ್ಪನವರು ಒಪ್ಪಿಗೆಯಿತ್ತರು. ಅವರು ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಅವಿರೋಧವಾಗಿ ಚುನಾಯಿತರಾದರು.

ಭಾರತ ರಾಜಕೀಯದಲ್ಲಿ ಕಾಂಗ್ರೆಸ್ ಮಹಾಸಂಸ್ಥೆಯ ಅಧ್ಯಕ್ಷ ಪೀಠ ಅತ್ಯುನ್ನತ ಗೌರವ, ಪ್ರತಿಷ್ಠೆಗಳ ಕೀಲಕ ಸ್ಥಾನ. ಮದ್ರಾಸ್ ಪ್ರಾಂತ್ಯದ ಮುಖ್ಯಮಂತ್ರಿಯಾಗಿ ಕೀರ್ತಿ ಪ್ರತಿಷ್ಠೆ ಜನಾನುರಾಗ ಗಳಿಸಿದ ಕಾಮರಾಜರು ಕಾಂಗ್ರೆಸ್ ಮಹಾಸಂಸ್ಥೆ ಅಧ್ಯಕ್ಷರಾಗಿ ಕೇಂದ್ರ ಸರ್ಕಾರದಲ್ಲಿ ಆಚರಣೆಗೆ ತಂದ 'ಕಾಮರಾಜ ಯೋಜನೆ', ವರಿಷ್ಠರ ವಿರೋಧ, ಕಾರ್ಯಕರ್ತರ ನಿರುತ್ಸಾಹ, ಜನತೆಯ ಉಪೇಕ್ಷೆ ಈ ಕಾರಣಗಳಿಂದಾಗಿ ವಿಫಲಗೊಂಡಿತ್ತು. ಅಧಿಕಾರದಲ್ಲಿದ್ದ ಹಿರಿಯ ಕಾಂಗ್ರೆಸ್ಸಿಗರನ್ನು ಪದಚ್ಯುತರಾಗಿ ಮಾಡಿ ಅವರನ್ನು ರಚನಾತ್ಮಕ ಕಾರ್ಯದಲ್ಲಿ ತೊಡಗಿಸಲು ಕಾಮರಾಜರು ಮಾಡಿದ ಪ್ರಯತ್ನ, ಅನೇಕ ಮಂದಿ ಜನನಾಯಕರ ಅಸಮಾಧಾನಕ್ಕೆ ಎಡೆಗೊಟ್ಟು ಆಮೇಲೆ ನಡೆದ ಮಹಾಚುನಾವಣೆಯಲ್ಲಿ ಕಾಂಗ್ರೆಸ್ ಬಹುತೇಕ ಸ್ಥಾನಗಳನ್ನು ಕಳೆದುಕೊಂಡಿತು. ಈ ಪರಿಸ್ಥಿತಿಯಲ್ಲಿ ನಿಜಲಿಂಗಪ್ಪನವರು ಕಾಂಗ್ರೆಸ್ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟರು. ಅವರ ರಾಷ್ಟ್ರಪ್ರೇಮ, ಕರ್ತವ್ಯನಿಷ್ಠೆ, ರಾಜಕೀಯದಲ್ಲಿ ಕಾಣಸಿಗದ ಪ್ರಾಮಾಣಿಕ ವರ್ತನೆ ದೇಶದ ರಾಜಕೀಯ, ಆರ್ಥಿಕ, ಸಾಮಾಜಿಕ ಸಮಸ್ಯೆಗಳ ಬಗೆಗೆ ಅವರ ಆಳವಾದ ಅನುಭವ, ಬೇರೆ ಬೇರೆ ಪ್ರಾಂತ್ಯಗಳ ಮುಂದಾಳುಗಳೊಡನೆ ಅವರು ಬೆಳೆಸಿಕೊಂಡು ಬಂದಿದ್ದ ಹಾರ್ದಿಕವಾದ ನಿಕಟ ಸಂಬಂಧ, ಎಲ್ಲಕ್ಕಿಂತ ಅವರ ಸರಳ ಜೀವನ, ಅಧ್ಯಕ್ಷ ಸ್ಥಾನಕ್ಕೆ ಅರ್ಹರನ್ನಾಗಿ

ಮಾಡಿತ್ತು. ಕಾಂಗ್ರೆಸ್ ಮಹಾಸಂಸ್ಥೆ ಈ ಗುಣಗಳನ್ನು ಸದುಪಯೋಗಪಡಿಸಿಕೊಂಡಿತು ಎಂಬುದನ್ನು ಭವಿಷ್ಯದ ಇತಿಹಾಸಕಾರರು ನಿರ್ಧರಿಸಬೇಕಾಗಿದೆ. ಕಾಂಗ್ರೆಸ್ ಮಹಾಸಂಸ್ಥೆಯ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ನಂತರವೂ ನಿಜಲಿಂಗಪ್ಪನವರು ಕೆಲವು ತಿಂಗಳು ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ಆಡಳಿತ ನಡೆಸಿದರು. ಈ ಸಂಧಿಕಾಲದಲ್ಲಿ ಅವರು ತೋರಿಸಿದ ಶ್ರಮ ಸಹಿಷ್ಣುತೆ, ಸ್ಮರಣಶಕ್ತಿ ಕೌಶಲ್ಯಕಾರ್ಯ, ವಿಶಾಲ ಮನೋಭಾವ, ವಿಚಾರ ಸ್ವಾತಂತ್ರ್ಯ ಇವು ಬೆರಗುಗೊಳಿಸುವಂತಹುದಾಗಿದ್ದವು. ಒಂದು ಕಡೆ ವಿರೋಧಿಗಳ ಟೀಕೆ, ಇನ್ನೊಂದು ಕಡೆ ಬೆಂಬಲಿಗರ ಕಾರ್ಯಾವಸರ; ಒಂದು ಕಡೆ ಕೇಂದ್ರ ಕಾಂಗ್ರೆಸ್ ಕಛೇರಿಯ ಕಾಗದ ಪತ್ರಗಳಿಗೆ ಉತ್ತರ, ಇವುಗಳಿಂದ ಊಟ ಉಪಹಾರ ವಿಶ್ರಾಂತಿ ನಿದ್ರೆಗಳಿಗೂ ಅವಕಾಶ ಸಿಕ್ಕುತ್ತಿರಲಿಲ್ಲ. ಈ ಮಧ್ಯೆ ತಿಂಗಳಿಗೆ ಎರಡು ಸಾರಿಯಾದರೂ ದೆಹಲಿಗೆ ಪ್ರವಾಸ. ಈ ಎಲ್ಲಾ ಕಾರ್ಯಗಳನ್ನೂ ನಿಜಲಿಂಗಪ್ಪನವರು. ಉತ್ಸಾಹದಿಂದ ಹಸನ್ಮುಖರಾಗಿ ನಿರ್ವಹಿಸದರೆಂಬುದು ಅವರ 'ಕಾರ್ಯ ಕೌಶಲ್ಯಕ್ಕೆ' ನಿದರ್ಶನ. ಕಾಂಗ್ರೆಸ್ ಮಹಾಸಂಸ್ಥೆಯ ರಾಜಕೀಯದ ದೈನಂದಿನ ಸಮಸ್ಯೆಗಳಿಗೆ ಪೂರ್ಣ ಗಮನಕೊಡುವ ಮುನ್ನ ಅವರು ಮೈಸೂರು ರಾಜ್ಯದಲ್ಲಿ ಮಾಡಬೇಕಾಗಿದ್ದ ಕಾರ್ಯ ತಮ್ಮ ಉತ್ತರಾಧಿಕಾರಿಯನ್ನು ಆರಿಸುವುದಾಗಿತ್ತು. ಈಗಾಗಲೇ ಪ್ರಾರಂಭಿಸಿ ಅರ್ಧ ಮುಗಿದಿದ್ದ ಕಾರ್ಯವಿಧಾನಗಳ ಪೂರೈಕೆ, ಶಾಸನ ಸಭಾ ಕಾಂಗ್ರೆಸ್ ಪಕ್ಷ ಬಲದ ಒಲವು ನಿಲುವುಗಳು, ಹೊಸ ಮಂತ್ರಿಮಂಡಲದ ಸುಭದ್ರತೆ, ಹಿತಾಸಕ್ತಿಗಳ ಪ್ರಾತಿನಿಧ್ಯ ಈ ಎಲ್ಲಾ ವಿಚಾರಗಳನ್ನೂ ಗಮನದಲ್ಲಿಟ್ಟುಕೊಂಡು ಅವರು ಹೊಸ ನಾಯಕರನ್ನು ಸೂಚಿಸಬೇಕಾಗಿತ್ತು. ಕಾಂಗ್ರೆಸ್ ವಲಯಗಳಲ್ಲಿ, ಪತ್ರಿಕೆಗಳಲ್ಲಿ, ಆಗಲೇ ಸಾಕಾದಷ್ಟು ಊಹಾಪೋಹಗಳು ನಡೆದಿದ್ದುವು. ಆದರೆ ಈ ವಿಚಾರದಲ್ಲಿ ತಾವು ಅನುಸರಿಸುವ ಮೂಲಸೂತ್ರವೇನೆಂಬುದನ್ನು ನಿಜಲಿಂಗಪ್ಪನವರು ಪ್ರಾಸಂಗಿಕವಾಗಿ ಮೊದಲೇ ತಿಳಿಸಿದ್ದರು. ''ಕಾಂಗ್ರೆಸ್ ಸಂಸ್ಥೆ ತನ್ನ ಮೊದಲಿನ ಶಕ್ತಿ ಸಾಮರ್ಥ್ಯಗಳನ್ನು ಪುನಃ ಪಡೆಯಬೇಕಾಗಿದ್ದರೆ ತರುಣರಿಗೆ ಅಧಿಕಾರ ಬಿಟ್ಟುಕೊಡುವುದು ಅಗತ್ಯ, ಅನಿವಾರ್ಯ.'' ''ಕಾಂಗ್ರೆಸ್ಸಿಗರಲ್ಲಿನ ಆದರ್ಶಗಳ ಅಭಾವ ಮತ್ತು ಸ್ವಾರ್ಥಸಾಧನೆಯಿಂದ ಕೆಲವು ಕಾಂಗ್ರೆಸ್ ಸರ್ಕಾರಗಳು ಉರುಳಿವೆ. ಬಹುಮಂದಿ ಕಾಂಗ್ರೆಸ್ಸಿಗರು ನಿಸ್ತೇಜರಾಗಿ ಮೊದಲಿನ ತ್ಯಾಗ ಮನೋಭಾವವನ್ನು ಕಳೆದುಕೊಂಡಿದ್ದಾರೆ. ರಾಷ್ಟ್ರ ಮತ್ತು ಸಂಸ್ಥೆಯ ಹಿತಕ್ಕಾಗಿ ಕಾಂಗ್ರೆಸ್ಸಿಗರು ತಮ್ಮ ಸರ್ವಸ್ವವನ್ನೂ ತ್ಯಾಗಮಾಡುತ್ತಿದ್ದ ದಿನಗಳು ಕಳೆದುಹೋದವು. ''ಈ ಕಾರಣದಿಂದ ತರುಣ ರಾಜಕಾರಣಿಗಳು ತಮ್ಮ ದೇಶದ ಇತಿಹಾಸ, ಸಂಸ್ಕೃತಿ, ತಾತ್ವಿಕ ಹಿನ್ನೆಲೆ, ಹಲವಾರು ಕ್ಷೇತ್ರಗಳಲ್ಲಿ ನಮ್ಮ ಹಿಂದಿನವರು ಸಾಧಿಸಿದ ಮಹತ್ ಕಾರ್ಯಗಳು, ಪ್ರಸ್ತುತ ನಮ್ಮ ಮುಂದಿರುವ ರಾಜಕೀಯ, ಆರ್ಥಿಕ, ಧಾರ್ಮಿಕ ಸಮಸ್ಯೆಗಳು ಈ ಎಲ್ಲಾ ವಿಚಾರಗಳನ್ನು ಅರಿತುಕೊಂಡು ಸಿದ್ಧರಾಗಿ ರಾಜಕೀಯಕ್ಕೆ ಪ್ರವೇಶಿಸಬೇಕು. ವೈಯಕ್ತಿಕ ಆಸೆ ಆಕಾಂಕ್ಷೆಗಳನ್ನು ಮರೆತು ನಾಡಿನ ಮತ್ತು ಜನತೆಯ ಹಿತಾಸಕ್ತಿಗಳಿಗೆ ಆದ್ಯತೆ ಕೊಡುವುದನ್ನು ಕಲಿಯಬೇಕು'' ಎಂದು ಅವರು ಈ ಮೊದಲೇ ಒಂದು ವಿಶೇಷ ಸಂದರ್ಭದಲ್ಲಿ ನುಡಿದಿದ್ದರು. ತಮ್ಮ ಮಂತ್ರಿಮಂಡಲದಲ್ಲಿ ಅನುಭವಸ್ಥರಾದ ಹಿರಿಯರಂತೆ ತರುಣ ಜನಾಂಗದ ಪ್ರತಿನಿಧಿಗಳಾಗಿ ರಾಮಕೃಷ್ಣ ಹೆಗಡೆ, ವೀರೇಂದ್ರ ಪಾಟೀಲ್, ಬಿ. ರಾಚಯ್ಯ, ಮಹಮ್ಮದ್ ಆಲಿ ಇವರುಗಳಿಗೆ ಸ್ಥಾನವಿತ್ತು ರಾಜಕೀಯ ಆಡಳಿತಗಳ ಅನುಭವ ಪಡೆಯಲು ಸಹಾಯಕರಾಗಿದ್ದರು. ಉತ್ಸಾಹಿ ತರುಣರೊಬ್ಬರನ್ನು ನಾಯಕರಾಗಿ ಆರಿಸುವುದು ನಿಜಲಿಂಗಪ್ಪನವರ ಇಚ್ಛೆಯಾಗಿತ್ತಾದರೂ ಅದು ಈಡೇರಲು ಕೆಲವು ಅಡಚಣೆಗಳಿದ್ದವು. ನಿಜಲಿಂಗಪ್ಪನವರ ವ್ಯಕ್ತಿತ್ವ ಪ್ರತಿಭೆಗಳಿಂದ ಒಂದಾಗಿದ್ದ ಶಾಸನಸಭಾ ಕಾಂಗ್ರೆಸ್ ಪಕ್ಷದಲ್ಲಿ ಸ್ಪರ್ಧಾ ಮನೋಭಾವ ತಲೆಯೆತ್ತಿತ್ತು. ಬಿರುಕು ಕಾಣಿಸಿಕೊಂಡಿತು. ಕೊನೆಗೆ ೨೩-೫-೬೮ರಲ್ಲಿ ಶಾಸನಸಭಾ ಕಾಂಗ್ರೆಸ್ ಪಕ್ಷದ ಸಭೆ ಬೆಂಗಳೂರಲ್ಲಿ ನಡೆದು ನಿಜಲಿಂಗಪ್ಪನವರ ಮಂತ್ರಿಮಂಡಳದಲ್ಲಿ ಲೋಕೋಪಯೋಗಿ ಶಾಖಾ ಸಚಿವರಾಗಿದ್ದ ವೀರೇಂದ್ರ ಪಾಟೀಲರು ನಾಯಕರಾಗಿ ಸರ್ವಾನುಮತದಿಂದ ಆರಿಸಲ್ಪಟ್ಟರು.

## ಮುಳ್ಳುಹಾಸಿಗೆ ಕಾಂಗ್ರೆಸ್ ಅಧ್ಯಕ್ಷ ಪೀಠ

ಕಾಂಗ್ರೆಸ್ ಅಧ್ಯಕ್ಷ ಪೀಠ ಒಂದು ಮುಳ್ಳುಹಾಸಿಗೆಯೆಂದು ಹೇಳಿದರೆ ಪ್ರಸ್ತುತ ಪರಿಸ್ಥಿತಿಯಲ್ಲಿ ಯಾವ ಉತ್ಪ್ರೇಕ್ಷೆಯೂ ಇರಲಾರದು. ಪಕ್ಷಾಂತರಗಳ ಪಿಡುಗು, ದೇಶದ ಹಲವು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ಸೇತರ ಸಂಯುಕ್ತ ಸರಕಾರ, ವಿದ್ಯಾರ್ಥಿಗಳ ಅಸಂತುಷ್ಟಿ ಕಾರ್ಮಿಕರ ಅಸಮಾಧಾನ ಇವುಗಳ ಫಲವಾಗಿ ಹೆಚ್ಚುತ್ತಿರುವ ಹಿಂಸಾಕೃತ್ಯಗಳು; ಶಾಸನಸಭೆಗಳಲ್ಲಿ, ಸಾರ್ವಜನಿಕ ವೇದಿಕೆಗಳಲ್ಲಿ ವಿರೋಧಿ ಪಕ್ಷಗಳೊಡನೆ ಸಂಘರ್ಷ - ಇವು ಈಗಿನಂತೆ ಆಗಲೂ ದಿನನಿತ್ಯದ ಘಟನೆಗಳು. ಈ ಆತಂಕಕಾರಿ ಸಂದಿಗ್ಧ ಪರಿಸ್ಥಿತಿಯಲ್ಲಿ ಕಾಂಗ್ರೆಸ್ ಸಂಸ್ಥೆಯ ಧ್ಯೇಯ ಆದರ್ಶ ಸಮದರ್ಶಿತ್ವಗಳಿಗೆ ಚ್ಯುತಿಬಾರದಂತೆ ಕಾರ್ಯನಿರ್ವಹಿಸುವುದು ಬಹು ಪ್ರಯಾಸದ ಜವಾಬ್ದಾರಿ ಕಾರ್ಯ. ಕಾಂಗ್ರೆಸ್ ಅಧ್ಯಕ್ಷರ ಆಯ್ಕೆ ನಡೆದ ಅನಂತರ ಹೈದರಾಬಾದ್‌ನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನದಲ್ಲಿ ಸದ್ಯದ ರಾಜಕೀಯ ಪರಿಸ್ಥಿತಿಯನ್ನು ಕುರಿತ ಸಮಗ್ರ ನಿರ್ಣಯವೊಂದು ಅಂಗೀಕರಿಸಲ್ಪಟ್ಟಿತು. ಅಧಿವೇಶನದಿಂದ ಹಿಂದಿರುಗಿದ ಅಧ್ಯಕ್ಷ ನಿಜಲಿಂಗಪ್ಪನವರು ೧೭-೧-೬೮ರಂದು ಪತ್ರಿಕಾ ಪ್ರತಿನಿಧಿಗಳಿಗೆ ಕೊಟ್ಟ ಹೇಳಿಕೆ ಕಾಂಗ್ರೆಸ್ಸೇತರ ಪಕ್ಷಗಳೊಡನೆ ಕಾಂಗ್ರೆಸ್‌ನ ವರ್ತನೆ

ಹಾಗೂ ಅದರಿಂದ ಉದ್ಭವಿಸುವ ಸಮಸ್ಯೆಗಳ ಪರಿಹಾರಕ್ಕೆ ಮಾರ್ಗದರ್ಶಕವಾಗಿರುತ್ತದೆ : ''ಕಾಂಗ್ರೆಸ್ ಸರ್ಕಾರಗಳನ್ನು ತೆಗೆದುಹಾಕುವುದಕ್ಕಿಂತ ಹೆಚ್ಚಾಗಿ ಪರಸ್ಪರ ಒಪ್ಪುವ ತತ್ವಗಳ ಆಧಾರದ ಮೇಲೆ ರಚಿತವಾಗುವ ಸರ್ಕಾರಗಳು ಅಸ್ತಿತ್ವದಲ್ಲಿರಬೇಕೆಂಬುದು ಈ ನಿರ್ಣಯದ ಉದ್ದೇಶವಾಗಿದೆ. ದೇಶದ ಪ್ರಗತಿ ಸಾಧನೆಗಾಗಿ ಪ್ರಜಾಪ್ರಭುತ್ವಗಳು ಉಳಿಯಬೇಕಾದರೆ ಇದು ಅಗತ್ಯ. ಸಮಾನ ತಾತ್ವಿಕ ಹೊಂದಾಣಿಕೆ ಇಲ್ಲದ ಗುಂಪುಗಳಿಂದ ಈ ಕಾರ್ಯ ಸಾಧ್ಯವಲ್ಲ. ಶಾಂತಿ ಕಾನೂನು ಪಾಲನೆಗಳ ದೃಷ್ಟಿಯಿಂದಲೂ ಸಮಾನ ತಾತ್ವಿಕ ಉದ್ದೇಶಗಳನ್ನು ಹೊಂದಿರುವ (ಸಮ್ಮಿಶ್ರ) ಸರ್ಕಾರಗಳು ಅಗತ್ಯವೆಂಬುದನ್ನು ನಿರ್ಣಯ ಪ್ರತಿಪಾದಿಸುತ್ತದೆ.'' ಈ ನಿರ್ಣಯವು ಎಷ್ಟೊಂದು ಸಕಾಲಿಕವೂ ಉಪಯುಕ್ತವೂ ಆಗಿದೆ ಎಂಬುದಕ್ಕೆ ಹರಿಯಾಣ ಮತ್ತು ಕೇರಳ ನಿದರ್ಶನಗಳು. ಹರಿಯಾಣದಲ್ಲಿ ನಡೆದ ಮಧ್ಯಂತರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಬಹುಮತ ದೊರೆತು ಕಾಂಗ್ರೆಸ್ ಮಂತ್ರಿಮಂಡಲ ರಚಿತವಾದದ್ದು ನಿಜಲಿಂಗಪ್ಪನವರ ಪ್ರಯತ್ನದಿಂದಲೇ ಆಗಿತ್ತು. ಆಗ ಹರಿಯಾಣ ಕಾಂಗ್ರೆಸ್ ಪಕ್ಷದಲ್ಲಿ ತಲೆಹಾಕಿದ್ದ ಸ್ಪರ್ಧಾ ಮನೋಭಾವವೇ ಸುಭದ್ರ ಸರ್ಕಾರದ ಸ್ಥಾಪನೆಗೆ ಮುಖ್ಯ ಅಡಚಣೆಯೆಂದು ತಿಳಿದ ಅಧ್ಯಕ್ಷ ನಿಜಲಿಂಗಪ್ಪನವರು ನಾಯಕರಲ್ಲಿ ಸ್ನೇಹ ಮೂಡಿಸಲು ಮಾಡಿದ ಪ್ರಯತ್ನಗಳು ಕಾಂಗ್ರೆಸ್ ಸರ್ಕಾರದ ರಚನೆಗೆ ಸಹಾಯಕವಾದವು. ಸಂಯುಕ್ತರಂಗದ ಸರ್ಕಾರಗಳೊಡನೆ ಕಾಂಗ್ರೆಸ್ ಸಂಬಂಧವನ್ನು ಕುರಿತ ವಿಶಾಲ ನೀತಿಯನ್ನು ಹೈದರಾಬಾದ್ ನಿರ್ಣಯದ ವಿವರಣೆಯಲ್ಲಿ ಸ್ವಯಂ ಅಧ್ಯಕ್ಷರೇ ಪರಿಷ್ಕಾರಗೊಳಿಸಿದರು.

ಇಷ್ಟೆಲ್ಲಾ ಕಾರ್ಯಗೌರವಗಳಿದ್ದರೂ ಧೈರ್ಯಗೆಡದೆ ಅಧ್ಯಕ್ಷ ನಿಜಲಿಂಗಪ್ಪನವರು ದೆಹಲಿಯಲ್ಲಿರುವ ಕಾಂಗ್ರೆಸ್ ಕಚೇರಿಯ ಪರಿಷ್ಕರಣಕ್ಕೆ ತೊಡಗಿರುವುದು ಸಂಸ್ಥೆಯ ವಿಷಯದಲ್ಲಿ ಅವರ ಶ್ರದ್ಧಾಸಕ್ತಿಗಳ ದ್ಯೋತಕವಾಗಿರುತ್ತದೆ. ಕಾಂಗ್ರೆಸ್ ಸರ್ಕಾರಗಳೊಡನೆ ಕಾಂಗ್ರೆಸ್ ಸಂಸ್ಥೆಗಳ ಸಂಬಂಧ, ಶಾಸನಸಭಾ ಕಾಂಗ್ರೆಸ್ ಪಕ್ಷಗಳಿಗೆ ಮಾರ್ಗದರ್ಶನ ನೀಡುವ ಸಂದರ್ಭಗಳಲ್ಲಿ ಕಾಂಗ್ರೆಸ್ ಕಚೇರಿ ಅನುಸರಿಸುವ ವಿಧಾನಗಳು, ಚುನಾವಣೆಗಳಿಗೆ ಅಭ್ಯರ್ಥಿಗಳನ್ನು ಆರಿಸುವಾಗ ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡು ಪಾಲಿಸುವ ನೀತಿ ನಿಬಂಧನೆಗಳು, ಪ್ರಾದೇಶಿಕ ಹಿತಗಳು ಮತ್ತು ತರುಣ ಕಾಂಗ್ರೆಸ್ಸಿಗರಿಗೆ ಹೆಚ್ಚು ಪ್ರಾತಿನಿಧ್ಯ ಇವೇ ಮುಂತಾದ ವಿಚಾರಗಳು ಕಾಲೋಚಿತವಾದ ಪರಿಷ್ಕೃತ ರೂಪ ತಾಳಬೇಕಾಗಿದೆ.

### ಚುನಾವಣೆಗಳು

ಮಧ್ಯಂತರ ಚುನಾವಣೆಗಳು ನಡೆಯಬೇಕಾಗಿರುವ ಪ್ರಾಂತ್ಯಗಳಿಗೆ ಅಭ್ಯರ್ಥಿಗಳನ್ನು ಚುನಾಯಿಸುವ ಹೊಣೆ ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡಿನದಾದರೂ ಪ್ರದೇಶ ಕಾಂಗ್ರೆಸ್ ಸಮಿತಿಗಳು ಕಳುಹಿಸುವ ಅಭ್ಯರ್ಥಿ ಪಟ್ಟಿಗಳನ್ನು ಪರಿಶೀಲಿಸಿ ಪ್ರಾದೇಶಿಕ ಹಿತಗಳಿಗೂ, ತರುಣ ಕಾಂಗ್ರೆಸ್ಸಿಗರಿಗೂ ಯೋಗ್ಯ ಪ್ರಾತಿನಿಧ್ಯ ದೊರಕುವಂತೆ ನೋಡಿಕೊಳ್ಳುವುದರಲ್ಲಿ ಅಧ್ಯಕ್ಷ ನಿಜಲಿಂಗಪ್ಪನವರು ಎಚ್ಚರಿಕೆ ತೆಗೆದುಕೊಳ್ಳಬೇಕಾಗಿತ್ತು. ಮೈಸೂರು ರಾಜ್ಯದಿಂದ ಲೋಕಸಭೆಯ ಒಂದು ಸ್ಥಾನಕ್ಕೂ, ವಿಧಾನಸಭೆಯ ಎರಡು ಸ್ಥಾನಗಳಿಗೂ, ತಾಲ್ಲೂಕು ಬೋರ್ಡು ಸದಸ್ಯ ಸ್ಥಾನಗಳಿಗೂ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷಕ್ಕೆ ದೊರಕಿದ ಪ್ರಚಂಡ ವಿಜಯವು ಅಧ್ಯಕ್ಷ ನಿಜಲಿಂಗಪ್ಪನವರ ಮಾರ್ಗದರ್ಶಿತ್ವ ಎಷ್ಟೊಂದು ಫಲಕಾರಿಯಾಗಿದೆ ಎಂಬುದನ್ನು ತಿಳಿಸುತ್ತದೆ. ಈ ವಿಜಯ ಮಾಲೆಯಲ್ಲಿ ಮದರಾಸು ಕಾರ್ಪೋರೇಷನ್ ಚುನಾವಣೆಗಳೂ ಸೇರುತ್ತವೆ.

### ಕಾಂಗ್ರೆಸ್ಸಿನಲ್ಲಿ ಒಡಕು

ಶ್ರೀ ನಿಜಲಿಂಗಪ್ಪನವರು ಕಾಂಗ್ರೆಸ್ ಮಹಾಸಂಸ್ಥೆಯ ಅಧ್ಯಕ್ಷರಾಗಿ ೮-೧೨-೧೯೬೭ರಂದು ಆರಿಸಲ್ಪಟ್ಟು ಅಧಿಕಾರ ವಹಿಸಿಕೊಂಡರು, ೧೯೭೧ರ ಕೊನೆಯಲ್ಲಿ ನಿವೃತ್ತರಾದರು. ಈ ಅಂತರದ ನಾಲ್ಕು ವರ್ಷಗಳ ಕಾಂಗ್ರೆಸ್ ಇತಿಹಾಸವು ಭಾರತದ ರಾಜಕೀಯದಲ್ಲಿ ತೀವ್ರ ಭಿನ್ನಾಭಿಪ್ರಾಯ, ಅಧಿಕಾರ ಲಾಲಸೆ, ಸ್ವಾರ್ಥ, ದ್ವೇಷ, ಮಿಥ್ಯಾಪ್ರಚಾರ, ದೋಷಾರೋಪ, ತುಮುಲ ಕಲಹಗಳ ಅಖಾಡವಾಗಿ ಪರಿಣಮಿಸಿ, ಕ್ರಮ ಕ್ರಮವಾಗಿ ತನ್ನ ಪ್ರಭಾವ ಜನಪ್ರಿಯತೆಗಳನ್ನು ಕಳೆದುಕೊಳ್ಳುತ್ತಿರುವ ಅಪ್ರೀತಿಕರ ಬೆಳವಣಿಗೆಯನ್ನು ಕಾಣುತ್ತೇವೆ. ಈ ಪರಿಸ್ಥಿತಿಯ ಕಾರಣಗಳನ್ನು ತಿಳಿಯಲು ಕಾಂಗ್ರೆಸ್ ಇತಿಹಾಸದ ಕಡೆಗೆ ಗಮನ ಹರಿಸುವುದು ಅಗತ್ಯ. ಬ್ರಿಟಿಷ್ ಆಡಳಿತದಿಂದ ಭಾರತವನ್ನು ವಿಮುಕ್ತಗೊಳಿಸಿ ಸ್ವಾತಂತ್ರ್ಯಾಡಳಿತವನ್ನು ಸ್ಥಾಪಿಸುವ ಏಕಮಾತ್ರ ಪರಮೋದ್ದೇಶದಿಂದ ಸ್ಥಾಪಿತವಾದ ಮಹಾಸಂಸ್ಥೆ ರಾಷ್ಟ್ರೀಯ ಕಾಂಗ್ರೆಸ್ ಧಾರ್ಮಿಕ, ಸಾಮಾಜಿಕ, ರಾಜಕೀಯ ವಿಚಾರಗಳ ವಿಭಿನ್ನವಾದ, ಕೆಲವು ಸಂದರ್ಭಗಳಲ್ಲಿ ಪರಸ್ಪರ ವಿರುದ್ಧವಾದ ಉದ್ದೇಶ ಅಭಿಪ್ರಾಯ ಸಾಧನೆಗಳನ್ನು ಹೊಂದಿದ್ದು, ಸ್ವಾತಂತ್ರ್ಯ ಸಾಧನೆಯ ಏಕಮಾತ್ರ ಉದ್ದೇಶದಿಂದ ಒಂದುಗೂಡಿದ ಸಂಮಿಶ್ರ ಸಂಸ್ಥೆ. ಈ ಕಾರಣದಿಂದ ಸಂಸ್ಥೆ ಅನೇಕಸಾರಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಪುನಃ ಪುನಃ

ಅದನ್ನು ಪಡೆಯಲು ಪ್ರಯತ್ನ ನಡೆಸಿದ್ದನ್ನು, ಕಳೆದ ಐವತ್ತು ವರ್ಷಗಳ ಅದರ ಇತಿಹಾಸದಲ್ಲಿ ಕಾಣುತ್ತೇವೆ. ಈ ದೃಷ್ಟಿಯಿಂದ ಕಾಂಗ್ರೆಸ್ ಇತಿಹಾಸವನ್ನು ಪರಿಶೀಲಿಸಿದಾಗ ೧೯೬೯ನೆಯ ಜುಲೈ ತಿಂಗಳಲ್ಲಿ ನಡೆದ ಏ.ಐ.ಸಿ.ಸಿ. ಅಧಿವೇಶನದ ಅನಂತರ ತಲೆದೋರಿದ ಒಡಕು ಈ ಶತಮಾನದ ಎರಡನೆಯ ದಶಕದಲ್ಲಿ ಸ್ವರಾಜ್ಯ ಪಕ್ಷವು ಕಾಂಗ್ರೆಸ್ಸಿನ ಅಂಗ ಸಂಸ್ಥೆಯಾಗಿ ರೂಪುಗೊಂಡಾಗ ಪ್ರಾರಂಭವಾಯಿತೆಂದು ಹೇಳಬೇಕಾಗುತ್ತದೆ. ಪ್ರಭಾವಶಾಲಿ ವ್ಯಕ್ತಿತ್ವ ವಿಭಿನ್ನ ಗುರಿಗಳನ್ನು ಮುಟ್ಟಲು ಉಪಯೋಗಿಸಿಕೊಂಡ ಸಾಧನಗಳು, ಈ ವಿಚಾರವಾದ ಒಳತೋಟಿ ಅಂದಿನಿಂದ ಇಂದಿನವರೆಗೆ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿರುತ್ತದೆ. ಈ ಘಟನೆಗಳನ್ನು ಹತೋಟಿಯಲ್ಲಿ ಇಟ್ಟುಕೊಂಡು ಕಾಂಗ್ರೆಸ್ ಸಂಸ್ಥೆಯ ಐಕ್ಯತೆಯನ್ನು ರಕ್ಷಿಸಿಕೊಂಡು ಬರಲು ಮಹಾತ್ಮ ಗಾಂಧಿ, ಅವರ ತರುವಾಯ ಪಂಡಿತ ನೆಹರೂ, ಈ ಇಬ್ಬರು ಮಹಾವಿಭೂತಿಗಳು ಶಕ್ತರಾಗಿದರು.

ಆ ಇಬ್ಬರ ಪ್ರಭಾವವಲಯದಿಂದ ಮುಕ್ತವಾದ ಕಾಂಗ್ರೆಸ್ ಸಂಸ್ಥೆ ಆನಂತರದ ಕೆಲವು ವರ್ಷಗಳಲ್ಲಿ ಬೀಜರೂಪವಾಗಿ ತನ್ನಲ್ಲಿ ಅಡಗಿದ್ದ ವಿಚ್ಛಿದ್ರಕಾರಕ ಪ್ರವೃತ್ತಿಗೆ ಬಲಿಯಾದದ್ದು ಪ್ರಕೃತಿಸಿದ್ಧವೂ, ಪೂರ್ತಿ ಪ್ರೇರಿತವೂ ಆದ್ದೆಂದು ಹೇಳಬೇಕಾಗಿದೆ. ನಿಜಲಿಂಗಪ್ಪನವರ ಅಧ್ಯಕ್ಷಾವಧಿಯಲ್ಲಿ ಈ ಒಡಕು ಮತ್ತೆ ಉಲ್ಬಣಿಸಿ ಕಾಂಗ್ರೆಸ್ ಸಂಸ್ಥೆ ಇಬ್ಭಾಗವಾದದ್ದು ಒಂದು ಯೋಗಾಯೋಗ. ನಾಡಿನ ಹಿತದೃಷ್ಟಿಯಿಂದ ಅದೊಂದು ಅನಿರೀಕ್ಷಿತ ಅಪ್ರೀತಿಕರ ಘಟನೆ. ರಾಜಕೀಯ, ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಆ ದುರ್ಘಟನೆಯ ಪರಿಣಾಮಗಳನ್ನು ಈಗ ನಾಡು ಎದುರಿಸಬೇಕಾಗಿದೆ.

## ವ್ಯಕ್ತಿ ವಿಶೇಷ

ನಿಜಲಿಂಗಪ್ಪನವರ ವ್ಯಕ್ತಿತ್ವ, ಪ್ರತಿಭೆ, ಗುಣ, ಘನತೆಗಳ ಪರಿಚಯ ಮಾಡಿ ಕೊಡುವುದೆಂದರೆ ಪ್ರಕೃತಿಯ ಸೊಬಗನ್ನು ಕೈಗನ್ನಡಿಯಲ್ಲಿ, ಗಗನದ ವಿಶಾಲತೆಯನ್ನು ಕ್ಯಾಮರಾದ ಕಣ್ಣಿನಿಂದ, ಸಮುದ್ರದ ಆಳವನ್ನು ಕಿರಿದಾದ ದೋಣಿಯಿಂದ ಅರಿಯಲು ಪ್ರಯತ್ನಿಸಿದಂತೆ. ಒಂದು ಸಾರಿ ಅವರನ್ನು ನೋಡಿ ಮಾತಾಡಿದ ಬಳಿಕ ಎಂದಿಗೂ ಮರೆಯಲಾಗದ ವ್ಯಕ್ತಿತ್ವ ಅವರದು.

''ತುಂಬುಗೆನ್ನೆಯ ದುಂಡುಮುಖ, ಸಮಕಟ್ಟಾದ ದೇಹ, ಆರೋಗ್ಯಭಾಗ್ಯದಿಂದ ಜಾಜ್ವಲ್ಯಮಾನವಾದ ಮುಖಕಾಂತಿ, ಕಣ್ಣುಗಳ ಸರಳ ದೃಷ್ಟಿ, ನಿರಾಡಂಬರತೆ ಸೌಶೀಲ್ಯಗಳ ಪ್ರತೀಕದಂತಿರುವ ಶುಭ್ರವಾದ ಖಾದಿ ಬಿಳಿಯುಡಿಗೆ, ಹಿರಿತನದ ಕುರುಹಾಗಿ ಬೆಳ್ಳಿಯ ಎಳೆಗಳಂತಿರುವ ತಲೆಗೂದಲಿಂದ ಮಿರುಗುವ ಬೊಕ್ಕತಲೆ, ಗುಲಾಬಿ ಬಣ್ಣದ ದೇಹಕಾಂತಿ, ಮಧುರ ಕಂಠ, ಮೃದು ಭಾಷೆ, ಹಿತಮಿತವಾದ ಮಾತು, ಹೃದಯದ ಕಲ್ಮಶವನ್ನು ತೊಡೆದು ಒಲವು ನಲಿವುಗಳನ್ನು ನೀಡಿ ಶತ್ರುಗಳನ್ನೂ ನಿರಾಯುಧರನ್ನಾಗಿ ಮಾಡುವ ಮಂದಹಾಸ, ಎಲ್ಲರೊಡನೆಯೂ ತೋರುವ ಸೌಜನ್ಯ ವರ್ತನೆ, ಅನೌಪಚಾರಿಕ ಮಾತುಕತೆ, ತೀಕ್ಷ್ಣವಾದರೂ ಅನುತಾಪವನ್ನು ಸೂಚಿಸುವ ಕಣ್ಣುಗಳು, ಅದಕೊಪ್ಪುವ ದಪ್ಪಧೂತಿ ಕಟ್ಟು ಸುಲೋಚನೆ.''

ಅವರ ವ್ಯಕ್ತಿತ್ವ ತರುಣ ಜನಾಂಗದ ಆದರ್ಶ, ಆಕಾಂಕ್ಷೆ, ಸಹಾನುಭೂತಿ, ಉತ್ಸಾಹಗಳನ್ನು ಮೈದುಂಬಿಸಿಕೊಂಡು ಅವರನ್ನು ''ತರುಣ''ರನ್ನಾಗಿಯೇ ಉಳಿಸಿದೆ. ಆದರ್ಶ ಪತಿಯಂತೆ ಗೃಹಸ್ಥ ಜೀವನ ನಡೆಸಿದ ಅವರು ಇಂದು ಆದರ್ಶ ತಂದೆ-ತಾತ ಆಗಿದ್ದಾರೆ. ಮಕ್ಕಳ ಸಮೂಹದಲ್ಲಿ ಅವರು ವಯಸ್ಸು ಪದವಿ ಜವಾಬ್ದಾರಿಗಳನ್ನು ಮರೆತು ಆನಂದದಿಂದ ನಲಿಯುತ್ತಾರೆ. ರಾಜಕೀಯ ಜಂಜಾಟದಲ್ಲಿ ಸಿಲುಕಿದರೂ ಅವರು ಕಲಾ ಪ್ರೇಮ, ರಸಿಕತೆಗಳನ್ನು ಕಳೆದುಕೊಂಡಿಲ್ಲ. ಸಂಗೀತ ಮುಂತಾದ ಲಲಿತ ಕಲೆಗಳಲ್ಲಿ ಆಸಕ್ತರು. ತಾರುಣ್ಯದಲ್ಲಿ ಕ್ರೀಡಾಪಟುಗಳಾಗಿದ್ದೂ ಕ್ರಿಕೆಟ್ ಟೆನಿಸ್ ಆಟಗಾರರೆಂದು ಪ್ರಸಿದ್ಧರಾಗಿದ್ದರು. ಭಾಷೆಗಳನ್ನು ಕಲಿಯುವುದರಲ್ಲಿ ಅವರು ನಿಷ್ಣಾತರು. ತೆಲುಗು, ತಮಿಳು, ಹಿಂದೀ ಭಾಷೆಗಳಲ್ಲಿ ನಿರರ್ಗಳವಾಗಿ ಮಾತಾಡಬಲ್ಲರು. ಇಂಗ್ಲೀಷ್ ಮತ್ತು ಕನ್ನಡಗಳಲ್ಲಿ ಅವರ ಮಾತು ಬರಹಗಳು ಸರಳ ಶೈಲಿಯ ಕೆಲವೇ ವಾಕ್ಯಗಳಲ್ಲಿ ಮಹತ್ವದ ಭಾವನೆಗಳನ್ನೂ ವಿಚಾರಗಳನ್ನೂ ಸೂಚಿಸಬಲ್ಲ ಅನುಪಮ ಆಕರ್ಷಕ ಶಕ್ತಿಯನ್ನು ಪಡೆದಿವೆ. ಪುಸ್ತಕಗಳನ್ನು ಓದುವುದು ಅವರ ಇನ್ನೊಂದು ಮುಖ್ಯ ಹವ್ಯಾಸ. ಕಾರ್ಯಾವಸರದಲ್ಲಿ ಬಿಡುವಾದಾಗ ಓದಲು ಯಾವುದಾದರೊಂದು ಪುಸ್ತಕ ಅವರ ಹತ್ತಿರ ಇರುತ್ತದೆ. ಪ್ರವಾಸದಲ್ಲಿ ವ್ಯಾವಹಾರಿಕ ಕಾಗದ ಪತ್ರಗಳಂತೆ ಪುಸ್ತಕಗಳನ್ನೂ ತೆಗೆದುಕೊಂಡು ಹೋಗುತ್ತಿದ್ದರು. ಎಲ್ಲ ಬಗೆಯ ಸಾಹಿತ್ಯದಲ್ಲಿಯೂ ಅವರಿಗೆ ಅಭಿರುಚಿಯಿತ್ತು. ಬೇಂದ್ರೆ, ಕುವೆಂಪು, ಅಡಿಗ, ಗೋಕಾಕರ ಕಾವ್ಯ ಕಾದಂಬರಿಗಳ ಪರಿಚಯವೂ ಅವರಿಗಿದೆ. ''ನಿಜಲಿಂಗಪ್ಪನವರು ಬಹಳ ಮೃದು ಸ್ವಭಾವದವರು, ದಾಕ್ಷಿಣ್ಯಪರರು, ಬೇಗ ನಿರ್ಧಾರ ಮಾಡುವುದಿಲ್ಲ'' ಎಂದು ಕೆಲವರು ಆಕ್ಷೇಪಿಸಿದುದುಂಟು. ನಿಜಲಿಂಗಪ್ಪನವರ ಸದಾಚಾರ, ಸದ್ವರ್ತನೆಗಳು, ಸಕಲ ಜೀವರಿಗೆ ಲೇಸನ್ನೇ ಬಯಸುವ ಅವರ ಚಿತ್ತವೃತ್ತಿ, ವಿಶಾಲ ಮನೋಭಾವ, ಅವಸರದ ನಿರ್ಧಾರಗಳಿಂದ ಯಾರಿಗೆ ಅನ್ಯಾಯವಾಗುವುದೋ ಎಂಬ ಶಂಕೆ,

ಅನ್ಯರ ಹಿತಕ್ಕಾಗಿ ತನ್ನ ಹಿತಗಳನ್ನು ಮರೆಯುವ ತ್ಯಾಗಶೀಲ ವರ್ತನೆ- ಈ ಸದ್ಗುಣಗಳು ಸಜ್ಜನರನ್ನು ಎಲ್ಲ ಯುಗಗಳಲ್ಲಿಯೂ ಈ ಬಗೆಯ ಆಕ್ಷೇಪಗಳಿಗೆ ಗುರಿಪಡಿಸಿರುವುದೆಂಬುದನ್ನು ಇತಿಹಾಸದಿಂದ ಅರಿಯಬಹುದು. ಇಂತಹ ತ್ಯಾಗಶೀಲ ಮಹಿಮಾನ್ವಿತ ವ್ಯಕ್ತಿಗಳನ್ನು ಬೌದ್ಧರ ಧಾರ್ಮಿಕ ಸಾಹಿತ್ಯದಲ್ಲಿ 'ಬೋಧಿಸತ್ವ' ಎಂದು ಕರೆದಿದ್ದಾರೆ. ಈ ಅಪೂರ್ವ ಪ್ರಶಸ್ತಿಗೆ ಅರ್ಹರಾದ ಮಹಾತ್ಮ ಗಾಂಧೀಜಿ, ಪಂಡಿತ ನೆಹರೂ ಇವರ ಸಾಲಿನಲ್ಲಿ ನಿಜಲಿಂಗಪ್ಪನವರೂ ಒಬ್ಬರು.

ಭಾರತದ ಯಾವುದೇ ಪ್ರಾಂತ್ಯದಲ್ಲಿಯಾದರೂ ನಿಜಲಿಂಗಪ್ಪನವರು ಅಪರಿಚಿತರಲ್ಲ. ಅವರಿಗೆ ಎಲ್ಲ ರಾಜ್ಯಗಳಲ್ಲಿ ಸುಸ್ವಾಗತವಿದೆ, ಸ್ನೇಹವಿದೆ, ಸನ್ಮಾನವಿದೆ, ಸಾಹಚರ್ಯವಿದೆ-ಎಂದರೆ ಯಾರಿಗೂ ಆಶ್ಚರ್ಯವೆನಿಸಬಹುದು. ಇವರ ತ್ಯಾಗಶೀಲ, ಸದ್ಗುಣಗಳಿಂದ ತೃಪ್ತಿಪಡೆದು ಸನ್ಮಾನಿಸಿದ ಅಗ್ರನಾಯಕರಲ್ಲಿ ಸರ್ದಾರ್ ಪಟೇಲ್, ಗೋವಿಂದ ವಲ್ಲಭ ಪಂತ್, ಪಂಡಿತ್ ನೆಹರೂ, ಡಾ। ರಾಜೇಂದ್ರ ಪ್ರಸಾದ್, ಡಾ। ಬಿ. ಸಿ. ರಾಯ್, ಲಾಲ್ ಬಹದ್ದೂರ್ ಶಾಸ್ತ್ರಿ ಇವರು ಮುಖ್ಯರಾಗಿದ್ದರು. ಈಗಿನ ನಾಯಕರಲ್ಲಿ ಡಾ। ರಾಧಾಕೃಷ್ಣನ್, ಡಾ। ಜಾಕೀರ್ ಹುಸೇನ್, ಇಂದಿರಾ ಗಾಂಧಿ, ಎಸ್. ಕೆ. ಪಾಟೀಲ್, ಕಾಮರಾಜ ನಾಡಾರ್, ವೈ. ಬಿ. ಚವ್ಹಾಣ್, ಈ ಉನ್ನತ ನಾಯಕರೂ, ಅನೇಕ ಮಂದಿ ರಾಜ್ಯಪಾಲರೂ, ಮುಖ್ಯಮಂತ್ರಿಗಳೂ ನಿಜಲಿಂಗಪ್ಪನವರನ್ನು ಕುರಿತು ಆಡಿದ ಉದ್ಬೋಧಕ ನುಡಿಗಳು ಭಾರತಕ್ಕೆ ಅನ್ವಯಿಸುತ್ತವೆ. ಆ ಮಾತುಗಳಿವು: ''ನಮ್ಮ ಇತಿಹಾಸ ಬಹಳ ಮಹತ್ವದ್ದು; ನಮ್ಮ ಸಂಸ್ಕೃತಿ ಬಹು ಪ್ರಾಚೀನ ಕಾಲದ್ದು. ನಮ್ಮ ಜನಜೀವಾಳ ಮಹದಾಶಯಗಳಿಂದ ಪ್ರೇರಣೆ ಪಡೆದದ್ದು. ಆ ನಮ್ಮ ಇತಿಹಾಸ ಇನ್ನೂ ಮಹತ್ವದ್ದಾಗುವಂತೆ, ಆ ಸಂಸ್ಕೃತಿ ಇನ್ನೂ ಹೆಚ್ಚಿನ ಘನತೆಗೇರುವಂತೆ, ಜನಜೀವನ ಇನ್ನೂ ಉದಾತ್ತವಾಗುವಂತೆ ನಾವು ಪ್ರಯತ್ನಿಸಬೇಕು. ಪ್ರಾಂತೀಯ ಭಿನ್ನಭಾವನೆಗಳನ್ನು ಬಿಟ್ಟು ಒಬ್ಬರನ್ನೊಬ್ಬರು ಅರಿತುಕೊಳ್ಳಬೇಕು. ಒಂದಾಗಿ ಬಾಳಿ ಕಷ್ಟ ಸುಖಗಳನ್ನು ಒಂದಾಗಿ ಅನುಭವಿಸಬೇಕು. ಆಗ ನಮ್ಮ ಬದುಕು ಸಮೃದ್ಧವೂ ಸಕ್ರಿಯವೂ ಆಗುತ್ತದೆ. ವಿಷಮತೆ ನಾಶವಾಗಿ ಅಮೃತ ಹರಿಯುತ್ತದೆ. ಅದಕ್ಕೆ ಸಾಧಕವಾದ ಆತ್ಮ ಜ್ಯೋತಿ ನಮ್ಮ ಅಂತರಂಗವನ್ನು ಬೆಳಗಿ ಭಾರತವನ್ನು ತೇಜೋಮಯವಾಗಿ ಮಾಡಲಿ'' ಇವು ನಿಜಲಿಂಗಪ್ಪನವರ ತ್ಯಾಗ ಜೀವನದ ವೈಶಾಲ್ಯ ಸಮಗ್ರತೆಗಳಿಗೆ ಕನ್ನಡಿ ಹಿಡಿದಂತಿವೆ.

# ಪ್ರಾಚೀನ ಭಾರತದಲ್ಲಿ ರಾಜಕೀಯ ವ್ಯವಸ್ಥೆ

ಡಾ. ಮಾ. ಮಂಜುಳ

ಭಾರತದಲ್ಲಿ ನಾಗರಿಕತೆ ಮೊದಲಿಟ್ಟ ಕಾಲದಿಂದಲೂ ಇಲ್ಲಿದ್ದುದು ಸಾರ್ವಭೌಮ ರಾಜರ ವಂಶಪಾರಂಪರಿಕ ಆಡಳಿತವೇ ಆಗಿದೆ. ಇದರಿಂದಾಗಿ ಒಂದು ಅರ್ಥದಲ್ಲಿ ತೀರ ಸುಲಭವಾಗಿ ರಾಜಮನೆತನಗಳನ್ನು ಗುರುತಿಸಿಯೇ ಇತಿಹಾಸ ರಚಿಸುವುದು ಕಂಡುಬರುತ್ತದೆ. ಇದು ಹೊರಗಿನಿಂದ ಬಂದ ಆಕ್ರಮಣಕಾರರಲ್ಲೂ ತಲೆದೋರಿದ್ದು ಸೋಜಿಗದ ಸಂಗತಿ. ಈ ಸುಮಾರು ಎರಡು ಸಾವಿರ ವರ್ಷಗಳಲ್ಲಿ ಒಂದೊಂದು ರಾಜಮನೆತನಗಳು ತಲಾ ಇನ್ನೂರು ವರ್ಷಗಳಂತೆ ಆಳಿತ್ತೆಂದು ಲೆಕ್ಕ ಹಾಕಿದರೆ ಬೆರಳೆಣಿಕೆಯ ವಂಶವಾಹಿನಿಗಳು ಮೊದಲ ನೋಟಕ್ಕೆ ಗೋಚರವಾಗುತ್ತವೆ. ಕರ್ನಾಟಕದ ಮಟ್ಟಿಗೆ ಕದಂಬ, ಚಾಲುಕ್ಯರಾದಿಯಾಗಿ ಮೈಸೂರು ಅರಸರವರೆಗೆ ಏಳು ಅರಸು ಮನೆತನಗಳನ್ನು ಪ್ರಧಾನವಾಗಿ ಗುರುತಿಸಿದೆ. ಇವಲ್ಲದೆ ಉತ್ತರ ಭಾರತದ ಹಾಗೂ ನೆರೆಹೊರೆಯ ರಾಜಮನೆತನಗಳು ಇಂದಿನ ಕರ್ನಾಟಕದ ಪ್ರದೇಶವನ್ನು ಆಕ್ರಮಣ ಮಾಡಿದ್ದುಂಟು. ಏನೇ ಆದರೂ ಬ್ರಿಟಿಷರು ಬರುವವರೆಗೆ ಸಾಮಾಜಿಕ ಜೀವನದಲ್ಲಿ ಆಡಳಿತಗಾರ ಹಾಗೂ ಆಳ್ವಿಕೆಗೊಳಗಾದವರಲ್ಲಿ ಹೆಚ್ಚಿನ ಬದಲಾವಣೆ ಕಂಡುಬರುವುದಿಲ್ಲ. ಕೃಷಿ, ಪಶುಪಾಲನೆ ಹಾಗೂ ಉಪಕರಣಗಳ ತಯಾರಿಕೆಯೇ ಪ್ರಮುಖವಾಗಿದ್ದಿತು. 'ಕಾಯಕ'ದ ಬಗ್ಗೆ ಮಧ್ಯಯುಗದಲ್ಲಿ ಹೆಚ್ಚಿನ ಒತ್ತು ನೀಡಲಾಯಿತಾದರೂ 'ಕೃಷಿಕ' ಹಾಗೂ 'ಕಾರುಕ' (ಶಿಲ್ಪಿ, ವಸ್ತು ನಿರ್ಮಾಣಕಾರ) ರ ಪಾತ್ರ ರಾಜ್ಯಾಡಳಿತದಲ್ಲಿ, ರಾಜ್ಯಾದಾಯದಲ್ಲಿ ಮುಖ್ಯವಾಗಿಯೇ ಇತ್ತು. ರಾಜ್ಯಾಂಗದೊಂದಿಗೆ ನ್ಯಾಯಾಂಗವೂ ಸೇರಿದಂತೆ ಕಾರ್ಯಾಂಗವು ರಾಜಾದಾಯ ಸಂಗ್ರಹಣೆ ಮಾಡುತ್ತಿತ್ತು. ಅಂತೆಯೆ ಜನಾಂಗ ಉತ್ಪತ್ತಿ ಹಾಗೂ ಜನಸೇವಾಕಾರ್ಯ ಮಾಡುತ್ತಿತ್ತು. ಜೊತೆಗೆ ಯುದ್ಧ ಹಾಗೂ ರಾಜಿ ವಿಸ್ತರಣೆಯಿಂದಲೂ ಆದಾಯ ಸಂಗ್ರಹಿಸಲಾಗುತ್ತಿತ್ತು. ಈ ಎಲ್ಲ ಅಂಶಗಳು ಕೌಟಿಲ್ಯನಲ್ಲಿಯೇ ಕಂಡುಬಂದಿದ್ದು ಮುಂದಿನ ಅರಸರೂ ಅನುಸರಿಸುವಂತಾಯಿತು. ಆದರೆ ಕೌಟಿಲ್ಯನದು ಅರ್ಥಶಾಸ್ತ್ರಕ್ಕೆ (ಅರ್ಥ=ಹಣ ಪ್ರಪಂಚ) ಒಂದು 'ಸಂಹಿತೆ' (ಕೋಡ್, ಥಿಯರಿ, ಮಾನ್ಯುಯಲ್)ಯಂತಿದ್ದರೆ ಮುಂದಿನ ರಾಜಮನೆತನಗಳದ್ದು ಪ್ರಾಯೋಗಿಕ (ಪ್ರಾಕ್ಟಿಕಲ್) ಅಂಶ.

ಕೌಟಿಲ್ಯ ದ್ರವ್ಯ ಸಂಗ್ರಹದ ಬಗ್ಗೆ ಹೆಚ್ಚು ಹೇಳುತ್ತಾನಾದರೂ ವೆಚ್ಚದ ಬಗ್ಗೆ ಅಲ್ಲ. ಅದೇ ಮುಂದಿನ ಅರಸರ ಕಾಲದಲ್ಲಿ ಆದಾಯದೊಂದಿಗೆ ವೆಚ್ಚದ ಬಗ್ಗೆಯೂ ವಿವರಗಳು ದೊರೆಯುತ್ತವೆ. ರಾಜನ ಸ್ವಂತ ಅರಮನೆ ಹಾಗೂ ಸೈನ್ಯದ ವಿನಾ ಪ್ರಜೆಗಳಿಗಾಗಿ ರಕ್ಷಣೆಗೆ ಪೋಲೀಸರ ಪಡೆ, ವ್ಯಾಪಾರಕ್ಕೆ ಸಂಚಾರ, ರಸ್ತೆ ಸೌಲಭ್ಯಗಳಿಗೆ ಅಧಿಕವಾಗಿಯೂ, ಗ್ರಾಮ ನೈರ್ಮಲ್ಯ ಹಾಗೂ ಶಿಕ್ಷಣಕ್ಕೆ ಸ್ವಲ್ಪ ಮಟ್ಟಿಗೂ ಆದಾಯದಿಂದ ನೀಡಲಾಗುತ್ತಿದ್ದಂತೆ ಕಂಡುಬರುತ್ತದೆ. ಉಳಿದಂತೆ ವಿದ್ವಾಂಸರೂ ಸೇರಿದಂತೆ ಗ್ರಂಥಕರ್ತರು, ಕಲಾವಿದರಿಗೆ ರಾಜಮರ್ಯಾದೆ ನಡೆಯುತ್ತಿತ್ತು.

ಕೌಟಿಲ್ಯನ ಕಾಲದಂತೆ ಮುಂದೆಯೂ ರಾಜ ಅಗೋಚರನಾಗಿಯೇ ಇದ್ದ. ರಾಜನೇ ನೇರವಾಗಿ ಹಾಕಿಸಿರುವ ಶಾಸನ ಅಥವಾ ಅಭಿವೃದ್ಧಿ ಕಾರ್ಯ, ಜೀರ್ಣೋದ್ಧಾರ ಕಡಿಮೆ. ಆದರೆ ಯಾರೇ ಈ ಬಗೆಯ ಯಾವುದೇ ಕಾರ್ಯ ಮಾಡಿ ಶಾಸನ ಹಾಕಿಸುವಾಗ ತನ್ನ ಮೇಲಧಿಕಾರಿಗಳನ್ನು

ಹಾಗೂ ರಾಜನನ್ನು ಸ್ಮರಿಸಿರುವುದುಂಟು. (ಈ ಮಾತುಗಳೇ ಇತಿಹಾಸ ರಚನೆಗೆ ಮುಖ್ಯ ಆಕಾರ) ಅರ್ಥಶಾಸ್ತ್ರಕ್ಕೆ ಸಂಬಂಧಿಸಿದಂತೆ ಇಲ್ಲಿ ದೊರೆಯುವ ಇನ್ನೊಂದು ಸಂಗತಿಯೆಂದರೆ ತೆರಿಗೆ ವಿಧಿಸುವಿಕೆ ಹಾಗೂ ಮನ್ನಾ ಮಾಡುವಿಕೆ. ಈ ಪ್ರಕ್ರಿಯೆ ಕಾಲದಿಂದ ಕಾಲಕ್ಕೆ, ರಾಜರಿಂದ ರಾಜರಿಗೆ, ಸ್ಥಳದಿಂದ ಸ್ಥಳಕ್ಕೆ ಆಗಾಗ್ಗೆ ಹೆಚ್ಚು ಕಡಿಮೆ ಆಗುತ್ತಿದ್ದು ಈ ಅಂಶಗಳನ್ನೆಲ್ಲ ಗಮನಿಸಿದರೆ ನಮ್ಮ ಆರ್ಥಿಕ ಚರಿತ್ರೆಯ ರಚನೆ ಹೆಚ್ಚಾಗಿ ನಡೆದಿಲ್ಲ.

ಅಶೋಕನ ಕಾಲದಲ್ಲಿ ರಾಜಕುಮಾರ ಪ್ರಾಂತೀಯ ಸರ್ಕಾರಗಳನ್ನು ನೋಡಿಕೊಳ್ಳುತ್ತಿದ್ದ. ಆತನ ನೆರವಿಗೆ ಧರ್ಮ ಮಹಾಮಾತ್ರರಲ್ಲದೆ ಇನ್ನೂ ಹಲವು ಮಹಾಮಾತ್ರರಿದ್ದರು. ಮುಂದೆ ಶಾತವಾಹನರ ಕಾಲಕ್ಕೆ ಸ್ಥಳೀಯ ಆಡಳಿತಕ್ಕೆ ಹೆಚ್ಚು ಪ್ರಾಮುಖ್ಯತೆ ಬಂದು ನಾಡು, ವಿಷಯ, ಹಳ್ಳಿಗಳೆಂಬಂತೆ ವಿಂಗಡವಾಗಿತ್ತು. 'ರಜುಕ' (ಹಗ್ಗಹಿಡಿದವರು, ಅಳತೆ ಮಾಡಿ ಕಂದಾಯ ವಿಧಿಸುವ ಅಧಿಕಾರಿಗಳು)ರ ಆಡಳಿತ ಪದ್ಧತಿ ಜನಪ್ರಿಯವಾಗಿತ್ತು. ಪರ್ಷಿಯನ್ ಭಾಷೆಯಲ್ಲಿ ' ಶಿರಸ್ತೆದಾರ್'ನೆಂದರೆ ಹಗ್ಗ ಹಿಡಿದವನೆಂದೇ ಅರ್ಥ) ಕದಂಬ ಗಂಗರ ಆಡಳಿತದಲ್ಲಿ ಬಲಶಾಲಿಗಳು ದುರ್ಬಲರನ್ನು ಶೋಷಿಸುವುದನ್ನು ತಡೆಗಟ್ಟಿ ರಾಜ್ಯ ರಕ್ಷಣೆ ಮಾಡುವುದಕ್ಕೆ ಹೆಚ್ಚು ಗಮನ ಕೊಡಲಾಯಿತು. ರಾಜ್ಯದಲ್ಲಿ ಖಾಸಗಿಯವರಿಗೂ ಆಸ್ತಿ, ಭೂ ಒಡೆತನಗಳಿದ್ದವು. ಮತಸ್ವಾತಂತ್ರ್ಯವಿದ್ದಿತು. ಸೇನಾಧಿಪತಿ, ಪ್ರಧಾನ, ಭಂಡಾರಿ, ಸಂಧಿ ವಿಗ್ರಹಿ ಮುಂತಾದ ಮಂತ್ರಿವರ್ಗದವರಿದ್ದರು. ಭೂ ಹಾಗೂ ಹವಾಗುಣ ವೈಪರೀತ್ಯವಾದಾಗ ಕಂದಾಯ ವಿನಾಯಿತಿಯಿತ್ತು. ಹೊಸ ಸಾಗುವಳಿಗೆ ಮೊದಲೆರಡು ವರ್ಷ ಕಂದಾಯ ವಿನಾಯತಿಯಿತ್ತು. ಭೂ ಅಳತೆಗೆ ವಿವಿಧ ಬಗೆಯ ಅಳತೆ ಕೋಲು ಹಾಗೂ ಭೂ ಪ್ರದೇಶ ಅನುಸರಿಸಿ ಕಂದಾಯ ನಿಗದಿಯಾಗುತ್ತಿತ್ತು. ಪದಾರ್ಥಗಳ ಮೇಲೆ ತೆರಿಗೆಯಿತ್ತು. ಗ್ರಾಮಾಡಳಿತ ಶಾನುಭೋಗ ನೋಡಿಕೊಳ್ಳುತ್ತಿದ್ದು, ಪಟ್ಟಣದ ಆಡಳಿತಕ್ಕೆ ಪೌರಾಧ್ಯಕ್ಷ, ಸೇನ್‌ಬೋವ, ವ್ಯಾಪಾರಿಸಂಸ್ಥೆ ಪ್ರತಿನಿಧಿ ಇತ್ಯಾದಿ ಹದಿನೆಂಟು ಆಡಳಿತ ಶಾಖೆಗಳಿದ್ದವು. ಪೌರಾಧ್ಯಕ್ಷ, ಸೇನ್‌ಬೋವ್, ಗಾಣಿಗ ಕುಂಬಾರ ಇತ್ಯಾದಿ ಕರಕುಶಲ ವಸ್ತುಗಳನ್ನು ವರ್ತಕ ಶ್ರೇಣಿಯೇ ನೋಡಿಕೊಳ್ಳುತ್ತಿತ್ತು. ಇವರು ಠೇವಣಿ ಸ್ವೀಕರಿಸಿ ಬಡ್ಡಿ ಸಹ ನೀಡುತ್ತಿದ್ದರು.

ಶಾತವಾಹನರ ಕಾಲದಲ್ಲಿ ಹೂವಾಡಿಗ, ಗಾಣಗಾರ, ಕಮ್ಮಾರ, ಕಲ್ಲುಕುಟಿಕ ಇವೇ ಮುಂತಾದ ಹದಿನೈದಕ್ಕೂ ಹೆಚ್ಚು ಕಸಬುಗಾರರ ಉಲ್ಲೇಖವಿದೆ. ಅಲ್ಲದೇ ವೃತ್ತಿ ಶ್ರೇಣಿಗಳಿದ್ದವು. ಅಕ್ಕಸಾಲಿಗ, ಕುಂಬಾರ, ಕಂಚುಗಾರ, ಬಿದಿರು ಕೆಲಸಗಾರ ಇವೇ ಮುಂತಾದ ವ್ಯಾಪಾರೀ ಶ್ರೇಣಿಗಳಿದ್ದವು.

ರಾಷ್ಟ್ರಕೂಟ, ಚಾಳುಕ್ಯರ ಕಾಲದಲ್ಲೂ ಶ್ರೇಣಿಗಳು ಮುಂದುವರಿದವು. ಮಾನ್ಯ, ಅರ್ಧಮಾನ್ಯ, ಸರ್ವಮಾನ್ಯವೆಂದು ತೆರಿಗೆಗಳನ್ನು ನಿಷ್ಕರ್ಷಿಸಲಾಗುತ್ತಿತ್ತು. ಆದರೆ ಹುಟ್ಟುವಳಿಯನ್ನು ಅನುಸರಿಸಿ ಅದರ ಅಂಶಗಳನ್ನು ತೆರಿಗೆಯಾಗಿ ಪಡೆಯಲಾಗುತ್ತಿತ್ತು. ಡೊಂಬದೆರೆ, ಕನ್ನಡಿವಣ ಮುಂತಾದ ಔದ್ಯೋಗಿಕ ತೆರಿಗೆಗಳು, ಜಾತ್ರೆಯಲ್ಲಿ ಬರುವ ಪದಾರ್ಥಗಳಿಗೆ ಸುಂಕಗಳಿಂದ ರಾಜಾದಾಯ ಎತ್ತಲಾಗುತ್ತಿತ್ತು.

ಕಲ್ಯಾಣಿ ಚಾಳುಕ್ಯರ ಕಾಲದ ವೇಳೆಗೆ ಇಲ್ಲಿಯ ವಣಿಜರು ಹೊರ ದೇಶಗಳಲ್ಲೂ ಪ್ರಸಿದ್ಧರಾಗಿದ್ದರು. ಹೊರಗಿನಿಂದ ರಾಯಭಾರಿಗಳು ವ್ಯಾಪಾರೋದ್ಯಮಗಳಿಗಾಗಿಯೇ ಬರುತ್ತಿದ್ದರು. ಅನೇಕ ವಸ್ತುಗಳು ನಿರ್ಯಾತ (ರಫ್ತು) ವಾಗುತ್ತಿದ್ದವು. ಹಡಗಿನ ವ್ಯಾಪಾರ ಚುರುಕಾಗಿತ್ತು. ಭೂಮಿಯನ್ನು ಗೇಣಿಗೆ ಬಿಟ್ಟು ಪಾಲಿನ ಆದಾಯವನ್ನು ಮಾಲೀಕ ಹಾಗೂ ಅಧಿಕಾರಿಗೆ ನೀಡಲಾಗುತ್ತಿತ್ತು. ಬಡಗಿ, ಕಮ್ಮಾರ, ಕುಂಬಾರ ಮುಂತಾದ 'ಕಾರುಕ'ರಿಗೆ ಧಾನ್ಯರೂಪದಲ್ಲಿ ಗ್ರಾಮಸ್ಥರು ಹಂಚಿಕೊಡುತ್ತಿದ್ದರು. ಅಸಲಿನ ಮೇಲಿನ ಬಡ್ಡಿದರದ ಬಗ್ಗೆ ಅನೇಕ ಸಂಗತಿಗಳು ತಿಳಿದುಬರುತ್ತವೆ. ಕೌಟಿಲ್ಯ, ಯಾಜ್ಞವಲ್ಕ್ಯ, ಮನುಗಳು ಶೇ. ೧೫ರಷ್ಟು ಬಡ್ಡಿ ವಿಧಿಸಿದ್ದರೆ ಈ ಕಾಲದಲ್ಲಿ ೧೦ ರಿಂದ ೪೦ ರವರೆಗೆ ಬಡ್ಡಿ ಪಡೆದ ಉಲ್ಲೇಖಗಳಿವೆ. ಜಾತಿ ಅನುಸರಿಸಿ ಬ್ರಾಹ್ಮಣರಿಗೆ ೨೪, ಕ್ಷತ್ರಿಯರಿಗೆ ೩೬, ವೈಶ್ಯರಿಗೆ ೪೮, ಶೂದ್ರರಿಗೆ ೬೦ ರಂತೆ ಬಡ್ಡಿ ವಿಧಿಸುವ ಬಗ್ಗೆ ಶಾಸ್ತ್ರಗ್ರಂಥಗಳು ತಿಳಿಸುತ್ತವೆ. ಹೊಯ್ಸಳರ ಕಾಲದಲ್ಲಿ ಸ್ತ್ರೀಗೆ ಹೆಚ್ಚಿನ ಮಹತ್ವ, ಸ್ವಾತಂತ್ರ್ಯ ಬಂದಂತೆ ತೋರುತ್ತದೆ. ರಾಜ್ಯಾಡಳಿತದಲ್ಲಿಯೂ ಅಧಿಕವಾಗಿ ಸ್ತ್ರೀಯರ ಪ್ರವೇಶವಾಗಿದೆ. ಕಲೆ, ಸಾಹಿತ್ಯಗಳೂ ಹೆಚ್ಚಾದವು. ಈ ಕಾಲದ ಶಿಲ್ಪಕಲೆಯಲ್ಲಿ ವಸ್ತ್ರಾಭರಣಗಳ ದೊಡ್ಡ ಪ್ರದರ್ಶನವೇ ಇದೆ. ಕುಸ್ತಿ, ಜೂಜು, ಸಂಗೀತ, ನರ್ತನಗಳು, ನಾಟಕಗಳು ಜನಪ್ರಿಯವಾಗಿದ್ದವು. 'ರಂಗಭೋಗ', 'ಅಂಗಭೋಗ' ಗಳೂ ಹೆಚ್ಚಾದವು. ಕೆಲಸದ ಕೂಲಿಗೆ ಧಾನ್ಯಗಳನ್ನು ನೀಡಲಾಗುತ್ತಿತ್ತು. ಕೃಷಿಗಾಗಿ ಕೆರೆ, ಕಾಲುವೆಗಳನ್ನು ಕಟ್ಟಿಸುವುದು, ದುರಸ್ತಿಮಾಡುವುದರ ಬಗ್ಗೆ ಶಾಸನಗಳು ಅಧಿಕವಾಗಿ ಉಲ್ಲೇಖಿಸುತ್ತವೆ. ಲೋಹಕೈಗಾರಿಕೆ, ನೆಯ್ಗೆ, ಮರಕೆಲಸ, ಕುಂಬಾರಿಕೆ ಮುಂತಾದ ಕೈಗಾರಿಕೆಗಳು ಸರ್ಕಾರದ ಪೋಷಣೆ, ಜನ ಬೆಂಬಲ ಪಡೆದಿತ್ತು. ಶಿಲ್ಪ, ವಾಸ್ತು ಶಿಲ್ಪಗಳಿಗೆ ನೀಡಿದ ಪ್ರೋತ್ಸಾಹ ಅದಕ್ಕಾಗಿ ನೀಡುತ್ತಿದ್ದ ಸಂಭಾವನೆಗಳನ್ನು ಕಂಡಾಗ ಶಿಲ್ಪಿಗೆ, (ಇಡೀ ಪಾಂಚಾಳ ವರ್ಗಕ್ಕೆ ಇದ್ದ ಪ್ರಾಮುಖ್ಯತೆ ಎಲ್ಲ ಕಾಲಕ್ಕೂ ಮೆಚ್ಚುವಂತವದೆನಿಸುತ್ತದೆ. ಉದ್ದಿಮೆ ಹಾಗೂ ವಾಣಿಜ್ಯ ವ್ಯವಹಾರಕ್ಕೆ ಸಂಬಂಧಿಸಿದಂತೆ ಉದಾರ ನೀತಿಯ ತೆರಿಗೆ ಇದ್ದುದರಿಂದ ಹೊರೆ ಇಲ್ಲದ ಒಳನಾಡಿನ ವ್ಯಾಪಾರ ಹೊಯ್ಸಳರಲ್ಲಿ ಉಚ್ಛ್ರಾಯ ಸ್ಥಿತಿಗೆ ಏರಿತ್ತೆಂದು ಹೇಳಬಹುದು.

ವಿಜಯನಗರ ಕಾಲ ಯುದ್ಧಗಳಿಂದಾಗಿ ಅನೇಕ ಏಳುಬೀಳುಗಳನ್ನು ಕಂಡಿತ್ತಾದರೂ ಒಂದು ಅರ್ಥದಲ್ಲಿ ದಕ್ಷಿಣ ಭಾರತದ ಐಶ್ವರ್ಯವೆಲ್ಲ ಇಲ್ಲಿಯೇ ಸಂಗ್ರಹಿತವಾಗಿತ್ತೆಂದು ಹೇಳಬಹುದು. ಹೊರಗಿನ ಪ್ರವಾಸಿಗಳು ವ್ಯಾಪಾರಸ್ಥರು ಇಲ್ಲಿ ನೆರೆದಿದ್ದು ದೇಶೀಯ ವಾಣಿಜ್ಯ, ಹಣಕಾಸಿನ ಮೇಲೆಯೂ ಪ್ರಭಾವ ಬಿದ್ದಿರಬಹುದು. ಅರಬ್, ಪರ್ಶಿಯ, ಚೀನಾಗಳಲ್ಲದೆ ನೆರೆಹೊರೆಯ ದೇಶಗಳೊಂದಿಗೆ ವಾಣಿಜ್ಯ ಸಂಬಂಧವೂ ಇತ್ತು. ಆನೆ, ಕುದುರೆ, ಹವಳ, ಪಾದರಸ, ರೇಷ್ಮೆ, ಇತ್ಯಾದಿ ಆಮದಾಗುತ್ತಿತ್ತು. ವಿಜಯನಗರದ 'ರತ್ನ ವ್ಯಾಪಾರ'ದ ಬಗ್ಗೆ, ಇಲ್ಲಿಯ ಲಲಿತಕಲೆಗಳ ಬಗ್ಗೆ, ವಸ್ತ್ರ ಆಭರಣಗಳ ಬಗ್ಗೆ ಮನದುಂಬಿ ಬರೆಯದ ವಿದೇಶೀ ಪ್ರವಾಸಿಗರೇ ಇಲ್ಲವೆಂದರೆ ಆಶ್ಚರ್ಯವಿಲ್ಲ.

ಮುಂದೆ ಇಂದಿನ ಕರ್ನಾಟಕದ ಭಾಗ ಅನೇಕ ತುಂಡುಗಳಾಗಿ ಒಡೆದುಹೋಯಿತಾದರೂ ಉತ್ತರದಲ್ಲಿ ವಿಜಾಪುರದ ಆದಿಲ್ ಶಾಹಿಗಳು ನಂತರ ದಕ್ಷಿಣದಲ್ಲಿ ಮೈಸೂರು ಅರಸರು ತಕ್ಕಮಟ್ಟಿಗೆ ದೊಡ್ಡ ಭೂ ಪ್ರದೇಶವನ್ನು ಆಳಿದರು. ಆದಿಲ್ ಶಾಹಿಗಳು ಪರ್ಶಿಯನ್ ಮೂಲದವರಾಗಿದ್ದು ಉತ್ತರ ಭಾರತದ ಮುಸ್ಲಿಂ ರಾಜರೊಂದಿಗೆ ಸಂಬಂಧವಿರಿಸಿಕೊಂಡಿದ್ದು ಇಡೀ 'ಆರ್ಥಿಕ' ಪರಿಸ್ಥಿತಿಗೆ ಬದಲಾವಣೆ ತಂದಂತೆ ಕಂಡುಬರುತ್ತದೆ. ಮುಖ್ಯವಾಗಿ ಅವರ ಧಾರ್ಮಿಕ ಪದ್ಧತಿಗೆ ಹೊಂದಿಕೊಂಡಂತೆ ಭೂಕಂದಾಯ ನಿಗದಿ ಹಾಗೂ ಮನ್ನಾ ಮಾಡುವಿಕೆ, ಕಡ್ಡಾಯವೆಂಬಂತಿದ್ದ ದಾನಧರ್ಮಗಳ ಅನುಸರಣೆ, ಪ್ರಾರ್ಥನಾ ಹಾಗೂ ಸಮಾಧಿ ಮಂದಿರಗಳ ರಚನೆಗೆ ಶಿಲ್ಪಿಗಳಿಗೆ ಪ್ರೋತ್ಸಾಹ, ಸಾಂಪ್ರದಾಯಿಕ ಕೃಷಿಯೊಂದಿಗೆ ತೋಟಗಾರಿಕೆ, ಹಣ್ಣು ಹಂಪಲು ಬೆಳೆಯುವಿಕೆ, ಸುಗಂಧ ದ್ರವ್ಯ ಹಾಗೂ ಅವುಗಳಿಗಾಗಿ ಹೂಗಳನ್ನು ಬೆಳೆಯುವಿಕೆ, ಕುದುರೆ, ನಾಯಿಗಳನ್ನು ಸಾಕುವಿಕೆ, ರತ್ನಗಂಬಳಿ, ಮಕಮಲ್ ಬಟ್ಟೆ ತಯಾರಿಕೆ, ಕಬ್ಬು ಹಾಗೂ ಸಕ್ಕರೆ ಉತ್ಪನ್ನ, ವಾರದ ಸಂತೆ, ಜಾತ್ರೆಗಳು ಇತ್ಯಾದಿಗಳಿಂದ ವರಮಾನ ಪಡೆಯಲಾಗುತ್ತಿತ್ತು. ಎಲ್ಲಕ್ಕೂ ಕ್ರಮಬದ್ಧವಾಗಿ ಲೆಕ್ಕಪತ್ರ ಇರಿಸಲಾಗುತ್ತಿತ್ತು. ಹಾಗೂ ಇವು ಪರ್ಶಿಯನ್ ಭಾಷೆಯಲ್ಲಿದ್ದುದರಿಂದ ಹೊಸ ಪಾರಿಭಾಷಿಕ ಶಬ್ದಗಳು ಚಾಲ್ತಿಗೆ ಬಂದಿದ್ದು ಇಂದಿಗೂ ಅನೇಕ ಸಂಗತಿಗಳಲ್ಲಿ ಇವೇ ಮುಂದುವರಿದಿರುವುದನ್ನು ಕಾಣಬಹುದು. ಆದಿಲ್ ಶಾಹಿಗಳೊಂದಿಗೆ ಸಂಪರ್ಕವಿದ್ದುದರಿಂದಾಗಿ ಮುಂದೆ ಇದೇ ಬಗೆಯ ಪರಿಸ್ಥಿತಿ ಮೈಸೂರು ಅರಸರಲ್ಲಿಯೂ ಮುಂದುವರೆಯಿತು. ಆದರೂ ಕೆಲವೆಡೆಯಾದರೂ ತೆರಿಗೆ ಪಡೆಯಲು ಅಧಿಕಾರಿಗಳು ತೆಗೆದುಕೊಂಡ ಕ್ರಮದಿಂದಾಗಿ ದಂಗೆಗಳಾಗಿರುವುದು ಕಂಡುಬರುತ್ತದೆ. ಸಕ್ಕರೆ, ರೇಷ್ಮೆ ಹಾಗೂ ಕರಕುಶಲ ವಸ್ತುಗಳಿಗೆ ಪ್ರೋತ್ಸಾಹ ನೀಡಿದ್ದು, ಸಾರಿಗೆ, ಅಂಚೆ ವ್ಯವಸ್ಥೆ ಸುಧಾರಿಸಿದ್ದು ವೈದ್ಯಕೀಯ ಹಾಗೂ ವಿದ್ಯಾಭ್ಯಾಸ ಸುಧಾರಿಸಿದ್ದು. ಮುಖ್ಯ ಸಂಗತಿಗಳು. ಇಡೀ ಆಡಳಿತವನ್ನು ಹದಿನೆಂಟು ಚಾವಡಿಗಳೆಂಬಂತೆ ಪುನರ್ ವಿಂಗಡಿಸಿದ್ದು ಆದಾಯ ಪಡೆಯಲು ಹಾಗೂ ವಿತರಿಸಲು ಸುಲಭವಾಯಿತು. ಮೈಸೂರು ರಾಜರು 'ನವಕೋಟಿ ನಾರಾಯಣ' ಎಂಬ ಬಿರುದು ಪಡೆಯುವಷ್ಟು ಶ್ರೀಮಂತರಾಗಿದ್ದರು. ಹೀಗೆ ಕೌಟಿಲ್ಯನ ಕಾಲದಿಂದಲೂ ಅರ್ಥ ವ್ಯವಸ್ಥೆಯಲ್ಲಿ ಕಾಲಧರ್ಮ, ದೊರೆಯುವ ವಸ್ತು, ಉತ್ಪನ್ನ, ಹೊರಗಿನ ಸಂಪರ್ಕ, ಹಣದ ಮೌಲ್ಯ ಇತ್ಯಾದಿಗಳು ಕಂದಾಯ ಹಾಗೂ ರಾಜಾದಾಯಗಳನ್ನು ಬದಲಿಸುತ್ತಿತ್ತು, ಯುದ್ಧಗಳು ಅದರಲ್ಲೂ ಹಲವಾರು 'ನಿರ್ಣಾಯಕ' ಯುದ್ಧಗಳು ನಡೆದಿದ್ದು ಆ ಪ್ರದೇಶ ಆರ್ಥಿಕವಾಗಿ ಚೇತರಿಸಿಕೊಳ್ಳಲು ಕೆಲವು ಶತಮಾನಗಳೇ ಬೇಕಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಕೌಟಿಲ್ಯನ ಅರ್ಥಶಾಸ್ತ್ರವನ್ನು ನೋಡಬಹುದು.

ಕೌಟಿಲ್ಯನ ಅರ್ಥಶಾಸ್ತ್ರ ರಾಜಕೀಯ ನೀತಿಯಿಂದಾಗಿ ಪ್ರಸ್ತುತವಾಗಿದೆ ಎಂಬ ವಿಚಾರ ಈಚೆಗೆ ಹೆಚ್ಚು ಪ್ರಸ್ತಾಪವಾಗುತ್ತಿದೆ. ಮೊದಲ ಓದಿಗೆ ಇದು ಹೌದೆಂಬ ಭಾವನೆಯೂ ಬರುತ್ತದೆ. ಆದರೆ ಮುಖ್ಯವಾಗಿ ಅಂದಿನದು ರಾಜಪ್ರಭುತ್ವ, ಇಂದಿನದು ಪ್ರಜಾಪ್ರಭುತ್ವ. ಯಾರೂ ಯಾರನ್ನೂ ನಂಬದಂತಹ ಪರಿಸ್ಥಿತಿ ಅಂದಿನದು. ರಾಜನೇ ಸ್ವತಃ ತನ್ನ ಕೈ ಕೆಳಗಿನ ಅಧಿಕಾರಿಗಳ ಮೇಲೂ ಗೂಢಚಾರರನ್ನು ಇರಿಸಿ ಪರಿಸ್ಥಿತಿ ನಿಭಾಯಿಸುತ್ತಿದ್ದಂಥ ಕಾಲವದು. ರಾಜ್ಯಾಂಗ, ಕಾರ್ಯಾಂಗಗಳಿಗಿಂತ 'ನ್ಯಾಯಾಂಗವೇ' ಮೇಲೇನೋ ಎಂಬ ಭಾವನೆ ಬರುವಂತೆ ದಂಡನೆಗಳು, ಕಂದಾಯ ವಸೂಲಾತಿಗಳು ಇದ್ದವು. ಪ್ರಾಯಶಃ ಇಂತಹ ದಂಡನೆಗಳು ಇಂದಿಗೂ ಇದ್ದದ್ದೇ ಆದಲ್ಲಿ ಪರಿಸ್ಥಿತಿ ಸುಧಾರಿಸಬಹುದೆಂಬ ಅಭಿಪ್ರಾಯ ಅನೇಕರಲ್ಲಿರಬಹುದು. ಉದಾಹರಣೆಗೆ ಆಭರಣ ಮಾಡಲೆಂದು ನಿಯಮಿಸಿದ ಶಿಲ್ಪಿ ಆ ಕೆಲಸವನ್ನು ತಾನು ಮಾಡದೆ ಬೇರೆಯವರಿಂದ ಮಾಡಿಸಿದರೆ ಇಬ್ಬರಿಗೂ ದಂಡ ವಿಧಿಸು, ಮೊದಲ ಶಿಲ್ಪಿಯ ಕೈ ಬೆರಳು ಕತ್ತರಿಸು ಎಂಬುದಾಗಲೀ, ನಿಯಮಿಸಿದ ಕಾರ್ಯ ನಿಗದಿತ ಅವಧಿಯಲ್ಲಿ ಮಾಡದಿದ್ದಲ್ಲಿ ದುಪ್ಪಟ್ಟು ದಂಡ ವಿಧಿಸು ಎಂಬುದಾಗಲೀ ಕಾರ್ಮಿಕರಲ್ಲಿ ಶಿಸ್ತು ಮೂಡಿಸುತ್ತದೆ ಎಂಬ ವಿಚಾರ ಕೆಲವರಲ್ಲಿರಬಹುದು. ಭಯ, ನಿಯಂತ್ರಣ, ಶಿಕ್ಷೆಯ ಬೆದರಿಕೆಗಳೇ ಶಿಸ್ತು ಮೂಡಿಸುತ್ತದೆ, ಉತ್ಪತ್ತಿ ಹೆಚ್ಚಿಸುತ್ತದೆ. ಇಡೀ ಸಮುದಾಯ ಅಂಕೆಯಲ್ಲಿರುತ್ತದೆ ಎಂದಾದರೆ ಈ ಪದ್ಧತಿ ಹೌದೆನ್ನಬಹುದು. ಆದರೆ ಇದು ಸಮಾಜವಾದದ ಶಿಸ್ತಲ್ಲ. ಬದಲಿಗೆ ನಿರಂಕುಶದ ಶಿಸ್ತು ಎಂಬ ಭಾವನೆ ಬರುತ್ತದೆ. ಆದರೆ ಇವುಗಳಿಂದ ಹೊರತಾಗಿ ಇಡೀ ಗ್ರಂಥದಲ್ಲಿ ಹರಡಿಕೊಂಡಿರುವ

ಬೇಹುಗಾರಿಕೆ (ಗೂಢಚರ್ಯೆ) ಮುಂಜಾಗರೂಕತೆ ಹಾಗೂ ಮುತ್ಸದ್ದಿತನ ಯಾವ ಕಾಲಕ್ಕೂ ಯಾವ ಬಗೆಯ ಪ್ರಭುತ್ವಕ್ಕೂ ಅಪೇಕ್ಷಣೀಯವೇ.

ಇಡೀ ಗ್ರಂಥದಲ್ಲಿ 'ರಾಜ' ನೇರವಾಗಿ ಪ್ರಸ್ತಾಪಿಸಿರುವುದು ತೀರ ಕಡಿಮೆ. ಆರಂಭದಲ್ಲಿ ಗೂಢಚಾರರು ಯಾರನ್ನೆಲ್ಲಾ ಪರಿಶೀಲಿಸಿದರೂ ರಾಜ, ರಾಜಪುರೋಹಿತರನ್ನು ಶೋಧಿಸಬಾರದೆನ್ನುತ್ತಾನೆ. ಆದರೆ ಗೂಢಚಾರರ ಮೇಲೆಯೇ ಪ್ರತಿಗೂಢಚಾರರಿರಿಸುವ ಬಗ್ಗೆ, ಮುಖ್ಯ ಅಮಾತ್ಯರ ನಡವಳಿಕೆಯ ಬಗ್ಗೆ ವರದಿ ತಂದೊಪ್ಪಿಸುವ ಗೂಢಚಾರರ ಪ್ರಸಂಗ, ಪಟ್ಟದ ರಾಣಿಯೂ ಸೇರಿದಂತೆ ಅಂತಃಪುರ ಪ್ರವೇಶಿಸುವ ಮುಂತಾದ ಸಂದರ್ಭಗಳಲ್ಲಿ ರಾಜನ ಅಸ್ತಿತ್ವ ಕಂಡು ಬರುತ್ತದೆ. ಅಂತೆಯೆ ತೀರಾ ಜನಸಾಮಾನ್ಯರೂ ಕ್ವಚಿತ್ತಾಗಿ ಉಲ್ಲೇಖರಾಗಿದ್ದಾರೆ. ಆದರೆ ಕಾರುಕ (ಕಾರ್ಮಿಕ, ಶಿಲ್ಪಿ) ಪ್ರಸಂಗಗಳಲ್ಲಿ ಅದರಲ್ಲೂ 'ಕಂಟಾಕ್ ನಿವಾರಣೆ' ಪ್ರಕರಣಗಳಲ್ಲಿ ಜನಸಾಮಾನ್ಯರಿಗೇ ಪ್ರಯೋಜನವಾಗುವಂತೆ ಹೇಳಿದ ಗ್ರಂಥದಲ್ಲಿ 'ಕಾರ್ಮಿಕರಿಂದ ಪ್ರಜೆಗಳ ರಕ್ಷಣೆ' ಎಂದೇ ನಾಲ್ಕನೆಯ ಅಧಿಕರಣ ಆರಂಭವಾಗುತ್ತದೆ. ಮುಂದೆ ಕಾರ್ಮಿಕರು ಜನರಿಗೆ ಮಾಡಬಹುದಾದ ಮೋಸದ ಕೃತ್ಯದ ವಿವರಣೆ ಹಾಗೂ ಹಾಗೆ ಮಾಡಿದ್ದೇ ಆದರೆ ನೀಡುವ (ಕಾರ್ಮಿಕರಿಗೆ) ಶಿಕ್ಷೆ, ದಂಡಗಳ ವಿವರ ನೋಡಿದರೆ ಮೋಸ ಮಾಡುವುದೇ ಕಾರ್ಮಿಕರ ಹುಟ್ಟು ಸ್ವಭಾವವೋ ಎನ್ನಿಸುವಂತಾಗುತ್ತದೆ ಅಥವಾ ರಾಜ್ಯದ ಅರಾಜಕತೆಯನ್ನು ಸೂಚಿಸುತ್ತದೆ. ಜೊತೆಗೆ ಆತ ವಿಧಿಸುವ ದಂಡದ ಪ್ರಮಾಣ ನೋಡಿದರೆ (ದಂಡ, ಶುಲ್ಕಗಳೆಲ್ಲ ಹಣದ ರೂಪದಲ್ಲೇ ಇರುತ್ತದೆ) ಭ್ರಷ್ಟಾಚಾರದ ನಿರ್ಮೂಲನಕ್ಕೆ ತೆಗೆದುಕೊಂಡಿದ್ದ ಕಠಿಣ ಕ್ರಮ ಬೆರಗುಮೂಡಿಸುತ್ತದೆ. ಇದರೊಂದಿಗೆ ಹೇಳಬಹುದಾದದ್ದೆಂದರೆ ಕೌಟಿಲ್ಯ ತನಗಿಂತ ಹಿಂದೆ ಬರೆದ ಗ್ರಂಥಗಳ ಅಧ್ಯಯನ ಹಾಗೂ ಪರಿಸ್ಥಿತಿಯ ಬಗ್ಗೆ ತಿಳಿವಳಿಕೆ ಹೊಂದಿದ್ದನೆಂಬುದು. ಮನು, ಬೃಹಸ್ಪತಿ, ಶುಕ್ರ, ಆದಿಕವಿ ಕೌಣಪಂಡಿತ (ಭೀಷ್ಮ), ಭಾರದ್ವಾಜ (ದ್ರೋಣ), ಪಿಶುನ (ನಾರದ) ಮುಂತಾದ ಹತ್ತಾರು ಮಂದಿಯ ಮಾತುಗಳನ್ನು ಕೌಟಿಲ್ಯ ಅಲ್ಲಲ್ಲಿ ಸಂದರ್ಭೋಚಿತವಾಗಿ ಉಲ್ಲೇಖಿಸುತ್ತಾನೆ. ತೀರ ಕ್ವಚಿತ್ತಾಗಿ ಹಿಂದಿನವರ ಅಭಿಪ್ರಾಯ ಒಪ್ಪುತ್ತಾನಾದರೂ ''ಅದು ಹಾಗಲ್ಲ'' ಎಂದು ಸಕಾರಣವಾಗಿ ತಿರಸ್ಕರಿಸಿ ತನ್ನ ಸಿದ್ಧಾಂತವನ್ನು ಮಂಡಿಸುತ್ತಾನೆ. ಇದು ಕಲೆ ಕಲಾವಿದರಿಂದ ಹಿಡಿದು ಯುದ್ಧತಂತ್ರದವರೆಗೆ ವಿಸ್ತಾರವಾಗಿ ವ್ಯಾಪಿಸಿದೆ. ಇಲ್ಲಿ ಎರಡು ಅಂಶಗಳು ಗಮನಾರ್ಹ. ಹಿಂದಿನವರು ಆರ್ಥಿಕ ವಿಷಯಗಳನ್ನು ಸರಿಯಾಗಿ ಗಮನಿಸಿರಲಿಲ್ಲವೆಂಬುದು ಒಂದಾದರೆ ಕೌಟಿಲ್ಯ ತನ್ನ ಕಾಲಕ್ಕೆ, ಪರಿಸ್ಥಿತಿಗೆ ತಕ್ಕಂತೆ ಹೊಂದಿಸಿದ್ದಾನೆಂಬುದು ಇನ್ನೊಂದು.

ಮುಂದೆಯೂ ಕೆಲವೇ ಶತಮಾನಗಳಲ್ಲಿ ಕೌಟಿಲ್ಯನ ಅರ್ಥಶಾಸ್ತ್ರವೂ ಅವಜ್ಞೆಗೆ ಗುರಿಯಾದಂತೆ ಕಂಡುಬರುತ್ತದೆ. ಬಾಣಭಟ್ಟನ ಕಾದಂಬರಿಯಲ್ಲಿ ಈ ಗ್ರಂಥದ ಬಗ್ಗೆ ಲಘುವಾದ ಅಭಿಪ್ರಾಯವಿರುವುದರಿಂದ ಹರ್ಷನ ಕಾಲಕ್ಕೆ ಕೌಟಿಲ್ಯ ತಿರಸ್ಕೃತಗೊಂಡಿದ್ದನೆಂದು ವಿದ್ವಾಂಸರ ಅಭಿಪ್ರಾಯ. ಪ್ರಾಯಶಃ ಇದರಲ್ಲಿರುವ ಶಿಕ್ಷೆ, ಆ ಮೂಲಕ ಜನರಲ್ಲಿ ಮೂಡಿಸಿದ ಭೀತಿ, ಹಣ ಎತ್ತಲು ತೆಗೆದುಕೊಂಡ ಕಠಿಣ ಕ್ರಮಗಳು, ಮುಂದಿನವರಿಗೆ ವಿಶೇಷವಾಗಿ ಬೌದ್ಧಮತಾವಲಂಬಿಗಳಿಗೆ ಹಣದ ಮುಗ್ಗಟ್ಟು ಹಾಗೂ ರಾಜ್ಯವಿಸ್ತಾರದ ಮಹತ್ವಾಕಾಂಕ್ಷೆ ಇದ್ದಿರಲಾರದು. ಕೌಟಿಲ್ಯನೇ ಹೇಳುವಂತೆ ಅರ್ಥಶಾಸ್ತ್ರ ಎಂದರೆ ಭೂಮಿಗೆ ಸಂಬಂಧಿಸಿದ್ದು- ಬೆಳೆ ಬೆಳೆಯುವುದರಿಂದ ಹಿಡಿದು ವಾಸಮಾಡುವವರೆಗೆ - ನೀರು, ಖನಿಜ, ರಸ್ತೆ, ಕಾಡು ಏನೆಲ್ಲ ಸೇರಿ ಭೂಮಿಯೇ ಆಧಾರ. ಎಂದಮೇಲೆ ಭೂಮಿಯ ಮೇಲೆ ನಡೆಯುವ ಸಕಲ ಆಗುಹೋಗುಗಳು, ಸಕಲ ವ್ಯಾಪಾರಗಳು ಒಂದು ಅರ್ಥದಲ್ಲಿ 'ಐಹಿಕ' 'ಸುಖಭೋಗ'ಗಳೇ ಆಗುತ್ತವೆ ಎಂಬ ಮಾತು ಸಹ ಮುಂದಿನ ಬೌದ್ಧ, ಜೈನ ಹಾಗೂ ಶಂಕರಾಚಾರ್ಯ ಪವಿತ್ರ ವೈದಿಕಧರ್ಮಗಳು (ಸನ್ಯಾಸಿ ಜೀವನವೇ ಪ್ರಮುಖವಾಗಿದ್ದ) ಸ್ವೀಕರಿಸದೇ ಹೋಗಿರಬಹುದು. ಕೌಟಿಲ್ಯನ ಐಹಿಕ ಸುಖಕ್ಕಿಂತ ಪಾರಮಾರ್ಥಿಕ ಚಿಂತನೆಯೇ ಮುಂದಿನವರಿಗೆ ಹೆಚ್ಚಾಗಿ ಕಂಡಿಬರಹುದು. ಈ ಇಪ್ಪತ್ತು ಶತಮಾನಗಳ ನಂತರ ಕೌಟಿಲ್ಯ ಪ್ರಸ್ತುತನೆಂಬ ಮಾತು ಹೆಚ್ಚಾಗಿ ಕೇಳಬರುತ್ತಿರುವುದೂ ಸಹ ಐಹಿಕ ಸುಖ ಭೋಗಗಳ ಇಚ್ಛೆ ಇಂದು ಮರುಕಳಿಸುತ್ತಿರುವುದೇ ಕಾರಣವೆಂದೆನಿಸಿದರೆ ಆಶ್ಚರ್ಯವಿಲ್ಲ. ಮೈಮುರಿಯುವ ದುಡಿತ, ಹಣ ಸಂಪಾದನೆ ಅದನ್ನು ಉಪಭೋಗಿಸುವಿಕೆಗಳಲ್ಲಿ ಅಂದಿಗೂ ಇಂದಿಗೂ ಸಾಮ್ಯತೆಯಿದೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬೆರಳು ಇರಿಸಿದಲ್ಲೆಲ್ಲಾ ರಾಜಕೀಯ ಪ್ರಜ್ಞೆ ಕಂಡುಬರುತ್ತದೆ. ಇಂದಿನ ನಾಗರಿಕ ಸೇವಾ ನಿಯಮಾವಳಿ (ಕೆ.ಸಿ.ಎಸ್.ಆರ್.)ಯಂತೆ ಅಧಿಕಾರಿಗಳ ಕರ್ತವ್ಯ ಪ್ರಜ್ಞೆಯನ್ನು ಜಾಗೃತದಲ್ಲಿಡುವಂತಿರುವ ಪ್ರಸ್ತುತ ಗ್ರಂಥ ಅದನ್ನು ಜನಸಾಮಾನ್ಯರೂ ಮನನ ಮಾಡುವಂತಿದೆ.

# ಆಧುನಿಕ ಭಾರತದ ರಾಜಕೀಯ ವಿಚಾರಧಾರೆ

ಡಾ. ದೇಜಗೌ

**ಮುಮ್ಮಾತು**

ಮನುಷ್ಯ ಎರಡು ಕಾಲಿನ ರಾಜಕೀಯ ಜಂತು ಎಂದು ಅರಿಸ್ಟಾಟಲ್ ಎಂದೋ ಹೇಳಿದ. ಒಬ್ಬನೇ ಇದ್ದಾಗ ಚಿಂತನೆ, ಇಬ್ಬರಿದ್ದಾಗ ವಾಗ್ವಾದ, ಮೂವರಿದ್ದಾಗ ರಾಜಕೀಯ ವ್ಯವಹಾರ ಕುದುರುವುದು ಸಹಜ. ಮಾನವ ಮಾತು ಕಲಿತಾಗಿನಿಂದ ಈ ಪ್ರಕ್ರಿಯೆ ಪ್ರಾರಂಭವಾಗುತ್ತದೆ. ಪ್ರತಿಯೊಂದು ದೇಶದಲ್ಲಿಯೂ ಅಲ್ಲಲ್ಲಿಯ ಪರಿಸರ, ಸಂಪ್ರದಾಯ, ಶಿಕ್ಷಣಕ್ಕನುಗುಣವಾಗಿ ರಾಜಕೀಯ ಚಿಂತನೆ ಮಾಡಲಾಗುತ್ತದೆ. ಅದು ನಿಸರ್ಗಸಹಜವಾದ ವ್ಯಾಪಾರ. ಭರತ ಖಂಡದಲ್ಲಿಯೂ ಪ್ರಾಚೀನ ಕಾಲದಿಂದ ರಾಜಕೀಯ ಚಿಂತನೆ ಅವಿಚ್ಛಿನ್ನವಾಗಿ ನಡೆಯುತ್ತಿದೆ. ಯಾವುದೋ ವ್ಯವಸ್ಥೆಯಲ್ಲಿ ರಾಜ್ಯಾಡಳಿತ ನಡೆಯುತ್ತಿತ್ತಷ್ಟೆ. ಅದು ಒಮ್ಮೆ ಹಿಂದೂ ಧರ್ಮದ ಭಾಗವಾಗಿ ಕೆಲವೊಮ್ಮೆ ದಂಡನೀತಿಯೋ ಅರ್ಥಶಾಸ್ತ್ರವೊ ನೀತಿಶಾಸ್ತ್ರವೊ ಆಗಿ ಪ್ರಚಾರವಾಗುತ್ತಿತ್ತು. ರಾಜಧರ್ಮ, ಕ್ಷಾತ್ರವಿದ್ಯೆ, ರಾಜ್ಯಶಾಸ್ತ್ರ ಎಂಬ ಹೆಸರುಗಳೂ ಆ ವ್ಯವಸ್ಥೆಗೆ ಅನ್ವಯವಾಗುತ್ತಿದ್ದುವು. ಭಿನ್ನ ಭಿನ್ನ ಹೆಸರುಗಳಿದ್ದ ಮಾತ್ರಕ್ಕೆ ಗೊಂದಲವಾಗಬೇಕಾಗಿಲ್ಲ. ಪ್ರಾಯಶಃ ಆ ಹೆಸರುಗಳು ಕಾನೂನನ್ನು ನಿರ್ದೇಶಿಸುತ್ತಿದ್ದುವೆಂದೂ ತೋರುತ್ತದೆ. ಒಟ್ಟಿನಲ್ಲಿ ದುಷ್ಟ ಶಿಕ್ಷಣ, ಶಿಷ್ಟರಕ್ಷಣ, ಬಾಹ್ಯಶತ್ರುಗಳ ದಮನ, ಶಾಂತಿ ಪಾಲನೆ, ದಂಡ ನೀತಿಯ ಗುರಿಯಾಗಿತ್ತು. ನಿರ್ಭಯವಾಗಿ ಜನ ತಮ್ಮ ಜೀವನವನ್ನು ಪಾಲಿಸಬೇಕೆಂಬುದು ರಾಜನೀತಿಯ ಉದ್ದೇಶ.

ರಾಜನೀತಿಶಾಸ್ತ್ರ ಸಾಹಿತ್ಯದ ಅಂಶವಾಗಿಯೋ, ಸ್ವತಂತ್ರವಾಗಿಯೋ ಗೋಚರಿಸುತ್ತಿದ್ದುಂಟು. ವೇದಾಗಮ ಪುರಾಣ ಧರ್ಮಸೂತ್ರಗಳಲ್ಲಿ ಆಡಳಿತ ವ್ಯವಸ್ಥೆಯ ಸ್ವರೂಪ ಲಕ್ಷಣಗಳ ವಿವರಣೆಯಿದೆ. ಗೌತಮ, ಬೋಧಾಯನ, ಆಪಸ್ತಂಭ, ವಸಿಷ್ಠ, ವಿಷ್ಣು, ಕಾತ್ಯಾಯನ, ಮನು, ಯಾಜ್ಞವಲ್ಕ್ಯ, ನಾರದ- ಇವರು ಧರ್ಮಸೂತ್ರಗಳ ಕರ್ತೃಗಳು. ರಾಜಪುರೋಹಿತರ ಕರ್ತವ್ಯವನ್ನು, ಸುಂಕ ತೆರಿಗೆಗಳ ವಿವರ, ಸಾಮಾಜಿಕ ವಿಚಾರಗಳು, ಇವೇ ಮೊದಲಾದವು ಈ ಧರ್ಮಗ್ರಂಥಗಳಲ್ಲಿ ಪ್ರಸ್ತಾಪಗೊಳ್ಳುತ್ತವೆ. ಬೌದ್ಧ ಸಾಹಿತ್ಯ ರಾಮಾಯಣ ಭಾರತಗಳಲ್ಲಿ ಕ್ಷಾತ್ರವಿದ್ಯೆಯ ಪ್ರಸ್ತಾವನೆ ಧಾರಾಳವಾಗಿ ಬರುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರ ರಾಜನೀತಿ ಗ್ರಂಥವೇ ಆಗಿದೆ. ಭರ್ತೃಹರಿಯ ನೀತಿಶಾಸ್ತ್ರ ಜನರ ಗುಣಾವಗುಣಗಳ ಕಡೆಗೆ ಗಮನ ಹರಿಸುತ್ತದೆ. ಕೌಟಿಲ್ಯನ ಅರ್ಥಶಾಸ್ತ್ರ ಕಾಮಂದಕನ ನೀತಿಸಾರ, ಶುಕ್ರ ನೀತಿಸಾರ, ಬೃಹಸ್ಪತಿಯ ಅರ್ಥಶಾಸ್ತ್ರ- ಇವು ರಾಜನ ಮಂತ್ರಿ, ಪುರೋಹಿತ ಮೊದಲಾದ ಅಧಿಕಾರಗಳ ಕರ್ತವ್ಯಗಳನ್ನಲ್ಲದೆ, ದೇಶಾಭ್ಯುದಯ ಮಾರ್ಗನೀತಿಗಳನ್ನು ಸ್ಪಷ್ಟಪಡಿಸುತ್ತವೆ. ಪುರುಷಾರ್ಥಸಾಧನೆಯೆ ಎಲ್ಲ ರಾಜನೀತಿ ಶಾಸ್ತ್ರಗಳ, ಭೀಷ್ಮನಂಥ ಧರ್ಮಬೋಧಕರ ಗುರಿ. ಮೆಕೆವೆಲಿಯ 'ಪ್ರಿನ್ಸ್' ಗ್ರಂಥದಂತೆ ಕೌಟಿಲ್ಯನ ಅರ್ಥಶಾಸ್ತ್ರ ಪ್ರಾಚೀನ ರಾಜಕೀಯ ಸಿದ್ಧಾಂತಗಳ ಮಾದರಿಗ್ರಂಥವೆಂದು ಹೇಳಲಾಗಿದೆ.

ತಮಿಳಿನ ತಿರುವಳ್ಳುವರ್ ಕವಿಯ 'ಕುರಳ್' ಗ್ರಂಥದಂತೆ, ಪ್ರಾದೇಶಿಕ ಭಾಷೆಗಳಲ್ಲಿ ಕೃತಿರಚನೆ ಮಾಡಿರುವ ಅನೇಕ ಸಾಹಿತಿಗಳಲ್ಲಿ ರಾಜನೀತಿಗೆ ಸಂಬಂಧಿಸಿದ ಮೌಲಿಕಾಂಶಗಳು

ಸಾಕಷ್ಟಿವೆ. ವೇಮನ, ಸರ್ವಜ್ಞರ ಕೃತಿಗಳು 'ಕುರುಳ್'ಗೆ ಯಾವ ವಿಷಯದಲ್ಲಿಯೂ ಕಡಮೆಯಿಲ್ಲ. ಪಂಪ, ಬಸವೇಶ್ವರ, ಕುಮಾರವ್ಯಾಸರು ಅನೇಕ ರಾಜನೀತಿ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆಂಬುದು ಗಮನಿಸಬೇಕಾದ ಸಂಗತಿ. ಮೈಸೂರು ಮಹಾರಾಜರಂಥ ಸಂಸ್ಥಾನಿಕರು ಪ್ರಜಾಕ್ಷೇಮವನ್ನು, ನಾಡಿನ ಅಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಗಾಂಧೀಜಿಯಿಂದ 'ರಾಮರಾಜ್ಯ' ಎನ್ನಿಸಿಕೊಳ್ಳುವಷ್ಟರ ಮಟ್ಟಿಗೆ ರಾಜ್ಯಭಾರ ಮಾಡಿದ್ದಾರೆ.

ಮನುಷ್ಯನ ಹುಟ್ಟು ಪ್ರಾರಂಭವಾದಾಗಿನಿಂದ ರಾಜಕೀಯ ಚಿಂತನೆಯೂ ಮೊಳೆದೋರಿದೆಯೆಂಬುದು ಸುಸ್ಪಷ್ಟ. ಅರಿಸ್ಟಾಟಲ್, ಪ್ಲೇಟೊ, ಮೆಕಿಯವೆಲ್ಲಿ, ಕೌಟಿಲ್ಯ ಮೊದಲುಗೊಂಡು ಮಾರ್ಕ್ಸ್, ಸ್ಟಾಲಿನ್, ಮಾವೊ, ಲಿಂಕನ್, ಗಾಂಧೀಜಿಯವರೆಗೆ ರಾಜಕೀಯ ಚಿಂತನೆ ಜೀವನದಷ್ಟೆ ವೈವಿಧ್ಯಮಯವಾಗಿ ವಿಸ್ತಾರವಾಗಿ ಬೆಳೆದಿದೆಯೆಂಬುದನ್ನು ಜಗತ್ತು ಬಲ್ಲುದು. ನಿಸರ್ಗದಂತೆ, ಜೀವನದಂತೆ, ಬುದ್ಧಿಯಂತೆ, ಜ್ಞಾನ ವಿಜ್ಞಾನಗಳಂತೆ, ರಾಜಕೀಯವೂ ನಿತ್ಯ ಚಲನ ಹಾಗೂ ಪರಿವರ್ತನಶೀಲವಾದದ್ದು. ಆಯಾಯ ಕಾಲದ ಪರಿಸ್ಥಿತಿ ಅಗತ್ಯಗಳಿಗನುಗುಣವಾಗಿ ರಾಜಕೀಯ ಪದ್ಧತಿಗಳು ತಲೆಯೆತ್ತುತ್ತವೆ, ನಶಿಸುತ್ತವೆ. ಹೊಸ ಪದ್ಧತಿಗಳು ಆಕ್ರಮಿಸಿಕೊಳ್ಳುತ್ತವೆ. ಆದಿಮಾನವಪದ್ಧತಿ, ಊಳಿಗಮಾನ್ಯಪದ್ಧತಿ, ಪಾಳೆಯಗಾರಿಕೆ, ಬಂಡವಾಳಗಾರಿಕೆ, ರಾಜಪದ್ಧತಿ, ಗಣರಾಜ್ಯಪದ್ಧತಿ, ಶ್ರೀಮಂತಪ್ರಭುತ್ವ, ದೈವಪ್ರಭುತ್ವ, ಜಮೀನ್ದಾರಿಪದ್ಧತಿ, ನಿರಂಕುಶಪ್ರಭುತ್ವ, ಅರಾಜಕತ್ವ, ಫ್ಯಾಸಿಸಮ್, ಸಾಮ್ರಾಜ್ಯಶಾಹಿ, ಸರ್ವಾಧಿಕಾರ ಮೊದಲಾದ ಪದ್ಧತಿಗಳು ಕೊನೆಗೊಂಡು, ಅಧ್ಯಕ್ಷೀಯ ಪದ್ಧತಿ, ಸಮಾಜವಾದ, ಸಾಮ್ಯವಾದ, ಪ್ರಜಾಪ್ರಭುತ್ವಗಳ ಕೂಡುದಾರಿಯಲ್ಲಿ ಜಗತ್ತು ಸಾಗಿಬಂದು ನಿಂತಿದೆ. ಕೇಂದ್ರೀಕರಣಕ್ಕಿಂತ ವಿಕೇಂದ್ರೀಕರಣದ, ಗ್ರಾಮಸ್ವರಾಜ್ಯ, ಸರ್ವೋದಯ, ವ್ಯಕ್ತಿಸ್ವಾತಂತ್ರ್ಯಗಳ ಕಡೆಗೆ ಮಾನವ ದೃಷ್ಟಿ ಹರಿದಿದೆ. ಹಳೆಯ ವಸಾಹತುಶಾಹಿ ಮತ್ತೆ ಜಾಗತೀಕರಣವೆಂಬ ನವ ವಸಾಹತುಶಾಹಿಯ ರೂಪದಲ್ಲಿ ಗೋಚರವಾಗುವ ಸಂಭವವೂ ಇದೆ. ಹಿಂದುಳಿದ ರಾಷ್ಟ್ರಗಳನ್ನು ಮುಂದುವರಿದ ರಾಷ್ಟ್ರಗಳು ತಮ್ಮೆತ್ತರಕ್ಕೆ ಏರಿಸಿಕೊಳ್ಳುವುದಾದರೆ ಜಾಗತೀಕರಣ ಸ್ವಾಗತಾರ್ಹ. ಆದರೆ ಶೋಷಣೆಯೇ ಅದರ ಉದ್ದೇಶವಾಗುವುದಾದರೆ, ಅದು ಖಂಡನಾರ್ಹ, ತಿರಸ್ಕಾರಾರ್ಹ. ಈ ಹಿನ್ನೆಲೆಯಲ್ಲಿ ಭರತಖಂಡದ ಆಧುನಿಕ ರಾಜಕೀಯ ಚಿಂತನೆ, ಪರಿಹಾರ, ಗುರಿಗಳ ಬಗ್ಗೆ ಸಿಂಹಾವಲೋಕನ ಕ್ರಮದಿಂದ ಪರಿಶೀಲನೆ ನಡೆಸಬಹುದು. ನಾನು ರಾಜಕೀಯಶಾಸ್ತ್ರದ ವಿದ್ಯಾರ್ಥಿಯಲ್ಲ. ಆದರೆ ಅದರಲ್ಲಿ ಅತ್ಯಾಸಕ್ತನಾದವನು. ಈ ವಿಷಯಕ್ಕೆ ಸಂಬಂಧಿಸಿದ ಉತ್ತರ ಇಂಡಿಯಾದ ಕೆಲವು ವಿದ್ವಾಂಸರ ಗ್ರಂಥಗಳನ್ನೋದಿದ ನನಗೆ ತುಂಬ ನಿರಾಶೆಯಾಯಿತು. ಅವರು ದಕ್ಷಿಣ ಭಾರತದ ರಾಜನೀತಿಜ್ಞರನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದಾರೆ. ಅವರ ಈ ಲೋಪವೇ ಕಾರಣವಾಗಿ ನಾನು ಈ ಲೇಖನವನ್ನು ಕೈಗೆತ್ತಿಕೊಂಡೆ. ಈಗಾಗಲೇ ಆ ಚಿಂತನೆಯ ಬಗ್ಗೆ ಪ್ರಕಟವಾಗಿರುವ ಹಲವಾರು ಗ್ರಂಥಗಳನ್ನು ಈ ನನ್ನ ಅಧ್ಯಯನಕ್ಕೆ ಬಳಸಿ ಕೊಂಡಿದ್ದೇನೆಂದೂ, ಆ ಗ್ರಂಥಗಳ ಲೇಖಕರಿಗೆ ನಾನು ಋಣಿಯೆಂದೂ ಸ್ಪಷ್ಟಪಡಿಸುತ್ತಿದ್ದೇನೆ.

ನಿಜಲಿಂಗಪ್ಪನವರು ಆಧುನಿಕ ರಾಜಕೀಯ ಚಿಂತನೆಯಲ್ಲಿ ಸಮರ್ಥರಾಗಿರಲಾಗಿ, ಅದೇ ಅವರ ಬದುಕಾಗಿರಲಾಗಿ, ಅವರ ಜನ್ಮ ಶತಮಾನೋತ್ಸವ ಸಮಯದಲ್ಲಿ ಆ ಚಿಂತನೆಯ ಸಾರವನ್ನು ಸಂಗ್ರಹಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಇದರಲ್ಲಿ ಕಾಣಬಹುದಾದ ಗುಣಗಳಿಗೆ ಅನೇಕ ಆಚಾರ್ಯ ಕೃತಿಗಳ ಅಧ್ಯಯನವೇ ಕಾರಣವೆಂದು ಈ ಸಂದರ್ಭದಲ್ಲಿ ಹೇಳಬಹುದಾಗಿದೆ.

**ಆಧುನಿಕತೆಯ ಅರುಣಕಾಂತಿ**

ಭರತಖಂಡದ ರಾಜಕೀಯ ಇತಿಹಾಸದಲ್ಲಿ ಆಧುನಿಕ ಘಟ್ಟ ಯಾವಾಗ ಪ್ರಾರಂಭವಾಯಿತೆಂದು ಹೇಳುವುದು ಕಷ್ಟ. ವಾಸ್ಕೋಡಿಗಾಮ ಇಂಡಿಯಾಕ್ಕೆ ಬಂದದ್ದು ೧೪೯೮ರಲ್ಲಿ. ಅಂದಿನಿಂದ ಇಂಡಿಯಾಕ್ಕೆ ಪಾಶ್ಚಾತ್ಯ ಸಂಪರ್ಕ ಪ್ರಾಪ್ತವಾಯಿತೆಂಬುದು ನಿಜ. ಇಂಗ್ಲೆಂಡಿನ ಈಸ್ಟ್ ಇಂಡಿಯಾ ಕಂಪನಿ ಮೊಗಲ್ ದೊರೆ ಜಹಾಂಗೀರನಿಂದ ವ್ಯಾಪಾರ ಸನ್ನದು ಪಡೆದದ್ದು ೧೬೦೮ರಲ್ಲಿ. ಫ್ರೆಂಚ್ ಇಂಗ್ಲಿಷರ ನಂತರ ಯುರೋಪಿನ ಇಂತಹ ದೇಶಗಳು ಒಂದೊಂದಾಗಿ ಇಂಡಿಯಾದಲ್ಲಿ ವಸಾಹತುಗಳನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಿಸುತ್ತವೆ. ಆಧುನಿಕ ಸೈನಿಕ ತಂತ್ರಜ್ಞಾನ ಭಾರತೀಯರಿಗೆ ದೊರೆತದ್ದೆ ಪಾಶ್ಚಾತ್ಯ ದೇಶಗಳಿಂದ. ಪಾಶ್ಚಾತ್ಯ ವಿದ್ಯೆಯ ಮೂಲಕ ವೈಜ್ಞಾನಿಕ ವೈಚಾರಿಕ ಆಲೋಚನಾ ಪ್ರವಾಹವೂ ಹರಿದು ಬರುತ್ತದೆ. ವ್ಯಾಪಾರಕ್ಕೆಂದು ಬಂದ ಜನ ಕಾಲಕ್ರಮೇಣ ಇಂಡಿಯಾ ದೇಶವನ್ನು ಗೆದ್ದುಕೊಂಡ ನಂತರ ಜನಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಪಾಶ್ಚಾತ್ಯ ನಾಗರಿಕತೆ ಪ್ರವೇಶ ಮಾಡುತ್ತದೆ. ಜತೆಜತೆಗೆ ಮತಾಂತರ ಕ್ರಿಯೆಯೂ ಆರಂಭವಾಗುತ್ತದೆ. ಪಾದ್ರಿಗಳು ಮತಾಂತರದೊಡನೆ ಶಾಲಾ ಕಾಲೇಜುಗಳನ್ನು ಸ್ಥಾಪಿಸುತ್ತಾರೆ. ಸ್ಥಳೀಯ ಭಾಷೆಗಳ ಅಧ್ಯಯನವನ್ನು ಸಹ ಆಧುನಿಕಗೊಳಿಸುತ್ತಾರೆ. ಸಂಸ್ಕೃತ ಭಾಷೆಯ ಮಹತ್ತು ಬೃಹತ್ತುಗಳನ್ನು ಅಂತರರಾಷ್ಟ್ರೀಯಗೊಳಿಸುತ್ತಾರೆ. ಪಾಶ್ಚಾತ್ಯರ ಯಂತ್ರಸಂಸ್ಕೃತಿ ಮತ್ತು ಭಾರತೀಯರ ಮತೀಯಸಂಸ್ಕೃತಿಯ ಪರಿಣಾಮವಾಗಿ ಆಧುನಿಕತೆ ತಲೆದೋರುತ್ತದೆ.

ಇಸ್ಲಾಂ ಧರ್ಮದ ಪ್ರಸಾರಕ್ಕೆ ಪ್ರತಿಕ್ರಿಯೆ ಎನ್ನುವಂತೆ ಹತ್ತನೆಯ ಶತಮಾನಕ್ಕೆ ಮುಂಚೆಯೇ ದಕ್ಷಿಣ ಇಂಡಿಯಾದಲ್ಲಿ ಉದ್ಭವವಾದ ಭಕ್ತಿಪಂಥ ಬಸವೇಶ್ವರ, ಪುರಂದರದಾಸ, ಕನಕದಾಸ, ಕಬೀರ್, ನಾನಕ್, ಚೈತನ್ಯ, ತುಲಸಿದಾಸ್, ಸೂರ್‌ದಾಸ್ ಮೂಲಕ ಭರತಖಂಡವನ್ನೆಲ್ಲ ವ್ಯಾಪಿಸಿಕೊಳ್ಳುತ್ತದೆ. ಆಂಗ್ಲ ಸಂಸ್ಕೃತಿಯ ಆಕ್ರಮಣಶೀಲತೆಗೆ ವಿರೋಧವೆನ್ನುವಂತೆ ಬ್ರಹ್ಮ ಸಮಾಜ, ಆರ್ಯ ಸಮಾಜ, ಪ್ರಾರ್ಥನಾ ಸಮಾಜ ಮತ್ತು ಶ್ರೀ ರಾಮಕೃಷ್ಣ ಪಂಥಗಳು ಇಡೀ ಭಾರತೀಯ ಸಮಾಜದ ಮೇಲೆ ಅಪಾರ ಪ್ರಭಾವ ಬೀರುತ್ತವೆ. ಆಂಗ್ಲವಿದ್ಯೆಯಲ್ಲಿ ಪಾರಂಗತರಾದ ರಾಜಾರಾಮಮೋಹನರಾಯ, ದೇವೇಂದ್ರನಾಥ ಠಾಕೂರ್, ಕೇಶವ ಚಂದ್ರಸೇನರು ಬ್ರಹ್ಮ ಸಮಾಜಕ್ಕೆ ಜೀವದಾತರಾದರೆ, ಪಾಶ್ಚಾತ್ಯದೇಶಗಳಲ್ಲಿ ವೇದಾಂತದ ವಿಜಯದುಂದುಭಿ ಮೊಳಗಿಸಿದ ಸ್ವಾಮಿ ವಿವೇಕಾನಂದರು ಶ್ರೀ ರಾಮಕೃಷ್ಣ ಪಂಥದ ಪ್ರವರ್ತಕರಾಗುತ್ತಾರೆ. ದಯಾನಂದ ಸರಸ್ವತಿಯವರು ಹುಟ್ಟುಹಾಕಿದ ಆರ್ಯಸಮಾಜ ಧಾರ್ಮಿಕ ಮಾತ್ರವಲ್ಲ ಸಾಮಾಜಿಕಾಂದೋಲನವಾಗಿ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ವಿಜೃಂಭಿಸುತ್ತದೆ. ಅನಿಬೆಸಂಟರು ಥಿಯಾಸಫಿ ಪಂಥದ ಬಾವುಟವನ್ನು ಹಾರಿಸುತ್ತಾರೆ. ಮಹಾರಾಷ್ಟ್ರದ ಜೋತಿರಾವ್ ಫುಲೆಯವರು ದಲಿತರ ಉದ್ಧಾರಕ್ಕಾಗಿ ಸತ್ಯಶೋಧಕ ಸಮಾಜವನ್ನು ಸೃಷ್ಟಿಸುತ್ತಾರೆ. ೧೮೮೫ರಲ್ಲಿ ಕಾಂಗ್ರೆಸ್ ಉದಯವಾಗುತ್ತದೆ. ಏತನ್ಮಧ್ಯೆ ಮದ್ರಾಸಿನಲ್ಲಿ ಜನ್ಮತಾಳಿದ ಜಸ್ಟಿಸ್ ಪಕ್ಷವನ್ನು ಮರೆಯುವಂತಿಲ್ಲ. ಪಾಶ್ಚಾತ್ಯ ನಾಗರಿಕತೆಯ ಸಂಪರ್ಕ ಹಾಗೂ ಹಲವು ಆಂದೋಲನಗಳ ಪರಿಣಾಮವಾಗಿ ಭರತಖಂಡದಲ್ಲಿ ಹಿಂದೆಂದೂ ಇಲ್ಲದ ನವಜಾಗೃತಿ ಪುಟಿಯುತ್ತದೆ; ಅನೇಕ ರಾಜಕೀಯ ನಾಯಕರು, ಆಂದೋಲನಕಾರರು, ಸಾಹಿತಿಗಳು, ಸಾಧಕರು ಮತ್ತು ತ್ಯಾಗಿಗಳು ಜನ್ಮತಾಳುತ್ತಾರೆ.

ಭರತಖಂಡದ ಸರ್ವಾವನತಿಗೆ, ಪರಕೀಯರ ಆಕ್ರಮಣಕ್ಕೆ ಇಲ್ಲಿಯ ಧಾರ್ಮಿಕ ನ್ಯೂನತೆಗಳು, ಸಾಮಾಜಿಕ ಲೋಪ ದೋಷಗಳು, ಬ್ರಾಹ್ಮಣ ಕ್ಷತ್ರಿಯರ ಕಲಹಗಳು, ಸಾಮಾನ್ಯ ಜನತೆಯ ಅಜ್ಞಾನ, ಜಾತೀಯತೆ, ಅಸಮಾನತೆ ಮತ್ತು ಅಸ್ಪೃಶ್ಯತೆ ಕಾರಣವೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ನೂರಾರು ರಾಜ ಮಹಾರಾಜರ ಪರಸ್ಪರ ದ್ವೇಷಮಾತ್ಸರ್ಯ ಸಂಘರ್ಷಗಳೂ ಕಾರಣವೆಂಬುದು ನಿಜ. ಇಂಡಿಯಾದೇಶ ಪರಕೀಯರ ವಶವಾದದ್ದಕ್ಕೆ ಅವರ ಯುದ್ಧಸಾಮರ್ಥ್ಯ ಬಲಾಢ್ಯತೆಗಿಂತ ಭಾರತೀಯರ ಆಂತರಿಕ ದೌರ್ಬಲ್ಯಗಳೇ ಪ್ರಮುಖ ಕಾರಣವೆಂಬುದನ್ನು ಮರೆಯಲಾಗದು. ಹಿಂದೂ ಧರ್ಮವಿನಾಶದ ಬೀಜಗಳು ಆ ಧರ್ಮದಲ್ಲಿಯೇ ಹುದುಗಿವೆ. ಅದರ ವೈಪರೀತ್ಯ ವೈಷಮ್ಯಗಳೇ ವಿದೇಶೀಯ ಧರ್ಮಗಳ ಬೆಳವಣಿಗೆಗೆ ಕಾರಣವೆಂಬ ಸತ್ಯವನ್ನು ಅಂದಿನವರಿರಲಿ, ಇಂದಿನವರೂ ಅರ್ಥ ಮಾಡಿಕೊಂಡಿಲ್ಲವೆಂಬುದು ಈ ದೇಶದ ಕರ್ಮವಿಪಾಕ. ದೀನ ದಲಿತರ, ನೊಂದವರ, ಬೆಂದವರ ಶಾಪ ದೇಶವನ್ನು ಅಧೋಗತಿಗೆ ನೂಕಿತೆಂಬುದು ದಿಟಕ್ಕೂ ದಿಟ. ಭಗವದಿಚ್ಛೆಯಿಂದಾಗಿ ಆಂಗ್ಲರು ಈ ದೇಶಕ್ಕೆ ಬಂದರು. ಅವರು ಬರದಿದ್ದರೆ ಹಿಂದೂಧರ್ಮ ಏನಾಗುತ್ತಿತ್ತು ಎಂಬುದು ಊಹೆಗೆ ಬಿಟ್ಟ ವಿಷಯವೆಂದು ಹೇಳುವವರುಂಟು. ಗಾಂಧೀಪೂರ್ವಯುಗದ ನಾಯಕರ ಅಭಿಪ್ರಾಯವೂ ಅದೇ ಆಗಿತ್ತು. ದೇಶದ ದಾಸ್ಯವಿಮೋಚನೆಗೆ ಆಂಗ್ಲಾಡಳಿತದಲ್ಲಿ ಪ್ರಸಾರ ಗೊಂಡ ಪಾಶ್ಚಾತ್ಯ ವಿದ್ಯಾಪ್ರಸಾರವೂ ಕಾರಣವೆಂಬುದನ್ನು ಅಲ್ಲಗಳೆಯುವಂತಿಲ್ಲ. ಪಾಶ್ಚಾತ್ಯ ಹಾಗೂ ಭಾರತೀಯ ಸಂಸ್ಕೃತಿಗಳ ಸಮ್ಮಿಲನದ ಫಲವಾಗಿ, ಸ್ವಾತಂತ್ರ್ಯ ಸಂಕಲ್ಪದ ಪರಿಣಾಮವಾಗಿ ಹತ್ತೊಂಬತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಜನ್ಮಧಾರಣೆ ಮಾಡಿದ ಸಂತಶ್ರೇಷ್ಠರನ್ನು, ರಾಜಕೀಯ ನಾಯಕರನ್ನು, ತ್ಯಾಗಿಗಳನ್ನು, ಪ್ರತಿಭಾವಂತರನ್ನು, ಹುತಾತ್ಮರನ್ನು ನೆನೆದಾಗ ರೋಮಾಂಚನವಾಗುತ್ತದೆ. ಪ್ರತಿಯೊಬ್ಬ ಮುಂಚೂಣಿಯ ನಾಯಕರೂ ಲಾಕ್, ಮಿಲ್, ಪೆಯಿನ್, ಮಾಂಟೆಸ್ಕ್ಯೋ, ಮೆಜಿನಿ, ಲೆನಿನ್ ಮೊದಲಾದವರಂತೆ ಅಮೂಲ್ಯ ರಾಜಕೀಯ ವಿಚಾರಧಾರೆಯ ಆಸ್ತಿಯನ್ನು ಬಿಟ್ಟುಹೋಗಿದ್ದಾರೆಂಬುದು ಹೆಮ್ಮೆಯ ಸಂಗತಿ. ಆ ವಿಚಾರಧಾರೆಯ ಸಂಕ್ಷಿಪ್ತ ಇತಿಹಾಸವನ್ನು ನಿರೂಪಿಸುವುದೇ ಈ ಪ್ರಬಂಧದ ಉದ್ದೇಶ.

## ಬ್ರಹ್ಮಸಮಾಜದ ಪ್ರಭಾವ

ಇಂಡಿಯಾ ದೇಶದಲ್ಲಿ ಆಂಗ್ಲಾಡಳಿತ ರೂಪಿಕ್ಕುವ ಸಮಯದಲ್ಲಿ, ಅನಂತರ ಕೆಲವು ಕಾಲ ಕಲ್ಕತ್ತ ದೇಶದ ರಾಜಧಾನಿಯಾಗಿತ್ತು. ಅದರ ದೆಸೆಯಿಂದಾಗಿ ಬ್ರಿಟಿಷ್ ಸಾಮ್ರಾಜ್ಯದ ಕೆನೆಯಂತಿದ್ದ ವ್ಯಾಪಾರ ವಾಣಿಜ್ಯೋದ್ಯಮಿಗಳು, ಆಡಳಿತ ನಿಪುಣರು, ಮುತ್ಸದ್ದಿಗಳು, ವಿಜ್ಞಾನಿಗಳು, ಕಲಾವಿದರು, ವಿವಿಧ ವಿದ್ಯಾಪಾರಂಗತರು ಅಲ್ಲಿ ನೆರೆಯುವಂತಾಯಿತು. ಜತೆಗೆ ಜಗತ್ತಿನ ಎಲ್ಲ ದೇಶಗಳ ವ್ಯಾಪಾರೋದ್ಯಮಿಗಳು, ರಾಜಕಾರಣಿಗಳು, ಪ್ರವಾಸಿಗರು ಅಲ್ಲಿಗೆ ಬರುವಂತಾಯಿತು. ಯೂರೋಪೀಯ ಪಾದ್ರಿಗಳಂತೂ ಚರ್ಚುಗಳ ಜತೆಜತೆಗೆ ಶಾಲಾ ಕಾಲೇಜುಗಳನ್ನು ತೆರೆದು ಪಾಶ್ಚಾತ್ಯ ವಿದ್ಯಾಸಂಸ್ಕೃತಿಯನ್ನು ಹರಡಲನುವಾದರು. ಈ ಎಲ್ಲ ಸಂಘಟನೆಗಳ ಕ್ರಿಯಾತ್ಮಕ ವ್ಯವಹಾರಗಳಿಂದಾಗಿ ಆ ನಗರ ಬೌದ್ಧಿಕ ವ್ಯಾಪಾರಾಕರ್ಷಣ ಸಂಘರ್ಷಗಳ ಕುದಿ ಕಡಲಾಗುತ್ತದೆ. ಆ ಕುದಿಹದಿಂದಾಗಿ ಇಡೀ ಬಂಗಾಳದ ಚೇತನ ಜಾಗ್ರತಗೊಳ್ಳುತ್ತದೆ; ದೇಶದ ಮುನ್ನಡೆಯ ಮುಂಚೂಣಿಯಲ್ಲಿ ಮಿಂಚುತ್ತದೆ. ವಿಶ್ವಪ್ರಜ್ಞೆಯೇ ಅಲ್ಲಿ

ಸಾಕಾರಗೊಂಡಂತೆ ಕಾಣುತ್ತದೆ. ರಾಜಾರಾಮ ಮೋಹನರಾಯ, ದೇವೇಂದ್ರನಾಥ ಠಾಕೂರ್, ಈಶ್ವರಚಂದ್ರ ವಿದ್ಯಾಸಾಗರ, ರಾಮಕೃಷ್ಣ ಪರಮಹಂಸ, ವಿವೇಕಾನಂದ, ಬಂಕಿಮ್‌ಚಂದ್ರಚಟರ್ಜಿ, ಜಗದೀಶಚಂದ್ರ ಬೋಸ್, ರವೀಂದ್ರನಾಥ ಠಾಕೂರ್, ಅರವಿಂದ ಘೋಷ್, ಸುರೇಂದ್ರನಾಥ ಬ್ಯಾನರ್ಜಿ, ಬಿಪಿನ್‌ಚಂದ್ರ ಪಾಲ್, ಚಿತ್ತರಂಜನದಾಸ್, ಎಂ. ಎನ್. ರಾಯ್, ಸುಭಾಷ್ ಚಂದ್ರ ಬೋಸ್, ನಂದಲಾಲ್ ಬೋಸ್- ಈ ಪ್ರತಿಭಾಸಂಪತ್ತಿನ ಮೆರವಣಿಗೆಯನ್ನು ನೋಡಿದಾಗ ಯಾರಿಗಾದರೂ ಆಶ್ಚರ್ಯವಾಗದಿರದು. ಆಧುನಿಕತೆಯ ಅಗ್ರಗಾಮಿಗಳೆಂದರೆ ಈ ಬಂಗಾಳಿಗಳೆಂಬುದೇ ಸರಿ.

ಈ ಸಮುದಾಯದಲ್ಲಿ **ರಾಜಾರಾಮ ಮೋಹನರಾಯ್** (೧೭೭೨-೧೮೩೩) ಮೊದಲಿಗರು. ಪರ್ಶಿಯನ್, ಅರೇಬಿಕ್, ಬಂಗಾಳಿ, ಇಂಗ್ಲಿಷ್ ಭಾಷೆಗಳಲ್ಲಿ ಪರಿಣತರಾಗಿದ್ದ ಅವರ ಮನಹೃದಯಗಳು ಉದಾರವಿಶಾಲ ಮತ್ತು ಸಾಮಾಜಿಕ ಪ್ರಜ್ಞೆಯಿಂದಾಗಿ ದೇಶಕ್ಕೆ ಮಾರ್ಗದರ್ಶನ ಮಾಡಬಲ್ಲವರಾಗಿದ್ದರು. ಲೌಕಿಕ ಸವಾಲುಗಳನ್ನೆದುರಿಸಬಲ್ಲ ಆಧುನಿಕ ಜ್ಞಾನ ಸಂಪಾದನೆಗೆ ಇಂಗ್ಲಿಷ್ ಜ್ಞಾನ ಭಾರತೀಯರಿಗೆ ಅತ್ಯಗತ್ಯವೆಂಬುದು ಅವರ ನಂಬಿಕೆ. 'ಸತಿ'ಯಂಥ ದುಷ್ಟ ಮೌಢ್ಯ ಪದ್ಧತಿಗಳ, ಮಹಿಳೆಯರ ಬವಣೆಗಳ ವಿರುದ್ಧವಾಗಿ ಹೋರಾಟ ನಡೆಸುತ್ತಾರೆ. ಹಿಂದೂ ಧರ್ಮದ ನ್ಯೂನತೆಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಕ್ಕಾಗಿ ಅವರಿಗೆ ಗೃಹಚ್ಯುತಿಯಾಗುತ್ತದೆ, ಸಮಾಜದಿಂದಲೂ ಬಹಿಷ್ಕೃತರಾಗುತ್ತಾರೆ. ೧೮೨೮ರ ಆಗಸ್ಟ ತಿಂಗಳಲ್ಲಿ ಬ್ರಹ್ಮಸಮಾಜವನ್ನು ಸ್ಥಾಪಿಸಿ, ದೇವೇಂದ್ರನಾಥ್ ಠಾಕೂರ್ ಮೊದಲಾದ ಗೆಳೆಯರಿಗೆ ಅದರ ಜವಾಬ್ದಾರಿಯನ್ನು ವಹಿಸಿ, ಇಂಗ್ಲೆಂಡಿಗೆ ಹೊರಟುಹೋಗುತ್ತಾರೆ. ಇಂಗ್ಲೆಂಡಿನಲ್ಲಿದ್ದರೂ, ಅಲ್ಲಿಯ ನಾಯಕರ ಸಖ್ಯವನ್ನು ಬೆಳೆಸಿಕೊಂಡು, ಭಾರತೀಯ ಸಮಾಜದ ಮೂಢ ಸಂಪ್ರದಾಯಗಳ ವಿರುದ್ಧವಾಗಿ ಧಾಳಿ ನಡೆಸುತ್ತಾರೆ. ಸಂಪ್ರದಾಯಸ್ಥರಾದ ಉತ್ತಮ ವರ್ಣದವರು ಸತಿ ಮೊದಲಾದ ಜೀರ್ಣ ಪದ್ಧತಿಗಳನ್ನುಳಿಸಿಕೊಳ್ಳಲು ತಮ್ಮ ಶಕ್ತಿಯನ್ನೆಲ್ಲ ವ್ಯಯಮಾಡುತ್ತಾರೆ. ರಾಯರ ತರ್ಕ ಸರಿಕಂಡರೂ, ಉತ್ತಮವರ್ಣದವರ ವಿರೋಧ ಕಟ್ಟಿಕೊಳ್ಳಲು ಆಂಗ್ಲಾಡಳಿತಗಾರರು ಹಿಂಜರಿಯುತ್ತಾರೆ. ಡೇವಿಡ್ ಹ್ಯೂವಲ್, ಮಾಂಟೆಸ್ಕ್ಯೂ, ವಾಲ್ಟೇರ್, ರೂಸೋ, ಲಾಕ್, ಪೆಯಿನ್ ಮೊದಲಾದ ಚಿಂತಕರ ಪ್ರಭಾವಕ್ಕೊಳಗಾಗಿದ್ದ ಮೋಹನರಾಯ್ ವೈಯಕ್ತಿಕ ಸ್ವಾತಂತ್ರ್ಯ ಹಾಗೂ ರಾಷ್ಟ್ರ ಭಾವನೆಗಳ ಪ್ರಚಾರದಲ್ಲಿ ತೊಡಗುತ್ತಾರೆ. ಬೈಬಲ್ ಪಾರಂಗತರಾಗಿದ್ದ ಅವರು ವಿಗ್ರಹಾರಾಧನೆಯನ್ನೂ ಬಹುದೇವತೋಪಾಸನೆಯನ್ನೂ ಮೂಢನಂಬಿಕೆಗಳನ್ನೂ ತಿರಸ್ಕರಿಸಿ, ಏಕದೇವತೋಪಾಸನೆಯನ್ನು ವ್ರತವಾಗಿ ಸ್ವೀಕರಿಸುತ್ತಾರೆ. ಧ್ಯಾನ ಮೂಲಕದ ಪರಮಾರ್ಥಾನುಷ್ಠಾನದಲ್ಲಿ ಅವರಿಗೆ ದೃಢವಾದ ನಂಬಿಕೆಯಿತ್ತು. ಫ್ರೆಂಚ್ ಕ್ರಾಂತಿಯ ಸಂದೇಶಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಸೋದರತ್ವಗಳು ಅವರಿಗೆ ತುಂಬ ಮೆಚ್ಚುಗೆಯಾಗುತ್ತವೆ.

ಪರಕೀಯರ ದಾಸ್ಯವೆಂದರೆ ಅವರಿಗಾಗದು. ಒಂದು ದೇಶ ಮತ್ತೊಂದು ದೇಶದ ಮೇಲೆ ದರ್ಬಾರು ನಡೆಸುವುದು ಮಹಾಪರಾಧವೆಂದೇ ಅವರ ನಂಬಿಕೆ. ಆದರೆ ಆಂಗ್ಲರ ಸಂಸ್ಕೃತಿ ಶೀಲ, ಶಿಸ್ತು ಮತ್ತು ಬೌದ್ಧಿಕತೆಗಳನ್ನು ಬಲ್ಲ ಅವರು ದೇಶೀಯರ ಅಭ್ಯುದಯದ ದೃಷ್ಟಿಯಿಂದ ಆಂಗ್ಲರ ಆಡಳಿತ ಕೆಲವು ಶತಮಾನವಾದರೂ ಮುಂದುವರಿಯಬೇಕೆಂದು ವಾದಿಸುತ್ತಿದ್ದುದುಂಟು. ಆದರೂ ಸರ್ಕಾರ ವೈಯಕ್ತಿಕ ಹಕ್ಕುಗಳನ್ನು ಕಸಿದುಕೊಳ್ಳಬಾರದೆಂದೂ ಪತ್ರಿಕಾ ಸ್ವಾತಂತ್ರ್ಯಕ್ಕೆ ಯಾವ ವಿಧದಲ್ಲಿಯೂ ಧಕ್ಕೆ ತರಬಾರದೆಂದೂ ಅವರು ತಮ್ಮ ಅಭಿಪ್ರಾಯವನ್ನು ಮೇಲಿಂದ ಮೇಲೆ ಬಹಿರಂಗಪಡಿಸುತ್ತಾರೆ. ನ್ಯಾಯಾಂಗವು ಆಡಳಿತಾಂಗದಿಂದ ಪ್ರತ್ಯೇಕ ವಾಗಿರಬೇಕೆಂದವರು ನಿರಂತರವಾಗಿ ವಾದಿಸುತ್ತಾರೆ.

ಖಾಸಗಿ ಆಸ್ತಿಗೆ, ಒಂದು ರೀತಿಯಲ್ಲಿ ಬಂಡವಾಳಗಾರಿಕೆಗೆ ಅವಕಾಶ ಬೇಕೆಂಬುದು ರಾಯರ ಚಿಂತನೆ. ಭೂಮಿ ಜಮೀನ್ದಾರರಿಗೆ ಸೇರಿದ್ದೇ ಹೊರತಾಗಿ, ಸರ್ಕಾರಕ್ಕಲ್ಲವೆಂಬುದು ಅವರ ನಿಶ್ಚಿತ ಮತ. ರೈತವಾರಿ ಪದ್ದತಿಗಿಂತ ಜಮೀನ್ದಾರಿ ಪದ್ಧತಿ ಒಳ್ಳೆಯದೆಂಬುದು ಅವರ ವಾದ. ರಾಷ್ಟ್ರದ ಆರ್ಥಿಕ ಚೈತನ್ಯಕ್ಕೆ ಹಾಗೂ ದೃಢತೆಗೆ ಮಧ್ಯಮವರ್ಗದ ಜನ ಹಾಗೂ ಜಮೀನ್ದಾರಿ ಪದ್ಧತಿ ಅತ್ಯವಶ್ಯಕವೆಂಬುದು ಅವರ ಮತ. ರೈತರ ಬಗ್ಗೆಯೂ ಅವರಿಗೆ ಸಹಾನುಭೂತಿಯುಂಟು. ಜಮೀನ್ದಾರರ ಹಾಗೂ ಅವರ ದಲ್ಲಾಳಿಗಳ ಸುಲಿಗೆ ತುಳಿತಗಳಿಂದ ಅವರನ್ನು ಪಾರುಮಾಡಬೇಕೆಂದು ಸರ್ಕಾರವನ್ನವರು ಎಚ್ಚರಿಸುತ್ತಾರೆ. ರೈತಕಾರ್ಮಿಕರಿಗೆ ಕನಿಷ್ಠ ವೇತನವನ್ನು ನಿಷ್ಕರ್ಷಿಸಬೇಕೆಂದವರು ಸರ್ಕಾರಕ್ಕೆ ಕರೆಕೊಡುತ್ತಾರೆ. ಸೈನ್ಯಕ್ಕೆ ತಗಲುವ ಖರ್ಚನ್ನು ಕಡಿತಗೊಳಿಸಿ, ಸಮಾಜ ಕ್ಷೇಮಾಭ್ಯುದಯ ಕಾರ್ಯಗಳ ಕಡೆಗೆ ಗಮನ ಹರಿಸುವಂತೆ ಅವರು ಸರ್ಕಾರಕ್ಕೆ ಸಲಹೆ ನೀಡುತ್ತಾರೆ.

ರಾಜಾರಾಮ ಮೋಹನರಾಯರು ಬಹುಮುಖೀ ಪ್ರತಿಭಾವಂತರು. ಬಂಗಾಳೀ ಪತ್ರಿಕಾ ಕ್ಷೇತ್ರದ ಹಾಗೂ ಬಂಗಾಳೀ ಗದ್ಯ ಸಾಹಿತ್ಯದ ಆದ್ಯ ಪ್ರವರ್ತಕರವರು. ತೌಲನಿಕ ಧರ್ಮಾಧ್ಯಯನದಲ್ಲಿ ಪ್ರವೀಣರಾದ ಅವರು ವಿಶ್ವೈಕ್ಯಕ್ಕಾಗಿ ಸದಾ ಚಿಂತಿಸುತ್ತಾರೆ.

ರವೀಂದ್ರನಾಥ ಠಾಕೂರರ ತಂದೆ ದೇವೇಂದ್ರನಾಥ ಠಾಕೂರರು ಮಹರ್ಷಿಯೆಂದೇ ಹೆಸರುವಾಸಿಯಾದವರು. ಉಪನಿಷತ್ತುಗಳ ಅನುಭವಾಮೃತದಲ್ಲಿ ಮುಳುಗಿದವರು. ಶಂಕರರ ಮಾಯಾವಾದ ಅವರಿಗೆ ಹಿಡಿಸದು; ರಾಮಾನುಜಾಚಾರ್ಯರ ಉಪದೇಶ ಅವರಿಗೆ ಮೆಚ್ಚು. ತತ್ತ್ವೋಪಾಸಕರೂ ಅನುಭಾವಿಗಳೂ ಆದ ಅವರಿಗೆ ರಾಜಕೀಯ ಸಾಮಾಜಿಕ ವಿಚಾರಗಳಲ್ಲಿ ಆಸಕ್ತಿಯಿಲ್ಲ. ಬೈಬಲ್‌ನಲ್ಲಿ ಅಪಾರ ಪಾಂಡಿತ್ಯವನ್ನು ಸಂಪಾದಿಸಿದ್ದ **ಕೇಶವಚಂದ್ರಸೇನ** (೧೮೩೮-೧೮೮೪) ಅದರೊಳಗಿನ ಕೆಲವು ಪರಿಕಲ್ಪನೆಗಳನ್ನು ಬ್ರಹ್ಮಸಮಾಜದಲ್ಲಿ ಸೇರಿಸಿಕೊಳ್ಳಲು ಪ್ರಯತ್ನಿಸಿದಾಗ ಅದು ಇಬ್ಭಾಗವಾಗುತ್ತದೆ. ದೇವೇಂದ್ರನಾಥ ಠಾಕೂರರ ನೇತೃತ್ವದ ಸಮಾಜ ಆದಿ ಬ್ರಾಹ್ಮ ಸಮಾಜವೆಂದೂ, ಕೇಶವ ಚಂದ್ರಸೇನರದು ಭಾರತೀಯ ಬ್ರಾಹ್ಮಸಮಾಜವೆಂದೂ ನಾಮಕರಣಗೊಳ್ಳುತ್ತವೆ. ಕೂಚ್ ಬಿಹಾರಿನ ಮಹಾರಾಜನಿಗೆ ತಮ್ಮ ಅಪ್ರಾಪ್ತ ವಯಸ್ಸಿನ ಮಗಳನ್ನು ಸೇನ್‌ಗೆ ಮದುವೆಮಾಡಿಕೊಡಲಾಗಿ, ಅವರ ಸಮಾಜದಲ್ಲಿದ್ದ ಕೆಲವು ಗಣ್ಯರು ದೂರ ಸರಿದು, ಸಾಧಾರಣ ಬ್ರಾಹ್ಮ ಸಮಾಜವನ್ನು ಸ್ಥಾಪಿಸಿಕೊಳ್ಳುತ್ತಾರೆ.

೧೮೭೦ರಲ್ಲಿ ಕೇಶವ ಚಂದ್ರಸೇನ್ ಇಂಗ್ಲೆಂಡಿಗೆ ಹೋಗಿದ್ದಾಗ, ತಮ್ಮ ವಾಗ್ಮಿತೆಯಿಂದ ರಾಣಿ ಮೊದಲುಗೊಂಡು ಅಲ್ಲಿಯ ಗಣ್ಯರನ್ನು ಚಕಿತಗೊಳಿಸುತ್ತಾರೆ. 'ಭರತಖಂಡಕ್ಕೆ ಇಂಗ್ಲೆಂಡು ಸಲ್ಲಿಸಬೇಕಾದ ಕರ್ತವ್ಯ' ಎಂಬ ಉಪನ್ಯಾಸದಲ್ಲಿ ಕ್ರಿಸ್ತಮತದ ಮಹತ್ವವನ್ನು ಪ್ರಶಂಸಿಸುತ್ತಾರೆ; ಚರ್ಚ್ ಆರಾಧನೆಯ ಕ್ರಿಸ್ತನಿಗಿಂತ ಧರ್ಮಗ್ರಂಥದ ಕ್ರಿಸ್ತ ಉತ್ತಮನೆಂದು ವಿವರಿಸುತ್ತಾರೆ. ಮೊದಲನೆಯ ಉಪನ್ಯಾಸದಿಂದ ಅಲ್ಲಿಯ ಜನರಿಗೆ ಅಸಮಾಧಾನವಾದರೆ, ಎರಡನೆಯದು ಅವರ ಮೆಚ್ಚುಗೆಗೆ ಪಾತ್ರವಾಗುತ್ತದೆ. ನೀವು ಭರತ ಖಂಡದ ಧರ್ಮದರ್ಶಿಗಳೆ ಹೊರತು, ಅದರ ಮಾಲೀಕರಲ್ಲ. ಆದ್ದರಿಂದ ಅಲ್ಲಿಯ ಆದಾಯೋತ್ಪನ್ನಗಳನ್ನು ಇಂಗ್ಲೆಂಡಿನ ಅಭಿವೃದ್ಧಿಗೆ ಬಳಸಿಕೊಳ್ಳಬಾರದು ಎಂದು ಅಲ್ಲಿನ ಜನರಿಗೆ ಕರೆಕೊಡುತ್ತಾರೆ. ಧರ್ಮಸಮನ್ವಯ ಹಾಗೂ ಮತೀಯ ಕೊಳುಕೊಡೆಯಲ್ಲಿ ಅವರಿಗೆ ನಂಬಿಕೆ. ಶ್ರೀರಾಮಕೃಷ್ಣ ಪರಮಹಂಸರ ದರ್ಶನದ ನಂತರ, ಕ್ರಿಶ್ಚಿಯನ್ ಮತದ ಬಗೆಗಿನ ಅವರ ಅನುರಕ್ತಿ ಇಳಿಮುಖವಾಗಿ, ವೇದಾಂತ ವನ್ನವರು ಆಶ್ರಯಿಸುತ್ತಾರೆ. ವಿಶ್ವಶಕ್ತಿ ಅಥವಾ ನಿಯತಿಗನುಗುಣವಾಗಿ ಜಗತ್ತಿನ ಚಲನವಲನಗಳು ಸಾಗುತ್ತವೆಂಬುದು ಅವರ ಸಿದ್ಧಾಂತ.

ಇಂಗ್ಲೆಂಡಿನಿಂದ ಮರಳಿದನಂತರ ಅವರು ಭಾರತೀಯ ಸಾಮಾಜಿಕ ಮತ್ತು ನೈತಿಕ ಸುಧಾರಣೆಗಾಗಿ ಸಂಸ್ಥೆಯೊಂದನ್ನು ತೆರೆಯುತ್ತಾರೆ. ಶಿಕ್ಷಣ ಪ್ರಸಾರ, ಮಹಿಳಾ ಪರಿಸ್ಥಿತಿ ಸುಧಾರಣೆ ಮೊದಲಾದುವು ಆ ಸಂಸ್ಥೆಯ ಉದ್ದೇಶಗಳಲ್ಲಿ ಕೆಲವು. ಅಮಾನವೀಯ ಜಾತೀಯತೆ ಮತ್ತು ಪೈಶಾಚಿಕ ಪುರೋಹಿತಶಾಹಿ ಭರತಖಂಡದ ಸರ್ವರೋಗಗಳಿಗೆ, ಪರಕೀಯ ದಾಸ್ಯಕ್ಕೆ ಕಾರಣವೆಂಬುದು ಅವರಿಗೆ ಮನದಟ್ಟಾಗಿತ್ತು. ಆ ತಿಳಿವಳಿಕೆಯಿಂದಾಗಿಯೇ ಆಂಗ್ಲರ ಆಡಳಿತ ಆಕಸ್ಮಿಕವಲ್ಲ, ದೈವೇಚ್ಛೆಯೆಂದವರು ನಂಬುತ್ತಾರೆ. ಆಂಗ್ಲಾಡಳಿತದ ಫಲವಾಗಿ ಭಾರತ ವಿದೇಶೀಯ ಮತಗಳ ಹಬ್ಬುಗೆಗೆ ಹಾಗೂ ಹಿಂದೂ ಪುರೋಹಿತಶಾಹಿಯ ತೀಕ್ಷ್ಣಾಕ್ಷೇಣಕ್ಕೆ ಅವಕಾಶವಾಯಿತೆಂಬುದು ನಿಜ. ಮೇಲಾಗಿ ರಾಷ್ಟ್ರೀಯತಾ ಮನೋಭಾವನೆಯ ಬೀಜಾವಾಪಕ್ಕೆ, ವೈಚಾರಿಕ ವೈಜ್ಞಾನಿಕ ಬುದ್ಧಿ ಸಂವರ್ಧನೆಗೆ ಅದು ಸಹಾಯಕವಾಯಿತೆಂಬುದರಲ್ಲಿಯೂ ಅನುಮಾನವಿಲ್ಲ. ಸಾಮಾಜಿಕ ಚಾರಿತ್ರಿಕ ಆವಶ್ಯಕತೆಯ ಪರಿಣಾಮವಾಗಿ ಮಹಾಪುರುಷ ಉದಯಿಸುತ್ತಾನೆಂದು ಹೆಗೆಲ್‌ನ ಧಾಟಿಯಲ್ಲಿ ಸೇನ್ ಹೇಳಿದ್ದುಂಟು.

ಆಂಗ್ಲಪ್ರಭುತ್ವದ ಬಗೆಗವರಿಗೆ ದ್ವೇಷವಿರದಿದ್ದರೂ, ಸ್ವಾತಂತ್ರ್ಯ ವ್ಯಕ್ತಿಯ ಆತ್ಮಗೌರವದ ಹಾಗೂ ರಾಷ್ಟ್ರೀಯತೆಯ ಕುರುಹೆಂಬುದು ಅವರ ಭಾವನೆ. ದಾಸ್ಯ ಯಾವ ರೂಪದಲ್ಲಿದ್ದರೂ ಕೆಟ್ಟದ್ದು. ದೇವರು ಸರ್ವಾಂತರ್ಯಾಮಿಯಾಗಿರುವಾಗ ವಿಗ್ರಹಾರಾಧನೆಯಾಗಲಿ, ಜಾತೀಯತೆಯಾಗಲಿ ದೂಷ್ಯವೆಂದವರು ಸ್ಪಷ್ಟಪಡಿಸಿದ್ದಾರೆ. ಸ್ವಾತಂತ್ರ್ಯಪ್ರೇಮ ವರ್ತಮಾನಯುಗದ ಪ್ರಮುಖ ಲಕ್ಷಣವೆಂದವರು ತಮ್ಮ ಲೇಖನ ಭಾಷಣಗಳಲ್ಲಿ ವಿಶದಪಡಿಸಿದ್ದಾರೆ. ಪ್ರತ್ಯೇಕತಾ ಮನೋಧರ್ಮವಾಗಲಿ, ಪರಸ್ಪರ ದ್ವೇಷಾಸೂಯೆಗಳಾಗಲಿ, ಜಾತೀಯತೆಯಾಗಲಿ ರಾಷ್ಟ್ರೀಯತೆಗೆ ವಿರುದ್ಧವೆಂದು ಒತ್ತಿಹೇಳಿದ್ದಾರೆ. ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿಗಳ ಸಾಮರಸ್ಯದಿಂದ ಉದ್ಭವವಾಗುವ ವಿಶ್ವಪ್ರೇಮ ಮಾತ್ರವೇ ಮನುಕುಲದ ಶಾಂತಿಗೆ ನಾಂದಿಯಾದೀತೆಂದು ಅವರು ದೃಢಪಡಿಸಿದ್ದಾರೆ.

ವಾಸ್ತವವಾಗಿ ಬ್ರಾಹ್ಮಸಮಾಜದ ಧ್ಯೇಯ ರಾಜಕೀಯಾಂದೋಲನವಲ್ಲ. ಆದರೆ ಅದರ ಮಾನವಧರ್ಮದ ಕಲ್ಪನೆ, ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಸಾಮರಸ್ಯಸಾಧನೆ ಹಾಗೂ ವಿಚಾರವಾದದಿಂದೊಡಗೂಡಿದ ವಿಶ್ವಪ್ರಜ್ಞೆ ಭರತಖಂಡದಲ್ಲಿ ವಿನೂತನ ವಾತಾವರಣವನ್ನು ಸೃಷ್ಟಿಸುತ್ತದೆ; ಬಿಪಿನ್ ಚಂದ್ರಪಾಲ್, ಸಿ. ಆರ್. ದಾಸ್, ರವೀಂದ್ರನಾಥ್ ಟಾಗೋರ್, ಜಗದೀಶ ಚಂದ್ರಬೋಸ್ ಮೊದಲಾದ ಧೀಮಂತ ಪ್ರತಿಭಾವಂತರ ಮೇಲೆ ಅಸಾಧಾರಣ ಪ್ರಭಾವ ಬೀರುತ್ತದೆ. ವಿಗ್ರಹಾರಾಧನೆಯ ನಿರಾಕರಣೆ, ಬಹುದೇವತೋಪಾಸನೆಯ ವಿರೋಧ, ಏಕದೇವತೋಪಾಸನೆಯ ಸ್ವೀಕಾರ, ವಿವಿಧ ಧಾರ್ಮಿಕ ತತ್ತ್ವಗಳ ಪರಸ್ಪರ ವಿನಿಮಯಾವಕಾಶ,

ಇವೇ ಮೊದಲಾದ ವಿಶಿಷ್ಟ ಕಾರ್ಯಕ್ರಮಗಳಿಂದಾಗಿ ಸಂಪ್ರದಾಯಜಡವಾದ ಹಿಂದೂಸ್ಥಾನದಲ್ಲಿ ಆ ಸಮಾಜ ಬೇರೂರಲಾರದೆ ಕಂತುಹೋಗುತ್ತದೆ.

**ಆರ್ಯಸಮಾಜದ ಅಚ್ಚಳಿಯದ ಮುದ್ರೆ**

ಬ್ರಹ್ಮ ಸಮಾಜಕ್ಕಿಂತ ವಿಸ್ತೀರ್ಣವೂ, ವ್ಯಾಪಕವೂ, ಬಹುದೀರ್ಘಾವಧಿಯದೂ, ಸತ್ವಯುಕ್ತವೂ ಆದ ವ್ಯವಸ್ಥೆ ಆರ್ಯ ಸಮಾಜ. ಅದು ಉದಯವಾದಾಗ ಇಂಡಿಯಾ ದೇಶದ ಮೂಲೆ ಮೂಲೆಗಳಲ್ಲಿ ಅದರ ಪ್ರಭಾವಳಿ ಮೆರೆದದ್ದಲ್ಲದೆ, ಅದರ ಸಂಜೆಗೆಂಪಿನ ಛಾಯೆಯನ್ನು ಈಗಲೂ ಅಲ್ಲಲ್ಲಿ ಕಾಣಬಹುದು. ಅದರ ಜನಕ ಗುಜರಾತಿನ **ಸ್ವಾಮಿ ದಯಾನಂದ ಸರಸ್ವತಿ.** (೧೮೨೧-೧೮೮೩) ಸಂಪ್ರದಾಯಸ್ಥ ಬ್ರಾಹ್ಮಣ ವಂಶದಲ್ಲಿ ಹುಟ್ಟಿದ ಅವರು ವಿವಾಹ ಬಂಧನದಿಂದ ತಪ್ಪಿಸಿಕೊಳ್ಳುವ ಸಲುವಾಗಿ, ಮನೆಯಿಂದ ತಪ್ಪಿಸಿಕೊಂಡು, ಅಲೆದಾಡಿ, ಮಹಾವಿದ್ವಾಂಸರ ಸನಿಹದಲ್ಲಿ ಕುಳಿತು ವೇದೋಪನಿಷತ್ತು ಭಗವದ್ಗೀತಾದಿ ಸಾಹಿತ್ಯವನ್ನೋದಿ ಪಾರಂಗತರಾಗುತ್ತಾರೆ. ಸಾಮಾಜಿಕ ಅರಾಜಕತೆಯ ವಿರುದ್ಧ ಸಮರಹೂಡುವ ಸಲುವಾಗಿ ೧೮೭೫ ಏಪ್ರಿಲ್ ತಿಂಗಳಲ್ಲಿ ಆರ್ಯ ಸಮಾಜವನ್ನು ಸ್ಥಾಪಿಸುತ್ತಾರೆ. ವಾಚಾಮನಸಾಕ್ರಿಯಾಪೂರ್ವಕವಾಗಿ ಸತ್ಯಾನ್ವೇಷಣೆ ಮಾಡುವುದಾಗಿ ಪ್ರತಿಜ್ಞಾಬದ್ಧರಾದ ಆ ವೈರಾಗ್ಯ ಶಿರೋಮಣಿ ಹಿಂದೂ ಕ್ರಿಶ್ಚಿಯನ್ ಧರ್ಮಗಳ ಮೂಢನಂಬಿಕೆಗಳ ವಿರುದ್ಧ ಖಂಡನೆಯ ಖಡ್ಗವೆತ್ತುತ್ತಾರೆ. ಸೃಜನಶೀಲ ಚೈತನ್ಯೋತ್ಸಾಹಗಳಿಂದ ವಿಜೃಂಭಿಸುತ್ತಿದ್ದ ಆ ಮಹಾಯೋಗಿ ಪಾಂಡಿತ್ಯದ ಮೂಲಕ, ಪ್ರವಚನ ಸಂವಾದ ಭಾಷಣಗಳ ಮೂಲಕ ಹಿಂದೂ ಧರ್ಮದಲ್ಲಿ ವಿನೂತನ ಶಕೆಯನ್ನಾರಂಭಿಸುತ್ತಾರೆ. ರಾಜಕೀಯ ಅವರ ಕ್ಷೇತ್ರವಲ್ಲವಾದರೂ, ದೀನದಲಿತ ಮಹಿಳೆಯರ ಪರವಾಗಿ ಅವರು ಧರ್ಮಧ್ವಜವನ್ನು ಹಾರಿಸುತ್ತಾರೆ; ಸಾರ್ವಜನಿಕ ಶಿಕ್ಷಣದಲ್ಲಿ ದೇಶದ ಅಭ್ಯುದಯವಿದೆಯೆಂದು ಸಾರುತ್ತಾರೆ. ನಾಡಿನ ನಾಡಿನಾಡಿಗಳಲ್ಲಿ ದೇಶಾಭಿಮಾನದ ಅಲೆಯನ್ನೆಬ್ಬಿಸಲು ಯಶಸ್ವಿಯಾಗುತ್ತಾರೆ. ಮಾಯಾವಾದ ಜನತೆಯ ಲೌಕಿಕೋತ್ಸಾಹವನ್ನು ಕುಗ್ಗಿಸಲಾಗಿ, ದೇಶದ ಪ್ರಗತಿ ಕುಂಠಿತವಾಯಿತೆಂದವರು ಸಾರುತ್ತಾರೆ. ಮೂಢನಂಬಿಕೆಗಳನ್ನು ತೊಡೆದುಹಾಕುವುದರಲ್ಲಿ, ಅಸ್ಪೃಶ್ಯತಾ ನಿವಾರಣೆ ಸಹಿತ ಸಾಮಾಜಿಕ ಸುಧಾರಣೆಯನ್ನು ಕಾರ್ಯಗತಗೊಳಿಸುವಲ್ಲಿ, ಜನತೆಯಲ್ಲಿ ದೇಶಾಭಿಮಾನವನ್ನು ಉಕ್ಕಿಸುವಲ್ಲಿ ಆರ್ಯ ಸಮಾಜ ತಕ್ಕಮಟ್ಟಿಗೆ ಯಶಸ್ವಿಯಾಗುತ್ತದೆ.

ದಯಾನಂದರು ವೇದಾರಾಧಕರು. ಜೀವನದ ಸಮಸ್ಯೆಗಳನ್ನು ವೈದಿಕ ಭಾಷೆಯ ಚೌಕಟ್ಟಿನಲ್ಲಿ ಪರಿಹರಿಸಬೇಕೆಂಬುದು ಅವರ ವಿಚಾರ. ವೇದಗಳ ಅಪೌರುಷೇಯತೆಯಲ್ಲಿ, ಅವುಗಳ ನಿರಂಜನತ್ವದಲ್ಲಿ ಹಾಗೂ ಅವುಗಳ ಸುಸ್ಥಿರತೆಯಲ್ಲವರಿಗೆ ಪೂರ್ಣ ವಿಶ್ವಾಸ. ಅವರು ವರ್ಣಾಶ್ರಮ ಧರ್ಮದ ಸಮರ್ಥಕರಾದರೂ, ಜಾತೀಯತೆಯ ಅಸಮಾನತೆ ಅನ್ಯಾಯಗಳನ್ನು ಹೀಗಳೆಯುತ್ತಾರೆ. ಹುಟ್ಟಿನ ಆಧಾರದ ಮೇಲೆ ಜಾತೀಯತೆಯನ್ನು ನಿರ್ಣಯಿಸಲಾಗದೆಂದೂ, ಅವರವರ ಮನೋಧರ್ಮ, ವರ್ತನೆ, ಗುಣಸ್ವಭಾವ ಜಾತಿನಿರ್ಣಯದ ಮಾನಕಗಳಾಗಬೇಕೆಂದೂ ಅವರು ವಾದಿಸುತ್ತಾರೆ. ಆದರೂ ಆಧುನಿಕ ಭಾರತದ ದೃಷ್ಟಿಯಿಂದ ಶ್ರೇಣೀಕೃತ ಸಮಾಜದ ಮುಂದುವರಿಕೆ ಸರಿಯೆ ಎನಿಸುತ್ತದೆ. ಅವರಿಗೆ ಬೌದ್ಧ ಧರ್ಮದ ವೈಚಾರಿಕತೆಯಾಗಲಿ, ವೇದಗಳ ದೇವತೆಗಳಾಗಲಿ, ತಾತ್ವಿಕ ಪ್ರಣಾಳಿಕೆಗಳಾಗಲಿ ಇಸ್ಲಾಂ ಕ್ರಿಶ್ಚಿಯನ್ ದಂಡುಗಳನ್ನು ಎದುರಿಸಲಾಗಲಿಲ್ಲವೆಂಬುದಂತು ವಾಸ್ತವ ಸತ್ಯ. ಆದರೂ ಅಧ್ಯಾತ್ಮ ಜ್ಯೋತಿ ಮತ್ತು ಸಾಮಾಜಿಕ ಐಕ್ಯ ಮಾತ್ರವೇ ಭಾರತದ ಪುನರುತ್ಥಾನಕ್ಕೆ ಸಾಧನವೆಂಬುದು ಅವರ ಅಚಲ ನಿಲುವು.

ದಯಾನಂದರಿಗೆ ಇಂಡಿಯಾದ ಸಮಕಾಲೀನ ರಾಜಕೀಯಾರ್ಥಿಕ ಸಾಮಾಜಿಕ ಪರಿಸ್ಥಿತಿಯ ಪರಿಚಯವಿದ್ದರೂ ಅಧ್ಯಾತ್ಮಿಕ ಸಾಧಕರಾದ ಅವರಿಗೆ ರಾಜಕೀಯ ಸಿದ್ಧಾಂತಗಳಲ್ಲಿ ಆಸಕ್ತಿಯಿರಲಿಲ್ಲ. ಆದರೂ ಅವರಿಗೆ ವಿದೇಶೀಯರ ಆಕ್ರಮಣವಾಗಲಿ, ಅನ್ಯಸಂಸ್ಕೃತಿಯ ಪ್ರಭಾವವಾಗಲಿ ಹಿಡಿಸುವುದಿಲ್ಲ. ಅಂಥ ಪರಿಸ್ಥಿತಿಯ ನಿವಾರಣೆಗೆ ಸ್ವರಾಜ್ಯ ಸಂಪಾದನೆ ಅನಿವಾರ್ಯವೆಂದೂ ಅದು ಸಾಧ್ಯವಾಗಬೇಕಾದರೆ ರಾಷ್ಟ್ರೀಯತಾ ಭಾವನೆಯ ವಿಕಾಸ ಅತ್ಯಗತ್ಯವೆಂದೂ, ಅದು ಸ್ಫುಟಗೊಳ್ಳಲು ವೈದಿಕ ಧರ್ಮಾದರ್ಶದ ಪುನರುಜ್ಜೀವನ ಅತ್ಯವಶ್ಯವೆಂದೂ ಅವರು ಒತ್ತಿ ಹೇಳುತ್ತಾರೆ. ಮತೀಯ ಪಂಥಗಳ ಹಾಗೂ ರಾಜರ ಪರಸ್ಪರ ಕಲಹ, ನೈತಿಕ ಜೀವನದ ಅಭಾವ, ವಿದ್ಯಾವಿಹೀನತೆ, ಜತೆಗೆ ಸಾಮಾಜಿಕ ಭದ್ರತೆಯ ಕೊರತೆಯಿಂದಾಗಿ ದೇಶ ಅವನತಿಯ ಪಥ ಹಿಡಿಯಿತು ಮಾತ್ರವಲ್ಲ, ದಾಸ್ಯಕ್ಕೊಳಗಾಯಿತೆಂದವರು ತಮ್ಮ 'ಸತ್ಯಾರ್ಥ ಪ್ರಕಾಶ' ಗ್ರಂಥದಲ್ಲಿ ಸ್ಪಷ್ಟಪಡಿಸುತ್ತಾರೆ. ಪ್ರತಿಯೊಂದು ರಾಷ್ಟ್ರಕ್ಕೂ ಒಂದೊಂದು ಧರ್ಮವುಂಟು. ಆ ರಾಷ್ಟ್ರದ ಪ್ರಗತಿಗೆ ಅದೇ ಸ್ಫೂರ್ತಿಯಾಗುತ್ತದೆ. ಜನರನ್ನು ಒಗ್ಗೂಡಿಸುವ ಶಕ್ತಿಯೂ ಅದೇಯೇ. ನಿಜಕ್ಕೂ ಆ ಧರ್ಮವೇ ಕಾನೂನು. ರಾಜ್ಯಕ್ಕೆ ಅದೇ ನ್ಯಾಯ. ಅದೇ ದೇಶವನ್ನಾಳಬೇಕು. ಸರ್ವಾಧಿಕಾರ ಒಳ್ಳೆಯದಲ್ಲ, ಆದ್ದರಿಂದ ಭಾರತದ ಐಕ್ಯಕ್ಕೆ ವೈದಿಕ ಧರ್ಮ ಅನಿವಾರ್ಯವೆಂದವರು ಭಾವಿಸುತ್ತಾರೆ. ರಾಷ್ಟ್ರಸ್ವಾತಂತ್ರ್ಯಕ್ಕಾಗಿ ಅವರು ವೇದಮಂತ್ರಗಳ ಮೂಲಕ ದೇವರಿಗೆ ಮೊರೆಯಿಡುತ್ತಾರೆ.

ದೇಶೀ ಸರ್ಕಾರಕ್ಕೆ ಉತ್ತಮ ಸರ್ಕಾರ ಪರ್ಯಾಯವಲ್ಲವೆಂಬುದು ಅವರ ಅಭಿಪ್ರಾಯ. ವಿದೇಶೀ ಸರ್ಕಾರ ಎಷ್ಟೇ ದಯಾಮಯವಾಗಿರಲಿ, ಉಪಯುಕ್ತವಾದುದಿರಲಿ, ಮತೀಯ ಪೂರ್ವಗ್ರಹದಿಂದ ದೂರವಾಗಿರಲಿ, ದೇಶೀಯ ವಿದೇಶೀಯರ ನಡುವೆ ಸಾಮರಸ್ಯವನ್ನು ಸಾಧಿಸಲಿ, ಅದರಿಂದ ದೇಶೀಯರು ಸಂಪೂರ್ಣ ಸುಖವಾಗಿರಲಾರರೆಂದವರು ಸ್ಪಷ್ಟಪಡಿಸುತ್ತಾರೆ.

ವೇದಗಳು ಬ್ರಾಹ್ಮಣರ ಪ್ರತ್ಯೇಕ ಸ್ವತ್ತುಗಳಲ್ಲ. ಅವು ಶೂದ್ರರಿಗೂ ಸಲ್ಲುತ್ತವೆ; ಮಾತ್ರವಲ್ಲ, ಜಗತ್ತಿನ ಸರ್ವರಿಗೂ ತೆರೆದಿರಬೇಕಾದ ಆಸ್ತಿಯೆಂದವರು ಘೋಷಿಸುತ್ತಾರೆ. ಹೀಗಾಗಿ ಅವರು ಬ್ರಾಹ್ಮಣೇತರರನ್ನು ಆರ್ಯ ಸಮಾಜದೊಳಗೆ ಸೇರಿಸಿಕೊಳ್ಳುತ್ತಾರೆ. ಸಮಾಜದ ಪದಾಧಿಕಾರಿ ಹುದ್ದೆಗಳನ್ನು ಚುನಾವಣೆಗಳ ಮೂಲಕ ತುಂಬುವಾಗ ಅವರು ಪ್ರಜಾಸತ್ತೆಯಲ್ಲಿ ತಮ್ಮ ವಿಶ್ವಾಸವನ್ನು ಅಭಿವ್ಯಕ್ತಗೊಳಿಸುತ್ತಾರೆ. ಗ್ರಾಮಗಳೇ ಇಂಡಿಯಾದೇಶದ ಪ್ರಾಣಶಕ್ತಿಗಳಾಗಿರುವಾಗ, ಪಂಚಾಯತಿಗಳ ಮೂಲಕ ಅವುಗಳ ಅಭಿವೃದ್ಧಿಯನ್ನು ಸಾಧಿಸಬೇಕೆಂದವರು ಸೂಚಿಸುತ್ತಾರೆ. ರಾಜಪ್ರಭುತ್ವವನ್ನವರು ಬೆಂಬಲಿಸಿದರೂ, ದೈವ ಪ್ರಭುತ್ವವೇ ಕೊನೆಯ ಆಸರೆಯೆಂದವರು ಬಲ್ಲರು. ಪ್ರಕೃತಿ ಮಾಯೆಯಲ್ಲ, ಸತ್ಯಸ್ಯ ಸತ್ಯ ಎನ್ನುವಲ್ಲಿ ಅವರ ಕಾವ್ಯದರ್ಶನ ವ್ಯಕ್ತವಾಗುತ್ತದೆ.

ರಾಷ್ಟ್ರನಿರ್ಮಾಣದ ದೃಷ್ಟಿಯಿಂದ ಅಸ್ಪೃಶ್ಯರನ್ನೊಳಗೊಂಡಂತೆ ಸರ್ವಸಮಾನತೆ, ಶೀಲವರ್ಧನೆ, ನೈತಿಕಶಿಕ್ಷಣ, ಶುದ್ಧ ಜೀವನ ಅತ್ಯಗತ್ಯವೆಂದವರು ಒತ್ತಿ ಹೇಳಿದ್ದಾರೆ. ಆ ಕಾಲದಲ್ಲವರು ಬ್ರಿಟಿಷ್ ಸಾರ್ವಭೌಮತ್ವವನ್ನು ಬಹಿರಂಗವಾಗಿ ನಿಂದಿಸದಿದ್ದರೂ, ಭಾರತೀಯ ಅಭ್ಯುದಯಕ್ಕೆ ರಾಷ್ಟ್ರದ ಏಳಿಗೆ, ರಾಷ್ಟ್ರೀಯತೆಯ ವಿಕಾಸಕ್ಕೆ ಸ್ವರಾಜ್ಯ ಮತ್ತು ಸ್ವದೇಶೀ ತತ್ತ್ವ ಅನಿವಾರ್ಯ ಎಂದವರು ಸ್ಪಷ್ಟಪಡಿಸಿದ್ದಾರೆ. ಜಗತ್ತಿನ ಶಾಂತಿಕ್ಷೇಮಗಳಿಗೆ ವೇದೋಪದೇಶದ ಅನುಷ್ಠಾನ ಅಗತ್ಯವೆಂಬುದು ಅವರ ತಿಳಿವಳಿಕೆ. ಒಟ್ಟಿನಲ್ಲಿ, ವೈದಿಕ ತತ್ತ್ವದ ಆಧಾರದ ಮೇಲೆ ಭಾರತೀಯತ್ವ ರೂಪಗೊಳ್ಳಬೇಕು, ಆ ತತ್ತ್ವ ವಿಶ್ವವ್ಯಾಪಕವಾಗಬೇಕು, ಅಸ್ಪೃಶ್ಯತೆ ಮೂಲೋತ್ಪಾಟನೆಯಾಗಬೇಕು ಎಂಬುದು ಅವರ ಸಿದ್ಧಾಂತ.

ವಿಷಪ್ರಾಶನದಿಂದಾಗಿ ದಯಾನಂದರು ಹುತಾತ್ಮರಾದರೆಂದು ಹೇಳಲಾಗಿದೆ. ಅವರ ನಂತರವೂ ಆರ್ಯಸಮಾಜ ಬಹುದಿನಗಳ ತನಕ ರಾಷ್ಟ್ರದ ಉದ್ದಗಲಗಳಲ್ಲಿ ತನ್ನ ಧ್ಯೇಯ ಸಾಧನೆಯಲ್ಲಿ ಕ್ರಿಯಾಶೀಲವಾಗಿತ್ತು. ಸಮಾಜಸುಧಾರಣೆಯಲ್ಲಿ ನಿರತವಾಗಿತ್ತು. ಬ್ರಹ್ಮ ಸಮಾಜ ಪ್ರಾದೇಶಿಕ ಸಂಘಟನೆಯಾದರೆ, ಆರ್ಯಸಮಾಜ ರಾಷ್ಟ್ರೀಯ ಸಂಘಟನೆಯೆಂದೇ ಹೇಳಬಹುದು. ಅದು ರಾಜಕೀಯ ವ್ಯವಸ್ಥೆಯಲ್ಲದಿದ್ದರೂ, ಶ್ರದ್ಧಾನಂದ ಲಾಲಾಲಜಪತರಾಯರಂಥ ಹುತಾತ್ಮರನ್ನು, ಮಹಾತ್ಯಾಗಿಗಳನ್ನು, ರಾಜಕೀಯ ನಾಯಕರನ್ನು ಸೃಷ್ಟಿಸಿತೆಂಬುದು ನಿಜ.

## ಬ್ರಹ್ಮ ವಿದ್ಯಾ (ಥಿಯಾಸಫಿ) ಸಮಾಜದ ಕೊಡುಗೆ

ಮಾನವೀಯತೆಯಲ್ಲಿ, ವ್ಯಕ್ತಿ ಹಾಗೂ ರಾಷ್ಟ್ರಸ್ವಾತಂತ್ರ್ಯದಲ್ಲಿ ನಂಬಿಕೆಯಿದ್ದ ಪಾಶ್ಚಾತ್ಯ ಸಜ್ಜನರು ಇಂಡಿಯಾ ಸ್ವಾತಂತ್ರ್ಯದ ಬಗ್ಗೆ ಸಹಾನುಭೂತಿಯುಳ್ಳವರಾಗಿದ್ದರು. ಅಂಥವರಲ್ಲಿ ಮುಂಚೂಣಿಯಲ್ಲಿದ್ದವರು ಐರ್ಲೆಂಡಿನಿಂದ ಬಂದ **ಡಾ. ಅನಿ ಬೆಸೆಂಟ್**ರು. (೧೮೪೭-೧೯೩೩) ಭರತಖಂಡದ ರಾಷ್ಟ್ರೀಯತೆ ಮತ್ತು ಸ್ವಾತಂತ್ರ್ಯ ಚಳವಳಿಯಲ್ಲಿ ಮಹತ್ತರವೂ ಪರಿಣಾಮಕಾರಿಯೂ ಆದ ಪಾತ್ರವನ್ನು ವಹಿಸಿ ಇತಿಹಾಸವನ್ನು ನಿರ್ಮಿಸಿದ ಕಾಂಗ್ರೆಸ್‌ನ (೧೮೮೫) ಸಂಸ್ಥಾಪಕರಲ್ಲಿ ಎ. ಓ. ಹ್ಯೂಮ್ ಒಬ್ಬ ಪ್ರಮುಖ ವ್ಯಕ್ತಿಯೆಂಬುದನ್ನು ಮರೆಯಲಾಗದು. ಬ್ಲಾವಟ್‌ಸ್ಕಿ ಮತ್ತು ಓಲ್ಕಾಟ್ ಸ್ಥಾಪಿಸಿದ ಥಿಯಾಸಫಿ ಸಮಾಜದ ಪ್ರಾಣಶಕ್ತಿ ಬೆಸೆಂಟ್. ೧೮೯೩ರಲ್ಲಿ ಇಂಡಿಯಾಕ್ಕೆ ಬಂದ ಈ ಮಹಿಳೆ ಮೊದಮೊದಲು ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಚಟುವಟಿಕೆಗಳಲ್ಲಿ ಸಮರ್ಪಣ ಮನೋಭಾವದಿಂದ ಭಾಗವಹಿಸುತ್ತಾರೆ. ಕಾಶಿಯಲ್ಲಿ ಶಾಲಾಕಾಲೇಜುಗಳನ್ನು ಸ್ಥಾಪಿಸುತ್ತಾರೆ. ಅವರ ಸೇವೆಯ ಫಲವಾಗಿ ೧೮೭೫ರಲ್ಲಿ ರಷ್ಯಾ ದೇಶದ ಮದಾಂ ಬ್ಲಾವಟ್‌ಸ್ಕಿ ಮತ್ತು ಅಮೆರಿಕಾದ ಕರ್ನಲ್ ಓಲ್ಕಾಟ್ ಮದ್ರಾಸಿನಲ್ಲಿ ಸ್ಥಾಪಿಸಿದ ಬ್ರಹ್ಮವಿದ್ಯಾ(ಥಿಯಾಸಫಿ) ಸಮಾಜದ ಅಧ್ಯಕ್ಷರು ಮಾತ್ರವಲ್ಲ, ೧೯೧೭ರಲ್ಲಿ ಕಲ್ಕತ್ತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗುತ್ತಾರೆ. ತಮ್ಮ ಹಲವು ಗ್ರಂಥಗಳಲ್ಲಿ ಹಿಂದೂ ಧರ್ಮವನ್ನೂ ಭಾರತೀಯ ನಾಗರಿಕತೆಯನ್ನೂ ಪ್ರಶಂಸಿಸುತ್ತಾರೆ. ತಮ್ಮ ಹಿಂದಿನ ಜನ್ಮದಲ್ಲಿ ಹಿಂದೂವಾಗಿ ಭಾರತದಲ್ಲಿ ಹುಟ್ಟಿರಬೇಕೆಂದು ಹೇಳಿಕೊಳ್ಳುತ್ತಾರೆ. ಇಂಡಿಯಾವನ್ನು ಕುರಿತ ಎರಡು ಮೂರು ಗ್ರಂಥಗಳ ಜತೆಗೆ ಭಗವದ್ಗೀತೆಯನ್ನು ಇಂಗ್ಲಿಷಿಗೆ ಭಾಷಾಂತರಿಸುತ್ತಾರೆ.

ಸ್ವಾತಂತ್ರ್ಯವೊಂದು ಅಮೂಲ್ಯ ಆಸ್ತಿ; ಅದು ಅವಿನಾಶಿ ಹಾಗೂ ಶಾಶ್ವತ; ಆತ್ಮಸಂಯಮದಿಂದ ಅದು ಪ್ರಾಪ್ತವಾಗುತ್ತದೆ. ಪ್ರತಿಯೊಂದು ಜೀವಿಯಲ್ಲಿಯೂ ವಾಸವಾಗಿರುವ ಆತ್ಮ ನಿತ್ಯಸ್ವತಂತ್ರ, ಎಂದವರು ತಿಳಿದಿದ್ದಾರೆ. ತಿಳಿವಳಿಕೆಯಿಲ್ಲದ ಜನ ಸ್ವಾರ್ಥಪರರೂ, ಹಣಬಾಕರೂ, ಸುಲಿಗೆಕೋರರೂ ಆದ ಶ್ರೀಮಂತರನ್ನು ಚುನಾಯಿಸುತ್ತಾರೆ; ಪ್ರಜಾಸತ್ತಾತ್ಮಕವಾದ ಸಮಾಜವಾದ

ಸಾಧ್ಯವಿಲ್ಲವೆಂಬುದು ಅವರ ಅಭಿಪ್ರಾಯ. ವಿವೇಕಿಗಳಿಗೆ ಹಾಗೂ ಬುದ್ಧಿವಂತರಿಗೆ ಮಾತ್ರ ಅಧಿಕಾರ ಸ್ಥಾನಗಳು ಮೀಸಲಾಗಿರಬೇಕು; ಆದರೆ ಸುಖಜೀವನವನ್ನು ಪಡೆಯುವ ಹಕ್ಕು ಎಲ್ಲ ಪ್ರಜೆಗಳಿಗೂ ಇದೆಯೆಂದವರು ಸ್ಪಷ್ಟಪಡಿಸುತ್ತಾರೆ. ಪಂಚಾಯಿತಿಗಳ ಮೂಲಕ ಗ್ರಾಮಗಳ ಆಡಳಿತವನ್ನು ಅವರು ಬೆಂಬಲಿಸುತ್ತಾರೆ. ಹವಾಮಾನ, ವಾತಾವರಣ, ಸಾಮಾಜಿಕ ರೂಢಿಗಳು ಆಯಾ ರಾಷ್ಟ್ರದ ಶೀಲವನ್ನು ನಿರ್ಧರಿಸುತ್ತವೆನ್ನುವುದು ಅವರ ವಾದ. ಮತ ಪ್ರತಿಯೊಂದು ದೇಶದ ರಾಷ್ಟ್ರೀಯತೆಯ ಅಡಿಪಾಯವಾಗಿರುತ್ತದೆಂದವರು ತಮ್ಮ ತಿಳಿವಳಿಕೆಯನ್ನು ಪ್ರಕಟಿಸುತ್ತಾರೆ. ಅವರ ದೃಷ್ಟಿಯಲ್ಲಿ ರಾಷ್ಟ್ರೀಯತೆಯೊಂದು ಆಧ್ಯಾತ್ಮಿಕ ಪರಿಕಲ್ಪನೆ, ದೈವೀಶಕ್ತಿ; ಅದಕ್ಕೊಂದು ಪೂರ್ಣ ವ್ಯಕ್ತಿತ್ವವಿದೆ; ಎಲ್ಲ ಪ್ರಜೆಗಳ ಭಾವೈಕ್ಯ ಹಾಗೂ ಧ್ಯೇಯೈಕ್ಯದಿಂದ ರಾಷ್ಟ್ರೀಯತೆ ಸುಭದ್ರವಾಗುತ್ತದೆ. ಭಾರತೀಯ ಆಧ್ಯಾತ್ಮಿಕ ಮೌಲ್ಯಗಳು ಮತ್ತು ಇಂಗ್ಲೆಂಡಿನ ವೈಜ್ಞಾನಿಕ ಸಂಶೋಧನೆಗಳು, ಅಂತೆಯೇ ಪೌರ್ವಾತ್ಯ ಪಾಶ್ಚಾತ್ಯ ಜೀವನಾದರ್ಶಗಳು ಸಂಗಮಗೊಂಡು ಪ್ರಪಂಚರಾಷ್ಟ್ರ ಉದಯವಾದಾಗ ಮನುಕುಲದ ಏಕತೆಯ ಪರಾಕಾಷ್ಠೆ ವಿರಾಜಿಸುತ್ತದೆಂಬುದು ಅವರ ಆಶೆ.

ಆಂಗ್ಲರ ನೇತೃತ್ವದಲ್ಲಿ ಭಾರತೀಯರು ಸ್ವರಾಜ್ಯ ನಡೆಸಬೇಕೆಂಬುದು ಅವರ ವಿಚಾರ. ಅಂಥ ಪರಿಸ್ಥಿತಿಯ ನಿರ್ಮಾಣಕ್ಕಾಗಿ ಅವರು ೧೯೧೬ರಲ್ಲಿ ಹೋಂರೂಲ್ ಲೀಗನ್ನು ಸ್ಥಾಪಿಸುತ್ತಾರೆ. ಇಂಡಿಯಾ ಮೇಲಣ ಬ್ರಿಟಿಷ್ ಸಾರ್ವಭೌಮತ್ವ ದೈವನಿಯಾಮಕವೆಂದೂ, ಧರಣಿಮುಷ್ಕರರಹಿತ ವಿಧಾಯಕರೀತಿಯಲ್ಲಿ ಸ್ವರಾಜ್ಯವನ್ನು ಪಡೆಯಬೇಕೆಂದೂ ಅವರ ವಾದ. ಅದರ ಸಮರ್ಥನೆಗಾಗಿ ಅವರು ತಮ್ಮ ವಾಗ್ವೈಖರಿಯನ್ನು ದುಂದುಮಾಡುತ್ತಾರೆ. ಗಾಂಧೀಜಿ ಪ್ರಾರಂಭಿಸಿದ ಅಸಹಕಾರ ಸತ್ಯಾಗ್ರಹ ಚಳವಳಿಯನ್ನವರು ವಿರೋಧಿಸುತ್ತಾರೆ. ಅಂಥ ಚಳವಳಿ ಸಮಾಜ ವಿರೋಧಿಕೃತ್ಯವೆಂದು, ಜನಾಂಗೀಯ ದ್ವೇಷ ಪ್ರೇರಕ ನೀತಿಯೆಂದು ಅವರ ಭಾವನೆ. ಇಡೀ ರಾಷ್ಟ್ರ ಗಾಂಧೀಜಿಯ ಪರವಾಗಿ ನಿಲ್ಲಲಾಗಿ, ಬೆಸೆಂಟರು ಪರದೆಯ ಹಿಂದೆ ಸರಿಯುತ್ತಾರೆ. ಮತೀಯ ದ್ವೇಷಮುಕ್ತಿ ರಾಜಕೀಯ ಮೊದಲುಗೊಂಡು ಸಕಲ ಜೀವನ ವ್ಯವಹಾರಗಳಲ್ಲಿ ಆಧ್ಯಾತ್ಮಿಕ ಸಹಯೋಗ, ಸ್ವರಾಜ್ಯ ಸಾಧನೆ ಮತ್ತು ದೇಶಾಭಿಮಾನ ರಾಷ್ಟ್ರೀಯತೆಯ ಲಕ್ಷಣಗಳೆಂದು, ಪೂರ್ವ ಪಶ್ಚಿಮಗಳ ಸಂಗಮ ಅಗತ್ಯವೆಂದು, ಮನುಕುಲದ ಏಕತೆಗಾಗಿ ಪ್ರಪಂಚರಾಷ್ಟ್ರ ಸ್ಥಾಪನೆ ಅನಿವಾರ್ಯವೆಂದು ಅವರು ತಮ್ಮ ವಾಗ್ವೈಖರಿಯ ಮೂಲಕ ಪ್ರಚಾರಮಾಡುತ್ತಾರೆ.

ಸಂಯೋಗಾತ್ಮಕ ಅನನ್ಯ ಪರಮಾದ್ವೈತದ ಉಪಾಸಕರೂ, ಬ್ರಹ್ಮ ವಿದ್ಯಾ ಸಮಾಜದ ಸದಸ್ಯರೂ ಆದ **ಡಾ. ಭಗವಾನ್ ದಾಸರು** (೧೮೬೯-೧೯೫೮) ಶಂಕರರ ಮಾಯಾವಾದವನ್ನು ತಿರಸ್ಕರಿಸುತ್ತಾರೆ. ಸಮಾಜ ಮತ್ತು ರಾಜಕೀಯ ಶಾಸ್ತ್ರಗಳು ಆತ್ಮವಿದ್ಯಾತ್ಮಕ ಮನೋವಿಜ್ಞಾನದ ತಳಹದಿಯ ಮೇಲೆ ರೂಪಗೊಳ್ಳಬೇಕೆಂಬುದು ಅವರ ವಿಚಾರ. ಮನುಸ್ಮೃತಿಯಲ್ಲಿ ಉಲ್ಲೇಖಗೊಂಡಿರುವ ವರ್ಣವ್ಯವಸ್ಥೆ ಸಾವಯವ ಸಮಾಜದ ಏಕತೆಗೆ ಅನುಕೂಲವಲ್ಲವೆಂದು ಹೇಳುತ್ತ, ಪ್ರಾಯೋಗಿಕ ಸಾಮಾಜಿಕ ವ್ಯವಸ್ಥೆಗೆ ಅದು ಅಗತ್ಯವೆನ್ನುತ್ತಾರೆ. ಎಲ್ಲ ಧರ್ಮಗಳ ಧ್ಯೇಯೋದ್ದೇಶಗಳಲ್ಲಿ ಪ್ರಧಾನ ವಿಧಿವಿಧಾನ ತತ್ತ್ವ ಸಿದ್ಧಾಂತಗಳ ಏಕಸೂತ್ರತೆಯಿರುವುದರಿಂದ, ಸರ್ವಧರ್ಮಗಳ ಆಧ್ಯಾತ್ಮಿಕ ಸಂಘದ ಅಗತ್ಯತೆಯನ್ನು ತಮ್ಮ ಭಾಷಣ ಲೇಖನಗಳಲ್ಲಿ ಪ್ರತಿಪಾದಿಸುತ್ತಾರೆ. ಅರವಿಂದರಂತೆ, ವೇದಾಂತ ಮತ್ತು ವಿಜ್ಞಾನಗಳ ಸಂಯೋಗದಿಂದ ಲೋಕಶಾಂತಿಕ್ಷೇಮ ಸಾಧ್ಯವೆಂದವರು ಹೇಳುತ್ತಾರೆ. ಪ್ರೇಮ, ಸಹಾನುಭೂತಿ, ಸಂಯಮ, ಸಮಭಾವ, ಧೈರ್ಯ, ಕರ್ತವ್ಯಪ್ರಜ್ಞೆ, ಕ್ಷಮೆ, ನೈತಿಕತೆ ಮೊದಲಾದ ಸಾತ್ವಿಕ ಗುಣಗಳು ನಾಗರಿಕತೆಯ ತಿರುಳು; ದ್ವೇಷಾಸೂಯೆ, ಲೋಭ, ಮೋಹ, ಸ್ವಾರ್ಥ, ಅಹಂಕಾರ, ಲೈಂಗಿಕತೆ, ಲಂಪಟತ್ವ, ವಂಚನೆ ಮೊದಲಾದ ಆಸುರೀಗುಣಗಳು ಅನಾಗರಿಕತೆಯ ಲಕ್ಷಣಗಳೆಂದವರು ಪ್ರಸ್ತಾಪಿಸುತ್ತಾರೆ.

ದುಷ್ಟಶಿಕ್ಷಣ ಶಿಷ್ಟರಕ್ಷಣ ಸರ್ಕಾರದ ಧರ್ಮವೆಂಬುದು ಅವರ ಅಪೇಕ್ಷೆ. ನಲವತ್ತು ವರ್ಷ ಮೀರಿದ ವಯಸ್ಸಿನ, ಗೃಹಕೃತ್ಯದ ಅನುಭವವಿರುವ ವ್ಯಕ್ತಿಗಳು ಮಾತ್ರ ಚುನಾವಣೆಗೆ ನಿಲ್ಲಬೇಕು; ಮತದಾರರೇ ದೇಶಾಭಿಮಾನಿ ಜನರನ್ನು ಹುಡುಕಿ, ಚುನಾವಣೆಗೆ ನಿಲ್ಲಿಸಬೇಕು, ಪ್ರಚಾರ ಸಲ್ಲದು; ದುಂದುವೆಚ್ಚ ಕೂಡದು; ಅಖಿಲ ಭಾರತೀಯ ಪಂಚಾಯಿತಿ ಅಥವಾ ಉಚ್ಚಸಂಸದ್ ಒಂದಿರಬೇಕು. ಹಳ್ಳಿ, ನಗರ, ಜಿಲ್ಲೆ ಮತ್ತು ಪ್ರಾಂತ್ಯಗಳ ಪಂಚಾಯಿತಿಗಳು ಉಚ್ಚ ಸಂಸತ್ತಿನ ಪ್ರಾತಿನಿಧಿಕ ಅಂಗಗಳಾಗಿ ಕೆಲಸ ಮಾಡಬೇಕು-ಭಗವಾನ್ ದಾಸರ ರಾಜಕೀಯ ಚಿಂತನೆಯ ಧಾರೆಯಿದು. ಒಟ್ಟಿನಲ್ಲಿ ಅವರು ಚಿಂತನೆ ಹಾಗೂ ಕಾರ್ಯವಿಧಾನದಲ್ಲಿ ಸಂಪ್ರದಾಯ ನಿಷ್ಠರೆಂದು ಹೇಳಬಹುದಾಗಿದೆ.

## ವಿಶ್ವಪ್ರವಾದಿ ಗುರುದೇವ ರವೀಂದ್ರ, ಟ್ಯಾಗೋರ್

ಶ್ರೇಷ್ಠ ಸಾಹಿತಿ ಸಮಾಜದ ನಡುವೆ ಜನಿಸಿದರೂ, ಸಾಕ್ಷೀ ಪ್ರಜ್ಞೆಯಿಂದ ಅದನ್ನು ವೀಕ್ಷಿಸುತ್ತಾನೆ; ಸಮಾಜಕ್ಕಿಂತ ಎತ್ತರವಾಗಿ ಬೆಳೆಯುತ್ತಾನೆ. ಆದರವನು ಸಾಮಾಜಿಕ ಬದ್ಧತೆಯಿಂದ ಜಾರಿಹೋಗುವಂತಿಲ್ಲ. ಸಮಾಜದ ಗತಿಯನ್ನು ಗಮನಿಸಿ, ಅದರ

ಗುಣದೋಷಗಳ ಕಡೆಗೆ ಕ್ಷಕಿರಣ ಹಾಯಿಸಬೇಕಾದ್ದು ಅವನ ಧರ್ಮ. ಸಾಹಿತಿ ಅನಧಿಕೃತ ಶಾಸಕನೆಂಬ ಶೆಲ್ಲಿಯ ಸೂತ್ರವನ್ನು ಮರೆಯಲಾಗದು. ರಾಜಕೀಯವೂ ಸಮಾಜಪುರುಷನ ಅಂಗವಷ್ಟೆ. ಸೂಕ್ಷ್ಮ ಜ್ಞಾನಾನುಭವ ಅನುಭಾವ ಕಲ್ಪನಾ ಪ್ರತಿಭೆಗಳ ಅಕ್ಷಯನಿಧಿಯಾದ ಸಾಹಿತಿ ರಾಜಕೀಯ ಸಾಗರವನ್ನು ಮಥಿಸಿ, ಅಮೃತವನ್ನು ಪಡೆದು, ಹಂಚಿ, ಸಮಾಜವನ್ನು ಪೋಷಿಸುವ, ರಕ್ಷಿಸುವ ಗುರುವೂ ಆಗಬೇಕು. ಇಂಥ ಗುರು ಶ್ರೇಣಿಯಲ್ಲಿ ಬಂಕಿಮಚಂದ್ರ, ರವೀಂದ್ರನಾಥ ಟ್ಯಾಗೋರ್, ಭಾರತಿ, ಭಾರತಿ ದಾಸನ್, ವೀರೇಶ ಪಂತುಲು, ಪ್ರೇಮಚಂದ್, ಕಾರಂತ, ಕುವೆಂಪು ಮೊದಲಾದ ಅಗ್ರೇಸರರು ಹಲವರಿದ್ದಾರೆ. ವಿಸ್ತಾರಭಯದಿಂದ, ಸಮಯಾಭಾವದಿಂದ, ಮಾಹಿತಿ ಸಂಗ್ರಹದ ಅಶಕ್ಯತೆಯಿಂದಾಗಿ, ಕೇವಲ ಪ್ರಾತಿನಿಧಿಕವಾಗಿ ಟ್ಯಾಗೋರ್ ಮತ್ತು ಕುವೆಂಪು ಅವರನ್ನು ಮಾತ್ರ ಪ್ರಕೃತ ಪ್ರಬಂಧಕ್ಕೆ ಆರಿಸಿಕೊಳ್ಳಲಾಗಿದೆ. ರವೀಂದ್ರರ ನಂತರ ಸಾಹಿತ್ಯಸಾಮ್ರಾಟ ಕಿರೀಟ ಕುವೆಂಪು ಅವರಿಗೆ ಸಲ್ಲತಕ್ಕದ್ದೆಂಬ ದೊಡ್ಡವರೊಬ್ಬರ ಮಾತೂ ಇರುವುದರಿಂದ, ಆ ಇಬ್ಬರ ರಾಜಕೀಯ ಚಿಂತನೆಗಳನ್ನು ಮಾತ್ರ ಇಲ್ಲಿ ಗಣನೆಗೆ ತೆಗೆದುಕೊಳ್ಳಲಾಗಿದೆ. ಅವರಿಬ್ಬರೂ ಪ್ರಥಮತಃ ಸಾಹಿತಿಗಳು, ಅಧ್ಯಾತ್ಮ ಸಾಧಕರು, ಋಷಿ ಸದೃಶ ದಾರ್ಶನಿಕರು, ತತ್ತ್ವಜ್ಞಾನಿ ಶಿಕ್ಷಕರು, ದೇಶಾಭಿಮಾನಿಗಳು, ಮಾನವತಾ ಪ್ರೇಮಿಗಳು, ವಿಶ್ವಮಾನವರು, ಅನಂತರ ಸಮಾಜ ಸುಧಾರಕರು ಹಾಗೂ ರಾಜಕೀಯ ವೀಕ್ಷಕರು. ಅವರು ಯಾವ ರಾಜಕೀಯ ಶಾಸ್ತ್ರಜ್ಞರಲ್ಲ, ರಾಜಕೀಯ ಸಿದ್ಧಾಂತಗಳನ್ನು ರೂಪಿಸುವ ವೃತ್ತಿನಿರತರೂ ಅಲ್ಲ. ಆದರೆ ಸಾಹಿತ್ಯ ಸಂದರ್ಭದಲ್ಲಿ ಅಂತಃಸ್ಫೂರ್ತಿಯಿಂದಲೋ ಅಪ್ರಜ್ಞಾಪೂರ್ವಕವಾಗಿಯೋ ಆನುಷಂಗಿಕವಾಗಿ ರಾಜಕೀಯ ವಿಚಾರಗಳನ್ನವರು ಅಭಿವ್ಯಕ್ತಿಸಬಹುದು. ಅವು ಸನ್ನಿವೇಶದ ಒತ್ತಡದಿಂದಲೋ ಅಥವಾ ಚಿಂತನ ಮಂಥನದ ಪರಿಣಾಮವಾಗಿಯೋ ಒಟ್ಟಿನಲ್ಲಿ ಸಾಕ್ಷೀ ಪ್ರಜ್ಞೆಯ ಶುದ್ಧಮನಸ್ಸಿನ ಅಭಿವ್ಯಕ್ತಿಗಳೆಂಬುದರಲ್ಲಿ ಸಂದೇಹವಿಲ್ಲ. ಆ ಅಭಿವ್ಯಕ್ತಿಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿ, ಸಮನ್ವಯಿಸಿ, ವ್ಯವಸ್ಥೆಗೊಳಿಸುವುದಾದರೆ ಅಮೂಲ್ಯ ರಾಜಕೀಯ ಸಿದ್ಧಾಂತಗಳು ಉಪಲಬ್ಧವಾಗುವುದರಲ್ಲಿ ಸಂದೇಹವಿಲ್ಲ.

ವಿಶ್ವಮಾನ್ಯತೆಗೆ ಪಾತ್ರರಾಗಿ, ಭಾರತೀಯರಿಗೆ ಗುರುದೇವರಾಗಿ ಕೀರ್ತಿವಂತರಾದ ರವೀಂದ್ರನಾಥ ಟ್ಯಾಗೋರರು (೧೮೬೧-೧೯೪೭) ಕವಿ, ಕಥೆಗಾರ, ಕಾದಂಬರಿಕಾರ, ತತ್ತ್ವಜ್ಞಾನಿ, ಶಿಕ್ಷಣ ತಜ್ಞ, ಮಾನವತಾವಾದಿಯೆಂದು ದೇಶವಿದೇಶಗಳಲ್ಲಿ ಪ್ರಖ್ಯಾತರಾಗಿದ್ದಾರೆ. ಸಾಹಿತ್ಯಕ್ಕೆ ನೊಬೆಲ್ ಪ್ರಶಸ್ತಿಯನ್ನು ಪಡೆದ ಪ್ರಪ್ರಥಮ ಭಾರತೀಯರವರು. 'ಜನಗಣಮನ ಅಧಿನಾಯಕ ಜಯಹೇ' ಎಂಬ ರಾಷ್ಟ್ರಗೀತೆಯನ್ನು ರಚಿಸಿದ, ಆಂಗ್ಲಪ್ರಭುಗಳು ಜಲಿಯನ್‌ವಾಲಾಬಾಗ್‌ನಲ್ಲಿ ನಡೆಸಿದ ಸಾಮೂಹಿಕ ಕಗ್ಗೊಲೆಯ ಪ್ರತಿಭಟನಾರ್ಥಕವಾಗಿ 'ಸರ್'ಪದವಿ ಯನ್ನು ತ್ಯಜಿಸಿದ ಧೀರಧೀಮಂತ ರಾಷ್ಟ್ರಾಭಿಮಾನಿಯವರು. ಸಿಲ್ವಿಯನ್, ಲೆವಿ ವಿಂಟರ್, ನಿಡ್ಜ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರನ್ನು ಆಕರ್ಷಿಸಿದ ಶಿಕ್ಷಣ ಸುಧಾರಣೆಗಳ ರೂವಾರಿಯವರು. ವಿಶ್ವಭಾರತಿ ವಿಶ್ವವಿದ್ಯಾನಿಲಯದ ಕನಸುಗಾರರು. ಜಗತ್ತಿನ ಎಲ್ಲ ಸಂಸ್ಕೃತಿಗಳನ್ನು ಗೌರವಿಸುತ್ತ ಅವುಗಳ ಸಾಮರಸ್ಯಕ್ಕಾಗಿ ಕಾತರಿಸಿದ, ಅಂತರರಾಷ್ಟ್ರೀಯ ಏಕತೆಗಾಗಿ ತಮ್ಮ ಜೀವನವನ್ನೇ ಮುಡುಪಿಟ್ಟ ಮಹಾಪ್ರವಾದಿಯವರು. ರಾಜಕೀಯ ಸಾಮಾಜಿಕ ಚಿಂತಕರಿಗೆ ಅವರ ಕಾವ್ಯ ಕಾದಂಬರಿಗಳು ಸಾಕಷ್ಟು ಗ್ರಾಸವನ್ನೂ ಪ್ರೇರಣೆಯನ್ನೂ ನೀಡುತ್ತವೆ.

ನಿರ್ಗುಣ ಬ್ರಹ್ಮನಲ್ಲಿ, ಭಗವಂತನ ಸರ್ವಾಂತರ್ಯಾಮಿತ್ವದಲ್ಲಿ ಟ್ಯಾಗೋರರಿಗೆ ನಂಬಿಕೆಯಿದ್ದರೂ, ಏಕ ದೇವತೋ ಪಾಸನೆಯನ್ನವರು ವಿರೋಧಿಸುತ್ತಿರಲಿಲ್ಲ. ಮಾನವನ ಸಕಲ ರೋಗಗಳಿಗೆ ಸರ್ವವ್ಯಾಪಕವಾದ ಭಗವತ್ಪ್ರೇಮ ದಿವ್ಯೌಷಧವೆಂಬುದು ಅವರ ನಿಲವು. ಸುತ್ತಮುತ್ತಣ ಪ್ರಕೃತಿಯಲ್ಲಿ, ಬಣ್ಣ ಬಣ್ಣದ ಹೂತಳಿರುಗಳಲ್ಲಿ, ಹರಿಯುವ ತೊರೆಗಳ ಜುಳು ಜುಳು ನಿನಾದದಲ್ಲಿ, ಸೂರ್ಯ ಚಂದ್ರರ ಉದಯಾಸ್ತಗಳಲ್ಲಿ, ನಕ್ಷತ್ರದೀಪ್ತ ರಜನಿಯಾಕಾಶದಲ್ಲಿ ಭಗವಂತನ ದರ್ಶನ ಸಾಧ್ಯವೆಂಬುದು ಅವರ ತಾತ್ತ್ವಿಕ ಚಿಂತನೆ. ಸಮನ್ವಯ ಸಾಮರಸ್ಯದಿಂದ ಲೋಕಶಾಂತಿಯ ಸಾಧನೆ ಅಸಾಧ್ಯವಲ್ಲವೆಂಬುದು ಅವರ ಭಾವನೆ. ಸೃಷ್ಟಿಕಾರ್ಯದಲ್ಲಿ ಬೌದ್ಧಿಕ ಸಾಮರ್ಥ್ಯ ಹಾಗೂ ಅಂತಃಸ್ಫೂರ್ತಿಗಳಿಗೆ ಸಮಾನಸ್ಥಾನ ನೀಡುತ್ತಾರೆ. ಮಾನವದೇಹ ಭಗವಂತನ ಸೃಜನಾತ್ಮಕ ಪ್ರಯೋಗಗಳಿಗೆ ಪ್ರಯೋಗಾಲಯವೆಂದು, ಕಾಯಕವೇ ಕೈಲಾಸವೆಂದು, ಭಗವಂತನನ್ನು ಗುಡಿಗಳಲ್ಲಲ್ಲ ನೇಗಿಲ ಗೆರೆಯಲ್ಲಿ ಕಲ್ಲುಕುಟಿಗನ ಉಳಿಯಲ್ಲಿ ಕಾಣಬಹುದೆಂದವರು ವಚನಕಾರರಂತೆ ನುಡಿಯುತ್ತಾರೆ. ಮಾನವೀಯತೆ ಎಲ್ಲಿದೆಯೋ ಅಲ್ಲಿ ದೈವೀಶಕ್ತಿ ನೆಲೆಗೊಂಡಿರುತ್ತದೆಂಬುದು ಅವರಿಗೆ ಸ್ಫಟಿಕ ಸ್ಪಷ್ಟ. ದೇವರು ಸೌಧದಲ್ಲಿ ಮಾತ್ರವಲ್ಲ ಬಡವರ ಗುಡಿಸಿಲಿನಲ್ಲಿಯೂ ಇದ್ದಾನೆ. ಬಡತನವನ್ನು ಹೋಗಲಾಡಿಸುವ ಶ್ರೀಮಂತರು, ಅಜ್ಞಾನವನ್ನು ನಿರ್ಮೂಲಮಾಡುವ ವಿದ್ಯಾವಂತರು ಸಂಸ್ಕೃತಿಯ ಅಧ್ವರ್ಯುಗಳು. ಆಸ್ತಿ ಸಂಗ್ರಹವಾಗಲಿ, ಅದರ ಸಾಮೂಹಿಕ ಸ್ವಾಮ್ಯವಾಗಲಿ ಅವರಿಗೆ ಅಪಥ್ಯ. ಇದು ಅವರ ಧರ್ಮ. ಮಾಯಾವಾದವಾಗಲಿ ವೈರಾಗ್ಯವಾಗಲಿ ಅವರಿಗೆ ಹಿಡಿಸುವುದಿಲ್ಲ, ಬಸವಣ್ಣನವರಂತೆ.

ಆರ್ಯ ದ್ರಾವಿಡರು, ಚೀನೀ ಹೂಣರು, ಸಿಥಿಯನ್ ಪಾರ್ಸಿಗಳು, ಪಠಾಣ ಮೊಗಲರುಗಳನ್ನು, ಕ್ರಿಶ್ಚಿಯನ್ ಇಸ್ಲಾಂ ಮೊದಲಾದ ಜನಾಂಗ ಹಾಗೂ ಸಂಸ್ಕೃತಿಗಳನ್ನು ಜೀರ್ಣಿಸಿಕೊಂಡಿರುವ ಇಂಡಿಯಾ, ವೇದಾಂತ ಧರ್ಮದ ಭಾರತ ಜಗತ್ತಿನಲ್ಲಿಯೇ ಶ್ರೇಷ್ಠವಾದದ್ದು; ಪ್ರಪಂಚದ ಸಕಲ ಸಂಸ್ಕೃತಿಗಳನ್ನು ಹೊಂದಾಣಿಕೆ ಮಾಡಿಕೊಳ್ಳುವ, ಸಮನ್ವಯೀಕರಿಸಿಕೊಳ್ಳುವ ಯೋಗ್ಯತೆ ಅದಕ್ಕೆ ಮಾತ್ರ ಮೀಸಲು. ಈ ಯೋಗ್ಯತೆಗೆ ಅದು ಅರ್ಹವಾಗಬೇಕಾದರೆ, ಜಗತ್ತಿನ ನಾಯಕತ್ವವನ್ನದು ಬಯಸುವುದಾದರೆ, ಅಸ್ಪೃಶ್ಯತೆ ತೊಲಗಬೇಕು, ಜಾತೀಯತೆ ಅಸಮಾನತೆ ನಿರ್ಮೂಲನವಾಗಬೇಕು, ಶೂದ್ರಾತಿಶೂದ್ರರ ಮೇಲಣ ಬ್ರಾಹ್ಮಣರ ಕ್ರೂರದರ್ಬಾರಿನ ಪೀಡೆ ವಿನಾಶಗೊಳ್ಳಬೇಕು. ಸಾಮಾಜಿಕ ಸ್ವಾತಂತ್ರ್ಯ ಹಾಗೂ ಉದಾರತ್ವದಿಂದ ಮಾತ್ರ ರಾಜಕೀಯ ಸ್ವಾತಂತ್ರ್ಯದ ಫಲಾನುಭವದ ಸುಖ ಆಸ್ವಾದವಾಗುತ್ತದೆ. ಆನುವಂಶೀಯ ಹಕ್ಕುಗಳಿಗೂ ವಿರಾಮ ಹಾಕಬೇಕು. ಇದು ಟ್ಯಾಗೋರರ ಸಾಮಾಜಿಕ ಚಿಂತನೆ.

ಸ್ವಾತಂತ್ರ್ಯ ಮಾನವನ ದೈವದತ್ತ ಸಹಜ ಹಕ್ಕು. ಅದರಿಂದ ವಂಚಿತನಾದ ಮಾನವ ಪ್ರಾಣಿಗೆಣೆ. ಮಾನವನ ಊರ್ಧ್ವಮುಖಿ ಪ್ರಗತಿಗೆ ಅದು ಅನಿವಾರ್ಯ. ಪರಕೀಯರ ದಾಸ್ಯದಲ್ಲಿರುವುದಾಗಲಿ, ಸಾರ್ವಭೌಮಶಕ್ತಿಯ ಮುಂದೆ ಬೆನ್ನು ಬಗ್ಗಿಸುವುದಾಗಲಿ, ಸರ್ವಾಧಿಕಾರಿಗೆ ತಲೆತಗ್ಗಿಸುವುದಾಗಲಿ ಮನುಷ್ಯತ್ವದ ಲಕ್ಷಣವಲ್ಲ. ಭಾರತೀಯ ನೈತಿಕಶಕ್ತಿಯನ್ನು ರೂಢಿಸಿಕೊಂಡಾಗ, ಸಾರ್ವಭೌಮತ್ವ ತಾನಾಗಿಯೇ ಉದುರಿಹೋಗುತ್ತದೆ. ರೈತರು ಜಮೀನ್ದಾರರ ಕಿರುಕುಳದಿಂದ ಹೊರಬರಬೇಕು. ರೈತರ ಕ್ಷೇಮಾಭಿವೃದ್ಧಿ ಜಮೀನ್ದಾರರ ಕರ್ತವ್ಯವಾಗಬೇಕು. ಗುಡಿಕೈಗಾರಿಕೆಗಳಿಗೆ ಎಲ್ಲ ವಿಧದ ಉತ್ತೇಜನ ನೀಡಬೇಕು. ಮಾನವಾಂತಃಕರಣವುಳ್ಳವನೂ, ಧೀರನೂ, ಧೀಮಂತನೂ, ದುರ್ಗುಣದೂರನೂ, ನೈತಿಕಶಕ್ತನೂ, ವಿವೇಕಿಯೂ ಆದ ವ್ಯಕ್ತಿಯನ್ನು ಜನನಾಯಕಸ್ಥಾನದಲ್ಲಿರಿಸಿಕೊಳ್ಳಬೇಕು; ಸ್ವಾತಂತ್ರ್ಯದ ಸಂಕೇತದಂತಿರುವ ಅವನು ದಾರಿತಪ್ಪದಂತೆ ಜನ ಸದಾ ಜಾಗ್ರತರಾಗಿರಬೇಕು. ಅಧಿಕಾರ ಕೇಂದ್ರೀಕರಣದಿಂದ ಸ್ವಾತಂತ್ರ್ಯ ಹರಣ; ಸ್ವಾತಂತ್ರ್ಯ ಹರಣದಿಂದ ಆತ್ಮಹಾನಿ ಹಾಗೂ ಬುದ್ಧಿ ಭಾವಗಳ ಕಾರಾಗೃಹವಾಸ. ಸರ್ಕಾರ ಮಾತ್ರವಲ್ಲ, ಮತೀಯ ಸಂಸ್ಥೆಗಳೂ ಈ ನಿಟ್ಟಿನಲ್ಲಿ ತಪ್ಪು ಮಾಡುತ್ತವೆ. Where the mind is wihout fear and the head held high ಎಂಬ ವಾಕ್ಯದಿಂದ ಪ್ರಾರಂಭವಾಗುವ ವಚನ ಕವನವನ್ನು ನೋಡಬಹುದು. ಈ ದೇಶದ ಎಲ್ಲ ರಾಜಕೀಯ ರೋಗ ರುಜಿನಗಳಿಗೆ ಸ್ವರಾಜ್ಯ ಸ್ಥಾಪನೆಯೊಂದೇ ಪರಿಹಾರ. ಇದು ಟ್ಯಾಗೋರರ ರಾಜಕೀಯ ಸಿದ್ಧಾಂತ. ಜಲಿಯನ್‌ವಾಲಾಬಾಗ್ ಹತ್ಯಾಕಾಂಡವಂತೂ ಬ್ರಿಟಿಷರ ಪರವಾದ ಅವರ ಸಹಾನುಭೂತಿ ಔದಾರ್ಯಗಳನ್ನು ನುಂಗಿಬಿಡುತ್ತದೆ. ಅವರು ಕೌಟಿಲ್ಯ ಅಥವಾ ಮೆಕಿವೆಲಿಯ ರಾಜನೀತಿಯನ್ನು ಬೆಂಬಲಿಸುವುದಿಲ್ಲ.

ಇಡೀ ಮನುಕುಲ ಸಂಯುಕ್ತ ವ್ಯವಸ್ಥೆಯನ್ನು ರೂಪಿಸಿಕೊಳ್ಳಬೇಕೆಂಬುದು ಅವರ ಆಶೆ. ಉಗ್ರ ರಾಷ್ಟ್ರೀಯತೆ ಪ್ರತ್ಯೇಕತೆಯನ್ನು ಪೋಷಿಸುತ್ತದೆ, ಹಿಂಸೆಯನ್ನು ಹೆರುತ್ತದೆ, ಜಗತ್ತಿನ ನಾಗರಿಕತೆಗೆ ಮಾರಕವಾಗುತ್ತದೆಂಬುದು ಅವರ ವಾದ. ರಾಷ್ಟ್ರಾಭಿಮಾನ ನೈತಿಕ ಶಕ್ತಿಯನ್ನು ಕುಗ್ಗಿಸುತ್ತದೆ, ಆಧ್ಯಾತ್ಮಿಕ ಸ್ಪಂದನವನ್ನು ನಿರಾಕರಿಸುತ್ತದೆ, ಪ್ರೇಮತತ್ತ್ವವನ್ನು ಮರೆಮಾಡುತ್ತದೆ, ಸಂಕುಚಿತ ಮನೋಧರ್ಮವನ್ನು ಉಲ್ಬಣಗೊಳಿಸುತ್ತದೆಂಬುದು ಅವರ ಚಿಂತೆ. ಇಡೀ ಜಗತ್ತೇ ಭಗವಂತನ ಸಾಮ್ರಾಜ್ಯ; ಆ ದಿವ್ಯ ಸಾಮ್ರಾಜ್ಯದ ಪ್ರಜೆಯಾಗುವ ಹಕ್ಕನ್ನು ರಾಷ್ಟ್ರಾಭಿಮಾನ ಮಾನವನಿಂದ ಕಸಿದುಕೊಳ್ಳುತ್ತದೆನ್ನುವ ಆದರ್ಶ ಅವರದು. ಆ ಅಧ್ಯಾತ್ಮಾದರ್ಶ ಆದರ್ಶವಾಗುಳಿಯುತ್ತದೆಯೆ ಹೊರತು, ಅದು ನೆಲದವರ ಜೀವನವಿಧಾನವಾಗುವುದು ಕಷ್ಟ.

## ಸ್ವಾಮಿ ವಿವೇಕಾನಂದರು

ನವಯುಗಾವತಾರಿಯೆಂದು ಪ್ರಕೀರ್ತಿತರಾದ ಶ್ರೀ ರಾಮಕೃಷ್ಣ ಪರಮಹಂಸರ ನೆಚ್ಚಿನ ಶಿಷ್ಯ, ವೀರ ಸನ್ಯಾಸಿ ಶ್ರೀ ಸ್ವಾಮಿ ವಿವೇಕಾನಂದರು (೧೮೬೩-೧೯೦೨) ಸೃಷ್ಟಿ ಮೂಲ ಪ್ರತಿಭೆಯೇ ಮೂರ್ತಿವೆತ್ತಂತಿದ್ದ ಆ ವಿಶಿಷ್ಟವ್ಯಕ್ತಿ, ನ ಭೂತೋ ನ ಭವಿಷ್ಯತಿ ಎನ್ನುವಂಥ ಅಸಾಧಾರಣ ಸನ್ಯಾಸಿ. ನರೇಂದ್ರ ಅವರ ತಂದೆತಾಯಿಯರು ಇಟ್ಟ ಹೆಸರು. ಅವರು ಬದುಕಿದ್ದು ಕೇವಲ ಮೂವತ್ತೊಂಬತ್ತು ವರ್ಷ. ವಿದ್ಯಾರ್ಥಿ ಜೀವನಾವಧಿಯನ್ನು ಹೊರತುಪಡಿಸಿದರೆ, ಉಳಿದ ೧೦-೧೫ ವರ್ಷಗಳಲ್ಲಿ ಅವರು ಸಾಧಿಸಿದ ಆಧ್ಯಾತ್ಮಿಕ ಸಿದ್ಧಿ, ಇಡೀ ಜಗತ್ತೇ ಬೆರಗುಗೊಳ್ಳುವಂತೆ ಸಿಂಹವಾಣಿಯಿಂದ ದೇಶವಿದೇಶಗಳಲ್ಲಿ ಅವರು ಬಿತ್ತರಿಸಿದ ಉಪದೇಶ ಭಾಷಣಗಳು ಮತ್ತು ವೇದಾಂತದ ಪ್ರಚಾರ, ಮತ್ತು ಇಂಡಿಯಾ ದೇಶದಲ್ಲಿ ಮಾತ್ರವಲ್ಲ, ಹಲವು ದೇಶಗಳಲ್ಲಿ ಈಗಲೂ ಕ್ರಿಯಾಶೀಲವಾಗಿರುವ ಅವರ ಪ್ರಭಾವದಿಂದಾಗಿ ಅವರು ಮತ್ತು ಅವರ ಸಂದೇಶ ಇಂದಿಗೂ ಪ್ರಸ್ತುತವೆಂದೇ ಹೇಳಬೇಕು. ಆಧ್ಯಾತ್ಮಿಕತೆಯ ಶಿಖರಸಿದ್ಧಿಯೆನಿಸಿ ಕೊಂಡಿರುವ ನಿರ್ವಿಕಲ್ಪಸಿದ್ಧಿಯೂ ಅವರಿಗೆ ವಶವಾಗಿತ್ತು.

ಪಾಶ್ಚಾತ್ಯ ಪೌರ್ವಾತ್ಯ ತತ್ತ್ವಜ್ಞಾನದಲ್ಲಿ ಪಾರಂಗತರಾದ, ಜಗತ್ತಿನ ಎಲ್ಲ ಧರ್ಮಗಳ ತೌಲನಿಕ ಅಧ್ಯಯನವನ್ನು ಪೂರೈಸಿದ್ದ ಅವರು ಹಿಂದೂಧರ್ಮ, ಅರ್ಥಾತ್ ವೇದಾಂತ ಧರ್ಮ ಎಲ್ಲ ಧರ್ಮಗಳ ತಾಯಿ ಎಂದು ಸಾರುವ ಅವರ ಕೆಚ್ಚು ಅಪ್ರತಿಮವಾದದ್ದು. ಹಿಂದೂಧರ್ಮದ ಎಲ್ಲ ಶಾಖೆಗಳ ತತ್ತ್ವಾರ್ಥ ಅವರಿಗೆ ಕರತಲಾಮಲಕವಾಗಿತ್ತು. ಆದ್ದರಿಂದ ಅವರನ್ನು ಸಮಗ್ರ ಹಿಂದೂ ಧರ್ಮದ ಪ್ರತಿನಿಧಿ ಎಂದು ಕರೆಯಬಹುದಿತ್ತು. ಉಪನಿಷತ್ತುಗಳ ಏಕದೇವತಾವಾದ ಮತ್ತು ನಿರ್ಗುಣೋಪಾಸನೆ ಅವರಿಗೆ ಮೆಚ್ಚುಗೆಯಾದರೂ, ಬಹುದೇವತೋಪಾಸನೆಯನ್ನಾಗಲಿ, ವಿಗ್ರಹಾರಾಧನೆಯನ್ನಾಗಲಿ ಅವರು ಅಲ್ಲಗಳೆಯಲಿಲ್ಲ. ಯಾವ ಮತದ ದೇವಾಲಯಗಳಿಗೆ ಹೋದರೂ, ಆಸ್ತಕರು ತಂತಮ್ಮ ಇಷ್ಟ ದೇವತೆಗಳನ್ನಲ್ಲಿ ಕಾಣಬಹುದೆಂಬ ಉದಾರ ಅಥವಾ ವಿಶ್ವಮತವಾದಿಯವರು. ನೈತಿಕತೆ ಸ್ವಾತಂತ್ರ್ಯ ಮತ್ತು ಸಮಾನತೆ ಪ್ರತಿಯೊಂದು ಧರ್ಮದ ಅಥವಾ ತತ್ತ್ವಶಾಸ್ತ್ರದ ಸಾರವೆಂದವರು ಘೋಷಿಸಿದ್ದುಂಟು. ಹಿಂದೂ ಧರ್ಮದ ಜಾತೀಯತೆಯನ್ನೂ ಅಸ್ಪೃಶ್ಯತೆಯನ್ನೂ ಅಸಮಾನತೆಯನ್ನೂ ಅವರು ಖಂಡತುಂಡವಾಗಿ ಜರೆಯುತ್ತಾರೆ. ಆದರೆ ಸಾಮಾಜಿಕ ಸುಧಾರಣೆ ಮಂದಗಮನದಲ್ಲಿ ಸಾಗಬೇಕೆಂಬುದು ಅವರ ಅಭಿಲಾಷೆ. ವೈಯಕ್ತಿಕ ಸ್ವಾತಂತ್ರ್ಯ ಮತ್ತು ಉದ್ಧಾರಗಳಿಂದ ಸಮಾಜದ ಉದ್ಧಾರ ಸಾಧ್ಯವೆಂದವರು ಜನತೆಯನ್ನೆಚ್ಚರಿಸುತ್ತಾರೆ. ಕೊಲಂಬೋದಿಂದ ಆಲ್ಮೋರದವರೆಗೆ ಅವರು ಮಾಡಿದ ಭಾಷಣಗಳಲ್ಲಿ ದೇಶೋದ್ಧಾರಾನುರಕ್ತಿಯೂ ದೇಶಾಭಿಮಾನಗಳೂ ಪುಟಿಯುತ್ತವೆ.

ಸ್ವಾಮಿ ವಿವೇಕಾನಂದರು ಸಕ್ರಿಯ ರಾಜಕಾರಣಿಯಲ್ಲದಿದ್ದರೂ, ಅವರ ಭವ್ಯ ವ್ಯಕ್ತಿತ್ವ ಹಾಗೂ ಸಂದೇಶಗಳು ದೇಶದ ರಾಜಕೀಯ ಹಾಗೂ ಸ್ವಾತಂತ್ರ್ಯವೀರರ ಮೇಲೆ ಅದಮ್ಯ ಪ್ರಭಾವ ಬೀರುತ್ತವೆ. ಅಧ್ಯಾತ್ಮದ ಮೂಲಕ ದೇಶ ಹಾಗೂ ಜಗತ್ತಿನ ಏಕತೆಯನ್ನು ಸಾಧಿಸಬಹುದೆಂಬುದು ಅವರ ವಿಚಾರ. ಪರಾನುಕರಣೆ ಮಾರಕವೆಂದೂ ಪರಂಪರಾಗತವಾದ ರಾಷ್ಟ್ರಾದರ್ಶದ ತಳಹದಿಯ ಮೇಲೆ ಪ್ರತಿಯೊಂದು ರಾಷ್ಟ್ರವೂ ತನ್ನ ಉದ್ಧಾರವನ್ನು ಕಂಡುಕೊಳ್ಳಬೇಕೆಂದೂ ಅವರು ಅಭಿಪ್ರಾಯಪಡುತ್ತಾರೆ. ಅವರು ರಾಜಕೀಯ ಧುರೀಣರಲ್ಲದಿದ್ದರೂ ಸಮಾಜದಲ್ಲಿ ಮನೆಮಾಡಿಕೊಂಡಿರುವ ಸಮಾನತೆಯನ್ನು ಹೋಗಲಾಡಿಸದಿದ್ದರೆ, ದೀನದಲಿತರನ್ನು ಮುಂದುವರಿದ ಜನಗಳ ಮಟ್ಟಕ್ಕೆತ್ತದಿದ್ದರೆ, ಭಾರತದ ಉದ್ಧಾರ ಸಾಧ್ಯವಿಲ್ಲವೆಂದು ಸಾರುತ್ತಾರೆ. ಅವರ ಈ ಸಾರಿಕೆ ಸಮಾಜಸುಧಾರಣೆಯ ಪ್ರಥಮ ಸೋಪಾನವಲ್ಲವೆ?

'ಹಿಂದೆ ಬಿದ್ದವರು ಹಿಂದೂಗಳಾಗಬಹುದು, ಮುಸಲ್ಮಾನರಾಗಬಹುದು, ಕ್ರಿಶ್ಚಿಯನ್ನರಾಗಬಹುದು, ಅದು ನನಗೆ ಮುಖ್ಯವಲ್ಲ. ಯಾರು ಪ್ರಭುವನ್ನು ಪ್ರೀತಿಸುತ್ತಾರೆಯೋ ಅವರಿಗೆ ನನ್ನ ಸೇವೆ ಮುಡಿಪಾಗಿದೆ. ಅಗ್ನಿಕುಂಡಕ್ಕೆ ಧುಮುಕಿ, ಮಕ್ಕಳೆ... ನಿಮಗೆ ಶ್ರದ್ಧೆಯಿರುವುದಾದರೆ ಜಗತ್ತೇ ನಿಮ್ಮ ಬಳಿಗೆ ಬರುತ್ತದೆ. ದಾರಿದ್ರ್ಯ, ಪುರೋಹಿತಷಾಹಿ ಮತ್ತು ನಿರಂಕುಶಪೀಡೆಗೆ ಗುರಿಯಾಗಿ ಜರ್ಝರಗೊಂಡಿರುವ ಕೋಟಿ ಕೋಟಿ ದಲಿತರಿಗಾಗಿ ಹಗಲಿರುಳೂ ಪ್ರಾರ್ಥಿಸೋಣ. ನಾನು ಅಧ್ಯಾತ್ಮ ಸಾಧಕನೂ ಅಲ್ಲ, ತತ್ತ್ವಜ್ಞಾನಿಯೂ ಅಲ್ಲ, ಸಂತನಂತೂ ಅಲ್ಲವೇ ಅಲ್ಲ. ನಾನು ಬಡವ. ಬಡವರನ್ನು ಪ್ರೀತಿಸುತ್ತೇನೆ. ಅಜ್ಞಾನ ದಾರಿದ್ರ್ಯದಲ್ಲಿ ಮುಳುಗಿರುವ ಆ ನತದೃಷ್ಟರಿಗಾಗಿ ಇಂಡಿಯಾದಲ್ಲಿ ಯಾರಾದರೂ ಕಣ್ಣೀರು ಸುರಿಸಿದ್ದಾರೆಯೆ? ಅವರಿಗೆ ದಾರಿ ಯಾವುದು?... ಅವರಿಗೆ ಯಾರು ಬೆಳಕಾಗುತ್ತಾರೆ? ಅವರು ನಿಮಗೆ ದೇವರಾಗಲಿ... ದೀನರಿಗಾಗಲಿ, ಬಡವರಿಗಾಗಲಿ ಕಣ್ಣೀರು ಕರೆಯುವವನನ್ನು ಮಹಾತ್ಮನೆಂದು ಕರೆಯುತ್ತೇನೆ. ಕೋಟ್ಯಂತರ ಜನ ಕ್ಷುಧೆ ಮೌಢ್ಯಗಳಿಂದ ಪರಿತಪಿಸುತ್ತಿರುವಾಗ, ಅವರ ಶ್ರಮದಿಂದ ವಿದ್ಯಾವಂತರಾಗಿದ್ದೂ, ಅವರ ಕಡೆಗೆ ಲಕ್ಷ್ಯ ಕೊಡದ ಜನರನ್ನು ನಾನು ದ್ರೋಹಿಗಳೆಂದು ಕರೆಯುತ್ತೇನೆ.'[1] ಆಗ ಸ್ವಾಮೀಜಿ ಹೇಳಿದ ಮಾತು ಇಂದಿಗೂ ಪ್ರಸ್ತುತ. ಅವರ ಉಪದೇಶವೆಲ್ಲ ಸಮಾಜವಾದದ ಕಡೆಗೆ ವಾಲುತ್ತದೆಂಬುದನ್ನು ಮರೆಯುವಂತಿಲ್ಲ.

ಅವರು ಜಾತಿವಿನಾಶವನ್ನು ಪುರಸ್ಕರಿಸದಿದ್ದರೂ, ಅಸ್ಪೃಶ್ಯತೆಯನ್ನು ಖಂಡಿಸುತ್ತಾರೆ. ಬ್ರಾಹ್ಮಣರ ಶ್ರೇಷ್ಠತಾವಾದವನ್ನು ತಿರಸ್ಕರಿಸುತ್ತಾರೆ. ಶೂದ್ರಾತಿಶೂದ್ರರ ದಮನವನ್ನು ಅಣಕಿಸುತ್ತಾರೆ. ಭೌತಿಕ, ಆಧ್ಯಾತ್ಮಿಕ ಹಾಗೂ ಬೌದ್ಧಿಕ ಸ್ವಾತಂತ್ರ್ಯ ಸರ್ವರಿಗೂ ದೊರಕಬೇಕೆಂದು ಘೋಷಿಸುತ್ತಾರೆ. ದೀನ ದಲಿತರು ನಿರ್ಭೀತಿಯಿಂದ, ಆತ್ಮಪ್ರತ್ಯಯದಿಂದ ಹೋರಾಡಬೇಕೆಂದೂ, ಬಲಿಷ್ಠರಾಗಬೇಕೆಂದೂ ಕರೆಕೊಡುತ್ತಾರೆ. 'ನನ್ನ ದೇಶದ ಹಸಿದ ನಾಯಿಗೂ ಆಹಾರವನ್ನೊದಗಿಸುವುದೇ ನನ್ನ ಧರ್ಮ, ಉಳಿದದ್ದೆಲ್ಲ ಅಧರ್ಮ' ಎಂದವರು ಪ್ರತಿಜ್ಞೆಮಾಡುತ್ತಾರೆ. ದೇಶದ ಶ್ರೀಮಂತಿಕೆಯನ್ನೂ ಆಹಾರವನ್ನೂ ಸೃಷ್ಟಿಸುವ ಸಾಮಾನ್ಯ ಜನ ಜಾಗೃತರಾಗದಿದ್ದರೆ, ಅವರು ಉದ್ಧಾರವಾಗದಿದ್ದರೆ ರಾಜಕೀಯ ಸ್ವಾತಂತ್ರ್ಯವೊಂದು ಹುಸಿಕನಸೆಂಬುದು ಅವರ ಅಭಿಮತ. ಶೂದ್ರಾತಿಶೂದ್ರರ ಅವನತಿಗೆ ಕಾರಣರಾದ ಬ್ರಾಹ್ಮಣರನ್ನು ಪರೆಯರಲ್ಲಿ ಪರೆಯರು ಎಂದು ಕರೆಯುವ ಕೆಚ್ಚು ಆ ಭೀಮ ಸನ್ಯಾಸಿಯಲ್ಲಿತ್ತು.

---

1. The life of Swami Vivekananda, Chapter LXXXIII by Romain Rolland

ಆ ಮಹಾ ಮೇಧಾವಿಗೆ, ಆ ಪರಿವ್ರಾಜಕ ಸನ್ಯಾಸಿಗೆ ಇಂಡಿಯಾದ ಎಲ್ಲ ಸಮಸ್ಯೆಗಳೂ ಸುಪರಿಚಿತವಾಗಿದ್ದುವು. ಭಾರತ ಪರ್ಯಟನ ಕಾಲದಲ್ಲಿ ಅವರು ಅರಮನೆಗಳಲ್ಲಿ ಮಾತ್ರವಲ್ಲ ಗುಡಿಸಿಲುಗಳಲ್ಲಿಯೂ ಉಳಿದಿದ್ದು ಅಲ್ಲಿಯ ಬದುಕನ್ನು ಬಲ್ಲವರಾಗಿದ್ದರು. ಅದರಿಂದಾಗಿ ಇಂಡಿಯಾ ದೇಶದ ಸಮಗ್ರ ಚಿತ್ರ ಅವರ ಕಣ್ಮುಂದಿತ್ತು. ಸಾಮಾನ್ಯ ಜನ ಮೇಲೇಳದೆ ಭಾರತಕ್ಕೆ ಭವಿಷ್ಯವಿಲ್ಲವೆನ್ನುವಾಗ ಸಮಾನತೆ ಅನಿವಾರ್ಯವೆನ್ನುವಾಗ ವೇದಾಂತಿಕ ಸಮಾಜವಾದವನ್ನು ಎತ್ತಿ ಹಿಡಿಯುತ್ತಾರೆ. ಬಡವರಿಗೆ ಕೆಲಸ ದೊರಕಿಸುವ ಸಲುವಾಗಿ ಭೌತಿಕ ನಾಗರಿಕತೆಯ ವಿಕಾಸ ಮಾತ್ರವಲ್ಲ, ಮೋಜಿನ ನಾಗರಿಕತೆಯ ಬೆಳವಣಿಗೆಯೂ ಅಗತ್ಯವೆನ್ನುತ್ತಾರೆ.[1] ಪ್ರತಿಯೊಬ್ಬರಿಗೂ ಉದ್ಯೋಗ ದೊರೆಯುವಂಥ ಅವಕಾಶವನ್ನು ಕಲ್ಪಿಸಬೇಕಾದ್ದು ಸಮಾಜದಧರ್ಮ. 'ಇಲ್ಲಿ ರೊಟ್ಟಿಯನ್ನು, ಅಲ್ಲಿ ಶಾಶ್ವತ ಸುಖವನ್ನು ನೀಡದ ದೇವರಲ್ಲಿ ನನಗೆ ನಂಬಿಕೆಯಿಲ್ಲ' ವೆಂದವರು ಘೋಷಿಸುವಾಗ ಜಗತ್ತಿನ ಎಲ್ಲ ಸನ್ಯಾಸಿಗಳಿಗೂ ವಿವೇಕ ಮೂಡೀತೆಂದು ಆಶಿಸಬಹುದಾಗಿದೆ. ಸ್ವಾತಂತ್ರ್ಯದ ಗುರಿ ಸರ್ವಸಮಾನತೆ, ಜೀವನಾವಶ್ಯಕತೆಗಳ ಸೃಷ್ಟಿ, ಸಾಮಾಜಿಕ ಸ್ವಾಸ್ಥ್ಯ ಎನ್ನುವುದಾದರೆ, ವಿವೇಕಾನಂದರ ಜೀವನವೆಲ್ಲ ಅಂಥ ಸಾಧನೆಗಾಗಿ ಮೀಸಲಾಗಿತ್ತು. ಅವರ ಉಪದೇಶದಲ್ಲಿ ಮುಂದಿನ ರಾಜಕೀಯ ನಾಯಕರಿಗೆ ಮಾರ್ಗದರ್ಶಿ ಸೂಚನೆಗಳಿದ್ದುವೆಂದು ಧಾರಾಳವಾಗಿ ಹೇಳಬಹುದು. ಸುಭಾಷ್ ಚಂದ್ರಬೋಸ್, ಮಹಾತ್ಮಾ ಗಾಂಧಿ, ಜವಹರಲಾಲ್ ನೆಹರೂ, ಜಯಪ್ರಕಾಶ ನಾರಾಯಣ ಮೊದಲಾದ ನಾಯಕರು ಅವರ ಮಾನಸ ಪುತ್ರರೆಂದರೂ ತಪ್ಪಾಗಲಾರದು. ಅವರ ರಾಜಕೀಯ ವಿಚಾರಧಾರೆ ಪರೋಕ್ಷವಾಗಿದ್ದು, ಅದು ಭಾರತೀಯರ ಮೇಲೆ ಅದಮ್ಯ ಪ್ರಭಾವ ಬೀರುತ್ತಿರುವುದರಿಂದ ಅದು ಈವೊತ್ತಿಗೂ ಪ್ರಸ್ತುತವೆಂದೇ ಹೇಳಬೇಕು.

### ಮಹಾಬೆಳಗು - ಬಂಗಾಳದಲ್ಲಿ

ಕಲ್ಕತ್ತದಲ್ಲಿ ಹುಟ್ಟಿ, ಅಲ್ಲಿಯೇ ಪ್ರೌಢಶಾಲಾ ವಿದ್ಯಾಭ್ಯಾಸವನ್ನು ಮುಗಿಸಿ, ಲಂಡನ್ನಿನಲ್ಲಿ ಕಾಲೇಜು ಶಿಕ್ಷಣವನ್ನು ಪಡೆದು, ಐಸಿಎಸ್ ಪರೀಕ್ಷೆಯಲ್ಲಿಯೂ ತೇರ್ಗಡೆ ಹೊಂದಿದ ಮಹಾವಾಗ್ಮಿ **ಸುರೇಂದ್ರನಾಥ ಬ್ಯಾನರ್ಜಿ** (೧೮೪೮-೧೯೨೫) ಇಂಗ್ಲಿಷ್ ಅಧಿಕಾರಿಗಳ ಕೈಕೆಳಗೆ ಆತ್ಮಗೌರವವನ್ನುಳಿಸಿಕೊಂಡು ಕೆಲಸ ಮಾಡಲಾಗದೆ ರಾಜೀನಾಮೆ ನೀಡಿ ಹೊರಗೆ ಬರುತ್ತಾರೆ. ಕಾಲೇಜೊಂದರಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದುಕೊಂಡು, 'ಬೆಂಗಾಲಿ' ಎಂಬ ಪತ್ರಿಕೆಯನ್ನು ನಡೆಸುತ್ತಾರೆ. ಚುನಾಯಿತ ಸರ್ಕಾರಕ್ಕಾಗಿ ಆಂದೋಲನ ನಡಸುವ ಸಲುವಾಗಿ 'ಇಂಡಿಯನ್ ಅಸೋಸಿಯೇಷನ್' ಎಂಬ ಸಂಸ್ಥೆಯನ್ನು ಸ್ಥಾಪಿಸುತ್ತಾರೆ. ಕಲ್ಕತ್ತೆಯ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶರನ್ನು ಟೀಕಿಸಿದರೆಂಬ ಕಾರಣಕ್ಕಾಗಿ ಅವರು ಎರಡು ತಿಂಗಳು ಕಾರಾಗೃಹವಾಸವನ್ನನುಭವಿಸಬೇಕಾಗುತ್ತದೆ. ನ್ಯಾಯಮೂರ್ತಿ ಎಂದೂ ತಪ್ಪುಮಾಡುವುದಿಲ್ಲ, ಅವನು ದೇವರಿಗಿಂತಲೂ ದೊಡ್ಡವ ಎಂಬ ಕುರುಡು ಭಾವನೆಯಿರುವತನಕ ನ್ಯಾಯಾಲಯದ ತಪ್ಪನ್ನು ಯಾರೂ ಟೀಕಿಸುವಂತಿಲ್ಲ. ಕಾಂಗ್ರೆಸ್ ಸ್ಥಾಪನೆಗೊಂಡ ಮೊದಲ ದಿನಗಳಲ್ಲಿ ಅವರು ಅದರ ಆಧಾರಸ್ತಂಭಗಳಲ್ಲೊಬ್ಬರಾಗಿದ್ದರು; ೧೮೯೫ರಲ್ಲಿ ಪೂನಾ ಅಧಿವೇಶನದ ಅಧ್ಯಕ್ಷರೂ ಆಗಿದ್ದರು. ಬಂಗಾಳದ ವಿಧಾನ ಪರಿಷತ್ತಿನ ಸದಸ್ಯರಾಗಿ, ಕೆಲವು ದಿನ ಮಂತ್ರಿಯೂ ಆಗಿ ಸೇವೆ ಸಲ್ಲಿಸುವ ಅವಕಾಶ ಅವರಿಗೆ ಪ್ರಾಪ್ತವಾಗಿತ್ತು.

ಇಟಲಿಯ ಜೋಸೆಫ್ ಮೆಜಿನಿ, ಇಂಗ್ಲೆಂಡಿನ ಮಿಲ್, ಬರ್ಕ್ ಚಕ್ ಮೆಕಾಲೆಯರ ರಾಜಕೀಯ ವಿಚಾರಗಳಿಂದ ಅವರು ಪ್ರಭಾವಿತರಾಗಿದ್ದರು. ಇಂಡಿಯಾದೇಶದ ಪ್ರತಿಯೊಬ್ಬ ನಿವಾಸಿಯೂ ದೇಶಾಭಿಮಾನಿಯಾಗಿರಬೇಕು; ನೈತಿಕತೆ ರಾಜಕೀಯ ಕಾರ್ಯಕ್ರಮಗಳ ಸಂಜೀವಿನಿಯಾಗಬೇಕೆಂಬುದು ಅವರ ಚಿಂತನೆ. ಸಂವಿಧಾನೀಯ ಸ್ವಾತಂತ್ರ್ಯದಲ್ಲಿ ಅವರಿಗೆ ನಂಬಿಕೆ. ವೇದೋಪನಿಷತ್ತುಗಳು, ರಾಮಾಯಣ, ಮಹಾಭಾರತಾದಿ ಗ್ರಂಥಗಳಲ್ಲಿ ರಾಷ್ಟ್ರೀಯ ಶಕ್ತಿವರ್ಧಕ ಗುಣವಿದೆಯೆಂದವರು ಪರಿಭಾವಿಸಿದ್ದರು. ಇಂಗ್ಲಿಷರು ದೇಶವನ್ನು ಬಿಟ್ಟು ಹೋಗಬೇಕೆಂಬುದು ಅವರ ಕಾರ್ಯಕ್ರಮದಲ್ಲಿರಲಿಲ್ಲ. ಅವರು ಭಾರತೀಯ ಸಮಾಜದ ದೋಷ ದೌರ್ಬಲ್ಯಗಳನ್ನು ನಿರ್ನಾಮಗೊಳಿಸಿ, ತೆರಿಗೆಗಳನ್ನು ಕಡಮೆ ಮಾಡುವ ಮೂಲಕ ಹಾಗೂ ಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸುವ ಮೂಲಕ ಇಲ್ಲಿಯ ಆರ್ಥಿಕ ಸಾಮರ್ಥ್ಯವನ್ನು ಹೆಚ್ಚಿಸಿ, ತಮ್ಮನ್ನು ತಾವೇ ಆಳಿಕೊಳ್ಳುವ ಕಲೆಯನ್ನು ಭಾರತೀಯರಿಗೆ ಕಲಿಸಿದರೆ ಸಾಕೆಂಬುದು ಅವರ ಅಭಿಪ್ರಾಯವಾಗಿತ್ತು. ಆರ್ಥಿಕ ಶೋಷಣೆಯನ್ನು ಸ್ಥಗಿತಗೊಳಿಸುವ ಸಲುವಾಗಿ, ಸ್ವದೇಶೀ ಚಳವಳಿಗವರು ಬೆಂಬಲ ನೀಡುತ್ತಾರೆ. ಆಚಾರ ವಿಚಾರಗಳಲ್ಲಿ, ಆಲೋಚನೆ ಕ್ರಿಯೆಗಳಲ್ಲಿ, ಆಕಾಂಕ್ಷೆ ಆದರ್ಶಗಳಲ್ಲಿ ಸ್ವದೇಶೀ ವ್ರತ ವ್ಯಾಪಿಸಿಕೊಂಡಿರಬೇಕೆಂಬುದು ಅವರ ಯೋಚನೆ. ವಿದೇಶೀಯ ಕಲೆ ಆದರ್ಶಗಳನ್ನು ವಿಜ್ಞಾನ ತಂತ್ರಜ್ಞಾನಗಳ ಕೈಗಾರಿಕೆಗಳನ್ನು ಮತ್ತು ಜನಹಿತ ಸಾಧಕವಾದ ಸಂಗತಿಗಳನ್ನು ರಾಷ್ಟ್ರೀಯತೆಗೆ, ಆತ್ಮಗೌರವಕ್ಕೆ ಕಂಟಕವಾಗದಂತೆ ಸ್ವದೇಶೀ ತತ್ವದೊಡನೆ

1. Complete Works of Swami Vivekananda, Vol IV p. 313

ಸಮೀಕರಿಸಿಕೊಳ್ಳಬೇಕೆಂಬುದು ಅವರ ನಿರೀಕ್ಷೆ. ಆದರೆ ಆಂಗ್ಲ ಸಾಮ್ರಾಜ್ಯದ ಭಾಗವಾಗಿದ್ದುಕೊಂಡೇ ರಾಷ್ಟ್ರಹಿತವನ್ನು ಸಾಧಿಸಬೇಕೆಂಬುದರಲ್ಲಿ ಅವರಿಗೆ ಅನುಮಾನವಿರಲಿಲ್ಲ.

'ವಂದೇಮಾತರಂ' ದೇಶಭಕ್ತಿ ಗೀತೆಯಿಂದ, ಇಂಡಿಯಾದಲ್ಲೆಲ್ಲ ಜನಪ್ರಿಯವಾದ ಕಾದಂಬರಿಗಳಿಂದ ಸ್ವಾತಂತ್ರ್ಯ ಸಂದೇಶವನ್ನು ನೀಡಿದ ಬಂಕಿಂ ಚಂದ್ರ, ಸುರೇಂದ್ರನಾಥ ಬ್ಯಾನರ್ಜಿ, ಚೈತನ್ಯಾದಿ ಮಹಾಪುರುಷರ ಪ್ರಭಾವಕ್ಕೊಳಗಾದ ಬಿಪಿನ್ ಚಂದ್ರ ಪಾಲ್ (೧೮೫೮-೧೯೩೨) ಕಟಕ್, ಬೆಂಗಳೂರುಗಳಲ್ಲಿ ಕೆಲವು ಸಮಯ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾಗಿದ್ದು, ಶಿಕ್ಷಣತಜ್ಞರಾಗಿ, ಪತ್ರಿಕೋದ್ಯಮಿಯಾಗಿ, ಲೇಖಕರಾಗಿ ರಾಷ್ಟ್ರೀಯ ಚಳುವಳಿಯಲ್ಲಿ ತೊಡಗಿಕೊಂಡ ಕೃಷ್ಣೋಪಾಸಕರು; ಶ್ರೀ ಕೃಷ್ಣನೇ ಭಾರತದ ಆತ್ಮ ಎಂದು ತಿಳಿದವರು; ವಿರಾಟ್ಪುರುಷನ ಬ್ರಾಹ್ಮೀಕರಣವೇ ರಾಷ್ಟ್ರವೆಂದು ನಂಬಿದವರು. ರಾಷ್ಟ್ರೀಯ ಶಿಕ್ಷಣಕ್ಕೆ ಉತ್ತೇಜನ, ರಾಷ್ಟ್ರೀಯ ಸ್ವಯಂಸೇವಕರ ತರಬೇತಿ, ಭಾರತೀಯ ಕೈಗಾರಿಕೆಗಳ ವಿಸ್ತರಣೆ ಮತ್ತು ಅವಕಾಶವೊದಗಿದ ಕೂಡಲೆ ಸರ್ಕಾರದ ಆಡಳಿತವನ್ನು ವಹಿಸಿಕೊಳ್ಳಬಲ್ಲ ರಾಜಕೀಯ ವ್ಯವಸ್ಥೆಯ ನಿರ್ಮಾಣ- ಇವು ಅವರು ರೂಪಿಸಿದ ಕಾರ್ಯಕ್ರಮ. ೧೯೦೯ರಲ್ಲಿ ಮಾಡಿದ ತಮ್ಮ ಉತ್ತರಪರ ಭಾಷಣದಲ್ಲಿ ಅವರ ಬಗ್ಗೆ ಶ್ರೀ ಅರವಿಂದರು ಪ್ರಸ್ತಾಪಿಸಿದ ಮಾತುಗಳು ಅವರ ಹೆಗ್ಗಳಿಕೆಗೆ ಸಾಕ್ಷಿಯಾಗಿವೆ: 'ನಾನು ರಾಜಕೀಯಕ್ಕೆ ಧುಮುಕಿದಾಗ ಒಂಟಿಯಾಗಿರಲಿಲ್ಲ. ರಾಷ್ಟ್ರೀಯತೆಯ ಬಲಿಷ್ಠ ಪ್ರವಾದಿಯೊಬ್ಬರು ನನ್ನ ಬಳಿಯಿದ್ದರು. ಅವರು ಪೂರ್ವ ಮತ್ತು ಪಶ್ಚಿಮ ಭಾರತಗಳಲ್ಲಿ ಪರ್ಯಟನ ಮಾಡಿ, ಪವಿತ್ರವೂ ಶಕ್ತಿಯುತವೂ ಆದ ಸ್ವರಾಜ್ಯ ಮತ್ತು ಸ್ವದೇಶೀ ಮಂತ್ರಗಳನ್ನು ಭಾವಾತ್ಮಕವಾಗಿ ಬೋಧಿಸುತ್ತಿದ್ದರು. ಅರವಿಂದರನ್ನು ರಾಜದ್ರೋಹದ ಆಪಾದನೆಗೆ ಗುರಿಮಾಡಿದ್ದ ಸಂದರ್ಭದಲ್ಲಿ, ಅವರ ವಿರುದ್ಧವಾಗಿ ಸಾಕ್ಷಿ ನೀಡಲಿಲ್ಲವೆಂಬ ಕಾರಣಕ್ಕಾಗಿ ಕೆಲವು ತಿಂಗಳು ಪಾಲ್ ಕಾರಾಗೃಹವಾಸವನ್ನನುಭವಿಸಬೇಕಾಯಿತು.

ಚಾರಿತ್ರಿಕ ಘಟನೆಗಳು ದೈವನಿಯಾಮಕ, ಜಗತ್ತು ಭಗವಂತನ ಲೀಲಾಭೂಮಿಯೆಂಬುದು ಬಿಪಿನ್ ಚಂದ್ರರ ಅಭಿಮತ. ಶಿಸ್ತು ಸಂಯಮಗಳಿಂದ, ವಿವಿಧ ಸಂಸ್ಕೃತಿಗಳ ಸಾಮರಸ್ಯದಿಂದ ಮಾತ್ರವೇ ನವಭಾರತದ ಪುನಶ್ಚೈತನ್ಯ ಹಾಗೂ ಪುನರುತ್ಥಾನ ಸಾಧ್ಯವೆಂದವರು ಪ್ರತಿಪಾದಿಸುತ್ತಾರೆ. ನಿಸರ್ಗಸಿದ್ಧವಾದ ಮಾನವನ ಹಕ್ಕುಗಳನ್ನು ಕಸಿದುಕೊಳ್ಳುವ ಹವಣು ದೈವದ್ರೋಹವೆಂಬುದು ಅವರ ಸಿದ್ಧಾಂತ. ರಾಜಕೀಯಾರ್ಥಿಕ ಸಾಮಾಜಿಕ ಸುಧಾರಣೆಗಳು ಆಕಾಶದಿಂದ ಉದುರುವುದಿಲ್ಲ, ಭಾರತೀಯರು ವಿದ್ಯಾರ್ಜನೆ, ಸ್ವದೇಶಿವ್ರತ ಬಹಿಷ್ಕಾರ ಹಾಗೂ ಹೋರಾಟಗಳ ಮೂಲಕ ಸಂಪಾದಿಸಿಕೊಳ್ಳಬೇಕೆಂದು ತಮ್ಮ 'ವಂದೇಮಾತರಂ' ಪತ್ರಿಕೆಯಲ್ಲಿ ಅವಿಚ್ಛಿನ್ನವಾಗಿ ಸಾರುತ್ತಾರೆ. ಪ್ರತಿಯೊಂದು ವ್ಯಕ್ತಿಯಲ್ಲಿಯೂ ಭಗವಂದಶವಿರುವುದರಿಂದ, ದೈವೀ ಪ್ರಜಾಪ್ರಭುತ್ವ ಸ್ಥಾಪನೆಯಾಗಬೇಕೆನ್ನುವುದು ಅವರ ಕಲ್ಪನೆ. ಆದರೆ ಆ ಕಲ್ಪನೆ ಹಿಡಿತಕ್ಕೆ ಸಿಗುವಂಥದಲ್ಲ; ಮಸಕು ಮಸಕು, ಮಂಜು ಮಂಜು. ಬ್ರಿಟಿಷ್ ಸಾಮ್ರಾಜ್ಯದ ಆವರಣದಲ್ಲಿ ಸಂಯುಕ್ತ ರಾಜ್ಯ ಸಂಘಟನೆ ರೂಪುಗೊಳ್ಳಬೇಕೆಂಬ ಅವರ ಸಲಹೆ ಸಹ ಪ್ರಯೋಗಾರ್ಹವಲ್ಲದ್ದು. ಮಾನವ ಜನಾಂಗದ ನೈತಿಕ ಒಗ್ಗಟ್ಟು ಸಹ ಕೈಗೂಡುವಂಥದಲ್ಲ.

ಮೊದಮೊದಲು ಉಗ್ರರಾಷ್ಟ್ರೀಯವಾದಿಯಾಗಿದ್ದ ಪಾಲ್ ಬರಬರುತ್ತ ಮಂದಗಾಮಿಯಾಗುತ್ತಾರೆ; ಆಂಗ್ಲರ ಆಳ್ವಿಕೆ ಭಗವನ್ನಿಯಾಮಕವೆಂದು ಬಗೆಯುತ್ತಾರೆ. ಆಂಗ್ಲರಿಗೆ ಹೊಣೆಗಾರಿಕೆಯ ಸಹಾನುಭೂತಿಯ ಸಹಕಾರ ಅತ್ಯಗತ್ಯವೆಂದವರು ವಾದಿಸುತ್ತಾರೆ. ೧೯೨೨ರಲ್ಲಿ ಗಾಂಧೀಜಿ ಹೂಡಿದ ಅಸಹಕಾರ ಚಳುವಳಿಯನ್ನು ವಿರೋಧಿಸುತ್ತಾರೆ. ಮಾನವತಾ ತತ್ತ್ವವೇ ಜನಾಂಗೀಯ ಸಮಾನತೆಗೆ ಮತ್ತು ಏಕತೆಗೆ ಅಡಿಪಾಯವಾಗಬೇಕೆಂಬುದು ಅವರ ಹೆಬ್ಬಯಕೆ.

ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿಗಳ, ಪ್ರಾಚೀನತೆ ಆಧುನಿಕತೆಗಳ, ಬೌದ್ಧಿಕತೆ ಹಾಗೂ ಆಧ್ಯಾತ್ಮಿಕತೆಗಳ ಸಂಗಮದ ಸಂಕೇತದಂತಿರುವ, ಅವುಗಳ ಸಾಮರಸ್ಯದ ಕೆನೆಯಂತಿರುವ ಶ್ರೀ **ಅರವಿಂದರು** (೧೮೭೨-೧೯೫೦) ಏಳನೆಯ ವಯಸ್ಸಿನಿಂದ ಇಪ್ಪತ್ತೊಂದು ವರ್ಷಗಳತನಕ ಇಂಗ್ಲೆಂಡಿನಲ್ಲಿ ವ್ಯಾಸಂಗಮಾಡಿ ಇಂಗ್ಲಿಷ್ ಗ್ರೀಕ್ ಲ್ಯಾಟಿನ್ ಭಾಷೆಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದು, ಬಹುಮುಖ ಪ್ರತಿಭಾನ್ವಿತರೆಂದು ಜಗತ್ಪ್ರಸಿದ್ಧರಾದದ್ದು ಭಾರತದ ಪುಣ್ಯ. ಇಂಡಿಯಾಕ್ಕೆ ವಾಪಸಾದನಂತರ ಬರೋಡದ ಕಾಲೇಜೊಂದರಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದಾಗ ಗೀತೋಪನಿಷತ್ತುಗಳನ್ನು ಆಳವಾಗಿ ಅಭ್ಯಾಸ ಮಾಡಿ, ಭಾರತೀಯ ಆಧ್ಯಾತ್ಮಿಕತೆಯ ಮಾನಸ ಸರೋವರದಲ್ಲಿ ಸಲೀಸಾಗಿ ಈಜಾಡುತ್ತಾರೆ. ೧೯೦೫ರಲ್ಲಿ ರಾಜಕೀಯ ಕ್ಷೇತ್ರಕ್ಕಿಳಿದಾಗ ಉಗ್ರಗಾಮಿಗಳೆಂದು ಆಂಗ್ಲ ಸರ್ಕಾರ ಅವರಿಗೆ ಹಣೆಪಟ್ಟಿ ಕಟ್ಟುತ್ತದೆ. ಬಾಂಬ್ ತೂರಾಟದಲ್ಲಿ ಅವರ ಪಾತ್ರವಿದೆಯೆಂದು ನ್ಯಾಯಾಲಯ ಅವರಿಗೆ ಕ್ರೂರಶಿಕ್ಷೆ ವಿಧಿಸುತ್ತದೆ. ಅಲಿಪುರ ಜೈಲಿನಲ್ಲಿ ಒಬ್ಬೊಂಟಿಗರಾಗಿದ್ದಾಗ ಅವರಿಗೆ ಅನೇಕ ಆಧ್ಯಾತ್ಮಿಕ ಅನುಭವಗಳಾಗುತ್ತವೆ. ಎಲ್ಲೆಲ್ಲಿಯೂ, ಎಲ್ಲರಲ್ಲಿಯೂ ಕೃಷ್ಣನನ್ನೇ

ಕಾಣುತ್ತಾರೆ. ಕಾರಾಗೃಹವಾಸದನಂತರ ಪಾಂಡಿಚೆರಿಯಲ್ಲಿದ್ದುಕೊಂಡು ಅಧ್ಯಾತ್ಮ ಚಿಂತನೆ ಸಾಧನೆಯಲ್ಲಿ ಹಾಗೂ ತಮ್ಮ ಅತೀಂದ್ರಿಯಾನುಭವಗಳನ್ನು ಬರಹಕ್ಕಿಳಿಸುವುದರಲ್ಲಿ ತಲ್ಲೀನರಾಗುತ್ತಾರೆ. ಭಗವಜ್ಜೀವನ, ಗೀತಾ ಪ್ರಬಂಧಗಳು, ಯೋಗಸಾಮರಸ್ಯ, ಸಾವಿತ್ರಿ[1] ಮೊದಲಾದ ಜಗತ್ಪ್ರಸಿದ್ಧವಾದ ಗ್ರಂಥಗಳು ಅವರ ಲೇಖನಿಯಿಂದ ಮೂಡುತ್ತವೆ.

'ಪಾಶ್ಚಾತ್ಯ ಪೌರ್ವಾತ್ಯ ಸಂಸ್ಕೃತಿಗಳ ಕೊಳು ಕೊಡುವಿನಿಂದ ಹಾಗೂ ಸಾಮರಸ್ಯದಿಂದ ಜಗತ್ಶಾಂತಿಯನ್ನು ಸಾಧಿಸಬೇಕಾಗಿದೆ.' ಎಂಬುದು ಅರವಿಂದರ ನಿಲುವು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಜನ ಚರ್ಚು ಹಾಗೂ ಧಾರ್ಮಿಕ ವಿಚಾರಗಳಲ್ಲಿ ಆಸಕ್ತರಾಗಿದ್ದರೂ, ಭೌತವಾದ ಅವರ ಜೀವನವನ್ನು ರೂಪಿಸುತ್ತಿದೆ. ಜೀವನವನ್ನವರು ವಿಶೇಷವಾಗಿ ಪ್ರೀತಿಸುತ್ತಾರೆ. ಜೀವನ ಸೌಕರ್ಯಗಳನ್ನು ನಿರ್ಮಿಸಿಕೊಳ್ಳುವುದರ ಕಡೆಗೆ ಅವರ ಶಕ್ತಿ ಸಮಸ್ತವೂ ಕ್ರಿಯಾಶೀಲವಾಗುತ್ತದೆ. ಹೀಗಾಗಿ ವಿಜ್ಞಾನ ತಂತ್ರಜ್ಞಾನಗಳಲ್ಲಿ ಕೈಗಾರಿಕೆಗಳಲ್ಲಿ ಕ್ರಾಂತಿ ಸಂಭವಿಸುತ್ತದೆ. ಅದರ ಬೆನ್ನಲ್ಲಿಯೇ ವೈಚಾರಿಕ ಕ್ರಾಂತಿ ಪ್ರಬಲವಾಗುತ್ತದೆ. ಸಹಜವಾಗಿಯೇ ಕ್ರಿಸ್ತ ಧರ್ಮ ವಿನೂತನ ಕ್ರಾಂತಿಯೊಡನೆ ರಾಜಿ ಮಾಡಿಕೊಳ್ಳಬೇಕಾಗುತ್ತದೆ. ಭೌತಿಕ ಸಂಪತ್ತೇ ಜೀವನಮೌಲ್ಯವಾಗಿರುವ ಈ ಕಾಲದಲ್ಲಿ ಕೆಲವು ಪಾಶ್ಚಾತ್ಯ ರಾಷ್ಟ್ರಗಳು ಮುಂಚೂಣಿಯಲ್ಲಿ ಕಾಣಿಸಿಕೊಳ್ಳುತ್ತವೆ. ಇತಿಹಾಸದ ಪ್ರಾತಃಕಾಲದಲ್ಲಿಯೇ, ಅನ್ಯರಾಷ್ಟ್ರಗಳು ಸರಿಯಾಗಿ ಕಣ್ಣುಬಿಡುವ ಮೊದಲೇ ಭೌತವಾದಕ್ಕೆ ಸರಿಗಟ್ಟುವ ಚಾರ್ವಾಕ ಸಿದ್ಧಾಂತ ಇಂಡಿಯಾದಲ್ಲಿ ವ್ಯಾಪಕ ಪ್ರಚಾರದಲ್ಲಿತ್ತು. ವೈದಿಕ ಧರ್ಮಕ್ಕೆ ಪ್ರತಿಭಟನೆಯ ರೂಪದಲ್ಲಿ ತಲೆಯೆತ್ತಿದ ಬೌದ್ಧಧರ್ಮಕ್ಕೆ ವೈಜ್ಞಾನಿಕ ಪ್ರವೃತ್ತಿ ತಳಹದಿಯಾಗಿತ್ತು. ನೂತನ ವಿಚಾರಧಾರೆಯ ಪ್ರಚಾರವನ್ನು ಸಹಿಸದ ಸನಾತನವಾದಿಗಳು ರಾಜರೊಡನೆ ಸೇರಿಕೊಂಡು ಅದನ್ನು ದೇಶದಿಂದಲೇ ಉಚ್ಚಾಟಿಸಲು ಸರ್ವಸನ್ನಾಹಗಳನ್ನು ನಡೆಸುತ್ತಾರೆ. ಚಾತುರ್ವರ್ಣ, ಕರ್ಮವಾದ, ಅದೃಷ್ಟವಾದ, ಜಾತೀಯತೆ, ವೈರಾಗ್ಯ, ಮಾಯಾವಾದ ಮೊದಲಾದ ವಿಪರೀತ ಅಸಂಗತ ವಿಚಾರಗಳನ್ನು, ಜತೆಗೆ ಸಾಮಾಜಿಕ ಕಟ್ಟುಕಟ್ಟಳೆಗಳನ್ನು ಸ್ಮೃತಿಕಾರರು ಸೃಷ್ಟಿಸಲಾಗಿ, ಅನೇಕ ಪಂಥ ಪಾಡುಗಳನ್ನು ಪುರೋಹಿತಷಾಹಿ ಕಲ್ಪಿಸಲಾಗಿ ಭಾರತ ಬೌದ್ಧಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಹಿಂಜರಿಯುತ್ತದೆ. ಗೀತೋಪನಿಷತ್ತುಗಳನ್ನು ಸರಿಯಾಗಿ ವ್ಯಾಖ್ಯಾನಿಸಿ, ಅವುಗಳ ಸಂದೇಶವನ್ನು ಸಾರ್ವತ್ರಿಕವಾಗಿ ಹರಡಿದ್ದರೆ ಭಾರತ ಜಗತ್ತಿನ ಸರ್ವಶ್ರೇಷ್ಠ ರಾಷ್ಟ್ರವಾಗಿ ಮೆರೆಯುತ್ತಿತ್ತೆಂಬುದು ಅರವಿಂದರ ಸುದೀರ್ಘ ತಪೋಲಬ್ಧ ಸುವಿಚಾರ ಸರಣಿ. ಪ್ರಾಚೀನ ಭಾರತದ ಆಧ್ಯಾತ್ಮಿಕ ಮೌಲ್ಯಗಳನ್ನು ಪುನರುಜ್ಜೀವನಗೊಳಿಸಿ ಆಧುನಿಕ ಪಾಶ್ಚಾತ್ಯ ಭೌತಿಕ ಸತ್ಯಗಳೊಡನೆ ಹೊಂದಾಣಿಕೆ ಮಾಡಿಕೊಳ್ಳುವುದಾದರೆ ಭಾರತ ಮತ್ತೆ ಅಗ್ರಮಾನ್ಯ ಶಕ್ತಿಮಾನ ರಾಷ್ಟ್ರವಾಗಿ ವಿಜೃಂಭಿಸಬಲ್ಲುದೆಂಬುದು ಅವರ ಪ್ರವಾದೀಯ ಸಂದೇಶ. ಭಗವಂತ ಸರ್ವಾಂತರ್ಯಾಮಿಯೆಂಬುದು ನಿಜವಾದರೆ ಭೌತಿಕ ಸತ್ಯಗಳನ್ನು ಅಲ್ಲಗಳೆಯಲಾಗದು.

ಚರಿತ್ರೆ ಗೊತ್ತುಗುರಿಯಿಲ್ಲದ ಕಾರ್ಯಕಾರಣ ಸಂಬಂಧವಿಲ್ಲದ ಯಾಂತ್ರಿಕ ಘಟನೆಗಳ ಗೊಂದಲವಲ್ಲ. ಅದು ಬ್ರಹ್ಮತತ್ತ್ವದ ಪ್ರಗತಿಪರ ಸ್ವಾಭಿವ್ಯಕ್ತಿಯೆಂದು ಅರವಿಂದರು ನಂಬುತ್ತಾರೆ. ರಾಷ್ಟ್ರೀಯ ಚಳವಳಿಯೆಂತೊ ಅಂತೆಯೇ ಆಂಗ್ಲ ಪ್ರಭುತ್ವದ ಹಿಂಸಾತ್ಮಕ ದಮನ ನೀತಿಯೂ ಭಗವದಿಚ್ಛೆಯೆಂಬುದು ಅವರ ನಿಲುವು. ನರನರರ ನಡುವೆ ಮೈತ್ರಿ, ಜಾತಿ ಜಾತಿಗಳ ನಡುವೆ ಸಮಾನತೆ, ವರ್ಗವರ್ಗಗಳ ನಡುವೆ ಸಾಮರಸ್ಯ ಕುದುರುವುದರ ಜತೆಗೆ, ಸ್ವಾತಂತ್ರ್ಯ ಸಿದ್ಧಿಯ ಮೂಲಕ ದೈವೀ ಐಕಮತ್ಯ ಸಂಸ್ಥಾಪನೆ ಯಾಗಬೇಕೆಂಬುದೇ ರಾಷ್ಟ್ರೀಯತಾ ಭಾವನೆಯ ಉದ್ದೇಶ. ಇಂಡಿಯಾ ಕೇವಲ ಭೌಗೋಳಿಕ ಪ್ರದೇಶವಲ್ಲ, ಮಹಾಮಾತೃ ಸ್ವರೂಪಿಣಿ. ತಪಸ್ಸು, ಜ್ಞಾನ ಮತ್ತು ಕ್ರಿಯಾಶಕ್ತಿಗಳ ಮೂಲಕ ಅವಳನ್ನು ಪೂಜಿಸಬೇಕೆಂಬುದು ಅವರು ತೋರಿಸಿರುವ ಮಾರ್ಗ. ಈ ಮಾರ್ಗವನ್ನನುಸರಿಸಿದ್ದಾದರೆ ಅಧ್ಯಾತ್ಮಸಿದ್ಧಿಯೂ, ಲೌಕಿಕ ಸ್ವಾತಂತ್ರ್ಯವೂ, ಸ್ಥಿತಪ್ರಜ್ಞಸ್ಥಿತಿಯೂ ಲಭ್ಯವಾಗುತ್ತವೆಂಬುದು ಅವರಿಗೆ ಹೊಳೆದ ಸತ್ಯ. ಸಾಧನೆಯ ಮೂಲಕ ಮಾನವ ಪಂಚಕೋಶಗಳನ್ನು ದಾಟಬೇಕಾದ್ದು ರಾಜಕೀಯಾರ್ಥಿಕ ಸಾಮಾಜಿಕ ಸ್ವಾತಂತ್ರ್ಯ ಅವನನ್ನು ಆ ಗುರಿಗೆ ಕೊಂಡೊಯ್ಯಬೇಕಾದ್ದು ನಿಸರ್ಗ ನಿಯಮವೆಂದವರು ಸಾರುತ್ತಾರೆ.

ವಿಶ್ವವೆಂಬುದು ಮನಸ್ಸು ಆಲೋಚನೆಗಳನ್ನೊಳಗೊಂಡ ಸೂಕ್ಷ್ಮ ಚೇತನ; ಅದು ಸಚ್ಚಿದಾನಂದಾತ್ಮಕವಾದದ್ದು. ಅದನ್ನೇ 'ಋತಚಿತ್' ಎಂದು ಕರೆಯಬಹುದು. ಆ ಸೂಕ್ಷ್ಮ ಚೇತನದ ಮೂರ್ತತ್ವವೇ ಜಗತ್ತು. ಅಂದ ಮೇಲೆ ಜಗತ್ತು ಮಾಯೆಯೆನ್ನಬಹುದೆ? ಈ ನಕಾರಾತ್ಮಕ ಭಾವನೆ ಸರಿಯೆ? ಜಗತ್ತಿನಲ್ಲಿ ಯಾವುದೂ ಮಿಥ್ಯೆಯಲ್ಲವೆಂದು ವಿಜ್ಞಾನ ರುಜುವಾತುಗೊಳಿಸಿದೆ. ರಾಷ್ಟ್ರದ ಕಷ್ಟ ಸಂಕಷ್ಟಗಳಿಗೆ, ಅವನತಿಗೆ ಮಾಯಾವಾದವೇ ಕಾರಣವಾಯಿತು, ಮಾನವನ ಆತ್ಮಶಕ್ತಿಗೆ ಅದು ಮಾರಕವಾಯಿತೆನ್ನುವುದು ಅರವಿಂದರ ಸ್ಪಷ್ಟ ವೈಜ್ಞಾನಿಕ ಚಿಂತನೆಯ, ಸತ್ಯ ಸಾಕ್ಷಾತ್ಕಾರ ಸಂಲಬ್ಧ ದಾರ್ಶನಿಕತೆಯ ಫಲ. ಸನಾತನ ಜ್ಞಾನ, ಪುನರುಜ್ಜೀವನ, ಮತೀಯ ಸುಧಾರಣೆ, ವೈಜ್ಞಾನಿಕ ಹಾಗೂ ಕೈಗಾರಿಕಾ ಕ್ರಾಂತಿ, ಫ್ರಾನ್ಸ್ ಕ್ರಾಂತಿ, ವೈಚಾರಿಕ ಕ್ರಾಂತಿ ಮತ್ತು ಸಮಾಜವಾದಾಂದೋಲನಾದಿ ಘಟನೆಗಳು

1. Life Divine, Essays on the Gita, the Synthesis of Yoga, Savitri and Others.

ಕ್ರಿಸ್ತಮತಕ್ಕೆ ಸಾಣೆಯಾಗಿ, ಅದರ ಅನುಯಾಯಿಗಳಲ್ಲಿ ಜೀವನಶ್ರದ್ಧೆ ಪರಿಪಾಕಗೊಳ್ಳಲು ಅನುವಾಗಿವೆ; ರಾಜಕೀಯ ಪ್ರಜ್ಞೆಯ ವಿಕಾಸಕ್ಕೆ ಆರ್ಥಿಕ ಪ್ರಗತಿಗೆ, ಸಾಮಾಜಿಕೋನ್ನತಿಗೆ ಪ್ರೇರಕವಾಗಿವೆ.

ಸಮಾನತೆ ಹಾಗೂ ವೈಯಕ್ತಿಕ ಹಕ್ಕುಗಳನ್ನೊಳಗೊಂಡ ಪ್ರಜಾಸತ್ತಾತ್ಮಕ ಸ್ವರಾಜ್ಯ ಸ್ಥಾಪನೆ ರಾಷ್ಟ್ರೀಯತಾ ಆಂದೋಲನದ ಗುರಿಯಾಗಬೇಕೆಂದವರು ಉಪದೇಶಿಸಿದರೂ, ಮಾನವ ಕುಟುಂಬದ ಏಕತಾ ಸಾಧನೆ ಸಕಲ ಮಾನವರ ಜೀವನಧ್ಯೇಯವಾಗ ಬೇಕೆಂಬುದು ಅವರ ಅಂತಿಮ ಸಂದೇಶವಾಗಿತ್ತು. ಸರ್ವಜನಾಂಗಗಳ ಸಮಸ್ತ ಮಾನವರ ಜೀವನದಲ್ಲಿ ಏಕಪ್ರಕಾರವಾಗಿ ಪ್ರವಹಿಸುತ್ತಿರುವ ಮಾನವತೆಯಲ್ಲವರು ಏಕತೆಯನ್ನು ದರ್ಶಿಸುತ್ತಾರೆ. ಆದ್ದರಿಂದ ನರನರರ ನಡುವೆ ಭೇದಭಾವನೆಯ ಅಡ್ಡ ಗೋಡೆಗಳಿರಬಾರದು; ಸಹನೆ ಸಹಕಾರ ಸಹಾನುಭೂತಿ ಪ್ರೇಮದಯೆಗಳ ಮೂಲಕ ಏಕತೆಯನ್ನು ಸಾಧಿಸಬೇಕೆಂದವರು ಜಗತ್ತಿನ ಎಲ್ಲ ಜನರನ್ನು ಎಚ್ಚರಿಸುತ್ತಾರೆ. ರಾಜಕೀಯ ಸಾಮಾಜಿಕ ಜೀವನದಲ್ಲಿ ಧರ್ಮದ, ಆಧ್ಯಾತ್ಮಿಕತೆಯ ಹಾಗೂ ನೈತಿಕತೆಯ ಸಂಸ್ಪರ್ಶವಿಲ್ಲದಿದ್ದರೆ, ಯಾವ ರಾಷ್ಟ್ರವೇ ಆಗಲಿ, ಮುಖ್ಯವಾಗಿ ಭರತಖಂಡ ಅಭ್ಯುದಯದ ಶಿಖರವನ್ನು ತಲುಪಲಾರದೆಂದು ಸ್ಪಷ್ಟಪಡಿಸುತ್ತಾರೆ.

ಶ್ರೀ ಅರವಿಂದರು ಇಪ್ಪತ್ತನೆಯ ಶತಮಾನದ ಬಹುಮುಖ ಪ್ರತಿಭೆಯ ಮಹಾಮೇಧಾವಿ. ಅವರು ಮಹಾಸಾಹಿತಿಯೂ ಹೌದು, ಮಹಾತತ್ತ್ವಜ್ಞಾನಿಯೂ ಹೌದು. ಅಧ್ಯಾತ್ಮ ಸಾಧಕರಾಗಿ, ದಾರ್ಶನಿಕರಾಗಿ, ಬ್ರಹ್ಮಜ್ಞಾನಿಗಳಾಗಿ, ಮಾನವ ಪ್ರೇಮಿಯಾಗಿ, ತಪಸ್ವಿಗಳಾಗಿ, ಉತ್ಥಾನ ಜಾಗೃತ ಭಾರತಾತ್ಮದ ಸಂಕೇತವಾಗಿ ಅವರು ಲೋಕಗೌರವ ಭಾಜನರಾಗಿದ್ದಾರೆ. ಅವರ ಅಧ್ಯಾತ್ಮ ಜೀವನದ ಹೊರಮೈಯಲ್ಲಿ ಒಮ್ಮೊಮ್ಮೆ ಮನುಕುಲ ಹಿತಾರ್ಥಕವಾದ ರಾಜಕೀಯ ವಿಚಾರಗಳು ಸುಳುಹುದೋರುತ್ತವೆ, ಅವು ಆಧುನಿಕ ರಾಜನೀತಿಕ್ಷೇತ್ರಕ್ಕೆ ಉತ್ತಮ ಕೊಡುಗೆಗಳೂ ಆಗಿವೆ.

ಬಂಗಾಳದ ರಾಜಕೀಯಾಕಾಶದ ಮತ್ತೊಂದು ಜಾಜ್ವಲ್ಯಮಾನವಾದ ನಕ್ಷತ್ರ **ಚಿತ್ತರಂಜನದಾಸ್** (೧೮೭೦-೧೯೨೫). ವೈಷ್ಣವ ಪಂಥಾನುಯಾಯಿಯಾದ ಅವರು ಕವಿ, ವಕೀಲರು ಮಾತ್ರವಲ್ಲ, ಸ್ವಾತಂತ್ರ್ಯ ಸಂಗ್ರಾಮದ ಹೋರಾಟಗಾರರೂ ಹೌದು. ಲಂಡನ್ನಿನಲ್ಲಿ ಕಾನೂನನ್ನು ಅಭ್ಯಾಸ ಮಾಡಿದ ಅವರು ೧೯೦೮ರಲ್ಲಿ ಅಲಿಪುರ ಬಾಂಬ್ ಪ್ರಕರಣದ ಮೊಕದ್ದಮೆಯಲ್ಲಿ ಅರವಿಂದರ ಪರವಾಗಿ ವಕಾಲತ್ತು ವಹಿಸಿಕೊಂಡು ವಾದ ನಡೆಸಿದಾಗ, ಅವರ ಹೆಸರು ಇಂಡಿಯಾದೇಶದಲ್ಲೆಲ್ಲ ಹರಡುತ್ತದೆ. ಜಲಿಯನ್‌ವಾಲಾಬಾಗ್ ಹತ್ಯಾಕಾಂಡದ ಸಂಬಂಧವಾಗಿ ೧೯೧೯ರಲ್ಲಿ ರಚನೆಗೊಂಡ ಕಾಂಗ್ರೆಸ್ ವಿಚಾರಣಾಸಮಿತಿಯ ಸದಸ್ಯರಾಗಿ ನಡೆಸಿದ ವಾದ ವೈಖರಿಯಲ್ಲಿ ಅವರ ಕಾನೂನು ಪಾಂಡಿತ್ಯ ಅಭಿವ್ಯಕ್ತವಾಗುತ್ತದೆ. ೧೯೨೦ರಲ್ಲಿ ಗಾಂಧೀಜಿ ಪ್ರಾರಂಭಿಸಿದ ಅಸಹಕಾರ ಚಳವಳಿಯನ್ನು ವಿರೋಧಿಸಿ, ಶಾಸನಸಭಾ ಪ್ರವೇಶದ ಮೂಲಕ ಸರ್ಕಾರ ವಿರೋಧಿ ಚಳವಳಿಯನ್ನು ಚುರುಕುಗೊಳಿಸಿದಾಗ ಅವರು ಕೆಲವು ತಿಂಗಳು ಕಾರಾಗೃಹವಾಸವನ್ನನುಭವಿಸಬೇಕಾಗುತ್ತದೆ.

೧೯೨೫ರಲ್ಲಿ ಅವರು ಅಖಿಲ ಭಾರತೀಯ ಸ್ವರಾಜ್ ಪಕ್ಷವನ್ನು ಸ್ಥಾಪಿಸುತ್ತಾರೆ. ಮೋತಿಲಾಲ್ ನೆಹರೂ ಅದರ ಕಾರ್ಯದರ್ಶಿ. ಕಾನೂನಿನ ಚೌಕಟ್ಟಿನಲ್ಲಿ ಶಾಂತರೀತಿಯಿಂದ ಅಹಿಂಸಾತ್ಮಕ ಅಸಹಕಾರ ಚಳವಳಿಯ ಮೂಲಕ ಸ್ವರಾಜ್ಯ ಸಾಧಿಸಬೇಕೆಂಬುದು ಆ ಪಕ್ಷದ ಉದ್ದೇಶ. ವಿಠಲಭಾಯಿ ಪಟೇಲ್, ಎಂ. ಆರ್. ಜಯಕರ್ ಮೊದಲಾದವರು ಆ ಪಕ್ಷದ ಸದಸ್ಯರಾಗಿದ್ದರು. ಪ್ರಾಂತೀಯ ಹಾಗೂ ಕೇಂದ್ರೀಯ ಶಾಸನಸಭೆಗಳಿಗೆ ನಡೆದ ಚುನಾವಣೆಗಳಿಗೆ ಸ್ವರಾಜ್ ಪಕ್ಷ ಹುರಿಯಾಳುಗಳನ್ನು ನಿಲ್ಲಿಸುತ್ತದೆ. ಶಾಸನಸಭೆಯಲ್ಲಿ ವಿರೋಧ ಪಕ್ಷದ ನಾಯಕರಾಗಿದ್ದ ದಾಸ್‌ರು ಸರ್ಕಾರಕ್ಕೆ ಸಿಂಹಸ್ವಪ್ನವಾಗುತ್ತಾರೆ. ಗಾಂಧೀಜಿಯೊಡನೆ ನಡೆಸಿದ ಸಂಧಾನದ ಫಲವಾಗಿ ೧೯೨೬ರಲ್ಲಿ ಸ್ವರಾಜ್ಯಪಕ್ಷ ಕಾಂಗ್ರೆಸ್ಸಿನಲ್ಲಿ ಲೀನವಾಗುತ್ತದೆ.

ಪಾಶ್ಚಾತ್ಯ ಮಾದರಿಯ ಕೈಗಾರಿಕೀಕರಣ ಇಂಡಿಯಾಕ್ಕೆ ತಗದು, ಅಧಿಕ ಬಂಡವಾಳವನ್ನಪೇಕ್ಷಿಸದ ಸ್ವದೇಶೀ ಉದ್ಯಮಗಳಿಗೆ ಅವಕಾಶ ಕಲ್ಪಿಸಬೇಕು, ಕೃಷಿಕ್ಷೇತ್ರದ ಅಭಿವೃದ್ಧಿಗೆ ಹೆಚ್ಚು ಪ್ರೋತ್ಸಾಹ ನೀಡಬೇಕೆಂದು ಅನೇಕ ಸಾರ್ವಜನಿಕ ವೇದಿಕೆಗಳಿಂದ, ಶಾಸನ ಸಭೆಯ ವಿರೋಧ ಪೀಠದಿಂದ ಅವರು ಗರ್ಜಿಸುತ್ತಾರೆ. ರೈತರ, ಕಾರ್ಮಿಕರ ಹಿತರಕ್ಷಣೆಯಲ್ಲವರು ಕಾತರರಾಗಿದ್ದರಲ್ಲದೆ ಕಾರ್ಮಿಕ ಸಮ್ಮೇಳನಗಳಲ್ಲಿ ಭಾಗವಹಿಸುತ್ತಾರೆ.

ಆ ಕಾಲದ ಇತರ ಸಮಕಾಲೀನ ನಾಯಕರಂತೆ, ಜಗತ್ತು ಭಗವಂತನ ಲೀಲಾರಂಗವೆಂದು, ಚರಿತ್ರೆ ಆ ಲೀಲೆಯ ಅಭಿವ್ಯಕ್ತರೂಪವೆಂದು, ಸತ್ಯ ಭಗವಂತನ ಪರ್ಯಾಯ ನಾಮವೆಂದವರು ತಿಳಿಯುತ್ತಾರೆ. ರಾಷ್ಟ್ರೀಯತೆಯ ಕಲ್ಪನೆ ಹೊರಗಿನಿಂದ ಆಮದಾದದ್ದಲ್ಲ, ಅದು ಋತಚಿತ್ಸಂಕಲ್ಪದ ಪ್ರತೀಕವಾಗಿದೆಯೆಂದವರು ಭಾವಿಸುತ್ತಾರೆ. ಪ್ರಾದೇಶಿಕ ಭಾಷೆಗಳ ಮೂಲಕ ನೀಡುವ ರಾಷ್ಟ್ರೀಯ ಶಿಕ್ಷಣದಿಂದ ಮಾತ್ರ ದೇಶದ ಸರ್ವಾಭ್ಯುದಯ ಸಾಧ್ಯವೆಂಬುದು ಅವರ ನಿಶ್ಚಿತ ಮತ. ಆತ್ಮಾವಲಂಬನ, ಆತ್ಮವಿಕಾಸ ಮತ್ತು

ಆತ್ಮಸಿದ್ಧಿಯ ಮೂಲಕ ಸಾಧಿಸಿದ ರಾಷ್ಟ್ರೀಯತೆ ಮಾತ್ರ ರಾಷ್ಟ್ರೀಯ ಹಾಗೂ ಜಾಗತಿಕ ಶಾಂತಿಗೆ ಕಕ್ಷೆಯಾಗುತ್ತದೆಂದೂ, ಹಿಂಸಾತ್ಮಕ ಆಕ್ರಮಣಕಾರಿ ಸಾಮ್ರಾಜ್ಯಷಾಹಿ ಜಾಗತಿಕ ಶಾಂತಿಗೆ ಅಪಾಯಕಾರಿಯಾಗುತ್ತದೆಂದೂ ಅವರು ಭವಿಷ್ಯ ನುಡಿಯುತ್ತಾರೆ.

ಪರಾವಲಂಬಿಯಾಗದೆ, ತನ್ನ ಶಕ್ತಿಯನ್ನೇ ನಂಬಿ ಸಾಹಸಗೈಯುವುದೆ ಅಸಹಕಾರ ಚಳವಳಿಯ ರಾಷ್ಟ್ರೀಯ ದೃಷ್ಟಿ. ರಾಷ್ಟ್ರಾಭಿವೃದ್ಧಿಗೆ ಅಡ್ಡಿಯಾಗಬಹುದಾದ ಅಪಾಯಗಳಿಂದ ಮುಕ್ತಗೊಂಡು, ಆತ್ಮಶುದ್ಧಿ ಮಾಡಿಕೊಳ್ಳುವುದೇ ಆ ಚಳವಳಿಯ ನೈತಿಕೋದ್ದೇಶ. ಪ್ರಜ್ಞಾಂತರಾಳದಲ್ಲಿ ಅಡಗಿರುವ ರಾಷ್ಟ್ರೀಯ ಆತ್ಮವನ್ನು ಜಾಗ್ರತಗೊಳಿಸುವುದೇ ಸ್ವರಾಜ್ಯದ ಧ್ಯೇಯ. ಕೊಳೆತು ನಾರುವ ಸಾಮಾಜಿಕ ವ್ಯವಸ್ಥೆಯನ್ನು ತೊಡೆಯದೆ ರಾಷ್ಟ್ರೀಯ ಪುನರುಜ್ಜೀವನ ಸಾಧ್ಯವಾಗದೆಂಬುದನ್ನು ಅವರು ಬಲ್ಲರು. ಆದ್ದರಿಂದ ಸ್ವರಾಜ್ಯವನ್ನು ಸಾಧಿಸದ ಸ್ವಾತಂತ್ರ್ಯ ಅರ್ಥಹೀನವೆಂಬ ಸತ್ಯ ಅವರಿಗೆ ಗೊತ್ತಿದೆ. ದಾಸ್‌ರ ಕಲ್ಪನೆಯ ಸ್ವರಾಜ್ಯ ಹಿಂದಿನವರ ಕಲ್ಪನೆಗಿಂತ ಭಿನ್ನವಾದದ್ದು ಮಾತ್ರವಲ್ಲ, ಶ್ರೇಷ್ಠವಾದದ್ದೆಂದು, ಅದು ಕೇವಲ ಸ್ವಯಮಾಡಳಿತವೆಂದು ಭಾವಿಸಬಹುದಾಗಿದೆ. ಸ್ವರಾಜ್ಯ ಸಂಪಾದನೆಗೆ ಹಿಂಸೆ ಕೂಡದೆಂದು ಸಾರುವಾಗಲೆ, ದಮನನೀತಿಯಿಂದ ಉಗ್ರಗಾಮೀ ಆಸುರೀಶಕ್ತಿಗಳ ಬೆಳವಣಿಗೆಗೆ ಅವಕಾಶಮಾಡಿ ಕೊಟ್ಟಂತಾಗುತ್ತದೆಂದು ಆಂಗ್ಲಸರ್ಕಾರಕ್ಕೆ ಎಚ್ಚರಿಕೆ ನೀಡುತ್ತಾರೆ. ಶ್ರೀಸಾಮಾನ್ಯರ ಏಳ್ಗೆ ಸ್ವರಾಜ್ಯದಿಂದಲ್ಲದೆ ಸಾಧ್ಯವಿಲ್ಲವೆಂಬುದು ಅವರ ಸಿದ್ಧಾಂತ.

ಆಂಗ್ಲ ಸಾಮ್ರಾಜ್ಯದೊಳಗಣ ಒಕ್ಕೂಟ ವ್ಯವಸ್ಥೆಗೂ (Dominion Status) ಅವರ ಸಮ್ಮತಿಯುಂಟು. ಒಕ್ಕೂಟ ವ್ಯವಸ್ಥೆಯೆಂದರೆ ದಾಸ್ಯವಲ್ಲ; ಒಂದೇ ಛತ್ರಿಯಡಿಯಲ್ಲಿ ಸಮಾನಸ್ಕಂಧತೆಯಿಂದ, ನಿರ್ಭೀತಿಯಿಂದ, ನಿರಪಾಯವಾಗಿ, ಪರಸ್ಪರ ಸಹಕಾರದಿಂದ ಸ್ವವಿಕಾಸ ಆತ್ಮ ಸಿದ್ಧಿಯನ್ನು ಸಾಧಿಸಿಕೊಳ್ಳುವ ಏರ್ಪಾಡೆಂಬುದು ಅವರ ವಿವರಣೆ. ಅದು ಸಾಧ್ಯವಾಗುವುದಿಲ್ಲವಾದರೆ ಆಂಗ್ಲ ಸರ್ಕಾರದ ವಿರುದ್ಧ ತೆರಿಗೆ ಚಳವಳಿಯನ್ನು ನಡೆಸಬೇಕಾಗುತ್ತದೆಂದು ನಿಷ್ಠುರವಾಗಿ ನುಡಿಯುತ್ತಾರೆ. ಮಾನವನ ದೈವದತ್ತ ಹಕ್ಕುಗಳನ್ನು ಕಸಿದುಕೊಳ್ಳುವ ಅಧಿಕಾರ ಯಾವ ಉನ್ಮಾದಗ್ರಸ್ತ ಉದ್ವೃತ್ತ ಸರ್ಕಾರಕ್ಕೂ ಇಲ್ಲವೆಂದವರು ಗುಡುಗುತ್ತಾರೆ.

ಚಿತ್ತರಂಜನದಾಸರು ಪ್ರವೃತ್ತಿಯಿಂದ ಸಮಾಜವಾದಿಗಳು; ಆದರೆ ಹಿಂಸಾತ್ಮಕವಾದ ಕಮ್ಯುನಿಸಮ್ಮನ್ನು ಅವರು ವಿರೋಧಿಸುತ್ತಾರೆ. ಪುಷ್ಕಿನ್ ಟಾಲ್‌ಸ್ಟಾಯ್‌ರಂಥ ಮಹಾಪುರುಷರನ್ನು ಜಗತ್ತಿಗೆ ಕೊಟ್ಟ ರಷ್ಯಾದ ಜಾಯಮಾನಕ್ಕೆ ಮಾರ್ಕ್ಸ್ ಸಿದ್ಧಾಂತ ಒಗ್ಗುವುದಿಲ್ಲವೆಂಬ, ನೂತನ ಸಿದ್ಧಾಂತದಿಂದ ಪಾರಾಗಲು ರಷ್ಯಾದ ಆತ್ಮ ಹೋರಾಟ ನಡಸುತ್ತದೆಂಬ ಅವರ ಭವಿಷ್ಯ ನಿಜವಾದದ್ದು ಲೋಕವೇದ್ಯ.

ಜಪಾನ್ ಚೀನಾಗಳನ್ನೊಳಗೊಂಡ ಏಷ್ಯಾ ಸಂಯುಕ್ತ ರಾಜ್ಯ ಘಟನೆಯ ಹೊಂಗನಸು ಆಗಾಗ್ಗೆ ಅವರ ಮನವನ್ನರಳಿಸುತ್ತದೆ. ಅದು ಮನುಕುಲದ ಸಂಯುಕ್ತ ಪ್ರಭುತ್ವಕ್ಕೆ ದಾರಿಯಾಗಲೆಂಬುದು ಅವರ ಹಂಬಲ. ಅತಿಕೇಂದ್ರೀಕರಣ ಅಪಾಯಕಾರಿಯೆಂದೂ ಸ್ವಾತಂತ್ರ್ಯಾಪಹರಣಕಾರಿಯೆಂದೂ, ವಿಕೇಂದ್ರೀಕರಣ ಪ್ರಜಾಪ್ರಭುತ್ವದ ಆತ್ಮವೆಂದೂ, ಗ್ರಾಮೀಣ ಸ್ತರದಿಂದಲೇ ಸ್ವಾಯತ್ತಾತ್ಮಕ ವಿಕೇಂದ್ರೀಕರಣ ಪ್ರಾರಂಭವಾಗಬೇಕೆಂದೂ ಹೇಳುವುದನ್ನವರು ಮರೆತಿಲ್ಲ. ತಮ್ಮ ಅದಮ್ಯ ವ್ಯಕ್ತಿತ್ವ, ಮೇಧಾವಿತನ, ವಾಗ್ವೈಖರಿಯಿಂದ ಮೋತಿಲಾಲರು[೧] ಸ್ವರಾಜ್ಯ ಪಕ್ಷಕ್ಕೆ ಮೆರುಗು ಚೇಗುಬಲಗಳನ್ನೊದಗಿಸಿದರೆಂಬುದಂತು ನಿಜ.

ಸಾಮ್ರಾಜ್ಯಷಾಹಿಯ ಉಚ್ಚಾಟನೆಗಾಗಿ ಪ್ರಾಣಾಹುತಿಗೂ ಸಿದ್ಧರಾಗಿ, ಉಗ್ರೋಗ್ರದೇಶಾಭಿಮಾನವನ್ನು ಮೆರೆದ ಮಹಾ ವ್ಯಕ್ತಿಗಳ ಪೈಕಿ **ಸುಭಾಷ್ ಚಂದ್ರಬೋಸರ** (೧೮೯೭-೧೯೪೫) ಹೆಸರು ಅಗ್ರಸ್ಥಾನದಲ್ಲಿ ನಿಲ್ಲುತ್ತದೆ. ಪ್ರತಿಭಾವಂತ ವಿದ್ಯಾರ್ಥಿಯೆಂದು ಬಂಗಾಳೀ ಯುವಕರ ಮನಹೃದಯಗಳನ್ನು ಆಕರ್ಷಿಸಿ, ಅಧ್ಯಾತ್ಮಗುರುವಿನ ಅನ್ವೇಷಣೆಗಾಗಿ ಹಿಮಾಲಯ ಪರ್ವತದಲ್ಲಿ ಅಲೆದಾಡಿ, ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿಯೂ ವಿಜಯಡಿಂಡಿಮವನ್ನು ಬಾರಿಸಿ, ಕೊನೆಗೆ ಭಾರತಾಂಬೆಯನ್ನು ದಾಸ್ಯದ ಸಂಕೋಲೆಯಿಂದ ಮುಕ್ತಿಗೊಳಿಸುವ ಸಲುವಾಗಿ ಭೋಗದಾಗರವಾದ ಅಧಿಕಾರಷಾಹಿಯನ್ನು ತಿಪ್ಪೆಯ ಕಸದಂತೆ ತಿರಸ್ಕರಿಸಿ, ಚಿಕ್ಕ ವಯಸ್ಸಿನಲ್ಲಿಯೇ ರಾಜಕೀಯಕ್ಕೆ ಧುಮುಕುತ್ತಾರೆ. ಅಧ್ಯಾತ್ಮಕ್ಷೇತ್ರದಲ್ಲಿ ಸ್ವಾಮಿ ವಿವೇಕಾನಂದರೂ ಅರವಿಂದರೂ, ರಾಜಕೀಯ ಕ್ಷೇತ್ರದಲ್ಲಿ ಲೆನಿನ್, ಡಿ.ವೆಲೇರಾ, ಮುಸ್ಸೋಲಿನಿ ಮೊದಲಾದ ಯುರೋಪಿನ ಕ್ರಾಂತಿನಾಯಕರೂ ಅವರ ಮೇಲೆ ಅದಮ್ಯ ಪ್ರಭಾವ ಬೀರುತ್ತಾರೆ. ಗಾಂಧಿಜೀಯ ಅಹಿಂಸಾತ್ಮಕ ಚಳವಳಿಯಲ್ಲಿ ಅವರಿಗೆ ವಿಶ್ವಾಸವಿಲ್ಲ. ಕ್ರಾಂತಿಕಾರಕ ಚಟುವಟಿಕೆಗಳಿಂದಾಗಿ ಅವರು ಹಲವು ಸಲ ಸೆರೆಮನೆ ವಾಸವನ್ನನುಭವಿಸಬೇಕಾಗುತ್ತದೆ. ಎರಡು ಸಲ ಕಾಂಗ್ರೆಸ್ ಗದ್ದುಗೆಗೆ ಅವರು ಆಯ್ಕೆಯಾದರೂ, ಸ್ವಾತಂತ್ರ್ಯ ಸಮರ ನೀತಿಯ ಸಂಬಂಧವಾಗಿ ತಮ್ಮ ಮತ್ತು ಗಾಂಧೀಜಿಯರ ನಡುವೆ ಧ್ರುವಾಂತರವಿರಲಾಗಿ, ಬಲಪಂಥೀಯರ ಕಿರುಕುಳದಿಂದ ನೊಂದು ಬೆಂದು ಅಧಿಕಾರಷಾಹಿಯ ಕೆರಳಿಕೆಯ ಫಲವಾಗಿ ಗೃಹಬಂಧನಕ್ಕೊಳಗಾಗುತ್ತಾರೆ. ೧೯೪೦ರ ಡಿಸೆಂಬರ್ ತಿಂಗಳಲ್ಲವರು ಜಗತ್ತಿನ ಮಹಾಶಕ್ತಿಶಾಲಿ ಸರ್ಕಾರಕ್ಕೆ ಮಣ್ಣುಮುಕ್ಕಿಸಿ, ವೇಷಾಂತರದಲ್ಲಿ ದೇಶಾಂತರಗಾಮಿಯಾಗುತ್ತಾರೆ.

೧. ಇದೇ ಲೇಖಕರ 'ಮೋತಿಲಾಲ್ ನೆಹರು' ಎಂಬ ಗ್ರಂಥವನ್ನೋದಿ.

ಪೆಷಾವರ ಕಾಬೂಲುಗಳ ಮೂಲಕ ಜರ್ಮನಿಯನ್ನು ಸೇರಿದ ಅವರ ಆ ಮಹಾಪ್ರಸ್ಥಾನದ ಕಥೆ ಪುರಾಣ ಸದೃಶ ಸಾಹಸಯಾತ್ರೆಯ ರೋಮಾಂಚಕರ ಮಹಾಗಾಥೆಯಾಗಿದೆ. ಯುರೋಪಿನ ಮಹಾನಗರಗಳಿಂದ ಅವರು ಆಂಗ್ಲ ಸಾಮ್ರಾಜ್ಯಶಾಹಿಯ ವಿರುದ್ಧವಾಗಿ ಆಕಾಶವಾಣಿಯ ಮೂಲಕ ಪ್ರಚಾರ ಸಮರವನ್ನು ಕೈಗೊಳ್ಳುತ್ತಾರೆ. ೧೯೪೩ರ ಜೂನ್ ತಿಂಗಳಲ್ಲವರು ಜಪಾನಿಗೆ ಬಂದಿಳಿಯುತ್ತಾರೆ. ಅದೇ ಜುಲೈ ತಿಂಗಳಲ್ಲಿ ಅರವತ್ತು ಸಾವಿರ ಭಾರತೀಯರನ್ನೊಳಗೊಂಡ ಭಾರತ ರಾಷ್ಟ್ರೀಯ ಸೈನ್ಯ (ಐ.ಎನ್.ಎ) ವನ್ನು ಸಜ್ಜುಗೊಳಿಸುತ್ತಾರೆ. ಅಕ್ಟೋಬರ್ ತಿಂಗಳಲ್ಲಿ ಸ್ವತಂತ್ರ ಭಾರತದ ಹಂಗಾಮಿ ಸರ್ಕಾರವನ್ನು ರಚಿಸುತ್ತಾರೆ. ರಾಷ್ಟ್ರೀಯ ಸೈನ್ಯ ಜಪಾನ್ ದಂಡಯಾತ್ರೆಗೆ ಬೆಂಬಲವಾಗಿ, ಇಂಡಿಯಾ ನೆಲದ ಮೇಲೆಯೂ ಕಾಲೂರುತ್ತದೆ. ೧೮.೮.೧೯೪೫ರಂದು ಟೋಕಿಯೋಗೆ ಮರಳುವಾಗ ಫಾರ್ಮೊಸಾದಲ್ಲಿ ವಿಮಾನ ಅಪಘಾತಕ್ಕೀಡಾಗಿ, ಅವರು ಹುತಾತ್ಮರಾಗುತ್ತಾರೆ; ಅವರ ಪ್ರಾಣಾರ್ಪಣೆಯ ದುರಂತ ರಾಷ್ಟ್ರ ಸ್ವಾತಂತ್ರ್ಯದ ನಾಂದಿಯಾಗುತ್ತದೆ.

ಸುಭಾಷ್ ಚಂದ್ರಬೋಸರ ಅಲ್ಪಾಯುಷ್ಯದ ಸಾರ್ಥಕ ಜೀವನ ಸಾಹಸಮಯ ಸಾಧನೆ ಕ್ರಿಯೆಗಳಿಂದ ಕಿಕ್ಕಿರಿದಿರಲಾಗಿ, ಚಿಂತನ ಮಂಥನಗಳಿಗೆ ಅವಕಾಶವಿಲ್ಲದ್ದರಿಂದ ರಾಜಕೀಯ ಸಿದ್ಧಾಂತಗಳನ್ನು ರೂಪಿಸಲು ಬೇಕಾದ ಸಮಯ ಅವರಿಗೊದಗಿ ಬರಲಿಲ್ಲ. ಆದರೆ ಅವರ ತ್ಯಾಗಮಯ ಜೀವನವೇ ಪ್ರಭಾವೀ ಸಿದ್ಧಾಂತವಾಗಿತ್ತೆಂಬುದರಲ್ಲಿ ಅನುಮಾನವಿಲ್ಲ. ಇತರ ವಂಗನಾಯಕರಂತೆ ಅವರೂ ಮಾಯಾವಾದವನ್ನು ಸಂಪೂರ್ಣವಾಗಿ ತಿರಸ್ಕರಿಸಿ, ಜಗತ್ತಿನ ವಾಸ್ತವಿಕ ಸತ್ಯವನ್ನೊಪ್ಪಿಕೊಳ್ಳುತ್ತಾರೆ. ಅರವಿಂದರ ಊರ್ಧ್ವಮುಖ ವಿಕಾಸಸಿದ್ಧಾಂತವನ್ನು ನಂಬುತ್ತಾರೆ. ಬಂಗಾಳದ ವಿಶಿಷ್ಟ ಪ್ರತಿಭೆಗೆ ಆರ್ಯದ್ರಾವಿಡ ಮಂಗೋಲಿಯನ್ ಸಂಸ್ಕೃತಿಗಳ ತ್ರಿವೇಣೀ ಸಂಗಮವೆ ಕಾರಣವೆಂಬುದು ಅವರ ವಾದ. ಪ್ಲೇಟೋ ಗ್ರೀನ್ ಗಾಂಧಿಯವರು ಪ್ರತಿಪಾದಿಸುವಂತೆ ರಾಜಕೀಯದಲ್ಲಿ ನೀತಿ ಸಂಹಿತೆಯನ್ನು ಬೆರಸಬಾರದೆಂದವರು ಆಗ್ರಹಿಸುತ್ತಾರೆ. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಅವರ್ಣನೀಯ ಯಾತನೆಗಳನ್ನನುಭವಿಸದೆ, ಸರ್ವತ್ಯಾಗಕ್ಕೂ ಸಿದ್ಧರಾಗದೆ ಅನ್ಯಮಾರ್ಗವಿಲ್ಲವೆಂಬುದು ಅವರ ಸಂಕಲ್ಪ. ಇಡಿಯಾದಂಥ ಸಾಮಾಜಿಕ ಅಸಮಾನತೆಯ ದೇಶದಲ್ಲಿ ರಾಜಕೀಯ ಹೋರಾಟದ ಜತೆಜತೆಗೆ ಸಾಮಾಜಿಕ ಹೆಣಗಾಟವೂ ಅನಿವಾರ್ಯವೆಂಬುದು ಅವರಿಗೆ ಗೊತ್ತು. ಅವರು ಅಪ್ಪಟ ಸಮಾಜವಾದಿಯಾದರೂ ಮಾರ್ಕ್ಸ್ ಅನುಯಾಯಿಯಲ್ಲ. ಅವರ ಪ್ರಕಾರ ನಾಸ್ತಿಕತೆಯನ್ನು ಪುರಸ್ಕರಿಸುವ ಮಾರ್ಕ್ಸ್‌ವಾದ ಭರತ ಖಂಡದ ನೆಲದಲ್ಲಿ ಹುಲುಸಲಾರದು. ಅವರ ಸಮಾಜವಾದದ ಬೇರುಗಳು ಸಾಂಖ್ಯ ವೈಶೇಷಿಕಾದಿ ದರ್ಶನಗಳಲ್ಲಿ ಚಾಚಿಕೊಂಡಿವೆ. ಹಳ್ಳಿಗಾಡಿನ ಸ್ಥಿತಿಗತಿಗಳನ್ನು ಉತ್ತಮಪಡಿಸಿದಾಗ, ಜಮೀನ್ದಾರಿ ಪದ್ಧತಿಯನ್ನು ರದ್ದುಗೊಳಿಸಿದಾಗ ರಾಷ್ಟ್ರಾಭ್ಯುದಯ ಸಾಧ್ಯವೆಂಬುದು ಅವರ ಅಚಲ ನಿರ್ಧಾರ.

ಆಂಗ್ಲ ರಾಜಕಾರಣಿಗಳ ಸಂಚು ಹೊಂಚುಗಳು ಕುಯುಕ್ತಿ ಕುತಂತ್ರಗಳು ಗಾಂಧೀಜಿಗೆ ತಿಳಿಯುವುದಿಲ್ಲವೆಂದು, ಅಹಿಂಸಾತ್ಮಕ ಚಳವಳಿಯಿಂದ ಸ್ವಾತಂತ್ರ್ಯ ಸಾಧನೆ ಸಾಧ್ಯವಿಲ್ಲವೆಂದು ಅವರ ಮನಸ್ಸಿಗೆ ಸ್ಪಷ್ಟವಾಗಿದ್ದರೂ, ಗಾಂಧೀಜಿಯ ಸತ್ಯನಿಷ್ಠೆ ಹಾಗೂ ಶೀಲಶುದ್ಧಿಗಾಗಿ ಬೋಸ್ ಅವರನ್ನು ಗೌರವಿಸುತ್ತಾರೆ. ಗಾಂಧಿ ನೇತೃತ್ವದ ಕಾಂಗ್ರೆಸ್ಸಿಗೆ ರಾಜಕೀಯ ವಸ್ತುಸ್ಥಿತಿ ಅರ್ಥವಾಗಲಿಲ್ಲವೆಂದು ಖಚಿತವಾದಾಗ ಬೋಸ್ ಆಂಗ್ಲ ಸರ್ಕಾರಕ್ಕೆ ವಿರುದ್ಧವಾದ ಶಕ್ತಿಗಳನ್ನು ಒಗ್ಗೂಡಿಸಿ, ಫಾರ್ವರ್ಡ್ ಬ್ಲಾಕ್ ಎಂಬ ಪಕ್ಷವನ್ನು ಕಟ್ಟುತ್ತಾರೆ.

ಆ ಪಕ್ಷದ ಧ್ಯೇಯೋದ್ದೇಶ ನೀತಿ ವಿಧಾನಗಳನ್ನು ಹೀಗೆ ಸಂಗ್ರಹಿಸಿಸಬಹುದು: ಸಂಪೂರ್ಣ ಸ್ವಾತಂತ್ರ್ಯ ಸಾಧನೆ; ಆರ್ಥಿಕೋನ್ನತಿಗಾಗಿ ಬಹು ಪ್ರಮಾಣದ ಉತ್ಪತ್ತಿ; ಉತ್ಪತ್ತಿ ವಿತರಣೆಗಳ ನಿಯಂತ್ರಣ; ಪ್ರತಿಯೊಬ್ಬ ವ್ಯಕ್ತಿಗೂ ಸಮಾನ ಹಕ್ಕುಗಳು; ಎಲ್ಲ ವರ್ಗಗಳ ಜನರಿಗೆ ಭಾಷಿಕ ಹಾಗೂ ಸಾಂಸ್ಕೃತಿಕ ಸ್ವಾಯತ್ತತೆ; ಸಾಮಾಜಿಕ ನ್ಯಾಯ ಸಂದಾಯ; ಶಿಸ್ತು ಶೀಲಗಳ ವಿಕಾಸಕ್ಕೆ ತಕ್ಕ ವಾತಾವರಣ ನಿರ್ಮಾಣ. ಫಾರ್ವರ್ಡ್ ಬ್ಲಾಕ್ ಪಕ್ಷದ ಧ್ಯೇಯ ನಿರೂಪಣೆಯಲ್ಲಿಯೇ ಸುಭಾಷ್ ಚಂದ್ರಬೋಸರ ರಾಜಕೀಯ ವಿಚಾರಧಾರೆಯ ಸ್ವರೂಪವನ್ನು ಗಮನಿಸಬಹುದು.

ಒಟ್ಟಿನ ಮೇಲೆ, ರಾಷ್ಟ್ರದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧೀಜಿಯ ನಂತರ ಬೋಸರ ಪಾತ್ರ ಮಹತ್ವಪೂರ್ಣವಾದದ್ದೆಂದೂ, ಅವರು ರಾಷ್ಟ್ರದ ಮಹಾನಾಯಕರೆಂಬುದರಲ್ಲಿ ಸಂದೇಹವಿಲ್ಲವೆಂದೂ ಧಾರಾಳವಾಗಿ ಹೇಳಬಹುದು.

## ಮಹಾಬೆಳಗು-ಮಹಾರಾಷ್ಟ್ರದಲ್ಲಿ

ಮುಂಬೈ ಮೂಲದ ಸ್ವಾತಂತ್ರ್ಯ ವೀರರಲ್ಲಿ ಜ್ಯೇಷ್ಠರಾದವರು **ದಾದಾಬಾಯಿ ನವರೋಜಿಯವರು.** (೧೮೨೫-೧೯೧೭) ಅವರ ಆನುವಂಶಿಕ ವೃತ್ತಿ ವ್ಯಾಪಾರ. ಪ್ರವೃತ್ತಿಯಿಂದ ಶಿಕ್ಷಣಾಭಿಮಾನಿಯಾದ ಅವರು ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಗಣಿತ ಮತ್ತು ತತ್ತ್ವಶಾಸ್ತ್ರಗಳ ಪ್ರಾಧ್ಯಾಪಕರಾಗುತ್ತಾರೆ. ಹೆಚ್ಚುಕಾಲ ಇಂಗ್ಲೆಂಡಿನಲ್ಲಿರುತ್ತಿದ್ದ ಅವರು ಅಲ್ಲಿಯ ಗಣ್ಯರನ್ನು ಪರಿಚಯಿಸಿಕೊಂಡು, ಅವರೊಡನೆ ಇಂಡಿಯಾ ದೇಶದ ಸಮಸ್ಯೆಗಳನ್ನು ಚರ್ಚಿಸುತ್ತಾರೆ. ಕೆಲವು ಕಾಲ ಬರೋಡದ ದಿವಾನರೂ ಆಗಿದ್ದರು. ೧೮೯೨ರಲ್ಲಿ ಬ್ರಿಟನ್ನಿನ

ಪಾರ್ಲಿಮೆಂಟ್ ಚುನಾವಣೆಯಲ್ಲಿ ಭಾಗವಹಿಸಿ ಗೆಲ್ಲುತ್ತಾರೆ, ಇಂಡಿಯಾದ ಪ್ರತಿನಿಧಿಯಂತೆ ಭಾರತೀಯರ ಆಶೋತ್ತರಗಳಿಗೆ ಅಲ್ಲವರು ನಾಲಗೆಯಾಗುತ್ತಾರೆ. ಸರ್ಕಾರದ ಉನ್ನತ ಸೇವೆಗಳಿಗೆ ನಡೆಸುವ ಪರೀಕ್ಷೆಗಳಿಗೆ ಲಂಡನ್ನಿನ ಜತೆಗೆ ಇಂಡಿಯಾದ ನಗರಗಳೂ ಕೇಂದ್ರಗಳಾಗಬೇಕೆಂದವರು ಒತ್ತಾಯಿಸುತ್ತಾರೆ. ಸಾರ್ವಭೌಮ ಸರ್ಕಾರ ದೇಶದ ಹೊರಗೆ ನಡೆಸುವ ಕಾರುಬಾರುಗಳಿಗಾಗಿ ಇಂಡಿಯಾ ದೇಶದ ಸಂಪತ್ತನ್ನು ಕೊಳ್ಳೆಹೊಡೆದು, ಇಲ್ಲಿಯ ಆರ್ಥಿಕ ಶಕ್ತಿಯನ್ನು ಕುಗ್ಗಿಸಿದುದರ ಪರಿಣಾಮವಾಗಿ ಜನ ಹಸಿದು ಕಂಗಾಲಾಗುತ್ತಿದ್ದುದನ್ನು ಸಭೆಯ ಗಮನಕ್ಕೆ ತರುತ್ತಾರೆ. ಅರ್ಥಶಾಸ್ತ್ರದಲ್ಲಿ ಪಾರಂಗತರಾದ ಅವರು ರಾಷ್ಟ್ರದ ಹಣಕಾಸಿನ ಪರಿಸ್ಥಿತಿಯ ಬಗ್ಗೆ ಅಧಿಕಾರವಾಣಿಯಿಂದ ಮಾತಾಡಬಲ್ಲವರಾಗಿದ್ದರು.

ರಾಷ್ಟ್ರೀಯ ಕಾಂಗ್ರೆಸ್ಸಿನ ಸಂಸ್ಥಾಪಕರಲ್ಲೊಬ್ಬರಾದ ಅವರು ಮೂರು ಸಲ ಅದರ ಅಧ್ಯಕ್ಷರಾಗಿ, ಸ್ವರಾಜ್ಯ ಸ್ಥಾಪನೆಯೇ ತಮ್ಮ ಸಂಸ್ಥೆಯ ಗುರಿಯೆಂದು ಘೋಷಿಸುತ್ತಾರೆ. ಇಂಡಿಯಾ ದೇಶದ ದಾರಿದ್ರ್ಯಾದಿ ಸಕಲ ಸಾಮಾಜಿಕಾರ್ಥಿಕ ಸಮಸ್ಯೆಗಳಿಗೆ ಹೊರಗಿನಿಂದ ಬಂದ ಅಧಿಕಾರಶಾಹಿಯೇ ಹೊಣೆಯೆಂದು ಸ್ಪಷ್ಟಪಡಿಸುತ್ತಾರೆ. 'ಜನಸಂಖ್ಯಾಸ್ಫೋಟ ಇಂಡಿಯಾದ ಸಮಸ್ಯೆಗಳಿಗೆ ಕಾರಣವೆಂದು ಸಾರ್ವಭೌಮ ಸರ್ಕಾರದ ಪ್ರತಿನಿಧಿಗಳು ವಾದಿಸುತ್ತಾರೆ. ಆ ವಾದ ನಿಜವಲ್ಲ. ಬ್ರಿಟನ್ ಅಬಿಸೀನಿಯಾದ ಮೇಲೆ ನಡೆಸುವ ಧಾಳಿಯ ವೆಚ್ಚವನ್ನು ಇಂಡಿಯಾ ಭರಿಸಬೇಕು. ಬ್ರಿಟಿಷ್ ಸರ್ಕಾರದ ಇಂಡಿಯಾ ಕಚೇರಿಯ ಖರ್ಚಿಗೆ ಹಣ ಇಲ್ಲಿಂದಲೇ ಹರಿದುಹೋಗಬೇಕು. ನಿವೃತ್ತಿಯ ನಂತರ ಇಂಗ್ಲೆಂಡಿನಲ್ಲಿ ನೆಲಸುವ ಉನ್ನತಾಧಿಕಾರಿಗಳ ಪಿಂಚಣಿಯೂ ಇಲ್ಲಿಯ ತೂಬಿನ ಮೂಲಕವೇ ಹರಿಯಬೇಕು. ಜತೆಗೆ ಅಧಿಕಾರಿಗಳು ಇಲ್ಲಿ ಸಂಪಾದಿಸಿದ ಹಣವನ್ನು ಮಿಗಿಸಿ ಅಲ್ಲಿ ಆಸ್ತಿಪಾಸ್ತಿಗಳನ್ನು ಸಂಪಾದಿಸುತ್ತಾರೆ. ಅಲ್ಲಿಯ ಕೈಗಾರಿಕೋದ್ಯಮಗಳಿಗೆ ಕಚ್ಚಾ ಸಾಮಗ್ರಿ ಕಡಮೆ ದರದಲ್ಲಿ ಇಲ್ಲಿಂದ ರವಾನೆಯಾಗಬೇಕು, ಅಲ್ಲಿಯ ಸಿದ್ಧ ವಸ್ತುಗಳಿಗೆ ಭಾರತವೇ ಮಾರುಕಟ್ಟೆ. ಹೀಗಾಗಿ ಇಂಡಿಯಾ ದೇಶದ ಬಂಡವಾಳದಿಂದ ಇಂಗ್ಲೆಂಡಿನ ಕೈಗಾರಿಕೆಗಳು ಬಲೂನಿನಂತೆ ಊದುತ್ತಿವೆ, ಕೊಬ್ಬುತ್ತಿವೆ. ಇಂಡಿಯಾದ ಜನರ ಬೆವರು ಶ್ರಮಗಳು ಇಂಗ್ಲೆಂಡಿಗರ ಬೊಜ್ಜು ಬೆಳೆಸುತ್ತಿವೆ. ಬಿಳಿಯರನ್ನು ಓಲೈಸಬಲ್ಲ ಕೆಲವು ಭಾರತೀಯರು ಶ್ರೀಮಂತರಾಗುತ್ತಿದ್ದಾರೆ. ಇಂಥವರ ಸಂಖ್ಯೆ ಶೇಕಡಾ ಹತ್ತಕ್ಕಿಂತ ಹೆಚ್ಚಿಗೆ ಇರಲಾರದು. ವೈಸ್‌ರಾಯ್ ಸರ್ಕಾರ ಎರಡು ಇಂಡಿಯಾಗಳನ್ನು ಸೃಷ್ಟಿಸಿದೆ: ಒಂದು ಶ್ರೀಮಂತ ನಗರಿ; ಮತ್ತೊಂದು ಜೋಪಡಿಗ್ರಾಮ. ಆಂಗ್ಲರ ಉದ್ಧಾರದ ಜತೆಗೆ ಭಾರತೀಯರ ಉದ್ಧಾರವೂ ತಮ್ಮ ಕರ್ತವ್ಯವೆಂದು ತಿಳಿಯಬೇಕಾದ್ದು ಪ್ರಭು ಧರ್ಮ. ಪರಸ್ಪರ ಸಹಾಯ ಸಹಕಾರಗಳ ಮೂಲಕ ಎರಡೂ ದೇಶಗಳ ಬಾಂಧವ್ಯ ಬಲಗೊಳ್ಳಬೇಕೆಂಬುದು ಭಾರತೀಯರ ಬಯಕೆ' - ಇದು ಸಾಮಾನ್ಯವಾಗಿ ಪಾರ್ಲಿಮೆಂಟಿನಲ್ಲಿ ಮಾಡುತ್ತಿದ್ದ ಅವರ ಭಾಷಣದ ಜಾಡು.

ರಾಜಕೀಯಾಧಿಕಾರಕ್ಕೆ ನೈತಿಕ ತಳಹದಿ ಅನಿವಾರ್ಯವೆಂಬುದು ಎಲ್ಲ ಭಾರತೀಯ ನಾಯಕರಂತೆ ಅವರೂ ನುಡಿಯುತ್ತಾರೆ. ಶಸ್ತ್ರಾಸ್ತ್ರಗಳಿಂದ ಕ್ಷಣಭಂಗುರ ಮೃಗೀಯ ದೈಹಿಕ ಶಕ್ತಿಯಿಂದ ಚಕ್ರಾಧಿಪತ್ಯವನ್ನು ಕಟ್ಟಿದರೂ, ಅದರ ಭದ್ರತೆಗೆ ಹಾಗೂ ಸಂರಕ್ಷಣೆಗೆ ಶಾಶ್ವತ ನೈತಿಕ ಶಕ್ತಿ ಅನಿವಾರ್ಯವೆಂದವರು ಮತ್ತೆ ಮತ್ತೆ ಹೇಳುತ್ತಾರೆ. ಇಂಗ್ಲೆಂಡಿನ ಪ್ರಗತಿಪರ ಸಭ್ಯನಾಗರಿಕತೆಯಿಂದ ಜಗತ್ತಿಗೆ, ಅದರಲ್ಲಿಯೂ ಭಾರತಕ್ಕೆ ಲಾಭವುಂಟೆಂದು'ನಂಬಿದವರಲ್ಲಿ ಅವರೂ ಒಬ್ಬರು. ಪಾಶ್ಚಾತ್ಯ ಶಿಕ್ಷಣ, ಪರಿಪಕ್ವವಾದ ಆಡಳಿತ ಕಲೆ ಮತ್ತು ತಂತ್ರ ಯಂತ್ರ ವಿಜ್ಞಾನಗಳ ಆಮದಿನಿಂದ ದೇಶಕ್ಕೆ ಅನುಕೂಲವಾಗುತ್ತದೆಂದವರು ಪ್ರಚಾರ ನಡೆಸುತ್ತಿದ್ದರೂ, ಸದ್ಯದ ಆಡಳಿತ ವೈಖರಿ ದೇಶದ ಪ್ರಗತಿಗೆ ಕಂಟಕವಾಗಿದೆಯೆಂದು ಘೋಷಿಸುವಲ್ಲಿ ಅವರಿಗೆ ಯಾವ ಮುಲಾಜೂ ಇಲ್ಲ. ಅನ್ಯಾಯದಿಂದಾಗಿ ಪ್ರಬಲತಮ; ಶಕ್ತಿಯೂ ನಾಶವಾಗುತ್ತದೆಂಬ ಅಂಶವನ್ನು ಬಿಳಿಯರ ಗಮನಕ್ಕೆ ತರುತ್ತಾರೆ. ಇಂಡಿಯಾದ ಒಳಿತಿಗಾಗಿ ಇಂಗ್ಲೆಂಡು ಆಡಳಿತ ನಡೆಸಬೇಕೇ ಹೊರತು, ಅದನ್ನು ಕೊಳ್ಳೆ ಹೊಡೆಯಲಿಕ್ಕಲ್ಲ; ಅಸಹಾಯಕತನದ ನಿರಾಶೆಯ ವಾತಾವರಣವನ್ನು ಸೃಷ್ಟಿಸಲಿಕ್ಕಲ್ಲ; ಸಂವಿಧಾನ ಸರ್ಕಾರದ ಸ್ಥಾಪನೆಗಾಗಿ ಪ್ರಾಣದ ಹಂಗು ತೊರೆದು ಹೋರಾಟ ನಡೆಸಿದ ಇಂಗ್ಲೆಂಡು ಇಂಡಿಯಾದ ಬಗ್ಗೆ ಸಭ್ಯತೆಯಿಂದ ವರ್ತಿಸುತ್ತದೆ, ನಿರಂಕುಶಾಡಳಿತವನ್ನು ತೊರೆಯುತ್ತದೆ, ಸೋದರಭಾವದಿಂದ ಭಾರತೀಯರನ್ನು ನಡೆಸಿಕೊಳ್ಳುತ್ತದೆಂದವರು ನಿರೀಕ್ಷಿಸುತ್ತಾರೆ; ಅಷ್ಟೇ ಅಲ್ಲ, ಅವಕಾಶ ದೊರೆತಾಗ ಅವರು ಆಂಗ್ಲರಿಗೆ ದಿಟ್ಟತನದಿಂದ ಕಟ್ಟೆಚ್ಚರಿಕೆ ನೀಡುತ್ತಾರೆ. ಪರಸ್ಪರ ಸೌಹಾರ್ದ ಸಮಾನತೆಯಿಂದ, ಸ್ನೇಹದಿಂದ ಭಾರತೀಯರನ್ನು ವಿಶ್ವಾಸಕ್ಕೆ ತೆಗೆದುಕೊಂಡವರು ಆಡಳಿತ ನಡೆಸಲೆಂದು ನವರೋಜಿಯವರು ಆಶಿಸುತ್ತಾರೆ. ಅವರ ಈ ಆಶೆಯಲ್ಲಿ ಇಂಗ್ಲೆಂಡಿನ ಹಿತವೂ ಇದೆ, ಇಂಡಿಯಾದ ಕ್ಷೇಮವೂ ಇದೆ. ಸಾಮ್ರಾಜ್ಯದ ಬಗ್ಗೆ ಭೇದಭಾವವಿಲ್ಲವೆಂಬುದು ನವರೋಜಿಯವರ ನಡೆನುಡಿಗಳಿಂದ ವ್ಯಕ್ತವಾಗುತ್ತದೆ.

ಇಂಗ್ಲೆಂಡಿನ ಆಡಳಿತವನ್ನೆಂತು ಅಲ್ಲಿಯ ಶಾಸಕರು ಹಾಗೂ ಅಧಿಕಾರಿಗಳು ನಡಸುತ್ತಾರೆಯೊ ಅಂತೆಯೇ ಇಂಡಿಯಾದ ಆಡಳಿತವನ್ನು ಆಂಗ್ಲರ ನೇತೃತ್ವದಲ್ಲಿ ಇಲ್ಲಿಯ ಶಾಸಕರು ಮತ್ತು ಅಧಿಕಾರಿಗಳು ನಡೆಸಬೇಕೆಂದು ನವರೋಜಿಯವರು ಸ್ಪಷ್ಟಪಡಿಸುತ್ತಾರೆ.

ದೇಶದ ಅಭಿವೃದ್ಧಿಗೆ ಇಂಥ ವ್ಯವಸ್ಥೆ ಅನಿವಾರ್ಯ. ಕರ ತೆರುವವರೇ ಅದರ ವಿನಿಯೋಗಕ್ಕೂ ಬಾಧ್ಯರಾಗಬೇಕು. ಇಲ್ಲಿ ಉತ್ಪತ್ತಿಯಾದ ಆದಾಯದ ಬಹುಭಾಗ ಇಲ್ಲಿಯವರಿಗೆ ವ್ಯಯವಾಗಬೇಕು. ಇಲ್ಲಿಯ ಜನರಿಗೆ ಎಲ್ಲ ಉದ್ಯೋಗಗಳು ದೊರಕಿ, ನಾನಾ ಕಾಲುವೆಗಳ ಮೂಲಕ ಇಂಗ್ಲೆಂಡಿಗೆ ಹರಿದುಹೋಗುವ ಸಂಪತ್ತನ್ನು ತಡೆಗಟ್ಟಬೇಕು ಎಂದವರು ಬದುಕಿರುವತನಕ ಪಟ್ಟು ಹಿಡಿಯುತ್ತಾರೆ.

ಮಹಾರಾಷ್ಟ್ರಾಭಿಮಾನಿಯೂ,ಶಿವಾಜಿಯ ಆರಾಧಕರೂ ಆದ **ಮಹದೇವ ಗೋವಿಂದ ರಾನಡೆ** (೧೮೪೨-೧೯೦೧) ಮಹಾರಾಷ್ಟ್ರ ಭರತಖಂಡಕ್ಕೆ ನೀಡಿರುವ ಅಮೂಲ್ಯ ಕಾಣಿಕೆ. ಎಲ್ಫಿನ್‌ಸ್ಟನ್ ಕಾಲೇಜಿನಲ್ಲಿ ಇಂಗ್ಲಿಷ್ ಮತ್ತು ಇತಿಹಾಸದ ಪ್ರಾಧ್ಯಾಪಕರಾಗಿ, ಮುಂಬಯಿ ವರಿಷ್ಠ ನ್ಯಾಯಾಲಯದ ನ್ಯಾಯಮೂರ್ತಿಯಾಗಿ, ಪ್ರಾರ್ಥನಾಸಭೆಯ ಸ್ಥಾಪಕರಾಗಿ, ದಖನ್ ಶಿಕ್ಷಣ ಸಂಸ್ಥೆಯ ಸಂಸ್ಥಾಪನೆಗೆ ಪ್ರೇರಕರಾಗಿ, ರಾಷ್ಟ್ರೀಯ ಕಾಂಗ್ರೆಸ್ಸಿನ ಬೆಂಬಲಿಗರಾಗಿ, ಸ್ತ್ರೀಶೋಷಣಾ ವಿರೋಧದ ಹರಿಕಾರರಾಗಿ ಭರತ ಖಂಡದಲ್ಲೆಲ್ಲ ಅವರ ಹೆಸರು ಮೊಳಗುತ್ತದೆ. ಜ್ಞಾನೇಶ್ವರ, ನಾಮದೇವ, ಏಕನಾಥ, ತುಕಾರಾಮ, ರಾಮದಾಸ ಮೊದಲಾದ ಸಂತರು ಅವರ ಮೇಲೆ ಅಪಾರ ಪ್ರಭಾವ ಬೀರುತ್ತಾರೆ. ಭಾಷಾ-ವರ್ಣ ಗರ್ವಾಂಧತೆಗೆ ಬಲವಾದ ಪೆಟ್ಟುಕೊಟ್ಟು ಪುರೋಹಿತ ಷಾಹಿಯ ಹಲ್ಲು ಮುರಿದು ಪ್ರಾದೇಶಿಕ ಭಾಷೆಗಳಿಗೆ ಗೀರ್ವಾಣ ಭಾಷೆಯ ಸ್ಥಾನವನ್ನು ಕಲ್ಪಿಸಿ, ಶೂದ್ರಾತಿಶೂದ್ರರನ್ನು ದೇವರ ರಾಜ್ಯಕ್ಕೆ ಸ್ವಾಗತಿಸಿ ಮನುಕುಲದ ಘನತೆಯನ್ನು ಸಂತರು ಹೆಚ್ಚಿಸಿದರೆಂಬುದು ಮಾನವನ ಇತಿಹಾಸದಲ್ಲಿ ಸಾಮಾನ್ಯ ಸಂಗತಿಯೇನಲ್ಲ. ಮೊಗಲರನ್ನು ಸೋಲಿಸಿದವರು ಆಂಗ್ಲರಲ್ಲ ಶಿವಾಜಿ. ಭಾರತೀಯ ರಾಷ್ಟ್ರೀಯತೆಯ ಕಲ್ಪನೆಯನ್ನು ಮೊದಲು ರೂಪಿಸಿದವನೇ ಅವನು, ಅವನು ಬರಿಯ ಯುದ್ಧ ಮಲ್ಲನಲ್ಲ, ಆಡಳಿತಗಾರನಲ್ಲ, ಭಾರತದ ಏಕತೆಯನ್ನು ಕಲ್ಪಿಸಿಕೊಂಡಿದ್ದ ಮಹಾದೇಶಾಭಿಮಾನಿ ಎಂದವನನ್ನು ರಾನಡೆ ಆರಾಧಿಸುತ್ತಾರೆ. ಅವರು ಪ್ರಾರಂಭಿಸಿದ ಧಾರ್ಮಿಕ ಕ್ರಾಂತಿಯಿಂದಾಗಿ ಜಾತ್ಯತೀತ ಪ್ರತ್ಯೇಕತಾವಾದ ಸೋತಿತೆಂದು, ಬ್ರಾಹ್ಮಣರಿಗೆ ಸಮನಾಗಿ ಶೂದ್ರರೂ ಅಧ್ಯಾತ್ಮ ಸಾಧನೆಯಲ್ಲಿ ಮೇಲೇರುವಂತಾಯಿತೆಂದು, ಸ್ತ್ರೀಯರ ಸ್ಥಾನಮಾನ ಉತ್ತಮವಾದುವೆಂದು, ಮರಾಠಿ ಭಾಷೆಯ ಸಾಹಿತ್ಯ ಶ್ರೀಮಂತವಾಯಿತೆಂದವರು ಐತಿಹಾಸಿಕ ಸತ್ಯವನ್ನು ನಿರವಿಸುತ್ತಾರೆ.

ರಾಜಕೀಯ ಸಾಮಾಜಿಕ ಮತೀಯ ಸಾಹಿತ್ಯಿಕ ಕ್ಷೇತ್ರಗಳಲ್ಲಿ ಹೊಸ ತಿಳಿವಳಿಕೆ ಮೂಡದೆ, ಸುಧಾರಣೆಯಾಗದೆ ರಾಷ್ಟ್ರೋತ್ಥಾನ ಸಾಧ್ಯವಿಲ್ಲವೆಂಬುದು ಅವರ ನಿಲುವು. ಮೊದಲು ಬಾಲ್ಯವಿವಾಹವನ್ನು ತಪ್ಪಿಸಬೇಕು, ಸ್ತ್ರೀ ದಾಸ್ಯಕ್ಕೆ ಮಂಗಳ ಹಾಡಬೇಕು, ವಿಧವಾ ವಿವಾಹವನ್ನು ಪ್ರೋತ್ಸಾಹಿಸಬೇಕು, ಅವರಿಗೆ ಶಿಕ್ಷಣಾವಕಾಶಗಳನ್ನು ಕಲ್ಪಿಸಬೇಕು, ಸಾಮಾಜಿಕ ಸಮಾನತೆ ಸಾರ್ವತ್ರಿಕವಾಗಬೇಕು. ರಾಜಕೀಯ ವ್ಯವಹಾರ ಮತ್ತು ಸಾಮಾಜಿಕ ಸುಧಾರಣೆಗಳನ್ನು ಬೇರ್ಪಡಿಸಲಾಗದೆಂದು, ವಿವಿಧ ಜೀವನವ್ಯಾಪಾರ ಶಾಖೆಗಳ ಪರಸ್ಪರಾವಲಂಬನ ನಿಸರ್ಗ ಧರ್ಮವೆಂದವರು ರಾಜಕಾರಣಿಗಳಿಗೆ ತಿಳಿವಳಿಕೆ ನೀಡುತ್ತಾರೆ. ಮತಾಂತರದ, ಕ್ರಾಂತಿಯ ಮಾರ್ಗವನ್ನು ಬಿಟ್ಟು, ಲೀನತ್ವ ಮತ್ತು ಜೀರ್ಣತ್ವಗಳ ಮೂಲಕ ಸಾಮಾಜಿಕ ಪರಿವರ್ತನೆಯನ್ನು ಸಾಧಿಸಬೇಕು, ಹಿಂದೂ ಸಮಾಜದ ಲೋಪದೋಷ ಗಳನ್ನು ಮೂಲೋತ್ಪಾಟನೆ ಮಾಡಬೇಕು, ಜಾತಿ ವ್ಯವಸ್ಥೆಯ ವಜ್ರತನವನ್ನು ಮುರಿಯಬೇಕೆಂದವರು ಕರೆಕೊಡುತ್ತಾರೆ.

ಭಾರತೀಯರ ದಾರಿದ್ರ್ಯದ ಬಗ್ಗೆ ಅವರಿಗರಿವುಂಟು. ನವರೋಜಿಯವರಂತೆ ದಾರಿದ್ರ್ಯಕ್ಕೆ 'ಬಸಿತ' ಕಾರಣವೆಂದು ಹೇಳುವುದಿಲ್ಲ. ಕೇವಲ ವ್ಯವಸಾಯಾವಲಂಬನೆ, ಉದ್ಯಮಗಳಿಗೆ ಬೇಕಾದ ಬಂಡವಾಳದ ಅಭಾವ, ಸಂಪ್ರದಾಯಬದ್ಧವಾದ ಸಮಾಜ ರಚನೆ, ಕಂದಾಚಾರ ಪದ್ಧತಿಯ ಸಾಲವಿತರಣೆ, ಮೇಲಾಗಿ ಸಾಹಸಪ್ರವೃತ್ತಿಯ ಗೈರುಹಾಜರಿ ಕಾರಣವೆಂಬುದು ನಿಜ. ಜತೆಗೆ ಹಣ ಬಸಿತವೂ ಕಾರಣವೆಂಬುದನ್ನು ಒಪ್ಪಿಕೊಳ್ಳಲೇಬೇಕು. ವ್ಯವಸಾಯ, ವಾಣಿಜ್ಯ, ಕೈಗಾರಿಕೆ ಹಾಗೂ ದುಡಿಮೆಗಳ ಚತುರ್ವೇಣೀ ಸಂಗಮದಿಂದಲ್ಲದೆ ರಾಷ್ಟ್ರೀಯ ಸಂಪತ್ತು ಗರಿಷ್ಠ ಪ್ರಮಾಣ ಮುಟ್ಟಲಾರದೆಂಬುದು ಸಾಮಾನ್ಯನಿಗೂ ಗೊತ್ತಿರುವ ಸಂಗತಿ. ರೈತರ ಕಷ್ಟ ಸಂಕಷ್ಟಗಳಿಗೆ ಶ್ರೀಮಂತರ ಲೂಟಿ ಮತ್ತು ಸಾಲದ ಹೊರೆ ಬಹುಮಟ್ಟಿಗೆ ನಿಮಿತ್ತವೆಂಬುದೂ ನಿಜ. ಜತೆಗೆ ಆಂಗ್ಲ ಸರ್ಕಾರ ರೈತರಿಗೆ ನೀರಾವರಿಯಂಥ, ವ್ಯವಸಾಯೋತ್ಪನ್ನ ಸರಕು ಮಾರುಕಟ್ಟೆಯಂಥ ಪ್ರಾಥಮಿಕ ಸೌಲಭ್ಯಗಳನ್ನೊದಗಿಸಿಲ್ಲವೆಂಬುದೂ ದಿಟ.

ಅದೇನೇ ಇರಲಿ, ಹೆಗೆಲ್ ಮಾದರಿಯಲ್ಲಿ ರಾನಡೆಯವರೂ ಇತಿಹಾಸದ ಬೆಳವಣಿಗೆಯಲ್ಲಿ ಭಗವಂತನ ಕೈವಾಡವನ್ನು ಕಾಣುತ್ತಾರೆ. ಭರತಖಂಡ ಭರವಸೆಯ ಭೂಮಿಯೆಂಬುದು ಭಾರತೀಯರು ದೇವರಿಗೆ ಪ್ರಿಯವಾದ ಜನಾಂಗವೆಂಬುದು ಅವರ ನಂಬಿಕೆ. ಪರಕೀಯರಾಕ್ರಮಣದ ಪರಿಣಾಮವಾಗಿ ಜಗತ್ತಿನ ಸಮಗ್ರ ಸಂಸ್ಕೃತಿಗಳೂ ಧರ್ಮಗಳೂ ಇಲ್ಲಿ ಕೂಡಿಕೊಳ್ಳಲಾಗಿ ಸಮ್ಮಿಶ್ರ ಸಂಸ್ಕೃತಿ ಮತ್ತು ಧರ್ಮ ರೂಪುಗೊಂಡಂತಾಗಿದೆಯೆಂಬುದೂ, ಅದೆಲ್ಲ ಭಗವದಿಚ್ಛೆಯೆಂಬುದೂ ಅವರ ಭಾವನೆ. ಭಾರತೀಯರ ಸೋಲಿಗೆ ಅವರಲ್ಲಿ ಪೌರಪ್ರಜ್ಞೆ ಮತ್ತು ರಾಜಕೀಯ ಪರಿಜ್ಞಾನ ಇಲ್ಲದ್ದೇ ದೊಡ್ಡ ಕೊರತೆಯೆಂಬುದನ್ನವರು ಬಲ್ಲರು. ಆದರೆ ದುರದೃಷ್ಟವಶಾತ್, ಅಷ್ಟಕ್ಕೆಲ್ಲ ಯಾರು ಕಾರಣರೆಂಬುದನ್ನವರು ಗುರುತಿಸಿಲ್ಲ. ಅಂಗಗಳ ಆರೋಗ್ಯದಿಂದ ದೇಹಾರೋಗ್ಯ ಸಮನಿಸುತ್ತದೆ, ಅಂತೆಯೇ ರಾಷ್ಟ್ರಜೀವನದ ಭಾಗವಾದ ಪ್ರತಿಯೊಬ್ಬ ವ್ಯಕ್ತಿಯ ಸೌಭಾಗ್ಯದಿಂದ ರಾಷ್ಟ್ರದ ಸೌಭಾಗ್ಯ ಊರ್ಜಿತವಾಗುತ್ತದೆ; ಆದ್ದರಿಂದ

ಪ್ರತಿಯೊಬ್ಬ ವ್ಯಕ್ತಿಯೂ ಅವನವನ ಪ್ರತಿಭಾ ಸಾಮರ್ಥ್ಯಕ್ಕನುಗುಣವಾಗಿ ಬೆಳೆಯುವ, ಉತ್ತಮವಾಗಿ ಬದುಕುವ ಅವಕಾಶವನ್ನು ಕಲ್ಪಿಸಬೇಕಾದ್ದೂ ಸರ್ಕಾರದ ಆದ್ಯಕರ್ತವ್ಯ; ಸಾಮೂಹಿಕ ರೂಪದ ಸರ್ಕಾರ ಅತ್ಯುತ್ತಮ ಪೌರರ ಸಕಲಗುಣಗಳನ್ನು ಪ್ರತಿನಿಧಿಸ ಬೇಕಾದದ್ದು ಧರ್ಮ; ಜನಪ್ರತಿನಿಧಿಗಳ ಸಮ್ಮತಿಯಿಲ್ಲದೆ. ಕಾನೂನು ರಚಿಸಬಾರದು, ತೆರಿಗೆ ವಿಧಿಸಿಸಬಾರದು, ಶಿಕ್ಷೆ ಮಾಡಬಾರದು, ನೇಮಕಾತಿಗಳನ್ನು ಜಾರಿಗೊಳಿಸಬಾರದು-ಇದು ಅವರ ಸಾಮಾಜಿಕಾರ್ಥಿಕ ರಾಜಕೀಯ ವಿಚಾರಧಾರೆ. ಭಾರತದಂಥ ಬೃಹತ್ ರಾಷ್ಟ್ರದ ಸರ್ವತೋಮುಖದ ಅಭಿವೃದ್ಧಿ ವಿಕೇಂದ್ರೀಕರಣ ಹಾಗೂ ವೈವಿಧ್ಯ ಸಂರಕ್ಷಣೆಯಿಂದಲೇ ಸಾಧ್ಯ; ಭಾರತೀಯರ ಸರ್ವಶಕ್ತಿಗಳ ವಿಕಾಸಕ್ಕೆ ತಕ್ಕ ಸನ್ನಿವೇಶವೊದಗಿದ್ದಾದರೆ, ಭಾರತ ಸರ್ವಶಕ್ತರಾಷ್ಟ್ರವಾಗಿ, ಇತರ ಅಗ್ರರಾಷ್ಟ್ರಗಳಿಗೆ ಹೆಗಲೆಣೆಯಾಗಿ ವಿರಾಜಮಾನ ವಾಗುತ್ತದೆಂಬುದು ಅವರ ಆಶಾಭಾವನೆ. ಸ್ವಾತಂತ್ರ್ಯಾದರ್ಶ, ಸಾಮಾಜಿಕ ಪ್ರಗತಿ, ದೇಶಾಭಿಮಾನ, ಶೀಲಾನುಷ್ಠಾನದಿಂದ ಭರತಖಂಡ ಸರ್ವೋತ್ಕೃಷ್ಟವಾಗುತ್ತದೆಂಬುದು ಅವರ ನಿರೀಕ್ಷೆ.

ರಾನಡೆಯ ರಾಜಕೀಯ ಶಿಷ್ಯರೂ, ಗಾಂಧೀಜಿಯ ರಾಜಕೀಯ ಗುರುಗಳೂ ಆದ **ಗೋಪಾಲಕೃಷ್ಣ ಗೋಖಲೆ** (೧೮೬೬-೧೯೧೫)ಯವರು ಫರ್ಗುಸನ್ ಕಾಲೇಜಿನಲ್ಲಿ ಇತಿಹಾಸ ಮತ್ತು ಅರ್ಥಶಾಸ್ತ್ರಗಳ ಪ್ರಾಧ್ಯಾಪಕರಾಗಿದ್ದು, ಮೂರ್‍ನಾಲ್ಕು ವರ್ಷ 'ಸುಧಾರಕ' ಎಂಬ ಪತ್ರಿಕೆಯ ಸಂಪಾದಕರಾಗಿದ್ದರು. ತಮ್ಮ ಸಮಕಾಲೀನ ನಾಯಕರಂತೆ ಆಂಗ್ಲಾಡಳಿತ ಭಗವತ್ಸಂಕಲ್ಪದ ಪರಿಣಾಮ ವೆಂದವರು ತಿಳಿದಿದ್ದರು. ಅವರು ದೀರ್ಘಕಾಲ ಇಂಡಿಯನ್ ಲೆಜಿಸ್ಲೇಟಿವ್ ಕೌನ್ಸಿಲ್ಲಿನ ಸದಸ್ಯರಾಗಿದ್ದರು. ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರೂ ಆಗಿದ್ದರು. ಅವರು ಮಂದಗಾಮಿಗಳ ಪಂಗಡಕ್ಕೆ ಸೇರಿದವರಾಗಿದ್ದು, ಶೀಘ್ರಗಾಮಿಗಳನ್ನೊಂದುಗೂಡಿಸಲು ಪ್ರಯತ್ನ ನಡೆಸಿದ್ದರು. ಗಾಳಿ ಬೆಳಕು ನೀರುಗಳಂತೆ ಬದುಕಿಗೆ ಶಿಕ್ಷಣವೂ ಅನಿವಾರ್ಯವೆಂದು ತಿಳಿದಿದ್ದ ಅವರು ೧೯೦೭ರ ತಮ್ಮ ಆಯವ್ಯಯ ಭಾಷಣದಲ್ಲಿ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಅಗತ್ಯತೆಯನ್ನು ಒತ್ತಿ ಹೇಳಿದ್ದರು. ಅಷ್ಟೇ ಅಲ್ಲ ೧೯೧೧ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಮಸೂದೆಯನ್ನು ಕೌನ್ಸಿಲ್ಲಿನಲ್ಲಿ ಮಂಡಿಸಿದ್ದರು.

ಗೋಖಲೆಯವರು ಆರೇಳು ಸಲ ಇಂಗ್ಲೆಂಡಿಗೆ ಭೇಟಿಕೊಟ್ಟಿದ್ದರು. ಹೋದಾಗಲೆಲ್ಲ ಭಾರತೀಯರ ಸಮಸ್ಯೆಗಳನ್ನು ಅಲ್ಲಿಯ ಗಣ್ಯವ್ಯಕ್ತಿಗಳ ಮುಂದಿಟ್ಟು ನ್ಯಾಯ ದೊರಕಿಸಿಕೊಳ್ಳಲು ಶ್ರಮಿಸುತ್ತಿದ್ದರು. ಗಾಂಧೀಜಿಯ ಆಹ್ವಾನದ ಮೇರೆಗೆ ದಕ್ಷಿಣ ಆಫ್ರಿಕಾಕ್ಕೆ ತೆರಳಿ, ಭಾರತೀಯರ ಸಮಸ್ಯೆಗಳ ಪರಿಹಾರಕ್ಕೆ ಪ್ರಯತ್ನ ನಡೆಸಿದ್ದರು. ಕೇಂದ್ರ ಶಾಸನಸಭೆಯಲ್ಲಿ ದಕ್ಷಿಣ ಆಫ್ರಿಕಾದ ಭಾರತೀಯರ ಕುಂದು ಕೊರತೆಗಳ ವಿಷಯವನ್ನೆತ್ತಿ, ಚರ್ಚೆಗೆ ಅವಕಾಶ ಕಲ್ಪಿಸಿದರು. ಅಲ್ಲಿಯ ಸತ್ಯಾಗ್ರಹ ಚಳವಳಿಯ ಸಹಾಯನಿಧಿಗಾಗಿ ಭಾರತದಲ್ಲವರು ಧನ ಸಂಗ್ರಹ ಕಾರ್ಯಕ್ರಮವನ್ನು ಸಹ ಹಮ್ಮಿಕೊಂಡಿದ್ದರು.

ಜಗತ್ತಿನಲ್ಲಿಯೇ ಪ್ರಪ್ರಥಮವಾಗಿ ಆಧ್ಯಾತ್ಮಿಕ ಪ್ರತಿಭೆಯನ್ನೂ ನೈತಿಕ ಸಂಪತ್ತನ್ನೂ ಮೆರೆದ, ಅನೇಕ ಮಹತ್ವಪೂರ್ಣ ಧರ್ಮಗಳ ತೊಟ್ಟಿಲು ತೂಗಿದ, ವಿಜ್ಞಾನ ಸಾಹಿತ್ಯಾದಿ ಕಲೆಗಳಿಗೆ ತವರಾದ ಪ್ರಾಚೀನ ಭಾರತೀಯ ನಾಗರಿಕತೆಯ ಬಗ್ಗೆ ಅವರಿಗೆ ಅಪಾರ ಹೆಮ್ಮೆ ಮತ್ತು ಗೌರವ. ಅವರ ಮಟ್ಟಿಗೆ ಸ್ವಾತಂತ್ರ್ಯ ಮತ್ತು ರಾಷ್ಟ್ರೀಯತೆಗಳು ಆಧ್ಯಾತ್ಮಿಕ ಅಗತ್ಯಗಳು. ಸಂವಿಧಾನಾತ್ಮಕವಾದ ಚಳವಳಿಯ ಮೂಲಕ ಅವನ್ನು ಗಳಿಸಿಕೊಳ್ಳಬೇಕೇ ಹೊರತು, ಮುಷ್ಕರ ಅಸಹಕಾರ ಮೊದಲಾದ ಹಿಂಸಾತ್ಮಕ ಕೃತ್ಯಗಳ ಮೂಲಕವಲ್ಲವೆಂಬುದು ಅವರ ರಾಜಕೀಯ ನೀತಿ. ಇಂಗ್ಲಿಷಿನವರ ಉದಾರನೀತಿಯಲ್ಲವರಿಗೆ ನಂಬಿಕೆಯಿತ್ತು. ಭಾರತೀಯ ಆತ್ಮಗೌರವವನ್ನು ರಕ್ಷಿಸುವ ಅಧಿಕಾರಿಗಳು ವಿದೇಶೀಯರಾದರೂ ಸರಿಯೆ ಭಾರತೀಯರ ಅಭ್ಯುದಯಕ್ಕಾಗಿ ಸರ್ವತ್ಯಾಗಕ್ಕೂ ಸಿದ್ಧವಾಗಿರುವ ಸರ್ಕಾರ ರಾಷ್ಟ್ರೀಯ ಸರ್ಕಾರವೆಂದೇ ಅವರ ತಿಳಿವಳಿಕೆ. ಅಧಿಕಾರಶಾಹಿಯ ಸಾಮ್ರಾಜ್ಯಮನೋಭಾವವನ್ನು, ದಮನ ನೀತಿಯನ್ನು, ಅಹಂಕಾರ ವರ್ತನೆಯನ್ನು ಅವರೆಂದೂ ಸಹಿಸಿದವರಲ್ಲ. ಪರಸ್ಪರ ಸಾಮರಸ್ಯ ಸಹಕಾರದಲ್ಲಿ ಇಂಡಿಯಾ ಇಂಗ್ಲೆಂಡುಗಳ ಉಜ್ವಲ ಭವಿಷ್ಯವಿದೆ ಯೆಂಬುದು ಅವರ ಭಾವನೆ.

ಧಾರವಾಡದ ಸಾಮಾಜಿಕ ಸಮ್ಮೇಳನದಲ್ಲಿ (೧೯೦೩) ಅವರು ಜಾತ್ಯಂಧತೆಯ ಬಗ್ಗೆ ಮಾಡಿದ ಭಾಷಣ ಇಂದಿಗೂ ಪ್ರಸ್ತುತವೆಂದೇ ಹೇಳಬೇಕು. 'ಪಾಶ್ಚಾತ್ಯದೇಶಗಳ ಸಾಮಾಜಿಕ ವರ್ಗಗಳು ನಮ್ಮಲ್ಲಿರುವಂತೆ ಕಬ್ಬಿಣದ ಕಟ್ಟುಗಳಾಗಿಲ್ಲ. ಇಂದಿನ ಬ್ರಿಟಿಷ್ ಸಾಮ್ರಾಜ್ಯ ದಲ್ಲಿಯೇ ಅತ್ಯಂತ ಮಹತ್ವದ ವ್ಯಕ್ತಿಯಾಗಿರುವ ಚೇಂಬರ್‌ಲೈನ್ ಹಿಂದೆ ಮೋಚಿಯಾಗಿದ್ದ. ಷೂಗಳ ಮಾರಾಟ ಅವನ ಕಸುಬಾಗಿತ್ತು. ಅವನಿಂದು ಇಂಗ್ಲೆಂಡಿನ ಕುಲೀನರೊಡನೆ ಸಮಾನ ಸ್ಕಂಧತೆಯಿಂದ ವರ್ತಿಸುತ್ತಾನೆ. ಅರಮನೆಯ ಭೋಜನ ಕೂಟಗಳಲ್ಲಿ ಭಾಗ ವಹಿಸುತ್ತಾನೆ. ಸಾಮಾಜಿಕ ಭದ್ರತೆಗಾಗಿ ಜಾತಿ ವ್ಯವಸ್ಥೆ ಅತ್ಯಗತ್ಯವೆನ್ನುವವರಿದ್ದಾರೆ. ಆದರೆ ಅದರಿಂದ ದೇಶದ ಪ್ರಗತಿಯೇ ಸ್ಥಗಿತಗೊಳ್ಳುತ್ತದೆ. ರಾಷ್ಟ್ರಹಿತ ಕ್ಷೇಮಾಭ್ಯುದಯದಲ್ಲಿ ಆಸಕ್ತರಾಗಿರುವವರೆಲ್ಲರೂ ಜಾತೀಯತೆಯನ್ನು ಪುರಸ್ಕರಿಸಲಾರರು.' ಸುಮಾರು ಒಂದು ಶತಮಾನದ ನಂತರವೂ ಉತ್ತಮವರ್ಗದ ಭಾರತೀಯರಿಗೆ ಈ ಅಮೃತವಾಣಿ ಅರ್ಥವಾಗದಿರುವುದು ದುರ್ದೈವ.

ತಮ್ಮ ಚಿಂತನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ ಅವರು ೧೨.೬.೧೯೦೫ರಲ್ಲಿ 'ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿ' ಎಂಬ ಸಂಸ್ಥೆಯನ್ನು ಸ್ಥಾಪಿಸುತ್ತಾರೆ. ಅದರ ಸದಸ್ಯರು ಇಂಗ್ಲೆಂಡಿನ ಬಾಂಧವ್ಯವನ್ನೊಪ್ಪಿಕೊಳ್ಳುತ್ತಾರೆ. ಅದು ಭಗವದಿಚ್ಛೆಯೂ ಹೌದು. ಸ್ವರಾಜ್ಯ ಸಂಪಾದನೆ ಇಂಡಿಯಾದ ಗುರಿಯಾಗಿರಬೇಕು. ಅದಕ್ಕೆ ಭಾರತೀಯರ ತ್ಯಾಗ, ಶ್ರದ್ಧೆ, ಶ್ರಮ, ಅಗತ್ಯ. ಆ ಅಗತ್ಯದ ಪೂರೈಕೆಗಾಗಿ ಜನರ ತರಬೇತಿ ಅನಿವಾರ್ಯ. ತ್ಯಾಗ ಹಾಗೂ ಸೇವಾಮನೋಭಾವಗಳ ಮೂಲಕ ಜನರಲ್ಲಿ ದೇಶ ಪ್ರೇಮವನ್ನು ಬೆಳೆಸುವುದು; ರಾಜಕೀಯ ಶಿಕ್ಷಣವನ್ನು ವ್ಯವಸ್ಥೆಗೊಳಿಸುವುದು; ಜಾತಿ ಜಾತಿಗಳ ನಡುವೆ ಸೌಹಾರ್ದ ಸಾಮರಸ್ಯವನ್ನು ಕುದುರಿಸುವುದು; ಶಿಕ್ಷಣ ಆಂದೋಲನವನ್ನು- ಮಹಿಳಾ ಶಿಕ್ಷಣ, ಹಿಂದುಳಿದವರ ಶಿಕ್ಷಣ, ಕೈಗಾರಿಕಾ ಮತ್ತು ವಿಜ್ಞಾನ ಶಿಕ್ಷಣ-ಚುರುಕುಗೊಳಿಸುವುದು; ಹಾಗೂ ದಲಿತರನ್ನು ಮೇಲಕ್ಕೆತ್ತುವುದು- ಇವು ಆ ಸೊಸೈಟಿಯ ಮುಖ್ಯ ಕಾರ್ಯಕ್ರಮಗಳು.

ಗೋಖಲೆಯವರ ದೃಷ್ಟಿಯಲ್ಲಿ ಸ್ವದೇಶಿ ಚಳವಳಿ ಕೇವಲ ಆರ್ಥಿಕ ಸ್ವರೂಪದ್ದಲ್ಲ; ಸರ್ವಾಲಿಂಗನ ಸ್ವರೂಪದ ದೇಶಪ್ರೇಮ. ಬನಾರಸ್ ಕಾಂಗ್ರೆಸ್ ಅಧಿವೇಶನ (೧೯೦೫)ದ ಅಧ್ಯಕ್ಷ ಪೀಠದಿಂದ ಮಾಡಿದ ಭಾಷಣದಲ್ಲಿ ಅವರು ಮಾಡಿದ ವಿಶ್ಲೇಷಣೆಯಿದು: 'ಸ್ವದೇಶಿ ಸಂಬಂಧದ ಆಲೋಚನೆಯೇ ರೋಮಾಂಚನಕಾರಿ. ಅದು ಸಾಮಾನ್ಯರಲ್ಲಿಯೂ ಪ್ರೇಮದ ಪರಾಕಾಷ್ಠೆಯನ್ನು ಅನುಗ್ರಹಿಸುತ್ತದೆ. ಅದು ಸಹನೆ ಸಹಕಾರ ತ್ಯಾಗಮನೋಧರ್ಮಗಳನ್ನು ಬಲಿಯಿಸುತ್ತದೆ. ಜನರಿಗೆ ಬೇಕಾದ ಪದಾರ್ಥಗಳನ್ನು ಸ್ವದೇಶದಲ್ಲಿಯೇ ತಯಾರಿಸಿಕೊಳ್ಳುವ ಹಾಗೂ ಅವುಗಳನ್ನು ಮಾತ್ರವೇ ಬಳಸುವ ಪ್ರಕ್ರಿಯೆ ಪರಿಕ್ರಮಗಳಲ್ಲಿ ಅನ್ಯದೇಶಪ್ರೇಮವನ್ನು ಗುರುತಿಸಬಹುದಾಗಿದೆ.' ಆದರವರು ವಿದೇಶೀ ವಸ್ತುಗಳ ಬಹಿಷ್ಕಾರವನ್ನೊಪ್ಪುವುದಿಲ್ಲ.

ಅದೇ ಅಧಿವೇಶನದಲ್ಲಿ ಗೋಖಲೆಯವರು ಭಾರತೀಯರ ಹಿತದೃಷ್ಟಿಯಿಂದ ಕೆಲವು ಬೇಡಿಕೆಗಳನ್ನು ಮಂಡಿಸುತ್ತಾರೆ: ೧. ಶಾಸನಸಭೆಗಳಲ್ಲಿ ಚುನಾಯಿತ ಸದಸ್ಯರ ಸಂಖ್ಯೆ ಅರ್ಧದಷ್ಟಿರಬೇಕು. ಬಜೆಟ್ಟಿನ ಅಂಗೀಕಾರ ಆ ಸಭೆಯಲ್ಲಾಗಬೇಕು. ೨. ಕೊನೆಯ ಪಕ್ಷ ಮೂವರು ಭಾರತೀಯರು ವೈಸ್‌ರಾಯರ ಕಾರ್ಯಸಮಿತಿಯಲ್ಲಿರಬೇಕು. ೩. ಪ್ರತಿಯೊಂದು ಜಿಲ್ಲೆಯಲ್ಲಿಯೂ ಸಲಹಾ ಸಮಿತಿಗಳಿರಬೇಕು. ಜಿಲ್ಲಾಧಿಕಾರಿಗಳು ಅವರ ಸಲಹೆಯನ್ನು ಪಡೆಯಬೇಕು. ೪. ನ್ಯಾಯ ಇಲಾಖೆಗೆ ಕಾನೂನು ತಜ್ಞರನ್ನೇ ನೇಮಿಸತಕ್ಕದ್ದು. ೫. ನ್ಯಾಯಾಂಗ ಮತ್ತು ಆಡಳಿತಾಂಗ ಪ್ರತ್ಯೇಕಗೊಳ್ಳಬೇಕು. ೬. ಸೈನ್ಯದ ವೆಚ್ಚವನ್ನು ಕಡಿತಗೊಳಿಸಬೇಕು. ೭. ಪ್ರಾಥಮಿಕ ಶಿಕ್ಷಣ ವಿಸ್ತಾರಗೊಳ್ಳಬೇಕು. ೮. ಕೈಗಾರಿಕಾ ವೃತ್ತಿ ಮತ್ತು ತಾಂತ್ರಿಕ ಶಿಕ್ಷಣವನ್ನು ಹೆಚ್ಚು ಹೆಚ್ಚಾಗಿ ಪಸರಿಸಬೇಕು ೯. ಗ್ರಾಮೀಣ ಋಣ ಬಾಧೆಯನ್ನು ಇಲ್ಲವಾಗಿಸಬೇಕು. ೧೦. ಕೃಷಿ ಬ್ಯಾಂಕುಗಳ ಸ್ಥಾಪನೆ. ೧೧. ವೈಜ್ಞಾನಿಕ ಕೃಷಿ ಮತ್ತು ನೀರಾವರಿ ಯೋಜನೆಗಳ ಅನುಷ್ಠಾನ. ೧೨. ಆರೋಗ್ಯ ರಕ್ಷಣೆ.- ಗೋಖಲೆಯವರ ಈ ಯೋಜನೆಗಳು ಇಂದಿಗೂ ಅನುಷ್ಠಾನ ಯೋಗ್ಯ. ಒಂದು ಸರ್ಕಾರದ ಸಾಮರ್ಥ್ಯವನ್ನು ಒರೆಗೆ ಹಚ್ಚುವಲ್ಲಿ ಈ ಕಾರ್ಯಕ್ರಮಗಳನ್ನು ಗಮನದಲ್ಲಿರಿಸಿಕೊಳ್ಳಬೇಕು.

ದೇಶದ ಪ್ರಗತಿಗೆ ಕೇಂದ್ರೀಕರಣ ಮಾರಕ, ವಿಕೇಂದ್ರೀಕರಣ ಪ್ರೇರಕವೆಂಬ; ಅಧಿಕಾರಶಾಹಿಯ ಮೇಲೆ ನಿಯಂತ್ರಣ ಅತ್ಯಗತ್ಯವೆಂಬ ರಾಜಕೀಯ ವಿಜ್ಞಾನದ ಮೂಲತತ್ತ್ವಗಳನ್ನವರು ಬಲ್ಲವರಾಗಿದ್ದರು. ಗ್ರಾಮಪಂಚಾಯಿತಿ, ಜಿಲ್ಲಾ ಪಂಚಾಯತಿ ಮತ್ತು ಶಾಸನಸಭೆ ಎಂಬ ಮೂರು ಸ್ತರಗಳಲ್ಲಿ ಆಡಳಿತ ಹಂಚಿಕೆಯಾಗುವುದಾದರೆ ವಿಕೇಂದ್ರೀಕರಣ ತತ್ತ್ವ ಯಶಸ್ವಿಯಾಗುತ್ತದೆಂದವರು ಆಲೋಚಿಸಿದ್ದರು.

ಆಂಗ್ಲ ಸರ್ಕಾರ ದಲಿತರನ್ನು ಬದಿಗೊತ್ತರಿಸಿ, ಅನವಶ್ಯಕವಾಗಿ ಮುಸ್ಲಿಮರನ್ನು ಅಲ್ಪಸಂಖ್ಯಾತರೆಂದು ಕರೆದು, ಅವರ ಕಡೆಗೆ ವಾಲುತ್ತಿದ್ದುದನ್ನವರು ಗಮನಿಸಿದ್ದರು. ಜಗತ್ತಿನೆಲ್ಲ ಕಡೆಯೂ ಬೇರುಬಿಟ್ಟಿರುವ ಅವರನ್ನು ಅಲ್ಪಸಂಖ್ಯಾತರೆಂದು ಕರೆಯಬಹುದೆ? ತನು ಮನ ಹೃದಯಗಳನ್ನು ಇಂಡಿಯಾದ ಹೊರಗಿರಿಸಿಕೊಂಡಿರುವ ಜನರಿಗೆ ಆಡಳಿತದಲ್ಲಿ ವಿಶೇಷ ಸ್ಥಾನಮಾನಕೊಡಬಹುದೆ ಎಂಬುದು ಅವರ ಪ್ರಶ್ನೆ. ಜಾತಿ ವಿನಾಶದಿಂದ ಮಾತ್ರ ಹಿಂದೂಸಮಾಜ ಬಲಿಷ್ಠವಾಗುತ್ತದೆ, ಭದ್ರವಾಗುತ್ತದೆಂಬ ಅನೇಕ ನಾಯಕರಿಗೆ ಹೊಳೆಯದ ಸತ್ಯ ಅವರಿಗೆ ಗೋಚರವಾಗಿತ್ತು.

ಗೋಖಲೆಯವರು ತಮ್ಮ ಬದುಕಿನ ಕೊನೆಗಾಲದಲ್ಲಿ, ಇಂಡಿಯಾದಲ್ಲಿ ಸಂವಿಧಾನಾತ್ಮಕ ಪ್ರಗತಿಗಾಗಿ ಕೆಲವು ಸಲಹೆಗಳ ಕಾರ್ಯಸೂಚಿಯನ್ನು ತಯಾರಿಸಿದ್ದರು. ಪ್ರಾಂತ್ಯಗಳಿಗೆ ಸ್ವಾಯತ್ತತೆ ನೀಡಬೇಕು; ಗೌರ್ನರರ ಕಾರ್ಯಸಮಿತಿಯಲ್ಲಿ ಅರ್ಧ ಭಾಗದಷ್ಟು ಭಾರತೀಯರಿರಬೇಕು; ಸೈನ್ಯದ ಉನ್ನತಾಧಿಕಾರಿಗಳಿಗೆ ಭಾರತೀಯರನ್ನು ನೇಮಿಸಿಕೊಳ್ಳಬೇಕು; ಜರ್ಮನಿಯ ವಶದಲ್ಲಿರುವ ಪೂರ್ವ ಆಫ್ರಿಕಾವನ್ನು ಗೆದ್ದುಕೊಂಡಾಗ, ಭಾರತೀಯರ ನೆಲೆಗಾಗಿ ಅದನ್ನು ಬಿಟ್ಟುಕೊಡಬೇಕು; ಜಾಗತಿಕ ಸ್ಪರ್ಧೆಯಲ್ಲಿ ಸ್ಥಳೀಯ ಉದ್ಯಮಗಳಿಗೆ ಧಕ್ಕೆಯಾಗದಂತೆ ರಕ್ಷಣೆ ನೀಡಬೇಕು; ವಿದೇಶೀಯ ಆಮದುಗಳ ಮೇಲೆ ತೆರಿಗೆ ವಿಧಿಸಬೇಕು; ವಿದೇಶೀಯ ಬೃಹತ್ ಕೈಗಾರಿಕೆಗಳ

ಮುಂದೆ ಗುಡಿಕೈಗಾರಿಕೆಗಳು ತರಹರಿಸುತ್ತವೆಯಾದ್ದರಿಂದ, ದೊಡ್ಡ ಉದ್ಯಮಗಳ ಸ್ಥಾಪನೆಗೆ ಸರ್ಕಾರ ನೆರವು ನೀಡಬೇಕು; ಸರ್ಕಾರದ ಉತ್ಪತ್ತಿಯಲ್ಲಿ ಬಹುಭಾಗ ಕೃಷಿಕರಿಂದ ಬರುತ್ತಿರಲಾಗಿ, ಅವರ ಸಾಲ ಸೋಲಗಳನ್ನು ತೀರಿಸಬೇಕಾದ್ದು ಸರ್ಕಾರದ ಕರ್ತವ್ಯ. ಸಮಕಾಲೀನ ನಾಯಕರ ಪೈಕಿ ಗೋಖಲೆಯವರು ಕಳೆದೆರಡು ಶತಮಾನಗಳ ಮಹಾಚಿಂತಕರೆಂಬುದಕ್ಕೆ ಅವರ ಹಲವು ಸಲಹೆ ಸೂಚನೆಗಳು ನಿದರ್ಶನ ವಾಗಿವೆ. ಕಾಲಕ್ರಮೇಣ ಸ್ವದೇಶಿ ಚಳವಳಿಯೇ ಭಾರತದ ಪ್ರಗತಿಗೆ ಅನಿವಾರ್ಯವೆಂದವರು ಸ್ಪಷ್ಟಪಡಿಸುತ್ತಾರೆ. ಖಾಸಗಿ ಆಸ್ತಿಯ ಹಕ್ಕಿನ ಪರವಾಗಿದ್ದರು. ಸೈನ್ಯದ ವೆಚ್ಚ ಕಡಿತಗೊಳಿಸಬೇಕೆಂದು ವಾದಿಸುತ್ತಿದ್ದರು.

ರಾಜಕೀಯದಲ್ಲಾಗಲಿ ಜೀವನದಲ್ಲಾಗಲಿ ಗುರಿಯೆಷ್ಟು ಮುಖ್ಯವೋ, ಮಾರ್ಗವೂ ಅಷ್ಟೇ ಮುಖ್ಯ; ಎರಡೂ ಶುದ್ಧವಾಗಿರಬೇಕು; ಅನೈತಿಕತೆಗೆ ಎಲ್ಲಿಯೂ ಅವಕಾಶವಿರಬಾರದೆಂಬುದು ಅವರ ಸಂಕಲ್ಪ. ರಾಜಕೀಯದಲ್ಲಿ ಮಿತಿ, ಸಂಧಾನ, ಸಹಕಾರ, ವಿವೇಕಗಳಿರ ಬೇಕೆಂಬುದು ಅವರ ಸಂದೇಶ. ಒಂದು ರೀತಿಯಲ್ಲಿ ಗಾಂಧಿ ಅವರ ಸೃಷ್ಟಿಯೆಂದೇ ಹೇಳಬಹುದು.

'ಸ್ವರಾಜ್ಯ ಭಾರತೀಯರ ಆಜನ್ಮಸಿದ್ಧಹಕ್ಕು' ಎಂದು ಘೋಷಿಸುವ ಮೂಲಕ ಭಾರತೀಯರ ನಾಡಿನಾಡಿಗಳಲ್ಲಿ ವಿದ್ಯುತ್ ಚೈತನ್ಯವನ್ನು ಹರಿಸಿದ, ಲೋಕಮಾನ್ಯರೆಂದು ಪ್ರಸಿದ್ಧರಾದ **ಬಾಲಗಂಗಾಧರ ತಿಲಕ್** (೧೮೮೦-೧೯೨೦) ತಮ್ಮ ಬದುಕಿನ ಹ್ರಸ್ವಾವಧಿಯಲ್ಲಿಯೇ ಒಂದು ಶತಮಾನದ ಕಾರ್ಯವನ್ನು ಯಶಸ್ವಿಯಾಗಿ ಸಾಧಿಸಿ, ಜನಮನದಲ್ಲಿ ಅಚ್ಚಳಿಯದ ವ್ಯಕ್ತಿತ್ವದ ಗುರುತನ್ನು ಮುದ್ರಿಸಿಹೋಗಿರುವ ಭಾರತಾಂಬೆಯ ಸುಪುತ್ರರು. ಆ ಪೀಳಿಗೆಯ ರಾಜಕೀಯ ನಾಯಕರಲ್ಲಿಯೇ ಗೋಪುರ ವ್ಯಕ್ತಿ. 'ಕೇಸರಿ' ಮತ್ತು 'ಮರಾಠಾ' ಎಂಬೆರಡು ಪತ್ರಿಕೆಗಳ ಮೂಲಕ ಮರಾಠಿಗರಲ್ಲಿ ಜಾಗೃತಿಯನ್ನು, ದೇಶಪ್ರೇಮವನ್ನು ಮೂಡಿಸುತ್ತಾರೆ. ರಾಷ್ಟ್ರೀಯ ಚಳವಳಿಯ ಪುರಸ್ಕೃತರೆಂದು, ಪ್ರಾಣದ ಹಂಗುತೊರೆದು ದೇಶದ ಹಿತರಕ್ಷಣೆಗಾಗಿ ಹೋರಾಡಿದ ದೇಶಪ್ರೇಮಿಯೆಂದು, ಶಿವಾಜಿಯನ್ನು ಆರಾಧ್ಯ ವ್ಯಕ್ತಿಯ ಮಟ್ಟಕ್ಕೇರಿಸುವ, ಗಣೇಶನನ್ನು ರಾಷ್ಟ್ರೀಯ ದೇವತೆಯ ಎತ್ತರಕ್ಕೇರಿಸಿ, ದೇಶದಲ್ಲೆಲ್ಲ ವ್ಯಾಪಕವಾಗಿ ಆ ಹಬ್ಬವನ್ನು ಜನಪ್ರಿಯಗೊಳಿಸುವ ಮೂಲಕ ಭಾರತೀಯರಲ್ಲಿ ಏಕತಾಭಾವನೆಯನ್ನು ಕುದುರಿಸಿದ, ಧೈರ್ಯ ಆತ್ಮಶೌರ್ಯ ಆತ್ಮ ಗೌರವಗಳನ್ನು ತುಂಬಲು ಪ್ರಯತ್ನಿಸಿದ ಮಹಾಪುರುಷರವರು. ವೇದವೇದಾಂತ ರಾಮಾಯಣ ಮಹಾಭಾರತಗಳನ್ನು ಧನ್ಯಭಾವದಿಂದ ಆಳವಾಗಿ ಅಧ್ಯಯನ ಮಾಡಿ; ಹಿಂದೂಧರ್ಮವನ್ನು ಶ್ರದ್ಧಾಪೂರ್ವಕವಾಗಿ ಪ್ರೀತಿಸಿ; ಗೀತೋಪನಿಷತ್ತುಗಳನ್ನು ಕುರಿತು ಮಹಾಭಾಷ್ಯಗಳನ್ನು ರಚಿಸಿ; ವೇದಾಂತಿಯೆಂಬ, ಗದ್ಯಶಿಲ್ಪಿಯೆಂಬ ಮೆಚ್ಚುಗೆಗೆ ಪಾತ್ರರಾದ ವಿದ್ವತ್ಸಂಪನ್ನ ಮಹಾ ಮೇಧಾವಿಯವರು. ದಖನ್ ಎಜುಕೇಷನ್ ಸೊಸೈಟಿ, ಫರ್ಗುಸನ್ ಕಾಲೇಜಿನಂಥ ಸುಪ್ರಸಿದ್ಧ ವಿದ್ಯಾಸಂಸ್ಥೆಗಳ ಆಧಾರಸ್ತಂಭವಾಗಿದ್ದ ಶಿಕ್ಷಣ ತಜ್ಞರವರು. ಆತ್ಮ ಚಿರಂಜೀವತ್ವದಲ್ಲಿ ಅಚಲ ವಿಶ್ವಾಸವಿದ್ದ ಅವರು ಅನ್ಯಾಯಕ್ಕೆಂದೂ ತಲೆ ಬಾಗಿದವರಲ್ಲ. ಕೆಲವು ವೇಳೆ ತಪ್ಪಿತಸ್ಥರ ಮೇಲೆ ಮೋರೆ ಮುಸುಡಿ ನೋಡದೆ ಹರಿಹಾಯುತ್ತಿದ್ದದೂ ಉಂಟು. ಹಿಂದೂ ಮುಸ್ಲಿಮ್ ಒಗ್ಗಟ್ಟಿನ ಅಗತ್ಯತೆಯನ್ನವರು ಕಂಡುಕೊಂಡಿದ್ದರು. ನಿಸರ್ಗಸಿದ್ಧ ಹಕ್ಕುಗಳನ್ನೂ, ರಾಜಕೀಯ ಸ್ವಾತಂತ್ರ್ಯವನ್ನೂ ಕಳೆದುಕೊಂಡ ದೇಶಕ್ಕೆ ಭವಿಷ್ಯವಿಲ್ಲವೆಂಬುದು ಅವರ ಅನಿಸಿಕೆ. ಕಾಂಗ್ರೆಸ್ಸನ್ನು ಮಧ್ಯಮವರ್ಗದ ಕೆಳಸ್ತರದ ತನಕ ತರುವಲ್ಲಿ ಅವರ ಪಾತ್ರವಿತ್ತು. ಹೋಂ ರೂಲ್ ಲೀಗ್ ಕೂಡ ಅವರ ಬುದ್ಧಿಯ ಕೂಸು.

ಸನಾತನ ಹಿಂದೂಧರ್ಮ ಅತ್ಯಂತ ಪ್ರಾಚೀನವೆಂದೂ, ಅವತಾರ ತತ್ತ್ವ ಹಿಂದೂಧರ್ಮಕ್ಕೆ ಮಾತ್ರ ಮೀಸಲಾದದ್ದೆಂದೂ, ಅದು ಪರಮಾತ್ಮ ಜೀವಾತ್ಮಗಳ ಪರಸ್ಪರ ಸಂಬಂಧವನ್ನು ದೃಢಗೊಳಿಸುತ್ತದೆಂದೂ ಅವರು ಅದರ ಘನತೆಯನ್ನೆತ್ತಿ ಹಿಡಿಯುತ್ತಾರೆ. ವೇದಗಳ ಪ್ರಾಮಾಣ್ಯವನ್ನೊಪ್ಪಿಕೊಂಡವನೆ ಹಿಂದೂ ಎಂದವರು ಲಕ್ಷಣಿಸುತ್ತಾರೆ. ಅಂದಮೇಲೆ ವೇದಾಧಿಕಾರವಿಲ್ಲದ ಶೇಕಡ ೯೫ ಮಂದಿ ಭಾರತೀಯರು ಈ ಲಕ್ಷಣದ ಪ್ರಕಾರ ಅಹಿಂದೂಗಳಾಗುತ್ತಾರೆ. ಅಸಮಾನತೆ ತೀವ್ರವಾಗಿರುವ ದೇಶದಲ್ಲಿ ಏಕತೆ ಸಾಧ್ಯವೆ ಎಂಬ ಪ್ರಶ್ನೆಗೆ ಉತ್ತರ ಕೊಡುವವರು ಯಾರು? ಅಸ್ಪೃಶ್ಯತೆ ಸಂಪೂರ್ಣವಾಗಿ ತೊಲಗಬೇಕು, ಅಸ್ಪೃಶ್ಯತೆಯನ್ನು ಸಹಿಸುವ ದೇವರನ್ನೊಪ್ಪಲಾರೆ ನೆನ್ನುವರೇ ಸಾಮಾಜಿಕ ಕ್ರಾಂತಿಯನ್ನು ವಿರೋಧಿಸುತ್ತಾರೆ; ಸಾಮಾಜಿಕಾಂದೋಲನವನ್ನು ಬೆಂಬಲಿಸುವ, ವೇದ ಪ್ರಾಮಾಣ್ಯವನ್ನೊಪ್ಪಿ ಕೊಳ್ಳುವ ಆರ್ಯಸಮಾಜದಲ್ಲವರಿಗೆ ವಿಶ್ವಾಸವಿಲ್ಲ. ರಾಜಕೀಯ ಮತ್ತು ಸಾಮಾಜಿಕ ಸಂಗತಿಗಳನ್ನು ಬೆರಸಬಾರದೆಂಬ ಇಚ್ಛೆ ಅವರದು. ಹಿಂದೂಧರ್ಮದ ಎಲ್ಲ ಶಾಸ್ತ್ರಗಳಲ್ಲಿಯೂ ಅವರಿಗೆ ಗೌರವ. ಯಾರು ಹಿಂದೂಧರ್ಮದ ಆರಾಧಕರೊ ಅವರ ಮಾರ್ಗದರ್ಶನದಲ್ಲಿ ಸಾಮಾಜಿಕ ಪರಿವರ್ತನೆ ನಡೆಯಬೇಕೆನ್ನುವಾಗ ಅವರ ಮನಸ್ಸಿನಲ್ಲಿ ಸಂಪ್ರದಾಯ ಕ್ರಾಂತಿಗಳ ನಡುವೆ ಸಂಘರ್ಷ ನಡೆಯುತ್ತಿದ್ದಂತೆ ತೋರುತ್ತದೆ. ವಿಧವಾ ವಿವಾಹವಾಗಲಿ, ಶಿಕ್ಷಣ ಮೂಲಕದ ಮಹಿಳೆಯರ ಪಾಶ್ಚಾತ್ಯೀಕರಣವಾಗಲಿ, ಅಂತೆಯೇ ಮತಾಂತರವಾಗಲಿ ಅವರಿಗೆ ವಾಕರಿಕೆಯುಂಟುಮಾಡುತ್ತದೆ. ರಮಾಬಾಯಿಯವರು ಪ್ರಾರಂಭಿಸಿದ ಶಾರದ ಸದನದ ಬಗ್ಗೆ ಅವರಿಗೆ ಸಹಾನುಭೂತಿಯಿಲ್ಲ. ಉದ್ಯಮ ಪರಿಣತಿಯ ದೃಷ್ಟಿಯಿಂದ ಜಾತೀಯತೆಯನ್ನು ಸಮರ್ಥಿಸಿಕೊಳ್ಳಬಹುದಾದರೂ ಬದಲಾದ ಪರಿಸ್ಥಿತಿಯಲ್ಲಿ ಅದು ನಿಧಾನವಾಗಿ

ನಶಿಸಬೇಕೆಂದವರು ವಾದಿಸುತ್ತಾರೆ. ಅವರ ಅಂತರಂಗದ ಮೂಲೆಯಲ್ಲಿ ಸಾಮಾಜಿಕ ಬದಲಾವಣೆಗೆ ವಿರುದ್ಧವಾದ ಸಂಪ್ರದಾಯ ಜಡತೆಯ ಸ್ವಭಾವ ಅವಿತುಕೊಂಡಿರುವಂತೆ ತೋರುತ್ತದೆ.

ಸ್ವರಾಟ್ ಅಥವಾ ಸ್ವರಾಜ್ಯ ಎನ್ನುವ ಪದ ವೇದಗಳಲ್ಲಿಯೇ ಸಿಗುತ್ತದೆ. ವ್ಯಕ್ತಿಯ ಪ್ರಾಣವೆನ್ನಬಹುದಾದ ಸ್ವರಾಜ್ಯವೇ ಸತ್ಯ ಅದು ಭಗವಂತನಿಂದ ಬೇರೆಯಲ್ಲ. ಸ್ವಾತಂತ್ರ್ಯವಿಲ್ಲದೆ ವ್ಯಕ್ತಿಯ ಬದುಕು ಮಾತ್ರವಲ್ಲ ದೇಶದ ಬದುಕೂ ಸೊನ್ನೆ. ತಿಲಕರ ಪ್ರಕಾರ ನಿಜವಾದ ಸ್ವಾತಂತ್ರ್ಯ ವೈದಿಕ ಕಲ್ಪನೆಯ ಮತ್ತು ಮೆಜಿನಿ ಬರ್ಕ್ ಮಿಲ್ ವಿಲ್ಸನ್ ಮೊದಲಾದ ಪಾಶ್ಚ್ಯಾತ್ಯರ ಚಿಂತನೆಗಳ ಸಮ್ಮಿಲನದ ರಾಸಾಯನಿಕ ಪರಿಣಾಮ. ಸ್ವರಾಜ್ಯ ಸ್ವಧರ್ಮವೂ ಹೌದು; ಅಧ್ಯಾತ್ಮ ಸಾಧನೆ ಸಿದ್ಧಿಗಳಿಗೆ ರಾಜಕೀಯ ಸ್ವಾತಂತ್ರ್ಯ ಅನಿವಾರ್ಯವೆಂಬುದು ಅವರ ಮತ. ಕೊನೆಗೆ ದೇಶದೊಳಗಿನ ವ್ಯವಹಾರಗಳನ್ನಾದರೂ ದೇಶೀಯರೇ ನಿರ್ವಹಿಸಲು ಅವಕಾಶ ದೊರೆತರೆ ಸಾಕೆಂಬುದು ಅವರ ಆಗಿನ ಯೋಚನೆಯಾಗಿದ್ದಂತೆ ತೋರುತ್ತದೆ. ವಿದೇಶೀಯರ ಆಡಳಿತದಲ್ಲಿ ಆರ್ಥಿಕ ಕುಸಿತ ನಿಶ್ಚಿತವೆಂದೂ, ಭಾರತೀಯ ರಾಷ್ಟ್ರೀಯತೆಯ ಭದ್ರತೆಗಾಗಿ ಸ್ವದೇಶೀ ಚಳುವಳಿ ಸಹಜ ಸತ್ಯ ಮಾರ್ಗವೆಂದೂ, ಸ್ವದೇಶೀ ಚಳುವಳಿ ಬಹಿಷ್ಕಾರ ರಾಷ್ಟ್ರೀಯ ಶಿಕ್ಷಣ ಮತ್ತು ಅಹಿಂಸಾತ್ಮಕ ಸತ್ಯಾಗ್ರಹ ಸ್ವರಾಜ್ಯಸಂಪಾದನೆಯ ತಂತ್ರವಿಧಾನಗಳೆಂದೂ ಅವರು ಸ್ಪಷ್ಟಪಡಿಸುತ್ತಾರೆ. ಅಷ್ಟೇ ಅಲ್ಲ, ಅಹಿಂಸಾತ್ಮಕ ಸತ್ಯಾಗ್ರಹದ ರೂಪರೇಷೆಗಳನ್ನು ಕಾರ್ಯಕ್ರಮಗಳನ್ನು ಅವರು ರೂಪಿಸುತ್ತಾರೆ. ಬಹಿಷ್ಕಾರವೊಂದು ರಾಜಕೀಯ ಆಯುಧ. ಕಂದಾಯ ವಸೂಲಿ ಮಾಡಲು ಅವರಿಗೆ ಸಹಾಯ ನೀಡುವುದಿಲ್ಲ. ಭಾರತೀಯರ ರಕ್ತಧನಗಳನ್ನು ಸುರಿದು ದೇಶದ ಗಡಿಯಾಚೆ ಯುದ್ಧ ಮಾಡುವುದಿಲ್ಲ. ಅವರ ನ್ಯಾಯಾಡಳಿತವನ್ನು ವಿರೋಧಿಸುತ್ತೇವೆ. ಸಮಯ ಬಂದಾಗ ಕಂದಾಯ ಕೊಡುವುದಿಲ್ಲ. ಈ ನಿಟ್ಟಿನಲ್ಲಿ ಯೋಚಿಸಿ, ಕ್ರಿಯಶೀಲರಾಗಬೇಕೆಂದವರು ದೇಶೀಯರಿಗೆ ಕರೆಕೊಡುತ್ತಾರೆ. ನ್ಯಾಯ ನೀತಿಗಳಲ್ಲಿ ವಿರುದ್ಧವಾದ ಕಾನೂನುಗಳನ್ನು ಪಾಲಿಸಬೇಕಾಗಿಲ್ಲವೆಂಬುದು ಅಹಿಂಸಾತ್ಮಕ ಸತ್ಯಾಗ್ರಹದ ಹಿಂದಿರುವ ತತ್ತ್ವ. ಇದರಿಂದ ಬ್ರಿಟಿಷರ ರಾಜಕೀಯ ಸಂಬಂಧವನ್ನು ಸಂಪೂರ್ಣವಾಗಿ ಕಳಚಿಕೊಳ್ಳಬೇಕೆಂಬುದು ಅವರ ಉದ್ದೇಶವಲ್ಲ. ಆಂಗ್ಲ ಶಿಕ್ಷಣದಿಂದ ರಾಷ್ಟ್ರೀಯತಾ ಜಾಗೃತಿಯುಂಟಾಯಿತೆಂಬ ಅವರ ತಿಳಿವಳಿಕೆ ಸರಿಯೇ ಸರಿ.

ಸಂವಿಧಾನಾತ್ಮಕ ಚಳವಳಿಯ ಮೂಲಕ ಸ್ವರಾಜ್ಯ ಸಂಪಾದಿಸಬೇಕೆಂಬುದು ಗೋಖಲೆ ಮೊದಲಾದ ಹಲವು ನಾಯಕರ ಅಭಿಪ್ರಾಯವಾಗಿತ್ತಷ್ಟೆ. ರಾಷ್ಟ್ರಕರು ಅಥವಾ ಅವರ ಪ್ರತಿನಿಧಿಗಳು ರೂಪಿಸಿದ ರಾಜ್ಯಾಂಗ ನಿಜವಾದ ಸಂವಿಧಾನವೆನಿಸಿಕೊಳ್ಳುತ್ತದೆ. ಅದಿಲ್ಲದಿರುವಾಗ ಸಂವಿಧಾನ ಬದ್ಧ ಚಳವಳಿ ಹೇಗೆ ಸಾಧ್ಯ? ಎಂಬ ತಿಲಕರ ಪ್ರಶ್ನೆ ತರ್ಕಬದ್ಧವಾಗಿದೆ. ಸಂವಿಧಾನದ ಗೈರುಹಾಜರಿಯಲ್ಲಿ ಜನಾಭಿಪ್ರಾಯವನ್ನು ಪ್ರಕಟಿಸುವ, ರೂಪಿಸುವ ಪತ್ರಿಕೆಗಳೇ ಸಂವಿಧಾನದ ಪಾತ್ರವನ್ನು ನಿರ್ವಹಿಸಬೇಕಾಗುತ್ತದೆನ್ನುವುದನ್ನವರು ಬಲ್ಲರು. ಅವರು ಆಗಾಗ್ಗೆ ಅಹಿಂಸಾತ್ಮಕ ಚಳವಳಿಯ ಬಗ್ಗೆ ಮಾತಾಡುತ್ತಿದ್ದರೂ, ಎಲ್ಲ ಸಂದರ್ಭಗಳಲ್ಲಿಯೂ ಅದೇ ಸರಿಯೆಂದು ಟಾಲ್‌ಸ್ಟಾಯ್ ಗಾಂಧಿಯರಂತೆ ಹಟ ಹಿಡಿದವರಲ್ಲ. ಅಫ್ಜಲ್‌ಖಾನ್ ಮೊದಲಾದವರನ್ನು ಕೊಂದ ಶಿವಾಜಿಯ ಶೌರ್ಯ ಹಾಗೂ ಯುದ್ಧ ಪ್ರಾವೀಣ್ಯವನ್ನವರು ಶ್ಲಾಘಿಸುತ್ತಾರೆ. ಶಿವಾಜಿಯನ್ನವರು ಅರ್ಜುನನಿಗೆ ಹೋಲಿಸುವುದೂ ಉಂಟು. ಧರ್ಮಯುದ್ಧ ಅಥವಾ ಧರ್ಮಬದ್ಧವಾದ ಹಿಂಸೆ ಅವರ ದೃಷ್ಟಿಯಲ್ಲಿ ಅನಿವಾರ್ಯ, ಆದರೆ ಅಂಥ ಹಿಂಸೆಯನ್ನು ಅಧಿಕಾರಶಾಹಿ ಸುಲಭವಾಗಿ ನುಗ್ಗುನುರಿಮಾಡಬಹುದೆಂಬ ಸಂಶಯವೂ ಅವರಿಗಿದೆ. ರಣ ಸಾಮಗ್ರಿ ಕಾರ್ಖಾನೆಯನ್ನು ನೇಪಾಳದಲ್ಲಿ ಸ್ಥಾಪಿಸುವ ಆಲೋಚನೆಯೂ ಅವರ ಮನಸ್ಸಿನಲ್ಲಿದ್ದಂತೆ ತೋರುತ್ತದೆ. ಇಂಡಿಯಾದಂಥ ಅವ್ಯವಸ್ಥೆಯ ಹಾಗೂ ನಿರಾಯುಧ ದೇಶದಲ್ಲಿ ಹಿಂಸಾತ್ಮಕ ಚಳವಳಿ ಸಾಧ್ಯವೆ ಎಂಬ ವಾಸ್ತವ ದೃಷ್ಟಿಯೂ ಅವರಲ್ಲಿದೆ.

ಇಂಡಿಯಾ ದೊಡ್ಡ ರಾಷ್ಟ್ರವಾದುದರಿಂದ, ಅದನ್ನು ಭಾಷಾವಾರು ಪ್ರಾಂತಗಳನ್ನಾಗಿ ವಿಂಗಡಿಸತಕ್ಕದ್ದೆಂಬುದೂ ಸ್ವತಂತ್ರ ಭಾರತ ಸರ್ಕಾರ ಸಂಯುಕ್ತ ಸ್ವರೂಪದ್ದಾಗಿರಬೇಕೆಂದೂ ೧೯೧೬ ರಷ್ಟು ಹಿಂದೆಯೇ ತಿಲಕರು ಪ್ರವಾದಿಯಂತೆ ಭವಿಷ್ಯ ನುಡಿದಿದ್ದರು. ಭಾಷಾವಾರು ಪ್ರಾಂತ ರಚನೆಯೇನೋ ಆಯಿತು; ಸಂಯುಕ್ತ ಸ್ವಾಯತ್ತತೆಯ ಸರ್ಕಾರ ಬರಲಿಲ್ಲ. ಇದಕ್ಕೆ ಉತ್ತರದ ರಾಜಕಾರಣಿಗಳ ಅಸಡ್ಡೆ, ದಕ್ಷಿಣ ರಾಜಕಾರಣಿಗಳ ಅನೈಕ್ಯ ಹಾಗೂ ಸ್ವಾರ್ಥಮುಖತೆ ಕಾರಣವೆಂಬುದರಲ್ಲಿ ಸಂಶಯವಿಲ್ಲ.

ಈ ಜಗತ್ತಿನಲ್ಲಿ ಸಾಧುಗಳಿಗೆ, ಸಾತ್ವಿಕರಿಗೆ ಹಾಗೂ ಹೇಡಿಗಳಿಗೆ ಬದುಕು ಸುಗಮವಾಗದೆಂದು ಅವರು ಹೇಳುತ್ತಿದ್ದುದುಂಟು. 'ನಿಮ್ಮ ಭಾವನೆ, ಉದ್ದೇಶ ಮತ್ತು ವರ್ತನೆಗಳನ್ನು ತಪ್ಪುತಪ್ಪಾಗಿ ಪ್ರಚಾರ ಮಾಡುವುದನ್ನೇ ಕೆಲವರು ಉದ್ಯೋಗಮಾಡಿಕೊಂಡಾಗ, ನಿಮ್ಮ ಕೇಡಿ ಟೀಕಾಕಾರ ಬಗ್ಗೆ ದಿವ್ಯ ನಿರ್ಲಕ್ಷದಿಂದಿರುವುದಾದರೆ, ನಿಮ್ಮ ಉದ್ದೇಶಕ್ಕೆ ನೀವೇ ಭಂಗ ತಂದುಕೊಂಡಂತಾಗುತ್ತದೆ. ಅಷ್ಟೇ ಅಲ್ಲ, ಆ ತಪ್ಪಿಗೆ ನೀವೇ ಹೊಣೆಗಾರರಾಗುತ್ತೀರಿ. ಅಂಥ ಸಂದರ್ಭದಲ್ಲಿ ನೀವು ಕಠಿಣವಾದ ಭಾಷೆಯನ್ನು ಬಳಸಬೇಕಾಗುತ್ತದೆ.

ಆದರಿಂದಾಗಿ ನೀವು ಪಾಪಕ್ಕೆ ಗುರಿಯಾಗುವುದಿಲ್ಲ. ಯಾರಾದರೂ ನಿಮ್ಮ ಕೆನ್ನೆಗೆ ಹೊಡೆದದ್ದಾದರೆ ನೀವು ಸುಮ್ಮನಿರುವುದು ಸಮನಲ್ಲ. ತಿಲಕರ ಈ ವಿಚಾರಸರಣಿ ಅನೈತಿಕವಲ್ಲವಾದರೂ ಕ್ರಿಸ್ತ ಬಸವೇಶ್ವರ ಗಾಂಧೀಜಿಗೆ ಖಂಡಿತವಾಗಿಯೂ ಹಿಡಿಸುವುದಿಲ್ಲ.

ಸನಾತನ ಹಿಂದೂಧರ್ಮದ ಆರಾಧಕರಾದರೂ, ಭಾರತದ ಭವಿಷ್ಯವನ್ನು ಹಿಂದೂಧರ್ಮ ರೂಪಿಸಬೇಕೆಂದವರು ತಿಳಿದಿದ್ದರೂ, ಸಾವರ್‌ಕರಂಥ ವೀರ ಹಿಂದೂಗಳಿಗವರು ಆದರ್ಶರಾಗಿದ್ದರೂ, ಭಾರತದ ಏಕತೆಗಾಗಿ ಯಾವ ತ್ಯಾಗಕ್ಕೂ ಸಿದ್ಧರಾಗಿದ್ದ ಉಜ್ವಲ ದೇಶಾಭಿಮಾನಿಯವರು. ರಾಜದ್ರೋಹದ ಆಪಾದನೆಯ ಮೇಲೆ ಮೂರು ಸಲ ಅವರು ಜೈಲುವಾಸವನ್ನನುಭವಿಸುತ್ತಾರೆ, ಕೊನೆಯ ಸಲ ಆರು ವರ್ಷ ಅವರು ಮಾಂಡಲೆಯಲ್ಲಿ ಕಠಿನ ಸಜವನ್ನನುಭವಿಸಬೇಕಾಗುತ್ತದೆ. ಅವರು ತೀರಿಕೊಂಡಾಗ ಗಾಂಧೀಜಿ ಮೊದಲುಗೊಂಡು ಒದ್ದೆಗಣ್ಣಾಗದ ಭಾರತೀಯರಿರಲಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಅವರು ಬದುಕಿರಲಿಲ್ಲವಾದರೂ, ಅವರ ತ್ಯಾಗದ ನೆನಪು ಗಾಢವಾಗಿತ್ತೆಂಬುದು ನಿಜ.

ಸ್ವಾತಂತ್ರ್ಯಸಮರ ಕಾಲದ ಗೋಪುರೋಪಮನಾಯಕರೆಲ್ಲರೂ ಮಹಾವಿದ್ವಾಂಸರು. ಜೈಲಿನಲ್ಲಿರಲಿ ಹೊರಗಿರಲಿ ಪಾಶ್ಚಾತ್ಯ ಪೌರ್ವಾತ್ಯ ತತ್ತ್ವಶಾಸ್ತ್ರಗಳನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದ್ದ ಮಹಾಚಿಂತಕರು. ತಿಲಕರು ಪ್ರಾಚೀನ ಸಂಸ್ಕೃತ ಕಾವ್ಯಗಳಲ್ಲಿ ಪಾರಂಗತರಾಗಿದ್ದಲ್ಲದೆ, ಗ್ರೀನ್, ಕಾಂಟ್, ಬಂಥಾಮ್, ಮಿಲ್ ಮೊದಲಾದ ಪಾಶ್ಚಾತ್ಯ ತತ್ತ್ವಜ್ಞಾನಿಗಳ ಕೃತಿಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಿ ವಿದ್ವತ್ತಿನಲ್ಲಿ ಪಾಶ್ಚಾತ್ಯರನ್ನು ಮೀರಿಸಿದ ಅಸಾಧಾರಣ ಮೇಧಾವಿಗಳು.ಅವರು ಮರಾಠಿಯಲ್ಲಿ ಬರೆದು, ಬೇರೆ ಭಾಷೆಗಳಿಗೆ ಅನುವಾದಗೊಂಡಿರುವ 'ಗೀತಾರಹಸ್ಯ' ದೇಶ ವಿದೇಶಗಳ ವಿದ್ವಾಂಸರ ಗಮನವನ್ನು ಸೆಳೆದಿದೆ. ತಿಲಕರು ತಮ್ಮ ಈ ಶ್ರೇಷ್ಠ ಕೃತಿಯಲ್ಲಿ ಕರ್ಮಸನ್ಯಾಸಕ್ಕಿಂತ ಕರ್ಮಯೋಗಕ್ಕೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ಆದರವರು ಮಾಯಾವಾದವನ್ನೊಪ್ಪಿಕೊಳ್ಳುತ್ತಾರೆ. ಸ್ವಾತಂತ್ರ್ಯ ಸಂಪಾದನೆಯಲ್ಲಿ ಗೀತೆಯದೂ ಪಾತ್ರವಿದೆ; ಸ್ವಾತಂತ್ರ್ಯ ರಕ್ಷಣೆಗೂ ಅದು ಅಗತ್ಯವೆನ್ನುವ ತಿಲಕರ ಸಂದೇಶವನ್ನು ಭಾರತೀಯರು ಸದಾ ನೆನೆಯವುದು ಶ್ರೇಯಸ್ಕರ.

**ಮಹಾಬೆಳಗು-ಪಂಜಾಬಿನಲ್ಲಿ**

ಆರ್ಯ ಸಮಾಜದ ಕುಡಿಯೂ, ಸ್ವಾತಂತ್ರ್ಯ ಸಮರದ ಹುತಾತ್ಮರೂ ಆದ **ಲಾಲಾ ಲಜಪತ ರಾಯ್** (೧೮೬೫-೧೯೨೮) ಪಂಜಾಬಿನವರು. ಸ್ವಾರ್ಥತ್ಯಾಗ, ಧೈರ್ಯ, ದೇಶ ಪ್ರೇಮ ಮತ್ತು ಸೇವಾಮನೋಭಾವ-ಆರ್ಯ ಸಮಾಜ ಅವರಿಗೆ ಕಲಿಸಿದ ಗುಣಗಳು. ಅವರು ಹಿಂದೂ ಪವಿತ್ರ ಗ್ರಂಥಗಳನ್ನೋದಿಕೊಂಡಿದ್ದರೂ, ಅವಕ್ಕೆ ಸಂಪೂರ್ಣವಾಗಿ ಶರಣಾಗಲಿಲ್ಲ. ಮೆಜಿನಿ, ಗಾರಿಬಾಲ್ಡಿಯರು ಅವರ ಮೇಲೆ ಅಪಾರ ಪ್ರಭಾವ ಬೀರುತ್ತಾರೆ. ಅವರ ಮೇಲಣ ಗೌರವದಿಂದ ಉರ್ದುವಿನಲ್ಲಿ ರಾಯರು ಅವರ ಜೀವನ ಚರಿತ್ರೆಗಳನ್ನು ಬರೆಯುತ್ತಾರೆ. ಐದು ವರ್ಷ ಅವರು ಅಮೆರಿಕಾದಲ್ಲಿದ್ದಾಗ 'ಯಂಗ್ ಇಂಡಿಯಾ' ಎಂಬ ಮಾಸಪತ್ರಿಕೆಯನ್ನು 'ಹೋಂ ರೂಲ್ ಲೀಗ್' ಎಂಬ ಸಂಸ್ಥೆಯನ್ನು ತೆರೆದು, ಅಮೆರಿಕಾದ ಜನರಿಗೆ ಇಂಡಿಯಾದ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸುತ್ತಾರೆ. ಇಂಡಿಯಾಕ್ಕೆ ಇಂಗ್ಲೆಂಡಿನ ಋಣ, ಯಂಗ್ ಇಂಡಿಯಾ, ಅಮೆರಿಕಾ ಸಂಸ್ಥಾನವನ್ನು ಕುರಿತ ಹಿಂದೂ ಒಬ್ಬನ ಭಾವನೆಗಳು - ಇವೇ ಮೊದಲಾದ ಗ್ರಂಥಗಳನ್ನು ಪ್ರಕಟಿಸುತ್ತಾರೆ. ಅಮೆರಿಕಾದ ಶಿಕ್ಷಣ ನೀತಿ, ನೀಗ್ರೋ ಹಾಗೂ ಭಾರತೀಯರ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ನಡೆಸುತ್ತಾರೆ.

೧೯೨೦ರಲ್ಲಿ ಕಲ್ಕತ್ತೆಯಲ್ಲಿ ಲಜಪತರಾಯರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ವಿಶೇಷಾಧಿವೇಶನದಲ್ಲಿ ಅಸಹಕಾರ ಚಳವಳಿ ನಡೆಸಬಹುದೆಂದು ತೀರ್ಮಾನವಾಗುತ್ತದೆ. ಅಸಹಕಾರ ಚಳವಳಿಯ ಸ್ವರೂಪವನ್ನು, ಸ್ವರಾಜ್ಯದ ಪರಿಕಲ್ಪನೆಯನ್ನು ಪಂಜಾಬಿನಲ್ಲಿ ಹರಡುತ್ತಾರೆ. ೧೯೨೫ರಲ್ಲಿ ಕೇಂದ್ರ ಶಾಸನಸಭೆಗೆ ಚುನಾವಣೆ ನಡೆದಾಗ ತಮ್ಮ ಪಕ್ಷದ ಉಪನಾಯಕರೂ ಆಗುತ್ತಾರೆ. ಸ್ವರಾಜ್ ಪಕ್ಷದ ಸಭಾತ್ಯಾಗ ನೀತಿಯನ್ನವರು ಒಪ್ಪುವುದಿಲ್ಲ. ಮುಸ್ಲಿಮರ ಅತಿಯಾದ ಕೋಮು ಬೇಡಿಕೆಗಳು ಅವರಿಗೆ ಹಿಡಿಸುವುದಿಲ್ಲ.

ರಾಯರ ಲೇಖನಿಗೆ ಎಂದೂ ವಿರಾಮವಿಲ್ಲ. ತಾವೇ ಪ್ರಾರಂಭಿಸಿದ ದಿ ಪಂಜಾಬಿ, ವಂದೇ ಮಾತರಂ (ಉರ್ದು) ಮತ್ತು ನಿಸರ್ಗ (ಇಂಗ್ಲಿಷ್) ಪತ್ರಿಕೆಗಳ ಮೂಲಕ ಸ್ವರಾಜ್ಯ, ಸ್ವಾತಂತ್ರ್ಯ, ಸಾಮಾಜಿಕ ಪರಿವರ್ತನೆಗಳ ಬಗ್ಗೆ ಜನರಿಗೆ ತಿಳಿವಳಿಕೆ ನೀಡುತ್ತಾರೆ. ಭಾರತವನ್ನು ವಿಕಾರವಾಗಿ ಚಿತ್ರಿಸಿದ ಮಿಸ್ ಮೇಯೋಳ 'ಮದರ್ ಇಂಡಿಯಾ' ಗ್ರಂಥದ ಅಸಹ್ಯ ಸಂಗತಿಗಳಿಗೆ ತಿರುಗೇಟು ಕೊಡುತ್ತಾರೆ. ಮಾಂಡಲೆಯಲ್ಲಿ ಗಡೀಪಾರು ಶಿಕ್ಷೆಯನ್ನನುಭವಿಸುತ್ತಿದ್ದಾಗ ಅವರು ಬರೆದಿರುವ ಬರ್ಮೀಯರ ರೂಢಿ ಸಂಪ್ರದಾಯಗಳ ನ್ನೊಳಗೊಂಡ 'ನನ್ನ ಗಡೀಪಾರಿನ ಕಥೆ' ಎನ್ನುವ ಗ್ರಂಥ ಅವರ ಆಸಕ್ತಿ ವೈವಿಧ್ಯಕ್ಕೆ ಸಾಕ್ಷಿಯಾಗಿದೆ. ಹಲವು ಜೀವನಚರಿತ್ರೆಗಳ ಜತೆಗೆ ಅವರು ಆತ್ಮಕಥೆಯನ್ನೂ ಬರೆದಿದ್ದಾರೆ.

ಆಳಿಸಿಕೊಳ್ಳುವರ ಇಷ್ಟಾನಿಷ್ಟ ಆಶೋತ್ತರಗಳನ್ನರಿತು ಆಳುವುದು, ನೀತಿನಿಯಮಗಳನ್ನು ರೂಪಿಸುವುದು ಆಳುವವರ ಕರ್ತವ್ಯವೆಂದವರು ಸಾರುತ್ತಾರೆ. ಆಂಗ್ಲರ ಗೆಲುವಿಗೆ ಅವರ ಶೌರ್ಯ ಧೈರ್ಯ ಸಾಹಸಗಳಲ್ಲ, ಅವರ ನೀತಿಬಾಹಿರವಾದ ಸಂಚು ಹೊಂಚುಗಳು ಕಾರಣವೆಂದವರು ಸ್ಪಷ್ಟಪಡಿಸುತ್ತಾರೆ. ಭಾರತೀಯರ ಹಣ ಮತ್ತು ರಕ್ತ ಸ್ರಾವದಿಂದ ಅವರು ಇಂಡಿಯಾವನ್ನು ಗೆದ್ದುಕೊಂಡರೆಂಬುದು ಸತ್ಯ ಸಂಗತಿ. ಹುತಾತ್ಮರ ರಕ್ತದಿಂದ ರಾಷ್ಟ್ರೀಯತೆ ಪೋಷಿತವಾಗಬೇಕಾಗಿದೆ. ಆಳುವವರ ದಮನ ನೀತಿ ಅದಕ್ಕೆ ಪ್ರಾಣಶಕ್ತಿಯಾಗುತ್ತದೆಂಬುದು; ಕರ್ತವ್ಯ ಪ್ರಜ್ಞೆ, ನೈತಿಕ ಮಟ್ಟ, ನಿಸ್ವಾರ್ಥತೆ, ದೇಶಭಕ್ತಿ ಅದರ ವಿಕಾಸಕ್ಕೆ ಪ್ರೇರಕವಾಗುತ್ತದೆಂಬುದು ಅವರ ಸಂದೇಶದ ಸಾರವಾಗಿದೆ. ಬಂಡವಾಳದ ಕಡೆಗಿಂತ ಸಮಾಜವಾದದ ಕಡೆಗೆ ಅವರ ಸಹಾನುಭೂತಿ ಅಧಿಕವಾಗಿತ್ತು. ಆದರೂ ಕಾರ್ಮಿಕರು ಮತ್ತು ಒಡೆಯರು ಸಮಾನತೆಯಿಂದ ಪರಸ್ಪರ ಕೈಕುಲುಕಬೇಕೆಂದೂ ನಾಡಿನ ಆರ್ಥಿಕ ಭದ್ರತೆಗೆ ನಿಮಿತ್ತವಾಗಿರುವ ಕೈಗಾರಿಕೆಗಳನ್ನುಳಿಸಿ ಬೆಳೆಸಬೇಕೆಂದೂ ಅವರು ನೀಡಿದ ಸಲಹೆ ಹಿಂದುಳಿದ ದೇಶಕ್ಕೊಂದು ವರ. ಅವರು ಬಾಲ್ಷೆವಿಸಮ್ ವಿರೋಧಿ. ಅದು ಹರಡದಂತೆ ತಡೆಗಟ್ಟುವ ಒಂದೇ ಒಂದು ವಿಧಾನವೆಂದರೆ ಪ್ರಜಾಪ್ರಭುತ್ವ ವ್ಯವಸ್ಥೆಯ ಅಂಗೀಕಾರವೆಂದೂ, ಬಂಡವಾಳಗಾರಿಕೆ ಮತ್ತು ಸಾರ್ವಭೌಮತೆಗೆ ಬದಲಾಗಿ ಬಾಲ್ಷೆವಿಕ್ ವ್ಯವಸ್ಥೆ ತಮಗೆ ಒಪ್ಪಿಗೆಯೆಂದೂ ಅವರು ನುಡಿಯುತ್ತಾರೆ. ಸ್ವದೇಶಿ, ರಾಷ್ಟ್ರೀಯ ಶಿಕ್ಷಣ ಮತ್ತು ಸಮಾಜವಾದಗಳ ಕಡೆಗೆ ಅವರ ಒಲವು.

ಧರ್ಮ ಬದುಕಿನ ಅವಿಭಾಜ್ಯ ಅಂಗವಾಗಬೇಕು; ಮೌಲಿಕವೂ ಪ್ರಸ್ತುತವೂ ಆದ ಸಿದ್ಧಾಂತಗಳನ್ನು ತೊರೆಯಬಾರದು; ಅಸಮಾನತೆಯನ್ನು ಬೆಂಬಲಿಸುವ ಧರ್ಮ ತ್ಯಾಜ್ಯ; ಧರ್ಮ ನಿಂತ ಮಡುವಾಗದೆ, ದಿನದಿಂದ ದಿನಕ್ಕೆ ಊರ್ಧ್ವಮುಖವಾಗಿ ಬೆಳೆಯುವ ಶಕ್ತಿಯಾಗಬೇಕು; ಅದು ನೈತಿಕತೆ ಮತ್ತು ಆಧ್ಯಾತ್ಮಿಕತೆಯನ್ನು ಒಪ್ಪವಿಡುವ ಜತೆಗೆ, ಸಾಮಾಜಿಕ ಪರಿವರ್ತನೆಯನ್ನು ಸಾಧಿಸಬೇಕು; ಮನು, ನಾರದ ಮತ್ತು ಆಪಸ್ತಂಭರ ಸಾಮಾಜಿಕ ಸಿದ್ಧಾಂತಗಳನ್ನು ಮುಂದುವರಿಸುವುದು ಮೂರ್ಖತನ. ಯಾವಾಗಲು ನಮ್ಮ ದೃಷ್ಟಿ ಮುಮ್ಮೊಗವಾಗಿರಬೇಕೇ ಹೊರತು, ಹಿಮ್ಮೊಗವಾಗಬಾರದು-ಇವು ಧರ್ಮದ ಬಗೆಗಿನ ಅವರ ಅಭಿಪ್ರಾಯ. ಹಿಂದೂ ಸಂಘಟನೆಗೆ ಹಾಗೂ ದೇಶದ ಭದ್ರತೆಗೆ ಜಾತೀಯತೆ ಅಪಾಯಕಾರಿಯೆಂದು, ಅಂತೆಯೇ ಜಾತಿವಾರು ಚುನಾವಣಾ ಕ್ಷೇತ್ರ ವಿಂಗಡಣೆ ಮಾರಕವೆಂದವರು ಒತ್ತಿ ಹೇಳಿದ್ದುಂಟು. ಜಾತೀಯತೆ ಹಿಂದೂಧರ್ಮದ ಶಾಪವೆಂಬುದು ಅವರಿಗೆ ಮನದಟ್ಟಾಗಿತ್ತು.

ಲಜಪತರಾಯರಂಥ ಕಾಂಗ್ರೆಸ್ ಕಾರ್ಯಕರ್ತರು ೧೯೨೫ರಲ್ಲಿ ಹಿಂದೂ ಮಹಾಸಭೆಯ ಕಲ್ಕತ್ತಾ ಅಧಿವೇಶನದ ಅಧ್ಯಕ್ಷರಾದದ್ದು ಆ ಪಕ್ಷದ ಆಗಿನ ಕಾಲದ ಸರ್ವಾದರಣೀಯವಾದ ಉದಾರ ನೀತಿಗೆ ನಿದರ್ಶನವಾಗಿದೆ. ಅಧ್ಯಕ್ಷ ಪೀಠದಿಂದವರು ಸೂಚಿಸಿದ ಕಾರ್ಯಕ್ರಮಗಳಲ್ಲಿ ಕೆಲವಿವು: ದೇಶದಲ್ಲೆಲ್ಲ ಹಿಂದೂ ಮಹಾಸಭೆಯನ್ನು ಜನಪ್ರಿಯಗೊಳಿಸುವುದು; ಮತಾಂತರಗೊಂಡ ಹಿಂದೂಗಳನ್ನು ಮತ್ತೆ ಹಿಂದೂಧರ್ಮಕ್ಕೆ ಸೇರಿಸಿಕೊಳ್ಳುವುದು; ಹಿಂದೂ ಯುವಕಯುವತಿಯರಿಗೆ ವ್ಯಾಯಾಮಶಾಲೆಗಳನ್ನು ವ್ಯವಸ್ಥೆಗೊಳಿಸುವುದು; ಮುಸ್ಲಿಮ್ ಕ್ರಿಶ್ಚಿಯನ್ನರಲ್ಲಿ ಭ್ರಾತೃ ಬಾಂಧವ್ಯವನ್ನು ರೂಢಿಸುವುದು; ಸ್ತ್ರೀ ಸಂಘಟನೆ.

೩೦.೧೦.೧೯೨೮ರಂದು ಸೈಮನ್ ಆಯೋಗವನ್ನು ವಿರೋಧಿಸುವ ಸಲುವಾಗಿ, ಲಾಹೋರಲ್ಲಿ ಲಜಪತರಾಯರ ನೇತೃತ್ವದಲ್ಲಿ ಬೃಹತ್ ಮೆರವಣಿಗೆಯನ್ನು ಏರ್ಪಡಿಸಲಾಗಿತ್ತು. ನಿರ್ದಯಿ ಕಟುಕ ಆಂಗ್ಲ ಸಾರ್ಜೆಂಟನೊಬ್ಬನ ಲಾಠಿಯೇಟಿಗೆ ಲಜಪತರಾಯರು ಬಲಿಯಾಗುತ್ತಾರೆ. ಸ್ವಾತಂತ್ರ್ಯದ ಬಲಿಪೀಠದಲ್ಲಿ ಹುತಾತ್ಮರಾದ ಲಜಪತರಾಯ್, ಭಗತ್‌ಸಿಂಗ್‌ರಂಥ ತ್ಯಾಗವೀರರ ರಕ್ತಪಂಕದಲ್ಲಿ ಸ್ವಾತಂತ್ರ್ಯ ಕಮಲ ಅರಳಿದೆ; ಅಂತೆಯೇ ಉಳಿಯಬೇಕಾಗಿದೆ.

## ಉಜ್ವಲ ಕ್ರಾಂತಿಯ ಪ್ರವಾಹ

ರಾಷ್ಟ್ರಪಿತರೆಂದು, ಮಹಾಪ್ರವಾದಿಯೆಂದು, ಸಂತರೆಂದು, ಮಹಾತ್ಮರೆಂದು ಜಗತ್ತಿನ ಮೂಲೆ ಮೂಲೆಗಳಲ್ಲಿ ಪ್ರಸಿದ್ಧರಾದ ಮೋಹನದಾಸ ಕರಮಚಂದ ಗಾಂಧಿಯ (೧೮೬೯- ೧೯೪೮) ಜನನವೊಂದು ಐತಿಹಾಸಿಕ ವಿಶ್ವಮಾನವತೆಯ ಮಹದ್ಘಟನೆ, ವಿಶ್ವಚಿತ್ಸಂಕಲ್ಪದ ವ್ಯೂಹ ರಚನೆ. ಅವರನ್ನು ಆಧುನಿಕ ಸೋಕ್ರೆತೀಸ್, ಬುದ್ಧ ಕ್ರಿಸ್ತ ಎಂದು ಕರೆಯಬಹುದೆ? ಇವರೊಡನೆ ರಸ್ಕಿನ್, ಥೋರೋ, ಟಾಲ್‌ಸ್ಟಾಯ್, ರಾಮಚಂದ್ರ ಬಾಬು ಸೇರಿ ಆದ ದಿವ್ಯ ವ್ಯಕ್ತಿತ್ವ ಅವರದು. ಅವರ ಇಡೀ ಜೀವನವೇ ಸತ್ಯ ಶೋಧನೆಯ, ಅಂದರೆ ಪ್ರಯೋಗಾತ್ಮಕ ತಪಸ್ಸಿನ ಪುಣ್ಯಕ್ಷೇತ್ರ. ಜಗತ್ತಿನ ಬಹುಭಾಗವನ್ನು ಗೆದ್ದುಕೊಂಡಿದ್ದ ಬ್ರಿಟಿಷ್ ಸಾಮ್ರಾಜ್ಯವನ್ನೆ ಎದುರಿಸಿದ ಅಹಿಂಸಾತ್ಮಕ ಸತ್ಯಾಗ್ರಹಾಸ್ತ್ರದ ಸೃಷ್ಟಿಯೂ ಸತ್ಯಶೋಧನೆಯ ಫಲವೇ. ಅವರು ನುಡಿದದ್ದೇ ವೇದ, ನಡೆದದ್ದೇ ಆದರ್ಶ. ಸತ್ಯ ಅಹಿಂಸೆಗಳ ಮೊತ್ತವೇ ಸತ್ಯಾಗ್ರಹ. ವೇದಾಂತ, ಗೀತ, ಬೌದ್ಧ, ಕ್ರಿಸ್ತಧರ್ಮಗಳ ಸಾರವೇ, ಅವುಗಳ ಕ್ರಿಯಾರೂಪವೇ ಗಾಂಧಿ ಹಾಗೂ ಗಾಂಧಿವಾದ. ಸ್ವರಾಜ್ಯ, ಸ್ವದೇಶಿ ಮತ್ತು ಸರ್ವೋದಯಗಳ ಮಿಲನವೇ ಗಾಂಧಿವಾದ.

ಇಂಗ್ಲೆಂಡಿನಲ್ಲಿ ಬ್ಯಾರಿಸ್ಟರ್ ಆಗಿ, ೧೮೯೩ ರಿಂದ ೧೯೧೪ರವರೆಗೆ ದಕ್ಷಿಣ ಆಫ್ರಿಕಾದಲ್ಲಿ ಜನಾಂಗೀಯ ಸಾಮರಸ್ಯಕ್ಕಾಗಿ ಶಾಂತಿಯುತ ಹೋರಾಟವನ್ನು ನಡೆಸುವಾಗ ಜಗತ್ತಾಗಲಿ, ಸಕಲ ಧರ್ಮಗಳಾಗಲಿ, ಹಿಂದಿನ ಋಷಿ ಕವಿ ಸಂತರಾಗಲಿ ಕಂಡರಿಯದ, ಕೇಳರಿಯದ ಸತ್ಯಾಗ್ರಹಾಸ್ತ್ರವನ್ನು ಸೃಜಿಸಿದ್ದೇ ಇಪ್ಪತ್ತನೆಯ ಶತಮಾನದ ಪವಾಡ ಸದೃಶ ಘಟನೆ. ಅದರ ರಹಸ್ಯವೆಂದರೆ ಅದರ ಸಾಧನ ವಿಧಾನ ತಂತ್ರಗಳನ್ನು ವೈಜ್ಞಾನಿಕವಾಗಿ ಪೂರ್ಣಗೊಳಿಸಿದ್ದರೂ, ಅದನ್ನು ಯಶಸ್ವಿಯಾಗಿ ಪೂರ್ಣ ಪ್ರಮಾಣದಲ್ಲಿ ಪ್ರಯೋಗಿಸಬಲ್ಲವರು ಅವರೊಬ್ಬರೇ. ವಿಜ್ಞಾನ ತಂತ್ರಜ್ಞಾನಗಳ ಅಬ್ಬರ ಲೋಕವನ್ನೆ ಮುಕ್ಕಿಬಿಡುತ್ತದೆ. ಡೈನಾಸರಸ್ ಅಂಥ ಪ್ರಾಣಿಗಳು ನಶಿಸಿ ಹೋದರೆ ಮನುಕುಲವೂ ಅಪಾಯದ ಅಂಚಿನಲ್ಲಿದೆ, ಅದನ್ನುಳಿಸಲು ಸತ್ಯಾಗ್ರಹದಂಥ ಅಸ್ತ್ರವೇ ಸರಿಯೆಂದು ತಿಳಿದ ಭವಿಷ್ಯಜ್ಞರವರು. ಅವರು ಬಿಟ್ಟುಹೋಗಿರುವ ಜ್ಞಾನಾನುಭವ ತತ್ತ್ವರಾಶಿ ಅವರ ವಿಶಿಷ್ಟ ಚಿಂತನೆಯ ಫಲವೂ ಹೌದು; ಅದಕ್ಕಿಂತ ಮಿಗಿಲಾಗಿ ಅವರ ಅಂತರ್ಬೋಧೆಯ ಪರಿಣಾಮವೂ ಹೌದು.

ಗಾಂಧಿವಾದದ ಅಡಿಪಾಯವೇ ಆಧ್ಯಾತ್ಮಿಕ ಸತ್ಯ. ನಿರಂತರ ತಪಸ್ಸಿನ ಮೂಲಕ ಅದನ್ನನುಭವಿಸಬೇಕು; ಅಂತರ್ಬೋಧೆಯ ಮೂಲಕ ಹೊಳೆಯುವ ಆ ಅನುಭವವನ್ನು ಬುದ್ಧಿ ವಿವೇಕಗಳ ಮಾಧ್ಯಮದ ಮೂಲಕ ಸತ್ಯಾಹಿಂಸೆಗಳನ್ನಾಗಿ ಪರಿವರ್ತಿಸಬೇಕು. ಮೂಲಭೂತ ಸತ್ಯ ಆಧ್ಯಾತ್ಮಿಕಾನುಭವ ಮತ್ತು ಅಂತರ್ಬೋಧೆ ಮೂಲಕವೇ ಸ್ಫುರಿಸಬೇಕು. ಪ್ರಾರ್ಥನೆ ಈ ಸ್ಫುರಣಕ್ಕೆ ಪ್ರೇರಕಜ್ಯೋತಿ ಯಾಗುತ್ತದೆ. 'ತೇನ ವಿನಾ ತೃಣಮಪಿ ನ ಚಲತಿ' ಎಂಬ ನಿಯಮದಲ್ಲಿ, ದೈವೇಚ್ಛೆಯಲ್ಲಿ ಅವರಿಗೆ ಅಪಾರ ಶ್ರದ್ಧೆಯಿದ್ದರೂ, ಅವರ ಜೀವನ ಅವಿಶ್ರಾಂತ ಕ್ರಿಯಾಮಯ ತತ್ತ್ವವಾಗಿತ್ತೆಂಬುದನ್ನು ಮರೆಯಲಾಗದು. ಧರ್ಮವೆನ್ನಿ, ಋತವೆನ್ನಿ, ಸಕಲ ಜೀವಾವಳಿ ಗಳನ್ನೊಳಗೊಂಡ ವಿಶ್ವದಲ್ಲೊಂದು ನಿಯತಿ ನಿಯಮವಿದೆಯೆಂಬ ಸತ್ಯದಲ್ಲವರಿಗೆ ವಿಶ್ವಾಸವುಂಟು. ಅಹಿಂಸೆಯಂಥ ಪ್ರಬಲ ಶಕ್ತಿ ಮತ್ತೊಂದಿಲ್ಲವೆಂಬುದನ್ನು ತಮ್ಮ ಜೀವನದಲ್ಲಿಯೇ ಪ್ರಯೋಗಿಸಿ ತೋರಿಸಿದ ಮಹಾತಪಸ್ವಿಯವರು.

ಅಧ್ಯಾತ್ಮ ಅಥವಾ ಮಾನವತಾ ಸಿದ್ಧಾಂತದ ತಳಹದಿಯ ಮೇಲೆ ಜಗತ್ತಿನ ಎಲ್ಲ ಧರ್ಮಗಳು ಸೃಷ್ಟಿಯಾಗಿವೆ. ಆದ್ದರಿಂದ ಪ್ರತಿಯೊಂದು ಜನಾಂಗವೂ ತಂತನ್ನ ಧರ್ಮವನ್ನು ಪ್ರಾಮಾಣಿಕತೆಯಿಂದ ಪ್ರೀತಿಸಿ ಅನುಸರಿಸಿದರೆ ಸಾಕು; ಮಾನವನಲ್ಲಿರುವ ಆಸುರೀ ಸ್ವಭಾವವನ್ನು ಮಾರ್ದವಗೊಳಿಸುವುದೇ ಧರ್ಮದ ಗುರಿ. ವಿಶ್ವ ಚೇತನ ಮತ್ತು ಮಾನವ ಚೇತನಗಳ ಸಂಬಂಧವನ್ನು ಗುರುತಿಸುವ ಶಕ್ತಿ ಮಾತ್ರವಲ್ಲ, ಮಾನವ ಮಾನವರ ನಡುವಣ ಬಾಂಧವ್ಯವನ್ನು ಬೆಸೆಯುವ ಸಾಮಾಜಿಕ ತತ್ತ್ವವೂ ಹೌದು. ನ್ಯಾಯ, ನೀತಿ, ಸಮಾನತೆ, ದಯೆ, ಪ್ರೇಮ, ಶಾಂತಿ, ಒಟ್ಟಿನಲ್ಲಿ ಮಾನವೀಯತೆ ಅದರ ಆಣಿಗುಣ, ಈ ಗುಣಗಳಿಲ್ಲದ್ದೆಲ್ಲವೂ ಅಧರ್ಮ. ಧರ್ಮದ ಬಗೆಗಿನ ಗಾಂಧೀಜಿಯ ಕಲ್ಪನೆ ಇದು.

ವೈಭವಾಡಂಬರವಿಲ್ಲದ ನಿಸರ್ಗಕ್ಕೆ ಸಮೀಪವಾದ ಸರಳತೆ ಜೀವನದ ಗುರಿಯಾಗಿರಬೇಕು; ನಿಸರ್ಗ ಸಹಜವಾದ ಈ ಸರಳತೆಯನ್ನು ಗ್ರಾಮೀಣ ಜೀವನದಲ್ಲಿ ಮಾತ್ರ ಕಾಣಬಹುದಾಗಿದೆ; ಉಳುವವನಿಗೆ ಮಾತ್ರವೇ ನೆಲ ಸೇರಬೇಕು; ಚಕ್ರರೂಪದ ಚರಕದ ಮೇಲೆ ಧರ್ಮ ನಿಂತಿದೆ; ನೇಗಿಲು ಮತ್ತು ಚರಕಗಳು ಶ್ರಮಜೀವನ ಗೌರವದ ಸಂಕೇತಗಳು, ಧರ್ಮದ ನಿಕೇತನಗಳು; ಯಂತ್ರೀಕರಣ ಹಾಗೂ ಕೈಗಾರಿಕೀಕರಣದಿಂದ ಭಾರತೀಯ ಸಂಸ್ಕೃತಿಗೆ ಕಳಂಕ ತಟ್ಟುತ್ತದೆ. ನಿರುದ್ಯೋಗ ಸಮಸ್ಯೆ ಉಲ್ಬಣಗೊಳ್ಳುತ್ತದೆ. ಅದರ ಪರಿಣಾಮವಾಗಿ ಅಧರ್ಮ, ಅಶಾಂತಿ, ಹಿಂಸಾಚಾರಗಳು ಹೆಚ್ಚುತ್ತವೆ. ದೇಶದ ಆತ್ಮವನ್ನೆ ಕೊಂದಂತಾಗುತ್ತದೆ. ಅನಿವಾರ್ಯವಾದ ಬೀಜರೂಪದ ಕೈಗಾರಿಕೆಗಳನ್ನು ಸರ್ಕಾರ ನಡೆಸಬಹುದು. ಶ್ರೀಮಂತರು ಸಹ ದುಡಿಯುತ್ತ ಸರಳ ಜೀವನವನ್ನು ನಡೆಸುವುದಾದರೆ, ಹಸಿವು ಬಡತನಗಳು ಅರಿವಿಲ್ಲದಂತೆಯೇ ಪರಾರಿಯಾಗುತ್ತವೆ. ಆಧ್ಯಾತ್ಮಿಕ ಅಥವಾ ಧಾರ್ಮಿಕ ಸಮಾಜವಾದ ಮಾನವನ ಮಾನಸಿಕ ವರ್ತನೆಗೆ ಸಂಬಂಧಿಸಿದ್ದು, ಕೇವಲ ಆರ್ಥಿಕ ರಚನೆಗಲ್ಲ. ಶ್ರೀಮಂತರು ಅನುಭವಿಸುವ ಸಕಲ ಸಾಮಾನ್ಯ ಸೌಲಭ್ಯ ಸೌಕರ್ಯಗಳನ್ನು ಕಟ್ಟಕಡೆಯ ಬಡವರು ಅನುಭವಿಸುವಂತಾದಾಗ ಸಮಾಜವಾದೀಯ ಸ್ವರಾಜ್ಯ ಪ್ರಾಪ್ತಿಸಿದಂತಾಗುತ್ತದೆ. ತಾರತಮ್ಯವಿಲ್ಲದ, ಸಮಾನತೆ ಯನ್ನೊಪ್ಪಿಕೊಳ್ಳುವ ವರ್ಣಾಶ್ರಮ ಧರ್ಮ ತ್ಯಾಜ್ಯವಲ್ಲ. ಅವರ ಕಲ್ಪನೆಯ ಸಾಮಾಜಿಕಾರ್ಥಿಕ ವ್ಯವಸ್ಥೆಯಿದು. ಹಿಂಸೆಯ ಸಂಕೇತ ವೆಂದವರು ಬಂಡವಾಳಗಾರಿಕೆಯನ್ನು ವಿರೋಧಿಸುತ್ತಾರೆ. ಆದರೆ ಶ್ರೀಮಂತರನ್ನು ವಿರೋಧಿಸುವುದಿಲ್ಲ. ಅವರು ಹಣದ, ಆಸ್ತಿಯ ಒಡೆಯರಾಗದೆ, ಧರ್ಮದರ್ಶಿಗಳಂತಿರಬೇಕೆಂಬುದು ಅವರ ವಾದ.

ಧರ್ಮದ ಅಡಿಪಾಯವಿಲ್ಲದ, ನೈತಿಕ ಬದ್ಧತೆಯಿಲ್ಲದ ರಾಜಕೀಯ ಅವರ ಪಾಲಿಗೆ ದೂಷ್ಯ. ಶತ್ರುಮಿತ್ರರೊಡನೆ ಶಾಂತಿಯಿಂದಿರ ಬೇಕೆಂಬುದು ಅವರ ಹಂಬಲ. ಅವರು ರಾಷ್ಟ್ರೀಯತಾವಾದಿಯಾದರೂ, ಅದು ಅಂತರ್ರಾಷ್ಟ್ರೀಯತ್ವಕ್ಕೆ ಸೋಪಾನವಾಗಬೇಕೆಂದು ಭಾವಿಸುತ್ತಾರೆ. ಅಹಿಂಸೆ ಮಾತ್ರವೇ ಪ್ರಜಾಪ್ರಭುತ್ವಕ್ಕೆ ರಾಜಮಾರ್ಗವೆಂದವರು ಸಾರುತ್ತಾರೆ. ಗೀತೆಯ ಸರ್ವಭೂತಹಿತವಾದ ಹಾಗೂ ಬಸವೇಶ್ವರರ ಸಕಲ ಜೀವಾವಳಿಗೆ ಲೇಸನ್ನೆ ಬಯಸುವ ಮನೋಧರ್ಮವೇ ಗಾಂಧೀಜಿಯವರ ಸರ್ವೋದಯ ಸಿದ್ಧಾಂತ.

ಗೀತೋಪನಿಷತ್ತು, ಬುದ್ಧ, ರಸ್ಕಿನ್, ಥೋರೋ, ಟಾಲ್‌ಸ್ಟಾಯ್‌ರ ಸಂದೇಶ ಹಾಗೂ ಪ್ರಯೋಗಲಬ್ಧ ಸೃಜನಾತ್ಮಕ ಸ್ವಾನುಭವಗಳ ಆಧಾರದ ಮೇಲವರು ಸರ್ವೋದಯ ಸಿದ್ಧಾಂತವನ್ನು ವೈಚಾರಿಕ ವೈಜ್ಞಾನಿಕ ತತ್ತ್ವಗಳಿಗನುಗುಣವಾಗಿ ರೂಪಿಸಿದ್ದಾರೆ. ಸರ್ವೋದಯವೇ ಸ್ವರಾಜ್ಯದ ಗುರಿಯಾಗಬೇಕು. ತ್ಯಾಗ, ಪ್ರೇಮ, ನಿಸ್ವಾರ್ಥಗಳು ಸರ್ವೋದಯ ಕಾರ್ಯಕರ್ತರ ನಿಕಷವಾಗಬೇಕೆಂಬುದು ಅವರ ಆಶಯ. ರಾಜಕೀಯ ಸಂಬಂಧವಾಗಿ ಮಾತ್ರವಲ್ಲ ಸುಲಿಗೆ ದಮನ ವಂಚನೆ ಮೊದಲಾದ ಎಲ್ಲ ಅನ್ಯಾಯಗಳ ವಿರುದ್ಧವಾಗಿ ಸತ್ಯಾಗ್ರಹಾಸ್ತ್ರವನ್ನು ಬಳಸಬಹುದೆಂಬುದು ಅವರ ಮತ.

ಉಪವಾಸ ಸತ್ಯಾಗ್ರಹದ ತಂತ್ರವಿಧಾನಗಳಲ್ಲೊಂದು. ಹಿಜ್ರತ್ ಆಗಲಿ, ಇಸ್ರೇಲಿಗಳ ಎಕ್ಸೋಡಸ್ ಆಗಲಿ, ಅಸಹಕಾರ ಚಳವಳಿಯಾಗಲಿ ಸತ್ಯಾಗ್ರಹದ ರೂಪಗಳೆಂದವರು ವಿಶದಪಡಿಸುತ್ತಾರೆ. ಆದರೆ ಭೂಗತ ಚಟುವಟಿಕೆಗಳನ್ನವರು ಒಪ್ಪಿಕೊಳ್ಳುವುದಿಲ್ಲ. ಅನ್ಯಾಯವೆಂದು ತೋರುವತನಕ ಸತ್ಯಾಗ್ರಹಿ ಆಯಾಯ ದೇಶದ ಕಾನೂನುಗಳನ್ನು ಪ್ರಾಮಾಣಿಕವಾಗಿ ಪಾಲಿಸಬೇಕು. ದೇವರಲ್ಲಿ ಅಚಲವಾದ ಭಕ್ತಿಯಿರಬೇಕು. ಪ್ರಾರ್ಥನೆ, ಧ್ಯಾನ ವಿನಾ ಪೂಜಾ ವಿಧಿ ವಿಧಾನಾದಿ ಗೊಡ್ಡು ಸಂಪ್ರದಾಯಗಳನ್ನು ವರ್ಜಿಸಬೇಕು. ಧನ ಕೀರ್ತಿಗಳಿಗಾಗಿ ಹಾತೊರೆಯಬಾರದು; ಬ್ರಹ್ಮಚರ್ಯವನ್ನು ವ್ರತವಾಗಿ ಸ್ವೀಕರಿಸಬೇಕು; ಸಹನೆ, ಕರ್ತವ್ಯಪ್ರಜ್ಞೆ, ಸಂಯಮ, ವೀತರಾಗ ಭಯಕ್ರೋಧ, ಏಕಧ್ಯೇಯ ನಿಷ್ಠೆ, ಶುದ್ಧ ಮನಸ್ಸು, ಹೃದಯಗಳಿರಬೇಕು-ಇವೇ ಮೊದಲಾದ ಶಿಸ್ತುಗಳನ್ನು ಪ್ರಯೋಗಿಸುವವನೇ ಸತ್ಯಾಗ್ರಹಿಯೆಂದವರು ಲಕ್ಷಣಿಸುತ್ತಾರೆ. ಅವರು ಆತ್ಮವಾಣಿಗೆ ಹೆಚ್ಚು ಒತ್ತುಕೊಡುತ್ತಾರೆ. ಜೀವನದ ಗೃಹಕೃತ್ಯ ಮೊದಲುಗೊಂಡು ಸಕಲ ವ್ಯವಹಾರಗಳಲ್ಲಿ ಸತ್ಯಾಗ್ರಹವನ್ನು ಬಳಸಬಹುದೆಂದವರು ಹೇಳುತ್ತಾರೆ.

ದಲಿತರ ಸಮಸ್ಯೆಗಳನ್ನು ಪರಿಹರಿಸದ, ವ್ಯಕ್ತಿ ಸ್ವಾತಂತ್ರ್ಯವಿಲ್ಲದ ಸ್ವರಾಜ್ಯದಲ್ಲಿ ಗಾಂಧೀಜಿಗೆ ನಂಬಿಕೆಯಿಲ್ಲ. ಸ್ವಾತಂತ್ರ್ಯ ಅಖಂಡವಾದದ್ದು. ಯುದ್ಧ ಯಾವತ್ತೂ ಅನ್ಯಾಯಾತ್ಮಕವಾದದ್ದು. ಆದರೆ ಆಕ್ರಮಣಕಾರಿಯ ವಿರುದ್ಧವಾಗಿ ಸತ್ಯಾಗ್ರಹಿ ಎದುರಾಳಿಗೆ ನೈತಿಕಬೆಂಬಲ ನೀಡಬಹುದೆಂಬುದು ಅವರ ಅಭಿಪ್ರಾಯ.

ಆಧುನಿಕ ನಾಗರಿಕತೆಯ ನೈತಿಕ ದಿವಾಳಿತನ ಹಾಗೂ ಹಿಂಸಾಚಾರಗಳು ಮನುಕುಲಕ್ಕೆ ಕುಠಾರಪ್ರಾಯವಾಗುತ್ತವೆಂದವರು ಮೇಲಿಂದ ಮೇಲೆ ಒತ್ತಿ ಹೇಳುತ್ತಾರೆ. ಶಾಂತಿಯುತವಾದ ನಡೆವಳಿಕೆಯಿಂದ ಎಂಥ ಜಟಿಲ ಕುಟಿಲ ಸಮಸ್ಯೆಯನ್ನಾದರೂ ಬಗೆ ಹರಿಸಬಹುದೆಂಬ ಆತ್ಮ ವಿಶ್ವಾಸ ಅವರಿಗಿದೆ. ಆತ್ಮ ಯಾತನಾ ಸಹನೆಯಿಂದ ಕೂಡಿದ ಪ್ರೇಮದ ಮೂಲಕ ಮಾನವ ಜೀವನದಲ್ಲಿ ಮಹಾ ಪರಿವರ್ತನೆಯುಂಟು ಮಾಡಬಹುದೆಂಬ ಅವರ ನಂಬಿಕೆಗೆ ಬುದ್ಧ, ಕ್ರಿಸ್ತ, ಬಸವೇಶ್ವರರ ಹಾಗೂ ಅವರ ಜೀವನದಲ್ಲಿ ಹಲವು ನಿದರ್ಶನ ಗಳು ದೊರೆಯುತ್ತವೆ. ಗಾಂಧಿವಾದ ಹಾಗೂ ಗಾಂಧೀಜಿ ಜೀವನಸಂದೇಶ ಮಾತ್ರವೇ ಕಣ್ಣನ್ನು ಕತ್ತಲಿಸುತ್ತಿರುವ ಪ್ರಳಯ ಧೂಮದಿಂದ ಜಗತ್ತನ್ನು ರಕ್ಷಿಸೀತೆಂದು. ವಿಜ್ಞಾನಿಗಳು, ಸಾಹಿತಿಗಳು ಕಲಾವಿದರು ವಿದ್ವಾಂಸರು ಹಾಗೂ ರಾಜಮಂತ್ರ ಪ್ರವೀಣರು ಅರಿಯಬೇಕಾಗಿದೆ; ಅರಿಯಲಿಲ್ಲ, ಅರಿತು ನಡೆಯಲಿಲ್ಲ, ಜಗತ್ತು ವಿನಾಶ ಹೊಂದುವುದರಲ್ಲಿ ಸಂದೇಹವಿಲ್ಲ. ಜಗತ್ತಿನಲ್ಲೆಲ್ಲ ಗಾಂಧಿ ಜೀವನ ಸೂರ್ಯ ಪ್ರಕಾಶದಷ್ಟೇ ಉಜ್ವಲವಾಗಿ ಹರಡಿರುವುದರಿಂದ, ಅದನ್ನಿಲ್ಲಿ ಲಂಬಿಸಬೇಕಾಗಿಲ್ಲವೆಂಬ ಭಾವನೆಯಿಂದ ಮುಂದೆ ಸಾಗಬಹುದಾಗಿದೆ.

ಮೌಲಿಕವಾದ ಕೆಲವೇ ಕೆಲವು ಗಾಂಧೀ ಸುಭಾಷಿತಗಳನ್ನು ಓದುಗರ ಅವಗಾಹನೆಗಾಗಿ ಇಲ್ಲಿ ಮುದ್ರಿಸಲಾಗಿದೆ.

- ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಸಂಗ್ರಹ ಶರೀರ ಶ್ರಮ ಅಸ್ವಾದಾ ಸರ್ವತ್ರ ಭಯವರ್ಜನ ಸರ್ವಧರ್ಮಸಮಾನತ್ವ ಸ್ವದೇಶೀ ಸ್ಪರ್ಶಭಾವನಾ
- ಎಲ್ಲ ದೇಶಗಳ ಸಂಸ್ಕೃತಿಯ ಗಾಳಿ ಮನೆಯೊಳಗೆ ಬರುವಂತೆ ಕಿಟಕಿಗಳನ್ನು ತೆರೆಯಿರಿ. ಆದರದು ನಮ್ಮ ಸಂಸ್ಕೃತಿಯನ್ನು ಕೊಚ್ಚದಿರಲಿ.
- ಸಮಾಜದ ಪಾರಿಶುದ್ಧಕ್ಕೆ ಸಾರ್ವಜನಿಕ ಅಭಿಪ್ರಾಯ ಅತ್ಯಗತ್ಯ. ಯಾರೆಷ್ಟು ಅಲ್ಲಗಳೆದರೂ ದೇವರು ಸತ್ಯಗಳಿಗೆ ಹಾನಿಯಿಲ್ಲ.
- ನೂರು ಸುಳ್ಳು ಹೇಳಿ ನಿಜವನ್ನು ಸಾಧಿಸಲಾಗದು.
- ನನಗೆ ಭೂತದ ಚಿಂತೆಯಿಲ್ಲ; ಭವಿಷ್ಯ ಗೊತ್ತಿಲ್ಲ; ವರ್ತಮಾನದ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲಾರೆ.
- ಡಾ. ಅಂಬೇಡ್ಕರ್ ಯಾವ ಬ್ರಾಹ್ಮಣನಿಗೂ ಕಡಮೆಯಿಲ್ಲ.
- ತತ್ತ್ವರಹಿತ ರಾಜಕೀಯ; ದುಡಿಮೆಯಿಲ್ಲದ ಸಂಪತ್ತು; ನೀತಿಹೀನ ವಾಣಿಜ್ಯ; ಶೀಲವಿಲ್ಲದ ಶಿಕ್ಷಣ; ಆತ್ಮಸಾಕ್ಷಿರಹಿತ ಭೋಗ; ಮಾನವತಾಶೂನ್ಯ ವಿಜ್ಞಾನ; ತ್ಯಾಗವಿಲ್ಲದ ಪೂಜೆ-ಇವು ಸಪ್ತ ಪಾತಕಗಳು.

- ವಿದೇಶೀ ಭಾಷಾ ಮಾಧ್ಯಮ ಪಾಪ.
- ಆಡಳಿತದ ದುಂದುವೆಚ್ಚ ರಾಷ್ಟ್ರದ್ರೋಹ; ಜನ ಪ್ರತಿನಿಧಿಗಳ ವೈಭವ ಜೀವನ ಪ್ರಜಾದ್ರೋಹ.
- ಸೃಷ್ಟಿಯಲ್ಲಿ ವೈವಿಧ್ಯವೂ ಇದೆ, ಏಕಸೂತ್ರತೆಯೂ ಇದೆ; ಏಕತೆಯ ಸಾಕ್ಷಾತ್ಕಾರವೇ ಧರ್ಮ.
- ಅಂತರಂಗದ ಕರೆಯೇ ಆತ್ಮ ಸಾಕ್ಷಿಯ ಕರೆ, ಅದೇ ಸತ್ಯ, ಸಂಕಷ್ಟಗಳನ್ನು ಅಹಿಂಸಾ ವಿಧಾನದಿಂದ ಎದುರಿಸುವವನೇ ಧೀರ. ಕಳ್ಳತನ, ದರೋಡೆ, ಹಾದರಗಳಷ್ಟೇ ಕೆಟ್ಟದ್ದು ಕುಡಿತ.
- ನನ್ನ ಪಾಲಿಗೆ ದೇವರು ಸತ್ಯ ಮತ್ತು ಪ್ರೇಮ. ದೇವರೇ ನೀತಿಸಂಹಿತೆ. ಧೈರ್ಯವೇ ದೇವರು. ದೇವರು ಜ್ಯೋತಿ ಮತ್ತು ಜೀವನಗಳ ಮೂಲ ಮಾತ್ರವಲ್ಲ, ಅವುಗಳಿಗೆ ಅತೀತನಾಗಿದ್ದಾನೆ. ಆತ್ಮಸಾಕ್ಷಿಯೇ ದೇವರು. ನಾಸ್ತಿಕವಾದದ ನಾಸ್ತಿಕ್ಯವೂ ಅವನೇ. ಅವನು ಮಾತು ವಿವೇಕಗಳನ್ನು ಮೀರಿದವನು.

ಭಾರತದ ಬಿಸ್ಮಾರ್ಕ್, ಉಕ್ಕಿನ ಮನುಷ್ಯನೆಂದು ಹೆಸರಾದ **ಸರ್ದಾರ್ ವಲ್ಲಭಭಾಯಿ ಪಟೇಲರು** (೧೮೭೫-೧೯೫೦) ಸ್ವಾತಂತ್ರ್ಯಾನಂತರ ಬ್ರಿಟಿಷರ ಚಂಚಾಗಳಂತಿದ್ದ ಜನಸಾಮಾನ್ಯರ ಪ್ರತಿನಿಧಿಗಳಲ್ಲದ ದಡಿಪುಡಿರಾಜರ ಸೊಂಟ ಮುರಿದು, ಅಖಂಡ ಭಾರತವನ್ನು ನಿರ್ಮಿಸಿದ ಪುರುಷಸಿಂಹರು. ಗಾಂಧಿಯುಗದ ಕೆನೆಯಾಳುಗಳಲ್ಲೊಬ್ಬರು. ಕೇಂದ್ರ ಶಾಸನಸಭೆಯ ಪ್ರಥಮ ಭಾರತೀಯ ಅಧ್ಯಕ್ಷರೆಂದು, ದುರ್ದಮ್ಯ ಅರಿಭಯಂಕರ ಧೈರ್ಯಗಾರರೆಂದು ಸುಪ್ರಸಿದ್ಧರಾದ ವಿಠಲಭಾಯಿ ಪಟೇಲರು ಇವರ ಅಣ್ಣಂದಿರು. ಇಂಗ್ಲೆಂಡ್‌ನಲ್ಲಿ ಬ್ಯಾರಿಸ್ಟರ್ ಪದವಿ ಪಡೆದು, ಅಹಮದಾಬಾದಿನಲ್ಲಿ ಲಾಭದಾಯಕವಾದ ಲಾಯರಿಕೆಯನ್ನು ನಡೆಸುತ್ತಿದ್ದು, ಮಂತ್ರವಾದಿಯಂತಿದ್ದ ಗಾಂಧೀಜಿಯ ಮೋಡಿಗೆ ಮರುಳಾಗಿ, ರಾಜಕೀಯವನ್ನು ಪ್ರವೇಶಿಸುತ್ತಾರೆ. ಸತ್ಯಾಗ್ರಹ ಅಸಹಕಾರ ಚಳವಳಿಗಳಲ್ಲಿ ಭಾಗವಹಿಸುತ್ತಾರೆ. ಸಂಘಟನಾ ಕುಶಲರಾದ ಪಟೇಲರು ಕಾಂಗ್ರೆಸ್ಸಿನ ಬಲಪಂಥೀಯ ಗುಂಪಿಗೆ ಸೇರಿದವರು. ಒಂದು ರೀತಿಯಲ್ಲವರು ಗಾಂಧೀಜಿಯ ಬಲಗೈಬಂಟರು. ಪ್ರಾಮಾಣಿಕತೆ, ಶ್ರದ್ಧೆ, ನಿಷ್ಠೆ ಮತ್ತು ಛಲಗಳಿಗೆ ಹೆಸರಾದವರು. ಗಾಂಧೀಜಿಯಲ್ಲಿ ಅವರಿಗಿದ್ದ ನಿಷ್ಠೆ ಅನನ್ಯವಾದದ್ದು. ಗಾಂಧೀಜಿಯ ಕಾರ್ಯಕ್ರಮದ ಬಗ್ಗೆ ಒಲವಿಲ್ಲದಿದ್ದಾಗಲೂ, ಗಾಂಧೀಜಿಯ ಮಾತೇ ವೇದವೆಂದು ತಿಳಿದು, ಅಗ್ನಿಕುಂಡಕ್ಕೆ ಬೀಳಲು ಸಿದ್ಧವಾಗಿದ್ದ ಶ್ರೇಷ್ಠನಾಯಕರವರು. ಅವರ ಖಿಲಾಫತ್ ಚಳವಳಿಯಲ್ಲವರಿಗೆ ವಿಶ್ವಾಸವಿಲ್ಲದಿದ್ದರೂ ಗಾಂಧೀಜಿ ಗೋಸ್ಕರವಾಗಿ ಅದರಲ್ಲವರು ಭಾಗವಹಿಸುತ್ತಿದ್ದರು. ಅವರ ಧಮನಿಧಮನಿಗಳಲ್ಲಿ ದೇಶ ಪ್ರೇಮ ನಿರ್ಝರಿಸುತ್ತಿತ್ತು. ಸೋಮನಾಥ ದೇವಾಲಯವನ್ನು ಪುನರ್ನಿರ್ಮಿಸಿ, ಹಿಂದೂಗಳ ಪ್ರಶಂಸೆಗೆ ಪಾತ್ರರಾದರೂ ಅನ್ಯ ಧರ್ಮಗಳಲ್ಲಿ ಅವರಿಗೆ ದ್ವೇಷವಿರಲಿಲ್ಲ; ಅವರು ಮತಾಂಧರಂತು ಅಲ್ಲ.

ಸರ್ಕಾರ ಭೂಗಂದಾಯವನ್ನು ಹೆಚ್ಚಿಸಿದಾಗ, ೧೯೨೮ರಲ್ಲವರು ನಡೆಸಿದ ಬರ್ಡೋಲಿ ಸತ್ಯಾಗ್ರಹ ನಾಡಿನ ಮೂಲೆ ಮೂಲೆಯಲ್ಲಿ ಮಾತ್ರವಲ್ಲ, ಜಗತ್ತಿನಲ್ಲೆಲ್ಲ ಅವರ ಸಾಮರ್ಥ್ಯವನ್ನು ಡಂಗುರಿಸುತ್ತದೆ. ಪ್ರಾತಿನಿಧ್ಯವಿಲ್ಲದೆ ಕರಭಾರಸಲ್ಲದು ಎಂಬ ಅಮೆರಿಕೀಯ ಸೂಕ್ತಿಯನ್ನು ಜನರಿಗವರು ಮನದಟ್ಟು ಮಾಡಿಕೊಡುತ್ತಾರೆ. ರೈತರ ಬಗೆಗಿದ್ದ ಅವರ ಅನುಕಂಪ ಆ ಸಂದರ್ಭದಲ್ಲಿ ಸುವ್ಯಕ್ತವಾಗುತ್ತದೆ. ಕೃಷಿ ವ್ಯವಸ್ಥೆಯ ಸುಧಾರಣೆಯಿಂದಲ್ಲದೆ ದೇಶದ ಸಾಮಾಜಿಕಾರ್ಥಿಕ ಪ್ರಗತಿ ಸಾಧ್ಯವಿಲ್ಲವೆಂಬುದು ಅವರ ನಿಶ್ಚಿತ ಮತ. ರೈತರು ಸಂಪತ್ತಿನ ಉತ್ಪಾದಕರೆಂದೂ, ಜಮೀನ್ದಾರರು ಪರೋಪಜೀವಿಗಳೆಂದೂ, ವಿದೇಶೀಯ ಆಳರಸರು ಜಮೀನ್ದಾರರ ಷಾಮಿಲುಗಾರರೆಂದೂ ತಿಳಿದ ಅವರು ರೈತರಿಗೆ ಉತ್ತೇಜನ ನೀಡುತ್ತಾರೆ. ಇಂಡಿಯಾ ಮಾತ್ರವಲ್ಲ, ಇಡೀ ಜಗತ್ತಿನ ಉಳಿವು ಕೃಷಿಕರನ್ನವಲಂಬಿಸಿದೆ ಎಂಬ ವೇದ ಸತ್ಯವನ್ನವರು ರೈತಸಭೆಗಳಲ್ಲಿ ಘೋಷಿಸುತ್ತಾರೆ.

ಎಂಥ ಕಠಿಣ ಸಂದರ್ಭದಲ್ಲಿಯೂ ನಿರ್ಣಯ ತೆಗೆದುಕೊಳ್ಳಲಾಗದ ನೆಹರೂ ಅವರ ಮನಸ್ಸು ಡೋಲಾಯಮಾನವಾಗಿರುತ್ತಿತ್ತು; ಅಂಥ ಸಂದರ್ಭಗಳಲ್ಲಿ ಪಟೇಲರು ದೃಢನಿರ್ಧಾರ ತೆಗೆದುಕೊಂಡು ಛಲದಿಂದ ಕ್ರಿಯಾಶೀಲರಾಗುತ್ತಿದ್ದರು. ಚರ್ಚಿಲ್‌ನಂಥ ವ್ಯಕ್ತಿಯ ಬೆಂಬಲ ನವಾಬನ ಕಡೆಗಿದ್ದರೂ, ಪಟೇಲ್ ಎದೆಗುಂದದೆ ಹೈದರಾಬಾದ್ ಮೇಲೆ ಪೊಲೀಸ್ ಧಾಳಿ ನಡೆಸಿ ಯಶಸ್ವಿಯಾದದ್ದು ಅವರ ವಾಸ್ತವದೃಷ್ಟಿಗೂ, ಅಸಮ ಸಾಹಸಕ್ಕೂ ಸಾಕ್ಷಿಯಾಗಿದೆ. ಸಾರ್ವಭೌಮಾಕಾಂಕ್ಷೆಯ ಚೀನಾದ ಟಿಬೆಟ್ ನೀತಿಯ ಬಗ್ಗೆಯೂ ಪಟೇಲರು ನೆಹರೂ ಅವರಿಗೆ ಎಚ್ಚರಿಕೆ ನೀಡುತ್ತಾರೆ.

ಸಹಕಾರ ತತ್ತ್ವಾಧಾರಿತವಾದ ಸಮಾಜವಾದವನ್ನು ಕೈಗಾರಿಕಾ ಪ್ರಗತಿಯನ್ನು ಸಾಧಿಸಬೇಕೆಂಬುದು ಪಟೇಲರ ಅಭಿಪ್ರಾಯ. ರೈತ ಕಾರ್ಮಿಕರಿಗೆ ತೊಂದರೆಯಾಗದಿದ್ದರೆ, ದೀನ ದಲಿತರನ್ನು ಮೇಲೆತ್ತುವಲ್ಲಿ ಸಹಕರಿಸುವುದಾದರೆ, ಜಮೀನ್ದಾರ ರಾಜಮಹಾರಾಜರ

ಹಕ್ಕುಗಳನ್ನು ಕಸಿದುಕೊಳ್ಳಬೇಕಾಗಿಲ್ಲವೆಂಬುದು ಅವರ ವಾದ. ಆದರೂ ಪ್ರಜಾಪ್ರತಿನಿಧಿಗಳಲ್ಲದವರು ಪ್ರಭುಗಳಾಗುವುದುಂಟೆ ಎಂಬುದು ಅವರ ಪ್ರಶ್ನೆ. ಯುರೋಪೀಯ ನಾಗರಿಕತೆಯ ಹಿನ್ನೆಲೆಯಲ್ಲಿ ರೂಪಗೊಂಡಿರುವ ಮಾರ್ಕ್ಸ್‌ವಾದ ಭಾರತಕ್ಕೆ ಸರಿಹೋಗದೆಂಬುದು ಅವರ ತಿಳಿವಳಿಕೆ. ತಮಗೆ ಯಾವ ರೀತಿಯ ಸರ್ಕಾರ ಬೇಕೆಂಬುದನ್ನು ಸ್ವಾತಂತ್ರ್ಯಾನಂತರ ಜನ ನಿರ್ಧರಿಸಿಕೊಳ್ಳಲೆಂಬುದು ಅವರ ನಿರೀಕ್ಷೆ.

ಗಾಂಧೀಜಿ ಆದರ್ಶವಾದಿ, ನಿಜ; ಆದರೆ ಪಟೇಲರು ಕಟ್ಟಾ ವಾಸ್ತವವಾದಿಯಾದರೂ, ಗಾಂಧಿ ತತ್ತ್ವದಿಂದ ದೂರ ಸರಿಯುವುದಿಲ್ಲ. ಅವರು ವಚನ ಮಲ್ಲರಲ್ಲ, ತಾಜಾ ಕ್ರಿಯಾಶೀಲರು. ಬೊಬ್ಬೆ ಆಡಂಬರಗಳಿಲ್ಲದೆ ರಾಜ ಮಹಾರಾಜರನ್ನು ಮೂಲೆ ಗುಂಪು ಮಾಡಿದ್ದು ಅವರ ಅನುಪಮ ಬುದ್ಧಿಕೌಶಲ, ಕಾರ್ಯನಿರ್ವಹಣ ಸಾಮರ್ಥ್ಯ ಮತ್ತು ಸಾಧನಾ ಛಲಗಳಿಗೆ ನಿದರ್ಶನವಾಗಿದೆ. ಅವರು ಅಹಿಂಸಾ ತತ್ತ್ವಕ್ಕೆ ಗಂಟುಬಿದ್ದಿದ್ದರೆ ಜೂನಾಗಡ ಹೈದರಾಬಾದುಗಳು ಮಾತ್ರವಲ್ಲ, ಹಲವು ಸಂಸ್ಥಾನಗಳು ಸ್ವತಂತ್ರವಾಗುಳಿದು, ಭಾರತದ ಅಖಂಡತೆಗೂ, ಏಕತೆಗೂ ಸದಾ ಸವಾಲಾಗಿರುತ್ತಿದ್ದವೆಂಬುದನ್ನು ರಾಜಕೀಯ ಪ್ರಜ್ಞೆಯುಳ್ಳವರು ಮರೆಯುವಂತಿಲ್ಲ.

ಪ್ರಾಚೀನ ಭಾರತೀಯ ಸಂಸ್ಕೃತಿಯ ಪ್ರತಿನಿಧಿಯೆಂದು, ಸಾತ್ವಿಕ ರಾಜಕಾರಣಿಯೆಂದು, ಅಪ್ಪಟ ದೇಶಾಭಿಮಾನಿಯೆಂದು ಹೆಸರಾಂತ **ಬಾಬು ರಾಜೇಂದ್ರ ಪ್ರಸಾದರು** (೧೮೮೪- ೧೯೬೩) ಕಟ್ಟಾ ಗಾಂಧಿ ಅನುಯಾಯಿಗಳು; ರಾಷ್ಟ್ರ ಸ್ವಾತಂತ್ರ್ಯ ಸಾಧನೆಗಾಗಿ ತಮ್ಮ ಬಾಳನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡವರು. ಬಿಹಾರವನ್ನೊಳಗೊಂಡ ಪೂರ್ವ ಭಾರತಕ್ಕೆಲ್ಲ ಏಕಮಾತ್ರ ಉನ್ನತ ಶಿಕ್ಷಣ ಸಂಸ್ಥೆಯಾಗಿದ್ದ ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಅವರು ಸರ್ವಶ್ರೇಷ್ಠ ವಿದ್ಯಾರ್ಥಿಯೆನಿಸಿಕೊಂಡು, ಆನರ್ಸ್ ಪರೀಕ್ಷೆಯಲ್ಲಿ ಉತ್ತೀರ್ಣರಾದ ನಂತರ ಕೆಲವು ತಿಂಗಳು ಮುಝಫರ್‌ಪುರ ಮತ್ತು ಕಲ್ಕತ್ತೆಯ ನಗರ ಕಾಲೇಜುಗಳಲ್ಲಿ ಉಪನ್ಯಾಸಕರಾಗಿದ್ದು, ಕಾನೂನು ಪರೀಕ್ಷೆಯನ್ನು ಮುಗಿಸಿಕೊಳ್ಳುತ್ತಾರೆ. ಮೊದಲು ಕಲ್ಕತ್ತೆಯ, ಅನಂತರ ಪಾಟ್ನಾದ ಉಚ್ಚನ್ಯಾಯಾಲಯಗಳಲ್ಲಿ ಶ್ರೇಷ್ಠ ವಕೀಲರೆಂದು ಹೆಸರು ಪಡೆಯುತ್ತಾರೆ.

೧೯೧೭ರಲ್ಲಿ ಗಾಂಧೀಜಿ ಪ್ರಾರಂಭಿಸಿದ ಚಂಪಾರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಯಶಸ್ವಿಯಾದಾಗ ಪ್ರಸಾದರ ಹೆಸರು ಇಡೀ ದೇಶದಲ್ಲಿ ಹರಡುತ್ತದೆ. ೧೯೨೦ರಲ್ಲಿ ಅಸಹಕಾರ ಚಳವಳಿ ಮೊಳಗಿದಾಗ ಪ್ರಸಾದರು ಗಾಂಧೀಜಿಯ ಕರೆಗೆ ಓಗೊಟ್ಟು, ವಕೀಲಿ ವೃತ್ತಿಯನ್ನು ತ್ಯಜಿಸಿ, ದೇಶದ ದಾಸ್ಯ ಮುಕ್ತಿಗಾಗಿ ಚಳವಳಿಯಲ್ಲಿ ಧುಮುಕುತ್ತಾರೆ. ಸತ್ಯಾಗ್ರಹ ಸಿದ್ಧಾಂತವನ್ನು ತ್ರಿಕರಣ ಶುದ್ಧಿಯಾಗಿ ಒಪ್ಪಿಕೊಂಡು, ಪ್ರಯೋಗಪೂರ್ವಕವಾಗಿ ಅದರ ಪ್ರಸಾರ ಕಾರ್ಯವನ್ನು ಕೈಗೊಳ್ಳುತ್ತಾರೆ; ಗಾಂಧೀಜಿಯ ರಾಜಕೀಯ ಸಿದ್ಧಾಂತಗಳನ್ನು ಜನರಿಗೆ ಮುಟ್ಟಿಸುತ್ತಾರೆ. ಭಾರತೀಯ ಜೀವನವನ್ನು ಮೂಲಚೂಲವಾಗಿ ಅರ್ಥಮಾಡಿಕೊಂಡ ಸ್ವತಂತ್ರ ಸ್ವೋಪಜ್ಞ ಚಿಂತಕರೆಂದು ಗಾಂಧೀಜಿಯಲ್ಲಿ ಅವರಿಗೆ ಅಪಾರ ಗೌರವ. ಗಾಂಧಿ ಸಿದ್ಧಾಂತವೊಂದೆ ಇಂಡಿಯಾದ ಮಾತ್ರವಲ್ಲ, ಇಡೀ ಜಗತ್ತಿನ ಸಕಲ ಸಮಸ್ಯೆಗಳಿಗೆ ಪರಿಹಾರವೆಂದು ನಂಬಿ 'ವಿಭಜಿತ ಇಂಡಿಯಾ' ಮೊದಲಾದ ತಮ್ಮ ಗ್ರಂಥಗಳಲ್ಲಿ ನಿರೂಪಿಸಿದ್ದಾರೆ. ಭಾರತೀಯ ತತ್ತ್ವಶಾಸ್ತ್ರದ ಸಾರವೇ ಅಹಿಂಸೆಯೆಂಬುದು ಅವರ ವಿಚಾರ. ಅವರ ಪ್ರಕಾರ ಇತರರಿಗೆ ತೊಂದರೆಯಾಗದಂತೆ, ಆದರ್ಶವಾಗುವಂಥ ರೀತಿಯಲ್ಲಿ ತನ್ನ ಜೀವನ ನಡೆಸುವ ವ್ಯಕ್ತಿಯೇ ಅಹಿಂಸಾವಾದಿ.

ಪ್ರಸಾದರು ಹಕ್ಕುಗಳಿಗಿಂತ ಮಿಗಿಲಾಗಿ ಕರ್ತವ್ಯಕ್ಕೆ ಹೆಚ್ಚು ಒತ್ತು ನೀಡುತ್ತಿದ್ದರು. 'ಕರ್ತವ್ಯಗಳ ಒಡಲಿನಲ್ಲಿ ಹಕ್ಕುಗಳಿವೆ; ಕರ್ತವ್ಯ ಪಾಲನೆಯ ಜತೆಜತೆಯಲ್ಲಿಯೇ ಹಕ್ಕುಗಳು ಪ್ರಾಪ್ತವಾಗುತ್ತವೆ' ಎಂದವರು ಹೇಳುತ್ತಾರೆ. ಸರ್ಕಾರದ ಅಧಿಕಾರ ಸರ್ವಾಧಿಕಾರದ ಕಡೆಗೆ ವಾಲಿದೆ, ಇದು ಒಂದು ಹದ್ದಿನಲ್ಲಿರಬೇಕು; ಹದ್ದು ಮೀರಿದರೆ ವ್ಯಕ್ತಿ ಸ್ವಾತಂತ್ರ್ಯಕ್ಕೆ, ಮನುಕುಲದ ಸ್ವಾತಂತ್ರ್ಯಕ್ಕೆ, ರಾಜಕೀಯ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗುತ್ತದೆಂದು ಅವರು ಸ್ಪಷ್ಟವಾಗಿ ವಿವರಿಸಿದ್ದಾರೆ.

ರಾಜೇಂದ್ರ ಪ್ರಸಾದರು ರಾಜ್ಯಾಂಗ ಸಭೆಯ ಅಧ್ಯಕ್ಷರಾಗಿದ್ದರೆಂಬುದು ಎಚ್ಚೆತ್ತ ಸ್ವತಂತ್ರ ಭಾರತ ಅವರ ಮುಡಿಗೆ ಮುಡಿಸಿದ ಕಿರೀಟ. ಅದೊಂದು ಪ್ರಮುಖ ಐತಿಹಾಸಿಕ ಘಟನೆ. ಮೂಲಭೂತ ಹಕ್ಕುಗಳು ಮತ್ತು ನಿರ್ದೇಶಕ ಸೂತ್ರಗಳ ರಚನೆಯಲ್ಲಿ ಅವರ ಪಾತ್ರವೂ ಇತ್ತು. ಆದರೆ ರಾಷ್ಟ್ರಪತಿಯ ಅಧಿಕಾರವ್ಯಾಪ್ತಿಯ ಬಗ್ಗೆ ಅವರಿಗೆ ಅಸಮಾಧಾನವಿತ್ತು. ಆ ಬಗ್ಗೆ ಕಾನೂನು ಪಂಡಿತರು ಚರ್ಚೆ ನಡಸಬೇಕೆಂಬುದು ಅವರ ಇರಾದೆಯಾಗಿತ್ತು. ಇಂಡಿಯಾದ ಪ್ರಪ್ರಥಮ ರಾಷ್ಟ್ರಪತಿಯಾದದ್ದು ಮಾತ್ರವಲ್ಲ, ಎರಡು ಸಲ ರಾಷ್ಟ್ರಪತಿಯಾಗಿ ಸಂವಿಧಾನದ ಸೂತ್ರಗಳಿಗೆ ಭಂಗವೊದಗದಂತೆ ನೋಡಿಕೊಂಡು ಸರ್ಕಾರಕ್ಕೆ ತಲೆನೋವಾಗದಂತೆ ವರ್ತಿಸಿ ಅದಕ್ಕೊಂದು ಸ್ಥಿರತೆಯನ್ನು ಕಲ್ಪಿಸಿದ್ದೇ ಅವರ ಹಿರಿಮೆಗೆ ಸಾಕ್ಷಿಯಾಗಿದೆ. ಟಿಬೆಟ್ ಸ್ವತಂತ್ರವೂ ತಟಸ್ಥವೂ ಆದ ರಾಷ್ಟ್ರವಾಗಬೇಕೆಂಬುದು

ಅವರ ಬಯಕೆ. ನೆಹರೂ ಸರ್ಕಾರದ ದುರ್ಬಲ ಹಾಗೂ ಸಾಂತ್ವನ ನೀತಿಯಿಂದಾಗಿ ಟಿಬೆಟ್ಟು ಚೀನಾಕ್ಕೆ ಹಸ್ತಾಂತರವಾದದ್ದು, ಅದರ ಆಕ್ರಮಣಕಾರಿ ಬಕಾಸುರ ಪ್ರವೃತ್ತಿಗೆ ನೆರವಾದದ್ದು, ಪ್ರಸಾದರ ಅಶಾಂತಿಗೆ ಕಾರಣವಾಗುತ್ತದೆ.

ಜಗತ್ತಿನ ಶಾಂತಿಗೆ ಅಂತರರಾಷ್ಟ್ರೀಯ ಸಹಕಾರ ಅತ್ಯಗತ್ಯ; ಅಂಥ ಸಹಕಾರ ವಿಕಾಸಗೊಳ್ಳಲು ಸುಭದ್ರ ನೈತಿಕ ಬುನಾದಿಯನ್ನು ಸರಿಸಿದ, ಜಗತ್ತಿನ ಎಲ್ಲ ನಾಗರಿಕ ರಾಷ್ಟ್ರಗಳು ಸೇರಿ ರಚಿಸಿದ ಅಂತರರಾಷ್ಟ್ರೀಯ ಕಾನೂನು ಅತ್ಯಗತ್ಯ. ಪ್ರಬಲ ರಾಷ್ಟ್ರಗಳು ಸಣ್ಣ ರಾಷ್ಟ್ರಗಳಿಗೆ ಕಿರುಕುಳ ಕೊಡದಂತೆ ಮಾರಕಾಸ್ತ್ರಗಳು ಗಡಿ ಮೀರದಂತೆ ಈ ಕಾನೂನು ರಕ್ಷಣೆ ನೀಡಬೇಕು; ಮಾನವಹಕ್ಕುಗಳನ್ನು ರಕ್ಷಿಸುವ, ಮಾನವೀಯತೆಗೆ ಗೌರವವನ್ನೀಯುವ ಅಧಿಕಾರ ಅದಕ್ಕಿರಬೇಕು-ಕಾನೂನಿನ ಬಗೆಗಿನ ಪ್ರಸಾದರ ಧೋರಣೆಯಿದು.

ಗಾಂಧೀಜಿಯ ರಾಜಕೀಯ ಸಿದ್ಧಾಂತಗಳನ್ನೆ ತಮ್ಮವನ್ನಾಗಿಸಿಕೊಂಡು, ಅವರ ಹೆಜ್ಜೆಗಳನ್ನು ಹಿಂಬಾಲಿಸುವುದೇ ತಮ್ಮ ಪುಣ್ಯವೆಂದು ಬಗೆದು, ಸ್ವಾತಂತ್ರ್ಯವೇ ಭಗವತ್ಸಾಕ್ಷಾತ್ಕಾರವೆಂದು ನಂಬಿ ಅಜಾತಶತ್ರುವೆಂಬಂತೆ ಸಂತರಂತೆ ಬದುಕಿದ ಪ್ರಸಾದರ ಜೀವನವೇ ರಾಜಕೀಯ ಸಂದೇಶವೆಂದರೆ ಅತಿಶಯೋಕ್ತಿಯಾಗಲಾರದು.

ಅಂತರರಾಷ್ಟ್ರೀಯ ರಾಜಕೀಯ ಪ್ರಜ್ಞೆಯುಳ್ಳ ಆಧುನಿಕ ಭಾರತದ ಶಿಲ್ಪಿಯೆಂದೇ ಪ್ರಸಿದ್ಧರಾದ **ಪಂಡಿತ ಜವಹರಲಾಲ್ ನೆಹರೂ** (೧೮೮೯-೧೯೬೪) ಅವರು ಬಾಯಲ್ಲಿ ಚಿನ್ನದ ಚಮಚ ಇಟ್ಟುಕೊಂಡೇ ಅಲಹಾಬಾದಿನಲ್ಲಿ ಹುಟ್ಟಿದವರು. ಆಂಗ್ಲ ಸಂಸ್ಕೃತಿಯನ್ನು ಹೊದ್ದು ಕೊಂಡು, ಆಂಗ್ಲ ಶ್ರೀಮಂತರಂತೆ ಬದುಕಿದ ದೇಶದ ಸುಪ್ರಸಿದ್ಧ ವಕೀಲರಾದ ಪಂಡಿತ ಮೋತಿಲಾಲರು ಅವರ ತಂದೆ. ಕಾಂಗ್ರೆಸ್ ಸೇರಿಕೊಂಡ ಏಕಮಾತ್ರ ಪುತ್ರ ಜೈಲಿಗೆ ಹೋದಾಗ, ಸುಖದ ಸುಪ್ಪತ್ತಿಗೆಯಲ್ಲಿ ಬೆಳೆದ ಮಗ ಕಾರಾಗೃಹ ವಾಸದ ಕಾಠಿಣ್ಯವನ್ನು ಹೇಗೆ ಸಹಿಸುತ್ತಾನೆಯೋ ಎಂದವರು ಚಡಪಡಿಸುತ್ತಾರೆ. ತಾವೇ ಚಾಪೆಯ ಮೇಲೆ ಮಲಗಿ, ಮಗನ ಕಷ್ಟ ಕ್ಲೇಶಗಳನ್ನನುಭವಿಸುತ್ತಾರೆ. ಉದ್ಯೋಗವಿಲ್ಲದೆ ತಂದೆಯ ಹಂಗಿನಲ್ಲಿ ಬದುಕುವ ಮಗನ ಮುಜುಗರವನ್ನು ಕಂಡಾಗ ಅವರು ಮಗನಿಗೆ ಹೇಳುತ್ತಾರೆ: 'ನಿನಗೇಕೆ ಇಷ್ಟೆಲ್ಲ ಮುಜುಗರ? ನಾನು ಒಂದು ವರ್ಷ ವಕೀಲಿ ನಡೆಸಿದರೆ ಸಾಕು, ನನ್ನ ಸಂಪಾದನೆ ನಿನ್ನ ಇಡೀ ಜೀವನಕ್ಕೆ ಸಾಕಾಗುತ್ತದೆ' ಎಂದು. ಇಂಗ್ಲೆಂಡಿನಲ್ಲಿದ್ದಾಗ ತಾನೊಂದು ಕಾರು ಕೊಳ್ಳುವುದಾಗಿ ಮಗ ತಂದೆಯನ್ನು ಕೇಳುತ್ತಾರೆ. ಆಗ ತಂದೆ ಕೊಟ್ಟ ಉತ್ತರವೇನು? 'ನೀನು ಕಾರಿನಲ್ಲಿ ಓಡಾಡುವುದು ನನಗೆ ಸಂತೋಷವೆ. ಕಾರು ಅಕಸ್ಮಾತ್ ಅಪಘಾತಕ್ಕೀಡಾಗಬಹುದಾದ ಸಂಶಯಕೀಟ ಮನವೊಕ್ಕಾಗ ನನಗೆ ನಿದ್ರೆ ಬರದು; ಊಟ ಸೇರದು. ನೀನು ಸದಾ ಟ್ಯಾಕ್ಸಿಯಲ್ಲಿ ಓಡಾಡುವುದಾದರೆ ನಾನಿಲ್ಲಿ ನಿರಾಳವಾಗಿರುತ್ತೇನೆ' ಎಂದು ಮಗನಿಗೆ ತಂದೆ ತಿಳಿಸುತ್ತಾರೆ. ಆ ತಂದೆಯ ಪುತ್ರವಾತ್ಸಲ್ಯ ದಶರಥನನ್ನು ನೆನಪಿಗೆ ತರುತ್ತದೆ. ಮೋತಿಲಾಲರು ಕಾಂಗ್ರೆಸ್ಸಿಗೆ ಸೇರುವುದಾದರೆ ಪಕ್ಷಕ್ಕೆ ಬಲ ಬರುತ್ತದೆ; ಆದರೆ ಆಂಗ್ಲ ಸಂಸ್ಕೃತಿಮೋಹಿಯನ್ನು ಆಕರ್ಷಿಸುವುದೆಂತೆಂದು ಮೋಡಿಕಾರ ಗಾಂಧಿ ಯೋಚಿಸುತ್ತಾರೆ. ಮೋತಿಲಾಲರ ಪುತ್ರವ್ಯಾಮೋಹವನ್ನರಿತಿದ್ದ ಗಾಂಧೀಜಿ ಅವರ ಮಗನನ್ನು ಸೆಳೆದುಕೊಳ್ಳುತ್ತಾರೆ; ಅನಂತರ ಕರು ಹೋದೆಡೆಯಲ್ಲೆಲ್ಲ ಹಸು ಹಿಂಬಾಲಿಸುವಂತೆ ಮೋತಿಲಾಲರು ಮಗನನ್ನು ಹಿಂಬಾಲಿಸುತ್ತಾರೆ.

ಜಗತ್ತಿನ ಶ್ರೇಷ್ಠತಮ ವಿದ್ಯಾಕೇಂದ್ರದಲ್ಲಿ, ಉತ್ತಮ ಪರಿಸರದಲ್ಲಿ ಮಗ ವಿದ್ಯೆ ಕಲಿಯಬೇಕೆಂಬುದು ಮೋತಿಲಾಲರ ಹೆಬ್ಬಯಕೆ. ಹ್ಯಾರೊ ಮತ್ತು ಕೇಂಬ್ರಿಡ್ಜ್‌ನಲ್ಲಿ ಜವಹರಲಾಲರ ಕಲಿಕೆ ಯಶಸ್ವಿಯಾಗಿ ಸಾಗುತ್ತದೆ. ಅವರು ಮಿಲ್, ಗ್ಲಾಡ್‌ಸ್ಟನ್ ಮೊದಲಾದ ಮುತ್ಸದ್ದಿಗಳ, ಬರ್ನಾರ್ಡ್ ಷಾ, ಬರ್ಟ್ರಾಂಡ್ ರಸೆಲ್ ಮೊದಲಾದ ಲೇಖಕರ ಪ್ರಭಾವಕ್ಕೊಳಗಾಗುತ್ತಾರೆ. ಇಂಡಿಯಾಕ್ಕೆ ಹಿಂದಿರುಗಿದನಂತರ ಅಲಹಾಬಾದ್ ಉಚ್ಚ ನ್ಯಾಯಾಲಯದಲ್ಲಿ ವಕೀಲಿ ವೃತ್ತಿಯನ್ನಾರಂಭಿಸುತ್ತಾರೆ. ತಮ್ಮ ಮನೋಧರ್ಮಕ್ಕೂ ವಕೀಲಿ ವೃತ್ತಿಗೂ ಸರಿಹೊಂದುವುದಿಲ್ಲವೆಂದು ಅವರು ಸಂಪೂರ್ಣವಾಗಿ ರಾಜಕೀಯದಲ್ಲಿ ಮುಳುಗುತ್ತಾರೆ. ಹೋಂರೂಲ್ ಲೀಗಿನ ಮೂಲಕ ಅವರು ಅಸಹಕಾರ ಚಳವಳಿಗೆ ತಮ್ಮನ್ನು ತಾವು ತೆತ್ತುಕೊಳ್ಳುತ್ತಾರೆ. ಗಾಂಧೀಜಿಯನ್ನು ಸುತ್ತುವರಿದಿದ್ದ ಮಹಾಯೋಧರಲ್ಲಿ ನೆಹರೂ ಅಗ್ರಗಣ್ಯರು. ರಾಜಕೀಯ ಹೋರಾಟದ ಗುರಿ ಪೂರ್ಣ ಸ್ವಾತಂತ್ರ್ಯವೆಂದವರು ಪ್ರತಿಜ್ಞೆ ಕೈಗೊಳ್ಳುತ್ತಾರೆ. ಅದರ ಪೂರೈಕೆಗಾಗಿ ಸರ್ವತ್ಯಾಗಕ್ಕೂ ಅವರು ಸಿದ್ಧರಾಗುತ್ತಾರೆ; ಹಲವು ವರ್ಷ ಜೈಲೇ ಅವರ ಮನೆಯಾಗುತ್ತದೆ.

ಮೋತಿಲಾಲರಿಗಾಗಲಿ, ಜವಹರರಿಗಾಗಲಿ ಮತೀಯ ವಿಚಾರಗಳಲ್ಲಿ ನಂಬಿಕೆಯಿಲ್ಲ. ಇಬ್ಬರೂ ಅಜ್ಞೇಯತಾವಾದಿಗಳು, ವಾಸ್ತವವಾದಿಗಳು, ವಿಚಾರವಾದಿಗಳು. ಮೂವತ್ತು ನಲವತ್ತು ವರ್ಷಗಳ ಕಾಲ ಜವಹರಲಾಲ್ ಗಾಂಧೀಜೀಯ ಸಹವಾಸದಲ್ಲಿದ್ದರೂ ಅವರು ತಮ್ಮ ನಿಲುವನ್ನು ಬದಲಾಯಿಸಿಕೊಳ್ಳುವುದಿಲ್ಲ. ಆದರೆ ರಾಜಕೀಯ ನೈರ್ಮಲ್ಯದ ಬಗೆಗಿನ ಗಾಂಧೀಜಿಯ ನೈತಿಕ ಹಾಗೂ ಆಧ್ಯಾತ್ಮಿಕ ವಿಚಾರಗಳನ್ನೆಂದೂ ಅವರು ವಿರೋಧಿಸುವುದಿಲ್ಲ. 'ಭಾರತ ಶೋಧನೆ' ಎಂಬ ತಮ್ಮೊಂದು ಆಂಗ್ಲ ಗ್ರಂಥದಲ್ಲಿ ದೇವರ ಬಗ್ಗೆ ಅವರು ಹೇಳುವುದಿದು: 'ಹಲವು ವೇಳೆ ಈ ಜಗತ್ತಿನ ಬಗ್ಗೆ ಧ್ಯಾನಿಸುವಾಗ, ಅಜ್ಞಾತ ಅಗಾಧತೆಯ ರಹಸ್ಯಗಳ ಛಾಯಾಚಿತ್ರವೇ ನನ್ನ

ಮುಂದೆ ಗೋಚರಿಸಿದಂತಾಗುತ್ತದೆ. ನಾನದನ್ನು ದೇವರೆಂದು ಕರೆಯುವುದಿಲ್ಲ. ಏಕೆಂದರೆ ನಾನು ನಂಬಲಾರದ ಅನೇಕ ಸಂಗತಿಗಳು ದೇವರ ಹೆಸರಿನಲ್ಲಿ ಉಲ್ಲೇಖಗೊಳ್ಳುತ್ತವೆ. ಇಷ್ಟದೈವದ ಭಾವನೆಯೇ ನನಗೆ ವಿಚಿತ್ರವಾಗಿ ಕಾಣುತ್ತದೆ. ವೇದಾಂತದ ಅದ್ವೈತ ಸಿದ್ಧಾಂತ ತಕ್ಕ ಮಟ್ಟಿಗೆ ನನಗೆ ಹಿಡಿಸಿದೆ. ಆದರೆ ಅಮೂರ್ತ ಅನಂತವನ್ನು ಕುರಿತ ವ್ಯಾಖ್ಯಾನಗಳು ನನ್ನನ್ನು ತಲ್ಲಣಗೊಳಿಸುತ್ತವೆ,' (ಪು ೧೨) ಬುದ್ಧನ ಜೀವನ ಅವರ ಮೇಲೆ ಅಪಾರ ಪ್ರಭಾವ ಬೀರಿದೆಯೆನ್ನುವುದಕ್ಕೆ ಅಂತರರಾಷ್ಟ್ರೀಯ ಸಹ ಬಾಳ್ವೆಗೆ 'ಪಂಚಶೀಲ' ಎಂಬ ಬೌದ್ಧ ಕಲ್ಪನೆಯನ್ನು ಬಳಸಿಕೊಂಡದ್ದೇ ನಿದರ್ಶನವಾಗಿದೆ.

ಜವಹರಲಾಲರು ಪ್ರಕೃತಿ ವಿಜ್ಞಾನದ ವಿದ್ಯಾರ್ಥಿಯಾದರೂ ಅವರು ನುರಿತ ವಿಶಿಷ್ಟ ಪೂರ್ಣದೃಷ್ಟಿಯ ಇತಿಹಾಸಕಾರರೆನ್ನುವುದಕ್ಕೆ ಅವರ 'ಪ್ರಪಂಚ ಇತಿಹಾಸದ ಹೊಳಹುಗಳು' ಎಂಬ ಉದ್ಗ್ರಂಥವೆ ಸಾಕ್ಷಿಯಾಗಿದೆ. ಅದು ಕೇವಲ ಚೆದರಿದ ಘಟನೆಗಳ ಸಂಗ್ರಹವಲ್ಲ; ಸಾವಯವ ಸ್ವರೂಪದ ಕಾರ್ಯಕಾರಣ ಸಮನ್ವಿತವಾದ ಜಾಗತಿಕ, ಜಾನಾಂಗಿಕ, ನಾಗರಿಕತೆಯ ವಿಕಾಸದ ಇತಿಹಾಸ. ಇತಿಹಾಸ ನಿರ್ಮಾಪಕರ ಸೃಜನಾತ್ಮಕ ಚಟುವಟಿಕೆಗಳನ್ನು ಮನೋಜ್ಞವಾಗಿ ಕಾದಂಬರಿ ಶೈಲಿಯಲ್ಲಿ ವಿವರಿಸಿದ್ದಾರೆ. ಆರ್ಯರು ತಮ್ಮ ಮಡಿವಂತಿಕೆಯನ್ನು ಕಾಪಾಡಿಕೊಳ್ಳುವ ಅವಸರದಲ್ಲಿ ಜಾತಿವ್ಯವಸ್ಥೆ ಹುಟ್ಟಿತೆಂದವರು ಹೇಳುತ್ತಾರೆ. ಇಂಡಿಯಾದೇಶದ ಮೂಲನಿವಾಸಿಗಳನ್ನು ಹಾಗೂ ದ್ರಾವಿಡರನ್ನು ಆರ್ಯರು ಶೂದ್ರರೆಂದು ಕರೆಯುತ್ತಾರೆ. ಆರ್ಯ ದ್ರಾವಿಡರ ನಡುವೆ ಕಲಹ ನಿರಂತರವಾಗಿ ನಡೆಯುತ್ತಿತ್ತು; ಹರಪ್ಪ ಮೊಹೆಂಜೋದಾರೊ ನಾಗರಿಕತೆ ದ್ರಾವಿಡರು ನಿರ್ಮಿಸಿದ್ದು. ಇದು ಪ್ರಾಚೀನ ಭಾರತದ ಬಗೆಗಿನ ಅವರ ನಿರೂಪಣೆ. ಗಾಂಧಿ ವಿವೇಕಾನಂದರಂತೆ ಅವರು ಜಾತೀಯತೆಯನ್ನು ಹಾಗೂ ಅಸ್ಪೃಶ್ಯತೆಯನ್ನು ತೀವ್ರವಾಗಿ ಖಂಡಿಸದಿದ್ದರೂ ಜಾತಿರಹಿತ ವರ್ಗರಹಿತ ಸಮಾಜದ ಬಗ್ಗೆ ಅವರ ಒಲವು.

೧೯೨೭ರಲ್ಲಿ ಸೋವಿಯಟ್ ರಷ್ಯಾಕ್ಕೆ ಭೇಟಿ ನೀಡಿದ ಅವರು ಹಲವು ಕ್ಷೇತ್ರಗಳಲ್ಲಿ ನಡೆದಿದ್ದ ಪ್ರಗತಿಯನ್ನು ಕಂಡು ಅಚ್ಚರಿಗೊಳ್ಳುತ್ತಾರೆ; ಅದಕ್ಕೆ ಕಾರಣವಾದ ದೈವೀವಿರುದ್ಧದ ಮೌಢ್ಯ ರಹಿತ ಮಾರ್ಕ್ಸ್ ಸಿದ್ಧಾಂತವನ್ನು ಮೆಚ್ಚಿಕೊಳ್ಳುತ್ತಾರೆ. ಲೆನಿನ್‌ನ ಸಾಧನೆಯನ್ನು ಮುಕ್ತಕಂಠದಿಂದ ಪ್ರಶಂಸಿಸುತ್ತಾರೆ. ಅವರ ಸಿದ್ಧಾಂತಗಳ ಪರಿಚಯದಿಂದಾಗಿ, ಇತಿಹಾಸವನ್ನು ವರ್ತಮಾನದ ಹೊಸ ಬೆಳಕಿನಲ್ಲಿ ನೋಡುವಂತಾಯಿತೆಂದೂ, ಮನಸ್ಸು ವಸ್ತುಗಳ ಅದ್ವೈತ ಸಂಬಂಧವನ್ನರಿಯಲು ಸಾಧ್ಯವಾಯಿತೆಂದೂ, ವಸ್ತು ಚಲನೆಯ ಶಕ್ತಿಯನ್ನು ಗ್ರಹಿಸಲನುಕೂಲವಾಯಿತೆಂದೂ ನೆಹರೂ ತಮ್ಮ ನಿಲುವನ್ನು ವಿಶದಪಡಿಸುತ್ತಾರೆ. ಆರ್ಥಿಕ ಪ್ರಗತಿಯ ಮೂಲಕ ಉಳಿದ ಸಮಸ್ಯೆಗಳನ್ನು ಪರಿಹರಿಸಬಹುದೆಂಬ ನಂಬಿಕೆ ಅವರದು. ಆದರೆ ಬರಬರುತ್ತ ಅವರಿಗೆ ಕಮ್ಯುನಿಸಮ್ ಮಾದರಿಯ ಸರ್ವಾಧಿಕಾರವಾಗಲಿ, ಸೈನ್ಯೋತ್ಕರ್ಷದ ಸಾರ್ವಭೌಮ ನೀತಿಯಾಗಲಿ ಹಿಡಿಸುವುದಿಲ್ಲ. ಕ್ರಿಯೆ ಪ್ರತಿಕ್ರಿಯೆ, ಕಾರ್ಯಕಾರಣ ಘಟನೆ ಪ್ರತಿಘಟನೆ ಮತ್ತು ಸಾಮರಸ್ಯಗಳ ಮೂಲಕ ಜಗತ್ತಿನ ವಿಕಾಸ ಸಾಧ್ಯವೆಂಬ ವ್ಯಕ್ತಿ ಸ್ವಾತಂತ್ರ್ಯಾಪಹರಣವಾಗಲಿ, ಸ್ಟಾಲಿನ್ ಕಾಲದ ಹತ್ಯಾಕಾಂಡವಾಗಲಿ ಅವರ ಮನಸ್ಸಿಗೆ ಆಘಾತವುಂಟುಮಾಡುತ್ತವೆ. ಕಮ್ಯೂನಿಸಮ್ ರಾಷ್ಟ್ರೀಯತಾ ವಿರೋಧಿಯೆಂಬುದೂ ಅವರ ಮನೋಧರ್ಮಕ್ಕೆ ಒಗ್ಗುವಂಥದಲ್ಲ. ದಮನಗೊಂಡ ವರ್ಗಕ್ಕೆ ಅನುಕೂಲವಾಗುವುದಾದರೆ ಉತ್ಪತ್ತಿ ಹಂಚಿಕೆಗಳ ಮೇಲಣ ಸರ್ಕಾರೀ ನಿಯಂತ್ರಣ ಅವಶ್ಯವೆನ್ನುವಷ್ಟರ ಮಟ್ಟಿಗೆ ಅವರು ಸಮಾಜವಾದಿಯಾಗುತ್ತಾರೆ. ಜಮೀನ್ದಾರರಿಂದ, ಮತ್ತು ಉದ್ಯಮಪತಿಗಳಿಂದ ರೈತಕಾರ್ಮಿಕರನ್ನು ಪಾರುಮಾಡುವ ಸಮಾಜವಾದವನ್ನವರು ಸ್ವಾಗತಿಸುತ್ತಾರೆ. ಕಾಂಗ್ರೆಸ್ಸು ಸಮಾಜವಾದೀ ನೀತಿಯನ್ನು ಅಳವಡಿಸಿಕೊಳ್ಳುವಂತೆ ಕಾಂಗ್ರೆಸ್ಸಿನ ವಕೀಲರು ಒತ್ತಡ ತರುತ್ತಾರೆ. ಕೈಗಾರಿಕೀಕರಣ ಇಲ್ಲವೆ ಹರಣ, ಜತೆಗೆ ರಾಷ್ಟ್ರೀಕರಣ ಎಂಬ ನೀತಿಗವರು ಕಟ್ಟು ಬಿದ್ದಿದ್ದರೂ, ಖಾದಿ ಮೊದಲಾದ ಸಣ್ಣ ಪ್ರಮಾಣದ ಗುಡಿಕೈಗಾರಿಕೆಗಳನ್ನವರು ಧಿಕ್ಕರಿಸುವುದಿಲ್ಲ. ಸುಖೀರಾಜ್ಯದ ಕಲ್ಪನೆ, ನಿರ್ಮಾಣ ಮತ್ತು ನಿರ್ವಹಣೆ ಅವರ ಪ್ರಾಮಾಣಿಕ ಪ್ರಯತ್ನಗಳೆಂಬುದರಲ್ಲಿ ಅನುಮಾನವಿಲ್ಲ.

ಗಾಂಧೀಜಿ ತಮಗೆ ಪಿತೃ ಸಮಾನರೆಂಬುದು ನೆಹರೂ ಅವರ ನಂಬುಗೆ. ಗಾಂಧೀಜಿಗೂ ಅವರ ಬಗ್ಗೆ ಅಕಳಂಕ ವಾತ್ಸಲ್ಯ. ನೈತಿಕ ಹಾಗೂ ಆಧ್ಯಾತ್ಮಿಕ ಸಂಬಂಧವಾದ ಕೆಲವು ವಿಷಯಗಳಲ್ಲಿ ಅವರಿಬ್ಬರ ನಡುವೆ ಭಿನ್ನಾಭಿಪ್ರಾಯವಿದ್ದರೂ, ದಿನಕಳೆದಂತೆಲ್ಲ ಅವರ ಪ್ರೇಮ ಸಂಬಂಧ ಗಾಢವಾಗುತ್ತದೆ. ಗಾಂಧೀಜಿಯ ಸರ್ವತ್ಯಾಗ, ಎಂಥ ಗಂಡಾಂತರದಲ್ಲಿಯೂ ಎದೆಗೆಡದ ಅಧ್ಯಾತ್ಮ ಶಕ್ತಿ, ಅವರ ಸತ್ಯಾಗ್ರಹ ಸಾಹಸ, ಸ್ವಾತಂತ್ರ್ಯ ಸಮರದಲ್ಲಿ ಅವರು ಪ್ರದರ್ಶಿಸಿದ ಜಾಣ್ಮೆ- ಒಟ್ಟಿನಲ್ಲಿ ಅವರ ಸ್ಥಿತಪ್ರಜ್ಞೆಗಾಗಿ ನೆಹರೂ ಅವರಿಗೆ ಮಾರು ಹೋಗುತ್ತಾರೆ, ಮಂತ್ರಮುಗ್ಧರಾಗುತ್ತಾರೆ. ಗಾಂಧೀಜಿ ಭಾರತೀಯ ರಾಷ್ಟ್ರೀಯತೆಯ ಪ್ರತೀಕವೆಂದು, ಸಂಪ್ರದಾಯಸ್ಥರಾದರೂ ಮಹಾಕ್ರಾಂತಿಕಾರರೆಂದು, ಭೂತ ವರ್ತಮಾನ ಭವಿಷ್ಯಗಳ, ಪೂರ್ವಪಶ್ಚಿಮಗಳ ಸೇತುವೆಯೆಂದು, ತಮಸ್ಸನ್ನಳಿಸುವ ಜ್ಯೋತಿಯೆಂದವರನ್ನು ನೆಹರೂ ಗೌರವಿಸುತ್ತಾರೆ. ಗಾಂಧೀಜಿ ಕಲ್ಪನೆಯ ಸತ್ಯ ಅಹಿಂಸೆ ಸಿದ್ಧಾಂತವನ್ನು ಪೂರ್ಣವಾಗಿ ಅನುಸರಿಸಲು ಅವರಿಗೆ

ಸಾಧ್ಯವಾಗದಿದ್ದರೂ, ಅವರು ಮಾನವತಾ ಸಿದ್ಧಾಂತದ ಆರಾಧಕರೆಂಬುದಂತು ದಿಟ. ಆಜ್ಞೇಯತಾ ಪ್ರವೃತ್ತಿಯಿಂದಾಗಿ ಅವರ ಸೆಕ್ಯೂಲರ್ ಮನೋಭಾವದಲ್ಲಿ ಪ್ರಾಮಾಣಿಕತೆಯನ್ನು ಗುರುತಿಸಬಹುದು.

ಇಂಡಿಯಾ ದೇಶದ ಸ್ವಾತಂತ್ರ್ಯ ಇತರ ಗುಲಾಮೀ ದೇಶಗಳ ಮೇಲೆ ಪ್ರಭಾವ ಬೀರುತ್ತದೆಂದು, ರಾಷ್ಟ್ರೀಯತಾ ಭಾವನೆಯೇ ಸ್ವಾತಂತ್ರ್ಯ ಸಮರಕ್ಕೆ ಸ್ಫೂರ್ತಿಶಕ್ತಿಯೆಂದು ನೆಹರೂ ಪ್ರಚಾರಮಾಡುತ್ತಾರೆ. ಆಂಗ್ಲರ ಅಹಂಕಾರ, ಅವರ ಸುಲಿಗೆಯಿಂದಾಗಿಭಾರತೀಯರು ಅನುಭವಿಸಬೇಕಾದ ಬಡತನ ಹಾಗೂ ದಿವಾಳಿತನ, ರಾಷ್ಟ್ರೀಯ ಉದ್ಯಮಗಳ ನಾಶ, ವಿದೇಶೀಯರ ಆಡಳಿತದಿಂದಾದ ದೇಶೀಯ ಪ್ರತಿಭಾಸಂಹಾರ - ಈ ಸಂದರ್ಭಗಳು ನೆಹರೂ ಅವರಲ್ಲಿ ರಾಷ್ಟ್ರೀಯತಾ ಭಾವನೆಯನ್ನು ಪ್ರಚೋದಿಸುತ್ತವೆ. ಆದರೆ ಅವರ ರಾಷ್ಟ್ರೀಯತಾ ಭಾವನೆ ಅವರ ಅಂತರರಾಷ್ಟ್ರೀಯತಾ ಧರ್ಮಕ್ಕೆ ವಿರೋಧಿಯಲ್ಲ. ಇಂಡಿಯಾ ಸ್ವತಂತ್ರವಾದರೆ ಇತರ ದೇಶಗಳಿಗೂ ಸ್ವಾತಂತ್ರ್ಯ ದೊರೆಯುತ್ತದೆ. ವಸಾಹತುಷಾಹಿ ನಿರ್ನಾಮಗೊಂಡು, ಎಲ್ಲ ಸ್ವತಂತ್ರ ರಾಷ್ಟ್ರಗಳು ಪರಸ್ಪರ ಸಹಕಾರದಿಂದ ಸಹಬಾಳ್ವೆ ನಡೆಸಿದಾಗ ಲೋಕಶಾಂತಿ ಕ್ಷೇಮಗಳು ಸಾಧ್ಯವೆಂಬುದು ಅವರ ಖಚಿತಮತ. ಸಂಕುಚಿತ ಸ್ವಭಾವದ, ಆಕ್ರಮಣಶೀಲದ ರಾಷ್ಟ್ರೀಯತೆ ಗವರು ವಿರೋಧಿ. ಈ ಯುಗದಲ್ಲಿ ಯಾವೊಂದು ರಾಷ್ಟ್ರವೂ ಪರಾವಲಂಬಿಯಾಗದಿರಲು ಸಾಧ್ಯವಿಲ್ಲದ್ದರಿಂದ ಪಂಚಶೀಲಗಳ ಆಚರಣೆಯ ಮೂಲಕ ಪ್ರಗತಿ ಹೊಂದಬೇಕೆಂಬುದು ಅವರ ಸಿದ್ಧಾಂತ. ಅವರು ಅಲಿಪ್ತ ನೀತಿಯ ಪ್ರವರ್ತಕರೆಂಬುದನ್ನು, ಅಲಿಪ್ತ ರಾಷ್ಟ್ರ ಸಂಘಟನೆಯ ಹರಿಕಾರರೆಂಬುದನ್ನು ಮರೆಯಲಾಗದು.

ಅನಿಯಂತ್ರಿತ ಸ್ವಾತಂತ್ರ್ಯವಿರುವ ದೇಶದಲ್ಲಿ ಪ್ರಜಾಪ್ರಭುತ್ವ ಸರ್ಕಾರವೇ ಸರ್ವಶ್ರೇಷ್ಠವಾದದ್ದು. ಅಂಥ ಸರ್ಕಾರವನ್ನು ನಡೆಸುವ ಜವಾಬ್ದಾರಿ ಕೇವಲ ಮಂತ್ರಿಗಳಿಗೆ, ಶಾಸಕರಿಗೆ ಮಾತ್ರವೇ ಸೀಮಿತವಾಗಬಾರದು. ಎಲ್ಲ ಪ್ರಜೆಗಳೂ ಆಸಕ್ತಿ ವಹಿಸಿದಾಗ ಆ ವ್ಯವಸ್ಥೆ ಸಾರ್ಥಕವಾಗುತ್ತೆಂಬುದು ನೆಹರೂ ಅವರ ಅಭಿಪ್ರಾಯ. ಪ್ರತಿನಿಧಿಗಳ ಮೂಲಕ ಎಲ್ಲ ಪ್ರಜೆಗಳ ಅಭಿಪ್ರಾಯವನ್ನು ಸಂಗ್ರಹಿಸಿ, ಶಾಸನಸಭೆಯಲ್ಲಿ ಅವುಗಳ ಬಗ್ಗೆ ಚರ್ಚೆ ನಡೆಸಬೇಕಾದ್ದು ಪ್ರಜಾಸತ್ತೆಯ ಲಕ್ಷಣವೆಂದವರು ವಾದಿಸುತ್ತಾರೆ. ಪ್ರತಿಯೊಬ್ಬ ವ್ಯಕ್ತಿಗೂ ಸ್ವಾತಂತ್ರ್ಯವಿರಬೇಕು. ಸಮಾನಾವಕಾಶವಿರಬೇಕು, ರಾಜಕೀಯಾರ್ಥಿಕ ಸಾಮಾಜಿಕ ಕ್ಷೇತ್ರಗಳಲ್ಲಿ ಸಮಾನತೆಯಿರಬೇಕು, ಪಾರ್ಲಿಮೆಂಟು ಸರ್ವೋಚ್ಚ ಅಧಿಕಾರವುಳ್ಳ ಪ್ರಾತಿನಿಧಿಕ ಸಂಸ್ಥೆಯಾಗಬೇಕು, ಸೆಕ್ಯುಲರಿಸಂ ಮತ್ತು ಸಮಾಜವಾದ ಪಂಚಶೀಲ ತತ್ತ್ವ ಆಚರಣೆಗೆ ಬರಬೇಕು-ಇವು ಅವರ ಧ್ಯೇಯಗಳು.

ಸ್ವಾತಂತ್ರ್ಯ ಸಂಗ್ರಾಮವೀರರ ಅಗ್ರಪಂಕ್ತಿಯಲ್ಲಿ ನೆಹರೂ ಅವರಿಗೆ ಪ್ರಥಮೋಚ್ಚ ಸ್ಥಾನವುಂಟೆಂಬುದು ನಿರ್ವಿವಾದ. ಜಗತ್ತಿನ ಉದ್ದಾಮ ರಾಷ್ಟ್ರಗಳಿಗೆಣೆಯಾಗಿ ಇಂಡಿಯಾ ವೃದ್ಧಿ ಹೊಂದಬೇಕೆಂಬುದು ಅವರ ಆಸೆ. ಹಾಗೆಯೇ ಅದನ್ನು ಬೆಳೆಸುವಲ್ಲಿ ತಮ್ಮ ವೈಜ್ಞಾನಿಕ ತಳಹದಿಯ ಬುದ್ಧಿ ಜ್ಞಾನಗಳನ್ನೆಲ್ಲ ವಿನಿಯೋಗಿಸುತ್ತಾರೆ. ಮಾನವ ಕೃಷಿಕನಾಗಲಿ, ನೇಕಾರನಾಗಲಿ ಸಹಜವಾಗಿಯೇ ಕ್ರಿಯಾಶಾಲಿ, ಹಾಗೂ ಸೃಜನಶೀಲ. ಅವುಗಳ ವಿಕಾಸಕ್ಕೆ ಯೋಗ್ಯ ವಾತಾವರಣವನ್ನು ಸೃಷ್ಟಿಸಬೇಕಾದದ್ದು ಸರ್ಕಾರ ಸಮಾಜಗಳ ಕರ್ತವ್ಯವೆಂಬುದನ್ನು ಅವರು ಅರಿತಿದ್ದರು. ಹದಿನೆಂಟು ವರ್ಷ ಪ್ರಧಾನಿಯಾಗಿದ್ದ, ಒಂದು ರೀತಿಯಲ್ಲಿ ಸರ್ವಾಧಿಕಾರಿಯಾಗಿದ್ದ ಅವರು ಬಲಿಷ್ಠ ರಾಷ್ಟ್ರವನ್ನು ಕಟ್ಟುವಲ್ಲಿ ಯಶಸ್ವಿಯಾದರೆ? ಎನ್ನುವುದೊಂದು ದೊಡ್ಡ ಪ್ರಶ್ನೆಯಾಗಿದೆ. ಡೋಲಾಯಮಾನ ಅಥವಾ ಸಂಶಯ ಮನಸ್ಸಿನ ಥಾಮಸ್ ಅಥವಾ ಹ್ಯಾಮ್ಲೆಟ್ ಎಂಬ ಟೀಕೆಗೆ ಗುರಿಯಾದ ಅವರು ಪಟೇಲ್ ಅಥವಾ ಜಗಜೀವನರಾಂ ಹಾಗೆ ಸಮರ್ಥ ಆಡಳಿತಗಾರರಲ್ಲ; ಭಾರತದ ಹೃದಯ ಹಳ್ಳಿಗಳಲ್ಲಿದೆಯೆಂಬುದನ್ನರಿತವರಲ್ಲ; ಬೃಹತ್ ಕೈಗಾರಿಕೆಗಳಿಗೆ ಒತ್ತು ಕೊಟ್ಟಂತೆ, ನೀರಾವರಿಯ ಕಡೆಗೆ ಗಮನ ಹರಿಸಿದವರಲ್ಲ, ಗಾಂಧಿ ವಿಚಾರಧಾರೆಯನ್ನು ನೆನಪಿನಲ್ಲಿಟ್ಟು ಕೊಂಡವರಲ್ಲವೆಂದು ಅವರನ್ನು ತೀರ ಹತ್ತಿರದಿಂದ ಬಲ್ಲವರು ಹೇಳುತ್ತಾರೆ. ಗಡಿ, ಜಲ, ಭಾಷಾ, ಮತೀಯ ವಿವಾದಗಳನ್ನು ಹಾಗೆಯೇ ಬಿಟ್ಟು ಹೋದರೆಂಬುದನ್ನು ಇಂದಿನ ಪೀಳಿಗೆಯವರು ಮರೆತಿಲ್ಲ. ಪಾಕಿಸ್ತಾನ ಟಿಬೆಟ್ ಸಮಸ್ಯೆಗಳು ಜಟಿಲಗೊಂಡದ್ದು ಯಾರಿಂದ? ಅವರ ದೌರ್ಬಲ್ಯಗಳೇನೇ ಇರಲಿ, ಅವರು ಮಹಾತ್ಯಾಗಿ, ಧೀರ ಧೀಮಂತ ಸ್ವಾತಂತ್ರ್ಯ ಯೋಧ, ಅಪ್ಪಟ ದೇಶಾಭಿಮಾನಿ, ಸಭ್ಯತೆ ಸಜ್ಜನಿಕೆಗಳು ಸಾಕಾರಗೊಂಡ ಮಹಾನಾಯಕರೆಂದು, ಅಂತರರಾಷ್ಟ್ರೀಯ ಖ್ಯಾತಿಯ ಮಹಾಪುರುಷರ ಸಾಲಿಗೆ ಸೇರಿದ ಭಾರತಾಂಬೆಯ ಸುಪುತ್ರರೆಂದು ಅವರು ಸರ್ವಗೌರವ ಭಾಜನರಾಗಿದ್ದಾರೆಂಬುದು ಹೆಮ್ಮೆಯ ಸಂಗತಿ.

ದೇಶದ ಪ್ರಾಣವನ್ನೆ ಹಿಂಡುತ್ತಿರುವ ಜಾತೀಯತೆಯೊಂದು ಅರ್ಬುದ ವ್ರಣ; ಆತ್ಮವನ್ನೆ ಹಿಸುಕುತ್ತಿರುವ ಅಸ್ಪೃಶ್ಯತೆಯೊಂದು ಶಾಪ. ಈ ದೇಶ ಅನ್ಯಾಕ್ರಮಣಕ್ಕೊಳಗಾದದ್ದಕ್ಕೆ, ಅದರ ಅವನತಿಗೆ ಇವೇ ಕಾರಣ. ನೂರಾರು ಸಾವಿರಾರು ದೇವರುಗಳಿಂದ, ಸಾವಿರಾರು ಜಾತಿಗಳಿಂದ ಛಿದ್ರ ವಿಚ್ಛಿದ್ರಗೊಂಡಿರುವ ಈ ದೇಶದಲ್ಲಿ ರಾಷ್ಟ್ರೀಯ ಏಕತೆಯಾಗಲಿ, ಸುಭದ್ರತೆಯಾಗಲಿ ಇಲ್ಲ. ಈ ದೇಶವನ್ನು

ಒಡೆದೊಡೆದು ಹಂಚಿಕೊಂಡು ಆಳಿದ ಸಹಸ್ರ ಸಹಸ್ರ ಕಲಹಪ್ರಿಯ ರಾಜಮಹಾರಾಜರಾಗಲಿ ಸ್ವಾಮಿ ವಿವೇಕಾನಂದರನ್ನುಳಿದ ಲಕ್ಷಾಂತರ ಸನ್ಯಾಸಿಗಳಾಗಲಿ, ಸಾವಿರಾರು ಮಠ ಆಶ್ರಮಗಳಾಗಲಿ, ಬಸವಣ್ಣನವರನ್ನುಳಿದ ನೂರಾರು ಸಂತ ಆಚಾರ್ಯ ಅವತಾರ ಪುರುಷರಾಗಲಿ, ಹೊರಗಿನಿಂದ ಬಂದ ಆಕ್ರಮಣಕಾರರಾಗಲಿ- ಜಾತೀಯತೆಯನ್ನಾಗಲಿ, ಅಸ್ಪೃಶ್ಯತೆಯನ್ನಾಗಲಿ ನಿರ್ನಾಮಗೊಳಿಸದೆ, ಸ್ವಾರ್ಥಕ್ಕಾಗಿ, ತಮ್ಮ ಗುಂಪಿನ ಏಳ್ಗೆಗಾಗಿ, ತಮ್ಮ ಆಡಳಿತದ ಸೌಲಭ್ಯಕ್ಕಾಗಿ ಅವನ್ನೆಲ್ಲ ಬಳಸಿಕೊಂಡದ್ದು ಹೇಯಕೃತ್ಯ. ಮಾತ್ರವಲ್ಲ, ಅಕ್ಷಮ್ಯ ಅಪರಾಧ. ಉತ್ತರ ಇಂಡಿಯಾದ ನಾನಕ್, ಕಬೀರ್, ಮಹಾರಾಷ್ಟ್ರದ ಜ್ಯೋತಿಬಾ ಫೂಲೆ, ತಮಿಳುನಾಡಿನ ಪೆರಿಯಾರ್, ಕೇರಳದ ನಾರಾಯಣಗುರು ಹೊರತಾಗಿ ಅಸೃಶ್ಯತೆಗಾಗಿ ಕಣ್ಣೀರು ಕರೆದವರೆ ಅಪರೂಪ. ಮಹಾರಾಜರ ಪೈಕಿ ಅಸ್ಪೃಶ್ಯರಿಗೆ ಸಹಾಯ ಮಾಡಲು ಮುಂದೆ ಬಂದವರು ಒಬ್ಬರು ಮಾತ್ರ. ಅವರೇ ಬರೋಡಾದ ಗಾಯಕವಾಡರು. ಭಾರತದ ಸ್ವಾತಂತ್ರ್ಯಕ್ಕಾಗಿ ಸಮರ ಹೂಡಿದ ಕಾಂಗ್ರೆಸ್ ಪಕ್ಷದ ಧುರೀಣರ ಪೈಕಿ ಮಹಾತ್ಮಾಗಾಂಧಿಯವರನ್ನುಳಿದು ಬೇರೆ ಯಾರೂ ಅಸ್ಪೃಶ್ಯರ ಬಗ್ಗೆ ಅನುಕಂಪ ತಾಳಿದವರಿಲ್ಲ. ಲೋಕಮಾನ್ಯ ಬಾಲಗಂಗಾಧರ ತಿಲಕರಂತು ಅಸ್ಪೃಶ್ಯರ ನಾಯಕರ ಬಗ್ಗೆ ಅಸಹನೆ ಹೊಂದಿದ್ದರೇ ಹೊರತು ಸಹಾನುಭೂತಿ ತಾಳಿದವರಲ್ಲ; ತಮ್ಮ ಪತ್ರಿಕೆ 'ಕೇಸರಿ'ಯಲ್ಲವರು ಆ ನಾಯಕರ ಲೇಖನಗಳನ್ನು ಪ್ರಕಟಿಸಲೊಪ್ಪಲಿಲ್ಲ; ಕೊನೆಗೆ ಅವರು ಪ್ರಾರಂಭಿಸಿದ 'ಮೂಕನಾಯಕ' ಪತ್ರಿಕೆಯ ಜಾಹಿರಾತನ್ನು ಮುದ್ರಿಸಲೂ ತಯಾರಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಅಸ್ಪೃಶ್ಯ ತಂದೆ ತಾಯಿಯರ ಹೊಟ್ಟೆಯಲ್ಲಿ ಹುಟ್ಟಿದ ಪ್ರವಾದಿಸದೃಶ ಮಹಾಪುರುಷನಿಂದ ಅಸ್ಪೃಶ್ಯರ ಉದ್ಧಾರವಾಗಬೇಕೆಂಬುದು ಋತದಿಚ್ಛೆಯಿದ್ದಂತೆ ತೋರುತ್ತದೆ.

ಆ ಮಹಾಪುರುಷನೇ ಭಾರತದ ಸಂವಿಧಾನ ಶಿಲ್ಪಿ, ಮಹಾಕ್ರಾಂತಿಕಾರ **ಬಾಬಾಸಾಹೇಬ ಡಾ. ಭೀಮರಾವ್ ರಾಮ್‌ಜೀ ಅಂಬೇಡ್ಕರ್** (೧೮೯೧-೧೯೫೬) ಅವರು. ಸಾರ್ವಕಾಲಿಕವೂ, ಸಾರ್ವತ್ರಿಕವೂ, ಅದಮ್ಯವೂ ಆದ ಪ್ರಭಾವವನ್ನು ಬೀರುತ್ತ, ಇತಿಹಾಸವನ್ನು ನಿರ್ಮಿಸಿದ ಆ ಪ್ರಚಂಡ ಮೇಧಾವಿಯ ಜನನವೇ ಒಂದು ಮಹದ್ಘಟನೆ. ಸಹಸ್ರ ಸಹಸ್ರ ವರ್ಷಗಳಿಂದ ಮಡುಗೊಂಡಿರುವ ಅಸ್ಪೃಶ್ಯತೆಯ ಅವಮಾನದ ಸಿಟ್ಟು ಇದ್ದಕ್ಕಿದ್ದಂತೆ ಕ್ರಾಂತಿಯಾಗಿ ಆಸ್ಫೋಟಿಸಿ, ಅಂಬೇಡ್ಕರರ ವ್ಯಕ್ತಿತ್ವದಲ್ಲಿ ಸಾಕಾರಗೊಂಡಂತೆ ತೋರುತ್ತದೆ. ರಾಮಾಯಣ ಮಹಾಭಾರತಗಳ ಬಗ್ಗೆ, ಮನುವಿನ ಬಗ್ಗೆ, ಸ್ಮೃತಿಗಳ ಬಗ್ಗೆ, ಗಾಂಧೀಜಿ ಬಗ್ಗೆ, ಹಿಂದೂಧರ್ಮದ ಬಗ್ಗೆ, ಜಡ ಸಂಪ್ರದಾಯಗಳ ಬಗ್ಗೆ, ಬ್ರಾಹ್ಮಣರ ಬಗ್ಗೆ ಪುರೋಹಿತಶಾಹಿಯ ಬಗ್ಗೆ ಮಾತಾಡುವಾಗ ಅವರು ಸಿಡಿಲಾಗುತ್ತಾರೆ; ದ್ವಾಪರದ ಭೀಮರೇ ಆಗುತ್ತಾರೆ; ತ್ರಿಶೂಲಿಯೇ ಆಗುತ್ತಾರೆ; ಕಲ್ಕಿಯೇ ಆಗುತ್ತಾರೆ. ಸಾವಿರಾರು ವರ್ಷಗಳಿಂದ ಪತಿತರ, ದೀನರ, ಶೂದ್ರರ ಗೋಳನ್ನು ಕಂಡು ಸಹನೆ ಮೀರಿದ ರುದ್ರನೇ ಅಂಬೇಡ್ಕರ್ ರೂಪವನ್ನು ಧರಿಸಿ ಬಂದಂತೆ ಕಾಣುತ್ತದೆ. ವಿಭೂತಿತ್ವ ಯಾವಾಗ, ಯಾವ ರೂಪದಲ್ಲಿ, ಎಲ್ಲಿ ಅವತರಿಸುತ್ತದೆಂಬುದು ಋತಚಿಚ್ಛಕ್ತಿಗೆ ಮಾತ್ರ ಗೊತ್ತು. ಅದು ಮೀನಾಗಿ, ಹಾವಾಗಿ ಯಾವ ರೂಪದಲ್ಲಾದರೂ ಬರಬಹುದು; ಕೊಟ್ಟಿಗೆಯಲ್ಲಿಯೋ, ಸೆರೆಮನೆಯಲ್ಲಿಯೋ, ಅರಮನೆಯಲ್ಲಿಯೋ ಹುಟ್ಟಬಹುದು. ಅವರು ಬೋಧಿಸತ್ವನ ಅವತಾರವೆಂದೇ ನಂಬುವವರೂ ಉಂಟು. ಸಹಸ್ರ ಸಹಸ್ರ ವರ್ಷಗಳ ದಲಿತರ ಗೋಳಿನ ಕರೆಮೊರೆಯ ಆಶೋತ್ತರಗಳ ಫಲವಾಗಿಯೆಂಬಂತೆ ಭೀಮರಾವ್ ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಅಂಬಾವಾಡೆ ಗ್ರಾಮದಲ್ಲಿ ಮಹರ್ ಜಾತಿಯ (ಮಹರ್ ಪದದಿಂದ ಮಹಾರಾಷ್ಟ್ರ ಬಂದಿರಬಹುದಲ್ಲವೇ?) ರಾಮ್‌ಜೀ ಸತ್ಪಾಲ ಮತ್ತು ಭೀಮಾಬಾಯಿಯರ ಮಗನಾಗಿ ಹುಟ್ಟುತ್ತಾರೆ. ಅವರ ಅಜ್ಜ, ತಂದೆ ಮಾತ್ರವಲ್ಲ, ತಾಯಿಯ ತಂದೆಯೂ ಸೈನ್ಯದಲ್ಲಿದ್ದವರು. ಸೈನಿಕಶಾಲೆಯಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ರಾಮಜೀ ಕಬೀರ್ ಪಂಥಾನುಯಾಯಿಗಳು; ಭಾರತೀಯ ಮಹಾಕಾವ್ಯಗಳನ್ನು ಓದಿಕೊಂಡವರು. ಅವರು ಶ್ರೀಮಂತರಲ್ಲದಿದ್ದರೂ. ನಿರ್ಗತಿಕರಲ್ಲ; ವ್ಯಾಸಂಗದ ಮಹಿಮೆಯಿಂದ ಸುಸಂಸ್ಕೃತರೆನಿಸಿಕೊಂಡಿದ್ದವರು. ಅಂದಮೇಲೆ ಅಂಬೇಡ್ಕರರ ಉತ್ತಮ ಬದುಕಿಗೆ ಅನುಕೂಲಕರವಾದ ಪರಿಸರ ದೊರೆಕಿತೆಂದೇ ಹೇಳಬಹುದು.

ಆದರೂ ಹಿಂದೂ ಸಮಾಜದಲ್ಲಿ ಹುಟ್ಟಿದ ಅಸ್ಪೃಶ್ಯರ ಬಾಳು ಎಷ್ಟು ಹೀನಾಯವಾದದ್ದು, ನಾಯಿಬಾಳಿಗಿಂತ ಕಡೆಯಾದದ್ದು, ಅವರನುಭವಿಸಬೇಕಾದ ಕಷ್ಟಕ್ಲೇಶ ಅವಮಾನಗಳ ಘೋರ ಕ್ರೌರ್ಯ ಎಷ್ಟು ಅಸಹನೀಯವಾದದ್ದು ಎಂಬುದನ್ನು ಕೇಳಿದಾಗ ಎಂಥ ಕಲ್ಲೆದೆಯವನ ಕಣ್ಣೂ ಒದ್ದೆಯಾಗಬೇಕು. ಅಂಬೇಡ್ಕರ್ ಎಲ್ಲ ಅವಮಾನಗಳನ್ನು ಸಹಿಸಿಕೊಂಡು, ಬಿ.ಎ. ಪದವಿ ಪಡೆದು, ಅಮೆರಿಕ, ಇಂಗ್ಲೆಂಡ್, ಜರ್ಮನಿಗಳ ಮುಕ್ತ ವಾತಾವರಣದಲ್ಲಿ ಅರ್ಥಶಾಸ್ತ್ರ, ರಾಜಕೀಯಶಾಸ್ತ್ರ ಮತ್ತು ಕಾನೂನುಶಾಸ್ತ್ರದಲ್ಲಿ ಅಪಾರ ವಿದ್ವತ್ತನ್ನೂ ಡಾಕ್ಟರೇಟ್ ಪದವಿಯನ್ನೂ ಸಂಪಾದಿಸಿಕೊಂಡು ವಿದ್ಯಾನುಭವ ಶ್ರೀಮಂತರಾಗಿ ಸ್ವದೇಶಕ್ಕೆ ವಾಪಸಾಗುತ್ತಾರೆ. ಅಂಥವರಿಗೂ ಅಸ್ಪೃಶ್ಯತೆಯ ಕಳಂಕ ತಟ್ಟದಿರಲಿಲ್ಲ. ಅವರಿಗಾಗ ಉದ್ಯೋಗಾಧಿಕಾರ ಧನಗಳ ವ್ಯಾಮೋಹವಿರಲಿಲ್ಲ; ಧಾರ್ಮಿಕ ರಾಜಕೀಯಾರ್ಥಿಕ ಸಾಮಾಜಿಕಾದಿ ಸರ್ವದಾಸ್ಯಗಳಿಂದ ಅಸ್ಪೃಶ್ಯರನ್ನು ಪಾರುಮಾಡಬೇಕೆಂಬ ಛಲ ಅವರು ಬದುಕನ್ನೆಲ್ಲ ಆವರಿಸಿಕೊಳ್ಳುತ್ತದೆ; ಆ

ಭಗವತ್ಕಾರ್ಯಕ್ಕಾಗಿ ಅವರು ತಮ್ಮನ್ನು ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುತ್ತಾರೆ. ಮಹಾಚಿಂತಕರಾದ ಅವರು ಲೇಖನ ಭಾಷಣಗಳ ಮೂಲಕ ಸಾರ್ವಜನಿಕ ಸಭೆಗಳಲ್ಲಿ ಸಂಸದ್ ಶಾಸನಸಭೆಗಳಲ್ಲಿ ದುಂಡುಮೇಜಿನ ಪರಿಷತ್ತಿನಲ್ಲಿ ಅಸ್ಪೃಶ್ಯ ಸಮಸ್ಯೆಗಳನ್ನು ಹಕ್ಕುಗಳನ್ನು ಪ್ರತಿಪಾದಿಸುತ್ತಾರೆ. ಸಂಪ್ರದಾಯ ಜಡ ಪಂಡಿತರ ವಿರೋಧದಿಂದಾಗಿ ಅವರ ಶಾಲಾಕಾಲೇಜುಗಳಲ್ಲಿ ಸಂಸ್ಕೃತ ಕಲಿಯಲಾಗದಿದ್ದರೂ, ಖಾಸಗಿಯಾಗಿ ಓದಿಕೊಂಡು ಆ ಭಾಷೆಯಲ್ಲಿಯೂ ಪರಿಣತರಾಗಿ ಹಿಂದೂಧರ್ಮದ ಪವಿತ್ರ ಗ್ರಂಥಗಳ ಬೂಟಾಟಿಕೆಯನ್ನು ರಾಮಕೃಷ್ಣಾದಿ ದೇವತೆಗಳ ಭಂಡತನವನ್ನು ಹೊರಗೆಡುಹುತ್ತಾರೆ, ಇಂಡಿಯಾ ದೇಶದ ಇತಿಹಾಸವನ್ನೇ ಜಾಲಾಡುತ್ತಾರೆ. ಆರ್ಯ ದ್ರಾವಿಡ ನಾಗಾಜನಾಂಗಗಳ ಮೇಲೆ ಹೊಸ ಬೆಳಕು ಚೆಲ್ಲುತ್ತಾರೆ. ಜನಾಂಗೀಯವಾಗಿ ಅಸ್ಪೃಶ್ಯರು ಮತ್ತು ಶೂದ್ರರು ಈ ಜನಾಂಗಗಳ ಪರಿಧಿಯಲ್ಲಿ ಬರುತ್ತಾರೆಂದು ಸಾಧಿಸುತ್ತಾರೆ. ಅವರ ಮೂಲಗಳನ್ನು ಶೋಧಿಸುವ ಮೂಲಕ ಅವರು ಮಹಾಸಂಶೋಧಕರಾಗಿ ವಿರಾಜಿಸುತ್ತಾರೆ. ಇಂಡಿಯಾದೇಶದ ಇತಿಹಾಸವನ್ನು ಮೂಲಚೂಲವಾಗಿ ಬಲ್ಲ, ಹಿಂದೂಧರ್ಮದ ನಾಯಕರ ಹೀನ ಸ್ವಭಾವವನ್ನರಿತಿದ್ದ ಅವರು ರಾಜಕೀಯ ಸ್ವಾತಂತ್ರ್ಯಕ್ಕಿಂತ ಮುಂಚಿತವಾಗಿ ಅಸ್ಪೃಶ್ಯರ ಸ್ಥಾನಮಾನ ಭವಿಷ್ಯ ನಿರ್ಧಾರವಾಗಬೇಕೆಂದು ಪಟ್ಟು ಹಿಡಿದದ್ದರಲ್ಲಿ ತಪ್ಪಿಲ್ಲ. ದಾಸ್ಯವಿರುವ ತನಕ ಪ್ರಜಾಸತ್ತಾತ್ಮಕ ಪ್ರಭುತ್ವ ಸಾಧ್ಯವಿಲ್ಲ, ಶೂದ್ರಾತಿಶೂದ್ರರು ಪ್ರತ್ಯೇಕವಾಗಿರುವತನಕ ದೇಶಕ್ಕೆ ಲಕ್ವ ಹೊಡೆದಂತಾಗುತ್ತದೆಯೆಂದವರು ವೈಜ್ಞಾನಿಕವಾಗಿ ವಿವರಿಸುತ್ತಾರೆ.

ಹಿಂದೂ ನಾಯಕತ್ವ ಅವರ ಮಾತಿಗೆ ಗೌರವ ಕೊಡದಿದ್ದಾಗ ಅವರು ಮತಾಂತರದ ಕಡೆಗೆ ವಾಲುತ್ತಾರೆ. ಆದರವರು ಕ್ರಿಸ್ತ ಅಥವಾ ಇಸ್ಲಾಂ ಮತಕ್ಕೆ ಸೇರದೆ ಹಿಂದೂಧರ್ಮಕ್ಕೆ ಹಾಗೂ ಇಂಡಿಯಾದೇಶಕ್ಕೆ ಮಹದುಪಕಾರ ಮಾಡಿದರೆಂದೇ ಹೇಳಬೇಕು. ೧೯೫೬ರಲ್ಲಿ ಬೌದ್ಧಮತಕ್ಕೆ ಸೇರಿದ್ದರಿಂದ ತಾವು ಪ್ರಾಚೀನ ಶ್ರೇಷ್ಠತಮ ಸಂಸ್ಕೃತಿಯ ವಾರಸುದಾರರೆಂದು, ಬುದ್ಧನ ಅನುಯಾಯಿಗಳೆಂದು ಹೇಳಿಕೊಳ್ಳುವ, ಆ ಮೂಲಕ ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳುವ ಅವಕಾಶವೊದಗುತ್ತದೆಂಬುದು ಅನೇಕ ದಲಿತ ನಾಯಕರ ಶ್ರದ್ಧಾಪೂರ್ವಕವಾದ ನಂಬಿಕೆ . ಯಾವ ಧರ್ಮ ಜನರ ಅಖಂಡತೆಯನ್ನೂ ಏಕತೆಯನ್ನೂ ಸಾಧಿಸುತ್ತದೆಯೋ ಅದೇ ನಿಜವಾದದ್ದು. ಆ ದೃಷ್ಟಿಯಿಂದ ಹಿಂದೂ ಧರ್ಮ ಹೊಲಸು, ಬೌದ್ಧ ಧರ್ಮ ಸೊಗಸು ಎಂದು ಅಂಬೇಡ್ಕರ್ ಸ್ಪಷ್ಟಪಡಿಸಿದ್ದಾರೆ. 'ಅಸಮಾನತೆ, ತಾರತಮ್ಯ ಹಾಗೂ ದಾಸ್ಯವನ್ನು ಪುರಸ್ಕರಿಸುವ ವ್ಯವಸ್ಥೆ ಧರ್ಮವಲ್ಲ. ಯಾವ ಧರ್ಮ ನಮ್ಮನ್ನು ಗೌರವದಿಂದ ಮಾನವೀಯವಾಗಿ ಕಾಣುವುದಿಲ್ಲವೊ ಅಂಥ ಧರ್ಮದ ಆವಶ್ಯಕತೆ ನಮಗಿಲ್ಲ. ಹಿಂದೂ ಧರ್ಮ ದುಷ್ಟ ಶಕ್ತಿ ಕೇಂದ್ರ. ದೀನದಲಿತರನ್ನು ನಿಕೃಷ್ಟರನ್ನು ಮೇಲೆತ್ತದ ಜನ ಅಮಾನವೀಯರು; ಅವರು ದೇಶಭಕ್ತರಂತು ಅಲ್ಲ. ಅಸ್ಪೃಶ್ಯರು ಹಿಂದೂಗಳೆಂಬುದಕ್ಕೆ ಶಾಸ್ತ್ರಾಧಾರವಿಲ್ಲ. ಶೂದ್ರರಿಗೂ ಅಸ್ಪೃಶ್ಯರಿಗೂ ಇರುವ ವ್ಯತ್ಯಾಸಗಳನ್ನು ಸ್ಪಷ್ಟಪಡಿಸಿಲ್ಲ. ಗುಲಾಮಗಿರಿಗೂ ಅಸ್ಪೃಶ್ಯತೆಗೂ ಭಾರಿ ವ್ಯತ್ಯಾಸವಿದೆ. ಒಂದು ತಾತ್ಕಾಲಿಕ, ಮತ್ತೊಂದು ಶಾಶ್ವತ. ಅಸ್ಪೃಶ್ಯತೆಯಿಲ್ಲದ ಹಿಂದೂ ಧರ್ಮವನ್ನು ಊಹಿಸಿಕೊಳ್ಳಲಾಗದು'- ಅಂಬೇಡ್ಕರರ ಈ ವಿಚಾರ ಧಾರೆಯನ್ನು ಮತಿಯುಳ್ಳವರೆಲ್ಲರೂ ಒಪ್ಪಿಕೊಳ್ಳಬೇಕು.

ಬಹುಮುಖ ಪ್ರತಿಭಾಸಂಪನ್ನರೂ, ಬಹುಶ್ರುತರೂ ಆದ ಅಂಬೇಡ್ಕರ ವಿಚಾರಧಾರೆ ಜೀವನದ ರಾಜ್ಯ ರಾಷ್ಟ್ರಗಳ ಸಕಲ ವ್ಯವಹಾರಗಳನ್ನೊಳಗೊಳ್ಳುತ್ತದೆ. ಕಮ್ಯೂನಿಸಂ ಬಗ್ಗೆ ಅವರ ಮನಸ್ಸು ಡೋಲಾಯಮಾನವಾಗಿದೆ. ಅದರಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಸಾಮಾಜಿಕ ಸುಧಾರಣೆಗೆ ಅವಕಾಶವಿರುವುದಾದರೆ ಬೇಡವೆನ್ನುವುದಿಲ್ಲ. ಅವರ ಒಲವೆಲ್ಲ ನಿರ್ಜಾತೀಯ ರಾಜ್ಯ ಅಥವಾ ಸರ್ಕಾರೀ ಸಮಾಜವಾದದ ಕಡೆಗಿದೆ. 'ರಾಜ್ಯ ಸಮಾಜವಾದ ಸಿದ್ಧಾಂತವನ್ನು ಸಂವಿಧಾನದಲ್ಲಿಯೇ ಅಳವಡಿಸಬೇಕು. ದುರ್ಬಲ ವರ್ಗಗಳ ಸಾಮಾಜಿಕಾರ್ಥಿಕ ವ್ಯವಸ್ಥೆಯ ಸುಲಿಗೆಯನ್ನು ತಡೆಯಬೇಕಾದರೆ ಈ ಉಪಾಯ ಅತ್ಯಗತ್ಯ. ಸಂಪನ್ಮೂಲಗಳನ್ನೆಲ್ಲ ರಾಜ್ಯವೇ ನಿರ್ವಹಿಸಬೇಕು. ಭೂಮಿಯ ಒಡೆತನ ಸರ್ಕಾರಕ್ಕಿರಬೇಕು. ಕೈಗಾರಿಕೆಗಳು ರಾಷ್ಟ್ರೀಕರಣಗೊಳ್ಳಬೇಕು. ಸಾಮೂಹಿಕ ಬೇಸಾಯವನ್ನು ಉತ್ತೇಜಿಸಬೇಕು. ಬ್ಯಾಂಕು, ವಿಮಾ ಕಂಪೆನಿಗಳ ಮೇಲೆ ಸರ್ಕಾರದ ಹತೋಟಿಯಿರಬೇಕು. ಜಮೀನ್ದಾರಿ ಪದ್ಧತಿಯನ್ನು ರದ್ದುಗೊಳಿಸಿ, ಹಿಡುವಳಿ ಭೂಮಿಯ ಮಿತಿಯನ್ನು ನಿಷ್ಕರ್ಷಿಸಿ, ಜಮೀನಿಲ್ಲದವರಿಗೆ ಜಮೀನು ಹಂಚಬೇಕು. ರಾಜ್ಯ ಸಮಾಜವಾದದ ರೂಪ ಸ್ವರೂಪ ಲಕ್ಷಣಗಳಿವು. ಈ ಪಟ್ಟಿಗೆ ಮತದೇವಾಲಯಗಳನ್ನೂ ಸೇರಿಸಬಹುದಿತ್ತು. ದಲಿತರಿಗಾಗಿ ಪ್ರತ್ಯೇಕ ಹಳ್ಳಿಗಳನ್ನು ನಿರ್ಮಿಸಬೇಕೆಂಬ ಅವರ ಸಲಹೆ ಏಕತಾಸಾಧನೆಯ ದೃಷ್ಟಿಯಿಂದ ಸಾಧುವಲ್ಲ, ಈ ತನಕ ಅವರನ್ನು ಪ್ರತ್ಯೇಕವಾಗಿಟ್ಟದ್ದೇ ಸಾಕಾಗಿದೆ.

ವ್ಯಕ್ತಿ-ವಾಕ್-ಧಾರ್ಮಿಕ-ಆರ್ಥಿಕ ಸ್ವಾತಂತ್ರ್ಯವನ್ನು ರಕ್ಷಿಸುವುದು ಪ್ರಭುತ್ವದ ಗುರಿ. ಅಂತೆಯೇ ಹಿಂದುಳಿದವರನ್ನು ಮೇಲೆತ್ತಲು ಮಾರ್ಗೋಪಾಯಗಳನ್ನು ರೂಪಿಸಿಕೊಳ್ಳಬೇಕು. ಹೊರಗಿನವರ ಆಕ್ರಮಣದಿಂದ ದೇಶವನ್ನು ಪಾರುಮಾಡಲು ಸದಾ ಎಚ್ಚರಿಕೆ

ಯಿಂದಿರಬೇಕು. ಸಾಮಾಜಿಕ ಪರಿವರ್ತನೆಯ ಕಡೆಗೂ ಅದು ಗಮನ ಹರಿಸಬೇಕು. ಪ್ರಭುತ್ವದ ಧ್ಯೇಯೋದ್ದೇಶಗಳನ್ನವರು ಈ ಮಟ್ಟಿಗೆ ಗುರುತಿಸುತ್ತಾರೆ.

ಅಂಬೇಡ್ಕರರ ಪ್ರಕಾರ ಸಂಸದೀಯ ಪ್ರಜಾಸತ್ತೆ ಮಾತ್ರವೇ ಸದ್ಯಕ್ಕೆ ಸ್ವಾಗತಾರ್ಹವಾದದ್ದು. ಆ ವ್ಯವಸ್ಥೆಯಲ್ಲಿ ಶೋಷಿತರು, ಶೋಷಕರಿರಬಾರದು. ಬಹುಪಕ್ಷಗಳಿಗೆ ಅವಕಾಶವಿದ್ದು, ವಿರೋಧಪಕ್ಷ ಬಲವಾಗಿರಬೇಕು. ಅನುವಂಶೀಯ ಆಳ್ವಿಕೆಗೆ ಸದುವಿರಬಾರದು. ಸಂವಿಧಾನಾತ್ಮಕ ಹಾಗೂ ನೈತಿಕ ಮೌಲ್ಯಗಳ ವಿಕಾಸ ನಿರಂತರವಾಗಿ ಸಾಗಬೇಕು. ಅಲ್ಪಸಂಖ್ಯಾತರಿಗೆ ರಕ್ಷಣೆಯೊದಗಬೇಕು. ಪ್ರಭುತ್ವ ಹಾಗೂ ಶಾಸನಸಭೆಯ ವರ್ತನೆಯ ಬಗ್ಗೆ ಸಾರ್ವಜನಿಕ ಅಭಿಪ್ರಾಯ ರೂಪುಗೊಳ್ಳುವಂತಿರಬೇಕು. ನಾಯಕ ಅಥವಾ ವ್ಯಕ್ತಿ ಪೂಜೆ ಪ್ರಜಾಸತ್ತೆಗೆ ಮಾರಕ. ನಿರಂಕುಶ ಪ್ರಭುತ್ವ ಹತೋಟಿ ಮೀರದಂತೆ ವಿರೋಧಪಕ್ಷ ಸದಾ ಜಾಗೃತವಾಗಿರಬೇಕು. ಇಲ್ಲವಾದರೆ ಪ್ರಜಾಪ್ರಭುತ್ವ ಮುಗ್ಗರಿಸುತ್ತದೆ.

ತಮ್ಮ ಚಿಂತನೆ ಅನುಭವ ಅಭಿಪ್ರಾಯ ಸಂದೇಶ ಸಿದ್ಧಾಂತಗಳನ್ನು ಸಾರ್ವಜನಿಕರಿಗೆ ಮುಟ್ಟಿಸಲೆಂದೇ ಅವರು ಒಂದಲ್ಲ, ನಾಲ್ಕು ಪತ್ರಿಕೆಗಳನ್ನು ಪ್ರಾರಂಭಿಸುತ್ತಾರೆ: 'ಮೂಕನಾಯಕ' 'ಬಹಿಷ್ಕೃತ ಭಾರತ', 'ಜನತಾ' ಮತ್ತು 'ಪ್ರಬುದ್ಧ ಭಾರತ'. 'ಪತ್ರಿಕೆಯಿಲ್ಲದ ನಾಯಕನ ದನಿ ರೆಕ್ಕೆಯಿಲ್ಲದ ಪಕ್ಷಿಯಂತೆಯೇ ಸರಿ' ಎಂಬ ಅವರ ಮಾತು ಸ್ವಾನುಭವ ಸತ್ಯ. ತಮಗೆ ಬೇಕಾದವರನ್ನು ಗಗನಕ್ಕೇರಿಸಿ, ಬೇಡವಾದವರನ್ನು ಪಾತಾಳಕ್ಕೆ ತುಳಿಯುವ, ತಮಗಾಗದ ಭಾಷಣಕಾರರ ಅಥವಾ ವಿಚಾರವಂತರ ಮೌಲಿಕ ವಿಷಯಗಳನ್ನು ಮುದ್ರಿಸದೆ, ತಮಗೆ ಬೇಕಾದ ದಾರಿಹೋಕರ ನೀತಿಬಾಹಿರರ ನುಡಿಮುತ್ತುಗಳನ್ನು ಪ್ರಶಸ್ತ ಜಾಗದಲ್ಲಿ ಪ್ರಕಟಿಸುವ ಪಕ್ಷಪಾತ ದೃಷ್ಟಿಯ, ದುರಾಗ್ರಹ ಪೂರ್ವಗ್ರಹ ಬುದ್ಧಿಯ ಪತ್ರಿಕೆಗಳು ಈ ದೇಶದಲ್ಲಿರುವಾಗ, ಅಂಬೇಡ್ಕರರಂಥ ದಲಿತ ನಾಯಕರಿಗೆ ತಮ್ಮವೇ ಆದ ಪತ್ರಿಕೆಗಳ ಅಗತ್ಯ ಇದ್ದೇ ಇತ್ತು. ಗಾಂಧೀಜಿಗೂ ಅಷ್ಟೇ. ಚೌದರ್ ಕೆರೆಯ ಜಲಸ್ಪರ್ಶ, ದೇವಾಲಯ ಪ್ರವೇಶ, ಮನುಸ್ಮೃತಿ ದಹನ ಇವೇ ಮೊದಲಾದ ಅಹಿಂಸಾತ್ಮಕ ಮಾರ್ಗಗಳ ಮೂಲಕ ತಮ್ಮ ಪ್ರತಿಭಟನೆಯನ್ನು ಅಭಿವ್ಯಕ್ತಗೊಳಿಸುವುದಲ್ಲದೆ ತಮ್ಮ ಸಂದೇಶವನ್ನು ಜನರಲ್ಲಿ ಹರಡುತ್ತಾರೆ. ಇಂಥದೇ ಉದ್ದೇಶಕ್ಕಾಗಿ ಅವರು ೧೯೪೫ರಲ್ಲಿ ಜನತಾ ಶಿಕ್ಷಣ ಸೊಸೈಟಿ (People's Education Society) ಯನ್ನು ಸ್ಥಾಪಿಸುತ್ತಾರೆ. ಔರಂಗಾಬಾದ್‌ನಲ್ಲಿದ್ದ ಮಿಲಿಂದ ಕಾಲೇಜಿಗೆ ಹೋದಾಗಲೆಲ್ಲ ಅವರು ಹೋಟಲಿಗೆ ಹೋಗದೆ, ಕಾಲೇಜಿನ ಕಿರುಕೋಣೆಯಲ್ಲುಳಿಯುತ್ತಿದ್ದರೆನ್ನುವ ಸಂಗತಿ ನಮ್ಮ ರಾಜಕೀಯ ನಾಯಕರಿಗೆ ಗೊತ್ತಾಗಬೇಕು.

ರಾಕ್ಷಸೀ ಪ್ರವೃತ್ತಿಯ ಭಾರತೀಯ ಸ್ಮೃತಿಕಾರರು ಮಹಿಳೆಯರನ್ನು ಶೂದ್ರಾತಿಶೂದ್ರರಿಗಿಂತ ಅತ್ತತ್ತಲಾಗಿ ಕಡೆಗಣಿಸಿ, ಅವರ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕಸಿದುಕೊಂಡಿರಲಾಗಿ ದೇಶದ ಪ್ರಗತಿ ತುಂಬ ಕುಂಠಿತಗೊಂಡಿತೆಂಬುದು ಅವರ ಸ್ಪಷ್ಟಾಭಿಪ್ರಾಯ. ೧೯೫೧ರಲ್ಲಿ ಅವರು ಪಾರ್ಲಿಮೆಂಟಿನಲ್ಲಿ ಮಂಡಿಸಿದ ಮಸೂದೆಯನ್ನು ನೆಹರೂ ಮೊದಲಾದ ಪ್ರಭೃತಿಗಳು ವಿರೋಧಿಸಿದ್ದು ದುರ್ದೈವ. ಅತ್ಯಂತ ಪ್ರಗತಿಪರವಾದ ಆ ಮಸೂದೆ ಕಾನೂನಾಗಿದ್ದರೆ, ಭಾರತೀಯ ಮಹಿಳೆಯಿಂದು ಜಾಗತಿಕ ಮಹಿಳಾಲೋಕದ ಅಗ್ರಪಂಕ್ತಿಯಲ್ಲಿರುತ್ತಿದ್ದಳು. ಅಂಬೇಡ್ಕರರಿಗೆ ದಲಿತ ಶೋಷಣೆಯ ಸಮಸ್ಯೆ ಎಷ್ಟು ಮುಖ್ಯವಾಗಿತ್ತೋ, ಅವರ ಹೃದಯಕ್ಕೆ ಹತ್ತಿರವಾಗಿತ್ತೋ, ಮಹಿಳಾಶೋಷಣೆಯ ಸಮಸ್ಯೆಯೂ ಅಷ್ಟೇ ಮುಖ್ಯವಾಗಿತ್ತು. ಆದ್ದರಿಂದಲೇ ಅವರು ಆ ಮಸೂದೆ ತಿರಸ್ಕೃತವಾದಾಗ ತಮ್ಮ ಸಚಿವ ಪದವಿಗೆ ರಾಜೀನಾಮೆ ನೀಡಿ, ಮತ್ತೆ ಹಿಂದಕ್ಕೆ ತಿರುಗಿ ನೋಡದೆ ಮುಂಬಯಿಗೆ ಹೊರಟುಹೋಗುತ್ತಾರೆ.

ಅಭ್ಯುದಯದ ಶಿಖರವೇರಿದ ಶೂದ್ರಾತಿಶೂದ್ರರು ನವಬ್ರಾಹ್ಮಣಿಕೆಯಿಂದ ಮೆರೆಯುತ್ತಿದ್ದುದನ್ನು, ಜಾತಿಗಳ ಪ್ರಾಬಲ್ಯದಿಂದ ಇಂಡಿಯಾ ಒಡೆದ ಮನೆಯಾಗಿದ್ದುದನ್ನು ನೆನೆಸಿಕೊಂಡು ಅವರು ಆಗಾಗ್ಗೆ ವ್ಯಸನಾಕ್ರಾಂತರಾಗುತ್ತಾರೆ. ಬೌದ್ಧ ದೀಕ್ಷೆ ಸ್ವೀಕರಿಸಿದ ಸಂದರ್ಭದಲ್ಲವರು ಹೊಸ ಪಕ್ಷವನ್ನು ಸ್ಥಾಪಿಸಲು ನಿರ್ಧರಿಸುತ್ತಾರೆ. 'ಸೀಟುಗಳ ಮೀಸಲಾತಿಯಿಂದ ಏನೂ ಪ್ರಯೋಜನವಿಲ್ಲ. ದೇಶದ ಐಕ್ಯತೆ ಮುಖ್ಯ. ಆ ಪಕ್ಷವು ಉದಾರವಾದ, ವಿಚಾರವಾದ, ಮಾನವತಾವಾದ, ಸಮಾಜವಾದ, ಅನುಭವೈಕವಾದ (Empiricism), ಪ್ರೇಮ ಮತ್ತು ಸ್ನೇಹದ ಹೊಸ ಅರ್ಥವನ್ನು ಹೊಂದಿದೆ' ಎಂದವರು ಘೋಷಿಸುತ್ತಾರೆ.[೧] ಅವರು ಇನ್ನೂ ಹತ್ತು ವರ್ಷ ಬದುಕಿದ್ದರೆ ಇಂಡಿಯಾದ ರಾಜಕೀಯ ಪರಿಸ್ಥಿತಿ ಬದಲಾಗುತ್ತಿತ್ತೆಂದು ಅವರ ಮನಃಪರಿವರ್ತನೆಯಿಂದ ವ್ಯಕ್ತವಾಗುತ್ತದೆ. ಅವರು ಕೊನೆ

೧. ಡಾ. ಅಂಬೇಡ್ಕರ್ ಅವರ ರಾಜಕೀಯ ವಿಚಾರಧಾರೆ, ಡಾ। ವಿ. ಲಕ್ಷ್ಮೀನಾರಾಯಣ (ಶತಮಾನದ ಅಂಬೇಡ್ಕರ್, ಸಂಪಾದಕ ಮಾ. ಭರಣಿ, ಈ ಗ್ರಂಥದಲ್ಲಿ ಪ್ರಕಟಗೊಂಡಿದೆ) ಪು. ೨೨೧

ಕೊನೆಗೆ ಪಾಕಿಸ್ತಾನದ ರಚನೆಯನ್ನು ಅನುಮೋದಿಸುತ್ತಾರೆ. ಆದರೆ ಸಿ. ರಾಜಗೋಪಾಲಾಚಾರಿಯವರಂತೆ ಅವರು ಎರಡೂ ದೇಶಗಳ ನಡುವೆ ಜನ ವಿನಿಮಯ ಮಾಡಿಕೊಳ್ಳಬೇಕೆಂದು ಸೂಚಿಸುತ್ತಾರೆ.

ದೀಕ್ಷಾ ಪೂರ್ವದ ಅಂಬೇಡ್ಕರರ ನಾಲಗೆ ತುಂಬಾ ಹರಿತ; ಅದು ತಪ್ಪಲ್ಲವೆಂದು ಮಾನವತಾವಾದಿಗಳೆಲ್ಲರೂ ಬಲ್ಲರು. ಅಸ್ಪೃಶ್ಯತೆಯ ಪ್ರಖರತೆಗೆ ಬ್ರಾಹ್ಮಣರು ಮತ್ತು ಮಠಾಧೀಶರು ಕಾರಣರೆಂದವರು ಝಾಡಿಸುತ್ತಾರೆ. ರಾಜರು ಮತ್ತು ಅಧಿಕಾರಶಾಹಿ ಅವರನ್ನು ಬೆಂಬಲಿಸಿದರೆನ್ನುವುದೂ ಅವರಿಗೆ ಗೊತ್ತು. ಅದೇನೇ ಇರಲಿ, ಅವರು ಶೂದ್ರಾತಿಶೂದ್ರರಿಗೆ, ಮುಖ್ಯವಾಗಿ ಅಸ್ಪೃಶ್ಯರಿಗೆ ವರವಾಗಿ ಉದಯಿಸಿದರೆನ್ನುವುದಂತು ಸತ್ಯ. ಅವರು ಹುಟ್ಟದಿದ್ದರೆ ಅಸ್ಪೃಶ್ಯತೆಗೆ ಮೋಕ್ಷ ದೊರಕುತ್ತಿತ್ತೆ ಎನ್ನುವುದು ಸಂದೇಹದ ಸಂಗತಿ. ಅವರೊಬ್ಬರು ಸ್ವಯಂಭೂ; ಸ್ವಶಕ್ತಿಯಿಂದಲೇ ದಲಿತರಿಗೆ ಧ್ರುವತಾರೆಯಾದವರು. ಅವರ ರಾಜಕೀಯ ವಿಚಾರಧಾರೆಯನ್ನು ಪ್ರತಿಬಿಂಬಿಸುವ ಕೆಲವು ಸೂತ್ರಗಳನ್ನು ಅವರ ಗ್ರಂಥಗಳಿಂದಾಯ್ದು ಇಲ್ಲಿ ಜೋಡಿಸಲಾಗಿದೆ.

- ಇಂಡಿಯಾದಲ್ಲಿ ಮುಸ್ಲಿಮ್ ಕ್ರಿಶ್ಚಿಯನ್ನರಿಗಿರುವ ಗೌರವ ದಲಿತರಿಗಿಲ್ಲ.
- ಚಲನಶೀಲತೆಯನ್ನು ಕಳೆದುಕೊಂಡ ಧರ್ಮ ತ್ಯಾಜ್ಯ.
- ಹಿಂದೂಗಳ ಗುಲಾಮರಾಗಿರುವ ತನಕ ದಲಿತರಿಗೆ ಭವಿಷ್ಯವಿಲ್ಲ, ದೇಶಕ್ಕೆ ಕ್ಷೇಮವಿಲ್ಲ .
- ಪಾಂಡಿತ್ಯ ಬ್ರಾಹ್ಮಣರ ಸ್ವತ್ತಾಗಿದ್ದರೂ, ಅವರಲ್ಲಿ ವ್ಯಾಸ ವಾಲ್ಮೀಕಿಯರಾಗಲಿ, ವಾಲ್ಟೇರ್ ಆಗಲಿ ಹುಟ್ಟಲಿಲ್ಲ.
- ರಾಜಕೀಯ ಸ್ಥಿರತೆಗೆ ಸಾಮಾಜಿಕಾರ್ಥಿಕ ಸ್ಥಿರತೆ ಅನಿವಾರ್ಯ.
- ಜನಸಂಖ್ಯಾಧಾರದ ಮೇಲೆ ಎಲ್ಲ ಕಡೆಯೂ ಎಲ್ಲ ವರ್ಗದವರಿಗೂ ಪ್ರಾತಿನಿಧ್ಯ ಸಿಗಬೇಕು.
- ಸ್ವಾತಂತ್ರ್ಯ, ಸಮಾನತೆ, ಸೋದರತ್ವಗಳ ನಕಾರಾತ್ಮಕ ರೂಪವೇ ಬ್ರಾಹ್ಮಣ.
- ಎಲ್ಲ ಬಗೆಯ ಪ್ರಗತಿಯ ಬಾಗಿಲುಗಳ ಬೀಗಗಳನ್ನು ತೆರೆಯುವ ಮಾಸ್ಟರ್ ಕೀಲಿಯೇ ರಾಜಕೀಯಾಧಿಕಾರ.
- ಹಿಂದೂಗಳು ನಡೆಸುವ ಯಾವ ಚಳವಳಿಯಲ್ಲಿಯೂ ಅಸ್ಪೃಶ್ಯರು ಪಾತ್ರವಹಿಸಬಾರದು.
- ಶ್ರೀಸಾಮಾನ್ಯರಿಗೆ ಬಿಳಿಯರಷ್ಟೇ ಬ್ರಾಹ್ಮಣರೂ ಪರಕೀಯರು.
- ಪ್ರಜಾಪ್ರಭುತ್ವದ ಯಶಸ್ಸಿಗೆ ಶೋಷಣೆ ರಹಿತ ಸಮಾಜ, ಬಲಿಷ್ಠ ವಿರೋಧ ಪಕ್ಷ, ಸಂವಿಧಾನವನ್ನು ರಕ್ಷಿಸುವ ನ್ಯಾಯಾಂಗ, ನಿಷ್ಪಕ್ಷಪಾತ ಸಾರ್ವಜನಿಕಾಭಿಪ್ರಾಯ, ಸನ್ನಡತೆ, ರಾಷ್ಟ್ರಾಭಿಮಾನ ಅತ್ಯಗತ್ಯ.
- ಆಡಳಿತ ಮತ್ತು ವಿರೋಧ ಪಕ್ಷಗಳೆರಡೂ ಪ್ರಾಮಾಣಿಕತೆಯಿಂದ, ನಿಸ್ವಾರ್ಥ ಬುದ್ಧಿಯಿಂದ ಕೆಲಸ ಮಾಡಿದಾಗ ಮಾತ್ರ ಪ್ರಜಾಪ್ರಭುತ್ವ ಸುಭದ್ರ ಹಾಗೂ ಸಾರ್ಥಕ.
- ಕಾಣದ ವಿಧಿಯನ್ನು ನಂಬದೆ ಕಾಣುವ ನಿಮ್ಮ ಶಕ್ತಿಯನ್ನು ನಂಬಿಕೊಳ್ಳಿ.
- ಜ್ಞಾನ, ಸ್ವಾಭಿಮಾನ, ಶೀಲ ಇವೇ ನನ್ನ ದೇವರು.
- ಸಜ್ಜನ ಪ್ರಭುವಾಗಲಾರ, ಪ್ರಭು ಸಜ್ಜನನಾಗಲಾರ.
- ಶೂದ್ರರ ಮತ್ತು ಅಸ್ಪೃಶ್ಯರ ಮೆದುಳನ್ನು ಬ್ರಾಹ್ಮಣನೂ, ಅವರ ಶರೀರವನ್ನು ಬನಿಯಾಗಳೂ ಕ್ಷತ್ರಿಯರೂ ಬಂಧಿಸಿಟ್ಟಿದ್ದಾರೆ.
- ದಾಸ್ಯದ ಸಂಕೋಲೆಗಳನ್ನು ಕಳಚಲು ವೈಚಾರಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳಿ.
- ಸ್ವಂತ ಬುದ್ಧಿಯಲ್ಲಿ ವಿಶ್ವಾಸವಿರಲಿ, ಸ್ವಂತ ಶ್ರಮದಿಂದ ಬದುಕಿ.
- ಬ್ರಾಹ್ಮಣರು ಮತ್ತು ಬನಿಯಾಗಳು ಯಾವ ಕಾಲದಲ್ಲೂ ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಿಲ್ಲ. ಆದರೆ ಸ್ವಾತಂತ್ರ್ಯದ ಲಾಭವನ್ನು ಮಾತ್ರ ಕಬಳಿಸುತ್ತಾರೆ.
- ನಾಳೆ ನೀವು (ದಲಿತರು) ಇಂಡಿಯಾದ ಪ್ರಭುಗಳಾಗುತ್ತೀರೆಂಬುದನ್ನು ಎಲ್ಲರಿಗೂ ಕಾಣಿಸುವ ಹಾಗೆ ಗೋಡೆಗಳ ಮೇಲೆ ಬರೆಯಿರಿ.
- ಯಾವ ವ್ಯಕ್ತಿಯೂ ಆತ್ಮಗೌರವವನ್ನು ಕಳೆದುಕೊಂಡು ಮತ್ತೊಬ್ಬನಿಗೆ ಸಲಾಮು ಹೊಡೆಯಬೇಕಾಗಿಲ್ಲ; ಯಾವ ದೇಶವೂ ಸ್ವಾತಂತ್ರ್ಯವನ್ನು ತೆತ್ತು ಮತ್ತೊಂದು ದೇಶದ ಸ್ನೇಹವನ್ನು ಸಂಪಾದಿಸಬೇಕಾಗಿಲ್ಲ.

- ಜಾತೀಯತೆಗೆ ಚಾತುರ್ವರ್ಣ್ಯ ಕಲ್ಪನೆ, ಅಸ್ಪೃಶ್ಯತೆಗೆ ಜಾತೀಯತೆ ಮೂಲ; ಜಾತಿ ವಿನಾಶವಾಗದೆ ದೇಶಕ್ಕೆ ಭವಿಷ್ಯವಿಲ್ಲ.
- ವಿಚಾರವಿನಿಮಯದ ಮೂಲಕ ಕಾರ್ಯ ನಿರ್ವಹಿಸುವ ಸರ್ಕಾರವೇ ಪ್ರಜಾಪ್ರಭುತ್ವ.
- ಸ್ವಂತ ಬುದ್ಧಿಯಲ್ಲಿ ನಂಬಿಕೆಯಿಡಿ, ಸ್ವಂತ ಪರಿಶ್ರಮದಿಂದ ಬದುಕಿ.
- ದಾಸ್ಯದ ಸಂಕೋಲೆಗಳನ್ನು ಕಳಚಿಕೊಳ್ಳಲು ವೈಚಾರಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳಿ.
- ಐತಿಹಾಸಿಕ ಪ್ರಜ್ಞೆಯುಳ್ಳವರು ಮಾತ್ರ ಇತಿಹಾಸವನ್ನು ಸೃಷ್ಟಿಸಬಲ್ಲರು.
- ಬೌದ್ಧ, ಬ್ರಾಹ್ಮಣ ಧರ್ಮಗಳ ನಡುವಣ ಸಂಘರ್ಷವೇ ಇಂಡಿಯಾ ದೇಶದ ಚರಿತ್ರೆ.
- ಏನನ್ನೂ ಸಾಧಿಸದೆ ಬಾಳುವುದಕ್ಕಿಂತ, ತೊಟ್ಟಿಲಿನಲ್ಲಿ ಸಾಯುವುದೇ ಮೇಲು.
- ದೇವರು ಇದ್ದಿದ್ದರೆ ನಮ್ಮ ಗುಲಾಮಗಿರಿಯನ್ನು ತೊಡೆಯುತ್ತಿರಲಿಲ್ಲವೇ?
- ಅಸ್ಪೃಶ್ಯತೆಯ ಮೂಲ ಜಾತಿವ್ಯವಸ್ಥೆಯಲ್ಲಿದೆ. ಜಾತಿವ್ಯವಸ್ಥೆಯ ಮೂಲ ವರ್ಣಾಶ್ರಮ ವ್ಯವಸ್ಥೆಯಲ್ಲಿದೆ, ವರ್ಣಾಶ್ರಮ ವ್ಯವಸ್ಥೆಯ ಮೂಲ ಬ್ರಾಹ್ಮಣ ಧರ್ಮದಲ್ಲಿದೆ.
- ಸಮಾನತೆ, ಸ್ವಾತಂತ್ರ್ಯ, ಸೋದರತ್ವ ಮತ್ತು ನ್ಯಾಯ ಪ್ರಜಾಸತ್ತೆಯ ನಾಲ್ಕು ಸ್ತಂಭಗಳು.
- ಪ್ರಜಾಪ್ರಭುತ್ವದಲ್ಲಿ ಆಡಳಿತ ವಿರೋಧ ಪಕ್ಷಗಳೆರಡಕ್ಕೂ ಸಮಾನ ಗೌರವವಿರಬೇಕು.

### ಭಾರತೀಯತ್ವದ ಉಳಿವಿಗೆ ದಕ್ಷಿಣ ಭಾರತ ಕಾರಣ

ಭಾರತವೆಂದರೆ ಉತ್ತರ ಭಾರತ, ಚರಿತ್ರೆಯೆಂದರೆ ಉತ್ತರ ಭಾರತದ ಚರಿತ್ರೆ, ನಾಯಕರೆಂದರೆ ಉತ್ತರ ಭಾರತದ ನಾಯಕರು, ಸಂಸ್ಕೃತಿಯೆಂದರೆ ಉತ್ತರ ಭಾರತದ ಸಂಸ್ಕೃತಿ; ವೇದೋಪನಿಷತ್ತು ರಾಮಾಯಣ ಮಹಾಭಾರತಗಳು ಅವತಾರ ಪುರುಷರು ಹುಟ್ಟಿದ್ದೇ ಅಲ್ಲಿ; ಗಂಗಾ ಯಮುನಾ ನದಿಗಳಿರುವುದೇ ಅಲ್ಲಿ ಎಂದು ಇತಿಹಾಸದ ಗಂಧವೇ ಗೊತ್ತಿಲ್ಲದ, ಪೂರ್ವಗ್ರಹ ಪಕ್ಷಪಾತ ಪೀಡಿತರಾದ ಕೆಲವು ವಿದ್ವಾಂಸರು ಹೇಳುವುದುಂಟು. ದಕ್ಷಿಣ ಭಾರತದ ಗಂಗ, ಚೋಳ, ಚಾಲುಕ್ಯ, ಹೊಯ್ಸಳ, ರಾಷ್ಟ್ರಕೂಟ, ವಿಜಯನಗರದ ಅರಸರು ತಮ್ಮ ಶೌರ್ಯ ಪ್ರತಾಪಗಳಿಂದ, ವಿದ್ಯಾ ಕಲಾಸಂಸ್ಕೃತಿ ಪಕ್ಷಪಾತದಿಂದ, ಆಡಳಿತ ಕೌಶಲದಿಂದ, ವ್ಯಾಪಾರವಾಣಿಜ್ಯಾದಿ ಸಂಪದುತ್ಪಾದಕ ವಹಿವಾಟುಗಳಿಂದ ಇಡೀ ಜಗತ್ತನ್ನೇ ವಿಸ್ಮಯಗೊಳಿಸಿದ್ದರೆಂಬುದು ಚರಿತ್ರೆಯಾಗಿದೆ. ಚಾಲುಕ್ಯ ಚಕ್ರವರ್ತಿ ಎರಡನೆಯ ಪುಲಿಕೇಶಿ ಉತ್ತರದ ಹರ್ಷವರ್ಧನನನ್ನು ನರ್ಮದಾನದಿಯಿಂದತ್ತತ್ತ ಸೋಲಿಸಿ ಓಡಿಸಿದ್ದು ರೋಮಾಂಚಕರ ಸಂಗತಿ. ಕನ್ನಡ ದೊರೆಗಳ ಸಂತತಿಯವರು ಗುಜರಾತ್, ಬಂಗಾಳ ಮತ್ತು ನೇಪಾಳಗಳಲ್ಲಿ ಜಯ ಡಿಂಡಿಮವನ್ನು ಬಾರಿಸಿದ್ದರು. ೧೫-೧೬ ನೆಯ ಶತಮಾನಗಳಲ್ಲಿ ವಿಜಯನಗರ ಸಾಮ್ರಾಜ್ಯದ ಕೀರ್ತಿ ಜಗತ್ತಿನಲ್ಲೆಲ್ಲ ಹರಡಿತ್ತು. ಸಂಗೀತ ಶಿಲ್ಪಕಲೆಗಳಲ್ಲಂತು ಆ ಕಾಲದಲ್ಲಿ ದಕ್ಷಿಣ ಭಾರತಕ್ಕೆಣೆಯಾದ ರಾಷ್ಟ್ರವಿರಲಿಲ್ಲ.

ಅದೆಲ್ಲ ಒತ್ತಟ್ಟಿಗಿರಲಿ, ಭಾರತೀಯ ಸಂಸ್ಕೃತಿ ಮತ್ತು ಹಿಂದೂ ಧರ್ಮವನ್ನು ರಕ್ಷಿಸಿದ್ದೇ ದಕ್ಷಿಣ ಭಾರತ. ದಕ್ಷಿಣಾಪಥದ ಆಕ್ರಮಣದಿಂದ ಮಹಮ್ಮದೀಯರ ಧಾಳಿಯನ್ನು ತಡೆದದ್ದೇ ವಿಜಯನಗರ. ರಾಮಕೃಷ್ಣ ವಾಮನರು ಮತ್ಸ್ಯ ವರಾಹರು ಇದ್ದರೋ ಇಲ್ಲವೋ ಗೊತ್ತಿಲ್ಲ, ಶಂಕರ ರಾಮಾನುಜ ಮಧ್ವ ಬಸವೇಶ್ವರರು ಇದ್ದುದಂತು ನಿಜ. ಇವರಿಲ್ಲದಿದ್ದರೆ ಹಿಂದೂ ಧರ್ಮವೇ ಇಂಡಿಯಾದಲ್ಲುಳಿಯುತ್ತಿರಲಿಲ್ಲ. ಅವರ ಪ್ರಭಾವ ಪ್ರಭೆ ಉತ್ತರ ಇಂಡಿಯಾದ ಮೂಲೆ ಮೊಡಕುಗಳಲ್ಲಿ ಹರಿದಿದ್ದ ಕತ್ತಲೆಯನ್ನು ಪರಿಹರಿಸುತ್ತದೆ. ಮಿತಾಕ್ಷರಮಾರ್ಗದ ಪ್ರವರ್ತಕ ವಿಜ್ಞಾನೇಶ್ವರ ದಾಕ್ಷಿಣಾತ್ಯ; ಕೌಟಿಲ್ಯನೂ ದಾಕ್ಷಿಣಾತ್ಯನಾಗಿರಬೇಕೆಂಬ ಸಂದೇಹವಿದೆ. ಶ್ರೀರಾಮ ಲಕ್ಷ್ಮಣ ಧರ್ಮರಾಯಾದ್ಯರಿಗೆ ಆಶ್ರಯಕೊಟ್ಟದ್ದು, ಅವರ ಕೀರ್ತಿಯ ಹಬ್ಬುಗೆಗೆ ನಿಮಿತ್ತವಾದದ್ದು ದಕ್ಷಿಣ ಭಾರತ. ಕಿತ್ತೂರು ರಾಣಿ ಚೆನ್ನಮ್ಮ, ಬೆಳವಾಡಿ ಮಲ್ಲಮ್ಮ, ಸಂಗೊಳ್ಳಿರಾಯಣ್ಣ, ಟಿಪ್ಪು ಮೊದಲಾದ ದಕ್ಷಿಣದ ವೀರಾಧಿವೀರರು ಆಂಗ್ಲರಿಗೆ ಮಣ್ಣು ಮುಕ್ಕಿಸಿದ ಕಥೆ ಜಾನಪದ ಕಾವ್ಯಗಳ ವಸ್ತುವೂ ಆಗಿದೆ.

ಉತ್ತರದ ನಾಯಕರಿಗೆ ಸಮಗ್ರೆಯಾಗಿ ದಕ್ಷಿಣದ ನಾಯಕರು ಸ್ವಾತಂತ್ರ್ಯ ಸಮರದಲ್ಲಿ ಹೋರಾಟ ನಡೆಸುತ್ತಾರೆ. ಅನೇಕ ಕವಿಗಳು ರಣಕಹಳೆಯೂದುತ್ತಾರೆ. ದಾಸಪ್ಪರಂಥವರು ಗಾಂಧೀಜಿಯ ಮೆಚ್ಚುಗೆಗೂ ಪಾತ್ರರಾಗುತ್ತಾರೆ. ರಾಜಾಜಿ ಎಂದೇ ಹೆಸರಾದ ಸಿ. ರಾಜ ಗೋಪಾಲಾಚಾರಿಯವರು ಗಾಂಧೀಜಿಗೆ ತೀರ ಹತ್ತಿರದವರಾಗಿ, ಅತ್ಯಂತ ನಿಶಿತಮತಿಯ ಚಿಂತನಶೀಲ ರಾಷ್ಟ್ರನಾಯಕರೆಂದೇ

ಪ್ರಖ್ಯಾತರಾಗುತ್ತಾರೆ. ಇವರು ಮತ್ತು ಇನ್ನೂ ಅನೇಕರು ಭಾರತೀಯ ರಾಜಕೀಯ ವಿಚಾರಧಾರೆಗೆ ವಿಶಿಷ್ಟವೂ ಅಮೂಲ್ಯವೂ ಆದ ಕಾಣಿಕೆಯನ್ನು ನೀಡಿದ್ದಾರೆ. ಕಾಂಗ್ರೆಸ್ಸಿನ ಸಭೆ ಸಮಾರಂಭಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ಅದರ ನೀತಿಯನ್ನು ರೂಪಿಸುವಲ್ಲಿ ರಾಜಾಜಿಯವರ ಪಾತ್ರ ಗಣನೀಯವಾಗಿತ್ತೆಂದೇ ಹೇಳಬಹುದು. ಮುಖ್ಯಮಂತ್ರಿಯಾಗಿ, ರಾಜ್ಯಪಾಲರಾಗಿ ಹಾಗೂ ಕೊಟ್ಟಕೊನೆಯ ಗೌರ್ನರ್ ಜನರಲ್ಲರಾಗಿ ಆಡಳಿತದ ನೀತಿ ರೀತಿ ವಿಧಾನ ಸಂಘಟನೆಗಳಿಗವರು ತಮ್ಮ ಚಿಂತನಾನುಭವಗಳನ್ನು ಧಾರೆಯೆರೆಯುತ್ತಾರೆ. ದೇಶವಿಭಜನೆಯನ್ನೊಪ್ಪಿಕೊಳ್ಳಬೇಕೆಂದು, ಜನ ವಿನಿಮಯವಾಗಬೇಕೆಂದು ಸೂಚಿಸಿದ ಚಾಣಾಕ್ಷರಲ್ಲಿ ಮೊದಲಿಗರವರು. ಮುಖ್ಯಮಂತ್ರಿಯಾಗಿದ್ದಾಗ, ಇಂಜಿನಿಯರಿಂಗ್ ಇಲಾಖೆಯನ್ನು ಪ್ರಥಮ ಸಾರ್ವಜನಿಕ ಶತ್ರುವೆಂದು ಕರೆದದ್ದುಂಟು. ಈಗವರು ಬದುಕಿದ್ದರೆ ಇಡೀ ಸರ್ಕಾರವನ್ನೆ ಪ್ರಪ್ರಥಮ ಸಾರ್ವಜನಿಕ ಶತ್ರುವೆಂದು ಕರೆಯುತ್ತಿದ್ದರೇನೊ? ಚಾಣಾಕ್ಷ ರಾಜಕಾರಣಿಯೆಂದು ಖ್ಯಾತನಾಮರಾದ ಕರ್ನಾಟಕ ವಿಧಾನಸೌಧದ ಶಿಲ್ಪಿ ಕೆ. ಹನುಮಂತಯ್ಯನವರು ಕೇಂದ್ರ ಸರ್ಕಾರ ರಚಿಸಿದ ಆಡಳಿತ ಸುಧಾರಣಾಸಮಿತಿಯ ಅಧ್ಯಕ್ಷರಾಗಿ, ಪರಿಣಾಮಕಾರೀ ಜನಪರ ಆಡಳಿತಕ್ಕೆ ಬೇಕಾದ ಮಾರ್ಗೋಪಾಯಗಳನ್ನು ರಚಿಸಿದ ಮೇಧಾವಿಯೆಂಬುದನ್ನು; ಏಕೀಕರಣವಾದಿಯೆಂಬುದನ್ನು; ಅವರೇ ಮೊದಲು ಬಳ್ಳಾರಿಯನ್ನು ಹಳೆಯ ಮೈಸೂರಿಗೆ ಸೇರಿಸಿಕೊಂಡು ಏಕೀಕೃತ ಕರ್ನಾಟಕಕ್ಕೆ ನಾಂದಿ ಹಾಡಿದರೆಂಬುದನ್ನು; ಕನ್ನಡ ಮತ್ತು ಸಂಸ್ಕೃತಿ ಇಲಾಖೆಯನ್ನು ಸೃಷ್ಟಿಸಿದ ಸಂಸ್ಕೃತಿ ಅಧ್ವರ್ಯುವೆಂಬುದನ್ನು ಮರೆಯಲಾಗದು. ಕೇರಳದ ಸಾಮಾಜಿಕ ಜೀವನದಲ್ಲಿ ಕ್ರಾಂತಿಯನ್ನುಂಟುಮಾಡಿ, ದಲಿತರ ಏಳ್ಗೆಗೆ ದಾರಿ ತೋರಿದ, ಅದ್ವೈತ ಸಿದ್ಧಾಂತವನ್ನು ಕಾರ್ಯಗತಗೊಳಿಸಿದ, ಅಧ್ಯಾತ್ಮಯೋಗಿ ಶ್ರೀ ನಾರಾಯಣ ಗುರುಗಳ ಸಾಧನೆ ಸಿದ್ಧಿಗಳಲ್ಲಿ ಧಾರ್ಮಿಕ ರಾಜಕಾರಣದ ಬೇರುಗಳಿವೆಯೆಂಬುದನ್ನು ಗಮನಿಸಬಹುದು. ಸಂಜೀವರೆಡ್ಡಿ, ನಂಬೂದರಿಪಾದ್ ಅವರು ಸಾಮಾನ್ಯರೇನಲ್ಲ. ದಕ್ಷಿಣದ ಎಲ್ಲ ಜಾಣರಾಜಕಾರಣಿಗಳ ರಾಜಕೀಯ ಚಿಂತನೆಯನ್ನು ದಾಖಲುಗೊಳಿಸುವ ಸಾಹಸಕ್ಕೆ ಕೈಹಾಕದೆ ಕೇವಲ ಪ್ರಾತಿನಿಧಿಕವಾಗಿ ವಿಶಿಷ್ಟರೆಂದು ತೋರಿದ ಮೂವರು ಮೇಧಾವಿಗಳ ರಾಜಕೀಯ ವಿಚಾರಲಹರಿಗಳನ್ನಿಲ್ಲಿ ಸಂಗ್ರಹಿಸಲು ಪ್ರಯತ್ನಿಸಲಾಗಿದೆ.

### ತಮಿಳುನಾಡಿನ ತಂದೆ ಪೆರಿಯಾರರ ಜೀವನ ಸಂದೇಶ

ನವಯುಗದ ಪ್ರವಾದಿಯೆಂದು, ಏಷಿಯಾದ ಸೋಕ್ರಟೀಸನೆಂದು, ನಾಸ್ತಿಕರೆಂದು, ತಮಿಳುನಾಡಿನ ಆಧುನಿಕ ಬುದ್ಧನೆಂದು ಮಹಾ ಸಾಮಾಜಿಕ ಕ್ರಾಂತಿಕಾರರೆಂದು, ತಮಿಳು ಜನಾಂಗದ ಪಿತನೆಂದು ಸುವಿಖ್ಯಾತರಾದ, ಪೆರಿಯಾರರೆಂದೇ ಸರ್ವಜನ ಗೌರವಾನ್ವಿತರಾದ ಇ.ವಿ. ರಾಮಸ್ವಾಮಿ ನಾಯಕರ (೧೮೭೯-೧೯೭೩) ಮೂಲಪುರುಷರು ಕನ್ನಡಿಗರು. ಈರೋಡಿನ ಸಂಪ್ರದಾಯಸ್ಥ ಆಸ್ತಿಕರ ಮನೆಯಲ್ಲಿ ಹುಟ್ಟಿ, ಪುರಾಣಪ್ರವಚನ, ಭಜನೆ, ಹೋಮಧೂಮಗಳ ನಡುವೆ ಬೆಳೆದು, ಕಾಶಿಯಾತ್ರೆಯನ್ನು ಮುಗಿಸಿ, ಸನ್ಯಾಸಿಯಾಗಬೇಕೆಂದು ಯೋಚಿಸಿದ ವ್ಯಕ್ತಿ ದೇವರು, ದಿಂಡರು, ಸ್ವರ್ಗ, ನರಕ, ಪೂಜಾರಿ, ಪುರೋಹಿತರನ್ನು ಹೀಯಾಳಿಸಿ, ಮೌಢ್ಯ ವಿರೋಧಿಯಾಗಿ, ವಿಚಾರವಾದಿಯಾಗಿ, ವೇದ ಪುರಾಣಾಗಮಗಳನ್ನು ನಡುಗಿಸಿ, ಕಲ್ಲು ದೇವರುಗಳ ಮರ್ಯಾದೆಯನ್ನು ತೆಗೆದು, ತಮಿಳರನ್ನು ಜಾಗೃತಗೊಳಿಸಿ, ಸರ್ವಭೇದಗಳನ್ನು ನಿರ್ಮೂಲಗೊಳಿಸಿ, ಏಕತೆಯನ್ನು ಸಾಧಿಸಿದ ಸಾಹಸವಂತ ವೀರಾಗ್ರಣಿಯಾದ. ಹೆಚ್ಚು ವಿದ್ಯಾವಂತರಲ್ಲದಿದ್ದರೂ ಸ್ವೋಪಜ್ಞ ಚಿಂತಕರಾಗಿ, ಲೋಕಾನುಭವ ಸಂಪನ್ನರಾಗಿ, ವ್ಯಾವಹಾರಿಕ ಬುದ್ಧಿ ಕುಶಲರಾಗಿ, ಗ್ರಾಮೀಣ ಶೈಲಿಯ ನಿಷ್ಕಪಟ ವಾಣಿಯಿಂದ ತಮಿಳರ ಮನವನ್ನು ಗೆದ್ದುಕೊಂಡ ಅಯಸ್ಕಾಂತ ವ್ಯಕ್ತಿತ್ವದ ಧೈರ್ಯ ಶ್ರೀಮಂತರವರು. ಶ್ರೀಮಂತರಾದರೂ ವ್ಯಾಪಾರ ಕುಶಲರಾದರೂ ನಾಡು ನುಡಿಗಳ ಸೇವೆಗಾಗಿ ಎಲ್ಲವನ್ನು ತ್ಯಜಿಸಿ ಸ್ವಾತಂತ್ರ್ಯ ಆಂದೋಲನದ ಅಗ್ನಿ ಕುಂಡಕ್ಕೆ ಧುಮುಕಿದ ನಿಷ್ಕಾಮ ಕರ್ಮಿಯವರು. ಕಾಂಗ್ರೆಸ್ ಜನರ ಕಾಪಟ್ಯವನ್ನು, ಕೋಮುವಾರು ಭಾವನೆಯನ್ನು, ದಲಿತ ವಿರೋಧಿ ನೀತಿಯನ್ನು, ಹಿಂದಿ ಪಕ್ಷ ಪಾತವನ್ನು ಕಂಡು, ತಮಿಳುನಾಡಿನಲ್ಲಿ ತಾವೇ ಕಟ್ಟಿದ ಕಾಂಗ್ರೆಸ್ಸಿಗೆ ರಾಜೀನಾಮೆ ನೀಡಿ, ಜಸ್ಟಿಸ್ ಪಾರ್ಟಿಯನ್ನು ಬೆಂಬಲಿಸುತ್ತ, ಔತ್ತರೇಯರ ಪ್ರತಿಷ್ಠಾಹಂಕಾರ ಸಾರ್ವಭೌಮ ಪ್ರವೃತ್ತಿಗೆ ಮದ್ದರೆಯಲು ಪ್ರಾದೇಶಿಕ ಪಕ್ಷಗಳು ಅನಿವಾರ್ಯವೆಂದು ನಿಶ್ಚಯಿಸಿ, ಇಡೀ ದೇಶದಲ್ಲಿಯೇ ಪ್ರಪ್ರಥಮವಾಗಿ 'ದ್ರಾವಿಡ ಕಳಗಂ' ಪ್ರಾದೇಶಿಕ ಪಕ್ಷವನ್ನು ಹುಟ್ಟುಹಾಕಿ ಜಗತ್ತಿಗೆ ತಮ್ಮ ಶಕ್ತಿಯನ್ನು ತೋರಿಸಿದ, ದ್ರಾವಿಡ ಸಂಸ್ಕೃತಿಯ ಅಧ್ವರ್ಯು ಅವರು.

ಜಲಿಯನ್‌ವಾಲಾ ಬಾಗ್‌ನಲ್ಲಿ ನಡೆದ ವಿಕಟ ಕರಾಳ ಘಟನೆಗಳಿಂದ ನೊಂದ ರಾಮಸ್ವಾಮಿ ೧೯೧೯ರಲ್ಲಿ ಕಾಂಗ್ರೆಸ್ಸು ಸೇರುತ್ತಾರೆ; ಖಾದಿಯನ್ನು ಜನಪ್ರಿಯಗೊಳಿಸುವ ಸಲುವಾಗಿ ಮೂಟೆಗಳನ್ನು ಹೆಗಲ ಮೇಲೆ ಹೊತ್ತು, ಊರೂರಿಗೆ ಕೊಂಡೊಯ್ದು ವ್ಯಾಪಾರ ಮಾಡುತ್ತಾರೆ. ಕೊನೆಗೆ ಅಸಹಕಾರ ಚಳವಳಿಯ ಕಾಲದಲ್ಲಿ ಮುನಿಸಿಪಾಲಿಟಿ ಮೊದಲುಗೊಂಡು ಹತ್ತಿಪ್ಪತ್ತು ಸಮಿತಿಗಳ ಅಧ್ಯಕ್ಷ ಅಥವಾ

ಕಾರ್ಯದರ್ಶಿ ಪದವಿಗಳಿಗೆ ರಾಜೀನಾಮೆ ನೀಡಿ ಹೊರಬರುತ್ತಾರೆ. ಪಾನನಿರೋಧ ಚಳವಳಿಯಲ್ಲಿ ಭಾಗವಹಿಸಿ ಹಲವು ಸಲ ಕಾರಾಗೃಹ ವಾಸವನ್ನನುಭವಿಸುತ್ತಾರೆ. ತಮ್ಮ ತೋಟದ ಐನೂರು ತೆಂಗಿನ ಮರಗಳನ್ನವರು ಕತ್ತರಿಸಿದ್ದು ಮಾತ್ರ ಇಂದಿನವರಿಗೆ ಅವಿವೇಕವೆನಿಸುತ್ತದೆ. ಸರ್ಕಾರಿ ಹುದ್ದೆಗಳಲ್ಲಿ, ಶಿಕ್ಷಣ ಸಂಸ್ಥೆಗಳಲ್ಲಿ, ವಿದ್ಯಾರ್ಥಿನಿಲಯಗಳಲ್ಲಿ, ಸಂಘಸಂಸ್ಥೆಗಳಲ್ಲಿ ಜನಸಂಖ್ಯೆಗನುಗುಣವಾಗಿ ಕೋಮುಪ್ರಾತಿನಿಧ್ಯ ವಿರಬೇಕೆಂಬ ಅವರ ಸಲಹೆಗೆ ರಾಜಾಜಿ ಮೊದಲಾದವರಿಂದ ಬೆಂಬಲ ದೊರೆಯಲಿಲ್ಲವಾಗಿ ಅವರು ಕಾಂಗ್ರೆಸ್ಸಿನಿಂದ ಹೊರಬರುತ್ತಾರೆ.

ಸೃಜನಾತ್ಮಕ ಕ್ರಿಯಾಶೀಲ ಸ್ವೋಪಜ್ಞ ವ್ಯಕ್ತಿಯ ಜಾಯಮಾನಕ್ಕೆ ಅವರಿವರ ಅಡಿಮೆ ಒಗ್ಗದು. ಅವರೇ ಒಂದು ಶಕ್ತಿಯಾಗಿ, ಸಂಸ್ಥೆಯಾಗಿ, ಪಕ್ಷವಾಗಿ, ದೇಶಸೇವೆಗೆ ಟೊಂಕ ಕಟ್ಟಿ, ದೃಢವಾಗಿ ನಿಲ್ಲಬಲ್ಲರು. ಪಂಚಸೂತ್ರಗಳ ಆಧಾರದ ಮೇಲೆ ಅವರು ದ್ರಾವಿಡ ಕಳಗಂ ಕಟ್ಟಿ, ಆರ್ಯ ಪೂರ್ವ ಭಾರತೀಯ ಸಂಸ್ಕೃತಿಯನ್ನು ಜನಮನದಲ್ಲಿ ಬೇರೂರಿಸುತ್ತಾರೆ. ವೈಚಾರಿಕತೆ ಅವರ ಬದುಕಿನ ಜೀವಾತು ವಾಗುತ್ತದೆ. ನಾಲ್ಕು ಗೋಡೆಗಳ ನಡುವಣ ಶಾಲಾ ಕಾಲೇಜುಗಳಲ್ಲವರು ಓದಲಿಲ್ಲ; ಜಗತ್ತೇ ಅವರ ಶಾಲೆ ಹಾಗೂ ಪುಸ್ತಕ. ಉತ್ತಮರೆಂದು ಹೇಳಿಕೊಳ್ಳುತ್ತಿದ್ದ ಜನ ಕನಿಷ್ಠರ ಮೇಲೆ ಎಸಗುತ್ತಿದ್ದ ರಾಕ್ಷಸೀಯ ದಬ್ಬಾಳಿಕೆ ಅವರ ವೈಚಾರಿಕ ಚಿಂತನೆಯನ್ನು ಪ್ರಚೋದಿಸುತ್ತದೆ. ವಿದ್ಯೆಯಿಂದ ವಂಚಿತರಾದ ಕನಿಷ್ಠರು ವೈಚಾರಿಕತೆಗೂ ಪರಕೀಯರಾಗುತ್ತಾರೆ. ಆದ್ದರಿಂದವರು ಸಮಾಜದಲ್ಲಿ ಜೀತಗಾರರಾಗಿ ಬದುಕನ್ನು ನೂಕಬೇಕಾಗಿದೆ. ದಿನದಿನವೂ ತಮ್ಮ ಕಣ್ಮುಂದಿನ ನಾಯಿಬಾಳನ್ನು ಕಂಡು ಕನಿಕರಗೊಂಡು, ಅವರಿಗೇ ನಾದರೂ ಗತಿಕಾಣಿಸುವ ದೃಷ್ಟಿಯಿಂದ ಸಮಾಜಸೇವೆಗೆ ಧುಮುಕುತ್ತಾರೆ. ಅನುಭವ ಸಿದ್ಧವಾದ, ಬುದ್ಧಿವಿವೇಕಗಳಿಂದ ಲಬ್ಧವಾದ ವಿದ್ಯೆಯೇ ನಿಜವಾದ ಜ್ಞಾನ, ಅವಜ್ಞೆ ಅವಹೇಳನಗಳಿಗೆ ಗುರಿಯಾದ ಜನ ವಿವೇಕವಂತರಾದಾಗ ಶೋಷಣೆ ನಿಲ್ಲುತ್ತದಲ್ಲದೆ, ಉತ್ತಮರೊಡನೆ ಹೆಗಲೆಣೆಯಾಗಿ ಬಾಳಬಹುದೆಂದವರು ಎಚ್ಚರಿಕೆ ನೀಡುತ್ತಾರೆ. ವೈಚಾರಿಕತೆಯ ಅಗತ್ಯವನ್ನು ಕುರಿತು ಅವರು ಹರಿಸುವ ಆಲೋಚನಾಧಾರೆಯಿದು: ಸಪ್ತ ಸ್ವರ್ಗಗಳನ್ನು ಸಪ್ತನರಕಗಳನ್ನು ಕಂಡುಹಿಡಿದ ಮನೀಷಿಗಳಿರುವಾಗ, ಹಿಮಾಲಯದ ಎತ್ತರವನ್ನಳೆಯಲು ಹೊರಗಿನವರೆ ಬರಬೇಕೆ? ಬೇರೆ ದೇಶಗಳಲ್ಲಿ ಜ್ಞಾನಕ್ಕೆ ವೈಚಾರಿಕತೆಗೆ ಬೆಲೆ ಇದ್ದರೆ, ಈ ದೇಶದಲ್ಲಿ ಧರ್ಮ ದೇವರುಗಳಿಗೆ ಸಂಬಂಧಿಸಿದ ಅರ್ಥವಿಲ್ಲದ ವಿಧಿ ಆಚರಣೆಗಳಿಗೆ ಮಾತ್ರ ಬೆಲೆಯುಂಟು. ಬುದ್ಧಿಮತ್ತೆಯಲ್ಲಿ ಇಂಗ್ಲೆಂಡ್ ಅಮೆರಿಕಾ ಮಕ್ಕಳಿಗೂ ನಮ್ಮ ಮಕ್ಕಳಿಗೂ ನಡುವೆ ಇರುವ ಅಜಗಜಾಂತರಕ್ಕೆ ಕಾರಣವೇನು? ನಮ್ಮ ಮಕ್ಕಳು ಕಲ್ಲನ್ನೇ ದೇವರೆಂದು ಪೂಜಿಸುತ್ತಾರೆ; ಆ ಮಕ್ಕಳು ವೈಜ್ಞಾನಿಕ ಪರಿಶ್ರಮದಲ್ಲಿ ಬೆಳೆಯುತ್ತಾರೆ. ವಿದ್ಯಾವಕಾಶವಿಲ್ಲದ್ದರಿಂದ ಬಹುಜನರ ಬುದ್ಧಿ ಮುರುಟಿ ಹೋಗಲಾಗಿ ಈ ದೇಶದಲ್ಲಿ ಜ್ಞಾನವಿಕಾಸ ಸ್ಥಗಿತಗೊಳ್ಳುತ್ತದೆ. ಬುದ್ಧಿಯ, ವಿಚಾರದ ಒರೆಯಲ್ಲಿ ಯಾವುದು ಗೆಲ್ಲಲಾರದೊ ಅದನ್ನು ರೂಢಮೂಲವಾಗಿ ತ್ಯಜಿಸಬೇಕು. ಎಂಥ ದೊಡ್ಡವರ ಮಾತಾಗಲಿ, ಪರೀಕ್ಷಿಸದೆ ಒಪ್ಪಿಕೊಳ್ಳಬಾರದು. ಹಣಕ್ಕಿಂತ, ಆಸ್ತಿಗಿಂತ, ಜ್ಞಾನ ಸಂಪಾದನೆಗೆ ಮಹತ್ವ ನೀಡಬೇಕು. ವಿವೇಕದಿಂದೊಡಗೂಡಿದ ಜ್ಞಾನ ಮಾತ್ರ ಮಾನವನ ದಾರಿದೀಪವಾಗಬೇಕು. ಜ್ಞಾನ ಸಂಪತ್ತೇ ದೇಶದ ಅಕ್ಷಯ ಸಂಪತ್ತು. ಇವು ರಾಮಸ್ವಾಮಿ ನಾಯಕರು ಕಾರ್ಯಗತಗೊಳಿಸಬೇಕೆಂದು ಕಳಗಂನ ಮುಂದಿಟ್ಟ ಷರತ್ತುಗಳು.

ಮಾನವನ ಉದ್ಧಾರಕ್ಕೆ ಬೌದ್ಧಿಕ ಸಾಮರ್ಥ್ಯದಷ್ಟೇ ಮುಖ್ಯವಾದದ್ದು ಸ್ವಾಭಿಮಾನ. ನಾಯಕರು ಸ್ವಾಭಿಮಾನದ ಹೆಸರಿನಲ್ಲಿಯೇ ಆಂದೋಲನವನ್ನು ಪ್ರಾರಂಭಿಸುತ್ತಾರೆ. ಪ್ರಾಯಶಃ ಅಂಥ ಚಳವಳಿಯ ಕಲ್ಪನೆ ಜಗತ್ತಿನ ಯಾವ ಭಾಗದಲ್ಲಿಯೂ ಇದ್ದಂತಿಲ್ಲ. ಇದು ನಾಯಕರ ವೈಶಿಷ್ಟ್ಯ, ಸ್ವಾಭಿಮಾನವೊಂದಿದ್ದರೆ ಆತ್ಮಸ್ಥೈರ್ಯ, ಆತ್ಮ ಪ್ರತ್ಯಯ, ಆತ್ಮೋಲ್ಲಾಸ, ಮತ್ತು ಬುದ್ಧಿ ಮತ್ತೆ ತಾವಾಗಿಯೇ ಪ್ರಾಪ್ತ ವಾಗುತ್ತವೆಂಬುದು ಅವರ ವಿಶ್ವಾಸ ಹಾಗೂ ಸ್ವಂತ ಅನುಭವ. ಸ್ವಾಭಿಮಾನದಿಂದ ಜನರ ಕುರಿತನ ತೊಲಗಿ ಸಿಂಹಸದೃಶ ವ್ಯಕ್ತಿತ್ವ ಸಾಕಾರಗೊಳ್ಳುತ್ತದೆಂಬುದು ಅವರ ದಿಟ್ಟನಿಲುವು. ಮೇಲ್‌ಜಾತಿ ಕೀಳ್ಜಾತಿಗಳ ಕಲ್ಪನೆಯಿಂದಾಗಿ ಬ್ರಾಹ್ಮಣೇತರ ಜಾತಿಗಳ ಸಬಲರೂ ದುರ್ಬಲರಾಗಿದ್ದಾರೆ. ದೇವಾಲಯಗಳು, ಮತೀಯಾಚರಣೆಗಳು ಮತ್ತು ಪುರೋಹಿತಶಾಹಿ ಬಹುಜನರನ್ನು ಹಾಗೂ ದೇಶವನ್ನು ನಿರ್ವೀರ್ಯಗೊಳಿಸಿದೆ. ಸಮಾನತೆಗಾಗಿ ಸಮಾನಾವಕಾಶಗಳಿಗಾಗಿ ಪ್ರತಿಯೊಬ್ಬ ವ್ಯಕ್ತಿಯೂ ಹೋರಾಟ ನಡೆಸಬೇಕು. ಸರ್ಕಾರ ಸರ್ವರಿಗೂ ಸಮಾನಾವಕಾಶ ಕಲ್ಪಿಸದಿದ್ದಲ್ಲಿ, ಸ್ವಾತಂತ್ರ್ಯ ಬಂದರೂ ವ್ಯರ್ಥ. ಜಾತೀಯತೆ ಅಸ್ಪೃಶ್ಯತೆ ಹಾಗೂ ಚಾತುರ್ವರ್ಣ್ಯ ವಿನಾಶ ಈ ಆಂದೋಲನದ ಪ್ರಧಾನೋದ್ದೇಶ. ಅಸ್ಪೃಶ್ಯತೆ ಮಾನವನ ನಾಗರಿಕತೆಯ ಮುಖಕ್ಕೆಸೆದ ರಾಡಿ. ಕೆಲವರನ್ನು ಮೇಲೆತ್ತುವ, ಹಲವರನ್ನು ತುಳಿಯುವ ಮತ ಧರ್ಮವಲ್ಲ, ಪಾಪಕರ್ಮ. ಕೋತಿ, ನಾಯಿ, ಹಂದಿ, ಬೆಕ್ಕು ಮೊದಲಾದ ಪ್ರಾಣಿವರ್ಗಗಳಲ್ಲಿ ಚಾತುರ್ವರ್ಣ್ಯ ಪದ್ಧತಿಯುಂಟೆ ಎಂದವರು ಪ್ರಶ್ನಿಸುತ್ತಾರೆ. ಆತ್ಮಗೌರವದಿಂದ ಬದುಕಬೇಕಾದ ಮನುಷ್ಯನಲ್ಲಿ ವಿಸ್ಮಯ ಪ್ರಶ್ನೆ ಸಾಮರ್ಥ್ಯ ಮತ್ತು ಚಿಂತನ ಪ್ರವೃತ್ತಿಗಳಿರಬೇಕು. ಇದು ಅವರು ಬೋಧಿಸಿದ ಎರಡನೆಯ ಸೂತ್ರ.

ಪೆರಿಯಾರರು ಮಲೇಷಿಯಾ, ರಷ್ಯಾ, ಇಂಗ್ಲೆಂಡ್ ಮೊದಲಾದ ಯುರೋಪೀಯ ದೇಶಗಳಿಗೆ ಹೋಗಿಬಂದನಂತರ ಅವರ ಚಿಂತನೆ ಸಮಾಜವಾದದ ಕಡೆಗೆ ಸೆಳೆಯುತ್ತದೆ. ಅದನ್ನು ಕಾರ್ಯಗತಗೊಳಿಸುವ ಸಲುವಾಗಿ, ಕಾರ್ಯಕ್ರಮವನ್ನವರು ರೂಪಿಸುತ್ತಾರೆ. ಜಮೀನ್ದಾರರ ಮತ್ತು ಲೇವಾದೇವಿಗಾರರ ಸಂಕೋಲೆಯಿಂದ ಭೂಹೀನ ಕೃಷಿಕಾರ್ಮಿಕರನ್ನು ಪಾರುಮಾಡಬೇಕು; ರೈತರ ಅನುಕೂಲಕ್ಕಾಗಿ ಸಹಕಾರ ಸಂಘ ಮತ್ತು ಬ್ಯಾಂಕುಗಳನ್ನು ಸ್ಥಾಪಿಸಬೇಕು; ಅಂಚೆ ರೈಲು ಸೇವೆಗಳಂತೆ ಜನೋಪಯೋಗಿ ಸಕಲ ಸೇವೆಗಳೂ ಸರ್ಕಾರೀಕರಣಗೊಳ್ಳಬೇಕು; ಪ್ರಾಥಮಿಕ ಶಿಕ್ಷಣ ಎಲ್ಲ ಮಕ್ಕಳಿಗೂ ಕಡ್ಡಾಯವಾಗಬೇಕು; ಸಂಪೂರ್ಣ ಪಾನನಿಷೇಧ ಜಾರಿಗೆ ಬರಬೇಕು; ಜಾತೀಯತೆ ಅಸ್ಪೃಶ್ಯತೆ ಅಪರಾಧವೆಂದು ಕಾನೂನು ರಚಿಸಬೇಕು; ಶ್ರೀಮಂತ ತೆರಿಗೆಗಳ್ಳರನ್ನು ಶಿಕ್ಷಿಸಬೇಕು; ಬಡತನವನ್ನು ತೊಲಗಿಸಲು ಸರ್ಕಾರ ಹಾಗೂ ಶ್ರೀಮಂತರು ಶ್ರಮ ವಹಿಸಬೇಕು; ದೇವಾಲಯಗಳ ಆಸ್ತಿಪಾಸ್ತಿಗಳನ್ನು ಪ್ರಜಾಕ್ಷೇಮ ಯೋಜನೆಗಳಿಗಾಗಿ ಮುಟ್ಟುಗೋಲು ಹಾಕಿಕೊಳ್ಳಬೇಕು; ಸಾಮಾಜಿಕ ಕ್ಷೇಮವೇ ಸರ್ಕಾರದ ಎಲ್ಲ ಚಟುವಟಿಕೆಗಳ ಗುರಿಯಾಗಿರಬೇಕು; ದುಡಿಮೆಗಾರರ ಕ್ಷೇಮವನ್ನು ಕಡೆಗಣಿಸಿದ ವಿದ್ಯಾವಂತರು, ಶ್ರೀಮಂತರು ಮತ್ತು ಅಧಿಕಾರಿಗಳು ಭೂಮಿಯ ಮೇಲೆ ಬದುಕಕೂಡದೆಂದು ಸ್ಪಷ್ಟಪಡಿಸಬೇಕು- ಇಷ್ಟೊಂದು ಖಡಾಖಂಡಿತವಾಗಿ ಗರ್ಜಿಸಬಲ್ಲ ಧೈರ್ಯಸ್ಥೈರ್ಯ ಪೆರಿಯಾರರಿಗಲ್ಲದೆ ಬೇರೆಯವರಿಗೆ ದುರ್ಲಭ.

ಜಾತಿವಿನಾಶ ಹಾಗೂ ಪುರೋಹಿತಶಾಹಿ ಅವರ ಕಾರ್ಯಕ್ರಮದ ಪಟ್ಟಿಯಲ್ಲಿ ಅಗ್ರಸ್ಥಾನವನ್ನು ಪಡೆಯುತ್ತದೆ. ಸ್ವಾರ್ಥಕ್ಕಾಗಿ, ಸ್ವಜನಕ್ಷೇಮಕ್ಕಾಗಿ ರಾಕ್ಷಸ ಪ್ರವೃತ್ತಿಯ ಕುತ್ಸಿತ ಬುದ್ಧಿಯ ದೇಶಪ್ರೇಮವಿಲ್ಲದ ಕುಯುಕ್ತಿಯ ಜನ, ಶ್ರಮವಿಲ್ಲದೆ ಹೊಟ್ಟೆ ಬೆಳೆಸಿಕೊಳ್ಳುವ ಸುಖಲೋಲುಪರು ಜಾತಿಗಳನ್ನು ನಿರ್ಮಿಸಿದರೆಂಬುದು ಪೆರಿಯಾರರ ನಿಶ್ಚಿತಾಭಿಪ್ರಾಯ. ಜಾತೀಯತೆಯನ್ನು ಮೂಲೋತ್ಪಾಟನ ಮಾಡಲಾರದ ಸಂವಿಧಾನ ಕಾನೂನುಗಳಿಂದ, ಸ್ವಾತಂತ್ರ್ಯದಿಂದ, ಸರ್ಕಾರದಿಂದ, ಧರ್ಮ ದೇವಾಲಯಗಳಿಂದ, ಧರ್ಮಗ್ರಂಥಗಳಿಂದ, ಮಸೀದಿ ಮಠ ಮೌಲ್ವಿ ಸನ್ಯಾಸಿಗಳಿಂದ, ಪುರೋಹಿತರಿಂದ ಏನಾಗಬೇಕು? ಜಾತೀಯತೆಯ ಪುರೋಹಿತಶಾಹಿಯ ಆಸರೆಯಲ್ಲಿ ಪಕ್ಷಗಳು ಬೆಳೆಯುತ್ತಿವೆ. ನಾಯಕರು ವಿಜೃಂಭಿಸುತ್ತಿದ್ದಾರೆಂಬುದೂ ಅವರಿಗೆ ಗೊತ್ತು. ಶೂದ್ರಾತಿಶೂದ್ರರನ್ನು ಸೃಷ್ಟಿಸಿದ ಪವಿತ್ರ ಗ್ರಂಥಗಳನ್ನು ಸುಡಬಾರದೇಕೆ? ಜಾತಿ ಎನ್ನುವ ಪದ ಸಂಸ್ಕೃತದ್ದೇ ಹೊರತು, ತಮಿಳಿನಲ್ಲಿ ಅದಕ್ಕೆ ಸಂವಾದಿಯಾದ ಪದವಿಲ್ಲವೆಂದವರು ಹೇಳುತ್ತಾರೆ. ಜಾತೀಯತೆ ಮತ್ತು ಅಸ್ಪೃಶ್ಯತೆಗಳ ವಿಷಯದಲ್ಲಿ ಬಸವಣ್ಣನವರು ಇಷ್ಟೇ ಕಠಿಣವಾಗಿ ವ್ಯವಹರಿಸುತ್ತಾರೆಂಬುದನ್ನು ನೆನೆಯಬಹುದು.

ಶೂದ್ರಾತಿಶೂದ್ರರಷ್ಟೇ ಕೀಳ್ಮೆಗೆ ಪಾತ್ರವಾದ ಮತ್ತೊಂದು ವರ್ಗವೆಂದರೆ ಮಹಿಳಾ ವರ್ಗ. ಸಮಾಜದಲ್ಲಿ ಪುರುಷನಷ್ಟೇ ಪ್ರಧಾನ ಸ್ಥಾನಮಾನ ಸ್ತ್ರೀಗಿರಬೇಕು; ಅವಳಿಗೂ ಶಿಕ್ಷಣ ನೀಡಬೇಕು; ಅವಳಿಗೂ ಆಸ್ತಿಯಲ್ಲಿ ಹಕ್ಕು ಇರಬೇಕು ಎಂದು ಪೆರಿಯಾರ್ ಹೋದ ಕಡೆಯಲ್ಲೆಲ್ಲ ಬಿರುಸಾಗಿ ಪ್ರಚಾರ ಮಾಡುತ್ತಾರೆ. ಭಾರತೀಯ ಸ್ತ್ರೀ ಅಸ್ಪೃಶ್ಯರಿಗಿಂತಲೂ ಕ್ರೂರತರವಾದ ಸಂಕಟಗಳಿಗೊಳಗಾಗಿದ್ದಾಳೆ; ಮಹಿಳೆ ಸಂಪಾದನೆಯ ಮಾರ್ಗವನ್ನು ಕಂಡುಕೊಂಡಾಗ, ಗಂಡ ಅವಳನ್ನು ದಾಸಿಯಂತೆ ಕಾಣುವುದಿಲ್ಲ; ತಾಳಿ ದಾಸ್ಯದ ಸಂಕೇತ; ಯಾವ ವಿಷಯದಲ್ಲಿಯೂ ತಾನು ಗಂಡನಿಗಿಂತ ಕೀಳಲ್ಲವೆಂಬುದನ್ನು ಹೆಂಗಸು ಮಾಡಿ ತೋರಿಸಬೇಕು; ನೀತಿ ಬಾಹಿರನಾದ ಗಂಡನನ್ನು ಸದ್ಗೃಹಿಣಿಯಾದವಳು ದಾರಿಗೆ ತರುವ ಉಪಾಯವನ್ನು ಕಂಡುಕೊಳ್ಳಬೇಕು; ಹಿಂದಿನಿಂದ ಪುರುಷ ಸ್ತ್ರೀಯನ್ನು ಪೂಜಿಸುವುದಾಗಿ ಬಾಯಲ್ಲಿ ಹೇಳುತ್ತ ವಂಚನೆಯ ಜಾಲದಲ್ಲಿ ಕಟ್ಟಿಹಾಕುತ್ತಾನೆ; ವಿಧವಾ ವಿವಾಹಕ್ಕೆ, ಕೂಡಾವಳಿಗೆ, ಅಂತರ್ಜಾತೀಯ ವಿವಾಹಗಳಿಗೆ ಅನಿರ್ಬಂಧಿತ ಅವಕಾಶವಿರಬೇಕು; ಬಾಲ್ಯ ವಿವಾಹವನ್ನು ಸಂಪೂರ್ಣವಾಗಿ ನಿಷೇಧಿಸತಕ್ಕದ್ದು; ಸ್ತ್ರೀಯರನ್ನು ಹೀನಾಯವಾಗಿ ಕಾಣುವವರೆಲ್ಲರೂ ಅನಾಗರಿಕರು, ಬರ್ಬರರು; ಗಂಡು ಹೆಣ್ಣುಗಳ ಸಾಮರಸ್ಯದಿಂದ, ಪರಸ್ಪರ ಸಹಕಾರದಿಂದ ಮಾತ್ರ ಕೌಟುಂಬಿಕ ಶಾಂತಿ ಮತ್ತು ದೇಶಾಭ್ಯುದಯ ಸಾಧ್ಯವೆಂದವರು ಉಗ್ಗಡಿಸುತ್ತ, ಸ್ವಾಭಿಮಾನಾಂದೋಳನದ ಅಂಗವಾಗಿ ಸ್ತ್ರೀವಿಮೋಚನಾ ಚಳವಳಿಯನ್ನು ಸಹ ಸಂಘಟಿಸುತ್ತಾರೆ.

ಪೆರಿಯಾರರ ಈ ಸೂತ್ರಗಳಲ್ಲಿ ದೂರದೃಷ್ಟಿಯಿದೆ, ದೇಶಕ್ಷೇಮ ಕಾತರತೆಯನ್ನೊಳಗೊಂಡ ದೇಶಾಭಿಮಾನವಿದೆ, ಪ್ರವಾದಿಯ ಭವಿಷ್ಯವಾಣಿಯಿದೆ. ಆ ಸೂತ್ರಗಳನ್ನು ಕಾರ್ಯಗತಗೊಳಿಸದಿದ್ದರೆ ದೇಶದಲ್ಲಿ ಅಶಾಂತಿ ಹೆಚ್ಚುತ್ತದೆ, ಅರಾಜಕತೆಗೆ ದಾರಿಯಾಗುತ್ತದೆ, ಅಂತರ್ಯುದ್ಧ ಸಂಭವಿಸುತ್ತದೆ. ಸ್ವಾತಂತ್ರ್ಯ ಬಂದು ಐವತ್ತು ಮೂರು ವರ್ಷಗಳಾದರೂ (೨೦೦೦) ಜಾತೀಯತೆಯನ್ನು ನಿರ್ಮೂಲ ಮಾಡಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪ್ರಾಮಾಣಿಕವಾಗಿ ಏನೊಂದು ಕಾರ್ಯಕ್ರಮವನ್ನೂ ಕೈಗೊಂಡಿಲ್ಲ. ಸ್ತ್ರೀ ಸಬಲೀಕರಣ ಮಸೂದೆಯನ್ನೊಪ್ಪಿಕೊಳ್ಳಲು ರಾಜಕೀಯ ನಾಯಕರು ಮೀನಮೇಷ ಎಣಿಸುತ್ತಿದ್ದಾರೆ. ನಾಯಕರು ಸಭೆ, ಸಮಾರಂಭಗಳಲ್ಲಿ ಜೋರಾಗಿ

ನಾಲಗೆಯಿರಿಯುತ್ತಾರೆಯೇ ಹೊರತು, ಕೃಷಿಕರ ಸಮಸ್ಯೆಗಳನ್ನು ಬಗೆ ಹರಿಸುತ್ತಿಲ್ಲ. ಯಾರ ತ್ಯಾಗ ಹೋರಾಟಗಳ ಫಲವಾಗಿ ದ್ರಾವಿಡ ಪಕ್ಷಗಳು ಸರ್ಕಾರ ರಚಿಸಲು ಸಾಧ್ಯವಾಯಿತೋ ಆ ಸರ್ಕಾರಗಳೂ ಅವರ ಸಂದೇಶಗಳನ್ನು ಮರೆತಿರುವುದೇ ದುರ್ದೈವ. 'ವಿಡುದಲೆ ಕುಡಿಯರಸು' ಪತ್ರಿಕೆಗಳ ಮೂಲಕ ಅವರು ತಮ್ಮ ಸಂದೇಶವನ್ನು ಜಗತ್ತಿಗೆ ತಿಳಿಸುತ್ತಾರೆ.

ಚಾತುರ್ವರ್ಣ್ಯ ಜಾತೀಯತೆಗಳಿಂದಾಗಿ ಭಾರತೀಯ ಸಂಸ್ಕೃತಿಯೇ ಹಾಳಾಗುತ್ತದೆಂಬುದು ಅವರ ಪ್ರಾಮಾಣಿಕ ನಂಬುಗೆ. ಮೌಢ್ಯಾಚಾರಗಳನ್ನು ನಾಶಮಾಡುವ ದೃಷ್ಟಿಯಿಂದವರು ಬಿರುಗಾಳಿಯಾಗಿ ಸಿಡಿಲಾಗಿ ಭೂಸುರಲೋಕ ಕಂಪನಕಾರಿಯಾಗಿ ದೇವರು ದೇವಾಲಯಗಳ ಮೇಲೆ ಧಾಳಿಮಾಡುತ್ತಾರೆ. ವಿಗ್ರಹಾರಾಧನೆಯನ್ನು ತಪ್ಪಿಸುವ ಸಲುವಾಗಿ ಗಣೇಶನ ಬೊಂಬೆಗಳ ಮೇಲೆ ಧಾಳಿ ಮಾಡುತ್ತಾರೆ; ರಾಮನ ಚಿತ್ರಗಳನ್ನು ಸುಡುತ್ತಾರೆ; ಪುರೋಹಿತರ ಸುಲಿಗೆಯನ್ನು ತಡೆಗಟ್ಟಿ, ಬ್ರಾಹ್ಮಣೇತರರನ್ನು ಜಾಗೃತಿಗೊಳಿಸುವುದೆ ಅವರ ಸಿಡಿಮಿಡಿಯ ಉದ್ದೇಶ. ದೇವನೊಬ್ಬನಿದ್ದರೆ ಪರೋಪಕಾರ ಪರಸೇವೆಯಿಂದ ಅವನಿಗೆ ತೃಪ್ತಿಯಾಗುತ್ತದಲ್ಲವೆ?ದೇವದಾಸಿ ಪದ್ಧತಿಯನ್ನೊಪ್ಪಿಕೊಂಡ ದೇವರು ವ್ಯಭಿಚಾರಿಯೆ? ಎಂದವರು ಪ್ರಶ್ನಿಸುತ್ತಾರೆ. ಸಂವಿಧಾನ ರೀತಿಯಲ್ಲಿಯೇ ಜಾತೀಯತೆಯನ್ನು ತೊಡೆಯಬೇಕೆಂದು ಗುಡುಗಿದ ಮಾನವತಾವಾದಿ ಪೆರಿಯಾರ್ ಅವರು.ಹೆಸರುಗಳಲ್ಲಾಗಲಿ, ನಾಮಫಲಕಗಳಲ್ಲಾಗಲಿ, ಸರ್ಕಾರಿ ದಾಖಲಾತಿಗಳಲ್ಲಾಗಲಿ ಜಾತಿ ಚಿಹ್ನೆಗಳು ಗುರುತು ಸಿಗದಂತೆ ಅಳಿಸಿಬಿಡಬೇಕೆಂದವರು ಸಲಹೆ ನೀಡುತ್ತಾರೆ. ದೇವರನ್ನು ಯಾರೂ ಕಂಡಿಲ್ಲವಾದದ್ದರಿಂದ, ಕಲ್ಲುಮರದ ಬೊಂಬೆಗಳಲ್ಲಿ ಜೀವವೂ ಇಲ್ಲದಿರುವುದರಿಂದ, ದೇವರ ಪರವಾದ ನಂಬಿಕೆ ಸತ್ಯಕ್ಕೆ ಅಪಚಾರ ಎಸಗಿದಂತಾಗುತ್ತದೆಂದವರು ಆಸ್ತಿಕರಿಗೆ ಸವಾಲೆಸೆಯುತ್ತಾರೆ. ದೇವರಿದ್ದರೆ ಎಲ್ಲ ಧರ್ಮಗಳಿಗೆ ಒಬ್ಬನೇ ಇರಬೇಕು; ಇರುವುದಾದರೆ ಧರ್ಮ ಧರ್ಮದ ನಡುವೆ ಕಲಹ ನಡೆಯುತ್ತಿತ್ತೆ? ಅಂದಮೇಲೆ ಮತವೆಂಬುದೆ ಸುಳ್ಳು ಹಗರಣವೆಂದು ಹೇಳದೆ ಗತ್ಯಂತರವಿಲ್ಲ. ಜೀವನಕ್ಕೆ ಮತದ ಅಗತ್ಯವಿಲ್ಲ; ಅದಕ್ಕೆ ಗೃಹಬಂಧನ ಶಿಕ್ಷೆ ವಿಧಿಸುವುದಾದರೆ ಲೋಕದಲ್ಲಿ ಶಾಂತಿ ಸ್ಥಾಪನೆಗೊಳ್ಳುತ್ತದೆಂದು ಯೋಚಿಸುವ ಜನ ಹೆಚ್ಚುತ್ತಿದ್ದಾರೆಂಬುದು ನಿಜವೆ? ದೇವರೇ ಇಲ್ಲ; ದೇವರನ್ನು ಸೃಷ್ಟಿಸಿದವನು ಮೂರ್ಖ, ದೇವರ ಬಗ್ಗೆ ಪ್ರಚಾರಮಾಡುವವನು ನೀಚ, ದೇವರನ್ನು ಪೂಜಿಸುವವನು ಬರ್ಬರ ಎಂದವರು ಸಾರಿದ್ದುಂಟು.

ಚಳವಳಿಯೇ ಪೆರಿಯಾರರ ಕಾರ್ಯಸಾಧನಾ ವಿಧಾನ. ಔತ್ತರೇಯ ನಾಯಕರು ದಕ್ಷಿಣದ ಮೇಲೆ ಹಿಂದಿಯನ್ನು ಹೇರಿ, ದಾಕ್ಷಿಣಾತ್ಯರನ್ನು ಗುಲಾಮೀಕರಿಸಲು ಪ್ರಯತ್ನಿಸುತ್ತಿರುವರೆಂದೂ, ಹಿಂದೀಕರಣದ ಮೂಲಕ ತಮಿಳು ಮೊದಲಾದ ಪ್ರಾದೇಶಿಕ ಭಾಷೆಗಳನ್ನು ಉಚ್ಚಾಟಿಸಲು ಹವಣು ನಡೆಯುತ್ತಿದೆಯೆಂದೂ, ಸ್ವಾಭಿಮಾನವಿರುವವರೆಲ್ಲರೂ ಉತ್ತರದವರ ದಬ್ಬಾಳಿಕೆಯನ್ನು ವಿರೋಧಿಸಬೇಕೆಂದೂ ಅವರು ಕರೆಕೊಡುತ್ತಾರೆ. ಹಿಂದಿಯ ಏಳ್ಗೆಗಾಗಿ ಸರ್ಕಾರ ಬಡವರನ್ನು ಸುಲಿಯುತ್ತಿದೆಯೆನ್ನುವುದು ಅವರ ಆರೋಪಗಳಲ್ಲಿ ಒಂದು. ಹಿಂದಿ ಚಳುವಳಿ ಸಹ ಸ್ವಾಭಿಮಾನಾಂದೋಲನದ ಅಂಗವಾಗುತ್ತದೆ. ಹಿಂದಿ ಹೇರಿಕೆ ವಿರಸಕ್ಕೆ, ದ್ವೇಷಕ್ಕೆ, ಮಾತ್ಸರ್ಯಕ್ಕೆ, ಅಂತರ್ಯುದ್ಧಕ್ಕೆ ನಾಂದಿಯಾಗುತ್ತದೆಂದು ಅರಿಯದ ಜನ ನಾಯಕರಲ್ಲ, ಇಂಥ ನಾಯಕರು ಮೂರ್ಖರೆಂದೇ ಹೇಳಬೇಕಾಗುತ್ತದೆ.

ಯುಗಪುರುಷ ಪೆರಿಯಾರರ ಜೀವನ ಸಂದೇಶಗಳು ತಮಿಳುನಾಡಿನ ಇತಿಹಾಸವನ್ನೆ ಬದಲಾಯಿಸಿದ್ದಲ್ಲದೆ,ದಕ್ಷಿಣದ ಮೇಲೆ ಅದಮ್ಯ ಪ್ರಭಾವ ಬೀರಿವೆಯೆಂದು, ಪ್ರಾದೇಶಿಕ ಪಕ್ಷಗಳ ಜನನಕ್ಕೆ ಪ್ರೇರಣೆ ನೀಡಿದುವೆಂದು, ಔತ್ತರೇಯರಿಗೂ ಎಚ್ಚರಿಕೆವೆರಳುಗಳಾದುವೆಂದು ಸ್ಪಷ್ಟಪಡಿಸಬಹುದಾಗಿದೆ.

## ಕರ್ನಾಟಕದ ರೂವಾರಿ ಎಸ್ಸೆನ್‌ರ ರಾಜಕೀಯ ವಿಚಾರಲಹರಿ

ಕರ್ನಾಟಕ ಸ್ವಾತಂತ್ರ್ಯ ಸಮರದಲ್ಲಿ ಎಂದೂ ಹಿಂದೆ ಬಿದ್ದದ್ದಿಲ್ಲ. ಕೆ. ಟಿ. ಭಾಷ್ಯಂ, ಟಿ. ಸಿದ್ಧಲಿಂಗಯ್ಯ, ವೀರಕೇಸರಿ ಸೀತಾರಾಮ ಶಾಸ್ತ್ರೀ, ತಗಡೂರು ರಾಮಚಂದ್ರರಾಯರು, ಎಚ್. ಕೆ. ವೀರಣ್ಣ ಗೌಡ, ಹಳ್ಳಿಕೇರಿ ಗುದ್ಲೆಪ್ಪ, ಹೆಚ್. ಸಿ. ದಾಸಪ್ಪ ಕೆ. ಹನುಮಂತಯ್ಯ, ವಿ.ಟಿ. ಮಾಗಡಿ, ಕೆ. ಎಫ್ ಪಾಟೀಲ, ಕೆ. ಚೆಂಗಲ್‌ರಾಯರೆಡ್ಡಿ, ಎಂ. ಪಿ. ಪಾಟೀಲ, ಬಿ.ಡಿ. ಜತ್ತಿ, ತಾಳಕೆರೆ ಸುಬ್ರಹ್ಮಣ್ಯ, ಯಶೋಧರಾ ದಾಸಪ್ಪ, ಕೆ.ಆರ್. ಕಾರಂತ, ಕಡಿದಾಳ್ ಮಂಜಪ್ಪ, ಎಸ್. ಕರಿಯಪ್ಪ, ಕೆ.ವಿ. ಶಂಕರಗೌಡ. ಟಿ. ಮರಿಯಪ್ಪ ಕೊಲ್ಲೂರು ಮಲ್ಲಪ್ಪ, ಆರ್. ಆರ್. ದಿವಾಕರ್, ಅಲ್ಲಂ ಕುಟುಂಬ- ಇವರೇ ಮೊದಲಾದ ನೂರಾರು, ಸಾವಿರಾರು ಮಂದಿ ನಾಯಕ ನಾಯಕಿಯರು ಹೋರಾಟ ನಡೆಸಿದ ಪ್ರಯುಕ್ತ ಸ್ವಾತಂತ್ರ್ಯ ಸಂಪಾದನೆಯ ಜತೆಗೆ ಮೈಸೂರಿನಲ್ಲಿ ರಾಜತ್ವ ಕೊನೆಗೊಂಡು, ಜವಾಬ್ದಾರಿ ಸರ್ಕಾರ ಸ್ಥಾಪನೆಗೊಳ್ಳುತ್ತದೆ.

ಕಳೆದ ಶತಮಾನದಲ್ಲಿ ಭಾರತ ಕಂಡ ಮೂರು ಐತಿಹಾಸಿಕ ಘಟನೆಗಳೆಂದರೆ, ಸ್ವಾತಂತ್ರ್ಯ ಸಂಪಾದನೆ, ರಾಜಶಾಹಿ ವಿನಾಶ ಮತ್ತು ಭಾಷಾವಾರು ಪ್ರಾಂತ ರಚನೆ. ಕಾಂಗ್ರೆಸ್ ಪಕ್ಷ ಸ್ವಾತಂತ್ರ್ಯ ಸಮರಕಾಲದಲ್ಲಿಯೇ ಗಾಂಧೀಜಿಯ ನೆರಳಿನಲ್ಲಿಯೇ ಭಾಷಾವಾರು ಪ್ರಾಂತ ರಚನೆಯ ತತ್ತ್ವವನ್ನೊಪ್ಪಿಕೊಂಡಿದ್ದರೂ, ಅಧಿಕಾರ ಹಸ್ತಗತವಾದಕೂಡಲೇ ನೆಹರೂ ಮಹಾಶಯರು ಆ ತತ್ತ್ವವನ್ನೊಪ್ಪದಿದ್ದುದು ಅವರ ಮುತ್ಸದ್ದಿತನದ ಹಾಗೂ ದೂರದರ್ಶಿತ್ವದ ಅಭಾವಕ್ಕೆ ಸಾಕ್ಷಿಯಾಗಿದೆ. ಎಸ್ಸೆನ್‌ರಂಥವರನ್ನು ಕರೆಸಿಕೊಂಡು 'ನೀವು ಭಾಷಾವಾರು ಪ್ರಾಂತ ರಚನೆಯ ಬೇಡಿಕೆಯನ್ನು ಬಿಟ್ಟು ಬಿಡಿ, ನಿಮಗೆ ರಾಜ್ಯಪಾಲ ಹುದ್ದೆ ಕೊಡುತ್ತೇನೆ, ಬೇರೇನಾದರೂ ಆಶೆಯಿದ್ದರೆ ಪೂರೈಸುತ್ತೇನೆ' ಎಂದವರು ಪುಸಲಾಯಿಸುತ್ತಿದ್ದುದಕ್ಕೆ ಅವರ ಔತ್ತರೇಯ ಸಹಜ ಸ್ವಾಮ್ಯ ಪ್ರವೃತ್ತಿಯೇ ಕಾರಣವೆಂಬುದರಲ್ಲಿ ಅನುಮಾನವಿಲ್ಲ. ಭಾಷಾವಾರು ಪ್ರಾಂತ ರಚನೆಯಾದರೆ, ಆ ಪ್ರಾಂತ್ಯಗಳು ಪ್ರಬಲವಾಗುತ್ತವೆಂಬ ನೆಪದಲ್ಲಿ ಅವರು ಪ್ರಜಾಪ್ರಭುತ್ವ ತತ್ತ್ವಕ್ಕೆ, ವಿಕೇಂದ್ರೀಕರಣ ಸಿದ್ಧಾಂತಕ್ಕೆ ಎಳ್ಳುನೀರು ಬಿಟ್ಟರೆಂದೇ ಹೇಳಬಹುದು. ನೆಹರೂ ಸರ್ಕಾರದ ಅಹಂಕಾರಕ್ಕೆ, ಸರ್ವಾಧಿಕಾರ ಮನೋಭಾವನೆಯ ದೆವ್ವಕ್ಕೆ ಆಂಧ್ರದ ಪೊಟ್ಟಿ ಶ್ರೀರಾಮುಲು ಬಲಿಯಾಗಬೇಕಾಗುತ್ತದೆ. ಅನಂತರ ಫಜಲ್ ಆಲಿ ಆಯೋಗ ಮತ್ತು ಮಹಾಜನ ಆಯೋಗಗಳು ರಚನೆಯಾಗುತ್ತವೆ. ನಿಜಲಿಂಗಪ್ಪನವರು ನೆಹರೂ ಒಡ್ಡಿದ ಆಮಿಷಕ್ಕೆ ಸೋತಿದ್ದರೆ, ಅವರು ರಾಷ್ಟ್ರನಾಯಕರ ಜತೆ ಲಾಬಿ ನಡೆಸದಿದ್ದರೆ ಭಾಷಾವಾರು ಪ್ರಾಂತ ರಚನೆಯ ದಿನ ಮುಂದೆ ಹೋಗುತ್ತಿತ್ತೆನ್ನುವ ಸತ್ಯ ಕುಹಕಿಗಳಿಗೆ ಅರ್ಥವಾಗದು. ಕರ್ನಾಟಕ ಏಕೀಕರಣಕ್ಕೆ ಹನುಮಂತಯ್ಯನವರ ಪ್ರಾಮಾಣಿಕ ಬೆಂಬಲವಿತ್ತೆನ್ನುವುದನ್ನು ಜಾತ್ಯಂಧರು ಮರೆಯುವುದೂ ಉಂಟು. ಒಂದು ಮಾತಂತು ನಿಜ, ನಿಜಲಿಂಗಪ್ಪನವರ ತ್ಯಾಗ, ಛಲ, ನಿಸ್ವಾರ್ಥ ಪ್ರವೃತ್ತಿಯಿಂದ, ರುದ್ರಪ್ಪ, ರಾಮಸ್ವಾಮಿ, ಅನಂತರಾಮನ್, ಕೋ. ಚೆನ್ನಬಸಪ್ಪ, ಪುಟ್ಟಪ್ಪ ಮುಂತಾದವರ ಬೆಂಬಲದಿಂದ, ಏಕೀಕರಣ ಸಿದ್ಧಿಸಿತೆಂಬುದು. ನೆಹರೂ ಮತ್ತು ಇಂದಿರಾ ಗಾಂಧಿಯವರು ಪ್ರತಿರಾಜ್ಯದಲ್ಲಿಯೂ ಸ್ವಪಕ್ಷದಲ್ಲಿ ಎರಡು ಗುಂಪುಗಳನ್ನು ಸೃಷ್ಟಿಸಿ, ಒಂದರಮೇಲೊಂದನ್ನೆತ್ತಿಕಟ್ಟಿ, ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದರೆಂದು ಹನುಮಂತಯ್ಯ-ನಿಜಲಿಂಗಪ್ಪನವರು ಹೇಳುತ್ತಲೇ ಇದ್ದರು. ಸಾಮಾನ್ಯವಾಗಿ ದೆಹಲಿಯ ನಾಯಕರು ಸರ್ವಾಧಿಕಾರಿಗಳಂತೆ ಈಗಲೂ ವರ್ತಿಸುತ್ತಿದ್ದಾರೆ. ರಾಜ್ಯ ನಾಯಕರು ಅವರ ತಾಳಕ್ಕೆ ತಕ್ಕಂತೆ ಕುಣಿಯುತ್ತಾರೆ; ಇವರಿಗೆ ಸ್ವಾತಂತ್ರ್ಯವೇ ಇಲ್ಲ. ಆದರೆ ನಿಜಲಿಂಗಪ್ಪ ಹನುಮಂತಯ್ಯನವರು ನೆಹರೂ ಇಂದಿರಾ ಅವರಿಗೆ ಡೊಗ್ಗು ಸಲಾಮು ಹೊಡೆಯುತ್ತಿರಲಿಲ್ಲ, ಅವರೊಡನೆ ಸಮಾನಸ್ಕಂಧರಂತೆ ವರ್ತಿಸುತ್ತಿದ್ದರೆಂಬುದು ಸರ್ವವೇದ್ಯ.

ಶಾಂತವೇರಿ ಗೋಪಾಲಗೌಡರ ನೇತೃತ್ವದಲ್ಲಿ ನಡೆದ ಗೇಣಿದಾರರ ಪರವಾದ ಕಾಗೋಡು ಸತ್ಯಾಗ್ರಹ, ಎಚ್.ಕೆ. ವೀರಣ್ಣಗೌಡರ ಮಾರ್ಗದರ್ಶನದಲ್ಲಿ ಸರ್ಕಾರಕ್ಕೆ ಸವಾಲಾಗಿ ಜಯಗಳಿಸಿದ ಮಂಡ್ಯದ ಕಬ್ಬು ಬೆಳೆಗಾರರ ಅಠಾರಾ ಕಚೇರಿ ಚಲೋ ಚಳವಳಿ ಇವು ರಾಷ್ಟ್ರೀಯ ಗಮನವನ್ನು ಸೆಳೆದುವೆಂಬುದು ಸರ್ವವೇದ್ಯ. ವೀರಣ್ಣಗೌಡ, ಶ್ರೀರಾಮರೆಡ್ಡಿ ಮತ್ತು ಎಚ್. ಎಸ್. ರುದ್ರಪ್ಪನವರು ನಡೆಸಿಕೊಂಡು ಬಂದ, ಪ್ರೊ. ಎಂ. ಡಿ. ನಂಜುಂಡಸ್ವಾಮಿ ಮತ್ತು ಕೆ. ಎಸ್. ಪುಟ್ಟಣ್ಣಯ್ಯನವರು ಮುಂದುವರಿಸುತ್ತಿರುವ ರೈತ ಚಳವಳಿ ಅನಿವಾರ್ಯವೂ ಅತ್ಯಂತ ಉಪಯುಕ್ತವೂ ಆದ ಸಂಘಟನೆಯಾಗಿದೆ. ಡಾ. ಅನಕೃ ಅವರ ಬೆಂಬಲದಿಂದ ರಾಮಮೂರ್ತಿ ಸಂಘಟಿಸಿದ ಕನ್ನಡ ಚಳವಳಿ ಮುಂದೆ ವಾಟಾಳ್ ನಾಗರಾಜ್-ನಾರಾಯಣಕುಮಾರ್-ಪ್ರಭಾಕರರೆಡ್ಡಿಯರ ನಾಯಕತ್ವದಲ್ಲಿ ಟಿಸಿಲೊಡೆದು, ಕನ್ನಡದ ಬಹುಮುಖ ಅಭ್ಯುದಯಕ್ಕೆ ಶ್ರಮಿಸಿದೆ. ಕನ್ನಡಕ್ಕೆ ಸ್ಥಾನ-ಮಾನ ತಂದುಕೊಡುವಲ್ಲಿ ಡಾ. ರಾಜಕುಮಾರ್-ಪಾಟೀಲ್ ಪುಟ್ಟಪ್ಪನವರು ಸಂಘಟಿಸಿದ ಗೋಕಾಕ್ ವರದಿ ಸಂಬಂಧವಾದ ಚಳವಳಿಯ ಪಾತ್ರವನ್ನು ಕಡೆಗಣಿಸುವಂತಿಲ್ಲ. ಅಂತೆಯೇ ದಲಿತ ಚಳವಳಿ ಸಹ ಕರ್ನಾಟಕದ ರಾಜಕೀಯದಲ್ಲಿ ಸಕ್ರಿಯ ಪಾತ್ರ ವಹಿಸಿದೆ. ಈ ಸಂದರ್ಭದಲ್ಲಿ ಬಸವಲಿಂಗಪ್ಪನವರು ಚಳವಳಿಗೆ ನೀಡಿದ ಮಹತ್ವವನ್ನು ಮರೆಯುವಂತಿಲ್ಲ.

ಕರ್ನಾಟಕದ ಮಂತ್ರಿ ಮುಖ್ಯಮಂತ್ರಿಗಳು ತಂತಮ್ಮ ರೀತಿಯಲ್ಲಿ ಆಡಳಿತವನ್ನು ನಡಸುತ್ತ, ರಾಷ್ಟ್ರೀಯ ರಾಜಕೀಯ ಚಿಂತನೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಹನುಮಂತಯ್ಯನವರು ನಿರ್ಮಿಸಿದ, ಇತ್ತೀಚೆಗೆ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್‌ರ ಮೆಚ್ಚುಗೆಗೆ ಪಾತ್ರವಾದ ವಿಧಾನಸೌಧ ಪ್ರಜಾಪ್ರಭುತ್ವ ವೈಭವಕ್ಕೆ, ಕರ್ನಾಟಕ ಕಲೆಯ ಸಂಪತ್ತಿಗೆ ಸಂಕೇತವಾಗಿ, ಗೊಮ್ಮಟ ಸದೃಶ ಭವನವಾಗಿ, ನಗರ ರಾಣಿಯ ಮಕುಟದಂತೆ ವಿರಾಜಿಸುತ್ತಿದೆ. ಹಿಂದುಳಿದ ವರ್ಗಗಳಿಗೆ ಬೆಳಕನ್ನೂ ಉಸಿರನ್ನೂ ನೀಡಿದಾಗ; ಆಡಳಿತ ದಲ್ಲಿ ಎಲ್ಲ ವರ್ಗಗಳಿಗೂ ಅವಕಾಶ ನೀಡಿದಾಗ ಮಾತ್ರ ಪ್ರಜಾಪ್ರಭುತ್ವ ಯಶಸ್ವಿಯಾಗುತ್ತದೆಂದರಿತು, ತಮ್ಮ ಅರಿವನ್ನು ಕಾರ್ಯಗತಗೊಳಿಸಿದ ದೇವರಾಜ ಅರಸು ಅವರು ದಕ್ಷ ಆಡಳಿತಗಾರರಾಗಿದ್ದುದಲ್ಲದೆ, ಕರ್ನಾಟಕ ಲೋಕಸೇವಾ ಆಯೋಗದ ಪರೀಕ್ಷೆಗಳಿಗೆ ಕನ್ನಡ ಮಾಧ್ಯಮವನ್ನು ಜಾರಿಗೊಳಿಸಿದ ಮಹನೀಯರು. ಮೈಸೂರಿಗೆ ಕರ್ನಾಟಕವೆಂದು ನಾಮಕರಣ ಮಾಡಿದ ಧೀರರು. ಶ್ರೀ ರಾಮಕೃಷ್ಣ ಹೆಗ್ಡೆ ಮತ್ತು ನಜೀರ್ ಸಾಹೇಬರು ಗಾಂಧೀಜಿ ಕಲ್ಪನೆಯ ಪಂಚಾಯತ್ ರಾಜ್‌ಗೆ ರೂಪಕೊಟ್ಟ ಸಾಹಸ

ವೀರರು, ಅಂತೆಯೇ ಕನ್ನಡಾಭಿಮಾನಿಗಳು. ಎಸ್. ಬಂಗಾರಪ್ಪನವರು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಮತ್ತು ಕನ್ನಡ ವಿಶ್ವವಿದ್ಯಾಲಯಗಳ ಜತೆಗೆ, ಕುಪ್ಪಳಿಯ ಕುವೆಂಪು ಪ್ರತಿಷ್ಠಾನ, ಧಾರವಾಡದ ಬೇಂದ್ರೆ ಪ್ರತಿಷ್ಠಾನಗಳನ್ನು ಸ್ಥಾಪಿಸಿದರು. ಶ್ರೇಷ್ಠ ಕನ್ನಡ ಸಾಹಿತ್ಯ ಪ್ರೇಮಿಗಳು ಹಾಗೂ ಸಾಹಿತ್ಯ ಪುರುಷರಾದ ಎಂ. ವೀರಪ್ಪ ಮೊಯ್ಲಿಯವರು ಕನ್ನಡ ಪುಸ್ತಕ ಪ್ರಾಧಿಕಾರ ಸ್ಥಾಪಿಸಿದ್ದಲ್ಲದೆ, ಹಿಂದುಳಿದ ಆಯೋಗವನ್ನು ಅನುಷ್ಠಾನಗೊಳಿಸಿ ರಾಜ್ಯದಲ್ಲೇ ಮೊದಲ ಬಾರಿಗೆ ರಾಜಕೀಯ ಮೀಸಲಾತಿ ತಂದವರು. ರೈತರ ಉನ್ನತಿಯಿಂದಲ್ಲದೆ, ಸುಭಿಕ್ಷ ಕ್ಷೇಮಾಭ್ಯುದಯಗಳು ಸಾಧ್ಯವಿಲ್ಲವೆಂದು ಬಗೆದು ನೀರಾವರಿ ಮೊದಲಾಗಿ ಹಲವು ಬಗೆಯ ರೈತಾಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡ ಶ್ರೀ ಎಚ್. ಡಿ. ದೇವೇಗೌಡರು ಮಣ್ಣಿನ ಮಗನೆಂದೇ ಹೇಳಿಕೊಂಡು, ರೈತರ ಬಗೆಗಿನ ಕಾಳಜಿಯನ್ನು ವ್ಯಕ್ತಪಡಿಸುತ್ತಾರೆ. ದಕ್ಷಿಣದ ದ್ವಿತೀಯ ಹಾಗೂ ಕರ್ನಾಟಕದ ಪ್ರಪ್ರಥಮ ಪ್ರಧಾನಿಯಾದ ಅವರು ಅತ್ಯಂತ ದಕ್ಷ ಆಡಳಿತಗಾರರೆಂದು ಹೆಸರು ವಾಸಿಯಾಗಿದ್ದಾರೆ. ತಲೆಯ ಮೇಲೆ ಮಲಹೊರುವುದನ್ನು ನಿಲ್ಲಿಸಿ, ಕನ್ನಡ ಸಾಹಿತ್ಯದ ಬಹುಭಾಗ ಬೂಸಾ ಎಂದು ಕರೆದ ಶ್ರೀ ಬಸವಲಿಂಗಪ್ಪನವರನ್ನೆಂದೂ ಮರೆಯಲಾಗದು. ಆಧುನಿಕ ಮಾಹಿತಿ ತಂತ್ರಜ್ಞಾನದ ಅಭಿವೃದ್ಧಿಯಲ್ಲಿ ಅಪಾರ ಕಾಳಜಿ ವಹಿಸಿದವರು ಎಸ್. ಎಂ. ಕೃಷ್ಣ ಅವರು.

ಈ ಹಿನ್ನೆಲೆಯಲ್ಲಿ ಶ್ರೀ ನಿಜಲಿಂಗಪ್ಪನವರ ರಾಜಕೀಯ ಚಿಂತನ ಮಂಥನಗಳನ್ನು ಪ್ರತಿಬಿಂಬಿಸುವ ಸಾಧನೆ ಸಿದ್ಧಿಗಳನ್ನು ಗಮನಿಸಬಹುದು.[೧] ಭಾಷಾವಾರು ಪ್ರಾಂತರಚನೆ ನಿಸರ್ಗ ಸಹಜವಾದದ್ದು. ಭಾಷೆ ಒಂದು ಜನಾಂಗದ ಉಸಿರು, ಒಂದು ಸಂಸ್ಕೃತಿಯ ಬಸಿರು, ಏಕತೆಯ ಸಂಕೇತವೆಂಬುದನ್ನು ಯಾರೂ ತಪ್ಪಿಸಲಾರರು. ಅದು ಪ್ರಜಾತಂತ್ರದ ಪ್ರಧಾನ ಲಕ್ಷಣ. ಸ್ವಾತಂತ್ರ್ಯದ ಅಭಿಜ್ಞಾನ. ಅದು ಜ್ಞಾನಾನುಭವಗಳ, ಭಾವಾಲೋಚನೆಗಳ ಗರ್ಭಸ್ಥಾನವೂ ಹೌದು, ಅಭಿವ್ಯಕ್ತಿ ಮಾಧ್ಯಮವೂ ಹೌದು. ಜನಮನ ಹೃದಯಗಳ ಸೇತುವೆಯೂ ಹೌದು. ಒಂದು ಭಾಷೆಯನ್ನು ಮಾತಾಡುವ ಜನ ಒಂದು ಆಡಳಿತ ವ್ಯವಸ್ಥೆಯ ನೆರಳಿನಲ್ಲಿದ್ದಾಗ, ಆಡಳಿತ ಸುಲಭವಾಗುತ್ತದೆ; ಆಡಳಿತ ವೆಚ್ಚ ಕಡಮೆಯಾಗುತ್ತದೆ; ಶಾಲಾ ಕಾಲೇಜು ಶಿಕ್ಷಣ ಸುಲಲಿತವಾಗುತ್ತದೆ; ಜ್ಞಾನವಿಸ್ತರಣೆ ಸುಲಭವಾಗುತ್ತದೆ; ಜನರ ಅಭಿವ್ಯಕ್ತಿ ಶಕ್ತಿ ಸಂಪೂರ್ಣವಾಗಿ ಅರಳುತ್ತದೆ. ಭಾಷಾ ಅಲ್ಪ ಸಂಖ್ಯಾತರಿಗೂ ಪರಿಸರದ ಭಾಷೆ ಕಷ್ಟವಾಗುವುದಿಲ್ಲ. ಸಾಮಾನ್ಯವಾಗಿ ಜಗತ್ತಿನ ಎಲ್ಲ ರಾಷ್ಟ್ರಗಳು ನಿಸರ್ಗ ಸಹಜವಾಗಿಯೇ ಭಾಷಾನುಗುಣವಾಗಿವೆಯೆಂಬುದನ್ನು ವಿವೇಕಿಗಳು ಬಲ್ಲರು. ಏಕೀಕರಣ ಕೇವಲ ಭಾವುಕತೆಯ, ಸಂಕುಚಿತ ಮನೋಧರ್ಮದ, ಸ್ವಾರ್ಥಪರ ಅವ್ಯವಹಾರ್ಯ ಬಣಗು ವಾಗ್ಜಾಲವಲ್ಲ, ಅದೊಂದು ದೀರ್ಘಕಾಲದ ವಿಚಾರ ಪ್ರಯೋಗಾನುಭವ; ಮಾನಸಿಕ ವ್ಯಾಪಾರ ತರ್ಕ ಸಂವಾದಗಳ ಫಲವಾಗಿ ಖಾತರಿಗೊಂಡ ವೈಜ್ಞಾನಿಕ ಸಿದ್ಧಾಂತವದು. ಇಂಡಿಯಾ ದೇಶದ ನಾಯಕ ಶಿರೋಮಣಿಗಳನ್ನೆಲ್ಲ ಭೇಟಿ ಮಾಡಿ, ಏಕೀಕರಣ ತತ್ತ್ವವನ್ನವರಿಗೆ ಪಾಠಮಾಡಿ, ಒಳ ಹೊರಗಿನ ವಿರೋಧಶಕ್ತಿಗಳನ್ನು ವಿನಯಾನುನಯ ಭಾಷಾ ಮಾರ್ದವತೆಯಿಂದ ತಮ್ಮ ಪರವಾಗಿಸಿಕೊಳ್ಳಲು ಮಾಡಿದ ಸಂಧಾನದಿಂದ ಎಸ್ಸೆನ್ ರವರ ರಾಜಕೀಯ ಕೌಶಲ ಚಾಕಚಕ್ಯತೆ ಎದ್ದು ಕಾಣುತ್ತದೆ; ಏಕೀಕರಣ ಸಾಧನೆಯೊಂದೆ ಅವರ ಜೀವನದ ಏಕಮಾತ್ರ ಗುರಿಯಾಗುತ್ತದೆ. ಅದೇ ಅವರ ಬದುಕಾಗುತ್ತದೆ. ಕರ್ನಾಟಕದೊಳಗೆ ಅನೇಕ ಯುವಕರು ಮತ್ತು ಹಿರಿಯ ರಾಜಕಾರಣಿಗಳು ಪ್ರಾಮಾಣಿಕವಾಗಿ ಏಕೀಕರಣದ ಪರವಾಗಿ ಚಳವಳಿ ಹೂಡಿದ್ದು ನಿಜ; ಏಕೀಕರಣ ಸಾಧನೆಯಲ್ಲಿ ಆ ಚಳವಳಿ ಅಪಾರ ಪ್ರಭಾವ ಬೀರಿದ್ದೂ ನಿಜ. ಆದರೆ ಕೇಂದ್ರ ನಾಯಕತ್ವವೊಡ್ಡಿದ ಆಮಿಷ ಜಾಲದಿಂದ ಪಾರಾಗಿ, ಅಧಿಕಾರಕ್ಕೆ ಬಾಯಾರದೆ, ಸ್ನೇಹಾದರಗಳಿಂದ ವಲ್ಲಭಬಾಯಿಯರಂಥ ನಾಯಕರ ಮನವನ್ನು ಗೆದ್ದುಕೊಂಡು ಅವರ ವಿರೋಧವನ್ನು ತಡೆದದ್ದು ಸಾಮಾನ್ಯ ಸಂಗತಿಯಲ್ಲ. ಇದರಿಂದಾಗಿ ನಿಜಲಿಂಗಪ್ಪನವರು ಭಾರತೀಯ ಹಾಗೂ ಕರ್ನಾಟಕದ ಇತಿಹಾಸದಲ್ಲಿ ಸುಭದ್ರ ಸ್ಥಾನವನ್ನು ಗಳಿಸಿಕೊಂಡಿದ್ದಾರೆಂದೇ ಹೇಳಬಹುದು.

ಗಾಂಧೀಜಿಯಲ್ಲವರಿಗೆ ಶ್ರದ್ಧಾನಿಷ್ಠೆಯ ಭಕ್ತಿಯಿದ್ದದ್ದರಿಂದ ಅವರ ರಚನಾತ್ಮಕ ಕಾರ್ಯಕ್ರಮಗಳನ್ನು ಹಾಗೂ ರಾಜಕೀಯ ಸಿದ್ಧಾಂತಗಳನ್ನು ನಿಜಲಿಂಗಪ್ಪನವರು ಪ್ರತಿಕ್ರಿಯೆಯಿಲ್ಲದೆ ಮುಕ್ತಮನಸ್ಸಿನಿಂದ ಸಂಪೂರ್ಣವಾಗಿ ಒಪ್ಪಿಕೊಳ್ಳುತ್ತಾರೆ. ತಮ್ಮ ಅಧಿಕಾರಾವಧಿಯಲ್ಲಿ ಅವುಗಳಿಗೆ ಕಾರ್ಯರೂಪ ನೀಡಲು ಪ್ರಯತ್ನಿಸುತ್ತಾರೆ. ಶ್ರೀಮಂತರ ಮತ್ತು ದರಿದ್ರರ ನಡುವೆ ಅಗಾಧ ಕಂದಕ ನಿರ್ಮಾಣಗೊಂಡಿರುವ ಸಂದರ್ಭದಲ್ಲಿ ಅಹಿಂಸಾತ್ಮಕ ವ್ಯವಸ್ಥೆಯ ಸರ್ಕಾರ ಅಸಾಧ್ಯವೆಂಬ ಗಾಂಧೀಜಿಯ ಸೂಕ್ತ ಸದಾ ಅವರ ನೆನಪಿನಲ್ಲುಳಿಯುತ್ತದೆ. ಆ

೧. First Atulya Ghosh Memorial Lecture : Imbalances in Indian Economy and remedies ಎಂಬ ಭಾಷಣವನ್ನು ಇದೇ ಲೇಖಕರ 'ಕರ್ನಾಟಕದ ರೂವಾರಿ' ಮತ್ತು 'ಕಾಯಕಯೋಗಿರಾಷ್ಟ್ರನಾಯಕ' ಎಂಬ ಗ್ರಂಥಗಳನ್ನು ಈ ಸಂದರ್ಭದಲ್ಲಿ ಓದಬಹುದು.

ಕಂದಕವನ್ನು ತುಂಬಬಹುದಾದ ಮಾರ್ಗವಿಧಾನಗಳನ್ನೂ ಗಾಂಧೀಜಿ ರೂಪಿಸಿದ್ದರೆಂಬುದು ಸರ್ವವೇದ್ಯ. ಹಳ್ಳಿಗಳಲ್ಲಿ ಹುಟ್ಟಿ ಬೆಳೆದವರಿಗೆ ಮಾತ್ರ ಗ್ರಾಮೀಣ ಜೀವನದ ಕ್ರೌರ್ಯ ಭೀಕರತೆಗಳು ಅರ್ಥವಾಗುತ್ತವೆಯೆ ಹೊರತು, ನಗರದ ಬಡಾವಣೆಗಳ ಸುಸಜ್ಜಿತ ಸೌಧಗಳಲ್ಲಿ ಬೆಳೆದವರಿಗೆ ಅರ್ಥವಾಗುವುದಿರಲಿ, ಅವುಗಳ ಪರಿಚಯವೂ ಸಾಧ್ಯವಾಗುವುದಿಲ್ಲ. ಅಲಹಾಬಾದಿನ ಆನಂದ ಭವನದಲ್ಲಿ ಹುಟ್ಟಿ, ಇಂಗ್ಲೆಂಡಿನಲ್ಲಿ ಬೆಳೆದ ನೆಹರೂ ಮಹಾಶಯರಿಗೆ ಹಳ್ಳಿಯ ಬಡತನದ ಬೇನೆ ಬವಣೆಗಳು ಗೊತ್ತಿಲ್ಲವೆಂಬ ವ್ಯಸನ ಎಸ್ಸೆನ್‌ರವರನ್ನು ಕಾಡುತ್ತದೆ. 'ಆರ್ಥಿಕ ಜೀವನವನ್ನು, ಅದರ ಪ್ರಗತಿಯನ್ನು ಹಾಗೂ ರಾಷ್ಟ್ರೀಯ ಅಭ್ಯುದಯವನ್ನು ನಿಯಂತ್ರಿಸುವ ಮೂಲಭೂತ ವ್ಯವಹಾರವೇ ಕೃಷಿ. ಅದನ್ನು ಕೈಗಾರಿಕೆಯೆಂದು ಪರಿಗಣಿಸಿ, ವೈಜ್ಞಾನಿಕ ರೀತಿಯಲ್ಲಿ ರೂಢಿಸಬೇಕೆಂಬುದು ನನ್ನ ನಿಶ್ಚಲ ಮತ' ಎಂದು ನುಡಿದು, ದೇಶದಲ್ಲೆಷ್ಟು ಭೂಮಿಯಿದೆ, ಅದರಲ್ಲಿ ವ್ಯವಸಾಯ ಯೋಗ್ಯವಾದದ್ದೆಷ್ಟು, ನೀರಾವರಿಗೆಷ್ಟು ಜಮೀನೊದಗುತ್ತದೆ, ಅರಣ್ಯಕ್ಕಾಗಿ ಎಷ್ಟು ಎಕರೆ ಮೀಸಲಾಗಿಡಬೇಕು ಎಂಬ ಅಂಕಿಅಂಶಗಳನ್ನು ಸವಿವರವಾಗಿ ನಿರೂಪಿಸುತ್ತಾರೆ.[೧] ನೀರಾವರಿಗೆಷ್ಟು ಹಣ ಬೇಕಾಗುತ್ತದೆಂಬುದನ್ನು ಅವರು ಲೆಕ್ಕ ಹಾಕಿದ್ದಾರೆ. ಗೊಬ್ಬರ ಅನಿಲವನ್ನು (Gobar Gas) ಉತ್ಪಾದಿಸುವುದಾದರೆ ಮಾಲಿನ್ಯವನ್ನು ತೊಡೆಯುವುದರ ಜತೆಗೆ, ಅಡುಗೆ ದೀಪಗಳಿಗೆ ಬೇಕಾದ ಅಗ್ನಿ ಶಕ್ತಿಯನ್ನುತ್ಪಾದಿಸಬಹುದು, ಅದರಿಂದ ಗೊಬ್ಬರಕ್ಕೂ ಕೊರತೆಯಾಗುವುದಿಲ್ಲ. ಸೌಕರ್ಯಾನುಕೂಲವಿರುವ ಕಡೆಗಳಲ್ಲೆಲ್ಲ ಕೃಷಿ ಸಂಬಂಧವಾದ ಕೈಗಾರಿಕೆಗಳನ್ನು ಸ್ಥಾಪಿಸುವುದಲ್ಲದೆ ಗುಡಿಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸಬೇಕು. ಇಷ್ಟೂ ಸಾಧ್ಯವಾಗುವುದಾದರೆ ಗ್ರಾಮೀಣ ಪ್ರದೇಶದ ಲಕ್ಷಾಂತರ ಯುವಕರಿಗೆ ಉದ್ಯೋಗ ಕಲ್ಪಿಸಬಹುದು, ಗ್ರಾಮೀಣ ಜೀವನದ ಮಟ್ಟವನ್ನೆತ್ತರಿಸಬಹುದು, ಶಿಕ್ಷಣ ವೈದ್ಯಾನುಕೂಲಗಳು ಸ್ಥಳದಲ್ಲಿಯೇ ದೊರೆಯುವಂತೆ ಏರ್ಪಾಡು ಮಾಡಬಹುದು, ಅಂಥ ಸನ್ನಿವೇಶ ನಿರ್ಮಾಣವಾಗುವುದಾದರೆ ಹಳ್ಳಿಗರು ನಗರಕ್ಕೆ ವಲಸೆಹೋಗದಂತೆ ತಡೆಗಟ್ಟಬಹುದು- ನಿಜಲಿಂಗಪ್ಪನವರ ಅರ್ಥ ಮೀಮಾಂಸೆಯ ವಿವರಗಳಿವು. ಜತೆ ಜತೆಯಲ್ಲಿ ಅರಣ್ಯಾಭಿವೃದ್ಧಿಯೂ ಸಾಗಬೇಕೆಂಬುದು, ನಿಸರ್ಗವನ್ನು ನಾಶಮಾಡಬಾರದೆಂಬುದು ಅವರ ಇಚ್ಛೆ. ಶ್ರೀಮಂತರು, ನಾಯಕರು, ನ್ಯಾಯಮೂರ್ತಿಗಳು ದಂತಗೋಪುರದಿಂದ ಕೆಳಗಿಳಿದು ಬಂದು, ಗ್ರಾಮೀಣ ಜನರ ಬಗ್ಗೆ ಸಹಾನುಭೂತಿ ತೋರದಿದ್ದರೆ ನೂರು ವರ್ಷವಾದರೂ ದೇಶ ಮುಂದುವರಿಯವುದಿಲ್ಲವೆಂಬುದನ್ನು ಯೋಚಿಸಿದ್ದರು.

ಅನಿವಾರ್ಯ ಸಂದರ್ಭದಲ್ಲಿ ಬೃಹತ್ಪ್ರಮಾಣದ ಕೈಗಾರಿಕೆಗಳನ್ನು ಸ್ಥಾಪಿಸುವಲ್ಲಿ ನಿಜಲಿಂಗಪ್ಪನವರ ವಿರೋಧವಿಲ್ಲ. ಆದರೆ ಸರ್ಕಾರೀ ವಲಯದ ಅನೇಕ ಕೈಗಾರಿಕೆಗಳು ಸದಾ ನಷ್ಟ ಮುಖವಾಗಿರುವುದರ ಕಾರಣಗಳೇನೆಂಬುದನ್ನು ಕಂಡುಹಿಡಿದು, ಅವುಗಳಿಗೆ ತಕ್ಕ ಚಿಕಿತ್ಸೆ ಮಾಡದಿರುವುದು ಮಹಾಲೋಪವೆಂದವರು ಟೀಕಿಸುತ್ತಾರೆ. ಆವಶ್ಯಕತೆಗಿಂತ ಹೆಚ್ಚು ಕೆಲಸಗಾರರನ್ನು ನೇಮಿಸಿಕೊಳ್ಳುವುದು, ತಜ್ಞರು ಬೇಕಾದ ಕಡೆ ಅಜ್ಞ ಅಸಮರ್ಥ ಐಎಎಸ್ ಅಥವಾ ಐಪಿಎಸ್ ಅಧಿಕಾರಿಗಳನ್ನು ಕಂಪೆನಿ ಅಥವಾ ಕೈಗಾರಿಕೆಗಳ ಮುಖ್ಯಸ್ಥರನ್ನಾಗಿ ಮಾಡುವುದು, ಅವುಗಳ ಅವನತಿಗೆ ಕಾರಣವೆಂದವರು ಸ್ಪಷ್ಟಪಡಿಸಿದ್ದಾರೆ. ತಜ್ಞರನ್ನು ನಿರ್ಲಕ್ಷಿಸಿದ ಸರ್ಕಾರ ಎಂದಿದ್ದರೂ ಅಧೋಗತಿಗಿಳಿಯುತ್ತದೆಂಬುದರಲ್ಲಿ ಅನುಮಾನವಿಲ್ಲ, ಯೋಜನಾ ಆಯೋಗ ಬಿಳಿಯಾನೆ; ಅದರಿಂದೇನೂ ಪ್ರಯೋಜನವಿಲ್ಲವೆಂಬುದು ಅವರ ಪ್ರಾಮಾಣಿಕ ಅನಿಸಿಕೆ.

ಭಾರತೀಯ ಸಂಸ್ಕೃತಿ ಅತ್ಯಂತ ಪ್ರಾಚೀನವಾದದ್ದು, ಭಾರತೀಯ ತತ್ತ್ವಶಾಸ್ತ್ರ ಜಗತ್ತಿನಲ್ಲಿಯೇ ಶ್ರೇಷ್ಠವಾದದ್ದು ಎಂಬುದಾಗಿ ಹೆಮ್ಮೆಪಡುವಾಗ, ಅವು ಏಕೆ ಸಾಮಾನ್ಯ ಜನಸ್ತರಕ್ಕಿಳಿಯಲಿಲ್ಲ, ಇಳಿದಿದ್ದರೆ ಸಾಮಾಜಿಕ ಅಸಮಾನತೆ ತಾರತಮ್ಯಗಳು ಇರುತ್ತಿದ್ದುವೆ, ಅವು ಕೇವಲ ಕೆಲವರ ಸ್ವತ್ತಾಗಿದ್ದುದರಿಂದ ದೇಶ ಅವನತಿಯ ದಾರಿ ಹಿಡಿಯಿತೆ ಎಂಬೆಲ್ಲ ಸಮಸ್ಯೆಗಳಿಗೆ ಸಂಶೋಧನೆಯ ಮೂಲಕ ಉತ್ತರ ಕಂಡುಹಿಡಿದು, ಸಾಮಾನ್ಯನ ಉನ್ನತಿಗಾಗಿ ಮಾರ್ಗಗಳನ್ನು ರೂಪಿಸಬೇಕಾದ್ದು ದೇಶದ ಎಲ್ಲ ಸಂಶೋಧನ ಸಂಸ್ಥೆಗಳ ಗುರಿಯಾಗಿರಬೇಕೆಂದು ಅವರು ಸೂಚಿಸುತ್ತಾರೆ. ನಿರುದ್ಯೋಗದ ದೆಸೆಯಿಂದಾಗಿ ಪ್ರತಿನಿತ್ಯ ಎರಡು ಸಾವಿರ ಮಿಲಿಯ ಮಾನವ ಗಂಟೆಗಳು ಹಾಳಾಗುತ್ತಿರುವುದು ಯಾರೂ ಹೆಮ್ಮೆ ಪಡುವ ಸಂಗತಿಯಲ್ಲವೆಂದು ವಾದಿಸುತ್ತಾರೆ. ಗುಡಿ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸಿ, ಅವುಗಳಿಗೆ ಉತ್ತೇಜನ ನೀಡಿದ್ದರೆ ಇಷ್ಟೊಂದು ಮಾನವಶಕ್ತಿ ಪೋಲಾಗುತ್ತಿತ್ತೆ ಎಂದವರು ಪ್ರಶ್ನಿಸುತ್ತಾರೆ. ಮಾನವಶಕ್ತಿ ಸಂಪನ್ಮೂಲವನ್ನು ಸರಿಯಾಗಿ ಬಳಕೆಮಾಡಿಕೊಳ್ಳದಿರುವ ಸರ್ಕಾರ ನಿರರ್ಥಕವೆಂದೇ ಹೇಳಬೇಕಾಗುತ್ತದೆ.

ವಯೋಮಾನ ಕಾರಣವಾಗಿ ನಿಜಲಿಂಗಪ್ಪನವರು ಪಕ್ಷ ರಾಜಕೀಯದಿಂದ ನಿವೃತ್ತಿ ಹೊಂದಿದರೂ ರಾಜಕೀಯದ ಆಗು ಹೋಗುಗಳನ್ನು ಕುತೂಹಲಾವಿಷ್ಟರಾಗಿ ಗಮನಿಸುತ್ತಾರೆ. ದೇಶದಲ್ಲಿ ಹೆಚ್ಚುತ್ತಿರುವ ಅತ್ಯಾಚಾರ ಅನಾಚಾರ ಭ್ರಷ್ಟಾಚಾರಗಳು ಅವರ ನಿದ್ರೆಯನ್ನು ಕೆಡಿಸುತ್ತಿವೆ. ೯೦ನೇ ವಯಸ್ಸಿನಲ್ಲಿ ೧೯೯೨ರ ಮಾರ್ಚಿ ೨-೩ನೆಯ ತೇದಿಗಳಂದು ನಾಡಿನ ಹಿರಿಯ ಸಜ್ಜನರ

ಸಭೆಯೊಂದನ್ನು ದೆಹಲಿಯಲ್ಲಿ ಕರೆದು ಸದ್ಯದ ಪರಿಸ್ಥಿತಿಯನ್ನು ಕುರಿತು ತಾವೇ ಸಿದ್ಧಪಡಿಸಿದ ಸುದೀರ್ಘ ಟಿಪ್ಪಣಿಯನ್ನು ಆ ಸಭೆಯ ಮುಂದಿಡುತ್ತಾರೆ. ಅವರು ಯೋಚಿಸಿದ ಮತ್ತು ನಂಬಿದ ರಾಜಕೀಯ ತತ್ತ್ವಗಳ ಮೇಲೆ ಆ ಟಿಪ್ಪಣಿ ಬೆಳಕು ಬೀರುವುದರಿಂದ, ಅದರ ಸಾರಾನುವಾದವನ್ನಿಲ್ಲಿ ಕೊಡಲಾಗಿದೆ. 'ಭ್ರಷ್ಟಾಚಾರ ಮೇರೆ ಮೀರಿದೆ. ಬಡತನದಿಂದ ಬಂದ ಮಂತ್ರಿಗಳು ಶ್ರೀಮಂತರಾಗಿದ್ದಾರೆ. ಶ್ರೀಮಂತ ಮಂತ್ರಿಗಳು ಅತಿ ಶ್ರೀಮಂತರಾಗಿದ್ದಾರೆ. ಅಂಥವರನ್ನು ಬೆಂಬಲಿಸುವ ಜನರೂ ಭ್ರಷ್ಟಾಚಾರಿಗಳೇ ಹೌದು. ನ್ಯಾಯಾಂಗವೂ ಭ್ರಷ್ಟಾಚಾರದಿಂದ ಮುಕ್ತವಾಗಿಲ್ಲ. ಹಣ ಅಧಿಕಾರ ತಮ್ಮ ದೇವರೆಂದು ತಿಳಿದ ನಾಯಕರು ಅವುಗಳ ಗಳಿಕೆಗಾಗಿ ಎಂಥ ಹೇಯಕೃತ್ಯವನ್ನಾದರೂ ಎಸಗಲು ಸಿದ್ಧರಾಗಿದ್ದಾರೆ. ಲಪಟಾವಣೆಗಾಗಿಯೇ ಹೊಸ ಹೊಸ ರಾಜಕೀಯ ಪಕ್ಷಗಳು ತಲೆಯೆತ್ತುತ್ತಿವೆ. ಚುನಾವಣೆಗಳು ನಾಯಕರನ್ನು ತಿದ್ದುವ ಸಾಧನಗಳಾಗಿಲ್ಲ. ಪ್ರಜೆಗಳ ಮೂಲಭೂತ ಹಕ್ಕುಗಳ ಜತೆಗೆ ಸರ್ಕಾರದ ನೀತಿಯನ್ನು ರೂಪಿಸುವ ನಿರ್ದೇಶಕರ ಅಥವಾ ಮಾರ್ಗದರ್ಶೀ ಸೂತ್ರಗಳನ್ನು ಸಹ ಸಂವಿಧಾನದಲ್ಲಿ ಸೇರಿಸಲಾಗಿದೆ. ರಾಷ್ಟ್ರದ ಎಲ್ಲ ಮಕ್ಕಳಿಗೂ ಉಚಿತ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಗಬೇಕೆಂಬುದು ಅವುಗಳಲ್ಲೊಂದು ಸಂವಿಧಾನ ಜಾರಿಗೆ ಬಂದು ಅರ್ಧಶತಮಾನವಾದರೂ ಅದನ್ನು ಜಾರಿಗೆ ತರದಿರುವುದು ಸಂವಿಧಾನಕ್ಕೆಸಗಿದ ಅಪಚಾರವಾಗಿದೆ. ವ್ಯವಸಾಯಕ್ಕೆ ನೀರಾವರಿ ಯೋಜನೆಗಳಿಗೆ ಆದ್ಯತೆ ನೀಡಲಾಗಿದೆಯೆ? ಕೆಲವು ಕುಟುಂಬಗಳಲ್ಲಿ ಮಾತ್ರ ಧನ ಸಂಗ್ರಹವಾಗುತ್ತಿರುವುದು ನಿಂತಿದೆಯೆ? ಗುಡಿಕೈಗಾರಿಕೆಗಳ ವಿನಾಶದಿಂದ ಚಮ್ಮಾರರಂಥ ಕುಶಲಕರ್ಮಿಗಳು ನಿರುದ್ಯೋಗಿಗಳಾದರು, ಜತೆಗೆ ಕುಶಲಕಲೆಯೂ ಸತ್ತು ಹೋಯಿತು. ಈ ದುರಂತ ಕತೆಯ ಬಗ್ಗೆ ಯಾರಿಗಾದರೂ ಅನುಕಂಪವಿದೆಯೆ? ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆ ಬಂದನಂತರ ವಿಕೇಂದ್ರೀಕರಣ ನೀತಿ ಪೂರ್ಣಗೊಂಡಿದೆಯೆ? ಮಂತ್ರಿಗಳ, ಅಧಿಕಾರಿಗಳ, ಇತರ ನೌಕರರ ಸಂಖ್ಯೆ ಕಡಮೆಯಾಗಿದೆಯೆ? ಬಡವ ಬಲ್ಲಿದರ ನಡುವಣ ಅಂತರ ಕ್ಷೀಣಗೊಂಡು, ದೇಶ ಸಮಾಜವಾದದ ಅಂಚಿಗಾದರೂ ಬರಲು ಸಾಧ್ಯವಾಗಿದೆಯೆ? ಬೇರೆ ಬೇರೆ ತಲೆಗಳಿಗೆ ಹಾಕಿದ ಹಳೆಯ ಟೋಪಿ ತನ್ನ ಆಕಾರವನ್ನು ಕಳೆದುಕೊಂಡು ವಿಕಾರವಾದಂತಾಗಿದೆ ಸಮಾಜವಾದ. ಬ್ರಿಟಿಷ್ ಗೌರ್‍ನರರ ಅಧಿಕಾರಿಗಳ ಸುಖಲೋಲುಪತೆಯನ್ನು ಈಚಿನವರೂ ಶ್ರೀಮಂತರೂ ಅನುಕರಿಸುತ್ತಿರುವ ಕಾರಣಕ್ಕಾಗಿ ಶ್ರೀಮಂತ ಮತ್ತು ದರಿದ್ರ ಸಂಸ್ಕೃತಿಗಳು ಸಮಾನಾಂತರವಾಗಿ ಸಾಗುತ್ತಿವೆ. ಜಗತ್ತು ಬರಿಯ ಮಾಯೆ, ಇಲ್ಲಿಯ ಬದುಕು ತಾತ್ಕಾಲಿಕ ಎಂಬುದಾಗಿ ಬೋಧಿಸುವ ಶಾಸ್ತ್ರಗಳು ಭಾರತೀಯರ ಆಶಾವಾದವನ್ನು ಹಾಳು ಮಾಡಿ, ಅವರನ್ನು ದಿಕ್ಕುಗೆಡಿಸಿವೆ. ಚಾತುರ್ವರ್ಣ್ಯ ವ್ಯವಸ್ಥೆಯ ದುರಂತ ಪರಿಣಾಮವಂತು ಅವರ್ಣನೀಯ. ಪ್ರಜಾಪ್ರಭುತ್ವದಲ್ಲಿ ಇಂಥ ಅವೈಜ್ಞಾನಿಕ, ಅವೈಚಾರಿಕ, ಅಮಾನವೀಯ ಮೂಢನಂಬಿಕೆಗಳಿಗೆ ಅವಕಾಶವಿರಬಾರದು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ದೇಶವನ್ನು ಸಾಲದ ಶೂಲಕ್ಕೆ ನೂಕುತ್ತಿವೆ. ಸ್ವಿಟ್ಜರ್ಲೆಂಡಿನ ಬ್ಯಾಂಕುಗಳಲ್ಲಿರುವ ಭಾರತೀಯ ಶ್ರೀಮಂತಾಧಿಕಾರಿಗಳ ಹಣವೆಲ್ಲ ಈ ಸಾಲದಿಂದ ಬಂದದ್ದೇ ಇರಬೇಕು. ದೇಶದ ಆರ್ಥಿಕ ವಿಪನ್ನಾವಸ್ಥೆಗೆ ಜನಸಂಖ್ಯಾಸ್ಫೋಟವೂ ಕಾರಣವೆಂಬುದನ್ನಂತೂ ಅರಿತೂ ಅದನ್ನು ನಿಯಂತ್ರಿಸುವ ಮಾರ್ಗೋಪಾಯ ಕಂಡುಹಿಡಿಯದಿರುವುದೂ, ಕಂಡುಹಿಡಿದಿದ್ದರೂ ಕೆಲವು ಕೋಮುಗಳಿಗೆ ಹೆದರಿಕೊಂಡು ಅವುಗಳನ್ನು ಜಾರಿಗೊಳಿಸದಿರುವುದು ದುರ್ದೈವ'. ಭರತ ಖಂಡದ ಎಲ್ಲ ರಾಜ್ಯಗಳಿಂದ ಬಂದಿದ್ದ ಹಿರಿಯ ಧುರೀಣರು ಎಸ್ಸೆನ್ ಅವರ ಈ ಟಿಪ್ಪಣಿಯನ್ನು ಕುರಿತು ಚರ್ಚಿಸಿ ಅದರ ಆಧಾರದ ಮೇಲೆ 'ಘೋಷಣೆ'ಯನ್ನು ಸಿದ್ಧಪಡಿಸಿ, ಪತ್ರಿಕೆಗಳಿಗೆ ಅದನ್ನು ಬಿಡುಗಡೆ ಮಾಡುತ್ತಾರೆ.

ಮೂಲಭೂತ ಕರ್ತವ್ಯಗಳಡಿಯಲ್ಲಿ ಕಾಯಕದ ಹಕ್ಕನ್ನೂ, ಕಡ್ಡಾಯ ಮತದಾನದ ವಿಧಿಯನ್ನೂ ಸಂವಿಧಾನದಲ್ಲಿ ಸೇರಿಸಬೇಕಾಗಿತ್ತೆಂದು ನಿಜಲಿಂಗಪ್ಪನವರು ಬಯಸುತ್ತಾರೆ. ಇವುಗಳ ಜತೆಗೆ ನೀತಿಬಾಹಿರರೂ ನಿರಾಸಕ್ತರೂ ನಿಷ್ಕ್ರಿಯಾವಂತರೂ ಆದ ಶಾಸಕರನ್ನು ಸಂಸತ್ಸದಸ್ಯರನ್ನು ತೆಗೆದುಹಾಕುವ ಹಕ್ಕನ್ನು ಸಂಬಂಧಪಟ್ಟ ಚುನಾವಣಾ ಕ್ಷೇತ್ರಕ್ಕೆ ಕೊಡಬಹುದಿತ್ತೆಂಬ ಸಲಹೆಯನ್ನು ಅವರು ಉಲ್ಲೇಖಿಸಬಹುದಿತ್ತು. ಚುನಾವಣಾ ವೆಚ್ಚವನ್ನು ಸರ್ಕಾರ ಭರಿಸಬೇಕೆಂಬ ಅವರ ಅಭಿಪ್ರಾಯದ ಬಗ್ಗೆ ರಾಷ್ಟ್ರದ ಹಿರಿಯ ನಾಯಕರು ಗಂಭೀರವಾಗಿ ಆಲೋಚನೆ ಮಾಡಬೇಕಾಗಿದೆ.

ದಲಿತರ ಬಗ್ಗೆ ನಿಜಲಿಂಗಪ್ಪನವರಿಗೆ ಕನಿಕರ ಸಹಾನುಭೂತಿಯುಂಟು. ಭಾರತದ ಕ್ಷೇಮ ಅಸ್ಪೃಶ್ಯತೆಯೊಡನೆ ಗಂಟು ಹಾಕಿಕೊಂಡಿದೆಯೆಂಬುದು ಅವರ ಅಭಿಪ್ರಾಯ. ಮೀಸಲಾತಿಯ ಅನುಕೂಲಗಳು ಕೇವಲ ಕೆಲವು ಕುಟುಂಬಗಳಿಗೆ ಸೀಮಿತವಾಗದೆ, ಎಲ್ಲರಿಗೂ ದಕ್ಕುವಂತಾಗಬೇಕೆಂಬುದು ಅವರ ನಿಲವು. ದಲಿತರ ಮತ್ತು ಸವರ್ಣೀಯರ ನಡುವಣ ಅಂತರ ಸಮೆಯಬೇಕಾದರೆ, ದಲಿತರು ಸವರ್ಣೀಯರ ನೆರೆಹೊರೆಯಲ್ಲಿ ಬಾಳಬೇಕೆಂಬ ಅವರ ಯೋಚನೆ ಸರಿ. ಎಲ್ಲಿಯೇ ಆಗಲಿ, ನಿವೇಶನಗಳನ್ನು ಹಂಚುವಾಗ ದಲಿತರು ಮೊದಲುಗೊಂಡು ಎಲ್ಲ ಜಾತಿಯವರ ಮಿಶ್ರಣವನ್ನು ಸಾಧಿಸಬೇಕೆಂದವರು ಸೂಚಿಸುತ್ತಾರೆ. ಅಲ್ಪಸಂಖ್ಯಾತರ ಭಾರತ ನಿಷ್ಠೆಯ ಬಗ್ಗೆ ಅವರಿಗೆ ಅನುಮಾನವಿದೆ. ಅದಕ್ಕೆ ನಾಯಕರ ಹೇಡಿತನವೇ ಕಾರಣವೆಂಬುದು ನಿಜ.

ಏಕೀಕರಣವನ್ನು ಸಾಧಿಸಿದ ನಿಜಲಿಗಂಪ್ಪನವರು ಅದರ ಜತೆಯಲ್ಲಿಯೇ ಕನ್ನಡಕ್ಕೆ ಅಗ್ರಮಾನ್ಯಸ್ಥಾನವನ್ನು ಕಲ್ಪಿಸಿದ್ದರೆ, ಅಲ್ಪಸಂಖ್ಯಾತರು ಮೊದಲುಗೊಂಡು ಎಲ್ಲ ಭಾಷಾ ಅಲ್ಪಸಂಖ್ಯಾತರು ಕನ್ನಡವನ್ನು ಕಲಿಯುವಂತೆ ಏರ್ಪಾಡು ಮಾಡಿದ್ದರೆ, ಏಕತೆ ರೂಪಗೊಳ್ಳುತ್ತಿತ್ತು. ದುರದೃಷ್ಟವಶಾತ್ ಈ ಸುಸ್ಪಷ್ಟ ಸುಲಭಸೂತ್ರ ನಾಯಕರಿಗೆ ಅರ್ಥವಾಗದಿರುವುದೇ ಸೋಜಿಗ. ಪ್ರಾದೇಶಿಕ ಭಾಷೆಗಳಿಗೆ ಪಟ್ಟ ಕಟ್ಟುವಪಕ್ಷಕ್ಕೆ ಒಡಕುಗಳಿಗವಕಾಶವಿಲ್ಲದಂತೆ ಭಾವೈಕ್ಯ, ಸಮನ್ವಯ. ಸಾಮರಸ್ಯಗಳು ಕುದುರುತ್ತವೆಂಬುದನ್ನು ಎಸ್ಸೆನ್‌ರಂಥವರು ಅರ್ಥಮಾಡಿಕೊಳ್ಳಬೇಕಾಗಿತ್ತು.

ನಿಜಲಿಂಗಪ್ಪನವರು ಬಸವಣ್ಣನವರ ಕಟ್ಟಾ ಅಭಿಮಾನಿಗಳಾಗಿದ್ದುದರಿಂದ ನಿರ್ಜಾತೀಯ ಸಮಾಜ ರಚನೆಯಲ್ಲಿ ಆಸಕ್ತಿಯುಳ್ಳವರಾಗಿದ್ದರು. ಜಾತಿ ಲಾಂಛನಗಳ ಬಗ್ಗೆ ಅವರಿಗೆ ವಿಶ್ವಾಸವಿರಲಿಲ್ಲ. ಅನೇಕ ಸ್ವಾಮಿಗಳ ಸಂಕುಚಿತ ಭಾವನೆ ಹಾಗೂ ಸಂಪ್ರದಾಯಗಳನ್ನು ಕಠಿಣವಾಗಿಯೇ ಟೀಕಿಸುತ್ತಿದ್ದರು. ಭಾರತದಂಥ ಗಣರಾಜ್ಯದಲ್ಲಿ ಜಗದ್ಗುರು ಮಹಾಸಂಸ್ಥಾನಗಳೆಂಬ ಸ್ವಕಪೋಲಕಲ್ಪಿತ ಬಿರುದುಗದ್ದುಗೆಗಳು ನಗೆಪಾಟಲುಗಳೆಂಬುದು ಅವರ ಭಾವನೆಯಾಗಿತ್ತು. ಕರ್ಮ ಪುನರ್ಜನ್ಮಗಳಲ್ಲಿ ಅವರಿಗೆ ನಂಬಿಕೆಯಿರಲಿಲ್ಲ. ಜಗತ್ತು ಮಾಯೆಯೆಂದವರು ನಂಬಲಿಲ್ಲ. ಅವರು ಆಶಾವಾದಿಗಳಾಗಿದ್ದುದರಿಂದಲೇ ಸೌಂದರ್ಯೋಪಾಕರಾಗಿದ್ದರು. ಜಗಜ್ಜೀವನ ವಿಕಾಸಕ್ಕೆ ವಿಚಾರ ಕ್ರಾಂತಿಯೇ ಮೂಲವಾದ್ದರಿಂದ ಆ ಕ್ರಾಂತಿ ಚಿರಾಯುವಾಗಿರಬೇಕೆಂಬುದು ಅವರ ಹಂಬಲ.

ದೇಶದ ಬಲವರ್ಧನೆಗಾಗಿ ರಾಜ್ಯಗಳಿಗೆ ಹೆಚ್ಚು ಅಧಿಕಾರ ನೀಡಬೇಕೆಂದೂ, ಸ್ವಾಯತ್ತತೆಯನ್ನು ನೀಡುವುದಾದರೆ ರಾಜ್ಯಗಳ ಶೀಘ್ರ ಅಭಿವೃದ್ಧಿ ಸಾಧ್ಯವೆಂದೂ, ಆ ಮೂಲಕ ರಾಷ್ಟ್ರ ಸುಭದ್ರವಾಗುತ್ತದೆಂದವರು ಸ್ಪಷ್ಟಪಡಿಸುತ್ತಾರೆ. ಐ.ಎ.ಎಸ್. ಐ.ಪಿ.ಎಸ್., ಮೊದಲಾದ ಅಖಿಲ ಭಾರತೀಯ ಸೇವಾವ್ಯವಸ್ಥೆಯ ಬಗ್ಗೆಯೂ ಅವರ ವಿರೋಧವಿದ್ದೇ ಇದೆ. ರಾಜ್ಯಾಂಗವನ್ನು ರಚಿಸುವಾಗಲೇ ರಾಜ್ಯಗಳ ರೆಕ್ಕೆಗಳನ್ನು ಕತ್ತರಿಸಲಾಗಿದೆ; ಅಷ್ಟೇ ಸಾಲದೆಂಬಂತೆ ತಿದ್ದುಪಡಿ, ಸುತ್ತೋಲೆ, ನಿರ್ಣಯ, ನಿರೂಪಗಳ ಮೂಲಕ ರಾಜ್ಯಗಳ ಅಧಿಕಾರಗಳನ್ನು ಕಸಿದುಕೊಳ್ಳಲಾಗಿದೆ. ಜತೆಗೆ ಕೇಂದ್ರ ಸರ್ಕಾರ ಅನೇಕ ಇಲಾಖೆಗಳನ್ನು ದ್ವಿಪ್ರತಿಗೊಳಿಸುವುದರ ಮೂಲಕ ರಾಜ್ಯಗಳಲ್ಲಿ ಸಮಾನಾಂತರ ಸರ್ಕಾರ ನಡೆಸುತ್ತ, ಹಣವನ್ನು ಪೋಲು ಮಾಡುತ್ತಿದೆಯೆಂದವರು ಆಗ್ರಹಿಸುತ್ತಾರೆ.

೧೯೬೮ರ ಆಗಸ್ಟ್ ತಿಂಗಳಲ್ಲಿ ರಷ್ಯಾ ಜೆಕೊಸ್ಲಾವಿಯಾಕ್ಕೆ ಸೈನ್ಯ ನುಗ್ಗಿಸಿದಾಗ ನಿಜಲಿಂಗಪ್ಪನವರು ಅಸಮಾಧಾನಗೊಳ್ಳುತ್ತಾರೆ. ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರಗಳನ್ನೊದಗಿಸುವ ಅಮೆರಿಕಾ ನೀತಿಯನ್ನವರು ಖಂಡಿಸುತ್ತಾರೆ. ಅವರಿಗೆ ಕಮ್ಯೂನಿಸಂನಲ್ಲಿ ವಿಶ್ವಾಸವಿಲ್ಲ. ಚೀನಾ ಟಿಬೆಟ್ಟನ್ನು ನುಂಗಿಕೊಂಡದ್ದು ಸರಿಯಲ್ಲವೆಂಬ ಅಭಿಪ್ರಾಯವಿದ್ದರೂ, ಇಂಡಿಯಾಕ್ಕೆ ಚೀನಾ ಸ್ನೇಹ ಅಗತ್ಯವೆಂದವರು ವಾದಿಸುತ್ತಾರೆ. ಮತಾಂಧತೆ ಗಾಢವಾಗಿರುವ ಅರಬ್ ರಾಷ್ಟ್ರಗಳ ಬಗ್ಗೆ ಅವರಿಗೆ ನಂಬಿಕೆಯಿಲ್ಲ. ಭಾರತ ಇಸ್ರೇಲ್ ಜತೆ ಸ್ನೇಹ ಬೆಳೆಸಬೇಕೆಂಬುದು ಅವರ ಆಲೋಚನೆ. ಅಲಿಪ್ತ ರಾಷ್ಟ್ರಗಳ ಸಂಘಟನೆಯ ಬಗ್ಗೆ ವಿರೋಧವಿಲ್ಲವಾದರೂ, ಅಲಿಪ್ತ ನೀತಿ ಎಷ್ಟರಮಟ್ಟಿಗೆ ಫಲದಾಯಕವಾಗುತ್ತದೆಂಬುದರ ಬಗ್ಗೆ ಅವರಿಗೆ ಸಂದೇಹವುಂಟು. ಸದಾ ಅಮೆರಿಕೆಯನ್ನು ದೂರುತ್ತ ರಷ್ಯಾದ ಕಡೆಗೆ ವಾಲಿಕೊಂಡಿರುವ ಭಾರತದ ವರ್ತನೆ ಅಲಿಪ್ತ ನೀತಿಗನುಗುಣವಾಗಿದೆಯೇ ಎಂದವರು ಪ್ರಶ್ನಿಸುತ್ತಾರೆ. ಒಂದೇ ರಾಷ್ಟ್ರದಿಂದ ಶಸ್ತ್ರಾಸ್ತ್ರಗಳನ್ನು ತರಿಸಿಕೊಳ್ಳುವುದು ಸರಿಯಲ್ಲವೆಂದು, ಬೇರೆ ಬೇರೆ ರಾಷ್ಟ್ರಗಳಿಂದಲೂ ತರಿಸಿಕೊಳ್ಳಬಹುದೆಂದು ಅವರು ಸೂಚಿಸುತ್ತಾರೆ. ವಿದೇಶೀಯ ನೀತಿಗೆ ಸಂಬಂಧಿಸಿದ ಸಲಹೆಗಳನ್ನವರು ಮಂಡಿಸಿದ್ದು ಸಾಮಾನ್ಯವಾಗಿ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದಾಗ ಎಂದಿಟ್ಟುಕೊಳ್ಳಬಹುದು. ಆ ಸಲಹೆಗಳು ಎಷ್ಟರಮಟ್ಟಿಗೆ ಸ್ವೀಕಾರಯೋಗ್ಯವೆನ್ನುವುದು ಆಡಳಿತಗಾರರಿಗೆ ಬಿಟ್ಟ ವಿಚಾರವಾದರೂ, ನಿಜಲಿಂಗಪ್ಪನವರ ರಾಜಕೀಯ ವಿಚಾರ ಧೋರಣೆಯನ್ನರಿಯಲು ಅವು ಸಹಾಯವಾಗುತ್ತವೆಂಬುದಂತು ನಿಜ.

## ತತ್ತ್ವಜ್ಞಾನಿ ರಾಧಾಕೃಷ್ಣನ್

ಜಗತ್ತಿನ ಶ್ರೇಷ್ಠ ತತ್ವಜ್ಞಾನಿಗಳಲ್ಲೊಬ್ಬರೂ ವಿವೇಕಾನಂದರ ನಂತರ ಭಾರತೀಯ ತತ್ತ್ವಶಾಸ್ತ್ರವನ್ನು ಪಾಶ್ಚಾತ್ಯರಿಗೆ ಸಮರ್ಪಕವಾಗಿ ಬೋಧಿಸಿದ ಮಹಾಭಾಷ್ಯಕಾರರೂ, ತೌಲನಿಕ ತತ್ತ್ವಶಾಸ್ತ್ರದ ಅದ್ವಿತೀಯ ಬೋಧಕರೂ ಆದ **ಸರ್ವಪಲ್ಲಿ ರಾಧಾಕೃಷ್ಣನ್** (೧೮೮೮-೧೯೭೫) ಧರ್ಮದ ಹಿನ್ನೆಲೆಯಲ್ಲಿ ಪ್ರಜಾಪ್ರಭುತ್ವದ, ಸಾಮಾಜಿಕ ನ್ಯಾಯದ, ಲೋಕಶಾಂತಿಯ ಕಲ್ಪನೆಯನ್ನು ರೂಪಿಸಿದ, ಆಂಗ್ಲ ಭಾಷಾ ವಾಗ್ವೈಖರಿಯ ಜಾದೂಗಾರರು. ಮೈಸೂರು, ಕಲ್ಕತ್ತ ವಿಶ್ವವಿದ್ಯಾನಿಲಯಗಳಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕರಾಗಿ, ಆಂಧ್ರ ಮತ್ತು ಬೆನಾರಸ್ ವಿಶ್ವವಿದ್ಯಾನಿಲಯಗಳ ಕುಲಪತಿಗಳಾಗಿ ಹೆಸರು ಮಾಡಿ, ರಾಷ್ಟ್ರದ ಅತ್ಯುನ್ನತ ಸ್ಥಾನಗಳಾದ ಉಪರಾಷ್ಟ್ರಪತಿ-ರಾಷ್ಟ್ರಪತಿ ಪದವಿಯನ್ನು ಅಲಂಕರಿಸಿದ ಮಹಾವಿದ್ವಾಂಸರು ಹಾಗೂ ಶಿಕ್ಷಣ ತಜ್ಞರು. ಅವರು ರಚಿಸಿದ 'ಇಂಡಿಯನ್ ಫಿಲಾಸಫಿ' ಜಗತ್ತಿಗೆ

ಭಾರತೀಯ ಸಂಸ್ಕೃತಿಯನ್ನು ಪರಿಚಯಿಸಿಕೊಟ್ಟ ಮಹಾಗ್ರಂಥವಾಗಿದೆ. ರಿಲಿಜನ್ ಅಂಡ್ ಸೊಸೈಟಿ, ಕಲ್ಕಿ ಆರ್ ದಿ ಫ್ಯೂಚರ್ ಆಫ್ ಸಿವಿಲಿಜೇಷನ್, ಇಂಡಿಯಾ ಅಂಡ್ ಚೀನಾ, ಈಸ್ ದಿಸ್ ಪೀಸ್, ಹಿಂದೂ ವ್ಯೂ ಆಫ್ ಲೈಫ್, ಇವೇ ಮೊದಲಾದುವು ಅವರು ರಚಿಸಿದ ಲೋಕಪ್ರಿಯ ಗ್ರಂಥಗಳು.

ರಾಧಾಕೃಷ್ಣನ್ ಅವರಿಗೆ ಹಿಂದೂ ಧರ್ಮ ಹಾಗೂ ಭಾರತೀಯ ಸಂಸ್ಕೃತಿಯ ಬಗ್ಗೆ ಅಪಾರ ಅಭಿಮಾನವಿದೆ, ಗೌರವವಿದೆ. ಹಿಂದೂ ಧರ್ಮವೊಂದು ಆಂದೋಳನ, ಇನ್ನೂ ಬೆಳೆಯುತ್ತಿರುವ ಧರ್ಮ, ತನ್ನ ಬಳಿಗೆ ಬಂದ ಎಲ್ಲ ಧರ್ಮಗಳ ಸಾರವನ್ನು ಹೀರಿ ಪುಷ್ಟಿಗೊಳ್ಳುತ್ತಿರುವ ಶಕ್ತಿ ಪುಂಜ. ಆದ್ದರಿಂದಲೇ ಪರಕೀಯರ ಆಕ್ರಮಣ, ವಿದೇಶೀಯ ಮತಪ್ರಸಾರಕ, ಹಾವಳಿ, ರಾಜಕೀಯಾರ್ಥಿಕ ಗಂಡಾಂತರಗಳ ನಡುವೆಯೂ ಅದು ಉಳಿದಿದೆ ಎಂದವರು ಅಭಿಪ್ರಾಯಪಡುತ್ತಾರೆ. ಜಗತ್ತು ದೇವರ ಮನೆ; ಅದು ಮಿಥ್ಯೆಯಲ್ಲ, ಸತ್ಯ; ನಿಸರ್ಗದ ವೈವಿಧ್ಯವೆಲ್ಲವೂ ಮೂಲಶಕ್ತಿಯ ಲೀಲೆಯ ಫಲ; ಸರ್ವಮುಕ್ತಿಯೇ ಧರ್ಮದ ಗುರಿ ಎಂಬ ಉಪನಿಷದೀಯ ತತ್ವದಲ್ಲವರಿಗೆ ವಿಶ್ವಾಸವುಂಟು.

ಅವರು ಬುದ್ಧಿಯಷ್ಟೇ ಅಂತರ್ಜ್ಞಾನಕ್ಕೆ ಬೆಲೆ ಕೊಡುತ್ತಾರೆ. 'ನಿತ್ಯಸತ್ಯದ ಅಭಿವ್ಯಕ್ತಿಯ ಮಾಧ್ಯಮವದು. ಮೂಲ ಅಧ್ಯಾತ್ಮ ಶಕ್ತಿಯ ಅಡಿಪಾಯವೇ ಅದು. ಕಲಾವಿದರ ಕವಿಗಳ ತತ್ತ್ವಜ್ಞಾನಿಗಳ ವಿಜ್ಞಾನಿಗಳ ಸೃಜನಶೀಲ ಸಂಶೋಧನೆಗೆ ಅದರಿಂದಲೇ ಸ್ಫೂರ್ತಿ ಪ್ರೇರಣೆ. ಬುದ್ಧಿಗೆ ಮೊದಲಿನ, ಅದಕ್ಕೂ ತಳಹದಿ ಎನ್ನಬಹುದಾದ ಮೂಲಶಕ್ತಿಯದು. ಅದು ಭಾವುಕತೆಯಲ್ಲಿ, ಬುದ್ಧಿಗೆ ವಿರೋಧವಾದದ್ದಲ್ಲ. ಅದು ಮನಸ್ಸಿನ ಆತ್ಮ ಸ್ವರೂಪದ ಅಂತರ್ಜಲ. ಜೀವನದ ಅಂತರಾಳದಲ್ಲಿ ಹುದುಗಿರುವ ಅನೇಕ ನಿಗೂಢ ರಹಸ್ಯಗಳು ಅಭಿವ್ಯಕ್ತವಾಗುವುದೇ ಅಂತರ್ಜ್ಞಾನದ ಮೂಲಕ' ಇದು ರಾಧಾಕೃಷ್ಣನ್ ಅವರ ಅಂತರ್ಜ್ಞಾನದ ಸ್ವರೂಪ ವಿವರಣೆ. ನಿಮ್ಮ ಸಂಶೋಧನೆಗಳ ಹಿಂದಿರುವ ಶಕ್ತಿ ಯಾವುದು ಎಂದು ಯಾರೋ ಕೇಳಿದಾಗ 'ಅಂತರ್ಜ್ಞಾನ' ಎಂದು ಮಹಾವಿಜ್ಞಾನಿ ಐನ್‌ಸ್ಟೀನ್ ಉತ್ತರ ಕೊಡುತ್ತಾರೆ. ಐನ್‌ಸ್ಟೀನ್ ಮುಂದುವರಿದು 'ಅಂತರ್ಜ್ಞಾನದಿಂದ ಪಡೆದ ಅರಿವನ್ನು ಬುದ್ಧಿ ತರ್ಕ ಪ್ರಯೋಗಗಳ ಮೂಲಕ ಸಾಧಿಸಬೇಕಾಗುತ್ತದೆ' ಎಂದು ವಿವರಣೆ ನೀಡುತ್ತಾರೆ. ರಾಜಕೀಯ ಮೊದಲುಗೊಂಡು ಎಲ್ಲ ವ್ಯವಹಾರಗಳಲ್ಲಿಯೂ ಅಂತರ್ಜ್ಞಾನದ ಪಾತ್ರವಿದ್ದೇ ಇದೆ ಎಂಬುದಕ್ಕೆ ಗಾಂಧೀಜಿ ಜೀವನವೇ ನಿದರ್ಶನ. ಮಾರ್ಟಿನ್ ಲೂಥರ್‌ಕಿಂಗ್‌ನೂ ಈ ನಿಜವನ್ನೊಪ್ಪಿಕೊಳ್ಳುತ್ತಾನೆ.

'ಜಗತ್ತಿನಲ್ಲಿ ಅನೇಕ ನಾಗರಿಕತೆಗಳು ತಲೆದೋರಿ, ಮಣ್ಣಿನಲ್ಲಿ ಹೂತುಹೋಗಿವೆ. ದುಷ್ಟವ್ಯವಸ್ಥೆಗಳಂತು ಹೊಟ್ಟೆಬಾಕತನ ಆಕ್ರಮಣ ಘಾತ ಮತ್ತು ಅಹಂಕಾರಗಳಿಗೆ ಬಲಿಯಾಗುತ್ತವೆ. ಸರ್ವಾತ್ಮ ಭಾವೋದ್ದೇಶದ ನಾಗರಿಕತೆಗಳು ಮಾತ್ರ ಲೋಕ ಕಲ್ಯಾಣಕಾರಕವಾಗಿ ಉಳಿಯುತ್ತವೆ. ಜನಾಂಗಿಕ ಆಕ್ರಮಣಕಾರಿ ಮನೋಭಾವ, ಸರ್ವಾಧಿಕಾರ ಸಂಸ್ಕೃತಿ, ಸರ್ವಸ್ವಾಮ್ಯ ಪ್ರವೃತ್ತಿ, ಸೈನ್ಯಾವಲಂಬಿ ಬರ್ಬರತೆ ಮತ್ತು ಧನ ಸಂಗ್ರಹ ಶೀಲ ಸೂಕರ ಸ್ವಭಾವ ಲೋಕಶಾಂತಿಯನ್ನು ಕದಡುತ್ತವೆ. ಸಹನೆ ಸೌಹಾರ್ದ ಸೋದರ ಭಾವಗಳು ಮಾತ್ರ ವಿಶ್ವಶಾಂತಿಗೆ ಅನುವಾಗುತ್ತವೆ. ಆ ಮೂಲಕವೇ ವಿಶ್ವನಾಗರಿಕತೆ ಉದ್ಧಾರವಾಗಬೇಕಾಗಿದೆ' ಎಂಬುದು ಅವರ ಆಶಯ. ಒಂದು ನಾಗರಿಕತೆಯ ಅಗತ್ಯ ಮುಗಿದನಂತರ, ಅದು ತಾನಾಗಿಯೇ ಮಣ್ಣುಗೂಡುತ್ತದೆ. ಅದರ ಸಮಾಧಿಯ ಮೇಲೆ ವಿನೂತನ ನಾಗರಿಕತೆ ಹುಟ್ಟುತ್ತದೆ ಎಂಬ ನಿಸರ್ಗ ರಹಸ್ಯವನ್ನು ಮರೆಯಲಾಗದು.

ಲೋಕಕ್ಷೇಮಕ್ಕಾಗಿ ಹುಟ್ಟಿದ ಮತಗಳು ತಮ್ಮಲ್ಲಿಯೇ ಹುಟ್ಟಿಕೊಂಡಿರುವ ಮೌಢ್ಯಾಂಧತೆ, ಸಾಮಾಜಿಕಾನಿಷ್ಟ ಜೀರ್ಣ ಸಂಪ್ರದಾಯಗಳಿಂದ ಪಾರಾದಾಗ ಮಾತ್ರ ವ್ಯಷ್ಟಿ ಮತ್ತು ಸಮಷ್ಟಿಗಳ ನೆಲೆಯಲ್ಲಿ ಶಾಂತಿ ನೆಲಸಲು ಸಾಧ್ಯವಾಗುತ್ತದೆಯಾದ್ದರಿಂದ ಗಾಂಧೀಜಿಯಂತೆ ರಾಧಾಕೃಷ್ಣನ್‌ರವರೂ ರಾಜಕೀಯ ಕ್ಷೇತ್ರದ ಆಧ್ಯಾತ್ಮೀಕರಣಕ್ಕೆ ಒತ್ತು ನೀಡುತ್ತಾರೆ. ಪ್ರಾಯೋಗಿಕ ಧರ್ಮವೇ ರಾಜಕೀಯವೆಂಬುದು ಅವರ ಭಾವನೆ. 'ಮತವೆಂಬುದು ಬೇಜವಾಬ್ದಾರಿ ಜಗತ್ತು ಪ್ರಚೋದಿಸುವ ಮನೋವಿಕಾರತೆಯಲ್ಲ; ಐತಿಹಾಸಿಕ ಆಕಸ್ಮಿಕವಲ್ಲ; ಪಲಾಯನ ಮಂತ್ರವಲ್ಲ; ಮನೋವೈಜ್ಞಾನಿಕ ತಂತ್ರವಲ್ಲ. ಮಾನವ ಸ್ವಭಾವದ ಅವಿಭಾಜ್ಯಾಂಶ; ವಿಧಿಯ ಸಂದೇಶ; ವೈಯಕ್ತಿಕ ಮೌಲ್ಯದ ಅಭಿವ್ಯಕ್ತಿ; ಮಾನವನ ಆತ್ಮವನ್ನು ಹಸನುಗೊಳಿಸುವ ವಿಧಾನ; ವಿಶ್ವ ರಹಸ್ಯವನ್ನು ತೋರಿಸುವ ಬೆಳಕು; ಸಕಲ ಪ್ರಾಣಿಗಳಲ್ಲಿ ಅನುಕಂಪ ಹುಟ್ಟಿಸುವ ಕಾರುಣ್ಯದ ಹೊಳಹು.' ರಾಧಾಕೃಷ್ಣನ್ ಆದರ್ಶಮತದ ಸ್ವರೂಪವನ್ನು ಕುರಿತು ಹೇಳುವ ಮಾತು ಇವು. ವಸ್ತುಸ್ಥಿತಿಯನ್ನು ನಿಜದ ನೆಲೆಯನ್ನು ಕಂಡುಕೊಳ್ಳಲು ನಡೆಸುವ ಸಾಧನೆ ಮತ; ಮಾನವತೆ-ಮಾನವೀಯತೆಗಳ ಸಂಕೇತವದು ಎಂದವರು ಹೇಳುತ್ತ, ಇಂದಿನ ಮತಗಳು ಯಾವ ದಿಕ್ಕಿನಲ್ಲಿ ಚಲಿಸುತ್ತಿವೆಯೆಂಬುದನ್ನು ತಿಳಿಸುತ್ತಾರೆ: ಈಗವು ಪುರೋಹಿತಶಾಹಿಯ ಕೈಗೊಂಬೆಯಾಗಿವೆ. ಎಂದು ನುಡಿಯುತ್ತ 'ಪವಿತ್ರಗ್ರಂಥಗಳನ್ನು ವಿಕಾರವಾಗಿ ವ್ಯಾಖ್ಯಾನಿಸುವ ಪುರೋಹಿತಷಾಹಿಯ ದೌರ್ಜನ್ಯಗಳು ಇಂಡಿಯಾಕ್ಕೆ ಮಾತ್ರವೇ ಸೀಮಿತವಲ್ಲ; ಜಗತ್ತಿನಲ್ಲಿ ಜರುಗುತ್ತಿರುವ ಅರ್ಧಕ್ಕಿಂತ ಹೆಚ್ಚು ಯುದ್ಧಗಳು, ಪಾಪ, ಕಷ್ಟಕ್ಲೇಶಗಳು, ಮತೀಯ ಹಿಂಸೆ, ಕೊಲೆ, ದಹನ, ಚಿತ್ರಹಿಂಸೆ,

ಮೊದಲಾದುವುಗಳಿಗೆ ಅವುಗಳ ದುಷ್ಟ ಭಾವವೇ ಕಾರಣ' ಎಂದವರು ಸ್ಪಷ್ಟಪಡಿಸುತ್ತಾರೆ. ಇಡೀ ಮನುಕುಲಕ್ಕೆ ಏಕಮತ ಎಂಬ ಇದು ತರ್ಕಸಮ್ಮತವಲ್ಲದ ಭಾವನೆ, ಅವಿಚಾರತೆಯ ಪರಿಣಾಮ, ಅಸಹನೆಯ ತಂದೆ ಎಂದವರು ಸಾರಿದ್ದುಂಟು. 'ಅಸ್ಪೃಶ್ಯತೆಯನ್ನು ಸಹಿಸಿಕೊಂಡ ಸಮಾಜಕ್ಕೆ ನಾಗರಿಕವೆಂದು ಕರೆಸಿಕೊಳ್ಳುವ ಹಕ್ಕಿಲ್ಲ. ಜಾತಿ ಶ್ರೇಷ್ಠತೆಯನ್ನು, ಕೋಮು ದ್ವೇಷವನ್ನು ಬೋಧಿಸುವ ವಿದ್ಯೆ ಯಶಸ್ವಿಯಾಗದು. ಸಾಮಾಜಿಕ ನ್ಯಾಯ, ಸಾಮಾಜಿಕ ಭದ್ರತೆಯ ಮೊದಲ ಮೆಟ್ಟಿಲಾಗಬೇಕು.' ಎಂಬುದು ಅವರ ಅಭಿಪ್ರಾಯ. ಆದರೆ ಪುರೋಹಿತ ಶಾಹಿಯನ್ನಾಗಲಿ, ಜಾತೀಯತೆಯನ್ನಾಗಲಿ ಬುಡಮುಟ್ಟ ಕೀಳಬೇಕೆಂದು ಕುವೆಂಪು ಅವರಂತೆ ಖಡಾಖಂಡಿತವಾಗಿ ಅವರು ಹೇಳಲಾರರು. ತಳ ಬುಡಕಾಣದ ಆಧುನಿಕ ಮಾನವ ವಿಜ್ಞಾನ, ಧರ್ಮ ಮತ್ತು ಮಾನವತೆಗಳ ಸಾಮರಸ್ಯವನ್ನು ಕಂಡುಕೊಳ್ಳಬೇಕೆಂಬುದು ಅವರ ಮತ.

'ಎಲ್ಲಿ ನಿಜವಾದ ವ್ಯಕ್ತಿ ಸ್ವಾತಂತ್ರ್ಯವಿದೆಯೋ ಅದೇ ಮುಕ್ತ ಸಮಾಜ. ರಾಜಕೀಯ ಸ್ವಾತಂತ್ರ್ಯದ ತತ್ತ್ವ ತಂತ್ರಗಳೆರಡೂ ಪ್ರಜಾಪ್ರಭುತ್ವದಲ್ಲಿ ಅಡಕಗೊಂಡಿವೆ. ಎಲ್ಲಿ ವಿಶೇಷ ತಜ್ಞತೆಯ ಅಗತ್ಯವಿದೆಯೊ ಅದನ್ನು ಜನಸಮೂಹ ನಿರ್ಧರಿಸಲಾರದು. ಪ್ರತಿಯೊಬ್ಬ ವ್ಯಕ್ತಿಯ ಜೀವನವೂ ಪವಿತ್ರ. ಆದರೆ ಮಾನವರೆಲ್ಲ ಸರ್ವಸಮಾನರೆನ್ನುವುದು ಪ್ರಜಾಪ್ರಭುತ್ವದ ಅರ್ಥವಲ್ಲ. ಚರ್ಚೆ ಮತ್ತು ಸಹಕಾರ ಸಮನ್ವಯದ ಮೂಲಕ ಸಾಮಾಜಿಕಾರ್ಥಿಕ ಆಡಳಿತಾತ್ಮಕ ಬದಲಾವಣೆಗಳನ್ನು ಮಾಡಿಕೊಳ್ಳುವುದೇ ಪ್ರಜಾತಂತ್ರ. ಆರ್ಥಿಕ ನ್ಯಾಯವಿಲ್ಲದ ಪ್ರಜಾಸತ್ತೆಯನ್ನು ಸಮರ್ಥಿಸಿಕೊಳ್ಳಲಾಗದು. ತೆರಿಗೆಯ ಮೂಲಕ ಧನಸಂಗ್ರಹವನ್ನು ನಿಯಂತ್ರಿಸಬೇಕು. ಆದರೆ ಖಾಸಗಿ ಆಸ್ತಿಯ ಬಲವಂತ ಹಂಚಿಕೆ ಸಲ್ಲದು.' ಪ್ರಜಾಸತ್ತೆಯ ಬಗೆಗಿನ ರಾಧಾಕೃಷ್ಣನ್ ಅವರ ಈ ಅಭಿಪ್ರಾಯದಲ್ಲಿ ಸಮೂಲ ಕ್ರಾಂತಿಯ ಆಶಯವಿರದಿದ್ದರೂ, ಸಾಮಾಜಿಕ ನ್ಯಾಯದ ಕಾತರತೆಯಿದೆಯೆನ್ನುವುದು ಹಾಗೂ ಪ್ರತಿಗಾಮಿ ಅಥವಾ ಪ್ರಗತಿ ವಿರೋಧಿಯಲ್ಲವೆನ್ನುವುದು ಸುಸ್ಪಷ್ಟ. ಸಾಮ್ಯ ಸಮತಾವಾದ ಸಮಾನತಾವಾದಕ್ಕಿಂತ, ಸಮಾನಾವಕಾಶವಾದವೇ ವಿಶ್ವಸಮ್ಮತವಾಗುತ್ತದೆಂದು, ಅದೇ ಪ್ರಜಾಸತ್ತೆಯ ತತ್ತ್ವ ಹಾಗೂ ತಂತ್ರವೆಂಬುದನ್ನು ಈ ಸಂದರ್ಭದಲ್ಲಿ ಒತ್ತಿ ಹೇಳಬಹುದಾಗಿದೆ.

ರಾಧಾಕೃಷ್ಣನ್ ಹಿಂದೂಧರ್ಮದ, ಭಾರತೀಯ ಸಂಸ್ಕೃತಿಯ ವೈಭವವನ್ನು ಹೆಮ್ಮೆಯಿಂದ, ಆತ್ಮಪ್ರತ್ಯಯದಿಂದ ಪಾಶ್ಚಾತ್ಯರಿಗೆ ಬೋಧಿಸಿದ ಅಪ್ರತಿಮ, ಅದ್ವಿತೀಯ ವಿದ್ವಾಂಸರು, ವ್ಯಾಖ್ಯಾನಕಾರರು ಹಾಗೂ ಮಹಾವಾಗ್ಮಿಗಳು. ಆದರವರು ಕಾಂಟ್, ಹೆಗೆಲ್, ನೀತ್ಸೆ, ಶಂಕರ, ರಾಮಾನುಜ, ಮಧ್ವ, ಬಸವೇಶ್ವರರಂತೆ ವಿನೂತನ ಸಿದ್ಧಾಂತಗಳನ್ನು ರೂಪಿಸಿದ ಆಚಾರ್ಯರಲ್ಲ. ರಾಜಕೀಯ ಕ್ಷೇತ್ರದಲ್ಲಂತು ಗಾಂಧೀಜಿಯ ಸಿದ್ಧಾಂತಗಳನ್ನು ಸಂಪೂರ್ಣವಾಗಿ ಒಪ್ಪಿಕೊಂಡು, ಅವುಗಳನ್ನು ತಮ್ಮ ಬದುಕಿನಲ್ಲಿ ಪ್ರಾಮಾಣಿಕವಾಗಿ ಕಾರ್ಯಗತ ಗೊಳಿಸಿದ ನೀತಿವಂತ ತತ್ತ್ವಜ್ಞಾನಿಗಳು.

## ಕನ್ನಡ ಸಾಹಿತ್ಯ ಮತ್ತು ರಾಜಕೀಯ

ಬೃಹಸ್ಪತಿ, ಸರ್ವವಿದ್ಯಾಶಕ್ತಿ ಸರಸ್ವತಿಯ ಅವತಾರಗಳಲ್ಲಿ ಸಾಹಿತ್ಯದಂಥ ವಿಶ್ವರೂಪಿ ಬಹುಮುಖೀ ಜ್ಞಾನ ಶಾಖೆ ಮತ್ತೊಂದಿಲ್ಲ. ಇತಿಹಾಸ, ಭೂಗೋಳ, ತತ್ತ್ವಶಾಸ್ತ್ರ, ಭೌತ ವಿಜ್ಞಾನ ಮೊದಲಾದ ಶಾಖೆಗಳ ವ್ಯಾಪ್ತಿ ಸೀಮಿತ; ಸ್ವಕ್ಷೇತ್ರದಿಂದಾಚೆಗೆ ಅವುಗಳ ಗಮನ ಹರಿಯುವುದಿಲ್ಲ. ಸೂರ್ಯನ ಕೆಳಗೆ ನಡೆಯುವ ವ್ಯಾಪಾರಗಳೆಲ್ಲ ಸಾಹಿತ್ಯ ವಸ್ತುವಾಗುತ್ತವೆ. ಅಷ್ಟೇ ಅಲ್ಲ, ಚತುರ್ದಶಲೋಕಗಳಲ್ಲೆಲ್ಲ ಅದು ವಿಹರಿಸುತ್ತದೆ. ಚಿಂತನಾಭ್ಯಾಸ ಕಲ್ಪನಾ ಪ್ರತಿಭೆಯ ಅಂತರ್ಬೋಧೆಯ ಪರಿಣಾವಾಗಿ ಸಾಹಿತಿಯ ಲೋಕವೀಕ್ಷಣ ಸಾಮರ್ಥ್ಯ ಅಸಾಧಾರಣವಾಗಿರುತ್ತದೆ. ಅವನ ಮನೋದರ್ಪಣ ಇಡೀ ಲೋಕವನ್ನೆ ಪ್ರತಿಬಿಂಬಿಸುತ್ತದೆ; ತನಗೆ ಬೇಕಾದ್ದನ್ನು ಭದ್ರಪಡಿಸಿಕೊಂಡು, ಉಳಿದದ್ದನ್ನು ತಿರಸ್ಕರಿಸುತ್ತದೆ. ಜಗತ್ತಿನಲ್ಲಿ ಅದಕ್ಕೆ ವಸ್ತುವಾಗದ ವ್ಯಾಪಾರ, ವ್ಯವಹಾರ, ವೃತ್ತಿ, ವೃತ್ತಗಳೇ ಇಲ್ಲ. ಚಿತ್ತ ವ್ಯಾಪಾರ ಹಾಗೂ ಹೃದಯ ಸ್ಪಂದನಗಳ ಜತೆಗೆ ಸಮಾಜದ ಆಗು ಹೋಗುಗಳ ಅಭಿವ್ಯಕ್ತಿಯೂ ಅದರ ಕರ್ತವ್ಯ ಕರ್ಮ. ಸಾಮಾಜಿಕ ಬದ್ಧತೆ ಸಾಹಿತಿಯ ಧರ್ಮವಾಗಬೇಕು. ಸರ್ವವ್ಯಾಪೀ ರಾಜಕೀಯ ವ್ಯವಹಾರಗಳ ಮಧ್ಯೆ ಸಾಹಿತಿ ಬದುಕು ನಡಸಬೇಕಾಗಿರುವುದರಿಂದ ಸಾಕ್ಷೀ ಪ್ರಜ್ಞೆಯಿಂದ ಅವುಗಳ ಪ್ರಭಾವದಿಂದ ಮುಕ್ತಗೊಳ್ಳಲು ಸಾಧ್ಯವೇ ಇಲ್ಲ. ಅವುಗಳ ಮೇಲೆ ಚಿಂತನೆಯ ಕ್ಷ ಕಿರಣ ಹಾಯಿಸುವ, ಆ ಬಗ್ಗೆ ಪ್ರತಿಕ್ರಿಯೆ ಯನ್ನು ವ್ಯಕ್ತಪಡಿಸುವ ಅವಕಾಶವಿದ್ದೇ ಇದೆ. ರಾಜಕೀಯದ ಲೋಪದೋಷಗಳು ಅವನ ಸಾಕ್ಷಿ ಪ್ರಜ್ಞೆಗೆ ಹೊಳೆಯುವಂತೆ, ರಾಜಕೀಯದಲ್ಲಿಯೇ ಮುಳುಗಿರುವವನಿಗೆ ಗೊತ್ತಾಗುವುದಿಲ್ಲ. ಗೊತ್ತಾದರೂ ಅವುಗಳನ್ನು ಸರಿಪಡಿಸಿಕೊಳ್ಳಲು ಸಿದ್ಧನಾಗಿರುವುದಿಲ್ಲ. ಆದ್ದರಿಂದ ಸರ್ವಭೂತ ಹಿತರತನೂ, ಮಾನವತಾವಾದಿಯೂ ಮೌಲ್ಯಾಭರಣನೂ, ನಿರ್ಭೀತನೂ, ಪ್ರಾಮಾಣಿಕನೂ ಆದ ಸಾಹಿತಿ

ಕುರುಕ್ಷೇತ್ರಾರಂಭದ ಪಾರ್ಥನಂತಾಗದೆ, ಆ ಲೋಪ ದೋಷಗಳನ್ನು ತನಗೆ ತೋರಿದ ರೀತಿಯಲ್ಲಿ ಬಹಿರಂಗಗೊಳಿಸಲೇಬೇಕು. ಲೋಕಾನುಭವ ಸಮೃದ್ಧನಾದ ಸಾಹಿತಿ ಲೋಕಸಂಗ್ರಹಕಾರನೂ ಆಗಬೇಕಾದ್ದು ಅತ್ಯಗತ್ಯ.

ಪರಿವರ್ತನಶೀಲವಾದ ಜಗತ್ತಿನ ಆಗುಹೋಗುಗಳಿಗೆ, ವೈಚಾರಿಕ ವೈಜ್ಞಾನಿಕ ಕ್ರಾಂತಿಗನುಗುಣವಾಗಿ ಜನಜೀವನ ಸ್ಪಂದಿಸುವಂತೆ ತಿದ್ದಬೇಕಾದ್ದು ಸಾಹಿತಿಯ ಕರ್ತವ್ಯವೆಂದು ಅಧ್ಯಾತ್ಮಸಿದ್ಧಿಯ ಶಿಖರವೇರಿದ ಶ್ರೀ ಕುವೆಂಪು ಸಹ ವಾದಿಸುತ್ತಾರೆ. 'ರಾಜಕೀಯ, ಆರ್ಥಿಕ, ಸಾಮಾಜಿಕ ಪ್ರಪಂಚಗಳಲ್ಲಿ ಕ್ರಾಂತಿಕಾರಕವಾದ ಸಿದ್ಧಾಂತಗಳೂ, ಪ್ರಯೋಗಗಳೂ ಮಿಂಚಿನ ವೇಗದಿಂದ ಸಾಗುತ್ತಿರುವ ಈ ಸಮಯದಲ್ಲಿ ಹೊಸ ಸನ್ನಿವೇಶಕ್ಕೆ ಹೊಂದಿಕೊಳ್ಳುವಂತೆ, ಹೊಸ ತತ್ತ್ವಗಳನ್ನು ಒಪ್ಪಿಕೊಳ್ಳುವಂತೆ, ಹೊಸ ರೀತಿಯ ತ್ಯಾಗಗಳಿಗೆ ಸಿದ್ಧವಾಗುವಂತೆ, ಹಳೆಯ ಡಂಭದರ್ಪಾಚಾರಗಳನ್ನು ತ್ಯಜಿಸಿ ಹೊಸ ನಿಯಮಗಳನ್ನು ಮರ್ಯಾದೆಯಿಂದ ಅಂಗೀಕರಿಸುವಂತೆ ಬುದ್ಧಿಯನ್ನೂ ಹೃದಯವನ್ನೂ ತಿದ್ದಬೇಕಾದುದು ಅಗತ್ಯ. ಈ ಕೆಲಸವನ್ನು ಸಾಧಿಸುವುದರಲ್ಲಿ ಕೆಲವು ರಾಷ್ಟ್ರಗಳು ಮೊದಮೊದಲು ಲೇಖನಿಗಿಂತಲೂ ಹೆಚ್ಚಾಗಿ ಕತ್ತಿಯನ್ನೆ ನೆಚ್ಚಿ, ಕಾರ್ಯಸಾಧನೆಯಲ್ಲಿ ಸ್ವಲ್ಪಮಟ್ಟಿಗೆ ಶೀಘ್ರ ವಿಜಯಿಗಳಾದಂತೆ ತೋರಿದರೂ, ಅಪಖ್ಯಾತಿಗೂ ಲೋಕ ನಿಂದೆಗೂ ಸಾಮೂಹಿಕ ಸಂಶಯಕ್ಕೂ ಪಕ್ಕಾಗಿ, ಕೊನೆಗೆ ಲೇಖನಿಯ ನೆರವನ್ನೆ ನೆಮ್ಮಬೇಕಾಯಿತು. ಬುದ್ಧಿಯನ್ನು ಎಚ್ಚರಿಸಿ ಸೂಕ್ಷ್ಮಗೊಳಿಸಿ, ನಾನಾ ರೂಪದ ಪ್ರಾಚೀನ ಮತ್ತು ನವೀನ ಮೌಢ್ಯಗಳಿಂದ ಅದನ್ನು ಪಾರು ಮಾಡಿ, ವಿಚಾರಪರತೆಯನ್ನು ವೈಜ್ಞಾನಿಕ ದೃಷ್ಟಿಯನ್ನು ನೆಲೆಗೊಳಿಸಿ, ಜನತೆಯನ್ನು ಸಮನ್ವಯ ಸರ್ವೋದಯ ಮತ್ತು ಪೂರ್ಣದೃಷ್ಟಿಗಳ ಕಡೆಗೆ ತಿರುಗಿಸುವ ಹೊರೆ ಹೊಣೆ ಎರಡೂ ಕತ್ತಿಕುಡುಗೋಲುಗಳಿಂತಲೂ ಹೆಚ್ಚಾಗಿ ಲೇಖನಿಯ ಮೇಲೆಯೆ ಬೀಳುತ್ತದೆ. ಬುದ್ಧಿಯಷ್ಟೆ, ಅಥವಾ ಅದಕ್ಕಿಂತಲೂ ಮಿಗಿಲಾಗಿಯೆ, ಹೃದಯ ಪರಿವರ್ತನೆ ಅತ್ಯಗತ್ಯ. ಆ ಕೆಲಸ, ವಿವಿಧ ಮತ ಧರ್ಮಗಳು ನೆಲಸಿರುವ ನಮ್ಮ ದೇಶದಲ್ಲಿ, ಸಾಹಿತ್ಯದಿಂದಲೆ ಸಾಧ್ಯವಾಗಬೇಕಾಗಿದೆ. ಕ್ರೋಧಾಸೂಯೆ, ಸ್ಪರ್ಧೆ, ವೈರ, ಜಾತಿಮಾತ್ಸರ್ಯ, ದ್ವೇಷ, ದುರ್ಬುದ್ಧಿ, ಸ್ವಾರ್ಥತೆ, ಇತ್ಯಾದಿ ಭಾವೋನ್ಮಾದ ಬುದ್ಧಿ ವಿಕಾರಗಳಿಂದ ಕಲುಷಿತವಾಗಿರುವ ವಿಷಮಯವಾಗಿರುವ ರಾಜಕೀಯ ಕ್ಷೇತ್ರದಲ್ಲಿ ಏನೇನನಾಹುತವಾಗುತ್ತಿದೆಯೆನ್ನುವುದು ಲೋಕವೇದ್ಯ ಸಂಗತಿ. 'ಸಾಹಿತ್ಯ ಈ ವಿಷವನ್ನೆಲ್ಲ ಈಂಟುವ ನೀಲಕಂಠನಾಗಬೇಕು; ಅಮೃತವನ್ನು ಹಂಚುವ ದಿವ್ಯ ಮೋಹಿನಿಯಾಗಬೇಕು. ಸಂತ ಪ್ರವಾದಿ ಸದೃಶ ಮಹಾಕವಿಯ ಈ ವಾಣಿ ಸರ್ವದಾ ಸ್ವೀಕಾರಯೋಗ್ಯ, ಸಮಾಜದ ಆರೋಗ್ಯ ದೃಷ್ಟಿಯಿಂದ ಸಮಷ್ಟಿಹಿತದ ದೃಷ್ಟಿಯಿಂದ, ರಾಜಕೀಯ ಕ್ಷೇತ್ರದ ಲೋಪ ದೋಷಗಳನ್ನು ತಿದ್ದಿ, ಕೊಳಕನ್ನು ತೊಳೆಯುವುದು ಸಾಹಿತಿಯ ಉದ್ದೇಶಗಳಲ್ಲೊಂದಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ.

ಸಮಾಜದ ಮೇಲೆ ಅದಮ್ಯ ಪ್ರಭಾವ ಬೀರಬಲ್ಲ ಅನೇಕ ಆಧುನಿಕ ಗಣ್ಯ ಕೀರ್ತಿವಂತ ಸಾಹಿತಿಗಳು ದಕ್ಷಿಣ ಭಾರತದಲ್ಲಿ ಅಪಾರ ಸಂಖ್ಯೆಯಲ್ಲಿದ್ದಾರೆ. ಕೇವಲ ಪ್ರಾತಿನಿಧಿಕವಾಗಿ ಕೆಲವು ಹೆಸರುಗಳನ್ನಿಲ್ಲಿ ಉಲ್ಲೇಖಿಸಲಾಗಿದೆ: ಸುಬ್ರಹ್ಮಣ್ಯ ಭಾರತಿ, ಭಾರತಿದಾಸನ್, ವಲ್ಲತ್ತೋಳ್, ಶಿವಶಂಕರ ಪಿಳ್ಳೆ, ಶ್ರೀ ನಾರಾಯಣರೆಡ್ಡಿ ಇತ್ಯಾದಿ.

### ಸ್ವಾತಂತ್ರ್ಯ ಸಮರ-ಸಾಹಿತಿಗಳ ಕೊಡುಗೆ

ಇಪ್ಪತ್ತನೆಯ ಶತಮಾನ ಕನ್ನಡ ಸಾಹಿತ್ಯ ಚರಿತ್ರೆಯ ಸುವರ್ಣಯುಗ. ಈ ಯುಗದಲ್ಲಿ ಅವತರಿಸಿದಷ್ಟು ಕವಿ, ಸಾಹಿತಿವೃಂದ, ವೈಭವಯುತ ವೈವಿಧ್ಯಮಯ ಮೌಲ್ಯ ಸಂಪನ್ನಕೃತಿ ರಾಶಿ ಹಿಂದೆಂದೂ ಕಾಣದ್ದು. ಜಗತ್ತಿನ ಅತ್ಯುತ್ತಮ ಸಾಹಿತಿ ಹಾಗೂ ಸಾಹಿತ್ಯ ಕೃತಿಗಳಿಗೆಣೆಯಾದ ಸಾಹಿತಿ ಮತ್ತು ಸಾಹಿತ್ಯ ವಿಮರ್ಶೆ, ಮೀಮಾಂಸೆ, ಸಂಶೋಧನ ಸಾಹಿತ್ಯ, ವಿಚಾರ ಸಾಹಿತ್ಯ, ಮಹಾಕಾವ್ಯ- ಹೀಗೆ ಎಲ್ಲ ಪ್ರಕಾರಗಳಲ್ಲಿಯೂ ಅದ್ಭುತ ಕಾರ್ಯ ನಡೆದಿದೆ. ಪಾಶ್ಚಾತ್ಯ ಸಾಹಿತ್ಯ ವಿದ್ಯೆ ವಿಜ್ಞಾನ ವಿಚಾರಗಳ ಸಂಪರ್ಕ, ಸ್ವಾತಂತ್ರ್ಯ ಸಮರ ಹಾಗೂ ಗಾಂಧೀಜಿಯ ನಾಯಕತ್ವ, ಅಂಬೇಡ್ಕರ್ ಸಾಹಸದ ಕಥೆ, ಇವೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಕನ್ನಡ ಸಾಹಿತಿಗಳ ಮೇಲೆ ಅಪರಿಮಿತ ಅಪ್ರತಿಹತ ಪ್ರಭಾವ, ಪ್ರೇರಣೆ, ಸ್ಫೂರ್ತಿ, ಪರಿಣಾಮಗಳನ್ನು ಬೀರಲಾಗಿ ಕನ್ನಡದಲ್ಲಿ ವಿನೂತನ ವೈವಿಧ್ಯಮಯ ಸಾಹಿತ್ಯ ಸೃಷ್ಟಿಯಾಯಿತೆಂಬುದು ನಿಜ. ಹೀಗಾಗಿ ಇಪ್ಪತ್ತನೆಯ ಶತಮಾನದ ಹಿರಿಯ ತಲೆಮಾರಿನ ಸಾಹಿತಿಗಳ ಕೃತಿಗಳಲ್ಲಿ ಸಾಂದ್ರವಾಗಿಯೋ ವಿರಳವಾಗಿಯೋ ಬಿರುಸಾಗಿಯೋ ಶಿಥಿಲವಾಗಿಯೋ ರಾಜಕೀಯ ವಿಚಾರ ವಿದ್ಯಮಾನಗಳು ತಲೆದೋರುತ್ತವೆ.

ಬೇಂದ್ರೆ, ಕುವೆಂಪು, ಪುತಿನ, ಗೋಕಾಕ್, ಗೋವಿಂದ ಪೈ, ಮಾಸ್ತಿ, ಗೋಪಾಲಕೃಷ್ಣ ಅಡಿಗ, ರಾಜರತ್ನಂ, ಚಂದ್ರಶೇಖರ ಕಂಬಾರ, ತೇಜಸ್ವಿ, ಚಂಪಾ, ನಿಸಾರ್ ಅಹಮದ್, ಶಿವರುದ್ರಪ್ಪ, ಕಣವಿ, ಅರವಿಂದ ಮಾಲಗತ್ತಿ ಅನಂತಮೂರ್ತಿಯವರ ಕಥೆ ಕಾವ್ಯ ಮಹಾಕಾವ್ಯಗಳೊಳಗೆ ಹೆಪ್ಪು ಹೆಪ್ಪಾಗಿಯೋ, ಗಣ್ಣೆಗಣ್ಣೆಯಾಗಿಯೋ, ತುಣುಕು ತುಣುಕಾಗಿಯೋ ಸಾಮಾಜಿಕ ರಾಜಕೀಯ ವಿಚಾರಗಳು ಪ್ರವೇಶಿಸುತ್ತವೆ. ಶಿವರಾಮ ಕಾರಂತ, ಅನಕೃ, ನಿರಂಜನ, ಕೋಚೆ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕೃಷ್ಣಮೂರ್ತಿ

ಪುರಾಣಿಕ, ಬಸವರಾಜ ಕಟ್ಟೀಮನಿ, ತರಾಸು, ಚದುರಂಗ, ಎಸ್. ಎಲ್. ಭೈರಪ್ಪ ಮೊದಲಾದವರು ಸ್ವಾತಂತ್ರ್ಯ ಸಮರ ಕಾಲದ ವಿದ್ಯಮಾನಗಳಿಗೆ ಮತ್ತು ಸ್ವಾತಂತ್ರ್ಯೋತ್ತರ ಕಾಲದ ರಾಜಕೀಯ ವಿಷಯಗಳಿಗೆ ಸಂಬಂಧಿಸಿದಂತೆ ಪೂರ್ಣಶಃ ಅಥವಾ ಭಾಗಶಃ ಕಾದಂಬರಿಗಳನ್ನು ರಚಿಸಿದ್ದಾರೆ. ಕೈಲಾಸಂ 'ಶ್ರೀರಂಗ', ಲಂಕೇಶ್, ಮುಂತಾದವರು ತಮ್ಮ ನಾಟಕಗಳಲ್ಲಿ ಸಾಮಾಜಿಕ ರಾಜಕೀಯ ಸಮಸ್ಯೆಗಳನ್ನೆತ್ತಿದ್ದಾರೆ. ಕನ್ನಡಕ್ಕೆ ಅನೇಕ ಮಹಿಳಾ ಸಾಹಿತಿಗಳನ್ನು ಕೊಟ್ಟ, ಮಹಿಳಾ ಸ್ವಾತಂತ್ರ್ಯವನ್ನು ಎತ್ತಿಹಿಡಿದ ಶತಮಾನವಿದು. ತ್ರಿವೇಣಿ, ಅನುಪಮಾ ನಿರಂಜನ, ಪ್ರೇಮಾಭಟ್, ಸಾರಾ ಅಬೂಬಕ್ಕರ್, ಚಿ.ನ. ಮಂಗಳ, ಆರ್ಯಾಂಬ ಪಟ್ಟಾಭಿ, ಮಲ್ಲಿಕಾ, ಶಾಂತಾದೇವಿ ಮಾಳವಾಡ, ಕಮಲಾ ಹಂಪನಾ, ವೀಣಾ ಶಾಂತೇಶ್ವರ, ನಿರುಪಮ, ಪ್ರೇಮಾಭಟ್, ಲತಾ, ರಾಜಶೇಖರ್, ಮಂಗಳಾ ಸತ್ಯನ್, ಮಲ್ಲಿಕಾ ಘಂಟಿ ಮೊದಲಾದವರನ್ನು ನೆನೆಯಬಹುದು. ಲೇಖಕಿಯರ ಪೈಕಿ ಮಹಾಕಾವ್ಯವನ್ನು ರಚಿಸಿದ ಕೀರ್ತಿ ಮಲ್ಲಿಕಾ ಅವರಿಗೆ ಸಲ್ಲುತ್ತದೆ. ದೇವನೂರ ಮಹಾದೇವ, ಸಿದ್ಧಲಿಂಗಯ್ಯರಂಥ ಹಲವು ಶಕ್ತ ಕವಿಗಳ ಕೊಡುಗೆ ಈ ಯುಗದ ವೈಶಿಷ್ಟ್ಯ. ರಾಜಕೀಯ ಸಾಮಾಜಿಕ ಸಮಸ್ಯೆಗಳ ಸಂಘರ್ಷವನ್ನು ತೀವ್ರವಾಗಿ ಗಮನಿಸಿದ ಬರಗೂರು ರಾಮಚಂದ್ರಪ್ಪ, ಕೆ. ಎಸ್. ಭಗವಾನ್, ಸಿದ್ಧರಾಮಯ್ಯನವರನ್ನೊಳಗೊಂಡ ಬಂಡಾಯ ಸಾಹಿತ್ಯದ ಪ್ರವರ್ತಕ ವೃಂದ ಉಗಮಗೊಂಡದ್ದೂ ಈ ಶತಮಾನದಲ್ಲಿಯೇ. ಈಚಿನವರಾದರೂ ಮಠಾಧೀಶರಾಗಿಯೂ, ವಿಚಾರವಾದಿ ಸಾಹಿತಿಯೆಂದು ಖ್ಯಾತರಾಗಿರುವ ಶ್ರೀ ಚನ್ನಮಲ್ಲ ವೀರಭದ್ರ ಸ್ವಾಮಿಗಳನ್ನು ಈ ಸಂದರ್ಭದಲ್ಲಿ ನೆನೆಯಲೇಬೇಕು. ಸಾಹಿತಿಗಳು ರಾಜಕೀಯಕ್ಕಿಳಿದರೆ, ರಾಜಕಾರಣಿಗಳು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರೆ ಸಾಹಿತ್ಯಸಾಗರಕ್ಕೆ ಅಪೂರ್ವ ಅನುಭವ ಸ್ರೋತ ಹರಿದು ಬರುವುದರಲ್ಲಿ ಅನುಮಾನವಿಲ್ಲ. ಶಿವರಾಮ ಕಾರಂತರು ಸ್ವತಂತ್ರವಾಗಿ, ಅಡಿಗರು ಸ್ವತಂತ್ರ ಪಕ್ಷದಿಂದ ಚುನಾವಣೆಗೆ ನಿಂತು ಪರಾಭವಗೊಳ್ಳುತ್ತಾರೆ. ನಾಮಕರಣದ ಮೂಲಕ ಕೇವಲ ಕೆಲವರು ಮೇಲ್ಮನೆಗೆ ಪ್ರವೇಶಿಸಿದ್ದುಂಟು. ಆದರೆ ನ್ಯಾಯ ನಿಷ್ಠುರರಿಗೆ ಸಾಮಾನ್ಯವಾಗಿ ಅಲ್ಲಿ ಅವಕಾಶವಿರುವುದಿಲ್ಲ. ಸಾಹಿತ್ಯಪ್ರೇಮಿಗಳಾದ ಪ್ರತಿಭಾವಂತ ರಾಜಕಾರಣಿಗಳಲ್ಲಿ ಒದು ಗುಳಿಗಳು ವಿರಳವಾದರೂ, ಸಾಹಿತ್ಯಕ್ಕೆ ಕ್ಷೇತ್ರಕ್ಕೆ ನುಸುಳಿದವರು ಕಡಮೆ. ಅಂಥ ವಿರಳರಲ್ಲಿ ಆರ್. ಆರ್. ದಿವಾಕರ್, ಕಡಿದಾಳ್ ಮಂಜಪ್ಪ, ವೀರಪ್ಪ ಮೊಯಿಲಿ, ಎಂ. ಪಿ. ಪ್ರಕಾಶ್ ಮುಖ್ಯರು. ಮುಖ್ಯಮಂತ್ರಿಗಳಾಗಿದ್ದ ಮೊಯಿಲಿಯವರು ಮಹಾಕಾವ್ಯ ರಚನೆಗೆ ತೊಡಗಿದ್ದಾರೆಂಬುದು ಕನ್ನಡಿಗರು ಮೆಚ್ಚಿ ಉಬ್ಬಬೇಕಾದ ಸಂಗತಿ. ಕನ್ನಡ ಸಾಹಿತ್ಯದ ಪಿತಾಮಹರಂತಿರುವ ಡಿವಿಜಿ ಯವರು ಪತ್ರಕರ್ತರಾಗಿ, ರಾಜಕಾರಣ ವಿಶಾರದರಾಗಿ, ರಾಜಕೀಯ ಶಾಸ್ತ್ರವನ್ನು ಕುರಿತು ಉದ್ಗ್ರಂಥಗಳನ್ನು ರಚಿಸಿದ್ದಾರೆಂಬುದು ಹೆಮ್ಮೆ ಪಡಬಹುದಾದ ವಿಚಾರ. ಅವರ ಪೀಳಿಗೆಗೆ ಸೇರಿದವರು ಪಾಟೀಲ ಪುಟ್ಟಪ್ಪನವರು. ಅವರು ಮೊದಲು ಪತ್ರಕರ್ತರು; ಸಂಪಾದಕರಲ್ಲಿ ಗಣ್ಯ ಸಂಪಾದಕರಾಗಿ ರಾಜಕಾರಣಿಗಳಲ್ಲಿ ಉತ್ತಮ ರಾಜಕಾರಣಿಯಾಗಿ, ಸಾಹಿತಿಗಳಲ್ಲಿ ಕೀರ್ತಿವಂತ ಸಾಹಿತಿಗಳಾಗಿ ಹೆಸರು ಮಾಡಿದ್ದಾರೆ. ಭಾಷಾ ಪ್ರಯೋಗದಲ್ಲಂತು ಅವರೊಬ್ಬರು ಮೋಡಿಗಾರರೆಂದೇ ಹೇಳಬಹುದು. ಕನ್ನಡ ಸಾಹಿತ್ಯಕ್ಕೆ ಪತ್ರಿಕಾಕರ್ತರು ನೀಡಿರುವ ಕೊಡುಗೆ ಅಪಾರ, ಅಮೂಲ್ಯ. ಆ ಬಗ್ಗೆ ಹತ್ತಾರು ಪಿಎಚ್.ಡಿ. ಪ್ರಬಂಧಗಳಿಗವಕಾಶವಿದೆ. ಸುಪ್ರಸಿದ್ಧ ಅಂಕಣಕಾರರಾದ ಎಚ್ಚೆಸ್ಕೆ, ಕು.ಶಿ. ಹರಿದಾಸ ಭಟ್ಟ, ಹಾಮಾನಾರಂಥವರು ನೂರಾರು ಸಾವಿರಾರು ಸಾಮಾಜಿಕ ರಾಜಕೀಯ ಸಮಸ್ಯೆಗಳನ್ನೆತ್ತಿಕೊಂಡು ಕೂಲಂಕಷವಾಗಿ ನಿರ್ಭಿಡೆಯಿಂದ ಚರ್ಚಿಸಿದ್ದಾರೆಂಬುದು ನಾಡವರಿಗೆಲ್ಲ ಗೊತ್ತು. ಇಷ್ಟೂ ಗಣ್ಯರ ರಾಜಕೀಯ ಚಿಂತನಮಂಥನಗಳ ವಿವರಣೆ ವ್ಯಾಖ್ಯಾನಗಳಿಗೆ ಹಲವು ಹೆಬ್ಬೊತ್ತಿಗೆಗಳೆ ಬೇಕಾಗುತ್ತವೆ. ಅಷ್ಟನ್ನು ಸಿದ್ಧಪಡಿಸಲು ನನಗೆ ವ್ಯವಧಾನವೂ ಇಲ್ಲ, ಶಕ್ತಿಯೂ ಇಲ್ಲ. ಆದ್ದರಿಂದ ಕರ್ನಾಟಕ, ಭಾರತ ಮಾತ್ರವಲ್ಲ, ಇಡೀ ಜಗತ್ತಿಗೆ ಅನ್ವಯಿಸಬಹುದಾದ ಸಾರ್ವಕಾಲಿಕ ಸಾರ್ವದೇಶಿಕ ವಿಚಾರಗಳನ್ನು ನೀಡಿರುವ, ಅಧ್ಯಾತ್ಮವನ್ನು ಬಿಡದೆ ವೈಚಾರಿಕತೆ ಮಾನವತ್ವವನ್ನು ಪ್ರತಿಪಾದಿಸುವ, ರಾಜಕೀಯ, ತತ್ತ್ವಶಾಸ್ತ್ರ, ಸಮಾಜಸುಧಾರಣೆ ಮೊದಲಾದ ಜೀವನದ ಸರ್ವಮುಖಗಳಿಗೂ ಕನ್ನಡಿ ಹಿಡಿದಿರುವ ಏಕೈಕ ಕವಿ ಕುವೆಂಪು ಅವರ ರಾಜಕೀಯ ಚಿಂತನಮಂಥನಗಳನ್ನು ಮಾತ್ರ ಕೇವಲ ನಿದರ್ಶನಾರ್ಥವಾಗಿ ಸಂಗ್ರಹಿಸಲಾಗಿದೆ. ಕವಿಗಳು ಅನಧಿಕೃತ ಶಾಸನಕರ್ತರೆಂಬುದನ್ನು ಮರೆಯಲಾಗದು.

**ಕುವೆಂಪು ಅವರ ರಾಜಕೀಯ ಚಿಂತನೆ** : ಕನ್ನಡಾಭಿಮಾನಿ. ಅವರ ಕನ್ನಡ ಪ್ರೇಮ ಪರಭಾಷಾದ್ವೇಷವಾಗಿ ಪರಿಣಮಿಸುವುದಿಲ್ಲ. ಕನ್ನಡವನ್ನು ಕುರಿತ ಅವರ ಲೇಖನ ಭಾಷಣ ಕವಿತೆಗಳು ಸ್ವಾರ್ಥತೆಯ, ಅಂಧಾಭಿಮಾನದ ಭಾವುಕತೆಯ ಫಲಗಳಲ್ಲ; ವೈಚಾರಿಕ ಪ್ರವೃತ್ತಿ, ವಿಜ್ಞಾನಬುದ್ಧಿ, ಲೋಕಾನುಭವ, ವಿವೇಕಯುತವಾದ ದೂರದೃಷ್ಟಿ ಹಾಗೂ ಋತಧರ್ಮ ನಿಷ್ಠೆಯಿಂದ ಪ್ರೇರಿತವಾದವು. ಕನ್ನಡವೆನ್ನುವುದು

೧. ಕನ್ನಡ - ನನ್ನಮನೆ

ಅವರ ಪಾಲಿಗೆ ಒಂದು ಮಹಾಶಕ್ತಿ, ಒಂದು ದಿವ್ಯ ಮಂತ್ರ, ಒಂದು ವಿಭೂತಿ ತತ್ವ; ಪ್ರಜಾಪ್ರಭುತ್ವದ ಸಂಕೇತ, ಒಂದು ಜನಾಂಗದ ಆಶೋತ್ತರಗಳ, ಸೃಜನಶೀಲ ಪ್ರತಿಭೆಯ, ಆತ್ಮ ತೇಜಸ್ಸಿನ ಚಿಹ್ನೆ. ಸಹಸ್ರ ಸಹಸ್ರ ವರ್ಷಗಳ ಸಾಂಸ್ಕೃತಿಕ ಸಂಪತ್ತಿನ ಜ್ಯೋತಿಃಪುಂಜ. ಕೋಟ್ಯಂತರ ಜನರ ತಪಸ್ಸಿನ, ಚಿಂತನೆಯ, ದುಡಿಮೆಯ, ಸಾಧನೆಯ, ಸಿದ್ಧಿಯ, ಬುದ್ಧಿ ಭಾವಗಳ ಅಮೃತ ನಿಧಿಯದು. ಆದ್ದರಿಂದಲೇ ಅವರು

ಕನ್ನಡ ಎನೆ ಕುಣಿದಾಡುವುದೆನ್ನೆದೆ,<br>
ಕನ್ನಡ ಎನೆ ಕಿವಿ ನಿಮಿರುವುದು !

ಎಂದು ಕುಣಿದು ಕುಪ್ಪಳಿಸುತ್ತಾರೆ. ಕನ್ನಡದಲ್ಲಿ ಬಿನ್ನವಿಸಿಕೊಂಡಿದ್ದಾದರೆ, ಹರಿ ವರಗಳ ಮಳೆ ಕರೆಯುತ್ತಾನೆ, ಹರ ಪೊರೆಯುತ್ತಾನೆಂಬ ನಿಷ್ಠೆ ಅವರದು.

ಹೆರರ ಮಕ್ಕಳ ಮೀರಿ ನಿನ್ನವನು ಚೆಲುವನಮ್ಮಾ,<br>
ನೀನು ಒಲಿದರೆ ಮುಗಿಲ ಸರಿಸಕ್ಕೆ ನಿಲುವನಮ್ಮಾ

ಎಂದು ಅಮ್ಮನ ಮುಂದೆ ಮೊರೆಯಿಡುತ್ತಾರೆ.[೧]

ಕನ್ನಡಕೆ ಹೋರಾಡು<br>
ಕನ್ನಡದ ಕಂದ<br>
ಕನ್ನಡವ ಕಾಪಾಡು<br>
ನನ್ನ ಆನಂದಾ

ಎಂದು ಅನ್ಯರ ತುಳಿತಕ್ಕೊಳಗಾದ ಕನ್ನಡಾಂಬೆ ತನ್ನ ಮಕ್ಕಳನ್ನು ಕೇಳಿಕೊಳ್ಳುತ್ತಾಳೆ.[೨]

ತಾಯಿಯ ಆರ್ತನಾದಕ್ಕೆ ಮರುಗಿದ ಕವಿ

ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ,<br>
ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ!<br>
ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿ ಸಾಕ್ಷಿ<br>
ಗೆಲವಿದ್ದರದಕೆ ನಿಮಗಿಹುದು ಶಕ್ತಿ.[೩]

ಎಂದು ಕನ್ನಡಿಗರನ್ನೆಚ್ಚರಿಸುತ್ತಾರೆ. 'ಎಲ್ಲಾದರು ಇರು; ಎಂತಾದರು ಇರು; ಎಂದೆಂದಿಗು ನೀ ಕನ್ನಡವಾಗಿರು'[೪] ಕನ್ನಡತನವೊಂದಿದ್ದರೆ ಅಮೆರಿಕೆಯೊ, ರಷ್ಯವೊ ಎಲ್ಲಿದ್ದರೂ ಅಲ್ಲಿ ಕನ್ನಡವಿರುತ್ತದೆಂಬುದು ಕವಿಯ ವಿಶ್ವಾಸ - 'ಪಂಪರನ್ನರ್ ಕುಮಾರವ್ಯಾಸ ಲಕ್ಷ್ಮೀಶ ಹರಿಹರಾದಿಗಳ ಉಸಿರು ನಮ್ಮೊಳಿರ್ಪನ್ನೆಗಂ' ಕನ್ನಡಕ್ಕೆ ಅಳುಕಿಲ್ಲ, ಅಳಿವಿಲ್ಲವೆಂದವರು ಘೋಷಿಸುತ್ತಾರೆ.[೫] ಮೈಸೂರು ಕರ್ನಾಟಕದಲ್ಲಿ ಸೇರಲು ಸಕಾಲವಲ್ಲವೆಂದು ಪ್ರಜಾಪ್ರತಿನಿಧಿಸಭೆಯಲ್ಲಿ ತೀರ್ಮಾನವಾದ ಸಂದರ್ಭದಲ್ಲಿ ಅವರು

ದೀಕ್ಷೆಯ ತೊಡು ಇಂದೇ;<br>
ಕಂಕಣ ಕಟ್ಟಿಂದೇ!<br>
ಕನ್ನಡ ನಾಡೊಂದೇ;<br>
ಇನ್ನೆಂದೂ ತಾನೊಂದೇ![೬]

೧. ಕಂದ ಕನ್ನಡನಿವನು ಕೈ ಬಿಡದಿರಮ್ಮಾ - ಇಕ್ಷು ಗಂಗೋತ್ರಿ
೨. ಕನ್ನಡಮ್ಮನ ಹರಕೆ - ಕೋಗಿಲೆ ಮತ್ತು ಸೋವಿಯಟ್ ರಷ್ಯಾ
೩. ಅದೇ
೪. ಮೆಟ್ಟುವ ನೆಲ ಕರ್ನಾಟಕ, ಅದೇ
೫. ಅಳುಕದೀ ಕನ್ನಡಂ-ಇಕ್ಷು ಗಂಗೋತ್ರಿ
೬. ಕರ್ನಾಟಕ ಮಂತ್ರ ದೀಕ್ಷೆ, ಅದೇ

ಎಂದು ದೀಕ್ಷೆಯ ತೊಡುವಂತೆ ಕನ್ನಡದ ಮಕ್ಕಳಲ್ಲಿ ಬಿನ್ನವಿಸಿಕೊಳ್ಳುತ್ತಾರೆ. 'ಏಕೈಕ ಕರ್ನಾಟಕ'ದ[೧] ಕವಿಯ ಕನಸು ಎಂದೂ ಹುಸಿಯಾಗದೆಂಬ ಆತ್ಮಪ್ರತ್ಯಯ ಅವರಿಗಿದೆ. ಯಾರಾದರೂ ಕನ್ನಡ ತಾಯಿಯನ್ನು ನಿಂದಿಸಿದ್ದಾದರೆ ಎದೆಗೆ ಅಲಗಿಕ್ಕಿದಂತೆ ಅವರು ಚಿಂತೆಗೀಡಾಗುತ್ತಾರೆ; 'ಪಂಪ ರನ್ನರ ಹೆತ್ತ ನುಡಿಗೆ ಕುಂದೇನು? ಕವಿಚಕ್ರವರ್ತಿಗಳು ಬರುವರಿನ್ನೊಮ್ಮೆ'[೨] ಎಂದವರು ೧೯೨೮ರಲ್ಲಿಯೇ ಭವಿಷ್ಯ ನುಡಿಯುತ್ತಾರೆ. ಕನ್ನಡವಿಲ್ಲದ ಸ್ವರ್ಗಕ್ಕಿಂತ ಕನ್ನಡವಿರುವ ನರಕವೇ ಮೇಲೆಂದು ಹೇಳುವ ನಿಷ್ಠೆ ಅವರದು.[೩] ಅದೂ ಇರಲಿ, ಭಾದ್ರಪದ ಮಾಸದಲ್ಲಿ ಗೌರಿಗಣೇಶರು ಭೂಮಿಗೆ ಬರುವುದುಂಟಷ್ಟೆ. ಅವರು ಭಾರತ ಭೂಮಿಯಲ್ಲಿ ಸಂಚರಿಸಿ, ಎಲ್ಲಿಯೂ ನಿಲ್ಲದೆ ಕನ್ನಡನಾಡಿಗೆ ಮೆಚ್ಚಿ ಬರುತ್ತಾರೆ. (ಗಣೇಶಗಾಥಾ) ಅವರನ್ನಿಲ್ಲಿಗೆಳೆತರುವ ಸಾಹಸ ಕುವೆಂಪು ಅವರದು.

ರಾಜಕಾರಣಿಗಳ, ಮಂತ್ರಿಗಳ, ಅಧ್ಯಾಪಕರ, ಅಧಿಕಾರಿಗಳ, ಕೊನೆಗೆ ಹಳ್ಳಿಯ ರಾಜಕಾರಣಿಗಳ ತಿರಸ್ಕಾರಕ್ಕೆ ಕನ್ನಡ ಗುರಿಯಾಗಿದ್ದ ಸಂದರ್ಭದಲ್ಲಿ, ಎಲ್ಲರಿಗೂ ಈ ಮಹಾಕವಿ ಕೈಮುಗಿದು ನಮಸ್ಕರಿಸಿ ಬಿನ್ನವಿಸಿಕೊಳ್ಳುತ್ತಾರೆ: 'ನನ್ನ ನಮಸ್ಕಾರದಿಂದ ನಿನ್ನ ಅಹಂಕಾರವಳಿದು ಅಲ್ಲಿ ದೇವತ್ವ ಸಂಚಾರವಾಗುತ್ತದೆಂದು ನಂಬಿ ಭಗವತಿ ಶ್ರೀ ಸರಸ್ವತಿಯ ಈ ಹರಕೆಯನ್ನು ನಿನ್ನಲ್ಲಿ ಬಿನ್ನವಿಸುತ್ತಿದ್ದೇನೆ.... ಕನ್ನಡಕ್ಕಾಗಿ ಕೈಯೆತ್ತು. ನಿನ್ನ ಕೈ ಕಲ್ಪವೃಕ್ಷವಾಗುತ್ತದೆ! ಕನ್ನಡಕ್ಕಾಗಿ ಕೊರಳೆತ್ತು; ಅಲ್ಲಿ ಪಾಂಚಜನ್ಯ ಮೂಡುತ್ತದೆ.''[೪]

ಕುವೆಂಪು ಅವರಿಗೆ ಯಾವ ಭಾಷೆಯ ಮೇಲೆಯೂ ದ್ವೇಷವಿಲ್ಲ. ಮೊದಮೊದಲು ಅವರು ಕವಿತೆ ಬರೆಯುತ್ತಿದ್ದುದು ಇಂಗ್ಲಿಷಿನಲ್ಲಿ. ಕನ್ನಡವೊಂದು ದುರ್ಬಲ ಭಾಷೆ; ಅದರಲ್ಲಿ ಕವಿತಾ ರಚನೆ ಸಾಧ್ಯವಿಲ್ಲವೆಂದು ಹೇಳುತ್ತಿದ್ದ ಕಾಲವೊಂದಿತ್ತು. ಸಂಸ್ಕೃತದ ಜತೆಗೆ ಬಂಗಾಳಿ ಸಹ ಅವರಿಗೆ ಬರುತ್ತಿತ್ತು. ಸಾಹಿತಿಯಾದವನು, ವಿದ್ವಾಂಸನಾಗಬಯಸುವವನು ಒಂದಕ್ಕಿಂತ ಹೆಚ್ಚು ಭಾಷೆ ಕಲಿಯಬೇಕೆಂಬುದು ಅವರ ಅಭಿಪ್ರಾಯ. ಪರಭಾಷೆಯ ಮೂಲಕ ಕಲಿಯುವ ವಿದ್ಯೆ ಪೂರ್ಣವಲ್ಲ ಎಂಬ ಕಾರಣಕ್ಕಾಗಿ, ಮನಸ್ಸು ಹೃದಯಗಳ ಪೂರ್ಣವಿಕಾಸ ಪ್ರಾದೇಶಿಕ ಅಥವಾ ಮಾತೃಭಾಷೆಯ ಮೂಲಕ ಸಾಧ್ಯ ಎಂಬ ಮನೋವೈಜ್ಞಾನಿಕ ಕಾರಣಕ್ಕಾಗಿ, ಬುದ್ಧಿಯ ನೈಶಿತ್ಯ ಮತ್ತು ಜ್ಞಾನವೈಶಾಲ್ಯ ಪ್ರಾದೇಶಿಕ ಭಾಷೆಯ ಮೂಲಕ ಸುಲಭವೆನ್ನುವ ವೈಜ್ಞಾನಿಕ ಸತ್ಯದಿಂದಾಗಿ ಅವರು ಕನ್ನಡ ಅಥವಾ ಪ್ರಾದೇಶಿಕ ಭಾಷೆಗೆ ಹೆಚ್ಚು ಒತ್ತು ಕೊಡುತ್ತಾರೆ. ಯಾವ ಭಾಷೆಗೆ ಯಾವ ಸ್ಥಾನ ಕೊಡಬೇಕೆಂಬುದನ್ನವರು ಸ್ಪಷ್ಟಪಡಿಸುತ್ತಾರೆ. 'ಆಯಾ ಪ್ರಾಂತಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳಿಗೆ ಪ್ರಥಮ ಸ್ಥಾನ ಸಲ್ಲಬೇಕು. ಅಂತರ ಪ್ರಾಂತೀಯ ವ್ಯವಹಾರ ದೃಷ್ಟಿಯಿಂದ ಮತ್ತು ಕೇಂದ್ರದ ಆಡಳಿತ ದೃಷ್ಟಿಯಿಂದ ಅಖಿಲ ಭಾರತೀಯವಾದ ಸಂಯುಕ್ತ ಭಾಷೆಗೆ ಎರಡನೆ ಸ್ಥಾನ ಕೊಡಬೇಕು. ಅಂತರರರಾಷ್ಟ್ರೀಯವಾದ ಭಾಷೆಗೆ ಅಥವಾ ಭಾಷೆಗಳಿಗೆ ಐಚ್ಛಿಕ ಸ್ಥಾನ ಕೊಡಬೇಕು. ಆಯಾ ಪ್ರಾಂತಗಳಲ್ಲಿ ಆಯಾ ದೇಶಭಾಷೆಗಳೆ ಆಡಳಿತ ಭಾಷೆಗಳಾಗಿರಬೇಕು.'[೫] ಇಷ್ಟು ಹೊರತಾಗಿ ಬೇರೆ ಭಾಷೆಗಳನ್ನು ಕಲಿಯಬಾರದೆಂದು ಅವರೆಂದೂ ಹೇಳಿಲ್ಲ.

ಆದರೆ ಯಾವ ಯಾವ ಭಾಷೆ ಯಾವ ರೂಪದಲ್ಲಿರಬೇಕು, ಯಾವ ಪ್ರಮಾಣದಲ್ಲಿ, ಯಾರಿಗೆ, ಏತಕ್ಕೆ, ಯಾವ ಉದ್ದೇಶ ಗಳಿಗಾಗಿ ಎಂಬ ಪ್ರಶ್ನೆಗಳನ್ನು ಅವರೇ ಹಾಕಿಕೊಂಡು, ಸರ್ವಸಮ್ಮತವಾದ ಸಲಹೆಗಳನ್ನು ನೀಡಿದ್ದಾರೆ. ಮತ್ತೊಂದು ಕಡೆ ಅವರು ಹೇಳುವುದಿದು: 'ಇಂಗ್ಲಿಷ್ ಭಾಷೆ ಬಲಾತ್ಕಾರದ ಸ್ಥಾನದಿಂದ ಐಚ್ಛಿಕ ಸ್ಥಾನಕ್ಕೆ ನಿಯಂತ್ರಣಗೊಳ್ಳದಿದ್ದರೆ, ಇಂಗ್ಲಿಷ್ ಶಿಕ್ಷಣ ಮಾಧ್ಯಮ ತೊಲಗಿ ಪ್ರಾದೇಶಿಕ ಭಾಷೆಗೆ ಆ ಸ್ಥಾನ ಲಭಿಸದಿದ್ದರೆ, ನಮ್ಮ ದೇಶ ಹತ್ತೇ ವರ್ಷಗಳಲ್ಲಿ ಸಾಧಿಸಬೇಕಾದುದನ್ನು ಇನ್ನೊಂದು ನೂರು ವರ್ಷಗಳಲ್ಲಿಯೂ ಸಾಧಿಸಲಾರದೆ ನಿತ್ಯರೋಗಿಯಂತಿರಬೇಕಾಗುತ್ತದೆ. ಈ ಬಲಾತ್ಕಾರದ ಇಂಗ್ಲಿಷ್ ಶಿಕ್ಷಣದ ಪ್ರಚ್ಛನ್ನ ಭ್ರಷ್ಟಾಚಾರವನ್ನು ನಷ್ಟದಲ್ಲಾಗಲಿ ಹಾನಿಯಲ್ಲಾಗಲಿ ಸರಿದೂಗುವ ಭ್ರಷ್ಟಾಚಾರ ಮತ್ತೊಂದಿಲ್ಲ.[೬] ಹಳ್ಳಿಯಿಂದ ಬರುವ ಮಕ್ಕಳು ಇಂಗ್ಲಿಷ್ ಭಾರವನ್ನು ಹೊತ್ತು ಕೊಂಡು ಪಟ್ಟಣದ ಮಕ್ಕಳೊಡನೆ ಸ್ಪರ್ಧಿಸಲು ಸಾಧ್ಯವೆ' ಎಂದವರು ಪ್ರಶ್ನಿಸುತ್ತಾರೆ. ವಿಜ್ಞಾನದಲ್ಲಾಗಲಿ ಸಾಹಿತ್ಯದಲ್ಲಾಗಲಿ ಉತ್ತಮ ಕಾರ್ಯವನ್ನು ಮಾಡಬೇಕೆಂದಿರುವವರಿಗೆ ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ, ಈ ಮೂರೂ ಭಾಷೆಗಳ ಸಮರ್ಪಕವಾದ ಪರಿಚಯ ಅತ್ಯಂತ ಅವಶ್ಯಕವೆಂದವರು ಸ್ಪಷ್ಟ ಪಡಿಸಿದ್ದಾರೆ.[೭] ಆದರೆ ಇಂಗ್ಲಿಷಿನ ಸಾರ್ವಭೌಮತೆಯಿಂದ ಮಕ್ಕಳ ಪ್ರತಿಭೆ ಕುಂಠಿತವಾಗುತ್ತದೆಂಬುದು ಕವಿಯ ನಿಲವು.

---

೧. ಕರ್ನಾಟಕ ಮಂತ್ರದೀಕ್ಷೆ ಅದೇ
೨. ಓ ನನ್ನ ಕನ್ನಡವೆ! - ಹೊನ್ನ ಹೊತ್ತಾರೆ
೩. ಸ್ವರ್ಗದ್ವಾರದಿ ಯಕ್ಷ ಪ್ರಶ್ನೆ-ಅನುತ್ತರಾ
೪. ಕನ್ನಡಕ್ಕಾಗಿ ಕೈಯೆತ್ತು - ಮನುಜಮತ ವಿಶ್ವಪಥ
೫. ನಮಗೆ ಬೇಕಾಗಿರುವ ಇಂಗ್ಲಿಷ್, ಷಷ್ಟಿ ನಮನ, ಪು. ೬೮
೬. ಬಲಾತ್ಕಾರದ ಇಂಗ್ಲೀಷ್ ; ಪ್ರಚ್ಛನ್ನ ಭ್ರಷ್ಟಾಚಾರ, ಮನುಜಮತ ವಿಶ್ವಪಥ ಪು. ೧೧
೭. ಭಾರತದಲ್ಲಿ ಇಂಗ್ಲಿಷಿನ ಸ್ಥಾನ, ಷಷ್ಟಿ ನಮನ ಪು. ೧೦೫

ಇಂಗಿ ಹೋಗುತಿದೆ ಇಂಗ್ಲಿಷಿನ ಮರುಭೂಮಿಯಲಿ
ನಿನ್ನ ಮಕ್ಕಳ ಶಕ್ತಿ-ಬುದ್ಧಿ-ಪ್ರತಿಭಾ
ಓ ತಾಯಿ ಭಾರತಿಯೆ, ಚೀಣೀಯರನೆ ಮೀರಿ
ಹಿಂಡುತಿದೆ ಕಂದರನು ಇಂಗ್ಲಿಷಿನ ಮಾರಿ.[೧]

ಅದರಿಂದಾಗಿ 'ಪಾರುಮಾಡೆಮ್ಮನೀ ಇಂಗ್ಲಿಷಿನಿಂದ ಪೂತನಿಯ ಅಸುವೀಂಟಿ ಕೊಂದ ಗೋವಿಂದ.[೨] ಎಂದು ಪ್ರಾರ್ಥಿಸುತ್ತಾರೆ. ಯಾರು ಯಾರಿಗೆ ಯಾವ ಯಾವ ಭಾಷೆ ಬೇಕೋ ಕಲಿಯಲಿ. ದಿಲ್ಲಿಯ ಮಂತ್ರಿಯಾಗುವವನು ಹಿಂದಿ ಕಲಿಯಲಿ; ಇಂಗ್ಲೆಂಡಿನಲ್ಲಿ ರಾಯಭಾರಿಯಾಗುವನು ಇಂಗ್ಲಿಷ್ ಕಲಿಯಲಿ. ಬಲಾತ್ಕಾರದ ಭಾಷಾ ತ್ರಿಶೂಲ ಎಲ್ಲರಿಗೂ ಬೇಡವೆನ್ನುವಲ್ಲಿ ವಿವೇಕವಿದೆ.[೩] ಹೀಗೆ ಭಾಷಾ ಸಮಸ್ಯೆಯನ್ನು ವಿವಿಧ ಮುಖಗಳಿಂದ ಅಧ್ಯಯನ ಮಾಡಿರುವ ವಿದ್ವಾಂಸರು ಇಂಡಿಯಾದಲ್ಲಿಯೇ ವಿರಳ. ಅನ್ಯ ಪ್ರಾಂತ್ಯ ಗಳಲ್ಲಿರುವ ಕನ್ನಡಿಗರು ಅಲ್ಲಿಯ ಭಾಷಾ ಪ್ರಗತಿಗೆ ಅಡ್ಡಗಾಲಾಗಬಾರದು; ಇಂಗ್ಲಿಷಿನ ನೊಗದಿಂದ ಪಾರಾಗುವ ಮುನ್ನ ಹಿಂದಿ ನೊಗಕ್ಕೆ ಹೆಗಲು ಕೊಡುವುದು ಅಪಾಯಕಾರಿ. ಕನ್ನಡ ಮಾಧ್ಯಮವನ್ನು ಜಾರಿಗೆ ತರುವ ಮೂಲಕ ವಿಶ್ವವಿದ್ಯಾನಿಲಯಗಳು ಜನತೆಯ ಋಣ ತೀರಿ ಸಬೇಕು; ರಾಜಧಾನಿಯಲ್ಲಿ ಕನ್ನಡವೆ ಸಾರ್ವಭೌಮ ಭಾಷೆಯಾಗಬೇಕೆಂದವರು ಪ್ರವಾದಿಯಂತೆ ನುಡಿದಿದ್ದಾರೆ.[೪] ಪರಭಾಷೆಯನ್ನು ಮುಂದೊಡ್ಡಿ ಆತಂಕ ವ್ಯಕ್ತಪಡಿಸುವ ಮುಗ್ಧರ ಹಾಗೂ ಅಜ್ಞಾನಿಗಳ ಸಂದೇಹವನ್ನು ಸಹ ಯುಕ್ತ ತಿಳಿವಳಿಕೆಯ ಮೂಲಕ ಪರಿಹರಿಸಿದ್ದಾರೆ.[೫]

'ಬಹು ಭಾಷೆಗಳಲ್ಲಿ ದ್ವಿಭಾಷೆ' ಎನ್ನುವುದು ಅವರು ನೀಡಿರುವ ಅಂತಿಮ ಸೂತ್ರ. ಇದರ ಪ್ರಕಾರ 'ಒಬ್ಬ ಹುಡುಗ ಕನ್ನಡ ರಷ್ಯನ್ ತೆಗೆದುಕೊಳ್ಳಬಹುದು. ನಾಳೆ ದಿವಸ ಅವನು ರಷ್ಯಕ್ಕೆ ಹೋಗಿ ಏನಾದರೂ ಮಾಡಬೇಕು ಎಂಬ ಮನಸ್ಸು ಇದ್ದರೆ ಕನ್ನಡ, ರಷ್ಯನ್ ಕಲಿ ಯಲಿ... ಕನ್ನಡದವರು ಕನ್ನಡವನ್ನೇ ಬಿಡುವುದರಿಂದ ಏನೂ ಅಪಾಯ ಆಗುವುದಿಲ್ಲ. ಕನ್ನಡದವನೆ ಆಗಿ ಕನ್ನಡವನ್ನೇ ಬಿಟ್ಟ ಅಂದುಕೊಳ್ಳಿ, ಹಿಂದಿಯೋ ಜರ್ಮನ್ನೋ ತೆಗೆದುಕೊಂಡ ಅಂತ ಇಟ್ಟುಕೊಳ್ಳಿ. ಕನ್ನಡ ಅಧಿಕೃತ ಭಾಷೆಯಾಗಿ ಘೋಷಿತವಾದಾಗ, ಇಲ್ಲಿ ವ್ಯವಹಾರವೆಲ್ಲ ಕನ್ನಡದ ಮೂಲಕ ನಡೆಯುವಂತಾದಾಗ, ಕನ್ನಡವನ್ನು ಬಿಡುವವನು ತಾನು ಈ ದೇಶದವನಲ್ಲ, ಬೇರೆ ಕಡೆಗೆ ಹೋಗುತ್ತೇನೆ ಎಂತಲೇ ಕನ್ನಡವನ್ನು ಬಿಡುತ್ತಾನೆ'.[೬] ರಾಜಕೀಯವಾಗಿಯೂ ಇದೊಂದು ಸಮಸ್ಯೆಯನ್ನು ಬಗೆ ಹರಿಸುತ್ತದೆ ಎಂದವರು ನುಡಿಯುತ್ತ, ತಮಿಳುನಾಡಿನ ಉದಾಹರಣೆಯನ್ನು ಉದ್ಧರಿಸುತ್ತಾರೆ. 'ಐವತ್ತು ಕೋಟಿ ಭಾರತೀಯರೂ ಹಿಂದಿಯನ್ನು ಕಲಿಯಬೇಕೆನ್ನುವ ವಾದದಲ್ಲಿ ಗತ ಸಾಮ್ರಾಜ್ಯ ಶಾಹಿಯ ಮನೋಧರ್ಮದ ವಿನಾ ಇನ್ನಾವ ಅರ್ಥವೂ ಇಲ್ಲ.' ಎಂದವರು ನಿರ್ದಾಕ್ಷಿಣ್ಯವಾಗಿ ಘೋಷಿಸುತ್ತಾರೆ (ವಿಚಾರ ಕ್ರಾಂತಿಗೆ ಆಹ್ವಾನ, ಪು. ೯೮)

ಸರಸ್ವತಿಯ ಪವಿತ್ರ ಬಾಹುಗಳಂತಿರುವ ಎಲ್ಲ ಭಾಷೆ ಸಾಹಿತ್ಯಗಳ ಬಗ್ಗೆ ಅವರಿಗೆ ಗೌರವವಿದೆ. 'ಯಾವುದಾದರೂ ಭಾಷೆಯ ಯಾವನಾದರೂ ಒಬ್ಬ ಸಾಹಿತಿ ಸೌಹಾರ್ದಕ್ಕೆ ಭಂಗ ತರುವ ರೀತಿಯಲ್ಲಿ ಅಪಸ್ವರವೆತ್ತಿ ಹಾಡಿದ್ದರೆ, ಅದು ಖಂಡನೀಯ; ಅದು ಆಸುರೀಸಾಹಿತ್ಯವಾಗುತ್ತದೆ. ನಿಜವಾದ ಸಾಹಿತ್ಯ ಐಕ್ಯಕಾರಿ. ಸಾಮರಸ್ಯ, ಸಮನ್ವಯ, ಸಹಾನುಭೂತಿ, ಸರ್ವೋದಯ ಭಾವನೆ ಇವು ಗಳನ್ನು ಪ್ರಚೋದಿಸುವುದು ದೈವೀಸಾಹಿತ್ಯದ ಲಕ್ಷಣ. ಅಸೂಯೆ, ದ್ವೇಷ, ಸ್ವಾರ್ಥತೆ, ನಿಷ್ಕರುಣೆ, ಅನುಕಂಪನರಾಹಿತ್ಯ ಇತ್ಯಾದಿಗಳನ್ನು ಕೆರಳಿಸುವ ಬರೆಹ ಆಸುರೀ ಸಾಹಿತ್ಯವಾಗುವುದರಿಂದ ಅದು ದಮನ ಯೋಗ್ಯವಾಗುತ್ತದೆ.[೭] ದೇಶದ ಇಂದಿನ ಪರಿಸ್ಥಿತಿ ಯಲ್ಲಿ ವೈಜ್ಞಾನಿಕವೂ ಬೌದ್ಧಿಕವೂ ಆದ ವೈಚಾರಿಕ ಸಾಹಿತ್ಯ ಸೃಷ್ಟಿಗೆ ಆದ್ಯಗಮನ ಕೊಡಬೇಕಾಗಿದೆಯೆಂದವರು ಲೇಖಕ ವರ್ಗಕ್ಕೆ ಸೂಚನೆ ನೀಡುತ್ತಾರೆ.

---

೧. ಸಂಸ್ಕೃತಿ ಕರ್ಣಾಟಕ, ಷಷ್ಟಿ ನಮನ ಪು. ೮
೨. ಕರ್ನಾಟಕ ರಾಜ್ಯೋದಯ ಗೀತೆ, ಇಕ್ಷುಗಂಗೋತ್ರಿ, ಪು. ೭೮
೩. ಸಂಸ್ಕೃತಿ ಕರ್ನಾಟಕ, ಷಷ್ಟಿ ನಮನ, ಪು. ೪
೪. ಕನ್ನಡ ನಾಡಿನ ರಾಜಧಾನಿಯಲ್ಲಿ ಕನ್ನಡವೆ ಸಾರ್ವಭೌಮ ಭಾಷೆ, ಮನುಜ ಮತ ವಿಶ್ವಪಥ ಪು. ೪೯-೫೩
೫. ಕದನಕ್ಕೆ ಸಜ್ಜು, ಮನುಜ ಮತ ವಿಶ್ವಪಥ
೬. ಅದೇ.
೭. ಬಹು ಜಿಹ್ವಾ ಭಾರತಿಗೆ ಐಕ್ಯತೆಯ ಆರತಿ, ಅದೇ. ಪು. ೪೦

ರಾಷ್ಟ್ರದ ಹಿತದೃಷ್ಟಿಯಿಂದ ಪ್ರಾದೇಶಿಕ ವೈಶಿಷ್ಟ್ಯದ ರಕ್ಷಣೆ ಅತ್ಯಗತ್ಯವೆಂದವರು ವೈಜ್ಞಾನಿಕ ಆಧಾರಗಳೊಂದಿಗೆ ಸಮರ್ಥಿಸಿಕೊಳ್ಳುತ್ತಾರೆ. 'ಸಮಷ್ಟಿಯ ಕ್ಷೇಮವನ್ನು ಕಾಪಾಡುವ ಆತುರದಲ್ಲಿ ವ್ಯಷ್ಟಿಯನ್ನು ಬಲಿಗೊಟ್ಟು ವ್ಯಕ್ತಿಯ ವಿಶಿಷ್ಟತೆಯನ್ನು ನಿರ್ಲಕ್ಷಿಸಿದರೆ ಪ್ರಜಾಸತ್ತೆಯ ಬುಡಕ್ಕೆ ಕೊಡಲಿ ಇಟ್ಟಂತಾಗುತ್ತದೆ... ವೈಜ್ಞಾನಿಕ ಸಂಸ್ಥೆಗಳನ್ನು ಸ್ಥಾಪಿಸುವಾಗ ನಾವು ಅಖಿಲ ಭಾರತಕ್ಕೂ ಸರ್ವಸಾಧಾರಣವಾದ ರೀತಿ, ನೀತಿ ಮತ್ತು ಧ್ಯೇಯಗಳನ್ನು ಅನುಸರಿಸುವಂತೆ ವಿಶ್ವವಿದ್ಯಾನಿಲಯಗಳ ಸ್ಥಾಪನೆಯಲ್ಲಾಗಲಿ ಸಂಚಾಲನೆಯಲ್ಲಾಗಲಿ ಅನುಸರಿಸಿದರೆ ತಪ್ಪಾಗುತ್ತದೆ. ವ್ಯಕ್ತಿಯ ವಿಶಿಷ್ಟತೆಯ ವಿಧ್ವಂಸನದಿಂದಲೆ ಸ್ಥಾಪಿತವಾಗುವ ಆ ಐಕ್ಯತೆ ಮರುಭೂಮಿಯ ಅಚೇತನ ಏಕರೂಪವಾಗುತ್ತದೆಯೆ ಹೊರತು ಅನೇಕ ವಿಧವಾದ ರಾಗಗಳಿಂದ ಸುಮಧುರವಾಗುವ ಸಂಗೀತದಂತೆ ಸಚೇತನ ಸ್ವರಮೇಲವಾಗುವುದಿಲ್ಲ'[೧] ವಿಶ್ವವಿದ್ಯಾಲಯಗಳು ಹೆಂಚಿನ ಕಾರ್ಖಾನೆಗಳಾಗಬಾರದೆಂಬುದೇ ಅವರ ಖಚಿತ ಮತ. 'ಅಂಗಿಯ ಕ್ಷೇಮದಿಂದಲೆ ಅಂಗಾಂಗಗಳ ಕ್ಷೇಮವೂ ಸಿದ್ಧವಾಗುತ್ತದೆಂಬ.[೨] ಕವಿವಾಣಿಯಲ್ಲಿ ಋತಸತ್ಯ ಪ್ರತಿಬಿಂಬಿಸುತ್ತದೆ. ಭಾಷಾನುಗುಣವಾದ ಪ್ರಾಂತರಚನೆಗೆ ನಿಜವಾದ ಕಾರಣ ಈ ಮಾತುಗಳಲ್ಲಿ ಅಡಕವಾಗಿದೆ. ಆಯಾಯ ಪ್ರದೇಶಗಳ ಜನರ ಕ್ಷೇಮಸಾಧನೆ, ಚೈತನ್ಯ ವಿಕಾಸ, ಬುದ್ಧಿ ಪ್ರಾಬಲ್ಯ ಅಲ್ಲಿಯ ಭಾಷೆಗಳಿಂದ ಮಾತ್ರ ಸಾಧ್ಯವೆಂದವರು ಒತ್ತಿ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಇತ್ತೀಚೆಗೆ ಪ್ರಾದೇಶಿಕ ಪಕ್ಷಗಳು ಹುಟ್ಟಿ ಬೆಳೆದ ನಿಮಿತ್ತ ಕಾರಣ ಸಿದ್ಧಾಂತಗಳನ್ನು ಊಹಿಸಿಕೊಳ್ಳಬಹುದು.

ಕರ್ನಾಟಕ ರಾಜ್ಯೋದಯ ಮೂರ್ತಸ್ವರೂಪವನ್ನು ತಳೆದಾಗ 'ಕರ್ನಾಟಕ ರಾಜ್ಯೋದಯ ಶ್ರೀ ಗೀತೆ (ಇಕ್ಷು ಗಂಗೋತ್ರಿ) ಅವರ ಲೇಖನಿಯಿಂದ ಹೊರಹೊಮ್ಮುತ್ತದೆ. ರಾಜ್ಯೋದಯದ ಉತ್ಸವಕ್ಕೆ ನೃಪತುಂಗಾದಿ ದೊರೆ, ಕವಿ, ಸೇನಾನಿ, ರಸಋಷಿ, ದ್ರಷ್ಟಾರರನ್ನು ಆಹ್ವಾನಿಸುತ್ತಾರೆ. ಕರ್ನಾಟಕದ ಭೌತಿಕ ಹಾಗೂ ಸಾಂಸ್ಕೃತಿಕ ಸ್ವರೂಪವನ್ನು ವಿಶಿಷ್ಟ ರೀತಿಯಲ್ಲಿ ವರ್ಣಿಸುತ್ತಾರೆ.

ಬರಿಯ ಚದರ ಮೈಲಿಗಳಲ್ತು, ಕರ್ನಾಟಕದ ದೇಶ ವಿಸ್ತೀರ್ಣಂ
ನೆನೆ, ನೆನೆ, ಮನೋಮಯದ ಸಂಸ್ಕೃತಿಯ ಕೋಶ ವಿಸ್ತೀರ್ಣಮಂ
ಮರೆಯದಿರು ಚದರ ಸಂವತ್ಸರದ ಶತಮಾನಗಳ ಕಾಲ ವಿಸ್ತೀರ್ಣಮಂ.
ಪ್ರಾಣಮಯ ಭಾವ ಪ್ರದೇಶ ವಿಸ್ತೀರ್ಣಮಂ
ಚಿದಾಕಾಶ ವಿಜ್ಞಾನ ವಿಸ್ತೀರ್ಣಮಂ[೩]

ವಿದ್ಯುಲ್ಲೇಖೆಗಳಂತಿರುವ ಈ ಪಂಕ್ತಿಗಳನ್ನು ಗಮನಿಸಿದಾಗ ಕುವೆಂಪು ಅವರ ಕನ್ನಡ ಕರ್ನಾಟಕ ಪ್ರೇಮ ಆಧ್ಯಾತ್ಮಿಕತತ್ತ್ವದಿಂದ ಪ್ರೇರಿತವಾದುದೇ ಹೊರತು ಲೌಕಿಕ ಪ್ರಯೋಜನದ ರಾಜಕಾರಣದಿಂದಲ್ಲವೆಂಬುದು ಸ್ಪಷ್ಟ. 'ನಮ್ಮ ಕರ್ನಾಟಕ ಬರಿಯ ದೇಶ ವಿಸ್ತೀರ್ಣಕ್ಕೆ ಸಂಬಂಧ ಪಟ್ಟುದಲ್ಲ; ಕಾಲ ವಿಸ್ತೀರ್ಣವನ್ನು ನಾವು ಪ್ರಮುಖವಾಗಿ ಭಾವಿಸುತ್ತೇವೆ. ಅದನ್ನು ಚದರ ಮೈಲಿಗಳಿಂದ ಅಳೆದರೆ ಸಾಲದು; ಚದರ ವರ್ಷಗಳಿಂದಲೂ ಗುರುತಿಸಬೇಕು. ವ್ಯಷ್ಟಿ ರೂಪವಾದ ವ್ಯಕ್ತಿಗೆ ಕೋಶಗಳಿರುವಂತೆ ಸಮಷ್ಟಿರೂಪವಾದ ದೇಶಕ್ಕೂ ಕೋಶಗಳಿವೆ ಎಂದು ಭಾವಿಸುವುದಾದರೆ ಕರ್ನಾಟಕಕ್ಕೆ ಅನ್ನಮಯ ರೂಪವಾದ ಭೂ ಪ್ರದೇಶವಿರುವಂತೆಯೇ ಪ್ರಾಣಮನೋಮಯ ರೂಪವಾದ ಚಿತ್ ಪ್ರದೇಶವೂ ಇದೆ. ಚಿನ್ಮಯವೂ ಆಧ್ಯಾತ್ಮಿಕವೂ ಆಗಿರುವ ಆ ಸಂಸ್ಕೃತಿಕೋಶವೇ ಕರ್ನಾಟಕ ದೇವಿಯ ಸೂಕ್ಷ್ಮ ಶರೀರ. ನಶ್ವರವೂ ಚಂಚಲವೂ ಕಾಲ ಸನ್ನಿವೇಶವೂ ಆಗಿರುವ ಭೂವಿಸ್ತೀರ್ಣ ರೂಪವಾದ ಲೀಲಾ ಸ್ಥೂಲ ಶರೀರವನ್ನು ಸದಾ ಧಾರಣೆ ಮಾಡುತ್ತಿರುತ್ತದೆ ಆ ನಿತ್ಯ ಭಾವತನು. ಆ ಜ್ಯೋತಿಶ್ಶರೀರಿಯೆ ದೇವಿ.'[೪] ಈ ಭಾಷಾ ನೀತಿ ಮೀಮಾಂಸೆ ಇಡೀ ಜಗತ್ತಿನ ಎಲ್ಲ ಭಾಷೆಗಳಿಗೆ ಅನ್ವಯಿಸುತ್ತದೆಂದು ಸ್ಪಷ್ಟಪಡಿಸಬಹುದಾಗಿದೆ.

ಕುವೆಂಪು ಉಗ್ರ ಏಕೀಕರಣವಾದಿ. ಅವರ ಈ ನಿಲವಿಗೆ ಮೇಲೆ ನಿರೂಪಿಸಿರುವ ಆಧ್ಯಾತ್ಮ ತತ್ತ್ವವೇ ಪ್ರೇರಣೆ ನೀಡಿದೆ ಎಂಬುದರಲ್ಲಿ ಅನುಮಾನವಿಲ್ಲ. ಆತ್ಮವಿಕಾಸ, ಆಧ್ಯಾತ್ಮಿಕ ಉದ್ಧಾರ, ಸಹಬಾಳ್ವೆ, ಸರ್ವೋದಯ ಇವು ಮುಖ್ಯವಾಗಿ ಏಕೀಕರಣದ ಪರಮಗಂತವ್ಯ. ಏಕೀಕರಣದ ದುರ್ಲಾಭ ಪಡೆಯುವ ರಾಜಕೀಯ ಕಾಂಕ್ಷೆ ಅವರಿಗೆ ಎಳ್ಳಿನಿತೂ ಇಲ್ಲವೆಂಬುದು ಲೋಕವೇದ್ಯ. ರಾಜಕೀಯಾರ್ಥಿಕ ದೃಷ್ಟಿಯಿಂದಲೂ ಕನ್ನಡನಾಡಿನ ಏಳ್ಗೆಯ ದೃಷ್ಟಿಯಿಂದಲೂ ಏಕೀಕರಣ ಅತ್ಯವಶ್ಯವೆಂಬುದನ್ನವರು ಬಲ್ಲರು.

---

೧. ಪ್ರಾದೇಶಿಕ ವೈಶಿಷ್ಟದ ರಕ್ಷಣೆ, ಅದೇ ಪು. ೧೭-೧೮

೨. ಸಂಸ್ಕೃತಿ ಕರ್ನಾಟಕ, ಷಷ್ಟಿ ನಮನ ಪು. ೮

೩. ಕರ್ನಾಟಕ ರಾಜ್ಯೋದಯ ಗೀತೆ, ಇಕ್ಷು ಗಂಗೋತ್ರಿ, ಪು. ೭೮

೪. ಸಂಸ್ಕೃತಿ ಕರ್ನಾಟಕ, ಷಷ್ಟಿ ನಮನ, ಪು. ೪

'ಕನ್ನಡನಾಡಿನಲ್ಲಿ ಕನ್ನಡಿಗರ ಬ್ಯಾಂಕುಗಳೂ ಕನ್ನಡಿಗರ ಜೀವವಿಮಾ ಕಂಪೆನಿಗಳೂ ಕನ್ನಡಿಗರ ಕಾರ್ಖಾನೆಗಳೂ, ಕನ್ನಡಿಗರ ಕೈಗಾರಿಕೆಗಳೂ ಮತ್ತು ಕನ್ನಡಿಗರ ವ್ಯಾಪಾರ ಸಂಸ್ಥೆಗಳೂ ಹುಟ್ಟಿ ಬೆಳೆದು ಕರ್ನಾಟಕದ ಸಂಪದಭ್ಯುದಯದ ಮಟ್ಟವನ್ನು ಮೇಲ್ಗೊಳಿಸಬೇಕಾದರೆ, ನಮ್ಮವರು ಕಣ್ಣುಮುಚ್ಚಿಕೊಂಡು ಹೊರನಾಡಿಗರ ಕೈಬಾಯಿ ತುಂಬುವ ತಮ್ಮ ದಾನ ಶೌರ್ಯದ ವಿಚಾರದಲ್ಲಿ ಇನ್ನು ಸ್ವಲ್ಪ ಹೆಚ್ಚಿನ ವಿವೇಚನೆಯಿಂದ ವರ್ತಿಸಬೇಕಾಗಿರುವ ಕಾಲ ಈಗಲೀಗ ಬಂದಿದೆ'.[೧] ಕನ್ನಡ ನಾಡಿನಲ್ಲಿ ಬಡತನ ಮರೆತು ಸರ್ವರೂ ಸುಖವಾಗಿ ಬದುಕಬೇಕೆಂಬುದು ಅವರ ಹೇರಾಸೆ. 'ಕೃತಕವಾದ ರಾಜಕೀಯ ವಿಭಜನೆ ನೈಜವಾದ ಸಂಸ್ಕೃತಿಯ ಏಕತೆಯನ್ನು ಎಂದಿಗೂ ಶಾಶ್ವತವಾಗಿ ನಾಶಮಾಡಲಾರದು. ಇಂದಲ್ಲ ನಾಳೆ ನೈಜಕ್ಕೆ ಜಯವಿದೆ, ಕೃತಕಕ್ಕೆ ಪತನವಿದೆ. ಆದ್ದರಿಂದ ವಿವಿಧ ರಾಜಕೀಯ ವಿಭಾಗಗಳಲ್ಲಿ ಹರಿದು ಹಂಚಿಹೋದ ಕರ್ನಾಟಕದಲ್ಲಿ ಉದಾರ ಹೃದಯದ ಜನರಲ್ಲಿ ನುಡಿಯೊಲ್ಮೆಯ ಕಿಡಿ ಕೆಡದಂತೆ ನಿರಂತರವೂ ಸಾವೇಶ ಪ್ರೋತ್ಸಾಹವೀಯ ಬೇಕಾದುದು ಕರ್ನಾಟಕದ ಪುನರುತ್ಥಾನಕ್ಕಾಗಿ ದುಡಿಯಲು ದೀಕ್ಷೆಗೊಂಡ ತಪಸ್ವಿಗಳೆಲ್ಲರ ಕರ್ತವ್ಯ. ಏಕೆಂದರೆ ನುಡಿ ಬಿಟ್ಟರೆ ನಾಡು ಬಿಟ್ಟಂತೆ. ಭಾಷೆಗೇಡಿ ದೇಶಗೇಡಿಯೂ ಆಗುತ್ತಾನೆ.[೨]

ಹೀಗೆ ನಾಡು ನುಡಿಗಳ ಏಕೀಕರಣಕ್ಕಾಗಿ ಅತ್ಯಂತ ಕಾತರತೆಯಿಂದ ಹಂಬಲಿಸಿದ ಹಪಹಪಿಸಿದ ಸಾಹಿತಿಗಳು ವಿರಳ. ಹೋದೆಡೆಯಲ್ಲೆಲ್ಲ ಅವಕಾಶ ದೊರೆತಾಗಲೆಲ್ಲ ಅವರು ಏಕೀಕರಣದ ಬಗ್ಗೆ ಗುಡುಗುತ್ತಾರೆ, ಗರ್ಜಿಸುತ್ತಾರೆ. ಮೈಸೂರಲ್ಲಿ ಜವಾಬ್ದಾರಿ ಸರ್ಕಾರ ಬಂದನಂತರ ಏಕೀಕರಣದ ಬಗ್ಗೆ ಮಾತಾಡುವುದೂ ರಾಜಕೀಯಾಪರಾಧವಾಗುತ್ತದೆ. ಏಕೀಕರಣದ ಬಗ್ಗೆ ಎಲ್ಲಿಯೂ ಮಾತಾಡ ಕೂಡದೆಂದು ಆಗಿನ ಸರ್ಕಾರ ಅವರಿಗೆ ಎಚ್ಚರಿಕೆ ನೀಡುತ್ತದೆ. ಕನ್ನಡದ ಬಗ್ಗೆ ನಡೆಸುವ ಪ್ರಚಾರವೂ ಸರ್ಕಾರಕ್ಕಿಷ್ಟವಿಲ್ಲ. ಸಿಂಹಭೀಷಣರೂ ನಿರ್ಭೀತರೂ ಆದ ಕುವೆಂಪು ಸರ್ಕಾರಿ ನಿರೂಪಕ್ಕೆ ಸೊಪ್ಪು ಹಾಕುತ್ತಾರೆಯೆ? 'ಅಖಂಡ ಕರ್ನಾಟಕ'ವೆಂಬ ವೀರವಿಡಂಬನ ಕಾವ್ಯ ಸರ್ಕಾರದ ಆಜ್ಞೆಗೆ ಉತ್ತರವಾಗುತ್ತದೆ.

ಅಖಂಡ ಕರ್ನಾಟಕ
ಅಲ್ತೊ ನಮ್ಮ ಬೂಟಾಟದ ರಾಜಕೀಯ ನಾಟಕ!
    ಇಂದು ಬಂದು ನಾಳೆ ಸಂದು
    ಹೋಹ ಸಚಿವ ಮಂಡಲ
ರಚಿಸುವೊಂದು ಕೃತಕವಲ್ತೊ
ಸಿರಿಗನ್ನಡ ಸರಸ್ವತಿಯ
    ವಜ್ರ ಕರ್ಣಕುಂಡಲ!
ಅಖಂಡ ಕರ್ನಾಟಕ
ಅಲ್ತೊ ನಮ್ಮ ನಾಲ್ಕು ದಿನದ ರಾಜಕೀಯ ನಾಟಕ![೩]

ಈ ಕಾವ್ಯ ಇದೇ ಧಾಟಿಯಲ್ಲಿ ಮುಂದುವರಿಯುತ್ತದೆ. 'ಬುದ್ಧಿ ಬರಡೊ? ಬೇರೆ ಹುರುಡೊ? ದಿಟ್ಟಿಗೇಡೊ? ಹುಟ್ಟುಕುರುಡೊ? ಮೆಳ್ಳೆಗಣ್ಣ ಕಾಣೆ ನೀನು! ಹೇಳು! ತಪ್ಪು ನನ್ನದೇನು?' ಎಂದು ಮಂತ್ರಿಮಾನ್ಯರನ್ನು ಅಧಿಕಾರವರ್ಗವನ್ನು ಏಕೀಕರಣ ವಿರೋಧಿಗಳನ್ನು ಛೀಮಾರಿಸುತ್ತಾರೆ. ಈ ಕಾವ್ಯದ ಕಾವು ಮಂತ್ರಿಮಂಡಲವನ್ನು ತಟ್ಟುತ್ತದೆ. ಮುಖ್ಯಮಂತ್ರಿಗಳು ಕುವೆಂಪು ಅವರ ಹೆಸರೆತ್ತಿಕೊಂಡು' 'ಬೆಂಕಿಯ ಸಹವಾಸ. ಆ ವಿಷಯದ ಪ್ರಸ್ತಾಪ ಬೇಡ' ಎಂದರಂತೆ. ಅಖಂಡ ಕರ್ಣವ್ರತದಂಥ ಶಕ್ತಿಕಾವ್ಯ ಇನ್ನೂ ಹುಟ್ಟಬೇಕಾಗಿದೆ. ಆಗ ಯಾರ ಬಾಯಲ್ಲೂ ಇದೇ ಕಾವ್ಯ.

ಏಕೀಕರಣವೇನೋ ಆಗುತ್ತದೆ. ಹೆಸರು ಮಾತ್ರ ಮೈಸೂರೇ ಉಳಿಯುತ್ತದೆ. ಕನ್ನಡಿಗರ ಮೂರ್ಖತನವನ್ನು ಕುವೆಂಪು ಹೇಸುತ್ತಾರೆ. ಶ್ರೀ ಸಿದ್ಧವ್ವನಹಳ್ಳಿ ನಿಜಲಿಂಗಪ್ಪನವರು ಏಕೀಕೃತ ಕರ್ನಾಟಕದ ಮುಖ್ಯಮಂತ್ರಿಯಾಗುವ ಮುನ್ನ ಕುವೆಂಪು ಅವರನ್ನು ಭೇಟಿಮಾಡುತ್ತಾರೆ. ಆಗ ಕುವೆಂಪು ಅವರಿಗೆ ಹೇಳಿದ ನುಡಿಗಳಿವು. 'ನೀವು ನಾಲ್ಕು ಮಹಾಕಾರ್ಯಗಳನ್ನು ಸಾಧಿಸಬೇಕಾಗಿದೆ :

೧. ಕರ್ನಾಟಕಕ್ಕೆ ರಾಜ್ಯಪಾಲರನ್ನು ನೇಮಕ ಮಾಡುವಾಗ ರಾಜ್ಯಾಂಗದ ಪ್ರಕಾರ, ಪ್ರಜಾಪ್ರಭುತ್ವಕ್ಕನುಗುಣವಾಗಿ ಮಾಡಬೇಕು
೨. ರಾಜ್ಯಕ್ಕೆ 'ಕರ್ನಾಟಕ' ಎಂದು ನಾಮಕರಣ ಮಾಡಬೇಕು.
೩. ರಾಜ್ಯದ ಅಧಿಕೃತ ಭಾಷೆಯಾಗಿ ಕನ್ನಡವನ್ನು ಜಾರಿಗೆ ತರಬೇಕು.

---

೧. ದೇಶ ದೇವಿಯ ಪೂಜೆಗೆ ಬನ್ನಿ, ಸಾಹಿತ್ಯ ಪ್ರಚಾರ ಪು. ೬೧
೨. ಅದೇ ಪು. ೬೨
೩. ಅಖಂಡ ಕರ್ನಾಟಕ, ಇಕ್ಷು ಗಂಗೋತ್ರಿ, ಪು. ೫೪-೫೬

೪. ವಿದ್ಯಾಭ್ಯಾಸದ ಎಲ್ಲ ಹಂತಗಳಲ್ಲೂ ಕನ್ನಡ ಮಾಧ್ಯಮವಾಗಬೇಕು.[೧] 'ಕುವೆಂಪು ಅವರ ಸಲಹೆಗಳು ಸ್ವೀಕಾರಾರ್ಹ' ಎಂದು ಎಸ್ಸೆನ್ ತಮ್ಮ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ.

ನಾಮ ಪರಿವರ್ತನೆಗೂ ತುಂಬ ಕಾಲವೇ ಬೇಕಾಗುತ್ತದೆ. ದೇವರಾಜ ಅರಸು ಅವರು ಮುಖ್ಯಮಂತ್ರಿಯಾಗಲೆಂದು ಕಾಲ ನಾಡುಗಳೆರಡೂ ಕಾಯುತ್ತಿದ್ದುವೆಂದು ತೋರುತ್ತದೆ. 'ಕರ್ನಾಟಕ' ನಾಮಕರಣಕ್ಕಾಗಿ ಹಾರೈಸಿದವರು, ಹೋರಾಡಿ ದುಡಿದವರು ರಾಜಕಾರಣಿಗಳಿಗಿಂತ ವಿಶೇಷವಾಗಿ ಕವಿಗಳು ಮತ್ತು ಸಾಹಿತಿಗಳು. ಕರ್ನಾಟಕತ್ವ ಮುಖ್ಯವಾಗಿ ಅವರ ವಿಜಯವಾಗಿದೆ. ಈ ಸಂದರ್ಭದಲ್ಲಿ ಸಮೂಹ ಮಾಧ್ಯಮಗಳನ್ನು ಮರೆಯಲಾಗದು. ಕರ್ನಾಟಕ ಎಂಬ ಹೆಸರನ್ನಾಗಲಿ ಏಕೀಕರಣವನ್ನಾಗಲಿ ನಾವು ಸಾಹಿತಿಗಳು ಬಯಸಿದ್ದು ಭಾಷೆ ಸಾಹಿತ್ಯ ಸಂಸ್ಕೃತಿಗಳ ಶ್ರೇಯಾಭ್ಯುದಯಗಳ ದೃಷ್ಟಿಯಿಂದಲೆ ಹೊರತು ರಾಜಕೀಯ ಕಾರಣಗಳಿಗಾಗಿ ಅಲ್ಲ. ಆದರೆ ಏಕೀಕರಣವನ್ನು ರಾಜಕಾರಣ ಪಟುಗಳು ತಮ್ಮ ಉತ್ಕರ್ಷಕ್ಕೆ, ಸ್ವಾರ್ಥಕ್ಕೆ ಉಪಯೋಗಿಸಿಕೊಂಡರೆಂಬುದು ದುರದೃಷ್ಟಕರ ಸಂಗತಿ.[೨] ಪರಸ್ಪರ ದ್ವೇಷ ಮಾತ್ಸರ್ಯ ಕ್ರೋಧ ಜಾತೀಯತೆ ಮೊದಲಾದ ಪೈಶಾಚಿಕ ಪ್ರವೃತ್ತಿಗಳು ನಾಡಿನಲ್ಲಿ ಜನಮನದಲ್ಲಿ ಮಾಲಿನ್ಯ ಕಾಲುಷ್ಯಗಳನ್ನು ಸೃಷ್ಟಿಸುತ್ತವೆ. ಗಾಳಿ ನೀರುಗಳ ಮಾಲಿನ್ಯನಾಶ ಸಾಧ್ಯ; ಆದರೆ ಜನಮನದ ಮಾಲಿನ್ಯನಾಶ ಅಸಾಧ್ಯ. ಅವನ್ನು ನೋಡಿ ರೋಸಿ ಹೋದ ಕುವೆಂಪು ಕನ್ನಡ ಡಿಂಡಿಮವನ್ನು ಬಾರಿಸುವಂತೆ ಕರ್ನಾಟಕ ಹೃದಯ ಶಿವನನ್ನು ಮೊರೆ ಹೋಗುತ್ತಾರೆ.

ಸತ್ತಂತಿಹರನು ಬಡಿದೆಚ್ಚರಿಸು
ಕಚ್ಚಾಡುವರನು ಕೂಡಿಸಿ ಒಲಿಸು
ಹೊಟ್ಟೆಯ ಕಿಚ್ಚಿಗೆ ಕಣ್ಣೀರ್ ಸುರಿಸು
ಒಟ್ಟಿಗೆ ಬಾಳುವ ತೆರದಲಿ ಹರಸು
ಕ್ಷಯಿಸೆ ಶಿವೇತರ ಕೃತಿ ಕೃತಿಯಲ್ಲಿ
ಮೂಡಲಿ ಮಂಗಳ ಮತಿಮತಿಯಲ್ಲಿ
ಕವಿ ಋಷಿ ಸಂತರ ಆದರ್ಶದಲಿ
ಸರ್ವೋದಯವಾಗಲಿ ಸರ್ವರಲಿ.[೩]

ಏಕೀಕರಣದ ನಂತರ ಕನ್ನಡನಾಡು ಅಭಿವೃದ್ಧಿಮುಖವಾಗುತ್ತದೆ, ಕನ್ನಡಕ್ಕೆ ಪಟ್ಟಾಧಿಕಾರ ಲಭಿಸುತ್ತದೆ,ಜಾತಿ ಜಾತಿಗಳ ನಡುವೆ ಸಾಮರಸ್ಯ ಮೂಡುತ್ತದೆ ಎಂಬುದಾಗಿ ಹತ್ತು ಹಲವು ಕನಸುಗಳನ್ನು ಕಟ್ಟಿಕೊಂಡಿದ್ದ ಕುವೆಂಪು ಅವರಿಗೆ ನಿರಾಶೆಯಾಗುತ್ತದೆ. ಅದರ ಫಲವೇ ಈ ಕವಿತೆ. ಇದರಲ್ಲಿರುವ ಚಿಂತನ ಮಂಥನ ಭಾವ ಭಾವನೆಗಳು ಇಡೀ ಭಾರತಕ್ಕೆ ಅನ್ವಯಿಸುತ್ತವೆಂಬುದನ್ನು ಮರೆಯಬಾರದು. ಕರ್ನಾಟಕ ಹೃದಯಶಿವನಿಗೆ ಬದಲಾಗಿ ಮಮಭಾರತ ಹೃದಯಶಿವ ಎಂದರಾಯಿತು. ರಾಜ್ಯಪಾಲ ನಿಟ್ಟೂರು ಶ್ರೀನಿವಾಸರಾಯರು ಸ್ವಾತಂತ್ರ್ಯೋತ್ಸವದ ದಿನದಂದು ಸೈನಿಕ ಗೌರವಾನಂತರ ಮೊಟ್ಟಮೊದಲನೆಯ ಸಾರಿ ಕನ್ನಡದಲ್ಲಿ ಸಂದೇಶವಿತ್ತ ಸುದ್ದಿಯನ್ನೋದಿದಾಗ ತಮಗಾದ ಆನಂದವನ್ನವರು 'ರಾಜ್ಯಪಾಲರಿಗೆ ಅಭಿನಂದನೆ' (ಪ್ರೇತಕ್ಯೂ) ಎಂಬ ಕವಿತೆಯಲ್ಲಿ ಬರೆದಿದ್ದಾರೆ.

ಕುವೆಂಪು ಅವರ ಕನ್ನಡ-ಕರ್ನಾಟಕ ಪ್ರೇಮ ಅನನ್ಯವಾದ ರಾಷ್ಟ್ರಪ್ರೇಮಕ್ಕೆ ಪೋಷಕವಾಗಿತ್ತೆ ಹೊರತು ವಿರೋಧವಾಗಿರಲಿಲ್ಲ. ಕರ್ನಾಟಕ ಪ್ರಸ್ತಾಪ ಬಂದಾಗಲೆಲ್ಲ ಭಾರತ ಜನನಿಯ ತನುಜಾತೆಯೆಂದೇ ಸ್ತುತಿಸುತ್ತಾರೆ. ಕರ್ನಾಟಕಮಾತೆ ಭಾರತಮಾತೆ ಭಿನ್ನರಲ್ಲವೆಂಬಂತೆ ಭಾವುಕತೆಯಿಂದ ಮೆರೆಸುತ್ತಾರೆ.

ಜಯ್ ಭಾರತ ಜನನಿಯ ತನುಜಾತೆ,
        ಜಯ ಹೇ ಕರ್ನಾಟಕಮಾತೆ!
ರಾಘವ ಮಧುಸೂದನರವತರಿಸಿದ
        ಭಾರತ ಜನನಿಯ ತನುಜಾತೆ
ಕಪಿಲ ಪತಂಜಲ ಗೌತಮ ಜಿನನುತ
        ಭಾರತ ಜನನಿಯ ತನುಜಾತೆ

---

೧. ಕರ್ನಾಟಕ; ಇಟ್ಟ ಹೆಸರು ಕೊಟ್ಟ ಮಂತ್ರ, ವಿಚಾರ ಕ್ರಾಂತಿಗೆ ಆಹ್ವಾನ ಪುಟ. ೮೮
೨. ಕರ್ನಾಟಕ; ಇಟ್ಟ ಹೆಸರು ಕೊಟ್ಟ ಮಂತ್ರ, ವಿಚಾರ ಕ್ರಾಂತಿಗೆ ಆಹ್ವಾನ ಪುಟ. ೮೯
೩. ಕನ್ನಡ ಡಿಂಡಿಮ, ಪ್ರೇತಕ್ಯೂ

ನಾನಕ ರಾಮಾನಂದ ಕಬೀರರ
ಚೈತನ್ಯ ಪರಮಹಂಸ ವಿವೇಕರ
ಭಾರತ ಜನನಿಯ ತನುಜಾತೆ.[೧]

ಇದು ಕರ್ನಾಟಕದ ರಾಷ್ಟ್ರಗೀತೆಯಾಗಲು ಸರ್ವಾರ್ಹ. ಭಾರತ-ಕರ್ನಾಟಕ, ಇವುಗಳಲ್ಲಿ ಒಂದನ್ನು ಬಿಟ್ಟು ಮತ್ತೊಂದಿಲ್ಲ. ಅವಕಾಶ ಸಿಕ್ಕಿದರೆ ಸಾಕು, ಹಲವು ಬಗೆಯ ಅವಮಾನ ಪರಾಭವಗಳಿಗೆ ಗುರಿಯಾದ ಭಾರತೀಯ ದೀನಾವಸ್ಥೆಯನ್ನವರು ಹೃದಯ ವಿದ್ರಾವಕವಾಗಿ ವರ್ಣಿಸುತ್ತಾರೆ. ಗೋಮಟೇಶ್ವರನ ಮುಂದೆ ನಿಂತಾಗ ಹೃದಯ ಕರಗಿ ಭಾವ ಲಾವಾರಸ ಲಹರಿಯಾಗಿ ಹರಿಯುತ್ತದೆ.[೨]

ಭಾರತಿಗೆ ಪರಕೀಯರೆಸಗಿದನ್ಯಾಯಮಂ
ಕಣ್ಣಾರೆ ಕಂಡ ನೀಂ ನಿತ್ಯ ಸಾಕ್ಷಿ.
ಆಕೆಯಾಭರಣಮಂ ಮೋಸದಿಂ ಸುಲಿದುದಕೆ
ಬ್ರಹ್ಮನಾಸ್ಥಾನದೊಳು ನೀನೆ ಸಾಕ್ಷಿ
ಬಲಗೈಯ ಖಡ್ಗದಿಂದೆಡಗೈಕೊರಾನಿನಿಂ
ಭಾರತೀಯ ಪೀಡಿಸಿದ ಮುಸಲದಳಮಂ,
ಮೇಲೆ ಕ್ರಿಸ್ತನನಿರಿಸಿಯೊಳಗೆ ಸೈತಾನನಂ
ಮರೆ ಮಾಡಿ ಹೇಮಾಭಿಲಾಷೆಯಿಂದ
ವಾರಿಧಿಯದಾಂಟಿ ಬೇಹಾರಕೈತಂದರಂ
ಕ್ರಿಸ್ತ ವೇಷವನಾಂತ ಸೈತಾನನಾಚಾರದಿಂ
ಭಾರತಿಯ ಹಣೆಯಿಂದ ಪದಕಿಳಿದ ಶೋಣಿತಮುಮಂ
ನೋಡಿರುವೆಯದರಿಂದ ಭಾರತಿಗೆ ನೀನೆ ಸಾಕ್ಷಿ![೩] (೧೯೨೭)

೧೯೨೫ರಲ್ಲಿಯೇ ಜಲಿಯನ್‌ವಾಲಾಬಾಗ್ ಹತ್ಯಾಕಾಂಡವನ್ನು ಕುರಿತು ಇಂಗ್ಲಿಷ್ ಕವಿತೆಯ ಮೂಲಕ ರೋಷವನ್ನು ಕಾರುತ್ತಾರೆ; ಡಯರ್‌ನನ್ನು ಸೈತಾನನೆಂದು ಕರೆಯುತ್ತಾರೆ.[೪] ಭಾರತದ ಕಣ್ಣೀರಿನ ಈ ಕತೆ ರೌರವ ಕ್ರೋಧ ಶೋಕಗಳ ಮಡುವಾಗಿದೆ. 'ಭರತಮಾತೆ' ಎಂಬ ಕವಿತೆಯಲ್ಲಿಯೂ ಆ ತಾಯಿಯ ಮತ್ತು ಆಕೆಯ ಮಕ್ಕಳ ಕಷ್ಟ ಕಾರ್ಪಣ್ಯಗಳ ರುದ್ರ ಭೀಕರ ವರ್ಣನೆಯಿದೆ; ಇಲ್ಲಿಯೂ ಕವಿಯ ದೇಶಭಕ್ತಿ ಹೊನಲಾಗಿ ಹರಿಯುತ್ತದೆ.[೫]

ದಾಸ್ಯ ದಾರಿದ್ರ್ಯಗಳಿಂದ ನವೆಯುತ್ತಿದ್ದರೂ, ಕುಂದುಕೊರತೆಗಳಿದ್ದರೂ, ಅವಳನ್ನು ಆರಾಧಿಸುವುದರಲ್ಲಿಯೇ ಮುಕ್ತಿಯಿದೆ ಯೆಂದರಿತವರು ಇವರು.

ಭಾರತಾಂಬೆಯೆ ಜನಿಸಿ ನಿನ್ನೊಳು ಧನ್ಯನಾದೆನು, ದೇವಿಯೇ,
ನಿನ್ನ ಪ್ರೇಮದಿ ಬೆಳೆದು ಜೀವವು ಮಾನ್ಯವಾದುದು, ತಾಯಿಯೆ[೬]

---

೧. ಜಯಹೇ ಕರ್ನಾಟಕ ಮಾತೆ, ಕೊಳಲು
೨. Forget me not sweet land ! I a the child.
Though far away from they beloved shore.
I breath and passaway I love the more.
Dear India ! Remember the child exiled.
೧೯೨೪ರಲ್ಲಿಯೇ ಇಂಗ್ಲಿಷಿನಲ್ಲಿ ರಚಿಸಿದ The banished Indian patriot (in Andanman inlands) ಎಂಬ ಪದ್ಯ ಭಾಗವಿದು.
೩. ಗೋಮಟೇಶ್ವರ. ಅದೇ.
೪. Alien harp p. 42-43
೫. ಭಾರತಮಾತೆ, ಪಾಂಚಜನ್ಯ
೬. ಭಾರತ ಜನನಿಗೆ, ಕೊಳಲು

ಎಂದು ಕವಿ ಹೆಮ್ಮೆಯಿಂದ ತಾಯಿಯನ್ನು ಹೊಗಳುತ್ತಾರೆ, 'ನಿನ್ನ ಸೇವೆಯೊಳಳಿವ ಭಾಗ್ಯಕೆ ಸಕಲ ಭಾಗ್ಯವ ತೊರೆವೆನು!' ಎಂಬುದಾಗಿ ಶ್ರದ್ಧಾಗೌರವಗಳನ್ನು ವ್ಯಕ್ತಪಡಿಸುತ್ತಾರೆ. 'ಭರತಖಂಡದ ಹಿತವೆ ನನ್ನ ಹಿತ ಎಂದು, ಭರತ ಮಾತೆಯ ಮತವೆ ತನ್ನ ಮತವೆಂದು, ನುಗ್ಗು ಮರಣಕೆ, ವೀರ, ಸಗ್ಗದಾ ನೆಲೆಗೆ'[೧] ಎಂದವರು ಪಾಂಚಜನ್ಯವನ್ನು ಮೊಳಗಿಸುತ್ತಾರೆ, ಸತ್ಯಾಗ್ರಹಿಗಳನ್ನು ಉತ್ತೇಜಿಸುತ್ತಾರೆ.

ಸತ್ತ ಕಲ್ಲುಗಳ ರೂಪದಲ್ಲಿರುವ ದೇವರುಗಳನ್ನೆಲ್ಲ ತಿರಸ್ಕರಿಸಿ, ನಾಸ್ತಿಕರೆಂಬ ನಿಂದೆಗೂ ಹೆದರದೆ, ಭಾರತಾಂಬೆಯೆ ತಮ್ಮ ದೇವರೆಂದು ಸಾರುವ ನಿರ್ಭೀತ ನಿಷ್ಠುರ ದೇಶಭಕ್ತ ಕವಿಯಿವರು.

ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ.[೨]

ಎಂದು ನಿರ್ದಾಕ್ಷಿಣ್ಯವಾಗಿ ಸಾರುವಾಗ ಆಸ್ತಿಕರಿಗೆ ಎದೆಯೊಡೆಯದಿರುತ್ತದೆಯೆ? ಅವರಿಗೆ ದೇವರಿಗಿಂತ ದೇಶವೇ ಹೆಚ್ಚು. 'ಭರತ ಭೂಮಿ ನನ್ನ ತಾಯಿ, ನನ್ನ ಪೊರೆವ ತೊಟ್ಟಿಲು; ಜೀವನವನೆ ದೇವಿಗೆರೆವೆ ಬಿಡುತ ಗುಡಿಯ ಕಟ್ಟಲು!'[೩] ಈ ದೇಶದಲ್ಲಿ ವಾಸಿಸುತ್ತಿರುವ ಜನರಿಗೆ ಇದು ಜೀವನ ಮಂತ್ರವಾಗುವ ಪಕ್ಷಕ್ಕೆ ನೆರೆಹೊರೆಯ ರಾಷ್ಟ್ರಗಳ ದುರುದುಂಬಿತನ ನಿಂತೀತು. ಭಾರತೀಯರೆಲ್ಲರೂ ಒಟ್ಟಾಗಿ ನಿಷ್ಠೆಯಿಂದ

ನಮ್ಮ ಮತ-ಭಾರತ!
ನಮ್ಮ ವ್ರತ-ಭಾರತ!
ನಮ್ಮ ಬಾಹು ರಕ್ಷಿತ
ಸುರಕ್ಷಿತ ಸುರಕ್ಷಿತ
ಅನವರತ-ಭಾರತ! (ಮಂತ್ರಾಕ್ಷತೆ ೧೩೮)

ಎಂದು ಪ್ರಾರ್ಥಿಸುವುದಾದರೆ ದೇಶಕ್ಕೆ ಯಾವ ಗ್ರಹಶಂಕೆಯೂ ತಟ್ಟಲಾರದು. ಭರತಮಾತೆಯ ಸುಲಿಗೆಯ ಕತೆಯನ್ನೋದುವಾಗ 'ಕಣ್ಣು ಹನಿತುಂಬಿ ಮಂಜಾಗುವುದು; ಕುದಿಯುವುದು ನೆತ್ತರೆದೆ ಬೆಂದು ಬಿಸುಸುಯ್ಯುವುದು; ಸಿಲ್ಕಿ ಮಮತೆಯಲಿ ಒಮ್ಮೊಮ್ಮೆ ಕವಿಯಾಗುವನು ಕಲ್ಕಿ' ಎಂಬ ಕವಿವಾಣಿಯಲ್ಲಿ ದೇಶಾಭಿಮಾನಿಗಳ ಭಾವತೀಕ್ಷ್ಣತೆ ಹೊಳಲುಗೊಡುತ್ತದೆ.

ಕನ್ನಡಾಂಬೆಯನ್ನು ಕುರಿತ ಪ್ರಾರ್ಥನೆಯಲ್ಲಿ ಭಾರತಾಂಬೆಯ ಪ್ರಾರ್ಥನೆಯೂ, ಭಾರತಾಂಬೆಯನ್ನು ಕುರಿತ ಪ್ರಾರ್ಥನೆಯಲ್ಲಿ ಕನ್ನಡಾಂಬೆಯ ಪ್ರಾರ್ಥನೆಯೂ ಅವಿನಾಭಾವದಿಂದ ಹೆಣೆದುಕೊಂಡಿವೆಯೆಂಬುದು ಸುಸ್ಪಷ್ಟ. ಕರ್ನಾಟಕ ಮತ್ತು ಭಾರತಗಳಲ್ಲಿ, ಪ್ರಾದೇಶಿಕತೆ ಮತ್ತು ರಾಷ್ಟ್ರೀಯತೆಯಲ್ಲಿ ಅಖಂಡತೆಯನ್ನು ಅದ್ವೈತ ತತ್ತ್ವವನ್ನು ಕಾಣುವವನೇ ಅಪ್ಪಟ ಭಾರತೀಯನೆಂಬುದು ನೆನಪಿಡಬೇಕಾದ ಸಂಗತಿ. 'ದೇಶ ನನ್ನದು ನನ್ನದು ನಾಡು ಎನ್ನದ ಮಾನವನೆದೆ ಸುಡುಗಾಡು!'

ದೂರ ದೇಶಕೆ ಹೋದಾ ಸಮಯದಿ
ತನ್ನ ನಾಡನು ನೆನೆನೆನೆದುಬ್ಬದ
ಮಾನವನಿದ್ದರೆ ಲೋಕದಲಿ,
ತಾವಿಲ್ಲವನಿಗೆ ನಾಕದಲಿ! ವೀರ ನಾಕದಲಿ!(ಪ್ರತಾಪಸಿಂಹ)

ಇಂಥ ದೇಶಾಭಿಮಾನಿ ಕವಿಗೆ ಸ್ವಾತಂತ್ರ್ಯ ಸಮರವೂ ಒಂದು ವ್ರತವಾಗುತ್ತದೆ. ಆದರೆ ಕುವೆಂಪು ಈಚಲಮರಗಳನ್ನು ಕಡಿದು, ಆಂಗ್ಲ ಸಾರ್ವಭೌಮತ್ವದ ಬಾವುಟವನ್ನು ಸುಟ್ಟು, ಸತ್ಯಾಗ್ರಹದಲ್ಲಿ ಭಾಗವಹಿಸಿ, ಜೈಲು ಸೇರುವುದಿಲ್ಲ. ಅವರೇ ಹೇಳುತ್ತಾರೆ; 'ನಾನು ಲಾಠಿ ಏಟು ತಿಂದಿಲ್ಲ; ಸೆರೆಮನೆಗೆ ಹೋಗಿಲ್ಲ; ಬ್ರಿಟಿಷರ ವಿರುದ್ಧವಾಗಿ ತಿಲಕರ ಮತ್ತು ಗಾಂಧೀಜಿಯ ಪ್ರಭಾವವು ಪ್ರಚೋದಿಸಿದ ವಿದ್ಯಾರ್ಥಿ ಮೆರವಣಿಗೆಗಳಲ್ಲಿ ಕೂಗಿಕೊಂಡು ಅಲೆದಿದ್ದೇನೆ. ವಿದೇಶೀ ವಸ್ತ್ರದಹನ ಯಜ್ಞಗಳಲ್ಲಿ ಭಾಗವಹಿಸಿ, ಪ್ರೇಕ್ಷಕನಾಗಿ ನಿಂತಿದ್ದು, ಪಕ್ಕದಲ್ಲಿ ನಿಂತಿದ್ದ ಮಿತ್ರರು ಹುರಿದುಂಬಿಸಿದ್ದಕ್ಕಾಗಿ ತಾತ್ಕಾಲಿಕ ಭಾವಾವೇಶಕ್ಕೆ ಒಳಗಾಗಿ ಇದ್ದದ್ದೊಂದು ಅಂಗಿಯನ್ನು ಟೋಪಿಯನ್ನು ಬೆಂಕಿಗೆ ಎಸೆದದ್ದೂ ಉಂಟು... ಆ ಕಾಲದಲ್ಲಿ ನಡೆದ ಯಾವ ಮಹಾಘಟನೆಯೂ ಬಹುಶಃ ನನ್ನ ಲೇಖನಿಯಿಂದ ವಂಚಿತವಾಗಿಲ್ಲ. ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಚಿರಸ್ಮರಣೀಯವಾದ ಸನ್ನಿವೇಶಗಳೂ ಘಟನೆಗಳೂ ವ್ಯಕ್ತಿಗಳೂ ವ್ಯಕ್ತಿ ಜೀವನದ ಭವ್ಯ ವ್ಯಾಪಾರಗಳೂ ಕಂಡರಣೆಗೊಂಡು, ಆ ಸಂಗ್ರಾಮದ ಇತಿಹಾಸವನ್ನು ಶಾಶ್ವತಗೈಯುವ ಸ್ತಂಭ ದೀಪಿಕೆಗಳಂತೆ ಪಂಕ್ತಿಗೊಂಡು

೧. ಪಾಂಚಜನ್ಯ, ಪಾಂಚಜನ್ಯ
೨. ಇಂದಿನ ದೇವರು, ಅದೇ.
೩. ಭರತ ಭೂಮಿ ನನ್ನ ತಾಯಿ, ಕೋಗಿಲೆ ಮತ್ತು ಸೋವಿಯಟ್ ರಷ್ಯಾ

ಹೋರಾಟಕ್ಕೆ ಸ್ಪಂದಿಸುತ್ತಾರೆ. ಸಮರ ಸಂದೇಶವನ್ನು ಮನೆಮನೆಗಳಿಗೆ ಮನ ಮನಗಳಿಗೆ ಭಾವಮಾಧ್ಯಮದ ಮೂಲಕ ಮುಟ್ಟಿಸುತ್ತಾರೆ. ಗಾಂಧೀಜಿಯ ಕರೆಯ ಮೇರೆಗೆ ಹಳ್ಳಿಯ ನಿರಕ್ಷರಿಯೂ ಹೋರಾಟದಲ್ಲಿ ಭಾಗವಹಿಸಿ, ಜೈಲಿಗೆ ಹೋಗಬಹುದು. ಆದರೆ ನೂರಾರು ಸಾವಿರಾರು ಚೇತನಗಳನ್ನು ಪ್ರಚೋದಿಸುವ ಶಕ್ತಿ ಅವನಲ್ಲಿ ಸೊನ್ನೆ. ಆ ಶಕ್ತಿ ಕವಿಯ ಲೇಖನಿಗಿದೆ. ಆ ಕಾಲದಲ್ಲಿ ತಾವು ರಚಿಸಿದ್ದ ಸ್ವಾತಂತ್ರ್ಯಪರವಾದ ಕವಿತೆಗಳನ್ನು ಕುವೆಂಪುವೇ ವಾಚಿಸಿದಾಗ, ಸಭಿಕರು ಹುಚ್ಚೆದ್ದು ಕುಣಿಯುತ್ತಿದ್ದುದುಂಟು. ೧೯೩೨ರಲ್ಲಿ ಮಡಿಕೇರಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲವರು ಮತ್ತು ಕೆಲವರು ಉತ್ಸಾಹೀ ತರುಣರು ಪಾಂಚಜನ್ಯದ ಕವನಗಳನ್ನು, 'ತರುಣರಿರ ಎದ್ದೇಳಿ' 'ರಕ್ತತರ್ಪಣ' 'ಸುಮುಹೂರ್ತವೂ ಇಂದೆ' ಮೊದಲಾದ 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ'ದ ಕವಿತೆಗಳನ್ನು ವಾಚಿಸಿದಾಗ ಸಭಿಕರ ಉತ್ಸಾಹಾವೇಶ ಆಂಗ್ಲರ ಖಂಡನೆಯ ಕಡೆಗೂ ವಾಲುತ್ತಿತ್ತು. ಆಗ ಪೊಲೀಸ್ ಅಧಿಕಾರಿಗಳು ಆ ಕವಿತೆಗಳನ್ನು ರಚಿಸಿದ ಕವಿಯನ್ನು, ಅವನ್ನು ಹಾಡಿದ ತರುಣರನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವುದಾಗಿ ಬೆದರಿಕೆ ಹಾಕುತ್ತಾರೆ. ಆ ಸಂದರ್ಭದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಪೊಲೀಸರೊಡನೆ ವಾಗ್ವಾದಕ್ಕಿಳಿದು, ಆ ಕವಿತೆಗಳಲ್ಲಿ ರಾಜದ್ರೋಹಕರವಾದ ಸಂಗತಿಗಳಿಲ್ಲವೆಂದು ಸಮರ್ಥಿಸಿಕೊಳ್ಳುತ್ತಾರೆ.

ಇಷ್ಟೇ ಅಲ್ಲ, ವಿದೇಶೀಯರ ಆಳ್ವಿಕೆಯ ವಿರುದ್ಧವಾಗಿ ವ್ಯವಸ್ಥೆಗೊಳಿಸುತ್ತಿದ್ದ ಸಭೆ ಸಮಾರಂಭಗಳಲ್ಲಿ ಭಾಷಣಕಾರರು ಸ್ವಾತಂತ್ರ್ಯ ಸಂಬಂಧವಾದ, ಆವೇಶಭರಿತವಾದ ಕವಿತೆಗಳನ್ನೋದಿ ಜನಮನದಲ್ಲಿ ಕ್ರಾಂತಿಯ ಬೀಜಗಳನ್ನು ಬಿತ್ತುತ್ತಾರೆ. ಆ ಕವಿತೆಗಳನ್ನು ಹಾಡಿಕೊಂಡೇ ಜನ ಅನ್ಯಾಯದ ಕಾನೂನುಗಳನ್ನು ಮುರಿದು, ಜೈಲಿಗೆ ಹೋಗುತ್ತಾರೆ. ಅಂಥ ಕವಿತೆಗಳಲ್ಲಿ 'ನಡೆ ಮುಂದೆ, ನಡೆ ಮುಂದೆ, ನುಗ್ಗಿ ನಡೆ ಮುಂದೆ! ಜಗ್ಗದೆಯೆ, ಕುಗ್ಗದೆಯೆ ಹಿಗ್ಗಿ ನಡೆ ಮುಂದೆ' ಎಂದು ಮೊದಲಾಗುವ 'ಪಾಂಚಜನ್ಯ'ವೂ ಒಂದು.

ಬೀಳಲಿ ಮೈನೆತ್ತರು ಕಾರಿ;
ಹೋದರೆ ಹೋಗಲಿ ತಲೆ ಹಾರಿ
ತಾಯ್ನಾಡಿನ ಮೇಲ್ಮೆಗೆ ಹೋರಿ
ಸ್ವಾತಂತ್ರ್ಯದ ಸ್ವರ್ಗಕೆ ಏರಿ![೧]

ಎಂಬ ಸಾಲುಗಳನ್ನು ಮೈಮೇಲೆ ಬಂದವರಂತೆ ಭಾವಾವೇಶದಿಂದ ವಾಚಿಸಿದಾಗ, ಸಭಿಕರು ಮೈಮರೆತು, ಕುಣಿಕುಣಿದು, ಚಪ್ಪಾಳೆಯಿಕ್ಕುವಾಗ, ಸಭಾಂಗಣದ ಹಾಗೂ ಗಗನದ ಚಾವಣಿ ಹಾರಿಹೋಗುವಂತೆ ನಿರ್ಘೋಷ ಪ್ರಧ್ವಾನಗಳು ಆಸ್ಫೋಟಿಸುತ್ತವೆ. 'ಕಾಳಿ ಬರುವಳು', 'ಭೈರವನಾರಿ', 'ಇಂದಿನ ದೇವರು', 'ದೇಶಭಕ್ತನ ಬಯಕೆ', 'ಸತ್ತನೆ ಸೈನ್ಯಪತಿ', 'ದೇಶಭಕ್ತನ ಉತ್ತರವಾಣಿ' 'ಮಹಾತ್ಮಾ ಗಾಂಧಿ' 'ಮೋತಿಲಾಲ ನೆಹರು', ಇವೇ ಮುಂತಾದ ಕವಿತೆಗಳಲ್ಲಿ ಸ್ವಾತಂತ್ರ್ಯಲಹರಿ ಭೋರ್ಗರೆಯುತ್ತದೆ. ತಮ್ಮ ಅನುದಿನದ ಪ್ರಾರ್ಥನೆಯಲ್ಲವರು ಸ್ವಾತಂತ್ರ್ಯ ಪ್ರಾಪ್ತಿಗಾಗಿ ಹಾತೊರೆಯುತ್ತಾರೆ. ಗಣೇಶನನ್ನು ಇಳೆಗೆ ಬರಮಾಡಿಕೊಂಡಾಗಲೂ 'ಬರುವಾ ಕಾಲಕೆ ಭಾರತ ಮಾತೆಗೆ ಸ್ವಾತಂತ್ರ್ಯದ ಶ್ರೀಯೈತರಲು, ಕಾಮಧೇನುವಿನ ಕೆಚ್ಚಲಿನಮೃತವ ಕೊಡುವೆವು ಬೆಳ್ಳಿಯ ಬಟ್ಟಲಲ್ಲಿ' ಎಂದವರು ತಮ್ಮ ಮನೋರಥವನ್ನು ಅವನ ಮುಂದೆ ಬಿಚ್ಚಿಡುತ್ತಾರೆ. ಸ್ವಾತಂತ್ರ್ಯದ ಹುಚ್ಚು ಹಿಡಿದಿದೆಯೆನ್ನುವಂತೆ, ಪ್ರಕೃತಿ ವರ್ಣನೆಯ ಮಧ್ಯದಲ್ಲಿಯೂ ಸ್ವಾತಂತ್ರ್ಯದ ವಿಚಾರವನ್ನು ಉಲ್ಲೇಖಿಸುತ್ತಾರೆ.

ಶ್ರಾವಣ ಸಂಧ್ಯಾಸಮಯ ಸಮೀರ
ಸ್ವಾಗತ ನಿನಗೆ, ಪಯೋಧಿಯ ವೀರ!
ಸ್ವಾತಂತ್ರ್ಯದ ರುಚಿಯರಿತಿಹ ಧೀರ;
ಸ್ವಾತಂತ್ರ್ಯದ ಸಂದೇಶವ ತಾರ!
ಮುಕ್ತ ಸಮೀರ, ಬಾರಾ! ಬಾರಾ!
ಸತ್ಯಾಗ್ರಹವನು ನೀನೂ ಸೇರಾ!

ಎಂದು ಮುಂತಾಗಿ ವಾಯುದೇವನಿಗೆ ಅವರು ಬಿನ್ನಹ ಸಲ್ಲಿಸುತ್ತಾರೆ.[೨]

---

೧. ಶ್ರಾವಣ ಸಂಧ್ಯಾ ಸಮೀರ, ಪಾಂಚಜನ್ಯ

೨. ಸಮುಹೂರ್ತವೂ ಇದೆ! ಕೋಗಿಲೆ ಮತ್ತು ಸೋವಿಯಟ್ ರಷ್ಯಾ

ಮಹಾತ್ಮಾ ಗಾಂಧಿ ಅವರ ಆರಾಧ್ಯ ಮೂರ್ತಿ. ಅವರ ನಡೆನುಡಿ ಕ್ರಿಯೆಯೆಲ್ಲವೂ ಕುವೆಂಪು ಅವರಿಗೆ ಪವಿತ್ರ. ಹಿಂದಿನ ಸಹಸ್ರ ಸಹಸ್ರ ವರ್ಷಗಳ ಭಾರತೀಯ ಸಂಸ್ಕೃತಿ ಒಬ್ಬುಳಿಯಾಗಿ ಗಾಂಧೀಜಿಯಲ್ಲಿ ಸಾಕಾರಗೊಂಡಿದೆಯೆಂಬ 'ಜನಮನದ ಶಕ್ತಿ ಮೇಣವರ ಭೀಪ್ಸೆಯೆ ಮಹಾತ್ಮರಂ ನಮ್ಮೆಳಗೆ ತಪ್ಪದೆಳೆತರ್ಪುದು ಕಣಾ!'[೧] ಎಂಬ ವಿಶ್ವಾಸ ಅವರದು. ಗಾಂಧೀಜಿಯನ್ನು ಅವರ ಜೀವನದ ಘಟನೆಗಳನ್ನು, ಅವರ ಮರಣೋತ್ತರ ಸಂಗತಿಗಳನ್ನು ಕುರಿತು ಬರೆದ ಕವಿತೆ ಪ್ರಬಂಧಗಳೇ ಒಂದು ಹೆಬ್ಬೊತ್ತಿಗೆಗೆ ಸಾಕಾಗುತ್ತವೆ. ಸದ್ಯಕ್ಕೆ ಅಡಿಟಿಪ್ಪಣಿಯಲ್ಲಿ ನಮೂದಿಸಿರುವ ಪಟ್ಟಿಯಿಂದಲೆ ತೃಪ್ತಿಗೊಳ್ಳಬೇಕಾಗಿದೆ. ಸ್ವಾತಂತ್ರ್ಯಾವತರಣ ಸಂದರ್ಭದಲ್ಲಿ ಮತ್ತು ಪ್ರಥಮ ವಾರ್ಷಿಕೋತ್ಸವ ಸಂದರ್ಭದಲ್ಲಿ ರಚಿಸಿದ 'ಶ್ರೀಸ್ವಾತಂತ್ರ್ಯೋತ್ಸವ ಮಹಾಪ್ರಗಾಥಾ' ಮತ್ತು 'ಸ್ವಾತಂತ್ರ್ಯ ಲಕ್ಷ್ಮಿಗೆ' (ಇಕ್ಷು ಗಂಗೋತ್ರಿ) ಎಂಬೆರಡು ಕವಿತೆಗಳಲ್ಲಿ ಸ್ವಾತಂತ್ರ್ಯದ ಸ್ವರೂಪ, ಸಾಧನೆ, ಸಿದ್ಧಿ, ಧ್ಯೇಯೋದ್ದೇಶ, ಪರಿಣಾಮ, ದರ್ಶನಗಳನ್ನೊಳಗೊಂಡ ತಾತ್ವಿಕ ವಿವರಣೆಯಿದೆ.

ಸ್ವಾತಂತ್ರ್ಯಾನಂತರ ತನ್ನ ಇಷ್ಟಾರ್ಥ ನೆರವೇರಿದರೂ ಸುಖವನ್ನನುಭವಿಸಲಾಗದ ರಾಜಕೀಯ ರಾವಣನೊಬ್ಬನನ್ನು ಕುರಿತು 'ಅಲ್ಲಾದೊಡಂ ಮರೆವೊಗು ಮಹಾತ್ಮನಂ, ಸರ್ವಮಂ ಕ್ಷಮಿಸಿ, ರಕ್ಷಿಸಬಲ್ಲ ದಿವ್ಯಾತ್ಮನಂ' ಎಂದು ಕುವೆಂಪು ಅನುಕಂಪೆಯನ್ನು ವ್ಯಕ್ತಪಡಿಸಿದ್ದಲ್ಲದೆ 'ನಿನಗೊಳ್ಳಿತಂಗೆಯ್ಯಲಿ ಜಗನ್ಮಾತೆ'[೨] ಎಂದು ಹರಸುತ್ತಾರೆ. ಪಾಕಿಸ್ತಾನ ಭಾರತದ ಮೇಲೆ ಕೈಮಾಡಿ ಹಿಂದಕ್ಕೆ ಓಡಿ ಹೋದಾಗ 'ಸಾಕಾಯಿತೆ ರಕ್ತ ಸ್ನಾನ! ಇನ್ನಾದರೂ ಬುದ್ಧಿಯ ಕಲಿ, ಓ ಪಾಕಿಸ್ತಾನ' ಎಂದು ಸಾರುತ್ತಾರೆ.[೩] 'ಎಂದಾದರು ಕಾಶ್ಮೀರದ ಸೊಲ್ಲೆತ್ತೀಯ?' ಎಂದವರು ಭಾರತದ ಮುಸಲ್ಮಾನರ ಪರವಾಗಿ ಗುಡುಗುತ್ತಾರೆ.[೪] 'ಪರಾಭವ ಸಂವತ್ಸರ ಪುರುಷ'ನಿಗೆ[೫] ಸ್ವಾಗತ ನೀಡುವಾಗಲೂ ಜಗತ್ತಿನ ಸ್ವಾತಂತ್ರ್ಯವೇ ಅವರ ಕಣ್ಮುಂದಿದೆ. ಇಂಡಿಯಾದ ಮೇಲೆ ಧಾಳಿ ಯಾವ ಕಡೆಯಿಂದ ಬಂದರೂ ಈ ಕವಿ ಸಹಿಸಲಾರರು. 'ಚೀಣೀಯರ ಧಾಳಿ, ಬರಿ ಹಿಮದ ಧೂಳಿ! ತೂರಿಹೋಗುವುದು ಸ್ವಲ್ಪ ತಾಳಿ!' ಎಂದವರು ಭವಿಷ್ಯ ನುಡಿಯುತ್ತಾರೆ.[೬] 'ಚೀಣೀ ರಾಕ್ಷಸ ದಳವನು ಸೀಳಿ, ಓ ಬಾ ಬಾಬಾ, ಹೇ ಮಹಾಕಾಳಿ!'[೭] ಎಂದವರು ಮಾಕಾಳಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ಸ್ವಾತಂತ್ರ್ಯ ಮಾನವನ ನಿಸರ್ಗ ಸಹಜ ಹಕ್ಕೆಂಬ ತತ್ತ್ವ ಅವರ ಉಸಿರುಸಿರಿನಲ್ಲಿ ಹೊಳಹುದೋರುತ್ತದೆ.

ಸ್ವಾತಂತ್ರ್ಯದೊಡನೆ ಪ್ರಜಾಪ್ರಭುತ್ವ ಪ್ರಾಪ್ತವಾಗಿ, ಜನ ಪ್ರತಿನಿಧಿಗಳು ಜನರ ಪರವಾಗಿ, ಜನರಿಗಾಗಿ ಆಡಳಿತ ನಡೆಸುವಂತಾಗುತ್ತದೆಂಬುದು ಕುವೆಂಪು ಅವರ ಹೆಬ್ಬಯಕೆ. ಕಾಲಕ್ರಮೇಣ ಅವರಿಗರಿವಾಗುತ್ತದೆ, ಜನಪ್ರತಿನಿಧಿಗಳು ಜನರನ್ನು ಸುಲಿಗೆ ಮಾಡುವ ಸರ್ಕಾರದ ಏಜೆಂಟರೆಂದು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾರತೀಯರೇ ನಡೆಸುವ ಆಡಳಿತದಿಂದಾಗಿ ದೇಶ ಅವನತಿಯ ರಸಾತಳವನ್ನು ಮುಟ್ಟಿದೆಯೆಂಬುದು ಅವರಿಗೆ ಮನವರಿಕೆಯಾಗಿದೆ. ಧರ್ಮಸಂಕಟದಿಂದ, ಸಾತ್ವಿಕಕ್ರೋಧದಿಂದ ಸಿಡಿಲ ಕುಡವಾಗಿರುವ ಅವರ ಲೇಖನಿಯೇ ನಾಡಿನ ವಿಕಟ ಕರಾಳ ಪರಿಸ್ಥಿತಿಯನ್ನು ಬಣ್ಣಿಸಲಿ: 'ಪರಕೀಯರ ಶೋಷಣೆಯಿಂದ ನಮ್ಮ ದೇಶ ಎಂತಹ ಬಡತನಕ್ಕೆ ಇಳಿದಿತ್ತು ಎಂದರೆ ಯಂತ್ರನಾಗರಿಕತೆಯಲ್ಲಿ ತುಂಬ ಮುಂದುವರಿದ ದೇಶಗಳಂತೆ ಮಹಾ ಮಹಾ ಕಾರ್ಖಾನೆಗಳ ಮತ್ತು ಕೈಗಾರಿಕೆಗಳ ಭಾರವನ್ನು ಹೊರುವ ತ್ರಾಣವೆ ಅದಕ್ಕಿರಲಿಲ್ಲ. ಆದರೂ ಅದರ ಹೆಗಲ ಮೇಲೆ ಅದನ್ನೆಲ್ಲ ಹೇರಿದೆವು. ಕೋಟ್ಯಂತರ ಧನದ ಸಾಲವೆತ್ತಿ. ನಮಗೆ ಆಗ ತುರುತ್ತಾಗಿ ಬೇಕಾಗಿದ್ದುದು ಅನ್ನ ನೀರು ಬಟ್ಟೆ ಗುಡಿಸಲು. ಆದರೆ, ನಾವು ಮೋಟಾರು ಕಾರುಗಳನ್ನು ತಯಾರಿಸುವ ಏರ್ಪಾಡಿಗೆ ಬೆಂಬಲ ಕೊಟ್ಟೆವು. ನಾವೂ ಉಪಗ್ರಹಗಳನ್ನು ಹಾರಿಸಬೇಕೆಂದು ಹಟ ತೊಟ್ಟೆವು. ನಾವೂ ರಿಯಾಕ್ಟರುಗಳನ್ನು ಸ್ಥಾಪಿಸಿದೆವು. ಕೊನೆಗೆ ಆಟಂ ಸಾಧನವನ್ನು ಸಿಡಿಸಿದೆವು. ಹೀಗೆ ಅನೇಕ ರೀತಿಯ ಭೋಗದ ಮತ್ತು ಷೋಕಿಯ ವಸ್ತುಗಳ ತಯಾರಿಕೆಗೆ ಬಡ ರೈತರ ತೆರಿಗೆಯ ಧನವನ್ನು ವ್ಯಯಮಾಡಿದೆವು. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಭೋಗ ಜೀವನ ನಡಸುವ ಶ್ರೀಮಂತರ

೧. ಶ್ರೀರಾಮಾಯಣ ದರ್ಶನಂ ಮಹಾಕಾವ್ಯ ೧.೧.೨೬೧ರಿಂದ ೨೬೩ರ ವರೆಗಿನ ಪಂಕ್ತಿಗಳು.
೨. ಗತಿಸಿದ ರಾಜಕೀಯ ರಾವಣನೊಬ್ಬನಿಗೆ, ಇಕ್ಷು ಗಂಗೋತ್ರಿ, ಪು. ೩೫
೩. ಸಾಕಾಯಿತೆ ರಕ್ತಸ್ನಾನ, ಅನುತ್ತರಾ;
೪. ನಾ ಭಾರತ ಮುಸಲ್ಮಾನ- ಅದೇ
೫. ಪರಾಭವ ಸಂವತ್ಸರ ಪುರುಷನಿಗೆ, ಅದೇ
೬. ಚೀಣೀಯರ ಧಾಳಿ, ಮಂತ್ರಾಕ್ಷತೆ, ೧೩೧
೭. ಹೇ ಮಹಾಕಾಳಿ, ಅದೇ, ೧೩೪

ಸುಖಕ್ಕಾಗಿ ಹಳ್ಳಿಗಳನ್ನು ರೈತವರ್ಗವನ್ನು ಮರೆತುಬಿಟ್ಟೆವು ಅಥವಾ ಮರೆತೇಬಿಟ್ಟೆವು ಎಂಬ ದೂರಿನಿಂದ ಪಾರಾಗುವುದಕ್ಕಾಗಿಯೂ ಮತ್ತು ಅವರು ಸಂಪೂರ್ಣವಾಗಿ ನಿರ್ಜೀವವಾದರೆ ನಮಗಾಗಿ ದುಡಿಯುವವರು ಯಾರೂ ಇಲ್ಲದಂತೆ ಆಗಬಾರದು ಎಂಬುದಕ್ಕಾಗಿಯೂ ಜೀವವಾಡುವಷ್ಟರ ಮಟ್ಟಿಗೆ ಅವರ ಭಿಕ್ಷಾ ಪಾತ್ರೆಗೂ ಕಾಸು ಎಸೆದದ್ದುಂಟು.... ಬಡರೈತರನ್ನು ಹಿಂಡಿ ತೆಗೆದ ತೆರಿಗೆ, ದವಸ ಧಾನ್ಯಗಳು ನಗರಗಳ ಶ್ರೀಮಂತವರ್ಗಕ್ಕೂ ಅಧಿಕಾರ ವರ್ಗದ ಧಾಳಾ ಧೂಳಿಗೂ ವ್ಯಯವಾಯಿತು. ರಾಷ್ಟ್ರಪತಿಯಿಂದ ಹಿಡಿದು ರಾಯಭಾರಿ, ಪ್ರಧಾನಿ, ಮಂತ್ರಿ, ಲೋಕಸಭಾ ಸದಸ್ಯ, ಮೇಲ್ಮನೆ, ಕೆಳಮನೆ, ಐಎಎಸ್, ಐಪಿಎಸ್ ಇತ್ಯಾದಿ ಅಧಿಕಾರಿಗಳವರೆಗೆ ಸಮೃದ್ಧ ಸಂಬಳ ಗಿಂಬಳಗಳ ಹಂಚಿಕೆ ನಡೆಯಿತು.... ಗ್ರಾಮಸ್ವರಾಜ್ಯ ಪರಿಕಲ್ಪನೆಯ ವಿಕೇಂದ್ರೀಕರಣದ ಸ್ಥಾನದಲ್ಲಿ ಸಂಪೂರ್ಣ ಕೇಂದ್ರೀಕರಣ ಸ್ಥಾಪನೆಯಾಗಿ, ದೆಹಲಿಗೆ ಹೋಗಿ ಬರುವುದೆ ಕರ್ತವ್ಯಕರ್ಮದ ಪ್ರಧಾನ ಭಾಗವಾಯಿತು. ಆಡಳಿತ ಮತ್ತು ನ್ಯಾಯ ವಿತರಣೆಗಳು ಬ್ರಿಟಿಷರ ಕಾಲದಲ್ಲಿದ್ದುದಕ್ಕಿಂತಲೂ ಜಟಿಲವಾಗಿ ಅನಕ್ಷರಸ್ಥ ಹಳ್ಳಿಗರು ಅಧಿಕಾರದ ಗಾಣಕ್ಕೆ ಸಿಕ್ಕಿ ನರಳುವಂತಾಯಿತು.[೧] ಇಂದಿನ ಕ್ರೂರ ವಾಸ್ತವ ದುಃಸ್ಥಿತಿಯನ್ನು ಈ ಮಟ್ಟಿಗೆ ವರ್ಣಿಸುವ ನೈತಿಕ ಸಾಮರ್ಥ್ಯ ಕುವೆಂಪು ಅವರಂಥ ಧೀರ ಸಾಹಿತಿಯಲ್ಲದೆ ಬೇರಾರಿಗೂ ಸಾಧ್ಯವಿಲ್ಲ. 'ಎಂಜಲಿಗಂಜಲಿಯೊಡ್ಡಿದ ಕವಿಯಿಂ ಬಯಸುವಿರೇನನ್ನು? ತಿಂಗಳ ತಲುಬಿಗೆ ತೊತ್ತಾದವನಿಂ ಪಡೆಯುವಿರೇನನ್ನು?[೨] ಎಂದು ಕುವೆಂಪು ಅವರೇ ಹೇಳಿದ್ದುಂಟು.

ಸಮಾಜವಾದವೆ ನಮ್ಮ ಗುರಿ ಎಂದು, ಪ್ರಜಾಸತ್ತೆಯೆ ನಮ್ಮ ವಿಧಾನಮಾರ್ಗವೆಂದು ಮೊದಲೇ ನಿರ್ಣಯಿಸಲಾಗಿತ್ತು. ಅವನ್ನು ಕಾರ್ಯಗತಗೊಳಿಸಲು ಸಾಧ್ಯವಾಗಿದೆಯೆ? ಈ ಪ್ರಶ್ನೆಗೆ ಕುವೆಂಪು ಅವರೇ ಸ್ಪಷ್ಟವಾಗಿ ಉತ್ತರಿಸುತ್ತಾರೆ. 'ನೂರಕ್ಕೆ ತೊಂಬತ್ತರಷ್ಟು ಅನಕ್ಷರಸ್ಥರಿರುವ ದೇಶದಲ್ಲಿ ಅದೆಂತಹ ಪ್ರಜಾಪ್ರಭುತ್ವ ಸಾಧ್ಯವಾದೀತು? ಅದರಲ್ಲಿಯೂ ನಮ್ಮ ದೇಶ; ಯಾವತ್ತೂ ಪ್ರಜಾಸತ್ತೆಯ ಗಾಳಿಯನ್ನೂ ಮೂಸಿ ನೋಡದಿದ್ದ ದೇಶ; ರಾಜರನ್ನು ಪ್ರತ್ಯಕ್ಷ ದೇವರೆಂದು ಪೂಜಿಸಿದ ದೇಶ; ಪುರೋಹಿತರನ್ನು ಭೂಸುರರೆಂದು ಆರಾಧಿಸಿದ ದೇಶ! ಮತಮೌಢ್ಯ ಎಂಬ ನಿತ್ಯರೋಗವು ಅದರ ನಾಡಿನಾಡಿಗಳಲ್ಲಿ ಮಾತ್ರವಲ್ಲದೆ ಎಲುಬಿನಲ್ಲಿಯೂ ಐದು ಸಾವಿರ ವರ್ಷಗಳಿಂದ ಸರ್ವವ್ಯಾಪಿಯಾಗಿದ್ದು ವರ್ಗ ವರ್ಣ ಮತಜಾತಿ ಪಂಥ ಪಂಗಡ ಎಂಬ ನೂರಾರು ಭೇದಗಳಿಂದ ನರಳುತ್ತಿರುವ ದೇಶ! ಇಲ್ಲಿ ಡೆಮಾಕ್ರಸಿ ಬರಿಯ ಮಾಕರಿ ಆಗಿದೆ.'[೩] ಸಮಾಜವಾದ ಪ್ರಜಾಪ್ರಭುತ್ವ ಗಾಳಿಗೆ ತೂರಿಹೋಗಿವೆಯೆನ್ನುವುದರಲ್ಲಿಯೇ, ಪರೋಕ್ಷವಾಗಿ ಅವುಗಳ ಲಕ್ಷಣಗಳನ್ನು ವಿವರಿಸಿ, ಅವು ಗ್ರಾಹ್ಯವೆಂದು ಕುವೆಂಪು ತಿಳಿಸುತ್ತಾರೆ. ನಾಯಕರು ಅವೆರಡನ್ನೂ ಮಣ್ಣುಗೂಡಿಸಿದ್ದಾರೆಂಬುದು ಅವರಿಗೆ ಗೊತ್ತು.

ನಮ್ಮ ದೇಶದಲ್ಲಿ ನಡೆಯುತ್ತಿರುವ ಚುನಾವಣೆಗಳನ್ನು ವೀಕ್ಷಿಸಿದರೆ ಸಾಕು, ಇಲ್ಲಿ ಸಮಾಜವಾದವೂ ಇಲ್ಲ, ಪ್ರಜಾಸತ್ತೆಯೂ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. 'ಈಗಿನ ಚುನಾವಣಾ ಪದ್ಧತಿಯಿಂದ ಏನೇನು ಅನಾಹುತವಾಗಬಹುದೊ ಅದೆಲ್ಲ ಆಗಿದೆ ಮತ್ತು ಆಗುತ್ತಲೂ ಇದೆ. ಜಾತಿ ಮತ ಹೆಂಡ ದುಡ್ಡು ಇವೇ ಓಟರುಗಳು ; ಓಟು ಕೊಡುವ ಪ್ರಜೆಗಳು ಬರಿಯ ನಿಮಿತ್ತ ಮಾತ್ರ. ಮೂಕ ವಾಹನಗಳಷ್ಟೆ! ನಾಲ್ಕಾರು ಜನ ಯಾತಕ್ಕೂ ಹೇಸದ ಖದೀಮರು ಸೇರಿ, ಯಾವ ಉಪಾಯದಿಂದಾದರೂ, ಕಾಳ ಸಂತೆಯ ಕಪ್ಪುಹಣವೊ, ಕಳ್ಳಸಾಗಾಣಿಕೆಯ ಹಳದಿ ಹಣವೊ, ಅಂತು ಹೆಚ್ಚು ಹಣ ಒಟ್ಟು ಮಾಡಿದರಾಯ್ತು ನಮ್ಮ ಚುನಾವಣೆಗಳಲ್ಲಿ ಗೆಲ್ಲಬಹುದು?[೪] ಗೆದ್ದು ಅಧಿಕಾರ ಸೂತ್ರವನ್ನು ಹಿಡಿದ ಜನ ಸರ್ವಾಧಿಕಾರಿಗಳಾಗುತ್ತಾರೆ, ಶೋಷಕರಾಗುತ್ತಾರೆಂದು ಅವರು ಪ್ರಸಕ್ತ ದುಸ್ಥಿತಿಯನ್ನು ನಿರ್ಭೀತಿಯಿಂದ ಘೋಷಿಸುತ್ತಾರೆ.

'ನಿಜವಾದ ಪ್ರಜಾಸತ್ತೆ ಎಂದರೆ ಅನಿರ್ಬಾಧಿತ ಇಚ್ಛಾ ಸ್ವಾತಂತ್ರ್ಯದಿಂದ ಪ್ರಜೆಗಳು ಆಯುವ ಪ್ರಾಮಾಣಿಕ ವ್ಯಕ್ತಿಗಳಿಂದ ಸರ್ವರ ಅಭ್ಯುದಯಕ್ಕಾಗಿ ನಡೆಯುವ ರಾಜ್ಯಭಾರ'[೫]ವೆಂದು ಕುವೆಂಪು ಪ್ರಜಾಸತ್ತೆಯ ಲಕ್ಷಣವನ್ನು ಉಲ್ಲೇಖಿಸಿ, ಅದು ಸುಸ್ಥಿರಗೊಳ್ಳಬೇಕಾದರೆ, ಚುನಾವಣಾ ವಿಧಾನವನ್ನು ಬದಲಾವಣೆ ಮಾಡಬೇಕೆಂದು ಎಚ್ಚರಿಕೆ ನೀಡುತ್ತಾರೆ. 'ಭ್ರಷ್ಟಾಚಾರವನ್ನು ನಿರ್ಮೂಲ ಮಾಡುವ ಮತ್ತು ನಿಜವಾದ ಪ್ರಜಾಸತ್ತೆಯನ್ನು ರಕ್ಷಿಸುವ ಇಚ್ಛೆ ನಿಮಗಿದ್ದರೆ ಇಂದಿನ ರೀತಿಯ ಧನಾಶ್ರಿತ ಚುನಾವಣೆಯ ಪದ್ಧತಿಯನ್ನೇ ಬದಲಾಯಿಸಿ ಅದನ್ನು ಗುಣಾಶ್ರಿತವನ್ನಾಗಿ ಪರಿವರ್ತಿಸುವ ಕರ್ತವ್ಯ ನಿಮ್ಮ ಹೆಗಲ ಮೇಲೆ ಬೀಳುತ್ತದೆ. ಉಗ್ರಕ್ರಾಂತಿಯಿಂದಲಾದರೂ ನೀವು ಚುನಾವಣೆಯನ್ನು ಸಾತ್ವಿಕ ಮಾರ್ಗಕ್ಕೆ ತಿರುಗಿಸದಿದ್ದರೆ ಸ್ವಾರ್ಥಿಗಳೂ ಸಮಯ ಸಾಧಕರೂ ಗೂಂಡಾಗಳೂ ಕಾಳಸಂತೆಕೋರರೂ ಕಳ್ಳ

೧. ವಿಚಾರ ಕ್ರಾಂತಿಗೆ ಆಹ್ವಾನ, ಪು. ೩-೪
೨. ಪತಿತ ಕವಿಯ ಪ್ರಾರ್ಥನೆ, ಪ್ರೇತಕ್ಯೂ
೩. ವಿಚಾರ ಕ್ರಾಂತಿಗೆ ಆಹ್ವಾನ ಪು. ೫
೪. ಅದೇ, ಪು. ೫
೫. ಅದೇ, ಪು. ೫

ಸಾಗಣೆಯ ಖದೀಮರೂ ಚರಿತ್ರಹೀನರೂ ಪ್ರಜಾಸತ್ತೆಯ ಹುಸಿಹೆಸರಿನ ಹಿಂದೆ ಪ್ರಚ್ಛನ್ನ ಸರ್ವಾಧಿಕಾರ ನಡೆಸುತ್ತಾರೆ.'[೧] ಕುವೆಂಪು ಸದಾ ಅಂತರ್ಮುಖಿ, ಬಹಿರ್ಲೋಕದ ವ್ಯವಹಾರಗಳ ಬಗ್ಗೆ ಅವರು ನಿರ್ಲಿಪ್ತರು ಎಂಬ ಪ್ರತೀತಿ ಇದ್ದರೂ, ಅವರ ಕ್ರಾಂತ ದೃಷ್ಟಿಯಿಂದ ಯಾವ ಲೌಕಿಕ ವ್ಯವಹಾರವೂ ತಪ್ಪಿಸಿಕೊಳ್ಳುವಂತಿಲ್ಲವೆಂಬುದಕ್ಕೆ ಅನ್ಯಸಾಕ್ಷಿ ಅನಾವಶ್ಯಕ. ಪ್ರಾಯಶಃ ಯಾವ ಕ್ರಾಂತಿಕಾರ ದೀರ್ಘಾನುಭವಿ ರಾಜನೀತಿಜ್ಞನೂ ಈ ದೇಶದ ಇಂದಿನ ದುಸ್ಥಿತಿಯ ಬಗ್ಗೆ ಇದಕ್ಕಿಂತ ಹೆಚ್ಚು ಪರಿಣಾಮಕಾರಿಯಾಗಿ ವಿಶ್ಲೇಷಣೆ ಮಾಡಲಾರ; ಸಮಸ್ಯೆಯ ಬಗ್ಗೆ ಪರಿಹಾರ ಸೂಚಿಸಲಾರ.

ಪ್ರಜಾಸತ್ತೆಯ ಕಾಲುಷ್ಯಕ್ಕೆ ಹಾಗೂ ದುಸ್ಸಮಸ್ಯೆಗಳಿಗೆ ಪೂರ್ವೋಕ್ತ ಕಾರಣಗಳಿಗಿಂತ ಮತಾಂಧತೆಯೇ ಮೂಲವೆಂಬ ವಾಸ್ತವ ಸತ್ಯವನ್ನವರು ಸಂದೇಹಕ್ಕವಕಾಶವಿಲ್ಲದಂತೆ ಬಿತ್ತರಿಸಿದ್ದಾರೆ. 'ಅದು ಭಾವರೂಪಿಯಾದುದರಿಂದ ಅತಿ ಸೂಕ್ಷ್ಮವಾಗಿ ಹೃದಯ ಪ್ರವೇಶ ಮಾಡಿ ನಮ್ಮನ್ನು ಆಕ್ರಮಿಸುತ್ತದೆ... ಅದರ ಪ್ರಚ್ಛನ್ನ ವಂಚನೆಯ ಮುಷ್ಟಿಯಿಂದ ತಪ್ಪಿಸಿಕೊಳ್ಳುವುದೂ ಕಷ್ಟಸಾಧ್ಯವಾಗಿದೆ. ವೈಜ್ಞಾನಿಕ ದೃಷ್ಟಿಯ ಮತ್ತು ವೈಚಾರಿಕ ಬುದ್ಧಿಯ ನೆರವಿನಿಂದ ನಮ್ಮ ನಾಡಿನ ರಾಜಕೀಯ, ಸಾಮಾಜಿಕ ಮತ್ತು ಮತ ಧಾರ್ಮಿಕ ರಂಗಗಳನ್ನು ಪರಿಶೋಧಿಸದಿದ್ದರೆ ನಮಗೆ ಕೇಡು ತಪ್ಪದು'[೨] ಕುವೆಂಪು ಅವರ ಈ ಬುದ್ಧಿವಾದ ಈಗಂತು ಜಗತ್ತಿನ ಎಲ್ಲ ರಾಷ್ಟ್ರಗಳಿಗೂ ಅನ್ವಯಿಸುತ್ತದೆ. ಸೆಪ್ಟೆಂಬರ್ ೧೧(೨೦೦೧) ಮತ್ತು ಡಿಸೆಂಬರ್ ೧೩ (೨೦೦೧) ರಂದು ಜಗತ್ತಿನಲ್ಲಿ ನಡೆದ ಘೋರ ಘಟನೆಗಳ ಬಗ್ಗೆ ಚಿಂತಿಸುವಾಗ ಕುವೆಂಪು ಅವರ ಈ ಮಾತು ಪ್ರವಾದಿವಾಣಿಯಂತಿದೆಯೆಂದು ಹೇಳಬೇಕಾಗುತ್ತದೆ.

'ಜಗದ ಕವಿ ಯುಗದ ಕವಿ' ಕುವೆಂಪು ಕವಿಸಮ್ರಾಟರಾದರೂ ಅವರ ಒಲವೆಲ್ಲ ಸಮಾಜವಾದ ಮತ್ತು ಕಮ್ಯೂನಿಸಂ ಕಡೆಗೆ. ಕಮ್ಯೂನಿಸಂನ ಅನುಕೂಲ ಅನಾನುಕೂಲಗಳು ಅವರಿಗೆ ಗೊತ್ತು. 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ' ಎಂಬ ಕವಿತೆಯಲ್ಲಿ ಅವನ್ನು ಅಭಿವ್ಯಕ್ತಗೊಳಿಸಿದ್ದಾರೆ. ಶೋಷಕರನ್ನು ಬಲಿ ಹಾಕಿದ, ರಾಜಶಾಹಿಯನ್ನು ಕೊನೆಗೊಳಿಸಿ, ಜಗತ್ತಿನ ರಾಜರೆಲ್ಲರಿಗೂ ಸಿಂಹಸ್ವಪ್ನವಾಗಿದ್ದ ಲೆನಿನ್ ಬಗ್ಗೆ ಅವರಿಗೆ ಅಪಾರ ಗೌರವ.[೩] ರಾಜಶಾಹಿ ಕುವೆಂಪು ಅವರಿಗೂ ಅವಮಾನಕಾರಿ. 'ಬೆಳ್ಳಿಯ ಹಬ್ಬದ ಕಬ್ಬದ ಬಳ್ಳಿ' ಎಂಬ ತಮ್ಮೊಂದು ಸುದೀರ್ಘ ಕವಿತೆಯಲ್ಲಿ ಒಂದೇ ಒಂದು ಸಲ ಆಗಿನ ಮೈಸೂರಿನ ದೊರೆ ಕೃಷ್ಣರಾಜ ಒಡೆಯರನ್ನು ಮಿತಿಮೀರಿತೆನ್ನುವಂತೆ ಹೊಗಳಿದರೂ, ಅನಂತರ ಮರೆತೂ ರಾಜರನ್ನು ಸ್ತುತಿಸುವುದಿಲ್ಲ. 'ಕವಿ' ಎಂಬ ತಮ್ಮೊಂದು ಕವಿತೆಯಲ್ಲಿ 'ವಸಂತವನದಲಿ ಕೂಗುವ ಕೋಗಿಲೆ ರಾಜನ ಬಿರುದನು ಬಯಸುವುದಿಲ್ಲ. ಕವಿಗರಸುಗಿರಸುಗಳ ಋಣವಿಲ್ಲ; ಅವನಗ್ನಿಮುಖಿ, ಪ್ರಳಯಶಿಖಿ'[೪] ಎಂದವರು ಮುಲಾಜಿಲ್ಲದೆ ಡಂಗುರಿಸುತ್ತಾರೆ. ಎಲ್ಲ ಬಗೆಯ ಶೋಷಣೆಯನ್ನು ಸಮಾಜವಾದ ಪ್ರತಿಭಟಿಸುತ್ತದೆಂಬ ಆಸೆಯಿಂದ ಅವರು ಅದನ್ನು ಮಾನ್ಯಮಾಡುತ್ತಾರೆ. ಅವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ನನ್ನ ಜೀವನ ದೃಷ್ಟಿ ಒಂದು ರೀತಿಯಲ್ಲಿ ಸಮಾನತಾವಾದಿಯ ದೃಷ್ಟಿ... ನಾನು ಮಾಡುವ ಟೀಕೆ. ಖಂಡನೆ, ಶ್ಲಾಘನೆ, ಪ್ರಶಂಸೆ ಏನಿದ್ದರೂ ಅವು ಸಮಾನತಾವಾದಿಯ ದೃಷ್ಟಿಯಿಂದ ಹೊಮ್ಮುತ್ತವೆಯೆ ಹೊರತು ಯಾವ ಜಾತಿದ್ವೇಷದಿಂದಾಗಲಿ ಹೊಮ್ಮುವುದಿಲ್ಲ'.[೫] ಎಂದವರು ಸ್ಪಷ್ಟಪಡಿಸುತ್ತಾರೆ. ಕುವೆಂಪು ಟೀಕಾಕಾರರು ಈ ಸ್ಪಷ್ಟನೆಯನ್ನು ಸದಾ ನೆನಪಿನಲ್ಲಿಟ್ಟುಕೊಂಡರೆ ಮೇಲು. ದರಿದ್ರ ಶ್ರೀಮಂತರ ಅಸಮಾನತೆಯ ವಿನಾಶಕಾರೀ ಪರಿಣಾಮವೇ 'ಕಲ್ಕಿ' ಎಂಬ ಅವರ ಸುಪ್ರಸಿದ್ಧ ಕವಿತೆಯಿಂದ ಹೊರಹೊಮ್ಮುವ ಪಾಠ. 'ಬಡವರ ಬೆಂಕಿಯ ನಾಲಗೆ ಚಾಚಿ, ಶ್ರೀಮಂತರನಪ್ಪಿತು ಬಾಚಿ. ಹೊಟ್ಟೆಯ ಪಾಡಿಗೆ ಕಾವಿಯ ತೊಟ್ಟು, ಬಡವರ ಹಸಿವಿಗೆ ಮೌಢ್ಯವ ಕೊಟ್ಟು ಸುಖ ಸಂಪತ್ತನು ಕೊಂಡವರು; ಬಡವನ ಜಠರಾಗ್ನಿಯೆ ಬಡಬಾಗ್ನಿ ಬಡವನೆ ಕಲಿಯುಗದಂತ್ಯದ ಕಲ್ಕಿ', ಇವೇ ಮೊದಲಾದ ಭಾವಾಗ್ನಿ ಕಿಡಿಗಳು ಆ ಕವಿತೆಯಲ್ಲಿ[೬] ಹೊರಸೂಸುತ್ತವೆ.

ಪ್ರಜಾಸತ್ತೆ, ಸಮಾಜವಾದ, ಸರ್ವೋದಯ, ಸರ್ವಸಮಾನತೆ ಶ್ರೀ ಸಾಮಾನ್ಯತೆ ಇವು ಸ್ವಾತಂತ್ರ್ಯದ ಗಂತವ್ಯ, ಗಮ್ಯ ಹಾಗೂ ಲಕ್ಷಣಗಳೆಂಬುದು 'ಶ್ರೀ ಸಾಮಾನ್ಯರ ದೀಕ್ಷಾಗೀತೆ' ಎಂಬ ಕವಿತೆಯಲ್ಲಿ ದಟ್ಟೈಸಿವೆ.[೭]

---

೧. ವಿಚಾರ ಕ್ರಾಂತಿಗೆ ಆಹ್ವಾನ, ಪು. ೬
೨. ಅದೇ. ಪು. ೬-೭
೩. ಲೆನಿನ್, ಕೃತ್ತಿಕೆ, ಪು. ೬೫
೪. ಕವಿ, ಪಾಂಚಜನ್ಯ, ಪು. ೩೭
೫. ಸಂಸ್ಕೃತಿ ಕ್ರಾಂತಿಗೆ ಕಹಳೆ ನಾಂದಿ, ವಿಚಾರಕ್ರಾಂತಿಗೆ ಆಹ್ವಾನ, ಪು. ೪೯
೬. ಕಲ್ಕಿ, ಪಾಂಚಜನ್ಯ, ಪು. ೬೯-೭೩
೭. ಶ್ರೀ ಸಾಮಾನ್ಯರ ದೀಕ್ಷಾ ಗೀತೆ, ಇಕ್ಷು ಗಂಗೋತ್ರಿ, ಪು. ೧-೫

ಶ್ರೀ ಸಾಮಾನ್ಯನೇ ಭಗವದ್ ಮಾನ್ಯಂ;
ಶ್ರೀ ಸಾಮಾನ್ಯನೇ ಭಗವದ್ ಧನ್ಯಂ
ಸಾಮಾನ್ಯತೆ ಭಗವಂತನ ರೀತಿ
ಸಾಮಾನ್ಯವೆ ದಿಟ ಭಗವತ್ ಪ್ರೀತಿ!

ಪ್ರಧಾನಿಯಾಗಲಿ, ರಾಜ್ಯಪಾಲನಾಗಲಿ, ಸೇನಾನಿಯಾಗಲಿ, ಮಹಾಕವಿಯಾಗಲಿ, ಸನ್ಯಾಸಿಯಾಗಲಿ, ಸಂಸಾರಿಯಾಗಲಿ ಸಾಮಾನ್ಯರಲ್ಲಿ ಸಾಮಾನ್ಯನಂತೆ ವರ್ತಿಸಿದಾಗ ಸಮಾನತಾವಾದ ಅಥವಾ ಸರ್ವೋದಯ ಸಿದ್ಧಿಸುತ್ತದೆಂಬುದು ಕವಿಯ ಕಾಣ್ಕೆ.

ಕೊನೆಗೊಂಡಿತೊ ಓರೊರ್ವರ ಗರ್ವದ ಕಾಲ
ಇದು ಸರ್ವರ ಕಾಲ!
ಸರ್ವೋದಯ! ಸರ್ವೋದಯ
ಸರ್ವೋದಯ ಯುಗಮಂತ್ರ!
ಸರ್ವೋದಯವೇ ಸ್ವಾತಂತ್ರ್ಯದ ಶ್ರೀತಂತ್ರ!
ಮೇಲಿಲ್ಲವೊ ಕೀಳಿಲ್ಲವೊ
ಸರ್ವ ಸಮಾನದ ರಾಜ್ಯ!

ಈ ಶ್ರೀಸಾಮಾನ್ಯತಾವಾದ ಕಮ್ಯುನಿಸಂ ಸಮಾಜವಾದಗಳನ್ನು ಮೀರಿ ಮುಂದುವರಿದ ರಾಜನೀತಿ; ರಾಷ್ಟ್ರದೊಳಗೆ ಹೊರಗೆ ಶಾಂತಿ ಕ್ಷೇಮಗಳನ್ನು ವಿತರಿಸುವ ವಿಶ್ವತಂತ್ರ. ಹೆಸರಾಸೆ ಕೆಸರಾಸೆ ಪತ್ರಿಕಾ ಪ್ರಚಾರ ಕಾತರತೆ ಯಾವುದೂ ಈ ತಂತ್ರದಲ್ಲಿಲ್ಲದ್ದರಿಂದ, ಕಾಯಕವೇ ಪೂಜ್ಯವಾದ್ದರಿಂದ ಮಿಥ್ಯಾಗರ್ವಕ್ಕಿಲ್ಲಿ ಎಡೆಯಿಲ್ಲ. 'ಸರ್ವರಿಗೆ ಸಮಬಾಳು! ಸರ್ವರಿಗೆ ಸಮಪಾಲು! ಇಂದ್ರ ಸಿಂಹಾಸನಕೆ ಬಂದಿಹುದು ಕೊನೆಗಾಲ 'ಕಳಚಿ ಬೀಳುವುದಿಂದು ನಂದನದ ಬೇಲಿ!' ಎಂಬುದಾಗಿ ಕವಿ ಬಡವರಲ್ಲಿ ಹೊಸ ಆಶೆ ಹುಟ್ಟಿಸುತ್ತಾರೆ, ನೂತನ ಧೈರ್ಯ ತುಂಬುತ್ತಾರೆ.[೧]

ಸ್ವಾತಂತ್ರ್ಯದೊಡನೆ ಹೊಸ ಯುಗದ ಹೊಂಗಿರಣ ದಿಗಂತದಲ್ಲಿ ಕಣ್ಣು ಬಿಟ್ಟರೂ, ಭರತ ಖಂಡದ ದಪ್ಪ ಚರ್ಮದ, ಮಂದರಕ್ತದ ಎಲ್ಲ ಜಾತಿ ವರ್ಗಗಳ ಚಾಳಿ ಚರ್ಯೆಗಳನ್ನು ಬಲ್ಲ ಕವಿಗೆ ವಿನೂತನ ಮಂತ್ರ ತಂತ್ರಗಳು ತತ್ತ್ವ ಸೂತ್ರಗಳು ಕಾರ್ಯಗತಗೊಳ್ಳುವ ವಿಚಾರದಲ್ಲಿ ಸಂದೇಹವಿದೆ. ಸ್ವಾತಂತ್ರ್ಯ ಬಂದಿದ್ದರೂ 'ದಸರಾ ದರ್ಬಾರು! ಜಂಬೂ ಸವಾರಿ! ಬಗ್ಗು ಸೊಂಟ, ಡೊಗ್ಗು ಸಲಾಮು! ಗುಲಾಮಿಗೂ ಚಿನ್ನದ ಮುಲಾಮು; ಹಳೆಯ ಪಾಳೆಯಗಾರಿಕೆಗೆ ಹೊಸ ಪ್ರಹಸನ; ಭಾರತದ ಪವಿತ್ರ ರಾಜ್ಯಾಂಗಕ್ಕೂ ಅವಮಾನ' ಇವನ್ನು ನೋಡಿಕೊಂಡು ಆತ್ಮಗೌರವವಿಲ್ಲದ ನಾಯಕರು ಹೇಡಿಗಳಂತೆ ತೆಪ್ಪಗಿದ್ದಾರಲ್ಲ ಎಂದು ಕವಿಗೆ ಸಂಕಟ.

ಕಮ್ಯುನಿಸಂವಿ ಬಂದರೂ
ಹಾಕುವೆವು ಅದಕ್ಕೂ ಮೂರು ನಾಮ !
ಅದರ ಹೆಗಲಿಗೂ ಬೀಳುವುದು ಜನಿವಾರ !
ಅದಕ್ಕೂ ಕಟ್ಟುವೆವು ಲಿಂಗ !
ಕ್ರಾಸು ತಗುಲಿಸಿದರೂ ಆಶ್ಚರ್ಯವಿಲ್ಲ
ಹಿಂದುಸ್ಥಾನದಲ್ಲಿಯೂ ಅದು ಮುಸಲ್ಮಾನ
ನಮ್ಮ ರಾಜ್ಯಾಂಗದಲ್ಲಿ ಮಾತ್ರ
ನಾವು ಧರಿಸಿಹುದು ಸೆಕ್ಯುಲರ್ ಯಜ್ಞಸೂತ್ರ[೨]

ಭಾರತದ ಇಂಥ ರಿಕ್ತಮತಿ ಪರಿಸ್ಥಿತಿಯಲ್ಲಿ ಕ್ರಾಂತಿಯಾಗಲಿ ಸುಧಾರಣೆಯಾಗಲಿ ಪ್ರಗತಿಯಾಗಲಿ ಸಾಧ್ಯವಿಲ್ಲ.

ಶ್ರೀಸಾಮಾನ್ಯನಿಗೆ ದೊರೆ ಪುರೋಹಿತರಿಬ್ಬರೂ ಕಡುವೈರಿಗಳು. ದುಡಿಯುವವರನ್ನು ಶೋಷಿಸುವುದೇ ಅವರ ನೀತಿ. 'ಧನ್ವಂತರಿಯ ಚಿಕಿತ್ಸೆ' ಎಂಬ ವಿಡಂಬನಾತ್ಮಕವಾದ ಶ್ರೇಷ್ಠತಮ ಕಥೆಯೊಂದರಲ್ಲಿ ರೈತನ ದುರ್ಭರ ಸಂಕಟವನ್ನು ಮನಕರಗುವಂತೆ

೧. ಹೊಸ ಬಾಳಿನ ಗೀತೆ, ಕೋಗಿಲೆ ಮತ್ತು ಸೋವಿಯಟ್ ರಷ್ಯಾ
೨. ಅಲ್ಲಿ ಇಲ್ಲಿ ಪ್ರೇತಕ್ಕೂ

ಕುವೆಂಪು ಚಿತ್ರಿಸಿದ್ದಾರೆ. ಮಂತ್ರಿಗಳು, ಅಧಿಕಾರಿಗಳು, ಲಂಚಕೋರರು, ಶ್ರೀಮಂತರು, ವಿಜ್ಞಾನಿಗಳು, ಕೈಗಾರಿಕೋದ್ಯಮಿಗಳು ಮಾತ್ರವಲ್ಲ, ಇಡೀ ಸಾಮ್ರಾಜ್ಯವೇ ರೈತನ ಹೊರೆಯಾಗಿದೆ. ಅದರಿಂದ ಮುಕ್ತನಾಗುವ ಮಾರ್ಗವೇ ಇಲ್ಲವೆಂಬುದು ಆ ಕತೆಯಿಂದ ಕಲಿಯಬಹುದಾದ ಪಾಠ. 'ಕುವೆಂಪು ಸಾಹಿತ್ಯದಲ್ಲಿ ರೈತ' ಎಂಬ ಇದೇ ಲೇಖಕರ ಪುಸ್ತಿಕೆಯಲ್ಲಿ ರೈತ ಪರವಾದ ಕುವೆಂಪು ವಿಚಾರಧಾರೆಯನ್ನು ಕಾಣಬಹುದು.

ರೈತನ ಸ್ಥಾನದಲ್ಲಿ ನಿಂತುಕೊಂಡು ಸಾಮ್ರಾಜ್ಯದ ಕ್ರೌರ್ಯ ಅಟ್ಟಹಾಸಗಳನ್ನು ರಕ್ತದ ಲೇಖನಿಯಲ್ಲಿ ಬಿಡಿಸುತ್ತಾರೆ ಕವಿ.

ಕರಿಯರದೊ ಬಿಳಿಯರದೊ ಯಾರದಾದರೆ ಏನು ?
ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ !
ವಿಜಯನಗರವೊ? ಮೊಗಲರಾಳ್ವಿಕೆಯೊ ? ಇಂಗ್ಲಿಷರೊ ?
ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ !
ಸೋಮಾರಿಗಳಿಗೆ ಸುಖಿಗಳಿಗೆ ರಸಿಕರಿಗಲ್ತೆ
    ಸಾಮ್ರಾಜ್ಯವೆಂಬುದು ಕಾಮಧೇನು ?
ನೃಪ ಎಂಬ ಹೆಸರೊಡನೆ ಮುಡಿಯೊಂದನಾಂತೊಡನೆ
    ಕಳ್ಳರೊಡೆಯನು ಕೃಪೆಯ ಮೂರ್ತಿಯೇನು ?[೧]

ಸಾಮ್ರಾಟರು ಯಾವ ನಾಡಿನವರಾದರೂ ಸರಿಯೆ, ಅಂತೆಯೇ ಪುರೋಹಿತರು ರೈತ ಕಾರ್ಮಿಕರ ಶ್ರೀಸಾಮಾನ್ಯರ ರಕ್ತವನ್ನು ಕುಡಿ ಕುಡಿದು ಕೊಬ್ಬಿದ್ದಾರೆನ್ನುವುದು ಇತಿಹಾಸದ ಪುಟಗಳಿಂದ ಸ್ಪಷ್ಟವಾಗುತ್ತದೆ. ಸಾಮ್ರಾಜ್ಯವನ್ನು ಕಾಳಿ ಶೂರ್ಪನಖಿಯರಿಗೆ ಹೋಲಿಸುತ್ತಾರೆ. ಎಂಥ ದುಷ್ಟ ಶಕ್ತಿಗಳೊಡನೆ ಹೋಲಿಸಿದರೂ ಕಡಿಮೆಯೇ. ರೈತನ ಪರಿಪಾಟಲು ಬೇನೆ. ಬವಣೆಗಳನ್ನು ಇನ್ನೂ ಅನೇಕ ಕತೆ ಕವಿತೆ ಕಾದಂಬರಿಗಳಲ್ಲವರು ಕಣ್ಣಿಗೆ ಕಟ್ಟುವಂತೆ ಹೃದಯವೊಗುವಂತೆ ಕುಂಚಿಸಿದ್ದಾರೆ: ನೇಗಿಲಯೋಗಿ,[೨] ಕುಳದ ಕಲಿಗೆ ಹಾಡುನೇಗಿಲ ಯೋಗಿ'[೩] ಗೊಬ್ಬರ[೪] ಕಿಟ್ಟಯ್ಯ[೫]. ಶ್ರೇಣೀಕೃತ ಸಮಾಜದ ಎತ್ತರದ ಒಂದು ತುದಿಯಲ್ಲಿ ಸಮ್ರಾಟ ಪುರೋಹಿತರಿದ್ದರೆ, ಪಾತಾಳದ ಮತ್ತೊಂದು ಕೊನೆಯಲ್ಲಿ ರೈತನಿದ್ದಾನೆಂಬುದು ಸ್ಪಷ್ಟ.. ಈ ಅಂತರ, ಈ ತಾರತಮ್ಯ ಭಾವ, ದ್ವೈತ ಭಾವ ಅಳಿಯಬೇಕೆಂಬುದು ಕವಿಯ ದೃಷ್ಟಿ.

ರಾಜ್ಯಾಂಗ ನಮ್ಮ ರಾಷ್ಟ್ರವನ್ನು ಸೆಕ್ಯುಲರ್ ಎಂದು, ರಿಪಬ್ಲಿಕ್ ಅಥವಾ ಸರ್ವ ಪ್ರಜಾಧಿಪತ್ಯವೆಂದು ಸಾರಿರುವುದರ ಔಚಿತ್ಯವನ್ನವರು ಕಾವ್ಯ ನೈರ್ಮಲ್ಯ ದೃಷ್ಟಿಯಿಂದ ವ್ಯಾಖ್ಯಾನಿಸಿದ್ದಾರೆ. ರಾಜಕಾರಣಿಗಳು ಮತ್ತು ರಾಜನೀತಿಜ್ಞರು ಆ ವ್ಯಾಖ್ಯಾನವನ್ನೋದಬೇಕಾದ್ದು ಅತ್ಯಗತ್ಯ. 'ಸೆಕ್ಯುಲರ್ ಸ್ಟೇಟ್ ಎಂದರೆ ಧರ್ಮ ಬಾಹಿರರ, ಮತ ವಿದ್ವೇಷಕರ, ನಾಸ್ತಿಕ ಅಥವಾ ಚಾರ್ವಾಕ ರಾಷ್ಟ್ರ ಎಂದರ್ಥವಲ್ಲ, ಸಮನ್ವಯ ರಾಷ್ಟ್ರ ಎಂದರ್ಥ. ಎಲ್ಲ ಮತಗಳೂ ಸತ್ಯದೆಡೆಗೆ ನಮ್ಮನ್ನು ಕೊಂಡೊಯ್ಯುವ ಬೇರೆ ಬೇರೆ ಪಥಗಳು. ಆದ್ದರಿಂದ ಯಾವ ಮತವಾಗಲಿ ಇನ್ನೊಂದು ಮತವನ್ನು ನಿಂದಿಸಲು ಕಾರಣವಿಲ್ಲ. ಎಲ್ಲ ಮತಗಳೂ ದೇವರೆಡೆಗೆ ದಾರಿಗಳೆ ಆಗಿರುವುದರಿಂದ ಮತಾಂತರಗೊಳಿಸುವಂಥ ಅರ್ಧಬರ್ಬರ ಕ್ರಿಯೆಗಳಿಗೂ ಇಲ್ಲಿ ಅರ್ಥವಿಲ್ಲ; ಆದ್ದರಿಂದ ಸ್ಥಾನವಿಲ್ಲ. ಎಲ್ಲರೂ... ಅನ್ಯಮತಗಳನ್ನು ಸಹಾನುಭೂತಿಯಿಂದ ಅರಿತು, ಇತರರ ಸಾಮಾಜಿಕ ಜೀವನದೊಂದಿಗೆ ಮೈತ್ರಿಯಿಂದ ಬೆರೆತು, ಭಾಗವಹಿಸಿ, ರಾಷ್ಟ್ರದ ಜನರೆಲ್ಲ ಸಹೋದರ ಭಾವವನ್ನೂ ಐಕಮತ್ಯದ ಬುದ್ಧಿಯನ್ನೂ ನೆಲೆಗೊಳಿಸಬೇಕು. ಈ ಕೆಲಸದ ಹೊರೆಯ ಮತ್ತು ಹೊಣೆಯ ಮುಕ್ಕಾಲು ಮೂರು ವೀಸ ಪಾಲು ಸಾಹಿತ್ಯದ್ದಾಗಿದೆ...

'ನಮ್ಮ ರಾಷ್ಟ್ರವನ್ನು ರಿಪಬ್ಲಿಕ್ ಎಂದು ಘೋಷಿಸಿದ್ದೇವೆ. ಅದರ ಗುರಿ ಸರ್ವೋದಯ. ಎಂದರೆ ಎಲ್ಲರ ಪಾಲಿಗೆ ಎಲ್ಲರೂ ಸಮ, ಎಲ್ಲರೂ ಸಮಾನ ಎಂಬುದು ತತ್ತ್ವ ಜ್ಞಾನರೂಪದಲ್ಲಿ ಬಹಳ ಹಿಂದಿನಿಂದಲೂ ಋಷಿವಾಣಿಯಾಗಿ ಬಂದಿದೆ'[೬] ಶುದ್ಧ ಹೃದಯದ ಆಧ್ಯಾತ್ಮಿಕ ದೃಷ್ಟಿಯಿಲ್ಲದಿದ್ದರೂ ಈ ಎರಡು ತತ್ವಗಳೂ ನಿಷ್ಪ್ರಯೋಜಕವಾಗುತ್ತವೆ.

---

೧. ರೈತನ ದೃಷ್ಟಿ, ಕೋಗಿಲೆ ಮತ್ತು ಸೋವಿಯಟ್ ರಷ್ಯಾ
೨. ಕೊಳಲು, ಪು. ೨೮
೩. ಪ್ರೇತಕ್ಯೂ
೪. ಕೋಗಿಲೆ ಮತ್ತು ಸೋವಿಯಟ್ ರಷ್ಯಾ
೫. ನವಿಲು ಪು. ೫೫
೬. ಷಷ್ಠಿ ನಮನ, ಪು. ೩೪

ರಾಷ್ಟ್ರಹಿತದೃಷ್ಟಿಯುಳ್ಳ ಸಾಹಿತಿ ರಾಷ್ಟ್ರ ರಾಜಕಾರಣವನ್ನು ಸಾಕ್ಷಿ ಪ್ರಜ್ಞೆಯಿಂದ ವೀಕ್ಷಿಸಿ, ಧ್ಯಾನದ ಮೂಲಕ ಶೋಧಿಸಿ, ನಿರ್ಮಮತೆ ನಿರ್ಮಮಕಾರದಿಂದ ಅಧ್ಯಯನ ಮಾಡಿ ತಾನು ಕಂಡ ಸತ್ಯವನ್ನು ಮುಚ್ಚುಮರೆಯಿಲ್ಲದೆ ನಿರ್ಭೀಡೆಯಿಂದ ಪ್ರಕಟಪಡಿಸಬೇಕಾದ್ದು ಸಾಮಾಜಿಕ ಬದ್ಧತೆಯ ಧರ್ಮ. ನಮಗೆ ನಾನಾ ಪ್ರಯೋಜನದ ಕೆಲಸಗಳಿಗೆ ಬೇಕಾಗುವ ನಾನಾ ರೀತಿಯ ಸಾಹಿತ್ಯದ ಆವಶ್ಯಕತೆಯಿದೆ ಎಂದು ಹೇಳುತ್ತ, ಒಂದು ಪಟ್ಟಿಯನ್ನೆ ಅವರು ಕೊಟ್ಟಿದ್ದಾರೆ.[1] ಕ್ರಾಂತಿಕಾಳಿಯೆಂಬ ಅವರದೊಂದು ಸಾನೆಟ್ ಸಹ ಸಾಹಿತ್ಯದ ಗೊತ್ತುಗುರಿಗಳನ್ನು ಸಾರುತ್ತದೆ. ಕ್ರಾಂತಿಕಾಳಿ ಕಠಾರಿಯನ್ನು ಎದೆಗೊತ್ತಿ ಝಳಪಿಸುತ್ತ ಗರ್ಜಿಸುತ್ತಾಳೆ.

ಓ ದ್ರೋಹಿ ಕವಿಯೆ, ನಿನಗಿತ್ತಾಣತಿಯ ಮರೆತು
ಕ್ಲೀಬತನದಲಿ ಹೆಣ್ಣು ಸೋಬಾನೆಗಳ ಹಾಡಿ
    ಪಾಳ್ಗಯ್ದೆ ಕಜ್ಜಮಂ! ಶುಕ, ಪಿಕ, ವಸಂತ, ಲತೆ
    ಮುಂಗುರುಳು, ತಂಗಾಳಿ ದೊರೆಗಿರೆಗಳಜ್ಜಿಕಥೆ
ಬೆಳ್ದಿಂಗಳೆಂಬುವಂ ನೂಕಾಚೆ, ಹೆಂಬೇಡಿ !
ಬಡತನಂ, ಗೊಬ್ಬರಂ, ಕತ್ತಿ, ಗುದ್ದಲಿ, ಹಾರೆ,
    ಬೆವರು ನೆತ್ತರ್ಗಳಂ ಗಾನಗೈವುದು ನಿನ್ನ
    ಕರ್ತವ್ಯವಿಂದು, ಹಾ ! ಹೊಟ್ಟೆಗಿಲ್ಲದೆ ಅನ್ನ
ಬಡಜನರು ಸಾಯುತಿರೆ ರಸಗಂಧವನು ತೋರೆ ತಣಿವಹುದೆ ?[2]

ಸಾಹಿತ್ಯಕ್ಕೆ ಮಡಿ ಮೈಲಿಗೆ ತರತಮ ಭಾವಗಳಿರಬಾರದು, ಮಾನವೀಯತೆಯ ಆಧ್ಯಾತ್ಮಿಕತೆಯೆ ಅದರ ಸರ್ವ ಗುರಿಯಾಗಿರಬೇಕೆಂದವರು ಹತ್ತುಹಲವು ಕಡೆ ಸ್ಪಷ್ಟಪಡಿಸಿದ್ದಾರೆ.

ಪ್ರಜಾಸತ್ತೆಯ, ಎಲ್ಲ ಮಾನವ ವ್ಯವಹಾರಗಳ ಮತ್ತು ರಾಜ್ಯಭಾರದ ಗುರಿ ಸರ್ವೋದಯವಾಗಿರಬೇಕೆಂಬುದು ಕವಿಯ ಹೆಬ್ಬಯಕೆ. ಅವರ ಜೀವನ ಹಾಗೂ ಸಾಹಿತ್ಯದ ಉದ್ದೇಶವೂ ಅದೇ. ಸರ್ವೋದಯ ರವಿ ವಿನೋಬಾಜಿ ೨೫-೫-೧೯೫೭ರಂದು ಉದಯರವಿಗೆ ಬಂದದ್ದೆ ಕವಿಚೇತನದ ಅಭೀಪ್ಸೆಗೆ ಸಾಕ್ಷಿಯಾಗಿದೆ. 'ಅಗ್ನಿಶೀತ ಚರಣಕೆ' 'ಉದಯದ ರವಿಯಲ್ಲಿ ಸರ್ವೋದಯ ರವಿ', 'ಮಹತ್ತರ ಸುದ್ದಿ', 'ಇದು ಕಲಿಯುಗವೆ?[3] ಇವಿಷ್ಟೂ ವಿನೋಬಾಜೀಯವರ ಪವಾಡಕ್ಕೆ ಸಂಬಂಧಿಸಿದುವೆಂದು ಬಲ್ಲವರಿಗೆ ಹೇಳಬೇಕಾಗಿಲ್ಲ.

ಜಗತ್ತಾಗಲಿ, ಅದರೊಳಗಿನ ಜೀವಸಂತಾನವಾಗಲಿ ಕ್ಷಣ ಮಾತ್ರವೂ ಸ್ಥಗಿತಗೊಳ್ಳದ, ಸದಾ ಚಲನಶೀಲವಾದ, ವಿಕಾಸಮುಖವಾದ ಜ್ಯೋತಿಃ ಪುಂಜ. ವೈಜ್ಞಾನಿಕ ಸಂಶೋಧನೆಗಳ ಪರಿಣಾಮವಾಗಿ ಜಗತ್ತು ಹಾಗೂ ಮಾನವ ಜಗತ್ತು ಆದಿಮಾನವ ಸ್ಥಿತಿಯಿಂದ ಅನೇಕ ಸ್ಥಿತ್ಯಂತರಗಳನ್ನು ದಾಟಿ, ಗಣಕಯಂತ್ರ ಮಾಹಿತಿ ತಂತ್ರಜ್ಞಾನದ ತನಕ ಬಂದಿದೆ. ಜತೆಜತೆಗೆ ವೈಜ್ಞಾನಿಕ ಮನೋಧರ್ಮ ಮತ್ತು ವೈಚಾರಿಕ ಪ್ರವೃತ್ತಿ ವಿಕಾಸಗೊಂಡು, ಗತಕಾಲದ ನಂಬಿಕೆಗಳು ರೂಢಿ ಸಂಪ್ರದಾಯಗಳು, ಮೌಢ್ಯಗಳು, ಕಲ್ಪನೆಗಳು, ಆಚರಣೆಗಳು, ತತ್ತ್ವಗಳು, ವಸ್ತು ಪದಾರ್ಥಗಳು, ರೀತಿನೀತಿಗಳು ಎಷ್ಟೇ ಪವಿತ್ರವಾಗಿರಲಿ, ವಿಸ್ಮೃತಿಯ ಗರ್ಭವನ್ನು ಪ್ರವೇಶಿಸಲೇಬೇಕು. ಇಲ್ಲವಾದರೆ ಅವುಗಳಿಗೆ ನೇತುಹಾಕಿಕೊಂಡ ಮಾನವ ಜನಾಂಗ ಉಳಿಯಲಾರದು. ಜಗತ್ತಿನ ಇತಿಹಾಸವನ್ನೋದಿದವರಿಗೆ ಈ ಸತ್ಯ ಗೊತ್ತು.

ವೈಜ್ಞಾನಿಕ ವೈಚಾರಿಕ ಪ್ರಗತಿಯ ಮೂಲಗಳು ಮಾನವನ ಮತಿಯಲ್ಲಿ ಹುದುಗಿವೆಯೆಂಬುದು ಸೂರ್ಯ ಚಂದ್ರರ ಅಸ್ತಿತ್ವದಷ್ಟೆ ಸುಸ್ಪಷ್ಟ. ಆದರೆ ಹಲವರಿಗೆ ಹೊಟ್ಟೆ, ಬಾಯಿ, ಕಿವಿ, ಮೂಗು, ಕಣ್ಣುಗಳ ಅರಿವಿದೆಯೆ ಹೊರತು ಮತಿಯ ಅರಿವಿಲ್ಲ; ಅದಿಲ್ಲವೆನ್ನುವ ರೀತಿಯಲ್ಲಿ ಬಹುಸಂಖ್ಯಾತ ಜನ ಜೀವನವನ್ನು ಸಾಗಿಸುತ್ತಾರೆ. ಅದರಿಂದಲೇ ಅವರು ವೈಜ್ಞಾನಿಕ ವೈಚಾರಿಕ ಸತ್ಯಗಳ ಬೆಳಕಿನ ಕಡೆಗೆ ಗಮನ ಹರಿಸದೆ ಅಜ್ಞಾನದ ಮೌಢ್ಯದ ಅಂಧಕಾರದಲ್ಲಿಯೂ ಕುರುಡರಂತೆ ವರ್ತಿಸುತ್ತ ಅಶಾಂತಿ ಅವ್ಯವಸ್ಥೆಗಳಿಗೆ ಕಾರಣರಾಗಿದ್ದಾರೆ. ಕುವೆಂಪು ಬುದ್ಧಿ ತಿಳಿದಾಗಿನಿಂದ ಮತಿಯ ಸರ್ವೋತ್ಕೃಷ್ಟತೆಯನ್ನು ಕಂಡುಕೊಂಡು, ಮತ ಜನ್ಯ ಪುರೋಹಿತರಕ್ಷಿತ ಮೌಢ್ಯ ಶನಿಸಂತಾನವನ್ನು ತಿರಸ್ಕರಿಸುತ್ತಾರೆ, ಯುವಕರಿಗೆ ಮನಗಾಣಿಸಲು ಪ್ರಯತ್ನಿಸುತ್ತಾರೆ; ವಿಚಾರ ಕ್ರಾಂತಿಗೆ[4] ಬೀಜಾವಾಪನೆ ಮಾಡುತ್ತಾರೆ. ಗತ ಶತಮಾನದ ಮೂರನೆಯ ದಶಕದಲ್ಲಿ, ಅಂದರೆ ಇಲ್ಲಿಗೆ (೨೦೦೭) ಎಪ್ಪತ್ತು ವರ್ಷಗಳ ಹಿಂದೆ ಮಾಡಿದ ನಾಲ್ಕು ಭಾಷಣಗಳು ಅಂದಿನ ತರುಣವೃಂದದ ಮನಸ್ಸನ್ನು ಆಕರ್ಷಿಸುತ್ತವೆ; ಇಂದಿನವರಿಗೂ ಪ್ರಸ್ತುತವಾಗಿವೆ. 'ಆತ್ಮ ಶ್ರೀಗಾಗಿ ನಿರಂಕುಶಮತಿಗಳಾಗಿ',

---

೧. ಅದೇ ಪುಟ. ೩೩

೨. ಕೃತ್ತಿಕೆ, ಪುಟ. ೬೩

೩. ಪ್ರೇತಕ್ಯೂ ಈ ಸಂಬಂಧವಾಗಿ 'ಷಷ್ಟಿನಮನ'ದಲ್ಲಿರುವ 'ಶ್ರೀ ವಿನೋಬಾಜಿ' ಎಂಬ ಪ್ರಬಂಧ (೧೩೪-೧೪೪)ವನ್ನು ಓದಬಹುದು.

೪. ಪೂರ್ಣ ವಿವರಗಳಿಗೆ ಇದೇ ಲೇಖಕನ 'ವಿಚಾರ ಕ್ರಾಂತಿಗೆ ಕುವೆಂಪು ಅವರ ಕರೆ' ಎಂಬ ಕಿರುಹೊತ್ತಿಗೆಯನ್ನು ನೋಡಬಹುದು.

'ಮಲೆನಾಡಿನ ಯುವಕರಲ್ಲಿ', 'ವಿದ್ಯಾರ್ಥಿಗಳಲ್ಲಿ ಮತಿಗೌರವದ ಆವಶ್ಯಕತೆ' ಮತ್ತು 'ವಿದ್ಯಾರ್ಥಿಗಳಿಗೇಕೆ ಆತ್ಮಶ್ರೀ' ಎಂಬ ಆ ಭಾಷಣಗಳ ಶೀರ್ಷಿಕೆಗಳೇ ಉಪನಿಷತ್ತಿನ ಸೂತ್ರಗಳಂತಿವೆ, ಅರ್ಥವತ್ತಾಗಿವೆ. ಮತಿಯಿಂದ ಮಾನವನೂ ದೇವತ್ವಕ್ಕೇರಬಹುದು; ನಿರಂಕುಶ ಮತಿಯಿಂದ ಮಾತ್ರವೇ ಆತ್ಮಶ್ರೀ ಲಭ್ಯವೆಂಬುವ ಸತ್ಯದರ್ಶನ ಮೊದಲನೆಯ ಭಾಷಣದಲ್ಲಿ ದೊರೆಯುತ್ತದೆ. ಆದರೆ ಆ ಮತಿ 'ಮೌಢ್ಯದಿಂದಲೂ ಮತಾಚಾರಗಳಿಂದಲೂ ಸಮಾಜ ಭೀತಿಯಿಂದಲೂ ರಾಜಭಯದಿಂದಲೂ ಸ್ವರ್ಗನರಕದೇವಾನುದೇವತೆಗಳ ಮೋಹಮಾಯೆಗಳಿಂದಲೂ ಸತ್ವರಹಿತವಾಗಿದೆ ಕಾಂತಿಹೀನವಾಗಿದೆ.[೧] ಎಂದವರು ನಿರ್ಮತಿಯ ಕಾರಣವನ್ನು ತಿಳಿಸುತ್ತಾರೆ. ಮತ ಬಂಧನದಿಂದ ಮೊದಲ್ಗೊಂಡು ಎಲ್ಲ ಬಗೆಯ ದಾಸ್ಯಗಳಿಂದ ಪಾರಾದಾಗ ನಿರಂಕುಶಮತಿ ಅರಳುವಂತಾಗುತ್ತದೆ. ಮತಿಯ ಸಹಾಯದಿಂದ ಪರೀಕ್ಷೆ, ವಿಮರ್ಶೆ ಮತ್ತು ವಿಚಾರಶಕ್ತಿಗಳನ್ನು ವೃದ್ಧಿಕೊಂಡು, ಆ ಮೂಲಕ ಗಳಿಸಿದ ಜ್ಞಾನದಿಂದ ಶುಷ್ಕಾಚಾರಗಳನ್ನು ತೊಲಗಿಸಿ, ಉತ್ತಮ ಜೀವನವನ್ನು ಸಂಪಾದಿಸಬಹುದೆಂದು ಎರಡನೆಯ ಭಾಷಣದಲ್ಲಿ ಸ್ಪಷ್ಟಪಡಿಸುತ್ತಾರೆ. ಕೊನೆಯ ಎರಡು ಭಾಷಣಗಳಲ್ಲಿ ಮತಿಗೌರವದ ಹಾಗೂ ಆತ್ಮಶ್ರೀಯ ಆವಶ್ಯಕತೆಯನ್ನು ವಿದ್ಯಾರ್ಥಿಗಳಿಗೆ ಮನದಟ್ಟು ಮಾಡಿಕೊಡುತ್ತಾರೆ.

'ರಾಹುಕಾಲ ಪಂಚಾಂಗ ವಾರಭವಿಷ್ಯಗಳಿಗೆ ಜೋತುಬೀಳುವ ಜ್ಯೋತಿಷಿ ಮಾಂತ್ರಿಕರಿಗೆ ಅಧ್ಯಾತ್ಮ ಸಾಧಕರಲ್ಲದ ನಕಲಿ ಕಾವಿಧಾರಿಗಳಿಗೆ ಶರಣಾಗುವ ತರುಣರಿಗೆ ವಿಚಾರದೃಷ್ಟಿ ಸಿದ್ಧಿಸುವುದುಂಟೆ?' ಎಂದವರು ಪ್ರಶ್ನಿಸುತ್ತಾರೆ. ಚುನಾವಣೆಗೆ ಮುನ್ನ ಚಂಡಿ ಹೋಮ ನಡೆಸಿಕೊಡುವವನು ಪುರೋಹಿತ; ಮಂತ್ರಿತ್ವ ವಹಿಸಿಕೊಳ್ಳುವ ಕಾಲ ನಿರ್ಣಯ ಮಾಡುವವನು ಜ್ಯೋತಿಷಿ; ವಿಮಾನ ಏರುವ ಮುಹೂರ್ತವನ್ನು ಇಟ್ಟುಕೊಡುವವನು ಜ್ಯೋತಿಷಿ; ಗೃಹ ಪ್ರವೇಶ ಮಾಡಿಸುವವನು ಜ್ಯೋತಿಷಿ, ಹೀಗಾಗಿ ಅವೈಜ್ಞಾನಿಕತೆ ಮತ್ತು ಅವಿಚಾರತೆ ವ್ಯಾಪಕವಾಗಿ ಹರಡುತ್ತಿರುವಾಗ ಈ ದೇಶಕ್ಕೆ ಭವಿಷ್ಯವುಂಟೆ ಎಂದವರು ಚಿಂತಿಸುತ್ತಾರೆ. ಈ ಜ್ಯೋತಿಷರು, ಈ ಮಾಂತ್ರಿಕರು, ಈ ಪುರೋಹಿತರೇ ದೇಶ ಪರಾಧೀನವಾಗಲು ಕಾರಣವೆಂಬುದು ಸುಳ್ಳಲ್ಲ. 'ಧಾಂ ಧ್ರಿಂ ಧ್ರೂಂ'[೨] ಎಂಬ ಕವಿತೆಯಲ್ಲಿ ದೇಶದ ಅವನತಿಯ ಕಾರಣವನ್ನು ಸೂಚಿಸಿರುವರಲ್ಲದೆ, ಪೌರೋಹಿತ್ಯ ಪಾರಮ್ಯವನ್ನು ಮಂತ್ರಮಹಿಮೆಯನ್ನು ಕುವೆಂಪು ಪರಿಣಾಮಕಾರಿಯಾಗಿ ವಿಡಂಬಿಸಿದ್ದಾರೆ.

ಶಾಸಕ ಅಥವಾ ಮಂತ್ರಿಯಾಗುವ ತನಕ ಲೋಹಿಯಾವಾದಿ ಅಥವಾ ಸಮಾಜವಾದಿಯಾಗಿದ್ದವರು ಅಧಿಕಾರ ದೊರಕಿದ ಕೂಡಲೇ ಮಜಾವಾದಿಯಾಗುವುದು, ಹಾಳು ಮೂಳು ದೇವರುಗಳಿಗೆ ಹರಕೆ ಹೊರುತ್ತ, ಸಾಮಾನ್ಯ ಜನರಲ್ಲಿ ಮೂಢ ನಂಬಿಕೆಗಳನ್ನು ಹರಡುತ್ತ ಮತೀಯ ಪ್ರೇತಗಳಂತೆ ಕುಡಿಕುಡಿದು ಕುಣಿದಾಡುವುದು ಸರ್ವೇಸಾಮಾನ್ಯವಾಗಿದೆ. ಅಂತೆಯೇ ಆಶ್ರಮ ವಿದ್ಯಾರ್ಥಿಯಾಗಿದ್ದವರು ಸದಾ ಗಾಂಧೀ ನಾಮಸ್ಮರಣೆಮಾಡುವವರು ಲಕ್ಷ್ಮೀಪೂಜೆ ಹಾಗೂ ರತಿಸೇವೆಯಲ್ಲಿ ನಿರಂತರಾಗಿದ್ದಾರೆ. ವೈಚಾರಿಕತೆಯಾಗಲಿ, ವೈಜ್ಞಾನಿಕ ತೇಜಸ್ಸಾಗಲಿ ಅವರ ಮೆದುಳನ್ನು ಹೊಕ್ಕಿದ್ದರೆ ಮಿತಿಮೀರಿದ ಭ್ರಷ್ಟಾಚಾರದಲ್ಲಿ ತೊಡಗುತ್ತಿರಲಿಲ್ಲ. ಅಂಥವರನ್ನು ಕುರಿತು ಕುವೆಂಪು ಹೇಳುವ ಮಾತಿವು: 'ಸತ್ಯಂ ವದ-ಧರ್ಮಂ ಚರ ಮೊದಲಾದ ನೀತಿ ಸೂಕ್ತಿಗಳನ್ನು ಸಾಮೂಹಿಕವಾಗಿ ಯಾಂತ್ರಿಕವಾಗಿ ಉಚ್ಚರಿಸಿ ಪ್ರತಿಜ್ಞೆ ಮಾಡಿದ್ದ ನಿಮ್ಮಂತಹ ಲಕ್ಷಾಂತರ ಸ್ನಾತಕರೆ ರಾಜಕೀಯ ರಂಗದಲ್ಲಿ, ಆರ್ಥಿಕರಂಗದಲ್ಲಿ, ಶಿಕ್ಷಣರಂಗದಲ್ಲಿ ನಿರ್ಲಜ್ಜೆಯಿಂದ ಪಾಪಮಯ ಭ್ರಷ್ಟಾಚಾರಗಳಲ್ಲಿ ತೊಡಗಿ ದೇಶವನ್ನು ದುರ್ಗತಿಗೆ ಒಯ್ಯುತ್ತಿರುವುದನ್ನು ನೆನೆದರೆ ಬದುಕು ಬೆಚ್ಚುಳಿಸಿ ಹದುಗುವಂತಾಗುತ್ತದೆ.'[೩] ಸಮಾಜದಲ್ಲಿ ಭ್ರಷ್ಟಾಚಾರ ಹೆಚ್ಚಲು ಅಧಿಕಾರಿಗಳು, ಮಂತ್ರಿಗಳು ಮತ್ತು ಪಂಡಿತರು ಹೇಗೆ ಕಾರಣರೊ, ಮೌಢ್ಯ ಹೆಚ್ಚಲು ಸಹ ಅವರೇ ಕಾರಣರು.

ಈ ಮೌಢ್ಯಾಚಾರ ಭ್ರಷ್ಟಾಚಾರಗಳು ನಿವಾರಣೆಯಾಗಬೇಕಾದರೆ ಜನತಾಪ್ರಜ್ಞೆ ಅರಳಬೇಕು, ವೈಚಾರಿಕ ಜಾಗೃತಿ ಪಲ್ಲವಿಸಬೇಕೆಂಬುದು ಕುವೆಂಪು ಅವರ ಮತ. ಹಳ್ಳಿಹಳ್ಳಿಗೂ ಒಂದು ವಿಚಾರವೇದಿಕೆಯಿದ್ದು, 'ಆ ವಿಚಾರವೇದಿಕೆಗಳಲ್ಲಿ ತರುಣರಿಗೆ ಹಳೆಯ ನಂಬಿಕೆ ಆಚಾರಗಳನ್ನೆಲ್ಲ ಪ್ರಶ್ನಿಸುವುದನ್ನು ಕಲಿಸಬೇಕು, ಅವರ ಕಿವಿಗೂ ಹೊಸ ಕ್ರಾಂತಿಕಾರಕ ಘೋಷಣೆಗಳು ಬೀಳಬೇಕು. ಅಲ್ಲಿ ಅವರು ಕುರುಡು ನಂಬುಗೆಯ ಹಳೆಯ ಮೌಲ್ಯಗಳನ್ನೆಲ್ಲ ಬುದ್ಧಿಯ ಒರೆಗೆ ಹಚ್ಚಿ ಚರ್ಚಿಸುವಂತಾಗಬೇಕು'[೪] ಎಂದು ಹಳ್ಳಿಯ ತರುಣರಿಗವರು ಸಲಹೆ ನೀಡುತ್ತಾರೆ.

---

೧. ಆತ್ಮ ಶ್ರೀಗಾಗಿ ನಿರಂಕುಶ ಮತಿಗಳಾಗಿ, ಪು. ೨

೨. ಕೋಗಿಲೆ ಮತ್ತು ಸೋವಿಯತ್ ರಷ್ಯಾ.

೩. ವಿಚಾರ ಕ್ರಾಂತಿಗೆ ಆಹ್ವಾನ, ಪು. ೨

೪. ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ, ಪು. ೧೨

ಹಳೆಯ ಕಾಲದ ಮೌಢ್ಯಗಳನ್ನು ನಂಬುವ ಚಟ ಎಷ್ಟರ ಮಟ್ಟಿಗೆ ಜನತೆಯಲ್ಲಿ ಬೇರೂರಿದೆಯೆಂದರೆ, ವಿಜ್ಞಾನ ಯುಗದಲ್ಲಿಯೂ ದೇವರಿಗೆ ಚಿನ್ನದಿಂದ ಮಾಡಿದ ಕಿರೀಟಾದಿ ಅಲಂಕಾರಗಳನ್ನರ್ಪಿಸುವ ಭ್ರಾಂತಿ ಅಪಾರವಾಗಿದೆ. 'ದೇವರು ಧರ್ಮಗಳ ಹೆಸರಿನಲ್ಲಿ ಸಾಲ ಮಾಡಿಯಾದರೂ ತಿರುಪತಿ ವೆಂಕಟರಮಣನ ಕಿರೀಟಕ್ಕೆ ಎರಡು ಕೋಟಿ ರೂಪಾಯಿಗಳದ್ದೇನೊ ಕಿರೀಟಮಾಡಿಸಿದ್ದಾರಂತೆ, ಅದೇನೋ ಪಾದುಕೆಗಳಂತೆ. ಎಂತಹ ಹುಡುಗರಿಗೂ ಗೊತ್ತಾಗುತ್ತದೆ, ಏಕೆ ಆ ಕಿರೀಟಕ್ಕೆ ಅಷ್ಟು ಕೋಟಿ ರೂಪಾಯಿ? ಅದರ ಬದಲು ಸುತ್ತ ಮುತ್ತ ಇದ್ದ ಹಳ್ಳಿಗಳಲ್ಲಿ ಬಾವಿಗಳನ್ನು ತೋಡಿಸಬಾರದೇಕೆ? ದೇಶದ ಆರ್ಥಿಕ ವ್ಯವಹಾರದ ದೃಷ್ಟಿಯಿಂದ ಇದೆಲ್ಲ ನಷ್ಟದ ಬಾಬತ್ತು ಅಲ್ಲವೆ? ದೇವರು ಧರ್ಮದಾನದ ಹೆಸರಿನಲ್ಲಿ ವರಮಾನತೆರಿಗೆ ಕೊಡಲು ಕದಿಯುವ ಜನ ತಪ್ಪಿಸಿಕೊಳ್ಳುತ್ತಾರೆ ಎಂದು ಹೇಳುತ್ತಾರೆ. ದೇವರು ಧರ್ಮ ಮತ ಅನ್ನುವ ನಂಬಿಕೆಗಳು ಮೌಲ್ಯಗಳು ಇವೆಯಲ್ಲ, ಅವುಗಳನ್ನು ಪ್ರಶ್ನಿಸುವ ಮನೋಧರ್ಮವನ್ನು ವಿಚಾರದೃಷ್ಟಿಯನ್ನು ನಮ್ಮ ಹುಡುಗರಿಗೆಲ್ಲಾ ತಂದುಕೊಡಬೇಕಾಗಿದೆ'[೧] ತಂದುಕೊಡಲಿಲ್ಲ, ದೇಶದಲ್ಲಿ ಅಜ್ಞಾನ ದಾರಿದ್ರ್ಯಗಳು ಕಂಪ್ಯೂಟರ್ ಯುಗದಲ್ಲಿಯೂ ಮುಂದುವರಿಯುತ್ತವೆ; ಮುಂದುವರಿದ ದೇಶಗಳ ನಗುಪಾಟಲಿಗೆ ಗುರಿಯಾಗಬೇಕಾಗುತ್ತದೆ. ನಮ್ಮ ನಾಯಕರು ನೆರೆಯ ಚೀನಾದಿಂದಾದರೂ ಪಾಠಕಲಿತುಕೊಳ್ಳಬಾರದೆ? ಅನುತ್ಪಾದಕ ವೆಚ್ಚಗಳನ್ನು ತಡೆಗಟ್ಟಬೇಕಾದ್ದು ಸರ್ಕಾರದ ಕರ್ತವ್ಯವಲ್ಲವೆ?

ಶೈಶವದಲ್ಲಿಯೇ ವೈಜ್ಞಾನಿಕ ಪ್ರವೃತ್ತಿಯನ್ನು ವೈಚಾರಿಕ ಬುದ್ಧಿಯನ್ನು ವೃದ್ಧಿಗೊಳಿಸುವ ಪ್ರಯತ್ನ ನಡೆಯಬೇಕೆಂಬುದು ಕುವೆಂಪು ಅವರ ವಿಚಾರ. 'ಯಾವ ಮೌಲ್ಯಗಳನ್ನು ಹಿಂದೆ ನಾವು ಬಹಳ ಶ್ರೇಷ್ಠ ಎಂದು ಭಾವಿಸಿದ್ದೆವೊ ಅವುಗಳ ವಿಚಾರದಲ್ಲಿ ಮುಂದೆಯೂ ಅದೇ ಶ್ರೇಷ್ಠತೆಯನ್ನು ಅವಕ್ಕೆ ಕೊಟ್ಟುಕೊಂಡು ಹೋಗುವುದಕ್ಕೆ ಆಗುವುದಿಲ್ಲ'[೨] ಎಂದವರು ನುಡಿಯುತ್ತ, ಶಿಶುಸಾಹಿತ್ಯ ನಿರ್ಮಿಸುವ ಸಾಹಿತಿಗಳು ಎಚ್ಚರಿಕೆ ವಹಿಸಬೇಕೆಂದು ತಿಳಿಸುತ್ತಾರೆ. ಮತ್ತೂ ಮುಂದುವರಿದು ಚಿಕ್ಕಂದಿನಲ್ಲಿಯೇ ವಿಚಾರ ಪ್ರಜ್ಞೆಯನ್ನು ಕೆರಳಿಸುವ, ಅಂದರೆ ಪ್ರಶ್ನೆ ಕೇಳುವ, ಸಂದೇಹ ಪಡುವ, ಸತ್ಯವನ್ನು ಒರೆಗಲ್ಲಿಗೆ ತಿಕ್ಕಿ ಸರಿ ತಪ್ಪನ್ನು ಪರಿಶೀಲಿಸುವ ಮನೋಧರ್ಮ ಉಂಟಾಗುವಂತೆ ಮಗುವಿಗೆ ಬೋಧಿಸಿದ್ದರೆ ಆ ಮಗು ಇಂಥ ಕಥೆಯನ್ನು (ಪ್ರಹ್ಲಾದನ ಕಥೆ) ಕೇಳಿ ಅದನ್ನು ಅವಿಚಾರವಾಗಿ ಗುಳಕ್ಕನೆ ನುಂಗುವುದಿಲ್ಲ' ಎಂದು ಪ್ರಶ್ನ ಪ್ರವೃತ್ತಿಯ[೩] ಅಗತ್ಯತೆಯನ್ನು ಒತ್ತಿ ಹೇಳುತ್ತಾರೆ. ವಿಚಾರಶಕ್ತಿಯ ಅಭಾವದಿಂದ ಜಗತ್ತಿನಲ್ಲಿ ಮತ ಸಂಬಂಧವಾದ ಕ್ಷೋಭೆ ಆಗಾಗ್ಗೆ ಉದ್ಭವಿಸುತ್ತದೆಯೆಂಬ ಸತ್ಯವನ್ನವರು ಪ್ರಕಟಿಸುತ್ತಾರೆ. ಅಂತಹ ವೈಚಾರಿಕ ಮನೋಧರ್ಮವನ್ನು ಮೊದಲಿಂದಲೂ ನಾವು ಮಕ್ಕಳಲ್ಲಿ ಬಿತ್ತಿದ್ದರೆ, ಮತಕಲಹಗಳೂ ಮತಮೌಢ್ಯಗಳೂ ಸಂಕುಚಿತವಾದ ಹುಸಿ ಮತಾಭಿಮಾನದಿಂದ ಒದಗುವ ಅನ್ಯ ಮತ ದ್ವೇಷದಿಂದ ಉಂಟಾಗುತ್ತಿರುವ ಕ್ಷೋಭೆಗಳೂ ಲೋಕದಲ್ಲಿರುತ್ತಿರಲಿಲ್ಲ. ಇನ್ನು ಮುಂದೆ ನಮ್ಮ ಮಕ್ಕಳು ಸಂಕುಚಿತ ಮತಭಾವಗಳನ್ನೆಲ್ಲ ತಿರಸ್ಕರಿಸಿ ವಿಶಾಲ ಅಧ್ಯಾತ್ಮಕ್ಕೆ ಮಾತ್ರ ವಿದ್ಯಾರ್ಥಿಗಳಾಗಬೇಕು. ಲೋಕದ ಶಾಂತಿ ಸೌಖ್ಯಗಳಿಗೆ ಕಾರಣವಾದ ಧರ್ಮವನ್ನು ಕಂಡುಕೊಂಡು ಮತಗಳನ್ನೆಲ್ಲ ಮತಿಯ ಒರೆಗಲ್ಲಿಗೆ ತಿಕ್ಕಬೇಕು'[೪] ಪ್ರಾಯಶಃ ಇಂಥ ಬುದ್ಧಿವಾದವನ್ನು ನೀಡಬಲ್ಲ ಶಕ್ತಿ ಯೋಗ್ಯತೆ ಶ್ರೀರಾಮಕೃಷ್ಣ ಪರಮಹಂಸರಂಥ ಸರ್ವಧರ್ಮ ಸಮನ್ವಯಾಚಾರ್ಯರ ಶಿಷ್ಯ ಪ್ರಶಿಷ್ಯರಿಗೆ ಮಾತ್ರ ಲಭ್ಯ. ವಿಚಾರವಾದಿ ಅಜ್ಞೇಯತಾವಾದಿ ಆದರೂ ಆಗಬಹುದು, ಎಂದಿಗೂ ನಾಸ್ತಿಕನಾಗಲಾರ ಆದರೆ ಅವನಿಗೆ ಯಾವಾಗಲೂ ತೆರೆದ ಮನಸ್ಸಿರಬೇಕು ಎಂಬ ಮಾತಂತು ಸತ್ಯ.

ವೈಚಾರಿಕತೆ ವೈಜ್ಞಾನಿಕತೆಗಳಿಗೆ ಕಟ್ಟಾವಿರೋಧಿ ಪರಮಶತ್ರು ಪುರೋಹಿತಶಾಹಿ. ಪುರಾಣಾಗಮ ಶಾಸ್ತ್ರಗ್ರಂಥಗಳನ್ನು, ದೇವಾಲಯಗಳನ್ನು, ಅನೇಕ ಮೌಢ್ಯಾಚರಣೆಗಳನ್ನು, ಒಳಗೊಂಡ ಪುರೋಹಿತಶಾಹಿ ಮತೀಯತೆಯ ಶನಿಸಂತಾನ. ಜಾತೀಯತೆ ಅಸ್ಪೃಶ್ಯತೆ ಕ್ರೂಸೇಡ್ ಜಿಹಾದ್‌ಗಳೆಲ್ಲವೂ ಪುರೋಹಿತಶಾಹಿ ದಿನದಿನವೂ ಬಿತ್ತುವ ವಿಷಬೀಜಗಳು. ಮಾನವನ ಮುಕ್ತಿಗಾಗಿ, ಲೋಕ ಕಲ್ಯಾಣಕ್ಕಾಗಿ ಮಹಾಪುರುಷರು ಹಾಗೂ ಆಚಾರ್ಯ ಶ್ರೇಷ್ಠರು ಸೃಷ್ಟಿಸಿದ ಮತಗಳು ಲೋಕವಿನಾಶಕ ಕಿರಾತ ಸಂಸ್ಥೆಗಳಾದದ್ದು ದುರ್ದೈವ. ಇಷ್ಟಕ್ಕೆಲ್ಲ ಕಾರಣವಾದದ್ದು ಪುರೋಹಿತಶಾಹಿ. ಈ ಪುರೋಹಿತಶಾಹಿ ನಿರ್ನಾಮವಾಗುವ ತನಕ ಜಗತ್ತಿನಲ್ಲಿ ಶಾಂತಿ ನೆಲಸುವುದಿಲ್ಲವೆಂದು ಉಚ್ಚಕಂಠದಿಂದ ಇಡೀ ಜೀವನದುದ್ದಕ್ಕೂ ಘೋಷಿಸಿದವರು ಕುವೆಂಪು. ಅವರ ಆ ಘೋಷಣೆಯಲ್ಲಿ ಪ್ರವಾದಿಯ ಧ್ವನಿಯಿದೆ, ವಿಶ್ವಶಕ್ತಿಯ ಪ್ರತಿಧ್ವನಿಯಿದೆ. ಜಗತ್ತಿನ ಹಲವು ರಾಷ್ಟ್ರಗಳ ರಾಜ್ಯಭಾರಗಳು ಮತೀಯತೆಯಿಂದ ಕಲುಷಿತವಾಗಿರುವುದೇ ಪುರೋಹಿತಶಾಹಿಯ ಪೈಶಾಚಿಕ ನೃತ್ಯಕ್ಕೆ ನಿದರ್ಶನವಾಗಿದೆ. ಬುದ್ಧ, ಬಸವೇಶ್ವರ, ವಿವೇಕಾನಂದರ ನಂತರ ಪುರೋಹಿತಶಾಹಿಯ ವಿರುದ್ಧವಾಗಿ ಬಂಡೆದ್ದವರು ಕುವೆಂಪು. ಈವರೆಗಿನ ಯಾವ ಕನ್ನಡ ಸಾಹಿತಿಯೂ ಕುವೆಂಪು ಅವರಂತೆ, ಕಠೋರ ವಿಚಾರವಾದಿ ಎನಿಸಿಕೊಂಡವರು ಸಹಿತ,

---

೧. ಅದೇ, ಪು. ೨೭
೨. ಮಕ್ಕಳ ಸಾಹಿತ್ಯಕ್ಕೆ ಆಧುನಿಕ ಮೌಲ್ಯಗಳು, ಅದೇ ಪುಟ. ೪೮
೩. ಮಕ್ಕಳಿಗೇಕೆ ವೈಚಾರಿಕತೆ, ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ, ಪು. ೪೦
೪. ಅದೇ ಪು. ೪೧-೪೨

ಪುರೋಹಿತಶಾಹಿಯನ್ನು ನಿಷ್ಠುರವಾಗಿ, ಉಗ್ರವಾಗಿ ಖಂಡಿಸಿಲ್ಲ. ಅದರ ನಿರ್ನಾಮಕ್ಕಾಗಿ ತ್ರಿಕರಣ ಶುದ್ಧಿಯಾಗಿ ಪ್ರಯತ್ನಪಟ್ಟವರಿಲ್ಲ. 'ನಮ್ಮ ಎಷ್ಟೋ ಕವಿಗಳು ಬರಿಯ ಪದ್ಯ ರಚಕರು. ಅವರ ಆಲೋಚನೆಯ ಮಟ್ಟ ಅಷ್ಟೇನೂ ಮೇಲಿನ ವರ್ಗದ್ದಲ್ಲ. ತಮ್ಮ ಮತ, ತಮ್ಮ ಜಾತಿ, ತಮ್ಮವರ ಹಿತಾಸಕ್ತಿಗಳನ್ನು ದಾಟಿ ಅವರು ಹೋಗಲಾರರು. ದೊಡ್ಡ ದೊಡ್ಡ ತತ್ತ್ವಗಳನ್ನು ಹೇಳಿದರೂ ಅವು ತಮ್ಮ ಗುಂಪಿಗೆ ಮಾತ್ರ ಅನ್ವಯವಾಗುತ್ತದೆ' ಎಂಬ ಕುವೆಂಪು ಅವರ ಮಾತುಗಳನ್ನು ಈ ಸಂದರ್ಭದಲ್ಲಿ ನೆನೆಯಬಹುದು.[೧] 'ಭರತ ಖಂಡದ ಪತನಕ್ಕೆ ಮುಖ್ಯ ಕಾರಣವೆಂದರೆ, ರಾಜವರ್ಗದವರ ಮತ್ತು ಪುರೋಹಿತವರ್ಗದವರ ಅಧಿಕಾರ ಬಲದಿಂದ ವಿದ್ಯಾಬುದ್ಧಿಗಳ ಸರ್ವಸ್ವಾಮ್ಯವೂ ಅತ್ಯಲ್ಪ ಸಂಖ್ಯೆಯ ಕೆಲವೇ ಕೆಲವು ಬ್ರಾಹ್ಮಣರ ಹಸ್ತಗತವಾದದ್ದು.' ಎಂಬ ವಿವೇಕಾನಂದರ ಸತ್ಯ ಘೋಷಣೆಯನ್ನು ನಮ್ಮ ನಾಯಕರು ಅರಿಯಬೇಕು.

ಕುವೆಂಪು ಅವರ ಪ್ರಕಾರ ಪುರೋಹಿತಶಾಹಿ ಜಗತ್ತಿನ ಎಲ್ಲ ಮತಾಂಧರನ್ನೊಳಗೊಳ್ಳುತ್ತದೆ. ಇಂಡಿಯಾ ಜಗತ್ತಿನ ಎಲ್ಲ ಮತಗಳ ತೊಟ್ಟಿಲೂ ಆಗಿದೆ, ಕುರುಕ್ಷೇತ್ರವೂ ಆಗಿದೆ. ಮತಾಂಧರು ಮತ್ತು ಉಗ್ರಗಾಮಿಗಳು ಪುರೋಹಿತಶಾಹಿ ಹೆತ್ತ ಸೈತಾನರು. 'ದಯೆಯೇ ಧರ್ಮದ ಮೂಲವಯ್ಯ' ಎಂಬ ಬಸವಣ್ಣನವರ ಮಾತು ಪ್ರತಿಯೊಂದು ಶುದ್ಧ ಪ್ರಬುದ್ಧ ಧರ್ಮಕ್ಕೆ ಅನ್ವಯಿಸಬೇಕು. ದಯೆಯಿಲ್ಲದ ಧರ್ಮ, ಧರ್ಮವೇ ಅಲ್ಲ. ಯಾವುದೋ ಕಾಲಬಿಂದುವಿನಲ್ಲಿ ಮತ್ತು ಸನ್ನಿವೇಶದಲ್ಲಿ ಹುಟ್ಟಿದ ಮತ ಕಾಲಾನುಗುಣವಾಗಿ, ಸನ್ನಿವೇಶಕ್ಕೆ ತಕ್ಕಂತೆ, ಗುರಿ ಒಂದೆಯಾದರೂ ಪಥವನ್ನು ಬದಲಾಯಿಸಿಕೊಳ್ಳಬೇಕಾದ್ದು ಋತಧರ್ಮ. ಪರಿವರ್ತನೆ ಜೀವಂತಿಕೆಯ ಲಕ್ಷಣ. ಆಧ್ಯಾತ್ಮಿಕತೆ ಮತ ಅಥವಾ ಧರ್ಮದ ಜೀವಂತ ಲಕ್ಷಣವಾಗಬೇಕು. ಬಹುಪಾಲು ಮಠಗಳಲ್ಲಿ ಮತ್ತು ಕಾವಿ ತೊಟ್ಟವರಲ್ಲಿ ಆಧ್ಯಾತ್ಮಿಕ ಸಾಧನೆಯೆ ಗೈರುಹಾಜರು. ಭರತ ಖಂಡ ಪವಿತ್ರ ದೇಶವೆಂದು; ಜಗತ್ತಿನ ಬೇರೆಡೆ ಇಲ್ಲದ ಪ್ರತಿಭಾವಂತರು ಇಲ್ಲಿದ್ದಾರೆಂದು ಹಿಂದೂ ಧರ್ಮ ಸರ್ವಶ್ರೇಷ್ಠವೆಂದು ಜಂಬಕೊಚ್ಚಿಕೊಳ್ಳುವುದುಂಟಷ್ಟೆ. ಆದರೆ ಲಕ್ಷಾಂತರ ಸನ್ಯಾಸಿಗಳಾಗಲಿ, ಪ್ರತಿಭಾವಂತರಾಗಲಿ, ಹಿಂದೂ ಧರ್ಮಾನುಯಾಯಿಗಳಾಗಲಿ ಈ ಸಮಾಜವನ್ನು ನರಕವಾಗಿಸಿರುವ ಅಸಮಾನತೆಯನ್ನು ಜಾತೀಯತೆಯನ್ನು ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಪ್ರಯತ್ನ ಮಾಡಿದ್ದಾರೆಯೆ? ಗಾಂಧೀಜಿ, ಟ್ಯಾಗೋರ್ ಮೊದಲುಗೊಂಡು ತಿಲಕ್, ಗೋಖಲೆ, ರಾಜಾಜಿ, ನೆಹರೂ, ಲಜಪತರಾಯ್, ರಾಜೇಂದ್ರ ಪ್ರಸಾದ್ ಮೊದಲಾದ ಸ್ವಾತಂತ್ರ್ಯ ಸಮರ ವೀರರು ಸರ್ವನಾಶಕರವಾದ ಪುರೋಹಿತಶಾಹಿಯ ಬಗ್ಗೆ ಎಂದಾದರೂ ಅಡ್ಡಾದಿಡ್ಡಿಯಾಗಿಯೋ ಆಕಸ್ಮಿಕವಾಗಿಯೋ ವಿರೋಧ ವ್ಯಕ್ತ ಪಡಿಸಿದ್ದುಂಟೆ? ಜಗತ್ತಿನ ಎಲ್ಲೆಡೆಯೂ ಮತೀಯ ಸರ್ಕಾರವಿರುವ ರಾಷ್ಟ್ರಗಳು ಪ್ರಬಲವಾಗುತ್ತಿರುವಾಗ, ಪುರೋಹಿತಷಾಹಿ ಸರ್ವಾಧಿಕಾರದಿಂದ ಮೆರೆಯುತ್ತಿರುವಾಗ, ರಾಜನೀತಿಜ್ಞರ ರಾಜಕೀಯ ಚಿಂತನೆಯ ಭಾಗವಾಗಿ ವಿರೋಧ ತಲೆಯೆತ್ತದಿರಲು ಕಾರಣವೇನು? ಇದೊಂದು ಮೂಲಭೂತ ಸಮಸ್ಯೆಯೆಂದು ಪ್ರಪಂಚ ಸಂಸ್ಥೆಯೂ ಗುರುತಿಸಿಲ್ಲದಿರುವುದೊಂದು ದುರ್ದೈವ.

ಸುಮಾರು ಎಪ್ಪತ್ತು ವರ್ಷಗಳ ಹಿಂದೆಯೇ ಕುವೆಂಪು ಈ ಸಮಸ್ಯೆಯ ಪ್ರಖರತೆಯನ್ನೂ ಘೋರ ಪರಿಣಾಮವನ್ನೂ ಗುರುತಿಸಿ, ಹಲವು ಬಗೆಯ ಅದರ ಪೈಶಾಚಿಕ ರೂಪಗಳನ್ನು[೨] ಪ್ರಕಾಶಪಡಿಸಿ, ಅದನ್ನು ಬೇರುಸಹಿತ ಕಿತ್ತೊಗೆಯದಿದ್ದರೆ ಈ ಜಗತ್ತಿಗೆ ಉಳಿಗಾಲ ವಿಲ್ಲವೆಂದು ಸ್ಪಷ್ಟಪಡಿಸುತ್ತಾರೆ. ತಾನೇ ಸೃಷ್ಟಿಸಿದ ಮೌಢ್ಯಗಳ ಜಾತ್ರೆಯಲ್ಲಿ ಪುರೋಹಿತಶಾಹಿಯ ದರ್ಬಾರು; ಆ ದರ್ಬಾರು ನಾಶವಾಗುವ ಮುನ್ನ ಮೌಢ್ಯ ಹನನ ಅಗತ್ಯ ಎಂದವರು ಜನರಿಗೆ ಕರೆಕೊಡುತ್ತಾರೆ. 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು?' 'ತರುಣರೆ ಎದ್ದೇಳಿ' 'ಓ ಬನ್ನಿ ಸೋದರರೆ ಬೇಗ ಬನ್ನಿ' 'ದೇವರು ಪೂಜಾರಿ' 'ದೇವರು ಸೆರೆಯಾಳ್' 'ಹೂವುದೇವರು'[೩] 'ಮೌಢ್ಯ ಮೇಧ' 'ಭಾವೈಕ್ಯತೆ'[೪] 'ಬ್ರಾಹ್ಮನಾಯಿ-ಶೂದ್ರಕೋಳಿ' ಈ ಮೊದಲಾದ ಕವಿತೆಗಳ ಬಾವುಟವನ್ನು ಆಕಾಶದಲ್ಲಿ ಹಾರಾಡಿಸುತ್ತಾರೆ.

ಮಾಡಿರಯ್ ಯಾಗಗಳ! ತಿನ್ನಿರಯ್ ಭಕ್ಷ್ಯಗಳ!
ಭೋಜನವೆ ಯೋಜನೆಯ ಮುಖ್ಯ ಅಂಗ!
ಮಂಕುಮಂದಿಗೆ ಮೌಢ್ಯ ಮದ್ಯವನು ಕುಡಿಸಿರಯ್;
ಸುಳ್ಳು ಭಯವನು ಬಿತ್ತಿ ಚೆನ್ನಾಗಿ ದುಡಿಸಿರಯ್

---

೧. ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ, ಪು. ೨೧

೨. ಸಂಸ್ಕೃತಿ ಕ್ರಾಂತಿಗೆ ಕಹಳೆ ನಾಂದಿ, ವಿಚಾರ ಕ್ರಾಂತಿಗೆ ಆಹ್ವಾನ ಪುಟ. ೭೩

೩. ಕೋಗಿಲೆ ಮತ್ತು ಸೋವಿಯಟ್ ರಷ್ಯಾ

೪. ಪ್ರೇತಕ್ಯೂ

ಕತ್ತೆಗಳಿರುವುದೇಕೆ? ನಮ್ಮ ಮಡಿ ಹೊರುವುದಕೆ;
ಕತ್ತೆಗಳಿಗುತ್ತಮತೆ ಇತ್ತರಾಯ್ತೆಮ್ಮಗತಿ![೧]

ಇಂಥ ಯಾಗ ಹೋಮಗಳಲ್ಲಿ ನಂಬಿಕೆಯಿರುವ, ಆತ್ಮ ಶ್ರದ್ಧೆ ಆತ್ಮಪ್ರತ್ಯಯವಿಲ್ಲದಿರುವ ಶೂದ್ರರು ಮೌಢ್ಯದ ಕೆಸರಿನಿಂದ ಮೇಲೇಳಲು ಸಾಧ್ಯವೇ ಇಲ್ಲ; ಅಂಥವರ ಹೆಜ್ಜೆಯನ್ನು ಯಾರೂ ಹಿಂಬಾಲಿಸಬಾರದು.

ಆಚಾರ್ಯರು ಸ್ಥಾಪಿಸಿದ ಮೂಲಮತವನ್ನು ಪುರೋಹಿತರೂ, ರಾಜರೂ, ರಾಜಕಾರಣಿಗಳೂ ಸೇರಿಕೊಂಡು, ಸಾಮಾನ್ಯರ ವಿರುದ್ಧವಾಗಿ ಸಂಚುಹೂಡಿ, ವಿಕೃತಗೊಳಿಸಿದ ಕತೆಯೆ ಲೋಕ ಇತಿಹಾಸದ ವಸ್ತು. ಸಾತ್ವಿಕ ಗುಣದ ಮತಗಳು ಬರಬರುತ್ತ ರಕ್ತದಾಹದ ರಾಜಸಿಕ ತಾಮಸಿಕ ಶೋಷಕ ಮತಗಳಾಗಿ ಪರಿಣಮಿಸುತ್ತವೆ.

ದೊರೆ ಮತ್ತು ಪುರೋಹಿತ ಕೂಡಿದಾಗ ಹುಟ್ಟಿತು ಮತ !
ಮೊದಲ ಠಕ್ಕ ಮೊದಲ ಬೆಪ್ಪ ಕೂಡಿದಾಗ ಮೂಡಿತು ಮತ ![೨]

ಠಕ್ಕ ಬೆಪ್ಪರಿಂದಾಗಿ ತಾಮಸಿಕ ಮತ ದಿನದಿನವೂ ನಾರಕೀಯವಾಗಿ, ಸೈತಾನೀಯವಾಗಿ ರೌದ್ರವಾಗಿ ಬೆಳೆಯುತ್ತಿದೆ. ಜಾತಿ ವರ್ಣಾಶ್ರಮಗಳು ಮೊದಲಿನಿಂದ ಇರಲಿಲ್ಲವೆಂದವರು ಹೇಳುತ್ತಾರೆ. 'ಅವು ಈ ಪುರಾಣಗಳು ಪ್ರಾರಂಭವಾದುವಲ್ಲ ಆವಾಗಿನಿಂದ ಶುರು ವಾಯಿತು. ಪ್ರಾರಂಭದಲ್ಲಿ ಜಾತಿ ಅನ್ನೋ ಭಾವನೆಯೇ ಇಲ್ಲ. ನೀವು ಉಪನಿಷತ್ತಿನ ಮಟ್ಟಕ್ಕೆ ಹೋದರೆ ಅಲ್ಲಿ ವಿಶ್ವತತ್ತ್ವಗಳಿವೆಯೇ ಹೊರತು ಅವು ಯಾವುದೋ ಒಂದು ದೇಶಕ್ಕೆ ಒಂದು ಕಾಲಕ್ಕೆ, ಒಂದು ಮತಕ್ಕೆ ಸಂಬಂಧ ಪಡತಕ್ಕಂತಹವಲ್ಲ'.[೩]

ರಾಜಕೀಯ ನಾಯಕರ ಉಳಿವಿಗೆ ಸುಳ್ಳೇ ಬಂಡವಾಳ. ಅವರ ಸುಳ್ಳಿಗೆ ಮುಗ್ಧ ಜನರು ಬಲಿ. ಅಂತೆಯೇ ಮಠಾಧಿಪತಿ ಮಠದ ಹಂದರದ ಮೇಲೆ ಪುರಾಣವೆಂಬ ಹೆಸರಿನಲ್ಲಿ ಸುಳ್ಳು ಕಥೆಗಳನ್ನು ಹಬ್ಬಿಸಿ, ಶಾಸ್ತ್ರಾಗಮಗಳೆಂಬ ಕುಚ್ಚುಗೊಂಡೆಯಗಳನ್ನಲಂಕರಿಸಿ ಸಾಮಾನ್ಯರಿಗೆ ಮಂಕುಬೂದಿ ಎರಚುತ್ತಾರೆ. ಪಂಡಿತರು ಸುಳ್ಳಿನ ಲತೆಗೆ ನೀರುಹೊಯ್ದು ಬೆಳೆಸಿ ಶೂದ್ರಾತಿಶೂದ್ರರ ಕೊರಳಿಗೆ ಉರುಳು ಬಿಗಿಯುತ್ತಾರೆ.

ಸುಳ್ಳಿನ ಮಾಲೆಯ ಕೊರಳಿಗೆ ಸೂಡಿ
ಕಳ್ಳನೊಬ್ಬನನು ಗುರುವನು ಮಾಡಿ
ಬಡವರ ಹೊನ್ನನು ಕಾಣಿಕೆ ನೀಡಿ
ಧರ್ಮವ ಮೆರೆವರ ನೋಡಯ್ಯ![೪]

ಎಂದು ಕುವೆಂಪು ಹೇಳುವಲ್ಲಿ ಬಸವಣ್ಣನವರ ನೆನಪಾಗುತ್ತದೆ. ಆದರೆ ಬಸವತತ್ತ್ವ ಲೌಕಿಕ ಜೀವನಕ್ಕೆ ಮೇವಾಗಿದೆಯೆ ಹೊರತು, ಆಚರಣೆಗಲ್ಲ ಎಂಬುದು ಜಗತ್ತಿಗೇ ಗೊತ್ತು. ಹೀಗೆಲ್ಲ ಹೇಳುವಾಗ ಯಾವ ಮಠಾಧಿಪತಿ ತಾನೆ ಕುವೆಂಪು ಬಸವಣ್ಣನವರನ್ನು ಸಹಿಸಿ ಕೊಂಡಿದ್ದಾರು? ಪುರೋಹಿತಶಾಹಿ ನಾಶವಾಗುವ ತನಕ ಸ್ವಾತಂತ್ರ್ಯ ಬರಿಯ ಮರೀಚಿಕೆಯಾಗುತ್ತದೆ.

ಕಡೆಯ ಪುರೋಹಿತನ ಕರುಳು
ಕಡೆಯ ದೊರೆಯ ಕೊರಳಿಗುರುಳು
ಬಿಗಿದ ಹೊರತು ಬರಿಯ ನರಳು
ಸ್ವಾತಂತ್ರ್ಯದ ಸ್ವರ್ಗವು.[೫]

ಕುವೆಂಪು ಪ್ರಧಾನವಾಗಿ ನಿಸರ್ಗಾರಾಧಕರು; ಅಧ್ಯಾತ್ಮ ಸಾಧಕರು; ಆದರೂ ಅವರು ಆಗಾಗ್ಗೆ ಸಾಮಾಜಿಕ ಹಾಗೂ ರಾಜಕೀಯ ಚಿಂತನೆಯ ಕಡೆಗೂ ಗಮನ ಹರಿಸುತ್ತಿದ್ದರು. ಅಂಥ ಚಿಂತನೆಯಲ್ಲಿಯೂ ಅಧ್ಯಾತ್ಮ ಸ್ಪರ್ಶವಿದ್ದೇ ಇರುತ್ತದೆ. ದೇಶ, ಸ್ವಾತಂತ್ರ್ಯ, ಜಾತಿ ವಿನಾಶ, ಮಾನವೀಯತೆ, ವೈಚಾರಿಕತೆ, ವೈಜ್ಞಾನಿಕತೆ ಅವರ ಆ ಚಿಂತನೆಯ ತತ್ತ್ವಗಳು. ಅವರ ಕಾವ್ಯ, ಕಾದಂಬರಿ, ನಾಟಕಗಳಲ್ಲಿ ಅವು ಮೇಲಿಂದ ಮೇಲೆ ಮಿಂಚುತ್ತವೆ. ಕುವೆಂಪು ಯಾವೊಂದು ಮತಕ್ಕೂ ಸೇರಿದವರಲ್ಲ, ಎಲ್ಲ ಮತದವರು. 'ಮನ್ಮನೋಮಂದಿರಕೆ ಓ ಲೋಕಗುರುಗಳೆಲ್ಲ ಬನ್ನಿ' ಎಂಬುದು ಅವರ ಅನುದಿನದ ಪ್ರಾರ್ಥನೆಯಾಗಿದೆ. ಆದ್ದರಿಂದಲೇ.

---

೧. ಅದೇ.
೨. ಮಂತ್ರಾಕ್ಷತೆ. ಪು. ೪೮
೩. ಸಂಸ್ಕೃತಿ ಕ್ರಾಂತಿಗೆ ಕಹಳೆ ನಾಂದಿ, ವಿಚಾರ ಕ್ರಾಂತಿಗೆ ಆಹ್ವಾನ, ಪು. ೩
೪. ಮಠಾಧಿಪತಿ, ಮಂತ್ರಾಕ್ಷತೆ, ಪು. ೧೫
೫. ಕ್ರಾಂತಿ ಮಂತ್ರ, ಅದೇ ೨೧

ಮತದಿಂದ ಪಾರಾಗು; ಅಧ್ಯಾತ್ಮ ಶರಣಾಗು !
ಮೌಢ್ಯಕ್ಕೆ ದೂರಾಗು; ವಿಜ್ಞಾನ ಮತಿಯಾಗು ![೧]

ಎಂದು ಮತಾಚಾರ್ಯರಿಗೂ ಎಚ್ಚರಿಕೆ ನೀಡುವ ನೈತಿಕ ಹಕ್ಕು ಅವರಿಗಿದೆ. ಅವರು ಆಚಾರ್ಯರಲ್ಲಿ ಆಚಾರ್ಯರೆಂಬುದು ನಿಜ. ಇದು ಈ ಮಹಾಕವಿಯ ಕೊನೆಯ ಆಶೆ; ಅದೇ ವಿಶ್ವಮಾನವ ಸಂದೇಶವಾಗಿ ಸಾಕಾರಗೊಳ್ಳುತ್ತದೆ.

ಕುವೆಂಪು ಅವರ ಸುದೀರ್ಘ ಜೀವನದ ಲೌಕಿಕಾಲೌಕಿಕ ಅನುಭವದ, ಚಿಂತನೆಯ ಫಲ ವಿಶ್ವಮಾನವ ಸಂದೇಶ.[೨] ಅವರ ಜ್ಞಾನಭಂಡಾರ ವ್ಯೋಮ ವಿಸ್ತಾರವಾದದ್ದು. ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಲೇ ಪಾಶ್ಚಾತ್ಯ ಪೌರ್ವಾತ್ಯ ಸಾಹಿತ್ಯವನ್ನೆಲ್ಲ ಓದಿ ಅರಗಿಸಿಕೊಂಡವರು. ಜಗತ್ತಿನ ಇತಿಹಾಸವನ್ನು ಬಲ್ಲವರು. ಯಾವೊಂದು ಮತೀಯ ಬಂಧನಕ್ಕೂ ಒಳಗಾಗದೆ, ಎಲ್ಲ ಮತಗಳ ವಿಲಾಸ ವಿಭ್ರಮಗಳನ್ನು ಶುಭಾಶುಭಗಳ ಪರಿಣಾಮವನ್ನು ನಿರಂಕುಶ ಮತಿಯಿಂದ ಆಲೋಚಿಸಿ, ಧ್ಯಾನಿಸಿ, ಶ್ರೀರಾಮಕೃಷ್ಣ ಪರಮಹಂಸ, ವಿವೇಕಾನಂದ, ಅರವಿಂದರ ಮಾನಸಶಿಷ್ಯರಾಗಿ ಆತ್ಮಶ್ರೀಯನ್ನು ಕಂಡುಕೊಂಡವರು. ಆದಿಮಾನವ ಯುಗದಿಂದ ವೈಜ್ಞಾನಿಕ ಯುಗದವರೆಗೆ, ರಾಮಕೃಷ್ಣ, ಬುದ್ಧ, ಯೇಸು, ಪೈಗಂಬರರಿಂದ ಹಿಡಿದು ಗುರುನಾನಕ್‌ರವರೆಗೆ, ಗಾಂಧಿ, ಅಂಬೇಡ್ಕರ್‌ವರೆಗೆ ಜಗತ್ತು ನಡೆದು ಬಂದಿರುವ ಮಾರ್ಗವನ್ನು ಶ್ರದ್ಧೆಯಿಂದ, ವೈಚಾರಿಕ ದೃಷ್ಟಿಯಿಂದ, ಸಾಕ್ಷೀಪ್ರಜ್ಞೆಯಿಂದ, ನಿರ್ಮಮತೆಯಿಂದ, ವಿಶ್ವಚೇತನದ ಹಿನ್ನೆಲೆಯಲ್ಲಿ ನೋಡಿದವರು. ರಾಜಶಾಹಿ ಪುರೋಹಿತಶಾಹಿಯಿಂದ ಜಗಕ್ಕಾದ ಅನ್ಯಾಯವನ್ನು ಕಂಡು ರೋಸಿಹೋದವರು. ರಷ್ಯಾ ಕ್ರಾಂತಿ ಸೇರಿದಂತೆ ಹಲವು ಕ್ರಾಂತಿಗಳನ್ನು, ಎರಡು ಮಹಾಯುದ್ಧಗಳನ್ನು, ಮಿಗಿಲಾಗಿ ಸ್ವಾತಂತ್ರ್ಯ ಸಮರವನ್ನು, ವಸಾಹತುಗಳ ಜಾಗೃತಿಯನ್ನು ದೂರದಿಂದಲೋ ನಾತಿದೂರದಿಂದಲೋ ಸಂವೀಕ್ಷಿಸಿ, ಆಧ್ಯಾತ್ಮಿಕತೆಯ ಹಿನ್ನೆಲೆಯಲ್ಲಿ ಆ ಬಗ್ಗೆ ಚಿಂತನೆ ನಡಸಿದವರು. ಈ ಎಲ್ಲ ಚಿಂತನ ಮಂಥನ ಅಂತರ್‌ದೃಷ್ಟಿಯ ಪರಿಣಾಮವಾಗಿ

ಯುಗಯುಗ ಬೇಕೀ ಮನುಜತೆ
    ಮಾನವತನವನೆ ಮೀರಿ
ದೇವತ್ವವ ಸಂಪಾದಿಸೆ
    ಸಂಯಮ ಸ್ವರ್ಗಕ್ಕೇರಿ!
ಇಳಿತಂದುದು ಈ ಭೂಮಿಗೆ
    ಅವತಾರದ ಮೇಲವತಾರ!
ಆದುದ್ಧಾರಕೆ ಸಾವಿರ ಮಡಿ
    ಇಹುದಾಗುವ ಉದ್ಧಾರ![೩]

ಎಂಬ ನಿರ್ಧಾರಕ್ಕವರು ಬರುತ್ತಾರೆ. ವಿಶ್ವಮಾನವ ಸಂದೇಶದ ಶ್ರೀಧರ್ಮಸೂತ್ರದ ಕಲ್ಪನೆಗೆ ಈ ನಿರ್ಧಾರವೂ ಕಾರಣ.

ಈ ಸಂದೇಶ ದಿಢೀರನೆ ಉದ್ಭವವಾದದ್ದಲ್ಲ. ಕಾವ್ಯ ಜೀವನದ ಪ್ರಾರಂಭದಿಂದಲೂ ಆ ಬಗ್ಗೆ ಚಿಂತನ ಮಂಥನ ನಡೆಸುತ್ತಿದ್ದರೆಂಬುದು ಅವರ ಸಾಹಿತ್ಯ ಕೃತಿಗಳಲ್ಲಿ ಭಾಷಣ ಸಂಭಾಷಣೆಗಳಲ್ಲಿ ಮೊಗದೋರುತ್ತಿದ್ದ ಸೂಚನೆಗಳಲ್ಲಿ ಆಲೋಚನಾ ಕಿರಣಗಳಲ್ಲಿ ಭಾವಲಹರಿಗಳಲ್ಲಿ ವ್ಯಕ್ತವಾಗುತ್ತದೆ.

ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ
    ಮತಿಯಿಂದ ದುಡಿಯಿರೈಲೋಕ ಹಿತಕೆ
ಆ ಮತದ ಈ ಮತದ ಹಳೆ ಮತದ ಸಹವಾಸ
    ಸಾಕಿನ್ನು ಸೇರಿರೈ ಮನುಜಮತಕೆ
ಓಬನ್ನಿ, ಸೋದರರೆ, ವಿಶ್ವಪಥಕೆ ?

---

೧. ಅದೇ ಪು.
೨. ವಿಶ್ವಮಾನವ ಸಂದೇಶದ ತಾತ್ಪರ್ಯವನ್ನು ಪೂರ್ಣವಾಗಿ ಅರಿಯಬೇಕೆನ್ನುವವರು ಇದೇ ಲೇಖಕರ ಕುವೆಂಪು ವಿಶ್ವಮಾನವ ಸಂದೇಶವನ್ನೋದಬಹುದು.
೩. ಶತಮಾನ ಸಂಧ್ಯೆ, ಅಗ್ನಿಹಂಸ, ಪು. ೮೭.

ಹಿಂದಿನ ಶತಮಾನದ ಮೂರನೆಯ ದಶಕದಲ್ಲಿಯೇ ಕುವೆಂಪು ರಚಿಸಿದ ಕವಿತೆಯ ಭಾಗವಿದು. ಅಲ್ಲಿಂದೀಚೆಗೆ ಪಾದ್ರಿಯ ನೋಂಪಿಯೆಂಬಂತೆ ಆ ಸಂದೇಶವನ್ನು ಹೋದೆಡೆಯಲ್ಲೆಲ್ಲ ಸಾರುತ್ತ, ಅದರ ಕಲ್ಪನೆಯನ್ನು ವಿಸ್ತರಿಸುತ್ತಿದ್ದಾರೆ. ವಿಶ್ವಪ್ರೇಮ ಈ ಸಂದೇಶದ ಮೂಲ. ವಿಶ್ವಪ್ರೇಮದ ಮೂಲಕ ವಿಶ್ವ ಪ್ರಜ್ಞೆಯೂ, ಅದರ ಜತೆಯಲ್ಲಿ ವಿಶ್ವಮೈತ್ರಿಯೂ ಅರಳಬೇಕು. ಇವುಗಳ ವಿಕಾಸಕ್ಕೆ ವಿಶ್ವವಿದ್ಯೆಯ ಬೆಂಬಲಬೇಕು. ವಿಶ್ವಮೈತ್ರಿ, ವಿಶ್ವಜ್ಞಾನ ಪಡೆದವನು ವಿಶ್ವಮಾನವನಾಗುತ್ತಾನೆ.

ಸಂಕುಚಿತ ಮನೋಭಾವನೆಯನ್ನು ತ್ಯಜಿಸಿ ಪೂರ್ಣದೃಷ್ಟಿಯನ್ನು ಸಾಧಿಸಿದಾಗ, ಸರ್ವೋದಯ ದೃಷ್ಟಿ ಮತ್ತು ಸಮನ್ವಯ ದೃಷ್ಟಿಗಳು ರಾಜಕೀಯಾರ್ಥಿಕ ಕ್ಷೇತ್ರ ಮೊದಲುಗೊಂಡು ಎಲ್ಲೆಲ್ಲು ತಾಂಡವವಾಡುವಂತಾದಾಗ ಸಮಾಜದಲ್ಲಿ ಶಾಂತಿ ನೆಲಸುತ್ತದೆಂದು ವಿದ್ಯಾರ್ಥಿಗಳಿಗೆ ಕರೆಕೊಡುತ್ತಾರೆ.

ವಿಶ್ವಮಾನವ ಸಂದೇಶದಲ್ಲಿ ಮೂರು ಪಾದಗಳಿವೆ: ಪಂಚಮಂತ್ರ, ಸಪ್ತ ಸೂತ್ರ ಮತ್ತು ಅನಿಕೇತನ ಗೀತೆ. **ಪಂಚಮಂತ್ರ**: ಮನುಜಮತ, ವಿಶ್ವಪಥ, ಸಮನ್ವಯ, ಸರ್ವೋದಯ, ಪೂರ್ಣ ದೃಷ್ಟಿ. (೧) ವಿಜ್ಞಾನಯುಗದಲ್ಲಿ ಹಳೆಯ ಮತಗಳಿಗೆ ಸ್ಥಾನವಿಲ್ಲ; ಮನುಜನಮತ ಅಥವಾ ಮಾನವಧರ್ಮವೊಂದೇ ಇಂದಿನ ಅಗತ್ಯ. (೨) ಎಲ್ಲ ಮತಗಳ ಗುರಿ ಸತ್ಯ ಸಾಕ್ಷಾತ್ಕಾರ; ಅದನ್ನು ತಲುಪುವ ಅಥವಾ ಸಾಧಿಸುವ ಮಾರ್ಗ ಎಲ್ಲ ಮತಗಳೂ ಒಪ್ಪುವಂಥದ್ದಾಗಿರಬೇಕು; ಗುರಿಯಂತೆ ದಾರಿಯೂ ಒಳ್ಳೆಯದಾಗಿರಬೇಕಷ್ಟೆ. ಅದೇ ವಿಶ್ವಪಥ. ವಿಭಿನ್ನತೆ ವೈವಿಧ್ಯತೆ ನಿಸರ್ಗ ಲಕ್ಷಣವೂ ಹೌದು, ಜೀವನವಿಧಾನವೂ ಹೌದು. ಮಾನವರ ನಡುವಣ ವಿರಸಕ್ಕೆ ಈ ವಿಭಿನ್ನತೆಯೇ ಕಾರಣ, ವಿವಿಧವರ್ಣಗಳ ಗೋವುಗಳ ಹಾಲು ಬೆಳ್ಳಗಿರುವಂತೆ, ವೈವಿಧ್ಯತೆಯ ಹಿಂದೆ ಏಕತೆಯಿದೆ; ವಿಜ್ಞಾನವೂ ಅದನ್ನೊಪ್ಪಿಕೊಳ್ಳುತ್ತದೆ; ಆ ವೈವಿಧ್ಯತೆಯಲ್ಲಿಯೂ ಸಾಮರಸ್ಯವನ್ನು ಸಾಧಿಸುವುದೇ, ವಿರೋಧಾಭಾಸ ವಿಪರ್ಯಾಸಗಳ ಹೊಂದಾಣಿಕೆಯೇ ಸಮನ್ವಯ. (೪) ಭೇದಭಾವಗಳನ್ನು ವರ್ಜಿಸಿ ಮೇಲು ಕೀಳೆನ್ನುವುದನ್ನು ತ್ಯಜಿಸಿ, ಎಲ್ಲರನ್ನೂ ಸಮಾನ ಭಾವದಿಂದ ಕಾಣುವುದೇ, ಎಲ್ಲರಿಗೂ ಸುಖವನ್ನು ಕೋರುವುದೇ ಸರ್ವೋದಯ ಸಿದ್ಧಾಂತದ ತಿರುಳು (೫) ಜಗತ್ತಿನಲ್ಲಿ ಜೀವನದಲ್ಲಿ ನಡೆಯುವ ಘಟನೆಗಳ ಪೂರ್ವ ಸೂಚನೆ ಮನುಷ್ಯನಿಗಿರುವುದಿಲ್ಲ; ಅವುಗಳನ್ನು ನಿಯಂತ್ರಿಸುವ ಶಕ್ತಿಯೂ ಅವನಿಗಿಲ್ಲ. ಶಬರಿಯ ಜೀವನದಲ್ಲಿ ಕಂಡಂತೆ ಅನೇಕ ವೇಳೆ ಸುಖವೂ ಕ್ಲೇಶರೂಪಿಯಾಗಿ ಪ್ರತ್ಯಕ್ಷವಾಗುವ ಸಂಭವವುಂಟು. ಅರಣ್ಯವಿಹಾರಿಯಾದ ರಾಮ ಅಥವಾ ಸತ್ಯಾಗ್ರಹಿ ಗಾಂಧೀಜಿ ಅವರ್ಣನೀಯ ಕ್ಲೇಶ ಸಂಕಟಗಳನ್ನು ಎದುರಿಸಿದ ಪರಿಣಾಮವಾಗಿ ಅವರು ಲೋಕಮಾನ್ಯರಾಗುತ್ತಾರೆ. ವಾಲ್ಮೀಕಿಯ ಪೂರ್ವಾರ್ಧದ ಜೀವನವನ್ನು ಮಾತ್ರವೇ ಲಕ್ಷಿಸಿದ್ದಾದರೆ, ಅವನು ತಿರಸ್ಕಾರಕ್ಕೆ ಪಾತ್ರನಾಗುತ್ತಾನೆ. ಪೂರ್ಣ ದೃಷ್ಟಿಯಿಂದ ನೋಡಿದಾಗ ಆ ವ್ಯಕ್ತಿಗಳ ಬದುಕಿನ ಮಹತ್ವ ಅಭಿವ್ಯಕ್ತವಾಗುತ್ತದೆ; ಅವರ ಜೀವನದ ಅಂಧಕಾರವೂ ಪೂಜನೀಯವಾಗುತ್ತದೆ.

**ಸಪ್ತ ಸೂತ್ರ**: (೧) ಮನುಷ್ಯ ಜಾತಿ ತಾನೊಂದೆ ವಲಂ ಎಂಬುದನ್ನು ನಿರುಪಾಧಿಕವಾಗಿ ಸ್ವೀಕರಿಸಬೇಕು, ಸ್ವೀಕರಿಸಿದಾಗ ಜಾತೀಯ, ಮತೀಯ, ಜಾನಾಂಗಿಕ, ಭೌಗೋಳಿಕ ಭೇದಗಳು ಸಂಪೂರ್ಣವಾಗಿ ಅಳಿಸಿಹೋಗುತ್ತವೆ. ಆಗ ಭ್ರಾತೃತ್ವ ನೆಲೆಗೊಂಡು, ಮಾನವ ಮಾನವನಂತೆ ಬಾಳುವಂತಾಗುತ್ತದೆ. ೨) ವರ್ಣಾಶ್ರಮ ಧರ್ಮವನ್ನು ತಿದ್ದುವುದಲ್ಲ; ಅದನ್ನು ಸಂಪೂರ್ಣವಾಗಿ ತೊಲಗಿಸಬೇಕು. ಆಗ ಮಾತ್ರ ಸಮಾಜದಲ್ಲಿ ಸಮಾನತೆ ದೃಢವಾಗುತ್ತದೆ. ೩) ಎಲ್ಲ ದೇಶಗಳಲ್ಲಿ ಮತ್ತು ಎಲ್ಲ ಮತಗಳಲ್ಲಿರುವ ಜಾತಿ ಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ, ವಿನಾಶಗೊಳಿಸಬೇಕು. ೪) ಮತ ತೊಲಗಿ, ಅಧ್ಯಾತ್ಮ ಮಾತ್ರ ವೈಜ್ಞಾನಿಕ ತತ್ವವಾಗಿ ಮಾನ್ಯತೆ ಪಡೆಯಬೇಕು. ಮತ ಅಧ್ಯಾತ್ಮದ ಕಡೆಗೆ ವಾಲಿದಾಗ ಮತೀಯ ಕಲಹಗಳು ಕೊನೆಗಾಣುತ್ತವೆ. ೫) ಮತ ಮನುಜ ಮತವಾಗಬೇಕು, ಪಥ ವಿಶ್ವಪಥವಾಗಬೇಕು; ಮನುಷ್ಯ ವಿಶ್ವಮಾನವನಾಗಬೇಕು. ೬) ಮತ ಗುಂಪು ಕಟ್ಟುವ ವಿಷಯವಾಗಬಾರದು. ಯಾರೂ ಯಾವ ಒಂದು ಮತಕ್ಕೂ ಸೇರದೆ, ಪ್ರತಿಯೊಬ್ಬನೂ ತಾನು ಕಂಡುಕೊಳ್ಳುವ 'ತನ್ನ ಮತಕ್ಕೆ' ಮಾತ್ರ ಸೇರಬೇಕು. ಅದೇ ಮನುಜಮತ ೭) ಯಾವ ಒಂದು ಗ್ರಂಥವೂ ಏಕೈಕ ಪರಮಪೂಜ್ಯ ಧರ್ಮಗ್ರಂಥವಾಗಬಾರದು. ಮತ ಮತಗಳ ನಡುವೆ ಕಚ್ಚಾಟ ಹೋರಾಟಗಳನ್ನು ತಂದಿಕ್ಕಿದ್ದೇ ಈ ಪವಿತ್ರ ಗ್ರಂಥಗಳು.

**ಅನಿಕೇತನವೆಂಬ ವಿಶ್ವಮಾನವ ಗೀತೆ**: 'ಓ ನನ್ನ ಚೇತನ, ಆಗು ನೀ ಅನಿಕೇತನ' ಎಂಬ ಪಂಕ್ತಿಗಳಿಂದ ಅದು ಆರಂಭವಾಗುತ್ತದೆ. ಅದರಲ್ಲಿ ನಾಲ್ಕು ಪದ್ಯಗಳಿವೆ. ಅದರ ಸಾರಾಂಶವನ್ನು ಮಾತ್ರ ಇಲ್ಲಿಕೊಡಲಾಗಿದೆ. (ಪದ್ಯ ೧): ವಿಶ್ವಮಾನದ ಸಂದೇಶದ ತಿರುಳು ಅನಿಕೇತನ. ಮನೆಯಿಲ್ಲದವನು ಕೊನೆಯಿಲ್ಲದವನು ಅನಿಕೇತನ ಸ್ಥಿತಪ್ರಜ್ಞ, ಅವನು ಕೃಷ್ಣನಿಗೆ ಪ್ರಿಯನಾದವನೆಂದು ಗೀತೆ ಹೇಳುತ್ತದೆ. ಮನುಷ್ಯ ಚೇತನ ಅನಾದಿ, ಅನಂತ, ಸರ್ವತಂತ್ರ ಸ್ವತಂತ್ರ. ಮಗು ಹುಟ್ಟಿದಾಗ ವಿಶ್ವಮಾನವನಾದರೂ, ಬೆಳೆಯುವಾಗ ದೇಶಭಾಷೆ ಭೂಗೋಳ ಮತ ಜನಾಂಗ ವರ್ಣ ಇತ್ಯಾದಿ ಉಪಾಧಿಗಳಿಂದ ಬದ್ಧಗೊಂಡು ಅಲ್ಪಮಾನವನಾಗುತ್ತಾನೆ. ಕೋಟ್ಯಂತರ ನಾಮರೂಪಗಳಿದ್ದರೂ ಚೇತನ ಅವುಗಳಿಗಿಂತ ಅತೀತ; ಅವುಗಳ ಒಳಗೂ ಇದೆ. ಗಾಳಿ ಬೆಳಕುಗಳಂತೆ ಅದು ಸ್ವತಂತ್ರ. ಭಾವದ ಬೆಳಗು ಅಂತರಂಗವನ್ನು ಭೇದಿಸಿದಾಗ ಈ ನಿಜ ಸ್ಪಷ್ಟವಾಗುತ್ತದೆ. ಆಗ ಅದು ಅನೇಕ ಬಂಧನಗಳಿಂದ ಪಾರಾಗಿ ಅನಂತವಾಗುತ್ತದೆ (ಪದ್ಯ೨)

ನೂರಾರು ಮತಗಳಲ್ಲಿ ಹಂಚಿಹೋಗಿರುವ ಇಂದಿನ ಜಗತ್ತಿನ ಜನ ಮನುಷ್ಯತ್ವವನ್ನೆ ಮರೆತಿದ್ದಾರೆ. ಜನಮನವನ್ನು ಕೂಡಿಸಿ ಬಾಳಿಸಬೇಕಾದ ಮತ ಅದನ್ನು ಛಿದ್ರಗೊಳಿಸುವ ಸಾಧನವಾಗಿದೆ. ಪ್ರತಿಯೊಂದು ಮತದಲ್ಲಿಯೂ ವಿಧಿ ನಿಷೇಧಗಳೆಂಬ ಹೊಟ್ಟು ಆತ್ಮಸಸ್ಯ ಮರೆಮಾಡಿದೆ. ಹೊಟ್ಟನ್ನು ತೂರಿದಾಗ ಆತ್ಮದರ್ಶನವಾಗುತ್ತದೆ. ಆದ್ದರಿಂದಲೇ ಮತ ಮತಗಳ ನಡುವೆ ದ್ವೇಷ, ಮಾತ್ಸರ್ಯ, ಕಲಹ ಯಾವಾಗಲೂ ಇದ್ದೇ ಇರುತ್ತವೆ. ಸತ್ಯಶೋಧನೆಯೆ ಗುರಿಯಾದ ತತ್ತ್ವಶಾಸ್ತ್ರಗಳಿಗೂ ಒಂದು ಮಿತಿಯಿದೆ. ಕಾಲಾನುಗುಣವಾಗಿ, ಹೊಸ ಪರಿಸರಕ್ಕೆ ತಕ್ಕಂತೆ ತತ್ತ್ವಶಾಸ್ತ್ರ ಬೆಳೆಯುತ್ತದೆ. ಪರಮ ಸತ್ಯಕ್ಕೆ ಕೊನೆಯಿಲ್ಲ. ಅದು ನಿರ್ದಿಂಗತವಾದದ್ದು. ತತ್ತ್ವಶಾಸ್ತ್ರಗಳನ್ನು ಮೀರಿ ಬೆಳೆದ ಚೇತನ ಮಾತ್ರ ಅನಂತವಾಗಿ ನಿರ್ದಿಗಂತವಾಗಿ ವಿಕಾಸ ಹೊಂದಲು ಸಾಧ್ಯವಾಗುತ್ತದೆ. ವಿಶ್ವಮಾನವ ಸದಾ ಸತ್ಯಾನ್ವೇಷಕ. (ಪದ್ಯ ೩): ಜಾತಿಮತ ಜನಾಂಗಗಳ ಮನೆಯನ್ನು ಕಟ್ಟಿಕೊಂಡು, ಅದೇ ಕೊನೆಯೆಂದು ತಿಳಿದಿದ್ದರೆ ಚೇತನ ಅಲ್ಪಮಾತ್ರವಾಗಿ ಉಳಿಯುತ್ತದೆ. ಸತ್ಯದ ನಿರಂತರ ಅನ್ವೇಷಣೆಯೆ ಆತ್ಮಯಾತ್ರೆಯ, ಮಾನವ ಜೀವನದ ಗುರಿ. ಅನಂತ ಯಾತ್ರಿಯಾದ, ಯಾವ ಬಂಧನವೂ ಇಲ್ಲದ ಆತ್ಮ, ಜಾತಿ, ಮತ, ಗೋತ್ರ, ಜನಾಂಗ, ವರ್ಣಗಳನ್ನು ದಾಟಿ, ವಿಶ್ವವನ್ನು ವ್ಯಾಪಿಸಿಕೊಳ್ಳುತ್ತದೆ. ಅದು ಲೌಕಿಕ ಶಾರೀರಕ ಉಪಾಧಿಗಳಿಂದ ಮುಕ್ತಗೊಂಡಾಗ, ಪರಮ ಸತ್ಯದ ನೆಲೆ ಗೋಚರವಾಗುತ್ತದೆ. ಅದು ಒಂದೆಡೆ ನಿಲ್ಲುವುದಿಲ್ಲ. ವಿಶ್ವಮಾನವನಿಗಿದೇ ಆದರ್ಶ. (ಪದ್ಯ ೪): ಸರ್ವಸಮರೂಪದ ವಸ್ತುಗಳನ್ನು ತಯಾರು ಮಾಡುವ ಕಾರ್ಖಾನೆಗಳಾಗಿವೆ. ಸಂಪ್ರದಾಯದ ಮತಗಳು. ಪ್ರತಿಯೊಬ್ಬ ಮನುಷ್ಯನ ಹೃದಯ ವಿಶಿಷ್ಟ ಚೈತನ್ಯದ ಚಿಲುಮೆಯಾಗಿದೆ. ಆದ್ದರಿಂದ ಪ್ರತಿಯೊಬ್ಬನೂ ತನ್ನದೇ ಆದ ವಿಶ್ವಪಥಾನುಗಾಮಿಯಾದ ಧರ್ಮವನ್ನನುಸರಿಸಬೇಕು. ಅದೇ ಮನುಜಮತ. ಅನಂತತೆಯ ಅನುಭಾವದ ಫಲ ಬ್ರಹ್ಮಾನಂದ. ಪ್ರತಿಯೊಂದು ಜೀವಿಯ ಗುರಿ ಅದು. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ವಿಶ್ವಮಾನವ ಅಥವಾ ಅನಂತಸ್ವರೂಪಿಯಾದ ಚೇತನ ಅಡಗಿಕೊಂಡಿದ್ದಾನೆ. ಅದರ ಅನುಭವ ವಾದಾಗಲೇ ಅವನು ಅನಂತತೆಯಲ್ಲಿ ಒಂದಾಗುತ್ತಾನೆ.

'ಋತ ಚಿನ್ಮಯೀ ಜಗನ್ಮಾತೆ' ಎಂಬ ಪದ್ಯಮಾಲಿಕೆಯಲ್ಲಿ ವಿಶ್ವಚೇತನದ ದಾರ್ಶನಿಕ ವರ್ಣನೆಯಿದೆ. 'ಶ್ರೀರಾಮಯಣ ದರ್ಶನಂ' ಮಹಾಕಾವ್ಯವಂತು ವಿಶ್ವಮಾನವ ಸಂದೇಶವನ್ನು ಪ್ರತಿಬಿಂಬಿಸುವ ದಾರ್ಶನಿಕ ದರ್ಪಣವಾಗಿದೆ. ಕುವೆಂಪು ಅವರ ಪರಿಪಕ್ವ ಜೀವನಾನುಭವದ, ಉಜ್ವಲ ಕಲ್ಪನಾ ಪ್ರತಿಭೆಯ, ಸುದೀರ್ಘ ತಪಸ್ಸಿನ, ಮಾನವತಾ ಪ್ರೇಮದ, ಲೋಕಕಲ್ಯಾಣಾಕಾಂಕ್ಷೆಯ ಪರಿಣತ ಫಲ ಈ ವಿಶ್ವಮಾನವ ಸಂದೇಶ. ಜಗತ್ತಿನ ಶಾಂತಿಗೆ, ಸಮಾಜದ ಕ್ಷೇಮಕ್ಕೆ, ವೈಯಕ್ತಿಕ ಜೀವನದ ಮಡಿತನಕ್ಕೆ ಗೀತೋಪನಿಷತ್ತು ಬೈಬಲ್ ಕುರಾನ್‌ಗಳ ಸಾರವತ್ತಾದ ದಿವ್ಯಶಕ್ತಿಮಾತ್ರೆಯಂತಿರುವ ಈ ಸಂದೇಶದ ಆಚರಣೆ ಅಪೇಕ್ಷಣೀಯ.

ಕುವೆಂಪು ಅವರ ಪ್ರಕಾರ ಸಮನ್ವಯ, ಸರ್ವೋದಯ, ಪೂರ್ಣದೃಷ್ಟಿ ಈ ಮೂರು ಮಹಾತತ್ತ್ವಗಳು ಜಗತ್ತಿನ ಮುಂದಿನ ಬಾಳಿನ ಮೂಲಮಂತ್ರಗಳಾಗಬೇಕಾಗಿದೆ. ಆ ಬಾಳನ್ನು ನಿರೂಪಿಸುವುದರಲ್ಲಿಯೂ ರೂಪಿಸುವುದರಲ್ಲಿಯೂ, ಸ್ಥಾಪಿಸುವುದರಲ್ಲಿಯೂ, ಆಸಕ್ತ ವಾಗುವ ಮುಂದಿನ ಸಾಹಿತ್ಯಕ್ಕೂ ಆ ಮೂಲಮಂತ್ರ ತ್ರಯಗಳೆ ದರ್ಶನವಾಗಿ ಮಾರ್ಗದರ್ಶಕವಾಗುತ್ತವೆ. ಲೋಕಹಿತದ ದೃಷ್ಟಿಯಿಂದ ಮುಂದಿನ ಸಾಹಿತ್ಯದಲ್ಲಿ ಆ ಮಂತ್ರಪಂಚಕಗಳ, ಸಪ್ತ ಸೂತ್ರಗಳ ದರ್ಶನ ಅಭಿವ್ಯಕ್ತಿಗೊಳ್ಳಬೇಕು. ಕುವೆಂಪು ಅವರ ಜೀವನದ ಸಕಲ ವ್ಯವಹಾರಗಳಲ್ಲಿ ದಾರ್ಶನಿಕತೆ ಹಾಸುಹೊಕ್ಕಾಗಿರುವಂತೆ, ಅವರ ರಾಜಕೀಯ ಸಾಮಾಜಿಕ ಚಿಂತನೆಯಲ್ಲಿಯೂ ಅದರ ಜೀವಾತು ಎಂಬಂತೆ ಅದು ವ್ಯಾಪಕವಾಗಿ ಲಹರಿಸುತ್ತದೆ. ಇದು ಅನ್ಯತ್ರ ಅಲಭ್ಯವಾದ ಅವರ ರಾಜಕೀಯ ಚಿಂತನೆಯ ಅಪೂರ್ವ ಅಪ್ರತಿಮ ವೈಶಿಷ್ಟ್ಯ. ಕುವೆಂಪು ಅವರ ಮಹಾಕಾದಂಬರಿ, ಮಹಾಕಾವ್ಯ, ನಾಟಕ ಹಾಗೂ ಪ್ರಬಂಧಗಳಿಂದ ಇನ್ನೂ ಅನೇಕ ರಾಜಕೀಯ ವಿಚಾರಗಳನ್ನು ಹೆಕ್ಕಿ ತೆಗೆಯಬಹುದು. ಸ್ಥಳಾಭಾವದಿಂದಾಗಿ ಹಾಗೂ ಸಮತೋಲನ ದೃಷ್ಟಿಯೇ ಕಾರಣವಾಗಿ ಸದ್ಯಕ್ಕೆ ಈ ವಿಚಾರಕ್ಕೆ ಪೂರ್ಣ ವಿರಾಮ ರೇಖೆ ಎಳೆಯಲಾಗಿದೆ.

ಅವರ ಕೃತಿಗಳಿಂದ ಆಯ್ದ ಕೆಲವು ಸುಭಾಷಿತಗಳು :

- ಕಷ್ಟವಿದ್ದರೂ, ಸರಿಯೆ, ಇರಲಿ ಸ್ವಾತಂತ್ರ್ಯ ಸುಖವಿದ್ದರೂ ಹೀನವೈ ಪಾರತಂತ್ರ್ಯ (ಹಾಳೂರು ೫)
- ಜನ್ಮಭೂಮಿಯ ಮೇಲ್ಮೆಗಾಗಿ ಮಾಡಿದ ಕರ್ಮವಾವುದೂ ದುಷ್ಕೃತ್ಯವೆಂದು ಪರಿಗಣಿತವಾಗದು (ರಕ್ತಾಕ್ಷಿ ೧೦೦)
- ದೇಶ ನನ್ನದು, ನನ್ನದು ನಾಡು ಎನ್ನದ ಮಾನವನೆದೆ ಸುಡುಗಾಡು (ಕಥನ ಕವನಗಳು ೬೦)
- ಧ್ವಜವೇ ಸ್ವಾತಂತ್ರ್ಯದ ಶಿವಮೂರ್ತಿ ಧ್ವಜ ರಕ್ಷಣೆಯೇ ದೇಶಕೆ ಕೀರ್ತಿ (ಪ್ರೇತಕ್ಯೂ ೮)
- ನಿಜವಾದ ಪ್ರಜಾಸತ್ತೆ ಎಂದರೆ ಅನಿರ್ಬಾಧಿತ ಇಚ್ಛಾ ಸ್ವಾತಂತ್ರ್ಯದಿಂದ ಪ್ರಜೆಗಳು ಆಳುವ ಪ್ರಾಮಾಣಿಕ ವ್ಯಕ್ತಿಗಳಿಂದ ಸರ್ವರ ಅಭ್ಯುದಯಕ್ಕಾಗಿ ನಡೆಯುವ ರಾಜ್ಯಭಾರ (ವಿಚಾರ ಕ್ರಾಂತಿಗೆ ಆಹ್ವಾನ ೫)

- ಬಹು ಭಾಷೆ, ಬಹುಮತ, ಅನೇಕಾಚಾರ ಮೊದಲಾದ ಅಸಂಖ್ಯ ಭೇದಗಳಿಂದ ಕೂಡಿರುವ ನಮ್ಮ ರಾಷ್ಟ್ರ ಜೀವನ ತನ್ನ ಏಕತ್ವವನ್ನು ರಕ್ಷಿಸಿಕೊಂಡು ಹೋಗಬೇಕಾದರೆ ವಿಜ್ಞಾನದೃಷ್ಟಿಯ ಮತ್ತು ವಿಚಾರ ಬುದ್ಧಿಯ ಆಧಾರದ ಮೇಲೆ ನಿಲ್ಲುವ ಮನುಜಮತಕ್ಕೂ ಮತ್ತು ವಿಶ್ವಪಥಕ್ಕೂ ನಮ್ಮ ಜನರನ್ನು ತಿರುಗಿಸುವುದು ಅತ್ಯಂತ ಆವಶ್ಯಕ (ಮನುಜಮತ ವಿಶ್ವಪಥ ೨೩)
- ಸರ್ವಾಧಿಕಾರ ಮಾರ್ಗದಲ್ಲಿ ಸತ್‌ಫಲವಾಗಲಿ ದುಷ್ಫಲವಾಗಲಿ ಶೀಘ್ರ ಸಿದ್ಧವಾಗುವಂತೆ ಪ್ರಜಾಸತ್ತೆಯ ವಿಧಾನಮಾರ್ಗದಲ್ಲಿ ಆಗಲು ಸಾಧ್ಯವಿಲ್ಲ (ಅದೇ, ೬)
- ಅಂಗಾಂಗಗಳ ಕ್ಷೇಮ ಅಂಗಿಯ ಕ್ಷೇಮದಿಂದ ಅಭಿನ್ನ. ಅಂಗಿಯ ಕ್ಷೇಮದಿಂದಲೆ ಅಂಗಾಂಗಗಳ ಕ್ಷೇಮವೂ ಸಿದ್ಧವಾಗುತ್ತದೆ (ಷಷ್ಟಿ ನಮನ ೮)
- ಕನ್ನಡಕ್ಕಾಗಿ ಕೈಯೆತ್ತು ನಿನ್ನ ಕೈ ಕಲ್ಪವೃಕ್ಷವಾಗುತ್ತದೆ; ಕನ್ನಡಕ್ಕಾಗಿ ಕೊರಳೆತ್ತು ಅಲ್ಲಿ ಪಾಂಚಜನ್ಯ ಮೊಳಗುತ್ತದೆ; ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಸಾಕು ಅದು ಗೋವರ್ಧನ ಗಿರಿಧಾರಿಯಾಗುತ್ತದೆ (ಮನುಜಮತ, ವಿಶ್ವಪಥ ೭)
- ಸರಕಾರಗಳಾಗಲಿ, ವಿದ್ಯಾಭ್ಯಾಸ ಇಲಾಖೆಗಳಾಗಲಿ, ವಿಶ್ವವಿದ್ಯಾನಿಲಯಗಳಾಗಲಿ ಇತರ ಸಾಂಸ್ಕೃತಿಕ ಸಂಸ್ಥೆಗಳಾಗಲಿ, ಕಡೆಗೆ ವ್ಯಾಪಾರ ವಾಣಿಜ್ಯಾದಿ ಸಂಸ್ಥೆಗಳಾಗಲಿ ದೇಶಭಾಷೆಗೆ ಮೊತ್ತ ಮೊದಲನೆಯ ಸ್ಥಾನ ಕೊಡಬೇಕು. ಹಾಗೆ ಮಾಡದಿದ್ದರೆ ಪ್ರಜಾಪ್ರಭುತ್ವದ ಬುಡದ ಬೇರಿಗೆ ಬೆನ್ನೀರೆರೆದಂತಾಗುತ್ತದೆ (ಷಷ್ಟಿನಮನ ೧೪)
- ಸೋಮಾರಿಗಳಿಗೆ, ಸುಖಿಗಳಿಗೆ ರಸಿಕರಿಗಲ್ತೆ ಸಾಮ್ರಾಜ್ಯವೆಂಬುದದು ಕಾಮಧೇನು ? (ಕೋಗಿಲೆ ಮತ್ತು ಸೋವಿಯಟ್ ರಷ್ಯಾ ೧೩)

## ಹಿಂದೂ ರಾಷ್ಟ್ರೀಯವಾದಿಗಳು

ಸಾವಿರಾರು ವರ್ಷಗಳಿಂದ ಹರಪ್ಪನ್ ವೈದಿಕ, ಹಿಂದೂ, ಜೈನ, ಬೌದ್ಧ, ಲಿಂಗಾಯತ, ಸಿಖ್, ಮತಗಳ ಉಗಮ ಕೇಂದ್ರವಾಗಿರುವುದಲ್ಲದೆ, ಅನೇಕ ವಿದೇಶೀಯ ಮತಗಳ ತೊಟ್ಟಿಲಾಗಿ, ಪ್ರಯೋಗಾಲಯವಾಗಿ, ರಣರಂಗವೂ ಆಗಿ, ಮತೀಯ ಸಿದ್ಧಾಂತಗಳ ಕುದಿಹಂಡೆಯಾಗಿ, ಮತಗಳು ಕೊಳೆತು ನಾರುವ ತಿಪ್ಪೆ ತೊಟ್ಟಿ ಹೊಂಡಗಳಾಗದಂತೆ, ಚಲನಶೀಲ ವೈವಿಧ್ಯಮಯ ನೂತನ ವಿನೂತನ ಮತಗಳಾಗುವಂಥ ಸನ್ನಿವೇಶ ವಾತಾವರಣ ಸಂದರ್ಭಗಳನ್ನು ಸೃಷ್ಟಿಸಿದ ಕೀರ್ತಿ ಭಾರತಕ್ಕೆ ಸಲ್ಲಬೇಕಾಗಿದೆ.

ಅವರವರ ದರ್ಶನಕೆ
ಅವರವರ ದೇಶದಲಿ
ಅವರವರಿಗೆಲ್ಲ ಗುರು ನೀನೊಬ್ಬನೇ
ಅವರವರ ಭಾವಕ್ಕೆ
ಅವರವರ ಅರ್ಚನೆಗೆ
ಅವರವರಿಗೆಲ್ಲ ದೇವ ನೀನೊಬ್ಬನೇ

ಇಂಥದೊಂದು ದಾರ್ಶನಿಕ ಪ್ರತಿಭೆ ಬಹುಮತೀಯ ಸಂಸ್ಕೃತಿಯ ಇಂಡಿಯಾದಲ್ಲಲ್ಲದೆ ಬೇರೆಲ್ಲಿ ಮೂಡಲು ಸಾಧ್ಯ? ನಿಷ್ಕಲ್ಮಷ, ನಿರ್ವಿಕಾರ, ನಿಷ್ಪಕ್ಷಪಾತ, ವೈಚಾರಿಕ, ವೈಜ್ಞಾನಿಕ ದೃಷ್ಟಿಯಿಂದ ಇಂಡಿಯಾದ ಪ್ರಸ್ತುತ ಮತೀಯ ಪರಿಸ್ಥಿತಿಯನ್ನು ಗ್ರಹಿಸಿ, ವಿಮರ್ಶಿಸಿ, ಒಂದು ಇತ್ಯರ್ಥಕ್ಕೆ ಬರುವುದಾದರೆ, ಹಿಂದೂಮತವನ್ನು ಭಾರತೀಯ ಮತವೆಂದೋ, ಭಾರತೀಯ ಸಂಸ್ಕೃತಿಯೆಂದೋ ಕರೆಯಬಹುದಾಗಿದೆ. ಹಾಗೆ ಕರೆಯುವುದರಿಂದ ರಾಜಕೀಯಾರ್ಥಿಕ ಸಾಮಾಜಿಕ ಅನುಕೂಲಗಳು ಅಪಾರವಾಗಿ ಒದಗುತ್ತವೆಂಬುದರಲ್ಲಿ ಅನುಮಾನವಿಲ್ಲ. ಬೇಕಾದರೆ ಪರ್ಯಾಯವಾಗಿ 'ಮನುಜನುತ' (ಮಾನವಧರ್ಮ) ವೆಂದಾದರೂ ಕರೆಯಬಹುದು.

ಕ್ರಿಸ್ತಶಕೆಗೆ ಐದಾರು ಶತಮಾನಗಳ ಹಿಂದೆಯೇ ಚಾತುರ್ವರ್ಣ್ಯ ಸಿದ್ಧಾಂತವನ್ನು ಜಾರಿಗೊಳಿಸಿ, ಶೇಕಡ ೯೮ ಮಂದಿಯನ್ನು, ಸ್ತ್ರೀಯರನ್ನು ಅಜ್ಞಾನಾಂಧಕಾರಕ್ಕೆ ನೂಕಿ ಅವರನ್ನು ಶೋಷಿಸಲು ಪ್ರಯತ್ನಿಸಿದ ವೈದಿಕಮತದ ವಿರುದ್ಧವಾಗಿ ಜೈನ ಬೌದ್ಧ ಧರ್ಮಗಳು ಬಂಡೆದ್ದಾಗ, ವೈದಿಕರು ಅದನ್ನು ಗಂಭೀರವಾಗಿ ಗಣಿಸದಿದ್ದದ್ದು ದುರ್ದೈವ. ಗಣಿಸಿದರು, ನಿಜ. ಹೇಗೆ? ಅವುಗಳನ್ನು ತುಳಿಯುವ ಮೂಲಕ ಮಾತ್ರವೇ ಹೊರತು ವೈದಿಕ ಧರ್ಮವನ್ನು ಪರಿಷ್ಕರಿಸುವ ಮೂಲಕವಲ್ಲ. ಕ್ರಿಸ್ತ ಶಕೆಯ ಆದಿಯಲ್ಲಿಯೇ ಸಂತ ಥಾಮಸ್, ಎಂಟನೆಯ ಶತಮಾನದಲ್ಲಿ ಅರಬರು ಇಂಡಿಯಾ ನೆಲದ ಮೇಲೆ ಕಾಲಿಡುತ್ತಿದ್ದಂತೆ ಪರಿತ್ಯಕ್ತ ಮಂದಿ ತುಂಬಿರುವ ದೇಶ ತಮ್ಮ ಮತಾಂತರ ಕಾರ್ಯಕ್ಕೆ ಫಲವತ್ತಾಗಿದೆಯೆಂದು ತಿಳಿಯುತ್ತಿದ್ದಂತೆ ಹಿಂದೂಮತಕ್ಕೆ ಸವಾಲಿನ ಮೇಲೆ ಸವಾಲುಗಳ ಧಾಳಿಯೆರಗಿ ಅದನ್ನು ಅಪಾಯದ

ಅಂಚಿಗೆ ತಳ್ಳುತ್ತವೆ. ವೀರಶೈವ ಮತ್ತು ಸಿಖ್ ಪಂಥಗಳು ಹುಟ್ಟಿಕೊಂಡಾಗಲಾದರೂ ಪರಿಸ್ಥಿತಿಯ ಬಿಕ್ಕಟ್ಟನ್ನು ಅರ್ಥಮಾಡಿಕೊಳ್ಳುವ ದೂರದೃಷ್ಟಿ ಆ ವರ್ಣಾಂಧರಲ್ಲಿ, ಮೂಲಭೂತವಾದಿಗಳಲ್ಲಿ ಇಲ್ಲವಾಯಿತು. ಶಂಕರ, ರಾಮಾನುಜ, ಮಧ್ವ, ಬಸವೇಶ್ವರ, ರಾಮಾನಂದ, ಕಬೀರ, ತುಕಾರಾಂ, ತುಲಸಿದಾಸ, ಚೈತನ್ಯ, ಶ್ರೀರಾಮಕೃಷ್ಣ ಪರಮಹಂಸ, ವಿವೇಕಾನಂದ, ನಾರಾಯಣ ಗುರು ಮೊದಲಾದವರು, ಗಂಗ, ಗುಪ್ತ, ಚಾಲುಕ್ಯ, ಚೋಳ, ರಾಷ್ಟ್ರಕೂಟ, ವಿಜಯನಗರಾದಿ ಸಾಮ್ರಾಜ್ಯಗಳು ಕುಸಿಯುತ್ತಿದ್ದ ಹಿಂದೂ ಮತಕ್ಕೆ ತಂತಮ್ಮ ಶಕ್ತಿ ಸಾಮರ್ಥ್ಯವನ್ನು ಧಾರೆಯೆರೆದು, ಅದನ್ನು ಎತ್ತಿ ನಿಲ್ಲಿಸಲು ಪ್ರಯತ್ನಪಟ್ಟಿದ್ದುಂಟು. ಆದರೆ ಈ ಮತಾಂತರವನ್ನು ತಡೆಗಟ್ಟುವ ನೈತಿಕ ಅಥವಾ ಅಧ್ಯಾತ್ಮಶಕ್ತಿ ಶ್ರೀ ರಾಮಕೃಷ್ಣ, ವಿವೇಕಾನಂದ ಹೊರತಾಗಿ ಅವರಲ್ಲಿ ಯಾರಿಗೂ ಇಲ್ಲವಾದದ್ದು, ವಿಧಿವಿಲಾಸವೆಂದೇ ಹೇಳಬೇಕಾಗಿದೆ. ದೇಶ ತ್ರಿಕರಣ ಶುದ್ಧಿಯಾಗಿ ಬಸವಮಾರ್ಗವನ್ನನುಸರಿಸಿದ್ದರೆ ಮತಾಂತರದಿಂದ, ವಿದೇಶೀಯ ಆಕ್ರಮಣದಿಂದ ಆಗಿರುವ ನಷ್ಟವನ್ನು ತಡೆಗಟ್ಟಬಹುದಿತ್ತು.

ಪಾಶ್ಚಾತ್ಯ ವಿದ್ಯೆಯ ಪರಿಣಾಮವಾಗಿ ಹಲಕೆಲವು ಪ್ರಬುದ್ಧ ರಾಜಕಾರಣಿಗಳ, ಸಾಹಿತಿಗಳ, ಮಠಾಧಿಪತಿಗಳ ಖಾಸಗಿ ಮತ್ತು ಸಾರ್ವಜನಿಕ ಚರ್ಚೆ ಸಮಾಲೋಚನೆಗಳ ಹಾಗೂ ಆಂತರಿಕ ಸಾಮರ್ಥ್ಯದ ಪರಿಣಾಮವಾಗಿ ಹಿಂದೂ ಸಂಸ್ಕೃತಿ ವಿದೇಶೀಯ ಸಂಸ್ಕೃತಿಗಳ ಉಗ್ರ ಧಾಳಿಯನ್ನೆದುರಿಸಲು ಸಾಧ್ಯವಾಯಿತೆಂದೇ ಹೇಳಬಹುದು. ವಿದೇಶೀಯ ಪಾದ್ರಿಗಳು ಮತ್ತು ವಿದ್ವಾಂಸರು ಸಂಸ್ಕೃತ ಹಾಗೂ ದೇಶ ಭಾಷೆಗಳಲ್ಲಿ ಅಪಾರ ಅಪೂರ್ವ ಪಾಂಡಿತ್ಯವನ್ನು ಸಂಪಾದಿಸಿ, ಇಂಗ್ಲಿಷ್ ಭಾಷೆಗೆ ಭಾಷಾಂತರಿಸಿ ವಿಮರ್ಶಿಸಿ, ಅವುಗಳಿಗೆ ಆಧುನಿಕ ರೀತಿಯ ಶಾಸ್ತ್ರೀಯ ವ್ಯಾಖ್ಯಾನವನ್ನು ಬರೆದ ನಂತರ ಹಿಂದೂ ಮತದ ಚೈತನ್ಯ ಶಕ್ತಿ ಬಾಹ್ಯ ಜನರಿಗೆ ಗೊತ್ತಾದದ್ದು ಮಾತ್ರವಲ್ಲ, ದೇಶೀಯ ರಾಜಕಾರಣಿಗಳಲ್ಲಿ ವಿದ್ವಾಂಸರಲ್ಲಿ ಹಿಂದೂಮತದ ಬಗ್ಗೆ ವಿನೂತನ ದೃಷ್ಟಿ, ಧೋರಣೆ, ದೀಪ್ತಿ, ದಿಕ್ಸೂಚಿಗಳು, ವಿಚಾರ, ವಿಮೋಚನ, ಪ್ರೇರಣೆಗಳು ಸಮನಿಸಿದುವೆಂಬುದನ್ನು ಮರೆಯಲಾಗದು. ನಮ್ಮದು ಜಾತ್ಯತೀತ, ಸೆಕ್ಯುಲರ್, ಧರ್ಮಸಮನ್ವಯ, ಧರ್ಮನಿರಪೇಕ್ಷ ರಾಷ್ಟ್ರವಾಗಬೇಕೆಂಬುದು ಸಂವಿಧಾನ ಕರ್ತೃಗಳ ಉದ್ದೇಶ. ಆದರೆ, ಅನೇಕ ರಾಷ್ಟ್ರಗಳಲ್ಲಿ ಒಂದೊಂದು ಧರ್ಮ ರಾಷ್ಟ್ರ ಧರ್ಮವಾಗಿರುವಾಗ, ಇಂಡಿಯಾದಲ್ಲಿ ಅಲ್ಪ ಸಂಖ್ಯಾತರು (ಜನಾಂಗಿಕವಾಗಿ ಅವರೆಲ್ಲರೂ ಹಿಂದೂಗಳೇ) ತಂತಮ್ಮ ಹಕ್ಕುಗಳಿಗಾಗಿ ಹೊರಗಡೆಯಿಂದ ಪ್ರಚೋದನೆ ಪಡೆದು ಹೋರಾಟ ನಡೆಸುತ್ತಿರುವಾಗ, ಆತ್ಮಗೌರವವುಳ್ಳ ಕೆಲವು ನಾಯಕರು 'ಹಿಂದೂರಾಷ್ಟ್ರ'ದ ಕಲ್ಪನೆಯನ್ನು ತಲೆಯಲ್ಲಿರಿಸಿಕೊಂಡು ಗುಡುಗಾಡುತ್ತಿರುವುದು ಆಶ್ಚರ್ಯದ, ಅಸಹಜತೆಯ ವಿಷಯವೆನ್ನಬಹುದಲ್ಲವೆ? ವೇದಾಂತವೇ ಜಗತ್ತಿನ ಸಕಲಮತಗಳ ಮೂಲವೆಂದು ಕೆಲವರು ವಾದಿಸುವಾಗ, ಬಾಹ್ಯ ನಿಷ್ಠೆಯ ಕೆಲವರು ಇಲ್ಲಿ ಜೀವನವಾಹಿನಿಯೊಡನೆ ಒಂದಾಗದೆ, ಹಿಂದೂ ಮತವನ್ನೆ ಉಚ್ಚಾಟಿಸಲು ಪ್ರಯತ್ನ ನಡೆಸುವಾಗ, ಇಂಡಿಯಾ ಸಹ ಇರಾನ್ ಅರೇಬಿಯಾ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿಗಳಂತೆ ಹಿಂದೂಮತದಿಂದ ಭಿನ್ನವಾದ ಏಕಮತೀಯ ರಾಷ್ಟ್ರವಾಗಬೇಕೆಂದು ಮತ್ತೆ ಕೆಲವರು ಆಲೋಚಿಸುತ್ತಿರುವಾಗ, ಕೆಲವು ಹಿಂದೂ ನಾಯಕರು ಉದ್ವಿಗ್ನಗೊಳ್ಳುವುದನ್ನು ಸಹಾನುಭೂತಿಯಿಂದ ಅವರನ್ನೊಲಿಸಿಕೊಂಡು ದಾರಿಗೆ ತರಬೇಕಾಗುತ್ತದೆ.

ಅದೇನೇ ಇರಲಿ. ಹತ್ತೊಂಬತ್ತು-ಇಪ್ಪತ್ತನೆಯ ಶತಮಾನಗಳ ಮೇಧಾವಿಗಳೂ ಸುಸಂಸ್ಕೃತರೂ ಆದ ಕೆಲವು ಹಿಂದೂ ರಾಷ್ಟ್ರೀಯವಾದಿಗಳು, ಹಿಂದೂ ಸಂಸ್ಕೃತಿ ನಿಷ್ಠರು ಮತ್ತು ಮಠಾಧಿಪತಿಗಳು ವಿಶ್ವ ಹಿಂದೂ ಪರಿಷತ್, ಹಿಂದೂ ಮಹಾಸಭೆ, ಜನಸಂಘ, ಆರೆಸ್ಸೆಸ್, ಭಜರಂಗ, ಭಾಜಪ ಮೊದಲಾದ ಸಂಘಟನೆಗಳ ಮೂಲಕ ಸೆಕ್ಯುಲರ್ ರಾಷ್ಟ್ರೀಯವಾದಿಗಳಿಗೆ ಸವಾಲೆಸೆದದ್ದುಂಟು. ಅಂಥವರಲ್ಲಿ ಕಣ್ಣಿಗೆ ಎದ್ದು ಕಾಣಿಸುವವರನ್ನಿಲ್ಲಿ ಹೆಸರಿಸಲಾಗಿದೆ: ಸ್ವಾಮಿ ಶ್ರದ್ಧಾನಂದ, ಪರಮಾನಂದ, ಪಂಡಿತ ಮದನ ಮೋಹನ ಮಾಳವೀಯ, ವೀರ ಸಾವರ್ಕರ್, ಮೂಂಜೆ, ಶಾಮಪ್ರಸಾದ ಮುಖರ್ಜಿ, ಹೆಗ್ಡೆವಾರ್, ಅರವಿಂದ, ರಮಣಮಹರ್ಷಿ, ಸ್ವಾಮಿ ವಿವೇಕಾನಂದ, ಕೆ.ಸಿ. ಭಟ್ಟಚಾರ್ಯ, ದಾಸಗುಪ್ತ, ರಾಧಾಕೃಷ್ಣನ್, ಹರದಯಾಳ್, ದೀನದಯಾಳ್ ಉಪಾಧ್ಯಾಯ ಇತ್ಯಾದಿ ಇತ್ಯಾದಿ. ಜಾತ್ಯತೀತ ಪಕ್ಷಗಳಲ್ಲಿರುವ ಕೆಲವು ನಾಯಕರು ಸಹ ಹಿಂದೂ ಧರ್ಮದ ಬಗ್ಗೆ ಪಕ್ಷಪಾತವುಳ್ಳವರಾಗಿದ್ದಾರೆ. ಸಾಹಿತಿಗಳಂತು ಹಿಂದೂ ಧರ್ಮವನ್ನು ಕುರಿತು ಹಾಡಿದ್ದೇ ಹಾಡಿದ್ದು. ಆರ್ಯಸಮಾಜ, ಸನಾತನ ಧರ್ಮಪ್ರತಿನಿಧಿಗಳ ಸಭೆ, ಅಖಿಲ ಭಾರತೀಯ ಶುದ್ಧಿ ಸಭಾ ಮೊದಲಾದ ಸಂಸ್ಥೆ ಪಕ್ಷ ಪಂಥಗಳ ಮೂಲಕ ಹಿಂದೂ ಜಾಗೃತಿಯನ್ನು ಮೂಡಿಸಲು, ಅದರ ಪೂರ್ವ ವೈಭವವನ್ನು ಪುನರುಜ್ಜೀವಿಸಲು ಪ್ರಯತ್ನಿಸುತ್ತಾರೆ. ತಮಗೆ ಮತಾಂತರದಲ್ಲಿ ನಂಬಿಕೆಯಿಲ್ಲ, ತಾವು ಹಿಂದೂ, ಹಿಂದೂವಾಗಿಯೆ ಉಳಿಯುತ್ತೇನೆ ಎಂಬುದಾಗಿ ಗಾಂಧೀಜಿಯೂ ಸಾರಿದ್ದುಂಟು. ಆದರೆ ಹಿಂದೂಧರ್ಮದ ಕ್ಷೀಣತೆಗೆ, ಅದನ್ನು ಮುತ್ತಿಕೊಂಡಿರುವ ರೋಗರುಜಿನಗಳಿಗೆ ಕಾರಣವೇನು ಎಂಬುದನ್ನು ಆಳವಾಗಿ ಆಲೋಚಿಸಿ, ಅದಕ್ಕೆ ಪರಿಹಾರವನ್ನು ಹುಡುಕುವ; ಜಾತೀಯತೆ ಅಸ್ಪೃಶ್ಯತೆಯನ್ನು ನಿರ್ಮೂಲಮಾಡಿ, ವೈಜ್ಞಾನಿಕ ವಿಧಾನದ ಮೂಲಕ ಹಿಂದೂ ಧರ್ಮವನ್ನು ನವೀಕರಿಸುವ; ಅದಕ್ಕೆ ಹೊಸ ಶಕ್ತಿ ಚೈತನ್ಯಗಳನ್ನು ತುಂಬುವ ಕ್ರಾಂತಿಕಾರಕ ಕಾರ್ಯಕ್ಕೆ

ಯಾರೂ ಸಿದ್ಧವಾಗಿಲ್ಲದಿರುವುದು ಮಹಾಪರಾಧ. ಹನ್ನೆರಡನೆಯ ಶತಮಾನದಲ್ಲಿಯೇ ಶಾಸ್ತ್ರ ಪುರಾಣಾಗಮಗಳನ್ನು, ಮೌಢ್ಯ ಸಂಪ್ರದಾಯಗಳನ್ನು ತಿರಸ್ಕರಿಸಬೇಕೆಂದು ಕರೆಕೊಟ್ಟ ಬಸವಣ್ಣನವರ ಸಂದೇಶವನ್ನು ಕಾರ್ಯಗತಗೊಳಿಸುವುದೊಂದೇ ಹಿಂದೂ ಧರ್ಮದ ಉದ್ಧಾರ ಮಾರ್ಗವೆಂಬುದನ್ನು ಹಿಂದೂ ಧರ್ಮೋದ್ಧಾರದ ಕನಸುಗಾರರೆಲ್ಲರೂ ಅರಿಯಬೇಕಾಗಿದೆ. ಈ ದೇಶದಲ್ಲಿ ನಡೆಯುವ ಮತಾಂತರಕ್ಕೆ ಕಾರಣ ಪಾದ್ರಿಗಳೂ ಅಲ್ಲ, ಮೌಲ್ವಿಗಳೂ ಅಲ್ಲ, ಇಲ್ಲಿಯ ವೈದಿಕರು, ವೇದಾಂತಿಗಳು, ಆಗಮ ಪಂಡಿತರು, ಹೋಮ ಹವನ ಯಾಗಾಧ್ವರ್ಯುಗಳು, ಜ್ಯೋತಿಷಿಗಳು; ಅವರನ್ನು ಪ್ರೋತ್ಸಾಹಿಸುವ ರಾಜಕಾರಣಿಗಳೆಂಬ ಸತ್ಯವನ್ನು ನಾಯಕರು ಮತ್ತು ಸಂಪ್ರದಾಯ ಜಡರು ಗ್ರಹಿಸುವುದಾದರೆ ಹಿಂದೂ ಧರ್ಮ ಉಳಿಯುತ್ತದೆ, ಇಲ್ಲ ಕೆಲವಾರು ವರ್ಷಗಳಲ್ಲಿ ಕ್ಷಯಿಸುತ್ತದೆ. ಹಿಂದೂಗಳ ಪರಮವೈರಿಗಳು ಹಿಂದೂಗಳು ಆತಂಕವಾದಿ ಪುಂಡರು ಅಜ್ಞಾನಿ ಪಂಡಿತರೆ ಹೊರತು, ಮತ ಪ್ರಚಾರಕರಲ್ಲವೆಂಬುದನ್ನು ವಿವೇಕಿಗಳು ಅರಿಯಬೇಕಾಗಿದೆ. ಪುರೋಹಿತಶಾಹಿಯನ್ನು ಬೂಲಮೂಲವಾಗಿ ಕಿತ್ತೊಗೆದು, ದಲಿತರು ದೇವಾಲಯಗಳ ಜವಾಬ್ದಾರಿಯನ್ನು ಹೊತ್ತಾಗ ಮಾತ್ರ ಅಸ್ಪೃಶ್ಯತೆ ಅಳಿಯುತ್ತದೆ; ಅದು ಅಳಿಯದೆ ಹಿಂದೂ ಧರ್ಮಕ್ಕೆ ಉಳಿಗಾಲವಿಲ್ಲ. ಹಿಂದೂ ಮೂಲಭೂತವಾದಿಗಳು ಹಿಂದೂ ಧರ್ಮವನ್ನು ಬ್ರಹ್ಮನಾಣೆಗೂ ರಕ್ಷಿಸಲಾರರೆಂಬ ಸತ್ಯ ತಿಳಿವಳಿಕೆಯುಳ್ಳವರಿಗೆಲ್ಲರಿಗೂ ಗೊತ್ತು. ನಿರ್ಜಾತೀಯ ನಿರ್ವರ್ಣೀಯ ಹಿಂದೂ ಮತವನ್ನು ಜಗತ್ತಿನ ಯಾವ ಪ್ರಬಲತಮ ಶಕ್ತಿಯೂ ಎದುರಿಸಲಾರದೆಂಬುದನ್ನು ಮಡಿವಂತರು ಅರಿಯಬೇಕಾಗಿದೆ.

ಮುನ್ಷಿರಾಮ್ ಎಂಬ ಜನ್ಮನಾಮವುಳ್ಳ, ದೇಶ ಸೇವೆಗಾಗಿ ಕಾವಿಯನ್ನು ಧರಿಸಿದ **ಸ್ವಾಮಿ ಶ್ರದ್ಧಾನಂದರು** (೧೮೫೬-೧೯೨೬) ಪಂಜಾಬಿನ ಜಲಂಧರ್ ಜಿಲ್ಲೆಯವರು. ಅವರು ವಿದ್ಯಾಭ್ಯಾಸವನ್ನು ಮುಗಿಸಿದನಂತರ ಆರ್ಯ ಸಮಾಜವನ್ನು ಸೇರಿ, ಸಮಾಜಸೇವೆ ಮತ್ತು ಧಾರ್ಮಿಕ ಪ್ರಸಾರದಲ್ಲಿ ತೊಡಗಿರುತ್ತ, ವೈದಿಕ ಮೌಲ್ಯಗಳ ಶಿಕ್ಷಣಕ್ಕಾಗಿ ಕಾಂಗ್ರಿಯಲ್ಲಿ ಗುರುಕುಲವನ್ನು ಸ್ಥಾಪಿಸುತ್ತಾರೆ. ಕಾವಿ ಧರಿಸಿ ಸನ್ಯಾಸಿಯಾಗಿರುವ ತನಕ ಅವರು ಆ ಸಂಸ್ಥೆಯ ಪ್ರಾಂಶುಪಾಲರಾಗಿ, ಕಾರ್ಯದರ್ಶಿಗಳಾಗಿ, ಅದರ ಪ್ರಸಿದ್ಧಿಗೆ ಕಾರಣರಾಗುತ್ತಾರೆ. ಅವರು ಕಾಂಗ್ರೆಸ್ ಅಧಿವೇಶನಗಳಲ್ಲಿ ಭಾಗವಹಿಸುತ್ತಿದ್ದರಲ್ಲದೆ, ರೌಲತ್ ಕಾನೂನಿಗೆ ವಿರುದ್ಧವಾಗಿ ನಡೆದ ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುತ್ತಾರೆ. ದೆಹಲಿಯಲ್ಲಿ ಘೂರ್ಕ ಸೈನಿಕರು ನಿಶ್ಶಸ್ತ್ರ ಪ್ರದರ್ಶನಕಾರರ ಮೇಲೆ ಗುಂಡು ಹಾರಿಸಲು ತೊಡಗಿದಾಗ, ಬಟ್ಟೆಯನ್ನು ತೆಗೆದು, ಗುಂಡಿಗೆ ತಮ್ಮ ಎದೆಯೊಡ್ಡುವ ಧೈರ್ಯವನ್ನವರು ಪ್ರದರ್ಶಿಸುತ್ತಾರೆ.

ಮೊದಮೊದಲು ಅವರು ಗಾಂಧೀಜಿ ಪ್ರಾರಂಭಿಸಿದ ಅಸಹಕಾರ ಚಳವಳಿಯನ್ನು ಬೆಂಬಲಿಸುತ್ತಾರೆ; ದೆಹಲಿಯಲ್ಲಿ ದಲಿತೋದ್ಧಾರ ಸಭೆಯನ್ನು ಸಂಸ್ಥಾಪಿಸುತ್ತಾರೆ. ಅಸಹಕಾರ ಚಳವಳಿ ಸಾಮೂಹಿಕವಾಗಬೇಕು. ಅದು ಮಧ್ಯದಲ್ಲಿ ನಿಲ್ಲಬಾರದು, ಶಾಸನಸಭೆಗಳಿಗೆ ಕಾಂಗ್ರೆಸ್ ಪಕ್ಷ ಪ್ರವೇಶಿಸಬೇಕು ಎಂಬ ವಿಷಯಗಳಲ್ಲಿ ಕಾಂಗ್ರೆಸ್ ಪಕ್ಷದಲ್ಲಿಯೇ ಒಡಕು ತೋರಲಾಗಿ ಅವರು ಪಕ್ಷಕ್ಕೆ ರಾಜೀನಾಮೆ ನೀಡುತ್ತಾರೆ. ಹಿಂದೂ ಸಂಘಟನೆಗಾಗಿ ಅವರು ಶುದ್ಧೀಕರಣ ಆಂದೋಳನವನ್ನು ಪ್ರಾರಂಭಿಸುತ್ತಾರೆ. ದಲಿತರನ್ನು ಬಿಡುಗಡೆಗೊಳಿಸದೆ ಹಿಂದೂ ಸಂಘಟನೆ ಸಾಧ್ಯವಿಲ್ಲವೆಂದವರು ನಿರ್ಧರಿಸುತ್ತಾರೆ. ಶುದ್ಧಿ ಸಮಾಚಾರವೆಂಬ ಮಾಸ ಪತ್ರಿಕೆಯನ್ನು ಶುರು ಮಾಡುತ್ತಾರೆ. ಕೆಲವು ವರ್ಷ ಹಿಂದೂ ಮಹಾಸಭೆಯ ಉಪಾಧ್ಯಕ್ಷರೂ ಆಗುತ್ತಾರೆ. ಶುದ್ಧೀಕರಣ ವಿಧಾನ ಸನಾತನ ಹಿಂದೂಗಳಿಗೂ ಮುಸ್ಲಿಮರಿಗೂ ಒಪ್ಪಿಗೆಯಾಗದು. ವಿವೇಕಾನಂದರಂತೆ ನೀತಿಯ ತಳಹದಿಯ ಮೇಲೆ ರಾಷ್ಟ್ರೀಯತಾ ಸೌಧವನ್ನು ನಿರ್ಮಿಸಬೇಕೆಂಬುದು ಅವರ ಉದ್ದೇಶ.

ಮುಸ್ಲಿಮ್ ಮತ್ತು ಸಿಖ್ ಮತೀಯರಲ್ಲಿದ್ದ ಸಂಘಟನೆ ಹಿಂದೂಗಳಲ್ಲಿಲ್ಲದ್ದು ಅವರ ಮನಸ್ಸಿಗೆ ಖೇದಕರವಾಗಿತ್ತು; ಈ ಅಸಂಘಟನೆಯಿಂದಾಗಿ ಒಂದಲ್ಲ ಒಂದು ದಿನ ಹಿಂದೂ ಧರ್ಮಕ್ಕೆ ಕುತ್ತುಂಟಾಗುತ್ತದೆಂಬುದು ಅವರಿಗೆ ಗೊತ್ತಿತ್ತು. ವೇದದ ತಳಹದಿಯ ಮೇಲೆ ಹಿಂದೂ ಸಮಾಜದ ಸಾಮಾಜಿಕ ನೈತಿಕ ಶಕ್ತಿಗಳು ಪುನರುಜ್ಜೀವನಗೊಳ್ಳಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಶಿಸ್ತು ಮತ್ತು ರಚನಾತ್ಮಕ ಕಾರ್ಯಕ್ರಮಗಳ ಮೂಲಕವೇ ಜನರ ಉದ್ಧಾರ ಸಾಧ್ಯವೆಂಬ, ಸ್ವರಾಜ್ಯ ಸಂಪಾದನೆ ಅಸದಳವಾಗದೆಂಬ ಗಾಂಧೀಜಿಯ ಸಲಹೆಗಳಲ್ಲಿ ಅವರಿಗೆ ವಿಶ್ವಾಸವಿತ್ತು. ಹಿಂದೂ ಮುಸ್ಲಿಮ್ ಸಿಖ್ ಕ್ರಿಶ್ಚಿಯನ್ನರು ತಂತಮ್ಮ ಭೇದಗಳನ್ನು ಸರಿಪಡಿಸಿಕೊಂಡು, ಸ್ವದೇಶಿ ವಸ್ತುಗಳನ್ನು ಜನಪ್ರಿಯಗೊಳಿಸಿ, ರಾಷ್ಟ್ರೀಯ ಶಿಕ್ಷಣವನ್ನು ರೂಪಿಸುವುದಾದರೆ ಸ್ವರಾಜ್ಯ ಸಂಪಾದಿಸಬಹುದೆಂಬುದು ಅವರ ನಿರ್ಧಾರ. ಹಿಂದೂಸ್ತಾನಿ ರಾಷ್ಟ್ರಭಾಷೆಯಾಗಬೇಕೆಂದವರು ನಂಬಿದ್ದರು. ಜಾತೀಯತೆ ಅಸ್ಪೃಶ್ಯತೆಗಳು ನಿರ್ಮೂಲನವಾಗದೆ ಹಿಂದೂ ಸಂಘಟನೆ ಸಾಧ್ಯವಾಗಲಾರದೆಂಬ ಸಾಮಾನ್ಯ ಜ್ಞಾನ ಅವರಿಗಿದ್ದಂತಿಲ್ಲ.

ಎಲ್ಲ ಧರ್ಮಗಳನ್ನು ಹೊಂದಿಸಿಕೊಂಡು ಹೋಗಬೇಕೆನ್ನುವ ಉದಾರ ರಾಷ್ಟ್ರೀಯವಾದಿಯವರು. ಹಿಂದೂ ಧರ್ಮದ ಪುನರುಜ್ಜೀವನಕ್ಕೆ, ಹಿಂದೂ ಸಂಘಟನೆಗೆ ಹಿಂದೂ ಮತಾಂತರ ಅನಿವಾರ್ಯವೆಂದು ತಿಳಿದಿದ್ದ ಅವರನ್ನು ಮುಸ್ಲಿಂ ಮತಾಂಧನೊಬ್ಬ ಅವರ ಎದೆಗೆ ಗುಂಡು ಹಾರಿಸಿದಾಗ, ಅವರು ಹುತಾತ್ಮರಾಗುತ್ತಾರೆ. ದೈತ್ಯಾಕಾರದ, ಧೈರ್ಯವೇ ಮೂರ್ತಿವೆತ್ತಂತಿದ್ದ ಆ ವ್ಯಕ್ತಿ ಸತ್ಯ ನ್ಯಾಯಗಳಿಗಾಗಿ ಅಪ್ರತಿಹತ ಶೌರ್ಯದಿಂದ ಹೋರಾಡುತ್ತಿದ್ದವರೆಂದು, ಅವರು ನಾಯಕರಲ್ಲಿ ನಾಯಕರೆಂದು ಮಹಾತ್ಮಾ ಗಾಂಧಿ ಅವರು ಹುತಾತ್ಮರಾದಾಗ ಕೊಂಡಾಡುತ್ತಾರೆ.

ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದ ಸಂಸ್ಥಾಪಕರಾದ **ಪಂಡಿತ ಮದನ ಮೋಹನ ಮಾಳವೀಯರ** ಹೆಸರು (೧೮೬೧-೧೯೪೬) ಆಧುನಿಕ ಭಾರತೀಯ ರಾಜಕೀಯ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಚಿರಸ್ಥಾಯಿಯಾದದ್ದು. ಹಿಂದಿ, ಸಂಸ್ಕೃತ, ಇಂಗ್ಲಿಷ್ ಭಾಷೆಗಳಲ್ಲಿ ಉದ್ದಾಮ ಪಂಡಿತರಾದ ಅವರು ಮಹಾವಾಗ್ಮಿಯೆಂದು ಕೀರ್ತಿತರಾಗಿದ್ದರು. ಅವರು ಹಿಂದೂಸ್ಥಾನ್, ಅಭ್ಯುದಯ ಮೊದಲಾದ ಪತ್ರಿಕೆಗಳ ಸಂಪಾದಕರಾಗಿ, ಅಲಹಾಬಾದ್‌ನಲ್ಲಿ ಹಿಂದೂ ಸಮಾಜವೆಂಬ ಸಂಸ್ಥೆಯನ್ನು ಸಹ ಸ್ಥಾಪಿಸಿದ್ದರು. ರಾಷ್ಟ್ರೀಯ ಕಾಂಗ್ರೆಸ್ಸಿನ ಪ್ರವರ್ತಕರಾಗಿ, ೧೯೦೯ರಲ್ಲಿ ಲಾಹೋರ್ ಸಮ್ಮೇಳನದ ಅಧ್ಯಕ್ಷತೆ ಸಹ ವಹಿಸಿದ್ದರು. ಪ್ರಾಂತೀಯ ಶಾಸನ ಸಭೆಯ ಸದಸ್ಯರಾಗಿ ಪ್ರಾಥಮಿಕ ಶಿಕ್ಷಣ ಮಸೂದೆಯಂಥ ದೇಶ ಹಿತಕಾರಿ ವಿಷಯಗಳಿಗೆ ಸಂಬಂಧಿಸಿದ ಚರ್ಚೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಅಸಹಕಾರ ಚಳವಳಿಯಲ್ಲಿ ಅವರಿಗೆ ವಿಶ್ವಾಸವಿರಲಿಲ್ಲ. ಆದರೆ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ, ಜೈಲುವಾಸವನ್ನು ಸಹ ಅನುಭವಿಸಿದ್ದರು. ಅವರು ದ್ವಿತೀಯ ದುಂಡುಮೇಜಿನ ಪರಿಷತ್ತಿನಲ್ಲಿ ಭಾಗವಹಿಸಿದ್ದರಲ್ಲದೆ, ಕೋಮುವಾರು ಘೋಷಣೆಯನ್ನು ವಿರೋಧಿಸಿದ್ದರು. ಹಿಂದೂ ಮಹಾಸಭೆಯ ವ್ಯವಸ್ಥಾಪಕರಾಗಿ, ಹಿಂದೂ ಸಂಘಟನೆಯ ಬೆಂಬಲಿಗರಾಗಿದ್ದರು.

ಭಗವಂತನ ಅಂತರ್ಯಾಮಿತ್ವವನ್ನೊಪ್ಪಿಕೊಂಡಿದ್ದ ಅವರು ವೈಷ್ಣವ ಸಂಪ್ರದಾಯಾನುಯಾಯಿ. ಚಾರಿತ್ರಿಕ ಘಟನೆಗಳು ವಿಧಿವಿಲಾಸ ಬದ್ಧವೆಂಬುದರಲ್ಲಿ ಅವರಿಗೆ ನಂಬಿಕೆಯಿತ್ತು. ಅಂದ ಮೇಲೆ ಬ್ರಿಟಿಷರ ಆಡಳಿತ ಭಗವತ್ಸಂಕಲ್ಪವೆಂದು ಕರ್ಮವಾದವನ್ನು ನಂಬುವ ಬೋಳೆತನ ಅವರದು. ಹಿಂದೂ ಸಂಸ್ಕೃತಿಯ ಉತ್ಕೃಷ್ಟತೆಯಲ್ಲವರಿಗೆ ಲವಲೇಶವೂ ಅನುಮಾನವಿಲ್ಲ. ಹಿಂದೂ ನೈತಿಕ ಮೌಲ್ಯಗಳನ್ನಲ್ಲಗಳೆದ ರಾಷ್ಟ್ರೀಯತೆ ಅವರಿಗೆ ಬಹುದೂರ. ಮತೀಯ ಚೌಕಟ್ಟಿನಲ್ಲಿ ಜೀವನ ರೂಪಗೊಳ್ಳಬೇಕೆಂಬುದು ಅವರ ಆಶೆ. ಅಂತಿಮ ಜಯ ಸತ್ಯಕ್ಕೆಂಬ ಆರ್ಷೇಯ ತತ್ತ್ವ ಅವರ ಪಾಲಿಗೆ ನಿತ್ಯ. ಶಾಲಾ ಕಾಲೇಜುಗಳಲ್ಲಿ ಮತೀಯ ಶಿಕ್ಷಣ ಆವಶ್ಯಕವೆಂಬ ಧೋರಣೆ ಅವರದು. ಇಂಡಿಯಾದ ಸಂದರ್ಭದಲ್ಲಿ ಅಂಥ ಶಿಕ್ಷಣ ಯಶಸ್ವಿಯಾಗಬಹುದೇ ಎಂಬ ಸಮಸ್ಯೆ ಅವರಿಗೆ ಹೊಳೆದಂತಿಲ್ಲ.

ಶಾಸನಸಭೆಗಳಲ್ಲಿ ಜನಪ್ರತಿನಿಧಿಗಳಿಗೆ ಅವಕಾಶವಿರಬೇಕೆಂದೂ, ತಮ್ಮ ಜನರ ದುಃಖದುಮ್ಮಾನ ಆಶೋತ್ತರಗಳನ್ನು ಅಭಿವ್ಯಕ್ತಗೊಳಿಸುವ ಹಕ್ಕು ಅವರಿಗಿರಬೇಕೆಂದೂ ಮಾಳವೀಯರು ವಾದಿಸುತ್ತಾರೆ. ಅವರು ತಮ್ಮದೊಂದು ಭಾಷಣದಲ್ಲಿ ಸ್ವದೇಶೀ ಆಂದೋಲನದ ಪರವಾಗಿ ಗಟ್ಟಿಯಾಗಿ ಮಾತಾಡುತ್ತಾರೆ. ಸ್ವದೇಶೀ ಆಂದೋಲನಕ್ಕೆ ಪ್ರೋತ್ಸಾಹ ನೀಡಬೇಕಾದ್ದು ಮಾನವಧರ್ಮದಲ್ಲಿ ವಿಶ್ವಾಸವಿರುವ ಎಲ್ಲ ಆಳರಸರ ಕರ್ತವ್ಯ. ಅದರಿಂದ ಇಲ್ಲಿಯ ಆರ್ಥಿಕ ಸಮಸ್ಯೆಗಳಿಗೆ ಪರಿಹಾರವೊದಗಿಸಿದಂತಾಗುತ್ತದೆ. ನಿರುದ್ಯೋಗಿಗಳಿಗೆ ಅನ್ನ ಕೊಟ್ಟಂತಾಗುತ್ತದೆಂದವರು ಸ್ಪಷ್ಟಪಡಿಸುತ್ತಾರೆ. ದೇಶದ ಮುನ್ನಡೆಗೆ ಶೈಕ್ಷಣಿಕ ಮುಖ್ಯವಾಗಿ ತಾಂತ್ರಿಕ ಶಿಕ್ಷಣ ಮತ್ತು ಕೈಗಾರಿಕಾ ಕಾರ್ಯಕ್ರಮಗಳು ಅತ್ಯಗತ್ಯವೆಂದವರು ಒತ್ತಾಯಿಸುತ್ತಾರೆ. 'ನಿಮ್ಮ ದೇಶದಲ್ಲಿ ನಿಮ್ಮ ಜನರೆಂತು ಸ್ವತಂತ್ರ ವಾತಾವರಣದಲ್ಲಿ ಬದುಕು ನಡೆಸುತ್ತಾರೆಯೋ ಅಂಥದೇ ವಾತಾವರಣವನ್ನು ಇಲ್ಲಿಯೂ ಸೃಷ್ಟಿಸಿ' ಎಂದವರು ಆಂಗ್ಲ ಸರ್ಕಾರಕ್ಕೆ ಸೂಚಿಸುತ್ತಾರೆ. ಸಿರಿಯಾ ಮತ್ತು ಮೆಸೊಪೊಟೇಮಿಯಾಕ್ಕೆ ನೀಡಿರುವ ಸ್ವಯಂ ನಿರ್ಣಯಾಧಿಕಾರವನ್ನು ಇಂಡಿಯಾಕ್ಕೂ ಏಕೆ ಅನ್ವಯಿಸಬಾರದೆಂದವರು ಪ್ರಶ್ನಿಸುತ್ತಾರೆ. ಸಮಾಜವಾದೀ ಸಿದ್ಧಾಂತವಾಗಲೀ, ಮೂಲಭೂತ ಕ್ರಾಂತಿಯಾಗಲಿ ಅವರಿಗೆ ಹಿಡಿಸುವುದಿಲ್ಲ. ರಾಷ್ಟ್ರೀಯತೆ ಹಿಂದೂ ಧರ್ಮದಲ್ಲಿ ಬಲವಾಗಿ ಬೇರೂರಬೇಕು, ಹಿಂದೂಗಳು ವ್ಯವಸ್ಥಿತವಾಗಿ ಸಂಘಟನೆ ಗೊಳ್ಳಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಅಸ್ಪೃಶ್ಯರನ್ನು ಶೂದ್ರರನ್ನು ಮರೆತ ಸಂಘಟನೆ ಅಪೂರ್ಣ, ಅಭದ್ರ, ಅನಿಶ್ಚಯ, ಅವಾಸ್ತವ, ಅತಂತ್ರವೆಂಬುದನ್ನು ಆಗಿನ ನಾಯಕರೆಲ್ಲರೂ ಮರೆಯುತ್ತಾರೆಂಬುದನ್ನು ಮತ್ತೆ ಮತ್ತೆ ಕೆದಕಬೇಕಾಗಿಲ್ಲ. ಅದೇನೇ ಇರಲಿ ಮಾಳವೀಯರು ರಚನಾತ್ಮಕ ಕಾರ್ಯತಂತ್ರಗಳ ಮೂಲಕ ಸ್ವಾತಂತ್ರ್ಯಕ್ಕೆ ಕಾವುಕೊಟ್ಟದ್ದಲ್ಲದೆ, ರಾಷ್ಟ್ರೀಯತೆಯನ್ನು ಪುಷ್ಟೀಕರಿಸಿದರೆಂಬುದು ಮರೆಯಲಾಗದ ಸಂಗತಿ.

ಕಟ್ಟಾ ರಾಷ್ಟ್ರವಾದಿಯೂ, ಉಗ್ರಕ್ರಾಂತಿಕಾರಿಯೂ ಆದ **ವಿನಾಯಕ ದಾಮೋದರ ಸಾವರ್ಕರ್** (೧೮೮೩-೧೯೬೬) ಅದಮ್ಯ ಶಕ್ತಿ ಸಾಹಸಗಳ ಅಪೂರ್ವ ಮಹಾವೀರ. ಆಂಗ್ಲರ ಉಚ್ಚಾಟನೆಗಾಗಿ, ಹಿಂದೂ ಸಂಸ್ಕೃತಿಯ ಪುನಶ್ಚೇತನಕ್ಕಾಗಿ ಪ್ರಾಣಾಹುತಿಗೂ ಸಿದ್ಧರಾಗಿದ್ದ ಮಹಾತ್ಯಾಗಿ. ಇಂಗ್ಲೆಂಡಿನಲ್ಲಿ ವ್ಯಾಸಂಗಮಾಡುತ್ತಿದ್ದಾಗಲೂ ಕ್ರಾಂತಿಕಾರಕ ಕಾರ್ಯಕ್ರಮಗಳಲ್ಲಿ ನಿಮಗ್ನರಾಗಿದ್ದ ದೈತ್ಯ ಶಕ್ತಿ ಸಂಪನ್ನರವರು. ಅವರ ಆತಂಕಕಾರಿ ಚಟುವಟಿಕೆಗಳಿಗಾಗಿ ಆಂಗ್ಲ ಸರ್ಕಾರ ಅಂಡಮಾನ್ ದ್ವೀಪದಲ್ಲಿ ಕೆಲವು ಕಾಲ ಅವರನ್ನು ಸೆರೆಗೆ ಹಾಕಿತ್ತು; ಇಂಡಿಯಾದ ಜೈಲುಗಳು ಸಹ ಅವರಿಗೆ ಅಪರಿಚಿತವಾಗಿರಲಿಲ್ಲ. ಹತ್ತಾರು ವರ್ಷ ಕಾರಾಗೃಹವಾಸವನ್ನನುಭವಿಸಿದ ನಂತರವೂ ಆ ಪುರುಷ ಸಿಂಹ ಗವಿಯಲ್ಲಿ ಮುದುಡುವಂಥವರಲ್ಲ. ಮೊದಲು ತಿಲಕರ ಪ್ರಜಾಸತ್ತಾತ್ಮಕ ಸ್ವರಾಜ್ ಪಕ್ಷದಲ್ಲಿ, ತದನಂತರ ಹಿಂದೂ ಮಹಾಸಭೆಯಲ್ಲಿ ಕ್ರಾಂತಿಕಾರಕ ಚಟುವಟಿಕೆಗಳನ್ನು ಮುಂದುವರಿಸುತ್ತಾರೆ.

ಸಾವರ್ಕರರಿಗೆ ಭಾರತೀಯ ಇತಿಹಾಸದ ಬಗ್ಗೆ ಭಾರಿ ಅಭಿಮಾನವಿದೆ. ವಿದೇಶೀಯರೊಡನೆ ಹೋರಾಡಿ, ಸೋಲಿಸಿ, ರಾಷ್ಟ್ರೀಯ ಅಭಿಮಾನವನ್ನು ಮೆರೆದ ದೊರೆಗಳನ್ನವರು ಹೆಮ್ಮೆಯಿಂದ ಸ್ಮರಿಸುತ್ತಾರೆ. ಚಂದ್ರಗುಪ್ತ ಚಾಣಕ್ಯರ ಮೌರ್ಯ ಸಾಮ್ರಾಜ್ಯ; ಇಂಡಿಯಾದಲ್ಲಿ ಗ್ರೀಕರ ಹುಟ್ಟಡಗಿಸಿದ ಪುಷ್ಯಮಿತ್ರನ ಸಾಹಸ; ಶಕರನ್ನು ಸೋಲಿಸಿ ಹೊಸ ಯುಗವನ್ನೆ ನಿರ್ಮಿಸಿದ ವಿಕ್ರಮಾದಿತ್ಯ; ಹೂಣರನ್ನು ಸೋಲಿಸಿ; ಅವರ ನಾಯಕ ಮಿಹಿರಗುಲನನ್ನು ಸೆರೆಹಿಡಿದ ಮಾಳವ ದೊರೆ ಯಶೋಧರ್ಮ; ಮುಸ್ಲಿಮರಿಗೆ ಸಿಂಹಸ್ವಪ್ನವಾಗಿ, ಮರಾಠಾ ಸಾಮ್ರಾಜ್ಯವನ್ನು ಸ್ಥಾಪಿಸಿದ ಶಿವಾಜಿ ಇವರನ್ನವರು ಮೆಚ್ಚುತ್ತಾರೆ- ಹಿಂದೂಧರ್ಮದ ರಕ್ಷಕರೆಂದು ಕೊಂಡಾಡುತ್ತಾರೆ. ಅವರು ಆಳಿದ ಕಾಲಮಾನಗಳು ಇಂಡಿಯಾ ದೇಶದ ಇತಿಹಾಸದಲ್ಲಿ ಸುವರ್ಣ ಯುಗಗಳೆಂದವರು ಗಣಿಸುತ್ತಾರೆ. ಜತೆಗೆ ಬ್ರಿಟಿಷ್ ವಸಾಹತುಶಾಹಿಯನ್ನು ಹಿಂಗಿಸಿದ ಆಧುನಿಕ ಯುಗದ ಮಹತ್ವವನ್ನು ಮನಸಾರೆ ಅಭಿಮಾನದಿಂದ ಹೊಗಳುತ್ತಾರೆ. ಆದರೆ ದಕ್ಷಿಣ ಭಾರತದ ಅಸ್ತಿತ್ವದ ಬಗ್ಗೆಯಾಗಲಿ, ಅಲ್ಲಿ ಆಳಿದ ರಾಜರನ್ನು ಕುರಿತಾಗಲಿ, ಕೊನೆಗೆ ವಿಜಯನಗರ ಸಾಮ್ರಾಜ್ಯದ ಬಗೆಗಾಗಲಿ ಅವರಿಗೆ ಅಷ್ಟೇನೂ ವಿಷಯ ಗೊತ್ತಿದ್ದಂತೆ ಕಾಣದು. ಹರ್ಷವರ್ಧನ ಪುಲಿಕೇಶಿಯರ ರಾಜ್ಯಭಾರಕ್ಕಿಂತ ಶಿವಾಜಿಯ ರಾಜ್ಯಭಾರ ಅಧಿಕತರ ರಾಷ್ಟ್ರೀಯ ಮಹತ್ವದ್ದೆಂಬುದು ಅವರ ಅಭಿಪ್ರಾಯವಿದ್ದಂತೆ ತೋರುತ್ತದೆ. ಸಿಪಾಯಿ ದಂಗೆ ಭಾರತೀಯ ಸ್ವಾತಂತ್ರ್ಯದ ಪ್ರಥಮ ಸಮರವೆಂಬುದು ಅವರ ಮತ.

ಸಂತರು ಸನ್ಯಾಸಿಗಳಿರುವ ರಾಷ್ಟ್ರದಲ್ಲಿ ಹಿಂಸೆ ಅನಾವಶ್ಯಕ; ಸುಲಿಗೆಕೋರರ, ಶಸ್ತ್ರಸಜ್ಜಿತರ,ವಸಾಹತುಷಾಹಿಗಳ ದೇಶದಲ್ಲಿ ಅಹಿಂಸೆ ಮೂರ್ಖತನವೆಂಬುದು ಅವರ ಭಾವನೆ. ಹಿಂದೂ ಸಂಸ್ಕೃತಿಯ ಪಾರಮ್ಯದಲ್ಲಿ ಅವರಿಗೆ ಅಪಾರ ನಂಬಿಕೆ. ಹಿಂದೂ ದೇಶದಲ್ಲಿ ಪುರಾತನ ಕಾಲದಿಂದಿದ್ದವರೆಲ್ಲರೂ ಹಿಂದೂಗಳೆಂದು, ಇಸ್ಲಾಂ ಧರ್ಮವನ್ನಪ್ಪಿಕೊಂಡ ಹಿಂದೂಗಳಲ್ಲಿ ಹಿಂದೂ ರಕ್ತವಿರುವುದರಿಂದ ಅವರಲ್ಲಿ ಹಿಂದುತ್ವವಿದೆಯೆಂಬ ಅವರ ವಾದ ಮುಸ್ಲಿಮರಿಗೆ ಮೆಚ್ಚಿಗೆಯಾಗುವುದಾದರೆ ಒಪ್ಪಬಹುದೇನೊ? ಜೈನ ಸಿಖ್ ಹಿಂದೂಗಳೊಳಗಿನ ಅಂತರ್‌ಜಾತೀಯ ವಿವಾಹಗಳನ್ನವರು ಸ್ವಾಗತಿಸುವಾಗ, ಅಂತರ್ವರ್ಣೀಯ ವಿವಾಹಗಳ ಬಗ್ಗೆ ಅವರು ಏನೂ ಹೇಳುವುದಿಲ್ಲ. ರಾಷ್ಟ್ರೀಯತೆ ಮತ್ತು ಹಿಂದುತ್ವ ಅವರ ದೃಷ್ಟಿಯಲ್ಲಿ ಒಂದೇ. ಅಜ್ಞಾನದ ಮೌಢ್ಯಗಳು, ಹಾಗೂ ಜಾತೀಯತೆ ತಾಂಡವವಾಡುತ್ತಿರುವ ದೇಶದ ಜನರನ್ನು ಕಟ್ಟಿಕೊಂಡು, ಶಸ್ತ್ರಸಜ್ಜಿತವಾದ ಆಂಗ್ಲರ ಮೇಲೆ ಹಿಂಸೆಯ ಮೂಲಕ ಜಯಸಾಧಿಸಲಾಗದೆಂಬ ಭಾವನೆ ದೇಶದ ಹಿನ್ನೆಲೆ ಸರಿಯಾಗಿ ಗೊತ್ತಿಲ್ಲದ ಕ್ರಾಂತಿಕಾರ ಸಾವರ್‌ಕರರಿಗೆ ಹಿಡಿಸದಿದ್ದುದು ಅಚ್ಚರಿಯೇನಲ್ಲ.

ಹಿಂದೂ ಪುನರುಜ್ಜೀವನದ ಸಂದರ್ಭದಲ್ಲಿ ಮರೆಯಲಾಗದ ಒಂದು ಹೆಸರು **ಹೆಗ್ಡೆವಾರ್** ಅವರದು. ಕಲ್ಕತ್ತೆಯ ರಾಷ್ಟ್ರೀಯ ವೈದ್ಯ ಕಾಲೇಜಿನಲ್ಲಿ ಪದವಿ ಪಡೆದಿದ್ದ ಡಾ. **ಕೇಶವ ಬಲಿರಾಂ ಹೆಗ್ಡೆವಾರ್** (೧೮೮೯-೧೯೪೦) ಮುಸ್ಲಿಂಪರವಾಗಿ ವರ್ತಿಸುತ್ತಿದ್ದ ಕಾಂಗ್ರೆಸ್ಸಿನ ನೀತಿ ಹಿಂದೂಗಳಿಗೆ ಅಪಾಯಕಾರಿಯಾಗುತ್ತದೆಂದು ತಿಳಿದು ೧೯೨೫ರಲ್ಲಿ ನಾಗಪುರದಲ್ಲಿ ವಿಜಯದಶಮಿ ದಿನದಂದು ರಾಷ್ಟ್ರೀಯ ಸ್ವಯಂ ಸೇವಕ ಸಂಸ್ಥೆಯನ್ನು ಹುಟ್ಟುಹಾಕುತ್ತಾರೆ. ಸಾವರ್‌ಕರ್ ಗೆಳೆಯರಾಗಿದ್ದ ಅವರು ೧೯೩೦ರವರೆಗೆ ಹಿಂದೂ ಮಹಾಸಭೆಯ ಸದಸ್ಯರಾಗಿದ್ದರಲ್ಲದೆ ಅಸಹಕಾರ ಚಳವಳಿಯಲ್ಲೂ ಭಾಗವಹಿಸಿದ್ದುಂಟು. ಹಿಂದೂಗಳಲ್ಲಿ ಸಾಂಸ್ಕೃತಿಕ ಅಸ್ತಿಯ ಪ್ರಜ್ಞೆಯನ್ನು ಕೆರಳಿಸಬೇಕು, ಅವರಲ್ಲಿ ಸೈನಿಕ ಶಿಸ್ತನ್ನು ತುಂಬಬೇಕೆಂಬುದೇ ಆ ಸಂಸ್ಥೆಯನ್ನು ಸ್ಥಾಪಿಸುವುದರಲ್ಲಿದ್ದ ಉದ್ದೇಶ. ಜಾತಿ ಪಂಥ ಪಂಗಡಗಳಿಂದಾಗಿ ಬಿರುಕು ಬಿಟ್ಟಿದ್ದ ಹಿಂದೂ ಸಮಾಜವನ್ನು ಒಗ್ಗೂಡಿಸದಿದ್ದರೆ ಈ ದೇಶಕ್ಕೆ ಭವಿಷ್ಯವಿಲ್ಲವೆಂದವರು ಅರಿತಿದ್ದರು. ಆ ಬಿರುಕಿಗೆ ಕಾರಣವಾದ ಹಳೆಯ ಜಿಗ್ಗದ ಕಂತೆಯನ್ನು ಕಿತ್ತೊಗೆಯುವ ಸಾಹಸಕ್ಕೆ ಅವರು ಕೈಹಾಕಲಿಲ್ಲ. ಸಾಂಸ್ಥಿಕ ರಾಜಕೀಯದೊಡನೆ ಯಾವ ಸಕ್ರಿಯ ಸಂಬಂಧವೂ ಬೇಡವೆಂದವರು ತಮ್ಮ ಸಂಘಕ್ಕೆ ಸೂಚನೆ ನೀಡಿದ್ದರು. ಮತ, ರಾಜಕೀಯ, ಆರ್ಥಿಕ ವ್ಯವಸ್ಥೆಗಳನ್ನೊಳಗೊಂಡ ಸಂಸ್ಕೃತಿಯ ಪುನರುಜ್ಜೀವನದಲ್ಲಿ ಅವರಿಗೆ ನಂಬಿಕೆ. ಇದಕ್ಕಾಗಿ ಸರ್ವಸಮರ್ಪಣ ಭಾವವೂ ಶ್ರದ್ಧಾಪೂರ್ವಕ ಸೇವೆಯೂ ನೈತಿಕ ಮೌಲ್ಯ ಸಾಧನೆಯೂ ಅತ್ಯವಶ್ಯವೆಂದು ತಮ್ಮ ಸೋದರ ಸದಸ್ಯರಿಗೆ ಒತ್ತಿ ಹೇಳುತ್ತಿದ್ದರು. ಇಂದಿಗೂ ಆ ಸಂಸ್ಥೆಯ ಪರಿಣಾಮಕಾರೀ ಪ್ರಭಾವ ಉಪೇಕ್ಷಿಸುವಂಥದಲ್ಲ.

ಹಿಂದೂ ಮಹಾಸಭೆಯ ಅಧ್ಯಕ್ಷರಾಗಿ, ಅದನ್ನು ಕಟ್ಟಿಬೆಳೆಸಿದ ಬ್ಯಾರಿಸ್ಟರ್ ಮಹಾವಾಗ್ಮಿ **ಶ್ಯಾಮ ಪ್ರಸಾದ್ ಮುಖರ್ಜಿಯವರು** (೧೯೦೧-೧೯೫೩) ಕೆಲವು ಕಾಲ ಕಲ್ಕತ್ತ ವಿಶ್ವವಿದ್ಯಾನಿಲಯದ ಕುಲಪತಿಯಾಗಿದ್ದರು, ಕೆಲವು ಕಾಲ ನೆಹರೂ ಸಚಿವಮಂಡಲದಲ್ಲಿ ಮಂತ್ರಿಯಾಗಿದ್ದ ಅವರು ಇಂಡಿಯಾ ಪಾಕಿಸ್ತಾನಕ್ಕೆ ಸಂಬಂಧಿಸಿದ ದೆಹಲಿ ಕೌಲು ಸರಿಬೀಳದೆ ೧೯೫೦ರಲ್ಲಿ ತಮ್ಮ ಹುದ್ದೆಗೆ ರಾಜೀನಾಮೆ ನೀಡುತ್ತಾರೆ. ಅವರು ಸಂವಿಧಾನ ಸಭೆಯ ಸದಸ್ಯರೂ ಆಗಿದ್ದರು. ಅವರು ೧೯೫೧ರಲ್ಲಿ ಭಾರತೀಯ ಜನಸಂಘವೆಂಬ ರಾಜಕೀಯ

ಪಕ್ಷವನ್ನು ಕಟ್ಟುತ್ತಾರೆ. ಮುಖರ್ಜಿಯವರಿಗೆ ದೇಶ ವಿಭಜನೆ ನುಂಗಲಾರದ ತುತ್ತು. ಎಂದಾದರೊಂದು ದಿನ ಭಾರತ ಪಾಕಿಸ್ತಾನ್‌ಗಳು ಒಂದಾಗಬಹುದೆಂಬ ಆಶೆ ಅವರದು. ವಿಶ್ವವಿದ್ಯಾನಿಲಯಗಳ ಸ್ವಾಯತ್ತತೆಗಾಗಿ ಅವರು ಶ್ರಮಿಸಿದರೆಂಬುದು ಪ್ರಾಯಶಃ ಈಗಿನ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಗೊತ್ತಿಲ್ಲ. ದೇಶದ ಆರ್ಥಿಕ ಪ್ರಗತಿಗಾಗಿ ಖಾಸಗಿ ಉದ್ಯಮಕ್ಕೆ ಅವಕಾಶ ಕಲ್ಪಿಸಬೇಕೆಂಬುದು ಅವರ ಭಾವನೆ. ಮುಸ್ಲಿಮರಿಗೆ ಕಾಂಗ್ರೆಸ್ ನೀಡುವ ರಿಯಾಯಿತಿಗಳಿಗೆ ಅವರು ಕಟ್ಟಾ ವಿರೋಧಿ. ಇಂಡಿಯಾದ ಭದ್ರತೆಗೆ ಎಲ್ಲ ಹಿಂದೂಗಳ ಐಕ್ಯ ಅತ್ಯಗತ್ಯವೆಂದವರು ಹೋದೆಡೆಯಲ್ಲೆಲ್ಲ ಪ್ರಚಾರಮಾಡುತ್ತಿದ್ದರು.

ಆಧುನಿಕ ಯುರೋಪೀಯ ರಾಷ್ಟ್ರಗಳು ಹಿಂದೂಗಳ ಅಥವಾ ಆರ್ಯರ ವಂಶದವರೆಂದು; ಹಿಂದೂ ಸಂಸ್ಕೃತಿ ಹಾಗೂ ಅದರ ಸಾಹಿತ್ಯ ಜಗತ್ತಿನಲ್ಲೇ ಅತ್ಯಂತ ಪ್ರಾಚೀನವೆಂದು; ಮುಸ್ಲಿಮರ ಒಲವನ್ನು ಸಂಪಾದಿಸಿಸಬೇಕೆನ್ನುವ ಕಾಂಗ್ರೆಸ್ಸಿನ ನೀತಿ ಸರಿಯಲ್ಲವೆಂದು ಸಾರಿದ **ಭಾಯಿ ಪರಮಾನಂದರು** (೧೮೭೪-೧೯೪೮); ಹಿಂದೂ ಸಂಘಟನೆ, ಹಿಂದೂ ದರ್ಬಾರು, ಮುಸ್ಲಿಮರ ಶುದ್ಧೀಕರಣ, ಮತ್ತು ಆಫ್ಘಾನಿಸ್ಥಾನ ವಾಯವ್ಯ ಪ್ರಾಂತ್ಯಗಳ ಆಕ್ರಮಣ-ಇವುಗಳ ಮೇಲೆ ಹಿಂದೂ ಸ್ಥಾನದ ಭವಿಷ್ಯ ನಿಂತಿದೆ ಎಂದು ಉದ್ಗರಿಸಿದ ಪಂಜಾಬಿನ **ಲಾಲ ಹರದಯಾಳ್** (೧೮೮೪-೧೯೩೪); ಹರಪ್ರಸಾದ ಶಾಸ್ತ್ರೀ, ಸುರೇಂದ್ರನಾಥ ದಾಸಗುಪ್ತ, ಕೆ. ಸಿ. ಭಟ್ಟಾಚಾರ್ಯ ಮೊದಲಾದ ಮೇಧಾವಿಗಳೂ, ಆರ್ಯ ಸಮಾಜ, ಶ್ರೀ ರಾಮಕೃಷ್ಣ ಮಿಷನ್, ಸ್ವಾಮಿ ನಾರಾಯಣ ಸಮಾಜ, ಸತ್ಯದೇವ ಪರಿವ್ರಾಜಕ ಮೊದಲಾದ ಸಂಸ್ಥೆಗಳೂ, ಹಲವು ಸಾಹಿತಿಗಳೂ ಹಿಂದೂ ಪುನರುಜ್ಜೀವನಕ್ಕೆ ಸಾಕಷ್ಟು ಚೈತನ್ಯವನ್ನೂ ಪುಷ್ಟಿಯನ್ನೂ ನೀಡಿದರೆಂಬುದು ಐತಿಹಾಸಿಕ ಸಂಗತಿ. ಹಳೆಯ ಕೊಳೆಯನ್ನೆಲ್ಲ ತೊಳೆದು ಆಧುನಿಕ ಯುಗದ ವೈಚಾರಿಕ ಹಾಗೂ ವೈಜ್ಞಾನಿಕ ಆವಿಷ್ಕಾರಗಳನ್ನು ಬಳಸಿಕೊಂಡು ವರ್ಣಾಶ್ರಮ ಧರ್ಮವನ್ನು ಸಂಪೂರ್ಣವಾಗಿ ತ್ಯಜಿಸಿ, ಶೂದ್ರಾತಿಶೂದ್ರರಿಗೆ ಸಮಾನ ಸ್ಥಾನ ಸಮಾನಾವಕಾಶಗಳನ್ನು ನೀಡಿ, ಬೌದ್ಧ, ಜೈನ್, ಸಿಖ್ ಎಲ್ಲರನ್ನೂ ಹಿಂದೂ ಚೌಕಟ್ಟಿಗೆ ಒಳಪಡಿಸಿಕೊಂಡು ಸರಳ ರೀತಿಯ ಶುದ್ಧೀಕರಣವನ್ನು ಜಾರಿಗೊಳಿಸದಿದ್ದರೆ ಹಿಂದೂ ಮತಕ್ಕೆ ಭವಿಷ್ಯವಿಲ್ಲವೆಂದೇ ಹೇಳಬೇಕಾಗಿದೆ. ಹಿಂದೂ ಎಂಬ ಪದ ಬ್ರಾಹ್ಮಣ ಪದಕ್ಕೆ ಪರ್ಯಾಯವಾಗಿರುವುದರಿಂದ, ಅದಕ್ಕೆ ಬದಲಾಗಿ ಭಾರತೀಯ ಧರ್ಮವೆಂಬ ಹೆಸರನ್ನೊಪ್ಪಿಕೊಳ್ಳುವುದಾದರೆ ಜೈನ, ಬೌದ್ಧ, ಸಿಖ್ಖರೂ, ಬೇರೆಯವರೂ ಆ ಧರ್ಮವನ್ನು ಹಿಡಿದುಕೊಳ್ಳುತ್ತಾರೆಂದು ಊಹಿಸಬಹುದಾಗಿದೆ.

## ಮುಸ್ಲಿಮ್ ವಿಚಾರಧಾರೆ

ಇಂಡಿಯಾದೇಶದ ರಾಜಕೀಯ ಕ್ಷೇತ್ರದಲ್ಲಿ ಮುಸ್ಲಿಮರ ಪಾತ್ರ ವಿಶಿಷ್ಟ ಹಾಗೂ ಪ್ರಮುಖ ಮಾತ್ರವಲ್ಲ, ಜಟಿಲವೂ ಸಮಸ್ಯಾತ್ಮಕವೂ ಆದದ್ದೆಂಬುದು ಜಗತ್ತಿಗೇ ಗೊತ್ತಿರುವ ಸಂಗತಿ. ಅತ್ಯಂತ ಪ್ರಮುಖರಾದ ಕೆಲವೇ ಕೆಲವರ ಕಾಣಿಕೆಯನ್ನಿಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

ಉರ್ದು ಭಾಷೆಯ ಅಮರ ಕವಿಯೆಂದು, ತತ್ತ್ವಜ್ಞಾನಿಯೆಂದು ಹೆಸರಾದ **ಡಾ. ಮುಹಮ್ಮದ್ ಇಕ್ಬಾಲ್** (೧೮೭೩-೧೯೩೮) ಅವರು ಹುಟ್ಟಿದ್ದು ಪಂಜಾಬ್ ರಾಜ್ಯದ ಸಿಯಾಲ್‌ಕೋಟ್‌ನಲ್ಲಿ. ಕೇಂಬ್ರಿಡ್ಜ್‌ನ ಟ್ರಿನಿಟಿ ಕಾಲೇಜಿನಲ್ಲಿ ಡಾಕ್ಟೊರೇಟ್ ಪದವಿ ಪಡೆದ ಅವರು ಲಾಹೋರ್‌ನ ಸರ್ಕಾರಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗುತ್ತಾರೆ. ಕೆಲವು ಕಾಲ ಪಂಜಾಬಿನ ಶಾಸನಸಭೆಯ ಸದಸ್ಯರಾಗಿದ್ದದ್ದಲ್ಲದೆ, ಎರಡನೆಯ ಮತ್ತು ಮೂರನೆಯ ದುಂಡುಮೇಜಿನ ಗೋಷ್ಠಿಗಳಲ್ಲಿಯೂ ಭಾಗವಹಿಸುತ್ತಾರೆ.

ಸರ್ವಶಕ್ತನೂ, ಸರ್ವಜ್ಞನೂ, ಸೃಷ್ಟಿಕರ್ತನೂ ಆದ ವಿಶ್ವಚೈತನ್ಯವೊಂದೇ; ಅದರ ಸೂಕ್ಷ್ಮ ಚೈತನ್ಯವೇ ಮನುಷ್ಯನಲ್ಲಿ ಗೋಚರಿಸುತ್ತದೆ. ಅವರ ದೃಷ್ಟಿಯಲ್ಲಿ ನಿಸರ್ಗವೊಂದು ಚಲನಶೀಲ ಶಕ್ತಿ; ಅದೊಂದು ಅಂತರ್ಸಬಂಧವುಳ್ಳ ಘಟನೆಗಳ ನಿತ್ಯ ವಿಕಾಸ ಶೀಲ ಸಹಜ ಪ್ರಕ್ರಿಯೆ. ಇದೇ ರೀತಿಯಲ್ಲಿ ಸಮನ್ವಯ, ಸಾಮರಸ್ಯ, ಪೂರ್ಣ ದೃಷ್ಟಿಯೊಡನೆ ಧಾರ್ಮಿಕ ವಿಕಾಸವೂ ಸಾಗಿದ್ದರೆ ಜಗತ್ತಿಗೆ ಕ್ಷೇಮವೊದಗುತ್ತಿತ್ತು.

ನಾನೆಂಬುದಗೋಚರ; ಸಾಕ್ಷಿಯದಕೆ ನಹಿ
ಧ್ಯಾನಿಸೆ ಗುಟ್ಟು ನಿನಗೆ ತಿಳಿಯುತದೆ
ನಾನೆಂಬುದೆ ನಿಜ; ಮಾಯೆಯಲ್ಲವದು
ಪಕ್ವವಾಗಲದೆ ಶಾಶ್ವತ ಜ್ಯೋತಿ

ಇದು ಇಕ್ಬಾಲರ ಪ್ರಕಾರ ದೇವಮಾನವರ ಸಂಬಂಧ. ಅಂತರ್ಜ್ಞಾನದ ಮೂಲಕವೇ ಅಧ್ಯಾತ್ಮಿಕಾನುಭವವನ್ನೂ ಜ್ಞಾನವನ್ನೂ ಪಡೆಯಬಹುದು; ಜತೆಗೆ ಆಲೋಚನೆಗೂ ಮೊದಲು ಅದು; ಅದು ಆತ್ಮಸ್ವಾತಂತ್ರ್ಯವನ್ನು ಚಿರಂತನತ್ವವನ್ನು ವ್ಯಕ್ತಪಡಿಸುತ್ತದೆಂಬುದು

ಅವರ ಅಭಿಪ್ರಾಯ. ಆತ್ಮವಾಗಲಿ, ಜ್ಞಾನವಾಗಲಿ, ಅಂತರ್ಜ್ಞಾನವಾಗಲಿ, ಆಲೋಚನೆಯಾಗಲಿ ಎಲ್ಲ ಮಾನವರಿಗೂ ಸಮಾನವಾದುದರಿಂದ, ಅವರು ಬಾಹ್ಯರೂಪದಲ್ಲಿ ಭಿನ್ನವೇ ಹೊರತು, ಅಂತಃಶಕ್ತಿಯಲ್ಲಲ್ಲವೆಂದು ಹೇಳುತ್ತಾರೆ.

ಪ್ರಾರ್ಥನೆ ಧ್ಯಾನಗಳಿಲ್ಲದ ಮತವೇ ಇಲ್ಲ. ಮನುಷ್ಯ ದೇವರೊಡನೆ ವಿಲೀನಗೊಳ್ಳಬೇಕೆಂಬ ಕಾತರತೆ, ಜತೆಗೆ ಅದಕ್ಕಾಗಿ ಸಲ್ಲಿಸುವ ಮೊರೆಯೇ ಪ್ರಾರ್ಥನೆ. ನೈತಿಕ ಸ್ಥೈರ್ಯವನ್ನು ರೂಢಿಸಲು, ರಕ್ಷಿಸಲು ಸಹ ಅದು ಅತ್ಯವಶ್ಯ. ಸಾಮೂಹಿಕ ಪ್ರಾರ್ಥನೆಯಲ್ಲಿ ವಿಶಾಲವಾದ ಸಾಮಾಜಿಕ ಐಕ್ಯತೆಯೂ, ಭ್ರಾತೃತ್ವಭಾವವೂ ಇದೆ ಎಂಬುದು ಅವರು ಕಂಡ ಸಂಗತಿ. ಕೃಷ್ಣನ ಕರ್ಮಯೋಗ ಸಿದ್ಧಾಂತದಲ್ಲಿ ಅವರಿಗೆ ಮೆಚ್ಚುಗೆ. ಇಸ್ಲಾಂ ಧರ್ಮದಲ್ಲಿಯೂ ಕ್ರಿಯೆ ಮುಖ್ಯ; ಅದರಿಂದ ಸಮಾಜಕ್ಕೆ ಶಕ್ತಿಯೊದಗುತ್ತದೆ. ಕ್ರಿಯೆಯಿಂದಲ್ಲದಿದ್ದರೆ ಸೃಷ್ಟಿಯ ರಹಸ್ಯ ಬಯಲಾಗುತ್ತಿರಲಿಲ್ಲ; ಮಾನವ ವೈಜ್ಞಾನಿಕವಾಗಿ ಇಷ್ಟು ದೂರ ಮುಂದುವರಿಯುತ್ತಿರಲಿಲ್ಲ; ಅವನಿಗೆ ಇಷ್ಟೊಂದು ಸುಖಸೌಕರ್ಯಗಳು ಲಭಿಸುತ್ತಿರಲಿಲ್ಲ; ಆದ್ದರಿಂದ ಕ್ರಿಯೆಯೇ ಬದುಕು ಎಂದವರು ಸ್ಪಷ್ಟಪಡಿಸಿದ್ದಾರೆ. ಅವರು ಸಹಜವಾಗಿಯೆ ನೀತ್ಸೆಯ 'ದೇವಮಾನವ' ಕಲ್ಪನೆಯನ್ನೊಪ್ಪಿಕೊಳ್ಳುತ್ತಾರೆ. ಆದರೆ ಅವನ ನಾಸ್ತಿಕವಾದವನ್ನು ತಿರಸ್ಕರಿಸುತ್ತಾರೆ.

ಆಧುನಿಕ ಜಗತ್ತಿನ ಶಾಪಮಯ ಸಮಸ್ಯೆಗಳಿಗೆ ಮತೀಯ ಪರಿಹಾರಗಳೇ ದಿವ್ಯೌಷಧವೆಂಬುದು ಅವರ ನಿಶ್ಚಿತಮತ. ಗೊಡ್ಡು ಸಂಪ್ರದಾಯ, ಪುರೋಹಿತಶಾಹಿ ಮತ್ತು ಆಚರಣೆಗಳಿಂದ ಮುಕ್ತಗೊಂಡ ಉಚ್ಚತಮ ಮತ ಮಾತ್ರ ವಿಜ್ಞಾನ ಯುಗದ ಜಗತ್ತಿನೊಡನೆ ಸಹಕರಿಸುವುದಾದರೆ ಶಾಂತಿ ಸ್ಥಾಪನೆ ಸಾಧ್ಯವೆಂದವರು ಹೇಳುವ ಮಾತು ನಿಜ. ಪ್ರಗತಿಪರ ಮತದಿಂದ ಮಾತ್ರ, ಅಂಥ ಶಾಂತಿ ಸಾಧ್ಯವೆಂಬುದು, ಅಂಥ ಮತ ಜೀವನದ ಎಲ್ಲ ಮುಖಗಳನ್ನು ರೂಪಿಸುತ್ತದೆಂಬುದೂ ದಿಟ. ವಿಭಜನಾತ್ಮಕವಾದ ರಾಷ್ಟ್ರೀಯತೆಗಿಂತ ಇಸ್ಲಾಮೀ ಮಾನವತಾ ಕಲ್ಪನೆ ಮೇಲೆಂಬುದು ಅವರ ಮತ. ಏಕದೇವತಾಪಾರಮ್ಯವನ್ನು ಎಲ್ಲರೂ ಒಪ್ಪತಕ್ಕದ್ದೇ. ಅವರ ಸುಪ್ರಸಿದ್ಧ ಕವಿತೆ God's Command to The Angels ಅತ್ಯಂತ ಶಕ್ತಿಯುತವೂ ಪರಿಣಾಮಕಾರಿಯೂ ಆದ ಕವಿತೆ. ಅದರ ಕೆಲವು ಪಂಕ್ತಿಗಳ ಭಾವಾನುವಾದವನ್ನು ಮಾತ್ರ ಇಲ್ಲಿ ಕೊಡಲು ಪ್ರಯತ್ನಿಸಲಾಗಿದೆ.

ಹೋಗು, ನನ್ನ ವಿಶ್ವದಿಂದ ಹೊರಹಾಕಲ್ಪಟ್ಟವರನ್ನು ಬಡವರನ್ನು ಎಚ್ಚರಿಸು
ಬುಡಮುಟ್ಟ ಸಿರಿವಂತರ ಅರಮನೆಗಳ ಗೋಡೆಗಳನ್ನು ಅಲುಗಾಡಿಸು
ಆತ್ಮ ಪ್ರತ್ಯಯ ಗುಲಾಮರ ರಕ್ತವನ್ನು ಕಾವುಗೊಳಿಸಲಿ
ಪುಟ್ಟ ಗುಬ್ಬಚ್ಚಿಯೊಂದು ರಣಹದ್ದನ್ನು ತಾಗಲಿ
ಶ್ರೀಸಾಮಾನ್ಯರ ಸಾಮ್ರಾಜ್ಯದ ದಿನ ಸನ್ನಿಹಿತವಾಗುತ್ತಿದೆ.
ಪಳೆಯುಳಿಕೆಗಳಲ್ಲಿ ಸಿಕ್ಕಿದರೂ ಹೂತುಬಿಡಿ.
ಬಡವನಿಗೆ ಬದುಕೊದಗಿಸದ ಹೊಲವಿದೆಯೆ?
ಗುಡಿ ಮಸೀದಿಗಳ ದೀಪವಾಗಿಸಿ ಮೊದಲು
ಬೆಳ್ಗಲ್ಲಿನಲಿ ಕಟ್ಟಿಹ ಮಂದಿರಗಳೆಂದರೆ ನನಗಸಹ್ಯ
ನನ್ನ ಪೂಜೆಗೆ ಜೇಡಿ ಮಣ್ಣಿನ ಕಿರುಮನೆಯ ಕಟ್ಟಿ

ಇಕ್ಬಾಲರು ಬಂಡವಾಳಗಾರಿಕೆಯ ಕೆಡುಕುಗಳನ್ನು ನಿಂದಿಸಿದರೂ, ಕೇವಲ ಆರ್ಥಿಕ ಸಮಾನತೆಯನ್ನು ಬೋಧಿಸಿದ ಕಾರ್ಲ್ ಮಾರ್ಕ್ಸ್‌ನ ನಾಸ್ತಿಕವಾದವನ್ನೊಪ್ಪುವುದಿಲ್ಲ. ಪ್ರಾರಂಭದಲ್ಲವರು 'ಹಿಂದೂಸ್ತಾನ್ ಹಮಾರಾ' ಎಂಬ ಕವಿತೆಯನ್ನು ರಚಿಸಿ, ಅದರಲ್ಲಿ ವ್ಯಕ್ತವಾಗಿರುವ ದೇಶಭಕ್ತಿಗಾಗಿ ಇಡೀ ಭಾರತೀಯರ ಮೆಚ್ಚುಗೆಯನ್ನು ಪಡೆದರು. ಇಡೀ ಜಗತ್ತಿನಲ್ಲಿ ಅಂಥ ದೇಶವಿಲ್ಲವೆಂಬುದು ಆ ಕವಿತೆಯ ಭಾವ. ಬರಬರುತ್ತ 'ನಾವು ಮುಸ್ಲಿಮರು, ನಮ್ಮದು ಇಸ್ಲಾಂಧರ್ಮ; ಜಗತ್ತೇ ನಮ್ಮದು' ಎಂದು ಹೇಳಿಕೊಳ್ಳುತ್ತಾರೆ. ಇಸ್ಲಾಂ ಮತ್ತು ಜನಾಂಗಿಕ ಭೇದಗಳು ಪರಸ್ಪರ ವಿರೋಧ ಮಾತ್ರವಲ್ಲ, ಅವು ಜಗತ್ತಿನ ಮಹಾಶತ್ರುಗಳೆಂಬುದೂ ಅವರ ಸ್ವಾಭಿಪ್ರಾಯ.

ಭಾರತೀಯ ಏಳ್ಗೆಗೆ ನೆರವಾಗುವ ರಾಷ್ಟ್ರೀಯತೆಗವರು ವಿರೋಧಿ. ಪ್ರತ್ಯೇಕ ರಾಷ್ಟ್ರೀಯತೆಯಿಂದಾಗಿ ಹಲವು ಮುಸ್ಲಿಮ್ ರಾಷ್ಟ್ರಗಳಲ್ಲಿ ದೇಶಾಭಿಮಾನ ವೃದ್ಧಿಯಾಗಿ, ಐಕ್ಯತೆ ನಾಶವಾದೀತೆಂಬ ಭೀತಿ ಅವರದು. ಮುಸ್ಲಿಂ ಅಲ್ಪಸಂಖ್ಯಾತರನ್ನು ಭಾರತೀಯರು ಆಳುವ ಸಂದರ್ಭವೂ ಒದಗಬಾರದೆಂಬುದು ಅವರ ಅಪೇಕ್ಷೆ. ತಮ್ಮ ರಾಷ್ಟ್ರೀಯತೆ ಭಿನ್ನವಾದದ್ದೆಂದೂ, ತಮಗಾಗಿಯೇ ಪ್ರತ್ಯೇಕ ರಾಜ್ಯ ಅಥವಾ ರಾಜ್ಯಗಳಾಗತಕ್ಕದ್ದೆಂದೂ ಪ್ರಚಾರ ಮಾಡತೊಡಗುತ್ತಾರೆ.

ಪರಮಾತ್ಮನೊಬ್ಬ, ಆತ್ಮಗಳು ಹಲವೆಂದು, ಸೂಫಿಗಳ ಅಂತರ್ಜ್ಞಾನ ಸರಿಯೆಂದೂ ಅವರು ನಂಬಿದ್ದರು. ಉರ್ದು ಮತ್ತು ಪರ್ಷಿಯನ್ ಕವಿತೆಗಳಿಗಾಗಿ ಅವರು ಇಂಡಿಯಾದಲ್ಲಿ ಹಾಗೂ ಹೊರಗೆ ಗೌರವನೀಯವಾಗಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯ ವಿಕಾಸಕ್ಕೆ

ಪೂರ್ಣಾವಕಾಶ ನೀಡುವ ಮೂಲಕ ಆಧ್ಯಾತ್ಮಿಕ ಪ್ರಜಾಪ್ರಭುತ್ವವನ್ನು ರೂಪಿಸಬೇಕೆಂಬುದು ಅವರ ಅಪೇಕ್ಷೆ. ಶಾಸನ ಸಂಸತ್ ಸಭೆಗಳ ಚರ್ಚೆ ಪರಮಾತ್ಮನ ಹದ್ದು ಮೀರಬಹುದೆಂಬ ಭೀತಿ ಅವರಿಗಿದೆ. ಎಕುರ್ ಆನ್ ಅಥವಾ ಶರಿಯತ್ ವಿವರಣೆಗಳಿಂದ ಆಧುನಿಕ ಲೌಕಿಕ ಸಮಸ್ಯೆಗಳನ್ನು ಪರಿಹರಿಸಬಹುದೇ ಎಂಬ ಸಂದೇಹ ಅವರಿಗಿದ್ದೇ ಇದೆ. ಪರಮಾಧಿಕಾರವಿರಬೇಕಾದ್ದು ಪರಮಾತ್ಮನಿಗೆ ಮಾತ್ರವೇ ಹೊರತು ಮಾನವರಿಗಲ್ಲ ಎನ್ನುವುದು ಅವರ ಎಚ್ಚರಿಕೆ. ಆಧುನಿಕ ತುರ್ಕಿಯ ಸೆಕ್ಯೂಲರಿಸಮ್ ಆಗಲಿ, ಸ್ತ್ರೀ ಸ್ವಾತಂತ್ರ್ಯವಾಗಲಿ ಅವರಿಗಾಗದು. ೧೯೩೦ರಲ್ಲಿ ಲಾಹೋರಿನಲ್ಲಿ ನಡೆದ ಮುಸ್ಲಿಮ್ ಲೀಗ್ ಅಧಿವೇಶನದಲ್ಲಿ ಇಕ್ಬಾಲ್ ಪಾಕಿಸ್ತಾನದ ಕಲ್ಪನೆಯನ್ನು ಸಭೆಯ ಮುಂದಿಟ್ಟದ್ದರಿಂದ ಅವರೇ ಪಾಕಿಸ್ತಾನದ ಪ್ರವರ್ತಕರೆನ್ನಬಹುದಾಗಿದೆ.

ಗೋಖಲೆಯನ್ನು ಮಹಾರಾಜಕೀಯ ಋಷಿಯೆಂದು ಕರೆದು, ಹಿಂದೂ ಮುಸ್ಲಿಂ ಐಕ್ಯದ ರಾಯಭಾರಿಯೆಂದು ಅವರಿಂದ ಹೊಗಳಿಸಿಕೊಂಡ **ಮುಹಮ್ಮದ್ ಆಲಿ ಜಿನ್ನ** (೧೮೭೬- ೧೯೪೮) ತಮ್ಮ ರಾಜಕೀಯ ಜೀವನದ ಪ್ರಾರಂಭದಲ್ಲಿ ರಾಷ್ಟ್ರೀಯತಾವಾದಿಯಾಗಿದ್ದರು. ಸೂಕ್ಷ್ಮಮತಿಯ ವಕೀಲರಾಗಿದ್ದ ಅವರು ೧೯೧೬ರಲ್ಲಿ ಲೋಕಮಾನ್ಯ ತಿಲಕರ ಮೇಲೆ ಹೂಡಿದ್ದ ರಾಜದ್ರೋಹ ಆಪಾದನೆಯಲ್ಲಿ ಸಮರ್ಥವಾಗಿ ವಾದಿಸುತ್ತಾರೆ. ಸಂಸತ್ ಸಭೆಯಲ್ಲಿ ಗೋಖಲೆಯವರು ಮಂಡಿಸಿದ್ದ ಪ್ರಾಥಮಿಕ ಶಿಕ್ಷಣ ಮಸೂದೆಯನ್ನು ಬೆಂಬಲಿಸುತ್ತ ಶ್ರೀಸಾಮಾನ್ಯರಿಗೆ ಉಚಿತ ಶಿಕ್ಷಣ ನೀಡತಕ್ಕದ್ದು ನಾಗರಿಕ ಸರ್ಕಾರದ ಕರ್ತವ್ಯವೆಂದವರು ಅಬ್ಬರಿಸುತ್ತಾರೆ.

ಅಸಹಕಾರ ಚಳವಳಿ ಪ್ರಾರಂಭವಾಗುವ ತನಕ, ಮುಸ್ಲಿಂ ಲೀಗ್ ವೇದಿಕೆಯಿಂದಲೂ ಜಿನ್ನಾ ಹಿಂದೂ ಮುಸ್ಲಿಂ ಏಕತೆಗಾಗಿ ಕರೆಕೊಡುತ್ತಿದ್ದರು. ಗಾಂಧೀಜಿಯ ಕರೆಗೆ ದೇಶದ ಜನ ಓಗೊಡಲಾಗಿ, ಸ್ವಾತಂತ್ರ್ಯ ಚಳವಳಿ ಸಂವಿಧಾನ ರೀತಿಯಲ್ಲಿರಬೇಕೇ ಹೊರತು, ಆಳುವ ಸರ್ಕಾರವನ್ನು ಬುಡಮೇಲು ಮಾಡುವ ಸಾಹಸ ಯೋಗ್ಯವಲ್ಲವೆಂದವರು ವಾದಿಸುತ್ತಾರೆ. ಅಧಿಕಾರ ಪ್ರಾಪ್ತವಾದಾಗ ಹಿಂದೂ ಮುಸ್ಲಿಮರು ಸಮಸಮವಾಗಿ ಹಂಚಿಕೊಳ್ಳಬೇಕೆಂದು ಅವರು ಹಟ ಹಿಡಿಯುತ್ತಾರೆ. ಇಂಡಿಯಾದ ಪ್ರಜಾಪ್ರಭುತ್ವವೆಂದರೆ, ಮುಸ್ಲಿಮ್, ಪಾರ್ಸಿ, ಯಹೂದ್ಯ, ಅಸ್ಪೃಶ್ಯ ಮತ್ತು ಕ್ರಿಶ್ಚಿಯನ್ನರನ್ನು ದಮನಗೊಳಿಸುವ ಹಿಂದೂರಾಜ್ ಎಂದು ಪ್ರಚಾರ ಮಾಡುತ್ತಾರೆ. ೧೯೪೦ರಲ್ಲಿ ಲಾಹೋರಿನಲ್ಲಿ ನಡೆದ ಮುಸ್ಲಿಮ್ ಲೀಗ್ ಅಧಿವೇಶನದಲ್ಲಿ ಅವರು ದ್ವಿರಾಷ್ಟ್ರ ಸಿದ್ಧಾಂತವನ್ನು ಮಂಡಿಸುತ್ತಾರೆ. ಕಾಂಗ್ರೆಸ್ ಹಿಂದೂ ಸಂಸ್ಥೆಯೆಂದು ಉದ್ಗರಿಸುತ್ತಾರೆ. ಇಂಗ್ಲೆಂಡಿನಲ್ಲಿ ಚಾಲ್ತಿಯಲ್ಲಿರುವ ಪ್ರಜಾಪ್ರಭುತ್ವವಿಧಾನ ಇಂಡಿಯಾಕ್ಕೆ ಅನ್ವಯವಾಗದೆಂದು ಸಾರುತ್ತಾರೆ. ಯಾವ ದೃಷ್ಟಿಯಿಂದ ಸಮೀಕ್ಷಿಸಿದರೂ ನಾಗರಿಕತೆ, ಭಾಷೆ, ಸಾಹಿತ್ಯ, ಕಲೆ, ಶಿಲ್ಪ, ಹೆಸರು, ಮೌಲ್ಯ ವಿಧಾನ, ಕಾನೂನು, ನೀತಿ, ಸಂಪ್ರದಾಯ, ಕ್ಯಾಲೆಂಡರ್, ಚರಿತ್ರೆ, ಪರಂಪರೆ, ಮನೋಧರ್ಮ, ಆಶೋತ್ತರ, ಜೀವನ ವಿಧಾನ-ಯಾವುದೇ ಆದರೂ ಅಂತರರಾಷ್ಟ್ರೀಯ ಕಾನೂನಿನ ಪ್ರಕಾರ ತಾವೊಂದು ಪ್ರತ್ಯೇಕ ರಾಷ್ಟ್ರವೆಂದವರು ಸಾಧಿಸುತ್ತಾರೆ. ದೇಶ ವಿಭಜನೆಯೊಂದೇ ಹಿಂದೂ ಮುಸ್ಲಿಮ್ ಸಮಸ್ಯೆಗೆ ಪರಿಹಾರವೆಂದು, ವಾಯವ್ಯ ಸರಹದ್ದಿನ ಪ್ರಾಂತ್ಯಗಳು, ಬಲೂಚಿಸ್ತಾನ, ಸಿಂಧ್, ಪಂಜಾಬ್, ಬಂಗಾಳ ಮತ್ತು ಅಸ್ಸಾಂ ಸೇರಿ ಸರ್ವತಂತ್ರ ಸ್ವತಂತ್ರ ಪಾಕಿಸ್ತಾನವಾಗಬೇಕೆಂದವರು ಸ್ಪಷ್ಟಪಡಿಸುತ್ತಾರೆ. ಅಲಿಘರ್ ಶಿಕ್ಷಣಾಂದೋಲನವೂ ಪಾಕಿಸ್ತಾನ ನಿರ್ಮಾಣಕ್ಕೆ ಕಾರಣವಾಗಿರಬಹುದೆ? ರಾಜಕಾರಣಿಗಳು ಯೋಚಿಸಬೇಕು.

ಜಿನ್ನಾ ತಮ್ಮ ಇಚ್ಛೆಯನ್ನು ಈಡೇರಿಸಿಕೊಳ್ಳುತ್ತಾರೆ. ೧೧.೮.೧೯೪೭ರಂದು ಪಾಕಿಸ್ತಾನ ರಾಜ್ಯಾಂಗಸಭೆಯಲ್ಲಿ ಅವರು ಆಡಿದ ಮಾತುಗಳಿವು: 'ಪಾಕಿಸ್ತಾನದಲ್ಲಿ ನೀವೆಲ್ಲರೂ ಸ್ವತಂತ್ರರು. ಮಂದಿರ ಮಸೀದಿಗಳಿಗೆ, ನೀವು ಎಲ್ಲಿಗೆ ಬೇಕಾದರೂ ಹೋಗಬಹುದು. ನೀವು ಯಾವ ಜಾತಿ ಮತಕ್ಕೆ ಸೇರಿದ್ದರೂ ಸಮಾನ ಪ್ರಜೆಗಳು. ದಿನ ಕಳೆದಂತೆ ಹಿಂದೂಗಳು ಹಿಂದೂಗಳಾಗಿ ಉಳಿಯುವುದಿಲ್ಲ, ಮುಸ್ಲಿಮರು ಮುಸ್ಲಿಮರಾಗಿ ಉಳಿಯುವುದಿಲ್ಲ. ಇದು ಮತೀಯಾರ್ಥದಲ್ಲಲ್ಲ, ರಾಜಕೀಯಾರ್ಥದಲ್ಲಿ.' 'ನಾವು ಮುಸ್ಲಿಮರಾಗಿಯೇ ನಮ್ಮ ಏಳ್ಗೆಯನ್ನು ಕಂಡುಕೊಳ್ಳಬೇಕಾಗಿದೆ' ಎಂದವರು ಘೋಷಿಸುತ್ತಾರೆ. ಕೊನೆಗವರ ಮಾತು ಏನಾಯಿತು?

ಗಡಿನಾಡಿನ ಗಾಂಧಿ ಖಾನ್ ಅಬ್ದುಲ್ ಗಫಾರ್ ಖಾನರಂತೆ ಅಬುಲ್ ಕಲಾಮ್ ಆಜಾದರೂ (೧೮೮೯-೧೯೫೮) ಗಾಂಧಿ ಯುಗದ ಶ್ರೇಷ್ಠ ವ್ಯಕ್ತಿಗಳಲ್ಲೊಬ್ಬರು. ಅವರು ಕುರ್ ಆನ್‌ನ ಮಹಾಭಾಷ್ಯಕಾರರು. ಅವರದನ್ನು ರಚಿಸಿದ್ದು ಪ್ರಥಮ ಮಹಾ ಯುದ್ಧದ ಕಾಲದಲ್ಲಿ. ರಾಂಚಿ ಜೈಲಿನಲ್ಲಿದ್ದಾಗ ಕುರ್ ಆನ್‌ಗೆ ಶರಣಾಗುವುದೆ ಲೋಕದ ಸಮಸ್ಯೆಗಳಿಗೆ ಪರಿಹಾರವೆಂದವರು ಸ್ಪಷ್ಟಪಡಿಸುತ್ತಾರೆ. ಸೇಂದ್ರಿಯ ಜೀವನವನ್ನು ಕುರ್ ಆನ್ ವಿರೋಧಿಸುತ್ತದೆ. ಬಾಹ್ಯರೂಪದ ಪೂಜೆಗಾಗಿ ಜನ ಜಗಳವಾಡಬಾರದು. ಮಾನವನಿಗೆ ಗುಣ ಹಾಗೂ ಆಂತರಿಕ ಜೀವನ ಮುಖ್ಯ. ತನ್ನವರನ್ನು, ಬಡವರನ್ನು, ಅನಾಥರನ್ನು ಅನುಕಂಪೆಯಿಂದ ಕಂಡು, ದೇವರಿಗೆ ನಿಷ್ಠೆಯಿಂದಿರುವುದೇ ಮತದ ಸಾರ. ಸರ್ವರೂ ನೀತಿ ನಡತೆಯನ್ನು ಪಾಲಿಸಬೇಕು, ಬೇರೆ ಮತಗಳ ಭಕ್ತರಿಗೆ ಮುಕ್ತಿಯಿಲ್ಲವೆನ್ನುವುದೇ ಮೂರ್ಖತನವಾಗುತ್ತದೆ. ಮತದ ತಿರುಳಿಗೆ ಬೆಲೆ ಕೊಡಬೇಕೇ ಹೊರತು, ಬಾಹ್ಯಾಚಾರಗಳಿಗಲ್ಲ. ದಯಾಮಯನಾದ ಭಗವಂತ ಇಡೀ ಮನುಕುಲವನ್ನೆ

ಸಂರಕ್ಷಿಸುತ್ತಾನೆ. ತಿಳಿವಳಿಕೆಯಿಲ್ಲದ ಜನ ಮತಮತಗಳ ನಡುವೆ ಒಡಕು ಹುಟ್ಟಿಸುತ್ತಾರೆ. ಭ್ರಾತೃತ್ವ, ಏಕ ದೇವತಾ ಪಾರಮ್ಯ ಮತ್ತು ಮತೀಯ ಏಕತೆ ಕುರ್ ಆನ್‌ನ ಸಾರ. 'ವೈವಿಧ್ಯದಲ್ಲಿ ಏಕತೆಯಿದೆ' - ಇದು ಆಜಾದರ ಪ್ರಕಾರ ಕುರ್ ಆನ್‌ನ ಸಂದೇಶ. ಮುಹಮ್ಮದನೇ ಕೊನೆಯ ಪ್ರವಾದಿಯೆಂಬುದನ್ನವರು ನಂಬುವುದಿಲ್ಲ. ಆದರೆ ಸಂಪ್ರದಾಯಸ್ಥ ಮುಸ್ಲಿಮರು ಅಜಾದರ ವೈಚಾರಿಕ ಹಿನ್ನೆಲೆಯ ಉದಾರ ಭಾಷ್ಯವನ್ನೊಪ್ಪುವುದಿಲ್ಲ.

ಬ್ರಿಟಿಷರ ಗುಲಾಮಗಿರಿಯ ವಿರುದ್ಧವಾಗಿ ಮೊದಲು ಹೋರಾಟ ನಡೆಸಬೇಕೆಂಬುದು ಮೌಲಾನರ ಧ್ಯೇಯವಾಗಿತ್ತು. ಇತಿಹಾಸ ಕಾಲದಿಂದಲೂ ರಾಜಕೀಯ ಅಥವಾ ಮತೀಯ ದಮನದ ವಿರುದ್ಧವಾಗಿ ಸೋಕ್ರತೀಸ್, ಜೀಸಸ್ ಕ್ರೈಸ್ತ ಮೊದಲಾದವರು ಹೋರಾಡಿ ಹುತಾತ್ಮರಾಗಿದ್ದಾರೆ. ದಾಸ್ಯದ ನೊಗದಡಿ ನರಳುವ ಜನ ಎಚ್ಚತ್ತು ತಮ್ಮ ಆಜನ್ಮ ಹಕ್ಕಾದ ಸ್ವಾತಂತ್ರ್ಯಕ್ಕಾಗಿ ಸೆಣಸುವಾಗ ಆಳುವ ದೊರೆಗಳು ಅವರನ್ನು ತುಳಿಯುವುದು ಐತಿಹಾಸಿಕ ಸಂಗತಿಯಾಗಿದೆ. ಇಸ್ಲಾಂ ಭಗವಂತನ ಸಾರ್ವಭೌಮತ್ವವನ್ನು ಮಾತ್ರ ಗೌರವಿಸುತ್ತದೆ. ಚಕ್ರವರ್ತಿಗಳು, ರಾಜಮಹಾರಾಜರು, ಪುರೋಹಿತರು, ಮತೀಯ ನಾಯಕರು ಮತ್ತು ಶ್ರೀಮಂತರು ಮಾನವನ ಸ್ವಾತಂತ್ರ್ಯವನ್ನು ದಮನಗೊಳಿಸಲು ಪ್ರಯತ್ನಿಸುತ್ತಾರೆ. ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕೆನ್ನುವುದು ಇಸ್ಲಾಂ ಸಂದೇಶ. ಯಾವುದಾದರೂ ಸರ್ಕಾರ ಬಲವಂತದಿಂದ ಅನ್ಯಾಯವಾಗಿ ಯಾವ ರಾಜ್ಯವನ್ನೇ ಆಗಲಿ ಆಳುವ ಹಕ್ಕು ಹೊಂದಿರುವುದಿಲ್ಲ. ಅಜಾದರು ಅಸಹಕಾರ ಚಳವಳಿಕಾಲದಲ್ಲಿ ಇಸ್ಲಾಮಿ ತತ್ತ್ವಗಳನ್ನು ಪ್ರಚಾರಕ್ಕಾಗಿ ಬಳಸಿಕೊಳ್ಳುತ್ತಾರೆ. ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವ ಇಸ್ಲಾಂನ ಮೂಲಭೂತ ತತ್ತ್ವವೆಂದವರು ಸಾರುತ್ತಾರೆ. ಆದರೆ ಆಜಾದರಿಗೆ ಗಾಂಧೀಜಿಯ ಅಹಿಂಸಾತತ್ತ್ವ ಒಪ್ಪಿಗೆಯಾಗುವುದಿಲ್ಲ. ಹಿಂಸೆಗೆ ಹಿಂಸೆ ಇಸ್ಲಾಂ ಕೊಟ್ಟಿರುವ ಬಾಣ. ಅಜಾದ್ ವಿಧಿಯಿಲ್ಲದೆ ಅಹಿಂಸೆಯನ್ನೊಪ್ಪಿಕೊಳ್ಳುತ್ತಾರೆ.

ಹಿಂದೂ ಮುಸ್ಲಿಮರ ನಡುವೆ ಏಕತೆ ಸಾಧಿಸುವ ನಿಟ್ಟಿನಲ್ಲಿ ಅಜಾದರು ವರಿಷ್ಠ ಪ್ರಮಾಣದಲ್ಲಿ ಪ್ರಯತ್ನಿಸುತ್ತಾರೆ. ಮುಸ್ಲಿಮ್ ಲೀಗ್‌ನ ಪ್ರತ್ಯೇಕತಾ ಭಾವನೆಗೆ ಅವರು ಪೂರ್ತಿ ವಿರುದ್ಧ. ಹಿಂದೂ ಮುಸ್ಲಿಮರ ಪೂರ್ವಜರು ಎರಡು ಕಡೆಯವರಿಗೂ ಸಮಾನರಾದುದರಿಂದ, ಸಾವಿರಾರು ವರ್ಷಗಳಿಂದ ಎರಡು ಜನಾಂಗಗಳು ಒಟ್ಟಾಗಿ ಜೀವನ ನಡಸುತ್ತಿರುವುದರಿಂದ, ಭೇದ ಭಾವಗಳನ್ನಳಿದು ಒಂದಾಗಬೇಕೆಂದವರು ಕರೆಕೊಡುತ್ತಾರೆ. ೧೯೩೭-೩೯ನೆಯ ಅವಧಿಯ ಕಾಂಗ್ರೆಸ್ ಆಡಳಿತದ ವಿರುದ್ಧವಾಗಿ ಹೇರುತ್ತಿದ್ದ ಜಿನ್ನಾ ನಿಂದೆಯನ್ನವರು ಪ್ರತಿಭಟಿಸುತ್ತಾರೆ. ಅಷ್ಟೇ ಅಲ್ಲ, ಅಲಿಘರ್ ಪಂಥದ ರಾಜಕೀಯಾಲೋಚನೆಯನ್ನವರು ಖಂಡಿಸುತ್ತಾರೆ. ಪಾಕಿಸ್ತಾನ ರಚನೆಯನ್ನವರು ಖಂಡತುಂಡವಾಗಿ ವಿರೋಧಿಸುತ್ತಾರೆ. ಸ್ವಾತಂತ್ರ್ಯಾನಂತರ ಅವರು ನೆಹರೂ ಸಚಿವ ಸಂಪುಟದಲ್ಲಿ ಶಿಕ್ಷಣ ಸಚಿವರಾಗುತ್ತಾರೆ.

ಗುಮಾಸ್ತರಾಗಿ ನೌಕರಿಯನ್ನು ಸೇರಿ, ವೈಸ್‌ರಾಯರ ಕಾರ್ಯ ಸಮಿತಿಯ ಸದಸ್ಯರಾದ **ಸಯದ್ ಅಹಮದ್ ಖಾನ್** (೧೮೧೭-೧೮೯೮) ಯಾವ ಸದನಕ್ಕೂ ಚುನಾಯಿತ ಪ್ರತಿನಿಧಿಗಳಿರಬಾರದೆಂದು ಸ್ಪಷ್ಟಪಡಿಸಿದ್ದುಂಟು. ಹಾಗೆ ಸ್ಪಷ್ಟಪಡಿಸಲು ಬ್ರಿಟಿಷ್ ಸರ್ಕಾರದ ಪರವಾಗಿದ್ದ ಅವರ ವಿಧೇಯತೆಯೇ ಕಾರಣ. ತಮ್ಮವರಿಗೆ ಪಾಶ್ಚಾತ್ಯ ವಿದ್ಯೆಯ ಪಾಂಡಿತ್ಯವಿರದಿದ್ದರೆ, ಹಿಂದುಳಿದಿರ ಬೇಕಾಗುತ್ತದೆಯೆಂಬ ದೃಷ್ಟಿಯಿಂದ ಅವರು ವಿಜ್ಞಾನ ಗ್ರಂಥಗಳ ಭಾಷಾಂತರಕ್ಕಾಗಿ ೧೮೬೪ರಲ್ಲಿ ಗಾಜಿಯಾಪುರದಲ್ಲಿ ಭಾಷಾಂತರ ಸೊಸೈಟಿಯನ್ನು ಪ್ರಾರಂಭಿಸುತ್ತಾರೆ. ಅಲಿಘರ್ ಸ್ಕೂಲಿನ ಕನಸೂ ಅವರದೇ. ಅವರ ಪ್ರಕಾರ ೧೮೫೭ನೆಯ ವರ್ಷದ ಇಂಡಿಯಾ ದಂಗೆಯ ಕಾರಣ ಶಾಸನಸಭೆಗಳಿಗೆ ಭಾರತೀಯ ಪ್ರವೇಶವಿಲ್ಲದ್ದು. ಇದರ ಜತೆಗೆ ಇತರ ಕಾರಣಗಳೂ ಇದ್ದುವು.

ಅಹಮದ್ ಖಾನರೊಮ್ಮೆ ಮುಂದೆ ಕಾಣಿಸಿರುವಂತೆ ದೇಶಾಭಿಮಾನವನ್ನು ವ್ಯಕ್ತಪಡಿಸಿದ್ದುಂಟು :'ಉತ್ತಮವರ್ಣದ ಹಿಂದೂಗಳೆಂತು ಎಂದೋ ಹೊರಗಿನಿಂದ ಬಂದು, ಇಲ್ಲಿ ನೆಲಸಿ, ತಮ್ಮ ಪೂರ್ವದ ವಸತಿಗಳನ್ನು ಮರೆತು, ಇಂಡಿಯಾವನ್ನೇ ತಮ್ಮ ಸ್ವಂತ ದೇಶವೆಂದು ಪರಿಗಣಿಸಿದರೋ ಅಂತೆಯೇ ಮುಸ್ಲಿಮರೂ ನೂರಾರು ವರ್ಷಗಳ ಹಿಂದೆ ತಮ್ಮ.ದೇಶವನ್ನು ಬಿಟ್ಟು ಬಂದು ಇಂಡಿಯಾವನ್ನೆ ತಮ್ಮದನ್ನಾಗಿ ಪ್ರೀತಿಸುತ್ತಿದ್ದಾರೆ. ನನ್ನ ಹಿಂದೂ ಸಹೋದರರೂ, ನನ್ನ ಮತೀಯರೂ, ಉಸಿರಾಡುವುದು ಒಂದೇ ಗಾಳಿ, ಕುಡಿಯುವುದು ಒಂದೇ ನೀರು, ತಿನ್ನುವುದು ಒಂದೇ ನೆಲದ ಬೆಳೆ, ಬದುಕುವುದು, ಸಾಯುವುದು ಜತೆಯಲ್ಲಿಯೇ. ತುಸು ಕಾಲ, ನಮ್ಮನಮ್ಮ ದೇವರ ಕಲ್ಪನೆಯನ್ನು ಮರೆತಿದ್ದಾದರೆ, ಉಳಿದ ಬದುಕೆಲ್ಲ ಒಂದೇ ರಾಷ್ಟ್ರಕ್ಕೆ ಸೇರಿದ್ದು. ನಮ್ಮ ಹೃದಯಗಳು ಒಂದಾಗುವುದಾದರೆ ಮಾತ್ರ ದೇಶದ ಪ್ರಗತಿ ಸಾಧ್ಯ.'

ಇಷ್ಟು ಆತ್ಮೀಯವಾಗಿ, ಆಪ್ತವಾಗಿ ಭಾಷಣ ಮಾಡಿದ ಸಯ್ಯದ್‌ರು ಕೆಲವು ದಿನಗಳಲ್ಲಿಯೇ ಮನಸ್ಸನ್ನು ಬದಲಾಯಿಸಿಕೊಂಡದ್ದು ಆಶ್ಚರ್ಯ. ಅವರಿಗೆ ರಾಷ್ಟ್ರೀಯ ಕಾಂಗ್ರೆಸ್ ಬಗ್ಗೆ ಸಂಶಯವುಂಟಾಗಿ, ಅದರಿಂದ ದೂರ ಸರಿಯುವಂತೆ ತಮ್ಮ ಮತೀಯರಿಗವರು

ಎಚ್ಚರಿಕೆ ನೀಡುತ್ತಾರೆ. ಕಾಂಗ್ರೆಸ್ಸಿಗೆ ವಿರುದ್ಧವಾಗಿ ಅವರು ಸಂಸ್ಥೆಗಳನ್ನು ಸಹ ಪ್ರಾರಂಭಿಸುತ್ತಾರೆ. ಬಹುಮತೀಯರ ವಿಶ್ವಾಸದ್ರೋಹದ ಬಗ್ಗೆ ಅವರಿಗೆ ಶಂಕೆಯಿತ್ತೆಂಬುದಂತು ನಿಜ. ಮುಸ್ಲಿಮ್ ಜನಾಂಗಕ್ಕೆ ಪ್ರಗತಿಪರ ಆಧುನಿಕ ಶಿಕ್ಷಣದ ಸೌಲಭ್ಯವನ್ನೊದಗಿಸಲು ಸರ್ವ ಪ್ರಯತ್ನ ಮಾಡುತ್ತಾರೆ.

ಅಹಿಂಸಾತ್ಮಕ ಅಸಹಕಾರ ಚಳವಳಿ ಹಾಗೂ ಹಿಂದೂ ಮುಸ್ಲಿಮ್ ಏಕತೆಗೆ ತಮ್ಮನ್ನರ್ಪಿಸಿಕೊಂಡ **ಮುಹಮ್ಮದ್ ಅಲಿ** (೧೮೭೮-೧೯೩೧) ಕಾಮ್ರೇಡ್ ಪತ್ರಿಕೆಯ ಸಂಪಾದಕರಾಗಿ, ಮುಸ್ಲಿಮ್ ಲೀಗಿನ ಅಧ್ಯಕ್ಷರಾಗಿ, ಕೊನೆಗೆ ಕಾರಾಗೃಹವಾಸಿಯಾಗಿ, ದೇಶದಲ್ಲೆಲ್ಲ ತಮ್ಮ ಹೆಸರು ಹಬ್ಬಿಸುತ್ತಾರೆ. ಜೈಲಿನಿಂದ ಹೊರಬಂದನಂತರ ಅವರು ಕಾಂಗ್ರೆಸ್ ಸೇರುತ್ತಾರೆ. ವಿಜ್ಞಾನದ ಸ್ಥಾನ ಮುಖ್ಯವಾದರೂ ಮತ ಜೀವನ ವಿಜ್ಞಾನವೆಂದವರು ಭಾವಿಸಿದವರು. ಕುರ್ ಆನ್ ತಮ್ಮ ಮಾರ್ಗದರ್ಶಿ ಮಾತ್ರವಲ್ಲ, ಜೀವನಕ್ಕೆ ಸ್ಫೂರ್ತಿ ನೀಡುವ ಶಕ್ತಿಯೆಂದವರು ತಿಳಿಯುತ್ತಾರೆ. ಅವರೊಮ್ಮೆ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ಆಡಿದ ಮಾತುಗಳಿವು: 'ಒಂದು ಸಂಗತಿ ಮಾತ್ರ ನಿಜ. ಇಂದು ಹಿಂದೂಗಳು ಮುಸಲ್ಮಾನರನ್ನಾಗಲಿ, ಮುಸಲ್ಮಾನರು ಹಿಂದೂಗಳನ್ನಾಗಲಿ ಈ ದೇಶದಿಂದ ಉಚ್ಚಾಟಿಸಲಾರರು. ಇಂಥ ಸಂದರ್ಭದಲ್ಲಿ ಎರಡು ಕೋಮುಗಳೂ ಸಹಕಾರ ಸೌಹಾರ್ದಗಳಿಂದ ಬದುಕುವುದೊಂದೆ ಅವರ ಮುಂದಿರುವ ಏಕಮಾತ್ರ ಮಾರ್ಗ. ಹಿಂದೂಗಳ ಸ್ವರಾಜ್ಯ ಸಂಬಂಧವಾದ ಭಾವನೆಯನ್ನಂತು ಮುಸ್ಲಿಮರು ಬೆಂಬಲಿಸಬೇಕು. ಅಂತೆಯೇ ಹಿಂದುಗಳು ಮುಸ್ಲಿಮರ ಗುಲಾಮಗಿರಿಯ ಭಯವನ್ನು ನಿವಾರಿಸಬೇಕಾಗುತ್ತದೆ. ಇಂಥದೊಂದು ಶಾಶ್ವತ ಒಪ್ಪಂದಕ್ಕೆ ಬರುವ ತನಕ ಈ ದೇಶದ ಇಂದಿನ ಸ್ಥಿತಿ ಬದಲಾಗದು 'ಅವರ ಈ ಮಾತುಗಳನ್ನು ನಡೆಸುವರಾರು?

ಆದರೆ ದಿನ ಕಳೆದಂತೆ ಮುಹಮ್ಮದ್ ಅಲಿಯವರೇ ತಾವಾಡಿದ ಮಾತನ್ನು ನಡೆಸುವುದಿಲ್ಲ. ಅಸಹಕಾರ ಚಳವಳಿಯನ್ನವರು ವಿರೋಧಿಸುತ್ತಾರೆ. ಗಾಂಧಿಗೆ ಇಂಡಿಯಾದ ಸ್ವಾತಂತ್ರ್ಯ ಬೇಕಿಲ್ಲ, ಹಿಂದೂ ಮಹಾಸಭೆಯ ದರ್ಬಾರಿಗೆ ಮುಸ್ಲಿಮರನ್ನೊಪ್ಪಿಸುವುದೆ ಅವರ ಆಂದೋಳನದ ಗುರಿಯೆನ್ನುವಲ್ಲಿ ಅಪಪ್ರಚಾರದ ಅಂಶವಿದ್ದೆ ಇದೆ. ಆದರೂ ಮಾತೃಭೂಮಿಯ ಭಕ್ತಿ ಕುಂದಿಲ್ಲ. 'ಸ್ವಾತಂತ್ರ್ಯವಿಲ್ಲದೆ ಗುಲಾಮೀ ದೇಶಕ್ಕೆ ನಾನು ಹಿಂದಿರುಗಲಾರೆ. ಸ್ವಾತಂತ್ರ್ಯವಿರುವ ಈ ಪರದೇಶದಲ್ಲಿ ಸತ್ತರೂ ಸರಿಯೆ' ಎಂದವರು ದುಂಡು ಮೇಜಿನ ಪರಿಷತ್ತಿನಲ್ಲಿ ಭಾಷಣ ಮಾಡುತ್ತಾರೆ. ಒಟ್ಟಿನಲ್ಲಿ ಅವರ ವಿಶ್ವಾಸದಲ್ಲಾಗಲಿ, ಮಾತಿನಲ್ಲಾಗಲಿ ಸ್ತಿಮಿತತೆ ಇದ್ದಂತೆ ತೋರದು. ಅವರು ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ್ದೆ ಈ ರಂಪಕ್ಕೆಲ್ಲ ಕಾರಣ. ವಿಶ್ವವ್ಯಾಪಕವೂ ಶಾಶ್ವತವೂ ಆದ ಆಧ್ಯಾತ್ಮಿಕ ಮತ್ತು ನೈತಿಕ ಮೌಲ್ಯಗಳಲ್ಲಿ ಗಾಂಧೀಜಿಗೆ ನಿಷ್ಠೆಯಿದ್ದರೆ, ಕುರ್ ಆನ್‌ಗೆ ಸೀಮಿತವಾದ ನೈತಿಕ ಮೌಲ್ಯದಲ್ಲಿ ಮಾತ್ರ ಮುಹಮ್ಮದ್ ಅಲಿಯವರಿಗೆ ನಿಷ್ಠೆ. ಅದೇನೇ ಇರಲಿ, ರಾಜಕೀಯದಲ್ಲಿ ಅಲ್ಪಸಂಖ್ಯಾತರು ಯಾವ ಕಡೆಗೆ ತುಯ್ಯುತ್ತಾರೆಂದು ಭವಿಷ್ಯ ನುಡಿಯುವುದು ಕಷ್ಟ.

### ಕಮ್ಯುನಿಸಮ್ ಪ್ರವೇಶ

ಕಮ್ಯುನಿಸಮ್ ಇಂಡಿಯಾ ದೇಶವನ್ನು ಪ್ರವೇಶಿಸಿದ್ದು ೧೯೧೭ರ ಸುತ್ತಮುತ್ತ, ರಷ್ಯಾದಲ್ಲಿ ಕ್ರಾಂತಿ ನಡೆದ ಹೊತ್ತಿನಲ್ಲಿ. ವಸಾಹತುಶಾಹಿ ಜನ, ಶೋಷಿತರು, ಬಡವರು, ತುಳಿತಕ್ಕೊಳಗಾದವರು ಮಾಸ್ಕೋವನ್ನು ಸ್ವರ್ಗವೆಂದು ಭಾವಿಸಿ, ಆ ಕಡೆಗೆ ಕಣ್ಣಾಗುತ್ತಾರೆ, ಲೆನಿನ್ ಆರಾಧ್ಯವ್ಯಕ್ತಿಯಾಗುತ್ತಾನೆ, ಮುಕ್ತಿದಾತನಾಗುತ್ತಾನೆ. ನೆಹರೂ ಅಂಥ ರಾಜಕಾರಣಿಗಳು ಮಾಸ್ಕೋಗೆ ಯಾತ್ರೆ ಮಾಡುತ್ತಾರೆ. ಕವಿಗಳು ಲೆನಿನ್‌ನನ್ನು ಕುರಿತು ಹಾಡುತ್ತಾರೆ.

ಧಮನಿಯಲಿ ಬಿಸಿನೆತ್ತರುಕ್ಕದೆ ನೆನೆಯಲಾರೆ
ನಿನ್ನಂ ಲೆನಿನ್! ನಿನ್ನ ಹೆಸರದು ಸಿಡಿಲ್ ಸದ್ದು
ದೊರೆಗಿವಿಗೆ; ನಿನ್ನ ಸಮತಾ ಬೋಧೆ ಸಿಡಿಮದ್ದು
ನರನ ಸಂಗ್ರಹ ಬುದ್ಧಿ ಸ್ವಾರ್ಥತೆಯನುರಿದೋರೆ
ದಹಿಸಿ, ನಿಃಸ್ವಾರ್ಥತೆಯ ಬೆಂಕಿಯಿಂ ಹೃತ್ಕುಂಡ
ಸರ್ವದಾ ಪ್ರಜ್ವಲಿಸುವಂತೆಸಗೆ ಜಮದಗ್ನಿ
ಸುತನಂತೆ ನೀನು ಪಾರ್ಥಿವ ಕುಲಕೆ ಬಡಬಾಗ್ನಿ
ದುಡಿವ ದೀನರ ದೈವವನ್ಯರ್ಗೆ ಯಮದಂಡ!' (ಲೆನಿನ್ : ಕೃತ್ತಿಕೆ, ಪು. ೬೫)

ಅನೇಕ ನಾಯಕರು ಕಮ್ಯೂನಿಸ್ಟ್ ಸಾಹಿತ್ಯವನ್ನು ಕಬಳಿಸುತ್ತಾರೆ. ಎಂ. ಎನ್. ರಾಯ್, ವೀರೇಂದ್ರನಾಥ್ ಚಟ್ಟೋಪಾಧ್ಯಾಯ, ಅವನಿ ಮುಖರ್ಜಿ, ನಳಿನಿ ಗುಪ್ತ, ಭೂಪೇಂದ್ರನಾಥ ದತ್ತ, ರಜನಿ ಪಾಮೆದತ್ತ, ಎಸ್. ಎ. ಡಾಂಗೆ ಮೊದಲಾದವರು ಕಮ್ಯೂನಿಸಮ್

ತತ್ತ್ವಗಳನ್ನು ನಾಡಿನಲ್ಲಿ ಬಿತ್ತುತ್ತಾರೆ. ಕಮ್ಯುನಿಸ್ಟ್ ಒಲವುಳ್ಳ ಲಾಲ ಹರದಯಾಳ್, ಸೋಹನ್ ಸಿಂಗ್, ರತನ್ ಸಿಂಗ್, ರಜನಿ ಪಾಮೆದತ್ತ ಮೊದಲಾದವರು ಅಮೆರಿಕೆಯ ಕ್ಯಾಲಿಫೋರ್ನಿಯಾದಲ್ಲಿ ಇಂಡಿಯಾದ ಸ್ವಾತಂತ್ರ್ಯಕ್ಕಾಗಿ ಘದರ್ (ಬಂಡಾಯ) ಪಕ್ಷವನ್ನು ಪ್ರಾರಂಭಿಸುತ್ತಾರೆ.

ಕಾನ್ಪುರ ಮತ್ತು ಮೀರತ್ ವಿದ್ರೋಹ ಘಟನೆಗಳಲ್ಲಿ ಡಾಂಗೆ, ನಳಿನಿಗುಪ್ತ, ಮುಜಫರ್ ಅಹಮದ್, ಮಿರಜ್‌ಕರ್ ಮೊದಲಾದ ಕಮ್ಯೂನಿಸ್ಟರು ಸಿಕ್ಕಿಕೊಳ್ಳಲಾಗಿ, ದೀರ್ಘ ಕಾಲದ ಕಾರಾಗೃಹಶಿಕ್ಷೆಗೊಳಗಾಗುತ್ತಾರೆ. ಕಮ್ಯೂನಿಸ್ಟರಿಗೆ ಗಾಂಧಿ ಆಂದೋಲನದಲ್ಲಿ ನಂಬಿಕೆಯಿರಲಿಲ್ಲ. ಅವರ ದೃಷ್ಟಿಯಲ್ಲಿ ಅದೊಂದು ಬೂರ್ಷ್ವಾ ಸುಧಾರಣಾಕ್ರಮ. ೧೯೩೪ರಿಂದ ೧೯೪೨ರ ವರೆಗೆ ಕಮ್ಯೂನಿಸ್ಟ್ ಪಕ್ಷ ಬಹಿಷ್ಕೃತಗೊಂಡಿತ್ತು. ಏತನ್ಮಧ್ಯೆ ಆಂಧ್ರದ ಎನ್. ಜಿ. ರಂಗಾ ಅವರು ೧೯೩೬ರಲ್ಲಿ ಅಖಿಲ ಭಾರತೀಯ ಕಿಸಾನ್ ಸಭೆಯನ್ನು ಪ್ರಾರಂಭಿಸಿದ್ದುಂಟು. ಅದನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಲು ಕಮ್ಯೂನಿಸ್ಟರು ಪ್ರಯತ್ನಿಸುತ್ತಾರೆ. ದ್ವಿತೀಯ ಮಹಾಯುದ್ಧದಲ್ಲಿ ರಷ್ಯಾ ಸಹ ಭಾಗವಹಿಸಲಾಗಿ, ಕ್ವಿಟ್ ಇಂಡಿಯಾ ಆಂದೋಲನದ ಫಲವಾಗಿ ಕಾಂಗ್ರೆಸ್ ನಾಯಕರು ಸೆರೆಮನೆ ಸೇರಲಾಗಿ, ಕಮ್ಯುನಿಸ್ಟರು ತಮ್ಮ ಬುಡವನ್ನು ಭದ್ರಪಡಿಸಿಕೊಂಡು, ಅಖಿಲ ಭಾರತೀಯ ಟ್ರೇಡ್ ಯೂನಿಯನ್ ಕಾಂಗ್ರೆಸ್ಸನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ದಕ್ಷಿಣ ಭಾರತದಲ್ಲಿ ತಮ್ಮ ಚಟುವಟಿಕೆಗಳನ್ನು ಚುರುಕುಗೊಳಿಸುತ್ತಾರೆ.

೧೯೫೧ರಿಂದೀಚೆಗೆ ಅವರು ಶಾಸನ ಸಂಸದ್ ಸಭೆಗಳನ್ನು ಪ್ರವೇಶಿಸುವ ಮೂಲಕ ಜನಸಾಮಾನ್ಯರಲ್ಲಿಯೂ ತಮ್ಮ ಪ್ರಭಾವ ಬೀರಲು ಯಶಸ್ವಿಯಾಗುತ್ತಾರೆ. ಆಂಧ್ರ ಪ್ರದೇಶ ರಚನೆಗಾಗಿ ಪೊಟ್ಟಿ ಶ್ರೀರಾಮುಲು ತೀರಿಕೊಂಡಾಗ, ತಮ್ಮ ಪಕ್ಷದ ಪ್ರತಿಮೆಯ ಕಾಂತಿಯನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಅವರು ಆ ಸಂದರ್ಭವನ್ನು ಬಳಸಿಕೊಂಡದ್ದುಂಟು. ರಷ್ಯಾ ಭಾರತಗಳ ನಡುವೆ ಸ್ನೇಹ ಸಂಬಂಧ ಕುದುರಿದ ನಂತರ ಕಮ್ಯೂನಿಸ್ಟ್ ಪಕ್ಷದ ಧೋರಣೆ ಬದಲಾದದ್ದಲ್ಲದೆ, ಗಾಂಧಿ ಆಂದೋಲನದ ಬಗೆಗಿನ ಅವರ ಅಭಿಪ್ರಾಯವೂ ವ್ಯತ್ಯಾಸಗೊಳ್ಳುತ್ತದೆ. ಮುಂದಿನ ದಿನಗಳಲ್ಲಿ ಕೇರಳ ಮತ್ತು ಪಶ್ಚಿಮ ಬಂಗಾಳಗಳಲ್ಲಿ ಕಮ್ಯೂನಿಸ್ಟ್ ಸರ್ಕಾರಗಳು ರಚನೆಗೊಳ್ಳುತ್ತವೆ. ಆ ಸರ್ಕಾರಗಳಲ್ಲಿ ಭ್ರಷ್ಟಾಚಾರ ಕಡಿಮೆ ಇಲ್ಲವೆಂದರೂ ತಪ್ಪಲ್ಲವೆಂಬ ಮಾತೂ ಇದೆ.

ಇಂಡಿಯಾ ಕಮ್ಯೂನಿಸ್ಟರು ಮಾರ್ಕ್ಸ್ ಸಿದ್ಧಾಂತವನ್ನು ಪೂರ್ಣವಾಗಿ ಒಪ್ಪಿಕೊಳ್ಳುತ್ತಾರೆ. ತಾರ್ಕಿಕ ಭೌತವಾದ ಮತ್ತು ವರ್ಗ ಸಂಘರ್ಷ ಅವರ ಚಾರಿತ್ರಿಕ ತತ್ತ್ವಶಾಸ್ತ್ರದ ತಿರುಳು. ಗುಲಾಮರೊಡೆಯರಾದ ಆರ್ಯರ ಹಾಡು ಪುರುಷ ಸೂಕ್ತ ಎಂಬ ಮಾತು ಎಷ್ಟು ನಿಜವೊ ಗೊತ್ತಿಲ್ಲ. ರಾಹುಲ ಸಾಂಕೃತಾಯನ (೧೮೯೩-೧೯೬೩) ಬ್ರಾಹ್ಮಣ ಕ್ಷತ್ರಿಯ ಸಂಘರ್ಷದ ಹಿನ್ನೆಲೆಯಲ್ಲಿ ಭಾರತೀಯ ಸಾಮಾಜಿಕ ಇತಿಹಾಸವನ್ನು ವಿವರಿಸಲು ಪ್ರಯತ್ನಿಸುತ್ತಾರೆ. ಮತ ಜನರ ಆಫೀಮು ಎಂಬ ಮಾರ್ಕ್ಸ್ ಲೆನಿನ್‌ರ ಉದ್ಗಾರವನ್ನವರು ಒಪ್ಪಿಕೊಳ್ಳುತ್ತಾರೆ. ಮುಸ್ಲಿಮರು ಪ್ರತ್ಯೇಕ ರಾಷ್ಟ್ರವನ್ನು ಪಡೆಯಲರ್ಹರೆಂಬುದು ಕಮ್ಯೂನಿಸ್ಟರ ಅಭಿಪ್ರಾಯ. ಅಷ್ಟೇ ಅಲ್ಲ, ಅವರು ದ್ರಾವಿಡಸ್ಥಾನ ವಿರೋಧಿಗಳೂ ಅಲ್ಲ.

೧೯೪೫ರಲ್ಲಿ ಕಮ್ಯೂನಿಸ್ಟ್ ಪಕ್ಷ ಪ್ರಕಟಿಸಿದ ಕಾರ್ಯಕ್ರಮಗಳಲ್ಲಿ ಕೆಲವು ಮಾತ್ರ : ೧. ಭಾರತ ಪಾಕಿಸ್ತಾನಗಳ ನಡುವೆ ಸಹಕಾರ, ೨. ಸ್ತ್ರೀಯರಿಗೆ ಸಮಾನಹಕ್ಕು, ೩. ಎಲ್ಲರಿಗೂ ಉಚಿತ ಶಿಕ್ಷಣ, ೪. ರಾಷ್ಟ್ರಗಳಿಗೆ ಸ್ವಯಂ ನಿರ್ಣಯಾಧಿಕಾರ, ೫. ಸ್ವಾಯತ್ತತಾ ಭಾಷಾವಾರು ಪ್ರಾಂತಗಳು, ೬. ಹಣ ಕೊಡದೆಯೆ ಜಮೀನ್ದಾರಿ ಪದ್ಧತಿಯ ನಿರ್ಮೂಲನ; ಗ್ರಾಮೀಣ ಋಣ ಮುಕ್ತಿ, ೭. ಬೃಹತ್ ಕೈಗಾರಿಕೆಗಳು, ೮. ದಮನಾತ್ಮಕ ಶಾಸನಗಳ ರದ್ದಿಯಾತಿ, ೯. ಅಧಿಕಾರಿಶಾಹಿಯ ತ್ಯಜನೆ, ೧೦. ಜನರ ಶಸ್ತ್ರೀಕರಣ. ಇವುಗಳಲ್ಲಿ ಕೆಲವು ಈಗಾಗಲೇ ಕಾರ್ಯಗತಗೊಂಡಿವೆಯೆಂದು ತಿಳಿಯಬಹುದು.

ಸಂವಿಧಾನದ ಬಗ್ಗೆಯೂ ಕಮ್ಯೂನಿಸ್ಟ್ ಪಕ್ಷಕ್ಕೆ ಪೂರ್ಣ ಸಮ್ಮತವಿಲ್ಲ. ಅವರು ಸೂಚಿಸುವ ಕೆಲವು ಸಲಹೆಗಳಿವು: ಪ್ರಜಾ ಪ್ರತಿನಿಧಿಗಳಲ್ಲಿ ವರಿಷ್ಠಾಧಿಕಾರ ಸಂಗ್ರಹಗೊಳ್ಳಬೇಕು; ಆದರೆ ಆ ಪ್ರತಿನಿಧಿಗಳು ಸರಿಯಿಲ್ಲದಾಗ ಹಿಂದಕ್ಕೆ ಕರೆಸಿಕೊಳ್ಳುವಂತಿರಬೇಕು. ಸ್ಥಳೀಯ ಸರ್ಕಾರದ ಅಧಿಕಾರ ವಿಸ್ತಾರಗೊಳ್ಳಬೇಕು. ಯಾವ ಭೇದವೂ ಇಲ್ಲದೆ, ಸರ್ವರಿಗೂ ಸಮಾನಾವಕಾಶ ದೊರೆಯುವಂತಾಗ ಬೇಕು. ಆಯಾ ಪ್ರದೇಶಗಳ ಭಾಷೆಗಳೇ ಸರ್ವಮಾಧ್ಯಮಗಳಾಗಬೇಕು. ಅಖಿಲ ಭಾರತೀಯ ಭಾಷೆಯಾಗಿ ಹಿಂದಿಯ ಬಳಕೆ ಕಡ್ಡಾಯವಾಗಬಾರದು. ಮತೀಯ ಸಂಸ್ಥೆಗಳಿಂದ ಸರ್ಕಾರ ದೂರವಿರಬೇಕು. ಎಲ್ಲ ಮಕ್ಕಳಿಗೂ ಉಚಿತ ಪ್ರಾಥಮಿಕ ಕಡ್ಡಾಯ ಶಿಕ್ಷಣ. ಎಲ್ಲರಿಗೂ ಪ್ರಾಥಮಿಕ ಆರೋಗ್ಯ ಸೇವೆ ದೊರಕುವಂತಾಗಬೇಕು. ರಾಜ್ಯಗಳ ಸ್ವಯಂ ನಿರ್ಣಯಾಧಿಕಾರದಿಂದ ದೇಶದ ಭದ್ರತೆಗೆ ಧಕ್ಕೆಯೊದಗುವುದರಿಂದ, ಕೇಂದ್ರದಿಂದ ಸಿಡಿಯಲಾರದ ಸ್ವಾಯತ್ತತಾಧಿಕಾರವನ್ನು ರಾಜ್ಯಗಳಿಗೆ ಕೊಟ್ಟರೆ ಸಾಕು. ಚಲಾಯಿಸಿದ ಒಟ್ಟು ಮತಗಳಿಗನುಗುಣವಾಗಿ ರಾಜಕೀಯ ಪಕ್ಷಗಳಿಂದ ಪ್ರತಿನಿಧಿಗಳನ್ನಾರಿಸುವುದು ಮೇಲು-ಇದು ಆ ಪಕ್ಷದ ವಿಚಾರಧಾರೆ.

ಸಾಮಾನ್ಯವಾಗಿ ಜಗತ್ತಿನ ಎಲ್ಲ ಕಮ್ಯುನಿಸ್ಟರೂ ಮಾರ್ಕ್ಸ್-ಲೆನಿನ್-ಸ್ಟಾಲಿನ್ ತಂತಮ್ಮ ದೇಶಗಳಲ್ಲಿ ರಾಜಕೀಯ ಕ್ಷೇತ್ರಗಳಲ್ಲಿ, ಜೀವನ ವ್ಯವಹಾರಗಳಲ್ಲಿ ಜಾರಿಗೆ ತರುತ್ತಾರೆಯೇ ಹೊರತು, ಸ್ವತಂತ್ರವಾಗಿ ಹೊಸ ಸಿದ್ಧಾಂತಗಳನ್ನು ರೂಪಿಸಿದ್ದಿಲ್ಲ. ಒಂದು ರೀತಿಯಲ್ಲಿ ಎಲ್ಲರೂ ಅನುಕರಣಶೀಲರು. ರಷ್ಯಾದಲ್ಲಿ ಹೇಗೆ ಸೀನುತ್ತಾರೆಯೊ ಬೇರೆ ಕಡೆಯೂ ಜನ ತದ್ವತ್ತಾಗಿ ಸೀನುತ್ತಾರೆ. ಮಾರ್ಕ್ಸ್ ಕೈಗಾರಿಕಾ ದೇಶಗಳನ್ನು ಗಮನದಲ್ಲಿಟ್ಟುಕೊಂಡು, ತನ್ನ ಸಿದ್ಧಾಂತಗಳನ್ನು ರೂಪಿಸಿದನಷ್ಟೆ. ಕೃಷಿ ಕಾರ್ಮಿಕರನ್ನು ದೃಷ್ಟಿಯಲ್ಲಿಟ್ಟುಕೊಂಡು ಕಮ್ಯುನಿಸ್ಟ್ ಸಿದ್ಧಾಂತಗಳನ್ನು ರೂಪಿಸಿದ್ದು ಕಡಮೆ. ಮಾವೊ ಮಾತ್ರ ತನ್ನ ದೇಶದ ಪರಿಸ್ಥಿತಿಗನುಗುಣವಾಗಿ ಸಿದ್ಧಾಂತಗಳನ್ನು ರೂಪಿಸಿಕೊಳ್ಳುತ್ತಾನೆ. ಇಂಡಿಯಾದ ಕಮ್ಯುನಿಸ್ಟರು ಮಾವೋವಾದಿಗಳೆಂದು, ಮಾರ್ಕ್ಸ್‌ವಾದಿಗಳೆಂದು ಇಬ್ಭಾಗವಾದರೂ, ಕಮ್ಯುನಿಸಂ ಸಿದ್ಧಾಂತಕ್ಕೆ ಏನೂ ಹೊಸ ಕೊಡುಗೆಯನ್ನು ನೀಡಿಲ್ಲ. ಅಂತರರಾಷ್ಟ್ರೀಯ ಕಮ್ಯುನಿಸಂಗೆ ಧಕ್ಕೆಯಾಗುತ್ತದೆಂಬ ಶಂಕೆಯಿಂದ ಮಾರ್ಕ್ಸ್ ಮೊದಲಾದವರು ರಾಷ್ಟ್ರೀಯತೆಯನ್ನಲ್ಲಗಳೆಯುತ್ತಾರೆ. ಇಂಡಿಯಾದ ಕಮ್ಯೂನಿಸ್ಟರು ಬಹುರಾಷ್ಟ್ರೀಯತೆಯ ಪರ ಅದೇನೇ ಇರಲಿ, ಸೋವಿಯಟ್ ರಷ್ಯಾ ಹಿಂದಿನಂತೆ ಬಹುರಾಷ್ಟ್ರಗಳಾಗಿ ಒಡೆದು, ಕಮ್ಯುನಿಸಮ್ ಸತ್ತುಹೋದದ್ದು ದುರ್ದೈವ. ಆದರೂ ಕಮ್ಯುನಿಸಮ್ ಹಲವು ರೂಪಗಳಲ್ಲಿ ಬದುಕಿದೆಯೆನ್ನುವುದು ಮಾತ್ರ ಸತ್ಯ.

ವಿದ್ಯಾರ್ಥಿ ದೆಶೆಯಲ್ಲಿಯೇ ಕ್ರಾಂತಿಕಾರರಾದ ನರೇಂದ್ರನಾಥ ಭಟ್ಟಾಚಾರ್ಯ ತಮ್ಮ ಹೆಸರನ್ನು ಬದಲಾಯಿಸಿಕೊಂಡು **ಮಾನವೇಂದ್ರನಾಥ ರಾಯ್** ಆಗಿ (೧೮೮೬-೧೯೫೪) ಸ್ವಾಮಿ ವಿವೇಕಾನಂದ, ಬಂಕಿಮ್ ಚಂದ್ರ, ಅರವಿಂದ್ ಘೋಷ್, ವಿ.ಡಿ. ಸಾವರ್ಕರ್ ಮೊದಲಾದ ದೇಶಾಭಿಮಾನಿಗಳ ಪ್ರಭಾವಕ್ಕೊಳಗಾಗುತ್ತಾರೆ. ೧೯೧೦ರಲ್ಲಿ ಹೌರಾ ವಿದ್ರೋಹ ಮೊಕದ್ದಮೆಯಲ್ಲಿ ಜೈಲುವಾಸ ಅನುಭವಿಸಿದ ನಂತರ, ಅವರು ಜಾವ, ಫಿಲಿಪೈನ್ಸ್ , ಅನಂತರ ಕೊರಿಯಾ ಮಂಚೂರಿಯಾಗಳಿಗೆ ತಪ್ಪಿಸಿಕೊಂಡು ಹೋಗುತ್ತಾರೆ. ಅಮೆರಿಕೆಗೆ ಹೋದ ನಂತರ ಕಮ್ಯೂನಿಸಮ್ ಪ್ರಭಾವಕ್ಕೊಳಗಾಗುತ್ತಾರೆ. ೧೯೨೦ರಲ್ಲಿ ಈ ರಾಜಕೀಯ ಅಲೆಮಾರಿ ರಷ್ಯಾವನ್ನು ತಲುಪಿ, ಸಾಮಾನ್ಯ ಕೃಷಿಕರನ್ನೊಳಗೊಂಡ ವರ್ಗರಚನೆ ಪಾಶ್ಚಾತ್ಯ ದೇಶಗಳಿಗಿಂತ ಪೌರ್ವಾತ್ಯ ರಾಷ್ಟ್ರಗಳಲ್ಲಿ ತೀರ ಭಿನ್ನವಾದದ್ದೆಂದು ಲೆನಿನ್‌ನಿಗೆ ಸ್ಪಷ್ಟಪಡಿಸುತ್ತಾರೆ. ಕೃಷ್ಯುತ್ಪನ್ನಗಳನ್ನೆಲ್ಲ ಬಂಡವಾಳಗಾರಿಕೆ ತನ್ನ ಹಿಡಿತದಲ್ಲಿಟ್ಟುಕೊಂಡಿದ್ದುದರಿಂದ ಇಂಡಿಯಾದ ಗ್ರಾಮೀಣ ಜನತೆ ಭೀಕರ ಸಂಕಟಕ್ಕೊಳಗಾಗಿದೆಯೆಂದು, ಕೈಗಾರಿಕಾ ಹಿಂಜರಿತದಿಂದಾಗಿ ನಗರದ ಸಾಮಾನ್ಯ ಜನರ ಬೆಳವಣಿಗೆ ಕುಸಿದಿದೆಯೆಂದು ಅವರು ಇಂಡಿಯಾದ ಸ್ಥಿತಿಯನ್ನು ವಿಶ್ಲೇಷಿಸುತ್ತಾರೆ.

ಗಾಂಧೀಜಿಯ ನಾಯಕತ್ವ ಹಾಗೂ ಸತ್ಯಾಗ್ರಹ ಮಧ್ಯಮ ವರ್ಗದ ಜನರ ಪರವಾದದ್ದೆಂದೂ, ಅವುಗಳ ಬದಲಾಗಿ ಸಾಮಾನ್ಯ ಜನರು ಬಂಡೇಳಬೇಕೆಂದೂ ರಾಯ್ ಸೂಚಿಸುತ್ತಾರೆ. ೧೯೨೨ರ ಗಯಾ ಕಾಂಗ್ರೆಸ್ ಅಧಿವೇಶನದ ಹೊತ್ತಿಗೆ ಸಂಪೂರ್ಣ ಸ್ವಾತಂತ್ರ್ಯ, ಸಾರ್ವಮತದಾನ ಹಕ್ಕು, ಸಂಯುಕ್ತ ಗಣರಾಜ್ಯಗಳ ಕಾರ್ಯಕ್ರಮವನ್ನವರು ಇಂಡಿಯಾದ ನಾಯಕರಿಗೆ ಕಳಿಸಿಕೊಡುತ್ತಾರೆ. ಬರಬರುತ್ತ ಗಾಂಧೀಜಿಯ ಸಾಮಾನ್ಯಜನ ಕೇಂದ್ರೀಕೃತ ಕಾರ್ಯಕ್ರಮಗಳನ್ನವರು ಮೆಚ್ಚಿಕೊಳ್ಳುವರಾದರೂ, ತಮಗೆ ತೋರಿದ ನ್ಯೂನತೆಗಳನ್ನು ಬಯಲಿಸುತ್ತಾರೆ.

ಮಾಸ್ಕೊ ಸಂಸ್ಥೆಯ ಪ್ರಾಚ್ಯ ಇಲಾಖೆಯ ಮುಖ್ಯಸ್ಥರಾಗಿದ್ದ ಅವರು ೧೯೨೬ರಲ್ಲಿ ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಪಕ್ಷದ ಪ್ರತಿನಿಧಿಯಾಗಿ ಇತರ ನಾಯಕರೊಡನೆ ಚೀನಾಕ್ಕೆ ತೆರಳುತ್ತಾರೆ. ಕೃಷಿ ಕ್ಷೇತ್ರದಲ್ಲಿ ಕ್ರಾಂತಿಯನ್ನು ಬಲಪಡಿಸುವ ಮೂಲಕ ಕಮ್ಯುನಿಸ್ಟ್ ಪಕ್ಷವನ್ನು ಸುಭದ್ರಗೊಳಿಸಬಹುದೆಂದವರು ಚೀನಾದ ನಾಯಕರಿಗೆ ಸಲಹೆ ನೀಡುತ್ತಾರೆ. ಅವರ ಸಲಹೆ ಚೀನೀಯರಿಗೆ ಹಿಡಿಸುವುದಿಲ್ಲ. ಸ್ಟಾಲಿನ್‌ನ ಅತಿರಿಕ್ತವಾದ ನೀತಿ ರಾಯ್‌ಗಾಗಲಿ, ೧೯೨೮- ೨೯ನೆ ಅವಧಿಯ ಅಂತರರಾಷ್ಟ್ರೀಯ ಕಮ್ಯೂನಿಸ್ಟ್ ಸಮ್ಮೇಳನಕ್ಕಾಗಲಿ ಸರಿಹೊಂದುವುದಿಲ್ಲ. ಸೈಮನ್ ಆಯೋಗ ಇಂಡಿಯಾಕ್ಕೆ ಬರುತ್ತಿದ್ದ ಸಮಯದಲ್ಲಿ, ಅದರ ಮುಂದೆ ರಾಜ್ಯಾಂಗಸಭೆಯ ಬೇಡಿಕೆಯನ್ನಿಡುವಂತೆ ರಾಯ್ ಇಂಡಿಯಾದ ನಾಯಕರಿಗೆ ಸೂಚಿಸುತ್ತಾರೆ.

ರಾಯ್ ೧೯೩೦ರಲ್ಲಿ ರಹಸ್ಯವಾಗಿ ಇಂಡಿಯಾಕ್ಕೆ ಬರುತ್ತಾರೆ. ಕಾನ್ಪುರದ ವಿದ್ರೋಹ ಮೊಕದ್ದಮೆಯಲ್ಲಿ ಅವರಿಗೆ ಆರು ವರ್ಷ ಕಠಿಣ ಶಿಕ್ಷೆಯನ್ನು ವಿಧಿಸಲಾಗುತ್ತದೆ. ೧೯೩೬ರಲ್ಲಿ ಬಿಡುಗಡೆಯಾದ ನಂತರ ಗಾಂಧಿಯನ್ನು, ಕಾಂಗ್ರೆಸ್ಸನ್ನು ಸಾಕಷ್ಟು ನಿಂದಿಸುತ್ತಾರೆ. ೧೯೩೯ರಲ್ಲಿ ಅಬುಲ್ ಕಲಾಮ್ ಆಜಾದರಿಗೆ ವಿರುದ್ಧವಾಗಿ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿ, ಸೋಲುತ್ತಾರೆ. ಅನಂತರ ಅವರು ಮೂಲಭೂತ ಪ್ರಜಾಪ್ರಭುತ್ವ ಪಕ್ಷವನ್ನು ಪ್ರಾರಂಭಿಸುತ್ತಾರೆ. ದ್ವಿತೀಯ ಸಮರದ ಕಾಲದಲ್ಲಿ , ಗಾಂಧಿ ಮತ್ತು ಕಾಂಗ್ರೆಸ್ಸು ಫ್ಯಾಸಿಸ್ಟ್ ಅಂದರೆ ಮಧ್ಯಮವರ್ಗದ ಬಂಡವಾಳಗಾರರ ಪರವೆಂದವರು ಹೇಳಿಬಿಡುತ್ತಾರೆ.

ರಾಯ್ ವಿಜ್ಞಾನ ಮತ್ತು ತತ್ತ್ವಜ್ಞಾನ ಎಂಬ ತಮ್ಮ ಗ್ರಂಥದಲ್ಲಿ ಐನ್‌ಸ್ಟೀನ್, ಶ್ರಾಡಿಂಗರ್ ಮೊದಲಾದವರ ಸಂಶೋಧನೆಗಳನ್ನು ಭೌತ ಮಾರ್ಗದಲ್ಲಿ ವಿವರಿಸಿ, ನ್ಯಾಯ ವೈಶೇಷಿಕಗಳೊಡನೆ ಅವನ್ನು ಸಮನ್ವಯಿಸಲು ಪ್ರಯತ್ನಿಸುತ್ತಾರೆ. ವೈಭವಯುಕ್ತವಾದ,

ಅಭ್ಯುದಯ ಪೂರ್ಣವಾದ ನಾಗರಿಕತೆಗೆ ಬೌದ್ಧ ಆಂದೋಲನ ಅಡಿಗಲ್ಲನ್ನು ಸಿದ್ಧಪಡಿಸಿತು. ಆದರೆ ಮಧ್ಯಯುಗದ ಬ್ರಾಹ್ಮಣೀಯ ಮತೀಯ ಯುಗ ಆ ನಾಗರಿಕತೆಯಲ್ಲಿ ಪ್ರತಿಗಾಮಿತ್ವ, ನಾತ ಮತ್ತು ನಾಶಗಳನ್ನು ತುಂಬಿತೆಂದವರು ಹೇಳುತ್ತಾರೆ.

ರಷ್ಯಾ ಕಮ್ಯೂನಿಸಮ್ ರಾಜ್ಯ ಬಂಡವಾಳಗಾರಿಕೆಯೆಂದು, ಮಾರ್ಕ್ಸ್ ಕನಸುಗಳನ್ನು ನನಸುಗೊಳಿಸಲು ಮತ್ತೊಂದು ಕ್ರಾಂತಿಯ ಅಗತ್ಯವಿದೆಯೆಂದು ರಾಯ್ ರಷ್ಯನ್ ಕ್ರಾಂತಿ ಎಂಬ ತಮ್ಮ ಪುಸ್ತಕದಲ್ಲಿ ಬರೆಯುತ್ತಾರೆ. ಆ ಕ್ರಾಂತಿ ಬರುವ ಮುನ್ನವೆ ರಷ್ಯನ್ ಕಮ್ಯುನಿಸಮ್ ಏನಾಯಿತೆಂಬುದನ್ನು ಬದುಕಿರುವವರೆಲ್ಲ ಬಲ್ಲರು. ಮಾರ್ಕ್ಸ್‌ನನ್ನು ಕೇವಲ ಆರ್ಥಿಕ ತತ್ತ್ವದೃಷ್ಟಿಯಿಂದ ನೋಡದೆ, ಅವನೊಬ್ಬ ಮಾನವತಾವಾದಿ ಮತ್ತು ಸ್ವಾತಂತ್ರ್ಯ ಪ್ರೇಮಿಯೆಂದು ಪರಿಗಣಿಸಬೇಕೆಂಬುದು ರಾಯ್ ಅಭಿಪ್ರಾಯ. ಐತಿಹಾಸಿಕ ವಿಶ್ಲೇಷಣೆಯ ಸಂದರ್ಭದಲ್ಲಿ ಬುದ್ಧಿಯ ಹಾಗೂ ಭಾವನೆಗಳ ಸೃಜನಶೀಲ ಮುಖವನ್ನು ಮಾರ್ಕ್ಸ್ ಸಿದ್ಧಾಂತ ಮರೆಯುತ್ತದೆಂದು, ಅದರ ಜೈವಿಕ ಹಾಗೂ ನೈತಿಕ ತಳಹದಿ ತುಂಬ ದುರ್ಬಲವೆಂದು, ವ್ಯಕ್ತಿ ಸ್ವಾತಂತ್ರ್ಯವನ್ನದು ತಿರಸ್ಕರಿಸುತ್ತದೆಂದು, ಸಂಪೂರ್ಣ ವರ್ಗನಿರ್ಮೂಲನ ಸಾಧ್ಯವಿಲ್ಲವೆಂದು, ಭೌತವಾದಕ್ಕೆ ಬದಲಾಗಿ ಭೌತವಾಸ್ತವತೆಯನ್ನು ಗ್ರಹಿಸಿಕೊಳ್ಳುವುದು ಸೂಕ್ತವೆಂದು, ಭಾವಭಾವನೆಗಳು ಜ್ಞಾನದ ಮೂಲವೆಂದು, ಆಲೋಚನೆ ಮತ್ತು ಕ್ರಿಯೆಗಳ ನಡುವೆ ಹೊಂದಾಣಿಕೆ ಅತ್ಯಗತ್ಯವೆಂದು ರಾಯ್ ಹೇಳುತ್ತ ಮಾರ್ಕ್ಸ್ ಸಿದ್ಧಾಂತವನ್ನು ವಿಮರ್ಶಿಸುತ್ತಾರೆ. ಆದರವರು ಬಂಡವಾಳ ಸಂಗ್ರಹ, ಹಂಚಿಕೆ, ಉತ್ಪತ್ತಿ ತತ್ತ್ವ ಹಾಗೂ ಕೂಲಿ ಮೌಲ್ಯದ ಬಗ್ಗೆ ಏನೂ ಹೇಳಿದಂತಿಲ್ಲ.

ತಮ್ಮ ಕೊನೆಯ ದಿನಗಳಲ್ಲಿ ರಾಯ್ ಮಾನವತಾವಾದದ ಪುರಸ್ಕರ್ತರಾಗುತ್ತಾರೆ. 'ನಿಸರ್ಗ ಸಹಜವಾದ ಬುದ್ಧಿ, ನಿರಂಕುಶ ಮತಿ, ವಿಚಾರ ಸಾಮರ್ಥ್ಯ ಹಾಗೂ ನಿರ್ಮತೀಯ ಭಾವನೆಗಳೇ ಆಧಾರವುಳ್ಳ, ತಾತ್ತ್ವಿಕತೆಯೇ ನವಮಾನವತಾವಾದ. ಮಾನವ ವಿಶ್ವದ ಸಮಗ್ರ ಸಾವಯವ ಭಾಗವಾದ್ದರಿಂದ ಸಾಮಾಜಿಕ ಸಾಮರಸ್ಯ ಸಂಲಬ್ಧವಾದ ನೀತಿಸಂಹಿತೆಯನ್ನವನು ಮರೆಯಲಾಗದು. ಆ ನೀತಿ ಸಂಹಿತೆ ಮಾನವನ ಶ್ರದ್ಧಾ ನಿಷ್ಠೆಗಳನ್ನವಲಂಬಿಸದೆ, ಅವನ ಸೃಜನಶೀಲ ಬುದ್ಧಿ ಮತ್ತೆಯಿಂದ ಉದ್ಭವಿಸಬೇಕು. ಉಳಿಯಲು ಮಾನವ ನಡೆಸುವ ಚಟುವಟಿಕೆ ಮತ್ತು ಹೋರಾಟಗಳು ನೈತಿಕತೆಯ ಮೂಲ ಆಕರಗಳಾಗಬೇಕು. ಸ್ವಾತಂತ್ರ್ಯ ವಿಚಾರ ಮತ್ತು ನೈತಿಕತೆ ಈ ಮಾನವತಾವಾದದ ಲಕ್ಷಣಗಳಾಗಬೇಕು. ಸಕಲ ಜೀವಾವಳಿಗೆ ಲೇಸನ್ನು ಬಯಸುವುದೇ ವಿಶ್ವನೀತಿ. ಸಹಕಾರವೇ ಅದರ ತಳಹದಿ. ಮೌಢ್ಯಗಳು ಮಾನವನನ್ನು ಸಂಘರ್ಷಾಗ್ನಿಗೂ, ಕೂಪಾಂಧಕಾರಕ್ಕೂ ನೂಕುತ್ತವೆಂಬುದನ್ನು ಮರೆಯಲಾಗದು.' ನವಮಾನವತೆಯ ಬಗೆಗಿನ ರಾಯರ ವಿಚಾರಧಾರೆಯಿದು.

ಜಯಪ್ರಕಾಶ ನಾರಾಯಣರ ಹಾಗೆ, ವ್ಯವಸ್ಥಿತ ಸ್ಥಳೀಯ ಪ್ರಜಾಪ್ರಭುತ್ವದ ತಳಹದಿಯ ಮೇಲೆ ಪಕ್ಷ ರಹಿತ ಪ್ರಜಾಪ್ರಭುತ್ವವನ್ನು ನಿರ್ಮಿಸತಕ್ಕದ್ದೆಂದು ರಾಯ್ ಪ್ರತಿಪಾದಿಸುತ್ತಾರೆ. ಆ ದಿಕ್ಕಿನಲ್ಲಿ ರಾಜಕೀಯ ಶಾಲೆಗಳು ಜನರಿಗೆ ತರಬೇತಿ ನೀಡಬೇಕೆಂಬುದವರ ಅಭಿಪ್ರಾಯ. ಅಧಿಕಾರ ಕೇಂದ್ರೀಕರಣ ಸ್ವತ್ವವನ್ನು, ಸ್ವೋಪಜ್ಞತೆಯನ್ನು, ಸ್ವಾತಂತ್ರ್ಯವನ್ನು, ಅಧ್ಯಾತ್ಮ ವಿಕಾಸವನ್ನು ಹಾಳು ಮಾಡುತ್ತದೆಂದೂ, ವಿಕೇಂದ್ರೀಕರಣ ಪ್ರಗತಿ ಸಾಧಕವೆಂದೂ, ರಾಜಕೀಯ ಪಕ್ಷಗಳ ಪಾತ್ರ ಕನಿಷ್ಠವಾದಷ್ಟೂ ವಿಕೇಂದ್ರೀಕರಣ ಸಾಧ್ಯವೆಂದೂ ಅವರು ಸ್ಪಷ್ಟಪಡಿಸುತ್ತಾರೆ.

ವಾಪಸಾತಿ ಮತ್ತು ಜನಾಭಿಪ್ರಾಯ ಪ್ರದರ್ಶನ ಪ್ರಜಾಪ್ರಭುತ್ವದ ಸಲ್ಲಕ್ಷಣಗಳೆಂದವರು ಪ್ರತಿಪಾದಿಸುತ್ತಾರೆ. ತಜ್ಞರನ್ನು ಶಾಸನ ಸಭೆಗೆ ನಾಮಕರಣ ಮಾಡುವ ವಿಧಾನವನ್ನವರು ಪುಷ್ಟೀಕರಿಸುತ್ತಾರೆ. ಎಂ. ಎನ್. ರಾಯ್ ವಿದ್ವತ್ತು, ವಾಗ್ಮಿತೆಗಳೆರಡನ್ನೂ ಗಳಿಸಿದ್ದ ಲೇಖಕ ವರೇಣ್ಯ. ಮೌಲ್ಯಪಾರಮ್ಯ ಅವರು ಪ್ರತಿಪಾದಿಸಿದ ನವಮಾನವತೆಯ ಲಕ್ಷಣ. ಬುದ್ಧಿಮತ್ತೆ, ಶೀಲೌನ್ನತ್ಯ, ನೈತಿಕ ಪ್ರಭೆ ಮತ್ತು ಪ್ರಾಮಾಣಿಕತೆ ನಾಯಕತ್ವದ ಲಕ್ಷಣಗಳಾಗಬೇಕು. ಆಗ ಮಾತ್ರ ಪ್ರಜಾಪ್ರಭುತ್ವ ಯಶಸ್ವಿಯಾಗುತ್ತದೆ. ಮಾರ್ಕ್ಸ್‌ನಂತೆ ಅವರು ರಾಷ್ಟ್ರೀಯತೆಯನ್ನೊಪ್ಪಿಕೊಳ್ಳುವುದಿಲ್ಲ. ಅದೇನೇ ಇರಲಿ, ಅವರು ಕೊನೆಕೊನೆಗೆ ಮಾರ್ಕ್ಸ್ ಸಿದ್ಧಾಂತದಿಂದ ದೂರ ಸರಿದರೆಂದೂ, ಅವರ ನವಮಾನವತಾವಾದ ಗಾಂಧಿವಾದಕ್ಕೆ ಹತ್ತಿರವಿದೆಯೆಂದೂ ಒಪ್ಪಿಕೊಳ್ಳಬಹುದಾಗಿದೆ.

ಎಂ. ಎನ್. ರಾಯ್ ತತ್ತ್ವಶಾಸ್ತ್ರಿಯಾಗಿದ್ದರೇ ಹೊರತು ಪ್ರಾಯೋಗಿಕ ಕ್ರಿಯಾಶೀಲರಾಗಿರಲಿಲ್ಲ. ಆ ಒಂದು ಕೀರ್ತಿ ಇಂಡಿಯಾದಲ್ಲಿ ಜ್ಯೋತಿ ಬಸು ಮತ್ತು ನಂಬೂದರಿಪಾದರಿಗೆ ಸಲ್ಲಬೇಕಾಗಿದೆ. ಇಂಡಿಯಾದ ರಾಜಕೀಯ ಚೌಕಟ್ಟಿನೊಳಗೆ ಕಮ್ಯೂನಿಸಮ್ ಸಿದ್ಧಾಂತಗಳನ್ನು ಕಾರ್ಯಗತಗೊಳಿಸಿದ ಮಹಿಮರವರು. ಏನಿಲ್ಲವೆಂದರೂ ಅವರು ಸರ್ಕಾರ ನಡೆಸಿದ ರಾಜ್ಯಗಳಲ್ಲಿ ಭ್ರಷ್ಟಾಚಾರ ಕನಿಷ್ಠ ಪ್ರಮಾಣದಲ್ಲಿತ್ತೆಂಬುದು ಸರ್ವವೇದ್ಯ ಸಂಗತಿ.

## ಸಮಾಜವಾದದ ಪ್ರಭಾವ

ಸರ್ವೋದಯ ಸಮಾಜವಾದದ ಕಲ್ಪನೆ ಋಗ್ವೇದ, ಉಪನಿಷತ್, ಬುದ್ಧನ ಕಾಲದಿಂದ ಇದ್ದದ್ದೇ. ಹತ್ತೊಂಬತ್ತನೆಯ ಶತಮಾನದ ಪಾಶ್ಚಿಮಾತ್ಯ ದೇಶಗಳಲ್ಲಿ ಆ ಪದವೊಂದು ಮೂರ್ತಸ್ವರೂಪವನ್ನೂ ಪಡೆದದ್ದಲ್ಲದೆ, ಹಲವು ರೂಪಗಳನ್ನು ಪಡೆಯುತ್ತದೆ. ಅದಕ್ಕೆ ನಿಜ ಸಮಾಜವಾದ, ಸರ್ಕಾರಿ ಸಮಾಜವಾದ, ಕ್ರಿಶ್ಚಿಯನ್ ಸಮಾಜವಾದ, ಫೇಬಿಯನ್ ಸಮಾಜವಾದ, ಗಿಲ್ಡ್ ಸಮಾಜವಾದ, ಪ್ರಜಾಪ್ರಭುತ್ವ ಸಮಾಜವಾದ ಎಂದೆಲ್ಲ ಹೆಸರು ಅಂಟಿಕೊಳ್ಳುತ್ತವೆ. ಒಟ್ಟಿನಲ್ಲಿ ಒಂದಲ್ಲ ಒಂದು ತರಹ ಸ್ವಾಮ್ಯವನ್ನು ಬೂರ್ಜ್ವಾ ಪದ್ಧತಿಯನ್ನು ಶೋಷಣೆಯನ್ನು ತಡೆಗಟ್ಟುವುದೆ ಹಾಗೂ ಉತ್ಪತ್ತಿಯನ್ನು ಎಲ್ಲರಿಗೂ ಹಂಚುವುದೆ ಸಮಾಜವಾದದ ಉದ್ದೇಶ. ಅದು ಕೈಗಾರಿಕಾ ಕ್ರಾಂತಿಯ ಪರಿಣಾಮವೆನ್ನುವುದರಲ್ಲಿ ಅನುಮಾನವಿಲ್ಲ. ರಾಜಕೀಯ, ಸಾಮಾಜಿಕ, ಆರ್ಥಿಕ ನ್ಯಾಯ ಸರ್ವರಿಗೂ ದೊರಕಬೇಕೆಂಬ ಆಲೋಚನೆಯಲ್ಲಿ ಸಮಾಜವಾದ ಹುಟ್ಟುತ್ತದೆ. ಹೀಗೆ ಯೋಚಿಸಿದವನು ವಿಲಿಯಮ್ ಗಾಂಡ್‌ವಿನ್ (೧೭೫೬-೧೮೩೬) ಒಳಿತು ಸಿಗಬೇಕಾದರೆ ಅದನ್ನು ಹುಡುಕಬೇಕೆಂದು ಎನ್‌ಕ್ವೈರಿ ಇನ್ ಟು ಪೊಲಿಟಿಕಲ್ ಜಸ್ಟಿಸ್ ಎಂಬ ತನ್ನ ಪುಸ್ತಕದಲ್ಲಿ ವಾದಿಸುತ್ತಾನೆ.

ಸೆಯಿಂಟ್ ಸೈಮನ್ (೧೭೬೦-೧೮೨೫) ವಿಜ್ಞಾನ ತಂತ್ರಜ್ಞಾನಗಳ ಮೂಲಕ ಉತ್ಪನ್ನ ಹೆಚ್ಚಬೇಕೆಂದು ವಾದಿಸಿದರೆ, ಮನುಷ್ಯ ನೆಲದೊಡನೆ ವಿಶೇಷ ಸಂಬಂಧ ಹೊಂದಬೇಕೆಂದು ಫೌರಿಯರ್ ಹೇಳುತ್ತಾನೆ. ಕೈಗಾರಿಕಾ ದೊರೆಯಾದ ರಾಬರ್ಟ್ ಓವೆನ್ (೧೭೭೧-೧೮೫೮) ಕಾರ್ಖಾನೆಯಲ್ಲಿ ಕೆಲಸವಿಲ್ಲದಾಗ ಸಹಕಾರ ಕಾಲೋನಿಗಳ ಮೂಲಕ ಕೂಲಿಕಾರರನ್ನು ಕೃಷಿಗೆ ಹಚ್ಚುತ್ತಾನೆ. ಸಹಕಾರ ಸಂಘಗಳ ಮೂಲಕ ವಿವಿಧ ಕಾರ್ಮಿಕ ವೃತ್ತಿಗಳ ವಿನಿಮಯಕ್ಕೂ ಅವಕಾಶ ಕಲ್ಪಿಸಲಾಗಿ, ಜಗತ್ತಿನಲ್ಲೆಲ್ಲ ಅವನ ಹೆಸರು ಬೆಳಗುತ್ತದೆ. ಈ ರೀತಿಯಲ್ಲಿ ಬೆಳೆಯುತ್ತ, ಬೆಳೆಯುತ್ತ, ಸ್ವಾಮ್ಯವನ್ನೆ ವಿರೋಧಿಸುವಂತಾಗುತ್ತದೆ. ಸಿಸ್ಮಂಡೆ ಡಿ ಸಿಸ್ಮಿಂಡಿ (೧೭೭೩-೧೮೪೨) ಎನ್ನುವ ಫ್ರೆಂಚ್ ಸಮಾಜವಾದಿ ಭೂಸ್ವಾಮ್ಯ ಸೇರಿದಂತೆ ಎಲ್ಲ ಬಗೆಯ ಸ್ವಾಮ್ಯವನ್ನು ವಿರೋಧಿಸುವುದರ ಜತೆಗೆ, ಅನಿಯಂತ್ರಿತ ಬಂಡವಾಳಗಾರಿಕೆ ನಿರುದ್ಯೋಗಕ್ಕೆ ಕಾರಣವೆಂದು ಸ್ಪಷ್ಟ ಪಡಿಸುತ್ತಾನೆ. ವ್ಯಕ್ತಿ ಸ್ವಾತಂತ್ರ್ಯ ಹಾಗೂ ನ್ಯಾಯ ಸಮಾಜ ವಾದದ ಮುಖ್ಯ ಲಕ್ಷಣಗಳೆಂದು ಪಿಯರಿ ಜೋಸೆಫ್ ಪ್ರೌಢಾನ್ (೧೮೦೯-೧೮೬೫) ವಾದಿಸುತ್ತಾನೆ. ಸರ್ವಮತದಾನ, ಸ್ಥಳೀಯತ್ವ ಮತ್ತು ಸಂಯುಕ್ತತ್ವದ ತಳಹದಿಯ ಮೇಲೆ ಪ್ರಜಾಪ್ರಭುತ್ವದ ಮಹಲನ್ನು ನಿರ್ಮಿಸಬೇಕೆಂಬುದು ಅವನ ಮತ. ಮನುಷ್ಯರು ಸನ್ನಿವೇಶ ಶಿಕ್ಷಣಗಳ ಕೂಸುಗಳೆಂಬುದು ಮಾರ್ಕ್ಸ್ ಮೊದಲಾದ ಸಮಾಜವಾದಿಗಳ ತಿಳಿವಳಿಕೆ. ಸಮಾಜವಾದಿಗಳು ಎಲ್ಲಿದ್ದರೂ ಒಂದೆ ಎಂಬುದು ಅವರ ನಂಬಿಕೆ. ಸಮಾಜವಾದವೆಂಬುದೊಂದು ಅಭಿಪ್ರಾಯವೇ ಹೊರತು ಬೇರೇನೂ ಅಲ್ಲ ಎಂಬುದು ಬರ್ನಾರ್ಡ್ ಷಾನ ಉದ್ಗಾರ.

ಆಸ್ತಿಯೆಂಬುದೇ ಕಳ್ಳತನ; ಎಲ್ಲರೂ ಹಂಚಿಕೊಳ್ಳುವ ಆಸ್ತಿಯೇ ನ್ಯಾಯವಾದದ್ದು ಎಂದು ಪ್ರೌಢಾನ್ ಸಾರುತ್ತಾನೆ. ಆ ಹಂಚಿಕೆ ಸಾಮೂಹಿಕವಾಗಿರದೆ ನೇರವಾಗಿ ವೈಯಕ್ತಿಕವಾಗಿರಬೇಕು. ಅವನು ಬಂಡವಾಳಗಾರಿಕೆ ಮತ್ತು ಎಲ್ಲ ಬಗೆಯ ಕೇಂದ್ರೀಕರಣಕ್ಕೆ, ಚರ್ಚು, ರಾಜ್ಯ, ರಾಜಕೀಯ ಪಕ್ಷಗಳೇ ಮೊದಲಾದ ಎಲ್ಲ ಬಗೆಯ ವ್ಯವಸ್ಥಿತ ಶೋಷಣೆಗಳಿಗೂ ವಿರೋಧಿ. ಅವನು ಶ್ರೀಸಾಮಾನ್ಯರ ಮತ್ತು ರೈತರ ಮುಖವಾಣಿಯಾಗುತ್ತಾನೆ.[೧]

'ಎಲ್ಲ ಕಾಲಗಳಲ್ಲಿಯೂ ಸಮಾಜವಾದ ಸಾಧ್ಯ ಮತ್ತು ಅಸಾಧ್ಯ; ಇಚ್ಛಾ ಮತ್ತು ಕರ್ತೃತ್ವ ಶಕ್ತಿಯಿರುವ ಸರಿಯಾದ ಜನ ಇದ್ದರೆ ಸಾಧ್ಯ, ಅವರೆಡೂ ಇಲ್ಲದ ಜನರಿದ್ದರೆ ಅಸಾಧ್ಯ' ಎಂಬ ಲ್ಯಾಂಡೌರ್‌ನ ಮಾತಿನಲ್ಲಿ ಸತ್ಯವಿದೆ.[೨] ಜಗತ್ತಿನ ಎಲ್ಲ ಆಂದೋಲನಗಳು ನೇತಾರರಿಗಾಗಿ ಕಾಯುತ್ತವೆ. ಎನ್. ಎಫ್. ಎಸ್. ಗ್ರಂಟವಿಗ್‌ನ ವಿದ್ಯಾಪೀಠ (Folk Schools)ಗಳ ಪ್ರಭಾವದಿಂದಾಗಿ ಡೆನ್ಮಾರ್ಕ್‌ನಲ್ಲಿ ಸ್ವತಂತ್ರ ರೈತ ಪ್ರಜಾಪ್ರಭುತ್ವವಿದೆ ಎಂದು ಹೇಳಲಾಗಿದೆ. ಆದರೆ ಯುರೋಪಿನ ಇತರ ದೇಶಗಳಲ್ಲಿ ಸರ್ಕಾರ ಮತ್ತು ಶ್ರೀಮಂತ ವರ್ಗ ಜತೆಗೂಡಿ ಶ್ರೀಸಾಮಾನ್ಯರಿಗೆ ಕಿರುಕುಳ ಕೊಟ್ಟಾಗ, ಹಿಂಸೆ ಅನಿವಾರ್ಯವಾಗುತ್ತದೆ. ವರ್ಗ ಹಾಗೂ ರಾಷ್ಟ್ರೀಯತೆಗಳ ನಿರ್ಮೂಲನವೆ ಶ್ರೀ ಸಾಮಾನ್ಯತಾವಾದ ಅಥವಾ ಕಮ್ಯೂನಿಸಂನ ಲಕ್ಷಣವೆಂಬುದು ಮಾರ್ಕ್ಸ್‌ನ ಮತ. ಇಡೀ ಮನು ಕುಲವನ್ನೆ ವರ್ಗಗಳ ಕ್ರೌರ್ಯದಿಂದ ಬಿಡುಗಡೆಗೊಳಿಸಬೇಕೆಂಬುದು ಅದರ ಉದ್ದೇಶ. ಮೊದಲು ಜನ ಮತದ ಹಿಡಿತದಿಂದ ಬಿಡುಗಡೆ ಹೊಂದುವುದಾದರೆ ಮಾತ್ರ, ಶ್ರೀಸಾಮಾನ್ಯನಿಗೆ ಮುಕ್ತಿ ದೊರೆಯುತ್ತದೆಂಬುದು ಆತನ ಶಪಥ. ಆರ್ಥಿಕ ನೆಲೆಯಲ್ಲಿ ಮಾತ್ರವಲ್ಲ, ತಾತ್ವಿಕ ನೆಲೆಯಲ್ಲಿ ಅವನ ತಾರ್ಕಿಕ ಆಲೋಚನೆ ಹರಿದಿತ್ತೆಂಬುದು ಗಮನಿಸಬೇಕಾದ ಸಂಗತಿ. ಒಂದು ಭಾವನೆಯ ಸತ್ಯ ಮತ್ತು ಕಾರ್ಯದ ಸಾಧಾರತೆಯ

1. Studies in Socialism, Asoka Mehta, P. 68
೨. ಅದೇ, ಪು. ೭೯

ಪ್ರಯೋಗದಿಂದ ಲಭಿಸುತ್ತವೆ. ವಸಾಹತುಶಾಹಿ ಮತ್ತು ಸಾರ್ವಭೌಮಶಾಹಿಗಳ ಬಂಡವಾಳಶಾಹಿಯಲ್ಲಿ ಕಾಣುವ ಶ್ರೀಸಾಮಾನ್ಯರ ದುಡಿಮೆ ಬಡತನ ಹಾಗೂ ಯಜಮಾನರು ಲಪಟಾಯಿಸುವ ಹೆಚ್ಚುವರಿ ಬೆಲೆಯೇ ಕಾರಣವೆಂಬುದು ಸಾಬೀತಾಗುತ್ತದೆ. ರೈತರು ಜಮೀನುಗಳನ್ನು, ಕಾರ್ಮಿಕರು ಕಾರ್ಖಾನೆಗಳನ್ನು ಹಿಡಿದುಕೊಳ್ಳಲಾಗಿ, ಸೈನ್ಯ ತಾನಾಗಿಯೇ ಕರಗಿಹೋಗುತ್ತದೆ; ಆಡಳಿತ ಕುಸಿಯುತ್ತದೆ; ಲೆನಿನ್ ಸೋವಿಯಟ್ ಅನ್ನು ಸಂಸ್ಥಾಪಿಸುತ್ತಾನೆ.

ಬ್ರಿಟನ್‌ನಲ್ಲಿ ದೊರೆತ ಸಾಮಗ್ರಿಯಿಂದ ಮಾರ್ಕ್ಸ್ ಚಿಂತನೆ ರೂಪುಗೊಂಡರೂ, ಆ ಚಿಂತನೆ ಬ್ರಿಟಿಷ್ ಸಮಾಜವಾದದ ಮೇಲೆ ಹೆಚ್ಚು ಪ್ರಭಾವ ಬೀರಲಿಲ್ಲ. ಮಿಲ್ ಮತ್ತು ಬೆಂಥಾಮರ ಆಲೋಚನೆಗಳ ಮುಂದುವರಿಕೆಯಾಗಿದೆ ಬ್ರಿಟಿಷ್ ಸಮಾಜವಾದ. ಹಂಚಿಕೆಯ ಕಾನೂನು ಮಾತ್ರವಲ್ಲ, ಆಸ್ತಿಯ ಹಕ್ಕು ಸಹ ಸಮಾಜದ ಇಚ್ಛೆಗನುಗುಣವಾಗಿ ಪರಿವರ್ತನೀಯ ಎಂದು ನ್ಯೂಮನ್ ನುಡಿಯುತ್ತಾನೆ. ಫೇಬಿಯನ್ ಸೊಸೈಟಿಯ ಸಿದ್ಧಾಂತಗಳನ್ನು ಗಮನಿಸಿದಾಗ, ಪ್ರಜಾಪ್ರಭುತ್ವದ ತಾರ್ಕಿಕ ಫಲಿತಾಂಶವೇ ಸಮಾಜವಾದವೆನ್ನುವವರೂ ಇದ್ದಾರೆ. ಇದೇ ಸಮಯದಲ್ಲಿ ಫ್ರಾನ್ಸ್, ಜರ್ಮನಿ, ಇಟಲಿ ಮೊದಲಾದ ಯುರೋಪಿನ ಇತರ ರಾಷ್ಟ್ರಗಳಲ್ಲಿಯೂ ಸಮಾಜವಾದದ ಭಿನ್ನ ಭಿನ್ನ ರೂಪಗಳನ್ನು ಕಾಣಬಹುದು. ಜಮೀನ್ದಾರ, ರೈತ ಮತ್ತು ರೈತ ಕಾರ್ಮಿಕರ ಸ್ಥಿತಿಗತಿಗಳ ವಿಷಯ ಸಮಾಜವಾದದ ಪರಿಧಿಯಲ್ಲಿ ಇನ್ನೂ ಪೂರ್ಣ ಚರ್ಚಿತವಾಗದಿರುವುದೊಂದು ಲೋಪ. ನೆಲಕ್ಕೂ ಮನುಷ್ಯನಿಗೂ ಆತ್ಮೀಯ ಸಂಬಂಧವುಂಟಾದಾಗ, ಅಂದರೆ ಹಳ್ಳಿಗಳಲ್ಲಿ ಅವರ ನಿಜವಾದ ಆತ್ಮ-ಅವರ ಭಾಷೆ, ಸಾಹಿತ್ಯ, ಕಾವ್ಯ ಮತ್ತು ಸಂಪ್ರದಾಯಗಳು ಮೂಡುತ್ತವೆಂಬುದನ್ನು ಸಮಾಜವಾದಿಗಳು ಅರಿತಿರಬೇಕು. ರಷ್ಯಾದ ಕಮ್ಯುನ್‌ಗಳಲ್ಲಿ ಇಸ್ರೇಲಿನ ಕಿಬುಟ್ಜ್‌ಗಳಲ್ಲಿ ಗುಂಪು ಬದುಕು ನಡೆಯುತ್ತದೆ. ರಷ್ಯದ ಸೋವಿಯಟ್ಟುಗಳು ಸಿಡಿದುಹೋದದ್ದು ನಿಜ; ಕಮ್ಯೂನಿಸಂ ಸಿದ್ಧಾಂತಕ್ಕೆ ಹಿಂದೇಟು ಪ್ರಾಪ್ತವಾಗಿರುವುದೂ ದಿಟ. ಆದರದು ಒಂದಲ್ಲ ಒಂದು ರೂಪದಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ಬಲವಾಗಿ ಬೇರೂರಿರುವುದು ಖಂಡಿತ. ಪ್ರಜಾಪ್ರಭುತ್ವವೇ ಹಲವು ಬಗೆಯ ಸಮಾಜವಾದಗಳ ಉಗಮಕ್ಕೆ ಕಾರಣವಾಗುತ್ತದೆ. ಜೈವಿಕವಾಗಿ ಸಮಾನತಾವಾದ ಸಾಧ್ಯವಾಗದಿದ್ದರೂ, ಸಮಾನಾವಕಾಶವಾದ ಮುಂದಿನ ಸಮಾಜವಾದದ ಗುರಿಯಾಗುತ್ತದೆ.

ವೇದೋಪನಿಷತ್ತು, ಭಗವದ್ಗೀತೆ, ಟಾಲ್‌ಸ್ಟಾಯ್, ರಸ್ಕಿನ್, ಥೋರೋ ಅವರನ್ನೋದಿಕೊಂಡಿದ್ದ ಗಾಂಧೀಜಿಯ ಸ್ವಾತಂತ್ರ್ಯ ಕಲ್ಪನೆಯ ನಾಲ್ಕು ಸ್ತಂಭಗಳೆಂದರೆ ಸ್ವರಾಜ್ಯ, ಸ್ವದೇಶಿ, ಸರ್ವೋದಯ ಮತ್ತು ಸತ್ಯಾಗ್ರಹ; ಅಸ್ಪೃಶ್ಯ ನಿರ್ಮೂಲನ ಮತ್ತು ದಾರಿದ್ರ್ಯ ನಿವಾರಣೆ ಅವರ ಸರ್ವೋದಯದ ಮಂತ್ರಗಳಾಗಿದ್ದುವು. ಅವರ ಆಶ್ರಮಗಳು ಗ್ರಾಮೀಣ ಕೇಂದ್ರವಾಗಿದ್ದುದಲ್ಲದೆ, ನಯೀ ತಾಲಿಮ್ ಒಡಗೂಡಿದ ಅವರ ರಚನಾತ್ಮಕ ಕಾರ್ಯಕ್ರಮಗಳು ಶ್ರೀಸಾಮಾನ್ಯರ ಶ್ರೇಯೋಭ್ಯುದಯ ಪರವಾಗಿದ್ದುವು. ವಿನೋಬ ಭಾವೆ ಗಾಂಧೀ ಸಮಾಜವಾದದ ಉತ್ತರಾಧಿಕಾರಿಯಂತಿದ್ದು, ಭೂದಾನ, ಗ್ರಾಮದಾನ, ಶ್ರಮದಾನ ಚಳುವಳಿಗಳ ಪ್ರವರ್ತಕರಾಗುತ್ತಾರೆ. ಜಯಪ್ರಕಾಶ ನಾರಾಯಣರೂ ಅವರೊಡನೆ ಸೇರಿಕೊಳ್ಳುತ್ತಾರೆ. ಆದರೆ ಆ ಚಳವಳಿ ಅವರೊಡನೆಯೆ ಮರೆತು ಹೋಗುತ್ತದೆ.

ಪಾಶ್ಚಾತ್ಯ ಮುದ್ರೆಯ ಸಮಾಜವಾದ ಭಾರತಕ್ಕೆ ನುಸುಳಿದ್ದೇ ಇಪ್ಪತ್ತನೆಯ ಶತಮಾನದಲ್ಲಿ. ಲಾಲಾ ಲಜಪತರಾಯ್, ಎಂ. ಎನ್. ರಾಯ್ ಮತ್ತು ವೀರೇಂದ್ರ ಚಟ್ಟೋಪಾಧ್ಯಾಯರು ಅದರ ಅಧ್ವರ್ಯುಗಳು; ಜವಹರಲಾಲ್ ನೆಹರೂ ತಮ್ಮ ತಂದೆ ಮೋತಿಲಾಲ್ ನೆಹರೂ ಅವರೊಡನೆ ರಷ್ಯಾಕ್ಕೆ ೧೯೨೬ರಲ್ಲಿ ಭೇಟಿ ನೀಡಿದ್ದು, ತಮ್ಮ 'ಪ್ರಪಂಚ ಚರಿತ್ರೆಯ ಮಿನುಗು'ಗಳಲ್ಲಿ ಮಾರ್ಕ್ಸ್‌ನ ಆರ್ಥಿಕ ಚಿಂತನೆಯ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಮುಂದಿನ ದಿನಗಳಲ್ಲಿ ಟ್ರೇಡ್ ಯೂನಿಯನ್‌ಗಳೂ, ಅಖಿಲ ಭಾರತೀಯ ಕಿಸಾನ್ ಸಭೆಗಳೂ ಸ್ಥಾಪನೆಗೊಳ್ಳುತ್ತವೆ. ಕಾಂಗ್ರೆಸ್ಸಿನೊಳಗೆ ಸೋಷಿಯಲಿಸ್ಟ್ ಪಾರ್ಟಿ ಪ್ರಾರಂಭವಾಗುತ್ತದೆ. ನರೇಂದ್ರ ದೇವ, ಜಯಪ್ರಕಾಶ ನಾರಾಯಣ್, ಯೂಸುಫ್ ಮೆಹರ್ ಆಲಿ, ಅಶೋಕ ಮೆಹ್ತ ಮೊದಲಾದವರು ಅದರ ಬೆನ್ನೆಲುಬಾಗುತ್ತಾರೆ. ಭಾರತೀಯ ಸಮಾಜವಾದದಲ್ಲಿ ವಿದೇಶೀಯ ಲಕ್ಷಣಗಳ ಜತೆಗೆ, ಸ್ವಾತಂತ್ರ್ಯ ಚಳುವಳಿಯ ಅಂಶಗಳೂ ಮಿಶ್ರಗೊಂಡಿವೆಯೆಂಬುದನ್ನು ಮರೆಯುವಂತಿಲ್ಲ. ೧೯೪೮ರ ನಂತರ ಸಮಾಜವಾದ ಪಕ್ಷ ಕಾಂಗ್ರೆಸ್ಸಿನಿಂದ ಪ್ರತ್ಯೇಕವಾಗುತ್ತದೆ. ಆದರೂ ಭೂಮಿತಿ, ಕೃಷ್ಯುತ್ಪನ್ನಗಳ ಬೆಲೆ ನಿಗದಿ, ನಿರುದ್ಯೋಗ ಸಮಸ್ಯೆಯ ನಿವಾರಣೆ, ಬ್ಯಾಂಕ್ ರಾಷ್ಟ್ರೀಕರಣ, ಹಿಂದುಳಿದವರ ಮೀಸಲಾತಿ ಇವೇ ಮೊದಲಾದ ಕಾರ್ಯಕ್ರಮಗಳನ್ನು ಕಾಂಗ್ರೆಸ್ ರೂಪಿಸಿಕೊಳ್ಳುತ್ತದೆ.

ಸಮಾಜವಾದಿಗಳ ಪೈಕಿ ನರೇಂದ್ರ ದೇವರಿಗೆ (೧೮೮೯-೧೯೫೬) ಪ್ರಥಮ ಸ್ಥಾನ ಸಲ್ಲುತ್ತದೆ. ಬಹುಭಾಷಾವಿದರಾದ ಅವರು ಬೌದ್ಧ ತತ್ತ್ವಶಾಸ್ತ್ರದಲ್ಲಿ ಬಲ್ಲಿದರು. ಅವರು ಪ್ರಾರಂಭದಲ್ಲಿ ಕಮ್ಯೂನಿಸ್ಟರಾಗಿದ್ದರೂ ಅಹಿಂಸಾನಿಷ್ಠರಲ್ಲದಿದ್ದರೂ ಗಾಂಧೀಜಿಯಲ್ಲಿ ವಿಶೇಷ ಗೌರವವುಳ್ಳವರು. ನೈತಿಕ ತಳಹದಿಯ ಸಮಾಜವಾದದ ಕಡೆಗೆ ಅವರ ಒಲವು. ಆಗಿಂದಾಗ್ಗೆ ಹೊಸ ಹೊಸ ವರ್ಗಗಳು ಮೊಳೆ

ದೋರುವುದರಿಂದ, ವರ್ಗಸಂಘರ್ಷ ಹಾಗೂ ಕೆಳವರ್ಗದ ಜನರ ಸಂಘಟನೆ ಅನಿವಾರ್ಯವೆಂಬುದು ಅವರ ಮತ. ಸ್ವಾತಂತ್ರ್ಯ ಚಳವಳಿ ಮತ್ತು ಸಮಾಜವಾದ ಆಂದೋಲನಗಳ ನಡುವೆ ರಾಜಿಯನ್ನು ಸಾಧಿಸಲವರು ಪ್ರಯತ್ನಿಸುತ್ತಾರೆ. ರಾಜಕೀಯ ಸ್ವಾತಂತ್ರ್ಯ ಸಮಾಜವಾದ ಸ್ಥಾಪನೆಗೆ ದಾರಿಯಾಗುತ್ತದೆಂದೂ, ಮೊದಲನೆಯದಿಲ್ಲದೆ ಎರಡನೆಯದು ಸಾಧ್ಯವಿಲ್ಲವೆಂದೂ ಅವರು ಸ್ಪಷ್ಟಪಡಿಸುತ್ತಾರೆ. ರಚನಾತ್ಮಕ ಕಾರ್ಯಕ್ರಮಗಳ ಮೂಲಕ ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯಗಳನ್ನು ಸಾಧಿಸತಕ್ಕದ್ದೆಂದು ಅವರು ತಮ್ಮ ಪಕ್ಷದವರಿಗೆ ಎಚ್ಚರಿಕೆ ನೀಡುತ್ತಾರೆ. ರೈತ ಚಳವಳಿಯ ಜತೆಗೆ ಸಾರ್ವತ್ರಿಕ ಶಿಕ್ಷಣದ ಆವಶ್ಯಕತೆಯನ್ನು ಒತ್ತಿ ಹೇಳುತ್ತಾರೆ. ರೈತರ ಪ್ರಯೋಜನಕ್ಕಾಗಿ ಸಹಕಾರ ಸಂಘಗಳನ್ನು ವ್ಯವಸ್ಥೆಗೊಳಿಸಬೇಕೆಂದೂ, ದಳ್ಳಾಳಿಗಳನ್ನು ನಿವಾರಿಸಬೇಕೆಂದೂ, ಅವರ ಸಾಲವನ್ನು ಚುಕ್ತಗೊಳಿಸಬೇಕೆಂದೂ ಅವರು ಸರ್ಕಾರಕ್ಕೆ ಕರೆಕೊಡುತ್ತಾರೆ. ಅವರ ಸಮಾಜವಾದದಲ್ಲಿ ಮಾನವತೆಗೆ ವಿಶೇಷ ಸ್ಥಾನವಿದೆ.

ಇಂಡಿಯಾ ದೇಶದ ಇತಿಹಾಸದ ಪ್ರಾಮುಖ್ಯತೆಯಲ್ಲಿ ಗಾಂಧೀಜಿಗೆ ಹತ್ತಿರವಾದ ಜಯಪ್ರಕಾಶ ನಾರಾಯಣರು (೧೯೦೨-೧೯೭೯), ಏಕಾಂಗಿಯಾಗಿ ಇಂದಿರಾ ಗಾಂಧಿಯವರ ಸರ್ವಾಧಿಕಾರವನ್ನೆದುರಿಸುತ್ತಾರೆ. ಅಮೆರಿಕೆಯಲ್ಲಿ ಓದುತ್ತಿದ್ದಾಗಲೆ ಮಾರ್ಕ್ಸ್ ಸಿದ್ಧಾಂತಕ್ಕೆ ಶರಣಾಗುತ್ತಾರೆ. ರಷ್ಯನ್ ಬಾಲ್ಷೆವಿಕ್ ಪಕ್ಷದ ಕ್ರೌರ್ಯಗಳನ್ನು ವಿರೋಧಿಸುತ್ತಾರೆ. ಬರಬರುತ್ತ ಮಾರ್ಕ್ಸ್ ಸಿದ್ಧಾಂತದ ಕಾಠಿನ್ಯಗಳು ಅವರಿಗೆ ಸರಿಕಾಣುವುದಿಲ್ಲ. ನರೇಂದ್ರ ದೇವರೊಡನೆ ಸೇರಿಕೊಂಡು ಭಾರತೀಯ ಸಮಾಜವಾದವನ್ನು ಬೆಳೆಸುವಲ್ಲಿ ಅವರು ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ೧೯೪೨ನೆಯ ಕ್ರಾಂತಿಕಾರ ಚಳವಳಿಯಲ್ಲವರು ಹಜಾರಿಬಾಘ್ ಸೆಂಟ್ರಲ್ ಜೈಲಿನಿಂದ ತಪ್ಪಿಸಿಕೊಂಡು ಮತ್ತೆ ಚಳವಳಿಯಲ್ಲಿ ಸೇರಿಕೊಳ್ಳುತ್ತಾರೆ.

ಗಾಂಧೀಜಿಯ ಮರಣಾನಂತರ ಸ್ಟಾಲಿನ್ ಜಗತ್ತಿನ ಶ್ರೇಷ್ಠ ಸಮಾಜವಾದಿಯೆಂಬುದು, ರಷ್ಯಾ ಎಲ್ಲ ಬಗೆಯ ಶೋಷಣೆಯಿಂದ ಮುಕ್ತ ಹೊಂದಿದೆಯೆಂಬುದು ಜೆ.ಪಿ.ಯವರ ಅಂದಿನ ಅಭಿಪ್ರಾಯ. ಹೊಸ ಸಮಾಜದ ಸೃಷ್ಟಿಗೆ ಹಿಂಸೆ ಅನಿವಾರ್ಯವೆಂದವರು ಒಪ್ಪಿಕೊಳ್ಳುತ್ತಾರೆ. ಮನು ಬೋಧಿಸಿದ ವರ್ಣಾಶ್ರಮ ಧರ್ಮವನ್ನವರು ನಾಡಿನ ಆರೋಗ್ಯಕ್ಕೆ ಅಪಥ್ಯವೆಂದು ಸಿಡಿಯುತ್ತಾರೆ. ಮಾನವರ ಆರ್ಥಿಕ ಪ್ರಗತಿಗೆ ಅಡ್ಡಬರುವ ಎಲ್ಲ ಪ್ರತಿಬಂಧಕಗಳನ್ನು ತೆಗೆಯಬೇಕಾದದ್ದು ಸಮಾಜದ ಹಾಗೂ ರಾಜ್ಯದ ಕರ್ತವ್ಯವೆಂದವರು ಭಾವಿಸುತ್ತಾರೆ. ಸಾಮಾಜಿಕಾರ್ಥಿಕ ಸಮಾನತೆಯೆ ಅವರ ಜೀವನಧ್ಯೇಯ; ಇದಕ್ಕಾಗಿ ಸಾಮೂಹಿಕ ಸ್ವಾಮ್ಯ ಮತ್ತು ಬೃಹತ್ ಉದ್ಯಮಗಳ ರಾಷ್ಟ್ರೀಕರಣ ಅತ್ಯಗತ್ಯವೆಂದವರು ವಾದಿಸುತ್ತಾರೆ. ಸಮಾಜವಾದ ಭಾರತೀಯ ಸಂಸ್ಕೃತಿಗೆ ವಿರೋಧವಲ್ಲ; ಹಂಚಿಕೆ ಅದರ ಆದರ್ಶಗಳಲ್ಲೊಂದು ಎಂಬುದಾಗಿ ನುಡಿಯುತ್ತಾರೆ. ಗಾಂಧೀಜಿಯ ಧರ್ಮದರ್ಶಿ ಮತ್ತು ರಾಮರಾಜ್ಯಗಳ ಕಲ್ಪನೆಯ ಪ್ರಕಾರ ದೊರೆ ಮತ್ತು ಪರೆಯರು ತಂತಮ್ಮ ಸ್ಥಾನಗಳಲ್ಲುಳಿಯುವುದರಿಂದ, ಅವುಗಳ ಬಗ್ಗೆ ನಾರಾಯಣರಿಗೆ ವಿರೋಧ. ಆದರೆ ನಾರಾಯಣರು ಆದರ್ಶ ಸಮಾಜವಾದಿ ಎಂದು ಗಾಂಧೀಜಿ ಒಪ್ಪಿಕೊಳ್ಳುತ್ತಾರೆ. ಜೆ.ಪಿ.ಯವರು ಬರಬರುತ್ತ ತಮ್ಮ ಚಿಂತನ ವಿಧಾನವನ್ನೆ ಬದಲಾಯಿಸಿಕೊಳ್ಳುತ್ತಾರೆ. ಕೃಷಿಕ ಸಮಾಜದ ಪುನರ್ರಚನೆ ಮತ್ತು ಪಂಚಾಯತ್ ರಾಜ್ಯದ ಸಂರಚನೆಯಿಲ್ಲದೆ ರಾಷ್ಟ್ರ ಪ್ರಗತಿ ಸಾಧ್ಯವಿಲ್ಲವೆಂದು ಸ್ಪಷ್ಟಪಡಿಸಿ, ಹದಿಮೂರು ಅಂಶಗಳ ಕಾರ್ಯಕ್ರಮವನ್ನು ಸರ್ಕಾರದ ಮುಂದಿಡುತ್ತಾರೆ.

ಇಷ್ಟಪಟ್ಟಿದ್ದರೆ ಜೆ.ಪಿ.ಯವರು ನೆಹರೂ ಸರ್ಕಾರದಲ್ಲಿರಬಹುದಿತ್ತು. ರಾಷ್ಟ್ರಪತಿಯಾಗಬಹುದಿತ್ತು. ಅವರಿಗೆ ಪಕ್ಷೀಯ ಸರ್ಕಾರ ಇಷ್ಟವಾಗಲಿಲ್ಲ. ತಾವಿದ್ದ ಪಕ್ಷಕ್ಕೂ ಅವರು ರಾಜೀನಾಮೆ ಕೊಡುತ್ತಾರೆ. ವಿನೋಬಾ ಭಾವೆಯವರು ಭೂದಾನ ಚಳವಳಿ ಪ್ರಾರಂಭಿಸಿದಾಗ, ಅವರು ಆ ಚಳವಳಿಗೆ ತಮ್ಮ ಜೀವನವನ್ನೇ ದಾನಮಾಡುತ್ತಾರೆ. ಇಂದಿರಾ ಗಾಂಧಿ ಸರ್ಕಾರದಲ್ಲಿ ಅನಾಚಾರ, ಅತ್ಯಾಚಾರ, ಭ್ರಷ್ಟಾಚಾರಗಳು ದೇಶಾದ್ಯಂತ ಮಿತಿಮೀರಿದಾಗ, ಅವುಗಳ ನಿರ್ಮೂಲನಕ್ಕೆ ಪಣತೊಟ್ಟು ಜೀವನವನ್ನು ಪಣವಿಟ್ಟು ಅನಾರೋಗ್ಯ ಸ್ಥಿತಿಯಲ್ಲಿಯೂ ದೇಶದಲ್ಲೆಲ್ಲ ಸುತ್ತಾಡಿ ಕ್ರಾಂತಿ ಆಂದೋಲನವನ್ನಬ್ಬಿಸುತ್ತಾರೆ. ಇಂದಿರಾ ಗಾಂಧಿಯವರು ಕ್ರಾಂತಿಯ ದಳ್ಳುರಿಯನ್ನು ಸಹಿಸಲಾರದೆ ತುರ್ತು ಪರಿಸ್ಥಿತಿಯನ್ನು ಘೋಷಿಸುತ್ತಾರೆ. ಅದರ ಫಲವಾಗಿ ಅವರು ಅಧಿಕಾರದ ಗದ್ದುಗೆಯಿಂದಿಳಿಯಬೇಕಾಗುತ್ತದೆ. ಜೆಪಿಯವರೂ ಮರಣವನ್ನಪ್ಪಬೇಕಾಗುತ್ತದೆ. ಗಾಂಧಿಯ ನಂತರ ಯಾರು ಎಂಬ ಪ್ರಶ್ನೆಗೆ ಜೆ.ಪಿ.[೧] ಎಂಬುದೇ ಉತ್ತರವಾಗುತ್ತದೆ. ಪಕ್ಷ ನಿರಪೇಕ್ಷ ಸಮಾಜರಚನೆ, ಸಮಗ್ರ ಕ್ರಾಂತಿ ಜಯಪ್ರಕಾಶರು ರಾಷ್ಟ್ರಾಭ್ಯುದಯಕ್ಕಾಗಿ ಸೂಚಿಸಿದ ಮಾರ್ಗಗಳು.

---

೧. ಇದೇ ಲೇಖಕರ 'ಲೋಕನಾಯಕ' ಎಂಬ ಗ್ರಂಥವನ್ನೋದಬಹುದು.
ಇದೇ ಲೇಖಕರ 'ಸಮಾಜವಾದಿ ಲೋಹಿಯಾ' ಎಂಬ ಗ್ರಂಥವನ್ನು ನೋಡಬಹುದು.

ಇಂಡಿಯಾ ಜರ್ಮನಿಗಳಲ್ಲಿ ವ್ಯಾಸಂಗ ಮಾಡಿದ **ರಾಮಮನೋಹರ ಲೋಹಿಯಾರವರು, (೧೯೧೦-೧೯೬೭)** ಸಮಾಜವಾದಿ ವಿರೋಧಿಗಳಿಗೆ ಅಗ್ನಿಭಯಂಕರರಾಗಿದ್ದರು. ಸಾಮ್ರಾಜ್ಯಶಾಹಿ ರಾಷ್ಟ್ರವಾದ ಇಂಗ್ಲೆಂಡಿನಲ್ಲಿ ತಾವು ವ್ಯಾಸಂಗಮಾಡುವುದಿಲ್ಲವೆಂಬ ಹಠದಿಂದ ಅವರು ಜರ್ಮನಿಗೆ ಹೋದದ್ದು. ಗಾಂಧಿವಾದದಲ್ಲಿ ಅವರಿಗೆ ಒಲವಿದ್ದುದರಿಂದ, ಅವರ ಅನುಭವಗಳನ್ನು ಸಮಾಜವಾದ ಪಕ್ಷಕ್ಕೆ ಆಮದುಮಾಡಿಕೊಳ್ಳಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ತಮ್ಮ ಪಕ್ಷ ಕಮ್ಯೂನಿಸಂ ಮತ್ತು ಕಾಂಗ್ರೆಸ್ಸಿನಿಂದ ಸಮದೂರದಲ್ಲಿದ್ದುದರಿಂದ, ಚುನಾವಣೆ ಸಮಯದಲ್ಲಿ ಕಾಂಗ್ರೆಸ್ಸಿನೊಡನೆ ಒಪ್ಪಂದ ಮಾಡಿಕೊಳ್ಳಬಹುದೆಂದು ವಾದಿಸುತ್ತಿದ್ದುದುಂಟು. ೧೯೫೫ರಲ್ಲಿ ಸಮಾಜವಾದ ಪಕ್ಷ ಪ್ರಾರಂಭವಾದಾಗ ಅವರು ಅದರ ಅಧ್ಯಕ್ಷರಾಗುತ್ತಾರೆ.

ಲೋಹಿಯಾ ಪ್ರಕಾರ ಇತಿಹಾಸ ಚಕ್ರಾರಪಂಕ್ತಿಯಂತೆ ತಿರುಗುತ್ತದೆ. ಭಾಗ್ಯದ ಅಭ್ಯುದಯ ಅವನತಿಯನ್ನು ಮೇಲಿನಿಂದ ಕೆಳಕ್ಕೆ ಕೆಳಗಿನಿಂದ ಮೇಲಕ್ಕೆ ಸರದಿಯಲ್ಲಿ ಕಾಣಬಹುದಾಗಿದೆ. ವಿಕೇಂದ್ರೀಕೃತ ಸಮಾಜವಾದ ಲೋಹಿಯಾ ಅವರ ರಾಜಕೀಯ ವಿಚಾರಧಾರೆ. ಅವರು 'ಭಾರತದ ರೈತ' ಎನ್ನುವ ತಮ್ಮ ಲೇಖನದಲ್ಲಿ ಹದಿಮೂರಂಶಗಳ ಕಾರ್ಯಕ್ರಮದ ಮೂಲಕ ಬಡತನವನ್ನು ನೀಗಬಹುದೆಂದು ವಿಶದಪಡಿಸಿದ್ದಾರೆ. ಪ್ರಪಂಚ ಸಂಸದದ ಕಲ್ಪನೆಯೂ ಅವರಿಗಿತ್ತು.

ಸ್ವಾತಂತ್ರ್ಯಾನಂತರದ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ಬಂಡವಾಳಗಾರರು ಶ್ರೀಮಂತರು ಮತ್ತು ಸ್ವಾರ್ಥಾಸಕ್ತರೇ ತುಂಬಿಕೊಂಡಿದ್ದಾರೆಂಬುದು ಅವರ ಕೂಗು. ಬಡ ರೈತ ಅಭ್ಯುದಯ ಹೊಂದುವತನಕ ಸ್ವಾತಂತ್ರ್ಯ ಪೂರ್ಣವಾಗುವುದಿಲ್ಲವೆಂಬ ಗಾಂಧೀಜಿಯ ಕಲ್ಪನೆಯಲ್ಲಿ ಅವರಿಗೆ ವಿಶ್ವಾಸವಿತ್ತು. ಅದರಿಂದಾಗಿ ಅವರು ದಮನ ತುಳಿತಗಳ ವಿರುದ್ಧವಾಗಿ ಕೋಪೋಗ್ರರಾಗುತ್ತಿದ್ದರು. ಜಾತೀಯತೆಯನ್ನವರು ತೀವ್ರವಾಗಿ ಖಂಡಿಸುತ್ತಿದ್ದರು. ಶೂದ್ರರ, ಹರಿಜನರ ಮತ್ತು ಬುಡಕಟ್ಟು ಜನರ ಏಳ್ಗೆಯನ್ನು ಸಾಧಿಸದಿದ್ದರೆ ಇಂಡಿಯಾದ ರಾಜಕೀಯ ಭವಿಷ್ಯ ಮಣ್ಣುಗೂಡುತ್ತದೆಂದು ಹೇಳುತ್ತಿದ್ದರು. ತಿಪ್ಪೆಯ ಎಂಜಲೆಲೆಗಳನ್ನು ಬಳಿದು ತಿನ್ನುವ ನಿರ್ಗತಿಕರಿರುವಾಗ ಅದ್ದೂರಿಯ ಹಬ್ಬ ಮದುವೆಗಳನ್ನು ನಡೆಸುವ ಶ್ರೀಮಂತರನ್ನವರು ದೂಷಿಸುತ್ತಿದ್ದರು. ಬಡ ರೈತರ ಸಮಸ್ಯೆಯನ್ನವರು ಮೈ-ಮನಸ್ಸಿಗೆ ತುಂಬ ಹಚ್ಚಿಕೊಂಡಿದ್ದರು.

ಕಾಂಗ್ರೆಸ್ ವಿರೋಧಿಪಕ್ಷಗಳೆಲ್ಲ ಒಂದುಗೂಡಿ ಸರ್ಕಾರ ರಚಿಸಬೇಕೆಂಬುದು ಅವರ ಅಪೇಕ್ಷೆಯಾಗಿತ್ತು. ಇಂಡಿಯಾ ಮತ್ತು ಪಾಕಿಸ್ತಾನಗಳ ಸಂಯುಕ್ತ ಸಂಸ್ಥಾನ ರಚನೆ ಅವರ ಕನಸಾಗಿತ್ತು. ೧೯೪೬ರಲ್ಲಿ ಗೋವ ಸ್ವಾತಂತ್ರ್ಯ ಚಳವಳಿಯನ್ನು ಪ್ರಾರಂಭಿಸಿದವರೇ ಅವರು. ಅವರ ದೃಷ್ಟಿಯಲ್ಲಿ ವಶಿಷ್ಠ ಪರಶುರಾಮರು ಉತ್ತಮ ವರ್ಗದ ಸಂಕೇತ, ವಾಲ್ಮೀಕಿ ವಿಶ್ವಾಮಿತ್ರರು ಕೆಳವರ್ಗದ ಸಂಕೇತ; ರಾಮ ಸಂಯಮಶೀಲ, ಕೃಷ್ಣ ಕಳ್ಳ, ಸುಳ್ಳ, ಮೋಸಗಾರ; ಶಿವ ಸರ್ವಶಕ್ತ, ಅನಂತ.

ಇಂಗ್ಲಿಷ್ ಶೋಷಣೆಯ ಮತ್ತು ಸಾರ್ವಭೌಮತ್ವದ ಸಂಕೇತವಾದುದರಿಂದ ಅದನ್ನು ಕೂಡಲೇ ದೇಶದಿಂದ ಉಚ್ಚಾಟಿಸಿ, ಅದರ ಬದಲಿಗೆ ಹಿಂದಿ ಮತ್ತು ಬೇರೆ ಪ್ರಾದೇಶಿಕ ಭಾಷೆಗಳನ್ನು ಬಳಕೆಗೆ ತರಬೇಕೆಂಬುದು ಅವರ ಇಚ್ಛೆಯಾಗಿತ್ತು.

ಲೋಹಿಯಾ ಇಂಡಿಯಾ ದೇಶದ ಆಕಾಶದಲ್ಲಿ ಮಿಂಚಿನಂತೆ ಸುಳಿದು, ಸಿಡಿಲಂತೆ ಆರ್ಭಟಿಸಿ, ಮಾಯವಾದರೂ ಎಲ್ಲ ಕಡೆಯೂ ಅವರ ಅನುಯಾಯಿಗಳಿದ್ದರು. ಕರ್ನಾಟಕದಲ್ಲಿಯೂ ಕಾಗೋಡು ಸತ್ಯಾಗ್ರಹ ಕೀರ್ತಿಯ ಗೋಪಾಲಗೌಡ, ಜೆ. ಎಚ್. ಪಟೇಲ್, ಬಂಗಾರಪ್ಪ, ತಿಮ್ಮಪ್ಪ, ಮೊದಲಾದವರು ಕೆಲವು ಕಾಲ ಕನ್ನಡಿಗರನ್ನು ವಿಸ್ಮಯಗೊಳಿಸಿದ್ದುಂಟು. ಲೋಹಿಯಾ ನಂತರ ಅವರ ಚೇಗಿನ ಜನರನ್ನು ಕಾಣುವಂತಿಲ್ಲ.

ಕೇವಲ ಕಾರ್ಖಾನೆಯ ಕಾರ್ಮಿಕರು ಮಾರ್ಕ್ಸ್‌ನ ಸಹಾನುಭೂತಿಗೆ ಪಾತ್ರರಾದವರು. ಇಂಡಿಯಾದಲ್ಲಿ ಭೂರಹಿತ ಹಳ್ಳಿಯ ಜನ ಭಾರವಾದ ಸಂಕಷ್ಟಕ್ಕೆ ಗುರಿಯಾಗಿದ್ದಾರೆಂಬುದು ಭಾರತೀಯ ಸಮಾಜವಾದಿಗಳ ದೂರು. ಭಾರತೀಯ ಸಮಾಜದಲ್ಲಿ ವರ್ಗಗಳ ಜತೆಗೆ ಜಾತೀಯ ಸಮಸ್ಯೆ ಕ್ರೂರವಾಗಿ, ಜಟಿಲವಾಗಿ ಇದೆಯೆಂಬುದು ಅವರ ಸಂಶೋಧನೆ. ಗಾಂಧೀಜಿಯ ಪ್ರಭಾವದಿಂದ ಹಿಂಸೆಯನ್ನು ತೊರೆದು ಸಂಸದೀಯ ವಿಧಾನಗಳ ಮೂಲಕ ರಾಜಕೀಯ ಸ್ವಾತಂತ್ರ್ಯವನ್ನೂ, ಆರ್ಥಿಕ ಶ್ರೇಯಸ್ಸನ್ನೂ ಸಾಧಿಸಬೇಕೆಂಬುದೂ, ವಿಕೇಂದ್ರೀಕರಣಕ್ಕೆ ಆದ್ಯತೆ ನೀಡಬೇಕೆಂಬುದೂ ಅವರ ಆಶಯ. ಸೂಕ್ತ ಹಂಚಿಕೆಯ ಮೂಲಕ ಸುಖೀರಾಜ್ಯವನ್ನು ಕಾಣಲಾಗದೆ? ಎನ್ನುವ ಸಮಾಜವಾದಿಗಳೂ ಉಂಟು. ಒಟ್ಟಿನಲ್ಲಿ ಸರ್ವಾಧಿಕಾರಕ್ಕೂ ಭಾರತೀಯ ಸಮಾಜವಾದಿಗಳಿಗೂ ಎಣ್ಣೆಸೀಗೆಯ ನಂಟು. ರಷ್ಯಾ ಮತ್ತು ಚೀನಾದ ಕಮ್ಯೂನಿಸಂ ಅನ್ನು ಕುರಿತು ಹಾಡುವ ಜನರು ಇಂಡಿಯಾದಲ್ಲಿ ಇಲ್ಲದಿಲ್ಲ. ಸಹಸ್ರ ಸಹಸ್ರ ವರ್ಷಗಳಿಂದ ಹಿಂದುಳಿದವರೂ ದಲಿತರೂ ಶೋಷಣೆಗೊಳಗಾಗಿದ್ದಾರೆಂಬುದವರಿಗೆ ಗೊತ್ತು.

ಸಮಾಜವಾದ ವಿದೇಶೀಯವಾದದ್ದು, ನಾಸ್ತಿಕತೆ ಅದರ ರೊಚ್ಚು, ಅದು ಈ ಮಣ್ಣಿಗೆ ಹೊಂದುವುದಿಲ್ಲವೆಂಬುದು ಡಾ. ಸಂಪೂರ್ಣಾನಂದರಂಥವರ, ಕೆಲವು ಆರ್ಯಸಮಾಜವಾದಿಗಳ ದೂರು. ಆದರೆ ಸಮಾಜವಾದೀ ವಿಧಾನದಿಂದಲ್ಲದೆ ಭಾರತೀಯ

ಸಮಸ್ಯೆಗಳ ಪರಿಹಾರ ಸಾಧ್ಯವಿಲ್ಲವೆಂಬ ಸಂಗತಿ ಕಾಂಗ್ರೆಸ್ ಪಕ್ಷಕ್ಕೂ ಗೊತ್ತು. ಆದ್ದರಿಂದಲೇ ಅದು ರಾಜ್ಯಾಂಗಕ್ಕೆ 'ಸಮಾಜವಾದೀ ಗಣರಾಜ್ಯ'ವೆಂಬ ತಿದ್ದುಪಡಿಯನ್ನು ತಂದದ್ದು ಆಯಿತು. ಆದರೂ ಹಿಂದುಳಿದವರ ಮತ್ತು ದಲಿತರ ಸಮಸ್ಯೆಗಳು ಪರಿಹಾರವಾಗಲಿಲ್ಲವೆಂಬುದು ಸರ್ವವೇದ್ಯ.

## ಸರ್ವೋದಯ-ಪಂಚಾಯತ್ ರಾಜ್

ನಿಜವಾದ ಪ್ರಜಾಪ್ರಭುತ್ವ ಎಂದೂ ಇದ್ದದ್ದಿಲ್ಲ. ಪ್ರಜಾಪ್ರಭುತ್ವವೆಂದರೆ ಪಕ್ಷದ ಪ್ರಭುತ್ವ ಎಂದೇ ಅರ್ಥ. ಆದ್ದರಿಂದಲೇ ಗಾಂಧೀಜಿ ಬಯಸಿದ್ದು ಸ್ವರಾಜ್ಯ ಮತ್ತು ಸರ್ವೋದಯ. ಸರ್ವೋದಯ ಪಕ್ಷರಹಿತ ಪ್ರಜಾಸತ್ತೆಯನ್ನಪೇಕ್ಷಿಸುತ್ತದೆ. ಪಂಚಾಯತ್ ರಾಜ್ಯದ ಮೂಲಕ ಸರ್ವೋದಯವನ್ನು ಸಾಧಿಸತಕ್ಕದ್ದು, ಪಂಚಾಯತ್ ರಾಜ್ಯವನ್ನು ನಡೆಸುವವರೆಲ್ಲರೂ ಜನಸೇವಕರಾಗಬೇಕೆಂದು ವಿನೋಬಾ, ದಾದ ಧರ್ಮಾಧಿಕಾರಿ ಮತ್ತು ಜಯಪ್ರಕಾಶ ನಾರಾಯಣರ ಅಭಿಪ್ರಾಯ. ಈ ಜನಸೇವಕರನ್ನು ಪಕ್ಷ ರಾಜಕೀಯದ ಮೂಲಕ ಆರಿಸದೆ ಜನಾಭಿಪ್ರಾಯದ ಮೂಲಕ ಅಥವಾ ಪರೋಕ್ಷ ಆಯ್ಕೆಯ ಮೂಲಕವಾಗಬೇಕೆಂಬುದು ಅವರ ಅಪೇಕ್ಷೆ. ಈ ವಿಧಾನದಲ್ಲಿಯೂ ಲೋಪದೋಷಗಳನ್ನೆ ತೋರಿಸುವುದುಂಟು. ಭೂದಾನದ ಮೂಲಕ ಜನಶಕ್ತಿಯನ್ನು ಸಂಘಟಿಸಿ, ಎಲ್ಲ ಪಕ್ಷಗಳ ಮಿಲನವನ್ನು ಸಾಧಿಸುವುದಾಗಿ ವಿನೋಬ ಹೇಳುತ್ತಾರೆ. ಪ್ರತಿಯೊಬ್ಬ ಸದಸ್ಯನೂ ಕೊಡುವ ಯೋಗ್ಯರ ಪಟ್ಟಿಯಿಂದ ಹೆಚ್ಚು ಮತ ಪಡೆದವರನ್ನು ಮಂತ್ರಿಯನ್ನಾಗಿ ಆರಿಸಬಹುದೆಂಬುದು ಅವರ ಸೂಚನೆ. ಈ ಸೂಚನೆಯ ಮೂಲಕ ಪ್ರಜಾಪ್ರಭುತ್ವದ ಭಾರಿ ಕೆಡುಕಾದ ಗುಂಪುಗಾರಿಕೆಯನ್ನು, ಭ್ರಷ್ಟಾಚಾರವನ್ನು ತೊಡೆಯಬಹುದೆಂಬುದು ಜೆ.ಪಿ.ಯವರ ಆಶಯ.

ಕೇಂದ್ರೀಕರಣ ಪ್ರಜಾಪ್ರಭುತ್ವದ ರೋಗಗಳಲ್ಲೊಂದೆಂದೂ, ಸಣ್ಣ ಸಣ್ಣ ಕೃಷಿಕ ಘಟಕಗಳ ಮೂಲಕ ವಿಕೇಂದ್ರೀಕರಣವನ್ನು ಸಾಧಿಸಬಹುದೆಂದೂ ಜೆಫರ್‌ಸನ್ ಸ್ಪಷ್ಟಪಡಿಸಿದ್ದರು. ಇದು ಗಾಂಧೀಜಿಯ ಅಭಿಪ್ರಾಯವೂ ಆಗಿತ್ತು. ಆದರೆ ನೈತಿಕ ಪ್ರಜ್ಞೆ, ಆತ್ಮವೇದನೆ, ತ್ಯಾಗಬುದ್ಧಿ, ಸಮತಾಭಾವನೆ, ಅಹಿಂಸಾ ಮನೋಧರ್ಮ ಇದ್ದಾಗ ಮಾತ್ರ ಸರ್ವೋದಯ ಮತ್ತು ಪಂಚಾಯತ್ ರಾಜ್ಯ ಯಶಸ್ವಿಯಾಗುತ್ತವೆ. ಇದೊಂದು ಆದರ್ಶವ್ಯವಸ್ಥೆ. ಪಕ್ಷೀಯ ಪ್ರಜಾಪ್ರಭುತ್ವ ಹಾಗೂ ಗ್ರಾಮೀಣ ಸ್ವರಾಜ್ಯಗಳ ಹೊಂದಾಣಿಕೆ ಸಾಧ್ಯವೆ ಎಂಬುದು ಗಾಂಧೀಜಿಯ ಕಲ್ಪನೆಯನ್ನು ಸೋಲಿಸುವ ಸಂಗತಿ. ವಕೀಲಿ ವೃತ್ತಿ ದುರ್ನೀತಿಯನ್ನು ಕಲಿಸುತ್ತದೆ. ಅದರಲ್ಲಿ ಪ್ರತಿಬೋಧನವೆ ಹೆಚ್ಚು. ಹಳ್ಳಿಗಳ ಜೀವನ ಹಾಳಾಗಿರುವುದೇ ಕೋರ್ಟು ಕಚೇರಿಗಳಿಂದ ಎಂದವರು ಸ್ಪಷ್ಟಪಡಿಸಿದ್ದಾರೆ. ವಿನೋಬಾರವರು ಅಹಿಂಸಾತ್ಮಕವಾದ ಭೂದಾನದ ಮೂಲಕ ಆರ್ಥಿಕ ಕ್ರಾಂತಿಯನ್ನು ಸರ್ವೋದಯವನ್ನು ಸಾಧಿಸಲು ಪ್ರಯತ್ನಿಸಿದ್ದುಂಟು. ವಿಜ್ಞಾನ ವೇದಾಂತ ಸೇರಿದಾಗ ಸರ್ವೋದಯ ಸಾಧ್ಯವೆಂಬುದು ಅವರ ಅಭಿಪ್ರಾಯ.

ಕೇರಳದ ಶ್ರೀ ನಾರಾಯಣಗುರುಗಳ ಶಿಷ್ಯರಾದ **ಸ್ವಾಮಿ ಧರ್ಮತೀರ್ಥರು** 'History of Hindu Information' ಎಂಬೊಂದು ಭಾರತದ ನಿಜವಾದ ಕಥೆಯನ್ನು ರಚಿಸಿದ್ದಾರೆ. ಅದನ್ನು ಪ್ರೊ। ಕೆ. ಎಸ್ ಭಗವಾನರು ಕನ್ನಡಕ್ಕೆ ಸೊಗಸಾಗಿ ಭಾಷಾಂತರಿಸಿ ಕನ್ನಡಿಗರಿಗೆ ಭಾರಿ ಉಪಕಾರವೆಸಗಿದ್ದಾರೆ. ಇಂಡಿಯಾ ಹಾಗೂ ಪಾಶ್ಚಾತ್ಯ ವಿದ್ವಾಂಸರು ನಡೆಸಿರುವ ವೈಜ್ಞಾನಿಕ ಸಂಶೋಧನೆಗಳನ್ನು ಅವೈಚಾರಿಕವಾಗಿ ಪಲ್ಲಟಿಸುತ್ತಿರುವ 'ಹಿಂದೂ' ಯುಗದಲ್ಲಿ ಈ ಗ್ರಂಥವನ್ನು ಭಾರತೀಯರು ಓದಿದರೆ ಮೇಲು. 'ಚರಿತ್ರೆಯನ್ನು ಅರಿಯದ ಜನ ನಿರ್ವೀರ್ಯರಾಗುತ್ತಾರೆ, ಮರೆತ ಜನ ಮಣ್ಣಾಗುತ್ತಾರೆ.' ಎಂದು ಮುನ್ನುಡಿಯಲ್ಲಿ ಭಗವಾನರು ಹೇಳಿರುವ ಮಾತು ನೂರಕ್ಕೆ ನೂರು ಸತ್ಯ. ಜನ ಓದಿದ್ದನ್ನು ಮರೆಯಲಾಗಿ ಮಣ್ಣಾದರು. ಬುದ್ಧಿವಂತರು ಆ ಮಣ್ಣನ್ನು ತಮಗೆ ಬೇಕಾದ ಹಾಗೆ ತುಳಿದು, ಅಪ್ಪಳಿಸಿ, ಬಳಸಿಕೊಂಡರು. ಐದು ಸಾವಿರ ವರ್ಷಗಳ ಈ ಕಾಲ ಬಿಂದುವಿನಲ್ಲಿ ನಿಂತು, ಸಿಂಹಾವಲೋಕನ ಕ್ರಮದಿಂದ ಹಿಂದಕ್ಕೆ ಕಣ್ಣು ಹಾಯಿಸಿದಾಗ ಸುಖಸಂತೋಷಗಳ ಜತೆಗೆ ದುಃಖ ದುಮ್ಮಾನಗಳು ಕೋಡಿವರಿಯುತ್ತವೆ. ಸಿಹಿ ಜೇನುಗಳಿಗಿಂತ ಮಿಗಿಲಾಗಿ ಕಹಿಖಾರಗಳೆ ನೆನಪಿನ ನಾಡಿನಾಡಿಗಳಲ್ಲಿ ಉಕ್ಕುವುದರಿಂದ ಹಳೆಯ ಚರಿತ್ರೆಯನ್ನೋದಿ ಮರೆತು, ಹೊಸ ನಾಡನ್ನು ಕಟ್ಟುವ ಸಲುವಾಗಿ ಧಮನಿಧಮನಿಗಳಲ್ಲಿ ವಿನೂತನ ಚೈತನ್ಯವನ್ನು ಉಕ್ಕಿಸಿಕೊಳ್ಳಬೇಕಾಗಿದೆ.

## ಉಪಸಂಹಾರ

ಪ್ರಾಯಶಃ ನೂತನ ಚೈತನ್ಯೋತ್ಸಾಹಗಳನ್ನು ಉಕ್ಕಿಸುವ ಸಲುವಾಗಿಯೇ ಹೊಸ ಸಂವಿಧಾನವನ್ನು ರೂಪಿಸಲಾಯಿತೆಂದು ತೋರುತ್ತದೆ. ಅದನ್ನು ರೂಪಿಸಿದವರೆಲ್ಲರೂ ತಂತಮ್ಮ ಕ್ಷೇತ್ರಗಳಲ್ಲಿ ಘಟಾನುಘಟಿಗಳೆಂಬುದರಲ್ಲಿ ಅನುಮಾನವಿಲ್ಲ. ಆದರೆ ಅವರಿಗಿದ್ದ ಒಂದೇ ಒಂದು ಕಾತರತೆಯೆಂದರೆ ರಾಷ್ಟ್ರದ ಏಕತೆಯ ಸಂರಕ್ಷಣೆ. ಆ ಸಂರಕ್ಷಣೆಗಾಗಿ ರಾಷ್ಟ್ರದ ಸರ್ವಾಂಗೀಣ ಅಭ್ಯುದಯವನ್ನು

ಬಲಿಕೊಡಬೇಕಾಗಿದೆಯೆಂಬ ಪರಿಸ್ಥಿತಿಯನ್ನವರು ಮರೆತಂತೆ ತೋರುತ್ತದೆ. ಕೇಂದ್ರೀಕೃತ ಇಲ್ಲವೆ ಏಕೀಕೃತ ರಾಜ್ಯ ವಿಧಾನವನ್ನು ತೊರೆದು, ಸ್ವಾಯತ್ತತೆಯ ರಾಜ್ಯಗಳುಳ್ಳ ಸಂಯುಕ್ತ ಪ್ರಜಾಪ್ರಭುತ್ವವನ್ನೊಪ್ಪಿಕೊಂಡಿದ್ದರೆ, ರಾಷ್ಟ್ರದ ಅಂಗಾಂಗಗಳು ಶಕ್ತಿಯುತವಾಗಿದ್ದರೆ, ರಾಷ್ಟ್ರವೂ ಸರ್ವಶಕ್ತವಾಗುತ್ತಿತ್ತೆಂಬುದರಲ್ಲಿ ಲವಲೇಶವೂ ಸಂದೇಹವಿರುವುದಿಲ್ಲ. ಅಂಗಗಳು ದುರ್ಬಲವಾದರೆ ಶರೀರವೂ ಅಶಕ್ತವಾಗುತ್ತದೆನ್ನುವುದಕ್ಕೆ, ಸೋವಿಯಟ್ ನಿದರ್ಶನ ತಮ್ಮ ಮುಂದಿದ್ದರೂ ವಿವೇಕಿಗಳು ಅರಿಯಲಾರದೆ ಹೋದರು.

ಈಗ ನಿಜವಾದ ಸ್ವಾತಂತ್ರ್ಯ ಇಂಡಿಯಾದಲ್ಲಿಲ್ಲ; ಇಂಡಿಯಾದಲ್ಲಿರುವುದು ದ್ವಿರಾಜ್ಯ ಭಾರ. (Diarely) ಅನೇಕ ಇಲಾಖೆಗಳಲ್ಲಿ ಸಮಾನಾಂತರ ಆಡಳಿತ ನಡೆಯುತ್ತಿದೆ; ಕೇಂದ್ರ ರಾಜ್ಯ ಸರ್ಕಾರಗಳೆರಡೂ ಇಲಾಖೆಗಳನ್ನು ನಡೆಸುತ್ತಿವೆ. ಇದು ಅನಾವಶ್ಯಕ. ಇದರಿಂದ ದುಂದುವೆಚ್ಚವಾಗುವುದರ ಜತೆಗೆ ಅಸಮಾನತೆಯನ್ನು, ಅಂದರೆ ಎರಡು ಜಾತಿಗಳನ್ನು ಸೃಷ್ಟಿಸಿದಂತಾಗುತ್ತದೆ. ಎರಡೂ ಕಡೆಯ ಉಪಾಧ್ಯಾಯರ ಯೋಗ್ಯತೆಯಲ್ಲಿ ಹೆಚ್ಚು ವ್ಯತ್ಯಾಸವಿರದಿದ್ದರೂ, ಕೇಂದ್ರ ಸರ್ಕಾರ ಹೆಚ್ಚು ಹಣವನ್ನು ಖರ್ಚುಮಾಡಿ, ಉತ್ತಮ ಪರಿಸರವನ್ನು ನಿರ್ಮಿಸುವ ಸಂಭವವುಂಟು. ಇದರಿಂದ ಪ್ರತಿಷ್ಠೆ ಗರ್ವಾಹಂಕಾರಗಳಿಗೆ ಅವಕಾಶ ಕಲ್ಪಿಸಿದಂತಾಗುತ್ತದೆ. ಇಂಥ ದುಸ್ಸಾಹಸಗಳಿಗೆ ವ್ಯರ್ಥವಾಗುವ ಹಣವನ್ನು ರಕ್ಷಣಾ ಇಲಾಖೆಗೆ ಖರ್ಚುಮಾಡಬಹುದಲ್ಲವೆ? ಈ ರೀತಿಯ ಅನಾವಶ್ಯಕ ಖರ್ಚುಗಳನ್ನು ತಡೆಗಟ್ಟುವುದಾದರೆ, ಶೇಕಡಾ ೫೦ ಕ್ಕಿಂತಲೂ ಹೆಚ್ಚು ಹಣವನ್ನು ಉಳಿಸಿ, ರಾಜ್ಯಗಳಿಗೆ ಕೊಡುವ ಅನುದಾನವನ್ನು ಹೆಚ್ಚಿಸಬಹುದು. ಮಂತ್ರಿಗಳ ಪ್ರವಾಸ ಭತ್ಯವನ್ನು ಕತ್ತರಿಸಲವಕಾಶವೂ ಉಂಟು. ಅನಿವಾರ್ಯವಾದರೆ ಪ್ರತಿಯೊಂದು ಇಲಾಖೆಯ ಬಗ್ಗೆ ರಾಜ್ಯ ಸರ್ಕಾರಕ್ಕೆ ಸಲಹೆಗಳನ್ನು ನೀಡಬಹುದು.

ರಾಜ್ಯ ಸರ್ಕಾರಗಳಿಗೆ ಸ್ವಾಯತ್ತತೆಯನ್ನು ಕೊಟ್ಟನಂತರ ಲೆಕ್ಕಾಧಿಕಾರಿಗಳ ಅಧಿಕಾರವನ್ನು ಹೆಚ್ಚಿಸಬಹುದು. ಲೋಕಾಯುಕ್ತರನ್ನು ಕೇಂದ್ರವೇ ನೇಮಿಸಬಹುದು. ರಾಜ್ಯಗಳು ಕೇಂದ್ರದಿಂದ ಕಿತ್ತುಕೊಂಡು ಹೋಗದಂತೆ, ಸ್ವಾತಂತ್ರ್ಯವನ್ನು ಘೋಷಿಸದಂತೆ ಸಂವಿಧಾನದಲ್ಲಿ ಬಿಗಿನಿಯಮಗಳನ್ನು ಸೇರಿಸಬೇಕು.

ಸ್ವಾಯತ್ತತೆ ಇಲ್ಲದಿರುವುದೇ ಪ್ರಾದೇಶಿಕ ಪಕ್ಷಗಳ ಪ್ರಾಬಲ್ಯಕ್ಕೆ, ಸಂಸದ್ ಮತ್ತು ಶಾಸನಸಭೆಗಳ ಅತಂತ್ರ ಪರಿಸ್ಥಿತಿಗೆ ಕಾರಣವೆಂಬುದನ್ನು ರಾಜಕಾರಣಿಗಳು ಅರಿಯದಿರುವುದೇ ಆಶ್ಚರ್ಯ. ರಾಷ್ಟ್ರ ರಾಜಕಾರಣದ ದಿವಾಳಿತನಕ್ಕೆ ಇದೊಂದೇ ಸಾಕ್ಷಿ. ಅಧಿಕಾರ ಶಾಹಿಯ ಸೋಮಾರಿತನವನ್ನು ನಿಷೇಧಿಸಿ, ಅದನ್ನು ಚುರುಕುಗೊಳಿಸಬೇಕಾದದ್ದು ಪ್ರತಿಯೊಂದು ಸರ್ಕಾರದ ಆದ್ಯಕರ್ತವ್ಯ. ಜನಸೇವಕರೆಂಬ ಭಾವನೆಯನ್ನು ಅವರಿಗೆ ಮನದಟ್ಟು ಮಾಡಿಕೊಡಬೇಕಾದದ್ದು ಅತ್ಯಂತಾವಶ್ಯಕ. ಶಾಸನ ದೃಷ್ಟಿಯಿಂದ ರೈತನೂ ಜಿಲ್ಲಾಧಿಕಾರಿಯೂ ಸಮಾನರೆಂಬ ನಿಜವನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕು.

ಇಂಡಿಯಾ ದೇಶದ ಆರ್ಥಿಕ ಶಕ್ತಿ ಸಮೃದ್ಧವಾಗಿದೆ. ಹೊರಗಿನಿಂದ ಬಂದ ಜನ ಕೊಳ್ಳೆ ಹೊಡೆದುಕೊಂಡು ಹೋದರು; ಸ್ಥಳೀಯರು ಕೆಲವರು ಹೊರತಾಗಿ ಬಹು ಮಂದಿ ಸಾವಿರಾರು ವರ್ಷಗಳಿಂದ ಬಡವರಾಗಿ ಉಳಿದಿದ್ದಾರೆ. ಕಾರಣವೇನು? ಶೂದ್ರಾತಿಶೂದ್ರರು ವಿದ್ಯೆಗರ್ಹರಲ್ಲ, ಅವರು ಉತ್ತಮ ವರ್ಗದವರ ಸೇವಕರಾಗಿರಬೇಕೇ ಹೊರತು, ಅವರ ಮಹಲಲ್ಲಿ ವಾಸಮಾಡಬಾರದು, ಚಿನ್ನ ಬೆಳ್ಳಿ ತೊಡಬಾರದು, ಸುಗ್ರಾಸಭೋಜನ ಭುಜಿಸಬಾರದು. ಇದರಿಂದಾಗಿ ದೇಶ ಶಕ್ತಿಹೀನವಾಗಿತ್ತು. ಸುಲಭವಾಗಿ ಪರಭಾರೆಯಾಯಿತು. ಪಾದ್ರಿಗಳು ಮತ್ತು ಮೌಲ್ವಿಗಳು ಶೂದ್ರಾತಿಶೂದ್ರರ ಮನಸ್ಸುಗಳಲ್ಲಿ ಕನಸುಗಳನ್ನು ಬಿತ್ತಿ ಮರುಳು ಮಾಡಿ, ಲಕ್ಷಾಂತರ ಮಂದಿಯನ್ನು ಮತಾಂತರಗೊಳಿಸಿದರು. ಮತಾಂತರಗೊಂಡವರು ಸಮಾಜದಲ್ಲಿ ಉತ್ತಮ ಸ್ಥಾನವನ್ನು ಪಡೆದರಲ್ಲದೆ ಅವರ ಆರ್ಥಿಕ ಸ್ಥಿತಿಯೂ ಉತ್ತಮಗೊಂಡಿತು.

ಮತಾಂತರ ಇಂಡಿಯಾ ದೇಶಕ್ಕೆ ಹೊಸತಲ್ಲ. ಜೈನ ಬೌದ್ಧರು ಹೊರಗಡೆಯಿಂದ ಬಂದವರಲ್ಲ. ಇಲ್ಲಿಯೇ ಮತಾಂತರ ಗೊಂಡವರು; ವೈಷ್ಣವರು, ಶ್ರೀ ವೈಷ್ಣವರು, ಸ್ಮಾರ್ತರೂ ಅಷ್ಟೇ; ಜೈನ ಮತವನ್ನನುಸರಿಸುತ್ತಿದ್ದ ಗಂಗರೆಲ್ಲರೂ ಒಕ್ಕಲಿಗರು. ಮಲೆನಾಡಿನ ಕೆಲವು ಒಕ್ಕಲಿಗ ಕುಟುಂಬಗಳಲ್ಲಿ ಈಗಲೂ ನವರಾತ್ರಿಯಲ್ಲಿ ಜೈನೆಡೆ ಇಡುವ ಸಂಪ್ರದಾಯವಿದೆಯಂತೆ. ಅವರು ಹಿಂದೆ ಯಾವಾಗಲೋ ಜೈನರಾಗಿದ್ದಿರಬಹುದು. ಆಗಿದ್ದರೆನ್ನುವುದಕ್ಕೆ ಕುವೆಂಪು ಅವರ ಕಾನೂರು ಹೆಗ್ಗಡಿತಿಯಲ್ಲಿ ರುಜುವಾತಿದೆ. ಅಷ್ಟೇ ಅಲ್ಲ ಅವರ ಕುಟುಂಬ ಶಿವಪ್ಪನಾಯಕರಕಾಲದಲ್ಲಿ ಲಿಂಗಾಯತರಾಗಿದ್ದರಂತೆ. ಲಿಂಗಾಯತ ಧರ್ಮದ ಮೂಲದವರು ಮತ್ತು ಅಡಿಪಾಯದವರೆಲ್ಲ ಒಕ್ಕಲಿಗರೇ. ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಪಂಥಗಳ ಆಚಾರ್ಯರು ಸಹ ಶೂದ್ರರಲ್ಲಿ ಉತ್ತಮರಾಗಿ ಕಂಡವರನ್ನು ತಮ್ಮ ಪಂಥಕ್ಕೆ ಸೇರಿಸಿಕೊಂಡಿರಬೇಕು. ಶ್ರೀ ರಾಮಾನುಜಾಚಾರ್ಯರು ಮಂಡ್ಯ ಜಿಲ್ಲೆಯಲ್ಲಿ ಅನೇಕ ಶೂದ್ರಾತಿಶೂದ್ರರನ್ನು ತಮ್ಮ ಪಂಥಕ್ಕೆ ಸೇರಿಸಿಕೊಂಡರೆಂಬ ಪ್ರತೀತಿಯುಂಟು. ಇಡೀ ಕರ್ನಾಟಕದಲ್ಲಿಯೇ ಸುಪ್ರಸಿದ್ಧರಾದ ನನ್ನ

ಮಾಧ್ವ ವಿದ್ವಾಂಸ ಮಿತ್ರರೊಬ್ಬರು ಹೇಳುತ್ತಿದ್ದುದುಂಟು, 'ತಾವು ಪೂರ್ವದಲ್ಲಿ ಮೊಗವೀರರಾಗಿರಬೇಕು, ಆಚಾರ್ಯರು ತಮ್ಮ ಹಿರಿಯರನ್ನು ಮಾಧ್ವ ಪಂಥಕ್ಕೆ ಸೇರಿಸಿಕೊಂಡಿರಬೇಕು, ನಮ್ಮ ಹಳೆಯ ವೃತ್ತಿ ಸಂಪ್ರದಾಯದ ನೆನಪಿಗಾಗಿ ಮದುವೆ ಸಮಯದಲ್ಲಿ ಬಲೆಶಾಸ್ತ್ರವನ್ನಾಚರಿಸುವುದುಂಟು' ಎಂದು. ಪ್ರಾಯಶಃ ಈ ಪಂಥಗಳಲ್ಲಿ ಮತಾಂತರ ಮಿತಿಯಲ್ಲಿದ್ದಿರಬೇಕೆಂದು, ಅದು ಆಯ್ಕೆಯ ಆಧಾರದ ಮೇಲೆ ನಡೆಯುತ್ತಿದ್ದಿರಬೇಕೆಂದು, ಕೆಲವು ಕಾಲದ ಮೇಲೆ ಆ ಪ್ರಕ್ರಮವೂ ನಿಂತು ಹೋಗಿರಬೇಕೆಂದು ಲಿಂಗಾಯತರು ಮಾತ್ರ ಉಚ್ಚ ನೀಚ ಎನ್ನದೆ ಶೂದ್ರಾತಿಶೂದ್ರರನ್ನೆಲ್ಲ ತಮ್ಮ ಪರಿಧಿಗೆ ಸೇರಿಸಿಕೊಂಡಿರಬೇಕೆಂದು ತೋರುತ್ತದೆ.

ಅದೇನೇ ಇರಲಿ, ವಿದೇಶೀಯ ಮತಗಳ ಪ್ರಚಾರಕರು ಹಿಡಿಮಂದಿ ಬಂದವರು ಈಗ ಕೋಟ್ಯಂತರ ಸಂಖ್ಯೆಯಲ್ಲಿ ಬೆಳೆದು, ಹಿಂದೂಮತಕ್ಕೆ ಅಪಾಯದ ಸ್ಥಿತಿ ಬಂದೊದಗಿದೆ. ಈ ದೇಶದ ಲಕ್ಷಾಂತರ ಮಠ ಆಶ್ರಮ ಸನ್ಯಾಸಿಗಳು ದೊರೆಗಳು ಮತಾಂತರವನ್ನು ತಡೆಯಲಾರದೆ, ಹೇಡಿತನವನ್ನು ನಿರ್ಲಕ್ಷ್ಯವನ್ನು ಪ್ರದರ್ಶಿಸಿದ್ದುಂಟು. ಹಿಂದೂ ಮತಕ್ಕೆ ಅಪಾಯಕಾರೀ ಶತ್ರುಗಳು ಈ ದೊರೆ ಸನ್ಯಾಸಿಗಳೇ ಹೊರತು, ಪಾದ್ರಿಗಳೂ ಅಲ್ಲ, ಮೌಲ್ವಿಗಳೂ ಅಲ್ಲ. ಉತ್ತಮ ವರ್ಣಗಳು ಪುರೋಹಿತರು ಮತ್ತು ಸನ್ಯಾಸಿಗಳು ಸಂಕಲ್ಪ ತೊಟ್ಟು, ಜಾತೀಯತೆಯನ್ನು ನಿರ್ಮೂಲಮಾಡಿ, ಅಸ್ಪೃಶ್ಯತೆಯನ್ನು ಸಂಪೂರ್ಣವಾಗಿ ತೊಡೆದಿದ್ದರೆ, ವಿದೇಶೀ ಪ್ರಚಾರಕರ ಮತಾಂತರ ಕಾರ್ಯ ಎಂದೋ ನಿಂತುಹೋಗುತ್ತಿತ್ತು. ಈ ಬಗ್ಗೆ ಬಸವಣ್ಣನವರ ಹೊರತಾಗಿ ಯಾವ ಸಾಹಿತಿಯೂ, ಮಹಾಕವಿಯೂ ಚಕಾರವೆತ್ತಿಲ್ಲ. ಸಾಮಾಜಿಕ ಸಮಸ್ಯೆಗಳ ವಿರುದ್ಧವಾಗಿ ಬಂಡೇಳುವುದಿರಲಿ, ಎಲ್ಲರೂ ವರ್ಣಾಶ್ರಮಧರ್ಮವನ್ನು ವೈಭವೀಕರಿಸಿದ್ದಾರೆ. ಆಧುನಿಕ ಯುಗದಲ್ಲಿ ಕುವೆಂಪು ಹೊರತಾಗಿ ಪುರೋಹಿತಶಾಹಿಯ ವಿರುದ್ಧವಾಗಿ ವಿಚಾರವಾದಿಗಳೂ ಬಂಡಾಯಗಾರರೂ ಸೊಲ್ಲೆತ್ತಿಲ್ಲ. ಎತ್ತಿದರೆ ತಮಗೆ ಉತ್ತಮ ವರ್ಣದವರಿಂದ ಮೆಚ್ಚುಗೆ ದೊರೆಯದು, ಪತ್ರಿಕೆಗಳಲ್ಲಿ ಪ್ರಚಾರ ಸಿಗದು ಎಂಬ ಭಯ ಶೂದ್ರ ಸಾಹಿತಿಗಳಿಗೂ ಇದ್ದೇ ಇದೆ. ಇವರ ಬಂಡಾಯಗಾರಿಕೆಯೆಲ್ಲ ವೇದಿಕೆಯ ಮೇಲಣ ಭಾಷಣದಲ್ಲಿ ಪರ್ಯವಸಾನವಾಗುತ್ತದೆ. ಪುರೋಹಿತಶಾಹಿಯನ್ನು, ಈ ರಾಷ್ಟ್ರವನ್ನು ಈ ಸ್ಥಿತಿಗೆ ತಂದ ಉತ್ತಮ ವರ್ಣದವರನ್ನು ನಿರ್ದಾಕ್ಷಿಣ್ಯವಾಗಿ, ನಿಷ್ಠುರವಾಗಿ ತರಾಟೆಗೆ ತೆಗೆದುಕೊಂಡವರು ಕುವೆಂಪು ಒಬ್ಬರೆ. (ನನಗೆ ಬೇರೆ ಭಾಷೆಗಳ ಸಾಹಿತಿಗಳ ವಿಷಯ ಗೊತ್ತಿಲ್ಲ) ಆದಿಕವಿಯಿಂದ ಹಿಡಿದು ಈವೊತ್ತಿನ ಸಾಹಿತಿಗಳವರೆಗೆ ಮತಾಂತರದ ಬಗ್ಗೆ, ಜಾತೀಯತೆ ಅಸ್ಪೃಶ್ಯತೆಗಳಿಗೆ ವಿರುದ್ಧವಾಗಿ, ಸಾಮಾಜಿಕ ಸಮಸ್ಯೆಗಳ ಬಗ್ಗೆ ತಮ್ಮ ಕೃತಿಗಳಲ್ಲಿ ಪ್ರಸ್ತಾಪ ಮಾಡಿದ್ದರೆ, ಒಟ್ಟಿನಲ್ಲಿ ಅವರಿಗೆ ಸಾಮಾಜಿಕ ಬದ್ಧತೆ ಇದ್ದಿದ್ದರೆ, ಈ ದೇಶದ ಸಾಮಾಜಿಕಾರ್ಥಿಕ ರಾಜಕೀಯ ಮತೀಯ ವಾತಾವರಣವೇ ತೀರ ಭಿನ್ನವಾಗಿರುತ್ತಿತ್ತೆನ್ನುವುದರಲ್ಲಿ ಅನುಮಾನವಿಲ್ಲ. ಸಾಮಾಜಿಕ ಬದ್ಧತೆಯಿಲ್ಲದ ಸಾಹಿತ್ಯ ಸಾಮಾಜಿಕ ಪರಿವರ್ತನೆಗಾಗಲಿ, ಅದರ ಉದ್ಧಾರಕ್ಕಾಗಲಿ ನೆರವಾಗಲಾರದು. ಮತಾಂತರ, ಜಾತಿ ಸಂಘರ್ಷ, ಅಸ್ಪೃಶ್ಯತಾ ಪಿಡುಗು ದಿನದಿಂದ ದಿನಕ್ಕೆ ಉಲ್ಬಣವಾಗುತ್ತಿದ್ದರೂ, ಈ ಘೋರ ಸಂಗತಿಗಳು ನಮ್ಮ ಸಾಹಿತಿಗಳನ್ನು ಸ್ಪಂದಿಸದಿದ್ದುದ್ದೇ ದುರ್ದೈವ.

ಸಾಹಿತಿಗಳನ್ನು ಸ್ಪಂದಿಸದಿದ್ದ ಕ್ರೂರ ಸಂಗತಿಗಳು ರಾಜಕಾರಣಿಗಳನ್ನು ಸ್ಪಂದಿಸುವುದುಂಟೆ? ದೇಶಕ್ಕೆ ಸ್ವಾತಂತ್ರ್ಯ ಬಂದು ಐವತ್ತೈದು ವರ್ಷಗಳು ತುಂಬುತ್ತಿವೆ. ಮೇಲಿನ ಮೂರು ಮಾರಕ ಪಿಡುಗುಗಳನ್ನು ದಹಿಸಲು ಸರ್ಕಾರ ಮಾಡಿರುವ ಪ್ರಯತ್ನಗಳೇನು? ಜಾತ್ಯತೀತ ಪಕ್ಷಗಳೆಂದು ಹೇಳಿಕೊಳ್ಳುವ ಕಮ್ಯೂನಿಸ್ಟ್, ಸಮಾಜವಾದೀ ಪಕ್ಷಗಳು ಈ ದಿಕ್ಕಿನಲ್ಲಿ ರೂಪಿಸಿರುವ ಯೋಜನೆಗಳೇನು? ಗಂಭೀರವಾಗಿ ನಡೆಸಿರುವ ಕಾರ್ಯತಂತ್ರಗಳೇನು? ಸಮಾಜ ವಿಜ್ಞಾನಿಗಳು ಈ ಬಗ್ಗೆ ಏನಾದರೂ ಹರುವುಗಳನ್ನು ಸೂಚಿಸಿದ್ದಾರೆಯೆ? ಯಾವ ಪಕ್ಷವಾದರೂ ಚುನಾವಣಾ ಪ್ರಣಾಳಿಕೆಯಲ್ಲಿ ಈ ಘೋರ ಪಿಡುಗುಗಳ ವಿಷಯ ಪ್ರಸ್ತಾಪಿಸಿದ್ದಾರೆಯೆ? ಸಂವಿಧಾನದಲ್ಲಿ ಪ್ರಸ್ತಾಪಿಸಿರುವ Secularism ಎಂಬ ಪದಕ್ಕೇನಾದರೂ ಬೆಲೆ ಇದೆಯೆ? ಕುಟುಂಬ ಯೋಜನೆ, ನಿರುದ್ಯೋಗ ಸಮಸ್ಯೆ, ನೀರಾವರಿ ಯೋಜನೆ, ರಫ್ತು ಕೊರತೆ, ಶಿಕ್ಷಣದ ಅಪರಿಪೂರ್ಣತೆ, ಭಾಷಾನೀತಿ, ರಕ್ಷಣಾ ತಂತ್ರ-ಇವು ರಾಷ್ಟ್ರೀಯ ಸಮಸ್ಯೆಗಳೆಂದು ಸರ್ಕಾರಿ ವೃತ್ತಗಳಲ್ಲಿ ಹೇಳಲಾಗಿದೆ. ಭಾಷಾ ಸಮಸ್ಯೆ ಸಮಸ್ಯೆಯೇ ಅಲ್ಲ; ಉತ್ತರದ ಮೂಲಭೂತವಾದಿಗಳು ಜಟಿಲಗೊಳಿಸುತ್ತಿರುವ ಕಂಟಕ. ಪ್ರಾದೇಶಿಕ ಭಾಷೆಗಳು; ಆಯಾಯ ಪ್ರದೇಶಗಳಲ್ಲಿ ಸಾರ್ವಭೌಮ ಭಾಷೆಗಳು ಪ್ರಾದೇಶಿಕ ಭಾಷೆಗಳ ನುಡಿ ಮತ್ತು ನುಡಿಗಟ್ಟುಗಳನ್ನು ಜೀರ್ಣಿಸಿಕೊಂಡ ಹಿಂದಿ ಇಂಗ್ಲಿಷಿನೊಡನೆ ಅಂತರರಾಜ್ಯ ಭಾಷೆಯಾಗಬೇಕೆಂದು ಘೋಷಿಸುವುದಾದರೆ ಒಂದೇ ವಾಕ್ಯದಲ್ಲಿ, ಒಂದೇ ಕ್ಷಣದಲ್ಲಿ ಆ ಸಮಸ್ಯೆ ಬಗೆ ಹರಿಯುತ್ತದೆ. ಮೂಲಭೂತವಾದಿಗಳು ಇಂಥ ಷರತ್ತಿಗೆ ಸಿದ್ಧವಾಗಿಲ್ಲ. ಚೀನಾ ಪಾಕಿಸ್ತಾನದ ಸಮಸ್ಯೆ ನಿಜಕ್ಕೂ ಅತ್ಯಂತ ಗಂಭೀರವಾದದ್ದು. ಆಂತರಿಕವಾಗಿ ದೇಶ ಶಕ್ತಿಯುತವಾದದ್ದಾದರೆ, ಹೊರಗಿನ ಬೆದರಿಕೆಯನ್ನು ಸುಲಭವಾಗಿ ಎದುರಿಸಲು ಸಾಧ್ಯ.

ಆಂತರಿಕವಾಗಿ ಶಕ್ತಿಯುತವಾಗುವುದೆಂದರೇನು? ಮತೀಯತೆ, ಒಜಾತೀಯತೆ, ಅಸ್ಪೃಶ್ಯತೆಗಳಿಂದಾಗಿ ದೇಶ ಆಂತರಿಕವಾಗಿ ದುರ್ಬಲವಾಗಿದೆ. ಕಾರಣನಾಶದಿಂದ ಕಾರ್ಯನಾಶವಾಗುತ್ತದೆ. ದೇಶದ ರಕ್ಷಣೆಗೆ ಈ ಮೂರೇ ದೊಡ್ಡ ಬೆದರಿಕೆಗಳು. ಇವು ದೇಶದ ಶಾಂತಿಯನ್ನು ಕೆಡಿಸುತ್ತಿವೆ. ಕೆಲವು ಮತೀಯರಂತು ಹಿಂದೊಮ್ಮೆ ದಾಯಾದಿಗಳಾಗಿದ್ದ ಹಿಂದೂಗಳೊಡನೆ ಹೊಂದಿಕೊಂಡು ಸಹಜೀವನ ನಡೆಸಲು ಸಿದ್ಧರಾಗಿಲ್ಲ. ಹಿಂದೂಗಳಾದರೂ ಹಳೆಯ ಗೊಡ್ಡು ಸಂಪ್ರದಾಯಗಳನ್ನು ತ್ಯಜಿಸಿ, ವೈಚಾರಿಕ ವೈಜ್ಞಾನಿಕಯುಗದ ವಾತಾವರಣಕ್ಕೊಗ್ಗಿಕೊಂಡು ಬಾಳುವ ಪ್ರಗತಿಪರ ದೃಷ್ಟಿಯಿಂದ ವಂಚಿತರಾಗಿದ್ದಾರೆ. ಒಂದು ಕಡೆ ಹಳೆಯ ಸಂಪ್ರದಾಯ, ಜಾತೀಯತೆ, ಅಸಮಾನತೆ, ಅವಿದ್ಯೆ, ನಾನಾ ಪಂಥಗಳು ತಾಂಡವವಾಡುತ್ತ, ವೈಜ್ಞಾನಿಕತೆ, ಮಾನವೀಯತೆ, ಸಮಾನತಾಭಾವನೆ, ವಿದ್ಯೆ ಇಲ್ಲದಿರುವಾಗ ಕೋಮು ಸೌಹಾರ್ದವಾಗಲಿ, ಭಾವೈಕ್ಯವಾಗಲಿ ಹೇಗೆ ಸಾಧ್ಯ? ಪ್ರತಿವರ್ಷ ಸರ್ಕಾರ ನಡೆಸುವ ಕುರುಡು ವ್ಯಾಯಾಮವಾಗಿದೆ ಅದು. ಅಸ್ಪೃಶ್ಯತೆ ಹೋದರೆ, ಜಾತೀಯತೆ ಹೋಗುತ್ತದೆ, ಜಾತೀಯತೆ ಹೋದರೆ ಅಸ್ಪೃಶ್ಯತೆ ಹೋಗುತ್ತದೆ, ಇವೆರಡೂ ಹೋದರೆ ಮತೀಯತೆಯ ಹಲ್ಲು ಬಿದ್ದು ಹೋಗುತ್ತವೆ; ಹೋಗಲಿಲ್ಲ, ಹಿಂದೂಮತ ಈ ದೇಶದಲ್ಲಿ ೨೫ ವರ್ಷಗಳಿಗಿಂತ ಮಿಗಿಲಾಗಿ ಉಳಿಯಲಾರದು; ಉಳಿದರೂ ಅಲ್ಪಸಂಖ್ಯಾತ ಮತವಾಗಿ ಉಳಿಯುವ ಸಂಭವವುಂಟು.

೨೦೦೧ನೆಯ ಇಸವಿ ಸೆಪ್ಟೆಂಬರ್ ಮೊದಲ ವಾರ ದಕ್ಷಿಣ ಆಫ್ರಿಕಾದ ಡರ್ಬಾನಿನಲ್ಲಿ ನಡೆದ ಜನಾಂಗೀಯ ತಾರತಮ್ಯ ವಿರೋಧಿ ಸಮ್ಮೇಳನದಲ್ಲಿ ಅಸ್ಪೃಶ್ಯತಾ ಸಮಸ್ಯೆ ಚರ್ಚೆಗೆ ಬರದಂತೆ ಜಾಗ್ರತೆ ವಹಿಸಿದ ಭಾರತದ ನಿಲವು ಅಕ್ಷಮ್ಯವೆಂದೇ ಹೇಳಬಹುದು.[೧] ಅಸ್ಪೃಶ್ಯತೆ ನಿರ್ನಾಮವಾಗಬೇಕೆಂದು ಪ್ರಪಂಚ ಸಂಸ್ಥೆಯಾದರೂ ಘೋಷಿಸಬೇಡವೆ? ಹಿಂದುಳಿದವರ ಮತ್ತು ಅಸ್ಪೃಶ್ಯರ ಹಿನ್ನೂಕಣೆಗೆ ಅನುಕೂಲವಾಗುವಂತೆ ಮುಂದುವರಿದವರು ಏನಾದರೂ ಯುಕ್ತಿಯನ್ನು ಆಗಾಗ್ಗೆ ಕಾರ್ಯಗತಗೊಳಿಸುತ್ತಾರೆ. ಈಗ ಜಾಗತೀಕರಣ, ಖಾಸಗೀಕರಣ ಮತ್ತು ಕೇಸರೀಕರಣಗಳು ಜಾರಿಗೆ ಬರುತ್ತಿವೆ. ಹಿಂದುಳಿದ ರಾಷ್ಟ್ರಗಳನ್ನು ಮೇಲೆತ್ತುವ ಸಲುವಾಗಿ ಜಾಗತೀಕರಣ ಜಾರಿಗೆ ಬಂದಿದ್ದರೆ ಯಾರೂ ಬೇಡವೆನ್ನುವಂತಿರಲಿಲ್ಲ. ಒಂದೊಂದು ಕಾಲಕ್ಕೆ ಒಂದೊಂದು ಶೋಷಣೆಯ ವ್ಯವಸ್ಥೆ ಕಾಣಿಸಿಕೊಳ್ಳುತ್ತದೆ. ಕೇಂದ್ರ ಸರ್ಕಾರದ ಕೇಂದ್ರೀಕರಣವೂ ಸುಲಿಗೆಯ ಹುನ್ನಾರಾಗಿದೆ. ಈ ಪರಿಸ್ಥಿತಿ ಹೀಗೆಯೇ ಮುಂದುವರಿದದ್ದಾದರೆ ಈ ದೇಶದಲ್ಲಿ ಅಂತರ್ಯುದ್ಧ ಅನಿವಾರ್ಯವಾಗುತ್ತದೆ.

ಈ ದೇಶದಲ್ಲಿ ಚಾಲ್ತಿಯಲ್ಲಿರುವ ಶೋಷಣಾ ಮಾರ್ಗ ವಿಧಾನ ಮಾಧ್ಯಮಗಳು ಹಲವಾರು. ಪ್ರತಿಯೊಂದು ಕೋಮಿನಲ್ಲಿಯೂ ಹಿಂದುಳಿದವರ ಬೆಂಬಲದಿಂದ ಮೇಲೆ ಬಂದ ನಾಯಕರು ತಮ್ಮ ಬೆಂಬಲಿಗರನ್ನೆ ಶೋಷಿಸುತ್ತಾರೆ. ಅವರು ನವಬ್ರಾಹ್ಮಣರಾಗುತ್ತಾರೆ. ಮುಂದಾದರೂ ದಲಿತರನ್ನು ಮತ್ತು ಹಿಂದುಳಿದವರನ್ನು ಭಾರತೀಯ ಜೀವನದ ಮುಖ್ಯವಾಹಿನಿಯಲ್ಲಿ ವಿಲೀನಗೊಳಿಸಿಕೊಳ್ಳಲು ಸರ್ಕಾರ ಮತ್ತು ಸಮಾಜ ಅವಶ್ಯವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗಿದೆ.

೧. ಖಾಸಗಿ ಸಂಸ್ಥೆಗಳಲ್ಲಿಯೂ ಕೂಡಲೇ ಮೀಸಲಾತಿ ನೀತಿ ಜಾರಿಗೆ ಬರಬೇಕು.
೨. ವ್ಯವಸಾಯಕ್ಕೆ ತಕ್ಕುದಾದ ಸರ್ಕಾರಿ ಜಮೀನನ್ನು ಅವರಿಗೆ ಮಾತ್ರವೇ ಮಂಜೂರು ಮಾಡಬೇಕು.
೩. ಕನಿಷ್ಠ ಪಕ್ಷ ಒಬ್ಬರನ್ನು ಹಾಗೂ ಸಂಖ್ಯಾನುಗುಣವಾಗಿ ಶೇಕಡಾ ಐವತ್ತರಷ್ಟು ಪೂಜಾರಿ ಸ್ಥಾನಗಳನ್ನು ಅವರಿಗೆ ಕಾದಿರಿಸತಕ್ಕದ್ದು.
೪. ಹೋಟಲುಗಳಲ್ಲಿಯೂ ಇದೇ ನೀತಿ ಜಾರಿಗೆ ಬರಬೇಕು.
೫. ಈ ನಿಯಮ ಅಂಗಡಿಗಳಿಗೂ ಅನ್ವಯವಾಗಬೇಕು.
೬. ಬೌದ್ಧಿಕವಾಗಿ ಅವರನ್ನು ಉತ್ತಮ ಮಟ್ಟಕ್ಕೇರಿಸುವ ಸಲುವಾಗಿ ಅವರಿಗೆ ವಿಶೇಷ ತರಬೇತಿಯ ಸೌಕರ್ಯಗಳನ್ನೊದಗಿಸಬೇಕು.
೭. ಮೀಸಲಾತಿಯನ್ನು ಮೊದಲ ತಲೆಮಾರಿನವರಿಗೆ ಮಾತ್ರವೇ ಸೀಮಿತಗೊಳಿಸುವುದಾದರೆ ಕೆಳಗಿನ ಸ್ತರದವರಿಗೆ ಅನುಕೂಲವಾಗಿ, ದೇಶದ ಕುಂಡಲಿನೀಶಕ್ತಿ ವಿಗುರ್ವಿಸುತ್ತದೆ. ಏಕಕೌಟುಂಬಿಕ ಸ್ವಾಮ್ಯ ಹೋಗಬೇಕು. ಶೋಷಕ ರೂಪದ ಸ್ವಾಮ್ಯ ಯಾವ ಕ್ಷೇತ್ರಕ್ಕೂ ಸರಿಯಲ್ಲ.
೮. ಅಂತರ್ಜಾತೀಯ ವಿವಾಹಗಳಿಗೆ, ವಿವಾಹಿತರಿಗೆ ನೌಕರಿಗಳಲ್ಲಿ ಆದ್ಯತೆ ನೀಡುವುದಾದರೆ ಜನ ಜನರ ನಡುವೆ ಭಾವನಾತ್ಮಕ ಸಂಬಂಧ ಏರ್ಪಡುತ್ತದೆ. (ಈ ನಿಯಮ ಒಳ ಅಥವಾ ಉಪಪಂಗಡಗಳಿಗೆ ಅನ್ವಯಿಸುವುದಿಲ್ಲ).

---

೧. ಡರ್ಬಾನ್ ಜನಾಂಗೀಯ ಸಮ್ಮೇಳನ ಹಾಗೂ ಅಸ್ಪೃಶ್ಯತೆ. ಪುಸ್ತಕ ಪ್ರಪಂಚ, ನವೆಂಬರ್ ೨೦೦೧, ಪು. ೩-೬, ಈ ಲೇಖನ ಓದಿ.

೯. ಪ್ರತಿಯೊಂದು ಮಠವೂ ಆಶ್ರಮವೂ ತಂತನ್ನ ಆರ್ಥಿಕ ಸ್ಥಿತಿಗನುಗುಣವಾಗಿ (ಕನಿಷ್ಠ ಪಕ್ಷ ಒಂದಾದರೂ) ನಿರ್ಗತಿಕ ದಲಿತ ಅಥವಾ ಹಿಂದುಳಿದ ಕುಟುಂಬಗಳನ್ನು ದತ್ತು ತೆಗೆದುಕೊಳ್ಳಬೇಕು. ದಲಿತ ಯುವಕರು ಉತ್ತರಾಧಿಕಾರಿಗಳಾಗುವಂತೆ ತರಬೇತಿ ನೀಡಬೇಕು.

೧೦. ಹೆಣ್ಣು ಗಂಡು ಎಲ್ಲ ಮಕ್ಕಳಿಗೂ ಪಿಯುಸಿವರೆಗಾದರೂ ಉಚಿತ ಶಿಕ್ಷಣ ಕಡ್ಡಾಯವಾಗಬೇಕು.

೧೧. ಎಸ್ಸೆನ್‌ರವರ ಆಜ್ಞೆಯಂತೆ ಏಕಜಾತೀಯ ಬಡಾವಣೆಗಳನ್ನು ತಪ್ಪಿಸಿ, ಎಲ್ಲ ಜಾತಿಯವರಿಗೂ ನಡುನಡುವೆ ನಿವೇಶನಗಳನ್ನು ಹಂಚಬೇಕು.

೧೨. ಕೇಂದ್ರ ಸರ್ಕಾರದ ಕಾರ್ಯಸೌಧದಲ್ಲಿ ಎಲ್ಲ ರಾಜ್ಯಗಳಿಗೂ ಜನಸಂಖ್ಯೆಗನುಗುಣವಾಗಿ ಪ್ರಾತಿನಿಧ್ಯವಿರಬೇಕು. ಭಾವೈಕ್ಯದ ದೃಷ್ಟಿಯಿಂದ ಇದು ಅತ್ಯಗತ್ಯ.

ಈ ಕಾರ್ಯಕ್ರಮಗಳ ಅನುಷ್ಠಾನದಿಂದ ದೇಶ ಕೇವಲ ಹತ್ತು ವರ್ಷಗಳಲ್ಲಿ ಅಮೆರಿಕದಂಥ ಅಭಿವೃದ್ಧಿ ರಾಷ್ಟ್ರಗಳಿಗೆ ಹೆಗಲೆಣೆಯಾಗುವಷ್ಟರ ಮಟ್ಟಿಗೆ ಪ್ರವರ್ಧಮಾನವಾಗುತ್ತದೆಂದು ನಂಬಬಹುದಾಗಿದೆ.

ಜಗತ್ತಿಗೆ ಗೊತ್ತಿರುವಂತೆ ೧೯೪೮ರಲ್ಲಿ ಚೀನಾ ಸರ್ವವಿಧಗಳಲ್ಲಿಯೂ ಇಂಡಿಯಾಕ್ಕಿಂತ ಹಿಂದಿತ್ತು. ಇಂದೊ? ಅದು ಇಂಡಿಯಾಕ್ಕಿಂತ ಬಹುಪಾಲು ಮುಂದಿದೆ. ಇದಕ್ಕೆ ಕಾರಣವೇನು? ಭಾರತ ಧರ್ಮನಿರಪೇಕ್ಷ ಗಣರಾಷ್ಟ್ರವೆಂದು ಸಂವಿಧಾನದಲ್ಲಿ ಬರೆದಿದೆ. ಜಾತಿ ಮತಗಳು ಸದಾ ಹೆಡೆಯೆತ್ತಿಕೊಂಡಿರುವಾಗ, ಅದನ್ನು ಸೆಕ್ಯುಲರ್ ರಾಷ್ಟ್ರವೆಂದು ಕರೆಯಬಹುದೆ?

ಭಾರತದಲ್ಲಿ ಪ್ರಜಾಪ್ರಭುತ್ವವೂ ಇಲ್ಲ, ಸಮಾಜವಾದವೂ ಇಲ್ಲ. ಸರ್ವಸಮಾನತೆಯಿರುವ, ಯಾವ ವಿಧವಾದ ಭೇದಭಾವವೂ ಇಲ್ಲದ ರಾಷ್ಟ್ರದಲ್ಲಿ ಮಾತ್ರ ಪ್ರಜಾಪ್ರಭುತ್ವ ಸಾಧ್ಯ, ಪ್ರಜಾಪ್ರಭುತ್ವವಿದ್ದೆಡೆ ಸಮಾಜವಾದ ಇದ್ದೇ ಇರುತ್ತದೆ. ವ್ಯಕ್ತಿ ಸ್ವಾತಂತ್ರ್ಯ ಪ್ರಜಾಪ್ರಭುತ್ವದ ಪ್ರಮುಖ ಲಕ್ಷಣ. ವಾಕ್-ವಿಚಾರ-ಅಂತಸ್ಸಾಕ್ಷಿಯ ಸ್ವಾತಂತ್ರ್ಯ, ಬದುಕುವ ಹಕ್ಕು ಪ್ರತಿಯೊಬ್ಬ ವ್ಯಕ್ತಿಯೂ ಆಶಿಸುವ ಕನಿಷ್ಠ ಬೇಕುಗಳು. ದ್ವಿತೀಯ ಮಹಾಸಂಗ್ರಾಮದ ಕಾಲದಲ್ಲಿ ಶ್ರೇಷ್ಠ ವಿಚಾರವಾದಿ ಮಹಾಚಿಂತಕ ಎಚ್.ಜಿ. ವೆಲ್ಸ್ ಮಿತ್ರರಾಷ್ಟ್ರಗಳ ನೀತಿ ಸರಿಯಿಲ್ಲವೆಂದು ಡಂಗುರಿಸುತ್ತಾನೆ. ಹಾಗೆ ಹೇಳುವುದು ಅವನ ಹಕ್ಕು, ತಪ್ಪಲ್ಲವೆಂದು ಚರ್ಚಿಲ್ ಟೀಕೆಗಳಿಗೆ ಕಡಿವಾಣ ಹಾಕುತ್ತಾನೆ. ಆದರೆ ಹಕ್ಕು ಮತ್ತು ಕರ್ತವ್ಯ ಒಂದಕ್ಕೊಂದು ಪೂರಕವೆಂಬುದನ್ನು ಮಾನವ ಅರಿಯಬೇಕು. ಶಿಸ್ತಿಲ್ಲದ ದೇಶವಾಗಲಿ ಮಾನವನಾಗಲಿ ಉದ್ಧಾರವಾಗುವಂತಿಲ್ಲ ಎಂಬ ಸ್ವಾಮಿ ವಿವೇಕಾನಂದರ ಬುದ್ಧಿವಾದವನ್ನು ಭಾರತೀಯರು ಗ್ರಹಿಸಬೇಕಾಗಿದೆ. ನವವಸಾಹತು ಸ್ವರೂಪದ ಜಾಗತೀಕರಣ, ಉದಾರವಾದ, ವಿಶ್ವವಾಣಿಜ್ಯವಾದದ ಹಿನ್ನೆಲೆಯಲ್ಲಿ ಭಾರತದಂಥ ಹಿಂದುಳಿದ ಬಹುಳ ರಾಷ್ಟ್ರ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಿಗೆ ಹೆಗಲೆಣೆಯಾಗಿ ನಿಲ್ಲಬೇಕಾದರೆ ಅಸ್ಪೃಶ್ಯತೆ ಮೊದಲುಗೊಂಡು ಜಾತೀಯತೆ ನಿರ್ಮೂಲವಾಗಬೇಕು, ಜನ ಶಿಸ್ತಿನಿಂದ ದುಡಿಯಬೇಕು, ರಾಜ್ಯಗಳಿಗೆ ಸ್ವಾಯತ್ತತೆ ನೀಡುವ ಮೂಲಕ ಪ್ರಾದೇಶಿಕ ಭಾಷಾ ಸಂಸ್ಕೃತಿಗಳನ್ನು ಉಳಿಸಿಕೊಳ್ಳಬೇಕು, ಆದಷ್ಟು ಮಟ್ಟಿಗೆ ಸ್ವದೇಶಿ ವ್ರತವನ್ನು ಅನುಸರಿಸಬೇಕು. ವಿಜ್ಞಾನ ತಂತ್ರಜ್ಞಾನಗಳಿಗೆ ಜೀವನವನ್ನು ಅಳವಡಿಸಿಕೊಳ್ಳಬೇಕು, ದಾರಿದ್ರ್ಯ ತಾಂಡವವಾಡುವಾಗ ಜಡವಿಗ್ರಹಕ್ಕೆ ಕಿರೀಟಾದಿ ಭೂಷಣಗಳನ್ನು ತೊಡಿಸುವ ಮೂರ್ಖತನವನ್ನು ತಡೆಗಟ್ಟಬೇಕು. ಆಗ ಮಾತ್ರ ನಾಡಿನ ಸರ್ವಾಂಗೀಣ ಅಭಿವೃದ್ಧಿ ಸಾಧ್ಯವಾದೀತು.

ಸಿಂಹಾವಲೋಕನ ಕ್ರಮದಿಂದ ಭಾರತೀಯ ಇತಿಹಾಸವನ್ನು ಸ್ಮರಿಸಿಕೊಂಡು, ಈ ಪ್ರಬಂಧಕ್ಕೆ ವಿರಾಮಚಿಹ್ನೆ ಹಾಕಬಹುದು. ಕೊಳ್ಳೆಗೆಂದು, ವ್ಯಾಪಾರಕ್ಕೆಂದು ಈ ದೇಶಕ್ಕೆ ಬಂದ ವಿದೇಶೀಯರು, ಇಲ್ಲಿಯ ಜನರ ಅಮಾಯಕ, ಅನೈಕ್ಯ, ಅಜ್ಞಾನ ಸ್ಥಿತಿಯನ್ನರಿತು, ಇಲ್ಲಿಯ ಜನರನ್ನೆ ಒಬ್ಬರ ಮೇಲೊಬ್ಬರನ್ನೆತ್ತಿ ಕಟ್ಟಿ ಸ್ವಾತಂತ್ರ್ಯವನ್ನು ಅಪಹರಿಸಿಕೊಂಡು, ಅಧಿಕಾರವನ್ನು ಸಂಪಾದಿಸಿ ರಾಷ್ಟ್ರದ ಸರ್ವಶಕ್ತಿಯನ್ನು ಹೀರುತ್ತಾರೆ. ಹಿಂದುಳಿದವರ ತಬ್ಬಲಿತನವನ್ನು ಕಂಡು, ಮತಾಂತರಗೊಳಿಸುವ ಮೂಲಕ ಅವರನ್ನು ವಿದೇಶೀಯಗೊಳಿಸುತ್ತಾರೆ. ವಿದೇಶೀಯರು ಮುಸ್ಲಿಮರಾಗಲಿ, ಬಿಳಿಯರಾಗಲಿ, ಇಲ್ಲಿಯ ಜನರನ್ನೆ ಸೈನ್ಯಕ್ಕೆ ಸೇರಿಸಿಕೊಂಡು, ಸ್ಥಳೀಯ ಯುದ್ಧಗಳಿಗೆ ಅವರನ್ನು ಬಳಸಿಕೊಂಡು, ಅವರಿಂದಲೇ ಇಲ್ಲಿಯ ಸೇನೆಯನ್ನು ರಕ್ತದ ಕಡಲಲ್ಲದ್ದಿದ್ದರಿಂದ ಇಂದಿನ ಭಾರತೀಯರೂ ನಾಚುವಂತಾಗಿದೆ. ಭಾರತ ಅನುಭವಿಸಬೇಕಾದ ನಾನಾ ಅನಾಹುತಗಳಿಗೆ ಸಾಮಾಜಿಕ ಪರಿಸ್ಥಿತಿಯೇ ಸಂಪೂರ್ಣ ಕಾರಣವೆನ್ನುವುದನ್ನು ಇಲ್ಲಿಯ ಮೇಲ್ವರ್ಗದ ಜನ ಈ ಹೊತ್ತಿಗೂ ಅರ್ಥಮಾಡಿಕೊಂಡಿಲ್ಲ. ಪಾಶ್ಚಾತ್ಯರ ಸಂಪರ್ಕದಿಂದ ಸುಶಿಕ್ಷಿತ ಮಧ್ಯಮ ವರ್ಗ, ಶ್ರೀಮಂತ ವರ್ಗ, ಔದ್ಯಮಿಕ ವರ್ಗ, ಕಾರ್ಮಿಕ ವರ್ಗಗಳು ತಲೆಯೆತ್ತುತ್ತವೆ. ಅಷ್ಟೇ ಅಲ್ಲ, ಪಾಶ್ಚಾತ್ಯ ವಿದ್ಯೆಯ ಸಂಸರ್ಗದಿಂದ ವೈಚಾರಿಕ ವೈಜ್ಞಾನಿಕ ಪ್ರಜ್ಞೆಯ ಜತೆಗೆ, ಸ್ವಾತಂತ್ರ್ಯ ಪ್ರಜ್ಞೆಯೂ ಉದಯವಾಗುತ್ತದೆ. ೧೮೫೭ರ ಪ್ರಥಮ

ಸ್ವಾತಂತ್ರ್ಯ ಸಮರ ಈ ಉದಯದ ಫಲ. ಪಾಶ್ಚಾತ್ಯ ರೀತಿಯ ಶಾಲಾ ಕಾಲೇಜುಗಳ ನಿರ್ಮಾಣ, ಬ್ರಾಹ್ಮ-ಆರ್ಯ, ಸತ್ಯ ಶೋಧಕಾದಿ ಸಮಾಜಗಳ ಪ್ರಾರಂಭ, ಪತ್ರಿಕೆಗಳ ಉಗಮ, ಇವುಗಳಿಂದಾಗಿ ನವಜಾಗೃತಿ ಮೊಳೆದೋರುತ್ತದೆ; ರಾಷ್ಟ್ರೀಯ ಕಾಂಗ್ರೆಸ್ ಅಸ್ತಿತ್ವಕ್ಕೆ ಬರುತ್ತದೆ.

ಗಾಂಧೀಜಿ ಭಾರತೀಯ ರಾಜಕೀಯ ಕ್ಷಿತಿಜದಲ್ಲಿ ಕಾಣಿಸಿಕೊಳ್ಳುವ ತನಕ, ಕಾಂಗ್ರೆಸ್ ಕಾರ್ಯಕ್ರಮ ವಾರ್ಷಿಕಾಧಿವೇಶನದ ನಿರ್ಣಯ ಮತ್ತು ಮನವಿಗಳಿಗೆ ಸೀಮಿತವಾಗಿತ್ತು. ಕಾಲಕ್ರಮೇಣ ನೇತಾರರಲ್ಲಿ ಸ್ವಾಭಿಮಾನ, ಸ್ವರಾಜ್ಯ, ಸ್ವದೇಶೀ ಪ್ರಜ್ಞೆಗಳು ವಿಕಾಸ ಗೊಳ್ಳಲಾಗಿ ಹಲವು ಕ್ಷೇತ್ರಗಳಲ್ಲಿ ಜನಾಂದೋಲನಗಳು ಗರಿಗಟ್ಟಿಗೊಳ್ಳುತ್ತವೆ. ಗಾಂಧೀಜಿ ತೋರಿಸಿಕೊಟ್ಟ ಅಸಹಕಾರ-ಕಾಯಿದೆಭಂಗ-ಸತ್ಯಾಗ್ರಹ ಚಳವಳಿಗಳಿಂದಾಗಿ ಸಾಮಾನ್ಯರಲ್ಲಿಯೂ ಆತ್ಮಪ್ರತ್ಯಯ ಸಿಂಹಧೈರ್ಯಗಳು ಕೆರಳಲಾಗಿ, ಬ್ರಿಟಿಷ್ ಸರ್ಕಾರ ಹಾಗೂ ಶ್ರೀಮಂತ ಉದ್ಯಮ ಪತಿಗಳು ಹೊಸ ಸವಾಲುಗಳನ್ನೆದುರಿಸಬೇಕಾಗುತ್ತದೆ. ಈ ಎದುರಾಟದಲ್ಲಿ ಕಾರಾಗೃಹವಾಸ, ಮರಣ ದಂಡನೆ ಮತ್ತು ಕಗ್ಗೊಲೆಗಳಿಗೆ ಜನ ಬಲಿಯಾಗುತ್ತಾರೆ. ಮಹಾರಾಷ್ಟ್ರ ಬಂಗಾಳಗಳಲ್ಲಿ ಕ್ರಾಂತಿಕಾರಿಗಳು ಪ್ರಬಲರಾಗುತ್ತಾರೆ. ಕೆಲವು ಆಂಗ್ಲ ಅಧಿಕಾರಿಗಳು ಅವರ ರೋಷಾವೇಶಗಳಿಗೆ ಆಹುತಿಯಾದದ್ದೂ ಉಂಟು. ಈ ಮಧ್ಯೆ ಸಮಾಜವಾದಿ ಕಮ್ಯೂನಿಸ್ಟ್ ಕಾರ್ಮಿಕ ಚಳವಳಿಗಳು ತಲೆಯೆತ್ತುತ್ತವೆ. ಟ್ರೇಡ್ ಯೂನಿಯನ್‌ಗಳು ಸ್ಥಾಪನೆಯಾಗುತ್ತವೆ. ಜಮೀನ್ದಾರರ ದಬ್ಬಾಳಿಕೆ ದೌರ್ಜನ್ಯಗಳಿಂದಾಗಿ ರೈತರ ಆಂದೋಲನಗಳು ತಲೆಯೆತ್ತುತ್ತವೆ. ಚಂಪಾರಣ್ಯ ಚಳವಳಿ, ಕೇರಳದ ಮುಸ್ಲಿಮ್ ಗೇಣಿದಾರರ ಆಂದೋಲನ, ಬಡೋರ್ಲಿ ಸತ್ಯಾಗ್ರಹ ಇವು ಮುಖ್ಯವಾದುವು. ಇವೆಲ್ಲವೂ ಆಂಗ್ಲ ಸರ್ಕಾರದ, ಜಮೀನ್ದಾರರ, ಲೇವಾದೇವಿದಾರರ ವಿರುದ್ಧ ನಡೆದಂಥವು. ದೇಶದಲ್ಲೆಲ್ಲ ಕಿಸಾನ್ ಸಭೆಗಳು, ರೈತ ಸಂಘಟನೆಗಳೂ ಹುರಿಮಾಡಿಕೊಳ್ಳುತ್ತವೆ.

ಇದೇ ಕಾಲದಲ್ಲಿ ಆದಿವಾಸಿ ದಂಗೆಗಳೇನೂ ಕಡಮೆಯಿಲ್ಲ. ತಮ್ಮ ನೆಲಸುಗಳಿಂದ ಕಿತ್ತೊಬ್ಬೆಯೆಬ್ಬಿಸುವಾಗ ನಾನಾ ರೀತಿಯಲ್ಲಿ ತಮ್ಮನ್ನು ಅವಹೇಳನ ಮಾಡುವಾಗ ಅವರು ಆತ್ಮರಕ್ಷಣೆಗಾಗಿ ಹಿಂಸಾಕೃತ್ಯಕ್ಕಿಳಿಯುತ್ತಾರೆ. ಅವರನ್ನು ತುಳಿಯುವಲ್ಲಿ ಜಮೀನ್ದಾರರು, ಸಾಹುಕಾರರು, ಕಂತ್ರಾಟುದಾರರು ಮತ್ತು ಮಧ್ಯಸ್ಥರು ಅಧಿಕಾರಿಗಳಿಗೆ ಶಾಮೀಲಾಗುತ್ತಾರೆ. ಇಂಥ ಹೇಯ ಕೃತ್ಯ ಜಗತ್ತಿನ ಎಲ್ಲ ರಾಷ್ಟ್ರಗಳಲ್ಲಿಯೂ ಅಸಹ್ಯ ರೀತಿಯಲ್ಲಿ ನಡೆಯುತ್ತದೆ. ಪಣಿಯ, ಕೋಲ, ಸಂತಾಲ, ಮುಂಡ, ಜಯಂತಿಯಾ, ನಾಗ ಮೊದಲಾದ ಆದಿವಾಸಿಗಳ ರಕ್ತದಿಂದ ರಾಷ್ಟ್ರದ ನೆಲ ತೊಯ್ದಿದೆಯೆಂಬುದನ್ನು ಮರೆಯಲಾಗದು. ಜಾತೀಯ ಕಲಹಗಳಿಗಂತೂ ಲೆಕ್ಕವೇ ಇಲ್ಲ . ಇತ್ತೀಚೆಗಿನ ಮಹಿಳಾ ಹಾಗೂ ದಲಿತ ಚಳವಳಿಗಳು ಮೋಕ್ಷ ಕಾಣಬೇಕಾಗಿದೆ.

ಈ ಎಲ್ಲ ಚಳವಳಿಗಳ, ಮತಾಂತರದ, ಜಾತೀಯತೆಯ ಮೂಲಗಳನ್ನು ವರ್ಣಾಶ್ರಮ ಧರ್ಮದಲ್ಲಿ, ಪುರೋಹಿತಶಾಹಿಯ ಕುಚೋದ್ಯದಲ್ಲಿ, ಬ್ರಾಹ್ಮಣ ಕ್ಷತ್ರಿಯರ ಮಠಗಳ ಸಂಚುಹೊಂಚುಗಳಲ್ಲಿ, ಆಂಗ್ಲರ ಸ್ವಾರ್ಥಪರವಾದ ದ್ವಂದ್ವ ನೀತಿಯಲ್ಲಿ ಗುರುತಿಸಬಹುದು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅಧಿಕಾರಕ್ಕೆ ಬಂದ ಯಾವೊಂದು ಪಕ್ಷವೂ ಸಾಮಾಜಿಕ ಪಿಡುಗುಗಳನ್ನು ಮೂಲೋತ್ಪಾಟನೆ ಮಾಡಲು ಪ್ರಯತ್ನಿಸದಿರುವುದು, ಹಳೆಯ ಇತಿಹಾಸವನ್ನೆ ಮಗುಚುತ್ತಿರುವುದೊಂದು ದುರಂತ ನಾಟಕವಾಗಿದೆ.

**ಗ್ರಂಥ ಋಣ :**


Ambedkar's works
Marx - Das Capital
Abul Kalam Azad. - India Wins Freedom
Chintamani, CY - Indian Politics Suice the Maturity
Jayakar, M.R. - The Story of My Life (2 Vols)
Jawaharalal Nehru - Glimpses of Wolrd History
Dayanand Saraswathi - Satyartha Prakash
Mujumdar, P. B - History of Political Thought From Rammohan to Dayananda
Panikkar, K.M. -A Survery of Indian History
Rathna Swamy N. - The Political Theory of the Government of India
Sir Radhakrishnan's Works
Mahatma Gandhi's Works
Swami Vivekananda- Complete Works

Pattabhi Sitaramaiah, The History of the Indian National Congress
Rajaram Mohan Roy- His life, Writings and Speeches
Ram Manohar Lohia's works
Rabindranath Togore's Works
E.V. Ramswami Nayakar's Works
Kuvempu's Works
Viswanath Prasad Varma - Modern Indian political Thought.
Mosani, R.P- Dadabhayi Navairoji, The Grand Old Man of India
GoplaKrishna Ghokale's Works
Balagangadhara Tilak's Works
Pal, B.L.- Memories of My Life and Times
LalaLajpat Rai's Works
Beg. A.A. - The Poet of the East (Iqbal)
M.N. Roy's Works
Asoka Mehta, Democratic Socialism
Jayaprakash Narayan's Works
Vinoba Bhave's Works
Jayaswal, K.P.- Hindu Polity
Goshal, U.N - A History of Indian Political Ideas
Shankar ghosh - Political Ideas and Movements in India
Majumdar - The History of the Freedom Struggle vol I,II,III
Namboodripad, M.S. - A History of the Indian Freedom Struggle

# ಪಂಪನಲ್ಲಿ ರಾಜಕೀಯ ಪ್ರಜ್ಞೆ

ಡಾ। ಎಸ್. ಡಿ. ಶಶಿಕಲಾ

ಯಾವುದೇ ಒಂದು ನಿರ್ದಿಷ್ಟ ಸಮುದಾಯ ಮತ್ತೊಂದು ಸಮುದಾಯವನ್ನು ತನ್ನ ಹಿಡಿತದಲ್ಲಿರಿಸಿಕೊಳ್ಳಲು ಅನುವಾಗುವಂತೆ ರೂಪಿಸಲಾದ ಆಳ್ವಿಕೆಯ ವ್ಯವಸ್ಥೆಯನ್ನು 'ರಾಜಕೀಯ' ಎನ್ನಬಹುದು. ರಾಜಕೀಯದ ಪ್ರಣಾಲಿಗಳು ಅಂಥ ಒಂದು ವ್ಯವಸ್ಥೆಯ ಅನುಷ್ಠಾನಕ್ಕೆ, ಸಾಧಕ-ಬಾಧಕಗಳಿಗೆ ಕಾರಣವಾಗುತ್ತವೆ. ಈ ಹಿನ್ನೆಲೆಯಲ್ಲಿ ನೋಡುವಾಗ ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗ ಇವೆ ಎಂಬುದು ಸ್ಪಷ್ಟ. ಸಮಾಜದ ಆಗುಹೋಗುಗಳು ಒಂದು ನಿರ್ದಿಷ್ಟ ಮಿತಿಯಲ್ಲಿ ವ್ಯವಹರಿಸಲ್ಪಡುವಾಗ ಅದಕ್ಕೆ ಒಂದು ಚೌಕಟ್ಟು ಅಗತ್ಯವಾಗುತ್ತದೆ. ಅಂಥ ಅಗತ್ಯ ಚೌಕಟ್ಟುಗಳನ್ನು ಮೀರಿದಾಗ ಅದು ಅಪರಾಧವಾಗುತ್ತದೆ. ಹೀಗೆ ರಾಜಕೀಯ ಎಂಬುದು ಆಳ್ವಿಕೆಗಾಗಿ ನಿರ್ಮಿತವಾದ ಒಂದು ವ್ಯವಸ್ಥೆಯಾಗಿ ಕಾಣುತ್ತದೆ. ಮನುಷ್ಯನ ಸ್ವೇಚ್ಛಾಪ್ರವೃತ್ತಿಯ ನಿಯಂತ್ರಣದ ಸಲುವಾಗಿಯೇ ನಿರ್ಮಿತವಾದ ಈ ರಾಜಕೀಯ ಒಟ್ಟು ಎರಡು ಬಗೆಯ ವ್ಯವಸ್ಥೆಗಳನ್ನು ಹೊಂದಿದೆ.

೧. ಪರಂಪರಾಗತವಾಗಿ ಜಾರಿಯಲ್ಲಿರುವ ವ್ಯವಸ್ಥೆ.

೨. ಅಗತ್ಯ ನಿಯಮಗಳನ್ನು ವಿಧಿಸುವ ಮೂಲಕ ಅಸ್ತಿತ್ವದಲ್ಲಿರುವ ವ್ಯವಸ್ಥೆ.

ಮೊದಲನೆಯದು ತಲೆಮಾರಿನಿಂದ ತಲೆಮಾರಿಗೆ ಜನಸಮುದಾಯದ ಬದುಕಿನಲ್ಲಿ ಹಾಸುಹೊಕ್ಕಾಗಿ ನಿರಂತರವಾಗಿ ಬೆಳೆದುಬಂದದ್ದಾದರೆ, ಎರಡನೆಯದು ಒಂದು ವ್ಯವಸ್ಥಿತ ರೂಪುರೇಷೆಯ ಮೂಲಕ ಜಾರಿಗೆ ಬರುವಂಥದ್ದಾಗಿದೆ. ಇಂಥ ರಾಜಕೀಯದ ಸ್ವರೂಪ ಕಾಲಕಾಲಕ್ಕೆ ಹಲವು ರೀತಿಯಲ್ಲಿ ಅಸ್ತಿತ್ವದಲ್ಲಿದ್ದುದು ತಿಳಿಯುತ್ತದೆ. ಇಪ್ಪತ್ತನೆಯ ಶತಮಾನದವರೆಗಿನ ಇತಿಹಾಸವನ್ನು ನೋಡುವಾಗ ಬಹುತೇಕ ಅರಸೊತ್ತಿಗೆಯ ವ್ಯವಸ್ಥೆ ಇದ್ದದ್ದು ಕಾಣುತ್ತದೆ. ಅರಸರು ನಿರ್ದಿಷ್ಟ ಭೂಪ್ರದೇಶಗಳ ಚಕ್ರವರ್ತಿಗಳಾಗಿ, ಸಾಮಂತರಾಗಿ, ಮಾಂಡಳಿಕರಾಗಿ ಕಾರ್ಯ ನಿರ್ವಹಿಸಿದ್ದು ನಿಜ. ಇಪ್ಪತ್ತನೆಯ ಶತಮಾನಕ್ಕೆ ಬಂದಾಗ ಜಗತ್ತಿನ ಹಲವು ರಾಷ್ಟ್ರಗಳಲ್ಲಿ ಅರಸೊತ್ತಿಗೆ, ಅಧ್ಯಕ್ಷೀಯ ಪದ್ಧತಿ, ಪ್ರಜಾಪ್ರಭುತ್ವ. ಹೀಗೆ ಹಲವು ಬಗೆಯ ಸತ್ತೆಗಳಿವೆ. ಅಂದಿನ ಅರಸ ಇಂದು ಪ್ರಧಾನಿಯಾಗಿದ್ದಾನೆ. ನ್ಯಾಯತೀರ್ಮಾನಗಳು ಅಂದು ಅರಸನ ಅಧಿಕಾರದಲ್ಲಿದ್ದರೆ ಇಂದು ನ್ಯಾಯಾಧೀಶನ ಕೈಯಲ್ಲಿವೆ.

ಆಳುವ ವರ್ಗಕ್ಕೆ ಹೆಚ್ಚಿನ ಅಧಿಕಾರ - ಮಾನ್ಯತೆ ದೊರಕಲಾರಂಭಿಸಿದಾಗ ರಾಜಕೀಯ ವ್ಯವಸ್ಥೆ ಸ್ವಹಿತಾಸಕ್ತಿಗಳನ್ನು ಆಧರಿಸಲಾರಂಭಿಸಿತು. ಆಗ ಒಂದು ಶಿಸ್ತುಬದ್ಧ ಜೀವನಕ್ಕೆ ತಮ್ಮನ್ನು ಒಡ್ಡಿಕೊಳ್ಳಲು ನಿರ್ಮಿತವಾದ ರಾಜಕೀಯ ವ್ಯವಸ್ಥೆ ಭ್ರಷ್ಟಾಚಾರದ ಹಾದಿಯನ್ನು ಹಿಡಿಯಿತು. ತಾನು ಈ ಭೂಮಂಡಲಕ್ಕೆಲ್ಲ ಏಕೈಕ ಅಧಿಪತಿಯಾಗಬೇಕೆಂಬ ದುರಾಸೆಯ ಅಡಿಯಲ್ಲಿ ಅನೇಕ ಅಮಾಯಕರು ಸಿಕ್ಕಿ ನಲುಗಬೇಕಾದ ದುಃಸ್ಥಿತಿಗೆ ಎಡೆಮಾಡಿಕೊಟ್ಟಿತು. ತಾನು ಹೇಳಿದಂತೆ ಉಳಿದವರು ಕೇಳಬೇಕೆಂಬ ವರ್ಗತಾರತಮ್ಯ ಮತ್ತು ಶಕ್ತಿ ಪ್ರಯೋಗದ ಮೂಲಕ ಆಳುವ ವರ್ಗ ಆಳಿಸಿ ಕೊಳ್ಳುವವರನ್ನು ಗುಲಾಮರಂತೆ ಬಳಸಿಕೊಳ್ಳುವ ಅಧಿಕಾರೀ ಪ್ರವೃತ್ತಿ ಬೆಳೆಯಿತು. ಜಾತಿ-ಧರ್ಮಗಳ

ಸೆರೆಗೆ ಸಿಕ್ಕು ರಾಜಕೀಯ ವ್ಯವಸ್ಥೆ ಏರುಪೇರಾಯಿತು. ಇಂಥ ಹಲವು ಸಂದರ್ಭಗಳಿಗೆ ತುತ್ತಾದ ಮನುಷ್ಯ ಅಸಂಗತತೆಯ ಸುಳಿಯಲ್ಲಿ ಸಿಕ್ಕು ನರಳುವಂತಾಯಿತು. ಅಲ್ಲದೆ ಅವನಿಗೆ ರಾಜಕೀಯ ವ್ಯವಸ್ಥೆಯನ್ನು ಸರಿಪಡಿಸುವಲ್ಲಿ ತೆಗೆದುಕೊಳ್ಳಬೇಕಾದ ನಿರ್ಣಯ ಮತ್ತು ಹಾದಿಗಳನ್ನು ರೂಪಿಸಿಕೊಳ್ಳುವ ಅನಿವಾರ್ಯತೆ ಎದುರಾದಾಗ ಹಲವು ಮಾರ್ಗಗಳು ಗೋಚರವಾದವು. ವರ್ಗರಹಿತ ಸಮಾಜ ನಿರ್ಮಾಣದ ಸಮತಾವಾದದ ದೃಷ್ಟಿ, ಪ್ರಜೆಗಳೇ ಪ್ರಭುಗಳು ಎಂಬ ಸಮಾನತೆಯ ಕಲ್ಪನೆ, ತನ್ನ ಅಸ್ತಿತ್ವವನ್ನು ಸಾಬೀತುಪಡಿಸಿಕೊಳ್ಳಬೇಕಾದ ಅರಿವು, ಜಾತ್ಯತೀತವಾದ ಮತ್ತು ಧರ್ಮನಿರಪೇಕ್ಷವಾದ ಮಾನವತಾವಾದದ ಜ್ಞಾನ, ಸ್ವಾರ್ಥ-ದ್ವೇಷ-ಸೇಡುಗಳನ್ನು ಮೀರಿದ ಮಾನವೀಯ ನೆಲೆಗಟ್ಟುಗಳನ್ನು ಕಂಡುಕೊಳ್ಳಬೇಕಾದ ಪ್ರಜ್ಞೆ - ಇವು ಅವನ ಆಲೋಚನಾ ಕ್ರಮಗಳಾದವು. ಇಂಥ ಒಂದು ರಾಜಕೀಯ ಪ್ರಜ್ಞೆ ಹತ್ತನೆಯ ಶತಮಾನದ ಪಂಪನ ಕಾವ್ಯಗಳಲ್ಲಿ ವ್ಯಕ್ತವಾಗಿರುವ ಬಗೆಯನ್ನು ಗುರುತಿಸಲು ಇಲ್ಲಿ ಯತ್ನಿಸಲಾಗಿದೆ.

ಶೋಷಣೆ, ವರ್ಗಭೇದಗಳು ಉದ್ಭವಿಸಿರದ 'ಪ್ರಾಚೀನ ಕಮ್ಯುನಿಸಂ' ಸಮಾಜ 'ಸ್ವಯಂ ನಿಯಂತ್ರಿತ' ಸಮಾಜವಾಗಿ ಅಸ್ತಿತ್ವದಲ್ಲಿತ್ತು. ''ಆಳುವವರು, ಆಳಲ್ಪಡುವವರು ಎಂಬ ವಿಂಗಡಣೆ ಉಂಟಾಗಿರಲಿಲ್ಲ. ಒಂದು ವರ್ಗವು ಇನ್ನೊಂದು ವರ್ಗವನ್ನು ಶೋಷಣೆ ಮಾಡುವುದಕ್ಕೂ, ಖಾಸಗಿ ಆಸ್ತಿಯನ್ನು ಗಳಿಸಿ ಕಾಪಾಡುವುದಕ್ಕೂ ಹಕ್ಕನ್ನು ಕೊಡುವ ಮತ್ತು ಅವಕಾಶವನ್ನು ಉಂಟುಮಾಡುವ ಶಾಸನಗಳಾಗಲಿ, ದಂಡ ಪ್ರಯೋಗದ ಯಂತ್ರವಾಗಲಿ ಆಗ ಉದ್ಭವಿಸಿರಲಿಲ್ಲ. ಪ್ರಭುತ್ವ ಎನ್ನುವುದು ಅಸ್ತಿತ್ವಕ್ಕೆ ಬಂದಿರಲಿಲ್ಲ.

''ನಿವಾರಿಸಲಾಗದ ವರ್ಗಕಲಹಗಳನ್ನು ಸ್ತಿಮಿತದಲ್ಲಿ ಇರಿಸಲು ಆಗದಿದ್ದರೆ ಹೊಡೆದು ಅಡಗಿಸುವುದಕ್ಕೆ ಶೋಷಕವರ್ಗಕ್ಕೆ ಒಂದು ಆಯುಧ ಅವಶ್ಯವಿರುತ್ತದೆ. ಹಾಗೆಯೇ ಆಸ್ತಿಯ ಹಕ್ಕು ಬಾಧ್ಯತೆಗಳನ್ನು ಕಾಯುವುದಕ್ಕೂ ಆಸ್ತಿವಂತರೊಳಗಿನ ವಿವಾದಗಳನ್ನು ಆಸ್ತಿವಂತ ವರ್ಗದ ಅಸ್ತಿತ್ವಕ್ಕೆ ಹಾನಿಯಾಗದಂತೆ ತೀರಿಸಿಕೊಳ್ಳುವುದಕ್ಕೂ ಒಂದು ಏರ್ಪಾಡು ಅವಶ್ಯವಿರುತ್ತದೆ. ಹೀಗೆ ಶಾಸನಗಳೂ, ದಂಡ ಪ್ರಯೋಗದ ಯಂತ್ರವೂ ಸಿದ್ಧವಾದುವು. ಅದನ್ನೇ ನಾವು ಪ್ರಭುತ್ವ ಎನ್ನುವುದು.''[೧] ಪಂಪಭಾರತದಲ್ಲಿ ಆಸ್ತಿವಿವಾದಕ್ಕೆ ಸಂಬಂಧಿಸಿದಂತೆ ಶೋಷಕ ವರ್ಗವಾಗಿ ಕೌರವರು, ಶೋಷಿತ ವರ್ಗವಾಗಿ ಪಾಂಡವರು ಕಾಣಬರುತ್ತಾರೆ. ವರ್ಗಕಲಹಗಳನ್ನು ಸ್ತಿಮಿತದಲ್ಲಿರಿಸುವುದಕ್ಕೆ ಕೌರವರು ತಮ್ಮ ಆಸ್ತಿಯನ್ನು ರಕ್ಷಿಸಿಕೊಳ್ಳುವ ಕಾರಣದಿಂದಾಗಿ ಪಾಂಡವರನ್ನು ವಾರಣಾವತಕ್ಕೆ ಕಳಿಸುವ ಅನಧಿಕೃತ ಶಾಸನವನ್ನು ಸೃಷ್ಟಿಸುತ್ತಾರೆ. ಅನಂತರ ಪಾಂಡವರನ್ನು ಅಡಗಿಸುವುದಕ್ಕೆ ದಂಡಪ್ರಯೋಗದ ಯಂತ್ರ ಸಿದ್ಧಮಾಡಿದ್ದೂ ಪ್ರಭುತ್ವದ ಕ್ರಿಯೆಯೇ ಆಗಿದೆ. ಸಮಸ್ತ ಆಸ್ತಿಗೆ ಹಕ್ಕುದಾರನಾಗಬೇಕೆಂಬ ಮತ್ತು ಸಮಸ್ತ ಸಾಮ್ರಾಜ್ಯಕ್ಕೆ ಒಡೆಯನಾಗಬೇಕೆಂಬ ದುರ್ಯೋಧನನ ಹಂಬಲವೇ ಪಾಂಡವರಿಗೆ ಒಂದು ಸೂಜಿಯ ಮೊನೆಯಷ್ಟೂ ಜಾಗ ಕೊಡುವುದಿಲ್ಲ ಎನ್ನಲು ಕಾರಣ ಎಂಬುದರಲ್ಲಿ ಎರಡು ಮಾತಿಲ್ಲ. ಪಾಂಡವರೊಂದಿಗಿನ ಕಲಹವನ್ನು ಹತ್ತಿಕ್ಕಲು ಆತ ಅನುಸರಿಸಿದ ಮಾರ್ಗ ದಂಡಪ್ರಯೋಗದ್ದು. ಅದು ಹನ್ನೆರಡು ವರ್ಷಗಳ ಕಾಲ ವನವಾಸ, ಒಂದು ವರ್ಷದ ಅಜ್ಞಾತವಾಸದ ಮೂಲಕ. ಆದರೆ ದುರ್ಯೋಧನನ ಪ್ರಭುತ್ವ ಒಂದು ಕಾಲಕ್ಕೆ ನಾಶವಾಗುವುದೂ ಇಲ್ಲಿದೆ. ಶೋಷಿತವರ್ಗ ಶೋಷಕವರ್ಗದ ವಿರುದ್ಧ ಸೆಟೆದು ನಿಲ್ಲಬಹುದಾದ ಎಚ್ಚರಿಕೆ ಕೂಡಾ ಇಲ್ಲಿದೆ. ಶೋಷಿತವರ್ಗ ಬಲಿಷ್ಠ ಶಕ್ತಿಯಾಗಿ ರೂಪುಗೊಳ್ಳಬೇಕಾದ ಅಗತ್ಯವನ್ನು ಪಾಂಡವರು ಸಂಕೇತಿಸುತ್ತಾರೆ.

ಗುಲಾಮಪದ್ಧತಿ ಕೂಡಾ ಪ್ರಭುತ್ವದ ಒಂದು ಅಂಗವಾಗಿದೆ. ಪಂಪಭಾರತದ ದ್ರೌಪದಿಯ ಸಂದರ್ಭಗಳು ಇದಕ್ಕೆ ನಿದರ್ಶನವಾಗಿದೆ. ಧರ್ಮರಾಯ ಜೂಜಿನಲ್ಲಿ ದ್ರೌಪದಿಯನ್ನು ಗುಲಾಮಳಂತೆ ಪಣಕ್ಕಿಡುವುದು, ಸೋತ ನಂತರ ದುರ್ಯೋಧನ ದುಶ್ಶಾಸನರು ದ್ರೌಪದಿಯನ್ನು ಗುಲಾಮಳಂತೆ ನಡೆಸಿಕೊಳ್ಳುವುದು ಅಮಾನವೀಯ ವರ್ತನೆಗಳಾಗಿ ಕಾಣುತ್ತವೆ. ಸೈರಂಧ್ರಿಯನ್ನು ಕಾಮಿಸಿದ ಕೀಚಕನಿಗೆ ಪೂರಕವಾಗಿ ನಡೆದುಕೊಳ್ಳುವ ಸುದೇಷ್ಣೆ ಕೀಚಕನ ಭವನಕ್ಕೆ ತೆರಳಿ ಮಧುವನ್ನು ತರಲು ಹೇಳುವ ಮೂಲಕ ಅವಳನ್ನು ದುಡಿಸಿಕೊಳ್ಳುವ ರೀತಿ ಗುಲಾಮಪದ್ಧತಿಗಿಂತ ಬೇರೆಯಾಗಿ ಕಾಣುವುದಿಲ್ಲ. ಇಲ್ಲೆಲ್ಲ ಪ್ರಭುತ್ವ ಎಂಬುದು ಅರಸನಿಗಷ್ಟೇ ಸೀಮಿತವಾಗದೆ ಪುರುಷ-ಸ್ತ್ರೀಯರ ಸಂಬಂಧಗಳೂ, ಸ್ತ್ರೀ-ಸ್ತ್ರೀಯರ ಸಂಬಂಧಗಳೂ ಪ್ರಭುತ್ವದಡಿಯಲ್ಲಿ ವರ್ತಿಸುವುದು ಕಾಣುತ್ತದೆ.

ರಾಜಪ್ರಭುತ್ವಗಳು ಪ್ರಜೆಗಳನ್ನು ನಡೆಸಿಕೊಳ್ಳುವ ರೀತಿ ಪಂಪಭಾರತದ ಶಂತನು-ಸತ್ಯವತಿ ಪ್ರಸಂಗದಲ್ಲಿ ಕಾಣಬರುತ್ತದೆ.

**''ಮೃಗಯಾ ವ್ಯಾಜದಿನೊರ್ಮೆ ಶಂತನು ತೊಟಲರ್ಪರ್ಗಂ ಪಳಂಚಲ್ಕೆ ತ।**
**ನ್ಮೃಗಶಾಬಾಕ್ಷಿಯ ಕಂಪು ತಟ್ಟ ಮಧುಪಂ ಜೋಲ್ ಸೋಲ್ತು ಕಂಡೊಲ್ದುನ॥**
**ಲ್ಗೆಗೆ ದಿಬ್ಯಂಬಿಡಿವಂತೆವೋಲ್ ಪಿಡಿದು ನೀನ್ ಬಾ ಪೋಪಮೆಂದಂಗೆ ಮ।**
**ಲ್ಲಗೆ ತತ್ಕನ್ಯಕೆ ಸಾಣ್ಣೆ ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ''[೨]**

ಪಂಪ ಈ ಪದ್ಯದ ಮೂಲಕ ಪ್ರಭುತ್ವದ ತೀವ್ರತೆಗೆ ತೀವ್ರ ಪ್ರತಿರೋಧ ಒಡ್ಡುವುದು ಕಾಣುತ್ತದೆ. ಬೇಟೆಗೆ ಬಂದ ಶಂತನು ಮಹಾರಾಜ ಕಾಡಿನಲ್ಲಿ ಮತ್ಸ್ಯಗಂಧಿಯನ್ನು ಮೋಹಿಸಿ ಅವಳ ಕೈಹಿಡಿದು 'ಬಾ ಪೋಪಂ' ಎನ್ನುತ್ತಾನೆ. ಇಲ್ಲಿ ಶಂತನು ಮಹಾರಾಜನ ವ್ಯಕ್ತಿತ್ವ ಪ್ರಭುತ್ವದ ಸಂಕೇತವಾಗಿ ಕಾಣುತ್ತದೆ. ತಾನು ಮೋಹಿಸಿದ್ದೇನೆ, ಅವಳು ತನ್ನನ್ನು ವರಿಸಬೇಕೆಂಬ ಅಧಿಕಾರದ ಧೋರಣೆ ಕಾಣುತ್ತದೆ. ತನ್ನಿಚ್ಛೆಯಂತೆ ಆಕೆ ನಡೆಯಬೇಕೆಂಬ ಅಧಿಕಾರದ ಪ್ರವೃತ್ತಿ ಇಲ್ಲಿದೆ. ಅವಳ ಅಭಿಪ್ರಾಯದ ಅಗತ್ಯ ಅವನಿಗೆ ಬೇಕಾಗಿಲ್ಲ. ಆದರೆ ಆ ಪ್ರಭುತ್ವವನ್ನು ನಯವಾಗಿ ನಿರಾಕರಿಸುವ ವ್ಯಕ್ತಿತ್ವ ಸತ್ಯವತಿಯಲ್ಲಿದೆ. 'ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ' ಎಂಬ ಅವಳ ಮಾತು ರಾಜನೊಬ್ಬ ತನ್ನ ಅಗತ್ಯವನ್ನು ನೆರವೇರಿಸಿಕೊಳ್ಳಬೇಕಾದರೆ 'ಬೇಡಬೇಕು' ಎಂದು ಹೇಳುವುದು ಅರಸನಾದ ಮಾತ್ರಕ್ಕೆ ಕರೆದ ಕೂಡಲೇ ಬರಲಾಗುವುದಿಲ್ಲ ಎಂಬ ನಯವಾದ ನಿರಾಕರಣೆಯಾಗಿ ಕಾಣಿಸುತ್ತದೆ. 'ಅಯ್ಯನಂ ಬೇಡಿರೇ' ಎಂಬ ಮಾತು ಕೂಡಾ ಹೆಣ್ಣನ್ನು ಆಳುವ ಪುರುಷನ ಪ್ರಭುತ್ವಕ್ಕೆ ಒತ್ತುಕೊಟ್ಟಂತಿದೆ. ರಾಜಪ್ರಭುತ್ವದಡಿ ಪ್ರಜೆಗಳೂ, ಪುರುಷನ ಪ್ರಭುತ್ವದಡಿ ಮಹಿಳೆಯೂ ನಲುಗುವುದು ಇಲ್ಲಿದೆ.

ದೇವಲೋಕದಲ್ಲಿರುವ ಪಾಂಡು ಅಲ್ಲಿರುವ ಹದಿನಾರು ರಾಜರೆದುರು ಜೀಯ, ಹಸಾದ ಎನ್ನುವ ಇಂದ್ರನನ್ನು ಕಂಡು ಬೆದರಿ ಬೆಚ್ಚಿ ಬೀಳುವ ಹೀನಸ್ಥಿತಿ ಇದ್ದುದರಿಂದ ಇದಕ್ಕೆ ಪರಿಹಾರಾರ್ಥವಾಗಿ ರಾಜಸೂಯಯಾಗ ಮಾಡಬೇಕೆಂಬ ಸಲಹೆ ನಾರದನಿಂದ ಧರ್ಮರಾಯನಿಗೆ ಬರುತ್ತದೆ. ಅದರ ಪ್ರಯೋಜನ ಕುರಿತು ಧರ್ಮರಾಯ

''ಬೆಳಗುವುದಿಂದ್ರ ಲೋಕದೊಳಗಯ್ಯನ ಮಾ(ತೆನಲೆ)ಮ್ಮ ಸಾಹಸಂ।
ಬೆಳಗುವುದೀ ಧರಾವಳಯದೊಳ್ ತಣಿವರ್ ದ್ವಿಜಮುಖ್ಯರಪ್ಪುದ॥
ಗ್ಗಳಿಕೆ ಪೊದಳ್ದು ಪರ್ವುವುದು ಕೀರ್ತಿ ಪುರಾಕೃತ ಪುಣ್ಯದಿಂದೆ ಸಂ।
(ಗಳಿ)ಸುವುದೆಂದೊಡೀ ಮಖದೊಳೇನ್ ತೊದಳುಂಟೆ ಮುನೀಂದ್ರನಾಯಕಾ॥[೨]

ಹೀಗೆ ಯೋಚಿಸಿ ಯಾಗ ಮಾಡಲು ನಿರ್ಧರಿಸುತ್ತಾನೆ. ಇರುವವರ ಬದುಕಿಗಿಂತ ಗತಿಸಿದ ಪಾಂಡುವಿನ ಅಲೌಕಿಕ ಏಳಿಗೆಯ ಬಗೆಗಿನ ಚಿಂತನೆ ಕಾಣುತ್ತದೆ. ರಾಜಸೂಯಯಾಗದ ಪೂರ್ವದಲ್ಲಿ ಪಾಂಡವರು ನಡೆಸುವ ಯುದ್ಧ, ಪರಿಣಾಮ- ಅಧಿಕಾರದ ಅಟ್ಟಹಾಸ, ಸಮಸ್ತ ಭೂಮಂಡಲವನ್ನು ವಶಪಡಿಸಿಕೊಳ್ಳಬೇಕೆಂಬ ಯತ್ನ ಈ ಎಲ್ಲವೂ ಅಪ್ಪಟ ಫ್ಯಾಸಿಸ್ಟ್ ಧೋರಣೆಯಾಗಿ ಕಂಡುಬರುತ್ತದೆ. ಆಧುನಿಕ ಜಗತ್ತಿನ ಹಿಟ್ಲರ್, ಮುಸಲೋನಿ ನೆನಪಾಗುತ್ತಾರೆ.

ಕೃಷ್ಣನ ಆಜ್ಞೆಯ ಮೇರೆಗೆ ಪಾಂಡವರು ಒಂದೊಂದು ದಿಕ್ಕಿಗೆ ತೆರಳುತ್ತಾರೆ. ಶತ್ರುರಾಜರನ್ನು, ರಾಕ್ಷಸರನ್ನು ಗೆದ್ದು ಅಲ್ಲಿನ ಸಂಪತ್ತನ್ನೆಲ್ಲವನ್ನೂ ದೋಚಿ ತರುತ್ತಾರೆ. ರಾಜಸೂಯಯಾಗಕ್ಕೆ ಆಹ್ವಾನಿಸಿದ ಬ್ರಹ್ಮರ್ಷಿಗಳಿಗೆ ಅರಸುಮಕ್ಕಳಿಗೆ ಬ್ರಾಹ್ಮಣರಿಗೆ ದೀನರಿಗೆ ದಾನವನ್ನು ನೀಡುತ್ತಾರೆ. ಇದು ಸಾರ್ವಭೌಮತ್ವದ ಸಂಕೇತವೂ ಹೌದು. ಸಂಪತ್ತಿನ ವಿಕೇಂದ್ರೀಕರಣವನ್ನು ಸಮಾಜವಾದ ಸೂಚಿಸುತ್ತದಾದರೂ ಇನ್ನೊಬ್ಬರಿಂದ ದೋಚಿ ತಂದು ಉಳಿದವರಿಗೆ ಹಂಚುವುದನ್ನು ಅದು ಹೇಳುವುದಿಲ್ಲ. ಸಮಾಜವಾದದಲ್ಲಿ ನಂಬಿಕೆಯುಳ್ಳ ವ್ಯಕ್ತಿ ತನ್ನಲ್ಲಿ ಅಗತ್ಯಕ್ಕಿಂತ ಹೆಚ್ಚಿರುವುದನ್ನು ಹಂಚಲು ತಿಳಿಸುತ್ತದೆ. ಧರ್ಮಪರಿಪಾಲನೆಯ ಹಣೆಪಟ್ಟಿ ಹೊತ್ತ ಪಾಂಡವರ ರಾಜಸೂಯಯಾಗದ ಸಂದರ್ಭ ಸಮಾಜವಾದಕ್ಕೆ ಬದಲು ಪರಮಾಧಿಕಾರವನ್ನು ಎತ್ತಿ ಹಿಡಿಯುತ್ತದೆ.

ಪಾಂಡವರ ಈ ಯಾಗದ ಸಂದರ್ಭ ದುರ್ಬಲವರ್ಗದ ಮೇಲಿನ ಆಧಿಪತ್ಯವಾಗಿಯೂ ವಿಜೃಂಭಿಸುವುದು ಕಾಣುತ್ತದೆ.

''ಉಱದಿರ್ಪಂತೆಮಗಾವ ಗರ್ವಮಿಱಿಯಲ್ವೇಡೆಮ್ಮ ನೆಮ್ಮುಳ್ಳುದಂ।
ನೆಱೆಕೊಂಡೆಮ್ಮಯ ಬಾೞ್ವೆಯೊಳ್ ನಿಱಿಸುವಂ ನೀನೆಂದು ತಂದಿತ್ತು ಕೆ॥
ಯ್ಸೆಱೆಯಂ ಕೊಟ್ಟಳವಟ್ಟ ಸಾರ ಧನಮಂ ಮೂವಿಟ್ಟಗಂ ಪೂಣ್ದು ಕಾ।
ಲ್ಗೆಱಗಿತ್ತಂತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ॥''[೩]

ತೆಪ್ಪಗಿರದಿರುವಂಥ ಗರ್ವವಾದರೂ ತಮಗೆ ಯಾವುದಿದೆ, ತಮ್ಮನ್ನು ಇರಿಯಬೇಡ ಎನ್ನುತ್ತಾ ತಮ್ಮಲ್ಲಿ ಇರುವುದನ್ನೆಲ್ಲಾ ಕೊಂಡು ತಮ್ಮನ್ನು ಬಾಳಲು ಬಿಡಬೇಕೆಂದು ಭಯದಿಂದ ಅರ್ಜುನನಿಗೆ ಗ್ರಾಮಜನರು, ಎಲ್ಲ ಕುಲದವರು, ರಾಜರು ಬೇಡಿಕೊಂಡದ್ದು ಇಲ್ಲಿ ವ್ಯಕ್ತವಾಗಿದೆ. ಇಲ್ಲೆಲ್ಲ ಡಕಾಯಿತ ಗುಂಪೊಂದು ಮಾರಕಾಸ್ತ್ರಗಳಿಂದ ಆಕ್ರಮಣ ಮಾಡಿ ಮನೆಯೊಂದರ ವಸ್ತು ಒಡವೆಗಳನ್ನು ದೋಚಲು ಹಲ್ಲೆ ಮಾಡಿದಾಗ ಅಸಹಾಯಕ ಜನ ತಮ್ಮ ಪ್ರಾಣವನ್ನುಳಿಸಿಕೊಳ್ಳಲು ಇರುವ ವಸ್ತು ಒಡವೆಗಳನ್ನು ಕೊಂಡುಹೋಗಲು ತಿಳಿಸುವಂತೆ ಈ ಸಂದರ್ಭ ಕಾಣಿಸುತ್ತದೆ. ಪ್ರಬಲ ವರ್ಗ ಶಕ್ತಿ ಪ್ರಯೋಗದ ಮೂಲಕ ದುರ್ಬಲ ವರ್ಗವನ್ನು ಹೇಗೆ ಹತ್ತಿಕ್ಕಬಹುದೆಂಬುದಕ್ಕೆ ಈ ಸಂದರ್ಭ ನಿದರ್ಶನವಾಗಿದೆ.

ಆದರೆ 'ಆದಿಪುರಾಣ'ದಲ್ಲಿ ಫ್ಯಾಸಿಸ್ಟ್ ಧೋರಣೆಯ ಮನೋಧರ್ಮ ಹಂತಹಂತವಾಗಿ ನಿರಸನಗೊಳ್ಳುವುದು ಭರತನ ಸಂದರ್ಭದಲ್ಲಿ ಕಾಣುತ್ತದೆ.

೧. ಭರತ ಪ್ರಶಸ್ತಿ ಕೆತ್ತೆಸೆಯಲು ಯತ್ನಿಸಿದಾಗ

೨. ಆತನ ಸಹೋದರರು ರಾಜ್ಯವನ್ನು ತೊರೆದಾಗ

೩. ತಮ್ಮನಾದ ಬಾಹುಬಲಿ ಮಲೆತು ಯುದ್ಧಕ್ಕೆ ನಿಂತಾಗ

೪. ಚಕ್ರರತ್ನ ಬಾಹುಬಲಿಯನ್ನು ಘಾತಿಸದೇ ಇದ್ದಾಗ

೫. ಯುದ್ಧದಲ್ಲಿ ಬಾಹುಬಲಿಗೆ ಸೋತಾಗ

೬. ಬಾಹುಬಲಿ ಗೆದ್ದ ರಾಜ್ಯವನ್ನು ಭರತನಿಗೇ ಇತ್ತು ವೈರಾಗ್ಯಪರನಾದಾಗ

ಭರತ ದಿಗ್ವಿಜಯ ಸಾಧಿಸಲು ಷಟ್ಖಂಡಗಳನ್ನು ವಶಪಡಿಸಿಕೊಳ್ಳುತ್ತಾ ಸಾಗಿ ವೃಷಭಾಚಲದಲ್ಲಿ ತನ್ನ ವಿಜಯ ಪ್ರಶಸ್ತಿಯನ್ನು ಕೆತ್ತಿಸಲು ಹೋದಾಗ ಅಲ್ಲಿನ ಶಿಲೆಗಳ ಮೇಲೆ ಹಿಂದಿನ ಕಲ್ಪಶತಕೋಟಿಗಳಲ್ಲಿ ಬಾಳಿದ ಚಕ್ರವೃಂದದ ಪ್ರಶಸ್ತಿಗಳನ್ನು ಕಂಡು ಅವನ 'ಕೊಳಗೊಂಡ ಗರ್ವರಸ' ಸೋರಿಹೋಗುತ್ತದೆ. ನಾಚಿಕೆಯಾದರೂ ಹಿಂದಿನ ಚಕ್ರವರ್ತಿಯೊಬ್ಬನ ಪ್ರಶಸ್ತಿಯನ್ನು ಒರಸಿ ತನ್ನ ಪ್ರಶಸ್ತಿಯನ್ನು ಕೆತ್ತಿಸುತ್ತಾನೆ. ರಾಜಧಾನಿಗೆ ಹಿಂದಿರುಗಿದರೆ ಚಕ್ರರತ್ನ ಪಟ್ಟಣ ಪ್ರವೇಶಿಸದೆ ನಿಂತಿರುತ್ತದೆ. ತನ್ನ ತಮ್ಮಂದಿರು ತನ್ನನ್ನು ಅಧಿರಾಜನೆಂದು ಒಪ್ಪಿಕೊಳ್ಳದಿರುವುದೇ ಅದಕ್ಕೆ ಕಾರಣವೆಂದು ಅರಿತಾಗ ಸಹೋದರರು ತನಗೆ ಎರಗಬೇಕೆಂದು ದೂತನನ್ನಟ್ಟುತ್ತಾನೆ. ಅಭಿಮಾನಿಗಳಾದ ಅವರು ''ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಮಿಂತೀಗಳಾಳರಸೆಂಬೊಂದು ವಿಭೇದಮಾದೊಡೆಱಕಂ ಚೀಃ ಕಷ್ಟಮಲ್ತೇ''[೫] ಎಂದು ಭಾವಿಸಿ ವೈರಾಗ್ಯ ತಳೆಯುತ್ತಾರೆ. ಅನಂತರ ಬಾಹುಬಲಿ ಭರತನನ್ನು ಸೋಲಿಸಿದರೂ ಚಕ್ರರತ್ನವನ್ನು ಬಾಹುಬಲಿಯ ಮೇಲೆ ಪ್ರಯೋಗಿಸುತ್ತಾನೆ. ಅದು ಘಾತಿಸದೆ ನಿಂತಾಗ ಭರತ ತನ್ನ ಆ ಕಾರ್ಯಕ್ಕೆ ನಾಚುತ್ತಾನೆ. ಆದರೆ ಬಾಹುಬಲಿ,

**''ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಯಮಿಾ ಭಟ ಖಡ್ಗ ಮಂಡಲೋ**
**ತ್ಪಲ ವನ ವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ**
**ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀನ್**
**ಒಲಿದ ಲತಾಂಗಿಗಂ ಧರೆಗಮಾಟಿಸಿದಂದು ನೆಗೞ್ತೆ ಮಾಸದೇ''**[೬]

ಎಂದು ವೈರಾಗ್ಯಪರನಾಗುತ್ತಾನೆ. ಭರತನ ಅಹಂಕಾರದ ನಿರಸನವಾಗುವ ಅತ್ಯದ್ಭುತವಾದ ಚಿತ್ರವನ್ನು ಪಂಪ ಕಟ್ಟಿಕೊಡುತ್ತಾನೆ.

'ಅಸಂಗತವಾದ' ಆಧುನಿಕ ಜಗತ್ತಿನ ರಾಜಕೀಯದಿಂದ ಹುಟ್ಟಿಕೊಂಡ ಒಂದು ಪ್ರಣಾಲಿ ಮನುಷ್ಯ ತನ್ನ ಖಾಲಿತನದ ಅನುಭವಗಳ ಮೂಲಕ ಬದುಕಿನ ಅರ್ಥವನ್ನು ಅರಿಯುವ ಪ್ರಯತ್ನ ಅಸ್ತಿತ್ವದ ಹುಡುಕಾಟವಾಗಿ ಕಾಣುತ್ತದೆ. ಮನುಷ್ಯನಿಗೆ ಸ್ವತಂತ್ರವಾದ ಮನಸ್ಸು ಮತ್ತು ಇಚ್ಛಾಶಕ್ತಿಗಳಿದ್ದು ಆತ ತನ್ನ ಮನುಷ್ಯತ್ವವನ್ನು ತಾನೇ ಸೃಷ್ಟಿಸಿಕೊಳ್ಳಬೇಕಾದ, ತನ್ನ ಗುಣಸ್ವಭಾವಗಳಿಗೆ ತಾನೇ ಹೊಣೆಗಾರನಾಗಬೇಕಾದ ಅನಿವಾರ್ಯತೆ ಒದಗಿತು. ತಾನು ಏನು ಆಗಬೇಕೆಂಬುದನ್ನು ಆಯ್ಕೆ ಮಾಡದೆ ಹೊರಗಿನ ಶಕ್ತಿಗಳಿಗೆ ಅವಕಾಶ ನೀಡಿದರೆ ಆತ ತಿರಸ್ಕಾರಯೋಗ್ಯನಾಗುವುದರಿಂದ ಅವನ ಅಸ್ತಿತ್ವ ಅವನ ಪ್ರಜ್ಞೆಯನ್ನು ಆಧರಿಸಿತು. ಅಸ್ತಿತ್ವದ ಹುಡುಕಾಟ ಮುಂದೆ ಮನುಷ್ಯನ ಅಸಂಗತತೆಗೂ ಎಡೆಮಾಡಿಕೊಟ್ಟಿತು. ಆಧುನಿಕ ಜಗತ್ತಿನಲ್ಲಿ ಸಂಭವಿಸಿದ ಎರಡನೆಯ ಮಹಾಯುದ್ಧವು ಮನುಷ್ಯನನ್ನು ಒಂಟಿಯನ್ನಾಗಿ, ಅಪರಿಚಿತನನ್ನಾಗಿ ಮಾಡಿದ್ದಲ್ಲದೆ ಅವಮಾನಕರವಾಗಿ ಬದುಕುವ, ಯಾವುದೇ ಅಂತಃಸತ್ವವಿಲ್ಲದ ನಿರ್ಜೀವ ವಸ್ತುವಿನಂತೆಯೂ ಮಾಡಿತು. ಅನಾಥ ಪ್ರಜ್ಞೆ, ಏಕಾಕಿತನ, ತಬ್ಬಲಿತನ, ಪರಕೀಯತೆಯಿಂದ ನರಳುವಂತೆ ಮಾಡಿತು. ಪಂಪಭಾರತದಲ್ಲಿ ರಾಜಕೀಯ ಅಸ್ಥಿರತೆಯಿಂದ ಹೊರಬರಲು ಹೆಣಗಾಡುವ ಪಾಂಡವರು, ತಬ್ಬಲಿತನ ಏಕಾಕಿತನದಿಂದ ಬಳಲುವ ಕರ್ಣ ಅಸ್ತಿತ್ವದ ಹುಡುಕಾಟದೆಡೆ ತುಯ್ದಾಡುತ್ತಾರೆ.

ಜೂಜಾಟದ ಪರಿಣಾಮವಾಗಿ ಎಲ್ಲವನ್ನು ಕಳೆದುಕೊಂಡು ಸ್ಥಿರತೆಗಾಗಿ ಹೋರಾಡುವ ಅನಿವಾರ್ಯತೆ ಒದಗುತ್ತದೆ. ಈ ಅಸ್ತಿತ್ವದ ಹೋರಾಟ ಅಹಿಂಸೆಯಿಂದ ಆರಂಭವಾಗುತ್ತದೆ. ಆದರೆ ಅದು ಜಯ ದೊರಕಿಸಿಕೊಡುವುದಿಲ್ಲ. ಈ ಮಟ್ಟಿಗೆ ಗಾಂಧೀಜಿಯವರ ಅಹಿಂಸಾವಾದ ಪಂಪಭಾರತದಲ್ಲಿ ಕಾಣುತ್ತದೆ. ಇದು ಜೈನಧರ್ಮದ ತತ್ತ್ವ ನಿರೂಪಣೆಯಾಗಿಯೂ ಕಾಣಿಸಿಕೊಳ್ಳುತ್ತದೆ. ಆದರೆ ಸಾತ್ವಿಕ ಹೋರಾಟದ ಸೋಲಿನೊಂದಿಗೇ ಅಸ್ತಿತ್ವದ ಹೋರಾಟ ನಿಲ್ಲುವುದಿಲ್ಲ. ಮುಂದೆ ಧರ್ಮಯುದ್ಧದ ಹೆಸರಿನಲ್ಲಿ ಮೋಸ, ವಂಚನೆಗಳ ಹಾದಿ ಹಿಡಿಯುತ್ತದೆ. ಹೋರಾಟದ ಹಾದಿಯಲ್ಲಿ ಈ ಅಕ್ರಮ ಮಾರ್ಗವನ್ನು ಹಿಡಿಯುತ್ತಾರೆ. ದ್ರೋಣನ ಹತ್ಯೆ, ಭೀಷ್ಮನ ಸಾವು ಇದಕ್ಕೆ

ನಿದರ್ಶನಗಳಾಗಿವೆ. ಹಿಂಸೆಗೆ ಪ್ರತಿಹಿಂಸೆ ಅಸ್ತಿತ್ವದ ಹೋರಾಟದ ನೆಲೆಯಾಗುತ್ತದೆ. ದುಶ್ಶಾಸನನ್ನು ಕೊಲ್ಲುವ ಬಗೆ ಮತ್ತು ಅನಂತರ ಭೀಮ-ದುಶ್ಶಾಸನನ ಸಂದರ್ಭದಲ್ಲಿ ವರ್ತಿಸುವ ಬಗೆ ಕ್ರೌರ್ಯದ ಪರಮಾವಧಿಯಾಗುತ್ತದೆ. ಶಕ್ತಿ ಪ್ರಯೋಗದ ಮೂಲಕ ಅಸ್ತಿತ್ವಕ್ಕಾಗಿ ಹೋರಾಟ ನಡೆಯುವುದು ಪಂಪಭಾರತದ ಇನ್ನೊಂದು ಮಜಲು. ದ್ರುಪದ ದ್ರೋಣನಿಂದಾದ ಅವಮಾನಕ್ಕೆ ಸೇಡನ್ನು ತೀರಿಸಿಕೊಳ್ಳಲು ದ್ರೋಣನನ್ನು ಕೊಲ್ಲುವಂಥ ಮಗನನ್ನು, ಅರ್ಜುನನಿಗೆ ಪತ್ನಿಯಾಗಬಲ್ಲ ಮಗಳನ್ನು ಪಡೆಯುವ ಪ್ರತಿಜ್ಞೆ ಮಾಡಿ ಪುತ್ರಕಾಮೇಷ್ಟಿಯಲ್ಲಿ ಅವರನ್ನು ಪಡೆಯುವುದು ಕಾಣುತ್ತದೆ.

ಪಂಪಭಾರತದ ಉದ್ದಕ್ಕೂ ಅಸಂಗತತೆಯ ಪ್ರತೀಕನಾಗುವವನು ಕರ್ಣ. ಕರ್ಣ ಬುದ್ಧಿಜೀವಿ-ಪ್ರತಿಭಾವಂತ. ಅವನ ಬದುಕು ಸಾಮಾಜಿಕ ಚೌಕಟ್ಟುಗಳಿಗೆ ಒಳಪಟ್ಟಿದೆ. ತಾನು ಒಂಟಿ ಎಂಬ ಭಾವನೆಯಿಂದ ಅವಮಾನಿತನಾಗಿ ಬದುಕುವ ಅಸಂಗತತೆಯನ್ನು ಹಲವು ಸಂದರ್ಭಗಳಲ್ಲಿ ಅವನು ಎದುರಿಸುತ್ತಾನೆ. ಅನಾಥಪ್ರಜ್ಞೆ, ಪರಕೀಯತೆ, ಆಗಂತುಕ ಪ್ರಜ್ಞೆ, ಏಕಾಕಿತನ, ತಬ್ಬಲಿತನ ಇವುಗಳನ್ನು ಆತ ಬದುಕಿನುದ್ದಕ್ಕೂ ಅನುಭವಿಸುತ್ತಾನೆ. ಪಾಂಡವರ ಕೌರವರ ವಿದ್ಯೆಯ ಪ್ರದರ್ಶನದ ವೇಳೆ ಅಕ್ರಮವಾಗಿ ಬಂದು ತನ್ನ ಬಿಲ್ವಿದ್ಯೆಯನ್ನು ಪ್ರದರ್ಶಿಸುವ ಮೂಲಕ ತನ್ನ ಅಸ್ತಿತ್ವನ್ನು ಸಾಬೀತುಪಡಿಸಲು ಪ್ರಯತ್ನಿಸುವಾಗಲೇ ಅನಾಥಪ್ರಜ್ಞೆಯನ್ನು, ಪರಕೀಯತೆಯನ್ನು ಅನುಭವಿಸುತ್ತಾನೆ. ಹಾಗೆ ಬಂದ ಕರ್ಣನನ್ನು ಕುರಿತು ದ್ರೋಣ ಹೇಳುವ ಮಾತು:

> **''ಏವದ ಮುಳಿಸಿನ ಕಾರಣ।**
> **ಮಾವುದೊ ನೀಂ ನಿನ್ನ ತಾಯ ತಂದೆಯ ದೆಸೆಯಂ॥**
> **ಭಾವಿಸದೆ ಕರ್ಣ ನುಡಿವಂ।**
> **ತಾವುದು ಸಮಕಟ್ಟು ನಿನಗಮರಿಕೇಸರಿಗಂ''**[೭]

ಕುಲವನ್ನು ಮುಂದೆ ಮಾಡಿ ಮಾತಾಡಿದಾಗ ''ಎಂಬುದುಮಾ ಮಾತಿಂಗೆ ಮಱುವಾತುಗುಡಲಱಿಯದೆ ಪಂದೆಯಂ ಪಾವಡರ್ದಂತುಮ್ಮನೆ ಬೆಮರುತ್ತುಮಿರ್ದ' ಕರ್ಣ ಅನಾಥಪ್ರಜ್ಞೆಯನ್ನನುಭವಿಸುತ್ತಾನೆ.

ಇಂಥ ಇನ್ನೊಂದು ಸಂದರ್ಭ ಎದುರಾಗುವುದು ಪಂಪಭಾರತದ ಒಂಬತ್ತನೇ ಆಶ್ವಾಸದಲ್ಲಿ. ಕೃಷ್ಣ ಸಂಧಾನಕ್ಕಾಗಿ ಪ್ರಯತ್ನಿಸಿ ವಿಫಲನಾದಾಗ ಕರ್ಣನನ್ನು ಭೇದಿಸಲು ಯತ್ನಿಸುತ್ತಾನೆ:

> **''ಭೇದಿಸಲೆಂದೆ ದಲ್ ನುಡಿದರೆನ್ನದಿರೊಯ್ಯನೆ ಕೇಳ ಕರ್ಣ ನಿ।**
> **ನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನಹರ್ಪತಿ ಪಾಂಡುನಂದನರ್॥**
> **ಸೋದರರಯ್ವರ್ ಮಯ್ದುನನೆನಾಂ ಪೆಱತೇಂ ಪಡೆಮಾತೊ ನಿನ್ನದೀ।**
> **ಮೇದಿನಿ ಪಟ್ಟಮುಂ ನಿನತೆ ನೀನಿರೆ ಮತ್ತೆ ಪೆಱರ್ ನರೇಂದ್ರರೇ॥''**[೮]

ಎನ್ನುತ್ತಾ ಕರ್ಣನಿಗೆ ಅವನ ಜನ್ಮವೃತ್ತಾಂತವನ್ನು ತಿಳಿಸಿ ಕರ್ಣನ ಹಕ್ಕುಗಾರಿಕೆ, ಸಂಬಂಧಗಳ ಆಪ್ತತೆ, ಅಧಿಕಾರದ ಮೋಹ ಉಂಟುಮಾಡಲೆತ್ನಿಸುತ್ತಾನೆ. ಆಗ ಕರ್ಣ ತನ್ನ ಅಸ್ತಿತ್ವವನ್ನು ಪಾಂಡವರಿಂದ ಗುರುತಿಸಲೋ ಕೌರವನಿಂದ ಗುರುತಿಸಲೋ ಎಂಬಂತಾದರೂ ಕೌರವನ ಬಗೆಗಿನ ಸ್ವಾಮಿನಿಷ್ಠೆ ಕರ್ಣನನ್ನು ಅವನ ಪರವಾಗಿ ನಿಂತು ಹೋರಾಡುವಂತೆ ಮಾಡುತ್ತದೆ. ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕೆಂಬ ಕೃಷ್ಣನ ತಂತ್ರ ವಿಫಲವಾಗುತ್ತದೆ. ಕರ್ಣ 'ನಣ್ಪಿನ ನೆವದಿಂದೆ ಪಾಂಡವರನಾನೊಳವೊಕ್ಕೊಡೆ ನೀಮೆ ಪೇಸಿರೆ' ಎಂದು ತಾನು ಸಮಯಸಾಧಕನೆನಿಸಿಕೊಳ್ಳಲು ಸಿದ್ಧನಿಲ್ಲವೆಂಬುದನ್ನು ತಿಳಿಸುತ್ತ ನಯವಾಗಿಯೇ ಕೃಷ್ಣನ ಮಾತನ್ನು ನಿರಾಕರಿಸುತ್ತಾನೆ. ಆದರೂ ಏಕಾಕಿತನ, ತಬ್ಬಲಿತನದಿಂದ ಕರ್ಣ ನರಳುತ್ತಾನೆ. ಶೂನ್ಯದಿಂದ ಬಂದ ಕರ್ಣನ ಬದುಕು ಶೂನ್ಯದಲ್ಲೇ ಕೊನೆಯಾಗುವ ರೀತಿ ಅವನ ಅಸಂಗತತೆಯ ದೀರ್ಘತೆಯನ್ನು ಸೂಚಿಸುತ್ತದೆ. ನಂಟಿನ ನೆಪದಿಂದ ಪಾಂಡವರ ಪರವಾಗಿಯೂ ನಿಲ್ಲಲಾಗದೆ, ತನ್ನನ್ನು ಪೋಷಿಸಿದ ದುರ್ಯೋಧನನ್ನೂ ಬಿಟ್ಟುಕೊಡಲಾರದೆ ಕೊನೆಗೆ ''ಎನ್ನೊಡಲನಾಂ ತವಿಪೆಂ ರಣರಂಗ ಭೂಮಿಯೊಳ್'' ಎಂದು ನಿರ್ಧರಿಸುತ್ತಾನೆ. ಒಡೆಯನಿಗಾಗಿ ಹೋರಾಡಿ ಅವನಿಗಿಂತ ಮುಂಚೆ ತನ್ನ ದೇಹವನ್ನೇ ವರ್ಜಿಸಲು ತೀರ್ಮಾನಿಸುತ್ತಾನೆ.

ಕುಂತಿಯೂ ಕರ್ಣನನ್ನು ಭೇದಿಸಲು ಬಂದು ಅಧಿಕಾರದ ಆಸೆಯನ್ನು ತೋರಿಸಿದಾಗ ಒಡೆಯನ ಅನ್ನದ ಋಣಕ್ಕೂ ತಪ್ಪಿ ನಶ್ವರ ಬದುಕಿಗೆ ಆಸೆಪಟ್ಟು ಬದುಕಲೇ ಎಂದು ಹೇಳುವುದಲ್ಲದೆ 'ಮೀಂಗುಲಿಗನೆನಾಗಿಯುಮಣಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾದಂಗೆನಗೆ ಬಿಸುಡಲಕ್ಕುಮೆ ?' ಸಾಧ್ಯವಿಲ್ಲ ಎನ್ನುತ್ತಾನೆ. ದಿವ್ಯಾಸ್ತ್ರವನ್ನು ಹಿಡಿಯುವುದಿಲ್ಲ, ನಿನ್ನ ಮಕ್ಕಳನ್ನು ಕೊಲ್ಲುವುದಿಲ್ಲ ಎಂದು ತಿಳಿಸಿ 'ಪೆರ್ಜಸಮಸೆ। ಪಿಡಿದೆನ್ನನ ರಣದೊಳಟೆವೆನಿರದಡಿಯೆತ್ತಿಂ' ಎಂದು ಮಾತುಕೊಟ್ಟು ಕಳಿಸುತ್ತಾನೆ. ತನ್ನ ಅಸ್ತಿತ್ವವನ್ನು

ಗುರುತಿಸಿಕೊಳ್ಳಲಾರದೆ ತನ್ನನ್ನು ತಾನು ಬಲಿಕೊಟ್ಟುಕೊಳ್ಳುವ ವ್ಯಕ್ತಿಯಾಗುತ್ತಾನೆ. 'ಚಲದ ಚಾಗದ ಕುಲದ ನನ್ನಿಯನಾವರ್ಜಿಸಿ ರಾಧೇಯನೊಳ್ಪಿಂಗಾಧೇಯಮಾಗಿರ್ದನ್....'

ಅರಸೊತ್ತಿಗೆಯನ್ನು ಪ್ರಶ್ನಿಸುವ ಮತ್ತು ಪ್ರತಿಭಟಿಸುವ ಪ್ರತಿಕ್ರಿಯೆಗಳು ಪಂಪಭಾರತದಲ್ಲಿವೆ. ಅರಸೊತ್ತಿಗೆಯು ಪ್ರಜೆಗಳನ್ನು ಸಂಬಂಧಿಗಳನ್ನು ನಡೆಸಿಕೊಳ್ಳುವ ರೀತಿಗೆ - ಅಧಿಕಾರೀ ಪ್ರವೃತ್ತಿಯ ಧೋರಣೆಗಳಿಗೆ ಕಟುವಾದ ಪ್ರತಿಕ್ರಿಯೆ ಪಂಪಭಾರತದ ಎರಡು ಸಂದರ್ಭಗಳಲ್ಲಿ ಇದೆ. ದ್ರೋಣನ ಸಾವಿನ ನಂತರ ದುರ್ಯೋಧನ ಕರ್ಣನಿಗೆ ಪಟ್ಟಗಟ್ಟಲೆತ್ನಿಸಿದಾಗ ಅಶ್ವತ್ಥಾಮ ಆಡುವ ಮಾತು: 'ನಿಜದೊಳೆ ಭೂಪರೆಂಬರವಿವೇಕಿಗಳಪ್ಪರ್' ಎಂದು ದುರ್ಯೋಧನನನ್ನು ಜರೆಯುತ್ತಲೇ 'ಸೂತಜನಿಱಿವಂ ಗಡಂ ಪಗೆಯನೇಂ ಗಳ ಪಟ್ಟಮೆ ಪಾಱಿ ತಿಂಬುದೇ' ಎಂದು ಛೇಡಿಸುತ್ತಾನೆ. ಆಗ ಕರ್ಣ 'ಎನಿತಳವುಳ್ಳೊಡಂ ದ್ವಿಜನ ಗಂಡಗುಣಕ್ಕಗಿವನ್ನರಾರೊ' ಎಂದು ಮಾರುತ್ತರ ಕೊಡುತ್ತಾನೆ. ಅರಸೊತ್ತಿಗೆಯನ್ನು ಪ್ರಶ್ನಿಸುವ ಮೂಲಕ ಆರಂಭವಾಗುವ ಮಾತು ಜಾತಿ ನಿಂದೆಯೊಂದಿಗೆ ಪರ್ಯಾವಸಾನವಾಗುತ್ತದೆ. ದುರ್ಯೋಧನ ಇಲ್ಲಿ ಮೌನಿಯಾಗಿ ಅಸಹಾಯಕನಾಗಿ ಮಾತ್ರ ಕಾಣುತ್ತಾನೆಯೇ ಹೊರತು ಅರಸೊತ್ತಿಗೆಯನ್ನು ಪ್ರತಿಭಟಿಸಿದ ಅಶ್ವತ್ಥಾಮನಿಗಾಗಲಿ ಕರ್ಣನಿಗಾಗಲಿ ತನ್ನ ಅಧಿಕಾರವನ್ನು ಹೇರದೆ ಇತ್ಯರ್ಥಮಾಡುವ ರೀತಿಯಲ್ಲಿ ವ್ಯವಹರಿಸುತ್ತಾನೆ. ಈ ಸಂದರ್ಭ ಅರಸೊತ್ತಿಗೆ ಸಾಮಾನ್ಯರ ವಿಷಯದಲ್ಲಿ ಮಣಿಯುತ್ತದೆಂಬ ನಿಜವನ್ನು ವ್ಯಕ್ತಪಡಿಸಿದಂತಿದೆ. ಪರಂಪರಾಗತ ಮೌಲ್ಯಗಳ ಪ್ರಶ್ನೆ ಕೂಡಾ ಇದರಲ್ಲಿದೆ. ಯುದ್ಧ ಕೌಶಲ್ಯ ಕ್ಷತ್ರಿಯರದೆಂದು ನಂಬಿದ್ದ ಮೌಲ್ಯ ಇಲ್ಲಿ ವ್ಯತಿರಿಕ್ತವಾಗಿದೆ. ದ್ರೋಣ ಅಶ್ವತ್ಥಾಮರು ಬ್ರಾಹ್ಮಣರಾಗಿದ್ದು ಯುದ್ಧ ನಿಪುಣರೂ ಆಗಿದ್ದಾರೆ. ಅಶ್ವತ್ಥಾಮನ ಮಾತುಗಳು ಸಂಬಂಧದ ಸ್ನೇಹದ ನೆಪದಲ್ಲಿ ಕರ್ಣನ 'ಕೈವಾರದಿಂದೊಸೆದಿತ್ತೊಡಮೇ....' ದುರ್ಯೋಧನ ಕರ್ಣನಿಗೆ ಸೇನಾಧಿಪತ್ಯ ವಹಿಸುವುದು ಪರಿಸ್ಥಿತಿಯನ್ನೆದುರಿಸುವಲ್ಲಿ ಪ್ರಯೋಜನಕ್ಕೆ ಬರುವುದಿಲ್ಲ ಎಂಬುದರಲ್ಲಿ ಹುರುಳಿದೆಯಾದರೂ ಬೆಸ್ತನ ಮಗ ಗೆಲ್ಲಲಾರ ಎಂಬುದಾಗಲೀ, ಅವನು ಸತ್ತಲ್ಲದೆ ಅಸ್ತ್ರ ಹಿಡಿಯುವುದಿಲ್ಲ ಎಂಬುದಾಗಲೀ ಇವು ಜಾತಿಯ ಸ್ಥಾನವನ್ನು ನಿರ್ದೇಶಿಸುತ್ತದೆ. ಕೆಳಜಾತಿಯ ಜನ ಸಾಮರ್ಥ್ಯವಿಲ್ಲದವರು ಎಂಬ ಧೋರಣೆ ಅಸಮಾನತೆಯ ನೆಲೆಯ ಸ್ವರೂಪದೊಂದಿಗೆ ಪಂಪನ ಕಾಲದಲ್ಲಿತ್ತು ಎಂಬುದನ್ನು ಸೂಚಿಸುತ್ತದೆ. ಬ್ರಾಹ್ಮಣ ಯುದ್ಧವಿದ್ಯೆ ಹೇಳಬಲ್ಲನೇ ಹೊರತು ಹೋರಾಡಲಾರ ಎಂಬುದು ಕರ್ಣನ ಮಾತಿನಲ್ಲಿದೆ. ಪರಸ್ಪರರ ಜಾತಿನಿಂದನೆ ಹುಟ್ಟಿನ ಹಿನ್ನೆಲೆಯನ್ನು ಒಳಗೊಂಡಿದೆಯೇ ವಿನಃ ವ್ಯಕ್ತಿಗತವಾದ ಮೌಲ್ಯವನ್ನು ಇಲ್ಲಿ ಅನುಸರಿಸಿಲ್ಲ.

ಪಂಪಭಾರತದ ಇನ್ನೊಂದು ಪ್ರಸಂಗ ಇದೇ ಬಗೆಯದು. ಕರ್ಣನ ಪಟ್ಟಾಭಿಷೇಕದ ಸಂದರ್ಭದಲ್ಲಿ ದುರ್ಯೋಧನ ಶಲ್ಯನಿಗೆ ಕರ್ಣಸಾರಥ್ಯವನ್ನು ವಹಿಸಬೇಕೆಂದು ತಿಳಿಸಿದಾಗ 'ಮದ್ರರಾಜನುಮ್ಮಚ್ಚರದೊಳುಮ್ಮನೆ ಬೆಮರ್ತು ಕಿನಿಸಿ ಕಿಂಕಿಱಿವೋಗಿ' ಹೀಗೆ ಹೇಳುತ್ತಾನೆ:

**''ಕಲಿಯನೆ ಪಂದೆ ಮಾಡ್ಪ ಕಡುವಂದೆಯನೊಳ್ಗಲಿ ಮಾಡ್ಪ ತಕ್ಕನಂ।**
**ಪೊಲೆಯನೆ ಮಾಡ್ಪ ಮುಂ ಪೊಲೆಯನಂ ನೆಱೆ ತಕ್ಕನೆ ಮಾಡ್ಪ ತಮ್ಮೊಳ॥**
**ಗ್ಗಲಿಸಿ ಪೊದಟ್ದು ಪರ್ವಿದವಿವೇಕತೆಯಿಂ ನೃಪ ಚಿತ್ತ ವೃತ್ತಿ ಸಂ।**
**ಚಲಮದಱಿಂದಮೋಲಗಿಸಿ ಬಾಳ್ವುದೆ ಕಷ್ಟಮಿಳಾಧಿನಾಥರಂ''**[೫]

ಕಲಿಯನ್ನು ಹೇಡಿಯನ್ನಾಗಿ, ಹೇಡಿಯನ್ನು ಸುಭಟನನ್ನಾಗಿ, ತಕ್ಕವನನ್ನು ಹೊಲೆಯನನ್ನಾಗಿ, ಹೊಲೆಯನನ್ನು ತಕ್ಕವನನ್ನಾಗಿ ಮಾಡುವ ಅರಸನ ಅವಿವೇಕತೆಯಿಂದ ಚಿತ್ತ ಚಂಚಲರಾಗಿರುವ ಅರಸರನ್ನು ಓಲೈಸಿ ಬಾಳುವುದು ಕಷ್ಟ - ಅಲ್ಲದೆ ಪರಾಕ್ರಮ, ಉದಾರತೆ, ಸತ್ಯವಾಕ್ಯ ಎಂಬ ಗುಣಗಳು ರಾಜರಲ್ಲಿದ್ದರೂ ರಾಜಬೀಜದಿಂದ ಬಂದ ಮದಗುಣ, ಎದೆಹಾಲನ್ನುಂಡ ಫಲವಾಗಿ ಬಂದ ಅವಿವೇಕ ಗುಣಗಳೆರಡನ್ನೂ ಯಾರೂ ಹೋಗಲಾಡಿಸಲಾರರು. ಕರ್ಣನಿಗಾಗಿ ರಥ ಓಡಿಸುವುದು ಶಲ್ಯನ ದೃಷ್ಟಿಯಲ್ಲಿ ಹೊಲೆಯನಿಗೆ ಅಮೃತವನ್ನು ಬಡಿಸಿದಂತೆ. ದುರ್ಯೋಧನ ಕರ್ಣನ ದಾನ, ತ್ಯಾಗ, ವೀರಚಾರಿತ್ರ, ಉಗ್ರತೇಜಸ್ಸು, ಶೌರ್ಯ ಒಬ್ಬ ಅಂಬಿಗನ ಮಗನಿಗೆ ಹುಟ್ಟುಗುಣವಾಗಿ ಬಂದಾವೆ ಎಂದು ಕರ್ಣನ ವಿಶೇಷತೆಯನ್ನು ಹೊಗಳುತ್ತ ಶಲ್ಯನನ್ನು ಒಡಂಬಡಿಸುವ ರೀತಿ ಮೆಚ್ಚುಗೆಗೆ ಪಾತ್ರವಾಗುತ್ತದೆ. ಆದರೆ ಕರ್ಣನ ನಿಜವೃತ್ತಾಂತವನ್ನು ಈಗಾಗಲೇ ತಿಳಿದಿರುವ ದುರ್ಯೋಧನ ಕರ್ಣ ಅಂಬಿಗನ ಮಗನಲ್ಲ ಕ್ಷತ್ರಿಯ ಎಂಬುದನ್ನು ಪರೋಕ್ಷವಾಗಿ ಒಪ್ಪುವುದಲ್ಲದೆ ಹೊಲೆಯನಾಗಿದ್ದರೆ ಈ ಶೌರ್ಯ-ಸಾಹಸಗಳು ಸಿದ್ಧಿಸುತ್ತಿರಲಿಲ್ಲವೆಂಬುದನ್ನು ತಿಳಿಸುವ ಈ ಮಾತಿನ ಧಾಟಿ ದುರ್ಯೋಧನನನ್ನೂ ಒಬ್ಬ ಜಾತಿವಾದಿಯಂತೆ ಕಾಣಿಸುತ್ತದೆ. ವ್ಯಕ್ತಿಗತವಾದ ಸಾಧನೆ ಸಿದ್ಧಿಗಳು ಜಾತಿಯಾಧಾರಿತವೆಂಬ ಮೌಲ್ಯವನ್ನು ಪಂಪನ ಕಾಲದ ಸಮಾಜ ಒಪ್ಪಿಕೊಂಡಂತೆ ಕಾಣುತ್ತದೆ.

ಆಧುನಿಕ ರಾಜಕೀಯವು ಇಂಥದೇ ಜಾತಿ ವ್ಯವಸ್ಥೆಯಿಂದ ಮಲಿನವಾಗಿದ್ದು ನಿಜಪ್ರತಿಭೆಗಳನ್ನು ಹತ್ತಿಕ್ಕಿದೆ. ಸಾಮಾಜಿಕ ವಲಯ ಕೂಡ ಇಂಥ ರಾಜಕೀಯದಿಂದ ಪ್ರಭಾವಿತಗೊಂಡಿದ್ದು ಪ್ರಬಲಜಾತಿ ಕೆಳಜಾತಿಯನ್ನು ತುಳಿಯುತ್ತಲೇ ಇದೆ. ಅಂಬೇಡ್ಕರ್, ಲೋಹಿಯಾ, ಗಾಂಧಿಯಂಥ ಚಿಂತಕರು ಈ ನಾಡಿನಲ್ಲಿ ಹುಟ್ಟಿ ಮನುಷ್ಯನ ವ್ಯಕ್ತಿಗತ ನಿಲುವುಗಳನ್ನು ಮಾನ್ಯ ಮಾಡಬೇಕಾದ ಅಗತ್ಯವನ್ನು ಒತ್ತಿ ಹೇಳಿದರು. ಆದರೆ ಪಂಪನ ಕಾಲವೂ ಪರಸ್ಪರ ಜಾತಿ-ಸಂಘರ್ಷಗಳನ್ನು ಹೊಂದಿತ್ತೆಂಬುದು ತಿಳಿಯುತ್ತದೆ. ದುರ್ಯೋಧನ ಜಾತೀಯತೆಯನ್ನು ವಿರೋಧಿಸಿದವನೂ ಉದಾರವಾದಿ ನಿಲವುಗಳನ್ನು ತಳೆದಂಥವನೂ ಆಗಿ ಕಾಣುವುದರಿಂದ ಪಂಪ ಅಸ್ಪೃಶ್ಯತೆಯ ವಿರುದ್ಧದ ಮೊದಲ ಸಾಹಿತ್ಯದ ಮೊದಲ ದನಿಯಾಗಿ ಕಾಣುತ್ತಾನೆ.

ಜಾತೀಯತೆಯ ಸಂಘರ್ಷ ಪಂಪಭಾರತದಲ್ಲಿ ರಾಜಕೀಯ ಪ್ರಜ್ಞೆಯಾಗಿರುವುದು ಕಾಣುತ್ತದೆ. ಜಾತಿಯ ಹೆಸರನ್ನು ಬೊಟ್ಟುಮಾಡಿ ತೋರಿಸುತ್ತಾ ಪ್ರತಿಭೆಗಳನ್ನು ಹತ್ತಿಕ್ಕುವ, ಆ ಮೂಲಕ ಆಳುವ ವರ್ಗ ತನ್ನ ಶ್ರೇಷ್ಠತೆಯನ್ನು ಕಾಪಾಡಿಕೊಳ್ಳುವ ರೀತಿ ಇದೆ. ಅಖಾಡದಲ್ಲಿ ಪಾಂಡವ-ಕೌರವರ ಕಲಿತವಿದ್ಯೆಯ ಪ್ರದರ್ಶನದ ವೇಳೆ ಕರ್ಣ ಅತಿಕ್ರಮಿಸಿ ಬಂದು ತನ್ನ ಕೌಶಲ್ಯವನ್ನು ತೋರುತ್ತಾನೆ. ತನ್ನ ಪ್ರತಿಭೆಯನ್ನು ತೋರಿಸಬೇಕೆಂಬ ಒಂದೇ ಹಂಬಲದಿಂದ, ಯಾವ ದೂರಾಲೋಚನೆ ಮತ್ತು ದುರಾಲೋಚನೆಯಿಲ್ಲದೆ ಬಂದ ಕರ್ಣನನ್ನು ಕುರಿತು ದ್ರೋಣ 'ನೀಂ ನಿನ್ನ ತಾಯಿತಂದೆಯ ದೆಸೆಯಂ ಭಾವಿಸದೆ ಕರ್ಣ ನುಡಿವಂತಾವುದು ಸಮಕಟ್ಟು ನಿನಗಮರಿಕೇಸರಿಗಂ' ಎನ್ನುತ್ತಾನೆ. ಬೆವರುತ್ತಿದ್ದ ಕರ್ಣನನ್ನು ಕಂಡು ದುರ್ಯೋಧನ ದ್ರೋಣ ಮತ್ತು ಕೃಪರಿಗೆ ಹೀಗೆ ಕೇಳುತ್ತಾನೆ: 'ಕುಲಮೆಂಬುದುಂಟೆ ಬೀರಮ... ನೀ ಮೊದಲೆಲ್ಲಿ ಪುಟ್ಟಿ ಬಳೆದಿರೋ। ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ.' ಮನುಷ್ಯನನ್ನು ನಿರ್ಜೀವ ವಸ್ತುವಿಗಿಂತ ಕಡೆಗಣಿಸಿ ನೋಡುವ ರೀತಿಯನ್ನು ಪ್ರಶ್ನಿಸುವ ದುರ್ಯೋಧನ ಅವರ ಜನ್ಮ ರಹಸ್ಯವನ್ನು ಲೇವಡಿ ಮಾಡುವುದರೊಂದಿಗೆ ವೀರತನಕ್ಕೆ, ಶೌರ್ಯಕ್ಕೆ ಕುಲ ಎಂಬುದು ಇಲ್ಲ ಎನ್ನುವಾಗ ಅವನಲ್ಲಿ ಜಾತ್ಯತೀತವಾದ ಧೋರಣೆ ಕಾಣುತ್ತದೆ. ದುರ್ಯೋಧನ ಅಷ್ಟಕ್ಕೇ ಸುಮ್ಮನಾಗದೆ 'ಕರ್ಣನನೀಗಳೆ ಕುಲಜನಂ ಮಾಡಿ ತೋರ್ಪೆನೆಂದು' ನಿಶ್ಚಯಿಸಿ ಅವನಿಗೆ ಅಂಗರಾಜ್ಯದ ಆಧಿಪತ್ಯವನ್ನು ಧಾರೆಯೆರೆಯುತ್ತಾನೆ. ನಂತರ ದುರ್ಯೋಧನನ ಇಬ್ಬಗೆಯ ನೀತಿ ಎದುರಾಗುತ್ತದೆ. ಕರ್ಣನ ಜನ್ಮ ವೃತ್ತಾಂತ ತಿಳಿಯುವ ಮುಂಚಿನ ಅವನ ವರ್ತನೆ ನಿಷ್ಕಲ್ಮಷವಾದ ಮಾನವೀಯ ಗುಣವನ್ನು, ಮಾನವತಾಧರ್ಮವನ್ನು ಎತ್ತಿಹಿಡಿದರೆ, ತಿಳಿದ ಅನಂತರದ ವರ್ತನೆ ತನ್ನ ರಾಜಕೀಯ ಕುತಂತ್ರಕ್ಕೇ ಕರ್ಣನನ್ನು ಅಸ್ತ್ರವನ್ನಾಗಿ ಬಳಸಿಕೊಳ್ಳುವ ರೀತಿ ಕಾಣುತ್ತದೆ. ಮಾನವತಾಧರ್ಮ ಸೇಡಿನ ಕ್ರಮವಾಗಿ ರಾಜಕೀಯದಲ್ಲಿ ಬಳಕೆಯಾಗುವ ರೀತಿ ಇದಾಗಿದೆ.

ಜಾತಿವ್ಯವಸ್ಥೆಯ ವಿರುದ್ಧ ಸೆಟೆದು ನಿಲ್ಲಬೇಕಾದ ಅಗತ್ಯದ ಪ್ರತಿಪಾದನೆ ಕರ್ಣನ ಸಂದರ್ಭದಲ್ಲಿ ಗೋಚರವಾಗುತ್ತದೆ. ದ್ರೋಣನ ಸಾವಿನ ನಂತರ ಕರ್ಣನಿಗೆ ಸೈನ್ಯಾಧಿಪತ್ಯವನ್ನು ಕಟ್ಟಬೇಕೆಂಬ ದುರ್ಯೋಧನನಿಗೆ ಅಶ್ವತ್ಥಾಮ ಹೇಳುವ ಮಾತು: 'ನಿಜದೊಳೆ ಭೂಪರೆಂಬರವಿವೇಕಿಗಳಪ್ಪರದಕ್ಕೆ ನೀಂ ಫಣಿಧ್ವಜ ಕಡುಕೆಯ್ದು ಕರ್ಣನನೆ ನಚ್ಚುವೆಯಪ್ಪೊಡೆ. ಸೂತಜನಿಱಿವಂ ಗಡಂ' ಎಂದು ವ್ಯಂಗ್ಯವಾಗಿ ಹೇಳುತ್ತಾನೆ. ಹಿಂದೆ ದ್ರೋಣ 'ಸೂತಜ' ಎಂದು ಜರೆದಾಗ ಬೆವರಿದ್ದ ಕರ್ಣನಲ್ಲಿ ಈಗ 'ಎನಿತಳವುಳ್ಳೊಡಂ ದ್ವಿಜನ ಗಂಡಗುಣಕ್ಕಗಿವನ್ನರಾರೊ' ಎಂದು ದಿಟ್ಟ ಪ್ರತಿಕ್ರಿಯೆ ನೀಡುವ ಮಟ್ಟಿಗಿನ ಬದಲಾವಣೆ ಕಾಣುತ್ತದೆ. ಇದು ಕರ್ಣನಲ್ಲಾದ ಬದಲಾವಣೆ ಹೇಗೋ ಹಾಗೇ ಜಾತಿವ್ಯವಸ್ಥೆಗೆ ಎದಿರೇಟು ಹಾಕುವ ರೀತಿಯಾಗಿದೆ. ಆದರೆ ಜಾತಿನಿಂದೆಗೆ ಜಾತಿನಿಂದೆಯೇ ಪರಿಹಾರ ಮಾರ್ಗವಲ್ಲ. ಇದನ್ನು ಮೀರಿದ ಮಾನವತಾವಾದದ ಕಲ್ಪನೆ ಇಲ್ಲಿ ದೊರೆಯುವುದಿಲ್ಲ. ಆದರೆ ಅಶ್ವತ್ಥಾಮ 'ಖಳನಿಲ್ಲಿ ಧನಂಜಯ ಕ್ರೂರ ಬಾಣ ಗಣಾವಳಿಯಿಂದಟ್ಟಾಡಿದೊಡಲ್ಲದೆ ವೈರಿಸಂಹಾರಕಾರಣ ಚಾಪಮನಾನೀ ಸಂಗರದೊಳ್ ಪಿಡಿಯೆಂಗಡಾ' ಎನ್ನುವುದಲ್ಲದೆ ನೀನೇ ಸೈನ್ಯಾಧಿಪತ್ಯವನ್ನು ವಹಿಸು ಎನ್ನುತ್ತಾನೆ. ಇದು ಕೆಳಜಾತಿಯ ವೀರನೊಬ್ಬನಿಗೆ ಮೊದಲು ಸೈನಾಧಿಪತ್ಯದ ಅವಕಾಶ ದೊರೆತ ಪರಿಣಾಮವಾಗಿ ಬಂದ ಮಾತುಗಳಾಗಿವೆ. ಎಂಥದೇ ಗೌರವವಾದರೂ ಮೊದಲು ಬ್ರಾಹ್ಮಣನಿಗೆ, ಅನಂತರ ಉಳಿದವರಿಗೆ ಎಂಬ ಯಥಾಸ್ಥಿತಿವಾದದ ನಿಲುವೂ, ಪ್ರತಿಭೆಯನ್ನು ಹತ್ತಿಕ್ಕುವ ಪುರೋಹಿತಶಾಹಿ ನಿಲುವೂ ಇದಾಗಿದೆ.

ಹಾಸ್ಯದ ಪರಿಕಲ್ಪನೆ ವರ್ಗ ತಾರತಮ್ಯದ ಧೋರಣೆಗಳು ವಿದುರ ಮತ್ತು ದುರ್ಯೋಧನನ ಸಂದರ್ಭಗಳಲ್ಲಿವೆ. ದಾಸ್ಯವನ್ನನುಭವಿಸ ಬೇಕಾದ ಅನಿವಾರ್ಯತೆಯಿಂದ ದಾಸೀಪುತ್ರನೆಂದು ಪದೇ ಪದೇ ಹಂಗಿಗೆ ಒಳಗಾಗುವವನು ವಿದುರ. ಅವಹೇಳನಕ್ಕೆ ಒಳಗಾದರೂ ದಾಸೀಪುತ್ರನ ಬುದ್ಧಿವಂತಿಕೆ ಇಲ್ಲಿ ಕೆಲಸ ಮಾಡುತ್ತದೆ. ಈ ಬುದ್ಧಿವಂತಿಕೆಯೇ ಪ್ರಭುತ್ವವನ್ನು ಎದುರಿಸುವ ಪರೋಕ್ಷ ಶಕ್ತಿಯಾಗಿ ನಿರ್ಮಿತವಾಗುತ್ತದೆ.

ಸಂಧಾನ ಕಾರ್ಯಕ್ಕೆಂದು ಬಂದ ಕೃಷ್ಣ ಹಸ್ತಿನಾವತಿಯಲ್ಲಿ ದುರ್ಯೋಧನನ ಅರಮನೆಗೆ ಹೋಗದೆ ವಿದುರನ ಮನೆಗೆ ತೆರಳುತ್ತಾನೆ. ಮರುದಿನ ದುರ್ಯೋಧನನನ್ನು ಕಂಡು ಮಾತನಾಡಿದಾಗ ಸಂಧಾನಕಾರ್ಯ ವಿಫಲವಾಗುತ್ತದಲ್ಲದೆ ಕೃಷ್ಣನ ಮಾತುಗಳನ್ನು

ಲೇವಡಿ ಮಾಡುವ ದುರ್ಯೋಧನ ಅದಕ್ಕೆ ವಿದುರನನ್ನು ಗುರಿಮಾಡಿಕೊಳ್ಳುತ್ತಾನೆ. ಕೃಷ್ಣ ಅರ್ಜುನನ ಪರಾಕ್ರಮವನ್ನು ಮುಂದಿಟ್ಟು ಕೊಂಡು ಸಂಧಾನಕ್ಕೆ ಯತ್ನಿಸಿದಾಗ

''ಎಟ್ಪೋಗು ದೂತನಪ್ಪನ।
ಬೆಟ್ಟನ ನುಡಿಗೇಳ್ದು ಮುಳಿಯಲಾಗದು ನೀನುಂ॥
ಮೆಟ್ಟಟ್ಟು ವಿದುರನೆಂಬೀ
ತೊಟ್ಟುಟ್ಟಿಯ ಮನೆಯ ಕೂಟೆ ನುಡಿಯಿಸೆ ನುಡಿದ್ಯೆ''[೧೦]

ಎನ್ನುತ್ತಾನೆ. ಗುಲಾಮನ ಮನೆಯ ಅನ್ನ ಹೀಗೆ ಆಡಿಸಿತು ಎನ್ನುವ ದುರ್ಯೋಧನನ ಮಾತು ಅರಸೊತ್ತಿಗೆಯ ಪ್ರಾಬಲ್ಯದ ಮನೋಧರ್ಮವಾಗಿ ಕಾಣುತ್ತದೆ. ಆಗ ಕುಪಿತನಾಗುವ ವಿದುರ

''ಕಡು ಮುಳಿದು ನಿನ್ನ ತೊಡೆಗಳ।
ನುಡಿವೆಡೆಯೊಳ ಭೀಮಸೇನನಾನಾ ಪದದೊಳ್॥
ಪಿಡಿಯಲ್ಕೆಂದಿರ್ದನಿದಂ।
ಪಿಡಿಯೆಂ ಪೋಗೆಂದು ಸಭೆಯೊಳುಡಿದಂ ಬಿಲ್ಲಂ''[೧೧]

ಆಳುವ ವರ್ಗಕ್ಕೆ ತೋರಿಸುತ್ತಿದ್ದ ಸ್ವಾಮಿನಿಷ್ಠೆಯನ್ನೂ ಮೀರಿ ದುರ್ಯೋಧನನ ರಕ್ಷಣೆಗೆಂದು ತೆಗೆದಿರಿಸಿದ್ದ ಬಿಲ್ಲನ್ನು ಮುರಿದು ಪ್ರತಿಭಟಿಸುತ್ತಾನೆ. ಸಮತಾವಾದದ ಮುಖ್ಯ ಆಶಯ ವರ್ಗರಹಿತ ಸಮಾಜವನ್ನು ನಿರ್ಮಾಣ ಮಾಡುವುದು. ಬಡವ, ಶ್ರೀಮಂತ ಶ್ರೇಷ್ಠ-ಕನಿಷ್ಠ ಎಂಬ ಭಾವನೆಗಳಿಗೆ ಆಸ್ಪದವಿಲ್ಲದ ಅರ್ಥಪೂರ್ಣ ಸಮಾನತೆಯ ಸಮಾಜ ಜಾತಿಮಟ್ಟದ ವಿರೋಧ ಮಾತ್ರವಲ್ಲ ಒಟ್ಟು ವ್ಯವಸ್ಥೆಗೆ ವಿರೋಧವಾಗುವ ನಿಲುವು ಇದರಲ್ಲಿದೆ.

ಪಂಪ ಭಾರತದಲ್ಲಿ ರಾಜಕೀಯ ದುರುದ್ದೇಶಗಳು, ಕುಟಿಲತೆಗಳು ಮೂರು ಉದ್ದೇಶಗಳ ಹಿನ್ನೆಲೆಯಲ್ಲಿ ಮೂಡಿಬಂದಿವೆ.

೧. ಮನುಷ್ಯನ ದೌರ್ಬಲ್ಯಗಳನ್ನು ಬಳಸಿಕೊಳ್ಳುವ ಮೂಲಕ ದುರುದ್ದೇಶ ಸಾಧನೆ.
೨. ಶಕ್ತಿ ಪ್ರಯೋಗದ ಮೂಲಕ ದುರುದ್ದೇಶ ಸಾಧನೆ.
೩. ಭೇದೋಪಾಯದ ಮೂಲಕ ದುರುದ್ದೇಶ ಸಾಧನೆ.

ಧರ್ಮರಾಯನ ದೌರ್ಬಲ್ಯಗಳನ್ನು ಬಳಸಿಕೊಳ್ಳುವ ಮೂಲಕ ಅದರಿಂದಲೇ ಪಾಂಡವರು ಅಧೋಗತಿಗಿಳಿಯುವಂತೆ ಮಾಡಿ ಸಮಸ್ತ ರಾಜ್ಯಕ್ಕೆ ಒಡೆಯರಾಗುವ ದುರಾಲೋಚನೆ ಕೌರವರದ್ದಾಗುತ್ತದೆ. 'ಯಮನಂದನನಲ್ತೆ ನೆತ್ತದೊಳ್ ಬಸನಿಗನಾತನಂ ಬರಿಸಿ ನೆತ್ತಮನಾಡಿಸಿ' ರಾಜ್ಯವನ್ನು ಪಡೆಯಲು ಶಕುನಿಯ ಮಾತಿನಂತೆ ದುರ್ಯೋಧನನ ಆಹ್ವಾನವನ್ನು ಮನ್ನಿಸಿ ಧರ್ಮರಾಯ ನೆತ್ತವನ್ನಾಡಲು ಸಿದ್ಧನಾಗುತ್ತಾನೆ. ಮನೋರಂಜನೆಗಾಗಿ ಆರಂಭವಾದ ಆಟ ಪಣವೊಡ್ಡುವ ಜೂಜಾಟವಾಗಿ ಪರಿವರ್ತನೆಗೊಳ್ಳುತ್ತದೆ. ಸ್ವಹಿತಾಸಕ್ತಿಗಳಿಗಾಗಿ ರಾಜಕೀಯದ ದುರ್ಬಳಕೆಯಾಗುವುದು ಇಲ್ಲಿದೆ.

''ಕರೆದೊಡೆ ಜೂದಿಂಗಂ ಧುರ।
ಭರ (ಕಾಖೇಟ)ಕ್ಕೆ ಭೂಭುಜಂಗಾಗದು ಮ॥
ಯ್ಗರೆದಿರಲೆಂಬ ಪುರಾತನ
ಗುರು ವಚನಂ ತನಗೆ ನಿಟ್ಟೆಪಟ್ಟುದಱಿಂದಂ''[೧೨]

ಜೂಜು, ಯುದ್ಧ, ಬೇಟೆ ಇವು ರಾಜನ ಲಕ್ಷಣಗಳೆಂದು ನಂಬಿದ ಪುರಾತನ ಗುರುವಚನಕ್ಕೆ ಬದ್ಧನಾಗುವ ಧರ್ಮರಾಯನ ದೌರ್ಬಲ್ಯ ಇಲ್ಲಿ ಕೌರವರಿಗೆ ಸುಗಮ ಹಾದಿಯನ್ನೊದಗಿಸುತ್ತದೆ.

ಶಕ್ತಿ ಪ್ರಯೋಗದ ಹಿನ್ನೆಲೆಯಲ್ಲಿ ನಡೆಸುವ ಕುಟಿಲತೆ ಕೌರವರ ಸಂದರ್ಭದಲ್ಲಿದೆ. ಪಾಂಡವರು ಎಂದಾದರೂ ತಮ್ಮನ್ನು ಹತ್ತಿಕ್ಕಬಹುದೆಂಬ ಆತಂಕ ಕೌರವರನ್ನು ಕುಟಿಲೋಪಾಯಕ್ಕೆ ಸಿದ್ಧಪಡಿಸುತ್ತದೆ. 'ಸ್ವಾಮ್ಯಾರ್ಥಂ ಸ್ವಾಮ್ಯವಿಕ್ರಾಂತಂ ಮರ್ಮಜ್ಞಂ ವ್ಯವಸಾಯಿನಂ ಅರ್ಧರಾಜ್ಯಹರಂ ಭೃತ್ಯಂ ಯೋಗ ಹನ್ಯಾತ್ಸ ಹನ್ಯತೇ' ಅಂದರೆ ''ಯಜಮಾನಿಕೆಗಾಗಿ ಯತ್ನಿಸುವವನನ್ನು, ಯಜಮಾನಿಕೆಯನ್ನು ಸಾಧಿಸುವಲ್ಲಿ ಸಮರ್ಥನಾದವನನ್ನು, ಅರ್ಧರಾಜ್ಯವನ್ನೇ ಅಪಹರಿಸಲು ಇಷ್ಟಪಡುತ್ತಿರುವ ಭೃತ್ಯನನ್ನು, ಮರ್ಮಗಳನ್ನು ಬಲ್ಲವನನ್ನು, ಹಿಡಿದ ಪಟ್ಟುಬಿಡದೆ ಉದ್ಯೋಗಶೀಲನಾದವನನ್ನು ಯಾವನು ಖೂನಿ ಮಾಡುವುದಿಲ್ಲವೋ- ಅವನೇ ಖೂನಿಯಾಗುತ್ತಾನೆ.''[೧೩] ('ಪಂಪನ ಸಮಸ್ತ ಭಾರತ ಕಥಾಮೃತ'- ಡಾ। ಎಲ್. ಬಸವರಾಜು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು,

ಪುಟ. ೫೫) ದಾಯಾದಿಗಳಾದ ಪಾಂಡವರನ್ನು ಶಸ್ತ್ರವಿದ್ಯೆ, ಪ್ರತಿಜ್ಞೆಗಳನ್ನು ಹೊಂದಿರುವ ತಾವು ಸುಮ್ಮನೆ ಬಿಡಬಾರದೆಂಬುದನ್ನು ದುರ್ಯೋಧನ ತಿಳಿಸುತ್ತಾ ಧೃತರಾಷ್ಟ್ರನಿಗೆ ಹೀಗೆನ್ನುತ್ತಾನೆ. 'ವಿಧಾತೃ ಯೋಗದಿಂ ಕಣ್ಕುರುಡಾದೊಡೇನೊ ಕುರುಡಾಗಲೆವೇಳ್ವುದೆ ನಿಮ್ಮ ಬುದ್ಧಿಯುಂ' ಎಂಬ ಮಗನ ಮಾತು ಕೇಳಿದ ಧೃತರಾಷ್ಟ್ರ ಪಾಂಡವರನ್ನು ಹಸ್ತಿನಾವತಿಯಿಂದ ದೂರವಿಡುವ ಸಲುವಾಗಿ ''ದುರ್ಯೋಧನನಪ್ಪೊಡೆ ಪೊಲ್ಲ ಮಾನಸನಾತನುಂ ನೀಮೊಂದೆಡೆಯೊಳಿರೆ ಸುಖುಂ ಕಲಹಮುಮೆಂದುಂ ಕುಂದದು ಕಾರಣಂ'' ಎನ್ನುತ್ತಾ ಗಂಗಾನದಿಯ ದಕ್ಷಿಣ ತೀರದಲ್ಲಿ ಕುರುಜಾಂಗಣ ದೇಶಕ್ಕೆ ತಿಲಕವಿಟ್ಟಂತಿರುವ ವಾರಣಾವತ ಪಟ್ಟಣಕ್ಕೆ ಹೋಗಿ ಸುಖವಾಗಿರಲು ತಿಳಿಸುತ್ತಾನೆ. ಪಾಂಡವರು ವಾರಣಾವತದ ಹೊರವಲಯದಲ್ಲಿ ವಿಶ್ರಮಿಸಲು ಹೋದಾಗ ದುರ್ಯೋಧನ ನಿರ್ಮಿಸಿದ ಅರಗಿನ ಮನೆಯಲ್ಲಿ ಸಂಭವಿಸುವ ಘಟನೆಗಳು ಕೌರವರ ಕುಟಿಲತೆಯನ್ನು ಸೂಚಿಸುತ್ತವೆ.

ಭೇದೋಪಾಯದ ಕುಟಿಲತೆ ಕೃಷ್ಣ ನಡೆಸುವ ಸಂಧಾನದ ಯತ್ನದಲ್ಲಿದೆ. ಪಾಂಡವರೊಡನೆ ಕೌರವರೂ ಒಂದಾದರೆ ಕೌರವನಿಗೆ ರಾಜ್ಯವಾಳಲು ಯಾವ ಆತಂಕವೂ ಇರುವುದಿಲ್ಲವೆಂದು ದುರ್ಯೋಧನನಿಗೆ ತಿಳಿಸುತ್ತ ತನ್ನ ಒಂದೊಂದೇ ತಂತ್ರಗಳನ್ನು ಒಡ್ಡುತ್ತಾನೆ.

(ಅ) ರಾಜ್ಯಕ್ಕೆ ಪಾಂಡವರೇ ಮೊದಲಿಗರೆಂಬುದನ್ನು ನೆನಪಿಸುತ್ತಾನೆ. 'ಪಟ್ಟದ ಮೊದಲಿಗರಾಜಿಗೆ ಜಟ್ಟಿಗರವರೆಂದು ಮಾಳ್ಪ ಮುನ್ನಿನ ನೆಲನಂ' ಕೊಟ್ಟು ಕರೆಸಿಕೋ, ಇಂಥವರು ಸಹೋದರರಾದರೆ ನಿನಗೆ ಅಸಾಧ್ಯವಾದುದೆಂಬುದಿಲ್ಲ ಎನ್ನುವುದು.

**''ಮುನ್ನಿನ ನೆಲನಂ ಕುಡುಗೆಮ।**
**ಗೆನ್ನರ್ ದಾಯಿಗರೆಮೆನ್ನರಂತಲ್ತಿಂತ॥**
**ಲೆನ್ನರ್ ಕರುಣಿಸಿ ದಯೆಯಿಂ।**
**ದಿನ್ನಿತ್ತುದೆ ಸಾಲ್ಗುಮೆಂಬರೆಂಬುದನೆಂಬರ್''[೧೪]**

(ಆ) ತಾವಾಗಿ ಈ ಮೊದಲು ಆಳಿದ ರಾಜ್ಯವನ್ನು ಬಯಸುತ್ತಿಲ್ಲ. ತಮ್ಮ ಹಕ್ಕನ್ನು ಪ್ರತಿಪಾದಿಸುತ್ತಲೂ ಇಲ್ಲ. ನೀನು ಕರುಣಿಸಿ ಕೊಟ್ಟದ್ದನ್ನು ಸಾಕು ಎಂದು ಪಾಂಡವರೊಪ್ಪುತ್ತಾರೆ ಎನ್ನುವುದು.

(ಇ) ರಕ್ತಸಂಬಂಧದ ನೆಪವೊಡ್ಡಿ ಹೇಳುವ ರೀತಿ: 'ನಿನಗೆ ಪಾಂಡವರಪ್ಪುದನಾರುಮಪ್ಪರೇ' ಎಂದು ಒಲಿಸಿಕೊಳ್ಳಲೆತ್ನಿಸುವುದು.

(ಈ) ಭೂಮಿಕೊಟ್ಟರೆ ಪುಣ್ಯ ಲಭಿಸುತ್ತದೆಂಬ ಆಮಿಷ ಒಡ್ಡುವುದು. 'ಪಳ್ಳಿರಲ್ಕೆಂದವರ್ಗೀವುದೊಳ್ಪು ನಿಲೆ ಕಂಚಿ ನೆಗೞ್ತೆಯ' ಎನ್ನುತ್ತಾ ವಾರಣಾಸಿ, ಕಾಕಂದಿ, ಕುರುಸ್ಥಳ, ವೃಕಸ್ಥಳ, ಕಂಚಿ ಎಂಬ ಐದು ಗ್ರಾಮಗಳನ್ನಾದರೂ ಕೊಡಲು ಹೇಳುವುದು.

(ಉ) ಈ ಮಾತಿಗೆ ದುರ್ಯೋಧನ ಆಕ್ಷೇಪಿಸಿದಾಗ ಕೃಷ್ಣ ಪಾಂಡವರ ಶಕ್ತಿ-ಶೌರ್ಯ-ಸಾಹಸಗಳನ್ನು ಕುರಿತು ಹೊಗಳುವ ಮೂಲಕ ದುರ್ಯೋಧನನ ಬಲಾಬಲಗಳ ಅಸಮರ್ಥತೆಯನ್ನು ಸೂಚಿಸಲು ಯತ್ನಿಸುವುದು.

(ಊ) ಕಪಟ ನಾಟಕದಿಂದ ಅಶ್ವತ್ಥಾಮನನ್ನು ತನ್ನತ್ತ ಮಾಡಿಕೊಳ್ಳುವುದು.

(ಋ) ಕರ್ಣನನ್ನು ಭೇದಿಸಲು ಕುಂತಿಗೆ ತಿಳಿಸುವುದು.

(ೠ) ಸಾಧ್ಯವಾದಷ್ಟೂ ತಾನು ದಾನಶೂರನಾದ ಕರ್ಣನನ್ನು ಭೇದಿಸುವುದಾಗಿ ತಿಳಿಸುವುದು, ಅಂತೆಯೇ ಮಾಡುವುದು.

(ಎ) ಕರ್ಣನನ್ನು ಪೋಷಿಸಲು ದುರ್ಯೋಧನನಿಗಿದ್ದ ಕಾರಣವನ್ನು ಹೇಳುತ್ತಾ ಕೃಷ್ಣ ಒಡೆದು ಆಳುವ ನೀತಿಯನ್ನು ಅನುಸರಿಸುತ್ತಾನೆ. ಸತ್ಯಂತಪ ಮುನಿಗಳ ಆಶ್ರಮದಲ್ಲಿ ಕರ್ಣನಿಗೆ ದೊರೆತ ಗೌರವದ ವಿಷಯವನ್ನರಿತ ದುರ್ಯೋಧನ ಅಂದು 'ಪಾಟಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು' ಹೇಳಿದ್ದನ್ನು ತಿಳಿಸುವುದು. ಕೃಷ್ಣನ ವರ್ತನೆ ಬ್ರಿಟಿಷರು ಭಾರತವನ್ನು ಒಡೆದು ಆಳಿದ ರೀತಿಗಿಂತ ಭಿನ್ನವಾಗಿ ತೋರುವುದಿಲ್ಲ. ಭಾರತೀಯರ ಆಂತರಿಕ ನ್ಯೂನತೆಗಳ ಬಹಿರಂಗ ಟೀಕೆಗಳು ಭಾರತೀಯರಲ್ಲಿ ಒಡಕುಂಟು ಮಾಡಿದುದನ್ನು ನೆನಪಿಸುತ್ತದೆ. ಸಂಧಾನ ಮಾಡಲೆತ್ನಿಸಿದ ಈ ಎಲ್ಲ ಬಗೆಯ ಕುಟಿಲೋಪಾಯಗಳು ಮುರಿದು ಬೀಳುತ್ತಲೇ ಯುದ್ಧಕ್ಕೆ ಸನ್ನದ್ಧನಾಗಲು ಕೃಷ್ಣ ಧರ್ಮರಾಯನಿಗೆ ತಿಳಿಸುತ್ತಾನೆ.

ಸ್ವಾರ್ಥ, ದ್ವೇಷ, ಅಹಂಕಾರಗಳು ರಾಜಕೀಯದ ಅಂಗವಾಗಿರುವುದು, ಆಧಿಪತ್ಯದ ಅಡಿಯಲ್ಲಿ ಮನುಷ್ಯ ಸಂಬಂಧಗಳ ಕೊಂಡಿಗಳು ಕಳಚುವ ರೀತಿ ದ್ರುಪದ ಮತ್ತು ದ್ರೋಣರ ಸಂದರ್ಭದಲ್ಲಿ ವ್ಯಕ್ತವಾಗುತ್ತದೆ.

ದ್ರೋಣ ತನ್ನ ಒಡನಾಡಿಯಾದ ದ್ರುಪದ ಛತ್ರಾವಳಿ ಎಂಬ ಪಟ್ಟಣದಲ್ಲಿ ರಾಜ್ಯವಾಳುತ್ತಿರುವ ಸುದ್ದಿ ಕೇಳಿ ಅಲ್ಲಿಗೆ ಬರುತ್ತಾನೆ. 'ದ್ರುಪದನರಮನೆಯ ಬಾಗಿಲೊಳ್ ನಿಂದು ಪಡಿಯಱನಂ ಕರೆದು ನಿಮ್ಮೊಡನಾಡಿದ ಕೆಳೆಯಂ ದ್ರೋಣನೆಂಬ ಪಾರ್ವಂ ಬಂದನೆಂದು'

ಹೇಳಲು ತಿಳಿಸಿದಾಗ ಅದನ್ನು ಕೇಳಿ ತಿಳಿದ ದ್ರುಪದ 'ರಾಜ್ಯಮದಿರಾ ಮದೋನ್ಮತ್ತನುಂ ಗರ್ವಗ್ರಹಚಿತ್ತನು ಮಾಗಿ'.... 'ದ್ರೋಣನೆಂಬನೇ. ಪಾರ್ವನೆ ಪೇೞೆಂತೆನಗೆ ಕೆಳೆಯನೇ' ಎಂದು ದ್ರೋಣನನ್ನು ಹೊರಗೆ ನೂಕಲು ಹೇಳುತ್ತಾನೆ. ಸ್ನೇಹಸಂಬಂಧಗಳು ಜಾತ್ಯತೀತ ಸಂಬಂಧಗಳಾಗಿ-ವರ್ಗಾತೀತ ಸಂಬಂಧಗಳಾಗಿ ಇಲ್ಲಿ ಕಾಣಬರುವುದಿಲ್ಲ. ಸಂಕುಚಿತಗೊಳ್ಳುವ ಈ ಸ್ನೇಹಸಂಬಂಧ ಜಾತಿವರ್ಗದ ಸಂಕೋಲೆಗಳಲ್ಲಿ ನರಳಿ ದ್ವೇಷದ ನಂಜುಕಾರುವ ವ್ಯತಿರಿಕ್ತ ಸಂದರ್ಭಗಳನ್ನು ಸೃಷ್ಟಿಸುತ್ತವೆ. ಮಿತ್ರನ ವರ್ತನೆಯಿಂದ ಕೋಪಾವಿಷ್ಟನಾಗುವ ದ್ರೋಣ 'ಸಭಾವಳಯದೊಳೆನ್ನ ನೇೞಿಸಿದ ನಿನ್ನನನಾಕುಶಮೆನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮ (ನೆ) ಮೀಸೆವೊತ್ತೆನೇ' ಎನ್ನುತ್ತಾನೆ. ಈ ಮನೋಧರ್ಮ ಅಶ್ವತ್ಥಾಮನವರೆಗೂ ವಿಸ್ತರಿಸಿರುವುದು ಇಲ್ಲಿದೆ.

ನಯವಂಚನೆಯು ಮನಃಶಾಸ್ತ್ರೀಯ ಪ್ರಜ್ಞೆಯ ರೂಪತಾಳಿ ಎದುರಾಳಿಯ ಸರ್ವನಾಶ ಮಾಡುವ ರೀತಿ ಭಾರತ ಯುದ್ಧದ ಸಂದರ್ಭದಲ್ಲಿದೆ. ಒಡೆದು ಆಳುವ ಪ್ರವೃತ್ತಿ ಕೃಷ್ಣನಂತೆ ಧರ್ಮರಾಯನಲ್ಲಿಯೂ ಇದೆ. ಧರ್ಮರಾಯ ಶಲ್ಯ ಒಡ್ಡಿದ ಸೈನ್ಯಕ್ಕೆ ಎದುರಾಗಿ ಆತುನಿಂತು ಕೈಬೀಸುವ ಸಮಯಕ್ಕೆ 'ಶೂರಂ ಭೇದೇನ ಯೋಜಯೇತ್' ಎಂಬ ನಯಮಂ ಕೆಯ್ಕೊಂಡು ವಿನಯಮನೆ ಮುಂದಿಟ್ಟು ಸೈನ್ಯವೆರಡೂ ಅವನನ್ನು ನೋಡುತ್ತಿರುವಾಗ ಒಬ್ಬನೇ ರಥದಲ್ಲಿ ಬಂದು ಭೀಷ್ಮರ ಚರಣಯುಗಕ್ಕೆಱಗೆ ನಿನಗೆ ಜಯಮಕ್ಕೆಂದಂ' ಭೀಷ್ಮ ಧರ್ಮರಾಯನ ವಿನಯವನ್ನು ಮೆಚ್ಚಿ ಹರಸುತ್ತಾನೆ. ಆನಂತರ ದ್ರೋಣ, ಕೃಪ, ಶಲ್ಯರ ಪಾದಗಳಿಗೆ ನಮಸ್ಕರಿಸಿದಾಗ ಹೀಗೆನ್ನುತ್ತಾರೆ:

**''ನಿನ್ನ ಬರವಿಂದಮೆಮ್ಮ ಮ।**
**ನನ್ನಿನಗೆಱಗಿದುದು ಜಯಮುಮೆಮ್ಮೀ ದೆಸೆಯಿಂ॥**
**ದನ್ನಿನಗೆ ಸಾರ್ಗೆ ಪೋಗೆನೆ।**
**ಮನ್ನಿಸಿ ಗುರುಜನಮನಾಗಳಂತಕತನಯಂ''**[೧೫]

ಜಯದ ಹಾರೈಕೆ ಹೊತ್ತು ಹಿಂತಿರುಗಿ ತನ್ನ ಶಿಬಿರಕ್ಕೆ ಧರ್ಮರಾಯ ಬರುವಾಗ ದುರ್ಯೋಧನನ ತಮ್ಮನಾದ ಯುಯುತ್ಸುವನ್ನು ಕರೆತರುತ್ತಾನೆ. ಭೀಮನಿಂದ ಕೌರವ ಕುಲ ನಾಶವಾದರೆ ಸಂತತಿಯನ್ನು ಬೆಳೆಸಲು ಯಾರೂ ಇರುವುದಿಲ್ಲವೆಂದು ಬಗೆದ ಧರ್ಮರಾಯನ ಬಗ್ಗೆ ಪಂಪ 'ಎನಿತಾದೊಡಮೇಂ ಪ್ರಭು ಪೊಲ್ಲಕೆಯ್ಗುಮೇ' ಎಂದು ಉಗ್ಗಡಿಸುತ್ತಾನೆ.

ಭೀಷ್ಮನನ್ನು ಭೇದೋಪಾಯದಿಂದಲ್ಲದೆ ಗೆಲ್ಲಲು ಅಸಾಧ್ಯವೆಂದರಿತಾಗ ಕೃಷ್ಣನ ಸಲಹೆಯಂತೆ ಭೀಷ್ಮನನ್ನು ಕಂಡು ಧರ್ಮರಾಯ 'ಕಾವರೆ ಕಣೆಗೊಣ್ಡವೊಲೆಂದೆಂಬ ಮಾತಿನಂತಾಗಿರದೇ' ಎನ್ನುತ್ತಾ 'ನಂಬಿನಂಬಲಿಮಿಂದಿಂ। ಗೊಂಬತ್ತು ದಿನಂ ದಲೆಮ್ಮ ಬೆನ್ನಲೆ ನಿಂದಿರ್' ಎಂದು ಮತ್ತೂ ಮುಂದುವರಿದು ನುಡಿಯುತ್ತಾನೆ:

**''ಸಾವೆ ನಿಮತಿಚ್ಚೆಯೆನೆ ಪೊಣ।**
**ರ್ದಾವಂ ತಳ್ತಿಱಿದು ಗೆಲ್ವನೆಮಗದಱಿಂದಂ॥**
**ಸಾವು ದಿ(ಟ)ಂ ನಿಮ್ಮಡಿ ಕೊಲೆ।**
**ಸಾವುದು ಲೇಸಲ್ತೆ ಸುಗತಿವಡೆಲ್ಕಕ್ಕುಂ''**[೧೬]

ಎಂಬುದನ್ನು ಕೇಳಿ 'ಕರುಣಾರಸ ಹೃದಯನಾಗಿ ಮಮ್ಮನ ಮೊಗಮಂ ಕೂರ್ಮೆಯಿಂ ನೋಡಿ ಕಣ್ಣ ನೀರಂ ನೆಗಪಿ' ಭೀಷ್ಮ ನುಡಿಯುತ್ತಾನೆ: 'ಜಗದೊಳವಧ್ಯನಂ ಗೆಲಲೆ ಬಾರದದಾದೊಡಮೇಂ ಶಿಖಂಡಿ ತೊಟ್ಟಗೆ ಕೊಳೆ ಬಂದು ಮುಂದೆ ನಿಲೆ ಸಾವೆನಗಪ್ಪುದು' ಎಂದು ತನ್ನ ಸಾವಿನ ರಹಸ್ಯವನ್ನು ತಿಳಿಸಿ ಅರ್ಜುನನಿಗೆ ಈ ಸಂಗತಿ ತಿಳಿಸದೆ ತಾನು ಹೇಳಿದಂತೆ ಮಾಡಲು ತಿಳಿಸುತ್ತಾನೆ. 'ವರಲಕ್ಷ್ಮಿಗೆ ನೆಲೆಯಾಗು' ಎನ್ನಲು 'ನೃಪಂ ಪೊಡೆವಟ್ಟು ಮನೋನುರಾಗದಿಂ' ಬಂದು ಕೃಷ್ಣನಿಗೆ ನಡೆದ ವೃತ್ತಾಂತವನ್ನು ತಿಳಿಸುತ್ತಾನೆ. ಅಜ್ಜನೆಂಬ ಮಮಕಾರವಿಲ್ಲದೆ, ಅಜ್ಜನ ಸಾವಿನ ತಳಹದಿಯ ಮೇಲೆ ರಾಜ್ಯಸಂಪಾದನೆಗೆ ತೊಡಗುವ ಧರ್ಮರಾಯ ನಯವಂಚಕನಾಗಿ ಕಾಣುತ್ತಾನೆ.

ದ್ರೋಣನ ಸಂದರ್ಭದಲ್ಲಿಯೂ ಧರ್ಮರಾಯನ ವರ್ತನೆ ಇದೇ ಬಗೆಯದಾಗಿದೆ: 'ನೀಮಿಂತು ಕೆಯ್ಕೊಂಡು ಕಾದೆ ಜಗತ್ಪೂಜಿತ ಜೆಟ್ಟನಾದೊಡೆಮಗಿಂ ಬಾಟ್ವಾಸೆಯಾವಾಸೆಯೋ।' ಎನ್ನುವುದಲ್ಲದೆ 'ನಿಮ್ಮಳವನಱಿದು ಮುನ್ನಮೆ ನಿಮ್ಮಂ ಪ್ರಾರ್ಥಿಸಿದೆ' ಆದರೂ ನೀವು ಮರೆತು ನಮ್ಮನ್ನು ಕಡೆಗಣಿಸಿ ಯುದ್ಧ ಮಾಡುವುದೇ ಎಂದಾಗ ದ್ರೋಣ 'ಕರುಣಾರಸಮಯ ಮನದಿಂ ಪೊಱಪೊಣ್ಮೆ ನಿನಗೆ ಜಯಮಕ್ಕುಮೆ' ಎಂದು ಹರಸುತ್ತಾನೆ. 'ಅಶ್ವತ್ಥಾಮ' ಎಂಬ ಹೆಸರಿನ ಆನೆ ಸತ್ತಾಗ 'ಹತೋಶ್ವತ್ಥಾಮೋ' ಎಂದು ಧರ್ಮರಾಯ ಹೇಳಿದ್ದನ್ನು ಕೇಳಿ ತನ್ನ ಮಗ ಮಡಿದನೆಂದೇ ತಿಳಿದ ದ್ರೋಣ ಬಿಲ್ಲನ್ನು ಬಿಸುಟ ನಂತರ ಆನೆ ಸತ್ತ ವಿಷಯ ತಿಳಿಸುತ್ತಾನೆ. ಬಿಸುಟ ಬಿಲ್ಲನ್ನು ಹಿಡಿಯುವುದಿಲ್ಲ ಎಂದು ದ್ರೋಣ ಪ್ರಾಣ ತ್ಯಜಿಸುತ್ತಾನೆ. ಇಲ್ಲೆಲ್ಲ ಧರ್ಮರಾಯನ ನಯವಂಚನೆಯೇ ಇರುವುದು ಸ್ಪಷ್ಟವಾಗುತ್ತದೆ.

ಭಟ್ಟಂಗಿತನದಿಂದ ಕಾರ್ಯಸಿದ್ಧಿ ಮಾಡಿಕೊಳ್ಳುವ ತಂತ್ರ ಧರ್ಮರಾಯನ ಸಂದರ್ಭದಲ್ಲಿದೆ, ಕೃಷ್ಣನ ಪವಾಡಗಳನ್ನು ಉತ್ಪ್ರೇಕ್ಷಿಸಿ ಹೊಗಳುತ್ತಲೇ ತಮ್ಮನ್ನು ಕಾಪಾಡಬೇಕೆಂದೂ, ಕೃಷ್ಣನಿಂದಾಗಿ ವನವಾಸವು ತೊಂದರೆಯಿಲ್ಲದೆ ಕಳೆಯಿತೆಂದೂ ಹೊಗಳುತ್ತಾನೆ. ಅಲ್ಲದೆ

'ಕಾದದೆ ಪನ್ನಗ ಧ್ವಜನಿಳಾತಳಮಂ ಕುಡನಾ' ಎಂಬುದನ್ನರಿತಿರುವ ಧರ್ಮರಾಯ ದುರ್ಯೋಧನ ತನ್ನ ಸೋದರನೆಂದು ಇದುವರೆಗೂ ಸುಮ್ಮನಿದ್ದು ಇನ್ನೂ ಹಾಗೇ ಇದ್ದರೆ ಲೋಕ ತನ್ನನ್ನು ಜರೆದರೆ ತನ್ನ ಘನತೆಗೆ ಕುಂದುಂಟಾಗುತ್ತದೆ. ಆದ್ದರಿಂದ ತಾನು ಹೇಗೆ ಮುಂದುವರೆಯಬೇಕೆಂಬುದನ್ನು ಕೇಳಿದಾಗ ಕೃಷ್ಣನು ತಾನು ದುಷ್ಟಸಂಹಾರಕ್ಕೆ ಬಳಸಿದ ತಂತ್ರವನ್ನೇ ಧರ್ಮರಾಯನಿಗೂ ಬೋಧಿಸುತ್ತಾನೆ. 'ನೀನುಮಿಳೆಯಂ ಮುಂಬೇಡಿಮಟ್ಟಟ್ಟಿ ಮಾ। ರ್ಮಲೆದಾತಂ ಕುಡದಿರ್ದೂಡಂದಿಱಿಯ ನೀಂ ಲೋಕಂ ಗುಣಗೊಳ್ವಿನಂ'. ಇದು ಕೃಷ್ಣನ ರಾಜನೀತಿಯೂ ಆಗಿದೆ.

ಅಧಿಕಾರದಾಹ ಎಂಥವರನ್ನೂ ಬಿಟ್ಟಿಲ್ಲ ಎಂಬುದಕ್ಕೆ ಧರ್ಮರಾಯ ನಿದರ್ಶನವಾಗುತ್ತಾನೆ. ದುರ್ಯೋಧನ ತನಗೆ ರಾಜ್ಯವನ್ನು ಕೊಡದಿದ್ದರೆ ತಾನು ತೆಗೆದುಕೊಳ್ಳುವ ಕ್ರಮದ ಬಗ್ಗೆ ಉಗ್ಗಡಿಸುತ್ತಾನೆ. '......ಅವನೀ ಭಾಗದೊಳೆನ್ನ ಭಾಗಮನದಂ ತಾನೀಯದಿರ್ದಾಗಳೆ। ನ್ನವನೀ ರಕ್ಷಣ ದಕ್ಷ ದಕ್ಷಿಣ ಭುಜಸ್ತಂಭಂ ಕೊಲಲ್ ಸಾಲದೇ' ಎನ್ನುವ ಈ ಮಾತು ಧರ್ಮಕ್ಕಷ್ಟೇ ಬದ್ಧವಾದ ವ್ಯಕ್ತಿತ್ವವನ್ನು ಹೇಳುವುದಿಲ್ಲ. ಧರ್ಮದ ನ್ಯಾಯಪರತೆಯ ಸೋಗಿನ, ಅಧಿಕಾರಲಾಲಸೆಯ ಆಂತರಿಕ ಮನೋಧರ್ಮವೂ ಇದರಲ್ಲಿ ಅಡಗಿರುವುದನ್ನು ಹೇಳುತ್ತದೆ. ಅವನೇ ಒಪ್ಪುವಂತೆ 'ವಿಷಯಾಂಬುಧಿಯೊಳ್.. ಮುೞುಗಿರ್ದೆಮ್ಮಯ್ವರುಮಂ ರಕ್ಷಿಸು' ಎಂಬ ಸ್ವವಿಮರ್ಶೆಯ ನಿಲವೂ ಇದೆ. ಕರ್ಣನನ್ನು ಗೆದ್ದು ಅರ್ಜುನ ತನಗೆ ಪಟ್ಟ ಕಟ್ಟುತ್ತಾನೆಯೇ ಎಂಬ ಸಂದೇಹ ಭಾರತದ ಯುದ್ಧದ ಉದ್ದಕ್ಕೂ ಅವನನ್ನು ಕಾಡಿದೆ. ಕೃಷ್ಣನೊಂದಿಗೆ 'ಕಿರೀಟಿ ಗೆಲ್ದನಗೆ ಪಟ್ಟಮಂ ಮಾಡುವನೇ' ಎನ್ನುವುದಲ್ಲದೆ ವೈರತ್ವವನ್ನು ಮರೆತು ದುರ್ಯೋಧನನೊಂದಿಗೆ ಎಲ್ಲರೂ ಸುಖವಾಗಿರಲು ತಿಳಿಸಿ ತಪಸ್ಸಿಗೆ ಹೋಗುವ ಮಾತನ್ನಾಡಿ ಅರ್ಜುನನಲ್ಲಿ ಹುಮ್ಮಸ್ಸು ತುಂಬುವುದೂ ಇದೆ. ಅರ್ಜುನನಿಂದ ಕರ್ಣ ಹತನಾದಾಗ

**''ಪರಸಿ ಸಕಳಾವನೀತಳ ।**
**ಭರಮಿನಸುತಟಿಯೆ ಹರಿಗನಿಂದೆನಗೀಗಳ್॥**
**ದೊರೆಕೊಂಡುದೆಂದೊಡೇಂ ಬ।**
**ತ್ತರಿಸಿದನೋ ರಿಪುತುರಂಗ ಕಂಠೀರವನಂ''**[೧೭]

ಎನ್ನುವನು.

ರಾಜದ್ರೋಹದ ಸಂಗತಿಗಳು ಪಂಪಭಾರತದ ಹಲವು ಸಂದರ್ಭಗಳಲ್ಲಿ ಗೋಚರಿಸುತ್ತದೆ. ಬಹುತೇಕ ದುರ್ಯೋಧನನ ಸಂದರ್ಭದಲ್ಲಿವೆ. ದ್ರೋಣ-ಭೀಷ್ಮರು ಕೌರವನ ಪಕ್ಷದಲ್ಲಿದ್ದೂ ಪಾಂಡವರಿಗೆ ತಮ್ಮ ಸಾವಿನ-ಸೋಲಿನ ರಹಸ್ಯಗಳನ್ನು ಬಿಟ್ಟುಕೊಡುವುದರ ಮೂಲಕ ಕೌರವನ ಸೋಲಿಗೆ ಕಾರಣರಾಗುತ್ತಾರೆ. 'ಜೋಳವಾಳಿ' ಇದ್ದರೂ ರಾಜದ್ರೋಹಿಗಳಾಗುತ್ತಾರೆ. ಕರ್ಣನ ಸಾರಥಿಯಾಗಿ ಯುದ್ಧದಲ್ಲಿ ತೊಡಗಿದ ಶಲ್ಯ, ಎದುರಾಳಿಗಳಾಗಿ ಅವನ ಅಳಿಯಂದಿರಾದ ನಕುಲ, ಸಹದೇವರು ಹೋರಾಡುವಾಗ ಎಲ್ಲಿ ಅವರು ಅಳಿಯುತ್ತಾರೋ ಎಂಬ ಆತಂಕದಿಂದ ಕರ್ಣನಿಗೆ ಹೇಳುತ್ತಾನೆ:

**''ಎರೆದನ ಪೆಂಪುಮಾಂತಧಿಕನಪ್ಪನ ಪೆಂಪುಮನೀವ ಕಾವ ನಿ।**
**ನ್ನೆರಡು ಗುಣಂಗಳುಂ ಬಯಸುತಿರ್ಪುವು ನಿನ್ನೊಳಿವಂದಿರೇತಱೊಳ್॥**
**ದೊರೆ ದೊರೆವೆತ್ತ ಕಾಳೆಗದ ಗೆಲ್ಲದ ಸೋಲದ ಮಾತು ನಿನ್ನೊಳಂ।**
**ನರನೊಳಮಿರ್ದುದುಯ್ಗೆ ಸಿಸುಗಳ್ ಸಿಬಿರಕ್ಕೆ ಬಱಲ್ಗ ಭೂಪನಂ॥**[೨೮]

ಪ್ರತಿಷ್ಠೆಯ ಹೋರಾಟ ಕರ್ಣ ಮತ್ತು ಅರ್ಜುನನ ನಡುವೆ ಇರುವುದನ್ನು ನೆನಪಿಸುತ್ತಾ ಬಳಲಿದ ಧರ್ಮರಾಯನನ್ನು ಯಮಳರು ಶಿಬಿರಕ್ಕೆ ಕರೆದೊಯ್ಯಲಿ ಎಂದು ಅಳಿಯಂದಿರನ್ನು ರಕ್ಷಿಸುವ ಮೂಲಕ ಕೌರವನಿಗೆ ದ್ರೋಹವೆಸಗುತ್ತಾನೆ.

ಸ್ವಾರ್ಥ-ಸ್ವಹಿತಾಸಕ್ತಿಗಳಿಗಾಗಿ ಅನ್ಯರನ್ನು ಗುರಿಮಾಡಿಕೊಳ್ಳುವ ಕ್ರೌರ್ಯವೂ ಇಲ್ಲಿ ವ್ಯಕ್ತವಾಗಿದೆ. ಕೆಳವರ್ಗವನ್ನು ಬಲಿಷ್ಠವರ್ಗ ಬಲಿತೆಗೆದುಕೊಳ್ಳುವ ರೀತಿ ಪಾಂಡವರ ಸಂದರ್ಭದಲ್ಲಿದೆ. ಪಾಂಡವರು ವಾರಣಾವತವನ್ನು ಪ್ರವೇಶಿಸುವ ಹೊರವಲಯದಲ್ಲಿ ಲಾಕ್ಷಾಗೃಹದಲ್ಲಿ ಉಳಿದಾಗ ಅದರ ಬಗ್ಗೆ ಶಂಕೆ ತಳೆದ ಧರ್ಮರಾಯ ತಮ್ಮ ಅವಸಾನ ಕುರಿತು ಆತಂಕವನ್ನು ವ್ಯಕ್ತಪಡಿಸಿ ಪಾರಾಗುವ ಯೋಚನೆ ಮಾಡುತ್ತಾನೆ. ಸುರಂಗ ಮಾರ್ಗದಿಂದ ಹೊರಹೋಗುವ ಸಿದ್ಧತೆಗಳಾಗುತ್ತವೆ. ಪುರೋಚನ ಪಾಂಡವರನ್ನು ಛಿದ್ರಿಸುವ ಹಿಂದಿನ ದಿನ 'ಮುನ್ನಿನ ದಿವಸನೊಳಗಣ ಪರಿಜನಮೆಲ್ಲಮುಂ ಪಾರ್ವರನೂಡಿ ನೆವದೊಳೆ ಪೊಱಮಡಿಸಿ ಸೂರ್ಯಾಸ್ತಮಯದೊಳ್ ಪಾರ್ವರನೂಡಿ ನಿಷಾದಿತಿಯೆಂಬ ಬೇಡಿತಿಗಮಯ್ವರ್ ಮಗಂದಿರ್ಗಮುಣಲಿಕ್ಕಿದೊಡೆ ತಣಿಯುಂಡು ಬೆಂಡುಮರಲ್ದು ಬಱಿಸುಂದಿದರ್ ಪುರೋಚನುಮಾ ಮನೆಯೊಳೊಂದೋವರಿಯೊಳಮಱಿಕೆಂದಿದನ ಪ್ರಸ್ತಾವದೊಳರ್ವ ರಾತ್ರಿಯಾವಾಗಳ್ ಪೊರತಿವೆರಸಯ್ವರುಮಂ ಮುನ್ನಲೊಯ್ಯನೊಯ್ಯನೆ ಸುರಂಗದಿಂ ಪೊಱಮಡಿಸಿ ಭೀಮಸೇನಂ ಪುರೋಚನಂ

ಮಱಿಕೆಂದಿರ್ದೋರ್ವರಿಯೊಳ್ ಕಿಚ್ಚಿಂ ಕೊಳಿಸಲೊಡಂ' ಅದು ಹೊತ್ತಿ ಉರಿದು ಅರಗಿನ ಮನೆಯಲ್ಲಿ ಸುಟ್ಟು ಕರಕಲಾಗಿದ್ದ ಬೇಡತಿ - ಅವಳ ಐವರು ಮಕ್ಕಳನ್ನು ಕಂಡು ಅವರು ಕುಂತಿ ಪಾಂಡವರೆಂದೇ ನಂಬಿ ಜನ ಶೋಕಿಸುತ್ತಾರೆ. ಕೌರವರೂ ನಂಬುತ್ತಾರೆ. ತಮ್ಮ ಉಳಿವಿಗಾಗಿ ಅಮಾಯಕರನ್ನು ಆಹುತಿಗೊಡುವ ಪಾಂಡವರ ಅಸ್ತಿತ್ವದ ಹೋರಾಟ ಕ್ರೌರ್ಯದ ರೂಪವನ್ನು ತಳೆಯುತ್ತದೆ.

ಹಿಂಸೆಗೆ ಪ್ರತಿಹಿಂಸೆಯೇ ಮದ್ದು ಎಂಬ ಅಲೌಕಿಕ ವಾದ ಇಲ್ಲಿದೆ. ದುಶ್ಶಾಸನ ಮಾಡಿದ ಅವಮಾನಕ್ಕೆ ಅವನನ್ನು ಕೊಂದನಂತರದ ಭೀಮನ ವರ್ತನೆ ಕ್ರೌರ್ಯದ ಪರಮಾವಧಿಯಾಗಿ ಕಾಣುತ್ತದೆ. ವೇಣಿಸಂಹಾರದ ನಂತರ ಭೀಮ ಹೇಳುವ ಮಾತು:

> **''ಇದಱೊಳ್ ಶ್ವೇತಪತ್ರ ಸ್ಥಗಿತ ದಶ ದಿಶಾಮಂಡಲಂ ರಾಜಚಕ್ರಂ।**
> **ಪುದಿದಟ್ಟಾಡಿತ್ತಡಂಗಿತ್ತಿದ ಱೊಳೆ ಕುರು ರಾಜಾನ್ವಯಂ ಮತ್ಪ್ರತಾಪ॥**
> **ಕ್ಕಿದಱಿಂದಂ ನೋಡಗುರ್ವುರ್ವಿದುದಿದುವೆ ಮಹಾಭಾರತಕ್ಕಾದಿಯಾಯ್ತು**
> **ಬ್ಜ ದಳಾಕ್ಷೀ ಪೇಟ ಸಾಮಾನ್ಯ ಬಗೆಯೆ ಭವತ್ಕೇಶಪಾಶ ಪ್ರಪಂಚಂ।**[೧೯]

ಇದರೊಳಗೆ ಶ್ವೇತಚ್ಛತ್ರಗಳು ಕಿಕ್ಕಿರಿದ ಹತ್ತೂದಿಕ್ಕಿನ ರಾಜಮಂಡಲಗಳೂ ಸಂಗಮಿಸಿ ನಾಶವಾದವು. ಕುರುರಾಜವಂಶವೂ ಇದರೊಳಗೆ ಅಡಗಿಹೋಯಿತು. ನನ್ನ ಪ್ರತಾಪಕ್ಕೆ ಇದರಿಂದಲೇ ಒಂದು ಭೀಕರ ಗಾಂಭೀರ್ಯ ಏರ್ಪಟ್ಟಿತು ಮಹಾಭಾರತ ಯುದ್ಧಕ್ಕೂ ಇದೇ ಆದಿಯೂ ಆಯಿತು. ನಿನ್ನ ಈ ಬಿಚ್ಚಿದ ಮುಡಿಯ ವಿಸ್ತಾರ ಸಾಮಾನ್ಯವೇ? ಎನ್ನುವ ಭೀಮನ ಮಾತುಗಳು ಭೂಮಂಡಲವನ್ನು ಮಟ್ಟಹಾಕಿದ ಅಟ್ಟಹಾಸದ ವರ್ತನೆಯನ್ನು ಕಾಣಿಸುತ್ತದೆ.

ಪಂಪನ ಕಾವ್ಯಗಳನ್ನು ನೋಡುವಾಗ ಅಲ್ಲಿ ಕಾಣುವ ಒಟ್ಟು ರಾಜಕೀಯ ಪ್ರಜ್ಞೆಯನ್ನು ಹೀಗೆ ಹೇಳಬಹುದು: ರಾಜಕೀಯದ ಸೂಕ್ಷ್ಮತೆಗಳು ಪಂಪಭಾರತದ ಹಲವು ಪಾತ್ರಗಳಲ್ಲಿ, ಘಟನೆಗಳಲ್ಲಿ, ಸಂಭಾಷಣೆಗಳಲ್ಲಿ ಮೂಡಿಬಂದಿವೆ. ಪಾಂಡವರಿರಲಿ, ಕೌರವರಿರಲಿ, ಕೃಷ್ಣನಂಥವನೇ ಆಗಿರಲಿ ಅಲ್ಲೆಲ್ಲೂ ಪಂಪನ ಪಕ್ಷಪಾತದ ಧೋರಣೆ ಕಾಣುವುದಿಲ್ಲ. ಬದಲಿಗೆ ಮನುಷ್ಯ ಸಹಜ ನೆಲೆಯಿಂದ ಗುರುತಿಸುವ ಉದಾತ್ತ ಮನೋಧರ್ಮವಿದೆ. ಆಳುವ ವರ್ಗ ಆಳಿಸಿಕೊಳ್ಳುವ ವರ್ಗವನ್ನು ಶೋಷಿಸುವ ಬಗೆ ಮತ್ತು ಪ್ರಭುತ್ವದ ಪರಿಣಾಮಗಳನ್ನು ಎದುರಿಸುವ ಮಾರ್ಗಗಳು, ಗುಲಾಮಪದ್ಧತಿ ಪ್ರಭುತ್ವದ ಒಂದು ಅಂಗವಾಗಿ ವ್ಯವಹರಿಸುವ ಸೂಕ್ಷ್ಮ ನಿರೂಪಣೆ, ಪ್ರಭುತ್ವದಡಿಗೆ ಸಿಕ್ಕ ಮನುಷ್ಯ ಅಸಹಾಯಕತೆಯ ಸಂದರ್ಭಗಳನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳುವಂತೆ ಮಾಡುವ ಸಂದಿಗ್ಧತೆಗಳ ಸೂಕ್ಷ್ಮ ವಿವೇಚನೆ ಇದೆ. ಫ್ಯಾಸಿಸ್ಟ್ ಧೋರಣೆಯ ಮನೋಧರ್ಮಗಳು ಜಗತ್ತನ್ನೇ ಬುಡಮೇಲು ಮಾಡುವ ಕೃತ್ಯಗಳಲ್ಲಿ ತೊಡಗಿ ಅಟ್ಟಹಾಸ ಮಾಡುತ್ತಾ ಮಾನವೀಯ ಸಂಬಂಧಗಳನ್ನು ಕಳಚಿಹಾಕುವುದರ ಬಗ್ಗೆ ಅರಿವು ಮತ್ತು ಈ ಮನೋಧರ್ಮಗಳು ನಿರಸನಗೊಳ್ಳುವ ಬಗೆ ಪರಿವರ್ತನೆಯ ಹಾದಿಯಲ್ಲಿ ಅಂಥ ಮನಸ್ಸುಗಳ ಒಳತೋಟಿಗಳ ವಿವರಗಳನ್ನು ಪಂಪಭಾರತ ಕಟ್ಟಿಕೊಡುತ್ತದೆ. ಅಹಂಕಾರಕ್ಕೆ ಅಹಂಕಾರವೇ ಉತ್ತರವಲ್ಲ ಉದಾಸೀನ-ವಿರಕ್ತಿ ಎಂಬುದರ ಕಡೆಗಿನ ಚಿಂತನೆ, ಹಿಂಸೆಗೆ ಪ್ರತಿಹಿಂಸೆ, ಜಾತಿನಿಂದನೆಗೆ - ಜಾತಿನಿಂದನೆ ಅಷ್ಟೇ ಉತ್ತರ ಅಲ್ಲ ಅಥವಾ ಪರಿಹಾರ ಮಾರ್ಗವಲ್ಲ ಎಂಬ ತಿಳಿವು, ಮನುಷ್ಯನ ಅಧೋಗತಿಗೆ ಅವನೊಳಗಿನ ಸಿಟ್ಟು, ಅಸಹನೆ, ಅಸೂಯೆಗಳು ಕಾರಣವಾಗುವ ಬಗ್ಗೆ ಒಳನೋಟಗಳು ಇಲ್ಲಿವೆ.

ಮಾರ್ಗದ ಕವಿಗಳನ್ನು ಕುರಿತು ಡಾ। ಎಂ. ಎಂ. ಕಲಬುರ್ಗಿಯವರು ಹೀಗೆ ಬರೆಯುತ್ತಾರೆ: ''ಈ ಕಾಲದ ಕವಿಗಳು ವ್ಯವಸ್ಥೆಯೊಂದಿಗೆ ಒಪ್ಪಂದ ಮಾಡಿಕೊಂಡವರು. ಇಂಥವರದು 'ಡಿಫೆನ್ಸಿವ್' ವ್ಯಕ್ತಿತ್ವ. ಇವರ ಗುರಿ ತಮ್ಮ ಸ್ಥಾನಮಾನ ರಕ್ಷಣೆಯೇ ಹೊರತು ಸಾಮಾಜಿಕ ಅನಿಷ್ಟಗಳ ನಿವಾರಣೆಗೆ ಕೈಹಾಕಿ, ಸಮಸ್ಯೆಗಳನ್ನು ಎದುರಿಸುವುದಲ್ಲ. ಹೀಗಾಗಿ ಇವರ ಬರವಣಿಗೆಯಲ್ಲಿ ಸಹಜವಾಗಿಯೇ ಪ್ರತಿಭಟನೆ ಗೌಣಸ್ಥಾನಕ್ಕೆ ಸರಿಯುತ್ತದೆ. ತಮ್ಮ ಇಂಥ ಡಿಫೆನ್ಸಿವ್ ವ್ಯಕ್ತಿತ್ವ ಕಾರಣವಾಗಿ ಈ ಕವಿಗಳು ಸ್ವಾಭಾವಿಕವಾಗಿಯೇ ಸಮಕಾಲೀನ ಪ್ರತಿಗಾಮಿ ಪಕ್ಷಗಳ ಪರವಾಗಿ ನಿಂತರು.''[೨೦] ಆದರೆ ಕಲಬುರ್ಗಿಯವರು ಹೇಳುವಂತೆ ಪಂಪ ವ್ಯವಸ್ಥೆಯೊಂದಿಗೆ ಒಪ್ಪಂದ ಮಾಡಿಕೊಂಡ ಕವಿಯಾಗಿ ಕಾಣದೆ ವ್ಯವಸ್ಥೆಯೊಂದಿಗೆ ಹೋರಾಡುವ ವ್ಯಕ್ತಿಯಾಗಿ ಕಾಣುತ್ತಾನೆ. ಪಂಪ ಕೇವಲ ಆಶ್ರಿತ ಕವಿಯಾಗಿರಲಿಲ್ಲ. ಆತ ಒಟ್ಟು ಮೂರು ಸಂದರ್ಭಗಳನ್ನು ಕಂಡವನು.

೧. ರಾಜನ ಆಶ್ರಯದಲ್ಲಿದ್ದು ಅರಸೊತ್ತಿಗೆಯ ಏಳುಬೀಳುಗಳನ್ನು ಕಂಡವನು.
೨. ಕಲಿಯೂ ಆಗಿ ಯುದ್ಧದ ಅನುಭವಗಳನ್ನು ಹೊಂದಿದ್ದವನು.
೩. ಕವಿಯಾಗಿ ಈ ಸಂದರ್ಭಗಳನ್ನು ವಿಶ್ಲೇಷಿಸಿದವನು.

ಪಂಪನಿಗೆ ಸ್ಥಾನಭದ್ರತೆಗಿಂತ ಸಂದರ್ಭಗಳನ್ನು ತೀಕ್ಷ್ಣ ವಿವೇಚನೆಗೆ ಗುರಿಪಡಿಸುವುದು ಮುಖ್ಯವಾಗುತ್ತದೆ. ಹಾಗಾಗಿ ಪಂಪಭಾರತದಲ್ಲಿ ಅರಸರನ್ನು ಅವಿವೇಕಿಗಳೆಂದು, ಅರಸರನ್ನು ಓಲೈಸಿ ಬಾಳುವುದು ಕಷ್ಟವೆಂದು, ಬೇರೆಯವರಿಂದ ತನಗೆ ಆಗಬೇಕಾದದ್ದೇನು ಎಂಬ ಯಾವ ಮುಲಾಜೂ ಇಲ್ಲದ ನಿರ್ದಾಕ್ಷಿಣ್ಯವಾದ ಈ ಹೇಳಿಕೆಗಳು ಕಾಣಸಿಗುತ್ತವೆ.

ಪಂಪಭಾರತದಲ್ಲಿ ಉತ್ಪ್ರೇಕ್ಷೆ ಎನಿಸಬಹುದಾದಷ್ಟು ಅರಿಕೇಸರಿಯ ಬಗ್ಗೆ ಹೊಗಳಿಕೆಗಳಿದ್ದರೂ ಮಹಾಭಾರತದಲ್ಲಿ ಯಾರನ್ನೂ ನೆನೆಯದಿರಿ, ನೆನೆಯುವುದಾದರೆ ಕರ್ಣನನ್ನು ನೆನೆಯಿರಿ ಎನ್ನುವ ಮಾತು ಮನುಷ್ಯನ ವ್ಯಕ್ತಿತ್ವವನ್ನು ಕುರಿತಂತೆ ತಳೆವ ಧೋರಣೆ ವ್ಯಕ್ತಪಡಿಸುವ ಆಶಯಗಳು ಇಲ್ಲಿ ವಿಶಿಷ್ಟವಾಗುತ್ತವೆ. ಅರಿಕೇಸರಿಯನ್ನು ಕುರಿತು ಹೊಗಳಿಕೆಗಳು ಈ ಸಂದರ್ಭದಲ್ಲಿ ಮೂಲೆಗೆ ತಳ್ಳಲ್ಪಡುತ್ತವೆ. ಅರಿಕೇಸರಿಯ ಯುದ್ಧದ ಕೌಶಲ್ಯ, ಅವನು ಸಾಧಿಸಿರಬಹುದಾದ ಗೆಲವುಗಳು ಅವನನ್ನು ಕುರಿತ ಹೊಗಳಿಕೆಗೆ ಕಾರಣಗಳಾಗಿದ್ದರೂ ಗೆಲುವಿನ ಭೀಷಣ ಖುಷಿಗಿಂತ ಕರ್ಣನ ತ್ಯಾಗ, ನನ್ನಿ ಮುಖ್ಯವೆನಿಸಿರಬೇಕು.

''ಆದರೂ ಆಳುವ ವರ್ಗದ ಆಶ್ರಯದಲ್ಲಿದ್ದು ಆ ದೃಷ್ಟಿಕೋನಕ್ಕೆ ಹೊಂದಿಕೊಳ್ಳಬೇಕಾಗಿ ಬಂದ ಕವಿಗಳೂ ಸ್ವತಂತ್ರ ಮನೋಧರ್ಮವನ್ನು ತೋರಿಸುವ ಪ್ರಯತ್ನ ಮಾಡಿ ಚರಿತ್ರೆಯ ಚಲನಶೀಲತೆಗೆ ಕ್ರಿಯಾಶಕ್ತಿಯಾದುದು ಸುಳ್ಳಲ್ಲ. ಈ ಕಾರಣದಿಂದಲೇ ಪಂಪನಂಥ ಕವಿಯಲ್ಲಿ ಕಂಡುಬರುವ ದ್ವಂದ್ವ ಆ ಕಾಲದ ವ್ಯಾಖ್ಯಾನವೂ ಹೌದು.''[೧೨] ಬರಗೂರು ರಾಮಚಂದ್ರಪ್ಪನವರ ಈ ಮಾತು ಸತ್ಯಕ್ಕೆ ಸಮೀಪವಾದ ಹೇಳಿಕೆಯಾಗಿದೆ. ಪಂಪನ ಸ್ವತಂತ್ರ ಮನೋಧರ್ಮ ಕಾವ್ಯದುದ್ದಕ್ಕೂ ಅಭಿವ್ಯಕ್ತಿಗೊಂಡಿದೆ. ಭಾರತದ ಕಥೆ ಮನುಷ್ಯನ ವ್ಯಕ್ತಿತ್ವದ ಹಲವು ಮುಖಗಳನ್ನು ಒಳಗೊಂಡಿರುವ ಪ್ರಧಾನ ಭೂಮಿಕೆ. ಇಂಥ ಪ್ರಭಾವಶಾಲೀ ವಸ್ತುವನ್ನು ಆಯ್ಕೆ ಮಾಡಿಕೊಂಡಿರುವ ಪಂಪ ಯಾವುದಕ್ಕೂ ಬದ್ಧನಾಗುವುದಿಲ್ಲ. ಹೊಗಳಬೇಕಾದೆಡೆ ಹೊಗಳುತ್ತ, ತೆಗಳಬೇಕಾದ ಕಡೆ ತೆಗಳುತ್ತ ನಿರ್ಭಿಡೆಯ ಬರವಣಿಗೆಯಲ್ಲಿ ತೊಡಗಿದ್ದು ಕಾಣುತ್ತದೆ. ಸ್ವಾರ್ಥ ಲೋಭಗಳ ಮನುಷ್ಯನ ಆಡಂಬರದ ಬದುಕಿನ ಮುಖವಾಡವನ್ನು ಕಳಚಿಹಾಕುವ ಸಂದರ್ಭಗಳೂ ಇಲ್ಲಿವೆ. ಮೋಸ, ವಂಚನೆ, ಕ್ರೌರ್ಯ, ಸಾಹಸ, ಶೌರ್ಯ, ತ್ಯಾಗ, ದಾನ, ವಿರಕ್ತಿ.... ಮೊದಲಾದ ಮನೋಧರ್ಮಗಳು ಭಾರತದ ಹಲವು ಪಾತ್ರಗಳಲ್ಲಿ, ಘಟನೆಗಳಲ್ಲಿ ವರ್ಗಲಿಂಗಭೇದಗಳಿಲ್ಲದೆ ವ್ಯಕ್ತವಾಗಿವೆ. ಯಾವುದಕ್ಕೂ ಬದ್ಧವಾಗದ ವಸ್ತುನಿಷ್ಠವಾದ ವಿವೇಚನೆಯನ್ನು ಪಂಪನಲ್ಲಿನ ದ್ವಂದ್ವ ಎನ್ನಲಾಗುವುದಿಲ್ಲ. ಮನುಷ್ಯನ ಮನಸ್ಸಿನ ಆಳ-ಅಗಲಗಳನ್ನು ನಿರುಕಿಸುವ ಪಂಪನ ಗುಣ ವಿಶಿಷ್ಟ ಮತ್ತು ಉದಾತ್ತ ನಿಲುವೇ ಆಗಿದೆ. ಹಾಗಾಗಿ ಪಂಪನ ಕಾವ್ಯಗಳಲ್ಲಿ ವ್ಯಕ್ತವಾಗುವ ರಾಜಕೀಯ ಪ್ರಜ್ಞೆ ಮನುಷ್ಯಸಹಜ ನೆಲೆಯಿಂದ ಹೊರಹೊಮ್ಮಿದ ಅಭಿವ್ಯಕ್ತಿಯಾಗಿದೆ.

## ಅಡಿಟಿಪ್ಪಣಿಗಳು

೧. ಕಮ್ಯೂನಿಸಂ : ಬಿ. ವಿ. ಕಕ್ಕಿಲ್ಲಾಯ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೭೮, ಪುಟ. ೧೩, ೧೮, ೧೯

೨. ಪಂಪಭಾರತ : ಮೊದಲನೇ ಭಾಗ, ಆಶ್ವಾಸ ೧ ರಿಂದ ೮ರ ವರೆಗೆ, ಸಂ: ಕೆ. ವಿ. ಪುಟ್ಟಪ್ಪ, ಮೈ.ವಿ.ವಿ. ಪ್ರಸಾರಾಂಗ, ಮೈಸೂರು, ೧೯೭೬, ಪುಟ. ೧೫, ಆಶ್ವಾಸ- ೧-೭೦ನೇ ಪದ್ಯ.

೩. ಪೂರ್ವೋಕ್ತ, ಪುಟ. ೧೫೨, (೬-೧೯)

೪. ಪೂರ್ವೋಕ್ತ, ಪುಟ. ೧೫೬ (೬-೩೦)

೫. ಆದಿಪುರಾಣ ಸಂಗ್ರಹ : ಸಂ: ಎಲ್. ಗುಂಡಪ್ಪ, ಮೈ.ವಿ.ವಿ ಪ್ರಸಾರಾಂಗ, ಮೈಸೂರು ೧೯೭೯, ಪುಟ. ೯೬ (೩೮೦ನೇ ಪದ್ಯ)

೬. ಪೂರ್ವೋಕ್ತ, ಪುಟ. ೧೦೭, (೪೪೦ನೇ ಪದ್ಯ)

೭. ಪೂರ್ವೋಕ್ತ, ಸಂ: ಕೆ.ವಿ. ಪುಟ್ಟಪ್ಪ, ಪುಟ. ೬೦ (೨-೮೨)

೮. ಪಂಪಭಾರತ : ಎರಡನೆಯ ಭಾಗ ೯-೧೪ ಆಶ್ವಾಸಗಳು, ಸಂ: ಕೆ.ವಿ. ಪುಟ್ಟಪ್ಪ, ಮೈ.ವಿ.ವಿ. ಪ್ರಸಾರಾಂಗ, ಮೈಸೂರು ೧೯೯೨, ಪುಟ. ೨೩೭ (೯-೬೪)

೯. ಪೂರ್ವೋಕ್ತ : ಪುಟ. ೩೩೬, (೧೨-೯೨)

೧೦. ಪೂರ್ವೋಕ್ತ, ಪುಟ. ೨೩೫, (೯-೫೮)

೧೧. ಪೂರ್ವೋಕ್ತ, ಪುಟ. ೨೩೬, (೯-೫೯)

೧೨. ಪೂರ್ವೋಕ್ತ, ೧೯೭೬, ಪುಟ. ೧೬೫ (೬-೭೧)

೧೩. ಪಂಪನ ಸಮಸ್ತ ಭಾರತ ಕಥಾಮೃತ; ಡಾ। ಎಲ್. ಬಸವರಾಜು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧, ಪುಟ. ೫೫
೧೪. ಪೂರ್ವೋಕ್ತ, ೧೯೯೨, ಪುಟ. ೨೩೨, (೯-೪೧)
೧೫. ಪೂರ್ವೋಕ್ತ, ಪುಟ. ೨೬೪, (೯-೬೨)
೧೬. ಪೂರ್ವೋಕ್ತ, ಪುಟ. ೨೮೬, (೧೧-೩೧)
೧೭. ಪೂರ್ವೋಕ್ತ, ಪುಟ. ೩೬೩ (೧೩-೨)
೧೮. ಪೂರ್ವೋಕ್ತ, ಪುಟ. ೩೪೨, (೧೨-೧೧೮)
೧೯. ಪೂರ್ವೋಕ್ತ, ಪುಟ. ೩೫೦, (೧೨-೧೫೬)
೨೦. ಮಾರ್ಗಸಾಹಿತ್ಯದಲ್ಲಿ ಪ್ರತಿಭಟನೆಯ ಅಂಶಗಳು, ಡಾ। ಎಂ. ಎಂ. ಕಲಬುರ್ಗಿ, 'ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ' : ಸಂ: ಡಾ। ಜಿ. ಎಸ್. ಶಿವರುದ್ರಪ್ಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯, ಪುಟ. ೧೮.
೨೧. ಹೊಸಗನ್ನಡ ಸಾಹಿತ್ಯದ ವರ್ಗ ಸ್ವಭಾವ, 'ಸಾಹಿತ್ಯ ಮತ್ತು ರಾಜಕಾರಣ', ಬರಗೂರು ರಾಮಚಂದ್ರಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮, ಪುಟ ೧೭೧

## ಗ್ರಂಥಋಣ


೧. ಅಸ್ತಿತ್ವವಾದ : ಕೆ.ವಿ. ತಿರುಮಲೇಶ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯
೨. ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ : ಸಂ: ಡಾ। ಜಿ.ಎಸ್. ಶಿವರುದ್ರಪ್ಪ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯
೩. ಕಮ್ಯೂನಿಸಂ : ಬಿ. ವಿ. ಕಕ್ಕಿಲ್ಲಾಯ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೧೯೭೮.
೪. ಪಂಪನ ಸಮಸ್ತ ಭಾರತ ಕಥಾಮೃತ : ಡಾ। ಎಲ್. ಬಸವರಾಜು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧
೫. ವಿಮರ್ಶೆಯ ಪರಿಭಾಷೆ : ಡಾ। ಓ. ಎಲ್. ನಾಗಭೂಷಣಸ್ವಾಮಿ, ಪರಿಸರ ಸಾಹಿತ್ಯ ಪ್ರಕಾಶನ, ಶಿವಮೊಗ್ಗ, ೧೯೮೩
೬. ಸಮಾಜವಾದ : ಎಲ್. ಶ್ರೀಕಂಠಯ್ಯ, ಮೈ.ವಿ.ವಿ. ಪ್ರಸಾರಾಂಗ, ಮೈಸೂರು, ೧೯೮೫
೭. ಸಾಹಿತ್ಯ ಮತ್ತು ರಾಜಕಾರಣ : ಬರಗೂರು ರಾಮಚಂದ್ರಪ್ಪ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮
೮. ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ : ಪ್ರಧಾನ ಸಂಪಾದಕರು ಪ್ರೊ। ಎಲ್. ಎಸ್. ಶೇಷಗಿರಿರಾವ್, ಉದಯಭಾನು ಕಲಾಸಂಘ, ಬೆಂಗಳೂರು ೧೯೯೩.

# ಕುಮಾರವ್ಯಾಸನಲ್ಲಿ ರಾಜಕೀಯ ಪ್ರಜ್ಞೆ

ಎಸ್. ಭಾರತಿ

### ಮಹಾಭಾರತ ಕಾವ್ಯದ ಮಹತ್ವ

ಪ್ರಪಂಚದ ಶ್ರೇಷ್ಠತಮ ಗ್ರಂಥಗಳಲ್ಲಿ ಮಹಾಭಾರತ ಅದ್ವಿತೀಯವಾದುದು. ಬೃಹತ್ ಹಾಗೂ ಮಹತ್‌ಗಳೆರಡರಲ್ಲೂ ಇದನ್ನು ಮೀರಿಸುವ ಗ್ರಂಥ ಯಾವುದೂ ಇಲ್ಲ. ಭಾರತೀಯರ ದೃಷ್ಟಿಯಲ್ಲಿ ಇದೊಂದು ಇತಿಹಾಸ ಮಹಾಕಾವ್ಯ. ಇದರ ಪಠಣ, ಶ್ರವಣ ಹಾಗೂ ಮನನ ಸರ್ವಕಾಲದಲ್ಲೂ ಶ್ರೇಷ್ಠ ಎಂಬ ನಂಬಿಕೆ ಭಾರತೀಯರಲ್ಲಿದೆ.

ಪ್ರಾಚೀನ ಭಾರತದ ಜ್ಞಾನಕೋಶವೇ ಮಹಾಭಾರತ. ಆದಿಕವಿಯೆನಿಸಿರುವ ವಾಲ್ಮೀಕಿ ಮಹರ್ಷಿ ಎಲ್ಲಾ ಬಗೆಯ ಕವಿಗಳಿಗೂ ಆದರ್ಶವಾದರೆ, ಎಲ್ಲಾ ರೀತಿಯ ಶಾಸ್ತ್ರಕಾರರೂ ಮಹಾಭಾರತದ ಕರ್ತೃ ವೇದವ್ಯಾಸರಿಗೆ ಋಣಿಯಾಗಿರುತ್ತಾರೆಂಬ ಅಭಿಪ್ರಾಯವಿದೆ.

ಮಹಾಭಾರತವೆಂದರೆ ಕಾವ್ಯ, ಇತಿಹಾಸ, ನೀತಿ, ಜ್ಞಾನ, ಧರ್ಮ, ರಾಜ್ಯಶಾಸ್ತ್ರ ತತ್ತ್ವಶಾಸ್ತ್ರ- ಹೀಗೆ ಎಲ್ಲವೂ ಅಡಕವಾದ ವಿಶ್ವಕೋಶ. ಜೀವನದ ಮಹಾಮೌಲ್ಯಗಳನ್ನು ಅವುಗಳ ಸಾಧನೆ ಹಾಗೂ ಸಿದ್ಧಿಗಳನ್ನು ಸಮಗ್ರವಾಗಿ ಮತ್ತು ಸುಂದರವಾಗಿ ಚಿತ್ರಿಸುವ ಶ್ರೇಷ್ಠ ಗ್ರಂಥವಿದು. ಭಾರತದ ಐತಿಹಾಸಿಕ, ಧಾರ್ಮಿಕ, ರಾಜಕೀಯ ಹಾಗೂ ಸಾಮಾಜಿಕ ಅಧ್ಯಯನ ವಿಷಯಗಳಿಗೆ ಇದೊಂದು ಆಕರ ಗ್ರಂಥವೆನಿಸಿದೆ. ಮಹಾಭಾರತ ಮಹಾಕಾವ್ಯ ಭಾರತದಲ್ಲಲ್ಲದೆ ಜಾವಾ, ಸುಮಾತ್ರ ದೇಶಗಳಲ್ಲಿಯೂ ಪ್ರಸಿದ್ಧವಾಗಿದೆ.

ರಾಮಾಯಣ ಆದಿಕಾವ್ಯವಾದರೆ ಮಹಾಭಾರತ ಕೇವಲ ಕಾವ್ಯವಲ್ಲ ಜ್ಞಾನದೀಪ. ರಾಮಾಯಣ ಕತೆಗೆ ಒಬ್ಬ ನಾಯಕ, ಮತ್ತೊಬ್ಬ ಪ್ರತಿನಾಯಕನಿರುತ್ತಾನೆ. ಆದರೆ ಮಹಾಭಾರತದಲ್ಲಿ ಬರುವ ಮುಖ್ಯ ಪಾತ್ರಗಳೇ ಹತ್ತಾರು. ಎಲ್ಲರೂ ನಾಯಕರೆನಿಸುವ ಮಹಾಭಾರತದ ಸಂದೇಶ, ಕಾಲ ದೇಶಗಳಿಗೆ ಸೀಮಿತವಾದುದಲ್ಲ. ಸದಾಕಾಲವೂ ಮಾನವ ಕೋಟಿಯನ್ನು ಉದ್ಧರಿಸಬಲ್ಲ ಸಂಜೀವಿನಿ ಮಂತ್ರವೇ ಅಲ್ಲಿ ಧರ್ಮ, ಮಹಾಭಾರತ ಮಹಾಕಾವ್ಯದಲ್ಲಿ ಸಾವಿರಾರು ಸಲ ಇದು ಪುನರುಚ್ಚರಿತವಾಗಿದೆ. ಅದು ಪಾತ್ರಗಳ ಜೀವನದಲ್ಲಿ ಪ್ರಕಟವಾಗಿದೆ. ಮನುಷ್ಯನ ಪುರುಷಾರ್ಥಗಳು ಮೂರು ಅವುಗಳೆಂದರೆ, ಧರ್ಮ, ಅರ್ಥ, ಕಾಮ ಹಾಗೂ ಮೋಕ್ಷ. ಧರ್ಮ ವಿವರ್ಜಿತವಾದ ಅರ್ಥ ಹಾಗೂ ಕಾಮಗಳು ಹೇಯ. ಉಪಾದೇಯವೇ ಅಲ್ಲ. ಆದ್ದರಿಂದ ಸರ್ವಕಾಲಕ್ಕೂ ಧರ್ಮವೇ ಮೂಲ. ಸತ್ಯ, ಅಹಿಂಸೆ ಮುಂತಾದವು ಧರ್ಮವೇ. ಯಾವುದರಿಂದ ಪರೋಪಕಾರವಾಗುವುದೋ ಅದು ಪುಣ್ಯಕರ. ಕ್ಷಮೆ, ತ್ಯಾಗಗಳು ಧಾರ್ಮಿಕರ ಮುಖ್ಯ ಅಂಗಗಳು. ಧರ್ಮವೆಂದರೆ ದುರ್ಬಲರ ವೇಷವಲ್ಲ, ಅತುಲಬಲರ ಸಂಯಮ.

ಮಹಾಭಾರತ ಕಾವ್ಯದ ಪ್ರಕಾರ ವ್ಯಕ್ತಿಯ ಸುಧಾರಣೆ ಬಹಳ ಮುಖ್ಯ. ಸಮಾಜದ ಉನ್ನತಿಗೆ ರಾಷ್ಟ್ರಪ್ರೇಮ, ವಿಶ್ವಕಲ್ಯಾಣ ಎಲ್ಲವನ್ನೂ ಪ್ರಜ್ಞಾಪೂರ್ವಕವಾಗಿ ಸಾಧಿಸಬೇಕಾದರೆ ವ್ಯಕ್ತಿಯ ಸುಧಾರಣೆ ಮುಖ್ಯ. ಜೊತೆಗೆ ದೇಶಕ್ಕಾಗಿ ಜನತೆಯ ಕರ್ತವ್ಯ ಮುಖ್ಯವೆನಿಸುತ್ತದೆ.

ಮಹಾಭಾರತ ಮಹಾಕಾವ್ಯದ ಶ್ರೇಷ್ಠತೆಯನ್ನು ಡಾ। ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಹೀಗೆ ಹೇಳುತ್ತಾರೆ- ''ಅಸಂಖ್ಯಾತ ಮಹಾಪುರುಷ ತಪಸ್ವಿ ಋಷಿಗಳ ಶಾಸನ ಆಶೀರ್ವಚನ ಶುಭಾಶಯಗಳನ್ನೊಳಗೊಂಡ ಭಾರತ ಗ್ರಂಥ; ಅವರ ತಪಸ್ಸು, ಜ್ಞಾನ, ಧರ್ಮನಿಷ್ಠೆ, ಸತ್ಯಸಂಕಲ್ಪದಿಂದೊಡಗೂಡಿ ನಿಂತಿರುವ ಮಾನಸ ಸರೋವರ, ಪಾವನ ತೀರ್ಥ.''

## ಕಾವ್ಯದ ಕರ್ತೃ

ಮಹಾಭಾರತ ಕಾವ್ಯದ ಕರ್ತೃ ವೇದವ್ಯಾಸರು ಬ್ರಹ್ಮ ಋಷಿಯ ಮರಿಮಗ. ಶಕ್ತಿಯ ಮೊಮ್ಮಗ, ಸತ್ಯವತಿ - ಪರಾಶರರ ಪುತ್ರ. ಶ್ಯಾಮಲ ದೇಹಕಾಂತಿಯಿಂದ ಕೂಡಿದ್ದರಿಂದ 'ಕೃಷ್ಣ'ನೆಂದೂ, ದ್ವೀಪದಲ್ಲಿ ಹುಟ್ಟಿದ್ದರಿಂದ 'ದ್ವೈಪಾಯನ'ನೆಂದೂ, ಬದರಿಯಲ್ಲಿ ನೆಲೆಸಿದ್ದರಿಂದ 'ಬಾದರಾಯಣ'ನೆಂದೂ, ವೇದಗಳನ್ನು ವಿಭಾಗ ಮಾಡಿದ್ದರಿಂದ 'ವೇದವ್ಯಾಸ'ನೆಂದೂ ಈತನಿಗೆ ಅಭಿದಾನಗಳಿವೆ. ಆತನ 'ಸಾಕ್ಷೀ ಪ್ರಜ್ಞೆ' ಎಲ್ಲಾ ಪಾತ್ರಗಳಲ್ಲೂ ಸಮಾನವಾಗಿ ಹರಡಿರುವುದನ್ನು ಗುರುತಿಸಬಹುದು. ವೇದವ್ಯಾಸರ ಔದಾರ್ಯವೇ ಮಹಾಭಾರತ ಮಹಾಕಾವ್ಯದ ಪ್ರಮುಖ ಲಕ್ಷಣ. ಸತ್ಯವತಿಯ ಪುತ್ರನಾದ ವೇದವ್ಯಾಸನಿಗೆ ಕುರುವಂಶದೊಡನೆ ಇರಬಹುದಾದ ಸಂಬಂಧವನ್ನು ನೆನೆಸಿಕೊಂಡರೂ ಆತ ಮಹಾಭಾರತ ಮಹಾಕಾವ್ಯದಲ್ಲಿ ತೋರಿರುವ 'ಸಾಕ್ಷೀಪ್ರಜ್ಞೆ'ಯ ಔನ್ನತ್ಯವನ್ನು ಯಾರೂ ಅಲಕ್ಷಿಸುವಂತಿಲ್ಲ.

ಮಹಾಭಾರತ ರಚನಾ ಕಾಲದ ಬಗ್ಗೆ ಸಾಕಷ್ಟು ಚರ್ಚೆ ಹಾಗೂ ಸಂಶೋಧನೆಗಳು ಜರುಗಿವೆ. ಸಾಂಪ್ರದಾಯಿಕವಾಗಿ ಹೇಳುವುದಾದರೆ ಮಹಾಭಾರತ ಯುದ್ಧ ಕ್ರಿ.ಪೂ. ೩೧೦೨ರಲ್ಲಿ ನಡೆದಿರಬೇಕು. ಆದರೆ ಇತಿಹಾಸ ಸಂಶೋಧಕರು ಈ ವಾದವನ್ನು ಒಪ್ಪುವುದಿಲ್ಲ. ಮಹಾಭಾರತ ಯುದ್ಧ ಕ್ರಿ.ಪೂ. ೧೪೦೦ರಲ್ಲಿ ನಡೆದಿರಬಹುದೆಂದು ಹೇಳಲಾಗಿದೆ.

ಮಹಾಭಾರತ ಮಹಾಕಾವ್ಯದಲ್ಲಿ ಪ್ರಾಚೀನ ರೋಂ ನಗರದ ಹೆಸರಿನ ಉಲ್ಲೇಖವಿದೆ. ಕ್ರಿ.ಪೂ. ಒಂದನೆಯ ಶತಮಾನಕ್ಕಿಂತ ಹಿಂದೆ ಈ ಕಾವ್ಯ ಹುಟ್ಟಿರಲಾರದೆಂದು ಡಾ। ಕೆ. ಕೃಷ್ಣಮೂರ್ತಿ ಹೇಳುತ್ತಾರೆ.

ಮಹಾಭಾರತವು ಕ್ರಿ.ಪೂ. ೪೦೦ರ ವೇಳೆಗೆ ರಚಿತವಾಗಿದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಪ್ರಸಿದ್ಧ ವಿಲ್‌ಫೋರ್ಡ್ ಪ್ರಕಾರ ಮಹಾಭಾರತದ ರಚನಾಕಾಲ ಕ್ರಿ.ಪೂ. ೧೩೭೦.

ಬುರ್ಚನ್ ಫರ್‌ಗ್ಯೂಸನ್ ಹಾಗೂ ಆರ್. ಶ್ಯಾಮಾಶಾಸ್ತ್ರೀ ಮೊದಲಾದ ವಿದ್ವಾಂಸರು ಮಹಾಭಾರತದ ರಚನಾ ಕಾಲವನ್ನು ಕ್ರಿ.ಪೂ. ೧೫ನೆಯ ಶತಮಾನವೆಂದು ಹೇಳುತ್ತಾರೆ. ಬೆಂಟ್ಲೆಯವರ ಪ್ರಕಾರ ಮಹಾಭಾರತದ ಯುಧಿಷ್ಠಿರನ ಜೀವಿತದ ಕಾಲ ಕ್ರಿ.ಪೂ. ೫೭೫.

ವಿಂಟರ್ ನಿಟ್ಸ್ ಅವರು ಮಹಾಭಾರತ ಮಹಾಕಾವ್ಯ ರಚನಾ ಕಾಲವನ್ನು ಕ್ರಿ.ಪೂ. ೪೦೦ ರಿಂದ ಕ್ರಿ.ಶ. ೪೦೦ ಎಂದು ನಿರ್ಣಯಿಸಿರುತ್ತಾರೆ. ಕ್ರಿ.ಶ. ೫ನೆಯ ಶತಮಾನದಲ್ಲಿ ಮಹಾಭಾರತ ಮಹಾಕಾವ್ಯವನ್ನು ಹೆಸರಿಸುವ ಅನೇಕ ಶಾಸನಗಳು ದೊರಕಿವೆ. ಪ್ರೊ। ಎ.ಆರ್. ಕೃಷ್ಣ ಶಾಸ್ತ್ರಿಗಳು ಹೇಳುವಂತೆ- ''ಸುಮಾರು ೮೦೦ ವರ್ಷ ಬೆಳೆದು ನಿಂತಿರುವ ಮಹಾವೃಕ್ಷ. ಈಗ್ಗೆ ಸುಮಾರು ೧೫೦೦ ವರ್ಷಗಳ ಕೆಳಗೆ ಬೆಳೆದು ಇಂದಿರುವ ರೂಪವನ್ನು ತಾಳಿತು.''

ಯಜುರ್ವೇದದಲ್ಲಿ ಕುರು-ಪಾಂಚಾಲವನ್ನು ಸಂಯುಕ್ತ ರಾಷ್ಟ್ರವೆಂದೂ ಆದಕಾರಣ ಮಹಾಭಾರತ ರಚನಾ ಕಾಲವನ್ನು ಕ್ರಿ.ಪೂ. ೧೦ನೆಯ ಶತಮಾನವೆಂದೂ ಮೆಕ್ ಡೊನಾಲ್ಡ್ ಹೇಳುತ್ತಾನೆ.

ಮಹಾಭಾರತ ಹಲವು ಕವಿಗಳ ರಚನೆಯೆಂದೂ, ಕಾಲದಿಂದ ಕಾಲಕ್ಕೆ ವಿಕಾಸಗೊಂಡ 'ವೀರ ಮಹಾಕಾವ್ಯ'ವೆಂದೂ ಕೆಲವರು ಹೇಳುತ್ತಾರೆ. ಇದಕ್ಕೆ ರೆವರೆಂಡ್ ಲಾಲ್‌ಮನ್ ಹೀಗೆ ಅಭಿಪ್ರಾಯಪಡುತ್ತಾರೆ. ''ಇಡೀ ಮಹಾಗ್ರಂಥ ಒಬ್ಬನೇ ಕವಿಯ ರಚನೆ. ಮೊದಲಿನಿಂದಲೂ ಅದೊಂದು ಗ್ರಂಥವಾಗಿತ್ತು. ಇದು ಬುದ್ಧನ ಕಾಲಕ್ಕಿಂತ ಹಿಂದಿನ ಕಾವ್ಯ - ಭಗವದ್ಗೀತೆ ಅದರ ಕೇಂದ್ರ. ವಿಶೇಷವಾಗಿ ಕ್ಷತ್ರಿಯರಿಗೆ ರಚಿಸಲ್ಪಟ್ಟ ಭಾಗವತ ಧರ್ಮದ ಕೈಪಿಡಿಗೆ ಪ್ರಮುಖವಾದುದು.'' ಒಟ್ಟಾರೆ ಮಹಾಭಾರತ ತಪಸ್ಸು, ಸತ್ಯ, ಸದಾಚಾರ ಮುಂತಾದ ಮೌಲ್ಯಗಳನ್ನು ಎತ್ತಿ ಹಿಡಿಯುತ್ತದೆ. ಆದರ್ಶ-ಅನಾದರ್ಶಗಳನ್ನು ಚಿತ್ರಿಸಿ ಆದರ್ಶವನ್ನು ಓದುಗರ ಮನದಲ್ಲಿ ಮೂಡಿಸುವ ವಿಶಿಷ್ಟ ಕಾವ್ಯವೇ ಮಹಾಭಾರತ.

## ಕನ್ನಡ ಸಾಹಿತ್ಯದಲ್ಲಿ ಮಹಾಭಾರತ

ಕನ್ನಡ ಸಾಹಿತ್ಯದ ಭಾಗ್ಯ, ನಮ್ಮ ಆದಿಕಾವ್ಯ ಪಂಪಮಹಾಕವಿ ವಿರಚಿತ (ಕ್ರಿ.ಶ. ೯೪೨) 'ವಿಕ್ರಮಾರ್ಜುನ ವಿಜಯಂ' ಅಥವಾ 'ಪಂಪಭಾರತಂ' ಆಗಿದೆ. ಈತ ವೇಂಗಿ ಚಾಲುಕ್ಯರ ಎರಡನೆಯ ಅರಿಕೇಸರಿ (ಕ್ರಿ.ಶ. ೯೪೦) ಯ ಆಸ್ಥಾನದಲ್ಲಿದ್ದ. ಮೂಲತಃ

ದಂಡನಾಯಕನಾದ ಪಂಪ ವೇದವ್ಯಾಸರ ಮಹಾಕೃತಿ ಮಹಾಭಾರತವನ್ನು ತನ್ನ 'ಲೌಕಿಕ ಪ್ರಜ್ಞೆ'ಯಿಂದ ಕನ್ನಡಕ್ಕಿಳಿಸಿದನು. ಪಂಪನ ಮಹಾಕಾವ್ಯ 'ವಿಕ್ರಮಾರ್ಜುನ ವಿಜಯಂ' ಮೂಲತಃ ಕಾವ್ಯವಾದರೂ ಸಮಕಾಲೀನ ರಾಜಕೀಯ ವಿಚಾರಗಳನ್ನು ತಿಳಿಯಲು ಕರ್ನಾಟಕದ ಇತಿಹಾಸಕಾರರಿಗೆ ಆಕರ ಗ್ರಂಥವಾಗಿರುವುದನ್ನು ಮರೆಯುವಂತಿಲ್ಲ. ಬಾದಾಮಿ ಚಾಲುಕ್ಯರು, ವೆಂಗಿ ಚಾಲುಕ್ಯರು, ರಾಷ್ಟ್ರಕೂಟ ರಾಜಮನೆತನಗಳ ಇತಿಹಾಸ ತಿಳಿಯಲು ಆದಿಕವಿ ಪಂಪನ ಕೃತಿ ಸಾಕಷ್ಟು ಸಹಾಯ ನೀಡುತ್ತದೆ. ಮೂಲತಃ ದಂಡನಾಯಕನಾದ ಪಂಪನಿಗೆ ಮಹಾಭಾರತ ಕಥೆ ಲೌಕಿಕ ಕಥನವಾಯಿತು. ವೇಮುಲವಾಡ ಹಾಗೂ ಪರಬಣಿ ಶಾಸನಗಳಲ್ಲಿ ದೊರಕುವ ಐತಿಹಾಸಿಕ ವಿವರಗಳು ಪಂಪನ ಕೃತಿಯಲ್ಲಿ ದೊರಕುತ್ತವೆ. ರಾಷ್ಟ್ರಕೂಟರ ಚಕ್ರವರ್ತಿ ನಾಲ್ಕನೆಯ ಗೋವಿಂದ ಹಾಗೂ ಬದ್ದೆಗ ದೇವನೊಡನೆ ಅಧಿಕಾರಕ್ಕಾಗಿ ನಡೆದ ಅಂತಃಕಲಹದ ವಿವರ ಆ ಶಾಸನಗಳಲ್ಲೂ ಹಾಗೂ ಪಂಪನ ಕೃತಿಗಳಲ್ಲೂ ಸಮಾನವಾಗಿ ದೊರಕುತ್ತವೆ. ಇದು ಅವನ ರಾಜಕೀಯ ಪ್ರಜ್ಞೆಯನ್ನು ತಿಳಿಯಲು ಸಹಾಯಕವಾದ ವಿಚಾರವಾಗಿದೆ.

ಪಂಪನ ಮಾನಸ ಪುತ್ರನಾದ ರನ್ನ ಮಹಾಕವಿ (ಕ್ರಿ.ಶ. ೯೯೩) 'ಸಾಹಸಭೀಮ ವಿಜಯಂ' ಅಥವಾ 'ಗದಾಯುದ್ಧ' ಎಂಬ ಮಹಾಭಾರತ ಆಧಾರಿತ ಮಹಾಕಾವ್ಯ ರಚಿಸಿದ್ದಾನೆ. ಪಂಪನಂತೆ ಈತ ಸಹ ತನ್ನ ಕಥಾನಾಯಕ ಭೀಮನನ್ನು ಕಲ್ಯಾಣಿ ಚಾಲುಕ್ಯರ ಸತ್ಯಾಶ್ರಯ (ಕ್ರಿ.ಶ. ೯೯೭ ರಿಂದ ೧೦೦೮)ನಲ್ಲಿ ಸಮೀಕರಿಸಿದ್ದಾನೆ. ದಾನಚಿಂತಾಮಣಿ ಅತ್ತಿಮಬ್ಬೆಯ (ಕ್ರಿ.ಶ. ೧೦೦೭) ವ್ಯಕ್ತಿತ್ವವನ್ನು ಹೇಳುವ ಲಕ್ಕುಂಡಿ ಶಾಸನವನ್ನು ಈತನೇ ಬರೆದನೆಂಬ ಅಭಿಪ್ರಾಯವಿದೆ. ಮೂಲತಃ ಶಾಸನ ರಚನಕಾರ ರನ್ನನಿಗೆ ಸಮಕಾಲೀನ ವಿಚಾರಗಳು ತುಂಬಾ ಪ್ರಿಯವೆನಿಸಿದ್ದವು.

### ಕುಮಾರವ್ಯಾಸನ ಆಗಮನ ಹಾಗೂ ಆತನ ಶ್ರೇಷ್ಠತೆ

ಪಂಪ-ರನ್ನರ ಕಾಲ ಕೂಡಾ ಕರ್ನಾಟಕದ ಇತಿಹಾಸದಲ್ಲಿ ಅತ್ಯಂತ ಮಹತ್ವದ ಕಾಲ. ಕನ್ನಡನಾಡಿನ ರಾಜರು ತಮ್ಮ ಶೌರ್ಯ ಪ್ರತಾಪಗಳಿಂದಾಗಿ ಇಡೀ ರಾಷ್ಟ್ರದಲ್ಲೇ ಖ್ಯಾತರಾದರು. ಅದು ವೀರಯುಗ ಎಂದು ಕರ್ನಾಟಕ ಇತಿಹಾಸದಲ್ಲಿ ದಾಖಲಿಸಲ್ಪಟ್ಟಿದೆ. ಪಂಪ-ರನ್ನರಿಬ್ಬರೂ ಜೈನರಾದ ಕಾರಣ ವೈದಿಕ ಪರಂಪರೆಯ ಮಹಾಭಾರತ ಅವರಿಗೆ ಪೂರ್ಣ ಲೌಕಿಕ ಕೃತಿಯೆನಿಸಿತು. ಸೃಜನಶೀಲ ಪ್ರತಿಭೆಯ ಪ್ರಕಾಶನಕ್ಕೆ ಸೂಕ್ತ ವೇದಿಕೆಯಾಯಿತು.

ಪಂಪ ರನ್ನರ ನಂತರ ಅಂದರೆ ನಾನ್ನೂರು ವರ್ಷಗಳ ತರುವಾಯ ಸುಮಾರು ಕ್ರಿ.ಶ. ೧೪೩೦ರಲ್ಲಿ ಗದುಗಿನ ನಾರಣಪ್ಪ ಅರ್ಥಾತ್ ಕುಮಾರವ್ಯಾಸ 'ಕರ್ಣಾಟ ಭಾರತ ಕಥಾಮಂಜರಿ' ಎಂಬ ಮಹಾಕಾವ್ಯ ರಚಿಸಿದ್ದಾನೆ. ಇದು ವ್ಯಾಸಮಹರ್ಷಿಗಳ ಮಹಾಭಾರತದ ಕನ್ನಡಾನುವಾದ, ಆದರೆ ಮಕ್ಕೀಕಾಮಕ್ಕಿ ಅನುವಾದವಲ್ಲ. ವ್ಯಾಸಭಾರತದ ಚಿನ್ನವನ್ನು ತಂದು ಕನ್ನಡ ಶ್ರೋತೃಗಳಿಗೆ ಅವರು ಮನಮೆಚ್ಚುವಂತೆ ವಿವಿಧ ಒಡವೆಗಳನ್ನು ಮಾಡಿಕೊಟ್ಟ ಹೆಗ್ಗಳಿಕೆ ನಾರಣಪ್ಪನದು. ಹುಲ್ಲನ್ನು ಮೇದು ಸವಿಯಾದ ಅಮೃತವನ್ನು ಕೊಡುವ ಆಕಳಂತೆ ಕುಮಾರವ್ಯಾಸ. ವ್ಯಾಸರಿಂದ ರಚಿತವಾದ ಮಹಾಭಾರತವನ್ನು ಚೆನ್ನಾಗಿ ಜೀರ್ಣಿಸಿಕೊಂಡು ನಿತ್ಯನೂತನ ಕಾವ್ಯ ರಚಿಸಿದ್ದಾನೆ.

ಕುಮಾರವ್ಯಾಸನೆಂದೇ ಖ್ಯಾತನಾಗಿರುವ ನಾರಣಪ್ಪ ಬಹುಶ್ರುತನಾದ ಮಹಾಕವಿ. ಅಷ್ಟೇ ಅಲ್ಲ, ಆತ ಸರ್ವದರ್ಶನದ ಸಮನ್ವಯಕಾರ. ಲೌಕಿಕ ಹಾಗೂ ಪಾರಮಾರ್ಥಿಕ ಸಾಮರಸ್ಯಕ್ಕಾಗಿ ತನ್ನ ಕಾವ್ಯಶಕ್ತಿಯನ್ನು ಸಮರ್ಪಕವಾಗಿ ಬಳಸಿಕೊಂಡ ವರಕವಿ. ಲೌಕಿಕ ಹಾಗೂ ಅಲೌಕಿಕ ಜೀವನವನ್ನು ಬಿಡಿ ಬಿಡಿಯಾಗಿ ನೋಡದೆ ಎರಡನ್ನೂ ಒಂದೆಂಬಂತೆ ಜೀವನದ ಎರಡು ಮುಖಗಳೆಂಬಂತೆ ತನ್ನ ಕೃತಿಯಲ್ಲಿ ಚಿತ್ರಿಸಿದ ಕ್ರಾಂತಿಕಾರಿ ಕವಿ.

ಗೀತೋಪನಿಷತ್, ಪುರಾಣ, ಆಗಮ, ನಾಟಕ, ಜ್ಯೋತಿಷ್ಯ, ಕಾವ್ಯ ಮೊದಲಾದವುಗಳಲ್ಲಿನ ಆತನ ಜ್ಞಾನ ಅವನ ಕಾವ್ಯಕ್ಕೆ ಹೊಸ ಮೆರುಗು ಕೊಟ್ಟಿದೆ. ಪಂಪನಿಗೆ ಅರ್ಜುನ, ರನ್ನನಿಗೆ ಭೀಮ ಕಥಾನಾಯಕರಾಗಿದ್ದಾರೆ. ಆದರೆ ಇವರಿಬ್ಬರ ಮನಸ್ಸನ್ನು ಕ್ರಮವಾಗಿ ಕರ್ಣ ಹಾಗೂ ದುರ್ಯೋಧನರಂತಹ ಪ್ರತಿನಾಯಕರು ಅಪಹರಿಸಿದ್ದಾರೆ. ಆದರೆ ಕುಮಾರವ್ಯಾಸನ ವಿಚಾರದಲ್ಲಿ ಹಾಗಿಲ್ಲ. ಅವನಿಗೆ ಕೃಷ್ಣನೊಬ್ಬನೇ ನಾಯಕ. ಕುಮಾರವ್ಯಾಸನ ಅಖಂಡ ಭಕ್ತಿ, ಪ್ರೀತಿ ಹಾಗೂ ಗೌರವಗಳನ್ನು ಶ್ರೀಕೃಷ್ಣನೊಬ್ಬನೇ ಪಡೆದಿದ್ದಾನೆ. 'ಶ್ರೀಕೃಷ್ಣ ಚರಿತೆ' ಎಂದೇ ಖ್ಯಾತವಾಗಿರುವ ಅವನ ಕೃತಿ ಈ ಕಾರಣಕ್ಕಾಗಿ ಕನ್ನಡದ ವಿನೂತನ ಕಾವ್ಯವಾಗಿದೆ.

ಲೋಕಾನುಭವ ಸಂಪನ್ನನೂ, ಪ್ರತಿಭಾಶೀಲನೂ, ಕ್ರಾಂತದರ್ಶಿಯೂ ಆದ ಕುಮಾರವ್ಯಾಸನ ಸಮಗ್ರ ವ್ಯಕ್ತಿತ್ವ ಮಹಾಭಾರತ ಕಾವ್ಯದಲ್ಲಿ ಪಡಿಮೂಡಿರುವುದನ್ನು ಗಮನಿಸಬಹುದು. ಡಾ। ದೇಜಗೌ ಹೇಳುವಂತೆ ''ಜಗತ್ತಿನ ಮಹಾಕಾವ್ಯಗಳಿಗೆ ಹೊಯ್‌ಕೈಯಾಗಿ ನಿಲ್ಲಬಲ್ಲ ಕೃತಿ ಗದುಗಿನ ಭಾರತ''.

ಪ್ರೊ। ಎಚ್. ಎಂ. ಶಂಕರನಾರಾಯಣರಾಯರು ಕುಮಾರವ್ಯಾಸನ ಮಹತ್ವವನ್ನು ಹೀಗೆ ಕಂಡರಿಸಿದ್ದಾರೆ. ''ವ್ಯಾಸ ಭಾರತದ ಕಥೆಯಿಂದ ತನ್ನ ಕಾವ್ಯದ ನೆಲೆಗಟ್ಟನ್ನು ಭದ್ರಪಡಿಸಿ, ಪಂಪಭಾರತದ ಸಾರವನ್ನು ಹೀರಿಕೊಂಡು, ಭಾಸನೇ ಮೊದಲಾದ ಕವಿಗಳನ್ನು ಅನುಸರಿಸಿ ನಡೆದಿದ್ದರೂ ಮೊದಲಿನಿಂದಲೂ ತುದಿಯವರೆಗೂ ಕಾವ್ಯದಲ್ಲಿ ಕವಿಯ ಸ್ವಂತಿಕೆಯ ಮುದ್ರೆ ಬಿದ್ದಿದೆ''

ಪ್ರೊ। ತ.ಸು. ಶಾಮರಾಯರ ಪ್ರಕಾರ - ''ಕುಮಾರವ್ಯಾಸನ ಭಾರತ ಸಂಸ್ಕೃತ ಭಾರತದ ಪ್ರತಿಕೃತಿಯಲ್ಲ. ಅದು ಸ್ವತಂತ್ರವಾದ ಕೃತಿ''. ಡಾ। ಸಿ.ಪಿ.ಕೆ. ಕುಮಾರವ್ಯಾಸನ ಮಹತ್ವವನ್ನು ಹೀಗೆ ಕಂಡರಿಸಿದ್ದಾರೆ. ''ಅನೇಕ ದೃಷ್ಟಿಗಳಿಂದ ಅದ್ವಿತೀಯನಾದ ಕವಿ ನಾರಣಪ್ಪ. ಅವನಿಗೆ ಸಾಟಿಯಾಗುವ ಕವಿ ಅನ್ಯಸಾಹಿತ್ಯದಲ್ಲೂ ದುರ್ಲಭವೇ! ಪ್ರಾಕೃತ ರೂಕ್ಷತೆಯಲ್ಲಿ, ಶಕ್ತಿ ಪರಿಪೂರ್ಣತೆಯಲ್ಲಿ, ಭಾವಾವೇಶದಲ್ಲಿ, ಭಾಷೆಯ ಬಳಕೆಯಲ್ಲಿ ಕುಮಾರವ್ಯಾಸನನ್ನು ಷೇಕ್ಸ್‌ಪಿಯರ್ ಕವಿಗೆ ಹೋಲಿಸಬಹುದು. ಆದರೆ ಈ ಹೋಲಿಕೆಯೂ ಯಾವುದೋ ಹಂತದಲ್ಲಿ ನಿಂತುಬಿಡುತ್ತದೆ.''

ಪ್ರೊ। ಕೆ. ವೆಂಕಟರಾಮಪ್ಪ ಅವರು ''ಕುಮಾರವ್ಯಾಸನು ಭಕ್ತಿ ರಸಾವೇಶದಿಂದ ಮೈಮರೆತು ಗಗನಚುಂಬಿಯಾಗುವಂತೆ ಬರೆದಿರುವ ಭಾಗಗಳಿಗೆ ಹೋಲಿಸಲು ಕನ್ನಡದಲ್ಲಿ ಮತ್ತೊಂದು ಕಾವ್ಯವಿಲ್ಲ'' ಎನ್ನುತ್ತಾರೆ. ಕುಮಾರವ್ಯಾಸನ ಕಾವ್ಯವನ್ನು ಡಾ। ಎ.ಆರ್. ಕೃಷ್ಣಶಾಸ್ತ್ರಿಗಳು 'ಕನ್ನಡ ಸಾಹಿತ್ಯದ ಗೋಪುರಕ್ಕೆ ಇಟ್ಟಿರುವ ಬಂಗಾರದ ಕಲಶಗಳಲ್ಲಿ ಒಂದು'' ಎಂದು ಹೇಳುತ್ತಾರೆ. ಕನ್ನಡದ ಕಣ್ವರೆಂದು ಖ್ಯಾತರಾಗಿರುವ ಪ್ರೊ। ಬಿ.ಎಂ.ಶ್ರೀ. ಅವರು 'ಕುಮಾರವ್ಯಾಸ ನಮ್ಮ ಕವಿಗಳಲ್ಲಿ ಹಿರಿಯ ತಲೆ, ಹಿರಿಯರಲ್ಲಿ ಹಿರಿಯ, ನಮ್ಮ ಸಾಹಿತ್ಯದ ಉತ್ತಮ ರತ್ನಗಳಲ್ಲಿ ನಾಯಕ ರತ್ನ'' ಎಂದು ವರ್ಣಿಸುತ್ತಾರೆ.

ಪಂಪ-ಕುಮಾರವ್ಯಾಸರು ಎರಡು ಉನ್ನತ ಗಿರಿಶಿಖರಗಳು. ಅದಕ್ಕಾಗಿಯೇ ಕನ್ನಡ ಸಾಹಿತ್ಯ ಚರಿತ್ರೆ ಕ್ರಮವಾಗಿ ಪಂಪಯುಗ, ಕುಮಾರವ್ಯಾಸ ಯುಗ ಎಂದು ಗುರುತಿಸಿದೆ. ಪಂಪ-ನಾರಣಪ್ಪರ ಕೃತಿಗಳು ಆಯಾ ಯುಗಧರ್ಮದ ಪ್ರಣಾಳಿಕೆಗಳಾಗಿವೆ. ಪಂಪಭಾರತದಲ್ಲಿ ಅಂದಿನ ಯುಗಮೌಲ್ಯವಾದ ವೀರರಸ ಅಭಿವ್ಯಕ್ತಿಯಾಗಿದ್ದರೆ ಕುಮಾರವ್ಯಾಸನ ಕಾವ್ಯದಲ್ಲಿ ಆ ಕಾಲದ ಭಕ್ತಿ ವೀರರಸಗಳೆರಡೂ ಆವಿಷ್ಕಾರಗೊಂಡಿವೆ. ಕುಮಾರವ್ಯಾಸನ ಭಾರತವು ಜನಮನದಲ್ಲಿ ಪೂಜ್ಯವೂ, ಅದ್ವಿತೀಯವೂ ಆದ ಸ್ಥಾನವನ್ನು ಸಂಪಾದಿಸಿಕೊಂಡಿದೆ. ''ಪಂಚಮವೇದ'' ಎಂಬ ಹಿರಿಮೆಗೆ ಅದು ಪಾತ್ರವಾಗಿದೆ. ಅದು ಮೊದಲಿಗೆ ಇತಿಹಾಸ, ಅನಂತರ ಕಾವ್ಯ, ಆಮೇಲೆ ಪುರಾಣ ಎಂಬ ಅಭಿಪ್ರಾಯವನ್ನು ಸಹ ವಿಮರ್ಶಕರು ವ್ಯಕ್ತಪಡಿಸಿದ್ದಾರೆ.

## ಹೊಸ ಅಧ್ಯಯನದ ದೃಷ್ಟಿ

ಕುಮಾರವ್ಯಾಸನನ್ನು ಅಧ್ಯಯನಕ್ಕೆ ತೆಗೆದುಕೊಳ್ಳದ ಕನ್ನಡದ ವಿಮರ್ಶಕರೇ ಇಲ್ಲ. ಅವರೆಲ್ಲಾ ಬಹುಮಟ್ಟಿಗೆ ಕುಮಾರವ್ಯಾಸನ ಕಥಾವಸ್ತು, ಸಂಭಾಷಣೆ, ಶೈಲಿ, ರೂಪಕ, ಪಾತ್ರ ಚಿತ್ರಣ, ಭಕ್ತಿ ಹಾಗೂ ಅಧ್ಯಾತ್ಮ ವಿಚಾರಗಳಿಗೆ ಹೆಚ್ಚಿನ ಒತ್ತು ಕೊಟ್ಟಿದ್ದಾರೆ. ಕುಮಾರವ್ಯಾಸನ ಕಾವ್ಯದಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ವಿಚಾರಗಳ ವ್ಯಾಪಕ ಅಧ್ಯಯನ ನಡೆಯಬೇಕಾಗಿದೆ. ಮಧ್ಯಕಾಲೀನ ಕರ್ನಾಟಕವನ್ನು ಅಂದರೆ ಕ್ರಿ.ಶ. ೧೩೩೬ರಿಂದ ೧೫೬೫ರ ಕರ್ನಾಟಕದ ರಾಜಕೀಯ ಹಾಗೂ ಸಾಮಾಜಿಕ ಘಟನೆಗಳ ಹಿನ್ನೆಲೆಯಲ್ಲಿ ಕುಮಾರವ್ಯಾಸ ಕಾವ್ಯದ ಅಧ್ಯಯನ ನಡೆಯಬೇಕಾಗಿದೆ.

೧೯೭೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಕುಲಪತಿಗಳೂ, ಕನ್ನಡದ ಹೆಸರಾಂತ ಲೇಖಕರೂ ಆದ ಡಾ। ದೇಜಗೌ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ 'ಗದುಗಿನ ಭಾರತ ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ವಿಶೇಷ ಉಪನ್ಯಾಸ ನೀಡಿದ್ದಾರೆ. ಅದು ಗ್ರಂಥರೂಪದಲ್ಲಿ ಪ್ರಕಟವಾಗಿದೆ. ಅದರಲ್ಲಿ ಡಾ। ದೇಜಗೌ ಅವರು ಕುಮಾರವ್ಯಾಸನ ರಾಜಕೀಯ ಸಂಸ್ಕೃತಿ, ಮತೀಯ ಸಂಸ್ಕೃತಿ ಹಾಗೂ ಸಾಮಾಜಿಕ ಸಂಸ್ಕೃತಿಗಳ ವ್ಯಾಪಕ ಅಧ್ಯಯನ ನಡೆಸಿದ್ದಾರೆ. ಅದನ್ನು ಹೊರತುಪಡಿಸಿ ಕುಮಾರವ್ಯಾಸನ 'ಗದುಗಿನ ಭಾರತ'ವನ್ನು ಸಾಹಿತ್ಯೇತರ ದೃಷ್ಟಿಯಿಂದ ಯಾರೂ ಅಧ್ಯಯನ ಮಾಡಿಲ್ಲ. ಕುಮಾರವ್ಯಾಸ ತನ್ನ ಪರಂಪರೆಯನ್ನು ಚೆನ್ನಾಗಿ ಮನನ ಮಾಡಿಕೊಂಡು ಮುಂದಡಿಯಿಟ್ಟಿದ್ದಾನೆ. ಪಂಪ, ರನ್ನರ ಮಾರ್ಗ ಆತನಿಗೆ ಅಪರಿಚಿತವಾಗಿರಲಿಲ್ಲ. ಭಾಷೆಯ ಬಳಕೆಯಲ್ಲಿ ವಚನಕಾರರಿಂದಲೂ ಪ್ರಭಾವಿತನಾಗಿದ್ದಾನೆ. ಪ್ರೊ। ಸುಜನಾ ಅವರು ''ಬಸವಣ್ಣನನ್ನೂ ಕುಮಾರವ್ಯಾಸನನ್ನೂ ಭಾವಸಹೋದರರು'' ಎಂದು ಕರೆಯುತ್ತಾರೆ. ಹರಿಹರ-ರಾಘವಾಂಕರ ಕೃತಿಗಳು ಅವನಿಗೆ ಪರಿಚಿತವೇ! ಸಂಸ್ಕೃತದ ಭಾಸ, ಭವಭೂತಿ, ಯಜ್ಞನಾರಾಯಣರ ಕೃತಿಗಳ ಆಳವಾದ ಅಧ್ಯಯನ ಅವನಲ್ಲಿತ್ತು. ಅಂದರೆ ಕುಮಾರವ್ಯಾಸನ 'ಜ್ಞಾನ ಸಂಗ್ರಹ ಭಂಡಾರ' ಸಂಪದ್ಭರಿತವಾಗಿತ್ತೆಂದು ಹೇಳಬಹುದು.

## ಮಹತ್ವದ ಸಮಕಾಲೀನ ರಾಜಕೀಯ ಘಟನೆಗಳು

ಕುಮಾರವ್ಯಾಸನಿಗೆ ಸಮಕಾಲೀನ ರಾಜಕೀಯ ಪರಿಸ್ಥಿತಿಯ ಆಳವಾದ ಜ್ಞಾನವಿತ್ತು. ಕುಮಾರವ್ಯಾಸನ ಜೀವಿತ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರೌಢದೇವರಾಯ (ಕ್ರಿ.ಶ. ೧೪೨೨-೧೪೩೬) ಹಾಗೂ ಬಹಮನಿ ಸಾಮ್ರಾಜ್ಯದ ೩ನೆಯ ಅಲ್ಲಾವುದ್ದೀನ್ ಅಹಮ್ಮದ್ ರಾಜ್ಯಭಾರ ಮಾಡುತ್ತಿದ್ದರು. ಪ್ರತಿನಿತ್ಯ ಇವರ ನಡುವೆ ಯುದ್ಧ ನಡೆಯುತ್ತಿತ್ತು. ಒಮ್ಮೆ ವಿಜಯನಗರದ ಅರಸು ಗೆದ್ದರೆ ಮತ್ತೊಮ್ಮೆ ಬಹಮನಿ ಅರಸರು ಗೆಲ್ಲುತ್ತಿದ್ದರು. ಪ್ರೌಢದೇವರಾಯನ ಕಾಲದಲ್ಲಿ ಹತ್ತು ಸಾವಿರ ಟರ್ಕಿಯೋಧರು ವಿಜಯನಗರದ ಸೈನ್ಯದಲ್ಲಿದ್ದರೆಂದು ಇತಿಹಾಸ ಹೇಳುತ್ತದೆ.[೧] ಕುಮಾರವ್ಯಾಸನ ಕಾವ್ಯದಲ್ಲಿ ಮ್ಲೇಚ್ಛರ ವಿಚಾರಕ್ಕೆ ಕಾರಣ ಆ ಕಾಲದ ರಾಜಕೀಯ ಪರಿಸ್ಥಿತಿ ಎನ್ನಬಹುದು.

ಪ್ರೌಢದೇವರಾಯನ ಕಾಲ ವಿಜಯನಗರದ ಆಳ್ವಿಕೆಯ ಕಾಲದಲ್ಲಿ ತುಂಬಾ ವೈಭವೋಪೇತವಾದ ಕಾಲ. ಆತನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಕೇರಳವೂ ಸೇರಿದಂತೆ ದಕ್ಷಿಣದಲ್ಲಿ ರಾಜ್ಯವನ್ನು ವಿಸ್ತರಿಸಲು ಸಾಧ್ಯವಾಯಿತು. ಸಿಲೋನ್ ದ್ವೀಪವು ಅವನಿಗೆ ಶರಣಾಯಿತು. ಅಂದರೆ ಕುಮಾರವ್ಯಾಸನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯ ತನ್ನ ಸುವರ್ಣ ದಿನಗಳನ್ನು ಕಾಣುವತ್ತ ಮುನ್ನುಗ್ಗುತ್ತಿತ್ತು. ಪರ್ಷಿಯಾದ ಪ್ರವಾಸಿ ಅಬ್ದುಲ್ ರಜಾಕ್ ಆ ಕಾಲದಲ್ಲಿ ವಿಜಯನಗರಕ್ಕೆ ಬಂದಿದ್ದು ಆ ವೈಭವವನ್ನು ಹೀಗೆ ದಾಖಲಿಸಿದ್ದಾನೆ. ''ಎಲ್ಲೆಲ್ಲೂ ಮನೆಗಳು, ತೋಟಗಳು ತುಂಬಿವೆ. ಅನೇಕಾನೇಕ ಅಂಗಡಿಗಳಿವೆ. ಒಂದು ಪ್ರಮುಖವಾದ ಪೇಟೆ ಬೀದಿಯಿದೆ. ಎಲ್ಲೆಲ್ಲೂ ಗುಲಾಬಿ ಹೂಗಳು ಮಾರಾಟವಾಗುತ್ತವೆ. ಹೂವುಗಳು ಈ ಜನರಿಗೆ ಆಹಾರದಷ್ಟೇ ಮುಖ್ಯವಾಗಿವೆ.''

ಕುಮಾರವ್ಯಾಸನ ಕಾವ್ಯದಲ್ಲಿ ಬ್ರಾಹ್ಮಣರಿಗೆ ವಿಶೇಷ ಆದ್ಯತೆ ಕೊಡಲಾಗಿದೆ. ಈ ಬಗ್ಗೆ ನ್ಯೂನಿಜ್ ದಾಖಲು ಮಾಡುವ ಕುತೂಹಲದ ಸಂಗತಿ ಹೀಗಿದೆ. ''ಅವರು (ಬ್ರಾಹ್ಮಣರು) ದಾನವಾಗಿ ಬೇಕಾದಷ್ಟು ಪಡೆಯುತ್ತಿದ್ದರು. ಅವರ ಬಳಿ ಯಾವಾಗಲೂ ತುಂಬಾ ಹಣವಿರುತ್ತಿತ್ತು, ಅವರು ಎಷ್ಟು ಉದ್ಧಟರಾಗಿದ್ದರೆಂದರೆ ಅರಮನೆಯಲ್ಲಿ ಬಾಗಿಲು ಕಾಯುವವರೂ ಅವರನ್ನು ತಡೆಯಲು ಸಾಧ್ಯವಾಗುತ್ತಿರಲಿಲ್ಲ!''

ಮಹಾಭಾರಾತದ ಕಥಾವಸ್ತು ದಾಯಾದಿಗಳ ಜಗಳ ತಾನೇ! ಕುಮಾರವ್ಯಾಸನ ಕಾಲದ ಒಂದು ಮರೆಯಲಾಗದ ಪ್ರಸಂಗವನ್ನು ಪರ್ಷಿಯಾದ ರಾಯಭಾರಿ ಅಬ್ದುಲ್ ರಜಾಕ್ ಹೀಗೆ ವರ್ಣಿಸುತ್ತಾನೆ. ''ರಾಜ ಮನೆತನದ ಸದಸ್ಯನೊಬ್ಬ (ಪ್ರಾಯಶಃ ಮಲತಮ್ಮ) ಮೋಸದಿಂದ ಸಿಂಹಾಸನ ಆಕ್ರಮಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ತಾನು ಕಟ್ಟಿಸಿದ ಹೊಸ ಅರಮನೆಗೆ ಹೋದ ಆತಿಥೇಯನು ರಾಜನೊಬ್ಬನೇ ಇದ್ದುದನ್ನು ನೋಡಿ ಅವನನ್ನು ಇರಿದು ಕೊಂದನು. ರಾಜನು ಸತ್ತು ಹೋದನೆಂದು ಭಾವಿಸಿ ಉಪ್ಪರಿಗೆಯ ಮೇಲಿನಿಂದ ತಾನೇ ಇನ್ನು ಮುಂದೆ ರಾಜನೆಂದು ಘೋಷಿಸಿದನು. ಆದರೆ ಕೇವಲ ಗಾಯಗೊಂಡಿದ್ದ ರಾಜನು (೨ನೆಯ ದೇವರಾಯ ಅಥವಾ ಪ್ರೌಢದೇವರಾಯ) ಅವನ ಬೆನ್ನ ಹಿಂದಿನಿಂದಲೇ ತೆವಳಿಕೊಂಡು ಬಂದು ತಾನು ಇನ್ನೂ ಬದುಕಿರುವುದಾಗಿ ಸಾರಿದನು. ರಾಜನ ಕಡೆಯವರು ಒಡನೆಯೇ ಆ ಕೊಲೆಗಾರನ ಮೇಲೆ ಬಿದ್ದು ಅವನನ್ನು ಮುಗಿಸಿ ಹಾಕಿದರು.''[೨]

ಹೊಯ್ಸಳ ಸಾಮ್ರಾಜ್ಯದಲ್ಲೂ ಇಂತಹ ಘಟನೆ ನಡೆದಿದ್ದವು ಆಗಲೇ ಈ ಪ್ರಸಂಗದ ಬಗೆ ಜನಜನಿತವಾಯಿತು. ಕುಮಾರವ್ಯಾಸರಿಗಿಂತ ಸುಮಾರು ೨೦೦ ವರ್ಷಗಳ ಹಿಂದಿದ್ದ ಹೊಯ್ಸಳರ ದೊರೆ ಸೋಮೇಶ್ವರ (೧೨೩೬-೧೨೫೭) ತಮಿಳುನಾಡು ವ್ಯವಹಾರದಲ್ಲಿ ಅನಗತ್ಯವಾಗಿ ತಲೆಹಾಕಿ ಕೊಣನೂರನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸುವಂತೆ ತನ್ನ ಮಗನಾದ ರಾಮನಾಥನಿಗೆ ಸೂಚಿಸಿದನು. ಅವನ ಮತ್ತೊಬ್ಬ ಮಗ ಮೂರನೆಯ ನರಸಿಂಹ ದೋರಸಮುದ್ರದಲ್ಲಿ ಆಳ್ವಿಕೆ ನಡೆಸುತ್ತಿದ್ದನು. (೧೨೫೪-೧೨೯೧) ಇವರಿಬ್ಬರ ನಡುವಿನ ದಾಯಾದಿ ಕಲಹವು ಹೊಯ್ಸಳ ಸಾಮ್ರಾಜ್ಯದ ಅವನತಿಗೆ ಕಾರಣವಾಯಿತು. ಅಂತಿಮವಾಗಿ ಮೂರನೇ ಬಲ್ಲಾಳ (ಕ್ರಿ.ಶ. ೧೨೯೧-೧೩೪೨)ನು ಈ ಸಂತತಿಯ ವಿಶ್ವನಾಥನನ್ನು ಸೋಲಿಸಿ ಹೊಯ್ಸಳ ಸಾಮ್ರಾಜ್ಯವನ್ನು ಒಂದುಗೂಡಿಸಿದನು. ಅಷ್ಟು ಹೊತ್ತಿಗೆ ಹೊಯ್ಸಳ ಸಾಮ್ರಾಜ್ಯ ಸಂಪೂರ್ಣವಾಗಿ ಶಿಥಿಲವಾಗಿತ್ತು. ಕ್ರಿ.ಶ. ೧೩೧೧ರಲ್ಲಿ ಉತ್ತರದ ದೊರೆ ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕಾಫರ್ ಧಾಳಿ ಮಾಡಿದಾಗ ೩ ನೆಯ ಬಲ್ಲಾಳ ಅವನಿಗೆ ಹಣ ನೀಡಿ ಮೊದಲ ಧಾಳಿ ತಪ್ಪಿಸಿಕೊಂಡ. ಮುಸ್ಲಿಂ ಧಾಳಿ ತಾತ್ಕಾಲಿಕ ಎಂದು ಭಾವಿಸಿದ್ದೇ ೩ನೆಯ ಬಲ್ಲಾಳನ ದೋಷವಾಗಿತ್ತು. ಅಂತಿಮವಾಗಿ ಕ್ರಿ.ಶ. ೧೩೪೨ರಲ್ಲಿ ಹೊಯ್ಸಳ ಸಾಮ್ರಾಜ್ಯ

೧. ಕರ್ನಾಟಕ ಚರಿತ್ರೆ, ಸಂ. ೩, ಪು. ೩ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಕರ್ನಾಟಕ ಚರಿತ್ರೆ, ಸಂಪುಟ, ೩, ಪುಟ. ೨೪೪, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಮಲ್ಲಿಕಾಫರನ ಧಾಳಿಗೆ ತುತ್ತಾಗಿ ನಾಶವಾಯಿತು. ಈ ಘಟನಾವಳಿಗಳೆಲ್ಲಾ ಕುಮಾರವ್ಯಾಸನ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿರುವುದಕ್ಕೆ ಸಾಧ್ಯವಿದೆ. ಕುಮಾರವ್ಯಾಸ ಶ್ರೀಕೃಷ್ಣನ ಬಾಯಲ್ಲಿ ''ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು. ಯುದ್ಧ ಧರ್ಮವೇ ಬೇರೆ, ಸಂಸಾರ ಧರ್ಮವೇ ಬೇರೆ'' ಎಂದು ಹೇಳಿಸಿದ್ದಾನೆ. ಆಕ್ರಮಣಕಾರರ ವಿರುದ್ಧದ ಯುದ್ಧ ಬೇರೆ ರೀತಿಯದು ಎಂದು ಕವಿ ಕುಮಾರವ್ಯಾಸ ಆ ಕಾಲದ ರಾಜರಿಗೆ ಮನವರಿಕೆ ಮಾಡಿಕೊಡಬೇಕಾಗಿತ್ತು.

**ರಾಜಕೀಯ ಸಿದ್ಧಾಂತ**

ನಮ್ಮ ಸಾಹಿತ್ಯ ಕೃತಿಗಳಲ್ಲಿನ ರಾಜಕೀಯ ತತ್ತ್ವ, ಸಿದ್ಧಾಂತ ಹಾಗೂ ಆಚರಣೆ ಕುರಿತಂತೆ ಪ್ರೊ। ಸುರೇಂದ್ರರಾವ್ ಹೇಳುವ ಮಾತು ಉಲ್ಲೇಖಾರ್ಹವಾದುದು. ''ಭಾರತೀಯ ರಾಜ್ಯಶಾಸ್ತ್ರ ಕೃತಿಗಳು ಹೆಚ್ಚೆಂದರೆ ರಾಜರಿಗೆ ಅಪೇಕ್ಷಣೀಯವೂ ಅಗತ್ಯವೂ ಆದ ಆದರ್ಶಗಳನ್ನು ಸೂಚಿಸುತ್ತಿದ್ದವು. ಆದರೆ ವಾಸ್ತವಿಕವಾಗಿ ಅದು ಆಚರಣೆಯಲ್ಲಿ ಹೇಗಿತ್ತೆಂಬುದನ್ನು ಅವು ಹೇಳುವುದಿಲ್ಲ.''[೧]

ಇಷ್ಟಾದರೂ ಕುಮಾರವ್ಯಾಸನ ಕಾವ್ಯದಲ್ಲಿ ಅನೇಕ ರಾಜಕೀಯದ ಸೂಕ್ಷ್ಮ ವಿಚಾರಗಳು ಪ್ರಸ್ತಾಪಿತವಾಗಿದೆ. ಕುಮಾರವ್ಯಾಸ ಚಿತ್ರಿಸಿದ ಕ್ಷಾತ್ರಧರ್ಮ ವೇದವ್ಯಾಸರು ಹೇಳಿದ ಕ್ಷಾತ್ರಧರ್ಮವೇ ಆಗಿರಬಹುದು. ಆದರೆ ತನ್ನ ಸಮಕಾಲೀನ ಪ್ರಜ್ಞೆಯಿಂದ ನಾರಣಪ್ಪ ಅನೇಕ ವಿಚಾರಗಳನ್ನು ಹೊಸದಾಗಿ ಚಿತ್ರಿಸಿರುವುದುಂಟು. ಪ್ರತಿಭಾನ್ವಿತ ಕವಿ ಸಮಾಜದ ಶಿಶುವಾದರೂ ಆ ಸಮಾಜಕ್ಕೆ ರೂಪಕೊಡಬಲ್ಲ ಮಾರ್ಗದರ್ಶಕ ಮಹಾನುಭಾವನಾಗುವುದುಂಟು.

ಆದಿಪರ್ವದ ಎಂಟನೆಯ ಸಂಧಿಯ ೨೬, ೩೫ ಹಾಗೂ ೪೫ ನೆಯ ಪದ್ಯಗಳು ರಾಜಕೀಯ ಮಹತ್ವವನ್ನು ದೃಢೀಕರಿಸುತ್ತವೆ. ಶಕುನಿ, ದುರ್ಯೋಧನನಿಗೆ ಹೇಳುವ ಈ ಮಾತು ಹಿಂದೆ ಎಲ್ಲಾ ರಾಜ ಮಹಾರಾಜರಿಗೂ ಅವರ ರಾಜಕೀಯ ಗುರುಗಳು ಹೇಳುತ್ತಿದ್ದ ಮಾತುಗಳೇ ಆಗಿವೆ. ರಾಜನಾದವನು ಸದಾಕಾಲ ಜಾಗೃತನಾಗಿರಬೇಕೆಂಬುದು ಇದರ ಆಶಯ:

**ಭಾವ ಮೈದುನನಣ್ಣ ತಮ್ಮನು**
**ಮಾವನಳಿಯನು ಪುತ್ರ ಮಿತ್ರರು**
**ಸೇವಕರು ಸಜ್ಜನರು ಸುಜನರು ಸತ್ಯಯುತರೆಂದು**
**ಭಾವಿಸದಿರಾರುವನು... (೮ನೇ ಸಂಧಿ, ೨೬ನೆ ಪದ್ಯ, ಪುಟ:೨೬)**

ಆಡಳಿತ ಸೂತ್ರ ತಿಳಿದವನು ಭಾವ, ಮೈದುನ, ಅಣ್ಣ, ತಮ್ಮ, ಮಾವ, ಅಳಿಯ, ಪುತ್ರ-ಮಿತ್ರ ಹಾಗೂ ಸೇವಕರುಗಳನ್ನು ಸಜ್ಜನರು, ಸುಜನರು ಮತ್ತು ಸತ್ಯವಾದಿಗಳೆಂದು ಭಾವಿಸಬಾರದಂತೆ!

''ಹಗೆಯ ಹೆಂಗಳನರಮನೆಗಳೊಳು ಹೊಗಿಸಲಾಗದು'' ಎಂಬುದು ಶಕುನಿಯ ಅಭಿಮತ.

ಯಾವ ಮಾರ್ಗದಲ್ಲಾದರೂ ಶತ್ರುವನ್ನು ನಾಶಮಾಡಬೇಕೆಂಬುದು ಶಕುನಿಯ ಹೇಳಿಕೆ. ಗುರಿಯಷ್ಟೇ ದಾರಿಯೂ ಶುದ್ಧವಾಗಿರಬೇಕೆಂಬ ಮಾತನ್ನು ಇಲ್ಲಿ ಅಪ್ಪಿ ತಪ್ಪಿಯೂ ನೆನೆಯುವಂತಿಲ್ಲ. ಶಕುನಿ ದುರ್ಯೋಧನನಿಗೆ ಹೇಳುವ ಕುತಂತ್ರದ ರಾಜನೀತಿ ಹೀಗಿದೆ:

**ಧನವನಿತ್ತಾದೊಡೆಯು ಸಹಭೋ**
**ಜನವನುಂಡಾದೊಡೆಯು ಮೇಣ್ ನಿಜ**
**ತನುಜೆಯರನಿತ್ತಾದೊಡೆಯು ಬಳಿಸಂದು ಬೇಸರದೆ**
**ತನುವ ಬೆರಸಿದ್ದಾದೊಡೆಯು ನೂ**
**ತನಗುಣವ ನುಡಿದಾದೊಡೆಯು ರಿಪು**
**ಜನಪತಿಯ ವಶಮಾಳ್ಪುದುಚಿತವಿದೆಂದನಾ ಶಕುನಿ.**

**(೮ನೇ ಸಂಧಿ, ೪೫ನೆಯ ಪದ್ಯ, ಪುಟ : ೨೭)**

ಹಣ ಕೊಟ್ಟಾದರೂ, ಸಹಪಂಕ್ತಿ ಭೋಜನ ಸ್ವೀಕರಿಸಿಯಾದರೂ, ಕೊನೆಗೆ ನಿಜತನುಜೆಯನ್ನು ಕೊಟ್ಟಾದರೂ ಶತ್ರುವನ್ನು ವಶಪಡಿಸಿಕೊಳ್ಳಬೇಕಂತೆ! ಆಧುನಿಕ ಕಾಲದ ರಾಜಕಾರಣಿಗಳಂತೂ ಶಕುನಿಯ ಸಲಹೆಯನ್ನು ಅಲ್ಪ ಸ್ವಲ್ಪ ಮಾರ್ಪಡಿಸಿಕೊಂಡು ಎಲ್ಲಾ

೧. ಕರ್ನಾಟಕ ಚರಿತ್ರೆ, ಸಂಪುಟ ೩, ಪುಟ. ೫

ಸಲಹೆಗಳ ಜೊತೆ 'ದೀರ್ಘದಂಡ ನಮಸ್ಕಾರ'ವನ್ನೂ ಹಾಕುತ್ತ ಶತ್ರುವನ್ನು ನಾಶ ಮಾಡುವುದಿಲ್ಲ, ಅಧಿಕಾರ ಗಳಿಸುತ್ತಾರೆ. ರಾಜಕಾರಣಿಗಳಿಗೆ ಅಧಿಕಾರ ಗ್ರಹಣವೊಂದೇ ಮುಖ್ಯ ಎಂಬುದನ್ನು ಆ ಕಾಲದಲ್ಲೇ ಶಕುನಿ ಸಮರ್ಥವಾಗಿ ಹೇಳಿದ್ದಾನೆ.

## ರಾಜನ ಪರಿವಾರ

ರಾಜಸೂಯಯಾಗದ ಪೂರ್ವದಲ್ಲಿ ನಾರದ ಮುನಿಗಳು ಧರ್ಮರಾಯನಿಗೆ ರಾಜಧರ್ಮ ಕುರಿತು ಯಥೋಚಿತವಾದ ಉಪದೇಶಾಮೃತವನ್ನು ನೀಡುತ್ತಾರೆ. ಈ ಉಪದೇಶದ ಮಾತು ಎಲ್ಲಾ ಆಡಳಿತಗಾರರಿಗೂ ಆದರ್ಶಪ್ರಾಯವಾದವು. ಸುಮಾರು ಹದಿನಾಲ್ಕರಿಂದ ಇಪ್ಪತ್ತನೆಯ ಪದ್ಯದವರೆಗೆ ನಾರದ ಮುನಿಗಳ ಉಪದೇಶದ ಧಾರೆ ಹರಿದಿದೆ. ಆ ಪದ್ಯಗಳಲ್ಲಿ ರಾಜನ ಕರ್ತವ್ಯ, ಆತನ ವಿವೇಚನೆ ಹಾಗೂ ಅವನಲ್ಲಿರಬೇಕಾದ ಧರ್ಮಬುದ್ಧಿಯ ಬಗ್ಗೆ ನಾರದರ ಮೂಲಕ ಕುಮಾರವ್ಯಾಸ ತನ್ನ ಅನಿಸಿಕೆಗಳನ್ನು ಹೇಳುತ್ತಾನೆ. ಮಂತ್ರಿ, ಮಹಾಮಾತ್ಯ, ಸೇನಾಧಿಪತಿ, ಮಾಂಡಲೀಕ, ಹಿರಿಯ ಅಧಿಕಾರಿ ಹಾಗೂ ಪ್ರಜಾವರ್ಗ ಹೀಗೆ ಪ್ರತಿಯೊಬ್ಬರ ಬಗ್ಗೆಯೂ ಇಲ್ಲಿ ಚಿಂತನೆ ನಡೆದಿದೆ. ಕುಮಾರವ್ಯಾಸನ ಕಾಲದ ರಾಜ ಹಾಗೂ ಅವನ ಪರಿವಾರವನ್ನು ಕುರಿತು ನಾರದರ ಮೂಲಕ ಕುಮಾರವ್ಯಾಸ ಹೀಗೆ ಚಿತ್ರಿಸುತ್ತಾನೆ.

**ಅರಸು ರಾಕ್ಷಸ ಮಂತ್ರಿಯೆಂಬುವ**
**ಮೊರೆವ ಹುಲಿ ಪರಿವಾರ ಹದ್ದಿನ**
**ನೆರವಿ ಬಡವರ ಬಿನ್ನಪವನಿನ್ನಾರು ಕೇಳುವರು**
**(ಸಭಾಪರ್ವ : ಮೊದಲನೆಯ ಸಂಧಿ : ೬೨ನೆಯ ಪದ್ಯ, ಪು: ೭೭)**

## ರಾಜರ ಆದ್ಯತೆ ಯಾವುದು?

ಕುಮಾರವ್ಯಾಸನ ಕಾಲಕ್ಕಿಂತ ಈಗಿನ ಪರಿಸ್ಥಿತಿ ಭಿನ್ನವಾಗಿದೆಯೆ? ಹದಿನೈದನೆಯ ಶತಮಾನದಲ್ಲಿ ಕುಮಾರವ್ಯಾಸ ಆಡಳಿತಗಾರರ ಆದ್ಯತಾ ಕ್ಷೇತ್ರ ಯಾವುದಾಗಿತ್ತು ಎಂಬುದನ್ನು ತನ್ನದೇ ಮಾತುಗಳಲ್ಲಿ ದಾಖಲಿಸುತ್ತಾನೆ.

**ಕೃಷಿ ಮೊದಲು ಸರ್ವಕ್ಕೆ ಕೃಷಿಯಿಂ**
**ಪಸರಿಸುವುದಾ ಕೃಷಿಯನುದ್ಯೋ**
**ಗಿಸುವ ಜನವನು ಪಾಲಿಸುವುದಾ ಜನಪದದ ಜನದಿ**
**ವಸು ತೆರಳುವುದು ವಸುವಿನಿಂ ಸಾ**
**ಧಿಸುವದಾವುದಸಾಧ್ಯವದರಿಂ**
**ಕೃಷಿ ವಿಹೀನನ ದೇಶವದು ದುರ್ದೇಶ ಕೇಳೆಂದ (ಸಭಾಪರ್ವ ಪದ್ಯ; ೬೪:ಪುಟ:೭೭)**

ಕೃಷಿಯಿಂದಲೇ ಜಗತ್ತು, ಕೃಷಿಯನ್ನು ಅವಲಂಬಿಸಿರುವ ರೈತನನ್ನು ಆಳ್ವಿಕೆದಾರರು ಪಾಲಿಸಬೇಕು. ಕೃಷಿಯನ್ನು ಅಸಡ್ಡೆ ಮಾಡಿದ ದೇಶಕ್ಕೆ ದುರ್ದೆಶೆ ಒದಗುವುದು ಖಂಡಿತ. ಪ್ರಾಯಶಃ ಐ.ಟಿ. ಗುಂಗಿನಲ್ಲಿರುವ ಕರ್ನಾಟಕ ರಾಜ್ಯಕ್ಕೆ ಸೇರಿದಂತೆ ಭಾರತಕ್ಕೆ ಈಗಲೂ ಕುಮಾರವ್ಯಾಸನೇ ಆದರ್ಶಪ್ರಾಯನಾಗುತ್ತಾನೆ.

## ಸಾರ್ವಕಾಲಿಕ ಸತ್ಯ ನುಡಿದ ದ್ರೌಪದಿ

ರಜಸ್ವಲೆಯಾದ ದ್ರೌಪದಿಯನ್ನು ದುರ್ಯೋಧನನ ತಮ್ಮ ದುಶ್ಯಾಸನ ರಾಜಸಭೆಗೆ ಎಳೆದುಕೊಂಡು ಬರುವುದೇ ಅತ್ಯಂತ ಅಪಮಾನಕರವಾದ ವಿಚಾರ. ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಗೆ ಸಾಕಷ್ಟು ಗೌರವ ಕೊಡಲಾಗಿದೆಯೆಂದು ಹೇಳುತ್ತಿದ್ದಾಗೆಲ್ಲಾ ಈ ಪ್ರಸಂಗ ನಮ್ಮ ಎದೆಯೊತ್ತುತ್ತಿರುತ್ತದೆ. ಪ್ರೊ। ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ ಅವರು ಈ ಪ್ರಸಂಗವನ್ನು ಕುರಿತು ಹೇಳುವ ಮಾತು ಹೀಗಿದೆ: ''ದ್ವಾಪರ ಯುಗದ ಈ ಕಿರಾತ ನಡತೆಗೆ ಗುರಿಯಾಗಿ ಆರ್ತಳಾಗಿ ಕೂಗಿದ ಅಬಲೆಯ ಮೈಗೆ ಕಲಿಯುಗ ಹೊದಿಸಿದ ಕರುಣೆಯ ವಸ್ತ್ರ''

ಸಭಾಪರ್ವದ ಹದಿನಾಲ್ಕನೆಯ ಸಂಧಿಯ ಈ ಪದ್ಯ ದ್ರೌಪದಿಯ ದಿಟ್ಟತನಕ್ಕೆ ಮಾತ್ರ ಸಾಕ್ಷ್ಯ ನೀಡುವುದಲ್ಲದೇ ಆತ್ಮಸಾಕ್ಷಿಯಿಲ್ಲದ ಎಲ್ಲಾ ಹಿರಿಯರಿಗೂ ಎಚ್ಚರಿಕೆಯ ಮಾತಾಗಿದೆ. ಅವಳ ಮಾತುಗಳನ್ನು ಇಂದಿನ ಶಾಸಕಾಂಗ ಸಭೆಗಳ ನಡವಳಿಕೆಗೆ ಹೋಲಿಸಬಹುದು.

**ಹಿರಿಯರಿಲ್ಲದ ಸಭೆ ಮನುಷ್ಯರ**
**ನೆರವಿಯದು ಸಭೆಯಲ್ಲ ಮೂರ್ಖರು**
**ಹಿರಿಯರಲ್ಲ ಯಥಾರ್ಥ ಭಾಷಣ ಭೀತಚೇತನರು (೮೧ನೆಯ ಪದ್ಯ, ಪುಟ ೧೫೧)**

ವೇದವ್ಯಾಸರಲ್ಲೂ ಕೂಡಾ ಈ ಮಾತು ಹೀಗೆ ಬರುತ್ತದೆ. ''ನಸಾ ಸಭಾಯತ್ರನ ಸಂತಿವೃದ್ಧಾ/ನತೇ ವೃದ್ಧಾಯೇನ ವದಂತಿ ಧರ್ಮಂ''

## ಪ್ರಸ್ತುತದ ದೃಶ್ಯ

ವಿರಾಟಪರ್ವದ ಹತ್ತನೆಯ ಸಂಧಿಯ ಎಪ್ಪತ್ತನೆಯ ಪದ್ಯವನ್ನು ಪರಿಶೀಲಿಸಿದಾಗ ಇಂದಿನ ಚಿತ್ರಣವೊಂದು ನೆನಪಿಗೆ ಬರುತ್ತದೆ. ಅಭಿಮನ್ಯು ಉತ್ತರೆಯರ ಮದುವೆಗೆ ಯಾದವಕುಲತಿಲಕ ಶ್ರೀಕೃಷ್ಣ ವಿರಾಟನಗರಕ್ಕೆ ಬರುತ್ತಿದ್ದಾನೆ. ವಿರಾಟನ ಅರಮನೆಗೆ ಶ್ರೀಕೃಷ್ಣನನ್ನು ಮೆರವಣಿಗೆಯಲ್ಲಿ ಕರೆತರಲಾಗುತ್ತಿದೆ. ಶ್ರೀಕೃಷ್ಣನನ್ನು ಸ್ವಾಗತಿಸಲು ನೋಡಲು ಹಸ್ತಲಾಘವ ಮಾಡಲು ಸಾವಿರಾರು ಜನ ಮುಗಿಬೀಳುತ್ತಾರೆ. ಶ್ರೀಕೃಷ್ಣನಿಗೂ ಅವರ ಮೇಲೆ ಪ್ರೀತಿಯೇನೋ ಹೌದು! ಆದರೆ ಅಂಗರಕ್ಷಕರ ಪಾಡೇನು! ಆ ಸಂದರ್ಭದಲ್ಲಿ ಅವರ ಕರ್ತವ್ಯ ಪ್ರಜ್ಞೆ ಹೇಗಿರಬೇಕೆಂದು ಕುಮಾರವ್ಯಾಸ ತನ್ನದೇ ಆದ ರೀತಿಯಲ್ಲಿ ಹೇಳಿದ್ದಾನೆ.

**ಮೇಲೆ ಬೀಳುವ ಮಂದಿಯನು ಕೈ**
**ಗೋಲಿನವರಪ್ಪಳಿಸೆ ಲಕ್ಷ್ಮೀ**
**ಲೋಲನವದಿರ ಜರೆದು ಕಾಣಸಿಕೊಳುತ ಪುರಜನವ ... (ಪುಟ : ೨೯೬)**

ಕುಮಾರವ್ಯಾಸನು ತನ್ನ ಕಾಲದಲ್ಲಿನ ಚಕ್ರವರ್ತಿ, ರಾಜಮಹಾರಾಜರ ಪ್ರವಾಸ ಭೇಟಿಯನ್ನು ನೋಡಿರಬೇಕು.

ಇಂದಿಗೂ ಮಂತ್ರಿ-ಮಹೋದಯರು ವಿಶೇಷ ಸಂದರ್ಭದಲ್ಲಿ ಭೇಟಿಕೊಟ್ಟಾಗ ಕುಮಾರವ್ಯಾಸ ವರ್ಣಿಸಿದ ಪರಿಸ್ಥಿತಿಯೇ ಇರುತ್ತದೆಯಲ್ಲವೇ? ಪೋಲಿಸರಿಂದ ಲಾಠಿ ಏಟಿಗೆ ಬಲಿಯಾಗುವ ಶ್ರೀಸಾಮಾನ್ಯರು ಕರುಣೆಗೆ ಪಾತ್ರರಾಗುತ್ತಾರೆ.

## ರಾಜಕೀಯ ಧರ್ಮೋಪದೇಶ

ಉದ್ಯೋಗ ಪರ್ವವಂತೂ ರಾಜಕೀಯ ವಿಚಾರಗಳಿಗೆ ವ್ಯಾಖ್ಯೆಯಂತಿದೆ. ಶ್ರೀಕೃಷ್ಣನ ಸಹಾಯ ಕೇಳಲು ಅರ್ಜುನ, ದುರ್ಯೋಧನರು ದ್ವಾರಕೆಗೆ ಆಗಮಿಸುತ್ತಾರಷ್ಟೆ. ಉದ್ಯೋಗ ಪರ್ವದ ಮೊದಲನೆಯ ಸಂಧಿಯ ಕಥಾಭಾಗವಿದು. ಅಲ್ಲಿನ ಎರಡು ಪದ್ಯಗಳನ್ನು ನೋಡಿ.

**ಕೌರವೇಶ್ವರ ಕೇಳು ಧರಣೀ**
**ನಾರಿಯನಿಬರಿಗೊಕ್ಕತನವಿ**
**ದ್ದಾರ ಮೆಚ್ಚಿದಳಾರ ಸಂಗಡವುರಿಯ ಹಾಯಿದಳು.**
**ಭೂರಿ ಮಮಕಾರದಲಿ ನೃಪರು ವಿ**
**ಚಾರಿಸದೆ ಧರೆಯೆಮ್ಮದೆಂದೇ**
**ನಾರಕದ ಸಾಮ್ರಾಜ್ಯಕ್ಕೈದುವರೆಂದು ಹರಿ ನುಡಿದ (೨೮ನೆ ಪದ್ಯ, ಪುಟ. ೩೦೦)**

**ತಗರೆರಡ ಖತಿಗೊಳಿಸಿ ಬಲುಗಾ**
**ಳಗವ ನೋಡುವರಂತೆ ನಿಮ್ಮನು**
**ತೆಗೆತೆಗೆದು ಕಲಿಮಾಡಿ ಬಡುವರು ಖುಲ್ಲರಾದವರು**
**ನಗುತ ಹೆರೆಹಿಂಗುವರು ಪಿಸುಣರು**
**ಬಗುಳಿದವದಿರು ಬಳಿಕ ಕಡೆಯಲಿ**
**ಹೊಗುರ್ಯೆ ನೀವಿಬ್ಬರಪಕೀರಿತಿಯ ಹಾದರಕೆ (೩೦ನೆಯ ಪದ್ಯ, ಪುಟ, ೩೦೦)**

ಕೃಷ್ಣ ತನ್ನ ಸಹಾಯ ಕೇಳಲು ದ್ವಾರಕೆಗೆ ಬಂದ ಅರ್ಜುನ-ದುರ್ಯೋಧನರಿಗೆ ಹೇಳುವ ಬುದ್ಧಿ ಮಾತು ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಗಾದೆ ಮಾತಿನಂತೆ ಉಳಿದುಕೊಂಡಿದೆ. ''ಸಾಮ್ರಾಜ್ಯಲಕ್ಷ್ಮೀ ನಿತ್ಯ ಮುತ್ತೈದೆ''. ''ಕ್ಷುಲ್ಲಕ ಜನ ಟಗರುಗಳನ್ನು ರೊಚ್ಚಿಗೆಬ್ಬಿಸಿ ಅವು ಯುದ್ಧ ಮಾಡಿ ಸತ್ತರೆ ತಾವು ಹೊಟ್ಟೆ ತುಂಬಾ ಉಣ್ಣುತ್ತಾರೆ'' ಎಂಬ ಮಾತು ಎಲ್ಲೆಡೆ ಪ್ರಸಿದ್ಧಿಯಾಗಿದೆ. ಶ್ರೇಷ್ಠ ರಾಜತಾಂತ್ರಿಕನೊಬ್ಬ ಹೇಳಬಹುದಾದ ಮಾತುಗಳನ್ನು ಶ್ರೀಕೃಷ್ಣ ಇಲ್ಲಿ ಹೇಳಿದ್ದಾನೆ.

ರಾಯಭಾರಿಯಾಗಿ ಹೋದ ಕೃಷ್ಣ ತಾನು ವಿದುರನ ಮನೆಯಲ್ಲಿ ಉಳಿದುಕೊಂಡಿದ್ದಕ್ಕೆ ಕಾರಣ ಹೇಳುತ್ತಾನೆ. ಉದ್ಯೋಗ ಪರ್ವದ ಎಂಟನೆಯ ಸಂಧಿಯ ೬೯ ಮತ್ತು ೭೦ನೆಯ ಪದ್ಯಗಳಲ್ಲಿ ಶ್ರೀ ಕೃಷ್ಣ ಹೇಳುವ ಎರಡು ಮಾತುಗಳು ಹೀಗಿವೆ-

**ಪ್ರಿಯದಲುಂಬುದು ಮೇಣು ವಿಬುಧಾ**
**ಶ್ರಯದಲುಂಬುದು ಮಾನವರಿಗಿದು**
**ನಿಯತವಿಂತಲ್ಲದೊಡೆ ಕೇಳೈ ಕೌರವರಾಯ (ಪದ್ಯ ೬೯)**
**ಹಗೆಯನೊಳಗಿಡಲಾಗದದು ವೈ**
**ರಿಗಳ ನಿಳಯದಲನ್ನಪಾನಾ**
**ದಿಗಳನುಣಲಾಗದು ನಿಧಾನಿಸೆ ರಾಜನೀತಿಯಿದು (ಪದ್ಯ ೭೦ : ಪುಟ ೩೩೫)**

ಪ್ರಾಣಿಗಳಾದರೆ ಯಾರನ್ನು ಬೇಕಾದರೂ ಆಶ್ರಯಿಸಿ ಹಸಿವನ್ನು ಹಿಂಗಿಸಿಕೊಳ್ಳುತ್ತವೆ. ಆದರೆ ಮನುಷ್ಯನಿಗೆ ಅವನದೇ ಆದ ರೂಢಿ ನೇಮವಿರುತ್ತದೆ. ಆದರಲ್ಲೂ ಆಡಳಿತಗಾರರು ಪಾಲಿಸಲೇಬೇಕಾದ ಶಿಷ್ಟಾಚಾರವಿರುತ್ತದೆ. ಅವರ ಮಾತು-ಕತೆ, ಸಂಪರ್ಕ ಭೋಜನಾದಿಗಳಲ್ಲಿ ಅರ್ಥವಂತಿಕೆಗಳನ್ನು ಕಲಿಯಬೇಕೆಂಬ ಉದ್ದೇಶವನ್ನು ಈ ಪದ್ಯ ಹೊಂದಿವೆ. ಅದೇ ಪರ್ವದ ಒಂಬತ್ತನೆಯ ಸಂಧಿಯ ಎರಡು ಮತ್ತು ಐದನೆಯ ಪದ್ಯಗಳು ಎಲ್ಲಾ ಆಡಳಿತಗಾರರಿಗೂ ಬೋಧಪ್ರದವಾಗಿವೆ. ಅಧಿಕಾರದ ಮದ ಹೇಗಿರುತ್ತದೆಂದರೆ:

**ಅರಸುತನ ತನಗಧಿಕವಾಗುತ**
**ಬರಬರಲು ಕಣ್ಣಾಲಿಗಳು ತರ**
**ಹರಿಸಿ ಕಾಣವು ವರ್ತಮಾನದ ನೃಪರ ಬಳಕೆಯಿದು**
**ಸಿರಿಯ ಮದವೆಂಬಧಿಕ ತಾಮಸ**
**ದೊರಕಿದಕ್ಷಿಗೆ ನೀತಿಕಾರರ**
**ಪರಮವಚನಾಂಜನದಿ ಪ್ರಜ್ವಲಿಸುವುದು ನಯವೆಂದ (ಪದ್ಯ ೨, ಪು. ೩೩೫)**

ಯೌವನ, ಅಧಿಕಾರ ಹಾಗೂ ಸಿರಿಗಳೆಂಬ ಮದ ಮನುಷ್ಯನಲ್ಲಿ ಒಟ್ಟಿಗೆ ಸೇರಿದರೆ ಅವುಗಳಿಂದಾಗುವ ಅನಾಹುತವನ್ನು ಶ್ರೀಕೃಷ್ಣ ಇಲ್ಲಿ ಹೇಳುತ್ತಾನೆ.

**ಸಾಮವೆಂಬುದು ರಾಜನೀತಿಗೆ**
**ತಾ ಮನೋಹರ ರೂಪು ಬದುಕುವ**
**ಭೂಮಿಪಾಲರನಂತ ವಿಭವಕೆ ಬೀಜಮಂತ್ರವಿದು**
**ಸಾಮ ತಪ್ಪಿದ ಬಳಿಕ ನೀತಿ ವಿ**
**ರಾಮವಾಗದೆ ಬಿಡದು ದಂಡದ**
**ಸೀಮೆಯೆಂಬುದುಪಾಯದಲಿ ಸಾಮಾನ್ಯ ತರವೆಂದ (ಪದ್ಯ : ೫, ಪು. ೩೩೬)**

ರಾಜ್ಯಶಾಸ್ತ್ರದ ಪಿತಾಮಹನಾದ ಅರಿಸ್ಟಾಟಲ್ ಸಹ ರಾಜ್ಯಾಧಿಕಾರ ಚಲಾಯಿಸುವಾಗ 'ದಂಡ'ದ ಮಹತ್ವವನ್ನು ಹೇಳುವುದಿಲ್ಲ. ಆದರೆ ಮೌರ್ಯವಂಶದ ಸ್ಥಾಪಕನಾದ ಮೊದಲನೆಯ ಚಂದ್ರಗುಪ್ತ ಮೌರ್ಯ (ಕ್ರಿ. ಪೂ. ೨೪೦ರಿಂದ ೨೯೮) ನ ಗುರುವಾಗಿದ್ದ ಕೌಟಿಲ್ಯ ಅಥವಾ ಚಾಣಕ್ಯ ತನ್ನ ಅರ್ಥಶಾಸ್ತ್ರ ಗ್ರಂಥದಲ್ಲಿ ರಾಜ ಅಗತ್ಯವಿದ್ದಾಗ ಅವಶ್ಯವಾಗಿ 'ದಂಡ, ಬಳಸಬೇಕೆಂದು ಹೇಳುತ್ತಾನೆ. ಕುಮಾರವ್ಯಾಸನಿಗೆ ಕೌಟಿಲ್ಯನ ಅರ್ಥಶಾಸ್ತ್ರ ಗ್ರಂಥ ಕರತಲಾಮಲಕವಾಗಿತ್ತು. ಸಾಮ, ಭೇದ, ದಂಡಗಳನ್ನು ಉಪಯೋಗಿಸುವ ರೀತಿ ಕುರಿತಂತೆ ನೂರಾರು ಕತೆಗಳು ನಮ್ಮ ಸಾಹಿತ್ಯರಾಶಿಯಲ್ಲಿ ದೊರೆಯುತ್ತವೆ. ಅದನ್ನೆಲ್ಲಾ ಕುಮಾರವ್ಯಾಸ ಚೆನ್ನಾಗಿ ಗ್ರಹಿಸಿದ್ದನೆಂಬುದಕ್ಕೆ ಅವನ ಮಹಾಕಾವ್ಯ ಅನೇಕ ಸಾಕ್ಷ್ಯ ನೀಡುತ್ತದೆ.

## ವ್ಯಕ್ತಿಯ ಯೋಗ್ಯತೆಗೆ ಬೆಲೆ ಬೇಡವೇ!

ಯುದ್ಧಕ್ಕೆ ಮೊದಲು ಪಾಂಡವರ ಪಾಳೆಯದಲ್ಲಿ ಚರ್ಚೆ ಮಾಡಲಾಗುತ್ತದೆ. ಉದ್ಯೋಗ ಪರ್ವದ ಹನ್ನೆರಡನೆಯ ಸಂಧಿಯಲ್ಲಿ ಇದರ ವಿಚಾರವಿದೆ. ಅಲ್ಲಿರುವ ಮೂವತ್ತೆರಡನೆಯ ಪದ್ಯ ಹೀಗಿದೆ-

**ಬಿಂಬವನು ಬೇರಿರಿಸಿ ಬಹುಮತ**
**ವೆಂಬ ಬಿಸಿಲಲಿ ರಾಜ ನಯವೆಂ**
**ದೆಂಬ ಸೈದಿಲು ನಲುವುಗೆಟ್ಟುದು ಕೃಷ್ಣ ಹೇಳೆನಲು (ಪುಟ. ೩೪೬)**

ಯಾವುದೇ ಯೋಗ್ಯತೆಯಿಲ್ಲದೆ ಕೇವಲ ಬಹುಮತವೆಂಬ ಬಿಸಿಲುಕುದುರೆಯನ್ನೇರಿ ಹೋಗುವುದು ಅಪಾಯವಲ್ಲವೇ? ಕೆಲವೊಮ್ಮೆ ಯೋಗ್ಯತೆಯ ಮನ್ನಣೆಗೆ ಬಹುಮತವೇ ಅಡಚಣೆಯಾಗಬಹುದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ತಲೆ ಎಣಿಕೆ ಹಾಗೂ ಮುದ್ರೆಯೊತ್ತುವುದೇ ಅಂತಿಮ ತೀರ್ಮಾನವಾಗುವ ಕಾರಣ ಸಹಜವಾಗಿ ವ್ಯಕ್ತಿಯ ವೈಯಕ್ತಿಕ ಅರ್ಹತೆಗೆ ಬೆಲೆ ಸಿಗುವುದು ಅಪರೂಪ.

ಭೀಷ್ಮ ಪರ್ವದ ಎರಡನೆಯ ಸಂಧಿಯಲ್ಲಿ ಭೀಷ್ಮನೇ ಹೇಳುವ ಮಾತುಗಳು ಸಾರ್ವಕಾಲಿಕ ಸತ್ಯವೆನಿಸಿದೆ.

**ಹಿರಿಯನಾಗಲಿ ಸುಜನನಾಗಲಿ**
**ಗರುವನಾಗಲಿ ಅರ್ಥವುಳ್ಳನ**
**ಚರಣ ಸೇವಾಪರರು ಜಗದಲಿ ವರ್ತಮಾನವಿದು (೨೬ನೆಯ ಪದ್ಯ, ಪು. ೩೫೫)**

ಪ್ರಾಯಶಃ ಭೀಷ್ಮನ ಈ ಮಾತು ಇಂದಿನ ಭಾರತದ ರಾಜಕಾರಣಕ್ಕೆ ಸರಿಹೊಂದುತ್ತದೆ. ಹಿರಿಯರು, ಗುರುಗಳು ಹಾಗೂ ಸುಜನರು ಹಣವಿದ್ದವರ ಗುಲಾಮರಾಗುತ್ತಾರೆ. ಅಂದ ಮೇಲೆ ಸದ್ಗುಣಗಳ ಆವಶ್ಯಕತೆಯಾದರೂ ಏನು?

ಭೀಷ್ಮನ ಆತ್ಮಶೋಧನೆಯ ಮಾತು ಹೀಗಿದೆ

**ಕೌರವನ ಧನವೆಂಬ ಘನಸಂ**
**ಸಾರಗುಣದೊಳು ಬದ್ಧನಾದೆನು. (೨೭ನೆಯ ಪದ್ಯ)**

## ಭೇದನೀತಿ ಧರ್ಮರಾಯನಿಗೂ ಪ್ರಿಯ

ಕುರುಕ್ಷೇತ್ರದ ಯುದ್ಧದಲ್ಲಿ ಧರ್ಮರಾಯ ಎಲ್ಲ ಹಿರಿಯರನ್ನು ಕಂಡು ಅವರ ಆಶೀರ್ವಾದ ಪಡೆದಿದ್ದರೂ ಅವರ ವ್ಯಕ್ತಿತ್ವಕ್ಕೆ ಸರಿಹೊಂದುವಂತಿದ್ದರೂ, ಆ ಮೂಲಕ ಅಂದರೆ ಭೇದ ನೀತಿಯ ಮೂಲಕ ಆತ ಕೌರವರ ಪಕ್ಷದ ಹಿರಿಯರನ್ನು ಗೆದ್ದುಕೊಂಡಿದ್ದನ್ನು ಮರೆಯಬಾರದು. ಕರ್ಣನನ್ನು ನಿಷ್ಕ್ರಿಯಗೊಳಿಸಲು ಶ್ರೀಕೃಷ್ಣ ಸಹ ಈ ಹಿಂದೆ ಇದೇ ನೀತಿಯನ್ನೇ ಅನುಸರಿಸಿದ್ದುಂಟು.

## ವಿರೋಧಿಗಳಿಗೆ ಹೇಳುವ ಮಾತು

ದ್ರೋಣಪರ್ವದ ಐದನೆಯ ಸಂಧಿಯಲ್ಲಿ ಅಭಿಮನ್ಯು ಕೌರವ ವೀರರನ್ನು ಕುರಿತು ಆಡುವ ಮಾತುಗಳು ನಮ್ಮ ಇಂದಿನ ಮಂತ್ರಿ ಮಹೋದಯರು ತಮ್ಮ ವಿರೋಧಿಗಳನ್ನು ಚುಚ್ಚಲು ಹೇಳುವ ಮಾತುಗಳಂತಿವೆ:

**''ಕೊಳಚೆ ನೀರೊಳಗಾಳುತೇಳುತ**
**ಜಲಧಿ ಕಾಲ್ಹೊಳೆಯೆಂಬ ಭಂಡರ**
**ಮುಳಿದು ಮಾಡುವುದೇನು? (೪೪ನೆಯ ಪದ್ಯ, ಪು. ೪೧೬)**

ಕೊಳಚೆ ನೀರಿನಲ್ಲಿ ಮುಳುಗುತ್ತಾ ತೇಲುತ್ತಾ ಇರುವವರು ಭವ್ಯ ಸಾಗರವನ್ನು ಕಾಲುಹೊಳೆ ಎಂದಂತೆ!

## ಚಾಡಿಕೋರರು ಎಂದಿಲ್ಲ!

ದ್ರೋಣ ಪರ್ವದ ಹದಿನೆಂಟನೆಯ ಸಂಧಿಯಲ್ಲಿ ದ್ರೋಣ ಹೇಳುವ ಮಾತು ಕುಮಾರವ್ಯಾಸನ ಅನುಭವದ ನುಡಿಯಾಗಿದ್ದರೆ ಆಶ್ಚರ್ಯದ ವಿಚಾರವಲ್ಲ:

**ಅವನಿಪಾಲರು ಕಂಗಳಿಂದವೆ**
**ಕಿವಿಗೆ ಕರವೊಳ್ಳಿದರು ಕಂಡುದ**
**ನವರು ನಂಬರು ಕೊಂಡೆಯರ ನುಡಿಗೇಳ್ದು ನಂಬುವರು : (೨ನೆಯ ಪದ್ಯ, ಪು. ೪೬೬)**

ಸಾಮಾನ್ಯ ಅಧಿಕಾರಸ್ಥರು ಕಂಡಿದ್ದನ್ನು ನಂಬುವವರಲ್ಲ, ಅವರ ಕಿವಿ, ಕಣ್ಣು ಬೇರೆಯವರ ನಿರ್ದೇಶನದಂತೆ ನಡೆಯುತ್ತವೆ. ''ಕೊಂಡೆಯರ'' ಎಂದರೆ ಚಾಡಿಕೋರರ ಮಾತೇ ಅವರಿಗೆ ಪ್ರಿಯ. ಇಂದೂ ಕೂಡಾ ಅನೇಕ ಮಂತ್ರಿ ಮಹೋದಯರು 'ಚಾಡಿಕೋರರ'ರ ಮಾತು ಕೇಳಿ ಹಾಳಾಗಿರುವುದನ್ನು ಸಮರ್ಥಿಸುವ ಅನೇಕ ಸಮಕಾಲೀನ ಘಟನೆಗಳು ನಮ್ಮ ಕಣ್ಮುಂದೆ ಇವೆ.

## ಮಾರ್ಗ ಯಾವುದಾದರೇನು ನಮಗೆ ಜಯಬೇಕು

ಗದಾಪರ್ವದ ಒಂಬತ್ತನೆಯ ಸಂಧಿಯಲ್ಲಿ ಬರುವ ಈ ದೃಶ್ಯ ಗುರುಪುತ್ರ, ಅಶ್ವತ್ಥಾಮನಿಗೆ ರಾತ್ರೋರಾತ್ರಿ ಪಾಂಡವರನ್ನು ಹೇಡಿಯಂತೆ ವಧೆ ಮಾಡಲು ಸ್ಫೂರ್ತಿ ಕೊಡುತ್ತದೆ.

**ಗೂಗೆ ಬಂದುದದೊಂದು ವಟಕುಜದಗ್ರಭಾಗದಲಿ**
**ಕಾಗೆಗಳ ಗೂಡುಗಳ ಹೊಯ್ದು ವಿ**
**ಭಾಗಿಸಿತು ತುಂಡದಲಿ ಬಿದ್ದವು**
**ಕಾಣೆ ಸುಭಟನ ಸಮ್ಮುಖದಲಿ... (೫ನೆಯ ಪದ್ಯ, ಪು. ೬೧೧)**

ಬೆಳಗ್ಗೆ ಗೂಗೆಗಳಿಗೆ ಕಣ್ಣು ಕಾಣಿಸುವುದಿಲ್ಲ. ಕಾಗೆಗಳಿಗೆ ರಾತ್ರಿ ಕಣ್ಣು ಕಾಣಿಸುವುದಿಲ್ಲ. ಬೆಳಗ್ಗೆ ಕಾಗೆಗಳು ಗೂಗೆಗಳ ಮೇಲೆ ಆಕ್ರಮಣ ಮಾಡುತ್ತವೆ. ರಾತ್ರಿ ಗೂಗೆಗಳು ಆ ಸೇಡು ತೀರಿಸಿಕೊಳ್ಳುತ್ತವೆ. ಅಂದಮೇಲೆ ಚಿಂತೆ ಯಾಕೆ, ರಾತ್ರಿಯಾದರೂ ಏನಂತೆ! ಪಾಂಡವರ ಪಾಳಯಕ್ಕೆ ಈಗಲೇ ಹೋಗೋಣ ಎಂದು ಅಶ್ವತ್ಥಾಮ ಕೃಪಾದಿಗಳಿಗೆ ಹೇಳುತ್ತಾನೆ. ಅಶ್ವತ್ಥಾಮನ ವಾದಸರಣಿ ಇಂದಿನ ರಾಜಕಾರಣಿಗಳಿಗೆ ಚೆನ್ನಾಗಿ ಅನ್ವಯಿಸುತ್ತದೆ.

## ಅರಸುಗಳಿಗಿದು ವೀರ

ಕುಮಾರವ್ಯಾಸ ತನ್ನ ಕಾವ್ಯಾರಂಭದಲ್ಲೇ ''ಅರಸುಗಳಿಗಿದು ವೀರ'' ಎಂದು ತನ್ನ ಕಾವ್ಯವನ್ನು ಬಣ್ಣಿಸುತ್ತಾನೆ. ಕರ್ನಾಟಕ ಇತಿಹಾಸದಲ್ಲಿ ವೀರಪರಂಪರೆಯೇ ಮೇಳೈಸಿದೆ. ಕದಂಬ ವಂಶದ ಸ್ಥಾಪಕ ಮಯೂರ ವರ್ಮ (ಕ್ರಿ.ಶ. ಸುಮಾರು ೩೪೫ ರಿಂದ ೩೬೦) ನಿಂದ ಹಿಡಿದು 'ಮೈಸೂರು ಹುಲಿ' ಎಂದು ಖ್ಯಾತನಾದ ಟಿಪ್ಪುಸುಲ್ತಾನ್ (೧೭೫೦ ರಿಂದ ೧೭೯೯)ನ ನೂರಾರು ಯೋಧರು ಈ ಮಣ್ಣಿನಲ್ಲಿ ಆಗಿಹೋಗಿದ್ದಾರೆ. ಸಾವಿರಾರು ವೀರಗಲ್ಲು ರಾಜ್ಯದೆಲ್ಲೆಡೆಯಿರುವುದನ್ನು ಗಮನಿಸಿದಾಗ ಖ್ಯಾತ ಇತಿಹಾಸಕಾರರಾದ ಪ್ರೊ। ಎಂ. ಹೆಚ್. ಕೃಷ್ಣ ಹೇಳುವ ''ದಕ್ಷಿಣ ಭಾರತದ ಇತಿಹಾಸವೆಂದರೆ ಕರ್ನಾಟಕದ ಇತಿಹಾಸವಾಗಿದೆ'' ಎಂಬ ಮಾತು ಸಮಂಜಸವೆನಿಸುತ್ತದೆ.

ತಲಕಾಡಿನ ಗಂಗರ ದೊರೆ ಭೂತುಗ (ಕ್ರಿ.ಶ. ೯೩೬ರಿಂದ ೯೬೧) ಶೌರ್ಯದ ಪ್ರತಿರೂಪದಂತಿದ್ದ ತನ್ನ ನಾಯಿಗಾಗಿ ವೀರಗಲ್ಲು ಹಾಕಿಸಿದ ಪರಂಪರೆ ನಮ್ಮಲ್ಲಿದೆ. ಆ ಕಾರಣಕ್ಕಾಗಿ ಕುಮಾರವ್ಯಾಸ ತನ್ನ ಕಾವ್ಯದಲ್ಲಿ ಯುದ್ಧಕ್ಕೆ ವಿಶಿಷ್ಟ ಸ್ಥಾನ ನೀಡಿದ್ದಾನೆ. ಅವನ ಕಾವ್ಯದಲ್ಲಿ ಒಂದು ಯುದ್ಧದಂತೆ ಮತ್ತೊಂದು ಯುದ್ಧವಿಲ್ಲ. ಒಬ್ಬ ಕ್ಷತ್ರಿಯನಂತೆ ಇನ್ನೊಬ್ಬ ಕ್ಷತ್ರಿಯನಿಲ್ಲ.

ಹಿಡಿಂಬ-ಭೀಮರ ಯುದ್ಧ. ಜರಾಸಂಧ-ಭೀಮರ ಯುದ್ಧ, ರಾಜಸೂಯಯಾಗದ ಸಂದರ್ಭದಲ್ಲಿ ದಿಗ್ವಿಜಯ, ಶಿಶುಪಾಲ ವಧೆ, ಖಾಂಡವವನದಹನ, ಘೋಷಯಾತ್ರಾ ಸಂದರ್ಭದಲ್ಲಿ ಗಂಧರ್ವರೊಡನೆ ಕದನ, ಕೀಚಕ ಸಂಹಾರ, ಗೋಗ್ರಹಣ, ಇನ್ನು ಕುರುಕ್ಷೇತ್ರದಲ್ಲಿ ನಡೆದ ೧೮ ದಿನಗಳ ಯುದ್ಧ- ಹೀಗೆ'ಮಹಾಭಾರತ' ಯುದ್ಧದಿಂದಲೇ ತುಂಬಿಹೋಗಿದೆ. ಮಧ್ಯಕಾಲೀನ ರಾಜರ ದುಃಸ್ಥಿತಿಯನ್ನು ನಾರಣಪ್ಪ ವರ್ಣಿಸುವುದು ಹೀಗೆ: ''ಸಂಗರಕೆ ಕರೆಯ ಕಾರುವುದು ಮಹೀಶನ'': ಇದೇ ಮಾತನ್ನು ಭೀಷ್ಮನೊಡನೆ ಮತ್ತೊಂದು ಬಗೆಯಲ್ಲಿ ನಾರಣಪ್ಪ ಹೇಳಿಸುತ್ತಾನೆ. ''ನೃಪಧರ್ಮವನು ಸಮರವ ನೆಮ್ಮಿ ಸಾವುದು ಗುಣವು ಗರುವರಿಗೆ''

ಯುದ್ಧ ಕಲೆಯಲ್ಲಿ ಶಸ್ತ್ರಾಸ್ತ್ರ ತಂತ್ರ ಮಂತ್ರವಲ್ಲದೆ, ಯುಕ್ತಿ ತಂತ್ರವೂ ಸೇರಿರುತ್ತದೆ. ಹಗೆಯ ಬಲಾಬಲಗಳನ್ನು, ಸ್ಥಿತಿಗತಿಗಳನ್ನು ಊಹಿಸಿಕೊಂಡು ಅವುಗಳಿಗೆ ತಕ್ಕಂತೆ ಕಾರ್ಯತಂತ್ರ ರೂಪಿಸಿ ಶತ್ರುವನ್ನು ಗೆಲ್ಲುವುದು ಯುದ್ಧದ ಪರಮ ನೀತಿ.

ಕೃಷ್ಣನ ಜೀವನವಂತೂ ರಾಜಕೀಯ ಚದುರಂಗದಾಟದಲ್ಲಿ ಮೆರೆಯುತ್ತದೆ. ಅದರಲ್ಲೂ ಯುದ್ಧ ನೀತಿಯನ್ನು ಶ್ರೀಕೃಷ್ಣನಿಂದಲೇ ಕಲಿಯಬೇಕು, ಪಾಂಡವರಿಗೆ ಹೆಸರಿಗೆ ಮಾತ್ರ ಧೃಷ್ಟದ್ಯುಮ್ನ ಸೇನಾಧಿಪತಿ. ಆದರೆ ಕುರುಕ್ಷೇತ್ರದ ಯುದ್ಧವನ್ನು ಶ್ರೀಕೃಷ್ಣನೊಬ್ಬನೆ ನಿರ್ವಹಿಸಿದ್ದಾನೆ. ''ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು. ಯುದ್ಧ ಧರ್ಮವೇ ಬೇರೆ, ಸಂಸಾರ ಧರ್ಮವೇ ಬೇರೆ'' ಎಂಬುದು ಶ್ರೀಕೃಷ್ಣನ ಅಭಿಮತ.

ಅಲೆಕ್ಸಾಂಡರ್, ನೆಪೋಲಿಯನ್, ಘಜ್ನಿ ಮಹಮ್ಮದ್ ಮೊದಲಾದವರು ದಿಗ್ವಿಜಯ ಕೈಗೊಂಡಿದ್ದು ತಮ್ಮ ಸ್ವಪ್ರತಿಷ್ಠೆ ಬೆಳೆಸಿಕೊಳ್ಳುವುದಕ್ಕೆ ಎನ್ನಬೇಕು. ದುರ್ಯೋಧನನ ಘೋಷಯಾತ್ರೆ ಕೂಡಾ ಈ ಪರಂಪರೆಗೆ ಸೇರಿದ್ದುದು. ಆದರೆ ಶ್ರೀಕೃಷ್ಣ ಪಾಂಡವರ ಮೂಲಕ ಕೈಗೊಂಡ ಯುದ್ಧ 'ಧರ್ಮ ಸಂಸ್ಥಾಪನೆ'ಗಾಗಿ ಎಂಬುದು ಗಮನಾರ್ಹವಾದ ವಿಚಾರ. ಮಧ್ಯಕಾಲೀನ ಕರ್ನಾಟಕದಲ್ಲೂ ಗೋಗ್ರಹಣ ಹಾಗೂ ಸ್ತ್ರೀ ಅಪಹರಣ ಯುದ್ಧಕ್ಕೆ ಕಾರಣವಾಗುತ್ತಿದ್ದ ವಿಷಯಗಳು.

## ಯುದ್ಧ ಭೂಮಿ

ರಾತ್ರಿಯ ವೇಳೆಯಲ್ಲಿ ಸಾಮಾನ್ಯವಾಗಿ ಯುದ್ಧ ನಡೆಯುತ್ತಿರಲಿಲ್ಲ. ಆಗೆಲ್ಲಾ ಸೈನಿಕರು ವಿಶ್ರಾಂತಿ ಪಡೆಯುತ್ತಿರುತ್ತಾರೆ. ಇತರ ಕರ್ಮಚಾರಿಗಳು ತೂತು ಬಿದ್ದ ಲೋಹದ ಶೀಸಕಗಳನ್ನು ಬಂಧಿಸುವ, ಹೋಳಾದ ಕವಚಗಳನ್ನು ಹೊಲಿಯುವ, ಬಾಹು ರಕ್ಷಣೆಯ

ಬಿರುಕನ್ನು ಬೆಸೆಯುವ, ಅಂತೆಯೇ ಪ್ರಾಣಿಗಳ ಕೆಟ್ಟ ಉಡುಗೆಗಳನ್ನು ಸರಿಪಡಿಸುವ, ರಥ ಭಾಗಗಳನ್ನು ರಿಪೇರಿ ಮಾಡುವ ಕಾಯಕದಲ್ಲಿ ನಿರತರಾಗಿರುತ್ತಾರೆ.

ಅಂತೆಯೇ ಪಶುವೈದ್ಯರು ಕುದುರೆಗಳ ಹರಿದ ಕೊರಳನ್ನು, ಉದರದೊಳಗೆ ಮುರಿದ ಬಾಣದ ಸೀಳನ್ನು, ಹೊಟ್ಟೆಯ ತಳಭಾಗದಲ್ಲಿ ಹರಿದುಹೋಗಿರುವ ಭಾಗವನ್ನು ಹೊಲಿಯುತ್ತಾ ಅವುಗಳ ವೇದನೆಗೆ ಪ್ರೀತಿಯಿಂದ ಪ್ರತಿಕ್ರಿಯಿಸುತ್ತಿದ್ದರೆಂದು ಕವಿ ಹೇಳುತ್ತಾನೆ.

ಹದಿನೆಂಟು ಅಕ್ಷೋಹಿಣಿ ಸೈನ್ಯದ ಕ್ಷೇಮ ಕಾರ್ಯಗಳ ನಿರ್ವಹಣೆಗೆ ಎರಡೂ ಕಡೆಯಿಂದ ದೊಡ್ಡ ಕಾರ್ಯಾಗಾರಗಳು ಹಾಗೂ ಆಸ್ಪತ್ರೆಗಳು ಇದ್ದಿರಬೇಕು. ವೀರಯೋಧರಿಗೆ ಬಾಣಾಘಾತದಿಂದ ಆದ ಗಾಯಗಳಿಗೆ ಸೂಕರ ತುಪ್ಪ ಬಳಿದು ತೈಲಧಾರೆ ಹರಿಸುತ್ತಾರೆ. ಕುಮಾರವ್ಯಾಸ ತಾನು ನೋಡಿದ, ಕೇಳಿದ ಅನೇಕ ರಣರಂಗದ ಅನುಭವಗಳನ್ನು ತನ್ನ ಕೃತಿಯಲ್ಲಿ ಸಮರ್ಥವಾಗಿ ಬಳಸಿಕೊಂಡಿದ್ದಾನೆ.

## ಕರ್ನಾಟಕದ ಪ್ರಾದೇಶಿಕ ವೈಶಿಷ್ಟ್ಯ

ಕುಮಾರವ್ಯಾಸ ಭಾರತದ ಅತ್ಯಂತ ರೋಚಕ ಪ್ರಸಂಗ 'ಸುಪ್ರತೀಕ' ಎಂಬ ಆನೆಯ ವಿಚಾರ. ಕರ್ನಾಟಕದಲ್ಲಿ ಆನೆ ಮೊದಲಿನಿಂದಲೂ ಯುದ್ಧದಲ್ಲಿ ಸಮರ್ಥವಾಗಿ ಬಳಕೆಯಾಗಿದೆ. ಮೈಸೂರು ಜಿಲ್ಲೆಯ ತಲಕಾಡಿನ ಗಂಗರ ಅನೇಕ ದೊರೆಗಳು ಆನೆಗಳ ಮಹತ್ವ ಕುರಿತು ಗ್ರಂಥ ರಚಿಸಿದ್ದಾರೆ. ಆನೆಗೆ ಹೆಂಡ ಕುಡಿಸಿ ತಮಟೆ, ನಗಾರಿ, ಭೇರಿ ಮೊದಲಾದ ವಾದ್ಯಗಳೊಡನೆ ಅದನ್ನು ಶತ್ರು ಸೈನ್ಯದ ಮೇಲೆ ನುಗ್ಗಿಸುವುದೇ ಕರ್ನಾಟಕ ರಾಜರ ಅಂದಿನ ಪ್ರಮುಖ ಯುದ್ಧತಂತ್ರವಾಗಿತ್ತು. ಕ್ರಿ.ಶ. ೧೫೬೫ರಲ್ಲಿ ವಿಜಯನಗರ ಮತ್ತು ಬಹಮನಿ ಸುಲ್ತಾನರ ನಡುವೆ ನಡೆದ ಮಹಾಯುದ್ಧದ ನಿರ್ಣಯವನ್ನು ಒಂದು ಆನೆ ಮಾಡಿತ್ತೆಂಬುದು ಅತ್ಯಂತ ಪ್ರಮುಖ ವಿಚಾರ.

ಕುಮಾರವ್ಯಾಸ ಸುಪ್ರತೀಕ ಎಂಬ ಆನೆಯ ಕ್ರೌರ್ಯವನ್ನು ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ. ''ವೀರಕುಂಜರ'' ಎಂಬ ಮಾತನ್ನು ಕುಮಾರವ್ಯಾಸ ಬಳಸಿದ್ದಾನೆ. ಕುಮಾರವ್ಯಾಸನ ಕೈಯಲ್ಲಿ ಸುಪ್ರತೀಕವೆಂಬ ಆನೆ ಕೇವಲ ಒಂದು ಪ್ರಾಣಿಯಾಗಿ ಉಳಿಯುವುದಿಲ್ಲ. ಒಂದು ಪಾತ್ರವಾಗಿ ಹಾಗೂ ಶಕ್ತಿಯಾಗಿ ಬೆಳೆದಿದೆ.

ಧೃತರಾಷ್ಟ್ರನಿಗೆ ಸಂಜಯ ಈ ಆನೆಯ ಶೌರ್ಯವನ್ನು ಹೀಗೆ ಹೇಳುತ್ತಾನೆ.

**ಕುರಿಯ ಹಿಂಡಿನ ತೋಳನೈ ನಿಸ್ಸಾನೆ**
**ಸವರಿತು ಮತ್ತು ಮಾರ್ಬಲವ**

ಈ ಪ್ರಸಂಗ ಕುರಿತು ಡಾ। ಸಿಪಿಕೆ ಹೇಳುವ ಮಾತುಗಳು ಗಮನಾರ್ಹವಾಗಿವೆ. ''ವ್ಯಾಸನಲ್ಲಿ ಹಾಗೂ ಪಂಪನಲ್ಲಿ ಕೇವಲ ಅಂಶ ಚಿತ್ರ(trailor)ವಾಗಿ ತೋರಿಬರುವ ಸುಪ್ರತೀಕ ಪ್ರಸಂಗವನ್ನು ಕುಮಾರವ್ಯಾಸ ಅದ್ಭುತವಾಗಿ ಚಿತ್ರಿಸಿದ್ದಾನೆ. ಭವ್ಯತೆಯ ಪರಮಾವಧಿಯನ್ನು ಈ ಪ್ರಸಂಗದಲ್ಲಿ ಕಾಣಬಹುದು.''

## ಯುದ್ಧ ಯೋಜನೆ ಹಾಗೂ ನಿರ್ವಹಣೆ

ಯುದ್ಧದಲ್ಲಿ ಯೋಜನೆ ಹಾಗೂ ಅನುಷ್ಠಾನವೇ ಪ್ರಮುಖವಾದುದು. ಪಾಂಡವರ ಕಡೆ ಯೋಜನೆಯ ನಿರ್ಮಾಪಕ ಶ್ರೀ ಕೃಷ್ಣನಾದರೆ ಅನುಷ್ಠಾನದ ಹೊಣೆ ಪಾಂಡವರದ್ದಾಗಿತ್ತು. ದುರ್ಯೋಧನನ ಕಡೆ ಯೋಜನೆ ರೂಪಿಸುವ ಹೊಣೆಯನ್ನು ಭೀಷ್ಮ, ದ್ರೋಣ, ಕರ್ಣಾದಿಗಳು ಹೊತ್ತಿದ್ದರು. ಅವರಲ್ಲಿ ಶ್ರದ್ಧೆಯಿಲ್ಲದ ಕಾರಣ ಅವರ ಯೋಜನೆಗಳಾವುವೂ ಸಮರ್ಪಕವಾಗಿ ಅನುಷ್ಠಾನಗೊಳ್ಳಲಿಲ್ಲ. ಆದರೆ ಪಾಂಡವರ ವಿಚಾರ ಹಾಗಲ್ಲ. ಶ್ರೀಕೃಷ್ಣನ ಮೇಲೆ ಸಂಪೂರ್ಣ ಭಾರ ಹಾಕಿದ ಪಾಂಡವರು ಶ್ರದ್ಧಾಪೂರ್ವಕವಾಗಿ ಶ್ರೀಕೃಷ್ಣನ ಯೋಜನೆಯನ್ನು ಅನುಷ್ಠಾನಗೊಳಿಸಿದರು. ದ್ರೋಣ ರಚಿಸಿದ 'ಪದ್ಮವ್ಯೂಹ' ಮಹಾಭಾರತ ಯುದ್ಧದಲ್ಲೇ ಅತ್ಯಂತ ಪ್ರಮುಖವಾದುದು.

ಸೈನ್ಯದ ಚಲನೆ ಹಾಗೂ ಅವುಗಳ ನಿಲುಗಡೆಯ ಬಗ್ಗೆ ಮಹಾಮಾತ್ಯ ಹಾಗೂ ಸೇನಾಧಿಕಾರಿಯ ಜವಾಬ್ದಾರಿ ಹಿರಿದಾಗಿರುತ್ತದೆ. ಗಂಗರ ಮಹಾಮಾತ್ಯ ಚಾವುಂಡರಾಯ (ಕ್ರಿ.ಶ. ೯೬೦ ರಿಂದ ೯೭೫), ಹೊಯ್ಸಳ ದೊರೆ ವಿಷ್ಣುವರ್ಧನನ ದಂಡನಾಯಕನಾದ ಮರಿಯಾನೆ (ಕ್ರಿ.ಶ. ೧೧೮೩), ಅಮಾತ್ಯನಾದ ಗಂಗರಾಜ (ಕ್ರಿ.ಶ. ೧೧೦೮), ವಿಜಯನಗರದ ಅರಸ ಕೃಷ್ಣದೇವರಾಯನ ಮಹಾಮಾತ್ಯ ಸಾಳ್ವ ತಿಮ್ಮರಸ (ಕ್ರಿ.ಶ. ೧೫೦೯) ಮೊದಲಾದವರು ತಮ್ಮ ಪ್ರಭುಗಳಿಗೆ ಸ್ವತಂತ್ರವಾಗಿ ಯುದ್ಧಗಳನ್ನು ಗೆದ್ದುಕೊಡಬಲ್ಲಷ್ಟು ಸಮರ್ಥರಾಗಿದ್ದರು. ಸಾಳ್ವ ತಿಮ್ಮರಸನನ್ನು ಬಿಟ್ಟು ಉಳಿದವರ ಸಾಧನೆ ಕುಮಾರವ್ಯಾಸನಿಗೆ ಅಪರಿಚಿತವಾಗಿರಲಿಲ್ಲ.

## ಯುದ್ದ ಮೊದಲಿನ ಘೋಷಣಾ ವಾಕ್ಯ

ಯುದ್ಧ ಕೇವಲ ರಾಜ-ಮಹಾರಾಜರ ನಡುವಣ ಹೊಯ್ದಾಟವಲ್ಲ. ಅನೇಕ ಶ್ರೀಸಾಮಾನ್ಯರು ಅದರಲ್ಲೂ ಸೈನಿಕರು ಈ ಯುದ್ಧದ ಮಾರಿಗೆ ಬಲಿಯಾಗುತ್ತಿದ್ದರು. ಇಂತಹ ಅಮಾಯಕ ಸೈನಿಕರನ್ನು ಉದ್ವೇಗಗೊಳಿಸಲು ಎಲ್ಲರೂ ಪ್ರಯತ್ನಿಸುತ್ತಿದ್ದರು. ಆ ತರಹದ ಉದಾಹರಣೆ ಇಲ್ಲಿದೆ. ''ಕೊಳುಗುಳದೊಳೋಡಿದರೆ ಹೆಜ್ಜೆಗೆ ಫಲ ಮಹಾಪಾತಕವು ಮುಂದಡಿಗೊಂಡು ಹೆಜ್ಜೆಯನಿಡಲು ಹೆಜ್ಜೆಯೊಳಶ್ವಮೇಧ ಫಲ''. ವಿಜಯನಗರ ಸಾಮ್ರಾಜ್ಯದ ಕೊನೆಯ ದೊರೆ ಅಳಿಯ ರಾಮರಾಯ (ಕ್ರಿ.ಶ. ೧೫೬೫) ತಾಳಿಕೋಟೆ ಯುದ್ಧದಲ್ಲಿ ಕೂಗಿದ ಘೋಷಣೆ: ''ಕಾದಿ ಮಡಿದೊಡೆ ಸ್ವರ್ಗ ಭೋಗಮುಂ ಕಾದಿ ಗೆಲ್ಲದೊಡೆ ರಾಜ್ಯ ಭೋಗಮುಂ''.

### ಸಮಾಜದ ಸಂಘಟನೆಗೆ ಇರಬೇಕಾದ ಗುಣ - ಕೃತಜ್ಞತೆ

ಹಂಗು-ಋಣ-ಜೋಳದ ಪಾಳಿ-ತಂಬುಲ- ಎಂಬ ಮಾತುಗಳು ರಾಜ-ಮಂತ್ರಿ-ಸ್ವಾಮಿ-ಭೃತ್ಯ, ಧನಿಕ-ಬಡವ ಎಂಬ ಸಂಬಂಧಗಳಲ್ಲಿ ಮೇಲಿಂದ ಮೇಲೆ ಬಳಕೆಯಾಗುತ್ತಿವೆ. ಇಕ್ಕಿದ ಅನ್ನಕ್ಕೆ ಪ್ರತಿಯಾಗಿ ಸಲ್ಲಿಸಬೇಕಾದ ಸೇವಾಕಾರ್ಯವೇ ಜೋಳದ ಪಾಳಿ ಅಥವಾ ಉಪ್ಪಿನ ಋಣ. ಉಪ್ಪಿಟ್ಟ ವ್ಯಕ್ತಿಗೆ ಎರಡು ಬಗೆದವನು ಮಹಾಪಾಪಕ್ಕೆ ಗುರಿಯಾಗಬೇಕಾಗುತ್ತಾನೆಂಬ ನಂಬಿಕೆ ಇಂದಿಗೂ ಸಾಮಾನ್ಯ ಜನರಲ್ಲಿದೆ.

''ಕುರುಕ್ಷೇತ್ರ ಯುದ್ಧ ಪ್ರಾರಂಭವಾಗುವುದಕ್ಕೆ ಮುಂಚೆ ಪಂಪಭಾರತದ ''ಜೋಳದ ಪಾಳಿಯು ನೆರಕಿರಾಗುಂಡಂ ಪೆರಂ ಗಂಡನ್ನೆ'' ಎಂಬ ಸೈನಿಕ ರಣೋತ್ಸಾಹದ ಮಾತನ್ನು ಗಮನಿಸಬೇಕು. ವಿಷ್ಣುವರ್ಧನನ ಸೈನಿಕ ದಾಸಯ್ಯ ತಲಕಾಡಿನ ಮೇಲೆ ಧಾಳಿ ಮಾಡಿ ಜೋಳದ ಪಾಳಿಗಾಗಿ ಹೋರಾಡಿ ಮಡಿದನೆಂದು ಶಾಸನಗಳು ಹೇಳುತ್ತವೆ.

ರಾಜ ಭೃತ್ಯರ ಸಂಬಂಧಗಳಲ್ಲಿ ಆಗಾಗ್ಗೆ ಪ್ರಯೋಗವಾಗುವ ವೇಳೆವಾಳಿ ಹಾಗೂ ಲೆಂಕವಾಳಿಗಳು ಇಂತಹದೇ ಪದ್ಧತಿಗಳನ್ನು ಸೂಚಿಸುವ ಪದಗಳು. ಜೋಳದ ಪಾಳಿಗಾಗಿ ಪ್ರಾಣ ತೆರುವುದೊಂದು ಪುಣ್ಯಕಾರ್ಯವೆಂದು ಕುಮಾರವ್ಯಾಸನ ಕಾಲದ ಸಮಾಜ ಒಪ್ಪಿಕೊಂಡಿತು. ''ಸಲಹಿದೊಡೆಯನ ಜೋಳವಾಳಿಗೆ ತಲೆಯ ಮಾರುವುದೊಂದು ಪುಣ್ಯದ ಫಲವು'' ಎಂದು ಕುಮಾರವ್ಯಾಸನ ಕರ್ಣ ತನ್ನ ಕೊನೆಗಾಲದಲ್ಲಿ ನುಡಿಯುತ್ತಾನೆ.

### ರಾಜಕುಮಾರರಿಗೆ ದೊರೆಯುವ ಶಿಕ್ಷಣ

ಅರಮನೆಯಲ್ಲಿದ್ದ ಕೌರವಾದಿಗಳಿಗೂ ಸಮರ್ಪಕವಾದ ವಿದ್ಯೆಕೊಡುವ ಪ್ರಯತ್ನ ನಡೆದಿರಲಿಲ್ಲ. ದ್ರೋಣ ಹಸ್ತಿನಾವತಿಯಲ್ಲಿ ನಿಂತ ನಂತರ ಪಾಂಡವ ಕೌರವರಿಗೆ ಕ್ರಮಬದ್ಧ ಶಸ್ತ್ರಾಸ್ತ್ರ ಶಿಕ್ಷಣ ಪ್ರಾರಂಭವಾಗುತ್ತದೆ. ರಾಜಕುಮಾರರು ಸುರಗಿ, ಸಬಳ, ಕಠಾರಿ, ಪರಿಘ, ಚಕ್ರ, ಮುಸುಂದೆ, ತೋರಣ, ಬಂಡಿವಾಳ, ಪರಶು, ಮುಸಲಗಳಲ್ಲಿ ಕೌಶಲ್ಯವನ್ನು ಪಡೆಯುವುದರ ಜೊತೆಗೆ ಸಂಗೀತ, ಸಾಹಿತ್ಯ ಹಾಗೂ ನಾಟಕಗಳಲ್ಲಿ ಪರಿಣತಿ ಪಡೆಯುತ್ತಿದ್ದರು. ಅರ್ಜುನನಿಗೆ ಭರತನಾಟ್ಯ ಹಾಗೂ ಭೀಮನಿಗೆ ಪಾಕಶಾಸ್ತ್ರದಲ್ಲಿ ತರಬೇತಿ ಕೊಡಿಸಲಾಗಿತ್ತು. ನಾರದ- ಮಾರ್ಕಂಡೇಯ, ವಿದುರ-ಸನತ್ಸುಜಾತ ಮೊದಲಾದ ಸಾಧು-ವಿದ್ವಾಂಸರ ಸಂಪರ್ಕದಿಂದ ಅರಸ ಅವರೊಡನೆ ನಡೆಸುತ್ತಿದ್ದ ಚರ್ಚೆಯೇ ರಾಜಕುಮಾರರಿಗೆ ಶ್ರೇಷ್ಠ ರಾಜಕೀಯ ಶಿಕ್ಷಣ ದೊರೆಯುವಂತೆ ಮಾಡಿತು.

ಶೂದ್ರನಾದ ಏಕಲವ್ಯ ಕ್ಷತ್ರಿಯ ವಿದ್ಯೆ ಕಲಿಯಲು ಹೋಗಿ ಅನುಭವಿಸಿದ ದುರಂತ ಮಹಾಭಾರತದಲ್ಲಿ ಮನನೀಯವಾದ ಸನ್ನಿವೇಶ. ಇಂತಹ ಅದ್ಭುತ ಸನ್ನಿವೇಶವನ್ನು ಕುಮಾರವ್ಯಾಸನು ರಾಜಕೀಯ ತತ್ವದ ಹಿನ್ನೆಲೆಯಲ್ಲಿ ಸಮರ್ಥವಾಗಿ ಬಳಸಿಕೊಂಡಿಲ್ಲವೆಂದು ಡಾ। ಬೋರೆಗೌಡ ಅವರು ''ಕುಮಾರವ್ಯಾಸ ಒಂದು ಅಧ್ಯಯನ'' ಎಂಬ ಪಿಹೆಚ್. ಡಿ. ಗ್ರಂಥದಲ್ಲಿ ಹೇಳಿದ್ದಾರೆ. ರಾಷ್ಟ್ರಕವಿ ಕುವೆಂಪು ಅವರು ''ಬೆರಳ್‌ಗೆ ಕೊರಳ್' ನಾಟಕದಲ್ಲಿ ಇದನ್ನು ಸಮರ್ಥವಾಗಿ ಬಳಸಿಕೊಂಡಿರುವುದನ್ನು ಜ್ಞಾಪಿಸಿಕೊಳ್ಳಬಹುದು.

## ದೌರ್ಬಲ್ಯದ ಗಣಿ

ನಾರಣಪ್ಪನ ಭಾರತದಲ್ಲಿ ಚಕ್ರವರ್ತಿಗಳ ವಿಚಾರ ನಾಲ್ಕಾರು ಕಡೆ ಬರುತ್ತದೆ. ಅದು ಬರುವೆಡೆಯಲ್ಲೆಲ್ಲ ಅವರ ಬಗ್ಗೆ ಒಳ್ಳೆಯ ಮಾತಿಲ್ಲ. ಅವರ ಬಗ್ಗೆ ಅವನಿಗೆ ತಿರಸ್ಕಾರ, ಜುಗುಪ್ಸೆ, ಅವಹೇಳನ. ಅದಕ್ಕೆಲ್ಲಾ ಕಾರಣವಿಲ್ಲದಿಲ್ಲ. ''ಅರಸರ ಮನೆಯಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯಲ್ಲಿ ತೊತ್ತಾಗಿರುವುದು ಲೇಸು.[೧]

---

೧. ಗದುಗಿನ ಭಾರತ - ಒಂದು ಸಾಂಸ್ಕೃತಿಕ ಅಧ್ಯಯನ; ರಾಜಕೀಯ ಸಂಸ್ಕೃತಿ, ಪುಟ. ೪೫, ಲೇಖಕ, ಡಾ। ದೇಜಗೌ

ನಾರದ ಮುನಿಗಳು ಅರಸರನ್ನು ''ಮೊರೆವ ಹುಲಿಗಳು'' ಎನ್ನುತ್ತಾರೆ. ಕೀಚಕನುಪಟಳದಿಂದ ಬೇಸತ್ತ ದ್ರೌಪದಿ ಹೇಳುವ ಮಾತು ''ಸೇವಿಸುವುದೇ ಕಷ್ಟವೆಂಬುದು ಕೋವಿದರ ಮತ''

ಶ್ರೀಕೃಷ್ಣನ ಪ್ರಕಾರ ಅರಸರ ದೌರ್ಬಲ್ಯಗಳು ಹೀಗಿವೆ: ದ್ಯೂತ ಮೃಗಯಾ ವ್ಯಸನ ನೃಪ ಜಾತಿಗೋಸುಗ... ವಿಷಮವಿದಲೇ ದ್ಯೂತ ಮೃಗಯಾ ವ್ಯಸನ ಪಾರ್ಥಿವ ಜಾತಿಗಿವು...

ಅಧಿಕಾರ ದೊರೆತ ನಂತರ ಅರಸ/ರಾಜಕಾರಣಿಗಳು ಹೇಗೆ ಬದಲಾಗುತ್ತಾರೆಂಬುದಕ್ಕೆ ದೊರೆ ದ್ರುಪದ ತನ್ನ ಬಾಲ್ಯ ಸ್ನೇಹಿತ ದ್ರೋಣನನ್ನು ಕುರಿತು ಹೇಳುವ ಮಾತೇ ಸಾಕ್ಷಿ:

**''ಭೂಪರಿಗೆ ಬಡಹಾರುವರಿಗೆತ್ತಣದು ಸಖತನ**
**ತಿರಿವ ಹಾರುವರೊಡನೆ ಭೂಮೀಶ್ವರನಿಗೆತ್ತಣ ಮೈತ್ರಿ''**

ಭೀಷ್ಮ, ದ್ರೋಣ, ವಿದುರ ಮೊದಲಾದವರೆಲ್ಲಾ ಆಗಾಗ್ಗೆ ರಾಜನ ದೌರ್ಬಲ್ಯಗಳನ್ನು ಹೇಳುತ್ತಾರೆ.

### ಋಷಿಗಳ ಕಣ್ಣಿನಲ್ಲಿ ರಾಜಕೀಯ ತತ್ವ

ಕುಮಾರವ್ಯಾಸನ ಕಾವ್ಯದಲ್ಲಿ ಮಾರ್ಕಂಡೇಯ, ಧರ್ಮವ್ಯಾಧ, ಧೌಮ್ಯ, ನಾರದ, ಶ್ರೀಕೃಷ್ಣ ಮೊದಲಾದವರು ಶ್ರೇಷ್ಠ ರಾಜಕೀಯ ಮೌಲ್ಯಗಳನ್ನು ಪ್ರತಿಪಾದಿಸಿದ್ದುಂಟು. ಗೋಖಲೆ, ಗಾಂಧಿ. ಜಯಪ್ರಕಾಶ ನಾರಾಯಣ ಮುಂತಾದ ಭಾರತದ ಆಧುನಿಕ ಧುರೀಣರು ಈ ತತ್ತ್ವದ ಹಿನ್ನೆಲೆಯ ಮೇಲೆ ಸಿದ್ಧಾಂತ ರಚಿಸಿದ್ದಾರೆ. ಕುಮಾರವ್ಯಾಸನ ಕಾವ್ಯದಲ್ಲಿ ಋಷಿಗಳು ಕಂಡ ರಾಜಕೀಯ ತತ್ತ್ವ ಹೀಗಿದೆ: ''ಲೋಕಕನರ್ಥ ಸಾಧನ ಕಾಮ, ಮಾನ್ಯರನು ಧಿಕ್ಕರಿಸಿ ಅವಮಾನ್ಯರನು ಮನ್ನಿಸಕೂಡದು, ಸಪ್ತ ವ್ಯಸನದ ಗಣೆಯಿಂದ ಮುಕ್ತನಾಗಬೇಕು. ಮೇಲೆ ಮೇಲೆ ಪತಿಕಾರ್ಯನಿಷ್ಠರಂತಿದ್ದು ಒಳಗೊಳಗೆ ರಾಜದ್ರೋಹವನ್ನು ನೆನೆಯುವ ಜನ ನೃಪರನ್ನು ಬಳಸಿಕೊಂಡಿರುತ್ತಾರೆ. ನಾಲ್ಕಾರು ಜನರಲ್ಲಿ ಆಲೋಚಿಸುವ ಕಾರ್ಯವಿಧಾನದ ಬಗ್ಗೆ ದೊರೆಯೊಬ್ಬನೇ ಕೊನೆಯದಾಗಿ ನಿರ್ಣಯಿಸಿಕೊಳ್ಳಬೇಕು. ನೀತಿಯಿಂದ ಜನಾನುರಾಗ, ಜನಾನುರಾಗದಿಂದ ಧನ, ಧನದಿಂದ ಪರಿಕರ, ಪರಿಕರದಿಂದ ಜಯ, ಜಯದಿಂದ ಧರ್ಮ, ಧರ್ಮದಿಂದ ಸುರತುಷ್ಟಿ, ತುಷ್ಟಿಯಿಂದ ಇಹಪರ ವಿಜಯ ಸಮನಿಸುತ್ತದೆ. ಮಂತ್ರವಿಲ್ಲದೆ ಬರಿಯ ತಳತಂತ್ರದಲಿ ಫಲವಿಲ್ಲ. ಸತ್ಯವೇ ಸತ್ಫಾಧಿಕೆ ಕಾರಣ. ಆಯವಿಲ್ಲದ ಬೀಯವಾಗಲಿ ನ್ಯಾಯವಿಲ್ಲದ ನಡವಳಿಕೆಯಾಗಲಿ ಸಲ್ಲವು, ನೆಚ್ಚದಿರು ಸಿರಿಯನು, ಅಪಕೀರ್ತಿ ನಾರಿಯ ಮೆಚ್ಚದಿರು, ಪರಿಜನರಲ್ಲಿ ದಯೆ, ಪರಸ್ತ್ರೀಯರಲ್ಲಿ ಭೀತಿ, ಹಗೆಗಳಲ್ಲಿ ನಿಷ್ಕರುಣೆ, ಬಡವರಲ್ಲಿ ದಾನವನ್ನು ವಿರಚಿಸುವುದುತ್ತಮ''[೧]

ತೆರಿಗೆ ವಿಚಾರದ ಪ್ರಸ್ತಾಪ ಬಂದಾಗ ಕುಮಾರವ್ಯಾಸ ಹೀಗೆ ಧ್ವನಿಸುತ್ತಾನೆ ''ಫಲವವಹುದು ಕೆಡವೀಯರಳಿ ಪರಿಮಳದ ಕೊಂಬಂದರಲೆ ನೀನಾಳ್ದಿಳೆಯ ಕರರರ್ಥವನು ತೆಗೆವೈ ಪ್ರಜೆಯ ನೋಯಿಸದೆ''.

ನಾರಣಪ್ಪ ಇಂತಹ ರಾಜಕೀಯ ವಿಚಾರಗಳನ್ನು ಹತ್ತು ಹಲವು ಕಡೆಯಿಂದ ಸಂಗ್ರಹಿಸಿದ್ದಾನೆ. ಅವು ಎಲ್ಲಾ ಕಾಲಕ್ಕೂ ಎಲ್ಲಾ ದೇಶಗಳಿಗೂ ಸಮಾನವಾಗಿ ಅರ್ಥೈಯಿಸುವಂತಹುದು.

### ರಾಜಕಾರಣದ ಹಿನ್ನೆಲೆಯಲ್ಲಿ ಪಾತ್ರ

ಕುಮಾರವ್ಯಾಸ ಚಿತ್ರಿಸಿದ ಅನೇಕ ಪಾತ್ರಗಳು ನಮ್ಮ ಜನಮನದಲ್ಲಿ ಶಾಶ್ವತವಾಗಿ ಬೇರೂರಿವೆ. ಕುಮಾರವ್ಯಾಸನೇ ತಾನು ನೋಡಿದ ವ್ಯಕ್ತಿಗಳನ್ನು ಸಿದ್ಧಪಡಿಸಿದ ಪಾತ್ರಗಳಿಗೆ ತುಂಬಿರಬಹುದು. ಇನ್ನೂ ಹೆಜ್ಜೆ ಮುಂದೆ ಹೋದರೆ ಕುಮಾರವ್ಯಾಸನ ಪಾತ್ರಗಳು ಅನಂತರ ಎಲ್ಲೆಲ್ಲೂ ರೂಪಗೊಂಡಿದ್ದನ್ನು ಕಾಣಬಹುದು.

### ಶ್ರೀಕೃಷ್ಣ

ಶ್ರೀಕೃಷ್ಣ ಶಕ್ತಿಯ ತಿರುಳು ಕುಮಾರವ್ಯಾಸನ ಕಾವ್ಯದಲ್ಲಿ ಎರಡು ಅಂಶಗಳ ಆಧಾರದ ಮೇಲೆ ನಿಂತಿದೆ. ಅವುಗಳಲ್ಲಿ ಒಂದು ವೈದಿಕತೆ ಮತ್ತೊಂದು ರಾಜ ತಾಂತ್ರಿಕ ಕುಶಲತೆ. ಕೃಷ್ಣನನ್ನು ದೈವವಾಗಿಸಿ ಕುಮಾರವ್ಯಾಸ ಎಲ್ಲಾ ಮುಖ್ಯ ಪಾತ್ರಗಳನ್ನೂ ತನ್ನ ಗುರುತ್ವ

೧. ಗದುಗಿನ ಭಾರತ ಒಂದು ಸಾಂಸ್ಕೃತಿಕ ಅಧ್ಯಯನ; ರಾಜಕೀಯ ಸಂಸ್ಕೃತಿ, ಪುಟ. ೪೫, ಲೇಖಕ, ಡಾ। ದೇಜಗೌ

ಕೇಂದ್ರದತ್ತ ಆಕರ್ಷಿಸಿ ಅವನನ್ನು ಒಬ್ಬ ರಾಜಕೀಯ ಕಾರ್ಯಪಟುವಾಗಿ ಪಾಂಡವರ ಹಿತಾಪೇಕ್ಷಿಸುತ್ತಾನೆ. ಅವನ ರಾಜತಾಂತ್ರಿಕತ್ವದ ಸಿಂಹಪಾಲು ಅರ್ಜುನನ ಒಡನಾಟತ್ವದಲ್ಲಿ ಪ್ರಕಟವಾಗುತ್ತದೆ.

ಸುಭದ್ರಾ ಪರಿಣಯದಿಂದ ಮೊದಲ್ಗೊಂಡು, ಖಾಂಡವವನ ದಹನ, ರಾಜಸೂಯಯಾಗಾಚರಣೆ ಮೊದಲಾದ ಕಡೆ ಕೃಷ್ಣನ ರಾಜತಾಂತ್ರಿಕ ಬುದ್ಧಿ ಕೆಲಸ ಮಾಡುತ್ತದೆ. ಸಹಾಯ ಯಾಚಿಸಿ ಬಂದ ದುರ್ಯೋಧನನಿಗೆ ಕೃತವರ್ಮನೊಡನೆ ಚತುರಂಗ ಸೇನೆಯನ್ನು ಒಪ್ಪಿಸಿ ತಾನು ಪಾಂಡವರ ಪಕ್ಷದಲ್ಲಿ ನಿಂತುದರಲ್ಲಿ ಪಾಂಡವರ ಪಕ್ಷಪಾತತ್ವ ಹಾಗೂ ಆತನ ವ್ಯಕ್ತಿ ಸಾಮರ್ಥ್ಯವನ್ನು ಅರಿಯಬಹುದು.

ಕೃಷ್ಣ ಪಾಂಡವರ ದೂತನಾಗಿ ಹಸ್ತಿನಾವತಿ ಪ್ರವೇಶಿಸಿದ ಮೇಲೆ ಆತ ನೇರವಾಗಿ ವಿದುರನ ಮನೆಗೆ ಹೋಗುತ್ತಾನೆ. ಇದೊಂದು ರಾಜಕೀಯ ತಂತ್ರ.

ವಿದುರ ಬಿಲ್ಲನ್ನು ಮುರಿದದ್ದು, ಕರ್ಣನ ಸ್ವಾಮಿನಿಷ್ಠೆಯಲ್ಲಿ ಕಂದಕವನ್ನ ತೋಡಿದುದು ಶ್ರೀಕೃಷ್ಣನ ರಾಯಭಾರಿತನದ ಫಲಶ್ರುತಿ. ಕರ್ಣನನ್ನು ಪಾಂಡವರ ಕಡೆಗೆ ಸೆಳೆದುಕೊಳ್ಳುವುದಾಗಲಿ, ಅವನನ್ನು ರಾಜನನ್ನಾಗಿ ಮಾಡಬೇಕೆಂಬುದಾಗಲಿ ಕೃಷ್ಣನ ಉದ್ದೇಶವಲ್ಲ. ಅವನ ಅದಮ್ಯ ಸ್ವಾಮಿನಿಷ್ಠೆ ಹಾಗೂ ರಣೋತ್ಸಾಹವನ್ನು ಕುಗ್ಗಿಸುವುದು ಶ್ರೀಕೃಷ್ಣನ ಉದ್ದೇಶವಾಗಿತ್ತು. ಈ ಉದ್ದೇಶದ ಈಡೇರಿಕೆಗೆ ಕೃಷ್ಣ 'ಭೇದನೀತಿ' ಅನುಸರಿಸುತ್ತಾನೆ.

ದಾಕ್ಷಿಣ್ಯ ಹಾಗೂ ದ್ವಂದ್ವಗಳಿಂದ ಜರ್ಝರಿತನಾದ ಕರ್ಣ 'ವಂಶವನರುಹಿ ಕೊಂದನು' ಎನ್ನುತ್ತಾ ಕೃಷ್ಣನ ರಾಜಕೀಯ ತಂತ್ರಕ್ಕೆ ವ್ಯಾಖ್ಯೆಯನ್ನು ನೀಡುತ್ತಾನೆ. ಕರ್ಣನ ಜನನ ವೃತ್ತಾಂತವನ್ನು ಶ್ರೀಕೃಷ್ಣ ಕುಂತಿಯಿಂದ ಮತ್ತೊಮ್ಮೆ ಕರ್ಣನಿಗೆ ಹೇಳಿಸಿ ಅವನ ಮನದಲ್ಲಿ ಪಾಂಡವರ ಪರವಾದ ಸಹಾನುಭೂತಿಯನ್ನು ಬಿತ್ತುತ್ತಾನೆ. ವೃತ್ತಿನಿರತ ರಾಜಕಾರಣಿ ತನ್ನ ಗುರಿ ಸಾಧನೆಗೆ ಯಾವ ಮಾರ್ಗಬೇಕಾದರೂ ಅನುಸರಿಸುತ್ತಾನೆ. ಅಷ್ಟೇ ಅಲ್ಲ ತಾಯಿ-ಮಗನ ಸಂಬಂಧವನ್ನು ಬೇಕಾದರೂ ಬಳಸಿಕೊಳ್ಳುತ್ತಾನೆಂಬುದಕ್ಕೆ ಈ ಪ್ರಸಂಗವೇ ಸಾಕ್ಷಿಯಾಗಿದೆ.

ಕುರುಕ್ಷೇತ್ರ ಯುದ್ಧದಲ್ಲಿ ದುರ್ಯೋಧನನ ಪರವಾಗಿ ನಿಂತ ಮಹಾರಥರೆನಿಸಿದ ಭೀಷ್ಮ, ದ್ರೋಣ, ಕರ್ಣರ ವಿರುದ್ಧ ಪಾಂಡವರು ಗಳಿಸಿದ ಜಯದಲ್ಲಿ, ಅಭಿಮನ್ಯು ವಧೆ ಮತ್ತು ಜಯದ್ರಥನ ಸಂಹಾರದಂತಹ ಸೂಕ್ಷ್ಮ ಸನ್ನಿವೇಶದಲ್ಲಿ ಕೃಷ್ಣನನ್ನು ತೊಡಗಿಸಿಕೊಂಡ ಬಗೆ ಅವನ ಕಾರ್ಯದಕ್ಷತೆ ಮತ್ತು ರಾಜಕೀಯ ಪ್ರಜ್ಞೆಯನ್ನು ಪ್ರಕಾಶಿಸುತ್ತದೆ. ಶ್ರೀಕೃಷ್ಣ ಒಬ್ಬ ಶ್ರೇಷ್ಠ ರಾಜತಾಂತ್ರಿಕಜ್ಞನಾಗಿ ಕಾವ್ಯದ ಎಲ್ಲಾ ಸ್ತರಗಳಲ್ಲೂ ತನ್ನ ಪ್ರಭಾವ ಬೀರುತ್ತಾನೆ.

## ಧರ್ಮರಾಯ

''ಅಂತಃಕಲಹಕಿದು ನೂರ್ವರು ವಿಚಾರಿಸಲೈವರಾವು'' ಎನ್ನುವ ಧರ್ಮರಾಯ ಕುಮಾರವ್ಯಾಸ ಭಾರತದ ಶ್ರೇಷ್ಠ ಮೌಲ್ಯಗಳನ್ನು ಪ್ರತಿಪಾದಿಸುವ ಚಕ್ರವರ್ತಿಯಾಗಿದ್ದಾನೆ. ಬೇರೆಯವರ ಕಲಹಕ್ಕೆ ನಾವು ನೂರೈವರು, ಅಂತಃಕಲಹಕ್ಕೆ ನೂರ್ವರು ಮತ್ತು ಐವರು ಎಂದು ಹೇಳುವ ಮೂಲಕ ಶ್ರೇಷ್ಠ ರಾಜನಲ್ಲಿರಬೇಕಾದ ಭಾವೈಕ್ಯತೆಯ ಮನೋಭಾವ ಕಾಣಬಹುದು. ಯಕ್ಷಪ್ರಶ್ನೆಯ ಸಂದರ್ಭದಲ್ಲಿ ನಕುಲ ಬದುಕಲೆಂದು ಹೇಳುವ ಮೂಲಕ ಧರ್ಮರಾಯ ತಮ್ಮಲ್ಲಿನ ಒಗ್ಗಟ್ಟು ಕಾಯ್ದುಕೊಳ್ಳಲು ಮುಂದಾಗುತ್ತಾನೆ. ಕುರುಕ್ಷೇತ್ರ ಯುದ್ಧದಲ್ಲಿ ಒಬ್ಬ ಸೋದರ ಮೃತನಾದರೂ ತಾನು ಅಗ್ನಿಪ್ರವೇಶ ಮಾಡುವುದಾಗಿ ಹೇಳುವ ಧರ್ಮರಾಯ ಅತ್ಯುತ್ತಮ ಭ್ರಾತೃವಾತ್ಸಲ್ಯಕ್ಕೆ ಉದಾಹರಣೆಯಾಗಿದ್ದಾನೆ.

ಧರ್ಮರಾಯ ದುರ್ಯೋಧನನಂತೆ ಕಳವಳಿಸುವನಲ್ಲ, ದೃಢ ಮನಸ್ಸಿನವನು ಹಾಗೂ ಸೂಕ್ಷ್ಮ ಬುದ್ಧಿಯವನು. ಡಾ। ಎಚ್. ಎಸ್. ರಾಘವೇಂದ್ರರಾವ್ ಅವರು ಧರ್ಮರಾಯನ ವ್ಯಕ್ತಿತ್ವವನ್ನು ಹೀಗೆ ಕಂಡರಿಸಿದ್ದಾರೆ: ''ಇವನು ಯಾವಾಗಲೂ ಉಚಿತವಾಗಿಯೇ ವರ್ತಿಸುತ್ತಾನೆ ಎನ್ನುವುದಕ್ಕಿಂತಾ ಹೆಚ್ಚಾಗಿ ಯಾವುದೇ ವಿಧವಾದ ಮಾನಸಿಕ ತುಮುಲ ಅನುಭವಿಸುವುದಿಲ್ಲವಲ್ಲ ಎನ್ನುವುದೇ ನಮ್ಮ ಕುತೂಹಲಕ್ಕೆ ಕಾರಣವಾಗುತ್ತದೆ.'' ಧರ್ಮರಾಯ ಕೇವಲ ಕಾವ್ಯದ ಆದರ್ಶದ ನಾಯಕನಲ್ಲ. ಅವನನ್ನು ಆದರ್ಶವಾಗಿಟ್ಟುಕೊಂಡ ಮೌರ್ಯರ ದೊರೆ ಅಶೋಕ (ಕ್ರಿ.ಪೂ. ೨೭೩ರಿಂದ ೨೩೨), ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗ (ಕ್ರಿ. ಶ. ೮೧೪ರಿಂದ ೮೭೮) ರಲ್ಲಿ ಧರ್ಮರಾಯನ ಪ್ರಭಾವವನ್ನು ಕಾಣಲು ಸಾಧ್ಯವಿದೆ.

## ದುರ್ಯೋಧನ

ಕುಮಾರವ್ಯಾಸ ಭಾರತದಲ್ಲಿ ರಾಜಕೀಯ ದೃಷ್ಟಿಯಿಂದ ದುರ್ಯೋಧನನ ಪಾತ್ರ ಅತಿ ಮುಖ್ಯ. ಪಂಪ, ರನ್ನರಂತೆ ಕುಮಾರವ್ಯಾಸ ಸಹ ದುರ್ಯೋಧನನಿಗೆ 'ಕುರುರಾಜೋತ್ತಮ,' 'ಮಾನನಿಧಿ', 'ರಾಜಕಲಿ' ಎಂಬ ವಿಶೇಷಣಗಳನ್ನು ಬಳಸುತ್ತಾನೆ. ಡಾ। ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ದುರ್ಯೋಧನನ ಪಾತ್ರವನ್ನು ವೈಜ್ಞಾನಿಕ ನೆಲೆಯಲ್ಲಿ ಚಿತ್ರಿಸುತ್ತಾರೆ. ''ದುರ್ಯೋಧನನಿಗೆ ಪಾಂಡವರ ವಿಷಯದಲ್ಲಿ ಕಲ್ಲುಮನಸ್ಸಾದರೂ ಅವನು ಜನರಲ್ಲಿ ಪ್ರೀತಿಯಿಂದ ನಡೆದುಕೊಂಡನು. ತಂದೆಯೆಂದರೆ ಅವನಿಗೆ ಪ್ರೀತಿ, ಭಕ್ತಿ ಸಾಲದಾದರೂ ಮಮತೆ ಕಡಿಮೆಯಾಗಿಲ್ಲ, ತಾಯಿಗೆ ಎದುರು ಮಾತು ಹೇಳುವವನಲ್ಲ.''

ಕೀಚಕನ ಮರಣ ವಾರ್ತೆ ಕೇಳಿದಾಗ ಆತನ ಪ್ರತಿಕ್ರಿಯೆ ಎಷ್ಟೊಂದು ಸೂಕ್ಷ್ಮವಾಗಿತ್ತೆಂಬುದನ್ನು ಈ ಕೆಳಗಿನ ಪದ್ಯದಿಂದ ನೋಡಬಹುದು.

**ಅವನಿಪತಿ ಮೂಗಿನಲಿ ಕರ ಪ**
**ಲ್ಲವವನಿಟ್ಟನು ತಲೆಯ ತೂಗಿದ**
**ನವಳು ದುರುಪದಿ ಖಳರ ಕೊಂದವ ಭೀಮ ಗಂಧರ್ವ**
**ದಿವಿಜ ಸತಿಯೆತ್ತಲು ವಿರಾಟನ**
**ಭವನದೋಲಗವೆತ್ತಲದು ಪಾಂ**
**ಡವರ ಕೃತ್ರಿಮ ತಂತ್ರ ಮರೆಯಿರಿಗಾರರವರೆಂದ**
**(ವಿರಾಟಪರ್ವ: ಸಂಧಿ, ೪, ಪದ್ಯ ೭, ಪುಟ. ೨೬೪)**

ಕೀಚಕ ಕಾಮಿಸಿದುದು ದ್ರೌಪದಿಯನ್ನೆಂದೂ ಅವನನ್ನು ಕೊಂದವನು ಭೀಮನೆಂದೂ ಊಹಿಸುವಾಗ ದುರ್ಯೋಧನ ಹಾಕುವ ಲೆಕ್ಕಾಚಾರ ಅವನ ರಾಜತಾಂತ್ರಿಕತೆಯನ್ನು ತೋರಿಸುತ್ತದೆ.

**''ಭೀಮ ಕೀಚಕ ಶಲ್ಯನೀ ಬಲ**
**ರಾಮನೆಂಬೀ ನಾಲುವರು ಸಂ**
**ಗ್ರಾಮದೊಳು ಸರಿ...**
**(ವಿರಾಟ ಪರ್ವ: ೪ನೆಯ ಸಂಧಿ, ೧೧ನೆಯ ಪದ್ಯ, ಪುಟ. ೨೬೪)**

ಎಂಬ ಅವನ ಅರಿವು ಅವನೆಲ್ಲಾ ಗ್ರಹಿಕೆಗಳ ಕೀಲಿಕೈ ಆಗಿದೆ.

ಕುರುಕ್ಷೇತ್ರ ಯುದ್ಧದಲ್ಲಿ ಭೀಷ್ಮನ ಸಹಭಾಗಿತ್ವವನ್ನು ಕೇಳಲು ತನ್ನ ''ಆಪ್ತಾವನಿಪ ಸಚಿವರು ಸಹಿತ'' ಭೀಷ್ಮನ ಮನೆಗೆ ಬಂದ ಸಂದರ್ಭದಲ್ಲಿ ಅವನು ಭೀಷ್ಮನೊಡನೆ ನಡೆಸುವ ಮಾತುಕತೆ ಅವನ ಸಂಯಮಶೀಲ ನಡತೆ ಹಾಗೂ ಮಾತುಗಾರಿಕೆಗೆ ಉದಾಹರಣೆಯಾಗಿದೆ.

ದುರ್ಯೋಧನ 'ಅಭಿಮಾನಧನ' ರಾಜಪುರುಷನೆಂದು ಮಹಾಭಾರತದಲ್ಲಿ ಖ್ಯಾತನಾಗಿದ್ದಾನೆ. ದುರ್ಯೋಧನ ಕೇವಲ ಕಾವ್ಯದಲ್ಲಿನ ಪಾತ್ರವಾಗಿ ಉಳಿದಿಲ್ಲ. ಅವನಂತಹ ಅಭಿಮಾನಧನರು ನಮ್ಮ ರಾಜಕಾರಣದಲ್ಲಿ ಬಹಳ ಜನರಿದ್ದಾರೆ. ವಿಜಯನಗರ ಸಾಮ್ರಾಜ್ಯ ಪತನಾನಂತರ ಕರ್ನಾಟಕದಲ್ಲಿ ನೂರಾರು ಪಾಳೇಪಟ್ಟುಗಳು ತಲೆಯೆತ್ತಿದವು. ಅದರಲ್ಲಿ ಚಿಕ್ಕಬಳ್ಳಾಪುರ ಪಾಳೇಪಟ್ಟೂ ಒಂದು. ಈ ಪಾಳೇಪಟ್ಟನ್ನು ಗೆದ್ದು ವಿಶಾಲ ಸಾಮ್ರಾಜ್ಯ ಸ್ಥಾಪಿಸಲು ಮೈಸೂರು ಸಂಸ್ಥಾನದ ನವಾಬ ಹೈದರಾಲಿ ದೀರ್ಘ ದಂಡಯಾತ್ರೆ ಕೈಗೊಳ್ಳುತ್ತಾನೆ. ಚಿಕ್ಕಬಳ್ಳಾಪುರದ ಪಾಳೆಗಾರನಾದ ಬೈಚೇಗೌಡನನ್ನು ಸೋಲಿಸಿ ಗಿಂಡಿ ಬಾಗಿಲಿನಂತಹ ಸೆರೆಮನೆಗೆ ದೂಡುತ್ತಾನೆ. ಬೈಚೇಗೌಡನಿಂದ ನಮಸ್ಕಾರ ಮಾಡಿಸಿಕೊಳ್ಳುವುದು ಹೈದರ್‌ನ ಆಸೆಯಾಗಿರುತ್ತದೆ. ಬೆಳಗ್ಗೆ ಎದ್ದು ಹೈದರ್ ಗಿಂಡಿ ಬಾಗಿಲ ಬಳಿ ಬರುತ್ತಾನೆ.* ತಲೆ ತಗ್ಗಿಸಿ ಬರಬೇಕಾದ ಸ್ವಾಭಿಮಾನಿ ಬೈಚೇಗೌಡನಿಗೆ ಹೈದರನ ಕುತಂತ್ರ ತಿಳಿದು ಆತ ಕಾಲುಗಳನ್ನು ಮುಂದೆ ಮಾಡಿಕೊಂಡು ಬರುತ್ತಾನೆ. ಇಂತಹ ಅನೇಕ ಸ್ವಾಭಿಮಾನಿ ಪಾಳೇಗಾರರು ಕರ್ನಾಟಕದ ಇತಿಹಾಸದಲ್ಲಿ ೧೭ ಹಾಗೂ ೧೮ನೆಯ ಶತಮಾನದಲ್ಲಿ ಕಾಣಬರುತ್ತಾರೆ. ಇವೆಲ್ಲಾ ಕುಮಾರವ್ಯಾಸನ ಕಾವ್ಯ ಜನಮನದಲ್ಲಿ ಬೀರಿದ ಅದ್ಭುತ ಪ್ರಭಾವವೆಂದು ಹೇಳಬಹುದು.

---

* ಕರ್ನಾಟಕ ಇತಿಹಾಸ ದರ್ಶನ : ಡಾ। ಎಂ. ವಿ. ಕೃಷ್ಣರಾವ್, ಎಂ. ಕೇಶವಭಟ್ಟ, ಪುಟ. ೪೬೫

## ಶಕುನಿ

ಕುಮಾರವ್ಯಾಸ ಭಾರತದಲ್ಲಿ ಅಪರೂಪದ ರಾಜಪ್ರಜ್ಞೆಗಳಲ್ಲಿ ಶ್ರೀಕೃಷ್ಣನ ನಂತರ ಶಕುನಿಗೆ ಸ್ಥಾನವಿದೆ. ಕುರುವಂಶವನ್ನು ವಿಚ್ಛೇದಿಸಿ ಒಂದು ಶಾಖೆಯನ್ನು ನಾಶಮಾಡಲಿಕ್ಕಾಗಿಯೇ ಎಂಬಂತೆ ಕವಿ ಕುಮಾರವ್ಯಾಸ ಶಕುನಿಯನ್ನು ಇಲ್ಲಿ ಚಿತ್ರಿಸಿದ್ದಾನೆ. ತಾನು ಗ್ರಹಿಸಿದ ಕುಟುಂಬ ಕಲಹವನ್ನು ಬಹು ಮಾರ್ಮಿಕವಾಗಿ ಚಿತ್ರಿಸಲು ಶಕುನಿ ಪಾತ್ರದ ಮೂಲಕ ಕವಿ ಪ್ರಯತ್ನಿಸಿದ್ದಾನೆ.

''ಜೂಜುಗಾರರ ಕುಲಶಿರೋಮಣಿ' ಎಂದು ತನ್ನನ್ನು ಕರೆದುಕೊಳ್ಳುವ ಶಕುನಿ ರಾಜ-ಮಹಾರಾಜರ ದೌರ್ಬಲ್ಯ ಉಪಯೋಗಿಸಿ ಕೊಂಡು ತಮ್ಮ ಬೇಳೆ ಬೇಯಿಸಿಕೊಳ್ಳುವ ಆಧುನಿಕ ಮರಿ ರಾಜಕಾರಣಿಗಳಂತೆ ಗೋಚರವಾಗುತ್ತಾನೆ.

ಧರ್ಮರಾಯನಿಗೆ ಶ್ರೀಕೃಷ್ಣ ದುರ್ಯೋಧನನಿಗೆ ಶಕುನಿ ಆಪ್ತ ಮಾರ್ಗದರ್ಶಕರಾಗಿರುತ್ತಾನೆ. ಕೃಷ್ಣ ಪಾಂಡವರಿಗೊದಗುವ ಸಮಸ್ಯೆಗಳನ್ನು ಬಿಡಿಸುವಲ್ಲಿ ತನ್ನ ಕುಶಲತೆಯನ್ನು ತೋರಿಸಿದರೆ ಶಕುನಿ ಸಮಸ್ಯೆಗಳನ್ನು ಸೃಷ್ಟಿಸುವಲ್ಲಿ ತನ್ನ ಕುತ್ಸಿಕತೆಯನ್ನು ತೋರಿಸುತ್ತಾನೆ. ಇಬ್ಬರ ರಾಜತಂತ್ರಜ್ಞತೆಯ ವೈಷಮ್ಯ ಗೋಚರಿಸುವುದು ಈ ನೆಲೆಯಲ್ಲಿ. ಕೃಷ್ಣ, ವಿದುರರ ಪ್ರವೃತ್ತಿಗೆ ವಿರುದ್ಧವಾದ ಪ್ರವೃತ್ತಿಯುಳ್ಳ ಶಕುನಿಯನ್ನು ಭಾರತ ಕಥೆಯ ಮುಖ್ಯ ಪಾತ್ರವಾಗಿ ಅಷ್ಟೇ ಅಲ್ಲ ಪ್ರಮುಖ ರಾಜತಂತ್ರಜ್ಞನಾಗಿಯೂ ಪರಿಗಣಿಸಬೇಕು.

ಬದುಕಿನ ಕೊನೆಯತನಕ ಶ್ರೀಕೃಷ್ಣನ ಪ್ರಾಮುಖ್ಯತೆಯನ್ನು ಒಪ್ಪಿಕೊಳ್ಳದ ಪಾತ್ರಗಳಲ್ಲಿ ಶಕುನಿ ಪಾತ್ರ ಕೂಡ ಒಂದು.

## ಭೀಷ್ಮ

ಕುಮಾರವ್ಯಾಸನ ಕಾವ್ಯದಲ್ಲಿ ಆದಿಯಿಂದ ಅಂತ್ಯದವರೆಗೂ ಸ್ಥಿರವಾಗಿ ನಿಲ್ಲುವ ಹಿರಿಯ ವ್ಯಕ್ತಿತ್ವ ಭೀಷ್ಮನದು. ವಿವೇಕ, ಔದಾರ್ಯ ಹಾಗೂ ಜೀವನಾನುಭವ ಆತನಿಗೆ ರಾಜಕಾರಣದಲ್ಲಿ ಹಿರಿಯ ಸ್ಥಾನ ಕೊಟ್ಟಿದೆ. ರಾಜಕಾರಣದಲ್ಲಿರಬೇಕಾದ ಗಾಂಭೀರ್ಯ ಹಾಗೂ ಮುತ್ಸದ್ದಿತನವನ್ನು ಈ ಪಾತ್ರ ಪ್ರಕಟಿಸುತ್ತದೆ.

## ವಿದುರ

ರಾಜನೀತಿಶಾಸ್ತ್ರಜ್ಞನಾಗಿ ವಿದುರ ಕುಮಾರವ್ಯಾಸ ಭಾರತದಲ್ಲಿ ಶಾಶ್ವತ ಸ್ಥಾನ ಗಳಿಸಿದ್ದಾನೆ. ಪಾಂಡವರನ್ನು ವಿಪತ್ತಿನ ಕ್ಷಣಗಳಿಂದ ಪಾರುಮಾಡುವ ತೀವ್ರ ಪ್ರಯತ್ನ ಮಾಡಿದವರಲ್ಲಿ ವಿದುರನೂ ಒಬ್ಬ. ಭೀಷ್ಮ ಮೊದಲಾದವರು ಕೌರವರ ಹಾಗೂ ಧೃತರಾಷ್ಟ್ರನ ಸ್ವಾರ್ಥವನ್ನು ಖಂಡಿಸಿದರೂ ಯಾವುದೋ ಹಂತದಲ್ಲಿ ನಿರ್ಲಿಪ್ತರಾಗಿಬಿಡುತ್ತಾರೆ. ಆದರೆ ವಿದುರ ದುರ್ಯೋಧನ ಹೀನಾಯವಾಗಿ ಮಾತನಾಡಿದರೂ ಲೆಕ್ಕಿಸದೆ ತನಗೆ ಸರಿಕಂಡದ್ದನ್ನು ನಿರ್ದಾಕ್ಷಿಣ್ಯವಾಗಿ ಹೇಳುವ ಪ್ರಕೃತಿಯವನು. ''ಭೀಮ ನಿನ್ನಯ ತೊಡೆಗಳನ್ನು ಕಡಿವಾ ಸಮಯದೊಳು ತಡೆದು ನಿನ್ನನು ಕಾಯಬೇಕೆಂದು ತಳುಹಿದೆನು'' ಎನ್ನುವ ವಿದುರನ ಮಾತು ಅವನ ಧೈರ್ಯದ ಕುರುಹೂ ಆಗಿದೆ.

ಭೀಷ್ಮ ಹಾಗೂ ಕರ್ಣರು ಸಾಧಿಸಲಾಗದ್ದನ್ನು ವಿದುರ ಸಾಧಿಸಿ ತೋರಿಸಿದ್ದಾನೆ. ನಿಂದನೆಯನ್ನು ಸಹಿಸದ ಅವನ ಸಹನಶಕ್ತಿಯ ಕಟ್ಟು ಕಡಿದು ಋಣದ ಹಂಗನ್ನು ಕಿತ್ತೊಗೆಯುತ್ತದೆ.

''ವಿದುರನು ದ್ರೋಣ, ಭೀಷ್ಮ ಮುಂತಾದವರಿಗಿಂತ ಹೆಚ್ಚಿನ ಧಾರ್ಮಿಕ ಮತ್ತು ನೈತಿಕ ಪ್ರಜ್ಞೆಯನ್ನು ತೋರಿಸುವ ವ್ಯಕ್ತಿ. ಅವನು ರಾಜ್ಯಶಾಸ್ತ್ರ, ನೀತಿಶಾಸ್ತ್ರ ಹಾಗೂ ಭಕ್ತಿಶಾಸ್ತ್ರಗಳೆಲ್ಲಲ್ಲಾ ಪರಿಣತನಾಗಿ ಕಾಣಿಸಿಕೊಳ್ಳುತ್ತಾನೆ. ಶಾಸ್ತ್ರ ಬಲದ ಜೊತೆ ವಿದುರನಲ್ಲಿ ನೈತಿಕ ಬಲವೂ ಇದೆ. ಅದಕ್ಕೇ ಆತ ಉಪದೇಶ ಮಾಡಲು ಸಮರ್ಥ'' ಎಂಬ ವಿಮರ್ಶಕ ಡಾ। ಎಚ್. ಎಸ್. ರಾಘವೇಂದ್ರರಾವ್ ಅವರ ಮಾತುಗಳು ವಿದುರನ ವ್ಯಕ್ತಿತ್ವವನ್ನು ಸುಂದರವಾಗಿ ಚಿತ್ರಿಸಿವೆ.

## ದ್ರೌಪದಿ

ಮಹಾಭಾರತಕ್ಕೆ ನಾಯಕ ಯಾರು? ಎಂಬ ವಿಚಾರದಲ್ಲಿ ಬೇಕಾದಷ್ಟು ಚರ್ಚೆ ನಡೆಯಬಹುದು. ದೃಷ್ಟಿ ಭೇದದಿಂದ ಉತ್ತರವೂ ಭಿನ್ನವಾಗಬಹುದು. ಆದರೆ ಅದರ ನಾಯಕಿ ದ್ರೌಪದಿಯೆಂಬ ವಿಚಾರದಲ್ಲಿ ಸಂಶಯ ಲವಲೇಶವೂ ಹುಟ್ಟುವಂತಿಲ್ಲ. ''ದ್ರೌಪದಿ ಭಾರತದ ಕ್ರಿಯಾಶಕ್ತಿ'' ಎನ್ನುವ ಪ್ರೊ। ತೀ. ನಂ. ಶ್ರೀ. ಅವರ ಮಾತು ಜ್ಞಾಪಕಾರ್ಹವಾದುದು.

ರಾಜಮನೆತನದ ಮಹಿಳೆಯೊಬ್ಬಳಿಗಿರಬೇಕಾದ ಛಲ, ದಿಟ್ಟತನ, ಸ್ವಾಭಿಮಾನ ಹಾಗೂ ಕರುಣೆ ಅವಳಲ್ಲಿ ಮನೆ ಮಾಡಿಕೊಂಡಿವೆ.

ವಸ್ತ್ರಾಪಹರಣದ ಸಂದರ್ಭದಲ್ಲಿ ದುಶ್ಯಾಸನ ಅವಳನ್ನು ಬಲವಂತವಾಗಿ ಎಳೆತಂದಾಗ ಆಕೆ ವಾದ ಮಾಡುವ ರೀತಿ ಎಲ್ಲರನ್ನೂ ಬೆರಗುಗೊಳಿಸುವಂತಹದು.

**ಮುನ್ನ ತನ್ನನು ಸೋತ ಬಳಿಕಿನೊಳೆನ್ನ**
**ಸೋತರೆ ಸಲುವುದೇ...**
(ಸಭಾಪರ್ವ, ೧೪ನೇ ಸಂಧಿ, ೫೭ನೆಯ ಪದ್ಯ, ಪುಟ. ೧೩೯)

ಎಂಬ ಅವಳ ಪ್ರಶ್ನೆ ಆಕೆಯ ಪ್ರಬುದ್ಧ ರಾಜಕೀಯ ಪ್ರಜ್ಞೆಯನ್ನು ತೋರಿಸುತ್ತದೆ. ಧೃತರಾಷ್ಟ್ರ ಅವಳಿಗೆ ಎರಡು ವರ ನೀಡಿದಾಗ ಅವಳು ಅದರಿಂದ ಧರ್ಮರಾಯನ ದಾಸ್ಯ ಬಿಡುಗಡೆ ಹಾಗೂ ಭೀಮ, ಅರ್ಜುನ, ನಕುಲ, ಸಹದೇವರ ಶಸ್ತ್ರಾಸ್ತ್ರಗಳನ್ನು ಮರಳಿ ಕೊಡುವಂತೆ ಕೇಳಿಕೊಳ್ಳುತ್ತಾಳೆ. ಪಾಂಡವರು ತನಗೆ 'ಪ್ರಾಣವಾಯು' ಎಂದು ಭಾವಿಸಿಕೊಂಡ ದ್ರೌಪದಿ ಪಾಂಡವರಿಗೆ ಪ್ರಾಣವಾಯುವಾಗಿ ಬದುಕಿದಳೆಂದು ಕುಮಾರವ್ಯಾಸ ಹೇಳುತ್ತಾನೆ.

ಕೃಷ್ಣನನ್ನು ರಾಯಭಾರಿಯಾಗಿ ಹಸ್ತಿನಾವತಿಗೆ ಕಳುಹಿಸುವಾಗ ಯುದ್ಧ ನಿರ್ಣಯಿಸಿಕೊಂಡು ಬರುವಂತೆ ಸೂಚಿಸಿದಳು. ಉಪಪಾಂಡವರೂ ಸೇರಿದಂತೆ ತನ್ನ ತೌರಿನ ಎಲ್ಲರನ್ನೂ ಅಶ್ವತ್ಥಾಮ ಕೊಂದಾಗ, ಅವನನ್ನು ಭೀಮ-ಅರ್ಜುನರು ಕೊಲ್ಲಲು ಮುಂದಾದಾಗ ಕುಮಾರವ್ಯಾಸ ಚಿತ್ರಿಸಿದ ದ್ರೌಪದಿ ಹೀಗಿದ್ದಾಳೆ-

**ಬಂದಳಾ ದ್ರೌಪದಿಯಹಹ ಗುರು**
**ನಂದನನ ಕೊಲಬಾರದಕಟೀ**
**ನಂದನರ ಮರಣದ ಮಹಾವ್ಯಥೆಯಿತನಳಿವಿನಲಿ**
**ಕೊಂದು ಕೂಗದೆ ಕೃಪೆಯನಬಲಾ**
**ವೃಂದ ಸಮಸುಖದುಃಖಿಗಳು ಸಾ**
**ರೆಂದು ಭೀಮಾರ್ಜುನರ ತೆಗೆದಳು ಬಳಿಕ ಪಾಂಚಾಲಿ**
(ಗದಾಪರ್ವ; ಹತ್ತನೆಯ ಸಂಧಿ. ೨೬ನೆಯ ಪದ್ಯ ಪುಟ. ೬೧೫)

ದ್ರೌಪದಿ ತನ್ನ ತಾಯ್ತನದ ದುಃಖ ನಿವಾರಣೆಗೋಸ್ಕರ ಮತ್ತೊಬ್ಬ ತಾಯಿಗೆ ದುಃಖವನ್ನುಂಟುಮಾಡುವುದನ್ನು ನಿರಾಕರಿಸುತ್ತಾಳೆ. ಕುಮಾರವ್ಯಾಸ ಇಲ್ಲಿ ದ್ರೌಪದಿಯ ಸೂಕ್ಷ್ಮ ಭಾವವನ್ನು ಸೂಕ್ತ ಸ್ತರಕ್ಕೇರಿಸಿ ಆಕೆಯ ವ್ಯಕ್ತಿತ್ವದ ಬಗೆಗೆ ಗಾಢವಾಗಿ ಚಿಂತಿಸುವಂತೆ ಮಾಡುತ್ತಾನೆ.

ಕರ್ನಾಟಕದ ಅನೇಕ ರಾಣಿಯರು ಮತ್ತು ರಾಜಮಾತೆಯರು ದ್ರೌಪದಿಯ ಛಲ ಹಾಗೂ ಸ್ವಾಭಿಮಾನವನ್ನು ರೂಢಿಸಿ ಕೊಂಡಿರುವ ವಿಚಾರವನ್ನು ಕರ್ನಾಟಕದ ಇತಿಹಾಸ ಪ್ರಸ್ತುತಪಡಿಸುತ್ತದೆ. ಕೆಳದಿ ರಾಣಿ ಚೆನ್ನಮ್ಮ, ರಾಣಿ ಅಬ್ಬಕ್ಕ, ಕಿತ್ತೂರ ರಾಣಿ ಚೆನ್ನಮ್ಮ, ಅವರ ಛಲ, ಸ್ವಾಭಿಮಾನ ಹಾಗೂ ಹೋರಾಟಗಳನ್ನು ನೆನೆದಾಗ ಅನೇಕ ಪೌರಾಣಿಕ ಪಾತ್ರಗಳು ಅವರ ವ್ಯಕ್ತಿತ್ವವನ್ನು ರೂಪಿಸಿರುವುದನ್ನು ಅಲ್ಲಗಳೆಯುವಂತಿಲ್ಲ.

## ಕಾವ್ಯದ ರಾಜಕೀಯ ಸಂದೇಶ

ಕುಮಾರವ್ಯಾಸನ ಮಹಾಕಾವ್ಯ ರಾಜಕಾರಣಿಗಳಿಗೆ ಹೇಳುವ ಮುಖ್ಯ ಸಂದೇಶ ಯಾವುದು? ''ಸರ್ವೇ ಜನಾಃ ಸುಖಿನೋಭವಂತು'' ಅದರ ಮುಖ್ಯ ಗುರಿ. ವಿದುರ ಆದಿ ಪರ್ವದಲ್ಲಿ ಹೇಳುವ ಮಾತು ಹೀಗಿದೆ:

**ಕುಲಕೆ ಕಂಟಕನಾದಡೊಬ್ಬನ**
**ಕಳೆವುದೂರಳಿವಿನಲಿ ಕಳೆವುದು**
**ಕುಲವನೊಂದನು ದೇಶದಳಿವಿನಲೂರ ಕೆಡಿಸುವುದು**
**ಇಳೆಯನಖಿಳವ ಬಿಸುಡುವುದು ತ**
**ನ್ನುಳಿವ ಮಾಡುವುದೆಂಬ ವಚನವ**
**ತಿಳಿವುದೀತನ ಬಿಸುಟು ಕೆಳೆ ನೀನೆಂದನಾ ವಿದುರ**
(೪ನೆಯ ಸಂಧಿ, ೫೪ನೆಯ ಪದ್ಯ ಪುಟ ೧೧)

''ಕುಟುಂಬಕ್ಕಾಗಿ ಒಬ್ಬನನ್ನು ತ್ಯಾಗ ಮಾಡಬೇಕು. ಗ್ರಾಮಕ್ಕಾಗಿ ಕುಟುಂಬವನ್ನು ತ್ಯಾಗ ಮಾಡಬೇಕು. ನಾಡಿನ ಅಭ್ಯುದಯಕ್ಕಾಗಿ ಒಂದು ಗ್ರಾಮವನ್ನು ತ್ಯಜಿಸಬೇಕು.'' ಅಂದರೆ ಸಂಕುಚಿತವಾಗಿ ಯೋಚಿಸದೆ ವಿಶಾಲವಾಗಿ ಯೋಚಿಸಬೇಕೆಂಬುದೇ ಇದರ ಧ್ವನಿ.

ಒಟ್ಟಾರೆ ಕುಮಾರವ್ಯಾಸ ಭಾರತ ಎಂದೆಂದೂ ಖಾಲಿಯಾಗದ ಚಿನ್ನದ ಗಣಿ. ಯಾರು ಶ್ರಮ ವಹಿಸಿ ಶುದ್ಧ ಚಿನ್ನ ಪಡೆಯುತ್ತಾರೋ ಅವರು ಬೇಕಾದ ಆಭರಣಗಳನ್ನು ಪಡೆಯಬಹುದು. ಭಾರತದ ಹಾಗೂ ಕರ್ನಾಟಕದ ರಾಜಕೀಯ ಘಟನಾವಳಿಯ ಹಿನ್ನೆಲೆಯಲ್ಲಿ ತೀವ್ರತರವಾದ ಅಧ್ಯಯನ ಕೈಗೊಂಡರೆ ಕುಮಾರವ್ಯಾಸನ ಮಹಾಕಾವ್ಯಕ್ಕೆ ನ್ಯಾಯ ದೊರಕಿಸಿಕೊಟ್ಟಂತಾಗುತ್ತದೆ.

ಕುಮಾರವ್ಯಾಸನ ಕಾವ್ಯ ಅನೇಕ ನಾಯಕರಿಗೆ ಸ್ಫೂರ್ತಿ ಕೊಟ್ಟಿದೆ. ಪ್ರೇರಣೆ ನೀಡಿದೆ. ಅದಕ್ಕಿಂತ ಹೆಚ್ಚಾಗಿ ಕನ್ನಡದ ಜನಪದರನ್ನು ರಾಜಕೀಯವಾಗಿ 'ಜಾಗ್ರತ'ರನ್ನಾಗಿ ಮಾಡಿದೆ. ಅದಕ್ಕಾಗಿ ಆತನಿಗೆ ಎಲ್ಲರೂ ಸದಾ ಚಿರಋಣಿಯಾಗಿರಬೇಕು.

ಕೃತಜ್ಞತೆ : ಕಾವ್ಯದಲ್ಲಿನ ಪದ್ಯಗಳನ್ನು ಆಯ್ಕೆ ಮಾಡಲು ಸಹಕರಿಸಿದ ಎ. ವಿ. ಪ್ರಸನ್ನ ಅವರಿಗೆ

## ಗ್ರಂಥ ಋಣ


ಡಾ। ಕುವೆಂಪು ಮತ್ತು : *ಕರ್ನಾಟ ಭಾರತ ಕಥಾಮಂಜರಿ*

ಡಾ। ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪ್ರಕಟಣೆ : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು ಸರ್ಕಾರ

ಡಾ। ತ. ಸು. ಶಾಮರಾಯ : ಸಭಾಪರ್ವ ಸಂಗ್ರಹ; ತ. ವೆಂ. ಸ್ಮಾರಕ *ಗ್ರಂಥಮಾಲೆ*, ಮೈಸೂರು

ಡಾ। ಸಿ. ಪಿ. ಕೃಷ್ಣಕುಮಾರ್ : ಕುಮಾರವ್ಯಾಸ ಭಾರತ- ಒಂದು ನೋಟ; ಸುವಿದ್ಯಾ ಪ್ರಕಾಶನ, ಬೆಂಗಳೂರು

ಡಾ। ಕೆ. ಕೃಷ್ಣಮೂರ್ತಿ : ಮಹಾಭಾರತ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಡಾ। ದೇ. ಜವರೇಗೌಡ : *ಗದುಗಿನ ಭಾರತ- ಒಂದು ಸಾಂಸ್ಕೃತಿಕ ಅಧ್ಯಯನ;* ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಾ। ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಭಾರತತೀರ್ಥ; ಜೀವನ ಕಾರ್ಯಾಲಯ, ಬೆಂಗಳೂರು

ಡಾ। ಎಸ್. ವಿ. ರಂಗಣ್ಣ : ಕುಮಾರವ್ಯಾಸ; ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಪ್ರೊ। ಎಚ್. ಎಂ. ಶಂಕರನಾರಾಯಣರಾವ್ : ಕುಮಾರವ್ಯಾಸ; ಒಂದು ಸಮೀಕ್ಷೆ; ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ

ಡಾ। ಜಿ ಎಸ್. ಶಿವರುದ್ರಪ್ಪ : ಕನ್ನಡ ಸಾಹಿತ್ಯ ಸಮೀಕ್ಷೆ :ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ

ಪ್ರೊ। ಎಂ. ವಿ. ಸೀತಾರಾಮಯ್ಯ : ಕುಮಾರವ್ಯಾಸ; ಐಬಿಹೆಚ್ ಪ್ರಕಾಶನ, ಬೆಂಗಳೂರು

ಪ್ರೊ। ಸುಜನಾ : ಕುಮಾರವ್ಯಾಸ; ಡಿವಿಕೆ ಮೂರ್ತಿ, ಮೈಸೂರು

ಡಾ। ಎಲ್. ಆರ್. ಹೆಗಡೆ : ಕುಮಾರವ್ಯಾಸನ ಪಾತ್ರಸೃಷ್ಟಿ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಾ। ಬೋರೇಗೌಡ ಚಿಕ್ಕಮರಳಿ : ಕುಮಾರವ್ಯಾಸ- ಒಂದು ಅಧ್ಯಯನ : ಅನಿಕೇತನ, ಚಿಕ್ಕಮರಳಿ, ಪಾಂಡವಪುರ

ಡಾ। ಡಿ. ಕೆ. ರಾಜೇಂದ್ರ : ಪ್ರಧಾನ ಸಂಪಾದಕರು, ಕನ್ನಡ ವಿಶ್ವಕೋಶ, ಸಂಪುಟ. ೧೩, ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ

ಪ್ರೊ। ಬಿ. ಷೇಕ್ ಆಲಿ : ಕರ್ನಾಟಕ ಚರಿತ್ರೆ, ಸಂಪುಟ ೨ ಮತ್ತು ೩, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಡಾ। ಎಂ. ವಿ. ಕೃಷ್ಣರಾವ್ : ಕರ್ನಾಟಕ ಇತಿಹಾಸ ದರ್ಶನ

ಎಂ. ಕೇಶವಭಟ್ಟ

# ಮೈಸೂರು ಒಡೆಯರ ರಾಜನೀತಿ

**ಡಾ। ವಸಂತಕುಮಾರ ಪೆರ್ಲ**

ವಿಜಯನಗರದ ಪತನಾನಂತರ ತಮ್ಮ ಸಮರ್ಥ ಮತ್ತು ಚಾಣಾಕ್ಷ ರಾಜನೀತಿಯಿಂದಾಗಿ ಮೈಸೂರಿನ ಯದುವಂಶದ ಅರಸರು ಒಂದು ಪುಟ್ಟ ಪಾಳೆಯಪಟ್ಟನ್ನು ದೊಡ್ಡ ಸಂಸ್ಥಾನವಾಗಿ ವಿಸ್ತರಿಸಲು ಸಾಧ್ಯವಾಯಿತು. ಕ್ರಿ. ಶ. ೧೩೯೯ರಲ್ಲಿ ಯದುರಾಯನಿಂದ ಆರಂಭವಾದ ಈ ರಾಜವಂಶದ ಇತಿಹಾಸವು ದೇಶ ಸ್ವಾತಂತ್ರ್ಯ ಗಳಿಸುವವರೆಗೂ ಹರಿದುಬಂದಿದೆ. ಕರ್ನಾಟಕದ ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಗೆ ಈ ರಾಜಮನೆತನದ ಕೊಡುಗೆ ಅನನ್ಯ. ಐದೂವರೆ ಶತಮಾನಗಳ ಅವಧಿಯಲ್ಲಿ (ಕ್ರಿ.ಶ. ೧೩೯೯-ಕ್ರಿ.ಶ. ೧೯೫೦) ಕೆಲವು ಏಳುಬೀಳುಗಳೊಂದಿಗೆ ಇಪ್ಪತ್ತೈದು ಮಂದಿ ಅರಸರನ್ನು ಕಂಡ ಈ ಸಂಸ್ಥಾನವು ನಾಡು, ನುಡಿ, ಪರಂಪರೆ, ಕಲೆ, ಶಿಕ್ಷಣ, ಆಡಳಿತಗಳ ದೃಷ್ಟಿಯಿಂದ ಅಳಿದುಹೋದ ವಿಜಯನಗರದ ಮುಂದುವರಿದ ಭಾಗವೇ ಆಗಿದೆ.

ಆಳಿದ ಅರಸರಲ್ಲಿ ೨೩ ನೆಯವರಾದ ಚಾಮರಾಜೇಂದ್ರ ಒಡೆಯರ್ ಅವರ ಆಳ್ವಿಕೆಯಿಂದ ಮೈಸೂರರಸರ ರಾಜನೀತಿಯನ್ನು ಈ ಲೇಖನದಲ್ಲಿ ಮುಖ್ಯವಾಗಿ ಗಮನಿಸಲಾಗಿದೆ. ಅದಕ್ಕೆ ಕಾರಣವೆಂದರೆ ಮೈಸೂರಿನ ಸರ್ವಾಧಿಕಾರಿ ಟಿಪ್ಪೂ ಸುಲ್ತಾನನ ಅಂತ್ಯದ ಬಳಿಕ (೧೭೯೯) ಮೈಸೂರು ಸೈನ್ಯವು ಸಂಸ್ಥಾನದ ಒಳಗೆ ಮತ್ತು ಹೊರಗೆ ಹಲವಾರು ಯುದ್ಧಗಳಲ್ಲಿ ವ್ಯಸ್ತವಾಗಬೇಕಾಯಿತು. ಹಾಗಾಗಿ ರಾಜ್ಯಾಡಳಿತ ಸುಸೂತ್ರವಾಗಿ ಆಗಲಿಲ್ಲ ಮತ್ತು ಆಗಾಗ ಬ್ರಿಟಿಷರ ಹಸ್ತಕ್ಷೇಪವೂ ಇತ್ತು. ಅಲ್ಲದೆ ಚಾಮರಾಜೇಂದ್ರ ಒಡೆಯರ್ ಅವರ ಆಡಳಿತಾವಧಿ ಮೈಸೂರು ಸಂಸ್ಥಾನದಲ್ಲಿ ಒಂದು ಬಹುಮುಖ್ಯ ಸಂಧಿ ಘಟ್ಟ. ಸಾಮಾಜಿಕವಾಗಿ ಹೊಸ ಕಾಲಕ್ಕೆ ಪರಿವರ್ತನೆಯಾಗುತ್ತಿದ್ದರೆ, ರಾಜಕೀಯವಾಗಿ ಪ್ರಜಾಪ್ರತಿನಿಧಿ ಸಭೆ ಭಾರತ ಉಪಖಂಡದಲ್ಲೇ ಮೊಟ್ಟಮೊದಲ ಬಾರಿಗೆಂಬಂತೆ ಮೈಸೂರಿನಲ್ಲಿ ರಚನೆಯಾಯಿತು. (ಅನಂತರ ತಿರುವಾಂಕೂರು ಸಂಸ್ಥಾನದಲ್ಲಿ ಆರಂಭವಾಯಿತು.) ಈ ಎಲ್ಲ ಕಾರಣಗಳಿಂದ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದ ಅನಂತರದ ಮೈಸೂರು ಸಂಸ್ಥಾನದ ರಾಜನೀತಿಯು ಈ ಅಧ್ಯಯನದಲ್ಲಿ ಚರ್ಚಿತವಾಗಿದೆ.

ಪುತ್ರರಿಲ್ಲದ ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ೧೮೬೮ರ ಫೆಬ್ರವರಿ ೨೨ರಂದು ನಾಲ್ಕೂವರೆ ವರ್ಷ ಹರೆಯದ ದತ್ತು ಪುತ್ರ ಚಾಮರಾಜೇಂದ್ರ ಒಡೆಯರ್ ಅವರನ್ನು (ಜನನ ಫೆಬ್ರವರಿ ೨೨, ೧೮೬೩) ಮೈಸೂರು ಸಿಂಹಾಸನದ ಉತ್ತರಾಧಿಕಾರಿಯೆಂದು ಸಿಂಹಾಸನದಲ್ಲಿ ಕೂರಿಸುವುದರೊಂದಿಗೆ ಮೈಸೂರು ರಾಜ್ಯಕ್ಕೆ ಅರ್ಹ ಉತ್ತರಾಧಿಕಾರಿಯೊಬ್ಬರ ಪ್ರಾಪ್ತಿ ಆಯಿತು. ಆದರೆ ದತ್ತು ಪುತ್ರರನ್ನು ಉತ್ತರಾಧಿಕಾರತ್ವಕ್ಕೆ ಒಪ್ಪದ ಬ್ರಿಟಿಷ್ ಪ್ರಭುತ್ವವು ಉತ್ತರಾಧಿಕಾರಿಯ ಅರ್ಹತೆ, ಸಾಮರ್ಥ್ಯಗಳನ್ನು ಒರೆಗೆ ಹಚ್ಚಿ ಪರೀಕ್ಷಿಸಿದ ನಂತರವಷ್ಟೇ ಸಂಸ್ಥಾನದ ಅಧಿಕಾರವನ್ನು ನೀಡುವುದಾಗಿ ಶರತ್ತು ವಿಧಿಸಿತು. ಅದರಂತೆ ಚಾಮರಾಜೇಂದ್ರ ಒಡೆಯರ್ ತಮ್ಮ ಅರ್ಹತೆ, ಸಾಮರ್ಥ್ಯಗಳನ್ನು ಸಾಬೀತುಪಡಿಸಿ ೧೮೮೧ರ ಮಾರ್ಚ್ ೨೫ ರಂದು ಮೈಸೂರು ಸಂಸ್ಥಾನದ

ಅಧಿಕಾರ ಪಡೆಯುವಲ್ಲಿ ಯಶಸ್ವಿಯಾದರು. ಇದು ಕೇವಲ ಮೈಸೂರು ಸಂಸ್ಥಾನಕ್ಕೆ ಮಾತ್ರವಲ್ಲ ಇಡೀ ಭಾರತಕ್ಕೆ ಒಂದು ಮಹತ್ವಪೂರ್ಣವಾದ ವರ್ಷ. ಅವರು ದಿವಾನ್ ರಂಗಾಚಾರ್ಲು ಮತ್ತು ಶೇಷಾದ್ರಿ ಅಯ್ಯರ್ ಅವರ ನೆರವಿನಿಂದ ಆಡಳಿತದಲ್ಲಿ ಸುಧಾರಣೆಗಳನ್ನು ತಂದು ಪ್ರಜಾಪ್ರಭುತ್ವ ನೆಲೆಗಳನ್ನು ಅನುಷ್ಠಾನಗೊಳಿಸಿದರು.

ಭಾರತದಲ್ಲೇ ಪ್ರಪ್ರಥಮ ಬಾರಿಗೆ ಎಂಬಂತೆ, ಮೈಸೂರಿನಲ್ಲಿ 'ಪ್ರಜಾಪ್ರತಿನಿಧಿ ಸಭೆ'ಯನ್ನು ೧೮೮೧ರಲ್ಲಿ ಸ್ಥಾಪಿಸಿದ್ದು ಚಾಮರಾಜೇಂದ್ರ ಒಡೆಯರ್ ಅವರ ಮಹಾಸಾಧನೆಗಳಲ್ಲಿ ಒಂದು. ರಾಜ್ಯಾಡಳಿತದಲ್ಲಿ ಪ್ರಜೆಗಳನ್ನೂ ಒಳಗೊಳಿಸಿಕೊಳ್ಳಬೇಕೆಂಬ ಈ ಮಹತ್ವಪೂರ್ಣವಾದ ಪರಿಕಲ್ಪನೆ ಮುಂದೊಂದು ದಿನ ಭಾರತದಲ್ಲಿ ಪ್ರಜಾಪ್ರಭುತ್ವ ಮಾದರಿಯ ರಾಷ್ಟ್ರಸ್ಥಾಪನೆಗೆ ಕಾರಣವಾಗುತ್ತದೆಂಬ ಆಲೋಚನೆ ಆಗ ಅವರಿಗೆ ಇದ್ದಿರಲಾರದು. ಇದರಿಂದಾಗಿ ಭಾರತದಲ್ಲಿ ಪ್ರಜಾಪ್ರಭುತ್ವದ ಬೀಜಾಂಕುರವಾಯಿತು ಎಂದು ಹೇಳಬಹುದು.

'ಪ್ರಜಾಪ್ರತಿನಿಧಿ ಸಭೆ'ಯ ಮೊದಲ ಸಭೆ ದಿವಾನ್ ಸಿ. ರಂಗಾಚಾರ್ಲು ಅವರ ಅಧ್ಯಕ್ಷತೆಯಲ್ಲಿ ೧೮೮೧ರ ಅಕ್ಟೋಬರ್ ೭ ರಂದು ನಡೆಯಿತು.[2] ಈ ಸಭೆಯ ಅಹವಾಲುಗಳನ್ನು ತಿಳಿದುಕೊಂಡು ರಾಜ್ಯಾಡಳಿತ ನಡೆಯುತ್ತಿತ್ತು.

ಚಾಮರಾಜೇಂದ್ರ ಒಡೆಯರ್ ಅವರನ್ನು 'ಆಧುನಿಕತೆಯ ಹರಿಕಾರ' ಎಂದೂ ಕರೆಯಬಹುದು. ಅವರಿಗೆ ಸ್ತ್ರೀ ಶಿಕ್ಷಣದಲ್ಲಿ ಅಪಾರವಾದ ಕಳಕಳಿ, ಕಾಳಜಿ ಇತ್ತು. ಅದೇ ವರ್ಷ ಮಹಾರಾಣಿಯವರ ಬಾಲಕಿಯರ ಪಾಠಶಾಲೆ ಆರಂಭಿಸಲಾಯಿತು. ಆಗ ಕನ್ನಡ ಭಾಷೆ ತುಂಬ ಹೀನಾಯ ಅವಸ್ಥೆಯಲ್ಲಿತ್ತು. ಕನ್ನಡ ಭಾಷೆಯ ಉಜ್ಜೀವನಕ್ಕಾಗಿ 'ಭಾಷೋಜ್ಜೀವಿನಿ ಸಭಾ' ಸ್ಥಾಪಿಸಲಾಯಿತು. ಸಂಸ್ಕೃತ ವಿದ್ಯಾಭ್ಯಾಸವೂ ಪ್ರಾರಂಭವಾಗಿತ್ತು. ಸಂಸ್ಕೃತ ಪಾಠಶಾಲೆ ಮತ್ತು ನಾಟಕಗಳ ಬೆಳವಣಿಗೆಗಾಗಿ 'ಶ್ರೀ ಚಾಮರಾಜೇಂದ್ರ ನಾಟಕ ಸಭಾ'ವನ್ನು ಸ್ಥಾಪಿಸಲಾಯಿತು.

ಇದೇ ಸಂದರ್ಭದಲ್ಲಿ ಬ್ರಿಟಿಷರ ಉದಾರವಾದದ ಪ್ರಭಾವ ಮತ್ತು ವಿವೇಕಾನಂದರ ಮೈಸೂರು ಭೇಟಿಯಿಂದಾಗಿ ಸಾಮಾಜಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಪಾರ ಸುಧಾರಣೆ ಕಾಣುವಂತಾಯಿತು. ಶಿಕ್ಷಣ ಪ್ರಚಾರಕ್ಕಾಗಿ ೮೦೦ ಪ್ರಾಥಮಿಕ ಶಾಲೆ, ೫೦ ಇಂಗ್ಲಿಷ್ ಪಾಠಶಾಲೆ, ಎರಡು ಸಾಮಾನ್ಯ ಶಾಲೆ, ೩೦ ಸಂಸ್ಕೃತ ಪಾಠಶಾಲೆ ಮತ್ತು ಒಂದು ಪ್ರಥಮ ದರ್ಜೆ ಕಾಲೇಜು ಸ್ಥಾಪಿಸಿ ವಿದ್ಯಾಭಿವೃದ್ಧಿಯ ಕಡೆ ಗಮನ ಹರಿಸಲಾಯಿತು. ಭೂಗರ್ಭ ಇಲಾಖೆ ಮತ್ತು ಪುರಾತತ್ವ ಇಲಾಖೆ ಇವರ ಅವಧಿಯಲ್ಲಿ ಸ್ಥಾಪಿತವಾದವು.

ಚಾಮರಾಜೇಂದ್ರರು ದೂರದ ಕಲಕತ್ತೆಯಲ್ಲಿ ೧೮೯೪ರ ಡಿಸೆಂಬರ್ ೨೮ರಂದು ಡಿಫ್ತೀರಿಯಾ ರೋಗಕ್ಕೆ ಬಲಿಯಾಗಿ ಕಾಲವಾದರು.

೧೮೮೪ರ ಜೂನ್ ೪ ರಂದು ಹುಟ್ಟಿದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ೧೮೯೫ರ ಫೆಬ್ರವರಿ ೧ ರಂದು ಸಿಂಹಾಸನವೇರಿದರು. (ತಂದೆ-ಚಾಮರಾಜೇಂದ್ರರು, ತಾಯಿ-ಕೆಂಪನಂಜಮ್ಮಣ್ಣಿಯವರು) ಶೇಷಾದ್ರಿ ಅಯ್ಯರ್ ಅವರು ದಿವಾನರಾಗಿ ರಾಜ್ಯದ ಆಡಳಿತ ನೋಡಿಕೊಳ್ಳುತ್ತಿದ್ದರು. ನಾಲ್ವಡಿಯವರು ಬಹುಭಾಷೆಗಳಲ್ಲಿ ತಜ್ಞರಾಗಿದ್ದರು. ಕುಶಲ ಆಡಳಿತಗಾರರೂ ಆಗಿದ್ದರು. ವೈಟ್ಲಿ, ಪೂರ್ಣ ರಾಘವೇಂದ್ರರಾವ್, ಭೀಮರಾವ್, ಫ್ರೇಸರ್ ಮುಂತಾದವರು ನಾಲ್ವಡಿಯವರ ಗುರುಗಳಾಗಿದ್ದರು. ತಮ್ಮ ೧೮ನೆಯ ವರ್ಷಕ್ಕೆ, ಅಂದರೆ ೧೯೦೨ರ ಆಗಸ್ಟ್ ೮ ರಂದು ನಾಲ್ವಡಿಯವರಿಗೆ ರಾಜ್ಯಾಭಿಷೇಕವಾಯಿತು. ೩೮ ವರ್ಷ ಆಡಳಿತ ಮಾಡಿದ (೧೯೦೨-೧೯೪೦) ನಾಲ್ವಡಿಯವರು ಅನವಶ್ಯಕವಾದ ವೆಚ್ಚಗಳನ್ನು ಕಡಿಮೆ ಮಾಡಿ ರಾಜ್ಯವನ್ನು ಸಂಘಟಿಸಿದರು.

ಪ್ರಜಾಪ್ರತಿನಿಧಿ ಸಭೆಗೆ ಕಾಲಕಾಲಕ್ಕೆ ಚುನಾವಣೆಗಳನ್ನು ನಡೆಸಲಾಯಿತು.[3] ಅವರ ಸಲಹೆ-ಸೂಚನೆಗಳಂತೆ ರಾಜ್ಯಾಡಳಿತ ಮಾಡಲಾಗುತ್ತಿತ್ತು.[4] ಒಂದೆಡೆ ಬ್ರಿಟಿಷರನ್ನೂ ಇನ್ನೊಂದೆಡೆ ಸ್ಥಳೀಯ ಮುಖಂಡರನ್ನೂ ತೃಪ್ತಿಪಡಿಸಬೇಕಾಗಿದ್ದುದರಿಂದ ನಾಲ್ವಡಿಯವರಿಗೆ ರಾಜ್ಯಭಾರವೆಂದರೆ ತಂತಿ ಮೇಲಣ ನಡಿಗೆಯಂತೆಯೆ ಆಗುತ್ತಿತ್ತು. ತಮ್ಮ ಮುತ್ಸದ್ದಿತನದಿಂದ ಇಂತಹ ಸವಾಲುಗಳನ್ನೆಲ್ಲ ಅವರು ಗೆದ್ದರು. ಮಹಿಳೆಯರಿಗೆ ಮತದಾನದ ಅಧಿಕಾರ ಕೊಟ್ಟುದು ಮತ್ತು ಮಹಿಳಾ ಅಭ್ಯರ್ಥಿಗಳಿಗೆ ಮೀಸಲಾತಿ ಸ್ಥಾನ ಕೊಟ್ಟುದು ನಾಲ್ವಡಿಯವರ ಮುಂದಾಲೋಚನೆಗೂ ಪ್ರಗತಿಪರ ಮನೋಭಾವಕ್ಕೂ ಹಿಡಿದ ಕನ್ನಡಿ. ೧೯೦೭ರಲ್ಲಿ ನ್ಯಾಯವಿಧಾಯಕ ಪರಿಷತ್ತು ರೂಪಿಸಿ ಪ್ರಜಾಪ್ರತಿನಿಧಿಗಳು ಸರಕಾರದ ಕಾನೂನು ಅಥವಾ ಶಾಸನ ರಚನೆಯ ಕಾರ್ಯದಲ್ಲಿ ಹೆಚ್ಚು ಭಾಗವಹಿಸುವಂತೆ ಮಾಡಿದರು. ೧೯೧೧ರಲ್ಲಿ ಕನ್ನಂಬಾಡಿ ಅಣೆಕಟ್ಟಿನ (ಶ್ರೀ ಕೃಷ್ಣರಾಜ ಸಾಗರ) ರಚನೆಗೆ ಮೊದಲಾಯಿತು.[5] ೧೯೧೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ೧೯೧೬ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲಾಯಿತು.

೧೮೯೭ರ ಫೆಬ್ರವರಿ ೨೮ ರ ಭಾನುವಾರ ಹಳೆಯ ಅರಮನೆ ಅಗ್ನಿಗೆ ಆಹುತಿಯಾಗಿತ್ತು. ಅದೇ ಜಾಗದಲ್ಲಿ ಅದೇ ವರ್ಷ ಹೊಸ ಅರಮನೆಯ ನಿರ್ಮಾಣಕಾರ್ಯ ಆರಂಭಿಸಿ ೧೯೧೨ರಲ್ಲಿ ಪೂರ್ತಿಗೊಳಿಸಲಾಯಿತು.

ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಮಿಂಟೋ ಆಸ್ಪತ್ರೆ, ವಿಶ್ವೇಶ್ವರಯ್ಯ ನಾಲೆ ಕಟ್ಟಿಸಿ ಕೃಷಿಗೆ ಪ್ರೋತ್ಸಾಹ, ಕಾವೇರಿ ವಿದ್ಯುತ್ ಸರಬರಾಜು ಯೋಜನೆ, ಮೈಸೂರು ಬ್ಯಾಂಕ್ ಸ್ಥಾಪನೆ, ಛೇಂಬರ್ ಆಫ್ ಕಾಮರ್ಸ್ ರಚನೆ ಮೊದಲಾದ ಕಾರ್ಯಗಳು ಇವರ ಆಡಳಿತ ಕಾಲದಲ್ಲಿ ಆದವು.

ಜನರಿಗೆ ಶಿಕ್ಷಣ ನೀಡಿಕೆ, ಆರೋಗ್ಯ ನೀಡಿಕೆ, ಕೃಷಿ ಅಭಿವೃದ್ಧಿ ಮತ್ತು ಕೈಗಾರಿಕಾ ಅಭಿವೃದ್ಧಿ ಈ ನಾಲ್ಕು ನಿಟ್ಟಿನ ಚಟುವಟಿಕೆಗಳ ಮೂಲಕವೇ ರಾಜ್ಯದ ಪ್ರಗತಿ ಸಾಧ್ಯ ಎಂದು ಅವರು ಭಾವಿಸಿದ್ದರು.[೬] ಜನರಿಗೆ ಉದ್ಯೋಗ ಒದಗಿಸುವ ಅನೇಕ ಉದ್ಯಮಗಳು ಅಸ್ತಿತ್ವಕ್ಕೆ ಬಂದವು. ಬೆಳಗೊಳದ ರಾಸಾಯನಿಕ ಗೊಬ್ಬರ ಸ್ಥಾವರ, ರೇಷ್ಮೆ ಕಾರ್ಖಾನೆ, ರೇಷ್ಮೆ ನೂಲು ತೆಗೆಯುವ ಕೇಂದ್ರ, ಅರಗು ಮತ್ತು ಬಣ್ಣದ ಕಾರ್ಖಾನೆ (೧೯೩೭), ಆಟದ ವಸ್ತುಗಳ ಕಾರ್ಯಾಗಾರ ಮೊದಲಾದವನ್ನು ಸ್ಥಾಪಿಸಲಾಯಿತು. ಬೀಡಿ ಉದ್ಯಮಕ್ಕೆ ಉತ್ತೇಜನ ದೊರೆಯಿತು. ರಫ್ತು ಉದ್ದೇಶದ ಉದ್ಯಮಗಳಿಗೆ ಪ್ರೋತ್ಸಾಹ ನೀಡಲಾಯಿತು. ಅಗರಬತ್ತಿ ಉದ್ಯಮ (೧೯೩೨) ಸ್ಥಾಪನೆಯಾಯಿತು. ಬೆಂಗಳೂರು - ಮೈಸೂರು ಹೆದ್ದಾರಿ ಅಭಿವೃದ್ಧಿ, ವೈದ್ಯಕೀಯ ಕಾಲೇಜು ಸ್ಥಾಪನೆ (೧೯೩೦), ಆಕಾಶವಾಣಿ ಕೇಂದ್ರ ಸ್ಥಾಪನೆ (೧೯೩೫) ಮೊದಲಾದ ಕಾರ್ಯಗಳಾದವು. ಕುಡಿಯುವ ನೀರಿನ ಸರಬರಾಜು, ಬೀದಿಗಳ ವಿದ್ಯುದೀಕರಣ, ಉದ್ಯಾನವನಗಳ ಅಲಂಕರಣ, ನೈರ್ಮಲ್ಯ ಕಾರ್ಯಗಳಿಗೆ ಆದ್ಯತೆ ದೊರೆಯಿತು.

ಪ್ರಜೆಗಳ ಶಿಕ್ಷಣ, ಆರೋಗ್ಯ ಮೊದಲಾದವುಗಳ ಕಡೆಗೆ ತೀವ್ರ ಗಮನ ಹರಿಸಲಾಯಿತು. ಗ್ರಾಮಾಂತರ ಪ್ರದೇಶಗಳಲ್ಲಿ ಶಾಲೆ ಮತ್ತು ಆಸ್ಪತ್ರೆಗಳನ್ನು ತೆರೆಯಲಾಯಿತು. ನೀರಾವರಿ ಮೂಲಕ ಕೃಷಿ ಉತ್ಪನ್ನ ಹೆಚ್ಚಿಸಲಾಯಿತು.

ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರನ್ನು ಅರಮನೆಗಳ ನಗರವನ್ನಾಗಿ ಪರಿವರ್ತಿಸಿದರು. ಗಂಗೋತ್ರಿ ಆವರಣದಲ್ಲಿರುವ ಜಯಲಕ್ಷ್ಮಿ ವಿಲಾಸ ಅರಮನೆ, ಚಾಮುಂಡಿ ಬೆಟ್ಟದ ರಾಜೇಂದ್ರ ವಿಲಾಸ ಅರಮನೆ, ಮೃಗಾಲಯದ ಪಕ್ಕದ ವಸಂತ ಮಹಲ್, ಲಲಿತಾದ್ರಿಪುರದ ಲಲಿತಮಹಲ್ ಅರಮನೆ, ಚೆಲುವಾಂಬಾ ಅರಮನೆ, ಜಗನ್ಮೋಹನ ಅರಮನೆ ಇವೆಲ್ಲ ಅವರ ಕಾಲದಲ್ಲಿ ಅರಳಿದ ಭವ್ಯ ಕಟ್ಟಡಗಳು, ಅರಮನೆ ಕಚೇರಿಗಳ ಸಂಕೀರ್ಣ, ದೇವರಾಜ ಮಾರುಕಟ್ಟೆ ಮುಂತಾದ ಹಲವು ಹತ್ತು ನಿರ್ಮಾಣಗಳು ಈ ಸಂದರ್ಭದಲ್ಲಿ ಆದವು.

ನಾಲ್ವಡಿ ಕೃಷ್ಣರಾಜ ಒಡೆಯರ್ ೧೯೪೦ ಆಗಸ್ಟ್ ೩ರಂದು ಕಾಲವಾದರು.

ನಾಲ್ವಡಿ ಕೃಷ್ಣರಾಜರ ಕಾಲದಲ್ಲಿ ಅವರ ತಮ್ಮ ಕಂಠೀರವ ನರಸಿಂಹರಾಜ ಒಡೆಯರ್ ಯುವರಾಜರಾಗಿದ್ದರು. ೧೯೪೦ರ ಮಾರ್ಚ್ ೧೧ರಂದು ಕೃಷ್ಣರಾಜ ಒಡೆಯರ್‌ಗಿಂತ ಮೊದಲೇ ಕಂಠೀರವ ನರಸಿಂಹರಾಜ ಒಡೆಯರ್ ಮರಣ ಹೊಂದಿದರು. ಈ ಯುವರಾಜರ ಪುತ್ರ ಜಯಚಾಮರಾಜರು ೧೯೪೦ರ ಸೆಪ್ಟೆಂಬರ್ ೮ ರಂದು ಸಿಂಹಾಸನವೇರಿದರು. ೧೯೫೦ರ ಜನವರಿ ೨೬ ರಂದು ಭಾರತ ಗಣರಾಜ್ಯವೆಂದು ಘೋಷಿತವಾಗುವವರೆಗೆ ಇವರು ಮಹಾರಾಜರಾಗಿದ್ದರು. ಅನಂತರ ಮಹಾರಾಜ ಪದವಿ ಹೋಗಿ 'ರಾಜಪ್ರಮುಖ' ರೆಂದು ಕರೆಯಲಾಯಿತು.

ಜಯಚಾಮರಾಜರ ಆಡಳಿತಕಾಲದಲ್ಲಿ ದೇಶ ಸಂಕ್ರಮಣಾವಸ್ಥೆಯಲ್ಲಿತ್ತು. ಒಂದೆಡೆ ಮಹಾಯುದ್ಧ, ಇನ್ನೊಂದೆಡೆ ಸ್ವಾತಂತ್ರ್ಯಾಂದೋಲನ, ಮಗದೊಂದೆಡೆ ಸಮಾಜ ಸುಧಾರಣೆ ಆಗುತ್ತಿತ್ತು. ಆರ್ಥಿಕ ಬಿಕ್ಕಟ್ಟಿನಿಂದ ದೇಶ ನರಳುತ್ತಿತ್ತು. ಈ ಸಮಸ್ಯೆಯನ್ನು ದಿವಾನರ ನೆರವಿನಿಂದ ಪರಿಹರಿಸಲಾಯಿತು.

ರಾಜಕೀಯ ಎಚ್ಚರ ಮೂಡಿದ್ದರಿಂದಾಗಿ ಪ್ರಜಾಪ್ರತಿನಿಧಿ ಸಭೆಗೆ ಹೊಸ ರೂಪ ಕೊಡಲಾಯಿತು. ೧೯೪೧ ಮತ್ತು ೧೯೪೫ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಚುನಾವಣೆ ನಡೆಸಿ ಸಕ್ರಿಯಗೊಳಿಸಲಾಯಿತು. ದೇಶದ ಅಗತ್ಯವಾಗಿದ್ದ ಜವಾಬ್ದಾರಿ ಸರ್ಕಾರದ ಕರೆಗೆ ಓಗೊಟ್ಟರು. ಭಾರತ ಗಣರಾಜ್ಯ ಒಕ್ಕೂಟದಲ್ಲಿ ಸೇರಲು ಮೊಟ್ಟಮೊದಲು ಒಪ್ಪಿಗೆ ನೀಡಿದ್ದೇ ಮೈಸೂರು ರಾಜ್ಯ.

ಭಾರತ ಗಣರಾಜ್ಯದಲ್ಲಿ ಅಂತರ್ಗತವಾದ ಬಳಿಕ ತಮ್ಮ ರಾಜಪದವಿಯನ್ನು ಬಿಟ್ಟುಕೊಡಲು ಮುಂದಾದವರಲ್ಲಿ ಜಯಚಾಮರಾಜರೂ ಒಬ್ಬರಾದರು. ೧೯೫೦-೫೬ರ ಅವಧಿಯಲ್ಲಿ ರಾಜಪ್ರಮುಖರೆನ್ನಿಸಿಕೊಂಡರು. ರಾಜ್ಯ ಪುನರ್ವಿಂಗಡಣೆಯ ತರುವಾಯ ೧೯೫೬ರಿಂದ ೧೯೬೪ರವರೆಗೆ ಕರ್ನಾಟಕದ ಮೊಟ್ಟಮೊದಲ ರಾಜ್ಯಪಾಲರಾದರು. ೧೯೬೪ರಿಂದ ೧೯೬೬ರವರೆಗೆ ಮದರಾಸಿನ ರಾಜ್ಯಪಾಲರಾದರು.

ಸಾಹಿತ್ಯ, ಸಂಗೀತ, ಕಲೆಗಳಿಗೆ ಮೈಸೂರರಸರು ಅಪಾರ ಪ್ರೋತ್ಸಾಹ ನೀಡಿದರು. ಶಿಕ್ಷಣವೊಂದೇ ಜನಸಾಮಾನ್ಯರನ್ನು ಶೋಷಣೆ ಮತ್ತು ಮೂಢನಂಬಿಕೆಗಳಿಂದ ಮೇಲೆತ್ತಬಲ್ಲುದು ಎಂಬುದನ್ನು ಅರಿತಿದ್ದ ಜಯಚಾಮರಾಜರು ಶಿಕ್ಷಣ ಸಂಸ್ಥೆಗಳನ್ನು ವಿಸ್ತರಿಸಿದರು.

ವಿದ್ಯಾಸಂಸ್ಥೆಗಳಿಗೆ ಆರ್ಥಿಕ ನೆರವು ನೀಡಿದರು. ನಿವೇಶನಗಳನ್ನು ಒದಗಿಸಿದರು. 'ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲೆ' ಎಂಬ ಪ್ರಕಾಶನ ಸಂಸ್ಥೆಯನ್ನು ಆರಂಭಿಸಿ ವೇದ, ಪುರಾಣ, ಉಪನಿಷತ್ತು, ಸಹಸ್ರನಾಮ ಮೊದಲಾದವಕ್ಕೆ ಸಂಬಂಧಿಸಿದ ನೂರಾರು ಕೃತಿಗಳನ್ನು ಪ್ರಕಟಿಸಿದರು. ಸ್ವತಃ ಅವರೇ ಹಲವಾರು ಅಮೂಲ್ಯ ಕೃತಿಗಳನ್ನು ರಚಿಸಿದರು. ಜಯಚಾಮರಾಜೇಂದ್ರ ಚಿತ್ರಶಾಲೆ ಸ್ಥಾಪಿಸಿದರು. ೧೮೯೧ರಲ್ಲಿ ಸ್ಥಾಪಿಸಲಾಗಿದ್ದ ಚಾಮರಾಜೇಂದ್ರ ಮೃಗಾಲಯವನ್ನು ವಿಸ್ತರಿಸಿದರು.

ಆಡಳಿತದ ಸುಗಮ ವ್ಯವಸ್ಥೆಗಳಿದ್ದರೂ ಜನಸಾಮಾನ್ಯರೊಂದಿಗೆ ನೇರವಾದ ಸಂಪರ್ಕ ಇಟ್ಟುಕೊಂಡವರು ಜಯಚಾಮರಾಜ ಅರಸರು. ಆಧುನಿಕ ಕಾಲದಲ್ಲಿ ಮುಖ್ಯಮಂತ್ರಿಗಳು, ಪ್ರಧಾನ ಮಂತ್ರಿಗಳು ನಡೆಸುತ್ತಿರುವ ''ಜನತಾದರ್ಶನ'' ಕಾರ್ಯಕ್ರಮದ ಬೀಜರೂಪವನ್ನು ಜಯಚಾಮರಾಜ ಅರಸರ ಆಡಳಿತದಲ್ಲಿ ಕಾಣಬಹುದು. ವ್ಯವಸ್ಥಿತವಾದ ಆಡಳಿತ ಕ್ರಮವಿದ್ದರೂ ಪ್ರಜೆಗಳೊಂದಿಗೆ ಅವರು ತಳಮಟ್ಟದ ಸಂಪರ್ಕವಿಟ್ಟುಕೊಂಡಿದ್ದರು. ಒಂದು ನಿಶ್ಚಿತ ದಿನ ಪ್ರಜೆಗಳು ಅರಸರನ್ನು ನೇರವಾಗಿ ಭೇಟಿಯಾಗಿ ತಮ್ಮ ಕುಂದುಕೊರತೆಗಳನ್ನು ಹೇಳಿಕೊಳ್ಳಬಹುದಾಗಿತ್ತು.

ಆದೇಶವೊಂದನ್ನು ಹೊರಡಿಸಿದ ಬಳಿಕ ರಾಜನಾದರೂ ಅದಕ್ಕೆ ಬದ್ಧನಾಗಿರಬೇಕು ಎಂಬ ತತ್ತ್ವದಲ್ಲಿ ಮೈಸೂರರಸರು ನಂಬಿಕೆಯಿರಿಸಿದ್ದರು. ರಾಜ ಎಂದ ಮಾತ್ರಕ್ಕೆ ಆದೇಶವನ್ನು ಉಲ್ಲಂಘಿಸುವುದು ನ್ಯಾಯವಲ್ಲ. ವೈಸರಾಯ್ ಲಾರ್ಡ್ ರೀಡಿಂಗ್ ೧೯೨೪ರಲ್ಲಿ ಒಮ್ಮೆ ಕಾರಾಪುರಕ್ಕೆ ಬಂದಿದ್ದರು. ಅವರ ಭೇಟಿಗೆ ನಿಯಮಿತವಾದ ಬಿಲ್ಲೆ ಇರುವವರಿಗೆ ಮಾತ್ರ ಅವಕಾಶ ಎಂದು ನಾಲ್ವಡಿಯವರು ಆದೇಶ ಹೊರಡಿಸಿದ್ದರು. ಸ್ವತಃ ನಾಲ್ವಡಿಯವರು ಬಿಲ್ಲೆ ಮರೆತು ವೈಸರಾಯ್ ಭೇಟಿಗೆ ಹೋದಾಗ ಬಿಲ್ಲೆ ಇರಲಿಲ್ಲ ಎಂಬ ಕಾರಣಕ್ಕೆ ಅಲ್ಲಿ ಕಾವಲಿದ್ದ ದಫೇದಾರ ಅವರನ್ನು ಒಳಗೆ ಬಿಡಲಿಲ್ಲ. ಹಾಗೆಂದು ನಾಲ್ವಡಿಯವರು ಅದು ತನಗಾದ ಅವಮಾನ ಎಂದು ಭಾವಿಸದೆ ಆ ಕಾವಲುಗಾರ ನಿಷ್ಠೆಯಿಂದ ತನ್ನ ಕೆಲಸ ಮಾಡಿದ್ದಕ್ಕೆ ಐವತ್ತು ರೂಪಾಯಿ ಬಹುಮಾನ ನೀಡಿದರು. ಇದು ಶಿಸ್ತಿಗೆ ಅವರು ಎಂತಹ ಗೌರವ ಕೊಡುತ್ತಿದ್ದರು ಎಂಬುದಕ್ಕೆ ನಿದರ್ಶನ.

ಪ್ರಭುಗಳೂ ಪ್ರಜೆಗಳೂ ರಾಜ್ಯವೆಂಬ ಸಂಸಾರಕ್ಕೆ ಇರುವ ಎರಡು ಚಕ್ರಗಳೆಂದು ಮೈಸೂರರಸರು ಭಾವಿಸಿದ್ದರು. ರಾಜ್ಯವನ್ನೂ ಅಭಿವೃದ್ಧಿ ಮಾಡುವ ಕಾರ್ಯಗಳ ಭಾರವನ್ನೂ ವಹಿಸಿಕೊಳ್ಳುವೆವೆಂದು ಪರಸ್ಪರ ಪ್ರತಿಜ್ಞೆ ಮಾಡಿಕೊಳ್ಳಬೇಕೆಂದು ಅಪೇಕ್ಷಿಸಿದ್ದರು. ಪ್ರಜೆಗಳು ಯಾವ ಕಾರ್ಯವನ್ನಾದರೂ ಮಾಡಬೇಕೆಂದು ಇಚ್ಛಿಸಿದಲ್ಲಿ ಅದು ತಮ್ಮ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದರೂ ಪ್ರಜೆಗಳ ಇಷ್ಟದಂತೆ ವರ್ತಿಸುತ್ತಿದ್ದರು.

ಅಭಿವೃದ್ಧಿ ವಿಚಾರದಲ್ಲಿ ಮೈಸೂರು ಸಂಸ್ಥಾನವು ಇಡೀ ಭಾರತಕ್ಕೆ ಒಂದು ಮಾದರಿಯಾಗಿತ್ತು. ೧೮೫೦ರ ಸುಮಾರಿಗೆ ನ್ಯಾಯ ವಿಚಾರಣೆಗಾಗಿ ನ್ಯಾಯಾಸ್ಥಾನಗಳು ಸ್ಥಾಪಿತವಾಗಿದ್ದವು. ಸಿವಿಲ್ ಕೋಡ್ ಮತ್ತು ಕ್ರಿಮಿನಲ್ ಕೋಡ್ ಪದ್ಧತಿಗನುಸಾರ ನ್ಯಾಯ ವಿಚಾರಣೆ ಮಾಡುವ ರೂಢಿ ಬಂದಿತ್ತು. ಅಲ್ಲಲ್ಲಿ ಸಾರ್ವಜನಿಕ ಆಸ್ಪತ್ರೆಗಳನ್ನು ಇದೇ ಸಂದರ್ಭದಲ್ಲಿ ಸ್ಥಾಪಿಸಲಾಗಿತ್ತು.

ಚಾಮರಾಜೇಂದ್ರ ಒಡೆಯರ ಅವಧಿಯಲ್ಲಿ ರಾಜ್ಯದ ಅಭಿವೃದ್ಧಿಗೆ ಸಂಪರ್ಕ ವ್ಯವಸ್ಥೆ ಅತಿಮುಖ್ಯ ಎಂಬುದನ್ನು ಮನಗಂಡು ಮೈಸೂರು-ಬೆಂಗಳೂರು ರೈಲ್ವೇ, ಬೆಂಗಳೂರು-ಹರಿಹರ ರೈಲ್ವೇ, ಮೈಸೂರು-ನಂಜನಗೂಡು ರೈಲ್ವೇ ಮೊದಲಾದ ರೈಲು ದಾರಿಗಳನ್ನು ನಿರ್ಮಿಸಲಾಯಿತು. ಇದರಿಂದಾಗಿ ಕಾಲ್ನಡಿಗೆಯ ಪ್ರಾಣಭೀತಿ ತಪ್ಪಿ ವ್ಯಾಪಾರ ವಾಣಿಜ್ಯ ಹೆಚ್ಚಿತು. ಸುಭಿಕ್ಷವು ನೆಲೆಗೊಂಡಿತು. ಇದಕ್ಕಾಗಿ ಸುಮಾರು ಮೂರು ಕೋಟಿ ರೂಪಾಯಿಗಳನ್ನು ಬೊಕ್ಕಸದಿಂದ ವ್ಯಯಿಸಲಾಯಿತು.

ಇದೇ ಅವಧಿಯಲ್ಲಿ ಭೂಗರ್ಭ ಇಲಾಖೆ, ಹವಾಮಾನ ಇಲಾಖೆ, ಶಾಸನ ಇಲಾಖೆ, ಜೀವವಿಮಾ ನಿಗಮ, ವ್ಯವಸಾಯ ಬ್ಯಾಂಕುಗಳು, ಮುಜರಾಯಿ ಇಲಾಖೆ ಸ್ಥಾಪಿತವಾದವು. ವ್ಯವಸಾಯ ಬ್ಯಾಂಕುಗಳು, ಮುಜರಾಯಿ ಇಲಾಖೆ ಸ್ಥಾಪಿತವಾದವು. ವ್ಯವಸಾಯ ಬ್ಯಾಂಕಿಗೆ ಆರಂಭಿಕ ಮೂಲಧನವಾಗಿ ಮಹಾರಾಜರೇ ಹದಿನಾಲ್ಕು ಲಕ್ಷ ರೂಪಾಯಿಗಳನ್ನು ನೀಡಿದರು. ಇದರಿಂದ ಕೃಷಿ ವ್ಯವಸಾಯಗಾರರು ಖಾಸಗಿಯವರಿಂದ ಅಧಿಕ ಬಡ್ಡಿಯ ಸಾಲ ಪಡೆದು ಶೋಷಣೆಗೊಳಗಾಗುವುದನ್ನು ತಪ್ಪಿಸಿದಂತಾಯಿತು. ಕುಡಿಯುವ ನೀರಿಲ್ಲದ ಜನವಸತಿಯ ಪ್ರದೇಶಗಳಿಗೆ ನಲ್ಲಿಗಳ ಮೂಲಕ ನೀರಿನ ಪೂರೈಕೆ ಮಾಡಿದುದು ಆ ಕಾಲದ ಹೊಸ ಪರಿಕಲ್ಪನೆ. ಗ್ರಂಥಗಳ ಪ್ರಕಟಣೆಗಾಗಿ ಓರಿಯೆಂಟಲ್ ಲೈಬ್ರೆರಿ ಎಂಬ ಪ್ರಾಚೀನ ಪುಸ್ತಕ ಭಂಡಾರ ಸ್ಥಾಪಿಸಲಾಯಿತು.

ಧಾರ್ಮಿಕ ನೇತಾರರ, ಪಂಡಿತರ ಮಾರ್ಗದರ್ಶನ ಸಮಾಜಕ್ಕೆ ಲಭ್ಯವಾಗಬೇಕೆಂಬ ದೃಷ್ಟಿಯಿಂದ ಅಂಥವರನ್ನು ಆಗಾಗ ಆಸ್ಥಾನಕ್ಕೆ ಕರೆಯಿಸಿ ಅವರಿಂದ ಪ್ರವಚನ, ಉಪನ್ಯಾಸ ಮತ್ತು ವಿದ್ವತ್ಸಭೆಗಳನ್ನು ಏರ್ಪಡಿಸಲಾಗುತ್ತಿತ್ತು.

ಪ್ರಜಾಹಿತ ಕಾರ್ಯವನ್ನು ಅಪ್ರತಿಮವಾಗಿ ಮಾಡಿದವರಿಗೆ ಬಿರುದು, ಸನ್ಮಾನಗಳನ್ನು ನೀಡಲಾಗುತ್ತಿತ್ತು. ಅತ್ಯಂತ ಸಮರ್ಥ ಅಧಿಕಾರಿಗಳಿಗೆ ರಾಜ್ಯ ದುರಂಧರ, ರಾಜಸಭಾ ಭೂಷಣ, ರಾಜಧರ್ಮ ಪ್ರವೀಣ, ರಾಜಮಂತ್ರ ಪ್ರವೀಣ, ರಾಜಕಾರ್ಯ ಪ್ರಸಕ್ತ ಮೊದಲಾದ ಬಿರುದುಗಳನ್ನೂ, ಸೈನ್ಯಾಧಿಪತ್ಯದಲ್ಲಿ ಶಕ್ತರಾದವರಿಗೆ ರಾಜಸೇನಾ ಭೂಷಣ, ಲೆಫ್ಟಿನೆಂಟ್ ಕರ್ನಲ್ ಮೊದಲಾದ ಬಿರುದುಗಳನ್ನೂ, ಧರ್ಮಕಾರ್ಯ ನಿರತರಾದವರಿಗೆ ಧರ್ಮ ರತ್ನಾಕರ, ಧರ್ಮ ಪ್ರವೃತ್ತ, ಧರ್ಮ ನಿರತ ಮೊದಲಾದ ಬಿರುದು ಗಳನ್ನೂ, ಪಂಡಿತರಿಗೆ ಪಂಡಿತರತ್ನಂ, ವಿದ್ಯಾನಿಧಿ, ವೇದಾಂತ ವಿಶಾರದ ಮೊದಲಾದ ಬಿರುದುಗಳನ್ನೂ, ಮುಸಲ್ಮಾನರಾಗಿದ್ದರೆ ಷೇಕ್ ಉಲ್-ಮುಷಾಯಿಕೇನ್, ಸಿರಾಜುಲ್-ಉಲ್ಮಾ, ಔಹೀರೇ ಮಜಲಿಸ್ ಮೊದಲಾದ ಬಿರುದುಗಳನ್ನೂ ಕೊಟ್ಟು ಗೌರವಿಸಲಾಗುತ್ತಿತ್ತು. ಅಪಾರ ಧನಸಂಗ್ರಹವುಳ್ಳವರು ಆ ಸಂಚಿತ ಧನವನ್ನು ಸರ್ಕಾರದ ಭಂಡಾರದಲ್ಲಿಟ್ಟರೆ ಅದಕ್ಕೆ ಶೇ. ೫ ರಂತೆ ಬಡ್ಡಿ ಕೊಡತಕ್ಕುದೆಂದು ಏರ್ಪಾಡು ಮಾಡಿದರು.[೭]

ಪಾಳೆಯಗಾರರಿಗೆ ಕೊಡುವ ಮಾಸಾಶನವನ್ನು ವೃದ್ಧಿಸಿದರು. ಮುಸಲ್ಮಾನರಿಗೂ ಪಂಚಮರಿಗೂ ವಿದ್ಯಾಭ್ಯಾಸಕ್ಕಾಗಿ ವೇತನಗಳನ್ನು ಕೊಟ್ಟು ಪ್ರೋತ್ಸಾಹಿಸಿದರು. ನೇಯ್ಗೆಯವರ ಸ್ಥಿತಿಗತಿಯ ಊರ್ಜಿತಕ್ಕಾಗಿ ಧನಸಹಾಯ ಮಾಡಿದರು. ನೇಯ್ಗೆ ಉದ್ಯಮದ ಉನ್ನತಿಗಾಗಿ ಶಾಲ್ಯ, ಕಂಚಿ, ಮಧುರೆ ಮೊದಲಾದೆಡೆಗಳಿಂದ ಕುಶಲ ನೇಯ್ಗೆಗಾರರನ್ನು ಕರೆಸಿಕೊಂಡರು.

ದೇಶದ ಸ್ಥಿತಿಯನ್ನೂ ಪ್ರಜೆಗಳ ರೀತಿಯನ್ನೂ ತಿಳಿದುಕೊಂಡು ಉತ್ತಮ ರೀತಿಯಲ್ಲಿ ಪ್ರಜಾಪರಿಪಾಲನೆ ಮಾಡಲು ಅನೇಕ ವೇಳೆ ದೇಶಾಟನೆ ಮಾಡಿದರು. ಇತರ ದೇಶಗಳಲ್ಲಿ ಸಂಚರಿಸಿ ಅಲ್ಲಿಯ ಅನುಭವಗಳನ್ನು ತಂದು ಇಲ್ಲಿ ಅಳವಡಿಸಿದರು. ಸ್ಥಳೀಯರಿಗೇ ಹೆಚ್ಚಿನ ಉದ್ಯೋಗ ಕೊಡಬೇಕೆಂಬ ಪ್ರಜೆಗಳ ಒತ್ತಾಯದ ಬೇಡಿಕೆಯನ್ನು ಮನಗಂಡು ದಿವಾನಗಿರಿಯಿಂದ ತೊಡಗಿ ಎಲ್ಲ ಉದ್ಯೋಗಗಳಿಗೂ ಸ್ಥಳೀಯರನ್ನೇ ನೇಮಿಸಲು ಉಪಕ್ರಮಿಸಿದರು.

ಸ್ತ್ರೀ ವಿದ್ಯಾಭ್ಯಾಸಕ್ಕೆ ಅವರು ನೀಡಿದ ಪ್ರೋತ್ಸಾಹ ಅಸದೃಶ್ಯವಾದುದು. ಬಾಲ್ಯವಿವಾಹವನ್ನು ನಿಷೇಧಿಸಿದರು. ಚಿನ್ನದ ಗಣಿಗಳಿಗೂ ಕಾಫಿ ವ್ಯವಸಾಯಕ್ಕೂ ಅನುಕೂಲ ಕಲ್ಪಿಸಿಕೊಟ್ಟರು. ದೊಡ್ಡ ದೊಡ್ಡ ಸರ್ಕಾರೀ ಕಟ್ಟಡಗಳನ್ನೂ ವಿಶಾಲವಾದ ರಸ್ತೆಗಳನ್ನೂ ನಿರ್ಮಿಸಲಾಯಿತು. ಚಾಮರಾಜೇಂದ್ರ ಒಡೆಯರ್ ಅವರ ರಾಜ್ಯಪರಿಪಾಲನೆಯ ವಿಧಾನವನ್ನೂ ರಾಜತಂತ್ರ ನೈಪುಣ್ಯವನ್ನೂ ನಿಷ್ಪಕ್ಷಪಾತ ನ್ಯಾಯದಾನವನ್ನೂ ನೋಡಿ ಆಗಿನ ಜನರಲ್‌ಗಳಾದ ಲಾರ್ಡ್ ಡೆಫರಿನ್, ಮಾರ್ಕ್ವಿಸ್ ಲ್ಯಾನ್ಸ್‌ಡೌನ್, ಆರ್ಲ್ ಎಲ್ಗಿನ್ ಮೊದಲಾದವರು ಶ್ಲಾಘನೆ ಮಾಡಿದರು.

ಅವರ ರಾಜನೀತಿ ಹೇಗಿತ್ತೆಂದರೆ ಯಾರಾದರೂ ತಮಗೆ ನೇರವಾಗಿ ಅರ್ಜಿ ಬರೆದುಕೊಂಡರೆ ಅಥವಾ ಪ್ರತ್ಯಕ್ಷ ನಿವೇದಿಸಿ ಕೊಂಡರೆ ಆ ವಿಷಯ ರಾಜಕೀಯಕ್ಕೆ ಸಂಬಂಧಪಟ್ಟುದಾಗಿದ್ದರೆ ತಾವೇ ಅದರ ತೀರ್ಮಾನ ಮಾಡುತ್ತಿರಲಿಲ್ಲ. ಹಾಗೆ ಮಾಡಿದರೆ ಆಯಾ ಇಲಾಖೆಗಳ ಅಧಿಕಾರಿಗಳ ಅಧಿಕಾರ, ಗೌರವಕ್ಕೆ ಚ್ಯುತಿ ಬಂದು ರಾಜಕಾರ್ಯದ ಗೌರವವೇ ಕೆಡುವುದೆಂದು ಭಾವಿಸಿ ಕೊಂಡಿದ್ದರು. ಒಂದು ವೇಳೆ ಇಂತಹ ವಿಷಯವನ್ನು ಹೀಗೆಯೇ ತೀರ್ಮಾನ ಮಾಡುವುದು ಉತ್ತಮವೆಂದು ತೋರಿದರೆ ಅರ್ಜಿಗೆ ತಕ್ಕ ಉತ್ತರ ಬರೆಯಿಸಿದ ಬಳಿಕ, ಸಂಬಂಧಿಸಿದ ಇಲಾಖೆಯ ಮೂಲಕವೇ ಷರಾಗಳನ್ನು ಬರೆಸಿ, ದೃಢೀಕರಣ ಪತ್ರ ಕಳಿಸುವ ಏರ್ಪಾಡು ಮಾಡುತ್ತಿದ್ದರು. ವಿಜ್ಞಾಪಿಸಿಕೊಂಡ ವಿಷಯಗಳು ರಾಜಕೀಯವಲ್ಲದೆ ಸಾಮಾನ್ಯವಾಗಿದ್ದರೆ ಅವಕ್ಕೆ ಬರಹದ ಮೂಲಕ ತಾವೇ ತೀರ್ಮಾನ ಕೊಟ್ಟುಬಿಡುತ್ತಿದ್ದರು.

ರಾಜ್ಯದ ಆರ್ಥಿಕ ಅಭಿವೃದ್ಧಿಗಾಗಿ ಮೈಸೂರರಸರ ನೀತಿ ಅತ್ಯಂತ ದಕ್ಷವಾಗಿತ್ತು. ಪ್ರಜಾಸತ್ತಾತ್ಮಕ ಮತ್ತು ಅಭಿವೃದ್ಧಿ ಪರವಾಗಿದ್ದ ನೀತಿಯಿಂದಾಗಿ ಸಾರ್ವಜನಿಕ ರಂಗದ ಉದ್ದಿಮೆಗಳ ಅಭಿವೃದ್ಧಿ ಆಯಿತು. ಅದರಿಂದಾಗಿ ಅವು ಸ್ವಂತ ಕಾಲ ಮೇಲೆ ನಿಂತು ಬೆಳವಣಿಗೆ ಸಾಧಿಸಿದವು. ರೆವಿನ್ಯೂ ಸಂಗ್ರಹಕ್ಕಾಗಿ ಖರ್ಚನ್ನು ತೀರಾ ಕಡಿಮೆ ಮಾಡುವ ನೀತಿ ಅನುಸರಿಸಲಾಯಿತು. ೧೯೦೨ರಲ್ಲಿ ಮೈಸೂರು ನಗರಾಭಿವೃದ್ಧಿ ಸಮಿತಿ ರಚಿತವಾದದ್ದು ಯೋಜಿತ ರೀತಿಯಲ್ಲಿ ಮೈಸೂರು ನಗರ ಬೆಳೆಯಬೇಕೆಂದು ಅರಸರು ಬಯಸಿದ್ದರ ಸೂಚನೆಯಾಗಿದ್ದಿತು.

ಸರ್ ಎಂ. ವಿಶ್ವೇಶ್ವರಯ್ಯ ಮತ್ತು ಸರ್. ಮಿರ್ಜಾ ಇಸ್ಮಾಯಿಲ್ ದಿವಾನರಾಗಿದ್ದ ಕಾಲದಲ್ಲಿ ಉದ್ಯಮ ಮತ್ತು ಕೃಷಿ ಎರಡನ್ನೂ ಸಮಾನವಾಗಿ ಅಭಿವೃದ್ಧಿಪಡಿಸುವ ನೀತಿ ಅನುಸರಿಸಲಾಯಿತು. ಪ್ರಜೆಗಳ ಭೌತಿಕ ಅಭಿವೃದ್ಧಿಗಾಗಿ ರಾಜ್ಯದ ಸ್ವಂತ ಉತ್ಪನ್ನಗಳನ್ನು ಅಭಿವೃದ್ಧಿಪಡಿಸುವ ಯೋಜನೆಗಳಾದವು. ಇದು ಅತ್ಯಂತ ವಿಚಕ್ಷಣತೆಯ ಮತ್ತು ದೂರಗಾಮೀ ಪರಿಣಾಮಗಳುಳ್ಳ ತೀರ್ಮಾನವಾಗಿತ್ತು. ಪ್ರಜೆಗಳಿಗೆ ಮೂಲಭೂತ ಆವಶ್ಯಕತೆಗಳನ್ನು (Infrastructure) ಒದಗಿಸಿಕೊಡಲಾಯಿತು.

ರಾಜರ ಸೇವೆ ಮತ್ತು ಸೈನ್ಯದಲ್ಲಿದ್ದ ಅಪಾರ ಸಂಖ್ಯೆಯ ದಲಿತರು ಈ ಉದಾರವಾದದ ಹಿನ್ನೆಲೆಯಲ್ಲಿಯೇ ಸಂಘಟಿತರಾದರು. ಸ್ವಾತಂತ್ರ್ಯಾನಂತರ ಗಟ್ಟಿಸ್ವರದಿಂದ ಮಾತಾಡಿ ತಮ್ಮ ಹಕ್ಕು ಪ್ರತಿಷ್ಠಾಪಿಸಲು ಮತ್ತು ಲಭ್ಯ ಅವಕಾಶಗಳನ್ನು ಸದುಪಯೋಗ ಪಡಿಸಿಕೊಳ್ಳಲು ಅವರಿಗೆ ಈ ಉದಾರವಾದ ನೆರವಾಯಿತು. ಕಳೆದ ಶತಮಾನದ ಎಪ್ಪತ್ತರ ದಶಕದಲ್ಲಿ ಜಾರಿಗೆ ತಂದ ಭೂಸುಧಾರಣಾ ಕಾಯ್ದೆಯ ಯಶಸ್ಸಿನ ಹಿಂದೆ ಒಂದು ಶತಮಾನದ ಪ್ರಯತ್ನದ ಇತಿಹಾಸವಿದೆ. ವಿಶ್ವೇಶ್ವರಯ್ಯನವರ ಕಾಲದಲ್ಲೇ ದಲಿತರಿಗೆ ಸರ್ಕಾರೀ ಉದ್ಯೋಗಗಳಲ್ಲಿ ಮೀಸಲಾತಿ ಒದಗಿಸಿದ ಸಂಸ್ಥಾನ ಮೈಸೂರು ಎಂಬುದು ಕೂಡ ಅರಸರ ರಾಜನೀತಿಗೆ ಗರಿ ಮೂಡಿಸುವ ವಿಚಾರ.[೮]

ಮೈಸೂರು ಒಡೆಯರ ಪ್ರಭುತ್ವದ ಲಾಂಛನ ಗಂಡಭೇರುಂಡ. ಇದು ಅಸದೃಶ ಶಕ್ತಿ ಮತ್ತು ಉಗ್ರ ಸ್ವಭಾವಗಳ ಸಂಕೇತ. ನ್ಯಾಯ ಧರ್ಮಗಳನ್ನು ಇಮ್ಮುಖಗಳಲ್ಲೂ ಸ್ಥಾಪಿಸುತ್ತ ಸರ್ವದಾ ಅಭಿವೃದ್ಧಿಯ ರೆಕ್ಕೆಗಳಿಂದ ಮುಂದೆ ಲಂಘಿಸುತ್ತಿರಬೇಕೆಂಬುದೇ ಇದರ ಆಶಯವಾಗಿದೆ.

ಮೈಸೂರು ಸಂಸ್ಥಾನದ ರಾಜನೀತಿಯು ಎಷ್ಟು ಪ್ರಗತಿಪರ ಮತ್ತು ಪ್ರಜಾಭಿವೃದ್ಧಿಯ ದೃಷ್ಟಿ ಹೊಂದಿತ್ತೆಂದರೆ ಹೆಚ್ಚು ಕಡಿಮೆ ಇದೇ ಆದರ್ಶವನ್ನು ಸ್ವಾತಂತ್ರ್ಯಾನಂತರ ಭಾರತ ಸರಕಾರ ಅಳವಡಿಸಿಕೊಂಡಿತು. ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆ, ಆರ್ಥಿಕ ನೀತಿ, ಕೃಷಿ ನೀತಿ, ಕೈಗಾರಿಕಾ ನೀತಿಗಳ ಬೀಜರೂಪವನ್ನು ಹತ್ತೊಂಬತ್ತನೆಯ ಶತಮಾನದ ಅಂತ್ಯದ ವೇಳೆಗೆ ಮೈಸೂರು ಸಂಸ್ಥಾನದಲ್ಲಿ ಕಾಣಬಹುದಾಗಿತ್ತು. ಕರ್ನಾಟಕ ರಾಜ್ಯದಲ್ಲಂತೂ ಈ ಆದರ್ಶ ಮತ್ತು ನೀತಿಯ ಮುಂದುವರಿಕೆಯನ್ನೇ ಕಾಣಬಹುದು. ಪ್ರಜೆಗಳ ಸುರಕ್ಷೆ, ಅಭಿವೃದ್ಧಿ ಮತ್ತು ಏಳ್ಗೆಯೇ ತಮ್ಮ ಏಳ್ಗೆ ಎಂದು ದೃಢವಾಗಿ ನಂಬಿದ್ದ ಮೈಸೂರು ಅರಸರು ಆ ನಂಬಿಕೆಗೆ ಕಿಂಚಿತ್ತೂ ಊನ ಬಾರದಂತೆ ನಡೆದುಕೊಂಡರು.

**ಅಡಿಟಿಪ್ಪಣಿಗಳು**

೧. ಮೈಸೂರನ್ನು ಆಳಿದ ರಾಜರ ಅನುಕ್ರಮಣಿಕೆ ಹೀಗಿದೆ - (೧) ಯದುರಾಯ - ೧೩೯೯-೧೪೨೩, (೨) ಹಿರಿಯ ಬೆಟ್ಟದ ಚಾಮರಾಜ ಒಡೆಯರು - ೧೪೨೩-೧೪೫೯, (೩) ತಿಮ್ಮರಾಜ ಒಡೆಯರು - ೧೪೫೯-೧೪೭೮, (೪) ಹಿರಿಯ ಚಾಮರಾಜ ಒಡೆಯರು - ೧೪೭೮-೧೫೧೩, (೫) ಬೆಟ್ಟದ ಚಾಮರಾಜ ಒಡೆಯರು - ೧೫೧೩-೧೫೫೩, (೬) ಇಮ್ಮಡಿ ತಿಮ್ಮರಾಜ ಒಡೆಯರು - ೧೫೫೩-೧೫೭೨, (೭) ಬೋಳ ನಾಲ್ವಡಿ ಚಾಮರಾಜ ಒಡೆಯರು - ೧೫೭೨-೧೫೭೬, (೮) ಬೆಟ್ಟದ ಐವಡಿ ಚಾಮರಾಜ ಒಡೆಯರು-೧೫೭೬-೧೫೭೮, (೯) ರಾಜ ಒಡೆಯರು - ೧೫೭೮-೧೬೧೭, (೧೦) ಚಾಮರಾಜ ಒಡೆಯರು - ೧೬೧೭-೧೬೩೭, (೧೧) ಇಮ್ಮಡಿ ರಾಜ ಒಡೆಯರು - ೧೬೩೭-೧೬೩೮, (೧೨) ರಣಧೀರ ಕಂಠೀರವ ನರಸರಾಜ ಒಡೆಯರು-೧೬೩೮-೧೬೫೯, (೧೩) ದೊಡ್ಡದೇವರಾಜ ಒಡೆಯರು - ೧೬೫೯-೧೬೭೩, (೧೪) ಚಿಕ್ಕದೇವರಾಜ ಒಡೆಯರು - ೧೬೭೩- ೧೭೦೪, (೧೫) ಕಂಠೀರವ ಒಡೆಯರು - ೧೭೦೪-೧೭೧೪, (೧೬) ದೊಡ್ಡ ಕೃಷ್ಣರಾಜ ಒಡೆಯರು - ೧೭೧೪-೧೭೩೨, (೧೭) ಚಾಮರಾಜ ಒಡೆಯರು - ೧೭೩೨-೧೭೩೪, (೧೮) ಇಮ್ಮಡಿ ಕೃಷ್ಣರಾಜ ಒಡೆಯರು-೧೭೩೪-೧೭೬೬, (೧೯) ನಂಜರಾಜ ಒಡೆಯರು - ೧೭೬೬-೧೭೭೦, (೨೦) ಬೆಟ್ಟದ ಚಾಮರಾಜ ಒಡೆಯರು - ೧೭೭೦-೧೭೭೬, (೨೧) ಖಾಸಾ ಚಾಮರಾಜ ಒಡೆಯರು - ೧೭೭೬-೧೭೯೬, (೨೨) ಮುಮ್ಮಡಿ ಕೃಷ್ಣರಾಜ ಒಡೆಯರು - ೧೭೯೯-೧೮೬೮, (೨೩) ಚಾಮರಾಜೇಂದ್ರ ಒಡೆಯರು - ೧೮೬೮-೧೮೯೪ (೨೪) ನಾಲ್ವಡಿ ಕೃಷ್ಣರಾಜ ಒಡೆಯರು - ೧೮೯೪-೧೯೪೦, (೨೫) ಜಯಚಾಮರಾಜೇಂದ್ರ ಒಡೆಯರು - ೧೯೪೦ - ೧೯೭೪, (೨೬) ಶ್ರೀಕಂಠದತ್ತ ನರಸಿಂಹರಾಜ ಒಡೆಯರು - ೧೯೭೪

೨. ಈ ಸಭೆಯನ್ನು ಸ್ಥಾಪಿಸಿದಾಗ ಕೆಲವು ಆಂಗ್ಲೋ-ಇಂಡಿಯನ್ ಪತ್ರಿಕಾಕರ್ತರು ಪರಿಹಾಸ್ಯ ಮಾಡಿದರಂತೆ. ಏನೂ ತಿಳಿಯದ, ಅವಿದ್ಯಾವಂತರಾದ ಹಳ್ಳಿಯ ಗೌಡರನ್ನು ಕಟ್ಟಿಕೊಂಡು ರಾಜ್ಯಭಾರದ ವಿಷಯಗಳನ್ನು ಹರಟುವ ರಾಜರ ಮತ್ತು ಮಂತ್ರಿಗಳ ರಾಜ್ಯಭಾರ ಕ್ರಮವನ್ನೇ ಅಪಹಾಸ್ಯ ಮಾಡಿ ಟೀಕಿಸಿದರಂತೆ. ವರ್ತಕ ಪ್ರಮುಖರು, ಗಣ್ಯ ನಾಗರಿಕರು ಮೊದಲಾದ ಸಮಾಜದ ಬೇರೆ ಬೇರೆ ರಂಗಗಳಿಗೆ ಸೇರಿದ ಒಟ್ಟು ೧೪೪ ಸದಸ್ಯರು 'ಪ್ರಜಾಪ್ರತಿನಿಧಿ ಸಭೆ'ಯಲ್ಲಿದ್ದರು. ಆರಂಭದಲ್ಲಿ ಈ ಸಭೆ ಹೆಸರಿಗೆ ಮಾತ್ರ Representative Assembly ಆಗಿತ್ತು. ನಿಜವಾದ ಅರ್ಥದಲ್ಲಿ ಅದು ಅರಿಕೆದಾರರ ಕೂಟವಾಗಿತ್ತು. ಜನರ ಕುಂದುಕೊರತೆಗಳನ್ನು ಸರ್ಕಾರಕ್ಕೆ ತಿಳಿಸುವುದು ಮತ್ತು ಆದಷ್ಟು ಪರಿಹಾರ ಪಡೆಯುವುದು, ಆಗಬೇಕಾದ ಕೆಲಸ ಕಾರ್ಯಗಳನ್ನು ಸೂಚಿಸುವುದು, ಈ ಬಗ್ಗೆ ಆಳರಸರ ಸಹಾನುಭೂತಿಯನ್ನು ಪಡೆಯುವುದು ಇಷ್ಟು ಮಾತ್ರ ನಡೆಯುತ್ತಿತ್ತು.

೩. ಈ ಪ್ರಜಾಪ್ರತಿನಿಧಿ ಸಭೆಯೇ ವಿಕಾಸ ಹೊಂದಿ ಮುಂದೆ ಸ್ವತಂತ್ರ ಭಾರತದಲ್ಲಿ ವಿಧಾನಸಭೆ ಮತ್ತು ವಿಧಾನ ಪರಿಷತ್ತುಗಳಾಗಿ ರೂಪುಗೊಂಡವು. ಆರಂಭದಲ್ಲಿ ಪ್ರತಿ ಜಿಲ್ಲೆಯಿಂದ ಆಯ್ದ ಕೆಲವು ಪ್ರಮುಖರ ಹೆಸರುಗಳನ್ನು (ಒಂದಿಬ್ಬರು ಗಣ್ಯ ಭೂಮಾಲೀಕರು,

ಇಬ್ಬರೋ ಮೂವರೋ ಪ್ರಭಾವೀ ವರ್ತಕರು) ಆಯಾ ಜಿಲ್ಲಾಧಿಕಾರಿಯು ಸರ್ಕಾರಕ್ಕೆ ಸೂಚಿಸುತ್ತಿದ್ದರು. ಸರ್ಕಾರ ಅವರನ್ನು ನಾಮಕರಣ ಮಾಡುತ್ತಿತ್ತು. ಚುನಾವಣಾ ನೀತಿ ರೂಪಿಸುವವರೆಗೆ, ಅಂದರೆ ೧೮೯೧ರ ವರೆಗೆ ನಾಮಕರಣ ಪದ್ಧತಿ ಮುಂದುವರಿಯಿತು. ಸರ್ಕಾರದ ನೀತಿ ನಿರ್ಧಾರಗಳಲ್ಲಿ ಈ ನಾಮಕರಣ ಸದಸ್ಯರ ಪಾತ್ರ ಬಹಳ ಮುಖ್ಯವಾಗಿತ್ತು. ೧೮೮೩ರ ಬರಗಾಲದ ಸಂದರ್ಭದಲ್ಲಿ ಆಪದ್ಧನ ಎತ್ತುವಲ್ಲಿ, ೧೮೮೫ರಲ್ಲಿ ಸ್ಥಳೀಯ ಅಂಚೆ ವ್ಯವಸ್ಥೆಯನ್ನು ಭಾರತ ಸರ್ಕಾರದ ಅಂಚೆ ವ್ಯವಸ್ಥೆಯೊಂದಿಗೆ ವಿಲೀನಗೊಳಿಸುವಲ್ಲಿ ಮತ್ತು ೧೮೯೦ರಲ್ಲಿ ಸರ್ಕಾರೀ ನೌಕರರಿಗೆ ವಿಮಾ ಸೌಲಭ್ಯ ಜಾರಿಗೆ ತರುವಲ್ಲಿ ಈ ನಾಮಕರಣ ಸದಸ್ಯರ ಪಾತ್ರ ಮಹತ್ವದ್ದಾಗಿತ್ತು.

೪. ಆರಂಭದಲ್ಲಿ ದಸರಾ ಸಮಯದಲ್ಲಿ ಆ ಸಭೆಯ ಒಂದೇ ಅಧಿವೇಶನವಿರುತ್ತಿದ್ದು, ಸುಮಾರು ೧೯೧೭ರ ವೇಳೆಗೆ ಎರಡು ಅಧಿವೇಶನಗಳು ನಡೆಯುವಂತಾದವು. ಆ ಇನ್ನೊಂದು ಅಧಿವೇಶವನ್ನು ಬಜೆಟ್ ಅಧಿವೇಶನ ಎಂದು ಕರೆದರು.

೫. ೧೯೧೧ರ ನವೆಂಬರ್‌ನಲ್ಲಿ ಆರಂಭವಾಗಿ, ಕೆ. ಆರ್. ಎಸ್ . ಅಣೆಕಟ್ಟು ಮತ್ತು ನಾಲೆಗಳ ರಚನೆ ಮುಗಿದು, ಕೆಲಸ ಪೂರ್ತಿಯಾಗಿ ಪೂರ್ಣಗೊಂಡುದು ೧೯೩೩ ರಲ್ಲಿ, ಆದರೆ ೧೯೨೪ ರಲ್ಲೇ ನೀರು ಸಂಗ್ರಹವಾಗಿ ಕುಡಿಯಲು ಮತ್ತು ನೀರಾವರಿಗೆ ಪೂರೈಕೆಯಾಗ ತೊಡಗಿತ್ತು.

೬. ಈ ನೀತಿಯನ್ನು ಸ್ವಾತಂತ್ರ್ಯಾನಂತರ ಭಾರತ ಸರ್ಕಾರ ಅಳವಡಿಸಿಕೊಂಡಿತು. ಪ್ರಧಾನಿ ನೆಹರೂ ಅವರ ನೇತೃತ್ವದಲ್ಲಿ ಪಂಚವಾರ್ಷಿಕ ಯೋಜನೆಗಳ ಮೂಲಕ ಶಿಕ್ಷಣ, ಆರೋಗ್ಯ, ವ್ಯವಸಾಯ ಮತ್ತು ಕೈಗಾರಿಕಾ ಪ್ರಗತಿಗೆ ಒತ್ತು ಕೊಡಲಾಯಿತು. ಮೈಸೂರು ಅರಸರ ರಾಜನೀತಿ ಇಡೀ ಭಾರತದಲ್ಲೇ ಆದರ್ಶಪ್ರಾಯವಾಗಿತ್ತೆಂಬುದನ್ನು ಈ ಮೂಲಕ ಕಂಡುಕೊಳ್ಳಬಹುದು.

೭. ಬ್ಯಾಂಕುಗಳು ನಿರಖು ಠೇವಣಿ ಇಟ್ಟವರಿಗೆ ಬಡ್ಡಿ ನೀಡುವಂತೆ, ಆ ಕಾಲಕ್ಕೆ ಈ ಹೊಸ ಪರಿಕಲ್ಪನೆ ಬಹುಶಃ ಬೇರೆಲ್ಲೂ ಕಂಡು ಬರದಂಥದು, ಧನವಂತರು ಹೀಗೆ ಭಂಡಾರದಲ್ಲಿಟ್ಟ ಹಣವನ್ನು ಅಬಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸಲಾಯಿತು.

೮. ಅರಮನೆಗೆ ಸಂಬಂಧಪಟ್ಟ ಎಲ್ಲ ನೌಕರ ವರ್ಗದವರಿಗೂ ಮನೆಯಲ್ಲಿ ಶುಭಾಶುಭ ಕಾರ್ಯಗಳು ನಡೆಯುವಾಗ ಅರಮನೆಯಿಂದ ದ್ರವ್ಯ ಮತ್ತು ಪದಾರ್ಥರೂಪದ ಸಹಾಯ ಒದಗಿಸಲಾಗುತ್ತಿತ್ತು. ಸಾಲ ಸೋಲ ಮಾಡಿ ಕಷ್ಟದಲ್ಲಿರುವವರಿಗೆ ಬಡ್ಡಿರಹಿತ ಧನಸಹಾಯ ಮಾಡಿ, ಅನಂತರ ಸ್ವಲ್ಪ ಸ್ವಲ್ಪವಾಗಿ ಸಂಬಳದಿಂದ ಹಿಡಿದುಕೊಳ್ಳುವ ಪದ್ಧತಿ ಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಜಾರಿಗೆ ಬಂತು. ನೌಕರಶಾಹಿಗೆ advance ರೂಪದ ಈ ಸಾಲ ಪದ್ಧತಿ ಸರ್ಕಾರದಲ್ಲಿ ಇಂದಿಗೂ ಜಾರಿಯಲ್ಲಿದೆ.

# ಸ್ವಾತಂತ್ರ್ಯ ಸಂಗ್ರಾಮ ಹಾಗೂ ರಾಜಕೀಯ ಪ್ರಜ್ಞೆ

ಡಾ। ಹೊ. ಶ್ರೀನಿವಾಸಯ್ಯ

ಪ್ರಜಾಪ್ರಭುತ್ವವನ್ನು ಕಾಪಾಡುವ ನಿಟ್ಟಿನಲ್ಲಿ ಮುಖ್ಯಪಾತ್ರ ವಹಿಸುವ, ಸ್ವತಂತ್ರ ದೇಶಗಳಲ್ಲಿ ಜನತೆಯ ಹಕ್ಕು ಬಾಧ್ಯತೆಗಳನ್ನು ಕಾಪಾಡಲು ಹೋರಾಡುವ ಪತ್ರಿಕೆಗಳು ಮುಖ್ಯಸಾಧಕಗಳು ಎಂದೇ ಹೇಳಬಹುದು. ಪತ್ರಿಕೆಗಳು ಜಗತ್ತಿನ ಕೈಗನ್ನಡಿ. ವಾಸ್ತವ ಅಂಶ ತಿಳಿಸಲು ಪತ್ರಿಕೆಗಳಿಗೆ ಸ್ವಾತಂತ್ರ್ಯ ಇರಬೇಕು. ಪ್ರಜಾಪ್ರಭುತ್ವದಲ್ಲಿ ಪತ್ರಿಕಾ ಸ್ವಾತಂತ್ರ್ಯ ಮೂಲಭೂತ ಹಕ್ಕು.

ಪರಕೀಯರ ಆಡಳಿತದ ವಿರುದ್ಧ ಮತ್ತು ಪತ್ರಿಕೆಗಳ ಸ್ವಾತಂತ್ರ್ಯಕ್ಕಾಗಿ ಭಾರತದ ಪತ್ರಿಕೆಗಳು ನಡೆಸಿದ ಹೋರಾಟ ರೋಮಾಂಚಕಾರಿ. ಭಾರತದಲ್ಲಿ ಪತ್ರಿಕೆಗಳು ಪ್ರಾರಂಭವಾದದ್ದೇ ಪರಕೀಯರ ಕಾಲದಲ್ಲಿ. ಪ್ರಾರಂಭದಿಂದಲೂ ದೇಶದ ಸ್ವಾತಂತ್ರ್ಯಕ್ಕಾಗಿ ಮಹತ್ತರವಾದ ಪಾತ್ರ ವಹಿಸಿವೆ.

ಜಗತ್ತಿನಲ್ಲಿ ಭಾರತವು ತುಂಬಾ ಪ್ರಾಚೀನವಾದ ದೊಡ್ಡ ದೇಶ. ಶ್ರೇಷ್ಠ ಸಂಸ್ಕೃತಿಯಿಂದ ಕೂಡಿದ್ದು ಶೇಕಡ ೮೦ ರಷ್ಟು ಜನರು ಗ್ರಾಮಾಂತರ ಪ್ರದೇಶದಲ್ಲಿ ವಾಸಮಾಡುತ್ತಾರೆ. ಬೇಸಾಯವೇ ಮುಖ್ಯ ಕಸುಬು. ಬೇರೆ ಬೇರೆ ಭಾಷೆಗಳನ್ನಾಡುವ ಜನರು ಇದ್ದಾರೆ. ಅಕ್ಷರಸ್ಥರ ಸಂಖ್ಯೆಯಲ್ಲಿ ಭಾರತ ಬಹಳ ಹಿಂದೆ.

ಸ್ವಾತಂತ್ರ್ಯ ಬಂದ ಮೇಲೆ ಸರಕಾರಗಳು ಕಲೆ, ಸಾಹಿತ್ಯ, ಶಿಕ್ಷಣ ಮತ್ತು ಸಂಸ್ಕೃತಿ ಅಭಿವೃದ್ಧಿಗೆ ಹೆಚ್ಚು ಗಮನ ಕೊಡುತ್ತಿವೆ. ಅಕ್ಷರಸ್ಥರ ಸಂಖ್ಯೆಯೂ ಪರಿಣಾಮಕಾರಿಯಾಗಿ ಅಭಿವೃದ್ಧಿಯಾಗಿದೆ. ಹೀಗೆಯೇ ಪತ್ರಿಕಾಲೋಕದಲ್ಲಿಯೂ ಮುನ್ನಡೆ ಕಾಣಬಹುದು.

ಭಾರತೀಯ ಪತ್ರಿಕಾಲೋಕದ ಹುಟ್ಟು ಮತ್ತು ಬೆಳವಣಿಗೆ, ಭಾರತೀಯ ಪತ್ರಿಕೆಗಳ ಹೋರಾಟ ಪ್ರವೃತ್ತಿ ಸ್ವಾತಂತ್ರ್ಯ ಪ್ರೇಮ, ಪ್ರಜಾಪ್ರಭುತ್ವ ತತ್ವ, ರಾಜ್ಯ ಪದ್ಧತಿಗೆ ಪತ್ರಿಕೆಗಳ ಕಾಣಿಕೆ ಅದ್ಭುತ.

ಪ್ರಮುಖವಾಗಿ ಭಾರತೀಯ ಪತ್ರಿಕೆಗಳು ಬ್ರಿಟಿಷ್ ಸರ್ಕಾರದ ದಬ್ಬಾಳಿಕೆಯ ವಿರುದ್ಧ ಸ್ವಾರ್ಥತ್ಯಾಗ ಮಾಡಿದವು. ಭಾರತೀಯ ಸ್ವಾತಂತ್ರ್ಯದ ಕನಸು ನನಸಾಗುವಂತೆ ಮಾಡಲು ಧೈರ್ಯದಿಂದ ಹೋರಾಡಿದವು. ಮುಂದಿನ ಭವಿಷ್ಯವನ್ನು ರೂಪಿಸಿಕೊಳ್ಳಲು ನೈತಿಕ ಶಕ್ತಿಯನ್ನು ಪಡೆದುಕೊಂಡವು.

### ಆರಂಭಕಾಲ

ಪತ್ರಿಕೆಗಳು ಪ್ರಾರಂಭವಾದಾಗ 'ಕತ್ತಿಗಿಂತ ಲೇಖನಿ ಹರಿತ' ಎಂಬ ನಾಣ್ಣುಡಿ ಜಗತ್ತಿನ ಎಲ್ಲಾ ದೇಶಗಳಲ್ಲೂ ಇತ್ತು. 'ಸಾವಿರ ಯುದ್ಧ ಸೈನಿಕರ ಶಕ್ತಿಗಿಂತ ಕೆಲವು ವಿರೋಧಿ ಪತ್ರಿಕೆಗಳ ಶಕ್ತಿಯೂ ಯುದ್ಧವನ್ನು ಗೆಲ್ಲಬಲ್ಲದು, ಎಂದು ಸಾಮ್ರಾಟ ನೆಪೋಲಿಯನ್ನನು ಹೇಳಿದ್ದನು.

ರಾಜ ಮಹಾರಾಜರುಗಳಿಗೆ ಸಾಮ್ರಾಟರುಗಳಿಗೆ ಶಿಕ್ಷಣ ಸೌಕರ್ಯವಾಗಲಿ, ವಾಹನ ಸೌಕರ್ಯವಾಗಲಿ, ಪತ್ರಿಕೆಗಳಾಗಲಿ ಇರಲಿಲ್ಲ. ರಾಷ್ಟ್ರದ ಘೋಷಣೆಗಳನ್ನು ಕಲ್ಲು ಬಂಡೆಗಳ ಮೇಲೆ

ಕೆತ್ತಿಸಿ ಪ್ರಸಿದ್ಧಪಡಿಸುತ್ತಿದ್ದರು. ಪ್ರತಿದಿನದ ಸುದ್ದಿಗಳನ್ನು ದೇವಾಲಯದ ಗೋಡೆಗಳ ಮೇಲೆ, ಚಿತ್ರಗಳ ಮೂಲಕ, ಬರವಣಿಗೆಗಳ ಮೂಲಕ ಪ್ರಸಾರ ಮಾಡಲಾಗುತ್ತಿತ್ತು.

ಭಾರತದಲ್ಲಿ ಮೊಗಲ್ ಸಾಮ್ರಾಜ್ಯದಲ್ಲಿ ಪತ್ರಿಕೆಗಳು ಹೊಸದಾಗಿ ಪ್ರಾರಂಭವಾದವು. ಒಂದು ರೀತಿಯ ಕೈಬರಹದ ಪತ್ರಿಕೆಗಳು ಪ್ರಸಾರವಾದವು. ಸುದ್ದಿಪತ್ರಗಳು ಪ್ರಕಟವಾದವು. ಇದಕ್ಕಾಗಿ ಲಿಪಿಕಾರರನ್ನು ನೇಮಿಸಿಕೊಂಡರು. ಸಾರ್ವಜನಿಕರಿಗೆ ಸುದ್ದಿಪತ್ರಗಳ ಮೂಲಕ ಸುದ್ದಿ ತಿಳಿಸುತ್ತಿದ್ದರು.

### ಮುದ್ರಣ ಕಲೆ

ಕ್ರಿ. ಶ. ೮೬೮ರಲ್ಲಿ ಚೈನಾ ದೇಶದಲ್ಲಿ ಮುದ್ರಣಕಲೆ ಪ್ರಾರಂಭವಾಯಿತು. ಪುಸ್ತಕ ಪ್ರಕಟಣೆಗಾಗಿ ಕಾಗದ ತಯಾರಿಸುವ ಕಲೆಯೂ ಚೈನಾ ದೇಶದಲ್ಲಿಯೇ ಪ್ರಾರಂಭ. ನಂತರ ಕೈರೋನಲ್ಲಿ ಆರಂಭವಾಯಿತು. ಯೂರೋಪಿನಲ್ಲಿ ೧೧೦೦ನೇ ಇಸವಿಯಲ್ಲಿ ಪ್ರಾರಂಭವಾಯಿತು.

### ಭಾರತದಲ್ಲಿ ಮುದ್ರಣ ಕಲೆ

ಕ್ರಿಶ್ಚಿಯನ್ ಪಾದ್ರಿಗಳು ಧರ್ಮಗ್ರಂಥಗಳ ಪ್ರಕಟಣೆಗಾಗಿ ಮುದ್ರಣ ಕಲೆಯನ್ನು ಭಾರತದಲ್ಲಿ ಪ್ರಾರಂಭಿಸಿದರು. ಭಾರತೀಯ ಭಾಷೆಗಳಲ್ಲಿ ತಮಿಳು ಮುದ್ರಣದಲ್ಲೇ ಪ್ರಥಮ. ನಂತರ ಇತರ ಎಲ್ಲಾ ಭಾಷೆಗಳಿಗೂ ಮುದ್ರಣ ಕಲೆ ಹರಡಿತು. ೧೮೧೭ರಲ್ಲಿ ಕರ್ನಾಟಕ (ಕನ್ನಡ) ಭಾಷೆಯ ವ್ಯಾಕರಣವನ್ನು ಡಾ। ಕ್ಯಾರಿ ಮುದ್ರಿಸಿದರು. ಮುದ್ರಣಾಲಯಗಳು ಒಂದಾದರೊಂದರಂತೆ ಪ್ರಾರಂಭವಾದವು. ಆದರೆ ಮುದ್ರಣಾಲಯಗಳು ಕ್ರೈಸ್ತ ಮತಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಮುದ್ರಿಸುವುದಕ್ಕಾಗಿಯೇ ಪ್ರಾರಂಭವಾದವು. ನಂತರ ಭಾರತದ ಸಂಸ್ಕೃತಿಯನ್ನು ಹರಡುವುದರಲ್ಲಿ ಆಸಕ್ತಿ ವಹಿಸಿದವು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತನ್ನ ಪ್ರಭಾವಯುತ ಪಾತ್ರವನ್ನು ವಹಿಸಿ ಭಾರತದ ಸ್ವಾತಂತ್ರ್ಯ ಚಿರಾಯುವಾಗಿ ಉಳಿಸುವಲ್ಲಿ ಪತ್ರಿಕೆಗಳ ಚರಿತ್ರೆ ರೋಮಾಂಚಕಾರಿ. ಭಾರತದಲ್ಲಿ ಮೊದಲು ಪತ್ರಿಕೆಗಳನ್ನು ಸ್ಥಾಪಿಸಿದವನು ಇಂಗ್ಲಿಷರವನಾದ ಭಾರತ ದೇಶಾಭಿಮಾನಿ ಜೇಮ್ಸ್ ಆಗಸ್ಟಸ್ ಹಿಕ್ಕಿ.

### ಮೊದಲ ಪತ್ರಿಕೆ

೧೭೮೦ರಲ್ಲಿ ಕಲ್ಕತ್ತಾದಲ್ಲಿ 'ದಿ ಬೆಂಗಾಲ್ ಗೆಜೆಟ್ ಮತ್ತು ಕಲ್ಕತ್ತಾ ಜನರಲ್ ಅಡ್ವರ್ಟೈಜರ್' ಎಂಬ ಹೆಸರಿನಲ್ಲಿ ಪ್ರಾರಂಭಿಸಿದವನು ಜೇಮ್ಸ್ ಆಗಸ್ಟಸ್ ಹಿಕ್ಕಿ.

ಸುದ್ದಿಗಳಿಗಿಂತ ವ್ಯಕ್ತಿ ಟೀಕೆಗಳೇ ಹೆಚ್ಚು. ಸುದ್ದಿ ಸಂಗ್ರಹಕ್ಕೆ ವಾಹನ ಸೌಕರ್ಯವಲ್ಲದೆ ಸುದ್ದಿ ಸಂಗ್ರಹಕಾರರ ಅಭಾವವಿತ್ತು. ವಿದೇಶಿ ಸುದ್ದಿಗಳನ್ನು ಪ್ರಕಟಿಸಲು ತಿಂಗಳಾನುಗಟ್ಟಲೆ ಕಾಯಬೇಕಾಗಿತ್ತು. ಆದುದರಿಂದ ದಿನನಿತ್ಯದ ಬಿಸಿ ಬಿಸಿ ಸುದ್ದಿಗಿಂತ ವೈಯಕ್ತಿಕ ಮತ್ತು ವ್ಯಾವಹಾರಿಕ ಜೀವನದ ಸಮಸ್ಯೆಗಳ ಸುದ್ದಿಯೇ ಹೆಚ್ಚು ಇರುತ್ತಿತ್ತು. ಹೀಗೆ ಆರಂಭವಾಯಿತು ಭಾರತದ ಮೊದಲ ಪತ್ರಿಕೆ ಹಿಕ್ಕಿಯ ಗೆಜೆಟ್.

ವಿಲಿಯಂ ಬೋಲ್ಟ್ಸ್ ಎಂಬಾತ ಈಸ್ಟ್ ಇಂಡಿಯಾ ಕಂಪನಿಯಲ್ಲಿ ಕೆಲಸಗಾರ. ಕಂಪನಿಯ ದುರಾಗ್ರಹಕ್ಕೆ ಒಳಗಾಗಿ ರಾಜೀನಾಮೆ ನೀಡಿದ. ಕಂಪನಿಯಲ್ಲಿ ಇದ್ದ ಎರಡು ಗುಂಪುಗಳ ಮಧ್ಯೆ ಇದ್ದ ವಿರುದ್ಧ ಅಭಿಪ್ರಾಯವನ್ನು ಜನರಿಗೆ ತಿಳಿಸಲು ಪತ್ರಿಕೆಯನ್ನು ಪ್ರಾರಂಭಿಸಿ, ಸುದ್ದಿಯ ಚೀಟಿಗಳನ್ನು ಗೋಡೆಗೆ ಅಂಟಿಸಿ ಪ್ರಚಾರಗೊಳಿಸಿದ, ಇದು ಅಧಿಕಾರಿ ವರ್ಗದಲ್ಲಿ ಕೋಲಾಹಲವನ್ನುಂಟು ಮಾಡಿತು. ಅಧಿಕಾರಿಗಳು ಹಾಲೆಂಡಿನವನಾದ ಬೋಲ್ಟ್ಸ್‌ನನ್ನು ಆತನ ದೇಶಕ್ಕೆ ವಾಪಸ್ಸು ಕಳುಹಿಸಿದರು. ಇದರಿಂದ ಆತನ ಪತ್ರಿಕೆ ನಿಂತಿತು.

'ದಿ ಕಲ್ಕತ್ತಾ ಜನರಲ್ ಅಡ್ವರ್ಟೈಸರ್' ಅಥವಾ 'ಬೆಂಗಾಲ್ ಗೆಜೆಟ್' ಎಂಬ ವಾರ ಪತ್ರಿಕೆಗೆ ಹಿಕ್ ಸಂಪಾದಕ, ಪ್ರಕಾಶಕ, ಮುದ್ರಕ. ಆದುದರಿಂದ ಅದನ್ನು 'ಹಿಕ್ಕಿಯ ಗೆಜೆಟ್' ಎಂದು ಕರೆಯುತ್ತಿದ್ದರು. ಇದರಲ್ಲಿ ಸಮಾಚಾರಕ್ಕಿಂತ ವ್ಯಕ್ತಿಗಳ ಸ್ವಂತ ವಿಷಯ ಗಳನ್ನು ಟೀಕೆಯೊಡನೆ ಪ್ರಕಟಿಸಲಾಗುತ್ತಿತ್ತು. ಇಂಗ್ಲಿಷ್ ಭಾಷೆಯಲ್ಲಿ ಪ್ರಕಟವಾಗುತ್ತಿದ್ದ ಈ ಪತ್ರಿಕೆ ಭಾರತದ ಮೊದಲ ಪತ್ರಿಕೆ.

'ಬೆಂಗಾಲ್ ಗೆಜೆಟ್' ಕೇವಲ ಎರಡು ವರ್ಷಗಳು ನಡೆದರೂ ಭಾರತದ ಸ್ವಾತಂತ್ರ್ಯಕ್ಕೆ ಬೆಂಬಲ ಕೊಡದಿದ್ದರೂ ಪತ್ರಿಕೆಯ ಸ್ವಾತಂತ್ರ್ಯಕ್ಕಾಗಿ ಮಾನವನ ಇರುವಿಕೆಗೆ ಅತ್ಯವಶ್ಯಕವಾದ ಭಾಷಣ ಸ್ವಾತಂತ್ರ್ಯ, ಸಭಾ ಸ್ವಾತಂತ್ರ್ಯ, ಶಿಕ್ಷಣ ಸ್ವಾತಂತ್ರ್ಯಗಳಿಗೆ ಬೆಂಬಲ

ಕೊಟ್ಟಿತು. ಹೀಗೆ ಪತ್ರಿಕೆ ಪರಕೀಯ ಸರ್ಕಾರದ ವಿರುದ್ಧ ಹೋರಾಟ ಪ್ರಾರಂಭಿಸಿತು. ಆಗ ಪತ್ರಿಕೆ ಓದುತ್ತಿದ್ದವರು, ಇಂಗ್ಲಿಷ್ ಬಲ್ಲ ಜನರು ಮತ್ತು ಈಸ್ಟ್ ಇಂಡಿಯಾ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದ ಇಂಗ್ಲಿಷರು. ಹಿಕ್ಕಿ ನಂತರ ಸಂಪಾದಕರಾಗಿ ಬಂದ ಇಂಗ್ಲಿಷ್ ಸಂಪಾದಕರು ಆಗಿನ ಆಡಳಿತಗಾರರಾದ ಈಸ್ಟ್ ಇಂಡಿಯಾ ಕಂಪನಿಯ ದಬ್ಬಾಳಿಕೆಯ ವಿರುದ್ಧ ಹೋರಾಟ, ಪತ್ರಿಕೆಯ ಸ್ವಾತಂತ್ರ್ಯ ಹೋರಾಟದ ಸಂಪ್ರದಾಯ ಪ್ರಾರಂಭಿಸಿದರು. ಇದರ ಫಲವಾಗಿ ಅಂಚೆ ಕಛೇರಿಯ ಸೌಲಭ್ಯಗಳನ್ನು ಕಳೆದುಕೊಂಡಿತು. ಅದೂ ಧೈರ್ಯವಾಗಿ ನಿಂದನಾತ್ಮಕ ಲೇಖನಗಳನ್ನು ಬರೆದುದರಿಂದ ಜೈಲುವಾಸ ಅನುಭವಿಸಬೇಕಾಯಿತು. ಹಿಕ್ಕಿ ಸೆರೆಮನೆಯಿಂದಲೇ ಲೇಖನಗಳನ್ನು ಬರೆದು ಗೆಜೆಟ್ ಪತ್ರಿಕೆಯನ್ನು ಪ್ರಕಟಿಸುತ್ತಿದ್ದ. ಇದರಿಂದ ಆಗಿನ ಆಡಳಿತಗಾರ ವಾರನ್ ಹೇಸ್ಟಿಂಗ್ಸ್ ಹಿಕ್ಕಿಯ ಮೇಲೆ ಅನೇಕ ಮೊಕದ್ದಮೆಗಳನ್ನು ಹೂಡಿದ.

ಹಿಕ್ಕಿಯ ಅಭಿವೃದ್ಧಿಯನ್ನು ತಾಳಲಾರದ ಆತನ ವಿರೋಧಿಗಳು ಪತ್ರಿಕೆಯನ್ನು ನಿಲ್ಲಿಸಲು ಪಣತೊಟ್ಟು ಮುದ್ರಣಾಲಯವನ್ನು ಜಪ್ತಿ ಮಾಡಿಸಿದರು. ಸರ್ಕಾರ ಎಲ್ಲವನ್ನೂ ವಶಪಡಿಸಿಕೊಂಡಿತು. ಹಿಕ್ಕಿ ಮತ್ತು ಆತನ ಸ್ನೇಹಿತರು ಪತ್ರಿಕೆ ಉಳಿಸಲು ಮಾಡಿದ ಪ್ರಯತ್ನ ವಿಫಲವಾಯಿತು. ನಂತರ ಹಿಕ್ಕಿಯೂ ನಿಧನನಾದ. ಆದರೆ ಆತನು ಪತ್ರಿಕಾ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟ, ತೋರಿಸಿದ ದಾರಿ ಚಿರಸ್ಮರಣೀಯ.

## ನಗರಗಳಲ್ಲಿ ಪತ್ರಿಕೆಗಳು

**ಕಲ್ಕತ್ತಾ:** ೧೭೮೦ರಲ್ಲಿ ಕಲ್ಕತ್ತೆಯಿಂದ 'ಇಂಡಿಯಾ ಗೆಜೆಟ್' ಪ್ರಾರಂಭವಾಯಿತು. ವ್ಯಾಪಾರ ದೃಷ್ಟಿಯಿಂದ ಪ್ರಾರಂಭಿಸಿದ ನಾಟಕ ಕಂಪನಿಯ ಬರ್ನಾರ್ಡ್ಸ್ ಮಿಸಿಂಕ್ ಮತ್ತು ಉಪ್ಪು ವ್ಯಾಪಾರಿ ಪೀಟರ್ ರೀಡ್ ಸರ್ಕಾರದ ನೀತಿ ನಿಯಮಗಳನ್ನು ಎತ್ತಿ ಹಿಡಿದ ಫಲದಿಂದ ಸರ್ಕಾರದ ಬೆಂಬಲ ಸಿಕ್ಕಿತು. ೧೭೮೪ರಲ್ಲಿ 'ಕಲ್ಕತ್ತ ಗೆಜೆಟ್' ಮತ್ತು 'ಓರಿಯಂಟಲ್ ಅಡ್ವರ್ಟೈಜರ್' ಪತ್ರಿಕೆ ಬಂಗಾಳಿ, ಪರ್ಷಿಯನ್ ಇಂಗ್ಲಿಷ್ ಭಾಷೆಗಳಲ್ಲಿ ಸುದ್ದಿ ಸೂಚನಾ ಪತ್ರಗಳನ್ನು ಪ್ರಕಟಿಸಿತು. ಕೆಲವು ದಿನಗಳ ಮೇಲೆ ಸರ್ಕಾರದ ಮುಖಪತ್ರವಾಯಿತು. ೧೭೮೫ರಲ್ಲಿ 'ಬೆಂಗಾಲ್ ಜರ್ನಲ್' ಎಂಬ ಪತ್ರಿಕೆಯನ್ನು ಥಾಯಸ್ ಜೋನ್ಸ್ ಪ್ರಾರಂಭಿಸಿದ. ಈ ಪತ್ರಿಕೆಗಳನ್ನು ಓದುತ್ತಿದ್ದವರು ವ್ಯಾಪಾರಕ್ಕಾಗಿ ಬಂದ ಇಂಗ್ಲಿಷರು, ಇಂಗ್ಲಿಷ್ ಬಲ್ಲ ಕೆಲವು ಭಾರತೀಯರು. ಪತ್ರಿಕಾಲಯದಲ್ಲಿ ಭಾರತೀಯರು ಇಲ್ಲವೇ ಇಲ್ಲ. ಹರಟೆ, ಗಾಳಿ ವರ್ತಮಾನ, ವ್ಯಕ್ತಿ ನಿಂದನೆಗಳನ್ನು ಈ ಪತ್ರಿಕೆಗಳು ಪ್ರಕಟಿಸುತ್ತಿದ್ದವು. ಇದರಿಂದ ಈ ಪತ್ರಿಕೆಗಳ ಪ್ರಸಾರ ನೂರಕ್ಕೇರಲಿಲ್ಲ.

**ಮದರಾಸು** : ೧೭೮೫ರಲ್ಲಿ ಮದರಾಸಿನಿಂದ ಪ್ರಾರಂಭವಾದುದು ಮದರಾಸ್ ಕೊರಿಯರ್. ಈಸ್ಟ್ ಇಂಡಿಯಾ ಕಂಪನಿಯ ವಿರುದ್ಧ ಕೆಲವು ಲೇಖನಗಳು ಪ್ರಕಟವಾದುದರಿಂದ ತೊಂದರೆಗೀಡಾಗಿ ಸಂಪಾದಕ ಹ್ಯೂಬಾಯ್ಡನ್ ರಾಜೀನಾಮೆ ಕೊಟ್ಟನು. ಹೀಗೆ ಪತ್ರಿಕೆಗಳು ಅನೇಕ ತೊಂದರೆಗಳಿಗೆ ಸಿಕ್ಕಿ ಹಾಕಿಕೊಂಡರೂ ಧೈರ್ಯ ಕಳೆದುಕೊಳ್ಳಲಿಲ್ಲ.

'ಇಂಡಿಯಾ ಹೆರಾಲ್ಡ್' ಪತ್ರಿಕೆಯನ್ನು ಹೆಂಪ್ರೆಸ್ ಎಂಬಾತ ಪ್ರಾರಂಭಿಸಿದ. ಈತನು ಸರ್ಕಾರವನ್ನು ಟೀಕಿಸಿದುದರಿಂದ ದೇಶದಿಂದ ಗಡೀಪಾರು ಮಾಡಿದರು. ಹೋಗುವಾಗ ಹಡಗಿನಿಂದ ತಪ್ಪಿಸಿಕೊಂಡು ಭಾರತದಲ್ಲಿ ಕೆಲವು ದಿನ ವಾಸಿಸಿದ. 'ವೀಕ್ಲಿ ಮದ್ರಾಸ್ ಗೆಜೆಟ್' ಪ್ರಾರಂಭಿಸಿದ.

**ಬೊಂಬಾಯಿ** : ಕಲ್ಕತ್ತಾದಲ್ಲಿ ಪತ್ರಿಕೆಗಳು ಮೊದಲು ಬೆಳೆದವು. ಆದರೆ ವಾಹನ ಸೌಕರ್ಯ ಇಲ್ಲವಾದುದರಿಂದ ಅದರ ಪ್ರಭಾವ ಬೇರೆ ಕಡೆಗೆ ನಿಧಾನವಾಗಿ ತಲುಪಿತು. ವಾಹನ ಮತ್ತು ಸುದ್ದಿ ಸಂಚಾರ ಮಾರ್ಗ ಸೌಕರ್ಯ ಒದಗಿದಂತೆ ಕಲ್ಕತ್ತಾದಲ್ಲಿ ನಡೆದ ಪತ್ರಿಕಾ ವ್ಯವಸಾಯದ ಮೂಲ ಬೆಳವಣಿಗೆಗಳ ಮತ್ತು ಹೋರಾಟದ ಚಳುವಳಿ ಮತ್ತು ಪ್ರಭಾವ ದೇಶದ ಇತರ ಕಡೆಗಳಲ್ಲಿಯೂ ಹರಡಿತು.

ಬೊಂಬಾಯಿಯಲ್ಲಿ ೧೭೮೯ರಲ್ಲಿ 'ಬಾಂಬೆ ಹೆರಾಲ್ಡ್' ಇಂಗ್ಲಿಷ್ ವಾರಪತ್ರಿಕೆ ಆರಂಭವಾಯಿತು. ನಂತರ 'ಬಾಂಬೆ ಕೊರಿಯರ್' ೧೭೯೦ರಲ್ಲಿ ಪ್ರಾರಂಭವಾಯಿತು. ನಂತರ 'ಬಾಂಬೆ ಟೈಮ್ಸ್' ಎಂದು ಬದಲಾಯಿತು.

ಕೆಲವು ಸರ್ಕಾರದ ಅಧಿಕಾರಿಗಳು ಮಾಡಿದ ಹೇಳಲಾಗದ ಕೃತ್ಯಗಳನ್ನು ಬಾಂಬೆ ಗೆಜೆಟ್ ಪ್ರಕಟಮಾಡಿತೆಂದು ಆಕ್ರೋಶಗೊಂಡು ಪತ್ರಿಕೆ ಮುದ್ರಿಸುವುದಕ್ಕೆ ಮುಂದೆ ಕರಡು ಪ್ರತಿಗಳನ್ನು ಸರ್ಕಾರಕ್ಕೆ ಒಪ್ಪಿಸಬೇಕೆಂದು ಆಜ್ಞೆ ಹೊರಡಿಸಿತು. ನಂತರ ಬಾಂಬೆ ಹೆರಾಲ್ಡ್ ಮತ್ತು ಬಾಂಬೆ ಗೆಜೆಟ್ ಪತ್ರಿಕೆಗಳು ಸರ್ಕಾರದ ಪತ್ರಿಕೆಗಳಂತೆ ಸುದ್ದಿ ಪ್ರಕಟಿಸಲು ಪ್ರಾರಂಭಿಸಿದ್ದರಿಂದ ಸರ್ಕಾರದ ಸಹಾಯ ಸಿಕ್ಕಿ ಎರಡೂ ಪತ್ರಿಕೆಗಳೂ ಒಟ್ಟುಗೂಡಿ ಒಂದೇ ಪತ್ರಿಕೆಯಾಯಿತು. ಭಾರತೀಯ ಸುದ್ದಿಗಳಿಗಿಂತ ಬ್ರಿಟಿಷ್ ಸುದ್ದಿಗಳೇ ಹೆಚ್ಚು ಇರುತ್ತಿದ್ದವು.

**ಕಲ್ಕತ್ತಾ ಪತ್ರಿಕೆಗಳು** : ೧೭೮೦ರ ನಂತರ ಅನೇಕ ಪತ್ರಿಕೆಗಳು ಜನಿಸಿದವು. ಏಷಿಯಾಟಿಕ್ ಮಿರರ್, ಇಂಡಿಯನ್ ವರ್ಲ್ಡ್, ಕಲ್ಕತ್ತಾ ಕೊರಿಯರ್, ಇಂಡಿಯನ್ ಅಪಾಲೋ, ಟೆಲಿಗ್ರಾಫ್, ಕಲ್ಕತ್ತಾ ಮಾರ್ನಿಂಗ್ ಪೋಸ್ಟ್, ಓರಿಯಂಟಲ್ ಸ್ಟಾರ್, ರಿರೇಟಿನ್ ಮುಂತಾದ ಪತ್ರಿಕೆಗಳು ಕಲ್ಕತ್ತಾ ನಗರದಿಂದಲೇ ಪ್ರಕಟವಾದವು. ಪತ್ರಿಕಾ ಸ್ವಾತಂತ್ರ್ಯ ತತ್ವದ ವಿಷಯದಲ್ಲಿ ಸರ್ಕಾರದ ಆಡಳಿತಗಾರರಿಗೂ ಪತ್ರಿಕೆಯ ಮಾಲೀಕರು ಮತ್ತು ಸಂಪಾದಕರುಗಳಿಗೆ ಘರ್ಷಣೆ ನಡೆಯುತ್ತಲೇ ಇತ್ತು. ಅಸಹಾಯಕರೂ ನಿರಾಶರೂ ಆದ ಸಾರ್ವಜನಿಕರಿಗೆ ಆಗಿನ ಕಂಪನಿ ಆಡಳಿತದಲ್ಲಿ ನಡೆಯುತ್ತಿದ್ದ ಅನ್ಯಾಯ, ಅಧರ್ಮಗಳನ್ನು ಎತ್ತಿ ತೋರಿಸಲು ಪ್ರಾರಂಭಿಸಿದರು. ಸರ್ಕಾರ ಅದನ್ನು ಮುಚ್ಚಿಡಲು ಪ್ರಯತ್ನಿಸಿ ವಿಫಲವಾಯಿತು. ಬೆಂಗಾಲ್ ಜರ್ನಲ್ ಪತ್ರಿಕೆಯ ಸಂಪಾದಕನಾದ ಡ್ಯೂಯನ್ ಸರ್ಕಾರದ ವಿರುದ್ಧ ಆಕ್ಷೇಪಾರ್ಹವಾದ ಲೇಖನಗಳನ್ನು ಪ್ರಕಟಿಸಿದ್ದರಿಂದ ಆತನನ್ನು ಗಡೀಪಾರು ಮಾಡಿದರು. ಆದರೆ ಆತನು ಆಜ್ಞೆಯನ್ನು ಪರಿಪಾಲಿಸಲಿಲ್ಲ. ಆದರೆ ಆತನನ್ನು ಗವರ್ನರನು ಔತಣಕ್ಕೆ ಆಹ್ವಾನಿಸಿ, ಆತನು ಬಂದಾಗ ದಸ್ತಗಿರಿ ಮಾಡಿದನು. ಆತನನ್ನು ಕಲ್ಕತ್ತಾದ ಹತ್ತಿರದ ಬಂದರಿನಿಂದ ಯೂರೋಪಿಗೆ ಹೋಗುವ ಹಡಗನ್ನು ಹತ್ತಿಸಿದನು.

೧೭೯೯ರಲ್ಲಿ ಗವರ್ನರ್ ಜನರಲ್ ಆದ ಲಾರ್ಡ್ ವೆಲ್ಲೆಸ್ಲಿ ಪತ್ರಿಕೆಗಳ ಮೇಲೆ ಹಿಡಿತವನ್ನು ಇಟ್ಟುಕೊಳ್ಳಲು ಕೆಲವು ಕಾನೂನುಗಳನ್ನು ತಂದನು. ಸರ್ಕಾರದ ದೋಷವಿಮರ್ಶಾಧಿಕಾರಿಯ ಸಹಿ ಇಲ್ಲದೆ ಸರ್ಕಾರದ ಸುದ್ದಿ ಪ್ರಕಟಿಸುವಂತಿರಲಿಲ್ಲ. ಮುದ್ರಕರ ಹೆಸರು ವಿಳಾಸ ಪ್ರಕಟಿಸಬೇಕು. ಇನ್ನೂ ಕೆಲವು ಕಾನೂನು ಜಾರಿಗೆ ತಂದನು. ಆದರೂ ಟೆಲಿಗ್ರಾಫ್ ಪತ್ರಿಕೆ ಈ ಕಾನೂನುಗಳ ವಿರುದ್ಧ ಹೋರಾಟ ನಡೆಸಿತು. ಸರ್ಕಾರದ ವಿರುದ್ಧ ಸುದ್ದಿ ಪ್ರಕಟಿಸುತ್ತಿದ್ದವರನ್ನು ದೇಶದಿಂದಾಚೆಗೆ ಗಡೀಪಾರು ಮಾಡುತ್ತಿದ್ದರೂ ಈಸ್ಟ್ ಇಂಡಿಯಾ ಕಂಪನಿಯ ದುರಾಡಳಿತ ಮತ್ತು ಅನ್ಯಾಯವನ್ನು ಪ್ರಕಟಿಸುತ್ತಿದ್ದರು. ಇವೆಲ್ಲಾ ಇಂಗ್ಲಿಷ್ ಪತ್ರಿಕೆಗಳು, ಇಂಗ್ಲಿಷಿನವರೇ ಪ್ರಕಟಿಸುತ್ತಿದ್ದರು. ಭಾರತೀಯರ ಅಭಿಪ್ರಾಯಕ್ಕೆ ಜಾಗವೇ ಇರುತ್ತಿರಲಿಲ್ಲ. ಹೀಗೆ ಭಾರತದಲ್ಲಿ ೧೮ನೇ ಶತಮಾನದಲ್ಲಿ ಇಂಗ್ಲಿಷ್‌ನವರಿಂದ ಇಂಗ್ಲಿಷ್ ಭಾಷೆಯ ಪತ್ರಿಕೆಗಳು ಇಂಗ್ಲಿಷರಿಗೆಂದೇ ಪ್ರಾರಂಭವಾದವು. ಭಾರತೀಯರು ಈ ಪತ್ರಿಕೆಗಳ ಕಛೇರಿಯಲ್ಲಿ ಕೆಲಸ ಮಾಡಲು ಪ್ರಾರಂಭಿಸಿದರು. ಕ್ರಮೇಣ ಸಂಪಾದಕರಾದರು. ನಂತರ ಮಾಲೀಕರೂ ಆದರು. ನಂತರ ಭಾರತೀಯ ಜನರ ಅಭಿಪ್ರಾಯಗಳನ್ನು ಪ್ರಕಟಿಸಲು ಪ್ರಾರಂಭ ಮಾಡಿದರು. ಇದರಿಂದ ಭಾರತೀಯ ಭಾಷಾ ಪತ್ರಿಕೆಗಳು ಪ್ರಾರಂಭವಾದವು. ಭಾರತೀಯ ಜನರ ಅಭಿಪ್ರಾಯಗಳನ್ನು ರೂಪಿಸಲು ಪ್ರಾರಂಭವಾಗಿ ಭಾರತದ ಸ್ವಾತಂತ್ರ ಹೋರಾಟಕ್ಕೂ ಇದು ನಾಂದಿಯಾಯಿತು.

## ಭಾರತೀಯ ಪತ್ರಿಕೆಗಳು

೧೯ನೇ ಶತಮಾನದಲ್ಲಿ ಮಾರ್ಕ್ವಿಸ್ ಆಫ್ ವೆಲ್ಲೆಸ್ಲಿ, ಪತ್ರಿಕೆಗಳ ಮೇಲೆ ಹತೋಟಿ ಇಡಲು ಅನೇಕ ಕಾನೂನುಗಳನ್ನು ಜಾರಿಗೆ ತಂದನು. ಭಾರತೀಯ ಪತ್ರಿಕೆಗಳಿಗೆ ಸ್ಥಳೀಯ ಸುದ್ದಿ ಪ್ರಕಟಿಸಲು ಮಾತ್ರ ಅನುಮತಿ ಇತ್ತು. ಆದರೆ ಪತ್ರಿಕೆಗಳು ಸ್ಥಳೀಯ ಸುದ್ದಿ ಜೊತೆಗೆ ಸರ್ಕಾರದ ದುರಾಡಳಿತದ ಮತ್ತು ಖಾಸಗೀ ವ್ಯಕ್ತಿಗಳ ನಿಂದನೆಗಳನ್ನು ಪ್ರಕಟಿಸುತ್ತಿದ್ದವು. ಅನೇಕ ಹೊಸ ಕಾನೂನುಗಳನ್ನು ಇವರು ಮಾಡಿದರು. ಈಸ್ಟ್ ಇಂಡಿಯಾ ಕಂಪನಿಯ ಆಡಳಿತಕ್ಕೂ ದೇಶಿಯ ಸಂಸ್ಥಾನಗಳ ರಾಜರುಗಳ ನಡುವೆ ನಡೆಯುವ ಪತ್ರ ವ್ಯವಹಾರ, ಹಡಗುಗಳ ಓಡಾಟ, ಸೈನಿಕರ ರವಾನೆ, ಸಾಮಾನು ಆಮದು ಮತ್ತು ರಫ್ತು ಈ ವಿಷಯಗಳ ಬಗ್ಗೆ ಪತ್ರಿಕೆಗಳಲ್ಲಿ ಪ್ರಕಟಿಸದಂತೆ ಕಾನೂನು ಹೇರಿದರು. ಕಂಪನಿಯ ವಿರುದ್ಧ ಜನರಲ್ಲಿ ಅಸಂತೋಷ ಮತ್ತು ಅತೃಪ್ತಿಯಾಗುವಂತಹ ಲೇಖನಗಳನ್ನು ನಿಷೇಧಿಸಿದರು. ಪತ್ರಿಕೆಗಳು ಸರ್ಕಾರದ ಆಜ್ಞೆಗೆ ತಲೆಬಾಗಿದವು.

ಆದರೆ ಕೆಲವು ದಿನಗಳ ನಂತರ ಸೈನ್ಯಕ್ಕೆ ಸಂಬಂಧಪಟ್ಟ ಮತ್ತು ಕಂಪನಿ ಆಡಳಿತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಪ್ರಕಟಿಸುತ್ತಲೇ ಇದ್ದವು. ಆಡಳಿತಗಾರರು ಎಚ್ಚರಿಕೆ ನೀಡುತ್ತಲೇ ಇದ್ದರೂ ೧೮೦೩ರಲ್ಲಿ ಮರಾಠ ಯುದ್ಧದ ಕಾಲದಲ್ಲಿ ಶತ್ರುಗಳಿಗೆ ಉಪಯೋಗವಾಗುವಂತಹ ಯಾವ ಸುದ್ದಿಗಳನ್ನೂ ಪ್ರಕಟಿಸಬಾರದೆಂದು ಆಜ್ಞಾಪಿಸಿದರು. ಸಾರ್ವಜನಿಕ ಸಭೆಗಳನ್ನು ಕೂಡ ನಡೆಸಬಾರದೆಂದು ನಿರ್ಬಂಧಿಸಿದರು. ಧರ್ಮನಿಂದಕ ಗ್ರಂಥಗಳು ಪ್ರಕಟವಾಗುತ್ತಿದ್ದುದನ್ನು ತಪ್ಪಿಸಲು ಗ್ರಂಥಗಳು ಮುದ್ರಣ ವಾಗುವುದಕ್ಕೆ ಮುಂಚೆಯೇ ಎರಡು ಕರಡು ಪ್ರತಿಗಳನ್ನು ಸರ್ಕಾರಕ್ಕೆ ಕೊಟ್ಟು ಪ್ರಕಟಿಸಲು ಒಪ್ಪಿಗೆ ಪಡೆಯಬೇಕಾಗುತ್ತಿತ್ತು. ಕೊನೆಯಲ್ಲಿ ಪ್ರಕಾಶಕರ ಹೆಸರು ಮತ್ತು ಗ್ರಂಥಕರ್ತರ ಹೆಸರು ಪ್ರಕಟಿಸುವ ಕಾನೂನು ಮಾಡಿದರು.

ಭಾರತಕ್ಕೆ ಕ್ರೈಸ್ತ ಧರ್ಮಗುರು ಸ್ಯಾಮ್ಯುಯಲ್ ಜೇಮ್ಸ್ ದೈಸರು ಬಂದಮೇಲೆ ಪತ್ರಿಕಾ ಚಟುವಟಿಕೆಗಳ ಬೆಳವಣಿಗೆಗೆ ತುಂಬಾ ಪ್ರಭಾವ ಉಂಟಾಯಿತು. ಇವರು ಪತ್ರಿಕಾ ಸ್ವಾತಂತ್ರ್ಯಕ್ಕಾಗಿ ಶ್ರಮವಹಿಸಿದರು.

ಲಾರ್ಡ್ ಹೇಸ್ಟಿಂಗ್ಸ್‌ನು 'ಏಷಿಯಾಟಿಕ್ ಮಿರರ್' ಪತ್ರಿಕೆಯ ಸಂಪಾದಕನಾಗಿದ್ದ ಡಾ। ಬೈಸ್‌ನ ಸಹಾಯ ಮತ್ತು ಪ್ರಭಾವದಿಂದ ಲಾರ್ಡ್ ವೆಲ್ಲಸ್ಲಿ ಜಾರಿಗೆ ತಂದಿದ್ದ ೧೮೧೮ರ ಸುದ್ದಿ ನಿಯಂತ್ರಣ ಕಾಯ್ದೆಯನ್ನು ತೆಗೆದುಹಾಕಿದ.

## ಭಾರತೀಯ ಒಡೆತನದ ಪತ್ರಿಕೆ

ಭಾರತದ ಪತ್ರಿಕೆಗಳಲ್ಲಿ ಭಾರತೀಯ ಸಾರ್ವಜನಿಕ ಅಭಿಪ್ರಾಯಗಳು ಮೂಡುತ್ತಾ ಬರತೊಡಗಿದವು. ೧೮೧೯ರಲ್ಲಿ 'ಬೆಂಗಾಲ್ ಗೆಜೆಟ್' ಎಂಬ ಪತ್ರಿಕೆಯನ್ನು ಗಂಗಾಧರ್ ಭಟ್ಟಾಚಾರ್ಯ ಎಂಬ ಭಾರತೀಯ ಸ್ಥಾಪಿಸಿದನು. ಇದು ಕೇವಲ ಒಂದು ವರ್ಷ ನಡೆಯಿತು. ಭಾನುವಾರದ ಪತ್ರಿಕೆಯಾಗಿ 'ಗಾರ್ಡಿಯನ್' ಸ್ಥಾಪಿತವಾಯಿತು. ೧೮೨೦ರಲ್ಲಿ 'ಕಲ್ಕತ್ತಾ ಜರ್ನಲ್' ಎಂಬ ಭಾನುವಾರದ ಪತ್ರಿಕೆ ಪ್ರಾರಂಭವಾಯಿತು.

ಶ್ರೀರಾಮಪುರದ ಪಾದ್ರಿಗಳು ಧರ್ಮಪ್ರಚಾರಕ್ಕಾಗಿ 'ದಿಗ್ದರ್ಶನಾ' ಎಂಬ ಮಾಸಪತ್ರಿಕೆಯನ್ನು ಬಂಗಾಳಿ ಭಾಷೆಯಲ್ಲಿ ಪ್ರಾರಂಭಿಸಿದರು. 'ಸಮಾಚಾರ ದರ್ಪಣ' ಎಂಬ ವಾರಪತ್ರಿಕೆ ಕೆಲವು ದಿನಗಳ ನಂತರ ಪ್ರಕಟವಾಯಿತು. ಸೂಚನಾ ಪತ್ರಗಳು, ಐತಿಹಾಸಿಕ ಲೇಖನಗಳು, ರಾಜಕೀಯ ಸುದ್ದಿಗಳೇ ಇದ್ದ ಪತ್ರಿಕೆಗಳು ಅಧಿಕಾರಿಗಳಲ್ಲಿ ಒಳ್ಳೆಯ ಪ್ರತಿಕ್ರಿಯೆ ಉಂಟುಮಾಡಿದವು. ಸಮಾಚಾರ ದರ್ಪಣ ೧೯೪೦ ರವರೆಗೆ ನಡೆಯಿತು.

## ಸುದ್ದಿ ನಿಯಂತ್ರಣ ಕಾಯ್ದೆ

ಭಾರತೀಯ ಪತ್ರಿಕೆಗಳು ಪ್ರಾರಂಭವಾದಾಗ ಅವುಗಳ ಹತೋಟಿಗೆ ಯಾವ ಕಾನೂನೂ ಇರಲಿಲ್ಲ. ಸುದ್ದಿ ನಿಯಂತ್ರಕಾಜ್ಞೆಯನ್ನು ರದ್ದುಗೊಳಿಸಿ ಕೆಲವು ನಿಯಮಾವಳಿಗಳನ್ನು ರಚಿಸಿದರು. ಸಾರ್ವಜನಿಕ ಹಿತಕ್ಕೆ ವಿರೋಧವಾದ ಮತ್ತು ಸರ್ಕಾರದ ಬಲಹೀನ ಮಾಡುವ ಯಾವುದೇ ಸುದ್ದಿಗಳು ಪ್ರಕಟಮಾಡುವುದನ್ನು ತಡೆಯುವುದೇ ಇದರ ಮುಖ್ಯ ಉದ್ದೇಶ. ಲಾರ್ಡ್ ಹೇಸ್ಟಿಂಗ್ಸ್‌ನ ಪತ್ರಿಕಾ ಸ್ವಾತಂತ್ರ್ಯ ಉದ್ದೇಶವನ್ನು ಎಲ್ಲರೂ ಪ್ರಶಂಸಿಸಿದರು.

'ಕಲ್ಕತ್ತಾ ಜರ್ನಲ್' ಸಂಪಾದಕ ಜೇಮ್ಸ್ ನಿಲ್ಕಿ ಬಕಿಂಗ್‌ಹ್ಯಾಮ್ ಭಾರತೀಯ ಪತ್ರಿಕಾ ಸ್ವಾತಂತ್ರ್ಯವನ್ನು ಪ್ರತಿಪಾದಿಸಿದ.

## ರಾಜಾರಾಮ ಮೋಹನರಾಯ್

೧೮೧೩ರಿಂದ ೧೮೧೮ ರವರೆಗೆ ಭಾರತೀಯ ಪತ್ರಿಕೆಗಳಾಗಿ ಕ್ರೈಸ್ತ ಪಾದ್ರಿಗಳು ದಿಗ್ದರ್ಶನ (ಬಂಗಾಳಿ), ಫ್ರೆಂಡ್ಸ್ ಆಫ್ ಇಂಡಿಯಾ (ಇಂಗ್ಲಿಷ್), ದರ್ಪಣ (ಬಂಗಾಳಿ) ಪ್ರಾರಂಭಿಸಿದರು. ಕ್ರೈಸ್ತ ಪಾದ್ರಿಗಳು ಈ ಪತ್ರಿಕೆಗಳನ್ನು ವೇದಾಂತ ತತ್ವಗಳನ್ನು ಟೀಕೆ ಮಾಡಲು ಪ್ರಾರಂಭ ಮಾಡಿದರು. ಟೀಕೆಗಳಿಗೆ ಉತ್ತರವನ್ನು ಬಯಸಿದರು. ದೇಶಾಭಿಮಾನಕ್ಕೆ, ತಾಳ್ಮೆಗೆ, ಶಕ್ತಿಯುತ ಬರವಣಿಗೆಗೆ, ಪ್ರಾಮಾಣಿಕತೆಗೆ, ಸ್ಫೂರ್ತಿಗೆ ಹೆಸರಾದ ರಾಜಾರಾಮ ಮೋಹನರಾಯ್ ಅವರು ಸಂಪಾದಕರಿಗೆ ಪತ್ರ ಬರೆದು ತನ್ನ ಸ್ವಂತವಾದ, ಸ್ಪಷ್ಟಾಭಿಪ್ರಾಯಗಳನ್ನು ತಿಳಿಸಿದರು. ಪತ್ರಿಕೆಗಳಲ್ಲಿ ಉತ್ತರಗಳನ್ನು ಪ್ರಕಟಿಸುವುದಾಗಿ ತಿಳಿಸಿದರೂ ರಾಜಾರಾಮ್ ಮೋಹನ ರಾಯ್‌ರವರ ಉತ್ತರ ಪ್ರಕಟಿಸಲಿಲ್ಲ. ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದದ್ದರಿಂದ ರಾಯ್‌ರವರು ಪತ್ರಿಕೆಗಳು ಮಾಡಿದ ಟೀಕೆಗಳಿಗೆ ಉತ್ತರ ಬಹಿರಂಗಪಡಿಸಲು 'ಬ್ರಾಹ್ಮಣಿಕಲ್ ಮ್ಯಾಗಜೀನ್' ಎಂಬ ಹೊಸ ಪತ್ರಿಕೆಯನ್ನು ಹೊರಡಿಸಿದರು. ರಾಯ್‌ರವರ ಸ್ನೇಹಿತರಾದ ಪಂಡಿತ ಶಿವಪ್ರಸಾದ್ ಶರ್ಮ ಸಂಪಾದಕರಾಗಿ ಪತ್ರಿಕಾ ಧ್ಯೇಯವನ್ನು ಪ್ರಕಟಿಸಿದರು. ಕ್ರೈಸ್ತ ಪಾದ್ರಿಗಳು ಹಿಂದೂ ಧರ್ಮದ ಮೇಲೆ ಮಾಡುತ್ತಿದ್ದ ನಿರಾಧಾರವಾದ ಟೀಕೆಗಳಿಗೆ ಸರಿಯಾದ ಉತ್ತರ ಕೊಟ್ಟು ಹಿಂದೂ ಧರ್ಮದ ಪುನರುದ್ಧಾರವೇ ನಮ್ಮ ಪತ್ರಿಕೆಯ ಉದ್ದೇಶ ಎಂದು ಸಾರಿದರು. ಬಂಗಾಳಿ ಭಾಷೆಯಲ್ಲಿ ಪ್ರಕಟವಾದ 'ಬ್ರಾಹ್ಮಿನ್ ಸೇವಡಿ', ವೇದಾಂತ ತತ್ವಗಳ ಮೇಲೆ ಬಂದ ಟೀಕೆಗಳಿಗೆ ಉತ್ತರಿಸುತ್ತಿದ್ದುದಲ್ಲದೆ ಕ್ರೈಸ್ತ ಧರ್ಮದ ಕೆಲವು ತತ್ತ್ವಗಳನ್ನು ಪ್ರಶ್ನಿಸಿತು.

ರಾಯ್‌ರವರಿಗೆ ಪತ್ರಿಕೆಗಳು ಪ್ರಭಾವವನ್ನು ಬೀರುವ ಮತ್ತು ಶಕ್ತಿಯುತವಾಗಿರುವ ಆಯುಧಗಳೆಂದು ಮನವರಿಕೆಯಾಗಿ 'ಸಂಬಂಧ ಕೌಮುದಿ' ಪತ್ರಿಕೆಯನ್ನು ಪ್ರಕಟಿಸಿದರು. ಇದು ಪೂರ್ಣ ಭಾರತೀಯರ ಸಾಹಸ. ಬಕಿಂಗ್ ಹ್ಯಾಮ್‌ನ 'ಕಲ್ಕತ್ತ ಜರ್ನಲ್' ಇದಕ್ಕೆ ಬೆಂಬಲ ನೀಡಿತು. ೧೮೨೧ರಲ್ಲಿ ರಾಯ್‌ರವರು ಪರ್ಷಿಯನ್ ಭಾಷೆಯಲ್ಲಿ ''ಮಿರರ್ ಉಲ್ ಅಕ್ಬರ್'' ಪತ್ರಿಕೆ ಪ್ರಾರಂಭಿಸಿದರು. ಇದು ಬುದ್ಧಿವಂತರಿಗೆ ಮೀಸಲಾಯಿತು. ಪರ್ಷಿಯನ್ ರಾಜಭಾಷೆ ಕಲ್ಕತ್ತಾ ಜರ್ನಲ್‌ನಲ್ಲಿ ರಾಯ್‌ರವರ ಇಂಗ್ಲಿಷ್ ಭಾಷಾಂತರ ಲೇಖನಗಳು ಪ್ರಕಟವಾಗುತ್ತಿದ್ದವು. ಇದರಿಂದ ಸರ್ಕಾರಕ್ಕೆ ಕೋಪ ಬಂದು ಭಾಷಾ ಪತ್ರಿಕೆ ಕಾನೂನು ಜಾರಿಗೆ ಬಂದಿತು. ಈ ಕಾನೂನು ಭಾಷಾ ಪತ್ರಿಕೆಗಳ ಸ್ವಾತಂತ್ರ್ಯವನ್ನು ಬಹುಮಟ್ಟಿಗೆ ಕಸಿದುಕೊಂಡಿತು. ಈ ಪತ್ರಿಕೆಗಳಲ್ಲಿ ಬರುವ ಲೇಖನಗಳನ್ನು ಮತ್ತು ರಾಜದ್ರೋಹದ

ಬರವಣಿಗೆಯನ್ನು ಓದಿ ಅದರ ಫಲವಾಗಿ ಸಮಾಜದಲ್ಲಿ ಶಾಂತಿ ಹದಗೆಡುವ ಹೆದರಿಕೆಯಿಂದ ಈ ಕಾನೂನು ತರಲಾಯಿತು. ಜನ ಅಸಮ್ಮತಿಯನ್ನು ವ್ಯಕ್ತಪಡಿಸಿದರು. ಆದರೆ ಸರ್ಕಾರ ಇದನ್ನು ಗಮನಿಸಲೇ ಇಲ್ಲ.

ಆದರೆ ರಾಜಾರಾಮ್ ಮೋಹನರಾಯ್ ಮತ್ತು ಅವರ ಸಂಗಡಿಗರು ಪ್ರತಿಭಟಿಸಿ ಶ್ರೇಷ್ಠ ನ್ಯಾಯಾಧೀಶರ ಮುಂದೆ ಆಕ್ಷೇಪಣೆಗಳನ್ನು ನ್ಯಾಯವಾದಿಗಳ ಮೂಲಕ ಪ್ರತಿಭಟನೆ ಸೂಚಿಸಿದರು. ರಾಯ್‌ರವರು ಸ್ವತಃ ತಾವೇ ಪ್ರತಿಭಟನೆಯಲ್ಲಿ ಭಾಗವಹಿಸಿದರು. ಸ್ವಾತಂತ್ರ್ಯ ಪ್ರೇಮಿಯಾದ ರಾಯ್‌ರವರು ಪತ್ರಿಕಾ ಸ್ವಾತಂತ್ರ್ಯದ ಹೋರಾಟದ ಫಲವಾಗಿ ಭಾರತದಲ್ಲಿ ರಾಜಕೀಯ ಕ್ರಾಂತಿಯಾದರೆ ಅದಕ್ಕೆ ತಾನೇ ಕಾರಣವೆಂದು ಧೈರ್ಯವಾಗಿ ಹೇಳಿದರು. ಆಗಿನ ಕಾಲದಲ್ಲಿ ಇಂತಹ ಚಳುವಳಿ ಮಾಡುವುದರ ಬಗ್ಗೆ ಮಾತನಾಡುವುದೇ ಕಷ್ಟಕರ. ವ್ಯವಸ್ಥಾಬದ್ಧವಾಗಿ ಹೋರಾಡುವವರಿಗೆ ರಾಯ್ ಅವರ ಕಾರ್ಯಚಟುವಟಿಕೆ ಮತ್ತು ನಡವಳಿಕೆ ಮಾದರಿಯಾದವು. ಆದರೆ ಅವರ ಮನವಿಯು ತಿರಸ್ಕೃತವಾಯಿತು. ರಾಯರು ಇಲ್ಲಿಗೇ ಬಿಡದೆ ಜನರಿಗೆ ಒಂದು ಮನವಿ ಸಲ್ಲಿಸಿ ಭಾರತೀಯರ ಆಜನ್ಮಸಿದ್ಧ ಹಕ್ಕುಗಳನ್ನು ಕಿತ್ತುಕೊಳ್ಳಲಾಗುತ್ತಿದೆಯೆಂದು ಉಲ್ಲೇಖಿಸಿದರು. ಆದರೆ ಬ್ರಿಟಿಷ್ ಸರ್ಕಾರ ಭಾರತದಲ್ಲಿ ಜ್ಞಾನಾಭಿವೃದ್ಧಿಯಾದರೆ, ಜನ ಬುದ್ಧಿವಂತರಾದರೆ ತಮಗೆ ಸಂಚಕಾರ ಬರಬಹುದೆಂದು ರಾಯ್‌ರವರ ಚಟುವಟಿಕೆಗಳನ್ನು ಮುಂದುವರಿಸಲು ಬಿಡಲಿಲ್ಲ.

ಭಾರತ ಸ್ವಾತಂತ್ರ್ಯ ಗಳಿಸುವುದರಲ್ಲಿ ನಾನಾ ರೀತಿಯಲ್ಲಿ ದುಡಿದ ಮಹಾಪುರುಷರಲ್ಲಿ ರಾಜಾರಾಮ್ ಮೋಹನರಾಯ್‌ರು ಅಗ್ರಗಣ್ಯರು. ಭಾರತದ ದೇಶಭಾಷೆಯ ಪತ್ರಿಕೋದ್ಯಮ ಪಿತಾಮಹ. ೨೨ನೇ ವಯಸ್ಸಿನಲ್ಲಿ ಇಂಗ್ಲಿಷ್ ಚೆನ್ನಾಗಿ ಅಭ್ಯಾಸ ಮಾಡಿದರು. ದೇವರು ಒಬ್ಬನೇ ಎಂಬ ವಾದವನ್ನು ಪ್ರತಿಪಾದಿಸಿದರು. ಅನೇಕ ಪುಸ್ತಕಗಳನ್ನು ರಚಿಸಿದರು. ಸರ್ಕಾರದಲ್ಲಿ ದೊಡ್ಡ ಅಧಿಕಾರಿಯಾಗಿದ್ದು ದಕ್ಷ ಆಡಳಿತಗಾರನಾಗಿ ಹಣವನ್ನು ಸಂಪಾದನೆ ಮಾಡಿದರು. ಆ ಹಣವನ್ನು ಸದುಪಯೋಗಗೊಳಿಸಲು ಧರ್ಮ ಪ್ರಚಾರ ಕೈಗೊಂಡರು. ತಮ್ಮ ಭಾವನೆಗಳನ್ನು ಮತ್ತು ಅಭಿಪ್ರಾಯಗಳನ್ನು ತಿಳಿಸಲು ಚರ್ಚಾಕೂಟ ಏರ್ಪಡಿಸಿದರು. ಬರವಣಿಗೆ ಮತ್ತು ಪ್ರಕಟಣೆಗಳ ಮೂಲಕ ಸಾರ್ವಜನಿಕ ಕರ್ತವ್ಯಜ್ಞಾನವನ್ನು ಹುಟ್ಟಿಸುವಂತಹ ನಂಬಿಕೆ ಮತ್ತು ಪ್ರಾಮಾಣಿಕರಾದ ಗೆಳೆಯರನ್ನು ಪಡೆದರು.

ಪತ್ರಿಕೆಗಳ ಬರವಣಿಗೆಗಳ ಮೂಲಕ ಸಮಾಜ ಸುಧಾರಣೆಗಳಿಗೆ ಪ್ರಯತ್ನ ಪಟ್ಟರು. ಮೂರ್ತಿ ಪೂಜೆ ಮತ್ತು ಸತಿ ಸಹಗಮನ ಪದ್ಧತಿ ವಿರೋಧಿಸಿ ಪತ್ರಿಕಾ ಬರವಣಿಗೆಗಳಿಂದ ಪ್ರಭಾವ ಬೀರಿದರು. ಸರ್ಕಾರ ನ್ಯಾಯ ರೀತಿಯಲ್ಲಿ ವರ್ತಿಸುವಂತೆ ಮಾಡುವುದು ಅವರ ಎಲ್ಲಾ ಸುಧಾರಣೆಗಳ ಮುಖ್ಯ ಉದ್ದೇಶ. ''ಬ್ರಹ್ಮ ಸಮಾಜ''ವನ್ನು ಸ್ಥಾಪಿಸಿದರು. ರಾಯ್‌ರವರ ಮುಖಂಡತ್ವದಲ್ಲಿ ರಾಜಕೀಯ ಸಾಮಾಜಿಕ ಅಭಿಪ್ರಾಯಗಳನ್ನು ಪ್ರತಿಪಾದಿಸಲು 'ಸಂಬಂಧ ಕೌಮುದಿ' ಎಂಬ ವಾರಪತ್ರಿಕೆಯನ್ನು ೧೮೨೧ರಲ್ಲಿ ಭವಾನಿ ಚರಣ ಬ್ಯಾನರ್ಜಿ ಸ್ಥಾಪಿಸಿದರು.

ಶ್ರೀರಾಮಪುರದ ಕ್ರೈಸ್ತ ಪಾದ್ರಿಗಳು 'ಸಮಾಚಾರ ದರ್ಪಣ' ಪತ್ರಿಕೆಯಲ್ಲಿ ಹಿಂದೂ ಧರ್ಮದ ಬಗ್ಗೆ ಕಟುವಾಗಿ ಟೀಕಿಸುತ್ತಿದ್ದರು. ಅದಕ್ಕೆ ಸರಿಯಾದ ಉತ್ತರವನ್ನು ರಾಯ್‌ರವರು ಪ್ರಕಟಿಸುತ್ತಿದ್ದರು.

ಪರ್ಷಿಯನ್ ಭಾಷೆಯಲ್ಲಿ 'ಜಾಮ್-ಇ-ಜಹನ್' ಎಂಬ ಪತ್ರಿಕೆ ೧೮೨೨ರಲ್ಲಿ ಭಾರತೀಯ ಸಮಾಚಾರ ಪ್ರಚಾರ ಮಾಡುವ ಸಲುವಾಗಿಯೇ ಪ್ರಾರಂಭವಾಯಿತು. ಜನರ ಅಭಿಪ್ರಾಯವನ್ನು ಪ್ರಕಟಿಸುತ್ತಿದ್ದ ಈ ಓದುಗರ ಅಭಿಪ್ರಾಯಗಳಲ್ಲಿ ಬ್ರಿಟಿಷರ ಆಡಳಿತವನ್ನು ಖಂಡಿಸುವುದೇ ಹೆಚ್ಚಾಗಿತ್ತು. ಈ ಪತ್ರಿಕೆಯ ಯಶಸ್ಸಿನಿಂದ ಸ್ಫೂರ್ತಿಗೊಂಡ ರಾಯ್ ಅವರು 'ಮಿರರ್-ಉಲ್-ಅಕ್ಬರ್' ಎಂಬ ಪರ್ಷಿಯನ್ ಪತ್ರಿಕೆ ಹೊರಡಿಸಿದರು. ಓದುಗರ ಜ್ಞಾನ ಬೆಳೆದು ಸಮಾಜ ಸುಧಾರಣೆ ಆಗಬೇಕೆಂಬುದೇ ಉದ್ದೇಶ. ದೇಶದನಿಜವಾದ ಪರಿಸ್ಥಿತಿಯನ್ನು ತಿಳಿಯುವುದು, ಕಾನೂನು ಮತ್ತು ಪದ್ಧತಿಗಳ ಅರಿವುಂಟುಮಾಡುವುದರ ಜೊತೆಗೆ ಆಡಳಿತಗಾರರು ಭಾರತೀಯ ಸಮಸ್ಯೆಗಳನ್ನು ಬಗೆಹರಿಸಲು ಸಹಾಯಕವಾಯಿತು. ಜನರು ಆಡಳಿತದಿಂದ ರಕ್ಷಣೆ ಪಡೆಯಲು ಸಹಾಯಕವಾಯಿತು.

ಆಗಿನ ಕಾಲದಲ್ಲಿ ದೇಶ ಭಾಷಾ ಪತ್ರಿಕೆಗಳು ಪ್ರಾರಂಭವಾದಾಗ ಸುವ್ಯವಸ್ಥಿತ ವಿದ್ಯಾಸಂಸ್ಥೆಗಳಿರಲಿಲ್ಲ. ಅನಕ್ಷರತೆಯೇ ಹೆಚ್ಚು. ಇಂಗ್ಲಿಷ್ ಸಾಹಿತ್ಯ, ಪಾಶ್ಚಿಮಾತ್ಯ ಸಾಹಿತ್ಯ, ಪದ್ಧತಿಗಳು ವಿಜ್ಞಾನದ ಬಗ್ಗೆ ಇನ್ನೂ ಅರಿವುಂಟಾಗಿರಲಿಲ್ಲ. ಜ್ಞಾನಾರ್ಜನೆ ಮಾಡುವ ಹಂಬಲ ಮಾತ್ರ ಇತ್ತು. ಇದರ ಬಗ್ಗೆ ಆಸಕ್ತಿ ವಹಿಸಿದವನು ರಾಜಾರಾಮ್ ಮೋಹನ್‌ರಾಯ್, ಅನೇಕ ಭಾಷಾ ಪಾಂಡಿತ್ಯ ಪಡೆದವನು, ತಿಳಿವಳಿಕಸ್ಥನಾಗಿ ಭಾರತೀಯರಲ್ಲಿ ಅರಿವುಂಟುಮಾಡುವ ಪ್ರಯತ್ನದಲ್ಲಿ ಸಫಲವಾದನು. ತನ್ನ ಅಭಿಪ್ರಾಯವನ್ನು ಜನರಿಗೆ ತಿಳಿಸಲು ಪತ್ರಿಕೆಗಳೇ ಮೂಲ ಸಾಧನ ಎಂಬ ಅರಿವು ಅವನಲ್ಲಿತ್ತು. ಅದಕ್ಕಾಗಿಯೇ ಅನೇಕ ದೇಶಭಾಷಾ ಪತ್ರಿಕೆಗಳನ್ನು ಪ್ರಾರಂಭಿಸಿದರು ಮತ್ತು ಅದರಲ್ಲಿ ಯಶಸ್ವಿಯೂ ಆದರು.

೧೮೧೮ರಲ್ಲಿ 'ಬಾಂಬೆ ಸಮಾಚಾರ್' ಎಂಬ ಪತ್ರಿಕೆ ಬೊಂಬಾಯಿಯಲ್ಲಿ ಗುಜರಾತಿ ಭಾಷೆಯಲ್ಲಿ ಪ್ರಾರಂಭವಾಯಿತು. ಬೊಂಬಾಯಿ ಮತ್ತು ಮದರಾಸುಗಳಲ್ಲಿ ಕೆಲವು ಪತ್ರಿಕೆಗಳು ಪ್ರಾರಂಭವಾದವು. ಮದರಾಸಿನ ರಾಜ್ಯಪಾಲರಾದ ಸರ್ ಥಾಮಸ್ ಪತ್ರಿಕೆಗಳ ಬಗ್ಗೆ ಉದಾರ ಮನಸ್ಸಿನವನಾಗಿದ್ದ. ''ಸ್ವಾತಂತ್ರ್ಯ, ಜನರು ಎಂದರೆ ಸ್ವಾತಂತ್ರ್ಯ ಪತ್ರಿಕಾ ಲೋಕ'' ಎಂಬ ಭಾವನೆ ಉಳ್ಳವನು. ಆದರೆ ಪತ್ರಿಕೆಗಳಿಗೆ ಸ್ವಾತಂತ್ರ್ಯ ಕೊಟ್ಟರೆ ಭಾರತೀಯರಿಗೆ ಸ್ವಾತಂತ್ರ್ಯಕ್ಕೆ ಸ್ಫೂರ್ತಿ ಕೊಡುವುದೆಂಬ ಅಭಿಪ್ರಾಯವೂ ಇತ್ತು. ಈತನ ಉದಾರನೀತಿಯು ಆಗಿನ ಸರ್ಕಾರಕ್ಕೆ ಅಸಂತೋಷ ಉಂಟುಮಾಡಿತು.

೧೮೨೫ರಿಂದ ೫೭ರವರೆಗೆ ಪತ್ರಿಕಾ ಪ್ರಪಂಚದ ಮೇಲೆ ಸರ್ಕಾರದ ಹತೋಟಿ ಕಡಿಮೆ ಆಯಿತು. ಇದಕ್ಕೆ ಕಾರಣ ಆಗಿನ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಕ್ ಮತ್ತು ಚಾರ್ಲ್ಸ್ ಮೆಕಾಲೆಯವರ ಉದಾರ ನೀತಿಯಿಂದಾಗಿ ದೇಶ ಭಾಷಾ ಪತ್ರಿಕೆಗಳು ಬೆಳೆದವು. ದೇಶಭಾಷಾ ಪತ್ರಿಕೋದ್ಯಮದ ಮೂಲ ಪುರುಷನಾದ ರಾಜಾರಾಮ ಮೋಹನರಾಯ್ ಈ ಜ್ಞಾನ ಜ್ಯೋತಿ ಬೆಳಗಿದ್ದರಿಂದ ಭಾರತದಲ್ಲಿ ಅನೇಕ ಸ್ವತಂತ್ರವಾದ ದೇಶಭಾಷಾ ಪತ್ರಿಕೆಗಳು ಮತ್ತು ಶ್ರೇಷ್ಠ ತರಗತಿಯ ಭಾರತೀಯ ಒಡೆತನದ ಇಂಗ್ಲಿಷ್ ಪತ್ರಿಕೆಗಳು ಹುಟ್ಟಿದವು. ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮದ ಉದಯಕ್ಕೆ ಪತ್ರಿಕೆಗಳು ಬಹಳ ಮಟ್ಟಿಗೆ ಕಾರಣೀಭೂತವಾದವು.

## ಭಾರತ ಸ್ವಾತಂತ್ರ್ಯ ಸಂಗ್ರಾಮ (ಸಿಪಾಯಿದಂಗೆ)

ಸಿಪಾಯಿ ದಂಗೆಯಿಂದ ಪ್ರಥಮ ಭಾರತದ ಸ್ವಾತಂತ್ರ್ಯ ಸಂಗ್ರಾಮ ೧೮೬೦ರಲ್ಲಿ ಪ್ರಾರಂಭವಾಯಿತು ಎಂಬ ಮಾತಿದ್ದರೂ ರಾಯ್‌ಯವರು ಪತ್ರಿಕಾ ಸ್ವಾತಂತ್ರ್ಯದ ಮೂಲಕ ದೇಶದಲ್ಲಿ ಸ್ವಾತಂತ್ರ್ಯದ ಬೀಜವನ್ನು ಬಿತ್ತಿದರೆಂಬುದನ್ನು ಮರೆಯುವಂತಿಲ್ಲ.

ನಾನಾ ಕಡೆ ಕ್ರಾಂತಿ ಹಬ್ಬುತ್ತಿದ್ದ ಕಾಲದಲ್ಲಿ ಪತ್ರಿಕೆಗಳು ಜ್ವಾಲೆಯನ್ನು ಹರಡಲು ಸಹಾಯಕವಾಗುವ ಹೇಳಿಕೆಗಳನ್ನು ಪ್ರಕಟಿಸಿದವು. ಓದುಗರ ಪತ್ರಗಳು, ಸಂಪಾದಕೀಯಗಳು, ಉದ್ರೇಕಿಸುವ ಮತ್ತು ದ್ವೇಷ ಭಾವನೆ ಹುಟ್ಟಿಸುವಂತಹ ಲೇಖನಗಳು ಪ್ರಕಟವಾದವು. ಬ್ರಿಟಿಷರ ಸಹಾಯ ಪಡೆಯುತ್ತಿದ್ದ ಆಂಗ್ಲೋ ಇಂಡಿಯನ್ ಪತ್ರಿಕೆಗಳು ರಾಷ್ಟ್ರೀಯ ಪತ್ರಿಕೆಗಳನ್ನು ದ್ವೇಷ ತೀರಿಸಿಕೊಳ್ಳಲು ಕಟುವಾಗಿ ಟೀಕಿಸಿದವು. ಆದರೂ ಹೆದರದೆ ಭಾರತೀಯ ಪತ್ರಿಕೆಗಳು ಹಿಂಸಾತ್ಮಕ ಲೇಖನಗಳನ್ನು ಬರೆದು ಕ್ರಾಂತಿಕಾರ ಚಟುವಟಿಕೆಗಳಿಗೆ ಪ್ರಚೋದನೆ ನೀಡಿದವು. ಕೈಬರಹದ ಪತ್ರಿಕೆಗಳು ಭಾರತದ ಎಲ್ಲಾ ಮೂಲೆಗಳಲ್ಲಿ ಕ್ರಾಂತಿಯನ್ನು ಬೆಂಬಲಿಸಿದವು. ಸರ್ಕಾರ ಇಂತಹ ಪತ್ರಿಕೆಗಳು ಸ್ವತಂತ್ರವಾಗಿ ಬೆಳೆಯಲು ಬಿಡಲಿಲ್ಲ ಮತ್ತು ಸೈನಿಕರ ಸ್ವಾತಂತ್ರ್ಯ ಮನೋಭಾವನೆಗಳನ್ನು ಬೆಳೆಯಲು ಬಿಡಲಿಲ್ಲ. ಪತ್ರಿಕೆಗಳ ಪ್ರಸಾರ ತಡೆಯಲು ಮುದ್ರಣಾಲಯಗಳ ಬಗ್ಗೆ ಒಂದು ಹೊಸ ಕಾನೂನು ತಂದರು. ಮುದ್ರಣಾಲಯಗಳ ಸ್ಥಾಪನೆಗೆ ಅನುಮತಿ ಪತ್ರ ಪಡೆಯಬೇಕಾಯಿತು. ಬ್ರಿಟಿಷರ ಬಗ್ಗೆ ಭಾರತೀಯರಲ್ಲಿ ದ್ವೇಷ ಭಾವನೆಗಳನ್ನು ಉಂಟುಮಾಡುವಂತಹ ಲೇಖನಗಳನ್ನು ಮುದ್ರಿಸಿ ಪ್ರಕಟಣೆ ಪ್ರಸಾರ ಮಾಡುವುದನ್ನು ನಿಷೇಧಿಸಲಾಯಿತು.

ಭಾರತೀಯ ಪತ್ರಿಕೆಗಳು ಭಾರತೀಯರಲ್ಲಿ ಬ್ರಿಟಿಷ್ ಆಡಳಿತದ ಬಗ್ಗೆ ದ್ವೇಷ ಹುಟ್ಟಿಸಿ ದ್ರೋಹವನ್ನು ತುಂಬುತ್ತಿವೆಯೆಂದು ಸರ್ಕಾರ ದೂಷಿಸಿತು. ಈ ಕೆಲಸ ಬುದ್ಧಿವಂತಿಕೆ ಮತ್ತು ಕಲಾತ್ಮಕತೆಯಿಂದ ಪ್ರಯತ್ನಪೂರ್ವಕವಾಗಿ ಮಾಡಲಾಗುತ್ತಿದೆಯೆಂದು ಭಾವಿಸಿದರು. ಜನರ ಹಿತದೃಷ್ಟಿಯಿಂದ ಪತ್ರಿಕಾ ಸ್ವಾತಂತ್ರ್ಯ ಸ್ವಲ್ಪ ತ್ಯಾಗ ಮಾಡಬೇಕೆಂಬ ದೃಷ್ಟಿಯಿಂದ ಕಾನೂನುಗಳನ್ನು ಹೇರಿ ಪತ್ರಿಕೆಗಳನ್ನು ಸಂಪೂರ್ಣ ಹತೋಟಿಯಲ್ಲಿ ಸರ್ಕಾರ ಇಟ್ಟುಕೊಂಡಿತು.

೧೮೫೭ರ ನವೆಂಬರ್‌ನಲ್ಲಿ ನಿಷೇಧಾಜ್ಞೆ ಒಂದು ವರ್ಷಕಾಲ ಜಾರಿಗೆ ಬಂದಿತು. ಭಾರತೀಯ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಪ್ರಯತ್ನಗಳು ಬ್ರಿಟಿಷರನ್ನು ಭೀತಿಗೊಳಿಸಿತು. ಕಾವೇರುತ್ತಿದ್ದ ಕ್ರಾಂತಿಯ ಮೊಳಕೆಯನ್ನು ಅದುಮಲು ಮೊದಲೇ ಪತ್ರಿಕೆಗಳ ಮೇಲೆ ನಿಷೇಧಾಜ್ಞೆ ತಂದರು. ಈ ಕಾನೂನಿಗೆ ಆಹುತಿಯಾದವರು ದ್ವಾರಕನಾಥ್ ಠಾಕೂರ್ ಮತ್ತು ಇತರ ದೇಶಪ್ರೇಮಿಗಳು ನಡೆಸುತ್ತಿದ್ದ ಪತ್ರಿಕೆ 'ಬೆಂಗಾಲ್ ಹಕಾರು'. ಈ ಪತ್ರಿಕೆ ಸರ್ಕಾರವನ್ನು ಬುಡಮೇಲು ಮಾಡುವ ಚಳುವಳಿಯಲ್ಲಿ ಸಹಕರಿಸುತ್ತಿದೆ ಎಂಬ ಆಪಾದನೆಯನ್ನು ಪತ್ರಿಕೆಯ ಮೇಲೆ ಹೊರೆಸಿ ಆ ಪತ್ರಿಕೆಗೆ ಕೊಟ್ಟಿದ್ದ ಅನುಮತಿ ಪತ್ರವನ್ನು ಹಿಂತೆಗೆದುಕೊಂಡರು. 'ದುರ್ಬೀನ್ ಸುಲ್ತಾನ್', 'ಉಲ್ ಅಕ್ಬರ್' ಮತ್ತು 'ಸಮಾಚಾರ ಸುಧಾಭೂಷಣ' ಎಂಬ ಪತ್ರಿಕೆಗಳ ಮೇಲೆ ರಾಜದ್ರೋಹಕರವಾದ ಲೇಖನಗಳನ್ನು ಬರೆದು ಮುದ್ರಿಸಿದರೆಂದು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದರು. ಮೊದಲ ಎರಡು ಪತ್ರಿಕೆಗಳು ತಪ್ಪು ಒಪ್ಪಿದ್ದರಿಂದ ಬಿಡುಗಡೆ ಮಾಡಿದರು. ೩ನೇ ಪತ್ರಿಕೆ ನ್ಯಾಯಾಲಯದಲ್ಲಿ ಜಯ ಪಡೆಯಿತು. ನ್ಯಾಯಾಲಯವು ತಪ್ಪಿತಸ್ಥವಲ್ಲವೆಂದು ಪತ್ರಿಕೆ ಬಗ್ಗೆ ತೀರ್ಮಾನ ಕೊಟ್ಟಿತು. 'ಗುಲನ್ಸ್-ಇ ಸರಬಹರ್' ಎಂಬ ಪತ್ರಿಕೆ ದ್ವೇಷಪೂರಿತವಾದ ಲೇಖನಗಳನ್ನು ಪ್ರಕಟಿಸಿದುದಕ್ಕಾಗಿ ಸರ್ಕಾರ

ಮುದ್ರಣಾಲಯವನ್ನು ವಶಪಡಿಸಿಕೊಂಡಿತು. ೧೮೫೭ರ ವೇಳೆಗೆ ಅನೇಕ ಪತ್ರಿಕೆಗಳು ಸರ್ಕಾರದ ಕಿರುಕುಳವನ್ನು ತಡೆಯಲಾರದೆ ನಿಲ್ಲಿಸಬೇಕಾಯಿತು. ಪತ್ರಿಕೆಗಳು ಅನುಮತಿಯನ್ನು ಪಡೆಯುವುದರ ಜೊತೆಗೆ ಅಧಿಕಾರಿಗಳಲ್ಲಿ ದಾಖಲೆ ಮಾಡಬೇಕಾಗಿತ್ತು. ಈ ಕಾನೂನು ಮುರಿದು ಅನೇಕ ಭಾರತೀಯರು ದಸ್ತಗಿರಿಯಾದರು, ಅನೇಕರು ರಾಜದ್ರೋಹದ ಲೇಖನಗಳನ್ನು ಬರೆದು ಸರ್ಕಾರದ ಕರಾಳ ಪತ್ರಿಕಾ ಶಾಸನಕ್ಕೊಳಗಾದರು. ಕೈಬರಹದ ಪತ್ರಿಕೆಗಳ ಬಗ್ಗೆ ಕಾನೂನು ಕ್ರಮ ತೆಗೆದುಕೊಳ್ಳಲು ಯಾವ ಕಾನೂನೂ ಇರಲಿಲ್ಲ. ಆ ಪತ್ರಿಕೆಗಳು ಹೆಚ್ಚು ಬೆಳೆದವು ಮತ್ತು ಎಲ್ಲಾ ಕಡೆಯಲ್ಲಿಯೂ ಇವನ್ನು ಹಂಚಿದರು.

''ಫ್ರೆಂಡ್ಸ್ ಆಫ್ ಇಂಡಿಯಾ'' ಪತ್ರಿಕೆಯ ಸಂಪಾದಕ ಹೆನ್ರಿ ಮೂಡ್‌ನು ಹಿಂದಿನ ಆಡಳಿತವನ್ನು ಟೀಕಿಸಿ ಪ್ಲಾಸಿಯ ಶತಮಾನೋತ್ಸವ ಎಂಬ ಲೇಖನದಲ್ಲಿ ಬ್ರಿಟಿಷ್ ಆಳ್ವಿಕೆ ಇರಬೇಕೆಂದು ಸಮರ್ಥಿಸಿದ. ಇದು ಬ್ರಿಟಿಷ್ ಆಳ್ವಿಕೆಗೆ ಕೆಟ್ಟದ್ದನ್ನು ಮಾಡಿತು. ಸರ್ಕಾರ ಸಂಪಾದಕರಿಗೆ ಎಚ್ಚರಿಕೆ ನೀಡಿತು. ಮೊದಲ ಎಚ್ಚರಿಕೆಯೆಂದು ಲೇಖನ ಬರೆದು ನಿಷೇಧಾಜ್ಞೆಯನ್ನು ಪತ್ರಿಕೆಯು ಗೌರವಿಸುತ್ತದೆಂದು ಬರೆದ, ಆದರೆ ಗವರ್ನರ್ ಜನರಲ್‌ರ ಚಟುವಟಿಕೆಗಳ ಬೆಂಬಲ ನೀಡುವ ನಾಲ್ಕು ಜನ ಬ್ರಿಟಿಷರೂ ಇಲ್ಲವೆಂದು ಬರೆದ ಈ ಉಗ್ರ ಟೀಕೆಯನ್ನು ಸಹಿಸಲಾರದೆ ಸರ್ಕಾರ ಅನುಮತಿಯನ್ನು ಕಿತ್ತುಹಾಕಿತು. ಪತ್ರಿಕೆ ಕ್ಷಮೆ ಕೇಳಿದ ಮೇಲೆ ಮುಂದಿನ ಕ್ರಮ ತೆಗೆದುಕೊಳ್ಳಲಿಲ್ಲ. 'ಬಾಂಬೆ ಟೈಮ್ಸ್' ಸಂಪಾದಕ ಡಾ। ಜಾರ್ಜ್ ಬೂಯಿಸನ್ನನು ಭಾರತೀಯರ ವಿರುದ್ಧ ಚಳುವಳಿ ಪ್ರಾರಂಭಿಸಿದ. ರಕ್ತಕ್ಕೆ ರಕ್ತ ಎಂಬುದೇ ಅವನ ಘೋಷಣೆ. ಈತನು ಭಾರತದ ಬಗ್ಗೆ ಅವಹೇಳನಕಾರಿಯಾದ ಟೀಕೆ ಮಾಡಿದನು. ಭಾರತವು ಸ್ವಾತಂತ್ರ್ಯದ ಹುಲಿಗಳಿಂದಲೂ, ದುಷ್ಟ ಅನಾಗರೀಕರಿಂದಲೂ, ವಿಶ್ವಾಸಘಾತಕರಿಂದಲೂ, ಕಾಡು ಜನರಿಂದಲೂ ತುಂಬಿದೆ ಎಂದು ಆಪಾದಿಸಿದ. ಈ ಪತ್ರಿಕೆ ಮಾಲೀಕರು ಭಾರತೀಯರೇ ಹೆಚ್ಚು. ನವರೋಜಿ 'ಸದೋಂಜಿ'ಯವರು ಮುಖ್ಯ ಪಾಲುದಾರರು. ಇವರು ಎಚ್ಚರಿಕೆ ಕೊಟ್ಟರೂ ಆತ ನಿಲ್ಲಿಸಲಿಲ್ಲ. ಆತನನ್ನು ವಜಾ ಮಾಡಿ ರಾಬರ್ಟ್ ನೈಟ್‌ನನ್ನು ಸಂಪಾದಕನನ್ನಾಗಿ ಮಾಡಿದರು.

'ಬಾಂಬೆ ಸಮಾಚಾರ', 'ಜಾಮೆ ಜಮಷೀರ್' ಮತ್ತು 'ರಾಸ್ತ್ರಗ್ರಾಪ್' ಮುಂತಾದ ದೇಶಭಾಷಾ ಪತ್ರಿಕೆಗಳು ಭಾರತೀಯರ ಮೊದಲ ಸ್ವಾತಂತ್ರ್ಯ ಸಂಗ್ರಾಮವನ್ನು ಕೊಂಡಾಡಿದವು. ಬ್ರಿಟಿಷ್ ಆಡಳಿತಗಾರರಿಗೆ ಸ್ವಾತಂತ್ರ್ಯ ಸಂಗ್ರಾಮ ಹೇಗೆ ನಡೆಯುತ್ತಿದೆ ಎಂಬುದನ್ನು ತಿಳಿಸಲು ಮಹತ್ವದ ವಿಷಯಗಳನ್ನು ಭಾರತೀಯ ಭಾಷೆಗಳಲ್ಲಿ ಇದ್ದ ಲೇಖನಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿ ಪ್ರಕಟಿಸುತ್ತಿದ್ದರು.

ಬೊಂಬಾಯಿ ಗುಜರಾತಿ ಪತ್ರಿಕಾ ಲೋಕದಲ್ಲಿಯೂ ಕ್ರಾಂತಿಗೆ ಬೆಂಬಲ ಸಿಕ್ಕಿತು. ಹರೀಶ್‌ಚಂದ್ರ ಮುಖರ್ಜಿ ತನ್ನ 'ಹಿಂದೂ ಪೇಟ್ರಿಯೆಟ್' ಪತ್ರಿಕೆಯ ಮೂಲಕ ಸಿಪಾಯಿದಂಗೆಯಲ್ಲಿ ಮುಖ್ಯ ಪಾತ್ರ ವಹಿಸಿದನು. ಅದೇ ವೇಳೆಗೆ ಸೋಮಪ್ರಕಾಶ್ ಎಂಬ ಬಂಗಾಳಿ ಪತ್ರಿಕೆಯನ್ನು ಪಂಡಿತ ಈಶ್ವರಚಂದ್ರ ವಿದ್ಯಾಸಾಗರ್ ಮತ್ತು ದ್ವಾರಕನಾಥ್ ವಿದ್ಯಾಭೂಷಣರು ರಾಜಕೀಯ ಸ್ವಾತಂತ್ರ್ಯ ತತ್ವಗಳ ಪ್ರಚಾರಕ್ಕಾಗಿ ಸ್ಥಾಪಿಸಿದರು. ಪತ್ರಿಕೆ ಚೆನ್ನಾಗಿ ನಡೆಯಿತು. ಲೇಖನಗಳು, ಸಂಪಾದಕೀಯಗಳು ಬಿರುಸಾಗಿದ್ದವು. ಜನರು ಪ್ರೋತ್ಸಾಹಿಸಿದರು. ಇದು ಸರ್ಕಾರದ ಕಣ್ಣಿಗೆ ಬಿತ್ತು. ಕಾನೂನಿನ ಮೇರೆಗೆ ಪತ್ರಿಕೆಯ ಪ್ರಕಟಣೆಯನ್ನು ತಡೆಹಿಡಿದರು. ಆದರೆ 'ಸೋಮಪ್ರಕಾಶ್' ಪತ್ರಿಕೆ ಸಂಪಾದಕರು ಅದೇ ಮುದ್ರಣಾಲಯದಲ್ಲಿ ಅದೇ ವಿಷಯವನ್ನೊಳಗೊಂಡ 'ನವಾಬಿ ಬಾಕರ್' ಎಂಬ ಹೆಸರಿನಲ್ಲಿ ಹೊಸ ಬಂಗಾಳಿ ಪತ್ರಿಕೆ ಪ್ರಕಟಿಸಿದರು. ಅದೇ ಸಂದರ್ಭದಲ್ಲಿ ಬಂಗಾಳಿ ಭಾಷೆಯಲ್ಲಿ ಪ್ರಕಟವಾಗುತ್ತಿದ್ದ 'ಅಮೃತ್ ಬಜಾರ್ ಪತ್ರಿಕೆ' ಇಂಗ್ಲಿಷ್ ಪತ್ರಿಕೆಯಾಗಿ ಮಾರ್ಪಾಡಾಯಿತು. ಈ ಎಲ್ಲಾ ಪತ್ರಿಕೆಗಳು ಭಾರತೀಯ ರಾಜಕೀಯ ಹೋರಾಟ ಕ್ರಾಂತಿಯ ಜ್ವಾಲೆಯನ್ನು ಎಲ್ಲಾ ಕಡೆ ಹರಡುವಂತೆ ಮಾಡಿದವು.

ಗಡಿನಾಡು ಪ್ರಾಂತದ ಉರ್ದು ಭಾಷಾ ಪತ್ರಿಕೆಗಳು ಈ ಕ್ರಾಂತಿಕಾಲದಲ್ಲಿ ಕರಾಳ ಪತ್ರಿಕಾ ಶಾಸನಕ್ಕೆ ಒಳಗಾಗಿ ನಿಂತವು. ಸ್ವರಾಜ್ಯದ ಕ್ರಾಂತಿ ಭಾರತದಾದ್ಯಂತ ಉದಯವಾಗಬಹುದು ಎಂಬ ಸುದ್ದಿ ಮತ್ತು ಕ್ರಾಂತಿಯೂ ಬಿರುಸಾಗಬಹುದೆಂಬ ಸುದ್ದಿ ಸಹ ಇಂಗ್ಲೆಂಡಿನವರೆಗೂ ಮುಟ್ಟಿತು.

ಸಾರ್ವಜನಿಕರು ಸ್ವಾತಂತ್ರ್ಯ ಗೀತೆಗಳನ್ನು ಹಾಡುವುದು, ಸ್ಫೂರ್ತಿಯಾಗಿ ಮಾತನಾಡುವುದು, ಸ್ವಾತಂತ್ರ್ಯದ ಘೋಷಣೆ ಕೂಗುವುದು ಮನೆಮಾತಾಯಿತು. ಈ ವಾತಾವರಣ ಬೆಳೆಯಲು ದೇಶಭಾಷಾ ಪತ್ರಿಕೆಗಳೇ ಕಾರಣವೆಂದು ಸರ್ಕಾರಕ್ಕೆ ಮನವರಿಕೆಯಾಯಿತು. ಬ್ರಿಟಿಷ್ ಸರ್ಕಾರವು ದೇಶಭಾಷಾ ಪತ್ರಿಕೆಗಳ ಮೇಲೆ ನಿಯಂತ್ರಣಾಜ್ಞೆಯನ್ನು ಕಡ್ಡಾಯ ಮಾಡಿತು. ಅನೇಕರನ್ನು ದಸ್ತಗಿರಿ ಮಾಡಿದರು ಮತ್ತು ಮುದ್ರಣಾಲಯಗಳನ್ನು ಮುಚ್ಚಿಸಿದರು. ಉತ್ತರ ಭಾರತದಂತೆಯೇ, ದಕ್ಷಿಣ ಭಾರತದಲ್ಲಿ

ಕ್ರಾಂತಿಯ ಜ್ವಾಲೆ ಹರಡಿತು. ಉತ್ತರ ದೇಶಭಾಷಾ ಪತ್ರಿಕೆಗಳಲ್ಲಿ ಪ್ರಕಟಿಸಿದ ಲೇಖನಗಳನ್ನು ಆಯ್ದು ಪ್ರಕಟಿಸಿದರು. ಕೈಬರಹದ ಪತ್ರಿಕೆಗಳು ಕ್ರಾಂತಿ ಜ್ವಾಲೆಯನ್ನು ಹರಡಿದವು. ಇಲ್ಲಿಯೂ ಸಹ ಅನೇಕ ಸಂಪಾದಕರು ದಸ್ತಗಿರಿಯಾದರು. ಮುದ್ರಣಾಲಯಗಳು ಮುಚ್ಚಲ್ಪಟ್ಟವು. ಆದರೆ ಸ್ವಾತಂತ್ರ್ಯ ಜ್ವಾಲೆ ಹರಡಿ ''ಸ್ವರಾಜ್ಯ ನಮ್ಮ ಆಜನ್ಮ ಸಿದ್ಧವಾದ ಹಕ್ಕು, ಅದನ್ನು ಪಡದೇ ಪಡೆಯುತ್ತೇವೆ'' ಎಂಬ ಕೂಗು ಭಾರತದಲ್ಲೆಲ್ಲಾ ಎದ್ದಿತು.

**ಭಾರತದ ಪ್ರಥಮ ವೈಸ್‌ರಾಯ್** : ಭಾರತದ ಪ್ರಥಮ ಸ್ವಾತಂತ್ರ್ಯ ಹೋರಾಟವನ್ನು ಅದುಮಿಡುವುದರಲ್ಲಿ ಯಶಸ್ವಿಯಾದರೂ, ಆಡಳಿತ ಬದಲಾವಣೆಯಾಗಿ ಬ್ರಿಟಿಷರ ರಾಣಿ ವಿಕ್ಟೋರಿಯಾ ೧೮೫೮ರಲ್ಲಿ ಭಾರತದ ಆಡಳಿತ ವಹಿಸಿಕೊಂಡಳು. ಮೊದಲ ವೈಸರಾಯ್ ಆದ ಕ್ಯಾನಿಂಗ್ ಪತ್ರಿಕೋದ್ಯಮಿಗಳ ನಡುವೆ ಮಧುರ ಬಾಂಧವ್ಯವನ್ನು ಹೆಚ್ಚಿಸಲು ಸರಕಾರದ ಕಛೇರಿಯಲ್ಲಿ ಒಂದು ಕೊಠಡಿಯನ್ನು ಏರ್ಪಾಟು ಮಾಡಿದ. ಸರಕಾರದ ಸೂಚನೆ, ಆಜ್ಞೆ ಮತ್ತು ಇತರ ದಾಖಲೆಗಳನ್ನು ನೋಡಲು ಅವಕಾಶ ಕಲ್ಪಿಸಲಾಯಿತು. ಆದರೆ ಪತ್ರಿಕೆಗಳ ಮೇಲಿನ ಕಾನೂನುಗಳನ್ನು ಇಂಡಿಯನ್ ಪೀನಲ್ ಕೋಡಿಗೆ ಸೇರಿಸಿ ಪತ್ರಿಕೆಗಳ ಮೇಲೆ ಒಂದು ಆಯುಧವನ್ನಾಗಿ ಮಾಡಿದರು. ಇದನ್ನು ರಾಜಾ ಕಾನೂನು ಎಂದು ಕರೆದರು.

ಮಾತು, ಶಬ್ದ, ಬರವಣಿಗೆ, ಚಿತ್ರಗಳು ಮುಂತಾದ ಪ್ರಚಾರ ಸಾಧನಗಳಿಂದ ಭಾರತೀಯರಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧ ದ್ವೇಷ ಹುಟ್ಟಿಸುವಂತಹ ಕೃತ್ಯವನ್ನು ಎಸಗಿದರೆ ಸರ್ಕಾರವನ್ನು ಉರುಳಿಸುವ, ತಲೆಕೆಳಗು ಮಾಡುವ ಚಳುವಳಿಗಳಲ್ಲಿ ಭಾಗವಹಿಸಿ ರಾಜಕೀಯ ಅವಿಶ್ವಾಸ ಹುಟ್ಟಿಸುವಂತಹ ಯಾರಿಗೇ ಆಗಲಿ ಜೀವಾವಧಿ ಶಿಕ್ಷೆ ಕೊಡುತ್ತಿದ್ದರು. ಅಲ್ಲದೆ ದಂಡ ಹೇರುತ್ತಿದ್ದರು ಅಥವಾ ಎರಡೂ ವಿಧಿಸಲಾಗುತ್ತಿತ್ತು. ಈ ಕಾನೂನಿಗೆ ಬಲಿಯಾದವರಲ್ಲಿ ಮೊದಲಿಗರು ಪೂನಾದ ಕೇಸರಿ ಪತ್ರಿಕೆಯ ಸಂಪಾದಕರೂ ರಾಜಕೀಯ ಮುಖಂಡರೂ ಆದ ಲೋಕಮಾನ್ಯ ಬಾಲಗಂಗಾಧರ ತಿಲಕರು. ರಾಜದ್ರೋಹಕರವಾದ ಸಂಪಾದಕೀಯ ಬರೆದರೆಂದು ೧೯೦೮ರಲ್ಲಿ ದಸ್ತಗಿರಿ ಮಾಡಿ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿ ಮಾಡಿದರು. ನ್ಯಾಯಾಸ್ಥಾನ ವಿಚಾರಣೆ ನಡೆಸಿ ತಿಲಕರು ತಪ್ಪಿತಸ್ಥರೆಂದು ೬ ವರ್ಷಗಳ ಕಾಲ ಸೆರೆಮನೆವಾಸದ ಶಿಕ್ಷೆ ವಿಧಿಸಿದರು. ಕೆಲವು ವರ್ಷಗಳ ನಂತರ 'ಹರಿಜನ' ಪತ್ರಿಕೆಯ ಸಂಪಾದಕರಾದ ಮಹಾತ್ಮ ಗಾಂಧೀಜಿಯವರಿಗೂ ಇದೇ ಕಾನೂನನ್ನು ಅನ್ವಯಿಸಿ ರಾಜದ್ರೋಹದ ಆಪಾದನೆಯ ಮೇಲೆ ನ್ಯಾಯಾಲಯದಲ್ಲಿ ವಿಚಾರಣೆಯಾಗಿ ಶಿಕ್ಷೆಗೆ ಒಳಪಡಿಸಿದರು.

ಪತ್ರಿಕೆಗಳ ಹೊಸ ಕಾನೂನುಗಳನ್ನು ತಂದು ಸ್ವಾತಂತ್ರ್ಯ ಜ್ಯೋತಿಯನ್ನು ಆರಿಸಲು ಮಾಡಿದ ಸರ್ಕಾರದ ಪ್ರಯತ್ನ ಸಫಲವಾಯಿತೆಂದು ತಿಳಿದಿದ್ದರು. ಆದರೆ ೧೮೫೭ರಲ್ಲಿ ಪ್ರಾರಂಭವಾದ ಸ್ವಾತಂತ್ರ್ಯ ಸಂಗ್ರಾಮ ೨೦ನೇ ಶತಮಾನಕ್ಕೂ ಹರಡಿತು. ಈ ಸಂಗ್ರಾಮ ಮುಂದೆ ನಡೆದ ಸ್ವಾತಂತ್ರ್ಯ ಚಳುವಳಿಗೂ ನಾಂದಿಯಾಯಿತು.

**ಪ್ರಸಿದ್ಧ ಪತ್ರಿಕೆ ಜನನ** : ೧೮೮೫ರಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಾದ ಮೇಲೆ ಭಾರತೀಯ ಪತ್ರಿಕಾ ಲೋಕದಲ್ಲಿ ಒಂದು ಹೊಸ ಅಧ್ಯಾಯ ಪ್ರಾರಂಭವಾಯಿತು. ಭಾರತಕ್ಕೆ ಸ್ವಾತಂತ್ರ್ಯ ಬೇಕೆಂದು ಒತ್ತಾಯ ಹೆಚ್ಚಿದಂತೆ ಬ್ರಿಟಿಷ್ ಒಡೆತನದಲ್ಲಿದ್ದ ಪತ್ರಿಕೆಗಳ ಬರವಣಿಗೆಯ ಧಾಟಿಯೇ ಬೇರೆಯಾಯಿತು. ಭಾರತೀಯ ಪತ್ರಿಕೆಗಳು ಮತ್ತು ಪತ್ರಿಕೋದ್ಯಮಿಗಳಂತೂ ಸ್ವಾತಂತ್ರ್ಯದ ವೀರರಸವನ್ನು ಬರವಣಿಗೆಗಳಲ್ಲಿ ಹರಿಸಿದವು. ಸ್ಫೂರ್ತಿಯುತವಾದ ಮತ್ತು ದೇಶಾಭಿಮಾನದ ಹೇಳಿಕೆಗಳು ಸ್ವಾತಂತ್ರ್ಯವನ್ನು ಎತ್ತಿ ಹಿಡಿದವು. ಆ ಕಾಲದಲ್ಲಿ, 'ಟೈಮ್ಸ್ ಆಫ್ ಇಂಡಿಯಾ', ಅಲಹಾಬಾದಿನ ಪಯನೀಯರ್, ಮದ್ರಾಸಿನ 'ಮದ್ರಾಸ್ ಮೇಲ್' ಕಲ್ಕತ್ತಾದ 'ಸ್ಟೇಟ್ಸ್‌ಮನ್', ಲಾಹೋರಿನ 'ಸಿವಿಲ್ ಅಂಡ್ ಮಿಲಿಟರಿ ಗೆಜೆಟ್' ಮದ್ರಾಸಿನ 'ಹಿಂದೂ' ಪತ್ರಿಕೆಗಳು ಪ್ರಾರಂಭವಾದವು. ರಾಯಿಟರ್ ಸಮಾಚಾರ ಸಂಸ್ಥೆಯೂ ಅಸ್ತಿತ್ವಕ್ಕೆ ಬಂದಿತು.

ಹೊಸದಾಗಿ ವೈಸರಾಯ್ ಆಗಿ ಬಂದ ಲಾರ್ಡ್ ಲಿಟ್ಟನ್ ಭಾರತೀಯ ಪತ್ರಿಕೆಗಳಲ್ಲಿ ಬ್ರಿಟಿಷ್ ಆಡಳಿತವನ್ನು ವಿರೋಧಿಸಿ ಕಟುವಾಗಿ ಟೀಕೆಮಾಡುತ್ತಿದ್ದ ಲೇಖಕರ ಲೇಖನಗಳ ಬಗ್ಗೆ ಲಂಡನ್ ಅಧಿಕಾರಿಗಳಿಗೆ ತಿಳಿಸಿದನು. ಅಲ್ಲದೆ ಈ ಸ್ವಾತಂತ್ರ್ಯವನ್ನು ಕಡಿತ ಮಾಡಲು ಒಂದು ಪ್ರಬಲವಾದ ಶಾಸನ ಮಾಡಲು ಸಿದ್ಧತೆ ಮಾಡಿಕೊಂಡನು.

'ಹಿಂದೂ ಪೇಟ್ರಿಯಟ್' ಪತ್ರಿಕೆಯ ಸುರೇಂದ್ರನಾಥ ಬ್ಯಾನರ್ಜಿ ಇಂತಹ ಒಂದು ಶಾಸನ ಬರದಂತೆ ಪ್ರಯತ್ನಪಟ್ಟು ವಿಫಲರಾದರು. ೧೮೭೮ರಲ್ಲಿ ಈ ಕಾನೂನು ಜಾರಿಗೆ ತಂದಿತು. ರಾಜದ್ರೋಹದ ಸಂದೇಶವನ್ನು ಜನತೆಗೆ ಹರಡಲು ಅಡ್ಡಿಪಡಿಸುವುದೇ ಉದ್ದೇಶವೆಂದು ಆಡಳಿತಗಾರರು ತಿಳಿಸಿದರು. ಇದರ ಸಂಬಂಧವಾಗಿ ಒಂದು ಮುಚ್ಚಳಿಕೆ ಪತ್ರವನ್ನು ಪತ್ರಿಕೆಗಳು ಬರೆದು

ಕೊಡುವಂತೆ ತಿಳಿಸಲಾಯಿತು. ಪತ್ರಿಕೆಗಳು ಪ್ರಕಟಿಸುವ ಸಮಾಚಾರಗಳನ್ನು ನಿಯಂತ್ರಣಾಧಿಕಾರಿಯ ಪರೀಕ್ಷೆಗೆ ಕೊಡಬೇಕಾಗಿತ್ತು. ಈ ಕಾನೂನು ಭಾರತೀಯ ಭಾಷೆಗಳ ಪತ್ರಿಕೆಗಳಿಗೆ ಬಿದ್ದ ದೊಡ್ಡ ಕೊಡಲಿ ಪೆಟ್ಟು.

**ಹಿಂದೂ ಪತ್ರಿಕೆ ಜನನ** : ಮದರಾಸಿನಲ್ಲಿ ಭಾರತೀಯ ಪತ್ರಿಕೆಯಾದ 'ನೇಟಿವ್ ಪಬ್ಲಿಕ್' 'ಒಪೀನಿಯನ್' ಮತ್ತು 'ಮದ್ರಾಸಿ ಕ್ರೆಸೆಂಟ್' ಪತ್ರಿಕೆಗಳು ನಿಂತುಹೋದವು. ಆದರೆ ದೇಶಭಕ್ತರ ಎಮ್. ವೀರರಾಘವಾಚಾರಿ ಮತ್ತು ಆರು ಜನ ಯುವಕರು 'ಹಿಂದೂ' ಪತ್ರಿಕೆಯನ್ನು ೧೮೭೮ರಲ್ಲಿ ಸ್ಥಾಪಿಸಿದರು.

೧೮೮೧ರಲ್ಲಿ ವೈಸರಾಯ್ ಆಗಿ ಬಂದ ಮಾರ್ಕ್ವಿಸ್ ಉದಾರ ನೀತಿಯಿಂದ ಭಾರತೀಯ ಭಾಷಾ ಪತ್ರಿಕೆಗಳ ಹತೋಟಿ ಕಾನೂನನ್ನು ತೆಗೆದುಹಾಕಿದರು. ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಭಾಗವಹಿಸಲು ಭಾರತೀಯರಿಗೆ ತರಬೇತಿ ಕೊಡಲು ಸಹಕರಿಸುವಂತೆ ಪತ್ರಿಕೆಗಳ ಸಹಕಾರ ಕೋರಿದನು. 'ಹಿಂದೂ' ಪತ್ರಿಕೆ ತ್ರಿವಾರ ಪತ್ರಿಕೆಯಾಗಿ ಪರಿವರ್ತನೆ ಹೊಂದಿ ರಾಜಕೀಯ ಜಾಗೃತಿಯನ್ನುಂಟು ಮಾಡಲು ಸಹಾಯಕವಾಯಿತು.

**ಅಖಿಲ ಭಾರತ ಕಾಂಗ್ರೆಸ್** : ದೇಶದ ಆಡಳಿತದಲ್ಲಿ ಜನ ಹೆಚ್ಚಾಗಿ ಭಾಗವಹಿಸಬೇಕೆಂಬ, ಭಾವನೆಗಳು ಹುಟ್ಟಿದವು. ಎಲ್ಲರೂ ಒಟ್ಟಾಗಿ ಸೇರಲು ಒಂದು ಸಮ್ಮತವಾದ ವೇದಿಕೆ ಇರಲಿಲ್ಲ. ಈ ಉದ್ದೇಶದಿಂದ ೧೮೮೫ರಲ್ಲಿ ಇಂಡಿಯನ್ ಸಿವಿಲ್ ಸರ್ವಿಸಸ್‌ನಲ್ಲಿ ಸೇವೆ ಸಲ್ಲಿಸಿದ ಆ್ಯಲನ್ ಆಕ್ಟೇವಿಯನ್ ಹ್ಯೂಮ್ ಎಂಬ ಇಂಗ್ಲಿಷಿನವರು ಭಾರತೀಯ ಗಣ್ಯರ ನೆರವಿನಿಂದ ಅಖಿಲ ಭಾರತ ಕಾಂಗ್ರೆಸ್ ಸ್ಥಾಪಿಸಿದನು. ಸುಸಂಸ್ಕೃತ ಭಾರತೀಯರ ಉದಾರ ಅಭಿಪ್ರಾಯ ತಿಳಿಸುವ ಅವಕಾಶ ಮಾಡಿಕೊಡುವುದು ಮುಖ್ಯ ಉದ್ದೇಶ. ಭಾರತೀಯರು ಬ್ರಿಟಿಷ್ ಆಡಳಿತದಲ್ಲಿ ಅತೃಪ್ತಿಯನ್ನು ಸೂಚಿಸುತ್ತಿರುವುದನ್ನು ಅರಿತು, ಸುವ್ಯವಸ್ಥಿತವಾದ ಸಂಸ್ಥೆಯ ಅವಶ್ಯಕತೆಯನ್ನು ತಿಳಿದು ಈ ಸಂಸ್ಥೆಯನ್ನು ಸ್ಥಾಪಿಸಿದನು. ಮೊದಲ ಸಭೆಯಲ್ಲಿ ಸಂಸ್ಥೆಯ ಉದ್ದೇಶವನ್ನು ನಿರ್ಧರಿಸಲಾಯಿತು.

ಭಾರತೀಯ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯೇ ಈ ಸಂಸ್ಥೆಯ ಉದ್ದೇಶವೆಂದು ಉಲ್ಲೇಖಿಸಲಾಯಿತು. ಜೊತೆಗೆ ಆಡಳಿತದಲ್ಲಿ ಹೆಚ್ಚು ಪಾಲು ಕೊಡಬೇಕೆಂದು ಕೇಳಿಕೊಳ್ಳಲಾಯಿತು. ಇದು ಕೇವಲ ಪ್ರಾರ್ಥಿಸುವ ಮತ್ತು ಅರ್ಜಿ ಹಾಕಿಕೊಳ್ಳುವ ಸಂಸ್ಥೆಯಾಗಿತ್ತು. ಈ ಸಂಸ್ಥೆಯಲ್ಲಿ ಬಹಳ ಭಾರತೀಯರಿದ್ದರು. ಇದೇ ಸಂದರ್ಭದಲ್ಲಿ ತ್ರಿವಾರ ಪತ್ರಿಕೆಯಾಗಿದ್ದ ಹಿಂದೂ ಪತ್ರಿಕೆ ದಿನಪತ್ರಿಕೆಯಾಗಿ ಈ ಕಾಂಗ್ರೆಸ್ ಸಂಸ್ಥೆಯನ್ನು ಬೆಂಬಲಿಸಲು ಪ್ರಾರಂಭಿಸಿತು. ಹ್ಯೂಮನು ಈ ಪತ್ರಿಕೆಯ ಬೆಳವಣಿಗೆಯಲ್ಲಿ ಆಸಕ್ತಿ ವಹಿಸಿದನು.

ಲಾರ್ಡ್ ಡಫರಿನ್ನನು ವೈಸರಾಯ್ ಆಗಿ ಬಂದಮೇಲೆ ಆತನು ಪತ್ರಿಕೆಗಳ ಮಿತ್ರನಾದನು. ಕೆಲವು ರಾಜಕೀಯ ಸುಧಾರಣೆಗಳನ್ನು ತಂದನು. ಸರ್ಕಾರಿ ಅಧಿಕಾರಿಗಳು ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುವ ನಿಷೇಧಾಜ್ಞೆಯನ್ನು ಹಿಂತೆಗೆದುಕೊಂಡನು. ಅಮೃತ ಬಜಾರ್ ಪತ್ರಿಕೆ ಭೂಪಾಲ್ ಸಂಸ್ಥಾನದ ಆಡಳಿತಕ್ಕೆ ಸಂಬಂಧಿಸಿದಂತೆ ಕೆಲವು ದೋಷಗಳ ಬಗ್ಗೆ ಲೇಖನಗಳನ್ನು ಪ್ರಕಟಿಸಿತು. ಆ ಸಂಸ್ಥಾನದ ಬ್ರಿಟಿಷ್ ಏಜೆಂಟನು ಕೋಪಗೊಂಡು ಅಮೃತ್ ಬಜಾರ್ ಪತ್ರಿಕೆಯ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳಲು ಕಾಗದ ಬರೆದನು. ಸರ್ಕಾರ ಕಾನೂನು ಕ್ರಮ ತೆಗೆದುಕೊಂಡರೆ ಪತ್ರಿಕೆಗೆ ಹೆಚ್ಚು ಪ್ರಚಾರ ಸಿಗುವುದೆಂದು ತಿಳಿದು, ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಇದರಿಂದ ಪ್ರಾಂತ್ಯದ ಏಜೆಂಟನು ತನಗೆ ಅವಮಾನವಾಯಿತೆಂದು ಕೆಲಸಕ್ಕೆ ರಾಜೀನಾಮೆ ಕೊಟ್ಟನು.

ಲಾರ್ಡ್ ಲ್ಯಾನ್ಸ್‌ಡೌನನು ವೈಸರಾಯ್ ಆಗಿ ಬಂದಾಗ ಅಮೃತ್ ಬಜಾರ್ ಪತ್ರಿಕೆ ಕಾಶ್ಮೀರದ ಬಗ್ಗೆ ಸರ್ಕಾರದ ರಹಸ್ಯ ವಿದೇಶಿ ಕಛೇರಿಯ ಕಾಗದವನ್ನು ಪ್ರಕಟಿಸಿತು. ಇದರಿಂದ ಸರಕಾರದ ರಹಸ್ಯ ದಾಖಲೆ ಪತ್ರಗಳನ್ನು ಪ್ರಕಟಿಸುವುದನ್ನು ನಿಷೇಧಿಸಲಾಯಿತು. ಇಲ್ಬರ್ಟ್ ಕಾನೂನು ಪ್ರಕಾರ ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಭಾರತೀಯರು, ಯೂರೋಪಿಯನ್ನರನ್ನು ನ್ಯಾಯಸ್ಥಾನದಲ್ಲಿ ವಿಚಾರಣೆ ಮಾಡಬಹುದಾಗಿತ್ತು. ಅಂದರೆ ಯೂರೋಪಿಯನ್ ಅಧಿಕಾರಿಗಳು ಪ್ರತಿಭಟಿಸಿದ್ದರಿಂದಲೇ ಕಾನೂನುಗಳನ್ನು ರದ್ದುಗೊಳಿಸಿದರು. ಇದರ ಬಗ್ಗೆ ಭಾರತದ ಪತ್ರಿಕೆಗಳು ಪ್ರತಿಭಟಿಸಿದವು.

ಹೆಣ್ಣುಮಕ್ಕಳಿಗೆ ೧೨ ವರ್ಷದವರೆಗೆ ಮದುವೆ ಮಾಡುವುದನ್ನು ನಿಷೇಧಿಸಿಲಾಯಿತು. ಹೀಗೆ ಹಿಂದೂ ಧರ್ಮದ ನಡವಳಿಕೆಗಳಲ್ಲಿ ಸರ್ಕಾರವು ತಲೆಹಾಕುವುದನ್ನು ಪತ್ರಿಕೆಗಳು ವಿರೋಧಿಸಿದವು. ಬ್ರಿಟಿಷ್ ಆಡಳಿತಗಾರರು ಜನಾಂಗ ಭೇದ ಭಾವನೆಗಳಿಗೆ ಬೆಂಬಲ ಕೊಡುತ್ತಿದ್ದುದನ್ನು ಪತ್ರಿಕೆಗಳು ಬಲವಾಗಿ ಟೀಕಿಸಿದವು. ಹೀಗೆ ಟೀಕೆ ಮಾಡಿದ ಬಂಗಾಳದ 'ಬಂಗದಾಸಿ' ಪತ್ರಿಕೆಯ ಸಂಪಾದಕ, ಪ್ರಕಾಶಕ ಮತ್ತು ಮುದ್ರಣಕಾರರನ್ನು ದಸ್ತಗಿರಿ ಮಾಡಲಾಯಿತು. 'ಕೇಸರಿ' ಪತ್ರಿಕೆಯ ಬಾಲಗಂಗಾಧರ ತಿಲಕರು ಈ ಶಾಸನ ಹಿಂದೂ

ಧರ್ಮದ ವಿರೋಧವೆಂದು ಟೀಕಿಸಿ ಹಿಂದೂಗಳು ವಿರೋಧಿಸಲು ಪ್ರೋತ್ಸಾಹಕ ಲೇಖನಗಳನ್ನು ಬರೆದರು. ಹಿಂದೂ ಧರ್ಮದ ಅಭಿಪ್ರಾಯ ಪ್ರಚೋದನೆ ಮಾಡಲು ೧೮೯೧ರಲ್ಲಿ ಅಮೃತ್ ಬಜಾರ್ ಪತ್ರಿಕೆಯನ್ನು ದಿನಪತ್ರಿಕೆಯಾಗಿ ಪ್ರಕಟಿಸಲು ಪ್ರಾರಂಭಿಸಿದರು.

ಕಾಮಾಕ್ಷಿ ನಟರಾಜನ್ ಸಂಪಾದಕತ್ವದಲ್ಲಿ ಬೊಂಬಾಯಿಯಿಂದ ೧೮೯೧ರಲ್ಲಿ 'ಸೋಷಿಯಲ್ ರಿಫಾರ್ಮರ್' ಎಂಬ ಪತ್ರಿಕೆ ಪ್ರಾರಂಭವಾಯಿತು. ಮಹಿಳಾ ವಿದ್ಯಾಭ್ಯಾಸ, ವಿಧವಾ ವಿವಾಹ, ಜಾತಿ ಭೇದ ತೆಗೆದುಹಾಕುವುದು ಮುಂತಾದ ಸಮಾಜ ಸುಧಾರಣೆಗಳನ್ನು ಸಾಧಿಸುವುದೇ ಮುಖ್ಯ ಉದ್ದೇಶ. ಬೊಂಬಾಯಿ ಮತ್ತು ಪೂನಾ ನಗರಗಳಲ್ಲಿ ೧೮೯೩ರಲ್ಲಿ ಕ್ಷಾಮದೆಸೆಯಿಂದ ಪ್ಲೇಗ್ ರೋಗವು ಹರಡಿತು. ರೋಗಿಯನ್ನು ಏಕಾಂತದಲ್ಲಿ ಇಡಲಾಗುತ್ತಿತ್ತು. ಏಕಾಂತವಾಗಿಡುವುದು ಹಿಂದೂ ಧರ್ಮಕ್ಕೆ ವಿರೋಧವೆಂದು ಪತ್ರಿಕೆಗಳು ಪ್ರತಿಭಟಿಸಿದವು. ಕೇಸರಿ ಪತ್ರಿಕೆಯಲ್ಲಿ ಬಾಲಗಂಗಾಧರ ತಿಲಕರು ಬಲವಾಗಿ ಪ್ರತಿಭಟಿಸಿ ಲೇಖನ ಬರೆದರು. ಜನ ರೊಚ್ಚಿಗೆದ್ದು ಹಿಂಸಾ ಕೃತ್ಯದಲ್ಲಿ ತೊಡಗಿದರು. ತಿಲಕರು ಮತ್ತು ಅವರ ಇಬ್ಬರು ಸಹೋದರರ ಮೇಲೆ ರಾಜದ್ರೋಹದ ಅಪವಾದ ಹೊರೆಸಿ ಹನ್ನೆರಡು ತಿಂಗಳು ಕಠಿಣ ಶಿಕ್ಷೆ ವಿಧಿಸಿದರು. ಇದಕ್ಕೆ ಪತ್ರಿಕೆಗಳು ಕೆರಳಿ ಬ್ರಿಟಿಷ್ ಸೈನಿಕರು ಪೂನಾದಲ್ಲಿ ನಡೆಸಿದ ಅತ್ಯಾಚಾರವನ್ನು ಪತ್ರಿಕೆಯಲ್ಲಿ ಪ್ರಕಟಿಸಿ ಸರ್ಕಾರದ ದೋಷವನ್ನು ಬಯಲಿಗೆಳೆದರು. ಇದರಿಂದ ಸರ್ಕಾರ ಇಂಡಿಯನ್ ಪೀನಲ್ ಕೋಡಿಗೆ ಕೆಲವು ತಿದ್ದುಪಡಿಗಳನ್ನು ತಂದು ಪತ್ರಿಕಾ ಸ್ವಾತಂತ್ರ್ಯವನ್ನು ಕುಂಠಿತಗೊಳಿಸಿತು.

**ಹೊಸ ಅಧ್ಯಾಯ** : ಅಖಿಲ ಭಾರತ ಕಾಂಗ್ರೆಸ್ ಪ್ರಾರಂಭವಾದದ್ದರಿಂದ ಪತ್ರಿಕೆಗಳಿಗೆ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಯಿತೆನ್ನಬಹುದು. ಸಾರ್ವಜನಿಕ ನಾಯಕರುಗಳ ಭಾಷಣಗಳು, ಚರ್ಚೆಗಳು, ಭಾರತೀಯರು ಚತುರತೆಯಿಂದ ಬರೆದ ಲೇಖನಗಳು ಪ್ರಕಟವಾದವು. ದಿನಪತ್ರಿಕೆಗಳ ಬೆಳವಣಿಗೆ ಆದಂತೆ ರಾಜಕೀಯ ಆಂದೋಲನಕ್ಕೆ ದೊಡ್ಡ ಸ್ಫೂರ್ತಿಯನ್ನೇ ಕೊಟ್ಟಿತು. ಭಾರತೀಯ ರಾಜಕೀಯ ಸುದ್ದಿಗಳಲ್ಲದೆ ಹೊರದೇಶದ ಸಮಸ್ಯೆಗಳನ್ನು ಕುರಿತಂತೆ ಪತ್ರಿಕೆಗಳ ಚರ್ಚಾಪೂರಕ ಲೇಖನಗಳು ಭಾರತೀಯರನ್ನು ಹುರಿದುಂಬಿಸಿದವು. ಬೊಂಬಾಯಿಯಲ್ಲಿ 'ಟೈಮ್ಸ್ ಆಫ್ ಇಂಡಿಯಾ', 'ಇಲಸ್ಟ್ರೇಟಡ್ ವೀಕ್ಲಿ' ವಾರಪತ್ರಿಕೆ ಪ್ರಾರಂಭ. ಬೇರೆ ಬೇರೆ ಪ್ರದೇಶಗಳಲ್ಲಿ ಕ್ರೀಡಾ ವಿಷಯ, ತಾಂತ್ರಿಕ ಜ್ಞಾನ ಸಂಸ್ಕೃತಿ, ಸಾಮಾಜಿಕ ಸುಧಾರಣೆಗಳ ಬಗ್ಗೆ ಅನೇಕ ಪತ್ರಿಕೆಗಳು ಪ್ರಾರಂಭವಾದವು. ರಾಜಕೀಯವಾಗಿ ಬ್ರಿಟಿಷ್ ಆಡಳಿತವನ್ನು ಕಟುವಾಗಿ ಟೀಕಿಸುವ ಧೈರ್ಯ ಪತ್ರಿಕೆಗಳಲ್ಲಿ ಮೂಡಿತು. ಭಾರತೀಯ ವಿದ್ಯಾವಂತ ವರ್ಗದವರಿಗೆ, ಭಾರತ ಸ್ವಾತಂತ್ರ್ಯಾಪೇಕ್ಷಿಗಳಿಗೆ ಪತ್ರಿಕೆಗಳು ನೆರವು ನೀಡಿ ಆ ಮಾರ್ಗದಲ್ಲಿ ನಡೆಯುವಲ್ಲಿ ಮುಖ್ಯ ಪಾತ್ರ ವಹಿಸಿದವು.

ಅಂಚೆ ಮತ್ತು ಸಾರಿಗೆ ಸೌಲಭ್ಯ ಒದಗಿದಂತೆ ಪತ್ರಿಕೆಗಳ ಪ್ರಸಾರ ಹೆಚ್ಚಾಯಿತು. ರೈಲು ಮಾರ್ಗ ಹಾಕಿದ್ದರಿಂದ ಪತ್ರಿಕೆಗಳ ರವಾನೆ ಮತ್ತು ಸುದ್ದಿ ಸಂಗ್ರಹಕ್ಕೆ ಪ್ರತ್ಯಕ್ಷವಾಗಿ ಸಹಾಯವಾಯಿತು. ವಿದ್ಯುಚ್ಛಕ್ತಿ ಬಂದಮೇಲೆ ತಂತಿ ಸಂಪರ್ಕದಿಂದ ಪತ್ರಿಕೋದ್ಯಮ ಹೆಚ್ಚು ಬೆಳವಣಿಗೆ ಸಾಧಿಸಲು ಅವಕಾಶವಾಯಿತು. ಸುಯೆಜ್ ಕಾಲುವೆಯಲ್ಲಿ ಹಡಗುಗಳ ಸಂಚಾರ ಪ್ರಾರಂಭವಾದ ಮೇಲೆ ಭಾರತಕ್ಕೂ ಯುರೋಪ್ ಪ್ರದೇಶಗಳ ಪ್ರಯಾಣ ಮತ್ತು ಸಾಗಾಣಿಕೆಗೂ ಹೆಚ್ಚು ಸೌಲಭ್ಯ ಒದಗಿಸಿದಂತಾಯಿತು. ಹಬೆಯ ಯಂತ್ರದಿಂದ ನಡೆಸುತ್ತಿದ್ದ ಮುದ್ರಣಾಲಯಗಳು ವಿದ್ಯುಚ್ಛಕ್ತಿಯಿಂದ ನಡೆಯಲು ಪ್ರಾರಂಭವಾಯಿತು.

**ಮುನ್ನಡೆ** : ಅಖಿಲ ಭಾರತ ಕಾಂಗ್ರೆಸ್ ಸ್ಥಾಪನೆಯಿಂದ ಪತ್ರಿಕೆಗಳ ಬೆಳವಣಿಗೆಗೆ ಹೆಚ್ಚು ಉತ್ತೇಜನ ಸಿಕ್ಕಿತು. ಕಾಂಗ್ರೆಸ್ ಸಭೆಯಲ್ಲಿ ಅನೇಕ ಪತ್ರಿಕಾ ಪ್ರತಿನಿಧಿಗಳು ಭಾಗವಹಿಸಿದ್ದರು. 'ರಾಸ್ತಗಾಫ್ಲೆರ್' 'ಹಿಂದು', 'ಇಂದು ಪ್ರಕಾಶ್ ಮರಾಠ', 'ಇಂಡಿಯನ್ ಮಿರರ್' ಮತ್ತು 'ಕೇಸರಿ' ಪತ್ರಿಕೆಗಳ ಪ್ರತಿನಿಧಿಗಳು, ಮುಖ್ಯಸ್ಥರು ಹೆಚ್ಚು ಜನಪ್ರತಿನಿಧಿಗಳು, ಪ್ರತಿಕೋದ್ಯಮಕ್ಕೆ ಪ್ರತ್ಯಕ್ಷ ಅಪ್ರತ್ಯಕ್ಷವಾಗಿ ಸಂಬಂಧವುಳ್ಳವರು ಭಾಗವಹಿಸಿದ್ದರು. ಹಿಂದೂ ಮತ್ತು ಅಮೃತ್ ಬಜಾರ್ ಪತ್ರಿಕೆಗಳು ತಮ್ಮ ಸ್ವಂತಶಕ್ತಿಯಿಂದ ಮತ್ತು ರಾಷ್ಟ್ರೀಯ ಭಾವನೆಯ ಅವಕಾಶದಿಂದ ಸಾರ್ವಜನಿಕರ ಅಭಿಪ್ರಾಯವನ್ನು ತಮ್ಮ ಪತ್ರಿಕೆಗಳಲ್ಲಿ ಪ್ರತಿಬಿಂಬಿಸಿ ಜನಪ್ರಿಯವಾದವು. ಬ್ರಿಟಿಷ್ ಒಡೆತನದಲ್ಲಿ ಪತ್ರಿಕೆಗಳು ಪ್ರಾರಂಭವಾದರೂ ಭಾರತೀಯ ಒಡೆತನದ ಪತ್ರಿಕೆಗಳು ಮಾತ್ರ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿ ರಾಷ್ಟ್ರದ ಗೌರವ ಕಾಪಾಡಲು ತಮ್ಮ ಸಂಗ್ರಾಮವನ್ನು ನಡೆಸುತ್ತಲೇ ಇದ್ದವು. ಬ್ರಿಟಿಷ್ ಪತ್ರಿಕೆಗಳು ಭಾರತೀಯ ಪತ್ರಿಕೆಗಳ ಲೇಖನಗಳ ಬಗ್ಗೆ ಹಾಸ್ಯಾಸ್ಪದವಾಗಿ ಟೀಕಿಸಿದರೂ ಭಾರತೀಯ ಪತ್ರಿಕೆಗಳು ಸ್ವತಂತ್ರ ಮನೋಭಾವ ಜನಿಸುವಂತಹ ಲೇಖನಗಳನ್ನು ಬರೆಯುತ್ತಲೇ ಬಂದವು.

ಭಾರತೀಯ ಪತ್ರಿಕೆಗಳು ಸಮಾಚಾರ ಸುದ್ದಿಗಳಲ್ಲದೆ ಅನೇಕ ಉಪಯುಕ್ತವಾಗುವ ಲೇಖನಗಳ ಜೊತೆಗೆ ಸ್ವಾತಂತ್ರ್ಯ ಬೇಕೆಂದು ಒತ್ತಾಯ ತರುವಂತಹ ಲೇಖನಗಳು ಮತ್ತು ಅದರ ಬಗ್ಗೆ ಜನಾಭಿಪ್ರಾಯಗಳನ್ನು ಧೈರ್ಯವಾಗಿ ಪ್ರಕಟಿಸುತ್ತಿದ್ದರು. ಶಾಸನಗಳ ಬಗ್ಗೆ ವ್ಯಾಖ್ಯಾನ, ಸಾರ್ವಜನಿಕರ ಸಮಸ್ಯೆಗಳ ವಿಮರ್ಶೆಗೆ ಮಹತ್ವಕೊಟ್ಟವು. ಲಘು ಮತ್ತು ವಿನೋದ ಲೇಖನಗಳಿಗೆ ಅವಕಾಶವೇ ಇಲ್ಲ.

ಧಾರ್ಮಿಕ ಮತ್ತು ಸಾಮಾಜಿಕ ವಲಯದಲ್ಲೂ ಪತ್ರಿಕೆಗಳ ಪ್ರಭಾವ ಬೇರೂರಿತು. ಅನೇಕ ಸಂಪಾದಕರು ಸಾರ್ವಜನಿಕ ರಂಗದ ನಾಯಕರುಗಳಾದವರು, ರಾಷ್ಟ್ರ ಸೇವೆ ಮಾಡುವ ಉದ್ದೇಶದಿಂದ ಪತ್ರಿಕಾ ವ್ಯವಸಾಯವನ್ನು ಅವಲಂಬಿಸಿದರೇ ಹೊರತು, ಹಣ ಮಾಡುವ ದೃಷ್ಟಿಯಿಂದಲ್ಲ, ಹಣ ಕಳೆದುಕೊಂಡ ಅನೇಕ ಉದಾಹರಣೆಗಳಿವೆ. ದೇಶದ ಆಡಳಿತ ಯಂತ್ರದ ಮೇಲೆ ಪತ್ರಿಕೆಗಳು ಪ್ರಭಾವ ಬೀರಲು ಪ್ರಾರಂಭಿಸಿದವು. ಅನೇಕ ಪತ್ರಿಕೆಗಳು ಜನರಿಗೆ ರಾಜಕೀಯ ವಿದ್ಯಾಭ್ಯಾಸ ಕೊಡುವ ಕಾಲೇಜುಗಳಾದವು. ಪತ್ರಿಕೆಗಳ ಧರ್ಮ ಸೇವೆ ಎಂಬ ಅಭಿಪ್ರಾಯವನ್ನು ಭಾರತೀಯ ಪತ್ರಿಕೆಗಳು ಸ್ಥಾಪಿಸಿದವು. ಬ್ರಿಟಿಷರ ಪತ್ರಿಕೆಗಳಿಗೆ ಸರಕಾರದ ನೆರವು ಇತ್ತು. ಆದರೆ ಭಾರತೀಯ ಪತ್ರಿಕೆಗಳಿಗೆ ಸಹಾಯಕ್ಕಿಂತ ಶಿಕ್ಷೆಯ ಹೆದರಿಕೆಯೇ ಹೆಚ್ಚು. ಯಾವಾಗ ಮುಚ್ಚಿಬಿಡುವರೋ ಎಂಬ ಭಯ. ಆದರೂ ಭಾರತೀಯ ದಿನಪತ್ರಿಕೆಗಳು ರಾಜಕೀಯ ಬಣ್ಣ ಹೊಂದುವುದಕ್ಕೆ ಪ್ರಾರಂಭಿಸಿದವು.

೧೯ನೇ ಶತಮಾನದ ಪತ್ರಿಕೆಗಳು ಸ್ವಾತಂತ್ರ್ಯ ಹೋರಾಟದಲ್ಲಿ ಧೈರ್ಯವಾಗಿ ಭಾಗವಹಿಸಿದವು. ಆಡಳಿತದ ವಿರುದ್ಧ ಜನತೆಯ ಬೆಂಬಲ ದೊರೆಯಿತು. ದೇಶದಲ್ಲಿ ಹಿಂಸಾತ್ಮಕ ಚಟುವಟಿಕೆಗಳೂ ನಡೆದವು. ಸರಕಾರಕ್ಕೆ ಈ ಎಲ್ಲಾ ರೀತಿಯ ಚಳುವಳಿಗಳನ್ನು ಒಂದೇ ಸಾರಿ ಎದುರಿಸುವುದು ಒಂದು ಸಮಸ್ಯೆಯಾಗಿ ಪರಿಣಮಿಸಿತು.

ಇಪ್ಪತ್ತನೆಯ ಶತಮಾನದಲ್ಲಿ ಒಂದು ಹೊಸ ಅಧ್ಯಾಯವೇ ಪ್ರಾರಂಭವಾಯಿತು. ಮದರಾಸಿನಲ್ಲಿ ಜೆ. ಎ. ನಟೇಶನ್ 'ಇಂಡಿಯನ್ ರಿವ್ಯೂ' ಎಂಬ ಪತ್ರಿಕೆಯನ್ನು ೧೮೯೦ರಲ್ಲಿ ಪ್ರಾರಂಭಿಸಿದರು. ಭಾರತದ ಅಭಿವೃದ್ಧಿಯ ಬಗ್ಗೆ ಪ್ರಸಿದ್ಧ ವ್ಯಕ್ತಿಗಳಿಂದ ಲೇಖನಗಳನ್ನು ಪ್ರಕಟಿಸಿದರು. ಭಾರತದ ಶ್ರೇಷ್ಠ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಪತ್ರಿಕೆಗಳಲ್ಲಿ ಅಲ್ಲದೆ ಸಣ್ಣ ಪುಸ್ತಕಗಳ ರೂಪದಲ್ಲಿ ಸುಲಭ ಬೆಲೆಗೆ ದೊರೆಯುವಂತೆ ಪ್ರಕಟಿಸಿ ಪ್ರಸಿದ್ಧರಾದರು. ಸಿ. ವೈ ಚಿಂತಾಮಣಿ, ಎನ್. ಸಿ. ಕೇಲ್ಕರ್‌ರಂತಹ ಯುವ ಪತ್ರಿಕೋದ್ಯಮಿಗಳು ಪ್ರಾಮುಖ್ಯತೆಗೆ ಬಂದರು. ತಿಲಕರು ಸೆರೆಮನೆಯಲ್ಲಿ ಇದ್ದಾಗ ಕೇಸರಿ ಪತ್ರಿಕೆ ಸಂಪಾದಕತ್ವವನ್ನು ಕೇಲ್ಕರ್ ವಹಿಸಿಕೊಂಡು ಪ್ರಸಿದ್ಧರಾದರು.

ವಿದ್ಯುಚ್ಛಕ್ತಿಯಿಂದ ಚಾಲಿತವಾದ ತಂತಿ ಸಮಾಚಾರ ವ್ಯವಸ್ಥೆ ಬಂದ ಮೇಲೆ ಸುದ್ದಿ ಸಂಸ್ಥೆಗಳು ಬೆಳೆದವು. ಜರ್ಮನಿಯ ರಾಯಿಟರ್ ಸಂಸ್ಥೆ ಪ್ರಾರಂಭವಾಯಿತು. ಕೆ. ಸಿ. ರಾಯ್‌ರವರು ಅಸೋಷಿಯೇಷನ್ ಪ್ರೆಸ್ ಆಫ್ ಇಂಡಿಯಾ ಭಾರತದ ಪ್ರಥಮ ಸುದ್ದಿ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಗಳ ಸಹಾಯದಿಂದ ದೇಶ ವಿದೇಶಗಳ ಸುದ್ದಿಗಳು ದೇಶದ ಎಲ್ಲಾ ಭಾಗಗಳಿಗೂ ವೇಗವಾಗಿ ತಲುಪಲು ಸಹಾಯ ವಾಯಿತು. ಸ್ವಾತಂತ್ರ್ಯ ದಾಹದಿಂದ ರೊಚ್ಚಿಗೆದ್ದ ಭಾರತೀಯರು ಸ್ವದೇಶ ಚಳವಳಿಯನ್ನು ಪ್ರಾರಂಭಿಸಿದರು. ಮಹಾತ್ಮ ಗಾಂಧಿಯವರು ಈ ಚಳವಳಿಯ ನೇತಾರರಾದರು. ಬ್ರಿಟಿಷರು ತಯಾರಿಸಿದ ಬಟ್ಟೆಗಳನ್ನು ಮತ್ತು ಇತರ ಸಾಮಾನುಗಳನ್ನು ಉಪಯೋಗಿಸಬಾರದೆಂಬ ಚಳವಳಿ ಭಾರತಾದ್ಯಂತ ಹರಡಿತು. ರಾಷ್ಟ್ರೀಯತೆ ಒಂದು ಧರ್ಮವಾಗಿ ಬೆಳೆಯಿತು. ಚಳವಳಿ ಹಿಂಸಾತ್ಮಕ ರೂಪವನ್ನು ತಾಳಿ ಸ್ವದೇಶಿ ಮೂಲತತ್ವಕ್ಕೆ ಭಂಗ ತಂದಿತು. ಈ ಸ್ವದೇಶಿ ಚಳವಳಿ ದೇಶದಲ್ಲೆಲ್ಲಾ ಹರಡಲು ಪತ್ರಿಕೆಗಳಲ್ಲಿ ಬರುತ್ತಿದ್ದ ಸುದ್ದಿ ಸಮಾಚಾರ ಮತ್ತು ಸ್ವದೇಶಿ ಅಭಿಮಾನ ಹುಟ್ಟಿಸುವಂತಹ ಲೇಖನಗಳು ಸಹಾಯಕವಾದವು. ೧೯೦೫ರಲ್ಲಿ ಬ್ರಿಟಿಷ್ ಸರ್ಕಾರ ಭಾರತಕ್ಕೆ ಸ್ವಯಂ ಆಡಳಿತ ಕೊಡುವ ಸೂಚನೆಗಳ ಮೂಲತತ್ವ ಮತ್ತು ಧ್ಯೇಯಗಳಲ್ಲಿ ಭಾರತೀಯ ನಾಯಕರುಗಳಲ್ಲಿ ಒಪ್ಪಂದ ಬರಲಿಲ್ಲ. ಕಾಂಗ್ರೆಸ್ ಇಬ್ಭಾಗವಾಯಿತು. ಉದಾರವಾದಿಗಳು ಮತ್ತು ರಾಷ್ಟ್ರೀಯವಾದಿಗಳು ಎಂದು ಎರಡು ಪಂಗಡಗಳಾದವು. ಸರ್ ಫಿರೋಜ್ ಷಾ ಮೆಹತಾ, ಗೋಪಾಲಕೃಷ್ಣ ಗೋಖಲೆ, ರಾಸ್ ಬಿಹಾರಿ ಘೋಷ್ ಮತ್ತು ಸುರೇಂದ್ರನಾಥ ಬ್ಯಾನರ್ಜಿ ಉದಾರವಾದಿಗಳ ನಾಯಕರಲ್ಲಿ ಮುಖ್ಯಸ್ಥರು. ಉಗ್ರ ರಾಷ್ಟ್ರೀಯವಾದಿಗಳೊಡನೆ ಸೇರಿ ಹಿಂಸಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಒಪ್ಪಲಿಲ್ಲ. ಸರಕಾರದೊಡನೆ ಸಹಕರಿಸಲು ಇಷ್ಟಪಡಲಿಲ್ಲ.

ರಾಜಕೀಯದಲ್ಲಿ ಭಿನ್ನಾಭಿಪ್ರಾಯ ತೋರಿದಂತೆ ಪತ್ರಿಕೆಗಳಲ್ಲಿ ಎರಡು ಗುಂಪುಗಳಾದವು. ರಾಷ್ಟ್ರೀಯವಾದ ಪತ್ರಿಕೆಗಳು ವೈಸರಾಯ್ ಆಡಳಿತವನ್ನು ಉಗ್ರವಾಗಿ ಟೀಕಿಸಿದವು. ಭೂ ವ್ಯವಹಾರದ ವಿಷಯದಲ್ಲಿ ಪಂಜಾಬಿನ ಸರ್ಕಾರಕ್ಕೂ ಮತ್ತು ಜನತೆಗೂ ಗೊಂದಲವಾಯಿತು. ಪಂಜಾಬ್‌ನ ನಾಯಕ ಲಾಲಾ ಲಜಪತ್ ರಾಯ್ ರೈತರ ಪಕ್ಷವನ್ನು ವಹಿಸಿ ಬೆಂಬಲ ಕೊಟ್ಟಿದ್ದರಿಂದ ೧೯೦೭ರಲ್ಲಿ ಭಾರತದಿಂದಲೇ ಗಡೀಪಾರು ಮಾಡಲಾಯಿತು. ಸರಕಾರದ ವರ್ತನೆಯನ್ನು ಪತ್ರಿಕೆಗಳು ಕಟುವಾಗಿ ಟೀಕಿಸಿದವು.

೧೯೦೭ರಲ್ಲಿ ಸೂರತ್‌ನಲ್ಲಿ ಸೇರಿದ ಕಾಂಗ್ರೆಸ್ ಅಧಿವೇಶನದಲ್ಲಿ ಮಿಂಟೋ ಸೂಚಿಸಿದ ಕೆಲವು ಸುಧಾರಣೆಗಳ ಬಗ್ಗೆ ಪುನಃ ಭಾರತೀಯ ನಾಯಕರಲ್ಲಿ ಭಿನ್ನಾಭಿಪ್ರಾಯ ತಲೆದೋರಿತು. ಗೋಪಾಲಕೃಷ್ಣ ಗೋಖಲೆ ಉದಾರವಾದಿಗಳ ಗುಂಪಿನ ನಾಯಕರೂ

ಬಾಲಗಂಗಾಧರ ತಿಲಕರು ಉಗ್ರವಾದಿಗಳ ನಾಯಕರು ಪೂನಾದ ಕೇಸರಿ ಮತ್ತು ನಾಗಪುರದ ದೇಶ ಸೇವಕ ಪತ್ರಿಕೆಗಳು ಕಟುವಾಗಿ ಉಗ್ರಪಂಥವನ್ನು ಎತ್ತಿ ಹಿಡಿದವು. ಈ ಲೇಖನಗಳು ಬಹಳ ಕಠೋರವಾದುದರಿಂದ ಭಾರತ ಸರಕಾರ ೧೯೦೮ರಲ್ಲಿ ವೃತ್ತಪತ್ರಿಕೆಗಳ ಶಾಸನವನ್ನು ಜಾರಿಗೆ ತಂದಿತು. ಇದರಿಂದ ಹಿಂಸಾತ್ಮಕ ಕ್ರಾಂತಿಗೆ ಬೆಂಬಲ ಕೊಡುವ ಲೇಖನಗಳನ್ನು ಬರೆದು ಜನರನ್ನು ಪ್ರಚೋದಿಸಿದ ಅನೇಕ ಪತ್ರಿಕೆ ಸಂಪಾದಕರು, ಪ್ರಕಾಶಕರು ಮತ್ತು ಮುದ್ರಣಕಾರರನ್ನು ದಸ್ತಗಿರಿ ಮಾಡಿ ಮುದ್ರಣಾಲಯಗಳನ್ನು ಜಪ್ತಿ ಮಾಡಿ ಮುಚ್ಚಿಸಿದರು ಮತ್ತು ಕೆಲಸದವರಿಗೆ ಎಚ್ಚರಿಕೆ ಕೊಟ್ಟರು.

ಮಾರ್ಲೆ ಮಿಂಟೋ ಸುಧಾರಣೆ ಫಲವಾಗಿ ಬಂಗಾಳ ಎರಡು ಪ್ರಾಂತವಾಗಿ ಒಡೆಯಿತು. ರಾಜಧಾನಿ ಕಲ್ಕತ್ತಾದಿಂದ ದೆಹಲಿಗೆ ವರ್ಗವಾಯಿತು. ಸುಧಾರಣೆ ಪ್ರಕಾರ ಸದಸ್ಯರಿಗೆ ಭಾರತ ಆಯವ್ಯಯ ಅಂದಾಜು ಪಟ್ಟಿಯನ್ನು ಚರ್ಚಿಸುವ ಪ್ರಶ್ನೆ ಕೇಳುವ ಮತ್ತು ನಿರ್ಣಯ ಮಂಡಿಸುವ ಅಧಿಕಾರ ಬಂದಿತು. ಇದು ಭಾರತದ ನಾಯಕರಲ್ಲಿ ಭಿನ್ನಾಭಿಪ್ರಾಯ ಹುಟ್ಟಿಸಿತು. ಉದಾರವಾದಿಗಳು ಸುಧಾರಣೆಯನ್ನು ಒಪ್ಪಿಕೊಂಡು ಸರಕಾರದೊಂದಿಗೆ ಸಹಕರಿಸಲು ತೀರ್ಮಾನಿಸಿದರೆ ಉಗ್ರವಾದಿಗಳು ಪೂರ್ಣವಾಗಿ ಖಂಡಿಸಿದರು.

ಸುಧಾರಣೆಗಳನ್ನು ವಿರೋಧಿಸಿದ ರಾಷ್ಟ್ರೀಯವಾದಿ ನಾಯಕರನ್ನು ದಸ್ತಗಿರಿ ಮಾಡಿ ಸೆರೆಗೆ ಕಳುಹಿಸಲಾಯಿತು. ಭಾರತೀಯ ಪತ್ರಿಕೆಗಳು ಈ ದಸ್ತಗಿರಿ ನೀತಿಯನ್ನು ತೀವ್ರವಾಗಿ ಖಂಡಿಸಿದ್ದಲ್ಲದೆ ಸುಧಾರಣೆಗಳು ತೀರ ಅಪಕ್ವವಾದುವೆಂದು ಟೀಕಿಸಿದರು. ವೈಸರಾಯ್ ಮಂತ್ರಿಮಂಡಲದಲ್ಲಿ ಒಬ್ಬ ಭಾರತೀಯನಿಗೆ ಸ್ಥಾನ ಕೊಡಲು ಈ ಸುಧಾರಣೆಯಲ್ಲಿ ಇದ್ದದ್ದರಿಂದ ಉದಾರವಾದಿಗಳು ಈ ಸುಧಾರಣೆಯನ್ನು ಒಪ್ಪಿಕೊಳ್ಳಲು ವಾದಿಸುತ್ತಿದ್ದರು. ಭಾರತೀಯರ ಪರವಾಗಿ ಕಲ್ಕತ್ತಾ ಶ್ರೇಷ್ಠ ನ್ಯಾಯಾಸ್ಥಾನದಲ್ಲಿ ಹೆಸರುವಾಸಿಯಾದ ಲಾರ್ಡ್ ಸತ್ಯ ಪ್ರಸನ್ನ ಸಿನ್ಹರವರಿಗೆ ಮಂತ್ರಿಮಂಡಲದಲ್ಲಿ ಸ್ಥಾನ ಕೊಟ್ಟು ನ್ಯಾಯಾಂಗ ಇಲಾಖೆಯನ್ನು ವಹಿಸಲಾಯಿತು.

ಉದಾರವಾದಿಗಳು ತಮ್ಮ ಪಕ್ಷ ಮತ್ತು ಪಂಥಗಳನ್ನು ಬಲಗೊಳಿಸಲು 'ಲೀಡರ್' ಪತ್ರಿಕೆ ಪ್ರಾರಂಭಿಸಿದರು. ಪಂಡಿತ ಮದನ ಮೋಹನ ಮಾಳವೀಯ ಮುಖ್ಯ ಸಂಚಾಲಕರು. ಫಿರೋಜ್ ಷಾ ಮೆಹ್ತಾ, ಗೋಪಾಲ ಕೃಷ್ಣ ಗೋಖಲೆ, ದಿನ್‌ಷಾ ವಾಚ ಈ ಪತ್ರಿಕೆಯ ಬೆಂಬಲಿಗರು. ಭಾರತ ಸ್ವಾತಂತ್ರ್ಯದ ಪ್ರಮುಖ ಸಮಸ್ಯೆಯನ್ನು, ಸರಕಾರ ಬಗೆಹರಿಸಲು ಸಾಧ್ಯವಾಗಲಿಲ್ಲ. ಸ್ವಾತಂತ್ರ್ಯದ ಜ್ವಾಲೆ ಎಲ್ಲಾ ಕಡೆಯಲ್ಲಿಯೂ ಹರಡುವುದನ್ನು ತಡೆಯಲೂ ಸಾಧ್ಯವಾಗಲಿಲ್ಲ. ಜನತೆಯ ಚಳವಳಿಗೆ ಪತ್ರಿಕೆಗಳು ಬಲವಾದ ಸಾಧನವಾಗಿ ಪರಿಣಮಿಸಿದವು. ರಾಷ್ಟ್ರೀಯ ಜಾಗೃತಿ ಉಂಟುಮಾಡುವುದರಲ್ಲಿ ತುಂಬಾ ಯಶಸ್ವಿಯಾದವು. ಜನರಲ್ಲಿ ನ್ಯಾಯಪರತೆಯನ್ನು, ಸಮತಾ ಮನೋಭಾವವನ್ನು ಉಂಟುಮಾಡಲು ನೆರವಾದವು. ಅಧಿಕಾರಿಗಳು ತಳೆಯುತ್ತಿದ್ದ ರಾಜದ್ರೋಹದ ಭಾವನೆಗಳನ್ನು ಎಲ್ಲಾ ಕಡೆ ಹರಡಲು ಸಹಾಯಕವಾದವು. ಇದನ್ನು ತಡೆಯಲು ಅಧಿಕಾರಿಗಳಿಗೆ ಸಾಧ್ಯವಾಗಲಿಲ್ಲ. ಈ ಪತ್ರಿಕೆಗಳ ಕಾರ್ಯಕ್ರಮ ತಡೆಯಲು ೧೯೧೦ರಲ್ಲಿ ವೃತ್ತ ಪತ್ರಿಕೆಗಳ ಶಾಸನವನ್ನು ತಂದರು. ಈ ಶಾಸನದ ಪ್ರಕಾರ ಪತ್ರಿಕೆಗಳು ಸರಕಾರದ ವಿರೋಧಿ ಎಂದು ತಿಳಿದರೆ ರಕ್ಷಣಾ ಹಣ ವಸೂಲಿ ಮಾಡುವುದರ ಜೊತೆಗೆ ಹೆಚ್ಚು ಶಿಕ್ಷೆಗೂ ಗುರಿಪಡಿಸಬಹುದಾಗಿತ್ತು. ಕೊನೆಗೆ ಪತ್ರಿಕೆಗಳು ಹೊರಡುವುದಕ್ಕೆ ಮುಂಚೆಯೇ ರಕ್ಷಣಾ ಹಣ ಕೊಡುವಂತೆ ವಿಧಿಸಿದರು. ಈ ಕಾನೂನಿನಿಂದ ಪತ್ರಿಕೋದ್ಯಮಿಗಳ ಬುದ್ಧಿ ಶಕ್ತಿ ಮತ್ತು ಪ್ರಾಮಾಣಿಕತೆಗೆ ಅವಮಾನ ವಾಯಿತು. ಕೆಲವು ಪತ್ರಿಕೆಗಳು ಹಣವನ್ನು ಕೊಟ್ಟವು. ಅನೇಕ ಪತ್ರಿಕೆಗಳು ಇದನ್ನು ಪ್ರತಿಭಟಿಸಿ ಪತ್ರಿಕೆಯನ್ನು ಪ್ರಕಟಿಸುವುದನ್ನು ನಿಲ್ಲಿಸಿದವು. ಸ್ವಾತಂತ್ರ್ಯದ ಜ್ವಾಲೆಯನ್ನು ಹರಡುತ್ತಿದ್ದ ಅನೇಕ ಪತ್ರಿಕೆಗಳು ಈ ಕಾನೂನಿಗೆ ಬಲಿಯಾದವು.

ಉಗ್ರಗಾಮಿಗಳನ್ನು ಬೆಂಬಲಿಸುತ್ತಿದ್ದ, ಕೆಲವು ಪ್ರಮುಖ ಪತ್ರಿಕೆಗಳೆಂದರೆ 'ಹಿಂದೂ ಸ್ವರಾಜ್', 'ಯುಗಾಂತರ', 'ಗುಜರಾತ್ ಶಕ್ತಿ', 'ಧರ್ಮ', 'ಹಿತೈಷಿ', 'ಮಿಲ್ಕಾರಾಸಿ', 'ಕಲ್ಯಾಣಿ', 'ಬೇದಾರಿ ಪ್ರೇಮ', 'ವರ್ತಮಾನ್', 'ಆಕಾಶ್', 'ಕೇಸರಿ', 'ಕರ್ನಾಟ ವೈಭವ' 'ರಾಷ್ಟ್ರಮತ' 'ವಿಶ್ವಾಮಿತ್ರ' 'ನ್ಯೂ ಗೆಜೆಟ್' 'ಜಂಗ್ ಎಸಯ್ಯರ್' 'ನವಶಕ್ತಿ' ಮತ್ತು 'ಸಹಾಯಕ್' ಪತ್ರಿಕೆಗಳು ಒಂದಲ್ಲ ಒಂದು ರೀತಿಯಲ್ಲಿ ಸರಕಾರ ಪ್ರಹಾರಕ್ಕೆ ತುತ್ತಾದವು. ಸಾರ್ವಜನಿಕರ ಅಭಿಪ್ರಾಯವನ್ನು ಕೂಡಿಸುವುದೇ ಒಂದು ದೊಡ್ಡ ತಪ್ಪಾಗಿ ಪರಿಣಮಿಸಿತು. ಗೋಖಲೆಯವರು ಈ ಹೇಯವಾದ ವರ್ತನೆಯನ್ನು 'ರಾಜದ್ರೋಹಿಗಳ ಪಿಶಾಚಿ' ಎಂದರು. 'ಕಾಳಿ' ಪತ್ರಿಕೆಯ ಸಂಪಾದಕರ ಮೇಲೆ ರಾಜದ್ರೋಹದ ದಾವೆ ಹಾಕಿದರು. ಪಂಜಾಬಿನಲ್ಲಿ ಲಾಲಾ ಲಜಪತ್‌ರಾಯ್ ಅವರನ್ನು ದೇಶ ಬಿಟ್ಟು ಹೊರಗಡೆ ಹೋಗುವ ಆಜ್ಞೆ ಮಾಡಿದರು. ಬಂಗಾಳದಲ್ಲಿ ಕೃಷ್ಣ ಕುಮಾರ್ ಮುಂತಾದ ಅನೇಕರ ಮೇಲೆ ಬಂಗಾಳ ಬಿಟ್ಟು ಹೋಗುವಂತೆ ಆಜ್ಞೆ ಮಾಡಿದರು. ವಂದೇ ಮಾತರಂ ಪತ್ರಿಕೆಯ ಸಂಪಾದಕರಾದ ಅರವಿಂದ್ ಘೋಷ್ ಮೇಲೆ ಕ್ರಮ ತೆಗೆದುಕೊಂಡರು. ಸಂಧ್ಯಾ ಪತ್ರಿಕೆಯ ಸ್ವಾಮಿ ವಿವೇಕಾನಂದರ ಸೋದರ, ಜುಗಾಂತರ್ ಪತ್ರಿಕೆಯ ಸಂಪಾದಕ ಭೂಪೇಂದ್ರ ಗುಪ್ತರೂ ಈ ಕ್ರಮಗಳಿಗೆ ತುತ್ತಾದರು. ಅರವಿಂದ ಘೋಷರು ಸೆರೆಮನೆಯಿಂದ ಹೊರಬಂದಮೇಲೆ ಪತ್ರಿಕೆಗಳನ್ನು ತ್ಯಜಿಸಿ, ಪೂರ್ಣವಾಗಿ ಧಾರ್ಮಿಕ ಚಟುವಟಿಕೆಯಲ್ಲಿ ನಿರತರಾದರು.

ಇವರು ಕರ್ಮಯೋಗಿ ಮತ್ತು ಧರ್ಮ ಎಂಬ ಎರಡು ಪತ್ರಿಕೆಗಳನ್ನು ಹೊರಡಿಸಿದರು. ಇಲ್ಲಿಯೂ ಸರಕಾರದವರು ಅವರ ಮೇಲೆ ಮೊಕದ್ದಮೆ ಹೂಡಲು ಪ್ರಯತ್ನಿಸುತ್ತಿದ್ದಾಗ ಆಗಿನ ಕಾಲದಲ್ಲಿ ಫ್ರೆಂಚರ ವಶದಲ್ಲಿದ್ದ ಪಾಂಡಿಚೆರಿಗೆ ಹೋಗಿ ನೆಲೆಸಿದರು.

**ಬಾಂಬೆ ಕ್ರಾನಿಕಲ್ :** ಫಿರೋಜ್ ಷಾ ಮೆಹ್ತಾ, ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕ್, ಸರ್ ದಿನಷಾ ವಾಚ, ಮತ್ತು ದಾದಾಭಾಯಿ ನವರೋಜಿಯವರು ಆಗ ಭಾರತದ ಸಾರ್ವಜನಿಕರ ಮುಂದಾಳುಗಳಾಗಿದ್ದರು. ಪ್ರಗತಿ ಬಯಸಿದವರನ್ನು ಕಲೆ ಹಾಕಿದರು. ಬೊಂಬಾಯಿ ರಾಜಕೀಯದಲ್ಲಿ ಅಗ್ರಸ್ಥಾನ ಪಡೆಯಲು ಸಿದ್ಧಪಡಿಸಿದರು. 'ಟೈಮ್ಸ್ ಆಫ್ ಇಂಡಿಯಾ' 'ಬೊಂಬಾಯಿ ಗೆಜೆಟ್' ಮತ್ತು 'ಅಡ್ವೊಕೇಟ್ ಆಫ್ ಇಂಡಿಯಾ' ಮುಂತಾದ ಇಂಗ್ಲಿಷ್ ಮಾಲೀಕತ್ವದ ಪತ್ರಿಕೆಗಳು ಮೆಹ್ತಾರವರ ರಾಜಕೀಯ ಅಭಿಪ್ರಾಯಕ್ಕೆ ವಿರೋಧವಾಗಿದ್ದವು. ಇದರಿಂದ ಮೆಹ್ತಾರವರು ತಮ್ಮ ರಾಜಕೀಯ ಅಭಿಪ್ರಾಯಗಳನ್ನು ಪ್ರಚಾರ ಮಾಡುವ ಸಲುವಾಗಿ 'ಬಾಂಬೆ ಕ್ರಾನಿಕಲ್' ಇಂಗ್ಲಿಷ್ ಪತ್ರಿಕೆಯನ್ನು ಪ್ರಾರಂಭಿಸಿದರು. ಬೆಂಜಮಿನ್ ಗೈ ಹಾರ್ನಿಮನ್ ಇದರ ಸಂಪಾದಕರು. ಅನುಭವಸ್ಥ ಪತ್ರಿಕೋದ್ಯಮಿ. ಭಾರತದ ಎಲ್ಲಾ ಸ್ವಾತಂತ್ರ್ಯ ಸಂಗ್ರಾಮಗಳಲ್ಲಿ ಆಸಕ್ತಿ. ಈ ಪತ್ರಿಕೆ ಭಾರತದ ಜನತಾ ಚಳುವಳಿಗಳಲ್ಲಿ ಧೈರ್ಯದಿಂದ ಭಾಗವಹಿಸಿ ತನ್ನ ಕಾಣಿಕೆಯನ್ನು ಸಲ್ಲಿಸಿತು.

**ವಿದೇಶದಲ್ಲಿ ಭಾರತೀಯ ಪತ್ರಿಕೆ :** ಭಾರತದ ಸ್ವಾತಂತ್ರ್ಯ ಹೋರಾಟದ ಬಗ್ಗೆ ಭಾರತದ ಹೊರಗಡೆಯ ಪತ್ರಿಕೆಗಳು ಅಲ್ಲಿಯ ಜನರಿಗೂ ಭಾರತೀಯರಿಗೂ ತಿಳುವಳಿಕೆ ಕೊಡುತ್ತಿದ್ದವು, ಬೆಂಬಲವನ್ನು ಕೊಡುತ್ತಿದ್ದವು. ಅಮೇರಿಕಾದಲ್ಲಿ 'ಜೈ ಹಿಂದೂಸ್ಥಾನ್ ಪತ್ರಿಕೆ' ಅಮೇರಿಕನ್ನರಿಗೆ ಭಾರತದ ಚಳವಳಿ ಬಗ್ಗೆ ಪರಿಚಯ ಮಾಡುತ್ತಿತ್ತು. ಲಾಲಾ ಲಜಪತ್ ರಾಯ್ ಮತ್ತು ಡಾ। ಎನ್. ಎಸ್. ಹರ್ಡೀಕರ್ ಅವರುಗಳು ಪುಸ್ತಕ, ಲೇಖನ ಮತ್ತು ಭಾಷಣಗಳ ಮೂಲಕ ಆಂದೋಳನ ಸ್ವರೂಪವನ್ನು ಕೊಡುತ್ತಿದ್ದರು. ಲಂಡನ್ ಮತ್ತು ಪ್ಯಾರಿಸ್ ನಗರಗಳಿಂದ ಶ್ಯಾಜ್ಜಿ ಕೃಷ್ಣವರ್ಮಾ 'ಇಂಡಿಯಾ ಸೋಷಿಯಲಿಸ್ಟ್' ಎಂಬ ಪತ್ರಿಕೆ ಹೊರಡಿಸಿದರು. ಬ್ಯಾರಿಸ್ಟರ್ ವಿ. ಕೆ. ಕೃಷ್ಣಮೆನನ್ 'ಇಂಡಿಯಾ ಲೀಗ್' ಎಂಬ ಸಂಸ್ಥೆಯನ್ನು ಲಂಡನ್ನಿನಲ್ಲಿ ಸ್ಥಾಪಿಸಿ ಪತ್ರಿಕೆ ಮತ್ತು ಪುಸ್ತಕಗಳ ಮೂಲಕ ಸಾರ್ವಜನಿಕರ ಅಭಿಪ್ರಾಯವನ್ನು ಭಾರತದ ಕಡೆಗೆ ವಾಲಿಸಿದರು. ಯುರೋಪಿನಲ್ಲಿ ವಂದೇಮಾತರಂ, ತಲ್ವಾರ್ ಮತ್ತು ಲಂಡನ್ನಿನಲ್ಲಿ ಇಂಡಿಯಾ ಪತ್ರಿಕೆಗಳು ಬ್ರಿಟಿಷರ ಮೇಲೂ ಅಲ್ಲಿಯ ಉದಾರವಾದಿಗಳ ಮೇಲೂ ಪ್ರಭಾವ ಬೀರಿದವು.

ದಕ್ಷಿಣ ಆಫ್ರಿಕಾದಲ್ಲಿ ಭಾರತದ ಸ್ಥಿತಿಗತಿಗಳನ್ನು ಮತ್ತು ಮಹಾತ್ಮ ಗಾಂಧೀಜಿಯವರು ಸರಕಾರದ ದಬ್ಬಾಳಿಕೆಯ ಕಾನೂನು ವಿರುದ್ಧ ಹೂಡಿದ ಸತ್ಯಾಗ್ರಹದ ವೀರಗಾಥೆಗಳನ್ನು ಈ ಪತ್ರಿಕೆಗಳು ಪ್ರಕಟಿಸಿದವು. ಈ ಸುದ್ದಿಗಳು ಭಾರತೀಯ ಪತ್ರಿಕೆಗಳಿಗೂ ಆಹಾರವಾಗಿತ್ತು. ದಕ್ಷಿಣ ಆಫ್ರಿಕಾದಲ್ಲಿ ಮಹಾತ್ಮ ಗಾಂಧೀಜಿಯವರು ಅಲ್ಲಿಯ ಭಾರತೀಯರ ಕಷ್ಟ ಪರಿಹರಿಸಲು ಮತ್ತು ಸಾರ್ವಜನಿಕ ಅಭಿಪ್ರಾಯ ರೂಪಿಸಲು 'ಇಂಡಿಯನ್ ಒಪಿನಿಯನ್' ಎಂಬ ಪತ್ರಿಕೆ ಹೊರಡಿಸಿದರು. ೧೯೧೪ರಲ್ಲಿ ನಡೆದ ಮೊದಲ ಮಹಾಯುದ್ಧದ ಸುದ್ದಿಗಳ ಬಗ್ಗೆ ಭಾರತೀಯ ಪತ್ರಿಕೆಗಳು ಸ್ವತಂತ್ರ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಧೈರ್ಯ ಮಾಡಿದವು.

**ಮೊದಲ ಮಹಾಯುದ್ಧ :** ಮೊದಲ ಮಹಾಯುದ್ಧ ಪ್ರಾರಂಭವಾದಾಗ ಆಂಗ್ಲೋ ಇಂಡಿಯನ್ ಪತ್ರಿಕೆಗಳು ಭಾರತದ ಮುಂದಾಳುಗಳು ರಾಷ್ಟ್ರೀಯ ಚಳವಳಿಯನ್ನು ನಿಲ್ಲಿಸಬೇಕೆಂದು ಅಭಿಪ್ರಾಯಪಟ್ಟರು. ಆದರೆ ಭಾರತೀಯ ರಾಷ್ಟ್ರವಾದದ ಪತ್ರಿಕೆಗಳು, ಮಿತ್ರ ರಾಷ್ಟ್ರಗಳು ಯಾವ ಸ್ವಾತಂತ್ರ್ಯಕ್ಕಾಗಿ ಯುದ್ಧ ನಡೆಸುತ್ತಿವೆಯೋ ಅದೇ ಸ್ವಾತಂತ್ರ್ಯವನ್ನು ಬ್ರಿಟಿಷ್ ಸರ್ಕಾರ ಭಾರತಕ್ಕೆ ಕೊಡಬೇಕು ಎಂದು ವಾದಿಸಿದವು. ಯುದ್ಧದಲ್ಲಿ ಸಹಕಾರ ನೀಡಬೇಕೆಂದವು. ಬ್ರಿಟಿಷ್ ಸರಕಾರ ಕೇಳಿದಾಗ ಭಾರತೀಯರು ಸಂಪೂರ್ಣ ಸಹಾಯ ಮತ್ತು ಸಹಕಾರ ನೀಡಿದರು. ಯಾವ ಶರತ್ತೂ ಇಲ್ಲದೆ ಸಹಾಯ ನೀಡಿದ್ದಕ್ಕೆ ಯಾವ ರೀತಿಯ ಕೃತಜ್ಞತೆಯನ್ನೂ ಸರಕಾರ ತೋರಿಸಲೇ ಇಲ್ಲ.

ಆದರೆ ಯುದ್ಧ ಕಾಲದಲ್ಲಿ ಕೆಲವರು ಸಹಾನುಭೂತಿಯನ್ನು ತೋರಿಸಬಾರದೆಂದೂ ಭಾರತದ ಸ್ವಾತಂತ್ರ್ಯದ ಬೇಡಿಕೆಗೆ ಯಾವ ಕರಾರು ಇಲ್ಲದೆ ಮಾನ್ಯತೆ ಕೊಡಬೇಕೆಂದೂ ಒತ್ತಾಯ ಮಾಡಿದರು. ಭಾರತೀಯರಲ್ಲೇ ಎರಡು ಗುಂಪಾಯಿತು. ಡಾ। ಅನಿಬೆಸೆಂಟ್ ಹೋಮ್‌ರೂಲ್ ಲೀಗ್ ಸ್ಥಾಪಿಸಿ ತಮ್ಮ ಅಭಿಪ್ರಾಯ ಜನರಿಗೆ ಪ್ರಚಾರ ಮಾಡಲು 'ಮದ್ರಾಸ್ ಸ್ಟಾಂಡರ್ಡ್' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಕೆಲವು ದಿನಗಳನಂತರ 'ನ್ಯೂ ಇಂಡಿಯಾ' ಎಂದು ಹೆಸರು ಬದಲಾಯಿಸಿದರು. ಈ ಪತ್ರಿಕೆ ಭಾರತಕ್ಕೆ ಸ್ವಾಯತ್ತಾಧಿಕಾರ ಬರಬೇಕೆಂದು ಪ್ರತಿಪಾದಿಸಿತು. ಭಾರತದ ಸ್ವಾತಂತ್ರ್ಯ ಚಳುವಳಿ ಬಿಸಿಯೂ ಅನಿಬೆಸೆಂಟ್‌ಗೆ ತಗಲಿತು. ಅನಿಬೆಸೆಂಟ್, ಬಿ. ಪಿ. ವಾಡಿಯಾ, ಜಾರ್ಜ್, ಎಸ್. ಅರುಂಡೇಕರ್‌ರವರನ್ನು ಸರ್ಕಾರ ದಸ್ತಗಿರಿ ಮಾಡಿತು. ಆಗ ಅವರ ಕಛೇರಿ ಜನರಿಗೆ ಯಾತ್ರಾ ಸ್ಥಳವಾಗಿತ್ತು. ಸಭೆಗಳು ಸೇರುತ್ತಿದ್ದವು. ಅಲ್ಲೆ 'ಸ್ವದೇಶಿ ಮಿತ್ರನ್' ಎಂಬ ಪತ್ರಿಕೆ ಸಂಪಾದಕರಾದ ಎ. ರಂಗಸ್ವಾಮಿ ಐಯ್ಯಂಗಾರ್ 'ನ್ಯೂ ಇಂಡಿಯಾ' ಪತ್ರಿಕೆಗೆ ಅನೇಕ ರೀತಿಯ ಸಹಾಯ ಮಾಡಿದರು. ಈ ಪತ್ರಿಕೆ ಭಾರತ ಸ್ವಾತಂತ್ರ್ಯ ಚಳುವಳಿಗೆ ಪ್ರಮುಖ ಕಾಣಿಕೆ ಕೊಟ್ಟದ್ದರಿಂದ ಅನಿಬೆಸೆಂಟ್‌ರನ್ನು ಭಾರತದ ಸ್ವಾತಂತ್ರ್ಯದ ನಂದಾದೀಪ ಎಂದು ಗೌರವಿಸಿದರು.

**ಶಿಕ್ಷಣ ತರಬೇತಿ** : ಪತ್ರಿಕೋದ್ಯಮ ಶಾಸ್ತ್ರದಲ್ಲಿ ಶಿಕ್ಷಣ ಕೊಡುವ ಯೋಜನೆಯ ಮೊದಲಿಗರು ಆನಿಬೆಸೆಂಟ್. ಗಾಂಧೀಜಿಯ ಸಹಕಾರ ಚಳವಳಿಯ ಪ್ರಾರಂಭದಲ್ಲಿ ಅನೇಕ ವಿದ್ಯಾರ್ಥಿಗಳು ಸರಕಾರಿ ಶಾಲಾ ಕಾಲೇಜುಗಳನ್ನು ತ್ಯಜಿಸಿದರು. ಅಂತಹವರಿಗೆ ಗಾಂಧೀಜಿಯವರು ರಾಷ್ಟ್ರೀಯ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಬೇಕೆಂದು ಸಲಹೆ ಮಾಡಿದರು. ಆನಿಬೆಸೆಂಟ್‌ರು ಮದರಾಸಿನ ಅಡಿಯಾರ್‌ನಲ್ಲಿ ೧೯೨೦ರಲ್ಲಿ ಥಿಯಾಸಫಿಕಲ್ ಸೊಸೈಟಿ ಆಶ್ರಯದಲ್ಲಿ ಒಂದು ರಾಷ್ಟ್ರೀಯ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ವಿಶ್ವಕವಿ ರವೀಂದ್ರನಾಥ ಠಾಕೂರರು ಕುಲಪತಿಗಳು, ಡಾ। ಆನಿಬೆಸೆಂಟರು ಸಹಕುಲಪತಿಗಳು, ಸರ್. ಸಿ. ಪಿ. ರಾಮಸ್ವಾಮಿ ಐಯ್ಯರ್ ರವರು ಉಪಕುಲಪತಿಗಳೂ ಆದರು. ಡಾ। ಜೆ. ಹೆಚ್. ಕಸಿನ್ಸ್ ಇಂಗ್ಲಿಷ್ ಪತ್ರಿಕೋದ್ಯಮ ವಿಭಾಗದ ಮುಖ್ಯಸ್ಥರು. ಬ್ಯಾಚಲರ್ ಆಫ್ ಆರ್ಟ್ಸ್ ಎಂಬ ಪದವಿ ನೀಡಿದರು. ಅನೇಕ ಹಿರಿಯರು ಪಾಠಗಳನ್ನು ಹೇಳುತ್ತಿದ್ದರು. ಪತ್ರಿಕೋದ್ಯಮ ಶಿಕ್ಷಣದಲ್ಲಿ ಪ್ರಾಯೋಗಿಕ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಟ್ಟು ನ್ಯೂ ಇಂಡಿಯಾ ಕಛೇರಿಯಲ್ಲೇ ತರಬೇತಿ ನಡೆಯುತ್ತಿತ್ತು. ಆನಿಬೆಸೆಂಟ್‌ರವರರದೇ ಮುಖ್ಯ ಪಾತ್ರ. ಅಲ್ಲಿ ತಯಾರಾದವರು ಅನೇಕ ಪತ್ರಿಕೆಗಳ ಸಂಪಾದಕರೂ, ಪ್ರಕಾಶಕರೂ, ಮಾಲೀಕರೂ ಆಗಿದ್ದರು. ಮೈಸೂರಿನ 'ಸಾಧ್ವಿ' ಸಂಪಾದಕರಾದ ಅಗರಂ ರಂಗಯ್ಯನವರು ಈ ಶಾಲೆಯ ಪದವೀಧರರು. ಆನಿಬೆಸೆಂಟರು ಪತ್ರಿಕೋದ್ಯಮ ಮೂಲವ್ಯಕ್ತಿಯಾಗಿ ಗಾಂಧೀಜಿಯ ಅಸಹಕಾರ ಚಳುವಳಿಗೆ ಪ್ರತ್ಯಕ್ಷವಾದ ಕಾಣಿಕೆ ನೀಡಿದರು.

ಮೊದಲನೆ ಮಹಾಯುದ್ಧದ ನಂತರ ಪತ್ರಿಕೆಗಳನ್ನು ಹತೋಟಿಯಲ್ಲಿ ಇಡುವ ಪ್ರಯತ್ನದಿಂದ ರಾಜದ್ರೋಹದ ಅಪವಾದದಿಂದ ಅನೇಕರು ಸೆರೆಮನೆವಾಸ ಅನುಭವಿಸಬೇಕಾಯಿತು. ತಿಲಕರು 'ಕೇಸರಿ' ಪತ್ರಿಕೋದ್ಯಮ ವೃತ್ತಿಯನ್ನು ಆರಂಭಿಸುವುದರಿಂದ ಆ ವೃತ್ತಿಗೆ ಘನತೆ ಹೆಚ್ಚಿತು. ಕೇಸರಿ ಪತ್ರಿಕೆಯಲ್ಲಿ ಬರೆದ ಲೇಖನಕ್ಕೆ ರಾಜದ್ರೋಹದ ಅಪವಾದ ಹೊರೆಸಿ ಎರಡು ವರ್ಷ ಕಠಿಣ ಶಿಕ್ಷೆ ವಿಧಿಸಿದರು. ನಂತರ ಆರು ವರ್ಷಗಳ ಕಾಲ ಗಡೀಪಾರು ಮಾಡಿದರು. ಸೆರೆಮನೆಯಿಂದ ಬಂದ ಮೇಲೆ ಹೋಮ್‌ರೂಲ್ ಲೀಗ್ ಸ್ಥಾಪಿಸಿದರು. ಭಾರತದ ಸ್ವಾತಂತ್ರ್ಯ ಕೇಳಿಕೆಗೆ ಬೆಂಬಲ ಮತ್ತು ಸಹಾನುಭೂತಿ ಗಳಿಸಲು ತಿಲಕರು ಇಂಗ್ಲೆಂಡಿನ ಲೇಬರ್ ಪಾರ್ಟಿಯ ಜೊತೆಗೆ ಒಪ್ಪಂದಕ್ಕೂ ಬಂದರು. ಅವರ ಚುನಾವಣಾ ಪ್ರಣಾಳಿಕೆಯಲ್ಲಿ ಭಾರತಕ್ಕೆ ಸ್ವಾಯತ್ತಾಧಿಕಾರ ಕೊಡಬೇಕೆಂಬ ಕೇಳಿಕೆಯನ್ನು ಸೇರಿಸಿ ಬ್ರಿಟಿಷ್ ಜನರ ಮುಂದಿಟ್ಟರು. ತಿಲಕರ ಆದರ್ಶ ಜೀವನ ಮತ್ತು ವ್ಯಾವಹಾರಿಕ ಜೀವನದ ಜೊತೆಗೆ 'ಸ್ವರಾಜ್ಯ ನನ್ನ ಆಜನ್ಮಸಿದ್ದ ಹಕ್ಕು, ನಾನು ಸಾಧಿಸಿಯೇ ತೀರುತ್ತೇನೆ' ಎಂಬ ಘೋಷಣೆ ಜನಪ್ರಿಯವಾಯಿತು.

**ಮೌಲಾನ ಆಜಾದ್** : ೧೯೧೧ರಲ್ಲಿ 'ಕಾಮ್ರೇಡ್' ಎಂಬ ವಾರಪತ್ರಿಕೆಯನ್ನು ಮಹಮ್ಮದ್‌ರವರೂ ಮತ್ತು ಮೌಲಾನ ಅಬುಲ್ ಕಲಂ ಆಜಾದ್ ೧೯೧೨ರಲ್ಲಿ 'ಅಲ್ ಹಿಲಾಲ್' ಎಂಬ ಉರ್ದು ಪತ್ರಿಕೆಯನ್ನು ಸ್ಥಾಪಿಸಿದರು. ರಾಷ್ಟ್ರೀಯ ಭಾವನೆಯ ಸ್ವಾತಂತ್ರ್ಯದ ಕೆಚ್ಚನ್ನು ಹುಟ್ಟಿಸುವ ವೀರಾವೇಶವಾದದ ಲೇಖನ ಪ್ರಕಟನೆಯಿಂದ ಇಬ್ಬರೂ ಸೆರೆಮನೆ ವಾಸ ಅನುಭವಿಸಿದರು. ಎಲ್ಲಾ ಕಡೆ ಸ್ವಾತಂತ್ರ್ಯ ಜ್ವಾಲೆ ಹರಡಿತು. ಅನೇಕ ಪತ್ರಿಕೋದ್ಯಮಿಗಳು ಚಳವಳಿಯನ್ನು ಸೇರಿದ್ದಲ್ಲದೆ ಸರಕಾರವನ್ನು ಕಟುವಾಗಿ ಟೀಕಿಸುತ್ತಿದ್ದರು. ಪತ್ರಿಕಾ ಶಾಸನ ಹೆಚ್ಚು ಉಪಯೋಗವಿಲ್ಲವೆಂದು ಸರಕಾರ ಪತ್ರಿಕೆ ಹೊರಡಿಸಲು ಅನುಮತಿ ಮತ್ತು ಠೇವಣಿ ಕೇಳುವುದರ ಜೊತೆ ಜಪ್ತಿ ಮುಂತಾದ ಆಯುಧಗಳನ್ನು ಉಪಯೋಗಿಸಿ ಪತ್ರಿಕೆಗಳು ಬೆಳೆಯಲು ಅವಕಾಶ ನೀಡಲಿಲ್ಲ.

**ಸುಧಾರಣೆಗಳು** : ಬ್ರಿಟಿಷ್ ಸರ್ಕಾರದ ರಾಜ್ಯ ಕಾರ್ಯದರ್ಶಿ ಮಾಂಟೆಗೂ ಭಾರತದ ಬಗ್ಗೆ ತಮ್ಮ ನೀತಿ ಮತ್ತು ನಿಲುವನ್ನು ಘೋಷಿಸಿದರು. ಆಡಳಿತದ ಎಲ್ಲಾ ಭಾಗಗಳಲ್ಲಿ ಭಾರತೀಯರಿಗೆ ಹೆಚ್ಚು ಅವಕಾಶ ಒದಗಿಸುವುದು, ಬ್ರಿಟಿಷ್ ಸಾಮ್ರಾಜ್ಯದ ಅಂಗವಾಗಿ ಭಾರತದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಮುಖ್ಯ ಅಂಶಗಳನ್ನು ಉದಾರವಾದಿಗಳು ಸ್ವಾಗತಿಸಿದರು. ರಾಷ್ಟ್ರೀಯವಾದಿಗಳು ಪ್ರತಿಭಟಿಸಿದರು. ಡಾ। ಆನಿಬೆಸೆಂಟ್ ಚಳುವಳಿಗೆ ಬೆಂಬಲ ನೀಡಿದರು. ೧೯೧೭ರಲ್ಲಿ ಕಾಂಗ್ರೆಸ್ ಅಧ್ಯಕ್ಷರೂ ಆದರು.

**ಗಾಂಧೀಜಿ ಆಗಮನ** : 'ಸ್ವರಾಜ್ಯ ನನ್ನ ಜನ್ಮ ಸಿದ್ಧ ಹಕ್ಕು ನಾನು ಪಡೆದೇ ಪಡೆಯುತ್ತೇನೆ' ಎಂದು ಘೋಷಿಸಿದ ರಾಷ್ಟ್ರೀಯ ಚಳುವಳಿಯ ನಾಯಕ ಬಾಲಗಂಗಾಧರ ತಿಲಕರು, ೧೯೨೦ರಲ್ಲಿ ಹಠಾತ್ತನೆ ತೀರಿಕೊಂಡರು. ಆಗ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿಯ ನಾಯಕತ್ವ ವಹಿಸಲು ಪ್ರಭಾವಿತ ವ್ಯಕ್ತಿಗಳು ಯಾರೂ ಇರಲಿಲ್ಲ. ಆದರೆ ಭಾರತದ ಅದೃಷ್ಟದಿಂದ ಆ ಜಾಗಕ್ಕೆ ತಿಲಕರಷ್ಟೇ ಪ್ರಭಾವಿತರಾದ ಮಹಾತ್ಮ ಗಾಂಧೀಜಿಯವರು ಆಗಮಿಸಿದರು. ೧೯೧೫ರಲ್ಲಿ ಭಾರತಕ್ಕೆ ದಕ್ಷಿಣ ಆಫ್ರಿಕಾದಿಂದ ಹಿಂತಿರುಗಿದರು. ಸತ್ಯ, ಅಹಿಂಸೆ ಮತ್ತು ಅಸಹಕಾರ ತತ್ವಗಳಿಂದ ಕೂಡಿದ ಚಳುವಳಿಯಲ್ಲಿ ಯಶಸ್ವಿಯಾಗಿ ಭಾರತದ ರಾಷ್ಟ್ರೀಯ ಚಳುವಳಿಯ ನಾಯಕತ್ವ ವಹಿಸಿಕೊಂಡರು. ದಕ್ಷಿಣ ಆಫ್ರಿಕಾದಲ್ಲಿ ಪ್ರಕಟಿಸುತ್ತಿದ್ದ ಗಾಂಧೀಜಿಯವರ 'ಇಂಡಿಯನ್ ಒಪಿನಿಯನ್' ಪತ್ರಿಕಾಲೋಕಕ್ಕೆ ಹೊಸತೇನಲ್ಲ. ಇದರಲ್ಲಿ ಗಾಂಧೀಜಿಯವರು, ಜನತೆಗೆ ತಮ್ಮ ಅಭಿಪ್ರಾಯವನ್ನು ಪತ್ರಿಕೆಗಳ ಮೂಲಕ ಪ್ರಚಾರ ಮಾಡುವುದರಲ್ಲಿ ಯಶಸ್ವಿಯೂ ಆಗಿದ್ದರು. ಆ ದೇಶದಲ್ಲಿ ಪತ್ರಿಕೆಯ ಯಶಸ್ಸನ್ನು ಕಂಡ ಗಾಂಧೀಜಿಯವರು ಭಾರತದಲ್ಲಿ ತಮ್ಮ ಅಭಿಪ್ರಾಯ ತಿಳಿಸಲು ಇಂಗ್ಲಿಷಿನಲ್ಲಿ 'ಯಂಗ್

ಇಂಡಿಯಾ' ಗುಜರಾತಿಯಲ್ಲಿ 'ನವಜೀವನ' ಪತ್ರಿಕೆಗಳನ್ನು ಹೊರಡಿಸಿದರು. ಪತ್ರಿಕೆಗಳು ಶಾಶ್ವತವಾಗಿ ನಿಲ್ಲಬೇಕಾದರೆ ಸಾರ್ವಜನಿಕರ ಬೆಂಬಲ ಅತ್ಯಗತ್ಯ. ಸಾರ್ವಜನಿಕ ಬೆಂಬಲದಿಂದ ಬೆಳೆದರೆ ನಿಜವಾದ ಪತ್ರಿಕೆಗಳಾಗಿ ಬಾಳಲು ಸಾಧ್ಯ ಎಂಬುದು ಗಾಂಧೀಜಿಯವರ ಅಭಿಮತ. ಈ ದೃಷ್ಟಿಯಿಂದ ಅವರು ಪತ್ರಿಕೆಗಳಿಗೆ ಜಾಹೀರಾತು ತೆಗೆದುಕೊಳ್ಳಲಿಲ್ಲ. ಅವರಿಂದ ಪ್ರೇರಿತರಾಗಿ ಅನೇಕ ಯುವಕರು ಪತ್ರಿಕೋದ್ಯಮಕ್ಕೆ ಧುಮುಕಿದರು. ಅವರಂತೆ ಸರಳ ರೀತಿಯಲ್ಲಿ ಬರೆಯಲು ತಮ್ಮ ಸಂಪಾದಕ ವರ್ಗದವರಿಗೆ ತರಬೇತಿಯನ್ನು ಕೊಟ್ಟರು. ಇವರ ಪತ್ರಿಕೆಗಳಲ್ಲಿ ಬರುತ್ತಿದ್ದ ಲೇಖನಗಳನ್ನು ಯಾವ ಶರತ್ತೂ ಇಲ್ಲದೆ ಬೇರೆ ಪತ್ರಿಕೆಗಳು ಪ್ರಕಟಿಸಲು ಅನುಮತಿ ಕೊಟ್ಟರು. ಗಾಂಧೀಜಿಯವರ ಲೇಖನಗಳು ಸರ್ಕಾರದ ರೀತಿ ನೀತಿಯನ್ನು ಕಟುವಾಗಿ ಟೀಕಿಸಿ ಸರ್ಕಾರದ ಮೇಲೆ ಪ್ರಭಾವ ಬೀರುತ್ತಿದ್ದವು. ಭಾರತೀಯರ ಹೃದಯದ ಮೇಲೆ ಪ್ರಭಾವ ಬೀರಿ ಸ್ವಾತಂತ್ರ್ಯದ ಅಭಿಮಾನ ಕೆರಳಿಸಿ ರಾಷ್ಟ್ರೀಯ ಮನೋಭಾವನೆಯು ದೇಶದಲ್ಲೆಲ್ಲಾ ಹರಡಲು ಸಹಾಯಕವಾಯಿತು. ಪತ್ರಿಕೋದ್ಯಮಿ ದೇಶದಲ್ಲಿ ತನ್ನ ಪವಿತ್ರತೆಯನ್ನು ಕಾಪಾಡಿಕೊಂಡು ಘನತೆಯಿಂದ ದೇಶ ಸೇವೆ ಮಾಡಲು ಮಾರ್ಗದರ್ಶನ ಮಾಡಿದ ಕೀರ್ತಿ ಗಾಂಧೀಜಿಗೆ ಸಲ್ಲುತ್ತದೆ. ಭಾರತೀಯ ರಾಷ್ಟ್ರೀಯ ಪತ್ರಿಕೆಗಳು ಯಾವ ಪ್ರಭಾವಕ್ಕೂ ಒಳಗಾಗದೆ ಸ್ವಾತಂತ್ರ್ಯದಿಂದ ನಿರ್ಭೀತಿಯಿಂದ ತಮ್ಮ ಅಭಿಪ್ರಾಯ ವ್ಯಕ್ತಪಡಿಸಲು ಪ್ರೇರಿತರಾದರು. ಸ್ವಾತಂತ್ರ್ಯಾಭಿಮಾನವನ್ನು ಹೊಂದಿರಲು ಸ್ಫೂರ್ತಿಯೂ ಸಿಕ್ಕಿತು. ಪತ್ರಿಕೆಗಳ ಮೂಲಕ ಜನರನ್ನು ಎಚ್ಚರಿಸಿ ಮುಂದಿನ ಸ್ವಾತಂತ್ರ್ಯ ಹೋರಾಟಕ್ಕೆ ತಯಾರು ಮಾಡುವುದು ಮುಖ್ಯ ಉದ್ದೇಶ. ಅವರ ಲೇಖನಗಳಿಂದ ಪ್ರಭಾವಿತರಾಗಿ ಅನೇಕರು ಅನುಯಾಯಿಯಾದರು.

ರಾಷ್ಟ್ರಾಭಿವೃದ್ಧಿಗೆ ಅನುಕೂಲವಾಗುವಂತಹ ಮತ್ತು ಸ್ವಾತಂತ್ರ್ಯ ಚಳುವಳಿಗೆ ಬೆಂಬಲ ಕೊಡುವ ಲೇಖನಗಳೇ ಹೆಚ್ಚು. ವಿದ್ಯಾವಂತರ ಮೇಲೆ ತಮ್ಮ ಸ್ಪಷ್ಟವಾದ ಅಭಿಪ್ರಾಯವನ್ನು ನಿರ್ಭಯವಾಗಿ ಪ್ರಕಟಿಸುತ್ತಿದ್ದರು. ಹಿಂದೂ ಮುಸಲ್ಮಾನರಲ್ಲಿ ಐಕ್ಯತೆ ಮತ್ತು ಮದ್ಯಪಾನ ನಿರೋಧ, ಖಾದಿ ಮತ್ತು ಗ್ರಾಮೋದ್ಯೋಗಗಳ ಬೆಳವಣಿಗೆ, ದಲಿತರ ಕಷ್ಟ ನಿವಾರಣೆ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಚರಕ ನೂಲುವುದು, ಅಸ್ಪೃಶ್ಯತಾ ನಿವಾರಣೆ, ಭಾರಿ ಯಂತ್ರಗಳ ಉಪಯೋಗದಿಂದ ಹಳ್ಳಿಗಳಿಗೆ ನಷ್ಟ ಮುಂತಾದವುಗಳ ಬಗ್ಗೆ ಲೇಖನಗಳನ್ನು ಬರೆದು ಜನಗಳಲ್ಲಿ ಆಗಿನ ಪರಿಸ್ಥಿತಿಯ ಅರಿವಿನ ಪ್ರಜ್ಞೆಯನ್ನು - ಬೆಳೆಸಿದರು. ಜನರು ಚಿಂತಿಸಲು ಅದಕ್ಕೆ ತಕ್ಕ ಕಾರ್ಯಕ್ರಮ ರೂಪಿಸಿಕೊಂಡು ಆ ಕಾರ್ಯಕ್ರಮಗಳಲ್ಲಿ ಕೆಲಸ ಮಾಡುವುದು ದೇಶದ ಸ್ವಾತಂತ್ರ್ಯದ ಚಳುವಳಿಗಳಲ್ಲಿ ಒಂದು ಎಂಬ ಭಾವನೆ ಬೆಳೆಯಿತು. ರಚನಾತ್ಮಕ ಕಾರ್ಯಕ್ರಮಗಳು ಸರ್ವತೋಮುಖ ಬೆಳವಣಿಗೆಗೆ ಸಾಧಕಗಳಾದವು. ಸ್ವಾತಂತ್ರ್ಯ ಚಳುವಳಿಗೆ ಸಹಾಯಕವೂ ಆಯಿತು. ಈ ಸಾಧನೆಯನ್ನು ಪತ್ರಿಕಾಧರ್ಮವನ್ನು ಬಿಡದೇ ಸಾಧಿಸಿದರು. ಭಾರತದ ಪತ್ರಿಕಾಲೋಕದಲ್ಲಿ ಒಂದು ಹೊಸ ಮಾದರಿಯ ಪತ್ರಿಕಾ ವ್ಯವಸಾಯ ನಡೆಸಿ ಮಾರ್ಗದರ್ಶನ ನೀಡಿ ಜನತೆಗೆ ಕಾಮಧೇನುವಾಗುವಂತೆ ಮಾಡಿದರು ಗಾಂಧೀಜಿ.

**ಜಲಿಯನ್‌ವಾಲಾ ಬಾಗ್** : ಸ್ವಾತಂತ್ರ್ಯ ಸಂಪಾದಿಸಲು ಗಾಂಧೀಜಿ ಅನುಸರಿಸಿದ ಸತ್ಯಾಗ್ರಹ ಚಳವಳಿ ತತ್ವಕ್ಕೆ ಆನಿಬೆಸೆಂಟರು ಗಾಂಧೀಜಿಗೆ ಬೆಂಬಲ ನೀಡಲಿಲ್ಲ. ಚಳವಳಿಯಲ್ಲಿ ಹಿಂಸೆಯೂ ಕಂಡುಬಂತು. ೧೯೧೯ರಲ್ಲಿ ಹಿಂಸಾಕೃತ್ಯಗಳನ್ನು ಕಂಡು ಸತ್ಯಾಗ್ರಹ ಚಳವಳಿಯನ್ನು ಗಾಂಧೀಜಿ ನಿಲ್ಲಿಸಿದರು. ಜಲಿಯನ್ ವಾಲಾಬಾಗ್‌ದಲ್ಲಿ ನಡೆದ ದುರಂತ ಗಾಂಧೀಜಿಯವರ ಕಣ್ಣನ್ನು ತೆರೆಸಿತು. ನಿರಾಯುಧರಾಗಿದ್ದ ಸಾವಿರಾರು ನಿರಪರಾಧಿ ಜನರ ಮೇಲೆ ಬ್ರಿಟಿಷ್ ಪೊಲೀಸರು ಮತ್ತು ಮಿಲಿಟರಿಯವರು ಗುಂಡು ಹಾರಿಸಿದ್ದರಿಂದ ನೂರಾರು ಜನ ಸತ್ತರೂ ಪತ್ರಿಕೆಗಳಿಗೆ ಈ ಸುದ್ದಿ ಕೊಡಲಿಲ್ಲ. ಈ ಸುದ್ದಿ ಪತ್ರಿಕೆಗಳಿಗೆ ತಲುಪಿದ್ದರೆ ದೊಡ್ಡ ಹಿಂಸಾಕ್ರಾಂತಿಯಾಗ ಬಹುದೆಂದು ತಿಳಿದು, ಪತ್ರಿಕೆಗಳ ಮೇಲೆ ಕಾನೂನು ಹೇರಿದರು. ನಿಜವಾದ ಸುದ್ದಿ ತಿಳಿದಮೇಲೆ ಪತ್ರಿಕೆಗಳಲ್ಲಿ ಕಟುವಾಗಿ ಟೀಕಿಸಿ ಲೇಖನಗಳನ್ನು ಬರೆದರು. ಸರಕಾರ ಪತ್ರಿಕಾ ಕಾನೂನು ಉಪಯೋಗಿಸಿ ಸ್ವಾತಂತ್ರ್ಯ ಮೊಟಕು ಮಾಡಿತು. ಇದರ ಪರಿಣಾಮ 'ಬೊಂಬಾಯಿ ಕ್ರಾನಿಕಲ್' ಪತ್ರಿಕೆ ಠೇವಣಿ ಕಳೆದುಕೊಂಡಿತು. ಜೊತೆಗೆ ಸಂಪಾದಕರಾದ ಬಿ. ಜಿ. ಹ್ಯಾರಿಮನ್‌ರನ್ನು ದೇಶದಿಂದಲೇ ಗಡೀಪಾರು ಮಾಡಿದರು. ಹತ್ತು ಸಾವಿರ ರೂಪಾಯಿ ಠೇವಣಿ ಕೊಟ್ಟು ಪುನಃ ಪ್ರಾರಂಭಮಾಡಿದರು. ರಾಷ್ಟ್ರೀಯವಾದಿ ಸೈಯದ್ ಅಬ್ದುಲ್ಲ ಬೆಲ್ವಿಯವರು ಸಹಸಂಪಾದಕರಾಗಿದ್ದರು. ಬಾಂಬೆ ಕ್ರಾನಿಕಲ್ ಪತ್ರಿಕೆಯ ರಾಷ್ಟ್ರೀಯ ಮನೋಭಾವನೆಯನ್ನು ಕಂಡು ಪಂಡಿತ ಮೋತಿಲಾಲ್ ನೆಹರೂ ಪತ್ರಿಕೆಯ ಸಂಬಂಧ ಇಟ್ಟುಕೊಂಡರು.

ಉತ್ತರ ಭಾರತದದಲ್ಲಿ ಒಳ್ಳೆಯ ಇಂಗ್ಲಿಷ್ ಪತ್ರಿಕೆಯಾಗಿ 'ಲೀಡ್' ಎಂಬ ದಿನಪತ್ರಿಕೆ ಪ್ರಾರಂಭವಾಯಿತು. ೧೯೧೯ರಲ್ಲಿ ಮೋತಿಲಾಲ್ ನೆಹರೂರವರೇ 'ಇಂಡಿಪೆಂಡೆಂಟ್' ಎಂಬ ಇಂಗ್ಲಿಷ್ ದಿನಪತ್ರಿಕೆಯನ್ನು ಅಲಹಾಬಾದಿನಲ್ಲಿ ಪ್ರಾರಂಭಿಸಿದರು. ಸರಕಾರದ ಮೇಲೆ ಉಗ್ರ ಟೀಕೆ ಮಾಡಿದ್ದರಿಂದ ಹೆಚ್ಚು ದಿನ ಬಾಳಲಿಲ್ಲ. ಸಿಮ್ಲಾದ 'ಟ್ರಿಬ್ಯೂನ್', ಮದ್ರಾಸಿನ ಹಿಂದೂ ಮತ್ತು 'ಸ್ವದೇಶಿ ಮಿತ್ರನ್' ಲಾಹೋರಿನ 'ಪಂಜಾಬಿ' ಮತ್ತು 'ಪ್ರತಾಪ್' ಪತ್ರಿಕೆಗಳು ಆಕ್ಷೇಪಾರ್ಹ ಲೇಖನಗಳನ್ನು ಪ್ರಕಟಿಸಿದವೆಂದು ಶಿಕ್ಷೆಗೆ ಒಳಗಾದವು.

ಐದನೆ ಜಾರ್ಜರು ೧೯೧೯ರಲ್ಲಿ ರಾಜಾಜ್ಞೆಯನ್ನು ಹೊರಡಿಸಿ ಸುಧಾರಣೆಗಳನ್ನು ಭಾರತದಲ್ಲಿ ಜಾರಿಗೆ ತರಲು ಘೋಷಿಸಿದರು. ಭಾರತದಲ್ಲಿ ಈ ಸುಧಾರಣೆಗಳ ಮೂಲಕ ಸ್ಥಾಪಿತವಾದ ಭಾರತದ ರಾಜ್ಯಾಂಗವನ್ನು ಪ್ರಾರಂಭಿಸಲು ರಾಜಕುಮಾರ ಪ್ರಿನ್ಸ್ ಬರಬೇಕೆಂದು ತೀರ್ಮಾನವಾಯಿತು. ಈ ಸಂದರ್ಭದಲ್ಲಿ ಎಲ್ಲಾ ರಾಜಕೀಯ ಖೈದಿಗಳನ್ನು ಬಿಡುಗಡೆ ಮಾಡಲು ಸರ್ಕಾರ ತೀರ್ಮಾನಿಸಿತು. ಆಂಗ್ಲೋ ಇಂಡಿಯನ್ ಪತ್ರಿಕೆಗಳು ಸುಧಾರಣೆ ಘೋಷಣೆಗಳನ್ನು ಸ್ವಾಗತಿಸಿದರೆ, ಭಾರತದ ರಾಷ್ಟ್ರೀಯ ಪತ್ರಿಕೆಗಳು ಕಟುವಾಗಿ ಟೀಕಿಸಿ ವಿರೋಧಿಸಿದವು. ೧೯೨೧ರಲ್ಲಿ ಕನ್ನಾಟ್‌ನ ಡ್ಯೂಕನು ಹೊಸ ರಾಜ್ಯಾಂಗ ಸುಧಾರಣೆಗಳನ್ನು ಆರಂಭಿಸಿದನು. ಲಾಲಾ ಲಜಪತ್ ರಾಯ್‌ರವರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ರಾಷ್ಟ್ರಿಯ ಕಾಂಗ್ರೆಸ್ ಅಧಿವೇಶನ ಸೇರಿ ಚರ್ಚಿಸಿ ಸುಧಾರಣೆಗಳು ಅಂಗೀಕರಿಸಲು ಯೋಗ್ಯವಲ್ಲ ಎಂದು ತೀರ್ಮಾನಿಸಿದರು. ಗಾಂಧೀಜಿಯವರ ಅಸಹಕಾರ ಚಳವಳಿಯ ಕಾರ್ಯಕ್ರಮ ಚರ್ಚಿಸಿದರು.

**'ಆಜ್'**: ಹಿಂದೀ ರಾಷ್ಟ್ರಭಾಷೆ ಆಗಬೇಕೆಂದು ಬಹುಜನರು ಅಭಿಪ್ರಾಯಪಟ್ಟದ್ದರಿಂದ ಹಿಂದೀ ಭಾಷೆಯಲ್ಲಿ ಒಂದು ದಿನಪತ್ರಿಕೆ ೧೯೨೦ರಲ್ಲಿ ಕಾಳೀಯ ಶಿವಪ್ರಸಾದ್ ಗುಪ್ತ 'ಆಜ್' ಎಂಬ ಹಿಂದಿ ಭಾಷೆಯ ಪತ್ರಿಕೆ ಪ್ರಾರಂಭಿಸಿದರು. ರಾಷ್ಟ್ರೀಯವಾದ ಮತ್ತು ಕಾಂಗ್ರೆಸ್‌ನ ಮುಖ್ಯ ಉದ್ದೇಶವಾದ ಸಂಪೂರ್ಣ ಸ್ವಾತಂತ್ರ್ಯ ತತ್ವವನ್ನು ಬಲಪಡಿಸುವುದು ಈ ಪತ್ರಿಕೆಯ ಉದ್ದೇಶ. ಇಂಗ್ಲೆಂಡಿನ ಟೈಮ್ಸ್ ಪತ್ರಿಕೆ ಮಾದರಿಯಲ್ಲಿ ಹೊರಬಂದು ಜನಪ್ರಿಯವಾಯಿತು.

**ಸ್ವರಾಜ್ಯ** : ಆಂಧ್ರ ಕೇಸರಿ ಟಿ. ಪ್ರಕಾಶಂ ೧೯೨೨ರಲ್ಲಿ ಮಹಾತ್ಮ ಗಾಂಧೀಜಿಯವರ ರಾಜಕೀಯ ತತ್ತ್ವಗಳನ್ನು ಅನುಷ್ಠಾನಕ್ಕೆ ತರಲು ಸ್ವರಾಜ್ಯ ಎಂಬ ಇಂಗ್ಲಿಷ್ ಪತ್ರಿಕೆ ಹೊರತಂದರು. ಅನೇಕ ಯುವಕರು ಈ ಪತ್ರಿಕೆಗೆ ಸೇರಿಕೊಂಡರು. ಜನ ಪತ್ರಿಕೆಯು ಪ್ರಕಟನೆಯಾಗಿ ಹೊರಬರುವುದನ್ನು ಕಾಯ್ದುಕೊಂಡಿರುತ್ತಿದ್ದರು. ದಕ್ಷಿಣ ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ ಬಿರುಸಾಗಿ ನಡೆಯಲು ಸ್ವರಾಜ್ಯವು ತುಂಬಾ ಸಹಾಯ ಮಾಡಿತು. ೧೨ ವರ್ಷಗಳು ಪೂರೈಸಿ ಆರ್ಥಿಕ ನೆರವಿಲ್ಲದೆ ನಿಂತಿತು.

ಪ್ರಿನ್ಸ್ ಆಫ್ ವೇಲ್ಸ್ ಸಮಾರಂಭಕ್ಕೆ ಬಂದಾಗ ದೇಶದಲ್ಲೆಲ್ಲಾ ವಿರೋಧ ಪ್ರದರ್ಶನ ಮಾಡಿ ಸಾವಿರಾರು ಜನ ಸೆರೆಮನೆವಾಸ ಅನುಭವಿಸಿದರು. ಗಾಂಧೀಜಿ ಮಾತ್ರ ಹೊರಗಡೆ ಇದ್ದು ವಿರೋಧ ಪ್ರಚಾರ ಮಾಡುತ್ತಿದ್ದಾಗ ರಾಜದ್ರೋಹಕರವಾದ ಭಾಷಣಗಳನ್ನು ಮಾಡಿದರೆಂದು ದಸ್ತಗಿರಿ ಮಾಡಿ ಅಹಮದಾಬಾದ್ ನ್ಯಾಯಾಸ್ಥಾನದಲ್ಲಿ ವಿಚಾರಣೆಗೆ ಒಳಪಡಿಸಿ ಆರು ವರ್ಷಗಳ ಕಠಿಣ ಶಿಕ್ಷೆಯನ್ನು ವಿಧಿಸಿದರು.

ಭಾರತೀಯ ದೇಶೀಯ ಸಂಸ್ಥಾನಗಳ ರಾಜರುಗಳು ಪತ್ರಿಕೆಗಳಿಂದ ರಕ್ಷಣೆ ಬೇಕೆಂದು ಭಾರತ ಸರಕಾರಕ್ಕೆ ಮನವಿ ಮಾಡಿಕೊಂಡರು. ಇದನ್ನು ಪರಿಗಣಿಸಿ ರಾಜರಕ್ಷಣೆ ಕಾನೂನು ಜಾರಿಗೆ ತಂದು ರಾಜರುಗಳನ್ನು ಪತ್ರಿಕೆಗಳಲ್ಲಿ ಟೀಕಿಸಿದರೆ ಈ ಕಾನೂನು ಪ್ರಕಾರ ಶಿಕ್ಷೆಗೆ ಒಳಗಾಗಿಸುತ್ತಿದ್ದರು.

**ಹಿಂದೂಸ್ಥಾನ್ ಟೈಮ್ಸ್** : ಮೋತಿಲಾಲ್ ನೆಹರೂ ಮತ್ತು ಸಿ. ಆರ್. ದಾಸ್ ೧೯೨೩ರಲ್ಲಿ ಕಲ್ಕತ್ತಾ ನಗರದಲ್ಲಿ ಸಾರ್ವಜ್ ಪತ್ರಿಕೆ ಪ್ರಾರಂಭಿಸಿದರು. ಆಗ ಗಾಂಧೀಜಿ ಸೆರೆಯಲ್ಲಿದ್ದರು. ಗಾಂಧೀಜಿಯ ಚಳವಳಿಯನ್ನು ಈ ಪಕ್ಷ ಒಪ್ಪಲಿಲ್ಲ. ಸ್ವರಾಜ್ಯ ಪಕ್ಷ ಹೊಸ ಶಾಸನ ಸಭೆಯನ್ನು ಪ್ರವೇಶಿಸಿ ಸುಧಾರಣೆಗಳನ್ನು ಸಂಪೂರ್ಣವಾಗಿ ಬಹಿಷ್ಕರಿಸಬೇಕೆಂದು ಅಭಿಪ್ರಾಯಪಟ್ಟಿತು. ಸ್ವರಾಜ್ಯ ಪಕ್ಷ ತಮ್ಮ ಅಭಿಪ್ರಾಯ ಪ್ರಸಾರ ಮಾಡಲು ಹಿಂದುಸ್ಥಾನ್ ಟೈಮ್ಸ್ ದಿನಪತ್ರಿಕೆ ಸ್ಥಾಪಿಸಿ ಸರ್ದಾರ್ ಕೆ.ಎಂ. ಪಣಿಕ್ಕರ್ ಸಂಪಾದಕತ್ವದಲ್ಲಿ ಪ್ರಾರಂಭವಾಯಿತು. ಸಿಖ್ಖರಿಗೂ, ಮಹಾಂತರಿಗೂ ಮನಸ್ತಾಪ ಬಂದು ಪತ್ರಿಕೆ ಒಡೆಯರುಗಳಾಗಿದ್ದ ಸಿಖ್ಖರು ಪತ್ರಿಕೆಯನ್ನು ನಡೆಸಲಾಗದೆ ಸ್ವರಾಜ್ಯ ಪಕ್ಷದ ನಾಯಕರುಗಳಿಗೆ ಮಾರಿದರು. ಸ್ವರಾಜ್ಯ ಪಕ್ಷ ತನ್ನ ಅಧಿಕೃತ ಪತ್ರಿಕೆಯನ್ನಾಗಿ ಮಾಡಿಕೊಂಡಿತು. ೧೯೨೭ರಲ್ಲಿ ಜಿ. ಡಿ. ಬಿರ್ಲಾ ಈ ಪತ್ರಿಕೆಯನ್ನು ಕೊಂಡರು.

**ಫಾರ್ವರ್ಡ್** : ಬಂಗಾಳದಲ್ಲಿ ಸ್ವರಾಜ್ಯ ಪಕ್ಷದ ಜನಪ್ರಿಯ ನಾಯಕ ಸಿ. ಆರ್. ದಾಸ್‌ರವರು ೧೯೨೩ರಲ್ಲಿ ಕಲ್ಕತ್ತಾ ನಗರದಲ್ಲಿ ಫಾವರ್ಡ್ ಪತ್ರಿಕೆ ಪ್ರಾರಂಭಿಸಿದರು. ಚಿತ್ರರಂಜನದಾಸ್ ಈ ಪತ್ರಿಕೆಯ ಸಂಪಾದಕತ್ವ ಪಡೆದರು. ದಾಸ್‌ರವರು ಸ್ವರಾಜ್ಯ ಪಕ್ಷದ ಟೀಕಾಕಾರರಾಗಿದ್ದರು. ದಾಸ್‌ರವರು ೧೯೨೫ರಲ್ಲಿ ನಿಧನರಾದ ಮೇಲೆ ಈ ಪತ್ರಿಕೆಯ ಹೆಸರು ಲಿಬರ್ಟಿ ಎಂದು ಬದಲಾಯಿತು. ಕೆಲವು ಕಾಲಾನಂತರ ನೇತಾಜಿ ಸುಭಾಷ್‌ಚಂದ್ರ ಬೋಸ್ ಫಾರ್ವರ್ಡ್ ಎಂದು ಪುನಃ ನಾಮಕರಣ ಮಾಡಿದರು. ರಾಷ್ಟ್ರೀಯ ಪತ್ರಿಕೆಯಾಗಿ ಬಂಗಾಳದಲ್ಲಿ ಭಾರತೀಯ ಪ್ರಜಾಪ್ರಭುತ್ವ ತತ್ವದ ಬೆಳವಣಿಗೆಗೆ ಸಹಾಯಕವಾಯಿತು.

**ರಾಷ್ಟ್ರೀಯ ಸುದ್ದಿ ಸಂಸ್ಥೆ** : ಸತ್ಯ ಸುದ್ದಿಯನ್ನು ಪ್ರಕಟಿಸುವ ಸಲುವಾಗಿ ಪ್ರಿನ್ಸ್ ಆಫ್ ಇಂಡಿಯಾ ಸಂಸ್ಥೆ ಪ್ರಾರಂಭವಾಯಿತು. ಇದನ್ನು ಸ್ಥಾಪಿಸಲು ಆನಿಬೆಸೆಂಟ್, ಎಂ. ಆರ್. ಜಯಕರ್, ಬಿರ್ಲಾ, ಜಯಕರ್ ವಾಲಚಂದ್, ಹೀರಾಚಂದ್ ಕಾರಣಕರ್ತರು.

ದೇಶಾಭಿಮಾನಪೂರಿತವಾದ ಸುದ್ದಿ ಪ್ರಸಾರವಾಯಿತು. ಸುದ್ದಿ ಸಂಸ್ಥೆಯ ಸುದ್ದಿ ಪ್ರಕಟಿಸಿದರೆ ಪತ್ರಿಕೆಗಳನ್ನು ಮುಟ್ಟುಗೋಲು ಹಾಕಲಾಗುವುದೆಂದು ಸರಕಾರ ಬೆದರಿಕೆ ಹಾಕಿತು.

ಹಾಗೆ ೨೦ನೇ ಶತಮಾನದ ಮೊದಲ ೩೦ ವರ್ಷಗಳಲ್ಲಿ ಭಾರತ ಸ್ವಾತಂತ್ರ್ಯ ಚಳುವಳಿಯ ಫಲವಾಗಿ ಪತ್ರಿಕಾ ಲೋಕದಲ್ಲಿ ಅಗಾಧವಾದ ಬೆಳವಣಿಗೆಯಾಯಿತು. ಹೊಸ ದಿನಪತ್ರಿಕೆಗಳು ಜನಿಸಿದವು. ಭಾರತದಾದ್ಯಂತ ಜನ ಎಚ್ಚರಗೊಂಡರು. ದೇಶದಲ್ಲಿ ಉದ್ಭವವಾಗುತ್ತಿದ್ದ ರಾಷ್ಟ್ರೀಯ ಜಾಗೃತಿಯ ಬೆಳವಣಿಗೆಯಲ್ಲಿ ಪತ್ರಿಕೆಗಳು ತುಂಬಾ ಸಹಾಯಕವಾಗಿದ್ದವು. ಭಾರತದ ರಾಷ್ಟ್ರೀಯ ಪತ್ರಿಕೆಗಳು ಅಷ್ಟು ಉಚ್ಚಸ್ಥಿತಿಯಲ್ಲಿ ಇರಲಿಲ್ಲ, ಬೆಳವಣಿಗೆಗೆ ಅಡ್ಡಿಗಳೇ ಹೆಚ್ಚು. ಜಾಹೀರಾತು ಪೂರ್ಣವೃತ್ತಿಯಾಗಿ ಬೆಳೆದಿರಲಿಲ್ಲ. ಸರಕಾರದ ನೆರವು ಇರಲಿಲ್ಲ. ತಾಂತ್ರಿಕ ಬೆಳವಣಿಗೆಯಲ್ಲೂ ಹಿಂದೆ. ಆದರೆ ಭಾರತೀಯ ಯಾಜಮಾನ್ಯದ ಪತ್ರಿಕೆಗಳು ಶೈಲಿ, ನಿರೂಪಣೆಗಳಲ್ಲಿ ವೈವಿಧ್ಯತೆ, ಧೈರ್ಯವನ್ನು ಹೊಂದಿದ್ದವು. ಸತ್ಯ, ವೀರರಸದಿಂದ ಕೂಡಿದ್ದವು. ಸ್ವಾತಂತ್ರ್ಯ ಚಳವಳಿಯ ಫಲವಾಗಿ ಧೈರ್ಯ ಬಂದಿತು. ಭಾರತೀಯ ಇಂಗ್ಲಿಷ್ ಮತ್ತು ಭಾಷಾ ಪತ್ರಿಕೆಗಳು ಪ್ರಾರಂಭದಿಂದ ತಮ್ಮ ಸೇವೆಯನ್ನು ಮಾಡಿ ದೇಶಕ್ಕೆ ಬಹು ಅಮೂಲ್ಯವಾದ ಕಾಣಿಕೆಯನ್ನು ಸಲ್ಲಿಸಿದವು.

**ಸ್ವಾತಂತ್ರ್ಯ ಹೋರಾಟ** : ಭಾರತದ ಪತ್ರಿಕೆಗಳು ಸ್ವಾತಂತ್ರ್ಯ ಹೋರಾಟದಲ್ಲಿ, ಚಳವಳಿಗಳಲ್ಲಿ ಧೈರ್ಯವಾಗಿ ಪಾತ್ರ ನಿರ್ವಹಿಸಿದವು. ೧೯೨೦ರಲ್ಲಿ ಪ್ರಾರಂಭವಾದ ಅಸಹಕಾರ ಚಳವಳಿಯಲ್ಲಿ ಪತ್ರಿಕೆಗಳ ಪಾತ್ರ ವಿಶೇಷ. ಬ್ರಿಟಿಷರ ವಿರುದ್ಧ ದ್ವೇಷ ಹುಟ್ಟಿಸುವಂತಹ ಲೇಖನಗಳನ್ನು ಬರೆದವು. ಬ್ರಿಟಿಷ್ ಆಡಳಿತ ಹೇಯವಾಗಿದೆ ಎಂಬ ವಾದವನ್ನು ಜನರಲ್ಲಿ ಮನದಟ್ಟು ಮಾಡಿದವು. ಸ್ವಾತಂತ್ರ್ಯ ಸಂಗ್ರಾಮ, ಪತ್ರಿಕಾ ಸ್ವಾತಂತ್ರ್ಯದ ಸಂಗ್ರಾಮದಲ್ಲಿ ಹೋರಾಡುತ್ತಿದ್ದ ಸಂಪಾದಕರುಗಳನ್ನು ಸೆರೆಮನೆಗೆ ಹಾಕುವುದರಿಂದೇನೂ ಪ್ರಯೋಜನವಾಗುವುದಿಲ್ಲ ಎಂಬುದು ಆಡಳಿತಗಾರರಿಗೆ ಅರಿವಾಯಿತು. ಪತ್ರಿಕೆಗಳಿಗೂ ಸರಕಾರಕ್ಕೂ ತಿಕ್ಕಾಟ ನಡೆಯುತ್ತಲೇ ಇತ್ತು. ಭಾರತೀಯ ರಾಜಕೀಯದಲ್ಲಿ ಗಾಂಧೀಜಿ ಪ್ರವೇಶಿಸಿ ಪತ್ರಿಕೆಗಳ ಮೇಲೆ ತುಂಬಾ ಪರಿಣಾಮ ಬೀರಿದರು. ಗಾಂಧೀಜಿ ರಾಜಕೀಯ ಜ್ಞಾನ ಉಂಟುಮಾಡಿದಂತೆ ಪತ್ರಿಕೆಗಳ ಮೇಲೂ ಪ್ರಭಾವ ಹೆಚ್ಚಿಗೆ ಬೀರಿತು. ಭಾರತ ಸ್ವಾತಂತ್ರ್ಯದ ಕ್ರಾಂತಿ ತತ್ವಗಳನ್ನು ಪ್ರಚಾರ ಮಾಡುವುದು ತಮ್ಮ ಮುಖ್ಯ ಧ್ಯೇಯವಾಗಿ ಪರಿಗಣಿಸಿ ಪ್ರಚಾರ ಮಾಡಿದವು. ಗಾಂಧೀಜಿಯ ಭಾರತದ ಪ್ರವೇಶ ದೇಶದ ಎಲ್ಲಾ ಕ್ಷೇತ್ರಗಳಲ್ಲೂ ಅಗೋಚರವಾಗಿ ತುಂಬಾ ಮಹತ್ವಪೂರ್ಣ ಪರಿಣಾಮ ಬೀರಿತು. ಗಾಂಧೀಜಿ ಬ್ರಿಟಿಷ್ ಸರ್ಕಾರದ ವಿರುದ್ಧ ದಕ್ಷಿಣ ಆಫ್ರಿಕಾದಲ್ಲಿ ಹೋರಾಡಿ ಸಾಕಷ್ಟು ಜಯಗಳಿಸಿ ಬಂದಿದ್ದರು. ಭಾರತದಲ್ಲೂ ಜಯಗಳಿಸಬಹುದೆಂಬ ನಂಬಿಕೆ ಇತ್ತು. ಗಾಂಧೀಜಿ ಅಮೃತಸರ ಕಾಂಗ್ರೆಸ್ ಅಧಿವೇಶನದಲ್ಲಿ ಭಾರತದ ನಾಯಕತ್ವದ ಪಟ್ಟಕ್ಕೇರಿದರು. ಗಾಂಧೀಜಿ ಸತ್ಯ, ಅಹಿಂಸೆ ತತ್ವಗಳ ಆಧಾರದ ಮೇಲೆ ತಾವು ಭಾರತದ ಸ್ವಾತಂತ್ರ್ಯವನ್ನು ಪಡೆಯುವುದಾಗಿ ಸಾರಿದರು. ಭಾರತೀಯರು ಸರಳ ಜೀವನ ನಡೆಸಬೇಕೆಂದೂ ಪರದೇಶಿ ವಸ್ತುವನ್ನು ಮತ್ತು ಸಾಮಾನುಗಳನ್ನು ಬಹಿಷ್ಕಾರ ಹಾಕಿ ಸ್ವದೇಶಿ ವಸ್ತ್ರಗಳನ್ನೇ ಬಳಸಬೇಕೆಂದೂ ಕರೆ ನೀಡಿದರು. ಚರಕ ಭಾರತದ ಆರ್ಥಿಕತೆಯ ಸಂಕೇತವಾಯಿತು. ದರಿದ್ರ ನಾರಾಯಣನ ಬಡತನ ನೀಗಲು ಚರಕವೇ ಕಾಮಧೇನು ಎಂದು ತಾವೇ ಉದಾಹರಣೆಯಾಗಿ ನಡೆದು ತೋರಿಸಿದರು. ತಾವೇ ನೂತರು ಮತ್ತು ಅವರೇ ನೂತ ಬಟ್ಟೆ ಉಟ್ಟರು. ನನ್ನ ಪ್ರಾರ್ಥನೆ ಮನ್ನಿಸಿ, ಜನತೆ ನಾನು ಹೇಳಿದ ಹಾಗೆ ನಡೆದುಕೊಂಡರೆ ಕ್ಷಣ ಮಾತ್ರದಲ್ಲಿ ಸ್ವರಾಜ್ಯ ಲಭಿಸುತ್ತದೆ ಎಂದು ಘೋಷಿಸಿದರು.

**ಸೈಮನ್ ಕಮಿಷನ್** : ಮಾಂಟೆಗೋ ಚೆಲ್ಮ್ಸ್‌ಫರ್ಡ್ ಸುಧಾರಣೆಗಳನ್ನು ಗಾಂಧೀಜಿ ವಿರೋಧಿಸಿದರು. ರಾಷ್ಟ್ರೀಯ ಪತ್ರಿಕೆಗಳು ಗಾಂಧೀಜಿಯ ವಿರೋಧವನ್ನು ಪ್ರಕಟಿಸಿದವು. ಭಾರತೀಯರ ಆಶೋತ್ತರಗಳನ್ನು ಪೂರ್ಣಗೊಳಿಸುವ ಸಲುವಾಗಿ ಸುಧಾರಣೆಗಳಲ್ಲಿ ಸೂಕ್ತ ಬದಲಾವಣೆಗಳನ್ನು ಶಿಫಾರಸ್ಸು ಮಾಡಲು ಸೈಮನ್ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿ ಭಾರತಕ್ಕೆ ಕಳುಹಿಸಿದರು. ಆದರೆ ಸಮಿತಿಯ ಧ್ಯೇಯ, ಉದ್ದೇಶ ಮತ್ತು ರಚನೆಗಳಲ್ಲಿ ಭಾರತೀಯರಿಗೆ ನಂಬಿಕೆ ಇರಲಿಲ್ಲ. ಸೈಮನ್ ಸಮಿತಿಯನ್ನು ಭಾರತದ ಎಲ್ಲರೂ ಸರ್ವಾನುಮತದಿಂದ ವಿರೋಧಿಸಿದರು. ಸಮಿತಿ ಸಾಕ್ಷಿ ಸಾಹಿತ್ಯವನ್ನು ಸಂಗ್ರಹಿಸಲು ಹೋದ ಕಡೆ ಬಲವಾದ ಬಹಿಷ್ಕಾರ ಹಾಕಿದರು. ಸಮಿತಿಯ ವಿರುದ್ಧ ಪ್ರದರ್ಶನ ದೊಡ್ಡ ಪ್ರಮಾಣದಲ್ಲಿ ನಡೆಯಿತು. ಬಹಿರಂಗ ಸಭೆ ನಡೆಸಿ ಜನರು ವಿರೋಧ ವ್ಯಕ್ತಪಡಿಸಿದರು. ಭಾರತದ ಪತ್ರಿಕೆಗಳು ಈ ಬಹಿಷ್ಕಾರ ಪ್ರದರ್ಶನ ಮತ್ತು ವಿರೋಧವನ್ನು ದೊಡ್ಡ ಪ್ರಮಾಣದಲ್ಲಿ ಪ್ರಚಾರ ಮಾಡಿದವು. ಶೇಕಡಾ ೭೫ ರಿಂದ ೮೦ಭಾಗ ರಾಷ್ಟ್ರೀಯ ಪತ್ರಿಕೆಗಳು ಸೈಮನ್ ಸಮಿತಿಯ ವಿರೋಧದ ಸುದ್ದಿಗಳಿಗಾಗಿ ಮೀಸಲಾಗಿಟ್ಟವು.

೧೯೨೯ರಲ್ಲಿ ಬ್ರಿಟನ್‌ನಲ್ಲಿ ಲೇಬರ್ ಪಕ್ಷ ಜಯಗಳಿಸಿ ಸರಕಾರ ಸ್ಥಾಪಿಸಿತು. ಈ ಪಕ್ಷದಿಂದ ಭಾರತದ ಸಮಸ್ಯೆ ಬಗೆಹರಿಯಬಹುದೆಂಬ ಆಕಾಂಕ್ಷೆ ಇತ್ತು. ವೈಸರಾಯ್ ಲಾರ್ಡ್ ಇರ್ವಿನ್, ಬ್ರಿಟನ್ ಭಾರತದ ಮತ್ತು ದೇಶೀಯ ಸಂಸ್ಥಾನದ ಪ್ರತಿನಿಧಿಗಳ ಒಂದು ಸಭೆಯನ್ನು ಕರೆಯುವ ಉದ್ದೇಶವಿದೆ ಎಂದು ಬ್ರಿಟಿಷ್ ಸರ್ಕಾರ ಘೋಷಿಸಿದಾಗ ಕಾಂಗ್ರೆಸ್ ಬಿಟ್ಟು ಮಿಕ್ಕವರು ಭಾಗವಹಿಸಲು

ಒಪ್ಪಿದರು. ಆಂಗ್ಲೋ ಇಂಡಿಯನ್ ಪತ್ರಿಕೆಗಳು ಸಂಪೂರ್ಣ ಬೆಂಬಲ ನೀಡಿದರೆ ರಾಷ್ಟ್ರೀಯ ಪತ್ರಿಕೆಗಳು ಸಮ್ಮೇಳನವನ್ನು ಬಹಿಷ್ಕರಿಸಲು ಕರೆ ನೀಡಿದವು.

**ದಂಡೀಯಾತ್ರೆ** : ಭಾರತಕ್ಕೆ ಸ್ವಾತಂತ್ರ್ಯ ಪಡೆಯಲು ಹೋರಾಟ ಅನೇಕ ವಿಧವಾಗಿ ಯಾರ ಅಡ್ಡಿಯೂ ಇಲ್ಲದೆ ನಡೆಯ ತೊಡಗಿತು. ಸರಕಾರದ ದಬ್ಬಾಳಿಕೆಯಿಂದ ಜನರನ್ನು ಹೆದರಿಸಲು ಸಾಧ್ಯವಾಗಲಿಲ್ಲ. ೧೯೩೦ರಲ್ಲಿ ಗಾಂಧೀಜಿಯವರು ಉಪ್ಪಿನ ಸತ್ಯಾಗ್ರಹ ಪ್ರಾರಂಭಿಸಿದರು. ಉಪ್ಪಿನ ತೆರಿಗೆಯನ್ನು ವಿರೋಧಿಸಿ ಕಾಲುನಡಿಗೆಯಲ್ಲಿ ಸಮುದ್ರದ ದಡಕ್ಕೆ ಹೋಗಿ ಉಪ್ಪನ್ನು ತಾವೇ ಮಾಡಿ ಚಳವಳಿ ಮಾಡಿದರು. ತಾವು ಮತ್ತು ನಂಬಿಕೆಯ ಸಂಗಡಿಗರೊಡನೆ ಕಾನೂನು ವಿರೋಧಿಸಿ ಉಪ್ಪನ್ನು ತಯಾರು ಮಾಡುವುದರ ಮೂಲಕ ಪ್ರಪಂಚಕ್ಕೆ ಅಸಹಕಾರ ಚಳವಳಿಯ ಮಹತ್ವದ ಅರಿವನ್ನುಂಟುಮಾಡಿದರು. 'ದಂಡೀಯಾತ್ರೆ' ಎಂದು ಇದು ಪ್ರಸಿದ್ಧವಾಯಿತು. ಇದರಿಂದ ಗಾಂಧೀಜಿ ದಸ್ತಗಿರಿಯಾದರು. ಪತ್ರಿಕೆಗಳು ಪ್ರತಿ ಹಂತದಲ್ಲೂ ಎಲ್ಲಾ ಅಂಶಗಳನ್ನು ಪ್ರಕಟಿಸಿ ಹೋರಾಟಕ್ಕೆ ಪೂರ್ಣ ಬೆಂಬಲ ಕೊಟ್ಟವು. ಪತ್ರಿಕೆಗಳು ಈ ಚಳವಳಿಗೆ ಪ್ರಚಾರ ಸಾಧನವೆಂದು ತಿಳಿದು ಸರ್ಕಾರ ತಕ್ಷಣ ಪತ್ರಿಕೆಗಳ ಬಾಯಿಗೆ ಬೀಗಮುದ್ರೆ ಹಾಕಿತು. ೧೯೩೦ರಲ್ಲಿ ಭಾರತದ ಪತ್ರಿಕೆಗಳ ತುರ್ತು ಶಾಸನ ಜಾರಿಗೆ ತಂದು ಪ್ರಕಟಿಸಿ ಎಲ್ಲಾ ಕ್ಷೇತ್ರಗಳಿಗೂ ವಿಸ್ತರಿಸಿದರು. ಕಾನೂನು ಪ್ರಕಾರ ಅನೇಕ ಪತ್ರಿಕೆಗಳು ನಿಂತವು. ದೇಶದಾದ್ಯಂತ ವಿರೋಧ ವ್ಯಕ್ತವಾಯಿತು. ಹಿರಿಯ ರಾಷ್ಟ್ರೀಯ ಪತ್ರಿಕೋದ್ಯಮಿಗಳು, ಮುಖ್ಯ ಪತ್ರಿಕೆಗಳ ಸಂಪಾದಕರು ಮೊದಲ ಬಾರಿಗೆ ಸಭೆ ಸೇರಿದರು. ಮದರಾಸಿನ ಹಿಂದೂ ಪತ್ರಿಕೆಯ ಸಂಪಾದಕರಾದ ರಂಗಸ್ವಾಮಿ ಅಯ್ಯಂಗಾರ್ ಈ ಸಭೆಯ ಅಧ್ಯಕ್ಷತೆ ವಹಿಸಿದ್ದರು. ತುರ್ತು ಶಾಸನವನ್ನು ಹಿಂತೆಗೆದುಕೊಳ್ಳುವಂತೆ ಪ್ರಾರ್ಥಿಸಿದರು. ಆದರೆ ಸರಕಾರ ಕಿವಿಗೆ ಹಾಕಿಕೊಳ್ಳದೇ ದಬ್ಬಾಳಿಕೆಯನ್ನು ಹೆಚ್ಚಿಸಿತು.

ಸರಕಾರದ ಯಾವ ಕಾರ್ಯಕ್ರಮಗಳೂ ಜನತೆಯ ನಿರ್ಧಾರವನ್ನು ಬದಲಾಯಿಸಲು ಸಾಧ್ಯವಾಗಲಿಲ್ಲ. ಪತ್ರಿಕೆಯ ಬಾಯಿಗೆ ಬೀಗ ಹಾಕಿದ ಹಾಗೆಲ್ಲ ಅನಧಿಕೃತ ಪತ್ರಿಕೆಗಳು ಹುಟ್ಟಿಕೊಂಡವು. ಇವು ಸ್ವಾತಂತ್ರ್ಯ ಹೋರಾಟದ ಸುದ್ದಿಗಳನ್ನು ಕೊಡುತ್ತಿದ್ದವು. ಇಂತಹ ಪತ್ರಿಕೆಗಳಲ್ಲಿ ಬೊಂಬಾಯಿಯಿಂದ ಹೊರಟ 'ಕಾಂಗ್ರೆಸ್ ಬುಲೆಟಿನ್' ಎಂಬುದು ಪ್ರಮುಖ.

ಉಪ್ಪಿನ ಸತ್ಯಾಗ್ರಹದಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಮಹತ್ವದ ಪಾತ್ರ ವಹಿಸಿತು. ಪತ್ರಿಕೆಗಳು ವೀರಾವೇಶ, ದೇಶಾಭಿಮಾನ ತುಂಬುವ ಲೇಖನಗಳನ್ನು ಬರೆಯುವುದರ ಮೂಲಕ ಜನತೆಯ ಉತ್ಸಾಹವನ್ನು ಜೀವಂತವಾಗಿರಿಸಿದವು. ಸತ್ಯಾಗ್ರಹ ಚಟುವಟಿಕೆಗಳನ್ನು ದೊಡ್ಡ ಅಕ್ಷರಗಳ ಶೀರ್ಷಿಕೆಗಳಲ್ಲಿ ಪ್ರಕಟಿಸಿ ನಾಯಕರ ಭಾವಚಿತ್ರದ ಜೊತೆಗೆ ಮೊದಲನೆಯ ಪುಟದಲ್ಲಿ ಮುದ್ರಿಸಿ ಜನತೆಯ ಗಮನ ಸೆಳೆದರು. ಸತ್ಯಾಗ್ರಹದ ಸುದ್ದಿಗಳು, ಮೆರವಣಿಗೆಗಳು, ಲಾಠಿ ಏಟು ತಿಂದ, ಗಾಯಗೊಂಡ ಸ್ವಯಂ ಸೇವಕರ ಭಾವಚಿತ್ರಗಳು ಇತರ ಸುದ್ದಿಗಳೊಡನೆ ಜನತೆಯಲ್ಲಿ ಚೇತನ ಉಂಟುಮಾಡಿತು. ರಾಷ್ಟ್ರೀಯವಾದಿಗಳ ಹೋರಾಟದಂತೆ ರಾಷ್ಟ್ರೀಯ ಪತ್ರಿಕೆಗಳೂ ಸರ್ಕಾರದೊಡನೆ ಹೋರಾಡಿದವು.

**ಫ್ರೀಪ್ರೆಸ್ ಜರ್ನಲ್** : "ಫ್ರೀಪ್ರೆಸ್ ಆಫ್ ಇಂಡಿಯಾ" ಸುದ್ದಿ ಸಂಸ್ಥೆಯ ರಾಷ್ಟ್ರಪ್ರೇಮವನ್ನು ಕೆರಳಿಸುವಂತಹ ಸುದ್ದಿಯನ್ನು ಪ್ರಕಟಿಸುತ್ತಿದ್ದ ಪತ್ರಿಕೆಗಳಿಗೆ ಸರಕಾರ ಕಿರುಕುಳ ಕೊಡುತ್ತಿತ್ತು. ಈ ಕಿರುಕುಳ ತಡೆಯಲಾರದೆ ಅನೇಕ ಪತ್ರಿಕೆಗಳು ಫ್ರೀ ಪ್ರೆಸ್ ಆಫ್ ಇಂಡಿಯಾ ಸುದ್ದಿ ಸಂಸ್ಥೆಯ ಚಂದಾದಾರರಾಗಲು ನಿರಾಕರಿಸಿದವು. ಆರ್ಥಿಕ ಮುಗ್ಗಟ್ಟಿಗೆ ಸಿಕ್ಕಿದ್ದರಿಂದ ತಾವೇ ಒಂದು ಪತ್ರಿಕೆಯನ್ನು ಪ್ರಾರಂಭಿಸಲು ಯೋಚಿಸಿ ಅನಿವಾರ್ಯವಾಗಿ 'ಫ್ರೀ ಪ್ರೆಸ್ ಜರ್ನಲ್' ಇಂಗ್ಲಿಷ್ ಪತ್ರಿಕೆ ಪ್ರಾರಂಭಿಸಿತು. ರಾಜಕೀಯ ಸುದ್ದಿಯ ಜೊತೆಗೆ ಸ್ವಾತಂತ್ರ್ಯ ವೀರಯೋಧರ ಚಟುವಟಿಕೆ, ಆಂದೋಳನದ ಪ್ರಗತಿಯನ್ನು ಮತ್ತು ಸುದ್ದಿಯನ್ನು ದಪ್ಪ ಅಕ್ಷರದಲ್ಲಿ ಮುದ್ರಿಸಿತು. ಪತ್ರಿಕೆ ಜನಾನುರಾಗಿಯೂ ಆಯಿತು. ಓದುಗರ ಅಭಿರುಚಿಗೆ ಪಾತ್ರರಾಗಲು ಮುಖ್ಯ ಕಾರಣ ಸಂಸ್ಥಾಪಕ ಎಸ್. ಸದಾನಂದ, ಸರ್. ಪುರುಷೋತ್ತಮ ದಾಸ್, ಥಾಕೂರ್‌ದಾಸ್, ವಾಲ್ ಚಂದ್ ಹೀರಾ ಚಂದ್, ಜಿ. ಡಿ. ಬಿರ್ಲಾ ಎಂ. ಆರ್. ಜಯಕರ್ ಮುಂತಾದವರು ಬೆಂಬಲಿಸಿದರು.

**ದುಂಡು ಮೇಜಿನ ಸಮ್ಮೇಳನ** : ೧೯೩೦ರಲ್ಲಿ ಗಾಂಧೀಜಿ ಅಸಹಕಾರ ಚಳವಳಿ ಪ್ರಾರಂಭಿಸಿದ ಮೇಲೆ ಭಾರತೀಯ ರಾಜಕೀಯ ಸ್ಥಿತಿ ಹದಗೆಟ್ಟಿತು. ಜೊತೆಗೆ ಸರಕಾರದ ದಬ್ಬಾಳಿಕೆ, ಕಾನೂನು ದಸ್ತಗಿರಿ ಮುಂತಾದವುಗಳಿಂದ ಸರಕಾರಕ್ಕೆ ಜನರ ಮೇಲಿನ ಹತೋಟಿ ಕಡಿಮೆ ಆಗುತ್ತಾ ಬಂತು. ಚಳವಳಿಗಳು ತೀವ್ರ ಸ್ವರೂಪವನ್ನು ಕಾಣತೊಡಗಿದವು. ಬ್ರಿಟಿಷ್ ಸರ್ಕಾರ ಭಾರತೀಯರ ಜೊತೆಗೆ ಚರ್ಚಿಸಲು ದುಂಡು ಮೇಜಿನ ಸಮ್ಮೇಳನವನ್ನು ಕರೆದರು. ಆದರೆ ಭಾರತಕ್ಕೆ ಸ್ವಾತಂತ್ರ್ಯ ಕೊಡುವ ಮೂಲ ತತ್ವ ಚರ್ಚಿಸಲು ಅವಕಾಶವಿಲ್ಲ ಎಂದು ತಿಳಿಸಿದ್ದರಿಂದ ಉದಾರವಾದಿಗಳು ಭಾಗವಹಿಸಲು ಪ್ರೋತ್ಸಾಹಿಸಿದರು. ಮೊದಲ ಸಭೆ ಲಂಡನ್ನಲ್ಲಿ ಸೇರಿತು.

ಗಾಂಧೀಜಿ ಮತ್ತು ಇತರ ಕಾಂಗ್ರೆಸ್ ನಾಯಕರು ಸಭೆಯಲ್ಲಿ ಭಾಗವಹಿಸುವಂತೆ ಮನವೊಲಿಸಲು ಪ್ರಯತ್ನಿಸಿದರು. ಅಮೃತ್ ಬಜಾರ್ ಪತ್ರಿಕೆ, ಬಾಂಬೆ ಕ್ರಾನಿಕಲ್, ಹಿಂದೂ, ಲೀಡರ್, ಮೈಲ್, ಪಯನೀಯರ್, ಸ್ಟೇಟ್ಸ್‌ಮನ್, ಮತ್ತು ಟೈಮ್ಸ್ ಆಫ್ ಇಂಡಿಯಾ ಪತ್ರಿಕಾ ವರದಿಗಾರರು ಈ ಸಭೆಯಲ್ಲಿ ಭಾಗವಹಿಸಿದರು. ಜೊತೆಗೆ ಲೀಡರ್ ಪತ್ರಿಕೆಯ ಸಿ. ವೈ. ಚಿಂತಾಮಣಿ ಮತ್ತು ಯಂಗ್ ಇಂಡಿಯಾದ ಶಿವರಾಯರು ಪ್ರತಿನಿಧಿಸಿದರು. ಪತ್ರಿಕೆಗಳು ಈ ದುಂಡುಮೇಜಿನ ಸಭೆಯ ಸುದ್ದಿಯನ್ನು ವಿವರವಾಗಿ ಪ್ರಕಟಿಸಿದವು. ಸಂಯುಕ್ತ ಸಾಮ್ರಾಜ್ಯ ಪದ್ಧತಿಗೆ ಭಾರತದ ದೊಡ್ಡ ಪಕ್ಷವಾದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಸಹಕಾರ ಪಡೆಯಲು ಸರಕಾರ ನಿರ್ಧರಿಸಿತು.

ಕಾಂಗ್ರೆಸ್ ನಾಯಕರನ್ನು ಬಿಡುಗಡೆ ಮಾಡಿದರು. ಬ್ರಿಟಿಷ್ ಸಾಮಗ್ರಿಗಳ ಬಹಿಷ್ಕಾರ ಮುಂದುವರಿಯಿತು. ಇದರಿಂದ ಕೆಲವರು ದಸ್ತಗಿರಿಯಾದರು. ಸಹಕಾರ ಚಳುವಳಿಯನ್ನು ನಿಲ್ಲಿಸಿ ಶಾಂತಿಯುತವಾದ ವಾತಾವರಣ ಕಲ್ಪಿಸಲು ಗಾಂಧೀಜಿ ಮತ್ತು ಕೆಲವು ನಾಯಕರುಗಳನ್ನು ಬಿಡುಗಡೆ ಮಾಡಿದರು. ಗಾಂಧೀಜಿ, ಸಪ್ರು ಜಯಕರ್ ಮುಂತಾದ ನಾಯಕರು ಆಗಿನ ವೈಸರಾಯ್ ಇರ್ವಿನ್‌ನ್ನು ಭೇಟಿ ಮಾಡಿ ಚರ್ಚಿಸಿದರು. ಇದರ ಫಲಿತಾಂಶವಾಗಿ ಗಾಂಧೀ-ಇರ್ವಿನ್ ಒಪ್ಪಂದವಾಯಿತು. ಒಪ್ಪಂದದಂತೆ ಗಾಂಧೀಜಿ ಲಂಡನ್‌ನಲ್ಲಿ ನಡೆದ ದುಂಡು ಮೇಜಿನ ಸಭೆಯಲ್ಲಿ ಭಾಗವಹಿಸಿದರು. ಆದರ ಈ ಸಭೆಯಲ್ಲಿ ಬ್ರಿಟಿಷ್ ಸರ್ಕಾರಕ್ಕೂ ಗಾಂಧೀಜಿಗೂ ಮೂಲಭೂತ ವಿಷಯಗಳಲ್ಲೇ ಒಮ್ಮತಕ್ಕೆ ಬರಲಾಗಲಿಲ್ಲ. ಗಾಂಧೀಜಿಯವರು ಎರಡನೇ ದುಂಡು ಮೇಜಿನ ಸಭೆಗೆ ಲಂಡನ್ನಿಗೆ ಹೋಗಿದ್ದಾಗ, ಬಂಗಾಳದಲ್ಲಿ ಬ್ರಿಟಿಷ್ ಅಧಿಕಾರಿಗಳ ಕೊಲೆ ಆಯಿತು. ಅನೇಕ ದುಷ್ಕೃತ್ಯಗಳು ಮತ್ತು ಹಿಂಸಾಕೃತ್ಯಗಳು ನಡೆದವು. ಇವುಗಳನ್ನು ತಡೆಯಲು ಮತ್ತು ಅಸಹಕಾರ ಚಳವಳಿಯನ್ನು ತಡೆಯಲು ಅನೇಕ ಶಾಸನಗಳನ್ನು ಮಾಡಿದರು. ಅದರಲ್ಲಿ ಭಾರತೀಯ ಪತ್ರಿಕೆಗಳ ಕುರಿತು ತುರ್ತು ಕಾನೂನೂ ಸೇರಿತು. ಹಿಂಸಾಕೃತ್ಯ ಮತ್ತು ಕೊಲೆಗೆ ಪ್ರೇರಣೆ ಮಾಡುವಂತಹ ಲೇಖನಗಳ ಮೇಲೆ ನಿಷೇಧಾಜ್ಞೆ ಜಾರಿಯಾಯಿತು. ಇದರಿಂದ ಕಾಂಗ್ರೆಸ್‌ನ ಚಳುವಳಿಯ ಬಗ್ಗೆ ಸೆರೆಮನೆಯಿಂದ ನಾಯಕರು ಸಂದೇಶ, ಅಸಹಕಾರ ಚಳವಳಿಯ ಬಗ್ಗೆ ಸುದ್ದಿಗಳನ್ನು ಪ್ರಕಟಿಸಲು ಈ ಕಾನೂನು ಅಡ್ಡವಾಯಿತು. ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸಿದ ಪತ್ರಿಕೆಗಳಿಗೆ ಠೇವಣಿ ಸಹ ಕೇಳಲು ಪ್ರಾರಂಭಿಸಿದರು. ಪತ್ರಿಕೆಗಳು ಹಣದ ಮುಗ್ಗಟ್ಟಿನಿಂದ ತೊಂದರೆಗೆ ಈಡಾದರೂ, ಕಾಂಗ್ರೆಸಿಗೆ ಸಹಾನುಭೂತಿ ತೋರಿಸುವ ಪತ್ರಿಕೆಗಳಿಗೆ ಜನರು ಹಣಸಹಾಯ ಮಾಡತೊಡಗಿದರು. ಬ್ರಿಟಿಷ್ ಸರ್ಕಾರ ಹಿಂದು ಮತ್ತು ಮುಸ್ಲಿಮರ ಪ್ರತ್ಯೇಕ ಚುನಾವಣಾ ಮತಗಟ್ಟೆಯನ್ನು ನಿರ್ಧರಿಸಿ ಪ್ರತ್ಯೇಕ ಚುನಾವಣಾ ಪದ್ಧತಿಯನ್ನು ಜಾರಿಗೆ ತಂದರು. ದೇಶದ ರಾಷ್ಟ್ರೀಯ ಮುಸ್ಲಿಮರು ಒಮ್ಮತದಿಂದ ಪ್ರತಿಭಟನೆ ನಡೆಸಿದರು. ರಾಷ್ಟ್ರೀಯ ಪತ್ರಿಕೆಗಳು ಈ ಪದ್ಧತಿಯನ್ನು ತೀವ್ರವಾಗಿ ಟೀಕಿಸಿದವು. ಗಾಂಧೀಜಿಯವರು ಮತ್ತೆ ಅಸಹಕಾರ ಚಳವಳಿಯನ್ನು ಪ್ರಾರಂಭಿಸಿ ವಿದೇಶಿ ವಸ್ತ್ರ ಬಹಿಷ್ಕಾರ ಚಳುವಳಿ ನಡೆಸಿದರು. ಜನರು ವಿದೇಶಿ ವಸ್ತುಗಳನ್ನು ತೊರೆದು ನೂತನ ಖಾದಿ ಬಟ್ಟೆ ಬಳಸಲು ಪ್ರಾರಂಭಿಸಿದರು. ಮದ್ಯಪಾನ ನಿರೋದ ಚಳವಳಿಯನ್ನು ಕಾಂಗ್ರೆಸ್ ಸ್ವಯಂ ಸೇವಕರೇ ಭರದಿಂದ ನಡೆಸಿದರು. ಗಾಂಧೀಜಿಯವರು ಪ್ರಾರಂಭಿಸಿದ ಅಸಹಕಾರ ಚಳವಳಿಯನ್ನು ಸರ್ಕಾರ ಧ್ವಂಸ ಮಾಡಲು ಅನೇಕ ತುರ್ತು ಶಾಸನಗಳನ್ನು ಜಾರಿಗೆ ತಂದರು. ಅಸಹಕಾರ ಚಳವಳಿಗೆ ಉತ್ತೇಜನ ಕೊಡುವ ಲೇಖನಗಳನ್ನು ಪ್ರಕಟಿಸುವ ಪತ್ರಿಕೆಗಳ ಮೇಲೆ ಕ್ರಮ ತೆಗೆದುಕೊಳ್ಳುವ ಶಾಸನವನ್ನು ಜಾರಿಗೆ ತಂದರು. ಬ್ರಿಟಿಷರ ಆಳ್ವಿಕೆಯಲ್ಲಿದ್ದ ಭಾರತೀಯ ಸರ್ಕಾರ ಮತ್ತು ವಿದೇಶಿ ಸರ್ಕಾರಗಳು ಇವುಗಳ ಬಗ್ಗೆ ಯಾವುದೇ ರೀತಿಯ ವಿರೋದ ಲೇಖನಗಳನ್ನು ರಾಜದ್ರೋಹ ಸಾಹಿತ್ಯವೆಂದು ಪರಿಗಣಿಸಿ ಶಿಕ್ಷೆಗೆ ಗುರಿ ಮಾಡುವ ಶಾಸನವನ್ನು ತಂದರು. ಬ್ರಿಟಿಷ್ ಸರ್ಕಾರ ಭಾರತದ ಸ್ವಾತಂತ್ರ್ಯ ಚಳುವಳಿಯನ್ನು ನಿರ್ನಾಮ ಮಾಡಲು ಅನೇಕ ಶಾಸನಗಳನ್ನು ಜಾರಿಗೆ ತಂದಿತು. ರಾಷ್ಟ್ರೀಯ ಪತ್ರಿಕೆಗಳು ಧೈರ್ಯ, ಪ್ರಾಮಾಣಿಕತೆ ದೇಶಾಭಿಮಾನದಿಂದ ತೋರಿಸಿದ ಪ್ರತಿಭಟನೆಯ ಮುಂದೆ ಸರ್ಕಾರದ ಕಾನೂನು ಹೆಚ್ಚು ಪರಿಣಾಮಕಾರಿ ಆಗಲಿಲ್ಲ. ೧೯೩೦ರ ಅಸಹಕಾರ ಚಳವಳಿಯಲ್ಲಿ ಅನೇಕ ಕೈಬರಹದ ಪತ್ರಿಕೆಗಳು ದೇಶದ ಎಲ್ಲಾ ಕಡೆಯು ಹುಟ್ಟಿಕೊಂಡವು. ಸತ್ಯಾಗ್ರಹಕ್ಕೆ ಸಂಬಂಧಪಟ್ಟ ಸುದ್ದಿ ಮತ್ತು ಸರ್ಕಾರ ಬಹಿಷ್ಕರಿಸಿ ಹಾಕಿದ ಸುದ್ದಿ ಪ್ರಕಟಿಸುವ ಜೊತೆಗೆ ದೇಶಾಭಿಮಾನ ಪೂರಿತವಾದ ಉದ್ರೇಕಗೊಳಿಸುವಂತಹ, ಲೇಖನಗಳನ್ನು ಈ ಪತ್ರಿಕೆಗಳು ಪ್ರಕಟಿಸುತ್ತಿದ್ದವು. ರಾಷ್ಟ್ರಾಭಿಮಾನಿಗಳು, ಸತ್ಯಾಗ್ರಹಿಗಳು, ಕಾಂಗ್ರೆಸ್ಸಿನವರು, ಸ್ವಯಂ ಸೇವಕರು ಈ ಪತ್ರಿಕೆಗಳನ್ನು ಹಂಚುತ್ತಿದ್ದರು.

ಈ ಕೈಬರಹದ ಪತ್ರಿಕೆಗಳ ಜೊತೆಗೆ ಮುದ್ರಿತ ಪತ್ರಿಕೆಗಳು ಜನತೆಯ ಮೇಲೆ ಪ್ರಭಾವ ಬೀರುವಂತಹ ಲೇಖನಗಳು ಪ್ರಕಟವಾಗುತ್ತಿದ್ದವು. ಆ ಕಾಲದಲ್ಲಿ ಲಾಭದ ದೃಷ್ಟಿಯನ್ನು ಇಟ್ಟುಕೊಳ್ಳದೇ ದೇಶಪ್ರೇಮವೇ ಮುಖ್ಯವಾದ ಗುರಿಯೆಂದು ನಂಬಿ ಆರ್ಥಿಕ ನಷ್ಟವನ್ನು ಹೊಂದಿ ಪತ್ರಿಕೆಗಳು ಕೆಲಸ ಮಾಡಿದವು. ಫ್ರೀ ಪ್ರೆಸ್ ಸಂಸ್ಥೆ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಹಾಯ ಮಾಡಲು ಭಾರತದಾದ್ಯಂತ ಪತ್ರಿಕೆಗಳನ್ನು ಸ್ಥಾಪಿಸುವ ಯೋಜನೆ ಹಾಕಿದಾಗ ಮದ್ರಾಸಿನ 'ಇಂಡಿಯನ್ ಎಕ್ಸ್‌ಪ್ರೆಸ್' ಇಂಗ್ಲಿಷ್ ವಾರಪತ್ರಿಕೆ,

ತಮಿಳು ಭಾಷೆಯ 'ದಿನಮಣಿ', ಬೊಂಬಾಯಿನ 'ನವಶಕ್ತಿ,' ಗುಜರಾತಿ ಭಾಷೆಯ 'ಜನಶಕ್ತಿ' ಕಲ್ಕತ್ತಾದಲ್ಲಿ ಇಂಗ್ಲಿಷ್ ಭಾಷೆಯ 'ಫ್ರೀ ಇಂಡಿಯಾ' ಮುಂತಾದ ಅನೇಕ ಪತ್ರಿಕೆಗಳು ಸ್ಥಾಪಿತವಾದವು.

**ಹರಿಜನ ಪತ್ರಿಕೆ :** ಗಾಂಧೀಜಿಯವರು ರಾಷ್ಟ್ರದ ರಾಜಕೀಯ ಚಳವಳಿಯ ಪ್ರಚಾರ ಮಾಡಲು ಇಡೀ ಭಾರತದಾದ್ಯಂತ ಹಂಚಿಕೆ ಮಾಡುವಂತಹ ಇಂಗ್ಲಿಷ್ ಪತ್ರಿಕೆಯ ಅವಶ್ಯಕತೆಯನ್ನು ಕಂಡು ಇಂಗ್ಲಿಷಿನಲ್ಲಿ 'ಹರಿಜನ', ಮರಾಠಿ ಭಾಷೆಯಲ್ಲಿ 'ಹರಿಜನ ಸೇವಕ' ಪ್ರಾರಂಭಿಸಿದರು. ಮುಖ್ಯವಾಗಿ ಗಾಂಧೀಜಿಯವರ ಅಹಿಂಸಾ ಚಳುವಳಿಯ ಮೂಲಾಧಾರವಾದ ಸತ್ಯ ಅಹಿಂಸೆ ತತ್ವಗಳನ್ನು ಜನತೆಯಲ್ಲಿ ಪ್ರಚಾರ ಮಾಡುವುದೇ ಮುಖ್ಯ ಉದ್ದೇಶವಾಗಿತ್ತು. ಪತ್ರಿಕೆಯು ಸ್ವಾವಲಂಬಿಯಾಗಿ ನಡೆಯಬೇಕಾದರೆ ಸುವ್ಯವಸ್ಥೆ, ಉತ್ತಮ ಸಂಪಾದಕತ್ವ ಮತ್ತು ಸಾರ್ವಜನಿಕರ ಬೆಂಬಲ ಅವಶ್ಯಕ ಎಂದು ಗಾಂಧೀಜಿಯವರು ತಿಳಿಸಿದರು. ಹರಿಜನ ಪತ್ರಿಕೆ ಬಹು ಬೇಗ ಜನಪ್ರಿಯವಾಯಿತು. 'ಹರಿಜನ ಬಂಧು' ಹಿಂದೀ ಭಾಷೆಯಲ್ಲಿ ಮತ್ತು ಗುಜರಾತಿ ಭಾಷೆಯಲ್ಲಿ ಪ್ರಾರಂಭವಾಯಿತು. ಅನೇಕ ಪ್ರಾಂತ್ಯಗಳಲ್ಲಿ ಪ್ರಾಂತೀಯ ಭಾಷೆಗಳಲ್ಲಿ ಹರಿಜನ ಪತ್ರಿಕೆ ಪ್ರಾರಂಭವಾದವು. ಕನ್ನಡನಾಡಿನ ಜನರಿಗೆ ಗಾಂಧೀ ತತ್ವಗಳನ್ನು ತಿಳಿಸುವ ಉದ್ದೇಶದಿಂದ ಗಾಂಧೀಜಿಯವರ ಶಿಷ್ಯರಾದ ಸಿದ್ದವನಹಳ್ಳಿ ಕೃಷ್ಣ ಶರ್ಮರು ಕನ್ನಡದಲ್ಲಿ ಹರಿಜನ ಪತ್ರಿಕೆ ಪ್ರಾರಂಭಿಸಿದರು. ಈ ಪತ್ರಿಕೆ ವಿಶೇಷವೇನೆಂದರೆ ಜಾಹೀರಾತು ಇಲ್ಲದಿರುವುದು. ಆಡಂಬರವಿಲ್ಲದ ಗಾಂಧೀಜಿಯವರ ಭಾಷೆ ನೇರವಾಗಿ ಜನರ ಹೃದಯವನ್ನು ಮುಟ್ಟಿತು. ಗಾಂಧೀಜಿಯವರ ಪತ್ರಿಕೋದ್ಯಮದ ಮೂಲ ಉದ್ದೇಶ ಮಹತ್ವವಾದುದು. ಪತ್ರಿಕೋದ್ಯಮದ ಮೂಲ ಧ್ಯೇಯವೆಂದರೆ ಜನತೆಯ ಆಶೋತ್ತರಗಳನ್ನು ಅರ್ಥ ಮಾಡಿಕೊಂಡು ಅವುಗಳನ್ನು ಇತರರಿಗೆ ತಿಳಿಸುವುದು. ಜನತೆಯಲ್ಲಿ ಒಳ್ಳೆಯ ಭಾವನೆಗಳನ್ನು ಮೂಡಿಸಿ ಕೆರಳಿಸುವುದು. ಯಾವ ಹೆದರಿಕೆ ಇಲ್ಲದೆ ಸಾರ್ವಜನಿಕರ ಕುಂದುಕೊರತೆಗಳನ್ನು ಬಹಿರಂಗಪಡಿಸುವುದು. ಗಾಂಧೀಜಿಯವರು ಹರಿಜನ ಪತ್ರಿಕೆಯನ್ನು ಒಂದು ವಿಶೇಷ ರೀತಿಯಲ್ಲಿ ನಡೆಸುತ್ತಿದ್ದರು. ಇತರ ಪತ್ರಿಕೆಗಳ ಮಾಲೀಕರು, ಸಂಪಾದಕರು ಧೈರ್ಯದಿಂದ ವರ್ತಿಸುತ್ತಾ ಸತ್ಯವನ್ನು ಪ್ರತಿಪಾದಿಸುವ ದಾರಿಯನ್ನು ಗಾಂಧೀಜಿಯವರು ತೋರಿಸಿಕೊಟ್ಟರು. ಆತ್ಮ ಸಾಕ್ಷಿಗೆ ವಿರುದ್ಧವಾಗಿ ನಡೆದುಕೊಳ್ಳಬಾರದು ಎಂಬುದು ಗಾಂಧೀಜಿಯ ಅಭಿಪ್ರಾಯವಾಗಿತ್ತು.

ಗಾಂಧೀಜಿಯವರು ಪತ್ರಿಕಾಲೋಕಕ್ಕೆ ೧೯೦೪ ರಿಂದಲೇ ತಮ್ಮ 'ಇಂಡಿಯನ್ ಒಪಿನಿಯನ್' ಮೂಲಕ ಚಿರಪರಿಚಿತರು. ದಕ್ಷಿಣ ಆಫ್ರಿಕಾದ ಸತ್ಯಾಗ್ರಹದ ಚಳುವಳಿಯಲ್ಲಿ ಈ ಪತ್ರಿಕೆ ಪ್ರಮುಖ ಪಾತ್ರವಹಿಸಿತ್ತು ಹಿಂದೂ ಮುಸ್ಲಿಮರ ಚುನಾವಣೆ ಪದ್ಧತಿಯನ್ನು ಗಾಂಧೀಜಿಯವರು ಹರಿಜನ ಪತ್ರಿಕೆಯ ಮೂಲಕ ಪ್ರತಿಭಟಿಸಿದರು. ಉಪವಾಸವನ್ನು ಪ್ರಾರಂಭಿಸಿದರು. ಬ್ರಿಟಿಷ್ ಸರ್ಕಾರ ಪ್ರಮುಖ ಬದಲಾವಣೆಗಳನ್ನು ಮಾಡುವುದಾಗಿ ಭರವಸೆ ಕೊಟ್ಟಿದ್ದರಿಂದ ಉಪವಾಸ ನಿಲ್ಲಿಸಿದರು.

**ಗಾಂಧೀಜಿ :** ಗಾಂಧೀಜಿಯವರು ಪತ್ರಿಕೆಗಳಿಗೆ ಲೇಖನಗಳನ್ನು ಲಂಡನ್ನಿನಲ್ಲಿದ್ದಾಗಲೇ ಬರೆಯಲು ಪ್ರಾರಂಭಿಸಿದರು. ದಕ್ಷಿಣ ಆಫ್ರಿಕಾದಲ್ಲಿನ ಸರ್ಕಾರಕ್ಕೆ ಮತ್ತು ಬಿಳಿಯ ಜನರಿಗೆ ನಿಜಸ್ಥಿತಿಯನ್ನು ತಿಳಿಸಲು 'ಇಂಡಿಯನ್ ಒಪೀನಿಯನ್' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಭಾರತೀಯರ ಕಷ್ಟ ನಷ್ಟಗಳನ್ನು ಬೆಳಕಿಗೆ ತರುವುದು, ಅವರ ನ್ಯಾಯಯುತ ಬೇಡಿಕೆಗಳ ಮಂಡನೆ, ಸರ್ಕಾರದ ಅನ್ಯಾಯಗಳ ಖಂಡನೆ ಇವೇ ಅದರ ಮುಖ್ಯ ಉದ್ದೇಶ. 'ಜನ ಸೇವೆ' ಏಕಮೇವ ಧ್ಯೇಯ. ಲೋಕ ಶಿಕ್ಷಣ ಹಾಗೂ ಲೋಕ ಹಿತಕರವಾದ ಕಾರ್ಯಗಳಲ್ಲೂ ಪ್ರತ್ಯೇಕ ಆಸಕ್ತಿ ವಹಿಸುವ ಪ್ರೇರಣೆ ಪತ್ರಿಕಾ ವ್ಯವಸಾಯದ ಉದ್ದೇಶವಾಗಬೇಕು ಎಂದರು ಗಾಂಧೀಜಿ. ಪತ್ರಿಕಾ ವ್ಯವಸಾಯವನ್ನು ಹಣಕ್ಕಾಗಲಿ, ವಿಲಾಸಕ್ಕಾಗಲಿ ಗಾಂಧೀಜಿಯವರು ಮಾಡಲಿಲ್ಲ. ಅವರ ಜೀವನ ಸಂದೇಶ ತಿಳಿಸಲು ಇದು ಒಂದು ಸಾಧನ. ಅಹಿಂಸಾ, ಸತ್ಯಗಳಿಂದ ಕೂಡಿದ ಸತ್ಯಾಗ್ರಹ ಧರ್ಮವನ್ನು ಪೂರ್ಣ ನಿಗ್ರಹದಿಂದ ಮಾಡಿಯೂ ಆಡಿಯೂ ಕಲಿಸುವುದು ಇದರ ಉದ್ದೇಶ. ಕೇವಲ ಉದ್ರೇಕ ಹುಟ್ಟಿಸಲು ಬರೆಯುವುದು ಸಲ್ಲದು.

ಗಾಂಧೀಜಿಯವರ ಪತ್ರಿಕಾ ಲೇಖನಗಳು ಸರ್ಕಾರಕ್ಕೆ ಚಾಟಿ ಏಟಾದರೆ, ಜನತೆಗೆ ಸ್ಫೂರ್ತಿಯ ವಾಣಿ. ಹಳ್ಳಿ ಹಳ್ಳಿಗಳಲ್ಲಿಯೂ ಅಂಚೆ ಕಛೇರಿಯ ಮುಂದೆ ವಾರಕೊಮ್ಮೆ ಈ ಪತ್ರಿಕೆಗಳಿಗಾಗಿ ಜನ ಕಾದು ನಿಂತಿರುತ್ತಿದ್ದರು. ಗುಂಪು ಕಟ್ಟಿಕೊಂಡು ಎಲ್ಲರಿಗೂ ಅರ್ಥವಾಗುವಂತೆ ಪತ್ರಿಕೆಗಳನ್ನು ಓದಿ ಸ್ಫೂರ್ತಿ ಪಡೆಯುತ್ತಿದ್ದರು.

ಪತ್ರಿಕೆ ಹೇಗಿರಬೇಕೆಂಬುದನ್ನು ಗಾಂಧೀಜಿಯವರು ಸ್ಪಷ್ಟವಾಗಿ ತಿಳಿಸಿದರು. ''ಜನಾಭಿಪ್ರಾಯವನ್ನು, ಜನಮನವನ್ನು ಅರಿತು ಕೊಂಡು ಅದಕ್ಕೆ ವ್ಯಕ್ತರೂಪ ಕೊಡುವುದು ಪತ್ರಿಕೆಗಳ ಕರ್ತವ್ಯ. ಪತ್ರಿಕಾ ವ್ಯವಸಾಯ ಒಂದು ವೃತ್ತಿ. ಹೊಟ್ಟೆಪಾಡಿಗಾಗಿ ಮಾಡುವ ಉದ್ಯೋಗವಲ್ಲ. ಸತ್ಯವಾದ ಮಾತುಗಳಲ್ಲಿ ಪ್ರಕಟಿಸಬೇಕು. ಸತ್ಕಾರ್ಯವನ್ನು ಸಾಧಿಸಲು ಸತ್ಯ ಮಾರ್ಗವನ್ನೇ ಅನುಸರಿಸಬೇಕು.''

ಗಾಂಧೀಜಿ ಪತ್ರಿಕೋದ್ಯಮದಲ್ಲಿ ಒಂದು ತಂತ್ರವನ್ನೇ ಹೂಡಿದರು. ಸ್ಪಷ್ಟ, ಸರಳ, ನೇರ ವ್ಯವಹಾರ, ನಿಷ್ಠ ಶೈಲಿ ಅವರದು. ಪ್ರಾಮಾಣಿಕವಾದ ಚಾಟಿ ಏಟಿನಂತೆ ಮಾತಿನ ಓಟ. ಹಿಂಸೆಯಿಲ್ಲ ನೋವಿಲ್ಲ. ಆದರೆ ಮಿಂಚಿನ ಹೊಳಪು. ಜನರನ್ನು ಹುರಿದುಂಬಿಸುವ

ಸುಂದರ ಶಕ್ತಿಯುತ ವಿಚಾರನಿಷ್ಠೆಯ ಶೈಲಿ, ಸ್ವಾತಂತ್ರ್ಯ ಸಂಗ್ರಾಮಕ್ಕೆ ಜನರನ್ನು ಹುರಿದುಂಬಿಸುವ ಗದ್ಯ ಶೈಲಿ ಎಲ್ಲರಿಗೂ ಉದಾಹರಣೆಯಾಗಿತ್ತು. ಗಾಂಧೀಜಿ ತಮ್ಮ ಪತ್ರಿಕೆಗಳಿಂದ ದೇಶದಾದ್ಯಂತ ಅಹಿಂಸಾ ಮತ್ತು ಸತ್ಯದಿಂದ ಕೂಡಿದ ಕ್ರಾಂತಿಯನ್ನು ನಡೆಸಿ ಸ್ವಾತಂತ್ರ್ಯದ ಹಾದಿ ಮಾಡಿಕೊಟ್ಟರು.

**ನ್ಯಾಷನಲ್ ಹೆರಾಲ್ಡ್** : ಉತ್ತರ ಭಾರತದಲ್ಲಿ ರಾಜಕೀಯ ಚಟುವಟಿಕೆಗಳು ಹೆಚ್ಚು ಪ್ರಗತಿಯಲ್ಲಿ ನಡೆಯುತ್ತಿದ್ದುದರಿಂದ ಜವಾಹರಲಾಲ್ ನೆಹರೂರವರ ಅಧ್ಯಕ್ಷತೆಯಲ್ಲಿ ನ್ಯಾಷನಲ್ ಹೆರಾಲ್ಡ್ ಇಂಗ್ಲಿಷ್ ದಿನಪತ್ರಿಕೆ ೧೯೩೮ರಲ್ಲಿ ಪ್ರಾರಂಭವಾಯಿತು. ಕೆ. ರಾಮರಾವ್ ಸಂಪಾದಕರು. ಇದು ಕಾಂಗ್ರೆಸ್‌ನ ಮುಖಪತ್ರಿಕೆಯಾಗಿ ಪತ್ರಿಕಾ ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವುದರಲ್ಲಿ ಪ್ರಭಾವಿತ ಪಾತ್ರ ವಹಿಸಿತು. ಈ ಅವಧಿಯಲ್ಲಿ ಅನೇಕ ಪತ್ರಿಕೆಗಳು ಪ್ರಾರಂಭವಾದವು. ಅವುಗಳಲ್ಲಿ ಮುಖ್ಯವಾದುವುಗಳೆಂದರೆ 'ಸಂಡೇ ಸ್ಟಾಂಡರ್ಡ್', 'ಮಾರ್ನಿಂಗ್ ಸ್ಟಾಂಡರ್ಡ್', 'ಫ್ರೀ ಪ್ರೆಸ್ ಜರ್ನಲ್', 'ಫ್ರೀಪ್ರೆಸ್ ಬುಲೆಟಿನ್', 'ಹಿಂದುಸ್ಥಾನ್ ಸ್ಟಾಂಡರ್ಡ್', ಮಹಮದಾಲಿ ಜಿನ್ನಾರವರ 'ಡಾನ್', 'ಹಿಂದುಸ್ಥಾನ್ ಟೈಮ್ಸ್', 'ವಂದೇಮಾತರಂ', 'ಪೀಪಲ್ಸ್ ವಾರ್', 'ಕಲ್ಕಿ' 'ತಂತೀ' ಕನ್ನಡದಲ್ಲಿ 'ದೇಶಬಂಧು'.

**ಆಗಸ್ಟ್ ಕ್ರಾಂತಿ** : ೧೯೩೯ರಲ್ಲಿ ೨ ನೇ ಮಹಾಯುದ್ಧ ಪ್ರಾರಂಭವಾಯಿತು. ಭಾರತೀಯರನ್ನು ಕೇಳದೇ ವೈಸರಾಯ್ ಲಿಲಿನ್‌ಗೋ ಈ ಮಹಾಯುದ್ಧದಲ್ಲಿ ಮಿತ್ರ ರಾಷ್ಟ್ರಗಳೊಂದಿಗೆ ಭಾರತವು ಸೇರಿದೆ ಎಂದು ಘೋಷಿಸಿದ. ಇದನ್ನು ಪ್ರತಿಭಟಿಸಿ ಕಾಂಗ್ರೆಸ್ ಸರ್ಕಾರ, ಪ್ರಾಂತೀಯ ಆಡಳಿತಾಧಿಕಾರ ವಹಿಸಿದ್ದ ಕಾಂಗ್ರೆಸ್ ಸರ್ಕಾರಗಳು ರಾಜೀನಾಮೆ ನೀಡಿದವು. ಭಾರತ ಮಿತ್ರ ರಾಷ್ಟ್ರಗಳೊಂದಿಗೆ ಜೊತೆಗೂಡಿ ಹೋರಾಡಲು ಅನುಕೂಲವಾಗುವಂತೆ ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಡಬೇಕೆಂದು ಬ್ರಿಟಿಷ್ ಸರ್ಕಾರವನ್ನು ಒತ್ತಾಯಿಸಿದರು. ಭಾರತಕ್ಕೆ ಸ್ವಾತಂತ್ರ್ಯವನ್ನು ಕೊಡುವ ವಾದವನ್ನು ಗಾಂಧೀಜಿ ಬ್ರಿಟಿಷರ ಮುಂದಿಟ್ಟರು, ಆದರೆ ಅವರು ಕಡೆಗಾಣಿಸಿದರು. ಬ್ರಿಟಿಷ್ ಸರ್ಕಾರ ಪತ್ರಿಕೆಗಳ ಮೇಲೂ ಯುದ್ಧದ ಬಗ್ಗೆ ಪ್ರಕಟವಾಗುವ ಸುದ್ದಿಗಳ ಬಗ್ಗೆಯೂ ಅನೇಕ ನಿರ್ಬಂಧಗಳನ್ನು ಹೇರಿತ್ತು. ರಾಷ್ಟ್ರೀಯ ಪತ್ರಿಕೆಗಳು ಮಿತ್ರರಾಷ್ಟ್ರಗಳ ಯುದ್ಧ ನೀತಿಯ ಬಗ್ಗೆ ವಿರೋಧವಾಗಿ ಪ್ರಚಾರ ಮಾಡಿದವು. ಗಾಂಧೀಜಿಯವರು ಬ್ರಿಟಿಷ್ ಸರ್ಕಾರಕ್ಕೆ ಎಚ್ಚರಿಕೆ ಕೊಟ್ಟು ವೈಯಕ್ತಿಕ ಅಸಹಕಾರ ಚಳುವಳಿ ಪ್ರಾರಂಭಿಸಿದರು. ಸತ್ಯಾಗ್ರಹಿಗಳು ಅಹಿಂಸಾತ್ಮಕವಾಗಿ ಬ್ರಿಟಿಷರ ಯುದ್ಧ ನೀತಿಗೆ ಬೆಂಬಲ ಕೊಡಕೂಡದೆಂದು ಪ್ರಚಾರ ಮಾಡಿ ನೈತಿಕ ಒತ್ತಡ ತರಲು ಈ ಚಳವಳಿ ಪ್ರಾರಂಭಿಸಿದರು. ಭಾರತೀಯ ರಾಷ್ಟ್ರೀಯ ಪತ್ರಿಕೆಗಳು ಗಾಂಧೀಜಿಯವರ ಸತ್ಯಾಗ್ರಹಕ್ಕೆ ಬೆಂಬಲ ನೀಡಿದವು.

ಕಠಿಣ ಪತ್ರಿಕಾ ನಿಷೇಧಾಜ್ಞೆಯಿಂದ ಅನೇಕ ಪತ್ರಿಕೆಗಳು ನಿಂತುಹೋದವು. ನ್ಯಾಷನಲ್ ಹೆರಾಲ್ಡ್ ಪತ್ರಿಕೆ ಸಹ ಸರ್ಕಾರದ ಗದಾ ಪ್ರಹಾರಕ್ಕೆ ಒಳಗಾಗಿ ಸಂಪಾದಕೀಯ ಲೇಖನವನ್ನು ಬರೆಯುವುದನ್ನು ನಿಲ್ಲಿಸುವುದರ ಮೂಲಕ ತನ್ನ ಪ್ರತಿಭಟನೆಯನ್ನು ಸೂಚಿಸಿತು. ಸರ್ಕಾರದವರು ಪತ್ರಿಕೆಯಿಂದ ಠೇವಣಿ ಹಣವನ್ನು ಕೇಳಿ, ಅದನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದರು. ಹಣದ ಮುಗ್ಗಟ್ಟಿನಿಂದ ಸಾರ್ವಜನಿಕರಲ್ಲಿ ಮನವಿ ಮಾಡಿಕೊಂಡಾಗ ಅನೇಕರು ಹಣವನ್ನು ಕಳಿಸಿಕೊಟ್ಟರು. ಅಸಹಕಾರ ಚಳವಳಿ ನಡೆಯುತ್ತಿದ್ದಾಗ ಲಕ್ನೋ ಸೆರೆಮನೆಯಲ್ಲಿ ಕಾಂಗ್ರೆಸ್ ಸ್ವಯಂಸೇವಕನೊಬ್ಬನ ಮೇಲೆ ಲಾಠಿ ಪ್ರಹಾರ ಮಾಡಿದ ಸುದ್ದಿಯನ್ನು ನ್ಯಾಷನಲ್ ಹೆರಾಲ್ಡ್ ಪತ್ರಿಕೆ ಪ್ರಕಟಿಸಿದ್ದರಿಂದ ಇದರ ಸಂಪಾದಕರಾದ ಕೆ. ರಾಮರಾವ್‌ರವರನ್ನು ದಸ್ತಗಿರಿ ಮಾಡಿ ೬ ತಿಂಗಳ ಕಾಲ ಕಠಿಣ ಶಿಕ್ಷೆ, ೭೦೦ ರೂ. ದಂಡ ವಿಧಿಸಿದರು. ಇದೇ ರೀತಿ ಸೈನಿಕ ಎಂಬ ಹಿಂದಿ ಪತ್ರಿಕೆಯ ಸಂಪಾದಕನನ್ನು ದಸ್ತಗಿರಿ ಮಾಡಿ, ಸೆರೆಗೆ ತಳ್ಳಿದರು.

೧೯೪೨ರ ಆಗಸ್ಟ್ ತಿಂಗಳ ಹೊತ್ತಿಗೆ ಭಾರತದ ಸ್ವಾತಂತ್ರ್ಯ ಹೋರಾಟ ಒಂದು ಹಂತಕ್ಕೆ ಬಂದಿತು. ಗಾಂಧೀಜಿಯವರು ೧೯೪೨ ಆಗಸ್ಟ್ ೮ ರಂದು ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಮಿತಿಯಲ್ಲಿ ಬ್ರಿಟಿಷರು ಭಾರತವನ್ನು ಬಿಟ್ಟು ತಕ್ಷಣ ಹೊರಟು ಹೋಗಬೇಕೆಂದು ಒತ್ತಾಯದ ನಿರ್ಣಯವನ್ನು ತಂದರು. ಭಾರತೀಯರಿಗೆ ಮನವಿ ಮಾಡುತ್ತಾ ಇನ್ನು ಮುಂದೆ ಭಾರತೀಯರೆಲ್ಲರು ಸ್ವತಂತ್ರ ನಾಗರೀಕರಂತೆ ವರ್ತಿಸಬೇಕು ಎಂದು ಘೋಷಿಸಿದರು. 'ಮಾಡು ಇಲ್ಲವೇ ಮಡಿ' ಎಂಬ ಸ್ವಾತಂತ್ರ್ಯ ಹೋರಾಟದ ಘೋಷಣೆಯನ್ನು ಕೊಟ್ಟು, ಈ ಹೋರಾಟ ಸತ್ಯ ಮತ್ತು ಅಹಿಂಸೆಯ ತಳಹದಿಯ ಮೇಲೆ ನಡೆಯಬೇಕೆಂದು ಕಡ್ಡಾಯಪಡಿಸಿದರು.

ಈ ಆಗಸ್ಟ್ ಕ್ರಾಂತಿ ಕಾಡ್ಗಿಚ್ಚಿನಂತೆ ಹರಡಿ ಈ ಕ್ರಾಂತಿಯಲ್ಲಿ ಭಾಗವಹಿಸುವಂತೆ ವಿದ್ಯಾರ್ಥಿಗಳು, ಉಪಾಧ್ಯಾಯರು, ವಕೀಲರು, ರೈತರು ಮತ್ತು ಇತರೇ ಎಲ್ಲಾ ಉದ್ದಿಮೆದಾರರು ತಮ್ಮ ಕೆಲಸಗಳನ್ನು ಬಹಿಷ್ಕರಿಸಿ ಚಳವಳಿಯಲ್ಲಿ ಭಾಗವಹಿಸಿದರು. ಇದರಿಂದ ಸರ್ಕಾರವೇ ನಿಂತಂತಾಯಿತು. ಬ್ರಿಟಿಷ್ ಸರ್ಕಾರ ಈ ಚಳವಳಿಯನ್ನು ತುಳಿಯಲು ಪತ್ರಿಕೆಗಳ ಮೇಲೂ ಅತಿ ಕ್ರೂರವಾದ ಕಾನೂನು ಜಾರಿಮಾಡಿತು. ಅನೇಕ ಪತ್ರಿಕೆಗಳು ನಿಂತವು. ಅವುಗಳಲ್ಲಿ ಮುಖ್ಯವಾದವು ಹರಿಜನ, ನ್ಯಾಷನಲ್ ಹೆರಾಲ್ಡ್, ಇಂಡಿಯನ್ ಎಕ್ಸ್‌ಪ್ರೆಸ್, ದಿನಮಣಿ.

ಪತ್ರಿಕಾ ಶಾಸನವನ್ನು ಉಲ್ಲಂಘಿಸಿ ಕಾಂಗ್ರೆಸ್ ಚಳವಳಿಯ ಸುದ್ದಿಯನ್ನು ಪ್ರಕಟಿಸಿದ ಹಿಂದುಸ್ಥಾನ್ ಟೈಮ್ಸ್ ಪತ್ರಿಕೆ ಸಂಪಾದಕರಾದ ದೇವದಾಸ್ ಗಾಂಧಿಯವರನ್ನು ದಸ್ತಗಿರಿ ಮಾಡಿ ಸೆರೆಗೆ ಹಾಕಿದರು. ದೇವದಾಸ್ ಗಾಂಧಿಯವರು ತಪ್ಪಿತಸ್ಥರಲ್ಲವೆಂದು ಅನೇಕ

ನ್ಯಾಯಾಲಯಗಳಲ್ಲಿ ಮನವಿ ಮಾಡಿದರು. ಕೊನೆಗೆ ಲಂಡನ್ನಿನ ಪ್ರಿವೀ ಕೌನ್ಸಿಲ್‌ಗೆ ಮನವಿ ಮಾಡಿದಾಗ ಅವರು ಶಿಕ್ಷೆಯನ್ನು ವಜಾ ಮಾಡಿದರು. ಇದೇ ರೀತಿ ಲಾಹೋರಿನ 'ಟ್ರಿಬ್ಯೂನ್' ಪತ್ರಿಕೆ ಮುಂಬಾಯಿನ 'ಜನ್ಮ ಭೂಮಿ' ಮತ್ತು ಬಾಂಬೆ ಕ್ರಾನಿಕಲ್, ಕಲ್ಕತ್ತಾದ 'ಅಮೃತ್ ಬಜಾರ್' ಪತ್ರಿಕೆಗಳ ಮೇಲೂ ಕ್ರೂರವಾದ ಮೊಕದ್ದಮೆಗಳನ್ನು ಸರ್ಕಾರ ಹೂಡಿತು. ಆದರೆ ಪತ್ರಿಕೆಗಳು ಐಕಮತ್ಯದಿಂದ ಇಡೀ ಸರ್ಕಾರದ ಬಗ್ಗೆ ಪ್ರತಿಭಟನೆಯನ್ನು ನಡೆಸುತ್ತಲೇ ಬಂದವು.

**ಕನ್ನಡ ಪತ್ರಿಕೆಗಳ ಪಾತ್ರ** : ದೇಶದ ಸ್ವಾತಂತ್ರ್ಯ ಸಾಧನೆಗಾಗಿ ದುಡಿದ ಪತ್ರಿಕೆಗಳನ್ನು ಹಾಗೂ ಅವನ್ನು ನಡೆಸಿದ ವ್ಯಕ್ತಿಗಳನ್ನು ಬೇರೆ ಬೇರೆಯಾಗಿ ಕಾಣುವುದು ಅಸಾಧ್ಯ. ಕಾರಣ, ಪತ್ರಿಕೆಗಳು ಮತ್ತು ವ್ಯಕ್ತಿಯು ಮಾಡಿದ ಸೇವೆಯಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಭಾರತದ ಸ್ವಾತಂತ್ರ್ಯದ ಸಾಧನೆಯೇ ಗುರಿ. ಭಾರತದಾದ್ಯಂತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಇಂಗ್ಲಿಷ್ ಪತ್ರಿಕೆಗಳಲ್ಲದೆ ಭಾರತೀಯ ಭಾಷಾ ಪತ್ರಿಕೆಗಳೂ ತಮ್ಮ ಸೇವೆಯನ್ನು ಸಲ್ಲಿಸಿವೆ. ಆಗಿನ ಕನ್ನಡ ಭಾಷಾ ಪ್ರಾಂತ್ಯಗಳು ಕೂಡ ಸ್ವಾತಂತ್ರ್ಯ ಸಂಗ್ರಾಮದ ಚಳುವಳಿಯಲ್ಲಿ ಭಾಗವಹಿಸಿ ಜನಸಾಮಾನ್ಯರಿಗೆ ಮುಟ್ಟುವಂತೆ ಕನ್ನಡ ಭಾಷಾ ಪತ್ರಿಕೆಗಳು ಹುಟ್ಟಿಕೊಂಡಿದ್ದಲ್ಲದೆ, ವಿಚಾರ ವಿನಿಮಯ ಮಾಡುವುದರಲ್ಲಿ ಯಶಸ್ವಿಯಾದವು. ಆಗಿನ ಮೈಸೂರು ರಾಜ್ಯದಲ್ಲಿ ಕ್ರೈಸ್ತರಿಂದ 'ವೃತ್ತಾಂತ ಪತ್ರಿಕೆ' ಬ್ರಾಹ್ಮಣ ಸಮಾಜದಿಂದ 'ಸಾಧ್ವಿ' ಮತ್ತು 'ಸಂಪದಾಭ್ಯುದಯ', ಒಕ್ಕಲಿಗರ ಸಂಘದಿಂದ 'ಒಕ್ಕಲಿಗರ ಪತ್ರಿಕೆ' ಕನ್ನಡ ಭಾಷೆಯಲ್ಲಿ ಪ್ರಕಟವಾಗಿ ಆಯಾ ಜನಾಂಗಗಳ ಮತ್ತು ಸ್ತ್ರೀ ಸಾಮಾನ್ಯರ ಬಗ್ಗೆ ವಿಷಯಗಳನ್ನು ಪ್ರಕಟಿಸಿದವು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಲ್ಲದೇ ಸಂಸ್ಥಾನದ ಸ್ವಾತಂತ್ರ್ಯ ಚಳವಳಿಯಲ್ಲಿಯೂ ವಿಶೇಷವಾಗಿ ಭಾಗವಹಿಸಿದ್ದವು.

ಹೆಚ್. ಕೆ. ವೀರಣ್ಣಗೌಡರ ವೈವಿಧ್ಯಮಯ ಜೀವನದಲ್ಲಿ ಪತ್ರಿಕೋದ್ಯಮವು ಪ್ರಮುಖವಾಗಿತ್ತು. 'ಕರ್ನಾಟಕ ವಿದ್ಯಾರ್ಥಿ' ಎಂಬ ದ್ವೈಮಾಸಿಕ ಪತ್ರಿಕೆಯ ಸಂಪಾದನೆ ಪ್ರಾರಂಭವಾಗಿ ಒಕ್ಕಲಿಗರ ಪತ್ರಿಕೆ ಸಂಪಾದಕರಾಗಿದ್ದರು. ನಂತರ 'ಚಿತ್ರಗುಪ್ತ' ಪತ್ರಿಕೆಯನ್ನು ಪ್ರಾರಂಭಿಸಿದರು. ಇದು ರಾಜಕೀಯ ಮತ್ತು ಆರ್ಥಿಕ ವಿಚಾರಗಳಲ್ಲದೇ ಸ್ವಾತಂತ್ರ್ಯ ಸಂಗ್ರಾಮದ ಪ್ರಚಾರಕ್ಕೆ ಪ್ರಾಧಾನ್ಯತೆ ಕೊಟ್ಟ ಪತ್ರಿಕೆಯಾಯಿತು. 'ವಾರ್ತಾ' ಎಂಬ ದಿನಪತ್ರಿಕೆಯನ್ನು ಕೆಲವು ದಿನಗಳ ಕಾಲ ನಡೆಸಿದರು .

ಗಾಂಧೀಜಿಯವರ ಮೋಡಿಗೆ ಒಳಗಾದ ತಿರುಮಲೆ ತಾತಾಚಾರ್ಯ ಶರ್ಮರವರು 'ವಿಶ್ವ ಕರ್ನಾಟಕ' ಪತ್ರಿಕೆಯನ್ನು ಪ್ರಾರಂಭಿಸಿದರು. ನಿರ್ಭೀತ ಟೀಕೆ, ಸತ್ಯ, ನಿಷ್ಠೆ, ಉನ್ನತ ಶೀಲ ಮತ್ತು ಯಾವ ಆಸೆಗೂ ಮನ ಸೋಲದೆ ಛಲದಿಂದ ನಡೆಸಿದ ಪತ್ರಿಕೆ 'ವಿಶ್ವ ಕರ್ನಾಟಕ'. ಇವರ ಉಗ್ರ ಲೇಖನಗಳಿಂದ ಪತ್ರಿಕೆ ಸರ್ಕಾರದ ಕಿರುಕುಳ, ದಂಡಕ್ಕೆ ಒಳಗಾಗಿ ಹಣದ ಮುಗ್ಗಟ್ಟಿನಿಂದ ಶರ್ಮರವರು ತಮ್ಮ ಆಸೆ ಮತ್ತು ಆರೋಗ್ಯವನ್ನು ಕಳೆದುಕೊಂಡರು. ತೀವ್ರ ಖಾಯಿಲೆಗೆ ಬಿದ್ದಾಗ ಸಿದ್ದವನಹಳ್ಳಿ ಕೃಷ್ಣಶರ್ಮ ಹೈದರಾಬಾದಿನಿಂದ ಗಡೀಪಾರಾಗಿ ಬೆಂಗಳೂರಿಗೆ ಬಂದರು. ವಿಶ್ವಕರ್ನಾಟಕದ ಜವಾಬ್ದಾರಿಯನ್ನು ಹೊತ್ತರು. ಇಬ್ಬರೂ ಶರ್ಮರ ಬರವಣಿಗೆಯಿಂದ ವಿಶ್ವ ಕರ್ನಾಟಕ ಪ್ರಜ್ವಲಿಸಲು ಪ್ರಾರಂಭಿಸಿತು. ಕೃಷ್ಣ ಶರ್ಮರ ಲೇಖನ ಯುವ ಜನರಿಗೆ ಸ್ಫೂರ್ತಿಯನ್ನು ತುಂಬಿತು. ಬರಹಗಾರರಿಗೆ, ಪತ್ರಕರ್ತರಿಗೆ ಒಂದು ತರಬೇತಿ ಕೇಂದ್ರವಾಯಿತು. ಅನೇಕ ಯುವ ಲೇಖಕರು ಪತ್ರಕರ್ತರಾದರು.

ವಿಶ್ವ ಕರ್ನಾಟಕದ ಸಂಪಾದಕೀಯ ಓದುವುದರಿಂದಲೇ ಅನೇಕ ಯುವಕರು ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದರು. ಸ್ವಾತಂತ್ರ್ಯ ಸಂಗ್ರಾಮ, ಸತ್ಯಾಗ್ರಹ ವರದಿ, ನಾಯಕರ ಭಾಷಣ, ಗಾಂಧೀಜಿಯ ವಾಣಿ, ಕನ್ನಡನಾಡಿನ ಸ್ಥಿತಿ, ಕರ್ನಾಟಕ ಏಕೀಕರಣ ಈ ಪತ್ರಿಕೆಯ ಪ್ರಮುಖ ಅಂಶಗಳು.

ವಿಶ್ವಕರ್ನಾಟಕದ ಜೊತೆಗೆ ಕೃಷ್ಣ ಶರ್ಮರು ಗಾಂಧೀಜಿಯವರ 'ಹರಿಜನ' ಪತ್ರಿಕೆಯನ್ನು ಕನ್ನಡದಲ್ಲಿ ಪ್ರಾರಂಭಿಸಿದರು. ಇಂಗ್ಲಿಷ್ ಪತ್ರಿಕೆ ನಿಂತ ಮೇಲೆ ಕನ್ನಡ ಹರಿಜನ ಪತ್ರಿಕೆಯೂ ನಿಂತಿತು.

'ವೈಸರಾಯ್‌ಗೆ ಬಹಿರಂಗ ಪತ್ರ' ಎಂಬ ಲೇಖನ ಪ್ರಕಟಿಸಿದಾಗ ವಿಶ್ವ ಕರ್ನಾಟಕವನ್ನು ಮುಟ್ಟುಗೋಲು ಹಾಕಿ, ಶರ್ಮರನ್ನು ಸೆರೆಮನೆಗೆ ಹಾಕಲಾಯಿತು.

೧೮೮೬ರಲ್ಲಿ 'ಸುವಾರ್ತೆ', ೧೮೮೫ರಲ್ಲಿ 'ಭಾವೈಕ್ಯ', 'ಸುಬೋಧ' ಬೊಂಬಾಯಿ ಕರ್ನಾಟಕ ಪ್ರಾಂತ್ಯದಲ್ಲಿ ಪ್ರಭಾವ ಬೀರಿದವು. ಸುವಾರ್ತೆ ಸರ್ಕಾರವನ್ನು ಟೀಕಿಸಿದುದರ ಸಲುವಾಗಿ ಮುದ್ರಣಾಲಯವನ್ನು ಸರ್ಕಾರ ವಶಪಡಿಸಿಕೊಂಡಿತು. ವಿಜಾಪುರದ 'ಕರ್ನಾಟಕ ವೈಭವ' ಮಾಸ ಪತ್ರಿಕೆ ಧಾರವಾಡದ 'ವಾಗ್ಭೂಷಣ' (೧೮೯೬) ವಾರಪತ್ರಿಕೆ, 'ರಾಜಹಂಸ' (೧೮೯೧), 'ಧನಂಜಯ ಹಾಗೂ 'ಕರ್ನಾಟಕ ವೃತ್ತ' (೧೮೯೫) ಮಾಸಿಕ 'ಸದ್ಬೋಧ ಚಂದ್ರಿಕ' (೧೯೧೨), 'ಆನಂದನ ಅಗಡಿ' ಮುಂತಾದ ಪತ್ರಿಕೆಗಳು ಜನತೆಯಲ್ಲಿ ಸ್ವಾತಂತ್ರ್ಯದ ಅಪೇಕ್ಷೆಯನ್ನು ಹುಟ್ಟಿಸಿ, ಹುರಿದುಂಬಿಸಿದವು. ೧೯೦೬ರಲ್ಲಿ ಕನ್ನಡದಲ್ಲಿ 'ಕಸ್ತೂರಿ'ಯನ್ನು ದೇಸಾಯಿ

ಆರಂಭಿಸಿದರು. ಡಾ। ನಾ. ಸು. ಹರ್ಡಿಕರ್‌ರವರು ಈ ಪತ್ರಿಕೆಯಲ್ಲಿ ಕೆಲಸ ಮಾಡಿದರು. ಸರ್ಕಾರದ ಶಾಸನಕ್ಕೆ ತುತ್ತಾಗಿ ಪೊಲೀಸರು ಪತ್ರಿಕಾ ಕಛೇರಿಯನ್ನು ಶೋಧಿಸಿ ಮುಚ್ಚಿಸಿದರು. 'ಧನಂಜಯ' ಪತ್ರಿಕೆ ಸರ್ಕಾರದ ದುರಾಗ್ರಹವನ್ನು ಎದುರಿಸಿ ಮುಚ್ಚಬೇಕಾಯಿತು. 'ರಾಜಹಂಸ', 'ವಿಜಯ' ಪತ್ರಿಕೆಗಳು ಸ್ವಾತಂತ್ರ್ಯ ಹೋರಾಟ ಮುಂದುವರಿಸಿದವು. ಅಸಹಕಾರ ಚಳುವಳಿಯ ಕಾಲಕ್ಕೆ ಕೊಡಗಿನ ಬೆಳ್ಳಿಯಪ್ಪನವರ 'ಕೊಡಗು ಪತ್ರಿಕೆ', ಉಡುಪಿಯ 'ಸತ್ಯಾಗ್ರಹ', ಮಂಗಳೂರಿನ 'ನವಯುಗ', 'ಕುಮಟಾದ ಕಾನಡ', 'ಉತ್ತರ ಕನ್ನಡ ಧುರೀಣ', 'ಧಾರವಾಡ ವಿಜಯ', 'ಕರ್ಮವೀರ', ಬಾಗಲಕೋಟೆಯ 'ನವಜೀವನ' ಗಮನಾರ್ಹವಾದ ಸೇವೆ ಸಲ್ಲಿಸಿದವು. ೧೯೩೩ರಲ್ಲಿ ದಿವಾಕರ್ ಮತ್ತು ಆರ್. ಆರ್. ಮೊಹರೆ ಹನುಮಂತರಾಯರ ನೇತೃತ್ವದಲ್ಲಿ ಸ್ವಾತಂತ್ರ್ಯ ಹೋರಾಟಕ್ಕಾಗಿಯೇ ಸ್ಥಾಪಿಸಿದ 'ಸಂಯುಕ್ತ ಕರ್ನಾಟಕ' ಅನೇಕ ವಿಧವಾದ ಮಾರ್ಗದಲ್ಲಿ ಚಳವಳಿಯನ್ನು ಪ್ರೋತ್ಸಾಹಿಸಿತು.

ಮಂಗಳೂರಿನ ಭಾರದ್ವಾಜರ 'ತಿಲಕ ಸಂದೇಶ', ಮ. ಶ್ರೀನಿವಾಸ್‌ರವರ 'ಕನ್ನಡಿಗ', ಹುಬ್ಬಳ್ಳಿ ವಿ. ಜಿ. ಪುರಾಣಿಕರ 'ಲೋಕ ಮಾತೆ', ಹುಬ್ಬಳ್ಳಿ ಎಲ್. ಎಸ್. ಪಾಟೀಲ್‌ರವರ 'ತರುಣ', ಹುಬ್ಬಳ್ಳಿ ಕೇಶವರವರ 'ಕರ್ನಾಟಕ ಕೇಸರಿ', ಗಣೇಶ್‌ಯಾಜಿಯವರ 'ಕನ್ನಡ ಧುರೀಣ', ಕುಮಟಾದ ಎಸ್. ಮಿರ್ಜಿಯವರ 'ಉದಯ', ಹರ್ಡೇಕರ್ ಮಂಜಪ್ಪನವರ 'ಶರಣ ಸಂದೇಶ' ಹಾಗೂ ಇನ್ನೂ ಇತರ ಅನೇಕ ಪತ್ರಿಕೆಗಳು ಕನ್ನಡ ಪ್ರದೇಶಗಳಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿದವು.

ಮೈಸೂರಿನ ಅಗರಂ ರಂಗಯ್ಯನವರು ಧೀರ ಪತ್ರಕರ್ತರು. ಹಿರಿಯ ಸ್ವಾತಂತ್ರ್ಯ ಯೋಧರು. ಸ್ವಾತಂತ್ರ್ಯ ಹೋರಾಟದ ಸಂಕೇತವಾಗಿ 'ಸಾಧ್ವಿ' ಎಂಬ ಪತ್ರಿಕೆ ಸ್ಥಾಪಿಸಿದರು.

ಮೈಸೂರಿನಲ್ಲಿ ಪಿ. ಆರ್. ರಾಮಯ್ಯನವರು ಸ್ಥಾಪಿಸಿದ 'ತಾಯಿನಾಡು' ಬೆಂಗಳೂರಿಗೆ ಬಂದು ದಿನಪತ್ರಿಕೆಯಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಅಪಾರ ಸೇವೆ ಸಲ್ಲಿಸಿತು. ಬಿ. ಎನ್. ಗುಪ್ತರವರ 'ಪ್ರಜಾಮತ', ಮದ್ದೂರು ಸೀತಾರಾಮ್ ಶಾಸ್ತ್ರಿಗಳ 'ವೀರ ಕೇಸರಿ', ಸಿ. ಅಶ್ವತ್ಥನಾರಾಯಣರವರ 'ನವಜೀವನ' ಪತ್ರಿಕೆಗಳು ಮಾಡುತ್ತಿದ್ದ ಸ್ವಾತಂತ್ರ್ಯ ಸಂಗ್ರಾಮದ ಸಹಕಾರ ಮೇಲೆ ಸರ್ಕಾರದ ಗದಾ ಪ್ರಯೋಗ ನಡೆಸಿದ್ದರಿಂದ ಈ ಪತ್ರಿಕೆಗಳು ನಿಲ್ಲಬೇಕಾಯಿತು.

ಮೈಸೂರು ಚಲೋ ಚಳುವಳಿಯಲ್ಲಿ ಎಚ್. ಎಸ್. ದೊರೆಸ್ವಾಮಿಯವರ 'ಪೌರವಾಣಿ' ಪತ್ರಿಕೆ ಸರ್ಕಾರದ ಆಜ್ಞೆಯಿಂದ ಬೆಂಗಳೂರಿನಲ್ಲಿ ಪತ್ರಿಕೆ ನಿಲ್ಲಿಸಿ ಹಿಂದೂಪುರದಿಂದ ಪ್ರಕಟಣೆಗೊಂಡಿತು. ಹೀಗೆ ಕನ್ನಡ ಪತ್ರಿಕೆಗಳು ಜನರಲ್ಲಿ ಸ್ವಾತಂತ್ರ್ಯದ ಆಕಾಂಕ್ಷೆಗಳನ್ನು ಪೂರ್ಣಗೊಳಿಸಲು ತುಳಿದ ದಾರಿ, ನೀಡಿದ ಕೊಡುಗೆ ಸ್ಮರಣೀಯ. ೧೮೪೩ ರಿಂದ ೧೯೪೭ರವರೆಗೆ ಕನ್ನಡ ಪ್ರಾಂತ್ಯಗಳಲ್ಲಿ ಸುಮಾರು ೬೦೦ ಕ್ಕೂ ಮೀರಿ ಪತ್ರಿಕೆಗಳು ಜನಿಸಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ, ಭಾರತಕ್ಕೆ ಸ್ವಾತಂತ್ರ್ಯ ತರುವಲ್ಲಿ ಸೇವೆ ಸಲ್ಲಿಸಿದವು. ಇವುಗಳಲ್ಲಿ ಅನೇಕ ಪತ್ರಿಕೆಗಳು ಸರ್ಕಾರದ ಕಟುವಾದ ಆಜ್ಞೆಗಳಿಂದಲೂ ಮತ್ತು ಆರ್ಥಿಕ ಮುಗ್ಗಟ್ಟಿನಿಂದಲೂ ನಿಂತವು.

**ಕನ್ನಡನಾಡಿನ ಭೂಗತ ಪತ್ರಿಕೆಗಳು** : ೧೯೪೨ರ ಆಗಸ್ಟ್‌ನಲ್ಲಿ ಮಹಾತ್ಮ ಗಾಂಧೀಜಿ ಭಾರತದ ಸ್ವಾತಂತ್ರ್ಯಕ್ಕಾಗಿ 'ಮಾಡು ಅಥವ ಮಡಿ' ಎಂಬ ಕೊನೆಯ ಚಳವಳಿಯನ್ನು ಪ್ರಾರಂಭಿಸಿದರು. ಈ ಕೊನೆಯ ಚಳವಳಿ ಪ್ರಾರಂಭಿಸುವುದಕ್ಕೆ ಮುನ್ನ ಬ್ರಿಟಿಷ್ ಸರ್ಕಾರದ ವೈಸ್‌ರಾಯರಿಗೆ ತಿಳಿಸಿದರು. ಬಹಿರಂಗವಾಗಿಯೂ ಚಳವಳಿ ಮಾಡುವುದಾಗಿ ತಿಳಿಸಿದರು. ಆ ಸಮಯದಲ್ಲಿ ಗಾಂಧೀಜಿಯವರೂ ಸೇರಿದಂತೆ ಅನೇಕ ನಾಯಕರನ್ನು ಬಂಧಿಸಲಾಯಿತು. ದೇಶದ ನಾಯಕರ ಬಂಧನದಿಂದಾಗಿ ಚಳವಳಿ ತೀವ್ರ ಸ್ವರೂಪ ಪಡೆಯಿತು. 'ಭಾರತ ಬಿಟ್ಟು ತೊಲಗಿ' ಚಳವಳಿಗಿಂತ ಮುಂಚಿತವಾಗಿಯೇ ಪ್ರತಿಯೊಬ್ಬ ಭಾರತೀಯನೂ, ತಾನೇ ನಾಯಕನಾಗಿ ಚಳವಳಿಯನ್ನು ಮುಂದುವರಿಸಬೇಕೆಂದು ತೀರ್ಮಾನ ಕೈಗೊಂಡಿದ್ದರು. ಇದರಿಂದಾಗಿ ಸಹಸ್ರಾರು ಜನ ದಸ್ತಗಿರಿಯಾದರು. ಹಲವಾರು ಜನ ಸತ್ತರು. ಇದನ್ನು ಯಾರೂ ಲೆಕ್ಕಿಸದೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಲ್ಪಸಂಖ್ಯಾತರು, ವಿದ್ಯಾರ್ಥಿಗಳು, ಯುವ ನಾಯಕರು, ನಾಗರಿಕರು, ಹೋರಾಟವನ್ನು ಮುಂದುವರಿಸಿದರು.

೧೯೪೨ರ ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ ಚಳವಳಿಕಾರರು ಪತ್ರಿಕೆ ಹೊರಡಿಸುತ್ತಿದ್ದರು ಮತ್ತು ೧೯೪೭ರ ಮೈಸೂರು ಚಲೋ ಚಳವಳಿಯಲ್ಲಿಯೂ ಚಳವಳಿಕಾರರು ಪತ್ರಿಕೆ ಹೊರಡಿಸುತ್ತಿದ್ದರು. ಸರ್ಕಾರದ ಕಾನೂನುಗಳಿಂದಾಗಿ ಸ್ವಾತಂತ್ರ್ಯ ಸಮರದ ಸುದ್ದಿಗಳು ಅಷ್ಟು ವಿವರವಾಗಿ ಜನರಿಗೆ ತಲುಪುತ್ತಿರಲಿಲ್ಲ. ಹಾಗೇನಾದರೂ ಸರ್ಕಾರದ ವಿರುದ್ಧವಾಗಿ ಪತ್ರಿಕೆಗಳನ್ನು ಪ್ರಕಟಿಸಿದರೆ ಅವುಗಳನ್ನು ಸರ್ಕಾರ ಮುಟ್ಟುಗೋಲು ಹಾಕಿ ಸಂಪಾದಕನನ್ನು ಸೆರೆಗೆ ಕಳುಹಿಸುತ್ತಿತ್ತು. ಇದರಿಂದಾಗಿ ಚಳವಳಿಯ ಕಾರ್ಯಕ್ರಮಗಳನ್ನು ತಿಳಿಸಲು ಜನರಲ್ಲಿ ಧೈರ್ಯ ಮತ್ತು ಕೆಚ್ಚನ್ನು ತುಂಬಿ ದೇಶಭಕ್ತಿಯನ್ನು ಹೆಚ್ಚಿಸಲು, ಪತ್ರಿಕಾ ಮಾಧ್ಯಮಗಳು ಅವಶ್ಯಕವಾದವು. ಆಗ ಆಕಾಶವಾಣಿ

ಇತ್ತು, ಆದರೆ ಅದರ ಉಪಯುಕ್ತತೆ ಬಹಳ ಕಡಿಮೆ, ದೂರದರ್ಶನವಂತೂ ಇಲ್ಲವೇ ಇಲ್ಲ. ಜನಸಾಮಾನ್ಯರಿಗೆ ಚಳುವಳಿಯ ಸುದ್ದಿಗಳನ್ನು ತಿಳಿಸಲು ಪತ್ರಿಕೆಗಳೇ ಸಾಧನಗಳಾದವು.

ಚಳುವಳಿಯ ವಾತಾವರಣವನ್ನು ಸೃಷ್ಟಿಸುವುದು, ಚಳವಳಿಯಲ್ಲಿ ಭಾಗವಹಿಸುವುದು ಕಾನೂನಿಗೆ ವಿರುದ್ಧ. ಇದಕ್ಕಾಗಿ ಸರ್ಕಾರಕ್ಕೆ ಗೋಚರವಾಗದಂತೆ ಭೂಗತ ಪತ್ರಿಕೆಗಳನ್ನು ಕಲ್ಲಚ್ಚು ಮಾಡಿಸಿ (Cyclostyle), ಬೆರಳಚ್ಚು ಮಾಡಿ, ಕೈಯಲ್ಲಿ ಬರೆದು ಪ್ರಕಟಿಸುವ ಮತ್ತು ಗುಟ್ಟಾಗಿ ಹಂಚುವ ಕಾರ್ಯಾಚರಣೆಗಳು ಸಹ ಸತ್ಯಾಗ್ರಹವಿದ್ದ ಹಾಗೆ ಸ್ವಾತಂತ್ರ್ಯ ಚಳವಳಿಯ ಒಂದು ಅಂಶವೆಂದು ಭಾವಿಸಿ, ಅನೇಕ ಹಿರಿಯರು, ನಾಯಕರು, ಯುವಕರು, ವಿದ್ಯಾರ್ಥಿಗಳು, ಭೂಗತ ಪತ್ರಿಕೆಗಳನ್ನು ಹೊರಡಿಸಿ ಹಂಚುತ್ತಿದ್ದರು. ಅದನ್ನು ಜನರು ಓದಿ ಅವರು ಬೇರೆಯವರಿಗೆ ಹೇಳಿ ವಿಷಯ ತಿಳಿಸುತ್ತಿದ್ದರು. ಇದರಿಂದ ಸ್ವಾತಂತ್ರ್ಯ ಚಳವಳಿ ಉಗ್ರರೂಪ ಪಡೆಯುತ್ತಿತ್ತು. ಇದು ಸರ್ಕಾರಕ್ಕೆ ನುಂಗಲಾರದ ತುತ್ತಾಗಿತ್ತು. ಇದರಿಂದ ಕೋಪಗೊಂಡ ಸರ್ಕಾರ ಈ ಪತ್ರಿಕೆಗಳಿಗೆಗಾಗಿ ಶೋಧನೆ ಆರಂಭಿಸಿತು. ಪ್ರಯತ್ನ ಸಫಲವಾಗಲಿಲ್ಲ. ಅನುಮಾನ ಬಂದವರ ಮನೆಗಳನ್ನು ಶೋಧಿಸಲು ಆಜ್ಞೆ ಇತ್ತು, ಪತ್ರಿಕೆಗಳು ಯಾರ ಮನೆಯಲ್ಲಾದರೂ ಸಿಕ್ಕಿದರೆ ಅವರನ್ನೇ ಬಂಧಿಸಿ ಜೈಲಿಗೆ ಹಾಕುತ್ತಿದ್ದರು. ಆದರೂ ಚಳವಳಿಕಾರರು ಎದೆಗುಂದಲಿಲ್ಲ. ಅವರಿಗೆ ಇನ್ನೂ ಹೆಚ್ಚು ಉತ್ಸಾಹ, ಹೆಚ್ಚು ದೇಶಾಭಿಮಾನ ಮೂಡುತ್ತಿತ್ತು. ಈ ಪತ್ರಿಕೆಗಳು ಭೂಗತವಾಗಿಯೇ ಬೆಳೆಯಬೇಕಾಗಿತ್ತು. ಅನೇಕರು ಈ ಕಾರ್ಯಕ್ರಮದಲ್ಲಿ ನೇರವಾಗಿ ಭಾಗಿಗಳಾಗದಿದ್ದರೂ ಪರೋಕ್ಷವಾಗಿಯೇ ಸಹಾಯ ಮಾಡಿದ್ದಾರೆ. ಜೊತೆಗೆ ಓದಿದ ಪತ್ರಿಕೆಗಳ ಸಾರಾಂಶವನ್ನು ಬೇರೆಯವರ ಜೊತೆ ಹಂಚಿಕೊಂಡಿದ್ದಾರೆ.

**ಮುದ್ರಣ** : ಆಗಿನ ಕಾಲದ ಕಲ್ಲಚ್ಚು ಯಂತ್ರಗಳ ಪರಿಚಯ ಈ ದಿನದ ನಾಗರಿಕರಿಗೆ ಇಲ್ಲವೇ ಇಲ್ಲ. ಸೈಕ್ಲೋಸ್ಟೈಲ್ ಯಂತ್ರ (ಕಲ್ಲಚ್ಚುಯಂತ್ರ) ಇದು ಒಂದು ಮೂಲ ಪ್ರತಿಯನ್ನು ಅನೇಕ ಪ್ರತಿಯನ್ನಾಗಿಸುವ ಕಡಿಮೆ ವೆಚ್ಚದ ಸಾಧನ.

**ವಿತರಣೆ** : ಮುದ್ರಿಸುವುದು ಸುಲಭವಾದರೆ, ಹಂಚುವ ಕೆಲಸ ಕಷ್ಟ. ಈ ಕೆಲಸವನ್ನು ಪೋಲಿಸರಿಗೆ ತಿಳಿಯದಂತೆ ಗುಪ್ತವಾಗಿ ಮಾಡಬೇಕು. ಕಂಬಗಳ ಮೇಲೆ, ಗೋಡೆಗಳ ಮೇಲೆ ರಾತ್ರಿಹೊತ್ತು ಹಚ್ಚುತ್ತಿದ್ದರು. ಅಂಚೆಯ ಮೂಲಕ ಸರ್ಕಾರದ ಮುದ್ರೆ ಒತ್ತಿ ಪತ್ರಿಕೆಗಳನ್ನು ಸರ್ಕಾರದ ಕಛೇರಿಗಳಿಗೂ, ಪೋಲಿಸ್ ಸ್ಟೇಷನ್‌ಗಳಿಗೂ ಕಳುಹಿಸಿ ಅವರಿಗೂ ಚಳವಳಿಯ ಸುದ್ದಿಯನ್ನು ಮುಟ್ಟಿಸುತ್ತಿದ್ದರು. ಒಂದು ನೂರು ಪತ್ರಿಕೆಗಳಿಂದ ಹಿಡಿದು ೨೦೦೦ ಪತ್ರಿಕೆಗಳವರೆಗೆ ಈ ಪತ್ರಿಕೆಗಳು ಕಲ್ಲಚ್ಚುಗಳಿಂದ ಮುದ್ರಿತವಾಗುತ್ತಿದ್ದವು. ಅದರ ಬೆಲೆ ಮೂರು ಕಾಸಿನಿಂದ ಒಂದು ಆಣೆಯವರೆಗೆ (೨ ಪೈಸೆಯಿಂದ ೧೦ ಪೈಸೆ) ಆದರೆ ಕೆಲವರು ಧೈರ್ಯವಾಗಿ ಕಾಸು ಕೊಟ್ಟು ಕೊಳ್ಳುತ್ತಿದ್ದರು. ಮತ್ತೆ ಕೆಲವರು ಪೋಲಿಸರಿಗೆ ಹೆದರಿ ಮುಟ್ಟುತ್ತಿರಲಿಲ್ಲ.

ಸ್ವಾತಂತ್ರ್ಯ ಹೋರಾಟದಲ್ಲಿ ಭೂಗತ ಪತ್ರಿಕೆಗಳ ಪಾತ್ರ ಬಹಳ ದೊಡ್ಡದು. ಭಾರತದಾದ್ಯಂತ ಈ ಪತ್ರಿಕೆಗಳು, ಆಯಾಯ ಪ್ರಾಂತ್ಯ ಭಾಷೆಯಲ್ಲಿ, ಪ್ರಕಟವಾಗುತ್ತಿದ್ದವು. ಕರ್ನಾಟಕದಲ್ಲಿ ಆಗಿನ ಮೈಸೂರು ಪ್ರಾಂತ್ಯದಲ್ಲಿ ಎಲ್ಲಾ ಭಾಗಗಳಲ್ಲಿಯೂ ವಿವಿಧ ಹೆಸರಿನಲ್ಲಿ ಈ ಪತ್ರಿಕೆಗಳನ್ನು ಹೊರಡಿಸಿ ಚಳವಳಿಕಾರರಿಗೆ ಮತ್ತು ಜನಸಾಮಾನ್ಯರಿಗೆ ತಲುಪುವಂತೆ ಮಾಡುತ್ತಿದ್ದವು.

ಈ ಪತ್ರಿಕೆಗಳ ಉದ್ದೇಶ ಚಳವಳಿಯ ವಾರ್ತೆಯನ್ನು ವಿದ್ಯಾರ್ಥಿಗಳಿಗೆ, ಯುವಕರಿಗೆ ಮುಟ್ಟಿಸುವುದು. ಇದರಲ್ಲಿ ಚಳವಳಿ ಹೇಗೆ ನಡೆಸಬೇಕು, ಕಾರ್ಯಕ್ರಮಗಳನ್ನು ಹೇಗೆ ಹಮ್ಮಿಕೊಳ್ಳಬೇಕು, ಮುಷ್ಕರದ ಅವಶ್ಯಕತೆ ಏನು ಇತ್ಯಾದಿ ವಿವರಗಳ ಜೊತೆಗೆ ವ್ಯಂಗ್ಯ ಚಿತ್ರಗಳನ್ನು ಪ್ರಕಟಿಸಿ ಚಳುವಳಿಕಾರರಿಗೆ ಪ್ರಚೋದನೆ ನೀಡುತ್ತಿದ್ದವು.

ಸಾಮಾನ್ಯ ಪತ್ರಿಕೆಗಳಲ್ಲಿ ಕೆಲವು ವಿಷಯಗಳು ಪ್ರಕಟಗೊಳ್ಳುತ್ತಿರಲಿಲ್ಲ. ಆದರೆ ಭೂಗತ ಪತ್ರಿಕೆಗಳಲ್ಲಿ ಲಾಠಿ ಪ್ರಹಾರ, ಗುಂಡು ಹಾರಿಸಿದ್ದು (ಗೋಲಿಬಾರ್), ವಿಧ್ವಂಸಕ ಕೃತ್ಯಗಳಾದ ಸರ್ಕಾರದ ಕಟ್ಟಡ ಸುಡುವ ವಿಷಯ ಇತ್ಯಾದಿಗಳ ಬಗ್ಗೆ ಸ್ಪಷ್ಟ ನಿರೂಪಣೆ ಇರುತ್ತಿತ್ತು. ಹಿರಿಯ ನಾಯಕರು ಜೈಲು ಸೇರಿದ ಮೇಲೆ ಹೊರಗಡೆಯಿದ್ದ ಯುವಕರಿಗೆ ವಿದ್ಯಾರ್ಥಿಗಳಿಗೆ ಚಳವಳಿಗಳನ್ನು ಜೀವಂತವಾಗಿಡಲು ಮತ್ತು ಮುಂದುವರಿಸಲು, ರಾಷ್ಟ್ರಧ್ವಜಾರೋಹಣ ಮಾಡುವುದು, ವಂದೇ ಮಾತರಂ ಹಾಡುವುದು, ಪ್ರಭಾತ್‌ಪೇರಿ, ಶಾಲಾ ಕಾಲೇಜುಗಳಲ್ಲಿ ಮುಷ್ಕರ ನಡೆಸುವುದು ಇತ್ಯಾದಿ ಕಾರ್ಯಕ್ರಮಗಳ ಬಗ್ಗೆ ಈ ಪತ್ರಿಕೆಗಳು ಪ್ರಕಟಿಸುತ್ತಿದ್ದವು. ಸಭೆ ಮತ್ತು ಕೂಟಗಳು ಕಾನೂನು ಪ್ರಕಾರ ನಿಷೇಧಿಸಲ್ಪಡುತ್ತಿದ್ದವು. ಆದಾಗ್ಯೂ ಬಹಿರಂಗ ಸಭೆ ನಡೆಯುವ ತಾರೀಖು, ವೇಳೆ, ಸ್ಥಳವನ್ನು ಇದರಲ್ಲಿ ಪ್ರಕಟಿಸುತ್ತಿದ್ದರು. ಇದನ್ನು ತಿಳಿದ ಪೋಲಿಸರು ಅಲ್ಲಿ ಸರ್ಪಗಾವಲು ಕಾದರೆ ಅಲ್ಲಿ ಸಭೆ ನಡೆಯುತ್ತಿರಲಿಲ್ಲ. ಬೇರೆಡೆ ನಡೆಯುತ್ತಿತ್ತು.

ಆಗ ಕರ್ನಾಟಕದಲ್ಲಿ ಇಂಗ್ಲಿಷ್ ಪತ್ರಿಕೆಗಳು ಸಹ ಇದ್ದವು. ಇವುಗಳಲ್ಲಿ ಲಿಬರ್ಟಿ (Liberty), 'ಆಜಾದ್' (Azad), 'ರೆವೆಲ್ಯೂಷನ್' (Revolution), 'ಕಾಂಗ್ರೆಸ್ ನ್ಯೂಸ್' (Congress News), 'ವಂದೇ ಮಾತರಂ' (Vande Mataram), 'ಹರಿಜನ' (Harijan), 'ಮೈಸೂರು ಕಾಂಗ್ರೆಸ್' (Mysore congress) ಇವು ಮುಖ್ಯವಾಗಿವೆ.

**ಭೂಗತ ಪತ್ರಿಕೆ ಬೆಂಗಳೂರಿನಲ್ಲಿ :** ಮಲ್ಲೇಶ್ವರದ ೨ ನೇ ಕ್ರಾಸಿನಲ್ಲಿ ಸುಖತೀರ್ಥ, ವ್ಯಾಸತೀರ್ಥ ಎಂಬ ವಿದ್ಯಾರ್ಥಿ ನಾಯಕರಿದ್ದರು. ಇವರು ಭೂಗತ ಪತ್ರಿಕೆಗಳನ್ನು ಬೇರೆ ಬೇರೆ ಹೆಸರುಗಳಲ್ಲಿ ಅಂದರೆ 'ಕ್ರಾಂತಿ', 'ಆಹುತಿ', 'ಆಜಾದ್' ಹೆಸರಿನಲ್ಲಿ ಮುದ್ರಿಸಿ ಮುನ್ನೆಚ್ಚರಿಕೆ ಕೊಟ್ಟು ಒಂದೊಂದು ದಿನ ಒಂದೊಂದು ಕಡೆ ಬರುವಂತೆ ತಿಳಿಸಿ, ಪತ್ರಿಕೆಗಳನ್ನು ಹಂಚಲು ನಮ್ಮ ಕೈಗೆ ಕೊಡುತ್ತಿದ್ದರು.

**ಹಂಚಿಕೆ :** ನಾವು ಅಂಗಡಿಗಳಿಗೆ ಮನೆಗಳಿಗೆ ಹೋಗಿ ಹಂಚಿಕೆ ಮಾಡುತ್ತಿದ್ದೆವು. ಅವರು ಮೂರು ಕಾಸಿನಿಂದ ಒಂದು ಆಣೆಯವರೆಗೆ ಕೊಡುತ್ತಿದ್ದರು. ಆ ಹಣವನ್ನು ಸಂಗ್ರಹಿಸಿ ಮುದ್ರಣಕಾರರಿಗೆ ತಲುಪಿಸುತ್ತಿದ್ದೆವು. ಇದರಿಂದ ಮುದ್ರಣ ಕಾಗದ ಕಲ್ಲಚ್ಚು ಕೊಳ್ಳಲು ಹಣ ಒದಗುತ್ತಿತ್ತು. ಬಸವನಗುಡಿಯಿಂದ ಕೆಲವು ಪತ್ರಿಕೆಗಳು ಇವರ ಮೂಲಕ ಬರುತ್ತಿದ್ದವು. ಅನೇಕ ಯುವಕರು ಈ ಗುಪ್ತ ಪತ್ರಿಕೆಗಳ ಪ್ರಚಾರ, ಹಂಚಿಕೆಗಳನ್ನು ಬಹಳ ಧೈರ್ಯದಿಂದ, ಪೋಲಿಸರಿಗೆ ಹೆದರದೇ ಮಾಡುತ್ತಿದ್ದರು.

ಹೊ. ಶ್ರೀನಿವಾಸಯ್ಯನಾದ ನಾನು ಮತ್ತು ಮಿತ್ರರಾದ ಗೋಪಾಲಕೃಷ್ಣರಾವ್, ಲಕ್ಷ್ಮೀನಾರಾಯಣ ಮುಂತಾದವರು ಒಂದು ದಿವಸ ಯೋಜನೆ ಮಾಡಿ ನಾವೂ ಏಕೆ ಪತ್ರಿಕೆ ಮಾಡಬಾರದೆಂದು ಚರ್ಚಿಸಿ ಒಂದು ಯೋಜನೆ ಹಾಕಿಕೊಂಡೆವು. ೧೯೪೨ರಲ್ಲಿ ಮಲ್ಲೇಶ್ವರದ ೫ನೇ ಕ್ರಾಸ್ ಮತ್ತು ಸಂಪಿಗೆ ರಸ್ತೆ ವೃತ್ತದಲ್ಲಿರುವ ಮೂಲೆಯಲ್ಲಿ ಪೋಲೀಸ್ ಠಾಣೆ ಇತ್ತು. ಅದರ ಪಕ್ಕದಲ್ಲಿ ಶೇಷಪ್ಪನ ಹೋಟೇಲು. ಅದರ ಪಕ್ಕದಲ್ಲಿ ಮೊದಲನೇ ಮಹಡಿಯ ಮೇಲೆ ಶ್ರೀ ರಾಮಕೃಷ್ಣ ಟೈಪಿಂಗ್ ಸಂಸ್ಥೆ ಇತ್ತು. ಇದರ ಮಾಲೀಕ ಶ್ರೀ ರಾಮರಾವ್, ಗೋಪಾಲಕೃಷ್ಣ ಅವರ ಅಣ್ಣ, ರಾಮರಾವ್ ಸರ್ಕಾರಿ ಕೆಲಸದಲ್ಲಿದ್ದರು. ಬೆಳಿಗ್ಗೆ ೧೦ರಿಂದ ೫ ಗಂಟೆಯವರೆಗೆ ಈ ಸಂಸ್ಥೆಯನ್ನು ನೋಡಿಕೊಳ್ಳುವ ಕೆಲಸ ಗೋಪಾಲಕೃಷ್ಣರದಾಗಿತ್ತು. ಈ ಅವಕಾಶವನ್ನು ಉಪಯೋಗಿಸಿಕೊಂಡು ಅಲ್ಲಿದ್ದ ಕಲ್ಲಚ್ಚುಯಂತ್ರದ ಸಹಾಯದಿಂದ ಪತ್ರಿಕೆ ಹೊರಡಿಸುವುದೆಂದು ತೀರ್ಮಾನಕ್ಕೆ ಬಂದೆವು. ರಾಮಕೃಷ್ಣ ಟೈಪರೇಟಿಂಗ್ ಸಂಸ್ಥೆಯಲ್ಲಿ ಕಲ್ಲಚ್ಚು ಉಪಯೋಗಿಸುವುದನ್ನು ಕಲಿಸುತ್ತಿದ್ದರು. ಅಲ್ಲಿ ಕಲ್ಲಚ್ಚು ಕಾಗದದ ಮೇಲೆ ಚೂಪಾದ ಗುಂಡಾಗಿರುವ ಲೇಖನಿಯಿಂದ ಬರೆಯಬೇಕಾಗಿತ್ತು. ಕೈಬರಹಕ್ಕೆ ಬೇರೆಯಾದ ಕಲ್ಲಚ್ಚು ಕಾಗದ ಬೇಕಾಗಿತ್ತು. ನಾವು ೧೦-೧೫ ಕಾಗದ ಕೇಳಿದಾಗ ಪೇಟೆಯಲ್ಲಿ ಅಂಗಡಿಯವನು ಪ್ರಶ್ನೆ ಮಾಡುತ್ತಿದ್ದ. ಮುದ್ರಣ ಕಾಗದವನ್ನು ಅಷ್ಟು ಹೆಚ್ಚಾಗಿ ಖರೀದಿಸಿದರೆ ಪ್ರಶ್ನಿಸುತ್ತಿದ್ದರು. ಅದನ್ನು ರಾಮಕೃಷ್ಣ ಟೈಪಿಂಗ್ ಸಂಸ್ಥೆಗೆಂದು ಮಲ್ಲೇಶ್ವರಂ ಹೈಸ್ಕೂಲು ಹೆಸರಿನಲ್ಲಿ ತರುತ್ತಿದ್ದೆವು.

ಮಧ್ಯಾಹ್ನದ ಹೊತ್ತು ಸುದ್ದಿಗಳನ್ನು ಸಂಗ್ರಹಿಸಿ ಕಲ್ಲಚ್ಚಿನ ಕಾಗದದ ಮೇಲೆ ಬರೆಯುತ್ತಿದ್ದರು. ನನ್ನ ಮತ್ತು ಲಕ್ಷ್ಮೀನಾರಾಯಣನ ಅಕ್ಷರ ಚೆನ್ನಾಗಿದ್ದುದರಿಂದ ನಮ್ಮಿಬ್ಬರಲ್ಲಿ ಒಬ್ಬರು ಕಲ್ಲಚ್ಚು ಕಾಗದದ ಮೇಲೆ ಬರೆಯುತ್ತಿದ್ದೆವು. ಗೋಪಾಲಕೃಷ್ಣರಾಯರು ಇನ್‌ಸ್ಟಿಟ್ಯೂಟ್ ಮುಂದಿನ ಬಾಗಿಲಿಗೆ ಬೀಗ ಹಾಕಿ ಹೊರಗಡೆ ವರಾಂಡದಲ್ಲಿ ಕಾವಲು ಕಾಯುತ್ತಾ ಕುಳಿತಿರುತ್ತಿದ್ದರು. ನಮ್ಮ ಕೆಲಸ ಮುಗಿದು ಸನ್ನೆ ಮಾಡಿದ ಮೇಲೆ ಬೀಗ ತೆಗೆಯುತ್ತಿದ್ದರು. ಈ ಪತ್ರಿಕೆಗಳನ್ನು ಚೀಲದಲ್ಲಿ ಹಾಕಿಕೊಂಡು ಅದರ ಮೇಲೆ ಪುಸ್ತಕವನ್ನೋ, ತರಕಾರಿಯನ್ನೋ ಹಾಕಿ ಹೊರಗಡೆ ತರುತ್ತಿದ್ದರು. ನಮಗೆ ತುಂಬಾ ಧೈರ್ಯ. ಏಕೆಂದರೆ ಪಕ್ಕದಲ್ಲೇ ಪೋಲಿಸ್ ಸ್ಟೇಷನ್. ಪೊಲೀಸರು ನಮ್ಮ ಇನ್‌ಸ್ಟಿಟ್ಯೂಟ್‌ನ ಕೆಳಗಿನ ಅಂಗಡಿಯಲ್ಲಿ ಕುಳಿತುಕೊಳ್ಳುತ್ತಿದ್ದರು. ಏಕೆಂದರೆ ಭೂಗತ ಪತ್ರಿಕೆ ಮುದ್ರಣಾಲಯಕ್ಕೆ ಪೊಲೀಸರ ಕಾವಲು. ಪತ್ರಿಕೆಗಳನ್ನು ಚೆನ್ನಾಗಿ ಮಡಚಿ ಜೇಬಿನಲ್ಲಿಟ್ಟು ಚೀಲದಲ್ಲಿನ ಪತ್ರಿಕೆಗಳನ್ನು ಬೇರೆ ಬೇರೆ ಕಡೆ ಹಂಚಲು ನಾನು, ನಮ್ಮ ಕೂಡ ಲಕ್ಷ್ಮೀನಾರಾಯಣ, ಗೋಪಾಲಕೃಷ್ಣ ಸೈಕಲ್ಲಿನಲ್ಲಿ ಹೋಗಿ ಕೊಟ್ಟು ಬರುತ್ತಿದ್ದೆವು.

ಕಲ್ಲಚ್ಚಿನ ಕಾಗದ ಮಸಿಯಾಗುತ್ತಿತ್ತು. ಅದನ್ನು ಒಂದು ಕಾಗದದಲ್ಲಿ ಮುಚ್ಚಿ ತಂದು ಬಚ್ಚಲು ಮನೆಯ ಉರಿಯಲ್ಲಿ ಸುಡುತ್ತಿದ್ದೆ. ಪತ್ರಿಕೆಗಳನ್ನು ಬೇರೆ ಬೇರೆ ಹೆಸರಿನಲ್ಲಿ ಅಂದರೆ, 'ಆಹುತಿ', 'ಕ್ರಾಂತಿ', 'ಜ್ವಾಲಾಮುಖಿ', 'ಗೆಜೆಟಿಯರ್', 'ಇನ್‌ಕ್ವಿಲಾಬ್', 'ಜ್ಯೋತಿ' ಹೆಸರುಗಳಲ್ಲಿ ಪ್ರಕಟಿಸುತ್ತಿದ್ದೆವು. ಇದಲ್ಲದೆ 'ಪ್ರಜಾಶಕ್ತಿ', 'ರಣಕಹಳೆ', 'ರಣಭೇರಿ', 'ಉದಯಜ್ವಾಲೆ', 'ಸ್ಯಾಕ್ರಿಫೈಸ್', 'ರೆವೆಲ್ಯೂಷನ್', 'ಬ್ಲೇಜ್', 'ಪ್ರಜಾರಾಜ್', 'ಜಿಂದಾಬಾದ್', 'ದಾಸಯ್ಯನ ಗರುಡಗಂಭ', 'ವಿದ್ಯಾರ್ಥಿ' ಈ ಹೆಸರುಗಳಲ್ಲಿ ಬರುತ್ತಿದ್ದವು. ಸಂಪಾದಕರ ಹೆಸರಾಗಿ ಜೈಲಿನಲ್ಲಿರುವವರ ಹೆಸರುಗಳನ್ನು ಬರೆಯುತ್ತಿದ್ದೆವು. ಪ್ರಕಟನಾ ಸ್ಥಳಗಳನ್ನು ಸಹ ಬೇರೆ ಬೇರೆ ಬರೆಯುತ್ತಿದ್ದೆವು. ಪತ್ರಿಕೆಗಳನ್ನು ತರುವಾಗ ಪೋಲಿಸರು ಕೆಳಗೆ ಕುಳಿತಿದ್ದರಿಂದ ಅವರಿಗೆ ಅನುಮಾನ ಬರದ ಹಾಗೇ ನಡೆದುಕೊಳ್ಳುತ್ತಿದ್ದೆವು. ಅವರಿಗೆ ಅನುಮಾನ ಬಂದರೆ ತಲಾಷು ಮಾಡುತ್ತಿದ್ದರು. ಗೋಪಾಲಕೃಷ್ಣರಾವ್ ಸಂಸ್ಥೆಗೆ ಸಂಬಂಧಪಟ್ಟವರಾದ್ದರಿಂದ ಪೊಲೀಸರಿಗೆ ಅನುಮಾನ ಬರಲು ಸಾಧ್ಯವಿರುತ್ತಿರಲಿಲ್ಲ.

**ವಿತರಣೆ** : ಗೋಪಾಲಕೃಷ್ಣರಾವ್, ನಾನು, ಲಕ್ಷ್ಮೀನಾರಾಯಣ ಇನ್ನೂ ಅನೇಕರು ಪತ್ರಿಕೆಗಳನ್ನು ಕೆಲವು ಹಂಚಿಕೆದಾರರ ಮನೆಗೆ ಅಥವಾ ಗೊತ್ತುಪಡಿಸಿದ ಮನೆ ತಲುಪಿಸುವ ಜವಾಬ್ದಾರಿ ಹೊತ್ತಿದ್ದೆವು. ಪತ್ರಿಕೆಯನ್ನು ನಿಕ್ಕರ್ ಜೇಬಿನಲ್ಲಿ ಮಡಚಿಟ್ಟುಕೊಂಡು ಸಂಪಿಗೆ ರಸ್ತೆಯಲ್ಲಿರುವ ಕೆಲವು ಅಂಗಡಿಗಳಿಗೆ ಕೊಡುತ್ತಿದ್ದೆವು. ಅಂಗಡಿಗೆ ಹೋದ ಕೂಡಲೇ ಪತ್ರಿಕೆಯನ್ನು ಮೇಜಿನ ಮೇಲೆ ಇಡುತ್ತಿದ್ದೆವು. ಅವರು ಮಾತಾಡದೇ ೩ ಅಡವಾರಿ ಕಾಸುಗಳನ್ನು ಕೈಗೆ ಕೊಡುತ್ತಿದ್ದರು. ಇದು ಬೇರೆ ಯಾರಿಗೂ ಅರಿವಾಗುತ್ತಿರಲಿಲ್ಲ. ಈ ಪತ್ರಿಕೆಗಳು ಯಾರ ಹತ್ತಿರವಾದರೂ ಸಿಕ್ಕರೆ ಅಂತಹವರನ್ನು ದಸ್ತಗಿರಿ ಮಾಡುತ್ತಿದ್ದರು. ಆದರಿಂದ ಕೆಲವರಿಗೆ ಈ ಪತ್ರಿಕೆಗಳನ್ನು ಕಂಡರೆ ಭಯ. ಆದರಿಂದ ಕೆಲವರು ಪತ್ರಿಕೆಗಳನ್ನು ಓದಿ ತಕ್ಷಣ ಹರಿದು ಹಾಕುತ್ತಿದ್ದರು. ಮಲ್ಲೇಶ್ವರದಲ್ಲಿ ವೆಂಕಟಾಚಾರ್ ಅಂಗಡಿ (ಅಂತಪ್ಪ ಎಂದು ಕೂಗುವ ವಾಡಿಕೆ) 'ವೆಂಕಟೇಶ್ವರ ಸ್ಟೋರ್' ಚಳವಳಿಕಾರರ ಒಂದು ಕೇಂದ್ರ, ಇವರು ವೃತ್ತ ಪತ್ರಿಕೆ ಮತ್ತು ವಾರಪತ್ರಿಕೆಗಳನ್ನು ಮಾರುತ್ತಿದ್ದರು. ಇದರಿಂದ ಭೂಗತಪತ್ರಿಕೆ ಮಾಡುವ ನಮಗೆ ಎಲ್ಲಾ ಪತ್ರಿಕೆಗಳಿಂದ ಸುದ್ದಿ ಸಂಗ್ರಹಣೆ ಮಾಡಲು ಅನುಕೂಲವಾಗಿತ್ತು. ಅಲ್ಲದೆ ಈ ಅಂಗಡಿಯ ಪತ್ರಿಕೆ ಹಂಚುವ ಹುಡುಗ ರಾಜು ನಮ್ಮ ಪತ್ರಿಕೆಗಳನ್ನು ಮನೆ ಮನೆಗೂ ತಲುಪಿಸುತ್ತಿದ್ದ.

**ಕಹಿ ಪ್ರಸಂಗ** : ಅಂತಪ್ಪನವರ ಅಂಗಡಿಗೆ ಅನೇಕ ಹಿರಿಯರು ಅಂದರೆ ತಿಪೇರುದ್ರಯ್ಯ, ಡಿವಿಷನಲ್ ಕಮಿಷನಲ್, ವೆಂಕಟಪ್ಪ (ಚಿತ್ರಕಲಾವಿದರು), ಸುಬ್ಬರಾವ್, ಸೆಂಟ್ರಲ್ ಕಾಲೇಜಿನ ರಸಾಯನಶಾಸ್ತ್ರದ ಪ್ರೊಫೆಸರ್ ಮುಂತಾದವರು ಪತ್ರಿಕೆಗಳನ್ನು ತೆಗೆದುಕೊಂಡು ಹೋಗಲು ಬರುತ್ತಿದ್ದರು. ಯಾವಾಗಲೂ ಪೋಲಿಸರ ಕಣ್ಣೆಲ್ಲಾ ಅಂತಪ್ಪನ ಮೇಲೆ ಇದ್ದೇ ಇರುತ್ತಿತ್ತು. ಸಿ. ಐ. ಡಿ. ರಾಘವೇಂದ್ರಾಚಾರ್ ಅಂಗಡಿಗೆ ಬರುತ್ತಿದ್ದರು. ಕ್ರಮೇಣ ಅವರು ನನ್ನ ಸ್ನೇಹಿತರೂ ಆದರು. ಅವರಿಂದ ಸರ್ಕಾರದ ಕೆಲವು ವಿಷಯಗಳು ತಿಳಿದುಬರುತ್ತಿತ್ತು. ಆದರೂ ಅವರಿಗೆ ಅನುಮಾನ ಇದ್ದೇ ಇತ್ತು. ಒಂದು ದಿನ ಅಂಗಡಿಯಲ್ಲಿ ನಾನು ಕುಳಿತಿದ್ದೆ. ಆಗ ನನ್ನ ನಿಕ್ಕರ್ ಜೇಬಿನಲ್ಲಿ ಭೂಗತ ಪತ್ರಿಕೆ ತುಂಬಿದ್ದವು. ನಾನು ಅನುಮಾನ ಬರದಂತೆ ನಟಿಸುತ್ತಿದ್ದೆ. ಅವರ ನಿಗವೆಲ್ಲಾ ನನ್ನ ಜೇಬಿನ ಮೇಲಿತ್ತು. ಅವರು ''ಏನು ಶ್ರೀನಿವಾಸಯ್ಯನವರೆ'' ಅನ್ನುತ್ತಾ ನನ್ನ ತೊಡೆಯ ಮೇಲೆ ಕೈ ಹಾಕಿದರು. ನಾನು ತಕ್ಷಣ ಹುಷಾರಾಗಿ ಕೈ ಹಾಕಿ ಪತ್ರಿಕೆಯನ್ನು ಜೇಬಿನಿಂದ ಹಿಂದಕ್ಕೆಳೆದುಕೊಂಡೆ. ಜೇಬಿನ ಮೇಲೆ ಅವರ ಕೈ ಬೀಳಲಿಲ್ಲ. ಅವರಿಂದ ತಪ್ಪಿಸಿಕೊಳ್ಳಲು ''ತುಂಬಾ ಕೆಲಸವಿದೆ'' ಎಂದು ಹೇಳಿ ಅಲ್ಲಿಂದ ಜಾರಿಕೊಂಡೆ. ಒಂದು ದಿನ ವೆಂಕಟಾಚಾರ್ ಅಂಗಡಿಗೆ ಪತ್ರಿಕೆ ಕೊಟ್ಟು ೩ ಕಾಸು ತೆಗೆದುಕೊಂಡು ಹೋದೆ. ಆ ದಿನ ವೆಂಕಟಾಚಾರ್ ಪೇಪರ್ ಓದ್ತಾ ಇದ್ದರು. ಸಿ.ಐ.ಡಿ. ರಾಘವೇಂದ್ರಾಚಾರ್‌ಗೆ ಇದು ಭೂಗತ ಪತ್ರಿಕೆ ಅಂತ ಗೊತ್ತಾಗಿ 'ಏನು ಅಂತಪ್ಪನವರೇ, ಯಾವುದೋ ಹೊಸ ಪತ್ರಿಕೆ ಓದ್ತಾ ಇದ್ದೀರಲ್ಲ ಕೊಡಿ ನೋಡೋಣ' ಎಂದರಂತೆ. ಅಷ್ಟರಲ್ಲಿ ವೆಂಕಟಾಚಾರ್ ಎಚ್ಚೆತ್ತುಕೊಂಡು ಪೇಪರ್ ಮಡಚಿ ಡ್ರಾಯರ್‌ನಲ್ಲಿ ಹಾಕಿಕೊಂಡು ಮಾತು ಮರೆಸಿ ಕಾಫೀ ತರಿಸಿ ಕೊಟ್ಟು ಕಳಿಸಿಬಿಟ್ಟರು. ರಾಘವೇಂದ್ರಾಚಾರ್ ಸ್ವಲ್ಪ ಹೊತ್ತು ಇದ್ದು ಹೊರಟುಹೋಗಿ ಅರ್ಧ ಗಂಟೆ ಬಿಟ್ಟು ಪೋಲಿಸ್ ವ್ಯಾನ್ ಕಳುಹಿಸಿ ಅಂಗಡಿ ತೋರಿಸಿದರು. ಆಗ ಇನ್ಸ್‌ಪೆಕ್ಟರ್ ಅಣ್ಣೇಗೌಡ, ಸಿ.ಐ.ಡಿ. ರಾಘವೇಂದ್ರಾಚಾರ್‌ಗೆ ಎರಡು ಭೂಗತ ಪತ್ರಿಕೆಗಳು ಸಿಕ್ಕಿದವು. ಪೋಲಿಸರು 'ಯಾರು ತಂದು ಕೊಟ್ಟದ್ದು ಎಲ್ಲಿಂದ ಬಂತು, ಎಂದು ಅನೇಕ ಪ್ರಶ್ನೆ ಹಾಕಿದರು. ಆದರೆ ಈ ಅಂತಪ್ಪ ಬಾಯಿ ಬಿಡದೆ, ''ನಾನು ಅಂಗಡಿ ಬಾಗಿಲು ಹಾಕುವಾಗ ಯಾರೋ ತೂರಿಸಿಬಿಟ್ಟು ಹೋಗಿರಬೇಕು'' ಎಂದರು. ಆದರೂ ಬಿಡದೇ ಪೋಲಿಸರು ತಕ್ಷಣ ದಸ್ತಗಿರಿ ಮಾಡಿ ಕರೆದುಕೊಂಡು ಹೋದರು. ಈ ವಿಷಯ ಸಂಜೆ ನನಗೆ ಗೊತ್ತಾಯಿತು. ಅಂತಪ್ಪ ಜೈಲಿನಿಂದ ಬಿಡುಗಡೆ ಆಗಿ ಬರುವವರೆಗೂ ಅವನ ಅಂಗಡಿ ಕೆಲಸಗಾರ ರಾಜು ಮತ್ತು ಪತ್ನಿ ವ್ಯವಹಾರ ನೋಡಿಕೊಳ್ಳುತ್ತಿದ್ದರು. ಅಂದಿನಿಂದ ಅಂಗಡಿಯವರು ಈ ಪೇಪರ್ ತೆಗೆದುಕೊಳ್ಳುವುದನ್ನೇ ನಿಲ್ಲಿಸಿಬಿಟ್ಟರು. ನಾವು ರಾತ್ರಿ ವೇಳೆ ಅಂಗಡಿಗಳಿಗೆ, ಮನೆಗಳಿಗೆ, ತಗೊಂಡು ಹೋಗಿ, ಅವರಿಗೆ ಗೊತ್ತಿಲ್ಲದ ಹಾಗೇ ಕಾಂಪೌಂಡು, ಹತ್ತಿ ಕಿಟಕಿಗಳಲ್ಲಿ ಹಾಕಿ ಬಂದುಬಿಡುತ್ತಿದ್ದೆವು.

**ಹಂಚಿಕೆಯ ಅನುಭವ** : ಮಲ್ಲೇಶ್ವರದ ೧೭ನೇ ಕ್ರಾಸಿನಲ್ಲಿ ನಾಯ್ಡು ಎಂಬುವರ ಮನೆಯ ಕಾಂಪೌಂಡು. ಒಮ್ಮೆ ಪತ್ರಿಕೆ ಹಂಚುತ್ತಾ, ನಾಯ್ಡು ಅವರ ಮನೆ ಹಂಚಲು ಹೊರಟದ್ದಿವಿ. ನಾಯ್ಡು ಕೃಷಿ ಇಲಾಖೆಯಲ್ಲಿ ನಿರ್ದೇಶಕರಾಗಿದ್ದವರು ಇವರಿಗೂ ವಿಷಯ ಮುಟ್ಟಿಸಬೇಕು ಅಂತ ನಮ್ಮ ಯೋಜನೆ ಆಗಿತ್ತು. ಅವರ ಮನೆಯದು ದೊಡ್ಡ ಕಾಂಪೌಂಡು. ಆಗ ಸುಮಾರು ರಾತ್ರಿ ೧೧-೦೦ ಗಂಟೆ ಸಮಯ. ಗೇಟಿನಿಂದ ಮನೆ ಸ್ವಲ್ಪ ದೂರದಲ್ಲಿತ್ತು. ನಾನು ಪತ್ರಿಕೆಯನ್ನು ಮಡಚಿ ಬಾಗಿಲವರೆಗೆ ಎಸೆದೆ. ಅದು ಹೋಗಲಿಲ್ಲ. ಮನೆಯ ಒಳಗೆ ಹೋಗೋಣ ಅಂದುಕೊಂಡು ಗೇಟ್ ತೆಗೆದುಕೊಂಡು ಒಳಕ್ಕೆ ಹೋದೆ. ನಾಗರಾಜ ಗೇಟಿನ ಬಳಿಯೇ ನಿಂತಿದ್ದ. ಮನೆ ಬಾಗಿಲ ಹತ್ತಿರ ಹೋಗುವಷ್ಟರಲ್ಲಿ ದೊಡ್ಡ ಆಲ್ಸೇಷನ್ ನಾಯಿ ಭುಜದ ಮೇಲೆ ಕಾಲಿಟ್ಟು ಬೊಗಳಲಾರಂಭಿಸಿತು. ಒಳಗಿನಿಂದ 'ಯಾರದು' ಎಂಬ ಕೂಗು. ಧೈರ್ಯ ತೆಗೆದುಕೊಂಡು ಪತ್ರಿಕೆ ಎಸೆದು ಹಿಂದಕ್ಕೆ ಓಡಿಬಂದೆ. ನಾಯಿ ಅಟ್ಟಿಸಿಕೊಂಡು ಬಂದು, ಇನ್ನೇನು ನಿಕ್ಕರಿಗೆ ಬಾಯಿ ಹಾಕಬೇಕು ಎನ್ನುವಷ್ಟರಲ್ಲಿ ಗೇಟ್ ತೆಗೆದಿದ್ದರಿಂದ ಓಡಿ ಬಂದು ಗೇಟ್ ಹಾಕಿ ರಸ್ತೆಯ ಪಕ್ಕದಲ್ಲಿದ್ದ ಮೋರಿಯಲ್ಲಿ ಬಚ್ಚಿಟ್ಟುಕೊಂಡೆ.

ತುಂಬಾ ಭಯ ಆಗಿತ್ತು. ಅಂದಿನಿಂದ ಪತ್ರಿಕೆಯನ್ನು ಅಂಚೆಯ ಮೂಲಕ ಕಳಿಸುವ ಯೋಚನೆ ಮಾಡಿದೆವು. ಮಲ್ಲೇಶ್ವರಂ ಹೈಸ್ಕೂಲಿನ ಜವಾನನ ಸಹಾಯದಿಂದ ಮೈಸೂರು ಸರ್ಕಾರದ ಪರವಾಗಿ (on Govt. of Mysore) ಎಂಬ ರಬ್ಬರ್ ಸ್ಟಾಂಪ್ ಮತ್ತು ಹಳೇ ಕವರ್ ಕಳವು ಮಾಡಲಾಯಿತು. ಅಂಚೆ ಚೀಟಿಗಳನ್ನು ಕೊಳ್ಳಲು ಕಾಸಿರಲಿಲ್ಲ. ಸರಕಾರದ ಕಾಗದಗಳಿಗೆ ಅಂಚೆ ಚೀಟಿ ಅಂಟಿಸುವ ಅಗತ್ಯವಿರಲಿಲ್ಲ. ಯುದ್ಧ ಕಾಲವಾದುದರಿಂದ ಇಲಾಖೆಯವರು ಹಳೆಯ ಲಕೋಟೆಯ ಒಂದು ತುದಿಯನ್ನು ಕತ್ತರಿಸಿ ಅದರ ಮೇಲೆ ಅಗಲವಾದ ಕಾಗದ ಅಂಟಿಸಿ ಅಂಚೆಗೆ ಹಾಕುತ್ತಿದ್ದರು. ಇದೇ ರೀತಿ ನಾವು ಲಕೋಟೆಯ ಮೇಲೆ ಮೊಹರು ಹಾಕಿ ಅದರಲ್ಲಿ ಭೂಗತ ಪತ್ರಿಕೆಯನ್ನಿಟ್ಟು ಅಂಟಿಸಿ ಮುದ್ರೆ ಒತ್ತಿ ವಿಳಾಸ ಬರೆದು ಬೇರೆ ಬೇರೆ ಕಡೆ ಅಂಚೆ ಪೆಟ್ಟಿಗೆಯಲ್ಲಿ ಹಾಕಲು ಪ್ರಾರಂಭಿಸಿದೆವು. ಇದು ಸರ್ಕಾರದ ಲಕೋಟೆಯಾದ್ದರಿಂದ ಯಾರಿಗೂ ಅನುಮಾನ ಮೂಡುತ್ತಿರಲಿಲ್ಲ. ಲಕೋಟೆಯನ್ನು ಸರ್ಕಾರಿ ಕಛೇರಿಗಳ ಮುಂದಿರುವ ಅಂಚೆ ಪೆಟ್ಟಿಗೆಯಲ್ಲಿ ಹಾಕುತ್ತಿದ್ದೆವು.

ನಾನು ಪತ್ರಿಕೆ ಹಾಕಿದವರಿಗೆ ತಲುಪಿದೆಯೇ ಎಂದು ಪರೀಕ್ಷಿಸಲು ನಮ್ಮ ಸ್ನೇಹಿತರನ್ನು ಕಳುಹಿಸುತ್ತಿದ್ದೆ. ಪತ್ರಿಕೆ ತಲುಪಿದೆ ಎಂಬ ಸುದ್ದಿ ಬಂದ ತಕ್ಷಣ ನಮಗೆ ಆದ ಸಂತೋಷ ಹೇಳತೀರದಷ್ಟು. ನನ್ನ ಸ್ನೇಹಿತರಾದ ರೈಲ್ವೆ ಇಲಾಖೆಯಲ್ಲಿ ಇದ್ದ ಕೃಷ್ಣೋಜಿರಾವ್ ಎಂಬುವರು ಶ್ರೀರಾಂಪುರದಲ್ಲಿದ್ದರು. ಅವರ ಮನೆಗೆ ಪತ್ರಿಕೆ ಕಳುಹಿಸುತ್ತಿದ್ದೆ. ಆತ ಸಿಕ್ಕಿದಾಗಲೆಲ್ಲ ಕಳಿಸಿದ ಪತ್ರಿಕೆ ಬಂತೆಂದು ಹೇಳಿ ಹೋಗುತ್ತಿದ್ದ. ವಿಷಯ ಬೇರೆಯವರಿಗೆ ತಿಳಿಸುತ್ತಿದ್ದ. ಆತ ಎಲ್ಲಾ ಪತ್ರಿಕೆಗಳನ್ನು ಜೋಪಾನವಾಗಿರಿಸಿಕೊಂಡು ನನಗೆ ಹಿಂತಿರುಗಿಸಿದ. ಹೀಗಾಗಿ ಆ ಪತ್ರಿಕೆಗಳೆಲ್ಲ ನನ್ನಲ್ಲಿ ಉಳಿಯಲು ಸಾಧ್ಯವಾಯಿತು. ೧೯೪೭ರ 'ಮೈಸೂರು ಚಲೋ' ಚಳುವಳಿಯಲ್ಲಿ ಸಹ ಭೂಗತ ಪತ್ರಿಕೆಗಳನ್ನು ಹಂಚುತ್ತಿದ್ದೆವು. ಬಸವನಗುಡಿಯ ಕಡೆಯಿಂದ 'ಕ್ರಾಂತಿ' ಪತ್ರಿಕೆ ಬರುತ್ತಿತ್ತು. ಅದು ಕಮ್ಯೂನಿಸ್ಟ್ ಪಾರ್ಟಿ ಹೆಸರಿನಲ್ಲಿ ಬರುತ್ತಿತ್ತು. ಕಾಂಗ್ರೆಸ್ ಪತ್ರಿಕೆಯನ್ನು ಯಾರಾದರೂ ತಂದುಕೊಡುತ್ತಿದ್ದರು. ಅವುಗಳನ್ನು ನಾವು ಹೊರಡಿಸುತ್ತಿದ್ದ ಪತ್ರಿಕೆಯ ಜೊತೆ ಹಂಚುವುದು ಮತ್ತು ಅಂಚೆಯಲ್ಲಿ ಕಳುಹಿಸುವುದಲ್ಲದೆ ಸ್ವಯಂ ಸೇವಕರು ಅವರವರ ಮನೆಯ ಸುತ್ತ ಮುತ್ತಲಿನವರಿಗೆ ಹಂಚುತ್ತಿದ್ದರು.

**ಕಂಬಗಳು ಮತ್ತು ಗೋಡೆಯ ಮೇಲೆ :** ಭೂಗತ ಪತ್ರಿಕೆಗಳು ಜನಸಾಮಾನ್ಯರಿಗೆ ಅಲ್ಲದೆ ಸರ್ಕಾರಿ ನೌಕರರಿಗೂ, ಪೋಲೀಸರಿಗೂ, ಸುದ್ದಿ ತಿಳಿಯಲೆಂದು ರಾತ್ರಿ ವೇಳೆಯಲ್ಲಿ ದೀಪದ ಕಂಬಗಳಿಗೆ, ಗೋಡೆಗಳಿಗೆ ಅಂಟಿಸುತ್ತಿದ್ದೆವು. ನಾನು ನಮ್ಮ ಮನೆಯಲ್ಲಿ ಹೊರಗಡೆ ವರಾಂಡದಲ್ಲಿ ಮಲಗುವ ರೂಢಿ. ಎಲ್ಲರೂ ಮಲಗಿದ ಮೇಲೆ ಜೇಬಿನಲ್ಲಿ ಪತ್ರಿಕೆ, ಪೇಸ್ಟು ಇಟ್ಟುಕೊಂಡು ಹನ್ನೊಂದು ಗಂಟೆ ಆದಮೇಲೆ ಹೊರಟು ಬೀದಿಬೀದಿಯಲ್ಲಿರುವ ದೀಪದ ಕಂಬಗಳ ಮೇಲೆ, ಗೋಡೆಗಳ ಮೇಲೆ ಅಂಟಿಸುತ್ತಿದ್ದೆ. ಆ ವೇಳೆಗೆ ಸಿನಿಮಾ ವಾಲ್ ಪೋಸ್ಟರ್ ಅಂಟಿಸುವ ಹುಡುಗರು ಜೊತೆಗೆ ಸಾಗುತ್ತಿದ್ದರು. ಅವರ ಜೊತೆಗೆ ಅಂಟಿಸುತ್ತಿದ್ದರಿಂದ ಪೋಲಿಸರಿಗೆ ಅನುಮಾನ ಬರುತ್ತಿರಲಿಲ್ಲ. ಇವನು ಸಿನಿಮಾ ಪೋಸ್ಟರ್ ಅಂಟಿಸುವನೆಂದು ತಿಳಿಯುತ್ತಿದ್ದರು. ಕೆಲವೊಂದು ಸಮಯ ಇವರಿಂದಲೇ ಪೇಸ್ಟ್ ತೆಗೆದುಕೊಂಡು ಅಂಟಿಸುತ್ತಿದ್ದೆವು. ಒಮ್ಮೊಮ್ಮೆ ನಾನೊಬ್ಬನೇ ಎದೆಯ ಮೇಲೆ ಪತ್ರಿಕೆ ಇಟ್ಟುಕೊಂಡು ಜೇಬಿನಿಂದ ಪೇಸ್ಟ್ ತೆಗೆದು ಸವರಿ ಒಂದೇ ಕ್ಷಣದಲ್ಲಿ ಕಂಬಕ್ಕೆ ಅಂಟಿಸಿ ಹೋಗುತ್ತಿದ್ದೆ.

**ಪೋಲಿಸರ ಕೈಗೆ ಸಿಕ್ಕಿಬಿದ್ದಿದ್ದು :** ಒಂದು ದಿವಸ ಮಲ್ಲೇಶ್ವರಂ ಆಟದ ಮೈದಾನದ ಪಕ್ಕದಲ್ಲಿರುವ ಕಂಬಕ್ಕೆ ದಿನಾ ಅಂಟಿಸುವಂತೆ ಪತ್ರಿಕೆಯನ್ನು ಅಂಟಿಸುತ್ತಿದ್ದೆ. ರಾತ್ರಿ ೧೧-೦೦ ಇರಬಹುದು. ನನಗಾಗಿ ಇಬ್ಬರು ಪೋಲಿಸರು ಕಾಯುತ್ತಾ ಮೋರಿಯಲ್ಲಿ ಬಚ್ಚಿಟ್ಟುಕೊಂಡಿದ್ದರು. ಒಂದು ಪತ್ರಿಕೆ ಅಂಟಿಸಿದ ಕೂಡಲೇ ಇವರು ಸೀಟಿ ಹಾಕುತ್ತಾ 'ನಿಲ್ಲು ನಿಲ್ಲು' ಅಂತ ಕೂಗಿದರು. ಆ ಸಮಯದಲ್ಲಿ ನನ್ನ ಹತ್ತಿರ ಅನೇಕ ಪತ್ರಿಕೆಗಳು ಮತ್ತು ಜೇಬಿನಲ್ಲಿ ಪೇಸ್ಟ್ ಸಹ ಇತ್ತು. ಅವರು ನಿಲ್ಲು ನಿಲ್ಲು ಅಂದಾಕ್ಷಣ ಹೇಗೆ ಓಡಿದೆನೋ ತಿಳಿಯದು. ೯ನೇ ಕ್ರಾಸ್ ೪ನೇ ಮೂಲೆಯಲ್ಲಿ ರುದ್ರಅವರ ಮನೆ ಕಾಪೌಂಡ್ ತುಂಬಾ ಗಿಡಗಳು. ನಾನು ಕಾಂಪೌಂಡ್ ಹಾರಿ ಆ ಗಿಡಗಳ ಮಧ್ಯೆ ಕುಳಿತುಬಿಟ್ಟೆ; ಸದ್ಯ ಅಲ್ಲಿ ನಾಯಿ ಇರಲಿಲ್ಲ. ಪೋಲಿಸರು ಅಲ್ಲಿಯ ಮೂಲೆಯವರೆಗೆ ಬಂದು ಸೀಟಿ ಊದಿದರು. ಎಲ್ಲಿ ಎಲ್ಲಿ ಅಂತ ಹುಡುಕುತ್ತಿದ್ದರು. ನನಗೆ ಅವರ ಮಾತು ಕೇಳಿಸುತ್ತಿತ್ತು. ಆ ಕಾಂಪೌಂಡಿನಲ್ಲಿ ಗಿಡ ಹೆಚ್ಚಾಗಿದ್ದುದರಿಂದ ನಾನು ಅವರಿಗೆ ಕಾಣಿಸುತ್ತಿರಲಿಲ್ಲ. ನನ್ನ ಉಸಿರ ಶಬ್ದ ಅವರಿಗೆ ಕೇಳಿಸುತ್ತದೆಂದು ನಿಧಾನವಾಗಿ ಉಸಿರಾಡುತ್ತಿದ್ದೆ. ಆಗ ಪೊಲೀಸರು ''ಇಲ್ಲೇ ಇದ್ದನಲ್ಲ! ಎತ್ತಕಡೆ ಹೋದ, ನೀನು ಆ ಕಡೆಯಿಂದ ಬಾ, ನಾನು ಈ ಕಡೆಯಿಂದ ಬರುತ್ತೀನಿ ಸಿಕ್ಕೇ ಸಿಗುತ್ತಾನೆ'' ಅಂತ ವಿಷಲ್ ಹಾಕುತ್ತಾ ಅವರಿಬ್ಬರು ಹೋದರು. ನಾನು ಪಕ್ಕದ ಗಲ್ಲಿಯ ಮೂಲಕ ಬಂದು ಮನೆ ಸೇರಿದೆ.

ಒಂದು ದಿನ ಇನ್ಸ್‌ಪೆಕ್ಟರ್ ರಾಜಗೋಪಾಲ್ ನಾಯಕತ್ವದಲ್ಲಿ ರಾತ್ರಿ ೧೨ ಗಂಟೆಯಲ್ಲಿ ಮಲ್ಲೇಶ್ವರಂ ಪೋಲೀಸ್ ಠಾಣೆಯ ಇನ್ಸ್‌ಪೆಕ್ಟರ್ ಅಣ್ಣೇಗೌಡ, ರುದ್ರಪ್ಪ ಎಲ್ಲರೂ ಮನೆಗೆ ಬಂದರು. ನನಗೆ ಅನುಮಾನವಿದ್ದರಿಂದ ನಾನು ಮನೆಯಲ್ಲೇ ಮಲಗಿದ್ದೆ. ಪೋಲಿಸರು ವ್ಯಾನನ್ನು ಹೊರಗಡೆ ನಿಲ್ಲಿಸಿ ಎಲ್ಲಾ ಪೋಲಿಸರನ್ನು ಮನೆ ಸುತ್ತಲೂ ನಿಲ್ಲಿಸಿ ನನ್ನನ್ನು ಕೂಗಿದರು. ನಾನು ಹೊರಗಡೆ ಬಂದು

'ಏನು ಬೇಕಾಗಿತ್ತು?' ಎಂದೆ. ನಮ್ಮ ತಾಯಿ ಕೂಡ ಎದ್ದು ಬಂದರು. ಪೋಲಿಸರು ನಿಮ್ಮ ಮನೆಯನ್ನು ಶೋಧಿಸಬೇಕೆಂದರು. ಅದಕ್ಕೆ ನಾನು ವಾರೆಂಟ್ ಇದೆಯೇ ಎಂದು ಕೇಳಿದೆ. ಅದಕ್ಕೆ ಅವರು ನಿನಗೆ ಕಾನೂನು ಬೇರೆ ಗೊತ್ತಿದೆಯೋ, ಹಾಗಾದರೆ ನೋಡು ಎಂದು ಡೆಪ್ಯೂಟಿ ಕಮಿಷನರ್ ಸಹಿ ಇರುವ ಕಾಗದ ಕೊಟ್ಟರು. ಅದರಲ್ಲಿ ಮನೆ ಶೋಧದ ಅಪ್ಪಣೆ ಇತ್ತು. ತಾಯಿಯವರಿಗೆ ಹೇಳಿದೆ- ನಮ್ಮ ಮನೆಯನ್ನು ಶೋಧಿಸಬೇಕಂತೆ ಎಂದು. ಅದಕ್ಕೆ ಅವರು ಆಗಲಿ ಎಂದರು. ಬೋರಯ್ಯ ಅನ್ನುವ ದಫೇದಾರ್ ಬಂದು ನನ್ನ ಹಾಸಿಗೆ ಪಕ್ಕದಲ್ಲಿದ್ದ ಮರದ ಪೆಟ್ಟಿಗೆಯನ್ನು ತೆಗೆದ. ಅದರಲ್ಲಿ ಪುಸ್ತಕಗಳಿದ್ದವು. ಆಗ ವಿದ್ಯುತ್ ದೀಪ ಇರಲಿಲ್ಲ. ಸೀಮೆಎಣ್ಣೆ ದೀಪ ಹಚ್ಚಿದೆ. ಬೋರಯ್ಯ ಶೋಧನೆ ಆರಂಭಿಸಿದ. ಆ ಪೆಟ್ಟಿಗೆಯಲ್ಲಿ ಬಾಕ್ಸ್ ಕ್ಯಾಮೆರಾ ಇತ್ತು. ಅದನ್ನು ನೋಡಿ ಸಿಕ್ತು ಸಾರ್ ಅಂದು ಕೂಗಿದ. ಅವರೆಲ್ಲಾ ಪೆಟ್ಟಿಗೆ ಸುತ್ತಾ ನಿಂತು 'ಧೈರ್ಯವಾಗಿ ತೆಗಿ' ಅಂದರು. ಅಷ್ಟರಲ್ಲಿ ಅಣ್ಣೇಗೌಡ 'ಪತ್ರಿಕೆ ಜೊತೆ ಬಾಂಬು ಸಹ ಮಾಡ್ತಾರ!' ಎಂದರು. ಅದಕ್ಕೆ ನನಗೇನು ಗೊತ್ತು ಅಂದೆ. ದಫೇದಾರ್ ಬೋರಯ್ಯ ಬಾಕ್ಸ್ ಕ್ಯಾಮರಾ ತೆಗೆದು ತೋರಿಸುತ್ತಾ ನೋಡಿ ಸಾರ್ ಅಂದ. ಅಷ್ಟರಲ್ಲಿ ಇನ್‌ಸ್ಪೆಕ್ಟರ್ ರುದ್ರಪ್ಪ ತಿರುಗಿ, 'ಇದು ಗ್ರೆನೈಡ್ ಅಲ್ಲ ಕಾಣಯ್ಯ, ಕ್ಯಾಮರಾ' ಅಂದ್ರು. ನನ್ನ ಹಾಸಿಗೆ ಪಕ್ಕದಲ್ಲಿ ಬಾಕ್ಸ್ ಚರಕ ಇತ್ತು. ರಾಜಗೋಪಾಲ್ ನನ್ನ ಕಡೆಗೆ ತಿರುಗಿ ಇದೇನ್ರಿ ಎಂದರು. ನಾನು ನೀವೇ ನೋಡಿ ಸ್ವಾಮಿ ಅಂದೆ. ಇದರಲ್ಲೇನ್ರಿ ಇದೆ? ಕಲ್ಲಚ್ಚು ಮಾಡಿ ಪತ್ರಿಕೆ ಹೊರಡಿಸೋ ಯಂತ್ರ ಏನ್ರಿ ಅಂದ್ರು. ಇಲ್ಲ ಸ್ವಾಮಿ ಇದು ಚರಕ 'ನೂಲುವುದು' ನೀವೇ ನೋಡ್ರಿ ಅಂದೆ. ಅದಕ್ಕೆ ಅವರು 'ತೆಗಿರೀ ನೋಡೋಣ' ಅಂತ ತೆಗೆಸಿದರು. ಕತ್ತಲಾದುದರಿಂದ ಪೋಲಿಸರು ಟಾರ್ಚ್ ಬಿಟ್ಟು ನೋಡಿದರು. ಚರಕ ಎಂದು ತಿಳಿದು ಸುಮ್ಮನಾದರು.

ಪುಸ್ತಕ ಎಲ್ಲಾ ಒದರಿಸಿ ನೋಡಿದರೂ ಏನೂ ಸಿಗಲಿಲ್ಲ. ನನ್ನನ್ನು ವ್ಯಾನಿನಲ್ಲಿ ಕುಳ್ಳಿರಿಸಿದರು. ನಾವು ನಿಮ್ಮ ಹುಡುಗನನ್ನು ಕರೆದುಕೊಂಡು ಹೋಗ್ತಾ ಇದ್ದೀವಿ, ಬಿಡೋದು ಎಷ್ಟು ದಿನ ಆಗುತ್ತೋ ಗೊತ್ತಿಲ್ಲ ಅಂತ ನಮ್ಮ ತಾಯಿಗೆ ಹೇಳಿದರು. ನಮ್ಮ ತಾಯಿ ಧೈರ್ಯವಾಗಿ ನಮ್ಮ ಹುಡ್ಗ ಒಳ್ಳೆಯವನು. ಸುಮ್ಮನೆ ನೂತುಕೊಂಡು ಮನೇಲಿ ಇರುತ್ತಿದ್ದ. ಯಾಕೆ ಈ ತೊಂದರೆ ಕೊಡುತ್ತೀರಿ, ತಿಳಿಯದು. ನಾಳೆ ನಮ್ಮ ಮನೆಯಲ್ಲಿ ಅಮಾವಾಸ್ಯೆ ಪೂಜೆ ಆದ ಮೇಲೆ ಖಂಡಿತ ನಾನೇ ಕಳುಹಿಸ್ತೀನಿ, ಈಗ ಬಿಟ್ಟು ಬಿಡಿ ಅಂದ್ರು. ನನಗೆ ತುಂಬಾ ಆಶ್ಚರ್ಯವಾಯಿತು. ಪೋಲಿಸನವರು ಸರಿ ಅಂತ ಹೇಳಿ 'ನಾಳೆ ೧೨ ಗಂಟೆಗೆ ಬನ್ನಿ' ಎಂದು ಹೇಳಿ ಹೊರಟುಹೋದರು. ಮಾರನೆ ದಿವಸ ಊಟ ಮುಗಿಸಿ ಪೋಲೀಸ್ ಠಾಣೆಗೆ ಹೋದೆ. ನಾನು ಬಂದದ್ದು ನೋಡಿ ರಾಜಗೋಪಾಲ್‌ಗೆ ತಿಳಿಸಿದರು. ಅವರು ನನ್ನನ್ನು ಬಂಧಿಸಲು ಹೇಳಿದರು. ಒಂದು ದಿನ ಪೋಲಿಸ್ ಸ್ಟೇಷನ್‌ನಲ್ಲಿ ಇಟ್ಟು, ನಂತರ ಜೈಲಿಗೆ ಕಳುಹಿಸಿದರು. ಎಲ್ಲರ ಜೊತೆ ನನ್ನ ಬಿಡುಗಡೆಯೂ ಆಯಿತು.

**ಸುದ್ದಿ ಸಂಗ್ರಹ** : ಮದ್ರಾಸಿನ ನನ್ನ ಸ್ನೇಹಿತ ಜನಾರ್ಧನ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಕೆಲಸ ಮಾಡುತ್ತಿದ್ದ. ಅವನು ಅಲ್ಲಿಯ ಸುದ್ದಿಗಳನ್ನು ಪೂರ್ತಿ ಕಳಿಸದೆ ಕತ್ತರಿಸಿ ಅಂಚೆಯ ಮೂಲಕ ಕಳುಹಿಸುತ್ತಿದ್ದ. ಪೋಸ್ಟ್‌ಮ್ಯಾನ್ ದೊರೆಸ್ವಾಮಿ ನಾಯ್ಡು ನನಗೆ ಕಾಗದಗಳನ್ನು ತಂದು ಕೊಡುತ್ತಿದ್ದ. ಅವುಗಳನ್ನು ತೆಗೆದು ನೋಡಿದಾಗ ಆಶ್ಚರ್ಯವೇನೆಂದರೆ ಅವುಗಳಲ್ಲಿ ಕೆಲವು ವಾಕ್ಯಗಳನ್ನು ಹೊಡೆದುಹಾಕುತ್ತಿದ್ದರು. ಈ ವಿಷಯವನ್ನು ನಾನು ಪೋಸ್ಟ್‌ಮ್ಯಾನ್ ಅವರ ಹತ್ತಿರ ವಿಚಾರಿಸಿದೆ. ಅವನು ಹೇಳಿದ 'ಸ್ವಾಮಿ, ಪೋಲಿಸರು ಕಚೇರಿಯಲ್ಲಿ ಕೂತು ನಿಮಗೆ ಬರೋ ಕಾಗದ ಎಲ್ಲಾನು ದ್ರವ ಹಾಕಿ, ಗೊತ್ತಾಗದ ಹಾಗೆ ತೆಗೆದು, ಸರ್ಕಾರಕ್ಕೆ ವಿರುದ್ಧವಾಗಿರೋ ವಾಕ್ಯಗಳೇನಾದರೂ ಇದ್ರೆ ಹೊಡೆದು ಹಾಕಿ ಮತ್ತೆ ಅಂಟಿಸಿ ಕಳಿಸುತ್ತಾರೆ. ಅದರಿಂದ ಅಂಚೆಯ ಮೂಲಕ ತರಿಸಬೇಡಿ, ಮುಂದೆ ತೊಂದರೆ ಆಗಬಹುದು' ಅಂತ ಎಚ್ಚರಿಕೆ ಕೊಟ್ಟ. ಅಂದಿನಿಂದ ನಾನು ಸ್ನೇಹಿತನಿಗೆ ಕಾಗದ ಬರೆದು ಬೇರೆಯವರ ಹೆಸರಿಗೆ ಕಳುಹಿಸುವಂತೆ ಹೇಳಿದೆ. ಅದೇ ರೀತಿ ಆತ ಮಾಡುತ್ತಿದ್ದ. ಸ್ವಾತಂತ್ರ್ಯ ಚಳವಳಿಯಲ್ಲಿ ಮತ್ತು ಮೈಸೂರು ಚಲೋ ಚಳುವಳಿಯಲ್ಲಿ ಸತ್ಯಾಗ್ರಹಿಗಳಿಗೆ ಸುದ್ದಿ ಮುಟ್ಟಿಸಲು, ದೇಶಭಕ್ತಿ ತುಂಬಲು ಮತ್ತು ಚಳವಳಿಯನ್ನು ಜೀವಂತವಾಗಿಡಲು ದೇಶದಾದ್ಯಂತ ಭೂಗತ ಪತ್ರಿಕೆಗಳು ಪ್ರಮುಖ ಪಾತ್ರ ವಹಿಸಿದವು. ಇವು ಭಾರತದಾದ್ಯಂತ ಎಲ್ಲ ಪ್ರಾಂತ್ಯಗಳಲ್ಲೂ ಎಲ್ಲಾ ಭಾಷೆಯಲ್ಲಿ ಪ್ರಕಟಗೊಳ್ಳುತ್ತಿದ್ದವು. ಅವುಗಳ ಬಗ್ಗೆ ಹೆಚ್ಚು ಪ್ರಚಾರ ಇರುತ್ತಿರಲಿಲ್ಲ. ಅವುಗಳ ಬಗ್ಗೆ ತಿಳುವಳಿಕೆ ಮತ್ತು ಸಂಗ್ರಹವಂತೂ ಇಲ್ಲವೇ ಇಲ್ಲ. ಇವು ಸ್ವಾತಂತ್ರ್ಯ ಚಳವಳಿಯಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದವು. ಚಳವಳಿ ಮುಗಿದ ಮೇಲೆ ಅವುಗಳನ್ನು ಶೇಖರಿಸಿ ಜನಸಾಮಾನ್ಯರಿಗೆ ಅವುಗಳ ಬಗ್ಗೆ ತಿಳುವಳಿಕೆ ಕೊಟ್ಟಿಲ್ಲ. ನಾನು ಪತ್ರಿಕೆಗಳನ್ನು ನನ್ನ ಮಿತ್ರ ಕೃಷ್ಣೋಜಿರಾವ್ ಅವರಿಗೆ ಕಳುಹಿಸದೇ ಹೋಗಿದ್ದರೆ, ಅವನು ಶೇಖರಿಸದಿದ್ದರೆ ಇವೂ ಸಹ ಲಭ್ಯವಾಗುತ್ತಿರಲಿಲ್ಲ. ಆತನಿಗೆ ಇದಕ್ಕಾಗಿಯೇ ವಂದನೆ ಅರ್ಪಿಸಬೇಕು.

ಆದರೆ ಗಾಂಧೀಜಿಯವರು ಮಾತ್ರ ಬಹಿರಂಗವಾಗಿಯೇ ಈ ಯೋಜನೆಯನ್ನು ಖಂಡಿಸಿದರು. ಆದರೂ ಈ ಯೋಜನೆಯಿಂದ ಭಾರತ ಸ್ವತಂತ್ರವಾಗಿ ಸಂವೃದ್ಧಿ ಬಾಳ್ವೆಯನ್ನು ಮಾಡಿಕೊಂಡು ಬಾಳುವುದಾದರೆ ತಾವು ಅಡ್ಡಿ ಬರಬಾರದೆಂದು ಯೋಜನೆಯ ಅನುಷ್ಠಾನಕ್ಕೆ ಯಾವುದೇ ತಡೆಯನ್ನು ಮಾಡಲಿಲ್ಲ. ವಿಭಜನೆಯ ವಿಚಾರದಲ್ಲಿ ವಿಧವಿಧವಾದ ಅಭಿಪ್ರಾಯಗಳನ್ನು ಪತ್ರಿಕೆಗಳ

ಮುಖಾಂತರ ಮತ್ತು ಸಾರ್ವಜನಿಕ ವೇದಿಕೆಗಳ ಮುಖಾಂತರ ತಿಳಿಯಪಡಿಸಲಾಯಿತು. ಕೆಲವು ಪತ್ರಿಕೆಗಳು ಉಗ್ರವಾಗಿ ವಿಭಜನೆಯ ತತ್ವವನ್ನು ಖಂಡಿಸಿದವು. ಮತ್ತೆ ಕೆಲವು ವಿಭಜನೆಯ ಯೋಜನೆಯನ್ನು ಹೊಗಳಿದ ಲೇಖನಗಳನ್ನು ಬರೆದವು. ಸ್ವತಂತ್ರ ಭಾರತವು ೧೯೪೭ರ ಆಗಸ್ಟ್ ೧೫ರಂದು ಉದಯವಾಯಿತು. ಹೊಸ ಅಧ್ಯಾಯ ಪ್ರಾರಂಭಕ್ಕೆ ಅನೇಕ ಪತ್ರಿಕೆಗಳು ಸಾಮಾನ್ಯವಾಗಿ ಕಾಂಗ್ರೆಸ್ ಚಳವಳಿಗೆ ಬೆಂಬಲ ಕೊಟ್ಟವು. ಮತ್ತೆ ಕೆಲವು ನೀತಿಗಳನ್ನು ಒಪ್ಪಲಿಲ್ಲ.

**೧೯೪೭ರ ಮೈಸೂರು ಚಲೋ ಚಳವಳಿ :** ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ ಮೈಸೂರು ಮಹಾರಾಜರ ಮುಖಂಡತ್ವದಲ್ಲಿ ಪೂರ್ಣ ಜವಾಬ್ದಾರಿ ಸರ್ಕಾರ ಸ್ಥಾಪಿಸಲು ಮೈಸೂರಿನ ಕಾಂಗ್ರೆಸ್ ನಾಯಕರು ಮೈಸೂರು ಚಲೋ ಸತ್ಯಾಗ್ರಹ ಪ್ರಾರಂಭಿಸಿದರು.

**ಭೂಗತ ಚಟುವಟಿಕೆ:** ಹಿಂದೆ ೧೯೪೨ರ ಚಳವಳಿಯಲ್ಲಿ ನಡೆದಂತೆ ಈ ಚಳುವಳಿಯಲ್ಲಿ ಭೂಗತ ಪತ್ರಿಕೆಗಳನ್ನು ನಡೆಸಲು ಮಿತ್ರರೆಲ್ಲರೂ ತೀರ್ಮಾನ ಕೈಗೊಂಡರು. ಆಗ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಮತ್ತು ಕೌನ್ಸಿಲ್ ಸದಸ್ಯರ ಮೇಲೆ ಚಳವಳಿ ಪ್ರಾರಂಭವಾಯಿತು. ಮೈಸೂರಿಗೆ ಹೋಗಿ ಬಂಧನಕ್ಕೊಳಗಾಗುವ ಬದಲು ಭೂಗತ ಪತ್ರಿಕೆ ಪ್ರಾರಂಭಿಸಿ ಚಳವಳಿಯನ್ನು ಜೀವಂತವಾಗಿಡಬೇಕೆಂಬುದು ಮುಖ್ಯ ಉದ್ದೇಶವಾಯಿತು.

ಹಿಂದೆ ಕಲ್ಲಚ್ಚು ಮಾಡಿದಂತೆ ಈ ಸಾರಿಯೂ ರಾಮಕೃಷ್ಣ ಕಾಮರ್ಸ್ ಇನ್‌ಸ್ಟಿಟ್ಯೂಟ್ ಕೇಂದ್ರ ಕಾರ್ಯಸ್ಥಳವಾಗಿತ್ತು. ಹಿಂದೆ ಸಹಾಯ ಮಾಡಿದ್ದ ಗೋಪಾಲಕೃಷ್ಣ ಅವರ ಸಹಾಯದಿಂದ 'ರಣಕಹಳೆ', 'ರಣಭೇರಿ', 'ಆಜಾದ್', 'ಉದಯ', 'ಆಹುತಿ', 'ಅಗ್ನಿ', 'ಜ್ವಾಲೆ', 'ಜ್ವಾಲಾಮುಖಿ', 'ಜ್ಯೋತಿ', 'ಸ್ಯಾಕ್ರಿಫೈಸ್', 'ಬ್ಲೇಜ್', 'ರೆವೆಲ್ಯೂಷನ್', 'ಮೈಸೂರು ರೈಲ್ವೆ ಗೆಜೆಟ್' ಈ ತರಹದ ಅನೇಕ ಹೆಸರುಗಳ ಪತ್ರಿಕೆಗಳು, ಶರ್ಮ ಸಂಪಾದಕತ್ವದ ಹೆಸರಿನಲ್ಲಿ ಹೊರಬಂದವು. ನಾನು ಮತ್ತೆ ಗೋಪಾಲಕೃಷ್ಣ, ಲಕ್ಷ್ಮೀನಾರಾಯಣ ಸಂಪಾದಕರಾಗಿ, ಎಸ್. ಜಿ ರಾಮಚಂದ್ರ, ಕಮಲ್‌ನಾಥ್, ಜನಾರ್ಧನ್, ಸ್ವಾಮಿ ಇವರು ಬಾತ್ಮೀದಾರರಾಗಿ ಮೂರ್ತಿ, ಚಲಂ, ಇಂದ್ರ, ವೆಂಕಟಾಚಾರ್ ಮೊದಲಾದವರು ಪತ್ರಿಕೆ ಹಂಚಿಕೆ ಪ್ರತಿನಿಧಿಗಳಾಗಿ ಕೆಲಸ ಮಾಡಿದೆವು. ೧೬-೧೦-೧೯೪೭ ರವರೆಗೆ ಯಾವುದೇ ಅಡ್ಡಿ ಆತಂಕವಿಲ್ಲದೆ ನಡೆದುಬಂದಿತು. ಆಗಿನ ಕಾಂಗ್ರೆಸ್ ಅಧ್ಯಕ್ಷರಾದ ಕೆ. ಸಿ. ರೆಡ್ಡಿ ಅವರನ್ನು ಮಹಾರಾಜರು ಕರೆಸಿ ತಾತ್ಕಾಲಿಕವಾಗಿ ಮಂತ್ರಿಮಂಡಲ ರಚಿಸುವವರೆಗೆ ಈ ಪತ್ರಿಕೆಗಳ ಕಾರ್ಯ ನಡೆಯಿತು. ಈ ಚಳುವಳಿಗಳಲ್ಲಿ ಮೈಸೂರಿನ ಸುತ್ತಮುತ್ತಲಿನ ಹೊರನಾಡಿನ ಕನ್ನಡಿಗರ ಸಹಾಯ, ಸಹಕಾರ ಕೂಡ ದೊರೆಯಿತು.

ಎಚ್. ಎಸ್. ದೊರೆಸ್ವಾಮಿ ಮತ್ತು ಮಿತ್ರರ 'ಪೌರವಾಣಿ' ಪತ್ರಿಕೆ ಸೈಕಲ್, ಬಸ್ಸುಗಳ ಮೂಲಕ ಬೆಂಗಳೂರನ್ನು ತಲುಪುತ್ತಿತ್ತು. ಅದನ್ನು ತಂದು ಎಲ್ಲಾ ಕಡೆ ಹಂಚುತ್ತಿದ್ದರು. 'ಮೈಸೂರು ಚಲೋ' ಚಳುವಳಿಯ ಸುದ್ದಿ ಸಮಗ್ರವಾಗಿ ಈ ಪತ್ರಿಕೆಯಲ್ಲಿ ಬರುತ್ತಿತ್ತು. ಆ ಪತ್ರಿಕೆಯಲ್ಲಿ ಬಂದ ಸುದ್ದಿಯನ್ನು ನಮ್ಮ ಪತ್ರಿಕೆಯಲ್ಲಿಯೂ ಹಾಕಿ ಚಳುವಳಿಯನ್ನು ಜೀವಂತವಾಗಿಡುತ್ತಿದ್ದೆವು. ನ್ಯಾಷನಲ್ ಕಾಲೇಜಿನ ಡಾ। ಎಚ್. ನರಸಿಂಹಯ್ಯನವರು 'ಇಂಕ್ವಿಲಾಬ್' ಪತ್ರಿಕೆಯನ್ನು ಹೊರಡಿಸುತ್ತಿದ್ದರು. ಇದು ಚಳುವಳಿಗೆ ಒಂದು ಉತ್ತಮವಾದ ಕೊಡುಗೆಯಾಗಿತ್ತು. ಮೊದಲು ಕೆಲವು ಪ್ರಕಟಣೆಗಳು ಇಂಗ್ಲಿಷಿನಲ್ಲಿದ್ದವು. ನಂತರ ಕನ್ನಡಕ್ಕೆ ಬದಲಾಯಿತು. ಈ ಪತ್ರಿಕೆಯಲ್ಲಿ ಯುವಕರಿಗೆ ಮಾರ್ಗದರ್ಶನ, ಪ್ರಸ್ತುತ ನಡೆಯುತ್ತಿದ್ದ ಚಳವಳಿಯ ಸುದ್ದಿ, ರಾಜಕೀಯ ಚಟುವಟಿಕೆ, ವಿದ್ಯಾರ್ಥಿಗಳನ್ನು ಚಳವಳಿಯಲ್ಲಿ ಹುರಿದುಂಬಿಸುವ ವಿಚಾರ, ವ್ಯಂಗ್ಯ ಚಿತ್ರಗಳು ಪ್ರಕಟಗೊಳ್ಳುತ್ತಿದ್ದವು. ಆ ವೇಳೆಗೆ ಸರಿಯಾಗಿ ಮೈಸೂರು ರೈಲ್ವೆ ಚಳವಳಿ ಮತ್ತು ಮುಷ್ಕರ ಇದ್ದುದರಿಂದ ಮೈಸೂರು ಚಲೋಗೆ ಬೆಂಬಲ ದೊರಕಿತು. ಭೂಗತ ಪತ್ರಿಕೆ ಹೊರಡಿಸಿ ಅವರ ಸಹಕಾರವನ್ನು ಪಡೆಯಲಾಯಿತು.

'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಭೂಗತ ಪತ್ರಿಕೆಗೆ ಚಳವಳಿ ವಿರೋಧವಿರಲಿಲ್ಲ. ಆದರೆ 'ಮೈಸೂರು ಚಲೋ' ಚಳವಳಿಗೆ ಕೆಲವು ಹಿರಿಯರು ಮತ್ತು ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ನರಸಣ್ಣನ ಹೆಸರಿನಲ್ಲಿ ಚಳವಳಿಯ ವಿರೋಧವಾಗಿ ಒಂದು ಪತ್ರಿಕೆ ಪ್ರಕಟವಾಗುತ್ತಿತ್ತು. ಅವುಗಳನ್ನು ಎದುರಿಸಿ ನಮ್ಮ ಪತ್ರಿಕೆಗಳು ಹೋರಾಟ ನಡೆಸಿ ಪ್ರಕಟಗೊಂಡವು. ಭೂಗತ ಪತ್ರಿಕೆ ಹೊರಡಿಸುವ ಮತ್ತು ನಾಡಬಾಂಬು ತಯಾರಿಸುವ ಕಾರ್ಯವು ಪೋಲಿಸರಿಗೆ ತಿಳಿದಿದ್ದರಿಂದ ಈ ಸಾರಿ ಚಳವಳಿಯನ್ನು ಜೀವಂತವಾಗಿಡಲು ಎಚ್ಚರಿಕೆ ವಹಿಸಲಾಯಿತು. ಪತ್ರಿಕೆ ಮುದ್ರಿಸುವ ಮತ್ತು ಕಂಬಗಳಿಗೆ ಹಚ್ಚುವ, ಅಂಚೆಯ ಮೂಲಕ ಕಳುಹಿಸುವ ಕೆಲಸ ಜಾಗ್ರತೆಯಿಂದ ಮಾಡಲಾಯಿತು.

ಭಾರತದಲ್ಲಿದ್ದ ಬ್ರಿಟಿಷ್ ಪತ್ರಿಕೆಗಳ ಸಂಪಾದಕರು ಚಳವಳಿಯ ಕಾಲದಲ್ಲಿ ಬ್ರಿಟಿಷ್ ಸರ್ಕಾರದ ನೀತಿ ರೀತಿಗಳನ್ನು ಬೆಂಬಲಿಸಿ ಬರೆದರು. ಸ್ವಾತಂತ್ರ್ಯದ ನಂತರ ಅವರ ಅಭಿಪ್ರಾಯ ಮತ್ತು ಬರಣಿಗೆಗಳ ಧಾಟಿ ಬದಲಾವಣೆ ಆಯಿತು. ಪತ್ರಿಕಾಲೋಕದ ಮೇಲೆ

ಹೇರಿದ್ದ ಪ್ರತಿಬಂಧಕಾಜ್ಞೆಯನ್ನು ಹಿಂತೆಗೆದುಕೊಂಡು ರಾಷ್ಟ್ರೀಯ ನಿರ್ಮಾಣದಲ್ಲಿ ಪತ್ರಿಕೆಗಳ ನೆರವನ್ನು ಕೋರಿತು. ಭಾರತದ ದಾಸ್ಯವು ತೊಲಗಿ ಸ್ವಾತಂತ್ರ್ಯವು ಬೆಳಗಿದಂತೆ ಪತ್ರಿಕಾಲೋಕದಲ್ಲಿ ಎಲ್ಲಾ ನಿರ್ಬಂಧಗಳು ತೊಲಗಿ ಸಂಪೂರ್ಣ ಪತ್ರಿಕಾ ಸ್ವಾತಂತ್ರ್ಯ ಬೆಳಗಿತು. ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಮ್ಮ ಕಾಣಿಕೆಯನ್ನು ಸಲ್ಲಿಸಿ ಸ್ವಾತಂತ್ರ್ಯದ ನಂದಾದೀಪ ಸದಾ ಉರಿಯುವಂತೆ ಮಾಡಿದ ಕೀರ್ತಿ, ಗೌರವ, ಸ್ವಾತಂತ್ರ್ಯ ವೀರರಿಗೆ ಸಲ್ಲುವಂತೆ ಭಾರತೀಯ ಪತ್ರಿಕೆಗಳಿಗೂ ಸಲ್ಲಬೇಕು.

### ೧೯೪೨ರ ಭೂಗತ ಪತ್ರಿಕೆಗಳು

೧. ಜ್ವಾಲಾಮುಖಿ
೨. ವಿದ್ಯಾರ್ಥಿಗಳ ಕೇಂದ್ರ ಸಮಿತಿ
೩. ಇನ್‌ಕ್ವಿಲಾಬ್
೪. ಸ್ವತಂತ್ರ ಭಾರತದ ಪತ್ರಿಕಾ
೫. ಪಾಂಚಜನ್ಯ
೬. ಕ್ರಾಂತಿ
೭. ಪ್ರಜಾವಾಣಿ
೮. ರಣಕಹಳೆ
೯. ಸ್ವಾರ್ಮ್
೧೦. ಸ್ಟೂಡೆಂಟ್ ಪೇಟ್ರಿಯಟ್
೧೧. ಲಿಬರ್ಟಿ
೧೨. ಆಜಾದ್
೧೩. ಸ್ಪೆಷಲ್ ನಂಬರ್
೧೪. ರೆವೆಲ್ಯೂಷನ್
೧೫. ಆಜಾದ್ ಸ್ಪೀಕ್ಸ್
೧೬. ವಂದೇಮಾತರಂ
೧೭. ಫಾರ್ ಅರ್‌ಜೆಂಟ್ ಸರ್‌ಕ್ಯೂಲೇಷನ್ ಅಮಾಂಗ್ ದಿ ಮೆಂಬರ್ಸ್ ಆಫ್ ಕಾಂಗ್ರೆಸ್ ವರ್ಕಿಂಗ್ ಕಮಿಟಿ
೧೮. ಆಜಾದ್
೧೯. ಹರಿಜನ್
೨೦. ಮೈಸೂರು ಕಾಂಗ್ರೆಸ್
೨೧. ಫ್ರೀ ಇಂಡಿಯಾ ಗೆಜೆಟ್

### ೧೯೪೭ರ ಭೂಗತ ಪತ್ರಿಕೆಗಳು

೧. ಅಗ್ನಿ ಆಹುತಿ
೨. ಪ್ರಜಾವಾಣಿ
೩. ರಣ ಕಹಳೆ
೪. ಆಹುತಿ
೫. ಕ್ರಾಂತಿ
೬. ಸ್ವತಂತ್ರ ಮೈಸೂರು ರೈಲ್ವೆ ಗೆಜೆಟ್
೭. ಇನ್‌ಕ್ವಿಲಾಬ್
೮. ಪಾಂಚಜನ್ಯ
೯. ರಣಭೇರಿ

೧೦. ಜ್ವಾಲಾಮುಖಿ
೧೧. ಜ್ಯೋತಿ
೧೨. ಅರಮನೆ ಮುಂದೆ ಮಾಡುವುದೇನು?
೧೩. ಹುಲಿ ವೇಷದ ಕತ್ತೆ ಹೊರಬಂದಿದೆ- ಜನಧ್ವನಿ
೧೪. ಉದಯ
೧೫. ದಾಸಯ್ಯನ ಗರುಡಗಂಭ
೧೬. ಆಜಾದ್
೧೭. ವಿದ್ಯಾರ್ಥಿ ವಾಣಿ
೧೮. ಅಗ್ನಿ
೧೯. ಪ್ರಜಾಶಕ್ತಿ
೨೦. ಮೈಸೂರಿನ ನವ ಲಾವಣಿ
೨೧. ಮೈಸೂರ್ ಸ್ಟೇಟ್ ರೈಲ್ವೆ ಡಿಪಾರ್ಟ್‌ಮೆಂಟ್ ಪ್ರೆಸ್ ನೋಟ್
೨೨. ಸ್ಯಾಕ್ರಿಫೈಸ್
೨೩. ಕಾಲ್ ಆಫ್ ದ ಡೇ
೨೪. ಬ್ಲೇಜ್
೨೫. ರೆವಲ್ಯೂಷನ್
೨೬. ಮೈಸೂರು ಕಾಂಗ್ರೆಸ್ ಸತ್ಯಾಗ್ರಹ
೨೭. ಅಪೀಲ್ ಟು ದ ಪೀಪಲ್ ಆಫ್ ಮೈಸೂರು ಸ್ಟೇಟ್
೨೮. ಮಹಾತ್ಮ ಗಾಂಧೀ ಕೀ ಜೈ
೨೯. ಸ್ಟ್ರೈಕ್ ಆನ್ ಸೆಪ್ಟೆಂಬರ್ ಫಸ್ಟ್
೩೦. ಇನ್ ದಿ ಕೋರ್ಟ್ ಆಫ್ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್
೩೧. ಮೈಸೂರು ಕಾಂಗ್ರೆಸ್ ಸತ್ಯಾಗ್ರಹ

**ಆಧಾರ**


೧. ಸತ್ಯಾಗ್ರಹದ ನೆನಪು — ಪ್ರೊ। ಡಿ. ಲಿಂಗಯ್ಯ
೨. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು-ಸಂಪುಟ ೧
೩. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು-ಸಂಪುಟ ೨ — ಡಾ. ಸೂರ್ಯನಾಥ ಕಾಮತ್
೪. ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು-ಸಂಪುಟ ೩
೫. ನೆನಪಿನ ಸುರುಳಿ ತೆರೆದಾಗ — ಎಚ್. ಎಸ್. ದೊರೆಸ್ವಾಮಿ
೬. ಕ್ವಿಟ್ ಇಂಡಿಯಾ ಚಳವಳಿ ಮತ್ತು ಮೈಸೂರು ಚಲೋ ಚಳವಳಿಗಳಲ್ಲಿ ನನ್ನ ಅನುಭವ — ಡಾ। ಎಚ್. ನರಸಿಂಹಯ್ಯ
೭. ಭೂಗತ ಪತ್ರಿಕೆಗಳು — ಡಾ। ಹೊ. ಶ್ರೀನಿವಾಸಯ್ಯ
೮. ಭಾರತೀಯ ಪತ್ರಿಕೋದ್ಯಮ — ನಾಡಿಗ ಕೃಷ್ಣ ಮೂರ್ತಿ
೯. ವಿಶ್ವಕನ್ನಡ — ಸಂಪುಟ ೧
೧೦. ಸಾಹಿತ್ಯ ಲೋಕದಲ್ಲಿ ಮಹಾತ್ಮ ಗಾಂಧಿ — ಹೊ. ಶ್ರೀನಿವಾಸಯ್ಯ
೧೧. ಕರ್ನಾಟಕ ರಾಜ್ಯ ಗೆಜೆಟಿಯರ್-೩
೧೨. ವಜ್ರ ಸಂಪುಟ — ಒಕ್ಕಲಿಗರ ಸಂಘ
೧೩. ಹಿಸ್ಟರಿ ಆಫ್ ಫ್ರೀಡಂ ಮೂಮೆಂಟ್ ಇನ್ ಕರ್ನಾಟಕ, ವಾಲ್ಯುಂ ೧೧ — ಪ್ರೊ। ಜಿ. ಎಸ್. ಹಾಲಪ್ಪ
೧೪. ಆತ್ಮ ಕಥೆ — ಎಂ. ಕೆ. ಗಾಂಧೀ

# ಸಾಹಿತಿಗಳು ಮತ್ತು ಏಕೀಕರಣ

ಡಾ। ಮಂಜುಳಾ ಹುಲ್ಲಹಳ್ಳಿ

'ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ'. ನಿಜ, ಹೊಟ್ಟೆ, ಬಟ್ಟೆ, ಅದಾದ ನಂತರ ಇರುವುದಕ್ಕೊಂದು ಸೂರು-ಇವು ಮಾನವನ ಪ್ರಾಥಮಿಕ ಅವಶ್ಯಕತೆಗಳು. ಅವಿಲ್ಲದೇ ಜೀವನವೇ ಇಲ್ಲ. ಹಾಗೆಂದುಕೊಳ್ಳುವಾಗಲೇ ಎದುರಾಗುವ ಪ್ರಶ್ನೆ ಅಸನವಸನಗಳನ್ನು ನೀಡಿ ತಣಿಸುವ ಆ 'ಸೂರು' ಎಲ್ಲಿರಬೇಕು? ತಟಕ್ಕನೆ ಹೊಳೆಯುವ ಉತ್ತರ 'ನಮ್ಮವರ ಮಧ್ಯೆ'. ಹಾಗಾದರೆ 'ನಮ್ಮವರು ಯಾರು?' ಈ ಅರ್ಹತೆ ಪಡೆಯಲು ಜಾತಿ, ಮತ, ಕುಲ, ಬಾಂಧವ್ಯಗಳು ಎಷ್ಟೇ ಪೈಪೋಟಿ ನಡೆಸಿದರೂ ಅಂತಿಮ ಜಯ ದಕ್ಕುವುದು ಭಾಷೆಗೆ. ಏಕೆಂದರೆ ಭಾಷೆಯು ಮಾನವನ ಬೌದ್ಧಿಕ ಶಕ್ತಿಗೆ, ಆ ಮೂಲಕ ಅವನ 'ಅಹಂ'ಗೆ ಚಾಲನೆ ಕೊಟ್ಟು ಆತನ ಆತ್ಮವಿಕಾಸಕ್ಕೆ ನೆರವಾದ ಅಪೂರ್ವ ಸಾಧನ. ಆದುದರಿಂದಲೇ ಮಾನವನಲ್ಲಿ ಎಷ್ಟೆಲ್ಲಾ ಸಣ್ಣತನ, ಕುಂದುಕೊರತೆ, ಮೇಲು ಕೀಳು ಮನೋಭಾವಗಳಿದ್ದರೂ ಭಾಷೆಯ ಮುಂದೆ, ಭಾಷಾಭಿಮಾನದ ಮುಂದೆ ಅವೆಲ್ಲಾ ಗೌಣವಾಗುತ್ತವೆ.

'ಜೀವಂತ ಭಾಷೆಗೂ ಚೈತನ್ಯಯುತವಾದ ಸಂಸ್ಕೃತಿಗೂ ಹೊಕ್ಕುಳುಬಳ್ಳಿ ಸಂಬಂಧವಿದೆ' ಎಂಬುದಾಗಿ ದೇಜಗೌ ಗುರುತಿಸುತ್ತಾರೆ. ಹೀಗೆ ಭಾಷೆಯ ಆಧಾರದಿಂದ ಸಂಸ್ಕೃತಿಯನ್ನು ಗುರುತಿಸುವುದಾದರೆ 'ಕನ್ನಡ ಸಂಸ್ಕೃತಿ'ಯ ಆಳ ಅಗಲಗಳು ಅಪಾರ. 'ಕಾವೇರಿಯಿಂದಮಾ ಗೋದಾವರಿವರಂ ಮಿರ್ಪ' ಅಲ್ಲ ನರ್ಮದೆಯ ಆಚೆಗೂ ಕನ್ನಡ ಸಂಸ್ಕೃತಿ ಹರಡಿದ್ದುದನ್ನು ಶಂಬಾ ಜೋಶಿ ಅವರು ಸಾಕ್ಷ್ಯಾಧಾರಗಳ ಮೂಲಕ ತೆರೆದಿಡುತ್ತಾರೆ. ಆಂಧ್ರ, ಮಹಾರಾಷ್ಟ್ರಗಳಿರಲಿ ಉತ್ತರದ ಗುಜರಾತ್, ಮಿಥಿಲಾ, ಬಂಗಾಳ, ನೇಪಾಳಗಳಲ್ಲೂ ಕನ್ನಡದ ಆಧಿಪತ್ಯವಿದ್ದುದಕ್ಕೆ ದಾಖಲೆಗಳಿವೆ.

ಹೀಗೆ ತನ್ನ ವೈಜಯಂತಿಯನ್ನು ಎತ್ತರೆತ್ತರಕ್ಕೆ ಏರಿಸಿದ್ದ ಕನ್ನಡಿಗರ ಕನ್ನಡತನ ಕುಗ್ಗುತ್ತಾ ಬಂದ ಹಾಗೇ ಕನ್ನಡನಾಡೂ ಸಂಕುಚಿತಗೊಳ್ಳುತ್ತಾ ಬಂದಿತು. ಗಂಗ, ಕದಂಬ, ಚಾಲುಕ್ಯ, ಹೊಯ್ಸಳ, ವಿಜಯನಗರ, ಮೈಸೂರು ಅರಸರ ಹೆಮ್ಮೆಯ ನಾಡು ಕಡೆಗೆ 'ಮೈಸೂರು ಹುಲಿ' ಟಿಪ್ಪುವಿನ ಪತನದೊಂದಿಗೆ ಛಿದ್ರ ವಿಚ್ಛಿದ್ರವಾಗಿ ನಾಲ್ಕೈದು ಪರಭಾಷಾ ಸಂಸ್ಥಾನಗಳ ಆಳ್ವಿಕೆಯೊಳಗೆ, ಹತ್ತಾರು ಸಣ್ಣಪುಟ್ಟ ದೇಶೀ ಸಂಸ್ಥಾನಗಳ ಹಿಡಿತದೊಳಕ್ಕೆ ಸೇರಿಹೋದುದು ದುರಂತ. ಈ ದಾರುಣಗಾಥೆಯನ್ನು ಬರೆಯಲು ಮೊದಲಿಟ್ಟವರು ಆಂಗ್ಲರು. ತಮ್ಮ ಬೆವರಿನ ಪ್ರತಿಫಲವನ್ನು ಅನ್ಯರಾರಿಗೋ ತೆರಿಗೆ ರೂಪದಲ್ಲಿ ಸಲ್ಲಿಸಿ-ಅವರು ಅವರ ಭಾಷೆಯಲ್ಲಿ ಮಾಡಿದ ಆದೇಶಗಳನ್ನು ಪರಿಪಾಲಿಸಬೇಕೆನ್ನುವ, ಅವರ ಭಾಷಾ ಸಂಸ್ಕೃತಿಗಳ ದಬ್ಬಾಳಿಕೆಗಳಿಗೆ ಒಳಗಾಗಬೇಕೆನ್ನುವ, ಕಡೆಗೆ ಮನೆ ಮಕ್ಕಳಿಗೆ ವಿದ್ಯಾಭ್ಯಾಸವನ್ನೂ ಆ ಪರಕೀಯ ಭಾಷೆಗಳ ಮೂಲಕವೇ ಮಾಡಿಸಬೇಕೆನ್ನುವ ಅನಿವಾರ್ಯತೆ ಸ್ವಾಭಿಮಾನಿ ಕನ್ನಡಿಗರನ್ನು ಅದೆಷ್ಟು ಕೆರಳಿಸಿರಬೇಕು! ಆದರೂ ಶತಮಾನಗಳ ಕಾಲ ಈ ದನಿಕೊಡಲಾಗದ ನೋವನ್ನು, ಪರಭಾಷಾ ದಬ್ಬಾಳಿಕೆಯನ್ನು ಕನ್ನಡಿಗರು ಅನ್ಯಮಾರ್ಗವಿಲ್ಲದೆ ಹಲ್ಲುಮುಡಿ ಕಚ್ಚಿ ಸಹಿಸಲೇಬೇಕಾಯಿತು. ಕಡೆಗೊಮ್ಮೆ ತಮ್ಮ ನೋವಿಗೆ, ಕೀಳರಿಮೆಗೆ, ವಿಷಾದಕ್ಕೆ

ಮುಖ್ಯ ಕಾರಣ ಬ್ರಿಟಿಷರು ಎಂಬ ಭಾವನೆ ಜಾಗೃತವಾಗಿ ಅವರನ್ನು ಭಾರತದಿಂದ ತೊಲಸಿಗಿದರೆ ತಮ್ಮ ಸ್ಥಿತಿ ಉತ್ತಮವಾಗುತ್ತದೆ ಎಂಬ ಆಲೋಚನೆಯಿಂದ ಬ್ರಿಟಿಷರ ವಿರುದ್ಧ ಎದೆಸೆಟೆಸಿ ನಿಂತರು. ಸಹಜವಾಗಿಯೇ ಕನ್ನಡದರಸರ ಲಾಲನೆಯಲ್ಲಿ ಹಾಯಾಗಿದ್ದ ಮೈಸೂರಿಗರಿಗಿಂತ ಉತ್ತರ ಕರ್ನಾಟಕ ಪ್ರದೇಶದಲ್ಲಿ ಈ ಹೋರಾಟ ಹೆಚ್ಚು ಗರಿಕಟ್ಟಿತು.

೧೯ನೆಯ ಶತಮಾನದ ಆರಂಭದಲ್ಲಿ ಉತ್ತರ ಕರ್ನಾಟಕದ ಭಾಗಗಳಲ್ಲಿ ಕನ್ನಡ ಹೆಚ್ಚು ಕಡಿಮೆ ನಾಮಾವಶೇಷವಾಗುವ ಪರಿಸ್ಥಿತಿ ತಲುಪಿತ್ತು. ಆಡಳಿತ ವಿದ್ಯಾಭ್ಯಾಸಗಳಿಗೆಲ್ಲ ಅನ್ಯಭಾಷಾ ಮಾಧ್ಯಮ ಅನಿವಾರ್ಯವೇ ಆಗಿದ್ದುದರಿಂದ ಕನ್ನಡ ಮಾತನಾಡುವುದೂ ಕೀಳು ಎಂಬಂಥ ಪರಿಸ್ಥಿತಿ ನಿರ್ಮಾಣವಾಗಿತ್ತು. ಕನ್ನಡಿಗರೆದೆಯಲ್ಲಿ ಜಾಗೃತಿ ಮೂಡಿ ಸಕಾಲಿಕ ಹೋರಾಟ ನಡೆಯದಿದ್ದರೆ ಈಗಿನ ಮೈಸೂರು ಸಂಸ್ಥಾನದ ಹೊರಗೆ ಕನ್ನಡ ನಾಮಾವಶೇಷವಾಗುತ್ತಿದ್ದುದರಲ್ಲಿ ಸಂಶಯವೇ ಇಲ್ಲ. ಅಳ್ಳೆದೆಯ ಜನಮನಗಳಲ್ಲಿ ಸ್ಫೂರ್ತಿಯ ಜಾಗೃತಿ ಮೂಡಿಸಿ ಹೋರಾಟಕ್ಕೆ ಬಲ ತುಂಬಿದವರಲ್ಲಿ ಶೇಕಡಾ ತೊಂಬತ್ತೊಂಬತ್ತು ಮಂದಿ ಸಾಹಿತಿಗಳೇ ಎಂಬುದು ನಿಜಕ್ಕೂ ಹೆಮ್ಮೆಯ ವಿಚಾರವಾಗಿದೆ.

ಉತ್ತರ ಕರ್ನಾಟಕದಲ್ಲಿ ಕನ್ನಡದ ಉಳಿವಿಗಾಗಿ ಮೊದಲ ಪ್ರಚೋದನೆ ನೀಡಿದವನು 'ಸರ್ ವಾಲ್ಟರ್ ಎಲಿಯಟ್.' ಅಲ್ಲಿ ಬಹುತೇಕ ಜನಸಮೂಹದ ಸಂಪರ್ಕ ಭಾಷೆಯು ಕನ್ನಡವೇ ಆಗಿರುವುದರಿಂದ ಕನ್ನಡದಲ್ಲಿ ಆಡಳಿತ ನಡೆಸಬೇಕೆಂಬುದು ಆತನ ದೃಷ್ಟಿಯಾಗಿತ್ತು. ಈ ಉದ್ದೇಶಕ್ಕೆ ಪೂರಕವಾಗಿ ಆತ ೧೮೩೦ರಲ್ಲಿ ಧಾರವಾಡದಲ್ಲಿ ಕನ್ನಡ ಶಾಲೆ ಆರಂಭಿಸಿ ಮೂರು ವರ್ಷಗಳ ಕಾಲ ಸ್ವಂತ ಖರ್ಚಿನಲ್ಲೇ ಶಾಲೆ ನಡೆಸಿದ. ಹಲವಾರು ಮರಾಠಿ ಶಾಲೆಗಳನ್ನು ಕನ್ನಡ ಶಾಲೆಗಳನ್ನಾಗಿ ಪರಿವರ್ತಿಸಿದ. ಈ ಭದ್ರ ಬುನಾದಿಯ ಮೇಲೆ ಮುಂದೆ ಕನ್ನಡದ ಹುಲಿ ಡೆಪ್ಯೂಟಿ ಚೆನ್ನಬಸಪ್ಪನವರು ಧಾರವಾಡ, ಬೆಳಗಾಂ ಮುಂತಾದೆಡೆಗಳಲ್ಲಿ 'ಕನ್ನಡತನ'ದ ಗುಣಮಟ್ಟ ಕನ್ನಡ ಶಾಲೆಗಳ ಮೂಲಕ ವೃದ್ಧಿಗೊಳ್ಳುವಂತೆ ಮಾಡಿದರು. ೧೮೫೬ರ ವೇಳೆಗೇ ಕನ್ನಡ ಕಲಿಕೆಗೆ ಇಂಬುಕೊಟ್ಟ ಕರ್ನಾಟಕ ಏಕೀಕರಣದ ಕನಸು ಕಂಡರು. ಮುಂದೆ ಶಾಂತವೀರ ರಾಚಿದೇವ ಕಿತ್ತೂರ, ಗಂಗಾಧರ ಮಡಿವಾಳೇಶ್ವರ ತೂರಮರಿ, ವೀರಭದ್ರ ಮಡಿವಾಳೇಶ್ವರ ಪಂಡಿತ, ಚುರಮುರಿ ಶೇಷಗಿರಿರಾಯ, ಪಾಂಡುರಂಗ ಚಿಂತಾಮಣಿ ಪೇಟಕರ, ವೆಂಕಟರಂಗೋಕಟ್ಟಿ ಮುಂತಾದ ಪಂಡಿತರು ಕನ್ನಡದ ಕೆಲಸಕ್ಕಾಗಿ ತಮ್ಮ ಜೀವನವನ್ನು ಮುಡಿಪಿಡತೊಡಗಿದರು.

ಈ ಎಲ್ಲಾ ಕಾರ್ಯಗಳಿಂದ ಪ್ರೇರಣೆ ಪಡೆದು ಕನ್ನಡ ನೆತ್ತರನ್ನೇ ನರನಾಡಿಗಳಲ್ಲಿ ತುಂಬಿಕೊಂಡು ಕನ್ನಡದ ಅಭಿವೃದ್ಧಿಗಾಗಿ ಹಗಲಿರುಳು ಚಿಂತಿಸುತ್ತಿದ್ದ ರಾ.ಹ. ದೇಶಪಾಂಡೆ ಅವರು ಕನ್ನಡ ಭಾಷೆಯ ದೀನ ಪರಿಸ್ಥಿತಿಯನ್ನು ದೂರ ಮಾಡಲಿಕ್ಕಾಗಿ ಕನ್ನಡ ಜನರ ಸಹಾಯದಿಂದ, ಸಮಾನ ಮನಸ್ಕರ ಬೆಂಬಲದಿಂದ ೧೮೯೦ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಧಾರವಾಡದಲ್ಲಿ ಹುಟ್ಟು ಹಾಕಿದರು. ಸಾಹಿತಿಗಳಿಂದ ತುಂಬಿಕೊಂಡು ಕನ್ನಡಾಭಿಮಾನಿಗಳಿಂದ ಪ್ರೋತ್ಸಾಹ ಪಡೆದು ಹಂತಹಂತವಾಗಿ ಬೆಳೆದುಬಂದ ಈ ಸಂಘದ ಇತಿಹಾಸವೇ ಕರ್ನಾಟಕ ಏಕೀಕರಣ ಚಳವಳಿಯ ಇತಿಹಾಸ ಎಂದರೂ ತಪ್ಪಾಗುವುದಿಲ್ಲ. ಈ ಸಂಘ ಪಡೆದ ಅಪೂರ್ವ ಸಂಘಟನೆಗಾರ ಆಲೂರು ವೆಂಕಟರಾಯರು.

ಇದುವರೆವಿಗೂ ಕನ್ನಡನುಡಿಯನ್ನು ಆಡುವವರೆಲ್ಲ ಒಂದು ಆಳ್ವಿಕೆಯಲ್ಲಿ ಬರಬೇಕು ಎಂಬ ಭಾವ ಸಾಹಿತಿಗಳಲ್ಲಿ, ಗಣ್ಯರಲ್ಲಿ ಮೈತುಂಬಿಕೊಂಡಿತ್ತಾದರೂ ಅವರಲ್ಲಿ ಸ್ಪಷ್ಟತೆ ಮತ್ತು ಖಚಿತತೆಯ ಅಭಾವವಿತ್ತು. ಆಲೂರರು ಆ ಭಾವಕ್ಕೆ ಸ್ಪಷ್ಟತೆಯನ್ನು ನೀಡಿ 'ಕರ್ನಾಟಕತ್ವ'ಕ್ಕೆ ಮೂರ್ತ ಸ್ವರೂಪವನ್ನು ಕೊಟ್ಟವರು. ೧೯೦೫ರಲ್ಲಿ ಬಂಗಾಲ ವಿಭಜನೆಯಾದಾಗ ನೊಂದ ಬಂಗಾಲಿಗರಲ್ಲಿ ಯಾರೊಬ್ಬರೂ ಒಲೆ ಹೊತ್ತಿಸಲಿಲ್ಲ ಎಂಬ ಸಂಗತಿ ಅವರಿಗೆ ತಿಳಿದಾಗ ಕನ್ನಡನಾಡು ಶತಶತಮಾನಗಳಿಂದಲೂ ಛಿದ್ರವಾಗಿದ್ದರೂ ಕನ್ನಡಿಗರು ಮೌನವಾಗಿದ್ದಾರಲ್ಲ ಎಂಬ ಸಂಕಟ ಅವರನ್ನು ಬಹಳವಾಗಿ ಕಾಡಿತು. ಕನ್ನಡಿಗರ ಈ ಅಭಿಮಾನಶೂನ್ಯತೆಗೆ ಇತಿಹಾಸದ ಮಾಹಿತಿಯ ಕೊರತೆಯೇ ಕಾರಣ ಎಂದು ಮನಗಂಡರು. ಕನ್ನಡಿಗರಿಗೆ ಅವರ ಭವ್ಯೋಜ್ವಲ ಪರಂಪರೆಯನ್ನು ಮನನ ಮಾಡಿಕೊಡಲು ಕನ್ನಡದ ಸಮೃದ್ಧ ಸಂಸ್ಕೃತಿ ಇತಿಹಾಸಗಳನ್ನು ಹಿಡಿದಿರಿಸಿಕೊಂಡ 'ಕರ್ನಾಟಕ ಗತವೈಭವ'ವನ್ನು ರಚಿಸಿದರು. ಇದು ತೂಕಡಿಸುತ್ತಿದ್ದ ಕನ್ನಡಿಗರನ್ನು ಬಡಿದೆಬ್ಬಿಸಿತು. 'ಕನ್ನಡಿಗರೇ ಕರ್ನಾಟಕದಲ್ಲಿ ಕಾರ್ಯ ಮಾಡದಿದ್ದರೆ ಇನ್ನಾರು ಮಾಡುವರು?' ಎಂಬ ದೃಢ ನಿಷ್ಠೆಯ ಅವರು ಕನ್ನಡಿಗರಿಗೆ ನೀಡಿದ ಸ್ಪಷ್ಟ ಕರೆ ಇದು- 'ಜರಾಸಂಧನ ದೇಹದ ತುಂಡುಗಳಲ್ಲಿ ಸಮ್ಮಿಲನ ಶಕ್ತಿ ಇದ್ದಂತೆ ಈಗ ನಿರ್ಜೀವವಾಗಿರುವ ನಮ್ಮ ಕನ್ನಡ ಭಾಷೆಯ ತುಂಡುಗಳಲ್ಲಿ ತಮ್ಮಷ್ಟಕ್ಕೆ ತಾವೇ ಸಮ್ಮಿಳಿತವಾಗುವ ಶಕ್ತಿ ಇಲ್ಲ. ಈ ಐದು ತುಂಡುಗಳನ್ನು ಒತ್ತಟ್ಟಿಗೆ ಕೂಡಿಸಿ ಅವುಗಳಲ್ಲಿ ಜೀವಕಳೆಗಳನ್ನು ತುಂಬಿಸುವ ಭಾರ ಕನ್ನಡಿಗರ ಮೇಲೆ ಇದೆ ಎಂಬುದನ್ನು ಯಾರೂ ಮರೆಯಬಾರದು.' ಹೀಗೆ ಖಂಡತುಂಡವಾಗಿರುವ ನಾಡನ್ನು ಒಂದು ಮಾಡಲು ನಿಜವಾದ ಕನ್ನಡಿಗನಿಂದ ಮಾತ್ರ ಸಾಧ್ಯ. ಅದಕ್ಕೆಂದೇ ಅವರು ಕನ್ನಡಿಗರ ಮನಮನದಲ್ಲಿ ತಮ್ಮ ಅಂತರಾಳದ ಸ್ಪಷ್ಟ ನುಡಿಗಳಿಂದ ಸ್ಫೂರ್ತಿ ಕೆಚ್ಚುಗಳನ್ನು ತುಂಬಲು ಯತ್ನಿಸುತ್ತಾರೆ.-'ಕನ್ನಡಿಗರೇ, ನಾವು ನಮ್ಮ

ಆಲಸ್ಯ ತಳ್ಳೋಣ; ಭ್ರಾಮಕ ಕಲ್ಪನೆಗಳನ್ನು ಬಿಟ್ಟುಬಿಡೋಣ. ಮುಂದಿನ ಮಾರ್ಗಕ್ಕೆ ಹತ್ತೋಣ. ಪಾತಾಳಕ್ಕಿಳಿದ ನಮ್ಮ ಕರ್ನಾಟಕದ ಆರ್ಯಸಂಸ್ಕೃತಿಯನ್ನು ನಾವು ಉದ್ಧರಿಸದೆ ಇನ್ನಾರು ಉದ್ಧರಿಸುವರು?

ಕನ್ನಡಿಗರು ಹೇಡಿಗಳು, ಹಿಂದುಳಿದವರು, ಅಭಿಮಾನ ಶೂನ್ಯರು ಎಂಬ ಕರ್ಣಕಠೋರ ನುಡಿಗಳಿಂದ ನಮ್ಮನ್ನು ಚುಚ್ಚುವವರಿಗೆ ನಮ್ಮ ಕ್ರಿಯಾಶಕ್ತಿಯಿಂದ ಉತ್ತರ ಕೊಡೋಣ. ಸಾಯಲಾದ ಕರ್ನಾಟಕಕ್ಕೆ ಇತಿಹಾಸದ ಸಂಜೀವಿನಿ ಮಾತ್ರೆ ಹಾಕಿ ಚೇತನಗೊಳಿಸೋಣ. ನಮ್ಮ ಆಶಾವೃಕ್ಷವನ್ನು ಕೊಳೆಯಿಸಿಬಿಡುವಂಥ ಹುಳುಗಳನ್ನು ಕೊಲ್ಲಲು ಇತಿಹಾಸವೇ ಮದ್ದು. ಕನ್ನಡಿಗರೇ, 'ಕರ್ನಾಟಕ' ಎಂಬ ಒಂದು ಶಬ್ದದಲ್ಲಿ ಎಂಥ ಅದ್ಭುತ ಶಕ್ತಿ ತುಂಬಿರುತ್ತದೆಂಬುದನ್ನು ಲಕ್ಷ್ಯಕ್ಕೆ ತನ್ನಿರಿ! ಕರ್ನಾಟಕದ ಅರಸರು ಹೋದರು, ಕವಿಗಳೂ ಹೋದರು; ಸಂಪತ್ತು ಹೋಯಿತು; ವೈಭವವೂ ಹೋಯಿತು. ಆದರೆ, ಕರ್ನಾಟಕ ಶಬ್ದ ಮಾತ್ರ ಇನ್ನೂ ಉಳಿದಿದೆ. ಅದು ದ್ರೌಪದಿಯ ಅಕ್ಷಯ ಪಾತ್ರೆಯ ಅಗುಳಿನಂತಾಗುತ್ತದೆ. ಆದಕಾರಣ ಕನ್ನಡಿಗರೇ, ಕರ್ನಾಟಕ ಸಂಸ್ಕೃತಿ ಎಂಬ ಗುಪ್ತಗಾಮಿನಿ ಗಂಗೆಯನ್ನು ಮೇಲಕ್ಕೆ ಎತ್ತಿ ತರೋಣ. ಏಳಿರಿ ಇದು ನಮ್ಮ ಮೊದಲ ಕರ್ತವ್ಯ.....'

ಗತ ಶತಮಾನದ ಮೊದಲ ದಶಕದಲ್ಲೇ ಹೀಗೆ ಏಕೀಕರಣಕ್ಕಾಗಿ ಜನಮನವನ್ನು ಜಾಗೃತಗೊಳಿಸುವ ಕೈಂಕರ್ಯಕ್ಕೆ ತಮ್ಮನ್ನು ಸಂಪೂರ್ಣ ಸಮರ್ಪಿಸಿಕೊಂಡ ಆಲೂರರು ಕರ್ನಾಟಕತ್ವದ ಬಗೆಗೆ ಕೂಡ ಅಷ್ಟೇ ಪ್ರಾಂಜಲವಾಗಿ ಚಿಂತಿಸುತ್ತ 'ಆ ಶಬ್ದ ಕೂಡ ನನ್ನ ಟಂಕಸಾಲೆಯಲ್ಲಿ ಹುಟ್ಟಿದ್ದು. ಅದೊಂದು ಶಬ್ದದಲ್ಲಿ ರಾಜಕಾರಣ, ಧರ್ಮ, ವಾಙ್ಮಯ, ಇತಿಹಾಸ, ಕಲೆ ಮುಂತಾದ ಯಾವತ್ತೂ ವಿಷಯಗಳು ಸೇರ್ಪಡೆಯಾಗುತ್ತವೆ' ಎನ್ನುತ್ತಾರೆ. ಕರ್ನಾಟಕ ವಿದ್ಯಾವರ್ಧಕ ಸಂಘ ಹಾಗೂ ಮುಂದೆ ೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ಈ ಎರಡೂ ಸಂಸ್ಥೆಗಳನ್ನು ಏಕೀಕರಣದತ್ತ ಸೆಳೆದದ್ದು ಆಲೂರರ ಅಪೂರ್ವ ಪ್ರಯತ್ನಗಳಿಂದೇ ಹೇಳಬಹುದು. ಕಾಂಗ್ರೆಸ್ ಮೂಲಕ ಕರ್ನಾಟಕದ ರಾಜಕೀಯ ಏಕೀಕರಣ, ಪರಿಷತ್ತಿನ ಮೂಲಕ ಕರ್ನಾಟಕ ಸಾಂಸ್ಕೃತಿಕ ಏಕೀಕರಣವನ್ನು ನಿರೀಕ್ಷಿಸಿದವರು ಅವರು. 'ಕನ್ನಡದ ಕುಲಪುರೋಹಿತ' ಹೆಸರಿಗೆ ಅನ್ವರ್ಥರಾದ ಇವರು ತಮ್ಮ ಕನಸಿನ ಏಕೀಕರಣ ಹೆಚ್ಚು ಕಡಿಮೆ ಸಾಕೃತಗೊಂಡಾಗ ಬೆಂಗಳೂರಿನ ವಿಜೃಂಭಣೆಯಲ್ಲಿ ಪಾಲುಗೊಳ್ಳದೇ ಹಂಪೆಯ ವಿರೂಪಾಕ್ಷ ಸನ್ನಿಧಿಯಲ್ಲಿ ಸಮಾನ ಮನಸ್ಕರೊಡನೆ ಕೂಡಿ ಎಲ್ಲ ಪ್ರಾಂತ್ಯದ ಮಣ್ಣು ನೀರುಗಳನ್ನು ಪಾವನ ತುಂಗಭದ್ರೆಯಲ್ಲಿ ಸಮ್ಮಿಲನಗೊಳಿಸಿ ಕೃತಕೃತ್ಯತೆಯ ಭಾವ ಅನುಭವಿಸಿದರೂ ಮೈಸೂರು 'ಕರ್ನಾಟಕ' ಆಗದಿದ್ದುದಕ್ಕೆ ವೇದನೆಯ ಉಸಿರನ್ನು ಹೊಮ್ಮಿಸಿದವರು. 'ಕರ್ನಾಟಕತ್ವವೆಂದರೆ ಕೇವಲ ದೇಶಾಭಿಮಾನವಲ್ಲ, ಭಾಷಾಭಿಮಾನವೂ ಅಲ್ಲ. ಇವೆಲ್ಲವುಗಳನ್ನು ಮೀರಿದ, ಇವೆಲ್ಲವುಗಳನ್ನು ಒಳಗೊಂಡ ಪರಿಶುದ್ಧ ಭಾವನೆ. 'ಕರ್ನಾಟಕವೆಂಬುದೊಂದು ಜನಾಂಗವು, ಅದಕ್ಕೆ ಒಂದೇ ಒಂದು ಶರೀರ, ಮನಸ್ಸು ಮತ್ತು ಆತ್ಮಗಳಿರುತ್ತವೆಂಬ ಭಾವನೆ ಎಲ್ಲಿಯವರೆಗೆ ನಮ್ಮಲ್ಲಿ ಉತ್ಪನ್ನವಾಗುವುದಿಲ್ಲವೊ ಅಲ್ಲಿಯವರೆಗೆ ನಮ್ಮ ಕನ್ನಡ ನುಡಿಯ ಅಭಿವೃದ್ಧಿ ಭರದಿಂದ ಸಾಗಲಾರದು.' ಎಂಬ ಅವರ ನುಡಿಗಳು ಸಾರ್ವಕಾಲಿಕವಾಗಿ ನಿಲ್ಲುತ್ತವೆ.

'ನಮ್ಮ ಕನ್ನಡ, ನಮ್ಮ ಹಿರಿಯರ ಕನ್ನಡ, ನಮ್ಮ ಮಕ್ಕಳ ಕನ್ನಡ, ನಮ್ಮ ಮರಿಮಕ್ಕಳ ಕನ್ನಡ...' ಎಂದು ಕನ್ನಡವನ್ನೇ ಉಸಿರಾಗಿಸಿಕೊಂಡು 'ಕನ್ನಡ ತಲೆಯೆತ್ತುವ ಬಗೆ'ಯನ್ನು ನಾಡಿನಾದ್ಯಂತ ಪಸರಿಸಿದ 'ಕನ್ನಡದ ಕಣ್ವ' ಬಿ.ಎಂ. ಶ್ರೀಕಂಠಯ್ಯನವರು ಏಕೀಕರಣ ಚಳವಳಿಯಲ್ಲಿ ಅದ್ವಿತೀಯ ಪಾತ್ರ ವಹಿಸಿದ್ದಾರೆ. ಅವರು ಕನ್ನಡಿಗನಲ್ಲಿ ಆತ್ಮಾಭಿಮಾನವನ್ನು ಜಾಗೃತಗೊಳಿಸಲು ಹಲವಾರು ದಾರಿ ಹಿಡಿದರು. ಮಹಾನ್ ರಾಜಭಕ್ತರಾಗಿದ್ದೂ ಕೂಡ ಕನ್ನಡದ ಏಕೀಕರಣಕ್ಕಾಗಿ ಅವರು ತಹತಹಿಸುತ್ತಿದ್ದ ರೀತಿ ಅಪೂರ್ವ.

'ಒಕ್ಕೊರಲಲೆಲ್ಲರೂ ಕೂಗಿ ಈ ಒಕ್ಕೂಗ- ಈ ಹಿರಿಯ ಕೂಗ
ಸಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಗೆಲ್ಗೆ, ಬಾಳ್ಗೆ
ಕನ್ನಡದ ತಾಯ್ ಗೆಲ್ಗೆ ಬಾಳ್ಗೆ....'

ಎಂದು ಎಲ್ಲರೂ ಕನ್ನಡದ ಏಳ್ಗೆಗಾಗಿ ಒಗ್ಗೂಡಬೇಕೆಂದು ಬಯಸಿದವರು ಅವರು. ಕನ್ನಡನಾಡನ್ನು ಬಲವಂದು ನಾಡಿನ ನೋಟದ ಚೆಲುವನ್ನು ಸವಿದು ದಾರುಣತೆಯನ್ನು ಅನುಭವಿಸಿ 'ಕನ್ನಡ ತಾಯ ನೋಟ'ದಲ್ಲಿ ಕನ್ನಡ ತಾಯಿಯೇ ತನ್ನ ದುರ್ವಿಧಿಯನ್ನು ಮಕ್ಕಳ ಮುಂದೆ ತೋಡಿಕೊಳ್ಳುವುದನ್ನು ಕಲ್ಪಿಸಿರುವುದು ನಿಜಕ್ಕೂ ಎಂಥವರ ಮನವನ್ನೂ ಕಲಕುವಂತಿದೆ. ತನಗೊದಗಿದ ದುಃಸ್ಥಿತಿಗೆ ವಿಧಿವಿಪರ್ಯಾಸ ಕಾರಣವೆನ್ನುವುದಾದರೆ ಹೇಗಾದರೂ ಸಹಿಸಿಕೊಳ್ಳಬಹುದು. ಆದರೆ ಇದು ಮಕ್ಕಳ ಹೇಡಿತನದಿಂದ ಒದಗಿದ್ದಾದರೆ ಅದನ್ನು ತಾಳುವುದು ಹೇಗೆ? ಅಂಥ ಮಕ್ಕಳ ತಾಯಾದ ಕಾರಣದಿಂದ ಈಕೆ

'ಹೆರರೊತ್ತೆ ಗಡಿಬಿಡುತ್ತ
ಹದುಗುತ್ತ ನುಗ್ಗೆ ಕುಗ್ಗುತ್ತ

ಹೆರರ ಕೈ ಕಾಯುತ್ತ
ಸಾಯದೆಯೇ ಬದುಕದೆಯೇ
ಬಾಳ ನೂಕುವೆನು......'

ಎಂಬ ಸ್ವಗತಕ್ಕೆ ಶರಣಾಗಬೇಕಾಗುತ್ತದೆ.

ತಾಯ ಅಳಲನ್ನು ಕಿವಿಯಾರೆ ಕೇಳಿ, ಕಣ್ಣಾರೆ ಕಂಡವರು ಮೌನದಿಂದ ಕೂರುವುದು ಹೇಗೆ ಸಾಧ್ಯ? ಅವರು ಕನ್ನಡದ ಬಾವುಟ ಹಿಡಿದು ಕೆಚ್ಚೆದೆಯಿಂದ ಹೊರಡಲೇಬೇಕಾಗುತ್ತದೆ.

ಏರಿಸಿ ಹಾರಿಸಿ ಕನ್ನಡದ ಬಾವುಟ
ತಾಯುಳಿಯೆ ನಾನುಳಿವೆ ತಾಯಳಿಯೆ ನಾನಳಿವೆ
ಮನೆ ಕಾಯಿ, ತುರು ಕಾಯಿ, ನಾಡ ಗಡಿ ಗುಡಿ ಕಾಯಿ
ಕಾಯಲಾರೆಯ ಸಾಯಿ ಎಂದೆಲ್ಲ ಹೇಳಿರೋ...'

ಈ ಒಕ್ಕೊರಲ ಘೋಷಣೆಯಿಂದ ಎಂಥ ಹೇಡಿಯ ನರನಾಡಿಯಲ್ಲೂ ಬಿಸಿನೆತ್ತರ ಕಾವನ್ನು ಉಕ್ಕಿಸಿ ನಾಡು, ನುಡಿಗಾಗಿ ಹೋರಾಟ ನಡೆಸುವ ಕೆಚ್ಚು ತುಂಬಿದ್ದರಲ್ಲಿ ಆಶ್ಚರ್ಯವೇನಿಲ್ಲ. ಕನ್ನಡನಾಡಿನ ಒಕ್ಕೂಟಕ್ಕೆ ಹಂಬಲಿಸಿ ಅದಕ್ಕಾಗಿ ದುಡಿಯುವ ಕನ್ನಡ ಪಡೆಯನ್ನು, ಕನ್ನಡಾಭಿಮಾನಿಗಳನ್ನು ರೂಪಿಸಿ ಬೆಳೆಸಿದ ಕೀರ್ತಿ ಮಹಾನ್ ಗುರು ಟಿ. ಎಸ್. ವೆಂಕಣ್ಣಯ್ಯ ಅವರದು. ಹುಯಿಲಗೋಳ ನಾರಾಯಣರಾಯರು ಬಾಲ್ಯದಿಂದಲೇ ಕನ್ನಡದ ಸ್ಥಿತಿಗತಿಯ ಬಗ್ಗೆ ಮನ ಕದಡಿಸಿಕೊಂಡವರು. ಅವರ ಹದಿನಾಲ್ಕನೇ ವಯಸ್ಸಿನಲ್ಲೇ, ೧೯೦೮ರಲ್ಲಿ ರಚಿಸಿದ 'ಕನಸು' ಷಟ್ಪದಿಯಲ್ಲಿ ಕನಸಿನಲ್ಲಿ ಅಲೆವ ದಾರಿಹೋಕನ ಮಾತಿನಲ್ಲಿ ಕನ್ನಡದ ದುಃಸ್ಥಿತಿಯನ್ನು ಹಿಡಿದಿಡುವ ಪ್ರಯತ್ನ ಮಾಡಿದ್ದರೆಂದರೆ ಕನ್ನಡದ ಬಗೆಗಿನ ಅವರ ತುಡಿತ ಎಂಥದ್ದೆಂಬುದು ವೇದ್ಯವಾಗುತ್ತದೆ.

'ಅಗರುಗಾಣುವ ಮುರುಕು ಮನೆಯೊಳು
ಪೊಗರುವಿಲ್ಲದೆ ಪೊಗೆಯು ತುಂಬಿದೆ
ಜಿಗಡು ಹರಡಿಹ ಕರಡು ನೆಲದೊಳು ಬರದು ಕಾಲಿಡಲು
ಮಗನೆ ಕರ್ನಾಟಕದ ದೊರೆಯಾಳ್ದ
ಜಗಲಿಯಿದು ಜಗುಲಿದುದು ಪೊಳಗಣ
ಬಗೆಯ ಪೇಳಲು ಬಗೆಯ ಕಾಣೆನು ಮಾಡಲಿನ್ನೇನು?

೧೯೧೫ರಲ್ಲಿ ಬೆಂಗಳೂರಿನಲ್ಲಿ ನಡೆದ ಪ್ರಥಮ ಸಾಹಿತ್ಯ ಸಮ್ಮೇಳನವನ್ನು ಕುರಿತು ನೂರಾರು ಆಸೆ, ಭಾವನೆ, ಕನಸುಗಳನ್ನು ತುಂಬಿಕೊಂಡು ಈ ಸಮ್ಮೇಳನದ ಆಗುಹೋಗುಗಳನ್ನು ಅರಿಯಲು ಖುದ್ದು ಬೆಂಗಳೂರಿಗೆ ಬಂದ ಅವರಿಗೆ ಕಂಡದ್ದು, ಕೇಳಿದ್ದು....

'.... ಸಭೆಯೊಳು ಮುದ್ದು ನುಡಿಯೊಳು ತಿದ್ದಿ ಪೇಳಿದರಿದ್ದ ನುಡಿ ಕೆಟ್ಟಿದ್ದ ಸ್ಥಿತಿಯನ್ನಾಂಗ್ಲ ಭಾಷೆಯಿಂ....'

ಕನ್ನಡ ನುಡಿ ಕೆಟ್ಟಿದ್ದ ಸ್ಥಿತಿಯನ್ನು ವಿವರಿಸಲು ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಆಂಗ್ಲ ಭಾಷೆಯನ್ನು ಬಳಸಿದರು ಎಂಬ ಈ ಒಂದು ನುಡಿ ಸಾಕು ಕನ್ನಡದ ಹತಭಾಗ್ಯ ಸ್ಥಿತಿಯನ್ನು ಕಲ್ಪಿಸಿಕೊಳ್ಳಲು. ಈ ವೇದನೆಯೇ ಕಾರಣವಾಗಿ ೧೯೧೬ರಲ್ಲಿ 'ಕರ್ನಾಟಕದ ಮಿಡುಕು' ಅವರಿಂದ ಹೊರಹೊಮ್ಮಿರುವುದು.

ಆದಿಶೇಷನಿಗೂ ವರ್ಣಿಸಲಸದಳವಾದ ವೈಭವವು ಮಣ್ಣುಗೂಡಿದ ಮಂದಭಾಗ್ಯತೆ ತೊಲಗಬೇಕಾದರೆ, ಕನ್ನಡಿಗ ಹಿರಿಹಿರಿ ಹಿಗ್ಗಿ ಬಾಳಬೇಕಾದರೆ ಅವರ ಪ್ರಕಾರ ಇರುವುದು ಒಂದೇ ದಾರಿ. ಅದು,

'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು
ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು.....'

೧೯೨೪ರ ಬೆಳಗಾಂ ಕಾಂಗ್ರೆಸ್ ಅಧಿವೇಶನದ ಸಮಯದಲ್ಲಿ ಪ್ರಾರ್ಥನಾ ಗೀತೆಯಾಗಿ ಇವರ ಒಳತುಡಿತ ಹೊರಹೊಮ್ಮಿಸಿದ ಗೀತ ಇದು. ನಂತರ ಪ್ರತಿಯೊಬ್ಬ ನಾಡಿಗನ ಎದೆಹರಕೆಯಾಗಿ ನಾಡಗೀತೆಯ ಮಾನ್ಯತೆ ಪಡೆದು ಏಕೀಕರಣದ ಹಂಬಲದ ಪ್ರತಿಸಭೆಯಲ್ಲೂ ತನ್ನ ಐಸಿರಿಯನ್ನು ಬೆಳಗಿಸಿದುದಷ್ಟೇ ಅಲ್ಲ ಏಕೀಕರಣದ ದಿನದ ಪ್ರಥಮ ಸಭೆಯಲ್ಲೂ ಕಾಳಿಂಗರಾಯರ ಕಂಚುದನಿಯಲ್ಲಿ 'ಉದಯವಾಯಿತು ನಮ್ಮ ಚೆಲುವ ಕನ್ನಡ ನಾಡು....' ಎಂದು ರೂಪಾಂತರಗೊಂಡು ಮೊಳಗಿತು.

'ಕನ್ನಡ ಕವಿಚರಿತೆ'ಯ ಮೂಲಕ ಕನ್ನಡದ ಕವಿವೈಭವ ಪರಂಪರೆಯನ್ನು ರೂಪುಗಟ್ಟಿಸಿದ ರಾ. ನರಸಿಂಹಾಚಾರ್ಯರು 'ಪ್ರಕೃತ ಕಾಲಕ್ಕೆ ಅನುಗುಣವಾಗಿ ಕನ್ನಡಿಗರೆಲ್ಲರೂ ಅಸಡ್ಡೆಯನ್ನು ತೊಲಗಿಸಿ ಭಾಷಾ ಸೇವೆಯಲ್ಲಿ ನಿರತರಾಗಬೇಕು' ಎಂದು ತಹತಹಿಸಿದರೆ,

ಬೆಳ್ಳಾವೆ ವೆಂಕಟನಾರಾಯಣಪ್ಪನವರು 'ಕನ್ನಡ ಮಾತೆಯ ಸೇವೆಯನ್ನು ಮನವೊಪ್ಪಿದ ರೀತಿಯಲ್ಲಿ ಮಾಡಿ ತೃಪ್ತಿ ಪಡಬೇಕೆಂಬುದೇ ನನ್ನ ಕೋರಿಕೆ' ಎಂದು ತಮ್ಮ ಅಂತರಾಳದ ಕೋರಿಕೆಯನ್ನು ತೆರೆದಿಡುತ್ತಾರೆ. 'ಕನ್ನಡ ದೇಶದಲ್ಲಿ ಕನ್ನಡಕ್ಕೆ ಪ್ರಾಶಸ್ತ್ಯ ಕೊಡದೇ ಹೋದರೆ ಮೆಕ್ಸಿಕೋ ದೇಶದವರೋ ನ್ಯೂಜಿಲ್ಯಾಂಡ್‌ನವರೋ ಕೊಡುತ್ತಾರೆಯೇ?' ಇದು ಡಾ। ಎ.ಆರ್. ಕೃಷ್ಣಶಾಸ್ತ್ರಿಗಳ ಮನಚುಚ್ಚುವ ಪ್ರಶ್ನೆ. 'ಕನ್ನಡದ ಆಸ್ತಿ' ಮಾಸ್ತಿಯವರು 'ಕನ್ನಡದ ಜನ ಉದ್ಧಾರವಾಗುವುದು ಕನ್ನಡದ ಮೂಲಕವೇ. ಕನ್ನಡದ ಕನ್ನಡತನ ಉಳಿಯುವುದಕ್ಕ ಬೆಳೆಯುವುದಕ್ಕೆ ಕನ್ನಡಿಗರು ಮೊದಲು ಸಾಧಿಸಬೇಕಾಗಿರುವುದು ಕನ್ನಡ ಜನತೆಯ ಏಕೀಕರಣ' ಎಂದು ಹೃದಯತುಂಬಿ ಹಂಬಲಿಸುತ್ತಾರೆ.

೧೯೨೪ರಲ್ಲಿ ಬೆಳಗಾಂನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ಸಮಯಕ್ಕೆ 'ಕರ್ನಾಟಕ ಕೈಪಿಡಿ' ಮತ್ತು 'ಕನ್ನಡಿಗನ ಸರ್ವಸ್ವ' ಈ ಎರಡು ಪುಸ್ತಕಗಳು ಪ್ರಕಟವಾದವು. ಕರ್ನಾಟಕ ಕೈಪಿಡಿಯಲ್ಲಿ ತಾತಾಚಾರ್ಯ ಶರ್ಮ, ಹರಪನಹಳ್ಳಿ ರಾಮರಾವ್, ರಾಘವೇಂದ್ರರಾವ್ ಕಡಪ, ಸಂಪದ್ಗಿರಿರಾವ್ ಕೋಲಾರ, ಕನ್ನಡವಕ್ಕಿ ಇವರುಗಳು ಲೇಖನಗಳನ್ನು ಬರೆದು ಕರ್ನಾಟಕದ ಭಾಗಗಳಲ್ಲಿ ಕನ್ನಡದ ಪರಿಸ್ಥಿತಿಯ ಸ್ಪಷ್ಟ ಚಿತ್ರಣವನ್ನು ಅಂಕಿ ಅಂಶಗಳ ಮಾಹಿತಿ ಮೂಲಕ ತಿಳಿಸುವ ಪ್ರಯತ್ನ ಮಾಡಿದರು. ಆರ್.ಬಿ.ಕುಲಕರ್ಣಿ ಅವರು ರಚಿಸಿದ 'ಕನ್ನಡಿಗನ ಸರ್ವಸ್ವ'ವು 'ಕನ್ನಡಿಗರೇ! ಕರ್ನಾಟಕದ ಅಭ್ಯುದಯವು ನಿಮ್ಮ ಧ್ಯೇಯವಾಗಿದ್ದರೆ ಅದಕ್ಕೆ ಸ್ವತಂತ್ರ ಕರ್ನಾಟಕ ಪ್ರಾಂತ ಒಂದೇ ಉಪಾಯವು! ಒಂದೇ ಉಪಾಯವು!' ಎಂದು ಪ್ರೋತ್ಸಾಹಿಸುತ್ತದೆ. ಇದರಲ್ಲಿ ಕರ್ನಾಟಕದ ಮೇಲಾಗುತ್ತಿರುವ ದುಷ್ಪರಿಣಾಮಗಳು, ಕರ್ನಾಟಕಕ್ಕೆ ಸೇರಬೇಕಾದ ಭಾಗಗಳು, ಸಂಯುಕ್ತ ಕರ್ನಾಟಕದ ಅಗತ್ಯತೆ ಇತ್ಯಾದಿ ಮಹತ್ವದ ಅಂಶಗಳು ಅತ್ಯಂತ ಮನನೀಯವಾಗಿ ರೂಪು ಪಡೆದಿವೆ. ಶಾಂತ ಕವಿಗಳಂತೂ ತಮ್ಮನ್ನು 'ಕನ್ನಡದ ದಾಸಯ್ಯ' ಎಂದು ಕರೆದುಕೊಂಡು 'ಬೇಡಲು ಕನ್ನಡ ದಾಸಯ್ಯ ಬಂದಿಹ ನೀಡಿರಮ್ಮಾ ತಡ ಮಾಡದಲೆ' ಎಂದು ಅನ್ಯಭಾಷೆಗಳ ರೀತಿಯಲ್ಲಿ ಕನ್ನಡವನ್ನು ಬೆಳೆಸಬೇಕೆಂಬ ತನ್ನ ಆಕಾಂಕ್ಷೆಯನ್ನು ತಿಳಿಸುತ್ತಾ ಅದಕ್ಕಾಗಿ ಕನ್ನಡ ಮಾತಿನ ಜೋಗುಳವನ್ನು ಕೇಳಿ ಕನ್ನಡದ ತೋಳಿನಲ್ಲಾಡಿ, ಕನ್ನಡ ದೇಶದಲ್ಲಿ ದೊಡ್ಡವರಾಗಿ ಕನ್ನಡ ವಿದ್ಯೆಯ ಗಳಿಸಿದವರೆಲ್ಲರೂ ಸಹಾಯ ಮಾಡಬೇಕೆಂದು ಕೋರುತ್ತಾರೆ.

'ಕನ್ನಡದ ಗುರಿ ಮೇಲೇರಬೇಕು. ಕನ್ನಡನಾಡು ಉಜ್ವಲವಾಗಬೇಕು. ಕನ್ನಡದ ಉದ್ಧಾರಕ್ಕೆ ಕರ್ನಾಟಕ ಏಕೀಕರಣವಾಗಬೇಕು' ಎಂದು ಸಾರಿದ ಮುಳಿಯ ತಿಮ್ಮಪ್ಪಯ್ಯ ಕನ್ನಡದ ಕೈಂಕರ್ಯವನ್ನು ಶ್ರದ್ಧೆಯಿಂದ ನಡೆಸಿದುದಷ್ಟೇ ಅಲ್ಲ ಕನ್ನಡದ ಕಟ್ಟಾಳುಗಳನ್ನು ಸಿದ್ಧಪಡಿಸುವುದರಲ್ಲೂ ಮಹತ್ವದ ಪಾತ್ರ ವಹಿಸಿದರು.

೧೯೧೮ರಲ್ಲಿ 'ಕರ್ನಾಟಕ ಸಂಘ' ಪ್ರಾರಂಭಿಸುವುದರ ಮೂಲಕ ಕರ್ನಾಟಕದ ಎಲ್ಲ ಕನ್ನಡ ಸಂಘಗಳಿಗೆ ನಾಂದಿ ಹಾಡಿದ ಎ. ಆರ್. ಕೃಷ್ಣಶಾಸ್ತ್ರಿಗಳು 'ಕನ್ನಡ ದೇಶದಲ್ಲಿ ಪ್ರಾಶಸ್ತ್ಯ ಕೊಡದೆ ಹೋದರೆ ಮೆಕ್ಸಿಕೋ ದೇಶದವರೋ ನ್ಯೂಜಿಲ್ಯಾಂಡಿನವರೋ ಕೊಡುತ್ತಾರೆಯೇ?' ಎಂಬ ಪ್ರಶ್ನೆಯ ಮೂಲಕ ಜನರಲ್ಲಿ ಕನ್ನಡಾಭಿಮಾನ ಮೂಡಿಸಿ ಸಂಘಟನೆಗೊಳಿಸಲು ಅಗತ್ಯ ಕ್ರಮಗಳನ್ನು, ಕಾರ್ಯಯೋಜನೆಗಳನ್ನು ಸೇವೆ ಎಂದು, ಕರ್ತವ್ಯ ಎಂದು ಮಾಡಿದರು.

ಬೆಳಗಾಂ, ಸೊಲ್ಲಾಪುರ, ಗುಲ್ಬರ್ಗಾ ಮುಂತಾದ ಅಚ್ಚಗನ್ನಡ ಪ್ರದೇಶಗಳಲ್ಲಿ ಪರಭಾಷೀಯರು ನಡೆಸುತ್ತಿದ್ದ ದಬ್ಬಾಳಿಕೆಯ ವಿರುದ್ಧ ಕನ್ನಡಿಗರನ್ನು ಜಾಗೃತಗೊಳಿಸುವ ಉದ್ದೇಶದಿಂದ 'ಕರ್ನಾಟಕ ಲಿಂಗಾಯಿತ ಎಜುಕೇಷನ್ ಸೊಸೈಟಿ' ಸ್ಥಾಪಿಸಿದ ಶಿ. ಶಿ. ಬಸವನಾಳರು ಗಡಿ ಪ್ರದೇಶದಲ್ಲಿ ಕನ್ನಡ ನುಡಿ ಸಂಸ್ಕೃತಿಗಳನ್ನು ಜೀವಂತವಾಗಿಡುವ ಸಲುವಾಗಿ ಆ ಪ್ರಾಂತ್ಯಗಳಲ್ಲಿ ಶಾಲಾ ಕಾಲೇಜುಗಳನ್ನು ಸ್ಥಾಪಿಸಿದರು. ಉತ್ತರ ಕರ್ನಾಟಕದ ಕನ್ನಡಿಗರ ಆಶೋತ್ತರಗಳಿಗೆ ಸ್ಪಂದಿಸುವ ಪ್ರತ್ಯೇಕ ವಿಶ್ವವಿದ್ಯಾನಿಲಯದ ಸ್ಥಾಪನೆಗಾಗಿ ೧೯೨೭ರಲ್ಲಿಯೇ ದನಿ ಎತ್ತಿದರು. ಆ ಬಗೆಗಿನ ಅವರ ನುಡಿಗಳಿವು - 'ನೆರೆಹೊರೆಯ ನಾಡುಗಳಾದ ಆಂಧ್ರ, ಮಹಾರಾಷ್ಟ್ರದವರ ಆಕ್ರಮಣಶೀಲ ಸ್ವಭಾವವು ಗಡಿನಾಡ ಪ್ರಶ್ನೆಗಳನ್ನು ಹೆಚ್ಚು ಜಟಿಲವಾಗಿಯೂ ಹೆಚ್ಚು ಅಗತ್ಯವನ್ನಾಗಿಯೂ ಮಾಡಿದೆ. ಈ ಪರಿಸ್ಥಿತಿಯಲ್ಲಿ ನಾವು ಕರ್ನಾಟಕ ವಿಶ್ವವಿದ್ಯಾಲಯದ ಬಗೆಗೆ ಸತತವಾದ ಪ್ರಬಲವಾದ ಪ್ರಯತ್ನಗಳನ್ನು ಮಾಡುವಲ್ಲಿ ಕೊಂಚ ಹಿಂಜರಿದರೂ ಸಾಕು, ಕರ್ನಾಟಕ ವಿಶ್ವವಿದ್ಯಾಲಯದ ಬಗೆಗೆ ಸಿದ್ಧವಾಗಿರುವ ಯೋಜನೆಯನ್ನು ಕಡೆಗಣಿಸಿ ಆಡಳಿತದ ಅನುಕೂಲಕ್ಕೆಂದು ಬರಿಯ ಗಡಿನಾಡುಗಳನ್ನೇಕೆ, ಬ್ರಿಟಿಷ್ ಕರ್ನಾಟಕದ ಜಿಲ್ಲೆಗಳನ್ನು ಆಂಧ್ರ, ಹಾಗೂ ಮಹಾರಾಷ್ಟ್ರ ವಿಶ್ವವಿದ್ಯಾನಿಲಯಗಳಿಗೆ ಜೋಡಿಸಿಬಿಡುವ ಕಲ್ಪನೆ ಆಡಳಿತಗಾರರ ಮನಸ್ಸಿನಲ್ಲಿ ಬರುವ ಸಂಭವವೂ ಇದೆ. ಆದುದರಿಂದ ನಾವೆಲ್ಲ ಕನ್ನಡಿಗರು ಅತ್ಯಂತ ಜಾಗರೂಕತೆಯಿಂದ ಸರ್ವವಿಧದ ಪ್ರಯತ್ನಗಳ ಮೂಲಕ ನಮ್ಮ ಗುರಿಯನ್ನು ಸಾಧಿಸಿಕೊಳ್ಳಬೇಕು. ಈ ಎಚ್ಚರಿಕೆಯ ಮಾತುಗಳಲ್ಲಿ ಕನ್ನಡಿಗರು ಸಿಲುಕಿಕೊಂಡಿದ್ದ ದುರ್ಭರ ಪರಿಸ್ಥಿತಿಯ ಎಳೆ ಎಳೆಯ ನಿರೂಪ ಇರುವುದನ್ನು ಕಡೆಗಣಿಸುವಂತಿಲ್ಲ.

'ಕನ್ನಡಕ್ಕೆ ಕನ್ನಡದ ಮೂಲಕವೇ ಮೋಕ್ಷ' ಎಂದು ಸಾರಿದ ತಿ. ತಾ. ಶರ್ಮರು ಕಾರವಾರ, ಅಂಕೋಲ, ಭಟ್ಕಳ ಮುಂತಾದ ಎಲ್ಲ ಪ್ರದೇಶಗಳಲ್ಲೂ ಪ್ರವಾಸ ಕೈಗೊಂಡು, ಏಕೀಕರಣಕ್ಕೆ ಸಂಬಂಧಿಸಿದ ಹಲವು ಲೇಖನಗಳನ್ನು ಪ್ರಸಿದ್ಧ ಪತ್ರಿಕೆಗಳಿಗೆ ಬರೆದು ಜನ ಜಾಗೃತಿ ಮೂಡಿಸಿದ್ದಾರೆ.

ಕನ್ನಡದ, ಕನ್ನಡತನದ ಹಿರಿಯ ಅಭಿಮಾನಿ ಎಂ. ಗೋವಿಂದ ಪೈ ಅವರು ಕನ್ನಡದ ಪ್ರಾಚೀನತೆಯನ್ನು ನಿರ್ಧರಿಸಿ ಆ ಮೂಲಕ ಕನ್ನಡಕ್ಕೆ ಅತ್ಯುನ್ನತ ಸ್ಥಾನ ಗಳಿಸಿಕೊಡಲು ಅವಿರತವಾಗಿ ಶ್ರಮಿಸಿದವರು. ಅದಕ್ಕಾಗಿ ಅವರು ಮಾಡಿದ ಸಂಶೋಧನೆಗಳು ಉಲ್ಲೇಖಾರ್ಹ. ಅನ್ಯಭಾಷಾ ಸಹಿಷ್ಣುಗಳಾದರೂ ಇಂಗ್ಲಿಷ್, ಹಿಂದಿ, ಸಂಸ್ಕೃತ ಇತ್ಯಾದಿ ಪರ ನುಡಿಗಳಿಗೆ ಸೋತು ತಮ್ಮತನವನ್ನು ನೀಗಿಸಿಕೊಳ್ಳುವವರನ್ನು ಕಂಡರೆ ಇವರ ಹೂಮನ ಕಠೋರವಾಗುತ್ತದೆ.

'ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ
ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ....'

ಎಂಬ ಮಾತುಗಳಲ್ಲಿ ಕನ್ನಡ ನಾಡೊಳಗೇ ಹುದುಗಿರುವ ಸಂಸ್ಕೃತಿಯ ಕಂಪು ಪೆಂಪುಗಳನ್ನು ಅರ್ಥೈಸಿಕೊಳ್ಳಲಾಗದೆ ಅನ್ಯ ಸಂಸ್ಕೃತಿಗೆ ಮುಗಿಬಿದ್ದು ಆ ಮೂಲಕ ಕನ್ನಡ ಸಂಸ್ಕೃತಿಯ ಹತ್ಯೆಗೆ ಕಾರಣರಾಗುವವರನ್ನು ಖಂಡಿಸುವುದರ ಜತೆಗೆ ಕನ್ನಡ ತಾಯಿಯನ್ನು 'ತಾಯೆ ಬಾರ ಮೊಗವ ತೋರ ಕನ್ನಡಿಗರ ಮಾತೆಯೇ, ಹರಸು ತಾಯೆ ಸುತರ ಕಾಯೆ ನಮ್ಮ ಜನ್ಮದಾತೆಯೇ' ಎಂದು ಸ್ವಾಗತಿಸಿ,

'ಕನ್ನಡ ಕಸ್ತೂರಿಯ
ಹೊಸತುಸಿರಿನಿಂ ತೀಡದನ್ನ
ಸುರಭಿ ಎಲ್ಲಿ? ನೀನದನ್ನ
ನವಶಕ್ತಿಯಿನೆಬ್ಬಿಸು'

ಎಂದು ಕನ್ನಡ ಕಸ್ತೂರಿಯ ನರುಗಂಪು ದೇಶದಾದ್ಯಂತ ಪಸರಿಸಲು ಅನುವಾಗುವ ನವಶಕ್ತಿಯನ್ನು ನಾಡಿಗರಿಗೆ ನೀಡಬೇಕೆಂದು ಹಂಬಲಿಸುತ್ತಾರೆ. ಒಟ್ಟಾರೆಯಾಗಿ ತನ್ನ ಅಂತಃಸ್ಸತ್ವದ ಬಲದಿಂದ ಒಂದಾದ ಕನ್ನಡನಾಡು ಇಡೀ ರಾಷ್ಟ್ರದ ಗಮನ ಸೆಳೆಯುವಂತಾಗಬೇಕೆಂಬುದು ಈ ಕಡಲತೀರದ ಕವಿಯ ಮಹತ್ವಾಕಾಂಕ್ಷೆ. ಅದಕ್ಕಾಗಿ ಜನತೆ ಇರಬೇಕಾದ ರೀತಿ, 'ತನು ಕನ್ನಡ ಮನ ಕನ್ನಡ ನುಡಿ ಕನ್ನಡವೆಮ್ಮವು.'

'ಕನ್ನಡ ನುಡಿ ಗಾರುಡಿಗ' ಬೇಂದ್ರೆಯವರ 'ಕನಸಿನೊಳಗೊಂದು ಕನಸು' ಇದೇ ಆಶಯದಿಂದಲೇ ಮೂಡಿಬಂದಿದೆ. ಕನ್ನಡದ ಬಗೆಗೆ ಅರಿವಿರುವ, ಕನ್ನಡದ ದುಃಸ್ಥಿತಿಯನ್ನು ತಿಳಿದಿರುವ ಯಾವೊಬ್ಬ ಕನ್ನಡಿಗನೂ ಹೇಡಿಯಾಗುಳಿಯದೇ ಆತ್ಮಬಲಿಯನ್ನೂ ಲೆಕ್ಕಿಸದೇ ಮುನ್ನುಗ್ಗಿ ಬರಬೇಕೆಂಬ ಇಲ್ಲಿನ ಕಾಳಜಿ ಅನನ್ಯ. ಅಂತೆಯೇ ಅವರ ಘೋಷಣೆ.

'ಒಂದೇ ಒಂದೇ ಕರ್ನಾಟಕ ಒಂದೇ
ಇಲ್ಲಿಯ ಜನಮನ ಭಾಷೆಯು ಕನ್ನಡವದು ಒಂದೇ
ಕುಲವೊಂದೇ ಸ್ಥಲವೊಂದೇ ನೀತಿಯ ನೆಲೆಯೊಂದೇ
ಹೀಗೆನ್ನದ ಹೆರವರು ಅವರಿದ್ದರೂ ಒಂದೇ ಇರದಿದ್ದರೂ ಒಂದೇ
ಕನ್ನಡವೆಂದಿಗೂ ಒಪ್ಪದು ಕರ್ನಾಟಕ ನಿಂದೇ.....'

ಏಕೀಕರಣದ ವಿಷಯದಲ್ಲಿ ಹೀಗೆ ಕಡ್ಡಿ ಎರಡು ತುಂಡು ಮಾಡುವಂಥ ನಿಷ್ಠುರ ಮನೋಭಾವದ ಬೇಂದ್ರೆಯವರು 'ಕನ್ನಡ, ಕರ್ನಾಟಕ, ಕನ್ನಡಿಗ- ಇವು ಭಾವೈಕ್ಯದ ಪರಿಣತ ಫಲಗಳಾಗಬೇಕು; ಭೇದ ಮುಚ್ಚುವ ಮುಸುಕಾಗಬಾರದು' ಎಂದು ನೀಡುವ ಸಕಾಲಿಕ ಎಚ್ಚರಿಕೆ ಕೂಡ ಗಮನಾರ್ಹ.

'ಕುವೆಂಪು' ಹೆಸರೇ ಸಾಕು ಮೈಮನಗಳನ್ನು ಕುಣಿಸುವುದಕ್ಕೆ. ಬಿ.ಎಂ.ಶ್ರೀ. ಯವರು ಷಣ್ಮುಖನಂತೆ ಇಡೀ ಕನ್ನಡನಾಡನ್ನು ಸುತ್ತಿ ಕನ್ನಡ ಕೆಲಸಕ್ಕೆ ಜನಜಾಗೃತಿಯನ್ನುಂಟುಮಾಡಿದರೆ ಕುವೆಂಪು ಗಣಪತಿಯಂತೇ ಇದ್ದಲ್ಲೇ ಆ ಕೆಲಸ ಮಾಡುತ್ತ ಜನರ ನರನಾಡಿಗಳಲ್ಲಿ ಹೊಸ ವಿಚಾರಗಳ ಕೆಚ್ಚು ರೊಚ್ಚು ಆಕ್ರೋಶಗಳನ್ನು ತುಂಬಿದವರು. ಇತರ ಎಲ್ಲಾ ವಿಷಯಗಳಂತೆ ಅಥವಾ ಅದೆಲ್ಲಕ್ಕಿಂತ ಮಿಗಿಲಾಗಿ ಕನ್ನಡ ನಾಡು ನುಡಿಗಳ ಒಗ್ಗಟ್ಟಿನ ಬಗೆಗೆ ತುಂಬು ಅಪೇಕ್ಷೆ ಆಕಾಂಕ್ಷೆ ಅವರದು. ಅದಕ್ಕಾಗಿ ಅವರ ಘೋಷಣೆ ಇದು. 'ನಾನು ಅವಧೂತನಾಗಿ ಹೋಗುವುದಿಲ್ಲ, ಕನ್ನಡವು ತನ್ನ ಸ್ಥಾನವನ್ನು ಅಧಿಕೃತವಾಗಿ ಪಡೆಯುವತನಕ, ನನ್ನ ಪ್ರಾಣವಿರುವತನಕ ಕನ್ನಡಕ್ಕಾಗಿ ದುಡಿಯುವುದು, ದುಡಿಯಲು ವ್ಯಕ್ತಿಗಳನ್ನು ಪ್ರಚೋದಿಸುವುದು, ಅದಕ್ಕಾಗಿ ಭಗವಂತನಲ್ಲಿ ಮೊರೆಯಿಡುವುದು ಮಾಡುತ್ತೇನೆ. ನನ್ನ

ತಪಃಶಕ್ತಿಯನ್ನು, ಪ್ರಾರ್ಥನಾಶಕ್ತಿಯನ್ನು ಕನ್ನಡದ ಸೇವೆಗಾಗಿ ಮೀಸಲಿಡುತ್ತೇನೆ.'' ಅಷ್ಟೇ ಅಲ್ಲ ಇಂಥ ಮಹಾನ್ ಕಾರ್ಯಕ್ಕೆ ನಾಡಿನ ಒಂದೊಂದು ರಕ್ತಕಣವೂ ರಕ್ಷಾಕಣವಾಗಬೇಕೆಂಬ ಹಂಬಲದಿಂದ 'ಹೇ ರಾಜಕಾರಣಿ, ಹೇ ಮಂತ್ರೀವರೇಣ್ಯ, ಹೇ ಅಧಿಕಾರಿ ಸರ್ವೋತ್ತಮ, ಹೇ ವಣಿಕ, ಹೇ ಶ್ರಮಜೀವಿ, ಹೇ ಅಧ್ಯಾಪಕ ಮಹಾಶಯ, ಓ ನೇಗಿಲ ಯೋಗಿ.... ನೀನು ಯಾರೇ ಆಗಿರು, ಎಲ್ಲಿಯೇ ಇರು ಕನ್ನಡವನ್ನು ಕೈ ಬಿಡದಿರು... ನಿನ್ನ ತಾಯಿ ರಾಣಿಯಾಗಿದ್ದವಳೆಂಬುದನ್ನು ಮರೆಯುವೆಯೇನು? ಸ್ವತಂತ್ರವಾದ ಮೇಲೂ ಆಕೆಯನ್ನು ತೊತ್ತಾಗಿಸುವೆಯೇನು?' ಎಂದು ನೀಡುವ ಪ್ರಾಂಜಲ ಮನದ ಕರೆಗೆ ಎಂಥ ಕಲ್ಲು ಹೃದಯವೂ ಕರಗಬೇಕು. ಮಹಾರಾಜ ಕಾಲೇಜಿನ ಒಂದು ಕಾರ್ಯಕ್ರಮದಲ್ಲಿ (೧೯೪೭) ಏಕೀಕರಣದಿಂದಲ್ಲದೆ ಕರ್ನಾಟಕದ, ಏಕೆ ಇಡೀ ಭಾರತದ ಕಲ್ಯಾಣ ಸಾಧನೆ, ಕ್ಷೇಮ ಸಂರಕ್ಷಣೆ ಖಂಡಿತ ಸಾಧ್ಯವಿಲ್ಲ ಎಂದು ಘೋಷಿಸಿದಾಗ ಅವರಿಗೆ ಬಂದಿದ್ದು ರಾಜಕೀಯ ವಿಷಯ ಮಾತನಾಡಬಾರದೆಂಬ ನೋಟಿಸ್. ಅದಕ್ಕೆ ಕವಿಯ ದಿಟ್ಟ ಉತ್ತರ 'ಅಖಂಡ ಕರ್ನಾಟಕ'.

'ಅಖಂಡ ಕರ್ನಾಟಕ' ಎಂಬುದು ನಾಲ್ಕು ದಿನಗಳ ಕೂಗಾಟದ ರಾಜಕೀಯ ನಾಟಕ ಅಲ್ಲ. ಇದಕ್ಕಾಗಿ ದೇವಗಾಂಧಿಯೇ ಹರಸಿದ್ದಾನೆ, ಋಷಿಯ ನಾಂದಿ ಮಂತ್ರಿಸಿದೆ. ಅದು ತನಗೆ ತಾನೇ ಋತಸ್ಯಂದಿಯಾಗಿ ಮೂಡಿಬರುತ್ತದೆ. ನಾಡನ್ನು ಆಳಲು ಯಾವುದೇ ಸಚಿವಮಂಡಲ ಬಂದರೂ ಅದು ಶಾಶ್ವತವಲ್ಲ. ಒಂದಲ್ಲಾ ಒಂದು ಸಮಯಕ್ಕೆ ಸಂದುಹೋಗಲೇಬೇಕು. ಆದರೆ ಕನ್ನಡಮ್ಮನಿಗಾಗಿ ಅವಳಿಗೆ ರುಚಿಸುವಂತೆ ಖುದ್ದು ಸರಸ್ವತಿಯೇ ಒಂದು ನಿತ್ಯ ಸಚಿವಮಂಡಲವನ್ನು ರಚಿಸಿಕೊಟ್ಟಿದ್ದಾಳೆ.

'ನೃಪತುಂಗನೇ ಚಕ್ರವರ್ತಿ
ಪಂಪನಲ್ಲಿ ಮುಖ್ಯಮಂತ್ರಿ
ರನ್ನ ಜನ್ನ ನಾಗವರ್ಮ
ರಾಘವಾಂಕ ಹರಿಹರ ಬಸವೇಶ್ವರ
ನಾರಣಪ್ಪ ಸರ್ವಜ್ಞ ಷಡಕ್ಷರ

ಇಂಥ ಮಂತ್ರಿಮಂಡಲದ ಚಕ್ರವರ್ತಿಯೇ ಆದೇಶ ನೀಡಿದ್ದಾನೆ. ಕಾವೇರಿಯಿಂದ ಗೋದಾವರಿವರೆಗಿನ ನಾಡು ಕನ್ನಡನಾಡು ಎಂದು. ಇದನ್ನು ಆಗುಮಾಡಬೇಕಾದರೆ ನಿಜವಾದ ಕನ್ನಡಿಗ ಕನ್ನಡ ನಾಡನ್ನು ಒಂದು ಮಾಡುವೆನೆಂದು ಇಂದೇ ದೀಕ್ಷೆಯ ತೊಡಬೇಕು, ಕಂಕಣ ಕಟ್ಟಬೇಕು ಅದಕ್ಕಾಗಿ

'ಇಡು ನಿನ್ನಯ ಸತಿಯಾಣೆ
ಇಡು ನಿನ್ನಯ ಪತಿಯಾಣೆ
ಕನ್ನಡ ಜನರೆಲ್ಲರ ಮೇಲಾಣೆ....'

'ಕನ್ನಡ ನಾಡೊಂದಾಗದೆ ಮಾಣೆ' ಎಂಬ ಪ್ರತಿಜ್ಞೆಯನ್ನೂ ಮಾಡಿ' 'ತೊಡು ದೀಕ್ಷೆಯ ಇಡು ರಕ್ಷೆಯ, ಕಂಕಣ ಕಟ್ಟಿಂದೇ ಇನ್ನೆಂದೂ ತಾನೊಂದೇ ಕನ್ನಡ ನಾಡೊಂದೇ'.... ಎಂದು ಒತ್ತಿ ಒತ್ತಿ ಹೇಳುತ್ತಾರೆ. ಅಷ್ಟೇ ಅಲ್ಲ 'ನಿಮ್ಮ ನುಡಿ ನಿಮ್ಮ ಗಂಡಸುತನಕೆ ಹಿರಿಸಾಕ್ಷಿ..... ನುಡಿ ಮಡಿದರೆಲ್ಲರೂ ಮೂಕ ಜಂತುಗಳಂತೆ' ಎಂದು ನುಡಿಯನ್ನು ಕಾಪಾಡಿಕೊಳ್ಳುವ ಬಗೆಗಿನ ಮಹತ್ವವನ್ನು ಸಾರಿದರು. ಕನ್ನಡಕ್ಕೆ ಬಂದಿರುವ ಹೀನಸ್ಥಿತಿಗೆ ಮುಖ್ಯ ಕಾರಣ ಪರಕೀಯರ ದುರಾಕ್ರಮಣ. ಅದನ್ನು ಕವಿ ನುಡಿರೂಪದಿಂದ ಹಿಡಿದಿಟ್ಟಿರುವುದು ಹೀಗೆ-

'ಪರಕೀಯರೆಲ್ಲರಾಶೀರ್ವಾದದ ಕರವೆತ್ತಿ
ಹರಸುತ್ತ ಬರುವರೈ ಮೊದಲು ಮೊದಲು
ಕಡೆಗದುವೆ ಕುತ್ತಿಗೆಗೆ ಕರಳವಾಳವಾಗುವುದು
ನಮ್ಮ ನಾಲಿಗೆ ನಮಗೆ ಕೀಳು ತೊದಲು

ಪರಕೀಯರಾಕ್ರಮಣದಿಂದ ನಾಲಿಗೆ ತೊದಲಿದಾಗ ನುಡಿಗೊದಗುವ ಗತಿ

ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದರಿರ
ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ
ನಿರಿನಿಟಿಲು ನಿಟಿಲೆಂದು ಮುದಿಮೂಳೆ ಮುರಿಯುತಿದೆ
ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ...

ಕನ್ನಡ ಡಿಂಡಿಮವನ್ನು ಬಾರಿಸಲು ಸಾಕ್ಷಾತ್ ಕರ್ನಾಟಕ ಹೃದಯಶಿವನಿಗೇ ಕರೆ ನೀಡುವ ಕವಿ ಈ ಕೈಂಕರ್ಯವನ್ನು ಕೈಗೊಳ್ಳಲೋಸುಗ

'ಸತ್ತಂತಿಹರನು ಬಡಿದೆಚ್ಚರಿಸು, ಕಚ್ಚಾಡುವರನು ಕೂಡಿಸಿ ಒಲಿಸು
ಹೊಟ್ಟೆಯ ಕಿಚ್ಚಿಗೆ ಕಣ್ಣೀರ್ ಸುರಿಸು'

ಎಂದು ಒಟ್ಟಿಗೆ ಬಾಳಲು ಅಡ್ಡಿಯಾಗುವ ಅಂಶಗಳನ್ನು ಅತ್ಯಂತ ನಿಖರವಾಗಿ ಗುರುತಿಸುತ್ತಾ ಅವು ಅಳಿದಾಗಲೇ ಒಗ್ಗೂಡಲು ಸಾಧ್ಯ ಎಂದು ತ್ರಿಕರಣಪೂರ್ವಕ ಘೋಷಿಸುತ್ತಾರೆ. ಕನ್ನಡದ ಏಳ್ಗೆಗಾಗಿ ಜನತೆಯನ್ನು ಹುರಿದುಂಬಿಸುವಾಗ ಕುವೆಂಪು ಲೇಖನಿ ಖಡ್ಗವಾಗುತ್ತದೆ ಎಂಬುದು ಸ್ವಯಂ ವೇದ್ಯ.

'ಗೋಕಾಕ'ರ ಹೆಸರು ನಾಡುನುಡಿಗಾಗಿ ಅವರು ದುಡಿದ ರೀತಿಗಾಗಿ ಚಿರಸ್ಮರಣೀಯ. ಅವರು ಆಗಿನ ಕನ್ನಡದ ಸ್ಥಿತಿಯನ್ನು ವರ್ಣಿಸಿರುವುದನ್ನು ನೋಡಿದರೆ ಈಗಲೂ ಆಕ್ರೋಶ ತುಂಬಿ ಬರುತ್ತದೆ.

ಸುಲಿದ ಹಣ್ಣಂತೆ ಮೃದು ಮಧುರವಾಗಿಹ ನುಡಿಯು
ಸುಲಿದ ಹಣ್ಣಹುದು ನೋಡು
ಸಲಿಗೆಯನು ಬೆಳೆಸುತ್ತಾ ಸುಲಿಗೆಯನು ಮಾಡಿದರು
ಕನ್ನಡಕ್ಕೆ ಬಂತು ಕೇಡು'

ಕನ್ನಡದ ಸ್ಥಿತಿಯನ್ನು ಸುಲಿದ ಹಣ್ಣಿನ ಸ್ಥಿತಿಗೆ ಹೋಲಿಸಿ ಕನ್ನಡಿಗರಲ್ಲಿ ಕೆಚ್ಚು ತುಂಬುವ ಕವಿ ಒಗ್ಗೂಡುವ ಕನ್ನಡಿಗರನ್ನು ಕುರಿತು ತಳೆದಿರುವ ಭರವಸೆಯೂ ಹಿರಿದಾದುದೇ. ಆದ್ದರಿಂದಲೇ ಕಳಕಳಿ ತುಂಬಿ ಹೇಳುತ್ತಾರೆ-

''ನಿನ್ನ ಬೇಸರ ಬೇನೆ ಬಲು ಹಿರಿದು ನಲ್ದಾಯಿ
ಪಡೆವ ಫಲವದಕು ಹಿರಿದು
ಬಾಳೋಣ ಏಳಿನ್ನು ಅರಸಾಗಿ ಆಳೋಣಾ
ಮನೆಮುರುಕರನ್ನು ಮುರಿದು''

ಗೋಪಾಲಕೃಷ್ಣ ಅಡಿಗರು ಕನ್ನಡವನ್ನು ಕಣ್ಣಿಗೆ ಕಾಣದ ದೇವಿಯಾಗಿ ಪರಿಗಣಿಸಲು ಸಿದ್ಧರಿಲ್ಲ. ಹಾಗೆಂದೇ ಅವರ ಧೀರವಾಣಿ ಮೊಳಗುವುದು-

'ಕನ್ನಡವೆಂದರೆ ತಾಯಿಯೇ ದೇವಿಯೇ
ನಾನೂ ನೀನೂ ಅವರು.
ಜನಮನದೊಳಗುದಿ ತುಡಿತ ಕಡಿತಗಳ
ಪ್ರತಿಕೃತಿ ಗಡಿ ನೂರಾರು.

ನಾನು ನೀನು ಅವರೆಲ್ಲರೂ ಕನ್ನಡವೇ ಎಂದಾದಾಗ ಕನ್ನಡಿಗರು ನಡೆಸುವ ಹೋರಾಟ ಭಿನ್ನವಾದ ಆಯಾಮವನ್ನು ಪಡೆಯುವುದು ಶತಃಸಿದ್ಧ. ಆ ಆಯಾಮವನ್ನು ಕಂಡದ್ದರಿಂದಲೇ ಅವರು,

ಇಂದು ಕೂಡ ಆಗದೆ ಕನ್ನಡವೊಂದಾಗದೆ
ಭೇದದ ಹುಳಿ ನೀಗದೆ ಕಾಯಿಮನ ಮಾಗದೇ
ಒಮ್ಮತದೊಗ್ಗಟ್ಟಿನ ಫಲ ನಮ್ಮ ಬಾಳ್ಗೆ ಬಾಗದೆ?

ಎಂದು ಹಂಬಲಿಸುವುದು.

ಆದರೆ ಕೇವಲ ಹಂಬಲ ಹಾರೈಕೆಗಳಿಂದಲೇ ಕೆಲಸ ಸಾಗದೆಂಬ ಸತ್ಯ ಮನಗಂಡಿರುವ ಇವರು ಹೋರಾಟದ ಹಾದಿ ಹಿಡಿಯಲು ನವತರುಣರನ್ನು ಹುರಿದುಂಬಿಸಿ ಏಳಿಸುವುದು ಹೀಗೆ-

ನಾಯಕ ಕಪಿಗಣದ ಕುಚೇಷ್ಟೆಗಳ ಮೂಕಗುದ್ದು
ಸಹಿಸ್ಟೆನ್ನು ನಮ್ಮೊಳಗಿದೆ ಎನ್ನಿ ಅದಕೆ ಮದ್ದು
ಕನ್ನಡ ನವತರುಣಗಣದ ಕಂಠ ಕೋಟಿ ಕೋಟಿ
ಕನ್ನಡ ನವಧರ್ಮವಾಣಿ ಎದೆ ತಳಕೆ ನಾಟಿ
ಮೊಳಗಲಿ ಹೊಸಗನ್ನಡತನ ವೀರ ಧೀರ ಧಾಟಿ

ಜಯದೇವಿತಾಯಿ ಲಿಗಾಡೆಯವರು ಕೊಲ್ಲಾಪುರದ ಭಾಗದಲ್ಲಿ ಮಾಡಿದ ಹೋರಾಟ ಚಿರಸ್ಮರಣೀಯ. ಅದರಗುಂಚಿ ಶಂಕರಗೌಡ ಪಾಟೀಲರು ೨೩ ದಿನಗಳ ಕಾಲ ಏಕೀಕರಣಕ್ಕೆ ಒತ್ತಾಯಿಸಿ ಉಪವಾಸ ಕುಳಿತಾಗ ಅವರಿಗೆ ಬೆಂಬಲ ಸೂಚಿಸಿ ಸ್ವರಕ್ತದಿಂದ ಸಹಿ ಹಾಕಿದ ತಾಯಿಯವರು ೧೯೫೩ರಲ್ಲಿ ಇಂದಿರಾಗಾಂಧಿಯವರು ಹುಬ್ಬಳ್ಳಿಗೆ ಬಂದಾಗ ಅವರಿಗೆ ಮನವಿ ಸಲ್ಲಿಸಿ ಬಳ್ಳಾರಿ, ಅಕ್ಕಲಕೋಟೆ, ಕೊಲ್ಲಾಪುರ, ಬೀದರ್, ಜತ್ತ, ಮಡಕಶಿರಾ, ಕಾಸರಗೋಡು, ನೀಲಗಿರಿ ಮೊದಲಾದ ಕನ್ನಡ ಪ್ರದೇಶಗಳನ್ನು ಕರ್ನಾಟಕದಲ್ಲಿ ಸೇರಿಸಬೇಕೆಂದು ಒತ್ತಾಯಿಸಿದರು. ಕೊಲ್ಲಾಪುರದ ಭಾಗದಲ್ಲಿ ಮಹಾರಾಷ್ಟ್ರೀಯರ ದಬ್ಬಾಳಿಕೆಯನ್ನು ತಡೆಯಲು ಕನ್ನಡ ಕೋಟೆಯನ್ನು ಕಟ್ಟಿ ಕನ್ನಡಿಗರು ತಮ್ಮ ಸ್ವಾಭಿಮಾನ ಮತ್ತು ಗೌರವಗಳನ್ನು ರಕ್ಷಿಸಿಕೊಳ್ಳಲೂ ಅವರು ಸಹಾಯ ಮಾಡಿದರು.

'ಮೈಸೂರು ಚಲೋ' ಚಳವಳಿಗೆ ತಮ್ಮ ಹದಿಹರೆಯದ ಮಗನನ್ನು ಬಲಿಗೊಟ್ಟ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಏಕೀಕರಣ ಚಳವಳಿಗಾಗಿ ದುಡಿದ ದುಡಿತ ಅವಿಸ್ಮರಣೀಯ. ಅಂತೆಯೇ ಬಿ. ಶಿವಮೂರ್ತಿಶಾಸ್ತ್ರಿಗಳು, ಎಸ್. ಕೆ. ಕರೀಂಖಾನ್ ಅವರು ಇಡೀ ಕರ್ನಾಟಕವನ್ನು ಸುತ್ತಿ ಕನ್ನಡಿಗರಲ್ಲಿ ಜಾಗೃತಿಯನ್ನು ಮೂಡಿಸಿದರು. ಸ. ಸ. ಮಾಳವಾಡ, ಬಸವರಾಜ ಕಟ್ಟೀಮನಿ, ಅನಕೃ, ತರಾಸು, ನಿರಂಜನ ಮುಂತಾದವರು ಭಾಷಣಗಳ ಮೂಲಕ ಜನಮನ ಪರಿವರ್ತನೆ ಮಾಡಿದ್ದು ಇತಿಹಾಸ.

'ಕನ್ನಡ ಉಳಿದರೆ ಸಾಹಿತ್ಯ ಉಳಿದೀತು. ಅದು ಅಳಿದರೆ ಸಾಹಿತ್ಯ ಅಳಿದೀತು. ಕನ್ನಡವೆಂಬ ತ್ರ್ಯಕ್ಷರಿಯೇ ಗಾಯತ್ರಿ. ಕನ್ನಡವೇ ತಾಯಿ ತಂದೆ ಬಂಧು ಬಳಗ' ಎಂದು ತಮ್ಮ ಕಂಚುಕಂಠದಿಂದ ಮೊಳಗಿದ ದೇಜಗೌ ಕರ್ನಾಟಕತ್ವದ ಬಗೆಗೆ, ಕನ್ನಡತ್ವದ ಬಗೆಗೆ ತಮ್ಮ ಅಭಿಪ್ರಾಯಗಳನ್ನು ಜನಮನದಲ್ಲಿ ಅಚ್ಚೊತ್ತುವುದು ಹೀಗೆ - 'ನಾಡು ನುಡಿಗಳ ವಿಸ್ತಾರ ವ್ಯಾಪ್ತಿ ವೈಭವಗಳಿಗೆ, ಸಂಸ್ಕೃತಿಯ ಮಹಿಮೌನ್ನತ್ಯಗಳಿಗೆ ಆ ಪದ ಕನ್ನಡಿಯಾಗಿದೆ. ಅದು ಬರಿಯ ಹೆಸರಲ್ಲ, ಶಕ್ತಿಬೀಜ, ಸ್ಫೂರ್ತಿಯ ನಿಧಿ, ಸಾಹಸದ ಗುರಿ, ಗತವೈಭವದ ಸಾಕ್ಷಿ, ಭವಿಷ್ಯತ್ತಿನ ಸಂಕೇತ, ಉತ್ಸಾಹದ ತವರು. ಚೈತನ್ಯದ ಚಿಲುಮೆ, ಭಾವೈಕ್ಯದ ಕುರುಹು, ಭಾರತದ ಹೆಮ್ಮೆ..... ನಾನಾ ರಾಜ್ಯಗಳ ಸಂಗಮದಿಂದ ಭಾರತ ಸಾಕಾರಗೊಳ್ಳುತ್ತದೆಯಾಗಿ ಭಾರತದ ಏಳ್ಗೆಗಾಗಿಯೇ ಕರ್ನಾಟಕವನ್ನು ಬೆಳೆಸಬೇಕಾಗಿದೆ... ಸಾಹಿತಿಗಳು, ದಾರ್ಶನಿಕರು, ರಾಜಕೀಯ ನಾಯಕರ ಹೃದಯ ಸಂವಾದದಿಂದ ಅಪೂರ್ವ ನಿಧಿ ಹೊರಬರಬೇಕಾಗಿದೆ...' ಈ ನುಡಿಗಳು ಏಕಕಾಲದಲ್ಲಿ ಸಾಹಿತಿಗಳ, ಸಂತರ, ರಾಜಕಾರಣಿಗಳ ಜವಾಬ್ದಾರಿಯ ಕಡೆಗೂ ಗಮನ ಸೆಳೆಯುತ್ತವೆ. 'ಕನ್ನಡಕ್ಕೆ ಅನ್ಯಾಯವಾದರೆ ನಾನು ನಿಜವಾದ ಜವರಾಯನೇ' ಎಂಬ ಅವರ ಮಾತುಗಳು ಇಂದಿಗೂ ಅದೇ ಶಕ್ತಿಯನ್ನು ಉಳಿಸಿಕೊಂಡಿವೆ.

ಸಾಂಘಿಕವಾಗಿ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕನ್ನಡ ಸಾಹಿತ್ಯ ಪರಿಷತ್ತುಗಳು ಮಾಡಿದ ಹೋರಾಟ ಮತ್ತು ಪ್ರಯತ್ನಗಳು ಅವಿಸ್ಮರಣೀಯವಾಗಿದೆ. ಕರ್ನಾಟಕ ವಿದ್ಯಾವರ್ಧಕ ಸಂಘವು ೧೯೧೭ರಂದೇ ಎಲ್ಲಾ ಕನ್ನಡ ಊರು, ತಾಲ್ಲೂಕು, ಜಿಲ್ಲೆಗಳನ್ನು ಒಟ್ಟುಗೂಡಿಸಿ ಒಂದೇ ಕರ್ನಾಟಕ ಇಲಾಖೆ ಅಥವಾ ಪ್ರಾಂತ್ಯವೆಂಬ ರಾಜಕೀಯ ವಿಭಾಗವನ್ನು ಮಾಡಿದರೆ ಕನ್ನಡಿಗರ ಐಕ್ಯಕ್ಕೂ ಹಿತಕ್ಕೂ ಬೆಳವಣಿಗೆಗೂ ಅನುಕೂಲವಾಗುವುದು ಎಂಬ ಗೊತ್ತುವಳಿಯನ್ನು ಅಂಗೀಕರಿಸಿತ್ತು.

ಈ ಸಂಘದ ಒತ್ತಾಸೆಯಿಂದ ಮತ್ತು ಎಲ್ಲ ಭಾಗಗಳ ಸಾಹಿತಿಗಳು ಹಾಗೂ ಗಣ್ಯರ ಪ್ರೋತ್ಸಾಹದಿಂದ ಬೆಂಗಳೂರಿನಲ್ಲಿ ೧೯೧೫ರಲ್ಲಿ ಅಸ್ತಿತ್ವಕ್ಕೆ ಬಂದ ಸಾಹಿತ್ಯ ಪರಿಷತ್ತು ಮೈಸೂರು ಸಂಸ್ಥಾನ, ಮುಂಬಯಿ ಆಧಿಪತ್ಯ, ಮದರಾಸು ಆಧಿಪತ್ಯ, ಹೈದರಾಬಾದ್ ಸಂಸ್ಥಾನ, ಕೊಡಗು ರಾಜ್ಯ ಈ ಎಲ್ಲಾ ಕನ್ನಡ ಪ್ರದೇಶಗಳಿಗೂ ಸೂಕ್ತ ಪ್ರಾತಿನಿಧ್ಯವನ್ನು ಕೊಟ್ಟು ಆ ಮೂಲಕ ಎಲ್ಲ ಪ್ರಾಂತ್ಯಗಳ ಕನ್ನಡತನವನ್ನು ಗೌರವಿಸಿದ್ದು ಗಮನಾರ್ಹ ಅಂಶ. ಇದರ ಮೊದಲ ಅಧ್ಯಕ್ಷರಾದ ರಾಜಮಂತ್ರ ಪ್ರವೀಣ ಎಚ್. ವಿ. ನಂಜುಂಡಯ್ಯ ಅವರ 'ಕನ್ನಡ ಭಾಷೆಯನ್ನೂ, ಸಾಹಿತ್ಯವನ್ನೂ ಪುಷ್ಟಿಗೊಳಿಸಿ ಅಭಿವೃದ್ಧಿಗೆ ತಂದು ಕನ್ನಡಿಗರೆಲ್ಲರಲ್ಲಿ ಪರಸ್ಪರ ಐಕಮತ್ಯವೂ, ಸೌಹಾರ್ದವೂ ದಿನದಿನಕ್ಕೆ ಹೆಚ್ಚುವಂತೆ ಮಾಡುವುದೇ ಕರ್ನಾಟಕ ಸಾಹಿತ್ಯ ಪರಿಷತ್ತಿನ ಮುಖ್ಯೋದ್ದೇಶವಾಗಿದೆ' ಎಂಬ ನುಡಿಗಳೂ ಇದನ್ನು ಸ್ಪಷ್ಟಪಡಿಸುತ್ತವೆ. ಈ ಕಾರಣದಿಂದಲೇ ನಾಡಿನ ಎಲ್ಲ ಭಾಗಗಳಲ್ಲಿ ಜನಜಾಗೃತಿ ಮೂಡಿಸಲು ಆ ಮೂಲಕ ಕನ್ನಡಾಭಿಮಾನವನ್ನು ಪ್ರವರ್ಧಗೊಳಿಸಲು ಸಾಹಿತ್ಯ ಸಮ್ಮೇಳನಗಳನ್ನು ಹಮ್ಮಿಕೊಳ್ಳಲಾಯಿತು. ಸಹಜವಾಗಿಯೇ ಈ ಸಮ್ಮೇಳನಗಳಲ್ಲಿ 'ಏಕೀಕರಣ' ಪ್ರಧಾನ ಚರ್ಚೆಯ ವಿಷಯವಾಗುತ್ತಿತ್ತು. ೧೯೧೫ರಿಂದ ೧೯೫೬ರ ವರೆಗೆ ನಡೆದ ೩೮ ಸಾಹಿತ್ಯ ಸಮ್ಮೇಳನಗಳ ವರದಿಗಳನ್ನು ಪರಿಶೀಲಿಸಿದರೆ ಈ ಅಂಶ ಸುವೇದ್ಯವಾಗುತ್ತದೆ. ಜತೆಗೆ ನಾಡಿನ ವಿವಿಧ ಭಾಗಗಳಲ್ಲಿ ನಡೆಯುವ ಈ ಸಮ್ಮೇಳನಗಳು ಸಾಹಿತಿಗಳು, ಸಾಹಿತ್ಯಾಭಿಮಾನಿಗಳು, ಭಾಷಾಭಿಮಾನಿಗಳು ಒಂದೆಡೆ ಸೇರುವುದಕ್ಕೆ ಸಹಾಯ ನೀಡುವುದರಿಂದ ಪ್ರಾಂತ್ಯಾಭಿಮಾನ ಮೂಡಿಸಿ ಆ ಮೂಲಕ 'ಕರ್ನಾಟಕ ಏಕೀಕರಣಕ್ಕೆ' ಸೂಕ್ತ ವಾತಾವರಣ ಕಲ್ಪಿಸಿದುದೂ ಗಮನಾರ್ಹ.

ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ ನುಡಿಗಳು ಆಯಾ ಸಂದರ್ಭದ ಕಾವನ್ನು ಕಟ್ಟಿಕೊಡುವಲ್ಲಿ ಸಫಲವಾಗುತ್ತವೆ. ರೊದ್ದ ಶ್ರೀನಿವಾಸರಾಯರು ೧೯೨೧ರಂದು ಹೊಸಪೇಟೆಯಲ್ಲಿ ನಡೆದ ೬ನೆಯ ಸಾಹಿತ್ಯ ಸಮ್ಮೇಳನದಲ್ಲಿ 'ಪರಭಾಷಿಗಳ ಅನಿಯಂತ್ರಿತ ಪ್ರತಿಷ್ಠೆಯು ಬೆಳೆಯುತ್ತ ಹೋದಹಾಗೆ ಅವು ನಮ್ಮ ಜನ್ಮಭಾಷೆಯನ್ನು ನಮ್ಮ ಅಡಿಗೆಮನೆಯಿಂದಲೂ, ದೇವರಕೋಣೆಯಿಂದಲೂ ಹೊರದೂಡಹತ್ತುವುವು'. ಎಂದು ಪರಭಾಷೆಗಳ ಬಗೆಗೆ ಎಚ್ಚರಿಕೆ ವಹಿಸಲು ಕರೆ ನೀಡಿದರೆ, ಸರ್. ಕೆ.ಪಿ. ಪುಟ್ಟಣ್ಣಚೆಟ್ಟಿ ಅವರು ೧೯೨೧ರಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ ೭ನೇ ಸಮ್ಮೇಳನದಲ್ಲಿ 'ಕನ್ನಡ ನುಡಿಗೆ ಈಗ ಒದಗಿರುವ ಸಮಸ್ಯೆ ನೋಡಿದರೆ ಕಣ್ಣೀರು ಬರುವುದು. ಕನ್ನಡಕ್ಕೆ ತನ್ನ ಸ್ವಗೃಹದಲ್ಲಿಯೇ ಯಜಮಾನ್ಯ ತಪ್ಪಿರುವುದು. .......ಕರ್ನಾಟಕ ಭಾಷಾ ವೀರಮಾತೆಯೆ........ ತನಗೆ ಪರಂಪರ ಪ್ರಾಪ್ತಿಯಾಗಿ ಬಂದ ಅಧಿಕಾರವು ಕಾರಣಾಂತರಗಳಿಂದ ಸಡಿಲಿಯೋ ತೊಲಗಿಯೋ ಹೋಗಿರುವೆಡೆಗಳಲ್ಲಿ ಅದನ್ನು ಮರಳಿ ಸಂಪಾದಿಸುವುದಕ್ಕೆ ತಕ್ಕ ಪ್ರಯತ್ನಗಳನ್ನು ಕೈಗೊಳ್ಳಬೇಕೆಂಬುದು ನ್ಯಾಯವಾಗಿ ತೋರುವುದಿಲ್ಲವೇ?' ಎಂಬ ಪ್ರಶ್ನೆಯೊಂದಿಗೆ ಮಾಡಬೇಕಾಗುವ ಕೆಲಸಗಳನ್ನು ಕುರಿತು ಪ್ರಚೋದನೆ ನೀಡಿದ್ದಾರೆ.

ಎಚ್. ಕೃಷ್ಣಶಾಸ್ತ್ರಿಗಳು ೧೯೨೪ರಂದು ಕೋಲಾರದಲ್ಲಿ ನಡೆದ ೧೦ನೇ ಸಮ್ಮೇಳನದಲ್ಲಿ 'ದಕ್ಷಿಣ ಕನ್ನಡ', ಸೇಲಂ, ಕೊಯಮತ್ತೂರು, ಚಿತ್ತೂರು, ಅನಂತಪುರ, ಬಳ್ಳಾರಿ, ಧಾರವಾಡ, ಬೆಳಗಾಂ, ಕಾರವಾರ, ಬಿಜಾಪುರ, ರತ್ನಗಿರಿ, ರಾಯಚೂರು, ಸೊಲ್ಲಾಪುರ, ಉಸ್ಮಾನಾಬಾದ್, ಕೊಡಗು ಇವನ್ನೆಲ್ಲಾ ಭಾಷಾ ವ್ಯಾಪ್ತಿಯಿಂದ ಕರ್ನಾಟಕ ರಾಜ್ಯದಲ್ಲಿಯೇ ಸೇರಿಸಬೇಕು ಎಂದು ಆಗ್ರಹಪಡಿಸಿದರೆ, ೧೯೨೯ರಲ್ಲಿ ಬಳ್ಳಾರಿಯ ೧೨ನೇ ಸಮ್ಮೇಳನದಲ್ಲಿ ಫ.ಗು. ಹಳಕಟ್ಟಿ ಅವರು 'ಸಾಹಿತ್ಯ ಸಮ್ಮೇಳನವನ್ನು ಒಂದು ವರ್ಷ ಎಲ್ಲಾದರೂ ಕೂಡಿಸಿದರೆ ನಾವು ಇಚ್ಛಿಸುವ ಕಾರ್ಯಗಳು ನೆರವೇರಲಾರವು. ಪ್ರತಿಯೊಂದು ಜಿಲ್ಲೆಯಲ್ಲಿ ಕನ್ನಡ ಭಾಷಾಪ್ರೇಮಿಗಳು ಪ್ರತಿಯೊಬ್ಬರಲ್ಲೂ ಕರ್ನಾಟಕತ್ವದ ಭಾವನೆಯನ್ನು ಜಾಗ್ರತಗೊಳಿಸಲು ಸದಾ ಪ್ರಯತ್ನಿಸುತ್ತಿರಬೇಕು' ಎಂದು ಅಪೇಕ್ಷಿಸುತ್ತಾರೆ.

ಆರ್. ತಾತಾಚಾರ್ಯರು 'ಒಳಭೇದಗಳನ್ನು ನೀಗಿಕೊಂಡು ಐಕಮತ್ಯದಿಂದ ಕೂಡಿದ ಭಾಷೆಯ ಏಕೀಕರಣವೇ ನಮಗೀಗ ಬೇಕಾಗಿರುವ ಏಕೀಕರಣ' ಎಂದು ಅಪೇಕ್ಷಿಸಿದರೆ, ಡಿವಿಜಿಯವರು ೧೯೩೨ರಲ್ಲಿ ಮಡಿಕೇರಿ ಸಮ್ಮೇಳನದಲ್ಲಿ 'ಕರ್ನಾಟಕ ಪ್ರದೇಶಗಳ ಏಕೀಕರಣ ಕಾರ್ಯವು ಈಚೆಗೆ ಸಮರ್ಪಕವಾಗಿ ಸಾಗಿಲ್ಲ. ಹರಕುಮುರುಕಾಗಿ ಒಡೆದುಹೋಗಿರುವ ಕನ್ನಡನಾಡು ಮತ್ತೆ ಒಂದುಗೂಡಿದಲ್ಲದೆ ನಮ್ಮ ಜನಕ್ಕೂ ನಮ್ಮ ಭಾಷೆಗೂ ಏಳಿಗೆಯಾಗದು...' ಎಂದು ಹೇಳುತ್ತಾರೆ. ಡಿವಿಜಿಯವರು ಮೊದಲಿಗೆ ಆಡಳಿತಾತ್ಮಕ ದೃಷ್ಟಿಯಿಂದ 'ದ್ವಿಕರ್ನಾಟಕ'ವಾದಿಗಳ ಕಡೆಗೆ ಸೇರಿದ್ದರಾದರೂ ಆನಂತರ ಸಾಂಸ್ಕೃತಿಕ ದೃಷ್ಟಿಯೇ ಅತ್ಯಂತ ಸೂಕ್ತ ಎಂಬುದನ್ನು ಪರಿಭಾವಿಸಿ ಏಕೀಕೃತ ಅಖಂಡ ಕರ್ನಾಟಕದ ಕಡೆಗೆ ವಾಲಿದ್ದು ಮೈಸೂರು ಸಂಸ್ಥಾನದಲ್ಲಿ ಸಾಹಿತ್ಯ ಜನಾಭಿಪ್ರಾಯವನ್ನು ಹಿಡಿತಕ್ಕೆ ತೆಗೆದುಕೊಳ್ಳಲು ಹೆಚ್ಚು ಸಹಕಾರಿಯಾಯಿತೆಂಬುದು ಗಮನಾರ್ಹ. ಜತೆಗೆ ಕನ್ನಡನಾಡಿನ ಜನರಲ್ಲಿ ಒಂದು ಹೊಸ ತೇಜಸ್ಸೂ, ಒಂದು ಹೊಸ ಶಕ್ತಿಯೂ, ಒಂದು ಹೊಸ ಉಲ್ಲಾಸವೂ ಆವಿರ್ಭವಿಸಿದರೆ ಕನ್ನಡ ಸಾಹಿತ್ಯಕ್ಕೆ ಒಂದು ಉಪಕರಣವಾಗುತ್ತದೆ ಎಂಬುದು ಅವರ ನಿಲುವಾಗಿತ್ತು.

೧೯೪೪ರ ರಬಕವಿ ಸಮ್ಮೇಳನದಲ್ಲಿ ಶಿ.ಶಿ. ಬಸನಾಳರು...... ಮೂಡ ಪಡುವಣ ಗಡಿನಾಡುಗಳಲ್ಲಿ ನೆರೆಯ ಪ್ರಬಲ ಭಾಷೆಗಳ ದವಡೆಯೊಳಗಿನಿಂದ ಕನ್ನಡವನ್ನು ಉಳಿಸಿ ಕಾಪಾಡುವ ಹೊಣೆ ಕನ್ನಡಿಗರಾದ ನಮ್ಮೆಲ್ಲರ ಮೇಲೆಯೂ ಇದೆ. ಆಯಾ ವಿಭಾಗಗಳಲ್ಲಿ ಕನ್ನಡ ಜನಸಾಮಾನ್ಯರಲ್ಲಿ ಜಾಗೃತಿಯನ್ನುಂಟುಮಾಡಿ ಅದು ಸದಾ ಪ್ರಜ್ವಲಿಸುವಂತೆ ಮಾಡಿಕೊಳ್ಳುವ ಭಾವ ನಮ್ಮದಾಗಲಿ ಎಂದು ಹಾರೈಸುತ್ತಾರೆ.

ಟಿ.ಪಿ. ಕೈಲಾಸಂ ೧೯೪೫ರ ಮದರಾಸ್‌ನ ಸಮ್ಮೇಳನದಲ್ಲಿ ಏಕೀಕರಣದ ಬಗೆಗೆ ಪ್ರಸ್ತಾಪಿಸುತ್ತಾ..... ಈ ಸಮ್ಮೇಳನಗಳಿಂದ ಕರ್ನಾಟಕದ ಏಕೀಕರಣಕ್ಕೆ ಸಹಾಯವಾಗಿದೆ. ಏಕೀಕರಣಕ್ಕಿಂತ ಮುಖ್ಯವಾದ್ದು ನಮ್ಮ ಜನತೆಯ ಏಕೀಕರಣ. ಆ ಏಕೀಭಾವವೇ ಕರ್ನಾಟಕಕ್ಕೆ ನಿಜವಾದ ಅಸ್ತಿಭಾರ. ಆ ಮನೋಭಾವವಿಲ್ಲದೆ ರಾಜಕೀಯ ಏಕೀಕರಣ ಫಲಕಾರಿಯಲ್ಲ...' ಎಂದು ಜನತೆಯ ಮನಗಳು ಗಟ್ಟಿಗೊಳ್ಳಬೇಕಾದ ನೆಲೆಯನ್ನು ಸೂಚಿಸುತ್ತಾರೆ.

ತಿ.ತಾ. ಶರ್ಮರು ೧೯೪೭ರಲ್ಲಿ ಕಾಸರಗೋಡಿನಲ್ಲಿ ನಡೆದ ಸಮ್ಮೇಳನದಲ್ಲಿ 'ರಾಜಕೀಯವಾಗಿ ಕನ್ನಡ ನಾಡೊಂದಾಗುವವರೆಗೂ ನಮ್ಮ ಆಶಯಗಳೆಲ್ಲ ಬರೇ ಕನಸಾಗಿಯೇ ಉಳಿಯುತ್ತವೆ. ಸಾಂಸ್ಕೃತಿಕ ದೃಷ್ಟಿಯಿಂದ ನಾವು ಏಕೀಕರಣಕ್ಕಾಗಿ ೩೦-೪೦ ವರ್ಷಗಳಿಂದ ವಿಶ್ವಪ್ರಯತ್ನ ಮಾಡುತ್ತಿದ್ದೇವೆ....' ಎಂದು ಅದುವರೆಗಿನ ಪ್ರಯತ್ನವನ್ನು ಸ್ಪಷ್ಟಗೊಳಿಸುತ್ತಾರೆ.

ಉತ್ತಂಗಿ ಚನ್ನಪ್ಪ ಅವರು 'ಕನ್ನಡದ ಎಲ್ಲ ಜನತೆಯು ಒಂದೆಡೆಗೆ ಬಂದು ತನ್ನ ಸಾಂಸ್ಕೃತಿಕ ಬಲವನ್ನು ಹೆಚ್ಚಿಸಿಕೊಳ್ಳಬೇಕು. ಇದೇ ಕರ್ನಾಟಕದ ಏಕೀಕರಣದ ಮುಖ್ಯ ಉದ್ದೇಶ....' ಎಂದು ಅವಲತುಕ್ತೊಂಡರೆ, ಎಸ್.ಸಿ. ನಂದೀಮಠ ಅವರು ದಕ್ಷಿಣ ಹಿಂದೂಸ್ಥಾನದೊಳಗಿನ ಪ್ರಮುಖ ಭಾಷೆಗಳನ್ನಾಡುವ ಎಲ್ಲ ಜನರೂ ಒಕ್ಕೊರಲಿನಿಂದ ಭಾಷೆಯ ತತ್ವದ ಮೇಲೆ ಪ್ರಾಂತಗಳನ್ನು ನಿರ್ಮಿಸಬೇಕೆಂದು ಕೇಳಿಕೊಳ್ಳುತ್ತಿರುವಾಗ ಈ ಸಮಸ್ಯೆಯನ್ನು ಅನಿಯಮಿತ ಅವಧಿಯವರೆಗೆ ಮುಂದೂಡುವುದು ಸರಿಯಾದುದಲ್ಲ ಎಂದು ಸಕಾಲಿಕ ಎಚ್ಚರಿಕೆ ನೀಡುತ್ತಾರೆ.

೧೯೫೫ರಲ್ಲಿ ಮೈಸೂರು ಸಮ್ಮೇಳನದಲ್ಲಿ ಶಿವರಾಮ ಕಾರಂತರು ವಿಸ್ತಾರವಾದ ಪೀಠಿಕೆ ಹಾಕಿಕೊಂಡು '......ಕನ್ನಡ ದೇಶದ ಇತಿಹಾಸ ವಿಸ್ತಾರವಾದ ಜೀವನದಲ್ಲಿ, ಒಂದೇ ನಾಡಿನವರಾಗಿ ಶತಮಾನ, ಶತಮಾನಗಳ ಕಾಲ ಬಾಳಿ ಬದುಕಿದ ಕನ್ನಡ ಜನರು, ಇಂದು ಭಿನ್ನ ಭಿನ್ನ ರಾಜಕೀಯ ಪ್ರಾಂತಗಳಲ್ಲಿ ಉಳಿದುಕೊಂಡು ತಮ್ಮ ಆರ್ಥಿಕ, ಸಾಂಸ್ಕೃತಿಕ ಇಲ್ಲವೆ ಸಾಮಾಜಿಕವಾದ ಯಾವ ಆಶೋತ್ತರಗಳನ್ನೂ ಕಾಲಕ್ಕೆ ತಕ್ಕಂತೆ ಬೆಳೆಯಿಸಿಕೊಳ್ಳಲಾರದೆ ನರಳುತ್ತಿರುವ ಈ ಕಾಲದಲ್ಲಿ....' ಯಾರು ಎಷ್ಟೇ ಮೂದಲಿಸಿದರೂ, ರಾಜಕಾರಣಿಗಳು ಎಂಥ ವಾದ ಮಂಡಿಸಿದರೂ ನಮ್ಮ ಕನ್ನಡ ಸಾಹಿತಿಗಳು ಮಾತ್ರ 'ಕನ್ನಡನಾಡು ಒಂದುಗೂಡಬೇಕು' ಎಂಬ ಹಂಬಲವನ್ನು ಇರಿಸಿಕೊಂಡೇ ಬಂದಿದ್ದಾರೆ. ಅದಕ್ಕಾಗಿ ನಾಡಿನಲ್ಲಿ ತೊಳಲಾಡಿದ್ದಾರೆ. ಅವರು ಎಂದೂ ಆ ಸವಿಗನಸನ್ನು ಬಿಟ್ಟುಕೊಟ್ಟವರಲ್ಲ......' ಎಂದು ಸಾಹಿತಿಗಳಿಗಿರುವ ಕಳಕಳಿಯನ್ನು ಎತ್ತಿ ಹಿಡಿಯುತ್ತ ಏಕೀಕರಣದ ವಿಷಯದಲ್ಲಿ ಅಡ್ಡಗಾಲಾಗಿರು ವವರನ್ನು ಕುರಿತು ಖಂಡಿಸುವುದಕ್ಕೂ ಹಿಂದೆಮುಂದೆ ನೋಡುವುದಿಲ್ಲ. '....ನಮ್ಮ ರಾಜಕಾರಣಿಗಳು ಗಳಿಗೆಗೊಂದು ತೆರನಾಗಿ ಮಾತನಾಡುತ್ತಿದ್ದಾರೆ. ಕನ್ನಡ ಏಕೀಕರಣದ ವಿಚಾರ ಬಂದಾಗಲೆಲ್ಲ 'ಆಡಳಿತೆಯ ಸೌಕರ್ಯ'ದ ಮಾತು ಹೇಳುತ್ತಾರೆ, 'ಹಣಕಾಸಿನ ಭಯ' ತೋರಿಸುತ್ತಾರೆ, ಜಾತಿ ಕೋಮುಗಳ ಭೂತ ದೆವ್ವಗಳನ್ನು ಎತ್ತಿ ಹಿಡಿಯುತ್ತಾರೆ.....' ಎರಡು ಕನ್ನಡ ನಾಡಾಗಲಿ' ಎನ್ನುವ ಪ್ರಭೃತಿಗಳುಂಟು ಈ ದೇಶದಲ್ಲಿ. ಮಂತ್ರಿಗಳಾಗುವ ಹೆಬ್ಬಯಕೆಯೊಂದೇ ರಾಜಕೀಯದಲ್ಲಿ ತಾಂಡವವಾಡುವಂತಿದ್ದರೆ ಎರಡಲ್ಲ, ಮಂತ್ರಿ ಪದಾಕಾಂಕ್ಷಿಗಳಿಗೆ ಸಮನಾದ ಸಂಖ್ಯೆಯಲ್ಲಿ, ಬಹು ಖಂಡ ಕರ್ನಾಟಕವಾಗಬೇಕಾಯಿತು....' ಸ್ವಾತಂತ್ರ್ಯ ಬಂದ ಮೇಲೂ ಏಕೀಕರಣ ಆಗುವುದಕ್ಕೆ ಏಕೆ ತಡವಾಯಿತೆಂಬ ಪ್ರಶ್ನೆಗೆ ಶಿವರಾಮ ಕಾರಂತರ ಈ ನುಡಿಗಳಲ್ಲಿ ಉತ್ತರ ದೊರೆಯುತ್ತದೆ.

ಶ್ರೀರಂಗರು ಕರ್ನಾಟಕ ಏಕೀಕರಣಕ್ಕಾಗಿ ಅತ್ಯಂತ ಹೆಚ್ಚಿನ ಶ್ರಮ ವಹಿಸಿದರು. ಅವರು ಕರ್ನಾಟಕ ಏಕೀಕರಣ ಸಂಘದಲ್ಲಿ ಸಕ್ರಿಯವಾಗಿ ಪಾಲುಗೊಂಡವರು. ಭಾಷಾವಾರು ಪ್ರಾಂತ ರಚಿಸಲೇಬೇಕೆಂದು ನೆಹರು ಅವರನ್ನು ಕಂಡು ಒತ್ತಾಯಿಸಿ ಅದರಲ್ಲಿ ಯಶಸ್ವಿಯಾದವರು. ೧೯೫೫ರ ರಾಯಚೂರು ಸಮ್ಮೇಳನದಲ್ಲಿ ಅವರು ಅಧ್ಯಕ್ಷರಾಗುವ ಹೊತ್ತಿಗೆ ಕರ್ನಾಟಕ ಏಕೀಕರಣಗೊಳ್ಳುವುದು ಖಚಿತವಾಗಿತ್ತು. ಅವರು ಸಂಸ್ಕೃತಿ, ಸಾಹಿತ್ಯ ಮತ್ತು ಜೀವನದ ದೃಷ್ಟಿಯಿಂದ ಕರ್ನಾಟಕದ ಏಕೀಕರಣವನ್ನು ಬಯಸಿ ಅದಕ್ಕಾಗಿ ಹೋರಾಡುತ್ತಿದ್ದ ಕನ್ನಡ ಸಾಹಿತಿಗಳ ಹೊಣೆ ಇನ್ನೂ ಹೆಚ್ಚಿದೆ ಎನ್ನಬಹುದು ಎಂದು ಹೇಳುತ್ತಾರೆ.

ಕನ್ನಡ ಕವಿ ಸಾಹಿತಿಗಳ ಇಷ್ಟೆಲ್ಲ ಹಂಬಲ ಹಾರೈಕೆಗಳು ಬೆಂಬಲ ಬಯಕೆಗಳು ಉದ್ಘೋಷ ಘೋಷಣೆಗಳು ಏಕೀಕರಣದ ಕಾವನ್ನು ತೀವ್ರಗೊಳಿಸಲು ಸಫಲವಾಗಿ ಅಂತಿಮವಾಗಿ ಕೇಂದ್ರ ಸರ್ಕಾರವನ್ನು ಮಣಿಸಿ 'ಕನ್ನಡ ನಾಡ'ನ್ನು ಒಂದುಗೂಡಿಸಿದ ರಾಜ್ಯೋತ್ಸವದ ಆಗಮನವೂ ಆಯಿತು ನವೆಂಬರ್ ೧, ೧೯೫೬ ರಂದು. ಸ್ವಾತಂತ್ರ್ಯ ಬಂದ ಮೇಲೂ ಒಂಬತ್ತು ವರುಷಗಳು ಬೇಕಾಯಿತು, ಕನ್ನಡಕ್ಕೆ ತನ್ನದೇ ಆದ ಆಡಳಿತ ಪಡೆಯಲು. ಈ ಹಿಂದಿನ ಕಹಿ ಏನೇ ಇದ್ದರೂ ರಾಜ್ಯೋತ್ಸವ ಎಂಬುದು ಕನ್ನಡಿಗರಿಗೆ ನಿಜಕ್ಕೂ ಅಪ್ಯಾಯಮಾನವಾಯಿತು. ಉತ್ಸಾಹದಿಂದ ಭುಗಿಲೆದ್ದ ಅವರ ಸಂತೋಷಕ್ಕೆ ಕವಿ ನುಡಿಗಳ ತಾಳ ಹಿಮ್ಮೇಳ ಮುಮ್ಮೇಳಗಳೂ ಸಾಥಿಯಾದವು.

ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' 'ಉದಯವಾಯಿತು ನಮ್ಮ ಚೆಲುವ ಕನ್ನಡ ನಾಡು' ಎಂದು ಪಿ. ಕಾಳಿಂಗರಾಯರ ಸಿರಿಕಂಠದಿಂದ ಹೊರಹೊಮ್ಮಿತು.

ಕುವೆಂಪು ತುಂಬಿ ಬಂದ ಸಂತೋಷದಿಂದ ಕನ್ನಡದ ಬಾವುಟಕ್ಕೆ ಅಭಿನಂದಿಸುತ್ತಾ

ಮೂಡುತಿದೆ ನೋಡು ಅದೋ ಐಕ್ಯ ಕರ್ನಾಟಕ
ಕಣ್‌ನೆಟ್ಟು ಬಯಸಿ ಕಾಣು ದಿಕ್‌ತಟ ಧ್ವಜಪಟ'

ಎಂದು ಉಕ್ಕೇರಿದರು.

ತೀನಂಶ್ರೀ ಅವರು

'ಗೆಳೆಯ ಕನ್ನಡಿಗರೇ ಸ್ವಾಗತವು ನಿಮಗೆ
ಬೆಳೆವ ಸಿರಿಗನ್ನಡದ ಬಳ್ಳಿ ಪಡೆದ! ಸ್ವಾಗತವು ನಿಮಗೆ
ಒಬ್ಬ ಕನ್ನಡ ದೇವಿಯುದರದಿಂದೊಗೆದು
ಒಬ್ಬ ಕನ್ನಡ ಜನನಿ ಎದೆ ಹಾಲು ಮೊಗೆದು
ಒಬ್ಬ ಮಾತೆಯ ಮಡಿಲು ತೊಡೆಗಳಲಿ ಕುಣಿದು
ಒಬ್ಬ ತಾಯುಲಿಗಳನೆ ತೊದಲಿ ನುಡಿದು
ಬೆಳೆದ ಕನ್ನಡಿಗರೇ ಬಂಧು ಕನ್ನಡಿಗರೇ
ಇನಿಯ ಕನ್ನಡಿಗರೇ ಸ್ವಾಗತವು ನಿಮಗೆ!'

ಎಂದು ಹೃದಯತುಂಬಿ ಸ್ವಾಗತಿಸುತ್ತಾರೆ. 'ಕನ್ನಡ'ವನ್ನೇ ಹಗಲಿರುಳು ಹಚ್ಚಿಕೊಂಡು ದುಡಿದ ಹುಟ್ಟು ಹೋರಾಟಗಾರ ಎಂ.ವಿ. ಸೀತಾರಾಮಯ್ಯ-

'ಕನ್ನಡ ತಾಯಿಗೆ ಮಣಿವ ನಾವ್ ಕನ್ನಡಿಗರೆಂದು ಕುಣಿವ
ಭಾರತೀಯ ಸ್ವಾತಂತ್ರ್ಯ ಭಾಗ್ಯದೊಳಪಾರ
ಬಳುವಳಿಯ ಹೊಂದಿ ನಲಿಯುತಿಹ ಕನ್ನಡ ತಾಯಿಗೆ ಮಣಿವ'

ಎಂದು ಉತ್ಸಾಹದಿಂದ ಸಿದ್ಧರಾಗಿರುತ್ತಾರೆ. ಕನ್ನಡ ನುಡಿಯ ಬಗೆಗೆ ಮೊದಲು ಅಷ್ಟಾಗಿ ಗಮನ ನೀಡದೆ ಇಂಗ್ಲಿಷ್‌ನಲ್ಲಿ ವ್ಯವಹಾರ ಮಾಡುತ್ತಿದ್ದ ಅಧಿಕಾರಿ ಮಾಸ್ತಿಯವರು ಹಳ್ಳಿಗನೊಬ್ಬನ ನುಡಿಗಳಿಂದ ಎಚ್ಚತ್ತು ಕನ್ನಡತನವನ್ನು ತೀವ್ರವಾಗಿ ಹಚ್ಚಿಕೊಂಡು ದುಡಿದು ತಣಿಯದವರು. ಏಕೀಕರಣದ ನಂತರ ಅವರ ಹೃದಯ ತುಂಬಿ ಬಂದ ಹಾಡು-

'ಕನ್ನಡದ ನಾಡ ಜನರೆಲ್ಲರೂ ನನ್ನವರು
ಬಡಗ ತೆಂಕಣ ಮೂಡ
ಕೊಡಗ ತುಳುವ ತೋಡ
ಇನ್ನೆಲ್ಲ ಕನ್ನಡಿಗರೆನ್ನವರು ಎನ್ನುವರು
ನಾವೆಲ್ಲ ಒಂದು ಮನೆಯವರಣ್ಣ ತಮ್ಮದಿರು
ನಮ್ಮೆಲರನು ಪಡೆದುದೊಂದೆ ನಾಡಿನ ಬಸಿರು'

'ಏನಾದರೂ ಆಗು ಮೊದಲು ಮಾನವನಾಗು' ಎಂದು ಮಾನವತೆಯ ಕಡೆಗೆ ಕರೆ ನೀಡಿದ ಸಿದ್ದಯ್ಯ ಪುರಾಣಿಕರು ಕನ್ನಡದ ದೀಪ ಹೊತ್ತಿ ಶತಮಾನಗಳ ಶಾಪ ಕಳೆದುದಕ್ಕೆ ಹಿಗ್ಗುತ್ತ ಇನ್ನು ಮುಂದೆ ಈ ಒಂದಾಗ ಕನ್ನಡನಾಡಿನ ಸೇವೆ ಮಾಡುವವರು ಹೀಗಿರಬೇಕೆಂದು ಬಯಸುತ್ತಾರೆ-

'ಉರಿವವರು ಬೇಕಿನ್ನು ಇದರೆಣ್ಣೆಯಾಗಿ
ಸುಡುವವರು ಬೇಕಿನ್ನು ನಿಡುಬತ್ತಿಯಾಗಿ
ಧರಿಸುವವರು ಬೇಕಿದನು ಸಿರಿ ಹಣತೆಯಾಗಿ'.........

ಹಣತೆಯಿಂದ ಸಿರಿಬೆಳಕನ್ನು ಮಾತ್ರ ಬಯಸಿದರೆ ಸಾಲದು ಅದಕ್ಕೆ ಎಣ್ಣೆಯಾಗಿ ಉರಿವ, ಬತ್ತಿಯಾಗಿ ಬೆಳಗುವ ತ್ಯಾಗಕ್ಕೂ ಸಿದ್ಧರಾಗಬೇಕು ಎಂಬ ಅಂಶವನ್ನು ಸೂಚಿಸುತ್ತಿದ್ದರೆ ಕೆ.ಎಸ್.ನ. ಇನ್ನೂ ಒಂದು ಹೆಜ್ಜೆ ಮುಂದಿಟ್ಟು-

'ಹೊಸತೊಂದು ನಾಡ ಕಟ್ಟುವೆವು ತಾಯೆ
ಬೆನ್ತಟ್ಟಿ ಮುಂದೆ ಕಳಿಸು
ಮುಂದಿಟ್ಟ ಹೆಜ್ಜೆ ಹಿಂದೆಗೆಯದಂತೆ
ನಡೆಯುವುದು ನಮಗೆ ಕಲಿಸು
ಮೈ ಬೆವರ ಸುರಿಸಿ ದುಡಿವಂತೆ ಮಾಡು
ಒಳಭೇದವನ್ನು ಅಳಿಸು
ಬಡತನವ ತೊರೆವ ಸಂಗ್ರಾಮದಲ್ಲಿ
ಶುಭವನ್ನು ನಮಗೆ ಹರಸು'

ಎಂದು 'ಕನ್ನಡ ರಾಜ್ಯೋತ್ಸವ'ದ ಪವಿತ್ರ ಸಂದರ್ಭದಲ್ಲಿ ಬಡತನವನ್ನು ನೀಗಿಸಲು ಸೋಮಾರಿತನವನ್ನು ಬಿಟ್ಟು ಮುಂದುವರಿಯಲು ಹರಸಬೇಕೆಂದು ಪ್ರಾರ್ಥಿಸುತ್ತಾರೆ.

'ಸಮನ್ವಯ ಕವಿ' ಜಿ.ಎಸ್. ಶಿವರುದ್ರಪ್ಪನವರು ಏಕೀಕರಣ ಹೋರಾಟದ ಪ್ರತಿ ಹಂತವನ್ನೂ ಸೂಕ್ಷ್ಮವಾಗಿ ಗಮನಿಸಿಕೊಂಡು ಬಂದವರು. ಅಂತೂ ಇಂತೂ ಒಂದಾದ ನಾಡು ಶತಶತಮಾನಗಳ ಮೌಲ್ಯದ 'ಕರ್ನಾಟಕ' ನಾಮವನ್ನು ಬಿಟ್ಟು 'ಮೈಸೂರು' ಆಗೇ ಉಳಿದುದನ್ನು, ಇದರಿಂದ ಉತ್ತರ ಕರ್ನಾಟಕದ ಜನತೆಗೆ ಆದ ಅಸಮಾಧಾನವನ್ನು ಮನಗಂಡವರು. ಹಾಗಾಗಿ ಅವರಿಗೆ ರಾಜ್ಯೋದಯ ಶುಭದ ಸಂಕೇತದ ಜತೆಗೆ ಆತಂಕದ ತಳಮಳವೂ ಸೇರಿದಂತಾಗಿದೆ. ಅಂತೆಯೇ ಅವರು ಹೇಳುವುದು,

'ರಾಜ್ಯೋದಯದೊಂದಿಗೆ ವ್ಯಾಜ್ಯೋದಯವೂ ಆಯಿತೆ
ನಮ್ಮೊಳಗೊಳಗೇ
ಕನ್ನಡತನ ಕನ್ನಡ ಸಂಸ್ಕೃತಿ ಈ ಎಲ್ಲವೂ
ಉಳಿದವು ಎಲ್ಲೋ ತಳದೊಳಗೆ

ಅಂತೂ ರಾಜ್ಯೋದಯವಾಗಿದೆ ಹೊರಗೆ, ಇನ್ನೂ ಕನ್ನಡ ರಾಜ್ಯೋದಯವಾಗುವುದಿದೆ ನಮಗೂ ನಿಮಗೂ ಒಳಗೆ' ಎಂಬಂಥ ನುಡಿಗಳು ಅವರಿಂದ ಹೊರಹೊಮ್ಮಿದವು.

ಇದುವರೆವಿಗೂ ಹಳೇ ಮೈಸೂರು ಪ್ರಾಂತ್ಯದವರು ಕನ್ನಡಮ್ಮನ ಮಡಿಲಲ್ಲಿ ಬೆಚ್ಚಗೆ ಪವಡಿಸಿದ್ದವರು. ರಾಜ್ಯೋದಯದ ಸಂದರ್ಭದಲ್ಲಿ ಮದ್ರಾಸ್, ಹೈದರಾಬಾದ್, ಮುಂಬೈಗಳಲ್ಲಿ ಹಂಚಿಹೋಗಿದ್ದ ಬಹುತೇಕ ಕನ್ನಡಿಗರು ಕನ್ನಡಮ್ಮನ ನೆಳಲಿನ ಆಶ್ರಯ ಪಡೆದರು. ಆದರೆ ಕನ್ನಡಿಗರಾಗಿದ್ದೂ ಗಡಿವಿಭಾಗದ ಅತಂತ್ರದಲ್ಲಿ ಪರಕೀಯ ನೆಲೆಯಲ್ಲಿಯೇ ಉಳಿದ ನತದೃಷ್ಟರು ಸಾವಿರಾರು. 'ಇನ್ನೇನು ಏಕೀಕರಣವಾಗುತ್ತದೆ, ನಮ್ಮ ಪ್ರದೇಶವೂ ಕನ್ನಡನಾಡಿನೊಳಗೆ ಸೇರುತ್ತದೆ, ನಾವೂ ಕನ್ನಡದ ಆಳ್ವಿಕೆಯಲ್ಲಿ ನೆಮ್ಮದಿಯ ಉಸಿರು ಬಿಡುತ್ತೇವೆ' ಎಂದು ಇರುಳಾಗುವುದಕ್ಕೆ ಮೊದಲು ತಾವರೆಯ ಒಳಗೆ ಸೇರಿಹೋಗಿದ್ದ ಭ್ರಮರದ ರೀತಿ ಹಾರೈಸುತ್ತಿದ್ದವರಿಗೆ ಆ ತಾವರೆಯ ದಂಬನ್ನೇ ಮದಗಜ ಸೆಳೆದುಹಾಕಿದಂತೆ ಬರಸಿಡಿಲೆರಗಿತು. ಅವರು ಅದೇ ಆಳ್ವಿಕೆಯಲ್ಲಿ ಉಳಿಯಬೇಕೆಂಬ ಆದೇಶ ಬಂದಾಗ, ಕವಿ ಕಯ್ಯಾರ ಕಿಞ್ಞಣ್ಣ ರೈ ಆ ಜನತೆಯ ತಳಮಳವನ್ನು ಹೀಗೆ ಹಿಡಿದಿರಿಸಿದ್ದಾರೆ.

'ಬೆಂಕಿ ಬಿದ್ದಿದೆ ಮನೆಗೆ ಓ ಬೇಗ ಬನ್ನಿ.
ಎಲ್ಲರೂ ಎದ್ದೆದ್ದು ಓಡಿ ಬನ್ನಿ
ಕನ್ನಡದ ಗಡಿಕಾಯೆ ಗುಡಿಕಾಯೆ ನುಡಿಕಾಯೆ.
ಕಾಯಲಾರೆನೆ ಸಾಯೆ ಓ ಬನ್ನಿ ಬನ್ನಿ

ಕನ್ನಡದ ಕುಲಕೋಟಿಯೆಚ್ಚರೆಚ್ಚರವಿರಲಿ
ಸಿಂಹಸ್ವಪ್ನವ ಬಿಟ್ಟು ಕೆರಳಿ ನಿಲ್ಲಲಿ
ಅನ್ಯೆಯಕ್ಕೆಡೆಗೊಡದ ಅಂಗುಲ ನೆಲಂ ಬಿಡದೆ
ಅನ್ಯರಂ ತಡೆ ಹಿಡಿದೆ ನಾಡುಳಿಸಲಿ....'

ಆದರೆ ಕವಿಯ ಅಳಲು ಅರಣ್ಯರೋದನವೇ ಆಯಿತು. ಏನೆಲ್ಲ ಪ್ರಯತ್ನಗಳು ಗಡಿಯಾಚೆಗೆ ಉಳಿದ ಕನ್ನಡಿಗರನ್ನು ಒಳಗೆ ತರಲು ವಿಫಲವಾದವು. ಆ ರೋಷದಿಂದ ಸಿಡಿದೆದ್ದರೂ ಹತಾಶೆಯ ಭೂತ ಗಡಿನಾಡಿಗರನ್ನು ಹಿಡಿಯಿತು. ಆ ಅಳಲು ಗೋವಿಂದ ಪೈ ಅವರಿಂದ ಹೀಗೆ ಪ್ರತಿಜ್ಞೆ ಮಾಡಿಸುತ್ತದೆ.

'ಪಣಿಕ್ಕರ್ ರಾಕ್ಷಸನ ಕೈಚಳಕ ಸ್ವಾಮಿ ನನ್ನನ್ನು ಕೇರಳಕ್ಕೆ ನೂಕಿದೆ. ನೆಹ್ರೂ ದೊಡ್ಡ ಮನುಷ್ಯರಾದರೂ ಕುರುಡರಂತೆ ಒಪ್ಪಿಗೆ ಇತ್ತರಲ್ಲವೋ! ಚಂದ್ರಗಿರಿಯ ಹೊಳೆಯೀಚೆಯ ನಾಡು ಅದೆಂತು ಕೇರಳವಾದೀತು? ನನ್ನ ಮಟ್ಟಿಗೆ ನನ್ನ ವಿಳಾಸ 'ಎಂ. ಗೋವಿಂದಪೈ, ಮಂಜೇಶ್ವರ, ಸೌತ್ ಕೆನರಾ ಎಂದು. ನನ್ನ ಕಾಗದಗಳು ನನಗೇ ಹಿಂದೆ ಬರಲಿ, ಚಿಂತೆ ಇಲ್ಲ. ಮಂಜೇಶ್ವರ ಎಂದಿಗೂ ದಕ್ಷಿಣ ಕನ್ನಡ ಜಿಲ್ಲೆ, ನಾನಿರುವಷ್ಟು ಕಾಲ ಹೀಗೆಯೇ ಬರೆಯುವುದು.....'

ಏಕೀಕರಣದ ನಂತರದ ಭ್ರಮನಿರಸನ ಕನ್ನಡ ಜನತೆಗೆ ನೀಡಿದ ಆಘಾತವಂತೂ ಹೇಳಲಸದಳ. ಅದನ್ನು ೧೯೬೦ರಲ್ಲಿ ಅನಕೃ ತಮ್ಮ ಮಾತಿನಲ್ಲಿ ಹೀಗೆ ವ್ಯಕ್ತಪಡಿಸಿದ್ದಾರೆ. ಅಭದ್ರ ಆಡಳಿತ, ನಾಯಕತ್ವಕ್ಕಾಗಿ ಹೋರಾಟ, ಅಧಿಕಾರ ಸ್ಥಾನಗಳನ್ನು ಆಕ್ರಮಿಸಿಕೊಳ್ಳುವ ದಾಹದಲ್ಲಿ ನಾಯಕರೆನಿಸಿಕೊಂಡವರಿಗೆ ಕನ್ನಡನಾಡು ನುಡಿ ಜನತೆಯ ಕಡೆಗೆ ಲಕ್ಷ್ಯ ಬೀರುವುದಕ್ಕೆ ವ್ಯವಧಾನವೇ ಇಲ್ಲವಾಗಿದೆ. ರಾಜ್ಯ

ಸರ್ಕಾರ ಎಲ್ಲ ವಿಷಯಗಳಲ್ಲೂ ಕನ್ನಡಿಗರನ್ನು ನಿರ್ಲಕ್ಷಿಸುತ್ತಿದೆ.' ಡಾ। ದೋ.ಆ. ಅಶೋಕ್ ಅವರಂತೂ ನೋವಿನಿಂದ 'ಕನ್ನಡನಾಡು ನುಡಿಯ ವಿಚಾರದಲ್ಲಿ ಹಿಂದೆಂದಿಗಿಂತಲೂ ಇಂದು ಹೆಚ್ಚು ವಿಚಾರ ಮಾಡಬೇಕಿದೆ. ಕರ್ನಾಟಕ ಏಕೀಕರಣದ ನಂತರ ಕನ್ನಡದ, ಕನ್ನಡಿಗರ ಎಲ್ಲ ಸಮಸ್ಯೆಗಳೂ ಬಗೆಹರಿದುವು ಎಂದು ತಿಳಿದುಕೊಂಡವರಿಗೆ ಭಾರೀ ನಿರಾಶೆಯಾಗಿದೆ. ರಾಷ್ಟ್ರೀಯತೆಯ ನೆಪದಲ್ಲಿ ರಾಜಕಾರಣಿಗಳಿಂದಲೂ, ಕೇಂದ್ರ ಸರ್ಕಾರದಿಂದಲೂ ಕರ್ನಾಟಕದ ದರೋಡೆ ಹಾಡುಹಗಲೇ ನಡೆಯುತ್ತಿದೆ. ಭಾರತ ಒಕ್ಕೂಟ ಸರ್ಕಾರದಲ್ಲಿ ಕರ್ನಾಟಕಕ್ಕೆ ಏನಾದರೂ ಮಂಜೂರಾಗಿದ್ದರೆ ಅದು 'ಅನ್ಯಾಯ'ದ ಹೊರತು ಮತ್ತೇನಿಲ್ಲ.' ಎಂದಿದ್ದಾರೆ.

ಪಾಟೀಲ ಪುಟ್ಟಪ್ಪನವರು 'ಕರ್ನಾಟಕ ಸರ್ಕಾರ ಬೆಳಗಾಂ ತಮ್ಮದೆಂದು ಹೇಳಿಕೊಂಡು ಬಂದಿತೇ ವಿನಾ ಅದನ್ನು ಕರ್ನಾಟಕದ್ದಾಗಿ ಉಳಿಸಿಕೊಳ್ಳಲು ಏನನ್ನೂ ಮಾಡಲಿಲ್ಲ' ಎಂದು ಸರ್ಕಾರ ಗಡಿನಾಡುಗಳ ಕಡೆಗೆ ತೋರಿರುವ ನಿರ್ಲಕ್ಷ್ಯವನ್ನು ನಿರ್ದಾಕ್ಷಿಣ್ಯವಾಗಿ ವ್ಯಕ್ತಪಡಿಸುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಆಲೂರರು ಬಯಸಿದ ರಾಜಕೀಯ ಏಕೀಕರಣ ಒಂದು ಅರ್ಥದಲ್ಲಿ ಸಾಧಿತವಾಗಿದೆ ಯಾದರೂ ಅವರು ತೀವ್ರವಾಗಿ ಆಪೇಕ್ಷಿಸಿದ ಸಾಂಸ್ಕೃತಿಕ ಏಕೀಕರಣಕ್ಕಾಗಿ ಸಾಹಿತಿಗಳು, ಅವರೊಡನೆ ಕನ್ನಡಾಭಿಮಾನಿಗಳು, ಭಾಷಾಭಿಮಾನಿಗಳು ಇಂದಿಗೂ ತುಡಿಯುತ್ತಲೇ ಇದ್ದಾರೆ. ಏಕೀಕರಣದ ದಿನ ನವೆಂಬರ್ - ೧ ರಂದು ಆ ಬಗೆಗೆ ಪುಟಗಟ್ಟಲೆ ಬರೆದು, ದಿನಗಟ್ಟಲೆ ಮಾತನಾಡುವುದರಿಂದ ಯಾವುದೇ ಪ್ರಯೋಜನವಿಲ್ಲ ಎಂಬುದು ಈಗ ಕಣ್ಣಿಗೆ ರಾಚುವ ಸತ್ಯವಾಗಿದೆ. ಕನ್ನಡನಾಡಿನ ಸಾಂಸ್ಕೃತಿಕ ಏಕೀಕರಣಕ್ಕೆ ಹೃದಯ ಹೃದಯಗಳ ನಡುವೆ ಸೇತುವೆ ಕಟ್ಟಬೇಕಾದ ಕೆಲಸ ಮೊದಲು ಆಗಬೇಕಾಗಿದೆ. ಕವಿ ನಿಸಾರರ ಮಾತಿನಲ್ಲಿ ಹೇಳುವುದಾದರೆ 'ಕನ್ನಡವೆಂದರೆ ಬರಿ ನುಡಿಯಲ್ಲ, ಬೇರಿದೆ ಅದರರ್ಥ.....'

## ಗ್ರಂಥಋಣ

೧. ಕರ್ನಾಟಕ ಏಕೀಕರಣ ಇತಿಹಾಸ : ಡಾ। ಎಚ್.ಎಸ್. ಗೋಪಾಲರಾವ್, ನವಕರ್ನಾಟಕ ಪಬ್ಲಿಕೇಷನ್ಸ್ : ೧೯೯೬
೨. ಕನ್ನಡ ಸಂಸ್ಕೃತಿ : ದೇಜಗೌ, ಪ್ರಸಾರಾಂಗ, ಬೆಂಗಳೂರು ವಿ. ವಿ., ೨೦೦೧
೩. ಕನ್ನಡ ತಾಯಿಗೆ ನುಡಿನಮನ : ಸಂ. ಪ್ರೊ। ಎಲ್. ಎಸ್. ಶೇಷಗಿರಿರಾವ್, ಪ್ರಸಾರಾಂಗ, ಕನ್ನಡ ವಿ. ವಿ. ಹಂಪಿ-೧೯೯೩
೪. ನವಕರ್ನಾಟಕ ನಿರ್ಮಾಪಕರು, ಪಾಟೀಲ ಪುಟ್ಟಪ್ಪ; ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ : ೧೯೮೩
೫. ಕನ್ನಡ ನುಡಿ (ಸುವರ್ಣ ಮಹೋತ್ಸವ ಸಂಚಿಕೆ) : ಕ.ಸಾ.ಪ. : ೧೯೯೧

# ಕನ್ನಡ ಕಾವ್ಯದಲ್ಲಿ ಸ್ವಾತಂತ್ರ್ಯ ಸಮರದ ಪ್ರಜ್ಞೆ

ಡಾ। ಟಿ. ಸಿ. ಪೂರ್ಣಿಮಾ

ಕಾಲಾಂತರದಿಂದಲೂ ಕರ್ನಾಟಕ ಎಂದೂ ಚಳವಳಿಗಳಿಗೆ ಬೆನ್ನುಹಾಕಿ ನಿಂತದ್ದೇ ಇಲ್ಲ. ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ, ರಾಜಕೀಯ ಎಲ್ಲ ಬಗೆಯ ಚಳವಳಿಗಳಿಗೆ ಹುಟ್ಟು, ಮಡಿಲು ಕೊಟ್ಟದ್ದು ಕರ್ನಾಟಕದ ಹಿರಿಮೆಯಾಗಿದೆ. ಹನ್ನೆರಡನೇ ಶತಮಾನದಷ್ಟು ಹಿಂದೆಯೇ ಸಾಮಾಜಿಕಾರ್ಥಿಕ ಅಸಮತೆಯ ನೆಲೆಯ ಮೇಲೆ ಮೂಡಿನಿಂತ ವೀರಶೈವ ಚಳವಳಿ; ಸಾಮಾಜಿಕ, ಧಾರ್ಮಿಕ ಕಾರಣಗಳ ತಳಹದಿಯಲ್ಲಿ ಪುಷ್ಟಿಗೊಂಡ ದಾಸಚಳವಳಿ ಈ ನಾಡಿನ ಮಣ್ಣಿನಲ್ಲೇ ಮೊಳಕೆಯೊಡೆದರೆ, ಸಮಾಜದ ಶ್ರೇಣೀಕರಣವನ್ನು ಧಿಕ್ಕರಿಸಿ ಇಪ್ಪತ್ತನೇ ಶತಮಾನದ ಎಪ್ಪತ್ತರ ದಶಕದಲ್ಲಿ ಬಲಿತ ದಲಿತ ಚಳವಳಿ; ರಾಜಕೀಯದ ಒಳತಂತ್ರಗಳಿಂದಾದ ಆರ್ಥಿಕ ಸಮಾನತೆಗೆ ಉತ್ತರವಾಗಿ ಎಂಬತ್ತರ ದಶಕದಲ್ಲಿ ಸಿಡಿದುಬಂದ ರೈತ ಚಳವಳಿಗೂ ಕರ್ನಾಟಕ ಆಶ್ರಯ ನೀಡಿದ್ದಿದೆ.

ಯಾವುದೇ ಚಳವಳಿಯ ಪ್ರೇರಣಾತಂತು ಮನುಷ್ಯನ, ಅದರಲ್ಲೂ ಕಷ್ಟ ನಿಷ್ಠುರಗಳನ್ನು ಸ್ವತಃ ಅನುಭವಿಸಿದ ವ್ಯಕ್ತಿಯ ಆಂತರ್ಯ ಅಥವಾ ಮನೋಭೂಮಿಕೆಯಲ್ಲಿ ಚಿಗುರುವುದರಿಂದಲೇ ಅಸಮಾಧಾನವನ್ನು, ಪ್ರತಿಭಟನೆಯನ್ನು ಪ್ರಕಟಿಸುವುದಕ್ಕೆ ಭಾವಾಭಿವ್ಯಕ್ತಿಯ ಮಾರ್ಗಗಳನ್ನೇ ಅನುಸರಿಸಲಾಗುತ್ತದೆ. ಈ ಹಿನ್ನೆಲೆಯಿಂದ ನೋಡಿದಾಗ ನಮ್ಮೆಲ್ಲ ಚಳವಳಿಗಳೂ ಸಾಹಿತ್ಯವನ್ನು ಊರುಗೋಲಾಗಿಸಿಕೊಂಡು ನಡೆದಿರುವುದು ಸ್ಪಷ್ಟವಾಗಿದೆ. ವೀರಶೈವ, ದಾಸ, ದಲಿತ ಈ ಎಲ್ಲ ಚಳವಳಿಗಳ ಸಂದರ್ಭದಲ್ಲೂ ಸಾಹಿತ್ಯದ ವಿಶಿಷ್ಟ ಪ್ರಕಾರಗಳೇ ಹುಟ್ಟಿಬಂದಿವೆ. ಆಧುನಿಕ ಯುಗದಲ್ಲೂ ರೈತ, ಬಂಡಾಯ, ದಲಿತ, ಮಹಿಳಾ ಚಳವಳಿಗಳ ಸಂದರ್ಭದಲ್ಲೂ ಕತೆ, ಕಾದಂಬರಿ, ನಾಟಕ, ಕಾವ್ಯ, ಪ್ರಬಂಧ, ಪತ್ರಿಕಾ ಸಾಹಿತ್ಯ ಹೀಗೆ ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ದುಡಿಸಿಕೊಳ್ಳಲಾಗಿದೆ. ಹೀಗೆ ಯಾವ ಕಾಲಕ್ಕೂ ಪ್ರಮುಖ ಚಳವಳಿ ಆಂದೋಲನಗಳು ಸಾಹಿತ್ಯವನ್ನು ಆಧರಿಸಿಯೇ ನಡೆದಿವೆ.

ಇದೆಲ್ಲದರ ನಡುವೆ ನಮ್ಮ ನಾಡಿನ ಸರ್ವವಿಧ ವ್ಯವಸ್ಥೆಯನ್ನೂ ಅಲುಗಾಡಿಸಿಬಿಟ್ಟ, ಭಾರತೀಯರ ರಾಷ್ಟ್ರ ಪ್ರೇಮವನ್ನೇ ಪ್ರಶ್ನಿಸಿಬಿಟ್ಟ, ಭಾರತಾಂಬೆಯ ಅಸ್ತಿತ್ವವನ್ನು ಅದೇ ರೂಪದಲ್ಲಿ ಉಳಿಸಿಕೊಳ್ಳುವಲ್ಲಿ ಅವಳ ಮಕ್ಕಳ ನೈತಿಕ ಹೊಣೆಗಾರಿಕೆಯನ್ನು ಒರೆಗೆ ಹಚ್ಚಿಟ್ಟ, ಸ್ವಾತಂತ್ರ್ಯ ಚಳವಳಿಗೆ ಕರ್ನಾಟಕವೂ ತನ್ನ ಭಾವಪೂರ್ಣ ಸ್ಪಂದನೆ ನೀಡಿದೆ. ವಸಾಹತುಷಾಹಿ ಆಳ್ವಿಕೆಯ ವಿರುದ್ಧ ಹದಿನೆಂಟನೇ ಶತಮಾನದಿಂದಲೇ ಕರ್ನಾಟಕ ಹೋರಾಟ ಆರಂಭಿಸಿದೆ. ೧೭೬೩ರಿಂದ ೧೮೫೮ರವರೆಗೆ ಅವಿಭಜಿತ ಕರ್ನಾಟಕದ ಒಂದಲ್ಲಾ ಒಂದು ಭಾಗದಲ್ಲಿ ಯುದ್ಧವೇ ನಡೆದಿರುವುದು ನಮ್ಮ ಇತಿಹಾಸದಲ್ಲಿದೆ. ಮೈಸೂರು ಹುಲಿ ಟಿಪ್ಪು, ಕಿತ್ತೂರು ಚೆನ್ನಮ್ಮ, ಬಿದನೂರಿನ ಧೋಂಡೀಜಾ ವಾಘಾ, ಬೀದರ್‌ನ ಶಿವಲಿಂಗಯ್ಯ ದೇಶಮುಖ್, ಬಿಜಾಪುರದ ಸಿಂಧಗಿಯ ದಿವಾಕರ್ ದೀಕ್ಷಿತ್, ರಾಮೋಜದಿ ರೋಸ್ತೆ, ಸಂಗೊಳ್ಳಿ ರಾಯಣ್ಣ, ಬದಾಮಿಯ ನರಸಿಂಗ ಪೇಟ್ಕರ್, ಕೆಳದಿಯ ಬೂದಿಬಸಪ್ಪ, ಸುರಪುರದ ವೆಂಕಟಪ್ಪ ನಾಯಕ, ನರಗುಂದದ

ಬಾಬಾಸಾಹೇಬ್ ಭಾಸ್ಕರರಾವ್, ಮುಂಡರಗಿಯ ರಾಮರಾವ್, ಕೊಡಗಿನ ಸ್ವಾಮಿ ಅಪರಂಪಾರ ಹೀಗೆ ಬ್ರಿಟಿಷರ ವಿರುದ್ಧ ಕತ್ತಿ ಎತ್ತಿದ ವೀರರು ಕರ್ನಾಟಕದಲ್ಲಿ ಆಗಿಹೋಗಿದ್ದಾರೆ.

ಸ್ವಾತಂತ್ರ್ಯ ಸಮರದ ಸಂದರ್ಭದಲ್ಲಿ ವಸಾಹತುಷಾಹಿ ಸರ್ಕಾರಕ್ಕೆ ಇಷ್ಟೆಲ್ಲಾ ತಿರುಗೇಟು ನೀಡಿದರೂ ಕರ್ನಾಟಕ ತಿಲಕರ ಮಹಾರಾಷ್ಟ್ರದಂತೆ, ಬೋಸರ ಬಂಗಾಳದಂತೆ ಹೋರಾಡಲಾಗದುದಕ್ಕೆ ಇದ್ದ ತೊಡಕುಗಳನ್ನು ಗುರುತಿಸಿಕೊಳ್ಳಬೇಕು. ಕ್ಷೇತ್ರೀಯವಾದ ಜಾತಿ ಸಮಸ್ಯೆಗಳು ಒಂದು ಕಡೆ, ವರ್ಗೀಕೃತ ಜಾತಿ ವ್ಯವಸ್ಥೆಯಿದ್ದುದರಿಂದ ಸಮಾಜ ಹಲವು ಗುಂಪುಗಳಾಗಿ ವಿಭಜಿಸಲ್ಪಟ್ಟಿತ್ತು. ಒಂದು ವರ್ಗಕ್ಕಿದ್ದ ಸಮಸ್ಯೆ ಇನ್ನೊಂದು ವರ್ಗಕ್ಕೆ ಇಲ್ಲದೇ ಇದ್ದುದರಿಂದಲೂ, ಮತ್ತೊಂದು ವರ್ಗಕ್ಕಿದ್ದ ಅನುಕೂಲತೆಗಳು ಮಗದೊಂದು ವರ್ಗಕ್ಕೆ ಇಲ್ಲದೆ ಇದ್ದುದರಿಂದಲೂ ಒಟ್ಟಾರೆ ಜನತೆಯ 'ಏಕಧ್ವನಿ' ಬ್ರಿಟಿಷರ ವಿರುದ್ಧ ಮೊಳಗುವುದು ಸಾಧ್ಯವಾಗುವುದಿಲ್ಲ. ಜೊತೆಗೆ ಧ್ವನಿ ಎತ್ತಿ ಅದಕ್ಕೆ ಸಾಹಿತ್ಯಕ ಸ್ವರೂಪ ಕೊಡುವ ಶಕ್ತಿ ಇದ್ದ ವರ್ಗ ಸುಸ್ಥಿತಿಯಲ್ಲಿದ್ದದ್ದರಿಂದ ಅಂತಹ 'ಗಟ್ಟಿಧ್ವನಿ'ಯನ್ನು ಚಳವಳಿಯ ಪ್ರಾರಂಭದಲ್ಲಿ ಎತ್ತುವುದೇ ಇಲ್ಲ.

ಅಖಿಲ ಕರ್ನಾಟಕವನ್ನು ಒಡೆದು, ಅವು ಪರಸ್ಪರ ಮೇಲಾಟಕ್ಕಿಳಿಯುವಂತೆ ಮಾಡುವ ಬ್ರಿಟಿಷರ ತಂತ್ರ ಇನ್ನೊಂದೆಡೆ. ೧೭೯೯ರಲ್ಲಿ ನಡೆದ ಶ್ರೀರಂಗಪಟ್ಟಣದ ಕೊನೆಯ ಯುದ್ಧದಲ್ಲಿ ಮೈಸೂರು ಹುಲಿಯ ಅವಸಾನವಾಗುವುದರೊಂದಿಗೆ ಇಡೀ ಮೈಸೂರು ಸಂಸ್ಥಾನದ ಆಡಳಿತ ಬ್ರಿಟಿಷರ ಕೈವಶವಾಯಿತು. ಖಡಕಿ ಯುದ್ಧ (೧೮೧೮)ದೊಂದಿಗೆ ಅರಸೊತ್ತಿಗೆ ಎನ್ನುವುದೇ ಇನ್ನಿಲ್ಲವಾಯಿತು. ಬ್ರಿಟಿಷರೊಂದಿಗೆ ಸರಿಸಾಟಿಯಾಗಿ ಸೆಣೆಸಬಲ್ಲ ಸಮರ್ಥ ರಾಜರೇ ಉಳಿಯಲಿಲ್ಲ. ನಿಜಾಮನನ್ನು ಮೊದಲ್ಗೊಂಡು ಸಂಪೂರ್ಣ ಆಳುವವರ್ಗದ ಮೇಲೆ ಬ್ರಿಟಿಷರು ಸಂಪೂರ್ಣ ಹತೋಟಿ ಸಾಧಿಸಿದರು. ಮೊದಲು 'ಕೆನರಾ' ೧೭೯೯ರಲ್ಲಿ, ನಂತರ ೧೮೦೦ರಲ್ಲಿ ಬಳ್ಳಾರಿಯ ಕೆಲವು ಭಾಗಗಳು, ೧೮೧೭ರಲ್ಲಿ ಧಾರವಾಡ, ನಂತರ ಬಿಜಾಪುರ, ಬೆಳಗಾವಿ, ೧೮೩೪ರಲ್ಲಿ ಕೊಡಗು ಹೀಗೆ ಒಂದೊಂದಾಗಿ ಎಲ್ಲವೂ ಬ್ರಿಟಿಷರ ಅಧೀನಕ್ಕೊಳಪಟ್ಟ ಮೇಲೆ, ಆಡಳಿತಾತ್ಮಕ ದೃಷ್ಟಿಯಿಂದ ರಾಜ್ಯವನ್ನು ಹಲವು ಭಾಗಗಳಾಗಿ ವಿಂಗಡಿಸಿಬಿಟ್ಟರು. ಜೊತೆಗೆ ನೆರೆಹೊರೆಯ ಪ್ರಾಂತ್ಯಗಳಿಗೆ ಅನೇಕ ಪ್ರದೇಶಗಳನ್ನು ಸೇರಿಸಿಯೂ ಬಿಟ್ಟರು. ಹೀಗೆ ಆಡಳಿತದ ಹೆಸರಿನಲ್ಲಿ ರಾಜ್ಯ ಯಾವಾಗ ಪ್ರಾದೇಶಿಕವಾಗಿ ಛಿದ್ರವಾಯಿತೋ ಆಗ ಬ್ರಿಟಿಷರ ವಿರುದ್ಧ ಒಗ್ಗೂಡಿದ ಕರ್ನಾಟಕದ ಜನತೆ ಒಟ್ಟಾಗಿ ಧ್ವನಿ ಎತ್ತುವುದೂ ಸಾಧ್ಯವಿರಲಿಲ್ಲ.

ಇವೆರಡಕ್ಕೂ ಭಿನ್ನವಾಗಿ, ಬ್ರಿಟಿಷ್ ಆಳುವ ವರ್ಗಕ್ಕೆ ದೇಶೀ ರಾಜರುಗಳಿಂದ ದೊರೆತ ಅಲಿಖಿತ ಸಹಮತ ಕೂಡ ಬ್ರಿಟಿಷ್ ವಿರುದ್ಧದ ಹೋರಾಟದ ತೀವ್ರತೆಯನ್ನು ಕುಗ್ಗಿಸಿದೆ. ಆದರೆ ಬ್ರಿಟಿಷ್ ಆಳ್ವಿಕೆಗೆ ಜನತೆಯಿಂದ ಸಂಪೂರ್ಣ ಬೆಂಬಲ ಸಿಕ್ಕಿತೆಂತಲೂ, ಅದಕ್ಕೆ ವಿರೋಧವೇ ಇರಲಿಲ್ಲವೆಂತಲೂ ಅರ್ಥವಲ್ಲ. ಅಲ್ಲಲ್ಲಿ, ಆಗಾಗ ಪ್ರತಿರೋಧ ವ್ಯಕ್ತವಾಗುತ್ತಲೇ ಇತ್ತು. ಈ ಸಂದರ್ಭದಲ್ಲೇ ಅಂದರೆ ಸುಮಾರು ೧೮೫೭ರ ಕಾಲದಲ್ಲಿ ಬ್ರಿಟಿಷರು ಸ್ಥಳೀಯ ರಾಜರ, ಆಡಳಿತಗಾರರ ನೆರವು ಪಡೆದು ಜನರ ಆಕ್ರೋಶವನ್ನು ಹತೋಟಿಯಲ್ಲಿ ಇರಿಸಿಕೊಂಡರು. ಮರಾಠಾ ಪೇಶ್ವೆಗಳು ಮತ್ತು ಹೈದರಾಬಾದಿನ ನಿಜಾಮ, ಮೈಸೂರಿನ ವಿರುದ್ಧ ಸಂಚು ಹೂಡಲು ಬ್ರಿಟಿಷರೊಡಗೂಡಿದರು. ವಸಾಹತುಶಾಹಿಗಳೊಂದಿಗೆ ಷಾಮೀಲಾಗಿದ್ದ ಸ್ಥಳೀಯ ರಾಜರು ಜನರನ್ನೂ, ಸಾಮಾನು ಸರಂಜಾಮುಗಳನ್ನೂ ಬ್ರಿಟಿಷರಿಗೆ ಒದಗಿಸಿದರು. ಇದಕ್ಕೆ ಪ್ರತಿಯಾಗಿ ತಮಗೆ ನೆರವಾದ ರಾಜರಿಗೆ ಬ್ರಿಟಿಷರು ಸಿಂಹಾಸನ ಉಳಿಸಿಕೊಟ್ಟರು. ಇಷ್ಟಲ್ಲದೆ ಸಾಮಂತ ಮೈತ್ರಿ ಪದ್ಧತಿಯನ್ನು ರೂಪಿಸಿದ ಇಂಗ್ಲಿಷರು, ಈ ಪದ್ಧತಿಯನ್ವಯ ತಮ್ಮ ಪರಮಾಧಿಕಾರವನ್ನು ಒಪ್ಪಿಕೊಂಡ ದೇಶೀಯ ರಾಜರು ತಮ್ಮ ರಾಜ್ಯಗಳನ್ನು ಆಳಿಕೊಳ್ಳಲು ಅನುವು ಮಾಡಿಕೊಟ್ಟಿತು. ಹೀಗೆ ಸ್ಥಳೀಯ ರಾಜಷಾಹಿಯೂ ಬ್ರಿಟಿಷರಿಗೆ ಅಘೋಷಿತ ಬೆಂಬಲ ನೀಡಿದ್ದು, ಸ್ಥಳೀಯ ಜನತೆಯ ಆಕ್ರೋಶವನ್ನೂ ಅಲ್ಪಪ್ರಮಾಣದ ವಿರೋಧಗಳನ್ನೂ ಹೊರತುಪಡಿಸಿ ತಹಬಂದಿಯಲ್ಲೇ ಇರಿಸಲು ಸಾಧ್ಯವಾಯಿತು.

ಹೀಗೆ ಪುರೋಹಿತಶಾಹಿ, ವಸಾಹತುಶಾಹಿ ಹಾಗೂ ಸ್ಥಳೀಯ ರಾಜಶಾಹಿಗಳ ನಡುವೆ ಇದ್ದ ಒಂದು ಸಮಾನ ಮನಸ್ಕತೆ ಹಾಗೂ ಸಮಾನೋದ್ದೇಶ ಕನ್ನಡಿಗರು ಉಳಿದ ರಾಜ್ಯಗಳ ಜನತೆಯಂತೆ ಧ್ವನಿ ಎತ್ತಲು ಅವಕಾಶವಿಲ್ಲದಂತೆ ಮಾಡಿದ್ದೇ ಅಲ್ಲದೆ ೧೯೨೦ರ ದಶಕದ ಕೊನೆಕೊನೆಯವರೆಗೂ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿ ವಿಳಂಬಗತಿಯಲ್ಲೇ ನಡೆಯುವಂತೆ ಮಾಡಿತು.

ಇದರ ಪರಿಣಾಮದ ಮತ್ತೊಂದು ಮುಖವಾಗಿ ನಮಗೀಗ ಗೋಚರವಾಗಿರುವುದೇನೆಂದರೆ ಸ್ವಾತಂತ್ರ್ಯ ಚಳವಳಿಯ ನೆನವಾಗಿ ಉಳಿಯುವ ಸಾಹಿತ್ಯ ಆಗ ಕನ್ನಡದಲ್ಲಿ ದಟ್ಟವಾಗಿ, ಸಾಂದ್ರವಾಗಿ ರಚನೆ ಆಗಿಲ್ಲ ಎನ್ನುವುದು ಅಥವಾ ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದಂತೆ ಕನ್ನಡದಲ್ಲಿ ದೊಡ್ಡ ಪ್ರಮಾಣದಲ್ಲಿ ಸಾಹಿತ್ಯ ರಚನೆ ಆಗಿಲ್ಲದಿರುವುದನ್ನು ನೋಡಿದಾಗ ಚಳವಳಿಯಲ್ಲಿ ಕರ್ನಾಟಕದ

ಪಾತ್ರ ಅಥವಾ ಪಾಲು ದೊಡ್ಡದೂ, ಗಾಢವಾದ್ದೂ ಆಗಿರಲಿಲ್ಲ ಎನ್ನುವಂತಿದೆ. ಅದರ ಜೊತೆಗೆ ಕನ್ನಡದ ಮುದ್ರಣ ಕ್ಷೇತ್ರದಲ್ಲಿ ಕ್ರಿಶ್ಚಿಯನ್ ಮಿಷನರಿಗಳದೇ ಪ್ರಾಬಲ್ಯವಿದ್ದುದರಿಂದ ಬ್ರಿಟಿಷರ ವಿರುದ್ಧ ಕನ್ನಡಿಗರು ಪ್ರಚುರಪಡಿಸಿರಬಹುದಾದ ಸಿಟ್ಟು ಸಿಡುಕುಗಳನ್ನು ಸಾಹಿತ್ಯ ರೂಪದಲ್ಲಿ ಹಿಡಿದಿಡುವುದು ಸಾಧ್ಯವಾಗದೇ ಹೋಗಿರಲೂಬಹುದು.

ಇದಲ್ಲದೆ, ಕನ್ನಡಿಗರ ಎದೆಯೊಳಗೆ ರಾಷ್ಟ್ರೀಯತೆಯ, ರಾಷ್ಟ್ರೀಯ ಭಾವೈಕ್ಯತೆಯ, ರಾಷ್ಟ್ರ ಸ್ವಾತಂತ್ರ್ಯದ ಸೂಕ್ಷ್ಮ ಪದರಗಳು ಬಿಡಿಸಿಕೊಳ್ಳುವ ಹೊತ್ತಿಗೆ ಅವರು ಬಾಲಗಂಗಾಧರ ತಿಲಕರ ಗಣೇಶೋತ್ಸವದಂತಹ ಸಂಘಟನೆಗೆ, ಕೇಸರಿಯಂತಹ ಪತ್ರಿಕೆಯ ವಿಚಾರಗಳಿಗೆ ಭಾವನಾತ್ಮಕ ಸ್ಪಂದನೆ ನೀಡತೊಡಗಿ, ಒಳಗೊಳಗೇ ವಸಾಹತು ಸರ್ಕಾರದ ವಿರುದ್ಧ ಕಿಡಿಕಾರತೊಡಗಿದ್ದು, ಜೊತೆಗೆ ಸ್ಥಳೀಯವಾದ ವರ್ಣಭೇದದ ಸಮಸ್ಯೆ, ಆಳುವ ಸ್ಥಳೀಯ ರಾಜರಿಗೆ ಮತ್ತು ಬ್ರಿಟಿಷ್ ದಣಿಗಳಿಗೆ ಮಣಿವ ಇಬ್ಬಗೆಯ ಗುಲಾಮಗಿರಿ, ಇಂಥ ಆಂತರಿಕ ನೋವುಗಳೂ ಜನತೆಯ ಅಭಿವ್ಯಕ್ತಿ ಸ್ಫೋಟಕ್ಕೆ ಕಾರಣವಾಗಬೇಕಿತ್ತು. ಆದರೆ, ಕನ್ನಡಿಗರಲ್ಲಿ ಸಾಹಿತ್ಯಕ ಅಭಿವ್ಯಕ್ತಿ ಸಾಧ್ಯವಾಗದೇ ಹೋಗುವುದು, ಮುಖ್ಯವಾಗಿ ಸುಶಿಕ್ಷಿತ ಕನ್ನಡಿಗರು ಮೇಲ್ವರ್ಗದವರೂ, ಇಂಗ್ಲಿಷ್ ಪ್ರಭಾವಕ್ಕೆ ಮಣಿದವರೂ ಆಗಿದ್ದ ಕಾರಣಕ್ಕೆ. ಮೇಲುದರ್ಜೆಯ ಸಮುದಾಯದಿಂದ ಬಂದಂಥ ಈ ಬರಹಗಾರರಿಗೆ ಮರಾಠಿ ಅಥವಾ ಬೆಂಗಾಲಿ ಭಾಷೆಗಳಲ್ಲಿ ಕಂಡುಬರುವ ಸುಧಾರಣಾವಾದವನ್ನು ಎತ್ತಿಹಿಡಿಯುವುದು ಬೇಕಾಗುವುದಿಲ್ಲ. ಆದರೂ ಬಹುತೇಕ ಬರಹಗಾರರು ಇದೇ ಸಾಮಾಜಿಕ ವರ್ಗಕ್ಕೆ ಸೇರಿದವರಾಗಿದ್ದರೂ ರಾಷ್ಟ್ರೀಯ ಚಳವಳಿಯನ್ನು ಬರಹಕ್ಕೆ ವಸ್ತುವಾಗಿ ಆಯ್ದುಕೊಳ್ಳುವ ಸಾಮಾಜಿಕ ಅನಿವಾರ್ಯತೆ ಅವರಿಗೂ ಇರುತ್ತದೆ. ಈ ವರ್ಗದವರು ಅಂದರೆ ಬರಹಗಾರರು ಚಳವಳಿಗೆ ತೀರಾ ಬೆಂಬಲವಾಗಿ ನಿಲ್ಲದೇ ಹೋದರೂ, ಒಪ್ಪಿಯೋ ಒಲ್ಲದೆಯೋ ಒಂದಷ್ಟು ಕೃತಿಗಳನ್ನಂತೂ ನೀಡಿರುವುದನ್ನು ನೋಡಿದಾಗ, ಅವರ ಆಂತರ್ಯದ ಇಬ್ಬಗೆ ಅರ್ಥವಾಗುತ್ತದೆ. ಜೊತೆಗೆ ಆ ಕಾಲದ ಸಾಹಿತ್ಯ ತೀರಾ 'ಗಟ್ಟಿ ಸಾಹಿತ್ಯ' ಎಂದು ಹೇಳಲಾಗದೇ ಹೋಗುವುದಕ್ಕೆ ನಿಖರ ಕಾರಣವಾಗುತ್ತದೆ.

ಆದರೆ ನಿಮ್ನವರ್ಗದ ಜನತೆಗೆ ಹೋರಾಟ ಬೇಕಿತ್ತು. ಆ ಹೋರಾಟಕ್ಕೆ ಭಾಷಿಕ ಅಭಿವ್ಯಕ್ತಿ ನೀಡುವ ಸಶಕ್ತತೆ ಅವರಿಗೆ ಇಲ್ಲದೇ ಹೋಗಿರುವುದರಿಂದ, ಅವರ ಶಕ್ತ್ಯಾನುಸಾರ ಹಾಡಿದ ಹಾಡುಗಳೂ ನಮಗೀಗ ಲಭ್ಯವಿವೆ, ಆದರೆ ದುರ್ಬಲವಾಗಿವೆ. ಹೀಗೆ ಮೇಲ್ವರ್ಗ ಒಲ್ಲದ ಮನಸ್ಸಿನಲ್ಲಿ, ಆದರೆ ತನ್ನ ಶೈಕ್ಷಣಿಕ ಸಾಮರ್ಥ್ಯದೊಂದಿಗೆ; ಕೆಳವರ್ಗ ಸಾಲದ ಸಾಮರ್ಥ್ಯದಲ್ಲಿ, ಆದರೆ ತನ್ನ ಮನೋಭಿಲಾಷೆಯೊಂದಿಗೆ ಸಾಹಿತ್ಯ ರಚಿಸಿರುವುದು ಗಮನಾರ್ಹ ಅಂಶವಾಗಿದೆ.

ಕರ್ನಾಟಕಕ್ಕಿಂತ ಭಿನ್ನವಾಗಿ ಬೆಂಗಾಲಿ ಮತ್ತು ಮರಾಠಿ ಭಾಷೆಗಳಲ್ಲಿ ಸುಶಿಕ್ಷಿತ ವರ್ಗವೇ ನೀಡುವ ಸಾಹಿತ್ಯಕ ಕೃತಿಗಳು ಸಂಘರ್ಷಕ್ಕಿಳಿಯುವಂತೆ ಅಲ್ಲಿನ ಜನತೆಯನ್ನು ತಿವಿದೆಬ್ಬಿಸುವ, ಆದರೆ ಕನ್ನಡದಲ್ಲಿ ತೀರಾ ಮಂದಗಾಮಿ ನಡೆ, ಸುಶಿಕ್ಷಿತ, ಅಶಿಕ್ಷಿತ ವರ್ಗಗಳೆರಡರಿಂದಲೂ ಬಹುತೇಕ ಶೀತಲ ಮೌನ, ಕೆಲವೊಮ್ಮೆ ಕ್ಷೀಣಧ್ವನಿ ದಾಖಲಾಗಿದೆ. ಕರ್ನಾಟಕದಲ್ಲಿ ಎಲ್ಲೂ ಅಸಹನೆಯ ಕಟ್ಟೆ ಒಡೆಯುವುದಿಲ್ಲ, ಕನ್ನಡ ಸಾಹಿತ್ಯಗಂಗೆ ಭೋರ್ಗರೆಯುವುದಿಲ್ಲ.

ಮಂದಗಾಮಿಯಾಗೇ ಪ್ರವಹಿಸಿದ ಕನ್ನಡಿಗರ ಆಗಿನ ಹೋರಾಟದ ಫಲವಾಗಿ ಸೃಜನಶೀಲ ನೆಲೆಯ ಕಾವ್ಯ ಸಾಹಿತ್ಯ ಒಂದಿಷ್ಟು ಸೃಷ್ಟಿಯಾಗತೊಡಗಿತಾದರೂ ಮರಾಠಿ, ಬೆಂಗಾಲಿ ಕೃತಿಗಳಂತೆ ಪ್ರಭಾವಶಾಲಿಯಾಗಲಿಲ್ಲ, ಜನಮಾನಸದ ಪರಿವರ್ತನೆಗೆ ಸಹಕಾರಿಯೂ ಆಗಲಿಲ್ಲ. ಅಕ್ಷರಸ್ಥ ಕನ್ನಡ ಜನಸಮೂಹವನ್ನು ಸ್ವಾತಂತ್ರ್ಯ ಯುದ್ಧದ ಮುಖ್ಯವಾಹಿನಿಗೆ ಸೇರಿಸಿಕೊಳ್ಳುವಲ್ಲೂ ಮುಂದಾಗಲಿಲ್ಲ. ಅದೇ ರೀತಿ ಆರ್ಥಿಕವಾಗಿ ಬಲಾಢ್ಯರಾಗಿದ್ದವರೂ ಸಹ ಚಳವಳಿಗೆ ಸೇರ್ಪಡೆಯಾಗದೇ ಹೋದದ್ದು ಹೋರಾಡುವ ಮನಸ್ಸಿದ್ದ ಸಾಮಾನ್ಯ ಜನತೆಗೆ ನೈತಿಕ ಬೆಂಬಲ, ಹೋರಾಡುವ ಸ್ಥೈರ್ಯ, ಧೈರ್ಯ, ಹುಮ್ಮಸ್ಸು ತುಂಬಿಸಿಕೊಳ್ಳಲು ತೊಡಕಾಯಿತು.

ಸಾಮಾಜಿಕ ಪುನರುತ್ಥಾನದ ಬಗ್ಗೆ ಹೊಸ ಕನಸು ಬಿತ್ತಿದ ಗಾಂಧೀಜಿ ಕನ್ನಡದ ಸಾಹಿತ್ಯಕ ಪುನರುತ್ಥಾನಕ್ಕೂ ಹೊಸ ಕಸುವು ನೀಡಿದರು. ಹೀಗೆ ನೋಡಿದಾಗ ಕನ್ನಡ ಕಾವ್ಯ ಸಾಹಿತ್ಯದ ಮೇಲೆ ತಿಲಕರಿಗಿಂತಲೂ ಆಳವಾದ, ದಟ್ಟವಾದ ಪ್ರಭಾವ ಬೀರಿದವರು ಗಾಂಧೀಜಿಯೇ. ತಿಲಕರ ವಾದದಲ್ಲಿ ನಂಬಿಕೆಯಿಟ್ಟ ಚಳವಳಿಗಾರರು ಅತೀ ಉತ್ತಮ ಮಟ್ಟದ ಶ್ರೇಷ್ಠ, ಪ್ರಭಾವೀ ಕಾವ್ಯವನ್ನೇನೂ ಕನ್ನಡದಲ್ಲಿ ರಚಿಸದಿದ್ದರೂ, ಗಾಂಧೀಜಿಯವರ ಪ್ರಭಾವದಿಂದ ಪ್ರೇರಿತವಾದ ಚಳವಳಿಗಾರಲ್ಲದವರೂ ಬರವಣಿಗೆಗೆ ತೊಡಗಿದರು. ಆದರೆ ಅನೇಕ ಸ್ಥಾಪಿತ ಬರಹಗಾರರಿಗೆ ಸಾಂಸ್ಕೃತಿಕ ಚಳವಳಿಗಳ ಕಡೆಗೆ ಒಲವಿತ್ತಾದರೂ, ತಿಲಕ್ ಅಥವಾ ಗಾಂಧೀಜಿ ನೇತೃತ್ವದ ರಾಷ್ಟ್ರೀಯ ಆಂದೋಲನದಲ್ಲಿ ಆಸಕ್ತಿ ಇರಲಿಲ್ಲ. ಬಿ.ಎಂ. ಶ್ರೀಕಂಠಯ್ಯ, ಡಿ.ವಿ. ಗುಂಡಪ್ಪ, ಮಾಸ್ತಿ ಮುಂತಾದವರೆಲ್ಲ ಉದಾರವಾದೀ ಧೋರಣೆಗಳಿಂದಲೇ ಸಾಹಿತ್ಯಕ ಚಿಂತನೆ ನಡೆಸಿದ್ದಾರೆಯೇ ಹೊರತು, ವಸಾಹತುಶಾಹಿಗೂ ಅದನ್ನು ವಿರೋಧಿಸುವ ಭಾರತೀಯ

ರಾಷ್ಟ್ರೀಯ ಪರಿಕಲ್ಪನೆಗೂ ನಡುವಿನ ಅಂತರ್ವಿರೋಧವನ್ನು ಗಂಭೀರ ಚಿಂತನೆಗೆ ಮಂಥನಕ್ಕೆ ಒಳಪಡಿಸಿಯೇ ಇಲ್ಲ. ಇಷ್ಟಾದರೂ ಗಾಂಧೀಶಕೆಯಲ್ಲಿ ಬರೀ ಕಾವ್ಯವಷ್ಟೇ ಅಲ್ಲದೆ ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿಯೂ ಗಮನಾರ್ಹ ಕೃತಿಗಳು ರಚನೆಯಾದವು.

ಗಾಂಧೀವಾದದ ಹೊಸ ಅಲೆಯ ಫಲವಾಗಿ ಇಪ್ಪತ್ತನೇ ಶತಮಾನದಲ್ಲಿ ಎರಡು ದಶಕಗಳು ಕಳೆವ ಹೊತ್ತಿಗೆ ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಹೊಸ ಅಧ್ಯಾಯ ಆರಂಭವಾಯಿತು. ಈ ಸಂದರ್ಭದಲ್ಲಿ ಸಾಹಿತ್ಯಕ ಪುನರುತ್ಥಾನದ ಜೊತೆಜೊತೆಗೆ ರಾಷ್ಟ್ರೀಯ ಚಳವಳಿಯೂ ಬಲಿಷ್ಠವಾಯಿತು. ಗಾಂಧೀಯುಗದಲ್ಲಿ ಬರೀ ಕನ್ನಡ ಸಾಹಿತ್ಯವಷ್ಟೇ ಅಲ್ಲ, ಇಡೀ ದಕ್ಷಿಣ ಭಾರತೀಯ ಸಾಹಿತ್ಯ ನವೋದಯ ಹೆಚ್ಚು ಸಮಗ್ರವೂ ಅರ್ಥಪೂರ್ಣವೂ ಆದ ಘಟ್ಟ ಪ್ರವೇಶಿಸಿತು. ಕನ್ನಡದಲ್ಲಿ ಕುವೆಂಪು, ಬೇಂದ್ರೆಯಂತೆಯೇ ತೆಲುಗಿನ ದಾಮರಾಜು ಪುಂಡರೀಕಾಕ್ಷುಡು, ತಮಿಳಿನ ಕಲ್ಕಿ ಆರ್. ಕೃಷ್ಣಮೂರ್ತಿ, ಕಲ್ಯಾಣಸುಂದರ ಮೊದಲಿಯಾರ್. ಮಲೆಯಾಳಂನ ಕುಮಾರನ್ ಆಶಾನ್, ವಲ್ಲತ್ತೋಳ್ ಬೆಳಕಿಗೆ ಬಂದರು. ಕುಂಟುತ್ತಾ ಸಾಗುತ್ತಿದ್ದ ಸ್ವಾತಂತ್ರ್ಯ ಸಮರಕ್ಕೆ ಭಾವತೀವ್ರತೆ ದೊರೆತು ಹೋರಾಟ ಸಂಕೀರ್ಣ ಸ್ವರೂಪ ಪಡೆಯಿತು. ಈ ಸಂದರ್ಭದಲ್ಲಿ ವಸಾಹತು ದೊರೆಗಳ ವಿರುದ್ಧವಷ್ಟೇ ಅಲ್ಲದೆ ಆಂತರಿಕ ಬಿಕ್ಕಟ್ಟುಗಳತ್ತಲೂ ವಿಚಾರಧಾರೆ ಹರಿಯತೊಡಗಿತು. ಬ್ರಿಟಿಷರ ವಿರುದ್ಧವಾಗಿ ಮೊರೆದ ರಾಷ್ಟ್ರೀಯ ಭಾವ, ಸಾಮಾಜಿಕಾರ್ಥಿಕ ಅಸಮಾನತೆಯ ವಿರುದ್ಧ ಸೆಟೆದು ನಿಂತ ವೈಯಕ್ತಿಕ ಭದ್ರತೆಯ ಪ್ರಶ್ನೆ, ಶ್ರೇಣೀಕರಣದಿಂದಾದ ತಾರತಮ್ಯದ ವಿರುದ್ಧದ ನೋವಿನ ಅಲೆ ಎಲ್ಲವೂ ಸ್ವಾತಂತ್ರ್ಯ ಸಂಗ್ರಾಮದ ಮೂಲನೆಲೆಯಿಂದಲೇ ಹೊಮ್ಮಿದ್ದು ವಿಶೇಷ. ಈ ಮೂಲಕ ರಾಷ್ಟ್ರದ್ದಷ್ಟೇ ಅಲ್ಲ ವೈಯಕ್ತಿಕ ಸ್ವಾತಂತ್ರ್ಯದ ಪ್ರಜ್ಞೆಯೂ ಕನ್ನಡಿಗರಲ್ಲಿ ಗರಿಬಿಚ್ಚಿತು. ಕಾವ್ಯಧಾರೆ ಧುಮ್ಮಿಕ್ಕಿತು.

ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಅದನ್ನೇ ಕುರಿತು ರಚಿಸಲಾಗಿರುವ ಸಂಪೂರ್ಣ ಕನ್ನಡ ಕಾವ್ಯವನ್ನು ಪ್ರಭಾವ, ಪ್ರೇರಣೆ, ಸ್ಫೂರ್ತಿಯ ಆಧಾರದ ಮೇಲೆ ಎರಡು ವರ್ಗಗಳಾಗಿ ನೋಡಬಹುದು.

೧. ಮಹಾರಾಷ್ಟ್ರ ಮತ್ತು ಬಂಗಾಳ ಹೋರಾಟಗಳ ಪ್ರಭಾವದಿಂದ ಮೂಡಿಬಂದ ಕನ್ನಡ ಕಾವ್ಯ.

೨. ತಿಲಕೋತ್ತರ ಕಾಲದಲ್ಲಿ ಗಾಂಧೀಜಿಯವರ ಪ್ರಭಾವದಿಂದ ಒಡಮೂಡಿದ ಕನ್ನಡ ಕಾವ್ಯ.

ಇದಲ್ಲದೆ, ಆ ಸಂದರ್ಭದ ಕನ್ನಡ ಕಾವ್ಯ ಪ್ರತಿಬಿಂಬಿಸುವ ಆಶಯದ ಆಧಾರದ ಮೇಲೆ ಅದನ್ನು ಮೂರು ಮುಖಗಳಲ್ಲಿ ಗುರುತಿಸಬಹುದು.

೧. ರಾಷ್ಟ್ರೀಯವಾದ

೨. ವಿಚಾರವಾದ

೩. ಗಾಂಧೀವಾದ

ಈ ಮೂರೂ ರೀತಿಯ ವಿಭಾಗೀಕರಣವಲ್ಲದೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಸಂಬಂಧಿಸಿದ ಕನ್ನಡ ಕಾವ್ಯವನ್ನು ಕಾಲಮಾನದ ದೃಷ್ಟಿಯಿಂದ ಮತ್ತೆ ಎರಡು ಗುಂಪುಗಳಾಗಿ ಅಧ್ಯಯನ ಮಾಡಬಹುದು.

೧. ಸ್ವಾತಂತ್ರ್ಯ ಪೂರ್ವಯುಗ

೨. ಸ್ವಾತಂತ್ರ್ಯೋತ್ತರ ಯುಗ

ತಿಲಕರ ಪ್ರಭಾವದಿಂದ ಪ್ರೇರೇಪಿತವಾದ ಕನ್ನಡ ಕಾವ್ಯಗುಚ್ಛದಲ್ಲಿ ನಾಡಿನ ಜನತೆ ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಳ್ಳುವಂತೆ ಪ್ರೇರೇಪಿಸುವ, ರಾಷ್ಟ್ರಪ್ರೇಮವೇ ವಸ್ತುವಾಗುವ ಕವನಗಳಿವೆ. ಮುಖ್ಯವಾಗಿ ಇವು ಹಾಡುಗಳು, ಗೇಯಗೀತೆಗಳು. ಇಂತಹ ಸುಮಾರು ೪೦೦ಕ್ಕೂ ಹೆಚ್ಚು ಹಾಡುಗಳನ್ನು ಸಂಗ್ರಹಿಸಿರುವುದಾಗಿ ಡಾ। ಸೂರ್ಯನಾಥ ಕಾಮತ್ ಹೇಳಿದ್ದಾರೆ. ಕನ್ನಡದ ಪ್ರಸಿದ್ಧ ಕವಿಗಳೂ, ಸಾಮಾನ್ಯ ಕವಿಗಳೂ, ಹೆಸರೇ ಗೊತ್ತಿಲ್ಲದ ಅಜ್ಞಾತ ಕವಿಗಳೂ ಇವನ್ನು ರಚಿಸಿದ್ದಾರೆ. ಪ್ರಭಾತ್‌ಫೇರಿಗೆ, ಸಾರ್ವಜನಿಕ ಸಭೆಗೆ, ಸಮೂಹ ಗಾಯನಕ್ಕೆ ಹೊಂದುವಂಥ ವೀರಾವೇಶದ, ನೇರ ನಡೆಯ(ಲಯ), ನುಡಿಯ ಹಾಡುಗಳಿವು. ಅಚ್ಚು ಕಾಣದೆ ಕರ್ಣಾಕರ್ಣಿಯಾಗಿ ಹರಿದುಬಂದ ದೇಶಭಕ್ತಿ ಗೀತೆಗಳೂ ಇಲ್ಲಿವೆ. ಹಾಡುವುದಕ್ಕೆ ಒಗ್ಗುವ ಜನಪದ ಗೀತೆಗಳು, ಲಾವಣಿಗಳು, ಗೀಗೀ ಪದಗಳ ಧಾಟಿಯಲ್ಲಿ ರಚಿಸಿದ ಗೀತೆಗಳು ಲಭ್ಯವಾಗಿವೆ. ಒಂದಿಷ್ಟು ಗಿಗೀ, ಲಾವಣಿಗಳನ್ನು ಗಮನಿಸೋಣ. ಇಂಗ್ಲಿಷರು ಹುಟ್ಟುವಳಿಯ ಮೇಲೆ ತೆರಿಗೆ ವಿಧಿಸಿದಾಗ ನೊಂದ ಕನ್ನಡಿಗರ ಹಾಡಿದು.

ಏನ ಹೇಳಲಿ ಜನ್ಮದ ಗೋಳಾ
ಇಂಗರಜಿ ಉಪದರ ಆದೀತು ಬಹಳಾ
ಬಡವರು ಅಳತಾರೊ ಗಳಾಗಳಾ ಮಾಡತಾರೊ ಚಿಂತಿ

ಕಠಿಣ ಬಡವರ ತುಂಬೋದು ಹೊಟ್ಟಿ
ಮಾರಿ ಕೊಟ್ಟಾರೊ ನೂಲುವ ರಾಟಿ
ದುಡ್ಡಿನ ಆಶೆ ಹತ್ತಿತ ಸರಕಾರಕ.

ತಮ್ಮ ಸ್ವಾರ್ಥ ಲಾಭಕ್ಕಾಗಿ ಮೇಲ್ವರ್ಗದ ವಿದ್ಯಾವಂತ ಜನ ಬ್ರಿಟಿಷ್ ಸರ್ಕಾರದ ದಾಸ್ಯವನ್ನೊಪ್ಪಿ ನಡೆಯುತ್ತಾರಾದರೂ ದೀನವರ್ಗದ ಜನತೆ ದಾಸ್ಯವನ್ನು ಧಿಕ್ಕರಿಸುತ್ತಾರೆ. ಆದರೆ ಅದನ್ನು ಅಭಿವ್ಯಕ್ತಿಸುವಲ್ಲಿ, ಸಾಹಿತ್ಯ ರೂಪದಲ್ಲಿ ಪ್ರಚುರಪಡಿಸುವಲ್ಲಿ ವಿದ್ಯಾವಂತರಷ್ಟು ಶಕ್ತಿ ಇರದೆ ಹೇಳಬೇಕಾದದ್ದನ್ನು ಬಿಗಿಯಾಗಿ ಹೇಳಲಾರದವರಾಗಿದ್ದಾರೆ. ಆದರೆ ಕೆಚ್ಚು, ಬಂಡಾಯ, ಶಕ್ತಿ ಮೀರಿ ಕೂಗುವ ಹಂಬಲ ಅವರ ಹಾಡುಗಳಲ್ಲಿ ಕಂಡುಬರುತ್ತವೆ. ನರಗುಂದ, ಮುಂಡರಗಿಯ ಲಾವಣಿಗಳಲ್ಲಿ ಕಿತ್ತೂರು, ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ಲಾವಣಿಗಳಲ್ಲಿ, ಗೀಗೀಗಳಲ್ಲಿ ಅದನ್ನು ಗುರುತಿಸಬಹುದು.

ಅಕ್ಕತಂಗಿ ತಾಯಿಗಳಿರಾ ಚ್ವಕ್ಕ ಚಿನ್ನದಂತ ಮಾತು ಅಕ್ಕರಿತಿಲೆ ನಿಮ್ಮ
ಮುಂದೆ ಹೇಳುವೆನಾ॥ ಖೋಡಿ ಗಂಡಸರ ಕೆನ್ನಿ ಮ್ಯಾಲ ಮೂಡು
ಹಂಗ ಕೈ ಬೆರಳು ಪಾಡತಂಗ ಹೊಡೆದ ಕಲಸರಿ ಬುದ್ದಿಯಾನಾ....

ಕಿತ್ತೂರ ಚನ್ನಮ್ಮನ ಶೌರ್ಯ। ಥ್ಯಾಕ್ರೆನ್ ಹೊಡೆದ ಧೈರ್ಯ
ಉಪದೇಶ ಮಾಡಿದಳು ಸಂಗೊಳ್ಳಿ ರಾಯಣ್ಣಗ। ಪ್ರಾಣ ಹೋದರ
ಸುದ್ದಾ ನಮ್ಮ ರಾಜ್ಯ ಕೊಡಬ್ಯಾಡ ಬ್ರಿಟಿಷರ ಕೈಯಾಗ ॥

ವೀರ ಚೆನ್ನಮ್ಮನಂಗ ನೀವು ಘೋರಬಿಟ್ಟ ರಾಯಣ್ಣಂಗ
ಮಾಡಬೇಕ್ರಿ ತಾಯಿ ನಿಮ್ಮ ರಾಯರನ್ನಾ ॥

(ಗೀಗೀ ಪದ - ಹುಲಕುಂದ ಭೀಮಕವಿ)

ಜಪಿಸಿರಿ ಸ್ವರಾಜ್ಯ ಮಂತ್ರವನೂ।ಧರಿಸಿರಿ ಸ್ವದೇಶಿ ವಸ್ತ್ರವನೂ
ಮೂರವತಾರದ ಮೂರ್ತಿಗಳಾಗಿಹ। ಧೀರರು ದೇಶದೊಳು।
ಪುಟ್ಟಿದರೂ। ಧೀರರು ದೇಶದೊಳು॥ ಪಾರತಂತ್ರ್ಯವೀ
ಸೂತ್ರವ ಹರಿಯುವ ನೀತಿಯ ಮಂತ್ರವಿದೂ

ಬಾಲಗಂಗಾಧರ ತಿಲಕರು ಲೋಕಕೆ। ಮಾನ್ಯರು ತಾವೆನಿಸಿ।
ಚಾಲನಗೈದರು ಮುಂದುವರೆಯಲು ಬಲು। ಕವಡುಗಳನು ಸಹಿಸಿ.

(ಲಾವಣಿ-ತಿಪ್ಪಯ್ಯ ಮಾಸ್ತರರು)

ಸತ್ಯ ಸಮರದಾ ಹತ್ಯಪೇಳುವೆನು ಚಿತ್ತದಿ ಲಾಲಿಸಿರಿದು ಸತ್ಯ।
ಮರ್ತ್ಯದೊಳಾರ‍್ಯಾವರ್ತದ ವಿದುರಾಶ್ವತ್ಥ ವಿಚಿತ್ರದ ಘನಹತ್ಯ॥
ವಿಶಾಲ ಮೈಸೂರ್ ಪ್ರಸಾರ ಕಾಂಗ್ರೆಸ್ ಪ್ರಸಂಗ ಲಾವಣಿ ಕವಿಸರಸ।

ಪಾಷಾಣ ಹೃದಯದ ದೇಶೀಯ ಜನರಿಗೆ ಲೇಸಾದರಿಲ್ಲವು ಕರುಣರಸ
ಆ ಶಿವಪುರದೊಳು।
ದೇಶೀಯ ಪ್ರಜೆಗಳು ಬೋ ಶಿಸ್ತು ತೋರಿದರೊಮ್ಮನಸ।
ದೇಶೀಯ ಪ್ರಮುಖರು ನಿಶಾನಿಯೇರಿಸಿ ಬಾರ್ಸಿದರ್ಭೇರಿಯ ಜಯಘೋಷ
ಕುಶಾಗ್ರನೀತಿಯ ಮೈಸೂರ್ ಸರ್ಕಾರವು ಸೆಕ್ಷನ್ ಚಲಾಯ್ಸಲು ಬಲುಬಿರುಸ
ದೇಶೀ ಮುಖಂಡರು ಸೆಕ್ಷನ್ ಉಲ್ಲಂಘಿಸಿ ಸೈ ಸೈ ಎಂದೆನಿಸಿದರಾದಿವಸ

(ಶಿವಪುರ ಮತ್ತು ವಿದುರಾಶ್ವತ್ಥ ಲಾವಣಿ- ಬಿ. ನೀಲಕಂಠಯ್ಯ)

ಪರದಾಸ್ಯ ಪಾಶದ ಬೇಡಿಯ ಕಡೆಯುವ
ಬಗೆಯನು ಕೇಳಿರಿ ದೇಶದ ಜನರೇ
ಮಾತರಂ ವಂದೇ ಮಾತರಂ

ಅರವಿಂದನಾಭನ ಸುರವಂದ್ಯಪಾದವ ಶಿರದೊಳು ವಿನಯದಿ
ಧರಿಸುವೆನು। ನಾನು। ಸರಸತಿ ಪಾದಕೆ ನಮಿಸುವೆನು। ಬಲು।
ಕರುಣದಿ ಮತಿಯನು ಬೇಡುವೆನು।। ಪರದಾಸ್ಯ ಬೇಡಿಯ
ಕಡಿಯಲು ಬೇಡುವೆ ಸಾಸಿರ ಹೆಸರಿನ ಜಗದೀಶನನ್ನು

ತಕ್ಕಡಿ ಹಿಡಕೊಂಡು ಬೇಪಾರ ಮಾಡುತ ಬಿಳುಪಾದ ಪರಕೀಯ
ಜನರೆಲ್ಲರೂ। ಬಂದು। ಕಕ್ಕಸಬಡುತಲಿ ಕೂಡಿದರು। ನಮ್ಮ।
ಉಕ್ಕುವ ನಾಡನು ಕೆಡಿಸಿದರು।। ಯುಕ್ತಿಯ ಬಲದಿಂದ ನೆಕ್ಕುತ
ರಾಜ್ಯವ ರಾಜಕಾರಣವನ್ನು ಭರದಿ ಹೂಡಿದರು

(ದೇಶೀ ದುಮದುಮೆ - ಶ್ರೀಧರ ಖಾನೋಲ್ಕರ್, ಸೀತಾತನಯ)

ವಂದೆ ಮಾತರಂಯೆಂದು ಸಾರುತಿಹ ಗಾಂಧಿ ಮಾರ್ಗವೇ ಸ್ಥಿರವಾಯ್ತು
ನಮ್ಮ। ಇಂದಿನ ಪರಿಸ್ಥಿತಿ ಬದಲಾಯ್ತು।
ಇನು। ಮುಂದಿನೇಳಿಗೆಯು ಯೆದುರಾಯ್ತು।
ಇಂದಿನದು ಸ್ಥಿತಿ ತೊಂದರೆ ಹರಿಸುವ ತಂದೆಯುಯಿರುವುದು ಒಳಿತಾಯ್ತು।।

(ಇಂದಿನ ಪರಿಸ್ಥಿತಿ - ಎನ್. ವಿಷಕಂಠರಾವ್ - ಲಾವಣಿ)

ಶೃಂಗಾರದ ನವರಂಗದ ಮೈಸೂರ್ ಕಾಂಗ್ರೆಸ್ ಘನವೆನ್ನುವನೊಬ್ಬ।
ಕಾಂಗ್ರೆಸ್‌ನ ಸಂಗ್ರಾಮದ ಕೇಳಿದ ಆಂಗ್ಲರಿಗಾಯಿತು. ಅಬ್ಬಬ್ಬಾ।।

(ಕಾಂಗ್ರೆಸ್ ಲಾವಣಿ - ಬಿ. ನೀಲಕಂಠಯ್ಯ)

ಸಂಸ್ಥಾನದವರಂದರ ಸಾಧಾರಣ ಮನುಷ್ಯರಲ್ಲ ವಜನದಾರ ಇದ್ದರ
ಮದಲಿನವರು। ತಮ್ಮ ಸಂರಕ್ಷಣ ತಾಂವ ಮಾಡಿಕೊಂತಿದ್ರು
ಈಗಿನವರು ಇಂಗ್ಲಿಷರಿಗಾಧೀನರು।।
ವಾಡೆದ ಮುಂದ ಬಡರೈತ ಹೋದರ। ಬೆದರಿಸಿ ಕಳಿಸೂರ ಪೊಲೀಸರಾ।
ಗೌರ್ನರ ಬರತಾರಂತ ತಾರ ಬಂದರ । ಕರಿಲಾಕ ಹೊರಡುರು ಮಹಾರಾಜರಾ।।

(ಶ್ರೀ ವಂದೇಮಾತರಂ - ಗೀಗೀ ಪದ- ಹುಲಕುಂದ ಭೀಮಕವಿ)

ನಾವು ಬಂದೇವ ನಾವು ಬಂದೇವ ನಾವು ಬಂದೇವ
ರಾಷ್ಟ್ರ ಸ್ವಾತಂತ್ರ್ಯ ಮಾಡೋದಕ್ಕ। ರಾಷ್ಟ್ರ ಸ್ವಾತಂತ್ರ್ಯ ಮಾಡೀ
ಕಷ್ಟ ಕಳಿಯೋದಕ್ಕ

(ನಾವು ಬಂದದ್ದು ಯಾತಕ್ಕ- ಗೀಗಿ- ಭಿಷ್ಟಪ್ಪ ಕುಬೇರಪ್ಪ ಮಂಡೇದ)

ಕಾಂತನ ಕಳಕೊಂಡು ಕಾಮಿನಿಯಂತೆ ಭಾರತ ಹಾಕ್ಸದು ಕಣ್ಣೀರ।
ಶಾಂತಿ ಸಮರದೊಳು ಗುಂಡಿನೇಟಿನೊಳೂ ಮಡಿದ ಮಹಾದೇವಪ್ಪ ಮೈಲಾರ।।
ಸಣ್ಣವನಿರುತಲೆ ಶಾಲೆಗೆ ಹೋಗಲು ಸ್ವತಂತ್ರವೀರರ ಚರಿತ್ರೆಯನು।
ಬಣ್ಣದ ಮಾತಿಗೆ ಕಣ್ಣನೆ ಎತ್ತದೆ ಓದುವ ಆಶೆ ಇಟ್ಟಿದ್ದನು।।

(ಮೈಲಾರ ಮಹಾದೇವರ ಲಾವಣಿ. - ಸಮದ್ ಸಾಬ್)

ರಾಷ್ಟ್ರವನ್ನು ಪರಿಪರಿಯಾಗಿ ಹೊಗಳುವ, ಭಾರತಾಂಬೆಯನ್ನು ವಿಧವಿಧವಾಗಿ ಬಣ್ಣಿಸುವ, ಅವಳ ಹೀನಸ್ಥಿತಿಗೆ ದಯನೀಯವಾಗಿ ಮರುಗುವ ಅನೇಕ ಗೀತೆಗಳು ಈ ಪೈಕಿಯದಾಗಿವೆ.

ಭಾರತಾಂಬೆಯ ಹೀನಸ್ಥಿತಿಯನು ಕಣ್ಣು ತೆರೆಯುತ ನೋಡಿರಿ
ಪಾರತಂತ್ರ್ಯದಿ ಸಿಲುಕಿ ಬಳಲುವ ತಾಯಿಯನು ನೀವ್ ಬಿಡಿಸಿರಿ

(ಅಜ್ಞಾತ ಕವಿ)

ನಮ್ಮದೀ ನಮ್ಮದೀ ಭರತ ಭೂಮಿ
ಹೆರವರಂ ನಂಬದಲೆ ಜಗದೀಶ್ವರಂ ತಾನೇ
ಧರಿಸಿ ನಾನಾವತಾರಂಗಳನ್ನು
ಕರೆವ ಸರ್ವಸ್ವಯಂ ಧರೆಯ ಸಂರಕ್ಷಿಸುವ
ತೆರವ ಕಲಿಸಿದ ಪೂರ್ವ ಪಾಠಶಾಲೆ

(ಶಾಂತ ಕವಿ)

ಸ್ವಾತಂತ್ರ್ಯವೇ ಬೇಕು ಏಳ್ಗೆಗೆ ಸ್ವಾತಂತ್ರ್ಯವೆ ಬೇಕು
ಹರಿಯುವ ಹಳ್ಳಕೆ ಹಾಕಲು ತಡೆಯನು
ಮೊರೆಯುತ ಮುಂದಕೆ ಸಾಗುವುದೇ॥ ಸ್ವಾತಂತ್ರ್ಯವೆ ಬೇಕು॥

(ಈಶ್ವರ ಸಣಕಲ್ಲ)

ಬಾಬಾ ನೋಡೋಣ ಕನ್ನಡ ಕೇಸರಿಯಾ
ಮಾಡುವಾ ಸಿಂಹದ ಗರ್ಜನೆಯಾ
ಕೂಡಿದ ಘನತರದೀ ಸಭೆಯಾ

(ತಿಪ್ಪಯ್ಯ ಮಾಸ್ತರ)

ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ
ಸಾಕು ಸುತ್ತಲು ನೋಡು ಕಣ್ತೆರೆದು ನಿಂದೂ
ಲೋಕದಲೆ ವಂದೇ ಮಾತರವೆಂಬುದೊಂದೆ ಪದ
ಈ ಕಿವಿಯನೊಡೆಯುತಿದೆ ಉಚ್ಚಳಿಸಿ ಬಂದೂ

(ಪಂಜೆ ಮಂಗೇಶರಾಯರು)

ಕರ್ನಾಟಕ ವೀರರೇಳಿ ರಣಭೇರಿ ಕೊಂಬ ಕೇಳಿ
ಸ್ವಾತಂತ್ರ್ಯ ಮಂತ್ರವನು ಹೇಳಿ ಪರದಾಸ್ಯ ದೇಹ ಸೀಳಿ

(ಜ. ರಾಮರಾವ ಹಜೇಬ)

ದಿಗಂತದಾಚೆಗೆ ನದಿವನದಾ ಕಡೆ।
ಆ ಬೆಟ್ಟದ ಮರೆಗಿದೆ - ತಾಯ್ನಾಡು॥
ಅವಳ ಪುಣ್ಯಪದ ರಜದಿ ಜನಿಸಿದೆವು।
ಸೇರುವೆವಾ ಸತ್ಯದ ನೆಲೆವೀಡು॥

ಕೇಳಿರಿ ಕೇಳಿರಿ ಕಹಳೆ ಮೊಳಗುತಿದೆ।
ಭಾರತ ಬಾರೆಂದೆಮ್ಮ ಕರೆಯುತಿದೆ॥
ಕೋಟಿ ಡಿಲ್ಲಿಗಳು, ಕೋಟಿ ಬಾಂಧವರು।
ಸ್ವಾಗತ ನಿಮಗೆಂದೆಮ್ಮ ಕರೆಯುವರು॥

(ಕಯ್ಯಾರ ಕಿಞ್ಞಣ್ಣ ರೈ)

ಭಾರತವನುಳಿಯುತ್ತ ನನಗೆ ಜೀವನವೆತ್ತ
ಭಾರತವೆ ನನ್ನುಸಿರು ನನ್ನೊಗೆದ ಬಸಿರು
ಭಾರತವೆ ಧನಧಾನ್ಯ ಭಾರತವೆ ಮನೆಮಾನ್ಯ
ಭಾರತವೆ ದೇವಾರವೆನ್ನ ಸಂಸಾರ

(ಗೋವಿಂದ ಪೈ)

ಭರತಮಾತೆಯೆ ಭರತಮಾತೆಯೆ ಎಂದು ನೀ ತಲೆ ಎತ್ತುವೆ?
ಎಂದು ಲೋಕದ ಜನದ ಹೃದಯದಿ ನಿನ್ನ ಮಹಿಮೆಯ ಬಿತ್ತುವೆ?

ಎಂದು ಮಲಿನತೆ ನೀಗುವೆ-ಮಗು
ಳೆಂದು ನಗುಮುಖವಾಗುವೆ

ಯಾರು ಮುಸುಕಿದ ಕಣ್ಣಮಂಜನು ತೆಗೆದು ಬೆಳಕನು ಬಿಟ್ಟರೋ
ಯಾರು ಜಾಡ್ಯವ ಹರಿಸಿ ನಮ್ಮಲಿ ಹೊಸದು ಜೀವವನಿಟ್ಟರೋ
ಅವರೆ ಕಣ್ಣನು ಹಿಡಿವರೆ ಕುದಿ
ದವರೆ ಕೊರಳನು ಮುರಿವರೆ। -(ಬಿ.ಎಂ.ಶ್ರೀ.)

ನೆರವು ನೀಡಿದವರೇ (ಬ್ರಿಟಿಷರೇ) ಕಷ್ಟವನ್ನೂ ನೀಡುತ್ತಿದ್ದಾರೆ ಎಂದು ಹೇಳುವ ಮೂಲಕ ಕವಿ ಇಲ್ಲಿ ಬ್ರಿಟಿಷರು ಭಾರತೀಯರಲ್ಲಿ ಹೊಸತನವನ್ನು ಹರಿಸಿದರು ಎಂದು ಒಪ್ಪಿರುವುದು ಮತ್ತು ಅವರೇ ನಮ್ಮ ಕಣ್ಣು ಮುಚ್ಚಿದ್ದಾರೆ ಎಂದು ಹೇಳುತ್ತಿರುವುದು ವಸಾಹತುಶಾಹಿಯನ್ನು ಬೆಂಬಲಿಸುತ್ತಲೇ ಅದನ್ನು ವಿರೋಧಿಸುವ ವಿಪರ್ಯಾಸವನ್ನು ಸೂಚಿಸುತ್ತದೆ. ಬ್ರಿಟಿಷ್ ವಸಾಹತುಪರ ಧೋರಣೆ ಇಲ್ಲಿ ವ್ಯಕ್ತವಾಗುವುದರ ಜೊತೆಗೆ, ಒಂದು ಸಾಂದರ್ಭಿಕ ಅಥವಾ ಸಾಮಯಿಕ ಪ್ರತಿಕ್ರಿಯೆಯಾಗಿ ರಾಷ್ಟ್ರೀಯ ಭಾವನೆ ಇಲ್ಲಿ ಒಡಮೂಡಿರುವುದು ಗಮನಾರ್ಹ.

ಮಾತೃಭೂಮಿ ಜನನಿ ನಿನ್ನ ಚರಣ ಸೇವೆ ಮಾಡುವಾ।
ಪರಮ ಹರುಷದಿಂದ ನಿನ್ನ ಸುಖಕೆ ಪ್ರಾಣವೀಯುವಾ।
(ಬೆಟಗೇರಿ ಕೃಷ್ಣಶರ್ಮ)

ಮರೆತೆ ಏತಕಯ್ಯಾ ನಿನ್ನ ಮಾತೃಭೂಮಿಯ
ನಿರುತ ನಿನ್ನ ಹೊರೆಯ ಹೊತ್ತು ಪೊರೆವ ತಾಯಿಯ॥
ಮರೆತೆ ಏತಕಯ್ಯಾ
(ಮುದವೀಡು ಕೃಷ್ಣರಾಯರು)

ಜೈ ಭಾರತ ಭೂಮಿಗೆ ಮಾತೆಗೆ
ಜೈ ಪಾವನ ಮೂರ್ತಿಗೆ
ಸನ್ಮಂಗಳವಾಗಲಿ ಸತತಂ॥
(ತಿರುಮಲೆ ರಾಜಮ್ಮ - 'ಭಾರತಿ')

ನನ್ನ ನಾಡ ಚೆನ್ನನಾಡ ಬನ್ನಬಡುತ ಪೊರೆಯುವಾ
ನನ್ನಿಯಿಂದ ತಾಯಿ ನಾಡ ಹೊನ್ನಸಿರಿಯ ಬೆಳಗುವಾ
(ಸ.ಪ. ಗಾಂವಕರ)

ಸುಮ್ಮನೆ ಕುಳಿತರೆ ಸಿಗದು ಸ್ವರಾಜ್ಯವು
ಬ್ರಹ್ಮಕಲ್ಪದವರೆಗು ಒಮ್ಮೆಲೆ ನಾವೆಲ್ಲ
ನಿರ್ಮಲ ಮತಿಯಿಂದ ಕರ್ಮವೆಸಗಬೇಕು
(ಬಲವಾಡಿ ಸೀತಾರಾಮ ಹೆಬ್ಬಾರ)

ಸರ್ಕಾರದ ದಬ್ಬಾಳಿಕೆಯುಬ್ಬರ ಜಗತ್ತಿನೆಲ್ಲೆಯ ವ್ಯಾಪಿಸಿದೆ
ತರ್ಕವ ಮಾಡದೆ ಸ್ವತಂತ್ರ ಗಳಿಸಿರಿಯೆನ್ನುತ ಕಾಂಗ್ರೆಸ್ ಸಾರುತಿದೆ
(ಎನ್. ವಿಷಕಂಠರಾವ್)

ಸುಭಾಷ್, ರವೀಂದ್ರರ ಪ್ರಭಾವದಿಂದ ಪ್ರೇರಿತವಾದ ಅಥವಾ ಅವುಗಳ ಅನುವಾದವಾದ ತಿಲಕ್, ನೇತಾಜಿ, ಆಜಾದ್, ಭಗತ್‌ಸಿಂಗ್‌ರ ಕ್ರಾಂತಿಕಾರಿ ಚಿಂತನೆಗಳನ್ನು ಮೇಳೈಸಿಕೊಂಡ ಅಪ್ಪಟ ಸ್ವಾತಂತ್ರ್ಯ ಗೀತೆಗಳು ರಚನೆಯಾಗಿವೆ. ವಸ್ತುವಿನ, ಆಶಯದ ದೃಷ್ಟಿಯಿಂದ ನೋಡಿದಾಗ ರಾಷ್ಟ್ರಭಕ್ತಿ, ರಾಷ್ಟ್ರಪ್ರೇಮ, ರಾಷ್ಟ್ರಸ್ವಾತಂತ್ರ್ಯ ಇವೇ ಮುಖ್ಯವಾಗಿವೆ. ಜೊತೆಗೆ ರಾಷ್ಟ್ರೀಯ ನಾಯಕರನ್ನೇ ಕುರಿತು ಹಾಡಿದ್ದೂ ಇದೆ. ಆಂತರ್ಯದಲ್ಲಿ ಪ್ರತಿಭಟನಾ ಧ್ವನಿಯನ್ನು ಒಳಗೊಂಡಿದ್ದು, 'ದಾಸ್ಯ ಮುಕ್ತಿಗೆ ಒಗ್ಗೂಡಿ' ಎಂದು ಕರೆ ನೀಡುವ ಹಲಬಗೆಯ ಪ್ರಯತ್ನಗಳು ನಡೆದಿವೆ.

ಶೂರನಾದ ಸಂಗೊಳ್ಳಿ ರಾಯನಾಯ್ಕ ಪುಂಡಾ
ಗೋರಾದಂಡಿಂದೆಲ್ಲಾ ಹಾರಿಸಿದನು ಚಂಡಾ
(ಹುಲಕುಂದ ಭೀಮಕವಿ)

ಧಗಧಗಿಸುತ್ತಿದೆ ಭಾರತ ಹೃದಯದೆ। ದುಃಖಾನಿಲ ಪ್ರಜ್ವಲಿಸುತ್ತಿದೆ
ಭಗತಸಿಂಗ, ಶುಕದೇವ, ರಾಜಗುರು। ಯೋಧರವರ ನಿಧನಗಳಿಂದ
(ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ)

ಇದೋ, ಇವಳೆ ಆ ಭುವನ ಮನಮೋಹಿನಿಯು।
ನಿರ್ಮಲವಾದ ಸೂರ್ಯಕಿರಣಗಳಿಂದ ಬೆಳಗುತಲಿರುವ ಭೂಮಿಯು॥
ತಂದೆಯೂ ತಾಯಿಯೂ ಆಗಿರುವ ಜನನಿಯು।
(ಎಂ. ಎನ್. ಕಾಮತ್
ಕವಿ ರವೀಂದ್ರರ ದೇವಿ ಭುವನ ಮನಮೋಹಿನಿ ಅನುವಾದ)

ಕೂತ್‌ಗೊಂಡ ಕೇಳರಿನ್ನ ಪ್ರೀತಿಯಿಂದ ಕೇಳರಿನ್ನಾ ಖ್ಯಾತಿವಂತರ್,
ಪಂಜಾಬದಲ್ಲಿ ತರುಣರಾ। ಭಾರತದ ಸ್ವಾತಂತ್ರ್ಯಕ್ಕ ಭಾರಿ ದುಡಿದು
ಮಡಿದಾರಿವರು ಭಗತಸಿಂಗ ಸುಖಾಧಿಯ್ಯಾ ಸುಖದೇವ್
ರಾಜ್‌ಗುರು ಬಟುಕೇಶ್ವರ ದತ್ತ ರಾಜಗುರು ಅತಿದತ್ತರಾ
(ದೇಶಭಕ್ತ ಭಗತ್‌ಸಿಂಹ, ಸುಖಾಧಿಯ್ಯಾ,
ರಾಜಗುರು, ಅತಿದತ್ತರ ಕವನ - ಭಿಷ್ಟಪ್ಪ ಮಂಡೇದ)

ಹೀಗೆ ಗಾಂಧಿಪೂರ್ವದ ಸಂದರ್ಭದಲ್ಲಿ ಪ್ರಚೋದಕ ಗೀತೆಗಳು ರಚನೆಗೊಂಡಿರುವುದರ ಜೊತೆಗೆ ಗಾಂಧೀಪ್ರಭಾವ ಮೆಲ್ಲಮೆಲ್ಲಗೆ ಹರಿದುಬರುತ್ತಿರುವುದನ್ನು ತೋರುವ ಗೀತೆಗಳನ್ನೂ ಗುರುತಿಸಬಹುದು. ತಿಲಕವಾದದಿಂದ ಗಾಂಧೀವಾದದ ಕಡೆಗೆ ಇದೇ ಕವಿಗಳು ಕ್ರಮೇಣ ಹೊರಳಿರುವ ಹೆಜ್ಜೆ ಗುರುತುಗಳೂ ಕಾಣಬರುತ್ತವೆ. ನಿದರ್ಶನಕ್ಕೆ ೧೯೨೦ಕ್ಕೂ ಮುಂಚೆ ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ ಅವರು ಬರೆದ ೪೬ ನುಡಿಗಳು 'ಬಾಲಗಂಗಾಧರ ಸ್ತವ'ವನ್ನು ಅವರೇ ೧೯೨೦ರಲ್ಲಿ ಮಂಗಳೂರಿಗೆ ಬಂದ ಗಾಂಧೀಜಿ ಮುಂದೆ ಹಾಡಿದ್ದರೆ. ಈ ಹಂತದಲ್ಲೇ ತಿಲಕರ ಪ್ರಭಾವ ಕುಗ್ಗಿ ಗಾಂಧಿ ಪ್ರಭಾವ ಹಬ್ಬತೊಡಗಿತ್ತು. ೧೯೨೪ರಲ್ಲಿ ಇದೇ ಪುಣಿಂಚತ್ತಾಯ 'ಗಾಂಧೀ ವಿಜಯ' ಎನ್ನುವ ೧೦೧ ನುಡಿಗಳ ನೀಳ್ಗವಿತೆ ಬರೆದಿರುವುದು ಪ್ರಭಾವದ ಟ್ರೆಂಡ್ ಬದಲಾವಣೆಯನ್ನು ತೋರಿಸುತ್ತದೆ. ಹೀಗೆ ಗಾಂಧಿ ಮತ್ತು ಗಾಂಧಿ ತತ್ವಗಳು ಚಳವಳಿಗಾರರ ಕವನಗಳಿಗೆ ವಸ್ತುವಾದವು.

ಕೂಗಿತ್ತೆ ಮಹಾಗಾಂಧಿ ಕೋಗಿಲೇ ॥ ಕೈ ಮೀರಿತೆನುತಲೇ
ಕೂಗಿ ಕತ್ತಲೆಯು ಸಾಗುವ ಸಮಯದಿ। ತೂಗಿ ಬೇಗನೆಂದಾಗಸದಲೆ
ಮುಚ್ಚಿರುವ ಮುಸುಕನ್ನು ತೆಗೆದೊಗೆದು । ಕತ್ತಲೆಯನು ಕಳೆದು॥
ಸ್ವಚ್ಛವಾದ ಸತ್ಯಾಗ್ರಹ ತತ್ವವ। ಬಿಚ್ಚಿ ನೋಡಿರಚ್ಚರವೆಂದೆನುತಲೇ
(- ಅಜ್ಞಾತ ಕವಿ)

ಚಿತ್ತವಿಟ್ಟು ಕೇಳಿರಿ ಶಿಸ್ತಿನ ಮೋಹರಂಥ ಕಥನಾ।
ಮರ್ತ್ಯಲೋಕದೊಳಗವತರಿಸಿದ ಗಾಂಧಿ - ಪೈಗಂಬರರು॥
ನಡೆಸಿದ ಶಾಂತಿ ಯುದ್ಧವನು।
ಇಂಗ್ಲಿಷರ ಕಪಟ ತಂತ್ರವನು॥
(ನಲವಡಿ ಶ್ರೀಕಂಠಶಾಸ್ತ್ರಿ)

ಜೈ ದೇಶಹಿತಾರ್ಪಿತ ಗಾಂಧಿ । ಮಹಾತ್ಮ ಭಾರತಮಾತೆಯ ಜೀವಾತ್ಮ॥
ಪರಮಧರ್ಮವು ಅಹಿಂಸೆಯೆಂದು । ಭರತಖಂಡಕದೆ ಜೀವನವೆಂದು।
ಸರಳತೆ ಸಮತೆಯ ಉಸುರಿದೆ ಬಂದು॥
(ಎನ್. ವಿಷಕಂಠರಾವ್)

ಮೂಲಗಾಂಧಿಯ ಮಂತ್ರ ಮೇಲೆ ನೂಲುವ ಯಂತ್ರ
ಬಂದ ಆಗ್ಯಾವ ಅವರೆಂತ್ರ।
ಅವರೆಂತ್ರ ಚಳವಳಿ। ದೇವರೌ ನನಗಾಂಧಿ

(ಅಜ್ಞಾತ ಕವಿ)

ಎಂಥಾ ಶಾಣ್ಯಾ ಮಹಾತ್ಮಾಗಾಂಧಿ
ಹಿಂದುಸ್ತಾನಕವನೆ ತಂದಿ॥
ಮಾಡಂತೇ ಹೇಳ್ಯಾವ ಕರಬಂಧಿ।
ಖಾದಿ ತೊಡೆಂದ ಕಾಯ್ದೆ ಭಂಗ ಮಾಡೆಂದ॥
ಹಿಂದುಸ್ತಾನ ಸ್ವಾತಂತ್ರ್ಯಕ್ಕೆ ಗಾಂಧಿ ಹೇಳ್ಯಾನ
ಒಂದೇ ಮಂತ್ರ ಒಂದೇ ನೂಲಂತ ಹೇಳ್ಯಾನ ನಮ್ಮ ಜಂತ್ರ॥

(ಸಿಂಪಿ ಲಿಂಗಣ್ಣ)

ಶರಣು ಮೋಹನದಾಸಗೆ ।ಶರಣು।
ಶರಣು ಮೋಹನದಾಸಗೆ
ಶರಣು ಕರುಣವ ಸುರಿವ ತರಣಿಗೆ
ಶರಣು ಭಾರತ ತನಯಗೆ

(ಶ್ರೀಧರ ಖಾನೋಲ್ಕರ್)

ಗಾಂಧೀಯೇ ಗಾಂಧಿ ಸರ್ವತ್ರ ಗಾಂಧಿ
ಸದೇಹಕಾರರನು ನಿಂದಿಸನು ಗಾಂಧಿ
ದೇಶದೇಶಗಳಲ್ಲಿ ದೇವರೆನಿಸುವ ಗಾಂಧಿ
ಕೋಶ ಕೋಶಗಳಲ್ಲಿ ಅಮ್ಮ ಗಾಂಧಿ
ದಾಸರಿಗೆ ನಿತ್ಯದಲಿ ಭಾಸವಾಗುವ ಗಾಂಧಿ
ವಾಸವಾಗಿಹ ಹೃದಯ ಪಟದಲ್ಲಿ ಗಾಂಧಿ

(ತಿಪ್ಪಯ್ಯ ಮಾಸ್ತರ)

ಮೂಲಮಾತ ನಿಮಗೆ ಕಾಲಬಿದ್ದ ಹೇಳತೀನಿ ಕೇಳಿಕೊಂಡ ನಡಿಬೇಕ್ರಿ
ಸರ್ವಜನಾ॥ ದೇಶದಭಿಮಾನಕ್ಕಾಗಿ ತ್ರಾಸ ಆದರು ಚಿಂತಿಯಿಲ್ಲ
ಮೀಸಲಿದ್ದ ಖಾದಿಯ ವಸ್ತ್ರವನಾ। ಧರಿಸಿರಿಯನ್ನಾ

(ಹುಲಕುಂದ ಭೀಮಕವಿ)

ಖಾದಿಯೇ ಸುಖಜೀವನಕೆ ಸಮೀಪದ ಹಾದಿ
ಬಾಧಿಸುವ ದಾರಿದ್ರ್ಯ ವ್ಯಾಧಿಗೌಷಧಿಯೂ॥
ಸೋದರರಗೆ ಸಾಧಿಸುವ ಪ್ರಜಲೈಕ್ಯತಾವಾದಿ
ಖಾದಿಯೇ ಸ್ವಾತಂತ್ರ್ಯ ಸಾಮ್ರಾಜ್ಯ ಸಿದ್ಧಿ

(ಅಜ್ಞಾತ ಕವಿ)

ಪರದೇಶದ ಬಟ್ಟೆಯ ಬಿಡುಬಿಡು
ಸುಡು ಸುಡು ॥ ದೇಶಬಂಧು
ಸ್ವರ್ಣ ಧರಣಿಯಾ ಸ್ವರ್ಣವನೆಲ್ಲವ
ಪೂರ್ಣ ವಿದೇಶಿ ವಸ್ತ್ರಕೆ ಕೊಡುವ
ಕರ್ಣ ಕಠೋರ ವಿಚಾರವ ಸುಡುಸುಡು

(ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ)

ಮಹಾತ್ಮಾ ಗಾಂಧಿಯವರ ಉಪದೇಶವು ನಮಗಿದು ರಾಷ್ಟ್ರಕಾರ್ಯ॥
ವಿಜಯಾ ॥

ನಿತ್ಯವು ನೂಲಿನ ಚಕ್ರವ ತಿರುಗಿಸು
ಚಿತ್ತವ ನೂಲುವನದರೊಳಗಿರಿಸು
ಸತ್ಯವೆ ಜಯವೆಂದೆನ್ನುತ ಮಂತ್ರ ಪಾಠವ ನೀ ಪಠಿಸು
(ತಿಪ್ಪಯ್ಯ ಮಾಸ್ತರ)

ಭಾರತೀಯರೆಲ್ಲ ಕೇಳಿ ಭೂರಿ ಚರಕ ಮಹಿಮೆಯನ್ನು
ಭಾರತೀಯರಿಗೆ ಸೂತ್ರಧಾರಿ ಗಾಂಧಿಯಾಜ್ಞೆಯನ್ನು
(ಅಜ್ಞಾತ ಕವಿ)

ಖಾದಿಯೆ ತಳಹದಿ ಖಾದಿಯೆ ಗೋಡೆಯು ಖಾದಿಯೆ ಉಡಿಗೆಯು
ಬಡಜನರ । ಖಾದಿ । ಹಾದಿಯು ಅನ್ನಕೆ ಹೆಂಗಸರ ।ನಮ್ಮ। ಖಾದಿ
ಯ ಹೊಟ್ಟೆಗೆ ನೂಲುವರ ।।ಖಾದಿಯೇ ಕಾಮಧೇನು ಪಿಂಜಾರ ಜನರಿಗೆ
ಖಾದಿಯೆ ಸ್ವಾತಂತ್ರ್ಯ ಗಳಿಸುವ ಹಾದಿ
(ಶ್ರೀಧರ ಖಾನೋಲ್ಕರ್)

ಗಾಂಧೀ ಮಹಾತ್ಮರ ನುಡಿಯ ।ಕೇಳಿ। ಮುಂದೆ ಮುಂದಕೆ ಮಾಡಿ ರಡಿಯ
ಕುಂದದೆ ಮನದೊಳು।ಗಂಭೀರ ಭಾವದೊಳಿಂದೆಮಗೆ ಸನ್ನಿಹಿತವಾದುದು
ಸ್ವರಾಜ್ಯವದು ದಿಟ

ಲಾಲಾಜಿ ಧೈರ್ಯಶಾಲಿಗಳು। ಮೋತೀ। ಲಾಲ ನೆಹರು
ಮೇಧಾವಿಯರು ।। ಶೀಲವಂತರು ಚಿತ್ತರಂಜನದಾಸರು । ಲೀಲೆ
ಯಿಂದಲಿ। ಬಾಲಕರು ಸಹಿ । ತೋಲಯಿಸುತಿಹರುಗ್ರ ತಪದಲಿ
(ಮೊಗೇರಿ ರಾಮಪ್ಪ ಅಡಿಗ)

ಮನಃಪೂರ್ವಕ ಸಾಧಿಸು ಮನುಜ ಸ್ವರಾಜ್ಯಕೆ । ಕುಗ್ಗಬೇಡ
ಭಯದಿಂ, ತಗ್ಗಬೇಡ, ಇಷ್ಟಕೆ ಹಿಗ್ಗಬೇಡ
ಅಹಿಂಸಾತ್ಮಕಾ ಸಹಕಾರಿತೆಯಿಂ ಸ್ವರಾಜ್ಯ ಸಾಧಿಸೆ ಭಯವೇನೈ
ಆಳರಸರ ಪೆಗಲಿಂದಿಳಿಯುತ। ನಡೆ ನಿನ್ನ ಕಾಲಿಂ।। ನೀ ನಡೆ
ನಿನ್ನ ಕಾಲಿಂ । ಮಾನವ ನಿನ್ನ ಕಾಲಿಂ
(ಅಜ್ಞಾತ ಕವಿ)

೧೯೨೦ರ ನಂತರ ಹರಡಿಕೊಂಡ ಗಾಂಧೀ ಛಾಯೆ ಹೆಚ್ಚು ದಟ್ಟವೂ ಸಾಂದ್ರವೂ ಆಗಿರುವುದಲ್ಲದೆ, ವೈಚಾರಿಕ ದೃಷ್ಟಿಕೋನವನ್ನೂ ಬೆಳೆಸಿರುವುದು ಉಲ್ಲೇಖಾರ್ಹ. ಈ ಸಂದರ್ಭದಲ್ಲಿ ಕವಿಗಳು ಪ್ರದರ್ಶಿಸುವ ರಾಷ್ಟ್ರೀಯತೆಯ ಶೈಲಿ ಸ್ವಾತಂತ್ರ್ಯ ಹೋರಾಟದ ಮುಖ್ಯವಾಹಿನಿಯಲ್ಲಿ ಜನತೆಯನ್ನು ತೊಡಗಿಸಿಕೊಳ್ಳುವ ಉದ್ದೇಶವನ್ನು ಮಾತ್ರ ಹೊಂದಿರದೆ, ಪರತಂತ್ರ ವ್ಯವಸ್ಥೆಯಿಂದಾದ ಸಮಸ್ಯೆಗಳ ವಿವಿಧ ಮಗ್ಗುಲುಗಳನ್ನು ಬಿಚ್ಚಿಡುತ್ತಾರೆ, ಅದಕ್ಕೆ ಪರಿಹಾರಗಳನ್ನೂ ಸೂಚಿಸುತ್ತಾರೆ. ಪರಿಹಾರ ಕಂಡುಕೊಳ್ಳದೆ ಹೋದರೆ ಆಗಬಹುದಾದ ಅನಾಹುತಗಳ ಬಗ್ಗೆ ಸೂಚ್ಯವಾಗಿ ಎಚ್ಚರಿಸುತ್ತಾರೆ. ಸ್ವಾತಂತ್ರ್ಯದ ಮೂಲ ಆಶಯಗಳ ಜೊತೆಗೆ ಸಾಮಾಜಿಕ, ಆರ್ಥಿಕ ಸಮಾನತೆ, ಜಾತೀಯತೆ, ಸಾಮಾಜಿಕ ಶ್ರೇಣೀಕರಣ, ಅಸ್ಪೃಶ್ಯತೆ, ದಾರಿದ್ರ್ಯ, ಅವಿದ್ಯೆ, ಅಜ್ಞಾನ ಮುಂತಾದ ಆಂತರಿಕ ಪಿಡುಗುಗಳತ್ತಲೂ ಈ ಕವಿತೆಗಳು ತೀಕ್ಷ್ಣ ನೋಟ ಬೀರುತ್ತವೆ. ಒಂದರ್ಥದಲ್ಲಿ ಈ ವರ್ಗದ ಕವಿತೆಗಳು ಮೊದಲಿನ ವರ್ಗದ ಕವಿತೆಗಳಿಗಿಂತಲೂ ತೀವ್ರವೂ, ಉಗ್ರವೂ, ಭಾವಾವೇಶಭರಿತವೂ ಆಗಿರುವುದರ ಜೊತೆಗೆ ವೈಚಾರಿಕವೂ, ತಾರ್ಕಿಕವೂ ಆಗಿವೆ. ಭಾಷಿಕವಾಗಿಯೂ ಮೌಲಿಕವಾಗಿ ಪ್ರೌಢವಾಗಿ ಹೊಸರೂಪದಲ್ಲಿವೆ. ಇದಕ್ಕೆ ಆಧುನಿಕ ಕನ್ನಡ ಕಾವ್ಯದ ಜಾಡು ಹೊಸ ದಿಕ್ಕಿಗೆ ತಿರುಗಿದ್ದೂ ಒಂದು ಕಾರಣ. ಇದು ನವೋದಯ ಕಾವ್ಯದ ಕಾಲ. ಈ ವೇಳೆಗೆ ಬಿ.ಎಂ.ಶ್ರೀ.ಯಂತಹ ಕವಿಗಳು 'ಇಂಗ್ಲಿಷ್ ಗೀತ'ಗಳನ್ನು ಕನ್ನಡಕ್ಕೆ ತರುವ ಮೂಲಕ ಇಂಗ್ಲಿಷರ ವಲಯದ ವಿಚಾರಶೀಲ ಚಿಂತನೆಗಳನ್ನು ಕನ್ನಡಕ್ಕೆ ತಂದರು. ಅದೇ ವೇಳೆಗೆ ಸ್ವಾತಂತ್ರ್ಯ ಹೋರಾಟ ಅಹಿಂಸಾತ್ಮಕವಾದರೂ ತೀವ್ರರೂಪ ಪಡೆದಿತ್ತು. ಮಹಾಯುದ್ಧಗಳ ಪರಿಣಾಮವೂ ಹೋರಾಟದ ಉತ್ಕಟತೆಗೆ ಕಾರಣವಾಗಿತ್ತು. ಬ್ರಿಟಿಷರ ಮುಷ್ಟಿಯ ಬಿಗಿತನದ ಅರಿವು ಎಲ್ಲ ವರ್ಗದ ಜನತೆಗೂ ಆಗುತ್ತಿತ್ತು. ಪ್ರಜಾತಂತ್ರದ ಕಲ್ಪನೆಯ ಗಾಳಿ ಬೀಸತೊಡಗಿದಂತೆಲ್ಲಾ ಸ್ಥಳೀಯ ಅರಸೊತ್ತಿಗೆಗಳು ತತ್ತರಿಸತೊಡಗಿದವು. ಯಾವಾಗ ಸ್ಥಳೀಯ ಸಾಮ್ರಾಜ್ಯಶಾಹಿ ಹಾಗೂ ಪುರೋಹಿತಶಾಹಿ ದುರ್ಬಲಗೊಳ್ಳತೊಡಗಿದವೋ,

ವಸಾಹತುಶಾಹಿಯ ವಿರುದ್ಧವೇ ನಡೆಯುತ್ತಿದ್ದ ಹೋರಾಟದಲ್ಲಿ ಅವೂ ಮೌನವಾಗಿ ಸೇರ್ಪಡೆಯಾಗಲೇಬೇಕಾಯಿತು. ಜಾಗೃತಗೊಂಡ ಸುಶಿಕ್ಷಿತ ಸಮಾಜ ಸಹ ಸಮರಕ್ಕೆ ಕೈಗೂಡಿಸಿ ಹೊಸ ಹೊಸ ವಿಚಾರವಾದವನ್ನು ಜನತೆಯ ಮುಂದೆ ಮಂಡಿಸಿದವು. ಕವಿಗಳು, ಕಥೆಗಾರರು, ನಾಟಕಕಾರರು ಹೊಸ ವಿಚಾರ ಪ್ರಚೋದಿತರಾಗಿ ಹೊರತಂದ ಕೃತಿಗಳು ಜನರ ಹೋರಾಟವನ್ನು ಇನ್ನಷ್ಟು ಪ್ರಚೋದಿಸಿದವು. ಹೀಗೆ ಹೋರಾಟ ಮತ್ತು ಸಾಹಿತ್ಯ ಪರಸ್ಪರ ಪ್ರೇರಣಾಶಕ್ತಿಗಳಾದವು. ವಿಚಾರದ ದೃಷ್ಟಿಯಿಂದ ಗಾಂಧೀಯುಗ ಸಮೃದ್ಧವಾಗಿತ್ತು.

ನಮ್ಮನೇತಕೆ ದೂರ-ದೂರ ನಿಲಿಸುವಿರಿ?
ನಿಮ್ಮಂತೆ ನಾವು ಹಿಂದುಗಳು ಭಾವಿಸಿರಿ।
ವಿಶ್ವಾತ್ಮನಾದ ಪರಮಾತ್ಮನೀ ಸೃಷ್ಟಿಯಲಿ
ವಿಶ್ವಜೀವಿಗಳೊಳಗೆ ಭೇದಕೆಡೆಯೆಲ್ಲಿ ?
ವಿಶ್ವಬಂಧುಗಳೆಲ್ಲರೊಂದೆಂಬ ಮತದಲ್ಲಿ।
ವಿಶ್ವಭಾರತದಲ್ಲಿ ನಮಗೆ ನೆಲೆಯಿರಲಿ
ಸರ್ವಮಾನವರಂತೆ ಮಾನವರು ಹರಿಜನರು।
ಸರ್ವಾಂಗದೊಳಗೆ ಭಾರತ ರಕ್ತಮಯರು।
ಸರ್ವೇಶನಿದಿರಲ್ಲಿ ಸರ್ವರಂತಿರುವರು।
ಸರ್ವವಿಧದಲ್ಲಿ ಹಿಂದುಗಳು ನಮ್ಮವರು।

(ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ)

ಧೈರ್ಯವ ತಾಳಿರಿ ಬಂಧು ಭಗಿನಿಯರೆ ಸ್ವರಾಜ್ಯವು ಹತ್ತರ ಬಂತು।
ಎದೆಗುಂದದೆ ಹೇಳುವೆ ಈ ಮಾತು।
ಗಾಂಧಿಯವರ ಕೃಪೆ ನಮಗುಂಟು।
ಮಲ್ನಾಡಿನ ತಮ್ಮ ಸೇವೆಯ ಗಯ್ಯುವ ಸೇವಕನಾಡುವ ಈ ಮಾತು।

(ತೀರ್ಥಹಳ್ಳಿಯ ಬಿ. ವಿ. ಕಾಮತ್)

ತರವೆ ತರವೆಯಿದು ಎಮ್ಮ ಬಂಧುಗಳಾ। ಅಂತು ಎಮ್ಮಯ
ಕಷ್ಟ ಸುಖಗಳ
ತರವೆ ನಿಮಗಿದು ಮಾನ್ಯರೆ। ಧರೆಯೊಳ್ ರೈತರು ಕುರಿಗಳೆನ್ನುತ
ಕರುಣವಿಲ್ಲದೆ ನೋಡ್ವಿರಿ.
ದುಡಿವ ರೈತನ ಒಡಲ ಉರಿಸಲು ತೊಡಗಬೇಡಿರಿ ಮಿತ್ರರೇ
ಕಡುದುರಾತ್ಮರ ಛಲವ ಪಿಡಿದು ದುಡುಕಬೇಡಿರಿ ಧನ್ಯರೇ

(ಜಿ. ನಾರಾಯಣ)

ವಾಕ್, ಸಭಾ ಮೇಣ್ ಪತ್ರಿಕಾ ಸ್ವಾತಂತ್ರ್ಯ ಮೈಸೂರ್ ಜನರಿಗೆ॥
ಬೇಕಾಗಿರುವುದು ಜವಾಬ್ದಾರ್ ಸರಕಾರ ಘನ ಮೈಸೂರಿಗೆ ॥

(ಬಿ. ನೀಲಕಂಠಯ್ಯ)

ನಾಡವರೆ ನಿಜ ನಾಡಿಗರು
ನೋಡು ಕಾಳಗವ ಹೂಡಿಹರು
ಸ್ವಾತಂತ್ರ್ಯದ ಸುಖದೂಟವನುಂಡು
ವಿಜಯನಗರದಲಿ ಕಾದಿದ ದಂಡು
ನಾಡವರಿಂದಿನ ದಾಸ್ಯವ ಕಂಡು
ಉಪ್ಪು ಮಾಡುವರು ಮುಂದಕೆ ಬಂದು

(ದಿನಕರ ದೇಸಾಯಿ)

ನಾಡಿನ್ ಬಡವ। ಸರ್ಕಸ್ನ ಸಿಮ್ಮ।
ಕಮ್ಬಿಯಿಡ್ದೋನ್ ಚೆಪ್ಪ ನನ್ನ ತಮ್ಮ।
ಔನ್ಗ ಯದ್ರಿ ಬಾಲ ಮುದ್ರಿ
ಮೂಲ್ಯಾಗ್ ಮುದರ್ಕೋಬೇಕಾ?
ಕಮ್ಬಿಯಿಡ್ದೋನ್ ಕೈಲ್ ಏನ್ ಆಗ್ತೈತ್?
ಔನ್ಗ ಎದರ್ಕೋಬೇಕಾ?
ನಿನ್ಗೇ ಗೊತ್ತಿಲ್ಲ ನಿನ್ ಸಕ್ತಿ।
ಯೋಳಾಕ್ ಬಂದ್ರೆ ಸಿರ್ರಂತ ರೇಗ್ತಿ।
ಕೂಕ್ಕೊಂಡ್ ಕಚ್ಕೋಕ್ ಮೇಲ್ ಆರ್ ಬರ್ತಿ।
ಯೋನ್ ಯೋಳಾನೆ ಸಿಮ್ಮಾ ಮಕ್ಳನ್ ಯಿಡ್ಬೈತ್ ನಿನ್ನ
ಕಮ್ಬಿಯಿಡಿಯೋ ಗುಮ್ಮ।

(ಜಿ. ಪಿ. ರಾಜರತ್ನಂ)

ಸುರೆಯನ್ನು ತೊರೆಯಯ್ಯ
ಅದರ ಹಾವಳಿಯನ್ನು ಅರಿತು ವಿವೇಕದಿ ಬಾಳಯ್ಯ ಗೆಳೆಯ।
........
ಸುರೆಯಿಂದ ಮನೆ ಮಾರು ಮಾರಿ ಹೋಗುವುದು
ಸುರೆ ತಲೆಗೇರಲು ಕುಲ ಮಣ್ಣಾಗುವುದು
ಸುರೆಯ ಬೆಳ್ನೊರೆಯಂತೆ ಸುಖಮಯವಹುದು
ಸುರೆಯ ವಾಸನೆಯಂತೆ ಅಪಕೀರ್ತಿಯಹುದು

(ಎಂ.ಎನ್. ಕಾಮತ್)

ರಾಷ್ಟ್ರೀಯದೇಳಿಗೆಗೆ ಮನವ ನೀನಿರಿಸು।
ರಾಷ್ಟ್ರಸೇವೆಗೆ ತನುವನು ನೀನು ಸವಿಸು।
......
ವಿದ್ಯೆಯೇ ನಮಗಧಿಕ ಗುಣವೀವ ಸಿಂಧು॥
ವಿದ್ಯೆಯೇ ಸಿರಿರೂಪು ಪರವೂರ ಬಂಧು॥
ವಿದ್ಯೆಯೇ ದುಂದುವೆಚ್ಚವ ನಿಲಿಪ ಬಂಧು॥
ವಿದ್ಯೆಯಿಂದಲೆ ಪಡುವ ಸುಖವಿನ್ನು ಮುಂದು॥

(ಅಜ್ಞಾತ ಕವಿ)

ಎರಡೂವರೆ ಶತಮಾನಕೆ
ದಬ್ಬಾಳಿಕೆ ಯಜಮಾನಿಕೆ
ದುರ್ದೆಸೆಗಳ ದಿನಮಾನಕೆ
ಉಸಿರಾಡಲನುಮಾನಕೆ
ಈ ದೇಶದ ಸಂತಾನಕೆ
ಉಸಿರೇ ಬರಲಿಲ್ಲ
ಹಸಿರೇ ಇರಲಿಲ್ಲ
ಸ್ವಾತಂತ್ರ್ಯಕೆ ಸರ್ವಾರ್ಪಣ
ಸತ್ಯಾಗ್ರಹಕೆ ಬಲಿತರ್ಪಣ
ನಾಡಿನ ನೆಲ ಸಮರಾಂಗಣ
ಕಡಿದೊಗೆದೆವು ದಾಸ್ಯದ ಋಣ
ತೊಟ್ಟೆವು ಎದೆಯೊಳಗಿನ ಪಣ

ಅಮೃತರಾರಾಳ್ಗೆ
ನೆಲ ಮಂಗಲ ಬಾಳ್ಗೆ

(ಎಸ್. ಆರ್. ಎಕ್ಕುಂಡಿ)

ಆಂಗ್ಲರಾಳಿಕೆಯಲ್ಲಿ
ಆರೋಗ್ಯ ನಿಕೇತನವಾಯಿತು ಈ ತಾಣ
ಯಾರಿಗೆ? ಆಳರಸರಿಗೆ
ಸಮುದ್ರಾದಾಚೆಯಿಂದ ಬಂದು
ಬಿಸಿಲಿನಲ್ಲಿ ಕಂಗೆಡುವ
ಬಿಳಿಛಾಯೆಯವರಿಗೆ ತಾಯ್ನೆಲದ ನೆನಪು ತಂದು
ತಂಪು ಹವೆಯಲಿ ತಣಿಸಿತು ಕುಣಿಸಿತು.
.......
ತನ್ನ ಕಣ್ಣು ಕಳೆದುಕೊಂಡ ಭಾರತೀಯನಿಗೆ
ಶಸ್ತ್ರಕ್ರಿಯೆ ಗೆಯ್ದು ಆಂಗ್ಲ ಕಣ್ಣನಿತ್ತ
ಆದರೆ ಶಸ್ತ್ರಕ್ರಿಯೆ ಪ್ರಾಣೋತ್ಕ್ರಮಣದಷ್ಟು ಕ್ರೂರವಾಗಿತ್ತು!

(ವಿ. ಕೃ. ಗೋಕಾಕ್)

ನೂರು ದೇವರನು ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು
ಪೂಜಿಸುವ ಬಾರ

(ಕುವೆಂಪು)

ಬ್ರಿಟಿಷರ ವಿರುದ್ಧದ ಆಂದೋಲನಕ್ಕೆ ವೈಚಾರಿಕ ಮೌಲ್ಯ ದೊರೆತಂತೆಲ್ಲ ಕನ್ನಡ ಕಾವ್ಯವೂ ಹೆಚ್ಚು ಹೆಚ್ಚು ವಿಚಾರ ಪರವಾಗಿರುವುದೂ, ಹೀಗೆ ಸಾಹಿತ್ಯದಲ್ಲಿ ಚಿಂತನ-ಮಂಥನಗಳು ಹೆಚ್ಚಾದಷ್ಟೂ ಆಂದೋಲನಕ್ಕೆ ಉತ್ಕಟತೆ ಮೂಡಿರುವುದೂ ಗಮನಕ್ಕೆ ಬರುತ್ತದೆ. ಅಷ್ಟೇ ಅಲ್ಲದೆ ಮೊದಲ ವರ್ಗದ ಕಾವ್ಯ ಸಂದರ್ಭದಲ್ಲಿ (ಗಾಂಧೀಪೂರ್ವ) ತೊಡಗಿದ್ದಾಗ ಪ್ರಾದೇಶಿಕ ಭಿನ್ನತೆಯ ಭಾವನೆಗಳು ಈ ಸಂದರ್ಭದಲ್ಲಿ ಎದ್ದು ತೋರುವುದಿಲ್ಲ. ಅಷ್ಟೇ ಅಲ್ಲದೆ ತಿಲಕ ಕಾಲದಲ್ಲಿ ನಡೆಯುತ್ತಿದ್ದ ಗಣೇಶೋತ್ಸವದ ಸಂಘಟನೆಗಳಲ್ಲಿ ಒಂದು ಧರ್ಮ, ಮತದ ಜನತೆ ಭಾಗಿಗಳಾಗುತ್ತಿದ್ದುದಕ್ಕಿಂತ ಭಿನ್ನವಾಗಿ, ಗಾಂಧೀಜಿಯವರ ಸತ್ಯಾಗ್ರಹಗಳಲ್ಲಿ, ಪಾದಯಾತ್ರೆ, ಅಹಿಂಸಾ ಚಳವಳಿಗಳಲ್ಲಿ ಸರ್ವಮತದವರ ಪಾಲ್ಗೊಳ್ಳುವಿಕೆಗೆ ಅವಕಾಶವಿದ್ದದ್ದು ಗಮನಾರ್ಹ. ಹೀಗೆ ಗಾಂಧಿ ಹಂಚುವ ಜಾತ್ಯತೀತತೆಯ ಮಿಠಾಯಿ ಸ್ವಾತಂತ್ರ್ಯದ ಪೂರ್ವೋತ್ತರಗಳಲ್ಲೂ ಕನ್ನಡದ ಪಾಲಿಗೆ ಅಮೃತದ ಸವಿ ನೀಡುತ್ತದೆ. ಮೇಲುಕೀಳುಗಳನ್ನು ಧಿಕ್ಕರಿಸಿ ಮನುಜ ಮತಕ್ಕೆ ಪಥ ಹಾಸುತ್ತದೆ.

ಏನಿದು ಏನಿದು ಏನಿದು ಎಂದು
ದೇವರ ಜಂಗುಳಿ ಕಿರುಚುವುದೇಕೆ
ಇದು ಮಾನವತೆಯು ಮೊಳಗುವ ಕಾಲ
ನಾಗರಿಕತೆಯು ಬೆಳಗುವ ಕಾಲ

(ಬೇಂದ್ರೆ)

ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು
ಎಂದು ನವಯುಗವಾಣಿ ಘೋಷಿಸಿದೆ ಕೇಳಿ
ಯುಗಯುಗದ ದಾರಿದ್ರ್ಯ ಭಾರದಿಂ ಬೆನ್‌ಬಾಗಿ
ಗೋಳಿಡುವ ಬಡಜನರೆ ಏಳಿರೈ ಏಳಿ

(ಕುವೆಂಪು)

ಬೀಳಲಿ ಮೈ ನೆತ್ತರು ಕಾರಿ ಹೋದರೆ ಹೋಗಲಿ ತಲೆ ಹಾರಿ
ತಾಯ್ನಾಡಿನ ಮೇಲ್ಮೆಗೆ ಹೋರಿ ಸ್ವಾತಂತ್ರ್ಯದ ಸ್ವರ್ಗಕೆ - ಏರಿ

(ಕುವೆಂಪು)

ನಾವೆಲ್ಲರೂ ಒಂದೇ ಜಾತಿ ಒಂದೇ ಮತ ಒಂದೇ ಕುಲ
ನಾವು ಮನುಜರು
ನರರ ನಡುವಿನಡ್ಡ ಗೋಡೆಗಳನು ಕುಟ್ಟಿ ಕೆಡಹುವೆವು
ನಾವು ವಿಲಯ ರುದ್ರರು
ಹೊಸಬಾಳಿನ ಹೊಸ ಸಮತೆಯ ಸಮರಸವನು ಸಮೆವೆವು
ನಾವು ನವ ವಿಧಾತರು

(ಅಡಿಗ)

ದೇಶ?
ಸತ್ಯಾಗ್ರಹದ ದೇಶ
ಇನ್ನು ಮುಂದೆ ಶ್ರಮಜೀವಿಗಳ ದೇಶ
ಹೇಳ ಹೆಸರಿಲ್ಲದ ದೇಶವದು,
ಇಂಡಿಯ ದೇಶ!
-------
ಇಲ್ಲಿಯ ಜೀವಜಾತಕೆಲ್ಲ
ಅಹಮಹಮಿಕೆಯ ಸೂಕ್ಷ್ಮರೋಗ ಹಿಡಿದಿದೆ
ಈ ಕಣ್ಣಿನ ಪೊರೆ ಬಿಡಿಸಲು
ಶಸ್ತ್ರಕ್ರಿಯೆಯೇ ದಾರಿ

(ವಿ.ಕೃ. ಗೋಕಾಕ್)

ಮತದ ಬಿರುಕುಗಳನು ತೊರೆವೆ
ನುಡಿಗಲೊಡಕುಗಳನು ಮರೆವೆ
ತೊತ್ತ ತೊಡಕುಗಳನು ಬಿರಿವೆ
ಜೀವನವನೆ ದೇವಿಗೆರೆವೆ
ಬಿಡುತೆ ಗುಡಿಯ ಕಟ್ಟಲು

(ಕುವೆಂಪು)

ಇಂತಹ ಚಿಂತನೆಗಳು ಮೂಡಿಬಂದದ್ದರ ಬೆನ್ನಲ್ಲೇ ಅಂಬೇಡ್ಕರ್ ವಿಚಾರಧಾರೆಗಳು ಬೀರಿದ ಪ್ರಭಾವ ರಾಷ್ಟ್ರೀಯ ಸ್ವಾತಂತ್ರ್ಯಕ್ಕಷ್ಟೇ ಸೀಮಿತವಾಗದೆ ವೈಯಕ್ತಿಕ ಸ್ವಾತಂತ್ರ್ಯದ ಅರಿವನ್ನೂ ಬಿತ್ತಿ ಜನಾಂದೋಳನಕ್ಕೆ ಹೊಸ ಶಕ್ತಿ ನೀಡಿತು. ಇದರ ಫಲವಾಗಿ ಶ್ರೀಸಾಮಾನ್ಯನ ಸಾಮಾನ್ಯ ತೊಂದರೆಗಳಿಗೆ, ಸಮಸ್ಯೆಗಳಿಗೆ, ನೋವುಗಳಿಗೆ ಸ್ಪಂದನೆ ನೀಡತೊಡಗಿತು. ಇಂತಹ ಸಾಮಾಜಿಕ ಕಳಕಳಿಯ ಕೆಲವು ಪ್ರಾತಿನಿಧಿಕ ಕವನಗಳನ್ನು ಇಲ್ಲಿ ನೋಡಬಹುದು.

ಊರಕೆರೆ ಬಾವಿಯಲಿ - ಸತ್ರ ಸಾಲೆಗಳಲ್ಲಿ
ದಾರಿಕೇರಿಗಳಲ್ಲಿ - ದೇಗುಲಂಗಳಲಿ
ಸೇರಿ ಸರ್ವರ ತೆರದೊಳಿರಲು ನಮಗೆಡೆಯಿರಲಿ
ಭಾರತೀಯರ ಸಮಭಾವವೆಸೆದಿರಲಿ

(ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ)

ಕುಡಿ ಕುಡಿ ಕುಡಿ ಹೆಂಡ ಜಗದೊಳಗಾಗಲು ನೀ ಭಂಡ
ಶ್ರೇಷ್ಠವಾದ ನರಜನ್ಮವು ದೊರೆತಿರೆ
ವ್ಯರ್ಥಗೊಳಿಸಿ ನರಕವನು ಸೇರುವರೆ

(ಅನಾಮಧೇಯ)

ವಾಕ್ ಸ್ವಾತಂತ್ರ್ಯವು ಬೇಕ್
ನಮಗೆನ್ನುವ ಠೀಕ್
ಬಂದೆಮ್ಮೊಳಗುದಿಸಾಯ್ತು
(ಎನ್. ವಿಷಕಂಠರಾವ್)

ಪೀತಾಂಬರಗಳ ಹೊದೆಯುವರಲ್ಲಿ
ಕೌಪೀನಕೆ ಚಿಂದಿಯೂ ಸಿಗದಿಲ್ಲಿ
(ಕುವೆಂಪು)

ಕೂಲಿ ಕುಂಬಳಿಯವರ ಪಾಲಿನ ಮೈದೊಗಲ
ಧೂಳಿಯ ಭಂಡಾರ ಹಣೆಯೊಳಗಿತ್ತೊ
(ಬೇಂದ್ರೆ)

ಶತಶತಮಾನದ ನಿದ್ರಾ ನೀರದ
ತೊಲಗಿ ತನ್ನತನದರಿವಿಂದರಳಿದ
ಭಾವಭಾವಗಳ ಕೃತಿ ಸಂಸ್ಕೃತಿಗಳ
ಸುಂದರ ಸೂಜ್ವಲ ತಾರಾಸಂಪದ
ಪಡೆಯುವುದೆಂದೀ ಹರಿಪದ
ಏಳುವುದೆಂದೀ ಜನಪದ
(ಬೇಂದ್ರೆ)

ದರಿದ್ರ ನಾರಾಯಣನ ಸೇವೆಯೋ
ಅದುವೆ ದೃಷ್ಟಿಯ ಗೊಂಬೆ
ಬಡತನ ಕಣ್ಣಿಗೆ ಬೀಳುವವರೆಗೂ
ಈ ತಿರುಮಂತ್ರವ ನಂಬೆ
(ಬೇಂದ್ರೆ)

ಉಧೋ ಉಧೋ ಏಳಿರಿನ್ನು
ಇಗೋ ಇಗೋ ಎದ್ದವೆನ್ನು
ಎಲ್ಲು ಇಲ್ಲ ದೇವರು
ನಾವೆ ನಮ್ಮ ದೇವರು
ತಾಳಬೇಕು - ಬಾಳಲು
ಸಹಿಸಬೇಕು - ಆಳಲು
(ಗೋಕಾಕ್)

ಹಸಿದಿಹುದು ಹೊಟ್ಟೆ ಕೊಡು ಅನ್ನವನು ತನ್ನ ತನು ಕೋಡುತಿದೆ ಚಳಿಗೆ
ಕೊಡು ಬಟ್ಟೆಗಳನ್ನು ಗಾಳಿ ಬೆಳಕಿನ ಗೋರಿಯಲಿ ಹೂತಿರುವೆನಿದೊ
ಕೊಡು ನನಗೆ ಸುವಿಶಾಲ ವಸತಿಗಳನು ಇದು ಮೊದಲು ಆಮೇಲೆ
ಉಳಿದುದೆಲ್ಲ ಆದುವರೆಗೆ ಉಳಿದೆಲ್ಲ ಮಾತು ಹೊಲ್ಲ
(ಅಡಿಗ)

ಕನ್ನಡದ ಕವನಗಳಲ್ಲಿ ರಾಷ್ಟ್ರೀಯವಾದ, ವಿಚಾರವಾದದ ನಂತರ ಗಾಂಧೀ ಹಾಗೂ ಗಾಂಧೀವಾದ ಕೇಂದ್ರವಸ್ತುವಾಗುವುದನ್ನು ನೋಡಿದರೆ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯ ಮೇಲೆ ಗಾಂಧಿ ಪ್ರಭಾವದ ಗಾಢತೆಯ ಅರಿವಾಗುತ್ತದೆ. ತಿಲಕ್ ಈ ಪ್ರಮಾಣದಲ್ಲಿ ಕನ್ನಡ ಕಾವ್ಯವನ್ನು ಪ್ರವೇಶಿಸುವುದಿಲ್ಲ, ಆವರಿಸಿಕೊಳ್ಳುವುದಿಲ್ಲ. ಗಾಂಧಿ ಕವಿಮನದ ದೇವರಾಗಿಬಿಟ್ಟರು. ಜನಮನದ ದೇವತಾಮನುಷ್ಯರಾದರು, ಶಾಂತಿದೂತರಾದರು, ಪ್ರವಾದಿಯಾದರು. ೧೯೨೦ಕ್ಕೇ ಹೊತ್ತಿಕೊಂಡ ಗಾಂಧೀ ಕಿಡಿ ಸ್ವಾತಂತ್ರ್ಯ ಬರುವ ವೇಳೆಗೆ ದಳ್ಳುರಿಗೊಂಡು ಗಾಂಧಿ ಸತ್ತ ಮೇಲೂ, ಈಗಲೂ ಇನ್ನೂ ಕಂತುವುದರಲ್ಲೇ ಇದೆ. ಸಂಪೂರ್ಣವಾಗಿ ನಂದಿಹೋಗುವುದು ಸಾಧ್ಯವೇ ಇಲ್ಲ ಎಂಬಷ್ಟರ ಮಟ್ಟಿಗೆ ಇತಿಹಾಸದಲ್ಲಿ ಸೇರಿಕೊಂಡಿದೆ, ಕನ್ನಡ ಸಾಹಿತ್ಯದಲ್ಲಿ ಬೆರೆತಿದೆ, ಇನ್ನೂ ಗಾಂಧೀ ಪ್ರಭಾವದ ಕನ್ನಡ ಸಾಹಿತ್ಯ ಹುಟ್ಟುತ್ತಲೇ ಇದೆ.

ಈ ಮಹಾ ಸ್ವಾತಂತ್ರ್ಯ ರಣಯಾಗ ಧೂಮದಲಿ
ಶ್ವೇತಾಗ್ನಿ ಜ್ವಾಲೆಯೊಂದುರಿಯುತಿದೆ; ನಿಶ್ಚಲಂ
ರಂಜಿಸುತ್ತಿದೆ. ಶಾಂತಿಯಲಿ ಹಿಮಮಹಾಚಲಂ
ರಾರಾಜಿಸುವಂತೆ ನೀಲಿಮ ನಭೋರಾಯದಲಿ

(ಕುವೆಂಪು)

ಅಹುದಿಳೆಯ ಪರಮಾಭಿಮಾನಿಯವ, ಇಳೆಯಣುಗನು
ಬಾನ್ ನೋಡುತಿರಲು
ಬಂದಿಲ್ಲಿ ಪ್ರಾರಂಭಿಸಿದ ತನ್ನ ಬಾಳಯಾತ್ರೆ
ಧ್ರುವತಾರೆ ಮೂಡುತಿರಲು
ಬೇಕಾರಿ ಬರಿಚರ್ಮ, ಬರಿ ಎಲುಬು, ಆದರಿವನು
ರಾಷ್ಟ್ರರುಧಿರದ ಆಗರ.
ಪಂಚೆಯುಟ್ಟಿಹ ರೈತ, ನಮ್ಮ ತಲೆಮಾರಿಗಿವನು
ಬುದ್ಧ ಕೃಪಾಸಾಗರ

(ಗೋಕಾಕ್)

ನಿನ್ನನರಿತು ನೋಡಲು ನಿನ್ನ ಕುರಿತು ಹಾಡಲು
ಕೋಟಿ ಕೋಟಿ ಜನದ ಮನದ ವ್ಯಥೆಯನೆಲ್ಲ ತೋಡಲೂ
ಅಯ್ಯೋ ನಾ ಅಪಾತ್ರ ತಂದೆ
ಬರಡು ನೆಲದ ಬೀಜ ನಾನು
ಮರದ ಫಲದ ವರದ ಕನಸು ಕಾಣುವಂಥ ದೀನನು
ಶಕ್ತಿ ಹೀನ ಭಕ್ತಿ ಹೀನ ಮಹಾಮ್ಲಾನನು

(ಅಡಿಗ)

ಜಯ ಜಯ ಗಾಂಧಿ ಮೋಹನಾ
ರಾಷ್ಟ್ರದೋಹನಾ
ಸತ್ಯ ಶರಣಾ-ಸತ್ಯ ಶರಣಾ

(ಬೇಂದ್ರೆ)

''ನನ್ನ ನೋಟ್ ಓದಿದಿರಾ ಗಾಂಧೀಜಿ?'' ಎಂದರು
ಗಾಂಧೀಜಿ ''ಓದಿದೆನು'' ''ಏನು? ಅದರಲಿ ನಿಮಗೆ
ಏನಾದರೂ ಬೆಲೆಯ ವಸ್ತು ಇದ್ದಿತೋ'' ''ಇಕೋ
ಅದನು ತೆಗೆದಿರಿಸಿಕೊಂಡಿಹೆನು''

ಇಂತೆಂದವರು

ಗಾಂಧೀಜಿ ಮೇಜ ಮೇಲಿನ ಪಿನ್ ಕುಷನ್ ಕಡೆಗೆ
ಕೈ ಚಾಚಿ ಒಂದು ಹೊಸ ಗುಂಡುಸೂಜಿಯ ಸೆಳೆದು
ಅವನ ಎದುರಿಗೆ ಹಿಡಿದು ಮೆಲ್ಲನೆಯೆ ನಕ್ಕರು

(ಮಾಸ್ತಿ)

ದಿವ್ಯಮಂತ್ರವ ಜಪಿಸು; ಬೆಂಬಲ ಮಹಾತ್ಮನಿಗೆ
ದೂರವೆನಿತಾದರೇನ್ ಪ್ರಾರ್ಥನಾ ಜವಕೆ

(ಕುವೆಂಪು)

ಹಿಂದೊಂದು ಕಾಲದಲಿ ಮುದಿಸಿಂಹ ಮುನಿದಿತ್ತು
ಗಾಂಧಿಯೊಬ್ಬ ಮನುಷ್ಯನೇ।
ಭಾರತದ ಬಿಡುಗಡೆಯ ಬೆರಗಾಗಿ ನುಡಿದಿತ್ತು

ಗಾಂಧಿಯೊಬ್ಬ ಮನುಷ್ಯನೇ!
ಹುಟ್ಟುಸಾವುಗಳಾಚೆ ಭರವಸೆಯ ನೆರಳಿತ್ತು
ಗಾಂಧಿಯೊಬ್ಬ ಮನುಷ್ಯನೆ!

(ಕೆ.ಎಸ್.ನ.)

ಹೀಗೆ ಗಾಂಧೀಜಿ ನವೋದಯ ಕಾವ್ಯ ಸಂದರ್ಭದಲ್ಲೂ ಕವಿಗಳ ಮನ್ನಣೆಗೆ ಪಾತ್ರರಾಗಿದ್ದಾರೆ. ಸ್ವಾತಂತ್ರ್ಯ ಸಂಗ್ರಾಮದ ಸಮಗ್ರ ಚಿತ್ರಣದಲ್ಲಿ ರಾಷ್ಟ್ರೀಯತೆ ಹಾಗೂ ಗಾಂಧಿ ಏಕೀಕೃತಗೊಂಡು ವಿಜೃಂಭಿಸಲ್ಪಡುವುದನ್ನು ಕನ್ನಡ ಕಾವ್ಯ ಸಂದರ್ಭದಲ್ಲಿ ನೋಡಬಹುದು. ಗಾಂಧಿ ಒಬ್ಬ ವ್ಯಕ್ತಿಯಾಗಿ, ಒಬ್ಬ ರಾಷ್ಟ್ರವಾಗಿ ಜನತೆಯ ಮೇಲೆ ಎಂತಹ ಪ್ರಭಾವವನ್ನು ಬೀರಿದರೋ ಅಷ್ಟೇ ಅಥವಾ ಅದಕ್ಕೂ ಹೆಚ್ಚಿನದೇ ಪ್ರಭಾವವನ್ನು ಅವರ ಸಾವೂ ಬೀರಿತು.

ಇನ್ನಿನಿಸು ನೀ ಮಹಾತ್ಮಾ ಬದುಕಬೇಕಿತ್ತು
ಈಗ ಭಾರತಕತ್ಯಗತ್ಯವಿದೆ ನಿನ್ನ

(ಗೋವಿಂದ ಪೈ)

ಹಿಂಸೆ ಕೊನೆಗಹಿಂಸೆಯನು ಗುಂಡು ಹಾಕಿ ಕೊಂದಿತೋ
ತನ್ನ ಕೊಲೆಯ ಕೊನೆಗಾಣಿಸಿ ಇವಗೆ ಶರಣು ಬಂದಿತೋ

(ಬೇಂದ್ರೆ)

ಇದಕ್ಕೇನೆನ್ನಲಿ ಮಹಾತ್ಮ ? ಸಾವಿಗೆ ನೀನೆಷ್ಟು ಕಾರಣ? ಸತ್ಯ
ಅಹಿಂಸೆಗಳೆಷ್ಟು? ಖಂಡ ಮಾಂಸವ ಹೊಕ್ಕು ಹಾರೆ ಮೀಟುವ ಕಾಲ?
ಉಷ್ಣವಲಯದ ಶಾಖ? ಅಸ್ತವ್ಯಸ್ತ? ದ್ವಂದ್ವಮಯ ಜಗಕ್ಕೆ
ಸತ್ಯ ಅನ್ನವಾಗದು ಮಹಾತ್ಮ

(ಲಂಕೇಶ್)

ಮತ್ತೆ ಬಿದ್ದಿದೆ ಇಗೋ, ಅಂದೆದ್ದ ತರಗೆಲೆ ಕಡ್ಡಿ
ದಿಕ್ಕು ಪಾಲಾಗಿ
ಅಲ್ಲೊಂದು ಇಲ್ಲೊಂದು ನಿಂತಿಹವು ದೀಪಸ್ತಂಭ
ನಿನ್ನ ಬೆಳಕನೆ ಹೊತ್ತು ಮುಡಿಯ ತುಂಬ
ನಂಬಿರುವೆ: ಮೂಡಿಯೇ ಮೂಡುವುದು
ಶಾಂತಿ ಸರ್ವೋದಯದ ಚಂದ್ರಬಿಂಬ

(ಜಿ.ಎಸ್. ಶಿವರುದ್ರಪ್ಪ)

ಗಾಂಧೀಯುಗದಲ್ಲಿ ಶಿಖರಕ್ಕೇರಿದ ಕನ್ನಡ ಕಾವ್ಯಕ್ಕೆ ಸ್ವಾತಂತ್ರ್ಯ ಸಮರದ ಗುಂಗಿನಿಂದ ಏಕಾಏಕಿ ಇಳಿಯುವುದು ಅಥವಾ ಬೇರಾವುದೇ ವಿಷಯಗಳತ್ತ ಥಟ್ಟನೆ ಹೊರಳಿಬಿಡುವುದೂ ಸಾಧ್ಯವಾದಂತಿಲ್ಲ. ಸ್ವಾತಂತ್ರ್ಯ ಪೂರ್ವ ಕಾಲದಲ್ಲಿದ್ದಂತೆಯೇ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲೂ ಭಾರತ ಸ್ವಾತಂತ್ರ್ಯವನ್ನು ಕುರಿತು ಬರೆದ ಅನೇಕ ಕವಿತೆಗಳನ್ನು ನೋಡುತ್ತೇವೆ. ಇದಕ್ಕೂ ಕಾರಣಗಳನ್ನು ಗುರುತಿಸಬಹುದು. ಒಂದು- ಸ್ವಾತಂತ್ರ್ಯ ಸಮರವೇ ನಮ್ಮ ಜನಮಾನಸದ ಮೇಲೆ ಬೀರಿದ ಪ್ರಭಾವ, ಎರಡು- ಸ್ವಾತಂತ್ರ್ಯ ಪಡೆದ ಉತ್ಸಾಹ ಹಾಗೂ ಸ್ವತಂತ್ರ ಭಾರತದ ನವನಿರ್ಮಾಣದ ಕನಸು. ಮೂರು-ಅಷ್ಟೇ ಪ್ರಮಾಣದ ಗಾಢತೆಯನ್ನು ಜನರ ಮನಸ್ಸಿನ ಮೇಲೆ ಬೀರುವಂತಹ ಬೇರಾವುದೇ ಚಳವಳಿ, ಆಂದೋಲನ ತಕ್ಷಣದಲ್ಲಿ ನಡೆಯದೇ ಇರುವುದು. ನಾಲ್ಕು - ರಾಷ್ಟ್ರ ನವನಿರ್ಮಾಣದ ಕನಸುಗಳು ಸಾಕಾರಗೊಳ್ಳುವಲ್ಲಿ ಅಡ್ಡಿಯಾದ ಎಡರುತೊಡರುಗಳು. ಇವೆಲ್ಲವೂ ಸ್ವಾತಂತ್ರ್ಯ ಸಮರವನ್ನು ಪದೇಪದೇ ಮೆಲುಕು ಹಾಕುವಂತೆ ಮಾಡುತ್ತವೆ. ಪ್ರತಿ ಸ್ವಾತಂತ್ರ್ಯ ದಿನಾಚರಣೆಗೂ ಒಂದು ಪೋಸ್ಟ್-ಮಾರ್ಟಮ್ ನಡೆಯುತ್ತದೆ. ಸ್ವಾತಂತ್ರ್ಯಾನಂತರದ ಹಾದಿ, ಸ್ವಾತಂತ್ರ್ಯ ಪೂರ್ವದಲ್ಲಿ ಕನಸು ಕಂಡ ಎಲ್ಲ ಕಾಲ್ಪನಿಕ ಸುಖ ಸಮೃದ್ಧಿಯನ್ನೂ ಭರಿಸಿತೇ? ಏಕೆ ಭರಿಸಲಿಲ್ಲ, ಹೇಗೆ ಭರಿಸಬೇಕು ಎಂಬ ಹೊಸ ಹೊಸ ವಿಶ್ಲೇಷಣೆಗೆ ಸ್ವಾತಂತ್ರ್ಯೋತ್ತರ ಕನ್ನಡ ಕಾವ್ಯರಂಗದಲ್ಲಿ ಜಾಗವಿದೆ. ಪ್ರಜಾತಂತ್ರ ವ್ಯವಸ್ಥೆಗೊಳಪಟ್ಟ ಭಾರತದ ಸಮಗ್ರ ಸರ್ವೇಕ್ಷಣೆಗೆ ಕನ್ನಡ ಕವಿಗಳು ತೊಡಗುತ್ತಾರೆ. ''ಸ್ವಾತಂತ್ರ್ಯ'' ಎನ್ನುವುದು ಸಮಸ್ಯೆ-ಪರಿಹಾರ, ಅವನತಿ-ಉನ್ನತಿ, ಭೂತ-ಭವಿಷ್ಯತ್‌ಗಳ ಸಮಸ್ತ ಚಿಂತನೆಗಳಿಗೆ ಉದ್ಭವ ಸ್ಥಾನವಾಗುತ್ತದೆ. ಆದ್ದರಿಂದಲೇ ಸ್ವಾತಂತ್ರ್ಯ ಎನ್ನುವುದು ಕನ್ನಡದ ಕಾವ್ಯಗಳಲ್ಲಿ ಅತೀವ ವೈಭವೀಕರಣಕ್ಕೆ ಒಳಗಾಗುತ್ತದೆ.

ಅರ್ಪಿತವಾಗಲಿ ಈ ಸ್ವಾತಂತ್ರ್ಯಂ ಶ್ರೀ ಚಾಮುಂಡಿಯ ಪದತಲಕೆ
ಅರ್ಪಿತವಾಗಲಿ ಈ ಸ್ವಾತಂತ್ರ್ಯಂ ಶ್ರೀ ಪುರುಷೋತ್ತಮನ ಕ್ರೀಬಲಕೆ
ಅರ್ಪಿತವಾಗಲಿ ಈ ಸ್ವಾತಂತ್ರ್ಯಂ ಪರಮಹಂಸ ಗುರುವರನಡಿಗೆ
ಸಮರ್ಪಿತವಾಗಲಿ ಈ ಸ್ವಾತಂತ್ರ್ಯಂ ಅರುಣಾಚಲ ಋಷಿಯೆದೆ ಗುಡಿಗೆ
ಸಮರ್ಪಿತವಾಗಲಿ ಈ ಸ್ವಾತಂತ್ರ್ಯಂ ಶ್ರೀ ಅರವಿಂದರ ಸಿರಿಮುಡಿಗೆ

(ಕುವೆಂಪು)

ಇದೋ ನೋಡು ನಾಡಿನಲ್ಲಿ ಎಲ್ಲೆಲ್ಲೂ ಹೊಸತನ
ಬೆಳಕು ಹರಿಯುತಿದಿಗೊ ಆಹಾ ಮುಂದೆ ಎಂಥ ನಂದನ

(ಅಡಿಗ)

ಸ್ವಾತಂತ್ರ್ಯ ಬಂದ ಹೊತ್ತಿನಲಿ ಅದರ ವೈಭವವನ್ನು, ಶಾಂತಿಯನ್ನು ಸ್ವಾತಂತ್ರ್ಯಾನಂತರದ ಪ್ರಗತಿ, ಪುನರುತ್ಥಾನದ ಕನಸನ್ನು ಕಂಡ ಕನ್ನಡಿಗರು, ಸ್ವಾತಂತ್ರ್ಯೋತ್ತರ ಕಾಲದಲ್ಲಿ ತಮ್ಮ ಕನಸು ಫಲಿಸಿತೇ? ಫಲಿಸೀತೆ? ಎಂಬುದನ್ನು ಆಗಿಂದಾಗ್ಗೆ ಸಿಂಹಾವಲೋಕನ ಮಾಡುತ್ತಲೇ ಇದ್ದಾರೆ.

'ವರುಷವಂದಾಯ್ತಲಾ ನೀನುದ್ಭವಿಸಿ ನಮಗೆ, ಸರ್ವಮಂಗಳೆಯೆಂದು ಸುಸ್ವಾಗತಂ ಬಯಸಿದೆವು ನಿನಗೆ ನಾವಂದು' ಎಂದು ಕುವೆಂಪು ೧೯೪೮ರಲ್ಲಿ ಸ್ವಾತಂತ್ರ್ಯೋದಯದ ನೆನಪು ಮಾಡಿಕೊಂಡರೆ, ಅಡಿಗರಂತೂ ಸ್ವಾತಂತ್ರ್ಯ ದಿನಾಚರಣೆ ನಡೆದುಬಂದ ದಾರಿಯನ್ನು ತಿರುತಿರುಗಿ ನೋಡಿದ್ದಾರೆ.  ಉದಾಹರಣೆಗೆ ಅವರ ಸ್ವಾತಂತ್ರ್ಯ - ೧೯೫೮ರ ಪಾಠ, ಸ್ವಾತಂತ್ರ್ಯೋತ್ಸವ-೭೭, ದಾಸ್ಯ-೧೯೭೮ ಮುಂತಾದ ಕವಿತೆಗಳು. ಹುತಾತ್ಮರನ್ನೂ ನೆನೆದು ಅವರು ಹಾಡುತ್ತಾರೆ-

ದಶಕ ದಶಕದ ವೀರ ಸತ್ಯಾಗ್ರಹದ ಘೋರ
ಬಲಿದಾನ ಸೋಪಾನದಲಿ ಹರಿದು
ಬಂದು ಸ್ವಾತಂತ್ರ್ಯ ಸುಧೆ ನಮ್ಮದಾಗಿದೆ ಇಂದು
ಮರೆತೆವೇ ಅದ ತಂದ ತ್ಯಾಗಿಗಳನು?

ಸ್ವಾತಂತ್ರ್ಯೋತ್ತರ ಕಾಲದ ಕವಿತೆಗಳಲ್ಲಿ ನವಭಾರತ ನಿರ್ಮಾಣದ ಗುರಿಯೇ ಪ್ರಮುಖ ಆಶಯವಾಗುತ್ತದೆ. ಇದರ ಆಚೀಚಿನ ಮಗ್ಗುಲಲ್ಲೇ ದೇಶದ ಪ್ರಗತಿ-ಅವನತಿ, ಸರಿ-ತಪ್ಪು, ಒಪ್ಪು-ನೆಪ್ಪುಗಳ ಪುನರ್ವಿಮರ್ಶೆ ನಡೆಯುತ್ತಲೇ ಬಂದಿದೆ.

ಸ್ವಾತಂತ್ರ್ಯ ಬಂದೊಡನೆ ತಂದ ಪುರಾಣವೇನು?
ನುಡಿದಿಹರು: ಭಾರತವು ಕಾಮಧೇನು
ಕರೆವುದಿದು ಹಿಂಡಿದೊಲು, ಸಭ್ಯ ಗೋವು
ಎಲ್ಲರ ಪ್ರಾಕಾಮ್ಯಗಳಿಗೇರಿ ಕಾವು
ನನ್ನಾಸೆ, ನಿನ್ನಾಸೆ
ನನ್ನ-ನಿನ್ನವರು ಬಯಸಿರುವ ದೋಸೆ

(ಗೋಕಾಕ್)

ಜೀವನವೋ ಕುರುಕ್ಷೇತ್ರ
ಮುಕ್ತ ಧರ್ಮ ಸದಾಕ್ಷಾತ್ರ
ದೇವ ಜೀವನಕ್ಕೆ ಪಾತ್ರ
ಇದು ದೇವನ ಕರುಣ ನೇತ್ರ
ವೈರಬೇಡ ಸ್ವೈರಬೇಡ ವಿರಸ ವಿಷವ ತೊಳೆಯುವಾ
ವೀರಧರ್ಮಸಾರ ಅಮೃತವೆಂದು ಬೆಳೆಯುವಾ
ವೀರರನ್ನು ನೆನೆದು ನೆನೆದು ವೀರರಾಗಿ ಉಳಿಯುವಾ

(ಬೇಂದ್ರೆ)

ಕಟ್ಟುವೆವು ನಾವು ಹೊಸ ನಾಡೊಂದನು ರಸದ ಬೀಡೊಂದನು
ಹೊಸ ನೆತ್ತರುಕ್ಕುಕ್ಕಿ ಆರಿ ಹೋಗುವ ಮುನ್ನ
ಹರೆಯದೀ ಮಾಂತ್ರಿಕನ ಮಾಟ ಮಸಳುವ ಮುನ್ನ
ಉತ್ಸಾಹ ಸಾಹಸದ ಉತ್ತುಂಗ ವೀಚಿಗಳ
ಈ ಕ್ಷುಬ್ಧ ಸಾಗರವು ಬಿತ್ತಿ ಹೋಗುವ ಮುನ್ನ
ಕಟ್ಟುವೆವು ನಾವು ಹೊಸ ನಾಡೊಂದನು

(ಅಡಿಗ)

ಕೊನೆಗೊಂಡಿತೊ ಓರೊರ್ವರ ಗರ್ವದ ಕಾಲ
ಇದು ಸರ್ವರ ಕಾಲ ಸರ್ವೋದಯ ಸರ್ವೋದಯ
ಸರ್ವೋದಯ ಯುಗಮಂತ್ರ
ಸರ್ವೋದಯವೇ ಸ್ವಾತಂತ್ರ್ಯ ಶ್ರೀ ತಂತ್ರ
ಮೇಲಿಲ್ಲವೋ ಕೀಳಿಲ್ಲವೋ ಸರ್ವಸಮಾನದ ರಾಜ್ಯ
ಅಧ್ಯಕ್ಷನೋ ಸೇನಾನಿಯೊ ಕಮ್ಮಾರನೋ ಚಮ್ಮಾರನೋ
ಕಾಯಕವೆಲ್ಲವೂ ಪೂಜ್ಯ

(ಕುವೆಂಪು)

ನಾನಳಿವೆ ನೀನಳಿವೆ ನಮ್ಮೆಲಬುಗಳ ಮೇಲೆ
ಮೂಡುವುದು ಮೂಡುವುದು ನವಭಾರತದ ಲೀಲೆ

(ಕುವೆಂಪು)

ಇಲ್ಲಿಂದಾಚೆಗೆ ಸ್ವಾತಂತ್ರ್ಯೋತ್ತರ ಭಾರತವನ್ನು ಬಣ್ಣಿಸುವ, ವಿಮರ್ಶಿಸುವ, ಟೀಕಿಸುವ, ವಿಶ್ಲೇಷಿಸುವ, ವಿವೇಚನೆಗೊಡ್ಡುವ ಅನೇಕಾನೇಕ ಸಾಹಿತ್ಯ ಕೃತಿಗಳು ಕನ್ನಡದಲ್ಲಿ ಬಂದಿವೆ, ಬರುತ್ತಿವೆ. ಹೀಗೆ ಸಂದರ್ಭಾನುಸಾರ ಹೊಸ ಹೊಸ ರೂಪು ಧರಿಸುವ ಕನ್ನಡ ಕಾವ್ಯ, 'ಸ್ವಾತಂತ್ರ್ಯ'ದ ನಂತರ ಕರ್ನಾಟಕ ಏಕೀಕರಣದ ಕಡೆ ಹೊರಳಿದೆ.

## ಗ್ರಂಥ ಋಣ

೧. ಸ್ವಾತಂತ್ರ್ಯ ಸಮರದ ಗೇಯಗೀತೆಗಳು : ಡಾ। ಸೂರ್ಯನಾಥ ಕಾಮತ್

೨. ರಾಷ್ಟ್ರೀಯತೆ ಮತ್ತು ಆಧುನಿಕ ಕನ್ನಡ ಸಾಹಿತ್ಯ: ಸಂ: ಡಾ। ಜಿ.ಎಸ್.ಎಸ್.

೩. ದಕ್ಷಿಣ ಭಾರತ ವಸಾಹತುಷಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ: ಡಾ। ಎಸ್. ಚಂದ್ರಶೇಖರ್

೪. ಕುವೆಂಪು ಸಮಗ್ರ ಕಾವ್ಯ

೫. ಗೋಪಾಲಕೃಷ್ಣ ಅಡಿಗ, ಗೋಕಾಕ್, ಬೇಂದ್ರೆ, ಮಾಸ್ತಿ, ರಾಜರತ್ನಂ ಮತ್ತಿತ್ತರ ಕವಿಗಳ ಕೃತಿಗಳು.

6. Political & Cultural History of Karnataka - Phalaksha

೭. ಭಾರತದ ಇತಿಹಾಸ - ಫಾಲಾಕ್ಷ

# ರಾಜಕೀಯ ಪ್ರಜ್ಞೆಯಲ್ಲಿ ಕಲಾವಿದರು

ಡಾ। ಅ. ಲ. ನರಸಿಂಹನ್

ಕೌಟಿಲ್ಯನ ಅರ್ಥಶಾಸ್ತ್ರ ಒಂದು ವಿಧದಲ್ಲಿ ಇಂದಿನ ಅರ್ಥಶಾಸ್ತ್ರ (Economics)ವನ್ನು ಬಹಳವಾಗಿ ಹೋಲುತ್ತದೆ. ಆದರೆ ಇಂದಿನದು ಪ್ರಜೆಗಳ ಮೂಲದ್ದಾದರೆ ಕೌಟಿಲ್ಯನದು ರಾಜ ಅಥವ ಆಡಳಿತವರ್ಗ ಮೂಲದ್ದು. ಕೌಟಿಲ್ಯ, ವಿಷ್ಣುಗುಪ್ತ, ಚಾಣಕ್ಯ ಇತ್ಯಾದಿಗಳು ಒಬ್ಬನದೇ ಹೆಸರೆಂದೂ, ಈತ ಕ್ರಿಪೂ. ೪ನೇ ಶತಮಾನದಲ್ಲಿ ಚಂದ್ರಗುಪ್ತನೊಂದಿಗೆ ಇದ್ದನೆಂದೂ ಹೇಳುವ ಸಾಂಪ್ರದಾಯಿಕ ನಂಬಿಕೆಗಳನ್ನು ಒಪ್ಪಿಕೊಂಡು ಶ್ರೀ ಸಚ್ಚಿದಾನಂದ ಶಂಕರ ಭಾರತೀಸ್ವಾಮಿಗಳ ಅನುವಾದವನ್ನು ಆಧರಿಸಿ, 'ಕೌಟಿಲೀಯ ಅರ್ಥಶಾಸ್ತ್ರದಲ್ಲಿಯ ಕಲೆ, ಕಲಾವಿದ'ರ ಬಗ್ಗೆ ಈ ಲೇಖನದಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಮೊದಲ ನೋಟಕ್ಕೆ ಕಾಣಸಿಗುವುದೆಂದರೆ ರಾಜ, ಯುದ್ಧ, ರಾಜ್ಯ ವಿಸ್ತರಣೆ ಹಾಗೂ ರಾಜಾದಾಯಗಳ ಜತೆಗೆ ಪ್ರಜೆಗಳಲ್ಲಿ ಸೈನಿಕವರ್ಗದವರು, ನಾಗರಿಕರು, ಸನ್ಯಾಸಿಗಳು ಹಾಗೂ 'ಶಿಲ್ಪಿ'ಗಳು ಸೇರುತ್ತಾರೆನ್ನುವ ವಿವರ ತಟ್ಟನೆ ಮನಸೆಳೆಯುತ್ತದೆ. ರಾಜನ ರಾಜ್ಯಭಾರದ ವೆಚ್ಚಕ್ಕೆ ಪ್ರಜಾವರ್ಗದಿಂದ ಬರುವ ಆದಾಯವೂ ಮಹತ್ವದ ಸೇರ್ಪಡೆಯಗುತ್ತದೆಂಬುದಕ್ಕೆ ಕೌಟಿಲ್ಯ ಸಾಕಷ್ಟು ಆಧಾರಗಳನ್ನು ಒದಗಿಸುತ್ತಾನೆ.

ಕೌಟಿಲ್ಯನ 'ಅರ್ಥಶಾಸ್ತ್ರ' (Economics) ಇಂದಿನದರಷ್ಟು ವ್ಯಾಪಕವೂ, ವೈವಿಧ್ಯವೂ ಜಟಿಲವೂ ಆಗಿರಲಿಲ್ಲ. ರಾಜನಿಗೆ ಅಗತ್ಯವಿರುವುದು ವೇಷಭೂಷಣಗಳು, ಅಲಂಕರಣ ವಸ್ತುಗಳು, ಶಸ್ತ್ರಾಸ್ತ್ರ ಹಾಗೂ ಯುದ್ಧಸಾಮಗ್ರಿಯಾದರೆ, ಜನತೆಗೆ ಬೇಕಾದುದು ಗೃಹೋಪಯೋಗಿ ವಸ್ತುಗಳು, ವಿಶೇಷವಾಗಿ ಪಾತ್ರೆ-ಪಗಡಿಗಳು, ಆಸನಗಳು ಹಾಗೂ ವಸ್ತ್ರಾಭರಣಗಳು ಮಾತ್ರ. ಇವುಗಳ ಮಧ್ಯೆ ರಸಿಕ ಜೀವನಕ್ಕೆ ಪೂರಕವಾಗಿ ಗಣಿಕೆಯರು, ನೃತ್ಯ-ಸಂಗೀತ-ನಾಟಕಾದಿಗಳು. ಚಿತ್ರಕಲೆ ಕ್ವಚಿತ್ತಾಗಿ ಉಲ್ಲೇಖಿತವಾಗಿವೆ. ಇಂದು 'ಕಲೆ' ಎಂದು ಪರಿಗಣಿಸುವುದೂ ಸಹ ರಾಜನ ಉತ್ಪತ್ತಿಯ ಒಂದು ಅಂಶವಾಗಿತ್ತೆಂಬ ಸ್ವಾರಸ್ಯದ ವಿಷಯವನ್ನು ಕೌಟಿಲ್ಯನಲ್ಲಿ ಗುರುತಿಸಬಹುದು.

ಇಲ್ಲಿ 'ಶಿಲ್ಪಿ', ಆತನ ತಯಾರಿಕೆಗಳು, ಅದಕ್ಕೆ ದೊರೆಯುವ ಕಂದಾಯ ಮತ್ತು ಸುಂಕ (ಆದಾಯ) 'ಶಿಲ್ಪಿ' ಮಾಡಬಹುದಾದ 'ಮೋಸ' (ವಂಚನೆ), ಅದಕ್ಕೆ ದಂಡ, ಹಾಗೂ ಚಿತ್ರ ಇರಬಹುದಾದ ಅಂತಃಪುರ, ವಾಸಗೃಹಗಳು ಅದಕ್ಕೆ ಸಂಬಂಧಿಸಿದ ವಿಷಯಗಳು ಮತ್ತು ಮುಖ್ಯವಾಗಿ 'ಗುಪ್ತ ಚರ್ಯೆ'ಗೆ 'ಶಿಲ್ಪಿ' ಅಥವ 'ಕಲಾವಿದರ' ಬಳಕೆಯ ಕುರಿತು ಚರ್ಚಿಸಿದೆ.

ಕೌಟಿಲ್ಯನಲ್ಲಿ 'ಶಿಲ್ಪಿ' ಎಂಬ ಪದವನ್ನು ತೀರಾ ವ್ಯಾಪಕವಾಗಿ ತೆಗೆದುಕೊಂಡಿದೆ. 'ಶಿಲ್ಪ' ಎಂದರೆ ಕಾರು, ಶಿಲ್ಪಿ ಕಾರುಕ ಎಂದರೆ ಎಲ್ಲ ಬಗೆಯ ಭೌತಿಕ ನಿರ್ಮಾಣ ಎಂದು ತಿಳಿಯಲಾಗಿದೆ. ದೇವಾಲಯ, ಪ್ರಾಸಾದ (ಅರಮನೆ), ನಾಗರ, ಗ್ರಾಮ, ಗೃಹ, ವಾಪಿ (ಭಾವಿ), ಕೂಪ (ಹಳ್ಳ), ತಟಾಕ (ಕೊಳ), ದುರ್ಗ (ಕೋಟೆ), ಚತುಃಕಾಲ (ಚಾವಡಿ), ರಥ (ತೇರು, ಯನ), ಯಂತ್ರ (ಉಪಕರಣಗಳು) ಭೂಷ (ಅಲಂಕಾರ, ಒಡವೆಗಳು)- ಒಟ್ಟಿನಲ್ಲಿ ಬಳಸುವ ಎಲ್ಲ ಉಪಕರಣಗಳಿಗೂ 'ಶಿಲ್ಪ'ವೆಂದೇ ಕರೆಯಲಾಗಿದೆ (ಎಸ್. ಕೆ. ರಾಮಚಂದ್ರರಾವ್, ಸಂಪ್ರದಾಯ

ಶಿಲ್ಪಕಲೆ, ಚಿತ್ರಕಲೆ, ೧೯೪೪), ಹಾಗಾಗಿ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಬರುವ 'ಶಿಲ್ಪಿ' ಎಂಬುದನ್ನು ವಿಶಾಲವಾದ ಅರ್ಥದಲ್ಲಿಯೇ ತೆಗೆದುಕೊಳ್ಳಬೇಕು. ಮುಂದೆ ಶಿಲ್ಪಿ, ಶಿಲ್ಪವರ್ಗ, 'ಶಿಲ್ಪ'ದ ಉತ್ಪತ್ತಿ 'ಶಿಲ್ಪ'ದಿಂದ ರಾಜಾದಾಯ, ಗೂಢಚರ್ಯೆಗೆ (ರಾಜಕಾರ್ಯಕ್ಕೆ) ಶಿಲ್ಪಿ, ಕಲಾವಿದರ ಬಳಕೆ, ಚಿತ್ರಪಟ, ವೇಶ್ಯಾಸ್ತ್ರೀ ಮತ್ತು ಕಲೆ ಎಂಬಿತ್ಯಾದಿಯಾಗಿ ವಿಭಾಗಿಸಿ ನೋಡಬಹುದು. (ಉಲ್ಲೇಖಗಳೊಂದಿಗೆ ಇರುವ ಸಂಖ್ಯೆ ಪೂರ್ವೋಕ್ತ. ಶ್ರೀ ಸಚ್ಚಿದಾನಂದ ಶಂಕರ ಭಾರತೀಸ್ವಾಮಿಗಳು ಅನುವಾದಿಸಿ, ರಾಜ್ಯ ಸರ್ಕಾರದಿಂದ ೧೯೬೩ರಲ್ಲಿ ಪ್ರಕಟಿಸಿದ 'ಕೌಟಿಲೀಯ ಅರ್ಥಶಾಸ್ತ್ರ'ದಲ್ಲಿಯ ಕ್ರಮ ಸಂಖ್ಯೆಯಾಗಿರುತ್ತದೆ.)

ಆರಂಭದಲ್ಲೇ ಚಾತುರ್ವರ್ಣವನ್ನು ಪ್ರತಿಪಾದಿಸುತ್ತಾ ನಾಲ್ಕು ವರ್ಣದವರ, ಧರ್ಮ (ಆಚರಣೆ, ಕೆಲಸ) ದ ಬಗ್ಗೆ ಹೇಳುತ್ತಾನೆ. ಅದರಲ್ಲಿ ''ಮೂರು ವರ್ಣಗಳನ್ನು ಸೇವಿಸುವುದು (ಸೇವೆ ಮಾಡುವುದು), ವ್ಯಾಪಾರ, ಬಡಗಿಯ ಕೆಲಸ, ಸಂಗೀತ ಕಲೆ ಇವು ಶೂದ್ರರ ಧರ್ಮಗಳು (ಅಧ್ಯಾಯ ೩, ಪುಟ ೮) ಎಂದು ಸ್ಪಷ್ಟ ಪಡಿಸುತ್ತಾನಲ್ಲದೆ, ಊರಿನಲ್ಲೂ ರಾಜಭವನದ ಹೊರವಲಯದಲ್ಲಿ ಗಂಧ, ಹೂವು, ಧಾನ್ಯ ಮತ್ತು ರಸಗಳ ಅಂಗಡಿಗಳೂ, ಮುಖ್ಯ ಶಿಲ್ಪಿಗಳೂ ಕ್ಷತ್ರಿಯರೂ ಪೂರ್ವ ದಿಕ್ಕಿನಲ್ಲಿ ವಾಸಿಸಬೇಕು ಎಂದು ಹೇಳುತ್ತಾನೆ. (ಅ. ೨೫, ಪು. ೭೧) ಆದರೆ ವಿಜಯನಗರ ಕಾಲದಲ್ಲಿ 'ಚಿತ್ರಗೆಲಸಿ'ಗಳಿಗೆ ಬೇರೆಯದೇ ಕೇರಿಗಳಿದ್ದವು.[೧] ರಾಜನ ಓಲಗದಲ್ಲಿ ಚಿತ್ರಕಾರರೂ, ಶಿಲ್ಪಿಗಳೂ ಕಲಾಭಿಜ್ಞರೂ ಇದ್ದರು.[೨] ರಾಜಸಭೆಯ ಪಶ್ಚಿಮ ದಿಕ್ಕಿನಲ್ಲಿ ಅಪಭ್ರಂಶ ಕವಿಯ ಹಿಂದೆ ಚಿತ್ರಗಾರರು, ಬಡಗಿಗಳು ಇತ್ಯಾದಿ ಕುಶಲ ಕರ್ಮಿಗಳಿಗೆ ಸ್ಥಾನ ಮೀಸಲಿರಿಸಿತ್ತೆಂದು[೩] ಅಭಿಪ್ರಾಯಗಳಿವೆ. ಕೌಟಿಲ್ಯನೇ ಮುಂದುವರೆದು ಬೇರೆ ಬೇರೆ ಶಿಲ್ಪಿ ಕಾರ್ಯಗಳಲ್ಲಿ ತೊಡಗಿರುವವರಿಗೆ ನಗರದಲ್ಲಿ ಬೇರೆಬೇರೆ ಸ್ಥಾನ ತೋರಿಸುತ್ತಾನೆ. ಆದರಂತೆ ಚಿನ್ನ-ಬೆಳ್ಳಿಗಳಲ್ಲಿ ಶಿಲ್ಪವೆಸಗುವವರು, ಕಾರ್ಖಾನೆ (ಕರ್ಮ ನಿಷದ್ಯಾ) ಗಳು ಆಗ್ನೇಯದಲ್ಲೂ ಗಣಿಕೆಯರು, ನಟರು, ವೈಶ್ಯರು ದಕ್ಷಿಣದಲ್ಲೂ, ದಾರತೆಗೆಯುವವರು, ಚಮ್ಮಾರರು, ಚಾಪೆ ತಯಾರಕರು, ಶೂದ್ರರು ಪಶ್ಚಿಮದಲ್ಲೂ ವಾಸಿಸಬೇಕೆಂದು ಹೇಳುತ್ತಾನೆ. (ಅ. ೨೫ ಪು. ೭೧) ಇಲ್ಲಿಯೇ ಹೇಳಬಹುದಾದ ಮಾತೆಂದರೆ ಶಿಲ್ಪದಲ್ಲಿಯಾಗಲಿ, ಉಪಕಾರದಲ್ಲಿಯಾಗಲೀ ಸಮನಾಗಿ ಕೆಲಸ ಮಾಡಿದವರಲ್ಲಿ ಸತ್ಕಾರ ಹೊಂದದಿರುವವರನ್ನು 'ಕ್ಷುದ್ರ ವರ್ಗ'ಕ್ಕೆ ಸೇರಿಸುತ್ತಾನಾದರೂ ಅರ್ಥ ಸ್ಪಷ್ಟವಾಗುವುದಿಲ್ಲ (ಅ. ೧೪. ಪು. ೩೧)

ಕೌಟಿಲ್ಯ ಕಲಾವಿದರಲ್ಲಿ ಸ್ಪಷ್ಟವಾಗಿ ಎರಡು ಭಾಗ ಮಾಡುತ್ತಾನೆ. ರಾಜಾದಾಯ ಹೆಚ್ಚಿಸುವ, ಉಪಕರಣ ತಯಾರಿಸುವ ಪಂಗಡ ಒಂದಾದರೆ ಸಾಮಾಜಿಕವಾಗಿ ಅಡಚಣೆ ಆಗುವ ವರ್ಗ ಇನ್ನೊಂದು. ದೇಶದಲ್ಲಿ ಸಮಸ್ತ ಜನಗಳ ವಿನೋದಕ್ಕೆ ಯೋಗ್ಯವಾದ ಉದ್ಯಾನವನಗಳೂ, ಪ್ರೇಕ್ಷಣೀಯವಾದ ಪ್ರಯೋಗಶಾಲೆಗಳೂ ಇರಕೂಡದು ತತ್ಫಲವಾಗಿ ನಟ,ಗಾಯಕ, ವಾದಕರೇ ಮುಂತಾದವರು ಸಂಗೀತ, ನಾಟ್ಯ, ವಾದನ ಮತ್ತು ಕಥೆಗಳನ್ನು ಹೇಳುವುದೇ ಮುಂತಾದ ಸ್ವವೃತ್ತಿ ಪ್ರದರ್ಶನದಿಂದ ವ್ಯವಸಾಯವೆನ್ನಸಗಲು ತೊಂದರೆಯನ್ನುಂಟುಮಾಡಲಾರರು. ವಿಹಾರ ಸ್ಥಾನಗಳ ಮತ್ತು ನೃತ್ಯ ಗೀತೆಗಳೇ ಮುಂತಾದ ಪ್ರದರ್ಶನಗಳ ಅಭಾವದಿಂದ ಗ್ರಾಮದಲ್ಲಿನ ಜನರು ತಮ್ಮ ತಮ್ಮ ಕಾರ್ಯದಲ್ಲಿ ತೊಡಗುವರು. ಅದರಿಂದ ಭಂಡಾರವು ಅಭಿವೃದ್ಧಿಯಾಗುವುದು, ಬಲಾತ್ಕಾರವಾಗಿ ಮಾಡಿಸಬಹುದಾದ ಕಾರ್ಯವು ಜರುಗುವುದು. ಧಾನ್ಯಗಳ ಎಣ್ಣೆ ಮತ್ತು ಕಬ್ಬಿನ ರಸವೇ ಮೊದಲಾದವುಗಳ ಅಭಿವೃದ್ಧಿಯಾಗುವುದು ಎಂದೂ, ಧನವ್ಯಯಕ್ಕೆ ಕಾರಣವಾದ ಕ್ರೀಡೆಗಳಿಗೆ ಅವಕಾಶ ಕೂಡದು ಎಂದೂ ಹೇಳುತ್ತಾನೆ (ಅ. ೨೨, ಪು. ೬೧). ಇಂದಿನ ಅರ್ಥಶಾಸ್ತ್ರದ ಪ್ರಕಾರದಿಂದಲೂ ಕಲೆ, ಕ್ರೀಡೆಗಳು ಅನುತ್ಪಾದಿತ (non-productive) ಕಾರ್ಯಗಳು. ಇವಕ್ಕೆ ನೀಡುವ ಹಣ ಸೇವೆಗೆ (Service) ನೀಡುವಂತಹದು. ದೇಶದಲ್ಲಿ ಆರ್ಥಿಕ ಸಂಕಷ್ಟ ಉಂಟಾದಾಗ ಕಲೆ, ಕ್ರೀಡೆಗಳಿಗೆ ಕೊನೆಯ ಸ್ಥಾನ. ನಮ್ಮ ಅಕಾಡೆಮಿಗಳಿಗೆ ನೀಡುವ ಅನುದಾನಗಳ ಪಾಡೂ ಇದೇ. ಪ್ರಾಚೀನ ಗ್ರೀಕ್ ಜನಾಂಗದಲ್ಲೂ ಕಲಾವಿದರ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಸುಮಾರು ಕೌಟಿಲ್ಯನ ಕಾಲದವನೇ ಆದ ಪ್ಲೇಟೋ (ಕ್ರಿ.ಪೂ. ೪೨೮-೩೪೮) ಕೂಡ ಕಲಾವಿದರು, ಸರಳ ಮನಸ್ಸಿನ ಮನುಷ್ಯರಿಗೆ ತನ್ನ ಕೃತಿಯ ನೈಜತೆಯಿಂದಾಗಿ ಮೋಸ ಮಾಡುವುದರಿಂದ (ಸಾಹಿತಿ, ಕಲಾವಿದರುಗಳನ್ನು) ಮರ್ಯಾದೆಯಿಂದ ತನ್ನ 'ಆದರ್ಶ ರಾಜ್ಯ'ದಿಂದ ಹೊರಗೆ ಕಳಿಸುವುದಾಗಿ ಹೇಳುತ್ತಾನೆ.[೪] ಕೌಟಿಲ್ಯ ವ್ಯಸನಗಳ ಬಗ್ಗೆ ಹೇಳುತ್ತಾ ಕಳ್ಳರು, ಜೂಜುಕೋರರು, ಬೇಡರು, ಸಂಗೀತಗಾರರು ಮತ್ತು ವಾದ್ಯಗಾರರೇ ಮುಂತಾದ ಅನರ್ಥಕಾರಿಗಳ ಸಂಬಂಧ ಕಾಮದಿಂದ ಉಂಟಾಗುವ ದೋಷ ಎಂದು ಹೇಳುತ್ತಾನೆ. (ಶ್ರೀ ೧೧೯, ಪು. ೪೫೭). ಸಂಗೀತಗಾರರಿಗೆ ನೀತಿ, ನಿಯಮ, ಆಚಾರ, ಅಧ್ಯಯನ ಇಲ್ಲವೆಂಬ ಭಾವನೆ ಕಳೆದ ಶತಮಾನದಲ್ಲಿಯೂ ಇತ್ತು.[೫] ದಾಸಿ ಆಟ ಎಂದು ಹೀನಾಯವಾಗಿ ಕಂಡಿದ್ದು 'ಭರತ ನಾಟ್ಯ' ಎಂಬ ಗೌರವಕ್ಕೆ ಪಾತ್ರವಾಗಿದ್ದೇ ಸುಮಾರು ೮೦ ವರ್ಷಗಳ ಹಿಂದೆ.[೬] ಕೌಟಿಲ್ಯನಿಗಿಂತ ಹಿಂದಿನವರು ಪ್ರತಿಪಾದಿಸಿರುವ ಅನೇಕ ಸಂಗತಿಗಳನ್ನು ಈತ ಖಂಡಿಸುತ್ತಾನೆ. ಹಿಂದಿನ ಆಚಾರ್ಯರು (ಪ್ರಾಯಶ ದ್ರೋಣಾಚಾರ್ಯ-ಭಾರದ್ವಾಜ) ರಾಜರ ಕ್ರೀಡಾ ವಿಹಾರವು ಬಡಗಿ, ಶಿಲ್ಪಿ, ಗಾಯಕ, ವಾಗ್ಮಿ, ವರ್ತಕ ಮುಂತಾದವರಿಗೆ ಕೆಲಸ ಕಾರ್ಯ ಒದಗಿಸಿ ಉಪಕಾರ ಮಾಡುವುದು ಒಳ್ಳೆಯದು ಎಂದು ಹೇಳಿರುವುದನ್ನು ಅಲ್ಲಗಳೆದು

'ರಾಜನ ಕ್ರೀಡಾವಿಹಾರವಾದರೋ, ಸ್ವಯಂ ವಲ್ಲಭರಾದವರು ತಾವಾಗಿಯೇ ಇಷ್ಟಾನುಸಾರವಾಗಿ ಏರ್ಪಡಿಸಿ ಎತ್ತುವ ಕಂದಾಯ, ಅಂಗಡಿ ಮಳಿಗೆಗಳು, ಕಾರ್ಯಗಳ ಕಡೆ ಮುಂತಾದವುಗಳಿಂದ ಪೀಡೆಯನ್ನುಂಟುಮಾಡುವುದು' ಎಂದು ಕೌಟಿಲ್ಯ ಪ್ರತಿಪಾದಿಸುತ್ತಾನೆ (ಅ. ೧೨೦, ಪುಟ ೪೬೩).

ಕಲಾವಿದರ ಬಗ್ಗೆ ಈತನಿಗೆ ಒಲವಿಲ್ಲವೇನೋ ಎಂಬಂತೆ ಹೇಳಿದರೂ ನಿತ್ಯೋಪಯೋಗಿ ಉಪಕರಣಗಳ ತಯಾರಕರ ಅಭಾವ ಆಗದಂತೆ ಎಚ್ಚರವಹಿಸಬೇಕೆನ್ನುತ್ತಾನೆ. 'ನೇಗಿಲು, ಕುಂಟೆ, ಕುಡುಗೋಲು ಮತ್ತು ಎತ್ತುಗಳೇ ಮುಂತಾದ ಉಪಕರಣಗಳ ಅಭಾವ ಮತ್ತು ಕಮ್ಮಾರ, ಬಡಗಿ, ಅಗೆಯುವವನು, ಹಾವುಗಳನ್ನು ಹಿಡಿಯುವವನು, ಹಗ್ಗವನ್ನು ಹೊಸೆಯುವವರೇ ಮುಂತಾದ ಜನರ ಅಭಾವದಿಂದ ಕೃಷಿ ಕಾರ್ಯಕ್ಕೆ ಅಡ್ಡಿಯುಂಟಾಗದಂತೆ ನೋಡಿಕೊಳ್ಳಬೇಕು' ಎಂದು ಹೇಳುತ್ತಾನೆ. (ಅ. ೪೫, ಪು. ೧೬೧) ಆಯುಧ ಹಾಗೂ ಯುದ್ಧೋಪಕರಣಗಳ ತಯಾರಿಕೆಗೆ ನಿತ್ಯ ನಿಯುಕ್ತರಾದ (daily wagers?) ಶಿಲ್ಪಿಗಳಿಗೂ ಆಗಂತುಕ ಶಿಲ್ಪಿ (invitees)ಗಳಿಗೂ ಅವರವರ ಯೋಗ್ಯತೆಗೆ ತಕ್ಕಂತೆ ರಕ್ಷಣೆಯನ್ನಿತ್ತು, ಉಡುಗೊರೆಗಳಿಂದಲೂ ಬಹುಮಾನಗಳಿಂದಲೂ ಅವರನ್ನು ಸತ್ಕರಿಸಬೇಕು ಎಂದು ಅಧಿಕಾರಿಗಳಿಗೆ ಸೂಚಿಸುತ್ತಾನೆ. (ಅ. ೫೪. ಪು. ೧೯೭)

ಸಂಭಾವನೆ (ಹಣದ ರೂಪದಲ್ಲಿ) ಪಡೆದು ಕಾರ್ಯನಿರ್ವಹಿಸುವ ಬಡಗಿ, ಶಿಲ್ಪಿ, ಸಂಗೀತಗಾರ, ವೈದ್ಯ, ಹಾಸ್ಯಗಾರ, ಪರಿಚಾರಕರು ಅದೇ ವರ್ಗದ ಇತರರು ಕಾರ್ಯನಿರ್ವಹಿಸುವಂತೆ ಕೆಲಸಮಾಡಬೇಕು. ಆ ಕಾರ್ಯದಲ್ಲಿ ನಿಪುಣರಾದವರು ಗೊತ್ತು ಪಡಿಸಿದಷ್ಟು ಹಣವನ್ನು ಸಂಬಳವಾಗಿ ಕೊಡಬೇಕು ಎಂದು ಹೇಳುವ ಕೌಟಿಲ್ಯ (ಅ. ೭೦, ಪು. ೨೫೯) ಹೀಗೆ ಸಂಬಳ ಕೊಡುವಾಗ ಸಾಕ್ಷಿಗಳೂ ಇರಬೇಕೆನ್ನುತ್ತಾನೆ. ನೌಕರರ ವೇತನದ ಬಗ್ಗೆ ಹೇಳುತ್ತಾ ಪದಾಧಿಕಾರಿಗಳ ಮುಖ್ಯಾಧಿಕಾರಿಯೊಂದಿಗೆ ಸಜಾತೀಯ ಶಿಲ್ಪಗಣದ ಮುಖ್ಯಸ್ಥನಿಗೂ ವಾರ್ಷಿಕ ವೇತನವಾಗಿ ಎಂಟುಸಾವಿರ ಪಣವನ್ನು ನೀಡುವಂತೆ ನಿರ್ಣಯಿಸುತ್ತಾನೆ. ಅಲ್ಲದೆ ಪ್ರಾಣಿಗಳನ್ನು ಪಳಗಿಸುವವರೊಂದಿಗೆ 'ಕಲ್ಲುಗಳಲ್ಲಿ ಶಿಲ್ಪವನ್ನೆಸಗುವವನು (ಶೈಲಖನಕ), ಸಂಗೀತದಲ್ಲಿಯೂ ಕುಣಿತದಲ್ಲಿಯೂ ನುರಿತವರು (ಸರ್ವೋಪಸ್ಥಾಯಿಗಳು) ಹಾಗೂ ಧರ್ಮಾರ್ಥಶಾಸ್ತ್ರ ಅರಿತ ವಿದ್ಯಾವಂತರಿಗೆ ರಾಜನು ಐನೂರಕ್ಕೆ ಮೇಲ್ಪಟ್ಟು ಒಂದು ಸಾವಿರ ಪಣಗಳವರೆಗೆ ಗೌರವ ವೇತನವನ್ನು (ಪೂಜಾ ವೇತನಾಗಿ) ಅವರವರ ಯೋಗ್ಯತೆಗೆ ತಕ್ಕಂತೆ ನೀಡಬೇಕೆನ್ನುತ್ತಾನೆ.' (ಅ. ೯೩, ಪು. ೩೪೪) ಕ್ಷೇತ್ರಾದಿಗಳಲ್ಲಿ ಕಳ್ಳತನ ಮಾಡುವವರ ಬಗ್ಗೆ ಹೇಳುತ್ತಾ ಕಾರು, ಶಿಲ್ಪಿ, ಸಂಗೀತಗಾರರು ಮತ್ತು ತಪಸ್ವೀ ಜನರಿಗೆ ಸಂಬಂಧಿಸಿದ ಅಲ್ಪದ್ರವ್ಯವನ್ನು ಕದ್ದರೆ ಒಂದು ನೂರು ಪಣ ದಂಡ ವಿಧಿಸುತ್ತಾನೆ (ಅ. ೮೭, ಪು. ೩೧೬)

ಹೀಗೆ ಕೌಟಿಲ್ಯ ಒಂದು ಕಡೆ ಕಲಾವಿದರ ನೀತಿ ನಡತೆಯನ್ನು ಸಂಶಯಿಸುತ್ತಲೇ, ಅವರನ್ನು ದೂರ ಸರಿಸುತ್ತಲೇ ಅವರ ಬಗ್ಗೆ ಕೆಲವು ಒಳ್ಳೆಯ ಮಾತನ್ನು ಆಡುತ್ತಾನೆ. ವೇತನ ಪುರಸ್ಕಾರ ನೀಡಬಯಸುತ್ತಾನೆ. ಎಂದರೆ ಇಡೀ ಸಮುದಾಯಕ್ಕೆ ಒಳಿತಾಗುವ 'ಕಲೆ' ಅಥವಾ 'ಶಿಲ್ಪ' ಬೇಕೆಂದೂ ಅಂತಹದು ಇಲ್ಲವಾದಲ್ಲಿ ಬೇಡವೆಂದೂ ಆತನ ಅಭಿಪ್ರಾಯವಾಗಿದೆ.

ಕೌಟಿಲ್ಯನಲ್ಲಿ ಚಿತ್ರಕಲೆಯ ಬಗ್ಗೆ ನೇರವಾದ ಉಲ್ಲೇಖ ಬಹಳ ಕಡಿಮೆ. ಬಿಡಿಚಿತ್ರಗಳ ಪ್ರಸ್ತಾಪವೂ ಹೆಚ್ಚಾಗಿಲ್ಲ. ಶತ್ರುರಾಜ್ಯಕ್ಕೆ ಹೋಗುವ ದೂತ ಎಷ್ಟು ಸೂಕ್ಷ್ಮವಾಗಿರಬೇಕು ಎಂದು ಹೇಳುತ್ತಾ ಕೌಟಿಲ್ಯ 'ತೀರ್ಥ ಕ್ಷೇತ್ರ, ದೇವಾಲಯ ಮುಂತಾದವುಗಳ ಗೋಡೆಗಳ ಮೇಲೆ ಸಂಜ್ಞೆ ತಿಳಿಸುವುದಕ್ಕಾಗಿ ಪ್ರದರ್ಶಿತವಾದ ಚಿತ್ರಪಟಗಳಿಂದಲಾಗಲೀ, ಸಂಜ್ಞಾಯುಕ್ತವಾದ ಅಕ್ಷರ ವಿಶೇಷ ಗಳಿಂದಾಗಲೀ ಶತ್ರು ವೃತ್ತಾಂತವನ್ನು ತಿಳಿಯಬೇಕು' ಎಂದು ಹೇಳುತ್ತಾನೆ (ಅ ೧೬, ಪು. ೪೦). ಅಂತಃಪುರದ ಬಾಗಿಲು ಮರ, ಲೋಹಗಳಿಂದ ಮಾಡಿ ದೇವತಾ ಪ್ರತಿಮೆಗಳಿಂದ ಕೂಡಿರಬೇಕು ಎಂದೂ, ರಾಜನ ವಾಸಗೃಹದ ಮುಂಬದಿಯಲ್ಲಿ ಕಣ್ಮನಗಳನ್ನು ಸೆಳೆಯಬಲ್ಲ ಬಣ್ಣ ಬಣ್ಣಗಳ ಚಿತ್ರಗಳಿಂದ ಕೂಡಿದ ಉಪ್ಪರಿಗೆ ಮನೆ ಇರಬೇಕೆಂದೂ ತಿಳಿಸುತ್ತಾನೆ. (ಅ. ೨೦ ಪು. ೫೧-೨)

ವೇಶ್ಯಾವೃತ್ತಿಗೆ ಸಂಬಂಧಿಸಿದಂತೆ ಚಿತ್ರಕಲೆಯ ಉಲ್ಲೇಖವಿದೆ. ಗೀತ, ವಾದ್ಯ, ರಾಗವಾಗಿ ಪದ್ಯಗಳನ್ನು ಓದುವುದು, ಕುಣಿಯುವುದು, ಅಭಿನಯಿಸುವುದು, ಅಂದವಾಗಿ ಬರೆಯುವುದು, ಚಿತ್ರಗಳನ್ನು ಉಲ್ಲೇಖಿಸುವುದು, ವೀಣೆ, ಮೃದಂಗಗಳನ್ನು ಬಾರಿಸುವುದು. ವೇಶ್ಯಾವೃತ್ತಿಗೆ ಸಂಬಂಧಪಟ್ಟ ಅರವತ್ತನಾಲ್ಕು ಕಲೆಗಳನ್ನು ಕಲಿಸುವುದು - ಮುಂತಾದುವನ್ನು ಗಣಿಕೆಯರಿಗೂ ದಾಸೀ ಜನರಿಗೂ ಅಭಿನೇತ್ರಿಯರಿಗೂ ಶಿಕ್ಷಣ ಕೊಡುವವರಿಗೂ ರಾಜನು ಸ್ವಂತದ ಬೊಕ್ಕಸ (ರಾಜಮಂಡಲ)ದಿಂದ ಜೀವಿಕೆಯನ್ನು ಕಲ್ಪಿಸಿ ಕೊಡಬೇಕು. ವೇಶ್ಯಾಪುತ್ರರನ್ನು ರಂಗಸ್ಥಳದಲ್ಲಿ ಮುಖ್ಯ ನರ್ತಕರನ್ನಾಗಿ ಮಾಡಲು ತಕ್ಕ ಶಿಕ್ಷಣ ಕೊಡಬೇಕು ಎಂದು ಇದಕ್ಕೆಂದೇ ನೇಮಕವಾಗಿರುವ ಅಧಿಕಾರಿಗೆ ಸೂಚಿಸುತ್ತಾನೆ. ಕಲೆಗಳಿಗೂ ಗಣಿಕೆಯರಿಗೂ ಇರುವ ಸಂಬಂಧ ಅನೇಕ ಕಾವ್ಯ - ನಾಟಕಗಳಲ್ಲಿ ಮೊದಲಿನಿಂದ (ಇಂದಿಗೂ) ಕಾಣಬಹುದು. ವಾತ್ಸಾಯನನ ಕಾಮಸೂತ್ರದಲ್ಲಿ ಗಣಿಕೆಯರಿಗೇ ಪ್ರತ್ಯೇಕವಾಗಿ ೬೪ ಕಲೆಗಳನ್ನು

ಉಲ್ಲೇಖಿಸುತ್ತಾನೆಯಲ್ಲದೆ ಸ್ತ್ರೀಯನ್ನು ವಶಪಡಿಸಿಕೊಳ್ಳುವುದರಿಂದ ಹಿಡಿದು ಅಲ್ಲಿಯ ಎಲ್ಲ ಚಟುವಟಿಕೆಗಳಿಗೂ ಚಿತ್ರಕಲೆ ಬಳಕೆಯಾಗಿರುವುದು ಪರಸ್ಪರ ಸಹ ಸಂಬಂಧವನ್ನು ಸೂಚಿಸುತ್ತದೆ.[೭] ಕೌಟಿಲ್ಯ 'ಗಣಿಕಾಧ್ಯಕ್ಷ' ಎಂಬ ಒಂದು ನೌಕರಿಯನ್ನೇ ಸೃಷ್ಟಿಸಿದ್ದಾನೆ. ಅವನು ಗಣಿಕೆಯರಷ್ಟೇ ಅಲ್ಲ, ಕಲಾವಿದರ ಬಗ್ಗೆಯೂ ಗಮನಿಸಬೇಕಾಗಿರುತ್ತದೆ. ಗಣಿಕೆಯರು ತಮ್ಮ ಆದಾಯವನ್ನು ಈ ಗಣಿಕಾಧ್ಯಕ್ಷನಿಗೆ ತಿಳಿಯಪಡಿಸುವಂತೆ ನಟರು, ನರ್ತಕರು, ಗಾಯಕರು, ವಾದ್ಯಗಾರರು, ಸಂಗೀತಗಾರರು ಮುಂತಾದವರು ಸಹ ತಮ್ಮ ಆದಾಯದಲ್ಲಿ ಒಂದು ಪಾಲು ರಾಜನಿಗೆ ನೀಡಬೇಕಿತ್ತು. ವಿದೇಶದಿಂದ ಬಂದ ನಾಟ್ಯನರ್ತನಕಾರಿಗಳ ತಂಡವು ತಮ್ಮ ಕಲಾಪ್ರೌಢಿಮೆಯನ್ನು ಪ್ರದರ್ಶಿಸುವುದಕ್ಕಾಗಿ ಐದು ಪಣವನ್ನು 'ಪ್ರೇಕ್ಷಾವೇತನ'ವಾಗಿ ಕೊಡಬೇಕು ಎಂಬುದು ಕುತೂಹಲಕರವಾಗಿದೆ. ಕಲೆ, ಕಲಾವಿದ, ಕಲಾಪ್ರದರ್ಶನಗಳು ಕ್ರಿಸ್ತಪೂರ್ವದಲ್ಲಿಯೇ ಗಣನೀಯವಾಗಿ ರಾಜಾದಾಯ ತರುತ್ತಿದ್ದಿತೆಂದು ಊಹಿಸಬಹುದಾಗಿದೆ. (ಅ. ೪೮ ಪು. ೧೭೫)

ಈ ಮೇಲಿನವು ಕಲೆಯ ಪ್ರಯೋಗದ ವೇಳೆಯಲ್ಲಿ ಪಡೆಯುವ ಶುಲ್ಕ ಅಥವಾ ಆದಾಯಗಳು. ಆದರೆ 'ದಂಡ' ವಿಧಿಸಿ ಪಡೆಯುವ ಅನೇಕ ಆದಾಯಗಳಲ್ಲಿ ಕಲಾವಿದರೂ ಇದ್ದಾರೆ. ಕುಶೀಲವ, ನಟ, ನರ್ತಕ ಮುಂತಾದವರು ಕಾರ್ಯಗಳನ್ನು ದುಡ್ಡು ಕೊಡದೆ ತಾನಾಗಲೀ ತನ್ನ ಮನೆಯವರಾಗಲೀ ನೋಡಲವಕಾಶ ಕೂಡದು. ರಹಸ್ಯವಾಗಿ ನಿಂತು ನೃತ್ಯ ಗೀತಾದಿಗಳನ್ನು ನೋಡಿದರೂ ಇಲ್ಲವೆ ಕೇಳಿದರೂ ದ್ವಿಗುಣ ದಂಡವನ್ನು ವಿಧಿಸಬೇಕು (ಅ. ೬೭, ಪು. ೨೪೫) ಎಂಬ ಮಾತು ಗ್ರಾಮಸ್ಥನಿಗೆ ಅನ್ವಯಿಸುವಂತಹುದು. ಅಂತೆಯೇ ರಾತ್ರಿಯಲ್ಲಿ ಸಂಚರಿಸುವವರಿಗೆ ದಂಡ ಹಾಕುವ ಉಲ್ಲೇಖದಲ್ಲಿ ಪ್ರಸವದ ಕಾಲ, ರೋಗಿಯ ಚಿಕಿತ್ಸೆ, ಅಗ್ನಿ ಭಯ ಇತ್ಯಾದಿ ಕಾರಣಗಳೊಂದಿಗೆ 'ರಾಜಾನುಜ್ಞಾತವಾದ ನಾಟಕಾದಿಗಳನ್ನು ನೋಡುವುದಕ್ಕೆ' ಹೋಗುತ್ತಿರುವವರ ಮೇಲೆ ದಂಡ ಹಾಕಬಾರದೆನ್ನುತ್ತಾರೆ. ಎಂದರೆ ರಾಜ ಅನುಮತಿ ನೀಡಿದ ಅಥವಾ ನೀಡದ ಎರಡು ಬಗೆಯ ನಾಟಕಗಳು ಇದ್ದಿರಬಹುದಾದ ಸೂಚನೆಯಿಲ್ಲಿದೆ. ನಮ್ಮ ಭಾಸ, ಕಾಳಿದಾಸಾದಿ ಪ್ರೌಢ ನಾಟಕಕಾರರ ಕೃತಿಗಳಲ್ಲಿ ಇದರ ಪ್ರದರ್ಶನಕ್ಕೆ ನಾವು ರಾಜನಿಂದ ಅನುಮತಿ ಪಡೆದಿದ್ದೇವೆ ಎಂಬಂತಹ ಘೋಷವಾಕ್ಯವಿದ್ದಿರಬಹುದಾದ ಸಂಭವವಿದೆ. ಅಂತೆಯೇ ಪಗರಣದಂತಹ ಜಾನಪದ ನಾಟಕಗಳನ್ನು ಕುಲೀನರು ನೋಡಬಾರದಿತ್ತೆಂದು ಶ್ರೀರಂಗರು ಹೇಳುವ ಮಾತಿಗೆ ಹತ್ತಿರವಿದೆ. ''ಹಗಲಿನಲ್ಲಿ ಸ್ತ್ರೀಯರ ಕುಣಿತಕ್ಕೂ, ಉದ್ಯಾನ ವಿಹಾರಕ್ಕೂ ತೆರಳುವವರಿಗೆ ಆರು ಪಣ ದಂಡ', ಪುರುಷರ ಕುಣಿತಕ್ಕೂ ವಿಹಾರ ಗಮನಕ್ಕೂ ಹೋದವಳಿಗೆ ಹನ್ನೆರಡು ಪಣ ದಂಡ; ರಾತ್ರಿಯಲ್ಲಿ ಸ್ತ್ರೀಯರ ಕುಣಿತಕ್ಕೆ ಹೋಗುವವನು ಹನ್ನೆರಡು ಪಣಗಳನ್ನೂ ಪುರುಷರ ಕುಣಿತಕ್ಕೆ ಹೋಗುವವಳು ಇಪ್ಪತ್ತನಾಲ್ಕು ಪಣಗಳನ್ನೂ ಕೊಡಬೇಕು. ವಿಧಿಸಾ (ಅ. ೫೮. ಪು. ೨೧೨) ಎಂದು ಹೇಳುವಾಗ ಈ 'ಕುಣಿತ' ನರ್ತನವಂತೂ ಆಗಿರಲಾರದು!

ವಾಮಾಚಾರ, ಅನೈತಿಕ ಕ್ರಿಯೆಗಳ ಎರಡು ಉದಾಹರಣೆಗಳಿವೆ. ಗ್ರಾಮದಲ್ಲಿರುವ ಎಲ್ಲ ಬೆಣ್ಣೆಗಳೂ ಒಂದೆಡೆ ತಾನೇ ತಾನಾಗಿ ಬರುವಂತೆ ಮಾಡುವ ವಾಮಾಚಾರ (Black Magic) ಮಾಡುವಾಗ ರಾತ್ರಿ ನಾಟಕಕಾರಿಗಳು ಪ್ರವೃತ್ತವಾದಾಗ ಕೈಗೊಳ್ಳಬೇಕೆಂದು ಹೇಳುತ್ತದೆ. (ಅ ೪೮. ಪು. ೬೦೨) ಚಂಡಾಲ ಸ್ತ್ರೀಯನ್ನು ಪ್ರವೇಶಿಸಿದವನ ಹಣೆಯ ಮೇಲೆ 'ಭಗ' ಚಿಹ್ನೆ ಹಾಕಿ ಗಡಿಪಾರು ಮಾಡಬೇಕು, ದೇವತಾ ಪ್ರತಿಮೆಯಲ್ಲಿ ರತಿ ಸೌಖ್ಯ ಪಟ್ಟವನಿಗೆ ಹನ್ನೆರಡು ಪಣ ದಂಡ ಹಾಕಬೇಕು (ಅ ೯೦. ಪು. ೩೨೮) ಎಂಬ ಮಾತನ್ನು ಹೇಗೆ ಅರ್ಥೈಸಬೇಕೊ ತಿಳಿಯದು. (ಸಮಾಜ ಪುಸ್ತಕಾಲಯ ಪ್ರಕಟಿಸಿದ ಕೆ. ಕೃಷ್ಣಭಟ್ಟರ ಅನುವಾದದಲ್ಲಿ - 'ದನವೇ ಮುಂತಾದ ತಿರ್ಯಗ್ಯೋನಿಗಳಲ್ಲಿ ಮೈಥುನ ಮಾಡುವ ದುರಾತ್ಮನಿಗೆ ಹನ್ನೆರಡು ಪಣ ದಂಡನೆ. ದೈವದ ಪ್ರತಿಮೆಗಳಲ್ಲಾದರೆ ಇಮ್ಮಡಿ ದಂಡನೆ ಎಂದಿದೆ.) ಪಾದಗಳನ್ನು ವಿಸ್ತರಿಸಿ, ನಗ್ನವಾಗಿ ಮಲಗಿದಂತಿರುವ ಸ್ತ್ರೀ ಪ್ರತಿಮೆ 'ಲಜ್ಜಾಗೌರಿ'ಯ ವಿನ್ಯಾಸವೇ. ಅದರೊಂದಿಗೆ ರತಿ ಸೌಖ್ಯ ಪಡೆಯಬಹುದಾದ ಸಾಧ್ಯತೆಗಳಿವೆಯೆಂದು ವಿದ್ವಾಂಸರ ಅಭಿಪ್ರಾಯ.

ನಟ, ನರ್ತಕ ಮುಂತಾದವರ ವಾಸ, ಗಮನ, ಕರ್ತವ್ಯಗಳಲ್ಲೂ, ಅವನ್ನು ಮೀರಿದಲ್ಲೂ ದಂಡ ವಿಧಿಸುವ ಬಗ್ಗೆ ಹೇಳಿದೆ. ಕುಶೀಲವರು (ಹಾರುವುದು, ನೆಗೆಯುವುದು. ಗಾನ ಮಾಡುವುದು ಇತ್ಯಾದಿ) ಮಳೆಗಾಲದ ರಾತ್ರಿಗಳಲ್ಲಿ ಒಂದೆಡೆಯಲ್ಲಿಯೇ ವಾಸಿಸಬೇಕು. ಪ್ರೀತಿಯಿಂದಲೂ, ಹೊಗಳಿಕೆಯಿಂದಲೂ ನ್ಯಾಯವಾಗಿ ಕೊಡಬೇಕಾದುದಕ್ಕಿಂತಲೂ ಹೆಚ್ಚು ಕೊಡಲ್ಪಟ್ಟುದ್ದನ್ನು ಸ್ವೀಕರಿಸಬಾರದು. ಯಾರೊಬ್ಬರನ್ನೂ ಅತಿಯಾಗಿ ಹೊಗಳಕೂಡದು. ಈ ನಿಯಮವನ್ನು ಮೀರಿದವರಿಗೆ ಹನ್ನೆರಡು ಪಣ ದಂಡವೆಳೆಯಬೇಕು. ದೇಶ, ಜಾತಿ, ಗೋತ್ರ, ಶಾಖಾದ್ವೈತ(ವೇದದ ಒಂದು ಶಾಖೆಯನ್ನು ಅಧ್ಯಯನ ಮಾಡುವವನು), ಮೈಥುನಗಳನ್ನು ಬಿಟ್ಟು ಪ್ರೇಕ್ಷಕರನ್ನು ಯಥೇಚ್ಛವಾಗಿ ಸಂತೋಷಗೊಳಿಸಬಹುದು. ಹೀಗೆ ಉಳಿದ ಶಿಲ್ಪಿಗಳ ವಿಷಯದಲ್ಲಿಯೂ ಕೂಡ 'ನಿಷ್ಪತ್ತಿವೇತನ'ವನ್ನು ಊಹಿಸಬೇಕು. ಕಳ್ಳರನ್ನು, ಕಳ್ಳರ ಕಾರ್ಯಕ್ರಮವನ್ನು ಮಾಡುತ್ತಿದ್ದವರನ್ನು, ಇಲ್ಲದವರಂತೆ ನಟಿಸುತ್ತಿರುವ ವರ್ತಕ,

ಕಾರುಕ, ಕುಶೀಲವ ಇತ್ಯಾದಿಯವರನ್ನು ತಡೆಗಟ್ಟಬೇಕೆನ್ನುತ್ತಾನೆ (. ೫೮. ಪು. ೨೮೫-೭). ಇಲ್ಲಿ ಕುಶೀಲದವರೆಂದರೆ ಸರ್ಕಸ್‌ನವರು, ದೊಂಬರಾಟದವರು ಎಂದೂ ಅರ್ಥೈಸಲಾಗಿದೆ. ಪ್ರಾಯಶಃ ಇವರು ರಸ್ತೆ ಬದಿಯಲ್ಲಿ ನೆರೆದು ಜನರಿಗೆ ಮನರಂಜನೆ ಮಾಡಿ ಜೀವಿಸುವ ವರ್ಗದವರಿರಬೇಕು. ರಸ್ತೆಯಲ್ಲಿ ಅನ್ಯಸ್ತ್ರೀಯೊಂದಿಗೆ ಹೋಗುವುದೂ ಅನುಮಾನಾಸ್ಪದವಾಗುತ್ತಿದ್ದಿರಬಹುದು. ಬೆಸ್ತ, ಮಾಲೆಗಾರ ಮುಂತಾದವರಂತೆ ನಟ, ಕುಶೀಲವರು ಸಹ ರಸ್ತೆಯಲ್ಲಿ ಸ್ತ್ರೀಯರೊಂದಿಗೆ (ಅಥವಾ ಹಿಂಬಾಲಿಸಿ) ಹೋಗುವುದು (ಪಥ್ಯನುಸರಣ) ದೋಷವಲ್ಲವೆಂದು ಅಭಿಪ್ರಾಯಪಡುತ್ತಾನೆ (ಅ. ೬೦, ಪು. ೨೨೪). ಬಹುಶಃ ನಟ ಕುಶೀಲವರೊಂದಿಗೆ ಸ್ತ್ರೀಯರು - ಸಹ ಕಲಾವಿದರು-ಇರುವುದು ಸಹಜವೆಂದು ಈ ನಿಯಮ ಹೇಳಿರಬಹುದು. (ಇಡೀ ಅಧ್ಯಾಯದಲ್ಲಿ ಪರಸ್ತ್ರೀ-ಪರಪುರುಷ ಗಮನದ ಬಗ್ಗೆಯೇ ವಿವರಗಳಿವೆ. ಅದು ಅಪರಾಧವಾಗಿದ್ದು, ಸೂಕ್ತದಂಡನೆಯೂ ಇದೆ.)

ಕೋಶ ಸಂಗ್ರಹಕ್ಕಾಗಿ ನೇರವಾಗಿ ಹಾಗೂ ದಂಡನೆಯಿಂದ ಪಡೆಯಬಹುದಾದ ಹಣದ ಬಗ್ಗೆ ದೀರ್ಘ ವಿವರಗಳಿವೆ. ಕಂದಾಯದಲ್ಲಿ ಏಳು ವಿಭಾಗಗಳಿದ್ದು, ಮೊದಲನೆಯದಾದ 'ದುರ್ಗ' ವಿಭಾಗದಲ್ಲಿರುವ ಇಪ್ಪತ್ತೆರಡು ಬಾಬುಗಳಲ್ಲಿ ನಟ-ನರ್ತಕರಿಂದ ವಸೂಲಾಗುವ ಭಾಗವೂ ಸೇರಿದೆ (ಅ-೨೭, ಪು. ೭೭). ರಾಜ್ಯಕ್ಕೆ ಹಣದ ಮುಗ್ಗಟ್ಟು ಬಂದಾಗ ಎತ್ತಬೇಕಾದ ಸುಂಕದ ಪ್ರಸ್ತಾಪವಿದೆ. ಚಿನ್ನ, ಬೆಳ್ಳಿ ವರ್ತಕರಿಂದ ಐವತ್ತನೇ ಒಂದು ಭಾಗ; ಬಟ್ಟೆ, ಕಂಚು, ಹಿತ್ತಾಳೆ ವ್ಯಾಪಾರಿಗಳಿಂದ ನಲವತ್ತನೇ ಒಂದು ಭಾಗ: ತಾಮ್ರ, ಕಬ್ಬಿಣದ ಉಪಕರಣಗಳನ್ನು ಗಾಡಿಯಲ್ಲಿ ಹೊತ್ತೊಯ್ದು ಮಾರುವವರಿಂದ ಮುವ್ವತ್ತನೇ ಒಂದು ಭಾಗ; ಬಡಗಿ ಕಮ್ಮಾರರಿಂದ ಹತ್ತನೇ ಒಂದು ಭಾಗ ಹಾಗೂ ನಟ-ನರ್ತಕರು ತಾವು ಗಳಿಸಿದ ಹಣದಲ್ಲಿ ಅರ್ಧ ಭಾಗವನ್ನು ಸುಂಕವಾಗಿ ನೀಡಬೇಕೆನ್ನುತ್ತಾನೆ. ಆದರೆ ಈ ಬಗೆಯ ಸುಂಕವನ್ನು ಒಂದು ಬಾರಿ ಮಾತ್ರ ಎತ್ತಬೇಕೆಂಬ ಎಚ್ಚರಿಕೆಯನ್ನು ಕೊಡುತ್ತಾನೆ. ಪದೇ ಪದೇ ಕೇಳಿದರೆ ಪ್ರಜೆಗಳ ಕೋಪಕ್ಕೆ ಕಾರಣವಾಗಬಹುದೆಂಬ ಕಾರಣ ನಿಯಮದಲ್ಲಿದೆ (ಅ. ೯೨; ಪು. ೩೩೮). ದೇವಾಲಯಗಳಿಗೆ ಸಂಬಂಧಿಸಿದ 'ದೇವತಾಧ್ಯಕ್ಷ' ದೇವತೆಗಳ ಆದಾಯವನ್ನು ಸಂಗ್ರಹಿಸುತ್ತಿದ್ದಿರಬೇಕು. ರಾತ್ರಿಯಲ್ಲಿ ಪ್ರಸಿದ್ಧ ಪುಣ್ಯಕ್ಷೇತ್ರದಲ್ಲಿ ದೇವತಾ ವೇದಿ ಅಥವ ಲಿಂಗವೊಂದನ್ನು ನೆಲೆಗೊಳಿಸಿ (ಬೆಳಿಗ್ಗೆ) ಇವು ಸ್ವಯಂ ಉದ್ಭವಿಸಿದ್ದು ಎಂದು ಪ್ರಖ್ಯಾತಿಗೊಳಿಸಿ, ಉತ್ಸವ ಇತ್ಯಾದಿ ಏರ್ಪಡಿಸಿ ಆ ಮೂಲಕ ಜನರು ನೀಡುವ ಕಾಣಿಕೆಯನ್ನು (ದೇವತಾಧ್ಯಕ್ಷ) ಸ್ವೀಕರಿಸಬೇಕೆಂದು ಉಪಾಯ ಸೂಚಿಸುತ್ತಾನೆ. ಇಂದು ನಮಗೆ ಕಾಣಸಿಗುವ ನೂರಾರು 'ಉದ್ಭವ' ಲಿಂಗಗಳು ಈ ಬಗೆಯ ಸೃಷ್ಟಿಯಲ್ಲವಷ್ಟೆ!

ಹಿಂದೆ ಹೇಳಿದಂತೆ ತೀರ ಈಚಿನವರೆಗೂ ಭಾರತದಲ್ಲಿ ಕಲೆ, ಕುಶಲಕಲೆ ಹಾಗೂ ದೈನಂದಿನ ಉಪಕರಣಗಳ ತಯಾರಿಕೆಯಲ್ಲಿ ಹೆಚ್ಚಿನ ಅಂತರವಿರಲಿಲ್ಲ. ಈ ಮೂರು ಪ್ರಭೇದ ಒಂದೇ ಆಗಿತ್ತು ಹಾಗೂ ಇವುಗಳ ತಯಾರಕ ''ಶಿಲ್ಪಿ'' ಅಥವಾ 'ಕಾರುಕ'ನೆಂದೇ ಕರೆಯಲ್ಪಡುತ್ತಿದ್ದ ಮತ್ತು ಆ ವಿದ್ಯೆಯನ್ನು ಪರಂಪರಾನುಗತವಾಗಿಯೇ ಕಲಿಯುತ್ತಿದ್ದ. ಹಾಗೂ ಈ 'ಕಸಬು'ಗಳು ಜಾತಿ ಆಧಾರಿತವಾಗಿದ್ದುದರಿಂದ ಕೆಲವು ಸಮಸ್ಯೆಗಳೂ ತಲೆದೋರಿರಬಹುದು. ಎಂದರೆ ಒಂದು ನಿಶ್ಚಿತ ಪ್ರದೇಶದಲ್ಲಿ ಶಿಲ್ಪಿಗಳ ಕೊರತೆಯುಂಟಾಗಬಹುದು. ಅಥವ ಶಿಲ್ಪಿಗೆ ಅಧಿಕ ಬೇಡಿಕೆಯಿಂದಾಗಿ ಗ್ರಾಹಕರನ್ನು ವಂಚಿಸುವುದೋ, ಶೋಷಣೆಯೋ ಮಾಡಬಹುದು. ಹೀಗಾಗದಂತೆ ಹಾಗೂ ರಾಜಾದಾಯದ ದೃಷ್ಟಿಯಿಂದ ಕೌಟಿಲ್ಯ ಕ್ರಮ ತೆಗೆದುಕೊಳ್ಳುತ್ತಾನೆ. ಪ್ರತಿಯೊಂದು ವಿಭಾಗಕ್ಕೂ ಒಬ್ಬ ಕಾರ್ಯಾಧ್ಯಕ್ಷನನ್ನು ನೇಮಿಸುತ್ತಾನೆ. (ಇಂದಿನ ಕಾರ್ಯದರ್ಶಿ- Secretary ಯಂತೆ). ಇವರುಗಳು ತಮ್ಮ ಸುಪರ್ದಿಗೆ ಬರುವ 'ಶಿಲ್ಪಿ'ಗಳ ಬಗ್ಗೆ ನಿಗಾವಹಿಸುತ್ತಾರೆ.

ಲೋಹಾಧ್ಯಕ್ಷನು ತಾಮ್ರ, ಸೀಸ, ತವರ , ಕಂಚು,, ಹಿತ್ತಾಳೆ, ವೃತ್ತ ಮುಂತಾದ ಲೋಹಗಳಲ್ಲಿ (ಬಿಂದಿಗೆ, ಚೊಂಬು ಮುಂತಾದ) ಪಾತ್ರೆಗಳನ್ನು ತಯಾರು ಮಾಡಿಸಬೇಕಲ್ಲದೆ ಅವುಗಳ ಕ್ರಯ-ವಿಕ್ರಯ ವ್ಯವಹಾರವನ್ನೂ ನೋಡಿಕೊಳ್ಳಬೇಕು. (ಅ. ೩೩, ಪು. ೧೧೫). ಪೌರ ಜಾನಪದರಿಗೆ ಚಿನ್ನ ಬೆಳ್ಳಿಗಳನ್ನು ಕೊಳ್ಳಲಿಕ್ಕೂ, ಮಾರಲಿಕ್ಕೂ ಶಿಲ್ಪಜ್ಞನೂ, ಚತುರನೂ, ಕುಲೀನನೂ ಮೇಲಾಗಿ ವಿಶ್ವಾಸಕ್ಕೆ ಪಾತ್ರನಾದವನನ್ನು ಸುವರ್ಣಾಧಿಕಾರಿಯಾಗಿ ರಾಜಮಾರ್ಗದ ನಡುಪ್ರದೇಶದಲ್ಲಿ ಇರುವ ಸೌಕರ್ಯ ಒದಗಿಸಬೇಕು (ಅಕ್ಷರ ಶಾಲೆ) (ಅ. ೩೪. ಪು. ೧೧೭). ಈತ ಚಿನ್ನದಿಂದ ಉಪಕರಣಗಳು, ಒಡವೆ ಮುಂತಾದ ಕಾರ್ಯ ನಿರ್ವಹಿಸುವವರ ಮೇಲ್ವಿಚಾರಣೆ ನಡೆಸಬೇಕು. 'ಅಕ್ಷರ ಶಾಲೆ' ಎನ್ನುವುದು ಇಂದಿನ Workshop ನಂತಿದ್ದು ಇಲ್ಲಿಗೇ ಶಿಲ್ಪಿಗಳು ಬಂದು ಕಾರ್ಯ ನಿರ್ವಹಿಸಿ ಮರಳುತ್ತಾರೆ. ಅವರಿಗೆ ನೀಡುವ ಚಿನ್ನ ಇತ್ಯಾದಿ ಲೋಹಗಳು, ಪ್ರಶಸ್ತ ಮಣಿ (ವಜ್ರ ಇತ್ಯಾದಿ)ಗಳೂ ಹಾಗೂ ತಯಾರಿಕಾ ಉಪಕರಣದ ಬಗ್ಗೆ ಸುವರ್ಣಾಧ್ಯಕ್ಷ ನಿಗಾ ವಹಿಸಬೇಕು. ಕಾರ್ಯದ ಅವಧಿ ಮುಗಿದ ಮೇಲೆ, ಕೆಲಸಕ್ಕೆ ನೀಡಿದ ಎಲ್ಲ ಉಪಕರಣಗಳನ್ನು, ಲೋಹಗಳನ್ನು ಹಾಗೂ ಅರ್ಧ ಮುಗಿದ ಆಭರಣಗಳನ್ನು ಅಲ್ಲಿಯೇ ಬಿಟ್ಟುಹೋಗಬೇಕು. ''ಬಟ್ಟೆ, ಕೈ ಮತ್ತು ಗುಹ್ಯ

ಪ್ರದೇಶಗಳಲ್ಲಿ ಬಚ್ಚಿಟ್ಟುಕೊಂಡು ಚಿನ್ನ ಬೆಳ್ಳಿಗಳನ್ನೊಯ್ಯುವರೇ? ಎಂದು ಚೆನ್ನಾಗಿ ಪರೀಕ್ಷಿಸಲ್ಪಟ್ಟು ಅಕ್ಷಶಾಲೆಯ ಒಳಕ್ಕೆ ಇಲ್ಲವೆ ಹೊರಕ್ಕೆ ಬಿಡಲ್ಪಡಬೇಕು''. ''ಪೂರ್ಣ ಸಿದ್ಧವಾದ ಒಡವೆಗಳನ್ನು ಸುವರ್ಣಾಧ್ಯಕ್ಷನ ಮುದ್ರೆ ಹಾಕಿ ಮೊಹರು ಹಾಕಿಡಬೇಕು'' ಎಂಬ ವಿವರಣೆಯಲ್ಲದೆ ಉಪಕರಣಗಳ ವರ್ಗೀಕರಣ, ಚಿನ್ನದ ಕಲಬೆರಕೆ, ಹಾಗೂ ವರ್ಣ (ಕ್ಯಾರೆಟ್), ಮಿಶ್ರಣ ಮಾಡುವ ಲೋಹಗಳ ಅವಶ್ಯಕತೆ, ತಾಳಿಕೆ, ದುಟ್ಟ ವಿಡುವಿಕೆ, ವಿವಿಧ ಶಾಖದಲ್ಲಿ ಬಣ್ಣಗಳನ್ನು ಸಹಜವಾಗಿ ನೀಡುವಿಕೆ, ಸಂಸ್ಕಾರ ವಿಧಾನ ಮುಂತಾದ ತಾಂತ್ರಿಕ ವಿವರಣೆಗಳು ಹಾಗೂ ವೈಜ್ಞಾನಿಕ (ತಾಂತ್ರಿಕ) ಹೆಸರುಗಳೊಂದಿಗೆ ವಿವರಿಸಿದೆ. (ಅ. ೩೪, ಪು. ೧೨೦-೨೨)

ಮುಂದೆ ಇಷ್ಟೇ ದೀರ್ಘವಾಗಿ ಆಭರಣ ತಯಾರಕರ ಬಗ್ಗೆ, ಕಾರ್ಯದ ಬಗ್ಗೆ ಹಾಗೂ ತಪ್ಪಿಗೆ ವಿಧಿಸುವ ಶಿಕ್ಷೆಯ ಬಗ್ಗೆ ವಿವರಗಳಿವೆ. ಒಡವೆ ಇತ್ಯಾದಿ ತಯಾರಿಸಲು 'ಅರಮನೆ ಕಲಾವಿದರು (ಅಕ್ಕಸಾಲಿಗರು) ಇದ್ದರು. ಅವರಿಗೆ ದಿನಗೂಲಿಯಂತೆ ಅಥವಾ ಕೆಲಸಕ್ಕೆ ತಕ್ಕಂತೆ ಕೂಲಿ ನೀಡಲಾಗುತ್ತಿತ್ತು. ನಿಗದಿತ ಕಾಲಾವಧಿಯಲ್ಲಿ ಪೂರೈಸದಿದ್ದರೆ ಅಥವ ಹೇಳಿದ ಕಾರ್ಯ ಬಿಟ್ಟು ಬೇರೊಂದು ಮಾಡಿದರೆ ಕೊಡಬಹುದಾದ ಕೂಲಿಯ ದುಪ್ಪಟ್ಟು ದಂಡ ವಿಧಿಸಲಾಗುತ್ತಿತ್ತು. ಒಂದು ಕಾರ್ಯಕ್ಕೆ ತೆಗೆದುಕೊಂಡ ಲೋಹ ಇತ್ಯಾದಿಗಳು ಆ ಕಾರ್ಯ ಪೂರೈಸಿ ಅಂತಿಮವಾಗಿ ನೀಡುವ ಒಡವೆ ಇತ್ಯಾದಿಗಳ ತೂಕಕ್ಕೆ ಹಾಗೂ ವಸ್ತುವಿಗೆ ಸಮವಾಗಿರಬೇಕು. ಕಾರ್ಯ ನಿರ್ವಹಿಸುವಾಗ, ಪುಟವಿಡುವಾಗ, ಬಣ್ಣ ನೀಡುವಾಗ ಕೆಲವು ಅಂಶ ಕಡಿಮೆಯಾಗುತ್ತದೆ (ಉದಾ : ಚಿನ್ನ, ಬೆಳ್ಳಿ ಕರಗಿಸಿದರೆ ಒಂದು ಕಾಕಣಿಯಷ್ಟು ಚಿನ್ನ ಕಡಿಮೆಯಾಗುತ್ತದೆ ಇತ್ಯಾದಿ) ಎಂಬುದನ್ನು ಲೆಕ್ಕ ಹಾಕಲಾಗುತ್ತಿತ್ತು. ಒಬ್ಬ ಶಿಲ್ಪಿಗೆ ನೀಡಿದ ಕಾರ್ಯವನ್ನು ಬೇರೊಬ್ಬರಿಂದ ಮಾಡಿಸಿದರೆ ಇಬ್ಬರಿಗೂ ದಂಡವಲ್ಲದೆ ಮೊದಲಾತನ ಕೈಬೆರಳುಗಳು ಕತ್ತರಿಸಿ ಹಾಕಬೇಕು. ತೂಕದ ಬೊಟ್ಟು ಇತ್ಯಾದಿ ಕೃತಕವಾಗಿ ತಯಾರಿಸಿದಲ್ಲಿ ಹನ್ನೆರಡು ಪಣ ದಂಡ ನೀಡಬೇಕು. ಇವಲ್ಲದೆ ಆರು ವಿಧದ ಶಿಲ್ಪದ ಕೆಲಸ, ಐದು ವಿಧ ಅಪಹರಣೋಪಾಯ ಹಾಗೂ ಈ ಎಲ್ಲದರ ಉಪಭೇದ ನಿಜ ಎಂದು ವಿವರಿಸಿದೆ (ಉದಾ. ತುಲಾವಿಷಮ- ಇದರಲ್ಲಿ ಎಂಟು ಬಗೆ ಕಂಟಕ, ಕೃಪೆ, ಲೋಹದಿಂದ ತಯಾರಿಸಿದ್ದು (ಸನ್ನಾಮಿನಿ), ಸರಿಯಿಲ್ಲದ ಸೂತ್ರ (ಸಕಟು ಕಷ್ಟಾ) ಇತ್ಯಾದಿ (ಅ - ೩೫, ಪು. ೧೨೩-೨೯) ದೇಶಾಂತರ ಹೋಗುವಾಗ ಅಥವಾ ಕಾರಣಾಂತರದಿಂದ ಒಡವೆ ಇತ್ಯಾದಿ ಬೆಲೆಯುಳ್ಳ ವಸ್ತುಗಳನ್ನು ಶಿಲ್ಪಿಯ ಬಳಿ ಒತ್ತೆ (ನ್ಯಾಸ) ಇರಿಸುವ, ಅದನ್ನು ಶಿಲ್ಪಿ ಲಪಟಾಯಿಸಹುದಾದ ಬಗ್ಗೆಯೂ ವಿವರಗಳಿವೆ. ಒಮ್ಮೆ ಹೀಗೆ ಇರಿಸಿದ್ದನ್ನು ಮರಳಿ ಕೊಡದೇ ಹೋದರೆ ಅಥವಾ ಇರಿಸಿಕೊಂಡವ ಇಲ್ಲವಾದರೆ ಉಂಟಾಗಬಹುದಾದ ಅನೇಕ ಸಮಸ್ಯೆಗಳನ್ನು ವಿವರವಾಗಿ ಚರ್ಚಿಸಿದೆ. ತಪ್ಪಿತಸ್ಥರಿಗೆ ನೀಡುವ ದಂಡದ ಬಗ್ಗೆಯೂ ಎಚ್ಚರಿಕೆಯಿದೆ. ಇಲ್ಲಿ 'ಸಾಕ್ಷಿ'ಯ ಅವಶ್ಯಕತೆ ಅಪಾರ (ಅ. ೬೯, ಪು. ೨೫೪-೫೬) ಇಂತಹದೇ ಇನ್ನೊಂದು ಕಾರುಕವೆಂದರೆ ಬಟ್ಟೆ ಹಾಗೂ ನೇಯುವಿಕೆ. ಇಲ್ಲಿ ನೂಲು ತೆಗೆಯುವ ಅಥವ ನೂಲು ಇತ್ಯಾದಿಗಳನ್ನು ಹೆಣೆಯಲು ಸಿದ್ಧ ಪಡಿಸುವವರಲ್ಲಿ ವಯಸ್ಸಾದವರು, ಅಂಗವಿಕಲರು, ನಿವೃತ್ತ ಗಣಿಕೆಯರೊಂದಿಗೆ. ನೃತ್ಯ ಗೀತಾದಿಯಿಂದ ದೇವರ ಸೇವೆ ಮಾಡಲು ಅಸಮರ್ಥರಾದವರನ್ನು ಸೇರಿಸಿದೆ. ಮುಂದೆ ನೇಯ್ಗೆಯ ರೀತಿ ನೀತಿ, ನೂಲಿನ ವಿಧಾನ, ಬಣ್ಣ ಕೊಡುವಿಕೆ ಮುಂತಾದ ವಿವರಗಳು, ವಸ್ತ್ರ ಮಾಡಲು ವಿವಿಧ ದರ್ಜೆಯ ನೂಲನ್ನು ಆಧರಿಸಿ ನಿಗದಿಪಡಿಸಿದ ಕಾಲಾವಧಿ, ಗುಣಮಟ್ಟ ಹಾಗೂ ಕಾಲಾವಧಿ ಮೀರಿದಲ್ಲಿ ಶಿಕ್ಷೆ ಹಾಗೂ ದಂಡಗಳ ವಿವರಗಳಿವೆ (ಅ. ೪೪. ಪು. ೧೫೮). ಬಟ್ಟೆ ಒಗೆಯುವವರ ಬಗ್ಗೆಯೂ ದಂಡ ನೀತಿಯಿದೆಯಲ್ಲದೆ ''ಎಲ್ಲ ಬಗೆಯ ಶಿಲ್ಪಿ (ಕಾರ್ಮಿಕ)ಯರಿಂದ ಪ್ರಜೆಗಳ ರಕ್ಷಣೆ'' ಎಂದು ಒಂದು ಅಧ್ಯಾಯವೇ ಮೀಸಲಿರಿಸಿದೆ (ಅ. ೫೮, ಪು. ೨೮೨-೮೭). ಈ ಎಲ್ಲ ವಿವರಗಳಿಂದ ತಿಳಿದುಬರುವುದೇನೆಂದರೆ ಒಂದು ವಿವಿಧ ಮಾಧ್ಯಮಗಳು ಹಾಗೂ ಅವುಗಳನ್ನು ತಯಾರಿಸುವ 'ಶಿಲ್ಪಿ'ಗಳು ಮಾಧ್ಯಮಗಳಲ್ಲಿ ವೈವಿಧ್ಯ, ಬಗೆ ಇತ್ಯಾದಿ. ತಯಾರಿಕಾ ವಿಧಾನ ಒಂದಾದರೆ ಅದಕ್ಕೆ ನಿಗದಿಪಡಿಸಿದ ಕೂಲಿ (ಸಂಭಾವನೆ) ಹಾಗೂ ಮಾನವಸಹಜವಾಗಿ ಶಿಲ್ಪಿಗೂ ಇರುವ ಮೈಗಳ್ಳತನ, ದುರಾಸೆ ಅವುಗಳಿಗೆ ಆತ ಯೋಚಿಸಬಹುದಾದ ಉಪಾಯಗಳು, ವಿವಿಧ ಮಾಧ್ಯಮಗಳಿಗೆಂದೇ ಇರುವ 'ಅಧ್ಯಕ್ಷ'ರಿಂದ ತಪಾಸಣೆ, ಸಂಭಾವನೆ ಹಾಗೂ ದಂಡಗಳು ಮತ್ತೊಂದು ಪ್ರಮುಖ ಅಂಶ. ಬೇಡಿಕೆಗಳು ಹೆಚ್ಚಾಗಿದ್ದು ತಯಾರಿಕೆಗಳು ಕಡಿಮೆಯಿದ್ದಲ್ಲಿ ಗುಣಮಟ್ಟ ಕಳಪೆಯಾಗುವ ಸಾಧ್ಯತೆಯಿದ್ದು ಅದರ ನಿವಾರಣೋಪಾಯ ಹಾಗೂ ಜನರಿಗೆ ಇದರಿಂದ ಉಂಟಾಗುವ ಹಾನಿ (ಕಂಟಕ)ಗಳ ಅರಿವು ಕೌಟಿಲ್ಯನಿಗೆ ಇದ್ದುದೇ ಆತನ ಸಮಗ್ರ ದೃಷ್ಟಿಗೆ ದ್ಯೋತಕವಾಗಿದೆ. ಇಂದೂ ಸಹ ಗುಣಮಟ್ಟ ನಿಯಂತ್ರಣ (I.S.I.) ಹಾಗೂ ಅಳತೆ ಮತ್ತು ತೂಕಗಳ ನಿಯಂತ್ರಣಗಳಿಗೆ ಪ್ರತ್ಯೇಕ ಇಲಾಖೆಯಿದ್ದು ಇದೇ ಬಗೆಯ ಕಾರ್ಯ ನಿರ್ವಹಿಸುತ್ತಿದೆಯಾದರೂ ಶುಲ್ಕ ಹಾಗೂ ದಂಡದಲ್ಲಿ ಹೆಚ್ಚು ಮೃದುವಾಗಿದೆ ಎಂದೆನಿಸುತ್ತದೆ.

ಕೊನೆಯದಾಗಿ ಗೂಢಚರ್ಯೆಗೆ ಸಂಬಂಧಿಸಿದಂತೆ ಕಲಾವಿದರ ಬಳಕೆಯ ಬಗ್ಗೆ ಸಂಕ್ಷಿಪ್ತವಾಗಿ ನೋಡಬಹುದೆನ್ನಿಸುತ್ತದೆ. ಕೌಟಿಲ್ಯನಲ್ಲಿ ಗೂಢಚರ್ಯ ರಾಜಕಾರಣದಷ್ಟೇ ಮುಖ್ಯವಾದುದು. ಇಲ್ಲಿ ಎರಡು ರೀತಿಯ ಗೂಢಚರ್ಯೆ ಕಾಣಬಹುದು. ಒಂದು-

ರಾಜ ತನ್ನ ಪರಿವಾರದವರ ಮೇಲೆಯೇ ನಡೆಸುವುದು ಹಾಗೂ ಇನ್ನೊಂದು- ಶತ್ರುರಾಜರ ಮೇಲೆ ನಡೆಸುವ ಪ್ರಯೋಗ. ಗೂಢಚಾರಿಗಳಲ್ಲೂ ಹಲವಾರು ವಿಧಗಳಿವೆ. ಅವರಲ್ಲಿ ಇಂದ್ರಜಾಲ, ಪಕ್ಷಿಶಾಸ್ತ್ರ ಕಾಮಶಾಸ್ತ್ರ ಇತ್ಯಾದಿಗಳೊಂದಿಗೆ ನೃತ್ಯ, ಗೀತೆಗಳಲ್ಲಿ ನುರಿತವರು 'ಸತ್ರಿ'ಗಳು. ರಾಜ ತನ್ನ ಮಂತ್ರಿ, ಪುರೋಹಿತ ಇತ್ಯಾದಿ ಹದಿನೆಂಟು ಪರಿವಾರದವರ ಬಗ್ಗೆಯೇ ಒಂದು ಕಣ್ಣಿಟ್ಟಿರಲು ಶಿಲ್ಪ, ಕಲಾಕುಶಲ ಮುಂತಾದ ತೀಕ್ಷ್ಣ ಬುದ್ಧಿಯುಳ್ಳವರನ್ನು ಗೂಢಚರ್ಯೆಗೆ ನೇಮಿಸಿಕೊಳ್ಳುತ್ತಿದ್ದ. ವಿವಿಧ ವೇಷಧಾರಿಗಳೊಂದಿಗೆ, ನಟ, ನರ್ತಕ, ಸಂಗೀತಗಾರ, ಕಥೆ ಹೇಳುವವ, ವೀಣಾದಿ ವಾದ್ಯ ನುಡಿಸುವವ ಮೊದಲಾದವರು ಮಂತ್ರಿ ಮುಂತಾದವರ ಒಳ ಸಮಾಚಾರ ಅರಿತು ರಾಜನಿಗೆ ಅರಿಕೆ ಮಾಡುತ್ತಿದ್ದರು. (ಅ. ೧೨. ಪು. ೨೫-೨೭) ಗ್ರಾಮದ ಮುಖಂಡನು ನೇಮಿಸಿಕೊಳ್ಳುವ ಗೂಢಚಾರಿಗಳಲ್ಲಿ 'ಕಾರುಶಿಲ್ಪಿ'ಯೂ ಒಬ್ಬ (ಅ. ೮೯, ಪು. ೨೯೫).

ರಾಜ್ಯದೊಳಗಿನ ಶತ್ರುಗಳಲ್ಲಿ ರಾಜನ ಮಗನೇ ಒಬ್ಬನಾಗಿರಬಹುದಿದ್ದು, ಆತ ತಾಯಿಯ ಕಡೆಯ ಸೇವಕರನ್ನು ಒಲಿಸಿಕೊಂಡು ಬಡಗಿ, ಶಿಲ್ಪಿ, ಕಮ್ಮಾರ, ಗಾಯಕ ಮುಂತಾದವರ ನೆರವಿನಿಂದ ತಂದೆಯನ್ನು ಹತ್ಯೆಮಾಡಿ ತಾನೇ ಪಟ್ಟಕ್ಕೆ ಬರುತ್ತಿದ್ದನೆಂಬ ಸೂಚನೆಯಿದೆ (ಅ. ೧೮, ಪು. ೪೭). ರಾಜ್ಯದೊಳಗೇ ರಾಜ ವಿರೋಧಿ ಸಂಘಗಳು ಇದ್ದು ಇವರನ್ನು ಜಾರಸ್ತ್ರೀ, ನಟ, ನರ್ತಕ ಮುಂತಾದವರೊಂದಿಗೆ ನಿಗ್ರಹಿಸಬೇಕೆಂದು ಹೇಳುತ್ತಾನೆ. ವಿರೋಧಿಸಂಘದ ಮುಖ್ಯಸ್ಥನೊಂದಿಗೆ ಧನಿಕ ವಿಧವೆ, ಉಪಾಯಜ್ಞೆಯಾದ ಸ್ತ್ರೀಯಾಗಲೀ, ದೇವತೆಗಳ ಪ್ರತಿಮೆಗಳನ್ನು ತೋರಿಸಿ ಜೀವಿಸುವ ಸ್ತ್ರೀಯರಾಗಲೀ, ನರ್ತಕ, ಗಾಯಕ ಸ್ತ್ರೀಯರಾಗಲೀ ತಮಗೆ ಭಾಗ ಕೊಡಬೇಕೆಂದು ವೃಥಾ ಕಲಹವಾಡಿ ಆತನಿಗೆ ಉನ್ಮಾದವುಂಟುಮಾಡಿ ಸಮಾಗಮಕ್ಕೆ ಕರೆದು ಬಂಧಿಸಬೇಕು ಅಥವ ಕೊಲ್ಲಬೇಕು (ಅ. ೧೩೫ - ಪು. ೫೨೯). ಹೊರಗಿನ ಶತ್ರುಗಳಲ್ಲಿ ಬೇರೆಯದೇ ದೇಶ (ರಾಜ್ಯ) ದವನೊಬ್ಬನಾದರೆ, ತನ್ನ ರಾಜ್ಯದಲ್ಲೆ ಅಡಗಿರುವ ಶತ್ರುವನ್ನು ನಿಗ್ರಹಿಸುವುದು ಇನ್ನೊಂದು. ಕಾರಣಾನಂತರದಿಂದ ಒಬ್ಬ ರಾಜನು ಪರರಾಜನೊಂದಿಗೆ 'ಸಂಧಿ'ಮಾಡಿಕೊಂಡು ನ್ಯಾಸವಾಗಿ ಪುತ್ರನನ್ನೇ ಶತ್ರುವಿನಲ್ಲಿ ಇರಿಸಿದಾಗ ಮೊದಲ ರಾಜನ ಗೂಢಚಾರರು ಪುತ್ರನನ್ನು ಉಪಾಯವಾಗಿ ಅಪಹರಿಸಿ ತರಬೇಕು ಎಂಬ ವಿಷಯದಲ್ಲಿ ಬಡಗಿ ಶಿಲ್ಪಿಗಳ ವೇಷದಿಂದ ಕೆಲಸ ಮಾಡುತ್ತಿದ್ದು ರಾತ್ರಿಯಲ್ಲಿ ಸುರಂಗ ತೋಡಿ ಪುತ್ರನನ್ನು ಅಪಹರಿಸಿ ಮರಳಿ ಕರೆತರಬೇಕು. ಇಲ್ಲವೆ ನಟ, ನರ್ತಕ, ಸಂಗೀತಗಾರ, ವಾದ್ಯಗಾರ ಮುಂತಾದವರು ಶತ್ರುರಾಜನೊಂದಿಗೆ ಗೆಳತನ ಬೆಳೆಸಿ ಆತನ ಕಣ್ಣು ತಪ್ಪಿಸಿ ರಾಜಪುತ್ರನನ್ನು ಕರೆತರಬೇಕು ಎಂದು ಹೇಳುತ್ತಾನೆ (ಅ. ೧೧೫, ಪು. ೪೫೯). ರಾಜ ಒಬ್ಬನೇ ಇದ್ದಾಗ, ಎಂದರೆ ರಾಜ್ಯ ಶತ್ರುವಿನ ಕೈವಶವಾದಾಗ ರಾಜನಲ್ಲಿಯೇ ಚೈತ್ಯಾಲಯದ ಪ್ರತಿಮೆಯ ಅಡಿಯ ಬಿಲದಲ್ಲಿ ಅಡಗಿ ಕತ್ತಲಾದ ನಂತರ ಅಂತಃಪುರಕ್ಕೆ ಹೋಗಿ ಅಲ್ಲಿರುವ ಶತ್ರುವನ್ನು ಕೊಲ್ಲಬೇಕು. ಚೈತ್ಯಾ ಹಾಗೂ ದೇವತೆಗಳ ಪ್ರತಿಮೆಯ ಛಿದ್ರದಲ್ಲಿ ಪ್ರವೇಶಿಸುವುದು, ದೇವತೆಯ ವೇಷ ಹಾಕಿದವರೊಂದಿಗೆ ಮಾತಾಡುವುದು, ದೇವತಾ ಪ್ರತಿಮೆಗಳಿಗೆ ತೇಜಸ್ಸು ಬರುವಂತೆ ತೈಲ ಅಥವ ಅಭ್ರಕ ಹಚ್ಚಿ ಪ್ರಜ್ವಲಿಸುವಂತೆ ಮಾಡಿ, ಶತ್ರುವಿನ ಗಮನ ಅತ್ತ ಸೆಳೆದು ಆತನನ್ನು ಸಂಹರಿಸಬೇಕು (ಅ. ೧೪೦,೪೧,೪೨, ಪು. ೫೫೮, ೬೦, ೬೫) ಎಂದು ಹೇಳುತ್ತಾನೆ.

ಇದರೊಂದಿಗೆ ಕೌಟಿಲ್ಯನಿಗೆ ಸಂಬಂಧಿಸಿದ ಸಾಹಿತ್ಯ ಗ್ರಂಥದಲ್ಲಿ ಗೂಢಚರ್ಯೆಯೊಂದಿಗೆ ಬಂದಿರುವ ಚಿತ್ರಕಲೆಯ ಪ್ರಸ್ತಾಪ ನೋಡಬಹುದು. ವಿಶಾಖದತ್ತನ 'ಮುದ್ರಾರಾಕ್ಷಸ'ದಲ್ಲಿ ಊರಲ್ಲೇ ಅಡಗಿರುವ ಅಮಾತ್ಯ ರಾಕ್ಷಸನ ಕುಟುಂಬದವರನ್ನು ಪತ್ತೆ ಹಚ್ಚಲು ನಿಪುಣಕನೆಂಬ ಗೂಢಚಾರ, ಸ್ವರ್ಗ-ನರಕಗಳ ಚಿತ್ರಗಳುಳ್ಳ ಚಿತ್ರಪಟ ಹಿಡಿದು ಕಥೆ ಹೇಳುತ್ತಾ ಮನೆಮನೆಗೆ ಹೋಗಿ ಅಮಾತ್ಯನ ಮಡದಿ ಮಗ ಇದ್ದ ಮನೆಯನ್ನು ಗುರುತಿಸುತ್ತಾನೆ.[೨] ಇದೇ ಸಂಗತಿ ಕೆಂಪುನಾರಾಯಣನ (೧೯ನೇ ಶ. ಆದಿ) 'ಮುದ್ರಾಮಂಜೂಷ'ದಲ್ಲಿ ಇನ್ನೂ ವಿಸ್ತಾರವಾಗಿ ಬಂದಿದೆ. ಈ ರೀತಿ ಚಿತ್ರಪಟ ಇರಿಸಿ ಕಥೆ ಹೇಳುವಿಕೆ ಚಾಣಕ್ಯನ ಸಮಕಾಲೀನ ಚಾರ್ವಾಕನಿಂದ ಹಿಡಿದು ಪಂಪ, ಅಭಿನವ ಪಂಪರ ಕಾವ್ಯಗಳಲ್ಲಿ ಪ್ರಸ್ತಾಪವಾಗಿದೆ. ಇಂದಿಗೂ ಈ ರೀತಿ ಕಥೆ ಹೇಳುವ ದುರುಗ ಮುರುಗಿಗಳು ರಾಷ್ಟ್ರದ ಆದ್ಯಂತ ದೊರೆಯುತ್ತಾರೆ.

ಕೌಟಿಲ್ಯನ ಕಾಲದಲ್ಲಿದ್ದ ವಾತಾವರಣವೇ ಮುಂದೆಯೂ ಇತ್ತೆಂದು ಹೇಳಲಾಗುವುದಿಲ್ಲ. ಕೌಟಿಲ್ಯ ಮೌರ್ಯ ವಂಶದ ಚಂದ್ರಗುಪ್ತನೊಂದಿಗೆ ಇದ್ದಾತನೇ. ಆದರೆ ಮುಂದೆ ಚಂದ್ರಗುಪ್ತನ ಮೊಮ್ಮಗ ಅಶೋಕನೇ ಬೌದ್ಧ ಮತಾವಲಂಬಿಯಾಗಿ ಯುದ್ಧ ಪ್ರಜ್ಞೆಯನ್ನೇ ತಿರಸ್ಕರಿಸಿದ. ಆಗ ಚಿತ್ರ, ಶಿಲ್ಪ ಇತ್ಯಾದಿ ಕಲೆಗಳೂ ಸಹ ಯುದ್ಧ ಅಥವ ಗೂಢಚರ್ಯೆಗೆ ನೆರವಾಗುವ ಪ್ರಶ್ನೆಯೇ ಬರುವುದಿಲ್ಲ. ಆದರೆ ಕೌಟಿಲ್ಯ ಹೇಳುವ ಚಿತ್ರ, ಸಂಗೀತ ಇತ್ಯಾದಿ ಲಲಿತ ಕಲೆಗಳಿಗೂ ಕರಕುಶಲ ಕಲೆಗಳ 'ಶಿಲ್ಪಿ'ಗಳಿಗೂ ಯಾವುದೇ ಆತಂಕವಿದ್ದಿರಲಾರದು. ಅರಮನೆಗೆ ಹೊಂದಿಕೊಂಡಂತೆಯೇ ಕೌಟಿಲ್ಯ ಹೇಳುವಂತೆ ಅಕ್ಷರಶಾಲೆ (workshop) ಮುಂದುವರಿದಿರ ಬಹುದು. ಮುಮ್ಮಡಿ ಕೃಷ್ಣರಾಜರ ಕಾಲದಲ್ಲೂ ಈ ಬಗೆಯ ಕಾರ್ಯಾಗಾರವೊಂದಿದ್ದು ಮುಂದೆ ಅದೇ ಪ್ರತ್ಯೇಕವಾಗಿ ಕಲಾ

ಶಾಲೆಯಾಯಿತು. ಉಳಿದ ಲಲಿತ ಕಲೆಗಳು ಕಳೆದ ಶತಮಾನದವರೆಗೂ ನಿಮ್ನ ವರ್ಗದವರ ಕೈಯಲ್ಲೇ ಇತ್ತು. ಅಂದಿನಂತೆಯೇ ಮುಂದೆಯೂ ಇವರ ನೈತಿಕತೆಯ ಬಗ್ಗೆ ಜನರಿಗೆ ಸಂದೇಹವಿದ್ದಿರಲೂಬಹುದು. ಆದರೆ ಅಂದಿನಂತೆ ಮುಂದೆಯೂ ಕಲೆ, ಕುಶಲ ಕಲೆಗಳು ರಾಜಾದಾಯದ ಒಂದು ಉತ್ಪತ್ತಿಯಾಗಲಾರದು.

## ಅಡಿಟಿಪ್ಪಣಿಗಳು

೧. ಕನಕದಾಸ: ಮೋಹನ ತರಂಗಿಣಿ, ಸಂಧಿ ೩, ಪ. ೨೨, ಪು. ೪೮

೨. ಕೆ. ಶ್ರೀಕಂಠಯ್ಯ; ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ, ೧೯೮೩, ಪು. ೮೨

೩. ಹಜಾರಿ ಪ್ರಸಾದ ದ್ವಿವೇದಿ: ಭಾರತೀಯ ಕಲಾತ್ಮಕ ವಿನೋದಗಳು, ಪು. ೧೮

೪. ಪ್ಲೇಟೋ, ರಿಪಬ್ಲಿಕ್ (ಅನು) : ಕೆ. ವೆಂಕಟರಾಮಪ್ಪ, ಮೈಸೂರು, ೧೯೬೧

೫. ಕೆ. ವಾಸುದೇವಾಚಾರ್ಯ : ನೆನಪುಗಳು ಪು. ೨೧

೬. ಯು. ಎಸ್. ಕೃಷ್ಣ ರಾವ್ : 'ಭರತ ನಾಟ್ಯ...' ಭಾರತೀಯ ಕಲಾದರ್ಶನ, ೧೯೬೨, ಪು. ೨೧೫

೭. ವಾತ್ಸಾಯನ, ಕಾಮಸೂತ್ರ (ಅನು) : ಮ. ಶ್ರೀಧರಾಚಾರ್, ಬೆಂಗಳೂರು, ೧೯೭೮

೮. ವಿಶಾಖದತ್ತ, ಮುದ್ರಾರಾಕ್ಷಸ ನಾಟಕ, (ಅನು) : ತೀ. ನಂ. ಶ್ರೀಕಂಠಯ್ಯ, ಮೈಸೂರು ೧೯೪೨

೯. ಕೆಂಪುನಾರಾಯಣ : ಮುದ್ರಾಮಂಜೂಷ, ವಿಶ್ವ ಕನ್ನಡ ಸಮ್ಮೇಳನ ಪ್ರಕಟಣೆ, ೧೯೮೫.

# ಏಕೀಕರಣೋತ್ತರ ಕರ್ನಾಟಕದ ಅಭಿವೃದ್ಧಿ

ರಾ. ನಂ. ಚಂದ್ರಶೇಖರ

ಭಾಷಾವಾರು ಪ್ರಾಂತ್ಯಗಳ ರಚನೆಯಿಂದ ವಿವಿಧ ಪ್ರಾಂತ್ಯಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡಿಗರು ಒಂದಾಗಿ ವಿಶಾಲ ಮೈಸೂರು ರಾಜ್ಯ (ಕರ್ನಾಟಕ) ರಚನೆ ಆಯಿತು. ಈ ಏಕೀಕೃತ ಕರ್ನಾಟಕವು ಸಾಂಸ್ಕೃತಿಕ ಕರ್ನಾಟಕದ ಅರ್ಧಮಾತ್ರ. ಹೈದ್ರಾಬಾದ್ ಮತ್ತು ಮುಂಬೈ ಪ್ರಾಂತ್ಯಗಳಲ್ಲಿದ್ದ ಕನ್ನಡ ಜಿಲ್ಲೆಗಳು ಸಾಕಷ್ಟು ಹಿಂದುಳಿದಿದ್ದವು. ಒಂದಾದ ಕನ್ನಡಿಗರು 'ಕರ್ನಾಟಕದ ಗತವೈಭವ' ಮರಳಿಬರುವುದೆಂದು ನಂಬಿದರು. ಕನ್ನಡಿಗರಲ್ಲಿ ಗರಿಗೆದರಿಕೊಂಡ ನವೋತ್ಸಾಹ, ಹೊಸ ಆಸೆ-ಆಕಾಂಕ್ಷೆಗಳು ಅಪಾರ.

## 'ಸಮೃದ್ಧ ಕರ್ನಾಟಕ' ಅಸಹಜ ಕನಸೇ?

ಗಾಂಧೀಜಿಯವರಿಂದ ''ನನ್ನ ಕನಸಿನ ಸ್ವತಂತ್ರ ಭಾರತಕ್ಕೆ ಮಾದರಿ ಮೈಸೂರು ಸಂಸ್ಥಾನ'' ಎಂದು ಗುರುತಿಸಲ್ಪಟ್ಟಿದ್ದ ನಮ್ಮ ರಾಜ್ಯದಲ್ಲಿ ಎಂ. ವಿಶ್ವೇಶ್ವರಯ್ಯನವರಂಥ ದಕ್ಷ-ದೂರದೃಷ್ಟಿ ಉಳ್ಳ ಆಡಳಿತಗಾರರಿದ್ದರು. ರಾಷ್ಟ್ರವು ಪಂಚವಾರ್ಷಿಕ ಯೋಜನೆ ರೂಪಿಸುವ ಮುನ್ನವೇ ನಮ್ಮ ರಾಜ್ಯವು ಯೋಜನೆಗಳನ್ನು ರೂಪಿಸಿತ್ತು. ನೈಸರ್ಗಿಕ ಸಂಪತ್ತಿನ ಸಮೀಕ್ಷೆ ನಡೆಸಿತ್ತು. ಸಾಮಾಜಿಕ ನ್ಯಾಯ ದೊರಕಿಸುವ ದೃಷ್ಟಿಯಿಂದ ಮೀಸಲಾತಿ ಜಾರಿಗೆ ತಂದ ಮೊದಲ ರಾಜ್ಯ ನಮ್ಮದು. ಹೀಗೆ ಅಭಿವೃದ್ಧಿಗೆ ಭದ್ರ ಬುನಾದಿ ಹೊಂದಿ, ಚಿನ್ನ, ಬೆಳ್ಳಿ, ಕಬ್ಬಿಣ, ತಾಮ್ರದಿಂದ ಸುಣ್ಣದ ಕಲ್ಲಿನವರೆಗೆ ಹೇರಳ ಖನಿಜ ಸಂಪತ್ತು, ಕೃಷಿಗೆ ಯೋಗ್ಯವಾದ ಫಲವತ್ತಾದ ಭೂಮಿ, ಸುಮಾರು ೪೦೦೦ ಟಿ. ಎಂ. ಸಿ. ಜಲ ಸಂಪತ್ತು, ವಿದ್ಯುತ್ ತಯಾರಿಕೆಗೆ ಯೋಗ್ಯವಾದ ಜಲಪಾತಗಳು, ಸಮುದ್ರ ಗಾಳಿ, ನೈಸರ್ಗಿಕವಾದ ೧೪ ಬಂದರುಗಳುಳ್ಳ ೨೦೦ ಕಿ.ಮೀ. ಕರಾವಳಿ, ಹಸಿರು ಹೊನ್ನು ಎಂದು ಗುರುತಿಸುವ ಅರಣ್ಯ, ಪ್ರವಾಸಿಗರನ್ನು ಕೈಬೀಸಿ ಕರೆಯುವ ಐತಿಹಾಸಿಕ ಸ್ಥಳಗಳು, ನಿಸರ್ಗ ಧಾಮಗಳು, ಸುಂದರ ಕರಾವಳಿ ತೀರ, ಮಹತ್ವದ ಧಾರ್ಮಿಕ ಕೇಂದ್ರಗಳು ಹೀಗೆ ಒಂದು ಸಮೃದ್ಧ ಸ್ವಾಭಿಮಾನಿ ರಾಜ್ಯವಾಗಿ ಹೊರಹೊಮ್ಮಲು ಬೇಕಾದ ಎಲ್ಲ ಸೌಲಭ್ಯ-ಸವಲತ್ತುಗಳು ಕರ್ನಾಟಕಕ್ಕೆ ಇದ್ದುದರಿಂದ ಏಕೀಕರಣಕ್ಕೆ ಶ್ರಮಿಸಿದವರು ಕರ್ನಾಟಕವು ರಾಷ್ಟ್ರಕ್ಕೆ ಮಾದರಿ ರಾಜ್ಯವಾಗುತ್ತದೆ ಎಂದು ಕನಸು ಕಂಡರು.

## ನನಸಾಗದ ಕನಸು

ಕರ್ನಾಟಕ ಏಕೀಕರಣವಾಗಿ ೪೬ ವರ್ಷಗಳು ಉರುಳಿದ ಸಂದರ್ಭದಲ್ಲಿ ಕನ್ನಡ ಕನ್ನಡಿಗ-ಕರ್ನಾಟಕಗಳ ಸ್ಥಿತಿಯನ್ನು ಅವಲೋಕಿಸಿದಾಗ ಕನ್ನಡಿಗರ ಕನಸು ನನಸಾಗುವ ದಿನ ದೂರವೇ ಇದೆ ಅನ್ನಿಸುತ್ತದೆ. ಹಾಗೆಂದ ಮಾತ್ರಕ್ಕೆ ಕರ್ನಾಟಕ ಏನನ್ನೂ ಸಾಧಿಸಿಲ್ಲ ಎನ್ನುವುದು ಸಿನಿಕತನವಾಗುತ್ತದೆ. ೧೯೫೭ರಲ್ಲಿ ೨೯.೮% ರಷ್ಟಿದ್ದ ಸಾಕ್ಷರತೆ ೬೭.೦೪% ಕ್ಕೇರಿದೆ. ೭.೬ ಲಕ್ಷ ಹೆಕ್ಟೇರ್‌ನಷ್ಟಿದ್ದ ನೀರಾವರಿ ಪ್ರದೇಶ ೨೦೦೧ ರ ಹೊತ್ತಿಗೆ ೨೫.೫. ಲಕ್ಷ ಹೆಕ್ಟೇರ್ ಆಗಿದೆ. ತಲಾ ಆದಾಯ ೧೦ ಪಟ್ಟು ಹೆಚ್ಚಿದೆ. ಸ್ಥೂಲವಾಗಿ ನೋಡಿದಾಗ ಹೀಗೆ ಕಾಣುವ ದೃಶ್ಯ ಸೂಕ್ಷ್ಮವಾಗಿ ಗಮನಿಸಿದಾಗ ಬೇರೆ

ಆಗುತ್ತದೆ. ಭೌಗೋಳಿಕವಾಗಿ ಒಂದಾದ ಕನ್ನಡಿಗರು, ಭಾವನಾತ್ಮಕವಾಗಿ ಒಂದಾಗಲು ಸಾಧ್ಯವಾಗಿಲ್ಲ. ಹನುಮನುದಿಸಿದನೆಂದು ಭಾವಿಸಲಾಗುವ ಈ ನಾಡಿನಲ್ಲಿ ಸಮಸ್ಯೆಗಳನ್ನು ಪಟ್ಟಿಮಾಡಲು ಹೊರಟರೆ ಹನುಮನ ಬಾಲಕ್ಕಿಂತ ಉದ್ದ ಬೆಳೆಯುತ್ತದೆ. ಭಾಷಾವಾರು ಪ್ರಾಂತ್ಯಗಳ ರಚನೆಯ ಉದ್ದೇಶವೇ ಕರ್ನಾಟಕದ ಮಟ್ಟಿಗೆ ಸಫಲವಾಗಿಲ್ಲ. ಪ್ರಾದೇಶಿಕ ಭಾಷೆಯಾದ ಕನ್ನಡವು ರಾಜ್ಯದ ಆಡಳಿತ, ಶಿಕ್ಷಣ, ಸಾರ್ವಜನಿಕ ವಲಯಗಳಲ್ಲಿ ಸೂಕ್ತ ಸ್ಥಾನ ಪಡೆಯಲು ಇನ್ನೂ ವಿಫಲವಾಗಿದೆ.

ಕನ್ನಡಿಗರ ಆಸೆಗಳು ಕನ್ನಡಿಯೊಳಗಿನ ಗಂಟಾಗಿಯೇ ಉಳಿದಿವೆ ಎಂಬುದಕ್ಕೆ ಹಲವು ನಿದರ್ಶನಗಳನ್ನು ಕೊಡಬಹುದು. 'ಕರ್ನಾಟಕ' ಎಂದು ನಾಮಕರಣವಾಗಲು ೧೭ ವರ್ಷಗಳು ಕಾಯಬೇಕಾಯಿತು. ಭಾಷಾವಾರು ಪ್ರಾಂತ್ಯಗಳ ರಚನೆಯಾಗಿ ಅರ್ಧ ಶತಮಾನ ಸಮೀಪಿಸುತ್ತಿರುವ ಸಂದರ್ಭದಲ್ಲೂ ಕನ್ನಡ ಸಂಪೂರ್ಣ ಆಡಳಿತ ಭಾಷೆ ಆಗಿಲ್ಲ. ಪ್ರಾಥಮಿಕ ಶಿಕ್ಷಣದಲ್ಲೂ ಕನ್ನಡಕ್ಕೆ ಸ್ಥಾನವಿಲ್ಲ. ನೆಲ ಜಲ ಅನ್ಯರ ಪಾಲಾಗುತ್ತಿದೆ. ಕರ್ನಾಟಕವು ತೊಂಡು ದನಗಳು ಮೇಯುವ, ಬೇಲಿಯಿಲ್ಲದ ಗೋಮಾಳ ಆಗಿದೆ. ಅವೈಜ್ಞಾನಿಕ ಯೋಜನೆಗಳಿಂದ ಪ್ರಾದೇಶಿಕ ಅಸಮಾನತೆ ಹಾಗೇ ಉಳಿದು ಪ್ರತ್ಯೇಕತೆಯ ಮಾತು ಕೇಳಿಬರುತ್ತಿದೆ. ಏಕೀಕರಣದ ತರುಣದಲ್ಲಿ ಪ್ರಗತಿಯ ದೃಷ್ಟಿಯಿಂದ ಎರಡನೇ ಸ್ಥಾನದಲ್ಲಿದ್ದ ಕರ್ನಾಟಕವು ಇಂದು ೧೦ನೇ ಸ್ಥಾನಕ್ಕಿಳಿದಿದೆ. ಎಪ್ಪತ್ತರ ದಶಕದವರೆಗೆ ತನ್ನ ಅಗತ್ಯದ ಎರಡರಷ್ಟು ಹೆಚ್ಚು ವಿದ್ಯುತ್ ಉತ್ಪಾದಿಸುತ್ತಿದ್ದ ಕರ್ನಾಟಕ ಇಂದು ತನ್ನ ಅಗತ್ಯದ ಅರ್ಧದಷ್ಟು ಉತ್ಪಾದಿಸಲೂ ಹೆಣಗುತ್ತಿದೆ. ಒಟ್ಟಿನಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಹಿನ್ನಡೆಯುತ್ತಿರುವ ಕರ್ನಾಟಕದ ಭವಿಷ್ಯ ಉಜ್ವಲವಾಗಬೇಕಾದರೆ ರಾಜ್ಯಸರ್ಕಾರದ ಕ್ರಿಯಾಶೀಲತೆಯ ಜೊತೆಗೆ ಕನ್ನಡಿಗರೂ ಕ್ರಿಯಾಶೀಲವಾಗುವ ಅನಿವಾರ್ಯತೆಯಿದೆ. ತನ್ನ ನಾಡಿನಲ್ಲಿಯೇ ಕನ್ನಡ ಭಾಷೆ-ಕನ್ನಡ ಜನ ಅಸ್ತಿತ್ವಕ್ಕಾಗಿ ಹೋರಾಡಬೇಕಾದ ದುಸ್ಥಿತಿಯಿರುವುದು ವಿಷಾದದ ಸಂಗತಿ. 'ಸ್ಥಳೀಯ ನಿರಾಶ್ರಿತ' ನಾಗಿರುವ ಕನ್ನಡಿಗ ಈ ಸ್ಥಿತಿಗೆ ಸರ್ಕಾರಗಳನ್ನು ದೂರುವುದರ ಜೊತೆಗೆ, ತಾನೂ ಕಾರಣ ಎಂಬುದನ್ನು ಅರಿತು, ಸರ್ಕಾರವು ಮಾಡಲು ಅಶಕ್ಯವಾದುದನ್ನು ತಾನೇ ಮಾಡುವ ಶಕ್ತಿಯನ್ನು ಬೆಳೆಸಿಕೊಳ್ಳಬೇಕು. ಯಾವುದು ತಮಗೆ ಹಿತವೆನಿಸುವುದಿಲ್ಲವೋ ಮತ್ತು ನಾಡು-ನುಡಿಯ ದೃಷ್ಟಿಯಿಂದ ಒಳ್ಳೆಯದೆನಿಸು ವುದಿಲ್ಲವೋ ಅದನ್ನು ಸಂಘಟಿತರಾಗಿ ಒಕ್ಕೊರಲಿನಿಂದ ಪ್ರತಿಭಟಿಸುವ ಹಂತಕ್ಕೆ ಕನ್ನಡಿಗರು ಬೆಳೆಯಬೇಕು.

ನಾಡನ್ನು ಈ ಆತಂಕದ ಸ್ಥಿತಿಯಿಂದ ಪಾರುಮಾಡಲು ಹಳೆಯ ವೈಭವವನ್ನು ಸ್ಮರಿಸಿಕೊಳ್ಳುವುದರ ಜೊತೆ ಜೊತೆಗೆ, ನಾಡಿನ ಸಮಸ್ಯೆಗಳನ್ನು ಗುರುತಿಸುವ ಮತ್ತು ವಸ್ತುನಿಷ್ಠ ನೆಲೆಯಿಂದ ವಿಶ್ಲೇಷಿಸುವ ಕೆಲಸ ಆಗಬೇಕಿದೆ. ಆ ನಿಟ್ಟಿನಲ್ಲಿ ಪೀಠಿಕೆಯನ್ನೂ ಕೆಲವು ಕ್ಷೇತ್ರಗಳ ವಸ್ತುನಿಷ್ಠ ವಿವರಗಳನ್ನೂ ಇಲ್ಲಿ ನಮೂದಿಸಿದೆ.

### ಇಂದಿನ ಕರ್ನಾಟಕ

ಕರ್ನಾಟಕ ಏಕೀಕರಣವಾದಾಗ ೧೯ ಜಿಲ್ಲೆಗಳಿದ್ದವು. ಇಂದು ೨೭ ಜಿಲ್ಲೆಗಳಾಗಿವೆ. ೨೦ ಜಿಲ್ಲೆಗಳು ರಾಜ್ಯದ ಸರಾಸರಿ ಆದಾಯಕ್ಕಿಂತ ಕೆಳಗಿರುವುದು, ಸಾಕ್ಷರತೆಯಲ್ಲಿ ೧೫ ಜಿಲ್ಲೆಗಳು ರಾಜ್ಯದ ಸರಾಸರಿಗಿಂತ ಕೆಳಗಿರುವುದನ್ನು ಗಮನಿಸಿದರೆ, ನಮ್ಮ ಯೋಜನೆಗಳನ್ನು ರೂಪಿಸುವ ಜನ ಸರಿಯಾದ ರೀತಿಯಲ್ಲಿ ನಾಡಿನ ಸ್ಥಿತಿ-ಗತಿಯನ್ನು ಗುರುತಿಸದಿರುವುದು ಹಾಗೂ ಯೋಜನೆಗಳ ಅನುಷ್ಠಾನದಲ್ಲಿ ಎಡವಿರುವುದು ಕಾಣುತ್ತದೆ.

### ಕರ್ನಾಟಕ ಅಭಿವೃದ್ಧಿಯಲ್ಲಿ ಅಸಮಾನತೆ

ಸಾಂಪ್ರದಾಯಿಕವಾಗಿ ನಾಡಿನ ಪ್ರಗತಿಯನ್ನು ತಲಾ ಆದಾಯದ ಮೇಲೆ ಗುರುತಿಸುವ ಪರಿಪಾಠವಿತ್ತು. ಅದನ್ನು ಇಂದು ಅರ್ಥ ಶಾಸ್ತ್ರಜ್ಞರು ತಪ್ಪು ಎಂದು ನಿರ್ಧರಿಸಿ. 'ಮಾನವ ಅಭಿವೃದ್ಧಿ ಸೂಚ್ಯಾಂಕ' ಎಂಬ ಹೊಸ ಪರಿಕಲ್ಪನೆಯನ್ನು ಅನುಸರಿಸುತ್ತಿದ್ದಾರೆ. ಇದರಲ್ಲಿ ಬಡತನ, ಆರೋಗ್ಯ, ಮೂಲಭೂತ ಸೌಕರ್ಯ, ಸಾಮಾಜಿಕ ಅಂಶಗಳನ್ನು ಅಡಕ ಮಾಡಲಾಗಿದೆ. ಇಂದು ಅಭಿವೃದ್ಧಿ ಎಂದರೆ ಮಾನವನ ನೆಮ್ಮದಿ ಬದುಕಿಗೆ ಅಗತ್ಯವಾದ ಸಾಮಾಜಿಕ ಆರ್ಥಿಕ ಮೂಲಭೂತ ಸೌಲಭ್ಯಗಳನ್ನೊಳಗೊಂಡ ಉತ್ತಮ ಜೀವನ ನಿರ್ವಹಣೆಗೆ ಸೂಕ್ತ ವಾತಾವರಣ ನಿರ್ಮಾಣ. ಈ ಎಲ್ಲ ಅಂಶಗಳನ್ನೂ ಗಣನೆಗೆ ತೆಗೆದುಕೊಂಡು ಕರ್ನಾಟಕದ ಪ್ರಾದೇಶಿಕ ಅಸಮಾನತೆಯನ್ನು ಡಾ। ಡಿ. ಎಂ. ನಂಜುಂಡಪ್ಪ ನೇತೃತ್ವದ ತಜ್ಞರ ತಂಡವು ನೀಡಿರುವ ವರದಿಯು ರಾಜ್ಯದ ಪ್ರಗತಿ ಬಗ್ಗೆ ವಸ್ತುನಿಷ್ಠ ದೃಷ್ಟಿಯಿಂದ ಕೂಡಿದ್ದಾಗಿದೆ.

ಕೃಷಿ ಮತ್ತು ಕೃಷಿ ಆಧಾರಿತ (೯); ವ್ಯಾಪಾರ, ಕೈಗಾರಿಕೆ, ವಿತ್ತ (೫); ಆರ್ಥಿಕ ಮೂಲಭೂತ ಸೌಕರ್ಯ (೯); ಸಾಮಾಜಿಕ ಮೂಲಭೂತ ಸೌಲಭ್ಯ (೭); ಜನಾಂಗದ ವೈಲಕ್ಷಣ್ಯ (೫) ಗಳನ್ನೊಳಗೊಂಡ, ೩೫ ಸೂಚಿಗಳನ್ನೊಳಗೊಂಡ 'ಸಮಗ್ರ ಸಂಯುಕ್ತ

ಅಭಿವೃದ್ಧಿ ಸೂಚ್ಯಾಂಕ'ದನ್ವಯ ತಾಲ್ಲೂಕು ಮಟ್ಟದಲ್ಲಿ ಅಧ್ಯಯನ ನಡೆಸಿ ಒಂದು ಉತ್ತಮ ವರದಿಯನ್ನು ನಂಜುಂಡಪ್ಪ ಸಮಿತಿಯು ನೀಡಿದೆ. ಈ ವರದಿಯಲ್ಲಿ ೧೭೪ ತಾಲ್ಲೂಕುಗಳಲ್ಲಿ ೧೧೪ ತಾಲ್ಲೂಕುಗಳು ಹಿಂದುಳಿದಿವೆ ಎಂದು ಗುರುತಿಸಲಾಗಿದ್ದು, ಅದರಲ್ಲಿ ೩೯ ತಾಲ್ಲೂಕುಗಳು ಅತಿ ಹಿಂದುಳಿದ ತಾಲ್ಲೂಕುಗಳು, ೪೦ ಕ್ಕೂ ಹೆಚ್ಚು ತಾಲ್ಲೂಕುಗಳು ಹಿಂದುಳಿದ ತಾಲ್ಲೂಕುಗಳಾಗಿವೆ. ಈ ನಿಟ್ಟಿನಲ್ಲಿ ಕರ್ನಾಟಕ ೨/೩ ಭಾಗ ಹಿಂದುಳಿದಿರುವುದು ಗಮನಿಸಬೇಕಾದ ಅಂಶ.

ಕೃಷಿ ಸಂಬಂಧಿತ ಕ್ಷೇತ್ರದಲ್ಲಿ ಉತ್ತರ ಕರ್ನಾಟಕದ ೫೦ ತಾಲ್ಲೂಕುಗಳು, ದಕ್ಷಿಣ ಕರ್ನಾಟಕದ ೩೮ ತಾಲ್ಲೂಕುಗಳು ರಾಜ್ಯದ ಸರಾಸರಿಗಿಂತ ಕೆಳಗಿವೆ. ಇವುಗಳಲ್ಲಿ ಉತ್ತರ ಭಾಗದ ೨೧, ದಕ್ಷಿಣ ಭಾಗದ ೧೬ ತಾಲ್ಲೂಕುಗಳು ಕೃಷಿ ಮುಲಭೂತ ಸೌಲಭ್ಯ ಮತ್ತು ಅಭಿವೃದ್ಧಿ ದೃಷ್ಟಿಯಿಂದ ಗಂಭೀರ ಸಮಸ್ಯೆಯ ಸುಳಿಯಲ್ಲಿವೆ. ನೀರಾವರಿ ವಿಚಾರದಲ್ಲಿ ನೀರು ಹಿಡಿದಿಟ್ಟಿದ್ದಾರೆ ಆದರೆ ಬಳಸಿಲ್ಲ. ವಿದ್ಯುತ್‌ನಲ್ಲಿ ಉತ್ತರ ಕರ್ನಾಟಕ ೨೩೧೩ ಎಂ.ಯು. ಬಳಸಿದರೆ ದಕ್ಷಿಣ ಕರ್ನಾಟಕದಲ್ಲಿ ೭೩೨ ಎಂ. ಯು. ಬಳಕೆ ಆಗುತ್ತಿದೆ. ೯೦ ತಾಲ್ಲೂಕುಗಳಲ್ಲಿ ರಸ್ತೆ ವ್ಯವಸ್ಥೆಯು ರಾಜ್ಯದ ಸರಾಸರಿ ರಸ್ತೆಗಿಂತ ಕಮ್ಮಿ ಇದೆ. ಮಾನವ ಅಭಿವೃದ್ಧಿ ಸೂಚಕದಂತೆ ಉತ್ತರ ಕರ್ನಾಟಕದ ೫೯ ತಾಲ್ಲೂಕುಗಳು, ದಕ್ಷಿಣ ಕರ್ನಾಟಕದ ೫೬ ತಾಲ್ಲೂಕುಗಳು ಹಿಂದುಳಿದಿವೆ. ಶಿಕ್ಷಣದಲ್ಲಿ ೩೨ ತಾಲ್ಲೂಕುಗಳು, ವೈದ್ಯಕೀಯ ಸೌಲಭ್ಯದಲ್ಲಿ ೧೧೯ ತಾಲ್ಲೂಕುಗಳು ರಾಜ್ಯ ಸರಾಸರಿಗಿಂತ ಹಿಂದುಳಿದಿದೆ. ಕರ್ನಾಟಕ ಸರ್ಕಾರವು ಈ ಅಂತರವನ್ನು ಸರಿಪಡಿಸಲು ಕ್ರಿಯಾಶೀಲ ಯೋಜನೆ ರೂಪಿಸಿರುವುದು ಒಂದು ಒಳ್ಳೆಯ ಬೆಳವಣಿಗೆ.

## ಪ್ರಗತಿಯ ಪಥ ಸಾಗಿರುವುದೆತ್ತ?

ಖ್ಯಾತ ಅರ್ಥಶಾಸ್ತ್ರಜ್ಞ, ಡಾ। ಪಿ. ಆರ್. ಬ್ರಹ್ಮಾನಂದ ಅವರು 'ಕರ್ನಾಟಕದ ಆರ್ಥಿಕ ಭವಿಷ್ಯ' ಎಂಬ ಲೇಖನದಲ್ಲಿ 'ಕರ್ನಾಟಕದಲ್ಲಿ ರಾಜ್ಯಮಟ್ಟದ ಆರ್ಥಿಕ ಸಮಸ್ಯೆಗಳು ಸಾರ್ವಜನಿಕರ ಗಮನವನ್ನು ಎಷ್ಟು ಸೆಳೆಯಬೇಕೋ ಅಷ್ಟು ಸೆಳೆಯುತ್ತಿಲ್ಲ. ನಿಜ, ಕರ್ನಾಟಕಕ್ಕೆ ಯೋಜನೆಯನ್ನು ನಿರ್ವಹಿಸುವುದರಲ್ಲಿ, ಆರ್ಥಿಕ ವರದಿಯನ್ನು ಸಿದ್ಧಪಡಿಸುವುದರಲ್ಲಿ ಹಾಗೂ ಸರ್ವೇಕ್ಷಣಗಳನ್ನು ನಡೆಯಿಸುವುದರಲ್ಲಿ ಸುದೀರ್ಘವಾದ ಅನುಭವವಿದೆ. ಅದು ದಕ್ಷ ಆಡಳಿತಗಾರರನ್ನೂ ಪಡೆದಿದೆ. ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ಸಲಹೆ - ನೀತಿ ನಿರೂಪಣೆಗಳಲ್ಲಿ ಸಹಕರಿಸುವ ಖ್ಯಾತ ಆರ್ಥಿಕ ತಜ್ಞರಿದ್ದಾರೆ. ೫೦ ಮತ್ತು ೬೦ರ ದಶಕಗಳ ಕಾಲಾವಧಿಯಲ್ಲಿ ಬೆಳೆದ ದರದಲ್ಲಿ ೭೦ರ ದಶಕದ ಮಧ್ಯಭಾಗದಿಂದ ೮೦ರ ದಶಕದ ಅಂತ್ಯದವರೆಗಿನ ಕಾಲಾವಧಿಯಲ್ಲಿ ಕರ್ನಾಟಕದ ಆರ್ಥಿಕತೆ ಏಕೆ ಬೆಳೆಯುತ್ತಿಲ್ಲ ಎಂಬುದು ನನಗೆ ಒಗಟಾಗಿ ಪರಿಣಮಿಸಿದೆ. (ಇದೇ ಪರಿಸ್ಥಿತಿ ಇಂದಿಗೂ ಮುಂದುವರೆದಿದೆ - ಲೇಖಕ) ಒಂದು ವೇಳೆ ಈ ಆರ್ಥಿಕ ಸ್ಥಗಿತತೆಯು ಹೀಗೇ ಮುಂದುವರೆದರೆ ಕಾಲಕ್ರಮೇಣ ಕರ್ನಾಟಕದ ಆರ್ಥಿಕತೆಯೂ ಬಿಹಾರದ ಆರ್ಥಿಕತೆಯಂತಾಗಿಬಿಡಬಹುದೆಂಬ ಭವಿಷ್ಯ ನುಡಿಯುವ ಮನಸ್ಸಾಗುತ್ತಿದೆ. ರಾಷ್ಟ್ರಮಟ್ಟದಲ್ಲಿ ಸರಾಸರಿಗಿಂತ ಉನ್ನತ ಸ್ಥಾನದಲ್ಲಿದ್ದ ಕರ್ನಾಟಕವು ಸಾವಕಾಶವಾಗಿ ಸರಾಸರಿಯ ಸ್ಥಾನಕ್ಕೆ ಜರುಗುತ್ತಿದೆ'', ಎಂದಿದ್ದಾರೆ. ಅವರ ಈ ಅಭಿಪ್ರಾಯವನ್ನು ಪುಷ್ಟೀಕರಿಸುವ ಸಂಗತಿಗಳು ಇಲ್ಲಿವೆ.

ಕರ್ನಾಟಕದ ಸಾಧನೆಗಳ ಬಗ್ಗೆ ಸಾಕಷ್ಟು ಪ್ರಚಾರ ನಡೆಯುತ್ತಿದೆ. ಆದರೆ ಸಂಪತ್ತಿನ ಕೊರತೆಯಿಂದ ಕರ್ನಾಟಕದ ತಲಾ ಯೋಜನಾ ವೆಚ್ಚವು ರಾಷ್ಟ್ರೀಯ ಸರಾಸರಿಗಿಂತ ಕೆಳಗಿರುವುದಕ್ಕೆ ಸಮಜಾಯಿಷಿ ಏನು? ಕರ್ನಾಟಕದ ತಲಾ ಯೋಜನಾ ವೆಚ್ಚವು ೨೨೬೬ ರೂಪಾಯಿಗಳಾಗಿದ್ದರೆ, ಹರಿಯಾಣ ೩೭೪೧, ಪಂಜಾಬ್ ೨೫೯೧, ಮಧ್ಯಪ್ರದೇಶ ೨೪೮೦, ಮಹಾರಾಷ್ಟ್ರ ೨೩೧೭, ಆಂಧ್ರ ೨೩೦೬ ರೂಪಾಯಿಗಳಾಗಿದೆ. ೧೯೯೩ರಲ್ಲಿ ತಲಾ ಯೋಜನಾ ವೆಚ್ಚದಲ್ಲಿ ಪ್ರಥಮ ಸ್ಥಾನದಲ್ಲಿದ್ದ ಕರ್ನಾಟಕ ಇಂದು ೭ ನೇ ಸ್ಥಾನಕ್ಕಿಳಿದಿದೆ. ರಾಜ್ಯದ ಹಣಕಾಸು ಕೊರತೆ ೧೯೯೧-೯೨ರಲ್ಲಿ ೫೧೩ಕೋಟಿ ಇದ್ದುದು ಇಂದು ೫೧೨೭ ಕೋಟಿಗೆ ಏರಿದೆ. ಜಿಲ್ಲಾ ಪರಿಷತ್ತುಗಳ ಯೋಜನಾ ವೆಚ್ಚವು ೧೯೮೮ರಲ್ಲಿ ೩೨.೨೪% ರಷ್ಟಿದ್ದುದು ಇಂದು ೨೦%ಕ್ಕಿಳಿದಿದೆ. ೧೯೯೧ರಲ್ಲಿ ಆದಾಯದ ೧೧.೨% ರಷ್ಟು ಬಡ್ಡಿ ಮತ್ತು ಸಾಲದ ಕಂತಿಗೆ ಹೋಗುತ್ತಿದ್ದರೆ, ಇಂದು ೨೭.೩%ರಷ್ಟು ಹೋಗುತ್ತಿದೆ. ೨೨೦೦೦ ಕೋಟಿಗಳಷ್ಟು ಬಂಡವಾಳವನ್ನು ಹೂಡಿದ್ದಾರೆ. ಅಧ್ಯ'ಕ್ಷ ಅಸಮರ್ಪಕ ನಿರ್ವಹಣೆಯಿಂದ ಪ್ರತಿ ವರ್ಷ ೧೭೦೦ ಕೋಟಿ ನಷ್ಟ ಅನುಭವಿಸುತ್ತಿದೆ. ಇದರಾಚೆಗೆ ರಾಜ್ಯದ ಬೃಹತ್ ಯೋಜನೆಗಳ ವೈಫಲ್ಯ ಗುಟ್ಟಾಗಿ ಉಳಿದಿಲ್ಲ. ಈ ಅಂಕಿ-ಸಂಖ್ಯೆಗಳು ಅವಾಸ್ತವಿಕ ಆರ್ಥಿಕ ನೀತಿ ಮತ್ತು ಸಂಪತ್ತಿನ ಕ್ರೋಢೀಕರಣದ ವೈಫಲ್ಯತೆಗೆ ಸಾಕ್ಷಿಯಾಗಿವೆ.

## ಅಭಿವೃದ್ಧಿ ಎಷ್ಟು?

ಸ್ವಾತಂತ್ರ್ಯ ಪೂರ್ವದಲ್ಲೇ ಎಂ. ವಿಶ್ವೇಶ್ವರಯ್ಯನವರಂತಹ ದೂರದರ್ಶಿತ್ವ ಉಳ್ಳವರ ನೇತೃತ್ವದಲ್ಲಿ ಸರ್ವಾಂಗೀಣ ಪ್ರಗತಿಗೆ ಭದ್ರ ಬುನಾದಿ ದೊರಕಿತ್ತು. ಆದರೂ ಏಕೀಕರಣದ ನಂತರ ಕರ್ನಾಟಕದ ಪ್ರಗತಿ ಮೂರನೇ ಪಂಚವಾರ್ಷಿಕ ಯೋಜನೆಯಿಂದ ಇಂದಿನವರೆಗೆ ರಾಷ್ಟ್ರೀಯ ಸರಾಸರಿಗಿಂತ ಕೆಳಗಿರುವುದನ್ನು ಕೆಳಗಿನ ಅಂಕಿ ಸಂಖ್ಯೆಗಳು ಸಾದರಪಡಿಸುತ್ತವೆ.

ರಾಜ್ಯದ ಉತ್ಪಾದನಾ ಪ್ರಗತಿಯು ಕೆಟ್ಟಿದೆ ಎಂದು ಹೇಳುವುದು ಸರಿಯಾಗಲಾರದು. ಆದರೆ ರಾಷ್ಟ್ರೀಯ ಸರಾಸರಿಯು ರಾಜ್ಯದ ಪ್ರಗತಿಗಿಂತ ನಿರಂತರವಾಗಿ ಮೇಲಿರುವುದನ್ನು ಗಮನಿಸಿದಾಗ ನಿರೀಕ್ಷಿತ ಬೆಳವಣಿಗೆ ಆಗಿಲ್ಲ ಎಂದು ಹೇಳಬಹುದು. ರಾಷ್ಟ್ರಮಟ್ಟದಲ್ಲಿ ದೊಡ್ಡ ಹೆಸರು ಮಾಡಿರುವ ಬೆಂಗಳೂರು ಸೇರಿದಂತೆ ರಾಜ್ಯದಲ್ಲಿ ಸಾಕಷ್ಟು ಕೈಗಾರಿಕೆ, ಸೇವಾ ವಲಯಗಳಿದ್ದರೂ ಕೃಷಿ ಆಧಾರಿತ ಚಟುವಟಿಕೆಗಳನ್ನು ಹಿಮ್ಮೆಟ್ಟಲು ಸಾಧ್ಯವಾಗದೆ, ಇಂದಿಗೂ ರಾಜ್ಯದ ಹೆಚ್ಚು ಉತ್ಪಾದನೆಯು ಪ್ರಥಮ ವಲಯದಿಂದಲೇ ಬರುತ್ತಿದೆ ಮತ್ತು ಕರ್ನಾಟಕವು ಕೈಗಾರಿಕೆ ಮತ್ತು ಮೂಲಭೂತ ಸೌಲಭ್ಯದ ಮಹತ್ವವನ್ನು ಅರಿತಿಲ್ಲ ಮತ್ತು ಆಗಿರುವ ಲೋಪವನ್ನು ಸರಿಪಡಿಸಲು ಪ್ರಯತ್ನಿಸಿಲ್ಲ. ರಾಜ್ಯದ ನಿವ್ವಳ ಆದಾಯ ೧೯೫೬-೫೭ರಲ್ಲಿ ೪೯೫ಕೋಟಿ ಇದ್ದುದು ೭೨ ರಲ್ಲಿ ೯೩೦ ಕೋಟಿಗೆ ಏರಿತು. ೧೯೬೦-೬೧ ರಿಂದ ೧೯೯೬-೯೭ರ ನಡುವೆ ರಾಜ್ಯದ ನಿವ್ವಳ ಆದಾಯವು ೧೯೮೧ರ ಸ್ಥಿರ ಬೆಲೆಯಲ್ಲಿ ೨೯೭೭ ಕೋಟಿಯಿಂದ ೧೩೦೪೭ ಕೋಟಿಗೆ ಏರಿತು. ಇಂದು ೧೭೦೦೦ ಕೋಟಿಗೆ ಏರಿದೆ ಎಂದು ಅಂದಾಜು ಮಾಡಲಾಗಿದೆ. ಆದರೆ ತಲಾ ಆದಾಯವು ಇದೇ ಅವಧಿಯಲ್ಲಿ ೧೨೭೩ರಿಂದ ೨೬೬೮ಕ್ಕೆ ಏರಿತು, ಅಂದರೆ ಎರಡು ಪಟ್ಟು ಮಾತ್ರ ಹೆಚ್ಚಿದೆ. ಬಡತನವು ಕಡಿಮೆ ಆಗಿದ್ದರೂ ಸರ್ಕಾರದ ಅಂಕಿ ಅಂಶವೇ ಪ್ರತಿ ೪ ಜನರಲ್ಲಿ ಒಬ್ಬರು ಬಡತನದ ರೇಖೆಗಿಂತ ಕೆಳಗಿದ್ದಾರೆ ಅನ್ನುತ್ತದೆ. ಕೆಲವರು ಇದನ್ನು ಪ್ರಶ್ನಿಸಿದ್ದಾರೆ.

## ಆರ್ಥಿಕ ಬೆಳವಣಿಗೆಯ ಅತಂತ್ರ ಸ್ಥಿತಿ

ಕಳವಳಕಾರಿಯಾದ ಸಂಗತಿಯೆಂದರೆ ೫ನೇ ಪಂಚವಾರ್ಷಿಕ ಯೋಜನೆಯಿಂದ ಅಂದರೆ ಸುಮಾರು ೨೫ ವರ್ಷಗಳಿಂದ ರಾಷ್ಟ್ರೀಯ ಸರಾಸರಿಯ ಪ್ರಗತಿಯನ್ನು ದಾಖಲಿಸಲು ರಾಜ್ಯವು ವಿಫಲವಾಗಿದೆ. ಯೋಜನೆಗಳ ಅನುಷ್ಠಾನದಲ್ಲಿ ಭದ್ರಬುನಾದಿ, ಪೂರಕವಾಗಿ ಪ್ರಕೃತಿ ಮತ್ತು ಮಾನವ ಸಂಪನ್ಮೂಲಗಳು ಹೇರಳವಾಗಿದ್ದರೂ, ರಾಜ್ಯವು ಯಶ ಸಾಧಿಸುವಲ್ಲಿ ಎಡವಿರುವುದು ಅರ್ಥವಾಗದ ಸಂಗತಿ. ೧೯೭೧ರಲ್ಲಿ ಕರ್ನಾಟಕದ ತಲಾ ಆದಾಯ ೬೮೫ ಇದ್ದು ರಾಷ್ಟ್ರದ ಸರಾಸರಿ ೬೩೩ ಆಗಿತ್ತು. ೧೯೮೧ರಲ್ಲಿ ಇದು ೬೩೭ ಮತ್ತು ೬೯೭ ಆಯಿತು. ಇದಕ್ಕೆಲ್ಲ ಕಾರಣ ಯೋಜನೆಗಳ ಅನುಷ್ಠಾನದ ಮಂದಗತಿಯೇ ಆಗಿದೆ. ೧೯೬೨ರಲ್ಲಿ ಪ್ರಾರಂಭವಾದ ಕೃಷ್ಣ ಕಣಿವೆಯ ಯೋಜನಾ ವೆಚ್ಚ ೧೨೭ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಿ ೫ ವರ್ಷಗಳಲ್ಲಿ ಪೂರ್ಣವಾಗುವುದೆಂದು ಹೇಳಲಾಗಿತ್ತು. ಆದರೆ, ಯೋಜನೆಯ ಅನುಷ್ಠಾನದಲ್ಲಿ ಶಿಸ್ತಿನ ಕೊರತೆ, ಅನಗತ್ಯ ಮಾರ್ಪಾಡು, ಜಲ ವಿವಾದಗಳಿಂದಾಗಿ ೪೦ ವರ್ಷಗಳು ಕಳೆದ ನಂತರವೂ ಈ ಯೋಜನೆ ಪೂರ್ಣಗೊಂಡಿಲ್ಲ. ಅಂದಾಜು ವೆಚ್ಚದ ೧೦೦ ಪಟ್ಟು ಹೆಚ್ಚು ಖರ್ಚಾಗಿದೆ. ೧೯೭೩ ರಿಂದ ಬಡತನ ಸರಾಸರಿ ವರ್ಷಕ್ಕೆ ೧% ರಷ್ಟು ಮಾತ್ರಕಮ್ಮಿ ಆಗಿದೆ.

## ಆರ್ಥಿಕತೆಯ ವಾಸ್ತವ ಸ್ಥಿತಿ

ರಾಜ್ಯ ಸರ್ಕಾರವು ವಿಶ್ವಬ್ಯಾಂಕ್ ಸೇರಿದಂತೆ ವಿವಿಧ ಮೂಲಗಳಿಂದ ಈವರೆಗೆ ಪಡೆದಿರುವ ಸಾಲದ ಮೊತ್ತ ಸುಮಾರು ೩೨೦೦೦ ಕೋಟಿ ರೂಪಾಯಿಗಳು. ಈ ಸಾಲಿನ ಬಜೆಟ್‌ನಲ್ಲಿ ೨೮% ರಷ್ಟು ಸಾಲದಿಂದ ನೀರಿಕ್ಷಿಸಲಾಗಿದೆ. ಅಂದರೆ ಸುಮಾರು ೭೫೦೦ ಕೋಟಿ. ರಾಜ್ಯದ ಆದಾಯದಲ್ಲಿ ೧೫% ರಷ್ಟು ಬಡ್ಡಿಯನ್ನೇ ಕೊಡಬೇಕಾಗುತ್ತದೆ. ಅಸಲು ತೀರಿಸುವುದು ಹೇಗೆ? ಆನಂತರ ರಾಜ್ಯ ನಡೆಸುವುದು ಹೇಗೆ? ಇದಲ್ಲದೆ ಕೃಷ್ಣ ಜಲ ನಿಗಮ ಬಾಂಡ್‌ಗಳ ಮೂಲಕ ಸಂಗ್ರಹಿಸಿರುವ ೫೦೦೦ ಕೋಟಿಯನ್ನು ೩ ವರ್ಷಗಳ ನಂತರ ಬಡ್ಡಿ ಸಮೇತ ಹಿಂದಿರುಗಿಸಬೇಕಿದೆ. ಅತ್ಯಂತ ಮಹತ್ವದ ಮತ್ತು ಅತ್ಯಗತ್ಯವಾದ ಯೋಜನೆ ಎಂದು ಪರಿಗಣಿಸಲ್ಪಟ್ಟಿರುವ ಕೆರೆಗಳ ಹೂಳೆತ್ತುವ ಯೋಜನೆಗೆ ೪೦೦ ಕೋಟಿ ರೂ. ಸಾಲ ಪಡೆದಿದೆ. ಅಬ್ಬರದ ಪ್ರಚಾರದೊಂದಿಗೆ ಹೂಳೆತ್ತುವ ಕಾರ್ಯದ ಉದ್ಘಾಟನೆ ಆಯಿತು. ತಮಿಳುನಾಡಿನ ಆಕ್ಷೇಪಣೆ ಹಾಗೂ ಅಧಿಕಾರಶಾಹಿಗಳ ಕೆಂಪು ಪಟ್ಟಿಯಿಂದ ಕೆಲಸ ಪೂರ್ಣ ಪ್ರಮಾಣದಲ್ಲಿ ಆರಂಭವೇ ಆಗಲಿಲ್ಲ. ವಾಣಿಜ್ಯ ತೆರಿಗೆ ಮತ್ತು ಅಬಕಾರಿ ಬಾಬ್ತು ೬೦೦೦ ಕೋಟಿ ರೂ.ಗಳನ್ನು ಸಂಗ್ರಹಿಸುವ ಗುರಿಯನ್ನು ೨೦೦೦-೦೧ರಲ್ಲಿ ಹೊಂದಲಾಗಿತ್ತು. ಆದರೆ ಸಂಗ್ರಹವಾದದ್ದು ೩೫೦೦ ಕೋಟಿ ಮಾತ್ರ. ನಕಲಿ ಛಾಪಾ ಕಾಗದದ ಜಾಲದಿಂದ ಸಾವಿರಾರು ಕೋಟಿ ನಷ್ಟವಾಗಿದೆ.

ರಾಜ್ಯದ ತೆರಿಗೆಯೇತರ ಆದಾಯ ದಶಕಗಳ ಹಿಂದೆ ೧೨% ರಷ್ಟಿದ್ದುದು, ಇಂದು ೯ ಕ್ಕಿಳಿದಿದೆ. ೧೯೯೯-೨೦೦೦ದ ಸಾಲಿನಲ್ಲಿ ತೆರಿಗೆ ಮತ್ತಿತರ ಮೂಲಗಳಿಂದ ೮೦೨೫ ಕೋಟಿ ರೂ.ಗಳನ್ನು ಸಂಗ್ರಹಿಸಲಾಯಿತು. ರಾಜ್ಯ ಸರ್ಕಾರದ ೬ ಲಕ್ಷ ನೌಕರರ ಸಂಬಳ

ಮತ್ತು ನಿವೃತ್ತ ನೌಕರರ ಪಿಂಚಣಿಗೇ ೬೧೦೦ ಕೋಟಿ ಖರ್ಚಾಗಿದೆ. ಇದರಾಚೆಗೆ ಕೈಗಾರಿಕೆಗಳ ನಷ್ಟ, ನಿಗಮಗಳ ಸಾಲ ಇದೆಲ್ಲಾ ನೆನೆದರೆ ನಾಳೆಗಳು ನಡುಕ ಹುಟ್ಟಿಸುತ್ತವೆ. ೧೯೮೦-೮೧ರಿಂದ ೧೯೯೦-೯೧ರ ವರೆಗಿನ ಅವಧಿಯಲ್ಲಿ ಕರ್ನಾಟಕದ ನಿವ್ವಳ ದೇಶೀಯ ಉತ್ಪನ್ನವು ೫೬೦೦ ಕೋಟಿ ರೂಪಾಯಿಗಳಿಂದ ೯೯೦೦ ಕೋಟಿಗೇರಿತ್ತು. ಈ ಅವಧಿಯಲ್ಲಿನ ವಾರ್ಷಿಕ ಬೆಳವಣಿಗೆ ದರವಾದ ೪.೮೯% ಅಖಿಲ ಭಾರತ ಮಟ್ಟದ ಬೆಳವಣಿಗೆ ದರ ೫.೫% ಕ್ಕಿಂತ ಕೆಳಗಿದೆ. ಆರ್ಥಿಕ ಅಭಿವೃದ್ಧಿ ಮಾನದಂಡದ ದೃಷ್ಟಿಯಿಂದ ಕರ್ನಾಟಕ ಕೆಳಗಿಳಿಯುತ್ತಿರುವುದಕ್ಕೆ ಇದು ಸ್ಪಷ್ಟ ಉದಾಹರಣೆ.

ಅಭಿವೃದ್ಧಿ ಅನ್ನುವುದು ಒಂದು ಸತತ ಕ್ರಿಯೆ. ಮೇಲಿನ ಕೋಷ್ಟಕದಲ್ಲಿನ ಅಂಶಗಳು ಆಶಾದಾಯಕವಾಗಿ ಕಾಣಿಸುತ್ತವೆ. ಆದರೆ ಆಂತರಿಕ ಉತ್ಪನ್ನದ ಹೆಚ್ಚಳವನ್ನು ಅಭಿವೃದ್ಧಿ ಎಂದು ಹೇಳಿದರೆ ಅರ್ಧ ಸತ್ಯವಾಗುತ್ತದೆ. ಕಾರಣ ಇತ್ತೀಚಿನ ಕರ್ನಾಟಕದಲ್ಲಿ ಬಡತನದ ರೇಖೆಗಿಂತ ಕೆಳಗಿರುವವರ ಸಂಖ್ಯೆ ೨೯% ತಲಾ ಆದಾಯದ ದೃಷ್ಟಿಯಿಂದ ೧೧ನೇ ಸ್ಥಾನಕ್ಕಿಳಿದೆ. ಪಕ್ಕದ ರಾಜ್ಯಗಳಾದ ಮಹಾರಾಷ್ಟ್ರದ ತಲಾ ಆದಾಯ ೨೨೬೦೪ ರೂ.ಗಳಾಗಿದ್ದು ತಮಿಳುನಾಡು ೧೮೬೨೫, ಕೇರಳ ೧೮೨೬೨ ರೂ.ಗಳಾಗಿದ್ದು ಕರ್ನಾಟಕದ ತಲಾ ಆದಾಯ ೧೬೨೪೨ ರೂಗಳಾಗಿದ್ದು ರಾಷ್ಟ್ರದ ತಲಾ ಆದಾಯ ೧೫೫೬೨ಕ್ಕೆ ಸಮೀಪದಲ್ಲಿದೆ. ತೆರಿಗೆಯೇತರ ಆದಾಯ ೧೨% ರಷ್ಟಿದ್ದುದು ಇಂದು ೯% ಕ್ಕಿಳಿದಿದೆ. ತಲಾ ಆಂತರಿಕ ಉತ್ಪನ್ನದಲ್ಲಿ ಕರ್ನಾಟಕ ೧೨ನೇ ಸ್ಥಾನದಲ್ಲಿದೆ, ಪಕ್ಕದ ರಾಜ್ಯಗಳಾದ ತಮಿಳುನಾಡು ೭ನೇ ಸ್ಥಾನ, ಕೇರಳ ೪ನೇ, ಮಹಾರಾಷ್ಟ್ರ ೮ನೇ ಹಾಗೂ ಆಂಧ್ರ ೧೦ನೇ ಸ್ಥಾನದಲ್ಲಿವೆ.

## ಕರ್ನಾಟಕದ ಪ್ರಗತಿ ಹೀಗೇಕೆ? ತಜ್ಞರ ಎರಡು ದೃಷ್ಟಿ

'ಕರ್ನಾಟಕದಲ್ಲಿ ಆರ್ಥಿಕಾಭಿವೃದ್ಧಿಯನ್ನು ತ್ವರಿತಗೊಳಿಸುವ ಪ್ರಯತ್ನ ನಡೆದಿದ್ದರೂ ಸಹ ಬಡತನ, ನಿರುದ್ಯೋಗ, ಆರ್ಥಿಕ ಅಸಮಾನತೆಗಳು ಮುಂದುವರಿದಿರುವುದು ಒಂದು ಅಸಂಗತವೇ ಸರಿ. ಇಂತಹ ಅಸಂಗತಕ್ಕೆ ಕಾರಣವೆಂದರೆ ಯೋಜನಾ ಕಾರ್ಯಗತಿಯಲ್ಲಿ ಇಲ್ಲಿಯ ತನಕ ಕೈಗೊಂಡಂತಹ ಅಭಿವೃದ್ಧಿ, ವ್ಯೂಹದ ಸ್ವಭಾವ, ಇಲ್ಲಿಯತನಕ ಯೋಜನೆಗಳನ್ನು ರಾಜಧಾನಿಯಲ್ಲಿಯೇ ಕುಳಿತು ತಜ್ಞರು ರಚಿಸಿದ ಕಾರಣ ಸ್ಥಳೀಯ ಸ್ಥಿತಿಗತಿಗಳಿಗೆ ಅನುಗುಣವಾಗಿ ಅವು ರೂಪಿತಗೊಳ್ಳಲಿಲ್ಲ ಹಾಗೂ ಅವುಗಳ ಅನುಷ್ಠಾನದಲ್ಲೂ ತೊಂದರೆ ಉಂಟಾಯಿತು. ಇದಲ್ಲದೆ ಹೆಚ್ಚಿನ ಪ್ರಮಾಣದಲ್ಲಿ ಬೃಹತ್ ಯೋಜನೆಗಳನ್ನು ಕೈಗೊಂಡ ಕಾರಣ ಅವುಗಳಿಂದ ಸಾಮಾನ್ಯ ಜನರಿಗೆ ಬೇಕಾಗುವಂತಹ ಉದ್ಯೋಗಾವಕಾಶಗಳ ಸೃಷ್ಟಿಯೂ ತಕ್ಕ ಪ್ರಮಾಣದಲ್ಲಿ ಆಗಲಿಲ್ಲ' ಎಂದು ಡಾ। ಅಬ್ದುಲ್ ಅಜೀಜ್ ಹೇಳುತ್ತಾರೆ.

'ಅತಿಯಾದ ರಾಜಕೀಯ ಅವಕಾಶವಾದಿತ್ವದ ಇಂದಿನ ಸನ್ನಿವೇಶದಲ್ಲಿ ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಅಲ್ಪಾವಧಿಯ ವೈಯಕ್ತಿಕ ಲಾಭಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಶಾಶ್ವತ ಪ್ರಯೋಜನ ಇಲ್ಲದ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ ಎಂದು ಪ್ರೊ। ಯು. ಆರ್. ರಾವ್ ಅನಿಸಿಕೆ.

## ಮಾಹಿತಿ ತಂತ್ರಜ್ಞಾನ ಸಾಧಿಸಿದ್ದೇನು?

ಮಾಹಿತಿ ತಂತ್ರಜ್ಞಾನದ ಬೆಳವಣಿಗೆ-ಸಾಧ್ಯತೆಗಳನ್ನು ಕುರಿತು ಹಲವು ಬಗೆಯ ಸುದ್ದಿಗಳಿವೆ. ಕರ್ನಾಟಕವು ಕಂಪ್ಯೂಟರ್ಸ್, ಎಲೆಕ್ಟ್ರಾನಿಕ್ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಿತ್ತು ಎನ್ನುವುದು ನಿಜ. ನಮ್ಮ ಮುಖ್ಯಮಂತ್ರಿಗಳು ಮಾಹಿತಿ ತಂತ್ರಜ್ಞಾನಕ್ಕೆ ಮಹತ್ವ ನೀಡುತ್ತಿದ್ದಾರೆ ಅನ್ನುವ ಕಾರಣಕ್ಕೇ ದೇಶದ ಅತ್ಯುತ್ತಮ ಮುಖ್ಯಮಂತ್ರಿ ಎಂದು ಸಮೂಹ ಮಾಧ್ಯಮಗಳು ಗುರುತಿಸಿದವು. ಸಹಸ್ರಮಾನದ ಮಾಹಿತಿ ತಂತ್ರಜ್ಞಾನ ನೀತಿ ರೂಪಿಸಿದ ಮೊದಲ ರಾಜ್ಯ ನಮ್ಮದು. ನುಡಿ ತಂತ್ರಾಂಶವನ್ನು ರೂಪಿಸಿದ್ದು, ಏಕ ಕೀಲಿಮಣೆ ರೂಪಿಸಿದ್ದು, ವಿವಿಧ ಲಿಪಿತಂತ್ರಾಂಶಗಳ ನಡುವೆ ಸಮನ್ವಯ ಪ್ರಮಾಣೀಭೂತ ಪ್ರಯತ್ನ ಮಾಡಿ, ಕನ್ನಡದ ಬಳಕೆಯ ಸಂದರ್ಭದಲ್ಲಿ ಇದ್ದ ಹಲವು ಸಮಸ್ಯೆಗಳಿಗೆ ಸಮರ್ಪಕ ಪರಿಹಾರ ಕಂಡುಕೊಂಡ ಈ ನಿಟ್ಟಿನಲ್ಲಿ ಪ್ರಥಮ ರಾಜ್ಯವೆನಿಸಿದೆ. ಕರ್ನಾಟಕದಲ್ಲಿ ವಿದ್ಯುನ್ಮಾನ ಆಡಳಿತದ ಉಪಕ್ರಮಗಳು ಪ್ರಾರಂಭವಾಗಿವೆ. ಇಂದು ಎಲ್ಲೆಡೆ ಮಾಹಿತಿ ತಂತ್ರಜ್ಞಾನದ ಅರಿವಿಲ್ಲದವರು ನಿಷ್ಪ್ರಯೋಜಕರು ಎನ್ನುವ ವಾತಾವರಣ ನಿರ್ಮಾಣವಾಗಿದೆ. ಹೀಗೆ ಸರ್ವಾಂತರ್ಯಾಮಿ ಆಗಿರುವ ಮಾಹಿತಿ ತಂತ್ರಜ್ಞಾನ ನಮ್ಮ ಭಾಗ್ಯದ ಬಾಗಿಲು ತೆರೆಯುತ್ತದೆ ಎನ್ನುವ ಕಲ್ಪನೆ ಇದೆ.

ಬೆಂಗಳೂರನ್ನು ಭಾರತದ ತಂತ್ರಜ್ಞಾನದ ರಾಜಧಾನಿ, ಏಷ್ಯಾದ ಸಿಲಿಕಾನ್ ಕಣಿವೆ ಎಂದು ಕರೆದರೆ ಕರ್ನಾಟಕವನ್ನು ಭಾರತದ ಮಾಹಿತಿ ತಂತ್ರಜ್ಞಾನ ಚಟುವಟಿಕೆಗಳ ಕೇಂದ್ರಸ್ಥಾನ ಎಂದೆಲ್ಲ ಹೇಳುತ್ತೇವೆ. 'ರಾಷ್ಟ್ರೀಯ ತಂತ್ರಾಂಶ ಮತ್ತು ಸೇವಾಸಂಸ್ಥೆಗಳ ಒಕ್ಕೂಟ' (Nassion) ವು ಮಾಹಿತಿ ತಂತ್ರಜ್ಞಾನವು ನೀಡುವ ಸಮರ್ಥ ಸೇವಾ ಬಳಕೆಗೆ (Ites) ಸಂಬಂಧಿಸಿದ ಅಧ್ಯಯನ ವರದಿಯನ್ನು

ಬಿಡುಗಡೆ ಮಾಡಿದೆ. ಆ ವರದಿಯನ್ವಯ ಬೆಂಗಳೂರು ೬ ನೇ ಸ್ಥಾನದಲ್ಲಿದ್ದರೆ, ಕ್ರಮವಾಗಿ ಹೈದರಾಬಾದು, ಕೊಚ್ಚಿ, ಚೆನ್ನೈ ಮೊದಲ ಮೂರು ಸ್ಥಾನದಲ್ಲಿವೆ. ದೂರಸಂಪರ್ಕ, ವಿದ್ಯುತ್, ಮಾನವ ಸಂಪತ್ತು, ಸಂಚಾರ ಮುಂತಾದ ಮೂಲಭೂತ ಸೌಲಭ್ಯಗಳ ಆಧಾರದ ಮೇಲೆ ವೈಜ್ಞಾನಿಕ ಅಂಕಗಳನ್ನು ನೀಡಿ ಈ ಅಧ್ಯಯನ ನಡೆಸಿದೆ (ಡೆಕನ್ ಹೆರಾಲ್ಡ್ ೧೨-೮-೨೦೦೨)

ಮಾಹಿತಿ ತಂತ್ರಜ್ಞಾನದ ಬಹುಮುಖಿ ಉಪಯುಕ್ತತೆಯಿಂದ ನಿಶ್ಚಿತವಾಗಿ ಅಭಿವೃದ್ಧಿಯಲ್ಲಿ ದಾಪುಗಾಲು ಹಾಕಬಹುದು. ಅದಕ್ಕೆ ಸೂಕ್ತ ವಾತಾವರಣ, ಮೂಲಭೂತ ಸೌಲಭ್ಯ ನಿರ್ಮಾಣ ಆಗಬೇಕು. ನಮ್ಮ ರಾಜ್ಯದಲ್ಲಿ ಪ್ರತಿ ಸಾವಿರ ಮಂದಿಗೆ ೪೦ ದೂರವಾಣಿಗಳಿದೆ. ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಕಮ್ಮಿ. ಗ್ರಾಮ-ಗ್ರಾಮ-ಹೋಬಳಿ-ತಾಲ್ಲೂಕ್, ಜಿಲ್ಲಾ ಕೇಂದ್ರಗಳ ನಡುವೆ ದೂರ ಸಂಪರ್ಕ, ರಸ್ತೆ, ವಿದ್ಯುತ್ ಸಂಪರ್ಕಗಳಿಲ್ಲದೆ ಅಂತರ್‌ಜಾಲವಾಗಲಿ, ಗಣಕಯಂತ್ರ ಜಾಲವಾಗಲಿ ನಿರ್ಮಿಸಲು ಸಾಧ್ಯವಿಲ್ಲ. ಕರ್ನಾಟಕದ ೨೭೦೬೬ ಗ್ರಾಮಗಳಲ್ಲಿ ೧೦೨೦೦ ಗ್ರಾಮಕ್ಕೆ ಮಾತ್ರ ವಿದ್ಯುತ್ ಸಂಪರ್ಕವಿದೆ. ಅಂದರೆ ೬೨ ರಷ್ಟು ಗ್ರಾಮಗಳಿಗೆ ವಿದ್ಯುತ್ ಇಲ್ಲ. (ಕರ್ನಾಟಕದಲ್ಲಿ ಗ್ರಾಮಗಳು ಸಂಪೂರ್ಣ ವಿದ್ಯುದೀಕರಣಗೊಂಡಿದೆ ಎಂದು ಸರ್ಕಾರ ಹೇಳುತ್ತದೆ. ಆದರೆ ೬೫ ಉಪಗ್ರಾಮಗಳಿಗೆ ವಿದ್ಯುತ್ ಇಲ್ಲ) ಕನಿಷ್ಠ ಶಿಕ್ಷಣ, ಆರೋಗ್ಯ, ರಸ್ತೆ, ವಿದ್ಯುತ್ ಸಂಪರ್ಕಗಳಿಲ್ಲದೆ ಮಾಹಿತಿ ತಂತ್ರಜ್ಞಾನದಲ್ಲಿ ಮುಂದಿದ್ದೇವೆ ಎಂದು ಹೇಳಿಕೊಳ್ಳುವುದು ಎಷ್ಟು ಉಚಿತ? ಶಾಲೆಗೊಂದು ಕಂಪ್ಯೂಟರ್ ಎಂದು ರಾಜ್ಯ ಸರ್ಕಾರ ಹೇಳಿದಾಗ ಕೆಲವರು ಹೇಳಿದರು 'ಶಾಲೆಗೆ ಒಂದು ಕಕ್ಕಸ್ಸು ಕೊಡಿ ಆಮೇಲೆ ಕಂಪ್ಯೂಟರ್ ಕೊಡಿ' ಎಂದು.

ಕರ್ನಾಟಕದಲ್ಲಿ ಮಾಹಿತಿ ತಂತ್ರಜ್ಞಾನ ನಮ್ಮ ಅರ್ಥವ್ಯವಸ್ಥೆಯಲ್ಲಿ ಬಲವಾಗಿ ಬೇರೂರಲು ಇನ್ನೂ ಸಾಕಷ್ಟು ಸಮಯಬೇಕು. ಆದ್ದರಿಂದಲೇ ಇಲ್ಲಿನ ಬಹುತೇಕ ತಂತ್ರಾಂಶ ಕಂಪನಿಗಳು ಶ್ರೀಮಂತ ದೇಶಗಳ ಉತ್ಪಾದನೆ ಮತ್ತು ವಿತರಣೆಗೆ ಅಗತ್ಯವಿರುವ ತಂತ್ರಾಶ ಸಿದ್ಧಪಡಿಸುವುದರಲ್ಲಿ ಪರಿಣತಿ ಪಡೆದಿವೆ. ಹಾಗಾಗಿ ಆ ದೇಶಗಳ ಅರ್ಥವ್ಯವಸ್ಥೆಯ ಮೇಲೆ ಆಗುವ ಅಲ್ಪ ಪರಿಣಾಮವೂ ನಮ್ಮ I.T. ಉದ್ಯಮದ ಮೇಲೆ ಭಾರಿ ಪರಿಣಾಮ ಬೀರುತ್ತದೆ. ನಮ್ಮಲ್ಲಿರುವ ತಂತ್ರಾಂಶ ಸಂಸ್ಥೆಗಳಿಗೆ ಲಾಭದ ಉದ್ದೇಶ ಬಿಟ್ಟು ಬೇರೇನೂ ಇಲ್ಲ. ಶಾಲೆಗಳಿಗೊಂದು ಕಂಪ್ಯೂಟರ್ ಕಾರ್ಯಕ್ರಮದಿಂದ ಲಾಭ ಪಡೆದವರು ಉದ್ಯಮಿಗಳು ಮಾತ್ರ. ಸ್ಥಳೀಯ ಅಗತ್ಯಕ್ಕೆ I.T. ಸ್ಪಂದಿಸಿಲ್ಲ ಎನ್ನುವುದಕ್ಕೆ ಇನ್ನೊಂದು ನಿದರ್ಶನ ಮಾಹಿತಿ ತಂತ್ರಜ್ಞಾನದಲ್ಲಿ ಅಷ್ಟು ಸುದ್ದಿ ಮಾಡದ ಕೇರಳ, ಅಂತರಜಾಲದ ಮೂಲಕ ಪ್ರವಾಸೋದ್ಯಮದಲ್ಲಿ ದಾಪುಗಾಲು ಹಾಕಿದೆ. ತಮಿಳುನಾಡು ತನ್ನ ಸಾಂಪ್ರದಾಯಿಕ ಉದ್ಯಮಗಳ ಜೊತೆಗೆ ಐ.ಟಿ. ಉದ್ಯಮದ ಲಾಭವನ್ನು ಪೂರ್ಣವಾಗಿ ಪಡೆದುಕೊಂಡಿದೆ. ಆದರೆ ಕರ್ನಾಟಕ ಎಲ್ಲವೂ ಇದ್ದರೂ ಏನಿಲ್ಲದಂತೆ ಆಗಿದೆ. ಕರ್ನಾಟಕ ಐ.ಟಿ. ಉದ್ಯಮಕ್ಕೆ ನೀಡಿದ ತೆರಿಗೆ ವಿನಾಯಿತಿ, ಅನಿರ್ಬಂಧಿತ ವಿದ್ಯುತ್, ಸುಂಕದ ರಿಯಾಯಿತಿಗಳಿಂದ ಉದ್ಯಮ ಬೆಳೆಯಿತು. ಆದರೆ ಇಲ್ಲಿ ಸ್ಥಳೀಯರಿಗೆ ಉದ್ಯೋಗ ದೊರೆಯಲಿಲ್ಲ. ರಿಯಾಯಿತಿಯ ಲಾಭ ಪಡೆದು ಅನಂತರ ಕಂಪನಿ ಮುಚ್ಚಿದ ಪ್ರಸಂಗವೂ ಇದೆ.

### ಐಟಿಯಿಂದ ಬಿಟಿಗೆ

ಭಾರಿ ಗದ್ದಲ ಎಬ್ಬಿಸಿದ್ದ ಐಟಿಗೆ ನಮ್ಮ ಸರ್ಕಾರಗಳು ಮಣಿದು ಆರ್ಥಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನೇ ಸಾಫ್ಟ್ ವೇರ್ ಉದ್ಯಮಕ್ಕೆ ನೆರವಾಗಲೆಂದು ಅವುಗಳ ಸ್ವರೂಪವನ್ನೇ ಬದಲಿಸಿದವು. ಈಗ ಐಟಿ ತಣ್ಣಗಾಗಿದೆ. ಇದರ ಜಾಗದಲ್ಲಿ ಜೈವಿಕ ತಂತ್ರಜ್ಞಾನ (ಬಿ.ಟಿ.) ಬರುತ್ತಿದೆ. ಅಗಾಧ ಸಾಮರ್ಥ್ಯವುಳ್ಳ ಬಯೋಟೆಕ್ನಾಲಜಿಯ ಅಗತ್ಯವೂ ಇದೆ. ಆದರೆ 'ಜೈವಿಕ ತಂತ್ರಜ್ಞಾನ ಪಾರ್ಕ್' ಸ್ಥಾಪನೆ ಸಂದರ್ಭದಲ್ಲಿ ನಡೆದ ಘಟನೆಗಳು ಹಲವು ಗುಮಾನಿಗಳಿಗೆ ಎಡೆ ಮಾಡಿಕೊಟ್ಟಿದೆ. ಸರ್ಕಾರವು ಘೋಷಿಸಿರುವ ರಿಯಾಯಿತಿಗಳು ಬಂಡವಾಳಶಾಹಿಗಳಿಗೆ ಮಾತ್ರ ಸಿಕ್ಕದೆ ಜನರಿಗೆ ದೊರೆಯುವಂತಾಗಬೇಕು. ಇಲ್ಲವಾದರೆ ಐ.ಟಿ. ಲಾಬಿಯಿಂದ ಕರ್ನಾಟಕಕ್ಕೆ ಆದ ಲಾಭವೇ ಬಿ.ಟಿ.ಯಿಂದಲೂ ಆಗುವ ಸಾಧ್ಯತೆ ಇದೆ. ಜನ ಜಾಗೃತರಾಗಿ ಜೈವಿಕ ತಂತ್ರಜ್ಞಾನದ ಫಲ ಪಡೆಯಲು ಸನ್ನದ್ಧರಾಗಬೇಕು.

### ಕೃಶವಾಗಿರುವ ಕೃಷಿ

ಕರ್ನಾಟಕ ಮೂಲತಃ ಕೃಷಿಯೇ ಪ್ರಧಾನ ಕಸುಬಾದ ರಾಜ್ಯ. ರಾಜ್ಯದ ೬೮% ರಷ್ಟು ಜನ ಕೃಷಿ ಅವಲಂಬಿತ ಚಟುವಟಿಕೆಯನ್ನೇ ನಂಬಿ ಬದುಕುತ್ತಿದ್ದಾರೆ. ಏಕೀಕರಣವಾದ ಸಂದರ್ಭದಲ್ಲಿ ರಾಜ್ಯದ ಒಟ್ಟು ಆದಾಯದಲ್ಲಿ ಕೃಷಿ ಕ್ಷೇತ್ರದ ಪಾಲು ೫೦% ಕ್ಕಿಂತ ಹೆಚ್ಚಿತ್ತು. ಈ ಪರಿಸ್ಥಿತಿಯು ೧೯೮೦ರವರೆಗೂ ಮುಂದುವರೆಯಿತು. ಇಂದು ಕೃಷಿ ಆದಾಯವು ೩೩% ಕ್ಕಿಳಿದಿದೆ. ಎಂಬತ್ತರ ದಶಕದಲ್ಲಿ ಕೃಷಿ ಬೆಳವಣಿಗೆ ರಾಷ್ಟ್ರದ ಸರಾಸರಿ ೪.೨% ರಷ್ಟಾದರೆ, ಕರ್ನಾಟಕದಲ್ಲಿ ಬೆಳವಣಿಗೆ ೨.೭% ರಷ್ಟು ಮಾತ್ರ. ಇದು ತೊಂಬತ್ತರ ದಶಕದಲ್ಲಿ ಕ್ರಮವಾಗಿ ೪.೮ ಮತ್ತು ೩.೭ ಆಗಿದೆ. ೧೯೯೨-೯೩ರಲ್ಲಿ ಆಹಾರ ಧಾನ್ಯಗಳ ಉತ್ಪಾದನೆ ೮೬ ಲಕ್ಷ ಟನ್ನುಗಳಿದ್ದುದು ೨೦೦೧-೦೨ರಲ್ಲಿ

೮೨.೨೮ ಲಕ್ಷ ಟನ್ನಿಗಿಳಿದಿದೆ. ೭೦ರ ದಶಕದ ಮಧ್ಯಭಾಗದವರೆಗೆ ಅಗತ್ಯಕ್ಕಿಂತ ಹೆಚ್ಚು ಆಹಾರ ಧಾನ್ಯಗಳನ್ನು ಉತ್ಪಾದಿಸುತ್ತಿದ್ದು ಕೃಷಿ ಉತ್ಪನ್ನದ ವಾರ್ಷಿಕ ಬೆಳವಣಿಗೆ ೧೯೮೦ರಲ್ಲಿ ೪% ಇದ್ದುದು ೯೦ರದಶಕದಲ್ಲಿ ೩% ಕ್ಕಿಳಿಯಿತು. ಆಹಾರ ಧಾನ್ಯದ ಉತ್ಪಾದನೆ ೩.೫೪% ರಿಂದ ೧.೮೯ ಕ್ಕಿಳಿದರೆ, ಆಹಾರೇತರ ಬೆಳೆಯ ಬೆಳವಣಿಗೆ ೪%ರಿಂದ ೩% ಕ್ಕಿಳಿದಿದೆ. ಇವು ಗಾಬರಿ ಹುಟ್ಟಿಸುವ ಸಂಗತಿಗಳಾಗಿವೆ. ಇದಕ್ಕೆಲ್ಲ ಕಾರಣ ಮಳೆಯನ್ನೇ ನಂಬಿಕೊಂಡಿರುವುದು ಒಂದೆಡೆಯಾದರೆ, ನೀರಾವರಿ ಸೌಕರ್ಯದ ಅಭಾವ ಎಂದು ಹೇಳುತ್ತಾರೆ. ಇದರಾಚೆಗೆ ಇನ್ನೊಂದು ಸಮಸ್ಯೆ ಇದೆ. ಅಖಿಲ ಭಾರತ ಮಟ್ಟದಲ್ಲಿ ಕೃಷಿ ಬೆಳೆಗಳ ಇಳುವರಿ ದರ ನಿರಂತರವಾಗಿ ಏರುಮುಖವಾಗಿದೆ. ೮೦ರ ದಶಕವು ರಾಷ್ಟ್ರದಲ್ಲಿ ಗಣನೀಯ ಪ್ರಮಾಣದ ಏರಿಕೆಯಾದ ಅವಧಿ ಆಗಿದೆ. ದುರಂತವೆಂದರೆ ಕರ್ನಾಟಕದಲ್ಲಿ ಎಂದೂ ಇಂತಹ ಏರಿಕೆ ಕೃಷಿಯಲ್ಲಿ ಸಂಭವಿಸಲಿಲ್ಲ. ಆಶ್ಚರ್ಯದ ಸಂಗತಿ ಎಂದರೆ ಕೃಷಿಯಲ್ಲಿ ಸುದೀರ್ಘ ಪರಂಪರೆಯಿರುವ ನಮ್ಮ ರಾಜ್ಯ ಆಹಾರೋತ್ಪನ್ನದಲ್ಲಿ ೧೪ ನೇ ಸ್ಥಾನದಲ್ಲಿರುವುದು. ಪ್ರತಿ ಹೆಕ್ಟೇರ್‌ಗೆ ರಾಷ್ಟ್ರೀಯ ಸರಾಸರಿ ಇಳವರಿ ಪ್ರತಿ ಹೆಕ್ಟೇರ್‌ಗೆ ೧೬೨೦ ಕೆ. ಜಿ. ಇದ್ದರೆ, ಕರ್ನಾಟಕದಲ್ಲಿ ೧೩೫೨ ಕೆ.ಜಿ. ಮಾತ್ರ. ತಲಾ ದವಸ ಧಾನ್ಯಗಳ ಉತ್ಪಾದನೆ ರಾಷ್ಟ್ರದ ಸರಾಸರಿ ೨೦೬ ಕೆ.ಜಿ. ಗಳಾದರೆ ಕರ್ನಾಟಕದ್ದು ೧೭೬ ಕೆ. ಜಿ. ಗಳು ಮಾತ್ರ. ರಾಜ್ಯದಲ್ಲಿ ಸರಾಸರಿ ಹಿಡುವಳಿ ಜಮೀನು ೨.೧೩ ಹೆಕ್ಟೇರ್ ಆಗಿದ್ದು ರಾಷ್ಟ್ರದ ಸರಾಸರಿ ೧.೫೭ ಹೆಕ್ಟೇರ್‌ಗಿಂತ ಮೇಲಿದೆ. ದೇಶದ ಆಹಾರ ಬೆಳೆಯುವ ಪ್ರದೇಶದ ೫.೯ ರಷ್ಟು ಹೊಂದಿರುವ ಕರ್ನಾಟಕ, ಆಹಾರೋತ್ಪಾದನೆ ಯಲ್ಲಿ ೪.೭% ರಷ್ಟು ಪಾಲಿರುವುದು ನಮ್ಮ ವೈಫಲ್ಯಕ್ಕೆ ಸಾಕ್ಷಿ ಆಗಿದೆ. ಖ್ಯಾತ ಅರ್ಥಶಾಸ್ತ್ರಜ್ಞ ಡಾ। ಪಿ. ಆರ್. ಬ್ರಹ್ಮಾನಂದ ಅವರ ದೃಷ್ಟಿಯಲ್ಲಿ ಕರ್ನಾಟಕವು ಸುಮಾರು ಕಾಲು ಶತಮಾನದಿಂದ ಕೃಷಿ ಕ್ಷೇತ್ರದಲ್ಲಿ ಸ್ಥಗಿತತೆ ಅನುಭವಿಸುತ್ತಿದೆ. ಇಂತಹ ಸ್ಥಗಿತತೆಯಿಂದ ಆರ್ಥಿಕತೆಯನ್ನು ಬಿಡುಗಡೆಗೊಳಿಸುವ ಯಾವ ಕ್ರಮಗಳೂ ಯಶಸ್ವಿಯಾಗಿಲ್ಲ.

ಇಷ್ಟು ವರ್ಷಗಳು ಕಳೆದ ನಂತರವೂ ಕೃಷಿ ಕ್ಷೇತ್ರದ ಮೂಲಭೂತ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಾಗಿಲ್ಲ. ಒಟ್ಟು ಬಿತ್ತನೆ ಮಾಡುತ್ತಿರುವ ಭೂಮಿಯಲ್ಲಿ ೧೫% ಪ್ರದೇಶದಲ್ಲಿ ಮಾತ್ರ ೭ ಬೆಳೆ ತೆಗೆಯುತ್ತಿದೆ. ಇದು ರಾಷ್ಟ್ರದ ಸರಾಸರಿ ೩೦% ಕ್ಕೆ ಹೋಲಿಸಿದರೆ ತೀರ ಕೆಳಗಿದೆ. ರಾಷ್ಟ್ರದ ಸರಾಸರಿ ನೀರಾವರಿ ೩೮.೬% ಇದ್ದರೆ ಕರ್ನಾಟಕದಲ್ಲಿ ೨೩.೭% ಮಾತ್ರ, ಪಕ್ಕದ ರಾಜ್ಯಗಳಾದ ತಮಿಳು ನಾಡಿನಲ್ಲಿ ೪೬% ಮತ್ತು ಆಂಧ್ರದಲ್ಲಿ ೪೨% ರಷ್ಟು ಆಗಿದೆ. ಅಂತರಜಲ ಬಳಕೆಯಲ್ಲೂ ಕರ್ನಾಟಕ ಹಿಂದಿದೆ. ತಮಿಳುನಾಡು ೪೭ ರಷ್ಟು ಅಂತರಜಲ ಬಳಸುತ್ತಿದ್ದರೆ ಕರ್ನಾಟಕ ೩೪ ರಷ್ಟು ಮಾತ್ರ ಬಳಸುತ್ತಿದೆ. ರಸಗೊಬ್ಬರ ಬಳಕೆಯೂ ನಮ್ಮಲ್ಲಿ ಪ್ರತಿ ಹೆಕ್ಟೇರ್‌ಗೆ ೬೪.೪ ಕೆ.ಜಿ.ಗಳಿದ್ದು, ಆಂಧ್ರದಲ್ಲಿ, ೧೧೪, ತಮಿಳುನಾಡಿನಲ್ಲಿ ೧೧೭ ಕೆ.ಜಿ.ಗಳಿದ್ದು ರಾಷ್ಟ್ರೀಯ ಸರಾಸರಿ ೬೮ ಕೆ.ಜಿ. ಆಗಿದೆ. ಬಂಜರು ಭೂಮಿಯನ್ನು ಬಳಸುವ ಪ್ರಯತ್ನ ಇನ್ನೂ ಪ್ರಾರಂಭವೇ ಆಗಿಲ್ಲ.

ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಕೃಷಿ ರಂಗಕ್ಕೆ ದೊಡ್ಡ ಸವಾಲೆಂದರೆ ಉದಾರೀಕರಣ. ವಿಶ್ವವಾಣಿಜ್ಯ ಒಕ್ಕೂಟದ ಒಪ್ಪಂದದ ಪರಿಣಾಮವಾಗಿ ಮುಕ್ತ ಆಮದು ಅನಿವಾರ್ಯವಾಗಿದೆ. ಕಡಿಮೆ ಬೆಲೆಗೆ ಖಾದ್ಯ ತೈಲಗಳನ್ನು ಆಮದು ಮಾಡಿಕೊಂಡ ಪರಿಣಾಮ ತೈಲ ಬೀಜಗಳ ಬೆಲೆ ಕುಸಿದು ರೈತ ಸಮುದಾಯ ತೊಂದರೆಗೆ ಸಿಲುಕಿದೆ. ಅಡಕೆ, ಕಾಫಿ ಬೆಲೆ ಪಾತಾಳಕ್ಕಿಳಿದು ಬೆಳೆಗಾರರು ಸಂಕಷ್ಟಕ್ಕೆ ಸಿಲುಕಿದ್ದಾರೆ. ನುಸಿಪೀಡೆ ರೋಗದಿಂದ ತೆಂಗು ನಾಶವಾಗಿದೆ. ಬೆಳೆದ ತರಕಾರಿಗಳ ಸಂರಕ್ಷಣೆಗೆ, ಸಾಗಾಣಿಕೆಗೆ ಸೂಕ್ತ ವ್ಯವಸ್ಥೆ ಇಲ್ಲದೆ ಬೆಳೆದ ತರಕಾರಿಗಳನ್ನು ರಸ್ತೆಗೆ ಚೆಲ್ಲಿ ಪ್ರತಿಭಟಿಸುವ ಹಂತಕ್ಕೆ ರೈತ ತಲುಪಿದ್ದಾನೆ. ಒಟ್ಟಿನಲ್ಲಿ ರೈತ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿ ಕಂಗಾಲಾಗಿದ್ದಾನೆ. ರೈತರು ಸಾಲದ ಹೊರೆಯಿಂದ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಉದ್ಭವಿಸಿದೆ. ಈ ಪರಿಸ್ಥಿತಿಯಿಂದ ಹೊರಬರ ಬೇಕಾದರೆ ಜಾಗತಿಕ ಮಟ್ಟದ ಬೇಡಿಕೆಯನ್ನು ಗುರುತಿಸುವ ಕೆಲಸ ಆಗಬೇಕು. ಮಾರಾಟ ಮತ್ತು ಮಾಹಿತಿ ಜಾಲವನ್ನು ಬಲಪಡಿಸಬೇಕು.

## ಸದೃಢ ಹಾದಿಯಲ್ಲಿ ತೋಟಗಾರಿಕೆ

ಕರ್ನಾಟಕವು ಆಹಾರ ಧಾನ್ಯಗಳನ್ನು ಬೆಳೆಯುವುದರಲ್ಲಿ ಹಿಂದಿದ್ದರೂ, ತೋಟಗಾರಿಕೆಯಲ್ಲಿ ರಾಷ್ಟ್ರಕ್ಕೆ ಮಾದರಿಯಾಗಿದೆ. ರಾಜ್ಯದಲ್ಲಿ ತೋಟಗಾರಿಕೆ ಬೆಳೆಗಳನ್ನು ೧೫.೮ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ. ವಾರ್ಷಿಕ ಉತ್ಪನ್ನ ೧೨೫ ಟನ್‌ಗಳಷ್ಟಿದೆ. ಇದರ ಮೌಲ್ಯ ೫೦೦೦ ಕೋಟಿ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ರಾಜ್ಯದ ಸಾಗುವಳಿಯ ೧೩% ರಷ್ಟು ಪ್ರದೇಶವನ್ನು ಮಾತ್ರ ವ್ಯಾಪಿಸಿರುವ ತೋಟಗಾರಿಕೆಯಿಂದ ಕೃಷಿ ಕ್ಷೇತ್ರದ ಒಟ್ಟು ಆದಾಯದಲ್ಲಿ ೪೦% ರಷ್ಟಿದೆ.

ತೋಟಗಾರಿಕೆಯು ಬೆಳೆ ವಿಸ್ತೀರ್ಣ ಪ್ರತಿ ವರ್ಷ ೩.೫% ರಷ್ಟು ಹೆಚ್ಚುತ್ತಿದೆ. ಹೀಗೆ ವಿಸ್ತರಿಸುತ್ತಾ ಹೋದರೆ ಮಾರುಕಟ್ಟೆಯನ್ನು ಹಿಡಿಯುವುದು ಕಷ್ಟವಾಗುತ್ತದೆ. ಸರ್ಕಾರ ಬೆಳೆಯ ವಿಸ್ತರಣೆ ಮತ್ತು ಬೆಳೆಗಳ ಬಗ್ಗೆ ನಿಯಂತ್ರಣ ಹೊಂದದಿದ್ದರೆ ನಾಳೆಗಳು ಸುಂದರ ವಾಗಿರಲಾರವು. ಈ ನಿಟ್ಟಿನಲ್ಲಿ ಸರ್ಕಾರ ತುರ್ತು ಗಮನ ನೀಡುವ ಅಗತ್ಯವಿದೆ.

ರಾಜ್ಯದಲ್ಲಿ ಮಾರುಕಟ್ಟೆಯ ಸ್ಥಿತ್ಯಂತರದ ಬಗ್ಗೆ ಮಾರ್ಗದರ್ಶನವಿಲ್ಲದಿರುವುದು, ಅಗತ್ಯವಿರುವಷ್ಟು ವೈಜ್ಞಾನಿಕವಾದ ಮಾರುಕಟ್ಟೆ ಇಲ್ಲದಿರುವುದು, ತೋಟಗಾರಿಕೆಯ ಉತ್ಪನ್ನಗಳು ಬೇಗನೆ ಕೊಳೆತು ಹಾಳಾಗುವುದನ್ನು ತಡೆಯಲು ವೈಜ್ಞಾನಿಕ ಸಾಗಣೆ ಸೌಕರ್ಯ, ಶೀತಲ ಗೃಹ, ವ್ಯವಸ್ಥಿತ ಸಂಗ್ರಹ ಕಣಜಗಳು ಅತ್ಯಗತ್ಯ. ಆದರೆ ಅವುಗಳ ಕೊರತೆ ತೀವ್ರವಾಗಿದೆ. ಇದರಾಚೆಗೆ ಕಾನೂನಿನ ಚೌಕಟ್ಟಿನಲ್ಲಿ ತಡೆಯಲು ಸಾಧ್ಯವಿಲ್ಲದ ದಲ್ಲಾಳಿಗಳ ಹಾವಳಿ, ಮಧ್ಯವರ್ತಿಗಳ ಶೋಷಣೆಯಿಂದಾಗಿ ರೈತನಿಗೆ ಸೂಕ್ತ ಪ್ರತಿಫಲ ದೊರೆಯುತ್ತಿಲ್ಲ. ಇದು ರೈತ ಸಮುದಾಯದಲ್ಲಿ ಹಲವು ಅಹಿತಕರ ಬೆಳವಣಿಗೆಗೆ ಎಡೆ ಮಾಡಿಕೊಡುತ್ತಿದೆ.

ಕರ್ನಾಟಕದಲ್ಲಿ ಪುಷ್ಪೋದ್ಯಮ ಉತ್ತಮ ಆರಂಭ ಮಾಡಿತ್ತು. ಜಟಿಲವಾದ ರಫ್ತು ನಿಯಮ, ವಿಮಾನ ಸಾಗಣೆ ಕೊರತೆಯಿಂದ ವಿದೇಶದ ಮಾರುಕಟ್ಟೆ ಹಿಡಿಯಲಾಗಲಿಲ್ಲ. ಹರಾಜು ಪ್ರಾಂಗಣ. ಸೂಕ್ತ ಸಾಗಣೆ ವ್ಯವಸ್ಥೆಯಿಲ್ಲದೆ ಸ್ಥಳೀಯ ಮಾರುಕಟ್ಟೆ ನಿರೀಕ್ಷಿತವಾಗಿ ಬೆಳೆದಿಲ್ಲ. ಸರ್ಕಾರ ಈ ಕ್ಷೇತ್ರಕ್ಕೆ ಆದ್ಯತೆ ನೀಡಿದರೆ ಸಾಕಷ್ಟು ಪ್ರಗತಿ ಸಾಧಿಸಬಹುದು.

ಕೃಷಿ ಕ್ಷೇತ್ರದ ಬಗ್ಗೆ ೧೯೫೬ರಿಂದ ಮೂಲ ಮಾಹಿತಿಗಳನ್ನು ಕೆಳಗೆ ನೀಡಲಾಗಿದೆ. ಇವು ಎಲ್ಲವನ್ನು ಹೇಳುತ್ತಿವೆ. ಇದು ಸರ್ಕಾರವೇ ಪ್ರಕಟಿಸಿರುವ ಮಾಹಿತಿಯಾಗಿದೆ. ಕೃಷಿ ಕ್ಷೇತ್ರದ ಹಿನ್ನಡೆಯ ಪರಿಣಾಮ ನೇರವಾಗಿ ಜನರನ್ನು ತಟ್ಟುತ್ತದೆ. ಕೃಷಿಯನ್ನು ಕಡೆಗಣಿಸಿದ ರಷ್ಯಾ ತಾಂತ್ರಿಕವಾಗಿ ದೊಡ್ಡ ಸಾಧನೆ ಮಾಡಿದರೂ ಉಳಿಯಲಾಗಲಿಲ್ಲ ಎಂಬ ಸತ್ಯವನ್ನು ನಾವು ಮನಗಾಣಬೇಕಾಗಿದೆ.

ಕರ್ನಾಟಕದಲ್ಲಿ ಅನೇಕ ನದಿಗಳು ಹರಿಯುತ್ತವೆ. ಜಲಸಂಪನ್ಮೂಲ ವಾರ್ಷಿಕ ಸರಾಸರಿ ೩೪೪೦ ಟಿ.ಎಂ.ಸಿ. ಎಂದು ಅಂದಾಜು ಮಾಡಲಾಗಿದೆ (ಒಂದು ಟಿ.ಎಂ.ಸಿ.- ಒಂದು ಸಾವಿರ ದಶಲಕ್ಷ ಘನ ಅಡಿ). ಪಶ್ಚಿಮದ ನದಿಗಳ ಕೊಳ್ಳದ ವಿಸ್ತಾರ ರಾಜ್ಯದ ೧೪% ಭಾಗವಾದರೆ ನೀರಿನ ಪ್ರಮಾಣ ೩೦೦೦ ಟಿ.ಎಂ.ಸಿ., (ರಾಜ್ಯದ ೫೮% ಭಾಗ) ಪೂರ್ವನದಿಗಳ ನೀರಿನ ಪ್ರಮಾಣ ೧೪೪೦ ಟಿ.ಎಂ.ಸಿ. ಇದರಲ್ಲಿ ಕೃಷ್ಣ ೯೭೦ ಟಿ.ಎಂ.ಸಿ. ಕಾವೇರಿ ೩೮೮ ಟಿ.ಎಂ.ಸಿ. ಉಳಿದ ನದಿಗಳದ್ದು ೮೨ ಟಿ.ಎಂ.ಸಿ. ಪೂರ್ವಕ್ಕೆ ಹರಿಯುವ ನದಿಗಳ ಕೊಳ್ಳ ಪ್ರದೇಶಗಳ ವಿಸ್ತಾರ ರಾಜ್ಯದ ೮೬% ಜಲ ಸಂಪನ್ಮೂಲ ೪೨%. ಪಶ್ಚಿಮ ವಾಹಿನಿ ನದಿಗಳ ನೀರಿನಲ್ಲಿ ಅಲ್ಪ ಪ್ರಮಾಣ ವಿದ್ಯುತ್ ಉತ್ಪಾದನೆಗೆ ಬಳಕೆ ಆಗುತ್ತಿದೆ. ಉಳಿದಂತೆ ಸಮುದ್ರ ಸೇರುತ್ತಿದೆ. ಇದನ್ನು ಬಳಸಿಕೊಳ್ಳುವ, ಪೂರ್ವದ ನದಿಗಳಿಗೆ ಸೇರಿಸುವ ಪ್ರಯತ್ನ ಯಶಸ್ವಿ ಆಗಿಲ್ಲ. ಕೃಷ್ಣಾ ನದಿಯ ನೀರಿನ ಹಂಚಿಕೆಯಲ್ಲಿ ಕರ್ನಾಟಕಕ್ಕೆ ಅನ್ಯಾಯವಾಗಿದೆ ಎಂದು ಹೇಳಲು ಸಾಕಷ್ಟು ಪುರಾವೆಗಳಿವೆ. ಬಂದಿರುವ ಪಾಲನ್ನೂ ನಾವು ಬಳಸಿಕೊಳ್ಳಲು ಆಗಿಲ್ಲ. ಕಾವೇರಿ ವಿಚಾರಕ್ಕೆ ಬಂದರೂ ಪರಿಸ್ಥಿತಿ ಭಿನ್ನವಾಗಿಲ್ಲ. ಜಲಸಂಪನ್ಮೂಲದ ಬಳಕೆ ಎಂದರೆ ನೀರಾವರಿ ಮಾಡುವುದು ಎನ್ನುವ ವಾತಾವರಣವಿದೆ. ನಾವು ಜಲಸಂಪತ್ತನ್ನು ಸಮರ್ಥವಾಗಿ ನಿರ್ವಹಿಸಲು ಸಾಧ್ಯವಾಗಿಲ್ಲದಿರುವುದರಿಂದ ನೆರೆ-ಬರ ಎರಡನ್ನೂ ಅನುಭವಿಸುತ್ತಿದ್ದೇವೆ.

ನಾವು ಅಣೆಕಟ್ಟುಗಳನ್ನು ಕಟ್ಟಿದ್ದೇವೆ. ಅವುಗಳ ಸುರಕ್ಷತೆಯನ್ನು ಚಿಂತಿಸಿಲ್ಲ. ಮಳೆಗಾಲದಲ್ಲಿ ಭೂಕೊರೆತದಿಂದ ಲಕ್ಷಾಂತರ ಟನ್ ಹೂಳು ಅಣೆಕಟ್ಟು ಸೇರುತ್ತದೆ. ಇದರಿಂದ ನೀರು ಸಂಗ್ರಹಣಾ ಸಾಮರ್ಥ್ಯ ಕುಸಿಯುತ್ತಿದೆ. ತುಂಗಭದ್ರ ಡ್ಯಾಂ ನಲ್ಲಿ ೧/೩ ಭಾಗ ಹೂಳು ತುಂಬಿಕೊಂಡಿದೆ. ಇನ್ನು ೨೫ ವರ್ಷಗಳಲ್ಲಿ ಈ ಅಣೆಕಟ್ಟು ನಿರುಪಯುಕ್ತ ಆಗುತ್ತದೆ ಎಂದು ತಜ್ಞರು ಹೇಳುತ್ತಾರೆ. ಕನ್ನಂಬಾಡಿಯ ಕಥೆ ಇದಕ್ಕೆ ಭಿನ್ನವಾಗಿಲ್ಲ. ಹೂಳು ಎತ್ತುವುದು ವ್ಯಾವಹಾರಿಕವಾಗಿ ಕಾರ್ಯಸಾಧುವಲ್ಲ. ಅಣೆಕಟ್ಟುಗಳ ಸಮೀಪ ಒಡ್ಡು ನಿರ್ಮಿಸುವುದು, ನದಿ ಪಾತ್ರದಲ್ಲಿ ದಟ್ಟ ಹುಲ್ಲು-ಮರಗಳನ್ನು ಬೆಳೆಸುವ ಕೆಲಸ ಆಗಬೇಕು. ನದಿಗಳಿರಲಿ, ಕೆರೆಗಳಲ್ಲಿ ಹೂಳು ತುಂಬಿಕೊಂಡುದರ ಪರಿಣಾಮ ನೀರಿನ ಶೇಖರಣಾ ಸಾಮರ್ಥ್ಯ ಕುಸಿದಿದೆ. ಅಂತರಜಲ ಮಟ್ಟ ಕಾಪಾಡಿಕೊಳ್ಳಲು ಸಾಧ್ಯವಾಗಿಲ್ಲ.

ಒಂದು ಪ್ರದೇಶದ ಆರ್ಥಿಕ ಪ್ರಗತಿ ಅದರ ಪ್ರಾಕೃತಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ. ಸ್ವಚ್ಛವಾದ ನೀರು ಅತ್ಯಪೂರ್ವ ಸಂಪತ್ತು. ನಾಗರಿಕತೆ ಬೆಳೆದಿದ್ದೇ ನೀರಿನ ಹರಿವಿನೊಂದಿಗೆ. ನೀರನ್ನು ವ್ಯವಸಾಯ, ಕೈಗಾರಿಕೆ, ವಿದ್ಯುತ್ ಉತ್ಪಾದನೆಗೆ ಬಳಸಬಹುದು. ಇದರ ಜೊತೆಗೆ ಸಾಗಾಣಿಕೆ, ಮೀನುಗಳಂತಹ ಆಹಾರೋತ್ಪತ್ತಿಗೂ ಬಳಸಬಹುದಾದ ನೀರಿನ ಸಂರಕ್ಷಣೆಗೆ ನಾವು ಆದ್ಯತೆ ನೀಡದಿರುವುದು ದೊಡ್ಡ ವಿಪರ್ಯಾಸ. ನೀರಿನ ನಿರ್ವಹಣೆ ಬಗ್ಗೆ ನಾವು ಇದೇ ಅಸಡ್ಡೆ ಮುಂದುವರೆಸಿದರೆ ಎದುರಿಸಬೇಕಾದ ಆಪಾಯ ಊಹೆಗೆ ನಿಲುಕದ್ದಾಗಿದೆ.

### ಅಡ್ಡಿ - ಅಡಚಣೆಗಳಿಂದ ಸೊರಗಿದ ನೀರಾವರಿ

ರಾಜ್ಯದಲ್ಲಿ ಕೃಷಿಗೆ ಯೋಗ್ಯವಾದ ೧೦೭ ಲಕ್ಷ ಹೆಕ್ಟೇರ್ ಜಮೀನಿದೆ. ಅದರಲ್ಲಿ ೫೫ ಲಕ್ಷ ಹೆಕ್ಟೇರ್‌ಗಳಿಗೆ ನೀರಾವರಿ ಒದಗಿಸುವಷ್ಟು ಜಲಸಂಪತ್ತಿದೆ, ೪೫ ಲಕ್ಷ ಹೆಕ್ಟೇರ್‌ಗಳು ನದಿ-ಕೆರೆಗಳಿಂದ, ೧೦ ಲಕ್ಷ ಹೆಕ್ಟೇರ್‌ಗಳು ಅಂತರ್ಜಲದಿಂದ ಸಿಗುತ್ತದೆ. ಈವರೆಗೆ ೧೮.೮೩ ಲಕ್ಷ ಹೆಕ್ಟೇರ್ ನದಿ-ಕೆರೆಗಳಿಂದ, ೬.೦೮ ಲಕ್ಷ ಹೆಕ್ಟೇರ್‌ಗಳು ಅಂತರ್ಜಲ ಮುಂತಾದ ಮೂಲದಿಂದ ಒಟ್ಟಾಗಿ ೨೪.೯೧ ಲಕ್ಷ ಹೆಕ್ಟೇರ್‌ಗಳಿಗೆ

ಮಾತ್ರ ನೀರಾವರಿ ಸೌಲಭ್ಯ ಕಲ್ಪಿಸಲಾಗಿದೆ. ರಾಜಸ್ಥಾನ ಬಿಟ್ಟರೆ ಹೆಚ್ಚು ಬಂಜರು ಭೂಮಿಯಿರುವುದು ಕರ್ನಾಟಕದಲ್ಲಿಯೇ. ೧೦೩ ಲಕ್ಷ ಹೆಕ್ಟೇರ್ ಬಂಜರು ಭೂಮಿ ಇದೆ. ಅಂದರೆ ದೇಶದ ಒಟ್ಟು ಬರಪೀಡಿತ ಪ್ರದೇಶದಲ್ಲಿ ೨೩% ರಷ್ಟು ಕರ್ನಾಟಕದಲ್ಲಿದೆ. ಈ ಪ್ರದೇಶದಲ್ಲಿ ಸುಮಾರು ೧.೬೦ ಕೋಟಿ ಜನ ವಾಸಿಸುತ್ತಿದ್ದಾರೆ.

ಕರ್ನಾಟಕದಲ್ಲಿರುವ ಜಲಸಂಪತ್ತಿನಲ್ಲಿ ಅರ್ಧದಷ್ಟನ್ನೂ ಬಳಸಲು ಏಕೆ ಆಗಿಲ್ಲ? ಎಂದು ಕಾರಣ ಹುಡುಕಲು ಹೊರಟರೆ ಯೋಜನೆಗಳ ಅನುಷ್ಠಾನದಲ್ಲಿ ಹಿಂದೆ ಆದ, ಈಗಲೂ ಆಗುತ್ತಿರುವ ವಿಳಂಬ ಎದ್ದು ಕಾಣುತ್ತದೆ. ನಾರಾಯಣಪುರ ಡ್ಯಾಂ ಕಟ್ಟಲು ೧೯ ವರ್ಷಗಳೇ ಬೇಕಾಯಿತು. ೧೯೬೩ರಲ್ಲಿ ಪ್ರಾರಂಭಿಸಿದ ಆಲಮಟ್ಟಿ ಅಣೆಕಟ್ಟನ್ನು ಇನ್ನೂ ಕಟ್ಟಿ ಮುಗಿಸುವುದರಲ್ಲೇ ಇದ್ದೇವೆ. ಘಟಪ್ರಭಾದ ಹಿಡಕಲ್ ಅಣೆಕಟ್ಟು ನಿರ್ಮಾಣಕ್ಕೆ ೧೩ ವರ್ಷಗಳಾಯಿತು. ಹೇಮಾವತಿ, ಕಬಿನಿ ಅಣೆಕಟ್ಟೆಗಳನ್ನು ಮುಗಿಸಲು ೧೬ ವರ್ಷಗಳು ಕಾಯಬೇಕಾಯಿತು. ಇವು ಅಣೆಕಟ್ಟುಗಳ ನಿರ್ಮಾಣಕ್ಕೆ ಸಂಬಂಧಿಸಿದ ಕತೆಯಾದರೆ, ನಾಲೆಗಳ ನಿರ್ಮಾಣದ ವಿಷಯ ಕಾದಂಬರಿ ಆಗುತ್ತದೆ.

ಅಣೆಕಟ್ಟುಗಳ ನಿಜವಾದ ಉಪಯೋಗವಾಗುವುದು ನಾಲೆಗಳ ನಿರ್ಮಾಣ ಪೂರ್ಣವಾದಾಗ ಮಾತ್ರ. ೧೯೫೩ರಲ್ಲಿ ಪ್ರಾರಂಭವಾದ ತುಂಗಭದ್ರಾ ಯೋಜನೆಯ ಎಡದಂಡೆ ಕಾಲುವೆ, ಬಲದಂಡೆಯ ಮೇಲ್ಮಟ್ಟದ ಕಾಲುವೆ ಇಂದಿಗೂ ಪೂರ್ಣಗೊಂಡಿಲ್ಲ. ಹೇಮಾವತಿ ಅಣೆಕಟ್ಟೆಯ ಕಾಲುವೆಗಳು ತುಮಕೂರು, ನಾಗಮಂಗಲ ತಲುಪುವ ದಿನ ಬರಬೇಕಿದೆ. ಈಗಿನ ಸ್ಥಿತಿ ನೋಡಿದರೆ ನೀರಾವರಿ ಲಾಭ ಪಡೆಯಲು ಸಮರೋಪಾದಿಯಲ್ಲಿ ಕೆಲಸ ಮಾಡಿದರೂ ಕನಿಷ್ಟ ೧೫-೨೦ ವರ್ಷಗಳು ಬೇಕಾಗುತ್ತವೆ. ಇಲ್ಲವಾದರೆ ೩೦-೪೦ ವರ್ಷ ಬೇಕಾಗಬಹುದು. ಅಣೆಕಟ್ಟುಗಳ ನಿರ್ಮಾಣಕ್ಕೆ ನೀಡಿದ ಪ್ರಾಮುಖ್ಯತೆಯನ್ನು ನೀರೊದಗಿಸುವ ಕಾಲುವೆಗಳ ನಿರ್ಮಾಣಕ್ಕೆ ನೀಡದೇ ಹೋದದ್ದು ಬಹು ದೊಡ್ಡ ಕೊರತೆಯಾಗಿ ಪರಿಣಮಿಸಿದೆ.

ಯೋಜನೆ ಅನುಷ್ಠಾನದ ವಿಳಂಬಗತಿಗೆ ಮುಖ್ಯ ಕಾರಣಗಳೆಂದರೆ ೧. ಸಂಪನ್ಮೂಲದ ಕೊರತೆ. ೨. ಭೂಸ್ವಾಧೀನಕ್ಕೆ ಬರುತ್ತಿರುವ ತಡೆಗಳು. ೩. ಭ್ರಷ್ಟಾಚಾರ ಮತ್ತು ರಾಜಕೀಯ ಹಸ್ತಕ್ಷೇಪ. ೪. ಪುನರ್ವಸತಿ ಮತ್ತು ಗುತ್ತಿಗೆ ನಿರ್ವಹಣೆಯಲ್ಲಿನ ವೈಫಲ್ಯ. ೫. ಏತ ನೀರಾವರಿಗೆ ಬೇಕಾದ ವಿದ್ಯುತ್ ಅಭಾವ ಮತ್ತು ಪರಿಹಾರ ಕಾಣದ ಅಂತರರಾಜ್ಯ ಜಲವಿವಾದ.

ಜಲವಿವಾದಕ್ಕೆ ಸಂಬಂಧಿಸಿದಂತೆ ಕರ್ನಾಟಕ ನದಿ ಪಾತ್ರದ ಮೇಲುರಾಜ್ಯವಾಗಿಯೂ ಕೆಳರಾಜ್ಯವಾಗಿಯೂ ಅನ್ಯಾಯಕ್ಕೊಳಗಾಗಿದೆ. 'ನದಿ ನೀರಿಗೆ ದೊಣ್ಣೆ ನಾಯಕನ ಅಪ್ಪಣೆಯೇ' ಅನ್ನುವ ಮಾತಿಗೆ ಅರ್ಥವಿಲ್ಲದಾಗಿದೆ. ನದಿ ನೀರು ಬಳಸಲು ಈಗ ದೊಣ್ಣೆ ನಾಯಕನ ಅಪ್ಪಣೆ ಪಡೆಯಲೇಬೇಕು. ಅಷ್ಟೇಕೆ ಕಾವೇರಿ ಕಣಿವೆಯ ಕೆರೆಗಳ ಹೂಳೆತ್ತುವುದಕ್ಕೂ ತಮಿಳುನಾಡು ತಕರಾರು ಮಾಡುತ್ತಿದೆ. ಕೃಷ್ಣಾ ಜಲವಿವಾದಕ್ಕೆ ಸಂಬಂಧಿಸಿದಂತೆ ೧೯೬೭ರಲ್ಲಿ ಬಚಾವತ್ ನೇತೃತ್ವದ ನ್ಯಾಯಮಂಡಲಿ ತೀರ್ಪು ನೀಡಿ ಕರ್ನಾಟಕಕ್ಕೆ ೨೦೦೦ ದ ಇಸವಿಗೆ ೭೩೪ ಟಿ.ಎಂ.ಸಿ. ಬಳಸಿಕೊಳ್ಳುವಂತೆ ಹೇಳಿತು. ನ್ಯಾಯವಾಗಿ ನಮಗೆ ೬೦೦ ಟಿ.ಎಂ.ಸಿ. ಬರಬೇಕಿತ್ತೆಂದು ಅಂದು ತಜ್ಞರು ಅಭಿಪ್ರಾಯಪಟ್ಟಿದ್ದರು. ದುರಂತವೆಂದರೆ ನಮ್ಮ ಪಾಲಿಗೆ ಬಂದ ನೀರಿನಲ್ಲಿಯೂ ೫ ಟಿ.ಎಂ.ಸಿ. ಯನ್ನು ಚೆನ್ನೈ ನೀರು ಸರಬರಾಜಿಗ ದಾನವಾಗಿ ಕೊಡಬೇಕಾಯಿತು. ಉಳಿದ ೭೨೯ ಟಿ.ಎಂ.ಸಿ.ಯನ್ನೂ ನ್ಯಾಯಮಂಡಲಿ ಕೊಟ್ಟ ಗಡುವು ತೀರಿ ೨ ವರ್ಷಗಳು ಕಳೆದ ನಂತರವೂ ಬಳಸಿಕೊಳ್ಳಲು ಆಗಿಲ್ಲ. ಇದುವರೆಗೆ ಉಪಯೋಗಿಸಿದ ನೀರು, ಪ್ರಗತಿಯಲ್ಲಿರುವ, ರೂಪಿತವಾಗಿರುವ ಯೋಜನೆಗಳು ಪೂರ್ಣಗೊಂಡರೂ ೫೩೬ ಟಿ.ಎಂ.ಸಿ. ಮಾತ್ರ ಬಳಕೆ ಆಗುತ್ತಿದೆ. ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು ಎತ್ತರಿಸಲು ಆಂಧ್ರ ಅಡ್ಡಿ ಬರುತ್ತದೆ. ಜೊತೆಗೆ ಅಣೆಕಟ್ಟಿನಲ್ಲಿ ಮುಳುಗುವ ಬಾಗಲುಕೋಟೆಗೆ ಪುನರ್ವಸತಿ ನಿರ್ಮಿಸುವ ಕೆಲಸವೂ ಆಗಿಲ್ಲ. ಆಂಧ್ರದವರು ಅವರ ಪಾಲಿಗಿಂತ ಒಂದೂವರೆ ಪಟ್ಟು ಹೆಚ್ಚು ನೀರು ಬಳಸುತ್ತಿದ್ದಾರೆ. ಹೆಚ್ಚು ಚರ್ಚೆಗೆ ಒಳಪಡದ ಭೀಮಾ ನದಿಯ ನೀರನ್ನು ಬಚಾವತ್ ವರದಿಯ ತೀರ್ಪಿಗೆ ವಿರುದ್ಧವಾಗಿ ಹೆಚ್ಚು ಬಳಸುತ್ತಿದೆ. ಹೀಗಾಗಿ ಕೃಷ್ಣಾನದಿಯ ಹೆಚ್ಚುವರಿ ನೀರನ್ನು ಹಂಚಲು ಕೇಳುವ ಸ್ಥಿತಿಯಲ್ಲಿ ಕರ್ನಾಟಕ ಇಲ್ಲ. ಮಹಾರಾಷ್ಟ್ರ ರಾಷ್ಟ್ರೀಯ ಜಲನೀತಿಯ, ದುರ್ಬಲ ಅಂಶಗಳನ್ನು ಹೇಗೆ ತನ್ನ ಲಾಭಕ್ಕೆ ಬಳಸಿಕೊಂಡಿದೆ ಎನ್ನುವುದಕ್ಕೆ ಭೀಮಾ ನೀರಿನ ಬಳಕೆ ಸಾಕ್ಷಿ ಆಗಿದೆ.

## ಬತ್ತಿದ ಭೀಮಾನದಿ-ಕುಪಿತರಾದ ರೈತ ಸಮೂಹ

ಕಾವೇರಿ-ಕೃಷ್ಣ ಜಲವಿವಾದಗಳ ನಡುವೆ ಅಷ್ಟೊಂದು ಜನರ ಗಮನ ಸೆಳೆಯದ ಗೋವಾದೊಂದಿಗಿನ ಮಹಾದಾಯಿ ನದಿ ವಿವಾದ, ಮಹಾರಾಷ್ಟ್ರದೊಡನೆ ಕರ್ನಾಟಕದ ರೈತರು ನೇರ ಸಂಘರ್ಷಕ್ಕಿಳಿಯುವಂತೆ ಮಾಡಿ, ಇಂದು ಸುಪ್ರೀಮ್ ಕೋರ್ಟ್‌ನಲ್ಲಿರುವ ಭೀಮಾ ನದಿ ನೀರಿನ ವಿವಾದಗಳು ಬಹುದೊಡ್ಡ ಆತಂಕವನ್ನೊಡ್ಡಿವೆ.

ಮಧ್ಯಮ ಮತ್ತು ಬೃಹತ್ ನೀರಾವರಿ ಯೋಜನೆಗಳ ವಿವರ ನೀಡುವಾಗ ಒಂದು ಟಿ.ಎಂ.ಸಿ. ಗಿಂತ ಹೆಚ್ಚು ನೀರು ಬಳಸಿದಾಗ ಮಾತ್ರ ಲೆಕ್ಕ ಕೊಡಬೇಕೆಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಮಹಾರಾಷ್ಟ್ರವು ಭೀಮಾನದಿಯ ನೀರಿನಲ್ಲಿ ೧ ಟಿ.ಎಂ. ಸಿ. ಗಿಂತ ಕಡಿಮೆ ಬಳಕೆ ಆಗುವ ಹಲವು ಯೋಜನೆಗಳನ್ನು ಹಮ್ಮಿಕೊಂಡು ಸುಮಾರು ೩೧.೩೭ ಟಿ.ಎಂ.ಸಿ. ಹೆಚ್ಚು ಬಳಸುತ್ತಿದೆ.

ಭೀಮಾನದಿಯ ನೀರಿನಲ್ಲಿ ಮಹಾರಾಷ್ಟ್ರ ೯೫, ಕರ್ನಾಟಕ ೧೫ ಟಿ.ಎಂ.ಸಿ. ಗಿಂತ ಹೆಚ್ಚು ನೀರು ಬಳಸಬಾರದು ಎಂದು ಬಚಾವತ್ ಹೇಳಿದ್ದಾರೆ. ಕರ್ನಾಟಕ ಯಾವುದೇ ಯೋಜನೆಯನ್ನು ಪೂರೈಸಿಲ್ಲವಾದ್ದರಿಂದ ಹೆಚ್ಚಿನ ನೀರು ಬಳಸುವುದಿರಲಿ, ತನ್ನ ಪಾಲನ್ನೇ ಬಳಸುವ ಸ್ಥಿತಿಯಲ್ಲಿಲ್ಲ. ಮಹಾರಾಷ್ಟ್ರ ೯೫ ಟಿ.ಎಂ.ಸಿ. ಬಳಸಲು ಪ್ರಾರಂಭಿಸಿ ದಶಕಗಳೇ ಆಗಿದೆ. ಇಂದು ೧೩೫ ಟಿ.ಎಂ.ಸಿ. ನೀರನ್ನು ಬಳಸಲು ಅನುಕೂಲವಾಗುವಂತೆ ಕಾಲುವೆಗಳನ್ನು ಸಿದ್ಧಪಡಿಸಿದೆ. ಇದರ ಪರಿಣಾಮ ಕರ್ನಾಟಕದಲ್ಲಿ ಭೀಮಾನದಿ ಬತ್ತಿದೆ. ನದಿಯ ಪಾತ್ರದ ೨೦೦ ಹಳ್ಳಿಗಳ ಜನರ ಜೀವನ ಅತಂತ್ರವಾಗಿದೆ. 'ಬತ್ತಿದ ಭೀಮಾ ನದಿ- ಕಂಗಾಲದ ರೈತರು' ಬಗ್ಗೆ ಪತ್ರಿಕೆಗಳು ಸಾಕಷ್ಟು ಬರೆದಿವೆ. ರೈತರ ಶಿಸ್ತುಬದ್ಧ ಹೋರಾಟ ಫಲ ನೀಡದ ಪರಿಣಾಮ ಮಹಾರಾಷ್ಟ್ರದ ಬ್ಯಾರೇಜ್ ಒಂದರ ಬಾಗಿಲುಗಳನ್ನು ಒಡೆದು ಅಲ್ಲಿಯ ಪೊಲೀಸ್ ಠಾಣೆಯಲ್ಲಿ ಹೆಸರನ್ನು ನೀಡಿದರು. ಇದರಿಂದ ಸಮಸ್ಯೆಯ ತೀವ್ರತೆ ಸಾರ್ವಜನಿಕರ ಗಮನಕ್ಕೆ ಬಂದಿತೇ ಹೊರತು ಸಮಸ್ಯೆ ಪರಿಹಾರ ಕಾಣಲಿಲ್ಲ.

ಬಚಾವತ್ ಆಯೋಗ, ಸುಪ್ರೀಮ್ ಕೋರ್ಟ್‌ಗಳ ನಿರ್ದೇಶನಗಳನ್ನು ಮಹಾರಾಷ್ಟ್ರ ಗಾಳಿಗೆ ತೂರಿ ೧೩೫ ಟಿ.ಎಂ.ಸಿ. ಬಳಕೆಗೆ ಸಿದ್ಧತೆ ಮಾಡಿರುವುದಲ್ಲದೆ, ಮೂಲ ಯೋಜನೆಗಳಲ್ಲಿಲ್ಲದ ಕೃಷ್ಣಾ ಮರಾಠವಾಡ ಸ್ಕೀಂ, ಭೀಮಾ-ಸೀನಾ ನದಿ ಜೋಡಣೆಗಳೂ ಸೇರಿದಂತೆ ೭ ಯೋಜನೆ ೫ ಬ್ಯಾರೇಜ್‌ಗಳನ್ನು ಕಟ್ಟಿ ೪೮.೫ ಟಿ.ಎಂ.ಸಿ. ನೀರನ್ನು ಅನಧಿಕೃತವಾಗಿ ಬಳಸುತ್ತಿದೆ. ಇದರ ಪರಿಣಾಮ ಇಂದು ಭೀಮಾನದಿ ಕರ್ನಾಟಕದಲ್ಲಿ ಹರಿಯುತ್ತಲೇ ಇಲ್ಲ. ಬಿಜಾಪುರದ ಗಡಿಯಲ್ಲಿರುವ 'ಟಾಕಳಿ'ಯಲ್ಲಿ ಮಾಪನ ಕೇಂದ್ರವಿದ್ದು ಅಲ್ಲಿ ನೀರಿನ ಹರಿವು ಅಳೆಯಲಾಗುತ್ತದೆ. ಅಲ್ಲಿ ದಾಖಲಾಗಿರುವಂತೆ ೧೯೬೫-೧೯೮೫ರ ವರೆಗೆ ನವೆಂಬರ್‌ನಿಂದ ಮೇ ವರೆಗೆ ಸರಾಸರಿ ೯.೩೦ ಟಿ.ಎಂ.ಸಿ. ನೀರು ಹರಿದಿದೆ. ೧೯೮೬-೯೮ ರವರೆಗೆ ನವೆಂಬರ್‌ನಿಂದ ಮೇ ವರೆಗೆ ಸರಾಸರಿ ೧.೭೦ ಟಿ.ಎಂ.ಸಿ. ನೀರು ಹರಿದಿದೆ. ೯೮ರಿಂದೀಚೆಗೆ ಭೀಮಾ-ನದಿಯಲ್ಲಿ ನೀರೇ ಹರಿಯುತ್ತಿಲ್ಲ. ಈ ಸಮಸ್ಯೆ ಬಗ್ಗೆ ಸರ್ಕಾರ ಗಮನ ಹರಿಸಿ ಗೆಲ್ಲಬೇಕಾದರೆ ಇನ್ನೂ ಹೆಚ್ಚು ವ್ಯವಸ್ಥಿತ ಪ್ರಯತ್ನ ಆಗಬೇಕು.

ಕಾವೇರಿ ಜಲವಿವಾದ ಶತಮಾನಗಳಿಂದ ಉಳಿದುಕೊಂಡು ಬಂದಿದೆ. ಪ್ರತಿವರ್ಷ ತಮಿಳುನಾಡು ಗದ್ದಲ ಮಾಡಿ ನೀರನ್ನು ಪಡೆಯುತ್ತಿದೆ. ಕಾವೇರಿ ಕಣಿವೆಯ ಕೆರೆಗಳ ಹೂಳೆತ್ತಲೂ ತಕರಾರು ತೆಗೆಯುತ್ತಿದೆ. ಕಾವೇರಿ ನ್ಯಾಯಮಂಡಲಿ ಮಧ್ಯಂತರ ಆದೇಶವನ್ನು ಜಾರಿಗೆ ಮಾಡುವುದರಿಂದ ಕರ್ನಾಟಕದಲ್ಲಿ ಬರಪೀಡಿತ ಪ್ರದೇಶ ಇನ್ನೂ ಹೆಚ್ಚುತ್ತದೆ. ಕರ್ನಾಟಕ 'ನೀರುಗಂಟಿ' ಕೆಲಸವನ್ನು ಮಾಡಬೇಕಾದ ಸ್ಥಿತಿ ಬರುತ್ತದೆ. ಇದರಾಚೆಗೆ ಮೈಸೂರು-ಮಂಡ್ಯ ವರುಣಾ ನಾಲೆ ವಿವಾದ, ಹಾಸನ-ತುಮಕೂರುಗಳ ನಡುವೆ ಬಾಗೂರು-ನವಿಲೆ ನಾಲೆ ವಿವಾದಗಳಂತಹ ಅಂತರ ಜಿಲ್ಲಾ ವಿವಾದಗಳು ನಮ್ಮ ರಾಜ್ಯದ ನೀರಾವರಿ ಪ್ರಗತಿಗೆ ತೊಡಕಾಗಿವೆ.

### ನಾಶದಂಚಿನಲ್ಲಿ ಕೆರೆ ನೀರಾವರಿ

ಕೆರೆ ನೀರಾವರಿ ಅತ್ಯಂತ ಪ್ರಾಚೀನವಾದ ಮತ್ತು ಅತ್ಯಂತ ಕಡಿಮೆ ಖರ್ಚಿನಲ್ಲಿ ಹೆಚ್ಚು ಜಮೀನಿಗೆ ನೀರೊದಗಿಸುವ, ಪರಿಸರ ಸಂರಕ್ಷಣೆಗೆ ಸಹಕಾರಿಯಾದ ವ್ಯವಸ್ಥೆ. ಪಂಚವಾರ್ಷಿಕ ಯೋಜನೆಗಳು ಪ್ರಾರಂಭವಾಗುವುದಕ್ಕೆ ಮುನ್ನ ಕರ್ನಾಟಕದಲ್ಲಿ ನೀರಾವರಿ ಕೆರೆಗಳದ್ದೇ ಆಗಿತ್ತು. ಇತ್ತೀಚಿನವರೆಗೂ ರಾಜ್ಯದ ಬಿತ್ತನೆ ಪ್ರದೇಶದ ೭೫ ಭಾಗವು ಕೆರೆ ನೀರಾವರಿಯಿಂದಲೇ ಕೂಡಿತ್ತು. ಅಂತರ್ಜಲ ಸಂರಕ್ಷಣೆಯಲ್ಲಿ, ಹವಾಮಾನದ ಸಮತೋಲನ ಕಾಪಾಡುವಲ್ಲಿ ಕೆರೆಗಳ ಪಾತ್ರ ಅತ್ಯಂತ ಮಹತ್ವದ್ದು. ಒಂದು ಕಾಲದಲ್ಲಿ ಕೆರೆಗಳು ಹಳ್ಳಿಗರ ಜೀವಸೆಲೆಯಾಗಿ ಜನ-ದನ-ಪಕ್ಷಿಗಳ ಬದುಕಿಗೆ ಆಸರೆಯಾಗಿದ್ದವು. ತುಮಕೂರು-ಕೋಲಾರ-ಬೆಂಗಳೂರು ಜಿಲ್ಲೆಗಳು 'ಕೆರೆಗಳ ಮಂಡಲ'ವಾಗಿತ್ತು. ಒಂದು ಕೆರೆ ತುಂಬಿ ಕೋಡಿ ಬಿದ್ದರೆ ಇನ್ನೊಂದು ಕೆರೆಗೆ ನೀರು ಹೋಗುತ್ತಿತ್ತು. ಕೆರೆ-ಕೆರೆಗಳ ನಡುವೆ ಸಂಪರ್ಕ ಕಲ್ಪಿಸಲಾಗಿತ್ತು. ಕೆರೆಗಳು ನದಿಗಳಿಲ್ಲದ ಊರಿಗೆ ವರದಾನವಾಗಿದ್ದವು. ಕೆರೆಗಳನ್ನು ಅಲ್ಪ ವೆಚ್ಚದಲ್ಲೇ ನಿರ್ವಹಣೆ ಮಾಡಬಹುದು. ಕೆರೆಗಳಿಂದ ಮುಳುಗಡೆ ಆಗುವ ಜಮೀನು, ನಾಶವಾಗುವ ಕಾಡು ಅತಿಕಡಿಮೆ. ಕೆರೆಗಳ ಹೂಳೆತ್ತುವುದೂ ಸುಲಭವಾಗಿತ್ತು. ಪ್ರತಿ ಬೇಸಿಗೆಯಲ್ಲಿ ಹಳ್ಳಿಗರು ಕೆರೆಯ ಹೂಳೆತ್ತಿ ಗದ್ದೆಗೆ ಸಾಗಿಸುತ್ತಿದ್ದರು. ಈ ಹೂಳು ಗೊಬ್ಬರವಾಗುತ್ತಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಕೆರೆಗಳ ನಿರ್ವಹಣೆ ಹಳ್ಳಿಗರದೇ ಆಗಿತ್ತು. ಹಾಗಾಗಿ ಕೆರೆಗಳು ಸುಸ್ಥಿತಿಯಲ್ಲಿದ್ದವು. ಸ್ವಾತಂತ್ರ್ಯದ ನಂತರ ಕೆರೆಗಳ ನಿರ್ವಹಣೆ ಸರ್ಕಾರದ ಜವಾಬ್ದಾರಿಯಾಯಿತು. ಬೃಹತ್ ನೀರಾವರಿ ಬೆಳೆದಂತೆ ಕೆರೆಗಳು ನಗಣ್ಯವಾದವು. ಜನರ ನಿರ್ಲಕ್ಷ್ಯ - ಆಸೆಬುರುಕುತನಗಳಿಂದಾಗಿ ೧೯೪೨ರಲ್ಲಿ ೮೦ ಸಾವಿರದಷ್ಟಿದ್ದ ಕೆರೆಗಳು ೧೯೭೬ರ ಹೊತ್ತಿಗೆ ೩೮,೩೯೮ ಕ್ಕಿಳಿಯಿತು. ೧೯೮೯ರ ಹೊತ್ತಿಗೆ ೨೨,೭೬೫ ಕೆರೆಗಳು

ಮಾತ್ರ ಉಳಿದಿದ್ದವು. ಇಂದು ಈ ಸಂಖ್ಯೆಯು ಇನ್ನೂ ಇಳಿದಿರುತ್ತದೆ. ಉಳಿದಿರುವ ಕೆರೆಗಳನ್ನು ದುರಸ್ತಿ ಮಾಡುತ್ತಿಲ್ಲ. ನಗರಗಳಲ್ಲಂತೂ ಕೆರೆ ಒತ್ತುವರಿ ಲಾಭದಾಯಕ ದಂಧೆ ಆಗಿದೆ. ಈ ದುಸ್ಥಿತಿಯಲ್ಲಿ ಒಂದು ಆಶಾದಾಯಕ ಸಂಗತಿ ಎಂದರೆ ಸರ್ಕಾರವು ಕೆರೆಗಳ ಹೂಳೆತ್ತುವ ಪ್ರಯತ್ನ ಮಾಡುತ್ತಿರುವುದು.

ಕೆರೆಗಳ ಅವನತಿಯಿಂದ ಅಂತರ್ಜಲ ಮಟ್ಟ ಕುಸಿದಿದೆ. ಕೋಲಾರ, ತುಮಕೂರು, ಬೆಂಗಳೂರು ಸೇರಿದಂತೆ ೧೯ ಜಿಲ್ಲೆಗಳ ಅಂತರ್ಜಲ ಮಟ್ಟ ಅಪಾಯಕಾರಿ ಮಟ್ಟ ಮುಟ್ಟಿದೆ. ಒಳನಾಡು ಮೀನುಗಾರಿಕೆಯಿಂದ ಪರಿಸರ ಸಮತೋಲನಕ್ಕೆ ಹಾನಿ ಆಗಿದೆ. ಹಲವೆಡೆ ಹಸಿರು ಕಣ್ಮರೆ ಆಗಿದೆ. ಕೆಲವು ದಶಕಗಳ ಹಿಂದೆ ಬೆಂಗಳೂರಿನಲ್ಲಿ ೮೬ ಕೆರೆಗಳಿದ್ದವು. ಇಂದು ಅದು ೯ ಕ್ಕಿಳಿದಿದೆ. ಇದರ ಪರಿಣಾವಾಗಿ ಬೆಂಗಳೂರು ಹವಾ ನಿಯಂತ್ರಿತ ನಗರ ಎನ್ನುವ ಖ್ಯಾತಿ ಕಳೆದುಕೊಂಡಿದೆ. ಬೆಂಗಳೂರು ಇಂದು ಆಸ್ತಮಾ ರೋಗದ ತವರಾಗಿದೆ.

ಪ್ರಚಲಿತ ನೀರಾವರಿ ವ್ಯವಸ್ಥೆ ಸಮರ್ಪಕವಾಗಿಲ್ಲ ಅನ್ನುವುದು ಎಲ್ಲರಿಗೂ ತಿಳಿದ ವಿಷಯ. ಕಾಲುವೆಯ ಕಾಮಗಾರಿ, ನಿರ್ವಹಣೆ ಸಮರ್ಪಕವಾಗಿಲ್ಲ. ರೈತರು, ತಜ್ಞರು, ಆಳುವವರು ಸೇರಿ ನೀರಾವರಿ ಕ್ಷೇತ್ರಕ್ಕೆ ಕಾಯಕಲ್ಪ ನೀಡಬೇಕು. ನೀರಾವರಿಯಲ್ಲಿ ಪ್ರಗತಿ ಎಂದರೆ ಹೆಚ್ಚು ಹೆಚ್ಚು ಹೊಲಗದ್ದೆಗಳಿಗೆ ನೀರು ಒದಗಿಸುವುದೊಂದೇ ಅಲ್ಲ, ಕಡಿಮೆ ನೀರು ಬಳಸಿ ಹೆಚ್ಚು ಉತ್ಪನ್ನ ಮತ್ತು ಲಾಭ ಹೆಚ್ಚಾಗುವಂತೆ ಮಾಡಿದರೆ ಆ ನೀರಾವರಿ ಪ್ರಗತಿಪರ ಮತ್ತು ವೈಜ್ಞಾನಿಕ ಅನ್ನಿಸಿಕೊಳ್ಳುತ್ತದೆ. ಇಸ್ರೇಲ್ ದೇಶದವರು ಕಡಿಮೆ ನೀರನ್ನು ಬಳಸಿ ಮರಳುಗಾಡನ್ನು ನಂದನವನವನ್ನಾಗಿ ಮಾಡಿದ್ದಾರೆ. ನಾವು ಅವರ ಪದ್ಧತಿಯನ್ನು ಅಧ್ಯಯನ ನಡೆಸಿ ಅನುಷ್ಠಾನಕ್ಕೆ ತರಬೇಕು. ನೀರು ನಿಸರ್ಗದತ್ತ ಅನನ್ಯವಾದ ಸಂಪತ್ತು. ಅದು ಸರ್ವ ಜನರ ಉಪಯೋಗಕ್ಕೆ ಬಳಕೆ ಆಗಬೇಕು. ಪ್ರಬಲರ-ಪಟ್ಟಭದ್ರರ ಹಿಡಿತಕ್ಕೆ ಸಿಕ್ಕಬಾರದು.

## ವಿದ್ಯುಚ್ಛಕ್ತಿ

ವಿದ್ಯುತ್ ಆಧುನಿಕ ಜೀವನವಿಧಾನದ ಹಿಂದಿರುವ ಚಾಲನ ಶಕ್ತಿ. ಇಂದಿನ ಬದುಕಿನ ಜೀವನಾಡಿ. ಒಂದು ನಾಡಿನ ಪ್ರಗತಿಯು ವಿದ್ಯುಚ್ಛಕ್ತಿಯನ್ನೇ ಅವಲಂಬಿಸಿರುತ್ತದೆ. ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳ ಮೂಲಭೂತ ಅಗತ್ಯ ವಿದ್ಯುತ್. ಈ ಕ್ಷೇತ್ರಗಳ ಉಳಿವು-ಪ್ರಗತಿ ವಿದ್ಯುತ್ ಸ್ಥಿತಿಯನ್ನೇ ಅವಲಂಬಿಸಿದೆ. ಕರ್ನಾಟಕವು ಇದರ ಮಹತ್ವ ಅರಿತ ಭಾರತದ ಮೊದಲ ರಾಜ್ಯ ಎನ್ನಲು ೧೮೮೭ರಲ್ಲೇ ಗೋಕಾಕ್ ಫಾಲ್ಸ್‌ನಲ್ಲಿ ಜಲವಿದ್ಯುತ್ ಉತ್ಪಾದಿಸಿದ್ದೇ ಸಾಕ್ಷಿ. ಜಲವಿದ್ಯುತ್ ಸಂಪನ್ಮೂಲಗಳ ಬಗ್ಗೆ ೧೯೪೮ರಷ್ಟು ಹಿಂದೆಯೇ ಸಮೀಕ್ಷೆ ನಡೆಸಿದ ಮೊದಲ ರಾಜ್ಯ ಕರ್ನಾಟಕ.

ಕರ್ನಾಟಕದಲ್ಲಿ ವಿದ್ಯುಚ್ಛಕ್ತಿ ಅಭಿವೃದ್ಧಿಯು ೧೯೦೨ರಲ್ಲಿಯೇ ಬ್ರಿಟಿಷರ ಮಾಲೀಕತ್ವದ ಕೋಲಾರದ ಚಿನ್ನದ ಗಣಿಗಾಗಿ ಶಕ್ತಿ ಒದಗಿಸಲು ಕಾವೇರಿ ನದಿ ತೀರದ ಶಿವನಸಮುದ್ರದ ಬಳಿ ಜಲವಿದ್ಯುತ್ ಉತ್ಪಾದನಾ ಕೇಂದ್ರವು ಪ್ರಾರಂಭವಾಯಿತು. ೪೨ ಮೆಗಾವ್ಯಾಟ್ ಸಾಮರ್ಥ್ಯದ ಈ ವಿದ್ಯುದಾಗರ ಏಷ್ಯಾದಲ್ಲೆ ಅತಿದೊಡ್ಡ ವಿದ್ಯುತ್ ಉತ್ಪಾದನಾ ಕೇಂದ್ರ ಹೊಂದಿದ ಪ್ರಥಮ ರಾಜ್ಯ ಎಂಬ ಹೆಗ್ಗಳಿಕೆ ಕರ್ನಾಟಕದ್ದು. ೧೯೦೨ರಲ್ಲಿ ಶಿವನಸಮುದ್ರದಿಂದ ಕೆ.ಜಿ.ಎಫ್.ಗೆ ೧೪೭ ಕಿ.ಮೀ. ಉದ್ದದ ೭೮ ಕಿ. ವ್ಯಾ. ವಿದ್ಯುತ್ ಜಾಲ ವಿಶ್ವದಲ್ಲೇ ಉದ್ದದ ಜಾಲವಾಗಿತ್ತು. ೧೯೧೦ರಲ್ಲೇ ಬೀದಿ ದೀಪವನ್ನು ಹೊಂದಿದ್ದ ಬೆಂಗಳೂರು, ರಾಷ್ಟ್ರದಲ್ಲೇ ಬೀದಿ ದೀಪ ಹೊಂದಿದ ಮೊದಲ ನಗರ ಎಂಬುದು ಉಲ್ಲೇಖನೀಯ. ವಿದ್ಯುತ್ ಉತ್ಪಾದನೆಯಲ್ಲಿ ಶ್ರೀಮಂತ ಅನುಭವ ಪರಂಪರೆಯಿರುವ ಕರ್ನಾಟಕ ೧೯೭೦ರವರೆಗೆ ಹೆಚ್ಚಿನ ವಿದ್ಯುತ್ ಉತ್ಪಾದಿಸಿ, ಕೈಗಾರಿಕೆಗಳ ಸ್ಥಾಪನೆಗೆ ಸ್ವರ್ಗವೆನಿಸಿದ್ದ ನಾಡಿನಲ್ಲಿ ಇಂದು ಕೈಗಾರಿಕಾ ಕ್ಷೇತ್ರ ವಿದ್ಯುತ್ ಕೊರತೆಯಿಂದ ನಲುಗಿಹೋಗುತ್ತಿದೆ.

ಕರ್ನಾಟಕದ ವಿದ್ಯುತ್ ಉತ್ಪಾದನೆಯು ಬಹಳಷ್ಟು ಬೆಳೆದಿದೆ. ೧೯೫೦-೫೧ರಲ್ಲಿ ೧೦೭ ಮೆ. ವ್ಯಾ. ಇದ್ದುದು ೨೦೦೦-೦೧ರ ಹೊತ್ತಿಗೆ ೪೫೮೫ ಮೆ.ವ್ಯಾ.ಗೆ ಹೆಚ್ಚಿದೆ. ಇದೇ ಅವಧಿಯಲ್ಲಿ ೪೮೦ ದ.ಲ.ಯು.ನಿಂದ ೧೯೮೧೮ ದ.ಲ.ಯು. ನಷ್ಟು ಉತ್ಪಾದನೆ ಆಗುತ್ತಿದೆ. ಆದರೆ, ನಮ್ಮ ಒಟ್ಟು ಅಗತ್ಯ ವರ್ಷಕ್ಕೆ ೨೭೫೦೦ ದ.ಲ.ಯು. ಗಳಾಗಿದ್ದು, ೭೫೩೦ ದ.ಲ.ಯು. ಗಳನ್ನು ಆಮದು ಮಾಡಿಕೊಂಡು ಬೇಡಿಕೆಯ ೮೬% ರಷ್ಟು ಮಾತ್ರ ಸರಬರಾಜು ಮಾಡುತ್ತಿದ್ದೇವೆ. ಈ ದಶಕದಲ್ಲಿ ತೀವ್ರ ವಿದ್ಯುತ್ ಕೊರತೆ ಎದುರಿಸುತ್ತಿದೆ. ಆಂಧ್ರ ಪ್ರದೇಶ ಇಂದು ಸ್ವಂತ ವಿದ್ಯುತ್ ತಯಾರಿಕೆಯಿಂದಲೇ ೯೨% ರಷ್ಟು ಬೇಡಿಕೆಯನ್ನು ಪೂರೈಸಿಕೊಳ್ಳುತ್ತಿದ್ದ ಕರ್ನಾಟಕದ ತಲಾ ವಿದ್ಯುತ್ ಬಳಕೆ ೩೫೫ ಕಿ.ವ್ಯಾ. ಇದೆ. ಇದು ರಷ್ಯಾದ ಸರಾಸರಿ ೩೨೫ಕ್ಕಿಂತ ಉತ್ತಮವಾಗಿದೆ. ಆದರೆ ಪಕ್ಕದ

ರಾಜ್ಯಗಳಾದ ಮಹಾರಾಷ್ಟ್ರದಲ್ಲಿ ೫೨೫ ಕಿ.ವ್ಯಾ., ತಮಿಳುನಾಡಿನಲ್ಲಿ ೪೩೧ ಕಿ.ವ್ಯಾ. ಆಂಧ್ರದಲ್ಲಿ ೩೬೮ ಕಿ.ವ್ಯಾ., ಇರುವುದು ಮತ್ತು ಪಂಜಾಬಿನಲ್ಲಿ ತಲಾ ಬಳಕೆ ೮೬೪ ಕಿ.ವ್ಯಾ. ಇರುವುದನ್ನು ಗಮನಿಸಿದರೆ ನಮ್ಮ ದುಸ್ಥಿತಿ ಅರ್ಥವಾಗುತ್ತದೆ.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

ಕರ್ನಾಟಕದ ಜಲವಿದ್ಯುತ್ ಸಾಮರ್ಥ್ಯ ೫,೭೫೦ ಮೆ. ವ್ಯಾ. ಎಂದು ಅಂದಾಜು ಮಾಡಲಾಗಿದೆ. ಆದರೆ, ೨,೮೬೦ ಮೆ. ವ್ಯಾ. ಸಾಮರ್ಥ್ಯದ ಜಲವಿದ್ಯುತ್ ಕೇಂದ್ರಗಳು ಮಾತ್ರ ಇದ್ದು ಇನ್ನೂ ೨,೨೮೫ ಮೆ. ವ್ಯಾ. ಜಲವಿದ್ಯುತ್ ಯೋಜನೆಗೆ ಜಲಸಂಪನ್ಮೂಲ ಲಭ್ಯವಿದೆ. ನಾವು ಸ್ಥಾಪಿತ ಸಾಮರ್ಥ್ಯವನ್ನು ಮಳೆ ಅಭಾವದಿಂದ ಬಳಸಲು ಆಗುತ್ತಿಲ್ಲ. ವಿದ್ಯುತ್ ಅಭಾವದಿಂದ ಹೊರಬರಲು ಜಲಸಂಪನ್ಮೂಲದ ಅವಲಂಬನೆಯನ್ನು ಕಡಿಮೆ ಮಾಡಿಕೊಳ್ಳಬೇಕು. ಆದರೆ ಕರ್ನಾಟಕ ಜಲ-ಥರ್ಮಲ್ ಅವಲಂಬನೆ ಪ್ರಮಾಣ ೭೨% : ೨೮% ಇದ್ದು ಆಂಧ್ರದಲ್ಲಿ ೪೪% : ೬೬%, ತಮಿಳುನಾಡು ೩೮% : ೬೨%, ಮಹಾರಾಷ್ಟ್ರ ೨೪% : ೭೬% ಮತ್ತು ರಾಷ್ಟ್ರದ ಸರಾಸರಿ ೨೫% : ೭೫% ಆಗಿದೆ. ಜಲವಿದ್ಯುತ್ತಿನ ಮೇಲೆ ಮಿತಿಮೀರಿದ ಅವಲಂಬನೆಯಿಂದ ಏನಾಗಿದೆ ಎನ್ನುವುದಕ್ಕೆ ಒಂದು ನಿದರ್ಶನ. ಬೇಸಿಗೆಯಲ್ಲಿ ನಮ್ಮ ರಾಜ್ಯದಲ್ಲಿ ೧೦೪ ದಶಲಕ್ಷ ಯುನಿಟ್ ಅಗತ್ಯವಿದ್ದು ೮೪ ದ.ಲ.ಯು. ಮಾತ್ರ ಪೂರೈಕೆ ಮಾಡುತ್ತಿದ್ದೇವೆ. ಇದರಲ್ಲಿ ರಾಜ್ಯದ ಉತ್ಪಾದನೆ ೬೩ ದ.ಲ.ಯು. ಮಾತ್ರ. ವಿದ್ಯುತ್ ಸೋರಿಕೆ, ಕಳ್ಳತನ,  ವಿದ್ಯುತ್ ಸಂವಹನದಲ್ಲಿನ ನಷ್ಟ, ವಿದ್ಯುತ್ ಕೊರತೆಯಿಂದಾಗಿ ವರ್ಷಕ್ಕೆ ೧,೭೦೦ ಕೋಟಿ ರೂಪಾಯಿಗಳ ನಷ್ಟ ಆಗುತ್ತಿದೆ. ವಿದ್ಯುತ್ ಬಾಬ್ತಿನಲ್ಲಿ ಕಳೆದ ೩ ವರ್ಷದಲ್ಲಿ ೭೦೬ ಕೋಟಿಗಳ ಅನಗತ್ಯ ವೆಚ್ಚ ಮತ್ತು ೩೦೦ ಕೋಟಿ ಸೋರಿಕೆಯಿಂದ ಆಗಿದೆ. ಕಳೆದ ೩ ವರ್ಷಗಳಲ್ಲಿ ೨೫೫ ಮೆ. ವ್ಯಾ. ಮಾತ್ರ ಹೆಚ್ಚಿದ್ದು ಗ್ರಾಹಕರ ಸಂಖ್ಯೆ ೩ ಪಟ್ಟು ಹೆಚ್ಚಿದೆ. ಕರ್ನಾಟಕದಲ್ಲಿ ವಿವಿಧ ರಾಜ್ಯಗಳ ವಿದ್ಯುತ್ ದರಕ್ಕಿಂತ ಹೆಚ್ಚಿದ್ದರೂ ನಷ್ಟ ಅನುಭವಿಸುತ್ತಿರುವುದಕ್ಕೆ ಕಾರಣ ಏನು?

ಮಧ್ಯಪ್ರದೇಶ, ಬಿಹಾರಗಳನ್ನು ಬಿಟ್ಟರೆ ಕರ್ನಾಟಕವೇ ಹೆಚ್ಚು ವಿದ್ಯುತ್ ಕೊರತೆ ಎದುರಿಸುತ್ತಿರುವ ರಾಜ್ಯವಾಗಿದೆ. ಉತ್ಪಾದನೆ-ಬೇಡಿಕೆಯ ಅಂತರ ಬೆಳೆಯುತ್ತಲೇ ಇದೆ. ಇಂದು ೨೮,೫೮೫ ದಶಲಕ್ಷ ಯುನಿಟ್ ಬೇಡಿಕೆಯಿದ್ದು ೧೭,೫೯೧ ದಶಲಕ್ಷ ಯುನಿಟ್ ಮಾತ್ರ ಲಭ್ಯವಿದೆ. ಅಂದರೆ ೪೦% ರಷ್ಟು ಕೊರತೆಯಿದೆ. ರಾಜಾರೋಷಾಗಿ ವಿದ್ಯುತ್ ಕಳವು ನಡೆಯುತ್ತಿದೆ. ವಿತರಣಾ ನಷ್ಟ ೩೬% ರಷ್ಟಾಗಿದೆ. ಜಮ್ಮುಕಾಶ್ಮೀರ, ಅಸ್ಸಾಂ ಬಿಟ್ಟರೆ ಕರ್ನಾಟಕದಲ್ಲೇ ವಿತರಣ ನಷ್ಟ ಹೆಚ್ಚಾಗಿದೆ. ವಿದ್ಯುತ್ ಕೊರತೆಯಿಂದ ಕೃಷಿ ಮತ್ತು ಕೈಗಾರಿಕಾ ಉತ್ಪಾದಕತೆ ಕುಗ್ಗಿದ್ದು ಮಾತ್ರವಲ್ಲ ಹೊಸ ಕೈಗಾರಿಕೆಗಳು ಬರುವುದಿರಲಿ, ಇರುವ ಕೈಗಾರಿಕೆಗಳೂ ವಲಸೆ ಹೋಗುತ್ತಿವೆ. ಇದು ಆರ್ಥಿಕ ಸ್ಥಗಿತತೆಗೆ ಕಾರಣವಾಗಿದೆ.

## ಪರಿಹಾರ ಏನು?

ಜಲವಿದ್ಯುತ್ ಯೋಜನೆಗಳ ಬಗ್ಗೆ ಹೊಸ ದೃಷ್ಟಿಕೋನ ಹೊಂದಬೇಕು. ಜಲಸಂಗ್ರಹಣಾ ಪದ್ಧತಿ ಬಿಟ್ಟು ಹರಿಯುವ ನದಿ ಯೋಜನೆಗಳು ಹಾಗೂ ನಾಲೆಗಳಲ್ಲಿ ಕೃತಕ ಜಲಪಾದ ನಿರ್ಮಿಸಿ ಸಣ್ಣ ಪ್ರಮಾಣದಲ್ಲಿ ವಿದ್ಯುತ್ ಉತ್ಪಾದಿಸಿದರೆ, ವಿತರಣನಷ್ಟ ತಡೆಯಬಹುದು. ನೀರನ್ನು  ನೀರಾವರಿಗೆ ಬಳಸಬಹುದು.

ಸೌರಶಕ್ತಿಯನ್ನು ಕಡ್ಡಾಯಗೊಳಿಸುವುದು, ಗಾಳಿ, ಗೋಬರ್ ಗ್ಯಾಸ್, ಗ್ಯಾಸಿಫೈಯರ್‌ಗಳೂ ಸೇರಿದಂತೆ ಅಸಂಪ್ರದಾಯಕ ಶಕ್ತಿಯನ್ನು ಬಳಸುವ ಪ್ರಯತ್ನ ಆಗಬೇಕಲ್ಲದೆ. ಅಣು, ಶಾಖೋತ್ಪನ್ನ ಸ್ಥಾವರಗಳನ್ನು ಬಳಸುವಂತಹ ಕ್ರಿಯೆ ತುರ್ತಾಗಿ ಆಗಬೇಕಿದೆ.

ಕರ್ನಾಟಕವು ಹಲವು ಆತಂಕಗಳ ನಡುವೆಯೂ ರಾಷ್ಟ್ರದ ಪ್ರಮುಖ ಕೈಗಾರಿಕಾ ರಾಜ್ಯವಾಗಿ ಉಳಿದಿದೆ. ಇದಕ್ಕೆ ಸ್ವಾತಂತ್ರ್ಯ ಪೂರ್ವದಲ್ಲೇ ಆಗಿನ ಮೈಸೂರು ರಾಜ್ಯದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರಂಥ ದೂರದರ್ಶಿತ್ವವುಳ್ಳ ಧುರೀಣರು ಪ್ರಾರಂಭಿಸಿದ ದೇಶೀಯ ಕೈಗಾರಿಕಾ ಸಂಸ್ಕೃತಿಯೇ ಕಾರಣ. ನಮ್ಮಲ್ಲಿ ಲಭ್ಯವಿರುವ ಕಚ್ಚಾವಸ್ತು ಹಾಗೂ ವಿದ್ಯುತ್ ಮೂಲಗಳನ್ನು ಬಳಸಿಕೊಳ್ಳಲು ಸರ್ಕಾರವು ಮೂವತ್ತರ ದಶಕದ ಆರಂಭದಲ್ಲಿಯೇ ೧೭ ಕಾರ್ಖಾನೆಗಳನ್ನು ಸ್ಥಾಪಿಸಿತ್ತು. ನಮ್ಮ ಶ್ರೀಗಂಧದ ಎಣ್ಣೆ, ಸೋಪು, ರೇಷ್ಮೆ ಮತ್ತು ಚನ್ನಪಟ್ಟಣದ ಆಟಿಕೆಗಳು ವಿಶ್ವ ಮಾರುಕಟ್ಟೆಯಲ್ಲಿ ಪ್ರಸಿದ್ಧಿ ಪಡೆದಿದ್ದವು. ಇದಕ್ಕೆ ಪೂರಕವಾಗಿ ಆವರ್ತಕ ಉದ್ಯೋಗಾವಕಾಶಗಳನ್ನು ಮತ್ತು ವಿಭಿನ್ನ ಆರ್ಥಿಕ ಸೌಲಭ್ಯಗಳನ್ನು ಕಲ್ಪಿಸುವ ಮೂಲಕ ರಾಷ್ಟ್ರಕ್ಕೆ ಮಾದರಿ ಆಗಿತ್ತು.

ಅಂದಿನಿಂದ ಇಂದಿನವರೆಗೆ ಸಾಕಷ್ಟು ಬದಲಾವಣೆಗಳು ಆಗಿವೆ. ಆರ್ಥಿಕ ಕ್ಷೇತ್ರ ಮತ್ತು ಮಾರುಕಟ್ಟೆಯಲ್ಲಿ ಭಾರಿ ಬದಲಾವಣೆಗಳು ಆಗಿವೆ. ಉದ್ಯಮಗಳು ಸ್ಥಾಪನೆಯಾದಾಗ ಇದ್ದ ಸನ್ನಿವೇಶಗಳು ಬದಲಾಗಿದೆ. ಈ ಬದಲಾವಣೆಗೆ ಸರಿಯಾಗಿ ನಾವು ಉತ್ಪನ್ನಗಳನ್ನು

ಮಾರ್ಪಾಡು ಮಾಡಲಾಗದೆ ಹೋದುದ್ದರ ಪರಿಣಾಮ, ಕರ್ನಾಟಕಕ್ಕೆ ರಾಷ್ಟ್ರಮಟ್ಟದಲ್ಲಿ ಕೀರ್ತಿ ತಂದಿತ್ತ ಉದ್ಯಮಗಳೆಲ್ಲ ಇಂದು ನಷ್ಟದಿಂದ ಮುಚ್ಚಿಹೋಗುವ ಹಂತಕ್ಕೆ ಬಂದಿವೆ. ಗಾಯದ ಮೇಲೆ ಬರೆ ಎಳದಂತೆ ವಿದ್ಯುತ್ ಕೊರತೆ, ಬರಿದಾಗುತ್ತಿರುವ ನಿಸರ್ಗ ಸಂಪತ್ತಿನಿಂದ ದೊಡ್ಡ ಹೊಡೆತ ಬಿದ್ದಿದೆ. ಹೀಗೆ ಹಲವು ರೀತಿಯಲ್ಲಿ ರೋಗಪೀಡಿತವಾಗಿರುವ ಕರ್ನಾಟಕ ಕೈಗಾರಿಕಾ ಕ್ಷೇತ್ರವು ಸುಮಾರು ದಶಕಗಳಿಂದ ರಾಷ್ಟ್ರದ ಸರಾಸರಿಯನ್ನು ಸರಿಗಟ್ಟಲಾಗಿಲ್ಲ. ಆದರೂ ರಾಜ್ಯದ ಆದಾಯದಲ್ಲಿ ೧೯೮೦-೮೧ರಲ್ಲಿ ಕೈಗಾರಿಕಾ ವಲಯದ ೧೫% ಇದ್ದುದು ೨೦೦೦-೦೨ರಲ್ಲಿ ೧೬.೬% ಕ್ಕೆ ಏರಿದೆ. ಆತಂಕದ ಸಂಗತಿ ಎಂದರೆ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆಗಳಲ್ಲಿ ಪಕ್ಕದ ರಾಜ್ಯಗಳಿಗೆ ಹೋಲಿಸಿದರೆ ಹಿಂದುಳಿದಿರುವುದಾಗಿದೆ. ತಮಿಳುನಾಡಿನಲ್ಲಿ ೩,೮೪,೩೩೬, ಕೇರಳದಲ್ಲಿ ೨,೪೩,೪೦೧ ಸಣ್ಣ ಕೈಗಾರಿಕಾ ಘಟಕಗಳಿದ್ದರೆ, ಕರ್ನಾಟಕದಲ್ಲಿ ೧೮೨,೨೧೫ ಘಟಕಗಳು ಮಾತ್ರ ಇವೆ. ಸಣ್ಣ ಕೈಗಾರಿಕೆ ಹೆಚ್ಚು ಜನರಿಗೆ ಉದ್ಯೋಗ ನೀಡುವುದಲ್ಲದೆ, ಜಾಗತೀಕರಣದ ಸವಾಲುಗಳನ್ನು ಎದುರಿಸಲು ಸಹಾಯಕವಾಗುತ್ತದೆ.

## ಕೆಳಗಿಳಿಯುತ್ತಿರುವ ರೇಷ್ಮೆ ಕೈಗಾರಿಕೆ

ಮೈಸೂರು ರೇಷ್ಮೆ ವಿಶ್ವಖ್ಯಾತಿ ಗಳಿಸಿತ್ತು. ಶತಮಾನಗಳಿಂದ ರೇಷ್ಮೆಯ ಉತ್ಪಾದನೆಯಲ್ಲಿ ಅಗ್ರಸ್ಥಾನ ಕಾಪಾಡಿಕೊಂಡು ಬಂದಿದ್ದ ಕರ್ನಾಟಕವು ಪ್ರಸ್ತುತ ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಹಿಂದೆ ಬಿದ್ದಿದೆ. ನಾವು ಸಮಯದ ಅಗತ್ಯತೆಯನ್ನು ಪೂರೈಸುವಲ್ಲಿ ಸಫಲರಾಗದಿದ್ದರೆ ಎಷ್ಟೇ ಭವ್ಯ ಪರಂಪರೆ, ಅನುಭವ, ಪರಿಣತಿಗಳು ನಿರುಪಯುಕ್ತವಾಗಬಲ್ಲವು ಎಂಬುದಕ್ಕೆ ರೇಷ್ಮೆ ಉದ್ಯಮ ನಿದರ್ಶನ.

## ಸಾವಿನಂಚಿನಲ್ಲಿ ಸಾರ್ವಜನಿಕ ಉದ್ಯಮಗಳು

ಕರ್ನಾಟಕದಲ್ಲಿ ಈಗ ಸಾರ್ವಜನಿಕ ವಲಯ ಎಂದು ಕರೆಯಲಾಗುವ ಮಾದರಿ ಉದ್ಯಮವು, ಆಗಿನ ಮೈಸೂರು ರಾಜ್ಯವು ಭದ್ರಾವತಿಯಲ್ಲಿ ಮೈಸೂರು ಕಬ್ಬಿಣ ಮತ್ತು ಉಕ್ಕು ಉದ್ಯಮದಂತಹ ೩೭ ಸಂಸ್ಥೆಗಳು ಸ್ವಾತಂತ್ರ್ಯ ಪೂರ್ವದಲ್ಲೇ ಅಸ್ತಿತ್ವದಲ್ಲಿದ್ದವು. ಇವುಗಳ ಉದ್ದೇಶ ನಾಡಿನ ಪ್ರಕೃತಿ ಸಂಪತ್ತನ್ನು ನಾಡಿನ ಸರ್ವತೋಮುಖ ಬೆಳವಣಿಗೆಗೆ ಬಳಸುವುದು ಮತ್ತು ಉದ್ಯೋಗಗಳನ್ನು ಸ್ಥಳೀಯರಿಗೆ ನೀಡಿ ಅವರ ಬದುಕು ಹಸನು ಮಾಡುವುದು ಹಾಗೂ ಬರುವ ಆದಾಯವನ್ನು ನಾಡಿನ ಮೂಲಭೂತ ಸೌಲಭ್ಯ ಕಲ್ಪಿಸಲು ಬಳಸುವುದೇ ಆಗಿತ್ತು. ಈ ಉದಾತ್ತ ಉದ್ದೇಶದಿಂದ ಸ್ಥಾಪಿತವಾದ ಉದ್ಯಮಗಳು ಇಂದು ರೋಗಗ್ರಸ್ತ ಹಾದಿಯಲ್ಲಿ ಸಾಗಿ ಮುಚ್ಚುವ ಹಂತಕ್ಕೆ ತಲುಪಿವೆ. ಆರ್ಥಿಕ ಹಾಗೂ ಸಾಮಾಜಿಕ ಮೂಲ ಪರಿಕರದ ವಿಸ್ತರಣೆಗಾಗಿ ಸ್ಥಾಪಿತವಾದ ಈ ಉದ್ಯಮಗಳಿಗೊದಗಿರುವ ಸ್ಥಿತಿ ಬಗ್ಗೆ ಎಲ್ಲ ಕನ್ನಡಿಗರು ಚಿಂತಿಸಬೇಕಿದೆ.

ಕರ್ನಾಟಕದಲ್ಲಿ ಒಟ್ಟು ೮೦ ಸಾರ್ವಜನಿಕ ಉದ್ಯಮಗಳು ಅಸ್ತಿತ್ವದಲ್ಲಿದ್ದು ೨೦೦೦-೦೧ರ ಸಾಲಿಗೆ ಅವುಗಳ ಒಟ್ಟು ಬಂಡವಾಳ ೧೮೯೭೫.೭೯ ಕೋಟಿ ರೂ. ಗಳಾಗದ್ದು, ೧,೬೮,೦೦೦ ಜನರಿಗೆ ಉದ್ಯೋಗ ಒದಗಿಸಿವೆ. ಈ ಸಾಲಿನ ವಹಿವಾಟು ೧೧,೨೫೮.೭೪ ಕೋಟಿ ರೂಪಾಯಿಗಳಾಗಿದ್ದು ೭೧.೧೫ ಕೋಟಿಗಳಷ್ಟು ನಷ್ಟ ಅನುಭವಿಸಿವೆ. ಪಕ್ಕದ ಮಹಾರಾಷ್ಟ್ರದಲ್ಲಿ ೩೯ ಸಾರ್ವಜನಿಕ ಉದ್ದಿಮೆಗಳಿದ್ದು ೩೦೦.೨೭ ಕೋಟಿ ಮತ್ತು ತಮಿಳುನಾಡು ೬೨ ಉದ್ದಿಮೆಗಳಿಂದ ೨೨.೧೭ ಕೋಟಿ ರೂಪಾಯಿ ಲಾಭ ಗಳಿಸಿವೆ. ಕರ್ನಾಟಕಕ್ಕೆ ಪ್ರತಿಷ್ಠೆಯನ್ನು ತಂದುಕೊಟ್ಟ ಸರ್ಕಾರಿ ಸ್ವಾಮ್ಯದ ಉದ್ಯಮಗಳು ಅಧಿಕಾರಶಾಹಿಗಳ ನಿರ್ಲಕ್ಷ್ಯ ಮತ್ತು ಆಳುವವರ ಸ್ವಾರ್ಥದಿಂದ ಒಂದೊಂದಾಗಿ ಮುಚ್ಚಿ ಹೋಗುತ್ತಿವೆ. ಸರ್ಕಾರವು ಈಗಾಗಲೇ ಚಾಮುಂಡಿ ಮೆಷಿನ್ ಟೂಲ್ಸ್, ಮೈಸೂರು ಮ್ಯಾಚ್ ಕಂಪನಿ, ಮೈಸೂರು ಲ್ಯಾಂಪ್ ವರ್ಕ್ಸ್, ಎನ್. ಜಿ. ಇ. ಎಫ್. ಗಳನ್ನು ಮುಚ್ಚಲು, ಮೈಸೂರು ಎಲೆಕ್ಟ್ರಿಕಲ್ಸ್ ಇಂಡಸ್ಟ್ರಿಯನ್ನು ಖಾಸಗೀಕರಣಗೊಳಿಸುವ ಬಗ್ಗೆ ಆದೇಶ ಹೊರಡಿಸಿದೆ. ಕರ್ನಾಟಕ ಟಂಗ್‌ಸ್ಟನ್ ಮೋಲಿ ನಿಯಮಿತವನ್ನು ಕಾರ್ಯಚಟುವಟಿಕೆಗಳು ಪ್ರಾರಂಭವಾಗುವ ಮುನ್ನವೇ ಮುಚ್ಚಲಾಯಿತು. ಎನ್. ಜಿ. ಇ. ಎಫ್., ಮೈಸೂರು ಲ್ಯಾಂಪ್ಸ್ ಹಲವು ದಶಕಗಳು ದೊಡ್ಡ ಲಾಭವನ್ನು ಮಾಡಿದ್ದವು. ಅವು ನಷ್ಟದ ಹಾದಿ ಹಿಡಿದದ್ದಕ್ಕೆ ಕಾರಣ ಹುಡುಕಿ ಸಂಪಾದಿಸುವ ಪ್ರಯತ್ನ ಮಾಡಬೇಕಿತ್ತು ಎಂದು ತಜ್ಞರು ಹೇಳುತ್ತಾರೆ. ಇವುಗಳ ಈ ಸ್ಥಿತಿಗೆ ತಕ್ಷಣ ಹೊಳೆಯುವ ಸಂಗತಿ ಎಂದರೆ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ತಾಂತ್ರಿಕ ಮತ್ತು ಆಡಳಿತಾತ್ಮಕ ಮಾರ್ಪಾಡು ಮಾಡಿಕೊಳ್ಳದೇ ಹೋದದ್ದು, ಸ್ಪರ್ಧಾತ್ಮಕ ಪ್ರಪಂಚದಲ್ಲಿ ಮೆಟ್ಟಿ ನಿಲ್ಲಲು ಬೇಕಾದ ಉದ್ಯಮಶೀಲತೆ ಮತ್ತು ಬಂಡವಾಳದ ಕೊರತೆ. ಗಾಬರಿ ಹುಟ್ಟಿಸುವ ಸಂಗತಿ ಎಂದರೆ ಲಾಭದಾಯಕವಾಗಿರುವ ಕರ್ನಾಟಕ ಸಾಬೂನು ಕಾರ್ಖಾನೆಯನ್ನು ಖಾಸಗೀಕರಣ ಮಾಡುತ್ತಾರೆ ಎನ್ನುವ ಮಾತು. ಈ ಉದ್ಯಮಗಳ ಮುಚ್ಚುವಿಕೆಯಿಂದ ಲಕ್ಷಾಂತರ ಜನ ಉದ್ಯೋಗ ಕಳೆದುಕೊಂಡಿದ್ದಾರೆ.

ಕರ್ನಾಟಕ ಸರ್ಕಾರ ಕೈಗಾರಿಕಾ ರಂಗವನ್ನು ವಿಸ್ತರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದೆ. ಇಂದು ಕರ್ನಾಟಕದಾದ್ಯಂತ ಆಯಕಟ್ಟಿನ ಸ್ಥಳಗಳಲ್ಲಿ ೧೫೯ ಕೈಗಾರಿಕಾ ಪ್ರಾಂಗಣಗಳಿವೆ. ಬೆಂಗಳೂರಿನ ಪೀಣ್ಯ ಕೈಗಾರಿಕಾ ಪ್ರಾಂಗಣ ಏಷ್ಯಾ ಖಂಡದಲ್ಲೇ ಹೆಚ್ಚು

ವಿಸ್ತಾರ ಉಳ್ಳದ್ದು. ಇಲೆಕ್ಟ್ರಾನಿಕ್ ಸಿಟಿ, ಮಂಗಳೂರಿನ ಯಯ್ಯಾಡಿ, ಶಿವಮೊಗ್ಗ, ಬೆಳಗಾವಿ ಎಲ್ಲೆಡೆ ಮಹತ್ವದ ಪ್ರಾಂಗಣಗಳಿವೆ. ತಂತ್ರಜ್ಞಾನದ ಉದ್ಯಾನ ಪ್ರಾರಂಭವಾಗುತ್ತಿದೆ. ಹೊಸ ಕೈಗಾರಿಕಾ ನೀತಿ, ತಾಂತ್ರಿಕ, ಹಣಕಾಸು ನೆರವಿಗೆ ಸಂಸ್ಥೆಗಳಿವೆ. ಇಷ್ಟಿದ್ದೂ ಏಕೆ ಕೈಗಾರಿಕೆಯಲ್ಲಿ ಪ್ರಥಮ ಸ್ಥಾನ ಏಳನೇ ಸ್ಥಾನಕ್ಕಿಳಿದಿದೆ ಎನ್ನುವುದು ಯಕ್ಷ ಪ್ರಶ್ನೆ ಆಗಿ ಉಳಿದಿದೆ. ಕರ್ನಾಟಕ ಸರ್ಕಾರವು ರೂಪಿಸಿರುವ ಯೋಜನೆಗಳು ಯಶಸ್ವಿಯಾಗಿ ಅನುಷ್ಠಾನ ಆದರೆ ಪರಿಸ್ಥಿತಿ ಸುಧಾರಿಸುತ್ತದೆ. ಯೋಜನೆ ಯಶಸ್ವಿಯಾಗಿ ನಮ್ಮ ರಾಜ್ಯ ಕೈಗಾರಿಕೆ ಕ್ಷೇತ್ರದಲ್ಲಿ ಮರಳಿ ಉನ್ನತ ಸ್ಥಾನಕ್ಕೇರಬೇಕಾದರೆ, ಸರ್ಕಾರದ ಜೊತೆಗೆ ಸಾರ್ವಜನಿಕರು ಸಕ್ರಿಯವಾಗಿ ಪಾಲ್ಗೊಂಡು ಸಹಕರಿಸಬೇಕು. ಸರ್ಕಾರದ ಕಾರ್ಯಗಳನ್ನು ಪ್ರಾಮಾಣಿಕವಾಗಿ ವಿಶ್ಲೇಷಿಸಿ, ಸೂಕ್ತ ಕಾಲದಲ್ಲಿ ತಿಳುವಳಿಕೆ ನೀಡುವ, ಎಚ್ಚರಿಸುವ ಕೆಲಸವನ್ನು ಸಂಘ, ಸಂಸ್ಥೆಗಳು ಮಾಡಬೇಕು.

## ಉದ್ಯೋಗ

ಕರ್ನಾಟಕದಲ್ಲಿ ಉದ್ಯೋಗಕ್ಕೆ ಸಂಬಂಧಿಸಿದಂತೆ ಎರಡು ರೀತಿಯ ಸಮಸ್ಯೆಗಳಿವೆ. ರಾಜ್ಯದಲ್ಲಿರುವ ಎಲ್ಲ ಕೇಂದ್ರ ಕೈಗಾರಿಕೆ, ಕಛೇರಿಗಳಲ್ಲಿ ಕನ್ನಡಿಗರಿಗೆ ಸೂಕ್ತ ಅವಕಾಶ ದೊರೆಯುತ್ತಿಲ್ಲ. ಖಾಸಗೀ ಕ್ಷೇತ್ರದಲ್ಲೂ ಇದೇ ಪರಿಸ್ಥಿತಿ ಮುಂದುವರಿದಿದೆ. ಕನ್ನಡಿಗರಿಗೆ ಅವಕಾಶವಿದ್ದ ರಾಜ್ಯ ಸರ್ಕಾರಿ ಸ್ವಾಮ್ಯದ ಉದ್ಯಮಗಳೆಲ್ಲ ಒಂದೊಂದಾಗಿ ಮುಚ್ಚಿಹೋಗುತ್ತಿವೆ. ಇನ್ನು ಕೆಲವು ಖಾಸಗೀಕರಣವಾಗುತ್ತಿವೆ. ಇದು ಸಮಸ್ಯೆಯ ಒಂದು ಮುಖವಾದರೆ, ಇನ್ನೊಂದು ಮುಖ ಇನ್ನೂ ಘೋರವಾಗಿದೆ. ಜಾಗತೀಕರಣದಿಂದ ಬದಲಾದ ಸನ್ನಿವೇಶದಲ್ಲಿ ಉದ್ಯೋಗಾವಕಾಶಗಳು ಕಮ್ಮಿಯಾಗುತ್ತಿವೆ. ಜನಸಂಖ್ಯೆ ಹೆಚ್ಚಳದಿಂದ ನಿರುದ್ಯೋಗಿಗಳು ಹೆಚ್ಚುತ್ತಿದ್ದಾರೆ.

ಉದ್ಯೋಗ ವಿನಿಮಯ ಕೇಂದ್ರಗಳ ಜೀವಂತ ದಾಖಲೆಗಳ ಆಧಾರದ ಮೇಲೆ ಒಟ್ಟು ಉದ್ಯೋಗಾಕಾಂಕ್ಷಿಗಳ ಸಂಖ್ಯೆಯು ನವೆಂಬರ್ ೨೦೦೧ರ ಅಂತ್ಯದಲ್ಲಿ ೨೦.೨೧ ಲಕ್ಷಗಳಿದ್ದು, ಈ ಸಂಖ್ಯೆಯು ಮಾರ್ಚ್ ೨೦೦೧ರಲ್ಲಿ ೧೯.೫೨ ಲಕ್ಷಗಳಿದ್ದು ಈ ಅವಧಿಯಲ್ಲಿ ೩.೫೩% ರಷ್ಟು ಏರಿಕೆ ಆಗಿದೆ. ಈ ಸಂಖ್ಯೆಯು ೧೯೯೬ ಏಪ್ರಿಲ್‌ನಲ್ಲಿ ೧೭.೪ ಲಕ್ಷವಿತ್ತು. ಅಂದರೆ ಸರಾಸರಿ ವರ್ಷಕ್ಕೆ ೧೮% ರಷ್ಟು ನಿರುದ್ಯೋಗ ಹೆಚ್ಚುತ್ತಿದೆ. ನಿರುದ್ಯೋಗಿಗಳಲ್ಲಿ ೧೫,೩೫೦ ಜನ ಸ್ನಾತಕೋತ್ತರ ಪದವೀಧರರು, ೧೬,೫೪,೦೮೦ ಪದವೀಧರರು. ವೃತ್ತಿಪರ ಶಿಕ್ಷಣ ಪಡೆದವರು ೧,೨೪,೫೯೦ ಜನ ಇದ್ದಾರೆ ಎಂಬುದು ಆತಂಕವನ್ನುಂಟುಮಾಡುವ ಸಂಗತಿ ಆಗಿದೆ. ಉದ್ಯೋಗ ವಿನಿಮಯ ಕೇಂದ್ರದಲ್ಲಿ ದಾಖಲು ಮಾಡಿಸಿದವರ ಸಂಖ್ಯೆಯನ್ನೂ ತೆಗೆದುಕೊಂಡರೆ ಸಂಖ್ಯೆ ಇನ್ನೂ ಹೆಚ್ಚು ಆಗುತ್ತದೆ.

ಕೈಗಾರಿಕೆ ಗುಂಪುವಾರು ಸಂಘಟಿತ ವಲಯ ಉದ್ಯೋಗವನ್ನು ಗಮನಿಸಿದಾಗ ಸಾಮಾಜಿಕ ಮತ್ತು ವೈಯಕ್ತಿಕ ಸೇವೆಗಳಲ್ಲಿ ಉದ್ಯೋಗದ ಪ್ರಮಾಣವು ಮಾರ್ಚ್ ೨೦೦೧ರ ಅಂತ್ಯಕ್ಕೆ ೭.೫೨ ಲಕ್ಷಗಳಿದ್ದು ಸೆಪ್ಟೆಂಬರ್ ೨೦೦೧ ರ ಅಂತ್ಯಕ್ಕೆ ೭.೫೪ ಲಕ್ಷಗಳಿಗೆ ಏರಿದೆ (ಸುಮಾರು ೨೦೦೦ ಹೆಚ್ಚಳ). ಉತ್ಪಾದನಾ ವಲಯದ ಪ್ರಮಾಣವು ಮಾರ್ಚ್ ಅಂತ್ಯದಲ್ಲಿ ೬.೧೮ ಲಕ್ಷಗಳಿದ್ದು ಸೆಪ್ಟೆಂಬರ್ ೨೦೦೧ ಅಂತ್ಯದಲ್ಲಿ ೬.೦೧ ಲಕ್ಷ ಎಂದರೆ ಸುಮಾರು ೧೭,೦೦೦ ದಷ್ಟು ಇಳಿಕೆ ಕಂಡುಬರುತ್ತದೆ. ಹಣಕಾಸು, ವಿಮೆ, ಆಸ್ತಿ ಮತ್ತು ವ್ಯವಹಾರ ಸೇವೆಗಳಲ್ಲಿನ ಉದ್ಯೋಗವು ೧.೩೮ ಲಕ್ಷಗಳಿಂದ ಸುಮಾರು ೧.೩೩ ಲಕ್ಷಗಳಿಗೆ ಇಳಿಕೆಯಾಗಿದ್ದು ಸುಮಾರು ೫೦೦೦ ದಷ್ಟು ತೋರಿದೆ. ಉಳಿದ ವಲಯಗಳಲ್ಲಿ ಸ್ವಲ್ಪ ಇಳಿಕೆಯಾಗಿರುವುದು ಕಂಡುಬಂದಿದೆ.

## ಸಾರಿಗೆ ಸಂಪರ್ಕ

ರೈಲು ಮತ್ತು ರಸ್ತೆಗಳು ನಾಡಿನ ಜೀವನಾಡಿಯಿದ್ದಂತೆ. ಸಾರಿಗೆಯ ಪ್ರಗತಿ ಕಂಡುಬಂದರೆ ನಾಡು ಪ್ರಗತಿಪಥದಲ್ಲಿದೆ ಎಂದರ್ಥ. ಸಂಪರ್ಕ ಇಂದು ಸಾಧನೆಗೆ ರಹದಾರಿ ಇದ್ದಂತೆ. ರಸ್ತೆ, ರೈಲು, ಬಂದರು, ವಿಮಾನ ಮುಖ್ಯ ಸಾರಿಗೆಗಳು. ರೈಲುಗಳು ಬೃಹತ್ ಪ್ರಮಾಣದ ಸರಕು-ಸಾಮಗ್ರಿಗಳನ್ನು ಕಡಿಮೆ ಖರ್ಚಿನಲ್ಲಿ ಒಟ್ಟಿಗೆ ಸಾಗಿಸುವ ಸಾಧನಗಳಾಗಿವೆ. ಒಂದು ರಾಜ್ಯದ ಪ್ರಗತಿ ರೈಲು ಮಾರ್ಗದ ಬಳಕೆಯಲ್ಲಿ ಅಡಗಿದೆ. ರೈಲು ಸಾರಿಗೆ ಅಭಿವೃದ್ಧಿಯ ದೃಷ್ಟಿಯಿಂದ ಕರ್ನಾಟಕ ಅತಿ ಹಿಂದುಳಿದ ರಾಜ್ಯಗಳಲ್ಲಿ ೩ ನೇ ಸ್ಥಾನದಲ್ಲಿದೆ. ದೇಶದಲ್ಲಿ ಪ್ರತಿ ೧೦೦೦ ಚ. ಕಿ.ಮೀ.ಗೆ ೧೯.೧೧ ಕಿ.ಮೀ. ರೈಲು ಮಾರ್ಗವಿದ್ದರೆ ಕರ್ನಾಟಕದಲ್ಲಿ ೧೭.೦೪ ಕಿ.ಮೀ. ಮಾತ್ರ ಇದೆ. ರಾಷ್ಟ್ರದಲ್ಲಿ ೬೩,೨೪೦ ಕಿ.ಮೀ. ರೈಲ್ವೆ ಮಾರ್ಗವಿದ್ದರೆ ಕರ್ನಾಟಕದಲ್ಲಿ ೩,೪೦೧ ಕಿ.ಮೀ. ರೈಲು ಮಾರ್ಗವಿದೆ. ಇದರಲ್ಲಿ ೩೭೪ ಕಿ.ಮಿ. ಮೀಟರ್‌ಗೇಜ್ ಇದ್ದು ನಿರುಪಯುಕ್ತವಾಗಿದೆ. ಉಪಯೋಗವಾಗುತ್ತಿರುವುದು ೨,೬೬೭ ಕಿ.ಮೀ. ಬ್ರಾಡ್ಗೇಜ್ ಮಾತ್ರ. ಅಂದರೆ ದೇಶದ ೫.೩% ಭೌಗೋಳಿಕ ಪ್ರದೇಶ ಹೊಂದಿರುವ ಕರ್ನಾಟಕ ೩.೯% ರಷ್ಟು ರೈಲು ಮಾರ್ಗ ಮಾತ್ರ ಹೊಂದಿದೆ. ಸ್ವಾತಂತ್ರ ಪೂರ್ವದಲ್ಲಿ ೫.೯೨% ರಷ್ಟಿತ್ತು. ದೇಶದ ಸಾಧನೆಗೆ ಹೋಲಿಸಿದರೆ ರಾಜ್ಯದಲ್ಲಿ ೩,೯೦೦ ಕಿ.ಮೀ. ಆದರೂ ರೈಲು ಮಾರ್ಗ ಇರಬೇಕಿತ್ತು. ಇನ್ನೂ ಕೆಲವು ಜಿಲ್ಲಾ ಕೇಂದ್ರಗಳಿಗೇ ರೈಲು ಸಂಪರ್ಕವಿಲ್ಲ. ಜೋಡಿಮಾರ್ಗ, ವಿದ್ಯುದೀಕರಣ ಎಲ್ಲದರಲ್ಲೂ ರಾಜ್ಯಕ್ಕೆ

ಸಿಕ್ಕಬೇಕಾದ ಪಾಲು ದೊರೆತಿಲ್ಲ. ಕರ್ನಾಟಕದ ಭಾಗ್ಯದ ಬಾಗಿಲನ್ನೇ ತೆರೆಯುತ್ತದೆಂದು ಭಾವಿಸಿದ್ದ ಕೊಂಕಣ ರೈಲು ಬಂದರೂ ಏನೂ ಬದಲಾವಣೆ ಆಗಿಲ್ಲ. ಅದಕ್ಕೆ ಕಾರಣ ನಮ್ಮ ರೈಲುಜಾಲವನ್ನು ಕೊಂಕಣ ರೈಲಿಗೆ ಸೇರಿಸುವ ಕೆಲಸ ಆಗಿಲ್ಲ.

ರೈಲು ಎಲ್ಲ ಕಡೆಗಳಿಗೂ ಹಾಕಲು ಸಾಧ್ಯವಿಲ್ಲ. ಹಾಗಾಗಿ ರಸ್ತೆಗಳು ಬಹಳ ಮಹತ್ವವಾದದ್ದೆನಿಸಿವೆ. ೧೯೫೯ರಲ್ಲಿ ೧೦೦ ಚದರ ಕಿ.ಮೀ.ಗೆ ೨೩ ಕಿ.ಮೀ. ರಸ್ತೆ ಇದ್ದುದು ೧೯೯೯ರ ಹೊತ್ತಿಗೆ ೭೦ ಕಿ.ಮೀ.ಗೆ ಏರಿಕೆ ಆಗಿದೆ. ೧೯೭೧ರಲ್ಲಿ ೮೩,೭೪೯ ಕಿ.ಮೀ.ಗಳಷ್ಟು ರಸ್ತೆ ಇದ್ದುದು ಇಂದು ೧,೪೮,೫೪೮ ಕಿ.ಮೀ.ಗಳಷ್ಟಾಗಿದೆ. ಇದರಲ್ಲಿ ೯೨,೨೬೨ ಕಿ.ಮೀ. ರಸ್ತೆ ಮಾತ್ರ ಸರ್ವಋತು ರಸ್ತೆ. ರಸ್ತೆಗಳ ನಿರ್ಮಾಣದಲ್ಲಿ ರಾಷ್ಟ್ರದ ಸರಾಸರಿಗೆ ಸಮೀಪದಲ್ಲಿದ್ದೇವೆ. ಪಕ್ಕದ ತಮಿಳುನಾಡು, ಮಹಾರಾಷ್ಟ್ರಗಳಿಗೆ ಹೋಲಿಸಿದರೆ ಸಾಕಷ್ಟು ಹಿಂದಿದ್ದೇವೆ. ಇಂದಿಗೂ ನದಿಗಳ ಮಧ್ಯೆ ದ್ವೀಪದಲ್ಲಿರುವ ಬಹಳಷ್ಟು ಊರುಗಳಿಗೆ ರಸ್ತೆ ಸಂಪರ್ಕವಿಲ್ಲ. ಮಲೆನಾಡಿನಲ್ಲೂ ಇಂತಹ ಗ್ರಾಮಗಳಿವೆ. ಇಂದಿಗೂ ಎಲ್ಲ ಗ್ರಾಮಗಳಿಗೂ ಸರ್ವಋತು ರಸ್ತೆಯಿಲ್ಲದಿರುವುದು ಶೋಭಾಯಮಾನ ಸಂಗತಿಯಲ್ಲ. ರಸ್ತೆ ವಿಚಾರದಲ್ಲೂ ನಾವು ಮುಂದುವರಿದ ರಾಜ್ಯದ ಪಟ್ಟಿಗೆ ಸೇರಿಲ್ಲ.

ಕರ್ನಾಟಕದಲ್ಲಿ ೯,೮೫೨ ಅಂಚೆ ಕಚೇರಿಗಳಿವೆ. ಪ್ರತಿ ೫,೩೫೩ ಜನರಿಗೆ ಒಂದು ಅಂಚೆ ಕಚೇರಿಯಿದೆ. ೧ ಅಂಚೆ ಕಚೇರಿ ೧೯.೫ ಚದರ ಕಿ.ಮೀ. ಗಳಿಗೆ ಸೇವೆಸಲ್ಲಿಸಬೇಕು. ಪ್ರತಿ ೩೫ ಜನರಿಗೆ ಒಂದು ದೂರವಾಣಿಯಿದೆ. ಇದು ಮಹಾನಗರಗಳನ್ನು ಬಿಟ್ಟರೆ ಇನ್ನೂ ಕಮ್ಮಿ ಆಗುತ್ತಿದೆ. ವಿಮಾನ, ಹಡಗು ಅಂತಹ ವಿಚಾರದಲ್ಲಿ ನಾವು ಸಾಕಷ್ಟು ಹಿಂದುಳಿದಿದ್ದೇವೆ. ಅವುಗಳ ಬಗ್ಗೆ ಮಾತನಾಡದಿರುವುದೇ ಉತ್ತಮ.

## ಶಿಕ್ಷಣ

ಶಿಕ್ಷಣದ ಮಹತ್ವದ ಬಗೆಗೆ ಎಲ್ಲ ವೇದಿಕೆಗಳಿಂದಲೂ ಘೋಷಣೆಗಳು ಕೇಳಿಬರುತ್ತವೆ. ಶಿಕ್ಷಣದ ದುಸ್ಥಿತಿಯ ಬಗ್ಗೆಯೂ ವ್ಯಾಪಕವಾಗಿ ಟೀಕೆ ಕೇಳಿಬರುತ್ತಿದೆ. ಪರಿಸ್ಥಿತಿ ಮಾತ್ರ ದಿನದಿಂದ ದಿನಕ್ಕೆ ಹದಗೆಡುತ್ತಿದೆ. ಸಂವಿಧಾನ ಜಾರಿಗೆ ಬಂದಿದ್ದು ೧೯೫೦ರಲ್ಲಿ. ಅಂದಿನಿಂದ ೧೦ ವರ್ಷಗಳೊಳಗಾಗಿ ಪ್ರಾಥಮಿಕ ಶಿಕ್ಷಣವನ್ನು ಈ ದೇಶದ ೧೪ ವಯೋಮಾನದ ಎಲ್ಲ ಮಕ್ಕಳಿಗೆ ಒದಗಿಸಲಾಗುವುದು ಎಂದು ಘೋಷಿಸಲಾಯಿತು. ಇದನ್ನು ೫ ವರ್ಷ ಮುಂದೂಡಲಾಯಿತು. ೪೫ ವರ್ಷಗಳು ಕಳೆದರೂ ಸಾರ್ವತ್ರಿಕ ಶಿಕ್ಷಣ 'ಗಗನ ಕುಸುಮ'ವಾಗಿ ಉಳಿದಾಗ ೯ನೇ ಪಂಚವಾರ್ಷಿಕ ಯೋಜನೆಯಲ್ಲಿ ೨೦೦೦ದ ಇಸವಿಗೆ ಎಲ್ಲರಿಗೂ ಶಿಕ್ಷಣ ಎಂದು ಘೋಷಿಸಲಾಯಿತು. ಅದು ಕಳೆದು ಎರಡು ವರ್ಷವಾಗಿದೆ. ಇಂದಿಗೂ ದೇಶದಲ್ಲಿ, ರಾಜ್ಯದಲ್ಲಿ ೧/೩ ಭಾಗ ಜನತೆ ಅನಕ್ಷರಸ್ಥರಾಗೇ ಉಳಿದಿದ್ದಾರೆ.

ನಮ್ಮ ರಾಜ್ಯದಲ್ಲಿ ಆದಾಯದ ೧೫% ಭಾಗವನ್ನು ಶಿಕ್ಷಣಕ್ಕೆ ಮೀಸಲಿಡಲಾಗಿದೆ. ಉತ್ತಮ ಗುಣಮಟ್ಟದ ಪ್ರಾಥಮಿಕ ವಿದ್ಯಾಭ್ಯಾಸದ ಅನುಕೂಲಗಳತ್ತ ಗಮನ ನೀಡದೆ ಹಾಗೂ ಸಾರ್ವತ್ರಿಕವಾಗಿ ಸಾಕ್ಷರತೆಯ ಗುರಿಯನ್ನು ಮುಟ್ಟದೆ, ಹೆಚ್ಚಿನ ಪಾಲಿನ ಹಣವನ್ನು ಉನ್ನತ ಶಿಕ್ಷಣಕ್ಕೆ ವಿನಿಯೋಗಿಸಲಾಗುತ್ತಿದೆ. ಉನ್ನತ ಶಿಕ್ಷಣವು ಸರ್ಕಾರದ ಅನುದಾನದಿಂದ ಅತ್ಯಂತ ಅಗ್ಗದ ದರದಲ್ಲಿ ದೊರೆಯುತ್ತಿದೆ. ಇದರಿಂದ ಉಳ್ಳವರಿಗೂ ಲಾಭವಾಗುತ್ತಿದೆ. ಕರ್ನಾಟಕದಲ್ಲಿ ೪೯,೬೭೪ ಪ್ರಾಥಮಿಕ ಶಾಲೆಗಳಿದ್ದು ೮೨,೨೯,೭೮೩ ಮಕ್ಕಳು ಓದುತ್ತಿದ್ದಾರೆ. ಇದು ಕಡಿಮೆ ಸಾಧನೆಯಲ್ಲ. ಆದರೆ ಬಡತನದ ಬೇಗೆಯಿಂದ ಇದರಲ್ಲಿ ೩೫% ರಷ್ಟು ಮಕ್ಕಳು ೪ ನೇ ತರಗತಿಗೆ ಮುನ್ನ ಶಾಲೆಯನ್ನು ಬಿಡುತ್ತಾರೆ. ರಾಜ್ಯದಲ್ಲಿ ಇನ್ನೂ ೧ ಕೋಟಿ ೬೦ ಲಕ್ಷ ಜನ ಅನಕ್ಷರಸ್ಥರಿದ್ದಾರೆ. ಇವುಗಳ ಬಗ್ಗೆ ಆದ್ಯಗಮನ ನೀಡಬೇಕಿದೆ. ವೃತ್ತಿಪರ ಶಿಕ್ಷಣ ಪಡೆದವರಿಗೂ ಕೆಲಸವಿಲ್ಲ ಎನ್ನುವುದು ಶಿಕ್ಷಣ ಕ್ಷೇತ್ರದ ವೈಫಲ್ಯಕ್ಕೆ ಕನ್ನಡಿ.

## ಆರೋಗ್ಯ

"ಸಂಪೂರ್ಣ ಆರೋಗ್ಯದತ್ತ ಗಮನ ನೀಡಿ ಮಾನವನ ಸರ್ವಾಂಗೀಣ ಪ್ರಗತಿಗೆ ಅನುವು ಮಾಡಿ" ಎಂಬ ಘೋಷಣೆಯೊಡನೆ ವಿಶ್ವ ಆರೋಗ್ಯ ಸಂಸ್ಥೆ ಕ್ರಿಯಾಶೀಲವಾಗಿದೆ. ನಮ್ಮ ರಾಜ್ಯವು ಇದಕ್ಕೆ ಸ್ಪಂದಿಸಿ ೧೬೮೫ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿತು. ಆದರೆ ಆರಂಭದಲ್ಲಿದ್ದ ಉತ್ಸಾಹ ಹೆಚ್ಚು ದಿನ ಉಳಿಯಲಿಲ್ಲ. ಇಂದು ಇದರಲ್ಲಿ ೨೩೫ ಕೇಂದ್ರಗಳಲ್ಲಿ ವೈದ್ಯರಿಲ್ಲ, ೩೫೧ ಕೇಂದ್ರಗಳಲ್ಲಿ ಪ್ರಯೋಗಾಲಯ ತಂತ್ರಜ್ಞರಿಲ್ಲ ಮತ್ತು ೧೪೫ ಕಡೆ ಔಷಧಿ ಕೊಡುವ ಸಿಬ್ಬಂದಿಯಿಲ್ಲ. ೨೪% ರಷ್ಟು ಕೇಂದ್ರಗಳಿಗೆ ಸ್ವಂತ ಕಟ್ಟಡವೇ ಇಲ್ಲ.

ಸರ್ಕಾರದ ೧೭೭ ಆಸ್ಪತ್ರೆಗಳಿವೆ, ೨೦೮ ಡಿಸ್ಪೆನ್ಸರಿಗಳಿವೆ, ಆಸ್ಪತ್ರೆಯಲ್ಲಿ ೨೩, ೨೭೩ ಹಾಸಿಗೆ ಇದೆ. ಖಾಸಗೀ ಆಸ್ಪತ್ರೆಗಳಲ್ಲಿ ಬಡವರು ಹೋಗಲು ಸಾಧ್ಯವೇ ಇಲ್ಲ. ಸರ್ಕಾರಿ ಆಸ್ಪತ್ರೆಗಳು ಸಂಪನ್ಮೂಲದ ಕೊರತೆ, ಸಿಬ್ಬಂದಿಯ ಅಸಹಕಾರ ಧೋರಣೆಯಿಂದ

ಜನ ಅಲ್ಲಿಗೆ ಹೋಗಲು ಹೆದರುತ್ತಾರೆ. ರಾಷ್ಟ್ರದ ಸರ್ಕಾರಿ ಆಸ್ಪತ್ರೆಗಳಲ್ಲಿ ಕರ್ನಾಟಕದ ಪಾಲು ೨.೧% ಮಾತ್ರ, ಡಿಸ್ಪೆನ್ಸರಿಯಲ್ಲಿ ೫.೪% ಇದೆ. ಇವು ತಕ್ಷಣದ ಮಾಹಿತಿಗಳು. ಶಿಕ್ಷಣ-ಆರೋಗ್ಯದ ಗುಣಮಟ್ಟ, ಸಾಗಬೇಕಾದ ದಾರಿಗಳ ಬಗ್ಗೆ ತಜ್ಞರು ಮಾತ್ರ ಹೇಳಲು ಸಾಧ್ಯ. ಇಲ್ಲಿರುವುದು ಒಬ್ಬ ನಾಡು ನುಡಿಯ ಆಸಕ್ತನ ಪ್ರತಿಕ್ರಿಯೆ.

### ಕ್ಷಯಿಸುತ್ತಿರುವ ನಿಸರ್ಗ ಸಂಪತ್ತು

ಪ್ರಕೃತಿಯನ್ನು ಮಣಿಸಿ ಅದನ್ನು ತನ್ನ ಅಗತ್ಯಕ್ಕೆ ತಕ್ಕಂತೆ ಮಾರ್ಪಡಿಸಿಕೊಳ್ಳುವುದೇ ಪ್ರಗತಿ ಎಂದು 'ನಾಗರಿಕ ಮಾನವ' ತಿಳಿದುಕೊಂಡುದರ ಪರಿಣಾಮ ಇಂದು ಸಮಾಜ ಹಲವು ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಭೂಮಿಯ ಒಳಗೆ-ಮೇಲೆ ಇರುವ ಸಂಪತ್ತನ್ನು ಯಾವುದೇ ವಿವೇಚನೆಯಿಲ್ಲದೆ ಬಳಸಿಕೊಂಡು ಪರಿಸರದ ಸಮತೋಲನವನ್ನೇ ನಾಶಮಾಡಿದ್ದೇವೆ. ಅದರ ಪರಿಣಾಮ ಅಂತರ್ಜಲ ಮಟ್ಟ ಅಪಾಯಕಾರಿ ಮಟ್ಟ ಮುಟ್ಟಿದೆ. ಮಳೆ ಸರಿಯಾಗಿ ಆಗುತ್ತಿಲ್ಲ. ಭೂಕಂಪದ ಭಯ ಹೆಚ್ಚಿದೆ.

ಪ್ರಕೃತಿಯ ಸಮತೋಲನ ಕಾಪಾಡಲು ನಾಡಿನ ಭೂಭಾಗದ ೩೫% ರಷ್ಟು ಪ್ರದೇಶದಲ್ಲಿಯಾದರೂ ಕಾಡಿರಬೇಕೆಂದು ತಜ್ಞರು ಹೇಳುತ್ತಾರೆ. ಪರಿಸರದ ಬಗ್ಗೆ ಮಣದಷ್ಟು ಮಾತನಾಡುವ ನಾವು, ಸಾಸುವೆಯಷ್ಟೂ ಕ್ರಿಯಾಶೀಲವಾಗಿಲ್ಲ. ಅರಣ್ಯದ ಮಹತ್ವವನ್ನರಿತ ಫಿನ್‌ಲ್ಯಾಂಡಿನಲ್ಲಿ ೬೪%, ಜಪಾನಿನಲ್ಲಿ ೬೩%, ಸ್ವಿಟ್ಸರ್‌ಲ್ಯಾಂಡಿನಲ್ಲಿ ೫೮%, ಅಮೇರಿಕಾದಲ್ಲಿ ೫೦% ಕ್ಕಿಂತ ಹೆಚ್ಚು ಅರಣ್ಯವನ್ನು ಬೆಳೆಸಿದ್ದಾರೆ. ಕೃಷಿಯೇ ಪ್ರಧಾನವಾದ ಭಾರತದಲ್ಲಿ ೨೧% ರಷ್ಟು ಮಾತ್ರ ಕಾಡಿದೆ. ಕರ್ನಾಟಕದಲ್ಲಿ ಪರಿಸ್ಥಿತಿ ಇನ್ನೂ ಕೆಟ್ಟದಾಗಿದೆ.

ಕರ್ನಾಟಕದಲ್ಲಿ ಘೋಷಿತ ಅರಣ್ಯ ಪ್ರದೇಶವು ೩೮,೭೨೪ ಚದರ ಕಿ.ಮೀ. ಆಗಿದ್ದು, ೨೦.೧೯ ರಷ್ಟು ಭೂಪ್ರದೇಶವನ್ನು ಕಾನೂನುಬದ್ಧವಾಗಿ ಅರಣ್ಯ ಎಂದು ಘೋಷಿಸಲಾಗಿದ್ದರೂ, ೧೧% ರಷ್ಟು ಪ್ರದೇಶದಲ್ಲಿ ಮಾತ್ರ ಮರಗಿಡಗಳಿದ್ದು, ಉಳಿದದ್ದು ಕುರುಚಲು ಗಿಡಗಳಿಂದ ಕೂಡಿದ ಕ್ಷೀಣಿತ ಅರಣ್ಯ ಪ್ರದೇಶವಾಗಿದೆ. ಒಟ್ಟಾರೆ ಭೌಗೋಳಿಕ ಪ್ರದೇಶದ ವಿಸ್ತೀರ್ಣದಲ್ಲಿ ೧೬.೯೩% ಅರಣ್ಯವಿದೆ ಎಂದು ಅಂದಾಜು ಮಾಡಲಾಗಿದ್ದು, ಇದನ್ನು ರಾಷ್ಟ್ರೀಯ ಸರಾಸರಿ ೧೯.೮೭% ಕ್ಕೆ ಹೆಚ್ಚಿಸುವ ಪ್ರಯತ್ನ ನಡೆದಿದೆ ಎಂದು ಸರ್ಕಾರದ ಅಂಕಿ-ಅಂಶಗಳು ಹೇಳುತ್ತವೆ. ಇದಕ್ಕೆ ವಿರುದ್ಧವಾಗಿ ಪರಿಸರ ತಜ್ಞರು ಕೊಡುವ ಅಂಕಿ-ಅಂಶಗಳು ಹೀಗಿವೆ. 'ರಾಜ್ಯದ ೫೬% ರಷ್ಟು ವ್ಯವಸಾಯಕ್ಕೆ ಬಳಕೆಯಾಗುತ್ತಿದ್ದು, ಉಳಿದಂತೆ ಮಾನವನ ವಸತಿ ಮತ್ತಿತರ ಸೌಲಭ್ಯಗಳಿಗೆ ೩೦% ರಷ್ಟು ಭೂಮಿ ಬಳಕೆ ಆಗುತ್ತಿದ್ದು, ೧೩-೧೪% ರಷ್ಟು ಮಾತ್ರ ಅರಣ್ಯ ಪ್ರದೇಶವಿದೆ. ಇದರಲ್ಲಿಯೂ ರಬ್ಬರ್, ತೇಗ, ಬೀಟೆ, ಮೆದುಮರ, ನೀಲಗಿರಿಯಂತಹ ಏಕತಾನೀಯ ಮರಗಳಿದ್ದು, ೮-೧೦% ಮಾತ್ರ ವೈವಿಧ್ಯಮಯವಾದ ಎಲ್ಲ ಜೈವಿಕ ಸಂಪನ್ಮೂಲಗಳೂ ಉಳಿದಿರತಕ್ಕಂತ ಅರಣ್ಯ ಪ್ರದೇಶವಾಗಿದೆ. ಈ ಸೀಮಿತ ಅರಣ್ಯ ಪ್ರದೇಶಕ್ಕೆ ರಾಜ್ಯದ ಜೈವಿಕ ಮತ್ತು ವಾಯುಗುಣದ ಸಮತೋಲನವನ್ನು ಕಾಪಾಡಿಕೊಂಡು ಬರುವ ಸಾಮರ್ಥ್ಯ ಇದೆಯೇ?'

### ಅರಣ್ಯರೋದನ ನೂರು ತರಹ

ಅರಣ್ಯದ ನಾಶ ಹೇಗೆ ಆಗುತ್ತಿದೆ ಎಂಬುದನ್ನು ಹೇಳಹೊರಟರೆ ಮಹಾಭಾರತದ 'ಅರಣ್ಯ ಪರ್ವ'ಕ್ಕಿಂತ ಬೃಹತ್ ಗ್ರಂಥವಾಗುತ್ತದೆ, ಅದರ ಅಗತ್ಯವಿಲ್ಲ. ಇಲ್ಲಿ ಒಂದೆರಡು ಮಾದರಿ ಮಾತ್ರ ಇದೆ. ೪೦ ವರ್ಷಗಳ ಹಿಂದೆ ಉತ್ತರ ಕನ್ನಡದಲ್ಲಿ ೯೦%ರಷ್ಟು ಅರಣ್ಯ ಇತ್ತು. ಕಾಳಿ ಯೋಜನೆಗೆ ೬೬೦೦೦ ಎಕರೆ ಕಾಡು, ಶರಾವತಿ ಅಂತಿಮ ಯೋಜನೆಗೆ ೨೪೫೬೬ ಎಕರೆ ಕಾಡು, ಬೇಡ್ತಿ ಯೋಜನೆಗೆ ೨,೮೦೦ ಎಕರೆ ಅರಣ್ಯ, ೧೦,೦೨೦ ಎಕರೆ ಜಮೀನು, ೧,೦೦೦ ಎಕರೆ ಅಡಿಕೆ ತೋಟ, ೨೮ ಹಳ್ಳಿಗಳು ಮುಳುಗಡೆ ಆಯಿತು. ದಾಂಡೇಲಿ ಕಾಗದ ಕಾರ್ಖಾನೆಗೆ ಆದ ಕಾಡುನಷ್ಟ ದೊಡ್ಡದು. ಇಂದು ಉತ್ತರ ಕನ್ನಡದಲ್ಲಿ ಕಾಡು ೭೩% ಕ್ಕಿಳಿದಿದೆ. ಉಕ್ಕು, ಕಾಗದ ಕಾರ್ಖಾನೆಗಳಿಗೆ ಶಿವಮೊಗ್ಗದ ೭೫,೦೦೦ ಹೆಕ್ಟೇರ್ ಕಾಡು ನಾಶವಾಗಿದೆ. ಸರ್. ಎಂ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ 'ಕಾಗದದ ಕಾರ್ಖಾನೆಗೆ ಬೇಕಾದ ಬಿದಿರನ್ನು ಕಾರ್ಖಾನೆಯವರೇ ಬೆಳೆದುಕೊಳ್ಳಬೇಕು, ಪ್ರತಿವರ್ಷ ಅವರು ಬಳಸುವ ಪ್ರದೇಶದ ಎರಡರಷ್ಟು ಪ್ರದೇಶದಲ್ಲಿ ಬಿದರನ್ನು ಬೆಳಸಬೇಕು' ಎಂದು ಷರತ್ತು ವಿಧಿಸಿದ್ದರು. ಆದರೆ, ಇಂದು ಅಂತಹ ಷರತ್ತುಗಳು ಕಾಗದದ ಮೇಲೆ ಮಾತ್ರ ಉಳಿದಿದೆ. ಬಿರ್ಲಾ-ಅಂಬಾನಿಗಳಿಗಾಗಿ, ಭೂಸಾರವನ್ನು ನಾಶಮಾಡುತ್ತದೆಂದು ನಿಷೇಧಿಸಲ್ಪಟ್ಟಿರುವ ನೀಲಗಿರಿ ಮರವನ್ನು ಬೆಳೆಯುತ್ತಿದ್ದೇವೆ. ಕೊಡಗು ಮತ್ತು ಕೆಲವು ಘಟ್ಟ ಪ್ರದೇಶಗಳಲ್ಲಿ ಬಿರ್ಲಾ ಕಂಪನಿಗೆ ಅತ್ಯಂತ ಕಡಿಮೆ ದರದಲ್ಲಿ ಸಾವಿರಾರು ಹೆಕ್ಟೇರ್ ಕಾಡನ್ನು ಗುತ್ತಿಗೆಗೆ ನೀಡಿದ್ದೇವೆ. ದಂತಚೋರ ವೀರಪ್ಪನ್ ಹೆಸರಿನಲ್ಲಿ ನೂರಾರು ಜನ ಗಂಧದ ಮರವನ್ನು ಬರಿದು ಮಾಡಿದ್ದಾರೆ. ಕರ್ನಾಟಕ ಇಂದು ಹೆಸರಿಗೆ ಮಾತ್ರ ಗಂಧದ ಬೀಡು.

ಪಶ್ಚಿಮ ಘಟ್ಟದ ಸಹ್ಯಾದ್ರಿ ಶ್ರೇಣಿ ಹಲವು ನದಿಗಳ ಉಗಮ ಸ್ಥಾನ. ಇಲ್ಲಿನ ೪೨ ಲಕ್ಷ ಹೆಕ್ಟೇರ್ ಭೂ ಪ್ರದೇಶವು ಮಳೆಯ ನೀರನ್ನು ಸಂಗ್ರಹಿಸಿ ನದಿಗಳಿಗೆ ನೀರನ್ನು ಪೂರೈಕೆ ಮಾಡುತ್ತದೆ. ನಾಲ್ಕೈದು ದಶಕಗಳಿಂದ ಮಿತಿ ಮೀರಿದ ಗಣಿಗಾರಿಕೆ, ಕಾಡುಗಳ್ಳರಿಂದ ವ್ಯವಸಾಯ ವಸತಿಗಳಿಗೆ ಇದರ ಅರ್ಧದಷ್ಟು ಕಾಡು ನಾಶವಾಗಿ ನದಿಗಳು ಬತ್ತಿವೆ. ಮಳೆ ಸರಿಯಾಗಿ ಬರದಂತ ಪರಿಸ್ಥಿತಿ ನಿರ್ಮಾಣವಾಗಿದೆ. ಮೂರು ಕಾಸಿನ ಲಾಭಕ್ಕಾಗಿ ಕೋಟ್ಯಂತರ ಬೆಲೆ ಬಾಳುವ ಅರಣ್ಯ ಪ್ರದೇಶದಲ್ಲಿ ಗಣಿಗಾರಿಕೆ ನಡೆದಿದೆ. ಬೆಳೆಯುತ್ತಿರುವ ಜನಸಂಖ್ಯೆಯಿಂದ ಕಾಡು ನಾಶ ಅನಿವಾರ್ಯ, ಆದರೆ ಕಡಿಮೆ ಪ್ರಮಾಣದ ಕಾಡು ನಾಶದ ಬಗ್ಗೆ ಚಿಂತಿಸಬೇಕಿದೆ. ಇಂದಿಗೂ ಹೆಚ್ಚಿನ ಜನ ತಮ್ಮ ದಿನ ನಿತ್ಯದ ಅಗತ್ಯಗಳ ಸಿದ್ಧತೆಗೆ ಸೌದೆಯನ್ನೇ ನಂಬಿಕೊಂಡಿದ್ದಾರೆ. ಹಳ್ಳಿಗಳಲ್ಲಿ ಕುಟುಂಬವೊಂದಕ್ಕೆ ೫.೮ ಗ್ರಾಂ ಸೌದೆಯ ಅಗತ್ಯವಿದೆ ಎಂದು ಲೆಕ್ಕ ಹಾಕಿದರೂ ೧೦೦ ಮನೆ ಉಳ್ಳ ಒಂದು ಹಳ್ಳಿಗೆ ೧೨ ಹೆಕ್ಟೇರ್ ಕಾಡು ನಾಶವಾಗುತ್ತದೆ. ಕರ್ನಾಟಕಕ್ಕೆ ಬೇಕಾಗಿರುವ ಸೌದೆ ಮರದ ಬೇಡಿಕೆ ೧೪ ದಶಲಕ್ಷ ಘನ ಮೀಟರ್ ಆದರೆ, ಲಭ್ಯತೆ ೨ ದ.ಲ.ಮೀ ಮಾತ್ರ. ಒಂದು ಹೆಕ್ಟೇರ್ ಕಾಡು ನಾಶವಾದರೆ ೧.೨೬ ಕೋಟಿ ರೂಪಾಯಿಗಳು ನಷ್ಟವಾದಂತೆ.

ಕರ್ನಾಟಕದ ಕಾಡು ಈ ಎಲ್ಲ ಕಂಟಕಗಳ ಜೊತೆಗೆ ಹೊಸದೊಂದು ಕಂಟಕ ಎದುರಿಸಬೇಕಾಗಿದೆ. ಕೇರಳದ ತಂಡಗಳು ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು, ದಕ್ಷಿಣ ಕನ್ನಡ ಜಿಲ್ಲೆಗಳ ಗುಡ್ಡ ಪ್ರದೇಶದಲ್ಲಿ ಕಾಡು ನಾಶಮಾಡಿ ಶುಂಠಿ ಬೆಳೆಯುತ್ತಿದ್ದಾರೆ. ಇಳಿಜಾರು ಪ್ರದೇಶದಲ್ಲಿ ಪಾತಿ ಮಾಡುವುದರಿಂದ ಫಲವತ್ತಾದ ಮಣ್ಣು ಕೊಚ್ಚಿಹೋಗುತ್ತದೆ. ಶುಂಠಿ ಬೆಳೆದ ಜಾಗ ಬರಡಾಗುತ್ತದೆ ಎನ್ನುವ ಕಾರಣದಿಂದ ಕೇರಳದಲ್ಲಿ ಪರಿಸರವಾದಿಗಳು ವಿರೋಧ ವ್ಯಕ್ತ ಪಡಿಸಿದ್ದಾರೆ. ಇಂತಹ ಸಂಗತಿಗಳು ನಮ್ಮ ಅಧಿಕಾರಶಾಹಿಗಳ ಗಮನಕ್ಕೆ ಬರದಿರುವುದು ದುರ್ದೈವದ ಸಂಗತಿ. ಕೃಷಿ ಪ್ರಧಾನವಾದ ದೇಶಗಳಿಗೆ ಮಳೆಯೇ ಜೀವಧಾರೆ. ಅರ್ಧ ಹೆಕ್ಟೇರ್ ದಟ್ಟ ಅರಣ್ಯ ಪ್ರತಿದಿನ ೯೫,೦೦೦ ಲೀಟರಿನಷ್ಟು ನೀರಿನ ಅಂಶವನ್ನು ವಾಯುಮಂಡಲಕ್ಕೆ ಸೇರಿಸುತ್ತದೆ. ಚಲಿಸುವ ಮೋಡವನ್ನು ಎತ್ತರದ ಮರಗಳು ತಡೆಯುತ್ತವೆ, ಆಗ ಮಳೆ ಸುರಿಯುತ್ತದೆ, ಒಂದು ಚದರ ಮೀಟರ್ ವಿಸ್ತೀರ್ಣದ ನೀರನ್ನು ಹಿಡಿದಿಟ್ಟುಕೊಳ್ಳಬಲ್ಲವು. ಇದರಿಂದ ಅಂತರ್ಜಲ ಸಂಗ್ರಹ ವೃದ್ಧಿಯಾಗಿ ಕೃಷಿಯೂ ಸೇರಿದಂತೆ ಮಾನವನ ಇತರ ನೀರಿನ ಅಗತ್ಯವನ್ನು ಪೂರೈಸುತ್ತದೆ.

ಅರಣ್ಯದ ಬಹುಮುಖ ಪ್ರಯೋಜನವನ್ನು ಮನಗಂಡ ಕೇಂದ್ರ ಸರ್ಕಾರವು ೯ನೆಯ ಪಂಚವಾರ್ಷಿಕ ಯೋಜನೆಯಲ್ಲಿ ೩೩% ರಷ್ಟು ಪ್ರದೇಶವನ್ನು ಅರಣ್ಯ ಬೆಳೆಸಲು ಸೂಚಿಸಿತು. ತಜ್ಞರು ಈ ಪರಿಸ್ಥಿತಿಯಲ್ಲಿ ೧/೩ ಭೂಪ್ರದೇಶದಲ್ಲಿ ಕಾಡು ಬೆಳೆಸಬೇಕೆಂಬುದು ಅವಾಸ್ತವ ಗುರಿ ಎಂದು ಪ್ರತಿಕ್ರಿಯಿಸಿದಾಗ, ಕೇಂದ್ರವು ಕನಿಷ್ಟ ೩೦ ರಷ್ಟು ಕಾಡು ಹೊಂದಲು ಕ್ರಿಯಾಶೀಲವಾಗುವಂತೆ ರಾಜ್ಯಗಳಿಗೆ ಸೂಚಿಸಿತು. ಕರ್ನಾಟಕವು ೯ನೇ ಯೋಜನೆ ಮುಗಿದಾಗ ರಾಷ್ಟ್ರದ ಕನಿಷ್ಟ ಗುರಿಯನ್ನು ತಲುಪಲು ವಿಫಲವಾಗಿ ೧೬.೭೩ ರಷ್ಟು ಮಾತ್ರ ಕಾಡು ಹೊಂದಿದೆ. ಈ ಅವಧಿಯಲ್ಲಿ ೧% ರಷ್ಟೂ ಕಾಡು ವೃದ್ಧಿಸಲಿಲ್ಲ ಎಂಬುದು ಗಮನಿಸಬೇಕಾದ ಸಂಗತಿ.

ಉದಾತ್ತ ಉದ್ದೇಶದಿಂದ ಪ್ರಾರಂಭವಾದ ಕೆಲವು ಯೋಜನೆಗಳೂ ಹೇಗೆ ಅಪಾಯಕಾರಿ ಆಗಬಲ್ಲವೆಂಬುದಕ್ಕೆ 'ಸಾಮಾಜಿಕ ಅರಣ್ಯ ಯೋಜನೆ' ಒಂದು ಅತ್ಯುತ್ತಮ ಉದಾಹರಣೆ. ಬಡ ಹಾಗೂ ಗ್ರಾಮೀಣ ಜನತೆಗೆ ಉರುವಲು ಸೌದೆ ಹಾಗೂ ಉದ್ಯೋಗ ಒದಗಿಸುವ ಉದ್ದೇಶದಿಂದ ಪ್ರಾರಂಭವಾದ ಈ ಯೋಜನೆಯ ಅಡಿಯಲ್ಲಿ ಹಳ್ಳಿಗಳ ಗೋಮಾಳ ಹಾಗೂ ಇತರ ಸ್ಥಳಗಳಲ್ಲಿ ನೀಲಗಿರಿ ಮತ್ತು ಕೆಲವು ಹೊಸ ತಳಿ ಮರಗಳನ್ನು ನೆಡಲಾಯಿತು. ಇದರಿಂದ ಆ ನೆಲ ಬಂಜರಾಗಿ, ಅಂತರ್ಜಲ ಪಾತಾಳಕ್ಕಿಳಿಯಿತು. ರೈತರಿಗೆ ಸೌದೆ ಸಿಗಲಿಲ್ಲ, ಗೋಮಾಳಗಳು ಬಂಜರಾಗಿ ಹುಲ್ಲೂ ಬೆಳೆಯುತ್ತಿಲ್ಲ. ಲಾಭವಾದದ್ದು ಪಾಲಿ ಫೈಬರ್‌ನಂತಹ ಬಹುರಾಷ್ಟ್ರೀಯ ಕಂಪನಿಗಳಿಗೆ.

## ನಶಿಸುತ್ತಿರುವ ಜಲ ಸೆಲೆಗಳು

ಪ್ರಪಂಚದ ೭೫% ರಷ್ಟು ಭಾಗ ನೀರಿನಿಂದಲೇ ಆವೃತ್ತವಾಗಿದ್ದರೂ, ಉಪಯೋಗಕ್ಕೆ ಬರುವ ಸಿಹಿ ನೀರಿನ ಪ್ರಮಾಣ ೩% ರಷ್ಟು ಮಾತ್ರ. ಜನಸಂಖ್ಯೆ ಹೆಚ್ಚಿದಂತೆಲ್ಲ ತಲಾ ಬಳಕೆಗೆ ದೊರಕುವ ನೀರಿನ ಪ್ರಮಾಣ ಕುಗ್ಗುತ್ತಲೇ ಇದೆ. ಆದರೆ ನಾವು ಇದರ ಪರಿವೆಯೇ ಇಲ್ಲದೆ ನೀರನ್ನು ಬೇಕಾಬಿಟ್ಟಿ ಬಳಸಿ ಪೋಲು ಮಾಡುತ್ತಿದ್ದೇವೆ. ಲಭ್ಯವಿರುವ ನೀರಿನಲ್ಲಿ ಮಾನವನ ದೈನಂದಿನ ಚಟುವಟಿಕೆಗೆ ೬%, ಕೈಗಾರಿಕೆಗೆ ೫೫%, ಕೃಷಿಗೆ ೧೦, ಬಳಕೆ ಆಗುತ್ತಿದೆ ಎಂಬ ಅಂದಾಜಿದೆ. ಆದರೆ, ನಾಗರಿಕತೆ ಬೆಳೆದಂತೆ ಮನುಷ್ಯ ಹೆಚ್ಚು ನೀರು ಬಳಸುವುದೇ ಪ್ರತಿಷ್ಠೆ ಎಂದು ಭಾವಿಸಿ ಯಥೇಚ್ಚವಾಗಿ ನೀರು ಬಳಸಿ (ಪೋಲು) ನೀರಿನ ಅಗತ್ಯತೆ ಹೆಚ್ಚು ಮಾಡಿದ್ದಾನೆ. ಬೆಂಗಳೂರು ಮುಂತಾದ ಪ್ರಮುಖ ನಗರಗಳಲ್ಲಿ ಕಾಡು ಕಡಿದು ಕಾಂಕ್ರೀಟ್ ಕಾಡು ನಿರ್ಮಿಸಿ ಭೂಮಿಗೆ ನೀರು ಇಳಿಯದಂತೆ ಮಾಡಿದ್ದೇವೆ. ಕೆರೆಗಳನ್ನು ಒತ್ತುವರಿ ಮಾಡಿ, ಕೃಷಿಭೂಮಿ ನಾಶ ಮಾಡಿ ಪಕ್ಷಿಗಳಿಗೆ ನೀರು-ಆಹಾರ ಇಲ್ಲದಂತೆ ಮಾಡಿದ್ದೇವೆ. ಕೆರೆಗಳು ಮಳೆ ನೀರನ್ನು

ಹಿಡಿದಿಡುವ ಸಾಧನಗಳಾಗಿ, ಅಂತರ್ಜಲ ಹೆಚ್ಚಿಸುವ ಸಾಧನಗಳಾಗಿದ್ದವು. ಈಗ ಬಾವಿಗಳು ಬತ್ತಿಹೋಗಲು ಕೆರೆ ನಾಶವೇ ಕಾರಣ. ಅಣೆಕಟ್ಟುಗಳಿಂದ ಬಿಡುಗಡೆ ಆಗುವ ನೀರಿನಲ್ಲಿ ೨೫-೩೫% ಪಾಲು ಮಾತ್ರ ಬಳಕೆ ಆಗುತ್ತದೆ. ೬೫% ಪೋಲಾಗುತ್ತಿದೆ. ಬೆಂಗಳೂರಿನಲ್ಲಿ ಕೆಲವರು ತಮ್ಮ ವಾಹನ ತೊಳೆಯಲು, ಗೋಡೆ ನೆನೆಸಲು ನೀರು ಪೋಲು ಮಾಡುವುದು ಕಂಡಾಗ ಭಯವಾಗುತ್ತದೆ. ನೀರಿನ ದುರ್ಬಳಕೆಯಿಂದ ಕರ್ನಾಟಕದ ೧೭ ಜಿಲ್ಲೆಗಳಲ್ಲಿ ಅಂತರ್ಜಲ ಅಪಾಯಕಾರಿ ಮಟ್ಟ ಮೀರಿದೆ.

### ಸಾಕ್ಷರತೆಯಷ್ಟೇ ಅಗತ್ಯವಾಗಿರುವ ಜಲ ಸಾಕ್ಷರತೆ

ಹಿಂದೆ ದುಂದುವೆಚ್ಚ ಮಾಡುವವರಿಗೆ 'ನೀರಿನಂತೆ ಹಣ ಖರ್ಚು ಮಾಡಬೇಡ' ಎನ್ನುತ್ತಿದ್ದರು. ಈಗ ನೀರನ್ನು ಹಣದಂತೆ ಖರ್ಚು ಮಾಡಬೇಡಿ ಎಂದು ಹೇಳುವ ಕಾಲ ಬಂದಿದೆ. ಒಂದು ಕೆ.ಜಿ. ಕಾಗದ ತಯಾರಿಕೆಗೆ ೧೦೦೦ ಲೀಟರ್, ೧ ಲೀಟರ್ ಬೀರ್ ತಯಾರಿಸಲು ೧೦ ಲೀಟರ್, ೧ ಟನ್ ಕಬ್ಬಿಣ ತಯಾರಿಕೆಗೆ ೧,೫೦೦ ಲೀಟರ್ ನೀರು ಬಳಕೆ ಆಗುತ್ತದೆ. ಹಳ್ಳಿಯ ವ್ಯಕ್ತಿ ತಲಾ ೨೦ ಲೀಟರ್ ಬಳಸಿದರೆ ನಗರದ ವ್ಯಕ್ತಿ ೬೦ ಲೀಟರ್ ನೀರು ಬಳಸುತ್ತಾನೆ. ಮಳೆಯ ನೀರು ಪೋಲಾಗುವುದನ್ನು ತಡೆಯುತ್ತಿಲ್ಲ. ಬಳಕೆಯಾದ ನೀರನ್ನು ಶುದ್ಧೀಕರಿಸಿ ಕಟ್ಟಡ ನಿರ್ಮಾಣ, ತೋಟಗಾರಿಕೆಗೆ ಬಳಸುವಂತೆ ಸರ್ಕಾರ ಹೇಳುತ್ತಿದೆ. ಜನ ಕೇಳುತ್ತಿಲ್ಲ. ಇದೆಲ್ಲವನ್ನೂ ಗಮನಿಸಿದಾಗ ಜಲದ ಮಹತ್ವ ತಿಳಿಸುವ, ಆದರೆ ಬಳಕೆಯ ಬಗ್ಗೆ ಎಚ್ಚರ ಮೂಡಿಸಲು 'ಸಾಕ್ಷರತೆಯಷ್ಟೇ' ಅಗತ್ಯವಾದದ್ದು ಜಲ ಸಾಕ್ಷರತೆ ಎಂಬುದು ಸತ್ಯ ಎನಿಸುತ್ತದೆ. ಪೆಟ್ರೋಲ್ ಇಲ್ಲವಾದರೆ ಬದಲಿ ಇಂಧನಗಳಿವೆ. ಅದರ ಮಹತ್ವ ಮತ್ತು ಉಳಿಸುವ ಬಗ್ಗೆ ಸಾಕಷ್ಟು ಪ್ರಚಾರವೂ ಇದೆ. ಜಾಗೃತಿಯೂ ಇದೆ. ನೀರಿಗೆ ಪರ್ಯಾಯವೇ ಇಲ್ಲ. ಅದರ ಬಗ್ಗೆ ಜಾಗ್ರತಿಯೂ ಇಲ್ಲ, ಅದನ್ನು ಮೂಡಿಸುವ ಪ್ರಯತ್ನ ಆಗಿದೆ. ಆದರೆ ಅದು ಅತ್ಯಲ್ಪ.

### ಕಸದ ಗುಂಡಿ ಆಗುತ್ತಿರುವ ಕರ್ನಾಟಕ

ಜಾಗತೀಕರಣದ ಹೆಸರಿನಲ್ಲಿ ಅಭಿವೃದ್ಧಿ ಹೊಂದಿದ ದೇಶಗಳು ಭಾರತದಂತಹ ರಾಷ್ಟ್ರಗಳಿಗೆ ತಮಗೆ ಬೇಡವೆನಿಸಿದ, ಕೊಳೆ ಕಕ್ಕುವ ಉದ್ಯಮಗಳನ್ನು ಕಳುಹಿಸುತ್ತಿವೆ. ಇವುಗಳನ್ನು ಸ್ವಾಗತಿಸಲು ರಾಜ್ಯಗಳು ಸ್ಪರ್ಧಿಸುತ್ತಿವೆ. ಅದರಲ್ಲಿ ಕರ್ನಾಟಕವೂ ಹಿಂದೆ ಬಿದ್ದಿಲ್ಲ. ಕೆಲವು ವರ್ಷಗಳ ಹಿಂದೆ ಪಶ್ಚಿಮ ರಾಷ್ಟ್ರಗಳಲ್ಲಿ ಹಡಗು ಒಡೆಯುವುದರ ವಿರುದ್ಧ ಅಲ್ಲಿ ಪರಿಸರವಾದಿಗಳು ಪ್ರತಿಭಟಿಸಿದರು. ಸಾಗರದಲ್ಲಿನ ಜೀವಮಂಡಲಕ್ಕೆ ಅಪಾಯವಿದೆ ಎಂಬುದನ್ನು ಮನಗಂಡು ಅವುಗಳನ್ನು ವರ್ಗಾಯಿಸಲು ಒಪ್ಪಿದರು. ಹಡಗು ಒಡೆಯುವ ಉದ್ಯಮವನ್ನು ಗುಜರಾತ್, ಕರ್ನಾಟಕಗಳು ಬರಮಾಡಿಕೊಂಡವು. ದಕ್ಷಿಣ ಕನ್ನಡದ ತಣ್ಣೀರು ಬಾವಿಯಲ್ಲಿ ಈ ಉದ್ದಿಮೆ ಲಾಭದಾಯಕವಾಗಿ ನಡೆಯಿತು. ಆಸೆ ಹೆಚ್ಚಿತು. ಹಳೇ ಹಡಗುಗಳು ತಮ್ಮ ಕಚಡಾ ಸಾಮಗ್ರಿಗಳೊಡನೆ ನಮ್ಮ ಕರಾವಳಿಯಲ್ಲಿ ಸೇರಿದವು. ಒಂದು ಹಳೇ ಹಡಗಿನಲ್ಲಿ ಕೊಳೆತ ಆಹಾರ ಪದಾರ್ಥಗಳು ಮತ್ತು ಕಲ್ಮಶ ಬೆರೆತ ಕಲ್ಲಿದ್ದಲಿನ ದುರ್ವಾಸನೆ ಎಷ್ಟಿತ್ತೆಂದರೆ ಸ್ಥಳೀಯ ಬೆಸ್ತರ ಸಹನೆ ಕಟ್ಟೆ ಒಡೆದು ಹೋರಾಟಕ್ಕಿಳಿದರು ಎಂದರೆ ಅಲ್ಲಿನ ಪರಿಸರ ಎಷ್ಟು ಹದಗೆಟ್ಟಿದೆ ಎಂದು ತಿಳಿಯಲು ಕಷ್ಟವಾಗಲಾರದು.

ಪ್ರಸ್ತುತ ಸಂದರ್ಭದಲ್ಲಿ ಕೈಗಾರಿಕೆಗಳಿಂದ ಪರಿಸರಕ್ಕೆ ತೀವ್ರ ಹಾನಿ ಆಗುತ್ತಿದೆ. ಕೈಗಾರಿಕೆಗಳು ನೀರು ಶುದ್ಧಿಕರಿಸದೇ ಬಿಡುವುದರಿಂದ (ಕ್ರೋಮಿಯಂ, ಲೆಡ್, ಸೈಯನೈಡ್, ಕ್ಯಾಡ್‌ಮಿಯನ್, ನಿಕ್ಕಲ್) ಮಣ್ಣು, ನೀರು, ಗಾಳಿಯೊಂದಿಗೆ ಸೇರಿ ಇಡೀ ಪರಿಸರ ಮಲಿನವಾಗುತ್ತಿದೆ. ಡಿಸ್ಟಿಲರಿಗಳ (ಮದ್ಯ ತಯಾರಿಕೆ ಘಟಕ) ಸ್ವರ್ಗವೆನಿಸಿರುವ ಕರ್ನಾಟಕದಲ್ಲಿ ಇವು ಉಂಟುಮಾಡುತ್ತಿರುವ ಮಾಲಿನ್ಯ ಊಹೆಗೆ ನಿಲುಕದ್ದು. ಒಂದು ಲೀಟರ್ ಮದ್ಯ ತಯಾರಿಸಲು ೧೫-೨೦ ಲೀಟರ್ ನೀರು ಬಳಕೆಯಾಗುತ್ತದೆ. ಭಾಗಶಃ ಮಾತ್ರ ಶುದ್ಧಿ ಮಾಡಿ ಭೂಮಿಗೆ ಬಿಡುವುದರಿಂದ ಕೆರೆ, ಬಾವಿ, ನದಿ ನೀರು ಕಲುಷಿತವಾಗುತ್ತಿದೆ. 'ಹರಿಹರದ ಪಾಲಿಫೈಬರ್ ಕಾರ್ಖಾನೆಯ ಕೊಳಕು ನೀರು ತುಂಗಭದ್ರಾ ನದಿಗೆ ಹರಿದು ಬಂದಿದ್ದರಿಂದ ನದಿಯ ಮೀನುಗಳು ಸತ್ತು ತೇಲಿದವು, ನೀರು ಕುಡಿದ ದನಗಳ ಬಾಯಲ್ಲಿ ಹುಣ್ಣುಗಳಾಗಿ ಅಸ್ವಸ್ಥವಾದವು. ಜನರು ಪ್ರತಿಭಟನೆ ಮಾಡಿದರು. ಕಾರ್ಖಾನೆಯ ಮಾಲೀಕರು ಕೈಗೊಂಡ ತುರ್ತುಕ್ರಮ ಏನೆಂದರೆ ಪ್ರಭಾವಿ ವಕೀಲರನ್ನು ನೇಮಕ ಮಾಡಿಕೊಂಡರು. ಯಾರೋ ದುಷ್ಕರ್ಮಿಗಳು ವಿಮಾನದಿಂದ ನದಿಗೆ ವಿಷ ಸಿಂಪಡಿಸಿರಬೇಕು ಎಂದು ನ್ಯಾಯಾಲಯದಲ್ಲಿ ವಾದ ಮಾಡಿದರು'. (ನಾಗೇಶ್ ಹೆಗಡೆ 'ಮಾಲಿನ್ಯ ನಿಯಂತ್ರಣ' ಲೇಖನದಲ್ಲಿ ಹೇಳಿದ ಮಾತು) ಒಂದು ಟನ್ ಮರು ಪ್ಲಾಸ್ಟಿಕ್ ತಯಾರಿಕೆಗೆ ೫೦೦೦ ಲೀಟರ್ ನೀರು, ೧೦೦ ಕಿ. ವ್ಯಾ. ವಿದ್ಯುತ್ ಬಳಕೆ ಆಗುತ್ತದೆ. ಅದು ಹೊರಹಾಕುವ ಕಚಡಾರಾಶಿ ೨ ಟನ್ನಿಗೂ ಹೆಚ್ಚಿರುತ್ತದೆ. ಇದು ನೆಲದಲ್ಲಿ ಹಾಗೇ ಉಳಿದು ನೆಲ ನಿಷ್ಪ್ರಯೋಜಕ ಆಗಿಬಿಡುತ್ತದೆ. ಸಕ್ಕರೆ, ರಾಸಾಯನಿಕ ಮುಂತಾದ ಉದ್ದಿಮೆಗಳು ಹೊರಚೆಲ್ಲುತ್ತಿರುವ ಕಲ್ಮಶಗಳಿಂದ ಕುಡಿಯುವ ನೀರು-ಗಾಳಿ ವಿಷವಾಗಿದೆ. ಈ ಕಸವನ್ನು ನಾಶಪಡಿಸುವ ಪ್ರಯತ್ನ ನಡೆದಿಲ್ಲ.

ನಾಗರಿಕತೆ ಬೆಳೆದಂತೆಲ್ಲ ಮಾನವ ಸೃಷ್ಟಿಸುವ ಕಸ (ತರಕಾರಿ ಸಿಪ್ಪೆ, ಪ್ಲಾಸ್ಟಿಕ್ ಚೀಲಗಳು, ಉಳಿಕೆ ಆಹಾರ ಇತ್ಯಾದಿ) ದೊಡ್ಡ ಸಮಸ್ಯೆ ಆಗಿದೆ. ಒಂದು ಅಂದಾಜಿನಂತೆ ನಗರದ ಪ್ರತಿ ವ್ಯಕ್ತಿ ೫೫೦ ಗ್ರಾಂ ಕಸ ಸೃಷ್ಟಿಸುತ್ತಾನೆ. ಅಂದರೆ, ಬೆಂಗಳೂರು ನಗರವೊಂದರಲ್ಲೇ ಪ್ರತಿದಿನ ೩,೦೦೦ ಟನ್ ಕಸ ಉತ್ಪತ್ತಿ ಆಗುತ್ತದೆ. ಅವುಗಳಿಂದಾಗಿ ಬೆಂಗಳೂರಿನ ಕೆರೆಗಳು ನಾಶವಾದವು. ಖಾಲಿ ಜಾಗ ಕಸದ ಗುಡ್ಡಗಳಾಗಿವೆ. ಈ ಕಸವನ್ನೇ ಬಳಸಿ ವಿದ್ಯುತ್ ಉತ್ಪಾದನೆ ಮಾಡಿದ್ದರೆ ನಗರದ ವಿದ್ಯುತ್ ಅಗತ್ಯದ ಅರ್ಧದಷ್ಟು ಪೂರೈಸಬಹುದಿತ್ತು. ಇಂತಹ ಪ್ರಯತ್ನ ಮುಂಬೈಯಲ್ಲಿ ಆಗಿದೆ. ಬೆಂಗಳೂರಿನ ಒಳಚರಂಡಿಗಳಿಂದ ಉಂಟಾಗುತ್ತಿರುವ ಪರಿಸರ ಮಾಲಿನ್ಯ ಊಹೆಗೆ ನಿಲುಕದ್ದು. ಈ ನೀರನ್ನು ಶುದ್ಧೀಕರಿಸಿ ತೋಟಗಾರಿಕೆ, ಕಟ್ಟಡ ನಿರ್ಮಾಣಗಳಿಗೆ ಬಳಸಬಹುದು. ನಾಗರಿಕತೆಯನ್ನು ಒಪ್ಪುವಲ್ಲಿ ಇದು ಅನಿವಾರ್ಯ. ಅಪಾಯದ ಸವಾಲುಗಳನ್ನು ಸ್ವೀಕರಿಸಿದ್ದರಿಂದಲೇ ಪ್ರಾಚೀನ ಶಿಲಾಯುಗದಿಂದ ಇಂದಿನ ತಂತ್ರಜ್ಞಾನದ ತನಕ ಸಾಗಿಬರಲು ಸಾಧ್ಯವಾದದ್ದು. ನಾವು ಸಾಧ್ಯವಾದಷ್ಟು ಪರಿಸರ ರಕ್ಷಣೆಗೆ ಒತ್ತು ಕೊಟ್ಟು, ಉತ್ತಮ ತಂತ್ರಜ್ಞಾನ ಬಳಸಿ ಪರಿಸರದ ಹಾನಿ ತಪ್ಪಿಸುವ ಪ್ರಯತ್ನ ಮಾಡಿ ಮುಂದುವರಿಯುವುದೊಂದೇ ದಾರಿ.

ನಮ್ಮ ರಾಜ್ಯದಲ್ಲಿರುವ ಕೃಷ್ಣ-ಕಾವೇರಿಯೂ ಸೇರಿದಂತೆ ಹಲವು ನದಿಗಳು ಅಪಾಯದ ಪಟ್ಟಿಯಲ್ಲಿವೆ. ನಮ್ಮ ರಾಜ್ಯದ ನೀರಿನ ಗುಣಮಟ್ಟದ ಉಸ್ತುವಾರಿ ಕೇಂದ್ರಗಳು ನದೀಮಾಲಿನ್ಯ ಸರಿಪಡಿಸಲು ಕಷ್ಟ ಅನ್ನುವ ಹಂತ ತಲುಪಿವೆ ಎಂದು ಹೇಳಿವೆ. ಉತ್ತರ ಭಾರತದಲ್ಲಿ ಗಂಗಾ, ಯಮುನಾ ನದಿಗಳ ಶುದ್ಧೀಕರಣ ನಡೆದಿದೆ. ಅವುಗಳಷ್ಟೇ ಕೊಳಕಾಗಿರುವ ನಮ್ಮ ರಾಜ್ಯದ ನದಿಗಳ ಶುದ್ಧೀಕರಣದ ಬಗ್ಗೆ ಯೋಚಿಸಿಯೂ ಇಲ್ಲ. ತುರ್ತಾಗಿ ನದೀ ಪಾತ್ರದಲ್ಲಿರುವ ಯಾತ್ರಾ (ಪವಿತ್ರ) ಸ್ಥಳಗಳಲ್ಲಿ ಶೌಚಾಲಯ ನಿರ್ಮಾಣವಾಗಬೇಕು. ನದೀ ಶುದ್ಧೀಕರಣ ಮಾಡುವಂತೆ ಕೇಂದ್ರ ಸರ್ಕಾರಕ್ಕೆ ಒತ್ತಾಯಿಸಬೇಕು.

'ದೇಶದ ಜನತೆಗೆ ಕುಡಿಯಲು ಶುದ್ಧನೀರು, ಕಲಬೆರೆಕೆ ರಹಿತ ಆಹಾರ ಮತ್ತು ಬದುಕಲು ಸ್ವಚ್ಛ ವಾತಾವರಣ ಇವಿಷ್ಟನ್ನು ಕಲ್ಪಿಸಿದರೆ ೬೦% ರಷ್ಟು ಜನರು ರೋಗದಿಂದ ಪಾರಾದಂತೆ' ಎಂದು ತಜ್ಞರ ಅಭಿಮತ.

ಈ ಲೇಖನದಲ್ಲಿ ಪ್ರಸ್ತಾಪವಾಗದ ಬಹಳಷ್ಟು ಸಂಗತಿಗಳಿವೆ. ಅದರಲ್ಲಿ ಬಹಳ ಮುಖ್ಯವಾದುದು ವಸತಿಗೆ ಸಂಬಂಧಿಸಿದ ಸಂಗತಿ. ವಸತಿಗೆ ಸಂಬಂಧಿಸಿದಂತೆ ರಾಷ್ಟ್ರದ ನಿರ್ವಸತಿಗರಿಗಿಂತ ಕರ್ನಾಟಕದಲ್ಲಿ ಹೆಚ್ಚು ನಿರ್ವಸತಿಗರಿದ್ದಾರೆ. ಅದರಲ್ಲಿಯೂ ಗ್ರಾಮೀಣ ಪ್ರದೇಶದಲ್ಲಿ ರಾಷ್ಟ್ರದ ಸರಾಸರಿಗಿಂತ ಕೆಳಗಿದ್ದೇವೆ. ಇವುಗಳ ಬಗ್ಗೆ ಬರೆಯಲಾಗದ್ದಕ್ಕೆ ವಿಷಾದವಿದೆ. ಮಾಹಿತಿಯ ಕೊರತೆ ಮತ್ತು ಸಮಯಾಭಾವದಿಂದ ಸಹಕಾರಿ ಕ್ಷೇತ್ರ, ಹೈನುಗಾರಿಕೆಗಳ ಬಗ್ಗೆ ಬರೆಯಲು ಆಗಿಲ್ಲ; ಕರ್ನಾಟಕವು ರಾಜ್ಯವಲಸೆಯಿಂದ ಎದುರಿಸುತ್ತಿರುವ ಸಮಸ್ಯೆಯನ್ನು ವಿಷಯಬಾಹುಳ್ಯದಿಂದ ಪ್ರಸ್ತಾಪಿಸಿಲ್ಲ. ವಲಸೆಯೇ ಒಂದು ಲೇಖನಕ್ಕಾಗುವ ವಿಷಯವಾದದ್ದು. ಹಾಗೇ ಸಮೂಹ ಮಾಧ್ಯಮ, ಸರ್ಕಾರದ ಪ್ರಕಟಣೆಗಳು ಸೇರಿದಂತೆ ಹಲವು ಕ್ಷೇತ್ರಗಳ ಬಗ್ಗೆ ಒಂದು ನಿಷ್ಪಕ್ಷವಾದ ವರದಿಯನ್ನು ಸಿದ್ಧಪಡಿಸುವ ಅಗತ್ಯವಿದೆ. ೨೦೦೬ ಕ್ಕೆ ಕರ್ನಾಟಕ ಏಕೀಕರಣವಾಗಿ ೫೦ ವರ್ಷಗಳಾಗುತ್ತಿವೆ. ಈ ಸುವರ್ಣ ಮಹೋತ್ಸವ ಸಂದರ್ಭಕ್ಕೆ ಕರ್ನಾಟಕವು ಈ ೫೦ ವರ್ಷಗಳಲ್ಲಿ ಮಾಡಿದ ಸಾಧನೆ-ವೈಫಲ್ಯಗಳ ಬಗ್ಗೆ ವಿವರಣಾತ್ಮಕವಾದ ವರದಿಗಳನ್ನು ಕ್ಷೇತ್ರವಾರು ಸಿದ್ಧಪಡಿಸುವ ಕೆಲಸ ಆಗಬೇಕು. ಆ ಕೆಲಸಗಳಿಗೆ ಇಂತಹ ಅಪೂರ್ಣ ಲೇಖನಗಳು ಪೀಠಿಕೆ ಆಗಲಿ ಎಂಬ ಆಶಯದಿಂದ ಈ ಲೇಖನವನ್ನು ಪೂರೈಸಿದ್ದೇನೆ. ಏಕೀಕರಣ ಶಿಲ್ಪಿ ನಿಜಲಿಂಗಪ್ಪನವರು ಅಂತರಂಗ ಬಹಿರಂಗ ಶುದ್ಧಿಯನ್ನು ಕಾಪಾಡಿಕೊಂಡಿದ್ದವರು. ಅವರ ಕನಸಿನ ಕರ್ನಾಟಕ ನಿರ್ಮಾಣವಾಗಲಿ ಎಂದು ಆಶಿಸುತ್ತೇನೆ.

## ಮಾಹಿತಿ ಮೂಲ

೧. ಆರ್ಥಿಕ ಸಮೀಕ್ಷೆ
ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ, ಕರ್ನಾಟಕ ಸರ್ಕಾರ

೨. ಕರ್ನಾಟಕ ಅಂಕಿ - ಅಂಶಗಳ ನೋಟ - ೨೦೦೦-೨೦೦೧
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ ಸರ್ಕಾರ

೩. ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ.

೪. ಸಾರ್ವಜನಿಕ ಉದ್ಯಮಗಳ ಸಮೀಕ್ಷೆ
ಕರ್ನಾಟಕ ರಾಜ್ಯ ಸಾರ್ವಜನಿಕ ಉದ್ಯಮಗಳ ಮಹೋದ್ಯಮ.

೫. ತೋಟಗಾರಿಕೆ ಸಾಂಖ್ಯಿಕ ಕೈಪಿಡಿ-೨೦೦೧
ಕರ್ನಾಟಕ ತೋಟಗಾರಿಕೆ ಅಧಿಕಾರಿಗಳ ಸಂಘ

೬. ಡಾ। ಡಿ. ಎಂ. ನಂಜುಂಡಪ್ಪ ನೇತೃತ್ವದ ಪ್ರಾದೇಶಿಕ ಅಸಮತೋಲನ ನಿವಾರಣ ಉನ್ನತಾಧಿಕಾರ ಸಮಿತಿ ವರದಿಯ ಸಾರಾಂಶ-೨೦೦೨

೭. ಕನ್ನಡ-ಕನ್ನಡಿಗ-ಕರ್ನಾಟಕ
ಕನ್ನಡ ಶಕ್ತಿ ಕೇಂದ್ರ
೮. ಕರ್ನಾಟಕ, ಕರ್ನಾಟಕ ನಾಮಕರಣ ಮಹೋತ್ಸವ ಸಮಿತಿ-೧೯೭೩
೯. ಕರ್ನಾಟಕದಲ್ಲಿ ಕೆರೆ ನೀರಾವರಿ
೧೦. ಕನ್ನಡ ಅಧ್ಯಯನ - ಭವಿಷ್ಯದ ಕರ್ನಾಟಕ
೧೧. ಕನ್ನಡ ಅಧ್ಯಯನ - ಕರ್ನಾಟಕದ ಪರಿಸರ
೧೨. ಅಭಿವೃದ್ಧಿ ಅಧ್ಯಯನ ಸಂಪುಟ - ೧, ಸಂಚಿಕೆ-೧
ಮೇಲಿನ ೫ ಪುಸ್ತಕಗಳ ಪ್ರಕಾಶರು ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೩. ಕುದುರೆ ಮುಖ ಗಣಿಗಾರಿಕೆ-ವಾಸ್ತವ ಮತ್ತು ಮಿಥ್ಯೆ, ಪ್ರಗತಿಪರ ಜನಸಮುದಾಯ ಪ್ರಕಾಶನ, ಮಂಗಳೂರು
೧೪. ಪರಿಸರ : ಮುಂದೇನು? ಪರಿಸರ ವಿಜ್ಞಾನ ಪರಿಷತ್ತು, ಬೆಂಗಳೂರು-೧೨
೧೫. ಕಾವೇರಿ ಜಲವಿವಾದ-ನೀರಿಗಾಗಿ ಶತಮಾನದ ತೀರದ ಬವಣೆ-ಕರ್ನಾಟಕ ಸರ್ಕಾರ
೧೬. ಕೇಳಿ ಕೃಷ್ಣೆಯ ಕೂಗು - ಎಚ್. ಕೆ. ಪಾಟೀಲ್
೧೭. ಯೋಜನಾ, ಕನ್ನಡ ಪ್ರಭ, ವಿಜಯ ಕರ್ನಾಟಕದ ಪತ್ರಿಕೆಗಳು
೧೮. Karnataka-India Basic Statistics, Directorate of Economics & Statistics.
೧೯. Karnataka Economic Review, 1989-90, Directorate of Economics & Statistics.
೨೦. Irrigation in Karnataka, 1996-97, Irrigation Dept, Karnataka Government.
೨೧. Optimum Development of Krishna & Cauvery Basins - S.G. Balekundri, Karanataka Vikasa Vedike.
೨೨. India 2001- Government of India.
೨೩. The Times of India - The Economic Times.
೨೪. ಸುಪ್ರೀಮ್ ಕೋರ್ಟಿನಲ್ಲಿ ಭೋರ್ಗರೆಯುತ್ತಿರುವ ಭೀಮಾ ನದಿ - ಡಾ। ಕೃಷ್ಣ ಕೊಲ್ಹಾರ ಕುಲಕರ್ಣಿ
೨೫. An Approach to the Ninth Five Year Plan, Planning Department. Karnataka.
೨೬ The Millennium in Policy, Karnataka Government.

# ಸ್ವಾತಂತ್ರ್ಯ ಚಳವಳಿ

ಡಾ। ಎಂ. ಬಿ. ಪದ್ಮ

## ಪೀಠಿಕೆ

ಮನುಕುಲದ ಇತಿಹಾಸದಲ್ಲಿ ಅದ್ವಿತೀಯ ಹಾಗೂ ಉಜ್ವಲ ಅಧ್ಯಾಯದ ವಿಷಯವಾಗಿರುವ ಭಾರತದ ಅದ್ಭುತ ಅಹಿಂಸಾತ್ಮಕ ಸ್ವಾತಂತ್ರ್ಯ ಸಮರದಲ್ಲಿ ಸ್ತುತ್ಯಾರ್ಹವಾದ ಪಾತ್ರವನ್ನು ಕರ್ನಾಟಕ ನಿರ್ವಹಿಸಿದೆ. ಈ ಚಳವಳಿಯ ಸಮಯದಲ್ಲಿ ಕರ್ನಾಟಕ ಏಕೀಕೃತ ನಾಡಾಗಿರಲಿಲ್ಲ. ಅದರ ಜಿಲ್ಲೆಗಳು ಮುಂಬೈ, ಮದ್ರಾಸ್ ಹಾಗೂ ಹೈದ್ರಾಬಾದ್ ಪ್ರಾಂತ್ಯಗಳ ಭಾಗಗಳಾಗಿದ್ದವು. ಮೈಸೂರು, ಸಂಡೂರು ಮುಂತಾದವು ಆಶ್ರಿತ ಸಂಸ್ಥಾನಗಳಾಗಿದ್ದವು. ಭೌಗೋಳಿಕವಾಗಿ ಅದರ ಪ್ರಾಂತ್ಯಗಳು ಚದುರಿಹೋಗಿದ್ದವು. ಆದರೂ ರಾಷ್ಟ್ರೀಯ ಭಾವನೆ, ದೇಶಪ್ರೇಮ ಹಾಗೂ ಸ್ವಾತಂತ್ರ್ಯ ಪ್ರಿಯತೆ ಜನರ ಸಾಮಾನ್ಯ ಲಕ್ಷಣಗಳಾಗಿದ್ದವು. ಬ್ರಿಟಿಷರ ಆಳ್ವಿಕೆಯನ್ನು ಅಳಿಸಿಹಾಕಿ ಸ್ವಾತಂತ್ರ್ಯದ ಸವಿಯನ್ನು ಅನುಭವಿಸಬೇಕೆಂಬ ಹೆಬ್ಬಯಕೆ ಅವರಲ್ಲಿ ಬಲವಾಗಿತ್ತು. ಕರ್ನಾಟಕದಲ್ಲಿ ನಡೆದ ಭಾರತದ ಸ್ವಾತಂತ್ರ್ಯ ಚಳವಳಿಯನ್ನು ಮೂರು ಘಟ್ಟಗಳಲ್ಲಿ ಗುರುತಿಸಬಹುದು. ಮೊದಲನೆಯದಾಗಿ ಕರ್ನಾಟಕದ ಮಣ್ಣಿನಿಂದ ಬ್ರಿಟಿಷರನ್ನು ಹೊಡೆದೋಡಿಸಲು ಹೈದರಾಲಿ, ಟಿಪ್ಪುಸುಲ್ತಾನ್ ನಡೆಸಿದ ಯತ್ನ. ಎರಡನೆಯದಾಗಿ ದತ್ತು ಮಕ್ಕಳಿಗೆ ರಾಜ್ಯಾಧಿಕಾರಕ್ಕೆ ಹಕ್ಕಿಲ್ಲ ಎಂದಾಗ ಬ್ರಿಟಿಷರ ನಿರಂಕುಶಾಧಿಕಾರದ ವಿರುದ್ಧ ಅನೇಕ ರಾಜರು ಹಾಗೂ ಅವರ ಯೋಧರು ಆಯುಧಗಳನ್ನು ಹಿಡಿದು ದಂಗೆ ಎದ್ದರು. ಮೂರನೆಯದಾಗಿ ಮಹಾತ್ಮ ಗಾಂಧಿ ಅವರ ನೇತೃತ್ವದ ಅಹಿಂಸಾತ್ಮಕ ಸತ್ಯಾಗ್ರಹ.

## ಮೊದಲ ಹಂತ

ಕರ್ನಾಟಕದಲ್ಲಿ ೧೭೬೦ ರಿಂದ ಹಿಡಿದು ಬ್ರಿಟಿಷರು ಭಾರತವನ್ನು ಬಿಟ್ಟು ಹೋಗುವವರೆಗೆ ನಿರಂತರವಾಗಿ ಸ್ವಾತಂತ್ರ್ಯ ಚಳವಳಿ ನಡೆಯಿತು. ಮೊದಲಿಗೆ ಅದು ಸಣ್ಣ ಪುಟ್ಟ ಹೊಳೆಯಂತಿದ್ದು ಅನಂತರ ಅದು ದೊಡ್ಡ ನದಿಯಾಯಿತು. ಬ್ರಿಟಿಷ್ ವಿರೋಧಿ ನೀತಿಯನ್ನು ಅನುಸರಿಸಿದ ಹೈದರಾಲಿ, ಅದನ್ನು ಮುಂದುವರೆಸಿದ ಅವನ ಮಗ ಟಿಪ್ಪುಸುಲ್ತಾನ್ ಬ್ರಿಟಿಷರಿಗೆ ಒಂದು ಭಯಂಕರ ದುಃಸ್ವಪ್ನವೇ ಆಗಿದ್ದರು. ೧೭೯೯ರಲ್ಲಿ ಟಿಪ್ಪು ವೀರಮರಣವನ್ನು ಅಪ್ಪಿದಾಗ ಬ್ರಿಟಿಷರು ದೊಡ್ಡ ಗಂಡಾಂತರ ಕಳೆಯಿತೆಂದು ಭಾವಿಸಿದರು.

ಆದರೆ ಸ್ವಾತಂತ್ರ್ಯಪ್ರಿಯರಾಗಿದ್ದ ಪಾಳೇಗಾರರು, ಜಮೀನ್ದಾರರು ಹಾಗು ಸಣ್ಣಪುಟ್ಟ ದೊರೆಗಳು ಬ್ರಿಟಿಷರ ವಿರುದ್ಧ ಸತತವಾಗಿ ಹೋರಾಟ ನಡೆಸಿ ಅವರಿಗೆ ತಲೆನೋವನ್ನುಂಟು ಮಾಡಿದರು. ಬ್ರಿಟಿಷರ ವಿರುದ್ಧದ ದಂಗೆಯ ಕಿಡಿಯನ್ನು ಜ್ವಾಲೆಯನ್ನಾಗಿಸಿ ಅವರಿಗೆ ಸಾಕಷ್ಟು ತೊಂದರೆಗಳನ್ನುಂಟುಮಾಡಿದವರಲ್ಲಿ ಮುಖ್ಯನಾಗಿದ್ದವನು, ಬಿದನೂರಿನ ದೋಂಡಿಯಾ ವಾಘ್. ಹೈದರ್ ಹಾಗೂ ಟಿಪ್ಪುವಿನ ಸೈನ್ಯದಲ್ಲಿದ್ದ ಅವನನ್ನು ಇಸ್ಲಾಂ ಮತಕ್ಕೆ ಸೇರಬೇಕೆಂದು ಟಿಪ್ಪು ಒತ್ತಾಯ ಮಾಡಿದ. ಆದರೆ ಅದಕ್ಕೆ ಮಣಿಯದೆ ಟಿಪ್ಪುವಿನ ಸೆರೆವಾಸಿಯಾದನು. ನಂತರ ೧೭೯೯ರಲ್ಲಿ

ಸೆರೆಯಿಂದ ಮುಕ್ತನಾಗಿ ಬ್ರಿಟಿಷರಿಂದ ನಾಡನ್ನು ಬಿಡಿಸಲು ನಿರ್ಧರಿಸಿ ಜನ ಹಾಗೂ ಧನಬಲ ಸಂಪಾದಿಸಿಕೊಂಡ. ಜನರಲ್ಲಿ ಸ್ವಾತಂತ್ರ್ಯದ ದಾಹ ಇಮ್ಮಡಿಸುವಂತೆ ಮಾಡಿದನು. ಅವನು ಅನೇಕ ಪ್ರದೇಶಗಳನ್ನು ಆಕ್ರಮಿಸಿಕೊಂಡಾಗ ಅವನನ್ನು ನಿಯಂತ್ರಿಸಲು ಸ್ವತಃ ಆರ್ಥರ್ ವೆಲ್ಲೆಸ್ಲಿಯೇ ಬರಬೇಕಾಯಿತು. ಕೊನೆಗೆ ಅವನು ಬ್ರಿಟಿಷರ ಗುಂಡಿನೇಟಿಗೆ ಬಲಿಯಾದ. ಹೀಗೆ ವಾಘ್ ಏಕಾಂಗಿಯಾಗಿ ಸುಸಜ್ಜಿತ ಬ್ರಿಟಿಷ್ ಸೇನೆಯ ವಿರುದ್ಧ ಹೋರಾಡಿ ತಾನು ಎಂತಹ ಧೈರ್ಯಶಾಲಿ, ಸಾಹಸಿ ಎಂಬುದನ್ನು ಕರ್ನಾಟಕ ಇತಿಹಾಸದಲ್ಲಿ ರುಜುವಾತುಪಡಿಸಿದ್ದಾನೆ.

ಅನಂತರ ಸ್ವಾತಂತ್ರ್ಯದ ಕಿಡಿಗಳು ಕೊಪ್ಪಳ ಹಾಗೂ ಬಿದರೆಯಲ್ಲಿ ೧೮೧೯ ಹಾಗೂ ೧೮೨೦ರಲ್ಲಿ ಪ್ರಖರವಾಗಿ ಹೊತ್ತಿಕೊಂಡು ಬ್ರಿಟಿಷ್ ಸರ್ಕಾರಕ್ಕೆ ಸಾಕಷ್ಟು ದೊಡ್ಡ ಸವಾಲಾಯಿತು. ನಿಜಾಮನ ನಿರಂಕುಶಾಧಿಕಾರದಿಂದ ಬೇಸತ್ತ ಕೊಪ್ಪಳದ ಜಮೀನ್ದಾರ ವೀರಪ್ಪ ಬ್ರಿಟಿಷರ ವಿರುದ್ಧ ದಂಗೆ ಎದ್ದನು. ಈ ದಂಗೆ ಜನಕ್ರಾಂತಿಯೇ ಆಯಿತು. ಅಂಗುಲ ಭೂಮಿಗಾಗಿ ಪ್ರಾಣವನ್ನೂ ಲೆಕ್ಕಿಸದೆ ಕಾದಾಡಿದ ವೀರಪ್ಪನಿಗೆ ಜಯ ಲಭಿಸದೆ ಇದ್ದುದು ದುರದೃಷ್ಟಕರ.

ಬಿದರೆಯಲ್ಲಿ ತಲೆಯೆತ್ತಿದ ಸ್ವಾತಂತ್ರ್ಯದ ಜ್ವಾಲೆ ಪ್ರಖರವಾಗಿರುವಂತೆ ನೋಡಿಕೊಂಡವರು ಶಿವಲಿಂಗಪ್ಪ, ತಿರುಮಲರಾಯ ಹಾಗೂ ಮೇಘಶ್ಯಾಮ. ಈ ಮೂವರು ನಾಯಕರು ದೇಶಮುಖರಾಗಿದ್ದರಿಂದ ಈ ದಂಗೆಗೆ ದೇಶಮುಖರ ದಂಗೆ ಎಂಬುದಾಗಿ ಹೆಸರಿಸಲಾಗಿದೆ. ಆದರೆ ಇಲ್ಲೂ ಬ್ರಿಟಿಷರ ಕೈ ಮೇಲಾಯಿತು.

ಕರ್ನಾಟಕ ಚರಿತ್ರೆಯಲ್ಲಿ ಕಿತ್ತೂರು ರಾಣಿ ಚೆನ್ನಮ್ಮ ಧೈರ್ಯೋತ್ಸಾಹಗಳಿಂದ ಬ್ರಿಟಿಷರನ್ನು ಎದುರಿಸಿ ನಾಡಿಗಾಗಿ ಮಾಡಿದ ಅಮೋಘ ಸೇವೆಯ ಅಧ್ಯಾಯ ಅತ್ಯಂತ ಪ್ರಜ್ವಲವಾದುದು. ಆಕೆಯ ದತ್ತು ಮಗನನ್ನು ಸಿಂಹಾಸನಾಧಿಕಾರಿ ಎಂದು ಬ್ರಿಟಿಷ್ ಕಮಿಷನರ್ ಥ್ಯಾಕರೆ ಒಪ್ಪಿಕೊಳ್ಳದಿದ್ದಾಗ ಯುದ್ಧ ಅನಿವಾರ್ಯವಾಯಿತು. ಸ್ವತಃ ಚೆನ್ನಮ್ಮನೇ ಸೇನಾಧಿಪತ್ಯದ ಸೂತ್ರವನ್ನು ಹಿಡಿದು ದಕ್ಷತೆಯಿಂದ ಸೇನೆಯನ್ನು ನಡೆಸಿ ವೀರಾವೇಶದಿಂದ ಕಾದಾಡಿದಳು. ದುರದೃಷ್ಟವಶಾತ್ ವಿಜಯಲಕ್ಷ್ಮಿ ಅವಳಿಗೆ ಒಲಿಯಲಿಲ್ಲ. ಅವಳು ಸೆರೆವಾಸವನ್ನು ಅನುಭವಿಸಬೇಕಾಗಿ ಬಂದಿತು. ಕೈದಿಯಾಗಿದ್ದ ಈ ಧೀರ ಮಹಿಳೆ ೧೮೨೯ರಲ್ಲಿ ಸೆರೆಯಾಳಾಗಿಯೇ ಮೃತಳಾದಳು. ಝಾನ್ಸಿರಾಣಿಗಿಂತ ಮೂವತ್ತಮೂರು ವರ್ಷಗಳ ಮೊದಲೇ ಬ್ರಿಟಿಷರ ವಿರುದ್ಧ ಸೆಟೆದು ನಿಂತು ಹೋರಾಡಿದ ಈ ಸಾಹಸಿ ರಾಣಿಯ ಪರಾಕ್ರಮ ಶೌರ್ಯಗಳ ಕತೆ, ಕನ್ನಡ ಲಾವಣಿ, ನಾಟಕ ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲಿ ಅಮರವಾಗಿದೆ.

ಇಷ್ಟಾದರೂ ಕಿತ್ತೂರಿನ ಜನರ ಸ್ವಾತಂತ್ರ್ಯ ದಾಹ ಅಡಗಲಿಲ್ಲ. ಸಂಗೊಳ್ಳಿ ರಾಯಣ್ಣನೆಂಬ ಸಾಮಾನ್ಯ ಪ್ರಜೆ ಒಂದು ವ್ಯವಸ್ಥಿತ ದಂಗೆಯನ್ನು ಅಣಿಗೊಳಿಸಿ ಕಿತ್ತೂರು ಜನರ ಅದ್ವಿತೀಯ ಸ್ವಾತಂತ್ರ್ಯ ಪ್ರೇಮವನ್ನ ಎತ್ತಿತೋರಿಸಿದನು. ಬ್ರಿಟಿಷರನ್ನು ಎದೆಗುಂದಿಸಿ ಅವರಿಗೆ ಸಿಂಹಸ್ವಪ್ನವಾಗಿದ್ದ ಅವನನ್ನು ದೇಶದ್ರೋಹಿಗಳು ಬ್ರಿಟಿಷರಿಗೆ ಹಿಡಿದು ಕೊಟ್ಟಾಗ ಅವನನ್ನು ಗಲ್ಲುಗಂಬಕ್ಕೆ ಏರಿಸಿದರು.

ಪುನಃ ದಂಗೆಯ ಕಿಡಿಗಳು ಕೊಡಗು ಹಾಗೂ ದಕ್ಷಿಣ ಕನ್ನಡ ಪ್ರದೇಶದಲ್ಲಿ ತಲೆಯೆತ್ತಿತು. ಚಿಕವೀರರಾಜನ ಕಾಲದಲ್ಲಿ ಕೊಡಗು ಹಾಗೂ ಬ್ರಿಟಿಷರ ನಡುವೆ ವೈಮನಸ್ಯವುಂಟಾಗಿ ಅದು ಯುದ್ಧಕ್ಕೆ ಕಾರಣವಾಯಿತು. ಬ್ರಿಟಿಷರು ಕೊಡಗನ್ನು ವಶಪಡಿಸಿಕೊಂಡರು. ಆದರೆ ಸ್ವಾತಂತ್ರ್ಯ ಪ್ರೇಮಿಗಳಾಗಿದ್ದ ಕೊಡಗಿನ ಜನರು ಅಪರಂಪಾರಸ್ವಾಮಿ, ಕಲ್ಯಾಣಸ್ವಾಮಿ ಹಾಗೂ ಪುಟ್ಟಬಸವಪ್ಪ ಅವರ ನಾಯಕತ್ವದಲ್ಲಿ ಹೋರಾಟವನ್ನು ಮುಂದುವರೆಸಿದರು. ಆದರೆ ಅದೃಷ್ಟ ದೇವತೆ ಬ್ರಿಟಿಷರ ಪರವಾಗಿದ್ದಳು. ಆ ಕಾರಣ ಕೊಡಗು ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅರಳಲು ಆರಂಭಿಸಿದ್ದ ಸ್ವಾತಂತ್ರ್ಯ ಪುಷ್ಪಗಳು ಕಮರಿಹೋದವು. ಹೀಗೆ ೧೮೫೭ರವರೆಗೆ ಈ ನಾಡಿನಲ್ಲಿ ಸ್ವಾತಂತ್ರ್ಯವನ್ನು ಪಡೆಯಲೇಬೇಕೆಂಬ ದೃಢ ನಿರ್ಧಾರದಿಂದ ದೇಶ ಪ್ರೇಮಿಗಳು ಪ್ರತ್ಯೇಕವಾಗಿ ಕೈಗೊಂಡ ಪ್ರಯತ್ನಗಳು ಸಣ್ಣ ಪುಟ್ಟ ಜ್ವಾಲೆಗಳಾಗಿ ಬ್ರಿಟಿಷರನ್ನು ಸಾಕಷ್ಟು ಸತಾಯಿಸಿದವು.

೧೮೫೭ರಲ್ಲಿ ಪ್ರಥಮ ಸ್ವಾತಂತ್ರ್ಯ ಸಮರ ರಾಷ್ಟ್ರವ್ಯಾಪಕವಾದಾಗ ಕರ್ನಾಟಕದ ಜನರು ಅದರಲ್ಲಿ ಭಾಗಿಗಳಾದರು. ಈ ಸ್ವಾತಂತ್ರ್ಯದಾವಾಗ್ನಿಯಲ್ಲಿ ಪ್ರಾಣಾರ್ಪಣೆ ಮಾಡಿದವರು ಸಾವಿರಾರು ಮಂದಿ. ಆದರೆ ಒಂದೂರಿನ ಸಮಸ್ತ ಜನಸಮುದಾಯವೇ ಸ್ವಾತಂತ್ರ್ಯಕ್ಕಾಗಿ ಬಲಿದಾನ ಮಾಡಿದ ಅಪೂರ್ವ ದೃಷ್ಟಾಂತವನ್ನು ನೀಡುವ ಭಾಗ್ಯ ಕನ್ನಡನಾಡಿನದು. ಈ ಮಹಾ ಸಮುದಾಯವೇ ಹಲಗಲಿಯ ಬೇಡರು. ಇವರಿಗೆ ತಮ್ಮ ಆಯುಧಗಳೇ ಅತ್ಯಂತ ಪವಿತ್ರ ಪೂಜಾ ವಸ್ತುಗಳಾಗಿದ್ದವು. ಹೀಗಿರುವಾಗ ಬ್ರಿಟಿಷ್ ಸರ್ಕಾರವು ನಿಶ್ಶಸ್ತ್ರೀಕರಣ ಶಾಸನವನ್ನು ಜಾರಿಗೆ ತಂದಾಗ ಈ ಬೇಡರು ತಮ್ಮ ಪರಂಪರಾನುಗತ ಹಕ್ಕನ್ನು ತ್ಯಜಿಸಲು ಒಪ್ಪದೆ ಬ್ರಿಟಿಷರನ್ನು ಎದುರಿಸಿದರು. ಬ್ರಿಟಿಷ್ ಸರ್ಕಾರ ಒಂದು ದೊಡ್ಡ ಸೇನೆಯನ್ನು ಕಳುಹಿಸಿತು. ವೀರಾವೇಶದಿಂದ ಕಾದಾಡುತ್ತಿದ್ದ ಈ ಬೇಡರನ್ನು ನಿಗ್ರಹಿಸುವುದು ಸುಲಭ ಸಾಧ್ಯವಾಗಿರಲಿಲ್ಲ. ಆಗ ಬ್ರಿಟಿಷ್ ಸೇನಾಧಿಕಾರಿ ಮೋಸದಿಂದ ಹಲಗಲಿ ಬೇಡರ ಮನೆಗಳನ್ನು ಸುಟ್ಟು ಹಾಕಿ,

ಬೇಡರನ್ನು ಜೀವಂತವಾಗಿ ಅಗ್ನಿಗೆ ಅರ್ಪಿಸಿದನು. ಕೈಗೆ ಸಿಕ್ಕಿದವರನ್ನು ಗಲ್ಲಿಗೇರಿಸಿದನು. ತನ್ನ ಹೇಯಕೃತ್ಯವನ್ನು ಸಮರ್ಥಿಸಲು ಅರಳೆ ಮೂಟೆಗಳಿಗೆ ಬೆಂಕಿ ತಗುಲಿತೆಂಬುದಾಗಿ ಸುಳ್ಳು ವರದಿ ನೀಡಿದನು. ಕೇವಲ ಅಲ್ಪ ಸಂಖ್ಯೆಯಲ್ಲಿದ್ದ ಹಲಗಲಿಯ ಬೇಡರನ್ನು ನಿಗ್ರಹಿಸಲು ಬ್ರಿಟಿಷ್ ಸುಸಜ್ಜಿತ ಸೇನೆಯೇ ಬರಬೇಕಾಯಿತು. ಗುಲ್ಬರ್ಗಾ ಜಿಲ್ಲೆಯ ಸುರಪುರ ಬ್ರಿಟಿಷರು, ನಿಜಾಮ ಹಾಗೂ ಮರಾಠರಿಂದಾಗಿ ದುಃಸ್ಥಿತಿಯಲ್ಲಿತ್ತು. ಆಗ ಅಲ್ಲಿ ಸ್ವಾತಂತ್ರ್ಯದ ಜ್ವಾಲೆ ಕಾಣಿಸಿಕೊಂಡಿತು. ಅಲ್ಲಿನ ಮುಖ್ಯಸ್ಥ ವೆಂಕಟಪ್ಪನಾಯಕನು ಬ್ರಿಟಿಷರನ್ನು ವಿರೋಧಿಸುತ್ತಿದ್ದವರ ಜೊತೆ ಕೈಜೋಡಿಸಿದಾಗ ಅವನನ್ನು ಸದೆ ಬಡಿಯಲು ಬ್ರಿಟಿಷರು ಯತ್ನಿಸಿದರು. ನಿಜಾಮನ ಪಿತೂರಿ ಹಾಗೂ ವಂಚಕತನ ಕುತಂತ್ರದಿಂದಾಗಿ ಅವನು ಬಂಧಿಯಾದ. ಸ್ವಾಭಿಮಾನಿಯಾಗಿದ್ದ ಅವನು ಆತ್ಮಹತ್ಯೆ ಮಾಡಿಕೊಂಡದ್ದು ಸಹಜವೇ ಸರಿ!

೧೮೫೮ರಲ್ಲಿ ಧಾರವಾಡದ ನರಗುಂದದಲ್ಲಿ ಬ್ರಿಟಿಷರ ನಿಶ್ಶಸ್ತ್ರೀಕರಣ ಹಾಗೂ ದತ್ತು ಮಕ್ಕಳಿಗೆ ಹಕ್ಕಿಲ್ಲ ಎಂಬ ಬಹು ಖಂಡನಾರ್ಹ ಕಾಯಿದೆ ಕಾರಣ, ಅಲ್ಲಿಯವರೆಗೆ ಬೂದಿ ಮುಚ್ಚಿಕೊಂಡಿದ್ದ ಸ್ವಾತಂತ್ರ್ಯ ಪ್ರೇಮ ಕೆಂಡವಾಯಿತು. ಅದಕ್ಕೆ ಗಾಳಿ ಬೀಸಿ ತುಪ್ಪ ಸುರಿದವನು ಮಹಾನ್ ಹೋರಾಟಗಾರನಾದ ಬಾಬಾ ಸಾಹೇಬ್ ಎಂಬುದಾಗಿ ಪ್ರಸಿದ್ಧನಾಗಿದ್ದ ಭಾಸ್ಕರರಾಯ, ಅವನು ನೆರೆಹೊರೆಯ ನಾಯಕರೊಂದಿಗೆ ಸಂಪರ್ಕ ಕಲ್ಪಿಸಿಕೊಂಡು ದಂಗೆ ಏಳಲು ಸಿದ್ಧತೆಗಳನ್ನು ಮಾಡಿಕೊಂಡಿದ್ದನು. ಬ್ರಿಟಿಷರ ವಿರುದ್ಧ ಕಾದಾಟ ಆರಂಭವಾದಾಗ ಕೆಲವು ವಿಶ್ವಾಸಘಾತುಕ ವ್ಯಕ್ತಿಗಳ ಸಹಾಯದಿಂದ ಬ್ರಿಟಿಷರು ಅವನನ್ನು ಸುಲಭವಾಗಿ ಸೆರೆಹಿಡಿದು ಗಲ್ಲಿಗೇರಿಸಿದರು. ಅನಂತರ ಅವನ ಅರಮನೆಯನ್ನು ಲೂಟಿ ಮಾಡಿದರು. ದೇಶಪ್ರೇಮಿ ಹಾಗೂ ಸಾಹಿತ್ಯ ಪೋಷಕನಾಗಿದ್ದ ಅವನ ಅಪೂರ್ವ ಗ್ರಂಥಭಂಡಾರವನ್ನು ನಾಶಪಡಿಸಿದರು.

ಇದೇ ವರ್ಷ ಬ್ರಿಟಿಷರು ಮತ್ತೋರ್ವ ವೀರ ದೇಶಪ್ರೇಮಿಯ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಅವನೇ ಮುಂಡರಗಿಯ ತಹಶೀಲ್ದಾರ ಭೀಮರಾಯ. ಅವನು ಬ್ರಿಟಿಷ್ ವಿರೋಧಿಗಳೊಡನೆ ಸೇರಿ ದಂಗೆಯೆದ್ದನು. ಬ್ರಿಟಿಷರ ಶೋಷಣಾ ನೀತಿಯಿಂದ, ತನ್ನ ನಾಡಿಗೆ ಉಂಟಾಗಿರುವ ಕಷ್ಟನಷ್ಟ ಸಂಕಟಗಳಿಂದ ರೊಚ್ಚಿಗೆದ್ದ ಅವನು ತನ್ನ ಮದ್ದುಗುಂಡುಗಳ ಸಂಗ್ರಹಣಾಗಾರಕ್ಕೆ ಬ್ರಿಟಿಷರು ಹಾಕಿದ್ದ ಬೀಗವನ್ನು ಮುರಿದು ಶಸ್ತಾಸ್ತ್ರಗಳನ್ನು ಅಪಹರಿಸಿ ಡಂಬಳವನ್ನು ಆಕ್ರಮಿಸಿ ಅಲ್ಲಿನ ಖಜಾನೆಯನ್ನು ಹಾಗೂ ಗದುಗಿನ ಅಂಚೆ ತಂತಿ ಕಚೇರಿಯನ್ನು ಕೊಳ್ಳೆ ಹೊಡೆದನು. ಅನಂತರ ಅವನು ಕೊಪ್ಪಳಕ್ಕೆ ಬಂದನು. ಆಗ ಬ್ರಿಟಿಷ್ ಪ್ರಬಲ ಸೇನೆ ಬಂದು ಕೊಪ್ಪಳವನ್ನು ೧೮೫೮ರ ಮೇ ತಿಂಗಳಲ್ಲಿ ವಶಪಡಿಸಿಕೊಂಡಿತು. ಹೆಸರಿಗೆ ತಕ್ಕಂತೆ ವೀರಭೀಮರಾಯ ಬ್ರಿಟಿಷರ ವಿರುದ್ಧ ಕಾದಾಡುತ್ತಾ ವೀರ ಮರಣವನ್ನು ಪಡೆದನು. ಈ ವೀರ ಮರಣದೊಂದಿಗೆ ಕರ್ನಾಟಕದಲ್ಲಿ ೧೮೫೭-೫೮ರ ಸ್ವಾತಂತ್ರ್ಯ ಚಳವಳಿಯ ಕಾರ್ಯಕ್ರಮಗಳು ಕೊನೆಗೊಂಡವು.

## ಎರಡನೆಯ ಹಂತ

ಕರ್ನಾಟಕದಲ್ಲಿ ೧೮೫೮ರ ಅನಂತರದ ಸ್ವಾತಂತ್ರ್ಯ ಚಳವಳಿ ಭಾರತದ ಇತರ ಭಾಗಗಳಂತೆ ಬ್ರಿಟಿಷರ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ನೀತಿಗೆ ವಿರುದ್ಧವಾದ ಹೋರಾಟವಾಗಿತ್ತು. ಆಧುನಿಕ ಇಂಗ್ಲಿಷ್ ಶಿಕ್ಷಣ, ರೈಸ್ ಮೊದಲಾದವರಿಂದಾದ ಕರ್ನಾಟಕ ಇತಿಹಾಸದ ಪರಿಶೋಧನೆ, ಆಲೂರು ವೆಂಕಟರಾವ್, ಗಳಗನಾಥ ಮೊದಲಾದ ಲೇಖಕರ ಪ್ರಭಾವಶಾಲಿ ಬರಹಗಳು ಬ್ರಿಟಿಷ್ ಆರ್ಥಿಕ ನೀತಿಯಿಂದ ಸ್ಥಳೀಯ ಜನರಿಗೆ ಉಂಟಾದ ಸಂಕಟ ಸುಧಾರಣಾ ಚಳವಳಿಗಳು, ಬಾಲಗಂಗಾಧರ ತಿಲಕರ 'ಕೇಸರಿ' ಅಲ್ಲದೆ 'ಸ್ವದೇಶಾಭಿಮಾನಿ', 'ರಾಜಹಂಸ', 'ಕನ್ನಡ ಕೇಸರಿ', 'ಕರ್ನಾಟಕ ವೈಭವ', ಮುಂತಾದ ಕನ್ನಡ ವೃತ್ತ ಪತ್ರಿಕೆಗಳು ಕರ್ನಾಟಕದ ಜನತೆಯಲ್ಲಿ ಉಂಟುಮಾಡಿದ ರಾಷ್ಟ್ರೀಯ ಪ್ರಜ್ಞೆಯಿಂದಾಗಿ ಸಂಪೂರ್ಣವಾಗಿ ಸ್ವಾತಂತ್ರ್ಯ ಪ್ರೇರಣೆ ಅರಳುವುದಕ್ಕೆ ಕಾರಣವಾಯಿತು. ಮುಂಬೈ ಹಾಗೂ ಮದ್ರಾಸ್ ಪ್ರಾಂತ್ಯಗಳಿಗೆ ಸೇರಿದ್ದ ಕರ್ನಾಟಕ ಪ್ರದೇಶಗಳಲ್ಲೂ ಈ ಸ್ವಾತಂತ್ರ್ಯ ಚಳವಳಿ ಆರಂಭಗೊಂಡಿತು. ೧೮೮೫ರಲ್ಲಿ ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದಾಗ ಅದರ ಅಧಿವೇಶನದಲ್ಲಿ ಬಳ್ಳಾರಿ ಹಾಗೂ ಬೆಳಗಾಂನಿಂದ ಹಲವು ರಾಷ್ಟ್ರವಾದಿಗಳು ಪಾಲ್ಗೊಂಡರು. ಕನ್ನಡ ಹಾಗೂ ಕರ್ನಾಟಕದ ಬಗ್ಗೆ ಜನರಲ್ಲಿ ಅಭಿಮಾನ ಮೂಡಿಸಬೇಕಾದುದು ಎಷ್ಟು ಅವಶ್ಯಕ ಎಂಬುದನ್ನು ಮನಗಂಡ ಆಲೂರು ವೆಂಕಟರಾಯರು ಕರ್ನಾಟಕ ಏಕೀಕರಣಕ್ಕಾಗಿ ಚಳವಳಿಯನ್ನು ಆರಂಭಿಸಿದರು. 'ಕರ್ನಾಟಕ ಗತ ವೈಭವ' ಎಂಬ ಪ್ರಸಿದ್ಧ ಕೃತಿಯನ್ನು ಬರೆದು ಜನರಲ್ಲಿ ರಾಷ್ಟ್ರಪ್ರೇಮ ಉಕ್ಕೇರುವಂತೆ ಮಾಡಿದರು.

ಮಹಾತ್ಮ ಗಾಂಧಿ ಅವರು ರಾಷ್ಟ್ರರಂಗ ಮಂಚವನ್ನು ಪ್ರವೇಶಿಸಿ ಪ್ರಧಾನ ನಾಯಕನ ಜವಾಬ್ದಾರಿಯುತ ಪಾತ್ರವನ್ನು ವಹಿಸಿಕೊಂಡ ಮೇಲೆ ನಡೆಸಿದ ಅಭೂತಪೂರ್ವ ಮೂರು ಸತ್ಯಾಗ್ರಹಗಳಲ್ಲಿ ಕರ್ನಾಟಕದ ಜನರು ಸಕ್ರಿಯವಾಗಿ ಭಾಗವಹಿಸಿದರು. ಅದಕ್ಕೂ ಮೊದಲೇ ಬಂಗಾಳ ವಿಭಜನೆಯನ್ನು ವಿರೋಧಿಸಿ ನಡೆದ ಪ್ರತಿಭಟನೆಯ ಪ್ರತಿಧ್ವನಿ ಧಾರವಾಡ, ಬೆಳಗಾಂ, ಗದಗ್, ಕಿತ್ತೂರು.

ಬಾಗಲಕೋಟೆಗಳಲ್ಲಿ ಕೇಳಿ ಬಂದಿತು. ಗಂಗಾಧರರಾವ್ ದೇಶಪಾಂಡೆ ಒಂದು ರಾಷ್ಟ್ರೀಯ ಶಾಲೆಯನ್ನು ತೆರೆದರು. ೧೯೧೯ರಲ್ಲಿ ನಡೆದ ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡದಿಂದಾಗಿ ಈ ಪ್ರಾಂತ್ಯದಲ್ಲಿ ರಾಷ್ಟ್ರೀಯತೆಯ ಕಾವುಯೇರೀತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಪರಿಸ್ಥಿತಿ ಬಿಗಡಾಯಿಸಿ ಮುಂಬಯಿ ಗವರ್ನರ್ ಜಿಲ್ಲೆಯ ಪ್ರವಾಸವನ್ನು ಕೈಬಿಡಬೇಕಾಯಿತು. ೧೯೦೫/೦೬ರಲ್ಲಿ ಬಳ್ಳಾರಿ, ಬೆಳಗಾಂಗೆ ಭೇಟಿ ನೀಡಿದ್ದ ತಿಲಕರು ೧೯೧೬ರಲ್ಲಿ ಹೋಂರೂಲ್ ಚಳವಳಿಯನ್ನು ಆರಂಭಿಸಿದರು. ಅನಂತರ ಅವರು ಬೆಳಗಾಂ, ನಿಪ್ಪಾಣಿಗಳಿಗೆ ಭೇಟಿ ನೀಡಿದರು. ಅವರ ಕರೆಗೆ ನೂರಾರು ಜನರು ಸ್ಪಂದಿಸಿ ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಂಡರು.

ಗಾಂಧೀಜಿಯವರು ೧೯೨೦/೨೧ರಲ್ಲಿ ಕರ್ನಾಟಕದಲ್ಲಿ ಪ್ರವಾಸ ಕೈಗೊಂಡರು. ಮಂಗಳೂರು, ಬೆಳಗಾಂ, ಬೆಂಗಳೂರು, ಧಾರವಾಡ, ಗದಗ್ ಮುಂತಾದ ಸ್ಥಳಗಳಿಗೆ ಭೇಟಿಯಿತ್ತರು. ಇದರಿಂದ ಜನಜಾಗೃತಿ ಮತ್ತಷ್ಟು ಹೆಚ್ಚಿ ರಾಷ್ಟ್ರೀಯತೆ ತೀವ್ರವಾಯಿತು. ಕರ್ನಾಟಕದಲ್ಲಿ ಒಂದು ಪ್ರತ್ಯೇಕ ಪ್ರದೇಶ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂದು 'ಕರ್ನಾಟಕದ ಸಿಂಹ' ಎಂದು ಪ್ರಸಿದ್ಧರಾಗಿದ್ದ ಗಂಗಾಧರರಾವ್ ದೇಶಪಾಂಡೆ ಅದರ ಅಧ್ಯಕ್ಷರಾದರು. ೧೯೨೦/೨೧ ರಲ್ಲಿ ಗಾಂಧೀಜಿ ಅಸಹಕಾರ ಚಳವಳಿಯನ್ನು ಆರಂಭಿಸಿ ಭಾರತೀಯರು ಬ್ರಿಟಿಷ್ ಶಾಲೆ, ನ್ಯಾಯಾಲಯ, ಕಚೇರಿ, ವೃತ್ತಿ ಇತ್ಯಾದಿಗಳನ್ನು ತ್ಯಾಗ ಮಾಡಬೇಕೆಂದು ಕರೆಕೊಟ್ಟರು. ಆಗ ಕರ್ನಾಟಕದಲ್ಲಿ ಪ್ರಮುಖ ವಕೀಲರಾಗಿದ್ದ ನಾರಾಯಣರಾವ್ ಜೋಶಿ ಗಾಂಧೀಜಿ ಅವರ ಕರೆಗೆ ಸ್ಪಂದಿಸಿದರು. ಶ್ರೀನಿವಾಸರಾವ್ ಕೌಜಲಗಿ, ಕಾರ್ನಾಡ್ ಸದಾಶಿವರಾವ್ ಮೊದಲಾದವರು, ಕೇಶವರಾವ್ ಗೋಖಲೆ, ದಾದಾಕಾಲೆ ಮೊದಲಾದ ಶಿಕ್ಷಕರು ತಮ್ಮ ತಮ್ಮ ವೃತ್ತಿ ತೊರೆದರು. ಎಲ್ಲೆಲ್ಲೂ ಖಾದಿ ಉತ್ಪಾದನಾ ಘಟಕ, ರಾಷ್ಟ್ರೀಯ ಶಿಕ್ಷಣ ಸಂಸ್ಥೆ, ಗುಡಿ ಕೈಗಾರಿಕಾ ಕೇಂದ್ರ ಪ್ರಾರಂಭವಾದವು. ನಾಗಪುರದ ಧ್ವಜ ಸತ್ಯಾಗ್ರಹದಲ್ಲಿ ಕರ್ನಾಟಕದ ಹಲವಾರು ಸ್ವಯಂ ಸೇವಕರು ಭಾಗವಹಿಸಿದರು. ಡಾ। ಎನ್. ಎಸ್. ಹರ್ಡೀಕರ್ ಹುಬ್ಬಳ್ಳಿಯಲ್ಲಿ ಯುವಕರಿಗೆ ತರಬೇತಿ ನೀಡಲು 'ಆರ್ಯಬಾಲ' ಸಭೆಯನ್ನು ಸ್ಥಾಪಿಸಿದರು. ಅನಂತರ ಅವರು 'ಹಿಂದೂಸ್ತಾನಿ ಸೇವಾದಳ'ವನ್ನು ಆರಂಭಿಸಿದರು. ಒಮ್ಮೆ ಮಾತ್ರ ಮಹಾತ್ಮ ಗಾಂಧೀಜಿ ಅಧ್ಯಕ್ಷರಾಗಿದ್ದ ಅಖಿಲ ಭಾರತ ಕಾಂಗ್ರೆಸ್ ಸಮ್ಮೇಳನವು ೧೯೨೪ರಲ್ಲಿ ಬೆಳಗಾಂನಲ್ಲಿ ಆಯಿತು. ೧೯೨೭ರಲ್ಲಿ ನಂದಿಬೆಟ್ಟದಲ್ಲಿ ಅನಾರೋಗ್ಯದ ಕಾರಣ ತಂಗಿದ್ದ ಗಾಂಧೀಜಿ ಮೈಸೂರು, ಶಿವಮೊಗ್ಗ, ಹಾಸನ, ಚಿಕ್ಕಮಗಳೂರು ಹಾಗೂ ಬೆಂಗಳೂರು ಜಿಲ್ಲೆಗಳಲ್ಲಿ ಪ್ರವಾಸ ಮಾಡಿದ್ದರು. ೧೯೨೮/೨೯ ರಲ್ಲಿ ನಡೆದ ಸುಲ್ತಾನ್ ಪೇಟೆ ಗಣಪತಿ ಗಲಭೆ ಹಾಗೂ ಮೈಸೂರು ಸರ್ಕಾರ ಅನುಸರಿಸಿದ ಧರ್ಮಕಾರಿ ನೀತಿ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಮತ್ತಷ್ಟು ಬಲಗೊಳ್ಳಲು ಕಾರಣವಾಯಿತು. ಪ್ರೊ। ಕೆ. ಸಂಪದ್ಗಿರಿರಾಯರು ಪ್ರಾಂಶುಪಾಲರಾಗಿದ್ದ ಬೆಂಗಳೂರಿನ ರಾಷ್ಟ್ರೀಯ ಪ್ರೌಢಶಾಲೆ ರಾಷ್ಟ್ರೀಯ ಚಟುವಟಿಕೆಗಳಿಗೆ ಸ್ಥಾನವಾಯಿತು.

೧೯೩೦ರಲ್ಲಿ ಪುನಃ ಸತ್ಯಾಗ್ರಹವನ್ನು ಗಾಂಧೀಜಿ ಆರಂಭಿಸಿದಾಗ ಕರ್ನಾಟಕದ ಜನರು ಒಂದಲ್ಲಾ ಒಂದು ರೀತಿಯಲ್ಲಿ ಪ್ರತಿಭಟಿಸಿ ಕಾಯಿದೆ ಭಂಗ ಮಾಡಿ ನೂರಾರು ಯುವಕರು ಜೈಲುವಾಸಿಗಳಾದರು. ೧೯೩೦ರ ಜನವರಿ ೨೬ ರಂದು ಹಳೆಯ ಮೈಸೂರಿನ ಹಲವು ಭಾಗಗಳಲ್ಲಿ ತ್ರಿವರ್ಣ ಧ್ವಜವನ್ನು ಹಾರಿಸುವುದರ ಮೂಲಕ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲಾಯಿತು. ಅಂಕೋಲಾದಲ್ಲಿ ಉಪ್ಪಿನ ಸತ್ಯಾಗ್ರಹ ೪೫ ದಿನಗಳವರೆಗೆ ನಡೆಯಿತು. ಇದಲ್ಲದೆ ಮಂಗಳೂರು, ಕುಂದಾಪುರ, ಉಡುಪಿ, ಕಾರ್ಕಳ, ಪುತ್ತೂರು, ಮಲ್ಪೆ ಮುಂತಾದ ಇನ್ನೂ ೩೦ ಸ್ಥಳಗಳಲ್ಲಿ ಉಪ್ಪಿನ ಸತ್ಯಾಗ್ರಹ ನಡೆಯಿತು. ಎಲ್ಲಾ ಮದ್ಯದ ಅಂಗಡಿಗಳ ಮುಂದೆ ಮುಷ್ಕರ ನಡೆದವು. ಸಿರಸಿ, ಸಿದ್ದಾಪುರಗಳಲ್ಲಿ ಜಂಗಲ್ ಹಾಗೂ ಹುಲ್ಲುಬನ್ನಿ ಸತ್ಯಾಗ್ರಹ ಭರದಿಂದ ಸಾಗಿತು. ಸಂಸ್ಥಾನದ ಎಲ್ಲೆಡೆ ಪ್ರತಿಬಂಧಕಾಜ್ಞೆಗಳನ್ನು ಮುರಿಯುವುದೇ ಪವಿತ್ರ ಕರ್ತವ್ಯವಾಗಿದ್ದಿತು. ಕಾಯಿದೆ ಭಂಗ ಮಾಡಿದವರ ವಿರುದ್ಧ ಸರ್ಕಾರ ಅಮಾನುಷ ರೀತಿಯಿಂದ ನಡೆದುಕೊಳ್ಳುತ್ತಿತ್ತು. ರಾಜ್ಯದ ಜನರು ಉತ್ಸಾಹದಿಂದ ಕರನಿರಾಕರಣೆಯ ಸತ್ಯಾಗ್ರಹವನ್ನು ಆರಂಭಿಸಿದರು. ಹಿರೆಕೆರೂರು, ಅಂಕೋಲಾ, ಸಿರಸಿ, ಸಿದ್ದಾಪುರ ತಾಲ್ಲೂಕುಗಳಲ್ಲಿ ಈ ಸತ್ಯಾಗ್ರಹ ತೀವ್ರವಾಗಿದ್ದಿತು. ಇಲ್ಲಿನ ಅಕ್ಷರಸ್ಥ ಮಹಿಳೆಯರು ಮಾಡಿದ ತ್ಯಾಗ ಒಂದು ಮಹಾಕಾವ್ಯವೇ ಆಗಿದ್ದಿತು. ಇಲ್ಲಿನ ಮಹಿಳೆಯರಿಗೆ ಮಾರ್ಗದರ್ಶನ ನೀಡಲು ಬಂದವರೆಂದರೆ ಕಾನಕಾನಹಳ್ಳಿ ಕಾವೇರಮ್ಮ, ಬೆಂಗಳೂರಿನ ಕಮಲಮ್ಮ ಚಂದೂರ್ ಹಾಗೂ ಮೈಸೂರಿನ ಸುಬ್ಬಮ್ಮ ಜೋಯಿಸ್. ಬ್ರಿಟಿಷ್ ಸರ್ಕಾರದ ದೌರ್ಜನ್ಯದ ಫಲವಾಗಿ ಕೈಲಾಸವಾಸಿಗಳಾಗಿದ್ದ ಮಹಿಳಾ ಸ್ವಾತಂತ್ರ್ಯ ಹೋರಾಟಗಾರರ ಚಿಕ್ಕ ಪುಟ್ಟ ಮಕ್ಕಳ ಪಾಲನೆಗಾಗಿ ಬಾಲಿಕಾಶ್ರಮವನ್ನು ಶಿವಮೊಗ್ಗದಲ್ಲಿ ತೆರೆಯಲಾಯಿತು. ಅದನ್ನು ಶಿವಮೊಗ್ಗದ ನಾಗರಿಕರು ಹಾಗೂ ಗೌರಮ್ಮ ವೆಂಕಟರಾಮಯ್ಯ, ಕಾವೇರಮ್ಮ ಎಸ್. ವಿ. ಮಾತಂಡ್ ಮೊದಲಾದವರು ನೋಡಿಕೊಳ್ಳುತ್ತಿದ್ದರು. ಮಣಿದೇವಿ ಗವರ್ನರ್‌ಗೆ ಕಪ್ಪುಧ್ವಜ ತೋರಿದ ಧೀರ ಮಹಿಳೆ. ನರಸಿಂಹಮ್ಮ ಹರಿಜನರ ಮಹಿಳೆ ದೇವಿಯ ಧೈರ್ಯ ಸ್ಥೈರ್ಯ ರಾಷ್ಟ್ರ ಪ್ರೇಮ ಸದಾ ಸ್ಮರಣಾರ್ಹವಾಗಿದೆ. ಉಡುಪಿಯ 'ಸತ್ಯಾಗ್ರಹಿ' ಹಾಗೂ 'ನವಯುಗ', ಧಾರವಾಡ ಹುಬ್ಬಳ್ಳಿಯ 'ಕರ್ಮವೀರ', ಮಡಿಕೇರಿಯ 'ಕೊಡಗು', ಕುಮಟಾದ 'ಕನ್ನಡ ವೃತ್ತ' ಹಾಗೂ 'ಕನ್ನಡ ಧುರೀಣ' ಬಳ್ಳಾರಿಯ

'ಕರ್ನಾಟಕ ಕೇಸರಿ' ಬೆಂಗಳೂರಿನ 'ಪ್ರಜಾಹಿತ', 'ತಾಯಿನಾಡು', 'ವೀರಕೇಸರಿ' ಹಾಗೂ 'ವಿಶ್ವಕರ್ನಾಟಕ' ಬಾಗಲಕೋಟೆಯ 'ಕನ್ನಡಿಗ' ಇವೇ ಮುಂತಾದ ಕನ್ನಡ ದಿನ ಪತ್ರಿಕೆಗಳು ಜನತೆಯಲ್ಲಿ ರಾಷ್ಟ್ರೀಯ ಭಾವನೆಯನ್ನು ಪ್ರಚೋದಿಸಿದವು.

ಅನಂತರ ೧೯೩೭ರಲ್ಲಿ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಕರ್ನಾಟಕದಿಂದ ಮುಂಬಯಿ ಹಾಗೂ ಮದ್ರಾಸ್ ಶಾಸನ ಸಭೆಗಳಿಗೆ ಸ್ಪರ್ಧಿಸಿದ ಎಲ್ಲಾ ಸ್ಥಾನಗಳನ್ನು ಗೆದ್ದುಕೊಂಡಿತು. ೧೯೩೯ರಲ್ಲಿ ಜಗತ್ತಿನ ಎರಡನೆಯ ಮಹಾಯುದ್ಧ ಸಂಭವಿಸಿದಾಗ ಭಾರತವು ಅದರಲ್ಲಿ ಭಾಗವಹಿಸುವಂತೆ ಮಾಡಬೇಕೆಂಬ ಬ್ರಿಟಿಷ್ ಸರ್ಕಾರದ ತೀರ್ಮಾನವನ್ನು ವಿರೋಧಿಸಿ ಕಾಂಗ್ರೆಸ್ ಮಂತ್ರಿಮಂಡಲ ರಾಜೀನಾಮೆ ನೀಡಿತು. ೧೯೪೦/೪೧ರಲ್ಲಿ ಅನೇಕಾನೇಕ ಸತ್ಯಾಗ್ರಹಿಗಳು ವೈಯಕ್ತಿಕ ಸತ್ಯಾಗ್ರಹವನ್ನು ಆರಂಭಿಸಿದರು.

ಹಳೆಯ ಮೈಸೂರು ರಾಜ್ಯದ ಮುಖ್ಯ ನಗರಗಳಲ್ಲಿ ಕಾಂಗ್ರೆಸ್ ಸಮಿತಿಗಳಿದ್ದವು. ೧೯೩೭ರಲ್ಲಿ ಪ್ರಜಾ ಸಂಯುಕ್ತ ಪಕ್ಷ ಕಾಂಗ್ರೆಸ್‌ನೊಡನೆ ಸೇರಿಕೊಂಡಾಗ ಕಾಂಗ್ರೆಸ್ ಪಕ್ಷವನ್ನು ಮೈಸೂರು ಕಾಂಗ್ರೆಸ್ ಎಂಬುದಾಗಿ ಕರೆಯಲಾಯಿತು. ಅದರ ಮೊದಲ ಅಧಿವೇಶನವನ್ನು ೧೯೩೮ರ ಏಪ್ರಿಲ್ ತಿಂಗಳಲ್ಲಿ ಶಿವಪುರದಲ್ಲಿ ಏರ್ಪಡಿಸಲಾಗಿತ್ತು. ಧ್ವಜಾರೋಹಣ ಕಾರ್ಯಕ್ರಮವನ್ನು ಸರ್ಕಾರ ನಿಷೇಧಿಸಿದ್ದರೂ ಸಾವಿರಾರು ಜನರು ಅದರಲ್ಲಿ ಭಾಗವಹಿಸಿದ್ದರು. ಅಧಿವೇಶನದ ಅಧ್ಯಕ್ಷತೆಯನ್ನು ಟಿ. ಸಿದ್ಧಲಿಂಗಯ್ಯ ಅವರು ವಹಿಸಿದ್ದರು. ಎಂ. ಎನ್. ಜೋಯಿಸ್ ಕಾಲಕ್ಕೆ ಸರಿಯಾಗಿ ಧ್ವಜಾರೋಹಣವನ್ನು ಮಾಡಿದರು. ಸಹಸ್ರಾರು ಜನರು ಹರ್ಷವನ್ನು ವ್ಯಕ್ತಪಡಿಸಿದರು.

ಅನಂತರ ವಿದುರಾಶ್ವತ್ಥ ದೇವಾಲಯದ ಜಾತ್ರೆಯ ಕಾಲದಲ್ಲಿ ರಾಷ್ಟ್ರಧ್ವಜವನ್ನು ಹಾರಿಸಿ ಮೆರವಣಿಗೆಯನ್ನು ನಡೆಸುವ ಕಾರ್ಯಕ್ರಮವನ್ನು ಯೋಜಿಸಲಾಯಿತು. ಸರ್ಕಾರ ಇದನ್ನು ನಿಷೇಧಿಸಲು ಆಜ್ಞೆ ಹೊರಡಿಸಿತು. ಕಾಂಗ್ರೆಸ್‌ನ ಸ್ವಯಂ ಸೇವಕರು ಇದಕ್ಕೆ ಜಗ್ಗದೆ ಈ ಆಜ್ಞೆಯನ್ನು ಉಲ್ಲಂಘಿಸಿದರು. ಪೋಲೀಸರು ಗೋಲಿಬಾರು ಮಾಡಿದಾಗ ಹಲವರು ಮುಗ್ಧ ಸ್ವಾತಂತ್ರ್ಯ ಹೋರಾಟಗಾರರು ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದರು. ವಲ್ಲಭಬಾಯ್ ಪಟೇಲ್ ಹಾಗೂ ಜೆ. ಬಿ. ಕೃಪಲಾನಿ ಮೊದಲಾದ ರಾಷ್ಟ್ರೀಯ ನಾಯಕರು ಈ ದುರಂತಕ್ಕಾಗಿ ಸ್ಥಳೀಯ ಸರ್ಕಾರದ ಮೇಲೆ ಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸಿದರು. ಕರ್ನಾಟಕದ ಇತಿಹಾಸದಲ್ಲಿ ಇದನ್ನು 'ಮಿನಿ ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡ' ಎಂದು ವರ್ಣಿಸಲಾಗಿದೆ. ಮೈಸೂರಿನ ಜನರು ರೊಚ್ಚಿಗೆದ್ದು ತಮಗೆ ಜವಾಬ್ದಾರಿ ಸರ್ಕಾರ ಬೇಕೆಂದು ಒತ್ತಾಯಿಸಿದರು. ಕೆ.ಟಿ. ಭಾಷ್ಯಂ, ಎಚ್. ಸಿ. ದಾಸಪ್ಪ, ಕೆ. ಸಿ. ರೆಡ್ಡಿ, ಬಿ. ಎನ್. ಗುಪ್ತ, ಎಚ್. ಕೆ. ವೀರಣ್ಣಗೌಡ, ಎಂ. ಎನ್. ಜೋಯಿಸ್, ಕೆ. ಹನುಮಂತಯ್ಯ, ಎಸ್. ನಿಜಲಿಂಗಪ್ಪ ಮೈಸೂರು ರಾಜ್ಯದ ಆಗಿನ ಪ್ರಮುಖ ನಾಯಕರಾಗಿದ್ದರು.

೧೯೪೨ರಲ್ಲಿ ಮಹಾತ್ಮ ಗಾಂಧೀಜಿ ಅವರು 'ಬ್ರಿಟಿಷರೆ ಭಾರತವನ್ನು ಬಿಟ್ಟು ತೊಲಗಿ' ಎಂಬ ಚಳವಳಿಯನ್ನು ಆರಂಭಿಸಿದರು. ಆಗ ಕರ್ನಾಟಕ ಕಂಡ ಜನಜಾಗೃತಿ ಅದ್ವಿತೀಯವಾಗಿದ್ದಿತು. ಮಹಾತ್ಮ ಗಾಂಧಿ ಹಾಗೂ ಇತರ ನಾಯಕರನ್ನು ಬಂಧಿಸಿದ್ದರಿಂದ ಅದಕ್ಕೆ ಪ್ರತಿಕ್ರಿಯೆಯಾಗಿ ಈ ರಾಜ್ಯದಲ್ಲಿ ವಿದ್ಯಾರ್ಥಿಗಳು, ಕಾರ್ಮಿಕರು, ವರ್ತಕರು ಮೊದಲಾದ ಸಮಾಜದ ಎಲ್ಲಾ ವರ್ಗಗಳ ಜನರು ಮುಷ್ಕರ ನಡೆಸಿದರು. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಸಿ.ಜೆ. ಅಂಬ್ಲಿ ಅವರನ್ನು ಅಧ್ಯಕ್ಷರನ್ನಾಗಿಯೂ, ಆರ್. ಆರ್. ದಿವಾಕರ್ ಅವರನ್ನು ಕಾರ್ಯದರ್ಶಿಯನ್ನಾಗಿಯೂ, ಯು. ಶ್ರೀನಿವಾಸ ಮಲ್ಯ, ಡಿ. ಪಿ. ಕರ್‌ಮರ್‌ಕರ್ ಹಾಗೂ ಆರ್. ಎಸ್. ಹುಕ್ಕೇರಿಕರ್ ಅವರನ್ನು ಸದಸ್ಯರನ್ನಾಗಿಯೂ ಮಾಡಿ ಕ್ರಿಯಾ ಸಮಿತಿಯನ್ನು ರಚಿಸಿತು. ಸರ್ಕಾರದ ಎಲ್ಲಾ ಕೆಲಸವನ್ನು ಧ್ವಂಸ ಮಾಡಲು ಪ್ರಬಲವಾದ ಚಳವಳಿಯನ್ನು ಆರಂಭಿಸಲಾಯಿತು. ಇದು ಬೆಳಗಾಂ, ಧಾರವಾಡ ಹಾಗೂ ಬೆಂಗಳೂರು ನಗರದಲ್ಲಿ ಬಹು ತೀವ್ರವಾಗಿ ನಡೆಯಿತು. ರಹಸ್ಯ ಕಾರ್ಯಾಚರಣೆ ಆರಂಭಗೊಂಡು ಎಲ್ಲೆಲ್ಲೂ ಭೂಗತ ಚಟುವಟಿಕೆಗಳು ಜರುಗಿದವು. ವಿದ್ಯಾರ್ಥಿಗಳ ಮುಷ್ಕರವೇ ಸ್ವಾತಂತ್ರ್ಯ ಚಳವಳಿಯ ಪ್ರಮುಖ ಅಸ್ತ್ರವಾಗಿತ್ತು. ಟಿಕೇಟ್‌ಗಳಿಲ್ಲದೆ ರೈಲಿನಲ್ಲಿ ಪ್ರಯಾಣ ಮಾಡುವುದು, ರೈಲು ನಿಲ್ದಾಣಗಳನ್ನು ಸುಡುವುದು, ರೈಲು ಕಂಬಿಗಳನ್ನು ಕಿತ್ತೆಸೆಯುವುದು, ರೈಲು ಮಾರ್ಗಗಳನ್ನು ಧ್ವಂಸ ಮಾಡುವುದು, ಸರ್ಕಾರಿ ಕಚೇರಿಗಳನ್ನು ಹಾಗೂ ದಾಖಲೆಗಳನ್ನು ಅಗ್ನಿಗೆ ಆಹುತಿ ಮಾಡುವುದು, ಅಂಚೆ ಹಾಗೂ ಖಜಾನೆಗಳನ್ನು ಲೂಟಿ ಮಾಡುವುದು. ಎಲ್ಲೂ ಸರ್ಕಾರಿ ಕೆಲಸಗಳು ನಡೆಯದಂತೆ ತಡೆಯುವುದೇ ಸ್ವಾತಂತ್ರ್ಯ ಹೋರಾಟಗಾರರ ಧ್ಯೇಯವಾಗಿತ್ತು. ಈ ಸಂದರ್ಭದಲ್ಲಿ ಮೈಲಾರ ಮಹದೇವಪ್ಪ, ತಿರುರಪ್ಪ ಕೋಗನೂರು ಹಾಗೂ ವೀರಯ್ಯ ಹಿರೇಮಠ ಹುತಾತ್ಮರಾದರು. ಕೆ. ವಿ. ವೆಂಕಟರಾಮಯ್ಯ, ಎ. ಜಿ. ರಾಮಚಂದ್ರರಾವ್, ಎನ್. ಡಿ. ಶಂಕರ್, ಹೆಚ್. ಎಸ್. ದೊರೆಸ್ವಾಮಿ, ಕಡಿದಾಳು ಮಂಜಪ್ಪ ಮೊದಲಾದವರು ರಹಸ್ಯ ಕಾರ್ಯಕ್ರಮಗಳನ್ನು ನಡೆಸಿ ಬಂದರು. ಮೈಸೂರು ಜಿಲ್ಲೆಯಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯಲ್ಲಿ ವಿದ್ಯಾರ್ಥಿಗಳು ಅತ್ಯುತ್ಸಾಹದಿಂದ ಪಾಲ್ಗೊಂಡು ಜೈಲುವಾಸ ಅನುಭವಿಸಿದರು. ಮೈಸೂರಿನ ವಿದ್ಯಾರ್ಥಿ ರಾಮಸ್ವಾಮಿ ಗುಂಡಿಗೆ ಆಹುತಿಯಾದ. ಇನ್ನೋರ್ವ ವಿದ್ಯಾರ್ಥಿ ಶಂಕರಪ್ಪ ಜೈಲಿನಲ್ಲಿ ಪೋಲೀಸರ ಅಮಾನುಷ ಕ್ರೌರ್ಯಕ್ಕೆ

ಬಲಿಯಾದನು. ಭಾರತ ಸ್ವಾತಂತ್ರ್ಯ ಪಡೆಯುವುದಕ್ಕಾಗಿ ಕರ್ನಾಟಕದ ಎಲ್ಲಾ ಜಿಲ್ಲೆಗಳಿಂದಲೂ ನೂರಾರು ನಾಯಕರು ಮೂಡಿಬಂದರು. ಬ್ರಿಟಿಷರ ದೌರ್ಜನ್ಯಕ್ಕೆ ತುತ್ತಾಗಿ ಅನೇಕ ಸಂಸಾರಗಳು ಬೀದಿ ಪಾಲಾದವು. ಅನೇಕ ಮಹಿಳೆಯರು ವಿಧವೆಯರಾದರು. ಮಕ್ಕಳು ತಬ್ಬಲಿಗಳಾದರು. ಶ್ರೀಮಂತರು ಆಸ್ತಿ-ಪಾಸ್ತಿಗಳನ್ನು ಕಳೆದುಕೊಂಡು ನಿರ್ಗತಿಕರಾದರು.

೧೯೪೨ರ ಸೆಪ್ಟೆಂಬರ್ ತಿಂಗಳಲ್ಲಿ ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಈಸೂರಿನ ಜನರು ನಡೆಸಿದ ಸತ್ಯಾಗ್ರಹ ಸ್ವಾತಂತ್ರ್ಯ ಹೋರಾಟದ ಕಥನದಲ್ಲಿ ಅದ್ವಿತೀಯ ಘಟನೆಯಾಗಿದೆ. ವಿದ್ಯಾರ್ಥಿ ಚಳವಳಿಗಾರರ ದರ್ಶನದಲ್ಲಿ ಉತ್ಸಾಹಿತರಾದ ಗ್ರಾಮಸ್ಥರು ತಮ್ಮ ಹಳ್ಳಿಯ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು. ಸ್ವಾತಂತ್ರ್ಯ ಹೋರಾಟಗಾರರ ಸಂಖ್ಯೆ ಅಗಣಿತವಾದುದು. ಪ್ರತಿಯೊಂದು ತಾಲ್ಲೂಕಿನಲ್ಲೂ ಒಂದಿಬ್ಬರು ನಾಯಕರ ಹೆಸರು ಹೇಳುತ್ತಾ ಹೋದರೆ ಅದೊಂದು ದೊಡ್ಡ ಪಟ್ಟಿಯೇ ಆಗುತ್ತದೆ. ಆ ದೃಷ್ಟಿಯಿಂದ ಆ ಎಲ್ಲ ನಾಯಕರು ಸದಾಕಾಲ ಪೂಜನೀಯರೆಂದು ಹೇಳಬಹುದು.

ಬ್ರಿಟಿಷ್ ಸರ್ಕಾರದ ಯಾವ ಅಧಿಕಾರಿಯೂ ತಮ್ಮ ಗ್ರಾಮವನ್ನು ಪ್ರವೇಶಿಸಕೂಡದೆಂಬುದಾಗಿ ಹಲಗೆಯ ಮೇಲೆ ಬರೆದು ತೂಗುಹಾಕಿದರು. ೨೮ರಂದು ಅಮಲ್ದಾರ್ ಹಾಗೂ ಸಬ್ ಇನ್ಸ್ ಪೆಕ್ಟರ್ ಹಳ್ಳಿಗೆ ಬಂದಾಗ ಗ್ರಾಮಸ್ಥರು ಅವರನ್ನು ಸುತ್ತುಗಟ್ಟಿ ಗಾಂಧಿ ಟೊಪ್ಪಿಯನ್ನು ಧರಿಸುವಂತೆ ಒತ್ತಾಯಪಡಿಸಿದರು. ಅದರಿಂದ ಸಿಟ್ಟಿಗೆದ್ದ ಸಬ್ ಇನ್ಸ್‌ಪೆಕ್ಟರ್ ಗುಂಡು ಹಾರಿಸಿದಾಗ ಕೋಪೋದ್ರಿಕ್ತರಾದ ಜನರು ಅವರನ್ನು ಕೊಂದುಹಾಕಿದರು. ಇದರ ಪರಿಣಾಮ ಗ್ರಾಮಕ್ಕೆ ಬಂದ ಸಶಸ್ತ್ರ ಪೋಲೀಸ್ ಪಡೆ, ಊಹಿಸಲಾಗದಂತಹ ಅತ್ಯಾಚಾರ ಎಸೆಗಿತು. ಗುರಪ್ಪ, ಮಲ್ಲಪ್ಪ, ಸೂರ್ಯನಾರಾಯಣಾಚಾರಿ, ಹಾಲಪ್ಪ ಹಾಗೂ ಶಂಕರಪ್ಪ ಎಂಬ ಸತ್ಯಾಗ್ರಹಿಗಳನ್ನು ಗಲ್ಲಿಗೇರಿಸಿತು.

**ಮೂರನೆಯ ಹಂತ**

ಹೀಗೆ ಈ ಸ್ವಾತಂತ್ರ್ಯ ಚಳವಳಿಯು ಎಲ್ಲೆಡೆ ಪ್ರಬಲವಾಗಿ ಹರಡಿತು. ಮೈಸೂರು ಸಂಸ್ಥಾನದಲ್ಲಿ ಅದರ ಕಾವು ಸ್ವಲ್ಪ ಕಡಿಮೆಯೆನಿಸಿತು. ಬೊಂಬಾಯಿ ಕರ್ನಾಟಕದಲ್ಲಿ ಅದು ಬಹು ತೀವ್ರವಾಗಿತ್ತು. ಅದನ್ನು ಕಂಡು ರೊಚ್ಚಿಗೆದ್ದ ಜಯಪ್ರಕಾಶ್ ನಾರಾಯಣ್ ಅವರು ಅದನ್ನು 'ಕರ್ನಾಟಕದ ಮಾದರಿ' ಎಂಬುದಾಗಿ ಪ್ರಶಂಸಿಸಿದರು. ಎಲ್ಲೆಲ್ಲೂ ಸತ್ಯಾಗ್ರಹಿಗಳಿಂದ ತುಂಬಿ ತುಳುಕುತ್ತಿದ್ದ ಸೆರೆಮನೆಗಳಿಂದಾಗಿ ಇಡೀ ರಾಜ್ಯವೇ ರಾಷ್ಟ್ರೀಯ ಪ್ರಜ್ಞೆಯಿಂದ ಉಜ್ವಲವಾಗಿ ಬೆಳಗುತ್ತಿತ್ತು. ಕರ್ನಾಟಕ ರಾಜ್ಯದ ಜನರು ತಮ್ಮ ತಾಯ್ನಾಡನ್ನು ದಾಸ್ಯದ ಸಂಕೋಲೆಯಿಂದ ಬಿಡಿಸುವ ಪವಿತ್ರ ಕಾರ್ಯದಲ್ಲಿ ತಾವು ಯಾರಿಗಿಂತಲೂ ಕಡಿಮೆಯಿಲ್ಲ ಎಂಬುದನ್ನು ಸಾಬೀತುಪಡಿಸಿದರು. ಭಾರತ ೧೯೪೭ರಲ್ಲಿ ಸ್ವತಂತ್ರ ದೇಶವಾಯಿತು. ಆದರೂ ಮೈಸೂರು ಕಾಂಗ್ರೆಸ್ ಪಕ್ಷದ ಕೆಲಸ ಇನ್ನೂ ಮುಕ್ತಾಯವಾಗಿರಲಿಲ್ಲ. ಅದು ಜವಾಬ್ದಾರಿ ಸರ್ಕಾರ ಬೇಕೆಂದು ಒತ್ತಾಯ ಪಡಿಸಿ, ಮೈಸೂರು ಚಲೋ ಚಳವಳಿ ಹಮ್ಮಿಕೊಂಡಿತು. ಮೈಸೂರು ಅರಮನೆ ಮುಂದೆ ಸತ್ಯಾಗ್ರಹ ನಡೆಸುವುದು ತಾಲ್ಲೂಕು ಕಚೇರಿಗಳ ಮುಂದೆ ಮುಷ್ಕರ ಮಾಡುವುದು ಇವರಲ್ಲಿನ ಮುಖ್ಯ ಅಂಶಗಳಾಗಿದ್ದವು. ದಿವಾನರ ವಿರುದ್ಧ 'ಆರ್ಕಾಟರ ಬಹಿಷ್ಕಾರ' ಧಿಕ್ಕಾರ, ಎಲ್ಲರ ಘೋಷಣೆಯಾಗಿತ್ತು. ಸರ್ಕಾರ ಈ ಚಳವಳಿಯನ್ನ ಹತ್ತಿಕ್ಕಲು ಎಷ್ಟೇ ಪ್ರಯತ್ನಿಸಿದರೂ ಸಫಲವಾಗಲಿಲ್ಲ. ಮೈಸೂರು ಮಹಾರಾಜರು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಲು ಒಪ್ಪಲೇ ಬೇಕಾಯಿತು. ಹೀಗೆ ೧೯೪೭ರ ಅಕ್ಟೋಬರ್ ೨೭ ರಂದು ಅಸ್ತಿತ್ವಕ್ಕೆ ಬಂದ ನೂತನ ಸರ್ಕಾರದಲ್ಲಿ ಕೆ.ಸಿ. ರೆಡ್ಡಿ ಮುಖ್ಯಮಂತ್ರಿಗಳಾದರು. ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಕೆ. ಟಿ. ಭಾಷ್ಯಂ, ಎಚ್. ಸಿ. ದಾಸಪ್ಪ, ಎಚ್. ಸಿದ್ಧಯ್ಯ, ಟಿ. ಮರಿಯಪ್ಪ ಹಾಗೂ ಆರ್. ಚೆನ್ನಿಗರಾಮಯ್ಯ ಅವರ ಮಂತ್ರಿಮಂಡಲದ ಸದಸ್ಯರಾದರು.

ಒಟ್ಟಿನಲ್ಲಿ ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಕರ್ನಾಟಕದ ಸ್ತ್ರೀ ಪುರುಷರು ವಹಿಸಿದ್ದ ಪಾತ್ರ, ತ್ಯಾಗ, ಹೋರಾಟ ಹಾಗೂ ಗುರಿ ಸಾಧನೆ ಕನ್ನಡಿಗರ ಸಹಜ ಲಕ್ಷಣಗಳೆಂಬ ಮಾತಿಗೆ ಅನುಗುಣವಾಗಿದೆ. ಅವರು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ರೀತಿ, ನಿರ್ವಹಿಸಿದ ಕರ್ತವ್ಯಗಳು ಸ್ತುತ್ಯಾರ್ಹವಾದುದು.

# ಸರ್ವೋದಯ ಚಳವಳಿ ನಡೆದುಬಂದ ದಾರಿ

ಪಿ. ವೆಂಕೋಬರಾವ್

**'ಸರ್ವೋದಯ' ಶಬ್ದದ ಉಗಮ**

''ಈ ಪುಸ್ತಕ ದಾರಿಯಲ್ಲಿ ಓದಲು ಯೋಗ್ಯವಾದದ್ದು'' ಎಂದು ಗಾಂಧೀಜಿಗೆ, ಗೆಳೆಯ ಪೋಲಕರು ಬಂದು ಒಂದು ಪುಸ್ತಕ ಕೊಟ್ಟರು. ಇದು ನಡೆದದ್ದು ಜೊಹಾನ್ಸಬರ್ಗ್ ಸ್ಟೇಷನ್ನಿನಲ್ಲಿ. ಗಾಂಧೀಜಿ ರೈಲಿನಲ್ಲಿ ದರ್ಬಾನಿಗೆ ಹೊರಟಿದ್ದರು. ಪುಸ್ತಕದ ಗಾತ್ರ ಅಂತಹ ಭಾರಿ ಪ್ರಮಾಣದ್ದಲ್ಲ. ನೋಡಲು ಕಿರಿದಾದ, ನಾಲ್ಕಾರು ಗಂಟೆಗಳಲ್ಲಿ ಓದಿ ಮುಗಿಸಬಹುದಾದಂತಹ, ಚೊಕ್ಕ ಗ್ರಂಥ. ಆದರೆ ಅದರ ಆಳ ಅತ್ಯಂತ ಗಹನ. ಪುಟಗಳನ್ನು ತಿರುವಿಹಾಕಿ ಓದಿ ಎಸೆಯುವಂತಹ ಕಳಪೆಯ ಪುಸ್ತಕವಾಗಿರಲಿಲ್ಲ. ನಿಗೂಢ ವಿಚಾರಗಳ ಸಂಗಮ ಅದರಲ್ಲಿ ತುಂಬಿತ್ತು.

ಗಾಂಧೀಜಿ ಓದಲು ಪ್ರಾರಂಭಿಸಿದರು. ಓದುತ್ತಿದ್ದಂತೆ ಅವರು ಏಕಾಗ್ರಗೊಂಡರು. ಮಧ್ಯದಲ್ಲಿ ನಿಲ್ಲಿಸಲು ಅವರಿಗೆ ಸಾಧ್ಯವಾಗಲಿಲ್ಲ. ಓದುತ್ತಲೇ ಹೋದರು. ಆ ಪುಸ್ತಕದಲ್ಲಿದ್ದ ವಿಚಾರಗಳ ಮೋಡಿಯಿಂದ ಅವರು ಪ್ರಭಾವಿತರಾಗಿದ್ದರು. ಒಂದೊಂದು ಶಬ್ದ-ಒಂದೊಂದು ವಾಕ್ಯ ಅವರನ್ನು ಮಂತ್ರಮುಗ್ಧರನ್ನಾಗಿ ಮಾಡಿತು. ರೈಲು ಸಾಯಂಕಾಲದ ಹೊತ್ತಿಗೆ ದರ್ಬಾನ್ ತಲುಪಿತು. ಅಷ್ಟೊತ್ತಿಗೆ ಗಾಂಧೀಜಿ ಪುಸ್ತಕ ಓದಿ ಮುಗಿಸಿದ್ದರು. ಅವರ ಮೇಲೆ ಮಾಡಿದ ಪುಸ್ತಕದ ಪವಾಡದ ಬಗ್ಗೆ ಅವರೇ ತಮ್ಮ ಆತ್ಮಕಥೆಯಲ್ಲಿ ಹೀಗೆ ಬರೆದಿದ್ದಾರೆ:

''ದರ್ಬಾನ್ ತಲುಪಿದ ರಾತ್ರಿ ನನಗೆ ನಿದ್ದೆ ಬರಲಿಲ್ಲ. ಅದರಲ್ಲಿದ್ದ ಆದರ್ಶ ವಿಚಾರಗಳನ್ನು ನನ್ನ ಜೀವನದಲ್ಲಿ ಕಾರ್ಯಗತಗೊಳಿಸಲು ನಿರ್ಧರಿಸಿದೆ. ನನ್ನಲ್ಲಿ ಮಹತ್ವಪೂರ್ಣ ಪರಿವರ್ತನೆ ತಂದ ಹಾಗೂ ನನ್ನ ಮೇಲೆ ಪ್ರಭಾವ ಬೀರಿದ ಪುಸ್ತಕ ಇದು. ''ನನ್ನ ಹೃದಯದ ಅಂತರಾಳದಲ್ಲಿ ಜೀವಂತವಾಗಿದ್ದ ಭಾವನೆಗಳ ಪ್ರತಿಬಿಂಬ ಇದರಲ್ಲಿ ಎದ್ದು ಕಾಣುತ್ತಿತ್ತು'' ಎಂದು.

ಇಂತಹ ಜಾದು ಮಾಡಿದ ಪುಸ್ತಕ ಯಾವುದು?

ರಸ್ಕಿನ್ ಬರೆದ 'Unto this Last'

ಈ ಪುಸ್ತಕದಲ್ಲಿ ಎದ್ದು ಕಾಣುವಂತಹ ವಿಚಾರಗಳು ಮೂರು.

ಒಂದು - ಎಲ್ಲರ ಹಿತದಲ್ಲಿ ನನ್ನ ಹಿತವಿದೆ. ಎರಡು - ವಕೀಲನ ಕೆಲಸವಾಗಬಹುದು, ಹಜಾಮನ ಕೆಲಸವಾಗಬಹುದು, ಇಬ್ಬರ ಮೌಲ್ಯಗಳೂ ಒಂದೆ. ಪ್ರತಿಯೊಬ್ಬರೂ ತಮ್ಮ ತಮ್ಮ ಕೆಲಸಗಳ ಮೂಲಕ ಜೀವನ ನಿರ್ವಹಣೆ ನೆಡೆಸುವ ಅಧಿಕಾರವಿದೆ. ಮೂರು-ಕಾರ್ಮಿಕ, ರೈತ ಅಥವಾ ಶ್ರಮಿಕನ ಜೀವನವೇ ಸರ್ವೋತ್ಕೃಷ್ಟವಾದದ್ದು. ''ಮೊದಲನೆ ವಿಚಾರ ನನಗೆ ಗೊತ್ತಿತ್ತು. ಎರಡನೆಯದು ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ಆದರೆ ಮೂರನೆ ವಿಚಾರ ನನಗೆ ಹೊಳೆದಿರಲೇ ಇಲ್ಲ. 'Unto this last' ಪುಸ್ತಕ ಸೂರ್ಯಪ್ರಕಾಶದಷ್ಟೆ ಸ್ಪಷ್ಟವಾಗಿ, ಮೊದಲ ವಿಚಾರದಲ್ಲಿ ಎರಡು - ಮೂರು ವಿಚಾರಗಳು ಸಮಾವೇಶಗೊಂಡಿವೆ ಎನ್ನುವುದನ್ನು ಮನದಟ್ಟು ಮಾಡಿಕೊಟ್ಟಿತು'' ಎಂದಿದ್ದಾರೆ ಗಾಂಧೀಜಿ.

ರಸ್ಕಿನ್ನನ ಈ ಗ್ರಂಥಕ್ಕೆ ಆಧಾರ 'ಬೈಬಲ್' ಇದರ ಅರ್ಥ. ಕಟ್ಟ ಕಡೆಯವನು, ಕೊನೆಯವನು ಎಂದು. ಬೈಬಲ್ಲಿನಲ್ಲಿರುವ ಕಥೆ ಹೀಗಿದೆ. ದ್ರಾಕ್ಷಿ ತೋಟದ ಒಬ್ಬ ಮಾಲೀಕ, ತನ್ನ ತೋಟದಲ್ಲಿ ಕೆಲಸ ಮಾಡಲು ಕೆಲವು ಕೂಲಿಕಾರರನ್ನು ಗೊತ್ತು ಮಾಡಿದ. ಅಂತೆಯೇ ದಿನಗೂಲಿಯನ್ನು ನಿರ್ಧರಿಸಿದ. ಬೆಳಗಿನಿಂದ ಸಾಯಂಕಾಲದವರೆಗಿನ ಒಂದು ದಿನದ ಕೂಲಿ ಒಂದು ಪೆನ್ನಿ, ಮಧ್ಯಾಹ್ನ ಕೆಲಸ ಮಾಡುತ್ತಿದ್ದ ಕೂಲಿಕಾರರ ಹತ್ತಿರ ಹೋದಾಗ ಕೆಲಸವಿಲ್ಲದ ಕೆಲವರು ನಿಂತಿದ್ದರು. ಅವರನ್ನು ನೋಡಿ ಅವರನ್ನೂ ತೋಟದ ಕೆಲಸಕ್ಕೆ ಸೇರಿಸಿಕೊಂಡ. ಸಂಜೆ ಹೊತ್ತಿಗೆ ಮತ್ತೆ ಕೆಲವರು ಆತನಿಗೆ ಕಾಣಿಸಿಕೊಂಡರು. ಅವರನ್ನೂ ತೊಟದ ಕೆಲಸಕ್ಕೆ ನೇಮಿಸಿಕೊಂಡ. ಕೆಲಸ ಮುಗಿದಾಗ ಗುಮಾಸ್ತನನ್ನು ಕರೆದು, ''ಇವರೆಲ್ಲರಿಗೂ ಕೂಲಿ ಕೊಡು. ಕೊನೆಯಲ್ಲಿ ಬಂದವರಿಂದ ಕೂಲಿ ಕೊಡುವುದನ್ನು ಆರಂಭಿಸು'' ಎಂದ.

ಗುಮಾಸ್ತ ಕೊನೆಯಲ್ಲಿ ಬಂದಿದ್ದ ಕೂಲಿಗಾರರಿಗೆ ಒಂದೊಂದು ಪೆನ್ನಿ ನೀಡಲು ಆರಂಭಿಸಿದ. ಬೆಳಿಗ್ಗೆ ಬಂದಿದ್ದ ಕೂಲಿಕಾರರಿಗೆ ಎಲ್ಲಿಲ್ಲದ ಸಂತೋಷ. ಅವರು ಹಸನ್ಮುಖಿಯಾಗಿದ್ದರು. ಸಾಯಂಕಾಲ ಬಂದು ಒಂದೆರಡು ಗಂಟೆ ಕೆಲಸ ಮಾಡಿದವರಿಗೆ ಒಂದು ಪೆನ್ನಿ ದೊರೆತಿರುವಾಗ ನಮಗೆ ಹೆಚ್ಚು ದೊರೆತೇ ದೊರೆಯುತ್ತದೆ ಎನ್ನುವ ಆಶೆ ಅವರದು. ಆದರೆ ನಡೆದದ್ದೆ ಬೇರೆ. ಎಲ್ಲರಿಗೂ ದಕ್ಕಿದ್ದು ಒಂದೊಂದೇ ಪೆನ್ನಿ. ಆಗ ಮೊದಲು ಬಂದಿದ್ದವರು ಮಾಲೀಕರಿಗೆ ದೂರು ಕೊಟ್ಟರು. 'ಇದೆಂತಹ ಅನ್ಯಾಯ? ಬೆಳಗಿನಿಂದ ಕೆಲಸ ಮಾಡಿದವರಿಗೂ ಒಂದು ಪೆನ್ನಿ. ಸಾಯಂಕಾಲ ಬಂದು ಒಂದೆರಡು ಗಂಟೆ ಕೆಲಸ ಮಾಡಿದವರಿಗೂ ಒಂದು ಪೆನ್ನಿ. ಇದರ ಅರ್ಥವೇನು?' ಎಂದು ಕೇಳಿದರು. ಯಜಮಾನ ಹೇಳಿದ, ''ತಮ್ಮಂದಿರಾ, ನಾನು ನಿಮ್ಮ ವಿಷಯದಲ್ಲಿ ಯಾವುದೇ ಅನ್ಯಾಯ ಮಾಡಿಲ್ಲ. ಮಾತಿನಂತೆ ನಡೆದುಕೊಂಡಿದ್ದೇನೆ. ದಿನಗೂಲಿ ಒಂದು ಪೆನ್ನಿ ಎಂದು ನಿರ್ಧರಿಸಿರಲಿಲ್ಲವೆ? ಅದರಂತೆ ಕೊಟ್ಟಿದ್ದೇನೆ. ಈಗ ನೀವು ಹೋಗಿ. ಕೊನೆಯಲ್ಲಿ ಬಂದಿರುವವರಿಗೂ ನಿಮಗೆ ಕೊಟ್ಟಷ್ಟೆ ಕೊಟ್ಟಿದ್ದೇನೆ. ಎಷ್ಟು ಖರ್ಚು ಮಾಡಬೇಕು, ಎಷ್ಟು ಕೊಡಬೇಕು, ಎನ್ನುವುದು ನನಗೆ ಸಂಬಂಧಪಟ್ಟ ವಿಷಯ. ಇದರಲ್ಲಿ ನೀವು ತಲೆಹಾಕಬಾರದು. ಇನ್ನೊಬ್ಬರ ವಿಷಯದಲ್ಲಿ ನಾನು ಒಳ್ಳೆಯ ವ್ಯವಹಾರ ಮಾಡಿದರೆ ನಿಮಗೇಕೆ ದುಃಖವಾಗಬೇಕು?''

ಈ ವಿಚಾರ ಬೇಗ ಅರ್ಥವಾಗುವುದು ಕಷ್ಟ. ಲೋಭಿಗಳಿಗೆ, ಜಿಪುಣರಿಗೆ, ಸ್ವಾರ್ಥಿಗಳಿಗೆ, ಬಹುದೂರ ಬರಿ ಗಳಿಕೆಯ ಗೊಂಡಾರಣ್ಯದಲ್ಲಿ ತಾಕಲಾಡುತ್ತಿರುವವರಿಗಂತೂ ಇನ್ನೂ ಕಷ್ಟ. ಆದರೆ ಈ ಸಣ್ಣ ಘಟನೆಯ ನ್ಯಾಯದಲ್ಲಿ ಅಡಗಿರುವುದು ಮಾನವತೆಯ, ಸಮಾನತೆಯ ಮಹಾತತ್ವ. ಇಲ್ಲಿ ದ್ವಂದ್ವವಿಲ್ಲ. ದ್ವೈತವಿಲ್ಲ, ಇರುವುದು ಅದ್ವೈತ ಒಂದೇ. ಇಲ್ಲಿಂದಲೇ ಸರ್ವೋದಯದ ಮೊಗ್ಗು ಅರಳುವುದು. ಈ ವಿಚಾರದ ಸೌರಭವೇ ಮನುಕುಲದ ನೆಮ್ಮದಿಯನ್ನು ಕಾಪಾಡುವಂಥದ್ದು. ಈ ಸರ್ವೋದಯ ಸೌರಭ ಎಂಥದ್ದು? ಅಂತಹ ಯಾವ ಶಕ್ತಿ ಇದೆ ಇದರಲ್ಲಿ? ಸರ್ವರ ಉದಯ, ಸರ್ವರ ಉತ್ಕರ್ಷ ಯಾರಿಗೆ ಬೇಡ? ಎಲ್ಲರ ಉತ್ಕರ್ಷ, ಎಲ್ಲರ ವಿಕಾಸ, ಮನುಕುಲದ ಆದರ್ಶವಾಗಬೇಡವೆ? ಇದನ್ನೇ ಸರ್ವೋದಯವೆನ್ನುವುದು. ನಮ್ಮ ಋಷಿಗಳು ಹೇಳಿದ್ದೂ ಇದನ್ನೆ.

ಸರ್ವೇ ತಪಿ ಸುಖಿನಃ ಸಂತು ಸರ್ವೇ ಸಂತು ನಿರಾಮಯಾಃ।
ಸರ್ವೇ ಭದ್ರಾಣಿ ಪಶ್ಯಂತು ಮಾ ಕಶ್ಚಿತ್ ದುಃಖ ಮಾಪ್ನುಯಾತ್॥

ಇದೇ ಅಮೃತವಾಣಿಯನ್ನು ಜೈನಾಚಾರ್ಯ ಸಮಂತಭದ್ರ ಈ ರೀತಿ ಹೇಳಿದ್ದಾನೆ.

''ಸರ್ವೋಪದಾ ಮಂಡಕರಂ ನಿರಂತರಂ ಸರ್ವೋದಯಂ ತೀರ್ಥ ಮಿದಂ ತವೈವ''

ಹೇಳಲು, ಕೇಳಲು, ಇವುಗಳೇನೊ ಸುಂದರ ಶಬ್ದಗಳೆ. ಕೆಲವರ ಉದಯವಾಗಬಹುದು, ಬಹುಸಂಖ್ಯಾತರ ಉದಯವೂ ಆಗಬಹುದು. ಆದರೆ ಎಲ್ಲರ ಉದಯ ಹೇಗೆ ಸಾಧ್ಯ? ಇಲ್ಲಿ ಬುದ್ಧಿ ಕುಂಠಿತವಾಗುತ್ತದೆ. ಸಿದ್ಧಾಂತ ಶಾಸ್ತ್ರಗಳು, ಬುದ್ಧಿಜೀವಿಗಳು ಎಡವುವುದು ಇಂತಹ ವಿಚಾರ ಎದುರಾದಾಗ. ಎಲ್ಲರ ಉದಯವಾಗಬೇಕು, ಎಲ್ಲರ ಕಲ್ಯಾಣವಾಗಬೇಕು, ಪ್ರತಿಯೊಬ್ಬ ವ್ಯಕ್ತಿಯ ವಿಕಾಸವಾಗಬೇಕು. ಇದು ಸರಿಯೆ. ಎಲ್ಲರು ಬಯಸುವುದೂ ಇದನ್ನೆ. ಆದರೆ... ಇದು ಸಾಧ್ಯವೆ? ವ್ಯವಹಾರ್ಯಯೋಗ್ಯವೆ? ಸರ್ವೋದಯ ಒಂದು ಆದರ್ಶವಾಗಬಹುದು. ಆದರೆ ವ್ಯಾವಹಾರಿಕವಲ್ಲ. ಇದು ಅಸಂಭವನೀಯ ಎನ್ನುತ್ತಾರೆ ಸಿದ್ಧಾಂತವಾದಿಗಳು.

ಸರ್ವೋದಯ ಕೇವಲ ಆದರ್ಶವಲ್ಲ, ಬರಿ ಕನಸೂ ಅಲ್ಲ. ಅದು ವ್ಯವಹಾರಯೋಗ್ಯವಾದ, ಆಮಲಿನಲ್ಲಿ ತರುವಂತಹ ಉತ್ಕೃಷ್ಟ ವಿಚಾರ. ಮನುಷ್ಯ ಉನ್ನತ ವಿಚಾರಗಳನ್ನು ಕುರಿತು ಯೋಚನೆಮಾಡಬಲ್ಲವನಾದರೆ, ಅದನ್ನು ಕೃತಿಗಿಳಿಸಲು ಆತನಿಗೆ ಸಾಧ್ಯವಾಗದೆ? ಮನಸ್ಸು, ಬುದ್ಧಿ, ಹೃದಯ ಒಂದಾದಾಗ ಸರ್ವೋದಯವನ್ನು ಸಾಧಿಸುವುದು ಅಪ್ರಾಪ್ಯವಲ್ಲ, ಅಸಾಧ್ಯವೂ ಅಲ್ಲ; ಅದು ಪ್ರಯತ್ನ ಸಾಧ್ಯ.

ವಿಚಾರ ಅಪೌರುಷೇಯವಾದುದು. ಅದು ಯಾರ ಗುತ್ತಿಗೆಯೂ ಅಲ್ಲ. ಅದು ಆಕಾಶದಷ್ಟೆ ವ್ಯಾಪಕ. ಗಾಂಧೀ ಬಳಗದ ಮಹಾನ್ ಚಿಂತಕ ದಾದಾ ಧರ್ಮಾಧಿಕಾರಿ ಹೇಳುತ್ತಾರೆ: ''ವಿಚಾರ ಗಾಂಧಿಯವರ ಸ್ವತ್ತಲ್ಲ. ಅಂತೆಯೇ ಮಾರ್ಕ್ಸ್‌ನ ಸ್ವತ್ತೂ ಅಲ್ಲ. ವಿಚಾರ ಸಮಾಜವಾದಿಯದೂ ಅಲ್ಲ. ಸರ್ವೋದಯವಾದಿಯದೂ ಅಲ್ಲ. ಅದು ಕೇವಲ ವಿಚಾರ. ಮಡಿವಂತಿಕೆ ಅದರ ಹತ್ತಿರ ಸುಳಿಯದು. ವಿಚಾರ ಮಾನವ ವ್ಯಾಪಿ ಎಂತಲೆ ಎಲ್ಲ ಶುದ್ಧ ವಿಚಾರಗಳು ಅಪೌರುಷೇಯವೆಂದು ತಿಳಿಯಬೇಕು. ಅದನ್ನು ಯಾರು ಬೇಕಾದರೂ ಅಭಿವ್ಯಕ್ತಗೊಳಿಸಬಹುದು. ಭಿನ್ನ-ಭಿನ್ನ ಅರ್ಥಗಳನ್ನು ಕಲ್ಪಿಸಿರಬಹುದು. ಆದರೆ ಅದರ ಅರ್ಥ ಹಾಗಿಲ್ಲ. ''ವೇದ ಈಶ್ವರ ಪ್ರಣೀತ ಎನ್ನುವ ಭಾವನೆ ನಮ್ಮಲ್ಲಿದೆ. ಈ ವಿಚಾರವನ್ನು ನಾನೊಪ್ಪಿಕೊಂಡರೆ ಇನ್ನು ಈಶ್ವರನ ಅಗತ್ಯವೇನಿದೆ ನಮಗೆ? ಆತ ನಿಜವಾಗಿಯೂ ವೇದಗಳನ್ನು ಜನರ ಮುಂದೆ ಹಾಡಿದನೆ, ಓದಿದನೆ, ತೋರಿಸಿದನೆ? ಬುದ್ಧಿ ಜೀವಿಗಳ ಮಕುಟಮಣಿ ಶಂಕರಾಚಾರ್ಯರು, ಗೀತೆಯ ಬಗ್ಗೆ ಭಾಷ್ಯ ಬರೆಯುವಾಗ ಹದಿನೈದನೆ ಅಧ್ಯಾಯದಲ್ಲಿ ಹೀಗೆ ಬರೆದಿದ್ದಾರೆ.

''ವೇದಾಂತಕೃತ್ ವೇದ ವಿದೇವ ಬಾಹಂ'' ಅಂದರೆ ''ವೇದಾಂತ ಕೃತ್ ನಾನೇ''. ಶಂಕರಾಚಾರ್ಯರು ಇದರ ಭಾಷ್ಯ ಮಾಡುವಾಗ, 'ವೇದಾಂತ ಕೃತ್' ಇದರ ಅರ್ಥ; ವೇದಗಳ ಪ್ರಥಮ ಪ್ರವಕ್ತಾ ನಾನು ಎಂದಿದ್ದಾರೆ. ಅಂದರೆ ''ಜ್ಞಾನವನ್ನು ನಾನು ಅಭಿವ್ಯಕ್ತಗೊಳಿಸಿದ್ದೇನೆ. ನಾನು ಅದರ ನಿರ್ಮಾತೃವಲ್ಲ. ಯಾರೂ ಅದರ ನಿರ್ಮಾತೃವಾಗಲು ಸಾಧ್ಯವಿಲ್ಲ''. ವಿಚಾರ ಸಾರ್ವಭೌಮ. ಅದರ ಶಕ್ತಿ ಅಗಣಿತ. ಅದು ಹರಿಯುತ್ತಿರುವ ನೀರಿನಂತೆ. ಅದು ಒಂದು ಕಡೆ ನಿಲ್ಲಬಾರದು. ಎಲ್ಲರ ದಾಹವನ್ನು ತಣಿಸುವ ಶಕ್ತಿ ಅದರದು. ಯಾರು ಬೇಕಾದರೂ ಅದರ ಉಪಯೋಗ ಪಡೆಯಬಹುದು. ಆದರೆ ಅದಕ್ಕೆ ಕಟ್ಟೆ ಕಟ್ಟಿದರೆ ಮುಗಿಯಿತು. ಅದರ ಶಕ್ತಿ ಇತಿ-ಮಿತಿಯಲ್ಲಿ ಇಂಗಿ ಹೋಗುತ್ತದೆ. ಅಂತೆಯೇ ವಿಚಾರವೂ ಸಹ. ಅದು ಆಕಾಶವ್ಯಾಪಿ. ದಾದಾ ಧರ್ಮಾಧಿಕಾರಿಯವರ ಮಾತಿನಲ್ಲಿ: ''ವಿಚಾರದಲ್ಲಿ ಆಗ್ರಹ ಬಂದಾಗ, ಒತ್ತಾಯ ಬಂದಾಗ, ಅದು ಸಂಪ್ರದಾಯದಲ್ಲಿ ಕಮರಿಹೋಗುತ್ತದೆ. ಅದರಿಂದ ಆವೇಶ ಹುಟ್ಟುತ್ತದೆ. ಜೊತೆಗೆ ಉನ್ಮಾದವೂ ಸೇರಿಕೊಳ್ಳುತ್ತದೆ. ಆಮೇಲೆ ಅದು ವಾದವಾಗಿ ಪರಿಣಮಿಸುತ್ತದೆ. ಮುಂದಿನ ಹಂತವೇ ವಿಚಾರ ಸಂಘರ್ಷ. ವಿಚಾರವೂ ಬೇಕು, ಸಂಘರ್ಷವೂ ಬೇಕು. ಇದು ಹೇಗೆ ಸಾಧ್ಯ, ''ಸರ್ವೋದಯಕ್ಕೆ ಮುಖ್ಯವಾದ ಆಧಾರ ಶಿಲೆ ಬೌದ್ಧಿಕ ಅನಾಗ್ರಹತೆ'' ಎನ್ನುತ್ತಾರೆ ಆಚಾರ್ಯ ದಾದಾ ಧರ್ಮಾಧಿಕಾರಿ.

ರಸ್ಕಿನ್ನನ 'ಅನ್‌ಟು ದಿಸ್ ಲಾಸ್ಟ್' ಶಬ್ದದ ಅರ್ಥವನ್ನು ಗಾಂಧೀಜಿ ಭಾಷಾಂತರಿಸುದುದೇ ಒಂದು ವಿಚಿತ್ರ! ಕಟ್ಟ ಕಡೆಯವನು, ಕೊನೆಯವನು, ಎನ್ನುವ ಕಲ್ಪನೆಯನ್ನೇ ಅವರು ಮಾಡಲಿಲ್ಲ. ಅವರು ಮಾಡಿದ ಚಿಂತನದ ಗರ್ಭದಲ್ಲಿ ಮನುಕುಲದ ವಿಶ್ವಮಾನವತೆಯ ಜೇನು ತೊಟ್ಟಿಕ್ಕುತ್ತಿತ್ತು. ಅದರ ರಸಾಯನದ ಪಾಕ ಎಲ್ಲರಿಗೂ ಹಂಚುವ ವಿಚಾರ ಅವರ ತಲೆಯಲ್ಲಿ ಮೂಡಿತು. ಅವರು ಅಂತ್ಯೋದಯ ಎನ್ನಲಿಲ್ಲ. ಅಂತ್ಯಜರ ಉದಯ ಎನ್ನಲಿಲ್ಲ. ದುರ್ಬಲರು ಸಬಲರು, ಎನ್ನುವ ಅಂತರ-ಭೇದದಿಂದ ಅವರು ದೂರ ಉಳಿದುಬಿಟ್ಟರು. ಅವರಿಗೆ ಕಾಣಿಸಿದ್ದು; ಸರ್ವಾಂಗ ಪರಿಪೂರ್ಣ ಸತ್ಯ ಮಾನವನ ಸೃಷ್ಟಿ. ಎಂತಲೇ ಅವರು 'ಸರ್ವೋದಯ' ಶಬ್ದವನ್ನುಪಯೋಗಿಸಿದರು. ಸರ್ವೋದಯ ಸಮಾಜವಾಗಬೇಕು ಎಂದರು.

**ಸರ್ವೋದಯ ಶಬ್ದದ ವ್ಯಾಖ್ಯೆ**

ಸರ್ವೋದಯ ಕೇವಲ ಆರ್ಥಿಕ ಅಭಿವೃದ್ಧಿಯೊಂದರಿಂದ ಸಾಧ್ಯವಿಲ್ಲ. ಅದರೊಂದರಿಂದ ರಾಜಕೀಯ, ಸಾಮಾಜಿಕ, ಆಧ್ಯಾತ್ಮಿಕ, ನೈತಿಕ ಪ್ರಗತಿಯೂ ಕೂಡಿಕೊಳ್ಳಬೇಕು. ಆಗ ಮಾನವ ಪರಿಪೂರ್ಣನಾದಾನು. 'ಸರ್ವ' ಶಬ್ದ ದಲ್ಲಿ ಸರ್ವರ ಹಿತ ಅಡಗಿದೆ. ನಾನು, ನನ್ನದು, ಎನ್ನುವ ಸಂಕುಚಿತತೆಗೆ ಅಲ್ಲಿ ಸ್ಥಾನವಿಲ್ಲ, ಎಲ್ಲ ಸಂಪತ್ತನ್ನು ಪಡೆದಿದ್ದು, ನೈತಿಕ ಸಂಪತ್ತು ಇಲ್ಲದೆ ಹೋದರೆ ಆತ ನಾಲ್ಕು ಕಾಲಿನ ಪಶುವಾದಾನು. ಮನೋವಿಕಾಸವಾಗದ ಆತ್ಮಜ್ಞಾನದಿಂದ ವಂಚಿತನಾದಾನು. ಹಾಗೆಂದು ಕೇವಲ ನೈತಿಕ ಸಂಪತ್ತನ್ನು ಗಳಿಸಿ, ತಿನ್ನಲು ಗತಿಯಿಲ್ಲದೆ ಹೋದರೆ ಆತ ಜೀವಂತ ಉಳಿದಾನೆ? ಸರ್ವತೋಮುಖ ಅಭಿವೃದ್ಧಿಗೆ ಪೂರ್ಣ ಮಾನವನ ಕಲ್ಪನೆ ಅತಿ ಮುಖ್ಯ. ಶರೀರದಲ್ಲಿ ಒಂದು ಅಂಗ ಊನವಾದರೂ ಅದು ಆರೋಗ್ಯಕರ ಬೆಳವಣಿಗೆ ಎಂದು ಹೇಳಲು ಬಾರದು. ಶರೀರದ ಎಲ್ಲ ಅಂಗಾಂಗಗಳೂ ಪರಿಪುಷ್ಟಗೊಳ್ಳಬೇಕು. ಬುದ್ಧಿ ವಿಚಾರ ಮಾಡಬೇಕು, ಕೈ ಕೆಲಸ ಮಾಡಬೇಕು, ಕಾಲು ಸಂಚರಿಸಬೇಕು. ಕೈಕಾಲಾಡಿಸದೇ ಬರೀ ಬುದ್ಧಿಯ ಕಸರತ್ತು ಸಮಾಜಕ್ಕೆ ಅಪಾಯಕರ, ಜ್ಞಾನ- ಕರ್ಮ-ಭಕ್ತಿ, ಇವು ಬೇರೆ ಬೇರೆಯಲ್ಲ. ಈ ತ್ರಿವೇಣಿ ಸಂಗಮವನ್ನು ಬೇರ್ಪಡಿಸಲಾಗದು. ಒಂದೊಂದು ಪರಸ್ಪರ ಪೂರಕ, ಇವುಗಳಲ್ಲಿ ಮೇಲು, ಕೀಳು ಭಾವನೆ ಸಲ್ಲದು. 'ಸಮಾಜಾಯ ಇದಂ ನಮಪು ನಮಪ್ಪ, ಎನ್ನುವುದಕ್ಕೆ ಇಲ್ಲಿ ಪ್ರಾಧಾನ್ಯ. ಇದೆಲ್ಲವೂ ಸಮಾಜದ್ದು. ನನ್ನದೆನ್ನುವುದು ಏನೂ ಇಲ್ಲ. ನನ್ನ ಇಡೀ ಶರೀರ ಬೆಳೆದದ್ದು ಸಮಾಜದಿಂದ. ನನ್ನ ಬುದ್ಧಿ-ಶಕ್ತಿ- ಸಾಮರ್ಥ್ಯ ಸಮಾಜದಿಂದ ಬಂದ ಋಣ. ಈ ಋಣವನ್ನು ನಾನು ತೀರಿಸಲೇಬೇಕು. ಅದಕ್ಕೆ ನಾನು ಸಂಕಲ್ಪ ಬದ್ಧನಾಗಬೇಕು. ಆಗ ಸರ್ವರ ಹಿತ, ಸರ್ವೋದಯ ಸಾಧ್ಯ.'

ಸರ್ವೋದಯ ವಿಚಾರಕ್ಕೆ ಮೊದಲು, ಎರಡು ವಿಚಾರ ಧಾರೆಗಳು ಸಮಾಜದಲ್ಲಿ ಪ್ರಚಲಿತವಾಗಿದ್ದವು. ಒಂದು-ಡಾರ್ವಿನ್ನನ Survival of the fittest'. ಮತ್ಸ್ಯನ್ಯಾಯದಂತೆ ಬಲಾಢ್ಯರೇ ಈ ಸಮಾಜದಲ್ಲಿ ಬದುಕಬಲ್ಲರು. ದೊಡ್ಡ ಮೀನು ಸಣ್ಣ ಮೀನನ್ನು ನುಂಗಿ ಹಾಕುತ್ತದೆ. ಆದರೆ ಅತ್ಯಂತ ಬಲಶಾಲಿಯಾದ, ಭಾರಿ ಗಾತ್ರವುಳ್ಳ ಆನೆಯನ್ನು ಮನುಷ್ಯ ಪಳಗಿಸಬಲ್ಲ. ವಸ್ತು ಸ್ಥಿತಿ ಮತ್ತು ಸಿದ್ಧಾಂತದಲ್ಲಿ ಅಂತರವಿದೆ ಎನ್ನುವುದನ್ನು ಮರೆಯಲಾಗದು. ಎರಡನೆಯದು - ಹಕ್ಸಲೆ ಸಿದ್ಧಾಂತ. ಅವನಿಗೆ ಡಾರ್ವಿನ್ನನ ಸಿದ್ಧಾಂತ ಒಪ್ಪಿಗೆಯಾಗಲಿಲ್ಲ. ಸಮಾಜ ನಿರ್ಮಾಣವಾಗುವುದು ಮನುಷ್ಯನಿಂದ. ಆತನೇ ಅದರ ಕರ್ತೃ. ಬಲಾಢ್ಯನಾದವನಿಗೇ ಸಮಾಜದಲ್ಲಿ ಬದುಕುವ ಅಧಿಕಾರವಿದೆ ಎನ್ನುವುದು ಸರಿಯಲ್ಲ. ಮನುಷ್ಯ ಕೇವಲ ಮನುಷ್ಯನಲ್ಲ. ಯೋಚನೆ ಮಾಡುವ, ವಿಚಾರ ಮಾಡುವ ಒಂದು ಚೇತನ. ಹೃದಯ-ಅಂತಃಕರಣವಿರುವ ಪ್ರಾಣಿ. ಬೇರೆಯವರಿಗೂ ಬದುಕಲು ಅವಕಾಶ ಮಾಡಿಕೊಡುವ ವಿವೇಕ ಆತನಲ್ಲಿದೆ. ಇದನ್ನೆ ಸಹ ಅಸ್ತಿತ್ವವೆಂದು ಕರೆಯುವುದು. ಹಕ್ಸಲೆಯ ವಿಚಾರದ ತಿರುಳು ಇದು.

ಈ ಎರಡು ವಿಚಾರಗಳನ್ನು ದಾಟಿ ಮುಂದುವರಿದಿರುವುದೇ ಸರ್ವೋದಯ. Live on others, Live and let live, ಈಗ 'live to let live' ವಿಚಾರದಲ್ಲಿ ಕ್ರಾಂತಿಕಾರಿಯಾದ ಬದಲಾವಣೆ ಇದು. ಕ್ರಾಂತಿ ಎಂದರೆ ರಕ್ತಪಾತವಲ್ಲ, ಹಿಂಸೆಯಲ್ಲ. ಇದ್ದ ಸ್ಥಿತಿಯಿಂದ ದಾಟಿ ಹೋಗುವುದು. ಇದಕ್ಕೆ ಅಸ್ತ್ರ-ಶಸ್ತ್ರ ಯಾವುದೂ ಬೇಕಿಲ್ಲ. ವ್ಯಕ್ತಿಯ ಶ್ರೇಯಸ್ಸು ಸಮಷ್ಟಿಯ ಶ್ರೇಯಸ್ಸಿನಲ್ಲಿ ಎಂದಿರುವುದು ಹೊಸ ವಿಚಾರವೇನಲ್ಲ. 'ಸರ್ವ ಭೂತಹಿತೇ ರತಾಃ', 'ಸರ್ವೇ ಜನಾಃ ಸುಖಿನೋ ಭವಂತು'. ಈ ವಾಕ್ಯಗಳನ್ನು ಸಾವಿರಾರು ವರ್ಷಗಳಿಂದ ನಾವು ಜಪಿಸುತ್ತಲೇ ಬಂದಿದ್ದೇವೆ. ಆದರೆ ಅದಕ್ಕೆ ತಕ್ಕಂತೆ ನಮ್ಮ ಸಮಾಜದ ವ್ಯವಸ್ಥೆ ಬೆಳೆದು ಬರಲಿಲ್ಲ. ನಮ್ಮ ರೀತಿ-ನೀತಿ, ನಮ್ಮ ಬಾಳು-ಬದುಕು, ನಡವಳಿಕೆ, ಸ್ವಭಾವ, ಬದುಕುವ ದಾರಿ ಆ ಮಟ್ಟಕ್ಕೆ ಏರಲೇ ಇಲ್ಲ. ವಿಚಾರ ಸಾರ್ವಭೌಮವಾದರೂ ಅದು ನಮ್ಮ ಹೃದಯವನ್ನು ಸ್ಪಂದಿಸಲೇ ಇಲ್ಲ. ನಮ್ಮ ಆಚರಣೆಯಲ್ಲಿ ಇಳಿದು ಬರಲಿಲ್ಲ. ನಾವು ಒಂದು ವೇಳೆ ಅದನ್ನು ಕೃತಿಗಿಳಿಸಿದ್ದಿದ್ದರೆ ಸರ್ವೋದಯ ಸಮಾಜ ಎಂದೋ ರಚನೆಯಾಗುತ್ತಿತ್ತು. ನಮ್ಮದು ಬಂಗಾರದ ಬದುಕಾಗುತ್ತಿತ್ತು. ಪರಕೀಯರೂ ನಮ್ಮ ಬದುಕನ್ನು ಅನುಕರಿಸುತ್ತಿದ್ದರು.

ನಾವು ರಸ್ಕಿನ್ನನ ಎರಡನೆ ವಿಚಾರಕ್ಕೆ ಬಂದಾಗ. ವೃತ್ತಿಯಲ್ಲಿ ಅಸಮಾನತೆಯ ಭೇದಗಳನ್ನು ತೊಡೆದುಹಾಕಿದ್ದುದು ಸ್ಪಷ್ಟವಾಗಿ ಗೋಚರಿಸುತ್ತದೆ. ನ್ಯಾಯಾಧೀಶ, ವಕೀಲ, ವೈದ್ಯ, ಭಂಗಿ ಯಾರು ಯಾವುದೇ ವೃತ್ತಿಯಲ್ಲಿದ್ದರೂ ಅವರೆಲ್ಲರೂ ಸರಿಸಮಾನರು. ಅವರ ವೃತ್ತಿಯಿರುವುದು ಸಮಾಜಸೇವೆಗಾಗಿ. ಅವರಿಂದ ಸಮಾಜ, ಸಮಾಜದಿಂದ ಅವರು. ಜೀವನ ನಿರ್ವಹಣೆ ನಡೆಸುತ್ತಿರುವ ಪ್ರತಿಯೊಬ್ಬರಿಗೂ ಇದು ಅನ್ವಯಿಸುತ್ತದೆ. ಹೀಗಿದ್ದೂ ನಾವು ವೃತ್ತಿಯಲ್ಲಿ ಅಸಮಾನತೆಯ ಅಲೆಯನ್ನು ಎಬ್ಬಿಸಿದ್ದೇವೆ. ರಾಷ್ಟ್ರಾಧ್ಯಕ್ಷರಿಂದ ಚಪ್ರಾಸಿಯವರೆಗೆ ವೇತನದ ಕಂದಕವನ್ನು ಸೃಷ್ಟಿಸಿದ್ದೇವೆ.

ನಮ್ಮ ವೇತನ ಶ್ರೇಣಿಯಲ್ಲಿ ಒಬ್ಬ ವ್ಯಕ್ತಿಗೆ ಅಗತ್ಯವಿರುವಷ್ಟು ದೊರೆಯುವುದೇ ಇಲ್ಲ. ಆತನ ಮನೆಯಲ್ಲಿರುವ ಹಸಿದ ಜನ, ಬಟ್ಟೆ-ಬರೆ ವಸತಿಯ ಲೆಕ್ಕ ಹಾಕುವುದೇ ಇಲ್ಲ. ಆತ ಝಾಡಮಾಲಿಯಾಗಿದ್ದರೆ, ಗುಮಾಸ್ತನಾಗಿದ್ದರೆ, ಕಡಿಮೆ ದರ್ಜೆಯವನೆಂದು ಕಡಿಮೆ ವೇತನ ಶ್ರೇಣಿಯನ್ನು ಗೊತ್ತು ಮಾಡುವುದು ಇಂದಿನ ಅರ್ಥನೀತಿ. ಆತನ ಪ್ರಾಥಮಿಕ ಅಗತ್ಯವನ್ನು ಪೂರೈಸಿದ ಅರ್ಥನೀತಿಯಿಂದ ಆತನ ಪ್ರಗತಿ ಹೇಗೆ ಸಾಧ್ಯ? ಅದೇ ಇನ್ನೊಂದು ಕಡೆ ಉನ್ನತ ಹುದ್ದೆಯಲ್ಲಿರುವ ವ್ಯಕ್ತಿಗೆ ದೊರೆಯುವ ವೇತನ ಅಧಿಕ. ಅವನ ಮನೆಯಲ್ಲಿ ಹಸಿದಿರುವವರ ಸಂಖ್ಯೆ ಕಡಿಮೆಯಿದ್ದರೂ ಅದು ಗಣನೆಗೆ ಬಾರದು. ಬರುವ ವೇತನ ಅಧಿಕಗೊಂಡ ಮೇಲೆ, ತನ್ನ ಆವಶ್ಯಕತೆಗೆ ಮೀರಿ ಸೇರಿದುದನ್ನು, ಆತ ಏನು ಮಾಡಬೇಕು? ಕಾರು, ಬಂಗಲೆ, ಆಭರಣ, ಒಡವೆ, ವೇಷ ಭೂಷಣಗಳಿಗೆ ಖರ್ಚು ಮಾಡುತ್ತಾನೆ. ಅದಕ್ಕೂ ಮೀರಿ ಉಳಿದರೆ ಬ್ಯಾಂಕಿನಲ್ಲಿಡುತ್ತಾನೆ. ಮೋಜಿನ ಜೀವನ ನಡೆಸುತ್ತಾನೆ. ದಾರಿತಪ್ಪಿದವನಾದರೆ ಕುಡಿತ, ಜೂಜು, ಹಾದರಕ್ಕಾಗಿ ಹಾಳುಮಾಡುತ್ತಾನೆ. ಕೊನೆಗೆ ತನ್ನ ಆತ್ಮವನ್ನೂ ನಾಶಮಾಡಿಕೊಳ್ಳುತ್ತಾನೆ. ಇಂತಹ ಮನುಷ್ಯನನ್ನು ಸೃಷ್ಟಿ ಮಾಡುವ ವೇತನ ಶ್ರೇಣಿ ಯಾವ ಸಂಸ್ಕೃತಿಯ ಪ್ರತೀಕ? ಅಭಿವೃದ್ಧಿಯ ಪ್ರತೀಕ?

ವೇತನ ಶ್ರೇಣಿ ಗೊತ್ತು ಮಾಡುವುದು, ಸಾಮರ್ಥ್ಯಕ್ಕೆ ತಕ್ಕ ಹಾಗೆ ಅಲ್ಲ, ಅಗತ್ಯಕ್ಕೆ ಅನುಗುಣವಾಗಿ ಎನ್ನುತ್ತದೆ ಸರ್ವೋದಯ. ಬಡವ ಮತ್ತು ಶ್ರೀಮಂತ ವರ್ಗ ಸೃಷ್ಟಿಯಾಗುವುದು (ಇಂದಿನ) ವೇತನ ಶ್ರೇಣಿಯ ಪದ್ಧತಿಯಿಂದ. ಬೇಕಾದವನಿಗೆ ಇಲ್ಲ. ಬೇಡವಾದವನಿಗೆ ಇದೆ. ಇಂತಹ ಅರ್ಥವ್ಯವಸ್ಥೆ ಕಲಹ, ದ್ವೇಷ, ಮತ್ಸರ, ವರ್ಗ ಸಂಘರ್ಷಕ್ಕೆ ಎಡೆಮಾಡಿಕೊಡುತ್ತದೆ. ಶಕ್ತಿ-ಸಾಮರ್ಥ್ಯಗಳಿಂದ ವೇತನ ಶ್ರೇಣಿಯನ್ನು ಗೊತ್ತು ಮಾಡದೆ ಅವರವರ ಆವಶ್ಯಕತೆಗನುಗುಣವಾಗಿ ನಿರ್ಧರಿಸುವುದು ಸರ್ವೋದಯ ಸಿದ್ಧಾಂತದ ಎರಡನೇ ವಿಚಾರ.

ಮೂರನೆಯದು ಶ್ರಮಿಕ, ರೈತ, ಕಸಬುದಾರರ ಜೀವನವೇ ಸರ್ವೋತ್ಕೃಷ್ಟವಾದುದು. ಉತ್ಪಾದಕ ಪರಿಶ್ರಮ ಮಾಡುವುದು ನಿಕೃಷ್ಟ ಎಂಬ ಭಾವನೆ ಅನಾದಿಕಾಲದಿಂದ ರೂಢಿಗ್ರಸ್ತವಾಗಿದೆ. ಶ್ರಮಿಕ- ದುಡಿಮೆಗಾರನಿಗೆ ಗೌರವವಿಲ್ಲ. ಸಮಾಜದ ಹೊರೆಯನ್ನು ಹೊತ್ತು ನಿಂತ ಈತನನ್ನು ಯಾರೂ ಗುರುತಿಸರು. ಪ್ರತಿಷ್ಠಿತ ವ್ಯಕ್ತಿಗಳ ಪಾಲಿಗೆ ಈತ ನಗಣ್ಯ. ಬೇರೆಯವರಿಗಾಗಿ ದುಡಿಯಬೇಕು, ಓದಬೇಕು. ಕೈಕಾಲಾಡಿಸದವನದು ಈತನ ಮೇಲೆ ಅಧಿಕಾರ. ಒಬ್ಬ ದಣಿ, ಒಬ್ಬ ಆಳು. ಹೀಗೆ ಸಮಾಜದಲ್ಲಿ ಉತ್ಪಾದಕ- ಅನುತ್ಪಾದಕ ವರ್ಗ ಸೃಷ್ಟಿಯಾಯಿತು. ಈ ಎರಡು ವರ್ಗಗಳ ನಡುವೆ ಸಾಮರಸ್ಯ ಉಂಟಾಗಲೇ ಇಲ್ಲ. ಈಗ ನಮ್ಮ ಮುಂದಿರುವುದು ಶೋಷಿತ-ಶೋಷಕ ಸಮಾಜ. ಇಂತಹ ವರ್ಗಭೇದವನ್ನು ಅಲ್ಲಗಳೆಯುತ್ತದೆ ಸರ್ವೋದಯ.

ಪ್ರತಿಯೊಬ್ಬ ವ್ಯಕ್ತಿ ಕಾಯಕ ಮಾಡುವುದು ಈಶ್ವರೀಯ ನಿಯಮ. ಭಗವದ್ಗೀತೆಯಲ್ಲಿ ಈ ಮಾತು ಬಂದಿದೆ. ಯಜ್ಞ ಮಾಡದೆ-ಪರಿಶ್ರಮ ಮಾಡದೆ ತಿನ್ನುವವನನ್ನು ಕಳ್ಳ-ಚೋರ ಎಂದಿದೆ. ಇದಕ್ಕಿಂತ ಛೀಮಾರಿ ಶಬ್ದ ಇನ್ನೊಂದಿದೆಯೆ? ಸಮಾಜದಲ್ಲಿ ಬದುಕುವ ಪ್ರತಿಯೊಬ್ಬರೂ ಉತ್ಪಾದನೆಯ ಪರಿಶ್ರಮ ಮಾಡಲೇಬೇಕು. ಈ ನಿಯಮ ಪಾಲಿಸಿದರೆ ಉಚ್ಚ-ನೀಚ ಭೇದ ಮಾಯವಾದೀತು. ದಕ್ಷಿಣ ಆಫ್ರಿಕಾದಲ್ಲಿದ್ದಾಗಲೆ ಗಾಂಧೀಜಿ ಗೆಳೆಯ ವೆಸ್ಟರೊಂದಿಗೆ ಮಾತುಕತೆ ನಡೆಸಿ; ಫೀನಿಕ್ಸ್ ಆಶ್ರಮಕ್ಕೆ ಹತ್ತಿರವಿರುವ ಎಂಬತ್ತು ಎಕರೆ ಭೂಮಿಯನ್ನು ಕೊಂಡುಕೊಂಡರು. ಕೃಷಿ ಕೆಲಸ ಆರಂಭವಾಯಿತು. ಅಂದಿನಿಂದ ಆರಂಭವಾದ ಅವರ ಕಾಯಕ ಅಂತ್ಯ ಕಾಲದವರೆಗೂ ನಡದೇ ಇತ್ತು. ಸಾಬರಮತಿ ಮತ್ತು ಸೇವಾಗ್ರಾಮ ಆಶ್ರಮಗಳಲ್ಲಿ ಶ್ರಮಜೀವನ ಕಡ್ಡಾಯವಾಗಿತ್ತು. ಬಲವಿದ್ದವನಿಗೆ ನೆಲೆ, ಮಾಡಿದ್ದೇ ನ್ಯಾಯ, ಮುಷ್ಠಿ ಬಲಕ್ಕೆ ಅಲ್ಪಸಂಖ್ಯಾತರನ್ನು ಕಡೆಗಣಿಸಿ, ಬಹು ಸಂಖ್ಯಾತರ ಹಿತವನ್ನವರು ಒಪ್ಪಲೇ ಇಲ್ಲ. ಶ್ರಮಾಧಾರಿತ-ಸಮತಾ ಪ್ರಧಾನ-ಸರ್ವಹಿತ ಸರ್ವೋದಯ ಸಮಾಜ ಗಾಂಧೀಜಿಯ ಕನಸಾಗಿತ್ತು. 'ನೀವು ನನಗಾಗಿ ಬದುಕಿ, ನಾನು ನಿಮಗಾಗಿ ಬದುಕುತ್ತೇನೆ?'ಎಷ್ಟೊಂದು ಸರಳವಾಕ್ಯ ಇದು!

**ಪಕ್ಷಾತೀತ ಸಂಘಟನೆ**

ಬೇರೆಯವರನ್ನು ನಮ್ಮವರನ್ನಾಗಿಸಿಕೊಳ್ಳಲು ನಮ್ಮಲ್ಲಿರುವ ಪ್ರೇಮ ವಿಸ್ತಾರವಾಗಬೇಕು. ನೀನು ಹೇಗೊ ಹಾಗೆಯೆ ನಾನು. ಈ ಭಾವನೆ ನಮ್ಮಲ್ಲಿ ಅಂಕುರಿಸಬೇಕು. ಹೃದಯ ಪರಿವರ್ತನೆ, ಜೀವನ ಪರಿವರ್ತನೆ, ಸಮಾಜ ಪರಿವರ್ತನೆ ಮತ್ತು ಸಾಧನ ಶುದ್ಧಿ ಇವು ಅದರ ಕ್ರಾಂತಿಕಾರಿ ಪ್ರಕ್ರಿಯೆಗಳು. ೧೯೩೪ರಲ್ಲಿ ಗಾಂಧೀಜಿ ಅಖಿಲ ಭಾರತ ಕಾಂಗ್ರೆಸ್ಸಿನ ಪ್ರಾಥಮಿಕ ಸದಸ್ಯತ್ವಕ್ಕೆ ರಾಜೀನಾಮೆ ಇತ್ತರು. ಇದರಿಂದ ಕಾಂಗ್ರೆಸ್ಸಿನಲ್ಲಿ ಬಲವಾದ ಬಿರುಗಾಳಿ ಎದ್ದಿತು. ರಾಷ್ಟ್ರಪಿತನ ನಿರ್ಧಾರದಿಂದ ಎಲ್ಲರೂ ಬೆಚ್ಚಿದರು. ಅವರಿಗೆ ಎಲ್ಲಿಲ್ಲದ ಅಚ್ಚರಿ. ಹೀಗೇಕಾಯಿತು ಎನ್ನುವ ಕಳವಳ. ಅದಕ್ಕೆ ಗಾಂಧೀಜಿಯ ಹತ್ತಿರ ಉತ್ತರ ಸಿದ್ಧವಾಗಿತ್ತು. ಅವರು ಯೋಚಿಸುತ್ತಿದ್ದ ದಾರಿಯೆ ಬೇರೆ, ಅವರಿಗೆ ಕೇವಲ ರಾಜಕೀಯ ಸ್ವಾತಂತ್ರ್ಯ ಮಹತ್ವದ್ದಾಗಿರಲಿಲ್ಲ. ಸ್ವಾತಂತ್ರ್ಯಾನಂತರದ ಸಮಾಜ ರಚನೆಯನ್ನು ಕುರಿತು ಅವರ ಮನಸ್ಸು ಯೋಚಿಸುತ್ತಿತ್ತು. ಅವರು ಆರಿಸಿಕೊಂಡ ಸತ್ಯಾಗ್ರಹ ಅಸ್ತ್ರ ಹದಿನೆಂಟು ರಚನಾತ್ಮಕ ಕಾರ್ಯಕ್ರಮಗಳು, ಅದಕ್ಕೆ ಪೂರಕವಾಗಿರಬೇಕೆಂದು ಅವರು ಬಯಸಿದ್ದರು. ಆದರೆ ಅವರ ಪ್ರಕ್ರಿಯೆಗಳು ಅವರ ರಾಜಕೀಯ ಅನುಯಾಯಿಗಳಿಗೆ ಹಿಡಿಸಲಿಲ್ಲ. ಸತ್ಯ-ಅಹಿಂಸೆ, ರಚನಾತ್ಮಕ ಕಾರ್ಯಗಳಿಗೆ ಅವರು ಅಡ್ಡಗಾಲು ಹಾಕಿದರು. ಅವರಿಗೆ ಬೇಕಾಗಿದ್ದುದು ರಾಜಕೀಯ ಸ್ವಾತಂತ್ರ್ಯ, ಉಳಿದುದೆಲ್ಲ ಅವರ ಪಾಲಿಗೆ ಗೌಣ. ಆದರ್ಶ-ಸಿದ್ಧಾಂತಗಳಿಂದ ಅವರು ತಿರುಚಿಕೊಂಡರು. ಆದರೂ ಗಾಂಧೀಜಿ ಸ್ವಾತಂತ್ರ್ಯ ಸಂಗ್ರಾಮದ ಸಾರಥಿಯಾಗಿ ೧೯೪೭ನೇ ಆಗಸ್ಟ್ ೧೫ ರವರೆಗೂ ಕಾಂಗ್ರೆಸ್ಸಿನ ರಥ ನಡೆಸಿದರು.

೧೯೩೪ರಿಂದ ಹದಿಮೂರು ವರ್ಷಗಳ ಕಾಲ ಗ್ರಾಮಸ್ವರಾಜ್ಯ, ಗ್ರಾಮಭಾರತದ ನವನಿರ್ಮಾಣ ಕಾರ್ಯದಲ್ಲಿ ಅವರು ತಮ್ಮನ್ನು ತೊಡಗಿಸಿಕೊಂಡರು. ಸೇವಾಗ್ರಾಮದ ಸುತ್ತ ಹಲವಾರು ಸಂಸ್ಥೆಗಳು ತಲೆ ಎತ್ತಿದವು. ''ನಯೀ ತಾಲೀಂ, ಗೋ ಸೇವಾ ಸಂಘ, ಅಖಿಲ ಭಾರತ ಖಾದಿ-ಗ್ರಾಮೋದ್ಯೋಗ ಸಂಘ'', ಹಿಂದೂಸ್ತಾನಿ ತಲೀಮಿ ಸಂಘ, ಹರಿಜನ ಸೇವಕ ಸಂಘ- ಹೀಗೆ ಹಲವಾರು ಸಂಸ್ಥೆಗಳಿಗೆ ಆಶ್ರಯ ನೆಲೆಯಾಯಿತು ಸೇವಾಗ್ರಾಮ. ನುರಿತ ಅನುಭವಿ ತಜ್ಞರಿಗೆ ಒಂದೊಂದು ಸಂಸ್ಥೆಯ ಜವಾಬ್ದಾರಿಯನ್ನು ವಹಿಸಿಕೊಟ್ಟರು. ವಿನೋಬಾ, ಕಾಕಾ ಕಾಲೇಲ್ಕರ, ಜೆ. ಸಿ. ಕುಮಾರಪ್ಪ, ಆರ್ಯ ನಾಯಕಂ, ಜಮನಾಲಾಲ ಬಜಾಜ ಹೀಗೆ ಅನೇಕರು ನೂತನ ಸಮಾಜದ ನಿರ್ಮಾಣ ಕಾರ್ಯದಲ್ಲಿ ತೊಡಗಿದರು. ಸರ್ವೋದಯ ಸಮಾಜದ ಪ್ರಯೋಗ ಶಾಲೆಯಂತಿದ್ದವು ಈ ಸಂಸ್ಥೆಗಳು.

ಗಾಂಧೀಜಿಯದು ಇಬ್ಬಗೆಯ ಕ್ರಾಂತಿ. ಒಂದು-ರಾಜಕೀಯ ಸ್ವಾತಂತ್ರ್ಯ, ಇನ್ನೊಂದು ಸರ್ವೋದಯ ಸಮಾಜ ನಿರ್ಮಾಣ, ಈ ಕಾರ್ಯಕ್ಕಾಗಿ ಅವರು ತೊಡಗಿಸಿಕೊಂಡ ಪಡೆ ಮೊದಲೇ ಸಿದ್ಧವಾಗಿತ್ತು.

೧೯೪೮ರ ಜನವರಿಯಲ್ಲಿ ಗಾಂಧೀಜಿ ತೀರಿಕೊಂಡಾಗ ಸೇವಾಗ್ರಾಮದಲ್ಲಿ ರಚನಾತ್ಮಕ ಕಾರ್ಯಕರ್ತರ ಸಮ್ಮೇಳನ ನಡೆಯಿತು. ರಾಷ್ಟ್ರಪಿತನ ಕಾರ್ಯವನ್ನು ಮುಂದುವರಿಸಿಕೊಂಡು ಹೋಗಲು ಪಕ್ಷಾತೀತ ಸಂಸ್ಥೆಯೊಂದರ ಸಂಘಟನೆಯಾಗಬೇಕೆನ್ನುವುದು ಎಲ್ಲರ ಅಪೇಕ್ಷೆಯಾಗಿತ್ತು. ಈ ಸಮ್ಮೇಳನಕ್ಕೆ ರಾಜಕೀಯ ನಾಯಕರು, ರಚನಾತ್ಮಕ ಕಾರ್ಯಕರ್ತರು ಆಗಮಿಸಿದ್ದರು. ಬ್ರಿಟಿಷರ ಕೈಯಿಂದ ಅಧಿಕಾರ ಹಸ್ತಾಂತರವೇನೊ ಆಯಿತು. ಆದರೆ ಮುಂದೆ ಗಾಂಧೀಜಿಯ ಕನಸಿನ ಭಾರತದ ರಚನೆಗೆ ಆದ್ಯತೆ ನೀಡುವ ವಿಷಯ ಪ್ರಸ್ತಾಪವಾಯಿತು. ನೆಹರೂ, ವಲ್ಲಭಬಾಯಿ, ರಾಜೇಂದ್ರ ಪ್ರಸಾದ, ಮೌಲಾನಾ ಆಜಾದ್ ಮುಂತಾದ ಹಿರಿಯ ನಾಯಕರು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಸಂಘಟನೆಯನ್ನು ಕುರಿತು ಹಲವಾರು ಹೆಸರುಗಳು ಪ್ರಸ್ತಾಪವಾದವು. ಈ ಸಂದರ್ಭದಲ್ಲಿ ಆಚಾರ್ಯ ವಿನೋಬಾ ಅವರು ಒಂದು ಹೆಸರನ್ನು ಸೂಚಿಸಿದರು. ಅದೇ ಸರ್ವೋದಯ.

ಸರ್ವೋದಯ ಸಮಾಜ ರಚಿಸುವುದು ಗಾಂಧೀಜಿಯವರ ಅಪೇಕ್ಷೆಯಾಗಿತ್ತು. ಅವರೇ ಕೊಟ್ಟ ಪದ ಅದು. ಅದಕ್ಕಾಗಿ ಶ್ರಮಿಸುವುದು ಬಾಪೂ ಅನುಯಾಯಿಗಳ ಕರ್ತವ್ಯ, ಧರ್ಮವೆಂದು ಸಭೆ ಸರ್ವ ಸಮ್ಮತಿಯಿಂದ ಅನುಮೋದಿಸಿತು. ಸಭೆಯಲ್ಲಿದ್ದವರೆಲ್ಲಾ ಗಾಂಧೀ ಅನುಯಾಯಿಗಳೆ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದವರೆ, ಕೇವಲ ರಾಜಕೀಯ ಸ್ವಾತಂತ್ರ್ಯಕ್ಕಾಗಿ ಗಾಂಧೀಜಿಯನ್ನು ಹಿಂಬಾಲಿಸಿದವರ ಒಂದು ಗುಂಪು. ಅವರಿಗೆ ಬಾಪೂ ಮಾರ್ಗದರ್ಶಿ, ಗುರು ಎಲ್ಲ ಆಗಿದ್ದರು. ಸಾಮ್ರಾಜ್ಯಶಾಹಿಯ ಅಧಿಕಾರದಿಂದ ಬಿಡುಗಡೆಯಾಗುವಷ್ಟರ ಮಟ್ಟಿಗೆ ಅವರು ಗಾಂಧೀ ಮಾರ್ಗವನ್ನು ಅನುಸರಿಸಿದ್ದರು. ಬ್ರಿಟಿಷರ ಶಸ್ತ್ರ ಶಕ್ತಿಯ ಮುಂದೆ ಸತ್ಯಾಗ್ರಹಾಸ್ತ್ರವನ್ನು ಬಿಟ್ಟರೆ ಅವರಿಗೆ ಅನ್ಯ ಮಾರ್ಗವಿರಲಿಲ್ಲ.

ಕ್ರಾಂತಿಕಾರಿಗಳ ಮಾರ್ಗವನ್ನು, ಅವರ ಪ್ರಕ್ರಿಯೆ, ಸಾಧನೆಗಳನ್ನು ನೋಡಿ-ಕೇಳಿ ಅರಿತುಕೊಂಡಿದ್ದರು. ಬಲಾಢ್ಯ ಹಿಂಸಕ ಶಕ್ತಿಯ ಎದುರು ಅವರು ಸಪ್ಪೆಯಾಗಿದ್ದುದು ತಿಳಿಯದ ವಿಷಯವೇನಾಗಿರಲಿಲ್ಲ. ಎಂತಲೆ ಗಾಂಧೀಜಿಯ ಅಹಿಂಸಾ ಮಾರ್ಗ ಅವರಿಗೆ ದಿಕ್ ಸೂಚಿಯಾಯಿತು. ಅಹಿಂಸೆ ಸ್ವಾತಂತ್ರ್ಯದ ಮಟ್ಟಿಗೆ ಮಾತ್ರ ಸೀಮಿತವಾಗಿರಲಿಲ್ಲ. ಇಡೀ ಮನುಕುಲದ ಬಾಂಧವ್ಯ ಬೆಸೆಯಲು ಯುದ್ಧರಹಿತ ಪರಿಸರವನ್ನು ನಿರ್ಮಿಸಲು ಅದಕ್ಕೆ ನೂತನ ವ್ಯವಸ್ಥೆಯನ್ನು ಅಳವಡಿಸಲು ಹೊಸ ಮನೋಧರ್ಮವನ್ನು, ಸಂಸ್ಕಾರವನ್ನು ಸೃಷ್ಟಿಸುವ ಕಾರ್ಯ, ಈ ಅಹಿಂಸೆಯಿಂದ ಆಗಬೇಕೆನ್ನುವುದು ಅವರ ಅಪೇಕ್ಷೆಯಾಗಿತ್ತು. ಆದರೆ ಬಾಪೂ ಅಂತರಂಗ ಅವರಿಗೆ ಕೊನೆವರೆಗೂ ಅರ್ಥವಾಗಲಿಲ್ಲ. ಅರ್ಥಮಾಡಿಕೊಳ್ಳುವ ಗೋಜಿಗೂ ಹೋಗಲಲಿಲ್ಲ. ಹೀಗಾಗಿ ರಾಜಕೀಯ ಅನುಯಾಯಿಗಳೆನಿಸಿ ಕೊಂಡವರ ದಾರಿ ದಿಕ್ಕು ಬೇರೆಯಾಯಿತು.

ಅವರ ಮುಂದೆ ಅಮೆರಿಕಾ, ರಷ್ಯದಂತಹ ಮುಂದುವರಿದ, ಮುಂದುವರಿಯುತ್ತಿರುವ ರಾಷ್ಟ್ರಗಳು, ನಮ್ಮ ಜೊತೆಗೆ ಬನ್ನಿ ಎಂದು ಕರೆಯುತ್ತಿದ್ದುದನ್ನು ಅವರು ಕಣ್ಣಾರೆ ನೋಡುತ್ತಿದ್ದರು. ಅವರ ಮಾದರಿ ನೋಡಲು ಆಕರ್ಷಕವಾಗಿತ್ತು. ಕಣ್ಣು ಕೋರೈಸುವಂತಹ ವೈಭವ-ಭೋಗ ಯಾರಿಗೆ ಬೇಡ? ಅತ್ತಕಡೆಯೇ ವಾಲಿದರು ನಮ್ಮ ನೆಹರೂ ಮತ್ತು ಅವರ ಬಳಗ. ಗಾಂಧೀಜಿಯ ಶ್ರಮಾಧಾರಿತ-ಗ್ರಾಮೋದ್ಯೋಗ ಪ್ರಧಾನ, ಶೋಷಣೆರಹಿತ ಜಾತ್ಯತೀತ, ವರ್ಗರಹಿತ, ಸ್ವಾವಲಂಬನೆಯ, ಗ್ರಾಮಸ್ವರಾಜ್ಯ ಮಾರ್ಗದಿಂದ ಅವರು ದೂರ ಸರಿದರು. ಗಾಂಧೀ ವಿಚಾರ ಕೊಂಡಿಯಿಂದ ಅವರು ಕಳಚಿಕೊಂಡರು. ಅವರ ಬುದ್ಧಿ-ಶಕ್ತಿ ಅಧಿಕಾರದ ಮಟ್ಟಿಗೆ ಸೀಮಿತವಾಯಿತು. ಧರ್ಮದರ್ಶಿತ್ವ ಟ್ರಸ್ಟೀಷಿಪ್ ಗುರಿಯಿಂದ ಅವರು ಜಾರಿ ಪ್ರಪಾತದ ದಾರಿಯನ್ನು ಹಿಡಿದರು. ಆದರೂ ಗಾಂಧೀಜಿಯ ಅಯಸ್ಕಾಂತ ಶಕ್ತಿ ಅವರನ್ನು ಬೇಗ ಬಿಟ್ಟುಕೊಡಲಿಲ್ಲ. ಎಂತಲೇ ಅವರು ಸೇವಾಗ್ರಾಮದಲ್ಲಿ ನಡೆದ ಸಮ್ಮೇಳನಕ್ಕೆ ಬಂದಿದ್ದರು.

ಗಾಂಧೀ ತಪೋಭೂಮಿಯಲ್ಲಿ ಸರ್ವೋದಯ ಸಮಾಜ ನಿರ್ಮಿಸುವ ಪಾಂಚಜನ್ಯ ಮೊಳಗಿತು. ವಿನೋಬಾ ಅವರು ಆದರ ಹರಿಕಾರರಾದರು. ರಾಜ್ಯ ವ್ಯವಸ್ಥೆಯ ಇಡೀ ತಳಪಾಯವನ್ನು ಬದಲಿಸುವುದು. ಅದರ ಮೇಲೆ ಸತ್ಯ-ಪ್ರೇಮ-ಕರುಣೆಯ ಸರ್ವೋದಯ ಸಮಾಜ ಮಾದರಿಯ ದಿಕ್ ಸೂಚಿಗಳನ್ನು ವಿಶ್ವರಾಷ್ಟ್ರಗಳಿಗೆ ರವಾನಿಸುವುದು. ಅದಕ್ಕೆ ವಿನೋಬಾ ಆರಿಸಿಕೊಂಡ ಮೊತ್ತಮೊದಲ ಸಾಧನ ಭೂ ಸಮಸ್ಯೆ ಪರಿಹಾರ. ರಾಜಕೀಯ ಸ್ವಾತಂತ್ರ್ಯಕ್ಕೆ ಅಹಿಂಸೆ ಹೇಗೆ ಸಾಧನವಾಯಿತೊ, ಹಾಗೆಯೇ ಆರ್ಥಿಕ ಸ್ವಾತಂತ್ರ್ಯಕ್ಕೆ ಅಹಿಂಸೆಯನ್ನು ಸಾಧನವನ್ನಾಗಿ ಬಳಸಿಕೊಂಡರು. ಸಮಸ್ಯೆ ಪರಿಹಾರವಾಗದೆ ಆರ್ಥಿಕ ಸ್ವಾತಂತ್ರ್ಯ ಬರೀ ಕನಸು. ಉಳುವವನಿಗೆ ಭೂಮಿ ಸಿಗದೆ ಹೋದರೆ ಅವನ ಉನ್ನತಿಯಾಗುವುದು ಹೇಗೆ? ಅನುತ್ಪಾದಕನ ಕೈಯಲ್ಲಿ ಭೂಮಿ. ಉತ್ಪಾದಕನ ಪರಿಶ್ರಮ ಮಾತ್ರ ಅನುತ್ಪಾದಕನ ಕೈಯಲ್ಲಿ. ಬರೆಯುವ ಕೈಗಳಿಗೆ ಲೇಖನಿಯಿಲ್ಲ; ಬರೆಯದ ಕೈಗಳಿಗೆ ಲೇಖನಿ. ಇದರಿಂದ ಯಾರಿಗೆ ಪ್ರಯೋಜನ? ಒಬ್ಬ ಧಣಿ, ಒಬ್ಬ ಗುಲಾಮ, ಒಬ್ಬ ಒಡೆಯ, ಒಬ್ಬ ಆಳು ಈ ಅಂತರದಿಂದ ಪ್ರೇಮ ಹೇಗೆ ಬೆಳೆದೀತು?

## ಸರ್ವೋದಯ ಯಾತ್ರೆ

ಹಿಂಸೆ ಕಾನೂನಿನ ಮೂಲಕ ಭೂ ಸಮಸ್ಯೆ ಪರಿಹಾರವಾದುದು, ಇದುವರೆಗೆ ನಡೆದು ಬಂದಿರುವ ದಾರಿ. ಇದಕ್ಕೆ ಹೊಸ ತಿರುವು ನೀಡಿ, ಪರಿವಾರದ ಚೌಕಟ್ಟಿನೊಳಗೆ ಹರಿದಾಡುತ್ತಿದ್ದ ಪ್ರೇಮವನ್ನು ಸಮಾಜದತ್ತ ವಿಸ್ತರಿಸುವ ಉಪಾಯ ಕಂಡುಹಿಡಿದರು ವಿನೋಬಾ. ಅದೇ ಭೂದಾನ ಚಳವಳಿ. ನಕ್ಸಲೀಯರ ಹಾವಳಿಯಿಂದ ಜಮೀನ್‌ದಾರರ ಕೊಲೆಯಾಗುತ್ತಿದ್ದ ಆಂಧ್ರದ ನೆಲಗೊಂಡ, ವಾರಂಗಲ್ ಜಿಲ್ಲೆಗಳಿಗೆ ವಿನೋಬಾ ಧಾವಿಸಿದರು. ಪೊಚಂಪಲ್ಲಿಯಲ್ಲಿ ಅವರಿಗೆ ಅಹಿಂಸೆಯ ದರ್ಶನವಾಯಿತು. ಒಬ್ಬ ಜಮೀನ್‌ದಾರ ನೂರು ಎಕರೆ ಭೂಮಿಯನ್ನು ದಾನವಾಗಿ ನೀಡಲು ಮುಂದಾದ. ಕರುಣೆಯ ಈ ಸಾಧನವನ್ನು ಬಳಸಿಕೊಂಡು ಪಾದಯಾತ್ರೆಯ ಮೂಲಕ ವಿನೋಬಾ ರಾಷ್ಟ್ರದುದ್ದಗಲಕ್ಕೂ ಸಂಚರಿಸಿದರು. ಇದೇ ಮುಂದೆ ಸರ್ವೋದಯ ಯಾತ್ರೆಯೆಂದು ಪ್ರಸಿದ್ದಿ ಪಡೆಯಿತು. ಸಾವಿರಾರು ಜನರ ಹೃದಯ ಪರಿವರ್ತನೆಯಿಂದ ಲಕ್ಷೋಪಲಕ್ಷ ಎಕರೆಗಳಷ್ಟು ಭೂಮಿ ಭೂಹೀನರಿಗೆ ದಾನವಾಗಿ ದೊರೆತದ್ದು ಒಂದು ಮಹಾನ್ ಪವಾಡ.

ಬುದ್ಧಿ ಜೀವಿಗಳ ಅಗ್ರಪಂಕ್ತಿಯಲ್ಲಿ ರಾರಾಜಿಸುತ್ತಿದ್ದ ಮಹಾನ್ ಕ್ರಾಂತಿಕಾರಿ, ಸಮಾಜವಾದಿ, ಜಯಪ್ರಕಾಶನಾರಾಯಣರ ಮನಸ್ಸು ಸೆಳೆಯಿತು, ಈ ಯಾತ್ರೆ, ಈ ಆಂದೋಲನ. ಅವರು ಪೌನಾರ್ ಆಶ್ರಮಕ್ಕೆ ಧಾವಿಸಿದರು. ವಿನೋಬಾ ನಡೆಸುತ್ತಿದ್ದ 'ಕಾಂಚನ ಮುಕ್ತಿ' ಪ್ರಯೋಗದಲ್ಲಿ ಭಾಗವಹಿಸಿ, ಕೆಲವು ದಿನ ಅವರೊಡನಿದ್ದು, ಗಾಂಧೀಪ್ರಣೀತ ಅರ್ಥವ್ಯವಸ್ಥೆಯನ್ನು ಕುರಿತು ವಿಚಾರ-ವಿನಿಮಯ ನಡೆಸಿದರು. ಈ ಮೊದಲು ಅವರು ದೇವಲೆಯಲ್ಲಿ ವಿಚಾರದ ಸ್ಪಷ್ಟತೆಗಾಗಿ ೩ ದಿನಗಳ ಉಪವಾಸ ಕೈಗೊಂಡಿದ್ದರು. ಮಾರ್ಕ್ಸ್ ವಿಚಾರದಿಂದ ಗಾಂಧೀ ವಿಚಾರಕ್ಕೆ ಬರಲು ಈ ಉಪವಾಸ ಅವರಿಗೆ ಬಹುಮಟ್ಟಿಗೆ ಸಹಾಯಕವಾಯಿತು. ವಿಚಾರಗೊಂದಲದಿಂದ ಅವರು ಪಾರಾದರು.

ಸಮತಾ ರಾಜ್ಯಕ್ಕೆ ಈ ಪ್ರಯೋಗ, ಈ ದಾರಿ ದಾರಿದೀಪವಾಗಬಲ್ಲದು ಎನ್ನುವ ವಿಚಾರ ಅವರ ಬುದ್ಧಿಗೆ ಹೊಳೆಯಿತು. ಅಂದಿನಿಂದ ಅವರು ಸಮಾಜವಾದದಿಂದ ಗಾಂಧೀ ವಿಚಾರದತ್ತ ಹೊರಳಿದರು. ಜೆ. ಪಿ. ಆಗಮನದಿಂದ ಸರ್ವೋದಯ ದೇಗುಲಕ್ಕೆ ಕಳಶವಿಟ್ಟಂತಾಯಿತು. ಜನಶಕ್ತಿಯ ವಿರಾಟರೂಪದಿಂದಾಗಿ ಮತ್ತೊಮ್ಮೆ ಗಾಂಧೀ ಶಕ್ತಿಯ ಅಲೆ ಎದ್ದು ಹೆಪ್ಪುಗಟ್ಟಿದ್ದ ರಾಜ್ಯಶಕ್ತಿಯನ್ನು ಅಲುಗಾಡಿಸುವಂತೆ ಮಾಡಿತು. ಭೂದಾನದಿಂದ ಗ್ರಾಮದಾನದದವರೆಗೆ ಬೆಳೆದ ಚಳವಳಿ ಬಿಹಾರ ದಾನದವರೆಗೂ ವಿಸ್ತರಿಸಿಕೊಳ್ಳುವ ಹಂತ ಮುಟ್ಟುವುದೇನೊ ಎನ್ನುವ ಸೂಚನೆ ಕಾಣಿಸತೊಡಗಿತು.

ಭೂಮಿ ಗ್ರಾಮದ ಸ್ವತ್ತು. ಅದನ್ನು ಯಾರೂ ಮಾರುವಂತಿಲ್ಲ. ಉಳುವವನಿಗೇ ಭೂಮಿಯ ಹಕ್ಕು. ಗ್ರಾಮ ಸಭೆಯ ಕಾರುಭಾರ, ತಂಟೆ-ತಕರಾರು ಬಂದರೆ ಕೋರ್ಟಿಗೆ ಹೋಗುವಂತಿಲ್ಲ. ನಿರ್ಣಯ ಗ್ರಾಮಸಭೆಯದೆ. ಯಾರೂ ನಿರುದ್ಯೋಗಿಗಳಾಗುವಂತಿಲ್ಲ. ಕೃಷಿಯಿಂದ ಹೊರತಾದ ಜನರಿಗೆ ಗ್ರಾಮೋದ್ಯೋಗ ಆಧಾರ. ಬಟ್ಟೆ, ನೇಗಿಲು ಎಣ್ಣೆ, ಚಪ್ಪಲಿ, ಮಡಕೆ ಮುಂತಾದ ಸಾಮಾನುಗಳಿಗಾಗಿ ಯಾರೂ ಹೊರಗೆ ಹೋಗುವಂತಿಲ್ಲ. ಗ್ರಾಮದ ಎಲ್ಲ ಕಸಬುದಾರರಿಗೆ ಅಲ್ಲಿಯೆ ಕೆಲಸ. ಎಲ್ಲರೂ ಸ್ವಾವಲಂಬಿ. ಪರಸ್ಪರ ಪೂರಕ ಜೀವನ. ಯಾರು ಯಾರನ್ನೂ ಶೋಷಣೆ ಮಾಡರು. ಬಂದ ಬೆಳೆಯಲ್ಲಿ ಇಪ್ಪತ್ತನೆ ಒಂದು ಭಾಗ ಗ್ರಾಮಕ್ಕೆ ನೀಡಬೇಕು. ಗ್ರಾಮದ ಧಾನ್ಯ ಕಣಜ ಅದು. ಅದರ ಮೇಲೆ ಗ್ರಾಮಸಭೆಯದೆ ಅಧಿಕಾರ. ಆಪತ್ಕಾಲದಲ್ಲಿ ಜನ ಹಸಿವಿನಿಂದ ನರಳಬಾರದೆಂದು ಈ ಯೋಜನೆ. ಗ್ರಾಮರಕ್ಷಣೆಗಾಗಿ ಗ್ರಾಮಯುವಕರ ಒಂದು ಶಾಂತಿಸೇನೆ. ಮನೋರಂಜನೆಗಾಗಿ ಒಂದು ರಂಗಮಂಟಪ, ಗೋವುಗಳಿಗಾಗಿ ಒಂದು ಗೋಶಾಲೆ. ಅವುಗಳ ರಕ್ಷಣೆ ಇಡೀ ಗ್ರಾಮಕ್ಕೆ ಸೇರಿದ್ದು. ಯಾವ ಕಸಾಯಿಖಾನೆಗಳಿಗೂ ಹಸುಗಳು ಹೋಗುವಂತಿಲ್ಲ, ಗ್ರಾಮದವರೇ ಮಾಡಿಕೊಂಡ ಯೋಜನೆ. ಇದಕ್ಕಿಂತ ಇನ್ನೇನು ಬೇಕು. ಗ್ರಾಮಸ್ವರಾಜ್ಯ-ಸರ್ವೋದಯ ಎಂದರೆ ಇದೇ ಅಲ್ಲವೆ : ಗಾಂಧೀಜಿಯ ಕನಸು ಇದಾಗಿತ್ತು.

ಈ ವಿಚಾರಕ್ಕೆ ಸ್ಪಂದಿಸಿದ ಜನಸ್ತೋಮ ಭೂದಾನಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಗ್ರಾಮದಾನ ಮಾಡಿದರು. ಬಿಹಾರ ದಾನದ ಮಾತೂ ಕೇಳಿಬಂತು. ಬಿಹಾರಿನ ಗ್ರಾಮ 'ಚಾಂದಿಲ್'ನಲ್ಲಿ ಸೇರಿದ ಸರ್ವೋದಯ ಸಮ್ಮೇಳನ ಚಳವಳಿಯ ಕೇಂದ್ರ ಬಿಂದುವಾಯಿತು. ಚಳವಳಿಯ ನೇತಾರ ವಿನೋಬಾ ಹೇಳಿದ ಒಂದು ಮಾತು ಸಭಿಕರನ್ನು ಮಂತ್ರಮುಗ್ಧರನ್ನಾಗಿ ಮಾಡಿತು.

'ದಂಡ ಶಕ್ತಿಯಿಂದ ಭಿನ್ನ, ಹಿಂಸಕ ಶಕ್ತಿಯ ವಿರೋಧ, ಅಹಿಂಸಕ ಶಕ್ತಿಯ ನಿರ್ಮಾಣ'

'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ 'ಮಾಡು ಇಲ್ಲ ಮಡಿ' ಎನ್ನುವ ನಿರ್ಣಯದಂತಿತ್ತು. ಈ ವಾಕ್ಯ. ಅಂದು ಮಹಾತ್ಮ ಕೊಟ್ಟ ಮಂತ್ರದಂತಹುದೇ ಇದೂ ಕೂಡ. ಮುಂದೆ ಬೋಧಗಯಾದಲ್ಲಿ ನಡೆದ ಸಮ್ಮೇಳನದಲ್ಲಿ 'ಜೀವನದಾನಿ'ಗಳ ಸರತಿ ಸೇರ್ಪಡೆಯಾಯಿತು. ವಿನೋಬಾ, ಜೆ.ಪಿ. ಜೀವನದಾನ ನೀಡಿದರು ಈ ಆಂದೋಲನಕ್ಕೆ. ನಿಷ್ಪಕ್ಷ ನಿರ್ವೈರ, ನಿರ್ಭಯ ಸಮಾಜಕ್ಕೆ ತಮ್ಮನ್ನು ಸಮರ್ಪಿಸಿಕೊಂಡರು. ಇದೊಂದು ಕರುಣಾಮಯ ದೃಶ್ಯ. ಎಲ್ಲರ ಕಣ್ಣುಗಳಲ್ಲೂ ನೀರು. ಎಲ್ಲವನ್ನು ಮೊದಲೇ ಸಮರ್ಪಿಸಿಕೊಂಡಿದ್ದ ವಿನೋಬಾ-ಜೆಪಿಯವರೂ ಜೀವನದಾನಿಗಳಾಗಬೇಕೆ! ಮುಂದೆ ಎಲ್ಲ ಪಕ್ಷಗಳ ಬೆಂಬಲ ದೊರೆತದ್ದು ಮೈಸೂರಿನ ಇಲವಾಲ ಸಭೆಯಲ್ಲಿ. ಇದರಿಂದ ಸರ್ಕಾರಕ್ಕೆ ಭೂ ಕಾನೂನು ಮಾಡಲು ಸುಲಭವಾಯಿತು.

ಹೀಗೆ ಸತ್ಯ-ಪ್ರೇಮ-ಕರುಣೆಯ ಗಂಗೆ ತನ್ನ ಪಾತ್ರವನ್ನು ಹಿಗ್ಗಿಸಿಕೊಂಡು ಮುಂದುವರಿದಂತೆ; ರಾಜ್ಯಶಕ್ತಿಯ ತಳಪಾಯ ಎಲ್ಲಿ ಕುಸಿಯುವುದೊ ಎನ್ನುವ ಭಯ ರಾಜ್ಯ ಸೂತ್ರ ಹಿಡಿದ ನಾಯಕರಿಗೆ ಅರಿವಾಯಿತು. ಆಗ ಪ್ರಧಾನ ಮಂತ್ರಿಯಾಗಿದ್ದವರು ಇಂದಿರಾಜಿ. ಅವರು ರಾಜ್ಯಶಕ್ತಿಯ ಬಿಗಿ ಮುಷ್ಟಿಯನ್ನು ಮತ್ತಷ್ಟು ಬಲಪಡಿಸಿ, ಕೇಂದ್ರಿತ ವ್ಯವಸ್ಥೆಯನ್ನು ಬಿಗಿಗೊಳಿಸಿದರು. ಇದರಿಂದ ನೌಕರಶಾಹಿ ತನ್ನ ಹೆಡೆಬಿಚ್ಚಿಕೊಂಡಿತು. ಆದರೆ ಸರ್ವಾಧಿಕಾರಿಗಳಾಗಿ ಭ್ರಷ್ಟಾಚಾರದ ಮಹಾಜಾಲದಲ್ಲಿ ಜನತೆಯನ್ನು ಬಂಧಿಸುವ ಹೊಂಚು ಹಾಕಿದರು. ಇದರಿಂದ ನಿರುದ್ಯೋಗ, ಲಂಚಗುಳಿತನ, ಬೆಲೆ ಏರಿಕೆ, ಕುಡಿತ, ಸ್ವಚ್ಛಂದ ಪ್ರವೃತ್ತಿ, ಸರ್ವಾಧಿಕಾರ ತಲೆ ಎತ್ತಿ ಪ್ರಜಾ ಪ್ರಭುತ್ವಕ್ಕೆ ಗಂಡಾಂತರ ಒದಗಿ ಬರುವಂತಹ ಸನ್ನಿವೇಶ ನಿರ್ಮಾಣವಾಯಿತು.

**ಸರ್ವ ಸೇವಾಸಂಘದಲ್ಲಿ ಬಿರುಕು : ಜೆ. ಪಿ. ಆಂದೋಲನ-ಗುರಿಸಾಧನೆಗೆ ಅಡ್ಡಿ**

ಬಿಹಾರ ಆಂದೋಳನ ಯಾವುದೇ ವ್ಯಕ್ತಿಯ ವಿರೋಧವಾಗಿ ನಡೆಸಿದ ಆಂದೋಳನವಾಗಿರಲಿಲ್ಲ. ರಾಜ್ಯ ವ್ಯವಸ್ಥೆಯಿಂದ ಉದ್ಭವಿಸಿದ ದುಷ್ಟ ಪದ್ಧತಿಗಳ ವಿರೋಧವಾಗಿತ್ತು. ಎಲ್ಲ ರಂಗಗಳಲ್ಲೂ ಅಶಾಂತಿಯ ವಾತಾವರಣ ತಲೆ ಎತ್ತಿತು. ಸ್ವಾತಂತ್ರ್ಯ ಬಂದನಂತರ ಶಿಕ್ಷಣ ರಂಗದಲ್ಲೂ ಯಾವುದೇ ಬದಲಾವಣೆ ಕಂಡುಬರಲಿಲ್ಲ. ಹೀಗಾಗಿ ವಿದ್ಯಾರ್ಥಿಗಳು ತಮ್ಮ ಬೇಡಿಕೆಗಳೊಂದಿಗೆ ಗುಜರಾತಿನಲ್ಲಿ ನವನಿರ್ಮಾಣ ಸಮಿತಿಯನ್ನು ರಚಿಸಿಕೊಂಡರು. ಹೋರಾಟ ಶುರುವಾಯಿತು. ಆಗ ಜೆ.ಪಿ. ಪೌನಾರ್ ಆಶ್ರಮದಿಂದ 'Youth for Democracy' ಹೆಸರಿನಲ್ಲಿ ಒಂದು ಲೇಖನ ಬರೆದರು.

ಆಗ ವಿದ್ಯಾರ್ಥಿ ವೃಂದ ಜೆ. ಪಿಯವರ ನೇತೃತ್ವ ಬಯಸಿತು. ೭೫ ವರ್ಷಗಳ ಅಂಚಿನಲ್ಲಿದ್ದ ಜೆ. ಪಿ. ಮತ್ತೊಮ್ಮೆ ವಿದ್ಯಾರ್ಥಿಗಳ ಕಣ್ಮಣಿಯಾದರು. ರಾಷ್ಟ್ರದ ಮೂಲೆಮೂಲೆಗೂ ಆಂದೋಳನ ವ್ಯಾಪಿಸಿಕೊಂಡಿತು. ಸರ್ವಾಧಿಕಾರ ಇಲ್ಲವೆ ಪ್ರಜಾಪ್ರಭುತ್ವ ಈ ಹೆಸರಿನಲ್ಲಿ ಜೆ. ಪಿ. ಬಿರುಗಾಳಿಯ ಸಂಚಾರ ಆರಂಭಿಸಿದರು. ಆಗಿನ ಕಾಂಗ್ರೆಸ್ಸಿನ ಹಿರಿಯ ನಾಯಕ ಚಂದ್ರಶೇಖರ್ ಹಾಗೂ ಅವರ ಗೆಳೆಯರು ಆಂದೋಳನವನ್ನು ಸ್ವಾಗತಿಸಿ ಅದರಲ್ಲಿ ಸಕ್ರಿಯಗೊಂಡರು. ಮುಂದೆ ಜನಸಂಘದ ನಾಯಕರು, ಕಾರ್ಯಕರ್ತರು, ರಾಷ್ಟ್ರಿಯ ಸ್ವಯಂಸೇವಕ ಸಂಘ ಈ ಮಹಾಪೂರದಲ್ಲಿ ಸೇರಿಕೊಂಡಿತು. ಲೋಕಸೇವಾ ತತ್ವದ ದೀಕ್ಷೆ ಕೈಗೊಂಡನಂತರ ಜೆ. ಪಿ. ಪಕ್ಷಾತೀತರಾಗಿ ಸರ್ವೋದಯ ನಾಯಕರಾದರು. ಅವರ ವಾಣಿಯಲ್ಲಿ ಮತ್ತೊಮ್ಮೆ ಗಾಂಧೀ ವಿಚಾರ ಧುಮ್ಮಿಕ್ಕತೊಡಗಿತು, ಜನ ಜಾಗೃತರಾದರು. ಗಾಂಧೀಜಿಯ ಕನಸು ನನಸಾಗುವ ಭರವಸೆ ದೊರೆಯಿತು ಜನರಿಗೆ. ಅಂದಿನಿಂದ ಜಯಪ್ರಕಾಶರು ಕೇವಲ ಜಯಪ್ರಕಾಶರಾಗಿ ಉಳಿಯಲಿಲ್ಲ. ಎಲ್ಲರ ಕಣ್ಣಿಗೆ ಲೋಕನಾಯಕರಾಗಿ ಕಾಣಿಸಿಕೊಂಡರು.

ಪಾಟ್ನಾದ ಗಾಂಧಿ ಮೈದಾನದಲ್ಲಿ ಸೇರಿದ್ದ ವಿರಾಟ ಸಭೆಯಲ್ಲಿ ಅವರು ಮಾಡಿದ ಉದ್ಘೋಷ : ''ನನ್ನದು ಸಂಪೂರ್ಣ ಕ್ರಾಂತಿ. ಚುನಾವಣಾ ಪದ್ಧತಿಯಲ್ಲಿ ಬದಲಾವಣೆ, ಪ್ರತಿನಿಧಿಗಳನ್ನು ಹಿಂದಕ್ಕೆ ಕರೆಸಿಕೊಳ್ಳುವ ಅಧಿಕಾರ (Right of Recall), ಭ್ರಷ್ಟಾಚಾರ ನಿರ್ಮೂಲನ, ಶಿಕ್ಷಣ ಪದ್ಧತಿಯಲ್ಲಿ ಬದಲಾವಣೆ, ರಾಜಕೀಯ-ಆರ್ಥಿಕ ಕ್ಷೇತ್ರಗಳಲ್ಲಿ ವಿಕೇಂದ್ರೀಕರಣ ಮುಂತಾದ ಕ್ರಾಂತಿಕಾರಕ ಬದಲಾವಣೆ ಜೋಡಿಸಿಕೊಂಡರು. ಸರ್ವೋದಯ ಗುರಿಯಾದರೆ, ಅದರ ಸಾಧನ ಸಂಪೂರ್ಣ ಕ್ರಾಂತಿ ಎಂದು ಘೋಷಿಸಿದರು.

ಇಂತಹ ಹೇಳಿಕೆಯಿಂದ ದೆಹಲಿ ಸಿಂಹಾಸನ ಅಲುಗಾಡಿತು. ಜೆ. ಪಿ. ಅವರಿಗೆ ಸಿಂಹಸ್ವಪ್ನವಾಗಿ ಕಂಡರು. ಅವರ ಉದ್ದೇಶವನ್ನರ್ಥಮಾಡಿಕೊಳ್ಳದ ಕೇಂದ್ರಸರ್ಕಾರ ಆಂದೋಳನವನ್ನು ಮಟ್ಟಹಾಕುವ ಸಂಚು ಹೂಡಿತು. ಜೆ. ಪಿ.ಯನ್ನು ಮುಗಿಸಿಬಿಡುವ ಅವರ ತಂತ್ರ ಯಶಸ್ವಿಯಾಗಲಿಲ್ಲ ನಾಲ್ಕೈದು ಬಾರಿ ಅವರ ಮೇಲೆ ಆಕ್ರಮಣ ನಡೆದಿತ್ತು. ರಭಸವಾಗಿ ಹರಿಯುತ್ತಿರುವ ಮಹಾಪೂರಕ್ಕೆ ಅಡ್ಡಗೋಡೆಯನ್ನು ನಿರ್ಮಿಸಲು ಸಾಧ್ಯವೆ? ಅದೊಂದು ಮಹಾಪೂರ. ಎದುರಾಗುವ ಎಲ್ಲ ಅಡೆತಡೆಗಳನ್ನು ಕೊಚ್ಚಿಕೊಂಡು ಹೋಗುವುದು ಅದರ ಸ್ವಭಾವ. ಆಂದೋಳನ ಮುಂದುವರಿಯುತ್ತಲೇ ಹೋಯಿತು.

ಈ ನಡುವೆ ಸರ್ವೋದಯ ಬಳಗದಲ್ಲಿ ಒಂದು ಬಿರುಕು ಬಂದಂತಾಯಿತು. ಸರ್ವಸೇವಾಸಂಘದ ಕಾರ್ಯಕಾರಿ ಸಮಿತಿಯ ಇಬ್ಬರು ಸದಸ್ಯರು ಅಪಸ್ವರ ಎತ್ತಿದರು. ಆಂದೋಳನದ ವಿರುದ್ಧ ಕಿಡಿಕಾರಿದರು, ನರೇಂದ್ರ ದುಬೆ ಮತ್ತು ನಿರ್ಮಲಾ ದೇಶಪಾಂಡೆ. ಉಳಿದ ಎಲ್ಲ ಸದಸ್ಯರ ಸಮರ್ಥನೆ ಬಿಹಾರ-ಆಂದೋಲನ ಪರವಾಗಿತ್ತು. ಮೆಜಾರಿಟಿ ಮೈನಾರಿಟಿಯ ನಿಯಮ ಸರ್ವ ಸೇವಾ ಸಂಘದಲ್ಲಿರಲಿಲ್ಲ. ಎಲ್ಲವೂ ಸರ್ವ ಸಮ್ಮತಿಯಿಂದ ನಡೆಯುತ್ತಿತ್ತು. ಈ ಇಬ್ಬರ ವಿರೋಧದಿಂದ ಸರ್ವ ಸೇವಾ ಸಂಘದಲ್ಲಿ ಬಿರುಗಾಳಿ ಎದ್ದಿತು. ಇನ್ನುಳಿದಿರುವುದು ಹೃದಯ ಪರಿವರ್ತನೆ ಮತ್ತು ವಿಚಾರ ಪರಿವರ್ತನೆಯ ಮಾರ್ಗ. ಏನು ಮಾಡಿದರೂ ಅವರು ಬದಲಾಗಲಿಲ್ಲ. ಒಂದೇ ಹಟ, ಒಂದೇ ಛಲ, ಸರ್ವೋದಯ ವಿಚಾರದ ಮಹಾನ್ ಚಿಂತಕ, ಗಾಂಧೀ ಪರಂಪರೆಯ ಭಾಷ್ಯಕಾರ, ದಾದಾ ಧರ್ಮಾಧಿಕಾರಿಯವರು ಅನೇಕ ವಿಧದಲ್ಲಿ ಇವರನ್ನು ಬದಲಾಯಿಸುವ ಪ್ರಯತ್ನ ಮಾಡಿದರು. ಆದರೆ ಸಾಧ್ಯವಾಗಲಿಲ್ಲ.

ಕೊನೆಯಲ್ಲಿ ವಿನೋಬಾ ಅವರ ಮುಂದೆ ಈ ಪ್ರಶ್ನೆಯನ್ನಿಡಲಾಯಿತು. ಅವರೂ ಸರ್ವ ಸಮ್ಮತಿಯ ನೀತಿಗೆ ಅಂಟಿಕೊಂಡರು. ಹೀಗಾಗಿ ಒಮ್ಮತಕ್ಕೆ ಬರಲಾಗಲಿಲ್ಲ. ಆಗ ದಾದಾ; ''ಈ ವಿಷಯದಲ್ಲಿ ನಿಮ್ಮ ವೈಯಕ್ತಿಕ ಅಭಿಪ್ರಾಯ ತಿಳಿಸಿಬಿಡಿ'' ಎಂದರು. ಅದಕ್ಕೂ ಅವರು ಉತ್ತರಿಸಲಿಲ್ಲ. ಹೀಗಾಗಿ ಸರ್ವ ಸೇವಾ ಸಂಘ ವಿಘಟನೆಗೊಳ್ಳುವಂತಹ ಪರಿಸ್ಥಿತಿ ಎದುರಾಯಿತು.?

ಆಗ ದೇಶದ ಸರ್ವೋದಯ ಪ್ರಮುಖರ ಸಭೆಯನ್ನು ವಾರ್ಧಾದ ಮಹಿಳಾ ಆಶ್ರಮದಲ್ಲಿ ಕರೆಯಲಾಯಿತು. ಜೆ. ಪಿ. ಯವರೂ ಸಭೆಗೆ ಆಗಮಿಸಿದ್ದರು. ಹಿಂದಿನ ದಿನ ಅವರು ತಂಗಿದ್ದುದು ಪೌನಾರ್ ಆಶ್ರಮದಲ್ಲಿ ಮೂತ್ರಪಿಂಡದ ಶಸ್ತ್ರ ಚಿಕಿತ್ಸೆಯಿಂದಾಗಿ ಅವರಿನ್ನೂ ಚೇತರಿಸಿಕೊಂಡಿರಲಿಲ್ಲ. ಅವರ ಸೇವಾ ಶುಶ್ರೂಷೆಯನ್ನು ನಿರ್ಮಲಾ ದೇಶಪಾಂಡೆಯವರ ತಂಗಿ ಕುಸುಮಾ ನೋಡಿಕೊಳ್ಳುತ್ತಿದ್ದರು. ಒಂದು ಕಡೆ ಜೆ. ಪಿ. ಆಂದೋಳನವನ್ನು ವಿರೋಧಿಸುತ್ತಿದ್ದ ಹಿರಿಯಕ್ಕ ನಿರ್ಮಲಾ, ಇನ್ನೊಂದು ಕಡೆ ಜೆ. ಪಿ. ಯವರ ಪರಿಸ್ಥಿತಿಯಿಂದ ಕಣ್ಣೀರಿಡುತ್ತಿದ್ದ ಕುಸುಮಾ. ಜೆ. ಪಿ. ತಮ್ಮ ಸಹಧರ್ಮಿಣಿ ಪ್ರಭಾವತಿಯನ್ನು ಕಳೆದುಕೊಂಡು ಒಂಟಿಯಾಗಿದ್ದರು. ಅವರಿಗೆ ಯಾರ ಆಸರೆಯೂ ಇರಲಿಲ್ಲ. ಇದ್ದ ಆಸರೆಯೆಂದರೆ ಅವರಿಗಾಗಿ ಮರುಕ ಪಡುತ್ತಿದ್ದ ವಿದ್ಯಾರ್ಥಿ ವೃಂದ ಮತ್ತು ಜನತೆ.

ಪ್ರಭಾವತಿ ಕಣ್ಮರೆಯಾಗುವಾಗ ಸರ್ವೋದಯ ಧುರೀಣರಿಗೆ ಒಂದು ಮಾತು ಹೇಳಿದ್ದರು. : ''ನಾನಿನ್ನು ಹೋಗುತ್ತಿದ್ದೇನೆ. ಜೆ. ಪಿ. ಇನ್ನು ಮೇಲೆ ಒಬ್ಬಂಟಿಗರು. ಅವರ ಆರೋಗ್ಯ ದಿನೇ ದಿನೇ ಕುಸಿಯುತ್ತಿದೆ. ಅವರನ್ನು ನೋಡಿಕೊಳ್ಳುವ ಜವಾಬ್ದಾರಿ ನಿಮ್ಮದು'' ಎಂದಿದ್ದರು.

ಬಿಹಾರ ಆಂದೋಳನ ಆರಂಭವಾದದ್ದು, ಜೆ. ಪಿ. ರಾಷ್ಟ್ರದ ನೇತೃತ್ವ ವಹಿಸಿದ್ದು, ಒಂದು ಪವಾಡವೆನ್ನಬೇಕು. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯಾನಂತರದ ಮಹಾಸಮರದಲ್ಲಿ ಅಗ್ರಪಾತ್ರ ವಹಿಸಿದ ಜೆ. ಪಿ. ದಣಿವಿನಿಂದ ಬಳಲಿದ್ದರು. ಈ ಮಹಾಮಾನವತಾವಾದಿಗೆ ವಿಶ್ರಾಂತಿ ದೊರೆಯಲಿಲ್ಲ. ಕೊನೆಯಲ್ಲಿ ಹೇಗೋ ಬಿಡುವು ಮಾಡಿಕೊಂಡು ಕಾಶ್ಮೀರದ ಕುಲು ಕಣಿವೆಗೆ ಹೋದಾಗ, ನಿರ್ಮಲಾ ದೇಶಪಾಂಡೆಯವರಿಗೆ ನಕ್ಸಲೀಯರಿಂದ ಪ್ರಾಣ ಬೆದರಿಕೆಯ ಪತ್ರ ತಲುಪಿತು. ಈ ವಿಷಯ ಜೆ.ಪಿ.ಗೆ ಬರೆದು ತಿಳಿಸಿದಾಗ, ಅವರು ಕೂಡಲೆ ಧಾವಿಸಿ ಬಂದರು. ಹೀಗಿದ್ದರು ನಮ್ಮ ಪ್ರಾಂಜಲ ಮನಸ್ಸಿನ ಲೋಕನಾಯಕ ಜೆ.ಪಿ.

ವಾರ್ಧಾದ ಮಹಿಳಾ ಆಶ್ರಮದಲ್ಲಿ ಕರೆದಿದ್ದ ಪ್ರಮುಖ ಕಾರ್ಯಕರ್ತರ ಸಂಖ್ಯೆ ಮುನ್ನೂರರ ಗಡಿಯನ್ನು ದಾಟಿತ್ತು. ಪ್ರಸ್ತುತ ಲೇಖಕರೂ ಆ ಸಭೆಯಲ್ಲಿದ್ದರು. ಜೆ. ಪಿ. ಸಭೆಗೆ ಆಗಮಿಸುತ್ತಿದ್ದಂತೆ ಅಲ್ಲಿ ಸೇರಿದ್ದ ಎಲ್ಲರೂ ಎದ್ದು ನಿಂತು ನಮನ ಸಲ್ಲಿಸಿದರು. ಹೊರಗಡೆ ಸಾವಿರಾರು ಜನರ ಉದ್ಘೋಷ ನಡೆದೇ ಇತ್ತು. ಸರ್ವೋದಯ ನಾಯಕ ಲೋಕನಾಯಕರಾಗಿ ವಾರ್ಧಾಕ್ಕೆ ಆಗಮಿಸಿದ್ದರು. ಅವರ ಸುತ್ತ ಜನರ ಮಹಾಪೂರ ನೆರೆದೇ ಇರುತ್ತಿತ್ತು.

ವಿದ್ವಾಂಸರ, ಪ್ರತಿಭಾ ಸಂಪನ್ನರ, ಮೇಧಾವಿಗಳ, ಗಾಂಧೀ ಬಳಗದವರ ಸಭೆಯಲ್ಲಿ ಜೆ. ಪಿ. ಆಡಿದ ಮಾತುಗಳು ಅತ್ಯಂತ ಮಾರ್ಮಿಕ, ಅವರ ಒಡಲಾಳದಿಂದ ಸ್ಫುರಿಸಿ ಬಂದ ಜೀವಂತ ಮಾತುಗಳಿವು:

- ನಾನು ಸರ್ವ ಸೇವಾ ಸಂಘದ ಹೆಸರಿನಲ್ಲಿ ಈ ಆಂದೋಳನವನ್ನು ಪ್ರಾರಂಭಿಸಿಲ್ಲ.

- ವೈಯಕ್ತಿಕ ಜವಾಬ್ದಾರಿ ಹೊತ್ತು ನಾನು ಈ ಆಂದೋಳನವನ್ನು ನಡೆಸುತ್ತಿದ್ದೇನೆ.

- ಇದೊಂದು ಅಹಿಂಸಾತ್ಮಕ ಆಂದೋಳನವೆಂದು ನಾನು ಕರೆದಿಲ್ಲ. ಅಹಿಂಸೆಯ ಪದವನ್ನುಪಯೋಗಿಸುವ ಶಕ್ತಿ ಸಾಮರ್ಥ್ಯ ನನಗಿಲ್ಲ. ಆ ಶಕ್ತಿ ಇದ್ದುದು ಗಾಂಧೀಜಿಯವರೊಬ್ಬರಿಗೆ ಮಾತ್ರ. ನನ್ನ ಆಂದೋಳನಕ್ಕೆ ನಾನು ಶಾಂತಿಯುತ ಆಂದೋಳನವೆಂದು ಕರೆದಿದ್ದೇನೆ.

- ನಾನು ಮೊದಲಿನಿಂದ ಕ್ರಾಂತಿಕಾರಿ. ನಾನು ನಿರಂತರ ಯೋಚನೆ ಮಾಡುತ್ತಿರುವುದು ಬಡವರನ್ನು ಕುರಿತು, ದುರ್ಬಲರನ್ನು ಕುರಿತು. ಶಬ್ದಗಳ ಗೊಂದಲ-ಚರ್ಚೆಗೆ ನಾನು ಹೋಗಿಲ್ಲ.

- ನನ್ನ ಮನಸ್ಸಿಗೆ ವಿರೋಧವೆನಿಸಿದುದನ್ನು ನಾನೆಂದೂ ಮಾಡಿಲ್ಲ. ತಪ್ಪು ದಾರಿ ಹಿಡಿದಿದ್ದರೆ ತಿದ್ದಿಕೊಂಡಿದ್ದೇನೆ.

- ನನ್ನ ವಿಚಾರ ಹಿಡಿಸಿದರೆ ನನ್ನೊಂದಿಗೆ ಬನ್ನಿ. ಇಲ್ಲವಾದರೆ ನಿಮ್ಮ ದಾರಿಯಲ್ಲಿ ನೀವು ಸ್ವತಂತ್ರರು. ನೀವು ಯಾವುದೇ ನಿರ್ಧಾರ ಮಾಡಿ, ನನಗೆ ಸಂತೋಷ, ಎಂದರು. ಅವರು ತಮ್ಮ ನಿಲುವನ್ನು ಅತ್ಯಂತ ಸ್ಪಷ್ಟ ಮಾತುಗಳಲ್ಲಿ, ಎಳೆಎಳೆಯಾಗಿ ಬಾಳೆಹಣ್ಣು ಸುಲಿದಂತೆ ವಿಶ್ಲೇಷಣೆ ಮಾಡಿದರು. ಕೊನೆಯಲ್ಲಿ: ''ನಾನು ಒಂದೆರಡು ದಿನ ಪೌನಾರಿನಲ್ಲಿರುತ್ತೇನೆ. ನಿಮ್ಮ ನಿರ್ಣಯ ತಿಳಿಸಿ. ನಾನು ನಿಮ್ಮ ಮಧ್ಯೆ ಇದ್ದರೆ ನಿಮಗೆ ಮಾತನಾಡಲು ಸಂಕೋಚವಾಗಬಹುದು. ನಾನಿನ್ನು ಹೊರಡುತ್ತೇನೆ'' ಎಂದು ಕೈ ಜೋಡಿಸಿ ಹೊರಟುಬಿಟ್ಟರು.

ಆ ಮೇಲೆ ದೀರ್ಘ ಚರ್ಚೆ ನಡೆಯಿತಾದರೂ ಒಮ್ಮತಕ್ಕೆ ಬರಲಾಗಲಿಲ್ಲ. ಹೀಗಾಗಿ ಕೊನೆಗೆ ವಿನೋಬಾ ಅವರ ಸಮ್ಮುಖದಲ್ಲೇ ಸಭೆ ನಡೆಸಲು ತೀರ್ಮಾನವಾಯಿತು. ಸರ್ವೋದಯ ಇತಿಹಾಸದಲ್ಲಿ ಇದೊಂದು ಮಹತ್ವಪೂರ್ಣ ಸಭೆ, ಅಷ್ಟೇ ಅಲ್ಲ, ದಾಖಲೆಯಾಗಿ ಉಳಿಯುವಂಥದ್ದು. ವಿನೋಬಾ ಏನು ಹೇಳುತ್ತಾರೊ ಕೇಳಬೇಕೆನ್ನುವ ಕಾತರ ಎಲ್ಲರಿಗೆ. ಸಭೆ ತುಂಬಿತ್ತು. ವೇದಿಕೆಯಲ್ಲಿ ಜಯಪ್ರಕಾಶ ಕುಳಿತಿದ್ದರು. ಒರಗಿ ಕುಳಿತುಕೊಳ್ಳಲು ಅವರಿಗೆ ದಿಂಬಿನ ವ್ಯವಸ್ಥೆ ಇರಲಿಲ್ಲ. ಚಡಪಡಿಸುತ್ತಿದ್ದರು. ಇದನ್ನು ಗಮನಿಸಿದ ವಿನೋಬಾ ತಮ್ಮ ಹಿಂದಿದ್ದ ದಿಂಬನ್ನು ಜೆ. ಪಿ. ಯವರತ್ತ ಸರಿಸಿದರು. ಕೂಡಲೆ ಮತ್ತೊಂದು ದಿಂಬು ವಿನೋಬಾ ಅವರ ಆಸರೆಗಾಗಿ ತಂದಿಟ್ಟರು, ಕಾರ್ಯಕರ್ತರು. ನಾನು ಪ್ರತ್ಯಕ್ಷ ದರ್ಶಿಯಾಗಿ ಇದನ್ನೆಲ್ಲ ನೋಡುತ್ತಿದ್ದೆ.

ವಿನೋಬಾ ಮಾತಿಗೆ ಆರಂಭಿಸಿ ಆರಂಭದಿಂದ ಕೊನೆಯವರೆಗೂ ತಮ್ಮ ದಿನಚರಿಯ ಬಗ್ಗೆ ವರದಿ ಸಲ್ಲಿಸಿದರು. 'ಕುರಾನ್ ಸಾರ್' ಒಂದನ್ನು ಬರೆದು ಮುಗಿಸಿದರೆ ನನ್ನ ಕಾರ್ಯ ಮುಗಿಯಿತು; ಇತ್ಯಾದಿ. ಇದರಿಂದ ಬಂದಿದ್ದ ಸಮೂಹಕ್ಕೆ ತೃಪ್ತಿಯಾಗಲಿಲ್ಲ. 'ನಾವು ನಿಮ್ಮಲ್ಲಿಗೆ ಬಂದಿರುವುದು, ಬಿಹಾರ ಆಂದೋಳನ ವಿಷಯದಲ್ಲಿ ನಿಮ್ಮ ನಿಲುವನ್ನು ಕೇಳಲು, ನಿಮ್ಮ ಮಾರ್ಗದರ್ಶನ ಪಡೆಯಲು' ಸಭೆ ಒಕ್ಕೊರಲಿನಿಂದ ಪ್ರಾರ್ಥಿಸಿತು. ಆಗ 'ಏನಾದರು ಪ್ರಶ್ನೆಗಳಿದ್ದರೆ ಕೇಳಿ?' ಎಂದರು ವಿನೋಬಾ. ಕಾರ್ಯಕರ್ತರು ಕೇಳಿದ ಅನೇಕ ಪ್ರಶ್ನೆಗಳಲ್ಲಿ ಒಂದು ಪ್ರಶ್ನೆ ತುಂಬಾ ಭಾರವಾಗಿತ್ತು.

'ಬಾಬಾ, ಬಾಪೂ ಮೊದಲು ರಾಜನೀತಿಜ್ಞರಾಗಿ ಆಮೇಲೆ ಸಂತರಾದರು. ನೀವು ಮೊದಲು ಸಂತರಾಗಿ ಈಗ ರಾಜನೀತಿಜ್ಞರಾಗಿದ್ದೀರಿ' ಎನ್ನುವುದೇ ಆ ಪ್ರಶ್ನೆ. ವಿನೋಬಾ ಸ್ವತಹ ಓದಿ ಬರೆದು ಕಳಿಸಿದ ತುಂಡು ಕಾಗದವನ್ನು ಕೆಳಗಿಟ್ಟರು. ಇದರಿಂದ ಸಭೆಯಲ್ಲಿ ಸ್ವಲ್ಪ ಹೊತ್ತು ಮೌನ ಆವರಿಸಿತು. ವಿನೋಬಾ ನಿರುತ್ತರರಾದರು. ಆದರೆ ಜೆ. ಪಿ. ಈ ಪ್ರಶ್ನೆಯಿಂದ ಕ್ರುದ್ಧರಾಗಿ. ''ಯಾರು ಈ ಪ್ರಶ್ನೆ ಕೇಳಿದವರು, ಎದ್ದು ನಿಲ್ಲಿ?'' ಎಂದು ಆವೇಶಭರಿತರಾಗಿ ನುಡಿದರು. ಎದ್ದುನಿಂತ ಕಾರ್ಯಕರ್ತನನ್ನು ನೋಡಿ : ''ಮೊದಲು ಬಾಬಾ ಅವರ ಕ್ಷಮೆ ಕೇಳು, ಅವರ ವ್ಯಕ್ತಿತ್ವ, ಅವರ ಪ್ರಭಾವ, ನಿನಗೇನು ಗೊತ್ತು'' ಎಂದುಬಿಟ್ಟರು. ವಿನೋಬಾ ವಿಷಯದಲ್ಲಿ ಜೆ.ಪಿ.ಯವರಿಗಿದ್ದ ಶ್ರದ್ಧೆ ಇದು. ಮಹಾಮಾನವತಾವಾದಿ ಜೆ. ಪಿ. ಯವರಲ್ಲಿರಬೇಕಾದ ದೊಡ್ಡ ಗುಣ. ಇಂತಹ ಅನೇಕ ಪ್ರಶ್ನೆಗಳು ಸಭೆಯಲ್ಲಿ ನಡೆಯುತ್ತಿರುವಾಗ, ಸಭೆಯ ಹೊರಗೆ ಕುಳಿತು ಕಾರ್ಯಕರ್ತನೊಬ್ಬನ ಮೂಲಕ ಬರೆದು ಕಳಿಸುತ್ತಿದ್ದ ನಿರ್ಮಲಾ ದೇಶಪಾಂಡೆಯವರ ವರ್ತನೆಯಿಂದ ಬೇಸತ್ತ ಶ್ರೀಮನ್ನಾರಾಯಣ ಆಗರವಾಲಾ ಅವರು ಎದ್ದು ನಿಂತು:

''ಇಂತಹ ಪ್ರಶ್ನೆಯನ್ನು ಬರೆದು ಕಳಿಸುವ ಸಾಹಸ ಮಾಡುತ್ತಿರುವವರಿಗೆ ಜೆ. ಪಿ. ಯವರ ವ್ಯಕ್ತಿತ್ವದ ಅರಿವಿಲ್ಲ. ಅವರು ಅಂತರರಾಷ್ಟ್ರೀಯ ಖ್ಯಾತಿ ಪಡೆದ ಮಹಾನ್ ವ್ಯಕ್ತಿ. ಸರ್ವೋದಯ ವಿಚಾರವನ್ನು ಅಂತರ್ರಾಷ್ಟ್ರೀಯ ಮಟ್ಟಕ್ಕೆ ಕೊಂಡೊಯ್ದವರು. ಇಂತಹ ವ್ಯಕ್ತಿಯ ಬಗ್ಗೆ ಸಣ್ಣತನದಿಂದ ವರ್ತಿಸುವುದು ಅತ್ಯಂತ ವಿಷಾದಕರ. ಈ ಸಭೆ ಹೀಗೇ ಮುಂದುವರಿದರೆ ನಾನು ಒಂದು ಕ್ಷಣವೂ ಇಲ್ಲಿರಲಾರೆ. ಎದ್ದು ಹೊರಟುಹೋಗುತ್ತೇನೆ'' ಎಂದು ನೊಂದು ನುಡಿದರು. ಸಭೆ ಸ್ತಬ್ಧಗೊಂಡಿತು. ಕೊನೆಯಲ್ಲಿ ವಿನೋಬಾ ತಮ್ಮ ನಿರ್ಧಾರವನ್ನು ಪ್ರಕಟಿಸಿದರು. ''ನನ್ನ ಗ್ರಾಮದಾನ ಆಂದೋಳನ ಗಂಗೆಯಂತೆ. ಬಿಹಾರ ಆಂದೋಳನ ಬ್ರಹ್ಮಪುತ್ರಕ್ಕೆ ಸಮಾನ, ಒಂದು ಸೌಮ್ಯ, ಒಂದು ಉಗ್ರ. ಇವೆರಡರಲ್ಲಿ ಯಾವುದನ್ನಾದರೂ ಆರಿಸಿಕೊಳ್ಳಿ'' ಎಂದುಬಿಟ್ಟರು.

ಜೆ. ಪಿ.ಯವರತ್ತ ಹೊರಳಿ: ''ನಿಮಗೆ ಸಮಾಧಾನವೆ?'' ಎಂದು ಕೇಳಿದರು. ''ಹದಿನಾರಾಣೆ ನನಗೆ ಸಮಾಧಾನವಾಗಿದೆ'' ಎಂದರು ಜೆ. ಪಿ. ಸ್ಪಷ್ಟ ಉತ್ತರದಿಂದ ನುಣಚಿಕೊಂಡ ವಿನೋಬಾ ಅವರ ಮಾತಿನಿಂದ ಕಾರ್ಯಕರ್ತರಿಗೆ ಸಮಾಧಾನವಾಗಲಿಲ್ಲ. ಎರಡರ್ಥ ಬರುವ ವಾಕ್ಯಗಳು ಅವರನ್ನು ಪೇಚಿಗೀಡುಮಾಡಿದವು. 'ಗಾಂಧೀ ಗಾಂಧಿಯೆ, ಎರಡರ್ಥ ಬರುವ ಮಾತುಗಳನ್ನು ಅವರು ತಮ್ಮ ಹೋರಾಟದಲ್ಲಿ ಎಂದೂ ಆಡಲಿಲ್ಲ!'' ಎನ್ನುವ ಪಿಸುಮಾತುಗಳು ಅಲ್ಲಲ್ಲಿ ಕೇಳಿಬರುತ್ತಿದ್ದುದನ್ನು ನಾನು ಆಲಿಸಿದೆ.

ಹೀಗಾಗಿ ಕಾರ್ಯಕರ್ತರು ಇಬ್ಭಾಗವಾದರು. ಒಂದಾಗಿದ್ದ ಶಕ್ತಿ ಹೋಳಾಯಿತು. ಇದರಿಂದ ಆಂದೋಳನಕ್ಕೆ ಭಾರಿ ಪೆಟ್ಟಾಯಿತು. ವಿನೋಬಾ ಅವರೆ ಕಟ್ಟಿದ ಸರ್ವ ಸೇವಾ ಸಂಘ ಅವರು ಜೀವಂತವಾಗಿರುವಾಗಲೆ ಒಡೆದುಹೋದದ್ದು ರಾಷ್ಟ್ರದ ದುರಂತವೆನ್ನಬೇಕು. ಸರ್ವೋದಯ ಆಂದೋಳನದ ಪತನ ಆರಂಭವಾದದ್ದು ಇಲ್ಲಿಂದ. ಜೆ.ಪಿ. ಆಂದೋಳನಕ್ಕೆ ಸರ್ವೋದಯ ಕಾರ್ಯಕರ್ತರ ಹೆಚ್ಚಿನ ಬೆಂಬಲ ದೊರೆತಿದ್ದರೂ ವಿನೋಬಾ ಅನಾಸಕ್ತರಾಗಿ ಉಳಿದು ಬಿಟ್ಟರು. ''ನಾನು ಪೌನಾರ್ ಆಶ್ರಮ ಬಿಟ್ಟು ಹೊರಗೆ ಹೋಗಲಾರೆ. ಪ್ರವಚನ ಮಾಡಲಾರೆ.'' ''ಈಗ ನನ್ನ ಕ್ಷೇತ್ರ ಸನ್ಯಾಸ. ಸೂಕ್ಷ್ಮದಲ್ಲಿ ಪ್ರವೇಶವಾಗಿದ್ದೇನೆ.'' ಎನ್ನುವ ಅಧ್ಯಾತ್ಮ ಭಾಷೆಯನ್ನು ಹೇಳಿ ಸುಮ್ಮನಾಗಿಬಿಟ್ಟರು. ಆಂದೋಳನ ಒಂದು ಶಕ್ತಿ ಕಳಚಿಕೊಂಡಿತು. ಸದಾ ಅಂತರ್ಮುಖಿಯಾಗಿ ಯೋಚಿಸುತ್ತಿದ್ದ ವಿನೋಬಾ ತಮ್ಮ ಜ್ಞಾನವನ್ನು ಗುರುತಿಸಿಕೊಂಡರು.

ಅಂತೆಯೇ ಜೆ. ಪಿ.ಯವರೂ ಕೂಡ. ಜನರ ಸಮಸ್ಯೆಯತ್ತ ಹಗಲಿರುಳು ಚಿಂತನ ಮಾಡುತ್ತಿದ್ದ ಕ್ರಾಂತಿಕಾರಿ ತಮ್ಮ ನೆಲೆಯನ್ನು ಗುರುತಿಸಿ ಆಂದೋಳನದ ಹರಿಕಾರರಾದರು. ಅದೊಂದು ಪರಿಪಕ್ವಗೊಂಡ ಕಾಲ ಎನ್ನಬೇಕು. ಗಾಂಧೀ ಪ್ರಣೀತ ರಾಜ್ಯ ವ್ಯವಸ್ಥೆಗೆ ಒಂದು ಸದವಕಾಶ. ಹೇಳಿ ಮಾಡಿಸಿದಂತಹ ವಾತಾವರಣ. ಸ್ವರಾಜ್ಯದ ಮೊಗ್ಗು ಅರಳಿ ಹೂ ಬಿಡುವಂತಹ ಸಂದರ್ಭ. ಸರ್ವೋದಯ ಚಳವಳಿಯಲ್ಲಿ ಬಿರುಕುಂಟಾದುದನ್ನು ಗಮನಿಸಿ. ಇಂದಿರಾಗಾಂಧಿ ಸರ್ಕಾರ, ಪೌನಾರ್ ಆಶ್ರಮದಿಂದ ಪ್ರಕಟಗೊಳ್ಳುತ್ತಿದ್ದ 'ಮೈತ್ರಿ' ಮಾಸಪತ್ರಿಕೆಯನ್ನು ಮುಟ್ಟುಗೋಲು ಹಾಕಿಕೊಂಡಿತು. ಇದನ್ನೆಲ್ಲ ನೋಡುತ್ತಿದ್ದ ವಿನೋಬಾ ಚಪ್ಪಾಳೆ ತಟ್ಟುವುದರ ಮೂಲಕ ಸ್ವಾಗತಿಸಿದರು. ಗಾಂಧಿಯವರಿಂದ ಪ್ರಥಮ ಸತ್ಯಾಗ್ರಹಿ ಎನಿಸಿಕೊಂಡ ವಿನೋಬಾ ಹೀಗೇಕೆ ಮಾಡಿದರು? ಹೀಗೇಕಾಯಿತು? ಇದರ ರಹಸ್ಯವೇನು? ಅದು ಇಂದಿಗೂ ರಹಸ್ಯವಾಗಿಯೆ ಇದೆ.

## ನಿಜಲಿಂಗಪ್ಪನವರಿಂದ ಸಮರ್ಥನೆ - ಜೆ.ಪಿ. ಅವರ ಬಂಧನ

ಈ ನಡುವೆ ಬಲಾಢ್ಯ ರಾಜ್ಯ ಶಕ್ತಿಯ ಎದುರು, ತಮ್ಮ ಎಲ್ಲ ಶಕ್ತಿಯನ್ನೂ ಕ್ರೋಡೀಕರಿಸಿ ಜಯಪ್ರಕಾಶರು, ಶಾಂತಿಸಮರವನ್ನು ಹೂಡಿಬಿಟ್ಟರು. ಇಡೀ ರಾಷ್ಟ್ರದಲ್ಲಿ ಸಂಘರ್ಷ ಸಮಿತಿಗಳು ತಲೆಯೆತ್ತಿದವು. ಕರ್ನಾಟಕಕ್ಕೂ ಜೆ. ಪಿ. ಧಾವಿಸಿದರು. ೧೯೭೫ನೇ ಮೇ ತಿಂಗಳಲ್ಲಿ ಅವರ ಪದಾರ್ಪಣವಾಯಿತು. ಮಂಗಳೂರಿನಿಂದ ಬೆಳಗಾಂವ್ ಮೂಲಕ ದಾವಣಗೆರೆಗೆ ಬಂದಾಗ, ಅವರಿಗೆ ದೊರೆತ ಸ್ವಾಗತ ಅತ್ಯದ್ಭುತ. ರಾಷ್ಟ್ರನಾಯಕ ಸಿದ್ಧವನಹಳ್ಳಿ ನಿಜಲಿಂಗಪ್ಪನವರೊಡನೆ ಮಾತುಕತೆ. ಆಂದೋಳನಕ್ಕೆ ಅವರಿಂದ ಬೆಂಬಲ. ನಗರದ ಹೈಸ್ಕೂಲ್ ಮೈದಾನ ಜನರಿಂದ ತುಂಬಿ ತುಳುಕಾಡುತ್ತಿತ್ತು.

ಗಾಂಧೀ ಪರಂಪರೆಯ ಅಪರಂಜಿ, ಯಾವುದೇ ಉನ್ನತ ಸ್ಥಾನಕ್ಕೆ ಆಸೆಪಡದೆ ಸಾತ್ವಿಕ-ಸೌಜನ್ಯದ ಸಾಕಾರ ರೂಪವೆನಿಸಿದ್ದ ನಿಜಲಿಂಗಪ್ಪನವರು ಜೆ. ಪಿ. ಯವರ ೭೫ನೇ ವರ್ಷದ ಸವಿನೆನಪಿನಲ್ಲಿ ೭೫ ಸಾವಿರ ರೂಪಾಯಿಯ ಚೆಕ್ಕನ್ನು ಅರ್ಪಿಸಿದರು. ಅವರು ತಮ್ಮ ಸ್ವಾಗತ ಭಾಷಣದಲ್ಲಿ, ''ಜೆ. ಪಿ.ಯವರ ಹಿಂದೆ ಇಡೀ ಕರ್ನಾಟಕದ ಜನತೆಯಿದೆ ಎನ್ನುವುದನ್ನು ಈ ಬೃಹತ್ ಸಭೆಯಲ್ಲಿ ಘೋಷಿಸುತ್ತೇನೆ'' ಎಂದಾಗ ಮುಗಿಲು ಮುಟ್ಟುವಂತಹ ಕರತಾಡನವಾಯಿತು. ಮೂರು ದಿನಗಳ ಕರ್ನಾಟಕ ಪ್ರವಾಸ ಮುಗಿಸಿ, ಬೆಂಗಳೂರಿಗೆ ಬಂದಾಗ, ನ್ಯಾಷನಲ್ ಕಾಲೇಜು ಮೈದಾನದಲ್ಲಿ ಸಾಗರೋಪಾದಿಯಲ್ಲಿ ಜನ ಸೇರಿದ್ದರು. ನಗರವತಿಯಿಂದ ಮೂರು ಲಕ್ಷ ರೂಪಾಯಿಯ ಹಮ್ಮಿಣಿಯನ್ನು ಅವರಿಗೆ ಅರ್ಪಿಸಲಾಯಿತು. ಬಿಹಾರಕ್ಕೆ ಅವರು ಮರಳುವಾಗ, ಪಕ್ಷಾತೀತ ತ್ರಿಸದಸ್ಯರ ಕ್ರಿಯಾ ಸಮಿತಿಯೊಂದನ್ನು ರಚಿಸಿದರು.

ಜೆ. ಪಿ. ಪಟ್ನಾ ತಲುಪಿದ ಒಂದೆರಡು ತಿಂಗಳಲ್ಲಿ ಇಂದಿರಾಜಿ ಸರ್ಕಾರ ಎಮರ್ಜೆನ್ಸಿಯ ಕರಾಳ ಶಾಸನವನ್ನು ಜಾರಿಗೆ ತಂದಿತು. ಜೂನ್ ೨೫ರಂದು ಭಾರತದ ದಿಗಂತದಲ್ಲಿ ಕರಿಮೋಡಗಳ ದಂಡು ಆವರಿಸಿತು. ಎಲ್ಲರ ಬಾಯಿಗಳಿಗೂ ಬೀಗಮುದ್ರೆ ಜಡಿಯಲಾಯಿತು. ಪತ್ರಿಕೆಗಳ ಸಂಪಾದಕೀಯ ರದ್ದು. ಯಾರೂ ಬರೆಯುವಂತಿಲ್ಲ. ಉಸಿರುಗಟ್ಟಿದ ಪ್ರಜಾಪ್ರಭುತ್ವಾಸ್ತಮಾನ. ೧೯೧೭ರಲ್ಲಿ ಜಾರಿಗೆ ತಂದ ರೌಲೆಟ್ ಆ್ಯಕ್ಟ್‌ನಂತದೇ ಪರಿಸ್ಥಿತಿ. ಅಂದು ಗಾಂಧೀ ಅದನ್ನು ಎದುರಿಸಿದರೆ ಈಗ ಜೆ. ಪಿ. ಎಮರ್ಜೆನ್ಸಿಯನ್ನು ವಿರೋಧಿಸಬೇಕಾಯಿತು. ಡೆಲ್ಲಿಯ ಗಾಂಧೀ ಶಾಂತಿಪ್ರತಿಷ್ಠಾನದಲ್ಲಿ ಮಲಗಿದ್ದ ಜೆ. ಪಿ. ಯವರನ್ನು ಮಧ್ಯರಾತ್ರಿ ಬಂಧಿಸಿ ಚಂದೀಘಡ ಸೆರೆಮನೆಗೆ ಕರೆದೊಯ್ಯಲಾಯಿತು. ಬ್ರಿಟಿಷ್ ಸರ್ಕಾರ ಗಾಂಧೀಜಿಯನ್ನು ಬಂಧಿಸುತ್ತಿದ್ದುದು ಮಧ್ಯರಾತ್ರಿ. ಅದೇ ಪರಿಪಾಠವನ್ನು ಇಂದಿರಾಜಿ ಸರ್ಕಾರ ಜೆ. ಪಿ.ಯವರ ವಿಷಯದಲ್ಲೂ ಅನುಸರಿಸಿತು. ಅಂದು ರಾತ್ರಿ ಸಾವಿರಾರು ಜನ ಬಂಧಿಸಲ್ಪಟ್ಟರು. ಮೊರಾರ್ಜಿ ದೇಸಾಯಿ, ವಾಜಪೇಯಿ, ಮಧು ದಂಡವತೆ, ಚಂದ್ರಶೇಖರ್ ಮುಂತಾದ ಹಿರಿಯ ನಾಯಕರ ಬಂಧನವೂ ಅದೇ ರಾತ್ರಿ ನಡೆಯಿತು.

ಸೆರೆಮನೆಯಿಂದ ಜೆ. ಪಿ. ಹೇಳಿದ್ದು ಹೀಗೆ : ''ನಾನೀಗ ಗಾಯಗೊಂಡಿರುವ ಸಿಪಾಯಿ, ಯುದ್ಧವಂತೂ ನನ್ನಿಂದಾಗದು. ಆದರೆ ಈಗ ಜನತೆ ಕಳೆದುಕೊಂಡಿರುವ ಪ್ರಜಾಪ್ರಭುತ್ವ ಪ್ರತಿಷ್ಠಾಪನೆಗೆ, ಅವರ ಹಕ್ಕುಗಳಿಗೆ ನಾನು ಹುತಾತ್ಮನಾಗಲು ತಯಾರಿದ್ದೇನೆ. ನನ್ನ ಸಾವಿರಾರು ಜೊತೆಗಾರರು ಸೆರೆಮನೆಗಳಲ್ಲಿ ಬಂದಿಗಳಾಗುವವರೆಗೂ ಈ ಯುದ್ಧ ನಿಲ್ಲದು. ಗಾಂಧೀಜಿಯ ಪ್ರಭಾವ ಈ ದೇಶದಲ್ಲಿರುವವರೆಗೆ ಎಂತಹ ಹಿಟ್ಲರನ ಮುಂದೆಯೂ ಗಾಂಧೀ ಅನುಯಾಯಿಗಳು ತಲೆಬಾಗರು. ನಾವು ಸತ್ಯಾಗ್ರಹಿಗಳು, ಸತ್ಯಾಗ್ರಹಿಗೆ ಎಂದೂ ಸೋಲಿಲ್ಲ''.

ಅವರ ಸಿಂಹವಾಣಿಯಿಂದ ಜಾಗೃತಗೊಂಡ ಜನಶಕ್ತಿ ಮಹಾಪೂರವಾಗಿ ಸೆರೆಮನೆಯತ್ತ ಹರಿಯಲು ಆರಂಭಿಸಿತು. ಅವರು ಇನ್ನೊಂದು ಕಡೆ ವಿನೋಬಾ ಅವರ 'ಅನುಶಾಸನ ಪರ್ವ'ದ ಬಗ್ಗೆ ಮಾತನಾಡುತ್ತಾ:

''ನಮ್ಮ ಆಂದೋಳನದ ವಿಷಯದಲ್ಲಿ, ಆರಂಭದಿಂದಲೂ ವಿನೋಬಾ ತಟಸ್ಥರಾಗಿರುವುದು ನಿಮಗೆ ತಿಳಿದೇಯಿದೆ. ಅವರ ಈ ತಟಸ್ಥ ದೃಷ್ಟಿಯ ಅರ್ಥ ಇಂದಿರಾಜಿಯ ಸಮರ್ಥನೆಯೆಂದೇ ಜನ ವ್ಯಾಖ್ಯಾನಿಸಿದರು. ಆಮೇಲೆ ಆಪತ್ಕಾಲ ಪರಿಸ್ಥಿತಿಯನ್ನು 'ಅನುಶಾಸನ ಪರ್ವ'ವೆಂದೇ ಅವರು ಕರೆದಾಗ ಅದು ಮತ್ತಷ್ಟು ದೃಢವಾಯಿತು. 'ಸರಕಾರಿ ಸಂತ' ಎಂಬ ಉಪಾಧಿಯನ್ನು ಬೇರೆ ಅವರಿಗೆ ಹಚ್ಚಲಾಯಿತು. ಸರಕಾರವೂ ಈ ವಿಷಯದಲ್ಲಿ ಹಿಂದೆ ಬೀಳಲಿಲ್ಲ. ಅದು ಹಿಗ್ಗಿನಿಂದ 'ಅನುಶಾಸನ ಪರ್ವ' ನಗಾರಿ ಜೋರಾಗಿ ಬಾರಿಸಿತು. ಆಚಾರ್ಯ ಕುಲದ ಅನುಶಾಸನವನ್ನು ಸರಕಾರ ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಇಂತಹ ಸರ್ಕಾರದ ವಿರುದ್ಧ ಸತ್ಯಾಗ್ರಹ ನಡೆಸುವ ಅಧಿಕಾರ ಜನರಿಗಿದೆ ಎಂದು ಸ್ಪಷ್ಟಪಡಿಸಿದರು. ಅವರ ಈ ವ್ಯಾಖ್ಯೆಯಿಂದ ಅನುಶಾಸನ ಪರ್ವದ ಬಗ್ಗೆ ಇದ್ದ ಭ್ರಮೆ ದೂರವಾಯಿತು'' ಎಂದು ತಿಳಿಸಿದ್ದಾರೆ.

ಒಟ್ಟಿನಲ್ಲಿ ಜೆ. ಪಿ. ಮತ್ತೊಮ್ಮೆ ಗಾಂಧಿಶಕ್ತಿಯಾಗಿ ಬಂದು, ಜನಚೇತನವನ್ನು, ಜಾಗೃತಗೊಳಿಸಿದ ಸಂದರ್ಭದಲ್ಲಿ ಇಂದಿರಾ, ವಿನೋಬಾ, ಲೋಕನಾಯಕನ ಜೊತೆಯಲ್ಲಿ ಬೆರೆತು ಕೈಜೋಡಿಸಿದ್ದರೆ, ಭಾರತದ ಚಿತ್ರವೇ ಬದಲಾಗುತ್ತಿತ್ತೊ ಏನೋ! ಜನಶಕ್ತಿಗೆ ಒಂದು ಹೊಸ ತಿರುವು ನೀಡಿದ್ದರೆ. ರಾಷ್ಟ್ರಪಿತನ ಗ್ರಾಮ ಸ್ವರಾಜ್ಯದ ತಳಪಾಯ ಭಾರತ ಭೂಮಿಯಲ್ಲಿ ಸ್ಥಿರಗೊಳ್ಳುತ್ತಿತ್ತೊ ಏನೋ! ನೆಹರೂ ಮನೆತನದ ವಿಷಯದಲ್ಲಿ ವಿನೋಬಾ ಅವರದು ಮೃದು ಸ್ವಭಾವ ಎಂದಿದ್ದರು ಲೋಹಿಯಾ ಒಮ್ಮೆ. ಅದು ನಿಜವೆನಿಸಿದ್ದು ಭಾರತದ ದುರ್ದೈವ.

ಈ ನಡುವೆ ಆಚಾರ್ಯರು ಮೌನವಾಗಿಯೂ ಇರಲಿಲ್ಲ, ಮುಂಬಯಿ ಕಸಾಯಿಖಾನೆಯಲ್ಲಿ ಸಹಸ್ರಾರು ಜಾನುವಾರಗಳ ಜೀವಂತ ಹತ್ಯೆ ನಡೆಯುತ್ತಿದ್ದುದನ್ನು ಪ್ರತಿಭಟಿಸಿ; ಗೋಹತ್ಯಾ ನಿಷೇಧ ಕಾನೂನನ್ನು ಜಾರಿಗೆ ತರುವಂತೆ ಸರ್ಕಾರದ ವಿರುದ್ಧ ಸತ್ಯಾಗ್ರಹ ಆಂದೋಳನ ಆರಂಭಿಸಿದರು. ದೇಶದ ಮೂಲೆಮೂಲೆಗಳಿಂದ ಮುಗ್ಧ ಕಾರ್ಯಕರ್ತರ ಉಪವಾಸ ಸತ್ಯಾಗ್ರಹ ಆರಂಭವಾಯಿತು. ಆದರೆ ವಿನೋಬಾ ಒಮ್ಮೆಯೂ ಮುಂಬಯಿಗೆ ಭೇಟಿ ನೀಡಲಿಲ್ಲ. ತಮ್ಮ ಪೌನಾರ್ ಆಶ್ರಮದಿಂದಲೇ ಕಾರ್ಯಕರ್ತರಿಗೆ ನಿರ್ದೇಶನ ನೀಡುತ್ತಿದ್ದರು. ಆದರೆ ಗಾಂಧೀಜಿ ನಡೆಸಿದ ಪ್ರತಿಯೊಂದು ಸತ್ಯಾಗ್ರಹದಲ್ಲೂ ಅವರ ಪಾತ್ರ ಎದ್ದು ಕಾಣುತ್ತಿತ್ತು. ಅವರೇ ಮುಂಚೂಣಿಯಲ್ಲಿ ನಿಂತು ನಿರ್ದೇಶನ ಕೊಡುತ್ತಿದ್ದರು. ಆಗ ಜನ ಅವರನ್ನು ಹಿಂಬಾಲಿಸುತ್ತಿತ್ತು.

ಜಾಗೃತಗೊಂಡಿದ್ದ ಜನಶಕ್ತಿಯ ಉಪಯೋಗ ಸರಿಯಾದ ದಿಕ್ಕಿನಲ್ಲಿ ಹರಿದಿದ್ದರೆ, ರಾಜ್ಯ ಶಕ್ತಿಯ ವಿಕೇಂದ್ರೀಕರಣ ಎಂದೋ ಆಗುತ್ತಿತ್ತು. ಇದಕ್ಕೆ ಯಾರು ಹೊಣೆ ಎನ್ನುವ ಚರ್ಚೆ ಇಲ್ಲಿ ಅಪ್ರಸ್ತುತ. ಇತಿಹಾಸಕಾರರಿಗೆ ಇದು ಬಿಟ್ಟ ವಿಷಯ.

ಚಳವಳಿಯ ಗಂಭೀರತೆಯನ್ನು ಗಮನಿಸಿ ಇಂದಿರಾಜಿ ಮಹಾಚುನಾವಣೆಯನ್ನು ಘೋಷಿಸಿದರು. ಇದೊಂದು ಅವರ ದಿಟ್ಟ ಹೆಜ್ಜೆ. ಪ್ರಜಾಪ್ರಭುತ್ವದ ವಿಷಯದಲ್ಲಿ ಅವರು ತಾಳಿದ್ದ ಮೃದು ಧೋರಣೆ ನಿಜಕ್ಕೂ ಅಚ್ಚರಿ. ಜೆ. ಪಿ. ಯವರ ಬಿಡುಗಡೆಯಾಯಿತು. ಆಗ ಅವರ ಎರಡು ಮೂತ್ರಪಿಂಡಗಳೂ (ಕಿಡ್ನಿ) ಹಾಳಾಗಿದ್ದವು. ಜಸಲೋಕ್ ಆಸ್ಪತ್ರೆಯಲ್ಲಿ ದಿನ ಬಿಟ್ಟು ದಿನ ಅವರಿಗೆ ಡಯಾಲಿಸಿಸ್ ಕೊಡಲಾಗುತ್ತಿತ್ತು. ಎಲ್ಲ ನಾಯಕರ ಬಿಡುಗಡೆಯಾಗಿ ಸೆರೆಮನೆಗಳು ಬರಿದಾದವು. ಆಗ ಹೊಸ ಪಕ್ಷದ ರಚನೆ ಮಾಡಿದರು. ಜೆ.ಪಿ. ಚುನಾವಣೆಯ ಸವಾಲನ್ನು ಸ್ವೀಕರಿಸಿದರು.

ಈ ಸಂದರ್ಭದಲ್ಲಿ ಅವರೊಂದು ಹೇಳಿಕೆ ನೀಡಿ :'' ಹೊಸ ಪಕ್ಷ ರಚನೆಯ ಘೋಷಣೆಯಿಂದಾಗಿ ನಾನು ಮತ್ತೆ ಪಕ್ಷ ರಾಜಕಾರಣದಲ್ಲಿ ತೊಡಗಿದ್ದೇನೆ ಎಂಬ ಭ್ರಮೆ ಅನೇಕರಲ್ಲಿ ಹರಡಿದೆ. ನಾನು ಅನೇಕ ವರ್ಷಗಳಿಂದ ಪಕ್ಷರಹಿತನಾಗಿ ಕೆಲಸ ಮಾಡುತ್ತಿದ್ದೇನೆ. ಪಕ್ಷ ಮತ್ತು ಅಧಿಕಾರದ ರಾಜನೀತಿಯಿಂದ ಹೊರಗುಳಿದಿದ್ದೇನೆ. ಆದರೂ ಈ ದೇಶದಲ್ಲಿ ಸಂಸದೀಯ ಪ್ರಜಾಪ್ರಭುತ್ವ

ಯಶಸ್ವಿಗೊಳ್ಳಬೇಕಾದರೆ ಒಂದು ಬಲದಿಂದ ವಿರೋಧ ಪಕ್ಷ ಇರಬೇಕಾದುದು ಅಗತ್ಯವೆಂದು ನನ್ನ ಭಾವನೆ'' ಎಂದು ಸ್ಪಷ್ಟ ಪಡಿಸಿದರು.

''ನಾನು ಚುನಾವಣೆಯಲ್ಲಿ ಸ್ಪರ್ಧಿಸುವುದಿಲ್ಲ. ಅಂತೆಯೇ ಅಧಿಕಾರ ಸ್ಥಾನವನ್ನು ಗ್ರಹಿಸುವುದಿಲ್ಲ. ಸತ್ತಾ ವ್ಯಾಮೋಹದಿಂದ ನಾನು ಬಹುದೂರ. ರಾಜ್ಯ ಸತ್ತೆಗೆ ಬದಲು ಜನಶಕ್ತಿಯ ಮೇಲೆ ನನಗೆ ವಿಶ್ವಾಸ. ಈ ಶಕ್ತಿಯಿಂದಲೇ ನಾನು ಸಮಾಜ ಪರಿವರ್ತನೆಯ ಕನಸು ಕಂಡವನು'' ಎಂದು ಹೇಳುವುದನ್ನು ಅವರು ಮರೆಯಲಿಲ್ಲ.

ಜನತಾಪಕ್ಷದ ಹೆಸರಿನಲ್ಲಿ ಜೆ. ಪಿ. ಚುನಾವಣೆಯ ಕಣಕ್ಕಿಳಿದರು. ಅದೊಂದು ಯುದ್ಧಭೂಮಿಯಾಗಿ ಪರಿಣಮಿಸಿತು. ಸರ್ವೋದಯ ನಾಯಕನನ್ನು ಗುರುತಿಸಿ, ಜನತಾ ಪಕ್ಷಕ್ಕೆ ಮತವಿತ್ತರು. ಪಕ್ಷದ ಅಭ್ಯರ್ಥಿಗಳದೇ ಜಯ. ಅದೂ ಲಕ್ಷಗಟ್ಟಲೆ ಮತಗಳ ಅಂತರದಿಂದ ಇಂದಿರಾಜಿಗೆ ಸೋಲಾಯಿತು. ''ಸತ್ಯಮೇವ ಜಯತೆ'' ಜನತಾ ಪಕ್ಷ ಅಧಿಕಾರಕ್ಕೆ ಬಂತು. ಮೊರಾರ್ಜಿ ದೇಸಾಯಿ ಹೆಸರನ್ನು ಪ್ರಧಾನ ಮಂತ್ರಿ ಸ್ಥಾನಕ್ಕೆ ಸೂಚಿಸಿದರು ಜೆ. ಪಿ.

ರಾಷ್ಟ್ರಪಿತನ ಸಮಾಧಿ ಬಳಿ, ಮಂತ್ರಿ ಮಂಡಲ ಶಪಥ ಗ್ರಹಣ ಮಾಡಿತು. ಶಪಥ ದೀಕ್ಷೆ ಕೊಟ್ಟವರು ಜಯಪ್ರಕಾಶ ನಾರಾಯಣ. ಅವರು ಮೊದಲೇ ತಿಳಿಸಿದಂತೆ. ಅಧಿಕಾರದಿಂದ ಹೊರಗುಳಿದರು. ಜನತಾ ಸ್ವರಾಜ್ಯಕ್ಕೆ ಬುನಾದಿ ಹಾಕುವ ಕಾರ್ಯ ಅತಿ ಶೀಘ್ರವಾಗಿ ಆರಂಭವಾಗಬೇಕೆನ್ನುವುದು ಅವರ ಅಪೇಕ್ಷೆಯಾಗಿತ್ತು. ಭ್ರಷ್ಟ ಶಾಸಕರನ್ನು ಹಿಂದಕ್ಕೆ ಕರೆಸಿಕೊಳ್ಳುವ ಅಧಿಕಾರ, ಶಿಕ್ಷಣದಲ್ಲಿ ಆಮೂಲಾಗ್ರ ಪರಿವರ್ತನೆ, ರಾಜ್ಯ ವ್ಯವಸ್ಥೆಯ ವಿಕೇಂದ್ರೀಕರಣ, ವ್ಯಕ್ತಿ ಮತ್ತು ಸಮಾಜಜೀವನದಲ್ಲಿ ಸರ್ವಾಂಗ ಪರಿಪೂರ್ಣ ಬದಲಾವಣೆ, ನಿರುದ್ಯೋಗ ಸಮಸ್ಯೆಯ ಪರಿಹಾರಕ್ಕೆ ಖಾದಿ-ಗ್ರಾಮೋದ್ಯೋಗದಂತಹ ಗುಡಿ ಕೈಗಾರಿಕೆಗಳನ್ನು ಜಾರಿಗೊಳಿಸುವುದು; ಇಂತಹ ಸಪ್ತ ಮುಖ ಕ್ರಾಂತಿ ಅವರ ಸಂಪೂರ್ಣ ಕ್ರಾಂತಿಯಲ್ಲಿ ಅಡಕವಾಗಿತ್ತು. ಈ ವಿಷಯವನ್ನು ಅವರು ಸರ್ಕಾರದ ಗಮನಕ್ಕೆ ತರುತ್ತಲೇ ಇದ್ದರು. ಪ್ರಧಾನ ಮಂತ್ರಿಗೆ ಕಾಗದಗಳನ್ನೂ ಬರೆದರು.

ಆದರೆ ಸರ್ಕಾರ ಅವರ ಸಲಹೆಗಳಿಗೆ ಕಿವಿಗೊಡಲಿಲ್ಲ. ದೈಹಿಕವಾಗಿ ದುರ್ಬಲರಾಗಿದ್ದ ಜೆ. ಪಿ. ಹೊರಗಡೆ ಸುತ್ತಾಡುವಂತಿರಲಿಲ್ಲ. ಅವರ ಎರಡು ಕಿಡ್ನಿಗಳೂ ಹಾಳಾಗಿ, ದಿನ ಬಿಟ್ಟು ದಿನ ಡಯಾಲಿಸಿಸ್ ಚಿಕಿತ್ಸೆಗೊಳಗಾಗಿದ್ದ ಈ ಸಿಂಹ ಮುಂಬಯಿಯ ಎಕ್ಸ್‌ಪ್ರೆಸ್ ಟವರ್ ಹೌಸಿನ ಒಂದು ಕೋಣೆಯಲ್ಲಿ ವಿಶ್ರಾಂತಿ ಪಡೆಯಬೇಕಾಯಿತು. ಹೀಗಾಗಿ ಅವರು ಜನತೆಯಿಂದ ದೂರ ಸರಿಯಬೇಕಾಯಿತು. ಸರ್ವೋದಯ ಗುರಿ ಸಾಧಿಸುವ ಸಲುವಾಗಿ ಅಧಿಕಾರದ ಹಸ್ತಾಂತರಕ್ಕೆ ಈ ಮಹಾನ್ ಕ್ರಾಂತಿಕಾರಿ ಕೈಹಾಕಿದ್ದು ನಿಜ. ಆದರೆ ಹಿಂದಿನ ವ್ಯವಸ್ಥೆಯನ್ನೆ ಮುಂದುವರಿಸಿಕೊಂಡು ಹೋಗುತ್ತಿದ್ದ ಸರ್ಕಾರದ ನೀತಿಯಿಂದ ಅವರು ಬಹು ಬೇಗೆ ಬೇಸತ್ತರು.

ನನ್ನ ಸೌಭಾಗ್ಯವೋ ಏನೊ, ಅವರ ಆದೇಶದ ಮೇರೆಗೆ ನಾನು ಅವರನ್ನು ಕಾಣಲು ಎಕ್ಸ್‌ಪ್ರೆಸ್ ಟವರ್ ಹೌಸಿಗೆ ಹೋಗಬೇಕಾಯಿತು. ಆಗ ಅವರು ಹಿಂದಿನ ಆಂದೋಳನದ ನೆನಪು ಮಾಡಿಕೊಂಡು ನನಗೆ ಕೆಲವು ಅಮೂಲ್ಯ ಸಲಹೆಗಳನ್ನು ನೀಡಿದರು. ಅವುಗಳಲ್ಲಿ ಮುಖ್ಯವಾದುದು:

''ಈಗ ನನ್ನ ಮಾತು ಯಾರೂ ಕೇಳುವುದಿಲ್ಲ, ಅವರವರ ದಾರಿಯಲ್ಲಿ ಮುಂದುವರಿದಿದ್ದಾರೆ. ಸರ್ವಾಧಿಕಾರದ ಬೇರು ಭೂಮಿಯ ಬಹು ಆಳಕ್ಕೆ ಇಳಿದುಹೋಗಿದೆ. ಅದು ಮತ್ತೆ ತಲೆ ಎತ್ತಿದರೂ ಎತ್ತಬಹುದು. ಆ ಅಂಜಿಕೆ ನನಗಿದೆ. ಈಗ ನನ್ನ ತಲೆಯಲ್ಲಿರುವುದು 'ಲೋಕ ಸಮಿತಿಗಳ' ರಚನೆ. ಅಂದರೆ ಜನಸಮಿತಿಗಳ ಸಂಘಟನೆ. ಗ್ರಾಮ ಮಟ್ಟದಿಂದ ಹಿಡಿದು ಜಿಲ್ಲಾ ಮಟ್ಟದವರೆಗೂ ಇದು ಬೆಳೆಯಬೇಕು. ಗ್ರಾಮಪ್ರಾತಿನಿಧ್ಯದಿಂದ ಕೂಡಿದ ಇಂತಹ ಸಮಿತಿಗಳ ರಚನೆಯಿಂದ, ಪಕ್ಷಾತೀತ ರಾಜ್ಯ ವ್ಯವಸ್ಥೆಗೆ ಒಂದು ದಾರಿಯಾದೀತು. ಇದು ಅಷ್ಟು ಸುಲಭದ ಕೆಲಸವಲ್ಲ, ಆದರೂ ಈಗ ಇರುವ ದಾರಿ ಇದೊಂದೆ. ದೀರ್ಘ ಸಮಯ ಹಿಡಿದರೂ ಮಾಡಬೇಕಾದ ಅತ್ಯಂತ ಮಹತ್ವದ ಕಾರ್ಯ. ಸರ್ವೋದಯ ಕಾರ್ಯಕರ್ತರಿಗೆ ಇದು ನನ್ನ ಸಲಹೆ'' ಎಂದರು.

ಅವರ ಈ ಸಲಹೆಗೆ ಯಾರೂ ಸ್ಪಂದಿಸಲಿಲ್ಲ. ಸರ್ವೋದಯ ಬಳಗವೂ ದೂರವಾಯಿತು. ಅವರು ಹೇಳಿದಂತೆ ಮತ್ತೆ ಇಂದಿರಾಗಾಂಧಿ ಆಡಳಿತಕ್ಕೆ ಬಂದರು. ಜನತಾ ಪಕ್ಷ ಹೋಳಾಯಿತು. ಜೆ. ಪಿ. ಗಳಿಸಿಕೊಟ್ಟ ಸುವರ್ಣ ಅವಕಾಶವನ್ನು ಪಕ್ಷ ಹಾಳು ಮಾಡಿಕೊಂಡಿತು. ಸಮಾನಾಂತರ ವಿಚಾರಧಾರೆಗಳಿಲ್ಲದೆ ತತ್ವ ರಹಿತ ರಾಜಕಾರಣಿಗಳಿಂದಾದ ದುರಂತ ಇದು. ಗುರಿ ಮತ್ತು ಸಾಧನ ಒಂದೇ ಆಗಿದ್ದಿದ್ದರೆ ಈ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ. ಕೋಮುವಾದ-ಸಾಂಪ್ರದಾಯಕತೆ -ಧರ್ಮ-ಜಾತಿಗಳ ಸಂಕುಚಿತ ಮನೋಧರ್ಮ ಪಕ್ಷವನ್ನು ನುಂಗಿಹಾಕಿತು. ಮತ್ತೆ ಅವರೆಲ್ಲ ತಮ್ಮ-ತಮ್ಮ ಹಳೇ ರೂಢಿಗೇ ಸೇರಿಕೊಂಡರು. ಹಿಂದೆ ಕಾಂಗ್ರೆಸ್ ಗಾಂಧೀಜಿಗೆ ದ್ರೋಹ

ಬಗೆದಂತೆ ಅವಕಾಶವಾದಿಗಳ ಜನತಾ ಪಕ್ಷವೂ ಜೆ. ಪಿ. ಯವರಿಗೆ ದ್ರೋಹ ಬಗೆಯಿತು. ಇಂತಹ ಮಹಾಪುರುಷರ ನಾಯಕತ್ವವನ್ನು ಪಡೆದ ಇಂದಿನ ನಾಯಕರಿಗೆ ಬುದ್ಧಿ ಬರಲಿಲ್ಲ. ವಿವೇಕ ಚಿಗುರಲಿಲ್ಲ. ಹಣ-ಅಧಿಕಾರಕ್ಕಾಗಿ ಅವರ ಹೆಸರನ್ನು ಬಳಸುತ್ತಲೇ ಇದ್ದಾರೆ. ಮುಗ್ಧ ಜನತೆಯ ಮತಗಳಿಸುವ ಮುಖವಾಡ ಇನ್ನೂ ಭದ್ರ ಮಾಡಿಕೊಳ್ಳುತ್ತಲೇ ಇದ್ದಾರೆ.

ಸರ್ವೋದಯ ಶಬ್ದ ಇವರಿಗೆ ಅಪರಿಚಿತ. ಶಬ್ದವನ್ನು ಪರಿಚಯಿಸಿಕೊಡುವ ಗಾಂಧೀ ಸಂಸ್ಥೆಗಳೂ ಇಂದು ನಿರ್ಜೀವವಾಗಿವೆ. ಕುರ್ಚಿಗಳ ಆಶೆಯಿಂದಾಗಿ ಹೊಸ ಪೀಳಿಗೆ ಬರದಂತಾಗಿದೆ. ಪುರೋಹಿತಶಾಹಿಯ ಮನೋಧರ್ಮ, ಜುಟ್ಟು, ಜನಿವಾರ, ವಿಭೂತಿ, ನಾಮಗಳ ಚೌಕಟ್ಟಿನಲ್ಲಿ ಸರ್ವೋದಯ ಸಮಾಜ ರಚನೆ ಹೇಗೆ ಸಾಧ್ಯ? 'ಸರ್ವೇ ಜನಾಃ ಸುಖಿನೋ ಭವಂತು ವಸುಧೈವ ಕುಟುಂಬಕಂ' ಈ ಉದಾತ್ತ ಆದರ್ಶಗಳನ್ನು ಪಾಲಿಸಬೇಕಾದರೆ, ನಾನೆಲ್ಲಿದ್ದೇನೆ ಎನ್ನುವುದರ ಅರಿವು ಮೊದಲಾಗಬೇಕು.

ಈ ವಿಷಯದಲ್ಲಿ ಸಾಬರಮತಿ ಆಶ್ರಮದಲ್ಲಿ ನಡೆದ ಘಟನೆಯನ್ನು ಸ್ಮರಿಸಿಕೊಳ್ಳುವುದು ಅತ್ಯಂತ ಉಚಿತವೆನಿಸುತ್ತದೆ. ಅದು ಸ್ವಾತಂತ್ರ್ಯ ಸಂಗ್ರಾಮದ ಕಾಲ. ಸತ್ಯಾಗ್ರಹಿಗಳ ತಂಡದ ತಯಾರಿ ನಡೆಸಿದ್ದರು ಗಾಂಧೀಜಿ. ಆಗ ಒಬ್ಬ ಸನ್ಯಾಸಿ ಗಾಂಧೀಜಿಯನ್ನು ನೋಡಲು ಬಂದರು. ಗಾಂಧೀ ವಿಚಾರದಿಂದ ಪ್ರಭಾವಿತನಾಗಿದ್ದ ಆತನ ಬೇಡಿಕೆ. ''ಬಾಪೂ, ನಾನು ನಿಮ್ಮ ಆಶ್ರಮದಲ್ಲಿರ ಬೇಕೆಂದಿದ್ದೇನೆ. ನನಗೆ ಅವಕಾಶ ಮಾಡಿಕೊಡಿ'' ಎಂದ. ಗಾಂಧೀಜಿ ತಲೆಯೆತ್ತಿ ನೋಡಿದಾಗ, ಕಾವಿಧಾರಿಯಾಗಿದ್ದ ಸನ್ಯಾಸಿ ಅವರ ಕಣ್ಣಿಗೆ ಬಿದ್ದರು. ಕೂಡಲೆ ಅವರು ಉತ್ತರಿಸಿದುದು ಹೀಗೆ.

''ನನ್ನ ಆಶ್ರಮ ಎಲ್ಲರಿಗೂ ತೆರೆದೇ ಇದೆ. ಆದರೆ ಕಾವಿಧಾರಿಗಳಿಗಲ್ಲ. ಇಲ್ಲಿಗೆ ಬರುವವರು ಜನತೆಯ ಸೇವಕರಾಗಬೇಕು. ಅವರ ಸೇವೆ ಮಾಡಬೇಕು. ಇದು ನಿಮ್ಮಿಂದ ಸಾಧ್ಯವೆ? ಮಲ ಎತ್ತುವ ಕೆಲಸ ನೀವು ಮಾಡಬಲ್ಲಿರಾ? ಸಾಮಾನ್ಯ ಜನರಂತೆ ನೀವು ಬಟ್ಟೆ ಧರಿಸಬಲ್ಲಿರಾ?'' ಎಂದು. ಕೇಳಿದರು. ಗಾಂಧೀಜಿಯ ಮಾತು ಕೇಳಿದ ಸನ್ಯಾಸಿ ''ಇದು ಹೇಗೆ ಸಾಧ್ಯ? ನಾನು ಸನ್ಯಾಸ ದೀಕ್ಷೆ ತೆಗೆದುಕೊಂಡಿದ್ದೇನೆ. ಹಿಮಾಲಯದಲ್ಲಿ ಸುತ್ತಾಡಿದ್ದೇನೆ. ವೇದೋಪನಿಷತ್ತುಗಳ ಅಧ್ಯಯನ ಮಾಡಿದ್ದೇನೆ. ಅದೆಲ್ಲದರ ಸಂಕೇತ ಈ ಕಾವಿಬಟ್ಟೆ. ಇದನ್ನೇ ತೆಗೆದುಹಾಕಿ ಎಂದರೆ ಹೇಗೆ?'' ಎಂದು ಪ್ರಶ್ನಿಸಿದ.

ಬಾಪೂ ಹೇಳಿದರು. '''ಕಾವಿಬಟ್ಟೆಯ ಬಗ್ಗೆ ನನಗೆ ವಿರೋಧವಿಲ್ಲ. ಅದು ಜನತೆಯಿಂದ ನಿಮ್ಮನ್ನು ದೂರವಿಡುತ್ತದೆ. ಜನ ನಿಮ್ಮಿಂದ ಕೆಲಸ ಮಾಡಿಸರು. ಅವರು ನಿಮ್ಮ ಸೇವೆಗಾಗಿ ಕಾತರರಾಗುತ್ತಾರೆ. ನಿಮ್ಮನ್ನು ಹಿಂಬಾಲಿಸುತ್ತಾರೆ. ಪೂಜಿಸುತ್ತಾರೆ. ಕಾವಿಬಟ್ಟೆಯ ಮಹಿಮೆ ಅಂತಹದು. ಹೀಗಿರುವಾಗ ನಾನು ನಿಮ್ಮನ್ನು ಇಲ್ಲಿರಲು ಅವಕಾಶ ಹೇಗೆ ಮಾಡಿಕೊಡಲಿ? ನನ್ನ ಆಶ್ರಮವಿರುವುದು ಬಡವರ ಸೇವೆ ಮಾಡುವ ಸಲುವಾಗಿ. ಆದರೆ ನಿಮ್ಮ ಸೇವೆಗೆ ತೊಡಗಿಬಿಟ್ಟರೆ ನನ್ನ ಗತಿ ಏನು?'' ಎಂದರು. ''ಹಾಗಾದರೆ ಇಲ್ಲಿ ನನಗೆ ಸ್ಥಾನವಿಲ್ಲವೆ? ಈ ಬಟ್ಟೆಯನ್ನು ತೆಗೆದುಹಾಕಲೇಬೇಕೆ?'' ಎಂದ ಸಂನ್ಯಾಸಿ ಮತ್ತೊಮ್ಮೆ, ''ಹೌದು'' ಎಂದರು ಬಾಪೂ. ''ಹಾಗಾದರೆ ಈ ಕಾರ್ಯ ನನ್ನಿಂದ ಸಾಧ್ಯವಿಲ್ಲ. ನಾನು ಹೊರಟುಹೋಗುತ್ತೇನೆ'' ಎಂದು ಕೋಪೋದ್ರಿಕ್ತರಾಗಿ ಹೊರಟೇಬಿಟ್ಟರು. ಆಮೇಲೆ ಸ್ವಲ್ಪಕಾಲದನಂತರ ಅವರು ಮತ್ತೆ ಆಶ್ರಮಕ್ಕೆ ಮರಳಿ-

''ಬಾಪೂ ನೀವು ಹೇಳಿದ್ದು ನಿಜ. ಜನ ನನಗೆ ಸೇವೆ ಮಾಡಲು ಅವಕಾಶ ಕೊಡಲಿಲ್ಲ. ನನ್ನನ್ನು ಹೊಗಳುವುದೇ ಅವರ ಕೆಲಸವಾಗಿಬಿಟ್ಟಿತು. ಈಗ ನನಗೆ ನಿಮ್ಮ ಮಾತಿನ ಅರ್ಥವಾಗಿದೆ. ನಾನು ಕಾವಿಬಟ್ಟೆ ತೊರೆದು ನಿಮ್ಮಲ್ಲಿಗೆ ಬಂದಿದ್ದೇನೆ. ನನಗೆ ಆಶ್ರಮದಲ್ಲಿರಲು ಅವಕಾಶ ನೀಡಿ'' ಎಂದು ನಮ್ರತೆಯಿಂದ ಬೇಡಿಕೊಂಡರು. ಇವರನ್ನು ಕೆಲವು ಕಾಲ ಆಶ್ರಮದಲ್ಲಿರಿಸಿಕೊಂಡು, ಆಮೇಲೆ ಹಿಂದೀ ಪ್ರಚಾರದ ಸಲುವಾಗಿ ಮದ್ರಾಸಿಗೆ ಕಳಿಸಿಕೊಟ್ಟರು ಗಾಂಧೀಜಿ. ಸರ್ವೋದಯ ಸಮಾಜವನ್ನು ಕುರಿತು ಮಾತನಾಡುವವರಿಗೆ ಇದು ಅರ್ಥವಾಗಬೇಕು. ಕುವೆಂಪು ಹೇಳಿದಂತೆ, 'ಮನುಜ ಮತ - ವಿಶ್ವಪಥ!' ಈ ಮತವು ಹೃದಯದಲ್ಲಿ ತುಂಬಿರಬೇಕು. ನಮ್ಮ ವಿಚಾರದಲ್ಲಿ ಪರಿವರ್ತನೆಯಾಗಿ, ಅದರಂತೆ ಜೀವನವನ್ನು ರೂಪಿಸಿಕೊಂಡಾಗ, ಸರ್ವೋದಯದ ಬಗ್ಗೆ ಮಾತನಾಡುವ ಅಧಿಕಾರ ನಮಗೆ ಬರುತ್ತದೆ. ಮುಖ್ಯವಾಗಿ ಇರಬೇಕಾದುದು ಪ್ರಾಮಾಣಿಕತೆ. 'ನಡೆಯಂತೆ ನುಡಿ, ನುಡಿದಂತೆ ನಡೆ. ಸತ್ಯ ಇದರ ಜೀವಾಳ 'ಓದಿ, ಬೂದಿಯ ಪೂಸಿ, ತೇದು ಕಾವಿಯ ಹೊಡೆದು ಹೋದಾತನ ಯೋಗಿ ಎನಬೇಡ' ಎನ್ನಲಿಲ್ಲವೆ ಸರ್ವಜ್ಞ.

ಗಾಂಧೀಯವರ ಸರ್ವೋದಯ ಅಳುಬುರುಕರದಲ್ಲ, ಹೇಡಿಗಳದಲ್ಲ, ಶರಣ ಬಸವಣ್ಣ ಹೇಳಲಿಲ್ಲವೆ; 'ಅಂತರಂಗ-ಬಹಿರಂಗ' ಶುದ್ಧವಾಗಿರಬೇಕೆಂದು. ಅಂತಹವರಿಗೇ ಇದು ಸಾಧ್ಯ, ಗ್ರಾಹ್ಯ, ಪ್ರಾಪ್ಯ. ಸರ್ವೋದಯ ವಿಚಾರಕ್ಕೆ ಜನ್ಮ ಕೊಟ್ಟ ಬಾಪೂ ಇಂದು ಸಂಸ್ಥೆಗಳ ಬಂಧನಕ್ಕೊಳಪಟ್ಟಿದ್ದಾರೆ. ಅವರನ್ನು ಬಂಡವಾಳ ಮಾಡಿಕೊಂಡು ಜೀವನ ನಿರ್ವಹಣೆಯ ಕಾರ್ಯ ನಡೆದಿದೆ ಎಲ್ಲೆಲ್ಲೂ. ಗಾಂಧೀಜಿಯ ಸಮಗ್ರ ರೂಪ ಅರ್ಥಮಾಡಿಕೊಂಡವರನ್ನು ಹುಡುಕಬೇಕಾಗಿದೆ ಸಮಾಜದಲ್ಲಿ.

ಅವರ ಹದಿನೆಂಟು ರಚನಾತ್ಮಕ ಕಾರ್ಯಕ್ರಮಗಳು, ಸರ್ವೋದಯ ಸಮಾಜದ ಹದಿನೆಂಟು ಕಂಬಗಳು (ಪಿಲ್ಲರ್). ಅದರ ಆಸ್ತಿಭಾರದ ಮೇಲೆ ಸರ್ವೋದಯ ಸಮಾಜ ತಲೆ ಎತ್ತಬೇಕು. ಈ ಕಲ್ಪನೆಯಿಲ್ಲದ ಜನರಿಂದ ಇಂತಹ ದೇವಸಮಾಜ ನಿರ್ಮಾಣವಾಗಲಾರದು. ಪಾನನಿರೋಧ, ಅಸ್ಪೃಶ್ಯತಾ ನಿವಾರಣೆ, ಖಾದೀ-ಗ್ರಾಮೋದ್ಯೋಗ, ಗೋಸೇವಾಸಂಘ, ನಯೀ ತಾಲೀಂ, ಹಿಂದೂಸ್ತಾನಿ ಪ್ರಚಾರ ಸಭಾ, ಹಿಂದೂ-ಮುಸ್ಲಿಂ ಏಕತೆ ಮುಂತಾದ ಕಾರ್ಯಕ್ರಮಗಳಲ್ಲಿ ತೊಡಗಿರುವವರಿಗೆ; ಇವುಗಳೆಲ್ಲಾ ಒಂದೇ ಘಟಕ, ಒಂದೇ 'ಯೂನಿಟ್' ಎನ್ನುವ ಭಾವನೆ ಬರಬೇಕು. ಸಪ್ತಸ್ವರಗಳಲ್ಲಿ ಹೊಂದಾಣಿಕೆಯಿಲ್ಲದೆ ಹೋದರೆ ಅದೊಂದು ಸಂಗೀತ ಎನಿಸಿಕೊಳ್ಳುವುದೆ? ಅದರಿಂದ ಇಂಪಾದ ನಾದ ಹೊರಬರಬಲ್ಲುದೆ? ಹಾಗೆಯೇ ಇದು ಕೂಡ. ಇಂದು ಗಾಂಧೀ, ವಿನೋಬಾ, ಜೆ. ಪಿ. ನಮ್ಮ ಮಧ್ಯೆ ಜೀವಂತವಾಗಿಲ್ಲ. ಅವರು ಮಾಡಿದ ತಪಸ್ಸು, ಪುರುಷಾರ್ಥ, ನಮ್ಮ ಮುಂದಿದೆ. ನಾವು ಅವರ ಎತ್ತರಕ್ಕೆ ಬೆಳೆಯದಿದ್ದರೂ, ಅವರು ನುಡಿದ-ನಡೆದ, ದಾರಿಯಲ್ಲಿ ತ್ರಿಕರಣ ಶುದ್ಧಿಯಿಂದ ನಡೆದಿದ್ದಾದರೆ, ಜನ ನಮ್ಮನ್ನು ಗುರುತಿಸಬಲ್ಲರು. ಸರ್ವೋದಯ ಸಮಾಜದ ರಚನೆಯಲ್ಲಿ ನಮ್ಮೊಡನೆ ಸಹಕರಿಸಬಲ್ಲರು. 'ಸಬಕೊ ಸನ್ಮತಿ ದೇ ಭಗವನಾನ್' ಗಾಂಧೀಜಿಯವರ ಈ ವಾಕ್ಯ ಸದಾ ನಮ್ಮ ಹೃದಯಭಿತ್ತಿಯಲ್ಲಿ ರಾರಾಜಿಸುತ್ತಿರಲಿ ಎನ್ನುವುದಷ್ಟೆ ನಮ್ಮ ಈಗಿನ ಪ್ರಾರ್ಥನೆ.

# ಏಕೀಕರಣ ಚಳವಳಿ

ಡಾ। ಎಚ್. ಎಸ್. ಗೋಪಾಲರಾವ್

೨೦೦೨ ನವೆಂಬರ್ ೧ ನೆಯ ತಾರೀಕಿಗೆ ಕರ್ನಾಟಕ ಏಕೀಕರಣವಾಗಿ ನಲವತ್ತ ಆರು ವರ್ಷಗಳು ತುಂಬಿದವು. ಈ ಮಾತು ಇತಿಹಾಸ ತಿಳಿಯದವರಿಗೆ ಅರ್ಥ ಆಗದಿರಬಹುದು. ಆಶ್ಚರ್ಯಕ್ಕೂ ಕಾರಣ ಆಗಬಹುದು. ಆದರೆ ಇತಿಹಾಸ ಬಲ್ಲವರಿಗೆ ಕಹಿ-ಸಿಹಿ ಘಟನೆಗಳ ಸ್ಮೃತಿ. ಒಡೆದುಕೊಳ್ಳುವ ಮತ್ತು ಕೂಡಿಕೊಳ್ಳುವ ಕನ್ನಡಿಗರ ಸ್ವಭಾವ ಇತಿಹಾಸಕ್ಕೆ ಹೊಸದಲ್ಲ. ಈ ಒಡೆದುಕೊಳ್ಳುವ ಮನೋಭಾವಕ್ಕೆ ಸದಾಕಾಲ ಪ್ರೇರಣೆಯಾಗಿರುವುದು ಬಹುತೇಕ ಅಧಿಕಾರದ ಆಸೆ. ಒಂದಾಗಲು ಕಾರಣವಾಗಿರುವುದು ಭಾಷೆ ಮತ್ತು ಸಂಸ್ಕೃತಿಯ ಬಗೆಗಿನ ಪ್ರೀತಿ ಮತ್ತು ಗೌರವ.

ಇತಿಹಾಸದ ವಿದ್ಯಾರ್ಥಿಗಳಿಗೆ ತಿಳಿದಿರುವಂತೆ ಗಂಗರು ಮತ್ತು ರಾಷ್ಟ್ರಕೂಟರು ಅಧಿಕಾರಕ್ಕಾಗಿ ಯುದ್ಧ ಮಾಡಿದರು. ರಾಷ್ಟ್ರಕೂಟರು ಬಾದಾಮಿ ಚಾಲುಕ್ಯರ ಬಲ ಕುಂದಿಸಿದರು. ರಾಷ್ಟ್ರಕೂಟರ ಬಲವನ್ನು ಕುಂದಿಸಿದವರು ಕಲ್ಯಾಣದ ಚಾಲುಕ್ಯರು. ತಮ್ಮ ಆಳ್ವಿಕೆಯ ಕೊನೆಯ ವರ್ಷಗಳಲ್ಲಿ ಕಲ್ಯಾಣದ ಚಾಲುಕ್ಯರು ಕಲಚೂರ್ಯರೊಡನೆ ಅಧಿಕಾರಕ್ಕಾಗಿ ಹೋರಾಡಬೇಕಾಯಿತು. ಈ ಮಧ್ಯೆ ಹೊಯ್ಸಳರು ಮತ್ತು ಸೇವುಣರು ನಡೆಸಿದ ಸೆಣಸಾಟದಲ್ಲಿ ಕರ್ನಾಟಕವು ಎರಡು ಭಾಗವಾಯಿತು. ತುಂಗಭದ್ರಾ ನದಿಯ ಉತ್ತರಕ್ಕೆ ಸೇವುಣರೂ, ದಕ್ಷಿಣಕ್ಕೆ ಹೊಯ್ಸಳರೂ ಆಳಿದರು. ಇದು ನಡೆದದ್ದು ಕ್ರಿ.ಶ. ೧೩ನೆಯ ಶತಮಾನದ ಆರಂಭದಲ್ಲಿ; ಆಗ ಬೇರೆಯಾದ ಕನ್ನಡಿಗರು ಆಡಳಿತಾತ್ಮಕವಾಗಿ ಒಂದಾದದ್ದು ೧೯೫೬ರಲ್ಲಿ. ಅಂದರೆ ಸುಮಾರು ೭೫೦ ವರ್ಷಗಳ ಕಾಲ ಕನ್ನಡಿಗರೇ ಅಧಿಕವಾಗಿದ್ದ ಭಾಗಗಳನ್ನು ಆಳಿದವರು ಕನ್ನಡೇತರರು. ಆಳುವ ವರ್ಗವು ಬಯಸುವ ಭಾಷೆಯನ್ನು ಆಡಳಿತದಲ್ಲಿ ಬಳಸುವುದು ವಾಡಿಕೆ. ಯಾವುದೇ ಭಾಷೆಯ ಬಳಕೆ ಕಡಿಮೆಯಾದರೆ, ಆ ಭಾಷೆಯ ಅವನತಿ ಆರಂಭವಾಗುತ್ತದೆ. ಭಾಷೆಯ ಅವನತಿಯೊಡನೆ ಆ ಭಾಷಿಕರ ಸಂಸ್ಕೃತಿಯೂ ಅನ್ಯಾಕ್ರಾಂತ ವಾಗುತ್ತದೆ ಮತ್ತು ಕ್ರಮೇಣ ತನ್ನ ಸ್ವರೂಪದಲ್ಲಿ ಗುರುತಿಸಲಾಗದಷ್ಟು ಬದಲಾವಣೆಗಳನ್ನು ಪಡೆಯುತ್ತದೆ. ಇಂತಹ ಬದಲಾವಣೆಯು ಅಗತ್ಯವೂ ಹೌದು; ಆದರೆ ಬದಲಾವಣೆಯು ಮೂಲ ಸ್ವರೂಪವನ್ನೇ ಇಲ್ಲವಾಗಿಸಿ, ಕುರೂಪಕ್ಕೆ ಅವಕಾಶ ನೀಡಬಾರದು. ಸಂಸ್ಕೃತಿಯ ಮೇಲೆ ನಡೆಯುವ ಯಾವುದೇ ವಿಧದ ಧಾಳಿಯು ಒಳಿತಾದ ಏನನ್ನೂ ಉಳಿಸುವುದಿಲ್ಲ ಮತ್ತು ಎಲ್ಲಾ ರೀತಿಯ ಕೆಟ್ಟದ್ದನ್ನೂ ತುಂಬುತ್ತದೆ. ಕನ್ನಡ ಸಂಸ್ಕೃತಿಯು ಇಂತಹ ಧಾಳಿಗಳಿಗೆ ತುತ್ತಾಗಿ ತನ್ನ ಎಷ್ಟೋ ಒಳ್ಳೆಯ ಅಂಶಗಳನ್ನು ಕಳೆದುಕೊಂಡಿದೆ. ಆಕಸ್ಮಿಕವಾಗಿ ಕೆಲವು ಒಳ್ಳೆಯ ಆಚಾರ ಮತ್ತು ವಿಚಾರಗಳನ್ನು ತನ್ನ ಸ್ವಾಭಾವಿಕ ಸ್ವೀಕರಣ ಗುಣದಿಂದಾಗಿ ತನ್ನದಾಗಿಸಿಕೊಂಡಿದೆ. ಆದ್ದರಿಂದ ಆಗಿರುವ ಹಾನಿಯು ಎಚ್ಚರಿಕೆಯ ಗಂಟೆಯನ್ನೇನೂ ಬಾರಿಸಿಲ್ಲ ಎಂದು ಸಮಾಧಾನಪಡಬಹುದು.

ಕರ್ನಾಟಕದ ಗಡಿರೇಖೆಯು ಎಂದೂ ಸಿದ್ಧವಾಗಿರಲಿಲ್ಲ, ಕದಂಬ-ಗಂಗ-ಬಾದಾಮಿ ಚಾಲುಕ್ಯ ವಂಶಗಳ ಆಳ್ವಿಕೆಯ ಸಂದರ್ಭದಲ್ಲಿ ಗೋದಾವರಿ ನದಿಯನ್ನು ಉತ್ತರ ಗಡಿಯಾಗಿಯೂ, ಕಾವೇರಿ ನದಿಯು ಸಮುದ್ರವನ್ನು ಸೇರುವ ಭಾಗದವರೆಗಿನ ಭಾಗವನ್ನು ದಕ್ಷಿಣ ಗಡಿಯಾಗಿಯೂ

ಹೊಂದಿದ್ದ ಕರ್ನಾಟಕವು ಬಾದಾಮಿ ಚಾಲುಕ್ಯ ವಂಶದ ಇಮ್ಮಡಿ ಪುಲಿಕೇಶಿಯ ಕಾಲದಲ್ಲಿ ನರ್ಮದೆಯವರೆಗೆ ತನ್ನ ಆಡಳಿತವನ್ನು ವಿಸ್ತರಿಸಿಕೊಳ್ಳುವ ಅವಕಾಶಗಳಿದ್ದರೂ ಹಾಗೆ ಮಾಡದೆ ಗೆದ್ದ ಭಾಗಗಳನ್ನು ತನ್ನ ಗುಲಾಮಗಿರಿಗೆ ಗುರಿ ಮಾಡಿಕೊಳ್ಳಲಿಲ್ಲ. ಕವಿರಾಜಮಾರ್ಗ ಕರ್ತೃವು 'ಕಾವೇರಿಯಿಂದಮಾ ಗೋದಾವರಿವರಮಿರ್ದ' ನಾಡು ಕನ್ನಡ ನಾಡು ಎಂದು ವರ್ಣಿಸಿದ್ದಾನೆ. ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಕಾಲಕ್ಕೆ ಈಗಿನ ಮಹಾರಾಷ್ಟ್ರದ ದಕ್ಷಿಣ ಭಾಗಗಳು ಮತ್ತು ಆಂಧ್ರದ ಪಶ್ಚಿಮ ಭಾಗಗಳು ಆಗಿನ ಕರ್ನಾಟಕದ ಅವಿಭಾಜ್ಯ ಭಾಗಗಳಾಗಿದ್ದವು. ಈಗಾಗಲೇ ತಿಳಿಸಿರುವಂತೆ ಹೊಯ್ಸಳರು ಮತ್ತು ದೇವಗಿರಿಯ ಯಾದವರು ಅಥವಾ ಸೇವುಣರ ಕಾಲದಲ್ಲಿ ಒಡೆದುಕೊಂಡ ಕರ್ನಾಟಕವು ಒಂದಾಗಲು ಹಲವು ಶತಮಾನಗಳು ಬೇಕಾಯಿತು; ಮಾತ್ರವಲ್ಲದೆ ಹೋರಾಟವೂ ಅನಿವಾರ್ಯವಾಯಿತು. ಇದು ವಿಪರ್ಯಾಸ ಎನಿಸಿದರೂ, ಮರೆಮಾಚಲಾಗದ ಸತ್ಯ. ಹೊಯ್ಸಳರು ಮತ್ತು ಸೇವುಣರ ನಂತರ ಆಳಿದ ವಿಜಯನಗರದ ಅರಸರ ಕಾಲದಲ್ಲೂ ಕರ್ನಾಟಕವು ತನ್ನ ಹಿಂದಿನ ಸ್ವರೂಪವನ್ನು ಪಡೆಯಲಿಲ್ಲ. ದಕ್ಷಿಣ ಭಾರತದ ಬಹುತೇಕ ಭಾಗವನ್ನು ವಿಜಯನಗರದ ಅರಸರು ಆಳಿದರು; ಆದರೆ ಆ ಮೊದಲು ಕರ್ನಾಟಕದ ಭಾಗವಾಗಿದ್ದ ಮತ್ತು ಈಗ ಕರ್ನಾಟಕಕ್ಕೆ ಸೇರಿರುವ ರಾಯಚೂರು, ಗುಲಬರ್ಗಾ ಮತ್ತು ಬೀದರ್ ಜಿಲ್ಲೆಗಳು ವಿಜಯನಗರದ ವ್ಯಾಪ್ತಿಗೆ ಸೇರಿರಲಿಲ್ಲ. ಅವೆಲ್ಲವೂ ಆದಿಲ್ ಷಾಹಿಗಳ ವಶವಾಗಿದ್ದವು. ಮೈಸೂರು ರಾಜ್ಯವನ್ನು ವಿಸ್ತರಿಸಲು ಹೈದರ್ ಮತ್ತು ಟಿಪ್ಪು ಪ್ರಯತ್ನಿಸಿದರು. ಟಿಪ್ಪುವು ತುಂಗಭದ್ರಾ ನದಿಯ ಆಚೆಯ ಕೆಲವು ಪ್ರದೇಶಗಳನ್ನು ಗೆದ್ದನಾದರೂ, ಕ್ರಿ.ಶ. ೧೭೯೧೮ರಲ್ಲಿ ಪೇಶ್ವೆಗಳೊಡನೆ ಆದ ಒಪ್ಪಂದದ ಪ್ರಕಾರ, ವರದಾ ನದಿಯ ಉತ್ತರ ಭಾಗವನ್ನು ಪೇಶ್ವೆಗಳಿಗೂ, ಕೊಡಗು ಮತ್ತು ಮಲಬಾರ್ ಪ್ರಾಂತಗಳನ್ನು ಬ್ರಿಟಿಷರಿಗೂ ನೀಡಬೇಕಾಯಿತು. ಅದಕ್ಕೆ ಮೊದಲೇ ೧೭೮೭ರಲ್ಲಿ ಟಿಪ್ಪುವು ತುಂಗಭದ್ರೆಯು ತನ್ನ ರಾಜ್ಯದ ಉತ್ತರ ಗಡಿ ಎಂದು ಒಪ್ಪಿಕೊಂಡಿದ್ದ. ಟಿಪ್ಪುವು ೧೭೯೯ರಲ್ಲಿ ಮರಣ ಹೊಂದಿದ ನಂತರ, ಅಂದರೆ ೪ನೆಯ ಮೈಸೂರು ಯುದ್ಧದ ನಂತರ, ಬ್ರಿಟಿಷರು ಮತ್ತು ಹೈದರಾಬಾದ್‌ನ ನಿಜಾಮನ ನಡುವೆ ಆಗಿದ್ದ ಒಪ್ಪಂದದ ಪ್ರಕಾರ ಮೈಸೂರು ಸಂಸ್ಥಾನವು ಮಾತ್ರ ಮೈಸೂರಿನ ಒಡೆಯರಿಗೆ ಉಳಿಯಿತು. ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳು ಬ್ರಿಟಿಷರ ಮುಂಬಯಿ ಆಧಿಪತ್ಯಕ್ಕೂ, ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಗಳು ಬ್ರಿಟಿಷರ ಮದರಾಸಿನ ಆಧಿಪತ್ಯಕ್ಕೂ, ಬೀದರ್, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳು ಹೈದರಾಬಾದ್ ನಿಜಾಮನ ಆಳ್ವಿಕೆಗೊ ಸೇರಿದ್ದವು. ಕೊಡಗು ಜಿಲ್ಲೆಯು ಬ್ರಿಟಿಷರ ಒಂದು ಅಧೀನ ರಾಜ್ಯವಾಗಿ ಉಳಿಯಿತು. ಕೆಲವು ಪ್ರದೇಶಗಳು ಸ್ಥಳೀಯ ಮರಾಠೀ ಸಂಸ್ಥಾನಿಕರ ವಶದಲ್ಲಿ ಉಳಿದವು.

ಹೀಗೆ ರಾಜಕೀಯವಾಗಿ ಒಡೆದುಕೊಂಡು, ಸೇರಿಕೊಂಡು (ಒಡೆದುಕೊಂಡಿರುವುದೇ ಹೆಚ್ಚು) ಭಿನ್ನ-ಭಿನ್ನ ಆಡಳಿತ ವ್ಯಾಪ್ತಿಗೆ ಸೇರಿದ ಕನ್ನಡ ಭಾಷಿಕರ ಪ್ರಾಂತಗಳಲ್ಲಿ, ಆಳುವ ವರ್ಗದವರ ಮರ್ಜಿಯಂತೆ, ಆಡಳಿತದ ಭಾಷೆಯ ಬಳಕೆ ಆಯಿತು. ಈಗಿನಂತೆಯೇ, ಹಿಂದೆಯೂ ಜನರ ಭಾಷೆಯ ಬದಲು, ಆಳುವವರ ಅಥವಾ ಆಳುವ ವರ್ಗದ ಅನುಕೂಲಕ್ಕಾಗುವ ಭಾಷೆಯು ಆಡಳಿತದಲ್ಲಿ ಬಳಕೆ ಆಯಿತು. ಕೇವಲ ಕೆಲವರೇ ಇದ್ದ ಆಳುವವರು, ಬಹುಸಂಖ್ಯಾತ ಆಳಿಸಿಕೊಳ್ಳುವವರು ಭಾಷೆಯನ್ನು ಕಲಿಯಲಿಲ್ಲ; ಆಡಳಿತದಲ್ಲಿ ಬಳಸಿಕೊಳ್ಳಲಿಲ್ಲ. ಬದಲಿಗೆ ಬಹುಸಂಖ್ಯಾತ ಆಳಿಸಿಕೊಳ್ಳುವವರು ಅಲ್ಪ ಸಂಖ್ಯಾತ ಆಳುವವರ ಭಾಷೆಯನ್ನು ಕಲಿತರು. ಇದಕ್ಕೆ ಕಾರಣ ಆಳುವವರ ಯಾಜಮಾನ್ಯ ಪ್ರವೃತ್ತಿ ಮತ್ತು ಆಳಿಸಿಕೊಳ್ಳುವವರ ಗುಲಾಮ ಪ್ರವೃತ್ತಿ. ತಮಗೆ ಅರ್ಥವಾಗದೆ ಇದ್ದರೂ ಆಳುವವರ ಭಾಷೆಯನ್ನು ಒಪ್ಪಿಕೊಂಡ ಜನ ಕ್ರಮೇಣ ಆಳುವವರ ಭಾಷೆಯನ್ನು ಬಲವಂತವಾಗಿಯಾದರೂ ಕಲಿತರು. ಭಾಷಾಭಿಮಾನಿಗಳನ್ನು ಕೇವಲ ಒಂದು ರಾಜ್ಯ ಅಥವಾ ಒಂದು ಪ್ರದೇಶಕ್ಕೆ ಮಿತಿ ಹಾಕಿಕೊಂಡ ಸಂಕುಚಿತ ಮನೋಭಾವದವರು ಎಂದೇ ಭಾವಿಸಲಾಗುತ್ತದೆ. ಇಂತಹವರನ್ನು ಟೀಕಿಸುವುದರ ಬದಲು, ಯಾವುದೇ ಒಂದು ಭಾಷೆ ಮತ್ತು ಅದಕ್ಕೆ ಹೊಂದಿಕೊಂಡ ಸಂಸ್ಕೃತಿಯು ಮಾನವನ ಬದುಕಿನ ಮಹತ್ವದ ದಾಖಲೆಗಳು ಎಂಬ ಐತಿಹಾಸಿಕ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದು ಒಳ್ಳೆಯದು. ಪ್ರಜಾಪ್ರಭುತ್ವದಲ್ಲಿಯಾದರೂ ಪ್ರಜೆಗಳ, ಅದರಲ್ಲಿಯೂ ಸಾಮಾನ್ಯ ಜನರ ಮತ್ತು ಬಹುಸಂಖ್ಯಾತರ ಭಾಷೆಗೆ, ಜನರ ಭಾವನೆಗಳಿಗೆ ಕೊಂಚವಾದರೂ ಬೆಲೆ ದೊರೆಯದಿದ್ದರೆ ಹೇಗೆ?

ಆಳುವ ಜನ ತಮ್ಮ ಅನುಕೂಲಕ್ಕೆ ಆಡಳಿತ ನಡೆಸುವುದು ಸಹಜ. ಬ್ರಿಟಿಷರಾಗಲೀ, ಹೈದರಾಬಾದ್ ನಿಜಾಮನಾಗಲೀ, ಮರಾಠೀ ದೇಸಾಯಿಗಳಾಗಲೀ ತಮಗೆ ಮಾತ್ರ ಅರ್ಥವಾಗುವ ಭಾಷೆಯಲ್ಲಿ ಆಡಳಿತ ನಡೆಸಿದರು. ತಾವು ಹೇಳಿದ್ದು ತಮಗೆ ಅರ್ಥವಾಗಬೇಕು ಎಂಬ ಅವರ ನಿರೀಕ್ಷೆಯಂತೂ ಸರಿ; ಆದರೆ ತಮ್ಮ ಮಾತು ಯಾರಿಗೆ ತಲುಪಬೇಕೋ ಅವರಿಗೆ ತಲುಪುತ್ತಿದೆಯೇ ಎಂದು ತಿಳಿಯುವ ಪ್ರಯತ್ನವನ್ನೂ ಆಳುವ ಜನ ಮಾಡಿದಂತೆ ತೋರುವುದಿಲ್ಲ. ಈ ಮಾತು ಎಲ್ಲ ಕಾಲಕ್ಕೆ ಮತ್ತು ಆಳಿದ ಎಲ್ಲರಿಗೂ ಅನ್ವಯಿಸುವುದಿಲ್ಲ. ಬ್ರಿಟಿಷರಲ್ಲಿ ಕೆಲವು ಅಧಿಕಾರಿಗಳು ಭಾರತಕ್ಕೆ ಬಂದ ಮೇಲೆ ಇಲ್ಲಿನ ಸ್ಥಳೀಯ ಭಾಷೆಗಳನ್ನು ಕಲಿತು, ಆ ಭಾಷೆಯಲ್ಲೇ ಮಹತ್ವದ ಸಾಧನೆಗಳನ್ನು ಮಾಡಿದರು. ಆ ನಿಟ್ಟಿನಲ್ಲಿ ಯೂರೋಪಿಯನ್ ವಿದ್ವಾಂಸರ ಸಾಹಸವನ್ನು ಮೆಚ್ಚಲೇಬೇಕಾಗುತ್ತದೆ. ಆದರೆ, ಕೆಲವು

ಸ್ಥಳೀಯ ಆಡಳಿತಗಾರರು, ತಮ್ಮ ನೆರೆಹೊರೆಯ ಭಾಷೆಯನ್ನು ಕಲಿಯುವುದರ ಬದಲು ತಮ್ಮ ಭಾಷೆಗೇ ಪ್ರಾಧಾನ್ಯತೆ ಕೊಡಲು ಹೋಗಿ, ನೆರೆಹೊರೆಯ ಅಥವಾ ಪರಿಸರದ ಭಾಷೆಯನ್ನು ಮೂಲೆಗುಂಪು ಮಾಡಿದ್ದಾರೆ. ಆದ್ದರಿಂದ ಯಾವುದೇ ಭಾಷೆಯನ್ನು ಹಾಳಾಗದಂತೆ ರಕ್ಷಿಸಲು ಅದರ ಬಳಕೆಗೆ ಆದ್ಯತೆ ನೀಡುವುದು ಅನಿವಾರ್ಯ. ಕರ್ನಾಟಕದ ಉತ್ತರ ಭಾಗದಲ್ಲಿಯೂ ೧೮ನೆಯ ಶತಮಾನದ ಹೊತ್ತಿಗೆ ಮರಾಠೀ ಭಾಷೆಯ ಪ್ರಭಾವ ಅಧಿಕವಾಗಿತ್ತು. ಕ್ರಿ.ಶ. ೧೮೧೮ರಲ್ಲಿ ಸೋತ ಬಾಜೀರಾಯನಿಂದ ಬ್ರಿಟಿಷರು ಪೇಶ್ವೆಗಳ ಆಳ್ವಿಕೆಗೆ ಸೇರಿದ್ದ ಎಲ್ಲಾ ಭಾಗಗಳನ್ನೂ ವಶಪಡಿಸಿಕೊಂಡರು. ೧೮೨೬ರಲ್ಲಿ ಧಾರವಾಡ ಜಿಲ್ಲೆಯನ್ನು ಆಡಳಿತಾತ್ಮಕ ಕಾರಣಗಳಿಂದ ಮದ್ರಾಸ್ ಪ್ರಾಂತಕ್ಕೆ ಸೇರಿಸಲು ಆಗ ಬಳ್ಳಾರಿಯಲ್ಲಿ ಕಲೆಕ್ಟರ್ ಆಗಿದ್ದ ಸರ್ ಥಾಮಸ್ ಮನ್ರೋ ಶಿಫಾರಸು ಮಾಡಿ, ಮುಂಬಯಿ ಕರ್ನಾಟಕ ಪ್ರಾಂತವನ್ನು 'ದಕ್ಷಿಣ ಮರಾಠ ಪ್ರಾಂತ್ಯ' ಎಂದು ಕರೆದು ತಪ್ಪು ಮಾಡಿರುವೆನೆಂದು ಒಪ್ಪಿಕೊಂಡಿದ್ದ. ಶಾಶ್ವತ ಏಕೀಕರಣವನ್ನು ಸಾಧಿಸುವುದರಿಂದ ಒಟ್ಟು ಕನ್ನಡ ಜನರಿಗೆ ಹಿತ ಆಗುತ್ತದೆ ಎಂಬುದು ಮನ್ರೋನ ಆಸೆಯಾಗಿತ್ತು. ದಕ್ಷಿಣ ಮರಾಠ ಪ್ರಾಂತ್ಯದ ಆ ಭಾಗಗಳಲ್ಲಿ ಆಳುತ್ತಿದ್ದ ಮರಾಠೀ ದೇಸಾಯರು ಮತ್ತು ಜಹಗೀರುದಾರರು ಆಡಳಿತದಲ್ಲಿ ಇಡಿಯಾಗಿ ಮರಾಠೀ ಭಾಷೆಯನ್ನು ಜಾರಿಗೆ ತಂದಿದ್ದರು. ಆದ್ದರಿಂದ ಜನತೆಯು ಅನಿವಾರ್ಯವಾಗಿ ಮರಾಠೀ ಕಲಿಯಬೇಕಾಯಿತು. ಕನ್ನಡವು ಕೇವಲ ಮನೆಮಾತಾಗಿ ಉಳಿಯಿತು. ಆಡಳಿತಕ್ಕೆ ಪೂರ್ಣವಾಗಿ ಬಳಕೆ ಆಗುತ್ತಿದ್ದ ಮರಾಠೀ ಭಾಷೆಗೆ ಶಿಕ್ಷಣದಲ್ಲೂ ಆದ್ಯತೆ ದೊರೆಯಿತು. ಈ ವಿಪರ್ಯಾಸವನ್ನು ಸರಿಪಡಿಸಲು ಸರ್ ವಾಲ್ಟರ್ ಎಲಿಯಟ್ ಪ್ರಯತ್ನಿಸಿದ. ೧೮೨೬ರಲ್ಲಿ ಮುಂಬಯಿ ಆಧಿಪತ್ಯದ ಸರ್ಕಾರವು ಹುಬ್ಬಳ್ಳಿ ಮತ್ತು ಧಾರವಾಡಗಳಲ್ಲಿ ಒಂದೊಂದು ಮರಾಠೀ ಶಾಲೆಯನ್ನು ಆರಂಭಿಸಿತು. ಆಡಳಿತದಲ್ಲಿ ಮರಾಠಿಯ ಪ್ರಾಬಲ್ಯವೇ ಹೆಚ್ಚಾಗಿದ್ದುದರಿಂದ ಸರ್ಕಾರದೊಂದಿಗಿನ ಸಂಪರ್ಕಕ್ಕೆ ಅದೇ ಸುಲಭ ಭಾಷೆ ಎಂಬ ಅಭಿಪ್ರಾಯ ಅಧಿಕಾರಿಗಳಿಗಿದ್ದಂತೆ ತೋರುತ್ತದೆ. ಆದರೆ ಸರ್ ವಾಲ್ಟರ್ ಎಲಿಯಟ್ ಆಲೋಚಿಸಿದ ರೀತಿಯೇ ಬೇರೆ ಆಗಿತ್ತು. 'ಇಲ್ಲಿಯ ಬಹುತೇಕ ಜನರ ಭಾಷೆ ಕನ್ನಡ ಆಗಿರುವುದರಿಂದ ಕನ್ನಡವೇ ಆಡಳಿತ ಭಾಷೆಯಾಗುವುದು ಸೂಕ್ತ' ಎಂಬ ಅಭಿಪ್ರಾಯದಿಂದ ಧಾರವಾಡದಲ್ಲಿ ಕನ್ನಡ ಶಾಲೆಯೊಂದನ್ನು ಆರಂಭಿಸಲು ತಾನೇ ೧೮೩೦ರಲ್ಲಿ ಅರ್ಜಿ ಸಲ್ಲಿಸಿದ. ಆದರೆ ಸರ್ಕಾರ ಅನುಮತಿ ನೀಡಲಿಲ್ಲ. ೧೮೩೩ರವರೆಗೆ, ಮೂರು ವರ್ಷಗಳ ಕಾಲ ಎಲಿಯಟ್ ತನ್ನ ಖರ್ಚಿನಲ್ಲೇ ಶಾಲೆಯನ್ನು ನಡೆಸಿದ. ಸರ್ ವಾಲ್ಟರ್ ಎಲಿಯಟ್ ಆರಂಭಿಸಿದ ಕೆಲಸವನ್ನು, ಎಂಜಿನಿಯರಿಂಗ್ ಶಿಕ್ಷಣ ಪಡೆದರೂ ಶಿಕ್ಷಣ ಇಲಾಖೆಯಲ್ಲಿ ದುಡಿದು ಕನ್ನಡದ 'ಡೆಪ್ಯುಟಿ' ಎನಿಸಿಕೊಂಡು ಕನ್ನಡದ ರಕ್ಷಣೆ ಮಾಡಿದ ಡೆಪ್ಯುಟಿ ಚೆನ್ನಬಸಪ್ಪ ಮುಂದುವರಿಸಿದರು. ಅವರಿಗೆ ಆಗಿನ ವಿದ್ಯಾ ಇಲಾಖೆಯ ದಕ್ಷಿಣ ವಿಭಾಗದ ಇನ್‌ಸ್ಪೆಕ್ಟರ್ ಆಗಿದ್ದ ರಸೆಲ್ ಪ್ರೋತ್ಸಾಹ ನೀಡಿದರು. ಡೆಪ್ಯುಟಿ ಚೆನ್ನಬಸಪ್ಪನವರು ಬೆಳಗಾವಿಯ ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲರಾಗಿದ್ದಾಗ 'ಮಠಪತ್ರಿಕೆ' ಎಂಬ ಕನ್ನಡ ಪತ್ರಿಕೆಯನ್ನೂ ಆರಂಭಿಸಿದರು.

ಕ್ರಿ.ಶ. ೧೮೩೭ರಲ್ಲಿ ಬೆಳಗಾವಿಯ ಜಿಲ್ಲಾಧಿಕಾರಿಯಾಗಿದ್ದ ಜಾನ್. ಎ ಡನ್‌ಲಪ್ ಅವರು ಧಾರವಾಡದ ಸಂದರ್ಶಕ ನ್ಯಾಯಾಂಗ ಕಮಿಷನರ್ ಅವರಿಗೆ ೨೦-೪-೧೮೩೭ರಂದು ಬರೆದಿರುವ ಪತ್ರದಲ್ಲಿ ಬೆಳಗಾವಿಯ ಜಿಲ್ಲೆಯಾದ್ಯಂತ ಕನ್ನಡವನ್ನೇ ಆಡಳಿತ ಹಾಗೂ ವ್ಯವಹಾರದ ಭಾಷೆಯನ್ನಾಗಿ ಜಾರಿಗೆ ತರಲು ಆದೇಶ ಹೊರಡಿಸಿರುವುದನ್ನು ತಿಳಿಸಿದ್ದಾರೆ. ಅಂತೆಯೇ ಆಗಿನ ಮುಂಬಯಿ ಗರ್ವನರ್ ಆರ್. ಗ್ರಾಂಟ್ ಅವರ ೧೯-೯-೧೮೩೭ರ ಪತ್ರವು ಕನ್ನಡಕ್ಕೆ ದೊರೆಯಲೇಬೇಕಾದ ಪ್ರಾಶಸ್ತ್ಯದ ಬಗ್ಗೆ ಮನವರಿಕೆ ಮಾಡಿದೆ.

ಹೈದರಾಬಾದ್ ಸಂಸ್ಥಾನದಲ್ಲೂ ಕನ್ನಡದ ಪರಿಸ್ಥಿತಿಯು ಕೆಟ್ಟಿತ್ತು. ಅಲ್ಲಿ ಮರಾಠೀ ಭಾಷೆಯ ಜೊತೆಗೆ ಉರ್ದು ಭಾಷೆಯೂ ಪ್ರಭಾವಶಾಲಿಯಾಗಿತ್ತು. ಶಿಕ್ಷಣದಲ್ಲೂ ಉರ್ದುವೇ ಮುಖ್ಯವಾಗಿತ್ತು. ಮೈಸೂರು ಸಂಸ್ಥಾನದಲ್ಲಿ ಮಾತ್ರ ಕನ್ನಡದ ಪರಿಸ್ಥಿತಿ ತೀರಾ ಹದಗೆಟ್ಟರಲಿಲ್ಲ.

ಕನ್ನಡಿಗರೇ ಅಧಿಕವಾಗಿದ್ದ ಭಾಗಗಳಲ್ಲಿ ಕನ್ನಡ ಭಾಷೆಯ ಪರಿಸ್ಥಿತಿ ಇದಾದರೆ, ಕನ್ನಡ ಸಂಸ್ಕೃತಿಯ ಪರಿಸ್ಥಿತಿಯು ಮತ್ತಷ್ಟು ಹೀನಾಯವಾಗಿತ್ತು. ಕನ್ನಡ ಭಾಷೆ ಮತ್ತು ಆ ಮೂಲಕ ರೂಪುಗೊಳ್ಳುವ ಸಂಸ್ಕೃತಿಯನ್ನು ಉಳಿಸಲು ಕನ್ನಡಿಗರೇ ಹೆಚ್ಚು ವಾಸಿಸುವ ಪ್ರದೇಶಗಳನ್ನು ಒಂದೇ ಆಡಳಿತ ವ್ಯಾಪ್ತಿಗೆ ತರುವ ಅಗತ್ಯ ಇತ್ತು. ಅದಕ್ಕಾಗಿ ಅವಶ್ಯಕ ವಾತಾವರಣ ನಿರ್ಮಾಣವಾದದ್ದು ೧೯೦೫ರ ಸುಮಾರಿನಲ್ಲಿ; ಒಡೆದು ಆಳುವ ನೀತಿಗೆ ಪ್ರಸಿದ್ಧರಾಗಿದ್ದ ಅಂದಿನ ಬ್ರಿಟಿಷ್ ಆಳುವ ವರ್ಗವು ಈಶಾನ್ಯ ಭಾರತವನ್ನು ಒಡೆದು ಆಳಲು ನಿರ್ಧಾರ ಮಾಡಿದ ಫಲವಾಗಿ, ಬಂಗಾಳದ ವಿಭಜನೆ ಆಯಿತು. ಮೊದಲಿನಿಂದಲೂ ರಾಷ್ಟ್ರೀಯತೆಗಾಗಿ ಬ್ರಿಟಿಷರನ್ನು ವಿರೋಧಿಸುತ್ತಲೇ ಇದ್ದ ಬಂಗಾಳದ ಜನ ಬ್ರಿಟಿಷ್ ರಾಜಕೀಯ ತಂತ್ರವನ್ನು ಒಪ್ಪಲಿಲ್ಲ. ಬಂಗಾಲದ ವಿಭಜನೆಯಾದ ದಿನ ಅಂದರೆ, ೧೬-೮-೧೯೦೫ರಂದು ಬಂಗಾಲದ ಯಾವ ಮನೆಯಲ್ಲೂ ಒಲೆಗಳನ್ನು ಹತ್ತಿಸಲಿಲ್ಲ. ಆ ದಿನವನ್ನು ಸಂತಾಪ ದಿನವಾಗಿ ಆಚರಿಸಲಾಯಿತು. ಹೋರಾಟವು ನಿರಂತರವಾಗಿ ಮುಂದುವರಿದು ೧೯೧೧ರಲ್ಲಿ ಬಂಗಾಲದ ವಿಭಜನೆ ರದ್ದಾಯಿತು. ಸರ್ಕಾರವೇ

ನೇಮಿಸಿದ್ದ ಸಮಿತಿಯು ೧೯೧೮ರಲ್ಲಿ ಸಲ್ಲಿಸಿದ ಮಾಂಟ್‌ಫೋರ್ಡ್ ವರದಿಯು 'ಬ್ರಿಟಿಷರ ಆಡಳಿತದ ಆವರೆಗಿನ ಭಾರತದ ಆಡಳಿತ ವಿಭಾಗಗಳು ಅಸಮರ್ಪಕ ಮತ್ತು ಜನತೆಯ ಹಿತವನ್ನು ಅನುಸರಿಸಿಲ್ಲ' ಎಂದು ಸ್ಪಷ್ಟಪಡಿಸಿತು. ಈ ಘಟನೆಯಿಂದ ಕನ್ನಡಿಗರ ಆತ್ಮ ಪ್ರತ್ಯಯ ಕೂಡ ಜಾಗೃತವಾಯಿತು.

ಕನ್ನಡ ಶಿಕ್ಷಣದ ಬಗೆಗಿನ ಜಾಗೃತಿ ಒಂದೆಡೆಗಾದರೆ, ಕನ್ನಡ ಸಾಹಿತ್ಯ, ಸಂಸ್ಕೃತಿ, ಭಾಷೆ ಮತ್ತಿತರ ಕನ್ನಡಿಗರ ಸಮಸ್ಯೆಗಳನ್ನು ಅರ್ಥೈಸಿ, ನಿವಾರಿಸಿ, ಕನ್ನಡ ಭಾಷಿಕರನ್ನು ಒಂದಾಗಿಸುವ ಪ್ರಯತ್ನದ ಫಲವೇ 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಸ್ಥಾಪನೆ. ಕರ್ನಾಟಕ ವಿದ್ಯಾವರ್ಧಕ ಸಂಘವು. ರಾ. ಹ. ದೇಶಪಾಂಡೆ ಅವರ ಕಲ್ಪನೆಯ ಕೂಸು. ಸಂಘದ ಮೂಲ ಉದ್ದೇಶವು ೧. ಕನ್ನಡದಲ್ಲಿ ಉಪಯುಕ್ತ ಕೃತಿಗಳ ರಚನೆಗೆ ಪ್ರೋತ್ಸಾಹ, ೨. ಇತರ ಭಾಷೆಗಳ ಉಪಯುಕ್ತ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿಸಿ ಬಹುಮಾನ ನೀಡಿಕೆ, ೩. ಸಂಪನ್ಮೂಲಗಳಿಗೆ ತಕ್ಕಂತೆ ಹೊಸ ಕನ್ನಡ ಗ್ರಂಥ ಭಂಡಾರಗಳ ಸ್ಥಾಪನೆ ಅಥವಾ ಇರುವ ಗ್ರಂಥ ಭಂಡಾರಗಳಿಗೆ ನೆರವು, ೪. ಕಡಿಮೆ ಬೆಲೆಯಲ್ಲಿ ರಾಜಕೀಯ ಸ್ವರೂಪವಿರದ ಉಪಯುಕ್ತ ಸಾಂಸ್ಕೃತಿಕ ಪತ್ರಿಕೆಗಳ ಪ್ರಕಟಣೆ ಅಥವಾ ಈಗಾಗಲೇ ಇರುವ ಅಂತಹ ಪತ್ರಿಕೆಗಳಿಗೆ ಸಹಾಯ ಹಾಗೂ ೫. ಸಮರ್ಥವಾಗಿ ಸಂಪಾದಿತವಾದ ಪ್ರಾಚೀನ ಕನ್ನಡ ಕೃತಿಗಳನ್ನು ಕನ್ನಡಿಗರಿಗೆ ದೊರಕಿಸುವುದೇ ಆಗಿತ್ತು. ೨೦-೭-೧೮೯೦ರಂದು ಸಂಜೆ ಧಾರವಾಡದಲ್ಲಿ ಆರಂಭವಾದ ಸಂಘವು ತನ್ನ ಉದ್ದೇಶಗಳಿಗೆ ತಕ್ಕಂತೆ ಕೆಲಸ ಮಾಡಿತು. ಹಲವು ಗ್ರಂಥಗಳನ್ನು ಮತ್ತು 'ವಾಗ್ಭೂಷಣ' ಎಂಬ ಮಾಸಪತ್ರಿಕೆಯನ್ನೂ ಪ್ರಕಟಿಸಿತು. ಕರ್ನಾಟಕದಾದ್ಯಂತ ಹಲವಾರು ಲೇಖಕರನ್ನು ಬೆಳೆಸಿದ ಸಂಘವು ಕನ್ನಡ ಗ್ರಂಥಗಳ ಭಾಷೆಯು ಏಕರೂಪವಾಗಿರಬೇಕು ಎಂಬ ಅಭಿಪ್ರಾಯದಿಂದ ಅಖಿಲ ಕರ್ನಾಟಕ ಮಟ್ಟದ ಗ್ರಂಥಕರ್ತರ ಸಮ್ಮೇಳನವನ್ನು ಧಾರವಾಡದಲ್ಲಿ ೧೯೦೭ರ ಜೂನ್ ತಿಂಗಳ ಮೊದಲ ವಾರದಲ್ಲಿ ನಡೆಸಿತು. ಎರಡನೆಯ ಸಮ್ಮೇಳನವನ್ನು ಮೈಸೂರು ಸರ್ಕಾರದ ವಿದ್ಯಾ ಇಲಾಖೆಯವರು ಬೆಂಗಳೂರಿನಲ್ಲಿ ನಡೆಸಬೇಕಾಗಿತ್ತು. ಕಾರಣಾಂತರಗಳಿಂದ ಸಮ್ಮೇಳನ ಬೆಂಗಳೂರಿನಲ್ಲಿ ನಡೆಯಲಿಲ್ಲ. ಎರಡನೆಯ ಸಮ್ಮೇಳನವೂ ಧಾರವಾಡದಲ್ಲೇ ನಡೆಯಿತು. ಮೂರನೆಯ ಸಮ್ಮೇಳನವಾದರೂ ಬೆಂಗಳೂರಿನಲ್ಲಿ ನಡೆಯಬೇಕೆಂಬ ಕೆಲವು ಗಣ್ಯರ ಅಪೇಕ್ಷೆಯು ಕರ್ನಾಟಕ (ಕನ್ನಡ) ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಕಾರಣವಾಯಿತು. ಎರಡೂ ಸಂಘಟನೆಗಳು ಸಾಹಿತ್ಯಿಕ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ಕೊಟ್ಟರೂ ಸಹ, ಅವಕಾಶ ದೊರೆತಾಗಲೆಲ್ಲಾ ಏಕೀಕರಣದ ವಿಷಯದಲ್ಲೂ ಸಮರ್ಥವಾಗಿ ಕಾರ್ಯೋನ್ಮುಖವಾದವು. ಕರ್ನಾಟಕ ವಿದ್ಯಾವರ್ಧಕ ಸಂಘವು ೭-೧೦-೧೯೧೭ರಂದು ನಡೆದ ತನ್ನ ವ್ಯವಸ್ಥಾಪಕ ಸಮಿತಿಯ ಸಭೆಯಲ್ಲಿ ಏಕೀಕರಣಕ್ಕೆ ಸಂಬಂಧಿಸಿದಂತೆ ಸ್ವೀಕಾರ ಮಾಡಿದ ಗೊತ್ತುವಳಿಯು ಈ ಕೆಳಕಂಡಂತಿದೆ.

'ಬ್ರಿಟಿಷ್ ಅಧಿಕಾರಕ್ಕೆ ಒಳಗಾದ ಎಲ್ಲ ಕನ್ನಡ ಊರು, ತಾಲೂಕು, ಜಿಲ್ಲೆಗಳನ್ನು ಒಟ್ಟುಗೂಡಿಸಿ ಒಂದು ರಾಜಕೀಯ ವಿಭಾಗವನ್ನು ಮಾಡಿ ಅದಕ್ಕೆ ಕರ್ನಾಟಕ ಪ್ರಾಂತವೆಂದು ಕರೆಯುವ ಬಗ್ಗೆ ಸರಕಾರಕ್ಕೆ ಬಿನ್ನಹ ಮಾಡಬೇಕು. ಉದಾಹರಣಾರ್ಥ ಸೊಲ್ಲಾಪುರ ಜಿಲ್ಲೆಯಲ್ಲಿ ಕೆಲವು ಭಾಗ ಕನ್ನಡವಿರುತ್ತದೆ. ಮದ್ರಾಸ್ ಇಲಾಖೆಯಲ್ಲಿ ಬಳ್ಳಾರಿ, ದಕ್ಷಿಣ ಕನ್ನಡ ಈ ಜಿಲ್ಲೆಗಳು ಪೂರ್ಣ ಕನ್ನಡವಿದ್ದು ಕಡಪಾ, ಕರ್ನೂಲು, ಅನಂತಪುರ ಮುಂತಾದ ಜಿಲ್ಲೆಗಳಲ್ಲಿ ಎಷ್ಟೋ ಹಳ್ಳಿಗಳೂ ತಾಲ್ಲೂಕುಗಳೂ ಕನ್ನಡ ಇರುತ್ತವೆ. ಇವುಗಳನ್ನೆಲ್ಲ ಒಟ್ಟುಗೂಡಿಸಿ ಒಂದು ಕರ್ನಾಟಕ ಇಲಾಖೆ ಅಥವಾ ಪ್ರಾಂತವೆಂಬ ರಾಜಕೀಯ ವಿಭಾಗವನ್ನು ಮಾಡಿದರೆ ಕನ್ನಡಿಗರ ಐಕ್ಯಕ್ಕೂ ಹಿತಕ್ಕೂ ಬೆಳವಣಿಗೆಗೂ ಅನುಕೂಲವಾಗುವುದು.'

ಮೈಸೂರು ಸಂಸ್ಥಾನ ಮಾತ್ರವಲ್ಲದೆ ಮುಂಬಯಿ ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮದ್ರಾಸ್ ಆಧಿಪತ್ಯ, ಕೊಡಗು ಇತ್ಯಾದಿ ಕನ್ನಡ ಪ್ರಾಂತಗಳ ಪ್ರಾತಿನಿಧ್ಯವೂ ಇದ್ದ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಸಾಹಿತ್ಯ ಸಮ್ಮೇಳನಗಳಲ್ಲಿ ಏಕೀಕರಣದ ಪರವಾಗಿ ನಿರ್ಣಯ ಸ್ವೀಕರಿಸಿರುವುದಲ್ಲದೆ, ತನ್ನ 'ಕನ್ನಡ ನುಡಿ' ಮತ್ತು 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'ಗಳಲ್ಲಿ ಏಕೀಕರಣದ ಪರವಾದ ಲೇಖನಗಳನ್ನು ಪ್ರಕಟಿಸಿ ಏಕೀಕರಣಕ್ಕೆ ಶ್ರಮಿಸಿತು.

ಕರ್ನಾಟಕ ಏಕೀಕರಣಕ್ಕೆ ನಿಶ್ಚಿತ ಎನ್ನುವಂತಹ ಚಾಲನೆ ದೊರೆತದ್ದು, ಆ ವಿಷಯದಲ್ಲಿ ರಾಷ್ಟ್ರೀಯ ನಾಯಕರು ಆಸಕ್ತಿ ವಹಿಸಿದ ನಂತರ ಎಂಬ ಮಾತನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ಯಾಜಮಾನ್ಯ ವಹಿಸಿದವರು ಆಲೂರು ವೆಂಕಟರಾಯರು. ೧೯೦೫ರಿಂದಲೂ ಕರ್ನಾಟಕ ಏಕೀಕರಣಕ್ಕೆ ದುಡಿದು, ಏಕೀಕರಣ ಆದದ್ದನ್ನು ನೋಡಿ ಸಂತೋಷಪಟ್ಟ ಹಿರಿಯರಾದ ಆಲೂರು ವೆಂಕಟರಾಯರನ್ನು 'ಕನ್ನಡ ಕುಲ ಪುರೋಹಿತ' ಎಂದೇ ಕರೆಯಲಾಗಿದೆ. ಆಲೂರರ ಕರ್ನಾಟಕ ಏಕೀಕರಣ ಪರ ಹೋರಾಟಕ್ಕೆ 'ಹೋಂರೂಲ್' ಸಂದರ್ಭದಲ್ಲಿ ತಿಲಕರು ಆಡಿದ್ದ 'ಕನ್ನಡದಲ್ಲಿ ಮಾತನಾಡಿ ಕನ್ನಡ ಭಾಷೆಯ ಹಕ್ಕನ್ನು ಸ್ಥಾಪಿಸು' ಎಂಬ ಮಾತುಗಳೂ ಪ್ರೇರಣೆ ಆಗಿದ್ದವು. ಕನ್ನಡ ಮತ್ತು ಕರ್ನಾಟಕದ ಬಗ್ಗೆ ಆಲೂರರಿಗೆ ಇದ್ದ ಗೌರವ, ಅಭಿಮಾನ ಮತ್ತು ಕಳಕಳಿಗಳನ್ನು ಅವರ 'ಕರ್ನಾಟಕ ಗತ ವೈಭವ' ಕೃತಿಯಲ್ಲಿ ಗುರುತಿಸಬಹುದು. ಆಲೂರರ ಜೊತೆಗೆ ವೆಂಕಟ ರಂಗೋಕಟ್ಟಿ, ಮುದವೀಡು ಕೃಷ್ಣರಾಯರು, ಬಿಂದೂರಾವ್

ಮುತಾಲಿಕ ದೇಸಾಯಿ, ಕಡಪಾ ರಾಘವೇಂದ್ರರಾವ್, ಗದಿಗೆಯ್ಯ ಹೊನ್ನಾಪುರಮಠ, ಪಾಟೀಲ ಸಂಗಪ್ಪ ಮುಂತಾದ ಹಿರಿಯ ರಾಷ್ಟ್ರೀಯ ನಾಯಕರಿದ್ದರು. ಗದಿಗೆಯ್ಯ ಹೊನ್ನಾಪುರಮಠ ಅವರ ಮನೆಯ ಅಟ್ಟದ ಮೇಲೆ ೧೯೧೬ರಲ್ಲಿ ಆಲೂರರು, ಕಡಪಾ ರಾಘವೇಂದ್ರರಾಯರು, ನರಗುಂದಕರರು ಒಟ್ಟಾಗಿ ಸ್ಥಾಪಿಸಿದ 'ಕರ್ನಾಟಕ ಸಭೆ'ಯು ಕರ್ನಾಟಕ ಏಕೀಕರಣವನ್ನೇ ಪ್ರಧಾನ ವಿಷಯವನ್ನಾಗಿ ಸ್ವೀಕರಿಸಿ ಕಾರ್ಯತತ್ಪರವಾಯಿತು.

೧೯೧೮ರಲ್ಲಿ ಅಖಿಲ ಕರ್ನಾಟಕ ರಾಜಕೀಯ ಪರಿಷತ್ತು ಸ್ಥಾಪನೆ ಆಯಿತು. ಏಕೀಕರಣ ವಿಚಾರಗಳಿಗೆ ರಾಜಕೀಯ ಬೆಂಬಲವೂ ದೊರೆಯಿತು. ಪರಿಷತ್ತಿನ ಮೊದಲ ಅಧಿವೇಶನವು ೧೯೨೦ರಲ್ಲಿ ಧಾರವಾಡದ ಉಳವಿ ಚೆನ್ನಬಸಪ್ಪನ ಗುಡ್ಡದ ಮೇಲೆ, ಮೈಸೂರು ಸಂಸ್ಥಾನದ ನಿವೃತ್ತ ದಿವಾನ್ ವಿ. ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ನಡೆಯಿತು. ಆ ಅಧಿವೇಶನದಲ್ಲಿ ಕಾಂಗ್ರೆಸ್ ಸಂಸ್ಥೆಯು ಕನ್ನಡ ಮಾತನಾಡುವ ಜನರ ಪ್ರದೇಶವನ್ನೆಲ್ಲ ಸೇರಿಸಿ ಒಂದು ಸ್ವತಂತ್ರ ಪ್ರಾಂತವನ್ನಾಗಿಸಬೇಕೆಂಬ ನಿರ್ಣಯವನ್ನು ಸ್ವೀಕರಿಸಿತು. ಅದೇ ವರ್ಷ ನಾಗಪುರದಲ್ಲಿ ಸೇರಿದ್ದ ಕಾಂಗ್ರೆಸ್ ಮಹಾಧಿವೇಶನದಲ್ಲಿ ಪ್ರಾಂತಿಕ ಕಾಂಗ್ರೆಸ್ ಸಮಿತಿಗಳ ರಚನೆಗೆ ಅವಕಾಶ ದೊರೆಯಿತು. ಕಡಪಾ ರಾಘವೇಂದ್ರರಾಯರು ಮತ್ತು ಶಾಂತಕವಿಗಳೆಂದು ಹೆಸರಾಗಿದ್ದ ಸಕ್ಕರಿ ಬಾಳಾಚಾರ್ಯರ ಪ್ರಯತ್ನದಿಂದಾಗಿ ಆ ಅಧಿವೇಶನಕ್ಕೆ ಕರ್ನಾಟಕದಿಂದ ಸುಮಾರು ೮೦೦ ಪ್ರತಿನಿಧಿಗಳು ಹೋಗಿದ್ದರು. 'ಪ್ರಾಂತಗಳನ್ನು ಗುರುತಿಸಲು ಭಾಷೆಯೇ ಸರಿಯಾದ ಆಧಾರ' ಎಂಬ ನಂಬಿಕೆಯಿದ್ದ ಮಹಾತ್ಮ ಗಾಂಧೀಜಿ ಅವರಿಗೆ ಭಾಷಾವಾರು ಪ್ರಾಂತ ರಚನೆಯ ಬಗ್ಗೆ ಒಲವಿತ್ತು.

ಕರ್ನಾಟಕ ಪ್ರಾಂತ್ಯ ಕಾಂಗ್ರೆಸ್ ಸಮಿತಿಯ ರಚನೆಯಾದ ಮೇಲೆ ಸಮಿತಿಯ ವ್ಯಾಪ್ತಿಗೆ ಕನ್ನಡ ಮಾತನಾಡುವ ಜನರಿರುವ ಪ್ರದೇಶಗಳೆಲ್ಲ ಸೇರ್ಪಡೆ ಆಗಬೇಕೆಂದೂ ನಿರ್ಣಯವಾಗಿತ್ತು. ಈ ಹಿನ್ನೆಲೆಯಲ್ಲೇ ಕನ್ನಡಿಗರು ಪರಸ್ಪರ ಒಂದಾಗಿ ಸಭೆ, ಸಮಾರಂಭಗಳನ್ನು ಹಮ್ಮಿಕೊಳ್ಳುವ, ಸಮ್ಮೇಳನಗಳನ್ನು ನಡೆಸುವ ಸೌಹಾರ್ದದ ವಾತಾವರಣವನ್ನು ಸೃಷ್ಟಿಸಿಕೊಂಡರು. ಆದರೆ ಕೆ.ಪಿ.ಸಿ.ಸಿ. ರಚನೆಯಾದ ಸಂದರ್ಭದಲ್ಲೇ ಬಳ್ಳಾರಿ ಜಿಲ್ಲೆಯು ಎಲ್ಲಿಗೆ ಸೇರಬೇಕು ಎಂಬ ಬಗ್ಗೆ ಕರ್ನಾಟಕ ಮತ್ತು ಆಂಧ್ರದ ನಾಯಕರಲ್ಲಿ ಭಿನ್ನಾಭಿಪ್ರಾಯ ಉಂಟಾಯಿತು. ಅದನ್ನು ಬಗೆಹರಿಸಲು ಕಾಂಗ್ರೆಸ್ ಸಂಸ್ಥೆಯು ಕೇಳಕರ್ ಸಮಿತಿಯನ್ನು ನೇಮಿಸಿತು. ಕೇಳಕರ್ ಸಮಿತಿಯ ವರದಿಯ ಪ್ರಕಾರ ಬಳ್ಳಾರಿ ಜಿಲ್ಲೆಯ ಆದವಾನಿ, ಆಲೂರು ಮತ್ತು ರಾಯದುರ್ಗ ತಾಲ್ಲೂಕುಗಳು ಆಂಧ್ರ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ವ್ಯಾಪ್ತಿಗೆ ಸೇರಿತು. ಕರ್ನಾಟಕ ಪ್ರಾಂತ ಕಾಂಗ್ರೆಸ್ ಸಮಿತಿಯ ರಚನೆಯ ನಂತರ ಕರ್ನಾಟಕ ಏಕೀಕರಣವೇ ಆಗಿಹೋಯಿತು ಎಂಬ ಭಾವನೆಯಿಂದ ಹಲವು ಹಿರಿಯ ನಾಯಕರು ನಿರ್ಲಿಪ್ತರಾದರು. ಆದರೆ ಕೇವಲ ನಾಲ್ಕು ವರ್ಷಗಳ ನಂತರ ೧೯೨೪ರಲ್ಲಿ ಬೆಳಗಾವಿಯಲ್ಲಿ ಗಾಂಧೀಜಿ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ಮಹಾಧಿವೇಶನದಲ್ಲಿ ಕರ್ನಾಟಕ ಏಕೀಕರಣ ವಿಚಾರಕ್ಕೆ ಮತ್ತೆ ಅತ್ಯಪೂರ್ವ ಚಾಲನೆ ದೊರೆಯಿತು. ಆ ಸಂದರ್ಭಕ್ಕೆಂದೇ 'ಕರ್ನಾಟಕದ ಕೈಪಿಡಿ' ಎಂಬ ಗ್ರಂಥವನ್ನು ಕಾಂಗ್ರೆಸ್ ಸಮಿತಿಯೇ ಪ್ರಕಟಿಸಿತು. ಜೊತೆಗೆ ಬೆಳಗಾವಿಯ ಆರ್. ಬಿ. ಕುಲಕರ್ಣಿ ಕಾವ್ಯರತ್ನ ಎನ್ನುವವರು ಬರೆದ 'ಕನ್ನಡಿಗನ ಸರ್ವಸ್ವ ಅಥವಾ ಸಂಯುಕ್ತ ಕರ್ನಾಟಕ ಪ್ರಾಂತ' ಎಂಬ ಕೃತಿಯು ಬಿಡುಗಡೆ ಆಯಿತು. ಅದೇ ಸಂದರ್ಭದಲ್ಲಿ ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂಬ ಕವನವು ಹಾಡಲ್ಪಟ್ಟಿತು. ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ನಿಶ್ಚಿತ ರೂಪು-ರೇಷೆಗಳು ರೂಪುಗೊಂಡದ್ದೇ ಬೆಳಗಾವಿಯಲ್ಲಿ, ಕಾಂಗ್ರೆಸ್ ಮಹಾಧಿವೇಶನ ನಡೆದ ಸಂದರ್ಭದಲ್ಲಿ ಎನ್ನುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಏಕೆಂದರೆ ಅದೇ ಸಂದರ್ಭದಲ್ಲಿ 'ಕರ್ನಾಟಕ ಏಕೀಕರಣ ಸಂಘ'ದ ಸ್ಥಾಪನೆ ಆಯಿತು ಮತ್ತು ಅದರ ಮೊಟ್ಟ ಮೊದಲ ಪರಿಷತ್ತೂ ಸಹ ನಡೆಯಿತು. ಅದರ ಅಧ್ಯಕ್ಷತೆ ವಹಿಸಿದ್ದವರು ರಾವ್‌ಬಹದ್ದೂರ್ ಸಿದ್ದಪ್ಪ ಕಂಬಳಿ; ಆಗ ಅವರು ಮುಂಬಯಿ ವಿಧಾನ ಪರಿಷತ್ತಿನ ಉಪಸಭಾಪತಿಯಾಗಿದ್ದರು. ಪರಿಷತ್ತಿನ ಸ್ವಾಗತಾಧ್ಯಕ್ಷರಾಗಿದ್ದವರು ದ.ವೆ. ಬೆಳವಿ. ಕರ್ನಾಟಕ ಏಕೀಕರಣ ಸಂಘದ ಹತ್ತನೆಯ ಪರಿಷತ್ತು ನಡೆದದ್ದು ಮುಂಬಯಿಯಲ್ಲಿ. ಆಗ ಉದ್ಘಾಟಕರು ವಲ್ಲಭಭಾಯಿ ಪಟೇಲ್ ಮತ್ತು ಅಧ್ಯಕ್ಷತೆ ವಹಿಸಿದ್ದವರು ಆಗ ಮುಂಬಯಿ ಆಧಿಪತ್ಯದ ಮುಖ್ಯಮಂತ್ರಿಗಳಾಗಿದ್ದ ಬಿ. ಜೆ. ಖೇರ್. ಏಕೀಕರಣಕ್ಕೆಂದೇ ರೂಪುಗೊಂಡ 'ಕರ್ನಾಟಕ ಏಕೀಕರಣ ಸಂಘ'ವು ಪ್ರತಿ ಪರಿಷತ್ತಿನಲ್ಲೂ ಏಕೀಕರಣ ವಿಚಾರದ ಬಗ್ಗೆ ವಿಶೇಷ ಪ್ರಸ್ತಾವನೆ ಮಾಡಿದೆ.

ಬಂಗಾಲದ ವಿಭಜನೆ ಮತ್ತು ಆನಂತರದ ಬೆಳವಣಿಗೆಗಳು ಬ್ರಿಟಿಷ್ ಸರ್ಕಾರದ ಒಡೆದು ಆಳುವ ನೀತಿಗೆ ಸಹಕಾರಿ ಆಗಿರಲಿಲ್ಲ. ೧೯೧೨ರಲ್ಲಿ ಆಗಿನ ಭಾರತದ ಗವರ್ನರ್ ಜನರಲ್ ಮತ್ತು ಭಾರತದ ಕಾರ್ಯದರ್ಶಿಗಳು ಭಾರತವನ್ನು ಭಾಷಾವಾರು ಸ್ವಾಯತ್ತ ಪ್ರಾಂತಗಳನ್ನಾಗಿ ವಿಭಾಗಿಸಲು ಇಚ್ಛಿಸಿದರು. ೧೯೧೮ರಲ್ಲಿ ಸಂವಿಧಾನ ಪರಿಷ್ಕರಣೆಯ ಸಲುವಾಗಿ ಮಾಂಟೆಗೋ - ಚೆಲ್ಮ್ಸ್‌ಫರ್ಡ್ ಸಮಿತಿ ನೇಮಕಗೊಂಡಿತು. ಸಮಿತಿಯು ೧೯೧೯ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಭಾಷಾವಾರು ಪ್ರಾಂತ ರಚನೆಯನ್ನು ಕೋರಿ ಕರ್ನಾಟಕದಲ್ಲೂ ಸಮಿತಿಗೆ ಹಲವು ಮನವಿಗಳು ಸಲ್ಲಿಸಲ್ಪಟ್ಟವು. ಜನತೆಯ ಅಭಿಪ್ರಾಯವನ್ನು ಪುರಸ್ಕರಿಸುವ ಹಾಗೂ ಆಡಳಿತದ

ಅನುಕೂಲದ ಕಾರಣದಿಂದಲೂ ಸಹ ಭಾಷಾವಾರು ಪ್ರಾಂತ ರಚನೆ ಒಳಿತು ಎಂಬ ಅಭಿಪ್ರಾಯ ಸಮಿತಿಯದಾಗಿತ್ತು. ಆ ವರದಿಯ ಹಿನ್ನೆಲೆಯಲ್ಲಿಯೇ ಪ್ರಾಂತೀಯ ಕಾಂಗ್ರೆಸ್ ಸಮಿತಿಗಳ ರಚನೆ ಆಯಿತು.

ನಂತರದ ವರ್ಷಗಳಲ್ಲಿ, ಸುಮಾರು ಮೂವತ್ತನಾಲ್ಕು ರಾಜಕೀಯ ಸಂಸ್ಥೆಗಳ ಸರ್ವಪಕ್ಷ ಸಮ್ಮೇಳನವು ನಿರ್ಣಯಿಸಿದಂತೆ, ಭಾಷಾವಾರು ಪ್ರಾಂತ ರಚನೆಗೆ ಸಂಬಂಧಿಸಿದಂತೆ ವರದಿ ನೀಡಲು ಮೋತಿಲಾಲ್ ನೆಹರೂ ಅವರ ನೇತೃತ್ವದಲ್ಲಿ ಒಂದು ಸಮಿತಿಯ ರಚನೆ ಆಯಿತು. ೧೯೨೮ ಮೇ ೧೯ರಂದು ನೇಮಕಗೊಂಡ ಸಮಿತಿಯು ಸುಮಾರು ೨೫ ಬಾರಿ ಸಭೆ ಸೇರಿ ವರದಿಯನ್ನು ಸಿದ್ಧಪಡಿಸಿತು. ಭಾಷಾವಾರು ಪ್ರಾಂತ ರಚನೆಯನ್ನು ಅವಶ್ಯಕ ಎಂದು ಪರಿಗಣಿಸಿದ ಸಮಿತಿಯು ಕರ್ನಾಟಕ ಮತ್ತು ಆಂಧ್ರ ಪ್ರಾಂತಗಳ ರಚನೆಗೆ ಸೂಕ್ತ ಏರ್ಪಾಡನ್ನು ಮಾಡಲು ಶಿಫಾರ್ಸು ಮಾಡಿತು. ಆದರೆ ಆಳುತ್ತಿದ್ದ ಸರ್ಕಾರ ಆ ಬಗ್ಗೆ ಯಾವುದೇ ಆಸಕ್ತಿ ವಹಿಸಲಿಲ್ಲ.

ಮದರಾಸ್ ಮತ್ತು ಮುಂಬಯಿಯ ವಿಧಾನ ಪರಿಷತ್ತುಗಳಲ್ಲಿ ಕರ್ನಾಟಕ ಪ್ರದೇಶಗಳನ್ನು ಪ್ರತಿನಿಧಿಸುತ್ತಿದ್ದ ಅನೇಕ ಗಣ್ಯರು ಕರ್ನಾಟಕ ಪ್ರಾಂತ ರಚನೆಯ ಸಂಬಂಧವಾಗಿ ಪ್ರಶ್ನಿಸುತ್ತಲೇ ಇದ್ದರು. ನೆಹರೂ ವರದಿ ಸಲ್ಲಿಕೆ ಆದ ನಂತರವೂ ಕರ್ನಾಟಕ ಏಕೀಕರಣದ ಪ್ರಶ್ನೆಗೆ ವಿಧಾನ ಪರಿಷತ್ತುಗಳು ಸ್ಪಂದಿಸಲಿಲ್ಲ. ವಿಧಾನ ಪರಿಷತ್ತುಗಳ ಬೆಂಬಲವಿಲ್ಲದೆ ಕೇಂದ್ರ ಶಾಸನ ಸಭೆ ಭಾಷಾವಾರು ಪ್ರಾಂತ ರಚನೆಯನ್ನು ಒಪ್ಪುವುದು ಸಾಧ್ಯವಿರಲಿಲ್ಲ. ಕರ್ನಾಟಕ ಪ್ರಾಂತ ರಚನೆಗೆ ಕನ್ನಡಿಗರ ಬೆಂಬಲವಿಲ್ಲ ಎಂದು ಮುಂಬಯಿ ಸರ್ಕಾರ ವಾದ ಮಾಡಿತು. ಆದರೆ ಜಾತಿ, ಮತ ಭೇದವಿಲ್ಲದೆ ಕರ್ನಾಟಕ ಏಕೀಕರಣ ಕುರಿತಂತೆ ಸಂಘ-ಸಂಸ್ಥೆಗಳು, ಪತ್ರಿಕೆಗಳು ವಾಚನಾಲಯಗಳು, ವಿವಿಧ ಪರಿಷತ್ತುಗಳು ಕಾರ್ಯನಿರತವಾದವು. ಏಕೀಕರಣದ ಪರವಾಗಿ ೩೬೦೦೦ ವಯಸ್ಕರ ಸಹಿಯನ್ನೊಳಗೊಂಡ ಮನವಿಯನ್ನು ಸಲ್ಲಿಸುವಲ್ಲಿ ಎನ್. ಎಸ್. ಹರ್ಡೀಕರ್ ಶ್ರಮಿಸಿದರು.

ಮೈಸೂರು ಸಂಸ್ಥಾನದ ಜನತೆಗೆ ಕರ್ನಾಟಕ ಏಕೀಕರಣದ ಕಲ್ಪನೆ ಬರಲು ಸಾಧ್ಯವಿಲ್ಲ ಎಂಬ ಅಭಿಪ್ರಾಯ ಉತ್ತರ ಕರ್ನಾಟಕದ ಹಲವು ನಾಯಕರಿಗಿತ್ತು. ಆದರೆ ಸರ್. ಎಂ. ವಿಶ್ವೇಶ್ವರಯ್ಯನವರ ದೂರದರ್ಶಿತ್ವದ ಫಲವಾಗಿ ರೂಪುಗೊಂಡ ಕನ್ನಡ ಸಾಹಿತ್ಯ ಪರಿಷತ್ತು ಭಾವನಾತ್ಮಕವಾಗಿ ಕನ್ನಡಿಗರನ್ನು ಒಂದುಗೂಡಿಸುವ ಕೆಲಸ ಮಾಡುತ್ತಿತ್ತು. ಉತ್ತರ ಕರ್ನಾಟಕದಲ್ಲಿದ್ದ ಹಲವು ದೇಶೀ ಸಂಸ್ಥಾನಗಳು ಏಕೀಕರಣಕ್ಕೆ ಒಪ್ಪುವ ಬಗ್ಗೆ ಅನೇಕರಿಗೆ ಅನುಮಾನಗಳು ಇದ್ದವು. ಅಂತಹ ಬಹುತೇಕ ಸಂಸ್ಥಾನಗಳ ಒಡೆತನ ಇದ್ದದ್ದು ಮರಾಠೀ ಜನರ ಕೈಗಳಲ್ಲಿ; ಅನುಮಾನಗಳಿಗೆ ಆ ವಿಚಾರವೂ ಕಾರಣವಾಗಿತ್ತು.

೧೯೨೮ರ ಆಗಸ್ಟ್ ೨೮ರಿಂದ ೩೧ರವರೆಗೆ ಲಖನೌನಲ್ಲಿ ನಡೆದ ಸರ್ವಪಕ್ಷ ಸಮಿತಿಯು ಮೋತಿಲಾಲ್ ನೆಹರೂ ಅವರ ವರದಿಯನ್ನು ಅಂಗೀಕರಿಸಿತು. ೨೮-೧೨-೧೯೨೮ರಂದು ಕಲ್ಕತ್ತಾದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಮಹಾಧಿವೇಶನವೂ ನೆಹರೂ ಸಮಿತಿಯ ವರದಿಯನ್ನು ಅಂಗೀಕರಿಸಿತು.

ಭಾರತದ ಸಂವಿಧಾನದ ಪುನರ್ಘಟನೆಗೆ ಸಂಬಂಧಿಸಿದಂತೆ ನೇಮಕಗೊಂಡ ಸೈಮನ್ ಆಯೋಗವನ್ನು ಕಾಂಗ್ರೆಸ್ ಬಹಿಷ್ಕರಿಸಿತು. ಸೈಮನ್ ಆಯೋಗದ ವರದಿಯನ್ನನುಸರಿಸಿ ಸಿಂಧ್ ಮತ್ತು ಒರಿಸ್ಸಾ ಪ್ರಾಂತಗಳ ರಚನೆ ಆಯಿತು. ಕಾಂಗ್ರೆಸ್ ಸಂಸ್ಥೆಯು ಸೈಮನ್ ಆಯೋಗವನ್ನು ಬಹಿಷ್ಕರಿಸಿತಾದರೂ, ದುಂಡು ಮೇಜಿನ ಪರಿಷತ್ತನ್ನು ಬಹಿಷ್ಕರಿಸಲಿಲ್ಲ. ಆ ಪರಿಷತ್ತಿನಲ್ಲೂ ಭಾಷಾವಾರು ಪ್ರಾಂತ ರಚನೆಯ ವಿಷಯ ಪ್ರಸ್ತಾಪ ಆಗಿತ್ತು.

೧೯೩೭ರಲ್ಲಿ ಭಾರತಕ್ಕೆ ಸ್ವಾಯತ್ತತೆ ಲಭಿಸಿತಾದರೂ, ಸಿಂಧ್ ಮತ್ತು ಒರಿಸ್ಸಾ ಪ್ರಾಂತಗಳ ನಿರ್ಮಾಣ ಆದರೂ ಕರ್ನಾಟಕದ ನಿರ್ಮಾಣ ಆಗಲಿಲ್ಲ. ೧೯೨೪ರಿಂದ ಆರಂಭವಾಗಿ ೧೯೪೬ರವರೆಗೆ ನಡೆದ ಹತ್ತು ಕರ್ನಾಟಕ ಏಕೀಕರಣ ಪರಿಷತ್ತುಗಳ ಮುಖ್ಯ ಉದ್ದೇಶವೂ ಕರ್ನಾಟಕ ಏಕೀಕರಣವೇ ಆಗಿತ್ತು. ಬೇರೆ ಬೇರೆ ಸ್ಥಳಗಳಲ್ಲಿ ನಡೆದ ಈ ಪರಿಷತ್ತುಗಳಲ್ಲಿ ಸ್ವಾಗತಾಧ್ಯಕ್ಷರಾಗಲೀ, ಉದ್ಘಾಟಕರಾಗಲೀ ಅಥವಾ ಅಧ್ಯಕ್ಷರಾಗಲೀ ಕರ್ನಾಟಕ ಏಕೀಕರಣವನ್ನು ಹೊರತುಪಡಿಸಿ ಬೇರೇನನ್ನೂ ಪ್ರಸ್ತಾಪಿಸಿದಂತೆ ತೋರುವುದಿಲ್ಲ. ಹತ್ತನೆಯ ಪರಿಷತ್ತಿನ ಉದ್ಘಾಟಕರಾಗಿದ್ದ ಸರ್ದಾರ್ ವಲ್ಲಭ ಭಾಯಿ ಪಟೇಲರು ಭಾಷಾವಾರು ಪ್ರಾಂತ ರಚನೆಯ ಅಗತ್ಯತೆಯನ್ನು ತಿಳಿಸಿ, ಸಧ್ಯದಲ್ಲೇ ಕರ್ನಾಟಕ ಪ್ರಾಂತ ರಚನೆ ಆಗುವುದೆಂದು ತಿಳಿಸಿದ್ದರು. ೩೧-೮-೧೯೪೬ರಂದು ದಾವಣಗೆರೆಯಲ್ಲಿ ಕರ್ನಾಟಕಸ್ಥರ ಮಹಾಸಭೆ ನಡೆಯಿತು. ಸ್ವಾಗತಾಧ್ಯಕ್ಷರಾಗಿದ್ದವರು ಉರವಕೊಂಡ ಜಗದ್ಗುರುಗಳು ಮತ್ತು ಮಹಾಸಭೆಯನ್ನು ಉದ್ಘಾಟಿಸಿದವರು ಕೆ. ಆರ್. ಕಾರಂತರು. ಸಭೆಯ ಅಧ್ಯಕ್ಷತೆಯನ್ನು ಎಂ. ಪಿ. ಪಾಟೀಲರು ವಹಿಸಿದ್ದರು. ಬಹುತೇಕ ಕರ್ನಾಟಕದ ಎಲ್ಲಾ ಭಾಗಗಳಿಂದ, ಎಲ್ಲಾ ರಾಜಕೀಯ ಪಕ್ಷಗಳ ಪ್ರತಿನಿಧಿಗಳು ಮಹಾಸಭೆಗೆ ಬಂದಿದ್ದರು. ಭಾರತಕ್ಕೆ ಸ್ವಾತಂತ್ರ್ಯ ಬರುವ ದಿನಗಳು

ಹತ್ತಿರದಲ್ಲಿವೆ ಎಂದು ಅಲ್ಲಿದ್ದ ಬಹುತೇಕ ಎಲ್ಲರಿಗೂ ತಿಳಿದಿತ್ತು. ರಾಜಕೀಯ ಘಟನೆ ಸಿದ್ಧವಾಗುವುದಕ್ಕೆ ಮೊದಲೇ ಭಾಷಾವಾರು ಪ್ರಾಂತಗಳ ರಚನೆ ಆಗುವುದು ಒಳಿತು ಹಾಗೂ ಸೂಕ್ತ ಎಂಬುದು ಅನೇಕರ ಅಭಿಪ್ರಾಯವಾಗಿತ್ತು. ಆ ಸಭೆಯಲ್ಲಿ 'ಸಾಧ್ಯವಾದರೆ ಮೈಸೂರನ್ನು ಒಳಗೊಂಡು, ಅಗತ್ಯವಾದರೆ ಅದನ್ನು ಬಿಟ್ಟು ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕು' ಎಂಬ ಗೊತ್ತುವಳಿಯನ್ನು ಬಳ್ಳಾರಿಯ ಕೋ. ಚೆನ್ನಬಸಪ್ಪ ಮಂಡಿಸಿದರು. ಅದನ್ನು ಬೆಂಗಳೂರಿನ ಬಿ. ಬಸವಲಿಂಗಪ್ಪ ಅನುಮೋದಿಸಿದರು. ಗೊತ್ತುವಳಿಗೆ ಕೆಂಗಲ್ ಹನುಮಂತಯ್ಯನವರು ಒಂದು ತಿದ್ದುಪಡಿ ತಂದರು. ಅದು ಪ್ರಮುಖವಾದ ಹಾಗೂ ಬಹು ಮುಖ್ಯವಾದ ತಿದ್ದುಪಡಿ ಆಗಿತ್ತು. ಆ ತಿದ್ದುಪಡಿಯು 'ಮೈಸೂರನ್ನು ಒಳಗೊಂಡು ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕು' ಎಂದಿತ್ತು. ತಿದ್ದುಪಡಿಯ ವಿಷಯದಲ್ಲಿ ಶ್ರೀರಂಗರ ಪಾತ್ರ ಮುಖ್ಯವಾಗಿತ್ತು. ಬ್ರಿಟಿಷ್ ಕರ್ನಾಟಕ, ಸಂಸ್ಥಾನ ಕರ್ನಾಟಕ ಎಂಬ ಭೇದವನ್ನೆಣಿಸದೆ, ಕರ್ನಾಟಕ ಏಕೀಕರಣ ಮತ್ತು ಭಾಷಾನುಗುಣ ಪ್ರಾಂತ ರಚನೆಗೆ ಘಟನಾ ಸಮಿತಿಯಲ್ಲಿ ಆದ್ಯತೆ - ಈ ಎರಡು ವಿಚಾರಗಳಿಗೆ ನಿರ್ಣಯ ಸ್ವೀಕರಿಸಿದ ಮಹಾ ಸಭೆಯು ಮೇಲಿನ ಉದ್ದೇಶ ಸಾಧನೆಗೆ ಮೂವರು ಸದಸ್ಯರ ಸಮಿತಿಯನ್ನು ನೇಮಿಸಿತು. ಆ ಸಮಿತಿಯಲ್ಲಿದ್ದವರೆಂದರೆ ಎಂ. ಪಿ. ಪಾಟೀಲ, ಎಸ್. ನಿಜಲಿಂಗಪ್ಪ ಮತ್ತು ಕೆ. ಬಿ. ಜಿನರಾಜ ಹೆಗಡೆ.

ಕರ್ನಾಟಕ ಪ್ರದೇಶ ಕಾಂಗ್ರೆಸ್ ಆರಂಭವಾದಾಗಿನಿಂದಲೂ ಅದಕ್ಕೆ ೧. ಭಾರತಕ್ಕೆ ಸ್ವಾತಂತ್ರ್ಯ ಮತ್ತು ೨. ಕರ್ನಾಟಕ ಏಕೀಕರಣ - ಎರಡೂ ಗುರಿಗಳಿದ್ದವು. ಈ ನಿಟ್ಟಿನಲ್ಲಿ ಬ್ರಿಟಿಷ್ ಕರ್ನಾಟಕ ಭಾಗಗಳ ಜನತೆಯ ಪ್ರಯತ್ನಗಳು ಪ್ರಮುಖವಾಗಿದ್ದವು. ಮೊದಲಿಗೆ, ಮೈಸೂರು ಸಂಸ್ಥಾನದಲ್ಲಿ ಏಕೀಕರಣಕ್ಕೆ ತೀವ್ರ ವಿರೋಧ ಇಲ್ಲದಿದ್ದರೂ, ಕೆಲವರಿಗೆ ಆಸಕ್ತಿಯಂತೂ ಇರಲಿಲ್ಲ. ಭಾರತಕ್ಕೆ ಸ್ವಾತಂತ್ರ್ಯ ಬರುವ ದಿನಗಳು ಹತ್ತಿರವಾದಂತೆಲ್ಲಾ ಎಲ್ಲರಿಗೂ ಕರ್ನಾಟಕ ಏಕೀಕರಣ ಆಗಲೇಬೇಕೆಂಬ ಆಸಕ್ತಿ ಹೆಚ್ಚಿತು. ಸ್ವತಂತ್ರ ಭಾರತದ ಸಂವಿಧಾನವನ್ನು ಸಿದ್ಧಪಡಿಸಲು ರಚಿತವಾಗಿದ್ದ ಘಟನಾ ಸಮಿತಿಯು, ಭಾಷಾವಾರು ಪ್ರಾಂತ ರಚನೆಯ ವಿಚಾರವನ್ನೂ ಚರ್ಚಿಸಿ ನಿರ್ಣಯ ತೆಗೆದುಕೊಳ್ಳಬೇಕಾಗಿತ್ತು. ೧೯೪೬ರ ಡಿಸೆಂಬರ್‌ನಲ್ಲಿ ಘಟನಾ ಸಮಿತಿಯ ಸಭೆಯು ದೆಹಲಿಯಲ್ಲಿ ಒಂದು ವಾರ ಕಾಲ ನಡೆದಾಗ. ಭಾಷಾವಾರು ಪ್ರಾಂತ ರಚನೆಯನ್ನು ಕುರಿತು ಕರ್ನಾಟಕದ ಪರ ವಾದ ಮಂಡಿಸುವವರಿಗೆ ನೆರವಾಗಲು ನೆಗಳೂರು ರಂಗನಾಥ ಹೋಗಿದ್ದರು. ಇದ್ದಕ್ಕಿದ್ದಂತೆ ರಂಗನಾಥರು ಶ್ರೀರಂಗರನ್ನು ದೆಹಲಿಗೆ ಕರೆಸಿಕೊಂಡರು. ಆ ಸಮಯದಲ್ಲಿ ಒಂದು ದಿನ (೨೫-೧-೧೯೪೭) ಶ್ರೀರಂಗರು ಕರ್ನಾಟಕದ ಇಬ್ಬರು ಕಾಂಗ್ರೆಸ್ ನಾಯಕರ ಜೊತೆಗೆ ನೆಹರೂ ಅವರನ್ನು ಕಂಡು, ಭಾಷಾವಾರು ಪ್ರಾಂತ ರಚನೆಯ ಅವಶ್ಯಕತೆ ಮತ್ತು ಅಗತ್ಯತೆಗಳನ್ನು ಕುರಿತು ವಿವರಿಸಿದರು. ಅಂದೇ ಘಟನಾ ಸಮಿತಿಯ ಸಭೆಯಲ್ಲಿ ಭಾಷಾವಾರು ಪ್ರಾಂತ ರಚನೆಯ ಬಗ್ಗೆ ಚರ್ಚೆ ನಡೆದು. ಆ ಸಂಬಂಧ ವರದಿಯನ್ನು ಸಿದ್ಧಪಡಿಸಲು ಎಂಟು ಜನರ ಉಪಸಮಿತಿಯೊಂದನ್ನು ರಚಿಸಲಾಯಿತು.

೧-೪-೧೯೪೭ರಂದು ಮುಂಬಯಿ ಶಾಸನ ಸಭೆಯಲ್ಲಿ ಪ್ರತ್ಯೇಕ ಕರ್ನಾಟಕ ರಚನೆಗೆ ಸಂಬಂಧಿಸಿದಂತೆ ಅಂದಾನಪ್ಪ ದೊಡ್ಡಮೇಟಿ ಅವರು ಮಂಡಿಸಿದ ಒಂದು ಖಾಸಗಿ ಗೊತ್ತುವಳಿಯು, ಮುರಾರಜಿ ದೇಸಾಯಿ ಅವರ ವಿರೋಧದ ನಡುವೆಯೂ, ಮುಖ್ಯಮಂತ್ರಿ ಬಿ. ಜಿ. ಖೇರರು ಸೂಚಿಸಿದ ತಿದ್ದುಪಡಿಗಳೊಂದಿಗೆ, ಪರವಾಗಿ ೬೦ ಮತ್ತು ವಿರುದ್ಧವಾಗಿ ೮ ಮತಗಳಿಂದ ಸ್ವೀಕೃತವಾಯಿತು. ೨೭-೪-೧೯೪೭ರಂದು ಮದರಾಸ್ ಶಾಸನ ಸಭೆಯಲ್ಲಿ ಡಾ। ಪಿ. ಸುಬ್ಬರಾಯನ್ ಅವರು 'ಭಾರತದ ಸಂವಿಧಾನವನ್ನು ರಚಿಸುವಾಗ ಭಾಷಾನುಗುಣವಾಗಿ ಪ್ರಾಂತಗಳ ಪುನರ್‌ರಚನೆ ಅತ್ಯಂತ ಅವಶ್ಯಕವಾಗಿದೆ. ಆದ್ದರಿಂದ ಘಟನಾ ಸಮಿತಿಯು ತನ್ನ ಪ್ರಥಮ ಸಭೆಯಲ್ಲೇ ಈ ವಿಷಯವನ್ನು ಕೈಗೆತ್ತಿಕೊಳ್ಳಬೇಕು' ಎಂದು ನಿರ್ಣಯ ಮಂಡಿಸಿದರು.

೧೫-೮-೧೯೪೭ರಂದು ಭಾರತ ಸ್ವತಂತ್ರವಾಯಿತು. ಆದರೆ ಮೈಸೂರು ಸಂಸ್ಥಾನ ಭಾರತ ಒಕ್ಕೂಟಕ್ಕೆ ಸೇರಲಿಲ್ಲ. ೧೦-೮-೧೯೪೭ರಂದೇ ಮೈಸೂರಿನ ಮಹಾರಾಜರು ಭಾರತ ಒಕ್ಕೂಟದಲ್ಲಿ ಸೇರುವ ಒಪ್ಪಂದಕ್ಕೆ ಸಹಿ ಹಾಕಿದ್ದರು. ಆದರೆ ಭಾರತಕ್ಕೆ ಸ್ವಾತಂತ್ರ್ಯ ಬಂದ ದಿನ ಮೈಸೂರು ಸಂಸ್ಥಾನ ಅದರಲ್ಲಿ ಸೇರಲಿಲ್ಲ ಎಂದು ಮೈಸೂರು ಸಂಸ್ಥಾನದ ಜನತೆ ಮೈಸೂರು ಚಲೋ ಚಳುವಳಿ ಮಾಡಿದರು. ೨೪-೧೦-೧೯೪೭ರಂದು ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರವು ಅಸ್ತಿತ್ವಕ್ಕೆ ಬಂದಿತು. ಕೆ. ಸಿ. ರೆಡ್ಡಿ ಅವರು ಮೊದಲ ಮುಖ್ಯಮಂತ್ರಿಯಾದರು. ೬-೧೧-೧೯೪೮ರಂದು ಬೀರೂರಿನಲ್ಲಿ ನಡೆದ ಅಖಿಲ ಮೈಸೂರು ಕಾಂಗ್ರೆಸ್ ಅಧಿವೇಶನದಲ್ಲಿ ಕೆ. ಸಿ. ರೆಡ್ಡಿ ಅವರು ಕರ್ನಾಟಕ ಪ್ರಾಂತ ರಚನೆಗೆ ಮೈಸೂರು ರಾಜ್ಯವು ಅಡ್ಡಿಯಾಗುವುದಿಲ್ಲ ಎಂದು ಸ್ಪಷ್ಟಪಡಿಸಿದರು. ಅದಕ್ಕೆ ಮೊದಲೇ ೧೯೪೬ರ ನವೆಂಬರ್‌ನಲ್ಲಿ, ಬೆಂಗಳೂರಿನ ಸುಭಾಷ್ ನಗರದಲ್ಲಿ ನಡೆದ ಮೈಸೂರು ಕಾಂಗ್ರೆಸ್ ಸಮಿತಿಯ ವಾರ್ಷಿಕ ಸಭೆಯಲ್ಲಿ, ಬೇರೆ ಬೇರೆ ಆಡಳಿತಗಳಲ್ಲಿ ಹರಿದು ಹಂಚಿಹೋಗಿರುವ ಭಾಗಗಳನ್ನೆಲ್ಲಾ ಒಗ್ಗೂಡಿಸಿ, ಶೀಘ್ರವೇ ಕರ್ನಾಟಕ ರಚನೆ ಆಗಬೇಕೆಂಬ ಗೊತ್ತುವಳಿ ಸ್ವೀಕರಿಸಿತ್ತು.

ಈಗಾಗಲೇ ತಿಳಿಸಿರುವಂತೆ ಮುಂಬಯಿಯಲ್ಲಿ ೧೯೪೬ರಲ್ಲಿ ನಡೆದ ಹತ್ತನೆಯ ಕರ್ನಾಟಕ ಏಕೀಕರಣ ಪರಿಷತ್ತು ಏಕೀಕರಣದ ವಿಷಯದಲ್ಲಿ ಮಹತ್ವ ಪಡೆಯಿತು. ಕರ್ನಾಟಕ ಏಕೀಕರಣ ಪರಿಷತ್ತಿನ ಹನ್ನೊಂದನೆಯ ಪರಿಷತ್ತು ೨೯-೧೨-೧೯೪೭ರಂದು ಕಾಸರಗೋಡಿನಲ್ಲಿ ನಡೆಯಿತು. ಅದೇ ಸಂದರ್ಭದಲ್ಲಿ ೩೧ನೆಯ ಕನ್ನಡ ಸಾಹಿತ್ಯ ಸಮ್ಮೇಳನವೂ ಕಾಸರಗೋಡಿನಲ್ಲೇ ನಡೆಯಿತು. ಆ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದವರು ತಿ. ತಾ. ಶರ್ಮ. ಅವರ ಅಧ್ಯಕ್ಷ ಭಾಷಣದಲ್ಲೂ ಏಕೀಕರಣದ ವಿಚಾರ ಪ್ರಸ್ತಾಪವಾಯಿತು. ಏಕೀಕರಣ ಪರಿಷತ್ತಿನ ಅಧ್ಯಕ್ಷತೆಯನ್ನು ವಹಿಸಬೇಕಾಗಿದ್ದ ಎ. ಬಿ. ಶೆಟ್ಟರು ಕಾರಣಾಂತರಗಳಿಂದ ಬರಲಾಗಲಿಲ್ಲ. ಆದ್ದರಿಂದ ಪರಿಷತ್ತಿನ ಅಧ್ಯಕ್ಷತೆಯನ್ನು ಕೇಂದ್ರ ಶಾಸನ ಸಭೆಯ ಆರ್. ಆರ್. ದಿವಾಕರ್ ವಹಿಸಿದರು. ಕೆ. ಆರ್. ಕಾರಂತರು ಪರಿಷತ್ತಿನ ಸ್ವಾಗತಾಧ್ಯಕ್ಷರಾಗಿದ್ದರು. ಪರಿಷತ್ತಿನ ಉದ್ಘಾಟನೆ ಮಾಡಿದವರು ಮೈಸೂರು ಸಂಸ್ಥಾನದ ಎಚ್. ಸಿದ್ಧಯ್ಯನವರು. ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ಮೇಲೂ ಏಕೀಕರಣ ವಿಳಂಬವಾಗುತ್ತಿರುವುದನ್ನು ಬಹುತೇಕ ಎಲ್ಲ ನಾಯಕರೂ ಆಕ್ಷೇಪಿಸಿದರು. ಏಕೀಕರಣಕ್ಕೆ ಇರುವ ಅಡೆ ತಡೆಗಳೇನು ಎಂದು ಸ್ಪಷ್ಟವಾಗಬೇಕು ಎಂಬುದೇ ಬಹು ಮುಖ್ಯ ಪ್ರಶ್ನೆಯಾಗಿತ್ತು. ರಾಜ್ಯಘಟನೆ ಜಾರಿಯಾಗುವುದರೊಳಗೆ ಕರ್ನಾಟಕ ಪ್ರಾಂತ ನಿರ್ಮಾಣ ಆಗದಿದ್ದರೆ ತೀವ್ರ ಚಳವಳಿಯ ಮೂಲಕ ಅದನ್ನು ವಿರೋಧಿಸಲಾಗುವುದು ಎಂದು ಎಚ್ಚರಿಸಿದ ಆ ಸಭೆಯಲ್ಲಿ ಏಳು ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು.

ಬೀರೂರಿನ ಕಾಂಗ್ರೆಸ್ ಅಧಿವೇಶನದಲ್ಲಿ ಆಗಿದ್ದ ನಿರ್ಣಯದಂತೆ ನೇಮಕಗೊಂಡ ಸಮಿತಿಯಲ್ಲಿ ಟಿ. ಸಿದ್ಧಲಿಂಗಯ್ಯ, ಟಿ. ಸುಬ್ರಹ್ಮಣ್ಯ, ಎಸ್. ಚನ್ನಯ್ಯ, ಕೆ. ಜಿ. ಒಡೆಯರ್, ಎ. ಜಿ. ಬಂದೀಗೌಡ ಮತ್ತು ನಾಮಕರಣಗೊಂಡಿದ್ದ ಬಿ. ಪಿ. ಹಾಲಪ್ಪ ಇದ್ದರು. ಈ ಸಮಿತಿಯು ಕರ್ನಾಟಕದ ಎಲ್ಲ ಭಾಗಗಳಲ್ಲಿ ಪ್ರವಾಸ ಮಾಡಿ ತನ್ನ ವರದಿಯನ್ನು ಸಲ್ಲಿಸಿತು.

ಭಾರತದ ಘಟನಾ ಸಮಿತಿಯು ಭಾಷಾವಾರು ಪ್ರಾಂತ ರಚನೆಗೆ ಸಂಬಂಧಿಸಿದಂತೆ ವರದಿ ನೀಡಲು ಅಲಹಾಬಾದ್ ಹೈಕೋರ್ಟಿನ ನಿವೃತ್ತ ನ್ಯಾಯಾಧೀಶ ಎಸ್. ಕೆ. ಧರ್ ಅವರ ಅಧ್ಯಕ್ಷತೆಯಲ್ಲಿ ೧೭-೬-೧೯೪೮ ರಂದು ಆಯೋಗವೊಂದನ್ನು ನೇಮಕಮಾಡಿತು. ಆ ಆಯೋಗದಲ್ಲಿ ಕರ್ನಾಟಕದ ಪರವಾಗಿ ಟೇಕೂರು ಸುಬ್ರಹ್ಮಣ್ಯಂ ಮತ್ತು ಆರ್. ಆರ್. ದಿವಾಕರ್ ಸಹಾಯಕ ಸದಸ್ಯರಾಗಿದ್ದರು. ಆಂಧ್ರ, ಕರ್ನಾಟಕ, ಕೇರಳ ಮತ್ತು ಮಹಾರಾಷ್ಟ್ರ-ಇವುಗಳಲ್ಲಿ ಯಾವ ಹೊಸ ಪ್ರಾಂತಗಳ ರಚನೆ ಆಗಬೇಕು. ಮತ್ತು ಇವುಗಳ ಖಚಿತ ಗಡಿಯ ನಿರ್ಧಾರ ಆಗುವವರೆಗೆ ತಾತ್ಕಾಲಿಕ ಗಡಿ ಯಾವುದಿರಬೇಕು ಹಾಗೂ ಈ ಪ್ರಾಂತಗಳ ನಿರ್ಮಾಣದಿಂದ ಅವುಗಳ ಆಡಳಿತ, ಆರ್ಥಿಕ ಮತ್ತು ಇತರ ವಿಷಯಗಳ ಮೇಲೆ ಆಗುವ ಪರಿಣಾಮಗಳೇನು ಎಂಬುದನ್ನು ಆಯೋಗ ಅಧ್ಯಯನ ಮಾಡಿ ವರದಿ ಸಲ್ಲಿಸಬೇಕಾಗಿತ್ತು. ೧೯-೭-೧೯೪೮ರಂದು ಮೊದಲ ಬಾರಿಗೆ ಹೊಸದೆಹಲಿಯಲ್ಲಿ ಸಭೆ ಸೇರಿದ ಆಯೋಗವು ಭಾಷಾವಾರು ಪ್ರಾಂತ್ಯ ರಚನೆಯ ಅಗತ್ಯತೆ, ವಿಧಾನ, ಪರಿಣಾಮ ಇತ್ಯಾದಿಗಳ ಬಗ್ಗೆ ತಿಳಿಯಲು ಇಪ್ಪತ್ತು ಪ್ರಶ್ನೆಗಳನ್ನು ಸಿದ್ಧಪಡಿಸಿ, ೧೬-೮-೧೯೪೮ರ ಒಳಗೆ ಅಂದರೆ ೨೮ದಿನಗಳ ಒಳಗಾಗಿ ಉತ್ತರವನ್ನು ದೆಹಲಿಗೆ ತಲುಪಿಸುವಂತೆ ಸೂಚಿಸಿ, ಪ್ರಶ್ನೆಗಳನ್ನು ಪ್ರಕಟಿಸಿತು. ಆಯೋಗದ ಕಾಟಾಚಾರದ ಕೆಲಸವನ್ನು ಜನತೆ ಹಗುರವಾಗಿ ಕಾಣಲಿಲ್ಲ. ಆಯೋಗದ ಪ್ರಶ್ನೆಗಳಿಗೆ ಗಂಭೀರವಾಗಿ ಉತ್ತರಿಸಿತು. ಆಗಸ್ಟ್ ತಿಂಗಳ ಕೊನೆಯ ವಾರದಲ್ಲಿ ಆಯೋಗವು ದೆಹಲಿಯಲ್ಲೇ ಕೆಲವು ಸಾಕ್ಷಿಗಳನ್ನು ಪರಿಶೀಲಿಸಿತು. ಸೆಪ್ಟೆಂಬರ್, ಅಕ್ಟೋಬರ್ ತಿಂಗಳುಗಳಲ್ಲಿ ವಿಶಾಖಪಟ್ಟಣ, ಮದರಾಸ್, ಮಧುರೈ, ಮಂಗಳೂರು, ಕಲ್ಲಿಕೋಟೆ, ಕೊಯಮತ್ತೂರು, ನಾಗಪುರ, ಹುಬ್ಬಳ್ಳಿ, ಪುಣೆ ಮತ್ತು ಮುಂಬಯಿಗಳಲ್ಲಿ ಸಾಕ್ಷಿಗಳನ್ನು ಸಂದರ್ಶಿಸಿ, ಮಾಹಿತಿ ಸಂಗ್ರಹಿಸಿ, ೧೦೦೦ದಷ್ಟು ಮನವಿಗಳನು ಸ್ವೀಕರಿಸಿ, ಸುಮಾರು ೭೦೦ ಸಾಕ್ಷಿಗಳನ್ನು ಪರೀಕ್ಷಿಸಿದ್ದಾಗಿ ತಿಳಿಸಿದ ಆಯೋಗವು ನವೆಂಬರ್ ೨೦ ಮತ್ತು ೨೧ ರಂದು ಸಭೆ ಸೇರಿ, ವಿಚಾರ ವಿನಿಮಯ ಮಾಡಿ ಡಿಸೆಂಬರ್ ೧೦ ರಂದು ತನ್ನ ವರದಿಯನ್ನು ಘಟನಾ ಸಮಿತಿಗೆ ಸಲ್ಲಿಸಿತು.

ಧರ್ ಆಯೋಗದ ಪ್ರಶ್ನಾವಳಿಗೆ ದಕ್ಷಿಣ ಕನ್ನಡ ಜಿಲ್ಲೆ, ನೀಲಗಿರಿ ಜಿಲ್ಲೆ, ಕೊಯಮತ್ತೂರು, ಪೆನುಗೊಂಡ, ಬಳ್ಳಾರಿ , ಬೆಜವಾಡ, ಮದ್ರಾಸ್, ಕೊಳ್ಳೇಗಾಲ, ಹೊಸೂರು ಮತ್ತು ಕಾಸರಗೋಡಿನ ಹಲವು ನಾಯಕರು ಉತ್ತರ ಸಲ್ಲಿಸಿದ್ದರು. ಸೊಲ್ಲಾಪುರದ ಜನತೆಯೂ ಜಯದೇವಿ ತಾಯಿ ಲಿಗಾಡೆ ಅವರ ನೇತೃತ್ವದಲ್ಲಿ ತಾವು ಕರ್ನಾಟಕಕ್ಕೆ ಸೇರುವುದಾಗಿ ಮನವಿ ಮಾಡಿತು.

ಧರ್ ಆಯೋಗವು ಸಲ್ಲಿಸಿದ ವರದಿಯಲ್ಲಿ, ಭಾಷಾವಾರು ಪ್ರಾಂತ ರಚನೆಗೆ ವಿಶೇಷವಾಗಿ ಆಂಧ್ರ, ಕರ್ನಾಟಕ ಮತ್ತು ಕೇರಳಗಳಲ್ಲಿರುವ ಭಿನ್ನಾಭಿಪ್ರಾಯಗಳನ್ನು ಪ್ರಸ್ತಾಪಿಸಲಾಗಿತ್ತು. ಈ ಭಿನ್ನಾಭಿಪ್ರಾಯಗಳು ಭಾಷಾವಾರು ಪ್ರಾಂತ ರಚನೆಗೆ ಅಡ್ಡಿಯಾಗಿವೆ ಎಂದು ತಿಳಿಸಿದ ಆಯೋಗವು ಕರ್ನಾಟಕ ಪ್ರಾಂತ ರಚನೆಯೇ ಹೆಚ್ಚು ತೊಡಕಾಗಿದೆ ಎಂದು ಸೂಚನೆ ನೀಡುತ್ತ, 'ನಮ್ಮ ಅಭಿಪ್ರಾಯದಲ್ಲಿ ಸದ್ಯಕ್ಕೆ ರಾಷ್ಟ್ರವು ಗಂಡಾಂತರ ಪರಿಸ್ಥಿತಿಯಲ್ಲಿದೆ. ಈಗಿನ ಕಾಲದಲ್ಲಿ ಹಿಂದುಸ್ತಾನವನ್ನೊಂದು ರಾಷ್ಟ್ರವನ್ನಾಗಿಸುವುದು ಮೊದಲನೇ ಮತ್ತು ಕೊನೆಯ ಅವಶ್ಯಕತೆಯಾಗಿದೆ. ರಾಷ್ಟ್ರೀಯ ಭಾವನೆಗೆ ಪೋಷಕವಿದ್ದುದೆಲ್ಲವನ್ನೂ ಕೈಕೊಳ್ಳತಕ್ಕದ್ದು. ಅದರ ಮಾರ್ಗದಲ್ಲಿ

ತೊಂದರೆಗಳನ್ನೊಡ್ಡುವ ಎಲ್ಲವನ್ನೂ ನಿರಾಕರಿಸತಕ್ಕದ್ದು ಅಥವಾ ತಡೆಹಿಡಿಯತಕ್ಕದ್ದು' ಎಂದು ತಿಳಿಸಿ ಸಧ್ಯದ ಪರಿಸ್ಥಿತಿಯಲ್ಲಿ ಭಾಷಾವಾರು ಪ್ರಾಂತ ರಚನೆ ಸಮರ್ಥನೀಯವಲ್ಲ ಎಂದು ತಿಳಿಸಿತು.

ಧರ್ ಆಯೋಗದ ವರದಿ ಸಲ್ಲಿಕೆ ಆದ ಒಂದು ವಾರದಲ್ಲಿ (ಡಿಸೆಂಬರ್ ೧೮,೧೯) ರಾಷ್ಟ್ರೀಯ ಕಾಂಗ್ರೆಸ್‌ನ ಐವತ್ತೈದನೆಯ ಅಧಿವೇಶನವು ಜಯಪುರದಲ್ಲಿ ನಡೆಯಿತು. ಆಗ ಧರ್ ಆಯೋಗದ ವರದಿಯನ್ನು ಪರಿಶೀಲಿಸಿ, ಮೂರು ತಿಂಗಳ ಒಳಗೆ ವರದಿ ಮಾಡಲು ಮೂವರು ಸದಸ್ಯರ ಸಮಿತಿಯೊಂದನ್ನು ರಚಿಸಲಾಯಿತು. ಆ ಸಮಿತಿಯಲ್ಲಿ ಸರ್ದಾರ್ ವಲ್ಲಭ ಭಾಯಿ ಪಟೇಲ್, ಡಾ। ಪಟ್ಟಾಭಿ ಸೀತಾರಾಮಯ್ಯ ಮತ್ತು ಜವಾಹರಲಾಲ್ ನೆಹರೂ ಇದ್ದರು. ಈ ತ್ರಿಮೂರ್ತಿ (ಜೆ.ವಿ.ಪಿ.) ಸಮಿತಿಯ ವರದಿಯು ೧-೪-೧೯೪೯ ರಂದು ಪ್ರಕಟವಾಯಿತು. ಧರ್ ಆಯೋಗದ ವರದಿಯನ್ನು ಜೆ.ವಿ.ಪಿ. ಸಮಿತಿಯೂ ಎತ್ತಿ ಹಿಡಿಯಿತು. ಕೇರಳ ಮತ್ತು ಕರ್ನಾಟಕ ಪ್ರಾಂತ ರಚನೆಯು ಸಮಸ್ಯಾತ್ಮಕವಾಗಿದೆ ಎಂಬ ಅಭಿಪ್ರಾಯದಿಂದ ಹೊಸದಾಗಿ ರಾಷ್ಟ್ರ ನಿರ್ಮಾಣವಾಗುತ್ತಿರುವ ಸಂದರ್ಭದಲ್ಲಿ ಭಾಷಾವಾರು ಪ್ರಾಂತ ರಚನೆಯು ರಾಷ್ಟ್ರದ ಐಕ್ಯತೆ ಹಾಗೂ ಆರ್ಥಿಕ ಪ್ರಗತಿಗೆ ಧಕ್ಕೆ ತರಬಹುದು ಎಂಬ ಸಂಶಯವನ್ನು ಜೆ. ವಿ. ಪಿ. ಸಮಿತಿ ವ್ಯಕ್ತಪಡಿಸಿತು.

೮-೫-೧೯೪೯ರಂದು ಕರ್ನಾಟಕ ಪ್ರಾಂತಿಕ ಸಮಿತಿಯು ಹುಬ್ಬಳ್ಳಿಯಲ್ಲಿ ಸಭೆ ಸೇರಿ, ತ್ರಿಮೂರ್ತಿ ಸಮಿತಿಯ ವರದಿಯ ಬಗ್ಗೆ ತನ್ನ ಅತೃಪ್ತಿ ವ್ಯಕ್ತಪಡಿಸಿತು. ಅಂತೆಯೇ ೨೦-೫-೧೯೪೯ರಂದು ಹುಬ್ಬಳ್ಳಿಯಲ್ಲೇ ಕರ್ನಾಟಕ ಏಕೀಕರಣ ಮಹಾಸಮಿತಿಯ ಸಭೆ ಸೇರಿ 'ಕರ್ನಾಟಕ ಪ್ರಾಂತ ನಿರ್ಮಾಣವಾಗದಿದ್ದರೆ ಕನ್ನಡ ನಾಡಿನಲ್ಲೆಲ್ಲಾ ಅತ್ಯಂತ ಅತೃಪ್ತಿ ಮತ್ತು ಅಸಂತೋಷಗಳುಂಟಾಗಿ ಜನತೆಯ ತಾಳ್ಮೆಯು ಕೊನೆಯ ಮಟ್ಟಕ್ಕೆ ಮುಟ್ಟುತ್ತದೆ ' ಎಂದು ಗೊತ್ತುವಳಿ ಸ್ವೀಕರಿಸಿತು. ನಂತರ ೨೩-೫-೧೯೪೯ ರಂದು ಎಂಟು ಸದಸ್ಯರ ಶಿಷ್ಟ ಮಂಡಳವು ಡೆಹರಾಡೂನ್‌ನಲ್ಲಿ, ಕಾಂಗ್ರೆಸ್ ಸಮಿತಿಯು ೧೬-೧೧-೧೯೪೯ರಂದು ಕೇವಲ ಆಂಧ್ರಪ್ರದೇಶ ರಚನೆಗೆ ಗೊತ್ತುವಳಿ ಸ್ವೀಕರಿಸಿತು. ಇದನ್ನು ಪ್ರತಿಭಟಿಸಿ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ಕಂಡು ಕರ್ನಾಟಕದ ಜನತೆಗೆ ಆಗಿರುವ ಅತೀವ ನಿರಾಶೆಯನ್ನು ತಿಳಿಸಿ, ಭಾಷಾವಾರು ಪ್ರಾಂತ ರಚನೆಯು ಒಮ್ಮೆಲೇ ಆಗುವುದು ಅವಶ್ಯಕ ಮತ್ತು ನ್ಯಾಯಯುತ ಎಂದು ಮನವರಿಕೆ ಮಾಡಿತು. ಆದರೆ ಕೇಂದ್ರ ಕಾಂಗ್ರೆಸ್ ಸಮಿತಿಯು ೩-೧೨-೧೯೪೯ರಂದು ಸಭೆ ಸೇರಿ ಕರ್ನಾಟಕ ಪ್ರಾಂತ ರಚನೆಗೆ ಅಡ್ಡಿಯಾಗಿರುವ ಕಾಂಗ್ರೆಸ್‌ನ ನಿರ್ಣಯವನ್ನು ವಿರೋಧಿಸಿ, ಕೇಂದ್ರ ಹಾಗೂ ಪ್ರಾಂತ ಶಾಸನ ಸಭೆಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸುತ್ತಿದ್ದ ೧೨ ಜನರು ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಿ, ರಾಜೀನಾಮೆ ಪತ್ರಗಳನ್ನು ಕೆ. ಪಿ. ಸಿ. ಸಿ. ಅಧ್ಯಕ್ಷರಿಗೆ ತಲುಪಿಸಿದರು. ಆ ಹನ್ನೆರಡು ಜನರಲ್ಲಿ ಎಸ್. ನಿಜಲಿಂಗಪ್ಪನವರೂ ಒಬ್ಬರಾಗಿದ್ದರು. ಇದೇ ಸಂದರ್ಭದಲ್ಲಿ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯೂ ಕರ್ನಾಟಕ ಪ್ರಾಂತ ರಚನೆಯಲ್ಲಿ ಮೈಸೂರು ಮಹಾರಾಜರು ಅಡ್ಡಿಯಾಗುವುದಿಲ್ಲ ಎಂದು ತಿಳಿಸಿತ್ತು.

೨೨-೧೨-೧೯೪೯ರಂದು ಕಾಂಗ್ರೆಸ್ ಪಕ್ಷದ ಕೇಂದ್ರ ಕಾರ್ಯಕಾರೀ ಸಮಿತಿಯು ಸಮಾವೇಶಗೊಂಡಾಗ ಹಾಜರಿದ್ದ ಕೆ. ಪಿ. ಸಿ. ಸಿ. ಅಧ್ಯಕ್ಷರಾದ ಎಸ್. ನಿಜಲಿಂಗಪ್ಪನವರು ಭಾಷಾವಾರು ಪ್ರಾಂತ ರಚನೆಯ ಬಗ್ಗೆ ಕನ್ನಡಿಗರ ಅಭಿಪ್ರಾಯಗಳನ್ನು ತಿಳಿಸಿ, ಆಗಲೇ ತಮ್ಮ ವಶಕ್ಕೆ ಬಂದಿದ್ದ ೧೨ ರಾಜೀನಾಮೆಗಳನ್ನು ಸಮಿತಿಗೆ ಸಲ್ಲಿಸಿದರು. ಸಮಿತಿಯು ರಾಜೀನಾಮೆಗಳನ್ನು ಸ್ವೀಕರಿಸಲಿಲ್ಲ. ಈ ಮಧ್ಯೆ ಆಂಧ್ರಪ್ರದೇಶದ ರಚನೆಯ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆಯ ವಿಭಜನೆಗೆ ಆಗುತ್ತಿದ್ದ ಸನ್ನಾಹವನ್ನು ಆದವಾನಿಯ ಜನ ವಿರೋಧಿಸಿದರು. ೯-೧-೧೯೫೦ರಂದು ಗದಗದಲ್ಲಿ ನಡೆದ ಕೆ.ಪಿ.ಸಿ.ಸಿ. ಸಭೆಯು ಆಂಧ್ರ ಪ್ರದೇಶದ ರಚನೆಗೆ ಮುಂದಾಗಿ ಕರ್ನಾಟಕ ಪ್ರಾಂತ ರಚನೆಗೆ ವಿಳಂಬ ಮಾಡುತ್ತಿರುವ ಕೇಂದ್ರ ಸರ್ಕಾರದ ಕ್ರಮವನ್ನು ವಿರೋಧಿಸಿ ರಾಜೀನಾಮೆ ಸಲ್ಲಿಕೆಗೆ ಅನುಮತಿ ಕೇಳಿದರು.

೨೬-೧-೧೯೫೦ರಂದು ಭಾರತವು ಗಣರಾಜ್ಯವಾಯಿತು. ಆದರೆ ಭಾಷಾವಾರು ಪ್ರಾಂತ ರಚನೆ ಆಗಲಿಲ್ಲ. ೨೦-೪-೧೯೫೧ರಂದು ರಾಷ್ಟ್ರೀಯ ಕಾಂಗ್ರೆಸ್ ಅಧ್ಯಕ್ಷರಾದ ಪುರುಷೋತ್ತಮದಾಸ್ ಟಂಡನ್ ಬೆಂಗಳೂರಿಗೆ ಬಂದಿದ್ದಾಗ, ಬೆಂಗಳೂರಿನ ಏಕೀಕರಣ ಸಂಘವು ನಗರದ ಪ್ರಮುಖರ ಜೊತೆಗೆ ಅವರನ್ನು ಸನ್ಮಾನಿಸಿ, ಕರ್ನಾಟಕ ಪ್ರಾಂತ ರಚನೆಗೆ ಅವಕಾಶ ಕಲ್ಪಿಸಲು ಮನವಿ ಮಾಡಿತು. ಅದೇ ವರ್ಷ ಜುಲೈ ತಿಂಗಳ ೧೩ ರಂದು ಬೆಂಗಳೂರಿನ ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟಿ ಟೌನ್‌ಹಾಲ್‌ನಲ್ಲಿ ಅಖಿಲ ಕರ್ನಾಟಕ ಪ್ರಾಂತ ರಚನಾ ಸಮ್ಮೇಳನ ನಡೆಯಿತು. ಅದೇ ಸಮಯದಲ್ಲಿ ಲಾಲ್‌ಬಾಗಿನ ಗಾಜಿನ ಮನೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಸಮಿತಿಯೂ ಸಮಾವೇಶಗೊಂಡಿತ್ತು. ಮಹಾರಾಷ್ಟ್ರ, ಮದ್ರಾಸ್ ಮತ್ತು ಆಂಧ್ರಪ್ರದೇಶದ ಪ್ರತಿನಿಧಿಗಳೆಲ್ಲ ಸೇರಿದ್ದ ಸಮಾವೇಶದಲ್ಲಿ ಎಲ್ಲರೂ ಕರ್ನಾಟಕ ಏಕೀಕರಣವನ್ನು ಬೆಂಬಲಿಸಿ ಮಾತನಾಡಿದರು.

ಕರ್ನಾಟಕದ ಅನೇಕ ನಾಯಕರಿಗೆ ಕಾಂಗ್ರೆಸ್ ಅನ್ನು ನಂಬಿದರೆ ಕರ್ನಾಟಕ ಏಕೀಕರಣವು ಕನಸಿನ ಮಾತಾಗಬಹುದೆಂದು ತೋರಿತು. ಆ ಕಾರಣದಿಂದ ಪಕ್ಷೇತರ ಕರ್ನಾಟಕ ಏಕೀಕರಣ ಪರಿಷತ್ತನ್ನು ನಡೆಸಲು ಮುಂದಾದರು. ಹೊಸಮನಿ ಸಿದ್ದಪ್ಪನವರ

ನೇತೃತ್ವದಲ್ಲಿ ಮೊದಲ ಪಕ್ಷೇತರ ಕರ್ನಾಟಕ ಏಕೀಕರಣ ಪರಿಷತ್ತು ೧೯೫೧ರ ಮೇ ೨೫ ಮತ್ತು ೨೬ ರಂದು ಸಮಾವೇಶಗೊಂಡಿತು. ಇದರಲ್ಲಿ ಕನ್ನಡ ಪ್ರದೇಶಗಳ ಬಹುತೇಕ ಎಲ್ಲ ರಾಜಕೀಯ ಪಕ್ಷಗಳೂ ಒಂದಾದವು. ಈ ಪರಿಷತ್ತಿನಲ್ಲಿ ಮುಂಬಯಿ, ಮದರಾಸ್ ಮತ್ತು ಹೈದರಾಬಾದ್ ಪ್ರಾಂತಗಳ ಕನ್ನಡ ಪ್ರದೇಶಗಳೂ, ಮೈಸೂರು ಮತ್ತು ಕೊಡಗು ರಾಜ್ಯಗಳನ್ನು ಸೇರಿಸಿ ಕೂಡಲೇ ಕರ್ನಾಟಕ ಪ್ರಾಂತ ರಚನೆ ಆಗಬೇಕು. ಹಾಗೆ ಆಗದಿದ್ದರೆ ಮುಂಬರುವ ಚುನಾವಣೆಗಳಲ್ಲಿ ಕರ್ನಾಟಕ ಪ್ರಾಂತ ರಚನೆಯ ಉದ್ದೇಶವನ್ನು ಮುಖ್ಯವಾಗಿ ಹೊಂದಿರುವ ರಾಜಕೀಯ ಪಕ್ಷಗಳಿಗೆ ಬೆಂಬಲ ನೀಡಲಾಗುವುದು ಹಾಗೂ ಪ್ರಸ್ತುತ ರಾಜಕೀಯ ಅಧಿಕಾರ ಸ್ಥಾನಗಳಲ್ಲಿರುವ ಕರ್ನಾಟಕದ ಪ್ರತಿನಿಧಿಗಳು ತಮ್ಮ ಸ್ಥಾನಗಳಿಗೆ ಕೂಡಲೇ ರಾಜೀನಾಮೆ ನೀಡಬೇಕು ಎಂಬ ಪ್ರಮುಖ ಗೊತ್ತುವಳಿಗಳನ್ನು ಸ್ವೀಕರಿಸಲಾಯಿತು. ಗೊತ್ತುವಳಿಗಳ ಅನುಷ್ಠಾನಕ್ಕೆ ಸಮಿತಿಯೊಂದು ರಚಿತವಾಯಿತು ಮತ್ತು ೧೯೫೨ರಲ್ಲಿ ಚುನಾವಣೆಗಳು ನಡೆದಾಗ ಕರ್ನಾಟಕ ಏಕೀಕರಣ ಪಕ್ಷದ ಅಭ್ಯರ್ಥಿಗಳು ಗುಡಿಸಲಿನ ಗುರುತಿನ ಮೂಲಕ ಚುನಾವಣೆಯಲ್ಲಿ ಸ್ಪರ್ಧಿಸಿದರು.

ಈ ಮಧ್ಯೆ ಆಂಧ್ರ ಪ್ರಾಂತ ರಚನೆಗೆ ಒತ್ತಾಯ ತೀವ್ರವಾಗಿ ೧೫-೮-೧೯೫೧ರಿಂದ ಸ್ವಾಮಿ ಸೀತಾರಾಮರು ತಿರುಪತಿಯಲ್ಲಿ ಆಮರಣಾಂತ ಉಪವಾಸ ಕೈಗೊಂಡರು. ಕೇಂದ್ರ ಮತ್ತು ಆಂಧ್ರ ಶಾಸನ ಸಭೆಗಳಲ್ಲಿ ಆಂಧ್ರ ಪ್ರಾಂತ ರಚನೆಯ ವಿಷಯ ಪ್ರಸ್ತಾಪಕ್ಕೆ ಬಂದಿತಾದರೂ ನಿರ್ಣಯಗಳ ಸ್ವೀಕಾರ ಆಗಲಿಲ್ಲ. ೧೯೫೨ರ ಸಾರ್ವತ್ರಿಕ ಚುನಾವಣೆಗಳು ಮುಗಿದ ನಂತರ ಜುಲೈ ಎರಡನೆಯ ವಾರ ಲೋಕಸಭೆಯಲ್ಲಿ ವಿರೋಧ ಪಕ್ಷಗಳು ಭಾಷಾವಾರು ಪ್ರಾಂತ ರಚನೆಯ ಗೊತ್ತುವಳಿಯನ್ನು ಮಂಡಿಸಿದವು. ಗೊತ್ತುವಳಿಯನ್ನು ವಿರೋಧಿಸಲು ಕಾಂಗ್ರೆಸ್ ಪಕ್ಷವು ತನ್ನ ಸದಸ್ಯರಿಗೆ ಆದೇಶ ನೀಡಿತು. ಆದರೆ ವಿಷಯದ ಬಗ್ಗೆ ಚರ್ಚೆ ನಡೆದಾಗ ಎಸ್. ನಿಜಲಿಂಗಪ್ಪನವರು ಭಾಷಾವಾರು ಪ್ರಾಂತ ರಚನೆಯ ಪರವಾಗಿಯೇ ವಿಚಾರಗಳನ್ನು ಮಂಡಿಸಿದರು. ಲೋಕಸಭೆಯಲ್ಲಿ ಗೊತ್ತುವಳಿಯು ಅತ್ಯಧಿಕ ಬಹುಮತದಿಂದ ಬಿದ್ದುಹೋಯಿತು. ಆಂಧ್ರ ಪ್ರಾಂತ ರಚನೆ ವಿಳಂಬವಾಗುತ್ತಿರುವುದನ್ನು ಸಹಿಸದ ತೆಲುಗರು ಪುನಃ ಸತ್ಯಾಗ್ರಹ, ಚಳವಳಿ ಇತ್ಯಾದಿಗಳನ್ನು ಆರಂಭಿಸಿದರು. ಆಗಲೇ ಆಂಧ್ರದ ಪೊಟ್ಟಿ ಶ್ರೀರಾಮುಲು ಅವರು ೫೮ ದಿನಗಳ ಉಪವಾಸದ ನಂತರ ೧೫-೧೨-೧೯೫೨ರಂದು ನಿಧನರಾದರು. ಕೇಂದ್ರ ಸರ್ಕಾರವು ಪರಿಸ್ಥಿತಿಯ ಗಂಭೀರತೆಯನ್ನು ಗಮನಿಸಿತು. ೧೯-೧೨-೧೯೫೨ರಂದು ಲೋಕಸಭೆಯಲ್ಲಿ ವಿಷಯದ ಪ್ರಸ್ತಾವನೆಯಾಗಿ, ಮದ್ರಾಸ್ ನಗರವನ್ನು ಹೊರತುಪಡಿಸಿ ಆಂಧ್ರ ಪ್ರಾಂತ ರಚನೆಗೆ ಮುಂದಾದ ಕೇಂದ್ರ ಸರ್ಕಾರವು, ಈ ಬಗ್ಗೆ ವರದಿ ನೀಡಲು ಕೆ. ಎನ್. ವಾಂಛೂ ಸಮಿತಿಯನ್ನು ನೇಮಿಸಿತು.

೧೯೫೩ರ ಜನವರಿ ತಿಂಗಳಿನಲ್ಲಿ ಹೈದರಾಬಾದ್‌ನ ನಾನಲ ನಗರದಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ವಾರ್ಷಿಕಾಧಿವೇಶನ ನಡೆದಾಗ ಮೈಸೂರು ರಾಜ್ಯದ ಮುಖ್ಯಮಂತ್ರಿ ಕೆ. ಹನುಮಂತಯ್ಯನವರು ಕರ್ನಾಟಕ ಪ್ರಾಂತ ರಚನೆಗೆ ಮೈಸೂರು ಸಂಸ್ಥಾನವು ಅಡ್ಡಿಯಾಗಿಲ್ಲ ಎಂದು ಸ್ಪಷ್ಟಪಡಿಸಿದರು. ಆ ಅಭಿಪ್ರಾಯವನ್ನು ಹಾರನಹಳ್ಳಿ ರಾಮಸ್ವಾಮಿ ಸಮರ್ಥಿಸಿದರು.

ಆಂಧ್ರ ಪ್ರಾಂತ ರಚನೆಯ ಬಗ್ಗೆ ಅಧ್ಯಯನ ಮಾಡಿ ವರದಿ ಸಲ್ಲಿಸಲು ಕೇಂದ್ರ ಸರ್ಕಾರವು ರಾಜಾಸ್ಥಾನದ ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಕೆ. ಎನ್. ವಾಂಛೂ ಅವರನ್ನು ೫-೧-೧೯೫೩ರಂದು ನೇಮಿಸಿತು. ೩೧-೧-೧೯೫೩ ಅಂದರೆ ಕೇವಲ ೨೯ ದಿನಗಳ ಒಳಗೆ ಆಯೋಗವು ವರದಿಯನ್ನು ಸಲ್ಲಿಸಬೇಕಾಗಿತ್ತು. ವಾಂಛೂ ಅನೇಕ ಸಂಘ-ಸಂಸ್ಥೆಗಳ ಮತ್ತು ರಾಜಕೀಯ ಪಕ್ಷಗಳ ಪ್ರತಿನಿಧಿಗಳಿಂದ ಮನವಿಗಳನ್ನು ಸ್ವೀಕರಿಸಿದರು. ವಾದ-ಪ್ರತಿವಾದಗಳನ್ನು ಕೇಳಿದರು. ಆಯೋಗವು ಕೆ.ಪಿ.ಸಿ.ಸಿ. ಅಧ್ಯಕ್ಷ ಎಸ್. ನಿಜಲಿಂಗಪ್ಪ ಅವರನ್ನೂ ಭೇಟಿ ಮಾಡಿತ್ತು. ೭-೨-೧೯೫೩ರಂದು ವಾಂಛೂ ತಮ್ಮ ವರದಿಯನ್ನು ಸಲ್ಲಿಸಿದರು. ಹೈದರಾಬಾದ್ ಮತ್ತು ಮದ್ರಾಸ್ ರಾಜ್ಯಗಳಲ್ಲಿ ಸೇರಿರುವ, ತೆಲುಗೇ ಹೆಚ್ಚು ಜನರ ಮಾತೃಭಾಷೆ ಆಗಿರುವ ಹನ್ನೊಂದು ಜಿಲ್ಲೆಗಳನ್ನು ಮಾತ್ರ ಸೇರಿಸಿ ಆಂಧ್ರ ಪ್ರಾಂತ ರಚನೆ ಮಾಡಲು ಆಯೋಗವು ಶಿಫಾರ್ಸು ಮಾಡಿತು. ಬಳ್ಳಾರಿ ಜಿಲ್ಲೆಯು ಆಂಧ್ರದೊಡನೆ ಸೇರಲು ಹಲವು ತೊಂದರೆಗಳಿದ್ದುದನ್ನು ಆಯೋಗವು ತಿಳಿಸಿತು. ೧೯೨೧ರಲ್ಲಿ ಕೇಳಕರ್ ಅವರ ಶಿಫಾರ್ಸಿನ ಮೇಲೆ ಬಳ್ಳಾರಿ ಜಿಲ್ಲೆಯ ಆಲೂರು, ಆದವಾನಿ ಮತ್ತು ರಾಯದುರ್ಗ ತಾಲ್ಲೂಕುಗಳು ಆಂಧ್ರ ಪ್ರದೇಶ ಕಾಂಗ್ರೆಸ್ ಸಮಿತಿಯ ವ್ಯಾಪ್ತಿಗೆ ಸೇರಿತ್ತು. ಆದ್ದರಿಂದ ಬಳ್ಳಾರಿ ಜಿಲ್ಲೆಯ ಬಗ್ಗೆ ಸ್ಪಷ್ಟ ತೀರ್ಮಾನ ಕೊಡಲು ವಿಫಲ ಆದ ವಾಂಛೂ ವರದಿಯನ್ನು ಆಧರಿಸಿ ೨೫-೩-೧೯೫೩ರಂದು ಕೇಂದ್ರ ಸರ್ಕಾರವು ಲೋಕಸಭೆಯಲ್ಲಿ ನೀಡಿದ ಪ್ರಕಟಣೆಯ ಪ್ರಕಾರ ಬಳ್ಳಾರಿ ಜಿಲ್ಲೆಯನ್ನು ಒಂದೇ ಘಟಕವೆಂದು ಪರಿಗಣಿಸಲು ಸಾಧ್ಯವಿಲ್ಲವಾದ್ದರಿಂದ ಆಲೂರು, ಆದವಾನಿ ಮತ್ತು ರಾಯದುರ್ಗ ತಾಲ್ಲೂಕುಗಳನ್ನು ಆಂಧ್ರಪ್ರದೇಶಕ್ಕೂ, ಹರಪನಹಳ್ಳಿ, ಹಡಗಲಿ, ಕೂಡ್ಲಿಗಿ, ಸೊಂಡೂರು ಮತ್ತು ಸಿರಗುಪ್ಪ ತಾಲ್ಲೂಕುಗಳನ್ನು ಮೈಸೂರು ರಾಜ್ಯಕ್ಕೂ ಸೇರಿಸಬಹುದಾದರೂ, ಮಿಶ್ರ ಭಾಷೆಯ ಬಳ್ಳಾರಿ ತಾಲ್ಲೂಕಿನ ಸಮಸ್ಯೆಯು ಕೇವಲ ಭಾಷೆಗೆ ಮಾತ್ರ ಸೀಮಿತವಾಗಿರದೆ, ತುಂಗಭದ್ರಾ ಅಣೆಕಟ್ಟೆಯ ಕಾರಣದಿಂದ ಸಾಮಾಜಿಕ ಮತ್ತು ಆರ್ಥಿಕ ವಿಚಾರಗಳನ್ನೂ ಒಳಗೊಂಡಿರುವುದರಿಂದ ಅದನ್ನು ಬಗೆಹರಿಸಲು ಭಾರತದ ರಾಷ್ಟ್ರಪತಿಗಳು ಹೈದರಾಬಾದ್‌ನ ಮುಖ್ಯ ನ್ಯಾಯಾಧೀಶ

ಎಲ್. ಎಸ್. ಮಿಶ್ರಾ ಅವರನ್ನು ೨೧-೪-೧೯೫೩ರಂದು ನೇಮಿಸಿ, ೧೫-೫-೧೯೫೩ರ ಒಳಗೆ ವರದಿ ಸಲ್ಲಿಸಲು ಕೋರಿದರು. ವಾಂಛೂ ಸಮಿತಿಯ ನೇಮಕವಾದಾಗಲೇ ಕರ್ನಾಟಕ ಪ್ರಾಂತ ರಚನೆ ವಿಳಂಬವಾಗುತ್ತಿದೆ ಎಂದು ಕರ್ನಾಟಕ ಏಕೀಕರಣವಾದಿಗಳಿಗೆ ಅತೃಪ್ತಿ ಮತ್ತು ಅಸಂತೋಷಗಳಾಗಿದ್ದವು. ಇದರಿಂದ ಬೇಸತ್ತ ಪಕ್ಷೇತರ ಕರ್ನಾಟಕ ಏಕೀಕರಣ ಪರಿಷತ್ತು ಕೇಂದ್ರ ಸರ್ಕಾರದ ಕ್ರಮವನ್ನು ಪ್ರತಿಭಟಿಸಿತು. ಸಮಾಜವಾದಿ ಮತ್ತು ಕಮ್ಯುನಿಸ್ಟ್ ಪಕ್ಷಗಳು ಏಕೀಕರಣ ಬೇಡಿಕೆಯನ್ನು ಪ್ರಧಾನ ಮಾಡಿದವು. ಈ ಬೇಡಿಕೆಗೆ ಹಿರಿಯ ರಾಜಕೀಯ ನಾಯಕರು ಮಾತ್ರವಲ್ಲದೆ ಜನತೆಯ ಬೆಂಬಲವೂ ದೊರೆಯಿತು. ಮಿಶ್ರಾ ಸಮಿತಿಯ ನೇಮಕದಿಂದ ಜನತೆಗೆ ಆಗಿದ್ದ ಅಸಮಾಧಾನದ ಪ್ರತೀಕವಾಗಿ ಅದರಗುಂಚಿ ಶಂಕರಗೌಡ ಪಾಟೀಲರ ಆಮರಣಾಂತ ಉಪವಾಸ ಆರಂಭವಾಯಿತು. ಹುಬ್ಬಳ್ಳಿಯ ಸಮೀಪದ ಸಣ್ಣ ಹಳ್ಳಿಯಲ್ಲೇ ಯಾವ ಪೂರ್ವ ಪ್ರಚಾರವೂ ಇಲ್ಲದೆ ಆರಂಭವಾದ ಅದರಗುಂಚಿ ಶಂಕರಗೌಡ ಪಾಟೀಲರ ಆಮರಣಾಂತ ಉಪವಾಸ ಸತ್ಯಾಗ್ರಹ ಕ್ರಮೇಣ ರಾಜಕೀಯ ನಾಯಕರು ಮತ್ತು ಪತ್ರಿಕಾ ಮಾಧ್ಯಮದವರನ್ನು ಆಕರ್ಷಿಸಿತು. ೨೮-೩-೧೯೫೩ರಂದು ಅದರಗುಂಚಿಯ ಕಲ್ಮೇಶ್ವರ ದೇವಾಲಯದಲ್ಲೇ ಉಪವಾಸ ಸತ್ಯಾಗ್ರಹ ಆರಂಭವಾಯಿತು. ಎಸ್. ನಿಜಲಿಂಗಪ್ಪನವರೂ ಸೇರಿದಂತೆ ಹಲವಾರು ನಾಯಕರು ಅದರಗುಂಚಿಗೆ ಹೋಗಿ ಶಂಕರಗೌಡ ಪಾಟೀಲರನ್ನು ಕಂಡರು. ಆ ಸಂದರ್ಭದಲ್ಲಿ ಬೆನ್ನಿನ ಮಣಿಶಿರದ ಶಸ್ತ್ರಚಿಕಿತ್ಸೆಗಾಗಿ ದಾಖಲಾಗಿದ್ದ ಜಯದೇವಿತಾಯಿ ಲಿಗಾಡೆ ಅವರು ತಮ್ಮ ಉಪವಾಸ ಸತ್ಯಾಗ್ರಹಕ್ಕೆ ಬೆಂಬಲ ಸೂಚಿಸಿ, ರಕ್ತಾಂಕಿತ ಪತ್ರವನ್ನು ಬರೆದಿದ್ದರೆಂದು ಶಂಕರಗೌಡ ಪಾಟೀಲರು ತಮ್ಮ ಅಪ್ರಕಟಿತ 'ನನ್ನ ದಿನಚರಿ'ಯಲ್ಲಿ ದಾಖಲಿಸಿದ್ದಾರೆ. ಶಂಕರಗೌಡ ಪಾಟೀಲರ ಉಪವಾಸ ಸತ್ಯಾಗ್ರಹದ ವಿಷಯವನ್ನು ಲೋಕಸಭೆಯಲ್ಲಿ ಪ್ರಸ್ತಾಪಿಸಿದ ಅಳವಂಡಿ ಶಿವಮೂರ್ತಿಸ್ವಾಮಿ ಅವರು, ಶೀಘ್ರವೇ ಕರ್ನಾಟಕ ಪ್ರಾಂತ ರಚನೆ ಆಗದಿದ್ದರೆ ಪರಿಸ್ಥಿತಿ ಉಲ್ಬಣಗೊಳ್ಳುತ್ತದೆ ಎಂಬ ಸೂಚನೆ ನೀಡಿದರು. ಮುಂಬಯಿ ಮತ್ತು ಹೈದರಾಬಾದ್ ಕರ್ನಾಟಕದ ಬಹುತೇಕ ಎಲ್ಲ ಭಾಗಗಳಿಂದ ಅನೇಕರು ಅದರಗುಂಚಿಗೆ ಬಂದು ತಮ್ಮ ಬೆಂಬಲ ಸೂಚಿಸಿದರು. ಕರ್ನಾಟಕ ಏಕೀಕರಣ ಸಮಸ್ಯೆಯು ಕೇವಲ ಕೆಲವು ರಾಜಕೀಯ ನಾಯಕರ ಸಮಸ್ಯೆ ಆಗಿ ಉಳಿಯದೆ ಇಡೀ ಜನತೆಯ ವಿಷಯವಾಗಿ ಪರಿಣಮಿಸಿತು.

೧೯-೪-೧೯೫೩ರಂದು ಹುಬ್ಬಳ್ಳಿಯ ಪುರಸಭಾ ಭವನದಲ್ಲಿ ಕೆ. ಪಿ. ಸಿ. ಸಿ. ಯ ವಿಶೇಷ ಕಾರ್ಯಕಾರೀ ಸಮಿತಿ ಸಭೆ ನಡೆಯಲಿತ್ತು. ಇದು ಕಾಂಗ್ರೆಸ್ಸೇತರ ಪಕ್ಷಗಳ ನಾಯಕರಿಗೂ ತಿಳಿದಿತ್ತು. ರಾಜೀನಾಮೆ ನೀಡುತ್ತೇವೆ ಎಂದು ಕೇವಲ ಬಾಯಿಮಾತಿನಲ್ಲಿ ಹೇಳುತ್ತಾ, ಯಾವುದೇ ರೀತಿಯ ನಿರ್ಧಾರಕ್ಕೆ ಅವಕಾಶ ನೀಡದ ಕಾಂಗ್ರೆಸ್ ನಾಯಕರಿಂದ ರಾಜೀನಾಮೆ ಕೇಳಲು ಜನ ಸಿದ್ಧರಾದರು. ಹಳ್ಳಿ ಹಳ್ಳಿಗಳಿಂದ ಚಕ್ಕಡಿಗಳಲ್ಲಿ ಹುಲ್ಲು ಹೇರಿಕೊಂಡು ಬಂದ ಸುಮಾರು ಇಪ್ಪತ್ತೈದು ಸಾವಿರ ಜನ ಹುಬ್ಬಳ್ಳಿಯ ಗುಳಕವ್ವನಕಟ್ಟೆಯಲ್ಲಿ ಜಮಾಯಿಸಿದರು. ಅದೇ ಸಂದರ್ಭದಲ್ಲಿ ಅದೇ ಮೈದಾನದಲ್ಲಿ ಒಂದು ಸರ್ಕಸ್ ಕಂಪೆನಿ ಸಹ ಪ್ರದರ್ಶನ ನಡೆಸಿತ್ತು. ಬಹುತೇಕ ಕರ್ನಾಟಕದ ಎಲ್ಲ ಭಾಗಗಳ ಜನ ಅಲ್ಲಿ ಸೇರಿದ್ದರು. ಪುರಭವನಕ್ಕೆ ಕಾಂಗ್ರೆಸ್ ನಾಯಕರು ಆಗಮಿಸುತ್ತಿದ್ದಂತೆಯೇ ಜನರು ಧಿಕ್ಕಾರ ಹೇಳುತ್ತಾ ಸ್ವಾಗತಿಸುತ್ತಿದ್ದರು. ಸಭೆ ನಡೆಯುತ್ತಿದ್ದ ಸ್ಥಳಕ್ಕೆ ಹೋದ ಕೆಲವರು ಕಾಂಗ್ರೆಸ್ ನಾಯಕರಿಗೆ ಅರಿಶಿನ-ಕುಂಕುಮ ಹಚ್ಚಿ, ಬಳೆ ತೊಡಿಸಿದರು. ಹಳ್ಳಿಕೇರಿ ಗುದ್ಲೆಪ್ಪನವರ ಜೀಪಿಗೆ ಯಾರೋ ಬೆಂಕಿ ಹಚ್ಚಿದರು. ಜನರನ್ನು ನಿಯಂತ್ರಿಸುವುದು ಕಷ್ಟ ಎಂದು ತಿಳಿದ ಪೋಲೀಸರು ಲಾಠೀ ಛಾರ್ಜ್‌ಗೆ ಆಜ್ಞೆ ಮಾಡಿದರು. ಅದಕ್ಕೆ ಬೆದರದ ಜನ ಲಾಠಿಗಳಿಗೆ ಎದೆಯೊಡ್ಡಿ ನಿಂತರು. ಲಾಠೀ ಚಾರ್ಜ್ ಪರಿಣಾಮಕಾರಿ ಆಗಲಿಲ್ಲ ಎಂದು ಪೋಲೀಸರು ಗೋಲೀಬಾರ್‌ಗೆ ಆದೇಶ ನೀಡಿದರು. ಜನರು ಅದಕ್ಕೂ ಎದೆಯೊಡ್ಡಿ ನಿಂತರು. ಈ ಎಲ್ಲ ವಿಷಯಗಳನ್ನು ಸ್ಥಳೀಯ ಪತ್ರಿಕೆಗಳಲ್ಲದೆ ನ್ಯೂಯಾರ್ಕ್ ಟೈಂಸ್ ಪತ್ರಿಕೆಯು ಮುಖಪುಟದಲ್ಲೇ ವರದಿ ಮಾಡಿತು. ಆ ಗಲಭೆಯಲ್ಲಿ ಕೆಲವರನ್ನು ಬಂಧಿಸಿ, ವಿಚಾರಣೆಗೆ ಗುರಿಪಡಿಸಲಾಯಿತು. ಬಂಧಿತರಾಗಿದ್ದವರ ಪರವಾಗಿ ಎಸ್. ಆರ್. ಬೊಮ್ಮಾಯಿ ಅವರು ವಾದಿಸಿದರು. ಹುಬ್ಬಳ್ಳಿಯಲ್ಲಿ ಒಂದೆಡೆ ಗಲಭೆ ಆದರೆ, ಮತ್ತೊಂದೆಡೆ ಕೆ.ಪಿ.ಸಿ.ಸಿ. ಸಭೆ ನಡೆದು ಗದ್ದಲದ ನಡುವೆಯೇ ಕರ್ನಾಟಕ ಏಕೀಕರಣದ ಪರವಾಗಿ ನಿರ್ಣಯವನ್ನು ಸ್ವೀಕರಿಸಲಾಯಿತು.

ಹುಬ್ಬಳ್ಳಿಯ ಗಲಭೆಯ ನಂತರ ಕರ್ನಾಟಕದ ಕಾಂಗ್ರೆಸ್ ನಾಯಕರು ಪ್ರಧಾನಮಂತ್ರಿ ನೆಹರೂ ಅವರನ್ನು ಏಕೀಕರಣಕ್ಕೆ ಒತ್ತಾಯಿಸತೊಡಗಿದರು. ಕಾಂಗ್ರೆಸ್ಸೇತರ ಪಕ್ಷಗಳ ಕೆಲವು ನಾಯಕರು ರಾಜ್ಯ ನಿರ್ಮಾಣವನ್ನೇ ಪ್ರಮುಖ ಗುರಿಯಾಗಿಟ್ಟುಕೊಂಡು ರೂಪಿಸಿದ ಸಂಸ್ಥೆಯೇ ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು. ಈ ಮೊದಲೇ ಪ್ರಸ್ತಾಪಿಸಿರುವಂತೆ ೨೧-೪-೧೯೫೩ರಂದು, ಅಂದರೆ ಹುಬ್ಬಳ್ಳಿ ಗಲಭೆ ನಡೆದ ಎರಡು ದಿನಕ್ಕೆ ಬಳ್ಳಾರಿ ನಗರ ಮತ್ತು ತಾಲ್ಲೂಕಿನ ಸಮಸ್ಯೆಯ ಪರಿಶೀಲನೆಗೆ ಎಲ್. ಎಸ್. ಮಿಶ್ರಾ ಸಮಿತಿಯ ನೇಮಕ ಆಯಿತು. ಮಿಶ್ರಾ ಅವರು ೨೭-೪-೧೯೫೩ರಿಂದಲೇ ಬಳ್ಳಾರಿಯಲ್ಲಿ ವಿಚಾರಣೆಯನ್ನು ಆರಂಭಿಸಿದರು. ೧೦-೫-೧೯೫೩ರಂದು ಮಿಶ್ರಾ ವರದಿಯು ಸಲ್ಲಿಕೆಯಾಗಿ, ೧೩-೮-೧೯೫೩ರಿಂದ ೧೯-೮-೧೯೫೩ರವರೆಗೆ ಲೋಕಸಭೆಯಲ್ಲಿ ಆ

ಬಗ್ಗೆ ಚರ್ಚೆ ನಡೆಯಿತು. ಚರ್ಚೆಯಲ್ಲಿ ಕರ್ನಾಟಕದ ಪರವಾಗಿ ಪ್ರಮುಖವಾಗಿ ಎಸ್. ನಿಜಲಿಂಗಪ್ಪ, ಅಳವಂಡಿ ಶಿವಮೂರ್ತಿಸ್ವಾಮಿ, ಟಿ. ಸುಬ್ರಹ್ಮಣ್ಯಂ, ಸ್ವಾಮಿ ರಮಾನಂದ ತೀರ್ಥ, ಎಂ. ಎಸ್. ಗುರುಪಾದಸ್ವಾಮಿ, ಎನ್. ರಾಚಯ್ಯ ಅವರು ಪಾಲ್ಗೊಂಡರು. ಇವರೆಲ್ಲರ ಚರ್ಚೆಯಲ್ಲಿ ಬಳ್ಳಾರಿಯಂತೆಯೇ ಮದ್ರಾಸ್ ಸರ್ಕಾರಕ್ಕೆ ಸೇರಿಕೊಂಡ ದಕ್ಷಿಣ ಕನ್ನಡ, ನೀಲಗಿರಿ, ಕೊಳ್ಳೇಗಾಲ ಭಾಗಗಳೂ ಆ ಸಂದರ್ಭದಲ್ಲೇ ಮೈಸೂರು ಸಂಸ್ಥಾನಕ್ಕೆ ಸೇರುವುದು ಸೂಕ್ತ ಎಂಬ ವಿಚಾರವು ಪ್ರಮುಖವಾಗಿತ್ತು. ಸಚಿವ ಸಂಪುಟವು ಮಿಶ್ರಾ ವರದಿಯನ್ನು ೨೦-೫-೧೯೫೩ರಂದು ಸ್ವೀಕರಿಸಿತು. ಬಳ್ಳಾರಿ ತಾಲ್ಲೂಕು ಇಡಿಯಾಗಿ, ಕೆಲವು ತಾತ್ಕಾಲಿಕ ಏರ್ಪಾಡುಗಳಿಗೆ ಒಳಪಟ್ಟು ಮೈಸೂರು ಸಂಸ್ಥಾನಕ್ಕೆ ಸೇರಬೇಕು ಎಂಬುದು ಮಿಶ್ರಾ ವರದಿಯ ಪ್ರಮುಖ ಅಂಶವಾಗಿತ್ತು.

ಅ.ಕ.ರಾ.ನಿ. ಪರಿಷತ್ತಿನ ಮೊದಲ ಅಧಿವೇಶನ ೨೮-೫-೧೯೫೩ರಂದು ದಾವಣಗೆರೆಯಲ್ಲಿ ನಡೆಯಿತು. ಕೆ. ಆರ್. ಕಾರಂತ ಅದರ ಅಧ್ಯಕ್ಷತೆ ವಹಿಸಿದ್ದರು. ಉದ್ಘಾಟನೆ ಮಾಡಿದವರು ಅಳವಂಡಿ ಶಿವಮೂರ್ತಿಸ್ವಾಮಿ. ೧೯೫೩ರ ಸೆಪ್ಟೆಂಬರ್ ಮೊದಲ ವಾರದಲ್ಲಿ 'ಕರ್ನಾಟಕ ವಾರ'ವನ್ನು ಆಚರಿಸಲು ಅ.ಕ.ರಾ.ನಿ. ಪರಿಷತ್ತು ಕರೆ ನೀಡಿತು. ವಿದ್ಯಾರ್ಥಿಗಳು, ವ್ಯಾಪಾರಿಗಳು, ನಾಗರಿಕರು ಒಂದಾಗಿ ಹರತಾಳ, ಸಭೆ, ಮೆರವಣಿಗೆಗಳನ್ನು ನಡೆಸಿದರು. ಅ.ಕ.ರಾ.ನಿ. ಪರಿಷತ್ತು ಹಲವು ಮುಖಂಡರನ್ನು ಮುಂಬಯಿ ಸರ್ಕಾರವು ಬಂಧಿಸಿತು. ಇದನ್ನು ಪ್ರತಿಭಟಿಸಿ ಅ.ಕ. ರಾ.ನಿ. ಪರಿಷತ್ತು ೨೬-೯-೧೯೫೩ರಂದು ಪ್ರತಿಭಟನಾ ದಿನವನ್ನು ಆಚರಿಸಿತು. ೧೪-೯-೧೯೫೩ರಂದು ಎಸ್. ನಿಜಲಿಂಗಪ್ಪನವರ ನೇತೃತ್ವದಲ್ಲಿ ಕೆ. ಪಿ. ಸಿ. ಸಿ. ನಿಯೋಗವು ಪ್ರಧಾನಿ ನೆಹರೂ ಅವರನ್ನು ಭೇಟಿ ಮಾಡಿ, ಹುಬ್ಬಳ್ಳಿಯ ಉಪಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸೋಲಾಗಿ, ಕರ್ನಾಟಕ ಏಕೀಕರಣ ಪಕ್ಷದ ಅಭ್ಯರ್ಥಿಗೆ ಗೆಲುವಾಗಿರುವುದನ್ನು ಪ್ರಸ್ತಾಪಿಸಿದರು. ಆಗ ನೆಹರೂ ಅವರು ಇಡಿಯಾಗಿ ಭಾರತಕ್ಕೆ ಸಂಬಂಧಿಸಿದಂತೆಯೇ ರಾಜ್ಯ ಪುನರ್ವಿಂಗಡಣಾ ಆಯೋಗವೊಂದನ್ನು ಸಧ್ಯದಲ್ಲೇ ರಚಿಸಿಸುವುದಾಗಿ ಭರವಸೆ ನೀಡಿದರು.

೧-೧೦-೧೯೫೩ರಂದು ಆಂಧ್ರ ಪ್ರಾಂತ ಉದಯವಾಯಿತು. ಅದೇ ದಿನ ಬಳ್ಳಾರಿಯು ಮೈಸೂರು ಸಂಸ್ಥಾನದೊಡನೆ ವಿಲೀನಗೊಂಡಿತು. ೨-೧೦-೧೯೫೩ರಂದು ಬಳ್ಳಾರಿಯ ಬಿ.ಡಿ. ಎ.ಎ. ಮೈದಾನದಲ್ಲಿ ಬಳ್ಳಾರಿ-ಮೈಸೂರು ವಿಲೀನ ಸಮಾರಂಭ ನಡೆಯಿತು. ಅದರಲ್ಲಿ ಮೈಸೂರು ರಾಜ್ಯದ ಮುಖ್ಯಮಂತ್ರಿ ಕೆ. ಹನುಮಂತಯ್ಯ ಪಾಲ್ಗೊಂಡು, ಬಳ್ಳಾರಿಯ ಜನತೆಯನ್ನು ಮೈಸೂರು ರಾಜ್ಯಕ್ಕೆ ಸ್ವಾಗತಿಸಿದರು. ಈ ಸಂತೋಷದ ಸಮಾರಂಭಕ್ಕೆ ಸಿದ್ಧತೆ ಮಾಡುತ್ತಿದ್ದ ರಂಜಾನ್ ಸಾಹೇಬ್ ಎಂಬ ಕನ್ನಡ ಪ್ರೇಮಿ ಕೆಲವು ದುಷ್ಟರ ಸಂಚಿಗೆ ಸಿಕ್ಕಿ ೩೦-೯-೧೯೫೩ರ ರಾತ್ರಿ ಆಸಿಡ್ ಬಲ್ಬ್‌ಗೆ ಬಲಿಯಾದದ್ದು ಆ ಸಂದರ್ಭದ ಕಹಿ ನೆನಪಾಗಿದೆ. ಅ.ಕ. ರಾ.ನಿ. ಪರಿಷತ್ತಿನ ಎರಡನೆಯ ಅಧಿವೇಶನವು ೩-೧೨-೧೯೫೩ರಂದು ಹಂಪೆಯಲ್ಲಿ ನಡೆಯಿತು. ಆ ಸಂದರ್ಭದಲ್ಲಿ ಅಳವಂಡಿ ಶಿವಮೂರ್ತಿ ಸ್ವಾಮಿಯವರನ್ನು ಪರಿಷತ್ತು ತನ್ನ 'ಡಿಕ್ಟೇಟರ್' ಎಂದು ನಾಮಕರಣ ಮಾಡಿತು.

೨೨-೧೨-೧೯೫೩ರಂದು ನೆಹರೂ ಅವರು ಲೋಕಸಭೆಯಲ್ಲಿ ಭಾರತದ ರಾಜ್ಯಗಳ ಪುನರ್ವಿಂಗಡನೆಗಾಗಿ ಫಜಲ್ ಅಲಿ ಅವರ ಅಧ್ಯಕ್ಷತೆಯಲ್ಲಿ ವರಿಷ್ಠ ಸಮಿತಿಯೊಂದನ್ನು ನೇಮಿಸಲಿರುವುದಾಗಿ ಘೋಷಿಸಿದರು. ೨೯-೧೨-೧೯೫೩ರಂದು ರಾಜ್ಯ ಪುನರ್ವಿಂಗಡಣಾ ಆಯೋಗದ ನೇಮಕವಾಯಿತು. ೩೦-೬-೧೯೫೫ರ ಒಳಗೆ ವರದಿಯನ್ನು ಸಲ್ಲಿಸಲು ಸೂಚನೆ ನೀಡಲಾಯಿತು. ಆಯೋಗದ ಅಧ್ಯಕ್ಷರಾಗಿ ಒರಿಸ್ಸಾ ರಾಜ್ಯಪಾಲರಾಗಿದ್ದ ಫಜಲ್ ಅಲಿ ಮತ್ತು ಸದಸ್ಯರಾಗಿ ರಾಜ್ಯಸಭಾ ಸದಸ್ಯ ಹೃದಯನಾಥ ಕುಂಜ್ರೂ ಮತ್ತು ಈಜಿಪ್ಟಿನಲ್ಲಿ ಭಾರತದ ರಾಯಭಾರಿಯಾಗಿದ್ದ ಕೆ. ಎಂ. ಪಣಿಕ್ಕರ್ ನಾಮಕರಣಗೊಂಡಿದ್ದರು. ೨೩-೨-೧೯೫೪ರಂದು ಆಯೋಗವು ನೀಡಿದ ಪತ್ರಿಕಾ ಪ್ರಕಟಣೆಗೆ ಉತ್ತರವಾಗಿ ಸುಮಾರು ೧,೫೨,೨೫೦ ಮನವಿಗಳು ಸ್ವೀಕೃತವಾದುವು.ಅವುಗಳಲ್ಲಿ ಸುಮಾರು ೨೦೦೦ ಮನವಿಗಳು ವಿಸ್ತೃತವಾಗಿದ್ದವು. ಜೊತೆಗೆ ೧೯೫೪ರ ಮಾರ್ಚ್ ತಿಂಗಳಿನ ಆರಂಭದಲ್ಲಿ ಆರಂಭವಾದ ಗೌಪ್ಯ ಸಂದರ್ಶನ ಕಾರ್ಯಕ್ರಮ ಮುಗಿದದ್ದು ೧೯೫೪ರ ಅಂತ್ಯಕ್ಕೆ. ೮-೪-೧೯೫೪ರಿಂದ ದೇಶದ ವಿವಿಧ ಭಾಗಗಳಲ್ಲಿ ಸಂಚರಿಸಿದ ಆಯೋಗವು ಸುಮಾರು ೯೦೦೦ ವ್ಯಕ್ತಿಗಳನ್ನು ಸಂದರ್ಶಿಸಿತು. ಅಂತಿಮವಾಗಿ ಆಯೋಗವು ತನ್ನ ವರದಿಯನ್ನು ೩೦-೯-೧೯೫೫ರಂದು ಸಲ್ಲಿಸಿತು.

ನೇಮಕಗೊಂಡ ತಕ್ಷಣವೇ ತನ್ನ ಕಾರ್ಯವನ್ನು ಆರಂಭಿಸಿದ ಆಯೋಗವು ವಿಳಂಬಕ್ಕೆ ಅವಕಾಶವಿಲ್ಲದಂತೆ ಕಾರ್ಯ ತತ್ಪರವಾಯಿತು. ೧೯೫೪ರಲ್ಲಿ ಕಲ್ಕತ್ತೆಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನದಲ್ಲಿ ರಾಜ್ಯ ಪುನರ್ವಿಂಗಡಣೆಗೆ ಸಂಬಂಧಿಸಿದಂತೆ ಪ್ರಾಂತೀಯ ಕಾಂಗ್ರೆಸ್ ಸಮಿತಿಗಳು ಮನವಿಯನ್ನು ಸಲ್ಲಿಸಬಹುದೆಂದು ತೀರ್ಮಾನವಾಯಿತು. ಅನಂತರ ಹುಬ್ಬಳ್ಳಿಯಲ್ಲಿ ೪-೨-೧೯೫೪ರಂದು ನಡೆದ ಕೆ.ಪಿ.ಸಿ.ಸಿ. ಮಹಾಸಭೆಯು, ೨೯-೪-೧೯೪೯ರಂದು ದಾವಣಗೆರೆಯಲ್ಲಿ ನಡೆದ ಅಖಿಲ ಕರ್ನಾಟಕ ಪ್ರತಿನಿಧಿಗಳ ಸಮ್ಮೇಳನದಲ್ಲಿ ಬಿ. ಬಸವಲಿಂಗಪ್ಪನವರು ಮಂಡಿಸಿ, ಕೋ. ಚೆನ್ನಬಸಪ್ಪನವರು ಅನುಮೋದಿಸಿದ್ದ ನಿರ್ಣಯದ ಪ್ರಕಾರ ಕೆ.ಪಿ.ಸಿ.ಸಿ. ಯು ಎಲ್ಲಾ ಕನ್ನಡಿಗರ ಪರವಾಗಿ ಮನವಿಯನ್ನು ಸಿದ್ಧಪಡಿಸಿ, ರಾಜ್ಯ ಪುನರ್ವಿಂಗಡಣಾ ಆಯೋಗಕ್ಕೆ ಸಲ್ಲಿಸಲು ವ್ಯವಸ್ಥೆ ಮಾಡುವ ಅಧಿಕಾರವನ್ನು ಎಸ್. ನಿಜಲಿಂಗಪ್ಪನವರಿಗೆ ನೀಡಿತು. ಆರ್. ಎ. ಜಹಗೀರದಾರ್ ಅವರ ಅಧ್ಯಕ್ಷತೆಯಲ್ಲಿ ನೇಮಕಗೊಂಡ

ಸಮಿತಿಯು, ಆವರೆಗಿನ ಎಲ್ಲಾ ಬೆಳವಣಿಗೆಗಳನ್ನೂ ಗಮನದಲ್ಲಿಟ್ಟುಕೊಂಡು, ಆವರೆಗಿನ ಎಲ್ಲಾ ಅಧ್ಯಯನಗಳನ್ನು ಆಧರಿಸಿ ಸಿದ್ಧಪಡಿಸಿದ ಮನವಿಯನ್ನು ಆಯೋಗಕ್ಕೆ ಸಲ್ಲಿಸಿತು. ಇಡಿಯಾಗಿ ಮೈಸೂರು ಸಂಸ್ಥಾನ; ಮುಂಬಯಿ ಕರ್ನಾಟಕದ ಧಾರವಾಡ, ಉತ್ತರ ಕನ್ನಡ ಜಿಲ್ಲೆ, ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಗಳು ಸಂಪೂರ್ಣವಾಗಿ ಮತ್ತು ಅವುಗಳಿಗೆ ಹೊಂದಿಕೊಂಡ ಕೆಲವು ಪ್ರದೇಶಗಳು; ಹೈದರಾಬಾದ್ ಭಾಗದ ಬೀದರ್, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳು; ಮದ್ರಾಸ್ ರಾಜ್ಯದ ದಕ್ಷಿಣ ಕನ್ನಡ ಹಾಗೂ ನೀಲಗಿರಿ ಜಿಲ್ಲೆಗಳು ಮತ್ತು ಅವುಗಳಿಗೆ ಹೊಂದಿಕೊಂಡ ಕೊಯಮತ್ತೂರು, ಸೇಲಂ ಜಿಲ್ಲೆಯ ಭಾಗಗಳು; ಆಂಧ್ರ ಪ್ರದೇಶದ ಅನಂತರಪುರ ಜಿಲ್ಲೆ ಮತ್ತು ಕರ್ನೂಲು ಜಿಲ್ಲೆಯ ಕೆಲವು ಭಾಗಗಳು ಮತ್ತು ಕೊಡಗು ಜಿಲ್ಲೆಯನ್ನು ಸೇರಿಸಿ, ಕರ್ನಾಟಕ ರಾಜ್ಯವನ್ನು ನಿರ್ಮಿಸಲು ಕೆ. ಪಿ. ಸಿ.ಸಿ.ಯು ಮನವಿ ಮಾಡಿತು. ಅಂತೆಯೇ ದಾವಣಗೆರೆಯ ಅಖಿಲ ಕರ್ನಾಟಕ ಪ್ರತಿನಿಧಿ ಸಮಾವೇಶ, ಗುಡಿಬಂಡೆ ಪುರಸಭೆ, ಹುಬ್ಬಳ್ಳಿಯ ಬಹುತೇಕ ಸಂಘ-ಸಂಸ್ಥೆಗಳು ಮತ್ತು ಗಣ್ಯರು, ಅ.ಕ.ರಾ.ನಿ. ಪರಿಷತ್ತು, ಮಂಗಳೂರಿನ ಅನೇಕ ಸಂಘ-ಸಂಸ್ಥೆಗಳು, ಬೆಳಗಾವಿಯಲ್ಲಿ ಬೆಳಗಾವಿ ಜಿಲ್ಲಾ ಕಾಂಗ್ರೆಸ್ ಸಮಿತಿ, ಬೆಳಗಾವಿ ನಗರ ಕಾಂಗ್ರೆಸ್ ಸಮಿತಿ, ಕೆ. ಎಲ್. ಇ. ಸೊಸೈಟಿ ಮುಂತಾದ ಸಂಘ-ಸಂಸ್ಥೆಗಳಲ್ಲದೆ ಅಲ್ಲಿಯ ಅಲ್ಪಸಂಖ್ಯಾತ ಜನಾಂಗದವರು ತಾವು ಕರ್ನಾಟಟಕದ ಪರ ಇರುವುದನ್ನು ತಿಳಿಸಿದರು. ಬೆಂಗಳೂರಿನಲ್ಲೂ ಆಯೋಗವು ಹಲವಾರು ಗಣ್ಯರನ್ನು ಕಂಡು ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿತು. ಇದೇ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಮುಖ್ಯಮಂತ್ರಿ ಕೆ. ಹನುಮಂತಯ್ಯನವರು, ರಾಜ್ಯದಾದ್ಯಂತ ಸಂಚರಿಸುತ್ತಾ ಸಂಸ್ಥಾನವು ಕರ್ನಾಟಕ ಏಕೀಕರಣದ ಪರ ಇರುವುದನ್ನು ಜನತೆಗೆ ಮನದಟ್ಟು ಮಾಡಿಕೊಡುತ್ತಿದ್ದರು. ೧೦-೧೦-೧೯೫೫ ರಂದು ಆಯೋಗವು ಕೇಂದ್ರ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ರಾ. ಪು. ಆಯೋಗವು ಶಿಫಾರ್ಸು ಮಾಡಿದ್ದ ಪ್ರಕಾರ ಕರ್ನಾಟಕವು ಈ ಕೆಳಕಂಡ ಪ್ರದೇಶಗಳನ್ನು ಸೇರಿ ರಚನೆ ಆಗಬೇಕಾಗಿತ್ತು.

೧. ಹಾಲಿ ಬಳ್ಳಾರಿ ಜಿಲ್ಲೆಯ ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ ತಾಲ್ಲೂಕುಗಳು ಮತ್ತು ತುಂಗಭದ್ರಾ ಅಣೆಕಟ್ಟು ಇರುವ ಮಲ್ಲಾಪುರ ಉಪ ತಾಲ್ಲೂಕಿನ ಸ್ವಲ್ಪ ಭಾಗಗಳನ್ನು ಬಿಟ್ಟು ಈಗ ಇರುವ ಮೈಸೂರು ರಾಜ್ಯ......

೨. ಮುಂಬಯಿ ರಾಜ್ಯದ ದಕ್ಷಿಣದ ಧಾರವಾಡ, ಬಿಜಾಪುರ, ಉತ್ತರ ಕನ್ನಡ ಮತ್ತು ಚಾಂದಗಡ ತಾಲ್ಲೂಕನ್ನುಳಿದು ಬೆಳಗಾವಿ-ಈ ನಾಲ್ಕೂ ಜಿಲ್ಲೆಗಳು.

೩. ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳು.

೪. ಕಾಸರಗೋಡು ತಾಲ್ಲೂಕನ್ನುಳಿದು ದಕ್ಷಿಣ ಕನ್ನಡ ಜಿಲ್ಲೆ.

೫. ಮದ್ರಾಸ್ ರಾಜ್ಯದ ಕೊಯಮತ್ತೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕು.

೬. ಕೊಡಗು.

ಈ ವರದಿಯಿಂದ ಕನ್ನಡಿಗರಿಗೆ ಆಘಾತವಾಯಿತು. ಕೇವಲ ಎರಡು ವರ್ಷದ ಹಿಂದೆ ಸೇರಿದ್ದ ಬಳ್ಳಾರಿ ಜಿಲ್ಲೆಯ ಮೂರು ತಾಲ್ಲೂಕುಗಳು, ದಕ್ಷಿಣ ಕನ್ನಡ ಜಿಲ್ಲೆಯ ಕಾಸರಗೋಡು ತಾಲ್ಲೂಕು, ಇಡಿಯಾಗಿ ಬೀದರ್ ಜಿಲ್ಲೆ ಕರ್ನಾಟಕಕ್ಕೆ ಸೇರಿರಲಿಲ್ಲ. ಕಾಸರಗೋಡಿನ ಜನರಿಗೆ ನೋವಾಗಿತ್ತು. ಅದನ್ನು ಆ ಭಾಗದ ಕವಿ ಕಯ್ಯಾರ ಕಿಞ್ಞಣ್ಣ ರೈ ತಮ್ಮ 'ಬೆಂಕಿ ಬಿದ್ದಿದೆ ಮನೆಗೆ' ಕವನದಲ್ಲಿ ಅಭಿವ್ಯಕ್ತಿ ಮಾಡಿದ್ದಾರೆ. ಬಳ್ಳಾರಿಯ ಭಾಗದ ಜನರು ೧೬-೧೧-೧೯೫೫ರಿಂದ ನೀರಿನ ಸತ್ಯಾಗ್ರಹವನ್ನು ಆರಂಭಿಸಿದರು. ಮಹಿಳೆ, ಮಕ್ಕಳೆನ್ನದೆ ಬಳ್ಳಾರಿಯ ಆಸುಪಾಸಿನ ಜನತೆ ಈ ಚಳುವಳಿಯಲ್ಲಿ ಭಾಗವಹಿಸಿತು.

ರಾ. ಪು. ಆಯೋಗದ ವರದಿಯ ಬಗ್ಗೆ ಸಾರ್ವಜನಿಕರಿಗೆ ಇದ್ದ ಅಭಿಪ್ರಾಯಗಳನ್ನು ಗಮನಿಸಿಯೇ ಲೋಕಸಭೆಯಲ್ಲಿ ಸುದೀರ್ಘ ಚರ್ಚೆ ನಡೆದು ೧೬-೩-೧೯೫೬ರಂದು ಭಾರತ ಸರ್ಕಾರವು ವಿಧೇಯಕವನ್ನು ಮಂಡಿಸಿತು. ಆ ಪ್ರಕಾರ ಕೆಳಕಂಡ ಭಾಗಗಳು ಸೇರಿ ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕಾಗಿತ್ತು.

೧. ಇಡಿಯಾಗಿ ಮೈಸೂರು ರಾಜ್ಯ.

೨. ಮುಂಬಯಿ ರಾಜ್ಯದ ಬಿಜಾಪುರ, ಧಾರವಾಡ, ಉತ್ತರ ಕನ್ನಡ ಮತ್ತು ಬೆಳಗಾವಿ (ಚಾಂದಗಡ ತಾಲ್ಲೂಕನ್ನು ಬಿಟ್ಟು) ಜಿಲ್ಲೆಗಳು.

೩. ಹೈದರಾಬಾದ್ ರಾಜ್ಯದ ಗುಲಬರ್ಗಾ ಜಿಲ್ಲೆ (ಕೋಡಂಗಲ್ಲು ಮತ್ತು ತಾಂಡೂರು ತಾಲ್ಲೂಕುಗಳನ್ನು ಬಿಟ್ಟು), ರಾಯಚೂರು ಜಿಲ್ಲೆ (ಆಲಂಪುರ ಮತ್ತು ಗದ್ವಾಲ ತಾಲ್ಲೂಕುಗಳನ್ನು ಬಿಟ್ಟು) ಮತ್ತು ಬೀದರ್ ಜಿಲ್ಲೆಯ ಬೀದರ್, ಭಾಲ್ಕಿ, ಔರಾದ್, ಹುಮನಾಬಾದ್ ತಾಲ್ಲೂಕುಗಳು.

೪. ಮದ್ರಾಸ್ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆ (ಕಾಸರಗೋಡು ತಾಲ್ಲೂಕು ಮತ್ತು ಅಮೀನ್ ದ್ವೀಪಗಳನ್ನು ಬಿಟ್ಟು) ಮತ್ತು ಕೊಯಮತ್ತೂರು ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕು.

೫. ಕೊಡಗು.

ರಾ. ಪು. ಆಯೋಗದ ಶಿಫಾರಸುಗಳ ಪ್ರಕಾರ ಬೀದರ್ ಜಿಲ್ಲೆಯ ಬಸವಕಲ್ಯಾಣ ಮಹಾರಾಷ್ಟ್ರ ಪ್ರಾಂತಕ್ಕೂ, ಗದ್ವಾಲ್ ತಾಲ್ಲೂಕು ಕರ್ನಾಟಕಕ್ಕೂ ಸೇರಬೇಕಾಗಿತ್ತು. ಆದರೆ ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ನಾಯಕರ ನಡುವೆ ಸಮಾಲೋಚನೆ ನಡೆಸಿ, ಆದ ಒಪ್ಪಂದದ ಪ್ರಕಾರ ಬಸವಕಲ್ಯಾಣವು ಬೀದರ್ ಜಿಲ್ಲೆಗೂ, ಗದ್ವಾಲ್ ತಾಲ್ಲೂಕನ್ನು ಆಂಧ್ರಕ್ಕೂ ಸೇರಿಸಲಾಯಿತು.

ವಿಧೇಯಕವನ್ನು ಎಲ್ಲಾ ರಾಜ್ಯಗಳ ವಿಧಾನ ಮಂಡಲಗಳೂ ಒಪ್ಪಿದ ನಂತರ, ೧೮-೪-೧೯೫೬ರಂದು ಗೃಹ ಸಚಿವ ಗೋವಿಂದ ವಲ್ಲಭ ಪಂತರು ಲೋಕಸಭೆಯಲ್ಲಿ ಮಂಡಿಸಿದರು. ಮೂರು ದಿನಗಳ ಚರ್ಚೆಯ ನಂತರ ವಿಧೇಯಕವನ್ನು ಸಂಯುಕ್ತ ಪರಿಶೀಲಕ ಸಮಿತಿಗೆ ಕಳುಹಿಸಲು ನಿರ್ಣಯ ಮಾಡಲಾಯಿತು. ಈ ನಿರ್ಣಯವನ್ನು ೨-೫-೧೯೫೬ರಂದು ರಾಜ್ಯಸಭೆಯೂ ಒಪ್ಪಿತ್ತು. ಅರವತ್ತು ಜನರಿದ್ದ ಸಂಯುಕ್ತ ಪರಿಶೀಲನ ಸಮಿತಿಯಲ್ಲಿ ಕನ್ನಡಿಗರಾದ ಎಸ್. ನಿಜಲಿಂಗಪ್ಪ, ಬಿ. ಎನ್. ದಾತಾರ್ ಮತ್ತು ಶ್ರೀನಿವಾಸ ಮಲ್ಯ ಇದ್ದರು. ಪರಿಶೀಲಕ ಸಮಿತಿಯು ಪರಿಶೀಲಿಸಿದ ವಿಧೇಯಕವು ಲೋಕಸಭೆಯ ಮುಂದೆ ೨೬-೭-೧೯೫೬ರಂದು ಚರ್ಚೆಗೆ ಬಂದು ೧೧-೮-೧೯೫೬ರಂದು ಸ್ವೀಕರಿಸಲ್ಪಟ್ಟಿತು. ೧೬-೮-೧೯೫೬ರಿಂದ ೨೫-೮-೧೯೫೬ರವರೆಗೆ ವಿಧೇಯಕದ ಬಗ್ಗೆ ರಾಜ್ಯ ಸಭೆಯಲ್ಲೂ ಚರ್ಚೆ ನಡೆದು, ಅಲ್ಲಿಯೂ ಒಪ್ಪಿಗೆ ದೊರೆಯಿತು. ೩೧-೮-೧೯೫೬ರಂದು ರಾ. ಪು. ವಿಧೇಯಕಕ್ಕೆ ರಾಷ್ಟ್ರಪತಿಗಳ ಅಂಗೀಕಾರವೂ ದೊರೆಯಿತು. ೧೯೫೬ರ ನವೆಂಬರ್ ಒಂದರಂದು ಪುನರ್ವಿಂಗಡಣೆಗೊಂಡ ರಾಜ್ಯಗಳೆಲ್ಲವೂ ಅಸ್ತಿತ್ವಕ್ಕೆ ಬರುವುವೆಂಬ ಸಾರ್ವಜನಿಕ ಪ್ರಕಟಣೆ ಹೊರಬಿದ್ದಿತು. ಹೊಸದಾಗಿ ನಿರ್ಮಾಣಗೊಂಡ ಕನ್ನಡಿಗರ ರಾಜ್ಯದ ಹೆಸರು 'ಮೈಸೂರು' ಎಂದೇ ಉಳಿಯಿತು. ಕಾಸರಗೋಡು ಮತ್ತು ಸೊಲ್ಲಾಪುರಗಳು ಕರ್ನಾಟಕದಿಂದ ಹೊರಗುಳಿದದ್ದು ನೋವಿನ ವಿಷಯವಾಯಿತು.

ಎಲ್ಲಾ ಕನ್ನಡ ಪ್ರದೇಶಗಳ ವಿಧಾನಸಭಾ ಸದಸ್ಯರೂ ೨೧-೧೦-೧೯೫೬ರಂದು ಬೆಂಗಳೂರಿನಲ್ಲಿ ಸಭೆ ಸೇರಿ ಎಸ್. ನಿಜಲಿಂಗಪ್ಪನವರನ್ನು ತಮ್ಮ ನಾಯಕನನ್ನಾಗಿ ಸರ್ವಾನುಮತದಿಂದ ಆಯ್ಕೆ ಮಾಡಿಕೊಂಡರು. ಮೈಸೂರು ಸಂಸ್ಥಾನ ಮತ್ತು ಕರ್ನಾಟಕ ಪ್ರದೇಶಗಳೆರಡರ ಜೊತೆಗೂ ಸಂಪರ್ಕ ಹೊಂದಿದ್ದ ನಿಜಲಿಂಗಪ್ಪನವರು ಏಕೀಕರಣಗೊಂಡ ಕರ್ನಾಟಕದ ಪ್ರಥಮ ಮುಖ್ಯಮಂತ್ರಿ ಆದರು. ೧೯೫೬ರ ನವೆಂಬರ್ ಒಂದನೆಯ ತಾರೀಕು ಬೆಳಿಗ್ಗೆ ನಡೆದ ಸಮಾರಂಭದಲ್ಲಿ 'ವಿಶಾಲ ಮೈಸೂರು' ರಾಜ್ಯವನ್ನು ರಾಷ್ಟ್ರಪತಿ ಬಾಬೂ ರಾಜೇಂದ್ರ ಪ್ರಸಾದ್ ಉದ್ಘಾಟಿಸಿದರು. ಅಂದೇ ಹೊಸ ರಾಜ್ಯದ ರಾಜ್ಯಪಾಲರಾಗಿ ಜಯಚಾಮರಾಜ ಒಡೆಯರ್ ಮತ್ತು ಮುಖ್ಯಮಂತ್ರಿಯಾಗಿ ಎಸ್. ನಿಜಲಿಂಗಪ್ಪ ಅವರು ಅಧಿಕಾರ ಸ್ವೀಕರಿಸಿದರು. ಅದೇ ದಿನ ಹಂಪೆಯಲ್ಲಿ ವಿರೂಪಾಕ್ಷನ ಸನ್ನಿಧಿಯಲ್ಲಿ ನಡೆದ ಕಾರ್ಯಕ್ರಮದಲ್ಲಿ, ಕರ್ನಾಟಕ ಕುಲಪುರೋಹಿತರೆನಿಸಿ ಖ್ಯಾತರಾದ ಆಲೂರು ವೆಂಕಟರಾಯರ ನೇತೃತ್ವದಲ್ಲಿ ರಾಜ್ಯೋತ್ಸವ ಕಾರ್ಯಕ್ರಮ ನಡೆಯಿತು. ಕನ್ನಡಿಗರ ಬಹುದಿನಗಳ ಕನಸು ನನಸಾದರೂ ಅನಂತಪುರ, ಮಡಕಶಿರಾ, ನೀಲಗಿರಿ, ಹೊಸೂರು, ಸೊಲ್ಲಾಪುರ, ಅಕ್ಕಲಕೋಟೆ ಮತ್ತು ಕಾಸರಗೋಡು ಪ್ರದೇಶಗಳು ವಿಶಾಲ ಮೈಸೂರಿನಲ್ಲಿ ವಿಲೀನವಾಗದೆ ಉಳಿದದ್ದು ಒಂದು ನೋವಾಗಿ ಈಗಲೂ ಕಾಡುತ್ತಿವೆ.

೧೯೭೩ರ ನವೆಂಬರ್ ಒಂದನೆಯ ತಾರೀಕು ರಾಜ್ಯದ ಹೆಸರು 'ಕರ್ನಾಟಕ ' ಎಂದು ಬದಲಾಯಿತು. ಬೆಳಗಾವಿ ನಗರ ತಮಗೆ ಸೇರಬೇಕೆಂದು ಮಹಾರಾಷ್ಟ್ರದ ರಾಜಕಾರಣಿಗಳು ತಗಾದೆ ಆರಂಭಿಸಿದಾಗ, ಬೆಳಗಾವಿ ಮತ್ತು ಕಾಸರಗೋಡಿನ ಸಮಸ್ಯೆಯನ್ನು ಬಗೆಹರಿಸಲು, ಮೊದಲಿಗೆ ಪಾಟಸ್ಕರ್ ಆಯೋಗ ಮತ್ತು ಅದರ ವರದಿ ಸಮರ್ಪಕ ಎನಿಸದಿದ್ದಾಗ ಮಹಾಜನ್ ಆಯೋಗದ ನೇಮಕ ಆಯಿತು. ಮೊದಲಿಗೆ ಮೈಸೂರಿನವರು ಮಹಾಜನ್ ಆಯೋಗವನ್ನು ಒಪ್ಪಲಿಲ್ಲ. ಆದರೆ ಮಹಾರಾಷ್ಟ್ರದವರು ಮಹಾಜನ್ ಆಯೋಗವೇ ಬೇಕು ಎಂದರು. ಮಹಾಜನ್ ಆಯೋಗದ ವರದಿಯ ಪ್ರಕಾರ ಬೆಳಗಾವಿ ಕರ್ನಾಟಕದಲ್ಲೇ ಉಳಿಯುತ್ತದೆ ಎಂದು ತಿಳಿದಾಗ ಮಹಾರಾಷ್ಟ್ರದವರು, ತಮ್ಮ ಮಾತನ್ನೇ ಮರೆತು ಮಹಾಜನ್ ವರದಿಯನ್ನು ತಿರಸ್ಕರಿಸುತ್ತಿದ್ದಾರೆ. ಈ ಮಧ್ಯೆ ಕಾಸರಗೋಡು ಅತಂತ್ರವಾಗಿದೆ. ಮಹಾರಾಷ್ಟ್ರ, ಕರ್ನಾಟಕ, ಕೇರಳ ಗಡಿ ವಿವಾದವನ್ನು ಬಗೆಹರಿಸಲು ರಾಜಕಾರಣಿಗಳಿಗೆ ಆಸಕ್ತಿ ಇಲ್ಲವಾಗಿದೆ. ಈ ಚದುರಂಗದಾಟದಲ್ಲಿ ಗಡಿ ಭಾಗದ ಕನ್ನಡಿಗರು ನೋವಿನಿಂದ ನರಳುತ್ತಿದ್ದಾರೆ ಎಂಬುದನ್ನು ರಾಜಕಾರಣಿಗಳು ಅಲ್ಲಗಳೆಯಬಹುದು; ಜನತೆಯ ಅಳಲಿಗೆ ಪರಿಹಾರ ನೀಡಬಲ್ಲ ಜನ ಪ್ರತಿನಿಧಿಗಳು ಯಾವಾಗ ದೊರೆಯುತ್ತಾರೋ ಕಾದು ನೋಡಬೇಕಾಗಿದೆ.

# ಸಹಕಾರ ಚಳವಳಿ

ಸಿ. ರುದ್ರಪ್ಪ

ಶೋಷಣ ರಹಿತ ಸಮಾಜ ನಿರ್ಮಾಣದ ಬಗ್ಗೆ ಎಲ್ಲರೂ ಮಾತನಾಡುತ್ತಾರೆ. ಅದಕ್ಕೊಂದು ತಾತ್ವಿಕ ಹಿನ್ನೆಲೆಯನ್ನು ಒದಗಿಸಿಕೊಡುವವರ ಸಂಖ್ಯೆ ತುಂಬಾ ವಿರಳ. ಶೋಷಣೆ ನಿರ್ಮೂಲನೆ, ಬಡತನ ನಿವಾರಣೆ, ನಿರುದ್ಯೋಗ ನಿವಾರಣೆ, ಎಲ್ಲವೂ ಸವಕಲಾದಂತೆ ಕಾಣುತ್ತವೆ. ಆದರೆ ಕಪ್ಪು ಕಾರ್ಮೋಡದ ನಡುವೆಯೂ ಮಿಂಚಿನ ಹೊಳಪು ಕಂಡು ಬಂದುದು ಅದರ ಹಿಂದೆ.·

ಸಿದ್ಧವನಹಳ್ಳಿ ನಿಜಲಿಂಗಪ್ಪನವರಿಗೆ ತಾವು ನಂಬಿದ ತತ್ವವನ್ನು ಪ್ರತಿಪಾದಿಸುತ್ತಾ, ತಾವು ಹಿಡಿದ ಗುರಿಯನ್ನು ತಲುಪಲೇಬೇಕೆಂಬ ಹಟ ಇದ್ದುದು ಸಹಜ. ಸ್ವಾತಂತ್ರ್ಯ ಹೋರಾಟದಲ್ಲಿ ರಾಷ್ಟ್ರ ರಾಜಕೀಯ ಸ್ವಾತಂತ್ರ್ಯಗಳಿಸಬೇಕೆಂಬುದೇ ಅವರ ಉದ್ದೇಶವಾಗಿತ್ತು. ಸ್ವಾತಂತ್ರ್ಯಾನಂತರ ರಾಷ್ಟ್ರದ ಜನರ ಬದುಕಿಗೆ ಒಂದು ಹೊಸ ಅರ್ಥವನ್ನೇ ನೀಡಬೇಕು, ಹಲವು ಶತಮಾನಗಳ ಕಾಲದಿಂದ ಯಾತನೆಯ ಮೂಸೆಯಲ್ಲಿ ಕರಗಿಹೋಗುತ್ತಿದ್ದ ಕೆಲವು ಜೀವನದ ಮೌಲ್ಯಗಳು ಸಾಕಾರಗೊಳ್ಳಬೇಕು ಎಂಬ ನಿರ್ದಿಷ್ಟ ನಿಲುವು ಅವರದಾಗಿತ್ತು. ಅಂತಹ ನಿಲುವಿನಲ್ಲಿ ಇದ್ದುದು ಶೋಷಣರಹಿತ ಸಮಾಜ ನಿರ್ಮಾಣ.

''ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು'' ಎನ್ನುವುದರಲ್ಲಿ ಅವರಿಗೆ ಅಮಿತವಾದ ನಂಬಿಕೆ. ಕಾಯಕ ಸಿದ್ಧಾಂತದಲ್ಲಿ ವಿಶೇಷ ಆಸೆ. ಆದುದರಿಂದಲೇ ಸಿದ್ದವನಹಳ್ಳಿಯವರಿಗೆ ಸಹಕಾರತತ್ವ, ಆಚರಣೆ ತುಂಬಾ ಪ್ರಿಯ ಎನಿಸಿತು.

ತಮ್ಮ ಆರ್ಥಿಕ ಚಿಂತನೆಗೆ, ಜನಸಮೂಹದ ಹಿತರಕ್ಷಣೆಗೆ ಸಹಕಾರ ತತ್ವವನ್ನು ಸಮರ್ಥವಾಗಿ ಬಳಸಿಕೊಳ್ಳಬಹುದೆಂಬ ವಿಶ್ವಾಸ ಅವರದ್ದಾಗಿತ್ತು. ಅಂತೆಯೇ ಆ ದಿಸೆಯಲ್ಲಿ ವಿಶೇಷ ಪ್ರಯತ್ನಗಳನ್ನು ಮಾಡಿದರು.

ಅಧಿಕಾರದಲ್ಲಿದ್ದ ಅವಧಿಯಲ್ಲಿ ಕರ್ನಾಟಕದಲ್ಲಿ ಸಹಕಾರ ಚಳವಳಿ ಬಲವಾಗಿ ಬೇರೂರಲು ಸಿದ್ದವನಹಳ್ಳಿಯವರು ನೆರವಾದರು. ಸಹಕಾರ ತತ್ವದ ಕಾರ್ಯಾಚರಣೆಗೆ ಬಲವಾದ ಬೆನ್ನೆಲುಬು ನೀಡಬೇಕೆಂದು ಪ್ರತಿಪಾದಿಸಿದರು.

ಸಮೃದ್ಧ ಕರ್ನಾಟಕ ರಾಜ್ಯವನ್ನು ಕಟ್ಟಬೇಕೆಂಬ ಅವರ ಕನಸು, ನನಸಾಗಲೆ ಇಲ್ಲ. ಅಂತೆಯೇ ಸಹಕಾರ ಚಳವಳಿಯ ಬಗ್ಗೆ ಅವರ ಕನಸು ಕನಸಾಗಿಯೇ ಉಳಿದಿದೆಯೇ ಇಲ್ಲವೇ ನನಸಾಗಿದೆಯೇ ಕಾಲವೇ ಹೇಳಬೇಕು. ನಿಜಲಿಂಗಪ್ಪನವರನ್ನು ಸ್ಮರಿಸುವಾಗ ಅವರ ಕನಸಾದ ಸಹಕಾರ ಚಳವಳಿ ಕರ್ನಾಟಕದಲ್ಲಿ ಬೇರೂರಿರುವ ಬಗ್ಗೆ ಅರಿಯುವುದೂ ಸಹ ಅವರ ಸ್ವರೂಪದ ಸ್ಮರಣೆಯ ಒಂದು ಅಂಶವೇ ಆಗುತ್ತದೆ.

**ಕರ್ನಾಟಕದಲ್ಲಿ ಸಹಕಾರ**

ಭಾರತದ ಸಹಕಾರ ಕ್ಷೇತ್ರಕ್ಕೆ ೯೮ ವರ್ಷಗಳ ಭವ್ಯ ಇತಿಹಾಸವಿದೆ. ೧೯೦೪ರಲ್ಲಿ ಭಾರತದಲ್ಲಿ ಪ್ರಥಮವಾಗಿ ಸಹಕಾರಿ ಚಳುವಳಿ ಆರಂಭವಾದ ಬಗ್ಗೆ ದಾಖಲೆಗಳಿವೆ. ಬ್ರಿಟನ್ನಿನ ರಾಬರ್ಟ್ ಓವನ್ ಮತ್ತು ಜರ್ಮನಿಯ ರೈಫಿನ್ ಸಹೋದರರು ಸಹಕಾರ ತತ್ವ ಸೃಷ್ಟಿಗೆ ಕಾರಣರು ಎನ್ನಲಾಗಿದೆ.

೨೦ನೇ ಶತಮಾನದ ಆರಂಭದಲ್ಲಿ ಭಾರತದ ಪಂಜಾಬ್ ಪ್ರಾಂತ್ಯದಲ್ಲಿ ಹಿಂದೆಂದೂ ಕಾಣದ ಬರ ಪರಿಸ್ಥಿತಿ ತಲೆದೋರಿ ರೈತರು ಕಂಗಾಲಾಗಿ ಬ್ರಿಟಿಷ್ ಸರ್ಕಾರದ ವಿರುದ್ಧ ದಂಗೆ ಏಳುತ್ತಾರೆ. ಆರ್ಥಿಕ ನೆರವಿಗಾಗಿ ಮೊರೆ ಇಡುತ್ತಾರೆ. ಕೃಷಿ ಚಟುವಟಿಕೆಗಳಿಗೆ ಸಹಾಯ ಕೇಳುತ್ತಾರೆ. ಅಂದಿನ ಸರ್ಕಾರ ದಿಕ್ಕು ಕಾಣದೆ ರೈತರ ದಂಗೆಯನ್ನು ಅಡಗಿಸಲು ಬ್ರಿಟನ್‌ನಲ್ಲಿ ಪ್ರಯೋಗಿಸಲಾದ ಸಹಕಾರ ಪದ್ಧತಿಯನ್ನು ಜಾರಿಗೆ ತರಲು ಪ್ರಯತ್ನಿಸುತ್ತದೆ. ಆ ಪ್ರಯತ್ನವೇ ಭಾರತದಲ್ಲಿ ಸಹಕಾರ ಚಳವಳಿಯ ಆರಂಭಕ್ಕೆ ನಾಂದಿ ಎಂದು ತಿಳಿದುಬರುತ್ತದೆ. ೧೯೦೪ರಲ್ಲಿ ಸಹಕಾರ ತತ್ವಕ್ಕೆ ಸಂಬಂಧಿಸಿದಂತೆ ಕಾಯ್ದೆಯೊಂದು ಜಾರಿಗೆ ಬರುತ್ತದೆ. ಅದರಡಿ ಸಹಕಾರಿ ಸಂಘಗಳು ನೋಂದಣಿಯಾಗಿ ಕಾರ್ಯಾರಂಭ ಮಾಡುತ್ತವೆ.

ಪ್ರಪ್ರಥಮ ಕೃಷಿ ಪತ್ತಿನ ಸಹಕಾರ ಸಂಘ ಸ್ಥಾಪನೆಯ ಕೀರ್ತಿ ಕರ್ನಾಟಕಕ್ಕೆ ಸಲ್ಲುತ್ತದೆ. ೧೯೦೫ರಲ್ಲಿ ಈಗಿನ ಗದಗ್ ಜಿಲ್ಲೆಯ ಕಣಗಿನಹಾಳ ಗ್ರಾಮದಲ್ಲಿ ಸಿದ್ಧರಾಮನಗೌಡ, ಸಂಣರಾಮಗೌಡ ತಾಸೀಲರ ನೇತೃತ್ವದಲ್ಲಿ ಕೃಷಿ ಪತ್ತಿನ ಸಹಕಾರ ಸಂಘ ನೋಂದಣಿಯಾಗುತ್ತದೆ. ಅದೇ ಪ್ರಥಮ ದಾಖಲೆಯಾಗಿ ಕಂಡುಬರುತ್ತದೆ. ಇದೇ ಸಮಯದಲ್ಲಿ ಬೆಂಗಳೂರಿನಲ್ಲಿ ಗ್ರಾಹಕ ಸಹಕಾರ ಸಂಘ, ಗೃಹನಿರ್ಮಾಣ ಸಹಕಾರ ಸಂಘಗಳು ಆರಂಭವಾದಂತೆ ಕಾಣುತ್ತದೆ. ಕರ್ನಾಟಕದ ಜನತೆಯಲ್ಲಿ ಸಹಕಾರ ತತ್ವ ಮೈಗೂಡಿಕೊಂಡಿತ್ತು ಎಂಬುದಕ್ಕೆ ಇದೊಂದು ಮಹತ್ವದ ಸಾಕ್ಷಿ ಎನಿಸುತ್ತದೆ.

ಇಂದು ಸಹಕಾರ ಕ್ಷೇತ್ರ ನಿರೀಕ್ಷೆಗೆ ಮೀರಿ ಬೆಳೆದಿದೆ, ಬೆಳೆಯುತ್ತಲೂ ಇದೆ. ''ಆಡು ಮುಟ್ಟದ ಗಿಡವಿಲ್ಲ'' ಎಂಬಂತೆ ಸಹಕಾರ ತತ್ವ ಆವರಿಸದ ಜೀವನ ಪ್ರಾಧಾನವೇ ಇಲ್ಲವೇನೋ ಎನ್ನುವಂತಾಗಿದೆ. ರಾಷ್ಟ್ರದ, ರಾಜ್ಯದ ಅರ್ಥವ್ಯವಸ್ಥೆಯ ಮೇಲೆ ಸಹಕಾರ ರಂಗ ಪರಿಣಾಮ ಬೀರಿದೆ. ಸಾರ್ವಜನಿಕ ಅರ್ಥವ್ಯವಸ್ಥೆ, ಖಾಸಗಿ ಅರ್ಥವ್ಯವಸ್ಥೆಗೆ ಸರಿಸಮವಾಗಿ ಮೂರನೇ ಪರ್ಯಾಯ ವ್ಯವಸ್ಥೆಯಾಗಿ ಭದ್ರ ತಳಹದಿಯ ಮೇಲೆ ಸಂಧಾನ ವ್ಯವಸ್ಥೆ ರೂಪುಗೊಂಡಿದೆ.

## ಹಸಿರು ಕ್ರಾಂತಿ - ಶ್ವೇತ ಕ್ರಾಂತಿ

ಭಾರತದಲ್ಲಿ ಆಗಿಹೋದ ಹಸಿರು ಕ್ರಾಂತಿ, ಶ್ವೇತ ಕ್ರಾಂತಿಗಳಿಗೆ ಸಹಕಾರದ ಬೆಂಬಲ ಅವರ್ಣನೀಯ ಎಂದು ಚಿಂತಕರು ಅಭಿಪ್ರಾಯ ಪಡುತ್ತಾರೆ. ಬಡತನ ನಿವಾರಣೆ, ನಿರುದ್ಯೋಗ ಸಮಸ್ಯೆ ಪರಿಹಾರ, ಕೃಷಿ ಉತ್ಪನ್ನ ಹೆಚ್ಚಳ, ಕೃಷಿ ವಸ್ತುಗಳ ರೂಪಾಂತರ ಕಾರ್ಯ. ಕೃಷಿ ಸಾಲ ವಿತರಣೆ, ಮಾರಾಟ, ಗ್ರಾಹಕ ಚಟುವಟಿಕೆ, ಸಕ್ಕರೆ ಉತ್ಪಾದನೆ, ಗೊಬ್ಬರ ತಯಾರಿಕೆ, ಗೃಹನಿರ್ಮಾಣ, ಹಾಲು ಉತ್ಪಾದನೆ, ವ್ಯಾಪಾರ ವ್ಯವಹಾರ ಹೆಚ್ಚಳ - ಇವುಗಳಲ್ಲಿ ಸಹಕಾರದ ಪಾತ್ರ ವಿಶಿಷ್ಟವಾದುದು, ವಿಶೇಷವಾದುದು.

ಭಾರತದಲ್ಲಿ ಇಂದು ೫ ಲಕ್ಷ ಸಹಕಾರಿ ಸಂಸ್ಥೆಗಳಿವೆ. ಅವುಗಳಲ್ಲಿನ ಸದಸ್ಯರ ಸಂಖ್ಯೆ ೨೩ ಕೋಟಿಯನ್ನು ದಾಟಿದೆ. ಬೃಹತ್ ರಸಗೊಬ್ಬರ ತಯಾರಿಕಾ ಸಂಸ್ಥೆಗಳು ಆರಂಭಗೊಂಡಿವೆ. ರೈತರ ಅಗತ್ಯದ ಶೇ. ೩೦ ರಷ್ಟು ಗೊಬ್ಬರ ವಿತರಣೆ ಸಹಕಾರಿ ಸಂಸ್ಥೆಗಳಿಂದ ಆಗುತ್ತಿದೆ. ಸಕ್ಕರೆ ಉತ್ಪಾದನೆಯ ಶೇ. ೬೦ ರಷ್ಟು ಸಹಕಾರ ಕ್ಷೇತ್ರದಲ್ಲಿ ಆಗುತ್ತಿದೆ. ಪ್ರಪಂಚದ ಅತಿ ದೊಡ್ಡ ಸಹಕಾರ ಚಳವಳಿ ಭಾರತದ್ದು ಎಂಬ ಹೆಗ್ಗಳಿಕೆ ಇದೆ.

ಕರ್ನಾಟಕ ಭಾರತದ ಸಹಕಾರಿ ಭೂಪಟದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಸ್ವಾತಂತ್ರ್ಯಾನಂತರದಲ್ಲಿ ಕರ್ನಾಟಕದ ಸಹಕಾರ ಚಳವಳಿ ವೇಗವಾಗಿ ಸಾಗಿ ನಡೆದಿರುವುದು ಕಂಡುಬರುತ್ತದೆ. ಇಂದು ೩೦,೮೦೦ ಸಹಕಾರಿ ಸಂಸ್ಥೆಗಳು ನೋಂದಣಿಯಾಗಿದ್ದು, ೧ ಕೋಟಿ ೮೯ ಲಕ್ಷ ಸದಸ್ಯರನ್ನು ಹೊಂದಿವೆ. ಎಲ್ಲ ಸಹಕಾರ ಸಂಘಗಳ ದುಡಿಯುವ ಬಂಡವಾಳ ೨೫ ಸಾವಿರ ರೂಪಾಯಿಗಳಷ್ಟು ಹೆಚ್ಚಿದೆ. ೩ ಲಕ್ಷ ಉದ್ಯೋಗವನ್ನು ಸೃಷ್ಟಿಸಿದೆ. ವಾರ್ಷಿಕ ೧೬೦೦ ಕೋಟಿ ರೂಪಾಯಿ ಸಾಲ ವಿತರಣೆ ಸಹಕಾರ ಸಂಸ್ಥೆಗಳಿಂದ ಆಗುತ್ತಿದೆ. ೩೦೧ ಪಟ್ಟಣ ಸಹಕಾರಿ ಬ್ಯಾಂಕ್‌ಗಳು ಪ್ರತಿವರ್ಷ ಸುಮಾರು ೪೦೦೦ ಕೋಟಿ ರೂಪಾಯಿ ಸಾಲ ಸೌಲಭ್ಯ ನೀಡುತ್ತವೆ. ೮೬೦೦ ಹಾಲು ಉತ್ಪಾದಕ ಸಹಕಾರ ಸಂಸ್ಥೆಗಳು ಪ್ರತಿದಿನ ೨೦ ಲಕ್ಷ ಲೀಟರ್ ಹಾಲನ್ನು ಸಂಗ್ರಹಿಸಿ ಮಾರಾಟ ಮಾಡುತ್ತಿವೆ. ಇದು ರೈತರ ಹಾಗೂ ಸಮಗ್ರ ಗ್ರಾಮೀಣ ಅಭಿವೃದ್ಧಿಯ ಕ್ರಿಯೆಗೆ ಚಾಲನೆ ನೀಡಿಕೆ. ೩೨ ಸಕ್ಕರೆ ಕಾರ್ಖಾನೆಯ, ೧೭ ನೂಲಿನ ಗಿರಣಿಯ, ಚಾಕಲೇಟ್ ಕಾರ್ಖಾನೆ, ಅಡಿಕೆ ಮಾರಾಟ ಸಂಸ್ಥೆಯ ಆರ್ಥಿಕ ಬೆಳವಣಿಗೆಯಲ್ಲಿ ತಮ್ಮ ಕಾಣಿಕೆಯನ್ನು ಸಲ್ಲಿಸುತ್ತವೆ.

## ಮಹಿಳೆಯರ ಪಾತ್ರ

ಕರ್ನಾಟಕದಲ್ಲಿ ಸಹಕಾರ ತತ್ವ ಆಚರಣೆಯಲ್ಲಿ ಮಹಿಳೆಯರು ವಿಶೇಷ ಪಾತ್ರ ವಹಿಸುತ್ತಿದ್ದಾರೆ. ೧೩೦೦ ಸಹಕಾರ ಸಂಸ್ಥೆಗಳನ್ನು ಮಹಿಳೆಯರೇ ನಡೆಸುತ್ತಿದ್ದು, ೨೮ ಬ್ಯಾಂಕುಗಳನ್ನು ಆರಂಭಿಸಿದ್ದಾರೆ. ಇದರಿಂದ ಮಹಿಳೆಯರಲ್ಲಿ ಆತ್ಮ ಸ್ಥೈರ್ಯ ಹೆಚ್ಚಲು ನೆರವಾದಂತಾಗಿದೆ.

ಸಮಾಜದ ಅತ್ಯಂತ ಕಡೆಯ ವ್ಯಕ್ತಿಗೆ ಮೊದಲ ಆದ್ಯತೆ ನೀಡುವುದೇ ಗುರಿಯಾಗಿರುವುದನ್ನು ಕರ್ನಾಟಕ ಸಾಬೀತು ಮಾಡಿದೆ. ನೀರಾವರಿ ಸಹಕಾರ ಸಂಘಗಳು ಕಾಶ್ಮೀರ ಭೂಪ್ರದೇಶವನ್ನು ಹೆಚ್ಚು ಕೃಷಿ ಯೋಗ್ಯವಾಗಿಸಿ ಈಗ ಉತ್ಪನ್ನಕ್ಕೆ ಪ್ರಯತ್ನಿಸುತ್ತಿವೆ. ಧೋಬಿ, ಕಮ್ಮಾರ, ಚಮ್ಮಾರ, ಬಡಗಿ-ಹೀಗೆ ಸಮಾಜದ ಅಬಲ ವರ್ಗದ ಆರ್ಥಿಕ ಹಿತರಕ್ಷಣೆಗೆ ಸಹಕಾರಿ ಸಂಸ್ಥೆಗಳು ಮುಂದಿವೆ.

ಆದರೆ....

ಸಹಕಾರ ಕ್ಷೇತ್ರದ ಬೆಳವಣಿಗೆ ಸಹಜವಾಗಿ ಪ್ರಶ್ನೆ ತರುವುದಾದರೂ ಅದರ ಹಿಂದಿನ ಉದ್ದೇಶ ಸಾಧನೆ ಆಗಿದೆಯೇ ಎಂಬುದು ಗಮನಾರ್ಹ. ಶೋಷಣೆ ನಿರ್ಮೂಲನವಾಗಬೇಕು ಎಂಬ ಆದರ್ಶದ ಹಿನ್ನೆಲೆಯಲ್ಲಿ ಆರಂಭವಾದ ಸಹಕಾರ ಸಂಸ್ಥೆಗಳು ತಾವೇ ಶೋಷಣೆಯನ್ನು ಆರಂಭಿಸಿರುವ ಅನುಮಾನಗಳು ಕಾಡುತ್ತಿವೆ. ಜನಸಾಮಾನ್ಯರ ಆರ್ಥಿಕ ಬೆಳವಣಿಗೆಗೆ ಶ್ರಮಿಸಬೇಕಾದ ಜನರು ಸ್ವಾರ್ಥಿಗಳಾಗಿದ್ದಾರೆಯೇ ಎಂಬ ಸಂಶಯಗಳು ತಲೆದೋರುತ್ತಿವೆ. ಆಡಳಿತ ಉದಾರೀಕರಣದ ಹಿನ್ನೆಲೆಯಲ್ಲಿ ಸಹಕಾರ ತತ್ವ ಅಪ್ರಸ್ತುತವೇ ಎಂಬ ಬಗ್ಗೆ ವ್ಯಾಪಕ ಚರ್ಚೆಗಳು ಆಗುತ್ತಿವೆ. ಇಂದು ಸಹಕಾರ ವ್ಯವಸ್ಥೆ ಯಾರಿಗೆ ಬೇಕಾಗಿದೆ ಎಂಬ ಜಿಜ್ಞಾಸೆ ನಡೆಯುತ್ತಿದೆ.

ಈ ಎಲ್ಲ ಸಂಶಯ, ಅನುಮಾನ, ಜಿಜ್ಞಾಸೆಗಳಿಗೆ ಆತ್ಮ ವಿಮರ್ಶೆಯೊಂದೇ ಪರಿಹಾರ. ಸಹಕಾರ ತತ್ವದಲ್ಲಿ ಪೂರ್ಣ ನಂಬಿಕೆ, ಆಚರಣೆಯಲ್ಲಿ ಪೂರ್ಣ ಬದ್ಧತೆ ಉಳ್ಳವರು ಮಾತ್ರವೇ ಸಹಕಾರ ಕ್ಷೇತ್ರವನ್ನು ಪ್ರವೇಶಿಸಿ, ನಿಮ್ಮ ಪ್ರಾಮಾಣಿಕ ಸಹನಾಯಕತ್ವವನ್ನು ರೂಪಿಸಿ, ಮುನ್ನಡೆಯುವುದೊಂದೇ ದಾರಿ

ಇಂದಿನ ಪರಿಸ್ಥಿತಿಯಲ್ಲಿ ಅದು ಸಾಧ್ಯವೇ?

ಸಹಕಾರ ಕ್ಷೇತ್ರ ಬಹುಮಟ್ಟಿಗೆ ರಾಜ್ಯ ಸರ್ಕಾರಗಳ ಹತೋಟಿಯಲ್ಲಿದೆ. ಸಹಕಾರ ಸಂಸ್ಥೆ ೮೮ ವರ್ಷ ಕಳೆದ ನಂತರವೂ ಅಧಿಕಾರ ಯುತವಾಗಿ ಸ್ವಾವಲಂಬಿ ಘಟಕಗಳಾಗಿ ಬೆಳೆದುಬರಲಿಲ್ಲ. ಪ್ರತಿಯೊಂದಕ್ಕೂ ಸರ್ಕಾರವನ್ನೇ ಅವಲಂಬಿಸುತ್ತವೆ. ಷೇರುಹಣ, ಸಹಾಯಧನ, ಕಾಲಕ್ಕೆ ಗ್ಯಾರಂಟಿ, ತಜ್ಞ ನೆರವು, ಆಡಳಿತ ಸಹಾಯ - ಎಲ್ಲವೂ ಸರಕಾರದಿಂದಲೇ. ಸರ್ಕಾರಗಳು ಇದನ್ನು ತಮ್ಮ ಅಭಿದಾನ ಗದ್ದುಗೆಯ ಮೆಟ್ಟಿಲುಗಳನ್ನಾಗಿಸಿ ಅಧಿಕಾರ ಚಲಾಯಿಸಲಾರಂಭಿಸಿವೆ. ಸಹಕಾರ ಸಂಸ್ಥೆಗಳಲ್ಲಿ ವೃತ್ತಿನಿರತ ಆಡಳಿತ ವ್ಯವಸ್ಥೆ ಇಲ್ಲ. ಸರ್ಕಾರದ ಮಧ್ಯ ಪ್ರವೇಶ ನಿಂತಿಲ್ಲ. ಸಹಕಾರ ಸಂಸ್ಥೆಗಳಲ್ಲಿ ಪೂರ್ಣ ಪ್ರಮಾಣದ ಪ್ರಜಾಸತ್ತಾತ್ಮಕ ವಿಧಿ ವಿಧಾನಗಳ ಅನುಷ್ಠಾನವಿಲ್ಲ. ಅಧಿಕಾರಕ್ಕಾಗಿ ಕಚ್ಚಾಟ, ಪ್ರಚೋದನೆ, ವೈಷಮ್ಯಗಳು ಇಲ್ಲದಿಲ್ಲ. ಎಲ್ಲಿ ಪವಿತ್ರ ಸೇವಾಮನೋಭಾವ ಇರಬೇಕೋ ಅಲ್ಲಿ ಸ್ವಾರ್ಥ ಎದ್ದು ಕಾಣುತ್ತಿದೆ. ಇದು ಪ್ರಾಜ್ಞರ, ದೇಶ ಪ್ರೇಮಿಗಳ, ಚಿಂತಕರ ಅನನ್ಯ ಚಿಂತನೆ.

ಕರ್ನಾಟಕ ರಾಷ್ಟ್ರದ ಸಹಕಾರ ಚಳವಳಿಯು ಬಹುಮಟ್ಟಿಗೆ ೩ ನೇ ಸ್ಥಾನದಲ್ಲಿದೆ. ಮಹಾರಾಷ್ಟ್ರ ಮತ್ತು ಗುಜರಾತ್ ರಾಜ್ಯವನ್ನು ಹೊರತುಪಡಿಸಿದರೆ ಸಹಕಾರ ರಂಗದ ಸಾಧನೆಯಲ್ಲಿ ನಂತರದ ಸ್ಥಾನ ಕರ್ನಾಟಕದ್ದಾಗಿದೆ. ರಾಷ್ಟ್ರದ ಸಹಕಾರಿ ಕ್ಷೇತ್ರಕ್ಕೆ ಉತ್ತಮ ನಾಯಕತ್ವವನ್ನು ನೀಡಿರುವ ಕೀರ್ತಿ ನಾಡಿನದ್ದಾಗಿದೆ. ಸಹಕಾರದಲ್ಲಿ ಮಹಿಳೆಯರ ಪಾತ್ರ ವಿಶೇಷವಾಗಿದ್ದು ರಾಷ್ಟ್ರದಲ್ಲೇ ಎರಡನೇ ಸ್ಥಾನದಲ್ಲಿದೆ. ಮೊದಲ ಸ್ಥಾನ ಪಡೆಯಲು ಬಹಳ ದೂರವೇನಿಲ್ಲ.

ಯಾವುದೇ ರಾಜ್ಯ ಲಾಭ ಸಾಧಿಸಿ ಬಲಾಢ್ಯವಾಗಬೇಕಾದರೆ ರೈತ ಸಮೂಹ ಆರ್ಥಿಕವಾಗಿ ಚೇತರಿಸಿಕೊಳ್ಳಬೇಕು. ಉತ್ಪನ್ನಗಳು ಅಧಿಕವಾಗಬೇಕು. ನೀರಾವರಿ, ರಸ್ತೆ ನಿರ್ಮಾಣ, ಆರೋಗ್ಯ, ಶಿಕ್ಷಣ ಕಾರ್ಯಕ್ರಮಗಳು ಕ್ರಮಬದ್ಧವಾಗಿ ನಡೆಯಬೇಕು. ಅಂತೆಯೇ ಸಮಾಜದಲ್ಲಿ ಶೋಷಣೆಯನ್ನು ತೊಡೆದುಹಾಕಿ ಬಡವ ಬಲ್ಲಿದರ ನಡುವಿನ ಭೇದ ಭಾವ ತೊಲಗಬೇಕು. 'ಸರ್ವರಿಗೆ ಸಮಪಾಲು ಸರ್ವರಿಗೆ ಸಮಬಾಳು' ತತ್ವ ಎಲ್ಲರಿಗೂ ಮನವರಿಕೆಯಾಗಬೇಕು. ಇದುವೇ ದಿವಂಗತ ಸ್ಮರಣೀಯರಾದ ಸಿದ್ಧವನಹಳ್ಳಿ ನಿಜಲಿಂಗಪ್ಪನವರ ಆಶಯವಾಗಿದ್ದಿತು.

ಮಹಾನ್ ಮೇಧಾವಿ, ಮಹಾನ್ ಮುತ್ಸದ್ದಿ, ದೂರದೃಷ್ಟಿಯ ನೇತಾರ, ರಾಷ್ಟ್ರೀಯ ನಾಯಕ ಸಿದ್ಧವನಹಳ್ಳಿ ನಿಜಲಿಂಗಪ್ಪನವರಿಗೆ ನಾವು ತೀರಿಸಬೇಕಾದ ಋಣ ಬಹಳಷ್ಟಿದೆ. ಅವರ ಕನಸಾಗಿದ್ದ ಸಹಕಾರ ಕ್ಷೇತ್ರವನ್ನು ಬಲಪಡಿಸಿ ಅದು ಸಮಾಜದ ಒಳಿತಿಗೆ, ರಾಜ್ಯದ ಜನತೆಯ ಒಳಿತಿಗೆ ಶ್ರಮಿಸುವಂತೆ ಮಾಡುವುದು ಅವರ ಋಣ ತೀರಿಕೆಯ ಒಂದು ಅಂಶ ಎನಿಸೀತು!

# ಭಾಷಾ ಚಳವಳಿ

ಜ. ಹೊ. ನಾರಾಯಣಸ್ವಾಮಿ

ಒಂದು ಜನಾಂಗದ ಅಭೀಪ್ಸೆಯಂತೆ ಅಲ್ಲಿಯ ಭಾಷೆ ಮೈದಳೆಯುತ್ತದೆ. ಹೀಗೆ ಮೈದಾಳಿರುವ ಪ್ರಪಂಚದ ಎಲ್ಲ ಭಾಷೆಗಳಿಗೂ ತಾಯಿ 'ಜಾನಪದ'. ಜನರು ಪದಗಳನ್ನು ಹಾಡಲು ಶುರು ಮಾಡಿದಂದಿನಿಂದಲೇ ಭಾಷೆಯ ಉಗಮ. ಅದನ್ನು ಸಂಶೋಧಿಸುತ್ತ ಸಾಗಿದರೂ ಅದು ತನ್ನ ಮೂಲವನ್ನು ಬಿಟ್ಟುಕೊಡದೆ ತನ್ನ ಪ್ರಾಚೀನತೆಯನ್ನು ಅಡಗಿಸಿಕೊಂಡಿರುತ್ತದೆ. ಹಾಗಾಗಿ ಅದು ಸಂಶೋಧಕರಿಗೆ ನಿರಂತರ ಸವಾಲಾಗಿ ನಿಂತಿದೆ.

ಅಂತಹ ಭಾಷೆಗಳಲ್ಲಿ ಕನ್ನಡ ಕೂಡ ಒಂದು. ಕ್ರಿ.ಶ. ೪೫೦ರಲ್ಲಿ ಕನ್ನಡದ ಮೊದಲ 'ಹಲ್ಮಿಡಿ' ಶಾಸನ ದೊರೆತಿದ್ದರೂ ಕನ್ನಡ ಅದಕ್ಕಿಂತ ಪ್ರಾಚೀನವಾದ ಭಾಷೆ. ಹೀಗಾಗಿ ಕನ್ನಡ ಭಾಷೆಗೆ, ಸಂಸ್ಕೃತಿಗೆ ಬಹು ವಿಸ್ತಾರವಾದ ಇತಿಹಾಸವಿದೆ. ಕ್ರಿ.ಶ. ೩೫೫ರಲ್ಲಿ ಕನ್ನಡ ಸಾಮ್ರಾಜ್ಯವನ್ನು ಕಟ್ಟಿದ ಕೀರ್ತಿ ಕದಂಬ ವಂಶದ ಮಯೂರವರ್ಮನಿಗೆ ಸಲ್ಲುತ್ತದೆ. ಕದಂಬರ ಆಳ್ವಿಕೆಯಲ್ಲಿ ಕನ್ನಡನಾಡು ಗುಜರಾತಿನವರೆಗೆ ವಿಸ್ತರಿಸಿತ್ತು. ಸರಿ ಸುಮಾರು ಅದೇ ಕಾಲದಲ್ಲಿ ದಕ್ಷಿಣದಲ್ಲಿ ಆಳ್ವಿಕೆ ಮಾಡಿದ ಗಂಗರ ಕಾಲದಲ್ಲಿ ಅದು ಕಲ್ಕತ್ತಾದವರೆಗೆ ವಿಸ್ತರಿಸಿತ್ತು. ಹೀಗಾಗಿ ಕನ್ನಡಿಗರು ಮುಕ್ಕಾಲು ಭಾರತವನ್ನು ಆಳಿದ ಕೀರ್ತಿಗೆ ಭಾಜನರಾಗಿದ್ದಾರೆ. ನಂತರ ಆಳ್ವಿಕೆ ಮಾಡಿದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಜ್ಯ, ಉತ್ತರ ಕರ್ನಾಟಕದಲ್ಲಿ ಮುಸ್ಲಿಂ ದೊರೆಗಳ ಆಳ್ವಿಕೆ, ಕೆಳದಿ ಸಂಸ್ಥಾನ, ಹೈದರಾಲಿ, ಟಿಪ್ಪುಸುಲ್ತಾನ್, ಮೈಸೂರು ಅರಸರು ಮೊದಲಾದವರ ಕಾಲ - ಹೀಗೆ ಕನ್ನಡನಾಡಿನ ಇತಿಹಾಸ ಬಹು ವಿಸ್ತಾರವಾದುದಾಗಿದೆ.

ಪಾಶ್ಚಾತ್ಯರ ಆಳ್ವಿಕೆಯಲ್ಲಿ ಕನ್ನಡ ಮಹತ್ವದ ಸ್ಥಾನ ಪಡೆದಿದೆ. ಕನ್ನಡದ ಬೆಳವಣಿಗೆಗೆ ಅವರ ಕೊಡುಗೆ ಅಪೂರ್ವವಾದುದು. ಮುದ್ರಣ ಅವರ ಕಾಲದಲ್ಲಿ ಬಂತು. ಕನ್ನಡದ ಶ್ರೀಮಂತ ಸಾಹಿತ್ಯ ಸಂಗ್ರಹಣೆ, ನಿಘಂಟು, ಆಡಳಿತದಲ್ಲಿ ಕನ್ನಡ ಬಳಕೆ ವಿಶಿಷ್ಟವಾದುವುಗಳು. ಕಾಲಿನ್ ಮೆಕೆಂಜಿ, ಡಾ। ಹರ್ಮನ್ ಮೋಗ್ಲಿಂಗ್, ಫೆಡ್ರಿಕ್ ಜೀಗ್ಲರ್, ಡಾ। ರೆವರೆಂಡ್ ಫರ್ಡಿನೆಂಡ್ ಕಿಟಲ್, ಬಿ. ಎಲ್. ರೈಸ್, ಜಾನ್ ಫೇತ್‌ಫುಲ್ ಫ್ಲೀಟ್ ಮುಂತಾದ ಮಹನೀಯರ ಕನ್ನಡ ಕೆಲಸ ಸ್ಮರಣೀಯವಾದುದು. ಬ್ರಿಟಿಷರ ಆಳ್ವಿಕೆ ಭಾರತಕ್ಕೆ ಎಂತೋ ಅಂತೆ ಕನ್ನಡಕ್ಕೂ ವರವಾಗಿ ಬಂತು. ಅನೇಕ ಸಂಸ್ಥಾನಗಳಾಗಿ ಚದುರಿಹೋಗಿದ್ದ ಭಾರತ ಒಂದು ರಾಷ್ಟ್ರವಾಗಿ ಹೊರ ಹೊಮ್ಮಲು, ವಿದ್ಯೆಯಿಂದ ವಂಚಿತವಾಗಿದ್ದ ಬಹುಸಂಖ್ಯಾ ಶೂದ್ರ ಸಮೂಹಕ್ಕೆ ವಿದ್ಯೆ ಹಾಗೂ ಸಾಮಾಜಿಕ ಮನ್ನಣೆ ದೊರೆಯಲು ಅದು ಪ್ರೇರಣೆಯಾಯ್ತು.

ಭಾರತ ೧೯೪೭ರಲ್ಲಿ ಸ್ವತಂತ್ರವಾದಾಗ ಅದನ್ನು ವೈಜ್ಞಾನಿಕವಾದ, ವ್ಯವಸ್ಥಿತವಾದ ಆಡಳಿತಕ್ಕೆ ಒಳಪಡಿಸಲು ಆಡಳಿತಾತ್ಮಕ ವಿಭಾಗಗಳನ್ನಾಗಿ ವಿಂಗಡಿಸಬೇಕೆ ಅಥವಾ ಭಾಷಾವಾರು ಪ್ರಾಂತಗಳನ್ನಾಗಿ ವಿಂಗಡಿಸಿ ಆಳ್ವಿಕೆಗೆ ಒಳಪಡಿಸಬೇಕೆ ಎಂಬ ಪ್ರಶ್ನೆ ಎದುರಾದಾಗ ಸಂವಿಧಾನ

ರಚನಾಕಾರರು ಅಂತಿಮವಾಗಿ ೨೬-೧-೧೯೫೦ರಂದು ಭಾಷಾವಾರು ಪ್ರಾಂತಗಳನ್ನಾಗಿ ವಿಂಗಡಿಸಿದ ಕಾರಣ ಕನ್ನಡ ನಾಡು 'ಮೈಸೂರು ಪ್ರಾಂತ'ವಾಗಿ ಹೊರಹೊಮ್ಮಿತು.

ಸ್ವಾತಂತ್ರ್ಯ ಪೂರ್ವದಲ್ಲಿ ೨೦ ಆಡಳಿತಗಳಲ್ಲಿ ಹಂಚಿಹೋಗಿತ್ತು ಕನ್ನಡನಾಡು. ಸ್ವಾತಂತ್ರ್ಯ ಬಂದು ಭಾಷಾವಾರು ಪ್ರಾಂತಗಳಾಗಿ ರಚನೆಯಾಗುವ ವೇಳೆಗೆ ಮದರಾಸ್, ಮುಂಬೈ ಪ್ರಾಂತಗಳು, ಕೊಡಗು, ದಕ್ಷಿಣ ಕನ್ನಡ, ಹೈದರಾಬಾದ್ ಹಾಗೂ ಮೈಸೂರು ಸಂಸ್ಥಾನದಲ್ಲಿದ್ದ ಪ್ರದೇಶಗಳು- ಹೀಗೆ ಐದು ಆಡಳಿತಗಳಿಗೆ ಒಳಪಟ್ಟಿತ್ತು. ಹೀಗೆ ಹರಿದು ಹಂಚಿಹೋಗಿದ್ದ ಕನ್ನಡನಾಡನ್ನು ಒಂದುಗೂಡಿಸುವ ಮಹದುದ್ದೇಶದಿಂದ ಕನ್ನಡ ನಾಡಿನಲ್ಲಿ ಒಂದು ಹೊಸ ಚಳವಳಿ ಪ್ರಾರಂಭವಾಯ್ತು. ಅದೇ 'ಏಕೀಕರಣ' ಚಳವಳಿ. ಅದರ ಫಲವಾಗಿ ಮೈಸೂರು ಪ್ರಾಂತ ವಿಶಾಲ ಮೈಸೂರಾಗಿ ೧೯೫೬ರಲ್ಲಿ ಘೋಷಿಸಲ್ಪಟ್ಟಿತು. ನಂತರ ೧೯೭೩ರಲ್ಲಿ ಮಾನ್ಯ ದೇವರಾಜ ಅರಸು ಅವರು ಮುಖ್ಯಮಂತ್ರಿಯಾಗಿದ್ದಾಗ ಕರ್ನಾಟಕ ಎಂದು ನಾಮಕರಣಗೊಂಡು 'ಕನ್ನಡ'ವನ್ನು ಆಡಳಿತ ಭಾಷೆಯಾಗಿ ಘೋಷಿಸಿದ ನಂತರ ಅಭಿವೃದ್ಧಿ ಪಥದಲ್ಲಿ ಅದು ಸಾಗುತ್ತಿದೆ. ಈ ಮೇಲಿನ ಇತಿಹಾಸ ಸರಳವಾಗಿ ಕಂಡರೂ ಕನ್ನಡ ನಾಡಿನಲ್ಲಿ ಕನ್ನಡಪರವಾದ ಹೋರಾಟ ಅಷ್ಟು ಸುಲಭವಾಗಿರಲಿಲ್ಲ. ಅದು ಈಗಲೂ ಆಗಿಲ್ಲ. 'ಕರ್ನಾಟಕದಲ್ಲಿ ಕನ್ನಡ ಹೋರಾಟ'ವನ್ನು ಕುರಿತು ಈ ಹಿನ್ನೆಲೆಯಲ್ಲಿ ಕೊಂಚ ಆಳವಾಗಿ ಚಿಂತಿಸಬೇಕಾಗುತ್ತದೆ.

ಕನ್ನಡ ಹೋರಾಟದಲ್ಲಿ ಮೊದಲನೇ ಮಹತ್ವದ ಮೈಲಿಗಲ್ಲೆಂದರೆ ಏಕೀಕರಣ ಚಳವಳಿ. ಆಗ ಮುಖ್ಯಮಂತ್ರಿಯಾಗಿದ್ದವರು ಸನ್ಮಾನ್ಯ ಕೆಂಗಲ್ ಹನುಮಂತಯ್ಯನವರು. 'ನೀವು ಏಕೀಕರಣಕ್ಕೆ ಒಪ್ಪಿಕೊಳ್ಳಬೇಡಿ. ಹಳೆ ಮೈಸೂರು ಸಂಸ್ಥಾನವನ್ನು ಹಾಗೆ ಉಳಿಸಿಕೊಂಡರೆ ನಿಮ್ಮ ಕಡೆಯ ಕಾಲದವರೆಗೂ ನೀವು ಮುಖ್ಯಮಂತ್ರಿಗಳಾಗಿರಬಹುದು'' ಎಂಬ ಆಮಿಷಗಳನ್ನು ಒಡ್ಡಿದರೂ ಅದಕ್ಕೆ ಅವರು ಕಿವಿಗೊಡಲಿಲ್ಲ. ಇತಿಹಾಸವನ್ನು ಆಳವಾಗಿ ಅಧ್ಯಯನ ಮಾಡಿದ್ದ ಅವರು ಕನ್ನಡನಾಡು, ಕನ್ನಡಿಗರ ಪರಂಪರೆಯನ್ನು ಅರಿತಿದ್ದವರು. ಆದಕಾರಣ ಅವರ ಹೃದಯ, ಮನಸ್ಸುಗಳು ಸಂಕುಚಿತತೆಯಿಂದ ದೂರವಾಗಿ ವೈಶಾಲ್ಯತೆಯಿಂದ ತುಂಬಿದ್ದವು. ಮುಖ್ಯಮಂತ್ರಿಯಾಗಿದ್ದು ಏಕೀಕರಣಕ್ಕೆ ಮೊದಲು ಧುಮುಕಿದರು.

ಉತ್ತರ ಕರ್ನಾಟಕದಲ್ಲಿ ಡೆಪ್ಯುಟಿ ಚೆನ್ನಬಸಪ್ಪ, ವೆಂಕಟರಂಗೋಕಟ್ಟಿ, ಹೊನ್ನಾಪುರ ಮಠ, ಆಲೂರು ವೆಂಕಟರಾಯರು, ಹಳಕಟ್ಟಿ, ಬಸವನಾಳ, ಸಿದ್ಧಪ್ಪ ಕಂಬಳಿ, ತಮ್ಮಣ್ಣಪ್ಪ ಚಿಕ್ಕೋಡಿ. ಡಾ। ಹರ್ಡೀಕರ್, ಆರ್. ಆರ್. ದಿವಾಕರ್, ಅಣ್ಣುಗುರೂಜಿ, ಶಾಂತಿನಾಥ ಇಂಗಳೆ, ಚನ್ನಪ್ಪವಾಲಿ, ಓಂಕಾರ ಮಠ, ಹಳ್ಳಿಕೇರಿ ಗುದ್ಲೆಪ್ಪ, ಅಳವಂಡಿ ಶಿವಮೂರ್ತಿಸ್ವಾಮಿ, ವೀರಭದ್ರಪ್ಪ ಶಿರೂರ, ಪೂಚಣ್ಣ, ಹಳೆ ಮೈಸೂರಿನಲ್ಲಿ ಬಿ. ಶಿವಮೂರ್ತಿಶಾಸ್ತ್ರಿ ತಿ. ತಾ. ಶರ್ಮ, ಎಸ್. ನಿಜಲಿಂಗಪ್ಪ, ವೀರಕೇಸರಿ ಸೀತಾರಾಮಶಾಸ್ತ್ರಿ, ಕುವೆಂಪು, ಗೊರೂರು, ಅನಕೃ, ದೇಜಗೌ, ಶ್ರೀರಂಗ, ಹಾರನಹಳ್ಳಿ ರಾಮಸ್ವಾಮಿ, ಕೆ. ಎಂ. ರುದ್ರಪ್ಪ, ಮುಂತಾದವರು. ದಕ್ಷಿಣ ಕನ್ನಡದಲ್ಲಿ ರಾಮಕೃಷ್ಣ ಕಾರಂತ, ಜಿನರಾಜ ಹೆಗ್ಡೆ, ಶಿವರಾಮ ಕಾರಂತ ಮೊದಲಾದವರು ಏಕೀಕರಣಕ್ಕೆ ಒತ್ತಾಸೆಯಾಗಿ ನಿಂತರು.

ಏಕೀಕರಣ ಹೋರಾಟದ ಸಂದರ್ಭದಲ್ಲಿ ಒಡಕು ಧ್ವಜ ಇಲ್ಲದಿರಲಿಲ್ಲ. ಉತ್ತರ ಕರ್ನಾಟಕದ ಭಾಷೆಯೆ ಬೇರೆ, ಹಳೆ ಮೈಸೂರು ಸಂಸ್ಥಾನದ ಭಾಷೆಯೆ ಬೇರೆ, ಮಂಗಳೂರು ಭಾಷೆಯೆ ಬೇರೆ. ಇವು ಒಂದಾಗುವುದು ಹೇಗೆ ಸಾಧ್ಯ? ಏಕೀಕರಣ ಕೂಡದು ಎನ್ನುವ ಒಡಕು ಧ್ವನಿಗೆ ಉತ್ತರವಾಗಿ ಅನಕೃ ಅವರು

ಬೆಂಗ್ಳೂರ್ ಕನ್ನಡ
ಮಂಗ್ಳೂರ್ ಕನ್ನಡ
ಧಾರವಾಡ ಕನ್ನಡ
ಹಾಡುವ ರಾಗವು
ಹೇಳುವ ಧಾಟಿಯು
ಬೇರೊಂದಾದರು.
ಒಂದೆ

ಎಂದು ಕನ್ನಡ ನಾಡು ಒಂದಾಗಬೇಕೆಂಬ ಗಟ್ಟಿ ನಿಲುವನ್ನು ತಾಳಿದರೆ ರಾಷ್ಟ್ರಕವಿ ಕುವೆಂಪು ಅವರು ವೇದಿಕೆಯೊಂದರಲ್ಲಿ ಅಖಂಡ ಕರ್ನಾಟಕದ ಅಗತ್ಯವನ್ನು ಒತ್ತಿ ಹೇಳಿದರು. ಆ ವರದಿಯನ್ನೋದಿದ ಕುಹಕ ಮಂತ್ರಿಯೋರ್ವರು 'ಪ್ರಾಧ್ಯಾಪಕರಾಗಿ ನೀವು ರಾಜಕೀಯ ವಿಷಯ ಕುರಿತು ಹೇಳಿಕೆ ನೀಡಿರುವುದಕ್ಕೆ ವಿವರಣೆ ಕೊಡಿ' ಎಂದು ನೋಟೀಸು ಜಾರಿಮಾಡಿದರು. ಹಾಗೆ ಮಾಡುವುದರ

ಮೂಲಕ ಕುವೆಂಪು ಅವರಲ್ಲಿ ಸುಪ್ತವಾಗಿ ಮಲಗಿದ್ದ ಘಟಸರ್ಪವನ್ನು ಎಚ್ಚರಿಸಿದರು. ಆಗ ಕುವೆಂಪು ನೋಟೀಸಿಗೆ ಉತ್ತರ ನೀಡದೆ 'ಅಖಂಡ ಕರ್ನಾಟಕ' ಎಂಬ ಕವನವನ್ನು ರಚಿಸಿದರು. ಅದರ ಕೆಲವು ಸಾಲುಗಳನ್ನು ಇಲ್ಲಿ ಕೊಡುತ್ತಿದ್ದೇನೆ.

ಅಖಂಡ ಕರ್ನಾಟಕ
ಅಲ್ತೊ ನಮ್ಮ ಬೂಟಾಟದ ರಾಜಕೀಯ ನಾಟಕ!
ಇಂದು ಬಂದು ನಾಳೆ ಸಂದು
ಹೋಹ ಸಚಿವ ಮಂಡಲ
ರಚಿಸುವೊಂದು ಕೃತಕವಲ್ತೊ
ಸಿರಿಗನ್ನಡ ಸರಸ್ವತಿಯ
ವಜ್ರ ಕರ್ಣಕುಂಡಲ!

ಅಖಂಡ ಕರ್ನಾಟಕ:
ಅಲ್ತೊ ನಮ್ಮ ನಾಲ್ಕು ದಿವಸದ ರಾಜಕೀಯ ನಾಟಕ!
ನೃಪತುಂಗನೆ ಚಕ್ರವರ್ತಿ!
ಪಂಪನಲ್ಲಿ ಮುಖ್ಯಮಂತ್ರಿ!
ರನ್ನ ಜನ್ನ ನಾಗವರ್ಮ
ರಾಘವಾಂಕ ಹರಿಹರ
ಬಸವೇಶ್ವರ ನಾರಣಪ್ಪ
ಸರ್ವಜ್ಞ ಷಡಕ್ಷರ
ಸರಸ್ವತಿಯೆ ರಚಿಸಿದೊಂದು
ನಿತ್ಯ ಸಚಿವ ಮಂಡಲ
ತನಗೆ ರುಚಿರ ಕುಂಡಲ!

ಕರ್ನಾಟಕ ಎಂಬುದೇನು
ಹೆಸರೆ ಬರಿಯ ಮಣ್ಣಿಗೆ!
ಮಂತ್ರ ಕಣಾ! ಶಕ್ತಿ ಕಣಾ!
ತಾಯಿ ಕಣಾ! ದೇವಿ ಕಣಾ!
ಬೆಂಕಿ ಕಣಾ! ಸಿಡಿಲು ಕಣಾ!
ಕಾವ ಕೊಲುವ ಒಲವ ಬಲವ
ಪಡೆದ ಚಲದ ಚಂಡಿ ಕಣಾ
ಋಷಿಯ ಕಾಣ್ಬ ಕಣ್ಣಿಗೆ

ಅಂದು ಈ ಕವಿತೆ ಇಡೀ ಕನ್ನಡನಾಡಿನ ದಿವ್ಯ ಬೆಳಕಾಗಿ ಕನ್ನಡಿಗರ ಹೃದಯದಲ್ಲಿ ಬಗ್ಗನೆ ಹೊತ್ತಿಕೊಂಡಿತು. ಕುವೆಂಪು ಮೂಲ ಮೂರ್ತಿಯಾದರೆ ದೇಜಗೌ ಉತ್ಸವಮೂರ್ತಿಯಾಗಿ ನಾಡಿನುದ್ದಗಲ ಸುತ್ತಿ ಅಖಂಡ ಕರ್ನಾಟಕದ ದಿವ್ಯಜ್ಯೋತಿಯನ್ನು ಹಳ್ಳಿಗಳಿಗ ನಾಡಿನ ಮೂಲೆಮೂಲೆಗೆ ಹರಡಿದರು.

ಉತ್ತರ ಕರ್ನಾಟಕದವರ ಹೃದಯವನ್ನು ಸೆಳೆದು ಕನ್ನಡನಾಡು ಒಂದಾಗುವಲ್ಲಿ ಮಹತ್ವದ ಪಾತ್ರವಹಿಸಿದವರಲ್ಲಿ ಸಿದ್ದವನಹಳ್ಳಿ ನಿಜಲಿಂಗಪ್ಪನವರು ಪ್ರಮುಖರಾಗಿದ್ದಾರೆ. ಕನ್ನಡ ಕುಲಪುರೋಹಿತರಾದ ಆಲೂರು ವೆಂಕಟರಾಯರು, ವರಕವಿ ದ.ರಾ.ಬೇಂದ್ರೆ, ಚೆನ್ನವೀರ ಕಣವಿ, ಪಾಟೀಲ ಪುಟ್ಟಪ್ಪ, ಹಳಕಟ್ಟಿ ಬಸವನಾಳ, ಸಿದ್ದಪ್ಪ ಕಂಬಳಿ, ತಮ್ಮಣ್ಣಪ್ಪ ಚಿಕ್ಕೋಡಿ, ಹುಯಿಲಗೋಳ ನಾರಾಯಣರಾವ್, ಸಾಲಿ ರಾಮಚಂದ್ರರಾಯ, ಸಿದ್ದಯ್ಯ ಪುರಾಣಿಕ ಮುಂತಾದವರು ಹರಿವ ಹೊಳೆಗೆ ತೊರೆಯಾಗಿ ಬಂದು ಸೇರಿದರು. ಹಾಗೆ ಟಿ. ಎಸ್. ವೆಂಕಣ್ಣಯ್ಯ, ಬಿ. ಎಂ. ಶ್ರೀಕಂಠಯ್ಯ, ಕಯ್ಯಾರ ಕಿಞ್ಞಣ್ಣರೈ, ಬಿ. ಶಿವಮೂರ್ತಿಶಾಸ್ತ್ರಿ ಅನಕೃ, ತರಾಸು, ಮ. ರಾಮಮೂರ್ತಿ, ಗೊರೂರು, ತಿ. ತಾ. ಶರ್ಮ, ವೀರಕೇಸರಿ ಸೀತಾರಾಮಶಾಸ್ತ್ರಿ ಸಿದ್ದವನಹಳ್ಳಿ ಕೃಷ್ಣಶರ್ಮ, ಮಹದೇವ ಬಣಕಾರ,

ಎಂ. ಚಿದಾನಂದಮೂರ್ತಿ ಮುಂತಾದವರು ಕಂಕಣಕಟ್ಟಿ ನಿಂತರು. ಈ ಎಲ್ಲ ಮಹನೀಯರ ಹೋರಾಟದ ಫಲವಾಗಿ ೧.೧೧.೧೯೫೬ರಂದು, ಹರಿದು ಹಂಚಿಹೋಗಿದ್ದ ಕನ್ನಡ ನಾಡು ವಿಶಾಲ ಮೈಸೂರಾಗಿ ಹೊರಹೊಮ್ಮಿತು. ಅಂದಿನಿಂದ ಇಂದಿನವರೆಗೆ ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತಾ ಕನ್ನಡ ಜಾಗೃತಿಯ ಹೋರಾಟ ನಾಡಿನ ಮೂಲೆಮೂಲೆಯಲ್ಲೂ ನಡೆಯುತ್ತಿದೆ.

ಈ ವೇಳೆಗಾಗಲೇ ಕನ್ನಡ ಸಾಹಿತ್ಯ ಪರಿಷತ್ತು ೧೯೧೮ರಿಂದ ಪ್ರತಿವರ್ಷವೂ ಕನ್ನಡ ಸಾಹಿತ್ಯ ಸಮ್ಮೇಳನವನ್ನು ನಡೆಸುತ್ತಾ ಕನ್ನಡದ ಭವ್ಯ ಪರಂಪರೆಯನ್ನು ಜನಮನದಲ್ಲಿ ಬಿತ್ತಿ ಕನ್ನಡ ನಾಡಿನ ಸರ್ವಶಕ್ತಿಗಾಗಿ ಶ್ರಮಿಸುತ್ತಾ ಬಂದಿದ್ದರೆ, ೧೯೧೬ರಲ್ಲಿ ಪ್ರಾರಂಭವಾದ ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಸರ್ವಾವಯವ ಸುಂದರವಾಗಿ ಹೊರಹೊಮ್ಮಲು ಪ್ರೇರಕ ಶಕ್ತಿಯಾಗಿ ನಿಂತಿತ್ತು. ಡಾ। ಎ. ಆರ್. ಕೃಷ್ಣ ಶಾಸ್ತ್ರಿ ಕನ್ನಡದ ಅಶ್ವಿನಿ ದೇವತೆಗಳೆಂದು ಕರೆಯಲ್ಪಡುವ ಟಿ.ಎಸ್. ವೆಂಕಣ್ಣಯ್ಯ, ಕಣ್ವರೆಂದು ಪ್ರಸಿದ್ಧರಾದ ಬಿ. ಎಂ. ಶ್ರೀಕಂಠಯ್ಯ ಕುವೆಂಪು, ಡಿ. ಎಲ್ ನರಸಿಂಹಾಚಾರ್, ತೀ. ನಂ. ಶ್ರೀಕಂಠಯ್ಯ, ಡಾ। ದೇ. ಜವರೇಗೌಡ ಎಸ್. ವಿ. ರಂಗಣ್ಣ, ಎ. ಎನ್. ಮೂರ್ತಿರಾವ್, ಡಾ। ಎಚ್. ತಿಪ್ಪೇರುದ್ರಸ್ವಾಮಿ, ಡಾ। ಎಲ್. ಬಸವರಾಜು ಡಾ। ಹಾಮಾನಾ ಮುಂತಾದವರು ಕನ್ನಡ ಭಾಷೆ ಮತ್ತು ಸಾಹಿತ್ಯ ಗರಿಗಟ್ಟುವಂತೆ ಶ್ರಮಿಸಿದರು. ನಂತರ ಪ್ರಾರಂಭವಾದ ಕರ್ನಾಟಕ ವಿಶ್ವವಿದ್ಯಾಲಯ, ಬೆಂಗಳೂರು ವಿಶ್ವವಿದ್ಯಾಲಯ, ಮಂಗಳೂರು ವಿಶ್ವವಿದ್ಯಾಲಯ, ಗುಲಬರ್ಗಾ ವಿಶ್ವವಿದ್ಯಾಲಯ, ಕುವೆಂಪು ವಿಶ್ವವಿದ್ಯಾಲಯ, ಕನ್ನಡ ವಿಶ್ವವಿದ್ಯಾಲಯ, ಮುಕ್ತ ವಿಶ್ವವಿದ್ಯಾಲಯ ಇವುಗಳ ಜೊತೆಜೊತೆಯಲ್ಲೆ ಸರ್ಕಾರ ಪ್ರಾರಂಭಿಸಿದ ವಿವಿಧ ಅಕಾಡೆಮಿಗಳು, ಪ್ರಾಧಿಕಾರಗಳು ಕನ್ನಡದ ಶ್ರೇಯಸ್ಸಿಗೆ ಕಂಕಣಬದ್ಧವಾಗಿ ದುಡಿಯುತ್ತಿವೆ.

ಏಕೀಕರಣವಾದ ನಂತರ ಕರ್ನಾಟಕದ ರಾಜ್ಯ ಸೂತ್ರವನ್ನು ಮಾನ್ಯ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿ ಹಿಡಿದರು. ಅವರ ಕನ್ನಡದ ಪ್ರೇಮ ಅತ್ಯಪೂರ್ವವಾದುದು. ಕನ್ನಡಕ್ಕಾಗಿ ಅಹರ್ನಿಶಿ ದುಡಿದಿದ್ದಾರೆ. ಅವರ ಕನ್ನಡ ಪ್ರೇಮವನ್ನು ಕುರಿತು ೧೯೬೬ರಲ್ಲಿ ಸಭೆಯೊಂದರಲ್ಲಿ ರಾಷ್ಟ್ರಕವಿ ಕುವೆಂಪು ಅವರು ಹೀಗೆ ನುಡಿದಿದ್ದಾರೆ.

''ಕರ್ನಾಟಕ ಏಕೀಕರಣಕ್ಕೆ ರಾಜಕೀಯ ಭೂಮಿಕೆಯಲ್ಲಿ ದುಡಿದ ಹಿರಿಯ ವ್ಯಕ್ತಿಗಳಲ್ಲಿ ಅಗ್ರಮಾನ್ಯರಾಗಿರುವ ಶ್ರೀ ನಿಜಲಿಂಗಪ್ಪನವರು ಮುಖ್ಯ ಕರ್ಣಧಾರರಾಗಿ ಸರ್ಕಾರದ ಸೂತ್ರಗಳನ್ನು ಕೈಗೆ ತೆಗೆದುಕೊಂಡ ತರುವಾಯ, ರಾಜ್ಯಾಂಗದ ಪ್ರಕಾರ ರಾಜ್ಯಪಾಲರ ನೇಮಕವಾಗಿ ಕನ್ನಡ ಅಧಿಕೃತ ಭಾಷೆ ಎಂದು ಘೋಷಿತವಾಗಿತ್ತು.''

ಹೀಗೆ ಕನ್ನಡ ವಾತಾವರಣ ನಿರ್ಮಾಣಗೊಳ್ಳುತ್ತಿತ್ತು. ಅರವತ್ತು ಎಪ್ಪತ್ತರ ದಶಕದಲ್ಲಿ ಕನ್ನಡ ಹೋರಾಟ ಚಿತ್ರರಂಗ, ವಾಣಿಜ್ಯ ಹೀಗೆ ಎಲ್ಲ ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳತೊಡಗಿತು. ಐವತ್ತರ ದಶಕದಲ್ಲಿ ಪ್ರಧಾನವಾಗಿ ಡಾ। ದೇಜಗೌ ಕನ್ನಡಿಗರನ್ನು ಬಡಿದೆಚ್ಚರಿಸುವ ಕೃತಿಯೊಂದನ್ನು ರಚಿಸಿ ಅದಕ್ಕೆ ಮುನ್ನುಡಿಯನ್ನು ಬರೆದು ಹರಸುವಂತೆ ಕುವೆಂಪು ಅವರನ್ನು ಕೇಳಿಕೊಂಡರು. ಆ ಕೃತಿ 'ಕನ್ನಡಿಗರೇ ಎಚ್ಚರಗೊಳ್ಳಿ' ಎಂಬುದು. ಕನ್ನಡನಾಡಿನ ಭವ್ಯ ಪರಂಪರೆಯನ್ನು ಕನ್ನಡ ನಾಡು ನುಡಿಗೆ ಅಗತ್ಯ ಆಗಬೇಕಾಗಿರುವ ಹಾಗೂ ಕನ್ನಡಿಗರ ಜವಾಬ್ದಾರಿಯನ್ನು ಅರಿವು ಮಾಡಿಕೊಡುವ ಮಹತ್ವದ ವಿಚಾರಗಳನ್ನು ಆ ಕೃತಿ ತುಂಬಿಕೊಂಡಿತ್ತು. ಆ ಕೃತಿಗೆ ೧೯೫೧ರಲ್ಲಿ ಮುನ್ನುಡಿ ಬರೆದು ಹರಸಿದ ಕುವೆಂಪು ಅವರ ಹಾರೈಕೆ ಇಂದಿಗೂ ಸಮಸ್ತ ಕನ್ನಡ ಕುಲಕೋಟಿಗೆ ಅನ್ವಯಿಸುವಂತಿದೆ. ಅದನ್ನು ಇಲ್ಲಿ ಯಥಾವತ್ತಾಗಿ ನೀಡುತ್ತಿದ್ದೇನೆ.

## ಕನ್ನಡಕ್ಕಾಗಿ ಕೈಯೆತ್ತು

ಇದೋ ವಾಗ್ದೇವಿಯ ಹರಕೆಯ ಶಿಶುವಾಗಿ ನಿನಗೆ ಕೈಮುಗಿದು ನಮಸ್ಕರಿಸಿ ಬಿನ್ನವಿಸುತ್ತೇನೆ. ನನ್ನ ನಮಸ್ಕಾರಕ್ಕಾದರೂ ನಿನ್ನ 'ಅಲ್ಪತೆ' ತೊಲಗಲಿ; ನಿನ್ನ ಹೃದಯದಲ್ಲಿ 'ಭೂಮ ' ಚೇತನ ಉದ್ದೀಪನವಾಗಿ ತೊಳಗಲಿ, ಕನ್ನಡ ನುಡಿದೇವಿಯಿಂದ ನಾಡ ಬಾಳು ಬೆಳಗಲಿ! ನನ್ನ ನಮಸ್ಕಾರದಿಂದ ನಿನ್ನ ಅಹಂಕಾರವಳಿದು ಅಲ್ಲಿ ದೇವತ್ವ ಸಂಚಾರವಾಗುತ್ತದೆಂದು ನಂಬಿ ಭಗವತಿ ಶ್ರೀ ಸರಸ್ವತಿಯ ಈ ಹರಕೆಯನ್ನು ನಿನ್ನಲ್ಲಿ ಬಿನ್ನವಿಸುತ್ತಿದ್ದೇನೆ.

ಹೇ ರಾಜಕಾರಣಿ, ಹೇ ಮಂತ್ರಿವರೇಣ್ಯ, ಹೇ ಅಧಿಕಾರಿ ಸರ್ವೋತ್ತಮ, ಹೇ ವಣಿಗ್ವರ, ಹೇ ಶ್ರಮಜೀವಿ, ಹೇ ಅಧ್ಯಾಪಕ ಮಹಾಶಯ, ಓ ನೇಗಿಲಯೋಗಿ, ನೀನು ಯಾರೇ ಆಗಿರು, ಎಲ್ಲಿಯೇ ಇರು, ಕನ್ನಡವನ್ನು ಕೈಬಿಡದಿರು.

ನಾಳೆ ಎಂದರಾಗದು; ಮುಂದೆ ಎಂದರಾಗದು; ಇಂದೆ ನೀನು ನಿರ್ಣಯಿಸಬೇಕು. ಇಂದೆ ಎತ್ತಿ ಪೊರೆಯಬೇಕು. ಬೆಂಕಿಗೆ ಬಿದ್ದವರನ್ನು ನಾಳೆ ಎತ್ತುತ್ತೇನೆಂದರೆ ದೊರೆಯುವುದೇನು? ಬೂದಿಯಲ್ಲವೆ! ನೀರಿಗೆ ಬಿದ್ದವರನ್ನು ನಾಳೆ ಎತ್ತುತ್ತೇನೆಂದರೆ ಲಭಿಸುವುದೇನು? ಹೆಣವಲ್ಲವೆ!

ಇದು ನಿನ್ನ ಭಾಷೆ; ಇದು ದೇಶಭಾಷೆ; ಇದು ಸಾವಿರಾರು ವರ್ಷಗಳ ಸುಪುಷ್ಪ ಸಾಹಿತ್ಯ ಭಾಷೆ; ಇದು ಮಹಾಕವಿಗಳನ್ನೂ ಶಿಲ್ಪಿಗಳನ್ನೂ ರಾಜಾಧಿರಾಜರನ್ನೂ ವೀರಾಧಿವೀರರನ್ನೂ ರಸಋಷಿ ದಾರ್ಶನಿಕರನ್ನೂ ಪಡೆದಿರುವ ಭಾಷೆ! ಏನೋ ನಡುವೆ ನಾಲ್ಕು ದಿನ ವಿಧಿ ಮುನಿಯೆ ಸಿರಿಯಳಿದು, ಮನೆಮುರಿಯೆ ಬೀದಿ ಸೇರಿದ ಮೊತ್ತದಿಂದ ನಿನ್ನ ತಾಯಿ ರಾಣಿಯಾಗಿದ್ದಳೆಂಬುದನ್ನು ಮರೆತು ಬಿಡುವೆಯ? ಸ್ವತಂತ್ರನಾದ ಮೇಲೆಯೂ ಆಕೆಯನ್ನು ತೊತ್ತಾಗಿರಿಸುವೆಯಾ?

ಅನ್ಯ ಮೋಹಕ್ಕೆ ಇಂದು ಅವಕಾಶವಿಲ್ಲ. ಮೀನಮೇಷಕ್ಕೆ ಇದು ಸಮಯವಲ್ಲ, ಧೈರ್ಯವಿರಲಿ, ಶ್ರದ್ಧೆಯಿರಲಿ, ಮನಸ್ಸು ಚಂಚಲವಾಗದಿರಲಿ

ಕನ್ನಡಕ್ಕಾಗಿ ಕೈಯೆತ್ತು; ನಿನ್ನ ಕೈ ಕಲ್ಪ ವೃಕ್ಷ ವಾಗುತ್ತದೆ!

ಕನ್ನಡಕ್ಕಾಗಿ ಕೊರಳೆತ್ತು; ಅಲ್ಲಿ ಪಾಂಚಜನ್ಯ ಮೂಡುತ್ತದೆ!

ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಸಾಕು ಇಂದು ಅದೆ ಗೋವರ್ಧನ

ಗಿರಿಧಾರಿಯಾಗುತ್ತದೆ

ಇಂದು; ನಾಳೆಯಲ್ಲ. ತಿಳಿ, ತಿಳಿ! ತಿಳಿದು ಉಳಿ, ಇಲ್ಲಿ ಅಳಿ!

ಏಳ್! ಗೆಲ್!ಬಾಳ್! ಓಂ ಶಾಂತಿಃ ಶಾಂತಿಃ ಶಾಂತಿಃ

ಶ್ರೀ ಕುವೆಂಪು ಅವರ ಮೇಲಿನ ಹಂಬಲದಂತೆ ಅಂದು ಕನ್ನಡಕ್ಕಾಗಿ ಕೈ ಎತ್ತಿದ ದೇಜಗೌ ಅವರ ಕೈ ಇಂದಿಗೂ ಇಳಿದಿಲ್ಲ. ಅರವತ್ತು ಎಪ್ಪತ್ತರ ದಶಕದಲ್ಲಿ ಕನ್ನಡ ಹೋರಾಟದಲ್ಲಿ ದೇಜಗೌ ಅವರ ಸಾರಥ್ಯ ನಾಡಿನಾದ್ಯಂತ ರೋಮಾಂಚನವನ್ನುಂಟುಮಾಡಿತು. ಅವರು ಕನ್ನಡಕ್ಕಾಗಿ ಅರ್ಪಿಸಿಕೊಂಡಿರುವ ರೀತಿಯನ್ನು ಅವರ ಮಾತುಗಳಿಂದಲೇ ಕೇಳಬೇಕು: ''ಕೆಲವರಿಗೆ ರಾಮನಿಂದ ಮುಕ್ತಿ, ಕೆಲವರಿಗೆ ಶಿವನಿಂದ ಮುಕ್ತಿ ನನಗಾದರೋ ಹಲವು ಸಲ ಹೇಳಿಕೊಂಡಿದ್ದೇನೆ- ಕನ್ನಡದಿಂದಲೇ ಮುಕ್ತಿ.''

''ಪೂಜ್ಯ ಕುವೆಂಪು ಅವರ ಮಾನಸಪುತ್ರರಾಗಿ ಅರಳಿ ಅವರ ಕನಸಿನ ಕರ್ನಾಟಕ ಕಟ್ಟಲು, ಅವರ ಕನ್ನಡಪರವಾದ ಚಿಂತನೆಗೆ ಸಾಕಾರರೂಪ ಕೊಡಲು, ಆ ಮೂಲಕ ಸುಂದರವಾದ ಅಖಂಡ ಕರ್ನಾಟಕ ರೂಪಿಸಲು ದೇಜಗೌ ಅಹರ್ನಿಶಿ ಕ್ರಿಯಾಶೀಲರಾಗಿ ದುಡಿದಿದ್ದಾರೆ'' ಎನ್ನುವ ಡಾ। ತಿಪ್ಪೇಸ್ವಾಮಿ ಅವರ ಮಾತು ವಾಸ್ತವಕ್ಕೆ ಹಿಡಿದ ಕನ್ನಡಿಯಾಗಿದೆ.

ಇಷ್ಟಾದರೂ ನಿರೀಕ್ಷಿಸಿದ ಮಟ್ಟದಲ್ಲಿ ಆಡಳಿತದಲ್ಲಿ ಕನ್ನಡ ಜಾರಿಯಾಗದ ಕಾರಣ ಕರ್ನಾಟಕ ಸರ್ಕಾರ 'ಕನ್ನಡ ಕಾವಲು ಸಮಿತಿಯನ್ನು' ರಚಿಸಿತು. ಅದರ ಅಧ್ಯಕ್ಷರಾಗಿ ಸಿದ್ಧರಾಮಯ್ಯ, ಪಾಟೀಲ ಪುಟ್ಟಪ್ಪ ದುಡಿದರು. ಅದು ಈಗ ಕನ್ನಡ ಅಭಿವೃದ್ಧಿ ಪ್ರಾಧಿಕಾರವಾಗಿ ಜಿ. ನಾರಾಯಣ, ಎಚ್. ನರಸಿಂಹಯ್ಯ, ಚಂದ್ರಶೇಖರ ಪಾಟೀಲ ಬರಗೂರು ರಾಮಚಂದ್ರಪ್ಪ ಮುಂತಾದವರು ದುಡಿದಿದ್ದಾರೆ. ಸದ್ಯದ ಅಧ್ಯಕ್ಷರಾಗಿ ಬಿ. ಎಂ. ಇದಿನಬ್ಬ ಅನೇಕ ಕನ್ನಡಪರ ಯೋಜನೆಗಳನ್ನು ಜಾರಿಗೆ ತರುತ್ತಿದ್ದಾರೆ.

ಕನ್ನಡನಾಡು ಒಂದಾದರೂ ಗಡಿ ಸಮಸ್ಯೆ ಇಂದಿಗೂ ಮುಗಿದಿಲ್ಲ. ಕಾಸರಗೋಡಿಗಾಗಿ ಕಯ್ಯಾರ ಕಿಞ್ಞಣ್ಣ ರೈ ನಿರಂತರ ಹೋರಾಡುತ್ತಿದ್ದಾರೆ. ೧೯೬೭ರಿಂದ ಮಹಾಜನ ವರದಿ ನೆನೆಗುದಿಗೆ ಬಿದ್ದಿದೆ. ಕಾವೇರಿ, ಕೃಷ್ಣ ನದಿಗಳೂ ಸೇರಿದಂತೆ ಜಲವಿವಾದಗಳು ಬಗೆಹರಿದಿಲ್ಲ. ಸರೋಜಿನಿ ಮಹಿಷಿ ವರದಿ ಪೂರ್ಣ ಜಾರಿಯಾಗಿಲ್ಲ. ಈ ವೇಳೆಗೆ ಕನ್ನಡಪರ ಹೋರಾಟ ಗರಿಗಟ್ಟಿ ಅನಕೃ, ಮ. ರಾಮಮೂರ್ತಿ, ವಾಟಾಳ್ ನಾಗರಾಜ್, ಜಿ. ನಾರಾಯಣ ಕುಮಾರ್, ಪ್ರಭಾಕರ ರೆಡ್ಡಿ ಮುಂತಾದವರು. ಸಂಘ ಸಂಸ್ಥೆಗಳ ಚಳವಳಿಯ ಪ್ರಭಾವದಿಂದಾಗಿ ಹಾಗೂ ಈಗ ಕರ್ನಾಟಕದ ಮುಖ್ಯಮಂತ್ರಿಯಾಗಿರುವ ಎಸ್. ಎಂ. ಕೃಷ್ಣ ಆಗ ಕೇಂದ್ರ ಸರ್ಕಾರದಲ್ಲಿ ಕೈಗಾರಿಕಾ ಮಂತ್ರಿಯಾಗಿದ್ದ ಕಾರಣ ಬಿ. ಇ. ಎಂ. ಎಲ್. ಮುಂತಾದ ಕೇಂದ್ರೋದ್ಯಮಗಳಲ್ಲಿ ಕನ್ನಡಿಗರಿಗೆ ಹೆಚ್ಚಿನ ಪ್ರಾಶಸ್ತ್ಯ ಸಿಕ್ಕಿತು. ತಮಿಳುಮಯವಾಗಿದ್ದ ಕೆ. ಜಿ. ಎಫ್.ನಲ್ಲಿ ಬಿ.ಇ.ಎಂ.ಎಲ್. ಕಾರ್ಖಾನೆ ಸ್ಥಾಪನೆಯಾದ ನಂತರ ಕನ್ನಡ ವಾತಾವರಣ ನಿರ್ಮಾಣವಾಗಲು ಪ್ರೇರಣೆಯಾಯ್ತು.

ಇಷ್ಟಾಗಿಯೂ ಕನ್ನಡನಾಡಿಗೆ ವಲಸೆ ಬರುವ ಅನ್ಯರಾಜ್ಯದವರ ಒತ್ತಡ ಕಡಿಮೆಯಾಗಲಿಲ್ಲ. ಅದು ಉಲ್ಬಣಗೊಂಡು ಕರ್ನಾಟಕ ರಾಜಧಾನಿಯಾದ ಬೆಂಗಳೂರಿನಲ್ಲೇ ಕನ್ನಡಿಗರು ಅಲ್ಪಸಂಖ್ಯಾತರಾಗುವ ದುರ್ಗತಿ ಪ್ರಾಪ್ತವಾಗಿದೆ. ಅನ್ಯರ ವಲಸೆಯಿಂದ ಕನ್ನಡನಾಡು ತುಂಬಿಹೋಗಿದೆ. ಐತಿಹಾಸಿಕವಾಗಿಯೂ ಈ ಮಾತು ಸತ್ಯದಿಂದ ಕೂಡಿದೆ. ಕೇರಳದಿಂದ ಬಂದ ಆದಿ ಶಂಕರಾಚಾರ್ಯರು ಬೀಡು ಬಿಟ್ಟಿದ್ದು ಕರ್ನಾಟಕದ ಶೃಂಗೇರಿಯಲ್ಲಿ. ತಮಿಳುನಾಡಿನಿಂದ ಹೊರಬಂದ ರಾಮಾನುಜಾಚಾರ್ಯರು ಬೀಡು ಬಿಟ್ಟಿದ್ದು ಮಂಡ್ಯ ಜಿಲ್ಲೆಯ

ಮೇಲುಕೋಟೆಯಲ್ಲಿ, ಹೀಗೆ ಇಷ್ಟೇ ಅಲ್ಲ ಕರ್ನಾಟಕದಲ್ಲಿ ನೆಲೆ ನಿಂತ ಅನೇಕ ರಾಜವಂಶಗಳೂ ಬುಡಕಟ್ಟುಗಳೂ, ಅನ್ಯರಾಜ್ಯಗಳಿಂದ ಹೊರದೂಡಲ್ಪಟ್ಟವರೂ, ಕರ್ನಾಟಕ ಸಂಪದ್ಭರಿತವಾಗಿದೆ, ಉತ್ತಮ ಹವಾಮಾನದಿಂದ ಕೂಡಿದೆ, ಸುಸಂಸ್ಕೃತರು ವಾಸಿಸುವ ನೆಲೆಯಾಗಿದೆ ಎಂದು ಹೊರರಾಜ್ಯಗಳಿಂದ ಬಂದು ಇಲ್ಲಿ ನೆಲೆಯೂರುತ್ತಿರುವವರಿಗೇನೂ ಕೊರತೆ ಇಲ್ಲ. ಹೀಗೆ ಅನ್ಯಭಾಷಿಗರ ಪ್ರಾಬಲ್ಯ ಹೆಚ್ಚಿ ಅವರ ದೌರ್ಜನ್ಯಗಳು ಮೇಲ್ಮೈಯಾಗುತ್ತಿರುವುದನ್ನು ಕಂಡು ಅ.ನ. ಕೃಷ್ಣರಾಯರು-

''ಹೊರಗಿನಿಂದ ಬಂದು ನಮ್ಮನ್ನು ತುಳಿದವರನ್ನು ಮತ್ತು ತುಳಿಯುತ್ತಿರುವವರನ್ನು ಪೂಜಿಸಿ ಪಾಪಿಗಳಾಗಿದ್ದೇವೆ. ಈಗ ಕ್ಲೈಬ್ಯವನ್ನು ದೂರಮಾಡಬೇಕಾದ ಕಾಲವಿದು. ನಮ್ಮ ಆಲಸ್ಯವೇ ನಮ್ಮ ಮೃತ್ಯು. ಕನ್ನಡಿಗರು ಮೂಲೆಮೂಲೆಗಳಲ್ಲಿ ಉಗ್ರ ಚಳವಳಿಯನ್ನು ಕೈಗೊಳ್ಳಬೇಕು. ಸಾಹಿತ್ಯ, ಸಂಗೀತ, ರಾಜಕಾರಣ, ಉದ್ಯೋಗ, ಸಮಾಜ ಯಾವ ಹೆಸರಿನಲ್ಲಿ ಪರಾಕ್ರಮಣ ಕಂಡು ಬಂದರೂ, ಕನ್ನಡಿಗರು ಎದುರಿಸಬೇಕು''

ಎಂದು ಅಂದೇ ಎಚ್ಚರಿಸಿದ್ದಾರೆ. ಈಗ ಈ ವಲಸಿಗರ ಸಮಸ್ಯೆಯನ್ನು ಕುರಿತು ದಿಟ್ಟ ನಿಲುವು ತಾಳಬೇಕಾಗಿದೆ.

ಕರ್ನಾಟಕದಲ್ಲಿ ಕನ್ನಡ ಹೋರಾಟ ಶಿಕ್ಷಣ ಕ್ಷೇತ್ರದಲ್ಲಿ ಜಾಗೃತವಾಯ್ತು. ಶಿಕ್ಷಣದಲ್ಲಿ ಕನ್ನಡ ಭಾಷೆಯ ಸ್ಥಾನವನ್ನು ಕುರಿತು ವಿ.ಕೃ. ಗೋಕಾಕ್ ಅವರ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿ ವರದಿ ನೀಡುವಂತೆ ಸರ್ಕಾರ ನೇಮಿಸಿತು. ಆ ವರದಿಯ ನಂತರ ಸಂಘರ್ಷವೇರ್ಪಟ್ಟಾಗ ಧಾರವಾಡದ ಕರ್ನಾಟಕ ಸಂಘ ಈ ಸಮಸ್ಯೆಯನ್ನು ಕೈಗೆತ್ತಿಕೊಂಡಿತು. ಪಾಟೀಲ ಪುಟ್ಟಪ್ಪ, ರಾಜಕುಮಾರ್ ನೇತೃತ್ವದಲ್ಲಿ ಇಡೀ ಕನ್ನಡನಾಡಿನಲ್ಲಿ ಬೃಹತ್ ಚಳವಳಿ ನಡೆಯಿತು. ಆದರೂ ಇಂದಿಗೂ ಶಾಲೆಗಳಲ್ಲಿ ಕನ್ನಡಕ್ಕೆ ಮಹತ್ವದ ಸ್ಥಾನಗಳು ಸಿಗುತ್ತಿಲ್ಲ. ಇಂಗ್ಲಿಷ್ ಮಾಧ್ಯಮದ ಶಾಲೆಗಳ ಹಾವಳಿ ಹಳ್ಳಿಹಳ್ಳಿಗಳಲ್ಲಿ ಉಲ್ಬಣಗೊಳ್ಳುತ್ತಿದೆ.

ಸರ್ಕಾರದ ಆಡಳಿತದಲ್ಲಿ, ಶಿಕ್ಷಣ ಕ್ಷೇತ್ರಗಳಲ್ಲಿ ಪೂರ್ಣ ಪ್ರಮಾಣದಲ್ಲಿ ಕನ್ನಡವನ್ನು ತರಬೇಕೆಂಬ ಸಂಕಲ್ಪಶಕ್ತಿಯ ರಾಜಕಾರಣಿಗಳು ಇರದ ಕಾರಣ ಪರೋಕ್ಷವಾಗಿ ಅನ್ಯಭಾಷೆಗಳು ಅದರಲ್ಲೂ ಇಂಗ್ಲಿಷ್ ಭಾಷೆ ಮೇಲ್ಮೈ ಸಾಧಿಸುತ್ತಿದೆ. ಆಂಗ್ಲರ ಆಡಳಿತದಲ್ಲಿ ಕನ್ನಡ ಪೂರ್ಣ ಪ್ರಮಾಣದಲ್ಲಿ ಯಶಸ್ವಿಯಾಗಿ ಜಾರಿಗೊಂಡಿದ್ದರೆ ಅದು ಈಗೇಕೆ ಸಾಧ್ಯವಾಗುತ್ತಿಲ್ಲ? ಅವರಿಗಿದ್ದ ಸಂಕಲ್ಪ ಶಕ್ತಿ ಕನ್ನಡಿಗರಿಗೇ ಇಲ್ಲ ಎನ್ನುವುದು ಖೇದದ ಸಂಗತಿ. ಬ್ರಿಟಿಷರು ನಮ್ಮನ್ನಗಲಿ ನಾವು ಅವರ ಬಂಧನದಿಂದ ಬಿಡುಗಡೆಗೊಂಡರೂ ಅವರ ಇಂಗ್ಲಿಷ್ ಭಾಷೆಯ ಬಂಧನದಿಂದ ಇಂದಿಗೂ ಬಿಡುಗಡೆಗೊಂಡಿಲ್ಲ. ಇಂಗ್ಲಿಷ್ ಭಾಷೆಯನ್ನು ಎಲ್ಲರೂ ಕಲಿಯಲಿ. ಆದರೆ ಅದು ಕನ್ನಡವನ್ನು ಕಡೆಗಣಿಸಿ ಯಾವುದೇ ಅನ್ಯಭಾಷೆ-ಇಂಗ್ಲಿಷ್ ಸೇರಿದಂತೆ- ಮಾತೃಭಾಷೆಯಾದ ಕನ್ನಡದ ಸ್ಥಾನವನ್ನು ಆಕ್ರಮಿಸಲು ಅವಕಾಶವೀಯ ಬಾರದು. ಅಲ್ಲದೆ ಶಿಕ್ಷಣದ ಭಾಷೆ, ಆಡಳಿತ ಭಾಷೆ, ಕನ್ನಡವೇ ಆಗಬೇಕು ಎನ್ನುವ ವೈಜ್ಞಾನಿಕ ಸತ್ಯದಿಂದ ಕನ್ನಡಿಗರು ವಂಚಿತರಾಗಬಾರದು.

ಕನ್ನಡಿಗರು ಈ ಎಲ್ಲ ಸಮಸ್ಯೆಗಳನ್ನು ಎದುರಿಸಲು ಒಳಗೊಳ್ಳಬೇಕಾದ ಅಂಶಗಳನ್ನು ಕುರಿತು ರಾಷ್ಟ್ರಕವಿ ಕುವೆಂಪು ಅವರು ೧೯೩೮ರಷ್ಟು ಹಿಂದೆಯೇ ಹೇಳಿದ ಈ ಕೆಳಗಿನ ಮಾತುಗಳು ಇಂದಿಗೂ ಪ್ರಸ್ತುತವಾಗಿದ್ದು ಅವುಗಳನ್ನು ಕನ್ನಡಿಗರಾದ ನಾವು ಅತ್ಯಂತ ಶ್ರದ್ಧಾಭಕ್ತಿಯಿಂದ ಆವಾಹನೆ ಮಾಡಿಕೊಳ್ಳಬೇಕಾಗಿದೆ.

''ಕರ್ನಾಟಕ ಭಕ್ತರಲ್ಲಿ, ಕನ್ನಡ ಸಾಹಿತ್ಯ ಸೇವಕರಲ್ಲಿ, ಕನ್ನಡಮ್ಮನ ಮಕ್ಕಳಲ್ಲಿ ಆ ನಾಡದೇವಿಯ ಉಪಾಸಕನಾದ ಕಬ್ಬಿಗನೊಬ್ಬನು ಇಂತೆಂದು ಪ್ರಜ್ಞಾಪಿಸುತ್ತಿದ್ದಾನೆ:

- ನಾವು ತೋರಿಸುತ್ತಿರುವ ಆಸಕ್ತಿ ಶ್ಲಾಘನೀಯವಾಗಿದೆ. ಆದರೂ ಸಾಲದಾಗಿದೆ.
- ನಮ್ಮ ಇಚ್ಛೆ ಎಚ್ಚೆತ್ತಿದೆ: ಆದರಿನ್ನೂ ಮುನ್ನುಗ್ಗಿ, ಹೋರಾಡುವುದನ್ನು ಕಲಿಯಬೇಕಾಗಿದೆ.
- ನಮ್ಮ ಆಸೆ ಕೆರಳಿದೆ; ಆದರಿನ್ನೂ ಕಾರ್ಯಕಾರಿಯಾಗಿ ಸೃಷ್ಟಿಸಲು ತೊಡಗಿಲ್ಲ.
- ನಮ್ಮ ಆತ್ಮಗೌರವದ ಸರ್ಪಕ್ಕೆ ಅವಹೇಳನದ ಪದಾಘಾತವಾಗಿದೆ. ಆದರಿನ್ನೂ ಹೆಡೆ ಎತ್ತಿ ನಿಂತಿಲ್ಲ.
- ನಮ್ಮ ಸ್ವಾರ್ಥತೆ ಬಲಿಪೀಠಕ್ಕೇರಿದೆ; ಆದರಿನ್ನೂ ದೃಢಚಿತ್ತದ ಖಡ್ಗವು ಕೆಳಗಿಳಿದಿಲ್ಲ, ಆದ್ದರಿಂದ ತ್ಯಾಗದೇವತೆ ಪ್ರತ್ಯಕ್ಷಳಾಗಿಲ್ಲ.

ತ್ಯಾಗದೇವತೆ ಪ್ರತ್ಯಕ್ಷಳಾಗುವವರೆಗೂ ಕರ್ನಾಟಕ ದೇಶದೇವಿ ನಮಗೆ ಸುಪ್ರಸನ್ನಳಾಗುವುದಿಲ್ಲ.

ದೇವಿ ಪ್ರಸನ್ನಳಾಗುವವರೆಗೂ ನಮಗೆ ನಿದ್ದೆಯಿಲ್ಲ, ಸುಖವಿಲ್ಲ, ಶಾಂತಿ ಇಲ್ಲ!''

# ಗಡಿ ಚಳವಳಿ

## ಕಯ್ಯಾರ ಕಿಞ್ಞಣ್ಣ ರೈ

ಪ್ರತಿಯೊರ್ವ ನಾಗರಿಕನೂ, ಆತನ ಗ್ರಾಮ, ಜಿಲ್ಲೆ, ರಾಜ್ಯ ಮಟ್ಟಗಳ ಕಚೇರಿಗಳಲ್ಲಿ ಸರಕಾರೀ ವಲಯದಲ್ಲಿ, ಏನೇನು ನಡೆಯುತ್ತದೆ ಎಂಬುದನ್ನು ತಿಳಿದುಕೊಂಡು ಅದಕ್ಕೆ ಸ್ಪಂದಿಸಿ ಜೀವನ ಸಾಗಿಸುವುದು ಸ್ವರಾಜ್ಯದ ಸರಿಯಾದ ಅರ್ಥವಾಗಿದೆ. ಲೋಕಾದ್ಯಂತ ಸ್ವತಂತ್ರ ರಾಷ್ಟ್ರಗಳಲ್ಲಿ ಈ ಸಿದ್ಧಾಂತದಂತೆ ವ್ಯವಹಾರಗಳು ನಡೆಯುತ್ತವೆ. ಹಾಗಲ್ಲವಾದರೆ, ಪ್ರಜೆಗಳಿಗೆ ಆಗುವ ತೊಂದರೆಗಳು ಅಗಣಿತ. ನ್ಯಾಯ ದೊರಕಬೇಕೆಂದು ನ್ಯಾಯಾಲಯದಲ್ಲಿ ದೂರು ಸಲ್ಲಿಸುತ್ತಾನೆ; ಆತನಿಗೆ ಅಲ್ಲಿ ನಡೆವ ಚರ್ಚೆ ತೀರ್ಮಾನಗಳು ಆತನ ಮಾತೃಭಾಷೆಯಲ್ಲಿ ಅಲ್ಲವಾದರೆ, ಇತರರು ಹೇಳಿದ್ದನ್ನು ನಂಬಬೇಕಾದರೆ ಸತ್ಯಾಂಶದ ಅರಿವಾಗುವುದು ಅಸಾಧ್ಯ; ಗ್ರಾಮರಾಜ್ಯಮಟ್ಟಗಳ ಸರಕಾರೀ ಕಚೇರಿಗಳಿಂದ ಬರುವ ಪ್ರಕಟನೆಗಳೂ ತನಗೆ ಗೊತ್ತಿಲ್ಲದ ಮಾತೃಭಾಷೆಯಲ್ಲದ. ಭಾಷೆಯಲ್ಲಿ ಬಂದರೂ ಇದೇ ತಾಪತ್ರಯ, ಹೀಗಾದಲ್ಲಿ ಸ್ವರಾಜ್ಯ ಸ್ವಾತಂತ್ರ್ಯ ಎಂಬುದಕ್ಕೆ ಅರ್ಥವೇನು?

ಹಾಗಾಗಿ, ಭಾರತಕ್ಕೆ ಸ್ವಾತಂತ್ರ್ಯ ಬೇಕು ಎಂದು ಹೋರಾಡಿದ ಕಾಲದಲ್ಲಿಯೇ, ಸ್ವರಾಜ್ಯ ಸಿಕ್ಕಿದ ಮೇಲೆ ಜನತೆಯ ಮಾತೃಭಾಷೆಯಲ್ಲಿಯೇ ಪ್ರಾಂತೀಯ ಆಡಳಿತ ನಡೆಯಬೇಕೆಂದು ಭಾಷಾ ಪ್ರಾಂತಗಳ ನಿರ್ಮಾಣವಾಗತಕ್ಕದ್ದೆಂದು ಸ್ವಾತಂತ್ರ್ಯ ಸಂಗ್ರಾಮದ ಧುರೀಣರು ಮಹಾತ್ಮ ಗಾಂಧಿ ಮೊದಲಾದವರು ಅಭಿಪ್ರಾಯ ಪಟ್ಟಿದ್ದರು. ಆ ಬಗ್ಗೆ ಕಲ್ಕತ್ತದಲ್ಲಿ, ರಾಷ್ಟ್ರದ ವಿವಿಧ ಭಾಗಗಳ ಹಲವು ಧುರೀಣರನ್ನು ಆಹ್ವಾನಿಸಿ ಸಭೆ ಸೇರಿಸಿ ಚರ್ಚಿಸಿ ತೀರ್ಮಾನ ಕೈಗೊಂಡಿದ್ದರು. ಸ್ವಾತಂತ್ರ್ಯ ಸಿಕ್ಕಿದ ನಂತರ ಪ್ರಾಂತಗಳ ವಿಭಜನೆ ಭಾಷಾಮೂಲವಾಗಿ ಆಗಿ ನಾಡಿನ ಜನತೆ ಸ್ವಾತಂತ್ರ್ಯದ ಪೂರ್ಣ ಪ್ರಯೋಜನ ಪಡೆವಂತಾಗಬೇಕೆಂದು ನಿಶ್ಚಯವಾಗಿತ್ತು. ಅಂದು ಸ್ವಾತಂತ್ರ್ಯಕ್ಕೆ ಹೋರಾಡಿದ ಪ್ರಮುಖ ಪಕ್ಷವಾದ ಕಾಂಗ್ರೆಸ್ಸು ಭಾಷಾ ಮೂಲವಾದ ಪ್ರಾಂತ ಸಮಿತಿಗಳನ್ನು ರಚಿಸಿ ಕಾರ್ಯಪ್ರವೃತ್ತವಾಗಿತ್ತು. ಬ್ರಿಟಿಷರ ಆಡಳಿತದಲ್ಲಿ ಮದ್ರಾಸ್, ಬೊಂಬಾಯಿ ಮೊದಲಾದ ಪ್ರಾಂತ್ಯಗಳಲ್ಲಿ ಸೇರಿದ್ದ ಎಲ್ಲಾ ಕನ್ನಡಿಗರೂ ಒಂದೇ ಕರ್ನಾಟಕ ಪ್ರಾಂತ ಕಾಂಗ್ರೆಸ್ ಅನ್ನು ರಚಿಸಿ ಅದರಂತೆ ಕಾರ್ಯಪ್ರವೃತ್ತರಾದರು.; ಇದೇ ರೀತಿ ದಕ್ಷಿಣ ಹಾಗೂ ಉತ್ತರ ಭಾರತಗಳಲ್ಲೂ ಪ್ರಾಂತಗಳು ರಚಿತವಾಗಿ ವ್ಯವಸ್ಥಿತವಾಗಿ ನಡೆಯಿತು. ಕರ್ನಾಟಕ ಕಾಂಗ್ರೆಸ್ ಪಕ್ಷದ ಮುಖಂಡರಾದ ಆಲೂರ ವೆಂಕಟರಾಯರು, ದಿವಾಕರ ರಂಗರಾಯರು, ನಿಜಲಿಂಗಪ್ಪನವರು, ಕೋಟ ರಾಮಕೃಷ್ಣ ಕಾರಂತರು ಮುಂತಾದ ಪ್ರಭೃತಿಗಳು ಏಕೀಕರಣವಾದಿಗಳಾಗಿಯೇ ಸ್ವಾತಂತ್ರ್ಯ ಆಂದೋಲನದಲ್ಲಿ ಪಾಲ್ಗೊಂಡರು.

೧೯೪೭ರಲ್ಲಿ ಭಾರತ ಸ್ವತಂತ್ರವಾಯಿತು. ಶೀಘ್ರವೇ ಭಾಷಾಮೂಲ ಪ್ರಾಂತ ರಚನೆಯಾಗಬೇಕೆಂಬ ಉದ್ಘೋಷ ಮೊಳಗಿತು. ಆದರೆ, ಭಾಷಾರಾಜ್ಯ ರಚನೆ ವಿಳಂಬವಾಗುತ್ತಿರುವುದನ್ನು ಪ್ರತಿಭಟಿಸಿ, ಆಂಧ್ರ ಪ್ರಾಂತ ರಚನೆ ಕೂಡಲೇ ಆಗಬೇಕೆಂಬ ಅಸಹನೀಯ ಆಕಾಂಕ್ಷೆಯಿಂದ ಆಂಧ್ರದ ಪೊಟ್ಟಿ ಶ್ರೀರಾಮುಲು ಆತ್ಮಾಹುತಿ ಅರ್ಪಿಸಿದರು. ಆಂಧ್ರದ ಜನತೆ ಕೆರಳಿತು. ಕೇಂದ್ರ

ಸರಕಾರ ಕೂಡಲೇ ಆಂಧ್ರ ಭಾಷಾಮೂಲದ ರಾಜ್ಯ ರಚನೆ ಮಾಡಿತು. ಅದೇ ಕಾಲಕ್ಕೆ ಎಂದರೆ ೧೯೪೭೦ರ ಕೊನೆಗೆ ಕಾಸರಗೋಡಿನಲ್ಲಿ ತಿ.ತಾ. ಶರ್ಮರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತು. ಅದರ ಅಂಗವಾಗಿ ಏಕೀಕರಣ ಗೋಷ್ಠಿಯೂ ಏರ್ಪಟ್ಟು ಅದರಲ್ಲಿ ದಿವಾಕರ ರಂಗರಾಯರು, ನಿಜಲಿಂಗಪ್ಪನವರು, ರಾಮಕೃಷ್ಣ ಕಾರಂತರು, ಜಿನರಾಜ ಹೆಗ್ಡೆ ಮುಂತಾದ ಪ್ರಭೃತಿಗಳು ಪಾಲ್ಗೊಂಡು ಕರ್ನಾಟಕ ಪ್ರಾಂತ ರಚನೆಗೆ ಕರೆ ನೀಡಿದರು. ಭೋಜನಸಮಾರಂಭ ಏರ್ಪಡಿಸಿ, ಎಲ್ಲರನ್ನು ಬರಮಾಡಿ ಎಲೆ ಹಾಕಿ ಕುಳಿತುಕೊಳ್ಳಿಸಿ ಅನ್ನ ಮೇಲೋಗರ ಬಳಸಿ ತುಪ್ಪ ಇಕ್ಕಿದ ನಂತರವೂ ಊಟ ಮಾಡಬೇಡಿ ಎಂದರೆ ಯಾರು ಕೇಳುತ್ತಾರೆ.; ರಾಷ್ಟ್ರಕ್ಕೆ ಸ್ವರಾಜ್ಯ ಪಡೆದ ನಂತರವೂ, ಭಾಷಾಮೂಲ ರಾಜ್ಯ ರಚಿಸದೆ ಇದ್ದಲ್ಲಿ ಜನತೆ ದಂಗೆ ಏಳಬಹುದು ಎಂಬರ್ಥದ ಈ ನುಡಿಯ ಕಿಡಿಯನ್ನು ಗೋಷ್ಠಿಯ ಅಧ್ಯಕ್ಷ ಭಾಷಣದಲ್ಲಿ ದಿವಾಕರರು ಉದ್ಘೋಷಿಸಿದರು. ಅಲ್ಲಿ ಸೇರಿದ ಅಖಿಲ ಕರ್ನಾಟಕದ ಮುಖಂಡರ ಹಾಗೂ ಜನತೆಯ ಪ್ರಚಂಡ ಸಭೆ ಆ ಧೋರಣೆಗೆ ಮಾರ್ಪಡಿಸಿತು.

ಆಗ ಕೇಂದ್ರ ಸರಕಾರ ಮತ್ತೊಮ್ಮೆ ಎಚ್ಚೆತ್ತಿತ್ತು. ಪ್ರಧಾನಿ ನೆಹರು ದಿವಾಕರರನ್ನು ಕೇಂದ್ರ ಮಂತ್ರಿ ಮಂಡಳಕ್ಕೆ ಸೇರಿಸಿಕೊಂಡರೂ ಏಕೀಕರಣದ ಆಂದೋಲನ ತೀವ್ರವಾಗುತ್ತಾ ಇತ್ತು. ವಿಷಯದ ಗಂಭೀರತೆಯನ್ನು ಅರ್ಥ ಮಾಡಿಕೊಂಡು ಕೇಂದ್ರ ಸರಕಾರ ಸಮಸ್ತ ಭಾರತದಲ್ಲಿಯೂ ಭಾಷಾಮೂಲ ಪ್ರಾಂತ ರಚನೆಯ ಸಾಧ್ಯತೆಯನ್ನು ಪರಿಶೀಲಿಸಿ ವರದಿ ಮಂಡಿಸಲು ಫಜಲಾಲಿ ಆಯೋಗವೆಂಬ ತ್ರಿಸದಸ್ಯ ಸಮಿತಿಯನ್ನು ನೇಮಿಸಿತು. ಆ ಸಮಿತಿ ರಾಷ್ಟ್ರಾದ್ಯಾಂತ ಸಂಚರಿಸಿ ಜನಾಭಿಪ್ರಾಯ ಸಂಗ್ರಹಿಸಿತು. ಆ ತ್ರಿಸದಸ್ಯ ಸಮಿತಿ ವರದಿಯಂತೇ ೧೯೫೬ರಲ್ಲಿ, ಕರ್ನಾಟಕ, ಕೇರಳ, ಮಹಾರಾಷ್ಟ್ರ, ತಮಿಳು ಮುಂತಾದ ಭಾಷಾಮೂಲ ಪ್ರಾಂತಗಳು ರಾಷ್ಟ್ರಾದ್ಯಂತ ರೂಪಿತವಾದುವು. ಹೀಗೆ ಭಾಷಾಮೂಲ ರಾಜ್ಯಗಳು ಸ್ಥಾಪಿತವಾದಾಗಲೂ, ಕೆಲವೊಂದು ಗಡಿ ಸಮಸ್ಯೆಗಳು ಉದ್ಭವಿಸಿ ಆಗಾಗ್ಗೆ ಗಡಿ ಹೋರಾಟ ಪ್ರಾರಂಭವಾಯಿತು. ಈ ಗಡಿ ಹೋರಾಟದ ಸಮಸ್ಯೆಗಳಲ್ಲಿ ಪ್ರಮುಖವಾದುದೆಂದರೆ ಕರ್ನಾಟಕ-ಕೇರಳ ಗಡಿ ವಿವಾದವಾದ ಕಾಸರಗೋಡು ಕರ್ನಾಟಕಕ್ಕೆ ಸೇರಬೇಕಾದ ವಿಚಾರವೊಂದು-ಅದರಂತೆ ಮಹಾರಾಷ್ಟ್ರ- ಕರ್ನಾಟಕ ಗಡಿ ವಿವಾದವಾದ ಬೆಳಗಾವಿ ಮಹಾರಾಷ್ಟ್ರಕ್ಕೆ ಸೇರಬೇಕೆಂಬ ವಾದ ಇನ್ನೊಂದು. ಅ ನಿಮಿತ್ತ ಕಾಸರಗೋಡಿನಲ್ಲಿ ಕನ್ನಡಿಗರೂ ಬೆಳಗಾವಿಯಲ್ಲಿ ಮಹಾರಾಷ್ಟ್ರೀಯರೂ ಚಳವಳಿಗಳನ್ನು ತೀವ್ರಗೊಳಿಸಿದರು.

ಬೆಳಗಾವಿ ಮಹಾರಾಷ್ಟ್ರವಲ್ಲ, ಕರ್ನಾಟಕವೆಂದು ಹಿಂದೆಯೇ ತಿಲಕ್, ಗಾಂಧಿ, ಕಾಲೇಲ್ಕರ ಪ್ರಭೃತಿ ರಾಷ್ಟ್ರ ಧುರೀಣರೇ ಸಾರಿದ್ದರೂ, ಮಹಾರಾಷ್ಟ್ರೀಯರು ಅದನ್ನು ಮಹಾರಾಷ್ಟ್ರ ರಾಜ್ಯಕ್ಕೆ ಸೇರಿಸಬೇಕೆಂದು ಬೊಬ್ಬೆ ಎಬ್ಬಿಸಿದರು, ಹೋರಾಟ ನಡೆಸಿದರು. ಆದರೆ, ಕಾಸರಗೋಡು ಕರ್ನಾಟಕದ ಭಾಗವೆಂದು ಪ್ರಾಚೀನ ಇತಿಹಾಸಕಾರರು, ಪಾಶ್ಚಾತ್ಯ ಸಂಶೋಧಕರು ಮಾತ್ರವಲ್ಲ, ಅಖಿಲ ಭಾರತ ಖ್ಯಾತಿಯ ಕಮ್ಯುನಿಸ್ಟ್ ಧುರೀಣ ಹಾಗೂ ಕೇರಳದ ಮುಖ್ಯಮಂತ್ರಿಯಾದ ಇ. ಎಂ. ಎಸ್. ನಂಬೂದಿರಿಪಾಡರು ೧೯೫೮ರಲ್ಲಿ ಬರೆದ ಪುಸ್ತಕವೊಂದರಲ್ಲಿ ಉಲ್ಲೇಖಿಸಿರುವರು; ಅವರ ಮಾತನ್ನು ಇನ್ನೊಬ್ಬ ಕೇರಳದ ಮುಖ್ಯಮಂತ್ರಿ, ಅಚ್ಯುತ ಮೆನನ್ ಹಾಗೂ ಕೇರಳ ಶಿಕ್ಷಣ ಸಚಿವ ಪ್ರೊ ಮೊಂಡಶ್ಶೇರಿ ಪ್ರಭೃತಿಗಳೂ ಸಮರ್ಥಿಸಿರುವರು. ಫಜಲಾಲಿ ಕಮೀಷನಿನಲ್ಲಿನ ಮೂರೂ ಜನ ಸದಸ್ಯರಲ್ಲಿ ಬ್ಯಾರಿಸ್ಟರ್ ಸರ್ದಾರ್ ಪಣಿಕರ್ ಕೂಡ ಒಬ್ಬರು. ಅವರು ಮೂಲತಃ ಕೇರಳೀಯರು. ಮದ್ರಾಸ್ ಪ್ರಾಂತದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಒಂದು ತಾಲ್ಲೂಕಾಗಿ ಕಾಸರಗೋಡು ಇದ್ದಾಗಲೂ ನೀಲೇಶ್ವರದ ದಾಯಿ ಹೊಳೆತನಕ ಕಾಸರಗೋಡು ವಿಸ್ತರಿಸಿತ್ತು. ನೀಲೇಶ್ವರ ಪ್ರೌಢ ಶಾಲೆಯಲ್ಲಿ ಕನ್ನಡ ಕಲಿತವರು, ಖ್ಯಾತ ಕನ್ನಡ ಲೇಖಕ 'ನಿರಂಜನ'ರು ಮಾತ್ರವಲ್ಲ, ಕರ್ನಾಟಕ ರಾಜ್ಯದಲ್ಲಿ ಸಚಿವರಾಗಿದ್ದ ವಿಠ್ಠಲ ದಾಸ ಶೆಟ್ಟರು ಕೂಡ. ಇಂದು ಅಚ್ಚಗನ್ನಡ ಪ್ರದೇಶವಾದ ಕಾಸರಗೋಡು ದಾಯಿ ಹೊಳೆತನಕ ೮೦೦ ಚದುರ ಮೈಲು ವಿಸ್ತರಿಸಿತ್ತು. ಇಷ್ಟು ವಿಸ್ತೀರ್ಣದ ಕಾಸರಗೋಡು ಪ್ರದೇಶದ ೫೦೦ ಚದುರ ಮೈಲೂ ವಿಸ್ತೀರ್ಣದ ಚಂದ್ರಗಿರಿ, ಪಯಸ್ವಿನಿ ಹೊಳೆಯ ದಕ್ಷಿಣ ಭಾಗವನ್ನು ಕೇರಳಕ್ಕೆ ಬಿಟ್ಟುಕೊಟ್ಟು ಉಳಿದ ಉತ್ತರ ಭಾಗ ಕೇವಲ ೩೦೦ ಚದುರ ಮೈಲು ಕಾಸರಗೋಡು ಪ್ರದೇಶ ಕರ್ನಾಟಕಕ್ಕೆ ಇರಲಿ ಎಂದು ಆಯೋಗದ ಸದಸ್ಯರಾಗಿದ್ದ ಸರ್ದಾರ್ ಪಣಿಕ್ಕರರು ಹೇಳಿದರು. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ನಿರಂತರ ಹೋರಾಡಿದ ಕಾಸರಗೋಡಿನ ಕನ್ನಡಿಗ ಧುರೀಣರು ಪ್ರಾಂತ ವಿಭಜನೆಯಾದ ನಂತರ, ಕನ್ನಡಿಗರ ಕೇರಳೀಯರಲ್ಲಿ ಸೌಹಾರ್ದ ಉಳಿಯಲಿ ಎಂಬ ವಿಶಾಲ ಬುದ್ಧಿಯಿಂದ ಸರ್ದಾರ್ ಪಣಿಕ್ಕರು ಮಾತನ್ನು ಒಪ್ಪಿಕೊಂಡರು; ಆ ಮಾತಿಗೆ ಇತರ ಕನ್ನಡಿಗರೂ ಸಮ್ಮತಿಸಿದರು; ಆದರೆ ಆಯೋಗ ವರದಿ ಮಂಡಿಸುವಾಗ ಇಡೀ ಕಾಸರಗೋಡು ತಾಲ್ಲೂಕನ್ನು ಕೇರಳಕ್ಕೆ ದಾನಮಾಡಿತು. ಈ ವಿಶ್ವಾಸದ್ರೋಹದಿಂದ ಕನ್ನಡಿಗರು ಕೆರಳಿದರು; ಹೋರಾಟ ನಡೆಸಿದರು; ಲಾಠಿ ಹೊಡೆತ ತಿಂದರು; ಸೆರೆಮನೆ ಸಂಕಷ್ಟ ಸತ್ಯಾಗ್ರಹ ಅನುಭವಿಸಿದರು. ಆಬಾಲ ವೃದ್ಧರಾಗಿ ಕಾಸರಗೋಡಿನ ಜನತೆ ತೀವ್ರ ಸಂಗ್ರಾಮ ನಡೆಸಿತು; ಮಹಿಳೆಯರು ಸತ್ಯಾಗ್ರಹ ಹೂಡಿ ಸೆರೆಮನೆಗೆ ಹೋದರು.

ಮುಂದೆ, ಸುಪ್ರೀಂ ಕೋರ್ಟು ಜಡ್ಜ್‌ರೂ, ಪಾರ್ಲಿಮೆಂಟ್ ಸಭಾಧ್ಯಕ್ಷರೂ ಆದ ಶ್ರೀ.ಕೆ.ಎಸ್. ಹೆಗ್ಡೆಯವರು ಆ ಕಾಲದಲ್ಲಿ ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ಅವರು, ಅಂದಿನ ಗೃಹಮಂತ್ರಿಗಳಾದ ಪಂತರೊಡನೆ, ಚಂದ್ರಗಿರಿ, ಪಯಸ್ವಿನಿ ಉತ್ತರ ಭಾಗದ ಕಾಸರಗೋಡು ಕನ್ನಡಿಗರದ್ದೆಂದು ತ್ರಿಸದಸ್ಯ ಸಮಿತಿ ಸದಸ್ಯರಲ್ಲೊಬ್ಬರಾದ ಸರ್ದಾರ್ ಪಣಿಕ್ಕರರೇ ಒಪ್ಪಿ ಈಗ ವಂಚನೆ ಮಾಡಿದ್ದಾರೆ ಎಂದು ದೂರು ನೀಡಿದರಂತೆ, ಕೇಂದ್ರದ ಗೃಹಸಚಿವರು ಪಣಿಕ್ಕರರೊಡನೆ ಆ ಕುರಿತು ಕೇಳಿದಾಗ, ತಾನು ಹಾಗೆ ಹೇಳಿದ್ದು ಆಹುದೆಂದೂ, ಆದರೆ ಆಯೋಗದ ವರದಿ ಬರೆದುದು ನಾನೊಬ್ಬನೇ ಅಲ್ಲ. ಮೂವರು ಸದಸ್ಯರೆಂದೂ ಹೇಳಿ ತಲೆ ತಪ್ಪಿಸಿಕೊಂಡರು. ತನ್ನ ಸಂಬಂಧಿಕರ ದೂರಿನ ವ್ಯಾಜ್ಯ ತನ್ನ ನ್ಯಾಯಾಲಯಕ್ಕೆ ಬಂದರೆ, ಅ ನ್ಯಾಯಾಪಧಿತಿ ಆ ವ್ಯಾಜ್ಯವನ್ನು ಇನ್ನೊಬ್ಬ ನ್ಯಾಯಾಧೀಶರ ವಿಚಾರಣೆಗೆ ಕಳುಹಿಸುವುದು, ಸತ್ಯ ಸ್ವತಃ ಬ್ಯಾರಿಸ್ಟರರಾದ ಪಣಿಕ್ಕರರಿಗೆ ಈ ವಿಷಯ ತಿಳಿಯದಿರಲು ಸಾಧ್ಯವಿಲ್ಲ, ಹಾಗಿದ್ದರೂ, ಸ್ವತಃ ಕೇರಳೀಯರಾದ ಅವರೇ ಆಯೋಗದ ಸದಸ್ಯರಲ್ಲಿ ಮುಂದಾಳಾಗಿ ಕನ್ನಡಿಗರ ವಾದ ಕೇಳಿ. ಅವರಿಗೆ ಕಾಸರಗೋಡಿನ ಉತ್ತರ ಭಾಗ ಕೊಡುವುದು ನಿಶ್ಚಯವೆಂದು ತಿಳಿಸಿ, ಮತ್ತೆ ವರದಿ ಬರೆದಾಗ ಈ ರೀತಿ ವಂಚನೆ ಮಾಡಿದ್ದು ದೇಶ ದ್ರೋಹವಾಗಿದೆ. ಇಂತಹ ದ್ರೋಹವನ್ನು ಪ್ರತಿಭಟಿಸಿ ಕಾನುಗೋಡಿನ ಸಮಸ್ತ ಜನತೆ, ಕೇವಲ ಕನ್ನಡ ಮನೆಮಾತಿನವರು ಮಾತ್ರವಲ್ಲ, ತುಳು, ಕೊಂಕಣಿ, ಕರಾಡ, ಉರ್ದು, ಮಲಯಾಳ, ಮಾತೃಭಾಷೆಯವರೂ ಒಗ್ಗಟ್ಟಿನಿಂದ ಕಾಸರಗೋಡನ್ನು ಮರಳಿ ಕರ್ನಾಟಕಕ್ಕೆ ಸೇರಿಸುವ ಹೋರಾಟ ನಡೆಸಿದರು. ಕಾಸರಗೋಡಿನ ಸಕಲ ರಾಜಕೀಯ ಪಕ್ಷಗಳ ಮುಖಂಡರೂ ತಮ್ಮ ತಮ್ಮ ಪಕ್ಷಗಳಿಗೆ ರಾಜೀನಾಮೆ ಇತ್ತು. ಕರ್ನಾಟಕ ಪ್ರಾಂತೀಯ ಸಮಿತಿಯನ್ನು ಸ್ಥಾಪಿಸಿ ಹೋರಾಡಿದ್ದಲ್ಲದೆ, ತಮ್ಮ ನಿಲುವನ್ನು ರಾಜ್ಯ ಕೇಂದ್ರ ಸರ್ಕಾರಗಳಿಗೆ ಸವಿವರ ತಿಳಿಸಿದರು.

ಕಾಸರಗೋಡಿಗಾಗಿ ಕನ್ನಡಿಗರು ಹೋರಾಡಿದಂತೆ ಬೆಳಗಾವಿಗಾಗಿ ಮಹಾರಾಷ್ಟ್ರೀಯರು ಚಳವಳಿ ನಡೆಸಿದ್ದರಿಂದ ಕೇಂದ್ರ ಸರ್ಕಾರ ಎಚ್ಚತ್ತು ಆ ಉಭಯ ಗಡಿ ಹೋರಾಟಗಳ ವಿವಾದ ತೀರ್ಮಾನಕ್ಕಾಗಿ ಸುಪ್ರೀಂ ಕೋರ್ಟಿನ ಜಡ್ಜ್‌ರಾಗಿದ್ದ ಜಿ. ಮೆಹರ್ ಚಂದ ಮಹಾಜನರ ಆಯೋಗವನ್ನು ನೇಮಿಸಿತು. ಬೊಂಬಾಯಿಯ ಮಹಾರಾಷ್ಟ್ರೀಯರ ಬೊಬ್ಬೆಯೇ ದಿಲ್ಲಿಯ ಮಂತ್ರಿವರ್ಯರಿಗೆ ಹೆಚ್ಚಾಗಿ ಕೇಳಿಸಿ, ದೂರದ ಕಾಸರಗೋಡಿನ ಕನ್ನಡಿಗರಿಗೆ ನ್ಯಾಯ ದೊರಕದೆ ಹೋಗಲಾರದೆಂದು ಆ ಸಂದರ್ಭದಲ್ಲಿ ನಿಜಲಿಂಗಪ್ಪನವರು ರಾಮಕೃಷ್ಣ ಹೆಗಡೆಯವರನ್ನು ಕೂಡಿಕೊಂಡು ದಿಲ್ಲಿಗೆ ಹೋಗಿ ಪ್ರಧಾನಿಯವರನ್ನು ಸಂದರ್ಶಿಸಿ ಆಯೋಗ ಕಾಸರಗೋಡಿಗಾದ ಅನ್ಯಾಯವನ್ನು ತನಿಖೆಮಾಡಿ ನ್ಯಾಯದಾನ ಮಾಡಿಕೊಂಡದ್ದು ನಾವು ಇಂದು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ಹಾಗಾಗಿ ಮಹಾಜನ ಆಯೋಗ ಮಹಾರಾಷ್ಟ್ರ- ಕರ್ನಾಟಕ, ಕರ್ನಾಟಕ -ಕೇರಳ ಎಂಬೀ ಉಭಯ ವಿವಾದಗಳ ಕುರಿತು ವರದಿ ಸಲ್ಲಿಸಿ ತೀರ್ಮಾನ ನೀಡಿದೆ. ಶ್ರೀ ಮಹಾಜನರು ಈ ಉಭಯ ವಿವಾದ ಪ್ರದೇಶಗಳಲ್ಲೂ ವಿಸ್ತಾರವಾದ ಸಂಚಾರ ಕೈಕೊಂಡು ಅಸಂಖ್ಯ ಸಂಘ ಸಂಸ್ಥೆಗಳ, ಜನತೆಯ, ರಾಷ್ಟ್ರೀಯ ಪಕ್ಷಗಳ ಪ್ರತಿನಿಧಿಗಳ ಮನವಿಗಳನ್ನು ಸ್ವೀಕರಿಸಿದರು. ಕಾಸರಗೋಡಿಗೆ ಬಂದಾಗ, ಪೆರಡಾಲದಲ್ಲಿ ಆಗ ಪಂಚಾಯಿತಿಯ ಅಧ್ಯಕ್ಷನಾಗಿದ್ದ ನಾನೂ ಮಹಾಜನರಿಗೆ ಮನವಿ ಸಲ್ಲಿಸಿದೆ. ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳಾಗಿದ್ದ ಶ್ರೀ ಎಚ್. ಎಲ್. ನಾಗೇಗೌಡರು ಮಹಾಜನರ ಜತೆಗಿದ್ದರು. ಕಾಸರಗೋಡಿನಲ್ಲಿ ಹಿಂದು, ಮುಸ್ಲಿಂ, ಕ್ರಿಶ್ಚಿಯನ್ ಮೊದಲಾದ ಹಲಜಾತಿಯ ಮುಖ್ಯಸ್ಥರೂ, ವಿವಿಧ ರಾಜಕೀಯ ಸಾಂಸ್ಕೃತಿಕ ಸಂಘ ಸಂಸ್ಥೆಗಳ ಧುರೀಣರೂ ಸಹಸ್ರ ಸಂಖ್ಯೆಯ ಮನವಿಗಳನ್ನು ಸಮರ್ಪಿಸಿದರು. ಕರ್ನಾಟಕ ಪ್ರಾಂತೀಕರೂ ಸಮಿತಿಯ ಅಧ್ಯಕ್ಷರ ನೆಲೆಯಲ್ಲಿ ಶ್ರೀಧರ ಕಕ್ಕಿಲ್ಲಾಯರೂ ವಿವರವಾದ ಮನವಿ ಮಂಡಿಸಿದರು; ಖ್ಯಾತ ನ್ಯಾಯವಾದಿ ಹಾಗೂ ರಾಜಕೀಯ ಧುರೀಣ ರಾಮಕೃಷ್ಣ ಕಾರಂತರು ಮಹಾಜನರ ಮುಂದೆ ವಾದಿಸಿದರು. ಆಗ ಕಾಸರಗೋಡನ್ನು ಪಾರ್ಲಿಮೆಂಟಿನಲ್ಲಿ ಪ್ರತಿನಿಧೀಕರಿಸಿದ್ದ ಬೆನಗಲ್ ಶಿವರಾಯರು ಮನವಿಯೊಪ್ಪಿಸಿದರು. ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ನಿಜಲಿಂಗಪ್ಪನವರು ಕಾಸರಗೋಡಿನ ಕನ್ನಡಿಗರ ವಾದವನ್ನು ಸಮರ್ಥಿಸಿದ್ದರು.

ಮಹಾಜನ ಆಯೋಗ ಈ ಎಲ್ಲಾ ಮನವಿಗಳನ್ನು, ಕನ್ನಡಿಗರ ಹಾಗೂ ಮಹಾರಾಷ್ಟ್ರೀಯರ ಮನವಿಗಳನ್ನು ಕೂಲಂಕಷ ಪರಿಶೀಲಿಸಿ ನೀಡಿದ ಚಾರಿತ್ರಿಕ ತೀರ್ಪಿನಂತೆ, ಚಂದ್ರಗಿರಿ-ಪಯಸ್ವಿನಿ ನದಿಗಳ ಉತ್ತರ ಭಾಗದ ಕಾಸರಗೋಡು ಕರ್ನಾಟಕಕ್ಕೆ ಸೇರಬೇಕೆಂದೂ, ಬೆಳಗಾವಿ ಕರ್ನಾಟಕದ್ದೆಂದೂ ಈಗ ಕರ್ನಾಟಕಕ್ಕೆ ಸೇರಿಸಲ್ಪಟ್ಟ ನಿಪ್ಪಾಣಿ ಮಹಾರಾಷ್ಟ್ರಕ್ಕೂ, ಈಗ ಮಹಾರಾಷ್ಟ್ರದಲ್ಲಿರುವ ದಕ್ಷಿಣ ಸೊಲ್ಲಾಪುರ ಕರ್ನಾಟಕಕ್ಕೂ ಹೀಗೆ ಕೆಲವೊಂದು ಇತಿಹಾಸ ಮಹತ್ವದ ತೀರ್ಮಾನ ನೀಡಿದೆ. ಆ ತೀರ್ಮಾನವನ್ನು ಕರ್ನಾಟಕ ಶಾಸನ ಸಭೆ ಹಾಗೂ ಅಲ್ಲಿನ ಸರ್ಕಾರ ಸಂಪೂರ್ಣ ಸಮ್ಮತಿಸಿದೆ. ಮಹಾರಾಷ್ಟ್ರ ಸರಕಾರ ಮಾತ್ರ ಅಪಸ್ವರ ಹೊರಡಿಸುತ್ತಿದೆ; ಮಹಾಜನ ಆಯೋಗ ನೇಮಕವಾಗುವಾಗ, ಕೇಂದ್ರದಲ್ಲಿ ಸಚಿವರಾಗಿದ್ದ ಚವ್ಹಾಣರೂ, ಮಹಾರಾಷ್ಟ್ರದಲ್ಲಿ ಮುಖ್ಯಮಂತ್ರಿಯಾಗಿದ್ದ ನಾಯಕರೂ ಮಹಾಜನ ವರದಿಯನ್ನು ಜಡ್ಜ್‌ಮೆಂಟಾಗಿ ಅಂಗೀಕರಿಸುತ್ತೆವೆಯೆಂದು ಹೇಳಿದ್ದರೂ, ಇಂದಿಗೂ ಮಹಾರಾಷ್ಟ್ರದವರು ಅಲ್ಲಲ್ಲಿ ಆಯೋಗ ವರದಿಗೆ ವಿರೋಧ ಹೇಳುತ್ತಿದ್ದಾರೆ. ಪುನಃ ಕರ್ನಾಟಕ, ಮಹಾರಾಷ್ಟ್ರ ಸರಕಾರಗಳು ಮಾತುಕತೆ ನಡೆಸಬೇಕೆಂದು ಒತ್ತಾಯಿಸುತ್ತಿದ್ದಾರೆ.

ಈ ಕೆಲಸ ಕ್ಷುಲ್ಲಕ ಕಾರಣಗಳಿಂದ ಮಹಾಜನ ತೀರ್ಮಾನವಾಗಿ ಮೂವತ್ತು ವರ್ಷಗಳ ಹತ್ತಿರವಾದರೂ ಇಂದಿಗೂ ಅದರ ಅನುಷ್ಠಾನವಾಗದೆ ತೊಂದರೆಯಾಗಿದೆ. ಮಹಾಜನರ ತೀರ್ಪಿನಂತೆ ಕಾಸರಗೋಡು ಕನ್ನಡ ಪ್ರದೇಶವನ್ನು ಮರಳಿ ಸೇರಿಸಬೇಕೆಂದು ದಿಲ್ಲಿಗೂ ರಾಜ್ಯಸರ್ಕಾರಕ್ಕೂ ಅಸಂಖ್ಯ ಮನವಿಗಳೂ ಶಿಷ್ಟ ಮಂಡಳಿಗಳೂ ಹೋಗಿವೆ. ಕೇಂದ್ರದ ಪ್ರಧಾನಿಗಳನ್ನು, ಕರ್ನಾಟಕದ ಮುಖ್ಯಮಂತ್ರಿಗಳನ್ನು ಬಿಡದೆ ಕೇಳಿಕೊಳ್ಳಲಾಗಿದೆ. ದುರ್ದೈವವೆಂಬಂತೆ ಇತ್ಯರ್ಥವಾಗದೆ ಗಡಿ ಸಮಸ್ಯೆ ಅಂತೆಯೇ ಇದೆ. ಯಾವ ರಾಜ್ಯಕ್ಕೆ, ಕಾಸರಗೋಡು ಮೊದಲಾದ ಪ್ರದೇಶಗಳು ಸೇರಬೇಕಾಗಿದೆಯೊ ಆ ರಾಜ್ಯ ಸರ್ಕಾರ ಮುಖ್ಯವಾಗಿ ಕೇಂದ್ರವನ್ನು ಒತ್ತಾಯಿಸಬೇಕು. ಕೇಂದ್ರವೇ ನೇಮಿಸಿದ ಆಯೋಗದ ವರದಿಯ ಅನುಷ್ಠಾನವನ್ನು ಕೇಂದ್ರ ಸರ್ಕಾರ ಜಾರಿಗೊಳಿಸುವುದು ಅದರ ಕರ್ತವ್ಯ. ಆ ಬಗ್ಗೆ ನ್ಯಾಯಸಮ್ಮತವಾದ ರಾಜಕೀಯ ಶಕ್ತಿ ಉಪಯೋಗವಾಗತಕ್ಕದ್ದಿದೆ. ಅದರ ಉಪಯೋಗ ಇದುವರೆಗೂ ಸಾಕಷ್ಟು ಆಗಿಲ್ಲವೆಂಬುದು ಶೋಚನೀಯ.

ನಿಜಲಿಂಗಪ್ಪನವರು ತಮ್ಮ ಕೊನೆಯ ದಿನಗಳ ತನಕವೂ ಗಡಿಸಮಸ್ಯೆ ಪರಿಹಾರಕ್ಕಾಗಿ ಪ್ರಯತ್ನ ಮಾಡಿದ್ದನ್ನು ಸ್ಮರಿಸಬೇಕು. ವಾಜಪೇಯಿ ಪ್ರಧಾನಿಯಾದ ಪ್ರಾರಂಭದ ದಿನಗಳಲ್ಲಿಯೇ ನಿಜಲಿಂಗಪ್ಪನವರು ಅವರಿಗೆ ಕಾಸರಗೋಡಿನ ಕುರಿತು ಮನವಿ ಸಲ್ಲಿಸಿ ಸಹಾನುಭೂತಿ ಪರವಾದ ಆಶ್ವಾಸನೆ ನೀಡಿದ್ದಾರೆ. ಇತ್ತೀಚೆಗೆ ಮುಖ್ಯಮಂತ್ರಿ ಎಸ್. ಎಂ. ಕೃಷ್ಣರವರನ್ನು ನಾವು ಸಂದರ್ಶಿಸಿ ಮನವಿ ಸಲ್ಲಿಸಿ ಕೇಳಿಕೊಂಡಾಗ ಅವರು ಆಶ್ವಾಸನೆ ನೀಡಿರುವರು. ಗಡಿಕನ್ನಡಿಗರು ನಿರಾಶರಾಗಬೇಕಾಗಿಲ್ಲ. 'ಸತ್ಯಮೇವ ಜಯತೆ' ಎಂಬುದು, ರಾಷ್ಟ್ರವಾಣಿ. ರಾಷ್ಟ್ರಧುರೀಣ ನಿಜಲಿಂಗಪ್ಪನವರಿಗೆ ನಾಡಿನ ಸಮಸ್ಯೆ ಪರಿಹಾರಕಾರ್ಯದಲ್ಲಿ ಇದ್ದ ನಿಷ್ಠೆ ಅವಿಸ್ಮರಣೀಯ. ಅವರ ಸಂಸ್ಮರಣದ ಈ ಸಂದರ್ಭದಲ್ಲಿ ಕನ್ನಡ ಜನತೆಯನ್ನು ಕರ್ನಾಟಕದ ಗಡಿ ಹೋರಾಟಕ್ಕೆ ಇನ್ನಷ್ಟು ಜಾಗೃತಗೊಳಿಸಿದಲ್ಲಿ ಕನ್ನಡಿಗರ ಬಹುಕಾಲದ ನಿಷ್ಠೆ ಫಲಿಸುವುದರೊಂದಿಗೆ ನಿಜಲಿಂಗಪ್ಪನವರ ಆತ್ಮಕ್ಕೆ ಶಾಂತಿ ದೊರಕುವುದು ನಿಶ್ಚಯವಾದುದು.

# ಭೂದಾನ ಚಳವಳಿ

ಬಿ. ಆರ್. ಪ್ರಾಣೇಶರಾವ್

ಗಾಂಧಿಯೋತ್ತರ ಭಾರತದಲ್ಲಿ ಗಾಂಧೀಮಾರ್ಗದಲ್ಲಿ ನಡೆದ ಭೂದಾನ ಚಳವಳಿ ಮಹತ್ವಪೂರ್ಣವಾದದ್ದು. ಆಚಾರ್ಯ ವಿನೋಬಾ ಭಾವೆ ಭೂದಾನ ಚಳವಳಿಯ ಜನಕ ಎನಿಸಿದ್ದಾರೆ. ವಿನೋಬಾಜಿಯವರದು ಋಷಿಸದೃಶ ವ್ಯಕ್ತಿತ್ವ. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಅವರ ಪಾತ್ರ ಅಸಾಮಾನ್ಯವಾಗಿತ್ತು. ೧೯೧೬ರಲ್ಲಿ ಇಪ್ಪತ್ತನೆಯ ಹರೆಯದಲ್ಲಿ ಗಾಂಧೀಜಿಯ ಆಶ್ರಮಕ್ಕೆ ಸೇರಿದ ವಿನೋಬಾಜಿ ಆಜನ್ಮ ಬ್ರಹ್ಮಚಾರಿ. ಮಹಾನ್ ಸಂತ. ವೇದ, ಉಪನಿಷತ್ ಭಗವದ್ಗೀತೆ ಮತ್ತೆಲ್ಲ ಅಧ್ಯಾತ್ಮ ಗ್ರಂಥಗಳನ್ನು ಹೃದ್ಗತ ಮಾಡಿಕೊಂಡಿದ್ದ ಅವರು ಕೊರಾನ್ ಮತ್ತು ಬೈಬಲ್‌ಗಳನ್ನೂ ಮೂಲದಲ್ಲಿ ಅಭ್ಯಾಸ ಮಾಡಿ ಸರ್ವಧರ್ಮಗಳ ಶಾಶ್ವತ ಮೌಲ್ಯಗಳನ್ನು ಮೈಗೂಡಿಸಿಕೊಂಡಿದ್ದರು. ರಾಮಕೃಷ್ಣ ಪರಮಹಂಸ, ವಿವೇಕಾನಂದ, ಗಾಂಧೀಜಿ ಅವರಂತೆ ಸರ್ವಧರ್ಮ ಸಮನ್ವಯದ ಸಂದೇಶ ಬೀರಿ 'ಜೈಜಗತ್' ಎಂಬ ಉದ್ಘೋಷಣೆ ಮಾಡಿ ವಿಶ್ವಮಾನವರಾಗಿ ವಿಜೃಂಭಿಸಿದರು. ''ಧರ್ಮ ಮತ್ತು ರಾಜಕಾರಣದ ಕಾಲ ಹೋಯಿತು, ಇದು ವಿಜ್ಞಾನ ಮತ್ತು ಆತ್ಮಜ್ಞಾನದ ಯುಗ'' ಎಂದು ಹೇಳಿ ಮಾನವ ಕುಲದ ಸರ್ವಾಂಗೀಣ ವಿಕಾಸಕ್ಕೆ ವಿಜ್ಞಾನ ಮತ್ತು ಆತ್ಮಜ್ಞಾನಗಳು ಮೇಳವಾಗಬೇಕೆಂಬ ದಾರ್ಶನಿಕ ತತ್ವವನ್ನು ಪ್ರಚುರಪಡಿಸಿದ ಮಹಾನ್ ದ್ರಷ್ಟಾರರು ವಿನೋಬಾಜಿ.

೧೮೯೫ರ ಸೆಪ್ಟೆಂಬರ್ ೧೧ ರಂದು ಮಹಾರಾಷ್ಟ್ರದ ಕೊಲಾಬಾ ಜಿಲ್ಲೆಯ ಗಗೋಡೆ ಗ್ರಾಮದಲ್ಲಿ ಜನಿಸಿದ ವಿನೋಬಾ ತಮ್ಮ ಹತ್ತನೇ ವರ್ಷದಲ್ಲೇ ಆಜನ್ಮ ಬ್ರಹ್ಮಚಾರಿಯಾಗಿರಲು ಪ್ರತಿಜ್ಞೆ ಮಾಡಿ ಬ್ರಹ್ಮ ವಿದ್ಯೆಯ ಸಾಧನೆಗಾಗಿ ಪಣತೊಟ್ಟರು. ಅವರ ತಂದೆ ನರಹರಿ ಭಾವೆ. ತಾಯಿ ರುಕ್ಮಿಣಿದೇವಿ, ಕರ್ನಾಟಕದವರು. ವಿನೋಬಾ ಭಾವೆ ಮೇಲೆ ತಾಯಿಯ ಆಧ್ಯಾತ್ಮಿಕ ಪ್ರಭಾವ ಅತಿಶಯವಾಗಿತ್ತು. ''ಭಕ್ತಿ ಮತ್ತು ಶ್ರದ್ಧೆಯ ಬಗ್ಗೆ ನಾನು ಓದಿದ ಎಲ್ಲ ಉದ್ಗ್ರಂಥಗಳ ಮತ್ತು ನಾನು ಕಂಡ ಮಹಾನ್ ವ್ಯಕ್ತಿಗಳ ಪ್ರಭಾವವನ್ನು ತಕ್ಕಡಿಯ ಒಂದು ಕಡೆ ಹಾಕಿ ಮತ್ತೊಂದೆಡೆ ತಾಯಿಯಿಂದ ಕಲಿತದ್ದನ್ನು ಹಾಕಿ ನೋಡಿದರೆ ತಾಯಿಯಿಂದ ಕಲಿತದ್ದೇ ಹೆಚ್ಚು ತೂಗುತ್ತದೆ'' ಎಂದು ವಿನೋಬಾಜಿ ನೆನೆಸಿಕೊಂಡಿದ್ದಾರೆ.

ಬಾಲ್ಯದಿಂದಲೇ ಆಧ್ಯಾತ್ಮಿಕ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದ ವಿನೋಬಾಜಿ ಲೌಕಿಕ ಶಾಲಾ ಶಿಕ್ಷಣವನ್ನು ತೊರೆದು ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಬ್ರಹ್ಮವಿದ್ಯೆಯನ್ನು ಅರಸಿ ಕಾಶಿಗೆ ಹೋಗಿದ್ದರು. ಆಗ ಭಾರತದ ಸ್ವಾತಂತ್ರ್ಯ ಹೋರಾಟ ತೀವ್ರವಾಗುತ್ತಿತ್ತು. ಬಂಗಾಲದಲ್ಲಿ ಕ್ರಾಂತಿಕಾರರು ಬಾಂಬ್ ಸಂಸ್ಕೃತಿಯನ್ನು ಮೆರೆದು ಬ್ರಿಟಿಷರ ವಿರುದ್ಧ ಹೋರಾಡುತ್ತಿದ್ದರು. ವಿನೋಬಾಜಿ ಆಗ ಮಾನಸಿಕ ತುಮುಲದಲ್ಲಿದ್ದರು. ಬಂಗಾಲಕ್ಕೆ ಹೋಗಿ ಕ್ರಾಂತಿ ಕಾರ್ಯದಲ್ಲಿ ತೊಡಗಬೇಕೆಂಬ ಗೀಳು ಇದ್ದರೆ, ಹಿಮಾಲಯಕ್ಕೆ ಹೋಗಿ ಶಾಂತಿಯ ನೆಲೆ ಕಾಣಬೇಕೆಂಬ ಹಂಬಲವೂ ಇತ್ತು. ಈ ತುಮುಲದಲ್ಲಿದ್ದಾಗ ಗಾಂಧೀಜಿ ವಿಚಾರ ಅವರನ್ನು ಆಕರ್ಷಿಸಿತು. ಮಹಾತ್ಮರೊಡನೆ ಪತ್ರ ವ್ಯವಹಾರ ಮಾಡಿದರು. ಅಹಮದಾಬಾದ್ ಬಳಿ ಕೊಚ್ರಾಬ್‌ನಲ್ಲಿದ್ದ

ಗಾಂಧೀ ಆಶ್ರಮಕ್ಕೆ ವಿನೋಬಾಜಿಯನ್ನು ಮಹಾತ್ಮರು ಬರಮಾಡಿಕೊಂಡರು. ''ಬಂಗಾಲದ ಕ್ರಾಂತಿಕಾರರ ಕೆಚ್ಚು ಮತ್ತು ಹಿಮಾಲಯದ ಪ್ರಶಾಂತತೆ ಮಹಾತ್ಮರಲ್ಲಿ ಸಮಾವೇಶಗೊಂಡಿತ್ತು'' ಎಂದು ಬಣ್ಣಿಸಿ ಆಗಿನಿಂದಲೇ (೧೯೧೬) ಗಾಂಧೀಜಿಯವರ ಆಶ್ರಮ ವಾಸಿಯಾದರು. ಗಾಂಧೀಜಿಯವರ ಎಲ್ಲ ರಚನಾತ್ಮಕ ಕಾರ್ಯಗಳಲ್ಲೂ ತನ್ಮಯರಾಗಿ ತೊಡಗಿದ್ದರು. ಎಲ್ಲ ಸತ್ಯಾಗ್ರಹ ಚಳವಳಿಗಳಲ್ಲೂ ಭಾಗವಹಿಸಿದರು. ಗಾಂಧೀಜಿಯ ಸಲಹೆಯಂತೆ ಸಬರಮತಿ, ವಾರ್ಧಾ ಆಶ್ರಮ, ಪವನಾರ್ ಮುಂತಾದ ಕಡೆ ವಿನೋಬಾಜಿ ಜೀವನಪರ್ಯಂತ ಸೇವಾತಪಸ್ವಿಯಾಗಿ ದೇಶಸೇವೆ ಮಾಡಿದರು. ನೂರಾರು ಸತ್ಯಾಗ್ರಹಿಗಳಿಗೆ ಶಿಕ್ಷಣ ನೀಡಿ ಸ್ಫೂರ್ತಿ ತುಂಬಿದರು. ವರ್ಷಗಟ್ಟಲೆ ನೆರೆಹೊರೆಯ ಗ್ರಾಮಗಳಿಗೆ ಹೋಗಿ ಸಫಾಯಿ ಕೆಲಸದಿಂದ ಹಿಡಿದು ಗ್ರಾಮ ನಿರ್ಮಲೀಕರಣ ಮತ್ತು ಗ್ರಾಮ ಪುನರ್ ನಿರ್ಮಾಣದ ಕೆಲಸಗಳಲ್ಲಿ ತೊಡಗಿದ್ದರು. ಮೂವತ್ತು ವರ್ಷಗಳ ಕಾಲ ಯಾವ ಪ್ರಚಾರ ಮತ್ತು ಪ್ರಸಿದ್ಧಿಯ ಜಾಲಕ್ಕೂ ಸಿಕ್ಕಿಕೊಳ್ಳದೆ ನಿಷ್ಕಾಮಕರ್ಮದ ಸಾಕಾರಮೂರ್ತಿಯಾಗಿದ್ದರು. ೧೯೪೦ರಲ್ಲಿ ಉಪಕ್ರಮಿಸಿದ ವೈಯಕ್ತಿಕ ಸತ್ಯಾಗ್ರಹ ಚಳವಳಿಗೆ ವಿನೋಬಾ ಭಾವೆಯವರನ್ನು ಪ್ರಥಮ ಸತ್ಯಾಗ್ರಹಿಯನ್ನಾಗಿ ಗಾಂಧೀಜಿ ಆರಿಸಿ ಪ್ರಪ್ರಥಮ ಬಾರಿಗೆ 'ಹರಿಜನ' ಪತ್ರಿಕೆಯಲ್ಲಿ ವಿನೋಬಾಜಿ ಬಗ್ಗೆ ಲೇಖನ ಬರೆದು ಅವರ ವ್ಯಕ್ತಿತ್ವದ ಹಿರಿಮೆಯನ್ನು ಬಣ್ಣಿಸಿದರು. ಎರಡನೆಯ ಸತ್ಯಾಗ್ರಹಿಯನ್ನಾಗಿ ಗಾಂಧೀಜಿ ಆರಿಸಿದ್ದು ಜವಹರಲಾಲ್ ನೆಹರೂ ಅವರನ್ನು.

೧೯೨೩ರ ನಾಗಪುರದ ಧ್ವಜ ಸತ್ಯಾಗ್ರಹದಿಂದ ಆರಂಭಿಸಿ ೧೯೪೨ರ ಕ್ವಿಟ್ ಇಂಡಿಯಾ ಚಳವಳಿ ಸೇರಿದಂತೆ ಎಲ್ಲ ಹೋರಾಟಗಳಲ್ಲೂ ಭಾಗವಹಿಸಿ ಹಲವಾರು ವರ್ಷಗಳ ಕಾಲ ಸೆರೆಮನೆ ವಾಸ ಮಾಡಿದ ಕೀರ್ತಿ ವಿನೋಬಾಜಿಯವರದು. ಒಮ್ಮೆ ಸೆರೆಮನೆಯಲ್ಲಿದ್ದಾಗ ಭಗವದ್ಗೀತೆಯ ಮೇಲೆ ನೀಡಿದ ಪ್ರವಚನಗಳು ಗೀತಾ ಪ್ರವಚನದ ಶೀರ್ಷಿಕೆಯಲ್ಲಿ ಪ್ರಕಟವಾಗಿ ಎಲ್ಲ ಭಾಷೆಗಳಲ್ಲೂ ಅದರ ಭಾಷಾಂತರಗಳು ಬಂದಿವೆ. ಸಿದ್ದವನಹಳ್ಳಿ ಕೃಷ್ಣಶರ್ಮರಿಂದ ಕನ್ನಡಕ್ಕೆ ಅನುವಾದಿಸಲ್ಪಟ್ಟ 'ಗೀತಾ ಪ್ರವಚನ' ಲಕ್ಷ ಪ್ರತಿಗಳಿಗೂ ಮೀರಿ ಖರ್ಚಾಗಿ ದಾಖಲೆಯನ್ನೇ ನಿರ್ಮಿಸಿದೆ.ಹಾಗೆಯೇ ಅವರ ಇತರ ಆಧ್ಯಾತ್ಮಿಕ ಗ್ರಂಥಗಳೂ ರಾಜನೀತಿ, ಸ್ವರಾಜ್ಯಶಾಸ್ತ್ರ ಜೀವನ ಶಿಕ್ಷಣ ಮುಂತಾದ ಮೌಲಿಕ ಗ್ರಂಥಗಳೂ ಎಲ್ಲ ಭಾಷೆಗಳಲ್ಲೂ ಲಭ್ಯವಿವೆ.

ಮಹಾತ್ಮ ಗಾಂಧಿ ಅವರು ಬದುಕಿರುವವರೆಗೆ ಕೇವಲ ಆಶ್ರಮವಾಸಿಯಾಗಿ ರಚನಾತ್ಮಕ ಕಾರ್ಯಗಳಲ್ಲೂ ಆಧ್ಯಾತ್ಮಿಕ ಸಾಧನೆಯಲ್ಲೂ ನಿರತರಾಗಿದ್ದ ವಿನೋಬಾಜಿಯವರು ಬಾಪೂಜಿಯ ಹತ್ಯೆಯ ನಂತರ ಸರ್ವೋದಯ ಕಾರ್ಯಕರ್ತರ ಹಾಗೂ ರಾಷ್ಟ್ರ ನಾಯಕರ ಅಪೇಕ್ಷೆಯಂತೆ ಸರ್ವೋದಯ ಚಳವಳಿಯ ಮುಂಚೂಣಿಗೆ ಬರಬೇಕಾಯಿತು.

ಗಾಂಧೀಜಿಯ ಹತ್ಯೆಯ ನಂತರ ಸರ್ವೋದಯದ ಕಾರ್ಯಕ್ರಮಗಳಿಗೆ ಚಾಲನೆ ನೀಡುವ ಉದ್ದೇಶದಿಂದ ೧೯೪೮ರ ಮಾರ್ಚಿ ೧೧ ರಿಂದ ೧೪ ರವರೆಗೆ ಸೇವಾಗ್ರಾಮದಲ್ಲಿ ವರಿಷ್ಠ ನಾಯಕರ ಹಾಗೂ ಸರ್ವೋದಯ ಕಾರ್ಯಕರ್ತರುಗಳ ಸಮಾವೇಶ ನಡೆಯಿತು. ಡಾ. ರಾಜೇಂದ್ರ ಪ್ರಸಾದ್ ಅವರ ಅಧ್ಯಕ್ಷತೆಯಲ್ಲಿ ನಡೆದ ಆ ಸಮ್ಮೇಳನದಲ್ಲಿ ಪ್ರಧಾನಿ ಜವಹರಲಾಲ್ ನೆಹರು, ಮೌಲಾನಾ ಅಬುಲ್ ಕಲಾಂ ಆಜಾದ್, ವಿನೋಬಾಜಿ, ಅಚಾರ್ಯ ಕೃಪಲಾನಿ, ಡಾ। ಪಿ. ಸಿ. ಘೋಷ್, ಶಂಕರರಾವ್‌ದೇವ್, ಕಾಕಾ ಕಾಲೇಲ್‌ಕರ್, ಜಯಪ್ರಕಾಶ್ ನಾರಾಯಣ ಮತ್ತು ಹಲವು ರಾಜ್ಯಗಳ ಮುಖ್ಯಮಂತ್ರಿಗಳೂ, ರಾಜ್ಯಪಾಲರುಗಳೂ ಸೇರಿದಂತೆ ಅನೇಕ ಗಣ್ಯರು ಭಾಗವಹಿಸಿದ್ದರು. ಗಾಂಧೀಜಿಯವರಿಂದ ಸ್ಥಾಪನೆಗೊಂಡಿದ್ದ ರಾಷ್ಟ್ರಮಟ್ಟದ ರಚನಾತ್ಮಕ ಸಂಸ್ಥೆಗಳ ಪ್ರತಿನಿಧಿಗಳೂ ಭಾಗವಹಿಸಿದ್ದರು. ಗಾಂಧೀಜಿಯ ಧ್ಯೇಯೋದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಕಾರ್ಯಶೀಲರಾಗಲು ಸರ್ವೋದಯ ಸಮಾಜವೆಂಬ ಸಂಸ್ಥೆಯನ್ನು ಸ್ಥಾಪಿಸುವ ನಿರ್ಣಯವೂ ಆಯಿತು. ನಂತರ ಗಾಂಧೀಜಿ ಸ್ಥಾಪಿಸಿದ್ದ ಎಲ್ಲ ಅಖಿಲ ಭಾರತ ರಚನಾತ್ಮಕ ಸಂಸ್ಥೆಗಳನ್ನೂ ಒಟ್ಟುಗೂಡಿಸಿ ಸರ್ವಸೇವಾಸಂಘವನ್ನು ಸಂಘಟಿಸಲಾಯಿತು. ಪ್ರತಿವರ್ಷ ಸರ್ವೋದಯ ಸಮ್ಮೇಳನ ನಡೆಸಿ ಸರ್ವೋದಯದ ಬೆಳಕಿನಲ್ಲಿ ದೇಶದ ಸಮಕಾಲೀನ ಆಗುಹೋಗುಗಳನ್ನು ಚರ್ಚಿಸುವ ಪರಿಪಾಠವೂ ರೂಢಿಗೆ ಬಂದಿತು. ಅಂತೆಯೇ ೧೯೫೧ರ ಏಪ್ರಿಲ್‌ನಲ್ಲಿ ಹೈದರಾಬಾದ್ ಬಳಿ ಶಿವರಾಮಪಲ್ಲಿಯಲ್ಲಿ ಮೂರನೆಯ ಅಖಿಲ ಭಾರತ ಸರ್ವೋದಯ ಸಮ್ಮೇಳನದ ವ್ಯವಸ್ಥೆಯಾಯಿತು. ಸಮ್ಮೇಳನದಲ್ಲಿ ಭಾಗವಹಿಸಲು ವಿನೋಬಾಜಿ ವಾರ್ಧಾದಿಂದ ಶಿವರಾಮಪಲ್ಲಿಗೆ ೩೧೫ ಮೈಲಿಗಳಷ್ಟು ದೂರ ಪಾದಯಾತ್ರೆಯಲ್ಲಿ ಬಂದು ಭಾಗವಹಿಸಿದರು. ಮೂರು ದಿನಗಳ ಸಮ್ಮೇಳನದ ನಂತರ ವಿನೋಬಾಜಿಯವರು ತೆಲಂಗಾಣ ಪ್ರದೇಶದಲ್ಲಿ ಪಾದಯಾತ್ರೆ ಮಾಡುವ ನಿರ್ಧಾರವನ್ನು ಪ್ರಕಟಿಸಿದರು. ಆಗ ತೆಲಂಗಾಣಾದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿ ನಿರ್ಮಾಣವಾಗಿತ್ತು. ಕಮ್ಯೂನಿಸ್ಟರು ಕ್ರಾಂತಿಯ ಹೆಸರಿನಲ್ಲಿ ಹಿಂಸೆ ಮಾರ್ಗ ಹಿಡಿದಿದ್ದರು. ಕೆಲವು ಭೂಮಾಲೀಕರನ್ನು ಕೊಂದು ಅವರ ಜಮೀನುಗಳನ್ನು ಬಡ ಭೂಕಾರ್ಮಿಕರಿಗೆ ಹಂಚಿದ್ದರು. ಪೋಲೀಸರು ಪ್ರತಿ ಕಾರ್ಯಾಚರಣೆ ನಡೆಸುತ್ತಿದ್ದರು. ಈ ಪರಿಸ್ಥಿತಿಯಲ್ಲಿ ಕಂಗಾಲಾಗಿದ್ದ ಜನಸಾಮಾನ್ಯರು ಭಯಭೀತರಾಗಿದ್ದರು. ಈ ಪರಿಸ್ಥಿತಿಯಲ್ಲಿ ಶಾಂತಿ ಸಂದೇಶ ಹೊತ್ತು ವಿನೋಬಾ ಪಾದಯಾತ್ರೆ ಹೊರಟಿದ್ದರು. ೧೯೫೧ರ ಏಪ್ರಿಲ್ ೧೫ ರಂದು ಪ್ರಾತಃಕಾಲ

ಕೆಲವು ಆಶ್ರಮವಾಸಿಗಳೊಡನೆ ಪಾದಯಾತ್ರೆ ಹೊರಟ ವಿನೋಬಾಜಿಯವರು ಏಪ್ರಿಲ್ ೧೮ನೇ ತಾರೀಖು ನಾಲ್ಗೊಂಡ ಜಿಲ್ಲೆಯ ಪೋಚಂಪಲ್ಲಿ ಗ್ರಾಮ ತಲುಪಿದರು. ಗ್ರಾಮಸ್ಥರ ಸಭೆಯಲ್ಲಿ ಜನರ ಸಮಸ್ಯೆಗಳನ್ನು ವಿಚಾರಿಸಿದರು. ಸಭೆಯಲ್ಲಿದ್ದ ಹರಿಜನರು ತಮ್ಮ ದಾರಿದ್ರ್ಯ ಸ್ಥಿತಿಯನ್ನು ಬಣ್ಣಿಸಿದರು. ತಮಗೆ ಹೇಗಾದರೂ ಮಾಡಿ ಜಮೀನು ಕೊಡಿಸಿದರೆ ಹೊಟ್ಟೆ ಹೊರೆಯುವುದಾಗಿ ಮೊರೆಯಿಟ್ಟರು. ಆ ಗ್ರಾಮದಲ್ಲಿ ನಲವತ್ತು ಹರಿಜನ ಕುಟುಂಬಗಳಿದ್ದವು. ಪ್ರತಿಯೊಂದು ಕುಟುಂಬಕ್ಕೂ ಎರಡೆರಡು ಎಕರೆ ಜಮೀನು ಕೊಡಿಸಿದರೆ ಸಾಕೆಂದು ಕೇಳಿದರು. ಅಂದರೆ ಒಟ್ಟು ಎಂಬತ್ತು ಎಕರೆ ಜಮೀನು ದೊರಕಿದರೆ ಅವರ ಕೋರಿಕೆಯನ್ನು ಪೂರೈಸಬಹುದಾಗಿತ್ತು. ಹರಿಜನರ ದಾರುಣ ಸಮಸ್ಯೆ ಬಗ್ಗೆ ಚಿಂತಾಕ್ರಾಂತರಾದ ವಿನೋಬಾಜಿಯವರು ಅವರಿಗೆ ಭೂಮಿ ಕೊಡಿಸುವುದಾದರೂ ಹೇಗೆಂದು ಅಂತರ್ಮುಖಿಯಾದರು. ಆಗ ಸಭೆಯಲ್ಲಿದ್ದ ಗ್ರಾಮದ ಮುಖಂಡ ರಾಮಚಂದ್ರರೆಡ್ಡಿ ಎದ್ದು ನಿಂತರು. ಹರಿಜನರಿಗೆ ಹಂಚಲು ಒಂದು ನೂರು ಎಕರೆ ಜಮೀನು ದಾನವಾಗಿ ಕೊಡುವುದಾಗಿ ಘೋಷಿಸಿದರು. ರೆಡ್ಡಿಯವರ ಕುಟುಂಬಕ್ಕೆ ನಾಲ್ಕು ನೂರು ಎಕರೆ ಜಮೀನಿದ್ದಿತು. ಅದರಲ್ಲಿ ಒಂದು ನೂರು ಎಕರೆ ದಾನ ಮಾಡುವುದಾಗಿ ಹೇಳಿ ಅಲ್ಲೇ ದಾನಪತ್ರ ಬರೆದುಕೊಡಲು ಮುಂದಾದರು. ರೆಡ್ಡಿಯವರು ನೀಡಿದ ಜಮೀನನ್ನು ಭೂಹೀನ ಬಡ ಹರಿಜನರಿಗೆ ಹಂಚಿಕೊಡಲು ವಿನೋಬಾಜಿ ಒಂದು ಸಮಿತಿಯನ್ನು ರಚಿಸಿದರು. ಭೂಮಿಯ ಹಂಚಿಕೆಯೂ ಆಯಿತು. ಅಂದೇ ಭೂದಾನಯಜ್ಞ ಆರಂಭವಾಯಿತು. ಮಾರನೆಯ ದಿನ ಮುಂದಿನ ಹಳ್ಳಿಗೆ ವಿನೋಬಾಜಿ ಹೋದರು. ಅಲ್ಲಿ ಪೋಚಂಪಲ್ಲಿಯ ಅನುಭವವನ್ನು ಗ್ರಾಮಸ್ಥರಿಗೆ ತಿಳಿಸಿದರು. ಅಲ್ಲಿಯೂ ಇಪ್ಪತ್ತೈದು ಎಕರೆ ಜಮೀನು ಭೂದಾನವಾಗಿ ಬಂದಿತು. ಭೀತಿಗ್ರಸ್ತ ತೆಲಂಗಾಣದಲ್ಲಿ ವಿನೋಬಾಜಿ ಐವತ್ತು ದಿನಗಳ ಕಾಲ್ನಡಿಗೆಯಲ್ಲಿ ಪ್ರವಾಸ ಮಾಡಿದರು. ಹನ್ನೆರಡು ಸಹಸ್ರ ಎಕರೆಗಳಷ್ಟು ಭೂಮಿ ದಾನವಾಗಿ ಬಂತು. ಸುಮಾರು ಐದನೂರು ಗ್ರಾಮೀಣ ವಿವಾದಗಳನ್ನು ಬಗೆಹರಿಸಿದರು. ವಿನೋಬಾಜಿ ತೆಲಂಗಾಣ ಪ್ರವಾಸ ಮುಗಿಸುವ ಹೊತ್ತಿಗೆ ಅಲ್ಲಿ ಶಾಂತಿ ನೆಲೆಗೊಂಡಿತ್ತು.

ತೆಲಂಗಾಣ ಪ್ರವಾಸ ಮುಗಿಸಿ ತಮ್ಮ ಪವನಾರ್ ಆಶ್ರಮಕ್ಕೆ ಹಿಂದಿರುಗಿದರು. ನಂತರ ಜವಹರಲಾಲ್ ನೆಹರೂ ಅವರಿಂದ ಆಮಂತ್ರಣ ಬಂದಿತು. ಎಂಟುನೂರು ಮೈಲಿ ದೂರದ ದೆಹಲಿಗೆ ಕಾಲ್ನಡಿಗೆಯಲ್ಲೇ ಕೆಲವು ಆಶ್ರಮವಾಸಿಗಳೊಡನೆ ತೆರಳಿದರು. ಪ್ರಯಾಣದುದ್ದಕ್ಕೂ ಭೂದಾನ ಯಜ್ಞದ ಉದ್ದೇಶವನ್ನು ತಿಳಿಸುತ್ತಾ ಹೋದರು. ತಮ್ಮದು ''ಪಾದಯಾತ್ರೆ ಅಷ್ಟೇ ಅಲ್ಲ, ಪ್ರೇಮ ಯಾತ್ರೆಯೂ ಹೌದು. ನಿಮ್ಮ ಕುಟುಂಬದಲ್ಲಿ ಐದು ಮಕ್ಕಳಿದ್ದರೆ ಭೂರಹಿತ ಕಾರ್ಮಿಕನನ್ನು ಆರನೆಯ ಮಗನೆಂದು ಭಾವಿಸಿ ನಿಮ್ಮ ಜಮೀನಿನಲ್ಲಿ ಒಂದು ಭಾಗ ದಾನ ನೀಡಿ'' ಎಂದು ಹೇಳುತ್ತಾ ಭೂದಾನದ ಸಂಗ್ರಹ ಕಾರ್ಯದಲ್ಲಿ ತೊಡಗಿದರು. ದೆಹಲಿ ತಲುಪುವ ಹೊತ್ತಿಗೆ ಮೂವತ್ತೈದು ಸಾವಿರ ಎಕರೆ ಜಮೀನು ಲಭ್ಯವಾಗಿತ್ತು. ದೆಹಲಿಯಲ್ಲಿ ವರಿಷ್ಠರೊಡನೆ ದೇಶದ ಆರ್ಥಿಕ, ಸಾಮಾಜಿಕ ಮತ್ತಿತರ ರಾಷ್ಟ್ರೀಯ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸಿದರು. ರಾಷ್ಟ್ರದ ಆರ್ಥಿಕ ಪುನರ್‌ರಚನೆ ಗ್ರಾಮಾಭಿಮುಖವಾಗಿ ಗ್ರಾಮಸ್ವರಾಜ್ಯದ ಆಧಾರದ ಮೇಲೆ ಆಗತಕ್ಕದೆಂಬುದನ್ನು ಪ್ರಭುತ್ವದ ಪ್ರತಿನಿಧಿಗಳಿಗೆ ತಿಳಿಸಿದರು. ನಂತರ ಉತ್ತರ ಪ್ರದೇಶದಲ್ಲಿ ಪಾದಯಾತ್ರೆಯನ್ನು ಮುಂದುವರೆಸಿದರು. ೧೯೫೨ರ ಏಪ್ರಿಲ್‌ನಲ್ಲಿ ಉತ್ತರ ಪ್ರದೇಶದ ಸೇವಾಪುರಿಯಲ್ಲಿ ಸರ್ವೋದಯ ಸಮ್ಮೇಳನ ನಡೆಯಿತು. ಭೂದಾನ ಚಳುವಳಿಯನ್ನು ರಾಷ್ಟ್ರವ್ಯಾಪಿಯಾಗಿ ಬೆಳೆಸಬೇಕೆಂದ ಎಲ್ಲ ಸರ್ವೋದಯ ಕಾರ್ಯಕರ್ತರೂ ತಮ್ಮ ತಮ್ಮ ಪ್ರದೇಶದಲ್ಲಿ ಭೂದಾನ ಯಾತ್ರೆಗಳನ್ನು ಕೈಗೊಳ್ಳಬೇಕೆಂದೂ ನಿರ್ಧಾರವಾಯಿತು. ಅದುವರೆಗೆ ಭೂದಾನಯಜ್ಞ ವಿನೋಬಾಜಿಯವರ ಪಾದಯಾತ್ರೆಗೆ ಸೀಮಿತವಾಗಿದ್ದಿತು. ಸೇವಾಪುರಿಯ ಸಮ್ಮೇಳನದ ನಂತರ ಅದು ರಾಷ್ಟ್ರವ್ಯಾಪಿ ಚಳವಳಿಯಾಗಿ ಪರಿವರ್ತಿತವಾಯಿತು.

ಸೇವಾಪುರಿಯ ಸರ್ವೋದಯ ಸಮ್ಮೇಳನಕ್ಕೆ ಕರ್ನಾಟಕದಿಂದ ಬೆಳಗುಂಬ ನಾರಾಯಣಪ್ಪ ಮತ್ತು ಟಿ. ಎಸ್. ಅನಂತ ರಂಗಾಚಾರಿಯವರು ಹೋಗಿದ್ದರು. ಅವರೇ ಕರ್ನಾಟಕಕ್ಕೆ 'ಭೂದಾನಗಂಗೆ' ತಂದವರು. ಅವರು ಅರಸೀಕೆರೆಯ ಬಳಿ ಕಸ್ತೂರಬಾ ಗ್ರಾಮದಿಂದ ಭೂದಾನ ಪಾದಯಾತ್ರೆಯನ್ನು ಹಿಂದಿನ ಮೈಸೂರು ಸಂಸ್ಥಾನದಲ್ಲಿ ಆರಂಭಿಸಿದರು. ಹಿರಿಯ ಸರ್ವೋದಯ ನಾಯಕರಾಗಿದ್ದ ಶ್ರೀ ವಲ್ಲಭಸ್ವಾಮಿಯವರು ಜೊತೆಗೂಡಿದರು. ಸಿದ್ದವನಹಳ್ಳಿ ಕೃಷ್ಣಶರ್ಮರು ಭೂದಾನ ಮತ್ತು ಸರ್ವೋದಯ ಸಾಹಿತ್ಯವನ್ನು ಮುಖ್ಯವಾಗಿ ವಿನೋಬಾಜಿಯವರ ಗೀತಾಪ್ರವಚನ ಮತ್ತಿತರ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿ ಮಹದುಪಕಾರ ಮಾಡಿದರು. ಭೂದಾನ ಕಾರ್ಯಕರ್ತರು ತಲೆಯ ಮೇಲೆ ಭೂದಾನ ಸಾಹಿತ್ಯದ ಗಂಟನ್ನು ಹೊತ್ತುಕೊಂಡು ಹಳ್ಳಿಹಳ್ಳಿ ತಿರುಗಿ ಸಾಹಿತ್ಯ ಪ್ರಸಾರ ಮತ್ತು ಭೂದಾನ ಪತ್ರಗಳ ಸಂಗ್ರಹಣೆಯಲ್ಲಿ ತೊಡಗಿದರು. ಹಿಂದಿನ ಮೈಸೂರು ಸಂಸ್ಥಾನದಲ್ಲಿ ಭೂದಾನ ಚಳುವಳಿಯನ್ನು ಬೆಳೆಸುವುದಕ್ಕಾಗಿ ಬೆಳಗುಂಬ ನಾರಾಯಣಪ್ಪನವರ ಸಂಚಾಲಕತ್ವದಲ್ಲಿ ಮೂರು ಜನರ ಸಮಿತಿ ರಚಿತವಾಯಿತು. ಅನಂತರಂಗಾಚಾರಿ ಮತ್ತು ಸರಸ್ವತಿ ನಟರಾಜನ್ ಸಮಿತಿಯ ಸದಸ್ಯರುಗಳಾಗಿದ್ದರು. ಕ್ರಮೇಣ ಸ್ವಾತಂತ್ರ್ಯ ಹೋರಾಟಗಾರರಾದ ಎಚ್.ಎಸ್. ದೊರೆಸ್ವಾಮಿ, ಖಾದ್ರಿ ಶಾಮಣ್ಣ, ಬಾ. ಸು. ಕೃಷ್ಣಮೂರ್ತಿ, ಗರುಡಶರ್ಮ, ಎಣ್ಣೆಕೊಪ್ಪದ ಮಲ್ಲಿಕಾರ್ಜುನಗೌಡರು ಭೂದಾನ

ಚಳುವಳಿಯ ಮುಂಚೂಣಿಗೆ ಬಂದರು. ಸರ್ವೋದಯ ಕಾರ್ಯಕರ್ತರುಗಳಾದ ಸತ್ಯವ್ರತ, ವೆಂಕಟರಮಣ ಅಯ್ಯರ್, ಪಿ. ವೆಂಕೋಬರಾವ್, ಸಂಪತ್ಕುಮಾರನ್, ಅರಯ್ಯರ್, ಕುಟ್ಟೀಜಿ, ಸೀತಾರಾಮ ಅಯ್ಯಂಗಾರ್ ಮುಂತಾದವರು ಸೇರಿ ಭೂದಾನ ಪಾದಯಾತ್ರಿಗಳ ಬಳಗ ಬೆಳೆಯಿತು. ಅವರುಗಳು ಗುಂಪುಗುಂಪಾಗಿ ಹೊರಟು ಎಲ್ಲಾ ಜಿಲ್ಲೆಗಳಲ್ಲೂ ಪ್ರಚಾರ ಕಾರ್ಯ ನಡೆಸಿದರು. ಭೂದಾನ ಪತ್ರಗಳನ್ನು ಸ್ವೀಕರಿಸುತ್ತಾ ಹೋದರು.

ಉತ್ತರ ಕರ್ನಾಟಕದಲ್ಲಿ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ ಸರ್ವೋದಯ ಮುಖಂಡರುಗಳೂ ಆಗಿದ್ದ ತಿಮ್ಮಪ್ಪನಾಯಕ, ಹೊದಿಕೆ ಮಾಸ್ತರ್, ನೀಲಕಂಠಯ್ಯ ಗಣಾಚಾರಿ, ಸದಾಶಿವರಾವ್ ಭೌನ್ಸ್ಲೆ, ಮಹದೇವತಾಯಿ, ಚನ್ನಮ್ಮ ಹಳ್ಳಿಕೇರಿ, ರಾಮಚಂದ್ರ ವಡವಿ ಮುಂತಾದವರು ಪೂರ್ಣಕಾಲದ ಭೂದಾನದ ಕಾರ್ಯಕರ್ತರಾಗಿ ನಿರಂತರ ಪಾದಯಾತ್ರೆಯಲ್ಲಿ ತೊಡಗಿದರು. ಭೂದಾನ ಪಡೆಯುವುದರಲ್ಲಿ ಗಣನೀಯ ಯಶಸ್ಸನ್ನು ಪಡೆದರು. ಹೈದರಾಬಾದ್ ಕರ್ನಾಟಕದಲ್ಲಿ ಡಾ। ಮೇಲ್ಕೋಟೆ, ಜನಾರ್ದನ ದೇಸಾಯಿ, ರಾಮಕೃಷ್ಣರಾವ್ ಮುಂತಾದ ಹಿರಿಯ ರಾಜಕೀಯ ಮುತ್ಸದ್ದಿಗಳು ಭೂದಾನ ಯಜ್ಞದಲ್ಲಿ ಪಾಲುಗೊಂಡರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗಾಂಧೀವಾದಿ ರಾಮಚಂದ್ರರಾವ್ ಮತ್ತು ಅವರ ಮಿತ್ರರು ಭೂದಾನ ಚಳುವಳಿಯನ್ನು ಸಂಘಟಿಸಿದರು. ೧೯೫೪ರಿಂದ ೧೯೫೭ರವರೆಗೆ ಅಂದರೆ ಆಚಾರ್ಯ ವಿನೋಬಾ ಭಾವೆ ಕರ್ನಾಟಕದಲ್ಲಿ ಪ್ರವಾಸ ಮಾಡಲು ಬರುವವರೆಗೆ ಈ ಎಲ್ಲಾ ನಿಸ್ಪೃಹ ನಿಸ್ವಾರ್ಥ ಸರ್ವೋದಯ ಕಾರ್ಯಕರ್ತರು ಕರ್ನಾಟಕದಾದ್ಯಂತ ಹಳ್ಳಿ ಹಳ್ಳಿಗಳಿಗೆ ಪಾದಯಾತ್ರೆಯಲ್ಲಿ ಹೋಗಿ ಭೂದಾನ ಚಳುವಳಿಗೆ ಭೂಮಿಕೆಯನ್ನು, ಉತ್ತಮ ವಾತಾವರಣವನ್ನು ನಿರ್ಮಿಸಿದ್ದರು. ವಿನೋಬಾಜಿ ಬರುವ ಸಮಯಕ್ಕೆ ಹಿರಿಯರಾದ ಟಿ. ಸಿದ್ದಲಿಂಗಯ್ಯ, ತಗಡೂರು ರಾಮಚಂದ್ರರಾವ್ ಮುಂತಾದವರೂ ಭೂದಾನ ಚಳವಳಿಗೆ ಇಳಿದರು.

೧೯೫೭ರಲ್ಲಿ ವಿನೋಬಾಜಿ ಕರ್ನಾಟಕಕ್ಕೆ ಬಂದಾಗ ಎಸ್. ನಿಜಲಿಂಗಪ್ಪನವರು ಕರ್ನಾಟಕದ ಮುಖ್ಯಮಂತ್ರಿಯಾಗಿದ್ದರು. ಕರ್ನಾಟಕದಲ್ಲಿ ವಿನೋಬಾಜಿಯವರ ಪಾದಯಾತ್ರೆ ಕಾರ್ಯಕ್ರಮಗಳಿಗೆ ಸಂಬಂಧಪಟ್ಟಂತೆ ವಿವರಗಳನ್ನು ಚರ್ಚಿಸಲು ಖ್ಯಾತ ಸರ್ವೋದಯ ಚಿಂತಕ ಶಂಕರರಾವ್‌ದೇವ ಅವರು ಬೆಂಗಳೂರಿಗೆ ಬಂದಿದ್ದರು. ವಿಧಾನಸೌಧದಲ್ಲಿ ಎಸ್. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ರಾಜ್ಯದ ಸರ್ವೋದಯ ಮುಖಂಡರ ಸಭೆ ನಡೆಯಿತು. ಸಂತ ವಿನೋಬಾರವರು ಕರ್ನಾಟಕದಲ್ಲಿ ಪ್ರವಾಸ ಮಾಡುವ ಸಮಯದಲ್ಲಿ ರಾಷ್ಟ್ರದ ವರಿಷ್ಠರ ಸಮಾವೇಶವನ್ನು ನಡೆಸುವ ಸಿದ್ಧತೆಯೂ ಆಗುತ್ತಿದ್ದಿತು. ಮುಖ್ಯಮಂತ್ರಿ ನಿಜಲಿಂಗಪ್ಪನವರು ಈ ಎಲ್ಲಾ ಕಾರ್ಯಕ್ರಮಗಳಲ್ಲಿ ತಾವು ಸಂಪೂರ್ಣವಾಗಿ ತೊಡಗಿಸಿಕೊಂಡು ಪೂರ್ಣ ಸಹಕಾರ ನೀಡುವ ಭರವಸೆ ನೀಡಿದರು.

ಉತ್ತರ ಪ್ರದೇಶ, ಬಿಹಾರ್, ಬಂಗಾಲ, ಒರಿಸ್ಸಾ, ತಮಿಳುನಾಡು, ಆಂಧ್ರ ಮತ್ತು ಕೇರಳ ರಾಜ್ಯಗಳಲ್ಲಿ ಪಾದಯಾತ್ರೆಯನ್ನು ಮುಗಿಸಿ ೧೯೫೭ರ ಆಗಸ್ಟ್ ೨೭ರಂದು ವಿನೋಬಾಜಿ ಕರ್ನಾಟಕವನ್ನು ದಕ್ಷಿಣ ಕನ್ನಡ ಜಿಲ್ಲೆಯ ಮೂಲಕ ಪ್ರವೇಶ ಮಾಡಿದರು. ಮಂಗಳೂರಿನಲ್ಲಿ ಸರ್ವೋದಯ ಕಾರ್ಯಕರ್ತರನ್ನು ಉದ್ದೇಶಿಸಿ ಮಾತನಾಡುತ್ತಾ ಭೂದಾನ ಚಳುವಳಿಯ ಬೆಳವಣಿಗೆಯನ್ನು ಅವಲೋಕಿಸಿ ಕನ್ನಡನಾಡಿನ ವೈಶಿಷ್ಟ್ಯವನ್ನು ಕುರಿತು ಮಾತನಾಡಿದರು.

''ಭೂದಾನದಿಂದ ಆರಂಭವಾಗಿ ಖಾಸಗಿ ಒಡೆತನವನ್ನು ವಿಸರ್ಜಿಸುವುದರ ಮೂಲಕ ಗ್ರಾಮದಾನದ ಹಂತ ಮುಟ್ಟಿ ಶಾಂತಿ ಸೇನೆಯ ಸ್ಥಾಪನೆ ಮಾಡಿದ್ದೇವೆ. ಈಗ ಕರ್ನಾಟಕ ಸರ್ವೋದಯ ಸಮಾಜವೆಂದರೆ ಏನೆಂಬುದನ್ನು ಸಾದೃಶಪಡಿಸಬೇಕಾಗಿದೆ. ಕರ್ನಾಟಕದ ಜನತೆ ಸಮನ್ವಯದ ವಿಶೇಷ ಪ್ರತಿಭೆ ಹೊಂದಿದ್ದಾರೆ. ನಮ್ಮ ಸಮಾಜ, ಕುಲ, ಜಾತಿ, ವರ್ಣ, ಮತ ಮತ್ತು ರಾಜಕೀಯ ಧ್ಯೇಯಗಳು ಇವುಗಳಿಂದ ಅನೇಕ ಹೋಳುಗಳಾಗಿ ಹೋಗಿದೆ. ಸ್ವರಾಜ್ಯ ಉಳಿಯಬೇಕಾದರೆ ನಮಗೆ ಸಾಮಾಜಿಕ ಐಕ್ಯ ಆಗತ್ಯವಾಗಿದೆ.'' ಎಂದು ವಿನೋಬಾಜಿ ಹೇಳಿದರು. ಕನ್ನಡನಾಡಿನ ಜನರ ಧರ್ಮಸಹಿಷ್ಣುತೆ ಮತ್ತು ಸರ್ವಧರ್ಮ ಸಮಭಾವದ ಬಗ್ಗೆ ಅತೀವ ಸಂತೋಷ ವ್ಯಕ್ತಪಡಿಸಿದರು. ಬಿಹಾರ, ಒರಿಸ್ಸಾ ಮತ್ತು ಕೇರಳ ರಾಜ್ಯಗಳಲ್ಲಿ ದೇವಮಂದಿರಗಳಿಗೆ ಪ್ರವೇಶಕ್ಕೆ ಸಂಬಂಧಿಸಿದಂತೆ ತಮ್ಮ ಅನುಭವಗಳನ್ನು ನೆನೆಸಿಕೊಂಡು ಕರ್ನಾಟಕದಲ್ಲಿ ಆದ ಅನುಭವನ್ನು ಪ್ರಸ್ತಾಪಿಸಿದ್ದಾರೆ. ಬಿಹಾರಿನಲ್ಲಿ ಪ್ರವಾಸ ಮಾಡುತ್ತಿದ್ದಾಗ್ಗೆ ದೇವಗಡದ ವೈದ್ಯನಾಥ ದೇವಸ್ಥಾನಕ್ಕೆ ವಿನೋಬಾಜಿ ಕೆಲವು ಹರಿಜನರೊಂದಿಗೆ ಹೋದರು. ಈ ವಿಷಯವನ್ನು ಮುಖ್ಯ ಅರ್ಚಕರಿಗೆ ತಿಳಿಸಿಯೂ ಇದ್ದರು. ಆದರೆ ದೇವಸ್ಥಾನವನ್ನು ಪ್ರವೇಶಿಸುವುದಕ್ಕೆ ಮುಂಚೆಯೇ ಕೆಲವು ಕಂದಾಚಾರಿಗಳು ಪುಂಡಾಟಿಕೆ ಮಾಡಿ ವಿನೋಬಾಜಿಯವರಿಗೂ ಅವರ ಸಹಚರರಿಗೂ ಏಟುಗಳನ್ನು ಕೊಟ್ಟರು. ವಿನೋಬಾಜಿ ಕಿವಿಗೆ ಏಟು ಬಿದ್ದಿತು. ಮೊದಲೇ ಮಂದವಾಗಿದ್ದ ಕಿವಿಗೆ ಇನ್ನೂ ಹೆಚ್ಚಿನ ನ್ಯೂನತೆ ಉಂಟಾಯಿತು, ವಿನೋಬಾಜಿ ಸಿಟ್ಟು ಮಾಡಿಕೊಳ್ಳಲಿಲ್ಲ. ಪುಂಡಾಟಿಕೆ ಮಾಡಿದವರ ಅಜ್ಞಾನಕ್ಕಾಗಿ ಕನಿಕರ ವ್ಯಕ್ತಪಡಿಸಿದರು. ಆದರೆ ಈ ಪ್ರಕರಣದಿಂದ ಭಾರತದ ಸಂವಿಧಾನದ ಉಲ್ಲಂಘನೆಯಾಗಿದೆಯೆಂದು ಹೇಳಿದರು. ಮುಂದೆ ಎಂದಿಗೂ ಇಂಥ ಘಟನೆ ನಡೆಯದಂತೆ ನೋಡಿಕೊಳ್ಳಬೇಕೆಂದು ಹೇಳಿದರು. ಒರಿಸ್ಸಾದಲ್ಲಿ ಪ್ರವಾಸ ಮಾಡುತ್ತಿದ್ದಾಗ ಪೂರಿ

ಜಗನ್ನಾಥ ದೇವಾಲಯಕ್ಕೆ ಕಾರ್ಯಕರ್ತರೊಂದಿಗೆ ಹೋದಾಗ ಅವರ ಜೊತೆಯಲ್ಲಿ ಓರ್ವ ಫ್ರೆಂಚ್ ಮಹಿಳೆ ಇದ್ದಳೆಂಬ ಕಾರಣದಿಂದ ದೇವಸ್ಥಾನದ ಪ್ರವೇಶಕ್ಕೆ ಅಡ್ಡಿಯಾಯಿತು. ಕೇರಳದ ಗುರುವಾಯೂರಿನಲ್ಲೂ ಅದೇ ಕಥೆ. ಅದರ ಅನುಭವವನ್ನು ವಿನೋಬಾಜಿಯವರು ಹೀಗೆ ಹೇಳಿದ್ದಾರೆ. ''ನಾನು ಅಲ್ಲಿಗೆ ಹೋದಾಗ ನನ್ನೊಡನೆ ಕೆಲವು ಕ್ರಿಶ್ಚಿಯನ್ ಮಿತ್ರರು ಇದ್ದರು. ನನ್ನ ಕ್ರಿಶ್ಚಿಯನ್ ಮಿತ್ರರೊಂದಿಗೆ ದೇವಾಲಯದೊಳಗೆ ಬಿಡುವಿರಾ?'' ಎಂದು ದೇವಾಲಯದವರನ್ನು ಕೇಳಿದೆ. ''ಅವರುಗಳೊಂದಿಗೆ ಬಿಡಲಾರೆವು, ಆದರೆ ನೀವು ದೇವಾಲಯಕ್ಕೆ ಬಂದರೆ ನಮಗೆ ಬಹಳ ಆನಂದವಾಗುವುದು. ನೀವು ಬಾರದಿದ್ದರೆ ಬಹಳ ದುಃಖವಾಗುವದು'' ಎಂದರು. ನನಗೆ ಬೇರೆ ದಾರಿ ಇಲ್ಲ, ''ನನ್ನ ಜೊತೆಯಲ್ಲಿರುವ ಕ್ರಿಶ್ಚಿಯನ್ ಮಿತ್ರರನ್ನು ಬಿಟ್ಟು ದೇವಾಲಯಕ್ಕೆ ಹೋಗಿ ದೇವರ ದರ್ಶನ ಮಾಡಲಾರೆ. ಅಲ್ಲಿ ನನಗೆ ದೇವರ ದರ್ಶನ ಆಗದು. ಆದುದರಿಂದ ನಾನು ಬರಲಾರೆ ಎಂದೆ. ನಾನು ದೇವಾಲಯಕ್ಕೆ ಹೋಗಲಿಲ್ಲ.''

ಕರ್ನಾಟಕದಲ್ಲಿನ ಅನುಭವದ ಬಗ್ಗೆ ವಿನೋಬಾಜಿ ಹೀಗೆ ನುಡಿದಿದ್ದಾರೆ. ''ಮೇಲುಕೋಟೆಯಲ್ಲಿ ರಾಮಾನುಜಾಚಾರ್ಯರು ನಿರ್ಮಿಸಿದ ದೇವಾಲಯವಿದೆ. ಹದಿನೈದು ವರ್ಷ ಅವರು ಮೇಲುಕೋಟೆಯಲ್ಲಿದ್ದರು. ರಾಮಾನುಜರು ಒಬ್ಬ ಅತ್ಯಂತ ಉದಾರ ಆಚಾರ್ಯರು. ಅವರು ಜಗದುದ್ಧಾರದ ಪ್ರಚಂಡ ಕಾರ್ಯವನ್ನು ಮಾಡಿರುವರು. ಮೇಲುಕೋಟೆ ದಕ್ಷಿಣ ಭಾರತದಲ್ಲಿ ಪ್ರಸಿದ್ಧ ದೇವಸ್ಥಾನ. ನನ್ನ ಜೊತೆಯಲ್ಲಿ ಕೆಲವು ಕ್ರಿಶ್ಚಿಯನ್‌ರಿದ್ದರು. ಅವರುಗಳೊಂದಿಗೆ ನಾನು ದೇವಾಲಯಕ್ಕೆ ಹೋದೆ. ಮೇಲುಕೋಟೆಯಲ್ಲಿ ನಮಗೆ ಪ್ರವೇಶ ಮಾಡಿಕೊಟ್ಟಿದ್ದು ಒಂದು ಆನಂದದ ವಿಷಯ.''

''ಇದಾದ ಮೇಲೆ ಪ್ರಸಿದ್ಧ ಗೋಕರ್ಣದ ಮಹಾಬಲೇಶ್ವರದಲ್ಲಿ ಅಂತಹುದೇ ಪ್ರಸಂಗ ಬಂದಿತು. ಅಲ್ಲಿ ನಮ್ಮ ಜೊತೆಯಲ್ಲಿ ಸಲೀಂ ಎಂಬ ಮುಸಲ್ಮಾನ ಸಹೋದರನಿದ್ದ. ಬಹಳ ಪ್ರೇಮಲ ಭಾವುಕ ಮನುಷ್ಯ. ನಾನು ದೇವಾಲಯದ ಮಾಲೀಕರು, ಪೂಜಾರಿಗಳನ್ನು ಉದ್ದೇಶಿಸಿ 'ನಮ್ಮನ್ನು ದೇವಾಲಯದ ಒಳಕ್ಕೆ ಬಿಡುವಿರೇನು? ಇಂತಹ ವ್ಯಕ್ತಿ ನಮ್ಮ ಜೊತೆಯಲ್ಲಿರುವನು'' ಎಂಧು ಕೇಳಿದೆ. ''ನೀವು ನಿಮ್ಮ ಎಲ್ಲ ಜೊತೆಗಾರರೊಂದಿಗೆ ಒಳಗೆ ಬನ್ನಿ, ಯಾವ ಅಡ್ಡಿಯೂ ಇಲ್ಲ'' ಎಂದರು. ಇದರಿಂದ ನನಗೆ ಬಹಳ ಆನಂದವಾಯಿತು. ಗೋಕರ್ಣ ಮಹಾಬಲೇಶ್ವರದಲ್ಲಿ ಇತರ ಧರ್ಮದವರೊಡನೆ ನನಗೆ ಪ್ರವೇಶ ಮಾಡಲು ಅವಕಾಶ ಕೊಟ್ಟರು. ಆದಾಗ್ಯೂ ಅಲ್ಲಿನ ದೇವರು ಭ್ರಷ್ಟವಾಗಲಿಲ್ಲ. ಗೋಕರ್ಣದ ಮಹಾಬಲೇಶ್ವರ ಸಣ್ಣ ತೀರ್ಥಕ್ಷೇತ್ರವೇನಲ್ಲ''. (ಆಧಾರ : ಅಹಿಂಸೆಯ ಶೋಧನೆ: ವಿನೋಬಾ ಜೀವನ ಸ್ಮೃತಿಗಳು, ಪುಟ ೧೨೫-೧೨೭) ಕನ್ನಡನಾಡಿನ ಸಮನ್ವಯ ಸಂಸ್ಕೃತಿ ಮತ್ತು ಸರ್ವಧರ್ಮ ಸಮಭಾವದ ಬಗ್ಗೆ ವಿನೋಬಾಜಿ ಅನೇಕ ಸಂದರ್ಭಗಳಲ್ಲಿ ಪ್ರಶಂಸೆ ಮಾಡಿದ್ದಾರೆ. ಕರ್ನಾಟಕದಲ್ಲಿ ದಕ್ಷಿಣ ಕನ್ನಡ, ಕೊಡಗು ಜಿಲ್ಲೆಗಳಲ್ಲಿ ಪಾದಯಾತ್ರೆ ಮುಗಿಸಿ ೧೯೫೭ರ ಸೆಪ್ಟೆಂಬರ್ ೨೧ ಮತ್ತು ೨೨ ರಂದು ಮೈಸೂರು ಬಳಿ ಇಲವಾಲದಲ್ಲಿ ನಡೆದ ಐತಿಹಾಸಿಕ ಸರ್ವಪಕ್ಷಗಳ ಸಮ್ಮೇಳನದಲ್ಲಿ ವಿನೋಬಾಜಿ ಭಾಗವಹಿಸಿದರು. ವಿನೋಬಾಜಿಯವರು ಆರಂಭಿಸಿದ್ದ ಭೂದಾನ ಗ್ರಾಮದಾನ ಚಳುವಳಿಗೆ ಬೆಂಬಲ ಸೂಚಿಸಲು ಸರ್ವಪಕ್ಷಗಳ ಸಮ್ಮೇಳನವನ್ನು ಇಲವಾಲದಲ್ಲಿ ಸರ್ವಸೇವಾಸಂಘ ಏರ್ಪಡಿಸಿದ್ದಿತು. ಸಮ್ಮೇಳನದಲ್ಲಿ ರಾಷ್ಟ್ರಪತಿ ಡಾ। ರಾಜೇಂದ್ರಪ್ರಸಾದ್, ಪ್ರಧಾನಿ ಜವಹರಲಾಲ್ ನೆಹರೂ, ಕೇಂದ್ರ ಸರ್ಕಾರದ ಪ್ರಮುಖ ಸಚಿವರುಗಳೂ, ಕೇರಳದ ಕಮ್ಯೂನಿಸ್ಟ್ ಸರ್ಕಾರದ ಮುಖ್ಯಮಂತ್ರಿ ಇ. ಎಂ. ಎಸ್. ನಂಬೂದರೀಪಾದ್, ಎಸ್. ನಿಜಲಿಂಗಪ್ಪ ಸೇರಿದಂತೆ ಹಲವು ರಾಜ್ಯಗಳ ಮುಖ್ಯ ಮಂತ್ರಿಗಳೂ ಎಲ್ಲಾ ರಾಜಕೀಯ ಪಕ್ಷಗಳ ಮುಖಂಡರೂ ಸರ್ವೋದಯ ನಾಯಕರುಗಳಾದ ಜಯಪ್ರಕಾಶ್ ನಾರಾಯಣ, ಸುಚೇತ ಕೃಪಲಾನಿ, ಧೀರೇಂದ್ರ ಮಜುಂದಾರ್, ಶ್ರೀಮಾನ್ ನಾರಾಯಣ್, ಆರ್. ಎಸ್. ಧೋತ್ರ, ಪ್ಯಾರೆಲಾಲ್ ಮುಂತಾದವರು ಭಾಗವಹಿಸಿದ್ದರು. ಸಮ್ಮೇಳನದ ವ್ಯವಸ್ಥೆಯ ಜವಾಬ್ದಾರಿಯನ್ನೆಲ್ಲ ರಾಜ್ಯ ಮುಖ್ಯಮಂತ್ರಿ, ಎಸ್. ನಿಜಲಿಂಗಪ್ಪ ಮತ್ತು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸಾಹುಕಾರ್ ಎಸ್. ಚೆನ್ನಯ್ಯನವರು ಹೊತ್ತಿದ್ದರು. ಈ ಐತಿಹಾಸಿಕ ಸಮ್ಮೇಳನವನ್ನು ಉದ್ದೇಶಿಸಿ ವಿನೋಬಾಜಿ ಭಾಷಣ ಮಾಡುತ್ತಾ ಈ ರೀತಿ ನುಡಿದರು.

''ಮಾನವ ಸ್ವಭಾವದ ಒಳಿತಿನಲ್ಲಿ ನನಗೆ ಸಹಜ ನಂಬಿಕೆ ಇದೆ. ಮಾನವನಲ್ಲಿ ಕೆಲವು ತೋರಿಕೆಯ ನ್ಯೂನತೆಗಳು ಇರಬಹುದು. ಆದರೆ ಮೂಲತಃ ಅವನಲ್ಲಿ ಅನೇಕ ಸಾತ್ವಿಕ ಗುಣಗಳಿವೆ. ಅವುಗಳನ್ನು ವಿವಿಧ ಬಗೆಗಳಲ್ಲಿ ಹೊರಹೊಮ್ಮಿಸಬಹುದು. ದೇವರ ದಯೆಯಿಂದ ನಾನು ತೆಲಂಗಾಣದಲ್ಲಿ ಆರಂಭಿಸಿದ ಭೂದಾನ ಆಂದೋಲನದ ರೂಪದಲ್ಲಿ ಈ ಒಳಿತನ್ನು ಕಂಡೆ.

''ಕಳೆದ ಕೆಲವು ವರ್ಷಗಳಿಂದ ದೇಶದ ನಾನಾ ಭಾಗಗಳಲ್ಲಿ ನಾನು ಭೂದಾನವನ್ನು ಪಡೆಯುತ್ತಿದ್ದೇನೆ. ಭೂ ಸಮಸ್ಯೆಯನ್ನು ಶಾಂತಿಯುತ, ಅಹಿಂಸಾತ್ಮಕ ವಿಧಾನಗಳಿಂದ ಪರಿಹರಿಸಲು ಹೊಸದೊಂದು ವಾತಾವರಣವೇ ಸೃಷ್ಟಿಯಾಗಿದೆ. ಗಾಂಧೀಜಿ ನಮಗೆ ಯಾವಾಗಲೂ ಶಾಂತಿ ಮತ್ತು ಪ್ರೇಮದ ಪಥವನ್ನು ತೋರಿಸಿದ್ದರು. ಇಂದಿನ ಜಗತ್ತು ಹಿಂಸೆಯಿಂದ ಬೇಸತ್ತಿದೆ. ಏನು ಮಾಡಬೇಕೋ

ಅರಿವಿಲ್ಲವಾಗಿದೆ. ಶಸ್ತ್ರಾಸ್ತ್ರಗಳ ಶೇಖರಣೆಯಿಂದ ಸಮಸ್ಯೆಗಳು ಬಗೆಹರಿಯಲಾರವು. ಗಾಂಧೀಜಿ ನಮ್ಮ ಮುಂದೆ 'ವಿಶ್ವಸ್ತ ಸಿದ್ಧಾಂತ'ವನ್ನು (ಟ್ರಸ್ಟಿಶಿಪ್) ಇಟ್ಟಿದ್ದರು. ಕೆಲವರು ಭೂದಾನ ಗ್ರಾಮದಾನ ಆಂದೋಲನಗಳು ವಿಶ್ವಸ್ತ ಸಿದ್ಧಾಂತಕ್ಕೆ ವಿರೋಧವಾಗಿದೆ ಎಂದು ಭಾವಿಸುತ್ತಾರೆ. ಏಕೆಂದರೆ ಅವು ಒಡೆತನದ ವಿಸರ್ಜನೆಯನ್ನು ಅಪೇಕ್ಷಿಸುತ್ತವೆ, ಆದುದರಿಂದ ವಿಶ್ವಸ್ತ ಸಿದ್ಧಾಂತದ ಬಗ್ಗೆ ನನ್ನ ವಿಚಾರಗಳನ್ನು ವಿವರಿಸುತ್ತೇನೆ. ಇದಕ್ಕಿಂತ ಉತ್ತಮ ನಿದರ್ಶನ ಇನ್ನೊಂದಿಲ್ಲ. ತಂದೆ ತಾಯಿಗಳು ತಮ್ಮ ಮಕ್ಕಳನ್ನು ತಮಗಿಂತ ಹೆಚ್ಚಾಗಿ ನೋಡಿಕೊಂಡು ಅವರಿಗೆ ಶಿಕ್ಷಣ ಕೊಟ್ಟು, ಆದಷ್ಟು ಜಾಗ್ರತೆ ತಮ್ಮ ವ್ಯವಹಾರದ ಹೊಣೆಗಾರಿಕೆಯನ್ನು ನೀಡಲು ಬಯಸುತ್ತಾರೆ. ಇದೇ ಭಾವವೇ ಈ ಎಲ್ಲಾ ವರ್ಷಗಳಿಂದ ಗ್ರಾಮದಾನಕ್ಕೆ ಸ್ಫೂರ್ತಿ ನೀಡಿರುವುದು.

''ಈ ಆಂದೋಲನದ ಪರಿಣಾಮವಾಗಿ ಆಗಲೇ ಭಾರತದಲ್ಲಿ ತುಂಡುತುಂಡಾಗಿರುವ ಭೂಹಿಡುವಳಿಗಳು ಇನ್ನೂ ಹೆಚ್ಚುತ್ತದೆಂದು ಆಗಾಗ ಆಕ್ಷೇಪ ಕೇಳಿ ಬರುತ್ತಿದೆ. ಭೂಮಿ ತುಂಡುತುಂಡಾಗುವುದೆಂಬುದಕ್ಕಿಂತ ಹೆಚ್ಚಾಗಿ ಹೃದಯಗಳು ತುಂಡಾಗುವ ಬಗ್ಗೆ ನನಗೆ ಕಳವಳ. ಜನತೆಯ ಹೃದಯಗಳನ್ನು ಕೂಡಿಸಲು ನಾನು ಶಕ್ತಿ ಮೀರಿ ಶ್ರಮಿಸುತ್ತಿದ್ದೇನೆ. ಇದು ಸಿದ್ಧಿಸಿದರೆ, ಉಳಿದುವೆಲ್ಲ ಹೆಚ್ಚು ಕಷ್ಟವಿಲ್ಲದೆ ತಾವಾಗಿಯೇ ಬರುತ್ತವೆ.''

ಗ್ರಾಮದಾನದ ಮೂಲ ಸಿದ್ಧಾಂತವನ್ನು ಕುರಿತವು ವಿನೋಬಾಜಿ ಹೀಗೆ ವಿವರಿಸಿದರು: ಇಂದು ಜಗತ್ತಿನಲ್ಲಿ ನಿಜವಾಗಿಯೂ ಇಲ್ಲದವರು ಯಾರೂ ಇಲ್ಲ. ಕೆಲವರಲ್ಲಿ ಭೂಮಿ ಇರುತ್ತದೆ. ಇತರರಲ್ಲಿ ಬೇರೆ ಆಸ್ತಿ ಇರುತ್ತದೆ. ಬೇರೆಯವರಲ್ಲಿ ಬುದ್ಧಿ ಶಕ್ತಿ ಮತ್ತು ಶ್ರಮ ಶಕ್ತಿ ಇರುತ್ತದೆ. ಇದಕ್ಕಿಂತ ಹೆಚ್ಚಾಗಿ ಪ್ರೀತಿ ವಿಶ್ವಾಸಗಳು ಎಲ್ಲ ಮಾನವರಲ್ಲಿಯೂ ಇದ್ದೇ ಇರುತ್ತವೆ. ಗ್ರಾಮದಾನದಲ್ಲಿ ಭೂ ಒಡೆಯ ಭೂದಾನ ಮಾಡುತ್ತಾನೆ. ಕಾರ್ಮಿಕರು ಶ್ರಮದಾನ ಮಾಡುತ್ತಾರೆ. ಇದೆಲ್ಲ ಸಮುದಾಯದ ಅಭಿವೃದ್ಧಿಗಾಗಿ. ಗ್ರಾಮದಾನ ಒಂದು ಪೂರ್ಣ ವಿಚಾರ. ಅದು ಖಾದಿ ಮತ್ತು ಗ್ರಾಮ್ಯೋದ್ಯೋಗಗಳನ್ನು ಒಳಗೊಂಡಿದೆ. ಶಾಂತಿ ಸೇನಾ, ಮೂಲ ಶಿಕ್ಷಣ ಮತ್ತು ಕಡೆಯದಾಗಿ ಅಹಿಂಸಕ ಸಮಾಜ ವ್ಯವಸ್ಥೆ ಎಲ್ಲವನ್ನೂ ಒಳಗೊಂಡಿದೆ. ರಾಷ್ಟ್ರೀಯ ಸ್ವಪರಿಪೂರ್ಣತೆಯನ್ನು ಸಾಧಿಸುವ ದೃಷ್ಟಿಯಿಂದ ಅಧಿಕ ಆಹಾರೋತ್ಪನ್ನವಾಗಬೇಕು. ಆದುದರಿಂದ ನಾನು ಗ್ರಾಮದಾನವನ್ನು ಒಂದು 'ರಕ್ಷಣಾ ಕಾರ್ಯಕ್ರಮ' ಎಂದು ಭಾವಿಸುತ್ತೇನೆ, ಆಹಾರದ ಆಗತ್ಯತೆಗಳ ಸ್ವಪರಿಪೂರ್ಣತೆಯನ್ನು ಸಾಧಿಸಿದ ಹೊರತು ಭಾರತಕ್ಕೆ ನಿಜವಾದ ರಕ್ಷಣೆ ಎಂಬುದಿಲ್ಲ''

(ಆಧಾರ : ವಿನೋಬಾ ಜೀವನ-ದರ್ಶನ, ಜಿ. ವಿ. ನಾರಾಯಣಮೂರ್ತಿ, ಪುಟ ೨೨೮-೨೩೦)

ಇಲವಾಲದಲ್ಲಿ ಎರಡು ದಿನಗಳ ರಾಷ್ಟ್ರ ನಾಯಕರ ಸಮಾವೇಶದಲ್ಲಿ ಗ್ರಾಮದಾನ ಚಳವಳಿಗೆ ಪೂರ್ಣ ಬೆಂಬಲವನ್ನು ವ್ಯಕ್ತಪಡಿಸಲಾಯಿತು. ಸಮ್ಮೇಳನದ ಕೊನೆಯಲ್ಲಿ ಜವಹರಲಾಲ್ ನೆಹರೂ ಅವರು ಸಂಯುಕ್ತ ಹೇಳಿಕೆಯೊಂದನ್ನು ರಚಿಸಿದರು. ''ಎರಡು ದಿನ ನಡೆದ ಚರ್ಚೆಗಳ ಅಂತ್ಯದಲ್ಲಿ ಸಮ್ಮೇಳನವು ವಿನೋಬಾಜಿಯವರ ಧ್ಯೇಯ, ಅದಕ್ಕೆ ಅನುಗುಣವಾಗಿ ಅಹಿಂಸಕ ಮತ್ತು ಸಹಕಾರ ವಿಧಾನಗಳಿಂದ ರಾಷ್ಟ್ರೀಯ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ಪ್ರಯತ್ನಗಳ ಬಗೆಗೆ ಅಪಾರ ಪ್ರಶಂಸೆಯನ್ನು ವ್ಯಕ್ತಪಡಿಸುತ್ತದೆ. ಈ ಧ್ಯೇಯಕ್ಕೆ ಭಾರತದ ಸಮಗ್ರ ಜನತೆ ತಮ್ಮ ಉತ್ಸಾಹಭರಿತ ನೆರವನ್ನು ನೀಡಬೇಕೆಂದು ಮನವಿ ಸಲ್ಲಿಸುತ್ತದೆ''. ಇಲವಾಲ ಪ್ರಣಾಳಿಕೆಯೆಂದೇ ಕರೆಯಲಾದ ಈ ಸಂಯುಕ್ತ ಹೇಳಿಕೆಗೆ ಎಲ್ಲ ಪಕ್ಷಗಳ ನಾಯಕರುಗಳೂ ಸಹಿಹಾಕಿ ವಿನೋಬಾಜಿಯವರ ಚಳವಳಿಗೆ ಸರ್ವಾನುಮತದ ಬೆಂಬಲವನ್ನು ಘೋಷಿಸಿದರು.

ಇಲವಾಲ ಘೋಷಣೆ ಬಗ್ಗೆ ವಿನೋಬಾಜಿಯವರು ವಿಶ್ಲೇಷಣೆ ಮಾಡುತ್ತಾ ''ಅದರಲ್ಲಿ ಗ್ರಾಮದಾನದ ವಿಚಾರಕ್ಕೆ ಎಲ್ಲರೂ ಬೆಂಬಲ ಕೊಡಬೇಕು, ಏಕೆಂದರೆ ಅದರಲ್ಲಿ ನೈತಿಕ ಉನ್ನತಿಯೊಂದಿಗೆ ಭೌತಿಕ ಉನ್ನತಿಯೂ ಆಗುವುದು ಎಂದು ಬರೆಯಲಾಗಿದೆ. ಇದರ ಬಗ್ಗೆ ನಾನು ಯೋಚಿಸಿದೆ. ಈ ಎರಡು ಉನ್ನತಿಗಳ ಹೊರತು ಮಾನವನಿಗೆ ಇನ್ನಾವ ಉನ್ನತಿ ಬಾಕಿ ಇದೆ? ಕೇವಲ ಧರ್ಮ ಪ್ರವಚನ ಮಾಡುವುದರಿಂದಲೇ ಅಲ್ಲ, ವ್ಯವಹಾರ ತಿಳಿದ ಮುಖಂಡರಿಂದಲೂ ಈ ಪ್ರಕಾರದ ಆಶ್ವಾಸನೆ ಸಿಕ್ಕಿತು. ಗ್ರಾಮದಾನದ ವಿಚಾರ ಲೋಕಮಾನ್ಯವಾಯಿತು ಎಂದು ನಾನು ತಿಳಿದೆ'' (ಆಧಾರ-ಅಹಿಂಸೆಯ ಶೋಧನೆ- ವಿನೋಬಾ ಜೀವನ ಸ್ಮೃತಿಗಳು, ಪುಟ ೧೨೮)

ಇಲವಾಲದ ಸಮ್ಮೇಳನ ಮುಗಿದ ಮಾರನೆಯ ದಿನ ಬೆಳಗಿನ ಝಾವ ವಿನೋಬಾಜಿ ಸರ್ವೋದಯ ಕಾರ್ಯಕರ್ತರೊಡನೆ ಹೊರಟು ಬೆಳಿಗ್ಗೆ ಮೈಸೂರು ತಲುಪಿದರು. ಮೈಸೂರಿನಲ್ಲಿ ಅವರ ಮೊದಲ ಕಾರ್ಯಕ್ರಮ ರಾಷ್ಟ್ರಕವಿ ಕುವೆಂಪು ಅವರ 'ಉದಯ ರವಿ' ನಿವಾಸಕ್ಕೆ ಭೇಟಿ. ಕುವೆಂಪು ಅವರು ಆನಂದಭರಿತರಾಗಿ ಆಚಾರ್ಯರನ್ನು ಸ್ವಾಗತಿಸಿದರು. ಇಬ್ಬರೂ ಸ್ವಲ್ಪ ಹೊತ್ತು ಮಾತುಕತೆ ನಡೆಸಿದರು. ಕುವೆಂಪು ಅವರು ವಿನೋಬಾಜಿ ಅವರಿಗೆ ರಾಮಾಯಣ ದರ್ಶನದ ಪ್ರತಿಯೊಂದನ್ನು ಅರ್ಪಿಸಿದರು. ಕುವೆಂಪು ಅವರ

ಕೈ ಬರಹದ ಮೂಲಪ್ರತಿಯನ್ನು ನೋಡಲು ವಿನೋಬಾ ಭಾವೆ ಆಶಿಸಿದರು. ಕೈಬರಹದ ಮೂಲ ಹಸ್ತ ಪ್ರತಿಯನ್ನು ಕುವೆಂಪು ತೋರಿಸಿದರು. ವಿನೋಬಾಜಿ ಹಸ್ತಪ್ರತಿಯನ್ನು ತಲೆಯ ಮೇಲೆ ಇಟ್ಟುಕೊಂಡು ನಂತರ ಅದನ್ನು ಕಣ್ಣಿಗೊತ್ತಿಕೊಂಡು ಕೆಲವು ಪುಟಗಳನ್ನು ತಿರುವಿ ಹಾಕಿದರು. ಪಾದಯಾತ್ರೆಯಲ್ಲಿ ಅನೇಕ ದಿನಗಳ ಕಾಲ ಅವರ ಜೊತೆಯಲ್ಲಿರುತ್ತಿದ್ದ ಸರ್ವೋದಯ ಕಾರ್ಯಕರ್ತ ಟಿ. ಎಸ್. ಅನಂತರಂಗಾಚಾರಿ ಅವರು ವಿನೋಬಾಜಿ ಅವರಿಗೆ ರಾಮಾಯಣ ದರ್ಶನವನ್ನು ಓದಿ ಹೇಳುತ್ತಿದ್ದ ಸಂಗತಿಯನ್ನು ನೆನಪಿಸಿಕೊಂಡರು.

ಸಣ್ಣ ಪುಟ್ಟ ಕವಿತೆಗಳೇ ಪ್ರಧಾನವಾಗಿರುವ ಈ ಕಾಲದಲ್ಲಿ ಮಹಾಕಾವ್ಯ ರಚಿಸಿರುವುದು ಮಹತ್ತರ ಸಾಧನೆಯೆಂದು ವಿನೋಬಾಜಿ ಪ್ರಶಂಸಿಸಿದರು. ವಿನೋಬಾಜಿಯವರನ್ನು ಆತ್ಮೀಯತೆಯಿಂದ ಬೀಳ್ಕೊಟ್ಟ ಮೇಲೆ ಕುವೆಂಪು ಅವರು ಈ ಎರಡು ಸಾಲುಗಳಲ್ಲಿ ಅವರ ಭೇಟಿಯ ಮಹತ್ವವನ್ನು ಬರೆದಿಟ್ಟರು.

''ಪಾದಯಾತ್ರೆಯ ಅಮೃತರೇಖೆ ಮನೆಯ ಮುಂದೆ ಸರಿದುದಕ್ಕೆ ವಂದನಂ''

ಮೈಸೂರಿನಲ್ಲಿ ವಾಸ್ತವ್ಯ ಮಾಡಿದ ಎರಡು ಮೂರು ದಿನಗಳ ಕಾಲ ಪ್ರಾರ್ಥನೆ, ಪ್ರವಚನ, ವಿವಿಧ ವರ್ಗಗಳ ಪ್ರತಿನಿಧಿಗಳೊಡನೆ ಭೇಟಿ ಮುಂತಾದ ಕಾರ್ಯಕ್ರಮಗಳು ನಡೆದುವು. ಮೈಸೂರಿಗೆ ಬೆಂಗಳೂರಿನಲ್ಲಿ ಪಾದಯಾತ್ರೆ ಮುಂದುವರೆಸಿದರು.

ವಿನೋಬಾಜಿಯವರು ಕರ್ನಾಟಕದಲ್ಲಿ ಆರು ತಿಂಗಳ ಕಾಲ ಪಾದಯಾತ್ರೆ ಮಾಡಿದರು. ಅವರ ದಿನಚರಿ ಹೀಗಿರುತ್ತಿತ್ತು. ಬೆಳಗಿನ ಝಾವ ಮೂರು ಗಂಟೆಗೆ ಎದ್ದು ಧ್ಯಾನ ಮತ್ತು ಅಧ್ಯಯನ ನಡೆಸುತ್ತಿದ್ದರು. ಮುಂಜಾನೆ ಐದು ಘಂಟೆಗೆ ಮುಂದಿನ ಊರಿಗೆ ಪ್ರಯಾಣ ಹೊರಡುತ್ತಿದ್ದರು. ಮುಂಭಾಗದಲ್ಲಿ ಇಬ್ಬರು ಸ್ವಯಂ ಸೇವಕರು ಲಾಟೀನುಗಳನ್ನು ಹಿಡಿದು ದಾರಿ ತೋರಿಸುತ್ತಿದ್ದರು. ವಿನೋಬಾಜಿ ಜೊತೆ ಆಯ್ದ ಕಾರ್ಯಕರ್ತರು ಇರುತ್ತಿದ್ದರು. ಅವರು ವಾಸ್ತವ್ಯ ಹೂಡಿದ್ದ ಗ್ರಾಮದ ಮುಖಂಡರು ಮುಂದಿನ ಗ್ರಾಮದವರೆಗೆ ಹೋಗಿ ಬಿಟ್ಟು ಬರುತ್ತಿದ್ದರು. ಗ್ರಾಮ ಪ್ರವೇಶ ಮಾಡುತ್ತಿದ್ದಂತೆ ಗ್ರಾಮ ಪ್ರದಕ್ಷಿಣೆ, ಜನಸಾಮಾನ್ಯರೊಡನೆ ಊರಿನ ಸಮಸ್ಯೆಗಳ ಬಗ್ಗೆ ಚರ್ಚೆ, ಭೂದಾನ ಕೊಡುವವರಿಂದ ದಾನಪತ್ರ ಸ್ವೀಕಾರ, ಸಂಜೆ ಪ್ರಾರ್ಥನಾ ಸಭೆ ನಡೆಯುತ್ತಿದ್ದವು. ಅವರ ಪ್ರಾರ್ಥನಾ ಸಭೆ ಎಂದರೆ ನೆರೆದಿದ್ದ ಜನರೆಲ್ಲ ಸದ್ದು ಮಾಡದೆ ಕುಳಿತು ಮೌನದಿಂದ ಕೆಲ ನಿಮಿಷ ಧ್ಯಾನ ಮಾಡುವುದು. ನಂತರ ವಿನೋಬಾಜಿಯ ಪ್ರವಚನ ನಡೆಯುತ್ತಿತ್ತು. ಪ್ರವಚನಗಳಲ್ಲಿ ಆಧ್ಯಾತ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ಸಮಕಾಲೀನ ವಿಷಯಗಳು ಪ್ರಸ್ತಾಪಿಸಲ್ಪಡುತ್ತಿದ್ದುವು. ಅವು ತುಂಬಾ ಬೋಧಪ್ರದವಾಗಿರುತ್ತಿದ್ದವು. ಈ ಪ್ರವಚನಗಳೆಲ್ಲವನ್ನೂ ಪ್ರಕಟಿಸಿದಂತೆ ಸರ್ವೋದಯ ಸಾಹಿತ್ಯ ಬೆಟ್ಟದಷ್ಟೇ ಬೆಳೆಯುವಂತಹವುದು. ಅವುಗಳಲ್ಲಿ ಬಹುತೇಕ ಪ್ರವಚನಗಳು ಪ್ರಕಟವಾಗಿವೆ. ಸ್ಪೂರ್ತಿದಾಯಕಗಳಾಗಿವೆ. ಕರ್ನಾಟಕ ಪಾದಯಾತ್ರೆ ಸಮಯದಲ್ಲಿ ಕರ್ನಾಟಕದ ಸಂಸ್ಕೃತಿ, ಪರಂಪರೆ, ಸರ್ವೋದಯ ದರ್ಶನದ ಬಗ್ಗೆ ವಿನೋಬಾಜಿಯವರ ಕೆಲವು ಪ್ರವಚನಗಳ ಸಾರಭೂತ ಭಾಗಗಳನ್ನು ಮಾತ್ರ ಕೊಡಲು ಸಾಧ್ಯ.

ವಿನೋಬಾಜಿ ಬೆಂಗಳೂರಿನಲ್ಲಿ ಆರು ದಿನ ಇದ್ದರು. ಮೊದಲನೆಯ ದಿನ ಬಸವನಗುಡಿ ನ್ಯಾಷನಲ್ ಕಾಲೇಜು ಕ್ರೀಡಾ ಮೈದಾನದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ಜನ ಸೇರಿದ್ದರು. ವಿನೋಬಾಜಿ ತಮ್ಮ ಪ್ರವಚನದಲ್ಲಿ ಈ ರೀತಿ ಹೇಳಿದರು.

''ಹೃದಯದಲ್ಲಿರುವ ಪರಮಾತ್ಮನಲ್ಲಿ ಸಂಪೂರ್ಣ ಶ್ರದ್ಧೆಯಿಟ್ಟು ಕೆಲಸದಲ್ಲಿ ತೊಡಗಿರುವುದರಿಂದ ಆರೂವರೆ ವರ್ಷದಿಂದ ಪಾದಯಾತ್ರೆ ಮಾಡುತ್ತಿದ್ದರೂ ನನಗೆ ಬಳಲಿಕೆಯೇ ಆಗುತ್ತಿಲ್ಲ. ಪ್ರತಿಯಾಗಿ ದಿನದಿನಕ್ಕೂ ಉತ್ಸಾಹ ಹೆಚ್ಚುತ್ತಿದೆ. ಪ್ರತಿಯೊಬ್ಬರ ಹೃದಯದಲ್ಲೂ ಜ್ಯೋತಿಯೊಂದು ಬೆಳಗುತ್ತಿದೆ. ಆ ಜ್ಯೋತಿಯೇ ಎಲ್ಲರಿಗೂ ಆದೇಶ ನೀಡುತ್ತಿದೆ. ಅದರ ಆದೇಶದಿಂದಲೇ ನಾನು ಸುತ್ತುತ್ತಿರುವುದು.

''ಸ್ವರಾಜ್ಯದ ಆಕಾಂಕ್ಷೆ ಇಡೀ ಭಾರತಕ್ಕೆ ಇದ್ದಂತೆ ಕರ್ನಾಟಕದವರಿಗೂ ಇತ್ತು. ಅದರ ಜೊತೆಗೆ ಕನ್ನಡಿಗರಿಗೆ ಐವತ್ತು ವರ್ಷಗಳಿಂದ ಇನ್ನೊಂದು ಆಕಾಂಕ್ಷೆಯಿತ್ತು. ಕನ್ನಡದ ಜನರೆಲ್ಲ ಒಂದಾಗಬೇಕು ಎಂಬುದೇ ಆ ಆಕಾಂಕ್ಷೆ. ಅದು ರಾಜಕೀಯ ಆಕಾಂಕ್ಷೆಯಲ್ಲ, ಸಾಂಸ್ಕೃತಿಕವಾದದ್ದು. ಐದು ವಿಭಾಗಗಳಲ್ಲಿ ಹಂಚಿಹೋಗಿದ್ದ ಕರ್ನಾಟಕ ಭಾರತದ ಸೇವೆಗೆ ತನ್ನ ಶಕ್ತಿಯನ್ನು ಕೂಡಿಸಲು ಆಗುತ್ತಿರಲಿಲ್ಲ. ಪರಮಾತ್ಮನ ಕೃಪೆಯಿಂದ ಈ ಆಕಾಂಕ್ಷೆ ಪೂರ್ಣವಾಯಿತು. ಅದರ ಪರಿಣಾಮ ಏನಾಗಬೇಕು? ಜನರ ಹೃದಯದಲ್ಲಿ ಅಡಗಿರುವ ಕನ್ನಡದ ಶಬ್ದ ಶಕ್ತಿ ಬೆಳೆಯಬೇಕು. ಬಲಿಯಬೇಕು. ಅದು ಆಗುತ್ತಲೂ ಇದೆ. ಪುಟ್ಟಪ್ಪನವರ ಭೇಟಿ ನನಗೆ ಎರಡು ಬಾರಿ ಆಯಿತು ''ರಾಮಾಯಣ ದರ್ಶನ''ವನ್ನು ಅವರು ಪ್ರೀತಿಯಿಂದ ನನಗೆ ಕೊಟ್ಟರು. ಇದು ಸಣ್ಣ ಪುಟ್ಟ ಕವಿತೆಗಳ ಕಾಲ, ಮಹಾಕಾವ್ಯ

ಯುಗವಲ್ಲವಷ್ಟೆ? ಎಂದು ನಾನು ವಿನೋದವಾಗಿ ಅವರಿಗೆ ಹೇಳಿದೆ. ಅವರು ಭಾರತದಲ್ಲೀಗ ಮಹಾಕಾವ್ಯದ ಯುಗ ಕಾಣಿಸಿಕೊಂಡಿದೆ ಎಂದರು. ರವೀಂದ್ರರು ಬಂಗಾಳದಲ್ಲಿ ಮಾಡಿದಂತೆ ಪುಟ್ಟಪ್ಪನವರು ಇಲ್ಲಿ ಮಹಾಕಾವ್ಯ ಸೃಷ್ಟಿಸಿದ್ದಾರೆ. ಅದು ನವಕನ್ನಡದ ಶಕ್ತಿ, ಇನ್ನು ಮುಂದೆ ನ್ಯಾಯಾಧೀಶರು, ಮುಖ್ಯಮಂತ್ರಿಗಳು, ಕವಿಗಳು, ಎಲ್ಲರೂ ರೈತರು ಕೂಲಿಗಾರರ ಭಾಷೆಯಲ್ಲೇ ಮಾತನಾಡುತ್ತಾರೆ. ಕಾಲೇಜ್ ಶಿಕ್ಷಣವೂ ಆ ಭಾಷೆಯಲ್ಲೇ ನಡೆಯುತ್ತದೆ. ಮೈಸೂರು ವಿಶ್ವವಿದ್ಯಾನಿಲಯ ಈಗಾಗಲೇ ಈ ಸಂಬಂಧದಲ್ಲಿ ನಿರ್ಣಯ ಮಾಡಿದೆ. ನವಶಕ್ತಿ ಸಂಚಾರದ ಸೂಚನೆ ಅದು.

''ಕನ್ನಡ ಭಾಷೆ ಒಂದು ಸಾವಿರ ವರ್ಷದಿಂದ ಬೆಳೆದುಬಂದಿದೆ. ಅಸಂಖ್ಯ ಕವಿಗಳು, ಸಾಧು ಸಂತರು ಅದರ ಸೇವೆ ಮಾಡಿದ್ದಾರೆ. ನಡುವೆ ಸ್ವಲ್ಪ ಕುಗ್ಗಿಹೋಗಿತ್ತು. ಇದೀಗ ಪುನಃ ಅದರ ಉತ್ಥಾನ ಆಗುತ್ತಿದೆ. ಅದರ ಪ್ರತೀಕವೇ ಪುಟ್ಟಪ್ಪನವರು. ಪಂಪನಿಂದ ಪುಟ್ಟಪ್ಪನವರೆಗೆ ಪರಂಪರೆ ನಡೆದುಬಂದಿದೆ. ಶಬ್ದಶಕ್ತಿ, ಸಾಹಿತ್ಯಶಕ್ತಿ ಬೆಳೆದುಬರುತ್ತಿದೆ. ರಾಜನೀತಿಯ ಕಾಲ ಮುಗಿಯಿತು. ಇನ್ನು ಲೋಕನೀತಿಯ ಕಾಲ. ಇನ್ನು ಜನತೆಯದೇ ಕಾಲ. ಪ್ರತಿಯೊಬ್ಬ ಗಂಡಸರು- ಹೆಂಗಸರು ಸಮಾಜದ ಸ್ತಂಭ, ಸಮಾಜದ ಕೇಂದ್ರ. ಈಗ ದಿಲ್ಲಿ ಕೇಂದ್ರಸ್ಥಾನವಾಗಿದೆ. ಇನ್ನು 'ಹೃದಯ' ಕೇಂದ್ರಸ್ಥಾನವಾಗಬೇಕು. ಪ್ರತಿ ವ್ಯಕ್ತಿಯೂ ಪ್ರತಿನಿಧಿಯಾಗಬೇಕು. ರಾಜನೀತಿ ಹೋಗಿ ಜನಶಕ್ತಿ, ಲೋಕನೀತಿ ವಿಕಸಿತವಾಗಬೇಕು.''

ಹೀಗೆ ವಿನೋಬಾಜಿ ತಮ್ಮ ವಿಚಾರಧಾರೆಯನ್ನು ಹರಿಸಿ ಪ್ರತಿದಿನವೂ ಸರ್ವೋದಯ ದರ್ಶನದ ಬೆಳಕನ್ನು ಚೆಲ್ಲುತ್ತಾ ಹೋದರು. ಪ್ರತಿದಿನ ಸಂಜೆ ಪ್ರವಚನ ನಡೆಸಿದ ನಂತರ 'ಗೀತಾ ಪ್ರವಚನ' ಕೊಂಡ ಪ್ರತಿಯೊಬ್ಬರಿಗೂ ಪುಸ್ತಕದಲ್ಲಿ 'ವಿನೋಬಾ' ಎಂದು ಕನ್ನಡದಲ್ಲಿ ಸಹಿ ಹಾಕಿ ಆಶೀರ್ವದಿಸುತ್ತಿದ್ದರು.

ಬೆಂಗಳೂರು ಭೇಟಿಯ ಸಮಯದಲ್ಲಿ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪನವರು ತಮ್ಮ ಮಂತ್ರಿಮಂಡಲದ ಸದಸ್ಯರೊಡಗೂಡಿ ವಿನೋಬಾಜಿಯವರನ್ನು ಭೇಟಿ ಮಾಡಿ ತಮ್ಮ ಸಚಿವ ಸಂಪುಟದ ಸದಸ್ಯರು ಸಂಬಳದಲ್ಲಿ ಪ್ರತಿ ಮಾಹೆ ನಿಗದಿಯಾದ ಮೊಬಲಗನ್ನು ಸಂಪತ್ತಿದಾನಕ್ಕೆ ನೀಡುವುದಾಗಿ ಆಶ್ವಾಸನೆ ನೀಡಿದರು.

ಬೆಂಗಳೂರಿನಲ್ಲಿದ್ದಾಗ ನೂರಾರು ಶಾಲಾಮಕ್ಕಳು ವಿನೋಬಾಜಿ ಜೊತೆಯಲ್ಲಿ ನಗರದ ವಿವಿಧ ಭಾಗಗಳಲ್ಲಿ ಪಾದಯಾತ್ರೆ ಹೋಗುತ್ತಿದ್ದರು. ಮನೆಮನೆಗೂ ಸರ್ವೋದಯ ಸಾಹಿತ್ಯವನ್ನು ಹಂಚುವ ಕೆಲಸವನ್ನು ಬಾಲಕರಿಗೆ ವಹಿಸಲಾಗಿತ್ತು. ವಿನೋಬಾಜಿಯವರಿಂದ ಆಕರ್ಷಿತರಾದ ಕೆಲವು ಮಕ್ಕಳು ಬೆಂಗಳೂರಿನಿಂದ ವಿನೋಬಾಜಿ ಪ್ರಯಾಣ ಮಾಡಿದಾಗಲೂ ಅವರನ್ನು ಕೆಲವು ದಿನ ಹಿಂಬಾಲಿಸಿದರು. ಸರ್ವೋದಯ ಕಾರ್ಯಕರ್ತರಾದ ಪದ್ಮ ಮತ್ತು ಸೀತಾರಾಮ ಅವರ ಪುತ್ರ, ಏಳು ವರ್ಷದ ಬಾಲಕ ನಾರಾಯಣಪ್ರಸಾದ್ ಬೆಂಗಳೂರಿನಲ್ಲಿ ವಿನೋಬಾ ಜೊತೆಗೂಡಿದವನು ಕರ್ನಾಟಕದಲ್ಲಿ ಅವರ ಯಾತ್ರೆ ಮುಗಿಯುವವರೆಗೂ ಐದಾರು ತಿಂಗಳು ಪಾದಯಾತ್ರೆ ಮಾಡಿ ವಿನೋಬಾ ಮೆಚ್ಚಿಗೆ ಪಡೆದ.

ವಿನೋಬಾಜಿಯವರು ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಪಾದಯಾತ್ರೆ ಮಾಡಿದರು. ಕರ್ನಾಟಕದ ಪಾದಯಾತ್ರೆ ಸಮಯದಲ್ಲಿ 'ಜೈಜಗತ್' ಎಂಬ ಉದ್ಘೋಷವನ್ನು ಪ್ರಥಮ ಬಾರಿಗೆ ಮಾಡಿದರು. ಅದು ೧೯೫೭ರ ನವೆಂಬರ್ ಒಂದನೇ ದಿನ.

ಕನ್ನಡ ರಾಜ್ಯೋತ್ಸವ ದಿನ 'ಜೈ ಜಗತ್' ಮಂತ್ರವನ್ನು ಉಚ್ಚರಿಸಿ ಜಗತ್ತಿನ ಕಲ್ಯಾಣಕ್ಕೆ ಕೆಲಸ ಮಾಡುವುದೇ ಸರ್ವೋದಯದ ಗುರಿ ಎಂದು ಹೇಳಿದರು. 'ಸರ್ವೋದಯ ಪಾತ್ರೆ'ಯ ಯೋಜನೆಯನ್ನು ಪ್ರಥಮ ಬಾರಿಗೆ ಮುಂದಿಟ್ಟಿದ್ದು ಸಹ ಕರ್ನಾಟಕದ ಪಾದಯಾತ್ರೆ ಸಮಯದಲ್ಲಿಯೇ. ಸರ್ವೋದಯದ ಕಾರ್ಯಕ್ರಮಗಳಿಗೆ ಜನರ ಸಹಾನುಭೂತಿ ಮತ್ತು ನೆರವು ನೀಡಲು ಪ್ರತಿಮನೆಯಲ್ಲೂ 'ಸರ್ವೋದಯ ಪಾತ್ರೆ' ಇಟ್ಟು ದಿನನಿತ್ಯವೂ ಬೆಳಿಗ್ಗೆ ಮನೆಯ ಪುಟ್ಟ ಮಕ್ಕಳಿಂದ ಅದರೊಳಕ್ಕೆ ಧಾನ್ಯವನ್ನು ಹಾಕಿಸಬೇಕೆಂಬ ಕಾರ್ಯಕ್ರಮವನ್ನು ಸೂಚಿಸಿದರು. ಆ ರೀತಿ ಮನೆಮನೆಗಳಲ್ಲಿ ಸಂಗ್ರಹವಾದ ಧಾನ್ಯವನ್ನು ಸರ್ವೋದಯ ಮಂಡಲಕ್ಕೆ ಕಳುಹಿಸಿ ಭೂದಾನ ಗ್ರಾಮದಾನ ಚಳವಳಿಯಲ್ಲಿ ನಿರತರಾದವರ ನಿರ್ವಹಣೆಗೂ ಗ್ರಾಮದಾನದ ಹಳ್ಳಿಗಳ ಪುನರ್ ನಿರ್ಮಾಣಕ್ಕೂ ವಿನಿಯೋಗಿಸಬೇಕೆಂಬ ಆದೇಶ ನೀಡಿದರು. ಅದರಂತೆ ದೇಶಾದ್ಯಂತ ಸಹಸ್ರಾರು ಮನೆಗಳಲ್ಲಿ ಸರ್ವೋದಯ ಪಾತ್ರೆ ಇಡುವ ಪದ್ಧತಿ ರೂಢಿಗೆ ಬಂದಿತು. ರಾಷ್ಟ್ರಪತಿ ರಾಜೇಂದ್ರ ಪ್ರಸಾದರು ಸಹ ರಾಷ್ಟ್ರಪತಿ ಭವನದಲ್ಲಿ 'ಸರ್ವೋದಯ ಪಾತ್ರೆ'ಯನ್ನಿಟ್ಟು ದಿನವೂ ಅದಕ್ಕೆ ಧಾನ್ಯ ಹಾಕುತ್ತಿದ್ದರು.

ವಿನೋಬಾಜಿಯವರ ಪಾದಯಾತ್ರೆಯ ಅಮೃತರೇಖೆ ಕರ್ನಾಟಕದ ಉದ್ದಗಲಕ್ಕೂ ಹರಿದುಹೋಯಿತು. ಅವರ ಅಮೃತವಾಣಿಯನ್ನು ಕೇಳುವ ಅವಕಾಶ ಪಡೆದ ಲಕ್ಷಾಂತರ ಕನ್ನಡಿಗರು ಧನ್ಯತೆಯ ಭಾವವನ್ನು ತಾಳಿದರು. ವಿನೋಬಾಜಿಯವರು

**ಭೂದಾನ ಯಜ್ಞದಲ್ಲಿ ಧಾನ್ಯ ಸಂಗ್ರಹಣೆ ಮತ್ತು ವಿತರಣೆ ೩೧-೩-೧೯೬೪ ರವರೆಗೆ ಭಾರತದ ವಿವಿಧ ರಾಜ್ಯಗಳಲ್ಲಿ ಈ ಕೆಳಕಂಡಂತಿದ್ದಿತು.**

| ರಾಜ್ಯ | ಸಂಗ್ರಹಿಸಿದ ಭೂದಾನ | ಭೂವಿತರಣೆ | ಹಂಚಲು ಭೂಮಿ | ಹಂಚಿಕೆಗಾಗಿ ಬಾರದ ಭೂಮಿ | ಉಳಿದಿರುವುದು |
|---|---|---|---|---|---|
| ೧. | ಅಸ್ಸಾಂ | ೧೧,೯೩೫, | ೨೬೫ | - | ೧೧,೬೭೦ |
| ೨. | ಆಂಧ್ರ | ೨,೪೧,೯೫೨ | ೧,೦೨,೦೩೮ | ೮೧,೨೨೪ | ೫೮,೬೨೫ |
| ೩. | ಒರಿಸ್ಸ | ೧,೫೭,೪೬೦ | ೫೧,೧೦೨ | ೧೧,೨೨೧ | ೯೫,೧೩೭ |
| ೪. | ಉ.ಪ್ರದೇಶ | ೪,೩೪,೩೫೧ | ೨,೦೭,೫೯೦ | ೨೫,೮೨೩ | ೨,೦೯,೯೩೮ |
| ೫. | ಕೇರಳ | ೨೬,೨೯೩ | ೫,೭೭೪ | ೭,೯೯೯ | ೧೨,೫೨೦ |
| ೬. | ತಮಿಳುನಾಡು | ೮೦,೪೩೩ | ೨೧,೫೧೯ | - | ೫೮,೯೧೪ |
| ೭. | ದೆಹಲಿ | ೩೦೦ | ೧೮೦ | ೧೨೦ | - |
| ೮. | ಪಂಜಾಬ್ | ೧೪,೭೩೯ | ೩,೬೦೧ | ೩,೩೮೦ | ೭,೭೫೮ |
| ೯. | ಗುಜರಾತ್ | ೧,೦೩,೫೩೦ | ೫೦,೯೮೪ | ೨೭,೯೯೪ | ೨೪,೫೫೨ |
| ೧೦. | ಮಹಾರಾಷ್ಟ್ರ | ೧,೫೦,೩೯೪ | ೧,೦೨,೨೧೨ | ೩೪,೭೯೭ | ೧೩,೩೮೫ |
| ೧೧. | ಮಧ್ಯಪ್ರದೇಶ | ೪,೦೪,೬೬೨ | ೧,೩೯,೯೮೮ | ೧,೪೬,೦೮೭ | ೧೧೮,೫೮೭ |
| ೧೨. | ಕರ್ನಾಟಕ | ೨೦,೦೮೬ | ೩೧೨೩ | ೫೩ | ೧೬,೯೧೦ |
| ೧೩. | ಬಂಗಾಳ | ೧೨,೮೮೭ | ೩೪,೮೨೫ | ೮,೪೨೬ | ೬೩೬ |
| ೧೪. | ಬಿಹಾರ | ೨೧,೩೨,೭೭೨ | ೨,೭೭,೬೬೦ | ೧೦,೪೬,೩೩೨ | ೮,೦೮,೭೮೦ |
| ೧೫. | ರಾಜಸ್ತಾನ | ೪,೩೦,೪೩೭ | ೯೭,೭೭೪ | ೯೧,೩೭೪ | ೨,೪೧,೨೮೯ |
| ೧೬. | ಹಿಮಾಚಲ ಪ್ರದೇಶ | ೫,೨೪೦ | ೨,೫೩೧ | - | ೨,೭೦೯ |
| ೧೭. | ಕಾಶ್ಮೀರ | ೫ | ೫ | | |

ಆಧಾರ - ವಿನೋಬಾ ಜೀವನ ದರ್ಶನ, ಜಿ. ವಿ. ನಾರಾಯಣಮೂರ್ತಿ ಕರ್ನಾಟಕ ಸರ್ವೋದಯ ಸಮಿತಿ ಪ್ರಕಟಣೆ, ಪುಟ ೨೭

ಕರ್ನಾಟಕದಲ್ಲಿ ಆರು ತಿಂಗಳ ಸತತ ಪಾದಯಾತ್ರೆ ಮಾಡಿ ಮುಗಿಸಿದ ಮೇಲೆ ೧೯೫೭ರ ಮಾರ್ಚಿ ೨೩ ರಂದು ಮಹಾರಾಷ್ಟ್ರಕ್ಕೆ ತೆರಳಿದರು. ಮಹಾರಾಷ್ಟ್ರ, ಗುಜರಾತ್, ಉತ್ತರ ಭಾರತದ ಮಿಕ್ಕೆಲ್ಲ ರಾಜ್ಯಗಳಲ್ಲಿ ಪಾದಯಾತ್ರೆ ಮುಗಿಸಿ ೧೯೬೪ರ ಏಪ್ರಿಲ್ ೧೦ ಕ್ಕೆ ತಮ್ಮ ಹದಿಮೂರು ವರ್ಷ ಮೂರು ತಿಂಗಳು ಮೂರು ದಿನಗಳ ಪಾದಯಾತ್ರೆಯನ್ನು ಮುಗಿಸಿ ಮತ್ತೆ ಪೌನಾರಿನ ಬ್ರಹ್ಮವಿದ್ಯಾಮಂದಿರಕ್ಕೆ ವಾಪಸು ಬಂದು ನೆಲಸಿದರು.

ವಿನೋಬಾಜಿಯವರ ಪಾದಯಾತ್ರೆಯಿಂದ ದೊರೆತ ಸ್ಫೂರ್ತಿಯಿಂದ ಎಲ್ಲ ಕಡೆಯಂತೆ ಕರ್ನಾಟಕದಲ್ಲೂ ಸರ್ವೋದಯ ಕಾರ್ಯಕರ್ತರು ಹತ್ತಾರು ವರ್ಷಗಳ ಕಾಲ ಭೂದಾನ-ಗ್ರಾಮದಾನ ಮತ್ತು ಸರ್ವೋದಯ ಆಂದೋಲನದ ಕಾರ್ಯಗಳಲ್ಲಿ ಮಗ್ನರಾದರು. ಇವರೆಲ್ಲರ ಸಮರ್ಪಣ ಭಾವದ ಕೆಲಸದಿಂದ ಕರ್ನಾಟಕದಲ್ಲಿ ಒಟ್ಟು ೨೦,೦೮೬ ಎಕರೆಗಳಷ್ಟು ಭೂಮಿ ಭೂದಾನಕ್ಕೆ ಪ್ರಾಪ್ತವಾಯಿತು. ಆ ಪೈಕಿ ೩೮೨೫ ಎಕರೆಗಳಷ್ಟು ಭೂಮಿಯನ್ನು ಭೂಹೀನ ಕೃಷಿ ಕಾರ್ಮಿಕರಿಗೆ ಹಂಚಿದರು. ವ್ಯವಸಾಯಕ್ಕೆ ಯೋಗ್ಯವಲ್ಲದ ೫೩ ಎಕರೆಗಳಷ್ಟು ಭೂಮಿಯನ್ನು ಬಿಟ್ಟು ಹಂಚಿಕೆಗಾಗಿ ಉಳಿದಿದ್ದ ಭೂಮಿ ೧೬೯೦೦ ಎಕರೆಗಳು. ಇದರ ವಿತರಣೆಗೆ ಭೂದಾನ ಕಾನೂನನ್ನು ಸರ್ಕಾರ ಜಾರಿಗೆ ತಂದು ಕರ್ನಾಟಕ ಭೂದಾನ ಮಂಡಲಿಯನ್ನು ಸ್ಥಾಪಿಸಿತು. ಅದರ ಮೂಲಕ ತಕ್ಕಮಟ್ಟಿಗೆ ಭೂಮಿಯ ವಿತರಣೆಯ ಕಾರ್ಯ ನಡೆಯಿತು. ಇತರ ರಾಜ್ಯಗಳಲ್ಲೂ ಶಾಸನಬದ್ಧ ಭೂದಾನ ಸಮಿತಿಗಳು ರಚಿಸಲ್ಪಟ್ಟು ಭೂದಾನದಲ್ಲಿ ಸಂಗ್ರಹವಾದ ಭೂಮಿಯನ್ನು ಕಾನೂನು ಬದ್ಧವಾಗಿ ವಿತರಿಸುವ ಕೆಲಸವಾಯಿತು.

ಕರ್ನಾಟಕದಲ್ಲಿ ಪಾದಯಾತ್ರೆ ಮಾಡುತ್ತಿದ್ದಾಗ ವಿನೋಬಾಜಿ ಮಾಡಿದ ಪ್ರವಚನಗಳನ್ನು ಕೆಲವು ಜಿಲ್ಲೆಗಳ ಉತ್ಸಾಹೀ ಸರ್ವೋದಯ ಸಮಿತಿಗಳ ನಿರ್ದೇಶಕರುಗಳು ಸಂಕಲನ ಮಾಡಿ ಪ್ರಕಟಿಸಿದ್ದಾರೆ. ಆ ಪೈಕಿ ಶಿವಮೊಗ್ಗ ಜಿಲ್ಲೆಯಲ್ಲಿ ವಿನೋಬಾಜಿ

ಪಾದಯಾತ್ರೆ ಮಾಡಿದ ಸಂದರ್ಭದಲ್ಲಿ ಮಾಡಿದ ಪ್ರವಚನಗಳನ್ನು ನಿಷ್ಠಾವಂತ ಸರ್ವೋದಯ ನಿವೇದಕರಾಗಿದ್ದ ಎಣ್ಣೆಕೊಪ್ಪದ ಮಲ್ಲಿಕಾರ್ಜುನಗೌಡರು ಪ್ರಕಟಿಸಿ ಉಪಕಾರ ಮಾಡಿದ್ದಾರೆ. ವಿನೋಬಾಜಿಯವರ ಪ್ರವಚನಗಳನ್ನು ಟಿ. ಎಸ್. ಅನಂತರಂಗಾಚಾರಿಯವರು ಹಿಂದಿಯಿಂದ ಕನ್ನಡಕ್ಕೆ ಭಾಷಾಂತರ ಮಾಡಿರುತ್ತಾರೆ. ಈ ಪುಸ್ತಕಕ್ಕೆ ರಾಷ್ಟ್ರಕವಿ ಕುವೆಂಪು ಅವರು ಅಮೂಲ್ಯವಾದ ಮುನ್ನುಡಿ ಬರೆದು ವಿನೋಬಾಜಿಯವರ ವ್ಯಕ್ತಿತ್ವದ ಹಿರಿಮೆ ಮತ್ತು ಅವರ ಸಾಧನೆಗಳನ್ನು ಮನೋಜ್ಞವಾಗಿ ವಿಶ್ಲೇಷಿಸಿದ್ದಾರೆ.

ವಿನೋಬಾಜಿಯವರು ಭಾರತೀಯ ಪರಂಪರೆಯ ಪ್ರಾಚೀನ ತಪಸ್ವಿಯೂ, ಅತ್ಯಂತ ಕ್ರಾಂತಿಕಾರನಾದ ಆಧುನಿಕ ರಾಜಕೀಯಾರ್ಥಿಕ ವಿಜ್ಞಾನಿಯೂ ಒಟ್ಟುಗೂಡಿದಂತಿದೆ. ಈ ದೃಷ್ಟಿಯಿಂದ ನೋಡಿದರೆ ಗಾಂಧೀಜಿಯ ನಿಜವಾದ ಉತ್ತರಾಧಿಕಾರಿ ಅವರಲ್ಲದೆ ಬೇರೆ ಇನ್ನಾರೂ ಅಲ್ಲ.

ಪ್ರಪಂಚದ ಸಂತರೆಲ್ಲ ಒಂದಲ್ಲ ಒಂದು ರೀತಿಯಿಂದ ಮಾನವ ಕಲ್ಯಾಣ ಸಾಧನೆಗೆ ದುಡಿದಿದ್ದಾರೆ ನಿಜ. ಆದರೆ ಈ ಪ್ರಕಾರದಲ್ಲಿ, ಈ ಪ್ರಮಾಣದಲ್ಲಿ ಆಧ್ಯಾತ್ಮಿಕ ಸಾಮಾಜಿಕ ಆರ್ಥಿಕ ರಾಜಕೀಯಗಳೆಲ್ಲವನ್ನೂ ಸಮನ್ವಯಗೊಳಿಸಿ ಸರ್ವೋದಯ ಸಾಧನೆಗೆ ತೊಡಗಿರುವವರಲ್ಲಿ ಇವರೇ ಮೊತ್ತಮೊದಲಿಗರೆಂದು ಕಾಣುತ್ತದೆ. ಇವರ ಈ ಬಹುಮುಖವಾದ ಬೃಹದ್ರೂಪದ ಪ್ರಯತ್ನಕ್ಕೂ ಶೀಘ್ರದಲ್ಲಿಯೇ ಪೂರ್ಣಸಿದ್ಧಿ ದೊರೆಯುತ್ತದೆ ಎಂದು ಯಾರಾದರೂ ನಿರೀಕ್ಷಿಸಿದರೆ ಅದು ಅತಿ ಶ್ರದ್ಧೆಯಾದೀತು. ಆದರೂ ಪೂರ್ಣತ್ವದ ಕಡೆಗೆ ಮಾನವತೆ ಕೈಗೊಂಡಿರುವ ಮಹಾಪ್ರಯಾಣದಲ್ಲಿ ಆಚಾರ್ಯ ವಿನೋಬಾ ಅವರ ಪಾದಯಾತ್ರೆಗೆ ಒಂದು ಅನನ್ಯ ಸಾಧಾರಣವಾದ ಅಪೂರ್ವ ದಿವ್ಯಸ್ಥಾನಕ್ಕೆ ಸಲ್ಲಬೇಕಾದ ಪೂಜಾಗೌರವ ಸಲ್ಲುತ್ತದೆ.

''ಭೂದಾನ, ಗ್ರಾಮದಾನ, ಸಂಪತ್ತಿದಾನ ಮೊದಲಾದ ಹೆಸರುಗಳ ಕಾಲುವೆಗಳಲ್ಲಿ ಹರಿಯುತ್ತಿರುವ ಈ ಭೂತದಯೆಯ ದೀಕ್ಷಾನದಿ ಮಾಡುತ್ತಿರುವ ನಿರ್ಮಲೀಕರಣದ ಕಾರ್ಯ ತುಂಬಾ ಜಟಿಲವಾಗಿದೆ. ಸೂಕ್ಷ್ಮ ದೃಷ್ಟಿಗೆ ಮಾತ್ರ ಗೋಚರವಾಗುವಂತಹ ಪರಿಣಾಮಕರವಾದ ಮಾರ್ಗಗಳಲ್ಲಿ ಅದು ಪ್ರವಹಿಸಿ ಮಾನವ ಮನೋಭೂಮಿಯ ಸಂದು ಗೊಂದುಗಳಲ್ಲಿ ನುಗ್ಗಿ ತನ್ನ ಪವಿತ್ರ ತೀರ್ಥ ಪ್ರೋಕ್ಷಣೆ ಮಾಡುತ್ತಿರುವುದನ್ನು ಕಾಣುತ್ತೇವೆ. ಮೇಲೆ ಕಾಣುವ ಸದ್ಯದ ಫಲ ಬರಿಯ ಸಾಮಾನ್ಯ ಲೌಕಿಕ ಪ್ರಯೋಜನದಂತೆ ತೋರುತ್ತಿದ್ದರೂ ಅದು ಮನುಷ್ಯತ್ವವನ್ನು ಅದರ ಮೂಲ ಅವಿದ್ಯೆಯ ಪಾಶಗಳಿಂದಲೇ ಬಿಡುಗಡೆ ಮಾಡುವ ಚಿರಂತನ ಫಲದಾಯಕವಾದ ಚಿಕಿತ್ಸೆಯಲ್ಲಿ ತೊಡಗಿದೆ. ಎಣ್ಣೆ ಕೊಪ್ಪದ ಮಲ್ಲಿಕಾರ್ಜುನಗೌಡರಿಂದ ತಮ್ಮ ಮತ್ತು ತಮ್ಮ ಪಕ್ಕದ ಹಳ್ಳಿಗಳಲ್ಲಿ ನಡೆದ ಸಂಗತಿಗಳನ್ನು ಕೇಳಿ ನನಗೆ ಕೃತಯುಗವೇ ಕಲಿಯುಗಕ್ಕೆ ಕಾಲಿಡುತ್ತಿರುವಂತೆ ಭಾಸವಾಯಿತು. ಇದು ಬರಿಯ ಭೂಮಿ ಹಂಚಿಕೆಯ ಕೆಲಸ ಮಾತ್ರವಲ್ಲ; ಅದಕ್ಕಿಂತಲೂ ಮಹೋನ್ನತವಾದ ಆತ್ಮಶ್ರೀ ಅನುಸಂಧಾನದ ಮತ್ತು ಸಂಸ್ಥಾಪನೆಯ ಗುರುತರ ಕ್ರಿಯೆಯಾಗುವುದರಲ್ಲಿ ಸಂದೇಹವಿಲ್ಲ... ಮುನ್ನುಡಿಯ ಕೊನೆಯಲ್ಲಿ ಸರ್ವೋದಯದ ಸಾರಭೂತ ತತ್ವಗಳನ್ನು ನಿರೂಪಿಸುವ ಶ್ಲೋಕಗಳನ್ನು ಕುವೆಂಪು ಕನ್ನಡಕ್ಕೆ ಅನುವಾದ ಮಾಡಿಕೊಟ್ಟಿದ್ದಾರೆ. ಅವನ್ನು ಉದ್ಧರಿಸಿ ಈ ಲೇಖನವನ್ನು ಮುಗಿಸುತ್ತೇನೆ.

ಕೇಡಿನಿಂದೆಲ್ಲರೂ ಪಾರಾಗಲಿ
ಒಳ್ಳನೆಲ್ಲರೂ ಕಾಣಲಿ
ಸರ್ವರಿಗೂ ಸದ್ಬುದ್ಧಿಯುಂಟಾಗಲಿ
ಎಲ್ಲರೆತ್ತಲೂ ನಲಿಯಲಿ

ಸುಖಿಗಳಾಗಲಿ ಸರ್ವರುಂ
ಸರ್ವರಕ್ಕೆ ನಿರಾಮಯಂ
ಸರ್ವರೊಳ್ಪನೆ ಕಾಣಲಿ
ದುಃಖಮಾರ್ಗಂ ಮಾಣಲಿ

ದುರ್ಜನರು ಸಜ್ಜನರಾಗಲಿ
ಸಜ್ಜನರು ಶಾಂತಿ ಪಡೆಯಲಿ
ಶಾಂತರು ಬಂಧಮುಕ್ತರಾಗಲಿ
ಮುಕ್ತರು ಇತರರನ್ನೂ ಮುಕ್ತಗೊಳಿಸಲಿ

- (ಕುವೆಂಪು, ಶಿವಮೊಗ್ಗ ಜಿಲ್ಲೆಯಲ್ಲಿ ವಿನೋಬಾ ಪ್ರವಚನ - ಮುನ್ನುಡಿ. ಜಿಲ್ಲಾ ಸರ್ವೋದಯ ಕಾರ್ಯಾಲಯದ ಪ್ರಕಟಣೆ)

# ಜೆ. ಪಿ. ಚಳವಳಿ

**ಸತ್ಯವ್ರತ**

## ಚಳವಳಿಯ ಉಗಮ

ಪತ್ನಿ ಪ್ರಭಾವತಿಯವರ ನಿಧನಾನಂತರ ಜಯಪ್ರಕಾಶರ ಜೀವನ ನೀರಸ-ನೀರವವಾಗಿತ್ತು. ಅವರು ಜೀವನ ವಿಮುಖರಾಗಿ ವಿರಕ್ತರಂತೆ ಇರುತ್ತಿದ್ದರು. ಆರೋಗ್ಯವೂ ಅಷ್ಟಕ್ಕಷ್ಟೇ. ಅವರು ಸಮಾಜ ಪರಾಯಣರಾಗಿರದೇ ಹೋಗಿದ್ದಿದ್ದರೆ ಹಿಮಾಲಯಕ್ಕೆ ಹೋಗಿಬಿಡುತ್ತಿದ್ದರೋ ಏನೋ. ಆದರೆ ಒಂದು ಅನಿರೀಕ್ಷಿತ ಅಯಾಚಿತ ಗಳಿಗೆ, ಕ್ರಮಪ್ರಾಪ್ತವಾಗಿ ನಡೆಯಬೇಕಾದ ಘಟನೆಯೊಂದರಿಂದ ಅವರಿಗೊಂದು ಹೊಸ ಹೊಳವು ಪ್ರೇರಣೆ ಉಂಟಾಯಿತು. ೧೯೭೩ರ ಡಿಸೆಂಬರ್ ಪ್ರಾರಂಭದ ದಿನಗಳಲ್ಲಿ ಜೆ. ಪಿ. ಒಂದರೆಡು ವಿಚಾರಗೋಷ್ಠಿ ಮತ್ತು ವಿನೋಬಾ ಭೇಟಿಗಾಗಿ ಅವರ ಆಶ್ರಮಕ್ಕೆ ಬಂದಿದ್ದರು. ಆ ಸಮಯದಲ್ಲಿ ಉತ್ತರ ಪ್ರದೇಶ ಚುನಾವಣೆಗಳನ್ನೆದುರಿಸುತ್ತಿತ್ತು. ಅದರಲ್ಲಿ ಎಲ್ಲ ಬಗೆಯ ಅಶುದ್ಧ ಸಾಧನಗಳ ಬಳಕೆ ಮತ್ತು ಅನುಚಿತಕಾರ್ಯ ನಡೆಯುತ್ತಿರುವುದನ್ನು ಕಂಡು ಅವರು ವ್ಯಥಿತರಾದರು. ಅದನ್ನು ವಿರೋಧಿಸಬೇಕಾದುದು ತಮ್ಮ ಕರ್ತವ್ಯವೆನಿಸಿತು. (ಒಂದು ತಿಂಗಳ ಹಿಂದೆ ಯು.ಪಿ. ಚುನಾವಣೆ ಮುಗಿದು, ಅದು ಈಗ ರಾಷ್ಟ್ರಪತಿ ಶಾಸನಕ್ಕೊಳಪಟ್ಟಿದೆ ಆಗಿನ ಸ್ಥಿತಿಗೂ ಇಂದಿಗೂ ಪರಿಸ್ಥಿತಿಯಲ್ಲಿ ಯಾವ ಪರಿವರ್ತನೆಯೂ ಕಂಡುಬಂದಿಲ್ಲ. ಇನ್ನಷ್ಟು ಕೆಟ್ಟಿದೆಯೆನ್ನಬೇಕು, ಅಷ್ಟೇ. ಇತಿಹಾಸದ ಪುನರಾವರ್ತನೆ ಆಯಿತೆಂದು ಬೇರೆ ಹೇಳಬೇಕಾಗಿಲ್ಲ. ಈಗ ಜೆ. ಪಿ. ಯಂಥ ಸೂಕ್ಷ್ಮಮತಿ, ದೇಶದ ಅಂತಃಸ್ಸಾಕ್ಷಿಯಾಗಿರುವ ಪ್ರಹರಿಯೊಬ್ಬ ಇಲ್ಲ ಅಷ್ಟೇ - ಲೇ.) ಆ ವೇಳೆಯಲ್ಲಿ ಪ್ರಜಾತಂತ್ರ ರಕ್ಷಣೆಗಾಗಿ ವಿಶೇಷ ಕಾರ್ಯಕ್ರಮ ನಡೆಸುವ ಪ್ರೇರಣೆ ಅವರಿಗಾಯಿತು. ಅದನ್ನು ನಡೆಸುವವರು ಯಾರು? ಅದಕ್ಕೆ ಬೇಕಾದ ಕಾರ್ಯಸಾಧಕ ವಾಹಕ ಶಕ್ತಿ ಯಾವುದು? ಅವರ ದೃಷ್ಟಿ ವಿದ್ಯಾರ್ಥಿ ಯುವಜನರ ಮೇಲೆ ಬಿತ್ತು. ಈ ಸಮುದಾಯ ಹೆಚ್ಚು ಸುಲಭವಾಗಿ ಪಕ್ಷಾತೀತವಾಗಿ ಕಾರ್ಯ ನಿರ್ವಹಿಸಬಲ್ಲದೆಂದು ಹೊಳೆಯಿತು. ಹೀಗೆ ತಾರ್ಕಿಕ ಮತ್ತು ಭಾವನಾತ್ಮಕವಾಗಿ ವಿದ್ಯಾರ್ಥಿ ಯುವ ಜನಶಕ್ತಿಯನ್ನು ಆವಾಹಿಸುವ ಪ್ರೇರಣೆ ಆಯಿತು. ಪ್ರಜಾತಂತ್ರಕ್ಕಾಗಿ ಯುವಕರು ಎಂಬ ಮನವಿಯೊಂದನ್ನು ತಯಾರಿಸಿದರು. ವಿನೋಬಾ ಅವರ ಸನ್ನಿಧಿಯಲ್ಲೇ ಇದ್ದುದರಿಂದ ಅವರಿಗೂ ತೋರಿಸಿದರು. ವಿನೋಬಾ ಅದರ ಮೇಲೆ ಸಹಿ ಮಾಡಿ ಅದನ್ನು ಅನುಮೋದಿಸಿದರು. ಅದರಿಂದ ಜೆ. ಪಿ. ಗೆ ಸಂತೋಷವಾಯಿತು. ಆಶ್ರಮದಲ್ಲಿದ್ದಾಗಲೇ ಡಿಸೆಂಬರ್ ೯ ನೇ ತಾರೀಖು ಅವರು ತಮ್ಮ ಹೇಳಿಕೆಯನ್ನು ಪ್ರಕಟಿಸಿದರು.

ಜೆ. ಪಿ. ಆ ವಿಸ್ತೃತದ ಹೇಳಿಕೆಯಲ್ಲಿ ೧೯೪೨ರ ಮಾದರಿಯ ಚಳವಳಿ ಹೂಡಲು ಕರೆ ನೀಡಿದ್ದರು. ೧೯೪೨ರಲ್ಲಿ ಪರಿಸ್ಥಿತಿ ಏನಿತ್ತೋ ಅದೇ ದೇಶದಲ್ಲಿ ಈಗಲೂ ಗೋಚರಿಸುತ್ತಿದೆ ಎಂದಿದ್ದರು. ಪ್ರಜಾತಂತ್ರದ ಮೌಲ್ಯಗಳ ರಕ್ಷಣೆ, ಅವುಗಳ ಸಂವರ್ಧನೆ, ಜನತೆಯ ಸ್ವತಂತ್ರ ಅಭಿಕ್ರಮಶಕ್ತಿಯನ್ನು ಎಚ್ಚರಗೊಳಿಸುವ ಅಗತ್ಯ ಮತ್ತು ಅದೇ ಅಂತಿಮ, ಸಾರ್ವಭೌಮಶಕ್ತಿ ಇತ್ಯಾದಿ ಮುಖ್ಯ ಅಂಶಗಳನ್ನು ಅವರ ಹೇಳಿಕೆ ಒಳಗೊಂಡಿತ್ತು.

ಜೆ. ಪಿ.ಯವರ ಈ ಹೇಳಿಕೆ ಜನತೆಯ ಮೇಲೆ ಅಪಾರ ಪರಿಣಾಮವನ್ನುಂಟುಮಾಡಿತು. ಅದರಿಂದ ಪ್ರೇರಣೆ ಪಡೆದು ಗುಜರಾತಿನ ನವ ನಿರ್ಮಾಣ ಚಳವಳಿ, ಅನಂತರ ಬಿಹಾರ ಆಂದೋಳನ ಪುಟಿದೆದ್ದವು. ಅವರಿಗೆ ಭಾರತೀಯ ಕ್ಷಿತಿಜದಲ್ಲಿ ೧೯೪೨ರ ಪರಿಸ್ಥಿತಿಯ ದರ್ಶನವಾಗುತ್ತಿತ್ತು. ಅದಕ್ಕೆ ಜನತಾ ಆಂದೋಳನದ ಸ್ವರೂಪ ಕೊಟ್ಟು ಹೊಸತೇ ಆದ ಲೋಕಜಾಗೃತಿ ಉದಯಿಸುವಂತೆ ಮಾಡುವ ಪ್ರೇರಣೆ ಸಹಜವಾಗಿಯೇ ಆಯಿತು. ಬಿಹಾರ ಚಳವಳಿ ಇದೇ ನಿರ್ದಿಷ್ಟ ದಿಶೆಯಲ್ಲಿ ಸಾಗಿ ಸಾಮಾಜಿಕ ಪರಿವರ್ತನೆಯ ಮತ್ತು ಸಂಪೂರ್ಣ ಕ್ರಾಂತಿಯ ವಾಹಕ ಹಾಗೂ ಸಾಧಕ ಚಳವಳಿಯಾಗಿ ರೂಪಗೊಳ್ಳಲಿ ಎಂದು ಆಶಿಸಿದ್ದರು.

**ನೇತೃತ್ವ** : ಪಟ್ನಾದ ವಿದ್ಯಾರ್ಥಿಗಳಿಂದ ಮೊಟ್ಟಮೊದಲು ೧೯೭೪ರ ಮಾರ್ಚ್‌ನಲ್ಲಿ ಆಂದೋಳನ ಆರಂಭವಾಯಿತು. ಅವರು ೧೨ ಬೇಡಿಕೆಗಳನ್ನಿಟ್ಟಿದ್ದರು. ಅವುಗಳಲ್ಲಿ ೮ ಶಿಕ್ಷಣ ಮತ್ತು ವಿದ್ಯಾರ್ಥಿಗಳಿಗೆ ಸಂಬಂಧಿಸಿದವು. ಉಳಿದ ನಾಲ್ಕು ರಾಷ್ಟ್ರೀಯ ಜನಜೀವನಕ್ಕೆ ಸಂಬಂಧಿಸಿದವು. ಭ್ರಷ್ಟಾಚಾರ ನಿಷೇಧ, ಶಿಕ್ಷಣದಲ್ಲಿ ಆಮೂಲಾಗ್ರ ಪರಿವರ್ತನೆ, ಬೆಲೆ ಏರಿಕೆಯ ಮೇಲೆ ಹತೋಟಿ ಮತ್ತು ನಿರುದ್ಯೋಗ ನಿವಾರಣೆ ಇವೇ ನಾಲ್ಕು ರಾಷ್ಟ್ರೀಯ ಬೇಡಿಕೆಗಳು. ಈ ನಾಲ್ಕು ಬೇಡಿಕೆಗಳ ಮೇಲೆ ಅಂತರ್ಮುಖಿಯಾಗಿ ವಿಚಾರ ಮಾಡುವುದಾದರೆ ಅವು ಇಂದಿಗೂ ಪರಿಹಾರಗಾಣದ, ಅತ್ಯಂತ ಪ್ರಸ್ತುತ ಸಮಸ್ಯೆಗಳಾಗಿಯೇ ಉಳಿದಿವೆ. ಅವು ಇಂದಿಗೂ ಜನತೆಯ ಒಟ್ಟು ಸಮಾಜದ ತಾಜಾ ಜ್ವಲಂತ ಸಮಸ್ಯೆಗಳೇ.

ಆರಂಭದಲ್ಲಿ ಯುವಜನರಿಗೆ ''ನೀವೇ ನಿಮ್ಮ ಆಂದೋಳನ ನಡೆಸಿರಿ. ನೀವೇ ಸೂಕ್ತ ನಿರ್ಣಯ ತೆಗೆದುಕೊಳ್ಳಿ, ನಾಯಕತ್ವ ನಿಮ್ಮವರಲ್ಲೇ ಇರಲಿ'' ಎನ್ನುತ್ತಿದ್ದರು. ಆದರೆ ಜೆ. ಪಿ. ಆಂದೋಳನದ ನಾಯಕತ್ವ ವಹಿಸಿಕೊಳ್ಳಲಿ ಎಂಬ ಆಗ್ರಹ ವಿದ್ಯಾರ್ಥಿ ಯುವ ಜನರಿಗಿತ್ತು. ಜೆ. ಪಿ. ಅದನ್ನು ತಳ್ಳಿಹಾಕಿದ್ದರು. ಆದರೆ ಮಾರ್ಚ್ ೧೯೭೪ರ ನಂತರದ ಘಟನಾವಳಿಯ ಪರಿಣಾಮವಾಗಿ ಮತ್ತು ವಿದ್ಯಾರ್ಥಿ ಯುವಜನರ ಮರು ಆಗ್ರಹಕ್ಕೊಳಗಾಗಿ ನೇತೃತ್ವ ವಹಿಸಲು ಒಪ್ಪಿದರು. ಹೀಗೆ ಬಿಹಾರ ಆಂದೋಳನದ ನೇತೃತ್ವ ಜಯಪ್ರಕಾಶರ ಕೈಸೇರಿ ಆಗಿನಿಂದ ಇದು ಜೆ. ಪಿ. ಚಳವಳಿಯೆಂದು ಪ್ರಸಿದ್ಧವಾಯಿತು. ಜೆ. ಪಿ. ಯಂಥ ಅಗ್ರಪಂಕ್ತಿಯ ನಾಯಕರು ಆಂದೋಳನದ ಸೂತ್ರಧಾರರಾಗಿ ನಿಂತದ್ದರಿಂದ ಅದಕ್ಕೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಹತ್ವ ಬಂತು. ಎಲ್ಲರ ಗಮನ ಅತ್ತ ಹರಿಯಿತು. ಅದರ ಪ್ರಗತಿ-ವಿಗತಿ ಏರಿಳಿತಗಳು, ವಿವಿಧ ತಿರುವು - ಹಂತಗಳ ಕಡೆ ದೃಷ್ಟಿ ಹೊರಳಿತು. ಎಲ್ಲೆಡೆ ಆಸಕ್ತಿ ಕೆರಳಿತು.

### ಚಳವಳಿಯ ಸ್ವರೂಪ

ಹೀಗೆ ಆರಂಭವಾದ ಜೆ. ಪಿ. ಚಳವಳಿ ಮೂಲತಃ ಪಕ್ಷಾತೀತವಾಗಿ, ಸಮಾಜ ಪರಿವರ್ತನೆಗಾಗಿ ಹಾಗೂ ಸಂಪೂರ್ಣ ಕ್ರಾಂತಿ ದರ್ಶನವನ್ನು ತನ್ನ ಮುಂದಿರಿಸಿಕೊಂಡು, ಅದಕ್ಕಾಗಿ ಸಮರ್ಪಿಸಿಕೊಂಡ ಸ್ವರೂಪದ್ದಾಗಿ ನಡೆಯುತ್ತಿತ್ತು. ಆಂದೋಳನದ ಪ್ರಾರಂಭಿಕ ದಿಶೆ-ದೆಶೆ ಇದ್ದುದು ಹೀಗೆ. ಅದು ತನ್ನ ಮೂಲಗುರಿಯಿಂದ ವಿಚಲಿತವಾಗದಂತೆ ನೋಡಿಕೊಳ್ಳುವ ಪ್ರಹರಿ ಜೆ. ಪಿ. ಯವರೇ.

ಚಳವಳಿಯ ಕಾವು ಕ್ರಮೇಣ ಅನ್ಯರಾಜ್ಯಗಳಿಗೂ ಪ್ರಸರಿಸುತ್ತಾ ಹೋಯಿತು. ಅಲ್ಲೆಲ್ಲ ವಿಚಾರವಂತರ, ಸಾಮಾಜಿಕ ಮತ್ತು ರಾಜಕೀಯ ಪಕ್ಷಗಳ ಕೆಲಸಗಾರರ ಕುತೂಹಲ ಕೆರಳಿತು. ಬಿಹಾರ ಆಂದೋಳನದ ನಾಲ್ಕು ರಾಷ್ಟ್ರೀಯ ಬೇಡಿಕೆಗಳೇ ಆಕರ್ಷಣೆ, ಜಿಜ್ಞಾಸೆ ಮತ್ತು ಸುಪ್ತವಾಗಿದ್ದ ಅಭಿಕ್ರಮದ ಎಚ್ಚೆತ್ತುಕೊಳ್ಳುವಿಕೆಗೆ ಕೇಂದ್ರಬಿಂದುಗಳಾಗಿದ್ದುವು ಎಂದು ಬೇರೆ ಹೇಳಬೇಕಾಗಿಲ್ಲ. ಆಂದೋಳನವನ್ನು ದೂರದಿಂದ ವೀಕ್ಷಿಸುವುದಕ್ಕಷ್ಟೇ ಸೀಮಿತವಾಗದೇ ಅವರ ಕುತೂಹಲ ಸಕ್ರಿಯ ಪಾತ್ರನಿರ್ವಹಣೆಗೂ ಮುಂದಾಯಿತು. ಅನ್ಯರಾಜ್ಯಗಳಲ್ಲಿ ಜೆ. ಪಿ. ಚಳವಳಿಯ ಸಮರ್ಥನೆ, ವಿದ್ಯಾರ್ಥಿ ಯುವಜನರ ಬೇಡಿಕೆಗಳನ್ನು ಕುರಿತು ತಮ್ಮ ತಮ್ಮ ಸಭೆಗಳಲ್ಲಿ ಚರ್ಚೆ, ಅಭಿಪ್ರಾಯ ವಿನಿಮಯ ಹಾಗೂ ಬೆಂಬಲ ಸೂಚಿಸುವಿಕೆಯಲ್ಲದೆ ಕೆಲವು ಪ್ರತಿನಿಧಿಗಳನ್ನು ಕಳಿಸಿ ಅಲ್ಲಿಯ ಆಂದೋಳನದ ವೀಕ್ಷಣೆ, ಅಭ್ಯಾಸ ಈ ಮೂರು ದಿಶೆಗಳಲ್ಲಿ ಕಾರ್ಯಾರಂಭವಾದವು.

ಜಯಪ್ರಕಾಶರ ದೈನಿಕ ಭಾಷಣ, ಹೇಳಿಕೆಗಳು, ತತ್ಕಾಲದ ಘಟನೆಗಳ ಮೇಲೆ ತಮ್ಮ ಅಭಿಮತ ಪ್ರಕಟಣೆಯ ಮೂಲಕ ದೇಶದಲ್ಲೆಲ್ಲ ಸ್ಫೂರ್ತಿಯ ಸಂಚಾರವಾಗುತ್ತಿತ್ತು. ಅವರನ್ನು ಅರಿಯುವ ಹಾಗೂ ಅವರಿಂದ ಸ್ಪಷ್ಟೀಕರಣ, ವಿಶದೀಕರಣ, ತಿದ್ದುಪಡಿ ಮುಂತಾದವು ದೊರೆಯುವುದು ಸುಲಭಸಾಧ್ಯವಾಗಿದ್ದುದರಿಂದ ಮತ್ತು ವೃತ್ತಪತ್ರಿಕೆಗಳ ಮೂಲಕ ವ್ಯಾಪಕ ಪ್ರಚಾರ-ಪ್ರಸಾರವಾಗುತ್ತಿದ್ದುದರಿಂದ ವಿಚಾರ ಹರಡಲು ತಡವಾಗುತ್ತಿರಲಿಲ್ಲ. ಇವೆಲ್ಲ ಅವಕಾಶ ಆಸ್ಪದಗಳ ಪರಿಣಾಮ ಜನಜಾಗೃತಿ-ಜನತಾಶಿಕ್ಷಣ, ಯಾವುದೇ ಆಂದೋಳನ ಸಾಧಿಸಬೇಕಾದುದು, ಕಟ್ಟಬೇಕಾದುದು, ಸಂಘಟಿಸಬೇಕಾದುದು ಎಚ್ಚೆತ್ತ ಜನಸಮೂಹ, ಜಾಗೃತ-ಅರಿತ ಮತ್ತು ಅದಕ್ಕೆ ತಕ್ಕಂತೆ ಕ್ರಿಯಾಶೀಲ-ಗತಿಶೀಲ ಆಗಬಲ್ಲ ಜನಸಮುದಾಯವನ್ನೇ ತಾನೇ? ಜಯಪ್ರಕಾಶರಿಂದ ಮೊದಲು ಇದೇ ಕಾರ್ಯದ ದಿಶೆ ಹಿಡಿದು ಮುನ್ನಡೆಯುವ ಪ್ರಯತ್ನವಾಯಿತು. ಸರ್ವೋದಯ ಪತ್ರ-ಪತ್ರಿಕೆಗಳು, ಸಮಾಜವಾದಿ ಕಾರ್ಯಕರ್ತರ

ಸಮೂಹ ತಮ್ಮ ಪ್ರಚಾರ ಸಾಧನಗಳ ಮೂಲಕ ಜೆ. ಪಿ. ವಿಚಾರವನ್ನು ಚಿತ್ರಿಸುವ ಕಾರ್ಯ ಕೈಗೊಂಡವು. ಕರ್ನಾಟಕದಲ್ಲಿ ಚಳವಳಿಯ ಪ್ರಾರಂಭಿಕ ಕಾರ್ಯ ಇದೇ. ಈ ಎರಡೂ ಸಮುದಾಯಗಳು ಜೆ. ಪಿ. ಅವರ ವಿಚಾರದಿಂದ ಮೊದಲು ಪ್ರಭಾವಿತವಾದವು. ಅದರಂತೆ ಕ್ರಿಯಾಶೀಲವೂ ಗತಿಶೀಲವೂ ಆದವು.

### ಕರ್ನಾಟಕದಲ್ಲಿ ಮೊಟ್ಟ ಮೊದಲ ವಿರೋಧ ಪ್ರದರ್ಶನ

ಸಮಾಜವಾದಿ ಯುವಜನ ಸಭೆ ಜೆ. ಪಿ. ಯವರಿಗೆ ಬೆಂಬಲ ಸೂಚಿಸಲು ದಿನಾಂಕ ೨೫ ನೇ ಏಪ್ರಿಲ್ ೧೯೭೪ಕ್ಕೆ ಸೆಂಟ್ರಲ್ ಕಾಲೇಜಿನಿಂದ ಮೌನ ಮೆರವಣಿಗೆಯಲ್ಲಿ ಹೊರಟು ಮುಖ್ಯಮಂತ್ರಿಗಳಿಗೆ ಭ್ರಷ್ಟಾಚಾರದ ವಿರುದ್ಧ ಮನವಿಯನ್ನರ್ಪಿಸಿದರು. ಕವಿಗಳು, ಸಾಹಿತಿಗಳು. ಪ್ರಾಧ್ಯಾಪಕರು, ಸರ್ವೋದಯ ಕಾರ್ಯಕರ್ತರು, ಅನ್ಯ ಹಿತೈಷಿಗಳು ಪ್ರದರ್ಶನದಲ್ಲಿ ಪಾಲ್ಗೊಂಡಿದ್ದರು.

ಬೆಳಗಾವಿ ಜಿಲ್ಲೆಯ ದೊಡ್ಡವಾಡದಲ್ಲಿ ಕರ್ನಾಟಕ ಮತ್ತು ಮಹಾರಾಷ್ಟ್ರದ ಸರ್ವೋದಯ ಕಾರ್ಯಕರ್ತರುಗಳಿಗಾಗಿ ೩೦ ದಿನಗಳ ಶಿಬಿರ ನಡೆಯಿತು. ಪ್ರಸಿದ್ಧ ಚಿಂತನಶೀಲರೂ ಜೆ. ಪಿ. ಚಳವಳಿಯ ಬೆಂಬಲಿಗರೂ ಆದ ದಾದಾ ಧರ್ಮಾಧಿಕಾರಿ ಶಿಬಿರದ ಮಾರ್ಗದರ್ಶನ ಮಾಡಿದರು. ಶಿಬಿರದಲ್ಲಿ ಜೆ. ಪಿ.ಯವರ ಪ್ರಜಾತಂತ್ರಕ್ಕಾಗಿ ಯುವಕರು, ಅವರು ಬಯಸುವುದೇನು ಇತ್ಯಾದಿ ವಿಷಯವಾಗಿ ವ್ಯಾಪಕ ಚರ್ಚೆ ನಡೆಸಿ ಕಾರ್ಯಕರ್ತರಿಗೆ ಸ್ಫೂರ್ತಿ ನೀಡಿದರು. ಶಿಬಿರ ಮೇ ೧ ರಿಂದ ಇಡೀ ತಿಂಗಳು ನಡೆಯಿತು.

### ಸಂಪೂರ್ಣ ಕ್ರಾಂತಿಯ ಉದ್ಘೋಷ

ಜಯಪ್ರಕಾಶಕರು ಪಟ್ನಾದ ಜನಸಾಗರದ ಸಮ್ಮುಖ ಜೂನ್ ೫ ನೇ ತಾರೀಖು ಸಂಪೂರ್ಣ ಕ್ರಾಂತಿಯ ತಮ್ಮ ದರ್ಶನವನ್ನು ಮಂಡಿಸಿ ಮೊದಲ ಬಾರಿಗೆ ಆ ಶಬ್ದೋಚ್ಚಾರಣೆ ಮಾಡಿದರು. ಅದು ಮತ್ತೊಮ್ಮೆ ದೇಶಾದ್ಯಂತ ವಿದ್ಯುತ್ ಅಲೆ, ಸ್ಫೂರ್ತಿಯ ಸಂಚಾರ ವನ್ನೆಬ್ಬಿಸಿತ್ತು. ದೇಶದ ಸಮಸ್ತ ಸಮಸ್ಯೆಗಳಿಗೆ ಅದೇ ಉತ್ತರ, ಜನಜೀವನದಲ್ಲಿ ವ್ಯಾಪಿಸಿರುವ ಎಲ್ಲ ತೊಡಕು-ತೊಡರುಗಳಿಗೆ, ಬಿಕ್ಕಟ್ಟು-ಬಿಗುವುಗಳಿಗೆ ಅದೇ ಸಿದ್ಧೌಷಧವೆನ್ನುವಂತೆ ಸಾರ್ವಜನಿಕ ಕಾರ್ಯಕರ್ತರು ಅದನ್ನು ಸ್ವೀಕರಿಸಿದರು. ಮುಂದೆ ಎಲ್ಲೆಡೆ ಅದೇ ದೇಶದ ಚರ್ಚಾವಿಷಯವಾಯಿತು. ಕರ್ನಾಟಕದ ಬೆಂಗಳೂರು, ಮೈಸೂರು, ಶಿವಮೊಗ್ಗ, ಹಾಸನ, ಸೊರಬ, ಗುಲ್ಬರ್ಗ ಮತ್ತಿತರ ಹತ್ತಾರು ನಗರ ಮತ್ತು ಊರುಗಳಲ್ಲಿ ಸಂಪೂರ್ಣ ಕ್ರಾಂತಿಯನ್ನು ಕುರಿತು ವಿಚಾರ ಗೋಷ್ಠಿ ಮತ್ತು ಸಾರ್ವಜನಿಕ ಸಭೆಗಳು, ಕಾರ್ಯಕರ್ತರ ಸಭೆಗಳು ನಡೆದವು. ಸಂಪೂರ್ಣ ಕ್ರಾಂತಿಯ ವ್ಯಾಖ್ಯಾನ, ಅರ್ಥ, ವಿವಿಧ ವೈಚಾರಿಕ ಮುಖಗಳು, ಅದರ ಅನ್ವಯ- ಅನುಷ್ಠಾನ ಕುರಿತು ತಿಳಿಸಿ ಹೇಳುವ ಪ್ರಯತ್ನವಾಗಿ, ಶಂಕೆ ಅಸಮಾಧಾನ ಸಹ ಆದವು. ಆಗಿನ ಅನೇಕ ವಿಚಾರವಂತರ ಅಭಿಪ್ರಾಯಗಳು ಜನತೆಯನ್ನು ವಿಚಾರಕ್ಕೆ ಹಚ್ಚುವಂಥವಾಗಿದ್ದವು. ಇದರಿಂದ ರಾಜ್ಯ ಸಾರ್ವಜನಿಕ ಕಾರ್ಯಕರ್ತರಲ್ಲಿ ವೈಚಾರಿಕ ಮಂಥನ ನಡೆಯುವಂತೆ ಮಾಡುವುದರಲ್ಲಿ ಸಾಕಷ್ಟು ಸಹಾಯವಾಯಿತು.

ಬೆಳಗಾವಿಯಲ್ಲಿ ಆಗಸ್ಟ ೭ನೇ ತಾರೀಖು ನಡೆದ ಕರ್ನಾಟಕ ಸರ್ವೋದಯ ಮಂಡಲದ ಸಭೆಯಲ್ಲಿ ಅಖಿಲಭಾರತ ಶಾಂತಿ ಸೇನಾ ಮಂಡಲದ ಸಂಚಾಲಕರೂ ಬಿಹಾರ ಆಂದೋಳನದಲ್ಲಿ ನೇರ ಸಕ್ರಿಯ ಪಾತ್ರ ವಹಿಸುತ್ತಿರುವವರೂ ಆದ ನಾರಾಯಣ ದೇಸಾಯಿಯವರು ಚಳವಳಿಯ ಹೃದಯಸ್ಪರ್ಶಿ ಘಟನಾವಿವರಗಳನ್ನು ವಿವರಿಸಿದರು. ದೇಸಾಯರ ಈ ಭಾಷಣ ಕಾರ್ಯಕರ್ತರ ಮೇಲೆ ತುಂಬಾ ಪರಿಣಾಮ ಮಾಡಿತು. ಅನಂತರ ೯ ನೇ ತಾರೀಖು ಹುಬ್ಬಳ್ಳಿಯ ಹಿಂದಿ ಪ್ರಚಾರ ಸಭಾಭವನದಲ್ಲಿ ನಡೆದ ಸರ್ವೋದಯ ಮಿತ್ರ ಮಂಡಲದ ಸಭೆಯಲ್ಲಿ ಗ್ರಾಮಸ್ವರಾಜ್ಯ ಮತ್ತು ಬಿಹಾರ ಆಂದೋಳನ ಕುರಿತು ಮಾತನಾಡಿ ಪ್ರತಿ ಮೊಹಲ್ಲಾ ಸಮಿತಿ ರಚಿಸುವಂತೆ ಸಲಹೆಯನ್ನಿತ್ತರು.

### ಕರ್ನಾಟಕದಲ್ಲಿ ತ್ರಿವಿಧಕಾರ್ಯ

ಕರ್ನಾಟಕದಲ್ಲಿ ೧೯೭೪ರ ವರ್ಷ ಪೂರಾ ಇವೇ ಮೂರು ವಿಧದ ಕಾರ್ಯಕ್ಕಾಗಿ ವಿನಿಯೋಗವಾಯಿತೆಂದು ಮೊದಲೇ ಹೇಳಿಯಾಗಿದೆ. ಬೆಂಗಳೂರು, ಮೈಸೂರು, ಶಿವಮೊಗ್ಗ, ಗುಲ್ಬರ್ಗ, ಹಾಸನ ಮತ್ತು ಅನ್ಯ ಪಟ್ಟಣಗಳಲ್ಲಿ ಅನೇಕ ಕಡೆ ಚರ್ಚೆ, ಅಭಿಪ್ರಾಯ ವಿನಿಮಯ, ವಿಚಾರಗೋಷ್ಠಿ ನಡೆಯುತ್ತಿದ್ದುದಲ್ಲದೆ ಆಂದೋಳನದ ಮುಖ್ಯ ಬೇಡಿಕೆಗಳಿಗೆ ತಮ್ಮ ಬೆಂಬಲ ಸೂಚಿಸಿ ನಿರ್ಣಯಗಳ ಅಂಗೀಕಾರವಾಗುತ್ತಿದ್ದವು. ಇವರಿಗೆಲ್ಲ ಬಿಹಾರ ಚಳವಳಿ ದೇಶದಲ್ಲಿ ಕವಿದಿದ್ದ ಅಂಧಕಾರ, ಆವರಿಸಿದ್ದ ನೈರಾಶ್ಯ ಮತ್ತು ದಿಶಾ ಹೀನತೆಯನ್ನು ಬಡಿದೋಡಿಸಿ ಹೊಸ ಆಶಾಂಕುರವನ್ನು ಒಡೆಯಿಸುವ ಸಂಕೇತವಾಗಿ ತೋರಿತು. ಮನೆಮಾಡಿಕೊಂಡಿದ್ದ ನಿಷ್ಕ್ರಿಯತೆಯನ್ನೂ ಗಾಢ ಆಲಸ್ಯವನ್ನೂ ಕೊಡವಿಹಾಕಿ ತಮ್ಮಲ್ಲಡಗಿದ್ದ ಚೈತನ್ಯ ಮತ್ತು ಅಭಿಕ್ರಮಶಕ್ತಿಯನ್ನು ಬಡಿದೆಬ್ಬಿಸುವ ವಿದ್ಯುತ್

ಕಿಡಿ-ಅಲೆಯಾಗಿ ಕಂಡಿತು. ಕರ್ನಾಟಕದ ಹಲವರು ಬಿಹಾರ ರಾಜ್ಯಕ್ಕೆ ತೆರಳಿ ಆಂದೋಳನವನ್ನು ಪ್ರತ್ಯಕ್ಷವಾಗಿ ವೀಕ್ಷಿಸಿ ಬಂದರು. ಅವರಲ್ಲಿ ಪ್ರಮುಖರು ದಿ. ಅನಂತರಂಗಾಚಾರ್, ಕೆ.ಎಸ್. ಸೀತಾರಾಮ ಅಯ್ಯಂಗಾರ್ ಅವರು. ಅದೇ ರೀತಿ ಎಂ. ಚಂದ್ರಶೇಖರ್, ಪಿ. ವೆಂಕೋಬರಾವ್ ಮತ್ತು ದಿ. ಗರುಡಶರ್ಮ ಇವರು ಡೆಲ್ಲಿಯಲ್ಲಿ ನಡೆದ ಅಕ್ಟೋಬರ್ ೬ನೇ ದಿನದ ರ್‍ಯಾಲಿಯಲ್ಲಿ ಪಾಲ್ಗೊಂಡು ಅನಂತರ ಪಟ್ನಾಕ್ಕೆ ಹೋಗಿ, ಜಯಪ್ರಕಾಶರನ್ನು ಕಂಡು ಕರ್ನಾಟಕಕ್ಕೆ ಭೇಟಿ ಕೊಡುವಂತೆ ಆಹ್ವಾನಿಸಿ ಬಂದರು.

ಕೇಂದ್ರ ಕಾರ್ಯಾಲಯದ ಕಾರ್ಯದರ್ಶಿಯಾಗಿ ಸತ್ಯವ್ರತರು ಬಿಹಾರ ಚಳವಳಿಯ ಪ್ರಾರಂಭದಿಂದಲೂ ಅದರ ನಿಕಟ ಸಂಪರ್ಕದಲ್ಲಿದ್ದುದಲ್ಲದೆ ಜೆ. ಪಿ. ಯವರೊಡನೆಯೂ ನೇರ ಸಂಪರ್ಕ ಹೊಂದಿದ್ದು ಬಿಹಾರ ಚಳವಳಿಗೆ ಸಂಬಂಧಿಸಿದ ಪ್ರಾಯಃ ಎಲ್ಲ ವಿಚಾರಗೋಷ್ಠಿಗಳು, ನೀತಿ ನಿರ್ಧಾರಕ ಸಭೆಗಳು, ಮತ್ತು ಅನ್ಯ ವಿಚಾರವಿನಿಮಯದ ಪ್ರಸಂಗಗಳಲ್ಲಿ ಹಾಜರಿದ್ದರು. ವಿನೋಬಾಜಿಯೊಡನೆ ನಡೆದ ಎಲ್ಲ ಮಾತುಕತೆಗಳಲ್ಲೂ ಪಾಲ್ಗೊಂಡಿದ್ದರು ಮುಂದೆ ಅಖಿಲ ಭಾರತ ಸರ್ವ ಸೇವಾಸಂಘದಲ್ಲಿ ಚಳವಳಿಯಲ್ಲಿ ಅಧಿಕೃತವಾಗಿ ಭಾಗ ತೆಗೆದುಕೊಳ್ಳುವ ಪ್ರಶ್ನೆಯ ಮೇಲೆ ಮತವಿಭಜನೆಯಾಗಿ ಅದು ಮೌನತಳೆದಾಗ, ಕೇಂದ್ರೀಯ ಪದಾಧಿಕಾರಿಗಳು ಮತ್ತು ಕಾರ್ಯಕಾರಿಣಿಯ ಸದಸ್ಯರು ತ್ಯಾಗಪತ್ರವಿತ್ತು ಹೊರಬಂದಾಗ ಅವರಲ್ಲೊಬ್ಬನಾಗಿ ತಾನೂ ಹೊರ ಬಂದರು. ಕರ್ನಾಟಕಕ್ಕೆ ಹಿಂತಿರುಗಿ ರಾಜ್ಯದಲ್ಲಿ ಚಳವಳಿ ಹೂಡಲು ಪ್ರಯತ್ನಿಸುತ್ತಿದ್ದ ಅನ್ಯ ಪ್ರಮುಖರೊಡಗೂಡಿದರು.

ಇತ್ತ ಮೈಸೂರಿನಲ್ಲಿ ಆಂದೋಳನದ ಕಿಡಿ ಹೊತ್ತಿದ್ದು ಅಲ್ಲಿಯ ವಿಚಾರವಂತರಲ್ಲಿ ಅದು ತುಮುಲ ಎಬ್ಬಿಸಿತ್ತು. ೨-೧೦-೯೭೪ರ ಗಾಂಧೀ ಜಯಂತಿಯ ದಿನ ವಿದ್ಯಾರ್ಥಿಗಳು, ಯುವಜನರು, ಪ್ರಾಧ್ಯಾಪಕರು, ವಕೀಲರು, ಸರ್ವೋದಯ ಕಾರ್ಯಕರ್ತರನ್ನೊಳಗೊಂಡ ೫೦೦ಕ್ಕೂ ಹೆಚ್ಚಿನ ಜನ ಜೆ.ಪಿ. ಲಾಂಛನ ಧರಿಸಿ ಮೌನ ಪ್ರದರ್ಶನ ನಡೆಸುತ್ತಾ ಸ್ವಾತಂತ್ರ್ಯ ಸಂಗ್ರಾಮದ ಐತಿಹಾಸಿಕ ಸ್ಥಳವೆಂದು ಪ್ರಸಿದ್ಧವಾಗಿದ್ದ ಸುಬ್ಬರಾಯನಕೆರೆ ಮೈದಾನದಿಂದ ನಗರದ ಪ್ರಮುಖ ರಸ್ತೆಗಳ ಮೂಲಕ ಪುರಭವನ ಸೇರಿದರು. ಅಲ್ಲಿ ಸಾರ್ವಜನಿಕ ಸಭೆ ಸೇರಿತು. ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಭಕ್ತ ರಾಮೇಗೌಡ, ಶ್ರೀಮತಿ ನಾಯಕ್, ಸುರೇಂದ್ರ ಕೌಜಲಗಿಯವರಲ್ಲದೆ ಅನೇಕ ವಿದ್ಯಾರ್ಥಿ ಸಂಘಗಳ ಪ್ರತಿನಿಧಿಗಳು ಮಾತನಾಡಿ ಜೆ. ಪಿ. ಚಳವಳಿ ಗೆ ಬೆಂಬಲವಿತ್ತರು.

ಕರ್ನಾಟಕ ಸರ್ವೋದಯ ಸಾಹಿತ್ಯ ಸಮಿತಿ ಜೆ. ಪಿ. ಸಾಹಿತ್ಯ ರಚನೆ ಮತ್ತು ಪ್ರಕಾಶನದಲ್ಲೂ, ಭೂದಾನ - ಸರ್ವೋದಯ ಸಂದೇಶ ಪಾಕ್ಷಿಕ ಪತ್ರಿಕೆ ವೆಂಕೋಬರಾಯರ ಸಂಪಾದಕತ್ವದಲ್ಲಿ ಚಳವಳಿ ಮುಖ್ಯ ವಕ್ತಾರನಾಗಿಯೂ ಕಾರ್ಯ ನಿರ್ವಹಿಸತೊಡಗಿದವು.

ಅಕ್ಟೋಬರ್ ೬ ರಂದು ಡೆಲ್ಲಿಯಲ್ಲಿ ನಡೆದ ಬೃಹತ್ ಜನಪ್ರದರ್ಶನದಲ್ಲಿ ಭಾಗವಹಿಸಲು ಬೇರೆ ಬೇರೆ ರಾಜ್ಯಗಳಿಂದ ಕಲೆತಿದ್ದ ನೂರಾರು ಪ್ರತಿನಿಧಿಗಳು ಅಂದೇ ಸಾಯಂಕಾಲ ಸಭೆ ಸೇರಿ ವಿಚಾರ ವಿನಿಮಯ ನಡೆಸಿ ಅನ್ಯರಾಜ್ಯಗಳಲ್ಲಿ ನಡೆಯುತ್ತಿರುವ ಚಳವಳಿಯ ಚಟುವಟಿಕೆಗಳ ಪರಿಚಯ ತೆಗೆದುಕೊಂಡದ್ದಲ್ಲದೆ ಅದನ್ನು ತೀವ್ರಗೊಳಿಸುವ ಅಗತ್ಯತೆಯನ್ನು ಒತ್ತಿಹೇಳಿದರು. ಈ ಸಭೆ ಡೆಲ್ಲಿಯ ಗಾಂಧಿ ಕ್ರಾಂತಿ ಪ್ರತಿಷ್ಠಾನ ಮುಂದೆ ಬಂದು ಸಂಘಟಿಸಿದ ಕಾರಣ ಸಾಧ್ಯವಾಯಿತು. ಗೋಷ್ಠಿಯಲ್ಲಿ ಮಾತನಾಡಿದ ಕರ್ನಾಟಕದ ಪ್ರತಿನಿಧಿ ಕೃಷ್ಣ ಸ್ವಾಮಿ, ಗರುಡ ಶರ್ಮ ಇವರು ಗ್ರಾಮದಾನ ಚಳವಳಿ, ರಚನಾತ್ಮಕ ಕಾರ್ಯಕ್ರಮ ಮತ್ತು ಸತ್ಯಾಗ್ರಹ ಒಟ್ಟಿಗೆ ನಡೆಯಬೇಕು. ಇಲ್ಲದಿದ್ದರೆ ಆಂದೋಳನಕ್ಕೆ ಶಕ್ತಿ ಬರಲಾರದು. ಬಿಹಾರದಲ್ಲಿ ಚಳವಳಿ ಇದೇ ಮಾರ್ಗ ಹಿಡಿದು ನಡೆಯುತ್ತಿದೆ. ಅದರಂತೆ ಉಳಿದ ರಾಜ್ಯಗಳಲ್ಲೂ ನಡೆಯುವಂತಾಗಬೇಕು ಎಂದು ಅಭಿಪ್ರಾಯವನ್ನು ಸಭೆಗೆ ತಿಳಿಸಿದರು. ಅವರು ತಮ್ಮ ರಾಜ್ಯದ ಕಾರ್ಯ ವರದಿಯನ್ನು ಕೊಟ್ಟರು.

## ಮುತ್ಸದ್ದಿಗಳ ದೃಷ್ಟಿಯಲ್ಲಿ ಬಿಹಾರ ಆಂದೋಳನ

ಜೆ.ಪಿ. ಚಳವಳಿ ದೇಶದ ಜನಮನ ಮತ್ತು ವಿಚಾರವಂತರ ವಿಚಾರವನ್ನೂ ಕಲಕಿ ಹಾಕಿದಂತೆ ಹಿರಿಯ ಮುತ್ಸದ್ದಿಗಳನ್ನು ಚಿಂತನಕ್ಕೆ ಹಚ್ಚಿತ್ತು. ಮಾಜಿ ವಿದೇಶಮಂತ್ರಿ ಎಂ.ಸಿ. ಛಗಲಾ, ಮಾರ್ಕ್ಸವಾದಿ ಧುರೀಣ ಬಿ.ಟಿ. ರಣದಿವೆ, ಇಬ್ರಾಹಿಂ, ಸುಲೆಮಾನ್ ಸೇಠ್ ಮತ್ತು ನಿಜಲಿಂಗಪ್ಪನವರು ತಮ್ಮ ಮೌನ ಮುರಿದು ಮಾತನಾಡತೊಡಗಿದರು. ನಿಜಲಿಂಗಪ್ಪನವರು ''ಜಯಪ್ರಕಾಶ ನಾರಾಯಣರ ಚಳವಳಿಗೆ ಪ್ರತಿಯೊಬ್ಬ ಪ್ರಜೆಯೂ ಬೆಂಬಲ ನೀಡಬೇಕು. ಭ್ರಷ್ಟಾಚಾರದಲ್ಲಿ ತೊಡಗಿರುವ ಸರ್ಕಾರ ಅಧಿಕಾರದಲ್ಲಿ ಮುಂದುವರಿಯಲು ಪ್ರಯತ್ನಿಸಿದಾಗ ಅಂಥ ಸರಕಾರವನ್ನು ಹೊರದೂಡಬೇಕು. ಕೇಂದ್ರ ಸಂಪುಟದ ಪುನರ್‌ರಚನೆಯಾದ ಮಾತ್ರಕ್ಕೆ ಧೋರಣೆಗಳಲ್ಲಿ ಬದಲಾವಣೆ, ಉತ್ಪಾದನೆಯಲ್ಲಿ ಹೆಚ್ಚಳ ಅಥವಾ ಭ್ರಷ್ಟಾಚಾರದ ಇಳಿಮುಖವಾಗುವುದು ಅಸಾಧ್ಯ'' ಎಂದರು. ಅನ್ಯ ಮುತ್ಸದ್ದಿಗಳೂ ತಮ್ಮ ಬೆಂಬಲ ಸೂಚಿಸಿದರು.

ಅಕ್ಟೋಬರ್ ೧೯೭೪ ಬಹುಮುಖೀ ಘಟನಾವಳಿಯಿಂದ ತುಂಬಿಹೋಗಿದ್ದ ತಿಂಗಳಾಯಿತು. ದೇಶ-ಪ್ರದೇಶಗಳಲ್ಲಿ ನಡೆದ ಘಟನಾವಳಿಯಿಂದ ಒಂದೆಡೆ ಆಂದೋಳನ ತೀವ್ರಗೊಳಿಸುವ ಹೆಬ್ಬುಬ್ಬು ಹುಮ್ಮಸ್ಸು, ಇನ್ನೊಂದೆಡೆ ರೋಷ, ತೀಕ್ಷ್ಣತೆ ಮತ್ತು ಕಾವು, ಮಗದೊಂದೆಡೆ ಭವಿಷ್ಯದ ಬಗ್ಗೆ ಅನಿಶ್ಚಯತೆ ಇವೆಲ್ಲ ಭಾವನೆಗಳು ಏಕಕಾಲದಲ್ಲಿ ಸಕ್ರಿಯವಾಗಿದ್ದವು. ಇಂಥ ಹಿನ್ನೆಲೆಯಲ್ಲಿ ಬೆಂಗಳೂರಿನ ಗಾಂಧಿಭವನದಲ್ಲಿ ಅಕ್ಟೋಬರ್ ೨೫ರಂದು ನಡೆದ ೭೩ನೇ ಜೆ. ಪಿ. ದಿನೋತ್ಸವಕ್ಕೆ ಎಲ್ಲಿಲ್ಲದ ಮಹತ್ವ ಬಂದಿತ್ತು. ಜೆ. ಪಿ. ಯವರ ಬಾಲ್ಯಮಿತ್ರ, ಅವರ ಹಿತೈಷಿ - ಪ್ರಶಂಸಕ, ಹಾಗೂ ಅವರ ಅಮೆರಿಕಾ ವ್ಯಾಸಂಗಕ್ಕೆ ಸಹಾಯಕರೂ ನಿಮಿತ್ತರೂ ಆಗಿದ್ದ ಡಾ. ಭೋಲಾ ಪಂತ್ ಅವರ ಅಧ್ಯಕ್ಷತೆಯಲ್ಲಿ ಸಮಾರಂಭ ನಡೆಯಿತು. ಡಾ। ಬಿ. ಆರ್. ಶೇಷಾಚಾರ್, ಸುಪ್ರೀಂ ಕೋರ್ಟಿನ ನಿವೃತ್ತ ನ್ಯಾಯಮೂರ್ತಿ ಕೆ. ಎಸ್. ಹೆಗಡೆ, ಖಾದ್ರಿ ಶಾಮಣ್ಣ, ವೆಂಕೋಬರಾವ್ 'ಜೆ. ಪಿ. ವ್ಯಕ್ತಿ ವಿಚಾರ' ಕುರಿತು ಮಾತನಾಡಿ ಅವರ ಗುಣಗಾನಮಾಡಿದರು. ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್ ಮತ್ತಿತರ ಗಣ್ಯವ್ಯಕ್ತಿಗಳು ಆಗಮಿಸಿದ್ದರು. ಗಾಂಧೀ ಕ್ರಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ದಿ. ನಾರಾಯಣಸ್ವಾಮಿ ಈ ಸಮಾರಂಭ ಏರ್ಪಡಿಸಿದ್ದರು.

ನವೆಂಬರ್ ೧ ಜೆ. ಪಿ. ಆಂದೋಳನದ ಮತ್ತೊಂದು ಮೈಲಿಗಲ್ಲು. ಅಂದು ಬೆಳಗ್ಗೆ ಜೆ. ಪಿ. ಇಂದಿರಾಜಿ ಮಾತುಕತೆ ೯೦ ನಿಮಿಷಗಳ ಕಾಲ ನಡೆಯಿತು. ಯಾವುದೇ ಒಪ್ಪಂದ ಅಥವಾ ನಿರ್ಣಯಕ್ಕೆ ಬರದೇ ಮಾತುಕತೆ ಮುರಿದುಬಿದ್ದವು. ಹೊರಬಂದ ಜೆ.ಪಿ. ಚಳವಳಿಯನ್ನು ಮತ್ತಷ್ಟು ತೀವ್ರಗೊಳಿಸಲಾಗುವುದು ಎಂದು ಪತ್ರಕರ್ತರೊಡನೆ ಮಾತನಾಡುತ್ತಾ ಹೇಳಿದರು. ಸಂಸ್ಥಾ ಕಾಂಗ್ರೆಸ್ಸಿನ ರಾಮನಂದನ ಮಿಶ್ರ ಮತ್ತು ವಿದೇಶಾಂಗ ಮಂತ್ರಿ ದಿನೇಶ್ ಸಿಂಗ್ ಅವರ ಸೌಜನ್ಯ ಮತ್ತು ಮಧ್ಯಸ್ಥಿಕೆಯಿಂದ ಈ ಮಾತುಕತೆ ಗೊತ್ತಾಗಿತ್ತು.

ಕರ್ನಾಟಕ ರಾಜ್ಯ ಸರ್ವೋದಯ ಮಂಡಲದ ಸಭೆ ನವೆಂಬರ್ ೧೦ನೇ ದಿನಾಂಕ ಸೇರಿ ಚಳವಳಿಗೆ ಆರ್ಥಿಕ ಸಹಾಯ ನೀಡಲು ರಾಜ್ಯದಲ್ಲಿ ಒಂದು ಲಕ್ಷ ರೂ. ನಿಧಿ ಸಂಗ್ರಹಿಸುವ ಸಂಕಲ್ಪ ಮಾಡಿತು. ಸಾರ್ವಜನಿಕರು, ಪಕ್ಷಗಳು, ವಿವಿಧ ಸಂಸ್ಥೆಗಳು ಉದಾರವಾಗಿ ಧನಸಹಾಯ-ಅನ್ಯ ಸಹಕಾರ ನೀಡಿ ಈ ಮಹೋನ್ನತ ಕಾರ್ಯವನ್ನು ಪೂರ್ಣಗೊಳಿಸಲು ಮುಂದೆ ಬರಬೇಕೆಂದು ಪ್ರಾರ್ಥಿಸಿಕೊಂಡಿತು.

ಆಂದೋಳನ ಈ ವೇಳೆಗೆ ತನ್ನ ಹುಟ್ಟು ಪ್ರದೇಶವಾದ ಬಿಹಾರದಲ್ಲಿ ತೀರ ಉಗ್ರ ಸ್ವರೂಪ ತಳೆದಿತ್ತು. ಅಕ್ಟೋಬರ್ ೪ ನೇ ತಾರೀಖು ನಡೆದ ಭಾರಿ ಪ್ರದರ್ಶನದ ಮೇಲೆ ಲಾಠಿ ಪ್ರಹಾರ ನಡೆದ ಸಂದರ್ಭದಲ್ಲಿ ಜೆ. ಪಿ. ಯವರಿಗೂ ಅದರ ಸವಿ ಸಿಕ್ಕಿತ್ತು. ''ತಮಗೆ ಪೆಟ್ಟು ಬಿದ್ದುದಾಗಿ ಜಯಪ್ರಕಾಶರು ತಿಳಿಸಿರುವುದರಿಂದ ಆ ಪ್ರಕರಣಕ್ಕಾಗಿ ಕೇಂದ್ರ ಸರ್ಕಾರ ವಿಷಾದಿಸುವುದಾಗಿ ಕೇಂದ್ರ ಗೃಹ ಸಚಿವ ಬ್ರಹ್ಮಾನಂದ ರೆಡ್ಡಿಯವರು ಹೇಳಿಕೆ ಇತ್ತು ಲೋಕಸಭೆಯಲ್ಲಿ ತಮ್ಮ ತಪ್ಪೊಪ್ಪಿಕೊಂಡಿದ್ದರು'' ಅವರ ಮೇಲೆ ಲಾಠಿ ಪೆಟ್ಟು ಬಿದ್ದಿರುವುದು ಸುಳ್ಳೆಂದು ಆ ಮೊದಲು ಅವರು ಪ್ರತಿಪಾದಿಸಿದ್ದರು. ಅಖಿಲ ಭಾರತ ಶಾಂತಿ ಸೇನಾಮಂಡಲದ ಕಾರ್ಯದರ್ಶಿ ಗಾಂಧೀಜಿಯ ಪ್ರಿಯ ಆಪ್ತ ಸಚಿವ ಮಹಾದೇವ ದೇಸಾಯಿಯವರ ಏಕಮಾತ್ರ ಪುತ್ರರೂ ಆದ ನಾರಾಯಣ ದೇಸಾಯರನ್ನು ನವೆಂಬರ್ ೨೫ರಂದು ಬಿಹಾರ ಸರ್ಕಾರ ಆ ಪ್ರದೇಶದಿಂದ ಗಡೀಪಾರು ಮಾಡಿ ಅಹ್ಮದಾಬಾದಿಗೆ ಒಯ್ದು ಬಿಟ್ಟಿತು. ಸರ್ವೋದಯ ನಾಯಕರಾದ ಆಚಾರ್ಯ ರಾಮಮೂರ್ತಿ, ಠಾಕೂರ್‌ದಾಸ್ ಬಂಗರನ್ನು ಈ ಮುಂಚೆ ಗಡೀಪಾರು ಮಾಡಿತ್ತು.

ಈ ಮಧ್ಯೆ ನವೆಂಬರ್ ೨೩-೨೪ ರಂದು ಯುವಕ ಸಂಘಗಳ ಸಮಾವೇಶವೊಂದನ್ನು ನಡೆಸುವುದಲ್ಲದೆ, ಮುಂದಿನ ಎರಡು ದಿನಗಳಲ್ಲಿ ವಿರೋಧ ಪಕ್ಷದ ನಾಯಕರೊಡನೆ ಚುನಾವಣೆ ಪದ್ಧತಿಯಲ್ಲಿ ತರಬಹುದಾದ ಸುಧಾರಣೆಯನ್ನು ಕುರಿತು ಚರ್ಚಿಸುವ ಉದ್ದೇಶದಿಂದ ಏಳು ದಿನಗಳ ಭೇಟಿಗಾಗಿ ಜೆ. ಪಿ. ದೆಹಲಿಗೆ ತೆರಳಿದರು.

ಇದೇ ಅವಧಿಯಲ್ಲಿ ಮೈಸೂರಿನ ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಅನಂತರಂಗಾಚಾರ್ ಮತ್ತು ಕೆ. ಎಸ್. ಸೀತಾರಾಂ ಅವರಿಬ್ಬರು ಮೂರು ತಿಂಗಳಕಾಲ ದಕ್ಷಿಣ ಬಿಹಾರದ ಜಿಲ್ಲೆಗಳಲ್ಲಿ ಸಂಚರಿಸಿ ಅಲ್ಲೆಲ್ಲ ಸಂಘರ್ಷ ಸಮಿತಿಗಳೊಡನೆ ಕಾರ್ಯ ಮಾಡಿ ನವೆಂಬರ್ ೨೫ರಂದು ಮೈಸೂರಿಗೆ ಮರಳಿಬಂದರು. ಅವರು ಜೆ. ಪಿ. ಯವರನ್ನು ಕಂಡುಬಂದಿದ್ದರು. ಕರ್ನಾಟಕ ಸರ್ವೋದಯ ಮಂಡಲದ ಸಭೆ ಬೆಂಗೇರಿ, ಹುಬ್ಬಳ್ಳಿಯಲ್ಲಿ ೧೦-೧೧-೭೪ನೇ ದಿನ ಮತ್ತೊಮ್ಮೆ ಬಿಹಾರ ಆಂದೋಳನಕ್ಕೆ ತನ್ನ ಸಂಪೂರ್ಣ ಮತ್ತು ಸರ್ವಾನುಮತದ ಸಮರ್ಥನೆಯನ್ನೂ ಅದರಲ್ಲಿ ತಾನು ಪೂರ್ಣವಾಗಿ ತೊಡಗಿಕೊಳ್ಳುವ ಸಂಕಲ್ಪವನ್ನೂ ದೃಢೀಕರಿಸಿತು. ಸಾರ್ವಜನಿಕರಿಗೂ ಸಹಕರಿಸುವಂತೆ ಕರೆ ನೀಡಿತು. ಕರ್ನಾಟಕದ ಅನ್ಯ ಸಂಘಟನೆಗಳನೇಕವು ಆಂದೋಳನಕ್ಕೆ ಬೆಂಬಲ ನೀಡುವ ನಿರ್ಣಯ ಸ್ವೀಕರಿಸಿದ್ದರಿಂದ ರಾಜ್ಯದಲ್ಲೆಲ್ಲ ಒಂದು ಬಗೆಯ ಅನುಕೂಲ ವಾತಾವರಣ ಉಂಟಾಯಿತು ಮತ್ತು ಒಂದು ರೀತಿಯಿಂದ ಸಂಘರ್ಷದ ಕಾರ್ಯಕ್ರಮಗಳಲ್ಲಿ ಜೊತೆಗೂಡಿ ಕ್ರಮಿಸಲು ಎಲ್ಲರೂ ಮುಂದಾಗಲು ಈ ಸಹಮತಿಯ ವಾತಾವರಣ ನೆರವಾಯಿತು.

## ಜನತೆಯ ಬೆಂಬಲದ ಪರೀಕ್ಷೆ ಚುನಾವಣೆಯಲ್ಲಿ

ಬಿಹಾರ ಆಂದೋಳನದ ಇತಿಹಾಸದಲ್ಲಿ ನವೆಂಬರ್ ೧೮ ಮತ್ತೊಂದು ಚರಿತ್ರಾರ್ಹ ಮೈಲಿಗಲ್ಲು. ಇಂದಿರಾಜಿ ನವೆಂಬರ್ ಒಂದರ ಜೆ. ಪಿ. ಜೊತೆ ವಿಫಲ ಮಾತುಕತೆಯ ನಂತರ ಒಂದು ಹೇಳಿಕೆ ನೀಡಿ ''ನಾನು ಬೇಕಾದರೆ ರಾಜೀನಾಮೆ ನೀಡಿ ಹೊರಬಂದೇನು, ಆದರೆ ಬಿಹಾರ ವಿಧಾನಸಭೆಯನ್ನು ವಿಸರ್ಜಿಸಲು ಸಮ್ಮತಿಸಲಾರೆ. ಜೆ. ಪಿ. ತಮ್ಮ ಈ ಬೇಡಿಕೆಗೆ ಸಂಪೂರ್ಣ ಜನತೆಯ ಬೆಂಬಲವಿದೆ ಎನ್ನುತ್ತಿದ್ದಾರೆ. ಹಾಗಾದರೆ ಅವರು ಮುಂಬರುವ ಚುನಾವಣೆಗಳಲ್ಲಿ ತಮ್ಮ ಬೆಂಬಲವನ್ನು ಪ್ರದರ್ಶಿಸಲಿ. ಅಲ್ಲಿಯವರೆಗೆ ಅವರು ತಾಳ್ಮೆಯಿಂದಿರಬೇಕು'' ಎಂದರು. ಅದಕ್ಕುತ್ತರ ನೀಡುತ್ತಾ ಜೆ. ಪಿ. ''ಇಂದಿರಾಜಿಯ ಸವಾಲನ್ನು ಒಪ್ಪಿದ್ದೇನೆ. ಆಕೆ ಒಬ್ಬ ಬಹು ಚತುರ ರಾಜಕಾರಣಿ. ನನ್ನನ್ನು ಚುನಾವಣಾ ರಂಗಕ್ಕೆಳೆಯುತ್ತಿದ್ದಾರೆ. ಅಲ್ಲಿ ಜನತೆಯ ಬೆಂಬಲ ಯಾರಿಗೆ ಎಂದು ತೋರಿಸುವೆ. ಅಲ್ಲಿಯವರೆಗೆ ಕಾಯಲು ಸಿದ್ಧ. ನನಗೇನೂ ಆತುರವಿಲ್ಲ. ನಾನು ಸ್ವತಃ ಸ್ಪರ್ಧಿಸುವುದಿಲ್ಲ. ಚುನಾವಣೆಗಳಲ್ಲಿ ಎರಡೇ ಪಕ್ಷಗಳಿರುವುವು. ಒಂದು ಆಂದೋಳನದ ಪಕ್ಷ, ಇನ್ನೊಂದು ಆಂದೋಳನದ ವಿರೋಧಿ ಪಕ್ಷ. ಇವೆರಡರ ನಡುವೆ ಶಕ್ತಿ ಪರೀಕ್ಷೆಯಾಗಲಿರುವುದು. ಇದೊಂದು ವಿನೂತನ ಚುನಾವಣೆ. ಇದು ಸರ್ವಜನಾಭಿಪ್ರಾಯ ಸಂಗ್ರಹಣೆಯ ರೂಪದ್ದು. ಆದುದರಿಂದ ಇದರಲ್ಲಿ ಜನತೆಯದೇ ಪ್ರಮುಖ ಪಾತ್ರ'' ಎಂದು ಸಾಗರದೋಪಾದಿಯಲ್ಲಿ ಸೇರಿದ್ದ ಜನತೆಯನ್ನುದ್ದೇಶಿಸಿ ನುಡಿದರು. ಇದರಿಂದ ಆಂದೋಳನದ ದಿಶೆಯೇ ಬದಲಾಗಿಹೋಯಿತು.

ಕರ್ನಾಟಕದಿಂದ ಬಿಹಾರ ಚಳವಳಿಯನ್ನು ವೀಕ್ಷಿಸಲೋಸುಗ ಮತ್ತೊಂದು ಕಾರ್ಯಕರ್ತರ ತಂಡ ಅಲ್ಲಿಗೆ ಹೋಯಿತು. ವೆಂಕೋಬರಾಯರು ಮತ್ತು ಅನ್ಯ ಕೆಲವು ಮಿತ್ರರು ಅದರಲ್ಲಿದ್ದರು. ಆಗ ಪಟ್ನಾ ಸಚಿವಾಲಯದತ್ತ ಹೋದಾಗ ಅಕ್ಟೋಬರ್ ೩-೪-೫ನೇ ದಿನಗಳಲ್ಲಿ ನಡೆದ ಬಿಹಾರ ಬಂದ್ ಸಂದರ್ಭದಲ್ಲಿ ಜನತೆಯ ಮೇಲೆ ಗುಂಡು ಹಾರಿಸಿದ ಸರ್ಕಾರದ ಪೈಶಾಚಿಕ ಕೃತ್ಯವನ್ನು ಪ್ರತಿಭಟಿಸಲು ೨೪ ಗಂಟೆಗಳ ಉಪವಾಸ ಮುಷ್ಕರ ನಡೆಯುತ್ತಿತ್ತು. ಉಪವಾಸ ಕುಳಿತಿದ್ದ ಆ ತಂಡದಲ್ಲಿ ಕರ್ನಾಟಕ ಕಾರ್ಯಕರ್ತ ಗರುಡ ಶರ್ಮರು ತನ್ನ ರಾಜ್ಯವನ್ನು ಪ್ರತಿನಿಧಿಸಿ ಕುಳಿತಿದ್ದುದನ್ನು ಕಂಡರು.

ಬಿಜಾಪುರ ಜಿಲ್ಲಾ ಸರ್ವೋದಯ ಮಂಡಲದ ಪುನರ್‌ರಚನೆಗಾಗಿ ಕರೆದಿದ್ದ ಸಭೆಯಲ್ಲಿ ಅದು ಮುಗಿದ ಬಳಿಕ ಬಿಹಾರ್ ಆಂದೋಳನದ ವಿಷಯವನ್ನೂ ಚರ್ಚಿಸಿ ಅದನ್ನು ಪೂರ್ಣವಾಗಿ ಸಮರ್ಥಿಸುವ ಮತ್ತು ರಾಜ್ಯದಲ್ಲಿ ಅದನ್ನು ವ್ಯಾಪಕಗೊಳಿಸುವ ತೀರ್ಮಾನ ಕೈಗೊಳ್ಳಲಾಯಿತು. ಅದೇ ರೀತಿ ಬೆಂಗಳೂರು ಜಿಲ್ಲಾ ಸರ್ವೋದಯ ಮಂಡಲದ ಸಭೆಯಲ್ಲೂ ಜೆ. ಪಿ. ಆಂದೋಳನವನ್ನು ಗ್ರಾಮಸ್ವರಾಜ್ಯ ಆಂದೋಳನದ ಎರಡನೇ ಹೆಜ್ಜೆಯೆಂದು ತಿಳಿದು ಅದನ್ನು ತ್ವರಿತಗೊಳಿಸುವ ತೀರ್ಮಾನ ಕೈಗೊಂಡರು.

**ಕುವೆಂಪು ಬೆಂಬಲ :** ಬೆಂಗಳೂರು ವಿಶ್ವವಿದ್ಯಾಲಯದ ಘಟಿಕೋತ್ಸವದ ಭಾಷಣ ಮಾಡುತ್ತಾ ವರಕವಿ ಕುವೆಂಪು ಅವರು 'ಪ್ರಜಾಸತ್ತೆಯ ಹೆಸರಿನಲ್ಲಿ ನಡೆಯುತ್ತಿರುವ ಸರ್ವಾಧಿಕಾರದ ದಮನಕ್ಕೆ ಸಿದ್ಧರಾಗಿ' ಎಂದು ಕರೆನೀಡಿದರು. ವಿನೋಬಾ - ಜೆ. ಪಿ.ಯವರನ್ನು ಧ್ಯೇಯ ಜ್ಯೋತಿಯನ್ನು ಬೆಳಗಿಸುತ್ತಿರುವವರು ಎಂದು ಬಣ್ಣಿಸಿದರು. ಈಗ ನಡೆಯುತ್ತಿರುವುದು ಗ್ರಾಮಜೀವನದ ಉಪೇಕ್ಷೆ ಮತ್ತು ಭೋಗಜೀವನದ ಅಪೇಕ್ಷೆ. ಡೆಮೋಕ್ರಸಿ ಎನ್ನುವುದೀಗ ಬರಿ 'ಮಾಕರಿ' ಆಗಿದೆ. ಧನಾಶ್ರಿತ ಚುನಾವಣೆಗಳ ಬದಲು ಗುಣಾಶ್ರಿತ ಚುನಾವಣೆಗಳು ನಡೆಯುವಂತಾಗಬೇಕು. ಮತಭ್ರಾಂತಿಯಿಂದ ಅಧ್ಯಾತ್ಮ ಹೊರಗುಳಿಯಲಿ ಎಂದು ಹಾರೈಸುತ್ತಾ ನುಡಿದರು. ಅವರ ಭಾಷಣ ಸಂಪೂರ್ಣ ಕ್ರಾಂತಿಯ ವ್ಯಾಖ್ಯಾನವಾಯಿತು ಎನಿಸುವಂತಿತ್ತು.

**ರಾಜ್ಯದಲ್ಲಿ ಬಂಗ್ ಪ್ರವಾಸ :** ೧೯೭೫ರ ಆರಂಭ ದಿನಗಳಲ್ಲಿ ಜೆ. ಪಿ. ಚಳವಳಿಯನ್ನು ತೀವ್ರಗೊಳಿಸುವ ಮತ್ತಷ್ಟು ಪ್ರಯತ್ನ ನಡೆದವು. ಆ ಉದ್ದೇಶದಿಂದ ರಾಜ್ಯಾದ್ಯಾಂತ ಒಂದು ಬಿರುಗಾಳಿಯ ಪ್ರವಾಸದ ಏರ್ಪಾಡಾಯಿತು. ಕರ್ನಾಟಕ ಸರ್ವೋದಯ ಮಂಡಲದ ಆಮಂತ್ರಣವನ್ನೊಪ್ಪಿ ಇಡೀಪ್ರದೇಶದ ೧೨ ಜಿಲ್ಲೆಗಳಲ್ಲಿ ೧೪ ದಿನಗಳ ಕಾಲ ಅ. ಭಾ. ಸರ್ವ ಸೇವಾ ಸಂಘದ ಪ್ರಧಾನ ಕಾರ್ಯದರ್ಶಿ ಪ್ರೊ। ಠಾಕೂರ್‌ದಾಸ್ ಬಂಗರು ಸಂಚರಿಸಿ ಸಂಪೂರ್ಣ ಕ್ರಾಂತಿಗೆ ಇದು ಪರಿಪಕ್ವ ಸಮಯ. ತವ ಕಾದಾಗ ರೊಟ್ಟಿ ತಯಾರಿಸಿಕೊಳ್ಳುವಂತೆ, ಕಬ್ಬಿಣ ಕಾದಾಗ ಬಡಿದು ನಿರ್ದಿಷ್ಟ ಆಕಾರಕ್ಕೆ ರೂಪಿಸುವಂತೆ ಸಮಯ ಪಕ್ವವಾಗಿ ನಿಂತಾಗ, ಜನಮನ ತಯಾರಾಗಿರುವಾಗ ಸಂಪೂರ್ಣ ಕ್ರಾಂತಿಯ ವೈಚಾರಿಕ ಬೀಜ ಬಿತ್ತರಿಸಬೇಕು ಎಂದು ಜನತೆಯ ಭಾಷೆಯಲ್ಲಿ ತಿಳಿಸುತ್ತಾ ಎಲ್ಲೆಡೆ ಹೋರಾಟ ಸಮಿತಿಗಳ ರಚನೆಯಾಗಲಿ ಎಂದು ಹುರಿದುಂಬಿಸಿದರು. ಜನವರಿ ೧೦ ರಿಂದ ಪ್ರವಾಸ ಆರಂಭಿಸಿ ಮೈಸೂರು, ಮಂಡ್ಯ, ಚನ್ನಪಟ್ಟಣ, ಬೆಂಗಳೂರು, ತುಮಕೂರು, ತಿಪಟೂರು, ಹಾಸನ, ಶಿವಮೊಗ್ಗ, ದಾವಣಗೆರೆ, ಹುಬ್ಬಳ್ಳಿ, ಧಾರವಾಡ, ಬೆಳಗಾಂ,

ಜಮಖಂಡಿ, ವಿಜಾಪುರ, ರಾಯಚೂರು, ಗುಲ್ಬರ್ಗಗಳಿಗೆ ಭೇಟಿಕೊಟ್ಟು ಬಿಹಾರ ಚಳವಳಿಯ ಕಥೆಯನ್ನು ನಿರೂಪಿಸಿ ವಸ್ತುಸ್ಥಿತಿಯ ದಿಗ್ದರ್ಶನ ಮಾಡಿಸಿದರು. ಯುವಜನ-ವಿದ್ಯಾರ್ಥಿಗಳು, ಬುದ್ಧಿಜೀವಿಗಳು, ಸರ್ವೋದಯ- ರಚನಾತ್ಮಕ ಕಾರ್ಯಕರ್ತರು, ರಾಜಕೀಯ ಪಕ್ಷಗಳು, ಪತ್ರಿಕಾ ಪ್ರತಿನಿಧಿಗಳು ಹಾಗೂ ಬಹಿರಂಗ ಸಭೆಗಳಲ್ಲಿ ಚಳವಳಿಯ ಮನಮುಟ್ಟುವ ವಿಶ್ಲೇಷಣೆಯಿಂದ ಜನಜಾಗೃತಿಯ ಮತ್ತು ಉತ್ಸಾಹದ ಹೊನಲನ್ನೇ ಹರಿಸಿದರು.

ಬಿಹಾರ ಚಳುವಳಿಯ ೪ ರಾಷ್ಟ್ರೀಯ ಬೇಡಿಕೆಗಳಂತೂ ಇದ್ದೇ ಇವೆ. ಇವಲ್ಲದೆ ಪ್ರಾದೇಶಿಕ, ಕ್ಷೇತ್ರಿಯ, ಸ್ಥಾನೀಯ ಸಮಸ್ಯೆಗಳಿಗೇನೂ ಕಡಿಮೆಯಿಲ್ಲ. ಅದನ್ನು ಮುಂದಿರಿಸಿಕೊಂಡು ಅವಕ್ಕಾಗಿ ಹೋರಾಡಿ. ಎರಡೂ ಬಗೆಯ ಬೇಡಿಕೆಗಳ ಜೋಡಣೆ ಇರಲಿ ಎಂಬುದು ಆಗಿನ ಮುಖ್ಯ ಧೋರಣೆಯಾಗಿತ್ತು. ಎಲ್ಲ ಊರುಗಳಲ್ಲೂ ಭಾರಿ ಸಾರ್ವಜನಿಕ ಸಭೆಗಳು ನಡೆಯುತ್ತಿದ್ದವು. ಜನತೆಯ ಕುತೂಹಲ ಮತ್ತು ಹುಮ್ಮಸ್ಸು ನೋಡಿ ಕಾರ್ಯಕರ್ತರು ಬೆಕ್ಕಸ ಬೆರಗಾಗುತ್ತಿದ್ದರು. ಈ ಬಿರುಗಾಳಿಯ ಪ್ರವಾಸದಲ್ಲಿ ಕಂಡ ದೃಶ್ಯದಿಂದ ಬಂಗರು ಪ್ರಭಾವಿತರಾದರು. ಸತ್ಯವ್ರತ, ಗರುಡ ಶರ್ಮ ಮತ್ತು ವೆಂಕೋಬರಾವ್ ಮೊದಲಿನಿಂದ ಕೊನೆಯವರೆಗೂ ಪ್ರವಾಸದಲ್ಲಿದ್ದರು. ಜನತೆ ಸ್ವಯಂಸ್ಫೂರ್ತಿಯಿಂದ ಮುಕ್ತ ಹಸ್ತದ ಧನಸಹಾಯ ನೀಡಿ ತಮ್ಮ ಬೆಂಬಲ ವ್ಯಕ್ತ ಪಡಿಸಿದರು. ಸಾರ್ವಜನಿಕ ಸಭೆಗಳಲ್ಲಿ ಸ್ಥಳದಲ್ಲಿ ೪೦೦೦ರೂ. ಸಂಗ್ರಹವಾಗಿದ್ದವು. ಇದು ಜನತೆಯ ಸಮ್ಮತಿಸೂಚಕ ಕಿಂಚಿತ್ ಕಾಣಿಕೆಯೆಂದು ಪರಿಗಣಿಸಲಾಯಿತು.

ಬಂಗರು ಮೈಸೂರು ಕಾರ್ಯಕ್ರಮದ ಮಧ್ಯೆ ಬಿಡುವು ಮಾಡಿಕೊಂಡು ಕುವೆಂಪು ಅವರ ದರ್ಶನದಿಂದ ಸ್ಫೂರ್ತಿ ಪಡೆದರು. ಬೆಂಗಳೂರು ಗಾಂಧಿ ಭವನದಲ್ಲಿ ಸೇರಿದ್ದ ಸಭೆ ಕೆಲವು ತೀರ್ಮಾನಗಳನ್ನು ತೆಗೆದುಕೊಂಡು ಆಂದೋಳನ ಹಬ್ಬಿಸುವ ವಿಧಿ ವಿಧಾನಗಳನ್ನು ನಿಶ್ಚಯಿಸಿತು. ಮೈಸೂರಿನ ನವ ನಿರ್ಮಾಣ ಸಮಿತಿಯೊಡನೆ ಬಂಗರ ಒಳ್ಳೆ ಸಂವಾದ ನಡೆಯಿತು. ರಾಜಕೀಯ ಪಕ್ಷ ಗಳ ವಿಷಯದಲ್ಲಿ ಅವರು ತಳೆದಿದ್ದ ಧೋರಣೆಯನ್ನು ಬಂಗ್ ತಿಳಿದರು. ಅನ್ಯ ಪಕ್ಷಾತೀತ ಸಂಘಟನೆಗಳೊಡನೆ ಸಹಕರಿಸುವುದಾಗಿ ಸಮಿತಿ ವಾಗ್ದಾನ ನೀಡಿತು.

ಬೆಂಗಳೂರಿನ ಒಂದು ಮೊಹಲ್ಲಾ ಪೀಲುಮುರಗಪುರಂ ೩೦ನೇ ಡಿವಿಜನ್ ಬಡಾವಣೆಯ ಸುಬ್ರಮಣ್ಯಸ್ವಾಮಿ ದೇವಸ್ಥಾನದ ಬಳಿಯ ಸಾರಾಯಿ ಅಂಗಡಿ ಸರ್ಕಾರಿ ಆದೇಶಕ್ಕೆ ವಿರುದ್ಧ ನಡೆಯುತ್ತಿದ್ದುದರ ವಿರುದ್ಧ ಸತ್ಯಾಗ್ರಹ ಫೆಬ್ರವರಿ ೧೭ರಿಂದ ಆರಂಭವಾಯಿತು. ಇದೂ ಸಹ ಸಂಘರ್ಷದ ಅಂಗವಾಗಿಹೋಯಿತು. ಒಂದು ತಿಂಗಳಿಗೂ ಮೀರಿ ನಡೆದ ಯಶಸ್ವಿ ಪಿಕೆಟಿಂಗಿನ ಪರಿಣಾಮ ಅಂಗಡಿ ಸ್ಥಳಾಂತರಗೊಂಡಿತು. ಅದೇ ಹೊತ್ತಿಗೆ ಬಿಹಾರದಲ್ಲಿ ಜನತಾ ಸರ್ಕಾರಗಳ ಸ್ಥಾಪನೆಯ ಅಭಿಯಾನ ಆರಂಭವಾಗಿ ಅನೇಕ ಸ್ಥಾನಗಳಲ್ಲಿ ಜನತಾ ಸರ್ಕಾರಗಳು ಕಾರ್ಯಾರಂಭ ಮಾಡಿದ್ದು ಒಂದು ರೋಚಕ ಬೆಳವಣಿಗೆಯಾಯಿತು. ಇನ್ನು ಮುಂದೆ ಜನತಾ ಸರ್ಕಾರಕ್ಕೆ ತೆರಿಗೆ ಸಂದಾಯವಾಗುವುದೇ ಹೊರತು ಬಿಹಾರ ಸರ್ಕಾರಕ್ಕಲ್ಲ ಎಂದು ಸಂಘರ್ಷ ಸಮಿತಿಗಳು ನಿಶ್ಚಯಿಸಿ ಮಾರ್ಚ್ ೧೧ರಿಂದ ಅದು ಜಾರಿಗೆ ಬರುವುದೆಂದು ಗೊತ್ತಾಯಿತು.

ಕರ್ನಾಟಕದಲ್ಲಿ ಪ್ರತಿವರ್ಷದಂತೆ ಫೆಬ್ರವರಿ ೧೧-೧೨ ನೇ ದಿನಗಳಲ್ಲಿ ನಡೆಯುವ ಮೇಳ ಈ ವರ್ಷವೂ ಪಶ್ಚಿಮವಾಹಿನಿಯಲ್ಲಿ ಕೂಡಿತು. ಅಲ್ಲಿ ಸಂಪೂರ್ಣ ಕ್ರಾಂತಿಯೇ ಮುಖ್ಯ ಚರ್ಚಾ ವಿಷಯವಾಗಿತ್ತು. ಜೆ. ಪಿ. ಆಂದೋಳನಕ್ಕೆ ಸರ್ವೋದಯ ಕಾರ್ಯಕರ್ತರು ಪೂರ್ಣ ಬೆಂಬಲ ಕೊಡಬೇಕಲ್ಲದೆ ರಾಜ್ಯದಲ್ಲಿ ಅದನ್ನು ತೀವ್ರಗತಿಯಲ್ಲಿ ಹರಡಬೇಕೆಂದು ಒಟ್ಟಭಿಪ್ರಾಯ ವ್ಯಕ್ತವಾಯಿತು.

## ನಮ್ಮ ಬೇಡಿಕೆಗಳು

ಮಾರ್ಚ್ ೬, ೧೯೭೫ಕ್ಕೆ ಡೆಲ್ಲಿಯ ಪಾರ್ಲಿಮೆಂಟ್ ಭವನದ ಮುಂದೆ ಜೆ. ಪಿ.ಯವರ ನೇತೃತ್ವದಲ್ಲಿ ವಿರಾಟ್ ಪ್ರದರ್ಶನ ನಡೆದು ಲೋಕಸಭಾ ಸ್ಪೀಕರರಿಗೆ ಮನವಿ ಪತ್ರ ಸಲ್ಲಿಸಲಾಯಿತು. ಅದಕ್ಕೆ ಪೂರಕವಾಗಿ ಅದೇ ದಿನ ರಾಜ್ಯದಲ್ಲೂ ಜನತಾ ಸಂಘರ್ಷ ಸಮಿತಿ ಮತ್ತು ವಿದ್ಯಾರ್ಥಿ ಯುವಜನ ಸಮಿತಿಗಳೂ ಕೂಡಿ ಬೆಂಗಳೂರಲ್ಲಿ ವಿರೋಧ ಪ್ರದರ್ಶನ ಏರ್ಪಡಿಸಿದವು. ಸರ್ವೋದಯ ಕಾರ್ಯಕರ್ತರು, ವಕೀಲರು, ಬುದ್ಧಿಜೀವಿಗಳು, ಸಂಘ-ಸಂಸ್ಥೆಗಳ ಪ್ರತಿನಿಧಿಗಳು, ಕಾರ್ಮಿಕರು, ವಿದ್ಯಾರ್ಥಿಯುವಜನರು, ವಿರೋಧ ಪಕ್ಷಗಳ ನಾಯಕರು, ಎಲ್ಲ ಪಕ್ಷಗಳ ಕಾರ್ಯಕರ್ತರು ಪ್ರದರ್ಶನದಲ್ಲಿದ್ದರು. ಬೆಳಗ್ಗೆ ೧೧ ಗಂಟೆಗೆ ಸಿಟಿ ಮಾರ್ಕೆಟ್‌ನಿಂದ ಹೊರಟ ಮೆರವಣಿಗೆ ವಿಧಾನಸೌಧ ತಲುಪಲು ಸುಮಾರು ಒಂದೂವರೆ ಗಂಟೆ ವೇಳೆ ತೆಗೆದುಕೊಂಡಿತು. ಸ್ವಾತಂತ್ರ್ಯಾನಂತರದ ೨೭ ವರ್ಷಗಳಲ್ಲಿ ನಡೆದ ಜನತೆಯದೇ ಆದ ಬೃಹತ್ ಪ್ರದರ್ಶನ ಇದು, ಎನ್ನಬೇಕು. ಸಂಕುಚಿತ, ಪಕ್ಷೀಯ ಅಥವಾ ವಿಭಾಗೀಯ ಚಳವಳಿಯಾಗಿರದೇ ಸಂಪೂರ್ಣ ಜನತೆಯದು ಮತ್ತು ಸಂಪೂರ್ಣ ಜನತೆಯ ಹಿತಕ್ಕಾಗಿ ನಡೆಯುವಂಥದು ಆಗಿದೆ. ಅದು ಮತ್ತು ಅದನ್ನೇ ಪ್ರತಿಬಿಂಬಿಸುವ

ಬೇಡಿಕೆಗಳನ್ನುಳ್ಳ ಮನವಿ ಪತ್ರದ ಅರ್ಪಣೆ ಇವು ಪ್ರದರ್ಶನದ ಸ್ವರೂಪವನ್ನು ಸಾರ್ಥಕಗೊಳಿಸಿದವು. ಭ್ರಷ್ಟಾಚಾರ ಮತ್ತು ನಿರುದ್ಯೋಗದ ವಿರುದ್ಧ ಪ್ರದರ್ಶನಕಾರರು ಘೋಷಣೆಗಳನ್ನು ಕೂಗುತ್ತಿದ್ದರು. ಚುನಾವಣಾ ಸುಧಾರಣೆ, ಶಿಕ್ಷಣದಲ್ಲಿ ಬದಲಾವಣೆ, ಮದ್ಯ ನಿಷೇಧ ಜಾರಿಗೆ ತರುವಿಕೆ, ಸಂಪೂರ್ಣ ಕ್ರಾಂತಿಯಾಗಲಿ ಎಂಬ ಫಲಕಗಳನ್ನೂ ಬ್ಯಾನರ್‌ಗಳನ್ನೂ ಪ್ರದರ್ಶನಕಾರರು ಹಿಡಿದುಕೊಂಡಿದ್ದರು. ಬೆಂಗಳೂರು ಸುತ್ತಲ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲದೆ ದೂರದ ಗುಲ್ಬರ್ಗ ದಾವಣಗೆರೆಯಿಂದ ಜನ ಪ್ರದರ್ಶನದಲ್ಲಿ ಭಾಗ ತೆಗೆದುಕೊಂಡಿದ್ದರು.

ಪ್ರದರ್ಶನವೇ ಬಹಿರಂಗ ಸಭೆಯಾಗಿ ಮಾರ್ಪಟ್ಟು ಪಿ.ಜಿ. ಆರ್. ಸಿಂಧ್ಯ ಸರ್ವರನ್ನೂ ಸ್ವಾಗತಿಸಿದರು. ಎಂ. ಚಂದ್ರಶೇಖರರು ಭಾಷಣಕಾರರ ಪರಿಚಯ ಮಾಡಿಸಿದರು. ಅನಂತರ ಕಾಗೋಡು ತಿಮ್ಮಪ್ಪ ಬೇಡಿಕೆಗಳ ಪಟ್ಟಿಯನ್ನೊಳಗೊಂಡ ಮನವಿಯನ್ನು ಓದಿದರು. ಶ್ರೀಗಳಾದ ಎ. ಕೆ. ಸುಬ್ಬಯ್ಯ, ಎಚ್. ಡಿ. ದೇವೇಗೌಡರು, ಬಂಗಾರಪ್ಪ, ಪಿ. ವೆಂಕೋಬರಾವ್, ಶ್ರೀಮತಿ ಪ್ರಮೀಳಾ ಮತ್ತು ಅನ್ಯರು ಸಭೆಯನ್ನುದ್ದೇಶಿಸಿ ಭಾಷಣ ಮಾಡಿದರು.

ವಿಶೇಷ ಹಕ್ಕುಗಳ ಬೇಡಿಕೆಗಳು ದೆಹಲಿಯಲ್ಲಿ ಲೋಕಸಭಾ ಸ್ಪೀಕರರಿಗೆ ಸಲ್ಲಿಸಿದ ಮನವಿ ಪತ್ರ ಬೇಡಿಕೆಗಳಿಗೆ ಪೂರಕವಾಗಿತ್ತು. ಬೇಡಿಕೆಗಳ ಪಟ್ಟಿ ಹೀಗಿತ್ತು:

೧. ಬಿಹಾರ ವಿಧಾನಸಭೆ ವಿಸರ್ಜನೆಯಾಗಲಿ. ಆ ಆಂದೋಳನಕ್ಕೆ ನಮ್ಮ ಪೂರ್ಣ ಬೆಂಬಲ ಇದೆ.

೨. ಮುಖ್ಯಮಂತ್ರಿಗಳು, ಉನ್ನತಾಧಿಕಾರಿಗಳು ಮತ್ತಿತರರ ಮೇಲೆ ಭ್ರಷ್ಟಾಚಾರ ಮತ್ತು ಸ್ವಜನಪಕ್ಷಪಾತದ ಆರೋಪಗಳ ತನಿಖೆಗೆ ನ್ಯಾಯಾಂಗ ವಿಚಾರಣಾ ಸಮಿತಿಯನ್ನು ಬೇಗ ನೇಮಿಸಬೇಕು. ಉಳಿದ ಮೂರು ಬೇಡಿಕೆಗಳೂ ಇದೇ ಸಂಬಂಧವಾಗಿದ್ದವು.

೬. ಇಂದಿರಾ ಬ್ರಿಗೇಡ್ ಅನ್ನು ತಕ್ಷಣ ನಿಷೇಧಿಸಬೇಕು.

೭. ವಿದ್ಯಾರ್ಥಿಗಳ ಮೇಲೆ ನಡೆಯುವ ಪೋಲೀಸ್ ದೌರ್ಜನ್ಯ ನಿಲ್ಲಬೇಕು ಮತ್ತು ಅವರ ಮೇಲಿರುವ ಮೊಕದ್ದಮೆಗಳನ್ನು ಹಿಂತೆಗೆದುಕೊಳ್ಳಬೇಕು.

೮. ವಿಧವೆ, ಅವಿವಾಹಿತ ಹೆಣ್ಣುಮಕ್ಕಳು ಮತ್ತು ದುರ್ಬಲರೆನಿಸಿದ ಜನರಿಗೆ ಭೂಮಿ ಕೊಡಲಾಗದ ಪಕ್ಷದಲ್ಲಿ ಅದರ ಬದಲಿಗೆ ಒಂದೇ ಕಂತಿನಲ್ಲಿ ಪರಿಹಾರಧನ ಕೊಡುವಂತೆ ಭೂಸುಧಾರಣಾ ಕಾಯಿದೆಯಲ್ಲಿ ತಿದ್ದುಪಡಿಯಾಗಬೇಕು.

೯ ಈಗ ರಚಿಸಿರುವ ಭೂನ್ಯಾಯ ಮಂಡಳಿಗಳಲ್ಲಿ ಅಧಿಕಾರಾರೂಢ ಪಕ್ಷದವರೇ ತುಂಬಿಹೋಗಿದ್ದಾರೆ. ಅದರಿಂದ ಕಕ್ಷಿದಾರರಲ್ಲಿ ವಿಶ್ವಾಸ ಹುಟ್ಟದು. ಉಳುವವನಿಗೇ ಭೂಮಿ ಎಂಬ ಉದಾತ್ತ ತತ್ವವನ್ನು ಎತ್ತಿ ಹಿಡಿಯಲು ಇವನ್ನು ಪುನರ್‌ರಚಿಸಬೇಕು.

೧೦. ರಾಜ್ಯದ ತಾಲ್ಲೂಕುಬೋರ್ಡ್, ಸ್ಥಳೀಯ ಸಂಸ್ಥೆಗಳು ಮತ್ತು ಬೆಂಗಳೂರು ನಗರಸಭೆಗೆ ಕೂಡಲೇ ಚುನಾವಣೆಗಳು ನಡೆಯಬೇಕು.

೧೧. ಕೇವಲ ದಿನಗೂಲಿಯ ಮೇಲೆ ಜೀವನ ನಡೆಸುತ್ತಿರುವ ಭೂಮಿಹೀನ ರೈತರ ಕೂಲಿ ನಿಗದಿ ಮಾಡಬೇಕು. ಅದೇ ರೀತಿ ಉಪಾಧ್ಯಾಯರ, ಅಧ್ಯಾಪಕರ, ಸರ್ಕಾರಿ ನೌಕರರ ಮತ್ತು ಕಾರ್ಮಿಕರ ಬೇಡಿಕೆಗಳನ್ನು ಕೂಡಲೇ ಮಾನ್ಯ ಮಾಡಬೇಕು.

೧೨. ದಿನಬಳಕೆಯ ಸಾಮಗ್ರಿಗಳು ನ್ಯಾಯಬೆಲೆಗೆ ಸಿಗುವಂತೆ ಬೆಲೆ ನಿಗದಿಯಾಗಿ ಜಾರಿಗೆ ಬರಲಿ. ಅವಶ್ಯಕ ಸರಕು ಮತ್ತು ಇತರ ವಸ್ತುಗಳ ಅಕ್ರಮ ಸಾಗಾಣಿಕೆ, ಸಂಗ್ರಹ, ಕಾಳಸಂತೆಕೋರತನ, ಮತ್ತಿತರ ಸಮಾಜಘಾತಕ ಉದ್ಯೋಗ, ವ್ಯಾಪಾರಗಳಲ್ಲಿ ತೊಡಗಿರುವವರ ಮೇಲೆ ನಿರ್ದಾಕ್ಷಿಣ್ಯ ಕ್ರಮ ಜರುಗಲಿ.

೧೩. ಬೆಲೆ ಇಳುವರಿಯಾಗುವವರೆಗೆ ಹೊಸ ತೆರಿಗೆ ಹೇರುವಿಕೆ ಮತ್ತು ತೆರಿಗೆ ಹೆಚ್ಚಳ ಎರಡೂ ಸರ್ವಥಾ ಕೂಡದು.

೧೪. ಆಹಾರ, ನಿತ್ಯಬಳಕೆ ವಸ್ತುಗಳು ರಾಜ್ಯಾದ್ಯಂತ ಗ್ರಾಮಾಂತರ ಪ್ರದೇಶಗಳಲ್ಲಿ ನ್ಯಾಯಬೆಲೆ ಅಂಗಡಿಗಳ ಮೂಲಕ ಪೂರೈಕೆಯಾಗಲಿ.

೧೫. ಗ್ರಾಮಾಂತರ ಪ್ರದೇಶದಲ್ಲಿ ಉದ್ಯೋಗದ ವಿಸ್ತಾರ; ಪ್ರತಿಯೊಬ್ಬ ಸ್ತ್ರೀ ಪುರುಷರಿಗೆ ಲಾಭದಾಯಕ ಉದ್ಯೋಗ ನಿಲುಕುವಂತೆ ರಾಷ್ಟ್ರನಿರ್ಮಾಣದಲ್ಲಿ ಭಾಗವಹಿಸಿದ ಸ್ಫೂರ್ತಿ ತುಂಬಿ ಬರುವಂತೆ ವ್ಯವಸಾಯ ಮತ್ತು ಉದ್ಯೋಗದ ಅಭಿವೃದ್ಧಿ ಮತ್ತು ಆರ್ಥಿಕ ನೀತಿ ರೂಪಗೊಳ್ಳಬೇಕೆಂದು ಒತ್ತಾಯ.

೧೬. ರಾಜ್ಯ ಮತ್ತು ಕೇಂದ್ರದ ಉದ್ಯೋಗ ಘಟಕಗಳಲ್ಲಿ ರಾಜ್ಯದ ಜನತೆಗೆ ಆದ್ಯತೆ. ಉದ್ಯೋಗ ಇಲ್ಲವೇ ನಿರುದ್ಯೋಗ ಭತ್ತೆ ನೀಡಬೇಕು.

೧೭ ಹರಿಜನ, ಗಿರಿಜನರ ಮೇಲೆ ನಡೆಯುವ ದೌರ್ಜನ್ಯದ ನಿಲುಗಡೆ. ಅಂಥ ಕೃತ್ಯಗಳನ್ನು ಮಟ್ಟಹಾಕಬೇಕು.

೧೮. ನಗರ ಭೂಮಿ ತೆರಿಗೆ ಮಸೂದೆಯನ್ನು ವಾಪಸು ಪಡೆಯಬೇಕು. ಈ ತೆರಿಗೆಯ ಭಾರ ಬಾಡಿಗೆದಾರನ ಮೇಲೆ ಬೀಳುತ್ತದೆ. ಹಾಗೆಯೇ ರೇಷ್ಮೆ ಮೇಲೆ ಹಾಕಿರುವ ತೆರಿಗೆಯಿಂದ ನೇಕಾರನಿಗೆ ತೊಂದರೆ ಹೆಚ್ಚುತ್ತದೆ. ಇವನ್ನು ಹಿಂತೆಗೆದುಕೊಳ್ಳಬೇಕು.

೧೯. ದೇಶದ ಮೂಲಭೂತ ಬದಲಾವಣೆಗೆ ಯುವಜನಶಕ್ತಿಯನ್ನು ತೊಡಗಿಸಲು ಮತದಾನದ ವಯೋಮಿತಿಯನ್ನು ೧೮ ವರ್ಷಕ್ಕಿಳಿಸಬೇಕು.

೨೦. ಪೂರ್ಣ ಮದ್ಯನಿಷೇಧ ಜಾರಿಗೆ ಬರಲಿ.

೨೧. ಕುದುರೆ ಜೂಜು ಲಾಟರಿಯಂಥ ಅನಿಷ್ಟ ಜೂಜುಗಳನ್ನು ತೊಲಗಿಸಬೇಕು.

ಪ್ರಾಮಾಣಿಕ, ಯೋಗ್ಯ, ನಿಃಸ್ವಾರ್ಥಿ ಜನರೇ ಸರ್ಕಾರದ ಉನ್ನತ ಮತ್ತು ಜವಾಬ್ದಾರಿ ಸ್ಥಾನಗಳಲ್ಲಿರಬೇಕು. ಕರ್ತವ್ಯನಿಷ್ಠ, ಅಪರಿಗ್ರಹನಿಷ್ಠ, ಸಚ್ಚಾರಿತ್ರ್ಯ ಸಂಪನ್ನ, ಮೌಲ್ಯಾಧಾರಿತ, ಮುನ್ನಡೆ ಸಾಧಿಸಬಲ್ಲ ಜನರಿಂದಲೇ ದೇಶದ ಪ್ರಜಾಪ್ರಭುತ್ವ ಉಳಿದೀತು. ಅವರೇ ಈ ದೇಶವನ್ನು ನಿಜವಾದ ಪ್ರಜಾಸತ್ತೆಯತ್ತ ಕೊಂಡೊಯ್ಯಬಲ್ಲರು. ಶ್ರೀಸಾಮಾನ್ಯನ ಕಷ್ಟಪರಂಪರೆಯ ದಾರುಣಚಿತ್ರ ಅಳಿಸಿ ಹೋಗಬೇಕಾದರೆ ಇಂಥ ಉಜ್ವಲ ಚರಿತ್ರಶೀಲರಿಂದ ಮಾತ್ರ ಸಾಧ್ಯ. ಆದ್ದರಿಂದ ಇಂಥ ಜನರನ್ನು ಉನ್ನತ ಸ್ಥಾನಕ್ಕೇರಿಸಲು ಜನತೆ ಎಷ್ಟೇ ತ್ಯಾಗಮಾಡಿದರೂ ಕಡಿಮೆಯೇ. ಇದು ವರ್ತಮಾನದ ಕರೆ.

ಜನ ಈಗಾಗಲೇ ಮಿತಿಮೀರಿದ ಕಷ್ಟ ಅನುಭವಿಸಿದ್ದಾರೆ. ಅವರ ಸಹನೆ ಮಿತಿ ಮೀರಿಹೋಗಿದೆ. ಇನ್ನು ಮುಂದೆ ಅವರು ಕೇವಲ ಮೂಕ ಪ್ರೇಕ್ಷಕರಾಗಿ ಉಳಿಯುವುದಿಲ್ಲವೆಂಬುದು ಸ್ಪಷ್ಟ. ಸರ್ಕಾರ ಸಮಯದ ಬೇಡಿಕೆಯನ್ನನುಲಕ್ಷಿಸಿ ಜನತೆಯ ಬೇಡಿಕೆಯನ್ನು ಪೂರೈಸದಿದ್ದರೆ ಪರಿಣಾಮ ಭೀಕರವಾಗಬಹುದೆಂದು ಸರ್ಕಾರಕ್ಕೆ ಎಚ್ಚರಿಕೆ ಕೊಡಬಯಸುತ್ತೇವೆ.

ಈ ಪಟ್ಟಿಯನ್ನು ಮುಖ್ಯಮಂತ್ರಿಗಳಿಗೆ ಅರ್ಪಿಸಲಾಯಿತು.

**ಜೆ. ಪಿ. ಭೇಟಿಗಾಗಿ ಸಿದ್ಧತೆ** : ಏಪ್ರಿಲ್ ೧೭-೧೮ರಂದು ಗಾಂಧೀಭವನದಲ್ಲಿ ದಕ್ಷಿಣ ರಾಜ್ಯಗಳ ಜೆ. ಪಿ. ಚಳವಳಿಯ ಬೆಂಬಲಿಗರ ಸಮಾವೇಶ ನಡೆಯಿತು. ನಾಲ್ಕು ರಾಜ್ಯಗಳಿಂದ ಆಯ್ದ ೫೦ ಪ್ರತಿನಿಧಿಗಳು ಸೇರಿದ್ದರು. ಅದಕ್ಕೆ ಸಿದ್ದರಾಜ ದಡ್ಡಾ ಮತ್ತು ರಾಧಾಕೃಷ್ಣ ಕೇಂದ್ರದಿಂದ ಬಂದಿದ್ದರು. ಜಯಪ್ರಕಾಶರು ಮೇ ೧೪ರಿಂದ ೧೭ರವರೆಗೆ ಕರ್ನಾಟಕದಲ್ಲಿ ಪ್ರವಾಸ ಕೈಗೊಳ್ಳುವರೆಂದು ಇಲ್ಲಿ ಪ್ರಕಟಿಸಲಾಯಿತು. ಇದರಿಂದ ರಾಜ್ಯದಲ್ಲೆಲ್ಲ ವಿದ್ಯುತ್ ಸಂಚಾರವಾದಂತಾಯಿತು. ಅವರು ಕೇರಳದಿಂದ ಕರ್ನಾಟಕಕ್ಕೆ ಬರುವರೆಂದು ತಿಳಿಯುತ್ತಲೇ ನಮ್ಮೆಲ್ಲರ ಕಾರ್ಯ ಮತ್ತು ಕಾರ್ಯಕ್ರಮಗಳಲ್ಲಿ ಒಂದು ಬಗೆಯ ತ್ವರೆ ಮತ್ತು ತೀವ್ರತೆ ತಲೆದೋರಿತು. ಆದ್ದರಿಂದ ಕರ್ನಾಟಕ ಜನತಾ ಸಂಘರ್ಷ ಸಮಿತಿ ಜೆ. ಪಿ. ಆಂದೋಳನವನ್ನು ಬೆಂಬಲಿಸುವ ಸರ್ವೋದಯ ಕಾರ್ಯಕರ್ತರು, ಅನ್ಯ ಸಂಘ-ಸಂಸ್ಥೆಗಳು, ರಾಜಕೀಯ ಪಕ್ಷಗಳು ಮತ್ತು ಗಣ್ಯ ನಾಗರಿಕರ ಸಭೆಯನ್ನು ಗಾಂಧಿಭವನದಲ್ಲಿ ಕರೆದು ರಾಜ್ಯ ಮಟ್ಟದ ಸ್ವಾಗತ ಸಮಿತಿಯನ್ನು ರಚಿಸುವ ಪೂರ್ಣ ಅಧಿಕಾರವನ್ನು ಅದಕ್ಕೇ ವಹಿಸಿತು. ಈ ಸಭೆ ಪಕ್ಷಮುಕ್ತ ಜೆ. ಪಿ. ಹಿತೈಷಿಗಳ ಸ್ವಾಗತ ಸಮಿತಿಯನ್ನು ಆರಿಸಿತು. ಕಡಿದಾಳ ಮಂಜಪ್ಪನವರು ಅಧ್ಯಕ್ಷರು, ಕೆ. ಎಸ್. ಹೆಗಡೆಯವರು ಉಪಾಧ್ಯಕ್ಷರು, ಕೆ. ಶಿವರಾಮ ಕಾರಂತ, ಕೆ. ಎಸ್. ನಾರಾಯಣಸ್ವಾಮಿ, ಎಚ್. ಆರ್. ವೆಂಕಟರಮಣ ಅಯ್ಯರ್, ಸೀತಾಶರಣ ಶರ್ಮ, ಪಿ. ವೆಂಕೋಬರಾವ್, ಬಿ. ಹೆಚ್. ಇನಾಂದಾರ್ ಶಕುಂತಲ ಕುರ್ತಕೋಟಿ, ಸದಾಶಿವರಾವ್ ಭೋಸಲೆ, ಪಕ್ಷಗಳ ನಾಯಕರಾದ ಎಸ್. ನಿಜಲಿಂಗಪ್ಪ, ವೀರೇಂದ್ರ ಪಾಟೀಲ್, ರಾಮಕೃಷ್ಣ ಹೆಗಡೆ, ದೇವೇಗೌಡ, ಮಲ್ಲಿಕಾರ್ಜುನಯ್ಯ, ಜೆ. ಎಚ್. ಪಟೇಲ್, ಎಸ್. ವೆಂಕಟರಾಂ, ಗುಂಡಯ್ಯ ಶೆಟ್ಟಿ, ಪೂಸಲಿಂಗಂ, ಆರ್ಮುಗಂ, ಬಿ.ಎಸ್. ಗುಪ್ತ, ಪಿ. ರಾಮದೇವ, ಲಕ್ಷ್ಮಿಸಾಗರ, ಎಂ. ಚಂದ್ರಶೇಖರ್, ಪಿ. ಜಿ. ಆರ್. ಸಿಂಧ್ಯ, ಮುಂತಾದವರು ಸದಸ್ಯರು, ಶ್ರೀ ಲಕ್ಷ್ಮೀಸಾಗರ್, ಪಿ. ರಾಮದೇವ್ ಮತ್ತು ಪಿ. ವೆಂಕೋಬರಾವ್ ಸಂಚಾಲಕರಾದರು. ಎಚ್. ಎಸ್. ದೊರೆಸ್ವಾಮಿ ಕಾರ್ಯಾಲಯ ನಡೆಸುವ ಜವಾಬ್ದಾರಿ ಹೊತ್ತರು, ಸತ್ಯವ್ರತರು ವಿದ್ಯಾರ್ಥಿ ಯುವಜನ ಸಂಘರ್ಷ ಸಮಿತಿಯ ಮಾರ್ಗದರ್ಶಕರೂ ಮೂಲಗುಂಪಿನ (ಕೋರ್ ಗ್ರೂಪ್) ಸದಸ್ಯರೂ ಆಗಿ ಕಾರ್ಯ ನಿರ್ವಹಿಸಿದರು. ಜಯಪ್ರಕಾಶರು ಭೇಟಿ ಕೊಡುವ ಪಟ್ಟಣಗಳಲ್ಲೆಲ್ಲ ಸ್ವಾಗತ ಸಮಿತಿಗಳ ರಚನೆಯೂ ಆದವು. ಬೆಂಗಳೂರಲ್ಲಿ ಬೃಹತ್ ನಿಧಿ ಸಮರ್ಪಣೆಯಾಗಬೇಕೆಂಬ ನಿಶ್ಚಯವಾಗಿ ಅದಕ್ಕಾಗಿ ಬಿ. ಎಸ್. ಗುಪ್ತರು ಸಂಚಾಲಕರಾಗಿರುವ ಅರ್ಥ ಸಮಿತಿಯ ರಚನೆಯೂ ಆಗಿ ಸಿದ್ಧತೆಗಳು ಭರದಿಂದ ಸಾಗಿದವು. ಗಾಂಧಿಭವನದ ಪಕ್ಕದಲ್ಲಿರುವ ವಲ್ಲಭ ನಿಕೇತನದಲ್ಲಿ ವಿಧಿವತ್ ಕಾರ್ಯಾಲಯ ಕಾರ್ಯಾರಂಭ ಮಾಡಿತು. ಮಂಗಳೂರು ಸ್ವಾಗತ ಸಮಿತಿ ಕೆ. ಎಸ್. ಹೆಗಡೆಯವರ ಅಧ್ಯಕ್ಷತೆಯಲ್ಲಿ ಕಾರ್ಯಾರಂಭಮಾಡಿತು. ಆ ಜಿಲ್ಲೆಯೊಂದರಿಂದಲೇ ಒಂದು ಲಕ್ಷ ರೂ. ನಿಧಿ ಸಮರ್ಪಿಸುವ ಸಂಕಲ್ಪವಾಯಿತು.

**ಡಿ.ವಿ.ಜಿ. ಅನುಕೂಲಾಭಿಮತ :** ಜಯಪ್ರಕಾಶರ ಪಕ್ಷರಹಿತ ಪ್ರಜಾತಂತ್ರದ ವಿಚಾರಕ್ಕೆ ಕಾರ್ಯನಿರ್ವಹಿಸಲಾಗದ, ಭ್ರಷ್ಟ, ಅದಕ್ಷ, ಬೇಜವಾಬ್ದಾರಿಯಿಂದ ವರ್ತಿಸುವ, ಜನಹಿತ ವಿರೋಧಿ ಎನಿಸಿದ ಜನಪ್ರತಿನಿಧಿಗಳನ್ನು ಅವರ ಕ್ಷೇತ್ರದ ಮತದಾರರು ವಾಪಸು ಕರೆಯಿಸಿಕೊಳ್ಳಬಹುದಾದ ರೀಕಾಲ್ ಪದ್ಧತಿಗೆ ಮತ್ತು ಅತಿ ವಿಶೇಷ ಸಂದರ್ಭಗಳಲ್ಲಿ ಸರ್ವಜನಾಭಿಪ್ರಾಯ ಪಡೆದು ನಿರ್ಣಯಿಸುವ ಅಂಶಕ್ಕೆ ಡಿ. ವಿ.ಜಿ. ಯಂಥ ತತ್ವವೇತ್ತರು ಪೂರ್ಣಬೆಂಬಲವಿತ್ತಲ್ಲದೆ. ಸಂವಿಧಾನದಲ್ಲಿ ಇವಕ್ಕೆ ಸೂಕ್ತ ಅವಕಾಶವಿರಬೇಕೆಂಬ ಅಭಿಪ್ರಾಯಕೊಟ್ಟರು. ಈ ಉದ್ದಾಮ ಸಾಹಿತಿಗಳಲ್ಲದೆ ಗೋಪಾಲಕೃಷ್ಣ ಅಡಿಗರಂಥ ಪುರೋಗಾಮಿ ಸಾಹಿತಿಗಳ ಬೆಂಬಲವಂತೂ ಚಳವಳಿಗೆ ಇದ್ದೇ ಇತ್ತು. ಇದರಿಂದ ಅದಕ್ಕೆ ಪ್ರಬಲ ಜನಾಧಾರ ದೊರೆಯುವುದು ಮತ್ತಷ್ಟು ಸುಲಭವಾಯಿತಲ್ಲದೆ ಜನಶಕ್ತಿ ನಿರ್ಮಾಣದ ಮಾರ್ಗ ಪ್ರಶಸ್ತವಾಯಿತು.

## ಕರ್ನಾಟಕದಲ್ಲಿ ಜೆ.ಪಿ. ಪ್ರವಾಸ ಕಾರ್ಯಕ್ರಮ

ಮೇ ೧೪ಕ್ಕೆ ಕಲ್ಲಿಕೋಟೆಯಿಂದ ಮಂಗಳೂರು ; ಬೆಳಗ್ಗೆ ಅಲ್ಲಿ ಸಾರ್ವಜನಿಕ ಸಭೆ. ಸಂಜೆ ವಿಮಾನದಲ್ಲಿ ಬೆಳಗಾವಿ. ಅಲ್ಲಿ ಸಾರ್ವಜನಿಕ ಸಭೆ. ೧೫ಕ್ಕೆ ಧಾರವಾಡ, ಹುಬ್ಬಳ್ಳಿ ಸಾರ್ವಜನಿಕ ಸಭೆ. ೧೬ಕ್ಕೆ ಬೆಂಗಳೂರು. ೧೭ ಕ್ಕೆ ರಾಯಚೂರು - ಗುಲ್ಬರ್ಗ ಹೀಗೆಂದು ನಿಶ್ಚಯವಾಗಿ ಅದರಂತೆ ನೆರವೇರಿತು.

ಎಲ್ಲೆಡೆ ಭಾರಿ ಸ್ವಾಗತ ಮತ್ತು ಅಂದಾಜು ಮೀರಿದ ಜನಸ್ತೋಮ ಅವರ ದರ್ಶನ ಮತ್ತು ಸಂದೇಶ ಕೇಳಲು ಉಕ್ಕಿ ಬಂತು. ಜೆ. ಪಿ. ತಮ್ಮ ಆರೋಗ್ಯವನ್ನೂ ಲೆಕ್ಕಿಸದೆ ತಮಗಾಗಿ ಗೊತ್ತಾಗಿದ್ದ ಎಲ್ಲ ಕಾರ್ಯಕ್ರಮಗಳನ್ನೂ ನಡೆಸಿಕೊಟ್ಟರು. ತಮ್ಮ ಅಂತರಾಳದಿಂದ ಹೊರಬಂದ, ಪ್ರಾಂಜಲ ಹೃದಯದಿಂದ ಹೊಮ್ಮಿದ ಅವರ ಮಾತಿನ ಮೋಡಿಯಲ್ಲಿ ವಿಚಾರ ಪ್ರವಾಹದಲ್ಲಿ ರಾಜ್ಯದ ಜನತೆಯನ್ನು ತನ್ನ ಕಡೆ ಸೆಳೆದುಕೊಂಡರೇನೋ ಎಂದು ತೋರುತ್ತಿತ್ತು. ಬೆಂಗಳೂರು ನಗರದ ಸಾರ್ವಜನಿಕ ಸಭೆ ನ್ಯಾಷನಲ್ ಹೈಸ್ಕೂಲು ಮೈದಾನದಲ್ಲಿ ನಡೆದು ಅದಕ್ಕೆ ಪೊಲೀಸ್ ಅಂದಾಜಿನ ಪ್ರಕಾರ ಒಂದೂಕಾಲು ಲಕ್ಷ ಜನ ಕಿಕ್ಕಿರಿದು ಸೇರಿದ್ದರು. ಕುಮಾರಕೃಪಾ ಅತಿಥಿ ಮಂದಿರದಿಂದ ತೆರೆದ ಜೀಪಿನಲ್ಲಿ ಸಾರ್ವಜನಿಕ ಸಭೆಗೆ ಹೊರಟರೆ ರಸ್ತೆಗಳ ಇಕ್ಕೆಲಗಳಲ್ಲಿ ಜನತೆ ನಿಂತು ಅವರ ದರ್ಶನ ಪಡೆಯಿತು. ಅವರ ಜೊತೆಯಲ್ಲಿದ್ದ ಈ ಲೇಖಕನಿಗೆ ಇದೇನು ಯಾವ ಪ್ರಧಾನಮಂತ್ರಿಯ ಕಾರ್ಯಕ್ರಮಕ್ಕೂ ಕಡಿಮೆಯಿರಲಿಲ್ಲ ಎನಿಸಿತು. ಅಪರಿಮಿತ ತ್ಯಾಗ, ತಪಸ್ಸು, ಅದ್ವಿತೀಯ ದೇಶಭಕ್ತಿ, ಸತ್ಯ ನಿಷ್ಠೆ, ಸೇವಾ ಪರಾಯಣತೆ, ಸಮಾಜಾಭಿಮುಖ ಸಾಧನೆಯ ಪರಾಕಾಷ್ಠೆಯ ಸಾಧಕ ಜೆ. ಪಿ.ಗೂ ಜನತೆಯ ಹೃನ್ಮನಗಳಲ್ಲಿ ಸುಭದ್ರ ಸ್ಥಾನಗಳಿಸಿರುವ ಲೋಕನಾಯಕನಿಗೂ, ಬರೇ ಚುನಾವಣೆಗಳಲ್ಲಿ ಗೆದ್ದು, ಸ್ಥಾನಬಲ ಅಧಿಕಾರಬಲದ ಮೇಲೆ ಜನತೆಯನ್ನು ಕಲೆಹಾಕಿಕೊಳ್ಳುವ ಪ್ರಧಾನಿಯೊಬ್ಬರಿಗೂ ಎಲ್ಲಿಯ ಹೋಲಿಕೆ? ಇದು ದೃಶ್ಯ ಹೋಲಿಕೆಯೇ ಹೊರತು, ವ್ಯಕ್ತಿ ಗಳ ಹೋಲಿಕೆಯಲ್ಲ ಎಂಬ ಅಂಶವನ್ನು ಮಾತ್ರ ಮರೆಯಬಾರದು. ಅವರ ಸ್ವಾಗತಕ್ಕಾಗಿ ರೈಲ್ವೆ ನಿಲ್ದಾಣದಲ್ಲಿ ಸೇರಿದ್ದ ಭಾರೀ ಜನಸಂದಣಿಯೂ ಇದನ್ನೇ ಪ್ರಮಾಣೀಕರಿಸಿ ಹೇಳುತ್ತದೆ.

ಜಯಪ್ರಕಾಶಕರು ತಮ್ಮ ಬೆಂಗಳೂರು ಕಾರ್ಯಕ್ರಮವನ್ನು ಅಂತ್ಯಗೊಳಿಸುತ್ತಾ ಅರ್ಥಾತ್ ರಾಜ್ಯದ ಕಾರ್ಯಕ್ರಮದ ಸಮಾರೋಪ ಮಾಡುತ್ತಾ ರಾಜ್ಯದ ಸಂಘರ್ಷ ಸಮಿತಿಯನ್ನು ಸಂಘರ್ಷ ನಿರತರ ಅಭಿಮತ ಪಡೆದು ನೇಮಿಸಿದರು. ಕಡಿದಾಳ್ ಮಂಜಪ್ಪ, ಕೆ. ಎಸ್. ಹೆಗಡೆ ಮತ್ತು ಪಿ. ವೆಂಕೋಬರಾವ್. ಈ ತ್ರಿಸದಸ್ಯ ಸಮಿತಿಯ ಸಾರಥ್ಯದಲ್ಲಿ ಕರ್ನಾಟಕ ಆಂದೋಳನ ಮುನ್ನಡೆಯುವುದೆಂಬ ಆಶಯ ವ್ಯಕ್ತಪಡಿಸಿದರು.

ಬಿಹಾರ ಆಂದೋಳನದ ಸಮರ್ಥಕ ಸರ್ವೋದಯ ಕಾರ್ಯಕರ್ತರ ಅ.ಭಾ. ಸಮ್ಮೇಳನ ಜೂನ್ ೧೪ರಿಂದ ೧೬ರವರೆಗೆ ಜಬ್ಬಲ್‌ಪುರದಲ್ಲಿ ನಡೆಯಿತು. ಅದರಲ್ಲಿ ಕರ್ನಾಟಕದ ಪರ ಗರುಡ ಶರ್ಮ, ಸತ್ಯವ್ರತ, ಪಿ. ವೆಂಕೋಬರಾವ್, ಅಶ್ವತ್ಥನಾರಾಯಣ ಗೌಡರು ಪಾಲ್ಗೊಂಡರು. ಜೆ. ಪಿ.ಯವರೂ ಸಮ್ಮೇಳನದಲ್ಲಿದ್ದು ಸೂಕ್ತ ಮಾರ್ಗದರ್ಶನ ಮಾಡಿದರು.

## ಆಪತ್ಕಾಲೀನ ಸ್ಥಿತಿಯ ಘೋಷಣೆ

ಅನಂತರ ಬಹುವೇಗದಿಂದ ಘಟನಾವಳಿ ಜರುಗಿದವು. ಅಲಹಾಬಾದ್ ಹೈಕೋರ್ಟು ತೀರ್ಪು ಹೊರಬಿದ್ದು ಚುನಾವಣಾ ಭ್ರಷ್ಟಾಚಾರ ಆಪಾದನೆಯ ಮೇಲೆ ಇಂದಿರಾಜಿಯ ಆಯ್ಕೆಯನ್ನು ರದ್ದುಗೊಳಿಸಿತು. ಆರು ವರ್ಷಗಳ ಕಾಲ ಚುನಾವಣೆಗಳಲ್ಲಿ ಸ್ಪರ್ಧಿಸಲು ಅನರ್ಹರೆಂದು ತೀರ್ಪು ಹೇಳಿತು. ಇದನ್ನು ಕೇಳಿದ ಜೆ. ಪಿ. ಇಂದಿರಾಜಿ ಪ್ರಧಾನಿಯಾಗಿ ಮುಂದುವರಿಯುವುದು ನೈತಿಕವಾಗಿ, ನ್ಯಾಯತಃ ಮತ್ತು ವ್ಯಾವಹಾರಿಕ ದೃಷ್ಟಿಯಿಂದ ಅಸಂಗತವೆನಿಸುವುದರಿಂದ ಅವರು ಕೂಡಲೆ ಆ ಸ್ಥಾನದಿಂದ

ಹೊರಬರಬೇಕೆಂದು ಸೂಚಿಸಿದರು. ಅಂದೇ ಸಂಜೆ ಗುಜರಾತಿನ ಚುನಾವಣಾ ಫಲಿತಾಂಶವೂ ಪ್ರಕಟವಾಗಿ ಇಂದಿರಾ ಕಾಂಗ್ರೆಸ್ ಸೋತು ಜನತಾ ಮೋರ್ಚಾಕ್ಕೆ ಬಹುಮತ ಬಂದಿತ್ತು. ಅನಂತರ ಜೂನ್ ೨೪ ರಂದು ಸರ್ವೋಚ್ಚ ನ್ಯಾಯಾಲಯದ ತೀರ್ಪು ಹೊರ ಬಂದು ಇಂದಿರಾಜಿಯ ಬೇಡಿಕೆಯಂತೆ ಅಲಹಾಬಾದ್ ನ್ಯಾಯಲಯದ ತೀರ್ಪಿಗೆ ಬೇಷರತ್ ತಡೆಯಾಜ್ಞೆ ಕೊಡಲು ನಿರಾಕರಿಸಿತು. ಇನ್ನೊಂದೆಡೆ ಅವರು ಸ್ಥಾನ ತ್ಯಜಿಸಬೇಕೆಂಬ ಒತ್ತಾಯ-ಒತ್ತಡ ಹೆಚ್ಚಿ ಅದರ ಪರ ಭಾರಿ ಭಾರಿ ಪ್ರದರ್ಶನಗಳು ನಡೆಯುತ್ತಲೇ ಇದ್ದವು. ಕಾಂಗ್ರೆಸ್ ಪಕ್ಷದೊಳಗೂ ಒತ್ತಡ ಹೆಚ್ಚಿ ಅದಕ್ಕಾಗಿ ಸಹಿ-ಸಂಗ್ರಹಣೆಯ ಅಭಿದಾನ ನಡೆಯುವ ಲಕ್ಷಣ ತೋರಿಬಂದಿತು. ಜೂನ್ ೨೦ರಂದು ದೆಹಲಿಯಲ್ಲಿ ಆಕೆಯ ಪರ ಭಾರಿ ರ‍್ಯಾಲಿ ನಡೆದರೆ ಜೂನ್ ೨೫ರಂದು ಅವರ ರಾಜೀನಾಮೆಗೆ ಒತ್ತಾಯಿಸಲು ಅದಕ್ಕೂ ಭಾರಿ ರ‍್ಯಾಲಿ ನಡೆಯಿತು. ಜೆ. ಪಿ.ಯವರ ವೀರಾವೇಶದ ಭಾಷಣವಾಗಿ ಅವರನ್ನು ಕೆಳಗಿಳಿಸುವಂತೆ ಕರೆ ನೀಡಿದರು. ಇಂದಿರಾಜಿಯ ಕಷ್ಟ ಕೋಟಲೆಗಳು ಹೆಚ್ಚುತ್ತಲೇ ಹೋದವು. ಜುಲೈನಲ್ಲಿ ಸಂಸತ್ತನ್ನು ಬೇರೆ ಎದುರಿಸುವುದಿತ್ತು. ವಿರೋಧ ಪಕ್ಷಗಳು ಮಾಡಬಹುದಾದ ಗಲಭೆಗಳ ದರ್ಶನವೂ ಅವರ ಕಣ್ಮುಂದೆ ಬಂದಿತೆಂದು ಕಾಣುತ್ತದೆ. ಹೀಗೆ ಸಹಿಸಲಸದಳ ಕಷ್ಟಪರಂಪರೆಗಳಿಂದ ತಾವು ಉಳಿದು ಕೊಳ್ಳುವ ಒಂದೇ ಒಂದು ಉಪಾಯವೆಂದರೆ ದೇಶದಲ್ಲಿ ಆಂತರಿಕ ತುರ್ತು ಪರಿಸ್ಥಿತಿಯನ್ನು ಹೇರುವುದು, ಅವರಿಗೆ ಅದೇ ತಮ್ಮ ಕೈಯಲ್ಲಿರುವ ಕೊಟ್ಟಕೊನೆಯ ಅಸ್ತ್ರ ಅಂತಿಮ ಉಪಾಯವೆಂದು ಹೊಳೆಯಿತು; ಆ ನಿಶ್ಚಯಕ್ಕೆ ಬಂದರು. ಜೂನ್ ೨೫ರ ಕರಾಳರಾತ್ರಿಯಲ್ಲಿ ತುರ್ತು ಪರಿಸ್ಥಿತಿಯನ್ನು ಹೇರಿದ ಘೋಷಣೆ ಆಯಿತು. ದೇಶದ ಮೇಲೆ ಬರಸಿಡಿಲೆರಗಿತು. ಇಡೀ ದೇಶ ಅವಾಕ್ಕಾಗಿ ಸ್ತಬ್ಧವಾಯಿತು. ಒಂದು ಬಗೆಯ ಭೀತಿಯ ವಾತಾವರಣ ಆಚ್ಛಾದಿಸಿತು. ಜಯಪ್ರಕಾಶರು, ವಿರೋಧ ಪಕ್ಷದ ನಾಯಕರು ಮತ್ತು ಸಹಸ್ರಾರು ಕಾರ್ಯಕರ್ತರನ್ನು ಸೆರೆಮನೆಗೆ ಅಟ್ಟಿದರು.

ಇಡೀ ದೇಶ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ತನ್ನ ಮನೆಯಲ್ಲಿ ತಾನೇ ಬಂದಿಯಾಗಿ, ದೇಶವೇ ಬಂದೀಖಾನೆಯಾಗಿ ಮಾರ್ಪಟ್ಟು, ನಂಬಲಾಗದ ವಿಲಕ್ಷಣ ಹಾಗೂ ಕ್ರೂರ ಆದೇಶಗಳ ಚಕ್ರಾಘಾತಕ್ಕೆ ಸಿಕ್ಕಿಬಿತ್ತು. ಮೂಲಭೂತ ಹಕ್ಕುಗಳ ಸ್ಥಗಿತ, ಪತ್ರಿಕೆಗಳ ಮೇಲೆ ಸೆನ್ಸಾರ್ ಬೀಗಮುದ್ರೆ, ನ್ಯಾಯಾಂಗವನ್ನು ಪಂಗುವಾಗಿಸುವ ವಿಧಿಗಳು, ತದನಂತರ ಜುಲೈ ೩ರಿಂದ ಅನೇಕಾನೇಕ ಕೋಮು ಸಂಘಟನೆಗಳ ಮೇಲೆ ಅಕ್ರಮ ಸಂಘಟನೆಗಳೆಂಬ ನಿಷೇಧಾಜ್ಞೆ ಜಾರಿ. ಹೀಗೆ ಒಂದರ ಮೇಲೊಂದು ಕ್ರಮದ ಸಾರುವಿಕೆ ಮತ್ತು ಸಹಸ್ರಾರು ಬಂಧನಗಳು ನಡೆದವು. ಯಾರನ್ನು ಬಂಧಿಸಿ ಎಲ್ಲಿ ಯಾವ ಸೆರೆಮನೆಯಲ್ಲಿಟ್ಟರೆಂಬ ಸುದ್ದಿ-ಸಮಾಚಾರವೂ ದೊರೆಯದಾಯಿತು. ಇವೆಲ್ಲ ಗೌಪ್ಯ ವಿಷಯಗಳಾದವು! ಇದು ಆಂಗ್ಲರ ಕಾಲದಲ್ಲೂ ಕಂಡು-ಕೇಳರಿಯದ ಕ್ರಮವಾಯಿತು! ತಮ್ಮ ಸಂಸದೀಯ ಸಮಿತಿಯ ಕಾರ್ಯಕ್ಕಾಗಿ ಬಂದಿದ್ದ ಅಟಲ ಬಿಹಾರಿ ವಾಜಪೇಯಿ, ಮಧುದಂಡವತೆ, ಎಸ್. ಎನ್. ಮಿಶ್ರ, ಎಲ್. ಕೆ. ಅಡ್ವಾಣಿಯವರನ್ನು ಬಂಧಿಸಿ ಬೆಂಗಳೂರು ಕೇಂದ್ರೀಯ ಸೆರೆಮನೆಯಲ್ಲಿಡಲಾಯಿತು. ಅನೇಕಾನೇಕ ಪತ್ರಿಕೆಗಳು ಮುಚ್ಚಿಹೋದವು ಅಥವಾ ಮುಚ್ಚಿಸಲ್ಪಟ್ಟವು. ೨೬ರ ಬೆಳಗಿನ ಪ್ರಮುಖ ದಿನಪತ್ರಿಕೆಗಳು ಸಂಪಾದಕೀಯ ಲೇಖನಗಳಿಲ್ಲದೆ ಆ ಸ್ಥಳವನ್ನು ಖಾಲಿ ಬಿಟ್ಟು, ಅಲ್ಲಲ್ಲೆ ಖಾಲಿ ಬಿಟ್ಟ ಪುಟಗಳ ಕಾಲಂಗಳಲ್ಲಿ ಕಪ್ಪು ಪಟ್ಟಿ ಹಾಕಿ ಹೊರಬಂದವು. ಹೀಗೇಕೆಂದು ಜನತೆಗೆ ಅರ್ಥವಾಗುವುದೇ ಕಷ್ಟವಾಯಿತು. ಸೆನ್ಸಾರ್‌ಷಿಪ್ ಜನತೆಗೆ ತಿಳಿಯದ ವಿಷಯವಾಗಿತ್ತು.

ತುರ್ತು ಪರಿಸ್ಥಿತಿಯ ಸಿಡಿಲೆರಗಿದಾಗ ಬೆಂಗಳೂರಲ್ಲಿದ್ದ ನಾವು ಕೆಲವರು ಮಾಡಿದ ಮೊದಲ ಕೆಲಸವೆಂದರೆ ಜೆ. ಪಿ. ಚಳವಳಿಯ ರಾಜ್ಯ ಕಾರ್ಯಾಲಯವಾಗಿ ಕಾರ್ಯನಿರ್ವಹಿಸುತ್ತಿದ್ದ ವಲ್ಲಭನಿಕೇತನದ ಕಾರ್ಯಾಲಯವನ್ನು ಮುಚ್ಚಿಹಾಕಿ ಸಮಸ್ತ ಕಾಗದಪತ್ರ ಫೈಲುಗಳು ಮತ್ತು ಪ್ರಚಾರ ಸಾಹಿತ್ಯವನ್ನು ಗಂಟುಕಟ್ಟಿ ಬೇರೊಂದು ಸುರಕ್ಷಿತ ಸ್ಥಳಕ್ಕೆ, ವರ್ಗಾಯಿಸಿದ್ದು. ಪಾಕ್ಷಿಕ ಪತ್ರಿಕೆಯಾಗಿ, ಕರ್ನಾಟಕಕ್ಕೆಲ್ಲ ಜೆ. ಪಿ. ವಾಣಿಯಾಗಿ, ಚಳವಳಿಯ ಮುಖಪತ್ರವಾಗಿ ಪ್ರಕಟವಾಗುತ್ತಿದ್ದ ಪಾಕ್ಷಿಕ ಪತ್ರಿಕೆ ಭೂದಾನ (ಸರ್ವೋದಯ ಸಂದೇಶ)ವನ್ನು ಸೆನ್ಸಾರ್ ಅಧಿಕಾರಿಗಳು ಬರುವುದರೊಳಗಾಗಿ ಮುಚ್ಚಿಹಾಕಿ ಕೂಡಲೆ ನಿಲ್ಲಿಸಿದ್ದು.

**ಚಳವಳಿಯ ಹಾದಿ ಗುಪ್ತಗಾಮಿ :** ಐತಿಹಾಸಿಕ ಸತ್ಯಸಂಗತಿಯೊಂದನ್ನು ಮೆಲುಕು ಹಾಕುವುದು ಸುಸಂಗತವೆನಿಸುವುದು. ನಿರ್ಬಂಧ-ನಿಷೇಧಗಳ ಸಂಕಷ್ಟ -ಸಂಕೋಲೆಗಳ ಮತ್ತು ಆತಂಕ ಆಶಂಕೆಗಳ ನಡುವೆ ಉಸಿರು ಕಟ್ಟುವ ವಾತಾವರಣದಲ್ಲಿ ಮಾನವನ ಚೈತನ್ಯ ಕಾರ್ಯಮಾಡಲು ಅದರೊಡನೆ ಹೊಂದಿಕೊಂಡಿರಲು ಒಪ್ಪುವುದಿಲ್ಲ. ಆ ಸ್ಥಿತಿಯಲ್ಲಿ ಬಹುಕಾಲ ಅದುಮಿಕೊಂಡಿರಲು ಸಮ್ಮತಿಸದು. ಅದು ನೇರ ಪ್ರತ್ಯಕ್ಷ ಮತ್ತು ಮುಕ್ತ ವಾತಾವರಣ ಬಯಸುತ್ತದೆ. ಆ ವಾತಾವರಣ ಲಭ್ಯವಿಲ್ಲದಿದ್ದಾಗ ಅದು ತಾನಾಗಿಯೇ ಅನ್ಯ ಮಾರ್ಗಗಳ ಕಡೆ ಹೊರಳುತ್ತದೆ. ಆದರೆ ತೆಪ್ಪನಿರಲು ಸರ್ವಥಾ ಒಪ್ಪದು. ಸಮಸ್ತ ಸಂಕೋಲೆಗಳನ್ನು ಕಿತ್ತೆಸೆಯಲು ಎಂಥ ಭಗೀರಥ ಪ್ರಯತ್ನಕ್ಕೂ ತಯಾರಾಗುತ್ತದೆ. ಎಂಥ ಬೆಲೆಯನ್ನಾದರೂ ತೆರಲು ಸಿದ್ಧ. ಆದರೆ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲು ಮಾತ್ರ ಒಪ್ಪದು. ಏಕೆಂದರೆ ಅದಕ್ಕೆ ಅದು ಅತಿ ಪವಿತ್ರ, ಅತ್ಯಮೂಲ್ಯ ಮತ್ತು ಅಷ್ಟೇ ಮೂಲಭೂತ ನಂಬಿಕೆ. ಆದುದರಿಂದ ಅದರ ಅಭಿವ್ಯಕ್ತಿಯ ಸುಪ್ರಸಿದ್ಧ

ಮಾರ್ಗಗಳು ಮುಚ್ಚಿದಾಗ ಅವನ ಚೈತನ್ಯಶಕ್ತಿ ಅನ್ಯಮಾರ್ಗಗಳನ್ನು ಹುಡುಕುತ್ತದೆ. ತೆರೆಯ ಮರೆಯಲ್ಲಿ, ಭೂಗತರಾಗಿ, ಗುಪ್ತಗಾಮಿಗಳಾಗಿ ಚಳವಳಿಯನ್ನು ಮುಂದುವರಿಸುತ್ತದೆ. ಇತಿಹಾಸದುದ್ದಕ್ಕೂ, ಜಗತ್ತಿನೆಲ್ಲೆಡೆ ಇಂಥ ಪರಿಸ್ಥಿತಿಯಲ್ಲಿ ನಡೆದಿರುವುದೇ ಹೀಗೆ. ಜನ ಸಮೂಹಗಳು ಎಷ್ಟು ವೈವಿಧ್ಯಮಯವಾಗಿದ್ದರೇನಂತೆ ಅವೆಲ್ಲ ನಡೆದುಕೊಂಡಿರುವುದೇ ಹೀಗೆ. ಗಾಂಧೀಜಿ ಇಂಥ ಗುಪ್ತ-ಭೂಗತ ಕಾರ್ಯಾಚರಣೆಯ ತತ್ತ್ವಜ್ಞಾನವನ್ನಾಗಲಿ, ತನ್ಮೂಲಕ ಪಡೆದ ಗುರಿಯನ್ನಾಗಲೀ ನಿರಾಕರಿಸಿದರು. ಆ ಬಗೆಯ ಹೋರಾಟದ ವಿಧಾನವನ್ನೇ ಅವರು ತಿರಸ್ಕರಿಸಿದರು. ಅದನ್ನು ಪ್ರೋತ್ಸಾಹಿಸಲೂ ಇಲ್ಲ. ಆದರೆ ಅನ್ಯ ವಿಚಾರಧಾರೆಗಳ ಜನ ತಮ್ಮ ನಂಬಿಕೆಗನುಸಾರ ಭಿನ್ನ ಮಾರ್ಗ ಹಿಡಿಯುವುದನ್ನು ಗಾಂಧೀಜಿಯ ನಂತರದ ಕಾಲದಲ್ಲಿ ತಡೆಯುವುದು ಸಾಧ್ಯವಾಗಲಿಲ್ಲ. ಇದು ಈಗಿನ ವಾಸ್ತವಿಕ ಸಂಗತಿ. ಆದುದರಿಂದ ಭಾರತದಲ್ಲಿ ತುರ್ತುಪರಿಸ್ಥಿತಿಯ ವಿರುದ್ಧ ಬಹುವ್ಯಾಪಕವಾದ ಭೂಗತ ಕಾರ್ಯಾಚರಣೆ ನಡೆಯಿತು.

ಅಗಾಧ ನಿರ್ಬಂಧ-ನಿಷೇಧಗಳ ಮಧ್ಯೆಯೂ ಚಳವಳಿಯನ್ನು ಜೀವಂತವಾಗಿಡುವುದಲ್ಲದೆ ಬೆಳೆಸಬೇಕಾಗಿತ್ತು. ಜನತೆಯವರೆಗೆ ಯಥಾರ್ಥ ಸುದ್ದಿ ಸಂಗ್ರಹ ತಲುಪಿಸಬೇಕಾಗಿತ್ತು. ದೀರ್ಘಕಾಲದ, ಅನಿಶ್ಚಯತೆಯ ಹೋರಾಟಕ್ಕೆ ಜನತೆಯ ಸಹಾನುಭೂತಿ ಬೆಂಬಲ ಮತ್ತು ಸಕ್ರಿಯ ಪಾತ್ರವನ್ನೂ ಹೆಚ್ಚಿಸಿಕೊಳ್ಳಬೇಕಾಗಿತ್ತು. ಆದುದರಿಂದ ಈ ದಿಶೆಯಲ್ಲಿ ಕಾರ್ಯತತ್ಪರರಾಗುವುದು ಅನಿವಾರ್ಯವಾಯಿತು.

ಆಪತ್ಕಾಲೀನ ಪರಿಸ್ಥಿತಿಯ ಘೋಷಣೆಯಿಂದಲೇ ಜೆ. ಪಿ. ಆಂದೋಳನ ಮತ್ತೊಂದು ತೀರ ಭಿನ್ನದಿಶೆ ಹಿಡಿದು ಸಾಗುವಂತಾಯಿತು. ಯಾವ ಆಂದೋಳನ ಸಮಾಜ ಪರಿವರ್ತನೆ ಮತ್ತು ಅದಕ್ಕಾಗಿ ಸಂಪೂರ್ಣ ಕ್ರಾಂತಿಯ ದಿಶೆ ಹಿಡಿದು ಕಾರ್ಯ ಮಾಡುತ್ತಿತ್ತೋ ಅದು ಈ ಮುಂಚೆ ತನ್ನ ನಿರ್ದಿಷ್ಟ ಮಾರ್ಗದಿಂದ ಎರಡು ಬಾರಿ ವಿಚಲಿತವಾಗಿಹೋಗಿತ್ತು. ಮೊದಲನೆಯದು ಬಿಹಾರ ವಿಧಾನಸಭೆಯ ವಿಸರ್ಜನೆಯ ಅಂಶವನ್ನು ತನ್ನ ಬೇಡಿಕೆಗಳ ಪಟ್ಟಿಯಲ್ಲಿ ಸೇರಿಸಿಕೊಂಡಾಗ, ಎರಡನೆಯದಾಗಿ ಇಂದಿರಾಜಿ ಎಸೆದ ಚುನಾವಣೆಯನ್ನೆದುರಿಸುವ ಸವಾಲನ್ನು ಸ್ವೀಕರಿಸಿದಾಗ. ಈಗ ಇದು ಮೂರನೆಯ ಬಾರಿ ಅನುಭವಿಸಿದ ವಿಚಲನೆ, ಅ-ಸಾಮಾನ್ಯ ತಿರುವು ಎನ್ನಬೇಕು. ಸಮಾಜ ಪರಿವರ್ತನೆಯ ಮಾತಿರಲಿ, ತನ್ನ ಕೈಯಲ್ಲಿದ್ದು ಕಳಚಿಹೋದ ಮೂಲಭೂತ ಸ್ವಾತಂತ್ರ್ಯವನ್ನು ಪುನಃ ಗಳಿಸುವ ಬುಡಮಟ್ಟದ ಹೋರಾಟಕ್ಕಿಳಿಯಬೇಕಾದ ತೀರ ಭಿನ್ನ ಪ್ರಸಂಗ. ಎಂದರೆ ಹಿಮ್ಮೆಟ್ಟಿದ ಹೋರಾಟ ಮತ್ತೆ ಓಂನಾಮದಿಂದ ಪ್ರಾರಂಭಿಸಬೇಕಾದ ಹೋರಾಟ. ಇತಿಹಾಸ ೫೦-೬೦ ವರ್ಷ ಹಿಂದೆ ಬಿದ್ದಂತೆ. ಹೀಗೆ ಮೂರು ಬಾರಿ ವಿಚಲಿತಗೊಂಡ ಆಂದೋಳನದ ಮೂಲ ಉದ್ದೇಶಗಳ ಗತಿ ಏನಾಗಿರಬೇಕು? ಅವೆಲ್ಲ ಎಲ್ಲಿಯೋ ಮೂಲೆಗುಂಪಾಗಿ ಅಡಗಿಕೊಂಡಿರಬೇಕಾಯಿತು. ಇವೆಲ್ಲ ದುರದೃಷ್ಟಕರ ದುರಂತಮಯ ಬೆಳವಣಿಗೆಗಳ ಕಾರಣ ಜೆ. ಪಿ. ತೀರದುಃಖಿ, ವೇದನಾಗ್ರಸ್ತರಾಗದೇ ಇದ್ದಾರೇ? ಆದರೂ ಎದುರಿಗಿರುವ ವಿಷಮ ಪರಿಸ್ಥಿತಿಯಿಂದ ಜಗ್ಗದೆ-ಕುಗ್ಗದೆ'' ಯುದ್ಧ್ಯಸ್ವವಿಗತಜ್ವರಃ''ದ ಸಾಧಕರಾಗಿ, ಎಂದರೆ ಸಂತಾಪರಹಿತ, ಮಮತ್ವ ಮತ್ತು ಆಸಕ್ತಿ ರಹಿತರಾಗಿ ಹೋರಾಟವನ್ನು ಮುಂದುವರಿಸಿದರು.

## ತೆರೆಮರೆಯ ಕಾರ್ಯದ ಸಪ್ತದಿಶೆ

ತೆರೆಯಮರೆಯಲ್ಲಿ, ಭೂಗತ ಕಾರ್ಯಾಚರಣೆಯ ಮಾರ್ಗ ಯಾರಿಗೆ ರುಚಿಸದಾಯಿತೋ ಅಥವಾ ಅದರಲ್ಲಿ ನಂಬಿಕೆಯಾಗಲಿ, ನೈಪುಣ್ಯವಾಗಲಿ ಇಲ್ಲದವರೋ ಅಥವಾ ಅದು ತತ್ವಶ: ತಪ್ಪೆಂದು ತಿಳಿದಿದ್ದರೋ ಅವರು ನೇರ ವಿರೋಧ ಮತ್ತು ಅದರ ಪರಿಣಾಮಗಳನ್ನು ಎದುರಿಸುವ ತೀರ್ಮಾನ ಕೈಗೊಂಡರು. ಸರ್ವೋದಯ ಕಾರ್ಯಕರ್ತರು ಇವರಲ್ಲಿ ಪ್ರಮುಖರು. ಮೊದಮೊದಲು ೨-೩ಕಡೆ ಗುಪ್ತವಾಗಿ ಸೇರಿ ಕಾರ್ಯದ ಸಂಯೋಜನೆಯ ಬಗ್ಗೆ ಅನ್ಯರೊಡಗೂಡಿ ಸಹಕರಿಸಿ ನಿಶ್ಚಯಿಸಿಕೊಳ್ಳುವ ಪ್ರಯತ್ನವಾಯಿತು. ಆದರೆ ಆ ಕ್ರಮ ಹೆಚ್ಚೇನೂ ಮುಂದುವರಿಯಲಿಲ್ಲ. ಅಂಥದೊಂದು ಪ್ರಸಂಗ ಮನಸ್ಸಿನ ಮೇಲೆ ಇನ್ನೂ ಅಚ್ಚಳಿಯದೇ ಉಳಿದಿದೆ. ಅಂದಿನ ಸಂಸ್ಥಾ ಕಾಂಗ್ರೆಸ್ ಭವನ (ಈಗಿನ ಜನತಾ ಭವನ) ದಲ್ಲಿ ಕೆಲವು ಜನ ಪ್ರಮುಖರ ಸಭೆ ಸೇರಿತ್ತು. ವಿರೋಧಿ-ಆಂದೋಳನವನ್ನು ಮುಂದುವರಿಸುವ ಬಗೆ ಮತ್ತು ತುರ್ತು ಪರಿಸ್ಥಿತಿಯನ್ನು ವಿರೋಧಿಸುವ ಬಗೆ ಇವೇ ಮುಖ್ಯ ಚರ್ಚಾ ವಿಷಯಗಳು. ಎಲ್ಲರ ಮನಸ್ಸಿನಲ್ಲಿ ಆತಂಕ-ಆತುರ ಕವಿದಿತ್ತು. ಆ ಸಭೆಯಲ್ಲಿ ಹಿರಿಯ ಮುತ್ಸದ್ದಿ ನಿಜಲಿಂಗಪ್ಪನವರು ಇದ್ದರು. ಆದ್ದರಿಂದ ಅದಕ್ಕೊಂದು ವಿಶೇಷ ಮಹತ್ವ ಬಂದಿತ್ತು. ಮುಂದಿನ ಕಾರ್ಯರೂಪ ಹೇಗಿರಬೇಕು ಮತ್ತು ತಕ್ಷಣ ಕೈಗೊಳ್ಳಬೇಕಾದ ಕಾರ್ಯಕ್ರಮ ಏನಿರಬೇಕೆನ್ನುವುವು ಆರಂಭದ ಚರ್ಚಾವಿಷಯಗಳು. ಭೂಗತರಾಗಿ ಕಾರ್ಯ ಮಾಡಬಹುದಾದವರು ಹಾಗೆ ಮಾಡಲೆಂಬ ಕಡೆ ಚರ್ಚೆ ಹೊರಳಿತು. ತಿಳಿನಗೆಯಲೆಯ ಮಧ್ಯೆ ನಿಜಲಿಂಗಪ್ಪನವರೆಂದರು : ಭೂಗತರಾಗಿ ಕಾರ್ಯ ಮಾಡಬಯಸುವವರು ಹಾಗೆ ಮಾಡಲಿ. ಆ ವಿಷಯದಲ್ಲಿ ಮತಭೇದವಿಲ್ಲ. ನನ್ನ ಸ್ಥಿತಿ ಬೇರೆ. ನಾನು ಇಚ್ಛಿಸಿದರೂ ಆ ಬಗೆಯ ಕಾರ್ಯ ನನ್ನಿಂದ ಸಾಧ್ಯವಾಗದು. ಅದು ಬಹು ಬೇಗ ಅರ್ಥಹೀನವಾಗುವುದು. ಉಳಿದೆಲ್ಲ ಕಾರ್ಯಕ್ಕೆ ನನ್ನ ಬೆಂಬಲ ಉಂಟು ಎಂದರು. ತಮ್ಮ ಸಲಹೆ-ಸೂಚನೆಯಂತೆ ನಡೆಯುತ್ತೇವೆ. ತಮ್ಮ ಸಂಪರ್ಕದಲ್ಲಿರುವವು ಎಂದು ಸೇರಿದ್ದವರು ಅವರಿಗೆ ಭರವಸೆ ನೀಡಿ ಚದುರಿದರು.

ತೆರೆಮರೆಯ-ಭೂಗತ ಕಾರ್ಯಾಚರಣೆಯೆಂದರಾಯಿತು ಆ ಮಾರ್ಗದಲ್ಲಿ ನುರಿತವರು, ನೈಪುಣ್ಯ ಸಾಧಿಸಿದವರು, ಅನುಭವ ಪಡೆದಿದ್ದ ಜನ ಮತ್ತು ಸಂಘಟನೆಗಳಿಗೇನೂ ಕಡಿಮೆ ಇರಲಿಲ್ಲ. ಕರ್ನಾಟಕದಲ್ಲಾಗಲಿ, ಭಾರತದಲ್ಲಾಗಲಿ ಅಂಥ ಬಲಿಷ್ಠ ಸಂಘಟನೆಗಳಿದ್ದವು. ರಾಷ್ಟ್ರೀಯ ಸ್ವಯಂ ಸೇವಕ ಸಂಘ, ಜಮಾತ್-ಎ-ಇಸ್ಲಾಮಿ ಇಂಥ ಸಂಘಟನೆಗಳು. ಈ ಸಂಘಟನೆಗಳನ್ನು ಭಾರತ ಸರ್ಕಾರ ನಿಷೇಧಿಸಿದಾಗ (ಜುಲೈ ೨-೩, ೧೯೭೫) ಮತ್ತು ಅವುಗಳ ಮೇಲೆ ಕಟ್ಟೆಚ್ಚರದಿಂದಿದ್ದು ನೇರ ಪ್ರಹಾರ ಆರಂಭಿಸಿದಾಗಲೇ ತುರ್ತು ಪರಿಸ್ಥಿತಿ ವಿರೋಧಿ ಚಳವಳಿಗೆ ದೊಡ್ಡ ಪ್ರಮಾಣದಲ್ಲಿ ಧುಮುಕಿದರು. ಅದುವರೆಗೂ ಆರ್. ಎಸ್. ಎಸ್. ಬಿಹಾರ ಆಂದೋಳನದಲ್ಲಿ ಹೆಚ್ಚೇನೂ ತೊಡಗಿಕೊಂಡಿರಲಿಲ್ಲ. ನೇರ ಪ್ರಹಾರ ತನ್ನ ನಾಯಕರ ಮೇಲೆ, ಕಾರ್ಯಾಲಯಗಳ ಮೇಲೆ, ಸಾಧನ ಸಾಮಗ್ರಿಗಳ ಜಪ್ತಿ ಮಾಡಿ, ಆರ್ಥಿಕ ಮೂಲಗಳ ಮೇಲೆ ಧಾಳಿಯ ಮೂಲಕ ಆದಾಗ ಅದು ತನ್ನ ಸಮಸ್ತಶಕ್ತಿಯನ್ನೂ ಮೇಳವಿಸಿಕೊಂಡು ಕಣಕ್ಕಿಳಿಯಿತು. ನುರಿತ ಮೂಲ ಬಲಾಧಾರಿತ ಸಂಘಟನೆ ಎನಿಸಿದ ಆರ್. ಎಸ್. ಎಸ್. ಭಾರಿ ಪ್ರಮಾಣದ ವಿರೋಧಿ ಆಂದೋಳನ ಆರಂಭಿಸಿತು. ದಕ್ಷತೆಯಿಂದ ಪ್ರತಿಭಟನಾ ಕಾರ್ಯ ಮಾಡಿತು. ತೆರೆಮರೆಯ ಭೂಗತ ಮತ್ತು ರಹಸ್ಯ ಕಾರ್ಯಾಚರಣೆಯಲ್ಲಿ ನಂಬಿಕೆಯುಳ್ಳ ಈ ಸಂಘಟನೆ ಶಿಸ್ತು ಮತ್ತು ತತ್ಪರತೆಯಿಂದ ದುಡಿಯಿತು. ವಿರೋಧಿ ಆಂದೋಳನವನ್ನು ಬಲಪಡಿಸಿತು.

ಭೂಗತ ಹೋರಾಟ ಮುಖ್ಯವಾಗಿ ನಾಲ್ಕಾರು ದಿಶೆಗಳಲ್ಲಿ ಸಾಗಿತು. ೧. ಕೆಲಸಗಾರರ ಪ್ರತಿರೋಧ ಶಕ್ತಿಯನ್ನು ಯಥಾವತ್ತಾಗಿ ಉಳಿಸಿ-ಬೆಳೆಸಿ ಆದಷ್ಟು ಹೆಚ್ಚು ಹೋರಾಟದ ಕೇಂದ್ರಗಳನ್ನು ಸಂಘಟಿಸುವುದು. ೨. ಭೂಗತ ಸುದ್ದಿ-ಪತ್ರ-ಕರಪತ್ರಗಳನ್ನು ವ್ಯಾಪಕವಾಗಿ ಹಂಚಿಸುವುದು. ಆ ಮೂಲಕ ಜನತೆಗೆ ಯಥಾರ್ಥ ಸಂಗತಿ - ಸಮಾಚಾರಗಳನ್ನು ತಿಳಿಸುವುದು. ಸರ್ಕಾರಿ ಮಾಧ್ಯಮಗಳ ಮೂಲಕ ಪ್ರಸಾರವಾಗುವ ವಿಷಯಗಳನ್ನು ಜನತೆ ಮುಗ್ಧರಂತೆ ನಂಬುವುದನ್ನು ತಡೆಗಟ್ಟುವುದು. ಅಂಥ ಸರ್ಕಾರಿ ಹೇಳಿಕೆ, ಪ್ರಕಟಣೆ, ಘೋಷಣೆ ಇತ್ಯಾದಿಯ ಪ್ರಭಾವಕಾರಿ ಪ್ರತಿವಾದ, ವಿರೋಧ ಮತ್ತು ನಿರಾಕರಣೆಯಾಗುವಂತೆ ನೋಡಿಕೊಳ್ಳುವುದು ೩. ತೆರೆಯಮರೆಯ ಮತ್ತು ತೆರೆಯಾಚೆಯ ಕಾರ್ಯಕರ್ತರ ನಡುವೆ, ಭೂಗತ ಭೂಗತರ ನಡುವೆ; ಇವರೆಲ್ಲರ ಮತ್ತು ನಾಯಕರ ಮಧ್ಯೆ ಸತತ ಸಂಪರ್ಕ ಸಾಧನೆ. ೪. ಸೆರೆಯೊಳಗಿರುವವರ ಮನೋಬಲ, ಉನ್ನತ ನಡವಳಿಕೆ ಮತ್ತು ವಿಚಾರಗಳಿಂದ ಹೊರಗಡೆಯ ಚಳವಳಿಗೆ ಸ್ಫೂರ್ತಿ ಮತ್ತು ಶಕ್ತಿ ದೊರೆಯುತ್ತಿರುವಂತೆ ನೋಡಿಕೊಳ್ಳುವುದು. ೫. ಮೇಲಿನ ನಾಲ್ಕೂದಿಶೆಯ ಕಾರ್ಯದ ಪರಿಣಾಮ ಮತ್ತು ಉದ್ಭವಿಸಬಹುದಾದ ಸಮಸ್ಯೆಗಳನ್ನು ಎದುರಿಸಲು- ಅನುಭವಿಸಲು ಮುಂದಾಗಿರುವುದು. ೬. ಸೆರೆಮನೆಯ, ಭೂಗತ ಕಾರ್ಯಕರ್ತರ, ಪೋಲಿಸ್ ಚಿತ್ರಹಿಂಸೆಗೊಳಗಾಗಿ ನೊಂದವರ, ಕಾಯಿಲೆಗಳಿಗೆ ತುತ್ತಾದ ಈ ಜನರ ಪರಿವಾರದವರಿಗೆ ಯತ್ಕಿಂಚಿತ್ ಸಹಾಯ-ಸಾಂತ್ವನ ನೀಡುವ ಕಾರ್ಯ, ಕೋರ್ಟ್‌ಗಳಲ್ಲಿ ಕೇಸ್, ಬೇಲ್-ಪೇರೋಲ್ ಮೇಲೆ ಬಿಡುಗಡೆ, ಹೈ ಕೋರ್ಟ್‌ನಲ್ಲಿ ಹೇಬಿಯಸ್ ಕಾರ್ಪಸ್ ಅರ್ಜಿ-ಅರ್ಪಣೆ-ವಿಚಾರಣೆ, ಮುಂತಾದ ಕಾರ್ಯಗಳಿಗೆ ಗಮನ. ೭. ಚಳವಳಿಯ ವೈಚಾರಿಕ ನೆಲೆ-ನೆಲೆಯ ನಿರಂತರ ಪ್ರಚಾರ. ಅದಕ್ಕಾಗಿ ಮೇಧಾವಿ ವಿಚಾರವಂತರ-ಚಿಂತಕರ ನಿಕಟ ಸಂಪರ್ಕದಲ್ಲಿದ್ದು, ಅವರಿಂದ ಬರೆಯಿಸಿ ಅಥವಾ ಬರೆದ ಸಾಹಿತ್ಯದ ಪ್ರಚಾರ-ಪ್ರಸಾರ.

ಹೀಗೆ ಭೂಗತ ಕಾರ್ಯ ಈ ಏಳೂ ದಿಶೆಯಲ್ಲಿ ನಡೆಯುತ್ತಿತ್ತು. ಸಂಘರ್ಷದಲ್ಲಿ ಪಾಲ್ಗೊಂಡ ಎಲ್ಲ ಸಂಘಟನೆಗಳೂ ತಮ್ಮ ಶಕ್ತ್ಯಾನುಸಾರ ಮೇಲಿನ ದಿಶೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು.

**ಬಹಿರಂಗ ವಿರೋಧ - ನೇರ ಸತ್ಯಾಗ್ರಹ** : ಇದಕ್ಕೆ ಮೊದಲು ಬರೆದಿರುವಂತೆ ಎರಡು-ಮೂರು ಬಾರಿ ನಡೆಸಿದ ಗುಪ್ತ ಸಭೆಗಳ ತೀರ್ಮಾನದಂತೆ ಕೂಡಲೆ ನಡೆಸಬಹುದಾದ ಎರಡು ಕಾರ್ಯಕ್ರಮ ನಿಶ್ಚಯವಾದವು : ೧. ಶಾಲಾ-ಕಾಲೇಜ್ ಮತ್ತು ವಿಶ್ವವಿದ್ಯಾಲಯ ಬಂದ್‌ಗೆ ಕರೆ ೨. ಕರ್ನಾಟಕ ಬಂದ್‌ಗೆ ಕರೆ. ಅದಕ್ಕೆ ಬೇಕಾದ ಭಿತ್ತಿ ಪತ್ರ-ಕರಪತ್ರಗಳನ್ನು ತಯಾರಿಸಿ ರಾಜ್ಯಾದ್ಯಂತ ರವಾನಿಸುವ ವ್ಯವಸ್ಥೆ ಹೇಗೋ ಆಗೇಹೋಯಿತು. ಈ ಎರಡೂ ಕರೆಗಳಿಗೆ ಮಿಶ್ರ ಪ್ರತಿಕ್ರಿಯೆ ದೊರೆಯಿತೆಂದು ಹೊರಗಿದ್ದವರಿಂದ ತಿಳಿಯಿತು. ಈ ಲೇಖಕ ಆ ಹೊತ್ತಿಗಾಗಲೆ ಸೆರೆಮನೆ ಸೇರಿದ್ದು. ಡಿ. ಐ. ಆರ್. ನಲ್ಲಿ ಬಂಧಿಸಲ್ಪಟ್ಟು ಅದರಲ್ಲಿ ನಾಲ್ಕು ತಿಂಗಳ ಸೆರೆವಾಸ ಅನುಭವಿಸಿದ. ಹೊರಬಂದು ಎರಡು ಸತ್ಯಾಗ್ರಹಿ ತುಕಡಿಗಳನ್ನು ತಯಾರಿಸಿ ನೇರಸತ್ಯಾಗ್ರಹ ಕೈಗೊಳ್ಳುವಂತೆ ಅನ್ಯ ಕಾರ್ಯಕರ್ತರೊಂದುಗೂಡಿ ಅವನ್ನು ಸಂಘಟಿಸಿದ. ಎರಡೂ ತುಕಡಿಗಳು ಬಂಧನಕ್ಕೊಳಗಾದವು. ಮೂರನೆ ತುಕಡಿಯ ಸಂಘಟನೆಗೆ ತೊಡಗಿದ. ಆ ಹೊತ್ತಿಗೆ ಎಂದರೆ ಡಿಸೆಂಬರ್ ತಿಂಗಳ ೧೦ನೇ ದಿನಾಂಕ ಭಾರಿ ವಿರೋಧ ಪ್ರದರ್ಶನದ ಏರ್ಪಾಡಾಯಿತು. ಪಕ್ಷಗಳ ಅನೇಕ ನಾಯಕರು ಆ ಪ್ರದರ್ಶನದಲ್ಲಿ ಭಾಗವಹಿಸಿದ್ದರು. ವೀರೇಂದ್ರ ಪಾಟೀಲ್, ಎಂ. ಎಸ್. ಗುರುಪಾದಸ್ವಾಮಿ, ವಿ. ಎಸ್. ಕೃಷ್ಣ ಅಯ್ಯರ್, ಟಿ. ಆರ್. ಶಾಮಣ್ಣ ಮತ್ತಿತರನೇಕರು ಸೇರಿದ್ದರು. ಪ್ರದರ್ಶನದಲ್ಲಿ ಈ ಲೇಖಕನೂ ಸೇರಿಕೊಂಡ. ಪ್ರಮುಖ ಪೇಟೆ ಬೀದಿಗಳಲ್ಲಿ ನಡೆದು ಮೈಸೂರು ಬ್ಯಾಂಕ್ ಚೌಕ ಸೇರುವ ಹೊತ್ತಿಗೆ ಪೋಲಿಸ್ ದಳ ಇಡೀ ಪ್ರದರ್ಶನವನ್ನೇ ಸುತ್ತುವರಿಯಿತು. ಒಂದು ಸಾರಿ ಜೈಲಿನಲ್ಲಿದ್ದು

ಹೊರಬಂದವರು, ಬೇಲ್ ಮೇಲೆ ಇರುವವರು ಈ ಪ್ರದರ್ಶನದಿಂದ ಹೊರಬಿದ್ದು ಬಿಡಬೇಕು. ಈಗಲೂ ಅವರು ಬಂಧನಕ್ಕೊಳಗಾದರೆ ಅವರನ್ನು ಪೋಲಿಸ್ ಬಿಡಲಿಕ್ಕಿಲ್ಲಾ. ಆದುದರಿಂದ ಅವರು ಹೇಗೋ ಪೋಲಿಸ್ ದಿಗ್ಬಂಧನದಿಂದ ತಪ್ಪಿಸಿಕೊಳ್ಳಬೇಕು ಎಂದು ಕಿವಿಮಾತು ಹರಡಿತು. ಅಷ್ಟೇ ಸಾಕಾಯಿತು. ಕ್ಷಣಾರ್ಧದಲ್ಲಿ ಪೋಲಿಸರ ಕಣ್ಣು ತಪ್ಪಿಸಿ ಈ ಲೇಖಕ ಅವರ ಘೇರಾಬಂದಿಯಿಂದ ಹೊರಬಂದು ನೋಡಲು ದೂರ ದೂರ ನಿಂತಿದ್ದ ಜನತೆಯಗುಂಪಿನಲ್ಲಿ ಬೆರೆತುಬಿಟ್ಟ. ಪೋಲಿಸ್ ಅವನನ್ನಟ್ಟಿ ಬರದಿದ್ದುದು ಆಶ್ಚರ್ಯ. ಮಿಂಚಿನ ವೇಗದಲ್ಲಿ ಯಾರೋ ಇಬ್ಬರು ಈ ಲೇಖಕನನ್ನು ಎಳೆದೊಯ್ದು ಮೋಟರ್ ಸೈಕಲ್ ಮೇಲೆ ಎಲ್ಲಿಯೋ ಸಾಗಿಸಿಬಿಟ್ಟರು. ಅವರು ಬೇರಿನ್ನಾರೂ ಅಲ್ಲ, ರಾಮದೇವ್ ಮತ್ತು ಸಂಗಡಿಗರು. ಹೀಗೆ ನಾಟಕೀಯ ರೀತಿಯಲ್ಲಿ ಮತ್ತೊಮ್ಮೆ ಬಂಧನಕ್ಕೊಳಗಾಗುವುದನ್ನು ತಪ್ಪಿಸಿಕೊಂಡ.

ಬಂಧಿಸಲ್ಪಟ್ಟ ಉಳಿದವರನ್ನು ಅಂದು ರಾತ್ರಿಯೇ ಬಿಡುಗಡೆಮಾಡಿದರೆಂದು ತಿಳಿಯಿತು. ಆ ವೇಳೆಗೆ ಎಂ. ಚಂದ್ರಶೇಖರ, ಎಸ್. ವೆಂಕಟರಾಮ್, ಪಿ. ವೆಂಕೋಬರಾವ್ ರಾಜ್ಯಾದ್ಯಂತ ಪ್ರವಾಸ ಕಾರ್ಯಕ್ರಮ ಹಾಕಿಕೊಂಡರು. ಮಂಗಳೂರು ನಗರದ ಹೊರವಲಯದಲ್ಲಿಯೇ ಪೋಲಿಸ್ ಅವರಿದ್ದ ವಾಹನವನ್ನು ತಡೆದು ಈ ಮೂವರನ್ನೂ ಗುರುತಿಸಿ ಬಂಧಿಸಿದರು. ಬಂದಗದ್ದೆ ರಮೇಶ್, ಪಿ.ಜಿ. ಆರ್, ಸಿಂಧ್ಯ, ಲಕ್ಷ್ಮೀನರಸಯ್ಯ, ಎ. ಕೆ. ಸುಬ್ಬಯ್ಯ, ಡಾ। ಚೆರಿಯನ್, ಮೈಕಲ್ ಫರ್ನಾಂಡಿಸ್, ಸುರೇಶ್ ಕುಮಾರ್ ಮುಂತಾದ ಹಿರಿಯ-ಕಿರಿಯ ಕಾರ್ಯಕರ್ತರು ಸೆರೆಮನೆ ಸೇರಿದ್ದರು. ಸರ್ದಾರ್ ವೆಂಕಟರಾಮಯ್ಯ, ಸೀತಾಶರಣಶರ್ಮ, ಗರುಡ ಶರ್ಮ ಇವರೂ ಬಂಧಿಸಲ್ಪಟ್ಟು ಬಳ್ಳಾರಿ ಕೇಂದ್ರೀಯ ಸೆರೆಮನೆಗೆ ಕಳಿಸಲ್ಪಟ್ಟರು. ಈ ಮೂವರ ಅಪರಾಧ? ವಿನೋಬಾ ಅವರ ಭೇಟಿ ಮತ್ತು ಅಲ್ಲಿಯ ಒಂದು ಸಭೆಯಲ್ಲಿ ಭಾಗವಹಿಸಲು ವರ್ಧಾಕೆ ರೈಲು ಚೀಟಿ ಖರೀದಿಸಿದ್ದು ಅವರನ್ನೇನೂ ಬಹಳ ಕಾಲ ಜೈಲಿನಲ್ಲಿ ಇಡಲಿಲ್ಲ. ಮೊದಲು ಹತ್ತು ದಿನಗಳಲ್ಲಿ ಸ್ಥಿರೀಕರಣವಾಗದೇ ಬಂಧನ ಮುಕ್ತರಾದರು. ತುರ್ತು ಪರಿಸ್ಥಿತಿಯ ಅವಧಿಯಲ್ಲಿ ಗರುಡ ಶರ್ಮರಿಗೆ ಇದು ಎರಡನೆ ಬಾರಿ ಬಂಧನವಾಯಿತು. ಬಂಧನದಿಂದ ಹೊರಬಂದು ಗರುಡರು ಖಿನ್ನರಾದರು! ಕಾರಣ? ದೇಶೋವಿಶಾಲವೇ ಜೈಲಾಗಿರುವಾಗ ತಾನು ಒಳಗಿರುವುದೇ ಲೇಸು! ಇದು ಅವರ ತರ್ಕ. ಹುಬ್ಬಳ್ಳಿ, ಬೆಳಗಾವಿ, ಧಾರವಾಡಗಳಲ್ಲೂ ಸರ್ವೋದಯ ಕಾರ್ಯಕರ್ತರು ಸೆರೆಮನೆ ಸೇರಿದ್ದರು. ಅವರಲ್ಲಿ ನಾರಾಯಣ ಪವಾರರೊಬ್ಬರು ಪೋಲೀಸರ ಹಿಂಸೆಯನ್ನನುಭವಿಸಬೇಕಾಯಿತು. ೭೫ರ ಆಗಸ್ಟ್-ಸೆಪ್ಟೆಂಬರ್ ತಿಂಗಳಲ್ಲೇ ಮೊಟ್ಟ ಮೊದಲು ಸಾರ್ವಜನಿಕ ಸಭೆಯ ವ್ಯವಸ್ಥೆಯಾದುದನ್ನು ಮರೆಯುವಂತಿಲ್ಲ. ಎಚ್. ಎಸ್. ದೊರೆಸ್ವಾಮಿ, ಗರುಡಶರ್ಮ, ವೆಂಕೋಬರಾವ್ ಮೂವರೂ ಸೇರಿ ಸಾರ್ವಜನಿಕ ಸಭೆ ನಡೆಸುವುದೆಂದೂ ಅಂದಿನ ಸತ್ಯಾಗ್ರಹಿ ವೆಂಕೋಬರಾವ್ ಎಂದೂ, ಅವರು ಸಾರ್ವಜನಿಕ ಸಭೆಯಲ್ಲಿ ಮಾತನಾಡಿ ತುರ್ತು ಸ್ಥಿತಿಯನ್ನು ವಿರೋಧಿಸುವುದೆಂದೂ, ಗೊತ್ತಾಗಿತ್ತು. ಆದರೆ ಆದದ್ದೇ ಬೇರೆ. ಸಭೆ ಸಂಜೆ ಪ್ರಾರ್ಥನೆಯಿಂದ ಆರಂಭವಾಯಿತು. ಪ್ರಾರ್ಥನೆ ಮುಗಿದು ಸತ್ಯಾಗ್ರಹಿ ಎದ್ದು ನಿಂತು ಮೊದಲ ವಾಕ್ಯ ಮುಗಿಸುವುದರೊಳಗೆ ಇಡೀ ಗುಂಪನ್ನೇ ಬಂಧಿಸಿದರು. ನಾಲ್ಕೈದು ಗಂಟೆಗಳ ನಂತರ ದೊರೆಸ್ವಾಮಿಯವರನ್ನೂ ಗರುಡಶರ್ಮರನ್ನೂ ಇರಿಸಿಕೊಂಡು, ಅಂದಿನ ಸತ್ಯಾಗ್ರಹಿ ವೆಂಕೋಬರಾಯರನ್ನೂ ಇನ್ನಿತರರನ್ನೂ ಬಿಟ್ಟುಬಿಟ್ರು. ಅವರಿಬ್ಬರ ಮೇಲೆ ಆರೋಪ ಹೊರಿಸಿ, ಡಿ. ಐ. ಆರ್. ನಲ್ಲಿ ಬಂಧಿಸಿ, ಸೆರೆಮನೆಗೆ ಕಳಿಸಲಾಯಿತು. ಇವರಿಬ್ಬರೂ ಈ ಲೇಖಕ ಇದ್ದ ಬರಾಕಿಗೇ ಬಂದರು, ಮೂರೂ ಜನ ಕೂಡಿ ಸ್ವಲ್ಪ ದಿನ ಇದ್ದೆವು. ಹೀಗೆ ಬಂಧನ, ಸತ್ಯಾಗ್ರಹ, ವಿರೋಧ ಇವು ನಡೆಯುತ್ತಲೇ ಇದ್ದವು.

**ಭೂಗತ ಆಂದೋಳನ** : ತುರ್ತು ಪರಿಸ್ಥಿತಿಯ ವಿರುದ್ಧದ ಹೋರಾಟ ನೇರ, ಬಹಿರಂಗವಾಗಿಯೂ ತೆರೆಯಮರೆಯಲ್ಲೂ ಜೂನ್ ೧೯೭೫ರಿಂದ ಮಾರ್ಚ್ ೧೯೭೭ರವರೆಗೆ ನಡೆಯಿತು. ಅದೊಂದು ದೀರ್ಘಕಾಲೀನ, ಅಮೋಘ ಹೋರಾಟ, ಸೆರೆಮನೆಯಿಂದ ಎಲ್ಲರೂ ಹೊರಬಂದ ನಂತರ ಹೋರಾಟ ಇತಿಹಾಸ 'ಭುಗಿಲು' ಪ್ರಕಟವಾಯಿತು. ಅದರಲ್ಲಿ ವಿವರವಾದ ವರ್ಣನೆ ಬರುತ್ತದೆ. ಅದರಲ್ಲಿಲ್ಲದ ಕೆಲವು ಘಟನೆಗಳನ್ನಷ್ಟೇ ಇಲ್ಲಿ ಉದಾಹರಣಾರ್ಥ ವರ್ಣಿಸಿದೆ. ಇಲ್ಲಿ ಇಡೀ ಹೋರಾಟದ ಮುಖ್ಯಾಂಶಗಳ ಪಟ್ಟಿಯನ್ನಷ್ಟು ಕೊಟ್ಟು ಅಷ್ಟರಲ್ಲೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ:

**೧. ಸಾಮೂಹಿಕ ಸತ್ಯಾಗ್ರಹ** : ಇಡೀ ರಾಜ್ಯದಲ್ಲಿ ೨೪ ಊರುಗಳಲ್ಲಿ. ಭಾಗವಹಿಸಿದವರ ಸಂಖ್ಯೆ ಒಟ್ಟು ೧೭,೮೦೦. ಅದರಲ್ಲಿ ರೈತರು ೪೦೦. ಉಳಿದ ೧೭,೧೦೦ ವಿದ್ಯಾರ್ಥಿಗಳು, ೩೦೦ ಅನ್ಯ.

**೨. ತಂಡಗಳಲ್ಲಿ ಸತ್ಯಾಗ್ರಹ** : ಒಟ್ಟು ತಂಡಗಳು ೭೭೫. ಸತ್ಯಾಗ್ರಹಿಗಳು ೮೭೪೦. ಇತರ ಬಂಧನಗಳು ೧೫೪೫. ಒಟ್ಟು ೧೦,೨೮೮. ಎರಡೂ ರೀತಿಯ ಸತ್ಯಾಗ್ರಹಿಗಳ ಸಂಖ್ಯೆ (೧+೨) ೨೭,೦೮೮.

**೩. ರಾಜ್ಯದ ೧೯ ಜಿಲ್ಲೆಗಳಲ್ಲಿ**; ೧೭೬ ತಾಲ್ಲೂಕುಗಳ ಪೈಕಿ ೧೧೭ ತಾಲ್ಲೂಕುಗಳಲ್ಲಿ ಸತ್ಯಾಗ್ರಹ ನಡೆಯಿತು. ಸತ್ಯಾಗ್ರಹ ನಡೆದ ಸ್ಥಳಗಳು ೨೫೯. ಸತ್ಯಾಗ್ರಹಿಗಳು ೧೯೯೦ ಊರುಗಳಿಂದ ಬಂದು ಭಾಗವಹಿಸಿದರು.

೪. ಒಟ್ಟು ಸತ್ಯಾಗ್ರಹಿಗಳ ಪೈಕಿ ೮೪೭ ಜನ ಮಹಿಳೆಯರು. ಸತ್ಯಾಗ್ರಹ ನಡೆದ ಕಾಲೇಜುಗಳ ಸಂಖ್ಯೆ ೮೭. ೧೦೦ ಕ್ಕೂ ಹೆಚ್ಚು ಜನ ಸತ್ಯಾಗ್ರಹಿಗಳನ್ನು ಕಳಿಸಿದ ತಾಲ್ಲೂಕುಗಳು ೨೭.

೫. ಕರ್ನಾಟಕದಲ್ಲಿ ಸಿಡಿದೆದ್ದ ವಿದ್ಯಾರ್ಥಿಗಳ ಸತ್ಯಾಗ್ರಹವನ್ನು ಹತ್ತಿಕ್ಕಲು ಸರ್ಕಾರ ೩೦೦ ಕ್ಕೂ ಮಿಕ್ಕು ವಿದ್ಯಾರ್ಥಿಗಳನ್ನು ಕಾಲೇಜುಗಳಿಂದ ಹೊರಹಾಕಿತು. ಆ ಪೈಕಿ ೨೦೦ ಕ್ಕೂ ಹೆಚ್ಚು ವಿದ್ಯಾರ್ಥಿಗಳು ನ್ಯಾಯಲಯದ ಮೆಟ್ಟಿಲು ಹತ್ತಿ ಪರಿಹಾರ ಪಡೆಯುವುದರಲ್ಲಿ ಯಶಸ್ವಿಯಾದರು. ಕಾಲೇಜುಗಳಿಗೆ ಸೇರಿಸಿಕೊಳ್ಳುವಂತೆ, ಪರೀಕ್ಷೆಗಳಿಗೆ ಕೂಡಲೆ ಅನುಮತಿ ಕೊಡುವಂತೆ ನ್ಯಾಯಾಲಯ ಆದೇಶಿಸಿತು.

೬. ನಿವೃತ್ತ ನ್ಯಾಯಮೂರ್ತಿ ರಾಮಾಜೋಯಿಸ್, ಸೋದರಿ ಪ್ರಮೀಳಾ, ಸಂತೋಷ್ ಹೆಗಡೆ, ಹಾರ್‌ನಹಳ್ಳಿ ರಾಮಸ್ವಾಮಿ ಮತ್ತಿತರ ಅನೇಕ ವಕೀಲರು ಸತ್ಯಾಗ್ರಹಿಗಳ ರಕ್ಷಣೆಗೆ ನಿಂತರು. ಜಿಲ್ಲೆ ಜಿಲ್ಲೆಗಳಲ್ಲಿ ಅಂಥ ನ್ಯಾಯವಾದಿಗಳು ತಮ್ಮ ಧೈರ್ಯ, ಸಾಹಸ ಮತ್ತು ಔದಾರ್ಯ ತೋರಿದವರ ದೊಡ್ಡ ಸೂಚಿಯೇ ಆಗುತ್ತದೆ. (ಭುಗಿಲಿನಲ್ಲಿ ಸೂಚಿಯನ್ನು ನೋಡಬಹುದು)

೭. ಬಂಧಿತರಾಗಿ ಸೆರೆಮನೆ ಸೇರಿದವರಲ್ಲಿ ಎರಡು ವಿಧದ ಜನ. ಒಂದು- ಭಾರತದ ರಕ್ಷಣಾ ಕಾನೂನಿನ್ವಯ ಬಂಧಿತರು- ಡಿ. ಐ. ಆ್. ಬಂಧನ-ಅವರ ಮೇಲೆ ನಿರ್ದಿಷ್ಟ ಆರೋಪ ಇದ್ದು ಕೋರ್ಟ್ ವಿಚಾರಣೆಗೆ ಅಧೀನರು. ಮೀಸಾ ಕಾಯಿದೆಯನ್ವಯ ಬಂಧಿತರು ಎರಡನೆ ಬಗೆಯವರು- (ಭಾರತದ ಆಂತರಿಕ ಭದ್ರತಾ ಕಾಯಿದೆ). ಅವರು ಸ್ಥಾನಬದ್ಧರಾಗಿ ತಮ್ಮ ಮೇಲೆ ಯಾವ ಆರೋಪವೂ ಇಲ್ಲದೆ ವಿಚಾರಣೆಯೂ ಇಲ್ಲದೆ ಸೆರೆವಾಸದಲ್ಲಿರುವವರು. ಇವರು ರಾಜಬಂದಿಗಳು.

೮. ರಾಜ್ಯದಲ್ಲಿ ಏಪ್ರಿಲ್ ೨೬, ಆಗಸ್ಟ್ ೯ ಮತ್ತು ೧೫ರ ದಿನಾಚರಣೆಗಳು ನಡೆದವು. ಜೂನ್ ೨೬ರ ವಿಶೇಷ ದಿನಾಚರಣೆ ನಡೆದು ವಿರೋಧದ ನಿರ್ಣಯ, ಬೇಡಿಕೆ ಮತ್ತು ಒತ್ತಾಯಗಳ ಮಂಡನೆ ಆಗುತ್ತಿದ್ದವು. ಹುತಾತ್ಮರಿಗೆ ಶ್ರದ್ಧಾಂಜಲಿ ಅರ್ಪಣೆ ಇವು ಕಾರ್ಯಕಲಾಪಗಳಲ್ಲಿ ಸೇರಿದ್ದವು. ನವೆಂಬರ್ ೧೪, ೧೯೭೫ ಸರ್ವಾಧಿಕಾರದ ವಿರುದ್ಧ ದೇಶಾದ್ಯಂತ ಸತ್ಯಾಗ್ರಹ ನಡೆಯಿತು. ಆಗಲೂ ಬಂಧನಗಳು, ಪೋಲಿಸ್ ದೌರ್ಜನ್ಯ ಇತ್ಯಾದಿ ಜರುಗಿದವು. ಸೆರೆಮನೆಯಲ್ಲಿದ್ದವರು ಉಪವಾಸ ಮಾಡಿದರು.

೯. ಅಕ್ಟೋಬರ್ ೧೩ರ ಮಧ್ಯರಾತ್ರಿ ಪ್ರಸಿದ್ಧ ಗಾಂಧಿವಾದಿ ಆಚರಣ-ನಿಷ್ಠ ಅನುಯಾಯಿ ಎನಿಸಿದ್ದ ಪ್ರಭಾಕರ ಶರ್ಮರ ಆತ್ಮಾಹುತಿ ಆದ ದಾರುಣ ಪ್ರಸಂಗದ ಸುದ್ಧಿ ಬಯಲಾಯಿತು.

೧೦. ಭೂಗತರ ಮತ್ತು ಭೂಗತ ಸಾಹಿತ್ಯದ ಶೋಧನೆಗಾಗಿ, ಇನ್ನಿತರ ಆಕ್ಷೇಪಾರ್ಹ ಸಾಹಿತ್ಯದ ಶೋಧನೆಗಾಗಿ ಅನುಮಾನ-ಶಂಕೆ ಸಂದೇಹ ಇದ್ದೆಡೆಗಳಲ್ಲೆಲ್ಲ, ಸುಳಿವು ಸಿಕ್ಕೆಡೆಗಳಲ್ಲೆಲ್ಲ ಪೋಲಿಸ್ ಧಾಳಿ ನಡೆಯುತ್ತಿತ್ತು. ಸರ್ವೋದಯ ಕೇಂದ್ರ ವಲ್ಲಭನಿಕೇತನದ ಮೇಲೆ ಮೂರು ಸಾರಿ ಧಾಳಿ ಆಯಿತು. ಆರ್. ಎಸ್. ಎಸ್. ಕೇಂದ್ರಗಳ ಮೇಲೆ ಪದೇ ಪದೇ ನಡೆಯುತ್ತಿತ್ತು. ಇಂಥ ಕೆಲವೆಡೆಗಳ ಸುತ್ತ ಸರ್ಪಕಾವಲು, ಸಿಐಡಿಗಳ ಕಟ್ಟೆಚ್ಚರದ ವೀಕ್ಷಣೆ ಜಾರಿಯಲ್ಲಿತ್ತು.

**ಸೆರೆಮನೆ ಶಿಕ್ಷಣ ಶಿಬಿರ** : ಸೆರೆಮನೆಯೊಳಗಿದ್ದ ಮೀಸಾ ಬಂದಿಗಳು ಅಲ್ಲಿ ನಡೆಸಿದ್ದು ಶಿಬಿರದ ಜೀವನ. ಅದೊಂದು ಶೈಕ್ಷಣಿಕ ಶಿಬಿರ, ಯೋಗ ಸಾಧನೆಯ ಶಿಬಿರ, ಅಧ್ಯಯನ (ಶೀಲರ) ಶಿಬಿರ, ಪ್ರತಿಭಾಪ್ರದರ್ಶನದ ಶಿಬಿರ, ಅಕ್ರಮ ಲೇಖಕರ ಲೇಖನ-ಕಾರ್ಯಶಾಲೆ, ವಿಶ್ವವಿದ್ಯಾನಿಲಯ, ವ್ಯಕ್ತಿತ್ವದ ನಿರ್ಮಾಣದ ತಾಣ, ವಿಶ್ರಾಮಧಾಮ, ಕ್ರೀಡಾಂಗಣ, ಆರೋಗ್ಯ ಸುಧಾರಣಾ ಕೇಂದ್ರ, ಚಿಂತಾಗೃಹ-ನಿದ್ರಾಗಾರ ಮುಂತಾಗಿ ಯಾವ ಹೆಸರಿನಿಂದ ಬೇಕಾದರೂ ಕರೆಯಬಹುದು. ಇವೆಲ್ಲವೂ ಒಪ್ಪುತ್ತವೆ. ಯೋಗಾಸನ, ಹಿಂದೀ, ಉರ್ದು, ಜರ್ಮನ್, ರಷ್ಯನ್, ಸಂಸ್ಕೃತ ಭಾಷಾ ವರ್ಗಗಳು, ಜೋತಿಷ್ಯ, ಸಂಗೀತ, ತಬಲಾ ವಾದನ, ಚಿತ್ರಕಲೆಗಳ ವರ್ಗಗಳಲ್ಲದೆ, ಗ್ರಂಥಾಧ್ಯಯನ-ವಾಚನ, ಗ್ರಂಥ ಲೇಖನ ಎಲ್ಲವೂ ಏಕ ಕಾಲದಲ್ಲಿ ನಡೆಯುತ್ತಿದ್ದವು. ಅವರವರ ಅಭಿರುಚಿಗೆ ತಕ್ಕಂತೆ ಮೇಲಿನ ವರ್ಗಗಳಲ್ಲಿ ಸೇರಿ ಕಲಿಯುತ್ತಿದ್ದರು. ಆಗಾಗ್ಗೆ ಆಯಾ ವರ್ಗಗಳ ಪರೀಕ್ಷೆಗಳೂ ನಡೆಯುತ್ತಿದ್ದವು. ಉರ್ದು ಭಾಷೆ ಕಲಿಯುವ ಮತ್ತು ಬರೆಯುವುದರಲ್ಲಿ ರಾಮಕೃಷ್ಣ ಹೆಗಡೆ ಅವರ ಆಶ್ಚರ್ಯಕಾರಕ ಪ್ರಗತಿ ನೋಡಿ ಎಲ್ಲೆಲ್ಲೂ ಮುಕ್ತಕಂಠದ ಪ್ರಶಂಸೆ ಕೇಳಿಬಂತು.

ಸೆರೆಮನೆಯಲ್ಲಿ ಗ್ರಂಥ ಬರೆದವರು, ಕಚ್ಚಾ ಪ್ರತಿ ಬರೆದದ್ದನ್ನು ಶುದ್ಧ ಪ್ರತಿ ತಯಾರಿಸಿಕೊಂಡವರು ಹಲವರು. ಮಧು ದಂಡವತೆ "ಗಾಂಧಿ- ಮಾರ್ಕ್ಸ್" ಎಂಬ ಹೊತ್ತಿಗೆಯ ಕಚ್ಚಾ ಪ್ರತಿಯಿಂದ ಶುದ್ಧ ಪ್ರತಿ-ಟೈಪ್‌ಸ್ಕ್ರಿಪ್ಟ್- ತಯಾರಿಸುವುದರಲ್ಲಿ ತಲ್ಲೀನರಾಗಿದ್ದರು. ರಾಮಾಜೋಯಿಸರು ನ್ಯಾಯಶಾಸ್ತ್ರದ ಒಂದು ವಿಷಯ ಆರಿಸಿಕೊಂಡು ಅದರ ಮೇಲೆ ಹೊತ್ತಿಗೆ ತಯಾರಿಸುತ್ತಿದ್ದರು. ವೆಂಕೋಬರಾಯರು ಬೃಹತ್ ಗಾಂಧೀ ಜೀವನ ಚರಿತ್ರೆಯನ್ನು ಬರೆಯುವುದರಲ್ಲಿ ತೊಡಗಿದ್ದರು. ಈ ಲೇಖಕ ವಿನೋಬಾಜಿಯ

ಅಧ್ಯಾತ್ಮ ವಿಚಾರದ ಮೇಲೆ ಗ್ರಂಥಾನುವಾದದಲ್ಲಿ ನಿರತರಾಗಿದ್ದರು. ಇವರೆಲ್ಲ ಬಂಧಮುಕ್ತರಾಗಿ ಹೊರಬಂದಮೇಲೆ ತಮ್ಮ ಗ್ರಂಥಗಳನ್ನು ಪ್ರಕಟಿಸಿದರು. ಈ ಲೇಖಕನ ''ಅಧ್ಯಾತ್ಮವಿಚಾರ''ಕ್ಕೆ ಮುಂದೆ (೧೯೮೧-೮೨) ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆಯಿತು. ಅಶೋಕ ಮೆಹತಾರ 'ಡೆಮಾಕ್ರೆಟಿಕ್ ಸೋಷಿಯಲಿಸಂ' ನ ಸಾಮೂಹಿಕ ವಾಚನ ಮತ್ತು ಅಭ್ಯಾಸವೂ ನಡೆಯಿತು. ಡಾರ್ಕ್‌ನೆಸ್ ಅಟ್ ನೂನ್, ದಿ ಟ್ರೂ ಬಿಲೀವರ್, ಪವರ್ ಅಂಡ್ ಮೊರ್‍ಯಾಲಿಟಿ, ಮ್ಯಾಕ್ಯಾವಲಿಯ ಸುಪ್ರಸಿದ್ಧ ಹೊತ್ತಿಗೆ, ಜಾರ್ಜ್ ಆರ್‌ವೆಲ್ಲರ ಅನಿಮಲ್ ಫಾರ್ಮ್, ಕಾರಂತರ ಎರಡು ಮೂರು ಕಾದಂಬರಿಗಳು, ದಕ್ಷಿಣ ಅಮೆರಿಕಾದ ಕ್ರಾಂತಿಕಾರ ಪಾಲ್ ಫ್ರೇರ್ ಅವರ ಪೆಡಗಗಿ ಆಫ್ ದಿ ಅಪ್ರೆಸ್ಡ್ ಗ್ರಂಥ ಇತ್ಯಾದಿಯ ಅಭ್ಯಾಸ ಮತ್ತು ನೋಟ್ಸ್ ತಯಾರಿಸಿಕೊಳ್ಳುವಿಕೆ ಇವೂ ಆದವು.

ಸೆರೆಮನೆಯಲ್ಲಿ ಅನೇಕ ಸಂಜೆ ಭಾಷಣ, ಭಾಷಣ ಮಾಲೆ, ಚರ್ಚೆ ಮತ್ತು ವಿಚಾರ ವಿನಿಮಯವೂ ನಡೆಯುತ್ತಿದ್ದುವು. ಪ್ರಚಲಿತ ಚುನಾವಣಾ ಪದ್ಧತಿಗಳು - ಚುನಾವಣಾ ಸುಧಾರಣೆ ಕುರಿತು ಅದ್ವಾನಿಯವರ ಭಾಷಣ ಮಾಲೆ, ಎಸ್. ಎನ್. ಮಿಶ್ರರ ಯೋಜನೆ-ನೀತಿ-ರೀತಿ, ಸಂಸತ್ತಿನಲ್ಲಿ ಹಾಸ್ಯ ಕುರಿತು ಮಧು ದಂಡವತೆ, ಸರ್ವೋದಯ ವಿಚಾರ ಕುರಿತು ವಂಕೋಬರಾವ್, ಭೂದಾನ ಚಳವಳಿಯ ಮೇಲೆ ಸತ್ಯವ್ರತ ಹೀಗೆ ಹಲವು ಹತ್ತು ವೈಚಾರಿಕ ಭಾಷಣಗಳಾದುದು ಇಲ್ಲಿ ಸ್ಮರಣೀಯ. ವಿಶೇಷ ದಿನಾಚರಣೆ, ಹಬ್ಬ-ಹರಿದಿನಗಳು, ಉತ್ಸವ-ಉಪವಾಸಗಳು, ವಿರೋಧ-ವಿಕ್ರಮಗಳ ಗುರುತಾಗಿ ಏರ್ಪಾಡುಗಳಾಗುತ್ತಿದ್ದು ಅವುಗಳಲ್ಲಿ ಬಹುತೇಕ ಎಲ್ಲ ತರಹೆಯ ಜನರು ಭಾಗವಹಿಸುತ್ತಿದ್ದರು.

ಗುಲ್ಬರ್ಗ, ಬಳ್ಳಾರಿ, ಬೆಳಗಾವಿ, ಮೈಸೂರು, ಹೊಸಪೇಟೆ, ಧಾರವಾಡ ಸೆರೆಮನೆಗಳಲ್ಲೂ ಇಂಥ ವೈಶಿಷ್ಟ್ಯಪೂರ್ಣ ಕಾರ್ಯಕ್ರಮ ನಡೆಯುತ್ತಿದ್ದವು. ಆಯಾ ಜೈಲುಗಳಲ್ಲಿದ್ದ ಪ್ರತಿಭಾವಂತರು, ಪಂಡಿತರು, ಪರಿಣತರು ಅಭ್ಯಾಸಗಳನ್ನವಲಂಬಿಸಿ ಅಲ್ಲಲ್ಲಿಯ ವಿಶಿಷ್ಟ ಕಾರ್ಯಕ್ರಮಗಳು ರೂಪಗೊಳುತ್ತಿದ್ದವು. ಇದೊಂದು ವೈಚಾರಿಕ ಶಿಬಿರವೋ ವಿದ್ಯಾಪೀಠವೋ ಅಥವಾ ವಿಶ್ವವಿದ್ಯಾನಿಲಯವೋ ಆಗಿರಬಹುದೆಂಬುದನ್ನು ಆಯಾ ಸ್ಥಳಗಳ ಕಾರ್ಯಕ್ರಮಗಳ ಸ್ವರೂಪವೇ ಸಾರಿ ಹೇಳುತ್ತಿದ್ದವು. ಒಟ್ಟಿನಲ್ಲಿ ಸೆರೆಮನೆಯಂತೂ ಮೀಸಾವಾಸಿಗಳ ಕೈಗೆ ಸಿಕ್ಕು ರೂಪಾಂತರ ಹೊಂದಿದವು ಎನ್ನಬೇಕು. ಸೆರೆಮನೆಯೊಳಗಿನ ಜೀವನದ ಇಣುಕು ನೋಟವಿದು. 'ಭುಗಿಲು'ನಲ್ಲಿ ವಿಸ್ತಾರ ವರ್ಣನೆ ಸಿಗುತ್ತದೆ. ಇಲ್ಲಿಯ ಕ್ರಿಯಾ ಕಲಾಪಗಳ ಪರಿಣಾಮವಾಗಿ ದಿನ - ವಾರ ತಿಂಗಳುಗಳು ಉರುಳಿಹೋದುದೇ ತಿಳಿಯದಂತಾಯಿತು. ನಿರಂತರ ಚಟುವಟಿಕೆಗಳ ಪರಿಣಾಮವಾಗಿ ಎಷ್ಟೇ ವಿಭಿನ್ನ ವಿಚಾರಧಾರೆಯವರಿದ್ದರೂ ಅವರಲ್ಲಿ ಒಂದು ಬಗೆಯ ಬಂಧುತ್ವದ ವಿಕಾಸವಾಗುವುದು ಸುಲಭವಾಯಿತು.

ಇಷ್ಟೆಲ್ಲ ಇದ್ದಾಗ್ಯೂ ಒಂದು ಅಂತರಂಗದ ಮಾತು ಇದ್ದೇ ಇತ್ತು. ಅದನ್ನು ಮುಚ್ಚಿಡಲಾಗದು. ಯಾರಿಗೆ ತಮ್ಮ ಕೌಟುಂಬಿಕ ಜೀವನ ಮತ್ತು ವ್ಯಾವಹಾರಿಕ ಜೀವನದ ವಿಸ್ತಾರ - ಕ್ಲಿಷ್ಟತೆಯ ಕಾರಣ ಚಿಂತೆ ಇರುತ್ತಿತ್ತೋ ಅವರಿಗೆ ಆ ಹೊರಗಡೆ ಬವಣೆಯ ನೆನಪಿನಿಂದ ಉಂಟಾಗುತ್ತಿದ್ದ ಪರಿತಾಪವನ್ನು ಮರೆಯಲು ಈ ಕಾರ್ಯಕ್ರಮಗಳು ಸೊಗಸಾದ ಆವರಣವನ್ನು ನಿರ್ಮಿಸಿಕೊಡುತ್ತಿದ್ದವು. ಅವರಿಗೆ ಈ ಕಾರ್ಯಕ್ರಮಗಳ ಪ್ರಯೋಜನ ಇಷ್ಟೇ. ಅವರಲ್ಲಿ ಕೆಲವರು ಇವೆಲ್ಲ ಪ್ರಯೋಜನಗಳನ್ನು ಬಳಸಿಯೂ ಮನಸ್ಸಿನ ಸಂತುಲನೆಯನ್ನು ಕಳೆದುಕೊಳ್ಳುತ್ತಿದ್ದರು. ಎಂದರೆ ಅಂಥವರು ದೀರ್ಘ ಸೆರೆವಾಸದ ಮಾನಸಿಕ ಒತ್ತಡಕ್ಕೊಳಗಾಗಿ ಶೀಘ್ರಕೋಪಿಗಳು, ಕಾಂಪೋಸ್ ಮಾತ್ರೆ ನುಂಗದೇ ರಾತ್ರಿ ನಿದ್ರಿಸಲಾರದವರು ಆಗಿ ಉಳಿಯುತ್ತಿದ್ದರು. ಅಂಥವರ ಮೇಲೆ ವಿದ್ಯಾಪೀಠದ ಪ್ರಭಾವ ಗಡಿಬಿಡಿಯದು ಮತ್ತು ಕನಿಷ್ಠ ಮಿತಿಯದು. ಅವರ ಉದಾಹರಣೆಯನ್ನು ಪಕ್ಕಕ್ಕಿಟ್ಟು ಒಟ್ಟು ವಿಚಾರ ಮಾಡುವುದಾದರೆ, ಸಾರಾಂಶರೂಪವಾಗಿ ಇಷ್ಟು ಹೇಳಬಹುದು: ಸೆರೆಮನೆಯ ಜೀವನವೇನೋ ಕಡು ಕಷ್ಟಮಯ ಅಥವಾ ಕಠೋರತರವಾದುದೇ. ಅಂಥ ಜೀವನವನ್ನೂ ಶಿಬಿರದ ಅಥವಾ ವಿದ್ಯಾಪೀಠದ ಜೀವನವನ್ನಾಗಿ ಪರಿವರ್ತಿಸಿದ ಚೈತನ್ಯಕ್ಕೆ, ಪ್ರತಿಕೂಲ ಪರಿಸ್ಥಿತಿಯನ್ನು ಪ್ರತಿರೋಧ ಕೇಂದ್ರವನ್ನಾಗಿ, ನಮ್ಮ ವೈಚಾರಿಕ ಪ್ರಕ್ಷೇಪಾಸ್ತ್ರವನ್ನಾಗಿ ಬದಲಿಸಿ ಬಳಸಿಕೊಂಡು ಆದ ಅದಮ್ಯ ಚೇತನಕ್ಕೆ ವಿನಮ್ರತೆಯ ನಮನ ಸಲ್ಲಬೇಕು. ತುರಂಗದಂತ ರಂಗದಲ್ಲಿ ಹುದುಗಿರುವ ರಹಸ್ಯ ಇದೇ.

ಆಂದೋಳನದ ಕಥಾ ಪ್ರಸಂಗ ಜನವರಿ ೧೮, ೧೯೭೭ನೇ ದಿನ ಮತ್ತೊಂದು ಮಜಲು, ಬಹುಮಟ್ಟಿಗೆ ಅಂತಿಮ ಹಂತವನ್ನು ತಲುಪಿತು. ಹಟಾತ್ತನೆ ಅಂದು ಚುನಾವಣೆಗಳ ಘೋಷಣೆ ಆಯಿತು; ಜೊತೆಗೇ ಕೆಲವರಿಗೆ ಬಿಡುಗಡೆಯ ಆಜ್ಞೆ, ಸೆರೆಯೊಳಗೆ ಮತ್ತು ದೇಶದ ಜನಜೀವನ ಥಟಕ್ಕನೆ ಬದಲಾಗಿ ಹೋಯಿತು. ಅನಂತರ ಜೇಲಿನಿಂದ ಬಿಡುಗಡೆಯ ಸುದ್ದಿ, ಸಡಗರ; ಹೊರಗಡೆ ಅವರಿಗೆ ವೀರೋಚಿತ ಸ್ವಾಗತದ ಸಂಭ್ರಮ- ಇವೇ ಘಟನಾವಳಿಯ ಕ್ರಮ ನಡೆಯಿತು. ಎಲ್ಲೆಲ್ಲೂ ಬಿಕ್ಕಟ್ಟು-ಬಿಗುವಿನ ವಾತಾವರಣ ಕಳೆದು, ನಿಷೇಧ-ನಿರ್ಬಂಧಗಳು ಹೋಗಿ ನಿರಾತಂಕದ ಮುಕ್ತತೆಯ ಅನುಭವ ಉಂಟಾಯಿತು. ಚುನಾವಣೆಯ ಕಾರಣ ಜನತೆಗೆ ಎಲ್ಲಿಲ್ಲದ ಮಹತ್ವ, ಘನತೆ, ಬೆಲೆ ಬಂತು. ಜಯಪ್ರಕಾಶರ ಪರ ವಿದ್ಯುತ್ ಸಂಚಾರವನ್ನುಂಟುಮಾಡಿತು.

**ಚಳವಳಿಯ ಗತಿ** : ಚುನಾವಣೆಗಳ ಫಲಿತಾಂಶವಾಗಿ ದೇಶದಲ್ಲಿ ಏಕನಾಯಕವಾದ ಒಬ್ಬವ್ಯಕ್ತಿಯ ನಿರಂಕುಶಾಧಿಕಾರ ಕೊನೆಗೊಂಡಿತು. ಜೆ. ಪಿ. ಆಶೀರ್ವಾದ ಪಡೆದ ಜನತಾ ಪಕ್ಷ ಅಧಿಕಾರಾರೂಢವಾಯಿತು. ಆದರೆ ಜೆ. ಪಿ. ಆಂದೋಳನ ಹಿಂದಕ್ಕೆ ಸರಿದು ಮಾಯವಾಗಿ ಹೋಯಿತು. ಸಂಪೂರ್ಣ ಕ್ರಾಂತಿಯ ಮೊದಲ ಚರಣದ ಕಾರ್ಯವೇ ಆರಂಭದ ಹಂತದಲ್ಲೇ ನಿಂತುಹೋಯಿತೆಂದ ಮೇಲೆ ಇನ್ನು ಎರಡನೇ ಚರಣದ ಮಾತಾಡುವುದೇನು ಬಂತು? ಸಮಾಜ ಪರಿವರ್ತನೆಯ ಕಾರ್ಯಕ್ಕೂ ತೆರೆಬಿದ್ದಂತಾಯಿತು. ಜಯಪ್ರಕಾಶರ ತೀವ್ರತರ ಅನಾರೋಗ್ಯ, ಅವರ ಚಲನ-ವಲನಗಳೆಲ್ಲ ನಿಂತುಹೋದುದು ಒಂದು ಕಡೆಯಾದರೆ, ಇನ್ನೊಂದೆಡೆ ಜನತೆಯ ಗಮನವೆಲ್ಲ ಕೇಂದ್ರದ ಹೊಸ ಸರ್ಕಾರದತ್ತ ಮತ್ತು ಆ ಸರ್ಕಾರ ಅಂತರ್ನಿಹಿತ ವಿರೋಧಾಭಾಸಗಳಲ್ಲಿ ಸಿಲುಕಿ ತೊಳಲಾಡುವಂತಾದುದು, ಕೊನೆಯದಾಗಿ ಸಮಾಜ ಪರಿವರ್ತನೆಯ ಕಾರ್ಯಕ್ಕೆ ಬದಲಾವಣೆಯ ಪರವಾಗಿರುವವರೆಂದು ಹೇಳಿಕೊಳ್ಳುವವರಿಂದಲೇ ಅವರೋಧಗಳು ಒಂದೊಂದೂ ಹೀಗೆಲ್ಲ ಕ್ಲಿಷ್ಟಕಾರಣಗಳ ಸರಮಾಲಿಕೆಯ ಪರಿಣಾಮವಾಗಿ ಜೆ. ಪಿ. ಚಳವಳಿಗೆ ಪೂರ್ಣ ವಿರಾಮ ಹಾಕಿದಂತಾಯಿತು. ಈಗ ಅದೊಂದು ಘೋಷಣೆ ಮಾತ್ರ. ಹೆಚ್ಚೆಂದರೆ ಪೂರ್ವೇತಿಹಾಸದ ಪುಟಗಳಲ್ಲಿ ಸೇರಿಹೋದ ಪ್ರಕರಣ ಮಾತ್ರ. ಹೀಗೆ ಸ್ಥಿತ್ಯಂತರವಾದಾಗ ಜೆ. ಪಿ. ಆಂದೋಳನದ ನಾಲ್ಕು ರಾಷ್ಟ್ರೀಯ ಬೇಡಿಕೆಗಳಾದ ಬೆಲೆ ಏರಿಕೆಯ ಮೇಲೆ ಹತೋಟಿ, ಭ್ರಷ್ಟಾಚಾರದ ನಿವಾರಣೆ, ನಿರುದ್ಯೋಗಕ್ಕೆ ನಿಲುಗಡೆ ಮತ್ತು ಶಿಕ್ಷಣದಲ್ಲಿ ಆಮೂಲಾಗ್ರ ಬದಲಾವಣೆಗಳ ಗತಿ ಏನಾಯಿತೆಂದು ಕೇಳುವವರಾರು?

ಕರ್ನಾಟಕದಲ್ಲಿ ರಾಜಕೀಯ ಪರಿವರ್ತನೇಯೇನೂ ಆಗಲಿಲ್ಲ. ಕಾಲಾನಂತರ ಬಂದ ಜನತಾದಳದ ಸರ್ಕಾರದ ಆಳ್ವಿಕೆಯಲ್ಲಿ ೧೯೭೫ನೇ ಮಾರ್ಚ್ ಆರನೇ ದಿನಾಂಕ ಆಗಿನ ಮುಖ್ಯಮಂತ್ರಿಗಳಿಗೆ ಜನತಾ ಸಂಘರ್ಷ ಸಮಿತಿ ಒಪ್ಪಿಸಿದ್ದ ೩೦ ಬೇಡಿಕೆಗಳ ಪಟ್ಟಿಯೊಳಗಿನ ಎಷ್ಟು ಅಂಶಗಳು ಪೂರೈಸಲ್ಪಟ್ಟವು? ಆ ಪಟ್ಟಿಯ ಗತಿ ಏನಾಯಿತೆಂದು ಯಾರ ಸ್ಮರಣೆಯಲ್ಲಾದರೂ ಉಳಿದಿದೆಯೇ? ಅವುಗಳಲ್ಲಿ ಕೆಲವಂಶಗಳ ನೇರ ಅವಹೇಳನೆಯಾದುದು ಕಟು ಸತ್ಯಸಂಗತಿ ಮತ್ತು ಅತಿ ವಿಂಡಬನಕಾರಿ ಬೆಳವಣಿಗೆ. ಇವೆಲ್ಲವನ್ನೂ ಕುರಿತು ಚಿಂತಿಸಿದಾಗ ಮತ್ತೊಂದು ಕಟುಸತ್ಯದ ಕಡೆಯೂ ದೃಷ್ಟಿ ಹೊರಳಬೇಕಾಗುತ್ತದೆ. ಆಗೆಲ್ಲ ಒಂದು ನಿಷ್ಠುರ ಟೀಕೆ ಕೇಳಿ ಬರುತ್ತಿತ್ತು. ಪಕ್ಷಗಳ ಧುರೀಣರೂ ಕಾರ್ಯಕರ್ತರೂ ಜೆ. ಪಿ.ಯ ಗೆಲ್ಲುಗಾಡಿಯನ್ನೇರಿ ಅಥವಾ ವಿಜಯರಥವೆಂದು ನಂಬಿರುವ ಗಾಡಿಯನ್ನೇರಿ ಅಥವಾ ತಪಃ ಪ್ರಭಾವದಲೆಯನ್ನೇರಿ ಅಧಿಕಾರ ಹಿಡಿದರು. ಅವರ ರಥವನ್ನು ತಮ್ಮ ಆ ನಿಹಿತ ಉದ್ದೇಶಕ್ಕಷ್ಟೇ ಬಳಸಿಕೊಂಡು ಅನಂತರ ಅದನ್ನು ಪಕ್ಕಕ್ಕೆ ಸರಿಸಿಬಿಟ್ಟರು ಎನ್ನುವುದು ಟೀಕೆಯಷ್ಟೇ ಆಗಲಿಲ್ಲ ವಾಸ್ತವಿಕ ಸಂಗತಿಯೆಂದು ಈಗ ಎಲ್ಲರಿಗೂ ಗೋಚರವಾಗುತ್ತದೆ.

**ಉಪಸಂಹಾರ** : ಜೆ. ಪಿ. ಚಳವಳಿಯ ದೀರ್ಘ ವಿವರಣೆಯ ನಂತರ ಉಪಸಂಹಾರ. ಚಳವಳಿ ಮೂರು ಬಾರಿ ವಿಚಲನೆ - ವಿರುದ್ಧ ತಿರುವುಗಳನ್ನನುಭವಿಸಿತು. ಅದು ಇಂದಿರಾ ವಿರೋಧಿಯಾಗಲಿ, ಕಾಂಗ್ರೆಸ್ ವಿರೋಧಿಯಾಗಲಿ ಅಲ್ಲ. ಇಂದಿರಾಜಿಯ ನೀತಿ-ರೀತಿಯ ವಿರೋಧಿಯಷ್ಟೇ ಎಂದು ಸಾರಿ ಸಾರಿ ಹೇಳಿದ್ದರೂ ಕೊನೆಗೆ ಅದನ್ನು ಇಂದಿರಾ ವಿರೋಧಿ ಆಂದೋಳನವನ್ನಾಗಿ ಪರಿಗಣಿಸಿದ್ದುದು ಒಂದು ವಿಡಂಬನಕಾರಿ ಬೆಳವಣಿಗೆ. ಇವೆಲ್ಲ ಏನೇ ಅನಿಷ್ಟಕಾರಿ ಬೆಳವಣಿಗೆಗಳಾದರೂ ಆಂದೋಳನ ನಾಲ್ಕಾರು ಸತ್ಪ್ರಭಾವಗಳನ್ನು ಬೀರಿತು. ೧. ಅದು ಕೇವಲ ರಾಷ್ಟ್ರೀಯವಾಗಿ ಉಳಿಯಿತು. ಸಂಕುಚಿತ-ಸಂಕೀರ್ಣ-ವಿಭಾಗೀಯ, ಆಂದೋಳನವಾಗಲಿಲ್ಲ. ೨. ಅದು ಅಹಿಂಸಕವಾಗಿ ನಡೆಯಿತು. ೩. ಪ್ರಚಂಡ ಜನಜಾಗೃತಿಯನ್ನುಂಟುಮಾಡಿತು. ೪. ಅದರಿಂದ ರಾಷ್ಟ್ರವ್ಯಾಪಿ ಜನಶಕ್ತಿಯನ್ನು ಎದ್ದು ನಿಲ್ಲಿಸಿತು. ೫. ಆ ಜನಶಕ್ತಿ ಪ್ರಜಾತಂತ್ರರಕ್ಷಕನಾಗಿ ತನ್ನಿಂದ ನಿರೀಕ್ಷಿತ ಕಾರ್ಯ ನೆರವೇರಿಸಿ ಅನ್ವರ್ಥವಾಗಿ ನಡೆದುಕೊಂಡಿತು. ೬. ಕೆಲವೊಂದು ಮುನ್ನೆಚ್ಚರಿಕೆ ಮತ್ತು ದೂರದೃಷ್ಟಿ ಹಾಗೂ ಜಾಗರೂಕ ಕ್ರಮಗಳೊಡನೆ ಮುನ್ನಡೆಯುವ ಜೆ. ಪಿ. ಯಂಥ ತ್ಯಾಗಿ, ತಪಸ್ವಿ ವಿವೇಕಿಯ ನಾಯಕತ್ವದ ಅಂಕೆಯಲ್ಲಿ ವಿದ್ಯಾರ್ಥಿ ಯುವಜನ ಶಕ್ತಿ ಕ್ರಾಂತಿಸಾಧಕ-ವಾಹಕವಾಗಬಲ್ಲದು ಎಂದು ತೋರಿಸಿತು. ಇದು ಕಡಿಮೆ ಮಹತ್ವದ ಸಾಧನೆಯೇನಲ್ಲ.

# ಕಾರ್ಮಿಕ ಚಳವಳಿ

ಎನ್. ಪಿ. ಶಂಕರನಾರಾಯಣರಾವ್

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಭಾರತದ ನಾನಾ ಭಾಗಗಳಲ್ಲಿ ಆಧುನಿಕ ಉದ್ಯಮಗಳು ತಲೆಯೆತ್ತಿದವು ಹಾಗೂ ಅದರ ಪರಿಣಾಮವಾಗಿ ಕಾರ್ಮಿಕ ಚಳವಳಿಗಳೂ ರೂಪುಗೊಂಡು, ಬಲಗೊಳ್ಳುತ್ತ ಹೋದುವು. ಭಾರತದ ಕಾರ್ಮಿಕ ಚಳವಳಿಯು ಆರಂಭ ಕಾಲದಿಂದ ರಾಷ್ಟ್ರೀಯ ಚಳುವಳಿಯೊಂದಿಗೆ ಗಾಢವಾದ ನಂಟನ್ನು ಬೆಳೆಸಿಕೊಂಡಿತು. ಈ ಐತಿಹಾಸಿಕ ನಂಟಿನ ಪರಿಣಾಮವಾಗಿ ಇಂದಿಗೂ ಸಹ ಕಾರ್ಮಿಕ ಚಳುವಳಿಯು ಗಾಢವಾಗಿ ರಾಜಕೀಯ ಪಕ್ಷಗಳ ಪ್ರಭಾವಗಳಿಗೆ ಗುರಿಯಾಗಿರುವುದನ್ನು ಕಾಣುತ್ತಿದ್ದೇವೆ.

ಮೇಲಿನ ಮಾತುಗಳು ಕರ್ನಾಟಕಕ್ಕೂ ಅನ್ವಯವಾಗುತ್ತವೆ. ಆದರೆ ಬ್ರಿಟಿಷರ ಕಾಲದಲ್ಲಿ ಕರ್ನಾಟಕವು ಒಂದು ರಾಜಕೀಯ ಆಡಳಿತ ಘಟಕವಾಗಿ ಒಂದುಗೂಡಿರಲಿಲ್ಲ. ಎರಡು ಬ್ರಿಟಿಷ್ ಪ್ರಾಂತಗಳಲ್ಲಿ ಎರಡು ದೊಡ್ಡ ಆಶ್ರಿತ ಸಂಸ್ಥಾನಗಳಲ್ಲಿ ಮತ್ತು ಹಲವು ಸಣ್ಣ ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿತ್ತು. ಕೊಡಗು ಮಾತ್ರ ಕೆಲಕಾಲ ಸಂಸ್ಥಾನವಾಗಿದ್ದು ಬಳಿಕ ಪುಟ್ಟ ಬ್ರಿಟಿಷ್ ಪ್ರಾಂತವಾಯಿತು. ಈ ಹಲವಾರು ಭಾಗಗಳಲ್ಲಿ ಈ ಲೇಖನದ ಮಟ್ಟಿಗೆ, ಮೈಸೂರು ಸಂಸ್ಥಾನ, ಮದರಾಸು ಮತ್ತು ಮುಂಬಯಿ ಪ್ರಾಂತಗಳ ಕನ್ನಡ ಪ್ರದೇಶಗಳೂ ಹಾಗೂ ಹೈದರಾಬಾದ್‌ನ ಕನ್ನಡ ಪ್ರದೇಶಗಳೂ ಮುಖ್ಯವಾದವು. ಏಕೀಕರಣವಾಗುವವರೆಗಿನ ಕಾರ್ಮಿಕ ಚಳವಳಿಯನ್ನು ಅರಿತುಕೊಳ್ಳಬೇಕಾದರೆ, ೧೯೫೬ರವರೆಗಿನ ಬೆಳವಣಿಗೆಗಳನ್ನು ಆಯಾ ಆಡಳಿತ ಘಟಕಗಳಿಗೆ ಸಂಬಂಧಪಟ್ಟ ಹಾಗೆ ತಿಳಿದುಕೊಳ್ಳುವುದು ಸೂಕ್ತ. ಏಕೀಕರಣದ ನಂತರದ ಚಳವಳಿಯು ಅಖಿಲ ಕರ್ನಾಟಕ ರೂಪದ್ದು. ಆ ಹಂತವನ್ನು ಆ ರೀತಿ ಒಂದೇ ಚಳವಳಿಯಾಗಿ ಅರಿತುಕೊಳ್ಳುವುದು ಸೂಕ್ತ. ಇಡೀ ಕರ್ನಾಟಕದ ಕಾರ್ಮಿಕ ಚಳವಳಿಯ ಒಂದು ಸಮಗ್ರ ಚಿತ್ರಣವನ್ನು ಪಡೆಯಲು ನಮಗಿರುವ ದಾರಿ ಇದೊಂದೇ. ಈ ಮುಂದೆ ಏಕೀಕರಣದವರೆಗಿನ ಕಾರ್ಮಿಕ ಚಳವಳಿಯನ್ನು ವಿಭಾಗೀಯವಾಗಿ ನಿರೂಪಿಸಿ, ಏಕೀಕರಣಾನಂತರದ್ದನ್ನು ಒಂದೇ ಚಳವಳಿಯನ್ನಾಗಿ ನಿರೂಪಿಸಸಲಾಗಿದೆ.

## ಏಕೀಕರಣಕ್ಕೆ ಮುನ್ನ

(ಅಂದಿನ ರಾಜಕೀಯ ಆಡಳಿತ ಘಟಕಗಳ ಪ್ರಕಾರ)

### ೧. ಮೈಸೂರು ಸಂಸ್ಥಾನ

೧೮೦೦ ರಿಂದ ೧೯೫೬ರ ವರೆಗಿನ ಒಂದೂವರೆ ಶತಮಾನಗಳ ಕಾಲಾವಧಿಯ ಪೂರ್ತಾ, ಮೈಸೂರು ಸಂಸ್ಥಾನವು ''ಇದು ನಮ್ಮ ರಾಜ್ಯ, ಇದರ ಅಭಿವೃದ್ಧಿ ನಮ್ಮ ಕರ್ತವ್ಯ.'' ಎಂಬ ಸಕಾರಾತ್ಮಕ ಮನೋಭಾವವಿದ್ದ ಆಡಳಿತಗಾರರ ಹತೋಟಿಯಲ್ಲಿತ್ತು ಎಂದು ಹೇಳಿದರೆ ತಪ್ಪಾಗಲಾರದು. ಈ ಕಾರಣದಿಂದ ಈ ಪ್ರದೇಶದ ಔದ್ಯಮಿಕ ಪ್ರಗತಿಯಲ್ಲಿ ಒಂದು ಮಟ್ಟದ ಸಂಬದ್ಧತೆಯನ್ನು ಕಾಣಬಹುದು. ಇದು ಜಲವಿದ್ಯುತ್ ಉತ್ಪಾದನಾ ಘಟಕಗಳ ಸ್ಥಾಪನೆಯಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.

೧೯ನೆಯ ಶತಮಾನದ ಕೊನೆಯ ವೇಳೆಗೆ ಕೋಲಾರದ ಚಿನ್ನದ ಗಣಿಗಳು, ಬೆಂಗಳೂರಿನ ಮೈಸೂರ್ ಸ್ಪಿನ್ನಿಂಗ್ ಅಂಡ್ ಮ್ಯಾನುಫಾಕ್ಚರಿಂಗ್ ಕಂಪನಿ ಎಂಬ ಹೆಸರಿನ ರಾಜಾಮಿಲ್, ಬೆಂಗಳೂರು ಸ್ಪಿನ್ನಿಂಗ್ ಅಂಡ್ ವೀವಿಂಗ್ ಮಿಲ್ಸ್ ಎಂಬ ಹೆಸರಿನ ಬಿನ್ನಿಮಿಲ್ - ಹೀಗೆ ಮೂರು ಬೃಹತ್ ಉದ್ಯಮಗಳು ಇಲ್ಲಿ ಸ್ಥಾಪನೆಯಾಗಿದ್ದುವು. ೧೯೪೪ರ ವೇಳೆಗೆ ಇಲ್ಲಿ ೬೦೫ ಕಾರ್ಖಾನೆಗಳಿದ್ದುವು. ಅವುಗಳಲ್ಲಿ ಸುಮಾರು ೮೦ ಸಾವಿರ ಕಾರ್ಮಿಕರಿದ್ದರು. ಇಲ್ಲಿನ ಉದ್ಯಮಗಳಲ್ಲಿ ಹತ್ತಿ ಜವಳಿ, ರೇಷ್ಮೆ ಜವಳಿ, ಕಾಗದ, ಕಬ್ಬಿಣ ಮತ್ತು ಉಕ್ಕು, ಯಂತ್ರ ನಿರ್ಮಾಣ ಮುಂತಾಗಿ ವಿವಿಧ ಉದ್ಯಮಗಳಿದ್ದುವು. ಉತ್ಪಾದನೆಯ ದೃಷ್ಟಿಯಲ್ಲಿ ಅವು ಬೃಹತ್ ಘಟಕಗಳಲ್ಲ ಎಂಬುದು ನಿಜವಾದರೂ, ಬ್ರಿಟಿಷ್ ಆಳ್ವಿಕೆಯಲ್ಲಿ ಒಂದು ದೇಶೀಯ ಸಂಸ್ಥಾನದಲ್ಲಿ ಅದೂ ಕರ್ನಾಟಕದ ಒಂದು ಭಾಗದಲ್ಲಿ ಸ್ಥಾಪಿಸಿದ ಪ್ರಗತಿ ಇದು ಎಂಬುದು ಸಂತೋಷ ತರುವಂತಹ ಒಂದು ಸಂಗತಿ. ಮುಂದೆ ಹಲವಾರು ಪ್ರಮುಖ ಕೇಂದ್ರ ಸರ್ಕಾರ ಸ್ವಾಮ್ಯದ ಬೃಹತ್ ಉದ್ಯಮಗಳ ಸ್ಥಾಪನೆಗೆ ಈ ಹಿನ್ನೆಲೆಯು ಒಂದು ಪ್ರೋತ್ಸಾಹದಾಯಕ ವಾತಾವರಣವನ್ನು ಸೃಷ್ಟಿಸಿತು.

ಆದರೆ, ಕಾರ್ಮಿಕ ಚಳವಳಿಯು ತಲೆ ಎತ್ತಲು ಆ ಕಾಲದ ಸರ್ಕಾರಗಳು ಅವಕಾಶಗಳೇ ದೊರೆಯದಂತಹ ಒಂದು ಬಗೆಯ ವೈರಭಾವದ ಪ್ರತಿಕೂಲ ವಾತಾವರಣವನ್ನು ನಿರ್ಮಿಸಿದ್ದವು. ಆಗಿನ ಬ್ರಿಟಿಷ್ ಭಾರತ ಸರ್ಕಾರವು ೧೯೨೬ರಲ್ಲಿ ಕಾರ್ಮಿಕ ಸಂಘಗಳಿಗೆ ಮಾನ್ಯತೆ ಹಾಗೂ ವಿವಾದಗಳಿಗೆ ಸಂಬಂಧಪಟ್ಟ ಹಾಗೆ ಅಖಿಲಭಾರತ ಟ್ರೇಡ್ ಯೂನಿಯನ್ ಕಾಯದೆಯನ್ನು ಜಾರಿ ಮಾಡಿತು. ಮೈಸೂರು ಸಂಸ್ಥಾನವು ಅದನ್ನು ಇಲ್ಲಿಗೆ ಅನ್ವಯಗೊಳಿಸಲೂ ಇಲ್ಲ, ಪರ್ಯಾಯ ಶಾಸನವೊಂದನ್ನು ರೂಪಿಸಲೂ ಇಲ್ಲ. ಇಲ್ಲಿ ಅಂತಹ ಒಂದು ಕಾಯದೆ ಜಾರಿಯಾದುದು, ಕಾರ್ಮಿಕರ ಹೋರಾಟಗಳ ಪರಿಣಾಮವಾಗಿ, ಅದೂ ೧೯೪೧ರಷ್ಟು ತಡವಾಗಿ.

ಕಾನೂನು, ಕಾಯಿದೆಗಳು ಜಾರಿಯಾಗಲಿಲ್ಲವೆಂದು ಜೀವನಾವಶ್ಯಕ ವಸ್ತುಗಳ ಬೆಲೆಗಳು ನಿಂತಲ್ಲಿ ನಿಲ್ಲುತ್ತವೆಯೇ? ೧೯೧೪ರ ಬೆಲೆ ಸೂಚ್ಯಂಕವನ್ನು ೧೦೦ ಎಂದು ಪರಿಗಣಿಸಿದರೆ, ೧೯೨೦ರ ವೇಳೆಗೆ ಅದು ೧೮೩ ಆಯಿತು. ಅತ್ಯಂತ ಕಡಿಮೆ ಕೂಲಿದರಗಳಲ್ಲಿ ಕೆಲಸ ಮಾಡಬೇಕಾದ ಕಾರ್ಮಿಕರ ಸ್ಥಿತಿಯು ದುರ್ಭರವಾಯಿತು. ಆಗಿನ ಕಾರ್ಮಿಕ ಹೋರಾಟಗಳೆಲ್ಲವೂ ವೇತನ, ಬೋನಸ್‌ಗಳಿಗೆ ಸಂಬಂಧಪಟ್ಟುವು. ೧೯೨೦ರಲ್ಲಿ ಬಿನ್ನಿಮಿಲ್‌ನಲ್ಲಿ ಬೋನಸ್ ಕೋರಿ ಒಂದು ಮುಷ್ಕರವು ಜರುಗಿತು. ೧೯೨೬ ರಿಂದ ೧೯೩೧ರ ನಡುವೆ ಅದೇ ಬೇಡಿಕೆಯ ಮೇಲೆ ನಾಲ್ಕು ಬಾರಿ ಮುಷ್ಕರಗಳು ಜರುಗಿದ್ದು, ಈ ಹೋರಾಟಗಳ ಸಂದರ್ಭಗಳಲ್ಲಿ ಕಾರ್ಮಿಕರು ರೊಚ್ಚಿಗೆದ್ದು ಯಂತ್ರಸ್ಥಾವರಗಳಿಗೆ ಹಾನಿಮಾಡಿ ಆಡಳಿತವರ್ಗ ಹಾಗೂ ಪೊಲೀಸರ ದಬ್ಬಾಳಿಕೆಗೆ ಗುರಿಯಾಗುತ್ತಿದ್ದರು. ಇದನ್ನು ಗಮನಿಸಿದ ಕೆಲವರು ಸಹೃದಯಿ ನಾಗರಿಕರು ಕಾರ್ಮಿಕರಿಗೆ ಸೂಕ್ತ ಮಾರ್ಗದರ್ಶನ ಮಾಡಲು ಮುಂದಾದರು. ಇವರಲ್ಲಿ ಕೆ.ಟಿ. ಭಾಷ್ಯಂ, ಮತ್ತು ಪಿ.ಎಂ. ರಾಮಶರ್ಮ ಮೊದಲಿಗರು ಹಾಗೂ ಮುಖ್ಯರು. ಅವರುಗಳ ಪ್ರಯತ್ನಗಳಿಂದಾಗಿ ಬೆಂಗಳೂರು ಟೆಕ್ಸ್‌ಟೈಲ್ ಲೇಬರ್‌ಯೂನಿಯನ್ ಎಂಬ ಕಾರ್ಮಿಕ ಸಂಘವು ಸ್ಥಾಪನೆಯಾಯಿತು. ಅದರ ಸ್ಥಾಪನೆಯಾದುದು ೧೯೧೮ ಎಂದು ಕೆಲವು ಮೂಲಗಳು ಹೇಳಿದರೆ, ೧೯೨೬ ಎಂದು ಇನ್ನು ಕೆಲವು ಮೂಲಗಳು ಹೇಳುತ್ತವೆ. ಇದನ್ನು ೧೯೦೪ರ ಸೊಸೈಟೀಸ್ ಆಕ್ಟ್ ಎಂಬ ಕಾಯದೆಯ ಪ್ರಕಾರ ನೋಂದಾಯಿಸಲಾಗಿತ್ತು. ಕೋಲಾರ ಚಿನ್ನದ ಗಣಿಗಳ ಕಾರ್ಮಿಕ ಸಂಘವೂ ಸ್ಥಾಪನೆಯಾಗಿತ್ತು. ಅದರ ಸಂಬಂಧವಾಗಿ ಪಿ.ಆರ್. ಶರ್ಮ, ಫಿಲಿಪ್ ಎಂಬುವರ ಹೆಸರುಗಳು ಅಲ್ಲಲ್ಲಿ ಪ್ರಸ್ತಾಪವಾಗಿವೆ. ೧೯೩೦ರಲ್ಲಿ ಮೈಸೂರಿನ ತಾತಯ್ಯ ಎಂದು ಹೆಸರಾಗಿದ್ದ ಎಂ. ವೆಂಕಟಕೃಷ್ಣಯ್ಯನವರು ಆಗ ಭಾರತದ ರೈಲ್ವೇ ಕಾರ್ಮಿಕರ ಪ್ರಮುಖ ಮುಖಂಡರಲ್ಲಿ ಒಬ್ಬರಾಗಿದ್ದ ವಿ. ವಿ. ಗಿರಿಯವರನ್ನು ಮೈಸೂರು ರೈಲ್ವೇ ಕಾರ್ಮಿಕರ ಸಂಘವನ್ನು ಸ್ಥಾಪಿಸಲು ನೆರವಾಗಿರೆಂದು ಆಹ್ವಾನಿಸಿ ಮೈಸೂರಿಗೆ ಕರೆಸಲು ಪ್ರಯತ್ನಿಸಿದರು. ಆದರೆ ಆಗಾಗ ಸರ್ಕಾರವು ಗಿರಿಯವರು ಮೈಸೂರಿಗೆ ಬಾರದಂತೆ ತಡೆಯಾಜ್ಞೆ ಜಾರಿಮಾಡಿತು. ಹೀಗೆ ಅಂದಿನ ಸರ್ಕಾರವು ಕಾರ್ಮಿಕ ಸಂಘಗಳೇ ಸ್ಥಾಪನೆಯಾಗದಂತೆ ಅಡ್ಡಿಮಾಡುತ್ತಿತ್ತು.

೧೯೩೦ರ ದಶಕದ ನಡುಭಾಗದಲ್ಲಿ ಕಾರ್ಮಿಕ ಸಂಘಟನೆಗೆ ವಿಶೇಷ ಗಮನ ಹರಿಸುವ ಉದ್ದೇಶ ಹೊಂದಿದ್ದ ಒಂದು ಸಂಘವು ಅಸ್ತಿತ್ವಕ್ಕೆ ಬಂತು. ೧೯೩೦ರ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ, ಬ್ರಿಟಿಷ್-ಪ್ರಾಂತಗಳಲ್ಲಿ ಸೆರೆಮನೆವಾಸ ಅನುಭವಿಸಿ ಹೊರಬಂದಿದ್ದ ಮೈಸೂರು ಸಂಸ್ಥಾನದ ಕೆಲವು ತರುಣರು ಮುಖ್ಯ ಪಾತ್ರವಹಿಸುತ್ತಿದ್ದ ಈ ಸಂಘದ ಹೆಸರು ''ಜನಜಾಗೃತಿ ಸಂಘ''. ಇದರ ಚಟುವಟಿಕೆಗಳು ಬೆಂಗಳೂರು, ಮೈಸೂರು, ಕೋಲಾರ ಮುಂತಾದೆಡೆಗಳಲ್ಲಿ ಚುರುಕಾಗಿದ್ದುವು. ಈ ಸಂಘದ ಹಲವರು ಆಗ್ಗೆ ನಿಷೇಧಿತವಾಗಿದ್ದ ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯರು ಹಾಗೂ ಸಹಾನುಭೂತಿಪರರು. ಮುಂದೆ ಮೈಸೂರು ಸಂಸ್ಥಾನದ ಕಾರ್ಮಿಕ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ ಎನ್.ಡಿ. ಶಂಕರ್, ಎಸ್. ರಾಮಸ್ವಾಮಿ, ಕೆ.ಎಸ್. ಕುಮಾರನ್, ಎಂ.ಎಸ್. ರಾಮರಾವ್ ಮುಂತಾದವರು ಈ ಸಂಘದವರು.

ಈ ತರುಣರು ಆ ವೇಳೆಗಾಗಲೇ ಕಾರ್ಮಿಕರ ನಡುವೆ ಅಭಿಮಾನ ಗಳಿಸಿದ್ದ ಕೆ.ಟಿ. ಭಾಷ್ಯಂ, ಪಿ.ಎಂ. ರಾಮಶರ್ಮ ಇವರೊಂದಿಗೆ ಸೇರಿಕೊಂಡರು. ಸ್ವತಃ ಕಾರ್ಮಿಕರಾಗಿ, ಕಾರ್ಮಿಕ ಮುಂದಾಳುಗಳಾದವರಲ್ಲಿ ಜಿ.ಆರ್. ಚಂಗಲಾರಾಧ್ಯ, ಜೆ. ಲಿಂಗಯ್ಯ, ಎಂ. ಎ. ಪರಶುರಾಂ, ಎಸ್. ರಾಮದಾಸ್. ಎಸ್. ಶ್ರೀರಾಮುಲು ಇವರು ಮುಖ್ಯರು.

೧೯೩೫ರ ನಂತರ ಕಾರ್ಮಿಕರ ನಡುವೆ ಜಾಗೃತಿಯುಂಟಾಯಿತು. ಆ ವರ್ಷ ಮಹಾರಾಜಾ ಮತ್ತು ಮಿನರ್ವ ಮಿಲ್‌ಗಳಲ್ಲಿ ಮುಷ್ಕರವು ಜರುಗಿ ೯ ಮಂದಿ ಕೆಲಸದಿಂದ ವಜಾ ಆದರು. ಕಾರ್ಮಿಕರು ಮತ್ತು ಕಾರ್ಮಿಕ ಮುಖಂಡರಲ್ಲಿ, ಕಾರ್ಮಿಕರ ಕೋರಿಕೆಗಳಿಗೆ ಹಾಗೂ ಅವರ ಮೇಲೆ ನಡೆಯುವ ದಬ್ಬಾಳಿಕೆ ಮತ್ತು ದೌರ್ಜನ್ಯಗಳಿಗೆ ವಿರುದ್ಧವಾಗಿ ಸಾರ್ವಜನಿಕ ಬೆಂಬಲವನ್ನು ಗಳಿಸುವುದರ ಮಹತ್ವದ ಅರಿವು ಮೂಡಿತು. ಮೈಸೂರು ಕಾಂಗ್ರೆಸ್ ಸ್ಥಾಪನೆಯಾಗಿ ಜನಾಂದೋಲನಗಳು ಪ್ರಾರಂಭವಾದ ಮೇಲಂತೂ ಸಾರ್ವಜನಿಕ ಸಭೆಗಳು, ಕಾರ್ಮಿಕರ ಮೆರವಣಿಗೆಗಳು ದಿನನಿತ್ಯದ ಘಟನೆಗಳಾದುವು. ಜನಜಾಗೃತಿ ಸಂಘದ ಕಾರ್ಯಕರ್ತರು ಸಣ್ಣಪುಟ್ಟ ಕಾರ್ಖಾನೆಗಳ ಕಾರ್ಮಿಕರನ್ನು ಸಂಘಟಿಸತೊಡಗಿದರು.

೧೯೩೯ರ ಫೆಬ್ರವರಿ ತಿಂಗಳಲ್ಲಿ ಟಿ. ಆರ್. ಮಿಲ್ಸ್ ಎಂಬ ಬಟ್ಟೆಗಿರಣಿಯ ಕಾರ್ಮಿಕರು ಹೆಚ್ಚಿನ ವೇತನ ಕೋರಿ ಮುಷ್ಕರ ಹೂಡಿದರು. ಅವರಿಗೆ ಬೆಂಬಲ ವ್ಯಕ್ತಪಡಿಸಲು ಜರುಗಿದ ಹಲವಾರು ಬಹಿರಂಗ ಸಭೆಗಳ ವರದಿಗಳು ಪೊಲೀಸ್ ದಾಖಲಾತಿಗಳಲ್ಲಿ ಲಭ್ಯವಿವೆ. ಧರ್ಮಾಂಬುಧಿ ಕೆರೆಯ ಅಂಗಳದಲ್ಲಿ (ಈಗಿನ ಬೆಂಗಳೂರು ಬಸ್‌ನಿಲ್ದಾಣ) ಜರುಗಿದ ಸಭೆಯಲ್ಲಿ ಎರಡು ಸಾವಿರ ಮಂದಿ ಹಾಜರಿದ್ದರಂತೆ. ಅಂತಹ ಇನ್ನೊಂದು ಸಭೆಯಲ್ಲಿ ಮಿನರ್ವ ಮಿಲ್ ಕಾರ್ಮಿಕರು ತಮ್ಮ ಒಂದು ದಿನದ ಕೂಲಿಯನ್ನು ವಂತಿಗೆ ಹಾಕಿ. ಟಿ. ಆರ್. ಮಿಲ್ಸ್ ಕಾರ್ಮಿಕರಿಗೆ ನೆರವು ನೀಡಲು ಮುಂದೆ ಬಂದರು. ಇನ್ನೊಂದು ಸಭೆಯಲ್ಲಿ ಆಗ್ಗೆ ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್‌ನ ಕಾರ್ಯದರ್ಶಿಯಾಗಿದ್ದ ಎಸ್. ಎಸ್. ಮಿರಜಕರ್ ಆ ಕಾರ್ಮಿಕರಿಗೆ ಬೆಂಬಲ ಸೂಚಿಸಿದರು.

ಅದೇ ವರ್ಷ ಮೈಸೂರಿನಲ್ಲಿ ಜರುಗಿದ ಒಂದು ಘಟನೆಯು ಕಾರ್ಮಿಕರಲ್ಲಿ ಮೂಡಿದ್ದ ಒಗ್ಗಟ್ಟನ್ನೂ, ದಿಟ್ಟತನವನ್ನೂ ಸೂಚಿಸುತ್ತದೆ. ಮೈಸೂರಿನಲ್ಲಿ ಮೇ ದಿನ ಆಚರಿಸಲು ಒಂದು ಸಭೆ ಏರ್ಪಟ್ಟಿತ್ತು. ಅದರಲ್ಲಿ ಭಾಷಣ ಮಾಡಲು ಬರಬೇಕಾಗಿದ್ದ ಎನ್. ಡಿ. ಶಂಕರ್ ಮತ್ತು ಇತರರ ಮೇಲೆ ಸರ್ಕಾರವು ತಡೆಯಾಜ್ಞೆ ವಿಧಿಸಿತು. ಆಗ ಜನಜಾಗೃತಿ ಸಂಘದ ಇನ್ನೊಬ್ಬ ಕಾರ್ಯಕರ್ತ ಎಸ್. ರಾಮಸ್ವಾಮಿ ಮೈಸೂರಿಗೆ ಹೋಗಿ, ಅಲ್ಲಿ ರೈಲ್ವೇ ವರ್ಕ್‌ಷಾಪಿನ ಕಾರ್ಮಿಕರ ಸಭೆ ನಡೆಸಿ, ಕಾರ್ಮಿಕ ಸಂಘವೊಂದನ್ನು ಸ್ಥಾಪಿಸಲು ಪ್ರಯತ್ನಿಸಿದಾಗ ಅವರನ್ನು ಬಂಧಿಸಿ ಪೊಲೀಸರು ಮೊಕದ್ದಮೆ ಹೂಡಿದರು. ಮಾರನೆಯ ದಿನ ಕಾರ್ಮಿಕರು ಕೋರ್ಟಿಗೆ ಹೋಗಿ ತಮ್ಮ ಮುಖಂಡರನ್ನು ಕಂಡು ಬರಲು ಮೇಲಧಿಕಾರಿಗಳ ಅನುಮತಿ ಕೋರಿದರು. ಅದು ನಿರಾಕರಿಸಲ್ಪಟ್ಟಾಗ ಅವರೆಲ್ಲ ತಮ್ಮನ್ನು ಊಟದ ಬಿಡುವಿಗೆ ಬಿಟ್ಟಾಗ ಮುಷ್ಕರ ಹೂಡಿ, ಮೆರವಣಿಗೆಯಲ್ಲಿ ಕೋರ್ಟಿಗೆ ಹೋದರು. ರಾಮಸ್ವಾಮಿಗಂತೂ ಶಿಕ್ಷೆಯಾಯಿತು.

### ಕಾರ್ಮಿಕ ಕಾಯದೆ ಜಾರಿ

ಈ ಹುಮ್ಮಸ್ಸಿನ ವಾತಾವರಣವು ಆಗಿನ ಮೈಸೂರು ಸಂಸ್ಥಾನದಲ್ಲಿ ಕಾರ್ಮಿಕ ಕಾಯಿದೆಯೊಂದು ಜಾರಿಯಾಗುವಂತೆ ಮಾಡಿತು. ೧೯೩೯ರಲ್ಲಿ ಎರಡನೆಯ ಮಹಾಯುದ್ಧ ಆರಂಭವಾಯಿತು. ಬ್ರಿಟಿಷ್ ಭಾರತ ಸರ್ಕಾರವು ಅಗತ್ಯ ವಸ್ತುಗಳ ಉತ್ಪಾದನೆಗೆ ತಡೆಯಾಗಬಾರದು ಎಂದು ಬಯಸುತ್ತಿತ್ತು. ಬೋನಸ್ ಮತ್ತು ಕಾರ್ಮಿಕ ಸಂಘಕ್ಕೆ ಮಾನ್ಯತೆಗಳನ್ನು ಕೋರಿ ಬೆಂಗಳೂರಿನ ಬಿನ್ನಿ ಮಿಲ್ ಕಾರ್ಮಿಕರು ೧೯೪೧ರ ಜನವರಿ ೨೦ ರಂದು ಮುಷ್ಕರ ಹೂಡಿದರು. ಅಲ್ಲಿನ ಕಾರ್ಮಿಕರು ಎನ್. ಡಿ. ಶಂಕರ್ ಅವರನ್ನು ತಮ್ಮ ಮುಷ್ಕರಕ್ಕೆ ಮುಖಂಡರಾಗಲು ಕೋರಿಕೊಂಡಿದ್ದು ಅವರು, ಒಪ್ಪಿ ಕೆ. ಎಸ್. ಕುಮಾರನ್ ಮತ್ತು ಎಂ. ಎಸ್. ರಾಮಭಾವೆ ಅವರನ್ನು ತಮ್ಮ ಸಹಾಯಕ್ಕಾಗಿ ನಿಯಮಿಸಿಕೊಂಡರು. ಮೂವರೂ ಕೂಡಿ ಕಾರ್ಮಿಕರು ಮಿಲ್ ಗೇಟಿನ ಬಳಿ ಕೂಡಿ, ಒಳಹೋಗಬಯಸುವ ಕಾರ್ಮಿಕರನ್ನು ತಡೆಯುವ ಒಂದು ಕಾರ್ಯಸೂಚಿಯನ್ನು ರೂಪಿಸಿ ಕಾರ್ಮಿಕರು ಅವರವರ ಕಾಲನಿ ಹಾಗೂ ಕೇರಿಗಳಿಂದ ಮಿಲ್ಲಿಗೆ ಹೊರಡದಂತೆ ತಡೆಯುವ ವ್ಯವಸ್ಥೆ ಮಾಡಿದರು. ಇದರಿಂದ ಗಲಭೆಯಾಗುವ ಅವಕಾಶಗಳೇ ತಪ್ಪಿ ಹೋದುವು. ಪ್ರತಿನಿತ್ಯವೂ ಕಾರ್ಮಿಕ ಸಭೆಗಳು ಏರ್ಪಟ್ಟು, ಮುಷ್ಕರದ ಬಗ್ಗೆ ಕಾರ್ಮಿಕರಲ್ಲಿ ಉತ್ಸಾಹವು ಕುಗ್ಗದಂತಾಯಿತು. ಸಾರ್ವಜನಿಕರಿಂದ ಹಾಗೂ ಮಂಡಿ ವರ್ತಕರಿಂದ ಹಣ ಹಾಗೂ ಆಹಾರ ದಿನಸಿಗಳನ್ನು ಸಂಗ್ರಹಿಸಿ ಅಗತ್ಯವಿರುವ ಸಂದರ್ಭಗಳಲ್ಲಿ ವಿತರಿಸುವ ಏರ್ಪಾಡುಗಳನ್ನು ಸಹ ಮಾಡಲಾಯಿತು. ೧೯೪೧ರ ಜನವರಿ ೨೦ ರಂದು ಪ್ರಾರಂಭವಾದ ಮುಷ್ಕರವು ಫೆಬ್ರವರಿ ೧೪ರವರೆಗೆ ನಡೆಯಿತು. ಫೆಬ್ರವರಿ ೧೩ರಂದು ಶಂಕರ್ ಮತ್ತು ಇತರ ಮುಖಂಡರನ್ನು ಬಂಧಿಸಲಾಯಿತು. ಕೆ. ಟಿ. ಭಾಷ್ಯಂ ಅವರು ತಾವು ಪಂಚಾಯತಿ ನಡೆಸಲು ಏರ್ಪಡಿಸುವುದಾಗಿ ಭರವಸೆ ನೀಡಿದ ನಂತರ ಮುಷ್ಕರ ನಿಂತಿತು. ಸರ್ಕಾರವು ಆಗಿನ ಎಕ್ಸೈಸ್ ಕಮೀಷನರಾಗಿದ್ದ ಎ. ವಿ. ರಾಮನಾಥನ್ ಅವರನ್ನು

ಮುಷ್ಕರದ ವಿಚಾರಣೆಗಾಗಿ ನೇಮಿಸಿತು. ಅವರು ಆಡಳಿತವರ್ಗ ಮತ್ತು ಕಾರ್ಮಿಕರ ನಡುವೆ ಹುಟ್ಟುವ ಭಿನ್ನಾಭಿಪ್ರಾಯಗಳನ್ನು ಆಗಾಗ್ಗೆ ಬಗೆಹರಿಸಲು ಒಂದು ವ್ಯವಸ್ಥೆಯು ಅಗತ್ಯ ಎಂದು ಸೂಚಿಸಿದರು. ಸೂಕ್ತವಾದ ಕಾನೂನನ್ನು ಕುರಿತು ಸಲಹೆ ಮಾಡಲು ಮದರಾಸ್ ಹೈಕೋರ್ಟಿನ ಬ್ರಿಟಿಷ್ ನ್ಯಾಯಧೀಶರೊಬ್ಬರನ್ನು ಕೇಳಿಕೊಳ್ಳಲಾಯಿತು. ಅವರ ಸಲಹೆಯ ಮೇರೆಗೆ ೧೯೪೧ರ ಅಕ್ಟೋಬರ್‌ನಲ್ಲಿ ಮೈಸೂರು ಕಾರ್ಮಿಕ ತುರ್ತು ಶಾಸನವು ಜಾರಿಯಾಗಿ ೧೯೪೨ ರಲ್ಲಿ ಅದು ಕಾರ್ಮಿಕ ಕಾಯದೆಯಾಯಿತು.

ಅದರ ಪ್ರಕಾರ ೧. ಕಾರ್ಮಿಕರಿಗೆ ಸಂಘ ಸ್ಥಾಪಿಸಿಕೊಳ್ಳುವ ಹಕ್ಕು ಇದೆ. ಅದಕ್ಕೆ ಆಡಳಿತವರ್ಗವು ಮಾನ್ಯತೆ ನೀಡಬೇಕು. ೨. ಒಂದು ಕಾರ್ಖಾನೆಗೆ ಒಂದೇ ಸಂಘ. ೨೫ ಕಾರ್ಮಿಕರಾದರೂ ಇರುವ ಕಾರ್ಖಾನೆಗಳಿಗೆ ಮಾತ್ರ ಇದು ಅನ್ವಯ. ೩. ಸಂಘದ ಅಧಿಕಾರವರ್ಗದಲ್ಲಿ ಇಬ್ಬರು ಕಾರ್ಮಿಕೇತರರು ಇರಬಹುದು. ಒಬ್ಬ ವ್ಯಕ್ತಿಯು ಒಂದಕ್ಕಿಂತ ಹೆಚ್ಚು ಸಂಘಗಳ ಅಧಿಕಾರ ವರ್ಗದಲ್ಲಿರಲಾಗದು. ಮುಂದೆ ಸರ್ಕಾರಿ ಒಡೆತನದ ಕಾರ್ಖಾನೆಗಳಿಗೆ ಈ ಅವಕಾಶವನ್ನು ನಿರಾಕರಿಸಲಾಯಿತು. ೪. ಕಾರ್ಮಿಕ ಸಂಘವು ಬೇಡಿಕೆಗಳನ್ನು ಮಂಡಿಸಿ ಆಡಳಿತವರ್ಗದೊಂದಿಗೆ ಮಾತುಕತೆ ಆರಂಭಿಸಬಹುದು. ಆ ಮಟ್ಟದಲ್ಲಿ ವಿವಾದವು ಪರಿಹಾರವಾಗದಿದ್ದರೆ, ಕಾರ್ಮಿಕ ಇಲಾಖೆಯು ಕಡ್ಡಾಯವಾದ ತೀರ್ಪು ನೀಡುವ ಅಧಿಕಾರವಿರುವ ಆರ್ಬಿಟ್ರೇಷನ್‌ನ ವ್ಯವಸ್ಥೆ ಮಾಡುತ್ತದೆ. ಈ ತೀರ್ಪನ್ನು ಎರಡು ಪಕ್ಷಗಳವರೂ ಕಡ್ಡಾಯವಾಗಿ ಮಾನ್ಯ ಮಾಡಿ ಜಾರಿಗೊಳಿಸಬೇಕು. ಈ ಕಾಯದೆಯು ಕಾರ್ಮಿಕರಿಗೆ ಮುಷ್ಕರ ಹೂಡುವ ಹಕ್ಕು ಇದೆ ಎಂದು ಹೇಳಲಿಲ್ಲ.

ಬಂಧಿತರಾಗಿದ್ದವರನ್ನು ಶೀಘ್ರದಲ್ಲಿ ಬಿಡುಗಡೆ ಮಾಡಲಾಯಿತು. ಆದರೆ ಶಂಕರ್ ಮತ್ತು ರಾಮರಾವ್ ಒಂದು ವರ್ಷಕಾಲ ಬೆಂಗಳೂರಿಗೆ ಬರಬಾರದೆಂದು ತಡೆ ವಿಧಿಸಲಾಯಿತು. ಆಗ ಶಂಕರ್ ಭದ್ರಾವತಿಯ ಕಾರ್ಮಿಕರ ಕರೆಯ ಮೇರೆಗೆ ಅಲ್ಲಿಗೆ ಹೋದರು. ಅಲ್ಲಿನ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ ಹಾಗೂ ಕಾಗದ ಕಾರ್ಖಾನೆಯಲ್ಲಿ ಕಾರ್ಮಿಕ ಸಂಘಗಳು ಸ್ಥಾಪನೆಯಾದುವು. ಎರಡರಲ್ಲೂ ಶಂಕರ್ ಅಧ್ಯಕ್ಷರಾದರು. ಕೆ. ಎಸ್. ರಾಮಚಂದ್ರಶೆಟ್ಟಿ ಎಂಬುವರು ಕಬ್ಬಿಣ ಕಾರ್ಖಾನೆಯ ಸಂಘದ ಕಾರ್ಯದರ್ಶಿಯಾದರು. ಕಾಗದ ಕಾರ್ಖಾನೆಯಲ್ಲಿಯೂ ಕಾರ್ಮಿಕರೊಬ್ಬರು ಕಾರ್ಯದರ್ಶಿಯಾದರು. ಈ ಸಮಾಚಾರವು ಸರ್ಕಾರಕ್ಕೆ ತಿಳಿದುಬಂದಕೂಡಲೇ ಇನ್ನೂ ಕರಡು ರೂಪದಲ್ಲಿದ್ದ ಕಾರ್ಮಿಕ ಶಾಸನದಲ್ಲಿ ಸರ್ಕಾರಿ ಸ್ವಾಮ್ಯದ ಕಾರ್ಖಾನೆಗಳಲ್ಲಿ ಕಾರ್ಮಿಕೇತರರು ಸಂಘದ ಅಧಿಕಾರ ಸ್ಥಾನಗಳಲ್ಲಿರುವುದನ್ನು ಮತ್ತು ಒಬ್ಬನೇ ವ್ಯಕ್ತಿ ಹೆಚ್ಚು ಸಂಘಗಳಲ್ಲಿ ಅಧಿಕಾರ ಸ್ಥಾನ ಪಡೆಯುವುದನ್ನು ತಡೆಯುವ ಸೂಕ್ತವಾದ ತಿದ್ದುಪಡಿಗಳನ್ನು ಮಾಡಲಾಯಿತು. ೧೯೪೨ರ ವೇಳೆಗೆ ೪೨ ಕಾರ್ಮಿಕ ಸಂಘಗಳು ಆ ಕಾಯದೆಯ ಅನ್ವಯವಾಗಿ ನೋಂದಾವಣೆಯಾದುವು. ಶಂಕರ್ ಅವುಗಳಲ್ಲಿ ಯಾವುದೊಂದರಲ್ಲೂ ಸ್ಥಾನ ಪಡೆಯಲಿಲ್ಲ ಹಾಗೂ ಮುಂದೆಯೂ ಅವರು ಯಾವ ಕಾರ್ಮಿಕ ಸಂಘದ ಅಧಿಕಾರ ಸ್ಥಾನಕ್ಕೆ ಸೆಣಸಲೂ ಇಲ್ಲ, ಅದನ್ನು ಪಡೆಯಲೂ ಇಲ್ಲ ಎಂಬುದು ಒಂದು ವಿಪರ್ಯಾಸ. ಕೆಲವೇ ತಿಂಗಳುಗಳ ನಂತರ ಜರುಗಿದ ಕ್ವಿಟ್ ಇಂಡಿಯಾ ಚಳುವಳಿಯು ಕಾರ್ಮಿಕ ಕ್ಷೇತ್ರಕ್ಕೆ ಹೊಸ ಮುಖಗಳನ್ನು ಪರಿಚಯಿಸಿತು.

## ಕಾರ್ಮಿಕರಲ್ಲಿ ರಾಜಕೀಯ ಜಾಗೃತಿ

೧೯೩೫ರಿಂದ ೧೯೪೨ರ ವರೆಗಿನ ಕಾರ್ಮಿಕ ಸಂಘಟನಾಕಾರ್ಯವು ಆಗಿನ ಮೈಸೂರು ಸಂಸ್ಥಾನದಾದ್ಯಂತ ಕಾರ್ಮಿಕರಲ್ಲಿ ದೇಶಭಕ್ತಿಯನ್ನು ಪ್ರಚೋದಿಸಿ ರಾಜಕೀಯ ಜಾಗೃತಿಯನ್ನು ಮೂಡಿಸಿತು. ೧೯೩೦ರ ಉಪ್ಪಿನ ಸತ್ಯಾಗ್ರಹದಲ್ಲಿಯೂ ೧೯೩೮ರಲ್ಲಿ ಜರುಗಿದ ನಾನಾ ಸತ್ಯಾಗ್ರಹಗಳಲ್ಲಿಯೂ ಸಾಕಷ್ಟು ಸಂಖ್ಯೆಯ ಕಾರ್ಮಿಕರು ಭಾಗವಹಿಸಿದ್ದರು. ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿ ಮಹಾತ್ಮ ಗಾಂಧಿಯವರನ್ನೂ, ಕಾಂಗ್ರೆಸ್ ಮುಖಂಡರನ್ನೂ ಸರ್ಕಾರವು ಬಂಧಿಸಿದಾಗ ದೇಶಾದ್ಯಂತವೂ ಜರುಗಿದ ಕಾರ್ಮಿಕ ಮುಷ್ಕರಗಳಲ್ಲಿ ಬೆಂಗಳೂರು ಮತ್ತು ಕೋಲಾರ ಚಿನ್ನದ ಗಣಿಗಳ ಕಾರ್ಮಿಕರೂ ಸಹ ಉತ್ಸಾಹದಿಂದ ಪಾಲುಗೊಂಡರು. ಆಗಿನ ಗೋಲೀಬಾರುಗಳಲ್ಲಿ ಪ್ರಾಣತೆತ್ತವರಲ್ಲಿ ಕಾರ್ಮಿಕರೂ ಸೇರಿದ್ದಾರೆ.

೧೯೪೨ರ ನಂತರ ಕಾರ್ಮಿಕ ಸಂಘಟನಾ ಕಾರ್ಯವು ಹೊಸ ಕ್ಷೇತ್ರಗಳಿಗೆ ವ್ಯಾಪಿಸಿತು. ಪುರಸಭಾ ಕಾರ್ಮಿಕರು, ಬೀಡಿ ಕಾರ್ಮಿಕರು, ಚರ್ಮ ಹದಮಾಡುವ ಟ್ಯಾನರಿಗಳ ಕಾರ್ಮಿಕರು, ವಿದ್ಯುತ್ ಇಲಾಖೆಯವರು ಮುಂತಾದವರಲ್ಲೆಲ್ಲಾ ಹೊಸ ಹೊಸ ಮುಖಂಡರ ನೇತೃತ್ವದಲ್ಲಿ ಸಂಘಗಳು ತಲೆ ಎತ್ತಿದುವು. ಬೆಂಗಳೂರಿನಲ್ಲಿ ಎಂ.ಎಸ್. ಕೃಷ್ಣನ್, ಎಸ್. ಸೂರ್ಯನಾರಾಯಣರಾವ್, ಕೆ. ಕಣ್ಣನ್, ಎಸ್. ನಾಗಭೂಷಣರಾವ್, ಐ. ಮರಿದಾಸ್ ಮುಂತಾದವರು ಬೆಂಗಳೂರಿನಲ್ಲಿಯೂ, ಕೆ. ಎಸ್. ವಾಸನ್, ಎ. ಎಂ. ಗೋವಿಂದನ್, ಎಂ. ಸಿ. ನರಸಿಂಹನ್ ಮುಂತಾದವರು ಕೋಲಾರ ಚಿನ್ನದ ಗಣಿಗಳಲ್ಲಿಯೂ ಪ್ರಮುಖ ಕಾರ್ಮಿಕ ನಾಯಕರಾದರು. ಇವರೆಲ್ಲರೂ ಬಹುಮಟ್ಟಿಗೆ ಕಮ್ಯುನಿಸ್ಟರು ಹಾಗೂ ಕಾಂಗ್ರೆಸ್ ಸೋಷಲಿಸ್ಟರು. ಈ ಅವಧಿಯಲ್ಲಿ ಮೈಸೂರು, ದಾವಣಗೆರೆ, ಹರಿಹರ ಮುಂತಾದೆಡೆಗಳಲ್ಲೂ ಕಾರ್ಮಿಕ ಸಂಘಗಳು ತಲೆ ಎತ್ತಿದುವು.

೧೯೪೨-೪೭ರ ಅವಧಿಯಲ್ಲಿ ಅಖಿಲ ಭಾರತ ಮಟ್ಟದಲ್ಲಿಯೂ ಅದರ ಸಹಜ ಮುಂದುವರಿಕೆಯಾಗಿ ಮೈಸೂರಿನಲ್ಲಿಯೂ ಕಾರ್ಮಿಕ ಸಂಘಗಳ ಒಳಗೆ ಹಾಗೂ ಸಂಘ-ಸಂಘಗಳ ನಡುವೆ ರಾಜಕೀಯ ಪೈಪೋಟಿಯು ಕಂಡುಬಂತು. ಆ ತನಕ ಅಖಿಲ ಭಾರತ ಮಟ್ಟದಲ್ಲಿ ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ ಎಂಬ ಹೆಸರಿನ ಒಂದೇ ಒಂದು ಕೇಂದ್ರ ಸಂಘಟನೆಯಿತ್ತು. ರಾಷ್ಟ್ರೀಯ ಕಾಂಗ್ರೆಸ್ ಬಗ್ಗೆ ಒಲವಿದ್ದ ಸಂಘಗಳು ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಎ. ಐ. ಟಿ. ಯು. ಸಿ.) ಕಮ್ಯೂನಿಸ್ಟರ ಹಿಡಿತಕ್ಕೆ ಸಿಕ್ಕಿಹೋಗಿದೆ ಎಂದು ಹೇಳಿ ತಮ್ಮದೇ ಆದ ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್, (ಐ.ಎನ್.ಟಿ.ಯು.ಸಿ.) ಎಂಬ ಹೊಸ ಕೇಂದ್ರ ಸಂಘಟನೆಯನ್ನು ಸ್ಥಾಪಿಸಿಕೊಂಡುವು. ಇಲ್ಲಿಯೂ ಅದಕ್ಕೆ ಅನುಗುಣವಾಗಿ ಮೈಸೂರು ಸ್ಟೇಟ್ ಟ್ರೇಡ್ ಯೂನಿಯನ್ ಕೌನ್ಸಿಲ್ (ಎ.ಐ.ಟಿ.ಯು.ಸಿ.) ಮತ್ತು ಮೈಸೂರು ಸ್ಟೇಟ್ ಲೇಬರ್ ಫೆಡರೇಷನ್ (ಐ. ಎನ್. ಟಿ. ಯು.ಸಿ) ಎಂಬ ಎರಡು ಪ್ರಾಂತೀಯ ಕೇಂದ್ರ ಸಂಘಟನೆಗಳು ರೂಪುಗೊಂಡುವು.

೧೯೪೬ರಲ್ಲಿ ಅಖಿಲ ಭಾರತದಲ್ಲಿ ಪೋಸ್ಟ್‌ಮೆನ್‌ಗಳ ಮೂರು ವಾರದ ಅವಧಿಯ ಒಂದು ಮುಷ್ಕರವು ಜರುಗಿತು. ಈ ಮುಷ್ಕರವು ಮೈಸೂರು ಸಂಸ್ಥಾನದಲ್ಲಿಯೂ ಯಶಸ್ವಿಯಾಗಿ ಜರುಗಿ, ಇಲ್ಲಿನ ಕಾರ್ಮಿಕರ ಮೇಲೂ ಗಣನೀಯ ಪ್ರಮಾಣದ ಪ್ರಭಾವವನ್ನು ಬೀರಿತು. ಸಂಘ ಎಂದು ಹೇಳುವುದಕ್ಕೆ ಹೆದರುತ್ತಿದ್ದ ಹಲವಾರು ಕ್ಷೇತ್ರಗಳ, ಅದರಲ್ಲಿಯೂ ಸರ್ಕಾರಿ ಸ್ವಾಮ್ಯದ ಕ್ಷೇತ್ರಗಳ ನೌಕರರು ಹಾಗೂ ಕಾರ್ಮಿಕರು ತಂತಮ್ಮ ಸಂಘಗಳನ್ನು ಕಟ್ಟಿಕೊಳ್ಳಲು ಮುಂದೆ ಬರುವಂತಾಯಿತು.

೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯವು ಬಂದಿತಾದರೂ, ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರವು ಅಧಿಕಾರಕ್ಕೆ ಬರಲಿಲ್ಲ. ದಿವಾನರ ಆಳ್ವಿಕೆಯನ್ನು ಮುಂದುವರಿಸಲು ಪ್ರಯತ್ನಿಸಲಾಯಿತು. ಆಗ ಮೈಸೂರು ಸ್ಟೇಟ್ ಕಾಂಗ್ರೆಸ್ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಒಂದು ದೊಡ್ಡ ಶಾಂತಿಯುತ ಚಳವಳಿಯನ್ನು ಹೂಡಿತು. ಸಂಸ್ಥಾನದ ಕಾರ್ಮಿಕರು ಈ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದರು. ಅದುವರೆಗೆ ಸಾಮಾನ್ಯವಾಗಿ ರಾಜಕೀಯ ಚಳವಳಿಗಳಿಂದ ಪ್ರಭಾವಿತರಾಗಿಲ್ಲದಿದ್ದ ಮೈಸೂರು ಸ್ಟೇಟ್ ರೈಲ್ವೇ ಕಾರ್ಮಿಕರು ಈ ಸಂದರ್ಭದಲ್ಲಿ ಮೂರ್ತಿ ಎಂಬುವರ ನೇತೃತ್ವದಲ್ಲಿ, ಶೇಕಡಾ ನೂರರಷ್ಟು ಎಂದ ಹೇಳಬಹುದಾದಂತಹ ಮುಷ್ಕರವನ್ನು ಹೂಡಿದರು. ಅಖಿಲ ಭಾರತ ಮಟ್ಟದ ವೇತನಗಳನ್ನು ಕೋರಿ ನಡೆಸಿದ ಈ ಹೋರಾಟವನ್ನು 'ಸತ್ಯಾಗ್ರಹ' ಎಂದೇ ಕಾರ್ಮಿಕರು ಕರೆದರು.

೧೯೪೦ರಲ್ಲಿ ಕರ್ನಾಟಕದ ಉದ್ಯಮರಂಗದ ಒಂದು ಮಹತ್ವದ ಬೆಳವಣಿಗೆಯೂ ಜರುಗಿತು. ಆ ವರ್ಷ ಮೂಲತಃ ಕಾರುಗಳ ತಯಾರಿಕೆಗೆ ಎಂದು ನಿಯೋಜಿಸಲ್ಪಟ್ಟ ಒಂದು ಕಾರ್ಖಾನೆಯ ಕಲ್ಪನೆಯು ನಾನಾ ತಿರುವುಗಳನ್ನು ಕಂಡು ಅಂತಿಮವಾಗಿ ಹಿಂದುಸ್ತಾನ್ ವಿಮಾನ ಕಾರ್ಖಾನೆಯಾಯಿತು. ಯುದ್ಧಕಾಲದಲ್ಲಿ ದೊರೆತ ಅಪಾರ ಪ್ರೋತ್ಸಾಹದಿಂದಾಗಿ ಅದು ವಿಸ್ತೃತಗೊಂಡು ಬಲಗೊಂಡಿತು. ಇದು ಬೆಂಗಳೂರಿನಲ್ಲಿ ಸ್ಥಾಪನೆಯಾದುದರಿಂದ, ಮುಂದೆ ೫೦ ರ ದಶಕದಲ್ಲಿ ಇಂಡಿಯನ್ ಟೆಲಿಫೋನ್ ಕಾರ್ಖಾನೆ, ಭಾರತ್ ಎಲೆಕ್ಟ್ರಾನಿಕ್ಸ್, ಹಿಂದುಸ್ತಾನ್ ಮೆಷೀನ್ ಟೂಲ್ಸ್, ಭಾರತ್ ಅರ್ತ್ ಮೂವರ್ಸ್, ಭಾರತ್ ಹೆವಿ ಎಲೆಕ್ಟ್ರಿಕಲ್ಸ್ ಮುಂತಾದ ಕೇಂದ್ರ ಸರ್ಕಾರದ ರಕ್ಷಣಾ ವಿಭಾಗ ಹಾಗೂ ಇತರೆ ಉದ್ಯಮಗಳು ಬೆಂಗಳೂರಿನಲ್ಲಿಯೂ, ಅವುಗಳ ಶಾಖೆಗಳು ಮೈಸೂರು, ಕೋಲಾರ ಚಿನ್ನದ ಗಣಿಗಳು, ತುಮಕೂರು ಮುಂತಾದ ಊರುಗಳಲ್ಲಿಯೂ ಸ್ಥಾಪನೆಯಾದುವು. ಮೈಕೋ (ಮೋಟಾರ್ ಇಂಡಸ್ಟ್ರೀಸ್ ಕಂಪನಿ) ಮುಂತಾದ ಬೃಹತ್ ಖಾಸಗಿ ಉದ್ಯಮಗಳು ಇಲ್ಲಿ ನೆಲೆಗೊಳ್ಳಲೂ ಸಹ ಅದು ನಾಂದಿಯಾಯಿತು. ಇಂದಿನ ಕಾರ್ಮಿಕ ಚಳವಳಿಯನ್ನು ಕುರಿತು ಮಾತನಾಡುವಾಗ ಈ ಉದ್ಯಮಗಳು ಸ್ಥಾಪನೆಯಾದ ಹಿನ್ನೆಲೆಯನ್ನು ಸಹ ಅರಿತುಕೊಳ್ಳುವುದು ಅಗತ್ಯ.

ಸ್ವಾತಂತ್ರ್ಯಾನಂತರದ ಒಂದೆರಡು ವರ್ಷಗಳ ಕಾಲ, ಕಾರ್ಮಿಕ ಸಂಘಟನಾ ಕಾರ್ಯದಲ್ಲಿ ತೊಡಗಿದ್ದ ಕಮ್ಯುನಿಸ್ಟ್ ಪಕ್ಷವು ರಾಜಕೀಯ ಕಾರಣಗಳಿಂದಾಗಿ ದಮನಕ್ಕೆ ಗುರಿಯಾಯಿತು. ಅದರ ಪ್ರಮುಖ ಕಾರ್ಯಕರ್ತರು ಸೆರೆಮನೆಗೆ ಹೋದರು ಇಲ್ಲವೇ ಭೂಗತರಾದರು. ಪರಿಸ್ಥಿತಿಯು ತಿಳಿಗೊಂಡ ನಂತರ ಅವರು ತಮ್ಮ ಚಟುವಟಿಕೆಗಳನ್ನು ಪುನರ್ ಸಂಘಟಿಸಿಕೊಳ್ಳಬೇಕಾಯಿತು. ೧೯೪೮ರಲ್ಲಿ ಸೋಷಲಿಸ್ಟರ ಪ್ರಭಾವವು ಪ್ರಬಲವಾಗಿರುವ ''ಹಿಂದ್ ಮಜ್ದೂರ್ ಸಭಾ'' ಎಂಬ ಮೂರನೆಯ ಅಖಿಲ ಭಾರತ ಕೇಂದ್ರ ಕಾರ್ಮಿಕ ಸಂಘಟನೆಯೊಂದು ಸ್ಥಾಪನೆಯಾಯಿತು.

೧೯೪೭-೫೬ರ ನಡುವೆ ಹಲವು ಕಾರ್ಮಿಕ ಸಂಘಗಳು ಸ್ಥಾಪನೆಯಾದುವು. ದಾವಣಗೆರೆಯ ಕಾಟನ್ ಮಿಲ್ಸ್, ಕೋಲಾರ ಚಿನ್ನದ ಗಣಿಗಳು ಮುಂತಾದ ಉದ್ಯಮಗಳಲ್ಲಿ ದೀರ್ಘಕಾಲ ಮುಷ್ಕರಗಳೂ ಜರುಗಿದುವು. ೧೯೫೫ರಲ್ಲಿ ೧೯೪೨ರ ಕಾರ್ಮಿಕ ಕಾಯಿದೆಯನ್ನು ರದ್ದುಗೊಳಿಸಿ, ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಯಿದೆಯನ್ನು ಮೈಸೂರು ಸಂಸ್ಥಾನಕ್ಕೂ ಅನ್ವಯಿಸಲಾಯಿತು. ಬದಲಾದ

ರಾಜಕೀಯ ವಾತಾವರಣದಲ್ಲಿ ಸುಸಂಘಟಿತವೂ, ಸರ್ಕಾರ ಹಾಗೂ ಮಾಲೀಕರನ್ನು ಎದುರಿಸುವುದೇ ಪ್ರಮುಖ ಉದ್ದೇಶವಿಲ್ಲದವೂ, ಹಾಗೂ ಸರ್ಕಾರದ ಕಾಯಿದೆಯು ನಿಯಮಿಸಿದ್ದ ಕಾರ್ಮಿಕ ವಿವಾದಗಳ ಪರಿಹಾರ ಕ್ರಮವನ್ನು ಅನುಸರಿಸಿ ಸೌಲಭ್ಯಗಳನ್ನು ಪಡೆದುಕೊಳ್ಳುವಂತಹವೂ ಆದ ಕಾರ್ಮಿಕ ಸಂಘಗಳು ಕಾರ್ಯನಿರತವಾದುವು, ಸಂಸತ್ತು ಮತ್ತು ರಾಜ್ಯ ವಿಧಾನಸಭೆ ಹಾಗೂ ವಿಧಾನ ಮಂಡಲಗಳ ನೆರವನ್ನು ಕಾರ್ಮಿಕ ಸಂಘಗಳು ಕೋರಿ, ಪಡೆಯುವ ಪರಿಪಾಠವೂ ಈ ಅವಧಿಯಲ್ಲಿ ವ್ಯವಸ್ಥಿತ ರೂಪವನ್ನು ಪಡೆಯಿತು.

### ೨. ಮದರಾಸ್ ಕರ್ನಾಟಕ

ಮದರಾಸ್ ಪ್ರಾಂತದ ಕನ್ನಡ ಪ್ರದೇಶಗಳೆಂದರೆ- ದಕ್ಷಿಣ ಕನ್ನಡ, ಬಳ್ಳಾರಿ ಜಿಲ್ಲೆಗಳು ಮತ್ತು ಕೊಳ್ಳೇಗಾಲ ತಾಲ್ಲೂಕು. ಇವು ಪರಸ್ಪರ ಕೂಡಿಕೊಂಡಿರಲಿಲ್ಲ. ಈ ಕಾರಣದಿಂದ ಅವುಗಳಲ್ಲಿನ ಕಾರ್ಮಿಕ ಚಳವಳಿಯನ್ನು ಪ್ರತ್ಯೇಕ ಪ್ರತ್ಯೇಕವಾಗಿ ವಿವರಿಸುವುದು ಅಗತ್ಯ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ಯಾಂಕ್ ಉದ್ಯಮವು ಬಿರುಸಾಗಿ ಪ್ರಗತಿಗೊಂಡಿತಾದರೂ, ಬೃಹತ್ ಕೈಗಾರಿಕೋದ್ಯಮಗಳು ಬೆಳೆಯಲಿಲ್ಲ. ಹೀಗಿದ್ದರೂ ಸಹ ಅಲ್ಲಿ ಕಾರ್ಮಿಕ ಚಳವಳಿಯು ೧೯೫೧ ರಷ್ಟು ಮುಂಚೆಯೇ ಪ್ರಾರಂಭವಾಯಿತು. ಕಾಂಗ್ರೆಸ್ ಸೋಷಲಿಸ್ಟ್ ಪಕ್ಷದ ಕಮಲಾದೇವಿಯವರು (ಅನಂತರ ಕಮಲಾದೇವಿ ಚಟ್ಟೋಪಾಧ್ಯಾಯ) ದ.ಕ. ಪ್ರೆಸ್ ಕಾರ್ಮಿಕ ಸಂಘವನ್ನು ೧೯೩೧ರಲ್ಲಿ ಸ್ಥಾಪಿಸಿದರು. ಹಿಂದಿನಿಂದಲೇ ಬೀಡಿ ಹಾಗೂ ಕೈ ಮಗ್ಗದ ಕಾರ್ಮಿಕರೂ ಸಂಘಟಿತರಾದರು. ಈ ಪ್ರಾರಂಭಿಕ ಕಾರ್ಯದಲ್ಲಿ ಹರಿದಾಸ ಆಚಾರ್ಯ, ಕೇಶವ ಕಾಮತ್ ಮತ್ತು ಸ್ವತಃ ಬೀಡಿ ಕಾರ್ಮಿಕರಾಗಿದ್ದ ಸಿ. ಕೆ. ಗೋವಿಂದನ್ ಪ್ರಮುಖ ಪಾತ್ರವಹಿಸಿದರು. ೧೯೩೫ರಲ್ಲಿ ಉಪಾಧ್ಯಾಯರಾಗಿದ್ದು ನೌಕರಿ ಕಳೆದುಕೊಂಡ ಎಸ್. ಎನ್. ಹೊಳ್ಳ, ಎ. ಕೃಷ್ಣಶೆಟ್ಟಿ, ಸಿಂಪ್ಸನ್ ಸೋನ್ಸ್, ಬಿ. ವಿ. ಕಕ್ಕಿಲ್ಲಾಯ, ಶಾಂತಾರಾಂ ಪೈ ಮುಂತಾದವರು ಕಾರ್ಮಿಕ ಸಂಘಟನಾ ಕಾರ್ಯ ಮಾಡಿದರು. ಇದರಿಂದಾಗಿ ೧೯೪೩ರಲ್ಲಿಯೇ ಜಿಲ್ಲೆಯ ಕಾರ್ಮಿಕ ಸಂಘಟನೆಗಳೆಲ್ಲವೂ ಒಂದುಗೂಡಿ ಜಿಲ್ಲಾ ಕಾರ್ಮಿಕ ಸಮ್ಮೇಳನವನ್ನು ಜರುಗಿಸಿದವು. ಆಗಿನ ಎ.ಐ.ಟಿ. ಯು.ಸಿ. ಮುಖಂಡರಲ್ಲಿ ಪ್ರಮುಖರಾಗಿದ್ದ ಎಸ್. ಎ. ಡಾಂಗೆ ಅದರಲ್ಲಿ ಭಾಗವಹಿಸಿದ್ದರು. ಕೆ. ಕೆ. ಶೆಟ್ಟಿ ಎಂಬ ಕಾಂಗ್ರೆಸ್ ನಾಯಕರ ಅಧ್ಯಕ್ಷತೆಯಲ್ಲಿ ಜಿಲ್ಲಾ ಟ್ರೇಡ್ ಯೂನಿಯನ್ ಕೌನ್ಸಿಲ್ ಒಂದು ಸ್ಥಾಪನೆಯಾಯಿತು. ಇದರಿಂದ ಸ್ಫೂರ್ತಿಗೊಂಡ ಕಾರ್ಯಕರ್ತರು ಮತ್ತು ಕಾರ್ಮಿಕರು ಸಂಘಟನಾಕಾರ್ಯವನ್ನು ವಿಸ್ತರಿಸಿದರು.

೧೯೪೪ರಲ್ಲಿ ಜಿಲ್ಲೆಯ ಪ್ರಮುಖ ಉದ್ಯಮವಾಗಿದ್ದು, ತನ್ನ ಉತ್ಪಾದನೆಗೆ ಮಂಗಳೂರು ಎಂಬ ಅನ್ವರ್ಥ ನಾಮವನ್ನು ತಂದುಕೊಟ್ಟ ಮಂಗಳೂರು ಹೆಂಚಿನ ಕಾರ್ಮಿಕರು ತಮ್ಮ ಸಂಘವನ್ನು ಸ್ಥಾಪಿಸಿಕೊಂಡರು. ಜೊತೆ ಜೊತೆಯಲ್ಲಿಯೇ ಗೇರುಬೀಜ (ಗೋಡಂಬಿ) ಸಂಸ್ಕರಣೆಯಲ್ಲಿ ತೊಡಗಿದ್ದ ಮಹಿಳಾ ಕಾರ್ಮಿಕರು ಸಂಘಟಿತರಾದರು. ಬರಿಗೈಯಲ್ಲಿ ಗೇರುಬೀಜವನ್ನು ಸುಲಿದರೆ ಹುಣ್ಣಾಗುತ್ತದೆ. ಅದರಿಂದಾಗಿ ಗೇರು ಸುಲಿಯಲು ತಗಡಿನ ತುಂಡು ಒದಗಿಸಬೇಕು ಎಂಬ ಅತ್ಯಂತ ಸರಳ ಕೋರಿಕೆಗಾಗಿಯೂ ಈ ಕಾರ್ಮಿಕರು ಹೋರಾಡಬೇಕಾಗಿಬಂತು. ಬೀಡಿ ಕಾರ್ಮಿಕರು ಸಹ ಬೀಡಿಕಟ್ಟುವ ನೂಲನ್ನು ಮಾಲಿಕರೇ ಸುತ್ತಿಸಿಕೊಡಬೇಕು, ಕುಳಿತುಕೊಳ್ಳುವ ಜಾಗವನ್ನು ಚೊಕ್ಕಟ ಮಾಡಿಸಿಕೊಡಬೇಕು- ಈ ಮುಂತಾದ ಸರಳ ಬೇಡಿಕೆಗಳಿಗಾಗಿಯೂ ಹೋರಾಡಿದ್ದಾರೆ. ಕೆಲಸದಿಂದ ತೆಗೆಯುವುದು, ಕಾರ್ಖಾನೆಗಳನ್ನೇ ಮುಚ್ಚಿಸುವುದು ಮುಂತಾದುವನ್ನು ಎದುರಿಸಿ ಇಲ್ಲಿನ ಕಾರ್ಮಿಕರು ಹೋರಾಡಿದ್ದಾರೆ. ಮಾಲೀಕರು ಮುಷ್ಕರನಿರತ ಕಾರ್ಮಿಕರ ಮೇಲೆ ಗೂಂಡಾಗಳಿಂದ ಹಲ್ಲೆ ಮಾಡಿಸಿ, ಆಗ ಜರುಗಿದ ಘರ್ಷಣೆಗಳಲ್ಲಿ ಆದ ಹಿಂಸೆ ಹಾಗೂ ಹತ್ಯೆಗಳಿಗೆ ಕಾರ್ಮಿಕರ ಮೇಲೆ ಆಪಾದನೆ ಹೊರಿಸಿ ಅವರನ್ನು ಕಿರುಕುಳಗಳಿಗೆ ಗುರಿಮಾಡಿದ್ದಾರೆ. ದ.ಕ. ಜಿಲ್ಲೆಯ ಆ ಕಾಲಾವಧಿಯ ಕಾರ್ಮಿಕ ಸಂಘಟನೆ ಹಾಗೂ ಹೋರಾಟಗಳು, ಆ ರೀತಿಯ ಕಿರು ಪ್ರಮಾಣದ ಉದ್ಯಮಗಳ ಕಾರ್ಮಿಕರ ಸಂಘಟನೆ ಹಾಗೂ ಹೋರಾಟಗಳಿಗೆ ಒಂದು ಮೇಲ್ಪಂಕ್ತಿಯಂತಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಕೈಮಗ್ಗದ ಕಾರ್ಖಾನೆಗಳು, ಬೀಡಿ ಕಾರ್ಖಾನೆಗಳು ಹಾಗೂ ಮುಖ್ಯವಾಗಿ ಕಬ್ಬಿಣ ಮತ್ತು ಮ್ಯಾಂಗನೀಸ್ ಗಣಿಗಳಿದ್ದುವು. ಆದರೂ ಅಲ್ಲಿ ಗಣನೀಯ ಪ್ರಮಾಣದಲ್ಲಿ ಕಾರ್ಮಿಕ ಸಂಘಗಳು, ಆ ಕಾಲದಲ್ಲಿ ಬೆಳೆದಂತೆ ತೋರುವುದಿಲ್ಲ. ಗಣಿ ಕಾರ್ಮಿಕರ ಸಂಘಟನೆಯಲ್ಲಿ ನಿರತರಾಗಿದ್ದ ದಾಸ್ ಎಂಬುವರು, ಈಗ ಆಂಧ್ರಕ್ಕೆ ಸೇರಿರುವ ರಾಯದುರ್ಗದ ನೇಕಾರರ ಸಂಘಟನೆಯಲ್ಲಿ ನಿರತರಾಗಿದ್ದ ಆರ್. ಆರ್. ನಿಪ್ಪಾಣಿ ಹೀಗೆ ಒಂದೆರಡು ಹೆಸರುಗಳು ಕೇಳಿಬರುತ್ತವೆ. ಇವರುಗಳು ಎ.ಐ.ಟಿ.ಯು.ಸಿ.ಗೆ ಸೇರಿದ್ದವರು.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಕೊಳ್ಳೇಗಾಲದಲ್ಲಿ ಸರ್ಕಾರವು ಒಂದು ಸಿಲ್ಕ್ ಫಿಲೇಚರ್ ಕಾರ್ಖಾನೆಯನ್ನು ಸ್ಥಾಪಿಸಿತು. ಒಂದೆರಡು ಖಾಸಗಿ ಫಿಲೇಚರ್ ಕಾರ್ಖಾನೆಗಳೂ ಆರಂಭವಾದುವು. ಆದರೆ ಇಲ್ಲಿ ಯಾವ ಕಾರ್ಮಿಕ ಸಂಘವೂ ಸ್ಥಾಪನೆಯಾಗಲಿಲ್ಲ.

### ೩. ಮುಂಬಯಿ ಕರ್ನಾಟಕ

ಈ ಪ್ರದೇಶದಲ್ಲಿಯೂ ಉದ್ಯಮಗಳು ವ್ಯವಸ್ಥೆಯಾಗಿ ಅಭಿವೃದ್ಧಿಗೊಂಡಿರಲಿಲ್ಲ. ಹತ್ತಿ ಬೆಳೆಯುವ ಭೂಭಾಗವಾಗಿದ್ದ ಕಾರಣ ಜಿನ್ನಿಂಗ್ ಕಾರ್ಯಾಗಾರಗಳಿದ್ದುವು. ಬೆಳಗಾಂ ಜಿಲ್ಲೆಯ ಗೋಕಾಕದಲ್ಲಿ ೧೮೮೮ರಲ್ಲಿ ಗೋಕಾಕ್ ಮಿಲ್ಸ್ ಎಂಬ ನೂಲಿನ ಗಿರಣಿ ಆರಂಭವಾಯಿತು. ಅದರ ಇನ್ನೊಂದು ಶಾಖೆಯು ಹುಬ್ಬಳ್ಳಿಯಲ್ಲೂ ಇತ್ತು. ಅನಂತರ ಹುಬ್ಬಳ್ಳಿಯಲ್ಲಿ ಮಹಾದೇವ ನೂಲಿನ ಗಿರಣಿಯು ಸ್ಥಾಪನೆಯಾಯಿತು. ಈ ಎರಡು ನೂಲಿನ ಗಿರಣಿಗಳ ಜೊತೆಗೆ ಹುಬ್ಬಳ್ಳಿಯ ರೈಲ್ವೆ ವರ್ಕ್‌ಷಾಪನ್ನೂ ಸೇರಿಸಬಹುದು. ಉತ್ತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯು ಬಹಳ ಬಿರುಸಿನಿಂದ ಜರುಗಿತಾದರೂ ಕಾರ್ಮಿಕ ಚಳವಳಿಯು ಪ್ರಾರಂಭವಾದುದು ತಡವಾಗಿ. ೧೯೩೮ರ ಸುಮಾರಿನಲ್ಲಿ ಮುಂಬಯಿ ಪ್ರಾಂತದಲ್ಲಿ ಮೊಟ್ಟಮೊದಲನೆಯ ಕಾಂಗ್ರೆಸ್ ಸರ್ಕಾರವು ಅಧಿಕಾರದಲ್ಲಿದ್ದಾಗ ಗೋಕಾಕ ಮಿಲ್ಸಿನಲ್ಲಿ ಒಂದು ಮುಷ್ಕರ ನಡೆಯಿತು. ವಿವಾದವನ್ನು ಬಗೆ ಹರಿಸುವ ಪ್ರಯತ್ನಗಳು ವಿಫಲವಾಗಿ ಒಂದು ವರ್ಷಕಾಲ ಮುಷ್ಕರ ಮುಂದುವರಿಯಿತು. ದುಂಡಪ್ಪ ಸಂಸುದ್ದಿ, ನಾರಾಯಣ ಸೋಹನಿ ಎಂಬುವರು ಅದರ ಮುಂದಾಳುಗಳು. ಕೆಲವೆಡೆ ಹಿಂಸಾಚಾರಗಳು ಜರುಗಿದುವು. ಕಾರ್ಮಿಕರು ಅಪಾರ ಕಷ್ಟಗಳಿಗೆ ಗುರಿಯಾಗಿ, ಕೊನೆಯಲ್ಲಿ ನೂರಾರು ಮಂದಿ ಕೆಲಸ ಕಳೆದುಕೊಳ್ಳ ಬೇಕಾಯಿತು.

ಹುಬ್ಬಳ್ಳಿ ರೈಲ್ವೆ ವರ್ಕ್‌ಷಾಪ್ ಆಗಿನ ಎಂ. ಎಸ್. ಎಂ. ರೈಲ್ವೆಗೆ ಸೇರಿತ್ತು. ಅಲ್ಲಿ ಒಂದು ಸಂಘಟನೆಯಿದ್ದು, ಅದು ಆ ಇಡೀ ಎಂ. ಎಸ್. ಎಂ. ರೈಲ್ವೆಯ ಕಾರ್ಮಿಕ ಸಂಘದ ಶಾಖೆಯಾಗಿತ್ತು. ೧೯೪೩-೪೪ರ ನಂತರ ಎನ್. ಕೆ. ಉಪಾಧ್ಯಾಯ ಎಂಬ ಕಾರ್ಯಕರ್ತರು ಹುಬ್ಬಳ್ಳಿಯಲ್ಲೂ, ನಬೀ ಸಾಹಬ್ ಬಾಲಸಿಂಗ್ ಮಾಸ್ತರ್ ಎಂಬುವರು ಬಿಜಾಪುರದಲ್ಲಿಯೂ ಕಾರ್ಮಿಕ ಸಂಘಟನೆಯನ್ನು ಕೈಗೆತ್ತಿಕೊಂಡರು. ಆ ವರ್ಷಗಳಲ್ಲಿ ನಡೆದ ಕಾರ್ಮಿಕ ಮುಷ್ಕರಗಳಲ್ಲಿ ಕೆಲವು ವಿಲಕ್ಷಣ ಘಟನೆಗಳು ಜರುಗಿದುವು. ಬಿಜಾಪುರದ ಒಂದು ಬೀಡಿ ಕಾರ್ಖಾನೆಯಲ್ಲಿ, ಧರಣಿ ಹೂಡಿದ್ದ ಕಾರ್ಮಿಕರು ಮತ್ತು ಅದರ ಮುಖಂಡರು ಮೂರು ದಿನ ಕಾರ್ಖಾನೆಯೊಳಗೇ ಇರಬೇಕಾಗಿ ಬಂತು. ಅದೇ ಬಿಜಾಪುರದ ಪುರಸಭೆಯ ಕಾರ್ಮಿಕರು ಎರಡು ಪಟ್ಟು ವೇತನ ಕೋರಿ ಮುಷ್ಕರ ನಡೆಸಿದಾಗ ಅಲ್ಲಿನ ಎಲ್ಲ ೨೦೦ ಮಂದಿ ಕಾರ್ಮಿಕರೂ ಸಹ ತಮ್ಮ ಮುಖಂಡರೊಂದಿಗೆ ಇಪ್ಪತ್ತೊಂದು ದಿನಗಳ ಕಾಲ ಬಿಜಾಪುರದ ಸೆರೆಮನೆಯಲ್ಲಿರಬೇಕಾಯಿತು. ೧೯೪೮ರಲ್ಲಿ ಧಾರವಾಡ ಪುರಸಭೆಯ ಕಾರ್ಮಿಕರು ೧೫ ದಿನಗಳ ಮುಷ್ಕರ ಹೂಡಿ ವೇತನ ಹೆಚ್ಚಳವನ್ನು ಪಡೆದರು. ಇಂತಹ ಯಶಸ್ವಿ ಮುಷ್ಕರಗಳಿಂದಾಗಿ ಮುಂಬಯಿ ಕರ್ನಾಟಕದ ಹಲವು ಪಟ್ಟಣಗಳಲ್ಲಿ ಹೋಟೆಲ್ ಕಾರ್ಮಿಕರು ಸಂಘಟಿತರಾದರು.

### ೪. ಹೈದರಾಬಾದ್ ಕರ್ನಾಟಕ

ಹೈದರಾಬಾದ್ ಕರ್ನಾಟಕದಲ್ಲಿ ಪ್ರಾರಂಭವಾದ ಮೊದಲನೆಯ ಆಧುನಿಕ ಉದ್ಯಮವು ಮೆಹಬೂಬ್ ಷಾಹಿ ಕಲ್ಬುರ್ಗಿ ಮಿಲ್ಸ್ (ಎಂ. ಎಸ್. ಕೆ. ಮಿಲ್ಸ್) ೧೮೮೬ರಲ್ಲಿ ಕಾರ್ಯಾರಂಭ ಮಾಡಿತು. ಅದರ ಮಾಲೀಕರು ಲಾತೂರಿನ ಲಾಹೋಟ್ ಕುಟುಂಬದವರು. ಅಲ್ಲಲ್ಲಿ ಕೆಲವು ಜಿನ್ನಿಂಗ್ ಕಾರ್ಖಾನೆಗಳು ಇದ್ದುವು. ೧೯೨೫ರಲ್ಲಿ ಷಹಾಬಾದ್‌ನಲ್ಲಿ ಎ. ಸಿ. ಸಿ. ಸಿಮೆಂಟ್ ಕಾರ್ಖಾನೆಯು ಸ್ಥಾಪನೆಯಾಯಿತು. ಕ್ರಮೇಣ ಈ ಪ್ರದೇಶದಲ್ಲಿ ಹಲವು ಸಿಮೆಂಟ್ ಕಾರ್ಖಾನೆಗಳು ಕಾರ್ಯಾರಂಭ ಮಾಡಿದುವು. ಷಹಾಬಾದ್ ಪ್ರದೇಶದಲ್ಲಿ ದೊರೆಯುವ ವಿಶಿಷ್ಟ ಕಲ್ಲುಗಳು ಈ ಉದ್ಯಮಕ್ಕೂ, ಹಾಗೂ ಷಹಬಾದ್ ಕಲ್ಲು ಎಂದು ಹೆಸರಾಗಿರುವ ಚಪ್ಪಡಿ ಬಿಲ್ಲೆಗಳ ಉದ್ಯಮಕ್ಕೂ ಕಚ್ಚಾವಸ್ತುವನ್ನು ಒದಗಿಸುತ್ತದೆ. ಗುಲ್ಬರ್ಗಾ ಜಿಲ್ಲೆಯಲ್ಲಿನ ಈ ಉದ್ಯಮಗಳನ್ನು ಬಿಟ್ಟರೆ, ರಾಯಚೂರು, ಬೀದರ್ ಜಿಲ್ಲೆಗಳಲ್ಲಿ ಆಧುನಿಕ ಉದ್ಯಮಗಳು ನಿಜಾಮರ ಕಾಲಕ್ಕೆ ಇರಲಿಲ್ಲ. ಸ್ಥಳೀಯವಾದ ಬೀಡಿ ಕಾರ್ಖಾನೆಗಳೂ ಜಿನ್ನಿಂಗ್ ಕಾರ್ಖಾನೆಗಳೂ ಇದ್ದುದುಂಟು.

ಕಾಯಿದೆ ದೃಷ್ಟಿಯಲ್ಲಿ ಅಂದಿನ ಹೈದರಾಬಾದ್ ಸಂಸ್ಥಾನವು ಬ್ರಿಟಿಷ್ ಭಾರತದಲ್ಲಿದ್ದ ಕಾರ್ಮಿಕ ಕಾಯಿದೆಗಳ ಮಾದರಿಯವೇ ಆದ ಕಾನೂನುಗಳನ್ನು ಜಾರಿಮಾಡಿತ್ತು. ಅದು ಉರ್ದು ಭಾಷೆಯಲ್ಲಿದ್ದುವೆಂಬುದಷ್ಟೇ ವ್ಯತ್ಯಾಸ. ಕಾರ್ಮಿಕ ಸಂಘಗಳ ರಚನೆ ಮತ್ತು ಕಾರ್ಯ ನಿರ್ವಹಣೆ, ವಿವಾದಗಳ ಪರಿಹಾರ, ಅಪಘಾತ ಪರಿಹಾರ ಮುಂತಾದ ಅಂಶಗಳೆಲ್ಲ ಅವುಗಳಲ್ಲಿ ಅಡಕವಾಗಿದ್ದುವು.

೧೯೪೨ರಲ್ಲಿ ಎಂ. ಎಸ್. ಕೆ. ಮಿಲ್ಸ್ ಕಾರ್ಮಿಕರು ಮಗ್ದುಂ ಮೋಹಿಯುದ್ದೀನ್ ಎಂಬುವರ ನೇತೃತ್ವದಲ್ಲಿ ಸಂಘ ಕಟ್ಟಿಕೊಂಡರು. ೧೯೪೬-೪೭ರಲ್ಲಿ ಈ ಮಿಲ್ಲಿನಲ್ಲಿ ಒಂದು ತಿಂಗಳು ಕಾಲದ ಮುಷ್ಕರವು ಜರುಗಿತು. ಆಗ ಕೆಲವು ಕಾರ್ಮಿಕರು ಉಪವಾಸ ಮುಷ್ಕರವನ್ನು ಹೂಡಿದರು. ಅದರಲ್ಲಿ ಮಾನ್‌ಸಿಂಗ್ ಎಂಬ ಕಾರ್ಮಿಕ ಮೃತನಾದ. ಆಗ ಅಬ್ದುಲ್ ಹಕೀಂ ತಿಮ್ಮಾಪುರಿ ಎಂಬ ವಕೀಲರು ಮಧ್ಯಸ್ಥಿಕೆ ನಡೆಸಿ ವೇತನ ಹೆಚ್ಚಳ ಹಾಗೂ ಇತರ ಕೆಲವು ಸೌಲಭ್ಯಗಳು ಕಾರ್ಮಿಕರಿಗೆ ದೊರೆತುವು. ಆಗ ಕೇಳಿಬರುವ ಇತರ ಕಾರ್ಮಿಕ ಮುಖಂಡರೆಂದರೆ ಶ್ರೀನಿವಾಸ ಗುಡಿ, ರಾಜ ಬಹದ್ದೂರ್ ಗೌರ್, ಗುಲಾಂ ನಬಿ ಆಜಾದ್ ಮುಂತಾದವರು.

ಷಹಾಬಾದಿನ ಎ.ಸಿ.ಸಿ. ಸಿಮೆಂಟ್ ಕಾರ್ಖಾನೆಯಲ್ಲಿ ೧೯೪೬ರಲ್ಲಿ ಕಾರ್ಮಿಕ ಸಂಘವು ಸ್ಥಾಪನೆಯಾಗಿ, ಕಾಯಿಲೆ ರಜಾ, ಹೆರಿಗೆ ರಜಾ ಮುಂತಾದ ಕೋರಿಕೆಗಳನ್ನು ಮಂಡಿಸಿ ಮುಷ್ಕರ ಹೂಡಿದರು. ಅದು ೧೨ ದಿನ ನಡೆಯಿತು. ೧೯೫೨ರಲ್ಲಿ ಸಂಘಕ್ಕೆ ಮಾನ್ಯತೆ ಕೋರಿ ನಡೆದ ೪೮ ದಿನಗಳ ಮುಷ್ಕರದಲ್ಲಿ ೨೪ ಮಂದಿ ಕಾರ್ಮಿಕರು ವಜಾ ಆದರು. ಈ ಮುಷ್ಕರಕ್ಕೆ ಸತ್ಯನಾರಾಯಣಶೆಟ್ಟಿ ಮತ್ತು ಗೋಪಾಲಸ್ವಾಮಿ ಇವರು ಮುಂದಾಳುಗಳಾಗಿದ್ದರು.

### ಏಕೀಕರಣ ಪೂರ್ವ ಅವಧಿಯ ಒಂದು ಸಮೀಕ್ಷೆ

ಸ್ವಾತಂತ್ರ್ಯ ಮತ್ತು ಏಕೀಕರಣಗಳು ಕೈಗೂಡುವ ಮುನ್ನ ಕರ್ನಾಟಕದ ಕಾರ್ಮಿಕ ಚಳವಳಿಯ ಈ ಸ್ಥೂಲ ಪರಿಚಯವನ್ನು ಮುಕ್ತಾಯಗೊಳಿಸುವ ಮುಂಚೆ ಕೆಲವು ಅಂಶಗಳನ್ನು ಸ್ಪಷ್ಟ ಪಡಿಸುವುದು ಅಗತ್ಯ. ಏಕೀಕರಣದವರೆಗಿನ ಕಾರ್ಮಿಕ ಚಳವಳಿಯ ಈ ನಿರೂಪಣೆಯಲ್ಲಿ ಮೈಸೂರು ಸಂಸ್ಥಾನದ ಪಾಲು ಬಹುದೊಡ್ಡದಾಯಿತು ಎಂದು ಮೇಲುನೋಟಕ್ಕೆ ತೋರುವುದು ಸಹಜ. ಆಗಿನ ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಅದು ಹೆಚ್ಚು ಕಡಿಮೆ ಒಂದು ಸ್ವಾಯತ್ತ ರಾಜಕೀಯ ಆಡಳಿತ ಘಟಕವಾಗಿದ್ದುದು ಇದಕ್ಕೆ ಮುಖ್ಯಕಾರಣ. ಅಲ್ಲಿ ವಿದ್ಯುತ್ ಉತ್ಪಾದನೆ, ರೈಲು ಮತ್ತು ರಸ್ತೆಗಳ ಅಭಿವೃದ್ಧಿ, ಉದ್ಯಮಗಳಿಗೆ ದೊರೆಯುತ್ತಿದ್ದ ಸರ್ಕಾರಿ ಪ್ರೋತ್ಸಾಹ, ಸಂಸ್ಥಾನವನ್ನೇ ಒಂದು ಸಮಗ್ರ ಘಟಕವಾಗಿ ಪರಿಗಣಿಸಿ ಅದರ ಆರ್ಥಿಕ - ಔದ್ಯಮಿಕ ಅಭಿವೃದ್ಧಿಗಾಗಿ ನಡೆದ ಸಮ್ಮೇಳನಗಳು, ಖಾಸಗಿ ಬಂಡವಾಳವು ಸಾಕಷ್ಟು ಪ್ರಮಾಣದಲ್ಲಿ ಹರಿದು ಬಾರದೆ ಹೋದಾಗ ಮೈಸೂರು ಬ್ಯಾಂಕಿನ ಸ್ಥಾಪನೆ, ಸರ್ಕಾರಿ ಸ್ವಾಮ್ಯದಲ್ಲಿ ಮತ್ತು ಸರ್ಕಾರದ ಪಾಲುಗಾರಿಕೆಯಲ್ಲಿ ಉದ್ಯಮಗಳ ಸ್ಥಾಪನೆ ಮೊದಲಾದ ಕೆಲವು ವಿಶಿಷ್ಟ ಬೆಳವಣಿಗೆಗಳು ಜರುಗಿದುವು. ಇದರ ಒಂದು ಮಹತ್ವದ ಪರಿಣಾಮವೆಂದರೆ, ಅಂದಿನ ಮೈಸೂರು ಸಂಸ್ಥಾನದ ಸರ್ಕಾರವು ಕಾರ್ಮಿಕ ಚಳವಳಿಯತ್ತ ತಳೆದ ಮನೋಭಾವದಲ್ಲಿ ಉದ್ಯಮಿಗಳು ತಮ್ಮ ಉದ್ಯಮಗಳ ಕಾರ್ಮಿಕ ಚಳವಳಿಯತ್ತ ತಳೆಯುವಂತಹ ಮನೋಭಾವದ ಪ್ರಮಾಣವು ಬಹು ದೊಡ್ಡದು.

ಉಳಿದ ಮೂರು ವಿಭಾಗಗಳು ಒಂದೊಂದು ವಿಶಾಲ ರಾಜಕೀಯ-ಆಡಳಿತ ಘಟಕಗಳ ವ್ಯಾಪ್ತಿಯೊಳಗೆ ಇದ್ದುವು. ಅವುಗಳ ಬಗ್ಗೆ ಅಲ್ಲಲ್ಲಿನ ಸರ್ಕಾರಗಳಿಗೆ ವಿಶೇಷ ಒಲವೂ ಇರಲಿಲ್ಲ, ವಿಶೇಷ ಕಾಳಜಿಯೂ ಇರಲಿಲ್ಲ. ಮುಂಬಯಿ ಕರ್ನಾಟಕವು ಮುಖ್ಯವಾದ ಹತ್ತಿ ಉತ್ಪಾದನಾ ಕ್ಷೇತ್ರವಾದರೂ ಸಹ ಅಲ್ಲಿ ಜವಳಿ ಗಿರಣಿಗಳನ್ನು ಸ್ಥಾಪಿಸಲು ಅಲ್ಲಿನ ಜನ ಮುಂದಾಗದಿದ್ದಾಗ, ಯಾವುದಾದರೊಂದು ರೀತಿಯಲ್ಲಿ ಅವರನ್ನು ಆ ದಾರಿಗೆ ತರಲು ಸರ್ಕಾರವು ಏನನ್ನು ಮಾಡಲೂ ಮುಂದಾಗಲಿಲ್ಲ. ಮದರಾಸು ಕರ್ನಾಟಕದ ದಕ್ಷಿಣ ಕನ್ನಡದಲ್ಲಿ ನಾವು ಆ ಕಾಲಕ್ಕೆ ಕಾಣುವುದು ಅಲ್ಲಿನ ಜನರ ಉದ್ಯಮಶೀಲತೆಯನ್ನು. ಸ್ಥಳೀಯ ಉದ್ಯಮಿಗಳು ಹಾಗೂ ಸ್ಥಳೀಯ ಕಾರ್ಮಿಕರ ನಡುವಣ ಒಂದು ಸೆಣಸಾಟವಾಗಿ ಅಲ್ಲಿನ ಕಾರ್ಮಿಕ ಚಳವಳಿಯನ್ನು ನೋಡಬಹುದು.

ಕೊಡಗಿನ ಬಗ್ಗೆ ಒಂದು ಮಾತಿನೊಂದಿಗೆ ಏಕೀಕರಣಕ್ಕೆ ಮುಂಚಿನ ಕಾರ್ಮಿಕ ಚಳವಳಿಯನ್ನು ಕುರಿತ ಈ ಭಾಗವನ್ನು ಮುಗಿಸಿ ಏಕೀಕರಣದ ನಂತರ ಕರ್ನಾಟಕದಲ್ಲಿ ಕಾರ್ಮಿಕ ಚಳವಳಿಯು ಹೇಗೆ ಬೆಳೆದಿದೆ ಎಂಬುದರತ್ತ ಗಮನ ಹರಿಸೋಣ. ಕೊಡಗಿನಲ್ಲಿ ಕಾಫಿ ಪ್ಲಾಂಟೇಷನ್ ಉದ್ಯಮವು ಬಹು ಪ್ರಮುಖ ಉದ್ಯಮವಾಗಿ ಬೆಳೆಯಿತು. ಆ ಕಾಲದಲ್ಲಿ ಆ ಕಾರ್ಮಿಕರ ನಡುವೆ ಯಾವುದೇ ಚಳುವಳಿ ಅಥವಾ ಸಂಘ ತಲೆ ಎತ್ತಿದಂತಿಲ್ಲ.

## ಏಕೀಕರಣಾನಂತರ

ಸ್ವಾತಂತ್ರ್ಯ ಮತ್ತು ಏಕೀಕರಣಗಳು ಕರ್ನಾಟಕದ ಉದ್ಯಮ ರಂಗದಲ್ಲೂ ಕಾರ್ಮಿಕ ರಂಗದಲ್ಲೂ ಮೂಲಭೂತ ಮಾರ್ಪಾಡುಗಳನ್ನು ತಂದುವು. ಈ ಲೇಖನದ ಪರಿಮಿತಿಗೆ ಸಂಬಂಧಿಸಿದಂತೆ, ಆ ಮಾರ್ಪಾಡುಗಳನ್ನು ಗಮನಿಸಿ ಮುಂದುವರಿಯುವುದು ಸೂಕ್ತ.

### ಉದ್ಯಮ ಕ್ಷೇತ್ರ ಮತ್ತು ಕಾರ್ಮಿಕ ಕ್ಷೇತ್ರಗಳಲ್ಲಿ ಆದ ಮಾರ್ಪಾಡುಗಳು

ಮೊದಲನೆಯದಾಗಿ ಉದ್ಯಮಗಳ ಸ್ಥಾಪನೆಗೆ ಹಾಗೂ ವಿಸ್ತರಣೆಗೆ ಸರ್ಕಾರವೇ ಅಡ್ಡಗಾಲು ಹಾಕುವುದು ನಿಂತಿತು. ಅದಕ್ಕೆ ವಿರುದ್ಧವಾಗಿ ಉದ್ಯಮಗಳಿಗೆ ಪ್ರೋತ್ಸಾಹ ನೀಡುವುದು ಸರ್ಕಾರದ ನೀತಿಯಾಯಿತು. ೧೯೫೦ರ ದಶಕದಿಂದ ಆರಂಭವಾದ

ಪಂಚವಾರ್ಷಿಕ ಯೋಜನೆಗಳು ಈ ನೀತಿಯ ಘೋಷಣೆಗಳು. ೧೯೫೦ರ ದಶಕದಲ್ಲಿ ಬೆಂಗಳೂರಿನಲ್ಲಿ ಕೇಂದ್ರ ಸರ್ಕಾರಿ ಸ್ವಾಮ್ಯದ ಉದ್ಯಮಗಳು ಸ್ಥಾಪನೆಯಾದುದನ್ನು ನಿರೂಪಿಸಿದಾಗ ಈ ಹೊಸ ಪ್ರವೃತ್ತಿಯನ್ನು ಸೂಚಿಸಲಾಗಿದೆ. ಯಾವಯಾವಾಗ, ಯಾವ ಯಾವ ಉದ್ಯಮಗಳು ಎಲ್ಲೆಲ್ಲಿ ಸ್ಥಾಪನೆಯಾದುವು ಎಂಬ ವಿವರಣೆಗಳ ಗೋಜಿಗೆ ಹೋಗದೆ ಈ ಐದು ದಶಕಗಳಲ್ಲಿ ಉದ್ಯಮ ಕ್ಷೇತ್ರದಲ್ಲಿ ಆಗಿರುವ ಒಂದೊಂದು ಪ್ರಗತಿಯನ್ನು ಗಮನಿಸೋಣ.

ಕಬ್ಬಿಣ ಮತ್ತು ಮ್ಯಾಂಗನೀಸ್ ಗಣಿಗಾರಿಕೆಯು ಸಂಡೂರು, ಬಳ್ಳಾರಿಗಳಲ್ಲಿ ವಿಸ್ತಾರಗೊಂಡಿದೆ. ಕುದುರೆಮುಖಕ್ಕೆ ವ್ಯಾಪಿಸಿದೆ. ನಾನಾ ಕಾರಣಗಳಿಂದ ಕಬ್ಬಿಣ ಮತ್ತು ಉಕ್ಕುಗಳನ್ನು ಉತ್ಪಾದಿಸಿ ರಫ್ತು ಮಾಡುವುದು ಸಾಧ್ಯವಾಗಿಲ್ಲ. ಆದರೆ ಸಂಡೂರಿನಲ್ಲಿ ಬೀಡುಕಬ್ಬಿಣವನ್ನೂ, ಕುದುರೆಮುಖದಲ್ಲಿ ಸಾಂದ್ರಗೊಳಿಸಿದ ಕಬ್ಬಿಣದ ಅದುರಿನ ಉಂಡೆಗಳನ್ನು ಉತ್ಪಾದಿಸಲಾಗುತ್ತಿದೆ. ಒಂದೇ ಒಂದು ಕಾಗದ ಕಾರ್ಖಾನೆಯಿದ್ದುದು ಈಗ ಮೂರಾಗಿವೆ. ಬೆಳಗೊಳ ಹಾಗೂ ದಾಂಡೇಲಿಗಳಲ್ಲಿ ಆ ಹೊಸ ಕಾರ್ಖಾನೆಗಳಿವೆ. ಕರ್ನಾಟಕದಲ್ಲಿ ಈಗ ಸುಮಾರು ೨೦ ಸಕ್ಕರೆ ಕಾರ್ಖಾನೆಗಳಿವೆ. ಸಿಮೆಂಟ್ ಉತ್ಪಾದನೆ ಬಾಗಲಕೋಟೆ ಪ್ರದೇಶಕ್ಕೂ ಹರಡಿದೆ. ಒಂದೆರಡಾದರೂ ರಸ ಗೊಬ್ಬರ ಕಾರ್ಖಾನೆಗಳಿವೆ. ಯಂತ್ರಗಳ ಉತ್ಪಾದನೆ, ಬಿಡಿ ಭಾಗಗಳ ಉತ್ಪಾದನೆ ಸಾಕಷ್ಟು ವ್ಯಾಪಕವಾಗಿ ಹರಡಿದೆ. ಕೃತಕ ನೂಲು, ರೇಷ್ಮೆ ನೂಲು ಹಾಗೂ ಹುರಿ ಇಂತಹ ಉದ್ಯಮಗಳೂ ಬಲಗೊಂಡಿವೆ. ವಿದ್ಯುತ್ ಉತ್ಪಾದನೆಯು ನಿತ್ಯವೂ ಏರುವ ಬೇಡಿಕೆಗೆ ಸರಿಗಟ್ಟದಿರ ಬಹುದಾದರೂ, ಶರಾವತಿ, ಸೂಪ, ರಾಯಚೂರು ಶಾಖವಿದ್ಯುತ್ ಸ್ಥಾವರ, ಅಣುವಿದ್ಯುತ್ ಸ್ಥಾವರ ಇದನ್ನೆಲ್ಲ ನೆನಪಿಗೆ ತಂದು ಕೊಂಡಾಗ, ಅದು ಎಷ್ಟು ಪಟ್ಟು ಹೆಚ್ಚಿದೆ ಎಂಬುದರ ಕಲ್ಪನೆಯಾದೀತು. ಇಲ್ಲ ಇಲ್ಲ ಎಂದು ಜನರು ದೂರಿದರೂ ರೈಲ್ವೆಗಳನ್ನೇ ನೋಡಿ, ಹಾಸನ-ಮಂಗಳೂರು ಹಾಗೂ ಕೊಂಕಣ ರೈಲ್ವೆ ನಿರ್ಮಾಣಗೊಂಡಿದೆ. ಆದ್ದರಿಂದ ಕೈಗಾರಿಕೋದ್ಯಮಗಳು, ವಿದ್ಯುತ್ ಉತ್ಪಾದನೆ, ರಸ್ತೆ ಹಾಗೂ ರೈಲ್ವೇ ಸಾರಿಗೆ ಇವುಗಳಲ್ಲೆಲ್ಲಾ ಆಗಿರುವ ಅಭಿವೃದ್ಧಿ ಗಮನಾರ್ಹ ಎಂಬುದಷ್ಟು ನಿರ್ವಿವಾದ. ಹೋಟೆಲ್, ಪ್ಲಾಂಟೇಷನ್ ಮುಂತಾದುವು ಬಲಗೊಂಡಿವೆ.

ಸ್ವಾತಂತ್ರ್ಯ ಪೂರ್ವದಲ್ಲಿ ಬ್ಯಾಂಕಿಂಗ್ ಮತ್ತು ವಿಮಾಕ್ಷೇತ್ರಗಳಲ್ಲಿ ಆಗಿದ್ದ ಪ್ರಗತಿಯು ಕೇವಲ ಪ್ರಾಥಮಿಕ ಹಂತದ್ದು. ಈಗ ಈ ಹಣಕಾಸು ಸಂಬಂಧವಾದ ಉದ್ಯಮವು ಬಹಳ ವಿಸ್ತಾರಗೊಂಡಿದೆ. ಭಾರಿ ಹಡಗುಗಳನ್ನು ಬರಮಾಡಿಕೊಳ್ಳಬಲ್ಲ ಹಾಗೂ ಕಳುಹಿಸಿಕೊಡಬಲ್ಲ ನವಮಂಗಳೂರು ಬಂದರನ್ನು ಅಭಿವೃದ್ಧಿಪಡಿಸಲಾಗಿದೆ. ವಿಮಾನಯಾನವು ಸಹ ವಿಸ್ತಾರಗೊಂಡಿದೆ. ಕರ್ನಾಟಕವೂ ಭಾರತದ ಮಾಹಿತಿ ತಂತ್ರಜ್ಞಾನ ಉದ್ಯಮದ ಮುಂಚೂಣಿಯಲ್ಲಿದೆ. ಏರುತ್ತಿರುವ ಜನಸಂಖ್ಯೆಗೆ ಉದ್ಯೋಗಗಳನ್ನು ಒದಗಿಸಲು ಇಷ್ಟು ಸಾಲದೆಂಬುದು ನಿಜ. ಆದರೆ ಆಗಿರುವ ವಿಸ್ತರಣೆ, ಉದ್ಯಮಗಳು ಒದಗಿಸುತ್ತಿರುವ ಉದ್ಯೋಗಾವಕಾಶಗಳ ಸಂಖ್ಯಾ ಪ್ರಮಾಣ ಹಾಗೂ ವೈವಿಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ.

ಉದ್ಯಮಗಳ ವಿಸ್ತರಣೆಯಿಂದ ಕಾರ್ಮಿಕ ಸಂಘಟನೆ, ವಿವಾದಗಳ ಇತ್ಯರ್ಥ, ಕಾರ್ಮಿಕ ಕಲ್ಯಾಣ ಮುಂತಾದ ಅಂಶಗಳಿಗೆ ಇರುವ ಸಾಂವಿಧಾನಿಕ ಹಕ್ಕು ಹಾಗೂ ಅವಕಾಶಗಳತ್ತ ಗಮನ ಹರಿಸೋಣ. ಈ ಎಲ್ಲ ಅಂಶಗಳಿಗೆ ಸಂಬಂಧಿಸಿದಂತೆ ಜಾರಿಯಲ್ಲಿರುವ ಕಾಯದೆ ಕಾನೂನುಗಳು ಮತ್ತು ಅಧಿಕೃತ ವ್ಯವಸ್ಥೆಗಳು ಇಡೀ ಭಾರತಕ್ಕೆ ಹಾಗೂ ಇಡೀ ಕರ್ನಾಟಕಕ್ಕೆ ಒಂದೇ ರೀತಿಯಲ್ಲಿ ಅನ್ವಯವಾಗುತ್ತವೆ. ಈ ಏಕರೂಪದ ವ್ಯವಸ್ಥೆಯಿಂದಾಗಿ ಕರ್ನಾಟಕದಾದ್ಯಂತವೂ ಕಾರ್ಮಿಕ ಸಂಘಗಳು ಅಸ್ತಿತ್ವಕ್ಕೆ ಬಂದಿವೆ ಮತ್ತು ಬಲಗೊಂಡಿವೆ. ಹಿಂದೆ ಕಾರ್ಮಿಕ ಎಂದರೆ ಕಾರ್ಖಾನೆ ಹಾಗೂ ಕಾರ್ಯಾಗಾರಗಳಲ್ಲಿ ದುಡಿಯುವವನು ಎಂಬುದಾಗಿ ವ್ಯಾಖ್ಯಾನಿಸಲಾಗುತ್ತಿದ್ದುದು. ಈಗ ಬ್ಯಾಂಕು, ವಿಮೆಯ ಕಚೇರಿ, ಶಾಲೆ, ಸಂಪರ್ಕ ಜಾಲ, ಆಸ್ಪತ್ರೆ ಹೀಗೆ ಎಲ್ಲ ಕ್ಷೇತ್ರಗಳಿಗೆ ವ್ಯಾಪಿಸಿಕೊಂಡಿದೆ. ಕಾರ್ಮಿಕರು ಎಂದು ತಮ್ಮನ್ನು ಹೆಸರಿಸಿಕೊಂಡು, ತಮ್ಮನ್ನು ಸಂಘಟಿಸಿಕೊಂಡರೆ ದೊರೆಯುವ ಕೆಲವು ಸೌಕರ್ಯ ಸೌಲಭ್ಯಗಳು, ಅವುಗಳಲ್ಲಿಯೂ ಬಹುಮುಖ್ಯವಾಗಿ ತಮ್ಮ ಸಾಮೂಹಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಅವಕಾಶಗಳಿಂದಾಗಿ ಈಗ ಬ್ಯಾಂಕ್ ಅಧಿಕಾರಿಗಳು, ಸರ್ಕಾರದ ಗೆಜೆಟೆಡ್ ಅಧಿಕಾರಿಗಳು, ಶಿಕ್ಷಕರು, ವೈದ್ಯರು ಮುಂತಾದ ಉನ್ನತ ಹುದ್ದೆಗಳಲ್ಲಿರುವವರು ಸಹ ಸಂಘಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಇಂತಹ ನಿದರ್ಶನಗಳಿಂದ ಪ್ರೇರಿತರಾಗಿ ಅಸಂಘಟಿತ ಕ್ಷೇತ್ರಗಳ ಕಾರ್ಮಿಕರು ಸಹ ಕಾರ್ಮಿಕ ಸಂಘಟನೆಗಳಲ್ಲಿ ಸಂಘಟಿತರಾಗುತ್ತಿದ್ದಾರೆ. ಅಸಂಘಟಿತ ಕ್ಷೇತ್ರಗಳು ಎಂದರೇನು ಎಂಬುದನ್ನು ಸ್ವಲ್ಪ ವಿವರಿಸುವುದು ಅಗತ್ಯ ಎಂದು ತೋರುತ್ತದೆ. ಕಟ್ಟಡ ನಿರ್ಮಾಣ, ಕಾಫಿ ಟೀ ಪ್ಲಾಂಟೇಷನ್‌ಗಳು, ಅಂಗನವಾಡಿಗಳು ಮುಂತಾದುವುಗಳಲ್ಲಿ ನೂರಾರು ಇರಲಿ ಹತ್ತಾರು ಕಾರ್ಮಿಕರು ಸಹ ಒಂದೇ ಜಾಗದಲ್ಲಿ ಕೂಡಿ ಕೆಲಸ ನಿರ್ವಹಿಸುವ ಅವಕಾಶಗಳು ಕಮ್ಮಿ. ಕಟ್ಟಡ ನಿರ್ಮಾಣ ಕ್ಷೇತ್ರದಲ್ಲಿಯಂತೂ ಒಂದೊಂದು ಸಂದರ್ಭದಲ್ಲಿ ಒಂದೊಂದು ರೀತಿಯ ಮಾಲೀಕ, ಕಾರ್ಮಿಕ ಸಂಬಂಧ ಇರುವುದು ಸಹಜ. ಹೀಗಿದ್ದರೂ ಸಹ ತಮ್ಮ

ಸಾಮೂಹಿಕ ಸಮಸ್ಯೆಗಳನ್ನು ಸರ್ಕಾರ ಹಾಗೂ ಸಾರ್ವಜನಿಕರ ಗಮನಕ್ಕೆ ತರುವುದರಿಂದ ಆಗುವ ಪ್ರಯೋಜನಗಳನ್ನು ಮನವರಿತು ಆ ಕಾರ್ಮಿಕರು ಹಲವಾರು ಸ್ಥಳಗಳಲ್ಲಿ ಸಂಘಟಿತರಾಗಿದ್ದಾರೆ. ಹಲವು ಸಂದರ್ಭಗಳಲ್ಲಿ ಮಾಲೀಕ ಎಂದು ಯಾರನ್ನಾದರೂ ಗುರುತಿಸುವುದು ಕೂಡಾ ಸಮಸ್ಯೆಯಾಗಬಹುದು. ಆದರೂ ಸಂಘಟನೆಗಳು ಬಲಗೊಳ್ಳುತ್ತಿವೆ.

ಒಟ್ಟಿನಲ್ಲಿ ಕಾರ್ಮಿಕ ಸಂಘಟನೆಯ ಸಂದೇಶವು ಶ್ರಮಿಕರಲ್ಲೆಲ್ಲಾ ವ್ಯಾಪಿಸಿದೆ. ಸಂಘಗಳು ಸ್ಥಾಪನೆಯಾಗಿವೆ. ಅವು ತಮ್ಮ ಕೆಲಸಗಳನ್ನು ನಿರ್ವಹಿಸಲು ಕಾನೂನು ವಿಧಿಸಿರುವ ಕ್ರಮವಿಧಾನಗಳಿವೆ. ಈ ಸಂಘಗಳು ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಮಹತ್ವಾಕಾಂಕ್ಷೆಗಳಿರುವ ವ್ಯಕ್ತಿಗಳಿಗೆ ಉಪಯುಕ್ತ ಸೇವಾಕಾರ್ಯಗಳ ಮೂಲಕ ಜನಪ್ರಿಯತೆ ಗಳಿಸುವ ವೇದಿಕೆಗಳೂ ಆಗಿವೆ. ಹೀಗಿರುವಾಗಲೂ ಸಹ ಕಾರ್ಮಿಕ ಸಂಘಗಳಲ್ಲಿ ಜವಾಬ್ದಾರಿಯಿಂದ ಕಾರ್ಯನಿರತರಾಗುವ ಕಾರ್ಯಕರ್ತರು ಮುಂದೆ ಬರುತ್ತಿದ್ದಾರೆ. ಕಾರ್ಮಿಕ ಸಂಘವೊಂದು ಯಾವುದಾದರೊಂದು ಸಮಸ್ಯೆಯನ್ನು ಕೈಗೆತ್ತಿಕೊಳ್ಳಲು ನಿರ್ಧರಿಸಿದ ಒಡನೆಯೇ ಅದಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳು ಹಾಗೂ ವಾದಗಳನ್ನು ಕ್ರೋಡೀಕರಿಸಿ ಮಾಲೀಕನಿಗೆ ಅಥವಾ ಆಡಳಿತ ವರ್ಗಕ್ಕೆ ಮತ್ತು ಸಂಬಂಧಪಟ್ಟ ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ ಆ ಸಮಸ್ಯೆಯನ್ನು ಕೂಲಂಕಷವಾಗಿ ಮನವರಿಕೆ ಮಾಡಿಕೊಡುವ ಕೆಲಸ ಆರಂಭವಾಗುತ್ತದೆ. ಕಾರ್ಮಿಕ ಕಾಯಿದೆಗಳ ಮತ್ತು ಆ ನಿರ್ದಿಷ್ಟ ಘಟಕ ಅಥವಾ ಕಾರ್ಖಾನೆಯ ಆರ್ಥಿಕ ಆಗುಹೋಗುಗಳ ಅಧ್ಯಯನ ಮಾಡುವುದಕ್ಕೆ ಗಮನ ಹರಿಸಬೇಕಾಗುತ್ತದೆ. ಹಲವು ಕಾರ್ಮಿಕ ಸಂಘಗಳು ಈ ಕೆಲಸಗಳಲ್ಲಿ ಲಾಯರುಗಳ ಸಲಹೆಯನ್ನು ಪಡೆಯುವುದು ವಾಡಿಕೆಯಾಗಿದೆ. ಸಂಘದ ಬಲವೊಂದೇ ಸಾಲದು, ತಮ್ಮ ಬೇಡಿಕೆಗಳ ಹಿಂದೆ ಅವುಗಳನ್ನು ಸಮಂಜಸವಾಗಿ ಮಂಡಿಸಬಲ್ಲ ತಿಳಿವಳಿಕೆಯ ಬಲವೂ ಸಹ ಅಗತ್ಯ ಎಂಬುದನ್ನು ಸಂಘಗಳ ಮುಖಂಡರು ಹಾಗೂ ಕಾರ್ಯಕರ್ತರು ಅರಿತುಕೊಳ್ಳುತ್ತಿದ್ದಾರೆ.

ಇಲ್ಲಿ ಕಾರ್ಮಿಕ ವಿವಾದಗಳ ಪರಿಹಾರಕ್ಕೆ ಇರುವ ಕಾನೂನುಬದ್ಧ ಕ್ರಮದ ಪರಿಚಯವು ಬಹಳ ಸಹಾಯಕವಾಗುತ್ತದೆ. ಯಾವುದಾದರೊಂದು ಉದ್ಯಮ ಘಟಕದಲ್ಲಿ ಕಾರ್ಮಿಕರು ಪರಿಹರಿಸಿಕೊಳ್ಳಬೇಕಾದುದು ಅಗತ್ಯ ಎಂದು ಪರಿಗಣಿಸುವ ಒಂದು ಸಮಸ್ಯೆಯಿದೆ ಎಂದು ಭಾವಿಸೋಣ. ಆ ಸಮಸ್ಯೆಯು ಕಾರ್ಮಿಕನೊಬ್ಬನನ್ನು ಕೆಲಸದಿಂದ ವಜಾ ಮಾಡಿದುದರಿಂದ ಹಿಡಿದು ಬೋನಸ್, ವೇತನ ಇತ್ಯಾದಿ ಯಾವ ಸಮಸ್ಯೆಯಾದರೂ ಆಗಿರಬಹುದು. ಮೊದಲು ಸಂಘವು ಆ ಸಮಸ್ಯೆಯ ಬಗ್ಗೆ ಒಂದು ವಿವರವಾದ ಪತ್ರ ಬರೆದು ಕಾರ್ಖಾನೆಯ ಆಡಳಿತಕ್ಕೆ ಕಳುಹಿಸುತ್ತದೆ. ಆ ಆಡಳಿತವು ಒಂದು ಕಾಲಮಿತಿಯಲ್ಲಿ ಅದಕ್ಕೆ ಉತ್ತರ ನೀಡಬೇಕು ಇಲ್ಲವೇ ವಿವಾದವನ್ನು ಕುರಿತು ಮಾತುಕತೆಗಳನ್ನು ನಡೆಸಲು ಸಂಘದ ಪ್ರತಿನಿಧಿಗಳನ್ನು ಆಹ್ವಾನಿಸಬೇಕು. ಆ ಉತ್ತರದಿಂದ ಅಥವಾ ಮಾತುಕತೆಗಳ ಫಲವಾಗಿ ವಿವಾದ ಬಗೆಹರಿಯದೆ ಹೋದರೆ, ಅದನ್ನು ಸಂಘವು ಕಾರ್ಮಿಕ ಇಲಾಖೆಯ ಸೂಕ್ತ ದರ್ಜೆಯ ಅಧಿಕಾರಿಯ ಮುಂದೆ ಮಂಡಿಸಬೇಕು. ಕಾರ್ಖಾನೆಯ ಕಾರ್ಮಿಕರ ಸಂಖ್ಯಾಬಲಕ್ಕೆ ಅನುಗುಣವಾಗಿ ವಿವಾದಗಳ ಪರಿಹಾರ ಕೈಗೊಂಡು, ರಾಜಿ ಮಾಡಿಸಲು ವಿವಿಧ ದರ್ಜೆಯ ಕಾರ್ಮಿಕ ಅಧಿಕಾರಿಗಳಿದ್ದಾರೆ. ಆ ಅಧಿಕಾರಿಯು ರಾಜಿ ಮಾಡಿಸಲು ವಿಫಲನಾದರೆ. ವಿವಾದವು ಕಾರ್ಮಿಕ ನ್ಯಾಯಾಲಯದ ಮುಂದೆ ಹೋಗುತ್ತದೆ. ಆ ನ್ಯಾಯಾಲಯವು ನೀಡುವ ತೀರ್ಪು ಕಾರ್ಮಿಕರಿಗಾಗಲಿ, ಆಡಳಿತಕ್ಕಾಗಲಿ ಒಪ್ಪಿಗೆ ಇಲ್ಲವಾದರೆ, ಹೈಕೋರ್ಟಿಗೆ ಮೇಲ್ಮನವಿ ಸಲ್ಲಿಸಬಹುದು. ಎಲ್ಲಿಯೂ ಅದು ಪರಿಹಾರವಾಗದೆ ಹೋದರೆ ಸೂಕ್ತವಾದ ಸಮಯಾವಕಾಶ ನೋಟೀಸು ನೀಡಿ, ಸಂಘದ ನೇತೃತ್ವದಲ್ಲಿ ಕಾರ್ಮಿಕರು ಮುಷ್ಕರ ಹೂಡಬಹುದು. ಹಾಗಾದಾಗ ಯಾವುದಾದರೊಂದು ಪಕ್ಷವು ಅಂದರೆ ಕಾರ್ಮಿಕ ಸಂಘವು ಅಥವಾ ಆಡಳಿತವು ಬೇರೆ ಬಗೆಯಲ್ಲಿ ಅಂದರೆ ರಾಜಕೀಯ ಒತ್ತಡ, ಗೌರವಾನ್ವಿತ ವ್ಯಕ್ತಿಗಳ ಪಂಚಾಯತಿ ಇಂತಹ ದಾರಿಗಳಿಂದ ವಿವಾದಗಳನ್ನು ಪರಿಹರಿಸಿಕೊಳ್ಳಬೇಕಾಗುತ್ತದೆ ಅಥವಾ ಸೋತು ತೆಪ್ಪಗಾಗಬೇಕಾಗುತ್ತದೆ. ವಿವಾದವು ಯಾವುದಾದರೂ ಹಂತದಲ್ಲಿ ಪರಿಹಾರಗೊಳಿಸುವ ಅಧಿಕಾರಿಗಳು ಅಥವಾ ನ್ಯಾಯಾಲಯಗಳ ಮುಂದಿರುವಾಗ ಹೂಡುವ ಮುಷ್ಕರವು ಕಾನೂನು ಬಾಹಿರವಾಗುತ್ತದೆ. ವಿವಾದದ ಪರಿಹಾರಕ್ಕೆ ಸೂಕ್ತ ಕ್ರಮವನ್ನು ಕೈಗೊಳ್ಳದೆ ಕಾರ್ಮಿಕರು ಹೂಡುವ ಮುಷ್ಕರವು ಸಹ ಕಾನೂನು ಬಾಹಿರ. ಈಗಿನ ಕಾಯದೆಯ ಪ್ರಕಾರವಾಗಿ ಒಂದೇ ಕಾರ್ಖಾನೆ ಅಥವಾ ಕಚೇರಿಯಲ್ಲಿ ಒಂದಕ್ಕಿಂತ ಹೆಚ್ಚಿನ ಕಾರ್ಮಿಕ ಸಂಘಗಳು ಅಸ್ತಿತ್ವದಲ್ಲಿರುವುದು ಸಾಧ್ಯ. ಅಂತಹ ಸಂದರ್ಭದಲ್ಲಿ ಆಡಳಿತವು ಯಾವ ಸಂಘದೊಂದಿಗೆ ಕಾರ್ಮಿಕ ವಿವಾದಗಳ ಬಗ್ಗೆ ವ್ಯವಹರಿಸಬೇಕು? ಈ ಸಮಸ್ಯೆಯನ್ನು ರಹಸ್ಯ ಮತದಾನ ಮಾದರಿಯ ಅಭಿಪ್ರಾಯ ಸಂಗ್ರಹ ಮಾಡುವ ಮೂಲಕ ಕಾಲದಿಂದ ಕಾಲಕ್ಕೆ ನಿರ್ಧರಿಸಲಾಗುವುದು. ಹೆಚ್ಚು ಮಂದಿ ಕಾರ್ಮಿಕರ ಬೆಂಬಲವಿರುವ ಸಂಘಕ್ಕೆ ಮಾನ್ಯತೆ.

ಇವೆಲ್ಲ ಕಾಯಿದೆ ಕಟ್ಟುಪಾಡುಗಳಿಂದಾಗಿ ಕಾರ್ಮಿಕ ಕಾಯಿದೆ ಕಾನೂನುಗಳು, ಅವುಗಳ ಮೇಲೆ ನ್ಯಾಯಾಲಯಗಳು ನೀಡಿರಬಹುದಾದ ತೀರ್ಪುಗಳು ಅವುಗಳ ಮೇಲಿನ ವ್ಯಾಖ್ಯಾನಗಳು ಮುಂತಾದುವೆಲ್ಲ ಮಹತ್ವ ಗಳಿಸಿವೆ. ಕಾಯಿದೆಯ ವಿವಿಧ

ವಿಭಾಗಗಳು ಅಂದರೆ ಸಿವಿಲ್, ಕ್ರಿಮಿನಲ್, ತೆರಿಗೆ, ಕಂಪನಿ ವ್ಯವಹಾರಗಳು ಮುಂತಾದುವಕ್ಕೆ ಅನ್ವಯವಾಗುವ ಕಾಯಿದೆ ಕಾನೂನುಗಳ ಪರಿಣತರಿರುವಂತೆಯೇ ಈಗ ಕಾರ್ಮಿಕ ಕಾಯಿದೆಗಳ ಪರಿಣತರೂ ಇದ್ದಾರೆ. ಇವೆಲ್ಲವುಗಳ ಜೊತೆಯಲ್ಲಿ ಮತ್ತು ಎಷ್ಟೋ ಬಾರಿ ಇವುಗಳನ್ನು ಮೀರಿ ರಾಜಕೀಯ ಪ್ರಭಾವ ಮತ್ತು ಒತ್ತಡಗಳೂ ಕೆಲಸ ಮಾಡುತ್ತವೆ. ಒಟ್ಟಿನಲ್ಲಿ ಈಗ ಕಾರ್ಮಿಕ ಕ್ಷೇತ್ರವು ಸಾಕಷ್ಟು ಸಂಕೀರ್ಣವಾಗಿದೆ.

### ಸಂಕೀರ್ಣತೆಯ ಕೆಲವು ಮುಖಗಳು

ಕಾರ್ಮಿಕ ಕ್ಷೇತ್ರದ ಸಂಕೀರ್ಣತೆಯ ಪೂರ್ಣ ರೂಪದ ಪರಿಚಯವನ್ನು ಪಡೆದುಕೊಳ್ಳುವುದು ಕಷ್ಟ. ಕೆಲವು ಮುಖ್ಯ ಅಂಶಗಳನ್ನು ಮಾತ್ರ ಪರಿಶೀಲಿಸಬಹುದು.

'ದಿಢೀರ್' ಮುಷ್ಕರಗಳು ಇಂತಹ ಒಂದು ಸಂಕೀರ್ಣ ಸಮಸ್ಯೆ. ಸಾರಿಗೆ ಮುಂತಾದ ಸಾರ್ವಜನಿಕರ ನಿಕಟ ಮತ್ತು ನಿರಂತರ ಸಂಪರ್ಕವು ಅನಿವಾರ್ಯವಾಗಿರುವ ಕ್ಷೇತ್ರಗಳಲ್ಲಿ ಇದು ಸಾಮಾನ್ಯ. ಪ್ರಯಾಣಿಕನಿಗೂ, ಬಸ್ ಕಂಡಕ್ಟರಿಗೂ ನಡೆಯುವ ಜಗಳ, ಆಟೋರಿಕ್ಷಾ ಚಾಲಕನೊಬ್ಬನಿಗೂ ಟ್ರಾಫಿಕ್ ಪೋಲೀಸ್ ಅಧಿಕಾರಿಗೂ ನಡುವೆ ಏಳುವ ವಿವಾದ ಹಾಗೂ ಪೊಲೀಸರ ವರ್ತನೆ ಮುಂತಾದುವು ಇಂತಹ ಮುಷ್ಕರಗಳಿಗೆ ಎಡೆ ಮಾಡಿಕೊಡುತ್ತವೆ. ನಿರ್ದಿಷ್ಟ ಸಂದರ್ಭಕ್ಕೆ ಅನುಗುಣವಾಗಿ ಇವು ಪರಿಹಾರವಾಗುತ್ತವೆ. ಎಷ್ಟೋ ಬಾರಿ ಕಾರ್ಮಿಕ ಅಥವಾ ನೌಕರನದೇ ತಪ್ಪಿರಬಹುದಾದರೂ ಸಂಘಗಳು ಅವನ ರಕ್ಷಣೆಗೆ ನಿಲ್ಲದೆ ವಿಧಿಯಿಲ್ಲದಂತಾಗುತ್ತದೆ.

ಮೂರು ನಾಲ್ಕು ದಶಕಗಳಿಂದ ಎದ್ದಿರುವ ಕಾರ್ಮಿಕ ವಿವಾದಗಳಲ್ಲಿ ಏರುತ್ತಿರುವ ಬೆಲೆಗೆ ಅನುಗುಣವಾದ ತುಟ್ಟಿಭತ್ಯೆ ನೀಡಿಕೆ, ವಾರ್ಷಿಕ ಬೋನಸ್. ಕಾರ್ಮಿಕರಿಗಾಗಿ ಸೂಕ್ತ ಆರೋಗ್ಯ ಸೇವಾ ವ್ಯವಸ್ಥೆ, ವಿಶ್ರಾಂತಿ ತಾಣಗಳು, ಇಂತಹ ಸೌಲಭ್ಯಗಳ ವ್ಯವಸ್ಥೆಯು ಸಾಂಸ್ಥಿಕ ರೂಪಗಳನ್ನು ತಳೆದಿವೆ. ತುಟ್ಟಿಭತ್ಯೆಯನ್ನು ನಿಗದಿಪಡಿಸುವ ಜೀವನವೆಚ್ಚ ಸೂಚ್ಯಾಂಕದ ನಿರ್ಧಾರ ಹಾಗೂ ಪ್ರಕಟಣೆ, ಕಾರ್ಮಿಕರು ಹಾಗೂ ನೌಕರರಿಗಾಗಿ ಪ್ರಾವಿಡೆಂಟ್ ಫಂಡ್ ವ್ಯವಸ್ಥೆ, ನೌಕರರ ರಾಜ್ಯ ವಿಮೆ ನಿರ್ವಹಣೆ ಮತ್ತು ಅವು ನಡೆಸುವ ಆಸ್ಪತ್ರೆಗಳು-ಹೀಗೆ ಹಲವಾರು ಸಂಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ.

ಹಲವಾರು ಉದ್ಯಮಗಳಲ್ಲಿ ಸಹಕಾರ ಸಂಘಗಳು. ಗೃಹ ನಿರ್ಮಾಣ ಸಹಕಾರ ಸಂಘಗಳು ಮುಂತಾದ ಆರ್ಥಿಕ ಮಹತ್ವದ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದಿವೆ. ಅವುಗಳಲ್ಲಿ ಕೆಲವು ಉತ್ತಮ ಕಾರ್ಯನಿರ್ವಹಣೆಗಾಗಿ ಉತ್ತಮವಾದ ಹೆಸರನ್ನು ಗಳಿಸಿವೆ.

ಹಲವಾರು ಉದ್ಯಮಗಳಲ್ಲಿ ಕಲಾ ಸಂಘಗಳು, ನಾಟಕ ತಂಡಗಳು ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಶೇಷವಾದ ಗಮನ ಹರಿಸುವ ಸಂಘ ಸಂಸ್ಥೆಗಳು ರೂಪುಗೊಂಡು ಪ್ರಸಿದ್ಧವಾಗಿವೆ. ಇವುಗಳನ್ನೆಲ್ಲ ಕಾರ್ಮಿಕ ಚಳುವಳಿಯ ಪರೋಕ್ಷ ಪರಿಣಾಮಗಳು ಎಂದು ಭಾವಿಸುವುದು ಸೂಕ್ತ. ಕಾರ್ಮಿಕ ಸಂಘಗಳ ಪ್ರಭಾವದಿಂದಾಗಿ ಇಂತಹ ಚಟುವಟಿಕೆಗಳಿಗೆ ಮಾಲೀಕರು ಅಥವಾ ಆಡಳಿತಗಾರರು ಅವಕಾಶ ನೀಡಿದ್ದಾರೆ ಮತ್ತು ಹಲವೆಡೆ ಪ್ರೋತ್ಸಾಹಿಸುತ್ತಲೂ ಇದ್ದಾರೆ. ಈ ರೀತಿ ಕಾರ್ಮಿಕ ಚಳುವಳಿಯಿಂದಾಗಿ ಕಾರ್ಮಿಕರ ಜೀವನವನ್ನು ಹಸನುಗೊಳಿಸುವಂತಹ ಹಲವಾರು ಶಾಖೆಗಳು ಹಾಗೂ ಕವಲುಗಳು ರೂಪುಗೊಂಡಿವೆ.

### ಆಘಾತಕಾರಿಯಾದ ಕೆಲವು ಬೆಳವಣಿಗೆಗಳು.

ಆದರೆ ಕಳೆದ ಮೂರು ದಶಕಗಳಲ್ಲಿ ಕೆಲವು ಆಘಾತಕಾರಿಯಾದ ಬೆಳವಣಿಗೆಗಳು ಸಂಭವಿಸಿವೆ. ಅವುಗಳತ್ತ ಗಮನ ಹರಿಸೋಣ. ೧೯೬೦ರ ದಶಕದ ಕೊನೆಯ ವೇಳೆಗೆ ಕರ್ನಾಟಕದ ಹಲವಾರು ಪ್ರಸಿದ್ಧ ಹಾಗೂ ಹಳೆಯ ಜವಳಿ ಕಾರ್ಖಾನೆಗಳು ರೋಗಗ್ರಸ್ತವಾದುವು. ಜನಸಾಮಾನ್ಯರಲ್ಲಿ ಉಡುಪಿನ ಶೈಲಿ ಹಾಗೂ ವಿನ್ಯಾಸಗಳು ಮಾರ್ಪಟ್ಟುದು ಇದಕ್ಕೆ ಒಂದು ಮುಖ್ಯಕಾರಣ. ಪಂಚೆಯು ಕಣ್ಮರೆಯಾಗಿ ಪ್ಯಾಂಟ್ ವಿರಾಜಿಸತೊಡಗಿತು, ಹೆಗಲಿನ ಮೇಲೆ ಇರುತ್ತಿದ್ದ ಟವಲು ಅಥವಾ ತುಂಡು ಅಪರೂಪವಾಯಿತು. ಪ್ಯಾಂಟುಗಳಿಗೆ, ಷರಟುಗಳಿಗೆ, ಸೀರೆ, ರವಿಕೆ ಮುಂತಾದುವಕ್ಕೆ ಹತ್ತಿ ನೂಲಿನ ವಾಯಿಲ್, ಟಸೂರ್, ಡ್ರಿಲ್, ಪಾಪ್ಲಿನ್ ಮುಂತಾದ ವಸ್ತ್ರಗಳನ್ನು ಬಳಸುವ ಬದಲು ಪಾಲಿಯೆಸ್ಟರ್, ನೈಲಾನ್ ಮುಂತಾದ ಕೃತಕ ನೂಲಿನ ವಸ್ತ್ರಗಳು ಜನಪ್ರಿಯವಾಗತೊಡಗಿದುವು.

ಅದೇ ಕಾಲಾವಧಿಯಲ್ಲಿ ಜಪಾನ್ ಮುಂತಾದ ದೇಶಗಳಲ್ಲಿ ನಡೆದ ತಾಂತ್ರಿಕ ಆವಿಷ್ಕಾರಗಳಿಂದಾಗಿ ಒಬ್ಬನೇ ಕಾರ್ಮಿಕ ಹೆಚ್ಚು ಸಂಖ್ಯೆಯ ನೂಲುವ ಕದಿರುಗಳನ್ನು ಮತ್ತು ಹೆಚ್ಚು ಸಂಖ್ಯೆಯ ಸ್ವಯಂಚಾಲಿತ ಮಗ್ಗಗಳನ್ನು ನಿರ್ವಹಿಸಬಲ್ಲಂತಹ ಯಂತ್ರಗಳು ಚಾಲ್ತಿಗೆ ಬಂದುವು. ಭಾರತದಲ್ಲಿಯೂ ಹಲವು ಗಿರಣಿಗಳು ಈ ಹೊಸ ತಂತ್ರಯಂತ್ರಗಳನ್ನು ಅಳವಡಿಸಿಕೊಂಡುವು. ಹಳೆಯ ಮಾದರಿಯ ಯಂತ್ರಗಳು ಮತ್ತು ಉತ್ಪಾದನಾ ವ್ಯವಸ್ಥೆಗಳನ್ನು ಬಳಸುತ್ತಿದ್ದ ಗಿರಣಿಗಳು ಪೈಪೋಟಿಯ ಪೇಟೆಯಲ್ಲಿ ಸೋತವು. ಉತ್ಪಾದನೆಯಾದ

ಹಳೆಯ ವಿನ್ಯಾಸದ ಸರಕುಗಳು ಸರಾಗವಾಗಿ ಮಾರಾಟವಾಗಲಿಲ್ಲ. ಇಡೀ ಭಾರತೀಯ ಹತ್ತಿ ಜವಳಿ ಉದ್ಯಮವು ತತ್ತರಿಸಿತು. ಹಲವಾರು ಗಿರಣಿಗಳು ಮುಚ್ಚಿಹೋದುವು. ಲಕ್ಷಾಂತರ ಜವಳಿಗಿರಣಿ ಕಾರ್ಮಿಕರು ಉದ್ಯೋಗ ಕಳೆದುಕೊಂಡರು. ಭಾರತ ಸರ್ಕಾರವು ರೋಗಗ್ರಸ್ತ ಗಿರಣಿಗಳನ್ನು ಸಮರ್ಥವಾಗಿ ನಿರ್ವಹಿಸುವ ಉದ್ದೇಶದಿಂದ ರಾಷ್ಟ್ರೀಯ ಜವಳಿ ನಿಗಮ ಅಥವಾ ನ್ಯಾಷನಲ್ ಟೆಕ್ಸ್‌ಟೈಲ್ ಕಾರ್ಪೋರೇಷನ್ ಎಂಬ ಸರ್ಕಾರಿ ಉದ್ಯಮ ಸಂಸ್ಥೆಯನ್ನು ಸ್ಥಾಪಿಸಿತು. ಅದು ಹಲವಾರು ಜವಳಿಗಿರಣಿಗಳನ್ನು ನಿರ್ವಹಿಸಲು ಆರಂಭಿಸಿತಾದರೂ, ಆಧುನೀಕರಣಕ್ಕೆ ಅಗತ್ಯವಾಗಿದ್ದ ಭಾರಿ ಪ್ರಮಾಣದ ಬಂಡವಾಳವು ಹರಿದು ಬರಲಿಲ್ಲ. ಹೀಗಾಗಿ ೭೦ ರ ದಶಕದಲ್ಲಿ ಭಾರಿ ಸಂಖ್ಯೆಯ ಜವಳಿಗಿರಣಿಗಳು ಮುಚ್ಚಿಹೋದವು.

ಈ ಬೆಳವಣಿಗೆಗಳ ಪರಿಣಾಮವಾಗಿ ಕರ್ನಾಟಕದ ಬಹುಪಾಲು ಜವಳಿ ಗಿರಣಿಗಳು ಮುಚ್ಚಿದುವು. ಅವುಗಳ ಕಾರ್ಮಿಕರು ನಿರ್ಗತಿಕರಾದರು. ಬೆಂಗಳೂರಿನ ಪ್ರಪ್ರಥಮ ಆಧುನಿಕ ಉದ್ಯಮವಾದ ರಾಜಾಮಿಲ್, ಗುಲ್ಬರ್ಗದ ಎಂ. ಎಸ್. ಕೆ. ಮಿಲ್, ಮೈಸೂರಿನ ಕೃಷ್ಣ ರಾಜೇಂದ್ರ ಮಿಲ್, ನಂಜನಗೂಡಿನ ಸುಜಾತಾ ಮಿಲ್ ಇವೆಲ್ಲ ಮುಚ್ಚಿಹೋದವು. ಕರ್ನಾಟಕದ ಮ್ಯಾಂಚೆಸ್ಟರ್ ಎಂದು ಪ್ರಖ್ಯಾತವಾಗಿದ್ದ ದಾವಣಗೆರೆಯ ಜವಳಿ ಗಿರಣಿಗಳು, ಹುಬ್ಬಳ್ಳಿಯ ಮಹಾದೇವ ಮಿಲ್ ಎಲ್ಲ ಕುಸಿದುವು. ಇವುಗಳಲ್ಲಿ ಕೆಲವನ್ನು ರಾಷ್ಟ್ರೀಯ ಜವಳಿ ನಿಗಮವು ಕೆಲಕಾಲ ನಿರ್ವಹಿಸಿ ಕೈಬಿಟ್ಟಿತು. ಹಿಂದೊಮ್ಮೆ ಹತ್ತು ಸಾವಿರದಷ್ಟು ಕಾರ್ಮಿಕರಿಗೆ ಉದ್ಯೋಗ ನೀಡಿದ್ದ ಪ್ರಸಿದ್ಧ ಬಿನ್ನಿಮಿಲ್ ಈಗ ಕೇವಲ ನಾಲ್ಕು ನೂರು, ಐನೂರು ಕಾರ್ಮಿಕರನ್ನು ಇಟ್ಟುಕೊಂಡು ಕುಟುಕು ಜೀವ ಹಿಡಿದುಕೊಂಡಿದೆ. ಅಷ್ಟಿಷ್ಟಾದರೂ ಕಾರ್ಯ ನಿರ್ವಹಿಸುತ್ತಿರುವ ಗಿರಣಿಗಳೆಂದರೆ ರಾಷ್ಟ್ರೀಯ ಜವಳಿ ನಿಗಮದ ನಿರ್ವಹಣೆಯಲ್ಲಿರುವ ಮಿನರ್ವ ಮಿಲ್ ಮತ್ತು ಕೆಲವು ಸಣ್ಣ ಪುಟ್ಟ ಗಿರಣಿಗಳು.

ಇದು ಜವಳಿ ಉದ್ಯಮಕ್ಕೆ ಮಾತ್ರವೇ ಒದಗಿದ ದುರ್ಗತಿಯಲ್ಲ. ಕೋಲಾರ ಚಿನ್ನದ ಗಣಿಗಳಲ್ಲಿ ಸುಲಭವಾಗಿ ತೆಗೆದು, ಲಾಭಕರವಾಗಿ ಚಿನ್ನ ಪಡೆಯಬಲ್ಲ ಚಿನ್ನದ ಅದುರುಗಳ ನಿಕ್ಷೇಪ ಬಹುಮಟ್ಟಿಗೆ ಬರಿದಾಗಿದೆ. ಈಗ ದೊರೆಯುವ ಅದುರುಗಳನ್ನು ತೆಗೆದು, ಸಂಸ್ಕರಿಸಲು ತಗಲುವ ವೆಚ್ಚವು, ದೊರೆಯುವ ಚಿನ್ನದ ಮಾರಾಟ ಬೆಲೆಗಿಂತಲೂ ಹೆಚ್ಚು ಎಂದು ಹೇಳಿ ಬಹುಪಾಲು ಗಣಿಗಳನ್ನು ಮುಚ್ಚಲಾಗಿದೆ. ಒಂದು ಗಣಿಯು ಮಾತ್ರ ಅಷ್ಟಿಷ್ಟು ಕಾರ್ಯ ನಿರ್ವಹಿಸುತ್ತಿದೆ. ಚಿನ್ನದ ಗಣಿಗಳ ಕಾರ್ಮಿಕರ ಪಾಡೂ ಸಹ ಜವಳಿ ಕಾರ್ಮಿಕರದರಂತೆಯೇ ಆಗಿದೆ. ೧೯೭೦ರ ದಶಕದಲ್ಲಿ ಆರಂಭವಾದ ಈ ಪ್ರವೃತ್ತಿಯು ಈಚಿನ ವರ್ಷಗಳಲ್ಲಿ ಹಲವಾರು ಉದ್ಯಮಗಳಲ್ಲಿ ಮರುಕಳಿಸಿದೆ. ಆದರೆ ಅದಕ್ಕೆ ಕಾರಣಗಳು ಮಾತ್ರ ಬೇರೆ. ಜಾಗತೀಕರಣ ಮುಂತಾದ ಸರ್ಕಾರದ ಈಚಿನ ನೀತಿಗಳು ಇದಕ್ಕೆ ಕಾರಣ ಎಂದು ಹೇಳಲಾಗುತ್ತಿರುವುದರಿಂದ ಆ ನೀತಿಗಳನ್ನು ಕುರಿತು ಪ್ರಸ್ತಾಪಿಸುವಾಗ ಆ ವಿಚಾರವನ್ನು ಪರಿಶೀಲಿಸೋಣ.

### ಕೇಂದ್ರೀಯ ಕಾರ್ಮಿಕ ಸಂಘಟನೆಗಳು

ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಕಾರ್ಮಿಕರ ಆರ್ಥಿಕ ಸ್ಥಿತಿಗತಿಗಳು ಬಹಳ ಇಕ್ಕಟ್ಟಿಗೆ ಸಿಲುಕಿದುವು. ಆಗ ಹಲವಾರು ನಗರಗಳಲ್ಲಿ ಕಾರ್ಮಿಕ ಸಂಘಗಳು ರೂಪುಗೊಂಡು, ಅವುಗಳ ಕೇಂದ್ರೀಯ ಸಂಘಟನೆಯೊಂದರ ಅಗತ್ಯವು ಕಂಡುಬಂದಿತು. ಕಾರ್ಮಿಕರು ಎದುರಿಸುವ ಸಮಸ್ಯೆಗಳು ಯಾವುದೇ ಒಂದು ನಿರ್ದಿಷ್ಟ ಕಾರ್ಖಾನೆ ಅಥವಾ ಉದ್ಯಮಕ್ಕೆ ಸೀಮಿತವಾದುವಲ್ಲ, ಅವುಗಳಲ್ಲಿ ಕೆಲವು ಒಂದೇ ಉದ್ಯಮದಲ್ಲಿ ತೊಡಗಿರುವ ಹಲವಾರು ಕಾರ್ಖಾನೆಗಳ ಕಾರ್ಮಿಕರಿಗೆ ಸಂಬಂಧಪಟ್ಟಂತಹವಾದರೆ, ಬಹುಪಾಲಿನವು ಎಲ್ಲ ಕಾರ್ಮಿಕರಿಗೂ ಸಮಾನವಾದಂತಹವು ಎಂಬ ಅರಿವು ಕಾರ್ಮಿಕರಲ್ಲಿಯೂ, ಅವರ ಮುಂದಾಳುಗಳಲ್ಲಿಯೂ ಮೂಡಿದುವು. ಇದರ ಪರಿಣಾವಾಗಿ ಭಾರತದ ಮೊಟ್ಟ ಮೊದಲನೆಯ ಕೇಂದ್ರೀಯ ಕಾರ್ಮಿಕ ಸಂಘಟನೆಯಾದ ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಎ.ಐ.ಟಿ.ಯು.ಸಿ.) ೧೯೨೦ರಲ್ಲಿ ಅಸ್ತಿತ್ವಕ್ಕೆ ಬಂತು. ಮೊದಲಿನಿಂದಲೂ ರಾಜಕೀಯ ಪ್ರಭಾವಗಳು ಕಾರ್ಮಿಕ ಸಂಘಗಳಲ್ಲಿ ಭಿನ್ನಾಭಿಪ್ರಾಯಗಳು ಮೂಡಲು ಕಾರಣವಾಗಿವೆ. ಇಂದು ಸುಮಾರು ಹತ್ತು ಹನ್ನೆರಡು ಕೇಂದ್ರೀಯ ಕಾರ್ಮಿಕ ಸಂಘಟನೆಗಳು ಅಸ್ತಿತ್ವದಲ್ಲಿವೆ.

ಅಂತಹ ಎಂಟು ಕೇಂದ್ರೀಯ ಕಾರ್ಮಿಕ ಸಂಘಟನೆಗಳು ಕರ್ನಾಟಕದಲ್ಲಿ ಕಾರ್ಯನಿರತವಾಗಿವೆ. ಒಂದು ಸಂಘಟನೆಯು ಕರ್ನಾಟಕದಲ್ಲಿ ಜನ್ಮ ಪಡೆದು ಅಖಿಲ ಭಾರತ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿದೆ. ಈ ಒಂಬತ್ತು ಸಂಘಟನೆಗಳ ಬಗ್ಗೆ ಕೆಲವು ಮುಖ್ಯ ಮಾಹಿತಿಗಳನ್ನು ಈ ಕೆಳಗೆ ನೀಡಿದ್ದೇವೆ. ಈ ಮಾಹಿತಿಗಳ ಆಯಾ ಕಾರ್ಮಿಕ ಸಂಘಟನೆಗಳೇ ಒದಗಿಸಿದಂತಹವು. ಸ್ಥಳ ಮಿತಿಯಿಂದ ಹೆಚ್ಚು ಮಾಹಿತಿಗಳನ್ನು ನೀಡುವುದು ಸಾಧ್ಯವಾಗುತ್ತಿಲ್ಲ.

೧. ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಎ.ಐ.ಟಿ.ಯು.ಸಿ.) ಕರ್ನಾಟಕ ರಾಜ್ಯ ಸಮಿತಿ ಸ್ಥಾಪನೆ - ೧೯೨೬ ಅಧ್ಯಕ್ಷರು - ಎಂ. ಸಿ. ನರಸಿಂಹನ್, ಪ್ರಧಾನ ಕಾರ್ಯದರ್ಶಿ - ಎಚ್. ವಿ. ಅನಂತಸುಬ್ಬರಾವ್, ಸೇರ್ಪಡೆಯಾಗಿರುವ ಸಂಘಗಳು : ೧೪೦, ಸದಸ್ಯತ್ವ : ೧,೨೫,೦೦೦ (ಸುಮಾರು), ಪ್ರಭಾವವಿರುವ ಊರುಗಳು : ಬೆಂಗಳೂರು ನಗರ, ಮೈಸೂರು, ದಾವಣಗೆರೆ, ಹರಿಹರ, ಚಿತ್ರದುರ್ಗ, ಗುಲ್ಬರ್ಗ. ಮಂಗಳೂರು.

ಸೇರ್ಪಡೆಯಾಗಿರುವ ಕೆಲವು ಸಂಘಗಳು : ರಾಜ್ಯ ಸಾರಿಗೆ ನೌಕರರ ಸಂಘ, ಅಂಗನವಾಡಿ ಕಾರ್ಯಕರ್ತೆಯರ ಸಂಘ, ಪ್ಲಾಂಟೇಷನ್ ಕಾರ್ಮಿಕರ ಸಂಘ ಮುಂತಾದವು.

೨. ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಐ. ಎನ್. ಟಿ.ಯು.ಸಿ. ಅಥವಾ ಇಂಟಕ್) ಕರ್ನಾಟಕ ಪ್ರದೇಶ ಸ್ಥಾಪನೆ - ೧೯೪೭.

ಅಧ್ಯಕ್ಷರು : ಎನ್. ಎಂ. ಅಡ್ಯಂತಾಯ : ಪ್ರಧಾನ ಕಾರ್ಯದರ್ಶಿ; ಪಿ. ಆರ್. ಚಂದ್ರಶೇಖರ್; ಸೇರ್ಪಡೆಯಾಗಿರುವ ಸಂಘಗಳು - ೩೦೦ (ಸು).

ಸದಸ್ಯತ್ವ - ೩ ಲಕ್ಷ (ಸುಮಾರು). ಪ್ರಭಾವವಿರುವ ಊರುಗಳು: ಮಂಗಳೂರು, ಬೆಂಗಳೂರು, ಮಂಡ್ಯ, ಮೈಸೂರು. ಸೇರ್ಪಡೆಯಾಗಿರುವ ಕೆಲವು ಸಂಘಗಳು :ರಾಜ್ಯ ಸಾರಿಗೆ ಸಂಸ್ಥೆ, ಎಚ್. ಎಂ. ಟಿ., ಮಂಗಳೂರು ರಸಗೊಬ್ಬರ, ಮಂಗಳೂರು ಬಂದರು ಇತ್ಯಾದಿ

೩. ಹಿಂದ್ ಮಜ್ದೂರ್ ಸಭಾ (ಎಚ್. ಎಂ. ಎಸ್.) ಕರ್ನಾಟಕ ಘಟಕ : ಸ್ಥಾಪನೆ : ೧೯೪೮ ; ಅಧ್ಯಕ್ಷರು: ಶ್ರೀ ಲೋಕಯ್ಯ ಶೆಟ್ಟಿ, ಪ್ರಧಾನ ಕಾರ್ಯದರ್ಶಿ: ವಿ. ಟಿ. ನರಸಿಂಹನ್, ಸೇರ್ಪಡೆಯಾಗಿರುವ ಸಂಘಗಳು: ೩೦, ಸದಸ್ಯತ್ವ : ೬೫,೦೦೦; ಮುಖ್ಯ ಕೇಂದ್ರಗಳು: ಬೆಂಗಳೂರು, ಕುದುರೆಮುಖ, ಸೇರ್ಪಡೆಯಾಗಿರುವ ಕೆಲವು ಸಂಘಗಳು: ಕುದುರೆಮುಖ ಕಬ್ಬಿಣ ಗಣಿ ಕಾರ್ಮಿಕ ಸಂಘ, ಬೆಂಗಳೂರು ಆಟೋ ಚಾಲಕರ ಸಂಘ, ಮಾಡರ್ನ್ ಫುಡ್ಸ್ ಇತ್ಯಾದಿ.

೪. ಭಾರತೀಯ ಮಜ್ದೂರ್ ಸಂಘ (ಬಿ. ಎಂ. ಎಸ್.) ಕರ್ನಾಟಕ ಸ್ಥಾಪನೆ: ೧೯೫೪, ಅಧ್ಯಕ್ಷರು : ಆಲಂಪಲ್ಲಿ ವೆಂಕಟರಾಮ್, ಪ್ರಧಾನ ಕಾರ್ಯದರ್ಶಿ: ಆರ್. ಶೇಷಾದ್ರಿ; ಸೇರ್ಪಡೆಯಾಗಿರುವ ಸಂಘಗಳು: ೧೦೫. ಸದಸ್ಯತ್ವ: ೧ ಲಕ್ಷ, ಪ್ರಭಾವವಿರುವ ಊರುಗಳು: ಬೆಂಗಳೂರು, ಮಂಗಳೂರು. ಸೇರ್ಪಡೆಯಾಗಿರುವ ಕೆಲವು ಸಂಘಗಳು :ಬೆಂಗಳೂರು ಮಜ್ದೂರ್ ಸಂಘ, ಸಿನೆಮಾ ಕಾರ್ಮಿಕರ ಸಂಘ, ಹೋಟೆಲ್ ಕಾರ್ಮಿಕರ ಸಂಘ ಮುಂತಾದುವು.

೫. ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ಸ್ (ಸಿಐಟಿಯು ಅಥವಾ ಸಿಟು)- ಕರ್ನಾಟಕ ರಾಜ್ಯ ಸಮಿತಿ ಸ್ಥಾಪನೆ : ೧೯೭೦, ಅಧ್ಯಕ್ಷರು: ಬಿ. ಮಾಧವ (ತಾತ್ಕಾಲಿಕ), ಪ್ರಧಾನ ಕಾರ್ಯದರ್ಶಿ: ವಿ. ಜೆ. ಕೆ. ನಾಯರ್, ಸೇರ್ಪಡೆಯಾಗಿರುವ ಸಂಘಗಳು: ೧೪೩, ಸದಸ್ಯತ್ವ: ೯೦,೦೦೦, ಪ್ರಭಾವವಿರುವ ಊರುಗಳು: ಬೆಂಗಳೂರು, ಉತ್ತರ ಕರ್ನಾಟಕ, ಮಂಗಳೂರು. ಸೇರ್ಪಡೆಯಾಗಿರುವ ಕೆಲವು ಸಂಘಗಳು: ಮೈಕೋ ಕಾರ್ಮಿಕ ಸಂಘ, ವಿಕ್ರಾಂತ್ ಟೈರ್ಸ್ ಕಾರ್ಮಿಕ ಸಂಘ, ಮೈಸೂರು, ಇಂಡಿಯನ್ ಟೊಬ್ಯಾಕೋ ಕಂಪನಿ ಕಾರ್ಮಿಕ ಸಂಘ (ಸಿಗರೇಟ್ ಕಾರ್ಖಾನೆ) ಮಲೆನಾಡು ಪ್ಲಾಂಟೇಷನ್ ಕಾರ್ಮಿಕ ಸಂಘ, ಬಿ.ಇ.ಎಲ್. ಕಾರ್ಮಿಕ ಸಂಘ ಇತ್ಯಾದಿ.

೬. ಯುನೈಟೆಡ್ ಟ್ರೇಡ್ ಯೂನಿಯನ್ ಸೆಂಟರ್ (ಲೆನಿನ್ ಸರಣಿ)

ಯುಟಿಯುಸಿ (ಎಲ್. ಎಸ್.) ಕರ್ನಾಟಕ ಸ್ಥಾಪನೆ : ೧೯೫೦

ಅಧ್ಯಕ್ಷರು : ಡಾ. ಕೆ. ರಾಧಾಕೃಷ್ಣ, ಪ್ರಧಾನ ಕಾರ್ಯದರ್ಶಿ : ಕೆ. ಸೋಮಶೇಖರ್, ಸೇರ್ಪಡೆಯಾಗಿರುವ ಸಂಘಗಳು: ೩೦, ಸದಸ್ಯತ್ವ: ೧೦,೦೦೦, ಪ್ರಭಾವವಿರುವ ಊರುಗಳು: ಬೆಂಗಳೂರು, ಬಳ್ಳಾರಿ, ರಾಯಚೂರು. ಸೇರ್ಪಡೆಯಾಗಿರುವ ಕೆಲವು ಸಂಘಗಳು: ಕಾಂಟ್ರಾಕ್ಟ್ ಗಣಿ ಕಾರ್ಮಿಕರ ಸಂಘ (ಬಳ್ಳಾರಿ, ಸಂಡೂರು), ಹಮಾಲಿಗಳ ಸಂಘ (ಎ.ಪಿ. ಎಂ.ಸಿ.), ಅಸಂಘಟಿತವಾದ ನೀರಾವರಿ ಕಾರ್ಮಿಕರ, ಬೀದಿ ಮಾರಾಟಗಾರರ ಸಂಘಗಳು.

೭. ಹಿಂದ್ ಮಜ್ದೂರ್ ಕಿಸಾನ್ ಪಂಚಾಯತ್ (ಹೆಚ್. ಎಂ. ಕೆ. ಪಿ.) ಸ್ಥಾಪನೆ: ೧೯೮೩, ಅಧ್ಯಕ್ಷರು : ಮೈಕೇಲ್ ಫರ್ನಾಂಡಿಸ್, ಪ್ರಧಾನ ಕಾರ್ಯದರ್ಶಿ : ಬಿ. ಆರ್. ಎ. ರಾಜನ್, ಸೇರ್ಪಡೆಯಾಗಿರುವ ಸಂಘಗಳು: ೭, ಸದಸ್ಯತ್ವ : ೨೦,೦೦೦.

ಪ್ರಭಾವವಿರುವ ಊರುಗಳು : ಬೆಂಗಳೂರು, ರಾಯಚೂರು.

ಸೇರ್ಪಡೆಯಾಗಿರುವ ಕೆಲವು ಸಂಘಗಳು : ಕರ್ನಾಟಕ ಪವರ್ ಕಾರ್ಪೊರೇಷನ್ ಕಾರ್ಮಿಕರ ಸಂಘ, ಆಸ್ಪತ್ರೆ ನೌಕರರ ಸಂಘ, ರೇಸ್ ಕೋರ್ಸ್ ಕಾರ್ಮಿಕರ ಸಂಘ, ಜಾನ್ ಫೋರ್ಟ್ಸ್, ಸ್ಟಂಪ್ ಷೂಲೆ ಸೋಮಪ್ಪ ಮುಂತಾದ ಇಂಜನಿಯರಿಂಗ್ ಕಂಪನಿಗಳ ಕಾರ್ಮಿಕ ಸಂಘಗಳು, ಈ ಸಂಘಟನೆಯು ಕೃಷಿ ಕಾರ್ಮಿಕರ ಸಂಘಟನೆಗೆ ಕೆಲವೆಡೆಗಳಲ್ಲಿ ವಿಶೇಷ ಗಮನ ಹರಿಸುತ್ತಿದೆ.

೮. ಕರ್ನಾಟಕ ಟ್ರೇಡ್ ಯೂನಿಯನ್ ಸೆಂಟರ್ ( ಕೆ. ಟಿ. ಯು. ಸಿ.)- ಸ್ಥಾಪನೆ :೧೯೮೫, ಅಧ್ಯಕ್ಷರು : ಶ್ರೀ ಜಿ. ಆರ್. ಶಿವಶಂಕರ್, ಪ್ರಧಾನ ಕಾರ್ಯದರ್ಶಿ : ಕೆ. ಮೋಹನ್, ಸೇರ್ಪಡೆಯಾಗಿರುವ ಸಂಘಗಳು : ೭೯, ಸದಸ್ಯತ್ವ : ೫೩.೦೦೦.

ಪ್ರಭಾವವಿರುವ ಊರುಗಳು : ಬೆಂಗಳೂರು, ರಾಜ್ಯಾದ್ಯಂತ ಅಂಗನವಾಡಿ ಕಾರ್ಯಕರ್ತರಲ್ಲಿ ಸೇರ್ಪಡೆಯಾಗಿರುವ ಕೆಲವು ಸಂಘಗಳು : ಕರ್ನಾಟಕ ರಾಜ್ಯ ಅಂಗನವಾಡಿ ಕಾರ್ಯಕರ್ತರ ಒಕ್ಕೂಟ, ಎನ್. ಜಿ. ಇ. ಎಫ್., ಬಿ. ಎಚ್. ಇ. ಎಲ್. ಮೈಕೋ ಮುಂತಾದ ಹಲವಾರು ಬೃಹತ್ ಉದ್ಯಮಗಳಲ್ಲಿನ ಕಾಂಟ್ರಾಕ್ಟ್ ಕಾರ್ಮಿಕರ ಸಂಘಗಳು, ಬೃಹತ್ ಹೋಟೆಲುಗಳ ಕಾರ್ಮಿಕರ ಸಂಘಗಳು.

ಅಖಿಲ ಭಾರತ ಟ್ರೇಡ್ ಯೂನಿಯನ್ ಕೋ-ಆರ್ಡಿನೇಷನ್ ಸೆಂಟರ್‌ಗೆ ಸೇರ್ಪಡೆಯಾಗಿದೆ.

೯. ಪ್ರೊಫೆಷನಲ್ ವರ್ಕರ್ಸ್ ಟ್ರೇಡ್ ಯೂನಿಯನ್ ಸೆಂಟರ್ ಆಫ್ ಇಂಡಿಯಾ (ಪಿ.ಡಬ್ಲ್ಯು.ಟಿ.ಯು.ಸಿ.) ಸ್ಥಾಪನೆ - ೧೯೯೨

ಅಧ್ಯಕ್ಷರು : ಎ. ಕೆ. ಬ್ರಹ್ಮಚಾರಿ, ಪ್ರಧಾನ ಕಾರ್ಯದರ್ಶಿ : ಆರ್. ಎನ್. ಗೋಡಬೋಲೆ, ಸೇರ್ಪಡೆಯಾಗಿರುವ ಸಂಘಗಳು ೧೨೦, ಸದಸ್ಯತ್ವ : ೫ಲಕ್ಷ, ಉದ್ಯಮಗಳಲ್ಲಿಯೂ, ಬ್ಯಾಂಕುಗಳಲ್ಲಿಯೂ, ಇನ್ನಿತರ ಸಂಸ್ಥೆಗಳಲ್ಲಿಯೂ ಮೇಲುದರ್ಜೆಯ ನಿರ್ವಾಹಕ ಹಂತದ ಅಂದರೆ ಮ್ಯಾನೆಜೀರಿಯಲ್ ಅಧಿಕಾರಿಗಳು, ಮೇಲ್ವಿಚಾರಕರು ಮುಂತಾದವರ ಹಕ್ಕುಗಳು ಹಾಗೂ ಹಿತಾಸಕ್ತಿಗಳನ್ನು ಕಾಪಾಡುವ ಸಲುವಾಗಿ ಸ್ಥಾಪನೆಯಾಗಿರುವ ಸಂಘ ಇದು. ಬೆಂಗಳೂರು ಕೇಂದ್ರವಾಗಿರುವುದರ ಪ್ರಭಾವ ಭಾರತದ ಎಲ್ಲ ಬೃಹತ್ ನಗರಗಳಲ್ಲೂ ಹರಡಿದೆ.

ಮೇಲೆ ನಮೂದಿಸಿದ ಕೇಂದ್ರೀಯ ಸಂಘಟನೆಗಳಲ್ಲದೆ, ರೈಲ್ವೆ, ಅಂಚೆ ಸೇವೆ, ಟೆಲಿಗ್ರಾಫ್, ಟೆಲಿಫೋನ್ ಮುಂತಾದ ಅಖಿಲ ಭಾರತ ವ್ಯಾಪ್ತಿಯ ಸೇವೆಗಳ ನೌಕರರ ಅಖಿಲ ಭಾರತ ಸಂಘಟನೆಗಳ ಕರ್ನಾಟಕ ರಾಜ್ಯ ಶಾಖೆಗಳು ಸಹ ಕ್ರಮಬದ್ಧವಾಗಿ ಕೆಲಸ ಮಾಡುತ್ತಿವೆ. ಬ್ಯಾಂಕು, ವಿಮೆ ಮುಂತಾದ ಹಣಕಾಸು ವ್ಯವಹಾರ ಸಂಸ್ಥೆಗಳ ನೌಕರರು ಸಹ ಇಂತಹ ಅಖಿಲ ಭಾರತ ಸಂಘಟನೆಗಳ ಕರ್ನಾಟಕ ಶಾಖೆಗಳನ್ನು ಪಡೆದಿದ್ದಾರೆ. ಸಕ್ಕರೆ, ಸಿಮೆಂಟ್, ಬೀಡಿ ಮುಂತಾದ ಉದ್ಯಮಗಳ ಕಾರ್ಮಿಕರ ಅಖಿಲ ಭಾರತ ಒಕ್ಕೂಟಗಳೂ ಇವೆ. ಹೀಗೆ ಒಂದು ಉದ್ಯಮದ ಕಾರ್ಮಿಕರು ಹಲವಾರು ರೀತಿಗಳಲ್ಲಿ ಅಖಿಲ ಭಾರತ ಸಂಘಟನೆಗಳಿಗೆ, ತಂತಮ್ಮ ಉದ್ಯಮದ ಕಾರ್ಮಿಕರ ಒಕ್ಕೂಟಗಳಿಗೆ ಸೇರ್ಪಡೆಯಾಗಿರುವುದುಂಟು. ಇನ್ನು ಕೆಲವು ಉದ್ಯಮಗಳಲ್ಲಿ ಹಾಗೂ ಕಾರ್ಖಾನೆಗಳಲ್ಲಿ ಕಾರ್ಮಿಕರು ಯಾವುದೇ ಒಂದು ಕೇಂದ್ರೀಯ ಕಾರ್ಮಿಕ ಸಂಘಟನೆಗೆ ತಮ್ಮ ಸಂಘವು ಸೇರ್ಪಡೆಗೊಂಡರೂ ಕೂಡ ತಮ್ಮ ತಮ್ಮಲ್ಲಿಯೇ ರಾಜಕೀಯ ಭಿನ್ನಾಭಿಪ್ರಾಯಗಳು ಹುಟ್ಟಿ ಅದರಿಂದ ನಮ್ಮ ಉದ್ಯಮ ಅಥವಾ ಕಾರ್ಖಾನೆಯಲ್ಲಿಯೇ ಘರ್ಷಣೆಗಳಾಗಿ, ಪ್ರತಿಸ್ಪರ್ಧಿ ಸಂಘಗಳು ಹುಟ್ಟುತ್ತವೆ ಎಂದು ಅರಿತು ತಮ್ಮ ಸಂಘವನ್ನು ಯಾವ ಕೇಂದ್ರೀಯ ಸಂಘಟನೆಗೂ ಸೇರ್ಪಡೆ ಮಾಡಿಸದೇ ಸ್ವತಂತ್ರವಾಗಿ ಉಳಿಸಿಕೊಂಡಿದ್ದಾರೆ. ಬೆಂಗಳೂರಿನ ವಿಮಾನ ಕಾರ್ಖಾನೆ, ಟೆಲಿಫೋನ್ ಕಾರ್ಖಾನೆ ಮುಂತಾದವುಗಳ ಕಾರ್ಮಿಕ ಸಂಘಗಳು ಇಂತಹವು. ಆ ಸಂಘಗಳ ಅಧಿಕಾರ ಸ್ಥಾನಗಳಲ್ಲಿ ಎಲ್ಲ ರಾಜಕೀಯ ಅಭಿಪ್ರಾಯಗಳವರೂ ಇರುತ್ತಾರೆ.

## ಕೆಲವು ಕಾರ್ಮಿಕ ಮುಖಂಡರು ಮತ್ತು ಅವರ ಸಾಧನೆ

ಹಿಂದಿನ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಯಲ್ಲಿ ಒಂದೆರಡು ಸ್ಥಾನಗಳು ಕಾರ್ಮಿಕರಿಗೆ ಮೀಸಲಾಗಿದ್ದು ಸ್ವತಃ ಕಾರ್ಮಿಕರಾಗಿದ್ದ ಚಂಗಲಾರಾಧ್ಯ, ರಾಮದಾಸ್ ಮುಂತಾದವರು ಆ ಸ್ಥಾನಗಳಿಗೆ ಆಯ್ಕೆಯಾಗಿದ್ದುದನ್ನು ಹಿಂದೆ ಪ್ರಸ್ತಾಪಿಸಲಾಗಿದೆ. ಏಕೀಕರಣದ ನಂತರವೂ ಸಹ ಕಾರ್ಮಿಕ ಮುಖಂಡರು ರಾಜಕೀಯ ಕ್ಷೇತ್ರದಲ್ಲಿ ಬೆಳಗಿದ್ದಾರೆ. ಅಂತಹ ಕೆಲವರನ್ನು ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಹೇಳಬೇಕಾದುದು ಅಗತ್ಯ.

ಸ್ವತಃ ಕಾರ್ಮಿಕರಾಗಿದ್ದ ಎಸ್. ಶ್ರೀರಾಮುಲು ಅವರು ವಿಧಾನಸಭಾ ಸದಸ್ಯರಾಗಿ, ದೇವರಾಜ ಅರಸ್ ಅವರ ಮಂತ್ರಿ ಮಂಡಲದಲ್ಲಿ ಸೇವೆ ಸಲ್ಲಿಸಿದವರು. ಹೋಟೆಲ್ ತಿಂಡಿಗಳ ಬೆಲೆ ನಿಯಂತ್ರಿಸುವ ಪ್ರಯತ್ನ ಮಾಡಿ ಇವರು ರಾಜೀನಾಮೆ ಕೊಟ್ಟರು. ಈ ಹಿರಿಯ ಮುಖಂಡರು ಇಂದೂ ನಮ್ಮೊಂದಿಗಿದ್ದಾರೆ. ಇವರು ರಾಜಾಮಿಲ್ ಕಾರ್ಮಿಕರಾಗಿದ್ದರು. ಇವರು ಕಾಂಗ್ರೆಸ್ ಪಕ್ಷದವರು.

ಮಿನರ್ವಾ ಮಿಲ್‌ನಲ್ಲಿ ಕಾರ್ಮಿಕರಾಗಿದ್ದ ಜೆ. ಲಿಂಗಯ್ಯನವರು ಬೆಂಗಳೂರು ಮಹಾನಗರ ಪಾಲಿಕೆಯ ಸದಸ್ಯರಾಗಿ ಚುನಾಯಿತರಾಗಿ, ನಗರದ ಮೇಯರ್ ಆಗಿದ್ದವರು. ಅವರೂ ನಮ್ಮೊಂದಿಗಿದ್ದಾರೆ. ಇವರೂ ಸಹ ಕಾಂಗ್ರೆಸ್ ಪಕ್ಷದವರು .

ಈಚೆಗೆ ದಾವಣಗೆರೆಯಲ್ಲಿ ಕಾಲವಶರಾದ ಪಂಪಾಪತಿ ಕೆಲವು ದೃಷ್ಟಿಗಳಲ್ಲಿ ವಿಶಿಷ್ಟರಾದವರು. ೧೯೪೪ರಲ್ಲಿ ಬಾಲ ಕಾರ್ಮಿಕರಾಗಿ ದಾವಣಗೆರೆ ಕಾಟನ್ ಮಿಲ್‌ಗೆ ಸೇರಿದ ಇವರು ೧೯೬೦ರ ದಶಕದಲ್ಲಿ ಒಂದು ಕೊಲೆ ಆಪಾದನೆಗೆ ಗುರಿಯಾಗಿ ಕೆಲಕಾಲ ಸೆರೆಮನೆಯಲ್ಲಿದ್ದರು. ೧೯೭೦ರಲ್ಲಿ ದಾವಣಗೆರೆ ನಗರಸಭೆಗೆ ಆಯ್ಕೆಯಾಗಿ ೧೯೭೪ರಿಂದ ೭೮ರ ವರೆಗೆ ನಗರಸಭೆಯ ಅಧ್ಯಕ್ಷರಾಗಿದ್ದರು. ಆಗ ನಗರದ ರಸ್ತೆಗಳ ಬದಿಗಳಲ್ಲಿ ೧೬,೦೦೦ ಮರಗಳನ್ನು ಬೆಳೆಸಿ ಆ ನಗರವನ್ನು ಹಸಿರಾಗಿಸಿದ ಖ್ಯಾತಿಗೆ ಪಾತ್ರರಾದರು. ೧೯೭೮ರಿಂದ ೧೯೮೯ ರವರೆಗೆ ಮೂರು ಬಾರಿ ರಾಜ್ಯ ವಿಧಾನಸಭೆಗೆ ಆರಿಸಿ ಬಂದು ಅದರಲ್ಲಿ ಕಾರ್ಮಿಕರ ಧ್ವನಿಯಾಗಿದ್ದರು. ಈಚೆಗೆ ೩೧.೭.೨೦೦೨ರಂದು ಇವರು ನಿಧನರಾದರು. ಪ್ರತಿಭಾವಂತನಾದ ಬಡಕಾರ್ಮಿಕನೂ ಸಹ ಪ್ರಜಾಪ್ರಭುತ್ವವಾದಿ ಸ್ವತಂತ್ರ ಭಾರತದಲ್ಲಿ ಏನನ್ನು ಸಾಧಿಸಬಹುದು ಎಂಬುದಕ್ಕೆ ಪಂಪಾಪತಿ ಒಂದು ಸಾಕ್ಷಿ. ಇವರು ಭಾರತೀಯ ಕಮ್ಯುನಿಸ್ಟ್ ಪಕ್ಷಕ್ಕೆ ಸೇರಿದ್ದವರು.

ಮೇಲೆ ಪ್ರಸ್ತಾಪಿಸಿದ ನಾಯಕರು ಸ್ವತಃ ಕಾರ್ಮಿಕರಾಗಿದ್ದವರು. ಈಗ ಕಾರ್ಮಿಕ ಸಂಘಟನಾ ಕಾರ್ಯವನ್ನು ಕೈಗೊಂಡು ವಿಧಾನ ಸಭೆ ಹಾಗೂ ಸಂಸತ್ತಿಗೆ ಚುನಾಯಿತರಾದ ಕೆಲವು ಕಾರ್ಮಿಕ ಮುಖಂಡ ರಾಜಕಾರಣಿಗಳ ಪರಿಚಯ ಮಾಡಿಕೊಳ್ಳೋಣ. ಭಾರತೀಯ ಕಮ್ಯುನಿಸ್ಟ್ ಪಕ್ಷದವರಾದ ಎಂ. ಎಸ್. ಕೃಷ್ಣನ್ ಮೂರುಬಾರಿ, ರಾಜ್ಯ ವಿಧಾನಸಭೆಗೆ, ಬಿ. ವಿ. ಕಕ್ಕಿಲಾಯ ಎರಡು ಬಾರಿ ರಾಜ್ಯ ವಿಧಾನ ಸಭೆಗೆ ಹಾಗೂ ಒಮ್ಮೆ ರಾಜ್ಯಸಭೆಗೂ, ಎಂ. ಸಿ. ನರಸಿಂಹನ್ ಎರಡು ಬಾರಿ ವಿಧಾನಸಭೆಗೂ, ಚುನಾಯಿತರಾಗಿದ್ದರು. ಭಾರತೀಯ ಮಾರ್ಕ್ಸಿಸ್ಟ್ ಕಮ್ಯುನಿಸ್ಟ್ ಪಕ್ಷದ ಎಸ್. ಸೂರ್ಯನಾರಾಯಣರಾವ್ ಒಮ್ಮೆ ವಿಧಾನಸಭೆಗೆ ಚುನಾಯಿತರಾದರು. ಈ ಮುಖಂಡರು ಯಾವ ರಾಜಕೀಯ ಪಕ್ಷಕ್ಕೆ ಸೇರಿದ್ದರು ಎನ್ನುವುದಕ್ಕಿಂತಲೂ, ಇವರೆಲ್ಲರೂ ಕಾರ್ಮಿಕ ಸಂಘಟನಾ ಕಾರ್ಯದ ಮೂಲಕ ಜನಾನುರಾಗಕ್ಕೆ ಪಾತ್ರರಾಗಿ ಚುನಾಯಿತರಾದವರು ಎಂಬುದು ಮುಖ್ಯ. ಇವರುಗಳಲ್ಲಿ ಎಂ. ಎಸ್ ಕೃಷ್ಣನ್ ಮತ್ತು ಎಸ್. ಸೂರ್ಯನಾರಾಯಣರಾವ್ ಈಚೆಗೆ ಕಾಲವಶರಾದರು.

## ಕಾರ್ಮಿಕ ಸಂಘಟನೆಗಳು ಮತ್ತು ರಾಜಕೀಯ ಸೈದ್ಧಾಂತಿಕ ಒಲವುಗಳು

ಭಾರತದಲ್ಲಿ ಕಾರ್ಮಿಕ ಚಳುವಳಿಯು ಕೆಲವು ಐತಿಹಾಸಿಕ ಕಾರಣಗಳಿಂದಾಗಿ ರಾಜಕೀಯ ಪಕ್ಷಗಳೊಂದಿಗೆ ನಂಟು ಪಡೆದಿದೆ. ಎಷ್ಟೋ ಸಂದರ್ಭಗಳಲ್ಲಿ ರಾಜಕೀಯ ಪಕ್ಷಗಳಲ್ಲಿ ಒಡಕು ಉಂಟಾದಾಗ, ಅವುಗಳ ಅನುಯಾಯಿ ಕಾರ್ಮಿಕ ಸಂಘಟನೆಗಳಲ್ಲಿಯೂ ಎಲ್ಲ ಹಂತಗಳಲ್ಲೂ ಒಡಕು ಮೂಡಿದ್ದುಂಟು. ಐ. ಎನ್. ಟಿ. ಯು. ಸಿ (ಇಂಟಕ್) ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಅನುಯಾಯಿ ಸಂಘಟನೆ. ಮಹಾತ್ಮ ಗಾಂಧಿಯವರ ತತ್ತ್ವ ಸಿದ್ಧಾಂತಗಳನ್ನು ಇದು ಒಪ್ಪಿಕೊಳ್ಳುತ್ತದೆ. ಅತ್ಯಂತ ಅನಿವಾರ್ಯವಾಗದಿರುವಾಗ ಮುಷ್ಕರಕ್ಕೆ ಇದರ ಒಲವಿಲ್ಲ. ಈಚಿನ ಉದಾರೀಕರಣ ಮುಂತಾದ ನೀತಿಗಳಿಗೆ ಇದು ವಿರೋಧಿಯಲ್ಲ. ಕಾರ್ಮಿಕರ ಹಿತಕ್ಕೆ ಧಕ್ಕೆಯಾಗಬಾರದೆಂದಷ್ಟೇ ಹೇಳುತ್ತದೆ.

ಭಾರತೀಯ ಮಜ್ದೂರ್ ಸಂಘವು ಭಾರತೀಯ ಜನತಾ ಪಕ್ಷದ ಅನುಯಾಯಿ. ಇದಕ್ಕೆ ವರ್ಗಸಂಘರ್ಷ ತತ್ತ್ವದಲ್ಲಿ ನಂಬಿಕೆಯಿದ್ದಿಲ್ಲ. ಪರಸ್ಪರರ ಹಿತಗಳಿಗೆ ಧಕ್ಕೆಯಾಗದಂತೆ ಕಾರ್ಮಿಕರು ಹಾಗೂ ಮಾಲಿಕರ ನಡುವೆ ಹೊಂದಾಣಿಕೆಯ ಭಾವವಿರಬೇಕು ಎಂಬುದು ಇದರ ಸೈದ್ಧಾಂತಿಕ ನಿಲುವು.

ಎ.ಐ.ಟಿ.ಯು.ಸಿ.ಯು ಭಾರತೀಯ ಕಮ್ಯುನಿಸ್ಟ್ ಪಕ್ಷದ ಅನುಯಾಯಿಯಾದರೆ. ಸಿ. ಐ.ಟಿ.ಯು ಮಾರ್ಕ್ಸಿಸ್ಟ್ ಕಮ್ಯುನಿಸ್ಟ್ ಪಕ್ಷದ ಹಿಂಬಾಲಕ. ಇವೆರಡೂ ಸಂಘಟನೆಗಳು ವರ್ಗ ಸಂಘರ್ಷ, ಕಾರ್ಮಿಕ ವರ್ಗದ ಕ್ರಾಂತಿ, ಸಮಾಜವಾದಿ ಸಮಾಜದ ಸ್ಥಾಪನೆ, ಮುಂತಾದ ಮಾರ್ಕ್ಸೀಯ ಸಿದ್ಧಾಂತಗಳಲ್ಲಿ ವಿಶ್ವಾಸ ತಳೆದಿವೆ. ಮುಷ್ಕರಗಳ ವಿರೋಧಿಗಳಲ್ಲ. ಇವೆರಡರ ನಡುವಿನ ವ್ಯತ್ಯಾಸ ಬಹಳ ಅಲ್ಪ.

ಹಿಂದ್ ಮಜ್ದೂರ್ ಸಭಾ ಪ್ರಜಾಪ್ರಭುತ್ವ, ದೇಶ ಭಕ್ತಿಗಳಿಗೆ ಒತ್ತು ನೀಡುತ್ತದೆ. ದೇಶದ ಹಿತಾಸಕ್ತಿಗೂ, ಪ್ರಜಾಪ್ರಭುತ್ವದ ಉಳಿವಿಗೂ ಬದ್ಧವಾಗಿ ಕಾರ್ಮಿಕರನ್ನು ಒಂದುಗೂಡಿಸಿ ಅವರ ಹಿತಗಳನ್ನು ರಕ್ಷಿಸಬೇಕು ಎಂಬುದು ಇದರ ಕಾರ್ಮಿಕ ಸಂಘಟನಾ ಸಿದ್ಧಾಂತ. ಇದು ಯಾವ ರಾಜಕೀಯ ಪಕ್ಷಕ್ಕೂ ಬದ್ಧವಾಗಿಲ್ಲ. ಹಿಂದ್ ಮಜ್ದೂರ್ ಕಿಸಾನ್ ಪಂಚಾಯತ್ ಮತ್ತು ಕರ್ನಾಟಕ ಟ್ರೇಡ್

ಯೂನಿಯನ್ ಸೆಂಟರ್‌ಗಳ ಸೈದ್ಧಾಂತಿಕ ನಿಲುವು ಸಹ ಹಿಂದ್ ಮಜ್ದೂರ್ ಸಭಾದ ನಿಲುವಿಗೆ ಸಮೀಪವಾದಂತಹುದು. ಯು.ಟಿ.ಯು.ಸಿ. (ಎಲ್. ಎಸ್.) ಸೋಷಲಿಸ್ಟ್ ಯೂನಿಟಿ ಸೆಂಟರ್ ಆಫ್ ಇಂಡಿಯಾ ಎಂಬ ಪಕ್ಷದ ಅನುಯಾಯಿ. ಇದು ಸಹ ಸಮಾಜವಾದಿ ಹಾಗೂ ಮಾರ್ಕ್ಸಿಸ್ಟ್ ಸಿದ್ಧಾಂತಗಳಲ್ಲಿ ನಂಬಿಕೆ ತಳೆದಿದೆ .

ಸಿ. ಡಬ್ಲ್ಯು. ಟಿ.ಯು.ಸಿ.ಯು ಖಚಿತವಾದ ರಾಜಕೀಯ ಸೈದ್ಧಾಂತಿಕ ನಿಲುವುಗಳನ್ನು ತಳೆದಿರುವಂತೆ ಕಾಣುವುದಿಲ್ಲ. ಆಡಳಿತವರ್ಗ ಮತ್ತು ಕಾರ್ಮಿಕ ವರ್ಗಗಳ ನಡುವಣ ಘರ್ಷಣೆಯಲ್ಲಿ ಎರಡೂ ಕಡೆಗಳಿಂದ ಒತ್ತಡಕ್ಕೆ ಗುರಿಯಾಗುವ ಮತ್ತು ಖಚಿತವಾದ ಹಾಗೂ ನಿರ್ಣಾಯಕವಾದ ಅಧಿಕಾರ  ಬಲ ಇಲ್ಲದ ನಿರ್ವಾಹಕ ದರ್ಜೆಯ ಸೂಕ್ಷ್ಮ ಸ್ಥಾನಮಾನಗಳನ್ನು ಕಾಪಾಡಿ, ಅವರ ಹಿತಾಸಕ್ತಿಗಳನ್ನು ರಕ್ಷಿಸುವುದಕ್ಕೆ ಇದು ಬದ್ಧ.

ಇವಿಷ್ಟು ಸಂಘಟನೆಗಳಿಂದ ಹೊರತಾದ ಒಂದು ಚಳವಳಿಯು ಕಾರ್ಮಿಕರ ನಡುವೆ ರೂಪು ತಳೆಯುತ್ತಿದೆ. ಪರಿಶಿಷ್ಟ ಜಾತಿಗಳು ಮತ್ತು ಪಂಗಡಗಳ ಚಳವಳಿ ಅದು. 'ಕಾರ್ಮಿಕರೆಲ್ಲರೂ ಒಂದಾಗಬೇಕು' ಎಂದು  ವಿಶ್ವಾಸದಿಂದ ನಂಬಿ, ಅಂತಹ ಏಕತೆಯಿಂದ ಭಾರತೀಯ ಸಮಾಜದಲ್ಲಿ ಕಂಡುಬರುವ ಸಾಮಾಜಿಕ ಹಾಗೂ ಜಾತಿ ಸಂಬಂಧವಾದ ಮೇಲು ಕೀಳುಗಳನ್ನು ಹಾಗೂ ಸಂಘರ್ಷಗಳನ್ನು ನಿವಾರಣೆ ಮಾಡಬಹುದು ಎಂದು ಪ್ರತಿಪಾದಿಸುವವರ ದೃಷ್ಟಿಯಲ್ಲಿ ಈ ಚಳವಳಿಯು ಐಕ್ಯಭಂಜಕವಾಗಿ ಕಂಡುಬರಬಹುದು. ಆದರ ಇಲ್ಲಿನ ಸಾಮಾಜಿಕ ವಾಸ್ತವಗಳನ್ನು ಪರಿಗಣಿಸಿದಾಗ ಇದು ಇಲ್ಲಿನ ಸಾಮಾಜಿಕ ಸನ್ನಿವೇಶದಲ್ಲಿ ಸಹಜವಾದ ಒಂದು ಬೆಳವಣಿಗೆ ಎಂಬುದು ಹೊಳೆಯುತ್ತದೆ. ಸಂವಿಧಾನದ ಪ್ರಕಾರ ಸರ್ಕಾರಿ ನೌಕರಿಗಳಲ್ಲಿ, ವಿಧಾನಸಭೆಗಳು ಹಾಗೂ ಸಂಸತ್ತಿನಲ್ಲಿ ಪರಿಶಿಷ್ಟರಿಗೆ ಮೀಸಲಾತಿಯಿದೆ. ಈ ಮೀಸಲಾತಿಯು ಸರ್ಕಾರಿ ಸ್ವಾಮ್ಯದ ಉದ್ಯಮಗಳು, ಬ್ಯಾಂಕುಗಳು ಮುಂತಾದವುಗಳಿಗೂ ಅನ್ವಯವಾಗುತ್ತದೆ. ಇದು ಮಾತ್ರವಲ್ಲದೆ ಪರಿಶಿಷ್ಟ ವರ್ಗಗಳ ಕಾರ್ಮಿಕರಿಗೆ ಒಂದೊಂದು ಉದ್ಯಮದಲ್ಲಿಯೂ ಅಥವಾ ಕಾರ್ಖಾನೆಯಲ್ಲಿಯೂ ಕಾಲದಿಂದ ಕಾಲಕ್ಕೆ  ವಿಶಿಷ್ಟ ಸಮಸ್ಯೆಗಳು ಎದುರಾಗಬಹುದು.  ಇವುಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಬಹುಪಾಲು ಉದ್ಯಮಗಳಲ್ಲಿ ಪರಿಶಿಷ್ಟ ವರ್ಗಗಳ ಹಿತರಕ್ಷಣೆಗಳಾಗಿ ಸಂಘಗಳು ಸ್ಥಾಪನೆಯಾಗಿವೆ.  ಇವು ಮೀಸಲಾತಿ ಪ್ರಮಾಣವು ತಮ್ಮ ಸಂಸ್ಥೆಗಳ ವ್ಯಾಪ್ತಿಯಲ್ಲಿ ಪಾಲನೆಯಾಗುತ್ತಿದೆಯೇ ಎಂಬುದರತ್ತಲೂ ಗಮನ ನೀಡುತ್ತದೆ.

ಕಾರ್ಮಿಕ ಚಳವಳಿಯಲ್ಲಿ ಇಷ್ಟೊಂದು ವೈವಿಧ್ಯಗಳು ಹಾಗೂ ಭಿನ್ನಾಭಿಪ್ರಾಯಗಳು ಇವೆಯೆಂಬುದು ನಿಜವಾದರೂ, ಕಳೆದ ೧೨-೧೩ ವರ್ಷಗಳಿಂದಲೂ ಭಾರತ ಸರ್ಕಾರವು ಅನುಸರಿಸುತ್ತಿರುವ ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ನೀತಿಗಳನ್ನೊಳಗೊಂಡ ಹೊಸ ಆರ್ಥಿಕ ನೀತಿಯೂ ಈ ಎಲ್ಲ ಭೇದ ಭಿನ್ನಾಭಿಪ್ರಾಯಗಳನ್ನು ಹಿಂದೆ ಸರಿಸಿ ಇಡೀ ಕಾರ್ಮಿಕ ವರ್ಗವನ್ನು, ಇಡೀ ಶ್ರಮಜೀವಿ ಸಮುದಾಯವನ್ನು ಒಂದುಗೂಡಿಸುತ್ತಿದೆ. ಈ ಉಖಾಜಾ ಅಂದರೆ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ನೀತಿ ಮತ್ತು ಅದರ ಪರಿಣಾಮವಾಗಿ ಕಾರ್ಮಿಕರು ಎದುರಿಸುತ್ತಿರುವ ತೀವ್ರ ಸಮಸ್ಯೆಗಳನ್ನು ಸಂಕ್ಷಿಪ್ತವಾಗಿ ಪರಿಶೀಲಿಸಿ ಈ ದೀರ್ಘಲೇಖನವನ್ನು ಮುಕ್ತಾಯಗೊಳಿಸೋಣ.

## 'ಉಖಾಜಾ'ನೀತಿ, ಕಾರ್ಮಿಕ ವರ್ಗದ ಮೇಲೆ ಅದರ ಪರಿಣಾಮ

ಭಾರತವು ಸ್ವತಂತ್ರವಾದ ನಂತರ ಸುಮಾರು ೧೯೫೦ರಿಂದ ಪಂಚವಾರ್ಷಿಕ ಯೋಜನೆಗಳ ಮೂಲಕ ಔದ್ಯಮಿಕ ಪ್ರಗತಿಯನ್ನು ಸಾಧಿಸುವ ಪ್ರಯತ್ನಗಳಲ್ಲಿ ತೊಡಗಿತು. ಆ ಆರ್ಥಿಕನೀತಿಯಲ್ಲಿ ಸರ್ಕಾರಿ ವಲಯ ಹಾಗೂ ಖಾಸಗಿ ವಲಯಗಳು ಸಾಕಷ್ಟು ಅಭಿವೃದ್ಧಿಗೊಂಡುವು. ಕಬ್ಬಿಣ ಮತ್ತು ಉಕ್ಕು ಉದ್ಯಮ, ಯಂತ್ರೋಪಕರಣಗಳ ಉತ್ಪಾದನೆ ಮುಂತಾದ ಕೆಲವು ಮೂಲ ಉದ್ಯಮಗಳಲ್ಲಿ ಸರ್ಕಾರವು ನಿರ್ಣಾಯಕ ಸ್ಥಾನವನ್ನು ತನ್ನ ಕೈಯಲ್ಲಿಯೇ ಉಳಿಸಿಕೊಂಡಿತು.  ಖಾಸಗಿ ಉದ್ಯಮಗಳ ವಿಸ್ತರಣೆಯಲ್ಲಿ ಅನಾವಶ್ಯಕ ಸ್ಪರ್ಧೆ ಏರ್ಪಡುವುದನ್ನು ತಪ್ಪಿಸಲು ಲೈಸೆನ್ಸಿಂಗ್ ಪದ್ಧತಿಯು ಜಾರಿಯಾಯಿತು. ಕಾರ್ಮಿಕ ವಿವಾದಗಳು ಸಾಧ್ಯವಾದಷ್ಟೂ ಮಟ್ಟಿಗೆ ಸಮಾಧಾನಕರವಾಗಿ ಬಗೆಹರಿದು ಉತ್ಪಾದನೆಗೆ ಕನಿಷ್ಠ ಮಟ್ಟದಲ್ಲಿ ಧಕ್ಕೆಯಾಗಲಿ ಎಂಬ ಉದ್ದೇಶದಿಂದ ಕಾರ್ಮಿಕ ನೀತಿಗಳನ್ನೂ, ಆಗಾಗ್ಗೆ ವೇತನ ಪರಿಷ್ಕರಣ ಮುಂತಾದುವವದನ್ನೂ ಸರ್ಕಾರವು ಜಾರಿ ಮಾಡಿತು. ಒಟ್ಟಿನಲ್ಲಿ ಉದ್ಯಮಗಳ ಮೇಲಿನ ಸರ್ಕಾರದ ನಿಯಂತ್ರಣವು ಬಲಗೊಂಡಿತು. ೧೯೮೦ರ ದಶಕದವರೆಗೆ ಈ ನೀತಿಗಳು ಆ ಅವಧಿಯಲ್ಲಿಯೇ ಅಸ್ತಿತ್ವದಲ್ಲಿದ್ದುವು. ಬ್ಯಾಂಕುಗಳು ಮತ್ತು ವಿಮಾಕ್ಷೇತ್ರಗಳು ರಾಷ್ಟ್ರೀಕರಣಗೊಂಡುದೂ, ಈ ನೀತಿಗಳಿಂದ ಗಮನಾರ್ಹ ಔದ್ಯಮಿಕ ವಿಸ್ತರಣೆಯು ಸಾಧ್ಯವಾಯಿತಾದರೂ ನಿಯಂತ್ರಣಾ ವ್ಯವಸ್ಥೆಯಲ್ಲಿ ಅದಕ್ಷತೆ, ಭ್ರಷ್ಟಾಚಾರ, ರಾಜಕೀಯ  ಹಸ್ತಕ್ಷೇಪ ಮುಂತಾದುವು ಬೆಳೆದು ಅರ್ಥವ್ಯವಸ್ಥೆಯಲ್ಲಿ ಶೈಥಿಲ್ಯವು ತಲೆದೋರಿತು.  ಆಗ ಸರ್ಕಾರವು ಅರ್ಥವ್ಯವಸ್ಥೆಯು ಕುಸಿದು ಬೀಳದಂತೆ ಕಾಪಾಡುವ ಸಲುವಾಗಿ ವಿಶ್ವಬ್ಯಾಂಕ್ ಹಾಗೂ

ಅಂತರರಾಷ್ಟ್ರೀಯ ಹಣಕಾಸು ನಿಧಿಗಳ ನೆರವು ಕೋರಿತು. ಅವು "ನಿಯಂತ್ರಣ ವ್ಯವಸ್ಥೆಯನ್ನು ಕೈಬಿಡುವಂತೆಯೂ, ಮುಕ್ತ ಮಾರುಕಟ್ಟೆಗೆ ಅವಕಾಶ ನೀಡುವಂತೆಯೂ, ಉದ್ಯಮಗಳು ಸ್ಪರ್ಧಾತ್ಮಕವಾಗಿ ಬೆಳೆಯುವುದಕ್ಕೆ ಅನುಕೂಲ ಒದಗಿಸುವ ದೃಷ್ಟಿಯಿಂದ ಸ್ವದೇಶಿ ಹಾಗೂ ವಿದೇಶಿ ಖಾಸಗಿ ಬಂಡವಾಳವು ಹರಿದುಬರಲು ಅವಕಾಶ ನೀಡುವಂತೆಯೂ" ಸಲಹೆ ನೀಡಿ ಆ ಸಲಹೆಗಳನ್ನು ಸರ್ಕಾರವು ಒಪ್ಪಿಕೊಂಡರೆ ಮಾತ್ರ ತಾನು ಅದರ ನೆರವಿಗೆ ಬರುವುದಾಗಿ ಹೇಳಿದುದು ವಿಧಿಯಿಲ್ಲದೆ ಹಾಗೂ ಆ ಹಿಂದಿನ ನೀತಿಗಳಿಂದಾಗಿ ಅರ್ಥವ್ಯವಸ್ಥೆಯಲ್ಲಿ ತಲೆದೋರಿದ್ದ ನಾನಾ ರೋಗಗಳನ್ನು ನಿಯಂತ್ರಿಸಲು ಹಾಗೂ ಸರಿಪಡಿಸಲು. ಇದರಿಂದ ಒಂದು ಉತ್ತಮ ಅವಕಾಶ ಒದಗುತ್ತದೆ ಎಂಬ ಮನವರಿಕೆಯಿಂದ ಸರ್ಕಾರವು ಆ ಸಲಹೆಗಳನ್ನು ಒಪ್ಪಿಕೊಂಡಿತು. ೧೯೯೦ರ ದಶಕದಲ್ಲಿ ಅವು ಕಾರ್ಯಗತವಾಗಲಾರಂಭವಾದುವು.

## ಉಖಾಜಾ ನೀತಿಯು ಭಾರತದಲ್ಲಿ ಆರಂಭವಾದ ಬಗೆ

ಈ ನೀತಿಯಿಂದಾಗಿ ಉದ್ಯಮಗಳಿಗೆ ಲೈಸೆನ್ಸ್ ನೀಡುವುದು ಸರಾಗವಾಗಿದೆ. ಆಮದು ಸುಲಭವಾಗಿದೆ. ಹಲವಾರು ಸರ್ಕಾರಿ ಸ್ವಾಮ್ಯದ ಉದ್ಯಮಗಳನ್ನು ಖಾಸಗಿ ಬಂಡವಾಳಗಾರರಿಗೆ ಮಾರಲಾಗಿದೆ; ಇನ್ನು ಕೆಲವು ಉದ್ಯಮಗಳಲ್ಲಿ ಸಾರ್ವಜನಿಕ ಬಂಡವಾಳವು ಹರಿದು ಬರುವಂತೆ ಏರ್ಪಡಿಸಲಾಗಿದೆ. ಆದರೆ ಜಾಗತೀಕರಣ ನೀತಿಯು ವಿದೇಶಗಳಲ್ಲಿಯೂ ವಿರೋಧಕ್ಕೆ ಗುರಿಯಾಗಿದೆ. ಎಲ್ಲೆಲ್ಲೂ ಅದು ಸ್ಥಳೀಯ ಕಾರ್ಮಿಕರಿಗೆ ಉದ್ಯೋಗಾವಕಾಶಗಳನ್ನು ಸಂಕುಚಿತಗೊಳಿಸುತ್ತಿದೆ ಎಂಬುದು ಅದರ ವಿರುದ್ಧವಾದ ದೂರು. ಹೀಗಾಗಿ ಆ ನೀತಿಗಳನ್ನು ಅನುಷ್ಠಾನಕ್ಕೆ ತಂದಾಗ ಆದ ಒಪ್ಪಂದಗಳ ಪ್ರಕಾರವಾಗಿ ಭಾರತದ ರಫ್ತುಗಳಿಗೆ ವಿದೇಶಗಳಲ್ಲಿ ಒದಗಬೇಕಾಗಿರುವಷ್ಟು ಅವಕಾಶಗಳು ಒದಗಿಬರುತ್ತಿಲ್ಲ.

ಭಾರತದಲ್ಲಿ ಈ ನೂತನ ಆರ್ಥಿಕ ನೀತಿಯು ಕಾರ್ಮಿಕರಲ್ಲಿ ವಿರೋಧದ ಅಲೆಗಳನ್ನು ಎಬ್ಬಿಸಿದೆ. ಹೆಚ್ಚು ಪ್ರಚಾರಕ್ಕೆ ಗುರಿಯಾಗಲಿಲ್ಲವಾದರೂ ಈ ನೀತಿಯು ಜಾರಿಯಾಗುವುದಕ್ಕೆ ಸ್ವಲ್ಪ ಮುಂಚಿನಿಂದಲೂ ಹಣಕಾಸು ಉದ್ಯಮ ಸಂಸ್ಥೆಗಳ ಕೆಲಸ ಕಾರ್ಯಗಳಲ್ಲಿ ಕಂಪ್ಯೂಟರೀಕರಣವು ಏರುತ್ತ ಬಂದ ಹಾಗೆ ಉದ್ಯೋಗಾವಕಾಶಗಳು ಕುಗ್ಗಿದವು. ನೌಕರರ ಸಂಘಗಳ ಪ್ರಬಲ ಪ್ರತಿಭಟನೆಗಳಿಂದಾಗಿ ನೌಕರಿಯಲ್ಲಿದ್ದವರು ಹೆಚ್ಚು ಪ್ರಮಾಣದಲ್ಲಿ ನೌಕರಿಗಳನ್ನು ಕಳೆದುಕೊಂಡಿಲ್ಲವಾದರೂ ಅವುಗಳಲ್ಲಿ ಹೊಸ ಉದ್ಯೋಗಗಳು ಸೃಷ್ಟಿಯಾಗುವುದು ಕಡಿಮೆಯಾಯಿತು. ಬ್ಯಾಂಕು, ವಿಮೆ, ಅಂಚೆ ಸೇವೆ ಮುಂತಾದುವುಗಳಲ್ಲಿ ಒಂದು ದಶಕದಿಂದ ಈಚೆಗೆ ಹೊಸದಾಗಿ ಉದ್ಯೋಗ ಪಡೆದಿರುವವರ ಸಂಖ್ಯೆ ಅತ್ಯಲ್ಪ. ಹಲವಾರು ಉದ್ಯಮಗಳಲ್ಲಿ ವಿ. ಆರ್. ಎಸ್. ಎಂದು ಜನಜನಿತವಾಗಿರುವ ಸ್ವಯಂ ನಿವೃತ್ತಿ ಯೋಜನೆಗಳಿಂದಾಗಿ ಸಾವಿರಾರು ಮಂದಿ ನಡುವಯಸ್ಸಿನಲ್ಲಿ ಉದ್ಯೋಗಗಳಿಂದ ನಿವೃತ್ತರಾಗಿದ್ದಾರೆ.

ಅವರಿಗೆಲ್ಲಾ ನಿಯಮಗಳ ಪ್ರಕಾರ ಗಣನೀಯ ಪ್ರಮಾಣದ ಪರಿಹಾರಧನವು ದೊರೆತಿದೆ ಎಂಬುದು ನಿಜ, ಆದರೆ ಬ್ಯಾಂಕುಗಳಲ್ಲಿ ಸಾರ್ವಜನಿಕ ಠೇವಣಿಗಳ ಮೇಲಿನ ಬಡ್ಡಿದರಗಳು ಇಳಿದುಹೋಗಿವೆ. ಇನ್ನೂ ಇಳಿಯುತ್ತ ಹೋಗುತ್ತವೆ ಎಂಬ ಸೂಚನೆಗಳು ದೊರೆಯುತ್ತಿವೆ.

ಉಖಾಜಾ ನೀತಿಯ ಒಂದು ಅಂಗವಾಗಿ ಕಾರ್ಮಿಕರ ಉದ್ಯೋಗಗಳಿಗೆ ಇದ್ದ ಸುರಕ್ಷತೆಯು ಇದೇ ರೀತಿ ಮುಂದುವರಿಯುವುದಿಲ್ಲ ಎಂಬುದು ಈಚೆಗೆ ಸ್ಪಷ್ಟವಾಗುತ್ತಿದೆ. ಅಗತ್ಯವಿದ್ದಾಗ ಕೆಲಸಕ್ಕೆ ತೆಗೆದುಕೊಂಡು, ಅಗತ್ಯ ತೀರಿದೊಡನೆ ಕಾರ್ಮಿಕರನ್ನು ಕೆಲಸದಿಂದ ಹೊರದೂಡುವುದಕ್ಕೆ ಅವಕಾಶಗಳು ದೊರೆಯುವಂತೆ ಕಾರ್ಮಿಕ ಕಾಯದೆಗಳಿಗೆ ತಿದ್ದುಪಡಿಗಳನ್ನು ತರಲಾಗುತ್ತಿದೆ. ಹೇಳಿಕೆಗಳಲ್ಲಿ ಇದನ್ನು ರಾಜಕಾರಣಿಗಳು ಅಲ್ಲಗಳೆಯುತ್ತಿದ್ದರೂ ಇದು ಉಖಾಜಾ ನೀತಿಯ ಒಂದು ಅಂಶ ಎಂಬುದರಲ್ಲಿ ಸಂದೇಹವಿಲ್ಲ. ಈ ನಡುವೆ ಕಾಂಟ್ರಾಕ್ಟ್ ಪದ್ಧತಿಯಲ್ಲಿ ನಿಯಮಿತ ಅವಧಿಗಾಗಿ ಮಾತ್ರ ಕಾರ್ಮಿಕರನ್ನು ನೇಮಿಸಿಕೊಳ್ಳುವ ಪದ್ಧತಿಯು ಹೆಚ್ಚುತ್ತಿದೆ. ಉದ್ಯಮಗಳು ಕೈಗೆತ್ತಿಕೊಳ್ಳುವ ಕಾರ್ಯ ಪರಿಯೋಜನೆಗಳಿಗೆ ಅಂದರೆ ಪ್ರಾಜೆಕ್ಟ್‌ಗಳಿಗೆ ಅಗತ್ಯ ಬೀಳುವ ಸಿಬ್ಬಂದಿ ತಂಡಗಳನ್ನು ಆ ಪರಿಯೋಜನೆಯ ಅವಧಿಗೆ ಮಾತ್ರವೇ ಒದಗಿಸುವ ಟೀಮ್ ಲೀಸ್ ಎಂಬ ಹೊಸ ಕ್ರಮವನ್ನು ಕೆಲವು ಸಂಸ್ಥೆಗಳು ರೂಪಿಸುತ್ತಿವೆ. ಇದರಿಂದ ಉದ್ಯೋಗ ಭದ್ರತೆ ಎಂಬ ಕಲ್ಪನೆಯ ಬುನಾದಿಯೇ ತತ್ತರಿಸುತ್ತಿದೆ.

ರಜೆ ಕಡಿತ, ಆಗಾಗ್ಗೆ ಏರ್ಪಡುವ ಕಾರ್ಮಿಕನ ಸಾಮರ್ಥ್ಯ ಮಟ್ಟದ ಪರೀಕ್ಷೆ, ಎಂದು ಬೇಕಾದರೂ ತಾನು ಉದ್ಯೋಗ ನೀಗಿಕೊಂಡು ಮನೆಗೆ ಬರಬಹುದು ಎಂಬ ವಾತಾವರಣದ ಸೃಷ್ಟಿ - ಇವೆಲ್ಲವೂ ಒಂದುಗೂಡಿ ಇಡೀ ಸಂಘಟಿತ ಕಾರ್ಮಿಕ ವರ್ಗದಲ್ಲಿ ಒಂದು ಅನಿಶ್ಚಯ ಮನೋಭಾವವನ್ನು ಮೂಡಿಸಿದೆ. ಕಳೆದ ಒಂದು ದಶಕದಿಂದ ಕಾರ್ಮಿಕರಿಂದ ಪ್ರತಿಭಟನೆಯನ್ನು ಎದುರಿಸುತ್ತಲೇ ಉಖಾಜಾ ನೀತಿ ಅನುಷ್ಠಾನಗೊಳ್ಳುತ್ತ ಬರುತ್ತಿದೆ. ಈ ಪ್ರತಿಭಟನೆಯ ಕೆಲವು ವಿಶಿಷ್ಟ ಲಕ್ಷಣಗಳನ್ನು ಗಮನಿಸುವುದು ಅಗತ್ಯ.

ಮೊಟ್ಟಮೊದಲಿಗೆ ಎದ್ದು ಕಾಣುವ ಸಂಗತಿಯೆಂದರೆ, ಈ ಪ್ರತಿಭಟನೆಯಲ್ಲಿ ಮುಷ್ಕರದ ಪಾತ್ರವು ಗೌಣವಾಗಿರುವುದು. ಕೆಲವು ಸಂದರ್ಭಗಳಲ್ಲಿ ಒಂದು ಅಥವಾ ಎರಡು ದಿನಗಳ ಸಾಂಕೇತಿಕ ಮುಷ್ಕರಗಳು ಜರುಗಿರಬಹುದು; ಆದರೆ ದೀರ್ಘ ಕಾಲದ ಮುಷ್ಕರಗಳು ನಡೆದೇ ಇಲ್ಲ ಎನ್ನುವಷ್ಟು ಕಡಿಮೆ ಪ್ರಮಾಣದಲ್ಲಿವೆ. ನಿಜವಾಗಿಯೂ ಆರ್ಥಿಕ ಇಕ್ಕಟ್ಟುಗಳಲ್ಲಿರುವ ಉದ್ಯಮಗಳಲ್ಲಿ ಕಾರ್ಮಿಕರು ಮುಷ್ಕರ ಹೂಡಿದರೆ ಅವು ಯಶಸ್ವಿಯಾಗುವುದು ದುಸ್ತರ ಎಂಬ ಸತ್ಯಾಂಶವನ್ನು ಕಾರ್ಮಿಕರು, ಅವರ ಸಂಘಗಳು ಹಾಗೂ ಮುಖಂಡರು ಅರಿತಿದ್ದಾರೆ. ಜವಳಿ ಉದ್ಯಮವು ಇಕ್ಕಟ್ಟಿನಲ್ಲಿದ್ದಾಗ ಜರುಗಿದ ಕೆಲವು ದೀರ್ಘಕಾಲದ ಮುಷ್ಕರಗಳು ಹಾಗೂ ಅವುಗಳಿಂದಾಗಿ ಕಾರ್ಮಿಕರು ಅನುಭವಿಸಿದ ಕಷ್ಟ ನಷ್ಟಗಳು, ಸಂಬಂಧಪಟ್ಟವರಿಗೆಲ್ಲಾ ಈ ವಿಚಾರದ ಆಗುಹೋಗುಗಳ ಅರಿವನ್ನು ಮೂಡಿಸಿರುವಂತೆ ಕಾಣುತ್ತದೆ.

ಕಾರ್ಮಿಕ ಸಂಘಗಳು ತಮ್ಮ ತಮ್ಮಲ್ಲಿನ ಭೇದ ಭಿನ್ನಾಭಿಪ್ರಾಯಗಳನ್ನು ಬದಿಗಿರಿಸಿ ಉಖಾಜಾ ನೀತಿಯನ್ನು ವಿರೋಧಿಸುವ ಬೃಹತ್ ಸಭೆಗಳು, ಭಾರಿ ಮೆರವಣಿಗೆಗಳು, ಪ್ರದರ್ಶನಗಳನ್ನು ಏರ್ಪಡಿಸುವ ಪರಿಪಾಠವು ಆಚರಣೆಗೆ ಬರುತ್ತಿದೆ. ೨೦೦೧ರ ಜುಲೈ ೧೨ರಂದು ಬೆಂಗಳೂರು ಸೇರಿದಂತೆ ಕರ್ನಾಟಕದ ಎಲ್ಲ ಮುಖ್ಯ ಔದ್ಯಮಿಕ ನಗರಗಳಲ್ಲಿಯೂ ಏರ್ಪಟ್ಟಿದ್ದ ಐಕ್ಯ ಸಮಾವೇಶಗಳನ್ನು ಇದಕ್ಕೆ ಒಂದು ನಿದರ್ಶನವಾಗಿ ಪರಿಗಣಿಸಬಹುದು. ಇಂತಹ ಸಮಾವೇಶ ಹಾಗೂ ಸಭೆಗಳಲ್ಲಿ ಎಲ್ಲ ಕಾರ್ಮಿಕ ಸಂಘಟನೆಗಳೂ, ಬ್ಯಾಂಕು, ವಿಮೆ, ಸರ್ಕಾರ, ಎಲ್ಲ ಕ್ಷೇತ್ರಗಳ ನೌಕರರ ಸಂಘಗಳೂ ಭಾಗವಹಿಸುತ್ತಿವೆ. ಇವಕ್ಕೆ ಪೂರಕವಾಗಿ ಸಂಸತ್ತಿಗೆ, ರಾಷ್ಟ್ರಪತಿಗಳಿಗೆ ಲಕ್ಷಾಂತರ, ಕೋಟ್ಯಂತರ ಕಾರ್ಮಿಕರು ರುಜು ಮಾಡಿರುವ ಮನವಿಗಳ ಸಲ್ಲಿಕೆ, ಸಹಾನುಭೂತಿಪರ ಸಂಸತ್ ಸದಸ್ಯರ ಮೂಲಕ ಸಂಬಂಧಪಟ್ಟ ವಿಚಾರವನ್ನು ಸಂಸತ್ತಿನಲ್ಲಿ ಪ್ರಸ್ತಾಪಿಸುವುದು, ಅದಕ್ಕೆ ರಾಜಕೀಯ ಬೆಂಬಲವನ್ನು ಕ್ರೋಢೀಕರಿಸುವುದು ಇಂತಹ ಕಾರ್ಯಾಚರಣೆಗಳಿಗೆ ಹೆಚ್ಚಿನ ಒತ್ತು ದೊರೆಯುತ್ತದೆ.

ಇಷ್ಟು ಸ್ಪಷ್ಟವಾಗಿ ಎದ್ದು ಕಾಣಿಸುತ್ತಿಲ್ಲವಾದರೂ ಕಾರ್ಮಿಕರಲ್ಲಿಯೂ, ಕಾರ್ಮಿಕ ಸಂಘಗಳು ಹಾಗೂ ಮುಖಂಡರಲ್ಲಿಯೂ "ಉದ್ಯಮಿಗಳು ಬಿಕ್ಕಟ್ಟಿಗೆ ಸಿಕ್ಕಿ, ನಷ್ಟಕ್ಕೆ ಗುರಿಯಾದರೆ ಅದರಿಂದ ಆಗುವ ನಷ್ಟವು ಉದ್ಯಮಗಳ ಮಾಲೀಕರಿಗೆ ಮಾತ್ರವೇ ಅಲ್ಲ; ಆ ಉದ್ಯಮದಲ್ಲಿರುವ ಕಾರ್ಮಿಕರು ಸಹ ಭರಿಸಲಾಗದ ಕಷ್ಟನಷ್ಟಗಳಿಗೆ ಗುರಿಯಾಗುತ್ತಾರೆ" ಎಂಬ ವಾಸ್ತವ ಸಂಗತಿಯು ಮನದಟ್ಟಾಗುತ್ತಿರುವಂತಿದೆ. ಬಹುಶಃ ಇದರಿಂದಾಗಿಯೇ, ಸ್ವಯಂ ನಿವೃತ್ತಿ, ಕಾರ್ಮಿಕರ ಸಂಖ್ಯೆಯನ್ನು ಕಡಿಮೆ ಮಾಡುವುದು, ಎಷ್ಟೋ ಸಂದರ್ಭಗಳಲ್ಲಿ ವೇತನ ಪಾವತಿಯು ಅಷ್ಟಿಷ್ಟು ತಡವಾಗುವುದು ಮುಂತಾದವುಗಳನ್ನು ಸಮಾಧಾನದಿಂದ ಮಾತುಕತೆಗಳ ಮೂಲಕ ಪರಿಹರಿಸಿಕೊಳ್ಳುವ ಮತ್ತು ಅನಿವಾರ್ಯಗಳಿಗೆ ಹೊಂದಿಕೊಳ್ಳುವ ಪ್ರವೃತ್ತಿಯು ಕಾರ್ಮಿಕರಲ್ಲಿ ಕಂಡುಬರುತ್ತಿದೆ. ಉದ್ಯಮಗಳ ಆಡಳಿತಾಧಿಕಾರಿಗಳು ಹಾಗೂ ಕಾರ್ಮಿಕ ಮುಖಂಡರು ಇಂತಹ ಘಟನೆಗಳನ್ನು ಉಲ್ಲೇಖಿಸುತ್ತಾರೆ. ಸೋವಿಯಟ್ ಒಕ್ಕೂಟ ಮತ್ತು ಪೂರ್ವ ಯೂರೋಪಿನ ದೇಶಗಳಲ್ಲಿ ಅಸ್ತಿತ್ವದಲ್ಲಿದ್ದ ಸಮಾಜವಾದಿ ಅರ್ಥವ್ಯವಸ್ಥೆಯು ಕುಸಿದುಬಿದ್ದುದು ಈ ಪ್ರವೃತ್ತಿಯನ್ನು ಪ್ರಚೋದಿಸಿ ಬಲಪಡಿಸುತ್ತಿರಬಹುದು. ಒಟ್ಟಿನಲ್ಲಿ ಮಾತುಕತೆಗಳ ಮೂಲಕ ದೊರೆಯುವಷ್ಟು ಅನುಕೂಲಗಳನ್ನು ಪಡೆದುಕೊಳ್ಳುವುದು ಮತ್ತು ಅನಿವಾರ್ಯವಾದಾಗ ಬಂದ ಕಷ್ಟ ನಷ್ಟಗಳಿಗೆ ತಾಳ್ಮೆಯಿಂದ ಹೊಂದಿಕೊಳ್ಳುವುದು ಎನ್ನುವ ಮನೋಭಾವವು ಇಂದು ಕಾರ್ಮಿಕ ರಂಗದಲ್ಲಿ ಬಲಗೊಳ್ಳುತ್ತಿದೆ ಎಂದು ಹೇಳಬಹುದು. ಹೀಗೆ ಕ್ರಮೇಣ, ಉದ್ಯಮಿಗಳು ಮತ್ತು ಕಾರ್ಮಿಕರ ನಡುವೆ ನಿರಂತರವಾಗಿ ಸಂಘರ್ಷವಿದೆ ಎಂಬ ನಿಲುವು ಕಣ್ಮರೆಯಾಗುತ್ತಿದೆ.

ಕಾರ್ಮಿಕ ಸಂಘಟನಾ ಕ್ಷೇತ್ರದಲ್ಲಿಯೂ ಒಂದು ಮಹತ್ವದ ಬದಲಾವಣೆಯು ಕಂಡುಬರುತ್ತಿದೆ. ಅಸಂಘಟಿತ ಕಾರ್ಮಿಕರು, ಕಾಂಟ್ರಾಕ್ಟ್ ಕಾರ್ಮಿಕರು ಮುಂತಾದ ಚದುರಿಹೋಗಿರುವ ಶ್ರಮಜೀವಿಗಳಲ್ಲಿಯೂ ಸಂಘಪ್ರಜ್ಞೆ ಬೆಳೆದು ಬಲಗೊಳ್ಳುತ್ತಿದೆ. ಕೆಲವು ಕೇಂದ್ರೀಯ ಸಂಘಟನೆಗಳು ಕೃಷಿ, ತೋಟಗಾರಿಕೆ ಮುಂತಾದ ಕ್ಷೇತ್ರಗಳ ಕಾರ್ಮಿಕರ ಸಂಘಟನೆಗಳನ್ನು ಕಟ್ಟುವುದಕ್ಕೆ ವಿಶೇಷವಾದ ಗಮನ ಹರಿಸುತ್ತಿವೆ.

## ಇನ್ನಿತರ ಕೆಲವು ಸಂಗತಿಗಳು

ಮೊದಲನೆಯ ಮಹಾಯುದ್ಧವು ಕೊನೆಗೊಂಡಾಗ 'ಲೀಗ್ ಆಫ್ ನೇಷನ್ಸ್' ನಂತಹ ಅಂತರ್ರಾಷ್ಟ್ರೀಯ ಸಂಘಟನೆಯು ಆರಂಭವಾದ ಹಾಗೆಯೇ ಇಂಟರ್ ನ್ಯಾಷನಲ್ ಲೇಬರ್ ಆರ್ಗನೈಸೇಷನ್ ಅಥವಾ ಅಂತರ್ರಾಷ್ಟ್ರೀಯ ಕಾರ್ಮಿಕ ಸಂಸ್ಥೆ

(ಐ.ಎಲ್.ಒ.)ಯು ಸಹ ಅಸ್ತಿತ್ವಕ್ಕೆ ಬಂತು. ಅದರಲ್ಲಿ ಭಾರತವನ್ನು ಪ್ರತಿನಿಧಿಸಲು ಒಂದು ಕಾರ್ಮಿಕ ಸಂಘಟನೆಯು ಅಗತ್ಯವಾಗಿದ್ದು ಆ ವರ್ಷಗಳಲ್ಲಿ ಸ್ಥಾಪನೆಯಾದ ಎ.ಐ.ಟಿ.ಯು.ಸಿ.ಗೆ ಆರಂಭ ಹಂತದಲ್ಲಿಯೇ ಆಗಿನ ಬ್ರಿಟಿಷ್ ಭಾರತೀಯ ಸರ್ಕಾರವು ಅಡ್ಡಿ ಆತಂಕಗಳನ್ನು ಒಡ್ಡದಿದ್ದುದಕ್ಕೆ ಒಂದು ಕಾರಣ. ಆಗಿನಿಂದಲೂ ಅಂತರ್ರಾಷ್ಟ್ರೀಯ ಕಾರ್ಮಿಕ ಸಂಸ್ಥೆಯಲ್ಲಿ ಭಾರತದ ಪ್ರತಿನಿಧಿಗಳು ಭಾಗವಹಿಸುವುದು ರೂಢಿಯಾಗಿದೆ.

೧೯೭೮, ೧೯೭೯, ೧೯೮೩ ಮತ್ತು ೧೯೮೪ ಈ ವರ್ಷಗಳಲ್ಲಿ ಜರುಗಿದ ಐ.ಎಲ್.ಒ. ವಾರ್ಷಿಕ ಸಮ್ಮೇಳನಗಳಲ್ಲಿ ಮಂಗಳೂರಿನ ಬಿ.ಎಂ.ಎಸ್. ಮುಖಂಡರಾದ ಪ್ರಭಾಕರ ಘಾಟೆಯವರು ಭಾರತದ ಒಬ್ಬ ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಈಚಿನ ವರ್ಷಗಳಲ್ಲಿ ಕರ್ನಾಟಕದಲ್ಲಿ ಐ.ಎನ್.ಟಿ.ಯು.ಸಿ.ಯ ಅಧ್ಯಕ್ಷರಾಗಿರುವ ಎನ್. ಎಂ. ಅಡ್ಯಂತಾಯ ಅವರು ಐ. ಎಲ್. ಒ. ದಲ್ಲಿ ಭಾರತದ ಶಾಶ್ವತ ಪ್ರತಿನಿಧಿಯಾಗಿದ್ದಾರೆ. ಇಲ್ಲಿ ಶಾಶ್ವತ ಎಂದರೆ ಒಂದು ಕಾಲಾವಧಿಗೆ ಎಂದು ಮಾತ್ರ ಅರ್ಥ.

ಕರ್ನಾಟಕದಲ್ಲಿ ಕೆಲವೊಮ್ಮೆ ಸರ್ಕಾರವು ನಿರ್ದಿಷ್ಟ ಉದ್ಯಮಗಳ ಕಾರ್ಮಿಕರ ಸ್ಥಿತಿಗತಿಗಳನ್ನು ವಿಚಾರಿಸಿ, ವರದಿ ಮಾಡಲು ಸಮಿತಿಗಳನ್ನು ನೇಮಿಸಿರುವುದುಂಟು. ಅವುಗಳಲ್ಲಿ ಕಾರ್ಮಿಕ ಸಂಘಟನೆಗಳ ಪ್ರತಿನಿಧಿಗಳನ್ನು ನೇಮಿಸಿರುತ್ತಾರೆ. ಹೀಗೆ ಪ್ರತಿನಿಧಿಗಳಾದವರು ಆ ಸಮಿತಿಗಳ ಕೆಲಸದಲ್ಲಿ ಮನಃಪೂರ್ವಕವಾಗಿ ಭಾಗವಹಿಸಿ ಕಾರ್ಮಿಕರಿಗೆ ಉತ್ತಮ ಸೇವೆ ಸಲ್ಲಿಸಿದ್ದಾರೆ.

**ಉಪಸಂಹಾರ**

ಸುಮಾರು ಎಂಟು ದಶಕಗಳ ಕಾಲಾವಧಿಯ ಕರ್ನಾಟಕದ ಕಾರ್ಮಿಕ ಚಳವಳಿಯ ದೀರ್ಘ ಇತಿಹಾಸದ ಈ ಕಿರು ಪರಿಚಯವನ್ನು ಮುಗಿಸುವ ಮುನ್ನ ಓದುಗರಲ್ಲಿ ಕೆಲವೊಂದು ಅಂಶಗಳನ್ನು ಕುರಿತು ಬಿಚ್ಚು ಮನದಿಂದ ಸ್ಪಷ್ಟೀಕರಣವನ್ನು ನೀಡುವುದು ಅಗತ್ಯ ಎಂದು ಭಾವಿಸಿದ್ದೇನೆ.

ಇಲ್ಲಿ ಕರ್ನಾಟಕದ ಕಾರ್ಮಿಕರು ನಡೆಸಿರುವ ಮುಷ್ಕರಗಳು, ಆಗಾಗ ಕಾರ್ಮಿಕ ಮುಖಂಡರು ಕೊಲೆ ಮುಂತಾದ ಗುರುತರ ಆಪಾದನೆಗಳಿಗೆ ಗುರಿಯಾದ ಪ್ರಸಂಗಗಳು, ಕಾರ್ಮಿಕ ಕಾರ್ಮಿಕರ ನಡುವೆಯೇ ಎದ್ದ ಘರ್ಷಣೆಗಳು, ಹೊಡೆದಾಟಗಳು, ಆಗ ಸಂಭವಿಸಿರುವ ಹತ್ಯೆಗಳು ಮುಂತಾದುವನ್ನು ಪ್ರಸ್ತಾಪಿಸಿಲ್ಲ. ಇದಕ್ಕೆ ಹಲವಾರು ಕಾರಣಗಳಿವೆ. ಅವುಗಳ ನಿರೂಪಣೆಗೆ ಮಹತ್ವ ನೀಡಿದರೆ, ಇಡೀ ಕಾರ್ಮಿಕ ಚಳವಳಿಯ ಮೇಲೆ ಕೇಂದ್ರೀಕೃತವಾಗಬೇಕಾಗಿರುವ ನಮ್ಮ ಗಮನವು ಅವುಗಳ ಮೇಲೆ ಹರಿದು ವಿಷಯಾಂತರವಾಗುವ ಅಪಾಯವಿದೆ ಎಂಬುದು ಆ ಕಾರಣಗಳಲ್ಲಿ ಬಹುಮುಖ್ಯವಾದುದು.

ಕಾರ್ಮಿಕ ಚಳವಳಿಯಲ್ಲಿ ಮುಖಂಡರು ಬಹು ಗುರುತರವಾದ ಪಾತ್ರ ವಹಿಸಿದ್ದಾರೆ. ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ಈ ಅಂಶವು ಬಹಳ ಮುಖ್ಯವಾದುದು. ಆದರೂ ಈ ಲೇಖನದಲ್ಲಿ ಮುಖಂಡರ ವ್ಯಕ್ತಿಗತ ಗುಣ ಹಾಗೂ ಸಾಧನೆಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿಲ್ಲದಿರುವುದಕ್ಕೂ ಸಹ ವಿಷಯಾಂತರದ ಅಪಾಯವೇ ಮುಖ್ಯವಾದ ಕಾರಣ.

ಇದು ಕರ್ನಾಟಕದ ಕಾರ್ಮಿಕ ಚಳವಳಿಯ ಸ್ಥೂಲ ಪರಿಚಯ ನೀಡುವ ಲೇಖನವೇ ಹೊರತು, ಅದರ ಪೂರ್ಣ ಅಥವಾ ಭಾಗಶಃ ಇತಿಹಾಸವಲ್ಲ ಎಂದು ಓದುಗರಲ್ಲಿ ಅರಿಕೆ ಮಾಡಿಕೊಂಡು ಇದನ್ನು ಮುಕ್ತಾಯಗೊಳಿಸುತ್ತೇನೆ.

# ರೈತ ಚಳವಳಿ

ಆರ್. ಟಿ. ವಿಠ್ಠಲಮೂರ್ತಿ

ಆರ್ಥಿಕ ಸಮಾನತೆಗಾಗಿ ರೂಪುಗೊಂಡ ರೈತ ಚಳವಳಿಗಳ ಇತಿಹಾಸ ಮಹತ್ವ ಪೂರ್ಣವಾದದ್ದು. ಅದರಲ್ಲೂ ಭಾರತೀಯ ವ್ಯವಸ್ಥೆಯ ವಿಷಯ ಬಂದಾಗ ಭೂಮಿಯೇ ಅದರ ಸಂಪತ್ತು. ಈ ಭೂಮಿಯ ಹಂಚಿಕೆಗಾಗಿ ನಡೆದ ಹೋರಾಟಕ್ಕೆ ಒಂದು ಇತಿಹಾಸವಿದ್ದರೆ ಭೂಮಿಯಿಂದ ರೂಪಿಸಿದ ಬೆಳೆಗೆ ನ್ಯಾಯಯುತ ಬೆಲೆ ದೊರೆಯಬೇಕು ಎಂದು ನಡೆಸಿದ ಹೋರಾಟಕ್ಕೆ ಇನ್ನೊಂದು ಇತಿಹಾಸವಿದೆ. ಅಂತಿಮವಾಗಿ ಇವೆರಡೂ ಪರಸ್ಪರ ಪೂರಕ ಎಂಬ ಅಭಿಪ್ರಾಯಗಳಿವೆಯಾದರೂ ಅವುಗಳ ಮಧ್ಯೆ ವೈರುಧ್ಯಗಳಿವೆ ಎಂಬುದು ನಿಜ. ಹೀಗೆ ಪರಸ್ಪರ ಪೂರಕವಾದ ವಿಷಯವೊಂದರಲ್ಲಿ ವೈರುಧ್ಯಗಳು ಕಾಣಿಸಿಕೊಳ್ಳುವುದು ಅಸಹಜವಲ್ಲವೆಂದರೂ ವಿಪರ್ಯಾಸವಂತೂ ಹೌದು.

ಭೂಮಿ ಹಂಚಿಕೆಗಾಗಿ ನಡೆದ ಹೋರಾಟ, ಬೆಳೆಗೆ ಪ್ರಚಲಿತ ದರ ದೊರೆಯಬೇಕು ಎಂದು ನಡೆದ ಹೋರಾಟಗಳ ಸ್ವರೂಪದಲ್ಲಿ ಅಂತದೊಂದು ವೈರುಧ್ಯ ಕಾಣಲು ನಿರ್ದಿಷ್ಟ ಕಾರಣಗಳಿವೆ. ಅದು ಭಾರತೀಯ ವ್ಯವಸ್ಥೆಯಲ್ಲಿರುವ ಜಾತಿ ಸಮಸ್ಯೆ ಹಾಗೂ ಸರ್ಕಾರಗಳ ಮಂದಮತಿತ್ವ. ಆದ್ದರಿಂದ ಇದನ್ನು ಸ್ಥೂಲವಾಗಿ ಗಮನಿಸುತ್ತಾ ಹೋಗಬೇಕು.

★ ★ ★

ಕರ್ನಾಟಕವನ್ನೇ ಮುಖ್ಯವಾಗಿಟ್ಟುಕೊಂಡು ನೋಡುವುದಾದರೆ ಮೊದಲು ರೈತ ಚಳವಳಿಯನ್ನು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಗುರುತಿಸಲಾಗುತ್ತದೆ. ಹೆಚ್ಚಿನ ತೆರಿಗೆ ವಿಧಿಸಿದುದಕ್ಕಾಗಿ ರೈತರು ಉಳುಮೆಯನ್ನು ಬಹಿಷ್ಕರಿಸಿ ಸಾಮೂಹಿಕವಾಗಿ ಚಳವಳಿ ಹೂಡಿದ ಸಂದರ್ಭವನ್ನು ವಿಲ್ಕ್ಸ್ ದಾಖಲಿಸುತ್ತಾನೆ. ನಂತರ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಭೂಮಿಗಾಗಿ ನಡೆದ ಚಳವಳಿಗಳು ಮಹತ್ವಪೂರ್ಣವಾಗಿವೆ. ಅದರಲ್ಲೂ ಮೊದಲ ಮೂರು ದಶಕಗಳ ಅವಧಿಯಲ್ಲಿ ಭೂಮಿಗಾಗಿ ನಡೆದ ಚಳವಳಿಯನ್ನು, ರೈತರ ಚಳವಳಿ ಅಂತಲೇ ಹೇಳಬೇಕಾಗುತ್ತದೆ.

ಭೂಮಿಗಾಗಿ ರೈತರು, ಅದರಲ್ಲೂ ಮುಖ್ಯವಾಗಿ ಬಡವರು, ಗೇಣಿದಾರರು ನಡೆಸಿದ ಹೋರಾಟವನ್ನು ಗಮನದಲ್ಲಿಟ್ಟುಕೊಂಡರೆ ಕೋಲಾರ, ಶಿವಮೊಗ್ಗ ಮತ್ತಿತರ ಕಡೆಗಳಲ್ಲಿ ನಡೆದ ಚಳವಳಿಯನ್ನು ಮುಖ್ಯವೆಂದು ಗುರುತಿಸಬಹುದು.

ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನಲ್ಲಿರುವ ಕಾಗೋಡು ಎಂಬ ಪುಟ್ಟ ಗ್ರಾಮ ಜಮೀನ್ದಾರ ಶಕ್ತಿಯ ವಿರುದ್ಧ ತಿರುಗಿಬಿದ್ದು ರೂಪಿಸಿದ ಚಳವಳಿ ಈವತ್ತು ಇತಿಹಾಸದ ಮಟ್ಟಿಗೆ 'ಕಾಗೋಡು ಚಳವಳಿ' ಎಂದೇ ಹೆಸರಾಗಿದೆ.

ಲಿಂಗಾಯತ ವರ್ಗದ ಜಮೀನುದಾರರ ಹಿಡಿತದಲ್ಲಿದ್ದ ಜಮೀನಿನಲ್ಲಿ ಗೇಣಿಗಾರಿಕೆ ಮಾಡುತ್ತಿದ್ದ ಬಡ ದೀವ ಜನಾಂಗದವರು ಬೆಳೆದ ಬಹುತೇಕ ಬೆಳೆಯನ್ನು ಮಾಲೀಕರಿಗೆ ಒಪ್ಪಿಸಿ, ಕಡೆಯ ಫಸಲನ್ನು ತಾವಿಟ್ಟುಕೊಳ್ಳಬೇಕಿತ್ತು. ಅದರಲ್ಲೂ ಪಾಲು ಅಳೆಯುವಾಗ ಬಳಸುತ್ತಿದ್ದ ವಸ್ತು

ಜಮೀನುದಾರರಿಗೊಂದಾದರೆ, ಗೇಣಿದಾರರಿಗೆ ಒಂದಾಗಿತ್ತು. ಜಮೀನುದಾರರಿಗೆ ಅಳತೆಯಲ್ಲಿ ಹೆಚ್ಚು ಅನುಕೂಲ. ಗೇಣಿದಾರರಿಗೆ ಸಂಕಟ ಎಂಬ ವಿಷಯವೇ ಮುಂದೆ ಕಾಗೋಡು ಹೋರಾಟಕ್ಕೆ ದಾರಿಯಾದವು. 'ಉಳುವವನೇ ಹೊಲದೊಡೆಯ' ಎಂಬ ಮಂತ್ರದ ಹುಟ್ಟುವಿಕೆಗೆ ಕಾರಣವಾಗಿದ್ದು ಈಗ ಇತಿಹಾಸ.

ಮುಂದೆ ದೇವರಾಜ ಅರಸರು ಮುಖ್ಯಮಂತ್ರಿಗಳಾಗಿದ್ದ ಅವಧಿಯಲ್ಲಿ ಜಾರಿಗೆ ತಂದ ಭೂಸುಧಾರಣಾ ಕಾಯ್ದೆ ಉಳುವವನೇ ಹೊಲದೊಡೆಯ ಎಂಬ ಸೂತ್ರದ ಮೇಲೆ ರೂಪಿತವಾಯಿತು. ಜಮೀನುದಾರರ ವಶದಲ್ಲಿದ್ದ ಭೂಮಿಯ ಪ್ರತಿ ಕೆಲ ಪ್ರಮಾಣವಾದರೂ ಗೇಣಿದಾರರ ಕೈಗೆ ಸಿಕ್ಕಿತು. ಹಾಗಂತ ಇದು ಭೂಮಿಗಾಗಿ ನಡೆದ ರೈತ ಚಳವಳಿಯ ಉದ್ದೇಶವನ್ನು ಸಾರಾಸಗಟಾಗಿ ಈಡೇರಿಸಿತು ಎಂದು ಹೇಳಲು ಸಾಧ್ಯವಿಲ್ಲ. ಯಾಕೆಂದರೆ ಎಲ್ಲರೂ ಬಲ್ಲ ಪ್ರಕಾರ ಕರ್ನಾಟಕದ ಮಟ್ಟಿಗೆ ಬಹುಪಾಲು ಭೂಮಿ ಕೇಂದ್ರೀಕೃತವಾಗಿದ್ದುದು ಒಕ್ಕಲಿಗ ಹಾಗೂ ಲಿಂಗಾಯತ ವರ್ಗದ ಕೈಯಲ್ಲಿ. ಹೀಗೆ ಬಹುಪಾಲು ಭೂಮಿಯ ಒಡೆತನವನ್ನು ಕೇಂದ್ರೀಕರಿಸಿಕೊಂಡ ಒಕ್ಕಲಿಗ ವರ್ಗ ಹಳೇ ಮೈಸೂರು ಭಾಗದಲ್ಲಿ ಪ್ರಧಾನವಾಗಿದ್ದರೆ, ಲಿಂಗಾಯತ ವರ್ಗ ಉತ್ತರ ಕರ್ನಾಟಕ ಭಾಗದಲ್ಲಿ ಪ್ರಧಾನವಾಗಿತ್ತು.

ಬಡತನ, ರಾಜಕೀಯ ಮೌಢ್ಯ ಹಾಗೂ ಶೋಷಣೆಯಲ್ಲಿ ಮುಳುಗಿಹೋಗಿದ್ದ ಉತ್ತರ ಕರ್ನಾಟಕ ಭಾಗದಲ್ಲಿ ಭೂಸುಧಾರಣಾ ಕಾಯ್ದೆ ತುಂಬು ಕ್ರಾಂತಿಯನ್ನೇನೂ ಮಾಡಲಿಲ್ಲ. ಬದಲಿಗೆ ಸರ್ಕಾರ ಜಾರಿಗೊಳಿಸಿದ ಕಾಯ್ದೆಯ ಬೆನ್ನಲ್ಲೇ ಉತ್ತರ ಕರ್ನಾಟಕ ಭಾಗದ ಬಹುತೇಕ ಭೂಒಡೆಯರು ಜಮೀನನ್ನು ಹರಿದು ಹಂಚಿಕೊಂಡರು. ಗೇಣಿದಾರರನ್ನು ಬಲವಂತವಾಗಿ ಒಕ್ಕಲೆಬ್ಬಿಸುವುದರಲ್ಲಿ ಯಶಸ್ವಿಯಾದರು. ಸ್ವತಃ ಭೂಸುಧಾರಣೆ ಕಾಯ್ದೆ ಒಬ್ಬ ವ್ಯಕ್ತಿಗಿರಬೇಕಾದ ಭೂ ಹಿಡುವಳಿಯ ಪ್ರಮಾಣವನ್ನು ನಿಗದಿಗೊಳಿಸಿತ್ತಾದ್ದರಿಂದ ಉತ್ತರ ಕರ್ನಾಟಕ ಭಾಗದ ಜಮೀನುದಾರಿ ಶಕ್ತಿಗಳು ಅದರ ಲಾಭ ಪಡೆಯುವಲ್ಲಿ ಯಶಸ್ವಿಯಾದವು.

ಆ ದೃಷ್ಟಿಯಿಂದ ಗಮನಿಸಿದರೆ ಭೂಸುಧಾರಣಾ ಕಾಯ್ದೆಯ ಪ್ರಯೋಜನ ಗಣನೀಯವಾಗಿ ದೊರೆತಿದ್ದ ಹಳೇ ಮೈಸೂರು ಭಾಗದ ಗೇಣಿದಾರರಿಗೆ ಇದಕಿದ್ದ ಮುಖ್ಯ ಕಾರಣ ಎಂದರೆ ರಾಜಕೀಯ ಜ್ಞಾನ ಹಾಗೂ ಸಮಾಜವಾದೀ ಪಕ್ಷ ಸಕ್ರಿಯವಾಗಿ ಕಾರ್ಯ ನಿರ್ವಹಿಸುತ್ತಿದ್ದುದು. ಇಷ್ಟಾದರೂ ಭೂಮಿಗಾಗಿ ರೈತರು ನಡೆಸಿದ ಚಳವಳಿ ಸಂಪೂರ್ಣ ಯಶಸ್ಸನ್ನು ಸಾಧಿಸಿತೆಂದು ಅರ್ಥವಲ್ಲ. ಅಥವಾ ಜಮೀನ್ದಾರಿ ಶಕ್ತಿಗಳು ಭೂಸುಧಾರಣಾ ಕಾಯ್ದೆಯಿಂದ ಅಳಿದು ಹೋದುವೆಂದೂ ಅರ್ಥವಲ್ಲ. ಈ ಅಂಶವನ್ನು ಸಾಬೀತುಪಡಿಸಲು ಅಸಂಖ್ಯ ಉದಾಹರಣೆಗಳನ್ನು ನೀಡುತ್ತಾ ಹೋಗಬಹುದು, ಇರಲಿ. ಆದರೆ ಒಂದು ಮಾತು ನಿಜ. ಭೂಮಿಗಾಗಿ ಕರ್ನಾಟಕದಲ್ಲಿ ರೈತರು ನಡೆಸಿದ ಚಳವಳಿ ಭಾರತೀಯ ಸಂದರ್ಭದಲ್ಲಿ ತುಂಬಾ ವಿಶಿಷ್ಟವಾದದ್ದು ಮತ್ತು ಅದಕ್ಕೆ ಪೂರಕವಾಗಿ ದೇವರಾಜ ಅರಸರು ರೂಪಿಸಿದ ಭೂ ಸುಧಾರಣಾ ಕಾಯ್ದೆಯ ಅಂತಿಮ ಫಲಿತಾಂಶ ನೂರಕ್ಕೆ ನೂರರಷ್ಟಲ್ಲವಾದರೂ ಅದು ಜಡಗಟ್ಟಿದ್ದ ವ್ಯವಸ್ಥೆಯಲ್ಲಿ ಚಲನೆಯನ್ನು ಕಾಣಿಸಿತು.

ಇವತ್ತು ಆಂಧ್ರದಲ್ಲಿ ನಡೆಯುತ್ತಿರುವ ನಕ್ಸಲೀಯ ಹೋರಾಟಗಳ ಸಂಪತ್ತಿನ ಹಂಚಿಕೆಯಲ್ಲಿರುವ ಅಸಮಾನತೆಯನ್ನು ವಿರೋಧಿಸುವ ಗುಣ ಇರುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಹೀಗಾಗಿ ಕರ್ನಾಟಕದ ರೈತ ಚಳವಳಿ ಕೊಂಚ ಮಟ್ಟಿಗಾದರೂ ಸಮತಾವಾದದ ಲಕ್ಷಣಗಳನ್ನು ಮೈಗೂಡಿಸಿಕೊಂಡಂಥದ್ದು.

ಕಾಲದಿಂದ ಕಾಲಕ್ಕೆ ರೈತರೊಂದಿಗೆ ಸಮಾಜವಾದೀ ಪಕ್ಷ, ಕಮ್ಯುನಿಸ್ಟ್ ಪಕ್ಷ, ಅಂತೆಯೇ ದಲಿತ ಚಳವಳಿಯ ಮುಖಂಡರು ಕೈಗೂಡಿಸುತ್ತಾ ಬಂದುದನ್ನು ಗಮನಿಸಿದರೆ ಅದಕ್ಕೆ ಇರುವ ವೈಶಾಲ್ಯತೆ ಅರ್ಥವಾಗುತ್ತದೆ.



ಹೀಗೆ ಭೂಮಿಗಾಗಿ ರೈತರು ನಡೆಸಿದ ಚಳವಳಿಯದು ಒಂದು ಮಜಲಾದರೆ, ಬೆಳೆದ ಬೆಳೆಗೆ ನ್ಯಾಯಯುತ ಬೆಲೆ ದೊರೆಯಬೇಕು, ರೈತನ ಶ್ರಮಕ್ಕೆ ತಕ್ಕ ಫಲ ದೊರೆಯಬೇಕು ಎಂಬ ವಾದದೊಂದಿಗೆ ನಡೆದ ಚಳವಳಿಯದು ಮತ್ತೊಂದು ಮಜಲು.

ಇಂತಹ ಹೋರಾಟಕ್ಕೆ ವ್ಯಾಪಕ ನೆಲೆಗಟ್ಟು ದೊರೆಯಿತು. ಕಾರಣ ಏನೆಂದರೆ ಹಸಿರು ಕ್ರಾಂತಿಯ ಕನಸಿನಲ್ಲಿ ಮುಂದಡಿಯಿಟ್ಟ ರೈತ ವರ್ಗ ಬೆಲೆ ಕುಸಿತದ ಪರಿಣಾಮಗಳನ್ನು ಎದುರಿಸಬೇಕಾಯಿತು. ಭೂಮಿಯ ಮೇಲೆ ಹಾಕಿದ ಬಂಡವಾಳ ತಕ್ಕ ಪ್ರತಿಫಲದೊಂದಿಗೆ ವಾಪಸ್ಸಾಗದ ವಿಪರ್ಯಾಸವನ್ನು ಅನುಭವಿಸಬೇಕಾಯಿತು.

ಈ ಹಿನ್ನೆಲೆಯಲ್ಲಿ ಆರಂಭವಾದ ಹೋರಾಟಕ್ಕೆ ತಮಿಳುನಾಡಿನ ನಾರಾಯಣಸ್ವಾಮಿ ನಾಯ್ಡು, ಮಹಾರಾಷ್ಟ್ರದ ಶೇತಕಿ ಸಂಘಟನೆಯ ಶರದಜೋಷಿ, ಕಾಲಾಂತರದಲ್ಲಿ ಉತ್ತರ ಪ್ರದೇಶದ ಮಹೇಂದ್ರಸಿಂಗ ಟಿಕಾಯತರಂತಹ ರೈತ ನಾಯಕರು ಆಯಾ ರಾಜ್ಯಗಳಲ್ಲಿ ಸಂಘಟಿಸಿದ ಹೋರಾಟಗಳು ಪ್ರೇರಣೆಯಾದವೆಂಬುದೂ ನಿಜ.

ಆ ದೃಷ್ಟಿಯಿಂದ ಕರ್ನಾಟಕದಲ್ಲಿ ಗುರುತಿಸಬಹುದಾದ ಮಹತ್ವಪೂರ್ಣ ಎನ್ನಬಹುದಾದ ಮೊದಲ ಚಳವಳಿ ಎಂದರೆ ಮಲಪ್ರಭಾ ರೈತರ ಚಳವಳಿ. ಇದಕ್ಕೂ ಮುನ್ನ ಕಮ್ಯುನಿಸ್ಟ್ ಪಾರ್ಟಿಯ ಬಿ. ವಿ. ಕಕ್ಕಿಲಾಯ, ಶ್ರೀನಿವಾಸಗುಡಿ ಅವರಂಥವರು ರೈತರಿಗೆ ಬಂಡವಾಳ ಷಾಹಿಗಳಿಂದ ಆಗುತ್ತಿರುವ ಅನ್ಯಾಯದ ವಿರುದ್ಧ ಹೋರಾಡಿದ್ದೂ ಇದೆ. ೧೯೭೭ರಷ್ಟು ಹಿಂದೆಯೇ ಕಮ್ಯುನಿಸ್ಟರು ಕಟ್ಟಿದ್ದ ಜಿಲ್ಲಾ ರೈತ ಸಂಘಗಳು ಮಾಗಡಿ ತಾಲ್ಲೂಕಿನ ಮರಿಕುಪ್ಪೆಯಲ್ಲಿ ಸಮ್ಮೇಳನವೊಂದನ್ನು ನಡೆಸಿ ಕೃಷಿಯ ಕನಿಷ್ಟ ಬೆಲೆಯನ್ನು ಏರಿಸಬೇಕು. ಗ್ರಾಮೀಣ ಪ್ರದೇಶಗಳಲ್ಲಿ ನ್ಯಾಯಬೆಲೆ ಅಂಗಡಿಗಳನ್ನು ತೆಗೆಯಬೇಕು ಎಂದು ಒತ್ತಾಯ ಮುಂದಿಟ್ಟಿದ್ದವು. ೧೯೭೪ರಲ್ಲಿ ರೈತ ಸಂಘ ಕೂಡಾ ಬತ್ತ, ಹತ್ತಿ ಕಬ್ಬು, ನೆಲಗಡಲೆ, ರೇಷ್ಮೆ, ಜೋಳಗಳ ಬೆಲೆ ಏರಿಸದಿದ್ದರೆ ರಾಜ್ಯಾದ್ಯಂತ ಪ್ರತಿಭಟನೆ ನಡೆಸುವುದಾಗಿ ಬೆದರಿಕೆಯೊಡ್ಡಿತು. ಆದರೆ ಹೀಗೆ ಬೆದರಿಕೆಯೊಡ್ಡಿದ ಸಿ.ಪಿ.ಐ.ನ ರೈತಸಂಘಕ್ಕೆ ವ್ಯಾಪಕವಾದ ಜಾಲ ಇರಲಿಲ್ಲ. ಸಾಲದ್ದಕ್ಕೆ ದೊಡ್ಡ ಹಾಗೂ ಮಧ್ಯಮ ವರ್ಗದ ರೈತರಿಗೆ ಸಿಪಿಐ ಬಗ್ಗೆ ನಂಬಿಕೆ ಇರಲಿಲ್ಲ. ಕಾರಣ ಸಿಪಿಐ ಎಷ್ಟಾದರೂ ಕೂಲಿಕಾರರು ಹಾಗೂ ಸಣ್ಣ ರೈತರ ಬಗ್ಗೆ ಆಕರಾಸ್ಥೆಯುಳ್ಳದ್ದು. ಹೀಗಿರುವಾಗ ಅದರ ಹೋರಾಟ ಅಂತಿಮವಾಗಿ ತಮಗೆ ಲಾಭ ತಂದುಕೊಡುವುದಿಲ್ಲ ಎಂಬ ಅನುಮಾನ ಅವರಿಗೆ ಇತ್ತು. ಹೀಗಾಗಿ ಸಿಪಿಐ ನಡೆಸಿದ ರೈತ ಹೋರಾಟಗಳಿಗೆ ವ್ಯಾಪಕವಾದುದೊಂದು ನೆಲೆಗಟ್ಟು ದಕ್ಕಲಿಲ್ಲ.

ಆ ದೃಷ್ಟಿಯಿಂದ ಕರ್ನಾಟಕದ ರೈತ ಶಕ್ತಿ ದೊಡ್ಡ ಮಟ್ಟದಲ್ಲಿ ತಲೆಯೆತ್ತಿ ನಿಂತದ್ದು ಮಲಪ್ರಭಾ ಹೋರಾಟದಲ್ಲಿ. ನೀರಾವರಿ ಬರುವ ಮುಂಚೆ ಧಾರವಾಡ ಜಿಲ್ಲೆಯ ಮಲಪ್ರಭಾ ಬರಪೀಡಿತ ಪ್ರವೇಶ. ನೀರಾವರಿ ಬಂದಮೇಲೆ ಆ ಪ್ರದೇಶದಲ್ಲಿ ವ್ಯಾಪಾರೀಕರಣಕ್ಕೆ ಚಾಲನೆ ದೊರೆಯಿತು. ಲಾಭ ಬೆಳೆಯ ಹತ್ತಿ ಹೈಬ್ರಿಡ್ ಜೋಳವನ್ನು ಲಘು ನೀರಾವರಿಯೊಂದಿಗೆ ಬೆಳೆಸಲು ಅಲ್ಲಿನ ರೈತರನ್ನು ಪ್ರೋತ್ಸಾಹಿಸಲಾಯಿತು. ಪರಿಣಾಮ? ಹೆಚ್ಚು ತಳಿಗಾಗಿ ಹೈಬ್ರಿಡ್ ಬೀಜ. ರಾಸಾಯನಿಕ ಖರೀದಿಸಬೇಕಾಗಿ ಬಂದ ರೈತ ಸುಧಾರಿಸಿಕೊಳ್ಳಲಿಲ್ಲ. ಬದಲಿಗೆ ಸಾಲ ಹೆಚ್ಚಾಯಿತು. ಸಾಲದೆಂಬಂತೆ ಸರ್ಕಾರ ನೀರಾವರಿ ನೀಡಿದ ಕಾರಣದಿಂದ ಅಭಿವೃದ್ಧಿ ಶುಲ್ಕ ಸಂಗ್ರಹಿಸುವ ಕಾರ್ಯಕ್ಕೂ ಇಳಿಯಿತು. ಪರಿಣಾಮವಾಗಿ ಅಧಿಕವಾಗಿ ಕುಸಿದ ರೈತ ಮುಂದೇನು ಎಂದು ಯೋಚಿಸುವ ನೆಲೆ ಸೃಷ್ಟಿ ಆಯಿತು. ಈ ಸಂದರ್ಭದಲ್ಲಿ ಮುಖ್ಯಮಂತ್ರಿಯಾಗಿದ್ದ ದೇವರಾಜ ಅರಸು ರೈತರ ಕೂಗಿಗೆ ಸ್ಪಂದಿಸುವ ಪ್ರಯತ್ನ ಮಾಡಿದರು. ೭೯ರ ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಸಭೆಯಲ್ಲಿ ಪಾಲುಗೊಂಡು ರೈತರಿಗೆ ಅನುಕೂಲವಾಗುವಂತಹ ಯೋಜನೆಗಳು ರೂಪುಗೊಳ್ಳಬೇಕು. ರೈತರು- ಗ್ರಾಹಕರ ನಡುವೆ ದಲ್ಲಾಳಿಗಳ ಕಾಟ ಇರದಂತೆ ನೋಡಿಕೊಳ್ಳಬೇಕು ಎಂದು ಪ್ರತಿಪಾದನೆ ಮಾಡಿದರು.

ಆದರೆ ಈ ವಿಷಯದಲ್ಲಿ ಕೇಂದ್ರದಿಂದ ನಿರೀಕ್ಷಿತ ಸಹಕಾರ ದೊರೆಯಲಿಲ್ಲ. ಇದಾದ ನಂತರ ಪಲ್ಲಟಗೊಂಡ ರಾಜಕೀಯ ವ್ಯವಸ್ಥೆ ಗುಂಡೂರಾಯರನ್ನು ಮುಖ್ಯಮಂತ್ರಿ ಹುದ್ದೆಯ ಮೇಲೆ ಕೂರಿಸಿತು. ಈ ಹಂತದಲ್ಲಿ ತೀವ್ರತೆ ಪಡೆದ ಮಲಪ್ರಭ ಚಳವಳಿಯು ರೈತರ ಸಾಲವನ್ನು ಮನ್ನಾ ಮಾಡುವುದು ಕೃಷಿ ಬೆಳೆಗೆ ಬೆಂಬಲ ಬೆಲೆ ನೀಡುವುದು ಸೇರಿದಂತೆ ಹಲವು ಬೇಡಿಕೆಗಳನ್ನು ಮುಂದಿಟ್ಟಿತು. ಅಷ್ಟೇ ಅಲ್ಲ, ಈ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯಿಸಲು ೧೯೮೦ ಜೂನ್ ೩೦ ರಂದು ಬೃಹತ್ ಸಮ್ಮೇಳನವೊಂದು ನಡೆಯಿತು. ಹತ್ತು ಸಹಸ್ರ ರೈತರು ಭಾಗವಹಿಸಿದ ಮಲಪ್ರಭ ಚಳವಳಿ ರಾಜ್ಯದಲ್ಲಿ ನಡೆದ ಬೃಹತ್ ಚಳವಳಿಗಳಲ್ಲೊಂದು.

ಮುಂದೆ ಚಳವಳಿಯ ಭಾಗವಾಗಿ ಜುಲೈ ೨೧ರಂದು ನರಗುಂದ, ನವಲಗುಂದ, ಸೌದತ್ತಿಗಳಲ್ಲಿ ಬಂದ್ ಆಚರಿಸಲಾಯಿತು. ನವಲಗುಂದದಲ್ಲಿ ಪರಿಸ್ಥಿತಿ ವಿಕೋಪಕ್ಕೆ ಹೋಗಿ ಲಾಠಿ ಚಾರ್ಜ್, ಗೋಲಿಬಾರ್ ನಡೆಯಿತು. ಒಬ್ಬ ರೈತ ಗುಂಡಿಗೆ ಆಹುತಿಯಾದ. ನರಗುಂದಲ್ಲೂ ಅದರ ಪುನರಾವರ್ತನೆಯಾಯಿತು.

ಒಟ್ಟಾರೆಯಾಗಿ ಮಲಪ್ರಭ ಚಳವಳಿಯ ಪರಿಣಾಮವಾಗಿ ರೈತರು, ಪೊಲೀಸರು ಸೇರಿದಂತೆ ಸುಮಾರು ಇಪ್ಪತ್ತು ಜನ ಮೃತರಾದರು. ಹೀಗೆ ಅಧಿಕ ಶೋಷಣೆಗೆ ಗುರಿಯಾದ ಭಾವನೆಯೊಂದಿಗೆ ರೂಪುಗೊಂಡ ರೈತ ಚಳವಳಿ ಈ ಮಟ್ಟಿಗೆ ತಲುಪಿದ್ದು ದಾಖಲೆಯೇ. ಮುಂದೆ ಈ ಹೋರಾಟದ ಫಲವಾಗಿ ಗುಂಡೂರಾಯರ ಸರ್ಕಾರ ರೈತರಿಗೆ ಎಂಬತ್ತು ಕೋಟಿ ರೂ.ಗಳ ರಿಯಾಯಿತಿ ಲಭ್ಯವಾಗುವ ಯೋಜನೆಗಳನ್ನು ಪ್ರಕಟಿಸಿತು. ಅದು ರೈತರಿಗೆ ಸಮಾಧಾನ ತರಲಿಲ್ಲ ಎಂಬುದು ಒಂದು ವಿಷಯವಾದರೆ, ಮಲಪ್ರಭಾ ಹೋರಾಟದಿಂದ ಕಾವೇರಿ, ತುಂಗಭದ್ರಾ ನದಿ ಪ್ರದೇಶದ ರೈತರೂ ಪ್ರೇರಿತರಾಗಿ ಕಣಕ್ಕಿಳಿದರು ಎಂಬುದು ಮತ್ತೊಂದು ಮುಖ್ಯ ವಿಷಯ.

★ ★ ★

ಮಲಪ್ರಭಾ ಹೋರಾಟದ ನಂತರ ರಾಜ್ಯದ ವಿವಿದೆಡೆ ರೈತ ಸಂಘಗಳು ಕ್ರಿಯಾಶೀಲವಾದುವಷ್ಟೇ ಅಲ್ಲ, ಆ ಮೂಲಕ ಹೆಚ್.ಎಸ್. ರುದ್ರಪ್ಪ, ಎನ್.ಡಿ. ಸುಂದರೇಶ ಹಾಗೂ ಪ್ರೊ। ಎಂ. ಡಿ. ನಂಜುಂಡಸ್ವಾಮಿ ನೇತೃತ್ವದ ಕರ್ನಾಟಕ ರಾಜ್ಯ ರೈತ ಸಂಘ ದೊಡ್ಡ ಮಟ್ಟದಲ್ಲೇ ತಳವೂರಿತು.

ಅಷ್ಟೇಅಲ್ಲ, ೧೯೮೦ರ ಅಕ್ಟೋಬರ್ ಹದಿನೇಳರಂದು ಗುಂಡೂರಾಯರನ್ನು ಭೇಟಿ ಮಾಡಿ ಹತ್ತೊಂಬತ್ತು ಬೇಡಿಕೆಗಳನ್ನು ಮುಂದಿಟ್ಟಿತು. ಒಂದು ದೃಷ್ಟಿಯಿಂದ ರೈತ ಚಳವಳಿಗೆ ತುಂಬು ಪ್ರಾಬಲ್ಯ ಅಂತ ಬಂದದ್ದೆ ಈ ಕಾಲಘಟ್ಟದಿಂದ. ರೈತರಿಗೆ ಸರ್ಕಾರ ಮಾಡುತ್ತಿರುವ ವಂಚನೆ, ಹಣಕಾಸು ಸಂಸ್ಥೆಗಳು ಮಾಡುತ್ತಿರುವ ಮೋಸ, ಭೂಕಂದಾಯವನ್ನು ರದ್ದು ಮಾಡುವ ಅನಿವಾರ್ಯತೆ, ಕೃಷಿ ಬೆಳೆಗಳಿಗೆ ಮತ್ತು ಔದ್ಯೋಗಿಕ ವಸ್ತುಗಳ ಬೆಲೆಗಳಿಗೆ ಸಮತೋಲನ ತರಬೇಕಾದ ನಿಷ್ಠುರತೆ, ಬೆಳೆ ವಿಮೆಯ ಬಗ್ಗೆ ಒತ್ತಡ - ಹೀಗೆ ಹಲವಾರು ವಿಷಯಗಳನ್ನು ಮುಖ್ಯವಾಗಿರಿಸಿಕೊಂಡ ರೈತ ಚಳವಳಿ ಕ್ರಮೇಣ ಬಲಿಷ್ಠವಾಗುತ್ತಾ ಹೋಯಿತು. ರಾಜ್ಯದ ಪ್ರತೀ ಗ್ರಾಮಗಳಿಗೆ ಸರ್ಕಾರ ಅಥವಾ ಬ್ಯಾಂಕಿನ ಪ್ರತಿನಿಧಿ ಬರಬೇಕೆಂದರೆ ಮುಖಂಡರ ಅನುಮತಿ ಕೇಳಬೇಕು ಎಂದು ಪಟ್ಟು ಹಿಡಿಯುವವರೆಗೆ ಬೆಳೆಯಿತು. ಇದಾದ ನಂತರ ಕರ್ನಾಟಕ ಪ್ರಾಂತ ರೈತ ಸಂಘ, ರಾಜ್ಯ ಕರ್ನಾಟಕ ರೈತ ಸಂಘ ನಡೆಸಿದ ಹೋರಾಟಗಳು ಒಂದೆರಡಲ್ಲ. ನಿಪ್ಪಾಣಿಯ ತಂಬಾಕು ಬೆಳೆಗಾರರ ಸಮಸ್ಯೆಯಿಂದ ಹಿಡಿದು, ಕಬ್ಬು ಬೆಳೆಗಾರರ ಸಮಸ್ಯೆಯವರೆಗೆ ಹಲವು ವಿಷಯಗಳನ್ನು ಮುಂದಿಟ್ಟುಕೊಂಡು ರೈತ ಸಂಘಟನೆಗಳು ಹೋರಾಡುತ್ತಾ ಬಂದಿವೆ.

ಈ ಎಲ್ಲದರ ನಡುವೆ ಕಾಲಕಾಲಕ್ಕೆ ನಾಯಕರು ಬದಲಾಗಿದ್ದಾರೆ, ಸಂಘಟನೆಗಳ ಸ್ವರೂಪ ಬದಲಾಗಿದೆ. ಕೃಷಿ ವಸ್ತುಗಳ ಬೆಲೆ, ಕೈಗಾರಿಕಾ ಉತ್ಪನ್ನಗಳ ಬೆಲೆಗೆ ಹೋಲಿಸಿದರೆ ತೀವ್ರ ಅಸಮತೋಲನ ಇರಕೂಡದು ಎಂಬ ಬೇಡಿಕೆಯೊಂದಿಗೆ ಹೋರಾಟ ನಡೆದೇ ಇದೆ. ಭಾರತೀಯ ವ್ಯವಸ್ಥೆಯಲ್ಲಿರುವ ಲೋಪ ದೋಷಗಳನ್ನು ಗಮನಿಸಿದರೆ ಅವು ನಡೆಯುತ್ತಲೇ ಇರಬೇಕಾಗುತ್ತದೆ. ಒಂದು ದೃಷ್ಟಿಯಿಂದ ಇದು ಅನಿವಾರ್ಯ, ವಿಪರ್ಯಾಸ.



ಆದರೆ ಈವತ್ತಿನ ಕಾಲಘಟ್ಟದಲ್ಲಿ ನಿಂತು ನೋಡಿದರೆ ರೈತ ಚಳವಳಿಗಳಿಗೆ ಕಾವು ಕಡಿಮೆಯಾಗಿದೆ ಅನ್ನಿಸುತ್ತದೆ. ಹಾಗಂತ ರೈತರ ಸಮಸ್ಯೆಗೇನೂ ಶಾಶ್ವತ ಪರಿಹಾರ ದೊರಕಲಿಲ್ಲ. ಹಸಿರು ಕ್ರಾಂತಿಯ ಕನಸಿನಲ್ಲಿ ಕೃಷಿ ಬೆಳೆಯ ಬೆಲೆ ಹೇಗೆ ಕುಸಿದುಹೋಯಿತೋ ಅದರಂತೆ ಗಂಡಾಂತರಕಾರಿಯಾದ ಪರಿಸ್ಥಿತಿಯಲ್ಲಿ ಇವತ್ತಿನ ರೈತ ನಿಂತಿದ್ದಾನೆ. ಮುಕ್ತ ಮಾರುಕಟ್ಟೆ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಮೇಲೆ ಒಂದು ರಾಷ್ಟ್ರದ ಉತ್ಪನ್ನ ಮತ್ತೊಂದು ರಾಷ್ಟ್ರಕ್ಕೆ ಮುಕ್ತವಾಗಿ ಸರಬರಾಜಾಗಬಹುದು ಎಂಬ 'ಗ್ಯಾಟ್' ಸೂತ್ರಕ್ಕೆ ದೇಶ ಬದ್ಧವಾದ ಮೇಲೆ ರೈತನ ಸ್ಥಿತಿ ಮತ್ತಷ್ಟು ಗಂಭೀರವಾಗಿದೆ. ಇವತ್ತು ಆಸ್ಟ್ರೇಲಿಯಾದಂತಹ ದೇಶ ಎರಡು ರೂ. ಮೌಲ್ಯಕ್ಕೆ ಒಂದು ಕೆ.ಜಿ. ಗೋಧಿಯನ್ನು ಸರಬರಾಜು ಮಾಡಿದರೆ, ಶ್ರೀಲಂಕಾದಂತಹ ದೇಶ ನಾಲ್ಕು ರೂಪಾಯಿಗೊಂದು ಲೀಟರು ಹಾಲು ನೀಡಬಲ್ಲುದಾದರೆ, ಕೆನಡಾದಂತಹ ದೇಶ ಇಪ್ಪತ್ತು-ಇಪ್ಪತ್ತೆರಡು ರೂ.ಗಳಿಗೆ ಇನ್ನಾವುದೋ ವಸ್ತು ಒದಗಿಸುತ್ತದೆ ಅಂತ ಆದರೆ ಅದರ ನೇರ ಪರಿಣಾಮವಾಗುವುದು ಕೃಷಿಕನಿಗೆ.

ಆಧುನಿಕ ಜಗತ್ತಿಗೆ ಗ್ರಾಹಕನೇ ದೊರೆ ಎಂಬ ಮಂತ್ರ ಚಾಲ್ತಿಯಲ್ಲಿರುವಾಗ ಇಂತಹದೊಂದು ಬೆಳವಣಿಗೆ ನಡೆದರೆ ಇಲ್ಲಿ ಬೆಳೆವ ಬತ್ತ, ಗೋಧಿ, ಕಬ್ಬುಗಳ ಗತಿ ಏನು? ದುಬಾರಿ ವೆಚ್ಚದಲ್ಲಿ ಅದನ್ನು ಉತ್ಪಾದಿಸಿದ ರೈತ ಮಾರುಕಟ್ಟೆಗೆ ಹೋಗುವ ಅರ್ಹತೆಯನ್ನೇ ಕಳೆದುಕೊಂಡರೆ ಭವಿಷ್ಯದಲ್ಲಿ 'ವ್ಯವಸ್ಥೆಯ' ಗತಿಯೇನು? ಇದು ಈವತ್ತಿನ ಅತ್ಯಂತ ಮುಖ್ಯ ಪ್ರಶ್ನೆ. ಉತ್ತರ ನೀಡಬೇಕಾದ ಸರ್ಕಾರಗಳು 'ಗ್ಯಾಟ್'ಗೆ ತಲೆಬಾಗಿರುವಾಗ ಈ ಪ್ರಶ್ನೆಗೆ ಪರಿಹಾರ ಕಂಡುಕೊಳ್ಳುವುದು ಸುಲಭವಲ್ಲ.

ರೈತ ನಾಯಕರೊಬ್ಬರು ಹೇಳುವಂತೆ ಅಮೆರಿಕದಂತಹ ದೇಶ ಬೀಜರಹಿತ ಬೆಳೆಗಳ ಸೃಷ್ಟಿಮಾಡುತ್ತಾ, ಹಸಿರು ಕ್ರಾಂತಿಯ ನೆಪದಲ್ಲಿ ಅಭಿವೃದ್ಧಿಶೀಲ ದೇಶಗಳನ್ನು ಅದರ ಬಲೆಗೆ ಬೀಳಿಸುತ್ತಾ, ಕಾಲಕ್ರಮೇಣ ಅಂತಹ ದೇಶಗಳು ಬೀಜ ಬಿತ್ತಲೂ ತನ್ನನ್ನೇ ಅವಲಂಬಿಸುವ ಪರಿಸ್ಥಿತಿ ತರುತ್ತದೆ. ಒಂದು ವ್ಯವಸ್ಥೆ ನಾಶವಾಗಲು ಇದಕ್ಕಿಂತ ಬೇರೆ ಕಾರಣ ಬೇಕಿಲ್ಲ ಎಂಬುದನ್ನು ನೆನಪಿಸಿಕೊಂಡರೆ ಪರಿಸ್ಥಿತಿಯ ಗಂಭೀರತೆ ಅರ್ಥ ಆಗುತ್ತದೆ. ಇಂತಹದೊಂದು ಸಂದರ್ಭದಲ್ಲಿ ರೈತ ಚಳವಳಿಯನ್ನು ಅಖಂಡವಾಗಿ ನಿಲ್ಲಿಸಬೇಕು, ಸರ್ಕಾರಗಳ ವಿರುದ್ಧ ಹೋರಾಡಬೇಕು, ಗ್ಯಾಟ್‌ನಂತಹ ಒಪ್ಪಂದಗಳಿಂದ ಹಿಂದೆ ಸರಿಯಬೇಕು ಎಂಬಂತಹ ಮಾತುಗಳು ಪದೇ ಪದೇ ಕೇಳಿಬರುತ್ತವೆ. ಆದರೆ ಹೇಗೆ? ಎಂಬ ಬಗ್ಗೆ ಉತ್ತರ ನೀಡುವವರು ಇಲ್ಲ. ಅಂದಹಾಗೆ ಗುಂಡೂರಾಯರ ಕಾಲದಲ್ಲಿ ದೈತ್ಯ ಶಕ್ತಿಯಾಗಿ ಬೆಳೆದು ನಿಂತ ರೈತ ಚಳವಳಿ ಕೆಲವೇ ವರ್ಷಗಳಲ್ಲಿ ಏಕೆ ಸೊರಗಿತು ಎಂಬುದಕ್ಕೆ ಉತ್ತರ ಕಂಡುಕೊಂಡರೆ ಮುಂದಿನ ದಾರಿ ಕಾಣಬಹುದೋ ಏನೋ.

ಈ ಪ್ರಶ್ನೆಯನ್ನು ಎದುರಿಗಿಟ್ಟುಕೊಂಡಾಗ 'ಕರ್ನಾಟಕ ರಾಜ್ಯ ರೈತ ಸಂಘದ' ರಾಜಕೀಯ ಆಕಾಂಕ್ಷೆ ಚಳವಳಿಯ ಬಲವನ್ನು ಕುಗ್ಗಿಸಿತು ಎಂಬ ಭಾವನೆ ಬರುತ್ತದೆ. ಯಾಕೆಂದರೆ ಚಳವಳಿಯ ಪ್ರತಿಫಲವಾಗಿ ೧೯೮೩ರಲ್ಲಿ ಅಧಿಕಾರಕ್ಕೆ ಬಂದ ಜನತಾಪಕ್ಷದ ಸರ್ಕಾರ ಮೂಲಭೂತವಾಗಿ ಲಿಂಗಾಯಿತ ಹಾಗೂ ಒಕ್ಕಲಿಗ ವರ್ಗಗಳ ಶಕ್ತಿಯೊಂದಿಗೆ ರೂಪುಗೊಂಡಿತು. ವೈಯಕ್ತಿಕ ನೆಲೆಯಲ್ಲಿ ನೋಡಿದರೆ ಕಾಂಗ್ರೆಸ್‌ನ ಭೂಸುಧಾರಣಾ ಕಾಯ್ದೆಯಿಂದ ದೊಡ್ಡ ಮಟ್ಟದ ನಷ್ಟ ಅನುಭವಿಸಿದವರೇ ಒಕ್ಕಲಿಗರು ಮತ್ತು ಲಿಂಗಾಯಿತರು. ಕರ್ನಾಟಕದ ನೆಲೆಗಟ್ಟಿನಲ್ಲಿ ಹೆಚ್ಚಿನ ಭೂಮಿ ಅಂಶ ಹೊಂದಿದ್ದುದೇ ಈ ಎರಡು ವರ್ಗಗಳು.

ಯಾವಾಗ ಉಳುವವನೇ ಹೊಲದೊಡೆಯ ಎಂಬ ಪರಿಕಲ್ಪನೆಯೊಂದಿಗೆ ಅರಸು ಭೂಸುಧಾರಣಾ ಕಾಯ್ದೆಯನ್ನು ಜಾರಿಗೆ ತಂದರೋ, ಅವತ್ತು ಆತಂಕಗೊಂಡ ಈ ಎರಡು ವರ್ಗಗಳು ಸಹಜವಾಗಿಯೇ ಕಾಂಗ್ರೆಸ್ ಚಿಂತನೆಗೆ ವಿರುದ್ಧವಾದವು. ಇದೇ ಪರಿಸ್ಥಿತಿ ಮುಂದುವರಿದರೆ ಆರ್ಥಿಕವಾಗಿ ಕುಸಿಯಬೇಕಾಗುತ್ತದೆ ಎಂಬ ಎಚ್ಚರಿಕೆಯೊಂದಿಗೆ ಜೆ.ಪಿ. ಅವರ ಸರ್ವೋದಯ ಚಳವಳಿಯೊಂದಿಗೆ, ಆ ಮೂಲಕ ಜನತಾ ಪಕ್ಷದೊಂದಿಗೆ ಗುರುತಿಸಿಕೊಂಡರು. ಅದೇ ಕಾಲಕ್ಕೆ ಗುಂಡೂರಾಯರ ಸರ್ಕಾರದ ವಿರುದ್ಧ ನಡೆದ ರೈತ ಚಳವಳಿಗೆ ಸಾದ್ಯಂತ ಬೆಂಬಲ ನೀಡಿದವು. ಹೀಗೆ ಕಾಂಗ್ರೆಸ್ ಸರಕಾರದ ಪತನವಾಗುವವರೆಗೆ ರೈತ ಚಳವಳಿಯ ಮುಂಚೂಣಿಯಲ್ಲಿದ್ದ ವರ್ಗಗಳು ಜನತಾ ಪಕ್ಷ ಅಧಿಕಾರಕ್ಕೆ ಬರುತ್ತಿದ್ದಂತೆಯೇ ಹಿಂದೆ ಸರಿಯತೊಡಗಿದವು. ತದನಂತರದ ದಿನಗಳಲ್ಲಿ, ಅಂದರೆ ಜನತಾ ಪಕ್ಷದ ಸರ್ಕಾರ ಅಸ್ತಿತ್ವಕ್ಕೆ ಬಂದ ದಿನಗಳಲ್ಲಿ ರೈತ ಹೋರಾಟದ ಖದರು ಇಳಿಯುತ್ತಾ ಹೋಯಿತು ಎಂಬುದನ್ನು ಗಮನಿಸಿದರೆ ಅದು ಸ್ಪಷ್ಟವಾಗುತ್ತದೆ.

ಅಂದರೆ?

ಯಾವ ಸರ್ಕಾರ ಬರಬೇಕೆಂದು ರಾಜ್ಯದ ಎರಡು ಪ್ರಬಲ ವರ್ಗಗಳು ಹವಣಿಸಿದವೋ, ಅಂತಹ ಸರ್ಕಾರದ ವಿರುದ್ಧ 'ರೈತ ಚಳವಳಿ'ಗೆ ಬೆಂಬಲ ನೀಡಲು ಅವು ತಯಾರಿರಲಿಲ್ಲ ಹಾಗೂ ಜಾತಿಯ ನೆಲೆಗಟ್ಟು ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಸೂಕ್ಷ್ಮವಾಗಿಯೇ ಅರಿತಿದ್ದ ಜನತಾ ಪಕ್ಷದ ನಾಯಕರು ಚಳವಳಿಯ ನಾಯಕರನ್ನು ನಿರಂತರವಾಗಿ ಬೇರ್ಪಡಿಸುವ ಕೆಲಸ ಮಾಡಿದರು. ಆ ಕಾರ್ಯದಲ್ಲಿ ಯಶಸ್ವಿಯೂ ಆದರು. ಈ ಮಧ್ಯೆ ಚಳವಳಿಯ ನಾಯಕರು ಮಾಡಿದ ದೊಡ್ಡ ತಪ್ಪೆಂದರೆ ರೈತರಿಗೆ ರಾಜಕೀಯ ಅಧಿಕಾರ ಸಿಗಬೇಕು ಎಂದು ಬಯಸಿದ್ದು. ಅದರರ್ಥ, ರೈತನಿಗೆ ರಾಜಕೀಯ ಅಧಿಕಾರ ಪಡೆಯುವ ಆಸೆ ಬರಬಾರದೆಂತಲ್ಲ. ಆದರೆ ಜನತಾ ಪಕ್ಷದ ಮೂಲ ಶಕ್ತಿಗಳೇ ರೈತ ಚಳವಳಿಯ ಮೂಲ ಶಕ್ತಿಗಳಾಗಿದ್ದವು. ಈಗ ರೈತ ಚಳವಳಿಯ ನಾಯಕರಿಗೆ ಅಧಿಕಾರ ದೊರೆಯಬೇಕು ಎಂಬ ಕಾರಣಕ್ಕಾಗಿ ಅವು ಜನತಾ ಪಕ್ಷವನ್ನು ಉರುಳಿಸುವ ಸ್ಥಿತಿಯಲ್ಲಿಲ್ಲ ಎಂಬುದು ಚಳವಳಿಯ ನಾಯಕರಿಗೆ ಮನವರಿಕೆಯಾಗಬೇಕಿತ್ತು.

ಆದರೆ ಹಾಗಾಗಲಿಲ್ಲ, ತೊಂಬತ್ತರ ಸುಮಾರಿನಲ್ಲಿ 'ಅಭಿಮಾನಿ' 'ಪ್ರತ್ರಿಕೆಗಾಗಿ ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ। ಎಂ.ಡಿ. ನಂಜುಂಡಸ್ವಾಮಿಯವರನ್ನು ನಾನೇ ಸಂದರ್ಶಿಸಿದ್ದೆ. ಆ ಸಂದರ್ಭದಲ್ಲವರು ಎಷ್ಟು ಉನ್ನತಾಕಾಂಕ್ಷಿಗಳಾಗಿದ್ದರೆಂದರೆ ವಿಧಾನಸೌಧದ ಮೇಲೆ ರೈತರ ಬಾವುಟ ಹಾರಿಸುತ್ತೇವೆ. ಗದ್ದುಗೆ ಏರಿ ರೈತರ ಕಷ್ಟ ಪರಿಹರಿಸುತ್ತೇವೆ ಎಂದಿದ್ದರು. ಅವತ್ತು ರಾಜ್ಯ ವಿಧಾನಸಭೆಯಲ್ಲಿ ರೈತ ಸಂಘವನ್ನು ಪ್ರತಿನಿಧಿಸುತ್ತಿದ್ದವರೇ ಇಬ್ಬರು. ಅವರಲ್ಲಿ ಒಬ್ಬರು ಬಾಬಾಗೌಡ ಪಾಟೀಲ, ಮತ್ತೊಬ್ಬರು ಪ್ರೊ। ಎಂ. ಡಿ. ನಂಜುಂಡಸ್ವಾಮಿ. ಮುಂದೆ ಈ ಬಲ ಒಂದಕ್ಕೆ ಇಳಿದು, ತೊಂಬತ್ತೊಂಬತ್ತರ ಚುನಾವಣೆಯಲ್ಲಿ ತುಂಬು ಶೂನ್ಯಕ್ಕಿಳಿಯಿತು ಎಂಬುದನ್ನು ಗಮನಿಸಿದರೆ ಜಾತೀಯ ಶಕ್ತಿಗಳು ಅದೆಷ್ಟು ತೀವ್ರಗತಿಯಲ್ಲಿ ಚಳವಳಿಯಿಂದ ಹಿಂದೆ ಸರಿದಿದ್ದವು ಎಂಬುದು ಸ್ಪಷ್ಟವಾಗುತ್ತದೆ.

★ ★ ★

ಕೊನೆಯದಾಗಿ ಒಂದಷ್ಟು ವಿವರಗಳನ್ನು ದಾಖಲಿಸಬೇಕಿದೆ. ರೈತ ಚಳವಳಿಗೆ ರಾಜಕೀಯ ಭವಿಷ್ಯವಿಲ್ಲ ಎಂಬುದನ್ನು ಮನದಟ್ಟು ಮಾಡಿಕೊಂಡ ಬಾಬಾಗೌಡ ಪಾಟೀಲ್ ಬಿ.ಜೆ.ಪಿ.ಗೆ ವಲಸೆ ಹೋದರು. ಕೇಂದ್ರ ಮಂತ್ರಿಯಾದರು. ಈ ಮಧ್ಯೆ ಒಕ್ಕಲಿಗ-ಲಿಂಗಾಯತ ವರ್ಗಗಳೇ ರೈತ ಚಳವಳಿಯನ್ನು ದೊಡ್ಡ ಮಟ್ಟದಲ್ಲಿ ಬೆಂಬಲಿಸುವ ಮನಸ್ಸು ಮಾಡಲಿಲ್ಲ. ಯಾಕೆಂದರೆ ಕಾಲದಿಂದ ಕಾಲಕ್ಕೆ ಅಸ್ತಿತ್ವಕ್ಕೆ ಬರುವ ಸರ್ಕಾರಗಳ ಮೇಲೆ ಹಿಡಿತವಿರಿಸಿಕೊಳ್ಳುವುದು ಸೂಕ್ತ ಎಂಬ ಅಭಿಪ್ರಾಯ ಆ ವರ್ಗಗಳಲ್ಲಿದ್ದಂತಿತ್ತು. ಉದಾಹರಣೆಯಾಗಿ ನೋಡಬೇಕೆಂದರೆ, ಎಂಬತ್ತೊಂಬತ್ತರಲ್ಲಿ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬಂದಾಗ ಲಿಂಗಾಯತ ಹಾಗೂ ಒಕ್ಕಲಿಗ ವರ್ಗಗಳೆರಡೂ ಅದರ ಬೆನ್ನಿಗೆ ನಿಂತಿದ್ದವು. ಯಾವ ಬೊಮ್ಮಾಯಿ ಸರ್ಕಾರವನ್ನು ವಜಾ ಮಾಡಿ ಕರ್ನಾಟಕದಲ್ಲಿ ರಾಷ್ಟ್ರಪತಿ ಆಡಳಿತ ಹೇರುವ ಸಾಹಸವನ್ನು

ಕಾಂಗ್ರೆಸ್ ಮಾಡಿತ್ತೋ ಅದೇ ಕಾಂಗ್ರೆಸ್ ಲಿಂಗಾಯತ ವರ್ಗದ ತೃಪ್ತಿಗಾಗಿ ವೀರೇಂದ್ರ ಪಾಟೀಲರನ್ನು ಭವಿಷ್ಯದ ಮುಖ್ಯಮಂತ್ರಿ ಎಂದು ಪ್ರತಿಬಿಂಬಿಸಿ ಚುನಾವಣಾ ಕಣಕ್ಕೆ ಇಳಿದಿತ್ತು.

ಇದಾದ ನಂತರ ವೀರೇಂದ್ರ ಪಾಟೀಲರನ್ನು ಪದಚ್ಯುತಗೊಳಿಸಿದ ಕಾಂಗ್ರೆಸ್ ಲಿಂಗಾಯತ ವರ್ಗದ ವಿರೋಧ ಕಟ್ಟಿಕೊಂಡಿತು. ಅನಂತರದ ಅವಕಾಶ ಹಿಂದುಳಿದವರಿಗೆ ದಕ್ಕಿದ್ದರಿಂದ ಪ್ರಬಲ ಒಕ್ಕಲಿಗ ವರ್ಗ ಅಸಮಾಧಾನಗೊಂಡಿತು. ಈ ಮಾತನ್ನು ಅಂಕಗಣಿತದ ಮಾದರಿಯಲ್ಲಿ ಮಂಡಿಸಲು ಸಾಧ್ಯವಿಲ್ಲವಾದರೂ, ತೊಂಬತ್ನಾಲ್ಕರ ಚುನಾವಣೆಯಲ್ಲಿ ಜನತಾಪಕ್ಷ ಅಧಿಕಾರಕ್ಕೆ ಬಂದ ರೀತಿಯನ್ನು ಗಮನಿಸಿದರೆ ಅದು ಸ್ಪಷ್ಟವಾಗುತ್ತದೆ. ತೊಂಬತ್ತೊಂಬತ್ತರಲ್ಲೂ ಅಷ್ಟೇ.

ರಾಜಕೀಯವಾಗಿ ಲಿಂಗಾಯತ ವರ್ಗದ ಬಹುಸಂಖ್ಯಾತ ಮತಗಳು ಬಿಜೆಪಿ ಮೈತ್ರಿ ಕೂಟದಲ್ಲಿ ಲೀನವಾದವು. ಹಿಂದುಳಿದ, ಪರಿಶಿಷ್ಟ, ಅಲ್ಪಸಂಖ್ಯಾತ ವರ್ಗಗಳ ಮತಬ್ಯಾಂಕನ್ನು ಮೂಲವಾಗಿರಿಸಿಕೊಂಡ ಕಾಂಗ್ರೆಸ್ ಮುಂದೆ ತಮ್ಮ ವರ್ಗದ ನಾಯಕರಿದ್ದದ್ದನ್ನು ಪರಿಗಣಿಸಿದ ಒಕ್ಕಲಿಗ ವರ್ಗ ಆಕಡೆ ವಾಲಿತು. ಇದನ್ನೇಕೆ ಗಮನಿಸಬೇಕೆಂದರೆ, ಕರ್ನಾಟಕದ ನೆಲೆಯಲ್ಲಿ ರೈತ ಚಳವಳಿ ದೊಡ್ಡ ಮಟ್ಟದಲ್ಲಿ ನಡೆದದ್ದು ಒಕ್ಕಲಿಗ, ಲಿಂಗಾಯತ ವರ್ಗಗಳ ಬೆಂಬಲದೊಂದಿಗೆ. ಅದರದ್ದು ಬೇರೇನೂ ಅಲ್ಲ. ದೊಡ್ಡ ಮಧ್ಯಮ ವರ್ಗದ ರೈತರನ್ನು ಹೊಂದಿದ್ದುದೇ ಈ ವರ್ಗಗಳು.

ಹೀಗಾಗಿ ರೈತ ಚಳವಳಿಯಲ್ಲಿ ಕೃಷಿ ಕಾರ್ಮಿಕರಿಗೆ, ಸಣ್ಣ ರೈತರಿಗೆ ಗಣನೀಯ ಸ್ಥಾನ ಎಂಬುದು ಇರಲಿಲ್ಲ. ಪರಿಣಾಮ? ಬಲಿಷ್ಠ ವರ್ಗಗಳ ಬೆಂಬಲದೊಂದಿಗೆ ಎದ್ದು ನಿಂತ ಚಳವಳಿ, ಅವುಗಳ ನಿರಾಸಕ್ತಿಯಿಂದಲೇ ಕಳೆಗುಂದಿಹೋಯಿತು. ಅದರರ್ಥ ರೈತ ಚಳವಳಿಗೆ ಕರ್ನಾಟಕದ ನೆಲೆಗಟ್ಟಿನಲ್ಲಿ ಜಾಗವಿಲ್ಲ ಅಂತಲ್ಲ. ಮುಕ್ತ ಮಾರುಕಟ್ಟೆ ನೀತಿಯ ಫಲವಾಗಿ ಕರ್ನಾಟಕದ ನೆಲೆಗಟ್ಟಿನಲ್ಲಿ ಹೊಡೆತ ತಿನ್ನುತ್ತಿರುವುದೇ ಲಿಂಗಾಯತ ಹಾಗೂ ಒಕ್ಕಲಿಗ ವರ್ಗಗಳು. ಹೀಗಿರುವಾಗ ಅಸ್ತಿತ್ವದ ದೃಷ್ಟಿಯಿಂದಲಾದರೂ ಅವು ಹೋರಾಟದ ಕಣಕ್ಕಿಳಿಯಬೇಕಾಗುತ್ತದೆ. ಅಳಿದುಳಿದ ಸಂಘಟನೆಗಳೊಂದಿಗೆ ಮುಂದುವರಿಯಲು ಅನುವಾಗಬೇಕಾಗುತ್ತದೆ. ಅಂತೆಯೇ ಈ ಹೋರಾಟಕ್ಕೆ ಎಲ್ಲಾ ಜಾತಿ, ವರ್ಗಗಳು ಜತೆ ಕೂಡಬೇಕಾದ ಅನಿವಾರ್ಯತೆ ಕೂಡಾ ಸ್ಪಷ್ಟವಾಗುತ್ತದೆ. ಆದರೆ ಯಾವಾಗ ಇಂಥದೊಂದು ವೇದಿಕೆ ಸಜ್ಜಾಗುತ್ತದೆ? ಎಂಬ ಪ್ರಶ್ನೆಗೆ ಕಾಲ ಮಾತ್ರವೇ ಉತ್ತರ ಹೇಳಬೇಕು.

**ಪರಾಮರ್ಶನ ಗ್ರಂಥಗಳು**


೧. ಕರ್ನಾಟಕದ ರೈತ ಹೋರಾಟಗಳು : ಎಂ. ವಿ. ನಾಡಕರ್ಣಿ

೨. ಕಾಗೋಡು ಸತ್ಯಾಗ್ರಹ : ಜಿ. ರಾಜಶೇಖರ

೩. ಕರ್ನಾಟಕದಲ್ಲಿ ಭೂ ಸುಧಾರಣೆ : ಎಂ. ಎ. ಎಸ್. ರಾಜನ್

4. Political Economy of Land Reforms : ಪ್ರೊ। ಜಿ. ತಿಮ್ಮಯ್ಯ, ಅಬ್ದುಲ್ ಅಜೀಜ್

೫. ಕಾಗೋಡು ಸತ್ಯಾಗ್ರಹ : ಸಂ. ಪ್ರೊ। ಹಿ. ಚಿ. ಬೋರಲಿಂಗಯ್ಯ

೬. ಶಾಂತವೇರಿ ಗೋಪಾಲಗೌಡ : ಸಂ: ಪ್ರೊ। ಕಾಳೇಗೌಡ ನಾಗವಾರ

# ಪರಿಸರ ಚಳವಳಿ

ಡಾ। ಎಸ್ ಎನ್. ರಾಮಸ್ವಾಮಿ ಮತ್ತು ಕೆ. ಎಸ್. ನಿಂಗಪ್ಪ

ಪಾಶ್ಚಿಮಾತ್ಯ ರಾಷ್ಟ್ರಗಳಂತಲ್ಲದೆ ಭಾರತದಲ್ಲಿ ಪರಿಸರ ಚಳವಳಿಗಳನ್ನು ನಡೆಸಿರುವವರು ಮಹಿಳೆಯರು, ಗಿರಿಜನ ಮತ್ತು ಬುಡಕಟ್ಟು ಜನಾಂಗಗಳು, ಹಳ್ಳಿಯ ಜನರು, ಆಸ್ತಿ ಪಾಸ್ತಿಗಳನ್ನು ಪರಿಸರ ವಿನಾಶದಿಂದಾಗಿ ಕಳೆದುಕೊಂಡಿರುವವರು-ಮುಖ್ಯವಾಗಿ ಬಡವರು. ಇವರ ಹೋರಾಟ ಪರಿಸರ ರಕ್ಷಣೆಗೋಸ್ಕರ ಕಾಡುಗಳ ಸಂರಕ್ಷಣೆಗಿರಬಹುದು, ದೊಡ್ಡ ದೊಡ್ಡ ಅಣೆಕಟ್ಟುಗಳು ಅಥವಾ ಜಲವಿದ್ಯುತ್ ಯೋಜನೆಗಳಿಗೆ ವಿರುದ್ಧವಾಗಿರಬಹುದು, ಗಣಿಗಾರಿಕೆ ಹಾಗೂ ಗ್ರಾನೈಟ್, ಸುಣ್ಣಕಲ್ಲು ಇವುಗಳನ್ನು ಕಾಡು ಕಡಿದು ಬೆಟ್ಟಗಳಿಂದ ಹೊರತೆಗೆಯುವುದರಿಂದಾಗಿರಬಹುದು. ಈ ಚಳವಳಿಗಳು ಮತ್ತು ಹೋರಾಟಗಳಿಗೆ ಮಹಾತ್ಮ ಗಾಂಧಿಯವರ ಸತ್ಯಾಗ್ರಹಗಳು ಸ್ಫೂರ್ತಿಯೇ? ಎಂಬ ಪ್ರಶ್ನೆಯಿದ್ದೇ ಇದೆ. ಇತ್ತೀಚಿನ ಕೆಲವು ಚಳವಳಿಗೆ ಮಾತ್ರ ಅವರು ಸ್ಫೂರ್ತಿದಾಯಕರಾಗಿರು ವುದರಲ್ಲಿ ಯಾವುದೇ ಸಂಶಯವಿಲ್ಲ.

ಪರಿಸರ ಅಥವಾ ನಮ್ಮ ಕಾಡುಗಳ ರಕ್ಷಣೆಗೆ ಚಳವಳಿಗಳೇಕೆ? ಮೂಲತಃ ಭಾರತೀಯ ಸಂಸ್ಕೃತಿ ಹುಟ್ಟಿದ್ದು ಅರಣ್ಯಗಳಲ್ಲಿ. ನಮ್ಮ ಋಷಿಗಳು, ದಾರ್ಶನಿಕರು ಮತ್ತು ಗುರುಕುಲಗಳು ಇದ್ದದ್ದು ಅರಣ್ಯಗಳಲ್ಲಿನ ಆಶ್ರಮಗಳಲ್ಲಿ. ಅವರ ಧ್ಯಾನ, ಜ್ಞಾನ ಮತ್ತು ಸಂಶೋಧನೆಗಳಿಂದಲೇ ವೇದಗಳು ಮತ್ತು ಉಪನಿಷತ್ತುಗಳು ಹುಟ್ಟಿಕೊಂಡದ್ದು. ಭಾರತೀಯ ಸಂಸ್ಕೃತಿ ಪ್ರಕೃತಿಯಲ್ಲಿ ದೇವರನ್ನು ಕಾಣುತ್ತದೆ. ನಮ್ಮ ನದಿಗಳಲ್ಲಿ, ಪರ್ವತಗಳಲ್ಲಿ, ಕಾಡುಗಳಲ್ಲಿ ಮತ್ತು ಎಲ್ಲ ಜೀವಿಗಳಲ್ಲಿ ನಾವು ದೇವರನ್ನು ಕಾಣುತ್ತೇವೆ. ಮರಗಳಲ್ಲಿ ದೇವರನ್ನು ಕಾಣುವ ಸಂಪ್ರದಾಯ ಋಗ್ವೇದದಷ್ಟೇ ಹಳೆಯದು. ಈ ಕಾಲದಲ್ಲಿ ಕಾಡುಗಳನ್ನು ''ಅರಣ್ಯಾಣಿ'', ''ವನರಾಣಿ'' ಎಂದು ಪೂಜ್ಯ ಭಾವನೆಯಲ್ಲಿ ನೋಡಲಾಗಿದೆ. ಅಥರ್ವವೇದದಲ್ಲಿ ಭೂಮಿ ಮನುಷ್ಯನಿಗೆ ಮಾತ್ರವಲ್ಲ, ಅದು ಎಲ್ಲ ಜೀವಿಗಳಿಗೂ ಇರುವಂಥದ್ದು ಎಂಬ ವಿಷಯ ಬರುತ್ತದೆ. ಆ ಕಾಲದಲ್ಲೇ ಪರಿಸರ ಸಮತೋಲನ ದೃಷ್ಟಿಯಿಂದ ಪ್ರಕೃತಿಯನ್ನು ನೋಡುತ್ತಿದ್ದುದು ನಮ್ಮ ಸಂಸ್ಕೃತಿಗೆ ಮಾತ್ರ ಇರುವ ಒಂದು ಹೆಚ್ಚುಗಾರಿಕೆ. ಈ ಸಂಪ್ರದಾಯ ಮತ್ತು ಭಾವನೆಗಳು ಬಹುಶಃ ಇಂದೂ ಕೂಡ ಎಲ್ಲ ಭಾರತೀಯರ ರಕ್ತದ ಕಣಕಣಗಳಲ್ಲೂ ಇವೆ. ತಮ್ಮ ಸುತ್ತಲಿನ ಪರಿಸರಕ್ಕೆ ತೊಂದರೆ ಬಂದಾಗ ಇಲ್ಲವೆ ಮರಗಳು ಇತರ ಜೀವಿಗಳಿಗೆ ಕುತ್ತು ಬಂದಾಗ ಅದನ್ನು ವಿರೋಧಿಸಿ ಚಳವಳಿ ನಡೆಸಿರುವವರು ಬುದ್ಧಿ ಜೀವಿಗಳಿಗಿಂತ ಹೆಚ್ಚಾಗಿ ಅನಕ್ಷರಸ್ಥರಾದ ಮಹಿಳೆಯರು, ಗಿರಿಜನ, ಬುಡಕಟ್ಟು ಜನ, ರೈತರು ಮತ್ತು ಇತರ ಸಾಮಾನ್ಯ ಜನತೆ.

ಪರಿಸರ ಚಳುವಳಿಗಳು ಪ್ರಾಕೃತಿಕ ಸಂಪನ್ಮೂಲಗಳ ಬಹುಕಾಲಿಕ ಉಪಯೋಗ ಮತ್ತು ರಕ್ಷಣೆಗಳ ನ್ಯಾಯಬದ್ಧ ಕಾರಣಗಳಿಗೋಸ್ಕರ ವ್ಯವಸ್ಥಿತ ರೀತಿಯಲ್ಲಿ ಜನತೆ ಹೂಡುವ ಸಾಮಾಜಿಕ ಆಂದೋಳನಗಳಾಗಿವೆ. ಪ್ರಾಕೃತಿಕ ಪರಿಸರದ ರಕ್ಷಣೆಗೋಸ್ಕರ ಭಾರತದಲ್ಲಿ ಇಂತಹ ಅನೇಕ ಆಂದೋಳನಗಳಾಗಿವೆ. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರದ ದಶಕಗಳಲ್ಲಿ ಬೃಹತ್ ಕೈಗಾರಿಕೆಗಳು,

ಅಣೆಕಟ್ಟುಗಳು, ಜಲವಿದ್ಯುತ್ ಯೋಜನೆಗಳು - ಇವುಗಳಿಂದಾಗಿ ಗಿರಿಜನರು, ಬುಡಕಟ್ಟು ಜನಾಂಗಗಳು, ಗ್ರಾಮ ಹಾಗೂ ಅರಣ್ಯವಾಸಿಗಳು ಸ್ಥಾನಪಲ್ಲಟಗೊಂಡು ನಮ್ಮ ದೇಶದಲ್ಲೇ ಆಶ್ರಯಾರ್ಥಿಗಳಾಗಿದ್ದಾರೆ. ಅಭಿವೃದ್ಧಿಯ ಹೆಸರಿನಲ್ಲಿ, ಸರ್ಕಾರ, ಕೈಗಾರಿಕೋದ್ಯಮಿ ಹಾಗೂ ಗಣಿಗಾರಿಕೆದಾರರುಗಳಿಂದ ನಮ್ಮ ಪರಿಸರಕ್ಕೆ ಈಗಾಗಲೇ ತುಂಬಲಾರದಷ್ಟು ನಷ್ಟವಾಗಿದೆ. ಇಂತಹ ಅನಾಹುತಗಳನ್ನು ತಪ್ಪಿಸಲು ಪರಿಸರ ಚಳವಳಿಗಳಾಗಿವೆ. ಇವುಗಳಲ್ಲಿ ಕೆಲವು ಯಶಸ್ವಿಯಾಗಿವೆ, ಮತ್ತೆ ಕೆಲವು ಇನ್ನೂ ಹೋರಾಟದ ಹಾದಿಯಲ್ಲೇ ಇವೆ. ಹೀಗೆ ಯಶಸ್ವಿಯಾದ ಕೆಲವು ಚಳವಳಿಗಳಲ್ಲಿ ಪ್ರಮುಖವಾದವು ಈ ಕೆಳಗಿನಂತಿವೆ:

**ಸೈಲೆಂಟ್ ವ್ಯಾಲಿ ಚಳುವಳಿ**

ಕೇರಳದ ಪಶ್ಚಿಮ ಘಟ್ಟಗಳ ಈ ಭಾಗದಲ್ಲಿ ಇರುವ ಜೈವಿಕ ವೈವಿಧ್ಯ ಅಪಾರ. ಅಪರೂಪದ ಸಸ್ಯ, ಪ್ರಾಣಿಗಳಿಗೆ ಸೈಲೆಂಟ್ ವ್ಯಾಲಿ ಕಾಡುಗಳು ತವರು. ಇಲ್ಲಿನ ಕುಂತಿಪೂಜ ನದಿಗೆ ೧೯೮೦ರಲ್ಲಿ ಒಂದು ೨೦೦ ಮೆ. ವಾ. ಜಲವಿದ್ಯುತ್ ಅಣೆಕಟ್ಟು ಯೋಜನೆಯನ್ನು ಕೇರಳ ಸರ್ಕಾರ ಪ್ರಾರಂಭಿಸಿತು. ತಕ್ಷಣವೇ ಪರಿಸರವಾದಿಗಳು, ಸ್ಥಳೀಯ ಜನರು ಹಾಗೂ ವಿಜ್ಞಾನಿಗಳು ಚಳವಳಿ ಪ್ರಾರಂಭಿಸಿದರು. ಚಳವಳಿ ಇಡೀ ದೇಶದ ಮತ್ತು ವಿಶ್ವದ ಗಮನ ಸೆಳೆಯಿತು. ಪ್ರಧಾನಮಂತ್ರಿಯಾಗಿದ್ದ ಇಂದಿರಾಗಾಂಧಿಯವರು ನೇರವಾಗಿ ಮಧ್ಯ ಪ್ರವೇಶಿಸಿ ಯೋಜನೆಯನ್ನು ಸ್ಥಗಿತಗೊಳಿಸಿದರು. ಹೀಗಾಗಿ ಪಶ್ಚಿಮಘಟ್ಟಗಳ ಒಂದು ಅಪರೂಪ ಅರಣ್ಯ ಪ್ರದೇಶ ಉಳಿದುಕೊಂಡಿತು. ಪರಿಸರ ಚಳವಳಿ ಯಶಸ್ವಿಯಾಯಿತು.

**ಚಿಪ್ಕೋ ಚಳವಳಿ**

ಚಿಪ್ಕೋ ಚಳವಳಿ, ೧೯೭೩ರಲ್ಲಿ ಪ್ರಾರಂಭವಾದದ್ದೆಂದು ಬಹಳಷ್ಟು ಜನರ ಅನಿಸಿಕೆ. ವಾಸ್ತವ ವಿಷಯವೆಂದರೆ ಈ ಚಳವಳಿ ೧೯೭೧ರಲ್ಲೇ ಪ್ರಾರಂಭವಾಗಿದೆ. ರಾಜಸ್ಥಾನದ ಜೋಧ್‌ಪುರಕ್ಕೆ ೨೫ ಕಿ. ಮೀ. ದೂರದಲ್ಲಿರುವ ಖೇಜರಿಲಿ ಗ್ರಾಮದ ಬಿಷನೋಯ್ ಮಹಿಳೆ ಅಮೃತಾದೇವಿ ಈ ಚಳವಳಿಗೆ ಮೂಲ ವ್ಯಕ್ತಿ. ಮರಗಳ ರಕ್ಷಣೆಗಾಗಿ ಪಣತೊಟ್ಟ ಅಮೃತಾದೇವಿ, ಆಕೆಯ ಪತಿ ರಾಮೋಜಿ, ಹೆಣ್ಣು ಮಕ್ಕಳಾದ ಆಸಿಬಾಯಿ, ರತ್ನಾಬಾಯಿ ಮತ್ತು ಭಗವತಿ ಮತ್ತು ಇತರೆ ೩೬೯ ಬಿಷ್‌ನೋಯ್ ಮಹಿಳೆಯರು ತಮ್ಮ ಪ್ರೀತಿ ಪಾತ್ರ ಮರಗಳನ್ನು ಕಡಿಯುವುದನ್ನು ವಿರೋಧಿಸಿ ಮರಗಳನ್ನು ಅಪ್ಪಿಕೊಂಡಿದ್ದರು. ಅವರು ಮರಗಳನ್ನು ಅಪ್ಪಿಕೊಂಡಿದ್ದಂತೆಯೇ ಮರ ಕಟುಕರ ಕೊಡಲಿಗಳಿಗೆ ಆಹುತಿಯಾದರು. ಹೀಗಾಗಿ ಚಿಪ್ಕೋ ಚಳವಳಿಯ ಅಸ್ತಿಭಾರ ಬಿಷ್‌ನೋಯ್ ಮಹಿಳೆಯರಿಂದಾಯಿತು. (Agarwal, 1993) ಚಂಡಿಪ್ರಸಾದ್ ಭಟ್‌ರವರು 'ಅಂಗಲೇ ವಾಲ್ತಾ' ಎಂದು ಕರೆಯುತ್ತಿದ್ದುದು ಚಿಪ್ಕೋ ಚಳವಳಿಗೇ. ಅವರ ಸಲಹೆಯಂತೆ ೧೯೭೩ರಲ್ಲಿ ಮಂಡಲ್ ಗ್ರಾಮಸ್ಥರು ಮರ ಕಡಿಯದಂತೆ ಅವನ್ನು ಅಪ್ಪಿಕೊಂಡಿದ್ದರು. ಇಂಥದೇ ಚಳವಳಿ ರೇಣಿಯಲ್ಲಿ ಗೌರದೇವಿ ಯವರ ನೇತೃತ್ವದಲ್ಲಿ ಮಹಿಳೆಯರಿಂದ ನಡೆಯಿತು.

೧೯೭೪ರಲ್ಲಿ ಉತ್ತರ ಪ್ರದೇಶದ ತೇಹ್ರಿ ಘರ್‌ವಾಲ್ ಜಿಲ್ಲೆಯ ಅಡ್ವಾನಿ ಹಳ್ಳಿಯ ಹತ್ತಿರದ ಮರಗಳನ್ನು ಕಡಿಯಲಾಗುತ್ತಿತ್ತು. ಈ ಸಂದರ್ಭದಲ್ಲೂ ಕೂಡ ಆ ಗ್ರಾಮದ ವೀರಮಹಿಳೆಯರು ಮರಗಳ ಸುತ್ತ ಪವಿತ್ರ ದಾರವೊಂದನ್ನು ಕಟ್ಟಿದರು. ಪೊಲೀಸರ ಗೋಲಿಬಾರನ್ನು ಎದುರಿಸಿದರು. ನಂತರ ಮಹಿಳೆಯರು ಸೆರೆಯಾದರು. ಅನಂತರ ಚಿಪ್ಕೋ ಚಳವಳಿಯನ್ನು ಕೈಗೆ ತೆಗೆದುಕೊಂಡವರು ಸುಂದರಲಾಲ್ ಬಹುಗುಣರವರು. ಅವರ ನೇತೃತ್ವದಲ್ಲಿ ಚಿಪ್ಕೋ ಚಳವಳಿ ತೇಹ್ರಿ ಘರ್‌ವಾಲ್ ಜಿಲ್ಲೆಯ ದುರ್ಗಮ ಗ್ರಾಮಗಳಿಗೆಲ್ಲಾ ಹರಡಿತು. ಮಣ್ಣು ಮತ್ತು ಭೂ ಜಲಗಳ ರಕ್ಷಣೆಗೆ ಹಿಮಾಲಯ ಪರ್ವತಗಳಲ್ಲಿ ಕಾಡುಗಳ ನಾಶ ಮತ್ತು ಮರ ಕಡಿಯುವುದನ್ನು ನಿಲ್ಲಿಸಬೇಕು. ಮಣ್ಣು ಸವಕಳಿ ಮತ್ತು ಭೂಕುಸಿತಗಳಾಗದಂತೆ ಬೆಟ್ಟಗಳ ಇಳಿಜಾರು ಪ್ರದೇಶಗಳನ್ನು ರಕ್ಷಿಸಬೇಕಾದರೆ ಅಲ್ಲಿಯ ಮರಗಳನ್ನು ಕಡಿಯಬಾರದು. ಶುದ್ಧ ವಾಯು, ನೀರು ಹಾಗೂ ಬೆಳೆಗಳಿಗೆ ಆಧಾರವಾದ ಮಣ್ಣು ಸುಸ್ಥಿತಿಯಲ್ಲಿರಬೇಕಾದರೆ ಕಾಡಿನ ಮರಗಳ ರಕ್ಷಣೆಯಿಂದ ಮಾತ್ರ ಸಾಧ್ಯ ಎಂದು ತೇಹ್ರಿ ಘರ್‌ವಾಲ್ ಮಹಿಳೆಯರು ಹಾಡಿದರು. ಸುಂದರಲಾಲ್ ಬಹುಗುಣ ಅವರು ಚಿಪ್ಕೋ ಚಳವಳಿಯು ಪರಕೀಯರು, ದುರಾಸೆಯ ಮರದ ವ್ಯಾಪಾರಿಗಳು, ವಿನಾಕಾರಣ ಕಾಡುಗಳನ್ನು ನಾಶಮಾಡುವವರು-ಇವರುಗಳ ವಿರುದ್ಧ ಎಂದು ವಿವರಿಸಿದರು. ೧೯೮೨ರ UNEP (ವಿಶ್ವ ಪರಿಸರ ರಕ್ಷಣಾ ಸಂಸ್ಥೆ) ಸಮ್ಮೇಳನದಲ್ಲಿ ಭಾಗವಹಿಸಿದರು. ನಮ್ಮ ದೇಶದ ಹಿಮಾಲಯದುದ್ದಕ್ಕೂ ಕಾಶ್ಮೀರದಿಂದ ಕೊಹಿಮಾವರೆಗೆ ಚಿಪ್ಕೋ ಪಾದಯಾತ್ರೆ ಕೈಗೊಂಡು (೪೦೭೦ ಕಿ.ಮೀ.) ಚಿಪ್ಕೋ ಚಳವಳಿಯ ಪ್ರಸಾರ ಮಾಡಿದರು. ಮನುಷ್ಯನಿಗೂ ಕಾಡುಗಳಿಗೂ ಇರುವ ಅಂತರ ಸಂಬಂಧಗಳು, ಪರಿಸರ ಸಮತೋಲನದಲ್ಲಿ ಮರಗಳ ಪಾತ್ರ ಇವುಗಳ ಬಗ್ಗೆ ಜ್ಞಾನ ಪ್ರಸಾರಮಾಡಿದರು.

ಚಿಪ್ಕೋ ಜನಪ್ರಿಯತೆ, ಸಾಧನೆಗಳು ದೇಶದ ಅನೇಕ ಪ್ರದೇಶಗಳಿಗೆ ಹರಡಿತು. ವಿಷ್ಣುಪ್ರಯಾಗದಲ್ಲಿ ಜಲವಿದ್ಯುತ್ ಯೋಜನೆ ಹಾಗೂ ತೇಹ್ರಿ ಅಣೆಕಟ್ಟು ಇವುಗಳ ವಿರುದ್ಧ ಸಾಮಾನ್ಯ ಜನತೆಯ ಆಂದೋಳನಗಳು ಪ್ರಾರಂಭವಾದವು.

೬೦೦೦ ಕೋಟಿ ರೂ. ಗಳ ೨೪೦೦ ಮೆ. ವ್ಯಾ. ಜಲವಿದ್ಯುತ್ ಯೋಜನೆಯಾದ ತೇಹ್ರಿ ಯೋಜನೆಯನ್ನು ೧೦೦೦ ಜನ ನ್ಯಾಯವನ್ನು ಬೇಡಿ ದೈನಂದಿನ ವಿರೋಧಿ ಪ್ರದರ್ಶನವನ್ನು ಇಂದೂ ನಡೆಸುತ್ತಿದ್ದಾರೆ. ತೇಹ್ರಿ- ಉತ್ತರ ಕಾಶಿ ಜಿಲ್ಲೆಯ ೧೨೫ ಹಳ್ಳಿಗಳಿಂದ ನಿರ್ವಸಿತರಾದ ಹತ್ತು ಸಾವಿರ ಕುಟುಂಬಗಳಿಗೆ ಇನ್ನೂ ಆಶ್ರಯ ಕಲ್ಪಿಸಬೇಕಾಗಿದೆ. ತೇಹ್ರಿ ಯೋಜನೆಗೆ ವಿರುದ್ಧವಾದ ಎರಡು ಅರ್ಜಿಗಳು ಸುಪ್ರೀಂ ಕೋರ್ಟಿನಲ್ಲಿವೆ. ಭಾಗೀರಥಿ ನದಿ ಅವ್ಯಾಹತವಾಗಿ ಹರಿಯುತ್ತಿರುವುದು ನಿಂತರೆ ಕಲುಷಿತ ಗೊಳ್ಳಬಹುದೆಂಬ ಹೆದರಿಕೆ, ಭೂಕಂಪದ ಪರಿಣಾಮಗಳ ಬಗ್ಗೆಯೂ ಜನ ಚಿಂತಿತರಾಗಿದ್ದಾರೆ. ರಷ್ಯಾದ ಧನಸಹಾಯವಿರುವ ಈ ಯೋಜನೆಯನ್ನು ಹಿರಿಯ ಸ್ವಾತಂತ್ರ್ಯ ಹೋರಾಟಗಾರ ವಿ.ಡಿ. ಸಕ್ಲಾನಿ ಮತ್ತು ಸುಂದರಲಾಲ್ ಬಹುಗುಣ ಪ್ರಾರಂಭದಿಂದಲೂ ವಿರೋಧಿಸಿ, ಚಳವಳಿಗೆ ಪ್ರೋತ್ಸಾಹ ಕೊಡುತ್ತಿದ್ದಾರೆ. ಇವರ **'ತೇಹ್ರಿ ವಿರೋಧಿ ಸಂಘರ್ಷ ಸಮಿತಿ'** ಕಳೆದ ಎರಡು ದಶಕಗಳಿಂದಲೂ ಹೋರಾಟ ನಡೆಸುತ್ತಿದೆ. ಬಹುಗುಣ ಇನ್ನೂ ಹಳೆಯ ತೇಹ್ರಿಯಲ್ಲೇ ವಾಸಿಸುತ್ತಿದ್ದಾರೆ. ಇದೇ ರೀತಿ ಚಂಡಿ ಪ್ರಸಾದ್ ಭಟ್‌ರವರು ಸ್ಥಾಪಿಸಿರುವ **'ದಶೋಲಿ ಗ್ರಾಮ ವಿಕಾಸ ಆಶ್ರಮ'** ವಿಷ್ಣುಪ್ರಯಾಗದ ಜಲವಿದ್ಯುತ್ ಯೋಜನೆಯ ವಿರುದ್ಧ ಚಳವಳಿ ನಡೆಸುತ್ತಿದೆ. ಕಾಡುಗಳನ್ನು, ಹಳ್ಳಿಗಳನ್ನು ಮುಳುಗಿಸಿ ಸಾವಿರಾರು ಕುಟುಂಬಗಳು ಹೊರಬಂದಾಗ ಅವರಿಗೆ ಸರಿಯಾದ ರೀತಿಯಲ್ಲಿ ಪುನರ್ವಸತಿ ಕಲ್ಪಿಸುವುದು ಸರ್ಕಾರಕ್ಕೆ ಸಕಾಲದಲ್ಲಿ ಸಾಧ್ಯವಾಗದಿರುವುದು, ಪರಿಸರ ನಾಶ, ಬದಲಾವಣೆಗಳು ಚಳವಳಿಗೆ ಮುಖ್ಯ ಕಾರಣಗಳು. ಹಿಮಾಲಯದ ಡೂನ್ ಕಣಿವೆಯಲ್ಲಿ ಕೂಡ ಮಹಿಳೆಯರು ಚಿಪ್ಕೋ ಚಳವಳಿಯಿಂದ ಸ್ಫೂರ್ತಿಗೊಂಡು ಕಾಡು ಹಾಗೂ ಜಲ ಸಂಪನ್ಮೂಲಗಳನ್ನು ಹಾಳು ಮಾಡುತ್ತಿದ್ದ ಗಣಿ ಕೈಗಾರಿಕೆಗಳ ವಿರುದ್ಧ ಸಿಡಿದೆದ್ದು ಚಳುವಳಿ, ಸತ್ಯಾಗ್ರಹಗಳನ್ನು ಪ್ರಾರಂಭಿಸಿದ್ದಾರೆ.

### ನರ್ಮದ ಬಚಾವೋ ಚಳವಳಿ

ಭಾರತದ ಪಶ್ಚಿಮದಲ್ಲಿ ನಾಲ್ಕು ರಾಜ್ಯಗಳಿಗೆ ಸಂಬಂಧಪಟ್ಟ ಈ ಯೋಜನೆಯಿಂದಾಗಿ ೩೭,೦೦೦ ಹೆಕ್ಟೇರ್ ಭೂಮಿ ಮುಳುಗುತ್ತದೆ (೧೧ ಸಾವಿರ ಹೆಕ್ಟೇರ್ ಕಾಡುಗಳು, ೨೪೮ ಹಳ್ಳಿಗಳು), ೧ ಲಕ್ಷ ಜನ ಸ್ಥಾನಪಲ್ಲಟಗೊಳ್ಳುತ್ತಾರೆ. ೧೯೮೦-೮೭ರಲ್ಲಿ **'ಬುಡಕಟ್ಟು ಜನಹಿತಪರ ಸ್ವಯಂ ಸೇವಾಸಂಘದ'** ಮೂಲಕ ಅನಿಲ್ ಪಟೇಲ್‌ರವರು ಗುಜರಾತ್ ಹೈಕೋರ್ಟು ಹಾಗೂ ಸುಪ್ರೀಂ ಕೋರ್ಟಿನಲ್ಲಿ ಯೋಜನೆಯ ವಿರುದ್ಧ ಹೋರಾಟ ನಡೆಸಿದರು. ಮೇಧಾ ಪಾಟ್ಕರ್‌ರವರ ನೇತೃತ್ವದ **'ನರ್ಮದ ಬಚಾವೊ ಆಂದೋಳನ'** ಇಂದಿಗೂ ಈ ಬಗ್ಗೆ ಚಳವಳಿ ನಡೆಸುತ್ತಿದೆ. ಪುನರ್ವಸತಿ ಕಾರ್ಯಕ್ರಮಗಳ ನ್ಯೂನತೆಗಳ ಬಗ್ಗೆ ಹೋರಾಟ ನಡೆಸುತ್ತಿದೆ. ವಿಶ್ವ ಬ್ಯಾಂಕ್ ನೆರವು ನಿಲ್ಲಿಸಲು ಅಮೆರಿಕದ ಸ್ವಯಂ ಸೇವಾಸಂಘಗಳು ಹಾಗೂ ಕಾಂಗ್ರೆಸ್ ಮೇಲೆ ಪ್ರಭಾವ ಬೀರಿದೆ. ಈ ಸಂಬಂಧವಾಗಿ ೧೯೮೯ರ ಸೆಪ್ಟೆಂಬರ್‌ನಲ್ಲಿ ಹರಸುಡ್‌ನಲ್ಲಿ ಸಮ್ಮೇಳನ ನಡೆಸಲಾಯಿತು. ೨೦೦ ಸ್ವಯಂ ಸೇವಾಸಂಘಗಳು ೪೫೦೦೦ ಪ್ರತಿನಿಧಿಗಳೊಂದಿಗೆ ಭಾಗವಹಿಸಿದ್ದವು. ನಂತರದ ಬೆಳವಣಿಗೆಯೆಂದರೆ ವಿಶ್ವಬ್ಯಾಂಕ್‌ನ ಬ್ರಾಡ್‌ಫರ್ಡ್ ಮೋರ್ಸ್‌ರವರ ನೇತೃತ್ವದಲ್ಲಿ ಒಂದು ಪರಾಮರ್ಶನ ಸಮಿತಿ ಅಸ್ತಿತ್ವಕ್ಕೆ ಬಂದದ್ದು. ಕೇಂದ್ರ ಯೋಜನಾ ಆಯೋಗ ಕೂಡ ಅಲಘ್‌ರವರ ನೇತೃತ್ವದಲ್ಲಿ ಅಧ್ಯಯನ ನಡೆಸಿತು. ಬಾಬಾ ಆಮ್ಟೆ ಮತ್ತು ಮೇಧಾ ಪಾಟ್ಕರ್ **''ನಮ್ಮ ಹಳ್ಳಿ, ನಮ್ಮ ಶಾಸನ''** ಚಳವಳಿ ನಡೆಸಿದರು. ಅಣೆಕಟ್ಟಿನ ಪರವಾಗಿ ಶಾಂತಿಯಾತ್ರೆಗಳು, ವಿರೋಧವಾಗಿ ಸಂಘರ್ಷ ಯಾತ್ರೆಗಳು ೧೯೯೦ ರಿಂದ ನಡೆಯುತ್ತಲೇ ಇವೆ. ೧೯೯೨ರಲ್ಲಿ ವಿಶ್ವಬ್ಯಾಂಕ್ ನೆರವು ನಿಲ್ಲಿಸುವ ತೀರ್ಮಾನಕ್ಕೆ ಬಂದಿತು. ೧೯೯೩ರ ಆಗಸ್ಟ್ ೬ರಲ್ಲಿ ನರ್ಮದ ಬಚಾವೋ ಆಂದೋಳನ ''ಜಲಸಮರ್ಪಣ ಚಳವಳಿ'' ಹೂಡುವ ಬೆದರಿಕೆ ಹಾಕಿತು. ೧೯೯೪ ರಿಂದ ಪಾಟ್ಕರ್, ಮಧ್ಯಪ್ರದೇಶ ಸರ್ಕಾರದ ವಿರುದ್ಧ ನಿರಾಶ್ರಿತರ, ಸ್ಥಾನಪಲ್ಲಟಗೊಂಡವರ ಪುನರ್ವಸತಿಗಾಗಿ ಹೋರಾಡುತ್ತಿದ್ದಾರೆ. ಸುಪ್ರೀಂ ಕೋರ್ಟಿನ ಆದೇಶದಿಂದಾಗಿ, ಅಣೆಯ ಎತ್ತರ ೮೦.೩. ಮೀಟರ್‌ಗೇ ಸೀಮಿತ ಗೊಂಡಿದೆ. ೧೯೯೬ರಲ್ಲಿ ದೇವೇಗೌಡರು ಪ್ರಧಾನಿಯಾದಾಗ ನಾಲ್ಕೂ ರಾಜ್ಯಗಳ ಮುಖ್ಯಮಂತ್ರಿಗಳನ್ನು ಕರೆಸಿಕೊಂಡು, ಪರಿಹಾರ ಕಾರ್ಯಗಳನ್ನು ತೀವ್ರಗತಿಯಲ್ಲಿ ಮುಗಿಸುವಂತೆ ಕೇಳಿಕೊಂಡರು.

### ಕರ್ನಾಟಕದಲ್ಲಿ ಪರಿಸರ ಚಳವಳಿ

ಕರ್ನಾಟಕದಲ್ಲಿ ಪರಿಸರ ಚಳವಳಿಗಳು ಮುಖ್ಯವಾಗಿ ಮರಗಳನ್ನು ಉಳಿಸಿಕೊಳ್ಳಲು, ಕಾಡುಗಳ ನಾಶವನ್ನು ತಡೆಯಲು, ಕೈಗಾರಿಕೆಗಳು ಪರಿಸರವನ್ನು ಕಲುಷಿತಗೊಳಿಸುವುದನ್ನು ತಡೆಯಲು, ಗಣಿಗಾರಿಕೆಯಿಂದ ಪರಿಸರವನ್ನು ರಕ್ಷಿಸಲು-ಈ ಕಾರಣಗಳಿಗಾಗಿ

ಆಗಿವೆ. ಅಪ್ಪಿಕೊ, ಕುದುರೆಮುಖ-ತುಂಗಭದ್ರ ಉಳಿಸಿ, ಬೇಡ್ತಿ ಯೋಜನೆ ಮತ್ತು ಕಿತ್ತುಕೋ ಹಚ್ಚಿಕೋ ಇವು ಚಳವಳಿಗಳ ಕೆಲವು ಉದಾಹರಣೆಗಳು. ಕೇರಳದ ಸೈಲೆಂಟ್ ವ್ಯಾಲಿ ಚಳುವಳಿಗೆ ಚುಕ್ಕಾಣಿ ಹಿಡಿದ ಸುಂದರಲಾಲ್ ಬಹುಗುಣ, ಚಂಡಿಪ್ರಸಾದ್ ಭಟ್ ಹಾಗೂ ಪ್ರೊ। ಪ್ರಸಾದ್ ಇವರುಗಳೇ ಬೇಡ್ತಿ ಯೋಜನೆಯ ವಿರುದ್ಧ ಮತ್ತು ಅಪ್ಪಿಕೊ ಚಳವಳಿಗಳಿಗೆ ಸ್ಫೂರ್ತಿ ಕೊಟ್ಟವರು.

**ಅಪ್ಪಿಕೋ ಚಳವಳಿ**

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆ ದೇಶದಲ್ಲೇ ಉತ್ತಮವಾದ ಅರಣ್ಯ ಸಂಪತ್ತಿಗೆ ಹೆಸರುವಾಸಿಯಾದದ್ದು. ಇಲ್ಲಿನ ಪಶ್ಚಿಮ ಘಟ್ಟಗಳ ದಟ್ಟ ಅರಣ್ಯಗಳು ಜೈವಿಕ ವೈವಿಧ್ಯಕ್ಕೆ ಹಾಗೂ ಅಪರೂಪದ ಸಸ್ಯ, ಪ್ರಾಣಿಗಳಿಗೆ ತವರು. ಚಿಪ್ಕೋ ಚಳವಳಿಯಿಂದ ಸ್ಫೂರ್ತಿ ಪಡೆದ ದೇಶದ ಅನೇಕ ಪರಿಸರವಾದಿಗಳಲ್ಲಿ ದಕ್ಷಿಣದ ಪಾಂಡುರಂಗ ಹೆಗ್ಗಡೆ ಒಬ್ಬರು.

ಪಾಂಡುರಂಗ ಹೆಗಡೆಯವರು ಸ್ಥಳೀಯ ಜನರಿಗೆ ತಿಳುವಳಿಕೆ ಕೊಟ್ಟು ಗುಂಪುಗಳನ್ನು ಕಟ್ಟಿ ಅಪ್ಪಿಕೋ ಆಂದೋಳನಕ್ಕೆ ಹೊಸ ಆಯಾಮವನ್ನು ಕೊಟ್ಟರು. ಸರ್ಕಾರವನ್ನೂ ಪಶ್ಚಿಮ ಘಟ್ಟಗಳ ರಕ್ಷಣೆಗೆ ಮನವೊಲಿಸಲು ಪ್ರಾರಂಭಿಸಿದರು. ಕಾಡುಗಳನ್ನು ಕಡಿದು ಮರದ ದಿಮ್ಮಿಗಳನ್ನು ಸಾಗಿಸುತ್ತಿದ್ದ ಟಿಂಬರ್ ಕಂಟ್ರಾಕ್ಟರುಗಳು ಹಾಗು ಅವರಿಗೆ ಪರವಾನಗಿ ಕೊಡುತ್ತಿದ್ದ ಸರ್ಕಾರದ ಬಗ್ಗೆ ಚಳವಳಿ ಪ್ರಾರಂಭವಾಯಿತು. ಸಿರ್ಸಿ ತಾಲ್ಲೂಕಿನ ಸಲ್ಕಾನಿ ಗ್ರಾಮದಲ್ಲಿ ಪ್ರಾರಂಭವಾದ ಚಳವಳಿ ಎಲ್ಲರ ಗಮನ ಸೆಳೆಯಿತು. ಹಳ್ಳಿಗರಿಗೆ ಸೌದೆ, ಮೇವು, ಜೇನು ಮತ್ತಿತರ ಪೂರೈಕೆಗಾಗಿ ಪಕ್ಕದಲ್ಲೇ ಇದ್ದ ಕಾಡಿನ ಭಾಗವೊಂದು ನಾಶಗೊಂಡಿತ್ತು. ಸಲ್ಕಾನಿ ಮತ್ತು ಸುತ್ತಮುತ್ತಲಿನ ಗ್ರಾಮಗಳ ಮಹಿಳೆಯರು ಮತ್ತು ಯುವಕರು ೧೯೮೩ರ ಸೆಪ್ಟೆಂಬರ್‌ನಲ್ಲಿ ಪಕ್ಕದಲ್ಲಿದ್ದ ಕಾಡಿಗೆ ಹೋಗಿ ಮರಗಳನ್ನು ಅಪ್ಪಿಕೊಂಡು ಕಡಿಯುವುದನ್ನು ತಪ್ಪಿಸಿ ಕರ್ನಾಟಕದ ಅಪ್ಪಿಕೋ ಚಳವಳಿಗೆ ನಾಂದಿ ಹಾಡಿದರು. ಅರಣ್ಯ ಇಲಾಖೆಯ ಪರವಾನಗಿ ಇದ್ದರೂ ಮರ ಕಟುಕರು ಮರಕ್ಕೆ ಕೊಡಲಿ ಹಾಕಲಾಗಲಿಲ್ಲ. ಚಳವಳಿ ಯಶಸ್ವಿಯಾಯಿತು. ಮರಗಳಿಗೋಸ್ಕರ ನೂರಾರು ಜನ ಆತ್ಮಾರ್ಪಣ ಮಾಡಿಕೊಳ್ಳಲು ಸಿದ್ಧರಾಗಿದ್ದರು. ಇಂತಹ ಒಂದು ಅಪೂರ್ವ ಘಟನೆ ಕರ್ನಾಟಕದ ಇತಿಹಾಸದಲ್ಲಿ ಸರ್ಕಾರಕ್ಕೆ, ಜನತೆಗೆ ಒಂದು ಹೊಸ ಅನುಭವ. ೩೮ ದಿನಗಳ ಕಾಲ ಸತ್ಯಾಗ್ರಹ ನಡೆಯಿತು. ಕೊನೆಗೆ ಸರ್ಕಾರ ತನ್ನ ಆದೇಶವನ್ನು ಹಿಂತೆಗೆದುಕೊಳ್ಳಬೇಕಾಯಿತು. ಮರ ಕಡಿಯುವ ಘಟನೆ ಕಂಟ್ರಾಕ್ಟರುಗಳಿಂದ ಮರುಕಳಿಸಿತ್ತು. ಮತ್ತೆ ಅಪ್ಪಿಕೋ ಚಳವಳಿಯ ಪುನರಾವರ್ತನೆಯಾಯಿತು. ಈ ಬಾರಿ ಕಂಟ್ರಾಕ್ಟರುಗಳ ಹತ್ತಿರ ಕೆಲಸ ಮಾಡುತ್ತಿದ್ದ ಕೂಲಿಗಾರರು ಕೂಡ ಅವರನ್ನು ತೊರೆದರು.

ಚಳವಳಿಯ ೨ ನೇ ಹಂತ ೧೯೮೩ರ ಅಕ್ಟೋಬರ್‌ನಲ್ಲಿ ಪ್ರಾರಂಭವಾಯಿತು. ಬೆನ್‌ಗಾವ್ ಕಾಡಿನ ಸುತ್ತುಮುತ್ತಲಿದ್ದ ಬುಡಕಟ್ಟು ಜನ ತಮ್ಮ ಜೀವನಕ್ಕಾಗಿ ಕಾಡಿನ ಬಿದಿರು ಮುಂತಾದ ಕಚ್ಚಾ ಸಾಮಗ್ರಿಗಳನ್ನು ಅವಲಂಬಿಸಿದ್ದರು. ಚಾಪೆ, ಬುಟ್ಟಿ, ಮಂಕ್ರಿ ಮುಂತಾದ ಕುಶಲವಸ್ತುಗಳನ್ನು ತಯಾರಿಸುತ್ತಿದ್ದರು. ಅವರು ವಾಸಿಸುತ್ತಿದ್ದ ಸ್ಥಳದಲ್ಲಿ ಬೆಟ್ಟದ ಇಳಿಜಾರುಗಳಲ್ಲಿದ್ದ ಮರಗಳನ್ನು ಕಡಿಯಲು ಪ್ರಾರಂಭಿಸುತ್ತಿದ್ದಂತೆಯೇ ಅಪ್ಪಿಕೋ ಚಳವಳಿ ಪ್ರಾರಂಭವಾಯಿತು. ಬುಡಕಟ್ಟು ಜನರ ಬೇಡಿಕೆಗೆ ಸರ್ಕಾರದ ಅರಣ್ಯ ಇಲಾಖೆ ಮಣಿಯಬೇಕಾಯಿತು. ಹೀಗಾಗಿ ಅಲ್ಲಿದ್ದ ಭಾಗಶಃ ನಿತ್ಯಹರಿದ್ವರ್ಣ ಕಾಡುಗಳು ಉಳಿದುಕೊಂಡವು.

ಹುಸ್ರಿಯ ಸುತ್ತಮುತ್ತ ಕೂಡ ಸ್ಥಳೀಯ ಜನತೆ ಅಪ್ಪಿಕೋ ಚಳವಳಿಯ ಮೂಲಕ ಅಲ್ಲಿ ಟಿಂಬರ್ ಕಂಟ್ರಾಕ್ಟರುಗಳು ಮರ ಕಡಿಯದಂತೆ ನಿಲ್ಲಿಸಿ ಅಲ್ಲಿನ ಬೇಸಗೆಯಲ್ಲಿ ಎಲೆಯುದುರುವ ಕಾಡುಗಳನ್ನು ರಕ್ಷಿಸಿದ್ದಾರೆ. ಒಂದು ನೂರು ಮಹಿಳೆಯರು ಹಾಗೂ ಯುವಕರು ಈ ಚಳವಳಿಯಲ್ಲಿ ಪಾಲ್ಗೊಂಡರು. ಸ್ಥಳಕ್ಕೆ ಭೇಟಿ ನೀಡಿದ ಅರಣ್ಯ ಇಲಾಖೆಯ ರೇಂಜ್ ಆಫೀಸರ್ ಸತ್ಯಾಗ್ರಹಿಗಳ ಮನವೊಲಿಸಲು ಪ್ರಯತ್ನಪಟ್ಟರು. ಬಲಪ್ರಯೋಗದ ಅರಿವಾದಾಗ ಜನ ಮರಗಳನ್ನು ಅಪ್ಪಿಕೊಂಡು ಸತ್ಯಾಗ್ರಹ ನಡೆಸಿದರು.

ಚಳವಳಿ ಸಿದ್ದಾಪುರ ತಾಲ್ಲೂಕಿನ ನಿಡಗೋಡಿಗೆ ತಲುಪಿತು. ಇಳಿಜಾರಿನ ಬೆಟ್ಟಗಳ ಮೇಲಿಂದ ಹತ್ತು ಎಕರೆಗಳಲ್ಲಿ ಮರಗಳನ್ನು ಆಗಲೇ ಕಡಿದಾಗಿತ್ತು. ೩೦ ಜನ ಚಳವಳಿಗಾರರು ಮರ ಕಡಿಯುವುದನ್ನು ನಿಲ್ಲಿಸಿದರು. ಇದೇ ತಾಲ್ಲೂಕಿನ 'ಕೆಳಗಿನ ಜಡ್ಡಿ'ಯಲ್ಲೂ ಕೂಡ ಅಪ್ಪಿಕೋ ಚಳವಳಿ ಪ್ರಾರಂಭಿಸಬೇಕಾಯಿತು. ಅಲ್ಲಿನ ಪ್ಲೈವುಡ್ ಕಾರ್ಖಾನೆಯೊಂದು ಹಳ್ಳಿಯ ಪಕ್ಕದ ಕಾಡಿನ ಮರಗಳನ್ನು ತನ್ನ ಪೂರೈಕೆಗಾಗಿ ಕಡಿದುಕೊಳ್ಳಲು ಅರಣ್ಯ ಇಲಾಖೆಯಿಂದ ಪರವಾನಗಿ ಪಡೆದಿತ್ತು. ಕಾರ್ಖಾನೆಯ ಸಿಬ್ಬಂದಿ ಕೇವಲ ೫೧ ಮರಗಳನ್ನು ಕಡಿದು ಬೀಳಿಸುವಾಗ ೫೪೭ ಮರಗಳಿಗೆ ಅಪಾಯ ಮಾಡಿದ್ದರು. ಹಳ್ಳಿಯ ಜನತೆಗೆ ತಮಗೆ ಸೌದೆ, ಮೇವು, ಹಸಿರು ಗೊಬ್ಬರ, ಔಷಧಿಗಳು ಇವೆಲ್ಲವನ್ನು ಕೊಡುತ್ತಿರುವ ಕಾಡಿನ ಮರಗಳಿಗೆ ಅಪಾಯ ಒದಗಿರುವುದು ಅರ್ಥವಾಯಿತು. ಮರ ಕಡಿಯುತ್ತಿದ್ದ ಪಾರ್ಸಿ ಕಾಡುಗಳಲ್ಲಿ ೩೦೦ ಜನ ಚಳವಳಿಗಾರರು ಅಪ್ಪಿಕೋ ಚಳವಳಿ ನಡೆಸಿದರು. ಚಳವಳಿ ಯಶಸ್ವಿಯಾಯಿತು.

ಡಿಸೆಂಬರ್ ತಿಂಗಳಿನಲ್ಲಿ ಬಿಳಗಲ್ ಕಾಡುಗಳಲ್ಲಿ ಅಪ್ಪಿಕೋ ಚಳವಳಿ ನಡೆಸಬೇಕಾಯಿತು. ನೂರು ಜನ ಮಹಿಳೆಯರೂ ಸೇರಿದಂತೆ ಒಟ್ಟು ೨೦೦ ಜನ ಚಳವಳಿಯಲ್ಲಿ ಭಾಗವಹಿಸಿದರು ಮತ್ತು ಮರ ಕಡಿಯುವುದು ನಿಂತಿತು.

ಅಪ್ಪಿಕೋ ಚಳವಳಿಯಿಂದ ಅನೇಕ ವಿಷಯಗಳು ಬೆಳಕಿಗೆ ಬಂದವು. ಅದರಲ್ಲಿ ಮುಖ್ಯವಾದವೆಂದರೆ ಕೆಲವು ಕಂಟ್ರಾಕ್ಟರುಗಳು ತಮಗೆ ಪರವಾನಗಿ ಎಷ್ಟು ಮರ ಕಡಿಯುವುದಕ್ಕಿತ್ತೋ ಅದಕ್ಕಿಂತ ಹೆಚ್ಚು ಕಡಿಯುತ್ತಿದ್ದುದು ಸ್ಥಳೀಯ ಜನತೆ ಸತ್ಯಾಗ್ರಹ, ಚಳವಳಿಗಳ ಮೂಲಕ ಪರಿಸರವನ್ನು ರಕ್ಷಿಸಿಕೊಳ್ಳಬಹುದು ಎಂಬುದು. ಫಲಿತಾಂಶವೆಂದರೆ - ಇರುವ ಅರಣ್ಯ ಸಂರಕ್ಷಣೆ, ಅರಣ್ಯ ನಾಶವಾಗಿರುವ ಕಡೆ ಕಾಡು ಬೆಳೆಸುವಿಕೆ, ಪರಿಸರ ಸಮತೋಲನ ರಕ್ಷಿಸಿಕೊಳ್ಳುವಿಕೆ, ಔಷಧ ವೃಕ್ಷಗಳ ಸಂರಕ್ಷಣೆ. ಈ ಕೆಲಸಗಳಿಗಾಗಿ ಇಂದು ಕರ್ನಾಟಕದ ಪಶ್ಚಿಮ ಘಟ್ಟಗಳ ಅನೇಕ ಭಾಗಗಳಲ್ಲಿ '**ಪರಿಸರ ಸಂರಕ್ಷಣಾ ಕೇಂದ್ರ**'ಗಳೆಂಬ ಸಂಸ್ಥೆಗಳು ಸ್ಥಾಪನೆಗೊಂಡಿವೆ.

**ಮೀನುಗಾರರ ಚಳವಳಿ**

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ ಪರಿಸರದ ದೃಷ್ಟಿಯಿಂದ ಅತಿ ಸೂಕ್ಷ್ಮವಾಗಿರುವ ಪ್ರಪಂಚದ ೩೪ ಜಿಲ್ಲೆಗಳಲ್ಲಿ ಒಂದು. ಕರ್ನಾಟಕ ಸರ್ಕಾರ ಇಲ್ಲಿ ಕೈಗಾರಿಕಾ ಬೆಳವಣಿಗೆಗೆ ಹೆಚ್ಚು ಪ್ರೋತ್ಸಾಹ ನೀಡಿರುವುದರಿಂದ ಈಗ ಇದೊಂದು ಬೃಹತ್ ಕೈಗಾರಿಕಾ ವಲಯವಾಗಿದೆ. ಪಕ್ಕದ ಅರಬ್ಬೀ ಸಮುದ್ರಕ್ಕೆ ಮಂಗಳೂರಿನ ಕೊಳಚೆ ನೀರಿನಿಂದ ಹಿಡಿದು ಕೈಗಾರಿಕಾ ತ್ಯಾಜ್ಯ ವಸ್ತುಗಳವರೆಗೆ ಅನೇಕ ಮಲಿನಕಾರಿ ವಸ್ತುಗಳು ಬಂದು ಸೇರುತ್ತವೆ. ಮಂಗಳೂರು ರಿಫೈನರಿ ಮತ್ತು ಪೆಟ್ರೋ ಕೆಮಿಕಲ್ ಕೈಗಾರಿಕೆಯಿಂದ ಹೊರಬರುವ ಕೊಳಚೆ ನೀರಿನಲ್ಲಿ ಕ್ಯಾಡ್ಮಿಯಂ ಪಾದರಸಗಳು ಸೂಕ್ಷ್ಮ ಪ್ರಮಾಣದಲ್ಲಿರುವುದನ್ನು ವಿಶ್ಲೇಷಣೆಗಳು ತೋರಿಸಿಕೊಟ್ಟಿವೆ. ಮೇಲಿನ ಕೈಗಾರಿಕೆಗಳಿಂದಾಗಿ ಮೀನುಗಳು ಸತ್ತುತೇಲುವುದು ಹೆಚ್ಚಾಗಿ ಸುಮಾರು ೪,೦೦,೦೦೦ ಮೀನುಗಾರರಿಗೆ ಜೀವನೋಪಾಯಕ್ಕೆ ತೊಂದರೆಯಾಗಿದೆ. ೧೯೯೫ರ ಆಗಸ್ಟ್ ತಿಂಗಳಿನಲ್ಲಿ ೧ ಲಕ್ಷ ಜನ ಮತ್ತು ಅನೇಕ ಸ್ವಯಂಸೇವಕ ಸಂಘಗಳು ಕಾರ್ಖಾನೆಯನ್ನು ವಿರೋಧಿಸಿ ಚಳವಳಿ ನಡೆಸಿದರು. ೧೯೯೫ರ ಸೆಪ್ಟೆಂಬರ್ ತಿಂಗಳಲ್ಲಿ ಮೇಲಿನ ಕಾರ್ಖಾನೆ ಕೊಳವೆಗಳನ್ನು ಸಮುದ್ರದ ಕಡೆ ಹಾಕಲು ಪ್ರಾರಂಭಿಸಿದಾಗ ಮೀನುಗಾರರು ಚಳವಳಿ ನಡೆಸಿದರು. ಕೆಲಸವನ್ನು ನಿಲ್ಲಿಸಲಾಯಿತು. ಕಾರ್ಖಾನೆ ತನ್ನ ಕೊಳೆ ನೀರನ್ನು ತೋಟಗಾರಿಕೆ ಹಾಗೂ ಕೃಷಿಗೆ ಬಳಸಿಕೊಳ್ಳುವುದಾಗಿ ಹೇಳಿತು. ಆದರೆ ಹಾಗಾಗಲಿಲ್ಲ. ನಂತರ ನಡೆದ ಸಭೆಯಲ್ಲಿ ಸರ್ಕಾರ, ಸೇವಾ ಸಂಘಗಳ ಪ್ರತಿನಿಧಿಗಳು, ಮೀನುಗಾರರು ಹಾಗೂ ಕಾರ್ಖಾನೆಯ ಪ್ರತಿನಿಧಿಗಳು ಭಾಗವಹಿಸಿದ್ದರು. ವಿಧಾನಸಭಾ ಹಾಗೂ ಲೋಕಸಭಾ ಸದಸ್ಯರುಗಳೂ ಭಾಗವಹಿಸಿದ್ದರು. ಸರ್ಕಾರ ಕಾರ್ಖಾನೆಗೆ ಅದರ ತ್ಯಾಜ್ಯ ವಸ್ತುಗಳ ಪುನರ್ಬಳಕೆ ಹಾಗು ಅದರ ಕೊಳಚೆ ನೀರಿನ ಸೂಕ್ತ ಸಂಸ್ಕರಣೆ-ಇವುಗಳ ಬಗ್ಗೆ ಆದೇಶ ನೀಡಿತು. ಮೀನುಗಾರರ ಚಳವಳಿ ಯಶಸ್ವಿಯಾಯಿತು. ಆದರೆ ಕಾರ್ಖಾನೆ ಆದೇಶವನ್ನನುಸರಿಸಬೇಕಲ್ಲ?

**ಧಾರವಾಡ ಜಿಲ್ಲೆಯ "ಕಿತ್ತುಕೋ ಹಚ್ಚಿಕೋ" ಚಳವಳಿ**

ಜಿಲ್ಲೆಯಲ್ಲಿ ಹರಿಯುವ ತುಂಗಭದ್ರಾ ನದಿತೀರದಲ್ಲಿ ಹರಿಹರ ಪಾಲಿಫೈಬರ್ ಕಾರ್ಖಾನೆಯನ್ನು ಕೈಗಾರಿಕೋದ್ಯಮಿ ಬಿರ್ಲಾರವರು ೧೯೭೨ರಲ್ಲಿ ಪ್ರಾರಂಭಿಸಿದರು. ಕಾರ್ಖಾನೆ ತನ್ನ ಕೊಳೆ ನೀರಿನಿಂದ ನದಿಯನ್ನು ಕಲುಷಿತಗೊಳಿಸಿದ್ದರಿಂದ ಲಕ್ಷಾಂತರ ಜನ ತೊಂದರೆಗೀಡಾದರು. ಜನತೆ, ನೇರವಾಗಿ ಚಳುವಳಿಗೆ ಧುಮುಕಿತು. ಒತ್ತಡಗಳಿಂದಾಗಿ ಕರ್ನಾಟಕ ಸರ್ಕಾರದ ಮಾಲಿನ್ಯ ನಿಯಂತ್ರಣ ಇಲಾಖೆ ಕೈಗಾರಿಕೆಯ ಮೇಲೆ ಕೋರ್ಟಿನಲ್ಲಿ ಮೊಕದ್ದಮೆ ದಾಖಲಿಸಿತು. ಬಿರ್ಲಾರವರ ಮಾಲೀಕತ್ವದಲ್ಲಿರುವ ಯಾವುದೇ ಕೈಗಾರಿಕೆಯನ್ನು ದೇಶದ ಇತರೆ ಯಾವುದೇ ಭಾಗದಲ್ಲೂ ನ್ಯಾಯಾಲಯಕ್ಕೆಳೆಯಲಾಗಿರಲಿಲ್ಲ.

ಬಿರ್ಲಾರವರ ಪಾಲುಗಾರಿಕೆಯೊಂದಿಗೆ ೧೯೮೪ರಲ್ಲಿ ಕರ್ನಾಟಕ ರಾಜ್ಯ ಸರ್ಕಾರ ಕರ್ನಾಟಕ ಪಲ್ಪ್ ವುಡ್ ಲಿಮಿಟೆಡ್(KPL) ಎಂಬ ಸಹಭಾಗಿ ಕಾರ್ಖಾನೆಯನ್ನು ಪ್ರಾರಂಭಿಸಿತು. ನೀಲಗಿರಿ ಮರಗಳನ್ನು ಸುತ್ತಮುತ್ತಲಿನ ಕಾಡು ಹಾಗೂ ಹಳ್ಳಿಗಳ ಸಾಮಾನ್ಯ ಭೂಪ್ರದೇಶಗಳಲ್ಲಿ ಬೆಳೆದು ಅದನ್ನು ಬಿರ್ಲಾರವರ ಪಾಲಿಫೈಬರ್ ಕಾರ್ಖಾನೆಗೆ ಒದಗಿಸುವುದೇ ಇದರ ಉದ್ದೇಶ. ೩೦,೦೦೦ ಹೆಕ್ಟೇರ್ ಅರಣ್ಯ ಹಾಗೂ ಹುಲ್ಲು ಬೆಳೆಯುವ ಗೋಮಾಳ ಪ್ರದೇಶಗಳನ್ನು ೪೦ ವರ್ಷಗಳ ಗುತ್ತಿಗೆ ಮೇಲೆ ಹೆಕ್ಟೇರ್‌ಗೆ ೧ ರೂ. ನಂತೆ ಕಾರ್ಖಾನೆಗೆ (KPL) ಬಿಟ್ಟು ಕೊಡಲಾಯಿತು. ತಲೆ ತಲಾಂತರದಿಂದ ಸಾಮಾನ್ಯ ಜನತೆ, ಹಳ್ಳಿಗಳು ಉಪಯೋಗಿಸಿಕೊಳ್ಳುತ್ತಿದ್ದ ಸಾಮಾನ್ಯ ಭೂಪ್ರದೇಶ ಈಗ ಕಾರ್ಖಾನೆಯ ಸ್ವತ್ತಾಗಿತ್ತು. ಸ್ಥಳೀಯ ಜನತೆ ಶಾಂತಿಯುತ ಸತ್ಯಾಗ್ರಹ ಹಾಗೂ ಚಳವಳಿಗಳನ್ನು ಪ್ರಾರಂಭಿಸಿದರು. ಸ್ವಯಂಸೇವಾ ಸಂಘವಾದ '**ಸಮಾಜ ಪರಿವರ್ತನ ಸಮುದಾಯ**' ಎಸ್. ಆರ್. ಹೀರೇಮಠ ಅವರ ನೇತೃತ್ವದಲ್ಲಿ

ವಿಷಯವನ್ನು ಸಾರ್ವಜನಿಕ ಹಿತದೃಷ್ಟಿಯ ಅರ್ಜಿಯಾಗಿ ಸುಪ್ರೀಂ ಕೋರ್ಟಿಗೆ ಕೊಂಡೊಯ್ಯಿತು. ಸ್ಥಳೀಯ ಜನತೆ "**ಕಿತ್ತುಕೋ, ಹಚ್ಚಿಕೋ**" ಸತ್ಯಾಗ್ರಹ ಪ್ರಾರಂಭಿಸಿದರು. ಸುಪ್ರೀಂ ಕೋರ್ಟ್‌ನಿಂದ ತಡೆ ಆಜ್ಞೆ ೧೯೮೭ರಲ್ಲಿ ಬಂದಿತು. ವಿಧಾನಸಭೆಯಲ್ಲಿ ವಿಷಯ ಚರ್ಚಿತಗೊಂಡು ೭೦ ಕ್ಕೂ ಹೆಚ್ಚು ಸದಸ್ಯರು ಸರ್ಕಾರ KPL ಗೆ ಕೊಟ್ಟಿರುವ ಜಮೀನನ್ನು ಹಿಂದೆ ಪಡೆಯಬೇಕೆಂದು ಚರ್ಚಿಸಿದರು.

ಜನರ ಸತ್ಯಾಗ್ರಹ, ಸುಪ್ರೀಂ ಕೋರ್ಟ್ ತಡೆ ಆಜ್ಞೆ ಮತ್ತು ಸಾರ್ವಜನಿಕ ಅಭಿಪ್ರಾಯ ಇವೆಲ್ಲಾ ಕರ್ನಾಟಕ ಸರ್ಕಾರಕ್ಕೆ ವಿರುದ್ಧವಾಗಿದ್ದವು. ಸಾಮಾನ್ಯ ಜನತೆಗೆ, ಸುತ್ತಲಿನ ಅರಣ್ಯ ಹಾಗೂ ಭೂ ಪ್ರದೇಶಗಳ ಮೇಲೆ ಪ್ರಾಕೃತಿಕ ಹಕ್ಕುಗಳಿರುತ್ತವೆ. ಅರಣ್ಯ ಸಂರಕ್ಷಣಾ ಕಾಯ್ದೆಯ ಪ್ರಕಾರ ಸರ್ಕಾರ ಈ ರೀತಿ ಮಾಡಲಾಗುವುದಿಲ್ಲ ಎಂದು ಚಳವಳಿಗಾರರು ವಾದಿಸಿದರು. ಚಳವಳಿಗಾರರ ಪರವಾಗಿ ಡೆಕ್ಕನ್ ಹೆರಾಲ್ಡ್, ಟೈಮ್ಸ್ ಆಫ್ ಇಂಡಿಯ, ಬಿಸಿನೆಸ್ ಟೈಮ್ಸ್, ಬಿ. ಬಿ. ಸಿ. ಮುಂತಾದವು ವಿಶೇಷ ಲೇಖನಗಳನ್ನು ಪ್ರಕಟಗೊಳಿಸಿದವು.

೧೯೯೨ರ ಮಾರ್ಚ್ ೨೬ರಂದು ಸುಪ್ರೀಂ ಕೋರ್ಟಿನ ಅಂತಿಮ ಆದೇಶ ಬಂದಿತು. ಸಾಮಾನ್ಯ ಭೂ ಪ್ರದೇಶಗಳ ಮೇಲೆ ಸ್ಥಳೀಯ ಪ್ರಜೆಗಳಿಗಿರುವ ಪ್ರಾಕೃತಿಕ ಹಕ್ಕನ್ನು ನ್ಯಾಯಾಲಯ ಎತ್ತಿ ಹಿಡಿದಿತ್ತು. KPL ಅನ್ನು ಮುಚ್ಚಬೇಕಾಯಿತು. ಕಿತ್ತುಕೋ ಹಚ್ಚಿಕೋ ಪರಿಸರ ಚಳವಳಿ ಯಶಸ್ವಿಯಾಗಿತ್ತು.

**ಕೊಜೆಂಟ್ರಿಕ್ಸ್ ವಿರುದ್ಧ ಚಳುವಳಿ**

ಕೊಜೆಂಟ್ರಿಕ್ಸ್ ಸುಮಾರು ೪,೨೦೦ ಕೋಟಿ ರೂ. ಗಳ ಉಷ್ಣ ವಿದ್ಯುತ್ ಸ್ಥಾವರ. ಮಂಗಳೂರಿನ ನಂದಿಕೂರು ಬಳಿ ಸ್ಥಾಪಿಸಿಬೇಕೆಂದಿದ್ದ ಈ ವಿದೇಶೀ ಸಂಸ್ಥೆಯ ವಿರುದ್ಧ ಚಳವಳಿ ನಡೆದು ನಂದಿಕೂರು ಜಾಗೃತ ಸಮಿತಿ ಹಾಗೂ ಮೇನಕ ಗಾಂಧಿಯವರು ಹೈಕೋರ್ಟಿಗೆ ಅರ್ಜಿ ಹಾಕಿದ್ದರು. ೧೯೯೭ರ ಆಗಸ್ಟ್‌ನಲ್ಲಿ ಅರ್ಜಿ ವಜಾ ಆಯಿತು. '**ದಕ್ಷಿಣ ಕನ್ನಡ ಜಿಲ್ಲಾ ಪರಿಸರಾಸಕ್ತ ಒಕ್ಕೂಟ**' ನಡೆಸಿದ ಚಳವಳಿಗಳೂ ಯಶಸ್ವಿಯಾಗಲಿಲ್ಲ. ಪಶ್ಚಿಮ ಘಟ್ಟಗಳ ನೆರಳಿನಲ್ಲಿರುವ ಕೊಜೆಂಟ್ರಿಕ್ಸ್ ಯೋಜನಾ ಸ್ಥಳದಿಂದ ನಂದಿಕೂರು, ಪಲಿಮಾರು ಹಾಗೂ ನಡಸಾಲ್ ಗ್ರಾಮಸ್ಥರು ನೆಲೆ ಕಳೆದುಕೊಳ್ಳಬೇಕಾಗುತ್ತದೆ. ಹತ್ತಿರವಿರುವ ಮುಲ್ಕಿ ನದಿ ನೀರು ಕಲುಷಿತಗೊಳ್ಳುತ್ತದೆ. ಗಂಧಕದ ಡೈಆಕ್ಸೈಡ್, ಆಮ್ಲೀಯ ಮಳೆ ಮತ್ತು ಹಾರುವ ವಿಷಯುಕ್ತ ಬೂದಿ ಮತ್ತು ತಾಪೀಯ ಮಾಲಿನ್ಯಗಳಿಂದ ಸುತ್ತಮುತ್ತಲ ಪರಿಸರ ವ್ಯೂಹಗಳೆಲ್ಲ ತತ್ತರಿಸಬೇಕಾಗುತ್ತವೆ. ಸುತ್ತಮುತ್ತಲಿನ ವೇಲಾಸಂಗಮಗಳಲ್ಲಿರುವ ಅಪರೂಪದ ಮ್ಯಾಂಗ್ರೂವ್ ಸಸ್ಯ ವರ್ಗವೆಲ್ಲಾ ನಾಶವಾಗಬಹುದು. ಸಮುದ್ರಕ್ಕೆ ಮಾಲಿನ್ಯಕಾರಿ ವಸ್ತುಗಳು ಸೇರುವುದರಿಂದ ಅಲ್ಲಿನ ಜೈವಿಕ ಸಮತೋಲನಕ್ಕೆ ಧಕ್ಕೆ ಉಂಟಾಗಬಹುದು. ಈ ಬಗ್ಗೆ ಎಲ್ಲಪ್ಪರೆಡ್ಡಿಯವರು ದಿಟ್ಟ ಹೋರಾಟ ನಡೆಸಿದ್ದಾರೆ.

**'ತುಂಗಭದ್ರ ಉಳಿಸಿ' ಹೋರಾಟ ಚಳವಳಿ**

ಕುದುರೆಮುಖದ ಕಬ್ಬಿಣದ ಅದಿರಿನ ಕಂಪನಿಯಿಂದ (KIOCL) ಅದಿರು ತೆಗೆಯುವುದನ್ನು ನಿಲ್ಲಿಸಬೇಕೆಂದು ತುಂಗಭದ್ರ ಹೋರಾಟ ಒಕ್ಕೂಟ ಚಳವಳಿ ನಡೆಸಿದೆ. ಖನಿಜವನ್ನು ತೆಗೆಯುವ ಉದ್ದೇಶದಿಂದ ಅಮೂಲ್ಯ ಅರಣ್ಯ ಸಂಪತ್ತನ್ನು ನಾಶಪಡಿಸುವುದು ಮತ್ತು ಕುದುರೆಮುಖ ಗಣಿಗಾರಿಕೆಯಿಂದ ತುಂಗ-ಭದ್ರ ನದಿನೀರು ಕಲುಷಿತಗೊಳ್ಳುತ್ತಿದೆ ಎಂಬುದು ಒಂದು ಮುಖ್ಯ ವಿಷಯ. ಚಳವಳಿಗಳು ದಾವಣಗೆರೆ, ಹಾವೇರಿ, ರಾಣೆಬೆನ್ನೂರು ಮತ್ತು ಬಳ್ಳಾರಿಯಲ್ಲೆಲ್ಲಾ ನಡೆದಿವೆ. ಇತ್ತೀಚೆಗೆ (ಜುಲೈ ೭, ೨೦೦೨) ಶಿವಮೊಗ್ಗದಲ್ಲಿ ಜಿಲ್ಲಾ ಒಕ್ಕೂಟದ ಅಧ್ಯಕ್ಷ ಅಂಟುಗೋಡು ವೆಂಕಟೇಶ್ ಮತ್ತು ಕಲ್‌ಕುಲಿ ವಿಠ್ಠಲ್ ಹೆಗ್ಡೆ ಅವರುಗಳ ನೇತೃತ್ವದಲ್ಲಿ "**ತುಂಗಭದ್ರ ನದಿ ಜನ ಜಾಥಾ**" ನಡೆಸಲಾಯಿತು. ತಕ್ಷಣದ ಅಲ್ಪ ಲಾಭಕ್ಕೋಸ್ಕರ ಭವಿಷ್ಯದ ಪರಿಸರ ದುರಂತಕ್ಕೆ ನಾವು ಪಶ್ಚಿಮ ಘಟ್ಟಗಳನ್ನು ಉಪಯೋಗಿಸಿಕೊಳ್ಳಬಾರದು. ಈಗಾಗಲೇ ಕುದುರೆಮುಖ ಯೋಜನೆಯಿಂದ ಸಾಕಷ್ಟು ಕಾಡುಗಳು ಹಾಳಾಗಿವೆ, ಬೆಟ್ಟಗಳೇ ಕಣ್ಮರೆಯಾಗಿವೆ ಹಾಗೂ ಲಕ್ಯ ನದಿಯ ಮೂಲ ಹಾಳಾಗಿದೆ. ಭದ್ರಾನದಿ ಕಲುಷಿತಗೊಂಡಿದೆ. ಖನಿಜ ತೆಗೆಯುವುದು, ಗಂಗಡಿಕಲ್ಲು ಹಾಗೂ ನೆಲ್ಲಿಬೀಡು ಬೆಟ್ಟಗಳಲ್ಲಿ ಪ್ರಾರಂಭವಾದರೆ ತುಂಗಾ ಮೂಲವೂ ಹಾಳಾಗುತ್ತದೆ ಎಂಬುದು ಚಳವಳಿಯ ಹಿಂದಿನ ಕಳಕಳಿ. ೨೦೦೨ರ ಜುಲೈ ೪ರಲ್ಲಿ ಒಕ್ಕೂಟ ಶೃಂಗೇರಿಯಿಂದ ದಾವಣಗೆರೆಗೆ ಜಾಥಾ ಏರ್ಪಡಿಸಿತ್ತು. ಈ ಬಗ್ಗೆ ಹೆಗ್ಗೋಡು ಸುಬ್ಬಣ್ಣನವರ ನೇತೃತ್ವದಲ್ಲಿ "**ತುಂಗಾ ಉಳಿಸಿ**" ವಿಚಾರ ಸಂಕಿರಣ ನಡೆದು ಹಳ್ಳಿಹಳ್ಳಿಗಳಲ್ಲಿ ಯುವಕರಿಂದ ಸೈಕಲ್ ಜಾಥಾ ಆಗಿದೆ. ಚಳವಳಿ ಜೀವಂತವಾಗಿದೆ.

ಮೇಲಿನ ಚಳವಳಿಗಳು ಕರ್ನಾಟಕದಲ್ಲಿನ ಕೇವಲ ಕೆಲವು ಉದಾಹರಣೆಗಳು ಮಾತ್ರ. ಎಲ್ಲ ಚಳವಳಿಗಳನ್ನೂ ಮೇಲೆ ಹೆಸರಿಸಲಾಗಿಲ್ಲ ಮತ್ತು ವಿವರಿಸಲಾಗಿಲ್ಲ. ಕನ್ನಡಿಗರು ಪರಿಸರದ ಬಗ್ಗೆ ಜಾಗೃತರಾಗಿದ್ದಾರೆ. ಅನೇಕ ನಗರಗಳಲ್ಲಿ ಪ್ಲಾಸ್ಟಿಕ್‌ನಿಂದ ಹಿಡಿದು ಕ್ಯಾಡ್ಮಿಯಂ ಬ್ಯಾಟರಿಗಳವರೆಗೆ ಅವನ್ನು ಉಪಯೋಗಿಸಬಾರದೆಂದು ಆಂದೋಳನ ನಡೆಯುತ್ತಿವೆ. ಕರ್ನಾಟಕ ಸರ್ಕಾರ ಮಣ್ಣು ಮತ್ತು ಜಲಸಂರಕ್ಷಣೆಗಾಗಿಯೇ ಕೆಲವು ಯೋಜನೆಗಳಿಗೆ ಚಾಲನೆ ಕೊಟ್ಟಿದೆ. ಇವುಗಳಲ್ಲಿ ಜಲಾನಯನ ನಿರ್ವಹಣೆ, ಬಂಜರುಭೂಮಿ ಅಭಿವೃದ್ಧಿ ಯೋಜನೆ, ಸಾಮಾಜಿಕ ಅರಣ್ಯ ಯೋಜನೆ ಹಾಗೂ ಇತ್ತೀಚಿನದು ಜಂಟಿ ಅರಣ್ಯ ನಿರ್ವಹಣೆ ಯೋಜನೆಗಳು. ಮುಂದಿನ ಚಳವಳಿಗಳು ನಮ್ಮ ನದಿಗಳು, ಸರೋವರಗಳು ಹಾಗೂ ಕೆರೆಗಳು ಮಾಲಿನ್ಯಗೊಳ್ಳುವುದನ್ನು ತಡೆಯುವುದಕ್ಕಾಗಬಹುದು. ಭೂ ಸದುಪಯೋಗದ ಬಗ್ಗೆ ಆಗಬಹುದು. ಜನಸಂಖ್ಯಾ ಬೆಳವಣಿಗೆಯನ್ನು ಸ್ಥಗಿತಗೊಳಿಸುವುದರ ಬಗ್ಗೆ ಆಗಬಹುದು. ಪಶ್ಚಿಮ ಘಟ್ಟಗಳನ್ನು ಮತ್ತು ಅವುಗಳ ಜೈವಿಕ ವೈವಿಧ್ಯವನ್ನು ಉಳಿಸಿಕೊಳ್ಳುವುದರ ಬಗ್ಗೆ ಆಗಬಹುದು. ಅಭಿವೃದ್ಧಿಯ ಹೆಸರಿನಲ್ಲಿ ಆಗುತ್ತಿರುವ ವಿನಾಶವನ್ನು ತಪ್ಪಿಸುವುದಕ್ಕೋಸ್ಕರ ಚಳವಳಿಗಳು ಆಗಬಹುದು. ಹಳ್ಳಿಹಳ್ಳಿಗಳಲ್ಲಿ ಪರಿಸರವಾಹಿನಿಗಳ ಉದ್ಭವವಾಗಬಹುದು, ಚಳವಳಿಗಳಾಗಬಹುದು. ನಮ್ಮ ಪರಿಸರವನ್ನು ನಾವು ಚನ್ನಾಗಿ ಕಾಪಾಡಿಕೊಳ್ಳಬೇಕಾದರೆ ನಮ್ಮ ಮಕ್ಕಳಿಗೆ, ಜನತೆಗೆ ಪರಿಸರದ ಬಗ್ಗೆ ಶಿಕ್ಷಣ ಕೊಟ್ಟರೆ ಮಾತ್ರ ಸಾಲದು, ಅವರು ಪೌರಪ್ರಜ್ಞೆ ಬೆಳೆಸಿಕೊಳ್ಳುವಂತೆಯೂ ಪ್ರೋತ್ಸಾಹಿಸಬೇಕು.

# ದಲಿತ ಚಳವಳಿ

**ಮುಳ್ಳೂರು ನಾಗರಾಜ**

ದಲಿತ ಚಳವಳಿಯ ಮೂಲ ಪ್ರೇರಣೆ ಡಾ। ಬಿ. ಆರ್. ಅಂಬೇಡ್ಕರ್, ಇಂದು ನೂರಾರು ದಲಿತ ಸಂಘಟನೆಗಳು, ಅಂಬೇಡ್ಕರ್ ಸಂಘಗಳು ಗ್ರಾಮಾಂತರ ಪ್ರದೇಶಗಳಿಂದ ಹಿಡಿದು ರಾಜಧಾನಿಯವರೆಗೆ ಹರಡಿಕೊಂಡಿವೆ. ಇಂದು ದಲಿತ ಸಂಘಟನೆಗಳ ಕೆಲಸ ತಾಲ್ಲೂಕು ಕಚೇರಿಗೆ. ಪೊಲೀಸ್ ಠಾಣೆಗಳಿಗೆ ತಿರುಗುವುದು, ಅರ್ಜಿ ಬರೆಯುವುದು, ಉದ್ದೇಶಿತ ಕೆಲಸಗಳಿಗೆ ಒತ್ತಾಸೆಯಾಗಿ ನಿಲ್ಲುವುದು, ಕಚೇರಿ ಮತ್ತು ಸಾಮಾನ್ಯರ ನಡುವೆ ಸೇತುವೆಯಾಗಿ ನಿಲ್ಲುವುದೇ ಆಗಿದೆ. ಇಂತಹ ದಲಿತ ಸಂಘಟನೆಗಳಲ್ಲಿ ಬಹುಪಾಲು ನಿರುದ್ಯೋಗಿ ಯುವಕರದೇ ಮೇಲುಗೈ. ಹಿಂದಿಗಿಂತ ಇಂದು ದಲಿತ ಪ್ರಜ್ಞೆ ಹೆಚ್ಚಾಗಿದ್ದು ಹಿಂದೆ ಓದಿನ ಕೊರತೆ ಇದ್ದರೆ ಇಂದು ಅನುಭವಗಳ ಕೊರತೆ ಇದೆ. ಕರ್ನಾಟಕದ ರಾಜಕಾರಣಗಳಲ್ಲಿ ದಲಿತ ಚಳವಳಿಯ ಪಾತ್ರ ಬಹು ದೊಡ್ಡದಾಗಿದೆ.

ದಲಿತ ಚಳವಳಿ ಮೂಲತಃ ಹಳ್ಳಿಗಾಡಿನ ಜನರ ಸಂಘಟನೆ. ಈ ಸಂಘಟನೆಗಳ ಉಸಿರು, ಮಂತ್ರ, ಅಂಬೇಡ್ಕರ್ ಅವರ ಚಿಂತನೆಗಳು. ಅಂಬೇಡ್ಕರರು ಭಾರತೀಯ ಜಾತಿ ಪದ್ಧತಿಯ ವಿರುದ್ಧ ಹೋರಾಡಿ ಹಿಂದೂ ಧರ್ಮವನ್ನು ತಿದ್ದುವ ಪ್ರಯತ್ನ ಮಾಡಿದರು. ಅವರ ಮಾನವೀಯ ಕಳಕಳಿಗೆ, ಉನ್ನತ ಅನಿಸಿಕೆಗಳಿಗೆ ಹಿಂದೂ ಧರ್ಮ ಸ್ಪಂದಿಸದಿದ್ದಾಗ ಹಿಂದೂ ಧರ್ಮಕ್ಕೆ ಸಂವಾದಿಯಾದ ಹಾಗೂ ಅದನ್ನು ಮೀರಿದ ಬೌದ್ಧ ಧರ್ಮಕ್ಕೆ ಸುಮಾರು ಒಂದು ಲಕ್ಷ ಅಸ್ಪೃಶ್ಯರೊಡನೆ ಮತಾಂತರವಾದರು. ಅಂಬೇಡ್ಕರರ ಹೋರಾಟದ ಫಲವಾಗಿ ದಲಿತರ ಬದುಕಿಗೆ ಒಂದು ನೆಲೆ, ಬೆಲೆ ಸಿಕ್ಕಿತು. ಕರ್ನಾಟಕ ದಲ್ಲಿಯೂ ಕೂಡ ದಲಿತ ಚಳವಳಿ ಪ್ರಾರಂಭವಾಯಿತು. ಸುಮಾರು ಎಂಟುನೂರು ವರ್ಷಗಳ ಹಿಂದೆಯೇ ಬಸವಣ್ಣನವರ ನಾಯಕತ್ವದಲ್ಲಿ ಸಮಾನತೆಯ ಚಳವಳಿ ಪ್ರಾರಂಭವಾಯಿತು. ಶೋಷಣೆಯ ಆಗರವಾಗಿದ್ದ ವೈಧಿಕ ಧರ್ಮಕ್ಕಿಂತ ಸಮಾನತೆಯನ್ನು ಸಾರುವ ವೀರಶೈವ ಧರ್ಮದ ಕಡೆಗೆ ದಲಿತ ಹಾಗೂ ಕೆಳವರ್ಗದವರ ಮನಸ್ಸು ಸ್ಪಂದಿಸತೊಡಗಿತು. ತದನಂತರದಲ್ಲಿ ವೀರಶೈವ ಧರ್ಮ ತನ್ನ ಮೊದಲಿನ ಚಳವಳಿಯ ರೂಪವನ್ನು ಕಳೆದುಕೊಂಡು ಭಾರತದ ಸಾವಿರಾರು ಜಾತಿಗಳಲ್ಲಿ ಅದೂ ಒಂದು ಜಾತಿಯಾಯಿತು.

ಅಸ್ಪೃಶ್ಯತೆಯ ವಿರುದ್ಧ ಪ್ರಬಲ ಹೋರಾಟ ನಡೆಸಿದವರು ಮಹಾತ್ಮ ಗಾಂಧೀಜಿ. ಭಾರತೀಯ ಸಮಾಜದ ಮೂರನೆಯ ದರ್ಜೆಯ ಹಿಂದೂ ಆಗಿದ್ದು ಅವರು ವೈಶ್ಯ ಕುಲದಲ್ಲಿ ಹುಟ್ಟಿದ್ದು ಅಸ್ಪೃಶ್ಯತೆ ಘೋರವಾದ ಒಂದು ಸಾಮಾಜಿಕ ಪಿಡುಗು ಎಂದು ಭಾವಿಸಿದ್ದರು. ತಮ್ಮ ಜೀವಿತದ ಕೊನೆಯವರೆಗೂ ಜಾತಿ ಪದ್ಧತಿ ವಿರುದ್ಧ ಹೋರಾಟ ನಡೆಸಿದರು. ಅಸ್ಪೃಶ್ಯತೆಯ ಹೋರಾಟದಲ್ಲಿ ಗಾಂಧಿ- ಅಂಬೇಡ್ಕರ್‌ರ ನಿಲುವು, ಧೋರಣೆ, ಹೋರಾಟಗಳು ಬೇರೆ ಬೇರೆ ಆಗಿದ್ದರೂ. ಗುರಿ, ಉದ್ದೇಶ ಒಂದೇ ಆಗಿತ್ತು. ಕೆಲವೊಂದು ವಿಚಾರಗಳಲ್ಲಿ ಅಂಬೇಡ್ಕರ್-ಗಾಂಧೀಜಿಯವರ ನಡುವೆ ಭಿನ್ನಾಭಿಪ್ರಾಯವಿತ್ತು.

ಭಾರತದ ಸ್ವಾತಂತ್ರ ಹೋರಾಟ ಕೊನೆಯ ಹಂತಕ್ಕೆ ಬಂದಿತ್ತು. ಭಾರತದ ಸಂವಿಧಾನವನ್ನು ಅಮೇರಿಕಾದ ಖ್ಯಾತ ಪತ್ರಕರ್ತ ಥಾಮಸ್ ಜಫರ್ಸನ್ ಅವರ ಮೂಲಕ ಬರೆಸಬೇಕೆಂಬುದು

ನೆಹರು ಮತ್ತು ವಲ್ಲಭಭಾಯಿ ಪಟೇಲರ ಇರಾದೆಯಾಗಿತ್ತು. ಗಾಂಧೀಜಿಯವರು ಇದನ್ನು ಮಾನ್ಯ ಮಾಡದೆ ಭಾರತದ ಸಂವಿಧಾನವನ್ನು ಬರೆಯುವ ಜವಾಬ್ದಾರಿಯನ್ನು ಡಾ। ಅಂಬೇಡ್ಕರ್‌ರಿಗೆ ವಹಿಸಿದರು. ಬಾಲ್ಯದ ಬಡತನ ಹಾಗೂ ಅಸ್ಪೃಶ್ಯತೆಗಳಿಂದ ಅಪಾರವಾದ ನೋವು ಅವಮಾನಗಳನ್ನು ಅನುಭವಿಸಿದ್ದ ಅಂಬೇಡ್ಕರ್ ಅವರು ಆ ಜವಾಬ್ದಾರಿಯನ್ನು ಅತ್ಯುತ್ತಮವಾಗಿಯೇ ನಿರ್ವಹಿಸಿದರು. ಅದರ ಪರಿಣಾಮವಾಗಿ ಪರಿಶಿಷ್ಟರಿಗೆ ಮತ್ತು ಹಿಂದುಳಿದವರಿಗೆ ಮೀಸಲಾತಿ ದೊರೆಯಿತು.

ಅಂಬೇಡ್ಕರ್‌ರ ವಿಚಾರಕ್ರಾಂತಿಯ ಫಲವಾಗಿ ಭಾರತದ ದಲಿತ ಯುವಕರಲ್ಲಿ ದಲಿತ ಪ್ರಜ್ಞೆ ಮೂಡಿತು. ಸಾಮಾಜಿಕ ಅನ್ಯಾಯಗಳ ವಿರುದ್ಧ ದಲಿತರ ಸಾಮೂಹಿಕ ಪ್ರತಿಭಟನೆ ಉಂಟಾಯಿತು. ದಲಿತ ಹೋರಾಟದ ಹಿನ್ನೆಲೆಯಲ್ಲಿಯೇ ದಲಿತ ರಾಜಕಾರಣ ಕೂಡ ರೂಪಿತವಾಯಿತು. ಅಧಿಕಾರದ ಮೂಲಕ ಸವಲತ್ತುಗಳನ್ನು ಪಡೆಯುವ ದಲಿತ ರಾಜಕೀಯವು ದಲಿತ ನಾಯಕರ ಏಳಿಗೆಗೆ ಮಾತ್ರ ಮೀಸಲಾಯಿತು. ಸವಲತ್ತುಗಳು ಜನರನ್ನು ತಲುಪುವ ಬದಲು ದಲಿತ ರಾಜಕಾರಣಿಗಳ ಸ್ವಾರ್ಥ ಹಿತಾಸಕ್ತಿಗಳ ಕೇಂದ್ರವಾದ ಪ್ರಚಲಿತ ರಾಜಕಾರಣವು ಪಕ್ಷ ಕೇಂದ್ರಿತ ರಾಜಕಾರಣವಾಯಿತೇ ಹೊರತು ದಲಿತ ಕೇಂದ್ರಿತ ರಾಜಕಾರಣವಾಗಲಿಲ್ಲ. ಬಹುತೇಕ ದಲಿತ ರಾಜಕಾರಣಿಗಳು ಸವರ್ಣೀಯ ರಾಜಕಾರಣಿಗಳ ಗುಲಾಮರಂತೆ ನಡೆದುಕೊಂಡರು. ಈ ಗುಲಾಮಗಿರಿ ಈಗಲೂ ಮುಂದುವರೆದಿದೆ.

ದಲಿತ ರಾಜಕಾರಣವು ತೋರಿಕೆಗೆ ಬೌದ್ಧ ಧರ್ಮವನ್ನು ಸ್ಮರಿಸುತ್ತಾ ಹಿಂದೂ ಧರ್ಮದಲ್ಲಿಯೇ ತನ್ನ ಕೇಂದ್ರಬಿಂದುವನ್ನು ಕಂಡುಕೊಂಡಿತು. ಅಸಮಾನತೆಯ ಊಳಿಗಕ್ಕೆ ತನ್ನನ್ನು ಮಾರಿಕೊಂಡಿರುವ ಹಿಂದೂ ಧರ್ಮಕ್ಕೆ ದಲಿತ ರಾಜಕಾರಣಿಗಳು ಹಿಂದೂಗಳ ಊಳಿಗದಾಳುಗಳಂತೆ, ತಮ್ಮ ಪಕ್ಷಗಳ ಒಡೆಯರ ಜೀತದಾಳುಗಳಂತೆ ನಡೆದುಕೊಂಡಿದ್ದಾರೆ. ಅದಕ್ಕೆ ಓಟಿನ ರಾಜಕಾರಣವೇ ಕಾರಣವಾಗಿದೆ. ಪ್ರಜಾತಂತ್ರದಲ್ಲೂ ಅತಂತ್ರ ಜೀವಿತವೇ ದಲಿತರನ್ನು ಕಾಡುತ್ತಿದೆ. ಶತಶತಮಾನಗಳಿಂದ ಶೋಷಣೆಗೆ ಒಳಗಾದ ದಲಿತರಿಗೆ ಆಸರೆ ನೀಡಿದ್ದು ಬೌದ್ಧ ಧರ್ಮ. ಈ ಧರ್ಮವು ಭ್ರಷ್ಟರಾದ ದಲಿತ ನೌಕರರ ಹಾಗೂ ನಿವೃತ್ತರಾದ ಭ್ರಷ್ಟ ದಲಿತ ನೌಕರರ ಸ್ವರ್ಗವಾಗಿದೆ. ಬೌದ್ಧ ಧರ್ಮದ ಹೆಸರಿನಲ್ಲಿ ಅವರು ಮೀಸಲಾತಿಯ ಸವಲತ್ತನ್ನು ಪಡೆಯಲು ಕಾತರರಾಗಿದ್ದಾರೆ. ರಾಜಕೀಯದಿಂದ ಹೊರಗೆ ಮತ್ತು ಒಳಗೆ ಅವರು ತಮ್ಮದೇ ಆದ ಪ್ರಭಾವವನ್ನು ಹೊಂದಿದ್ದಾರೆ. ಮೀಸಲಾತಿ ಕೋರುವ ಇವರು ದಲಿತತ್ವದ ಕಷ್ಟಗಳಿಗೆ ಸ್ಪಂದಿಸುತ್ತಿಲ್ಲ. ಬೌದ್ಧತೆಯನ್ನು ಪಡೆದುಕೊಂಡು ನವ ಬೌದ್ಧರ ಹಾಗೆ ವರ್ತಿಸುತ್ತಿದ್ದಾರೆ. ಅಂಬೇಡ್ಕರ್ ಬೌದ್ಧಧರ್ಮಕ್ಕೆ ಮತಾಂತರಗೊಂಡರೂ ತಮ್ಮ ಮೂಲ ದಲಿತರ ಭವವನ್ನು ಮರೆಯಲಿಲ್ಲ. ಬೌದ್ಧ ಧರ್ಮವು ಅವರಿಗೆ ಕೇವಲ ಆಧ್ಯಾತ್ಮಿಕ ಅಗತ್ಯವಾಗಿರದೆ, ಅವರ ಪಾಲಿಗೆ ಅದು ಸಾಮಾಜಿಕ ಹೋರಾಟದ ನೆಲೆಯೂ ಆಯಿತು. ತನ್ನ ಕೊನೆಯ ಉಸಿರಿರುವ ತನಕ ಎಲ್ಲಾ ಶೋಷಿತರ ಪರವಾಗಿ ಹೋರಾಡಿದ ಅಂಬೇಡ್ಕರ್ ೬.೧೨.೧೯೫೬ರಂದು ನಿಧನರಾದರು. ಆದರೆ ಅವರ ಹೋರಾಟವು ಅವರ ಜೀವಿತದ ಕಾಲಕ್ಕಿಂತ ಇಂದು ಹೆಚ್ಚು ಪರಿಣಾಮಕಾರಿಯಾಗಿ ಮುಂದುವರೆದಿದೆ. ಅಂಬೇಡ್ಕರ್‌ರ ಪೂರ್ಣದೃಷ್ಟಿಯ ಚಿಂತನೆ ಇನ್ನೊಬ್ಬರಿಗಿಲ್ಲ. ದಲಿತ ಬದುಕಿಗೆ ಮತ್ತು ಚಳವಳಿಗೆ ಅವರ ಕೊಡುಗೆ ಅಪಾರ.

ಅಂಬೇಡ್ಕರ್ ಗತಿಸಿದ ಸುಮಾರು ಇಪ್ಪತ್ತು ವರ್ಷಗಳ ನಂತರ ಕರ್ನಾಟಕದಲ್ಲಿ ದಲಿತ ಚಳವಳಿ ಪ್ರಾರಂಭವಾಯಿತು. ಅದಕ್ಕೆ ಬೀಜರೂಪಿಯಾದ ಪ್ರಸಂಗವು ೧೯೭೩ರಲ್ಲಿ ಮೈಸೂರಿನಲ್ಲಿ ನಡೆಯಿತು. ಬಸವಲಿಂಗಪ್ಪನವರ ಒಂದು ಪ್ರಸಂಗವು ಕರ್ನಾಟಕದ ರಾಜಕಾರಣದಲ್ಲಿ ಬಿರುಗಾಳಿ ಎಬ್ಬಿಸಿದ ಪ್ರಸಂಗ. ದಕ್ಷಿಣ ಆಫ್ರಿಕಾದ ಕಪ್ಪು ಸಾಹಿತ್ಯವನ್ನು, ಕ್ರಾಂತಿ ಸಾಹಿತ್ಯವನ್ನು, ಸಂಸ್ಕೃತ ಸಾಹಿತ್ಯವನ್ನು ಮತ್ತು ವೇದ ಉಪನಿಷತ್ತುಗಳನ್ನು ಆಳವಾಗಿ ಅಧ್ಯಯನ ಮಾಡಿದ್ದ ಬಸವಲಿಂಗಪ್ಪನವರು ವಚನಕಾರರು, ಸರ್ವಜ್ಞ ಹಾಗೂ ಪೆರಿಯಾರರನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದರು.

''ಮೂರ್ಖನೊಬ್ಬನು ಆರು ಬೆಟ್ಟವನು ಹಾರುವೆನೆಂದರೆ ಮೆಚ್ಚಿ ಅಹುದೆನಬೇಕು'' ಎಂಬ ಸರ್ವಜ್ಞನ ವಚನವನ್ನು ತಮ್ಮ ಬಹುಪಾಲು ಭಾಷಣಗಳಲ್ಲಿ ಉದಾಹರಿಸುತ್ತಿದ್ದರು. ಮೂರ್ಖರೊಡನೆ ವಿಚಾರ ಸಲ್ಲದೆಂದು ಹೇಳುತ್ತಿದ್ದು ಅವರ ವಿಚಾರರಹಿತ ಜೀವನವು ಜೀವನವೇ ಅಲ್ಲ ಎಂದೂ ವಿಡಂಬನಾತ್ಮಕವಾಗಿ ಹೇಳುತ್ತಿದ್ದರು. ವಿಚಾರವನ್ನು ಹೇಳುವುದು ನನ್ನ ಹಕ್ಕು, ಕೇಳುವುದು ಬಿಡುವುದು ನಿಮ್ಮ ಇಷ್ಟ ಎಂದು ಸಭಿಕರಿಗೆ ಹೇಳುತ್ತಿದ್ದು ಅವರು ಕಾನೂನು ಪದವೀಧರರಾಗಿದ್ದು ಸಾಕಷ್ಟು ವರ್ಷಗಳ ಕಾಲ ವಕೀಲಿ ವೃತ್ತಿ ಮಾಡಿದವರು.

ಮೈಸೂರಿನ ಮಹಾರಾಜ ಕಾಲೇಜಿನ ಶತಮಾನೋತ್ಸವ ಭವನದಲ್ಲಿ ನಡೆದ ಒಂದು ಸಮಾರಂಭದಲ್ಲಿ ಬಸವಲಿಂಗಪ್ಪನವರು ಇಂಗ್ಲಿಷಿನಲ್ಲಿ ಮಾತನಾಡಲು ಆರಂಭಿಸಿದರು. ಆ ಸಭೆಯಲ್ಲಿ ಹಾಜರಿದ್ದ ಕೆಲವು ಕನ್ನಡ ಪ್ರೇಮಿಗಳಿಗೆ ಕೊಂಚ ಕಿರಿಕಿರಿಯಾಯಿತು. ಕನ್ನಡದ ಮೇಲಿನ ಅವರ ಅಭಿಮಾನ ಸಹಜವಾದದ್ದೇ. ಆದರೂ ಅದಕ್ಕೆ ಬೆಲೆ ಸಿಗಲಿಲ್ಲ. ಸಚಿವರನ್ನು ಓಲೈಸುವುದಕ್ಕಾಗಿ ಕಾರ್ಯಕ್ರಮ

ರೂಪಿಸಿದ್ದವರು ಆ ಅಭಿಮಾನಿಗಳ ವಿರುದ್ಧ ತಿರುಗಿ ಬಿದ್ದರು. ''ಕನ್ನಡ ಸಾಹಿತ್ಯದಲ್ಲಿ ಏನಿದೆ, ಬರೀ ಬೂಸಾ'' ಈ ನುಡಿ ನೇರವಾಗಿ ಸಚಿವರ ಬಾಯಿಂದ ಬರಲಿಲ್ಲ. ಅವರ ಅಭಿಮಾನಿಯೊಬ್ಬರು ವೇದಿಕೆಯಿಂದ ಈ ಸವಾಲೆಸೆದರು. ಅವರ ಮಾತಿಗೆ ಒತ್ತಾಸೆಯಾಗಿ ಸಚಿವ ಬಸವಲಿಂಗಪ್ಪನವರು ''ಕನ್ನಡ ಸಾಹಿತ್ಯದಲ್ಲಿ ಬೂಸಾ ಇದೆ'' ಎಂದರು. ಈ ಮಾತು ಅಲ್ಲೋಲ ಕಲ್ಲೋಲವಾಗಿ ಒಂದು ಚಳವಳಿಯ ಪ್ರವಾಹವನ್ನೇ ಉಂಟುಮಾಡಿತು. ಅದೊಂದು ರಾಜಕೀಯ, ಸಾಮಾಜಿಕ ಆಂದೋಲನವೂ ಆಯಿತು. ಅದುವರೆಗೆ ತನ್ನ ಪಾಡಿಗೆ ಇದ್ದ ಕನ್ನಡ ಸಾಹಿತ್ಯ ಲೋಕಕ್ಕೆ ಬೂಸಾ ಎಂಬ ಪದವು ಒಂದು ಸವಾಲಾಯಿತು. ಮರುದಿನ ಪತ್ರಿಕೆಗಳಲ್ಲಿ ಸದರಿ ಪ್ರಸಂಗವು ಪ್ರಕಟವಾಯಿತು. ಅದರ ಬೆನ್ನಿಗೇ ಪ್ರತಿಭಟನೆಗಳು ಉಂಟಾದವು. ಕನ್ನಡ ಪರವಾಗಿರುವವರು ಮೇಲುಜಾತಿಗಳ ಪರವಾಗಿಯೂ, ಉಳಿದವರು ಬೂಸಾ ಪರವಾಗಿಯೂ ನಿಲ್ಲುವಂತಾಯಿತು. ಸಾಹಿತ್ಯಕ್ಕಿಂತ ಹೆಚ್ಚಾಗಿ ಸಾಹಿತ್ಯ ರಾಜಕಾರಣ ತಲೆದೋರಿತು. ಮೊದಮೊದಲು ಅಹಿಂಸಾವಾದಿಯಾಗಿದ್ದ ಈ ಚಳವಳಿಯು ಹಿಂಸಾರೂಪವನ್ನು ಪಡೆದುಕೊಂಡಿತು. ಕರ್ನಾಟಕದಾದ್ಯಂತ ಈ ಚಳವಳಿ ವ್ಯಾಪಿಸಿದಾಗ ಚಳವಳಿಯ ಒತ್ತಾಯಕ್ಕೆ ಮಣಿದು ಆಗಿನ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರು ಬಸವಲಿಂಗಪ್ಪನವರ ರಾಜೀನಾಮೆ ಪಡೆದ ನಂತರ ಚಳವಳಿ ಶಮನಗೊಂಡಿತು.

ಬೂಸಾ ಚಳವಳಿಯ ಸಂದರ್ಭದಲ್ಲಿಯೇ ದಲಿತ ಬರಹಗಾರ ದೇವನೂರು ಮಹಾದೇವ 'ದ್ಯಾವನೂರು' ಎಂಬ ಕಥಾ ಸಂಕಲನವನ್ನು ನೆಲಮನೆ ದೇವೇಗೌಡರ ಮೂಲಕ ಪ್ರಕಟಪಡಿಸಿದರು. ಕನ್ನಡ ಸಾಹಿತ್ಯಕ್ಕೆ ವೈಚಾರಿಕ ದೃಷ್ಟಿಕೋನವನ್ನು ನೀಡಿದ ಬೂಸಾ ಪ್ರಸಂಗ ದಲಿತ ಸಾಹಿತ್ಯ ಪ್ರಕಾರವಾಗಿ ಬೆಳೆಯಲು ಅದೊಂದು ಕಾರಣೀಕ ಘಟನೆಯಾಯಿತು. ೧೯೭೩ರ ವೇಳೆಗೆ ''ದಲಿತ ಸಂಘರ್ಷ ಸಮಿತಿ'' ಸಣ್ಣದಾಗಿ ಚಿಗುರಿತು. ಮೊದಲಿಗೆ ಭದ್ರಾವತಿಯಲ್ಲಿ ''ದಲಿತ ಸಂಘರ್ಷ ಸಮಿತಿ'' ಎಂಬ ಹೆಸರಿನಲ್ಲಿ ನೋಂದಣಿಯಾಯಿತು.

ಮಹಾರಾಷ್ಟ್ರದಲ್ಲಿ ದಲಿತ ಪ್ಯಾಂಥರ್ಸ್, ಆಂಧ್ರದಲ್ಲಿ ದಲಿತ ಮಹಾಸಭಾ, ತಮಿಳುನಾಡಿನಲ್ಲಿ ಪೆರಿಯಾರ್ ಚಳವಳಿ ಹೋಗಿ ಭಾರತದಾದ್ಯಂತ ಅನೇಕ ದಲಿತ ಸಂಘಟನೆಗಳು ಜನ್ಮ ತಾಳಿದವು.

ಕೃಷ್ಣಪ್ಪ ಅವರು ಭದ್ರಾವತಿಯಲ್ಲಿ ದ.ಸಂ. ಸಮಿತಿಯನ್ನು ಶುರುಮಾಡಿದ ಕಾಲದಲ್ಲೇ ಮೈಸೂರಿನಲ್ಲಿ ಕೆಲವರು ದ.ಸಂ. ಸಮಿತಿಯನ್ನು ಪ್ರಾರಂಭ ಮಾಡಿದರು. ದೇವಯ್ಯ ಹರವೆ. ದೇವನೂರು ಮಹಾದೇವ, ಎಚ್. ಗೋವಿಂದಯ್ಯ ಮುಖ್ಯರಾಗಿದ್ದಾರೆ. ಕೋಲಾರ ಜಿಲ್ಲೆಯ ಕುಗ್ರಾಮದಲ್ಲಿ ನಡೆದ ಕೊಲೆಯ ಪ್ರಸಂಗದಿಂದ ಅಲ್ಲಿ ದ.ಸಂ. ಸಮಿತಿ ಬೆಳೆಯಿತು. ಕೋಲಾರದಲ್ಲಿ ಬೇರೂರಿದ ದಲಿತ ಸಂಘಟನೆಯು ಊರಿಂದ ಊರಿಗೆ ಹಬ್ಬುತ್ತಾ ಹೋಯಿತು. ಇದೇ ಕಾಲಕ್ಕೆ ''ಪಂಚಮ'' ಎಂಬ ದಲಿತ ಪರ ಪಾಕ್ಷಿಕ ಪತ್ರಿಕೆಯೊಂದು ರಾಜ್ಯಾದ್ಯಂತ ಓಡಾಡಲು ಆರಂಭಿಸಿತು. ಮೊದಲು ಭದ್ರಾವತಿಯಿಂದ ಪ್ರಕಟವಾಗುತ್ತಿದ್ದು ಅದು ಕಾಲಾಂತರದಲ್ಲಿ ಬೆಂಗಳೂರಿಗೆ ವರ್ಗಗೊಂಡಿತು. ಮಾರ್ಕ್ಸ್‌ವಾದದ ವೇದಿಕೆಯಾದ ಈ ಪತ್ರಿಕೆ ತದನಂತರದಲ್ಲಿ ಅಂಬೇಡ್ಕರ್ ಚಿಂತನೆಗಳನ್ನು ಪ್ರಸಾರ ಮಾಡಲು ಪ್ರಯತ್ನಿಸಿತು.

ರಾಜ್ಯದ ನಾನಾ ಮೂಲೆಗಳಲ್ಲಿ ದಲಿತ ಸಂಘಟನೆ ಬಲವಾಗಿ ಬೇರೂರತೊಡಗಿತು. ''ಯಾರಿಗೆ ಬಂತು ಎಲ್ಲಿಗೆ ಬಂತು ೪೭ರ ಸ್ವಾತಂತ್ರ್ಯ'' ಹಾಗೂ ''ನನ್ನ ಕವನ'' ಎಂಬ ಸಿದ್ದಲಿಂಗಯ್ಯನವರ ಕವಿತೆಗಳು ನಾಡಿನಾದ್ಯಂತ ಬಹುಜನಪ್ರಿಯವಾದವು. ದಲಿತ ಚಳವಳಿಯ ಆತ್ಮವಾದ ಸಿದ್ದಲಿಂಗಯ್ಯನವರು ದಲಿತ ಸಾಹಿತ್ಯಕ್ಕೆ ಸಿಡಿಲಿನಂತಹ ಕವಿತೆಗಳನ್ನು ನೀಡಿದರು. ಅವರು ರಚಿಸಿದ ಕವಿತೆಗಳು ಘೋಷಣಾ ರೂಪದ ವಾಕ್ಯಗಳಾದವು.

ಕ್ರಿ.ಶ. ೧೯೭೯ರ ವೇಳೆಗೆ ಬಂಡಾಯ ಸಾಹಿತ್ಯ ತಲೆ ಎತ್ತಿತು. ಬಂಡಾಯ ಮತ್ತು ದಲಿತ ಸಾಹಿತ್ಯಗಳು ಜೊತೆ ಜೊತೆಯಲ್ಲಿಯೇ ಬೆಳೆಯುತ್ತಾ ಬಂದವು. ಬರಗೂರು ರಾಮಚಂದ್ರಪ್ಪ, ಬೆಸಗರಹಳ್ಳಿ ರಾಮಣ್ಣ, ಕಾಳೇಗೌಡ ನಾಗವಾರ ಮುಂತಾದ ಲೇಖಕರು ಬಂಡಾಯ ಸಾಹಿತ್ಯದಲ್ಲಿ ಸಾಕಷ್ಟು ಕೃಷಿ ನಡೆಸಿದರು. ಹೈದರಾಬಾದಿನಲ್ಲಿ ಜರುಗಿದ ಅಖಿಲ ಭಾರತ ದಲಿತ ಲೇಖಕರ ಸಮ್ಮೇಳನದಲ್ಲಿ ಪ್ರೊ। ಕೆ. ಎಸ್. ಭಗವಾನರು ಹಾಜರಿದ್ದರು. ಭಗವಾನರ ದಲಿತರ ಪರವಾದ ನಿಲುವು ತಾನು ದಲಿತ ಲೇಖಕನೆಂದು ಹೇಳಿಕೊಳ್ಳುವಂತೆ ಮಾಡಿತ್ತು. ದಲಿತರ ಏಳಿಗೆಗಾಗಿ ಹಗಲಿರುಳು ದುಡಿಯುತ್ತಿರುವವರು ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮಿಗಳು. ಇವರು ಕೇವಲ ಲಿಂಗಾಯಿತ ಗುರುಗಳಲ್ಲ, ಅವರು ಎಲ್ಲ ಶೋಷಿತ ವರ್ಗಗಳ ಗುರುಗಳು. ಅವರ ಚಿಂತನೆಗಳಲ್ಲಿ ಜಗತ್ತಿನ ಎಲ್ಲಾ ಧರ್ಮಗಳ ಸಾರವಿದೆ.

ಹಾಗಾಗಿಯೇ ನಿಡುಮಾಮಿಡಿ ಮಠಕ್ಕೆ 'ಮಾನವ ಧರ್ಮಪೀಠ' ಎಂಬ ಹೆಸರು. ಬಂದಿದೆ. ಡಾ। ಯು. ಆರ್. ಅನಂತ ಮೂರ್ತಿಯವರು ಕೂಡ ದಲಿತ ಚಳವಳಿಯ ಪರ ಕೆಲಸ ಮಾಡಿದವರು. ಮೀಸಲಾತಿಯ ವಿಚಾರದಲ್ಲಿ ದಲಿತ ಸಂಘಟನೆ ಮತ್ತು

ಅವರ ನಡುವೆ ಭಿನ್ನಾಭಿಪ್ರಾಯ ಉಂಟಾಗಿ ದಲಿತ ಸಂಘಟನೆಯ ಪ್ರತಿಭಟನೆಯಿಂದ ತಮ್ಮ ಪ್ರಾಧ್ಯಾಪಕ ಹುದ್ದೆಗೆ ರಾಜೀನಾಮೆ ನೀಡಿದರು.

ದ.ಸಂ.ಸ. ಒಂದು ಪ್ರತ್ಯೇಕ ರಾಜಕೀಯ ಪಕ್ಷವಾಗಿ ರೂಪು ತಳೆಯಲಿಲ್ಲ ಅಥವಾ ತನ್ನ ಜನರನ್ನು ಶೋಷಣೆಯ ಬಾಹು ಬಂಧನದಿಂದ ಬಿಡಿಸಲೂ ಇಲ್ಲ. ಕೇವಲ ರಾಜಕೀಯ ಒತ್ತಡದ ಗುಂಪಾಗಿ ಕೆಲಸ ಮಾಡಿತು. ಸರಕಾರದ ಸುತ್ತ ಗಾಣದೆತ್ತಿನಂತೆ ಸುತ್ತಿತು. ಅಲ್ಪ ಫಲಗಳಿಗೆ ತನ್ನನ್ನು ತಾನು ಸಂತೈಸಿಕೊಂಡಿತು. ಅದರಿಂದ ನೆಲೆ ತಪ್ಪಿದ ದಲಿತ ಚಳವಳಿ ನೆಲ ಹಿಡಿಯಿತು.

೧೯೭೫ರಿಂದ ೧೯೮೫ರ ವರೆಗೆ ದ.ಸಂ. ಸಮಿತಿಯ ಸುವರ್ಣಯುಗ. ಸಂಘಟನಾ ಶಕ್ತಿ ತೀವ್ರಗೊಂಡಿದ್ದ ಕಾಲ. ದಲಿತ ಸಂಘಟನೆಗಳಿಗೆ ಮಂತ್ರಿಮಾನ್ಯರು ಹೆದರುತ್ತಿದ್ದರು. ಸರ್ಕಾರಗಳು ಗಡ ಗಡ ನಡುಗುತ್ತಿದ್ದವು. ಈ ಕಾಲವನ್ನು ಕಾರ್ಯಕರ್ತರ ಯುಗವೆಂದು ಕರೆಯಲೇಬೇಕು. ರಾಜಕೀಯ ಪಕ್ಷಗಳು ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಕೆಲಸ ಮಾಡುತ್ತವೆ. ಚುನಾವಣೆಗೆ ಮೊದಲು ರಾಜಕಾರಣಿಗಳು ಜನರಿಗೆ ಬಗೆಬಗೆಯ ಭರವಸೆಗಳನು ಕೊಡುತ್ತಾರೆ. ಅಧಿಕಾರಕ್ಕೆ ಬಂದಮೇಲೆ ಜನರನ್ನು ಮರೆಯುತ್ತಾರೆ. ಸಾಗರದಷ್ಟು ಭರವಸೆಗಳ ಪೈಕಿ ಸಾಸಿವೆಯಷ್ಟನ್ನು ಈಡೇರಿಸುವುದಿಲ್ಲ. ಈ ಹಿನ್ನೆಲೆಯಲ್ಲಿ ದಲಿತ ಸಂಘಟನೆಯು ಊರೂರುಗಳಲ್ಲಿ ಗರಿಗಟ್ಟುತ್ತಾ ಹೋಗುತ್ತಿತ್ತು. ದಲಿತರು ಮತ್ತು ಇತರ ಹಿಂದುಳಿದ ವರ್ಗಗಳ ಆಶೋತ್ತರಗಳಿಗೆ ಅನುಗುಣವಾಗಿ ಸ್ಪಂದಿಸುತ್ತಾ ಹೋಯಿತು. ಹೀಗಾಗಿ ದಲಿತ ಸಂಘಟನೆಯು ಜನರ ನಡುವೆ ಬಲವಾಗಿ ಬೇರೂರಿತು.

ಅನಕ್ಷರತೆ. ಅಜ್ಞಾನ, ಮಾನಸಿಕ ಮತ್ತು ದೈಹಿಕ ಅಸ್ಪೃಶ್ಯತೆ, ಮೇಲುಜಾತಿಗಳ ಶೋಷಣೆ. ರಾಜಕೀಯ ಗುಲಾಮಗಿರಿ, ಹಣಕಾಸಿನ ಕೊರತೆ, ದುಡಿದರೂ ತುಂಬದ ಹೊಟ್ಟೆ, ಸಾಂಸ್ಕೃತಿಕ ದಾಸ್ಯಗಳು ಹಳ್ಳಿಗಾಡಿನ ನರನಾಡಿಗಳಲ್ಲಿ ಬಲವಾಗಿ ಬೇರು ಬಿಟ್ಟಿದ್ದವು. ಅದೆಲ್ಲದರ ವಿರುದ್ಧ ಸಂಘಟನೆಯು ವಿಮೋಚನೆಯ ಒಂದು ದಾರಿಯಾಗಿ ತೋರಿತು. ಹಳ್ಳಿಹಳ್ಳಿಗೆ ಅಂಬೇಡ್ಕರರನ್ನು ಕೊಂಡೊಯ್ಯುವುದು ದಲಿತ ಸಂಘಟನೆಯ ಆದ್ಯ ಕರ್ತವ್ಯವಾಗಿತ್ತು. ಹಸಿವು, ನೀರಡಿಕೆ, ನಿದ್ರೆಗಳನ್ನು ತೊರೆದು ಹಳ್ಳಿಹಳ್ಳಿಗಳಲ್ಲಿ ಸಂಚರಿಸಿದ ದಲಿತ ಸಂಘಟನೆಗೆ ಈ ವೃತ್ತಿಯಿಂದ ಹಣ ಸಂಪಾದನೆಯಾಗುತ್ತಿರಲಿಲ್ಲ. ಜನರ ಸಂಪಾದನೆಯಾಗುತ್ತಿತ್ತು.

ಇಂತಹ ಮಹತ್ತರ ಕಾರ್ಯದಲ್ಲಿ ದೇವಯ್ಯ ಹರವೆ, ದೇವನೂರು ಮಹಾದೇವರ ಶ್ರಮ ಅಪಾರ. ಎಂಬತ್ತರ ದಶಕದ ಆರಂಭದಲ್ಲಿ ಗುಜರಾತಿನಲ್ಲಿ ಮೀಸಲಾತಿ ವಿರೋಧಿ ಚಳವಳಿ ಸಣ್ಣದಾಗಿ ಆರಂಭವಾಗಿ ಕ್ರಮೇಣ ದೊಡ್ಡದಾಯಿತು. ಮೀಸಲಾತಿಯ ಮತ್ತು ವಿರೋಧದ ಚರ್ಚಾಗೋಷ್ಠಿಗಳು, ಚಳವಳಿಗಳು ಭಾರತದಾದ್ಯಂತ ನಡೆದವು.

ಡಾ। ಮುನಿವೆಂಕಟಪ್ಪ ದಲಿತ ಸಂಘರ್ಷ ಸಮಿತಿಯನ್ನು ಕಟ್ಟಿದವರು, ಬೆಳೆಸಿದವರು ಮತ್ತು ಅದರ ವಿನಾಶಕ್ಕೆ ಮರುಗಿದವರು. ''ನಾಯಿ ತನ್ನ ಮರಿಗಳನ್ನು ತಾನೇ ತಿನ್ನುತ್ತದೆ. ತಾನು ತಿಂದು ಮಿಕ್ಕ ಮರಿಗಳನ್ನು ಸಾಕುತ್ತದೆ. ಅದೇ ರೀತಿ ನಾಗರಹಾವು ತನ್ನ ಮೊಟ್ಟೆಗಳನ್ನು ತಾನೇ ತಿನ್ನುತ್ತದೆ. ಅದರಂತೆಯೇ ಈ ದಲಿತ ಸಂಘರ್ಷ ಸಮಿತಿಯ ನಾಯಕರು ದಲಿತ ಸಂಘರ್ಷ ಸಂಘಟನೆಯನ್ನೇ ತಿಂದರಲ್ಲ. ಈ ಮೃಗೀಯ ಸ್ವಾರ್ಥವು ಮನುಷ್ಯಕುಲವನ್ನು ಆವರಿಸಿ ಕೊಂಡಿದೆಯಲ್ಲ.'' ದಲಿತ ಚಳವಳಿಯಲ್ಲಿ ಸಕ್ರಿಯ ಸ್ಫೂರ್ತಿಯಾಗಿದ್ದ ಮುನಿವೆಂಕಟಪ್ಪನವರಿಗೆ ಅವರ ಜೀವಮಾನವನ್ನೆಲ್ಲ ಕಾಡಿದ ಪ್ರಶ್ನೆಯಿದು, ಪಂಚಮ ಪತ್ರಿಕೆ ನಿಂತಿತು. ದಲಿತ ಸಂಘರ್ಷ ಸಮಿತಿ ಬಡವಾಯಿತು. ಕಾರ್ಯಕರ್ತರು ಮತ್ತು ನಾಯಕರ ನಡುವೆ ಕಲಹ ಆರಂಭವಾಯಿತು. ನಾಯಕರೇ ಶೋಷಕರಾದರು. ಕಾರ್ಯಕರ್ತರೇ ಶೋಷಿತರಾದರು. ಮುನಿವೆಂಕಟಪ್ಪನವರು ಕಾರ್ಯಕರ್ತರ ಪರ ನಿಂತರು. ಆಗ ದ.ಸಂ. ಸಮಿತಿಯಲ್ಲಿ ಚಾರಿತ್ರಿಕವಾದ ಬಿರುಕು ಕಾಣಿಸಿತು. ಈ ಬಿರುಕಿಗೆ ದೇವನೂರು ಕಾರಣ, ಬಿ. ಕೆ. ಕಾರಣರಲ್ಲ.

ಕನ್ನಡ ಸಾಹಿತ್ಯದ ದುರಂತವೆಂದರೆ ಅದರ ಬಹುಪಾಲು ಲೇಖಕರು ಅಧ್ಯಾಪಕರೇ ಆಗಿರುವುದು. ಅಧ್ಯಾಪನ ವೃತ್ತಿ ತೊರೆದ ದೇವನೂರು ಲೇಖಕರಾಗಿ ಪ್ರಚಂಡ ಪ್ರಚಾರ ಪಡೆದಿರುವುದು ಸವರ್ಣೀಯ ವಿಮರ್ಶಕರ ವಿಮರ್ಶೆಯ ದೋಷವೇ ಆಗಿದೆ. ಅವರ ಕಬಂಧ ಬಾಹುವು ಕರ್ನಾಟಕದ ಆಚೆಗೂ ವಿಸ್ತರಿಸಿದೆ. ದೇವನೂರು ಅವರ ಸಾಹಿತ್ಯದಲ್ಲಿ ಸಾಹಿತ್ಯಕ್ಕಿಂತ ತಂತ್ರವೇ ಜಾಸ್ತಿ. ಜಾತಿ ಕುಲಗಳನ್ನು ನೋಡಿಕೊಂಡು ಮಣೆ ಹಾಕಿರೆಂದು ದಲಿತ ಸಾಹಿತಿಗಳು ಯಾರನ್ನೂ ಕೇಳಿಕೊಂಡಿಲ್ಲ. ಜಾತಿಮೂಲವಾದ ಸಾಹಿತ್ಯ ಇರುವಂತೆ ಜಾತಿಮೂಲವಾದ ವಿಮರ್ಶೆಯಿದೆ. ನಾವು ದೇವನೂರರ ಸಾಹಿತ್ಯವನ್ನು ದೂಷಿಸುತ್ತಿಲ್ಲ ಅವರ ಸಾಹಿತ್ಯದ ಮತ್ತು ವ್ಯಕ್ತಿತ್ವದ ದಲಿತ ವಿರೋಧಿ ನಿಲೆಗಳನ್ನು ವಿರೋಧಿಸುತ್ತಿದ್ದೇವೆ. ಹಂಗರಹಳ್ಳಿ ಜೀತಪ್ರಕರಣ, ಕಂಬಾಲಪಲ್ಲಿಯ ನರಮೇಧ- ಈ ಮುಂತಾದ ಅನಿಷ್ಟ ಪ್ರಸಂಗಗಳು ನಡೆಯುತ್ತಿರುವುದಕ್ಕೆ ಮರುಗುತ್ತಿದ್ದೇವೆ.

ಅದಕ್ಕೆ ನಾವೆಲ್ಲರೂ ಪರೋಕ್ಷ ಕಾರಣರು. ನಮ್ಮೆಲ್ಲರ ದುರ್ಬಲತೆಯಿಂದ ಇಂದು ಚಳವಳಿ ದುರ್ಬಲವಾಗಿದೆ. ದಲಿತ ಚಳವಳಿಗೆ ಚೈತನ್ಯ ಸ್ವರೂಪಿಯಾಗಿದ್ದ ಬಿ. ಕೃಷ್ಣಪ್ಪನವರ ಸಾವು ಒಂದು ದೊಡ್ಡ ಅಘಾತವೇ ಸರಿ. ದಲಿತ ಸಾಹಿತಿಗಳು ಇಂದು ಏಕಾಂತ ದಂತ ಗೋಪುರಗಳಲ್ಲಿದ್ದಾರೆ. ತಮ್ಮ ಜನಾಂಗೀಯ ಅನುಭವಗಳಿಂದ ದೂರವಾಗಿದ್ದಾರೆ. ಸಾವಿರಾರು ವರ್ಷಗಳ ಅಂಧಕಾರಕ್ಕಿಂತಲೂ ಇಂದು ಹೆಚ್ಚಿನ ಅಂಧಕಾರದಲ್ಲಿದ್ದಾರೆ. ಅನಿಕೇತನದ ಸ್ಥಿತಿಯಿಂದ ಸ್ವನಿಕೇತನ ಸ್ಥಿತಿಯನ್ನು ಸ್ಥಾಪಿಸಿದ್ದಾರೆ. ಇದು ತ್ರಿಶಂಕು ಸ್ಥಿತಿಗಿಂತಲೂ ಹೀನವಾದ ಸ್ಥಿತಿ, ನರಕಕ್ಕಿಂತಲೂ ಕಹಿಯಾದ ಸ್ಥಿತಿ. ದಲಿತ ಲೇಖಕರು ಕೇವಲ ದ್ವೀಪಗಳಾಗುತ್ತಿದ್ದಾರೆ. ಜನತೆಯ ಲೇಖಕರಾಗಲು ಎಲ್ಲರೂ ಹೆದರುತ್ತಿದ್ದಾರೆ. ಆಕ್ರೋಶವಶರಾಗಿ ಯಾರೂ ಸಾಹಿತ್ಯವನ್ನು ಸೃಷ್ಟಿಸಲು ಸಾಧ್ಯವಿಲ್ಲ. ಸಾಹಿತ್ಯವೆಂಬುದು ಹುಟ್ಟುವಿಕೆಯ, ಉಳಿಯುವಿಕೆಯ ಹಾಗೂ ಚಿಗುರುವಿಕೆಯ ಸಂಕೇತ.

ಆದರೆ ಯಾವುದೇ ಚಳವಳಿಗೆ ಪ್ರೇರಣಶಕ್ತಿಯಾಗಿ ಸಾಹಿತ್ಯದ ಹಿನ್ನೆಲೆ ಇರುವುದು ಸತ್ಯವಾದರೂ ಸಾಹಿತ್ಯವೇ ಒಂದು ಚಳವಳಿಯನ್ನು ಪೂರ್ಣವಾಗಿ ನಿಯಂತ್ರಿಸಲು ಹೊರಟರೆ ಆ ಚಳವಳಿ ಯಶಸ್ಸಿನ ಮೆಟ್ಟಿಲು ಏರುವುದರ ಬದಲು ಸೋಲಿನ ಮಡಿಲಿಗೆ ಬೀಳಬೇಕಾಗುತ್ತದೆ. ದಲಿತ ಚಳವಳಿಗೆ ಆಗಿರುವುದು ಹೀಗೆಯೇ. ಈಗ ಈ ಚಳವಳಿ ಯಾವುದೋ ಒಂದು ಭಾಗದ ಜನರಿಂದ ಮುಕ್ತವಾಗಿ ಸಾಮೂಹಿಕ ಹಿತರಕ್ಷಣೆಯತ್ತ ಸಾಗುವ ಕಾರ್ಯ ಅತ್ಯಂತ ಜರೂರಾಗಿ ಆಗಬೇಕಾಗಿದೆ.

# ಮಹಿಳಾ ಚಳುವಳಿಗಳು

ಡಾ। ಮಲ್ಲಿಕಾ ಘಂಟಿ

ಭಾರತ ಜಾತ್ಯತೀತ ದೇಶವೆಂದು ಸಾರುತ್ತಲೇ ಜಾತಿಯಾಧಾರಿತ ಸಂಘಟನೆಗಳು ಸಾಮಾಜಿಕ ನ್ಯಾಯಕ್ಕಾಗಿ ಹುಟ್ಟಿಕೊಳ್ಳುವ ಅನಿವಾರ್ಯತೆ ಇದೆ. ಸಿದ್ಧಾಂತರೂಪಿ ರಾಜಕೀಯ ಪಕ್ಷಗಳ ನೆಲೆಯಲ್ಲಿ ದುಡಿಯುವ ವರ್ಗಗಳ ಸಂಘಟನೆಗಳು ಅರ್ಥಪೂರ್ಣವೆನಿಸಿಕೊಳ್ಳುತ್ತಿವೆ. ಜಾತಿ ಮತ್ತು ದುಡಿಮೆಯ ಗಾಣದಲ್ಲಿ ಸಿಕ್ಕಿರುವ ಹೆಣ್ಣಿನ ರಕ್ತವನ್ನು ಸದ್ದಿಲ್ಲದೆ ಕುಡಿಯುತ್ತಿರುವ ರಾಕ್ಷಸೀ ಬದುಕಿನಲ್ಲಿ ಹೆಣ್ಣು ಬಾಯಿ ತೆಗೆದು ಮಾತನಾಡಿದ ನೆನಪೇ ಇಲ್ಲವಾಗಿದೆ. ಜಾತಿ, ವರ್ಗಗಳು ಸಾಮಾಜಿಕ ಸಮಸ್ಯೆಗಳೆಂದು ಪರಿಗಣಿಸಿದ ಸಮಾಜದಲ್ಲಿಯೇ ಲಿಂಗನೆಲೆಯ ಸಮಸ್ಯೆಯನ್ನು ಸರಳೀಕರಿಸಿ ನೋಡುತ್ತ ಬಂದಿರುವೆವು. ಕಾರ್ಮಿಕರು, ಬಡವರು, ರೈತರು ಸೇರಿ ಸಂಘಟಿತರಾಗಿ ಹೋರಾಡುತ್ತಿರುವುದನ್ನೆಲ್ಲ ಸಾಮಾಜಿಕ, ರಾಜಕೀಯವಾಗಿ ಪರಿಗಣಿಸಿ ಅವುಗಳನ್ನೆಲ್ಲ ದಾಖಲಿಸುತ್ತ ಬಂದಿದ್ದೇವೆ. ಭಾರತೀಯರೆಂದು ಕರೆದುಕೊಳ್ಳುವ ವೈಶಾಲ್ಯತೆಗೆ ಸಂಚು ತಂದುಕೊಂಡಿರುವ ಈ ಹೊತ್ತಿನಲ್ಲಿ ಹಿಂದೂ ಮುಸ್ಲಿಂ ಮೂಲಭೂತವಾದಿಗಳು ಮಹಿಳೆ, ದುಡಿಯುವ ವರ್ಗ, ದಲಿತರು, ಹಿಂದುಳಿದವರು, ಬುಡಕಟ್ಟು ಜನಸಮುದಾಯಗಳ ಮೇಲೆ ತನ್ನ ನಿಯಂತ್ರಣ ಉಳಿಸಿಕೊಳ್ಳುವ ಸಲುವಾಗಿ ರಕ್ತದೋಕುಳಿಯಾಡುತ್ತಿದೆ. ರೊಟ್ಟಿಗಿಂತಲೂ ಜೀವ ಅಗ್ಗವಾಗಿದೆ. ಹಿಂದೂವೆಂಬುದು ಭಾರತೀಯ ಬದುಕಿನಲ್ಲಿಯ ಒಂದು ಎಳೆಯೇ ವಿನಃ ಹಿಂದೂ- ಹಿಂದೂತ್ವವೇ ಭಾರತ ವೆಂದಾಗಲಿ, ಸಂಸ್ಕೃತಿಯೆಂದಾಗಲಿ ಅರ್ಥವಲ್ಲ. ಹಲವು ಧರ್ಮ, ಭಾಷೆ, ಸಂಸ್ಕೃತಿ, ಬದುಕು ಹುರಿಗೊಂಡು ಭಾರತವೆಂದು ಕರೆಯಿಸಿಕೊಳ್ಳುವ ಔದಾರ್ಯದ ನೆಲವಾಗಿದೆ.

ಹಲವು ಮತಧರ್ಮಗಳಿಗೆ, ಜಾತಿಕುಲಗೋತ್ರಗಳಿಗೆ ಬದುಕುವ ಅವಕಾಶ ನೀಡಿದ ಈ ಭೂಮಿಯಲ್ಲಿ ಬಲಿಷ್ಠತೆಗೆ ನಿರಂತರ ಉಣ್ಣಲು ಪರಮಾನ್ನವೇ ಸಿಕ್ಕಿದೆ. ಹೀಗೆ ಉಂಡವರು ಕಾಲಾಂತರದಲ್ಲಿ ಕೊಬ್ಬಿ ಮೂಲಭೂತವಾದಿಗಳಾಗಿ ಯಥಾಸ್ಥಿತಿಯನ್ನು ಉಳಿಸಿಕೊಂಡು ಹೋಗುವುದಕ್ಕಾಗಿ ಮಾನವಜೀವಗಳ ಜೊತೆಯಲ್ಲಿ ಚೆಲ್ಲಾಟವಾಡುತ್ತಿದ್ದಾರೆ. ಇದು ಸದ್ಯದ ವಾಸ್ತವದ ಸ್ಥಿತಿಯೂ ಹೌದು, ಭೂತವೂ ಹೌದು. ಈ ಹಿಂದೆಯೂ ಈ ಪುಣ್ಯಭೂಮಿಯಲ್ಲಿ ಜಾತಿ ಲಿಂಗಗಳ ಹೆಸರಿನಲ್ಲಿ ಚಾಪೆಯಲ್ಲಿ ಸುತ್ತಿಸುಡುವ ಧರ್ಮಸಂಗತ ಸಂಗತಿಗಳಿದ್ದವು. ಈಗಲೂ ಮುಂದುವರಿದು ಕೊಂಡು ಬಂದಿರುವುದನ್ನು ಕಂಬಾಲಪಲ್ಲಿಯ ಘಟನೆ ನೆನಪಿಸುವುದು. ಸ್ವಾತಂತ್ರ್ಯಾನಂತರದ ದಿನಗಳಲ್ಲಿ, ಅತ್ಯಂತ ಶ್ರೇಷ್ಠವಾದ ಗಣತಂತ್ರ ವ್ಯವಸ್ಥೆಯನ್ನು ಹೊಂದಿರುವ ದೇಶವೆಂದು ಕರೆಯಿಸಿಕೊಳ್ಳವ ಭಾರತದಲ್ಲಿ ಹೆಣ್ಣನ್ನು ಪ್ರಜೆಯ ಮಟ್ಟಕ್ಕೆ ಏರಿಸಿರುವುದನ್ನು, ಪರಿಗಣಿಸಿರುವುದನ್ನು ಸಾಮಾಜಿಕ, ಸಾಂಸ್ಕೃತಿಕ ಬದುಕಿನಲ್ಲಿ ಕಾಣಲು ಸಾಧ್ಯವಿಲ್ಲ. ಬಾಯಿಮಾತಿನ ಸ್ವಾತಂತ್ರ್ಯದ ವ್ಯಾಪ್ತಿಯಲ್ಲಿರುವ ಹೆಣ್ಣನ್ನು ಸಾಂಪ್ರದಾಯಿಕ ಪಾತಳಿಯಿಂದ ಹೊರಬರಲು ಅವಕಾಶವನ್ನು ನೀಡಿಯೇ ಇಲ್ಲ. ಗಂಡಾಗಿ ಹುಟ್ಟುವುದೊಂದೇ ಆಳಲು ಇರುವ ಹಕ್ಕೆಂದುಕೊಂಡಿರುವ ಸಾಮಾಜಿಕ, ಕೌಟುಂಬಿಕ ನೆಲೆಯಲ್ಲಿ ಹೆಣ್ಣನ್ನು ಕಂಡ, ಕಾಣುವ, ರೀತಿಯೆಲ್ಲ ನಾಗರಿಕ ಸಮಾಜದ್ದಲ್ಲ. ಮನುಮೂಲದ ವಿಚಾರಧಾರೆಯಿಂದ ಬುದ್ಧಿ ಭಾವಗಳನ್ನು ತುಂಬಿಕೊಂಡಿರುವ ಹೆಣ್ಣು

ಗಂಡುಗಳಾದಿಯಾಗಿ ಎಲ್ಲರಲ್ಲಿಯೂ ಶ್ರೇಷ್ಠತೆಯ ಭ್ರಮೆ, ಕೀಳರಿಮೆಗಳೇ ತುಂಬಿ ತುಳುಕುತ್ತಿವೆ. ಈ ಶ್ರೇಷ್ಠತೆಯ ಬಲದಿಂದ ಬಲಹೀನರನ್ನು ತುಳಿಯುತ್ತ ಬಂದ ಬಲಿಷ್ಠ ವರ್ಗ ರಾಜಕೀಯ, ಸಾಮಾಜಿಕ ಸ್ಥಾನಮಾನಗಳನ್ನು ಪಡೆದುಕೊಂಡರೆ ತುಳಿತಕ್ಕೆ ಸಿಕ್ಕವರು ಬದುಕುವ ಹಕ್ಕಿನಿಂದ ವಂಚಿತರಾಗುತ್ತಿರುವರು.

ಸಮಾಜ, ಕುಟುಂಬಗಳ ಹೆಬ್ಬಂಡೆಗಳನ್ನೆಲ್ಲ ಎದೆಯ ಮೇಲಿಟ್ಟುಕೊಂಡಿರುವ ಹೆಣ್ಣು ಉಸಿರಾಡಿದ್ದು ಗಾಳಿಯನ್ನಲ್ಲ, ಯಾತನೆ, ಬರೀ ಯಾತನೆಯನ್ನು. ಈ ಯಾತನಾಮಯ ಬದುಕಿನಲ್ಲಿ ಹೆಣ್ಣಿನ ಬಿಡುಗಡೆ ಸಂಘಟಿತ ಶಕ್ತಿಯ ಬಲದಿಂದ ಆಗುವ ಸೂಚನೆಗಳು ಕಾಣುಸುತ್ತಿಲ್ಲ. ಸಂಘಟನೆ, ಚಳುವಳಿಗಳೆಲ್ಲ ಗಂಡಸಿಗೆ ಸಂಬಂಧಿಸಿದ ಸಂಗತಿಗಳಾಗಿ ಪರಿಗಣಿಸಿರುವುದರಿಂದ ಇದರ ಕುರಿತ ಹಾಗೇ ಹೆಣ್ಣುಗಳು ಮಾತನಾಡುವುದೇ ಅಪರಾಧವೆಂಬ ಸ್ವಯಂ ಘೋಷಿತ ಕಾನೂನಿನಡಿಯಲ್ಲಿದ್ದೇವೆ. ಭಾರತಕ್ಕೊಂದು ಸಂವಿಧಾನವಿದೆ. ಜಾತಿ, ಲಿಂಗ, ವರ್ಗಾಧಾರಿತ ಸಂಗತಿಗಳಿಗೆ ಕಾನೂನಿನಡಿಯಲ್ಲಿಯೇ ಹಲವು ಹತ್ತು ಸವಲತ್ತು, ಶಿಕ್ಷೆ, ಹಕ್ಕು, ಕರ್ತವ್ಯಗಳೆಲ್ಲ ಸುಂದರ ಅಕ್ಷರಗಳಲ್ಲಿ ಬರೆಯಲ್ಪಟ್ಟು ತೆರೆಯದೆ ಮುಚ್ಚಿಟ್ಟಿದ್ದೇವೆ. ಅಲಿಖಿತ ಹಿಂದೂತ್ವದ ಬೈಬಲ್ ಎಂದು ಕರೆಯಬಹುದಾದ ಮನುಸ್ಮೃತಿ ವಾಸ್ತವ ಬದುಕಿನಲ್ಲಿ ಚಲಾವಣೆಗೊಳ್ಳುತ್ತಿದೆ.

ಹೆಣ್ಣಿನ ಲೋಕದಲ್ಲಿ ವಚನಕಾರರ ಕಾಲದಲ್ಲಿ ಕಾಣಿಸಿಕೊಂಡ ಬೆಳಕಿನ ಸೆಳಕುಗಳು ದಾರಿದೀಪಗಳಾಗಿ ನಿರಂತರ ಹೊತ್ತಿ ಉರಿಯಲಿಲ್ಲ. ಬ್ರಿಟಿಷರು ಬರುವವರೆಗೂ ಕರಾಳ ಕತ್ತಲೆಯಲ್ಲಿಯೇ ಬದುಕಿದವು. ಬ್ರಿಟಿಷರಾಗಮನ ದಲಿತ ಮತ್ತು ಮಹಿಳಾ ಲೋಕದಲ್ಲಿ ಚಲನಶೀಲತೆಯನ್ನು ತಂದಿತು ಎಂದರೆ ಗುಮಾನಿಯಿಂದ ನೋಡಬೇಕಾಗಿಲ್ಲ. ದೇವರು, ಧರ್ಮದ ಹೆಸರಿನಲ್ಲಿ ಹೆಣ್ಣನ್ನು ಹಾಡಾಹಗಲೇ ಸುಡುತ್ತಿರುವುದನ್ನು ನ್ಯಾಯಸಮ್ಮತವೆಂದು ಭಾವಿಸಿದ್ದ ನೆಲದಲ್ಲಿ ಹೆಣ್ಣಿನ ಬದುಕಿಗಾಗಿ ಕಣ್ಣೀರು ಸುರಿಸಿದ್ದು ಕೂಡಾ ಗಂಡಸರೆ ಎಂಬುದೊಂದು ಗಮನಿಸಬೇಕಾದ ಸಂಗತಿ. ಮನುಕುಲಕ್ಕಾಗಿ, ಮಾನವೀಯತೆಗಾಗಿ ಧ್ವನಿಯೆತ್ತುವ ಕಂಠ, ಬಾಯಿಗಳನ್ನು ಹೆಣ್ಣು ಗಂಡೆಂಬ ವರ್ಗೀಕರಣಕ್ಕೆ ಒಳಪಡಿಸುವುದು ತಪ್ಪು. ರಾಜಾರಾಮಮೋಹನ್‌ರಾಯರಂಥವರ ವೈಯಕ್ತಿಕ ನೆಲೆಯಲ್ಲಿ ಕಾಣಿಸಿಕೊಂಡ ತಳಮಳದ ಉರಿ ಇಡೀ ಮಹಿಳಾ ಸಮುದಾಯಕ್ಕೆ ಬದುಕುವ ಹಕ್ಕನ್ನು ನೀಡಿದ್ದನ್ನು ಮರೆಯುವ ಹಾಗಿಲ್ಲ. ಖಾಸಗಿ ಆಸ್ತಿಯಂತೆ ಹೆಣ್ಣನ್ನು ಪರಿಗಣಿಸಿರುವ ಸಮಾಜದಲ್ಲಿ ಹೆಣ್ಣು ನಿರಂತರ ಗಂಡಿನ ಕಣ್ಗಾವಲಿನಲ್ಲಿಯೇ ಇರಬೇಕು; ಒಬ್ಬನ ಸೊತ್ತನ್ನು ಇದ್ದಾಗಲೂ ಸತ್ತಾಗಲೂ ಅನ್ಯರು ಉಪಭೋಗಿಸಬಾರದೆಂಬ ಸ್ವಾರ್ಥಮೂಲದಿಂದ ಕಾಣಿಸಿಕೊಂಡ ಸತಿಪದ್ಧತಿ ದೈವತ್ವಕ್ಕೇರಿದ್ದು ವೈದಿಕ ಬಲದಿಂದಲೇ. ಸುಧಾರಣಾವಾದಿಗಳ ಗಮನ ಸೆಳೆದ ಸ್ತ್ರೀಬದುಕಿನ ಸಂಕಷ್ಟಗಳು ಆಮೂಲಾಗ್ರವಾಗಿ ನಿರ್ಮೂಲನೆ ಆಗುವಂತಹ ರೀತಿಯ ಕಾರ್ಯಸ್ವರೂಪವನ್ನು ಪಡೆದುಕೊಳ್ಳುವುದಿಲ್ಲವೆಂಬುದೊಂದು ಹಿನ್ನಡೆಯ ಸಂಗತಿ. ಯಾವ ಕಾಲದಲ್ಲಿಯೂ ಸ್ತ್ರೀ ಬದುಕಿಗೆ ಸುತ್ತಿಕೊಂಡಿರುವ ಕರಾಳ ಸರ್ಪದ ತಲೆ ಒಡೆಯುವ ಕೆಲಸವಾಗಿಲ್ಲ. ಏನಿದ್ದರೂ ಬಾಲದ ಜೊತೆಗೆ ನಡೆದ ಸರ್ಪದ ಚರಿತ್ರೆಯೇ ಅಭೂತ ಪೂರ್ವವಾಗಿ ದಾಖಲಾಗಿದೆ. ಹೆಣ್ಣಿನ ದಾರುಣ ಬದುಕಿಗೆ ಕಾರಣವಾದ ಸಂಗತಿಗಳನ್ನು ಹೇಳುವ ಕೇಳುವ ಸಂದರ್ಭಗಳು ಚರಿತ್ರೆಯಲ್ಲಿ ಅನಿವಾರ್ಯವೆನಿಸಲಿಲ್ಲ. ಹೆಣ್ಣನ್ನು ಸಮಾಜಜೀವಿಯೆಂದೇ ಮೂಲಭೂತವಾಗಿ ಪರಿಭಾವಿಸದ ಸ್ಥಾವರ ಮನಸ್ಸುಗಳು ಜಂಗಮವಾಗುವುದಾದರೂ ಹೇಗೆ ಸಾಧ್ಯ? ಸ್ಥಾವರಗೊಂಡ ಮನಸ್ಸಿನ ಹುತ್ತದೊಳಗಡೆಗೆ ಹೆಣ್ಣನ್ನು ಹರಿದು ತಿನ್ನುವ ಸಂಗತಿಗಳೆಲ್ಲ ನೀತಿ ನಿರೂಪಣೆಗಳಾಗಿ ನ್ಯಾಯಸಮ್ಮತಗೊಳ್ಳುತ್ತಲೇ ಹೆಣ್ಣುಗಂಡು ಸೇರಿಯೇ ಸಮಸ್ಯೆಯನ್ನು ಜಟಿಲಗೊಳಿಸಿದೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಗಾಂಧೀಜಿಯಂಥವರು ಸ್ತ್ರೀ ಶಕ್ತಿಯನ್ನು ಅಭೂತಪೂರ್ವಕವಾಗಿ ಬಳಸಿಕೊಳ್ಳಲು ಸಾಧ್ಯವಾಯಿತು. ಏಕೆಂದರೆ ದೇವರು, ಧರ್ಮ, ಕರ್ಮದ ಹೆಸರಿನಲ್ಲಿ ಹೆಣ್ಣು ಅರೆಹೊಟ್ಟೆ, ಉಪವಾಸ, ಸಹನೆ, ತಾಳ್ಮೆಗಳನ್ನೆಲ್ಲ ಬಾಲ್ಯದಿಂದಲೇ ಮೈಗೂಡಿಸಿಕೊಂಡು ಬೆಳೆದ ಜೀವವಾಗಿರುವುದರಿಂದ ಗಾಂಧೀಜಿಯ ಬತ್ತಳಿಕೆಯಲ್ಲಿ ಸಮರ್ಥ ಅಸ್ತ್ರವಾಗಿ ಸೇರಿಸಲ್ಪಟ್ಟಳು. ಮದ್ದು ಗುಂಡಿನ ಜೊತೆಗೆ ಮಾತನಾಡಿದ ವಸಾಹತುಶಾಹಿಗಳಿಗೆ ನಿರಾಯುಧ ಸ್ತ್ರೀ ಸಮುದಾಯದ ಎದುರಿಗೆ ನಿಲ್ಲುವ ಮಾನಸಿಕ ಸಿದ್ಧತೆಯಾಗಲಿ, ಚಳವಳಿಯ ತಂತ್ರಗಾರಿಕೆಯಾಗಲಿ ಇರಲಿಲ್ಲ. ಹೀಗಾಗಿಯೇ ರಾಷ್ಟ್ರೀಯ ಚಳವಳಿಯಲ್ಲಿ ಸ್ತ್ರೀಯರಿಗೆ ಪಾಲ್ಗೊಳ್ಳುವ ಕರೆ ನೀಡಲು ಈ ಗಂಡಸರು ಮನಸ್ಸು ಮಾಡಿರಲು ಸಾಕು. ದೇಶದ ಸ್ವಾತಂತ್ರ್ಯಕ್ಕೆ ಹೆಗಲೇಣಿಯಾದ ಹೆಣ್ಣು ಸ್ವಾತಂತ್ರ್ಯವುಣ್ಣುವ ಹಕ್ಕಿನಿಂದ ವಂಚಿತಳಾದದ್ದೊಂದು ವಿಪರ್ಯಾಸದ ಸಂಗತಿ. ಕುಟುಂಬಕ್ಕಿಂತಲೂ ದೇಶದ ಸ್ವಾತಂತ್ರ್ಯ ಪವಿತ್ರವಾದದ್ದು, ಶ್ರೇಷ್ಠ ವಾದದ್ದು ಎಂದು ಹೇಳಿದ ಮಹಾತ್ಮರ ಬಾಯಲ್ಲಿಯೇ ಸ್ವಾತಂತ್ರ್ಯ ಸಿಕ್ಕ ತಕ್ಷಣ ಹೆಣ್ಣಿಗೆ ಕುಟುಂಬ, ಗಂಡ, ಮಕ್ಕಳು ಮುಖ್ಯ, ಅವರ ಪಾಲನೆ ಪೋಷಣೆಯೇ ಅವಳ ಕರ್ತವ್ಯ, ಗಂಡನ ಪಾದದಡಿಯೇ ಸ್ತ್ರೀಗೆ ಸ್ವರ್ಗವೆಂಬ ಹಳೆಯ ಪುಂಗಿ ಊದಿ ಹೆಣ್ಣನ್ನು ಸುಮ್ಮನಿರಿಸಿದರು. ಇದರ ಹಿಂದಿರುವ ಪುರುಷರಾಜಕಾರಣದ ವಾಸನೆಯನ್ನು ಗುರುತಿಸುವ ಸೂಕ್ಷ್ಮತೆಗಳು ಹೆಣ್ಣಿಗೆ ದಕ್ಕದೇ ಹೋಗಿರುವುದು ಖೇದದ ಸಂಗತಿ.

ಪ್ರಾರಂಭದ ಹಂತದಲ್ಲಿ ಸ್ತ್ರೀ ಬದುಕಿನ ಸಮಸ್ಯೆಗಳಿಗೆ ಸ್ಪಂದಿಸಿದವರು ಗಂಡಸರು. ಬ್ರಿಟಿಷರ ಒತ್ತಾಸೆಯ ಮೂಲಕ ಹೆಣ್ಣನ್ನು ನಡೆಯಿಸಿಕೊಳ್ಳುವ ಅಸಹ್ಯ, ಅಮಾನುಷ ಸಂಗತಿಗಳಿಗೆ ಕಾನೂನು ರೀತಿಯಲ್ಲಿಯೇ ಕಡಿವಾಣ ಹಾಕಲ್ಪಟ್ಟಿತು. ಜಾತಿ, ಕುಲ, ಗೋತ್ರದ ಹೆಸರಿನಲ್ಲಿ ಸ್ತ್ರೀ ಸಮುದಾಯವನ್ನು ಛಿದ್ರಗೊಳಿಸಿದ ಸಮಾಜ ಪುರುಷ ವರ್ಗಕ್ಕೆ ಮಾತ್ರ ಜಾತಿ, ಕುಲ ಗೋತ್ರವನ್ನು ಮೀರಿದಂತೆ ಆಳುವ ಹಕ್ಕುಗಳು, ಹೆಣ್ಣನ್ನು ಭೋಗಿಸುವ, ನಡೆಸಿಕೊಳ್ಳುವ ಹಕ್ಕನ್ನು ನೀಡಿದೆ. ಹೆಣ್ಣು ಒಡವೆಯಾದರೆ, ಗಂಡು ಒಡೆಯನಾದ. ಹೆಣ್ಣು ಗುಲಾಮಳಾದರೆ, ಗಂಡಸು ಯಜಮಾನನಾದ. ಹೆಣ್ಣು ಭೋಗ್ಯವಸ್ತುವಾದರೆ, ಗಂಡು ಭೋಗಪ್ರಿಯನಾದ. ಹೆಣ್ಣು ಆಳಾದರೆ, ಗಂಡು ಆಳುವ ದೊರೆಯಾದ. ವಾಸ್ತವ ಸತ್ಯ ಹೀಗಿರುವುದರಿಂದ ಸ್ತ್ರೀ ಚಳವಳಿ ಹೋರಾಟಗಳು ಪ್ರತ್ಯೇಕವಾಗಿ ಯಾವುದೇ ಸಂಗತಿಯಾಧರಿಸಿ ಸಮಗ್ರವಾಗಿ ಕಾಣಿಸಿಕೊಂಡದ್ದು ತೀರ ಕಡಿಮೆಯೆಂದೇ ಹೇಳಬೇಕು. ಚಳವಳಿಯಲ್ಲಿ ಹೆಣ್ಣು ಪಾಲ್ಗೊಳ್ಳುವ ಸಂಗತಿಗಳ ಮೇಲಿಂದ ಆಕೆಯ ಅನನ್ಯತೆಯನ್ನು, ಅಸ್ತಿತ್ವವನ್ನು ನಿರ್ಧರಿಸಬಹುದು.

ಸ್ತ್ರೀ ಚಳವಳಿಗಳ ಕುರಿತ ಹಾಗೇ ಮಾತನಾಡುವಾಗ ಕರ್ನಾಟಕವನ್ನಿಟ್ಟುಕೊಂಡೇ ಹೊರಡುವುದಾದರೆ ಸ್ತ್ರೀ ಸಂಬಂಧಿ ಸಂಗತಿಗಳಿಗಾಗಿ ಹುಟ್ಟಿಕೊಂಡ ಸಂಘಟನಾತ್ಮಕ ಚಳವಳಿಗಳಿವೆಯೆ? ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ನೆಲೆಯಲ್ಲಿ ಮೂಡಿಬಂದ ಸಾಮುದಾಯಿಕ ಚಳವಳಿಗಳೆ, ಸ್ತ್ರೀ ಪಾಲ್ಗೊಳ್ಳುವಿಕೆಯ ಪ್ರಮಾಣ ಮತ್ತು ಅನಿವಾರ್ಯತೆಗಳೇನು? ಮಹಿಳಾ ಚಳವಳಿಗೆ ಮಹಿಳೆಯೇ ನಾಯಕತ್ವವನ್ನು ನೀಡಿರುವುದೆಷ್ಟು? ಪುರುಷ ನಾಯಕತ್ವದಲ್ಲಿ ಮಹಿಳೆ ತನಗಾಗಿ ನಡೆಸಿದ ಚಳವಳಿಗಳಿಂದ ಪಡೆದುಕೊಂಡದ್ದೇನು? ಈ ಎಲ್ಲ ತಾರ್ಕಿಕ ಪ್ರಶ್ನೆಗಳನ್ನಿಟ್ಟುಕೊಂಡು ಕರ್ನಾಟಕದಲ್ಲಿ ನಡೆದ ಚಳವಳಿಯ ಚರಿತ್ರೆಯನ್ನು ಪ್ರಾಚೀನ, ಅರ್ವಾಚೀನ ಕಾಲವನ್ನು ಅನುಲಕ್ಷಿಸಿ ನೋಡಿದಾಗ್ಯೂ ಅಂತಹ ಉತ್ಸಾಹದಾಯಕ ದಾಖಲೆಗಳೇನು ಸಿಗುವುದಿಲ್ಲ. ನಮ್ಮ ಗ್ರಾಮೀಣ ಸಮುದಾಯದಲ್ಲಿ ಮಾತನಾಡಿಕೊಳ್ಳುವಂತೆ 'ತಿಂಡಿ ಬಿಟ್ಟಷ್ಟೇ ತುರಿಸಿಕೊಳ್ಳುವ' ಧೋರಣೆ, ಪ್ರವೃತ್ತಿ ಎಲ್ಲ ಕಾಲದಲ್ಲಿಯೂ ಜಾಗೃತವಾಗಿರುವುದರಿಂದ ವ್ಯವಸ್ಥೆಗೆ ಮುಖಾಮುಖಿಯಾಗುವ, ಸಂಘರ್ಷಣಕ್ಕೆ ತೊಡಗುವುದೆಲ್ಲ ಸಾಮುದಾಯಿಕ ನೆಲೆಯಿಂದ ಸಾಧ್ಯವಾಗಿಲ್ಲ. ಹೆಣ್ಣನ್ನು ಹರಿದು ತಿನ್ನುವ ಸಾಮಾಜಿಕ, ಧಾರ್ಮಿಕ ಸಮಸ್ಯೆಗಳಿಗೆ ಸ್ಪಂದಿಸುವ ಸಂದರ್ಭದಲ್ಲಿಯೂ ಬುಡಮಟ್ಟದ ಗಟ್ಟಿ ಹೋರಾಟಗಳೊಂದೂ ನಡೆದ ಉದಾಹರಣೆಗಳಿಲ್ಲ. ಅಸಂಘಟಿತ ಕಾರ್ಮಿಕಳಾಗಿ, ಕೃಷಿಕೂಲಿಯವಳಾಗಿ, ಮಧ್ಯಮ ವರ್ಗದ ಅನ್ಯಾಶ್ರಯದ ಹೆಣ್ಣಾಗಿ, ಮೇಲ್ವರ್ಗ ಮೇಲ್‌ಜಾತಿಯ ಭೋಗದ ವಸ್ತುವಾಗಿರುವ ಸ್ತ್ರೀ ಸಮುದಾಯ ಒಗ್ಗೂಡುವ ಚಾರಿತ್ರಿಕ ಒತ್ತಡಗಳೇ ಬೆಸೆದ ವ್ಯವಸ್ಥೆಯನ್ನು ಸೀಳಿ ಹೊರಬಂದಿಲ್ಲ. ಮೇಲ್ವರ್ಗದ ಜಾತಿಯ ಮಹಿಳೆ ಆರ್ಥಿಕವಾಗಿ ನೆಮ್ಮದಿಯ ಲೋಕದಲ್ಲಿದ್ದರೆ ಕೆಳಜಾತಿಯ ಕೆಳವರ್ಗದ ಮಹಿಳೆಯರು ಸಾಂಸ್ಕೃತಿಕವಾಗಿ ನೆಮ್ಮದಿಯಿಂದ ಇದ್ದ ಹಾಗೇ ಕಾಣಿಸುವುದು. ಆರ್ಥಿಕ, ಸಾಂಸ್ಕೃತಿಕವಾಗಿ ಹೆಣ್ಣು ಬಲಗೊಳ್ಳದೆ ಸಾಮಾಜಿಕ ಬದುಕಿನಲ್ಲಿ ಕಾಲೂರಲು ಸಾಧ್ಯವಿಲ್ಲವೆಂಬ ಅರಿವು ಒಟ್ಟು ಮಹಿಳಾ ಸಮುದಾಯದಲ್ಲಿ ಮೂಡಬೇಕಾಗಿದೆ. ರಾಜಕೀಯವೆಂಬುದು ವ್ಯಕ್ತಿಯೊಬ್ಬ ತನ್ನ ಅನುಕೂಲಕ್ಕಾಗಿ ಸಾಮಾಜಿಕ ರೂಢಿಗತ ಮೌಲ್ಯಗಳನ್ನು ಕೈಗೋಳಾಗಿಸಿಕೊಂಡು ತನ್ನ ಉದ್ದೇಶಿತ ಗುರಿಸಾಧನೆಗಾಗಿ ಬಳಸಿಕೊಳ್ಳುವ ತಂತ್ರಗಾರಿಕೆ ಎಂಬುದನ್ನು ಎಲ್ಲ ಶೋಷಿತ ಜನರು ಅರಿಯಬೇಕಾಗಿದೆ. ಈ ತಂತ್ರಗಾರಿಕೆ, ಅರಿವು, ಆರ್ಥಿಕ ಬಲ, ಸಾಂಸ್ಕೃತಿಕ ಏಕತೆಯಿಂದ ಮಾತ್ರ ಸಾಮಾಜಿಕ ಬದುಕಿನಲ್ಲಿ ಸ್ತ್ರೀ ಪುರುಷ ಸಮಾನತೆ, ಸಂಗತ ಬದುಕನ್ನು ಕಂಡುಕೊಳ್ಳಲು ಸಾಧ್ಯ.

ಸತಿಪದ್ಧತಿ, ವಿಧವಾ ವಿವಾಹ, ಬಾಲ್ಯ ವಿವಾಹ, ದೇವರ ಹೆಸರಿನಲ್ಲಿ ಹೆಣ್ಣುಗಳನ್ನು ಮಾರುವ ತೂರುವ, ಕೊಳ್ಳುವ, ಕಾಯುವ, ಕಟ್ಟುವ, ವರದಕ್ಷಿಣೆಯ ಹೆಸರಿನಲ್ಲಿ ಹೆಣ್ಣನ್ನು ಹಾಡುಹಗಲೇ ಸುಡುವ ಬರ್ಬರತೆಯ ವಿರುದ್ಧ ಸ್ವಾತಂತ್ರ್ಯ ಪೂರ್ವದಿಂದ ಇಂದಿನವರೆಗೂ ಗಂಡಸಿನ ನೇತೃತ್ವದ ರಾಜಕೀಯ ಪಕ್ಷಗಳ ಹೋರಾಟದ ಕಾರಣಕ್ಕಾಗಿ ನಡೆದಿರುವ ಚಳವಳಿ ಹೋರಾಟಗಳಲ್ಲಿ ಮಹಿಳೆಯರು ಸಂಪೂರ್ಣವಾಗಿ ತೊಡಗಿಕೊಂಡು, ಸಿಡಿದೆದ್ದು ಸಂಘಟಿತ ಶಕ್ತಿಯಾಗಿ ಬೆಳೆದು ನಿಂತಿಲ್ಲ. ಇದನ್ನು ಸರಳೀಕರಿಸಿ ನೋಡುವುದಲ್ಲ. ಪುರೋಹಿತಶಾಹಿಯ ತುಳಿತಕ್ಕೆ ಸಿಕ್ಕ ದಲಿತರನ್ನು ಮೇಲೆತ್ತುವ ಮಹತ್ತರ ಕಾರ್ಯಕ್ಕೆ ಹೆಗಲೇಣಿಯಾದ ಜ್ಯೋತಿ ಬಾಫುಲೆ, ಡಾ। ಬಾಬಾಸಾಹೇಬ ಅಂಬೇಡ್ಕರ್‌ರಂಥ ಮುತ್ಸದ್ದಿಗಳು ಸ್ತ್ರೀ ಸಂಬಂಧಿ ಸಂಘಟನೆ, ಹೋರಾಟ, ಚಳವಳಿಗಳನ್ನು ಪೂರ್ಣ ಪ್ರಮಾಣದಲ್ಲಿ, ಪ್ರತ್ಯೇಕವಾಗಿ ಕಟ್ಟುವ ಅವಶ್ಯಕತೆಯನ್ನು ಮನಗಾಣಲಿಲ್ಲ. ದಲಿತರ ಸ್ಥಾನದಲ್ಲಿರುವ ಹೆಣ್ಣು ದಲಿತರ ಬಿಡುಗಡೆಯಲ್ಲಿಯೇ ಬಿಡುಗಡೆಗೊಳ್ಳುವಳು ಎಂಬ ನಂಬಿಕೆಯಿತ್ತು. ಆದರೆ ಹೆಣ್ಣು ದಲಿತಳೂ ಹೌದು, ಪುರೋಹಿತಳೂ ಹೌದು. ಪುರುಷ ಪ್ರಧಾನ ಹಿತಗಳು ಕಾರ್ಯಗತಗೊಳ್ಳುವ ಸಲುವಾಗಿ ಸ್ತ್ರೀ ಸಮುದಾಯ ಹಲವು ಕಾರಣಗಳಿಗಾಗಿ ಛಿದ್ರ ಛಿದ್ರಗೊಂಡಿದೆ. ಚರಿತ್ರೆಯನ್ನು, ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳದ ಅವಿವೇಕಿಗಳು 'ಹೆಣ್ಣಿನಿಂದಲೇ ಹೆಣ್ಣಿನ ಶೋಷಣೆ' ಎಂದು ಹೇಳುತ್ತಿರುವುದನ್ನು ಖುಷಿಗೊಂಡು ಕೇಳುತ್ತೇವೆ. ಅತ್ತೆ ಸೊಸೆಯ ಸಂಬಂಧವನ್ನು ಬೀದಿ ಕಾಳಗ ಮಾಡಿ ನೋಡುವ ಜನ ತಂದೆ ಮಗ, ಅಣ್ಣ ತಮ್ಮಂದಿರು ಕತ್ತಿಮಸೆಯುವುದನ್ನು ಮರೆಯುತ್ತಾರೆ. ಆರ್ಥಿಕಾಧಾರಿತ ಸಂಬಂಧಗಳು ವ್ಯಾವಹಾರಿಕಗೊಂಡಿರುತ್ತವೆ. ವರದಕ್ಷಿಣೆಯ ಅನಾಹುತಗಳಲ್ಲಿ

ಅತ್ತೆಯ ಕೈಯಲ್ಲಿನ ಸೀಮೆಎಣ್ಣೆ ಡಬ್ಬಿಯನ್ನೇ ಕೈಮಾಡಿ ತೋರಿಸುವ ಜನ ಮಾವ, ಗಂಡನ ಜೇಬಿನಲ್ಲಿಯ ಬೆಂಕಿ ಪೊಟ್ಟಣವನ್ನು ಮರೆತಿರುತ್ತಾರೆ. ಇಲ್ಲಿ ಹೆಣ್ಣು ಗಂಡುಗಳು ಸೇರಿಯೇ ಅರ್ಥ ಮೂಲಕ್ಕಾಗಿ ಹಿಂಸಾನಂದಿಗಳಾಗುತ್ತಾರೆಂಬುದನ್ನು ನೆನಪಿಡಬೇಕಾಗುತ್ತದೆ.

ಹೆಣ್ಣಿನ ಸಮಸ್ಯೆಗಳಿಗೆ ಹೆಣ್ಣುಮಕ್ಕಳು ಮುಂದಾಳತ್ವ ನೀಡಿ, ಸಂಘಟಿತ ಶಕ್ತಿಯ ನೆಲೆಯಲ್ಲಿ ಯಾವುದೇ ಚಳವಳಿ, ಹೋರಾಟ ಮಾಡುವುದಾಗದೆ ಇರುವುದಕ್ಕೆ ವ್ಯವಸ್ಥೆಯೇ ಕಾರಣ. ವ್ಯವಸ್ಥೆಯ ಹುದುಲಲ್ಲಿ ಸಿಲುಕಿರುವ ಹೆಣ್ಣು ಜಾತಿ, ಕುಲ, ಗೋತ್ರ, ಧರ್ಮ, ಕರ್ಮ, ದೇವರು ದಿಂಡಿರು, ಅಂತಸ್ತು, ಅಧಿಕಾರ, ಶೀಲ, ಸಂಸ್ಕೃತಿ, ಕೌಟುಂಬಿಕ ಜವಾಬ್ದಾರಿ, ಭಯ ಮುಂತಾದ ಕಾರಣಗಳಿಂದ ಒಗ್ಗೂಡುವುದಾಗುತ್ತಿಲ್ಲ. ದೇವರ ಹೆಸರಿನಲ್ಲಿ ನಡೆಯುತ್ತಿರುವ ದೇವದಾಸಿ, ಅದನ್ನೇ ಆಧುನಿಕ ಪರಿಭಾಷೆಯಲ್ಲಿ ಹೇಳುವುದಾದರೆ ಧರ್ಮ ಸಮ್ಮತ ಸೂಳೆಗಾರಿಕೆಯನ್ನು ಒಂದು ದಂಧೆ, ಉದ್ಯೋಗವೆಂದೇ ಕರೆಯುವಷ್ಟರ ಮಟ್ಟಿಗೆ ಸಾಮಾಜಿಕ ಸ್ಥಿತಿ ಇದೆ. ಸೌದತ್ತಿ, ಚಂದ್ರಗುತ್ತಿ, ಚಿಂಚನಸೂರು, ಹುಲಿಗಿ ಮುಂತಾದ ಊರುಗಳಲ್ಲಿರುವ ದೇವರುಗಳ ಜಾತ್ರಿ, ಹುಣ್ಣಿಮೆ ದಿನಗಳಲ್ಲಿ ನೆರೆಹೊರೆಯ ರಾಜ್ಯಗಳಿಂದಲೂ ಮಹಿಳೆಯರು ಬಂದು ದೇವದಾಸಿಯರಾಗುವ ಪ್ರಕ್ರಿಯೆ ರಾಜಾರೋಷವಾಗಿಯೇ ನಡೆಯುತ್ತಿದೆ. ಮೇಲ್‌ಜಾತಿ, ಮೇಲ್‌ವರ್ಗದ ಮಹಿಳೆಯರಾದಿಯಾಗಿ ಕೆಳಜಾತಿ, ಕೆಳವರ್ಗದ ಮಹಿಳೆಯರು ಈ ದೇವರುಗಳ ಹೆಸರಿನಲ್ಲಿ ಮುತ್ತು ಕಟ್ಟಿಕೊಳ್ಳುತ್ತಾರೆ. ಆದರೆ ಕೆಳಜಾತಿಯ ಕೆಳವರ್ಗದ ಮಹಿಳೆಯರು ಮಾತ್ರ ಕೆಂಪುದೀಪದ ಹುಳುಗಳಾಗಿ ನರಳಿ ಸಾಯುತ್ತಾರೆ. ಇಂತಹ ಅನಿಷ್ಟ ಪದ್ಧತಿಯ ವಿರುದ್ಧ ಸಂಘಟಿತ ರೂಪದಲ್ಲಿ ಚಳವಳಿ ನಡೆಸಲು ಮುಂದಾದರೆ ಮೇಲ್‌ಜಾತಿ, ವರ್ಗದ ಮಹಿಳೆಯರು ಬೀದಿಗಿಳಿಯಲು ಸಿದ್ಧರಿಲ್ಲ. ದಲಿತ ವರ್ಗದ ಮಹಿಳೆಯರಿಗೆ ಮೈ, ದೇಹವೇ ಆಸ್ತಿಯಾಗಿರುವುದರಿಂದ ಅದರಿಂದಲೇ ಹೊಟ್ಟೆ ತುಂಬಿಸಿಕೊಳ್ಳುವ ದುರವಸ್ಥೆಯಿದೆ ಅನಕ್ಷರ, ಅಜ್ಞಾನ, ಬಡತನ, ಮೂಢನಂಬಿಕೆಯ ಬಿಡಿಸಲಾರದ ಬಲೆಯಲ್ಲಿ ಸಿಲುಕಿಸಿರುವ ಈ ವರ್ಗದ ಮಹಿಳೆಯರನ್ನು ಹಲವು ವಿಧದಲ್ಲಿ ಶೋಷಣೆಗೆ ಒಳಪಡಿಸಿರುವುದನ್ನು ನೋಡಬಹುದು. ಇಂತಹ ಶೋಷಣೆಯ ವಿರುದ್ಧ ಅಥಣಿಯ ದೇವದಾಸಿ ವಿಮೋಚನಾ ಸಂಸ್ಥೆ, ಸಂಯುಕ್ತ ಮಹಿಳಾ ವೇದಿಕೆಗಳಂಥ ಎನ್. ಜಿ. ಓ.ಗಳು ಬೀದಿಗಿಳಿದು ಕಾರ್ಯಕ್ರಮ ನಡೆಸಿರುವುದನ್ನು ನೋಡಬಹುದು.

ಎಪ್ಪತ್ತು-ಎಂಬತ್ತರ ದಶಕದಲ್ಲಿ ಸ್ತ್ರೀ ಸಂಬಂಧಿ ಚಳವಳಿ, ಸಂಘಟನೆಗಳು ಎದ್ದುಕಾಣುವಂತೆ ಹುಟ್ಟಿಕೊಂಡಿರುವುದನ್ನು ಕಾಣಬಹುದು. ಇದರ ಪೂರ್ವದಲ್ಲಿಯೂ ಮಹಿಳೆಯರು ಚಳುವಳಿಯಲ್ಲಿ ಭಾಗವಹಿಸಿರುವರು. ೧೯೮೫ರ ಸಾಲಿನಲ್ಲಿ ಕೊಪ್ಪಳ ತಾಲ್ಲೂಕಿನಲ್ಲಿಯ ಕುದುರೆಮೋತಿ ಗ್ರಾಮದ ಸ್ವಾಮಿ ಶಾಲಾ ಶಿಕ್ಷಕರ ಪತ್ನಿ ಪಾರ್ವತಮ್ಮ ಮತ್ತು ಅವಳನ್ನು ಉಳಿಸಿಕೊಳ್ಳಲು ಬಂದ ಇಬ್ಬರು ಮಹಿಳೆಯರನ್ನು ಬೆತ್ತಲೆಗೊಳಿಸಿ ಮೆರವಣಿಗೆ ಮಾಡಿದ ಘಟನೆ ಇಡೀ ಕರ್ನಾಟಕದುದ್ದಕ್ಕೂ ಪ್ರತಿಭಟನೆಯ ಅಲೆಗಳು ಏಳುವಂತೆ ಮಾಡಿತ್ತು. ಅಖಿಲ ಭಾರತ ವಿದ್ಯಾರ್ಥಿ ಫೇಡರೇಶನ್ ಮತ್ತು ಬಂಡಾಯ ಸಾಹಿತ್ಯ ಸಂಘಟನೆಗಳು ಸೇರಿಕೊಂಡು ಕುದುರೆ ಮೇಲೆ ಸ್ವಾಮಿಯ ವಿರುದ್ಧ ಉಗ್ರಹೋರಾಟವನ್ನು ಮಾಡಿದವು. ಈ ಸಂದರ್ಭದಲ್ಲಿ ರಾಯಚೂರಿನ ಜನವಾದಿ ಮಹಿಳಾ ಸಂಘಟನೆ, ಹಲವಾರು ಪ್ರಗತಿಪರ ಸಂಘಟನೆಗಳು ತಮ್ಮ ಜವಾಬ್ದಾರಿಯನ್ನು ಅರ್ಥ ಮಾಡಿಕೊಂಡು ಹೋರಾಟಕ್ಕಿಳಿದ ಕಾರಣ ಅಂದಿನ ಸರಕಾರಕ್ಕೆ ಬಿಸಿ ತಗುಲಿತು. ಈ ಹೋರಾಟದಿಂದ ಸ್ವಾಮಿಗೆ ಯಾವುದೇ ಶಿಕ್ಷೆಯಾಗಲಿಲ್ಲವೆಂಬುದೊಂದು ಪ್ರಜಾಪ್ರಭುತ್ವ ವ್ಯಂಗ್ಯ. ಸ್ವಾಮಿಗೆ ಶಿಕ್ಷೆ ಆಗುವುದು ಬಿಡುವುದು ಬೇರೆ ಮಾತು. ಹೋರಾಟದ ಕಾವು ಎಲ್ಲ ಮಠಮಾನ್ಯಗಳನ್ನು ಎಚ್ಚರಿಸಿದವು ಮತ್ತು ಮಹಿಳೆಯರು ಬುರುಡೆ ಬಾಬಾ, ಡೋಂಗಿ ಸ್ವಾಮಿಗಳಿಂದ ಎಚ್ಚರಿಕೆಯಿಂದ ಇರಬೇಕೆಂಬ ಒಂದು ವಾತಾವರಣ ಮೂಡಿತು.

೧೯೮೮-೮೯ರ ಸಾಲಿನಲ್ಲಿ ಬೆಳಗಾಂವಿಯಲ್ಲಿ ಶ್ರೀಮಂತ ಮನೆತನ ಮತ್ತು ರಾಜಕೀಯವಾಗಿ, ಸಾಮಾಜಿಕವಾಗಿ ಪ್ರತಿಷ್ಠಿತವೆನಿಸಿಕೊಂಡಿದ್ದವರು ವರದಕ್ಷಿಣೆಯ ಆಸೆಗಾಗಿ ಸೊಸೆಯನ್ನು ಕೊಂದು ಅರ್ಧಮರ್ಧ ಸುಟ್ಟು ಬಾವಿಗೆ ಹೆಣವನ್ನು ಎಸೆದಿದ್ದರು. ಪೋಲಿಸರು ರಾಜಕಾರಣಿಗಳ ಒತ್ತಡಕ್ಕೆ ಒಳಗಾಗಿ ಇದೊಂದು ಆತ್ಮಹತ್ಯೆ, ಹುಡುಗಿಗೆ ತಾಳಲಾರದ ಹೊಟ್ಟೆನೋವಿತ್ತು ಎಂಬ ಕಾರಣ ನೀಡಿ ಅಪರಾಧಿಗಳನ್ನು ಬಚಾವು ಮಾಡುವ, ತಿಪ್ಪೆಸಾರಿಸುವ ಕೆಲಸ ಮಾಡಿದ್ದರು. ಇದನ್ನು ಅಲ್ಲಿಯ ಎಸ್. ಎಫ್ ಆಯ್. ಡಬ್ಲ್ಯು.ದ ರಾಜ್ಯಾಧ್ಯಕ್ಷೆಯಾಗಿದ್ದ ಕರಗುಪ್ಪಿಕರ ಎಂಬುವರು ಚಳವಳಿಯೊಂದನ್ನು ಸಂಘಟಿಸಿ ಇಡೀ ಬೆಳಗಾವಿಯ ಶ್ರೀಮಂತ ವರ್ಗ ಬೆಚ್ಚಿ ಬೀಳುವಂತೆ ಮಾಡಿದರು. ನೂರಾರು ಸಾವಿರಾರು ಮಹಿಳೆಯರು ಸೇರಿ ಬೀದಿಬೀದಿಯಲ್ಲಿ ಮೆರವಣಿಗೆ ಕೊಂಡೊಯ್ದು ಅಪರಾಧಿಗಳಿಗೆ ಶಿಕ್ಷೆಯಾಗಬೇಕೆಂಬ ಮನವಿಯನ್ನು ಜಿಲ್ಲಾಧಿಕಾರಿಗಳಿಗೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿಯ ಒಂದು ವಿಷಯವನ್ನು ಹೇಳಲೇ ಬೇಕಾಗಿದೆ. ಮಹಿಳೆಯರು ನಡೆಸುತ್ತಿರುವ ಶಾಂತಿಯುತ ಮೆರವಣಿಗೆ, ಧರಣಿಯ ಸಂದರ್ಭದಲ್ಲಿ ಸೇರಿದ ಮಹಿಳೆಯರಿಗಿಂತಲೂ ಮಿಗಿಲಾಗಿ ಮಹಿಳಾ ಪೋಲಿಸರನ್ನು ಬಂದೋಬಸ್ತಿಗೆ ಹಾಕಲಾಗಿತ್ತು. ನಮ್ಮ ಜೊತೆ ಹೆಜ್ಜೆ ಹಾಕುತ್ತಿದ್ದ ಒಬ್ಬ ಮಹಿಳಾ ಪೋಲಿಸರಿಗೆ ಒಂದು ವಿನಂತಿಯನ್ನು ಮಾಡಿಕೊಂಡೆ. ಏನೆಂದರೆ ಇಂದು ಮಹಿಳೆಯರು ಹಾಡುಹಗಲೇ ತಿರುಗುವಂತಿಲ್ಲ, ಬಸ್ ನಿಲ್ದಾಣ, ಜನಸಂದಣಿಯ ಪ್ರದೇಶದಲ್ಲಿ ಒಬ್ಬಳೇ ಓಡಾಡುವ ಪರಿಸ್ಥಿತಿಯಿಲ್ಲ. ನೀವು ಅಂಥಲ್ಲಿ ನಿಮ್ಮ ಕಾರ್ಯ ನಿರ್ವಹಿಸಿದರೆ ಆ ಮಹಿಳೆಯರಿಗೆ ಬೀದಿ

ಕಾಮಣ್ಣರಿಂದ ನೆಮ್ಮದಿಯಾದರೂ ಸಿಕ್ಕೀತು. ಅದು ಬಿಟ್ಟು ಇಂಥಲ್ಲಿ ಸುಮ್ಮನೆ ತೊಂದರೆ ತೆಗೆದುಕೊಳ್ಳುವುದೇಕೆಂದೆ ಅದಕ್ಕ ಆ ಪೊಲೀಸ್ ವೇಷಧರಿಸಿದ ಮಹಿಳೆ ನೀಡಿದ ಉತ್ತರ ಆಘಾತಕಾರಿಯಾಗಿತ್ತು. ಪೋಲಿಸ್‌ವೇಷದ ಮಹಿಳೆಯರು ಒಬ್ಬರೇ ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ, ಜನಸಂದಣಿಯ ಪ್ರದೇಶದಲ್ಲಿ ನಿಂತಾಗ ಈ ಗಂಡಸರು ಅವರನ್ನು ಕೆಟ್ಟದಾಗಿ ಕರೆಯುವರು, ಲೈಂಗಿಕ ಹಾವಭಾವಗಳನ್ನು ಮಾಡುವರು. ಅದಕ್ಕಾಗಿ ನಾವು ಒಬ್ಬೊಬ್ಬರೇ ಡ್ಯೂಟಿಗೆ ಹೋಗಲು ಭಯ ಮತ್ತು ಮುಜುಗರವಾಗುವುದು ಎಂದಳು. ಈಗ ಹೇಳಿ ಕಾಯುವವರನ್ನೇ ಕರೆಯುವ ಈ ಕಾಮಣ್ಣರು ಹೆಣ್ಣೆಂದೆ ನೋಡುವುದಿದೆಯಲ್ಲ? ಇದು ಯಾರ ಬಳುವಳಿ. ಈ ದೇಶದಲ್ಲಿ ಏನೇ ಅಧಿಕಾರ, ಅಂತಸ್ತು, ಸ್ಥಾನ, ವಿದ್ಯೆ ಇದ್ದರೂ ಹೆಣ್ಣಾಗಿದ್ದರೆ ಅದೆಲ್ಲ ನಗಣ್ಯ. ಆದರೆ ಅದೇ ಗಂಡಾದವನಿಗೆ ಸಮಾಜ ಏನಿಲ್ಲದಿದ್ದರೂ ರಾಜೋಚಿತ ಗೌರವ, ಆದರಗಳನ್ನು ತೋರಿಸುತ್ತ ಬಂದಿರುವ ಬಗ್ಗೆ ತಕ್ಷಣ ಚಿಂತನ, ಮಂಥನ, ಚಳುವಳಿ, ಹೋರಾಟಗಳು ನಡೆಯಬೇಕು.

ರೈತ ಸಂಘಟನೆಗಳು, ಕಾರ್ಮಿಕ ಸಂಘಟನೆಗಳು ಎಡಪಕ್ಷಗಳ ನೇತೃತ್ವದಲ್ಲಿ ಹಮ್ಮಿಕೊಳ್ಳುವ ಹೋರಾಟಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯನ್ನು ಕಾಣಬಹುದು. ವಿಜಾಪುರ ಜಿಲ್ಲೆಯ ಬಾಗೇವಾಡಿ ತಾಲ್ಲೂಕಿನಲ್ಲಿ ಕೆಲವು ಹಳ್ಳಿಗಳಲ್ಲಿ ಯಾವುದೇ ಸಂಘಟನೆ, ಸಿದ್ಧಾಂತವಿಲ್ಲದೆ ತಣ್ಣಗೆ ಹೋರಾಟವೊಂದು ನಡೆದುಹೋಯಿತು. ಕಿರಾಣಿಯಂಗಡಿಯಲ್ಲಿಯೂ ಹೆಂಡ ಮಾರಲು ಹೊರಡುವ ಸರಕಾರಗಳಿಂದ ಗ್ರಾಮಾಂತರ ಪ್ರದೇಶದ ಕುಟುಂಬಗಳು ಉಳಿಯಲು ಸಾಧ್ಯವೆ? ಬಡತನ, ಬರಗಾಲ, ಮೂಢನಂಬಿಕೆಯಿಂದ ತತ್ತರಿಸಿ ಹೋಗಿರುವ ಉತ್ತರ ಕರ್ನಾಟಕದಲ್ಲಿ ಹಾಲಿಗಿಂತಲೂ ಹೆಂಡ ಯಾವಾಗ ಬೇಕು ಅವಾಗೆಲ್ಲ ಸಿಗುವುದು. ಈ ಕುಡಿತಕ್ಕೆ ಒಳಗಾದ ಗಂಡಸರು ತಮ್ಮೆಲ್ಲ ಶೌರ್ಯ, ಸಾಹಸ ಮತ್ತು ಅಸಹಾಯಕತೆಯನ್ನು ತೋರಿಸಿಕೊಳ್ಳುವುದು ಕೈಹಿಡಿದ ಹೆಂಡತಿಯ ಮೇಲೆ. ಇಂತಹ ದಿನನಿತ್ಯದ ಘಟನೆಯಿಂದ ರೋಸಿಹೋದ ಗ್ರಾಮಾಂತರ ಮಹಿಳೆಯರು ಸೇರಿಕೊಂಡು ಸಂಘಟಿತರಾಗಿ ತಮ್ಮ ಊರಿಗೆ ಬರುವ ಹೆಂಡದ ಗಾಡಿಯನ್ನು ಕಲ್ಲು ಹಾಸಿ ಬರದಂತೆ ಮಾಡುವುದು ಮತ್ತು ಊರಲ್ಲಿಯ ಹೆಂಡದಂಗಡಿಗೆ ಬೀಗ ಜಡಿದು ಕುಡಿದು ಬಂದ ಗಂಡಸರನ್ನು ಥಳಿಸುವುದು ಮಾಡಿದರು. ಇದರಿಂದ ಎಷ್ಟೋ ಹಳ್ಳಿಗಳಲ್ಲಿ ಇಂದು ಹೆಂಡದಂಗಡಿಗಳಿಲ್ಲ! ಹೆಣ್ಣು ಮುನಿದರೆ ಮಾರಿ ಎಂಬುದನ್ನು ನೆನಪಿಸುವ ಇಂತಹ ಘಟನೆಗಳು ಯಾವುದೋ ಮೂಲೆಯಲ್ಲಿ ಘಟಿಸಿ ದಾಖಲಾಗದೆ ಜಗದ ಕಣ್ಣಿಗೆ ಕಾಣದೆ ಹೋಗುವುದರಿಂದ ಮಹಿಳಾ ಚಳುವಳಿಯ ಹೆಜ್ಜೆ ಗುರುತುಗಳನ್ನು ಕಾಣಲು ಸಾಧ್ಯವಾಗುತ್ತಿಲ್ಲ. ಹೀಗೆ ತಣ್ಣಗೆ ಪ್ರಾರಂಭವಾಗುವ ಹೋರಾಟಗಳಿಗೆ ಮಹಿಳಾ ಸಮುದಾಯ ಎಲ್ಲವನ್ನು ಬದಿಗಿಟ್ಟು ಬಂದು ಸೇರಬೇಕು. ಅಂದಾಗ ಸ್ತ್ರೀ ಬದುಕಿನ ಉದ್ಧಾರ ಸಾಧ್ಯ.

ಕರ್ನಾಟಕದಲ್ಲಿ ಸಂಘಟಿತ ರೂಪದಲ್ಲಿ ನಡೆಯುತ್ತಿರುವ ಚಳುವಳಿಯಲ್ಲಿ ಎಡಪಕ್ಷಗಳ ಕವಲುಗಳಂತಿರುವ ಜನವಾದಿ ಮಹಿಳಾ ಸಂಘಟನೆ, ಅಖಿಲ ಭಾರತ ಮಹಿಳಾ ಫೆಡರೇಶನ್, ಎಂ. ಎಸ್. ಎಸ್., ಸಮತಾವೇದಿಕೆ, ವಿಮೋಚನಾ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರಗಳು ವಿಷಯಾಧಾರಿತವಾಗಿ ಹೋರಾಟ ನಡೆಸಿರುವುದನ್ನು ಮತ್ತು ನಡೆಸುತ್ತಿರುವುದನ್ನು ನೋಡಬಹುದು. ೧೯೮೬-೮೭ರ ಸಂದರ್ಭದಲ್ಲಿ ಧಾರವಾಡದಲ್ಲಿ ಸಂಘಟಿತ ಚಳವಳಿಯೊಂದು ನಡೆದು ಇಡೀ ಕರ್ನಾಟಕ ಬೆಚ್ಚಿ ಬೀಳುವಂಥ ಸಂಗತಿಯನ್ನು ಬಯಲುಗೊಳಿಸಿತ್ತು. ಧಾರವಾಡದಲ್ಲಿರುವ ದಾದಿಯರ ತರಬೇತಿ-ಸಂಸ್ಥೆಯ ಪ್ರಾಚಾರ್ಯಳಾಗಿದ್ದ ರಮಾ ಭಂಡಾರಿ ಎಂಬವಳು ಬಡ ಸುಂದರ, ಗ್ರಾಮಾಂತರ ಪ್ರದೇಶದಿಂದ ಬಂದ ಮುಗ್ಧ ವಿದ್ಯಾರ್ಥಿನಿಯರನ್ನು ರಾಜ್ಯದ ಪ್ರತಿಷ್ಠಿತ ರಾಜಕಾರಣಿಗಳಿಗೆ, ಅಧಿಕಾರಿಗಳಿಗೆ, ಶ್ರೀಮಂತ ವರ್ಗಕ್ಕೆ ಸರಬರಾಜು ಮಾಡುತ್ತಿರುವ ಘಟನೆಯನ್ನು ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ ಬಯಲಿಗೆಳೆಯಿತು. ಆಗ ವಿವಿಧ ಮಹಿಳಾ ಸಂಘಟನೆಗಳು ಈ ಕೃತ್ಯದ ವಿರುದ್ಧ ಹೋರಾಟಕ್ಕಿಳಿದು ಖಂಡಿಸಿದವು. ಇದರಲ್ಲಿ ಭಾಗಿಯಾಗಿದ್ದ ಹಿರಿಯ ರಾಜಕಾರಣಿಗಳು, ಅಧಿಕಾರಿಗಳು ಕಾನೂನು ಬಯಸುವ ಸಾಕ್ಷ್ಯಾಧಾರಗಳು ದೊರೆಯದೆ ಉಳಿದುಕೊಂಡರು. ಕಾನೂನಿನ ಕೈಗಳು ಭದ್ರಗೊಳ್ಳದೆ ಇಂಥವರಿಗೆ ಶಿಕ್ಷೆಯಾಗದೇ ಹೋಗಬಹುದು. ಆದರೆ ಈ ಪ್ರತಿಭಟನೆ, ಚಳವಳಿಯಿಂದ ಕರ್ನಾಟಕದುದ್ದಕ್ಕೂ ಇರುವ ಶಿಕ್ಷಣ ಸಂಘಸಂಸ್ಥೆಗಳಲ್ಲಿಯ ದುರುಳರು ಎಚ್ಚೆತ್ತುಕೊಳ್ಳುವಂತಾಯಿತು.

ನಿತ್ಯವೂ ಕರ್ನಾಟಕದಲ್ಲಿ ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಬೆತ್ತಲೆ ಸೇವೆ ನಡೆಯುತ್ತಿರುವುದು ಎಲ್ಲರಿಗೂ ಗೊತ್ತಿರುವ ಸಂಗತಿಯೇ. ಆದರೆ ರಾಜಕೀಯ ಒತ್ತಾಸೆಯಿಂದ ಕರ್ನಾಟಕದ ರಾಜಧಾನಿಯಲ್ಲಿ ಬೆತ್ತಲೆ ಮೆರವಣಿಗೆಯೂ ನಾಚುವಂತಹ ಸೌಂದರ್ಯ ಸ್ಪರ್ಧೆ ಏರ್ಪಟ್ಟಿದ್ದರ ಬಗ್ಗೆ ನಾಗರಿಕ ಸಮಾಜ ತಲೆ ತಗ್ಗಿಸಬೇಕಾಗಿದೆ. ಇದನ್ನು ಕರ್ನಾಟಕದ ಮಹಿಳಾ ಸಮುದಾಯ ಮತ್ತು ಪ್ರಗತಿಪರ ಸಂಘಟನೆಗಳು ಉಗ್ರವಾಗಿ ಪ್ರತಿಭಟಿಸಿ ಲಾ ಎಂಡ್ ಆರ್ಡರ್ ಸಮಸ್ಯೆ ಉದ್ಭವವಾಗುವಂತೆ ಆಯಿತು. ಎಷ್ಟೋ ಜನ ಮಹಿಳೆಯರು ಜೈಲು ಶಿಕ್ಷೆಯನ್ನು ಅನುಭವಿಸುವಂತಾಯಿತು. ಇಂತಹ ಪ್ರಸಂಗದಲ್ಲಿ ಅಂದಿನ ಸರಕಾರದಲ್ಲಿ ಮಂತ್ರಿಯಾಗಿದ್ದ ಮಹಿಳೆಯೊಬ್ಬಳು ಸೌಂದರ್ಯ ಸ್ಪರ್ಧೆಯ ಪರವಾಗಿ ನಿಂತದ್ದೊಂದು ಖೇದದ ಸಂಗತಿ. ಅಷ್ಟೇ ಅಲ್ಲ, ಅವರು ಆಡಿದ ಮಾತು

ಹೇಗಿತ್ತೆಂದರೆ 'ನಿಮ್ಮ ಮನೆಯ ಮಗಳು, ಸೊಸೆಯಂದಿರು ನೈಟಿ ಹಾಕಿಕೊಂಡು ಹೊರಗಡೆ ತಿರುಗಾಡುವರಲ್ಲ ಇದು ಅಸಹ್ಯ ಎನಿಸುವುದಿಲ್ಲವೇ' ಎಂದದ್ದು. ಸ್ವಾಮಿಗಳು ಧರಿಸುವ ನಿಲುವಂಗಿಯಂಥ ಉಡುಪನ್ನೇ ಮಹಿಳೆಯರು ಮೈತುಂಬ ಹಾಕಿಕೊಳ್ಳುವುದು ಈ ಸಚಿವೆಯ ದೃಷ್ಟಿಯಲ್ಲಿ ಅಸಹ್ಯವಾಗಿ ಕಂಡಿತೆ? ಇಂತಹ ಪುರುಷ ಸಂಸ್ಕೃತಿಯ ವಕ್ತಾರಿಕೆಯನ್ನು ಶಿರಸಾಹೊತ್ತುಕೊಂಡಿರುವ ಮಹಿಳೆಯರು ವಿಧಾನಸೌಧದಲ್ಲಿ ಇದ್ದಷ್ಟೂ ಮಹಿಳಾ ಸಮುದಾಯಕ್ಕೆ ಆಪತ್ತೇ ವಿನಃ ಅನುಕೂಲವೇನಿಲ್ಲ. ಆ ಕಾರಣಕ್ಕಾಗಿ ರಾಜಕೀಯ ಮೀಸಲಾತಿಯ ಫಲಾನುಭವಿಗಳು ಎಂತಹ ಮಹಿಳೆಯಾಗಬೇಕೆಂಬುದರ ಬಗ್ಗೆಯೂ ಗಂಭೀರವಾಗಿ ಆಲೋಚಿಸಬೇಕಾಗಿದೆ.

ಸುಶಿಕ್ಷಿತ ವರ್ಗದಲ್ಲಿ ತಣ್ಣಗೆ ನಡೆದುಹೋಗುತ್ತಿರುವ ಸಾವಿರಾರು ಲಿಂಗ ನೆಲೆಯ ಸಾವುನೋವುಗಳು ಜಗದ ಕಣ್ಣಿಗೆ ಕಾಣದಂತಿವೆ. ನಿರಕ್ಷರ ಲೋಕದಲ್ಲಿ ಜಗತ್ತೇ ಬೆಚ್ಚಿ ಬೀಳುವಂತಹ ಅತ್ಯಾಚಾರ, ದಬ್ಬಾಳಿಕೆ, ದೌರ್ಜನ್ಯಗಳಿಗೆ ಜಗತ್ತು ಕಣ್ಣು ಮುಚ್ಚಿಕೊಂಡ ಬಕ ಪಕ್ಷಿಯಂತೆ ಧ್ಯಾನಕ್ಕಿಳಿಯುವುದರ ಬಗ್ಗೆ ಹೇಸಿಗೆ ಅನಿಸುತ್ತದೆ. ವ್ಯವಸ್ಥೆಯನ್ನು ವಾಸ್ತವದ ನಲೆಯಲ್ಲಿ ಗ್ರಹಿಸಿಕೊಳ್ಳುವ ವೈಚಾರಿಕ ಅರಿವು ಮಹಿಳೆಯರಿಗೆ ಸಾಮೂಹಿಕವಾಗಿ ಬರಬೇಕಾಗಿದೆ. ನಗರ ಕೇಂದ್ರಿತ ಮಹಿಳೆಯರು ತಮಗೆ ಸಿಕ್ಕಿರುವ ಶಿಕ್ಷಣ, ಆರ್ಥಿಕ ಬಲ, ಉದ್ಯೋಗದ ಬಲದಿಂದ ಗ್ರಾಮಾಂತರ ಮಹಿಳೆಯರ ಬದುಕಿನ ಬಗ್ಗೆ ಬೌದ್ಧಿಕವಾಗಿ ಆಲೋಚಿಸುವ, ಅವರಿಗೆ ತಿಳಿಸಿಹೇಳುವ ಕಾರ್ಯದಲ್ಲಿ ತೊಡಗಬೇಕು. ಅದೇ ರೀತಿ ಗ್ರಾಮಾಂತರ ಮಹಿಳೆಯರು ಯಾವುದೇ ಹುಸಿ ಭ್ರಮೆಗಳಿಲ್ಲದೆ ದಿಟ್ಟತನದಿಂದ ಮುಂದಡಿಯಿಟ್ಟು ಒಟ್ಟು ಮಹಿಳಾ ಸಮುದಾಯದ ಬದುಕಿನ ಹಕ್ಕನ್ನು ಉಳಿಸಿಕೊಳ್ಳಬೇಕು. ಹೆಣ್ಣು ಎಂಬುದೊಂದು ಜಾಗೃತ ಮನಸ್ಸು, ವೇದಿಕೆ, ವಿಚಾರ, ಸಿದ್ಧಾಂತವಾಗಬೇಕು. ಈ ಹೆಣ್ಣಿನ ಅನ್ಯೋನ್ಯತೆ, ಅಸ್ತಿತ್ವ ದಕ್ಕಿದೆ ಮೇಲೆ ಜಾತಿ, ಕುಲಗೋತ್ರ, ಅಧಿಕಾರ, ಸಂಸ್ಕೃತಿ ಎಂಬ ಹುಳುತಿಂದ ಎಲೆಗಳನ್ನು ಚಿವುಟುವ ಕಾರ್ಯ ಮಾಡುವುದಾಗಬೇಕು. ಕರ್ನಾಟಕದಲ್ಲಿ ಉದಾರೀಕರಣ, ಜಾಗತೀಕರಣ, ಖಾಸಗೀಕರಣದ ಹೆಸರಿನಲ್ಲಿ ಎಲ್ಲ ವರ್ಗದ ಮಹಿಳೆಯರು ವಿಶ್ವಮಾರುಕಟ್ಟೆಯ ಅಗ್ಗದ ಸರಕಾಗುವುದರಲ್ಲಿ ಸಂದೇಹವಿಲ್ಲ. ಆಹಾರಕ್ಕಾಗಿ ಜಾಗತಿಕ ಮತ್ತು ದೇಶಿಯ ನೆಲೆಯಲ್ಲಿ ಕಾಣಿಸಿಕೊಂಡಿರುವ ಕಂದರಗಳನ್ನು ಮುಚ್ಚಲು ಎಚ್ಚೆತ್ತು ಮನಸ್ಸುಗಳು ಸಾಗರದಂತೆ ತೆರೆದ ಕೈಗಳಿಂದ ಹೊರಬರಬೇಕಾಗಿದೆ. ಆ ಕಾಲ ತೀವ್ರ ಬೇಗ ಬರಲೆಂಬ ಆಶಯ ನಮ್ಮೆಲ್ಲರದು.

# ಸಾಮಾಜಿಕ ಪರಿವರ್ತನೆಯಲ್ಲಿ ಸಂಘ ಪರಿವಾರ

**ದು.ಗು. ಲಕ್ಷ್ಮಣ**

೧೯೨೫ರ ವಿಜಯದಶಮಿಯಂದು ನಾಗಪುರದಲ್ಲಿ ಡಾ। ಕೇಶವ ಬಲರಾಂ ಹೆಡಗೇವಾರರಿಂದ ಪ್ರಾರಂಭವಾದ ರಾಷ್ಟ್ರೀಯ ಸ್ವಯಂ ಸೇವಕ ಸಂಘ ಅಥವಾ ಆರ್.ಎಸ್.ಎಸ್. ಇಂದು ಬೃಹತ್ ವೃಕ್ಷವಾಗಿ ಬೆಳೆದಿದೆ. ಸಂಘ ಪರಿವಾರದಡಿ ಮೂವತ್ತಕ್ಕೂ ಹೆಚ್ಚು ಸಂಘಟನೆಗಳು ಸಾಮಾಜಿಕ ಪರಿವರ್ತನೆಯ ಮಹಾಕಾರ್ಯದಲ್ಲಿ ತೊಡಗಿವೆ. ಈ ಸಂಘಟನೆಗಳಲ್ಲಿ ಹಿಂದು ಸೇವಾ ಪ್ರತಿಷ್ಠಾನ, ರಾಷ್ಟ್ರೋತ್ಥಾನ ಪರಿಷತ್, ಜನಸೇವಾ ವಿದ್ಯಾಕೇಂದ್ರ, ಪ್ರಜ್ಞಾಪ್ರವಾಹ ಸೇರಿದಂತೆ ಹಲವು ಸಂಘಟನೆಗಳು ಕರ್ನಾಟಕ ಮೂಲದ್ದಾಗಿರುವುದು ಗಮನಾರ್ಹ.

ಸಂಘ ಶೈಶವಾಸ್ಥೆಯಲ್ಲಿದ್ದಾಗಲೇ ೪೦ರ ದಶಕದಲ್ಲಿ ಉತ್ತರ ಕರ್ನಾಟಕದ ಚಿಕ್ಕೋಡಿ, ಜಮಖಂಡಿ, ಧಾರವಾಡ ಮುಂತಾದ ಕಡೆಗಳಲ್ಲಿ ಸಂಘದ ಶಾಖೆಗಳು ಆರಂಭವಾಗಿ ಸಮಾಜ ಪರಿವರ್ತನೆಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವು. ವರಕವಿ ದ.ರಾ. ಬೇಂದ್ರೆ, ಸ್ವಾತಂತ್ರ್ಯ ಹೋರಾಟಗಾರರಾದ ಗಂಗಾಧರ ರಾವ್ ದೇಶಪಾಂಡೆ, ಶ್ರೇಷ್ಠ ಸಮಾಜ ಸುಧಾರಕ ಹರ್ಡೇಕರ್ ಮಂಜಪ್ಪ, ಖ್ಯಾತ ನಾಟಕಕಾರ ಗರೂಡ ಸದಾಶಿವರಾಯ - ಹೀಗೆ ಅಂದಿನ ಹಲವಾರು ಗಣ್ಯರು ರಾಜ್ಯದಲ್ಲಿ ಸಂಘದ ಕಾರ್ಯವಿಸ್ತಾರಕ್ಕೆ ಆಶೀರ್ವದಿಸಿದರು.

**ತೀವ್ರವಾದ ಸಂಘ ಕಾರ್ಯ**

ಸಂಘದ ಆಧಾರಸ್ತಂಭಗಳಲ್ಲಿ ಒಬ್ಬರೂ, ಕರ್ನಾಟಕವನ್ನು ಕರ್ಮಭೂಮಿಯನ್ನಾಗಿ ಮಾಡಿಕೊಂಡಿದ್ದವರೂ ಆದ ಮಾನ್ಯ ಯಾದವರಾವ್ ಜೋಷಿಯವರು ರಾಜ್ಯದಲ್ಲಿ ಸಂಘ ಕಾರ್ಯ ವಿಸ್ತರಿಸಲು ಸಂಘ ಸ್ಥಾಪಕ ಡಾ। ಕೇಶವ ಬಲರಾಮ ಹೆಡಗೇವಾರರ ಆದೇಶದಂತೆ ೧೯೪೩ರಲ್ಲಿ ಧಾರವಾಡಕ್ಕೆ ಬಂದಿಳಿದರು. ಅವರು ಮಾಡಿದ ಮೊದಲ ಕೆಲಸ ದ.ರಾ. ಬೇಂದ್ರೆಯವರ ಭೇಟಿ.

ಯಾದವರಾಯರು ಸಂಘದ ಧ್ಯೇಯ, ಹಿಂದು ಸಂಘಟನೆಯ ಮಹತ್ವವನ್ನು ಬೇಂದ್ರೆಯವರಿಗೆ ವಿವರಿಸಿದರು. ಸಂಘದ ವಿಚಾರಗಳನ್ನು ಕೇಳಿ ಮೆಚ್ಚಿದ ಬೇಂದ್ರೆಯವರು ''ಜನರ ಬಳಿ ಉಪದೇಶಕರಾಗಿ ಹೋಗಬೇಡಿ. ಬದಲಾಗಿ ಅವರ ಸೇವೆಗಾಗಿ ಮುಂದಾಗಿ. ನಿಮ್ಮ ಮನೋಧರ್ಮ ಹಾಗಿದ್ದಲ್ಲಿ ಜನರಿಂದಲೂ ನಿಮಗೆ ತುಂಬು ಮನದ ಸಹಕಾರ ಲಭಿಸುತ್ತದೆ. ನಮ್ಮ ಮಾತುಗಳು ಜನರನ್ನು ಮರುಳುಗೊಳಿಸುವಂತೆ ಇರುವುದು ಬೇಡ. ಆದರೆ ಅವರ ಹೃದಯಗಳನ್ನು ಗೆಲ್ಲುವಂತಿರಲಿ'' (Don't try to cap them, but try to capture their hearts) ಎನ್ನುವ ಕಿವಿ ಮಾತು ಹೇಳಿದರು.

ವಾಸ್ತವವಾಗಿ ಯಾದವರಾಯರು ನಡೆದುಕೊಂಡದ್ದೂ ಹಾಗೆಯೇ. ಅವಿರತವಾಗಿ ಸಂಘ ಕಾರ್ಯದಲ್ಲಿ ನಿರತರಾದ ಯಾದವರಾಯರು ರಾಜ್ಯದ ಮೂಲೆಮೂಲೆಯಲ್ಲಿ ಸಂಘದ ಕಾರ್ಯವನ್ನು ವಿಸ್ತರಿಸಿದರು. ರಾಜಕೀಯವಾಗಿ ಅಂದಿನ ದಿನಗಳಲ್ಲಿ ಮದ್ರಾಸ್ ಪ್ರಾಂತಕ್ಕೆ ಸೇರಿದ್ದ ಕರಾವಳಿ ಜಿಲ್ಲೆಯಲ್ಲೂ ಸಂಘದ ಶಾಖೆಗಳು ಆರಂಭವಾದವು. ಆರಂಭದಿಂದಲೂ ಮಂಗಳೂರು ಜಿಲ್ಲೆಯಲ್ಲಿ ಸಂಘ ಕಾರ್ಯ ವೇಗದ ಗತಿಯಲ್ಲಿ ಮುನ್ನಡೆಯಲು ಸಮಾಜದಲ್ಲಿ ಪ್ರತಿಷ್ಠಿತರಾದ

ಕಾರ್ಕಳ ಸದಾಶಿವರಾಯರು, ಹಿರಿಯ ವಕೀಲರಾದ ಜನಾರ್ಧನ ಮಲ್ಯ, ವ್ಯಾಪಾರಿವಲಯದಲ್ಲಿ 'ಸುಬ್ರಾಯ ಮಾಮಾ' ಎಂದೇ ಜನಪ್ರಿಯರಾಗಿದ್ದ ಹಾಗೂ ಆರ್ಯಸಮಾಜದ ಕ್ರಿಯಾಶೀಲ ಮುಖಂಡರಾದ ಬಸ್ತಿ ದಾಸಪ್ಪ ಶೆಣೈ, ಪಂಚಮಾಲ್ ವಾಸುದೇವ ಕಾಮತ್, ಉಡುಪಿಯ ಐರೋಡಿ ರಾಧಾಕೃಷ್ಣ ಪೈ, ಕಾರ್ಕಳದ ವಕೀಲರಾದ ಇಡ್ಯ ರಾಮಮೂರ್ತಿ, ಪುತ್ತೂರಿನ ಬಾಮಿ ದೇವದಾಸ ಶೆಣೈ, ಬೊಳುವಾರು ಮುಕುಂದಪ್ರಭು ಮುಂತಾದವರು ಸಂಘದ ನಿತ್ಯ ಶಾಖೆಯಲ್ಲಿ ಭಾಗವಹಿಸಿ, ಶ್ರಮಿಸಿ ಅಪಾರ ಕೊಡುಗೆ ನೀಡಿದರು.

ಹೈದರಾಬಾದ್ ಕರ್ನಾಟಕ, ಕರಾವಳಿ, ಹಳೇ ಮೈಸೂರು ಪ್ರಾಂತ ಹೀಗೆ ರಾಜ್ಯದ ಬಹುತೇಕ ಎಲ್ಲ ಜಿಲ್ಲೆಗಳಲ್ಲೂ ಐವತ್ತರ ದಶಕದ ಆರಂಭದ ಹೊತ್ತಿಗೆ ಸಂಘದ ಶಾಖೆಗಳು ಆರಂಭವಾಗಿದ್ದವು. ಕರ್ನಾಟಕ ಏಕೀಕರಣದ ಹೋರಾಟ ಆರಂಭವಾಗುವ ಹೊತ್ತಿಗಾಗಲೇ ಕಾಸರಗೋಡು ಸೇರಿಕೊಂಡಂತೆ ಏಕೀಕೃತ ಕರ್ನಾಟಕ ಸಂಘ ಅಸ್ತಿತ್ವಕ್ಕೆ ಬಂದಿತ್ತು.

**ಅಂದಿನ ಸವಾಲುಗಳು**

ನಲವತ್ತರ ದಶಕದಲ್ಲಿ ರಾಜ್ಯದ ಜನತೆ ಸಂಘದ ವಿಚಾರ ಮತ್ತು ಕೆಲಸದ ರೀತಿಯನ್ನು ಕುತೂಹಲದಿಂದ ವೀಕ್ಷಿಸಿದರು. ಉನ್ನತ ಪದವೀಧರರಾದ ಯುವಕರು ಮನೆ, ಮಠ ತೊರೆದು ಸ್ವಂತಕ್ಕೇನೂ ಅಪೇಕ್ಷಿಸದೆ ಅವಿವಾಹಿತರಾಗಿ ಪೂರ್ಣ ಸಮಯವನ್ನು ಸಂಘ ಕಾರ್ಯಕ್ಕೆ ಮೀಸಲಿರಿಸುವುದು ತರ್ಕಕ್ಕೆ ಮೀರಿದ ಆಕರ್ಷಣೆಯಾಗಿತ್ತು.

ಅಪರಿಚಿತ ಪ್ರದೇಶ, ಭಾಷೆ, ಆಹಾರ, ಹವಾಮಾನ ಮಾತ್ರವಲ್ಲದೆ ಜನರ ಸ್ವಭಾವ, ಜೀವನ ಶೈಲಿ, ಚಿಂತನೆಯ ಧಾಟಿ ಪ್ರಚಾರಕರ ಮಟ್ಟಿಗೆ ಹೊಸದೇ ಆಗಿರುತ್ತಿತ್ತು. ಆದರೆ ಜನಸಾಮಾನ್ಯರ ಮನದಲ್ಲೂ ಸ್ಪಂದಿಸುತ್ತಿದ್ದ ಸ್ವಾತಂತ್ರ್ಯ ಪ್ರಾಪ್ತಿಯ ಉತ್ಕಟ ಹಂಬಲ ಮಾತ್ರ ಸಮಾನ ಸಂಗತಿಯಾಗಿತ್ತು. ಈ ಹಂಬಲ ಮತ್ತು ಸಂಘದ ವಿಚಾರ ಹಾಗೂ ಕೆಲಸದ ರೀತಿ ಒಂದೇ ಆಗಿದ್ದರಿಂದ ಸಂಘ ಕಾರ್ಯಕ್ಕೆ ರಾಜ್ಯದ ಜನತೆಯ ನಿರೀಕ್ಷಿತ ಬೆಂಬಲ, ಸಹಕಾರ ದೊರಕಿತು.

ಅಂದಿನ ದಿನಗಳಲ್ಲಿ ಮಹಾರಾಜರ ಆಳ್ವಿಕೆಯಲ್ಲಿದ್ದ ಮೈಸೂರು ಸಂಸ್ಥಾನದಲ್ಲಿ ಸಂಘ ಕಾರ್ಯದ ವಿಸ್ತಾರ ಸುಲಭವಾಗಿರಲಿಲ್ಲ. ಸಂಘದ ಚಟುವಟಿಕೆಗಳ ಬಗ್ಗೆ ಪೊಲೀಸರಿಗೆ ಅದೇನೋ ಸಂಶಯ. ಶಾಖೆಗಳ ಹಾಗೂ ಸಂಘ ಕಾರ್ಯಕರ್ತರ ಚಟುವಟಿಕೆಗಳ ಮೇಲೆ ಸದಾ ಪೊಲೀಸರ ಕಣ್ಣಿರುತ್ತಿತ್ತು. ಶಾಖೆಗಳಲ್ಲಿ ದಂಡ ಶಿಕ್ಷಣಕ್ಕೆ ಅವಕಾಶವೇ ಇರಲಿಲ್ಲ. ನಾಗಪುರದಿಂದ ಬಂದಿದ್ದ ಓರ್ವ ಪ್ರಚಾರಕರು ಬಹಿರಂಗವಾಗಿ ದಂಡ ಪ್ರದರ್ಶನ ಮಾಡಿದ್ದಕ್ಕಾಗಿ ಸಂಸ್ಥಾನದಿಂದ ಗಡೀಪಾರಿಗೆ ಒಳಗಾದದ್ದೂ ಇದೆ.

ಸಂಘ ಕಾರ್ಯಕ್ಕೆ ಈ ಸಂಸ್ಥಾನದಲ್ಲಿದ್ದ ಅಡೆತಡೆಗಳ ಬಿಸಿ ಅಂದಿನ ಸಂಘದ ಮುಖ್ಯಸ್ಥರಾಗಿದ್ದ ಶ್ರೀ ಗುರೂಜಿಯವರನ್ನೂ ತಟ್ಟಿತ್ತು. ೧೯೪೭ರ ಸೆಪ್ಟೆಂಬರಿನಲ್ಲಿ ಶ್ರೀ ಗುರೂಜಿಯವರು ಮೊದಲ ಬಾರಿಗೆ ಬೆಂಗಳೂರಿಗೆ ಭೇಟಿ ನೀಡಿದ್ದಾಗ ಅವರನ್ನು ಬಂಧಿಸಲಾಯಿತು. ಚಲೇಜಾವ್ ಚಳವಳಿ ತೀವ್ರವಾಗಿದ್ದ ಸಂದರ್ಭದಲ್ಲಿ ಸಂಘ ಮತ್ತು ಕಾಂಗ್ರೆಸ್ ನಡುವಿನ ವ್ಯತ್ಯಾಸ ತಿಳಿಯದಿದ್ದ ಮೈಸೂರು ಸಂಸ್ಥಾನದ ಪೋಲೀಸರು ಶ್ರೀ ಗುರೂಜಿಯವರನ್ನು ಕಾರಣವೇ ಇಲ್ಲದೆ ಬಂಧಿಸಿದರು. ಯಾದವರಾಯರು ಮತ್ತು ಇಂದಿನ ಹಿರಿಯ ಸಂಘ ಪ್ರಚಾರಕರಾದ ಕೃ. ಸೂರ್ಯನಾರಾಯಣರಾಯರ ಪ್ರಯತ್ನದಿಂದ ಹಾಗೂ ಅಂದಿನ ಹಿರಿಯ ವಕೀಲ ವೆಂಕಟರಂಗ ಅಯ್ಯಂಗಾರ್ ಹಾಗೂ ವೀರಕೇಸರಿ ಸೀತಾರಾಮಶಾಸ್ತ್ರಿಯವರ ನೆರವಿನಿಂದ ಶ್ರೀ ಗುರೂಜಿಯವರನ್ನು ಬೇಷರತ್ತಾಗಿ ಬಿಡುಗಡೆ ಮಾಡಲಾಯಿತು.

ಸಾರ್ವಜನಿಕ ಸಮಾರಂಭವನ್ನು ಪೋಲೀಸರ ಅನುಮತಿ ಇಲ್ಲದೆ ನಡೆಸುವಂತಿರಲಿಲ್ಲ. ಸಮಾರಂಭದಲ್ಲಿ ಮಹಾರಾಜರ ಭಾವಚಿತ್ರ ಎದ್ದುಕಾಣುವಂತೆ ಅಲಂಕರಿಸಿಡಬೇಕೆನ್ನುವ ಷರತ್ತು ವಿಧಿಸಲಾಗುತ್ತಿತ್ತು. ೧೯೪೩ರಲ್ಲಿ ಕರ್ನಾಟಕ ಪ್ರಾಂತದ ಮೊದಲ ಬೈಠಕ್‌ನ ಸಮಾರೋಪ ಸಮಾರಂಭವನ್ನು ಮೈಸೂರು ಮಹಾರಾಜರ ವರ್ಧಂತ್ಯುತ್ಸವದ ಹೆಸರಿನಲ್ಲಿ ನಡೆಸಲಾಯಿತು.

ಆರಂಭದಲ್ಲಿ ಮಹಾರಾಷ್ಟ್ರದಿಂದ ಬಂದಿದ್ದ ಯಾದವರಾವ್ ಜೋಷಿ ಹಾಗೂ ಅಣ್ಣಾ ಶೇಷ ಅವರು ಕರ್ನಾಟಕದಲ್ಲಿ ಸಂಘ ಪ್ರಚಾರಕರಾಗಿದ್ದರು. ಕೆಲವೇ ವರ್ಷಗಳಲ್ಲಿ ಇವರ ಯತ್ನದಿಂದಾಗಿ ಹಾಗೂ ಮಹಾರಾಷ್ಟ್ರದಿಂದ ಬಂದ ಇನ್ನೂ ಕೆಲವು ಪ್ರಚಾರಕರ ಶ್ರಮದಿಂದಾಗಿ ಕರ್ನಾಟಕ ಪ್ರಚಾರಕ ವ್ಯವಸ್ಥೆಯಲ್ಲಿ ಸ್ವಯಂ ನಿರ್ಭರತೆ ಸಾಧಿಸಿತು. ಕರ್ನಾಟಕದವರೇ ಆದ ಹೊ. ವೆ. ಶೇಷಾದ್ರಿ, ಕೃ. ಸೂರ್ಯನಾರಾಯಣರಾವ್, ಸು. ರಾಮಣ್ಣ, ಸುಬ್ಬು ಶ್ರೀನಿವಾಸ್, ಸಾಂಕಲ್ ಚಂದ್ ಬಾಗ್ರೇಚಾ ಮುಂತಾದ ರಾಜ್ಯದ ಹಿರಿಯರು ರಾಷ್ಟ್ರಮಟ್ಟದಲ್ಲಿ ಈಗ ಸಂಘದ ನೇತಾರರಾಗಿದ್ದಾರೆ.

## ಐತಿಹಾಸಿಕ ಸತ್ಯಾಗ್ರಹ

ಮಹಾತ್ಮ ಗಾಂಧೀಜಿಯವರು ಹಂತಕನೊಬ್ಬನ ಗುಂಡಿಗೆ ಬಲಿಯಾದಾಗ ಇಡೀ ದೇಶಕ್ಕೆ ಸಿಡಿಲೆರಗಿದ ಆಘಾತವಾಯಿತು. ಸಂಘ ಕಾರ್ಯವನ್ನು ದಮನ ಮಾಡುವ ಉದ್ದೇಶದಿಂದ ಅಂದಿನ ಸರ್ಕಾರ ಗಾಂಧೀಜಿಯವರ ಹತ್ಯೆಯ ಹಣೆಪಟ್ಟಿ ಕಟ್ಟಿ ಸಂಘದ ಮೇಲೆ ನಿಷೇಧ ಹೇರಿತು. ದೇಶಾದ್ಯಂತ ಸಂಘದ ಕಾರ್ಯಾಲಯಗಳ ಮೇಲೆ, ಕಾರ್ಯಕರ್ತರ ಮೇಲೆ ಧಾಳಿ ನಡೆದವು. ಸಾಮಾನ್ಯ ಸ್ವಯಂಸೇವಕರೂ ಕಿರುಕುಳಕ್ಕೆ ಒಳಗಾದರು. ಅಂಥ ಸಮಯದಲ್ಲೂ ಸಂಘದ ಮುಖ್ಯಸ್ಥರಾಗಿದ್ದ ಶ್ರೀ ಗುರೂಜಿಯವರು ಎಲ್ಲ ಸ್ವಯಂ ಸೇವಕರಿಗೆ Be calm at all costs (ಎಲ್ಲ ಪರಿಸ್ಥಿತಿಯಲ್ಲೂ ಶಾಂತರಾಗಿರಿ) ಎನ್ನುವ ಸಂದೇಶ ನೀಡಿದರು.

ಸಂಘದ ಶಾಖಾರೂಪ ಕ್ರಿಕೆಟ್, ವಾಲಿಬಾಲ್ ನಂತರ ಶಾರೀರಿಕ ಕಾರ್ಯಕ್ರಮಗಳಾಗಿ ಪರಿವರ್ತಿತವಾದವು. ಬೌದ್ಧಿಕ ಚಟುವಟಿಕೆಗಳು ರೂಪ ಪಡೆದವು. ಮಂಗಳೂರಿನಲ್ಲಿ 'ಸಂಘದ ಗಣಪತಿ ಉತ್ಸವ' ಎನ್ನುವ ಖ್ಯಾತಿ ಪಡೆದಿರುವ ಸಾರ್ವಜನಿಕ ಗಣೇಶೋತ್ಸವ, ಉಳ್ಳಾಲದ ಶ್ರೀ ಶಾರದಾ ಉತ್ಸವ ಇದೇ ಹಿನ್ನೆಲೆಯದು. ನಿಷೇಧದ ಅವಧಿಯಲ್ಲಿ ಸ್ವಯಂಸೇವಕರಿಗೆ ಬೌದ್ಧಿಕ ಸರಕು ನೀಡಲು 'ವಿಕ್ರಮ' ಸಾಪ್ತಾಹಿಕ ಪತ್ರಿಕೆ ಆರಂಭವಾಯಿತು.

ನಿಷೇಧವನ್ನು ದೂರಗೊಳಿಸಲು ಶ್ರೀ ಗುರೂಜಿಯವರು ಕೇಂದ್ರ ಸರ್ಕಾರದ ಜೊತೆ ನಡೆಸಿದ ಪತ್ರ ವ್ಯವಹಾರ ಹಾಗೂ ಪ್ರಧಾನಮಂತ್ರಿ ಮತ್ತು ಗೃಹಸಚಿವರ ಜೊತೆ ನಡೆಸಿದ ಪ್ರತ್ಯಕ್ಷ ಮಾತುಕತೆ ವಿಫಲವಾಯಿತು. ಸತ್ಯಾಗ್ರಹ ನಡೆಸುವುದು ಸಂಘಕ್ಕೆ ಅನಿವಾರ್ಯವಾಯಿತು.

೧೯೪೮ರ ಡಿಸೆಂಬರ್ ೧೦ ರಂದು ಏಕದಿನ ಸತ್ಯಾಗ್ರಹದ ಶಂಖೋದ್ಘೋಶ ದೇಶಾದ್ಯಂತ ಮೊಳಗಿದವು. ಸಂಘದ ಶಾಖೆ ಪ್ರಾರ್ಥನೆ ನಡೆಸಿ ಮೆರವಣಿಗೆ ನಡೆಸುವ ಮೂಲಕ ನಿಷೇಧ ಮುರಿಯುವ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಈ ಐತಿಹಾಸಿಕ ಸತ್ಯಾಗ್ರಹದಲ್ಲಿ ದೇಶಾದ್ಯಂತ ೭೭,೦೯೦ ಸ್ವಯಂಸೇವಕರು ಬಂಧಿತರಾದರು. ೧೯೨೧ರ 'ಅಸಹಕಾರ ಚಳವಳಿ' ೧೯೩೦-೩೨ ರ 'ಕಾನೂನು ಭಂಗ ಚಳವಳಿ' ಮತ್ತು ೧೯೪೨ರ 'ಭಾರತ ಛೋಡೋ'- ಇವುಗಳಲ್ಲಿ ಆಗಿದ್ದ ಬಂಧನಗಳನ್ನು ಮೀರಿದ ದಾಖಲೆ ಇದು ಎನ್ನುವುದು ಗಮನಾರ್ಹ. ಈ ಸತ್ಯಾಗ್ರಹದಲ್ಲಿ ಮದ್ರಾಸ್ ಪ್ರಾಂತ ಮತ್ತು ಕರ್ನಾಟಕ ಪ್ರಾಂತ ಸೇರಿ ದಕ್ಷಿಣ ಭಾರತದಿಂದ ಬಂಧನಕ್ಕೊಳಗಾದವರು ೧೫,೫೬೩ ಸ್ವಯಂಸೇವಕರು. ಪೋಲೀಸರ ದೌರ್ಜನ್ಯದಿಂದ ಕರ್ನಾಟಕದ ಇಬ್ಬರು ತರುಣ ಕಾರ್ಯಕರ್ತರಾದ ಕಾಸರಗೋಡಿನ ಕೃಷ್ಣರಾವ್ ಮತ್ತು ಕಾರ್ಕಳ ತಾಲ್ಲೂಕಿನ ದುರ್ಗದ ಕೃಷ್ಣ ಭಟ್ ಚಿಪ್ಲೂಣ್‌ಕರ್ ಪ್ರಾಣಬಲಿ ನೀಡಿದರು.

ಮದ್ರಾಸಿನ ವಯೋವೃದ್ಧ ವಕೀಲರಾದ ಟಿ. ಆರ್. ವೆಂಕಟರಾಮಾಶಾಸ್ತ್ರಿಯವರ ಮಧ್ಯಸ್ಥಿಕೆಯಿಂದ ೧೯೪೯ರ ಜುಲೈ ೧೨ ರಂದು ಸಂಘದ ಮೇಲಿನ ನಿಷೇಧ ರದ್ದಾಯಿತು. ನಿಷೇಧದಿಂದ ಸಂಘವು ಅನುಭವಿಸಿದ್ದ ಕಷ್ಟನಷ್ಟಗಳೇನೇ ಇರಲಿ, ಸಕಾರಾತ್ಮಕವಾಗಿ ಒಂದು ಉತ್ತಮ ವಿದ್ಯಮಾನ ಅನುಭವಕ್ಕೆ ಬಂದಿತು. ಭೂಗತ ಹೋರಾಟದ ಅವಧಿಯಲ್ಲಿ ಸತ್ಯಾಗ್ರಹದ ಸಿದ್ಧತೆಗಳು ನಡೆಯುತ್ತಿದ್ದಾಗ ವಿವಿಧ ಹಂತಗಳಲ್ಲಿ ಪರಸ್ಪರ ವಿಚಾರ ವಿನಿಮಯದ ಪದ್ಧತಿ ಆರಂಭವಾಯಿತು. ನಿಷೇಧದ ಫಲವಾಗಿ ಸಂಘಕ್ಕೆ ಲಿಖಿತ ಸಂವಿಧಾನವೂ ಬಂತು. ಸಂವಿಧಾನದಿಂದ ಕಾರ್ಯಕರ್ತರ ವಿವಿಧ ಶ್ರೇಣಿಗಳು ಶುರುವಾದವು. ಪ್ರತಿಹಂತದಲ್ಲೂ ಪರಸ್ಪರ ಚರ್ಚೆ, ಸಮಾಲೋಚನಾ ಪದ್ಧತಿ ಆರಂಭವಾದುದರ ಫಲವಾಗಿ ಸಂಘದ ಕಾರ್ಯರಚನೆಯ ಒಳಹಂದರ ಹೆಚ್ಚು ಗಟ್ಟಿಯಾಯಿತು.

## ಗೋಹತ್ಯೆ ನಿಷೇಧಕ್ಕಾಗಿ ಸಹಿ ಸಂಗ್ರಹ

೧೯೫೨ರಲ್ಲಿ ಗೋಹತ್ಯೆ ನಿಷೇಧಕ್ಕಾಗಿ ಸರ್ಕಾರವನ್ನು ಒತ್ತಾಯಿಸಲು ಸಂಘ ಬೃಹತ್ ಜನಸಂಪರ್ಕ ಅಭಿಯಾನ ಕೈಗೊಂಡಿತು. ಸ್ವಾತಂತ್ರ್ಯ ಬಂದ ಕೂಡಲೇ ದೇಶದಲ್ಲಿ ಗೋಹತ್ಯೆ ನಿಷೇಧಿಸುವುದಾಗಿ ಲೋಕಮಾನ್ಯ ತಿಲಕ್, ಗಾಂಧೀಜಿ ಸೇರಿದಂತೆ ಎಲ್ಲ ಪ್ರಮುಖ ನಾಯಕರೂ ಸ್ವಾತಂತ್ರ್ಯ ಹೋರಾಟಗಾರರೂ ಘೋಷಿಸಿದ್ದರು. ನೂತನವಾದ ಸಂವಿಧಾನದ ನಿರ್ದೇಶನ ಸೂತ್ರಗಳಲ್ಲೂ ಗೋವಂಶದ ರಕ್ಷಣೆಗೆ ಸರ್ಕಾರದ ಬದ್ಧತೆ ಹೇಳಲಾಗಿದೆ. ಆದರೂ ದೇಶದಲ್ಲಿ ಗೋಹತ್ಯೆ ನಿರಂತರವಾಗಿ ನಡೆದೇ ಇದೆ. ದೇಶಭಕ್ತರ ಮನನೋಯಿಸುವ ಈ ಸಂಗತಿಗೆ ಆಂದೋಲನದ ಸ್ವರೂಪ ನೀಡಲು ಸಂಘ ನಿರ್ಧರಿಸಿತು.

೧೯೫೨ರ ಗೋಕುಲಾಷ್ಟಮಿಯಿಂದ ಒಂದು ತಿಂಗಳ ಕಾಲ ಸ್ವಯಂಸೇವಕರು ದೇಶಾದ್ಯಂತ ಮನೆಮನೆಗೆ ತೆರಳಿ ಗೋಹತ್ಯೆ ವಿರುದ್ಧ ಜನರ ಹಸ್ತಾಕ್ಷರ ಸಂಗ್ರಹಿಸಿದರು. ಈ ಅಭಿಯಾನದಲ್ಲಿ ಸಂಗ್ರಹಿಸಲಾದ ೧,೭೫,೮೯,೮೧೩ ಸಹಿಗಳು ವಿಶ್ವದ ಅದುವರೆಗಿನ ಇತಿಹಾಸದಲ್ಲೇ ದಾಖಲೆ ಎನಿಸಿತು. ೧೯೫೨ರ ಡಿಸೆಂಬರ್ ೭ ರಂದು ಗೋಹತ್ಯೆ ನಿಷೇಧಕ್ಕೆ ಒತ್ತಾಯಿಸುವ ಈ ಐತಿಹಾಸಿಕ

ಮನವಿಯನ್ನು ರಾಷ್ಟ್ರಪತಿ ಡಾ। ರಾಜೇಂದ್ರ ಪ್ರಸಾದರಿಗೆ ಅರ್ಪಿಸಲಾಯಿತು. ಈ ಅಭಿಯಾನದಲ್ಲಿ ಕರ್ನಾಟಕದ ೯೭೬೧ ಊರುಗಳಿಂದ ೫,೨೩,೫೪೦ ಸಹಿಗಳನ್ನು ಸಂಗ್ರಹಿಸಲಾಗಿತ್ತು.

ಇದೇ ವರ್ಷ ಸಂಘದ ಅಂದಿನ ಮುಖ್ಯಸ್ಥರಾಗಿದ್ದ ಶ್ರೀ ಗೂರೂಜಿಯವರು ೫೧ನೇ ವರ್ಷಕ್ಕೆ ಕಾಲಿಡುವವರಿದ್ದರು. ಈ ಸಂದರ್ಭದಲ್ಲಿ ೫೧ ದಿನಗಳ ಕಾಲ ದೇಶಾದ್ಯಂತ ವ್ಯಾಪಕ ಜನಸಂಪರ್ಕ ಅಭಿಯಾನ ನಡೆಸಲಾಯಿತು. 'ಶ್ರದ್ಧಾನಿಧಿ' ಹೆಸರಿನಲ್ಲಿ ನಡೆದ ಕಾರ್ಯಕ್ರಮದಲ್ಲಿ ಸ್ವಯಂಸೇವಕರು ಮನೆ ಮನೆಗಳಿಗೆ ತೆರಳಿ ಸಂಘದ ವಿಚಾರದ ಪರಿಚಯ, ಜೊತೆಯಲ್ಲಿ ಪ್ರತಿಪ್ರಾಂತದ ಒಂದು ಕೇಂದ್ರದಲ್ಲಿ ಶ್ರೀ ಗುರೂಜಿಯವರನ್ನು ಸನ್ಮಾನಿಸಿ ನಿಧಿ ಅರ್ಪಿಸಲು ದೇಣಿಗೆ ಸಂಗ್ರಹಿಸಿದರು. ದೇಶಾದ್ಯಂತ ೨೨ ಲಕ್ಷ ರೂ.ಗಳ ಶ್ರದ್ಧಾ ನಿಧಿಯನ್ನು ಶ್ರೀ ಗುರೂಜಿಯವರಿಗೆ ಸಮರ್ಪಿಸಲಾಯಿತು. ಇದರಲ್ಲಿ ಕರ್ನಾಟಕದ ಪಾಲು ೮೩ ಸಾವಿರ ರೂ.ಗಳು.

**ಐತಿಹಾಸಿಕ ಬೃಹತ್ ಶಿಬಿರ**

'ನಾವೆಲ್ಲ ಹಿಂದು - ನಾವೆಲ್ಲ ಒಂದು' ಎನ್ನುವ ಭಾವನೆಯನ್ನು ಸಮಾಜದಲ್ಲಿ ಮೂಡಿಸಲು, ಸ್ವಯಂ ಸೇವಕರ ಮನೋಭೂಮಿಕೆ ಸಿದ್ಧ ಮಾಡಲು ಬೃಹತ್ ಶಿಬಿರಗಳನ್ನು ಸಂಘ ನಡೆಸುತ್ತಾ ಬಂದಿದೆ. ಇಂಥ ಮೊದಲ ಐತಿಹಾಸಿಕ ಶಿಬಿರ ನಡೆದದ್ದು ೧೯೪೮ರ ಜನವರಿಯಲ್ಲಿ. ದೇಶ ವಿಭಜನೆಗೆ ಬ್ರಿಟನ್ ಸಂಚು ಹೂಡಿದ್ದಾಗ ಹಾಗೂ ಹತಾಶರಾಗಿದ್ದ ಮುಸ್ಲಿಂಲೀಗಿನ ಮಹಮದಾಲಿ ಜಿನ್ನಾರ ನೇರ ಕ್ರಮದ ಕರೆಯಿಂದಾಗಿ ಕಲ್ಕತ್ತ ಹಾಗೂ ದೇಶದ ಇಂತಹ ಪ್ರದೇಶಗಳಲ್ಲಿ ಜಾತೀಯ ದಂಗೆಗೆಳು ನಡೆಯುತ್ತಿದ್ದಾಗ ನಡೆದ ಕರ್ನಾಟಕದ ಮೊದಲ ಪ್ರಾಂತ ತರುಣ ಶಿಬಿರ ಹಿಂದೂ ಜನಮಾನಸದಲ್ಲಿ ಭರವಸೆಯ ಮಿಂಚು ಪಸರಿಸಿತು. ಇಂದು ಬೆಂಗಳೂರು ಮಹಾನಗರ ಸಾರಿಗೆ ಬಸ್ ನಿಲ್ದಾಣವಾಗಿರುವ ಜಾಗದಲ್ಲಿ ನಡೆದ ಶಿಬಿರ ಮೈಕೊರೆಯುವ ಚಳಿ ಮತ್ತು ತುಂತುರು ಮಳೆಯ ನಡುವೆಯೂ ಯಶಸ್ವಿಯಾಯಿತು.

ಪೂರ್ವಾಂಚಲ ಭಾರತದ ಮೇಲೆ ಚೀನಾ ಆಕ್ರಮಣ ನಡೆಸಿದ ಎರಡು ತಿಂಗಳ ನಂತರ ೧೯೬೨ರ ಡಿಸೆಂಬರ್‌ನಲ್ಲಿ ಇದೇ ಜಾಗದಲ್ಲಿ ಸಂಘದ ಎರಡನೇ ಬೃಹತ್ ಶಿಬಿರ ನಡೆಯಿತು. ಧಾರಾಕಾರ ಮಳೆ ಶಿಬಿರಕ್ಕೆ ಅಡ್ಡಿ ಮಾಡಿತು. ಶಿಬಿರಕ್ಕಾಗಿ ಬಂದಿದ್ದ ೫ರಿಂದ ೬ ಸಾವಿರ ಸ್ವಯಂ ಸೇವಕರಿಗೆ ಮಳೆಯಿಂದ ಜಲಾವೃತವಾಗಿದ್ದ ಶಿಬಿರಸ್ಥಾನದ ಹತ್ತಿರವಿದ್ದ ಛತ್ರಗಳು, ಮನೆಗಳು ವಸತಿ ಆದವು.

ಯೋಜನೆಯಂತೆ ಶಿಬಿರ ಆರಂಭವಾಗುವ ಹೊತ್ತಿಗೆ ಮಳೆರಾಯನ ಆರ್ಭಟ ನಿಂತಿತ್ತು. ಸ್ವಯಂ ಸೇವಕರ ಪಥಸಂಚಲನ ಮತ್ತು ಸಮಾರಂಭ ಹಿಂದೂ ಜನಮಾನಸದಲ್ಲಿ ವಿದ್ಯುತ್ ಸಂಚಾರ ಮೂಡಿಸಿತು.

## ಗಣರಾಜ್ಯೋತ್ಸವ ಪೆರೇಡಿನಲ್ಲಿ ಸಂಘದ ಸ್ವಯಂಸೇವಕರು

ಚೀನಾ ಯುದ್ಧದ ನಂತರ ದೇಶದ ನಾಯಕರ ದೃಷ್ಟಿ ಸಂಘದ ಕಡೆ ಹರಿಯುತ್ತಿತ್ತು. ಇದರ ಪರಿಣಾಮವಾಗಿ ೧೯೬೩ರ ಗಣರಾಜ್ಯೋತ್ಸವ ಪೆರೇಡಿನಲ್ಲಿ ಭಾಗವಹಿಸಲು ದೇಶದ ಪ್ರಧಾನಮಂತ್ರಿಯವರ ಕಾರ್ಯಾಲಯದಿಂದಲೇ ಆಹ್ವಾನ ಬಂದಿತು. ಕೇವಲ ಎರಡೇ ದಿನಗಳಲ್ಲಿ ೩ ಸಾವಿರ ಗಣವೇಶಧಾರಿ ಸ್ವಯಂಸೇವಕರು ಸರ್ಕಾರದ್ದೇ ಆದ ಗಣರಾಜ್ಯೋತ್ಸವ ಪೆರೇಡಿನಲ್ಲಿ ಆಕರ್ಷಕ, ಶಿಸ್ತುಬದ್ಧ ಪಥಸಂಚಲನ ನಡೆಸಿ ಹಿಂದು ಶಕ್ತಿಯ ದರ್ಶನ ಮಾಡಿದರು.

**ವೀರ ಸನ್ಯಾಸಿಗೆ ಒಂದು ಸ್ಮಾರಕ**

ಭಾರತದ ದಕ್ಷಿಣ ತುದಿ ಕನ್ಯಾಕುಮಾರಿಯಲ್ಲಿ ಮೂರು ಸಾಗರಗಳು ಸಂಗಮವಾಗುವಲ್ಲಿ ಸಮುದ್ರಗರ್ಭದಿಂದ ಎದ್ದು ನಿಂತ ಶಿಲಾಖಂಡವೊಂದಿದೆ. ವಿವೇಕಾನಂದ ಶಿಲೆ ಎಂದೇ ಅದರ ಖ್ಯಾತಿ. ಸ್ವಾಮಿ ವಿವೇಕಾನಂದರು ಅಮೆರಿಕಕ್ಕೆ ಹೋಗುವ ಮುನ್ನ ಪರಿವ್ರಾಜಕರಾಗಿ ಕನ್ಯಾಕುಮಾರಿಗೆ ಬಂದಿದ್ದಾಗ, ತುಸು ಕಾಲ ಅದರ ಮೇಲೆ ಧ್ಯಾನಸ್ಥರಾಗಿದ್ದರೆಂಬುದು ಸಾಮಾನ್ಯವಾಗಿ ಎಲ್ಲರೂ ನಂಬಿರುವ ಪ್ರತೀತಿ. ಅದರ ಮೇಲೊಂದು ಸ್ವಾಮೀಜಿಯವರ ಭೀಮಗಾತ್ರದ ಪ್ರತಿಮೆ ನಿಲ್ಲಿಸಿ ಅವರಿಗೆ ಭವ್ಯಸ್ಮಾರಕವನ್ನು ನಿರ್ಮಿಸಬೇಕೆಂಬ ವಿಚಾರ ಮೂಡಿದ್ದು ೧೯೬೩ರಲ್ಲಿ. ಅದು ಸ್ವಾಮೀಜಿಯವರ ಜನ್ಮ ಶತಮಾನೋತ್ಸವದ ವರ್ಷ.

ಕನ್ಯಾಕುಮಾರಿ ದೇಶದ ಒಂದು ಆಯಕಟ್ಟಿನ ಜಾಗ. ಅಲ್ಲಿ ಸುತ್ತಮುತ್ತ ಇರುವವರು ದೇಶವಿರೋಧಿ ಶಕ್ತಿಗಳೇ. ಮತಾಂತರಿತ ಕ್ರೈಸ್ತ ಮೀನುಗಾರರು ಮತ್ತು ಮುಸಲ್ಮಾನ ಕಳ್ಳಸಾಗಾಣಿಕೆದಾರರದೇ ತಮಿಳುನಾಡಿನ ಕರಾವಳಿಯುದ್ದಕ್ಕೂ ಪ್ರಶ್ನಾತೀತ ಸ್ವಾಮ್ಯ. ಇನ್ನು ಒಳನಾಡಿನಲ್ಲಿರುವ ಬಹುಸಂಖ್ಯಾತ ಹಿಂದು ಜನಮಾನಸವು ಉತ್ತರ ಭಾರತ, ಹಿಂದಿ ಭಾಷೆ ಇತ್ಯಾದಿ ವಿರುದ್ಧವಾಗಿ ಪ್ರತ್ಯೇಕತಾವಾದದ ಮೂಲ ಬಂಡವಾಳ. ಒಟ್ಟಿನಲ್ಲಿ ಸಂಪೂರ್ಣ ತಮಿಳುನಾಡು ದೇಶದ್ರೋಹಿ ಚಟುವಟಿಕೆಗಳಿಗೆ ತೆರೆದಿರಿಸಿದ ಆಡುಂಬೊಲ. ಪರಿಸ್ಥಿತಿ

ಹೀಗಿರುವಾಗ ಇವೆಲ್ಲವನ್ನೂ ಒಟ್ಟಿಗೇ ಕೊನೆಗಾಣಿಸಲು ಯೋಜಿತ ಸ್ಮಾರಕವು ಭವ್ಯವಾಗಿ ತಲೆಯೆತ್ತಿ ನಿಲ್ಲಬೇಕು. ಸಂಪೂರ್ಣ ದೇಶದ ಏಕತೆಯನ್ನು ಪ್ರತಿನಿಧಿಸಬೇಕು. ಇಂತಹ ಲೋಕೋತ್ತರ ಕಲ್ಪನೆಯೊಂದನ್ನು ಮಾಡಿದವರು ತಮಿಳುನಾಡಿನಲ್ಲಿ ಅನೇಕ ವರ್ಷಗಳ ಕಾಲ ಸಂಘದ ಪ್ರಾಂತ ಪ್ರಚಾರಕರಾಗಿದ್ದ ದತ್ತಾಜಿ ಡಿಡೋಲ್ಕರ್ ಅವರು.

ಶಿಲಾಸ್ಮಾರಕ ನಿರ್ಮಾಣದ ಪೂರ್ಣ ಹೊಣೆ ಹೊತ್ತಿದ್ದವರು ಹಲವು ವರ್ಷಗಳ ಕಾಲ ಸಂಘದ ಸಹಕಾರ್ಯವಾಹಕರಾಗಿದ್ದ ಏಕನಾಥ ರಾನಡೆ ಅವರು. ಆರಂಭದ ಹಂತದಲ್ಲಿ ಈ ಯೋಜನೆಗೂ ಹಲವಾರು ವಿಧದ ಬಾಲಗ್ರಹ ಪೀಡೆಗಳು ಎದುರಾದವು. ಆದರೆ ಏಕನಾಥ ರಾನಡೆಯವರ ಜಿದ್ದಿನ ಪ್ರಯತ್ನದಿಂದಾಗಿ ಕೊನೆಯಲ್ಲಿ ಎಲ್ಲ ತೊಡಕುಗಳು ದೂರವಾದವು. ಅದೇ ಸಂದರ್ಭದಲ್ಲಿ ಮೈಸೂರಿನ ಮಂಗಳೂರು ಗಣೇಶ ಬೀಡಿ ವರ್ಕ್ಸ್ ಮಾಲಿಕರಾದ ಕೊಡುಗೈ ದಾನಿ ಎಂ. ಗೋವಿಂದರಾವ್ ಅವರು ನೀಡಿದ, ದೇಶದಲ್ಲೇ ಮೊಟ್ಟ ಮೊದಲ ಅತಿ ದೊಡ್ಡ ದೇಣಿಗೆ - ಒಂದು ಲಕ್ಷ ರೂಪಾಯಿ - ಸ್ಮಾರಕದ ರಚನೆಗಾಗಿ ರೂಪಿಸಲಾಗಿದ್ದ ಸಮಿತಿಗೆ ಆರಂಭದ ಅತ್ಯಂತ ಇಕ್ಕಟ್ಟಿನ ಸನ್ನಿವೇಶದಲ್ಲಿ ಬೀಜಧನವಾಗಿ ಲಭಿಸಿತು.

ಶಿಲೆಯ ಮೇಲೊಂದು ಭವ್ಯ ಮಂದಿರ, ಅದರೊಳಗೆ ಸ್ವಾಮೀಜಿಯವರ ಆಳೆತ್ತರದ ವಿಗ್ರಹ ಇತ್ಯಾದಿ ಒಳಗೊಂಡ ರೂ. ೩೦ ಲಕ್ಷದಷ್ಟು ಅಂದಾಜು ವೆಚ್ಚದ ಯೋಜನೆಯೊಂದು ೧೯೬೭ರಲ್ಲಿ ಮೊದಲುಗೊಂಡಿತು. ಈ ಸ್ಮಾರಕಕ್ಕಾಗಿ ಧನಸಂಗ್ರಹ ಅಭಿಯಾನದ ಮೊದಲ ಪ್ರಯತ್ನ ನಡೆದುದು ಅದೇ ವರ್ಷ ಕರ್ನಾಟಕದಲ್ಲಿ. ಅದಕ್ಕಾಗಿ ಕರ್ನಾಟಕದ ಪೂರ್ವ ಮುಖ್ಯಮಂತ್ರಿ ಮತ್ತು ಕೆಲಕಾಲ ಕೇಂದ್ರದಲ್ಲೂ ಮಂತ್ರಿಯಾಗಿದ್ದ ಕೆಂಗಲ್ ಹನುಮಂತಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ರಚನೆಯಾಯಿತು. ಪ್ರಾಂತದ ವಿವಿಧ ಜಿಲ್ಲೆಗಳಲ್ಲಿನ ಅನೇಕ ಗಣ್ಯ ನಾಯಕರು ಅದರ ಸದಸ್ಯರಾಗಿ ಸೇರಿಕೊಂಡರು.

ಈ ಸಮಿತಿಯ ಹೆಸರಲ್ಲಿ ನಡೆಸಲಾದ ಧನಸಂಗ್ರಹ ಅಭಿಯಾನದ ವಿಶೇಷತೆಯೆಂದರೆ ವ್ಯಾಪಕ ಪ್ರಮಾಣದಲ್ಲಿ ಜನಸಾಮಾನ್ಯರನ್ನು ಕಂಡು ಅವರಿಂದ ಕನಿಷ್ಠ ಒಂದು ರೂಪಾಯಿ ಸಂಗ್ರಹ ಮಾಡಬೇಕು ಎಂಬುದೇ ಆಗಿತ್ತು. ಈ ರೀತಿ ಪಡೆದ ಹಣಕ್ಕೆ ಪ್ರತಿಯಾಗಿ ರಸೀತಿ ರೂಪದಲ್ಲಿ ಎಲ್ಲರಿಗೂ ವಿವೇಕಾನಂದರ ಚಿತ್ರವಿರುವ ಕಾರ್ಡ್ ಒಂದನ್ನು ಕೊಡಬೇಕು ಎಂಬುದು ಯೋಜನೆ. ಧನದ ಬೇಡಿಕೆಯೊಂದಿಗೆ ವಿದ್ಯಾರ್ಥಿಗಳು, ಗೃಹಿಣಿಯರು, ಕೂಲಿ ಕಾರ್ಮಿಕರು, ಗ್ರಾಮೀಣ ರೈತರವರೆಗೂ ಹೋಗುವುದರಿಂದ ಲಕ್ಷಾಂತರ ಮಂದಿಗೆ ಸ್ವಾಮಿ ವಿವೇಕಾನಂದರ ವಿಚಾರ, ನಮ್ಮ ರಾಷ್ಟ್ರ ಜೀವನಕ್ಕೆ ಅವರ ಕೊಡುಗೆ, ಕನ್ಯಾಕುಮಾರಿಯ ಸ್ಥಾನವಿಶೇಷತೆ, ತಮಿಳುನಾಡಿನ ವಿವಿಧ ವಿದ್ಯಮಾನಗಳು ಇತ್ಯಾದಿ ಎಲ್ಲವನ್ನೂ ವಿವರಿಸಲು ಒಂದು ಉತ್ತಮ ಅವಕಾಶ ಲಭಿಸುತ್ತದೆ. ತಮಿಳುನಾಡಿನ ಸಮಸ್ಯೆಗಳ ಕುರಿತು ಸಂಪೂರ್ಣ ದೇಶದಲ್ಲಿ ಈ ಅಭಿಯಾನ ಒಂದು ಪ್ರಭಾವೀ ಮಾಧ್ಯಮವಾಗುತ್ತದೆ. ಹೀಗೆ ಬಹುಮುಖ ಉದ್ದೇಶವಿರಿಸಿ ಕರ್ನಾಟಕದಲ್ಲಿ ದೇಶದಲ್ಲೇ ಮೊದಲನೆಯದಾದ ಅಭಿಯಾನ ನಡೆಯಿತು.

ಈ ಧನಸಂಗ್ರಹ ಅಭಿಯಾನದಲ್ಲಿ ಮೊದಲಿಗೆ ಕರ್ನಾಟಕದ ಗುರಿಯಿದ್ದುದು ಎರಡರಿಂದ ಮೂರು ಲಕ್ಷದಷ್ಟು ರೂಪಾಯಿಗಳು ಮಾತ್ರ. ಆದರೆ ಮೊದಲ ಪ್ರಯೋಗದಲ್ಲೇ ಗುರಿದಾಟಿ ಎಂಟು ಲಕ್ಷ ರೂಪಾಯಿಗಳು ಸಂಗ್ರಹವಾದವು. ಕರ್ನಾಟಕ ಸರಕಾರವೂ ಒಂದು ಲಕ್ಷ ರೂಪಾಯಿಗಳ ದೇಣಿಗೆಯನ್ನು ನೀಡಿತು. ಕರ್ನಾಟಕದ ಅಭಿಯಾನವು ಮಿಕ್ಕ ಪ್ರಾಂತಗಳಿಗೆ ಒಂದು ದಿಗ್ದರ್ಶಕ (trend setting) ಹೆಜ್ಜೆಯಾಯಿತು. ಪರಿಣಾವಾಗಿ ಎಲ್ಲ ಪ್ರಾಂತಗಳ ಗುರಿಗಳೂ ಹಲವು ಪಟ್ಟು ಹೆಚ್ಚಿ ಸ್ಮಾರಕದ ಅಂದಾಜು ವೆಚ್ಚ ಸಹ ಒಂದು ಕೋಟಿ ಮೀರಿತು.

## ಸಂಘ ಕಾರ್ಯಕ್ಕೆ ಸೇವೆಯ ಆಯಾಮ

ಹಿಂದು ಸಮಾಜವನ್ನು ಸಂಘಟಿಸಿ ಸಮಾಜಹಿತ ಸಂಸ್ಕಾರಗಳನ್ನೆ ನೀಡಲು ೧೯೬೪ರ ಗೋಕುಲಾಷ್ಟಮಿಯಂದು ಮುಂಬಯಿಯ ಸ್ವಾಮಿ ಚಿನ್ಮಯಾನಂದರ ಸಾಂದೀಪನಿ ಆಶ್ರಮದಲ್ಲಿ ವಿಶ್ವ ಹಿಂದು ಪರಿಷತ್ತಿನ ಆರಂಭಕ್ಕೆ ಸಂಘ ಪ್ರೇರಣೆ ನೀಡಿತು. ೧೯೬೬ರ ಕುಂಭಮೇಳದ ಸಂದರ್ಭದಲ್ಲಿ ಪ್ರಯಾಗದಲ್ಲಿ ನಡೆದ ಪರಿಷತ್ತಿನ ಮೊಟ್ಟಮೊದಲ ಸಮ್ಮೇಳನ 'ನ ಹಿಂದುರ್ಪತಿತೋ ಭವೇತ್' ಎನ್ನುವ ಕರೆ ನೀಡಿ ಮತಾಂತರಿತ ಬಂಧುಗಳಿಗೆ ಮಾತೃಧರ್ಮಕ್ಕೆ ಬರಲು ಬಾಗಿಲು ತೆರೆಯಿತು. ೧೯೬೯ ಡಿಸೆಂಬರಿನಲ್ಲಿ ಉಡುಪಿಯಲ್ಲಿ ನಡೆದ ಪರಿಷತ್ತಿನ ಬೃಹತ್ ಸಮ್ಮೇಳನ ಅಸ್ಪೃಶ್ಯತಾ ನಿವಾರಣೆಯ ಕೆಲಸಗಳಿಗೆ ಹೊಸ ತಿರುವು ನೀಡಿತು. ಸುಮಾರು ೬ ಸಹಸ್ರ ಪ್ರತಿನಿಧಿಗಳ ನಿರೀಕ್ಷೆಯಿದ್ದ ಆ ಸಮ್ಮೇಳನಕ್ಕೆ ಪ್ರತ್ಯಕ್ಷ ಬಂದಿದ್ದವರ ಸಂಖ್ಯೆ ೧೫ ಸಹಸ್ರ ಆಗಿತ್ತು.

ಅಸ್ಪೃಶ್ಯತೆ ಆಚರಣೆಯ ಮೂಲಕ ಹಿಂದು ಸಮಾಜ ತನ್ನದೇ ಒಂದು ವರ್ಗವನ್ನು ಅಲಕ್ಷಿಸಿರುವುದು ಸರಿಯಲ್ಲ. ಇದರಿಂದ ಈ ವರ್ಗವೂ ದುರ್ಬಲಗೊಂಡಿದೆ, ಹಿಂದು ಸಮಾಜವೂ ದುರ್ಬಲವಾಗಿದೆ. ಆದ್ದರಿಂದ ಅಸ್ಪೃಶ್ಯತೆ ವಿರುದ್ಧ ಹೋರಾಟ ನಡೆಸಬೇಕೆನ್ನುವ

ಕರ ಸಮ್ಮೇಳನದ ವೇದಿಕೆಯಿಂದ ಹೊರಬಿದ್ದಿತು. ವಿವಿಧ ಮತ, ಪಂಥಗಳಿಗೆ ಸೇರಿದ ನಲವತ್ತಕ್ಕೂ ಹೆಚ್ಚಿನ ಧರ್ಮಗುರುಗಳು ಮತ್ತು ಸಾಮಾಜಿಕ ನಾಯಕರು ಈ ಕರೆಗೆ ತಮ್ಮ ಧ್ವನಿ ಸೇರಿಸಿದರು.

**ಸೇವೆಯ ನಡುವೆ ಐತಿಹಾಸಿಕ ಹೋರಾಟ**

ಸಂಘ ಕಾರ್ಯ ಸಾಮಾಜಿಕ ಸೇವಾಕಾರ್ಯದಲ್ಲಿ ತೊಡಗಿಕೊಳ್ಳಲು ಅಣಿಯಾಗುತ್ತಿದ್ದಂತೆ ಇಂದಿರಾ ಗಾಂಧಿ ಸರ್ಕಾರ ಸಂಘದ ಮೇಲೆ ನಿಷೇಧ ಹೇರಿತು. ೧೯೭೫ರ ಜೂನ್ ೨೬ರಂದು ದೇಶದಲ್ಲಿ ತುರ್ತು ಪರಿಸ್ಥಿತಿ ಹೇರಿದ ಬೆನ್ನಲ್ಲೇ ಇಂದಿರಾ ಗಾಂಧಿ ಸರ್ಕಾರ ಸಂಘ ಕಾರ್ಯವನ್ನು ಮತ್ತೆ ನಿಷೇಧಿಸಿತು. ಆದರೆ ಸಂಘ ಆಗಲೂ ಹೆದರಿ ಮೂಲೆ ಪಾಲಾಗಲಿಲ್ಲ. ಅದು ಸಂಘದ ಮೇಲಿನ ಎರಡನೇ ನಿಷೇಧ.

೫೦ ವರ್ಷಗಳು ತುಂಬಲಿದ್ದ ಸಂಘ ಸೇವಾಚಟುವಟಿಕೆಗಳ ಜೊತೆಗೆ ಪ್ರಜಾತಂತ್ರದ ಉಳಿವಿಗಾಗಿ ಭೂಗತ ಚಳವಳಿ ರೂಪಿಸಿತು. ಜ್ಯೋತಿ, ರಣದುಂದುಭಿ, ಕೇಸರಿ, ತೂರ್ಯವಾಣಿ, ಪಾಂಚಜನ್ಯ, ಮಂಗಳೂರು ವಾರ್ತಾ, ಕೊಡಗುವಾಣಿ, ಚಿಕ್ಕಮಗಳೂರು ವಾರ್ತಾ, ಮೈಸೂರು ವಾರ್ತಾ ಇತ್ಯಾದಿ ಪ್ರಕಟಣೆಗಳ ಹೆಸರಿನಲ್ಲಿ ಪ್ರಜಾತಂತ್ರದ ಉಳಿವಿಗೆ ಹೋರಾಟ ಆರಂಭವಾಯಿತು. ಈ ಹೋರಾಟದಲ್ಲಿ ರಾಜ್ಯದಲ್ಲಿ ೩೧೪ ಮಂದಿ ಸ್ವಯಂಸೇವಕರು ಮೀಸಾ ಕಾನೂನಿನನ್ವಯ ಹಾಗೂ ೨೪೦ ಮಂದಿ ಇತರರು ಕಾನೂನಿನಡಿ ಬಂಧಿತರಾದರು. ಸತ್ಯಾಗ್ರಹ ಹಾಗೂ ಇನ್ನಿತರ ಕಾರಣಗಳಿಗಾಗಿ ಬಂಧಿತರಾದ ೨೮,೦೮೮ ಜನರಲ್ಲಿ ಶೇ. ೯೦ ಮಂದಿ ಸಂಘದ ಸ್ವಯಂಸೇವಕರಾಗಿದ್ದರು. ತುರ್ತುಸ್ಥಿತಿ ವಿರುದ್ಧ ನಡೆದ ಜನಾಂದೋಲನದ ಕತೆ ಭಾರತದ ಇತಿಹಾಸದಲ್ಲೇ ಒಂದು ರೋಚಕ ಅಧ್ಯಾಯ.

ಮುಖ್ಯವಾಗಿ ಸಂಘ ಹಾಗೂ ಇತರ ಸಂಘಟನೆಗಳ ಹೋರಾಟದ ಪರಿಣಾಮವಾಗಿ ೧೯೭೭ರಲ್ಲಿ ತುರ್ತುಪರಿಸ್ಥಿತಿ ದೂರವಾಯಿತು. ಸಂಘಕಾರ್ಯ ಮತ್ತೆ ಆರಂಭವಾಯಿತು. ಸಂಘ ತನ್ನ ಉದ್ದೇಶ ವಿವರಿಸಲು ಬೃಹತ್ ಜನಜಾಗರಣ ಅಭಿಯಾನ ನಡೆಸಿತು.

ಸಾಮಾಜಿಕ ಏಕತೆಗಾಗಿ ಸಂಘ ಆಯೋಜಿಸಿದ ಹಿಂದು ಸಮಾಜೋತ್ಸವ ರಾಜ್ಯದ ಬಹುತೇಕ ಎಲ್ಲ ಜಿಲ್ಲೆಗಳಲ್ಲಿ ಭಾರೀ ಜನಮನ್ನಣೆ ಗಳಿಸಿತು. ವಿವಿಧ ಪಂಥ ಮತಗಳ ಧರ್ಮಾಚಾರ್ಯರು ಮತ್ತು ಸಾಮಾಜಿಕ ಮುಖಂಡರು ಒಂದೇ ವೇದಿಕೆಯಿಂದ ಹಿಂದು ಏಕತೆಯ ಮಂತ್ರೋದ್ಘೋಷ ಮಾಡಿದರು.

**ಹಿಂದು ಸಂಗಮ**

೧೯೮೨ರ ಜನವರಿಯಲ್ಲಿ ನಡೆದ ಕರ್ನಾಟಕದ ಮೂರನೆಯ ಬೃಹತ್ ತರುಣ ಶಿಬಿರ 'ಹಿಂದು ಸಂಗಮ' ಹಿಂದು ಸಮಾಜವನ್ನು ಒಂದುಗೂಡಿಸುವ ನಿಟ್ಟಿನಲ್ಲಿ ಮೈಲಿಗಲ್ಲು. ಹಿಂದಿನ ಶಿಬಿರಗಳಿಗಿಂತ ಹಲವು ಪಟ್ಟು ಬೆಳೆದ ಶಿಬಿರದಲ್ಲಿ ಭಾಗವಹಿಸಿದವರ ಸಂಖ್ಯೆ ೨೧,೨೮೭.

ಸಂಘದ ಶಿಬಿರಗಳಲ್ಲೇ ದಾಖಲೆಯಾದ 'ಹಿಂದು ಸಂಗಮ'ದಲ್ಲಿ ಕರ್ನಾಟಕದ ೧೯೭ ತಾಲ್ಲೂಕುಗಳ ೨೧೫೭ ಊರುಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ೪ ಸಾವಿರ ಸ್ವಯಂಸೇವಕರು ಶಿಬಿರದ ಮೂಲಕ ಮೊದಲ ಬಾರಿಗೆ ಸಂಘ ಪ್ರವೇಶ ಮಾಡಿದರು. ಚರಿತ್ರಾರ್ಹವಾದ ಶಿಬಿರದ ಪಥಸಂಚಲನ ಯಾವುದಾದರೂ ಒಂದು ಬಿಂದುವಿನಿಂದ ದಾಟಿ ಬೇಕಾದರೆ ೬೫ ನಿಮಿಷಗಳು ತಗಲುತ್ತಿದ್ದವು.

ರಾಜ್ಯದ ೪೫ ಕೇಂದ್ರಗಳಿಂದ ಬಂದಿದ್ದ ೧೧೨೫ ಮಂದಿ ಘೋಷ್‌ವಾದಕರು (Bandset) ಅಲ್ಲಿಯವರೆಗೂ ಕಂಡಿರದ, ಕೇಳಿರದ ಘೋಷ್ ತಂಡದ ದಾಖಲೆ ನಿರ್ಮಿಸಿದರು.

**ರಾಜ್ಯದಿಂದ ಆರಂಭವಾದ ಶ್ರೀರಾಮ ಜನ್ಮಭೂಮಿ ಹೋರಾಟ**

ಉಜಿರೆಯಲ್ಲಿ ಧರ್ಮಸ್ಥಳ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗ್ಗಡೆಯವರ ಸಹಕಾರದಿಂದ ನಡೆದ ವಿಶ್ವ ಹಿಂದು ಪರಿಷತ್ತಿನ ದ್ವಿತೀಯ ಪ್ರಾಂತೀಯ ಸಮ್ಮೇಳನ ಐತಿಹಾಸಿಕವಾದದ್ದು. ೬೦ ಸಾವಿರಕ್ಕೂ ಹೆಚ್ಚು ಪ್ರತಿನಿಧಿಗಳಿದ್ದ ಸಮ್ಮೇಳನದಲ್ಲಿ ೧೭೮ ಧರ್ಮಾಚಾರ್ಯರು ಭಾಗವಹಿಸಿದ್ದರು.

೧೯೮೫ರಲ್ಲಿ ಉಡುಪಿಯಲ್ಲಿ ನಡೆದ ವಿಶ್ವ ಹಿಂದು ಪರಿಷತ್ತಿನ ದ್ವಿತೀಯ ಧರ್ಮಸಂಸತ್ತು ಶ್ರೀರಾಮಮಂದಿರಕ್ಕೆ ಹಾಕಲಾಗಿರುವ ಬೀಗವನ್ನು ಶಿವರಾತ್ರಿಯೊಳಗೆ ತೆಗೆಯದೇ ಹೋದರೆ ಉಗ್ರ ಹೋರಾಟ ನಡೆಸುವುದಾಗಿ ಕೇಂದ್ರ ಸರ್ಕಾರಕ್ಕೆ ಎಚ್ಚರಿಕೆ ನೀಡಿತು. ಪರಿಣಾಮವಾಗಿ ೧೯೮೬ರ ಫೆಬ್ರವರಿ ೧ ರಂದು ಕಲಂಕಿತ ಬೀಗ ತೆಗೆಯಲಾಯಿತು. ಶ್ರೀರಾಮ ಜನ್ಮಸ್ಥಾನ ಸಂಘರ್ಷದಲ್ಲಿ ಹಿಂದುಗಳಿಗೆ ಮೊದಲ ಜಯ ಸಿಕ್ಕಿತು.

### ವಿಶ್ವ ಸಂಘ ಶಿಬಿರ

೧೯೯೦ರ ಡಿಸೆಂಬರ್‌ನಲ್ಲಿ ವಿಶ್ವದ ವಿವಿಧ ದೇಶಗಳಲ್ಲಿನ ಸ್ವಯಂ ಸೇವಕರ ಶಿಬಿರ ಬೆಂಗಳೂರಿನಲ್ಲಿ ನಡೆಯಿತು. ೨೧ ದೇಶಗಳಿಂದ ಬಂದಿದ್ದ ೧೯೮ ಮಂದಿ ಸ್ವಯಂ ಸೇವಕರು ಶಿಬಿರದಲ್ಲಿ ಭಾಗವಹಿಸಿದ್ದರು.

೨೦೦೧ ಜನವರಿ ೨೫,೨೬ ಮತ್ತು ೨೭ ರಂದು ಬೆಂಗಳೂರಿನಲ್ಲಿ ನಡೆದ 'ಸಮರಸತಾ ಸಂಗಮ' ಕರ್ನಾಟಕದ ಸಂಘ ಇತಿಹಾಸದಲ್ಲಿ ಮತ್ತೊಂದು ಐತಿಹಾಸಿಕ ದಾಖಲೆ. ೪೫ ಸಹಸ್ರಕ್ಕೂ ಹೆಚ್ಚು ಸ್ವಯಂಸೇವಕರು ಆ ಶಿಬಿರದಲ್ಲಿ ಪಾಲ್ಗೊಂಡಿದ್ದರು. ಕರ್ನಾಟಕದ ಸಂಸತ್ಸದಸ್ಯ ಹಾಗೂ ಮಾಜಿ ಕೇಂದ್ರ ಸಚಿವ ಜಾಫರ್ ಷರೀಫ್, ರಾಜ್ಯ ಗೃಹಸಚಿವ ಮಲ್ಲಿಕಾರ್ಜುನ ಖರ್ಗೆ, ವಿಧಾನಪರಿಷತ್ ಉಪಾಧ್ಯಕ್ಷ ಡೇವಿಡ್ ಸಿಮೆಯೋನ್, ನಗರ ಪೋಲೀಸ್ ಆಯುಕ್ತ ಎಚ್. ಟಿ. ಸಾಂಗ್ಲಿಯಾನಾ ಮೊದಲಾದ ಪ್ರಮುಖರು ಶಿಬಿರ ವೀಕ್ಷಿಸಿ ಸಂಘಕಾರ್ಯದ ಶಿಸ್ತು, ಅದ್ಭುತ ಬೆಳವಣಿಗೆಯನ್ನು ಕೊಂಡಾಡಿದರು.

### ಜನಸೇವಾ ವಿದ್ಯಾಕೇಂದ್ರ

ದೇಶದಲ್ಲಿ ಜಾರಿಯಲ್ಲಿರುವ ಮೆಕಾಲೆ ಶಿಕ್ಷಣ ಪದ್ಧತಿಗೆ ಪರ್ಯಾಯವಾದ ಹಾಗೂ ದೇಶೀಯವಾದ ಮೌಲಿಕ ಶಿಕ್ಷಣ ನೀಡುವ ಉದ್ದೇಶದಿಂದ ಬೆಂಗಳೂರಿಗೆ ಸಮೀಪವಿರುವ ಚೆನ್ನೇನಹಳ್ಳಿಯಲ್ಲಿ ೧೯೭೨ರಲ್ಲಿ ಜನಸೇವಾ ವಿದ್ಯಾಕೇಂದ್ರ ಆರಂಭವಾಯಿತು.

ಸಮಕಾಲೀನ ಶಿಕ್ಷಣ ಸ್ವರೂಪವನ್ನು ಬಾಹ್ಯವಾಗಿ ಅಳವಡಿಸಿಕೊಂಡರೂ ಸಂಸ್ಕೃತ, ಯೋಗ ಶಿಕ್ಷಣ, ಕ್ರೀಡೆ, ಸಂಗೀತ ಮುಂತಾದ ಪಠ್ಯೇತರ ಪೂರಕ ಶಿಕ್ಷಣದ ಮೂಲಕ ವಿದ್ಯಾರ್ಥಿಗಳಲ್ಲಿ ಭಾರತೀಯತೆಯ ಬಗ್ಗೆ ಸ್ವಾಭಿಮಾನ, ಸಮಾಜಸೇವಾ ದೃಷ್ಟಿ, ಇತ್ಯಾದಿ ಗುಣಗಳ ನಿರ್ಮಾಣ ಮಾಡುವಲ್ಲಿ ಕೇಂದ್ರ ಕಾರ್ಯನಿರತವಾಗಿದೆ. ಇದಲ್ಲದೆ ವೇದ ವಿಜ್ಞಾನ, ಗುರುಕುಲ ಮೂಲಕ ಪ್ರಾಚೀನ ಶಿಕ್ಷಣ ಪದ್ಧತಿ ನೀಡುವ ವ್ಯವಸ್ಥೆಯೂ ಆರಂಭವಾಗಿದೆ.

### ಹಿಂದು ಸೇವಾ ಪ್ರತಿಷ್ಠಾನ

'ಲೋಕಹಿತಂ ಮಮ ಕರಣೀಯಂ' ಎನ್ನುವ ಧ್ಯೇಯವಾಕ್ಯವನ್ನು ಹೊಂದಿರುವ ಕರ್ನಾಟಕದ ಹೆಮ್ಮೆಯ ಸೇವಾ ಪ್ರಕಲ್ಪ ಹಿಂದು ಸೇವಾ ಪ್ರತಿಷ್ಠಾನ ೧೯೮೦ರಲ್ಲಿ ಜನ್ಮ ತಾಳಿತು. ಸೇವೆಯ ಮೂಲಕ ಸಮಾಜ ಪರಿವರ್ತನೆ ಮಾಡುವ ಮಹಾಕಾರ್ಯದಲ್ಲಿ ತೊಡಗಿರುವ ಪ್ರತಿಷ್ಠಾನದ ಮೊದಲ ಆದ್ಯತೆ ಅಸ್ಪೃಶ್ಯತೆ ನಿವಾರಣೆಗೆ, ಸೇವಾಕಾರ್ಯದಲ್ಲಿ ಕ್ರೈಸ್ತ ಮಿಷನರಿಗಳು ಮಾತ್ರ ತೊಡಗಬಲ್ಲರು ಎನ್ನುವ ವಾದವನ್ನು ಸುಳ್ಳಾಗಿಸಲು ಹಿಂದು ಸೇವಾ ವೃತ್ತಿಗಳನ್ನು ತರಬೇತುಗೊಳಿಸಲು ಪ್ರತಿಷ್ಠಾನ ಕೆಲಸ ಮಾಡುತ್ತಿದೆ.

ಸಂಘದ ಹಿರಿಯ ಪ್ರಚಾರಕರಾಗಿದ್ದ ದಿವಂಗತ ಅಜಿತ್‌ಕುಮಾರ್‌ರ ಕನಸಿನ ಕೂಸಾದ ಪ್ರತಿಷ್ಠಾನ ಕಳೆದ ೨೦ ವರ್ಷಗಳಲ್ಲಿ ೨೯೧೩ ಯುವಕ ಯುವತಿಯರಿಗೆ ಸೇವಾ ತರಬೇತಿ ನೀಡಿದೆ. ಪ್ರಸ್ತುತ ೧೭೦ ಸ್ಥಾನಗಳಲ್ಲಿ ಪ್ರತಿಷ್ಠಾನದ ಪುರುಷ ಹಾಗೂ ಮಹಿಳಾ ಸೇವಾವ್ರತಿಗಳು ಕ್ರಿಯಾಶೀಲರಾಗಿ ಸಾಮಾಜಿಕ ಪರಿವರ್ತನಾ ಕಾರ್ಯದಲ್ಲಿ ತೊಡಗಿದ್ದಾರೆ.

### ಸಂಸ್ಕೃತ ಸಂಭಾಷಣೆ

ಹಿಂದು ಸೇವಾ ಪ್ರತಿಷ್ಠಾನದ ಸಂಸ್ಕೃತ ವಿಭಾಗವಾದ 'ಅಕ್ಷರಂ' ಚ.ಮೂ. ಕೃಷ್ಣಶಾಸ್ತ್ರಿಯವರ ನೇತೃತ್ವದಲ್ಲಿ ಸಂಸ್ಕೃತವನ್ನು ಸಂಭಾಷಣಾ ಮಾಧ್ಯಮವಾಗಿ ಜನಪ್ರಿಯಗೊಳಿಸುತ್ತಿದೆ. ಸಂಸ್ಕೃತ ಪ್ರಚಾರವನ್ನು ಈಗ 'ಸಂಸ್ಕೃತಿ ಭಾರತಿ' ಎನ್ನುವ ಹೆಸರಿನಲ್ಲಿ ಅಖಿಲ ಭಾರತ ಸ್ವರೂಪದಲ್ಲಿ ಒಗ್ಗೂಡಿಸಲಾಗಿದೆ.

### ರಾಷ್ಟ್ರೋತ್ಥಾನ ಪರಿಷತ್

ಜನಜಾಗೃತಿ, ಜನಶಿಕ್ಷಣ, ಜನಸೇವೆ ಈ ಮೂರು ಉದ್ದೇಶಗಳನ್ನು ಹೊಂದಿರುವ ರಾಷ್ಟ್ರೋತ್ಥಾನ ಪರಿಷತ್ ಆರಂಭವಾದದ್ದು ೧೯೬೫ರಲ್ಲಿ. ಪರಿಷತ್ ಹೊರತರುತ್ತಿರುವ 'ಉತ್ಥಾನ' ವೈಚಾರಿಕ ಮಾಸಪತ್ರಿಕೆ ರಾಷ್ಟ್ರೀಯ ವಿಚಾರಧಾರೆಯ ಜನಪ್ರಿಯ ಪತ್ರಿಕೆಯಾಗಿದೆ.

ಪರಿಷತ್‌ನ ಗ್ರಂಥ ಪ್ರಕಟಣೆಯಲ್ಲಿ ಶಿವಾಜಿಯ ಜೀವನ ಚರಿತ್ರೆ 'ಯುಗಾವತಾರ', ಸಾವರ್ಕರರ ಕುರಿತ 'ಆತ್ಮಾಹುತಿ', ಚಂದ್ರಶೇಖರ ಆಜಾದ್ ಜೀವನ ಕುರಿತ 'ಅಜೇಯ', ಸುಭಾಷ್‌ಚಂದ್ರರ ಬದುಕಿನ ಪ್ರತಿಬಿಂಬ 'ಕೋಲ್ಮಿಂಚು' ಕರ್ನಾಟಕದ ಜನಮಾನಸದ ಮೇಲೆ ಪ್ರಭಾವ ಬೀರಿವೆ. ಕಿಶೋರ ಸಾಹಿತ್ಯದಲ್ಲಿ ವಿನೂತನ ದಾಖಲೆಯಾದ 'ಭಾರತ - ಭಾರತಿ' ಪುಸ್ತಕ ಮಾಲೆ ಭಾರತದ ಅನೇಕ ಭಾಷೆಗಳಲ್ಲಿ ಪ್ರಕಟವಾಗಿ ಜನಪ್ರಿಯವಾಗಿದೆ.

ಜನಜಾಗೃತಿ ಮೂಡಿಸುವಲ್ಲಿ ಪರಿಷತ್ತಿನ ಮಂಥನ (ಚಿಂತಕ - ಲೇಖಕರ ವೇದಿಕೆ), ರಾಷ್ಟ್ರೋತ್ಥಾನ ಸಂಶೋಧನಾ ವೇದಿಕೆ, ಉಪನ್ಯಾಸ ಮಾಲೆ, ಹಿಂದುಳಿದ, ಕೊಳಚೆ ಪ್ರದೇಶಗಳಲ್ಲಿ ನಡೆಯುತ್ತಿರುವ ಅನೌಪಚಾರಿಕ ಶಿಕ್ಷಣ, ಗ್ರಾಮೋತ್ಥಾನ ಪ್ರಕಲ್ಪ ಸಾಮಾಜಿಕ ಪರಿವರ್ತನೆಯಲ್ಲಿ ಮೌನಕ್ರಾಂತಿಯಾಗಿದೆ. ಬೆಂಗಳೂರು ನಗರವೊಂದರಲ್ಲೇ ಅಪೇಕ್ಷಿತ ಬಂಧುಗಳ ವಸತಿಗಳಲ್ಲಿ ಪರಿಷತ್ತಿನ ೧೦೦ಕ್ಕೂ ಹೆಚ್ಚು ಅನೌಪಚಾರಿಕ ಶಿಕ್ಷಣ ಕೇಂದ್ರಗಳು ಕಾರ್ಯನಿರತವಾಗಿದೆ.

ಶಿಕ್ಷಣ ರಂಗದಲ್ಲಿ ಹಗರಿಬೊಮ್ಮನಹಳ್ಳಿ, ಹೊಳೆಹೊನ್ನೂರು, ದಾವಣಗೆರೆಯಲ್ಲಿ ಪರಿಷತ್ತಿನ ಪ್ರೌಢಶಾಲೆಗಳು ಕಾರ್ಯ ನಿರತವಾಗಿವೆ. ಇವಲ್ಲದೆ ಪರಿಷತ್ತು ರಾಜ್ಯಾದ್ಯಂತ ಐವತ್ತಕ್ಕೂ ಹೆಚ್ಚು ಶಿಶುಮಂದಿರಗಳನ್ನು ನಡೆಸುತ್ತಿದೆ. ಬೆಂಗಳೂರಿನ ಜಯನಗರದಲ್ಲಿ ಶರೀರ ಶಿಕ್ಷಣ ಕೇಂದ್ರ ನಡೆಸುತ್ತಿದೆ.

ಜನಸೇವಾ ಕ್ಷೇತ್ರದಲ್ಲಿ ಸೇವಾಭಾರತಿ ಉಚಿತ ಚಿಕಿತ್ಸಾ ಕೇಂದ್ರಗಳು, ರಕ್ತನಿಧಿ ಸಂಚಾರ ಚಿಕಿತ್ಸಾ ಕೇಂದ್ರಗಳು ಪರಿಷತ್ತಿನ ಪ್ರಕಲ್ಪಗಳಾಗಿವೆ. ಇವಲ್ಲದೆ ರಾಷ್ಟ್ರೋತ್ಥಾನ ಬಳಗಗಳು ಹಾಗೂ ಮಾತೃಮಂಡಳಿಗಳು ಪರಿಷತ್ತಿನ ತ್ರಿವಿಧ ಧ್ಯೇಯಗಳನ್ನು ಅನುಷ್ಠಾನ ಗೊಳಿಸುವಲ್ಲಿ ಕಾರ್ಯನಿರತವಾಗಿವೆ.

**ಭಜರಂಗ ದಳ**

ಭಜರಂಗ ದಳ ವಿಶ್ವಹಿಂದು ಪರಿಷತ್ತಿನ ತರುಣ ಶಕ್ತಿಯ ಯುವವಿಭಾಗ. ವಿಶ್ವ ಹಿಂದು ಪರಿಷತ್ತಿನ ಧ್ಯೇಯೋದ್ದೇಶ, ಆಂದೋಳನ ಹಾಗೂ ಇನ್ನಿತರ ಚಟುವಟಿಕೆಗಳನ್ನು ಪ್ರತ್ಯಕ್ಷ ಕಾರ್ಯಾಚರಣೆಗೆ ಇಳಿಸುವ ಪ್ರಮುಖ ಹೊಣೆಗಾರಿಕೆ ಭಜರಂಗ ದಳದ ಹೆಗಲ ಮೇಲಿದೆ. ರಾಜ್ಯದಲ್ಲಿ ಎರಡು ವರ್ಷಗಳ ಹಿಂದೆ ಆರಂಭಗೊಂಡ ಈ ಸಂಘಟನೆ ರಾಷ್ಟ್ರಮಟ್ಟದಲ್ಲಿ ಪ್ರಾರಂಭವಾಗಿದ್ದು ೧೯೮೦ರ ಶ್ರೀರಾಮ ಶಿಲಾನ್ಯಾಸ ಸಂದರ್ಭದಲ್ಲಿ. ಇದೀಗ ಭಜರಂಗ ದಳ ತನ್ನ ಕಾರ್ಯಚಟುವಟಿಕೆಗಳ ಮೂಲಕ ದೇಶವ್ಯಾಪಿ ಜನಪ್ರಿಯತೆ ಪಡೆದಿದೆ. ಕರ್ನಾಟಕದಲ್ಲಿ ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನ್‌ಗಿರಿ ಎಂದು ಕರೆಯಲಾಗುತ್ತಿರುವ ಪ್ರದೇಶದಲ್ಲಿ ದತ್ತ ಜಯಂತಿ ಸಂದರ್ಭದಲ್ಲಿ ಯುವಜಾಗೃತಿ ಕಾರ್ಯಕ್ರಮಗಳನ್ನು ಇಲ್ಲಿ ಭಜರಂಗ ದಳ ಹಮ್ಮಿಕೊಂಡಿದೆ. ಪ್ರಮೋದ್ ಮುತಾಲಿಕ್ ಇವರು ಭಜರಂಗ ದಳದ ಕರ್ನಾಟಕ ಪ್ರಾಂತ ಸಂಚಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

**ಹಿಂದು ಜಾಗರಣಾ ವೇದಿಕೆ**

ಹಿಂದು ಜನಜಾಗೃತಿ, ಜನಸಂಘಟನೆ, ಮಠಮಂದಿರಗಳಿಗೆ ಮಾನ್ಯತೆ, ಅವುಗಳ ನಡುವೆ ಸೌಹಾರ್ದ ಸಂಬಂಧ ಸ್ಥಾಪನೆ, ದೇಶದ ಮಾನಬಿಂದುಗಳು ಹಾಗೂ ಶ್ರದ್ಧಾಕೇಂದ್ರಗಳ ರಕ್ಷಣೆ- ಇವುಗಳನ್ನು ಗುರಿಯಾಗಿ ಹೊಂದಿರುವ ಹಿಂದು ಜಾಗರಣ ವೇದಿಕೆ ಕರ್ನಾಟಕದಲ್ಲಿ ಪ್ರಾರಂಭಗೊಂಡ ಸಂಘ ಪರಿವಾರದ ಒಂದು ಹಿಂದು ಆಂದೋಳನ. ಪ್ರತಿ ವರ್ಷ ಆ. ೧೪ ರ ಮಧ್ಯರಾತ್ರಿ ೧೨ ಘಂಟೆಗೆ ರಾಜ್ಯಾದ್ಯಂತ ಅಖಂಡ ಭಾರತ ಸಂಕಲ್ಪ ದಿನವನ್ನು ಅದ್ದೂರಿಯಾಗಿ ಆಚರಿಸುತ್ತಾ ಬಂದಿರುವುದು ಹಿಂದು ಜಾಗರಣ ವೇದಿಕೆಯದ್ದೇ ವೈಶಿಷ್ಟ್ಯವಾಗಿದೆ. ಮತಾಂತರ ನಿಷೇಧ ಕಾಯಿದೆ ಜಾರಿಗೆ ಆಗ್ರಹ, ಗೋಹತ್ಯಾ ನಿಷೇಧ ಶಾಸನ ಜಾರಿಗೆ ಒತ್ತಾಯ ಮುಂತಾದ ಧಾರ್ಮಿಕ ಚಳುವಳಿಗಳನ್ನು ವೇದಿಕೆ ರಾಜ್ಯಾದ್ಯಂತ ಹಮ್ಮಿಕೊಂಡಿದೆ. ಜಗದೀಶ್ ಕಾರಂತ್ ಈಗ ಹಿಂದು ಜಾಗರಣ ವೇದಿಕೆಯ ಕರ್ನಾಟಕ ಪ್ರಾಂತ ಸಂಚಾಲಕರು.

**ಅ.ಭಾ.ವಿ.ಪ. ಸಾಧನೆ**

ಸಾಮಾಜಿಕ ಸಾಮರಸ್ಯ - ಸಮಾನತೆಗಳಿಗಾಗಿ ಕಳಕಳಿಯಿಂದ ಶ್ರಮಿಸುತ್ತಿರುವ ಸಂಘ ಪರಿವಾರದ ಇನ್ನೊಂದು ಸಂಘಟನೆಯೆಂದರೆ ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್. ಪ್ರತಿವರ್ಷ ಅದು ಡಿಸೆಂಬರ್ ೬ ರಂದು ಡಾ। ಅಂಬೇಡ್ಕರ್ ಪುಣ್ಯತಿಥಿಯನ್ನು ತನ್ನೆಲ್ಲ ಶಾಖೆಗಳಲ್ಲೂ ನಿಯಮಿತವಾಗಿ ಆಚರಿಸಿಕೊಂಡು ಬರುತ್ತಿದೆ. ಹರಿಜನ ಗಿರಿಜನ ವಿದ್ಯಾರ್ಥಿನಿಲಯಗಳಲ್ಲಿ ಕಾರ್ಯಕ್ರಮಗಳ ಏರ್ಪಾಡು, ಆ ವಿದ್ಯಾರ್ಥಿನಿಲಯಗಳಲ್ಲಿನ ವಿದ್ಯಾರ್ಥಿಗಳಿಗೆ ತಮ್ಮ ಮನೆಗಳಲ್ಲಿ ಚಹಾಪಾನ ಹಾಗೂ ಊಟಕ್ಕಾಗಿ

ಆಹ್ವಾನ ಇತ್ಯಾದಿ ಹಲವಾರು ಕಾರ್ಯಕ್ರಮಗಳ ಮೂಲಕ ಸ್ವಾಭಿಮಾನ - ಸಮಾನತೆಗಳನ್ನು ನಿರ್ಮಾಣ ಮಾಡುವ ಯತ್ನ ಸಾಗಿದೆ. ಆದರಿಂದ 'ಮೇಲ್ಜಾತಿ'ಗಳೆನಿಸಿಕೊಳ್ಳುವ ಕೆಲವು ವರ್ಗಗಳಲ್ಲಿ ಮನೆಮಾಡಿಕೊಂಡಿರುವ ಮೇಲರಿಮೆಯನ್ನು (Superiority Complex) ತೆಗೆದುಹಾಕಲು ಸಹ ಸಾಧ್ಯವಾಗುತ್ತಿದೆ. ಕರ್ನಾಟಕದಲ್ಲಿ ಅ.ಭಾ.ವಿ.ಪ. ಅಗ್ರಪಂಕ್ತಿಯ ವಿದ್ಯಾರ್ಥಿ ಸಂಘಟನೆಯಾಗಿದೆ.

ರಾಷ್ಟ್ರೀಯ ಭಾವೈಕ್ಯ ಮತ್ತು ಸಾಮರಸ್ಯಕ್ಕಾಗಿ, ದೇಶದ ವಿವಿಧ ರಾಜ್ಯಗಳ ಜನರ ನಡುವಣ ಅಂತರ ನೀಗಿಸಲು ಅ.ಭಾ. ವಿದ್ಯಾರ್ಥಿ ಪರಿಷತ್ ಹಮ್ಮಿಕೊಂಡ ಇನ್ನೊಂದು ಕಾರ್ಯಕ್ರಮವೇ 'ಸೀಲ್' (Student's Experience in Inter-state Living - SEIL) ವಿಶೇಷವಾಗಿ ಈಶಾನ್ಯ ಪ್ರದೇಶದ ಗುಡ್ಡಗಾಡು ರಾಜ್ಯಗಳಾದ ನಾಗಾಲ್ಯಾಂಡ್, ಮೇಘಾಲಯ, ಮಣಿಪುರ, ಅಸ್ಸಾಂ ಮೊದಲಾದ ರಾಜ್ಯಗಳ ಜನರಲ್ಲಿ ನಾವು ಪ್ರತ್ಯೇಕ ದೇಶವೆಂಬ ಭಾವನೆ ಹೆಪ್ಪುಗಟ್ಟಿರುವುದು ಒಂದು ಅಪಾಯಕಾರಿ ಬೆಳವಣಿಗೆ. ನಾವೆಲ್ಲರೂ ಭಾರತಕ್ಕೆ ಸೇರಿದವರು, ನಾವು ಭಾರತೀಯರು ಎಂಬ ಏಕತೆಯ ಭಾವನೆ ಅವರಲ್ಲಿ ಮುಂದುವರೆಯಲು ವಿದ್ಯಾರ್ಥಿ ಪರಿಷತ್ ಆ ರಾಜ್ಯಗಳ ವಿದ್ಯಾರ್ಥಿ- ವಿದ್ಯಾರ್ಥಿನಿಯರನ್ನು ದೇಶದ ಇತರ ರಾಜ್ಯಗಳಿಗೆ ಕರೆತಂದು ಸಂಘ ಪರಿವಾರದ ಬಂಧುಗಳ ಮನೆಯಲ್ಲಿ ಉಳಿಸಿ ಅವರಲ್ಲಿ ವಿಶಾಲ ಭಾವನೆ, ಆತ್ಮೀಯತೆ ರೂಪಿಸುವ ಯಶಸ್ವೀ ಪ್ರಯತ್ನ ಕೈಗೊಂಡಿದೆ. 'ಸೀಲ್' ಕಾರ್ಯಕ್ರಮದ ಪರಿಣಾಮವಾಗಿ ಈಶಾನ್ಯ ಪ್ರದೇಶದ ರಾಜ್ಯಗಳಲ್ಲಿದ್ದ ಪ್ರತ್ಯೇಕತಾ ಭಾವನೆ ಕ್ರಮೇಣ ಕರಗತೊಡಗಿದೆ. ೧೯೬೬ರಲ್ಲಿ ಪ್ರಾರಂಭವಾದ 'ಸೀಲ್' ಪ್ರಯೋಗ ನಿರಂತರವಾಗಿ ನಡೆಯುತ್ತಿದ್ದು 'ಒಂದು ರಾಷ್ಟ್ರ ಒಂದೇ ಜನ' (one nation, one people) ಎಂಬ ಏಕರಸತೆ ಮೂಡಿಸುವಲ್ಲಿ ಯಶಸ್ವಿಯಾಗಿದೆ.

## ಸಾಮರಸ್ಯ ಸಾಹಿತ್ಯ ಸಮ್ಮೇಳನ

ಜಗತ್ತಿನಲ್ಲಿ ಸಮಾನತೆ - ಸಮರಸತೆ ಒಂದು ನಿರಂತರ ಪ್ರಶ್ನೆಯಾಗಿದೆ. ಜಪಾನ್, ದಕ್ಷಿಣ ಆಫ್ರಿಕಾ, ಯುರೋಪ್, ಅಮೆರಿಕಾಗಳಲ್ಲಿ ಅಸಮಾನತೆಯ ನೋವಿನ ಅಧ್ಯಾಯಗಳು ಅಲ್ಲಿಯ ಇತಿಹಾಸದ ಪುಟಗಳಲ್ಲೂ, ವರ್ತಮಾನದಲ್ಲೂ ಕಾಣಸಿಗುತ್ತವೆ. ಜಾತಿ ದ್ವೇಷ, ಅಧಿಕಾರ, ಶೋಷಣೆ - ದರ್ಪಗಳು ರಾಜಕೀಯದ ಲಾಭಕ್ಕಾಗಿ, ರಾಜಕೀಯ ರಂಗದಲ್ಲೇ ಕಾಣಸಿಗುವುದು ಸಹಜ. ಕಳೆದ ಐವತ್ತು ವರ್ಷಗಳಲ್ಲಿ ಈ ಅವನತಿಯ ದೌರ್ಭಾಗ್ಯವನ್ನು ನಾವು ಕಂಡಿದ್ದೇವೆ. ಆದರೆ ಈ ದೌರ್ಭಾಗ್ಯ ಸಾಹಿತ್ಯ ಕ್ಷೇತ್ರವನ್ನೂ ಆವರಿಸಿರುವುದು ಅನೇಕ ಪ್ರಜ್ಞಾವಂತ, ಬುದ್ಧಿ ಜೀವಿಗಳನ್ನು ಕಳವಳಕ್ಕೀಡು ಮಾಡಿದೆ. ಸಾಹಿತ್ಯ ಕ್ಷೇತ್ರದಲ್ಲೂ ಜಾತೀಯತೆ, ಮೇಲು-ಕೀಳು, ವಿಮರ್ಶೆಯ ನೆಪದಲ್ಲಿ ನವೋದಯ, ನವ್ಯ, ಬಂಡಾಯ, ದಲಿತ ಸಾಹಿತ್ಯಗಳೆಂಬ ಭೇದಭಾವ ತನ್ಮೂಲಕ ಸಾಹಿತ್ಯಿಕ ವೈಷಮ್ಯ ನಿರ್ಮಾಣ ಶುರುವಿಟ್ಟುಕೊಂಡು ಅದು ಸಾಹಿತ್ಯರಂಗದ ಪತನಕ್ಕೆ ಕಾರಣವಾಯಿತೆಂಬುದನ್ನು ಮನಗಂಡು ಈ ಕ್ಷೇತ್ರದಲ್ಲಿ ಕೃಷಿ ಮಾಡುತ್ತಾ ಬಂದ, ಸಾಹಿತ್ಯಿಕ ಚಟುವಟಿಕೆಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡ ಹಲವು ಹಿರಿಯರು ನೊಂದುಕೊಂಡಿದ್ದಿದೆ. ಸಾಹಿತ್ಯದ ಮೂಲ ಆಶಯವೇ ಮರೆಯಾಗುತ್ತಿದೆಯೇ ಎಂದು ಹಳಹಳಿಸಿದ್ದಿದೆ.

ಸಾಹಿತ್ಯದ ಮೂಲ ಆಶಯವೇ ಮನುಷ್ಯನ ಬದುಕನ್ನು ಸುಸಂಸ್ಕೃತಗೊಳಿಸಲು ಅಗತ್ಯವಿರುವ ಸಮತೆ - ಸಮರಸತೆಗೆ ಬೇಕಾದ ಮಾನಸಿಕತೆಯನ್ನು ಉಂಟುಮಾಡುವುದು. ಸಾಹಿತ್ಯ ಒಂದು ನಿರಂತರ ಕಾನೂನು. ಇಂಗ್ಲಿಷಿನ ಕವಿ ಷೆಲ್ಲಿ ಕವಿಗಳನ್ನು unacknowledged legislators of the world (ಜಗತ್ತಿನ ಅನಧಿಕೃತ ಶಾಸಕರು) ಎಂದು ಕರೆದಿದ್ದ! ಸಾಹಿತ್ಯಕ್ಕೂ - ಸಾಮಾನ್ಯ ಕಾನೂನಿಗೂ ದೊಡ್ಡ ವ್ಯತ್ಯಾಸವಿದೆ. ಕಾನೂನನ್ನು ಯಾರು ಬೇಕಾದರೂ ಬದಲಿಸಬಹುದು. ಬದಲಾಗುತ್ತಿರುವ ಸಮಾಜ ಅದಕ್ಕೆ ತಿದ್ದುಪಡಿಗಳನ್ನು ತರಬಹುದು. ಆದರೆ ಸಾಹಿತ್ಯ ಮಾನವೀಯ ಸಮಾಜದ ದಾಖಲೆ. ಅದು ಇತಿಹಾಸ. ಅದರ ವಾಕ್ಯಗಳನ್ನು, ಪಂಕ್ತಿಗಳನ್ನು ಯಾರೂ ಬದಲಿಸಲಾರರು. ವ್ಯಾಸ, ಕಾಳಿದಾಸ, ಷೇಕ್ಸ್‌ಪಿಯರ್, ಕುವೆಂಪು, ಕಾರಂತ, ಬೇಂದ್ರೆ, ಸಿದ್ದಲಿಂಗಯ್ಯ ಇವರುಗಳು ಬರೆದುದನ್ನು 'ಈ ಕಾಲಕ್ಕೆ ಸರಿಯಾಗಿಲ್ಲ' ಎಂದು ಯಾರೂ ಎಂದಿಗೂ ಬದಲಿಸಲುಬಾರದು. ಆದ್ದರಿಂದ ಸಾಹಿತ್ಯ ರಚಿಸುವವನ ಮೇಲೆ ಸಹಸ್ರಾರು ವರ್ಷಗಳ ಜವಾಬ್ದಾರಿ ಇದೆ. ಕಾನೂನು ನಿರ್ಮಾಪಕ''ಮುಂದಿನ ಇಪ್ಪತ್ತೈದೋ, ಐವತ್ತೋ - ನೂರೋ ವರ್ಷಗಳ ನಂತರ ಅಂದಿಗೆ ತಕ್ಕಂತೆ ತನ್ನ ಕಾನೂನನ್ನು ಬದಲಿಸಿಕೊಳ್ಳಲಿ'' ಎಂದು ಹೇಳಬಹುದು. ಆದ್ದರಿಂದ ಆತನಿಗೆ ವರ್ತಮಾನದ ಜವಾಬ್ದಾರಿ ಮಾತ್ರ ಇದೆ. ಕವಿ - ಸಾಹಿತಿಗಾದರೋ ಮುಂದಿನ ನೂರಾರು, ಸಾವಿರಾರು ವರ್ಷಗಳ ಪೀಳಿಗೆಗಳು ಹೇಗೆ ಯೋಚಿಸುತ್ತವೆ, ಹೇಗೆ ಇರಬೇಕು ಎಂದು ಚಿಂತಿಸುವ ಬಹುದೊಡ್ಡ ಹೊರೆ ಇದೆ. ಭವಿಷ್ಯದ ಐತಿಹಾಸಿಕ ಹೊಣೆ ಅದು. ಆದ್ದರಿಂದ ದ್ವೇಷವಲ್ಲ ಸೌಹಾರ್ದವನ್ನು, ವಿಷಮತೆಯಲ್ಲ ಸಮರಸತೆಯನ್ನು ಆತ ಎತ್ತಿ ಹಿಡಿಯಬೇಕು. ಏಕೆಂದರೆ ಸೌಹಾರ್ದತೆ, ಸಮರಸತೆಗಳು ಸಾರ್ವಕಾಲಿಕ ಜೀವನ ಮೌಲ್ಯಗಳು.

ಈ ಹಿನ್ನೆಲೆಯಲ್ಲಿ ಬೆಂಗಳೂರಿನ ರಾಷ್ಟ್ರೋತ್ಥಾನ ಪರಿಷತ್ ಮತ್ತು 'ಸಾಮರಸ್ಯ' ವೇದಿಕೆ ಜಂಟಿಯಾಗಿ ೧೯೯೯ರ ಡಿಸೆಂಬರ್ ೪,೫ ರಂದು ಬೆಂಗಳೂರಿನಲ್ಲಿ ಸಾಮರಸ್ಯ ಸಾಹಿತ್ಯ ಸಮ್ಮೇಳನವನ್ನು ಆಯೋಜಿಸಿದವು. ಜನ ಶಿಕ್ಷಣ, ಜನಸೇವೆ, ವ್ಯಕ್ತಿ ವಿಕಾಸ, ಸಮಾಜಾಭ್ಯುದಯಗಳ ಹತ್ತು ಹಲವು ಪ್ರಕಾರದ ಜನಹಿತ ಕಾರ್ಯಗಳನ್ನು ರಾಷ್ಟ್ರೋತ್ಥಾನ ಪರಿಷತ್ ಕಳೆದ ೩೭ ವರ್ಷಗಳಿಂದ ಹಮ್ಮಿ ಕೊಂಡಿದ್ದು, ಕರ್ನಾಟಕದಲ್ಲಿ ಹಾಗೂ ಹೊರಗೆ ಸುಪರಿಚಿತ ಸಾಮಾಜಿಕ ಸಂಸ್ಥೆಯಾಗಿದೆ. ೧೯೯೪ರಲ್ಲಿ ಸಂಘದ ಪ್ರೇರಣೆಯಿಂದ ಆರಂಭವಾಗಿರುವ 'ಸಾಮರಸ್ಯ' ವೇದಿಕೆ ನಮ್ಮ ಸಮಾಜದಲ್ಲಿ ಬೇರು ಬಿಟ್ಟಿರುವ ಜಾತಿ ಆಧಾರಿತ ಮೇಲು - ಕೀಳು, ದ್ವೇಷ, ಸ್ಪೃಶ್ಯ - ಅಸ್ಪೃಶ್ಯ ಭಾವನೆ, ಆಚರಣೆಗಳನ್ನು ದೂರಗೊಳಿಸಿ, ಒಂದು ನಿರ್ಮಲ, ಸ್ವಸ್ಥ, ಸುದೃಢ, ಸಮರಸ ಸಮಾಜ ನಿರ್ಮಾಣಕ್ಕಾಗಿ ಕಟಿಬದ್ಧವಾಗಿರುವ ಆಂದೋಳನವಾಗಿದೆ. ಸಮಾನತೆ ಹಾಗೂ ಸೋದರತ್ವ ಮನುಷ್ಯ ಜಾತಿಯ ಪ್ರತಿಯೊಬ್ಬನ ಬೀಜಮಂತ್ರ ವಾಗುವಂತೆ ಜನಜಾಗೃತಿಯುಂಟುಮಾಡುವುದು 'ಸಾಮರಸ್ಯ' ವೇದಿಕೆಯ ಗುರಿ. ಅದಕ್ಕಾಗಿ ಸಾಹಿತ್ಯ ವಿತರಣೆ, ವಿಚಾರಗೋಷ್ಠಿ, ಚರ್ಚೆ, ಸಭೆ - ಸಮಾರಂಭ ಮುಂತಾದ ಕಾರ್ಯಕ್ರಮಗಳನ್ನು ಅದು ಹಮ್ಮಿಕೊಂಡಿದೆ. ಕುಡಿಯುವ ನೀರು, ಹೋಟೆಲ್, ದೇವಸ್ಥಾನ ಮುಂತಾದ ಸಾರ್ವಜನಿಕ ಸ್ಥಳಗಳಿಗೆ ಮುಕ್ತ ಪ್ರವೇಶಾವಕಾಶ ಕಲ್ಪಿಸಿಕೊಡಲು 'ಸಾಮರಸ್ಯ' ಪ್ರಯತ್ನಿಸುತ್ತಾ ಬಂದಿದೆ.

ಈ ಸಾಮರಸ್ಯ ಸಾಹಿತ್ಯ ಸಮ್ಮೇಳನದಲ್ಲಿ ಕನ್ನಡ ಸಾಹಿತ್ಯ ಲೋಕದ ಹೆಸರಾಂತ ಸಾಹಿತಿಗಳು, ಲೇಖಕರು, ಕವಿಗಳು ಭಾಗವಹಿಸಿ ಸಾಹಿತ್ಯಲೋಕ ಮರೆತಿದ್ದ ಸಾಮಾಜಿಕ ಸಾಮರಸ್ಯದ ಪುಷ್ಪ ಎಳೆಯನ್ನು ಎಳೆಎಳೆಯಾಗಿ ಬಿಡಿಸಿಟ್ಟರು. ಪ್ರೊ। ಎಲ್. ಎಸ್. ಶೇಷಗಿರಿ ರಾವ್, ಡಾ। ಸಾ. ಶಿ. ಮರುಳಯ್ಯ, ಡಾ। ಎಂ. ಚಿದಾನಂದಮೂರ್ತಿ, ಡಾ। ಪಿ. ವಿ. ನಾರಾಯಣ, ಡಾ। ಸಿದ್ಧಲಿಂಗಯ್ಯ, ಪ್ರೊ। ಮಲ್ಲೇಪುರಂ ಜಿ. ವೆಂಕಟೇಶ, ಸಂಧ್ಯಾರೆಡ್ಡಿ, ಚಂದ್ರಶೇಖರ ಕಂಬಾರ ಮೊದಲಾದವರು ಈ ಸಮ್ಮೇಳನದಲ್ಲಿ ಪಾಲ್ಗೊಂಡು ಸಾಮರಸ್ಯ ಸಾಹಿತ್ಯದ ಔಚಿತ್ಯತೆ ಹಾಗೂ ಅಗತ್ಯತೆಗಳನ್ನು ಒತ್ತಿ ಹೇಳಿದರು. ಸಾಹಿತ್ಯ ಲೋಕದ ಹೃದಯದಲ್ಲಿ ಹರಡಿದ್ದ ಕತ್ತಲನ್ನು ಕಳೆದು ಸಮರಸತೆಯ ಪ್ರಕಾಶವನ್ನು ಹರಡಿದರು.

ಈ ಸಾಮರಸ್ಯ ಸಾಹಿತ್ಯ ಸಮ್ಮೇಳನದ ಸಮಾರೋಪ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಡಾ। ಸಿದ್ಧಲಿಂಗಯ್ಯನವರು, ''ಇದೊಂದು ಸಕಾಲಿಕ ಹಾಗೂ ಔಚಿತ್ಯಪೂರ್ಣ ಪ್ರಯತ್ನ'' ಎಂದು ಸ್ವಾಗತಿಸಿದರು. ಜಾತಿ - ಜಾತಿಗಳ ನಡುವೆ ಅಡ್ಡಗೋಡೆಗಳಾಗಿ ನಿಂತಿರುವ ವೈಷಮ್ಯ, ಕೀಳರಿಮೆ ತೊಲಗಬೇಕಾದರೆ ಸಾಮರಸ್ಯದ ಕೊಂಡಿ ಅಗತ್ಯವಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ''ನನ್ನನ್ನು ಎಲ್ಲರೂ ದಲಿತ ಕವಿ, ದಲಿತ ಕವಿ ಎಂದು ಕರೆಯುತ್ತಾರೆ. ಹೀಗೆ ಕರೆದಾಗ ನನಗೆ ನೋವಾಗುತ್ತದೆ. ನಾನು ದಲಿತ ಕವಿಯಲ್ಲ, ಕನ್ನಡದ ಕವಿ. ನನ್ನನ್ನು ಹಾಗೆಯೇ ಕರೆಯಿರಿ. ನನಗದೇ ಸಂತೋಷ'' ಎಂದು ಮನಬಿಚ್ಚಿ ಅವರು ಆ ತುಂಬಿದ ಸಭೆಯಲ್ಲಿ ಹಿರಿಯ ಸಾಹಿತಿಗಳ ಸಮ್ಮುಖದಲ್ಲಿ ನುಡಿದಾಗ, ''ಇಕ್ರಲಾ ಒದ್ರಿರಲಾ ಈ ನನ್ಮಕ್ಳ ಚರ್ಮ ಎಬ್ರಲಾ'' ಎಂದು ಮೇಲ್ಜಾತಿಯ ಬಗ್ಗೆ ಅಸಹನೆಯಿಂದ, ಕ್ರೋಧದಿಂದ ಕುದಿದು ಕವಿತೆ ಬರೆದ ಸಿದ್ಧಲಿಂಗಯ್ಯ ಇವರೇನಾ ಎಂದು ಕೆಲವರಿಗಾದರೂ ಅಚ್ಚರಿಯಾಗದೆ ಇರಲಿಲ್ಲ.

**ಹಿಂದು ಮಹಾಸಭಾ**

ಹಿಂದು ಮಹಾಸಭಾ ಕರ್ನಾಟಕದಲ್ಲಿ ಪ್ರಾರಂಭವಾಗಿದ್ದು ೪೦ರ ದಶಕದ ಉತ್ತರಾರ್ಧದಲ್ಲಿ. ಶಿವಮೊಗ್ಗ, ಬೆಂಗಳೂರು ಮತ್ತು ತುಮಕೂರುಗಳಲ್ಲಿ ಅಂದಿನ ದಿನಗಳಲ್ಲಿ ಹಿಂದು ಮಹಾಸಭಾ ಅತ್ಯಂತ ಪ್ರಬಲ ಪಕ್ಷವಾಗಿ ಹೊರಹೊಮ್ಮಿತ್ತು. ವಿಶೇಷವಾಗಿ ಶಿವಮೊಗ್ಗದಲ್ಲಿ ಭೂಪಾಳಂ ಆರ್. ಚಂದ್ರಶೇಖರಯ್ಯ ಅವರು ಹಿಂದು ಮಹಾಸಭಾ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಪ್ರತಿ ವರ್ಷ ಅಲ್ಲಿ ಹಿಂದು ಮಹಾಸಭಾ ವತಿಯಿಂದ ಗಣೇಶೋತ್ಸವ ಅದ್ದೂರಿಯಾಗಿ ನಡೆಯುತ್ತಿತ್ತು. ಈಗಲೂ ಶಿವಮೊಗ್ಗದ ಹಿಂದು ಮಹಾಸಭಾ ಗಣೇಶೋತ್ಸವ ಇಡೀ ರಾಜ್ಯದ ಗಮನ ಸೆಳೆದಿದ್ದು, ಗಣೇಶ ವಿಸರ್ಜನೆಯ ದಿನ ಪೋಲೀಸರು ಭಾರೀ ಬಂದೋಬಸ್ತ್ ಏರ್ಪಡಿಸುತ್ತಿರುವುದು ಉಲ್ಲೇಖನೀಯ. ಬೆಂಗಳೂರಿನಲ್ಲಿ ವಾಜಪೇಯಂ ವೆಂಕಟೇಶಯ್ಯ, ಸಂಪಿಗೆ ವೆಂಕಟಪತಯ್ಯ ಹಾಗೂ ತುಮಕೂರಿನಲ್ಲಿ ಗಂಗಾಧರಯ್ಯ ಇವರು ಹಿಂದು ಮಹಾಸಭಾ ಸಂಘಟನೆಯ ರೂವಾರಿಗಳಾಗಿದ್ದರು.



# ಅಖಿಲ ಭಾರತ ಕಾಂಗ್ರೆಸ್

**ಪ್ರೊ। ಹೆಚ್. ಆರ್. ದಾಸೇಗೌಡ**

ಎ. ಒ. ಹ್ಯೂಮ್‌ರವರು ಸ್ಥಾಪಿಸಿದ ಭಾರತೀಯ ರಾಷ್ಟ್ರೀಯ ಒಕ್ಕೂಟ (Indian National Union) ಸಂಸ್ಥೆಯು, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಎಂಬ ಹೆಸರನ್ನು ಕಲ್ಕತ್ತಾದ ಸುಪ್ರಸಿದ್ಧ ವಕೀಲರಾದ ಉಮೇಶ್‌ಚಂದ್ರ ಬ್ಯಾನರ್ಜಿಯವರ ಅಧ್ಯಕ್ಷತೆಯಲ್ಲಿ ಬೊಂಬಾಯಿ ನಗರದಲ್ಲಿ ನಡೆದ ಸಮ್ಮೇಳನದಲ್ಲಿ ಪಡೆಯಿತು. ಭಾರತದಾದ್ಯಂತ ಆಗಮಿಸಿದ್ದ ೭೨ ಪ್ರತಿನಿಧಿಗಳು ಈ ಸಮ್ಮೇಳನದಲ್ಲಿ ಭಾಗವಹಿಸಿದ್ದರು.

ಭಾರತದ ರಾಜಕೀಯ ಇತಿಹಾಸದಲ್ಲಿ ಅಭೂತಪೂರ್ವ ಘಟನೆ ಎಂದರೆ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಜನನ. ಇದು ರಾಷ್ಟ್ರ ರಾಜಕಾರಣದಲ್ಲಿ ಹೊಸದಾಗಿ ಶಿಕ್ಷಣ ಪಡೆದ ಮಧ್ಯಮವರ್ಗದ ಪ್ರವೇಶವನ್ನು ಸ್ಪಷ್ಟವಾಗಿ ಮೂಡಿಸಿತು. ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಬಳುವಳಿಯಾಗಿ ಜನಿಸಿದ ಮಧ್ಯಮವರ್ಗವು ಮುಖ್ಯವಾಗಿ ಮೂರು ವರ್ಗಗಳಿಂದ ರಚಿತವಾಗಿತ್ತು. ಕೃಷಿಕರು, ಕಾರ್ಮಿಕರು ಮತ್ತು ವೃತ್ತಿಪರ ವರ್ಗಗಳು- ಈ ಪ್ರತಿಯೊಂದು ವರ್ಗವೂ ತನ್ನದೇ ಆದ ಹಿತಾಸಕ್ತಿಗಳನ್ನು ಹೊಂದಿದ್ದರೂ, ರಾಷ್ಟ್ರೀಯತೆಯ ಪ್ರಜ್ಞೆಯನ್ನು ಬೆಳೆಸಿಕೊಂಡಿದ್ದವು. ದೇಶಭಕ್ತಿ ಎಂಬ ಒಂದೇ ಕಾರ್ಯತಂತ್ರದಿಂದ ಇವು ಒಗ್ಗೂಡಿದ್ದವು. ೧೮೮೫ರಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪ್ರತಿವರ್ಷ ಸಮಾವೇಶಗೊಳ್ಳುತ್ತಿತ್ತು. ಅದರ ಪ್ರಭಾವವು ಮಧ್ಯಮವರ್ಗಗಳ ಜನರಲ್ಲಿ ತ್ವರಿತವಾಗಿ ಹರಡುತ್ತಿತ್ತು. ಅದರ ಗಮನವನ್ನು ಸೆಳೆದ ಮೂರು ಮುಖ್ಯ ವಿಷಯಗಳೆಂದರೆ-

೧. ಪ್ರತಿನಿಧಿ ಸರಕಾರ ಮತ್ತು ಕೇಂದ್ರ ಹಾಗೂ ಪ್ರಾಂತ್ಯಗಳಲ್ಲಿ ಶಾಸನೀಯ ಪರಿಷತ್ತುಗಳ ಸಂಖ್ಯೆ ಮತ್ತು ಕಾರ್ಯಗಳನ್ನು ವಿಸ್ತರಿಸುವುದು.

೨. ಉನ್ನತ ಸೇವೆಗಳನ್ನು ಭಾರತೀಕರಣಗೊಳಿಸುವುದು.

೩. ಭಾರತದ ಬಡತನದ ವಿರುದ್ಧ ಹೋರಾಡುವುದು.

೧೯ನೇ ಶತಮಾನ ಅಂತ್ಯಗೊಳ್ಳುವ ಸಂದರ್ಭ, ನಿಖರವಾಗಿ ಹೇಳುವುದಾದರೆ ೧೮೯೮ರ ಡಿಸೆಂಬರ್ ೩೦ ರಂದು ಲಾರ್ಡ್ ಕರ್ಜನ್ ಭಾರತದ ವೈಸರಾಯ್ ಆಗಿ ಆಗಮಿಸಿದ. ಕರ್ಜನ್‌ನ ಮಹತ್ವಾಕಾಂಕ್ಷೆ ಎಂದರೆ ಶಿಕ್ಷಿತ ಮಧ್ಯಮವರ್ಗದ ರಾಜಕೀಯ ಪ್ರಭಾವವನ್ನು ನಾಶಪಡಿಸುವುದೇ ಆಗಿತ್ತು. ಅದರಲ್ಲೂ ಬಂಗಾಲದ ಬುದ್ಧಿಜೀವಿಗಳನ್ನು ಮಟ್ಟಹಾಕುವುದು ಬಹುಮುಖ್ಯವಾಗಿತ್ತು. ಆದುದರಿಂದ ಅವನು ತನ್ನ ಮೊದಲ ಗಮನವನ್ನು ಬಂಗಾಲದ ಕಡೆಗೆ ಹರಿಸಿದನು. ೧೯೦೫ ಅಕ್ಟೋಬರ್ ೧೬ ರಂದು ಹೊರಡಿಸಿದ ರಾಜಾಜ್ಞೆಯು ಬಂಗಾಲ ಪ್ರಾಂತ್ಯವನ್ನು ಅದರ ಗಾತ್ರ ಮತ್ತು ಜನಸಂಖ್ಯೆಯ ದೃಷ್ಟಿಯಿಂದ ಮೊಟಕುಗೊಳಿಸಿ ಪೂರ್ವ ಬಂಗಾಲ ಎಂಬ ಒಂದು ಹೊಸ ಪ್ರಾಂತ್ಯವನ್ನು ಸೃಷ್ಟಿಸಿತು. ಈ ಯೋಜನೆಯನ್ನು ಭಾರತದಲ್ಲಿ ಮಾತ್ರವಲ್ಲದೇ ಬ್ರಿಟಿಷ್ ಸಮಾಚಾರ ಪತ್ರಿಕೆಗಳಲ್ಲಿಯೂ ಖಂಡಿಸಲಾಯಿತು.

ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವು ಬಂಗಾಳದ ವಿಭಜನೆಯನ್ನು ಸರ್ವಾನುಮತದಿಂದ ಖಂಡಿಸಿತು. ವಿಭಜಿತ ಬಂಗಾಳಗಳೆರಡರಲ್ಲೂ ೨೦೦೦ ಸಾರ್ವಜನಿಕ ಸಭೆಗಳನ್ನು

ನಡೆಸಲಾಯಿತು. ೫೦೦ ರಿಂದ ೫೦,೦೦೦ ಜನರು ಇವುಗಳಲ್ಲಿ ಭಾಗವಹಿಸಿದ್ದರು. ಇಂತಹ ಸಭೆಗಳಲ್ಲಿ ಹಿಂದೂಗಳು ಮತ್ತು ಮುಸಲ್ಮಾನರು ಸಮಾನ ಉತ್ಸಾಹ ಮತ್ತು ಉತ್ಸುಕತೆಯಿಂದ ಒಟ್ಟಾಗಿ ಪ್ರತಿಭಟಿಸಿದರು. ಬಂಗಾಳವು ಧೈರ್ಯದಿಂದ ಎದುರಿಸಿದ ಅದರ ಸತ್ವಪರೀಕ್ಷೆಯು ಇಡೀ ಭಾರತವನ್ನು ಬಡಿದೆಬ್ಬಿಸಿತು. ಅಲ್ಲಿಯವರೆಗೂ ಅನುಸರಿಸಿದ ಸಂವಿಧಾನಾತ್ಮಕ ಪ್ರತಿಭಟನೆಯು ಯಾವ ಪ್ರಭಾವವನ್ನೂ ಬೀರಿರಲಿಲ್ಲ. ಸ್ವದೇಶಿ ಚಳವಳಿ ಮತ್ತು ವಿದೇಶಿ ವಸ್ತುಗಳ ಬಹಿಷ್ಕಾರವು ಸ್ವಾತಂತ್ರ್ಯ ಚಳವಳಿಯ ಪ್ರಮುಖ ಕಾರ್ಯಕ್ರಮಗಳಾದವು. ಇವುಗಳ ಜೊತೆಯಲ್ಲಿಯೇ ಸರಕಾರಿ ಆಜ್ಞೆಗಳನ್ನು ಬಹಿರಂಗವಾಗಿ ಉಲ್ಲಂಘಿಸುವ, ತೆರಿಗೆ ಪಾವತಿಯನ್ನು ನಿರಾಕರಿಸುವ ಮತ್ತು ಹರತಾಳಗಳನ್ನು ಆಚರಿಸುವ ಕಾರ್ಯಕ್ರಮಗಳು ಹುಟ್ಟಿಕೊಂಡವು. ಕಾಂಗ್ರೆಸ್ ಪಕ್ಷವು ವಿದೇಶಿ ವಸ್ತುಗಳನ್ನು ಅದರಲ್ಲೂ ಬಟ್ಟೆಯನ್ನು ಬಹಿಷ್ಕರಿಸುವ ಕಾರ್ಯಕ್ರಮಕ್ಕೆ ಸಮ್ಮತಿಸಿತು. ಸ್ವದೇಶಿ ಚಳವಳಿಯು ವಿಶೇಷವಾಗಿ ಬಟ್ಟೆ ಉತ್ಪಾದನೆಯು ಸ್ಥಳೀಯ ಕೈಗಾರಿಕೆಗಳಿಗೆ ಉತ್ತೇಜನ ನೀಡಿತು.

ಕರ್ಜನ್ ನಂತರ ಅಧಿಕಾರಕ್ಕೆ ಬಂದ ಲಾರ್ಡ್ ಮಿಂಟೊ ನ್ಯಾಯಸಮ್ಮತವಾದ ನೀತಿಯನ್ನು ಅನುಸರಿಸಿದನು. ಇದು ದಂಡನೆ ಹಾಗೂ ಸಂತೈಸುವ ಅಂಶಗಳೆರಡನ್ನು ಒಳಗೊಂಡಿತ್ತು. ಒಂದೆಡೆ ತಡವರಿಸದ ದಮನ, ಮತ್ತೊಂದೆಡೆ ರಾಜಕೀಯ ಸುಧಾರಣೆಗಳನ್ನು ತರುವ ಪ್ರಯತ್ನಗಳೆರಡರ ಸಮ್ಮಿಲನವಾಗಿತ್ತು. ಕಾಂಗ್ರೆಸ್ ಇತಿಹಾಸದ ದೃಷ್ಟಿಯಿಂದ ೧೯೦೫ರಲ್ಲಿ ಬನಾರಸ್‌ನಲ್ಲಿ ನಡೆದ ಸಮ್ಮೇಳನವು ತಿರುವು ನೀಡುವಂತಹುದಾಗಿತ್ತು. ಸ್ವತಃ ಮಧ್ಯಮ ಪಂಥಿಯಾಗಿದ್ದರೂ, ಅಧ್ಯಕ್ಷ ಗೋಪಾಲಕೃಷ್ಣ ಗೋಖಲೆ ಆಕ್ರಮಣಕಾರಿ ಚಳವಳಿಗೆ ಸಮ್ಮತಿಸಿದರು. ವಾರ್ಷಿಕ ಚುನಾವಣೆಗಳು ಪದೇಪದೇ ಕಾರ್ಯನಿರತ ಸಿಬ್ಬಂದಿಯ ಬದಲಾವಣೆಯಲ್ಲಿ ಪರ್ಯಾವಸಾನವಾದರೂ, ೧೯೦೫ರಿಂದ ಕಾಂಗ್ರೆಸ್ ಪಕ್ಷವು ಶಾಶ್ವತ ಸಂಘಟನೆಯಾಗಿ ಕಾರ್ಯನಿರ್ವಹಿಸಲಾರಂಭಿಸಿತು.

೧೯೦೬ರಲ್ಲಿ ಪೊಲೀಸರು ಬಾರಿಸೋಲ್ (ಕಲ್ಕತ್ತಾ)ದಲ್ಲಿ ಕಾಂಗ್ರೆಸ್ ಸಮ್ಮೇಳನವನ್ನು ಭಂಗಗೊಳಿಸಿದರು. ಪ್ರತಿನಿಧಿಗಳನ್ನು ಲಾಠಿ ಪ್ರಹಾರಕ್ಕೆ ಒಳಪಪಡಿಸಲಾಯಿತು. ಶ್ರೇಷ್ಠ ನಾಯಕರನ್ನು ಪೊಲೀಸರು ಮನಬಂದಂತೆ ಹಿಂಸಿಸಿದರು. ಶಾಂತಿಯುತವಾಗಿ ಸಭೆ ಸೇರಿದ್ದ ಜನರಿಗೆ ಇಂತಹ ಘೋರ ಕೃತ್ಯದಿಂದ ರಾಷ್ಟ್ರೀಯ ಚಳವಳಿಯಲ್ಲಿ ಕ್ರಾಂತಿಕಾರಿ ಬದಲಾವಣೆಗೆ ದಾರಿ ಮಾಡಿಕೊಟ್ಟಿತು. ಇನ್ನು ಮುಂದೆ ಬಲಪ್ರಯೋಗಕ್ಕೆ ಪ್ರತಿಯಾಗಿ ಬಲ ಪ್ರಯೋಗಿಸುವುದು, ಅಪರಾಧಗೈಯದ ಅಮಾಯಕ ದೇಶಪ್ರೇಮಿಗಳ ರಕ್ತಪಾತಕ್ಕೆ ಪ್ರಾಯಶ್ಚಿತವಾಗಿ ಶ್ವೇತವರ್ಣೀಯನ ರಕ್ತ ಹರಿಸುವುದು ಸಮರ್ಥನೀಯವಾಯಿತು. ಇದು ಉಗ್ರಗಾಮಿಗಳ ವಿಜಯವಾಗಿತ್ತು. ಕ್ರಾಂತಿಕಾರಿ ನಾಯಕರ ಸುಗ್ಗಿಯೇ ಪ್ರಾರಂಭವಾಯಿತು. ಅಶ್ವಿನಿಕುಮಾರ್ ದತ್, ಬ್ರಹ್ಮ ಬಂಧಬ್ ಉಪಾಧ್ಯಾಯ, ಅರವಿಂದ ಘೋಷ್, ಲಾಲಾಲಜಪತರಾಯ್, ಬಾಲಗಂಗಾಧರ ತಿಲಕರಂತಹ ನಾಯಕಮಣಿಗಳು ಇತರರನ್ನು ಸುಲಭವಾಗಿ ಮುನ್ನಡೆಸಿದರು. ಸ್ವದೇಶಿ ಚಳವಳಿಯನ್ನು ಬೆಂಬಲಿಸಿದರು. ಹಲವರು ಬಹಿಷ್ಕಾರ ಕಾರ್ಯಕ್ರಮವನ್ನು ಒಪ್ಪಲಿಲ್ಲ, ಮತ್ತೆ ಉಳಿದ ಅನೇಕರು ಭಯೋತ್ಪಾದಕ ಚಟುವಟಿಕೆಗಳಿಗೆ ಅಸಮ್ಮತಿ ವ್ಯಕ್ತಪಡಿಸಿದರು. ಅವರ ಮುಖ್ಯ ಭಯವೆಂದರೆ ಭಾರತೀಯರ ಆಶೋತ್ತರಗಳ ಬಗ್ಗೆ ಬ್ರಿಟಿಷ್ ಸಾರ್ವಜನಿಕರ ಸಹಾನುಭೂತಿ ಕಳೆದುಕೊಳ್ಳುವುದು ಹಾಗೂ ಆಳರಸರ ಹೃದಯ ಕಠಿಣವಾಗುವುದೆಂಬುದೇ ಆಗಿತ್ತು.

೧೯೦೭ರಲ್ಲಿ ಕಲ್ಕತ್ತಾ ಅಧಿವೇಶನದ ಅಧ್ಯಕ್ಷರಾಗಿದ್ದ ದಾದಾಭಾಯಿ ನೌರೋಜಿಯವರಿಗೆ ಕಾಂಗ್ರೆಸ್‌ನ ಕಾರ್ಯಕರ್ತರೆಲ್ಲಾ ಸಮಸ್ಯೆಗೆ ಸೂಕ್ತ ಪರಿಹಾರ ನೀಡಲು ವಿನಂತಿಸಿಕೊಂಡರು. ಅವರು ಎರಡೂ ಪಕ್ಷಗಳವರಿಗೆ ಸಮಾಧಾನಕರವಾಗುವ ಸ್ವರಾಜ್ಯ ಅಥವಾ ಸ್ವಯಂ ಆಡಳಿತ ರಾಷ್ಟ್ರೀಯ ಕಾಂಗ್ರೆಸ್‌ನ ಗುರಿಯಾಗಬೇಕೆಂಬ ಹೊಸ ಯೋಜನೆಯೊಂದನ್ನು ಸೂಚಿಸಿದರು. ಪೂರ್ವಬಂಗಾಳದ ಲೆಫ್ಟಿನೆಂಟ್ ಗೌರ್ನರ್‌ನಾಗಿದ್ದ ಫುಲ್ಲರ್ ಬಹುಸಂಖ್ಯಾತರಾಗಿದ್ದ ಮುಸ್ಲಿಂರನ್ನು ಬಹಿರಂಗವಾಗಿ ಬೆಂಬಲಿಸಿ, ಅಲ್ಪಸಂಖ್ಯಾತ ಹಿಂದೂಗಳಿಗೆ ಅನ್ಯಾಯವೆಸಗಿದನು. ತನ್ನ ವರಿಷ್ಠಾಧಿಕಾರಿಗಳ ಅಭಿಪ್ರಾಯಕ್ಕೆ ಮಾನ್ಯತೆ ನೀಡದೇ ತನ್ನ ಹುದ್ದೆಗೆ ರಾಜೀನಾಮೆ ಇತ್ತು ನಿರ್ಗಮಿಸಿದನು. ಹಿಂದೂಗಳು ಮತ್ತು ಮುಸಲ್ಮಾನರ ನಡುವೆ ಬಿತ್ತಿದ ಅಪನಂಬಿಕೆಯ ಬೀಜ ಮೊಳೆತು, ಮುಸ್ಲಿಮರು ಬೇರೊಂದು ರಾಜಕೀಯ ಸಂಘಟನೆಯನ್ನು ರಚಿಸಿಕೊಂಡರು. ತಾತ್ಕಾಲಿಕವಾಗಿ 'ಮುಸ್ಲಿಂ ಲೀಗ್' ಎಂದು ನಾಮಕರಣಗೊಂಡ ಈ ಸಂಸ್ಥೆಯು ಹಿಂದೂ ವಿರೋಧಿ ಹಾಗೂ ಸರ್ಕಾರದ ಪರವಾದ ಕರಪತ್ರಗಳನ್ನು ಪ್ರಕಟಿಸಿತು. ಕೊಮಿಲ್ಲ ಮತ್ತು ಜಮಾಲ್‌ಪುರಗಳಲ್ಲಿ ಮತೀಯ ಗಲಭೆಗಳು ಸಂಭವಿಸಿದವು. ಮುಂದೆ ಇಡೀ ಬ್ರಿಟಿಷ್ ಭಾರತದಲ್ಲಿ ಎಲ್ಲೆಡೆ ಇಂತಹ ಗಲಭೆಗಳು ಬಹುತೇಕ ದೈನಂದಿನ ಘಟನೆಗಳೇ ಆದವು.

೧೯೦೭ರಲ್ಲಿ ಸೂರತ್‌ನಲ್ಲಿ ನಡೆದ ಕಾಂಗ್ರೆಸ್ ಸಮ್ಮೇಳನದಲ್ಲಿ ಸೌಮ್ಯವಾದಿ ಹಾಗೂ ಉಗ್ರಗಾಮಿಗಳ ನಡುವಣ ಭಿನ್ನಾಭಿಪ್ರಾಯಗಳು ತೀವ್ರವಾಗಿ, ಎರಡೂ ಕಡೆಯ ನಾಯಕರ ವಿಭಿನ್ನ ನಂಬಿಕೆಗಳಿಂದ ಕಾಂಗ್ರೆಸ್ ಪಕ್ಷದ ಮುಂದಿನ ಹಾದಿಯ ಬಗ್ಗೆ ಪ್ರತ್ಯೇಕ ನಿಲುವುಗಳೇ ಸೃಷ್ಟಿಯಾದವು. ೧೯೦೮ರಲ್ಲಿ ಸರ್ಕಾರ ಮತ್ತು ಜನತೆಯ ನಡುವೆ ಪ್ರಬಲವಾದ ಪ್ರತಿಸ್ಪರ್ಧೆ, ಹಿಂಸೆಯ ವಿರುದ್ಧ

ಇಚ್ಛಾಶಕ್ತಿ ಮತ್ತು ತ್ಯಾಗಗಳ ಸ್ಪರ್ಧೆ ನಡೆಯಿತು. ನ್ಯಾಯಾಲಯಗಳಲ್ಲಿ ವಿಚಾರಣೆ, ಶಿಕ್ಷೆ ನೀಡಿಕೆ, ಪ್ರಮುಖ ನಾಯಕರ ಬಂಧನ ಹಾಗೂ ಗಡಿಪಾರು ಮುಂತಾದವು ದಿನನಿತ್ಯದ ಸಂಗತಿಗಳಾದವು.

೧೯೦೯ರ ಮಾರ್ಲೆ-ಮಿಂಟೊ ಸುಧಾರಣೆಗಳು ಸಾರ್ವಜನಿಕ ಸಮಸ್ಯೆಗಳನ್ನು ಇತ್ಯರ್ಥಪಡಿಸುವ ಸರ್ಕಾರದ ಪ್ರಕ್ರಿಯೆಯಲ್ಲಿ ಸುಶಿಕ್ಷಿತ ಭಾರತೀಯರಿಗೆ ಹೆಚ್ಚಿನ ಮಹತ್ವವು! ಗೌರ್ನರ್ ಜನರಲ್‌ರ ಪರಿಷತ್‌ನಲ್ಲಿ ಓರ್ವ ಭಾರತೀಯನಿಗೆ ಮೀಸಲು ಸ್ಥಾನ ನೀಡಲಾಯಿತು. ಸತ್ಯೇಂದ್ರ ಸಿನ್ಹಾ ಭಾರತೀಯ ಪರಿಷತ್‌ನ ಮೊದಲ ಸದಸ್ಯರಾಗಿ ನೇಮಕಗೊಂಡರು. ಪ್ರಾಂತ್ಯಗಳಲ್ಲಿ ಮುಸ್ಲಿಂ ಸಮುದಾಯಕ್ಕೆ ಪ್ರಾತಿನಿಧ್ಯ ನೀಡಲಾಯಿತು. ದೆಹಲಿ ಮತ್ತು ಲಂಡನ್‌ನಲ್ಲಿ ಆಳರಸರು ತಮ್ಮ ನೀತಿಗಳ ಮೂಲಕ ಹಿಂದೂ ಮತ್ತು ಮುಸಲ್ಮಾನರ ನಡುವೆ ಪ್ರತ್ಯೇಕತಾಭಾವನೆ ತೀವ್ರಗೊಳ್ಳುವಂತೆ ಮಾಡಿದರು. ಅವರ ಉದ್ದೇಶ ಸ್ಪಷ್ಟವಾಗಿದ್ದು, ಮತೀಯ ಗಲಭೆಗಳನ್ನು ಉಲ್ಬಣಗೊಳಿಸಲು ಕಾರಣವಾಯಿತು.

ಮೊದಲನೇ ಮಹಾಯುದ್ಧದ ಸಮಯದಲ್ಲಿ ಬ್ರಿಟನ್ ಮತ್ತು ಟರ್ಕಿ ದೇಶಗಳ ನಡುವಣ ಭಿನ್ನಾಭಿಪ್ರಾಯವು ಮುಸಲ್ಮಾನ ಸಮುದಾಯದ ಸಾಂಕೇತಿಕ ಐಕಮತ್ಯಕ್ಕೆ ಧಕ್ಕೆ ತರುವ ಅಪಾಯವನ್ನು ಖಚಿತಪಡಿಸಿದ್ದರಿಂದ, ಮುಸ್ಲಿಂ ಜನಾಂಗ ಬ್ರಿಟಿಷ್ ಆಳ್ವಿಕೆಯಲ್ಲಿ ಭರವಸೆ ಕಳೆದುಕೊಂಡಿತು. ಹೊಸ ತಲೆಮಾರಿನ ನಾಯಕರಾದ ಎಂ. ಎ. ಜಿನ್ನಾ ಮತ್ತು ಮೊಹಮದ್ ಆಲಿ ಮುಸ್ಲಿಂ ಲೀಗ್‌ನ ನಾಯಕರಾದರು. ಇವರು ಮಧ್ಯಮವರ್ಗದ ಬುದ್ಧಿಜೀವಿಗಳನ್ನು ಪ್ರತಿನಿಧಿಸುತ್ತಿದ್ದರು. ೧೯೧೩ರಲ್ಲಿ ಮುಸ್ಲಿಂ ಲೀಗ್‌ನ ಸಮ್ಮೇಳನದಲ್ಲಿ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಸ್ವಯಂ ಸರ್ಕಾರ ಹೊಂದುವ ಠರಾವುವನ್ನು ಅಂಗೀಕರಿಸಿತು. ೧೯೧೫ರಲ್ಲಿ ಮುಸ್ಲಿಂ ಲೀಗ್ ಮತ್ತು ಕಾಂಗ್ರೆಸ್ ಪಕ್ಷಗಳೆರಡೂ ಬೊಂಬಾಯಿ ನಗರದಲ್ಲಿ ತಮ್ಮ ವಾರ್ಷಿಕ ಸಮ್ಮೇಳನಗಳನ್ನು ಹಮ್ಮಿಕೊಂಡವು. ಎರಡೂ ಪಕ್ಷಗಳೊಡನೆ ಸಂಯೋಜನೆಯ ಸಂಕೋಲೆ ಉಂಟಾಯಿತು. ಬ್ರಿಟಿಷ್ ಸರ್ಕಾರವು ಮುಸ್ಲಿಂರ ಪತ್ರಿಕೆಗಳನ್ನು ನಿರ್ಬಂಧಗಳಿಗೆ ಒಳಪಡಿಸಿದುದಲ್ಲದೆ, ಅವರ ವಿರುದ್ಧ ದಮನಕಾರಿ ಕ್ರಮಗಳನ್ನು ಕೈಗೊಂಡಿತು. ಖಿಲಾಫತ್ ಬಗ್ಗೆ ಸಿಡಿದೆದ್ದ ಮುಸ್ಲಿಂರ ಆಕ್ರೋಶವನ್ನು ಶಮನಗೊಳಿಸಲು ಬ್ರಿಟಿಷ್ ಸರ್ಕಾರವು ಮುಸ್ಲಿಂರ ಭಾರತದಾಚೆಯಿರುವ ಪವಿತ್ರ ಸ್ಥಳಗಳನ್ನು ರಕ್ಷಿಸುವ ಭರವಸೆ ನೀಡಿತು. ಈ ಮಧ್ಯೆ ಅನಿ ಬೆಸೆಂಟ್‌ರು ಕಾಂಗ್ರೆಸ್ ಪಕ್ಷ ಸೇರಿ, ತಿಲಕರ ಜತೆಗೂಡಿ ಭಾರತದಲ್ಲಿ ಸ್ವಯಂ ಆಳುವಿಕೆಯ ಬೇಡಿಕೆ ಮುಂದಿಟ್ಟರು.

೧೯೧೯ರ ಭಾರತ ಸರ್ಕಾರ ಕಾಯ್ದೆ (ಮಾಂಟ್‌ಫೋರ್ಡ್ ಸುಧಾರಣೆಗಳು) ಪ್ರಕಟವಾಗುವ ಮೊದಲು ಬ್ರಿಟಿಷ್ ಸರ್ಕಾರವು ಭಾರತದಲ್ಲಿ ಸ್ವಯಂ ಆಡಳಿತ ಸಂಸ್ಥೆಗಳ ವಿಕಾಸ, ಜವಾಬ್ದಾರಿಯುತ ಸರ್ಕಾರದ ರಚನೆಯನ್ನು ಬ್ರಿಟಿಷ್ ಸಾಮ್ರಾಜ್ಯದಡಿ ಸ್ಥಾಪಿಸುವ ಐತಿಹಾಸಿಕ ಹೇಳಿಕೆಯನ್ನು ೧೯೧೭ರ ಆಗಸ್ಟ್ ೨೦ರಂದು ಪ್ರಕಟಿಸಿತು. ಮಹಮದ್ ಆಲಿ, ಶೌಕತ್ ಆಲಿ ಮತ್ತು ಅಬ್ದುಲ್ ಕಲಾಂ ಆಜಾದ್‌ರು ಅಖಿಲಭಾರತ ಖಿಲಾಫತ್ ಸಮಿತಿ ರಚಿಸಿದರು. ೧೯೧೯ರ ಮಾರ್ಚ್‌ನಲ್ಲಿ ಸಾಮ್ರಾಜ್ಯ ಶಾಸನೀಯ ಪರಿಷತ್ ರೌಲೆಟ್ ಕಾಯ್ದೆಯನ್ನು ಪಾಸುಮಾಡಿತು. ಈ ಕಾಯ್ದೆಯು ಹಿಂದೂ, ಮುಸ್ಲಿಂ, ಸಿಕ್ಖ ಮುಂತಾದ ಎಲ್ಲ ಜನಾಂಗಗಳ ಕ್ರೋಧಕ್ಕೆ ಕಾರಣವಾಯಿತು. ಈ ಕಾಯ್ದೆಯು ಖಿಲಾಫತ್ ಚಳವಳಿಯ ಬಲಸಂವರ್ಧನೆ ಮಾಡಿತು. ಪಂಜಾಬ್ ಪ್ರಾಂತ್ಯದಲ್ಲಿ ಬ್ರಿಟಿಷ್ ಸರ್ಕಾರದ ಬರ್ಬರ ಹತ್ಯಾಕಾಂಡ ಮೊದಲು ಲಾಹೋರ್‌ನಲ್ಲಿ ನಂತರ ಅಮೃತಸರದಲ್ಲಿ ಪ್ರಾರಂಭವಾಯಿತು. ಅಪರಾಧಗೈಯದ ಶಾಂತಿಯುತ ಪ್ರದರ್ಶನಕಾರರನ್ನು ಗುಂಡಿನ ಸುರಿಮಳೆಗೆ ಈಡುಮಾಡಿದ ಬ್ರಿಟಿಷ್ ಸರ್ಕಾರದ ಘೋರ ಅಪಚಾರವನ್ನು ಭಾರತದಾದ್ಯಂತ ಖಂಡಿಸಲಾಯಿತು. ಗಾಂಧೀಜಿಯವರು ಸತ್ಯಾಗ್ರಹ ಸಭಾ ಸ್ಥಾಪಿಸಿದರೆ, ಜಿನ್ನಾ, ಮಾಳವೀಯ ಮತ್ತು ಮಜರ್- ಲಾಲ್-ಹಕ್ ಕೇಂದ್ರ ಶಾಸನೀಯ ಪರಿಷತ್ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು ಮತ್ತು ಭಾರತದ ಜನಸ್ತೋಮವು ರೌಲೆಟ್‌ಕಾರಿ ವಿರುದ್ಧದ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿತು.

೧೯೧೯ರ ಏಪ್ರಿಲ್ ೧೯ರಂದು ಅಮೃತಸರದ ಜಲಿಯನ್ ವಾಲಾಬಾಗ್‌ನಲ್ಲಿ ಪ್ರದರ್ಶನಕಾರರ ವಿರುದ್ಧ ಜನರಲ್ ಡೈಯರ್ ನಡೆಸಿದ ಭೀಕರ ಹತ್ಯಾಕಾಂಡದಲ್ಲಿ ಮೃತರಾದವರ ಬಗ್ಗೆ ಸ್ಫೋಟಗೊಂಡ-ಅಶ್ರುತರ್ಪಣ ಬ್ರಿಟಿಷ್ ಸಾಮ್ರಾಜ್ಯದ ಅವಸಾನಕ್ಕೆ ಕಾರಣವಾಯಿತು. ಖಿಲಾಫತ್ ಸಮ್ಮೇಳನದ ಮೊದಲಧಿವೇಶನ ದೆಹಲಿಯಲ್ಲಿ ೧೯೧೯ರ ನವೆಂಬರ್ ೨೩ ರಂದು ನಡೆಯಿತು. ಕಾಂಗ್ರೆಸ್‌ನ ನಾಯಕರಾದ ಗಾಂಧೀಜಿ, ಮೋತಿಲಾಲ್ ನೆಹರೂ, ಮಾಳವೀಯ ಮುಂತಾದವರು ಹಾಜರಿದ್ದರು. ಗಾಂಧೀಜಿ ಅಧ್ಯಕ್ಷರಾಗಿ ಆಯ್ಕೆಯಾದ ಬಳಿಕ ಅಸಹಕಾರ ಚಳವಳಿಯ ಕಾರ್ಯಕ್ರಮವನ್ನು ಕಾಂಗ್ರೆಸ್ ಸಮಿತಿ ಅಂಗೀಕರಿಸಿತು.

ಅಸಹಕಾರ ಚಳವಳಿಯು ದೇಶದಾದ್ಯಂತ ಹರಡಿತು. ಪ್ರಚಂಡ ಯಶಸ್ಸು ಗಳಿಸಿತು. ವಕೀಲರು ವೃತ್ತಿ ತೊರೆದರು. ವಸ್ತುಗಳ ಬಹಿಷ್ಕಾರ ಮುಂತಾದವು ನಿರಂತರವಾಗಿ ನಡೆಯಿತು. ಆದರೆ ೧೯೨೨ರ ಫೆಬ್ರವರಿ ೧೫ ರಂದು ಉತ್ತರ ಪ್ರದೇಶದ ಗೋರಖ್‌ಪುರ

ಜಿಲ್ಲೆಯ ಚೌರಿಚೌರದಲ್ಲಿ ಪೊಲೀಸರು ಮತ್ತು ಪ್ರತಿಭಟನಾಕಾರರ ಮಧ್ಯೆ ನಡೆದ ವ್ಯಾಪಕ ಹಿಂಸಾಕೃತ್ಯದಿಂದಾಗಿ ಗಾಂಧೀಜಿಯವರು ಅಸಹಕಾರ ಚಳವಳಿಯನ್ನು ಹಠಾತ್ತನೆ ನಿಲ್ಲಿಸಿದರು. ಖಿಲಾಫತ್ ಚಳವಳಿಕಾರರು ಗಾಂಧೀಜಿಯವರ ನಾಯಕತ್ವದಲ್ಲಿ ನಂಬಿಕೆ ಕಳೆದುಕೊಂಡರು. ಮಾರ್ಚ್ ೧೦, ೧೯೨೨ರಂದು ಗಾಂಧೀಜಿಯವರನ್ನು ಬಂಧಿಸಿ, ವಿಚಾರಣೆ ನಡೆಸಿ, ಪೂನಾದ ಬಳಿಯಿರುವ ಯರವಾಡ ಜೈಲಿನಲ್ಲಿ ಆರು ವರ್ಷಗಳ ಸೆರೆವಾಸಕ್ಕೆ ತಳ್ಳಲಾಯಿತು. ಖಿಲಾಫತ್ ಚಳವಳಿಯು ಕೊನೆಗೊಂಡಿತು.

ಸ್ವರಾಜ್ ಪಕ್ಷದ ಸೌಮ್ಯವಾದ ಮತ್ತು ಉದಾರವಾದಿ ನೇತಾರರು ೧೯೨೦ರ ಚುನಾವಣೆಗಳಲ್ಲಿ ಸ್ಪರ್ಧಿಸಿ, ಶಾಸನ ಪರಿಷತ್‌ಗಳಲ್ಲಿ ವಿರೋಧಿ ಬಣಗಳಾಗಿ ಸರ್ಕಾರದ ಹಲವಾರು ಗೊತ್ತುವಳಿಗಳನ್ನು ವಿಫಲಗೊಳಿಸಿದರು. ೧೯೧೦ರ ವೃತ್ತಪತ್ರಿಕೆಗಳಂತಹ ದುಷ್ಟ ಕಾಯ್ದೆಗಳನ್ನು ರದ್ದುಪಡಿಸಲು ಹೋರಾಡಿದರು.

ಒಪ್ಪಂದಗಳು ಮತ್ತು ಸಮ್ಮೇಳನಗಳು ಸ್ವರಾಜ್ಯ ಅಥವಾ ಸ್ವಾತಂತ್ರ್ಯದ ಪೂರ್ವ ಷರತ್ತಾಗಿ, ಹಿಂದೂ ಮತ್ತು ಮುಸಲ್ಮಾನರ ನಡುವೆ ಒಪ್ಪಂದವಾಗುವ ಬಗ್ಗೆ ಎಲ್ಲ ನಾಯಕರು ಸಮ್ಮತಿಸಿದ್ದರು. ಬಹುಸಂಖ್ಯಾತ ಹಿಂದೂಗಳು ಸ್ವರಾಜ್ಯವೆಂದರೆ ಮುಸ್ಲಿಂರ ರಾಜ್ಯವೆಂದೂ, ಅಲ್ಪಸಂಖ್ಯಾತ ಮುಸ್ಲಿಂರು ಹಿಂದೂ ಬಹುಸಂಖ್ಯಾತರಿಂದ ಆಕ್ರಮಣಕ್ಕೊಳಗಾಗುವ ಭಯದ ಭಾವನೆಗಳನ್ನು ಹೊಂದಿದ್ದರು. ೧೯೨೧ರಲ್ಲಿ ಮಲಬಾರ್ ಪ್ರಾಂತ್ಯದಲ್ಲಿ ಹಿಂದೂ ಭೂಮಾಲೀಕರು ಹಾಗೂ ಕುಟುಂಬಗಳ ಹತ್ಯೆ, ಆಸ್ತಿಪಾಸ್ತಿ ನಾಶ, ದೇವಾಲಯಗಳ ನಾಶ ಹಾಗೂ ಬಲಾತ್ಕಾರದ ಮತಾಂತರದಂತಹ ಕೃತ್ಯಗಳು ನಡೆದವು. ೧೯೨೩ರಲ್ಲಿ ಹಿಂದೂ ಮಹಾಸಭಾದವರು ಮುಸ್ಲಿಂರ ಅತ್ಯಾಚಾರಗಳ ವಿರುದ್ಧ ನಡೆಸಿದ ಕೃತ್ಯಗಳು ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಯಿತು. ೧೯೨೪ರಲ್ಲಿ ಇಡೀ ಭಾರತ ದೇಶದಲ್ಲಿ ಮತೀಯ ಗಲಭೆಗಳ ಕ್ಷೋಭೆಗೆ ಜನತೆ ತತ್ತರಿಸಿತು. ಕೊಹತ್‌ನಲ್ಲಿ ಹಿಂದೂಗಳ ವಿರುದ್ಧ ನಡೆದ ವ್ಯಾಪಕ ಹಿಂಸಾಚಾರಗಳ ಪರಿಣಾಮವಾಗಿ, ಅವರನ್ನು ಬೇರೆಡೆಗೆ ಸ್ಥಳಾಂತರಿಸಬೇಕಾಯಿತು. ೧೯೨೭ರಲ್ಲಿ ಸೈಮನ್ ಆಯೋಗದ ರಚನೆಯಾಯಿತು.

೧೯೨೪ರಲ್ಲಿ ಬಿಡುಗಡೆ ಹೊಂದಿದ ಗಾಂಧೀಜಿಯ ನೇತೃತ್ವದಲ್ಲಿ ರಾಷ್ಟ್ರೀಯ ಹೋರಾಟಗಾರರು ಆತ್ಮಾವಲೋಕನ ಮಾಡಿಕೊಂಡು, ಬೆಳಗಾಂನ ಕಾಂಗ್ರೆಸ್ ಸಮ್ಮೇಳನದಲ್ಲಿ ಖಾದಿಪ್ರಚಾರ, ಹಿಂದೂ-ಮುಸ್ಲಿಂ ಐಕ್ಯತೆ ಮತ್ತು ಅಸ್ಪೃಶ್ಯತೆಯ ಕೇಡುಗಳ ವಿರುದ್ಧ ಹೋರಾಡುವ ಸಂಕಲ್ಪವನ್ನು ಸ್ವರಾಜ್ಯದ ಸಿಪಾಯಿಗಳು ಕೈಗೊಳ್ಳಬೇಕೆಂದು ತೀರ್ಮಾನಿಸಲಾಯಿತು. ೧೯೨೬ರಲ್ಲಿ ಈ ಧ್ಯೇಯಗಳ ಸಾಧನೆಗೆ ಗಾಂಧೀಜಿ ಸಬರ್‌ಮತಿ ಆಶ್ರಯದಲ್ಲಿ ಒಂದು ವರ್ಷದ ಮೌನಾಚರಣೆಯ ನಂತರ ಸಂದೇಶ ನೀಡಿದರು. ೧೯೨೮ರರಲ್ಲಿ ಸೈಮನ್ ಆಯೋಗ ಭಾರತಕ್ಕೆ ಭೇಟಿಕೊಟ್ಟಾಗ, ವ್ಯಾಪಕ ಪ್ರತಿಭಟನೆ ನಡೆಯಿತು. ಕಾಂಗ್ರೆಸ್, ಮುಸ್ಲಿಂ ಲೀಗ್ ಹಾಗೂ ತೇಜ ಬಹದ್ದೂರ್ ಸಪ್ರು ನೇತೃತ್ವದ ವಿಚಾರವಾದಿ ಒಕ್ಕೂಟವು ಈ ಆಯೋಗವನ್ನು ಬಹಿಷ್ಕರಿಸಿದವು. ಭಾರತದ ಜನಾಭಿಪ್ರಾಯವನ್ನು ಸಂತೈಸಲು ವೈಸರಾಯರಾಗಿದ್ದ ಲಾರ್ಡ್ ಇರ್ವಿನ್ ೧೯೨೯ರಲ್ಲಿ ಭಾರತ ಡೊಮಿನಿಯನ್ ಸ್ಥಾನಮಾನದ ಗುರಿ ಸಾಧಿಸಬೇಕೆಂಬ ಪ್ರಸ್ತಾವವನ್ನು ಮುಂದಿಟ್ಟನು. ಹಿಂದೂ ಮುಸ್ಲಿಂರ ಪ್ರತ್ಯೇಕ ಚುನಾವಣಾ ಮತದಾರ ವರ್ಗಗಳು ರದ್ದಾಗುವವವರೆಗೂ ಜವಾಬ್ದಾರಿಯುತ ಸರ್ಕಾರ ಸ್ಥಾಪಿಸುವ ಕ್ರಮಗಳನ್ನು ತೆಗೆದುಕೊಳ್ಳಬಾರದೆಂಬ ನಿರ್ಣಯವನ್ನು ರಾಜ್ಯಗಳ ಪರಿಷತ್‌ನಲ್ಲಿ ಕೈಗೊಳ್ಳಲಾಯಿತು. (೧೬.೦೩.೧೯೨೭)

ಗಾಂಧೀಜಿಯವರು ದಂಡಿ ಸತ್ಯಾಗ್ರಹ ಕೈಗೊಳ್ಳುವ ನಿರ್ಧಾರವನ್ನು ವೈಸರಾಯರಿಗೆ ತಿಳಿಸಿದರು. ೧೯೩೦ರ ಏಪ್ರಿಲ್ ೫ ರಂದು ನಡೆದ ಈ ಸುಪ್ರಸಿದ್ಧ ಚಳವಳಿಯ ವತಿಯಿಂದ ದೇಶಾದ್ಯಂತ ಸುಮಾರು ಒಂದು ಲಕ್ಷ ಜನರು ಸೆರೆಮನೆಗೆ ತೆರಳಿದರು. ನಾಯಕರ ಬಂಧನ ಹಾಗೂ ದಮನಕಾರಿ ಕಾಯ್ದೆಗಳ ಪುನರ್ ಜಾರಿಗೊಳಿಸುವ ಪ್ರಯತ್ನ ಪ್ರಾರಂಭವಾಯಿತು. ಸತ್ಯಾಗ್ರಹ ಚಳವಳಿಯಲ್ಲಿ ಲಕ್ಷಾಂತರ ಜನರು ಪಾಲುಗೊಂಡರು. ಸರ್ಕಾರದ ಗುರಿಗಳು ವಿಫಲವಾದವು. ಮೊದಲ ದುಂಡುಮೇಜಿನ ಸಮ್ಮೇಳನ ೧೯೩೦ರ ನವೆಂಬರ್ ೧೨ ರಂದು ಸಮಾವೇಶಗೊಂಡಾಗ, ಕಾಂಗ್ರೆಸ್ ಪಕ್ಷದ ಸರ್ವಾನುಮತದ ನಿರ್ಧಾರ ಪೂರ್ಣ ಸ್ವರಾಜ್ಯ ಸಾಧನೆಯೇ ಎಂದು ಪ್ರಕಟಿಸಲ್ಪಟ್ಟಿತು. ಈ ಸಮ್ಮೇಳನ ಹೆಚ್ಚಿನದೇನನ್ನೂ ಸಾಧಿಸದಿದ್ದರೂ, ಭಾರತದ ಸ್ವಾತಂತ್ರ್ಯದ ಸಮಸ್ಯೆಗೆ ಸೂಕ್ತ ಪರಿಹಾರ ಕಂಡುಕೊಳ್ಳಲು ಕಾಂಗ್ರೆಸ್‌ನೊಂದಿಗೆ ರಾಜೀಸೂತ್ರ ಅನುಸರಿಸಬೇಕೆಂಬ ನೀತಿಯನ್ನು ಸ್ಪಷ್ಟಪಡಿಸಿತು. ಗಾಂಧೀಜಿ ಮತ್ತು ಇತರ ಅಸಂಖ್ಯಾತ ನಾಯಕರು ಹಾಗೂ ಅನುಯಾಯಿಗಳನ್ನು ಬಿಡುಗಡೆ ಮಾಡಲಾಯಿತು. (೨೬.೦೧.೧೯೩೧)

ಗಾಂಧೀಜಿ ಮತ್ತು ಲಾರ್ಡ್ ಇರ್ವಿನ್‌ರ ಸಮಾನ ಮನೋಧರ್ಮವು ಗಾಂಧಿ - ಇರ್ವಿನ್ ಒಪ್ಪಂದದಲ್ಲಿ ಫಲ ನೀಡಿತು. ಕಾಂಗ್ರೆಸ್‌ನ ಕರಾಚಿ ಸಮ್ಮೇಳನವು ವಲ್ಲಭಭಾಯಿ ಪಟೇಲ್ ಅಧ್ಯಕ್ಷತೆಯಲ್ಲಿ ದಿನಾಂಕ ೨೯.೩.೧೯೩೧ರಂದು ಈ ಒಪ್ಪಂದಕ್ಕೆ ತನ್ನ ಅಂಗೀಕಾರ ನೀಡಿತು. ೧೯೩೧ರ ಸೆಪ್ಟೆಂಬರ್ ೭ ರಂದು ಪ್ರಾರಂಭವಾದ ಎರಡನೆಯ ದುಂಡುಮೇಜಿನ ಸಮ್ಮೇಳನದಲ್ಲಿ ಕಾಂಗ್ರೆಸ್

ಪಕ್ಷದ ಏಕೈಕ ಪ್ರತಿನಿಧಿಯಾಗಿ ಗಾಂಧೀಜಿ ಭಾಗವಹಿಸಿದರು. ಬ್ರಿಟನ್ನಿನಲ್ಲಿ ಸರ್ಕಾರದ ನಾಯಕರಲ್ಲಿ ಬದಲಾವಣೆಗಳಾದ ಹಿನ್ನೆಲೆಯಲ್ಲಿ ಭಾರತದಲ್ಲಿ ಮತೀಯ ಭಿನ್ನಾಭಿಪ್ರಾಯಗಳನ್ನು ಅತ್ಯಧಿಕವಾಗಿ ದುರುಪಯೋಗಪಡಿಸಿಕೊಳ್ಳುವ ಸಂಚು ನಡೆಸಲಾಯಿತು. ಎಲ್ಲ ಅಲ್ಪಸಂಖ್ಯಾತರಿಗೂ ರಕ್ಷಣೆ ನೀಡುವ ಭರವಸೆ ಈಡೇರದೇ ಉಳಿಯಿತು. ಎರಡನೆಯ ದುಂಡುಮೇಜಿನ ಸಮ್ಮೇಳನವು ಯಾವ ನಿರ್ಧಾರವನ್ನೂ ಕೈಗೊಳ್ಳದೆ ಮುಕ್ತಾಯಗೊಂಡಿತು.

೧೯೩೧ರಲ್ಲಿ ಭಾರತ ಸುಗ್ರೀವಾಜ್ಞೆಗಳ ಭಾರದಿಂದ ಕಂಗೆಟ್ಟಿತು. ಭಾರತಕ್ಕೆ ಹಿಂದಿರುಗಿದ ಗಾಂಧೀಜಿಯವರಿಗೆ ನಾಗರಿಕ ಅಸಹಕಾರ ಚಳವಳಿಯನ್ನು ಮತ್ತೊಮ್ಮೆ ಪ್ರಾರಂಭಿಸುವ ಅನಿವಾರ್ಯತೆಯುಂಟಾಯಿತು. ಕಾಂಗ್ರೆಸ್‌ನ ಬೆಂಬಲಕ್ಕೆ ಗಡಿನಾಡ ಗಾಂಧಿ ಎಂದೇ ಪ್ರಖ್ಯಾತರಾದ ಖಾನ್ ಅಬ್ದುಲ್ ಗಫಾರ್‌ಖಾನ್ ಒಂದು ಲಕ್ಷ ಸ್ವಯಂ ಸೇವಕರನ್ನು ಚಳವಳಿಗೆ ತರಬೇತು ಮಾಡಿದರು. ಇವರನ್ನು ಖುದಾ-ಇ-ಖಿದ್ಮತ್‌ಗಾರ್ (ದೇವರ ಕಿಂಕರರು) ಎಂದು ಕರೆಯಲಾಯಿತು. ೧೯೩೨ರ ನವೆಂಬರ್ ೧೭ ರಂದು ಮೂರನೆಯ ದುಂಡುಮೇಜಿನ ಸಮ್ಮೇಳನ ಪ್ರಾರಂಭವಾಗಿ ಡಿಸೆಂಬರ್ ೨೪ರ ವರೆಗೆ ತನ್ನ ಕಲಾಪಗಳನ್ನು ನಡೆಸಿತು. ಕೊನೆಯಲ್ಲಿ ಬ್ರಿಟಿಷ್ ಸರ್ಕಾರ ಪ್ರಕಟಿಸಿದ ಶ್ವೇತಪತ್ರದಲ್ಲಿ ಸ್ಥಾನಿಕ ರಾಜ್ಯಗಳು ಒಪ್ಪಿಕೊಂಡಲ್ಲಿ ಭಾರತದಲ್ಲಿ ಒಂದು ಸಂಯುಕ್ತ ಪದ್ಧತಿಯನ್ನು ಸ್ಥಾಪಿಸುವ ಯೋಜನೆಯನ್ನು ಪ್ರಕಟಿಸಲಾಯಿತು. ಮುಂದೆ ಈ ಶ್ವೇತಪತ್ರವೇ ೧೯೩೫ರ ಭಾರತ ಸರ್ಕಾರದ ಕಾಯ್ದೆಯ ರೂಪದಲ್ಲಿ ಪ್ರಕಟವಾಯಿತು.

೧೯೩೫ರ ಭಾರತ ಸರ್ಕಾರದ ಕಾಯ್ದೆ ಸೂಚಿಸಿದ ಬದಲಿ ಯೋಜನೆಯನ್ನು ಕೆಲವು ಮಾರ್ಪಾಡುಗಳೊಂದಿಗೆ ಒಪ್ಪಿಕೊಳ್ಳಲಾಯಿತು. ಕಾಂಗ್ರೆಸ್‌ಪಕ್ಷವು ಚುನಾವಣೆಯಲ್ಲಿ ಪ್ರಚಂಡ ಯಶಸ್ಸು ಗಳಿಸಿ ಮದ್ರಾಸ್, ಬಿಹಾರ್, ಮಧ್ಯಪ್ರಾಂತ್ಯ, ಸಂಯುಕ್ತ ಪ್ರಾಂತ್ಯ ಹಾಗೂ ಒರಿಸ್ಸಾಗಳಲ್ಲಿ ಪ್ರಾಂತೀಯ ಸರ್ಕಾರಗಳನ್ನು ರಚಿಸಿತು. ಉಳಿದ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಸಾಕಷ್ಟು ಸ್ಥಾನಗಳನ್ನು ಶಾಸನ ಸಭೆಗಳಲ್ಲಿ ಗಳಿಸಿತು. ೧೯೩೭ರಲ್ಲಿ ಏಳು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ನೇತ್ರತ್ವದ ಮಂತ್ರಿ ಮಂಡಲಗಳು ರಚಿತವಾದರೆ, ಪಂಜಾಬ್, ಬಂಗಾಳ, ಅಸ್ಸಾಂ ಮತ್ತು ಸಿಂಧ್ ಪ್ರಾಂತ್ಯಗಳಲ್ಲಿ ಕಾಂಗ್ರೆಸ್ಸೇತರ ಸರ್ಕಾರಗಳು ಅಧಿಕಾರಕ್ಕೆ ಬಂದವು. ೧೯೩೯ರಲ್ಲಿ ಎರಡನೆಯ ಮಹಾಯುದ್ಧ ಪ್ರಾರಂಭವಾದ ಹಿನ್ನೆಲೆಯಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಅಕ್ಟೋಬರ್ ತಿಂಗಳಿನಲ್ಲಿ ರಾಜೀನಾಮೆ ನೀಡಿದವು.

ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ನಡುವಣ ಭಿನ್ನಾಭಿಪ್ರಾಯಗಳು ತೀವ್ರವಾದಂತೆ, ಪ್ರತ್ಯೇಕತೆಯ ಬೇಡಿಕೆಗಳೂ ಅಧಿಕವಾಯಿತು. ೧೯೪೧ರ ಕಾಂಗ್ರೆಸ್ ವಾರ್ಷಿಕ ಸಮ್ಮೇಳನ ರಾಮಘಡದಲ್ಲಿ ಸಮಾವೇಶಗೊಂಡಾಗ, ಸಂಪೂರ್ಣ ಸ್ವಾತಂತ್ರ್ಯ ಮತ್ತು ಸ್ವತಂತ್ರ ಭಾರತಕ್ಕೆ ಬೇಕಾದ ಸಂವಿಧಾನ ರಚನೆಗಾಗಿ ಒಂದು ಸಂವಿಧಾನಾತ್ಮಕ ಸಭೆಯನ್ನು ಸ್ಥಾಪಿಸಬೇಕೆಂಬ ಬೇಡಿಕೆ ಮುಂದಿಡಲಾಯಿತು. ಮುಸ್ಲಿಂ ಲೀಗ್ ಲಾಹೋರ್ ಅಧಿವೇಶನದಲ್ಲಿ ಭಾರತದ ಮುಸ್ಲಿಂರಿಗಾಗಿ ಪ್ರತ್ಯೇಕ ರಾಜ್ಯ ಸ್ಥಾಪಿಸಬೇಕೆಂಬ ಬೇಡಿಕೆ ಮುಂದಿಟ್ಟಿತು. ೧೯೪೨ರಲ್ಲಿ ಬ್ರಿಟಿಷ್ ಸರ್ಕಾರ ಸ್ಟ್ಯಾಫರ್ಡ್ ಕ್ರಿಪ್ಸ್‌ರನ್ನು ಹೊಸ ಸಂವಿಧಾನದ ಪ್ರಸ್ತಾವಗಳನ್ನು ಮಾಡಲು ಭಾರತಕ್ಕೆ ಕಳುಹಿಸಿತು. ಕಾಂಗ್ರೆಸ್ ಹಾಗೂ ಮುಸ್ಲಿಂ ಲೀಗ್ ಕ್ರಿಪ್ಸ್ ಪ್ರಸ್ತಾವಗಳನ್ನು ತಿರಸ್ಕರಿಸಿತು. ೧೯೪೨ರ ಮೇ ತಿಂಗಳಿನಲ್ಲಿ ಗಾಂಧೀಜಿ ಬ್ರಿಟನ್ನಿಗೆ ಭಾರತವನ್ನು ಅವರ ಪಾಲಿಗೆ ಬಿಡಬೇಕೆಂಬ ಕರೆ ನೀಡಿದರು. ಅದೇ ವರ್ಷ ಆಗಸ್ಟ್ ತಿಂಗಳಿನಲ್ಲಿ ''ಭಾರತ ಬಿಟ್ಟು ತೊಲಗಿ'' ನಿರ್ಣಯವನ್ನು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ತೆಗೆದುಕೊಂಡಿತು.

ನಂತರ ಬ್ರಿಟಿಷ್ ಸರ್ಕಾರದ ನೇತೃತ್ವವಹಿಸಿದ ಲೇಬರ್‌ಪಕ್ಷವು 'ಕ್ಯಾಬಿನೆಟ್ ಮಿಷನ್' ಯೋಜನೆಯನ್ನು ಪ್ರಕಟಿಸಿತು. ಮುಸ್ಲಿಂಲೀಗ್ ಈ ಯೋಜನೆಯನ್ನು ಒಪ್ಪಿಕೊಂಡರೆ, ಕಾಂಗ್ರೆಸ್ ಪಕ್ಷವು ಅದನ್ನು ತಿರಸ್ಕರಿಸಿತು. ನಂತರ ಮತೀಯ ಗಲಭೆಗಳು ಸಂಭವಿಸಿದವು. ೧೯೪೬ರ ಆಗಸ್ಟ್ ೧೬ ರಿಂದ ೧೮ರವರೆಗೆ ಕಲ್ಕತ್ತಾದ ಹತ್ಯಾಕಾಂಡ, ನಂತರ ಪಶ್ಚಿಮ ಪಂಜಾಬ್‌ನಲ್ಲಿ ವ್ಯಾಪಕ ಹಿಂಸಾಕೃತ್ಯಗಳು ನಡೆದವು. ಅನ್ಯಮಾರ್ಗವಿಲ್ಲದೆ, ಪಂಜಾಬಿನ ವಿಭಜನೆಗೆ ಕಾಂಗ್ರೆಸ್ ಬೇಡಿಕೆ ಸಲ್ಲಿಸಿತು. ೧೯೪೭ರ ಮಾರ್ಚ್ ತಿಂಗಳಿನಲ್ಲಿ ಲಾರ್ಡ್ ಮೌಂಟ್‌ಬ್ಯಾಟನ್ ಭಾರತದ ವಿಭಜನೆಯನ್ನು ಪ್ರಕಟಿಸಿದರು. ಮುಸ್ಲಿಂ ಬಹುಸಂಖ್ಯಾತ ಪ್ರದೇಶಗಳು ಪ್ರತ್ಯೇಕವಾದ ಪಾಕಿಸ್ತಾನವಾಗಬೇಕೆಂಬ ಯೋಜನೆಗೆ ಚಾಲನೆ ನೀಡಲಾಯಿತು. ಭಾರತದ ಸ್ವಾತಂತ್ರ್ಯಕಾಯ್ದೆ ೧೯೪೭ನ್ನು ಬ್ರಿಟಿಷ್ ಸಂಸತ್ತು ಪಾಸುಮಾಡಿದ ಬಳಿಕ ಭಾರತ ಮತ್ತು ಪಾಕಿಸ್ತಾನವೆಂಬ ಎರಡು ಸ್ವತಂತ್ರ್ಯ ರಾಜ್ಯಗಳ ಸ್ಥಾಪನೆಯಾಯಿತು.

ಭಾರತ ರಾಷ್ಟ್ರೀಯ ಚಳವಳಿಯ ಇತಿಹಾಸದಲ್ಲಿ ಹಾಸು ಹೊಕ್ಕಾಗಿ ಕಾಂಗ್ರೆಸ್ ಪಕ್ಷದ ಇತಿಹಾಸವು ಬೆಸೆದುಕೊಂಡಿದ್ದು, ೧೮೮೫ರಿಂದ ೧೯೪೭ರ ವರೆಗಿನ ಬೆಳವಣಿಗೆಯನ್ನು ಗಮನಿಸಿದರೆ, ಅದರ ಹುಟ್ಟು, ಬೆಳವಣಿಗೆ, ವಿಸ್ತಾರ ಹರವು ಒಂದು ನದಿಯ ಹೋಲಿಕೆಗೆ ಯೋಗ್ಯವಾಗುತ್ತದೆ. ಕೇವಲ ೭೨ ಮಂದಿ ಪ್ರತಿನಿಧಿಗಳಿಂದ ಪ್ರಾರಂಭವಾದ ಈ ಸಂಘಟನೆಯು, ನಾಲ್ಕನೆಯ ಅಧಿವೇಶನದಲ್ಲಿ ೧೨೪೮ ಮಂದಿ ಪ್ರತಿನಿಧಿಗಳಿಂದ ಕೂಡಿತ್ತು. ಪಂಡಿತ ಮದನ ಮೋಹನ ಮಾಳವೀಯರ ಮಾತಿನಲ್ಲಿ ಹೇಳುವುದಾದರೆ

- ಕಾಂಗ್ರೆಸ್‌ನಲ್ಲಿ ಭಾರತದ ಜನತೆಯ ದನಿ ಮಾರ್ದನಿಗೊಂಡಿತು.'' ಸರ್ ಹೆನ್ರಿ ಕಾಟ್‌ರ ಪ್ರಕಾರ ''ಕಾಂಗ್ರೆಸ್ ನಾಡಿನ ಶಕ್ತಿಯಾಯಿತು, ಭಾರತದ ಮೂಲೆ ಮೂಲೆಗಳಲ್ಲೂ ಅದರ ದನಿ ಕಹಳೆಯ ನಾದವಾಯಿತು.''

**ಕರ್ನಾಟಕದಲ್ಲಿ ಕಾಂಗ್ರೆಸ್:**

''ಮೈಸೂರು ಹುಲಿ'' ಎಂದು ಖ್ಯಾತನಾದ ಟಿಪ್ಪುಸುಲ್ತಾನ್ ಕ್ರಿ.ಶ. ೧೭೯೯ರಲ್ಲಿ ಬ್ರಿಟಿಷರಿಂದ ಹತನಾದನು. ಅಂದಿನಿಂದಲೇ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾಯಿತೆಂದು ಹೇಳಬಹುದು. ಕಿತ್ತೂರು ರಾಣಿ ಚೆನ್ನಮ್ಮ (೧೮೨೪), ಚನ್ನಗಿರಿಯ ಧೊಂಢಿಯಾ ವಾಘ (೧೮೦೦), ಸುರಪುರದ ದೊರೆ ವೆಂಕಟಪ್ಪ ನಾಯಕ (೧೮೫೮), ಮುಂಡರಗಿ ಭೀಮರಾಯ (೧೮೫೭) ಮೊದಲಾದವರು ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ಸಶಸ್ತ್ರ ಹೋರಾಟ ನಡೆಸಿದರು.

ಬ್ರಿಟಿಷರು ಜಾರಿಗೆ ತಂದ ಹೊಸ ಶಿಕ್ಷಣ ನೀತಿ ಹಾಗೂ ರಾಷ್ಟ್ರೀಯ ಪ್ರಜ್ಞೆ ಕರ್ನಾಟಕದಲ್ಲೂ ಹರಡಿತ್ತು. ೧೮೮೫ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಮೊದಲ ಅಧಿವೇಶನ ಮುಂಬೈಯಲ್ಲಿ ಜರುಗಿದಾಗ ಬೆಳಗಾವಿಯ ಬಾವು ಸಾಹೇಬ್ ಭಾಟೆ ಮತ್ತು ಬಳ್ಳಾರಿಯ ಕೋಲಾಚಲ ವೆಂಕಟರಾವ್ ಅವರೂ ಸೇರಿದಂತೆ ಕರ್ನಾಟಕದಿಂದ ನಾಲ್ವರು ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿದ್ದರು. ೧೮೯೫ರಲ್ಲಿ ಎಲೆನ್ ಹೋಂ ಧಾರವಾಡ ಬೆಳಗಾಂ ಮೊದಲಾದ ಪ್ರಾಂತ್ಯಗಳಿಗೆ ಭೇಟಿಕೊಟ್ಟು ಕಾಂಗ್ರೆಸ್‌ನ ಧ್ಯೇಯ ಧೋರಣೆಗಳನ್ನು ಪ್ರಚಾರ ಮಾಡಿದರು. ಮುಂಬಯಿ ರಾಜಕೀಯ ಪರಿಷತ್ತು ೧೮೯೫ರಲ್ಲಿ ದಿನ್‌ಷಾ ವಾಚಾ ಅವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ನಡೆಯಿತು.

ಕರ್ನಾಟಕದಲ್ಲೂ ನವೋದಯದ ಜಾಗೃತಿ ಉಂಟಾಯಿತು. ಬಾಲಗಂಗಾಧರ ತಿಲಕ್‌ರವರ 'ಕೇಸರಿ' ಪತ್ರಿಕೆಯ ಪ್ರಭಾವ ಮುಂಬೈ ಕರ್ನಾಟಕದೆಲ್ಲೆಡೆ ಹರಡಿತು. ೧೯೨೦ರ ಆಗಸ್ಟ್‌ನಲ್ಲಿ ಬಾಲಗಂಗಾಧರ ತಿಲಕ್ ಅವರು ತೀರಿಕೊಳ್ಳುವ ತನಕ ಸ್ವಾತಂತ್ರ್ಯ ಹೋರಾಟದಲ್ಲಿ ಅವರು ಪ್ರತಿಪಾದಿಸುತ್ತಿದ್ದ ತತ್ತ್ವ ಮುಂಚೂಣಿಯಲ್ಲಿತ್ತು. ತೀವ್ರಗಾಮಿ ಪರವಾದ ನಿಲುವನ್ನು ಹೊಂದಿದ್ದ ತಿಲಕರು ಯುವಜನರ ಆರಾಧ್ಯ ದೈವವಾಗಿದ್ದರು. ೧೯೦೭ರಲ್ಲಿ ಸೂರತ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಬೆಳಗಾವಿಯ ಗಂಗಾಧರರಾವ್ ದೇಶಪಾಂಡೆ, ಗೋವಿಂದರಾವ್ ಯಾಳಗಿ, ಧಾರವಾಡದ ಆಲೂರು ವೆಂಕಟರಾವ್, ಅಣ್ಣಾಚಾರ್ಯ ಹೊಸಕೇರಿ, ಬಿಜಾಪುರದ ಶ್ರೀನಿವಾಸ ಕೌಜಲಗಿ ಅವರುಗಳು ಭಾಗವಹಿಸಿದ್ದರು.

ಗೋಪಾಲಕೃಷ್ಣ ಗೋಖಲೆ ಅವರ ಅಸಹಕಾರ ತತ್ತ್ವದ ಹಿನ್ನೆಲೆಯುಳ್ಳ ಸ್ವಾತಂತ್ರ್ಯ ಹೋರಾಟ ಕರ್ನಾಟಕದ ದಕ್ಷಿಣ ಭಾಗದವರ ಮನ ಗೆದ್ದಿತ್ತು. ಮಹಾತ್ಮ ಗಾಂಧೀಜಿ ಅವರು ಗೋಖಲೆ ಅವರ ಉತ್ತರಾಧಿಕಾರಿಯಾಗಿ ಸ್ವಾತಂತ್ರ್ಯ ಹೋರಾಟವನ್ನು ಮುನ್ನಡೆಸಿದರು. ೧೯೨೦ರ ಡಿಸೆಂಬರ್‌ನಲ್ಲಿ ನಾಗಪುರದಲ್ಲಿ ಜರುಗಿದ ಕಾಂಗ್ರೆಸ್ ಮಹಾಧಿವೇಶನದಲ್ಲಿ ತೀವ್ರ ರಾಷ್ಟ್ರವಾದಿಗಳಾಗಿದ್ದ ಸಿ.ಆರ್. ದಾಸ್‌ರವರೇ ಆ ಅಸಹಕಾರ ಚಳವಳಿಯ ನಿರ್ಣಯವನ್ನು ಮಂಡಿಸಿದ್ದರು. ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಈ ಅಧಿವೇಶನ ತುಂಬಾ ಮಹತ್ತರವಾದುದು. ಮೊದಲನೆಯದು ಪ್ರತಿಯೊಂದು ಪ್ರಾಂತ್ಯಕ್ಕೂ ಒಂದೊಂದು ಪ್ರಾಂತೀಯ ಸಮಿತಿ ಇರಬೇಕೆಂದು ಈ ಸಮಾವೇಶ ಒಪ್ಪಿಗೆ ನೀಡಿತು. ಎರಡನೆಯದು ಭಾಷಾವಾರು ಪ್ರಾಂತ್ಯದ ನಿರ್ಮಾಣದ ಬೇಡಿಕೆಯನ್ನು ಸಮಾವೇಶ ಒಪ್ಪಿತು. ಈ ಅಧಿವೇಶನದಲ್ಲಿ ಕರ್ನಾಟಕದಿಂದ ೮೦೦ ಪ್ರತಿನಿಧಿಗಳು ಭಾಗವಹಿಸಿದ್ದರು. ಈ ಅಧಿವೇಶನದ ಫಲವಾಗಿ ನಿವೃತ್ತ ನ್ಯಾಯಾಧೀಶರಾದ ಎಸ್. ಎನ್. ಸೆಟ್ಲೂರ್ ಅವರ ನೇತೃತ್ವದಲ್ಲಿ ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿ ಅಸ್ತಿತ್ವಕ್ಕೆ ಬಂತು. ಆಗ ಎಸ್. ಎನ್. ಎಂ. ರಜ್ವಿ ಅವರು ಈ ಸಮಿತಿಯ ಕಾರ್ಯದರ್ಶಿಯಾಗಿದ್ದರು.

ಭಾರತದ ಸ್ವಾತಂತ್ರ್ಯ ಹೋರಾಟ ಹಾಗೂ ಕಾಂಗ್ರೆಸ್ ಸಂಸ್ಥೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ ಸಂಸ್ಥೆ 'ಹಿಂದೂಸ್ತಾನಿ ಸೇವಾದಳ'. ಇದನ್ನು ೧೯೨೩ರಲ್ಲಿ ಎನ್. ಎಸ್ ಹರ್ಡೀಕರ್ ಸ್ಥಾಪಿಸಿದರು. ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷದ ಬೆಳವಣಿಗೆಯ ದೃಷ್ಟಿಯಿಂದ ೧೯೨೪ರಲ್ಲಿ ಮಹಾತ್ಮ ಗಾಂಧೀಜಿ ಅವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ಜರುಗಿದ ಕಾಂಗ್ರೆಸ್ ಮಹಾಧಿವೇಶನ ಅತ್ಯಂತ ಪ್ರಮುಖವಾದ ಘಟನೆಯಾಗಿದೆ. ಈ ಅಧಿವೇಶನದಿಂದಾಗಿ ಪರಸ್ಪರ ಒಡೆದುಹೋಗಿದ್ದ ಮನಸ್ಸುಗಳು ಒಂದೆಂಬಂತೆ ಬೆಸೆದುಕೊಂಡವು. ೧೯೧೫ ಬೆಂಗಳೂರು, ೧೯೧೬ ಬೆಳಗಾವಿ, ೧೯೧೮ ಬಿಜಾಪುರ, ೧೯೨೦ ದಕ್ಷಿಣ ಕನ್ನಡ, ೧೯೨೭ ಬೆಂಗಳೂರು, ೧೯೩೪ ಉತ್ತರ ಕನ್ನಡ, ೧೯೩೭ ಬೆಳಗಾವಿ ಜಿಲ್ಲೆಯ ಹುದಲಿ ಗ್ರಾಮ-ಹೀಗೆ ಮಹಾತ್ಮ ಗಾಂಧೀಜಿ ಅವರು ಅನೇಕ ಸಾರಿ ಕರ್ನಾಟಕಕ್ಕೆ ಭೇಟಿಕೊಟ್ಟಿದ್ದಾರೆ. ಈ ಎಲ್ಲ ಪ್ರವಾಸವೂ ಜನಸಾಮಾನ್ಯರು ಕಾಂಗ್ರೆಸ್‌ನತ್ತ ಒಲಿಯುವಂತೆ ಮಾಡಿತು.

ಪ್ರಜಾಮಿತ್ರ ಮಂಡಳಿ ಹಾಗೂ ಪ್ರಜಾಪಕ್ಷ ಸೇರಿ ಸಂಯುಕ್ತ ಪ್ರಜಾಪಕ್ಷ ಸ್ಥಾಪನೆಯಾಯಿತು. ೧೯೩೭ರಲ್ಲಿ ಸಂಯುಕ್ತ ಪ್ರಜಾಪಕ್ಷವು ಕಾಂಗ್ರೆಸ್‌ನಲ್ಲಿ ವಿಲೀನಗೊಳ್ಳಲು ನಿರ್ಧರಿಸಿತು. ಈ ಪಕ್ಷದ ಅಧ್ಯಕ್ಷತೆಯನ್ನು ಆಗ ವಿ. ವೆಂಕಟಪ್ಪನವರು ವಹಿಸಿದ್ದರು. ಮೈಸೂರು ಕಾಂಗ್ರೆಸ್‌ನ ಪ್ರಪ್ರಥಮ ಅಧಿವೇಶನ ೧೯೩೮ರಲ್ಲಿ ಟಿ. ಸಿದ್ದಲಿಂಗಯ್ಯ ಅವರ ಅಧ್ಯಕ್ಷತೆಯಲ್ಲಿ ಶಿವಪುರದಲ್ಲಿ ಜರುಗಿತು. ಇದು 'ಧ್ವಜ ಸತ್ಯಾಗ್ರಹ' ಎಂದೇ ಪ್ರಸಿದ್ಧಿಯಾಗಿದೆ. ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಂಸ್ಥೆಯ ಸದಸ್ಯತ್ವಕ್ಕೆ ನಾಲ್ಕಾಣೆ ಸಂಗ್ರಹಿಸಿದರೆ ಅದರ ಭಾಗವಾಗಿದ್ದ ಮೈಸೂರು ಕಾಂಗ್ರೆಸ್‌ನ ಸದಸ್ಯತ್ವಕ್ಕೂ ನಾಲ್ಕಾಣೆ ಸಂಗ್ರಹಿಸಲಾಗುತ್ತಿತ್ತು. ಸ್ವಾತಂತ್ರ್ಯ ಬರುವ ಹೊತ್ತಿಗೆ ಇವೆರಡೂ ಒಂದೇ ಎಂಬಂತಾದವು.

ಕಾಂಗ್ರೆಸ್‌ಪಕ್ಷ ಸ್ವಾತಂತ್ರ ಹೋರಾಟಕ್ಕಾಗಿ ಅನೇಕ ಚಳವಳಿಗಳನ್ನು ರಾಷ್ಟ್ರನಾಯಕರ ಆದೇಶದಂತೆ ಹಮ್ಮಿಕೊಂಡಿತ್ತು. ಇದರಿಂದಾಗಿ ಕಾಂಗ್ರೆಸ್ ಪಕ್ಷಕ್ಕೂ ಹಾಗೂ ಅದರ ನಾಯಕರಿಗೂ ಅಪಾರ ಜನಪ್ರಿಯತೆ ದೊರಕಿತು. ಅದು ಹಮ್ಮಿಕೊಂಡ ಪ್ರಮುಖ ಚಳವಳಿ ಎಂದರೆ ೧೯೩೦ರಲ್ಲಿ ಕಾನೂನು ಭಂಗ ಚಳವಳಿಯ ಅಂಗವಾಗಿ ಅಂಕೋಲಾದಲ್ಲಿ ಜರುಗಿದ ಉಪ್ಪಿನ ಸತ್ಯಾಗ್ರಹ, ೧೯೩೮ರಲ್ಲಿ ಶಿವಪುರ ಧ್ವಜ ಸತ್ಯಾಗ್ರಹ, ಅದೇ ವರ್ಷ ವಿದುರಾಶ್ವತ್ಥದಲ್ಲಿ ಜರುಗಿದ ಚಳವಳಿ, ೧೯೪೨ರ ಕ್ವಿಟ್ ಇಂಡಿಯಾ ಚಳವಳಿ ಹಾಗೂ ೧೯೪೭ರಲ್ಲಿ ನಡೆದ ಮೈಸೂರು ಚಲೋ ಚಳವಳಿ. ಇವು ರಾಜ್ಯದಲ್ಲಿ ಅನೇಕ ನಾಯಕರನ್ನು ರೂಪಿಸಿದ ಕೀರ್ತಿ ಕಾಂಗ್ರೆಸ್ ಪಕ್ಷಕ್ಕೆ ದೊರಕುತ್ತದೆ.

೧೯೪೭ರ ಆಗಸ್ಟ್ ೧೫ ರಂದು ಭಾರತಕ್ಕೆ ಸ್ವಾತಂತ್ರ ಬಂದಾಗ್ಯೂ ಸೆಪ್ಟೆಂಬರ್ ೪ ರಂದು ಮೈಸೂರು ಸಂಸ್ಥಾನದಲ್ಲಿ ಪ್ರಜಾಸರ್ಕಾರ ಸ್ಥಾಪಿಸಲು ಕೆ.ಸಿ. ರೆಡ್ಡಿ ಅವರ ನೇತೃತ್ವದಲ್ಲಿ ಹೋರಾಟ ಪ್ರಾರಂಭವಾಯಿತು. ಸೆಪ್ಟೆಂಬರ್ ೨೪ ರಂದು ಮೈಸೂರು ಸಂಸ್ಥಾನ ಭಾರತ ಒಕ್ಕೂಟ ವ್ಯವಸ್ಥೆಗೆ ವಿಲೀನವಾಗಲು ಮೈಸೂರು ಮಹಾರಾಜರು ಒಪ್ಪಿಕೊಂಡರು. ಅಂತಿವಾಗಿ ಅಕ್ಟೋಬರ್ ೨೭ ರಂದು ಕೆ.ಸಿ ರೆಡ್ಡಿ ಅವರು ಮೈಸೂರು ಸಂಸ್ಥಾನದ ಮೊದಲ ಮುಖ್ಯಮಂತ್ರಿಯಾದರು. ಅವರ ಸಚಿವ ಸಂಪುಟದ ಇತರ ಸದಸ್ಯರೆಂದರೆ ಹಣಕಾಸು ಹಾಗೂ ಕೈಗಾರಿಕೆ ಸಚಿವರಾದ ಎಚ್. ಸಿ. ದಾಸಪ್ಪ, ಕಾರ್ಮಿಕ ಸಚಿವರಾದ ಕೆ.ಟಿ. ಭಾಷ್ಯಂ, ಕಂದಾಯ ಹಾಗೂ ಅಬ್ಕಾರಿ ಸಚಿವರಾದ ಎಚ್. ಸಿದ್ಧಯ್ಯ, ಗೃಹಸಚಿವರಾದ ಟಿ. ಮರಿಯಪ್ಪ ಹಾಗೂ ಸ್ಥಳೀಯ ಸಂಸ್ಥೆಗಳ ಸಚಿವರಾಗಿ ಎಚ್. ಚನ್ನಿಗರಾಮಯ್ಯ. ೧೯೫೧ರಲ್ಲಿ ಟಿ. ಸಿದ್ದಲಿಂಗಯ್ಯ ಅವರು ಶಿಕ್ಷಣ ಹಾಗೂ ಆರೋಗ್ಯಖಾತೆ ಸಚಿವರಾದರು. ೧೯೫೨ರ ಸಾರ್ವತ್ರಿಕ ಚುನಾವಣೆಯ ತನಕ ಕೆ. ಸಿ. ರೆಡ್ಡಿ ಅವರ ಈ ಸಚಿವ ಸಂಪುಟವೇ ಮುಂದುವರೆಯಿತು.

### ಸ್ವಾತಂತ್ರ್ಯಾನಂತರ ಕಾಂಗ್ರೆಸ್ ಪಕ್ಷ

೧೯೪೭ನೇ ಇಸವಿ ಆಗಸ್ಟ್ ೧೫ ರಂದು ನಮ್ಮ ದೇಶ ಸ್ವತಂತ್ರವಾಯಿತು. ೨೬ ನವೆಂಬರ್ ೧೯೪೯ಕ್ಕೆ ನಮ್ಮದೇ ಆದ ಸಂವಿಧಾನವು ಸಿದ್ಧವಾಯಿತು. ೨೬ ಜನವರಿ ೧೯೨೯ರಂದು ಲಾಹೋರ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ''ಪೂರ್ಣ ಸ್ವಾತಂತ್ರ್ಯ'' ಘೋಷಣೆ ಮಾಡಿದ್ದರಿಂದ ಆ ದಿನದ ಜ್ಞಾಪಕಾರ್ಥವಾಗಿ ೨೬ ಜನವರಿ ೧೯೫೦ ರಂದು ಸಂವಿಧಾನವನ್ನು ಜಾರಿಗೊಳಿಸಲಾಯಿತು.

### ಮೊದಲನೇ ಮಹಾಚುನಾವಣೆಗಳು: ೧೯೫೧-೧೯೫೨

೧೯೫೧ ಡಿಸೆಂಬರ್ ಮತ್ತು ೧೯೫೨ ಜನವರಿ ತಿಂಗಳಲ್ಲಿ ಮೊದಲನೇ ಲೋಕಸಭೆಗೆ, ಮೊದಲನೇ ಮಹಾಚುನಾವಣೆಗಳು ನಡೆದವು. ಆಗ ನಮ್ಮ ದೇಶದಲ್ಲಿ ೨೮ ರಾಜ್ಯಗಳಿದ್ದವು. ಅವುಗಳು ಹೊಂದಿದ್ದ ಅಧಿಕಾರದ ಮೇಲೆ ಈ ರಾಜ್ಯಗಳನ್ನು ಎ.ಬಿ.ಸಿ. ದರ್ಜೆಯ ರಾಜ್ಯಗಳೆಂದು ವಿಂಗಡಿಸಲಾಗಿತ್ತು. ಮೊದಲನೇ ಮಹಾಚುನಾವಣೆಯಲ್ಲಿ ೪೮೯ ಲೋಕಸಭಾ ಸ್ಥಾನಗಳಿದ್ದವು. ಅದೇ ರೀತಿ ೩,೩೭೫ ವಿಧಾನಸಭಾ ಸ್ಥಾನಗಳಿದ್ದವು. ದೇಶಾದ್ಯಂತ ಒಟ್ಟು ೧೭೬ ಮಿಲಿಯನ್ ಮತದಾರರಿದ್ದರು. ಮೊದಲನೇ ಲೋಕಸಭೆ-ವಿಧಾನಸಭೆ ಚುನಾವಣೆಗಳ ಹೊತ್ತಿಗೆ ದೇಶದಲ್ಲಿ ಒಟ್ಟು ೭೭ ಪಕ್ಷಗಳಿದ್ದವು. ಅದರಲ್ಲಿ ೧೪ ಪಕ್ಷಗಳನ್ನು ಅಖಿಲಭಾರತ ಪಕ್ಷಗಳೆಂದೂ ೩೯ನ್ನು ರಾಜ್ಯಮಟ್ಟದ ಪಕ್ಷಗಳೆಂದೂ ಚುನಾವಣಾ ಆಯೋಗ ಮಾನ್ಯ ಮಾಡಿತ್ತು. ಇದಕ್ಕೆ ಯಾವ ಮಾನದಂಡಗಳನ್ನು ಅದು ಅನುಸರಿಸಿತ್ತೆಂದು ನಿಖರವಾಗಿ ತಿಳಿದುಬರುವುದಿಲ್ಲ.

ಆದರೆ ಸ್ವಾತಂತ್ರ್ಯಪೂರ್ವದಿಂದಲೂ ಅಸ್ತಿತ್ವದಲ್ಲಿದ್ದು ಸಂಘಟಿತವಾಗಿದ್ದ ಪಕ್ಷಗಳೆಂದರೆ ಭಾರತದ ರಾಷ್ಟ್ರೀಯ ಕಾಂಗ್ರೆಸ್, ಕಮ್ಯುನಿಸ್ಟ್ ಪಕ್ಷ, ಹಿಂದೂ ಮಹಾಸಭಾ, ಅಖಿಲ ಭಾರತ ಪರಿಶಿಷ್ಟ ಜಾತಿ ಮಹಾಮಂಡಳ (AISCF) ಮತ್ತು ಸೋಷಲಿಸ್ಟ್ ಪಕ್ಷ. ಸಂವಿಧಾನ ಜಾರಿಗೆ ಬಂದ ನಂತರದಲ್ಲಿ ರಾಮರಾಜ್ಯ ಪಕ್ಷ, ಕಿಸಾನ್ ಮಜೂರ್ ಪೀಪಲ್ಸ್ ಪಾರ್ಟಿ, ಜನಸಂಘ ಪಕ್ಷಗಳು ಅಸ್ತಿತ್ವಕ್ಕೆ ಬಂದವು. ಉಳಿದ ಪಕ್ಷಗಳು ಅಷ್ಟೊಂದು ಸಂಘಟಿತವಾಗಿರಲಿಲ್ಲ. ಕಾಂಗ್ರೆಸ್ ಹೊರತುಪಡಿಸಿ ಯಾವ ಪಕ್ಷವೂ ಚುನಾವಣಾ ಸಿದ್ಧತೆಗಳನ್ನು

ಮಾಡಿಕೊಂಡಿರಲಿಲ್ಲವೆಂದು ಹೇಳಬಹುದು. ಕಾಂಗ್ರೆಸ್ ಪಕ್ಷದ ಸಂಘಟನೆಯ ಬಲ ಅಧಿಕವಾಗಿತ್ತು. ಹಳ್ಳಿಹಳ್ಳಿಗಳಲ್ಲಿ ಅದರ ಕಾರ್ಯಕರ್ತರಿದ್ದರು. ಭಾರತ ರಾಷ್ಟ್ರೀಯ ಕಾಂಗ್ರೆಸ್‌ಗೆ ಚುನಾವಣಾ ಆಯೋಗವು ಜೋಡೆತ್ತಿನ ಗುರುತನ್ನು ನೀಡಿತು. ಈ ಗುರುತು ನಮ್ಮ ದೇಶದ ಗ್ರಾಮೀಣ ರೈತಾಪಿ ಜನರೊಂದಿಗೆ ಒಂದು ರೀತಿಯ ಭಾವನಾತ್ಮಕ ಸಂಬಂಧವನ್ನು ಹೊಂದಿತ್ತು. ಪ್ರಾರಂಭದಿಂದಲೂ ಪರಿಶಿಷ್ಟ ಜಾತಿಯವರು, ಮುಸಲ್ಮಾನರು ಕಾಂಗ್ರೆಸ್ ಪಕ್ಷದ ಬಗ್ಗೆ ಸಹಾನುಭೂತಿ ಹೊಂದಿದ್ದು ಆ ಪಕ್ಷದೊಂದಿಗೆ ತಮ್ಮನ್ನು ಗುರುತಿಸಿಕೊಂಡಿದ್ದರೆಂದು ರಾಜಕೀಯ ತಜ್ಞರು ಅಭಿಪ್ರಾಯಪಟ್ಟಿದ್ದಾರೆ.

ಕಾಂಗ್ರೆಸ್ ಪಕ್ಷವು ೪೭೯ ಲೋಕಸಭಾ ಸ್ಥಾನಗಳಿಗೆ ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿತು. ೩೬೪ ಸ್ಥಾನಗಳನ್ನು ಗೆದ್ದು ಶೇಕಡಾ ೭೪.೪೩ ಸ್ಥಾನಗಳಲ್ಲಿ ಜಯ ಸಾಧಿಸಿತು. ಚಲಾಯಿತ ಪುರಸ್ಕೃತ ಮತಗಳಲ್ಲಿ ಅದು ಪಡೆದ ಶೇಕಡಾವಾರು ಮತದ ಪ್ರಮಾಣ ೪೫.೧ ಆಗಿತ್ತು. ರಾಜ್ಯವಿಧಾನ ಸಭೆಗಳ ೩೩೭೩ ಸ್ಥಾನಗಳ ಪೈಕಿ ೩೨೦೫ ಸ್ಥಾನಗಳಿಗೆ ಕಾಂಗ್ರೆಸ್ ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿತು. ಅದರಲ್ಲಿ ೨೨೪೭ ಜನ ಆಯ್ಕೆಯಾದರು. ಶೇಕಡಾ ೬೮.೫೬ ಸ್ಥಾನಗಳನ್ನೂ, ಶೇಕಡಾ ೪೨.೪೩ ಮತಗಳನ್ನು ಕಾಂಗ್ರೆಸ್ ವಿಧಾನಸಭಾ ಚುನಾವಣೆಗಳಲ್ಲಿ ಪಡೆಯಿತು. ಹೀಗೆ ಅಖಿಲ ಭಾರತ ಮಟ್ಟದಲ್ಲಿ ಕಾಂಗ್ರೆಸ್ ಪಕ್ಷ ಮೊದಲ ಸಾರ್ವತ್ರಿಕ ಚುನಾವಣೆಯಲ್ಲೇ ಜಯಭೇರಿ ಬಾರಿಸಿತ್ತು.

## ಮೈಸೂರು (ಕರ್ನಾಟಕ) - ಲೋಕಸಭೆ

೧೯೫೨ರಲ್ಲಿ ಅಂದಿನ ಮೈಸೂರು ರಾಜ್ಯವು 'ಬಿ' ದರ್ಜೆಯ ಸ್ಥಾನಮಾನ ಹೊಂದಿದ್ದ ರಾಜ್ಯವಾಗಿತ್ತು. ರಾಜ್ಯದಲ್ಲಿ ಒಟ್ಟು ೯ ಲೋಕಸಭಾ ಕ್ಷೇತ್ರಗಳಿದ್ದವು. ಈ ಕ್ಷೇತ್ರಗಳಲ್ಲಿ ೭ ಏಕ ಸದಸ್ಯ ಕ್ಷೇತ್ರಗಳು, ೨ ದ್ವಿ ಸದಸ್ಯ ಕ್ಷೇತ್ರಗಳು ಇದ್ದವು. ಹೀಗಾಗಿ ರಾಜ್ಯದಲ್ಲಿದ್ದ ಒಟ್ಟು ಲೋಕಸಭಾ ಸ್ಥಾನಗಳ ಸಂಖ್ಯೆ ೧೧.

ಚಿತ್ರದುರ್ಗ, ತುಮಕೂರು, ಬೆಂಗಳೂರು ಸಿಟಿ, ಬೆಂಗಳೂರು, ಮಂಡ್ಯ, ಹಾಸನ - ಚಿಕ್ಕಮಗಳೂರು, ಶಿವಮೊಗ್ಗ ಇವು ಏಳು ಏಕ ಸದಸ್ಯತ್ವ ಉಳ್ಳ ಕ್ಷೇತ್ರಗಳೂ, ಕೋಲಾರ ಮತ್ತು ಮೈಸೂರು ಇವು ದ್ವಿ ಸದಸ್ಯತ್ವವುಳ್ಳ ಕ್ಷೇತ್ರಗಳೂ ಆಗಿದ್ದವು. ದ್ವಿ ಸದಸ್ಯತ್ವ ಇದ್ದ ಕ್ಷೇತ್ರಗಳಲ್ಲಿ ಒಂದು ಸ್ಥಾನ ಪರಿಶಿಷ್ಟ ಜಾತಿಗೆ ಮೀಸಲಾಗಿತ್ತು. ಹೀಗಾಗಿ ೯ ಸಾಮಾನ್ಯ, ೨ ಮೀಸಲು ಲೋಕಸಭಾ ಸ್ಥಾನಗಳು ರಾಜ್ಯದಲ್ಲಿತ್ತು. ಈ ೧೧ ಸ್ಥಾನಗಳಿಗೂ ಸ್ಪರ್ಧಿಸಿದ್ದ ಕಾಂಗ್ರೆಸ್ ಪಕ್ಷ ೧೦ ಸ್ಥಾನಗಳಲ್ಲಿ ಜಯಗಳಿಸಿತು. ಮೈಸೂರು ದ್ವಿ ಸದಸ್ಯತ್ವ ಕ್ಷೇತ್ರದಿಂದ ಕಿಸಾನ್ ಮಜ್ದೂರ್ ಪೀಪಲ್ಸ್ ಪಾರ್ಟಿಯ ವತಿಯಿಂದ ಸಾಮಾನ್ಯ ಕ್ಷೇತ್ರಕ್ಕೆ ಸ್ಪರ್ಧಿಸಿದ್ದ ಎಂ. ಎಸ್. ಗುರುಪಾದಸ್ವಾಮಿಯವರು ಕಾಂಗ್ರೆಸ್ ಅಭ್ಯರ್ಥಿಯನ್ನು ಸೋಲಿಸಿ ಆಯ್ಕೆಯಾದರು. ಆಯ್ಕೆಯಾದ ಕಾಂಗ್ರೆಸ್ ಸ್ಪರ್ಧಿಗಳು, ಅವರು ಪಡೆದ ಮತಗಳ ವಿವರಗಳನ್ನು ಇಲ್ಲಿ ಕೊಡಲಾಗಿದೆ.

| | ಕ್ಷೇತ್ರ | ಅಭ್ಯರ್ಥಿಗಳ ಹೆಸರು | ಪಡೆದ ಮತಗಳು | ಶೇಕಡಾವಾರು |
|---|---|---|---|---|
| ೧. | ಚಿತ್ರದುರ್ಗ | ಶ್ರೀ ಎಸ್. ನಿಜಲಿಂಗಪ್ಪ | ೨,೧೮,೨೨೭ | ೫೮.೦೧ |
| ೨. | ತುಮಕೂರು | ಶ್ರೀ ಸಿ.ಆರ್. ಬಸಪ್ಪ | ೧,೧೬,೫೭೯ | ೫೨.೧೭ |
| ೩. | ಕೋಲಾರ | ಶ್ರೀ ದೊಡ್ಡ ತಿಮ್ಮಯ್ಯ (ಪ.ಜಾ.) | ೨,೦೩,೯೮೮ | ೨೮.೪೨ |
| | (ದ್ವಿಸದಸ್ಯ) | ಶ್ರೀ ಎಂ. ವಿ. ಕೃಷ್ಣಪ್ಪ | ೧,೭೨೫೪೬ | ೨೪.೦೩ |
| ೪. | ಬೆಂಗಳೂರು ಸಿಟಿ | ಶ್ರೀ ಎನ್. ಕೇಶವ ಅಯ್ಯಂಗಾರ್ | ೮೫೫೫೧೩ | ೪೭.೧೭ |
| ೫. | ಬೆಂಗಳೂರು | ಶ್ರೀ ಟಿ. ಮಾದಪ್ಪಗೌಡ | ೮೭೯೫೧ | ೫೧.೯೧ |
| ೬. | ಮಂಡ್ಯ | ಶ್ರೀ ಎಂ.ಕೆ. ಶಿವನಂಜಪ್ಪ | ೧,೨೫,೫೬೬ | ೫೯ ೨೩ |
| ೭. | ಮೈಸೂರು | ಶ್ರೀ ಎನ್. ರಾಚಯ್ಯ (ಪ.ಜಾ.) | ೨,೦೯,೨೦೩ | ೨೯.೩೭ |
| | (ದ್ವಿಸದಸ್ಯ) | ಶ್ರೀ ಎಂ.ಎಸ್. ಗುರುಪಾದಸ್ವಾಮಿ (ಕೆ.ಎಂ.ಪಿ.ಪಿ) | | |
| ೮. | ಹಾಸನ | ಶ್ರೀ ಎಚ್. ಸಿದ್ದನಂಜಪ್ಪ | ೧,೬೧,೫೬೧ | ೬೭.೮೩ |
| ೯. | ಶಿವಮೊಗ್ಗ | ಶ್ರೀ ಕೆ. ಜಿ. ಒಡೆಯರ್ | ೧,೦೮,೯೯೦ | ೪೬.೨೫ |

ಸಮಾಜವಾದಿ ಪಕ್ಷವು ೪ ಸ್ಥಾನಗಳಿಗೂ, ಜನಸಂಘವು ೪ ಸ್ಥಾನಗಳಿಗೂ, ಸಿಪಿಐ ಪಕ್ಷವು ಒಂದು ಸ್ಥಾನಕ್ಕೂ, ಪಕ್ಷೇತರರು ೮ ಸ್ಥಾನಗಳಿಗೂ ಸ್ಪರ್ಧಿಸಿದ್ದರು. ಆದರೆ ಇವರು ಒಂದೂ ಸ್ಥಾನದಲ್ಲಿ ಜಯಗಳಿಸಲಿಲ್ಲ. ೯ ಸ್ಥಾನಗಳಿಗೆ ಸ್ಪರ್ಧಿಸಿದ್ದ ಕೆ.ಎಂ.ಪಿ.ಪಿ. ಒಂದು

ಸ್ಥಾನ ಗಳಿಸುವಲ್ಲಿ ಸಫಲವಾಯಿತು. ಹೀಗಾಗಿ ಕಾಂಗ್ರೆಸ್ ಪಕ್ಷಕ್ಕೆ ಮೊದಲ ಮಹಾಚುನಾವಣೆಯಿಂದಲೇ ರಾಜ್ಯದಲ್ಲಿ ಸ್ವಲ್ಪ ಪ್ರತಿರೋಧ ಇತ್ತು ಎಂಬುದನ್ನು ಊಹಿಸಬಹುದಾಗಿದೆ.

ಮುಂಬಯಿ ಕರ್ನಾಟಕ, ಹೈದರಾಬಾದ್ ಕರ್ನಾಟಕ ಹಾಗೂ ಮದ್ರಾಸ್ ಕರ್ನಾಟಕದ ಭಾಗಗಳು ನಮ್ಮ ರಾಜ್ಯಕ್ಕೆ ಸೇರ್ಪಡೆ ಆಗಿರದಿದ್ದರೂ ಭಾವನಾತ್ಮಕವಾಗಿ ಅವು ಮೈಸೂರು ರಾಜ್ಯದೊಡನೆ ಮಿಳಿತವಾಗಿದ್ದವು. ಸಾಹಿತ್ಯಿಕವಾಗಿ ಸಾಂಸ್ಕೃತಿಕವಾಗಿ ಈ ಭಾಗಗಳು ಹಳೆಯ ಮೈಸೂರು ಸಂಸ್ಥಾನದೊಂದಿಗೆ ಬೆಸೆದುಕೊಂಡಿದ್ದವು. ಅಲ್ಲಿಯೂ ಕನ್ನಡಿಗರೇ ಮೊದಲನೇ ಮಹಾಚುನಾವಣೆಗಳಲ್ಲಿ ಲೋಕಸಭೆಗೆ ಸ್ಪರ್ಧಿಸಿದ್ದರು. ಉತ್ತರ ಕರ್ನಾಟಕದ ಭಾಗದಲ್ಲಿಯೂ ಕೂಡಾ ೧೨ ಲೋಕಸಭಾ ಸ್ಥಾನಗಳಿದ್ದವು. ಈ ೧೨ ಸ್ಥಾನಗಳಲ್ಲಿ ೧೧ ಸ್ಥಾನಗಳನ್ನು ಕಾಂಗ್ರೆಸ್ ಪಕ್ಷ ಗೆದ್ದುಕೊಂಡಿತ್ತು. ಕುಷ್ಟಗಿಯ ಒಂದು ಲೋಕಸಭಾ ಸ್ಥಾನದಲ್ಲಿ ಶಿವಮೂರ್ತಿಸ್ವಾಮಿ ಅಳವಂಡಿ ಎಂಬ ಹಿರಿಯ ನಾಯಕರು ತಾವೇ ಆಗತಾನೆ ಕಟ್ಟಿದ್ದ ಲೋಕಸೇವ ಸಂಘ ಎಂಬ ಪಕ್ಷದಿಂದ ಆರಿಸಿ ಬಂದರು. ಉತ್ತರ ಕರ್ನಾಟಕದ ಲೋಕಸಭಾ ಕ್ಷೇತ್ರಗಳು ಹಾಗೂ ಅಲ್ಲಿ ಜಯಶಾಲಿಯಾದ ಅಭ್ಯರ್ಥಿಗಳ ವಿವರಗಳನ್ನು ನೀಡಲಾಗಿದೆ.

**ಮುಂಬೈ ಕರ್ನಾಟಕ**

೧. ಬೆಳಗಾವಿ ಉತ್ತರ : (ಕಾರವಾರ, ಅಥಣಿ, ಗೋಕಾಕ, ಚಿಕ್ಕೋಡಿ, ರಾಯಭಾಗ ವಿಧಾನಸಭಾ ಕ್ಷೇತ್ರಗಳು)
೨. ಬೆಳಗಾವಿ ದಕ್ಷಿಣ (ಸಾವಂತವಾಡ, ಕೊಣ್ಣೂರು, ಪರಸಗಡ, ಬೆಳಗಾವಿ, ಹುಕ್ಕೇರಿ, ಚಾಂದಘಡ)
೩. ಬಿಜಾಪುರ ಉತ್ತರ : ರಾಜಾರಾಮ ಗಿರಿಧರಲಾಲ್ ದುಬೆ (ಕಾಂಗ್ರೆಸ್) ೧,೧೯, ೮೯೫
೪. ಬಿಜಾಪುರ ದಕ್ಷಿಣ : ರಾಮಪ್ಪ ಬಾಲಪ್ಪ ಬಿದರಿ (ಕಾಂಗ್ರೆಸ್) ೧,೫೯,೮೮೪
೫. ಧಾರವಾಡ ಉತ್ತರ : ಡಿ. ಪಿ. ಕರಮರಕರ್ (ಕಾಂಗ್ರೆಸ್) ೧,೨೯,೦೭೭
೬. ಧಾರವಾಡ ದಕ್ಷಿಣ : ತಿಮ್ಮಪ್ಪ ರುದ್ರಪ್ಪ ನೆಸ್ವಿ (ಕಾಂಗ್ರೆಸ್) ೧,೪೪,೨೨೫
೭. ಕಾರವಾರ (ಕೆನರಾ) : ಜೋಕಿಂ ಆಳ್ವ (ಕಾಂಗ್ರೆಸ್) ೧,೩೯,೫೫೭

**ಹೈದರಾಬಾದ್ ಕರ್ನಾಟಕ**

೮. ಕುಷ್ಟಗಿ (ಲಿಂಗಸುಗೂರು, ಮಾನ್ವಿ, ಸಿಂಧನೂರು, ಗಂಗಾವತಿ, ಕೊಪ್ಪಳ, ಯಲಬುರ್ಗಾ, ಕುಷ್ಟಗಿ ವಿಧಾನಸಭಾ ಕ್ಷೇತ್ರಗಳು)
   ೧. ಶಿವಮೂರ್ತಿಸ್ವಾಮಿ ಅಳವಂಡಿ (ಲೋಕಸೇವಕ ಸಂಘ) ೧,೦೭,೨೦೯
   ೨. ಮಾಧವರಾವ್ ಅನ್ವರಿ (ಕಾಂಗ್ರೆಸ್) ೬೩,೦೫೦
೯. ಗುಲಬರ್ಗಾ (ಶೋರಾಪುರ, ಜೇವರಗಿ, ಅಫಜಲಪುರ, ಅಳಂದ, ಕಮಲಾಪುರ, ಚಿತಾಪುರ, ಗುಲಬರ್ಗಾ ವಿಧಾನಸಭಾ ಕ್ಷೇತ್ರಗಳು)
   ಸ್ವಾಮಿ ರಮಾನಂದತೀರ್ಥ (ಕಾಂಗ್ರೆಸ್) ೫೬೦೬೭
೧೦. ಯಾದಗಿರಿ (ಚಿಂಚೋಳಿ, ತಾಂಡೂರು, ಸೇಡಂ, ಕೊಡಂಗಲ್, ಯಾದಗಿರಿ, ಶಹಾಪುರ) ಕೃಷ್ಣಾಚಾರ್ಯ ಜೋಷಿ (ಕಾಂಗ್ರೆಸ್) ಅವಿರೋಧ ಆಯ್ಕೆ

ಹೈದರಾಬಾದ್ ವಿಮೋಚನಾ ಹೋರಾಟದ ಪ್ರಮುಖ ನಾಯಕರೂ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಸಂಸ್ಥಾಪಕ ಅಧ್ಯಕ್ಷರೂ ಆಗಿದ್ದ ಸ್ವಾಮಿ ರಮಾನಂದತೀರ್ಥರು ಸಿಂಧಗಿಯವರು. ಅವರ ತಾಯಿಯ ಊರು ಅಫಜಲಪುರ ತಾಲ್ಲೂಕಿನ ದೇವಲ ಗಾಣಗಾಪುರ ಕ್ಷೇತ್ರ. ಈ ಮಹನೀಯರು ಕಟ್ಟಾ ಗಾಂಧೀವಾದಿಗಳು. ಇವರು ಗುಲಬರ್ಗಾ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ವತಿಯಿಂದ ಸ್ಪರ್ಧಿಸಿ ಆರಿಸಿ ಬಂದಿದ್ದು ಬಹಳ ವಿಶೇಷವಾದ ಸಂಗತಿ. ಅದೇ ರೀತಿ ಯಾದಗಿರಿ ಕ್ಷೇತ್ರದಿಂದ ಕೃಷ್ಣಾಚಾರ್ಯ ಜೋಷಿಯವರು ಕಾಂಗ್ರೆಸ್ ಪಕ್ಷದ ವತಿಯಿಂದ ಅವಿರೋಧವಾಗಿ ಆಯ್ಕೆಯಾಗಿದ್ದು ವಿಶೇಷ.

೧೧. ಬೀದರ್ (ಬೀದರ್, ಹುಮ್ನಾಬಾದ್, ಭಾಲ್ಕಿ) ಶೌಕತ್ ಉಲ್ಲಾ ಅನ್ಸಾರಿ (ಕಾಂಗ್ರೆಸ್) ೯೨, ೧೦೫

**ಮದ್ರಾಸ್ - ಕರ್ನಾಟಕ**

೧೨. ಬಳ್ಳಾರಿ (ಬಳ್ಳಾರಿ, ರಾಯದುರ್ಗ, ಕೂಡ್ಲಿಗಿ, ಹೊಸಪೇಟೆ, ಹರಪನಹಳ್ಳಿ) ೧,೨೪,೯೬೭ ಟಿ. ಸಿದ್ಧರಾಮಯ್ಯ (ಕಾಂಗ್ರೆಸ್) ೧,೨೪,೯೬೭ ಈ ರೀತಿಯಾಗಿ ಮೈಸೂರು ರಾಜ್ಯ ಮತ್ತು ಏಕೀಕರಣ ಪೂರ್ವ ಕರ್ನಾಟಕದ ಭಾಗಗಳಲ್ಲಿ ಕಾಂಗ್ರೆಸ್ ೧೯೫೨ರ ಮೊದಲ ಮಹಾಚುನಾವಣೆಗಳಲ್ಲಿ ಜಯಭೇರಿ ಬಾರಿಸಿತ್ತು.

## ೧೯೫೨ - ಮೈಸೂರು ವಿಧಾನಸಭಾ ಚುನಾವಣೆಗಳು

೧೯೫೨ನೇ ಇಸವಿ ಜನವರಿ ತಿಂಗಳಲ್ಲಿ ರಾಜ್ಯ ವಿಧಾನಸಭೆಗೆ ಚುನಾವಣೆಗಳು ನಡೆದವು. ಅಂದಿನ ಮೈಸೂರು ರಾಜ್ಯದಲ್ಲಿ ೬೧ ಏಕ ಸದಸ್ಯ, ೧೯ ದ್ವಿದಸ್ಯ ವಿಧಾನಸಭಾ ಕ್ಷೇತ್ರಗಳಿದ್ದವು. ಹೀಗಾಗಿ ಚುನಾಯಿಸಲ್ಪಡಬೇಕಾದ ವಿಧಾನಸಭಾ ಸದಸ್ಯರ ಸಂಖ್ಯೆ ೯೯. ಒಬ್ಬರು ಆಂಗ್ಲೋ ಇಂಡಿಯನ್ ನಾಮಕರಣ ಸದಸ್ಯರೂ ಸೇರಿದಂತೆ ಒಟ್ಟು ವಿಧಾನಸಭಾ ಸದಸ್ಯರ ಸಂಖ್ಯೆ ೧೦೦ ಆಗಿತ್ತು.

### ಏಕಸದಸ್ಯ ಕ್ಷೇತ್ರಗಳು

೧. ಮಾಲೂರು ೨. ಬಂಗಾರಪೇಟೆ ೩. ಬಾಗೇಪಲ್ಲಿ-ಗುಡಿಬಂಡೆ ೪. ಕೋಲಾರ ೫. ಗೌರಿಬಿದನೂರು ೬. ಹುಲಿಯೂರು ದುರ್ಗ ೭. ಕುಣಿಗಲ್ ೮. ತುಮಕೂರು ೯. ಕೋರಾ ೧೦. ಸಿರಾ ೧೧. ಗುಬ್ಬಿ ೧೨. ತುರುವೇಕೆರೆ ೧೩. ತಿಪಟೂರು ೧೪. ಚಿಕ್ಕನಾಯಕನಹಳ್ಳಿ ೧೫. ಮಲ್ಲೇಶ್ವರಂ ೧೬. ಗಾಂಧಿನಗರ ೧೭. ಚಾಮರಾಜಪೇಟೆ ೧೮. ಬಸವನಗುಡಿ ೧೯. ಕಬ್ಬನ್‌ಪೇಟೆ ೨೦. ಅಲಸೂರು ೨೧. ಸೆಂಟ್‌ಜಾನ್ಸ್‌ಹಿಲ್ ೨೨. ದೊಡ್ಡಬಳ್ಳಾಪುರ ೨೩. ಮಾಗಡಿ ೨೪. ರಾಮನಗರ ೨೫. ಕಾನಕಾನಹಳ್ಳಿ ೨೬. ವಿರೂಪಾಕ್ಷಿಪುರ ೨೭. ಚನ್ನಪಟ್ಟಣ ೨೮. ಮದ್ದೂರು ೨೯. ಮಂಡ್ಯ ೩೦. ಶ್ರೀರಂಗಪಟ್ಟಣ ೩೧. ಪಾಂಡವಪುರ ೩೨. ನಾಗಮಂಗಲ ೩೩. ಕೃಷ್ಣರಾಜಪೇಟೆ ೩೪. ಮೈಸೂರು ನಗರ ಉತ್ತರ ೩೫. ಮೈಸೂರು ನಗರ ದಕ್ಷಿಣ ೩೬. ಮೈಸೂರು ತಾಲ್ಲೂಕು ೩೭. ಟಿ. ನರಸೀಪುರ ೩೮. ಚಾಮರಾಜನಗರ ೩೯. ಹುಣಸೂರು ೪೦. ಕೃಷ್ಣರಾಜನಗರ ೪೧. ಪಿರಿಯಾಪಟ್ಟಣ ೪೨. ಹೊಳೆನರಸೀಪುರ ೪೩. ಅರಕಲಗೂಡು ೪೪. ಚನ್ನರಾಯಪಟ್ಟಣ ೪೫. ಜಾವಗಲ್ಲು ೪೬. ಅರಸೀಕೆರೆ ೪೭. ಹಾಸನ ೪೮. ಕಡೂರು ೪೯. ಭದ್ರಾವತಿ ೫೦. ತೀರ್ಥಹಳ್ಳಿ - ಕೊಪ್ಪ ೫೧. ತರೀಕೆರೆ ೫೨. ಶಿವಮೊಗ್ಗ ೫೩. ಚನ್ನಗಿರಿ ೫೪. ಹೊನ್ನಾಳಿ ೫೫. ಸಾಗರ-ಹೊಸನಗರ ೫೬. ಹರಿಹರ ೫೭. ದಾವಣಗೆರೆ ೫೮. ಹೊಸದುರ್ಗ ೫೯. ಮೊಳಕಾಲ್ಮೂರು ೬೦. ಚಿತ್ರದುರ್ಗ ೬೧. ಜಗಳೂರು

### ದ್ವಿ ಸದಸ್ಯತ್ವ ಕ್ಷೇತ್ರಗಳು

೧. ಕೆ. ಜಿ. ಎಫ್. ೨. ಮುಳಬಾಗಿಲು - ಶ್ರೀನಿವಾಸಪುರ ೩. ಚಿಂತಾಮಣಿ ೪. ಶಿಡ್ಲಘಟ್ಟ - ಚಿಕ್ಕಬಳ್ಳಾಪುರ ೫. ಪಾವಗಡ ೬. ಕೊರಟಗೆರೆ - ಮಧುಗಿರಿ ೭. ಬೆಂಗಳೂರು ದಕ್ಷಿಣ ೮. ಬೆಂಗಳೂರು ಉತ್ತರ ೯. ನೆಲಮಂಗಲ ೧೦. ಹೊಸಕೋಟೆ - ಆನೇಕಲ್ ೧೧. ಮಳವಳ್ಳಿ ೧೨. ನಂಜನಗೂಡು ೧೩. ಯಳಂದೂರು ೧೪. ಗುಂಡ್ಲುಪೇಟೆ - ಹೆಗ್ಗಡದೇವನಕೋಟೆ ೧೫. ಬೇಲೂರು ೧೬. ಚಿಕ್ಕಮಗಳೂರು - ಮೂಡಿಗೆರೆ ೧೭. ಸೊರಬ-ಶಿಕಾರಿಪುರ ೧೮. ಹಿರಿಯೂರು ೧೯. ಹೊಳಲ್ಕೆರೆ. ೧೯೫೦ ರಿಂದ ೫೨ ರವರೆಗೆ ಅಂದಿನ ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ ಮಂತ್ರಿಮಂಡಲ ಅಧಿಕಾರದಲ್ಲಿತ್ತು. ಕ್ಯಾಸಂಬಳ್ಳಿ ಚೆಂಗಲರಾಯ ರೆಡ್ಡಿಯವರು ರಾಜ್ಯದ ಪ್ರಪ್ರಥಮ ಕಾಂಗ್ರೆಸ್ ಮುಖ್ಯಮಂತ್ರಿಗಳಾಗಿದ್ದರು. ೧೯೫೨ರಲ್ಲಿ ಕೆಂಗಲ್ ಹನುಮಂತಯ್ಯನವರು ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದರು. ಮಹಾಚುನಾವಣೆಗೆ ಮುನ್ನ ಅವರು ಇಡೀ ಸಂಸ್ಥಾನದಾದ್ಯಂತ ಸಂಚರಿಸಿ ೧೯೫೨ರ ಮಹಾಚುನಾವಣೆಗಳಲ್ಲಿ ತಮಗೆ ಬೆಂಬಲಿತರಾದ ಅಭ್ಯರ್ಥಿಗಳಿಗೇ ವಿಧಾನಸಭಾ ಚುನಾವಣೆಗಳಿಗೆ ಸ್ಪರ್ಧಿಸಲು ಕಾಂಗ್ರೆಸ್ ಪಕ್ಷದ ಟಿಕೇಟ್ ಕೊಡಿಸಿದರೆಂದು ಅಂದಿನ ಹಿರಿಯ ನಾಯಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆಗ ಕೆ. ಹನುಮಂತಯ್ಯ ಮತ್ತು ಟಿ. ಸಿದ್ಧಲಿಂಗಯ್ಯ ಇವರು ಭಿನ್ನಮತೀಯರೆನಿಸಿಕೊಂಡಿದ್ದರೆಂದು ತಿಳಿದುಬರುತ್ತದೆ.

ಕಾಂಗ್ರೆಸ್ ಪಕ್ಷವು ೧೯೫೨ರ ಚುನಾವಣೆಗಳಲ್ಲಿ ೮೦ ಸಾಮಾನ್ಯ ಸ್ಥಾನಗಳಿಗೂ ೧೯ ಮೀಸಲು ಸ್ಥಾನಗಳಿಗೂ ಅಭ್ಯರ್ಥಿಗಳನ್ನು ಹೂಡಿತು. ಆ ಪೈಕಿ ೬೦ ಸಾಮಾನ್ಯ ಸ್ಥಾನಗಳಲ್ಲಿಯೂ ೧೪ ಮೀಸಲು ಸ್ಥಾನಗಳಲ್ಲಿಯೂ ಜಯಗಳಿಸಿತು. ಮುಳಬಾಗಿಲು, ಶ್ರೀನಿವಾಸಪುರ ದ್ವಿಸದಸ್ಯ ಕ್ಷೇತ್ರದಿಂದ ಕಾಂಗ್ರೆಸ್‌ನ ಟಿ. ಚನ್ನಯ್ಯನವರು ಅವಿರೋಧವಾಗಿ ಆಯ್ಕೆಯಾದರು. ೬೧ ಏಕ ಸದಸ್ಯ ಕ್ಷೇತ್ರಗಳಲ್ಲಿ ಚಲಾಯಿಸಲ್ಪಟ್ಟ ೧೪,೨೧,೦೯೦ ಮತಗಳ ಪೈಕಿ ಕಾಂಗ್ರೆಸ್ ೬,೮೦,೪೯೦ ಮತಗಳನ್ನು ಗಳಿಸಿ ಶೇಕಡಾವಾರು ೪೭.೯ ಪ್ರಮಾಣದಲ್ಲಿ ಮತಗಳಿಸಿತು. ೧೯ ದ್ವಿಸದಸ್ಯ ಕ್ಷೇತ್ರಗಳಲ್ಲಿ ಚಲಾಯಿಸಲ್ಪಟ್ಟ ೧೩, ೩೨, ೭೭೮ ಮತಗಳ ಪೈಕಿ ೫,೯೫, ೮೨೮ ಮತ ಗಳಿಸಿ ಶೇಕಡಾ ೪೪.೭ ಮತಗಳನ್ನು ಪಡೆಯಿತು.

## ಕಾಂಗ್ರೆಸ್ ಪಕ್ಷದಿಂದ ಗೆದ್ದ ಪ್ರಮುಖ ಅಭ್ಯರ್ಥಿಗಳು

| | | | |
|---|---|---|---|
| ಹೆಚ್. ಸಿ. ಲಿಂಗಾರೆಡ್ಡಿ | ಮಾಲೂರು | ಕೆ. ಚಂಗಲರಾಯರೆಡ್ಡಿ | ಬಂಗಾರಪೇಟೆ |
| ಎನ್. ಸಿ. ನಾಗಯ್ಯರೆಡ್ಡಿ | ಗೌರಿಬಿದನೂರು | ಚೆನ್ನಿಗರಾಮಯ್ಯ | ಕೊರಟಗೆರೆ - ಮಧುಗಿರಿ |
| ಎನ್. ಹುಚ್ಚಮಾಸ್ತಿಗೌಡ | ಹುಲಿಯೂರುದುರ್ಗ | ಎಂ. ವಿ. ರಾಮರಾವ್ | ತುಮಕೂರು |
| ಪಿ. ಆರ್. ರಾಮಯ್ಯ | ಬಸವನಗುಡಿ | ಕೆ. ಪುಟ್ಟಸ್ವಾಮಿ | ಶ್ರೀರಂಗಪಟ್ಟಣ |
| ಟಿ. ಮರಿಯಪ್ಪ | ಮೈಸೂರು ಉತ್ತರ | ಡಿ. ದೇವರಾಜ ಅರಸು | ಹುಣಸೂರು |
| ಎ. ಜಿ. ರಾಮಚಂದ್ರರಾವ್ | ಹೊಳೇನರಸಿಪುರ | ಕೆ. ಲಕ್ಕಪ್ಪ | ಚನ್ನರಾಯಪಟ್ಟಣ |
| ಬಿ. ಎಲ್. ಸುಬ್ಬಮ್ಮ | ಚಿಕ್ಕಮಗಳೂರು | ಎಚ್. ಎಸ್. ರುದ್ರಪ್ಪ | ಹೊನ್ನಾಳಿ |
| ಬಳ್ಳಾರಿ ಸಿದ್ದಮ್ಮ | ದಾವಣಗೆರೆ | ಕೆ. ಹನುಮಂತಯ್ಯ | ರಾಮನಗರ |

೯ ಏಪ್ರಿಲ್ ೧೯೫೨ರಂದು ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿ ಸಚಿವ ಸಂಪುಟ ರಚಿಸಿದರು.

| | | | |
|---|---|---|---|
| ಕೆ. ಹನುಮಂತಯ್ಯ | ಮುಖ್ಯಮಂತ್ರಿ | ಟಿ. ಸಿದ್ಧಲಿಂಗಯ್ಯ | ಕೈಗಾರಿಕೆ |
| ಎ. ಜಿ. ರಾಮಚಂದ್ರರಾವ್ | ಕಾನೂನು, ಶಿಕ್ಷಣ | ಟಿ. ಚೆನ್ನಯ್ಯ | ಸಾರ್ವಜನಿಕ ಆರೋಗ್ಯ<br>ಸ್ಥಳೀಯ ಸಂಸ್ಥೆ |
| ಹೆಚ್. ಸಿದ್ಧವೀರಪ್ಪ | ಗೃಹ ಮತ್ತು ಕೃಷಿ | ಕಡಿದಾಳು ಮಂಜಪ್ಪ | ರೆವಿನ್ಯೂ, ಲೋಕೋಪಯೋಗಿ |

೧೯೫೩ ಅಕ್ಟೋಬರ್ ತಿಂಗಳಲ್ಲಿ ತಾಮ್ರದ ತಂತಿ ಖರೀದಿ ಪ್ರಕರಣದಲ್ಲಿ ಟಿ. ಸಿದ್ಧಲಿಂಗಯ್ಯನವರು ನೈತಿಕ ಹೊಣೆ ಹೊತ್ತು ರಾಜೀನಾಮೆ ನೀಡಿದರು. ಆಗ ಡಾ। ಆರ್. ನಾಗನಗೌಡ ಅವರನ್ನು ಕೃಷಿ ಸಚಿವರನ್ನಾಗಿ ನೇಮಿಸಲಾಯಿತು. ಹೆಚ್. ಸಿದ್ದವೀರಪ್ಪನವರಿಗೆ ಗೃಹಖಾತೆ ಜೊತೆಗೆ ಕೈಗಾರಿಕಾ ಖಾತೆಯನ್ನು ನೀಡಲಾಯಿತು. ನವೆಂಬರ್ ೧೯೫೫ರಲ್ಲಿ ಎಚ್. ಎಂ. ಚನ್ನಬಸಪ್ಪ ಅವರನ್ನು ಮಂತ್ರಿಮಂಡಲಕ್ಕೆ ಸೇರಿಸಿಕೊಂಡು ಅವರಿಗೆ ಕೈಗಾರಿಕಾ ಖಾತೆ ನೀಡಲಾಯಿತು. ಕೆ. ಹನುಮಂತಯ್ಯನವರ ಮೇಲೆ ಮಟ್ಟೆದೊಡ್ಡಿ ಭೂಹಿಡುವಳಿ ಪ್ರಕರಣದ ಆಪಾದನೆ ಬಂತು. ರೆವಿನ್ಯೂ ಅಧಿಕಾರಿಗಳು ಅವರ ತಮ್ಮ ನಂಜಪ್ಪನವರಿಗೆ ಅಕ್ರಮವಾಗಿ ಈ ಭೂಮಿಯನ್ನು ಮಂಜೂರು ಮಾಡಿದ್ದಾರೆ ಎಂಬುದೇ ಈ ಪ್ರಕರಣದ ವಿಷಯ. ಈ ಪ್ರಕರಣ ಸುಪ್ರೀಂ ಕೋರ್ಟ್‌ವರೆಗೆ ಹೋಯಿತು.

ವಿಧಾನಸೌಧ ನಿರ್ಮಾಣ ಕಾಮಗಾರಿಯ ಇನ್ನೊಂದು ಆಪಾದನೆ ಆವರ ಮೇಲೆ ಬಂತು. ಆರಂಭದಲ್ಲಿ (೧೯೫೨) ೫೦ ಲಕ್ಷ ರೂಪಾಯಿ ಅಂದಾಜಿನೊಂದಿಗೆ ಆರಂಭವಾದ ಈ ಕಾಮಗಾರಿ ಕಟ್ಟಡ ಮುಗಿಯುವ ಹೊತ್ತಿಗೆ (೧೯೫೬) ಎರಡು ಕೋಟಿ ರೂ.ಗೆ ಏರಿತು. ಇದು ಅನಾವಶ್ಯಕ ದುಂದುವೆಚ್ಚ ಎಂಬುದೇ ಈ ಆಪಾದನೆಯ ವಿಷಯ. ಕಾಂಗ್ರೆಸ್‌ನಲ್ಲಿ ಭಿನ್ನಮತೀಯ ಚಟುವಟಿಕೆ ಪ್ರಾರಂಭವಾಯಿತು. ಸಾಹುಕಾರ್ ಚನ್ನಯ್ಯ, ನಾಗಯ್ಯರೆಡ್ಡಿ, ನಿಜಲಿಂಗಪ್ಪ ಇವರುಗಳ ಕೈ ಮೇಲಾಯಿತು. ಸಚಿವ ಸಂಪುಟದಲ್ಲಿದ್ದರೂ ಕಡಿದಾಳು ಮಂಜಪ್ಪ, ಎ. ಜಿ. ರಾಮಚಂದ್ರರಾವ್, ಹನುಮಂತಯ್ಯನವರ ಕೈಬಿಟ್ಟರು. ಅವಿಶ್ವಾಸ ನಿರ್ಣಯ ಅಂಗೀಕಾರವಾಗಿ ೧೯೫೬ ಆಗಸ್ಟ್‌ನಲ್ಲಿ ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿ ಪದವಿಗೆ ರಾಜೀನಾಮೆ ನೀಡಿದರು.

೧೯೫೬ರ ಆಗಸ್ಟ್ ತಿಂಗಳಲ್ಲಿ ಕಡಿದಾಳು ಮಂಜಪ್ಪ ಮುಖ್ಯಮಂತ್ರಿಗಳಾದರು. ಅಕ್ಟೋಬರ್ ತಿಂಗಳವರೆಗೆ ಅವರ ಮಂತ್ರಿಮಂಡಳ ಅಧಿಕಾರದಲ್ಲಿತ್ತು. ೧೯೫೬ರ ಅಕ್ಟೋಬರ್ ೨೧ ರಂದು ನಿಜಲಿಂಗಪ್ಪನವರು ಅವಿರೋಧವಾಗಿ ವಿಶಾಲ ಮೈಸೂರು ಕಾಂಗ್ರೆಸ್ ಶಾಸಕಾಂಗ ಪಕ್ಷದ ಮುಖಂಡರಾಗಿ ಆಯ್ಕೆಯಾದರು. ನವೆಂಬರ್ ೧, ೧೯೫೬ರಂದು ನೂತನ ವಿಶಾಲ ಮೈಸೂರು ರಾಜ್ಯ ಉದಯವಾಯಿತು. ಅದೇ ದಿನ ನಿಜಲಿಂಗಪ್ಪನವರು ವಿಶಾಲ ಮೈಸೂರಿನ ಪ್ರಪ್ರಥಮ ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು. ಐದು ತಿಂಗಳ ಕಾಲ ನಿಜಲಿಂಗಪ್ಪನವರ ಮಂತ್ರಿಮಂಡಲ ಅಧಿಕಾರದಲ್ಲಿತ್ತು. ೧೯೫೭ ಫೆಬ್ರವರಿ-ಮಾರ್ಚ್ ತಿಂಗಳಲ್ಲಿ ಲೋಕಸಭೆ ಹಾಗೂ ರಾಜ್ಯ ವಿಧಾನಸಭೆಗೆ ಎರಡನೆಯ ಮಹಾಚುನಾವಣೆಗಳು ನಡೆದವು.

**ವಿಧಾನಸಭಾ ಚುನಾವಣೆ ಫಲಿತಾಂಶಗಳು**

| ಪಕ್ಷಗಳು | ಸ್ಪರ್ಧಿಸಿದ ಸ್ಥಾನ | | ಗೆದ್ದ ಸ್ಥಾನ | | ಸೋತ ಸ್ಥಾನ | |
|---|---|---|---|---|---|---|
| | ಸಾಮಾನ್ಯ | ಮೀಸಲು | ಸಾಮಾನ್ಯ | ಮೀಸಲು | ಸಾಮಾನ್ಯ | ಮೀಸಲು |
| ಕಾಂಗ್ರೆಸ್ | ೮೦ | ೧೯ | ೬೦ | ೧೪ | ೨೦ | ೫ |
| ಕೆ.ಎಂ.ಪಿ.ಪಿ. | ೪೯ | ೧೦ | ೭ | ೧ | ೪೨ | ೯ |
| ಸೋಷಲಿಸ್ಟ್ | ೪೦ | ೭ | ೩ | - | ೩೭ | ೭ |
| ಜನಸಂಘ | ೨೧ | ೨ | - | - | ೨೧ | ೨ |
| ಕಮ್ಯುನಿಸ್ಟ್ | ೪ | ೧ | ೧ | - | ೩ | ೧ |
| ಎಸ್.ಸಿ.ಎಫ್. | ೭ | ೫ | - | ೨ | ೭ | ೩ |
| ಪಕ್ಷೇತರರು | ೧೩೦ | ೧೯ | ೯ | ೨ | ೧೨೧ | ೭ |

**ಮತದಾನದ ವಿವರಗಳು**

**ಚಲಾವಣೆಯಾದ ಒಟ್ಟು ಮತಗಳು**

**ಏಕ ಸದಸ್ಯ ಕ್ಷೇತ್ರಗಳು (೬೧) ೧೪,೨೧,೦೯೦**

**ದ್ವಿಸದಸ್ಯ ಕ್ಷೇತ್ರಗಳು (೧೯) ೧೩ ೩೨ ೭೭೮**

**ವಿವಿಧ ಪಕ್ಷಗಳು ಪಡೆದ ಮತಗಳು ಹಾಗೂ ಶೇಕಡಾವಾರು ಪ್ರಮಾಣ**

| ಪಕ್ಷಗಳು ಏಕ ಸದಸ್ಯ ಕ್ಷೇತ್ರಗಳು | ಸಾಮಾನ್ಯವಾರು | ಶೇಕಡಾ ಕ್ಷೇತ್ರಗಳು | ದ್ವಿಸದಸ್ಯವಾರು | ಶೇಕಡಾ |
|---|---|---|---|---|
| ಕಾಂಗ್ರೆಸ್ | ೬,೮೦,೪೯೦ | ೪೭.೯ | ೫,೯೫,೮೨೯ | ೪೪.೭ |
| ಸೋಷಲಿಸ್ಟ್ | ೧,೩೭,೭೦೭ | ೯.೭ | ೧,೦೨,೬೮೩ | ೭.೭ |
| ಕೆ.ಎಂ.ಪಿ.ಪಿ. | ೨,೪೩,೬೭೭ | ೧೭.೧ | ೧,೪೭,೯೭೬ | ೧೧.೧ |
| ಜನಸಂಘ | ೩೫,೫೬೯ | ೨.೫ | ೨೬,೫೪೯ | ೨.೦೦ |
| ಕಮ್ಯುನಿಸ್ಟ್ | ೩,೧ ೩೯ | ೦.೨ | ೨೧,೯೭೭ | ೧.೬ |
| ಎಸ್.ಸಿ.ಎಫ್. | ೧೭,೭೦೭ | ೧.೩ | ೪೩,೮೯೯ | ೩.೩ |
| ಪಕ್ಷೇತರರು | ೩,೦೨,೮೦೧ | ೨೧.೩ | ೩,೯೩,೮೬೬ | ೨೯.೬ |

ಮುಳಬಾಗಿಲು ಶ್ರೀನಿವಾಸಪುರ ಕ್ಷೇತ್ರದಲ್ಲಿ ಟಿ. ಚನ್ನಯ್ಯನವರು ಮೀಸಲು ಸ್ಥಾನದಿಂದ ಅವಿರೋಧವಾಗಿ ಆಯ್ಕೆಯಾಗಿದ್ದರು.

**ಲೋಕಸಭೆ-ವಿಧಾನಸಭೆ ಮಹಾಚುನಾವಣೆಗಳು ೧೯೫೭**

೧೯೫೬ರ ಆಗಸ್ಟ್ ತಿಂಗಳಲ್ಲಿ ಅಂದಿನ ಹಳೆಯ ಮೈಸೂರು ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದ ಕೆಂಗಲ್ ಹನುಮಂತಯ್ಯ ನೇತೃತ್ವದಲ್ಲಿದ್ದ ಸರ್ಕಾರದ ಮಂತ್ರಿಮಂಡಲ ರಾಜೀನಾಮೆ ನೀಡಿ, ಅದೇ ಪಕ್ಷದ ಕಡಿದಾಳು ಮಂಜಪ್ಪನವರ ನೇತೃತ್ವದ ಮಂತ್ರಿಮಂಡಳ ಅಸ್ತಿತ್ವಕ್ಕೆ ಬಂದಿತ್ತು. ೧೯೫೬ನೇ ಇಸವಿಯ ಪೂರ್ತಿ ಕರ್ನಾಟಕ ಏಕೀಕರಣ ಚಳವಳಿ ಪ್ರಖರವಾಗಿ ನಡೆದಿತ್ತು. ಈ ಚಳವಳಿಯ ಫಲಶ್ರುತಿಯಾಗಿ ೧.೧೧.೧೯೫೬ರಂದು ಕರ್ನಾಟಕ ಏಕೀಕರಣವಾಗಿ ವಿಶಾಲ ಮೈಸೂರು ರಾಜ್ಯ ಸ್ಥಾಪನೆ ಆಗಿತ್ತು. ಕರ್ನಾಟಕ ಏಕೀಕರಣಕ್ಕಾಗಿ ಅಹರ್ನಿಶಿ ಶ್ರಮಿಸಿದ್ದ, ಆ ಕನಸನ್ನು ನನಸನ್ನಾಗಿ ಮಾಡುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದ ನಿಜಲಿಂಗಪ್ಪನವರೇ ವಿಶಾಲ ಮೈಸೂರಿನ ಪ್ರಪ್ರಥಮ ಮುಖ್ಯಮಂತ್ರಿಗಳಾಗಬೇಕೆಂದು ಗುದ್ಲೆಪ್ಪ ಹಳ್ಳಿಕೇರಿ, ಅಂದಾನಪ್ಪ ದೊಡ್ಡಮೇಟಿ, ಎಚ್. ಕೆ. ವೀರಣ್ಣಗೌಡ, ಎ.ಸಿ. ಬಂದೀಗೌಡ, ಎಂ. ವಿ. ಕೃಷ್ಣಪ್ಪ, ಡಿ. ದೇವರಾಜಅರಸ್, ಆರ್ ಅನಂತರಾಮನ್ ಮುಂತಾದ ಹಿರಿಯ ಕಾಂಗ್ರೆಸ್ ನಾಯಕರಿಂದ ಕೂಡಿದ್ದ ಪ್ರಬಲವಾದ ಗುಂಪು ಒತ್ತಡ ತಂದಿತ್ತು. ಜೊತೆಗೆ ಇದು ಮೊದಲೇ ನಿರ್ಧಾರಿತವಾದ ವಿಷಯವಾಗಿತ್ತು. ಆದರಿಂದಾಗಿಯೇ ಏನೋ ಮುಖ್ಯಮಂತ್ರಿಗಳಾಗಿದ್ದ ಕಡಿದಾಳುರವರು ಕಾಂಗ್ರೆಸ್ ಶಾಸಕ ಮಿತ್ರರಿಗೆ "ಏನಪ್ಪಾ, ನನ್ನನ್ನು

ಏಕ್‌ದಿನ್ ಕಾ ಸುಲ್ತಾನ್ ಮಾಡಿದ್ದೀರಿ'' ಎಂದು ಹೇಳುತ್ತಿದ್ದರಂತೆ. ಪಕ್ಷದ ಹೈಕಮಾಂಡ್ ನಿರ್ಧಾರ, ನಾಯಕರ ಪ್ರಬಲ ಒತ್ತಾಯ ಹಾಗೂ ಬಹುಮತ ಆಧಾರದ ಮೇಲೆ ನಿಜಲಿಂಗಪ್ಪನವರು ೧.೧೧.೧೯೫೬ರಂದು ವಿಶಾಲ ಮೈಸೂರು ರಾಜ್ಯದ ಪ್ರಪ್ರಥಮ ಮುಖ್ಯಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿ, ೧೨ ಜನರ ಮಂತ್ರಿಮಂಡಲ ರಚಿಸಿದರು. ಹಿಂದಿನ ಮುಖ್ಯಮಂತ್ರಿಗಳಾಗಿದ್ದ ಕಡಿದಾಳು ಮಂಜಪ್ಪನವರು ನಿಜಲಿಂಗಪ್ಪನವರ ಮಂತ್ರಿಮಂಡಲದಲ್ಲಿ ಶಿಕ್ಷಣ ಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು.

ರಾಜ್ಯ ಪುನರ್ ವಿಂಗಡಣೆಯ ನಂತರ ನೂತನ ಮೈಸೂರು ರಾಜ್ಯಕ್ಕೆ ೧೩ ಲೋಕಸಭಾ ಕ್ಷೇತ್ರಗಳು ಹೊಸದಾಗಿ ದೊರಕಿದವು. ಅದರಲ್ಲಿ ಒಂದು ದ್ವಿಸದಸ್ಯ ಕ್ಷೇತ್ರವಾಗಿತ್ತು. ಹೀಗಾಗಿ ಹೊಸದಾಗಿ ವಿಶಾಲ ಮೈಸೂರು ರಾಜ್ಯಕ್ಕೆ ದೊರಕಿದ ಲೋಕಸಭಾ ಸ್ಥಾನಗಳ ಸಂಖ್ಯೆ ೧೪. ಹಳೆಯ ಮೈಸೂರು ರಾಜ್ಯದಲ್ಲಿದ್ದ ಲೋಕಸಭಾ ಸ್ಥಾನಗಳ ಸಂಖ್ಯೆ ೧೧. ನೂತನವಾಗಿ ರಚಿತಾವಾದ ಲೋಕಸಭಾ ಕ್ಷೇತ್ರ ತಿಪಟೂರು. ೧೯೫೭ರ ಲೋಕಸಭಾ ಚುನಾವಣೆಯ ಹೊತ್ತಿಗೆ ರಾಜ್ಯದಲ್ಲಿದ್ದ ಲೋಕಸಭಾ ಸ್ಥಾನಗಳ ಸಂಖ್ಯೆ ೨೬. ಅದರಲ್ಲಿ ಮೂರು ಸ್ಥಾನಗಳು ಪರಿಶಿಷ್ಟ ಜಾತಿಗೆ ಮೀಸಲಾಗಿದ್ದವು.

**ಏಕೀಕರಣದಿಂದ ಹೊಸದಾಗಿ ದೊರಕಿದ ಲೋಕಸಭಾ ಸ್ಥಾನಗಳು - ೧೪**

೧. ಬೆಳಗಾಂ
೨. ಚಿಕ್ಕೋಡಿ
೩. ಕೆನರಾ (ಉತ್ತರ ಕನ್ನಡ)
೪. ಧಾರವಾಡ ಉತ್ತರ
೫. ಧಾರವಾಡ ದಕ್ಷಿಣ
೬. ವಿಜಾಪುರ ಉತ್ತರ
೭. ವಿಜಾಪುರ ದಕ್ಷಿಣ
೮. ಗುಲಬರ್ಗಾ (೨) ದ್ವಿಸದಸ್ಯ ಕ್ಷೇತ್ರ (ಒಂದು ಸ್ಥಾನ ಪರಿಶಿಷ್ಟ ಜಾತಿಗೆ ಮೀಸಲು)
೯. ರಾಯಚೂರು
೧೦. ಕೊಪ್ಪಳ
೧೧. ಬಳ್ಳಾರಿ
೧೨. ದಕ್ಷಿಣ ಕನ್ನಡ (ಮಂಗಳೂರು)
೧೩. ಉಡುಪಿ

**ಹಳೆ ಮೈಸೂರು ರಾಜ್ಯದಲ್ಲಿದ್ದ ಕ್ಷೇತ್ರಗಳು - ೧೧**

೧. ಕೋಲಾರ (೨) ದ್ವಿಸದಸ್ಯ ಕ್ಷೇತ್ರ (ಒಂದು ಸ್ಥಾನ ಪರಿಶಿಷ್ಟ ಜಾತಿಗೆ ಮೀಸಲು)
೨. ತುಮಕೂರು
೩. ಬೆಂಗಳೂರು ನಗರ (ಮೊದಲು ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ ಎಂದು ಹೆಸರಿಸಲಾಗಿತ್ತು.)
೪. ಬೆಂಗಳೂರು
೫. ಮಂಡ್ಯ
೬. ಮೈಸೂರು (೨) ದ್ವಿಸದಸ್ಯ ಕ್ಷೇತ್ರ (ಒಂದು ಸ್ಥಾನ ಪರಿಶಿಷ್ಟ ಜಾತಿಗೆ ಮೀಸಲು)
೭. ಹಾಸನ - ಚಿಕ್ಕಮಗಳೂರು
೮. ಶಿವಮೊಗ್ಗ
೯. ಚಿತ್ರದುರ್ಗ

**ಹೊಸದಾಗಿ ರಚಿತವಾದ ಕ್ಷೇತ್ರ ೧**

೧. ತಿಪಟೂರು. ಒಟ್ಟು ಲೋಕಸಭಾ ಸ್ಥಾನಗಳು ೨೬ (ಸಾಮಾನ್ಯ-೨೩, ಪರಿಶಿಷ್ಟ ಜಾತಿಗೆ ಮೀಸಲು - ೩) ಅದೇರೀತಿ ವಿಧಾನಸಭಾ ಸ್ಥಾನಗಳ ಸಂಖ್ಯೆ ೨೦೭ ಕ್ಕೆ ಏರಿತು. ಹಳೆಯ ಮೈಸೂರು ರಾಜ್ಯದಲ್ಲಿದ್ದ ವಿಧಾನಸಭಾ ಸ್ಥಾನಗಳ ಸಂಖ್ಯೆ ೯೯. ವಿಶಾಲ ಮೈಸೂರು ರಾಜ್ಯ ಸ್ಥಾಪನೆಯಿಂದ ಸೇರ್ಪಡೆಯಾದ ಸ್ಥಾನಗಳು ೧೦೮. ಒಂದು ನಾಮಕರಣ ಆಂಗ್ಲೋ ಇಂಡಿಯನ್ ಜನಾಂಗಕ್ಕೆ. ಇವುಗಳಲ್ಲಿ ರಾಯಭಾಗ್, ಹುಕ್ಕೇರಿ, ರಾಣಿಬೆನ್ನೂರು, ಇಂಡಿ, ಭಾಲ್ಕಿ, ಆಳಂದ, ಸೇಡಂ, ರಾಯಚೂರು, ಹರಪನಹಳ್ಳಿ, ಚಳ್ಳಕೆರೆ, ಚಿತ್ರದುರ್ಗ, ಹೊನ್ನಾಳಿ, ಚಿಕ್ಕಮಗಳೂರು, ಬೇಲೂರು, ಮಳವಳ್ಳಿ, ಸಿರಾ, ಮಧುಗಿರಿ, ಚಿಕ್ಕಬಳ್ಳಾಪುರ, ಮುಳಬಾಗಿಲು, ಕೆ.ಜಿ.ಎಫ್,. ಬೆಂಗಳೂರು ಉತ್ತರ, ಹೊಸಕೋಟೆ, ನೆಲಮಂಗಲ, ಬೆಂಗಳೂರು ದಕ್ಷಿಣ, ಕೊಳ್ಳೇಗಾಲ, ಮೈಸೂರು ಉತ್ತರ, ಚಾಮರಾಜನಗರ, ಹುಣಸೂರು, ಪುತ್ತೂರು, ಕಾರ್ಕಳ-ಈ ೨೮ ದ್ವಿಸದಸ್ಯ ಕ್ಷೇತ್ರಗಳಾಗಿದ್ದವು. ೨೮ ದ್ವಿಸದಸ್ಯ ಕ್ಷೇತ್ರಗಳಲ್ಲಿ ಒಂದೊಂದು ಸ್ಥಾನ ಮೀಸಲು ಸ್ಥಾನವಾಗಿದ್ದು, ಅದರಲ್ಲಿ ೨೬ ಪರಿಶಿಷ್ಟ ಜಾತಿಗೂ, ಪುತ್ತೂರು ಮತ್ತು ಕಾರ್ಕಳ ಎರಡು ಪರಿಶಿಷ್ಟ ವರ್ಗಕ್ಕೂ ಮೀಸಲಾಗಿತ್ತು. ಏಕ ಸದಸ್ಯ ಕ್ಷೇತ್ರಗಳು - ೧೭೯ ದ್ವಿ ಸದಸ್ಯ ಕ್ಷೇತ್ರಗಳು - ೨೮ ಒಟ್ಟು ೨೦೭

ಒಂದು ಆಂಗ್ಲೋ ಇಂಡಿಯನ್ ನಾಮಕರಣ. ಹೀಗಾಗಿ ಒಟ್ಟು ಸ್ಥಾನಗಳು ೨೦೮.

ಆಗ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ಸಾಹುಕಾರ್ ಚನ್ನಯ್ಯನವರಿದ್ದರು. ಅವರದ್ದು ಒಂದು ಗುಂಪು. ಅವರಿಗೆ ವಿರುದ್ಧವಾಗಿ ಕೆಂಗಲ್ ಹನುಮಂತಯ್ಯನವರದ್ದು ಇನ್ನೊಂದು ಗುಂಪು. ಎರಡೂ ಗುಂಪಿನವರೂ ತಮ್ಮ ತಮ್ಮ ಅಭ್ಯರ್ಥಿಗಳಿಗೆ ಚುನಾವಣೆಗಳಲ್ಲಿ ಟಿಕೆಟ್ ಕೊಡಿಸಲು ಪ್ರಯತ್ನಿಸುತ್ತಿದ್ದರು. ಹೀಗಾಗಿ ಪ್ರದೇಶ ಕಾಂಗ್ರೆಸ್ ಚುನಾವಣಾ ಸಮಿತಿಯಲ್ಲಿ ಭಿನ್ನಾಭಿಪ್ರಾಯ ಉಂಟಾಗಿತ್ತು. ರಾಜ್ಯದಲ್ಲಿ ಫೆಬ್ರವರಿ ೨೫, ೧೯೫೭ಕ್ಕೆ ಚುನಾವಣೆಗಳು ನಡೆಯುವುದೆಂದು ನಿಗದಿಯಾಯಿತು. ೧೭ ಡಿಸೆಂಬರ್ ೧೯೫೬ರಂದು ಮೈಸೂರು ನಗರದ ಟೌನ್‌ಹಾಲ್‌ನಲ್ಲಿ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯು ಚುನಾವಣಾ ಪ್ರಚಾರವನ್ನು ಉದ್ಘಾಟಿಸಲು ಒಂದು ಸಭೆಯನ್ನು ಏರ್ಪಡಿಸಿತು. ಕೆ. ಕಾಮರಾಜ್‌ರವರು ಇದರಲ್ಲಿ ಭಾಗವಹಿಸಿದ್ದರು. ಅರ್ಹತೆ, ಪ್ರಾಮಾಣಿಕತೆ, ನಡತೆ, ವೈಯಕ್ತಿಕ ಪಕ್ಷನಿಷ್ಠೆ ಇವುಗಳನ್ನು ನೋಡಿಕೊಂಡು ಚುನಾವಣೆಗೆ ಸೂಕ್ತವಾದ ಉಮೇದುವಾರರನ್ನು ಆರಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ೧೯೫೬ ಡಿಸೆಂಬರ್ ೨೫ರ ಹೊತ್ತಿಗೆ ಮುಂಬಯಿ ಕರ್ನಾಟಕದ ಕಾಂಗ್ರೆಸ್ ಸಮಿತಿ, ಹೈದರಾಬಾದ್ ಕರ್ನಾಟಕದ ಕಾಂಗ್ರೆಸ್ ಸಮಿತಿ ಹಾಗೂ ಹಳೆಯ ಮೈಸೂರು ಕಾಂಗ್ರೆಸ್ ಸಮಿತಿಗಳು ಚುನಾವಣಾ ಅಭ್ಯರ್ಥಿಗಳ ಪ್ರತ್ಯೇಕ ಪಟ್ಟಿಗಳನ್ನು ತಯಾರಿಸಿದವು. ಈ ಪಟ್ಟಿಗಳ ಬಗ್ಗೆ ಪಕ್ಷದಲ್ಲಿ ಭಾರೀ ಅತೃಪ್ತಿ ವ್ಯಕ್ತವಾಯಿತು. ಇದರ ಜೊತೆಗೆ ಭಿನ್ನಮತೀಯರೆನಿಸಿಕೊಂಡಿದ್ದ ಜನಾರ್ಧನರಾವ್ ದೇಸಾಯಿ, ಕೊಲ್ಲೂರು ಮಲ್ಲಪ್ಪ, ಕೆ.ಎಫ್. ಪಾಟೀಲ್, ಟಿ. ಆರ್, ನೇಸ್ವಿ ಇವರುಗಳೂ ಕೂಡಾ ಬೇರೆ ಬೇರೆಯಾಗಿ ಅಭ್ಯರ್ಥಿಗಳ ಪಟ್ಟಿ ಸಿದ್ಧಪಡಿಸಿ ಹೈಕಮಾಂಡ್‌ಗೆ ನೀಡಿದ್ದರು. ಅದನ್ನು ಹೈಕಮಾಂಡ್ ತಿರಸ್ಕರಿಸಿತು. ಈ ಪಟ್ಟಿಯಲ್ಲಿ ಹಿಂದುಳಿದ ವರ್ಗಗಳನ್ನು ಕಡೆಗಣಿಸಲಾಗಿದೆ, ಗುಂಪುಗಾರಿಕೆ ಹೆಚ್ಚಾಗಿದೆ ಎಂದು ದೂರುಗಳು ಕೇಂದ್ರ ಚುನಾವಣಾ ಸಮಿತಿಯಲ್ಲಿದ್ದ ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಶ್ರೀಮನ್ನಾರಾಯಣ್, ದೇಬೇಶ್ವರ ಮಿಶ್ರಾ ಮತ್ತು ಮರಗತಮ್ ಚಂದ್ರಶೇಖರ್ ಅವರನ್ನು ತಲುಪಿದವು.

ಮುಖ್ಯಮಂತ್ರಿ ನಿಜಲಿಂಗಪ್ಪ, ನೂತನ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷ ವಿ. ವೆಂಕಟಪ್ಪ, ಮೈಸೂರು ಕಾಂಗ್ರೆಸ್ ಅಧ್ಯಕ್ಷ ಸಾಹುಕಾರ ಚನ್ನಯ್ಯ ಇವರುಗಳು ದೆಹಲಿಗೆ ಹೋಗಿ, ಅಭ್ಯರ್ಥಿಗಳ ಆಯ್ಕೆ ಬಗ್ಗೆ ಕೇಂದ್ರ ಸಂಸದೀಯ ಮಂಡಲಿಯೊಡನೆ ಚರ್ಚಿಸಿ ಡಿಸೆಂಬರ್ ೩೧, ೧೯೫೬ ರಂದು ಬೆಂಗಳೂರಿಗೆ ಹಿಂದಿರುಗಿದರು. ೧೨ ಜನವರಿ ೧೯೫೭ ರಂದು ಸಾಹುಕಾರ ಚನ್ನಯ್ಯನವರು ಮತ್ತೊಂದು ಪಟ್ಟಿಯೊಡನೆ ದೆಹಲಿಗೆ ಹೋದರು. ಈ ಪಟ್ಟಿಯ ಬಗ್ಗೆಯೂ ಅತೃಪ್ತಿ ವ್ಯಕ್ತವಾಗಿ ದೆಹಲಿಗೆ ದೂರುಗಳು ಹೋದವು. ಜನವರಿ ೧೩, ೧೪, ೧೯೫೭ ರಂದು ಕೆಂಗಲ್ ಹನುಮಂತಯ್ಯನವರೂ ದೆಹಲಿಗೆ ಹೋಗಿ ಅಭ್ಯರ್ಥಿಗಳ ಆಯ್ಕೆ ಬಗ್ಗೆ ಕೇಂದ್ರ ಸಂಸದೀಯ ಮಂಡಲಿಯೊಡನೆ ಚರ್ಚಿಸಿ ೧೫ ರಂದು ನಗರಕ್ಕೆ ಹಿಂದಿರುಗಿದರು. ಕೊನೆಗೆ ೧೭.೧.೧೯೫೭ರಂದು ಕೇಂದ್ರ ಚುನಾವಣಾ ಸಮಿತಿಯು ಉತ್ತರ ಕರ್ನಾಟಕದ ಕಾಂಗ್ರೆಸ್ ಅಭ್ಯರ್ಥಿಗಳ ಯಾದಿಯನ್ನು ಮಾತ್ರ ಬಿಡುಗಡೆ ಮಾಡಿತು.

ದಿನಾಂಕ ೨೩.೧.೧೯೫೭ ರಂದು, ಕೇಂದ್ರ ಚುನಾವಣಾ ಸಮಿತಿ ಹಳೇ ಮೈಸೂರು ಪ್ರದೇಶದ ಕಾಂಗ್ರೆಸ್ ಹುರಿಯಾಳುಗಳ ಪಟ್ಟಿಯನ್ನು ಬಿಡುಗಡೆ ಮಾಡಿತು. ಕೆಂಗಲ್ ಹನುಮಂತಯ್ಯ, ಟಿ. ಸಿದ್ಧಲಿಂಗಯ್ಯ, ಎಸ್. ಕರಿಯಪ್ಪ ಇವರಿಗೆ ಟಿಕೆಟ್ ನಿರಾಕರಿಸಲಾಗಿತ್ತು. ಕಾಂಗ್ರೆಸ್ ಉಮೇದುವಾರರ ಆಯ್ಕೆ ಕೊನೆಗೊಂಡಿದೆ, ವಾದ ವಿವಾದಕ್ಕೆ ಅವಕಾಶವಿಲ್ಲ ಎಂದು ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಶ್ರೀಮನ್ನಾರಾಯಣ್ ಪ್ರಕಟಿಸಿದರು. ೨೫ ಜನವರಿ ೧೯೫೭ರಂದು ಮೈಸೂರು ಕಾಂಗ್ರೆಸ್‌ನ ೨೦೦ ಜನ ಸದಸ್ಯರು ಸಭೆ ಸೇರಿದರು. ಪಿ.ಆರ್. ರಾಮಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಕೆಂಗಲ್ ಹನುಮಂತಯ್ಯನವರು ಸಭೆಯನ್ನುದ್ದೇಶಿಸಿ ಮಾತನಾಡಿದರು. ಅಭ್ಯರ್ಥಿಗಳ ಪಟ್ಟಿಯ ಬಗ್ಗೆ ತೀವ್ರ ಅತೃಪ್ತಿ ವ್ಯಕ್ತಪಡಿಸಲಾಯಿತು. ಕೊನೆಗೆ ಎಚ್. ಸಿ. ದಾಸಪ್ಪನವರಿಗೆ ಲೋಕಸಭೆಗೆ ಟಿಕೆಟ್ ನೀಡಲಾಯಿತು. ಕೆಂಗಲ್ ಹನುಮಂತಯ್ಯ, ಟಿ. ಸಿದ್ಧಲಿಂಗಯ್ಯ, ಕರಿಯಪ್ಪ ಇವರಿಗೂ ಟಿಕೆಟ್ ನೀಡಲಾಯಿತು. ನಿಜಲಿಂಗಪ್ಪನವರಿಗೆ ಮೊಳಕಾಲ್ಮೂರು ಕ್ಷೇತ್ರದಿಂದ ಟಿಕೆಟ್ ನೀಡಲಾಗಿತ್ತು. ಈ ಕೆಳಕಂಡ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಅಭ್ಯರ್ಥಿಗಳು ೧೯೫೭ರ ಮಹಾಚುನಾವಣೆಗಳಲ್ಲಿ ಮೈಸೂರು ರಾಜ್ಯದಿಂದ ಅವಿರೋಧವಾಗಿ ಆಯ್ಕೆಯಾದರು.

**ಲೋಕಸಭೆ - ಎರಡು ಸ್ಥಾನಗಳು**

೧. ಹಾಸನ - ಸಿದ್ದನಂಜಪ್ಪ    ೨. ಕೋಲಾರ (ಪ. ಜಾ. ಮೀಸಲುಸ್ಥಾನ) - ದೊಡ್ಡತಿಮ್ಮಯ್ಯ

**ವಿಧಾನಸಭೆ**

| | | | | | |
|---|---|---|---|---|---|
| ೧. | ಸಂಪಗಾವಿ -೨ | ಎಂ. ಎನ್. ನಾಗನೂರ್ (ಮುಸ್ಲಿಂ ಅಭ್ಯರ್ಥಿ) | ೨. | ಅಫಜಲಪುರ | ಅಣ್ಣಾರಾವ್ ಬಸಪ್ಪ ಗಣಮುಖಿ |
| ೩. | ಶಹಾಪುರ | ವಿರೂಪಾಕ್ಷಪ್ಪ | ೪. | ಚನ್ನಗಿರಿ | ಕುಂದೂರು ರುದ್ರಪ್ಪ |

೫. ಶೃಂಗೇರಿ ಕಡಿದಾಳು ಮಂಜಪ್ಪ ೬. ಬೈಂದೂರು ಮಂಜಯ್ಯ ಶೆಟ್ಟಿ
೭. ಕಾರ್ಕಳ (ಮೀಸಲು ಸ್ಥಾನದಿಂದ) ಮಂಜಪ್ಪ ಉಲ್ಲಾಳ

**ಸ್ವತಂತ್ರ ಅಭ್ಯರ್ಥಿ**

೮. ಜ್ಞಾನಾನಂದ ಸರ್ವೇಶ್ (ಮೀಸಲು ಸ್ಥಾನದಿಂದ) ಸೇಡಂ

ಇಡೀ ದೇಶದಲ್ಲಿ ಲೋಕಸಭೆಗೆ ೯ ಜನ ಅವಿರೋಧವಾಗಿ ಆಯ್ಕೆಯಾಗಿದ್ದರು. ಅದರಲ್ಲಿ ಆರು ಕಾಂಗ್ರೆಸ್ ಅಭ್ಯರ್ಥಿಗಳು. ಅದರಲ್ಲಿ ಇಬ್ಬರು ಮೈಸೂರು ರಾಜ್ಯದವರು. ಅದೇ ರೀತಿ ಇಡೀ ದೇಶದಲ್ಲಿ ವಿಧಾನಸಭೆಗಳಿಗೆ ಒಟ್ಟು ೨೮ ಜನ ಸದಸ್ಯರು ಅವಿರೋಧವಾಗಿ ಆಯ್ಕೆಯಾದರು. ಅದರಲ್ಲಿ ಎಂಟು ಜನ ಸದಸ್ಯರು ಮೈಸೂರು ವಿಧಾನಸಭೆಗೆ ಅವಿರೋಧವಾಗಿ ಆಯ್ಕೆಯಾದರು. ಅದರಲ್ಲಿ ೭ ಜನ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನವರು. ಮೈಸೂರು ರಾಜ್ಯದ ಮಟ್ಟಿಗೆ ಇದೊಂದು ಅಖಿಲ ಭಾರತ ದಾಖಲೆ ಆಯಿತು.

ಚನ್ನಗಿರಿ ಕ್ಷೇತ್ರದಲ್ಲಿ ಪ್ರಜಾ ಸಮಾಜವಾದಿ ಪಕ್ಷದ ಅಭ್ಯರ್ಥಿ ನಿಧನರಾಗಿದ್ದರಿಂದ ಆಗಿನ ಚುನಾವಣಾ ನಿಯಮಗಳಂತೆ ಕಾಂಗ್ರೆಸ್ ಪಕ್ಷದ ಕುಂದೂರು ರುದ್ರಪ್ಪ ಆಯ್ಕೆ ಆಗಿದ್ದಾರೆಂದು ಘೋಷಿಸಲಾಯಿತು. ಅವಿರೋಧವಾಗಿ ಆಯ್ಕೆಯಾದವರನ್ನು ಹೊರತುಪಡಿಸಿದರೆ, ಲೋಕಸಭೆಯ ೨೪ ಸ್ಥಾನಗಳಿಗೆ ೬೩ ಅಭ್ಯರ್ಥಿಗಳೂ, ವಿಧಾನಸಭೆಯ ೨೦೦ ಸ್ಥಾನಗಳಿಗೆ ೫೫೭ ಹುರಿಯಾಳುಗಳೂ ಸ್ಪರ್ಧೆಯಲ್ಲಿ ಉಳಿದಿದ್ದರು. ನಿಜಲಿಂಗಪ್ಪನವರು ರಾಜ್ಯದಾದ್ಯಂತ ಸಂಚರಿಸಿ ಚುನಾವಣಾ ಪ್ರಚಾರ ಭಾಷಣಗಳನ್ನು ಮಾಡಿದರು. 'ಲೋಕಸೇವ ಸಂಘದ ಪಕ್ಷಾತೀತ ಸರ್ಕಾರ ರಚನೆಯ ಕೂಗು ಕೇವಲ ಹುಡುಗಾಟ, ಪ್ರಜಾಪ್ರಭುತ್ವದ ರಾಷ್ಟ್ರಗಳಲ್ಲಿ ಅದು ಸಾಧ್ಯವಿಲ್ಲ,' ಎಂದು ಅವರು ಹೇಳಿದರು.

**೧೯೫೭ ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆ**

೧೯೫೭ರ ಮಹಾ ಚುನಾವಣೆಗಾಗಿ ದಿನಾಂಕ ೩೧.೧೨.೧೯೫೬ ರಂದು ಕಾಂಗ್ರೆಸ್ ಪಕ್ಷ ತನ್ನ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿತು. ಜನವರಿ, ೫,೬,೭ ೧೯೫೭ ರಂದು ಇಂದೋರ್‌ನಲ್ಲಿ ನಡೆದ ಎಐಸಿಸಿ ಅಧಿವೇಶನದಲ್ಲಿ ಇದನ್ನು ಅಂಗೀಕರಿಸಲಾಯಿತು. 'ಸಮಾಜವಾದಿ ಸಮಾಜ ರಚನೆಯೇ ಕಾಂಗ್ರೆಸ್‌ನ ಗುರಿ, ಜೀವನ ಪದ್ಧತಿಯೇ ಹಾಗೆ ಮಾರ್ಪಡಲಿ' ಎಂಬುದು ಆ ಚುನಾವಣಾ ಘೋಷಣೆಯ ಮುಖ್ಯ ಕರೆಯಾಗಿತ್ತು. 'ಜನತೆಯ ಪ್ರಗತಿ ಮತ್ತು ವಿಶ್ವಶಾಂತಿಗಾಗಿ ಹೆಣಗುವುದೇ' ಕಾಂಗ್ರೆಸ್ಸಿನ ಪ್ರಮುಖ ಗುರಿಯಾಗಿದೆ ಎಂದು ಈ ಘೋಷಣಾ ಪತ್ರದಲ್ಲಿ ಹೇಳಲಾಗಿತ್ತು.

**ಚುನಾವಣಾ ಪ್ರಣಾಳಿಕೆಯ ಮಹತ್ವದ ವಿವರಗಳು ಈ ಕೆಳಗಿನಂತಿವೆ.**

ಅಂತರರಾಷ್ಟ್ರೀಯ ರಂಗದಲ್ಲಿಯೂ ಭಾರತದ ಗ್ರಹಗತಿ ಉಚ್ಚವಾಗಿದ್ದು ಅದು ಪ್ರಶಂಸನೀಯ ಕಾರ್ಯವನ್ನು ಸಾಧಿಸಿದೆ. ಭಾರತದಲ್ಲಿ ಈಗ ನಡೆದಿರುವ ರಾಜಕೀಯ ಕ್ರಾಂತಿಯ ನಂತರ, ಆರ್ಥಿಕ ಸಾಮಾಜಿಕ ಕ್ರಾಂತಿಗಳು ಪೂರ್ತಿಗೊಂಡರೇನೇ ಭಾರತದಲ್ಲಿಯ ಕ್ರಾಂತಿಯು ಪೂರ್ಣವಾಗುವುದು. ಭಾರತದಲ್ಲಿ ಈಗ ನಡೆದಿರುವ ಮಾರ್ಪಾಡುಗಳು ದೇಶದಲ್ಲಿ ಸಕಲರಿಗೆ ಸಮಾನತೆ, ಸ್ವಾತಂತ್ರ್ಯ, ಸಮಾನ ಅವಕಾಶಗಳನ್ನು ಒದಗಿಸುವಂಥ ಸಮಾಜವಾದಿ ಸಮಾಜ ಸ್ಥಾಪನೆಯಾಗುವವರೆಗೆ ಹೀಗೇ ನಡೆಯುವುದು.

**ವಿದೇಶನೀತಿ ವಿಚಾರ**

ಭಾರತದಲ್ಲಿ ವಿದೇಶಿ ವಸಾಹತೊಂದು (ಗೋವಾ) ಉಳಿಯುವುದನ್ನು ಭಾರತ ಸಹಿಸದು. ಆದರೂ ಈ ಸಮಸ್ಯೆಯನ್ನು ಶಾಂತಿಯಿಂದ ಬಿಡಿಸಲು ಪ್ರಯತ್ನಿಸಲಾಗುವುದು. ಭಾರತ - ಪಾಕಿಸ್ತಾನಗಳ ನಡುವಿನ ಸಮಸ್ಯೆಗಳನ್ನು ಶಾಂತ ರೀತಿಯಿಂದ ಬಿಡಿಸಲು ಕಾಂಗ್ರೆಸ್ ಪ್ರಯತ್ನಿಸುವುದು. ಪಂಚಶೀಲಗಳ ತಳಹದಿಯ ಮೇಲೆಯೇ ಜಾಗತಿಕ ಶಾಂತಿಯನ್ನು ಸಾಧಿಸಲು ಸಾಧ್ಯ. ಈ ದೃಷ್ಟಿಯಿಂದ ಬಾಂಡುಂಗ್ ಪರಿಷತ್ತು ಸ್ವಾಗತಾರ್ಹವಾಗಿದೆ. ಜನತಾ ಚೀನಕ್ಕೆ ಸಂಯುಕ್ತ ರಾಷ್ಟ್ರ ಸಂಸ್ಥೆಯಲ್ಲಿ ಪ್ರವೇಶ ಕೊಡಬೇಕು. ಸೈನಿಕ ಒಡಂಬಡಿಕೆ ಮತ್ತು ಮೈತ್ರಿ ಒಡಂಬಡಿಕೆಗಳನ್ನು ಮಾಡಿಕೊಳ್ಳುವುದು ಭಾರತದ ವಿದೇಶ ನೀತಿಗೆ ಅನುಗುಣವಾಗಿಲ್ಲ. ಕೊರಿಯಾ ಮತ್ತು ಇಂಡೋಚೀನಾಗಳಲ್ಲಿ ಶಾಂತಿ ಸ್ಥಾಪನೆಯಲ್ಲಿ ಕೈಲಾದ ನೆರವು ನೀಡಿಕೆ. ದಕ್ಷಿಣ ಆಫ್ರಿಕದ ವರ್ಣದ್ವೇಷ ಖಂಡನೀಯ.

**ಆರ್ಥಿಕ ಯೋಜನೆಗಳು**

ಭಾರತದ ಆರ್ಥಿಕ ಜೀವನದಲ್ಲಿ ಸುಲಿಗೆ ನಡೆಯಬಾರದು, ಗುತ್ತಿಗೆದಾರಿಕೆ ತಲೆ ಎತ್ತಬಾರದು. ಆರ್ಥಿಕ ಆದಾಯದಲ್ಲಿ ಏರುಪೇರುಗಳು ಕಡಿಮೆಯಾಗಬೇಕು. ಪ್ರತಿಯೊಬ್ಬನಿಗೂ ಜೀವನಾವಶ್ಯಕ ವಸ್ತುಗಳು ಹಾಗೂ ಶಿಕ್ಷಣ, ಆರೋಗ್ಯ ದೊರೆತು ಅವನು

ಉತ್ಪಾದಕ ಕಾರ್ಯದಲ್ಲಿ ನಿರತನಾಗುವ ಅವಕಾಶ ಸಿಗುವಂತಾಗಬೇಕು. ದೇಶದ ಆರ್ಥಿಕ ದೃಷ್ಟಿಯಿಂದ ಮಹತ್ವಪೂರ್ಣವಾದ ಖಾಸಗಿ ಉದ್ದಿಮೆಗಳನ್ನು ರಾಷ್ಟ್ರೀಕರಿಸಲಾಗುವುದೇ ಹೊರತು ಎಲ್ಲ ಖಾಸಗಿ ಉದ್ದಿಮೆಗಳನ್ನು ರಾಷ್ಟ್ರೀಕರಿಸಲಾಗುವುದಿಲ್ಲ. ದೇಶದ ಯೋಜನೆಗಳನ್ನು ಗಮನದಲ್ಲಿಟ್ಟುಕೊಂಡು ಖಾಸಗಿ ಉದ್ದಿಮೆಗಳಿಗೆ ಪ್ರೋತ್ಸಾಹ. ವಿದೇಶಿ ನೆರವಿಗೆ ಸ್ವಾಗತ. ಆದರೆ ಬಂಡವಾಳವನ್ನು ಒದಗಿಸುವಲ್ಲಿ ಹೆಚ್ಚಿನ ಭಾರ ಸಮರ್ಥರಾದವರ ಮೇಲೆ ಬೀಳಬೇಕು. ಈ ದೃಷ್ಟಿಯಿಂದ ದೇಶದ ತೆರಿಗೆ ಪದ್ಧತಿಯನ್ನು ಪುನರ್ರಚಿಸಲಾಗುವುದು.

**ಕೃಷಿ ರಂಗ**

ಭೂಮಿಯ ಹಿಡುವಳಿಯ ಪರಮಾವಧಿ ಪ್ರಮಾಣ ಜಾರಿಗೆ. ಸಹಕಾರಿ ತಳಹದಿಯ ಮೇಲೆ ಸುಧಾರಿತ ಬೇಸಾಯ ಪದ್ಧತಿಗಳ ಜಾರಿ. ದ್ವಿತೀಯ ಯೋಜನೆ ಅಂತ್ಯಕ್ಕೆ ಆಹಾರಧಾನ್ಯ ಉತ್ಪಾದನೆಯಲ್ಲಿ ನೂರಕ್ಕೆ ೩೫ ರಿಂದ ೪೦ ಹೆಚ್ಚಿಗೆ ಉತ್ಪಾದನೆ ಸಾಧನೆ. ಸಮಾಜ ವಿಕಾಸ ಯೋಜನೆ, ರಾಷ್ಟ್ರೀಯ ವಿಸ್ತರಣಾ ಯೋಜನೆಗಳಿಂದ ಸ್ವಾವಲಂಬನೆ ಹಾಗೂ ಸಹಕಾರಿ ಪ್ರವೃತ್ತಿಯ ಜಾಗೃತಿ.

**ಔದ್ಯೋಗಿಕ ರಂಗ**

ಸಹಕಾರಿ ತತ್ವ ಅನುಸರಣೆಯಿಂದ ಉದ್ದಿಮೆಗಳಲ್ಲಿ ಕೂಲಿಕಾರರು ಭಾಗವಹಿಸುವಂತೆ ಮಾಡುವುದರ ಮೂಲಕ ನಿರುದ್ಯೋಗ ನಿವಾರಣೆ ಮಾಡಿ, ಔದ್ಯೋಗಿಕ ಪ್ರಜಾಪ್ರಭುತ್ವ ಸ್ಥಾಪನೆ. ಔದ್ಯೋಗಿಕ ರಂಗದಲ್ಲಿ, ಶೈಕ್ಷಣಿಕ ಸಂಸ್ಥೆಗಳಲ್ಲಿ ಶಾಂತಿಯನ್ನು ಕಾಪಾಡುವುದು. ಈ ರಂಗಗಳಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಶಾಂತ ರೀತಿಯಿಂದ ಸಹಕಾರಿ ತತ್ವದ ಮೇಲೆ, ಉತ್ಪಾದನಾ ಕಾರ್ಯಕ್ಕೆ ವ್ಯತ್ಯಯ ಬರದಂತೆ ಬಿಡಿಸುವುದು.

**ನಾಗಾ ಸಮಸ್ಯೆ**

ನಾಗಾ ಜನರ ಹಿಂಸಾಚಾರ ದುರ್ದೈವದ ಸಂಗತಿ. ಅವರಿಗೆ ಸ್ವಲ್ಪಮಟ್ಟಿಗೆ ಸ್ವಾಯತ್ತತೆ ಅಗತ್ಯ. ಅವರ ತಪ್ಪು ತಿಳುವಳಿಕೆಗಳನ್ನು ದೂರ ಮಾಡಿ ಅವರು ಭಾರತೀಯ ಕುಟುಂಬದ ಸಂತೃಪ್ತ ನಾಗರಿಕರಂತೆ ಬಾಳುವಂತೆ ಮಾಡಲಾಗುವುದು.

**ಮದ್ಯಪಾನ ನಿರೋಧ**

ಪಾನ ನಿರೋಧ ಜಾರಿಯಲ್ಲಿಲ್ಲದ ಪ್ರದೇಶಗಳಲ್ಲಿ ಪಾನ ನಿರೋಧ ಜಾರಿ.

**ರಾಜ್ಯ ಪುನರ್ಘಟನೆ ಘರ್ಷಣೆ**

ರಾಜ್ಯ ಪುನರ್ಘಟನೆಗಳ ವಿಚಾರದಲ್ಲಿ ಎಷ್ಟೋ ರಾಜ್ಯಗಳಲ್ಲಿ ಘರ್ಷಣೆ, ಅಶಾಂತಿಯ ವಾತಾವರಣ ಇದ್ದು ಇದನ್ನು ಶಾಂತಿಯಿಂದ ಬಗೆಹರಿಸಿಕೊಳ್ಳಬೇಕು. ಈ ಶಕ್ತಿ ಮತ್ತು ಮನೋಭಾವ ಭಾರತೀಯರಿಗೆ ಇದೆ. ಪ್ರಾಂತೀಯತೆ, ಪ್ರತ್ಯೇಕತಾ ಭಾವನೆಗಳ ನಿವಾರಣೆ ಆಗಬೇಕು. ಧಾರ್ಮಿಕ, ಭಾಷಿಕ ಅಲ್ಪ ಸಂಖ್ಯಾತರಿಗೆ ದೇಶದ, ಜೀವನದ ವಿವಿಧ ರಂಗಗಳಲ್ಲಿ ಯೋಗ್ಯ ಪಾತ್ರ ವಹಿಸುವ ಅವಕಾಶ ದೊರೆಯುವಂತೆ ನೋಡಿಕೊಳ್ಳುವುದು.

**ಸಮಾಜವಾದದ ಸ್ವರೂಪ**

ಕಾಂಗ್ರೆಸ್ ರೂಪಿಸಿರುವ ಸಮಾಜವಾದಿ ಪದ್ಧತಿಯಲ್ಲಿ ಜಾತಿ, ವರ್ಗಗಳಿಗೆ ಅವಕಾಶವಿಲ್ಲ. ಜಾತಿ-ಧರ್ಮ, ಸಿರಿವಂತಿಕೆ, ಅನುವಂಶಿಕತೆ ಮೂಲವಾದ ಸೌಕರ್ಯ ಸೌಲಭ್ಯಗಳ ನಿರ್ಮೂಲನೆ. ವ್ಯಕ್ತಿಯ ಯೋಗ್ಯತೆ, ದುಡಿಮೆಗೆ ಪುರಸ್ಕಾರ ನೀಡಿಕೆ.

**ಸಹಕಾರಿ ರಂಗ**

ಭಾರತದ ೪೦ ಕೋಟಿ ಜನರಿಗೆ ನಿಜವಾದ ಸ್ವಾತಂತ್ರ್ಯ ಸಮೃದ್ಧಿ ಸಮಾನತೆಗಳನ್ನು ತಂದುಕೊಡಲು ಪ್ರಚಂಡ ಸಹಕಾರಿ ಪ್ರಯತ್ನ. ಉತ್ಪಾದನಾ ಕಾರ್ಯಗಳಿಗೆ ಆದ್ಯತೆ. ನಿರಾಡಂಬರ ಸರಳ ಜೀವನಕ್ಕೆ ಜನರಿಗೆ ಧುರೀಣರ ಮಾರ್ಗದರ್ಶನ. ದೊಡ್ಡ ಪ್ರಮಾಣದಲ್ಲಿ ಔದ್ಯೋಗೀಕರಣ ಮತ್ತು ಕೃಷಿ ರಂಗದಲ್ಲಿ ಸುಧಾರಿತ ಪದ್ಧತಿಗಳನ್ನು ಅವಲಂಬಿಸಿ ನವಭಾರತ ನಿರ್ಮಾಣ ಕಾರ್ಯ. ಉಳಿತಾಯವನ್ನು ಸಾಧಿಸಿ ಅದನ್ನು ದೇಶದ ಭಾವಿ ಪ್ರಗತಿಗೆ ತೊಡಗಿಸುವುದು.

## ಆಹಾರಧಾನ್ಯ ಉತ್ಪಾದನೆ

ದ್ವಿತೀಯ ಯೋಜನೆ ಕೊನೆಯ ವೇಳೆಗೆ ದೇಶದ ಆಹಾರ ಉತ್ಪಾದನೆಯಲ್ಲಿ ಶೇಕಡಾ ೩೫ ರಿಂದ ೪೦ ಹೆಚ್ಚಳ. ಹಳ್ಳಿಗಳಿಗಾಗಿ ಸಮಗ್ರ ಯೋಜನೆ. ಒಕ್ಕಲುತನ ಉತ್ಪಾದನೆ ಕಾರ್ಯದಲ್ಲಿ ಸಹಕಾರಿ ಪದ್ಧತಿ ಜಾರಿ, ಒಕ್ಕಲುತನ ಸಹಕಾರಿ ಸಂಘಗಳ ರಚನೆ. ಅಗತ್ಯವಿದ್ದಲ್ಲಿ ಮಾತ್ರ ದೊಡ್ಡ ಸಹಕಾರಿ ಸಂಘಗಳ ಸ್ಥಾಪನೆ. ಸಹಕಾರವನ್ನು ಜನತೆಯ ಚಳವಳಿ ಎಂದು ಸರ್ಕಾರದ ನೇತೃತ್ವದಲ್ಲಿ ಬೆಳೆಸಿಕೊಂಡು ಬರುವುದು.

## ದ್ವಿತೀಯ ಪಂಚವಾರ್ಷಿಕ ಯೋಜನೆ

ಒಕ್ಕಲುತನ ಹಾಗೂ ಉದ್ಯಮ ರಂಗಗಳಲ್ಲಿ ಮತ್ತು ದೊಡ್ಡ ದೊಡ್ಡ ಉದ್ದಿಮೆಗಳಲ್ಲಿ ಸಮತೋಲನ ಸಾಧನೆ.

## ಉತ್ಪಾದನೆಯ ಹೆಚ್ಚಳ

ಔದ್ಯೋಗೀಕರಣ ಸಾಧನೆ. ಭಾರೀ ಉದ್ದಿಮೆಗಳನ್ನು ಭರದಿಂದ ಸ್ಥಾಪಿಸುವುದು. ಚಿಕ್ಕ ಪುಟ್ಟ ಉದ್ದಿಮೆಗಳಿಗೆ ಪ್ರೋತ್ಸಾಹ. ಸಾಧ್ಯವಾದ ಮಟ್ಟಿಗೆ ವಿಕೇಂದ್ರೀಕರಣ ಸಾಧನೆ.

## ಕಾಂಗ್ರೆಸ್‌ನ ವೈಶಿಷ್ಟ್ಯ

ಕಳೆದ ಮೂರು ಪೀಳಿಗೆಗಳಿಂದ ಕಾಂಗ್ರೆಸ್ ಭಾರತದ ಜನತೆಯೊಂದಿಗೆ ಒಂದಾಗಿದೆ. ದೇಶದ ಐಕ್ಯತೆ, ಭದ್ರತೆಗಳನ್ನು ಕಾಯ್ದುಕೊಂಡು ಜನಹಿತದ ಮಹಾಕಾರ್ಯಗಳನ್ನು ಸಾಧಿಸಲು ಸಮರ್ಥವಾಗಿದೆ. ಕಾಂಗ್ರೆಸ್ ಭಾರತೀಯರ ಕಲ್ಯಾಣಕ್ಕಾಗಿ, ವಿಶ್ವಶಾಂತಿಗಾಗಿ ಶ್ರಮಿಸಲು ಕಟಿಬದ್ಧವಾಗಿದೆ.

## ಫಲಿತಾಂಶ

ಕಾಂಗ್ರೆಸ್ ಪಕ್ಷ ೨೦೮ ವಿಧಾನಸಭಾ ಸ್ಥಾನಗಳ ಪೈಕಿ ೧೪೮ ಸ್ಥಾನಗಳನ್ನು ಪಡೆಯಿತು. ಪಕ್ಷೇತರರಾಗಿ ಆಯ್ಕೆಯಾಗಿದ್ದ ೩೦ ಅಭ್ಯರ್ಥಿಗಳಲ್ಲಿ ಅನೇಕರು ಬಂಡಾಯ ಕಾಂಗ್ರೆಸ್ಸಿಗರಾಗಿದ್ದರು. ೧೪ ಮಹಿಳೆಯರು ಕಾಂಗ್ರೆಸ್ ಅಭ್ಯರ್ಥಿಗಳಾಗಿ ವಿಧಾನಸಭೆಗೆ ಆರಿಸಿ ಬಂದಿದ್ದು ವಿಶೇಷವಾಗಿತ್ತು. ಲೋಕಸಭೆಯ ೨೬ ಸ್ಥಾನಗಳ ಪೈಕಿ ೨೩ ಸ್ಥಾನಗಳನ್ನು ಕಾಂಗ್ರೆಸ್ ಪಡೆಯಿತು. ಪಿ.ಎಸ್.ಪಿ., ಎಸ್.ಸಿ.ಎಫ್., ಎಲ್.ಎಸ್.ಎಸ್. ತಲಾ ಒಂದೊಂದು ಸ್ಥಾನ ಪಡೆದವು. ನಿಜಲಿಂಗಪ್ಪನವರು ಮುಖ್ಯಮಂತ್ರಿ ಆಗುವುದು ಹೆಚ್ಚು ಕಡಿಮೆ ನಿರ್ಧಾರಿತವಾಗಿತ್ತು. ಅದೇ ಸಮಯದಲ್ಲಿ ವಿಧಾನಸೌಧ ನಿರ್ಮಾಣ ಕಾಮಗಾರಿಗಳಲ್ಲಿ ನಡೆದಿರತಕ್ಕ ಅವ್ಯವಹಾರಗಳ ಬಗ್ಗೆ ಚರ್ಚೆ ಆರಂಭವಾಯಿತು. ಈ ಬಗ್ಗೆ ತನಿಖೆ ನಡೆಸಲು ಸಮಿತಿ ನೇಮಕ ಮಾಡಲಾಯಿತು. ಇದರಿಂದ ಹನುಮಂತಯ್ಯನವರಿಗೂ ನಿಜಲಿಂಗಪ್ಪನವರಿಗೂ ಭಿನ್ನಾಭಿಪ್ರಾಯಗಳು ಉಂಟಾದವು. ೬.೪.೧೯೫೭ರಂದು ಕಾಂಗ್ರೆಸ್ ಶಾಸಕಾಂಗ ಪಕ್ಷದ ಸಭೆ ಸೇರಿತು. ಕೇಂದ್ರ ಕಾಂಗ್ರೆಸ್ ಸಮಿತಿ ವೀಕ್ಷಕರಾಗಿ ಬಂದಿದ್ದ ಕೆ.ಪಿ. ಮಾಧವನ್ ನಾಯರ್ ಈ ಸಭೆಯ ಅಧ್ಯಕ್ಷತೆ ವಹಿಸಿದ್ದರು. ನಿಜಲಿಂಗಪ್ಪನವರು ಅವಿರೋಧವಾಗಿ ಮುಖ್ಯಮಂತ್ರಿ ಸ್ಥಾನಕ್ಕೆ ಆಯ್ಕೆಯಾದರು.

## ವಿಧಾನಸಭಾ ಚುನಾವಣೆಗಳಲ್ಲಿ ಗೆದ್ದ ಕಾಂಗ್ರೆಸ್ ಪ್ರಮುಖರು

ಎಸ್.ಡಿ. ಕೊಠಾವಳೆ - ಚಿಕ್ಕೋಡಿ, ಎಂ.ಪಿ. ಪಾಟೀಲ್-ಹುಕ್ಕೇರಿ, ಎ. ಆರ್. ಪಂಚಗಾವಿ, -ಗೋಕಾಕ್, ಎಚ್.ವಿ. ಕೌಜಲಗಿ - ಸಂಪಗಾವಿ, ಎಸ್.ಡಿ. ಗಾಂವ್‌ಕರ್ - ಕಾರವಾರ, ರಾಮಕೃಷ್ಣ ಹೆಗಡೆ - ಶಿರಸಿ, ಕೆ.ಎಫ್. ಪಾಟೀಲ್ - ರಾಣಿ ಬೆನ್ನೂರು, ಮೈಲಾರ ಸಿದ್ದಮ್ಮ, - ಹಾವೇರಿ, ಮಾಗಡಿ ಲೀಲಾವತಿ - ಶಿರಹಟ್ಟಿ, ಎಫ್. ಎಚ್. ಮೊಹಿಸೀನ್ - ಹುಬ್ಬಳ್ಳಿ ನಗರ, ಆರ್. ಎಂ. ಪಾಟೀಲ್ - ನವಲಗುಂದ್, ಅಂದಾನಪ್ಪ ದೊಡ್ಡಮೇಟಿ - ರೋಣ, ಎಸ್. ಆರ್. ಕಂಠಿ- ಹುನಗುಂದ, ಬಿ.ಡಿ. ಜತ್ತಿ- ಜಮಖಂಡಿ, ಸಿ. ಜೆ. ಅಂಬಲಿ-ತಿಕೋಟಾ, ವೀರೇಂದ್ರ ಪಾಟೀಲ್ - ಚಿಂಚೋಳಿ, ಮೊಹಮದ್ ಅಲಿ - ಗುಲಬರ್ಗಾ, ಅಣ್ಣಾರಾವ್ ಗಣಮುಖಿ - ಅಫಜಲಪುರ, ಶ್ರೀಮತಿ ಬಸವರಾಜೇಶ್ವರಿ - ಮಾನ್ವಿ, ಆರ್. ನಾಗನಗೌಡ - ಹೊಸಪೇಟೆ, ಬಿ. ಇ. ರಾಮಯ್ಯ - ಸಿರಗುಪ್ಪ, ಭೀಮಪ್ಪ ನಾಯಕ, - ಚಳ್ಳಕೆರೆ, ಎಚ್. ಎಸ್. ರುದ್ರಪ್ಪ - ಹೊನ್ನಾಳಿ, ಎ. ಆರ್. ಬದರಿನಾರಾಯಣ - ತೀರ್ಥಹಳ್ಳಿ, ಟಿ. ಸುಬ್ರಹ್ಮಣ್ಯಂ - ತುರುವೇಕೆರೆ, ಎನ್. ಹುಚ್ಚಮಾಸ್ತಿಗೌಡ - ಚಂದ್ರಶೇಖರಪುರ, ಮಾಲಿ ಮರಿಯಪ್ಪ - ಮಧುಗಿರಿ, ಎಸ್. ಮುನಿರಾಜು - ಚಿಕ್ಕಬಳ್ಳಾಪುರ, ಎಚ್. ಸಿ. ಲಿಂಗಾರೆಡ್ಡಿ - ಮಾಲೂರು,

ಎಲ್. ಎಸ್. ವೆಂಕಾಜಿರಾವ್ - ಬಸವನಗುಡಿ, ಶ್ರೀಮತಿ ಗ್ರೇಸ್ ಠಕ್ಕರ್ -ಅಲಸೂರು, ಕೆ. ಹನುಮಂತಯ್ಯ - ರಾಮನಗರ, ಎಂ. ರಾಜಶೇಖರಮೂರ್ತಿ- ಟಿ. ನರಸೀಪುರ, ಎಸ್. ಕರಿಯಪ್ಪ - ವಿರೂಪಾಕ್ಷಪುರ, ಎಚ್. ಕೆ. ವೀರಣ್ಣಗೌಡ - ಮದ್ದೂರು, ದೇವರಾಜ ಅರಸು - ಹುಣಸೂರು, ಎಚ್. ಎಂ. ಚನ್ನಬಸಪ್ಪ - ಕೆ.ಆರ್. ನಗರ, ಸಿ. ಎಂ. ಪೂಣಚ್ಚ - ವಿರಾಜಪೇಟೆ, ರತ್ನವರ್ಮ ಹೆಗ್ಗಡೆ - ಬೆಳ್ತಂಗಡಿ, ಡಾ. ನಾಗಪ್ಪ ಆಳ್ವ- ಪಾಣೆ ಮಂಗಳೂರು, ವೈಕುಂಠ ಬಾಳಿಗಾ- ಮಂಗಳೂರು.

## ಸೋತ ಪ್ರಮುಖರು

ಎ. ಜಿ. ರಾಮಚಂದ್ರರಾವ್ - ಹೊಳೇನರಸೀಪುರ, ಎಸ್. ಚನ್ನಯ್ಯ - ಮಂಡ್ಯ, ಎಂ. ವಿ. ರಾಮರಾವ್ - ತುಮಕೂರು, ಎನ್. ಸಿ. ನಾಗಯ್ಯರೆಡ್ಡಿ - ಗೌರಿಬಿದನೂರು, ಎಂ. ಸಿ. ಆಂಜನೇಯರೆಡ್ಡಿ - ಚಿಂತಾಮಣಿ, ಎ. ಜಿ. ಬಂದೀಗೌಡ - ಶ್ರೀರಂಗಪಟ್ಟಣ, ಆರ್. ಅನಂತರಾಮನ್ - ಚಿಕ್ಕಪೇಟೆ, ಬಿ. ಜಿ. ಲಿಂಗೇಗೌಡ - ಚನ್ನಪಟ್ಟಣ, ಕೆ. ಜಿ. ತಿಮ್ಮೇಗೌಡ- ಕನಕಪುರ, ಬಿ. ಬಸವಲಿಂಗಪ್ಪ - ಬೆಂಗಳೂರು ದಕ್ಷಿಣ, ಎಚ್. ಕೆ. ಶಿವರುದ್ರಪ್ಪ - ಗುಂಡ್ಲು ಪೇಟೆ.

## ೧೯ ಏಪ್ರಿಲ್ ೧೯೫೭ರಂದು ಅಸ್ತಿತ್ವಕ್ಕೆ ಬಂದ ನಿಜಲಿಂಗಪ್ಪನವರ ಮಂತ್ರಿ ಮಂಡಲ

ಎಸ್ ನಿಜಲಿಂಗಪ್ಪ - ಮುಖ್ಯಮಂತ್ರಿ, ಎಂ. ಪಿ. ಪಾಟೀಲ್ - ಕಂದಾಯ, ಸಿ. ಎಂ. ಪೂಣಚ್ಚ - ಗೃಹ ಹಾಗೂ ಕೈಗಾರಿಕೆ, ಎಚ್. ಎಸ್. ರುದ್ರಪ್ಪ - ಕೃಷಿ, ಟಿ. ಮರಿಯಪ್ಪ - ಹಣಕಾಸು, ಆರ್. ಚನ್ನಿಗರಾಮಯ್ಯ - ಸ್ಥಳೀಯ ಸಂಸ್ಥೆಗಳು, ಎಚ್. ಕೆ. ವೀರಣ್ಣಗೌಡ - ಲೋಕೋಪಯೋಗಿ, ಬಿ. ವೈಕುಂಠ ಬಾಳಿಗಾ - ಕಾರ್ಮಿಕ, ಆರ್. ಎಂ. ಪಾಟೀಲ್ - ಆರೋಗ್ಯ, ಮಹಮದ್ ಅಲಿ - ಅಬ್ಕಾರಿ, ಗ್ರಾಮೀಣ ಕೈಗಾರಿಕೆ, ವಿ. ವೆಂಕಟಪ್ಪ - ಶಿಕ್ಷಣ. ಉಪಮಂತ್ರಿಗಳು: ಗ್ರೇಸ್ ಠಕ್ಕರ - ಶಿಕ್ಷಣ, ರಾಮಕೃಷ್ಣ ಹೆಗಡೆ - ಯೋಜನೆ ಮತ್ತು ಅಭಿವೃದ್ಧಿ, ವೀರೇಂದ್ರ ಪಾಟೀಲ್ - ಗೃಹ ಮತ್ತು ಕೈಗಾರಿಕೆ. ಭಿನ್ನಮತ ಬೆಳೆದು ನಿಜಲಿಂಗಪ್ಪನವರಿಗೆ ಬಹುಮತ ನಷ್ಟವಾಗಿ ದಿನಾಂಕ ೧೬ ಮೇ ೧೯೫೮ರಂದು ಬಿ. ಡಿ. ಜತ್ತಿಯವರ ಮಂತ್ರಿಮಂಡಲ ಅಸ್ತಿತ್ವಕ್ಕೆ ಬಂದಿತು.

## ೧೯೫೭ - ವಿಧಾನಸಭಾ ಚುನಾವಣಾ ಫಲಿತಾಂಶಗಳು

ಒಟ್ಟು ಸ್ಥಾನಗಳು - ೨೦೮

| | |
|---|---|
| ಕಾಂಗ್ರೆಸ್ | ೧೪೮ |
| ಪಿ.ಎಸ್.ಪಿ. | ೨೪ |
| ಕಮ್ಯುನಿಸ್ಟ್ | ೨ |
| ಎಸ್.ಸಿ.ಎಫ್. | ೨ |
| ಪಿ.ಡಬ್ಲ್ಯು.ಪಿ | ೧ |
| ಪಕ್ಷೇತರರು | ૩೦ |
| ಒಟ್ಟು | ೨೦೮ |

೧೯೬೦ರವರೆಗೆ ನಡೆದ ಹತ್ತು ಉಪಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಏಳು (೭) ಉಪಚುನಾವಣೆಗಳಲ್ಲಿ ಜಯಗಳಿಸಿತು. ಎರಡು ಉಪಚುನಾವಣೆಗಳಲ್ಲಿ ಪಿ.ಎಸ್.ಪಿ., ಒಂದರಲ್ಲಿ ಪಕ್ಷೇತರ ಅಭ್ಯರ್ಥಿ ಜಯಗಳಿಸಿದರು.

## ೧೯೫೭ - ಲೋಕಸಭಾ ಚುನಾವಣಾ ಫಲಿತಾಂಶಗಳು

ಒಟ್ಟು ಸ್ಥಾನಗಳು - ೨೬

| ಪಕ್ಷ | ಸ್ಪರ್ಧಿಗಳು | ಆಯ್ಕೆಯಾದವರು |
|---|---|---|
| ಕಾಂಗ್ರೆಸ್ | ೨೪ | ೨೧ + ೨ = ೨೩ |
| ಎರಡು ಸ್ಥಾನ ಅವಿರೋಧ ಆಯ್ಕೆ | ೨ | |
| ಪಿ. ಎಸ್ ಪಿ. | ೧೨ | ೧ |

| | | |
|---|---|---|
| ಸಮಾಜವಾದಿ ಪಕ್ಷ | ೫ | |
| ಜನಸಂಘ | ೫ | |
| ಕಮ್ಯುನಿಸ್ಟ್ ಪಕ್ಷ | ೧ | |
| ಸ್ವತಂತ್ರ ಅಭ್ಯರ್ಥಿಗಳು | ೨೦ | ೨ |
| ೧-ಎಸ್.ಸಿ.ಎಫ್. | ೧. ಲೋಕಸೇವಾಸಂಘ | |

## ೧೯೫೭ರ ಲೋಕಸಭಾ ಚುನಾವಣೆ ಗೆದ್ದ ಪ್ರಮುಖರು

ಚಿಕ್ಕೋಡಿ ಕ್ಷೇತ್ರದಿಂದ ಪರಿಶಿಷ್ಟಜಾತಿ ಒಕ್ಕೂಟದ (Scheduled Castes Federation) ಕಟ್ಟಿದತ್ತ ಅಪ್ಪ ಬಾಳಪ್ಪ, ಬೆಳಗಾಂನಿಂದ ಕಾಂಗ್ರೆಸ್‌ನ ದಾತಾರ ಬಲವಂತರಾವ್ ನಾಗೇಶ್‌ರಾವ್, ಉತ್ತರ ಕನ್ನಡದಿಂದ ಆಳ್ವಾ ಜೋಕಿಂ ಫೈಯದ್, ಧಾರವಾಡ ದಕ್ಷಿಣದಿಂದ ನೆಸ್ವಿ ತಿಮ್ಮಪ್ಪ ರುದ್ರಪ್ಪ, ಧಾರವಾಡ ಉತ್ತರದಿಂದ, ಡಿ. ಪಿ. ಕರಮರಕರ್ - ಬಿಜಾಪೂರ ದಕ್ಷಿಣದಿಂದ ಬಿದರಿ ರಾಮಪ್ಪ ಬಾಳಪ್ಪ, ಬಿಜಾಪುರ ಉತ್ತರದಿಂದ ಸುಗಂಧಿ ಮುರಿಗೆಪ್ಪ ಸಿದ್ದಪ್ಪ, ಗುಲ್ಬರ್ಗಾದ ದ್ವಿಸದಸ್ಯ ಕ್ಷೇತ್ರದಿಂದ ಮಹದೇವಪ್ಪ ಯಶವಂತರಾವ್, ಪರಿಶಿಷ್ಟ ಜಾತಿಯಿಂದ ಶಂಕರದೇವ, ರಾಯಚೂರಿನಿಂದ ಜೆ. ಎಸ್. ಮೇಲ್ಕೋಟೆ, ಕೊಪ್ಪಳದಿಂದ ಸಣ್ಣಪ್ಪ ಅಂದಾನಪ್ಪ, ಬಳ್ಳಾರಿಯಿಂದ ಟಿ. ಸುಬ್ರಹ್ಮಣ್ಯಂ, ಚಿತ್ರದುರ್ಗದಿಂದ ಪಿ.ಎಸ್.ಪಿ. (ಪ್ರಜಾ ಸೋಷಲಿಸ್ಟ ಪಾರ್ಟಿ)ಯಿಂದ ಜೆ. ಎಂ. ಇಮಾಂ, ಶಿವಮೊಗ್ಗದಿಂದ ಕಾಂಗ್ರೆಸ್‌ನ ಕೆ.ಜಿ. ಒಡೆಯರ್, ಹಾಸನದಿಂದ ಅವಿರೋಧವಾಗಿ ಆಯ್ಕೆಯಾದ ಹೆಚ್. ಸಿದ್ದನಂಜಪ್ಪ, ಮಂಡ್ಯದಿಂದ ಎಂ. ಕೆ. ಶಿವನಂಜಪ್ಪ, ತಿಪಟೂರು ಕ್ಷೇತ್ರದಿಂದ ಸಿ. ಆರ್. ಬಸಪ್ಪ, ತುಮಕೂರಿನಿಂದ ಎಂ. ವಿ. ಕೃಷ್ಣಪ್ಪ, ಕೋಲಾರ ದ್ವಿಮತ ಕ್ಷೇತ್ರದಿಂದ ಕೆ. ಸಿ. ರೆಡ್ಡಿ, ಪರಿಶಿಷ್ಟ ಜಾತಿಯಿಂದ ಅವಿರೋಧವಾಗಿ ಆಯ್ಕೆಯಾದ ದೊಡ್ಡತಿಮ್ಮಯ್ಯ, ಬೆಂಗಳೂರು ನಗರದಿಂದ ಕೇಶವಯ್ಯಂಗಾರ್, ಬೆಂಗಳೂರು ಗ್ರಾಮಾಂತರದಿಂದ ಎಚ್. ಸಿ. ದಾಸಪ್ಪ, ಮೈಸೂರು ದ್ವಿಮತ ಕ್ಷೇತ್ರದ ಸಾಮಾನ್ಯಕ್ಷೇತ್ರದಲ್ಲಿ ಎನ್. ಶಂಕರಯ್ಯ, ಮೀಸಲು ಕ್ಷೇತ್ರದಿಂದ ಎಸ್. ಎಂ. ಸಿದ್ದಯ್ಯ, ಮಂಗಳೂರು ಕ್ಷೇತ್ರದಿಂದ ಕೆ. ಆರ್. ಆಚಾರ್ ಹಾಗೂ ಉಡುಪಿಯಿಂದ ಶ್ರೀನಿವಾಸ ಮಲ್ಯ ಅವರುಗಳು ಆಯ್ಕೆಯಾಗಿದ್ದರು.

ಚಿಕ್ಕೋಡಿ ಹಾಗೂ ಚಿತ್ರದುರ್ಗದಿಂದ ವಿರೋಧ ಪಕ್ಷದ ಅಭ್ಯರ್ಥಿಗಳು ಗೆದ್ದಿದ್ದರು. ಉಳಿದ ಎಲ್ಲಾ ಸ್ಥಾನಗಳು ಕಾಂಗ್ರೆಸ್ ಪಾಲಾಗಿತ್ತು. ವಿರೋಧ ಪಕ್ಷದಿಂದ ಸ್ಪರ್ಧಿಸಿ ಸೋತ ಪ್ರಮುಖ ಅಭ್ಯರ್ಥಿಗಳೆಂದರೆ, ಧಾರವಾಡ ಉತ್ತರದಿಂದ ಭಾರತೀಯ ಜನಸಂಘದ ಜಗನ್ನಾಥರಾವ್ ಜೋಷಿ, ತುಮಕೂರಿನಿಂದ ಕೆ. ವಿ. ಸುಬ್ರಹ್ಮಣ್ಯಸ್ವಾಮಿ, ಬೆಂಗಳೂರಿನಿಂದ ಎಂ. ಎ. ವೆಂಕಟರಾವ್ ಹಾಗೂ ಕೆ. ಶ್ರೀನಿವಾಸರಾವ್, ಗುಲ್ಬರ್ಗಾದಿಂದ ಆರ್. ವಿ. ಬಿಡಪ್ಪ, ಶಿವಮೊಗ್ಗದಿಂದ ಟಿ. ಎಲ್ ಕಲ್ಲಯ್ಯ, ಮಂಡ್ಯದಿಂದ ಎಂ. ಸಿ. ಲಿಂಗೇಗೌಡ, ತಿಪಟೂರಿನಿಂದ ಬಿ. ಹುಚ್ಚೇಗೌಡ, ತುಮಕೂರಿನಿಂದ ಬಿ. ಪಿ. ಗಂಗಾಧರಯ್ಯ, ಬೆಂಗಳೂರಿನಿಂದ ಎಂ. ಶಿವಲಿಂಗಯ್ಯ, ಮೈಸೂರಿನಿಂದ ಎಂ. ಎಸ್. ಗುರುಪಾದಸ್ವಾಮಿ ಹಾಗೂ ಉಡುಪಿಯಿಂದ ಡಿ. ಮೋಹನರಾವ್, ಇವರುಗಳೆಲ್ಲಾ ಪ್ರಜಾಸೋಷಲಿಸ್ಟ್ ಪಕ್ಷದ ಅಭ್ಯರ್ಥಿಗಳು.

## ೧೯೬೨ರ ಮಹಾಚುನಾವಣೆಗಳು

ದೇಶದಲ್ಲಿ ಲೋಕಸಭೆ ಮತ್ತು ವಿಧಾನಸಭೆಗಳಿಗೆ ಮೂರನೆಯ ಮಹಾಚುನಾವಣೆಗಳು ಫೆಬ್ರವರಿ ೧೫ರಿಂದ ೨೫, ೧೯೬೨ ರವರೆಗೆ ನಡೆದವು. ೧೯೫೭ರಿಂದ ೬೨ರ ಅವಧಿಯಲ್ಲಿ ದೇಶದಲ್ಲಿ ಹಾಗೂ ರಾಜ್ಯದಲ್ಲಿ ಅನೇಕ ಗಮನಾರ್ಹ ಬದಲಾವಣೆಗಳಾಗಿದ್ದವು. ೧೯೫೬ರಲ್ಲಿ ಭಾಷಾವಾರು ಪ್ರಾಂತಗಳ ರಚನೆಯಾಗಿತ್ತು. ವಿಶಾಲ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದಿತ್ತು. ಚುನಾವಣಾ ಆಯೋಗ ದ್ವಿಸದಸ್ಯ ಕ್ಷೇತ್ರ ಪದ್ಧತಿಯನ್ನು ರದ್ದುಪಡಿಸಿತ್ತು. ಇದರಿಂದ ಲೋಕಸಭೆ ಹಾಗೂ ವಿಧಾನಸಭಾ ಕ್ಷೇತ್ರಗಳ ವೈಶಾಲ್ಯ ಹಾಗೂ ಮೀಸಲು ಕ್ಷೇತ್ರಗಳ ನಿಗದಿಯಲ್ಲಿ ಅಗಾಧ ಬದಲಾವಣೆಗಳಾಗಿತ್ತು.

ಇದರಿಂದಾಗಿ ದೇಶದ ಒಟ್ಟು ೪೯೪ ಲೋಕಸಭಾ ಕ್ಷೇತ್ರಗಳು ಪ್ರತ್ಯೇಕವಾಗಿ ರಚಿತವಾಗಿ, ಅದರಲ್ಲಿ ೩೮೭ ಸಾಮಾನ್ಯ ಕ್ಷೇತ್ರಗಳು, ೭೬ ಪರಿಶಿಷ್ಟ ಜಾತಿ ಮತ್ತು ೩೧ ಪರಿಶಿಷ್ಟ ವರ್ಗದ ಮೀಸಲು ಕ್ಷೇತ್ರಗಳಿದ್ದವು. ೧೯೫೭ ಹಾಗೂ ೧೯೬೨ರ ಚುನಾವಣೆಗಳಲ್ಲಿ ಲೋಕಸಭಾ ಸ್ಥಾನಗಳ ಸಂಖ್ಯೆ ೪೯೪ ಆಗಿತ್ತು. ಲೋಕಸಭಾ ಕ್ಷೇತ್ರಗಳ ಸಂಖ್ಯೆಯಲ್ಲಿ ಹೆಚ್ಚಳವಾಗಲಿಲ್ಲ. ಆದರೆ ೧೯೫೭ರ ಚುನಾವಣೆಗಳಲ್ಲಿ ದ್ವಿಸದಸ್ಯ ಕ್ಷೇತ್ರಗಳೂ ಸೇರಿದಂತೆ ಒಟ್ಟು ೩೧೦೨ ವಿಧಾನಸಭಾ ಸದಸ್ಯ ಸ್ಥಾನಗಳಿದ್ದರೆ, ೧೯೬೨ರ ಚುನಾವಣೆಗಳಲ್ಲಿ ೨೪೨೮ ಸಾಮಾನ್ಯ

ಕ್ಷೇತ್ರಗಳು, ೪೭೧ ಪರಿಶಿಷ್ಟ ಜಾತಿ, ೨೨೨ ಪರಿಶಿಷ್ಟ ವರ್ಗ ಮೀಸಲು ಕ್ಷೇತ್ರಗಳು ಅಸ್ತಿತ್ವಕ್ಕೆ ಬಂದವು. ಇದರಿಂದಾಗಿ ೧೯ ವಿಧಾನಸಭಾ ಕ್ಷೇತ್ರಗಳ ಹೆಚ್ಚಳವಾದಂತಾಯಿತು.

೧೯೬೨ರ ಲೋಕಸಭಾ ಚುನಾವಣೆಗಳಲ್ಲಿ ೪೯೪ ಲೋಕಸಭಾ ಸ್ಥಾನಗಳ ಪೈಕಿ, ಕೇವಲ ಮೂರು ಕ್ಷೇತ್ರಗಳಲ್ಲಿ ಅವಿರೋಧ ಆಯ್ಕೆ ನಡೆದು ಅವೆಲ್ಲಾ ಸ್ಥಾನ ಕಾಂಗ್ರೆಸ್ ಪಕ್ಷಕ್ಕೆ ಬಂದಿತ್ತು. ದೇಶದಲ್ಲಿ (೧೯೫೨ರ ಚುನಾವಣೆಯಲ್ಲಿ ೧೨ ಅವಿರೋಧ ಆಯ್ಕೆ ಆಗಿತ್ತು). ೧೯೫೭ರಲ್ಲಿ ರಾಜ್ಯಗಳ ವಿಧಾನಸಭೆಗಳಿಗೆ ೧೩ ಕ್ಷೇತ್ರಗಳಲ್ಲಿ ಅವಿರೋಧ ಆಯ್ಕೆ ನಡೆಯಿತು. ೧೯೫೭ರಲ್ಲಿ ಇದು ೪೮ ಆಗಿತ್ತು. ಇವುಗಳಲ್ಲಿ ಎರಡು ಸ್ಥಾನ ಮೈಸೂರಿನದು. ಉಳಿದಂತೆ ಆಂಧ್ರಪ್ರದೇಶ ೬, ಮಧ್ಯಪ್ರದೇಶ ೩, ರಾಜಸ್ತಾನ, ಪಶ್ಚಿಮ ಬಂಗಾಳಗಳಲ್ಲಿ ತಲಾ ಒಂದೊಂದು ಸ್ಥಾನಗಳಲ್ಲಿ ವಿಧಾನಸಭೆಗೆ ಅವಿರೋಧ ಆಯ್ಕೆ ನಡೆಯಿತು. ೧೯೬೨ರಲ್ಲಿ ಲೋಕಸಭೆಯ ೪೯೧ ಸ್ಥಾನಗಳಿಗೆ ೧೯೮೫ ಜನ ಉಮೇದುವಾರರೂ, ೩೧೦೮ ವಿಧಾನಸಭಾ ಸ್ಥಾನಗಳಿಗೆ ೧೨೬೪೬ ಜನ ಉಮೇದುವಾರರೂ ಸ್ಪರ್ಧಿಸಿದ್ದರು.

೧೯೫೭ರ ಚುನಾವಣೆಗಳಲ್ಲಿ ಒಟ್ಟು ಮತದಾರರ ಸಂಖ್ಯೆ ೨೫, ೭೮, ೫೧೬೫೪ ಆಗಿದ್ದರೆ ಅದು ೧೯೬೨ರಲ್ಲಿ ೨೧,೪೫,೨೦೧೬೮ ಆಗಿತ್ತು. ಎಲ್ಲಾ ಅಂಕಿ ಅಂಶಗಳಲ್ಲಿ ಕಾಶ್ಮೀರವನ್ನು ಹೊರತುಪಡಿಸಲಾಗಿದೆ. ಕಾರಣ ಆಗ ಕಾಶ್ಮೀರದಲ್ಲಿ ಚುನಾವಣೆ ನಡೆಯಲಿಲ್ಲ. ಭಾರತದ ರಾಷ್ಟ್ರೀಯ ಕಾಂಗ್ರೆಸ್, ಪ್ರಜಾ ಸಮಾಜವಾದಿ ಪಕ್ಷ ಮತ್ತು ಸ್ವತಂತ್ರಪಕ್ಷ ಇವುಗಳನ್ನು ಮಾತ್ರ ಮೈಸೂರು ರಾಜ್ಯದಲ್ಲಿ ರಾಷ್ಟ್ರೀಯ ಪಕ್ಷಗಳೆಂದು ಚುನಾವಣಾ ಆಯೋಗ ಮಾನ್ಯ ಮಾಡಿತ್ತು. ಕಳೆದ ಚುನಾವಣೆಗಳಲ್ಲಿ ಶೇಕಡಾ ೪ ಕ್ಕಿಂತ ಹೆಚ್ಚು ಮತ ಪಡೆದುದರ ಆಧಾರದ ಮೇಲೆ ಇದನ್ನು ನಿಗದಿ ಮಾಡಲಾಗಿತ್ತು.

### ಚುನಾವಣಾ ಹಿನ್ನೆಲೆ

೧೯೫೭ರ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ೩೭೧ ಲೋಕಸಭಾ ಸ್ಥಾನಗಳನ್ನೂ ಗಳಿಸಿ ಕೇಂದ್ರದಲ್ಲಿ ಸುಭದ್ರ ಸರ್ಕಾರವನ್ನು ರಚಿಸಿ ಆಡಳಿತ ನಡೆಸುತ್ತಿತ್ತು. ಎರಡು ಪಂಚವಾರ್ಷಿಕ ಯೋಜನೆಗಳನ್ನು (೫೧-೬೧) ಯಶಸ್ವಿಯಾಗಿ ಪೂರೈಸಿ, ಮೂರನೇ ಪಂಚವಾರ್ಷಿಕ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿತ್ತು. ಕಳೆದ ಚುನಾವಣೆಗಳಲ್ಲಿ ನೀಡಿದ್ದ ಭರವಸೆಯಂತೆ, ಭಾರತದಲ್ಲಿ ಪೋರ್ಚುಗೀಸರ ವಸಾಹತುವಾಗಿದ್ದ ಗೋವಾವನ್ನು ೧೯೬೧ರ ಡಿಸೆಂಬರ್ ತಿಂಗಳಲ್ಲಿ ಕಾರ್ಯಾಚರಣೆ ನಡೆಸಿ ವಿಮೋಚನೆಗೊಳಿಸಲಾಗಿತ್ತು. (೧೮-೧೨-೬೧) ಗೋವಾ ವಿಮೋಚನಾ ಹೋರಾಟ ಕರ್ನಾಟಕದಲ್ಲೂ ತೀವ್ರವಾಗಿ ನಡೆದುದರಿಂದ, ರಾಜ್ಯದಲ್ಲಿ ಒಂದು ರೀತಿಯ ವಿಶೇಷ ಮಮತೆ ಕಾಂಗ್ರೆಸ್ ಪಕ್ಷದ ಬಗ್ಗೆ ಬೆಳೆದಿತ್ತು. ೧೯೫೯ರ ಜನವರಿ ತಿಂಗಳಲ್ಲಿ ನಡೆದ ನಾಗಪುರ ಎ.ಐ.ಸಿ.ಸಿ. ಅಧಿವೇಶನದಲ್ಲಿ ಕಾಂಗ್ರೆಸ್ ಪಕ್ಷವು ಸಮಾಜವಾದಿ ಸಮಾಜದ ನಿರ್ಮಾಣ, ಭೂಹಿಡುವಳಿ ಮಿತಿ ಮತ್ತು ಸಹಕಾರಿ ಬೇಸಾಯ ಪದ್ಧತಿಯ ಬಗ್ಗೆ ನಿರ್ಣಯಗಳನ್ನು ಅಂಗೀಕರಿಸಿತು. ಇದನ್ನು ಕಾಂಗ್ರೆಸ್‌ನ ಹಿರಿಯ ನಾಯಕರಾದ ರಾಜಾಜಿ, ಕಾಂಗ್ರೆಸ್ ಸಂಸದೀಯ ಪಕ್ಷದ ನಾಯಕ ಎನ್. ಜಿ. ರಂಗಾ ಮೊದಲಾದವರು ತೀವ್ರವಾಗಿ ವಿರೋಧಿಸಿ, ಜವಹರಲಾಲ್ ನೆಹರುರವರ ಕಮ್ಯುನಿಸ್ಟ್ ಪ್ರೀತಿಯೇ ಇದಕ್ಕೆ ಕಾರಣ ಎಂದರು. ಕಾಂಗ್ರೆಸ್‌ನ ಈ ನಿಲುವನ್ನು ವಿರೋಧಿಸುವವರು ಪಕ್ಷ ತ್ಯಜಿಸಿ ಹೋಗಬಹುದೆಂದು ನೆಹರು ಖಂಡತುಂಡವಾಗಿ ಹೇಳಿದರು. ೧೯೫೯ರ ಜೂನ್ ತಿಂಗಳಲ್ಲಿ ರಾಜಾಜಿ, ರಂಗಾ ಮೊದಲಾದ ಅನೇಕ ನಾಯಕರು ಕಾಂಗ್ರೆಸ್ ಪಕ್ಷವನ್ನು ತ್ಯಜಿಸಿ 'ಸ್ವತಂತ್ರ ಪಕ್ಷ' ಎಂಬ ಹೊಸ ರಾಜಕೀಯ ಪಕ್ಷವನ್ನು ರಚಿಸಿಕೊಂಡರು.

ಶ್ರೀಮತಿ ಇಂದಿರಾ ಗಾಂಧಿಯವರು ಕಾಂಗ್ರೆಸ್ ಪಕ್ಷದಲ್ಲಿ ಪ್ರವರ್ಧಮಾನಕ್ಕೆ ಬರಲು ಆರಂಭಿಸಿದ್ದರು. ಅವರು ೧೯೫೫ರ ಫೆಬ್ರವರಿಯಲ್ಲಿ ಅಖಿಲಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯರಾದರು. ೧೯೫೫ ಸೆಪ್ಟೆಂಬರ್‌ನಲ್ಲಿ ಕಾಂಗ್ರೆಸ್ ಕೇಂದ್ರ ಚುನಾವಣಾ ಸಮಿತಿ ಸದಸ್ಯರಾದರು. ೧೯೫೬ರಲ್ಲಿ ಅಖಿಲ ಭಾರತ ಯುವಕಾಂಗ್ರೆಸ್ ಅಧ್ಯಕ್ಷರಾದರು. ೧೯೫೮ ಫೆಬ್ರವರಿ ತಿಂಗಳಲ್ಲಿ ಕೇಂದ್ರ ಕಾಂಗ್ರೆಸ್ ಸಂಸದೀಯ ಮಂಡಳಿ ಸದಸ್ಯರಾದರು. ಫೆಬ್ರವರಿ ೨, ೧೯೫೯ರಂದು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದರು. ಹೀಗೆ ಅವರು ಪಕ್ಷದ ಮೇಲೆ ಹಿಡಿತ ಸಾಧಿಸಲು ಆರಂಭಿಸಿದ್ದರು. ಆದರೆ ೧೯೬೦ ಜೂನ್‌ನಲ್ಲಿ ಬೆಂಗಳೂರಿನಲ್ಲಿ ನಡೆದ ಎ.ಐ.ಸಿ.ಸಿ. ಅಧಿವೇಶನದಲ್ಲಿ ನೀಲಂ ಸಂಜೀವರೆಡ್ಡಿ ಅಖಿಲ ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾದರು.

### ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷದ ಪರಿಸ್ಥಿತಿ

೧೯೫೭ರ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ೧೪೮ ಸ್ಥಾನಗಳನ್ನು ಗಳಿಸಿ ಅಧಿಕಾರಕ್ಕೆ ಬಂದಿತ್ತು. ೧೯-೪-೧೯೫೭ರಂದು ನಿಜಲಿಂಗಪ್ಪನವರು ಎರಡನೇ ಬಾರಿಗೆ ರಾಜ್ಯದ ಮುಖ್ಯಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದ್ದರು.

೧೯೫೭ರ ಚುನಾವಣೆಗಳಲ್ಲಿ ಸೋತುಹೋಗಿದ್ದ ತಮ್ಮ ಮಿತ್ರ ಎಂ. ವಿ. ರಾಮರಾವ್ ಅವರನ್ನು ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರನ್ನಾಗಿ ಮಾಡಬೇಕೆಂದು ನಿಜಲಿಂಗಪ್ಪನವರು ಪ್ರಯತ್ನಿಸುತ್ತಿದ್ದರು. ಆದರೆ ಸಾಹುಕಾರ್ ಚನ್ನಯ್ಯನವರ ಗುಂಪು ಇದಕ್ಕೆ ವಿರುದ್ಧವಾಗಿತ್ತು. ೧೦ ಜೂನ್ ೧೯೫೭ರಂದು ಎಂ. ಪಿ. ಸಿ. ಸಿ. ಅಧ್ಯಕ್ಷ ಸ್ಥಾನಕ್ಕೆ ಚುನಾವಣೆಗಳು ನಡೆದು, ಸಾಹುಕಾರ್ ಚನ್ನಯ್ಯನವರು ೮೭-೮೧ ಬಹುಮತದಿಂದ ಅಧ್ಯಕ್ಷರಾಗಿ ಆಯ್ಕೆ ಆದರು. ಎಂ. ವಿ. ರಾಮರಾವ್ ಸೋತುಹೋದರು. ಮೈಸೂರಿನ ಹೆಸರನ್ನು ಕರ್ನಾಟಕ ಎಂದು ಬದಲಾಯಿಸಲು ಅಂಬಲಿ ಚನ್ನಬಸಪ್ಪ, ಅನ್ನದಾನಪ್ಪ ದೊಡ್ಡಮೇಟಿಯವರು ೩೦ ಸೆಪ್ಟೆಂಬರ್ ೧೯೫೭ ರಂದು ವಿಧಾನ ಸಭೆಯಲ್ಲಿ ಖಾಸಗಿ ನಿರ್ಣಯವನ್ನು ಮಂಡಿಸಿದರು. ಅದಕ್ಕೆ ಬೆಂಬಲ ಸಿಗಲಿಲ್ಲ. ಅದೇ ವರ್ಷ ದಸರಾ ಹಬ್ಬದಲ್ಲಿ ಮೈಸೂರು ಮಹಾರಾಜರು ಜಂಬೂ ಸವಾರಿ ಮೆರವಣಿಗೆಯನ್ನು ರದ್ದು ಮಾಡಿದರು. ಪಕ್ಷದಲ್ಲಿ ಭಿನ್ನಮತ ಬೆಳೆಯಿತು. ನಿಜಲಿಂಗಪ್ಪನವರ ಮಿತ್ರರೇ ಶತ್ರುಗಳಾದರು. ನಿಜಲಿಂಗಪ್ಪನವರು ಬಹುಮತ ಕಳೆದುಕೊಂಡಿದ್ದಾರೆಂದು ಭಿನ್ನಮತೀಯರು ಹೈಕಮಾಂಡ್‌ಗೆ ತಿಳಿಸಿದರು. ಎ.ಐ.ಸಿ.ಸಿ. ಕಾರ್ಯದರ್ಶಿ ಶ್ರೀಮನ್ನಾರಾಯಣ್ ೭-೫-೫೮ರಂದು ವೀಕ್ಷಕರಾಗಿ ಬೆಂಗಳೂರಿಗೆ ಬಂದರು. ಈಗಿನ ಮಹಾರಾಣಿ ಕಾಲೇಜಿನಲ್ಲಿ ಶಾಸಕರನ್ನು ಒಬ್ಬೊಬ್ಬರನ್ನಾಗಿ ಭೇಟಿ ಮಾಡಿ ಅಭಿಪ್ರಾಯ ಸಂಗ್ರಹಿಸಿದರು. ನಿಜಲಿಂಗಪ್ಪನವರು ಬಹುಮತ ಕಳೆದುಕೊಂಡಿರುವುದು ತಿಳಿದುಬಂದಿತು. ೮-೫-೧೯೫೮ರಂದು ನಿಜಲಿಂಗಪ್ಪನವರು ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಮುಂದಿನ ನಾಯಕನ ಆಯ್ಕೆಗೆ ಸಾಹುಕಾರ್ ಚನ್ನಯ್ಯ, ಟಿ ಸುಬ್ರಹ್ಮಣ್ಯಂ, ಅಂಬಲಿ ಚನ್ನಬಸಪ್ಪ, ಕೊಲ್ಲೂರು ಮಲ್ಲಪ್ಪ, ಹೂಲಿ ವೆಂಕಟರೆಡ್ಡಿ, ಕೆ. ಕೆ. ಶೆಟ್ಟಿ ಇವರಿಂದ ಕೂಡಿದ ಒಂದು ಸಮಿತಿಯನ್ನು ರಚಿಸಲಾಯಿತು. ಸಮಿತಿ ಟಿ. ಸುಬ್ರಹ್ಮಣ್ಯಂರವರನ್ನು ಮುಂದಿನ ನಾಯಕರನ್ನಾಗಿ ಆಯ್ಕೆ ಮಾಡಿತು. ಕೊನೆಗೆ ಪರಿಸ್ಥಿತಿಗಳು ಬದಲಾಗಿ ನಾಯಕ ಸ್ಥಾನಕ್ಕೆ ಚುನಾವಣೆ ನಡೆದು ೧೬-೫-೧೯೫೮ರಂದು ಬಿ. ಡಿ. ಜತ್ತಿಯವರು ಮುಖ್ಯಮಂತ್ರಿಗಳಾಗಿ ಆಯ್ಕೆಯಾದರು. ೧೯೬೨ರ ಚುನಾವಣೆಗಳವರೆಗೂ ಅವರ ಸಚಿವ ಸಂಪುಟ ಅಧಿಕಾರದಲ್ಲಿತ್ತು. ೬-೫-೧೯೬೦ರಂದು ನಿಜಲಿಂಗಪ್ಪನವರು ೧೨೧-೮೫ ಬಹುಮತಗಳಿಂದ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ಆಯ್ಕೆಯಾದರು. ಸಾಹುಕಾರ್ ಚನ್ನಯ್ಯ ಸೋತುಹೋದರು. ೨೩-೭-೬೦ರಂದು ಎ.ಐ.ಸಿ.ಸಿ. ಅಧ್ಯಕ್ಷ ನೀಲಂ ಸಂಜೀವರೆಡ್ಡಿ ಬೆಂಗಳೂರಿಗೆ ಬಂದು ಭಿನ್ನಮತೀಯ ಚಟುವಟಿಕೆಗಳನ್ನು ಶಮನಗೊಳಿಸಿದರು. ೨೮-೧೦-೧೯೬೦ ರಂದು ಪ್ರಧಾನಿ ನೆಹರು ಬೆಂಗಳೂರಿಗೆ ಭೇಟಿ ನೀಡಿದಾಗ ಭಿನ್ನಮತೀಯ ಚಟುವಟಿಕೆಗಳನ್ನು ಬಲವಾಗಿ ಖಂಡಿಸಿದರು. ಫೆಬ್ರವರಿ ೨೫, ೧೯೬೧ರಂದು ಜತ್ತಿ ಮಂತ್ರಿಮಂಡಲ ವಿಸ್ತರಣೆ ಆಯಿತು.

## ೧೯೬೨ರ ಚುನಾವಣೆಗಳು

ಮೂರನೇ ಮಹಾಚುನಾವಣೆಗಳು ೧೯೬೨ರ ಫೆಬ್ರವರಿ ತಿಂಗಳಲ್ಲಿ ನಡೆಯಬೇಕಾಗಿತ್ತು. ಆಗ ಪ್ರದೇಶ ಕಾಂಗ್ರೆಸ್‌ನಲ್ಲಿ ನಾಲ್ಕು ಗುಂಪುಗಳಿದ್ದವು. ನಿಜಲಿಂಗಪ್ಪ, ಎಂ. ವಿ. ರಾಮರಾವ್, ಎಂ. ವಿ. ಕೃಷ್ಣಪ್ಪ, ಹಳ್ಳಿಕೇರಿ ಗುದ್ಲಪ್ಪ, ಶಂಕರ ಆಳ್ವರವರದ್ದು ಒಂದು ಗುಂಪು; ಬಿ.ಡಿ. ಜತ್ತಿ, ಮಾಲಿಮರಿಯಪ್ಪ, ವೆಂಕಾರೆಡ್ಡಿ ಹೂಲಿ, ಶಂಕರರೆಡ್ಡಿ ಇವರುಗಳದ್ದು ಒಂದು ಗುಂಪು. ಕೆಂಗಲ್ ಹನುಮಂತಯ್ಯನವರ ಒಂದು ಗುಂಪು; ಸಾಹುಕಾರ್ ಚನ್ನಯ್ಯನವರ ಒಂದು ಗುಂಪು; ಮೊದಲಿನ ಎರಡು ಗುಂಪುಗಳೂ ಅನೇಕ ಬಾರಿ ಸಭೆ ಸೇರಿ ನವೆಂಬರ್ ೧೧, ೧೯೬೧ರ ಹೊತ್ತಿಗೆ ೭೭ ವಿಧಾನಸಭೆ ಹಾಗೂ ೮ ಲೋಕಸಭಾ ಕ್ಷೇತ್ರಗಳಿಗೆ ಸರ್ವ ಸಮ್ಮತ ಅಭ್ಯರ್ಥಿಗಳ ಪಟ್ಟಿ ತಯಾರಿಸಿ ಉಳಿದ ಅಭ್ಯರ್ಥಿಗಳ ಆಯ್ಕೆಯನ್ನು ಕೇಂದ್ರ ಚುನಾವಣಾ ಸಮಿತಿಗೆ ಬಿಡಲು ತೀರ್ಮಾನಿಸಿದವು. ೮-೧೨-೧೯೬೧ರ ಹೊತ್ತಿಗೆ ಕೇಂದ್ರ ಕಾಂಗ್ರೆಸ್ ಪಾರ್ಲಿಮೆಂಟರಿ ಮಂಡಲಿ ಅಭ್ಯರ್ಥಿಗಳ ಒಂದು ಪಟ್ಟಿಯನ್ನು ಬಿಡುಗಡೆ ಮಾಡಿತು. ನಿಜಲಿಂಗಪ್ಪನವರು ೨೮.೧೦.೬೦ರಿಂದಲೇ ಕೇಂದ್ರ ಪಾರ್ಲಿಮೆಂಟರಿ ಮಂಡಳಿ ಸದಸ್ಯರಾಗಿದ್ದರು. ಮುಂದೆ ತಾವೇ ಮುಖ್ಯಮಂತ್ರಿ ಆಗುವ ದೃಷ್ಟಿಯಿಂದ ಅವರನ್ನು ಬೆಂಬಲಿಸುವಂತಹ ಅಭ್ಯರ್ಥಿಗಳಿಗೆ ಹೆಚ್ಚಾಗಿ ಟಿಕೆಟ್ ನೀಡಿದ್ದಾರೆಂಬ ಆರೋಪಗಳು ಕೇಳಿಬಂದಿತು. ಈ ಪಟ್ಟಿಯ ಬಗ್ಗೆ ರಾಜ್ಯ ಕಾಂಗ್ರೆಸ್ ವಲಯದಲ್ಲಿ ತೀವ್ರ ಅಸಮಾಧಾನ ಅತೃಪ್ತಿ ಉಂಟಾಯಿತು.

೬-೧-೬೨ರಂದು ಸುಮಾರು ನೂರಕ್ಕೂ ಹೆಚ್ಚು ಜನ ಅತೃಪ್ತ ಕಾಂಗ್ರೆಸ್ ನಾಯಕರು ಕಾರ್ಯಕರ್ತರು ಬೆಂಗಳೂರಿನಲ್ಲಿ ಎಸ್. ಕರಿಯಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಕಾಂಗ್ರೆಸ್ ತತ್ವಗಳಲ್ಲಿ ತಾವು ನಂಬಿಕೆ ಇರಿಸಿರುವುದಾಗಿಯೂ, ಆದರೆ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯ ವಿರುದ್ಧ ತಾವು ಹೋರಾಡುವುದಾಗಿಯೂ, ಸ್ವತಂತ್ರ ಕಾಂಗ್ರೆಸ್ ಎಂಬ ಪಕ್ಷ ರಚನೆ ಮಾಡಿ ಚುನಾವಣೆಗೆ ಸ್ಪರ್ಧಿಸುವುದಾಗಿ ಹೇಳಿದರು. ಒಂದು ಚುನಾವಣಾ ಸಮಿತಿಯನ್ನು ಕೂಡಾ ರಚನೆ ಮಾಡಿಕೊಂಡರು. ಕಾಂಗ್ರೆಸ್ ಅಭ್ಯರ್ಥಿಗಳ ಪಟ್ಟಿಯ ಬಗ್ಗೆ ಪುನರ್ ವಿಮರ್ಶೆ ಸಾಧ್ಯವಿಲ್ಲ. ಟಿಕೆಟ್ ಹಂಚಿಕೆಯಾದ ನಂತರ ಅತೃಪ್ತಿ ಸ್ವಾಭಾವಿಕ, ಈಗ ೧೬ ಜನ ಪಕ್ಷಕ್ಕೆ ರಾಜೀನಾಮೆ ನೀಡಿದ್ದಾರೆ. ಅದರಿಂದ ಪಕ್ಷದ ಮೇಲೆ ಏನೂ ಪರಿಣಾಮವಿಲ್ಲ ಎಂದು ಕೆ. ಪಿ. ಸಿ. ಸಿ. ಅಧ್ಯಕ್ಷ ನಿಜಲಿಂಗಪ್ಪನವರು ೧೧-೧-೬೨ರಂದು

ಹೇಳಿಕೆ ನೀಡಿದರು. ಚಿತ್ರದುರ್ಗ ಕ್ಷೇತ್ರದ ಟಿಕೆಟ್ ಪಡೆದಿದ್ದ ಭೀಮಪ್ಪನಾಯಕ್, ಮಂಗಳೂರು ಕ್ಷೇತ್ರದಿಂದ ಟಿಕೇಟ್ ಪಡೆದಿದ್ದ ಎಸ್. ಎನ್. ಅಡಿಗ ತಮಗೆ ಚುನಾವಣೆಗೆ ಸ್ಪರ್ಧಿಸಲು ಸಾಧ್ಯವಿಲ್ಲವೆಂದು ಹೇಳಿದರು. ಅವರ ಬದಲಿಗೆ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದೆಂದು ಹೇಳಿದರು. ೧೩-೧-೧೯೬೨ ರಂದು ಅಧಿಕೃತ ಚುನಾವಣಾ ಪ್ರಕಟಣೆ ಹೊರಬಿತ್ತು. ರಾಜ್ಯದಲ್ಲಿ ಫೆಬ್ರವರಿ ೧೯, ೨೨ ಮತ್ತು ೨೪ರಂದು ಚುನಾವಣೆಗಳು ನಿಗದಿಯಾದವು.

ಫೆಬ್ರವರಿ ೧೯ - ಬೀದರ್, ಬಿಜಾಪುರ ಉತ್ತರ, ಬೆಳಗಾವಿ, ಕೊಪ್ಪಳ, ಚಿತ್ರದುರ್ಗ, ಉಡುಪಿ, ಬೆಂಗಳೂರು ನಗರ, ಚಾಮರಾಜನಗರ. ಫೆಬ್ರವರಿ ೨೨ : ಗುಲಬರ್ಗಾ, ಬಿಜಾಪುರ ದಕ್ಷಿಣ, ಧಾರವಾಡ ದಕ್ಷಿಣ, ಮಂಗಳೂರು, ತಿಪಟೂರು, ಚಿಕ್ಕಬಳ್ಳಾಪುರ, ಬೆಂಗಳೂರು, ಮಂಡ್ಯ. ಫೆಬ್ರವರಿ ೨೫ ಚಿಕ್ಕೋಡಿ, ಉತ್ತರ ಕನ್ನಡ, ಧಾರವಾಡ ಉತ್ತರ, ರಾಯಚೂರು, ಬಳ್ಳಾರಿ, ಶಿವಮೊಗ್ಗ, ಹಾಸನ, ತುಮಕೂರು, ಕೋಲಾರ ಜಿಲ್ಲೆಗಳಲ್ಲಿ ಚುನಾವಣೆಗಳು ನಡೆಯಲು ನಿಗದಿಯಾಯಿತು. ಈ ಮಧ್ಯೆ ೧೭-೧-೬೨ರಂದು ಬೆಂಗಳೂರು ನಗರ ಕಾರ್ಪೋರೇಷನ್ ಮೇಯರ್ ಚುನಾವಣೆ ನಡೆಯಿತು. ಕಾಂಗ್ರೆಸ್ ಪಕ್ಷದ ವಿ.ಎಸ್. ಕೃಷ್ಣಯ್ಯರ್ ೫೯-೧೧ ಬಹುಮತದಿಂದ ಮೇಯರ್ ಆಗಿ ಆಯ್ಕೆ ಆದರು. ಆದರೆ ಉಪಮೇಯರ್ ಸ್ಥಾನ ಕಾಂಗ್ರೆಸ್ ಕೈ ತಪ್ಪಿ ಪಕ್ಷೇತರ ಅಭ್ಯರ್ಥಿಯ ಪಾಲಾಯಿತು. ಇದೇ ದಿನ ಕಾಂಗ್ರೆಸ್ ಮುಖಂಡರುಗಳಾದ ಎನ್. ಪಿ. ಗೋವಿಂದಗೌಡ ಪಕ್ಷಕ್ಕೆ ರಾಜೀನಾಮೆ ನೀಡಿ ಕಡಿದಾಳು ಮಂಜಪ್ಪನವರ ವಿರುದ್ಧ ಸ್ಪರ್ಧಿಸುವುದಾಗಿ ಹೇಳಿದರು. ಬಿ. ನಂಜಪ್ಪನವರು ಪಕ್ಷಕ್ಕೆ ರಾಜೀನಾಮೆ ನೀಡಿ ಸ್ವತಂತ್ರ ಅಭ್ಯರ್ಥಿಯಾಗಿ ಶಾಂತಿನಗರ ಕ್ಷೇತ್ರದಿಂದ ಸ್ಪರ್ಧಿಸುವುದಾಗಿ ಹೇಳಿದರು. ನಾಮಪತ್ರ ಹಿಂತೆಗೆತಕ್ಕೆ ಕೊನೆಯ ದಿನವಾಗಿದ್ದ ೧೭-೧-೬೨ ರಂದು ಹುಣಸೂರು ಕ್ಷೇತ್ರದಿಂದ ಡಿ. ದೇವರಾಜ ಅರಸು, ತಾಳಿಕೋಟೆ ಕ್ಷೇತ್ರದಿಂದ ಜಿ. ಎಸ್. ಪಾಟೀಲ್‌ರವರ ಅವಿರೋಧ ಆಯ್ಕೆಯನ್ನು ಅಧಿಕೃತವಾಗಿ ಪ್ರಕಟಿಸಲಾಯಿತು. ಕಾಂಗ್ರೆಸ್ ಸ್ಪರ್ಧಿಗಳ ಸ್ಪಷ್ಟ ಚಿತ್ರ ಮೂಡಿಬಂತು. ಕಾಂಗ್ರೆಸ್ ಪಕ್ಷದ ಅಭ್ಯರ್ಥಿಗಳು ೭೨ ವಿಧಾನಸಭಾ ಕ್ಷೇತ್ರಗಳಲ್ಲಿ ನೇರ ಸ್ಪರ್ಧೆಯಲ್ಲಿದ್ದರೆ, ೬೩ ಅಭ್ಯರ್ಥಿಗಳು ತ್ರಿಕೋಣ ಸ್ಪರ್ಧೆಯಲ್ಲಿದ್ದರು. ನಿಜಲಿಂಗಪ್ಪನವರು ಹೊಸದುರ್ಗ ಕ್ಷೇತ್ರದಲ್ಲಿ ಪಿ.ಎಸ್.ಪಿ. ಅಭ್ಯರ್ಥಿ ಜಿ.ಟಿ. ರಂಗಪ್ಪ ವಿರುದ್ಧ ನೇರ ಸ್ಪರ್ಧೆಯಲ್ಲಿದ್ದರು. ಸಚಿವರಾದ ಟಿ. ಸುಬ್ರಹ್ಮಣ್ಯಂ, ಎಚ್. ಎಂ. ಚನ್ನಬಸಪ್ಪ ನೇರ ಸ್ಪರ್ಧೆಯಲ್ಲಿದ್ದರು. ಲೋಕಸಭೆಯ ೨೬ ಸ್ಥಾನಗಳ ಪೈಕಿ ೬ ಕಾಂಗ್ರೆಸ್ ಅಭ್ಯರ್ಥಿಗಳು ನೇರ ಸ್ಪರ್ಧೆಯಲ್ಲಿದ್ದರು. ಕೆಂಗಲ್ ಹನುಮಂತಯ್ಯ, ಎಚ್. ಸಿ. ದಾಸಪ್ಪ ಇವರಿಗೆ ಲೋಕಸಭೆಗೆ ಟಿಕೆಟ್ ನೀಡಲಾಗಿತ್ತು.

ವಿಧಾನಸಭೆಯ ೨೦೮ ಕಾಂಗ್ರೆಸ್ ಅಭ್ಯರ್ಥಿಗಳ ಪೈಕಿ ಲಿಂಗಾಯತರಿಗೆ ೯೧, ಒಕ್ಕಲಿಗರಿಗೆ ೪೫, ಪರಿಶಿಷ್ಟ ಜಾತಿ ಮೀಸಲು ಸ್ಥಾನ ೨೪ ಇಷ್ಟನ್ನು ಬಿಟ್ಟರೆ ಉಳಿದ ೫೪ ಸ್ಥಾನಗಳನ್ನು ಮಾತ್ರ ಎಲ್ಲಾ ಹಿಂದುಳಿದ ವರ್ಗ ಹಾಗೂ ಅಲ್ಪ ಸಂಖ್ಯಾತ ಅಭ್ಯರ್ಥಿಗಳಿಗೆ ಹಂಚಿಕೆ ಮಾಡಲಾಗಿತ್ತು. ಇದು ತೀವ್ರ ಅಸಮಾಧಾನಕ್ಕೆ ಕಾರಣವಾಗಿತ್ತು. ಟಿಕೆಟ್ ಹಂಚಿಕೆಗೆ ಮುಂಚೆಯೇ ಕುರುಬರ ಸಂಘವು ಮರಿಯಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ತಮಗೆ ಹೆಚ್ಚು ಸ್ಥಾನ ನೀಡುವಂತೆ ಒತ್ತಾಯಿಸಿತ್ತು. ಮೈಸೂರು ರಾಜ್ಯದ ಕಾಂಗ್ರೆಸ್ ಅಭ್ಯರ್ಥಿಗಳ ಆಯ್ಕೆಯಲ್ಲಿ ಗುಣ ಹಾಗೂ ಅರ್ಹತೆಗೆ ಹೆಚ್ಚು ಪ್ರಾಶಸ್ತ್ಯ ನೀಡಿಲ್ಲವೆಂದು ದಿನಾಂಕ ೧೭.೧.೬೧ರಂದು ಕಾಂಗ್ರೆ ವರಿಷ್ಠ ಮಂಡಲಿಯ ವಕ್ತಾರರೇ ಒಪ್ಪಿಕೊಂಡಿದ್ದರು. ಅವರು ನಿಜಲಿಂಗಪ್ಪನವನರ್ನು ಮುಖ್ಯಮಂತ್ರಿಯನ್ನಾಗಿ ಮಾಡಲು ಅವರ ಗುಂಪಿನ ಅಧಿಕ ಅಭ್ಯರ್ಥಿಗಳಿಗೆ ಟಿಕೆಟ್ ನೀಡಲಾಗಿದೆ ಎಂಬುದನ್ನು ನಿರಾಕರಿಸಿದ್ದರು. ಅಧಿಕೃತ ಅಭ್ಯರ್ಥಿಗಳ ವಿರುದ್ಧ ಸ್ಪರ್ಧಿಸಿದ್ದ ೩೪ ಜನ ಕಾಂಗ್ರೆಸ್ಸಿಗರನ್ನು ದಿನಾಂಕ ೧.೨.೬೨ ರಂದು ಆರುವರ್ಷಗಳ ಕಾಲ ಪಕ್ಷದಿಂದ ಹೊರಹಾಕಲಾಯಿತು.

## ಪ್ರಚಾರ ಕಾರ್ಯ

ನಿಜಲಿಂಗಪ್ಪನವರು ದಿನಾಂಕ ೧೫-೧-೬೨ರಂದು ಶಿವಮೊಗ್ಗದಲ್ಲಿ ಕಾಂಗ್ರೆಸ್ ಪಕ್ಷದ ಚುನಾವಣಾ ಪ್ರಚಾರವನ್ನು ಉದ್ಘಾಟಿಸಿದರು. ಅದೇ ರೀತಿ ೨೦.೧.೬೨ರಂದು ಹಳೆಯ ಮೈಸೂರು ಭಾಗದಲ್ಲಿ ಚುನಾವಣಾ ಪ್ರಚಾರ ಆರಂಭವಾಯಿತು. ಪ್ರಧಾನ ಮಂತ್ರಿ ನೆಹರು ಹಾಗೂ ಇಂದಿರಾಗಾಂಧಿ ಸೇರಿದಂತೆ ಅನೇಕ ಕೇಂದ್ರ ನಾಯಕರು ರಾಜ್ಯದಲ್ಲಿ ಚುನಾವಣಾ ಪ್ರಚಾರ ಮಾಡಿದರು. ಇಂದಿರಾಗಾಂಧಿಯವರು ೨೦.೧.೬೨ ಮತ್ತು ೨೧.೧.೬೨ ರಂದು ಕ್ರಮವಾಗಿ ಹುಬ್ಬಳ್ಳಿ, ಚಿತ್ರದುರ್ಗ, ದಾವಣಗೆರೆ ಮತ್ತು ಹಿರಿಯೂರು, ತುಮಕೂರು, ಬೆಂಗಳೂರುಗಳಲ್ಲಿ ಭಾರೀ ಬಹಿರಂಗ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ರಾಷ್ಟ್ರದ ಪ್ರಗತಿ ಕಾಂಗ್ರೆಸ್ ಪಕ್ಷದಿಂದ ಮಾತ್ರ ಸಾಧ್ಯ, ವಿದೇಶಾಂಗ ವ್ಯವಹಾರ, ಕೈಗಾರಿಕಾ ಪ್ರಗತಿ, ಆರ್ಥಿಕ ಅಭಿವೃದ್ಧಿ, ಮಹಿಳಾ ಕಲ್ಯಾಣ ಮುಂತಾದ ಕಾರ್ಯಕ್ರಮಗಳಲ್ಲಿ ಕಾಂಗ್ರೆಸ್ ಪಕ್ಷ ಅನುಸರಿಸುತ್ತಿರುವ ನೀತಿ ಸರಿಯಾಗಿದೆ. 'ನೀವು ಕೊಡುವ ಓಟು ವ್ಯಕ್ತಿಗಲ್ಲ, ಅದು ಕಾಂಗ್ರೆಸ್ ಸಂಸ್ಥೆಗೆ' ಎಂದರು. 'ದೇಶದ ಸರ್ವತೋಮುಖ ಅಭಿವೃದ್ಧಿಯೇ ಕಾಂಗ್ರೆಸ್ ಪಕ್ಷದ ಏಕೈಕ ಗುರಿಯಾಗಿದೆ' ಎಂದವರು ಹೇಳಿದರು.

೨,೩ ಫೆಬ್ರವರಿ ೬೨ ರಂದು ಎ.ಐ.ಸಿ.ಸಿ. ಅಧ್ಯಕ್ಷ ನೀಲಂ ಸಂಜೀವರೆಡ್ಡಿಯವರು ಹುಬ್ಬಳ್ಳಿ, ಬಿಜಾಪುರಗಳಲ್ಲಿ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. 'ಸ್ವರಾಜ್ಯವನ್ನು ಸುರಾಜ್ಯ ಮಾಡುವುದೇ ಕಾಂಗ್ರೆಸ್ ಪಕ್ಷದ ಗುರಿ' ಎಂದರು. ದಿನಾಂಕ ೫-೨-೬೨ರಂದು ಪ್ರಧಾನ ಮಂತ್ರಿ ನೆಹರೂರವರು ಬೀದರ್, ಬೆಳಗಾವಿ, ಹುಬ್ಬಳ್ಳಿ, ಮಂಗಳೂರುಗಳಲ್ಲಿ ಭಾರೀ ಬಹಿರಂಗ ಸಭೆಗಳನ್ನು ಉದ್ದೇಶಿಸಿ ಭಾಷಣ ಮಾಡಿದರು. ''ಸಮಾಜವಾದಿ ಮಾರ್ಗದಲ್ಲಿ ರಾಷ್ಟ್ರಪ್ರಗತಿಯೇ ಕಾಂಗ್ರೆಸ್ ಪಕ್ಷದ ಗುರಿ, ಚಿಕ್ಕಪುಟ್ಟ ಪಕ್ಷಗಳನ್ನು ಆರಿಸಿದರೆ ದೇಶಕ್ಕೆ ಅನರ್ಥವಾಗುತ್ತದೆ. ಕೋಮುಭಾವನೆ ಮೂಲೋತ್ಪಾದನೆ, ಬಡತನ ಅಜ್ಞಾನಗಳ ನಿರ್ಮೂಲನೆ ಕಾಂಗ್ರೆಸ್ ಪಕ್ಷದ ಗುರಿ'' ಎಂದರು. ೬.೨.೬೨ರಂದು ಬೆಂಗಳೂರು ಮಂಡ್ಯ, ಮೈಸೂರುಗಳಲ್ಲಿ ಭಾರೀ ಬಹಿರಂಗ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. 'ಟಿಕೆಟ್ ಸಿಗಲಿಲ್ಲವೆಂದು ಪಕ್ಷ ಬಿಡುವುದು ನೀಚತನ' ಎಂದು ಭಿನ್ನಮತೀಯರನ್ನು ಬಹಿರಂಗವಾಗಿ ಟೀಕಿಸಿದರು. ಸ್ವತಂತ್ರಪಕ್ಷದ ರೀತಿ ನೀತಿಗಳನ್ನು ಕಟುವಾಗಿ ಟೀಕಿಸಿದರು. ಬೆಂಗಳೂರು ನಗರ ದೇಶದ ಅಭಿವೃದ್ಧಿಯ ಸಂಕೇತ ಎಂದರು. ಇಂದಿರಾಗಾಂಧಿ ಹಾಗೂ ನೆಹರು ಅವರ ಜೊತೆ ಎಲ್ಲಾ ಸಭೆಗಳಲ್ಲಿ ನಿಜಲಿಂಗಪ್ಪನವರು ಹಾಗೂ ರಾಜ್ಯದ ಇತರ ನಾಯಕರು ಭಾಗವಹಿಸಿದ್ದರು. ಮಂಡ್ಯದಲ್ಲಿ ನೆಹರೂರವರನ್ನು ನೋಡಲು ೫೦ ಸಾವಿರ ಜನ ಸೇರಿದ್ದರು.

ಕೇಂದ್ರ ವಿದೇಶಾಂಗ ರಾಜ್ಯ ಸಚಿವೆ ಲಕ್ಷ್ಮೀ ಮೆನನ್ ಶಿವಮೊಗ್ಗ, ತೀರ್ಥಹಳ್ಳಿ, ಹಾಸನ, ಚಿಕ್ಕಮಗಳೂರುಗಳಲ್ಲಿ ಚುನಾವಣಾ ಪ್ರಚಾರ ಮಾಡಿದರು. ಕೇಂದ್ರ ಸಚಿವರೂ, ಕರ್ನಾಟಕದವರೂ ಆದ ಡಿ. ಪಿ. ಕರಮರಕರ್, ಎಂ. ವಿ. ಕೃಷ್ಣಪ್ಪ, ಕೆ. ಸಿ. ರೆಡ್ಡಿ, ಎಚ್. ಸಿ. ದಾಸಪ್ಪ, ರಾಜ್ಯಸಭೆ ಉಪಾಧ್ಯಕ್ಷ ಎಸ್. ವಿ. ಕೃಷ್ಣ ಮೂರ್ತಿರಾವ್, ಎಂ.ಪಿ.ಸಿ.ಸಿ. ಅಧ್ಯಕ್ಷ ನಿಜಲಿಂಗಪ್ಪ, ಮುಖ್ಯಮಂತ್ರಿ ಬಿ.ಡಿ. ಜತ್ತಿ ಎಸ್. ಆರ್. ಕಂಠಿ, ಕೆಂಗಲ್ ಹನುಮಂತಯ್ಯ, ಎಚ್. ಕೆ. ವೀರಣ್ಣಗೌಡ ಮುಂತಾದ ಅನೇಕ ನಾಯಕರು ರಾಜ್ಯದಲ್ಲಿ, ಅವರವರ ಜಿಲ್ಲೆಗಳಲ್ಲಿ ಕಾಂಗ್ರೆಸ್ ಪಕ್ಷದ ಪರ ಬಿರುಸಿನ ಪ್ರಚಾರ ಮಾಡಿದರು. ಪ್ರಚಾರಕ್ಕೆ ವ್ಯಾನು, ಧ್ವನಿವರ್ಧಕಗಳ ಬಳಕೆಯೇ ಒಂದು ಸುದ್ದಿ ಆಗಿತ್ತು. ಗೋವಾ ವಿಮೋಚನೆ, ರಾಜ್ಯದಲ್ಲಿ ಗೇಣಿದಾರರ ಉಚ್ಚಾಟನೆ ತಡೆಗೆ ಶಾಸನ ತಂದಿದ್ದು, ೧೯೬೨ರ ಪ್ರವಾಹ ಪರಿಸ್ಥಿತಿಯ ನಿಯಂತ್ರಣ, ಹಾಸನ, ಮಂಗಳೂರು ರೈಲ್ವೆ ಮಾರ್ಗ ನಿರ್ಮಾಣಕ್ಕೆ ಕೇಂದ್ರದ ಒಪ್ಪಿಗೆ ದೊರಕಿದ್ದು, ಮಂಗಳೂರನ್ನು ಸರ್ವಋತು ಬಂದರನ್ನಾಗಿ ಮಾಡಲು ಕೇಂದ್ರದ ಒಪ್ಪಿಗೆ ದೊರಕಿದ್ದು, ಶರಾವತಿ ಜಲವಿದ್ಯುತ್ ಯೋಜನೆಯ ಯಶಸ್ವೀ ಮುಕ್ತಾಯ, ರಾಜ್ಯದಲ್ಲಿ ಹತ್ತು ಹೊಸ ಜವಳಿ ಗಿರಣಿಗಳಿಗೆ ಕೇಂದ್ರದ ಲೈಸೆನ್ಸ್ ದೊರಕಿದ್ದು, ಮಂಡ್ಯದಲ್ಲಿ ಕಚ್ಚಾ ಫಿಲ್ಮ್ ಕಾರ್ಖಾನೆಯ ಸ್ಥಾಪನಾ ಕಾರ್ಯ ಆರಂಭ, ಬೆಂಗಳೂರು- ಸೇಲಂ ರೈಲು ಮಾರ್ಗ ನಿರ್ಮಾಣಕ್ಕೆ ಶಂಕುಸ್ಥಾಪನೆ ಇವೇ ಮುಂತಾದ ಅಭಿವೃದ್ಧಿಪರ ಕಾರ್ಯಗಳು ಚುನಾವಣೆಯ ಪ್ರಚಾರದಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸಹಾಯಕವಾಗಿದ್ದವು.

## ಪ್ರಣಾಳಿಕೆ ಮುಖ್ಯಾಂಶಗಳು

- ಕಾಂಗ್ರೆಸ್ ದೇಶದಲ್ಲಿ ಐಕ್ಯತೆಯನ್ನು ಸಂಘಟಿಸುವ ಸಂಸ್ಥೆ. ಸಮಾಜವಾದಿ ಸಮಾಜ ನಿರ್ಮಾಣವೇ ಕಾಂಗ್ರೆಸ್ ಗುರಿ. ದೇಶದಲ್ಲಿ ಪ್ರಜಾಪ್ರಭುತ್ವವನ್ನು ಬಲಗೊಳಿಸಿ, ಕೇಂದ್ರದಲ್ಲಿ ಬಲಿಷ್ಠ ಸರ್ಕಾರ ಸ್ಥಾಪಿಸಿ, ದೇಶವನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯಲು ಕಾಂಗ್ರೆಸ್ ಶ್ರಮಿಸುತ್ತದೆ.
- ಕಳೆದ ಎರಡು ಪಂಚವಾರ್ಷಿಕ ಯೋಜನೆಗಳಿಂದ ದೇಶಕ್ಕೆ ಬಹಳ ಲಾಭವಾಗಿದೆ. ಯೋಜನಾ ನೀತಿ ಮುಂದುವರಿಕೆ.
- ಕೈಗಾರಿಕಾ ಬೆಳವಣಿಗೆಯ ದಿಕ್ಕನ್ನು ಬದಲಾಯಿಸಲಾಗಿದೆ. ಸರ್ಕಾರಿ ಉದ್ಯಮ ರಂಗದ ವಿಸ್ತರಣೆಗೆ ಕ್ರಮ ತೆಗೆದುಕೊಳ್ಳಲಾಗಿದೆ. ಸಣ್ಣ ಕೈಗಾರಿಕಾ ಕ್ಷೇತ್ರದಲ್ಲಿ ಬೆಳವಣಿಗೆ ಸಾಧಿಸಲಾಗಿದೆ.
- ಬೆಂಗಳೂರಿನಲ್ಲಿ ಗಡಿಯಾರದ ಕಾರ್ಖಾನೆ, ಮಂಗಳೂರಿನಲ್ಲಿ ರಸಗೊಬ್ಬರ ಕಾರ್ಖಾನೆ, ನೂನಮತಿಯಲ್ಲಿ ದೇಶದ ಪ್ರಥಮ ತೈಲ ಶುದ್ಧೀಕರಣ ಕೇಂದ್ರಗಳನ್ನು ಸಾರ್ವಜನಿಕ ವಲಯದಲ್ಲಿ ೧೯೬೧ರಲ್ಲಿ ಹೊಸದಾಗಿ ಸ್ಥಾಪಿಸಲಾಗಿದೆ. ೧೯೬೨ರಲ್ಲಿ ೧೨೩೭ ಹೊಸ ಕೈಗಾರಿಕೆಗಳ ಸ್ಥಾಪನೆ ಮಾಡಲಾಗಿದೆ. ಪೂರ್ವ ವಲಯದಲ್ಲಿ ೩೬೨, ಪಶ್ಚಿಮ ವಲಯದಲ್ಲಿ ೨೮೮, ಉತ್ತರ ವಲಯದಲ್ಲಿ ೨೭೪, ದಕ್ಷಿಣ ವಲಯದಲ್ಲಿ ೩೨೮ ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ. ೧೯೬೧ರಲ್ಲಿಯೇ ಕೈಗಾರಿಕಾ ಉತ್ಪಾದನೆ ಪ್ರಮಾಣ ಶೇಕಡಾ ೧೪೪ರಷ್ಟು ಜಾಸ್ತಿಯಾಗಿದೆ.
- ಆಟೋಮೊಬೈಲ್, ಡೀಸೆಲ್ ಎಂಜಿನ್, ವಿದ್ಯುತ್ ಉಪಕರಣಗಳು, ರಸಗೊಬ್ಬರಗಳ ಕಾರ್ಖಾನೆಗಳ ಸ್ಥಾಪನೆಗೆ ಆದ್ಯತೆ.

ಗ್ರಾಮಾಂತರ ಪ್ರದೇಶದಲ್ಲಿ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಪ್ರೋತ್ಸಾಹ. ಕೈಮಗ್ಗ ಕ್ಷೇತ್ರಕ್ಕೆ ಬೆಂಬಲ. ೧೯೫೫ರಲ್ಲಿ ೮.೮ ಲಕ್ಷ ಇದ್ದ ಕೈಮಗ್ಗಗಳ ಸಂಖ್ಯೆ ೧೯೬೧ರಲ್ಲಿ ೧೩.೪೨ ಲಕ್ಷಕ್ಕೆ ಏರಿದೆ. ಕೈಮಗ್ಗದ ಬಟ್ಟೆಗಳ ಉತ್ಪಾದನೆ ೧೯೫೫ರಲ್ಲಿ ೧೪೭.೫೦ ಕೋಟಿ ಇದ್ದುದ್ದು

೧೯೬೧ರ ಹೊತ್ತಿಗೆ ೧೮೬ ಕೋಟಿಗೆ ಹೆಚ್ಚಿದೆ. ನೇಕಾರರ ವಸತಿ ನಿರ್ಮಾಣಕ್ಕೆ ಪ್ರೋತ್ಸಾಹ. ೧೯೬೧ರ ಹೊತ್ತಿಗೆ ೬೩೭೨ ನೇಕಾರರ ವಸತಿ ನಿರ್ಮಾಣಕ್ಕೆ ಮಂಜೂರಾತಿ ನೀಡಲಾಗಿದೆ. ವಿದೇಶಿ ವ್ಯಾಪಾರಕ್ಕೆ ಪ್ರೋತ್ಸಾಹ ನೀಡಲಾಗುತ್ತಿದೆ. ರಾಷ್ಟ್ರದ ಆರ್ಥಿಕ ವ್ಯವಸ್ಥೆಯನ್ನು ವಿಸ್ತೃತಗೊಳಿಸಿ ಬಲಗೊಳಿಸಲು ಕ್ರಮ. ರಾಷ್ಟ್ರೀಯ ನವನಿರ್ಮಾಣದಲ್ಲಿ ತಾಂತ್ರಿಕ ಶಿಕ್ಷಣಕ್ಕೆ ಮಹತ್ವ ನೀಡಲಾಗಿದೆ. ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿಗಳಿಗೆ ಆದ್ಯತೆ ನೀಡಲಾಗುತ್ತಿದೆ. ಆರೋಗ್ಯ ವ್ಯವಸ್ಥೆಯನ್ನು ಬಲಪಡಿಸುವ ಈಗಿನ ಕ್ರಮಗಳಿಂದ ಅನೇಕ ರೋಗ ರುಜಿನಗಳ ನಿವಾರಣೆಯಾಗಿದೆ. ಜನರ ಆಯುಷ್ಯದ ಪ್ರಮಾಣ ೩೩ರಿಂದ ೪೮ಕ್ಕೆ ಏರಿದೆ.

ಆಹಾರೋತ್ಪನ್ನ ಅಧಿಕಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. ಆಧುನಿಕ ಕೃಷಿ ಸಲಕರಣೆ, ಉತ್ತಮ ಬೀಜ, ಗೊಬ್ಬರಗಳನ್ನು ರೈತರಿಗೆ ಒದಗಿಸಲು ಕ್ರಮ ತೆಗೆದುಕೊಳ್ಳಲಾಗಿದೆ. ಭೂ ಸುಧಾರಣಾ ಕ್ರಮಗಳನ್ನು, ಭೂ ಹಿಡುವಳಿ ಮಿತಿಗಳನ್ನು ಜಾರಿಗೆ ತರಲು ಕ್ರಮ ಕೈಗೊಳ್ಳಲಾಗುತ್ತಿದೆ. ಪಂಚಾಯತ್ ರಾಜ್ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರಲು ಕ್ರಮ ಕೈಗೊಳ್ಳಲಾಗುತ್ತಿದೆ. ನಗರ ಪ್ರದೇಶದ ಆದಾಯಗಳ ಮೇಲೆ ಪರಿಮಿತಿ. ತನ್ಮೂಲಕ ಆರ್ಥಿಕ ಬೆಳವಣಿಗೆ ಸಾಧಿಸಲು ಯತ್ನ. ಗ್ರಾಮೀಣ ನಗರ ಪ್ರದೇಶಗಳ ವೃತ್ತಿಗಳ ಆದಾಯಗಳಲ್ಲಿರುವ ಅಗಾಧ ಅಂತರವನ್ನು ಕಡಿಮೆಮಾಡಲು ನೂತನ ತೆರಿಗೆ ಪದ್ಧತಿ ಹಾಗೂ ಇತರ ವಿಧಾನಗಳನ್ನು ಅನುಸರಿಸಲಾಗುವುದು. ಕೃಷಿ ಕಾರ್ಮಿಕರು - ಕೈಗಾರಿಕಾ ವಲಯದ ಸಂಘಟಿತ ಕಾರ್ಮಿಕರ ನಡುವೆ ಇರುವ ಆರ್ಥಿಕ ಅಂತರವನ್ನು ಕಡಿಮೆಗೊಳಿಸಲು ಯತ್ನ. ವ್ಯವಸಾಯಕ್ಕೆ ಪ್ರಾಮುಖ್ಯತೆ. ಬೆಳೆವಿಮೆ, ಪಶುವಿಮೆ ಜಾರಿಗೆ ತರಲು ಕ್ರಮ. ಜಾತ್ಯತೀತ ವ್ಯವಸ್ಥೆಯಿಂದ ಸಾಮಾಜಿಕ ಪ್ರಗತಿ ಸಾಧ್ಯವೆಂದು ನಂಬಿಕೆ. ಭಾರತದ ಭದ್ರತೆ ಹಾಗೂ ಪ್ರಗತಿಗಾಗಿ ಜಾತ್ಯತೀತ ವ್ಯವಸ್ಥೆಯನ್ನು ಪ್ರತಿಪಾದಿಸುವುದು ಹಾಗೂ ಬಲಪಡಿಸುವುದು. ಪ್ರಜಾಸತ್ತಾತ್ಮಕ ಸಮಾಜವಾದಿ ಸಮಾಜ ತತ್ವಗಳ ಆಧಾರದ ಮೇಲೆ ವ್ಯವಹರಿಸುವುದರಿಂದ ಗುರಿಸಾಧನೆ ಸಾಧ್ಯತೆಯಲ್ಲಿ ಪೂರ್ಣ ವಿಶ್ವಾಸ.

- ಮತೀಯ ದುರಭಿಮಾನ, ಜಾತೀಯತೆ, ಪ್ರತಿಗಾಮಿ ಶಕ್ತಿಗಳಿಂದ ರಾಷ್ಟ್ರದ ಪ್ರಗತಿಗೆ ಅಡ್ಡಿ. ಅದನ್ನು ನಿವಾರಿಸಿ ಜಾತ್ಯತೀತ ಸಮಾಜವಾದಿ ಸಮಾಜ ಸ್ಥಾಪನೆಗೆ ಸಂಕಲ್ಪ.
- ಜಾತೀಯ ಭಾಷಾ ವಿವಾದಗಳ ಬಗ್ಗೆ ರಾಷ್ಟ್ರೀಯ ಭಾವೈಕ್ಯತೆ ದೃಷ್ಟಿಯಿಂದ ವ್ಯವಹಾರ.
- ಭಾಷಾವಾರು ಪ್ರಾಂತ್ಯಗಳ ರಚನೆಯಲ್ಲಿ ನಂಬಿಕೆ. ಆದರೆ ಭಾಷಾವಾರು ರಾಜ್ಯಗಳು ಜನರ ಸದ್ಭಾವನೆಗಳನ್ನು ಕಲಕಿ ರಾಷ್ಟ್ರೀಯ ಸದುದ್ದೇಶ ಸ್ಥಾಪನೆಗೆ ಬದಲು ರಾಷ್ಟ್ರಘಾತಕ ಶಕ್ತಿಗಳನ್ನು ಪುಷ್ಟೀಕರಿಸಿದರೆ ಅದಕ್ಕೆ ಬೆಂಬಲ ಇಲ್ಲ. ರಾಷ್ಟ್ರೀಯ ಸಾಮರಸ್ಯವನ್ನು ಕಲಕುವ ಶಕ್ತಿಗಳ ದಮನಕ್ಕೆ ಕ್ರಮ.
- ಗೋವಾ ವಿಮೋಚನೆಗೆ ಯಶಸ್ವಿ ಕಾರ್ಯಾಚರಣೆ ನಡೆಸಲಾಗಿದೆ. ಗೋವಾ ಭಾರತದ ಅವಿಭಾಜ್ಯ ಅಂಗವಾಗಿದೆ. ಗೋವಾದಲ್ಲಿ ವ್ಯಾಪಾರಿ ನೌಕಾ ಸಿಬ್ಬಂದಿ ತರಬೇತಿ ಕೇಂದ್ರ ಸ್ಥಾಪನೆಗೆ ಕ್ರಮ. ಚೀನಾ, ಪಾಕ್ ಆಕ್ರಮಣ ತೊಡೆಯಲು ಶಪಥ. ಉತ್ತರ ಗಡಿಯಲ್ಲಿ ಬಲವರ್ಧನೆ. ಚೀನಾ ಆಕ್ರಮಿತ ಪ್ರದೇಶಗಳ ಮರುವಶಕ್ಕೆ ಕ್ರಮ.
- ಯಾವುದೇ ಮಿಲಿಟರಿ ಕೂಟಕ್ಕೆ ಭಾರತದ ಸೇರ್ಪಡೆ ಇಲ್ಲ. ತಟಸ್ಥ ನೀತಿ. ಮೈತ್ರಿ ಹಾಗೂ ಶಾಂತಿ ನೀತಿಯ ಅನುಸರಣೆ.
- ಆಫ್ರಿಕಾ ರಾಷ್ಟ್ರಗಳ ವಸಾಹತುಶಾಹಿ ವಿರುದ್ಧದ ಹೋರಾಟಕ್ಕೆ ಬೆಂಬಲ.
- ಅಮೆರಿಕ ರಷ್ಯಾ ಅಣ್ವಸ್ತ್ರ ಪರೀಕ್ಷೆ ಬಗ್ಗೆ ವಿಷಾದ. ನಿಶ್ಶಸ್ತ್ರೀಕರಣ ನೀತಿಗೆ ಪೂರ್ಣ ಬೆಂಬಲ.
- ಆಡಳಿತದಲ್ಲಿ ಭ್ರಷ್ಟಾಚಾರ ನಿವಾರಣೆ ಮತ್ತು ದಕ್ಷತೆಯನ್ನು ಹೆಚ್ಚಿಸಲು ಕ್ರಮ.

**ಫಲಿತಾಂಶ**

೧.೩.೬೨ರ ಹೊತ್ತಿಗೆ ಚುನಾವಣಾ ಫಲಿತಾಂಶಗಳು ಪ್ರಕಟವಾದವು. ಕಾಂಗ್ರೆಸ್ ಪಕ್ಷ ತಾನು ಸ್ಪರ್ಧಿಸಿದ್ದ ೨೦೮ ಸ್ಥಾನಗಳ ಪೈಕಿ ೧೩೮ ಸ್ಥಾನಗಳನ್ನು ಗೆದ್ದು ಅಧಿಕಾರಕ್ಕೆ ಬಂದಿತು. ಅದೇ ರೀತಿ ಲೋಕಸಭೆಯ ೨೬ ಸ್ಥಾನಗಳ ಪೈಕಿ ೨೬ರಲ್ಲೂ ಜಯಗಳಿಸಿತು. ವಿಧಾನಸಭೆಯಲ್ಲಿ ಪ್ರಜಾಸಮಾಜವಾದಿ ಪಕ್ಷ ೨೦, ಸ್ವತಂತ್ರ ಪಕ್ಷ ೯, ಕಮ್ಯುನಿಸ್ಟ್ ೩, ಸಮಾಜವಾದಿ ಪಕ್ಷ ೧, ಪಕ್ಷೇತರರು ೩೭ ಸ್ಥಾನ ಪಡೆದರು.

ವಿಧಾನಸಭೆಗೆ ಚಲಾವಣೆಯಾದ ೬೩,೦೧,೭೨೩ ಮತಗಳ ಪೈಕಿ ಕಾಂಗ್ರೆಸ್ ಪಕ್ಷ ೩೧,೬೪,೮೧೧ಮತಗಳನ್ನು ಪಡೆದು ಶೇಕಡಾ ೫೦. ೨೨ ಪ್ರಮಾಣದ ಮತಗಳನ್ನು ಪಡೆಯಿತು. ೫೪ ಜನ ಬಂಡಾಯ ಕಾಂಗ್ರೆಸ್ ಸ್ಪರ್ಧಿಗಳಲ್ಲಿ ಆರು ಜನ ವಿಧಾನಸಭೆಗೆ ಆರಿಸಿ ಬಂದರು. ಬಂಡಾಯ ಅಭ್ಯರ್ಥಿಗಳಿಂದಲೇ ಕಾಂಗ್ರೆಸ್ ಪಕ್ಷಕ್ಕೆ ಅನೇಕ ಸ್ಥಾನಗಳು ನಷ್ಟವಾದವು. ಕಾಂಗ್ರೆಸ್ ಪಕ್ಷಕ್ಕೆ ಆದ ಆಶ್ಚರ್ಯ ಹಾಗೂ ಅತ್ಯಂತ ದೊಡ್ಡ ಆಘಾತವೆಂದರೆ ನಿಜಲಿಂಗಪ್ಪನವರು ಹೊಸದುರ್ಗದಲ್ಲಿ ತಮ್ಮ ಪ್ರತಿಸ್ಪರ್ಧಿ ಪಿ. ಎಸ್. ಪಿ. ಯ

ಜೆ. ಟಿ. ರಂಗಪ್ಪನವರ ವಿರುದ್ಧ ೮೭೧೧ ಮತಗಳಿಂದ ಪರಾಜಯ ಅನುಭವಿಸಿದ್ದು. ವೀರಣ್ಣಗೌಡ, ಎಚ್. ಎಂ. ಚನ್ನಬಸಪ್ಪ, ಹೆಚ್. ಎಸ್. ರುದ್ರಪ್ಪ ಮಾಲಿಮರಿಯಪ್ಪ, ಎನ್. ರಾಚಯ್ಯ, ಟಿ. ಸುಬ್ರಹ್ಮಣ್ಯಂ, ಹಾಗೂ ಕೆ. ಕೆ. ಹೆಗ್ಗಡೆ ಸೇರಿದಂತೆ ೭ ಮಂತ್ರಿಗಳು, ೩ ಉಪಮಂತ್ರಿಗಳು, ಕಾಂಗ್ರೆಸ್ ಪಕ್ಷದ ಪದಾಧಿಕಾರಿಗಳು ಪರಾಭವ ಅನುಭವಿಸಿದರು.

ಬಹುಮತ ಬಂದಿದ್ದರೂ ಕಾಂಗ್ರೆಸ್ ವಲಯದಲ್ಲಿ ಸಂತೋಷ ಸಮಾಧಾನ ಇರಲಿಲ್ಲ. ಎಸ್. ಆರ್. ಕಂಠಿ ಮತ್ತು ಬಿ. ಡಿ. ಜತ್ತಿ ಇಬ್ಬರೂ ಪ್ರಚಂಡ ಬಹುಮತದಿಂದ ಆರಿಸಿ ಬಂದಿದ್ದರು. ಇದು ಪಕ್ಷದಲ್ಲಿ ಗುಂಪುಗಾರಿಕೆ ಹೆಚ್ಚಿಸಲು ಕಾರಣವಾಯಿತು. ನಿಜಲಿಂಗಪ್ಪನವರು ಶಾಸಕಾಂಗ ಪಕ್ಷದ ನಾಯಕನ ಸ್ಥಾನಕ್ಕೆ ಸ್ಪರ್ಧಿಸಲು ಇಚ್ಛಿಸಿದ್ದರು. ಆದರೆ ೪.೩.೬೨ ರಂದು ಇದಕ್ಕೆ ಹೈಕಮಾಂಡ್ ಅಸಮ್ಮತಿ ಸೂಚಿಸಿತು. ಚುನಾಯಿತ ಸದಸ್ಯರಲ್ಲಿಯೇ ನಾಯಕನ ಆಯ್ಕೆ ಆಗಬೇಕೆಂಬುದು ಕಾಂಗ್ರೆಸ್ ಹೈಕಮಾಂಡ್ ಅಭಿಪ್ರಾಯವಾಗಿತ್ತು. ೬.೩.೬೨ ರಂದು ಲಾಲ್ ಬಹುದ್ದೂರ್ ಶಾಸ್ತ್ರಿಯವರು ಪಕ್ಷದ ವೀಕ್ಷಕರಾಗಿ ನಾಯಕತ್ವದ ತೊಡಕಿನ ಪರಿಹಾರಕ್ಕಾಗಿ ಬೆಂಗಳೂರಿಗೆ ಆಗಮಿಸಿದರು. ಒಮ್ಮತದ ಆಯ್ಕೆಗೆ ಶಕ್ತಿಮೀರಿ ಶ್ರಮಿಸುವುದಾಗಿ ಶಾಸ್ತ್ರಿ ತಿಳಿಸಿದರು. ೮.೩.೬೨ರಂದು ಎಸ್. ಆರ್. ಕಂಠಿ ಶಾಸಕಾಂಗ ಪಕ್ಷದ ನಾಯಕನಾಗಿ ಆಯ್ಕೆಯಾದರು. ನಿಜಲಿಂಗಪ್ಪನವರು ನಾಯಕತ್ವಕ್ಕೆ ಸ್ಪರ್ಧಿಸಲಿಲ್ಲ. ದಿನಾಂಕ ೯.೩.೬೨ರಂದು ಶಿವಲಿಂಗಪ್ಪ ರುದ್ರಪ್ಪ ಕಂಠಿ ಅವರು ಮುಖ್ಯಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿ ೯ ಕ್ಯಾಬಿನೆಟ್ ಮಂತ್ರಿಗಳಿಂದ ಕೂಡಿದ ಸಚಿವ ಸಂಪುಟ ರಚಿಸಿದರು.

ಇನ್ನು ಕೆಲವೇ ತಿಂಗಳುಗಳಲ್ಲಿ ನಿಜಲಿಂಗಪ್ಪನವರು ನಮ್ಮ ನಾಯಕರಾಗಿ ಮಾರ್ಗದರ್ಶನ ಮಾಡಲು ಬರುತ್ತಾರೆ ಎಂದು ಹೇಳುವ ಮೂಲಕ ಎಸ್.ಆರ್. ಕಂಠಿ, ನಿಜಲಿಂಗಪ್ಪನವರು ಮತ್ತೆ ಮುಖ್ಯಮಂತ್ರಿಯಾಗಿ ಬರುವುದರ ಮುನ್ಸೂಚನೆ ನೀಡಿದರು. ಬಾಗಲಕೋಟೆ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾಗಿದ್ದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿ ಬಿ. ಟಿ. ಮುನ್ನಾಳ್ ನಿಜಲಿಂಗಪ್ಪನವರಿಗಾಗಿ ಸ್ಥಾನ ತೆರವು ಮಾಡಿಕೊಡಲು ರಾಜೀನಾಮೆ ನೀಡಿದರು. ಮೇ ೬೨ರಲ್ಲಿ ನಡೆದ ಉಪಚುನಾವಣೆಗಳಲ್ಲಿ ನಿಜಲಿಂಗಪ್ಪನವರು ಬಾಗಲಕೋಟೆ ಕ್ಷೇತ್ರದಿಂದ ಅವಿರೋಧವಾಗಿ ವಿಧಾನಸಭೆಗೆ ಆಯ್ಕೆಯಾದರು. ೨೧.೬.೧೯೬೨ರಂದು ನಿಜಲಿಂಗಪ್ಪನವರು ಶಾಸಕಾಂಗ ಪಕ್ಷದ ನಾಯಕನಾಗಿ ಆಯ್ಕೆಯಾಗಿ ಅದೇ ದಿನ ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದರು.

## ೧೯೬೨ರ ಲೋಕಸಭಾ ಚುನಾವಣೆ

೧೯೬೨ರ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ೨೬ ಸ್ಥಾನಗಳನ್ನು ಪಡೆಯಿತು. ಇದೊಂದು ಅಪೂರ್ವ ವಿಜಯವಾಗಿತ್ತು. ಕೊಪ್ಪಳದ ಲೋಕಸಭಾ ಕ್ಷೇತ್ರದಿಂದ ಲೋಕಸೇವಕ ಸಂಘದ ಶಿವಮೂರ್ತಿಸ್ವಾಮಿ ಅಳವಂಡಿ ಮಾತ್ರ ವಿಜಯಶಾಲಿಗಳಾದರು. ಈ ಚುನಾವಣೆಯಲ್ಲಿ ಗೆದ್ದ ಕಾಂಗ್ರೆಸ್‌ನ ಪ್ರಮುಖ ಅಭ್ಯರ್ಥಿಗಳೆಂದರೆ, ಬೀದರ್‌ನಿಂದ ರಾಮಚಂದ್ರ ವೀರಪ್ಪ, ಗುಲ್ಬರ್ಗಾದಿಂದ ಯಶವಂತಪ್ಪ, ಬಿಜಾಪುರ ಉತ್ತರದಿಂದ ರಾಜರಾಂ ಗಿರಿಧರಲಾಲ್ ದುಬೆ, ಬಿಜಾಪುರ ದಕ್ಷಿಣದಿಂದ ಎಸ್. ಬಿ ಪಾಟೀಲ್, ಚಿಕ್ಕೋಡಿಯಿಂದ ವಿ. ಎಲ್. ಪಾಟೀಲ್, ಬೆಳಗಾಂನಿಂದ ಬಿ.ಎನ್. ದಾತಾರ್, ಉತ್ತರ ಕನ್ನಡದಿಂದ ಜೋಕಿಂ ಆಳ್ವಾ, ಧಾರವಾಡ ದಕ್ಷಿಣದಿಂದ ಎಫ್. ಎಸ್. ಮೊಹಿಸೀನ್, ಧಾರವಾಡದ ಉತ್ತರದಿಂದ ಶ್ರೀಮತಿ ಸರೋಜಿನಿ ಮಹಿಷಿ, ರಾಯಚೂರಿನಿಂದ ಜಗನ್ನಾಥರಾವ್ ವೆಂಕಟರಾವ್ ಚಂಡ್ರಕಿ, ಬಳ್ಳಾರಿಯಿಂದ ಟಿ. ಸುಬ್ರಹ್ಮಣಂ, ಚಿತ್ರದುರ್ಗದಿಂದ ಎಸ್. ವೀರಬಸಪ್ಪ, ಶಿವಮೊಗ್ಗದಿಂದ ಎಸ್. ವಿ. ಕೃಷ್ಣಮೂರ್ತಿರಾವ್, ಉಡುಪಿಯಿಂದ ಯು. ಶ್ರೀನಿವಾಸ ಮಲ್ಯ, ಮಂಗಳೂರಿನಿಂದ ಎ. ಶಂಕರ ಆಳ್ವಾ, ಹಾಸನದಿಂದ ಹೆಚ್. ಸಿದ್ದನಂಜಪ್ಪ, ತಿಪಟೂರಿನಿಂದ ಸಿ. ಆರ್. ಬಸಪ್ಪ, ಚಿಕ್ಕಬಳ್ಳಾಪುರದಿಂದ ಕೆ. ಸಿ. ರೆಡ್ಡಿ, ಬೆಂಗಳೂರು ನಗರದಿಂದ ಕೆ. ಹನುಮಂತಯ್ಯ, ಬೆಂಗಳೂರು ಮತ್ತೊಂದು ಕ್ಷೇತ್ರದಿಂದ ಹೆಚ್. ಸಿ. ದಾಸಪ್ಪ, ಮಂಡ್ಯದಿಂದ ಎಂ.ಕೆ. ಶಿವನಂಜಪ್ಪ, ಚಾಮರಾಜನಗರದಿಂದ ಎಸ್. ಎಂ. ಸಿದ್ದಯ್ಯ,. ಹಾಗೂ ಮೈಸೂರಿನಿಂದ ಕೆ. ಶಂಕರಯ್ಯ.

ಈ ಅವಧಿಯಲ್ಲಿ ನಡೆದ ಉಪಚುನಾವಣೆಯಲ್ಲಿ ತುಮಕೂರಿನಿಂದ ಎ. ಪಿ. ಜೈನ್ ಹಾಗೂ ಮಾಲಿ ಮರಿಯಪ್ಪ, ಬೆಳಗಾಂನಿಂದ ಹೆಚ್. ವಿ. ಕೌಜಲಗಿ, ಬೆಂಗಳೂರಿನಿಂದ ಹೆಚ್. ಕೆ. ವೀರಣ್ಣಗೌಡ ಹಾಗೂ ಚಿಕ್ಕಬಳ್ಳಾಪುರದಿಂದ ಹೆಚ್. ಸಿ. ಲಿಂಗಾರೆಡ್ಡಿ ಅವರುಗಳು ಆಯ್ಕೆಯಾಗಿದ್ದರು.

೧೯೬೨ರ ವಿಧಾನಸಭೆ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ೨೦೮ ಸ್ಥಾನಗಳ ಪೈಕಿ ೧೩೮ ಸ್ಥಾನಗಳಲ್ಲಿ ವಿಜಯ ಗಳಿಸಿತು. ಈ ಚುನಾವಣೆಯಲ್ಲಿ ಗೆದ್ದ ಪ್ರಮುಖ ಅಭ್ಯರ್ಥಿಗಳೆಂದರೆ ಬೀದರ್‌ನಿಂದ ಮಹಮ್ಮದಾಲಿ, ಚಿಂಚೋಳಿಯಿಂದ ವೀರೇಂದ್ರ ಪಾಟೀಲ್, ಗುಲ್ಬರ್ಗಾದಿಂದ ಗಂಗಾಧರ ನಮೋಶಿ, ಅಫ್ಜಲ್‌ಪುರದಿಂದ ಅಣ್ಣಾರಾವ್ ಬಸಪ್ಪ ಗುಣಮುಖಿ, ಗುಳೇದಗುಡ್ಡದಿಂದ ಎಂ. ಆರ್. ಪಟ್ಟಣಶೆಟ್ಟಿ, ಹುನಗುಂದದಿಂದ ಎಸ್. ಆರ್. ಕಂಠಿ, ಜಮಖಂಡಿಯಿಂದ ಬಿ.ಡಿ. ಜತ್ತಿ, ತ್ರಿಕೋಟದಿಂದ

ಬಿ. ಎಂ. ಪಾಟೀಲ್, ಮುದ್ದೇಬಿಹಾಳ್‌ನಿಂದ ಎಸ್. ಎಂ. ಗುರಡ್ಡಿ, ಕಾಗವಾಡದಿಂದ ಎಸ್. ವಿ. ಪಾಟೀಲ್, ರಾಯದುರ್ಗದಿಂದ ಆರ್. ಎಸ್. ಪಾಟೀಲ್, ಕಾರವಾರದಿಂದ ಬಿ. ಪಿ. ಕದಂ, ಸಿರ್ಸಿಯಿಂದ ರಾಮಕೃಷ್ಣ ಹೆಗಡೆ, ಹಿರೇಕೆರೂರಿನಿಂದ ಬಿ. ಶಂಕರರಾವ್, ಬ್ಯಾಡಗಿಯಿಂದ ಎಂ.ಜಿ. ಬಣಕಾರ್, ಹುಬ್ಬಳ್ಳಿಯಿಂದ ಎಂ. ಆರ್. ಪಾಟೀಲ್, ರೋಣದಿಂದ ಎ.ಜೆ. ದೊಡ್ಡಮೇಟಿ, ಮಾನ್ವಿಯಿಂದ ಶ್ರೀಮತಿ ಬಸವರಾಜೇಶ್ವರಿ, ಕುರಗೋಡಿನಿಂದ ಅಲ್ಲಂ ಕರಿಬಸಪ್ಪ, ಸೊಂಡೂರಿನಿಂದ ಎಂ. ವೈ. ಘೋರ್ಪಡೆ, ದಾವಣಗೆರೆಯಿಂದ ಕೊಂಡಜ್ಜಿ ಬಸಪ್ಪ, ಹರಿಹರದಿಂದ ಗಾಂಜಿ ವೀರಪ್ಪ, ಹೊಳಲ್ಕೆರೆಯಿಂದ ಸಿ. ದುಗ್ಗಪ್ಪ, ಬೆಳ್ತಂಗಡಿಯಿಂದ ವೈಕುಂಠ ಬಾಳಿಗಾ, ಪಾಣೆ ಮಂಗಳೂರಿನಿಂದ ಡಾ। ಕೆ. ನಾಗಪ್ಪ ಆಳ್ವ, ಉಡುಪಿಯಿಂದ ಎಂ. ಮಧ್ವರಾಜ್, ಶೃಂಗೇರಿಯಿಂದ ಕಡಿದಾಳು ಮಂಜಪ್ಪ, ಚಿಕ್ಕಮಗಳೂರಿನಿಂದ ಬಿ. ಎಲ್. ಸುಬ್ಬಮ್ಮ, ಚಿಕ್ಕನಾಯಕನಹಳ್ಳಿಯಿಂದ ಸಿ. ಹೆಚ್. ಲಿಂಗದೇವರು, ಚಂದ್ರಶೇಖರಪುರದಿಂದ ಎನ್. ಹುಚ್ಚ ಮಾಸ್ತಿ ಗೌಡ, ಕೊರಟಗೆರೆಯಿಂದ ಆರ್. ಚನ್ನಿಗರಾಮಯ್ಯ, ಬೆಂಗಳೂರಿನ ಗಾಂಧಿನಗರದಿಂದ ನಾಗರತ್ನಮ್ಮ ಹಿರೇಮಠ, ಚಿಕ್ಕಪೇಟೆಯಿಂದ ವೈ. ರಾಮಚಂದ್ರ, ಯಲಹಂಕದಿಂದ ವೈ. ರಾಮಕೃಷ್ಣ ನೆಲಮಂಗದಿಂದ ಕೆ. ಪ್ರಭಾಕರ, ಚನ್ನಪಟ್ಟಣದಿಂದ ಬಿ. ಜೆ. ಲಿಂಗೇಗೌಡ, ಶ್ರೀರಂಗಪಟ್ಟಣದಿಂದ ಎ.ಜಿ. ಬಂಡೀಗೌಡ, ಮಳವಳ್ಳಿಯಿಂದ ಜಿ. ಮಾದೇಗೌಡ, ಕೊಳ್ಳೇಗಾಲದಿಂದ ಬಿ. ಬಸವಯ್ಯ, ಟಿ. ನರಸೀಪುರದಿಂದ ಎಂ. ರಾಜಶೇಖರಮೂರ್ತಿ, ನಂಜನಗೂಡಿನಿಂದ ಎನ್. ರಾಚಯ್ಯ, ಸಂತೇಮರಳ್ಳಿಯಿಂದ ಬಿ. ರಾಚಯ್ಯ ಹಾಗೂ ಹುಣಸೂರಿನಿಂದ ಡಿ. ದೇವರಾಜ ಅರಸು ಅವರುಗಳು ಆಯ್ಕೆಯಾಗಿದ್ದರು.

## ೧೯೬೭ರ ಮಹಾಚುನಾವಣೆಗಳು

೧೯೬೭ರ ಮಹಾಚುನಾವಣೆಗಳ ಹೊತ್ತಿಗೆ ಲೋಕಸಭೆಯ ಸ್ಥಾನಗಳ ಸಂಖ್ಯೆ ೪೯೪ ರಿಂದ ೫೨೦ಕ್ಕೆ ಏರಿತ್ತು. ರಾಜ್ಯದಲ್ಲಿ ಒಂದು ಲೋಕಸಭಾ ಸ್ಥಾನ ಹೆಚ್ಚಾಯಿತು. ಅಂದರೆ ರಾಜ್ಯದ ಲೋಕಸಭಾ ಸ್ಥಾನಗಳ ಸಂಖ್ಯೆ ೨೭ ಆಯಿತು. ಇವುಗಳಲ್ಲಿ ನಾಲ್ಕು ಪರಿಶಿಷ್ಟ ಜಾತಿಗೆ ಮೀಸಲಾದವು. ರಾಜ್ಯದ ವಿಧಾನಸಭಾ ಸ್ಥಾನಗಳ ಸಂಖ್ಯೆ ೨೦೮ರಿಂದ ೨೧೬ಕ್ಕೆ ಏರಿಕೆ ಆಯಿತು. ಇವುಗಳಲ್ಲಿ ೧೮೫ ಸಾಮಾನ್ಯ ಕ್ಷೇತ್ರಗಳು. ೨೯ ಪರಿಶಿಷ್ಟ ಜಾತಿ ಮತ್ತು ೨ ಪರಿಶಿಷ್ಟ ವರ್ಗಗಳಿಗೆ ಮೀಸಲು ಕ್ಷೇತ್ರಗಳು.

## ರಾಷ್ಟ್ರೀಯ ಪರಿಸ್ಥಿತಿ

೧೯೬೨ರ ಲೋಕಸಭಾ ಚುನಾವಣೆಗಳಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಲೋಕಸಭೆಯ ೪೯೪ ಸ್ಥಾನಗಳ ಪೈಕಿ ೩೭೧ ಸ್ಥಾನಗಳನ್ನು ಪಡೆದು ಅಧಿಕಾರಕ್ಕೆ ಬಂದಿತ್ತು. ನೆಹರು ಕಾಂಗ್ರೆಸ್ ಪಕ್ಷದ ಅನಭಿಷಿಕ್ತ ದೊರೆಯಂತಿದ್ದರು. ಪಂಚಶೀಲ, ಅಲಿಪ್ತ ನೀತಿ, ನಿಶ್ಶಸ್ತ್ರೀಕರಣ ಮುಂತಾದ ವಿದೇಶಾಂಗ ನೀತಿಗಳ ಮೂಲಕ ಪಂಚವಾರ್ಷಿಕ ಯೋಜನೆಗಳು, ಸಮಾಜವಾದಿ ಸಮಾಜ ನಿರ್ಮಾಣ, ಸರ್ಕಾರಿ ಕ್ಷೇತ್ರದ ಉದ್ಯಮಗಳ ವಿಸ್ತರಣೆ, ಭೂ ಸುಧಾರಣೆ ಮುಂತಾದ ಆರ್ಥಿಕಾಭಿವೃದ್ಧಿಯ ಕಾರ್ಯಕ್ರಮಗಳ ಮೂಲಕ ಪಕ್ಷವನ್ನು ಮುನ್ನಡೆಸುತ್ತಿದ್ದರು. ೧೯೫೯ರಲ್ಲಿ ಚೀನಾ ಟಿಬೆಟ್‌ನ್ನು ಆಕ್ರಮಿಸಿಕೊಂಡು ಜೊತೆಗೆ ಭಾರತದ ೩೦೦೦೦ ಚ.ಕೀ. ಪ್ರದೇಶವನ್ನು ಆಕ್ರಮಿಸಿದಾಗ ಭಾರತ ಕೇವಲ ಪ್ರತಿಭಟನೆ ಸಲ್ಲಿಸಿತು. ನೆಹರುರವರ ಆಪ್ತಮಿತ್ರ, ವಿದೇಶಾಂಗ ವ್ಯವಹಾರಗಳ ಸಲಹೆಗಾರ, ರಕ್ಷಣಾ ಸಚಿವ ಕೃಷ್ಣಮೆನನ್ ಈ ಬಗ್ಗೆ ಏನೂ ಮಾಡಲಿಲ್ಲವೆಂಬ ಆರೋಪ ಬಂತು. ಆದರೆ ೧೯೬೨ರ ಚುನಾವಣಾ ಪ್ರಚಾರಗಳಲ್ಲಿ ನೆಹರು ಕೃಷ್ಣಮೆನನ್ ಪರವಾಗಿ ಮಾತನಾಡಿದರು. ಚೈನಾ ಆಕ್ರಮಿತ ಭಾರತದ ಭೂ ಪ್ರದೇಶವನ್ನು ಬಲಪ್ರಯೋಗದಿಂದಲಾದರೂ ಮುಕ್ತಗೊಳಿಸುವುದಾಗಿ ಹೇಳಿದ್ದರು.

೧೯೬೨ರ ಫೆಬ್ರವರಿಯಲ್ಲಿ ಮೂರನೇ ಮಹಾಚುನಾವಣೆಗಳು ನಡೆದು ಕಾಂಗ್ರೆಸ್ ಅಧಿಕಾರಕ್ಕೆ ಬಂದ ನಂತರ ೧೯೬೨ ಅಕ್ಟೋಬರ್ ೩೦ ರಂದು ಚೀನಾ, ಭಾರತದ ಲಡಾಕ್ ಮತ್ತು ನೇಫಾ ಪ್ರದೇಶಗಳ ಮೇಲೆ ಭಾರೀ ಆಕ್ರಮಣ ನಡೆಸಿತು. ನವೆಂಬರ್ ೧೯ ರಂದು ಬೊಮಿಲ್ಡಾ ಪ್ರದೇಶದ ಮೇಲೆ ಆಕ್ರಮಣ ಮಾಡಿ ಭಾರತದ ಅಪಾರ ಭೂಪ್ರದೇಶವನ್ನು ಆವರಿಸಿಕೊಂಡಿತು. ನೆಹರೂ ದಿಜ್ಮೂಢರಾದರು. ಕೃಷ್ಣ ಮೆನನ್ ರಾಜೀನಾಮೆ ನೀಡಿದರು. ನೆಹರು ಅವರ ವಿದೇಶಾಂಗ ನೀತಿ ವಿಫಲವಾಗಿತ್ತು. ಜನ ಜಾಗೃತರಾದರು. ಅಪಾರ ಪ್ರಮಾಣದ ರಾಷ್ಟ್ರೀಯ ರಕ್ಷಣಾ ನಿಧಿ ಸಂಗ್ರಹವಾಯಿತು. ಯುದ್ಧಾನಂತರದ ಆರ್ಥಿಕ ಸಂಕಷ್ಟವನ್ನು ಹಾಗೂ ಹೀಗೂ ಎದುರಿಸಲಾಯಿತು.

ಪಕ್ಷದಲ್ಲಿ ಸಚಿವ ಸಂಪುಟದಲ್ಲಿ ನೆಹರು ಅವರ ಟೀಕಾಕಾರರು ವಿರೋಧಿಗಳು ಜಾಸ್ತಿಯಾದರು. ಇದನ್ನು ಪರಿಹರಿಸಲು ಕಾಮರಾಜ್ ಒಂದು ಯೋಜನೆಯನ್ನು ೧೦.೮.೬೨ರಲ್ಲಿ ರೂಪಿಸಿದರು. ಪಕ್ಷದ ಸಂಘಟನೆಗಾಗಿ ಮಂತ್ರಿಗಳು ರಾಜೀನಾಮೆ ನೀಡುವುದೇ ಈ

ಯೋಜನೆಯ ಉದ್ದೇಶ. ಈ ಯೋಜನೆ ಪ್ರಕಾರ ಕೇಂದ್ರಸಚಿವರಾಗಿದ್ದ ಅವರುಗಳು ಮೊರಾರ್ಜಿ ದೇಸಾಯಿ, ಜಗಜೀವನರಾಂ, ಲಾಲ್ ಬಹದ್ದೂರ್ ಶಾಸ್ತ್ರಿ ಎಸ್. ಕೆ. ಪಾಟೀಲ್, ಬಿ. ಗೋಪಾಲರೆಡ್ಡಿ, ಡಾ। ಕೆ. ಎಲ್. ಶ್ರೀಮಾಲಿ ಅವರುಗಳು ಮಂತ್ರಿಪದವಿಗೆ ರಾಜೀನಾಮೆ ನೀಡಿದರು. ತಮಿಳುನಾಡಿನ ಮುಖ್ಯಮಂತ್ರಿ ಆಗಿದ್ದ ಕಾಮರಾಜ್ ಸೇರಿದಂತೆ, ಜಮ್ಮು-ಕಾಶ್ಮೀರ, ಒರಿಸ್ಸಾ, ಉತ್ತರ ಪ್ರದೇಶ, ಬಿಹಾರ, ಮಧ್ಯಪ್ರದೇಶ ಮುಖ್ಯಮಂತ್ರಿಗಳು ರಾಜೀನಾಮೆ ನೀಡಿದರು. ೨೭-೫-೧೯೬೪ರಂದು ಜವಾಹರಲಾಲ್ ನೆಹರು ಹಠಾತ್ತಾಗಿ ನಿಧನರಾದರು. ನಾಯಕತ್ವಕ್ಕೆ ಮೊರಾರ್ಜಿ ದೇಸಾಯಿ- ಲಾಲ್ ಬಹದ್ದೂರ್ ಶಾಸ್ತ್ರಿ ನಡುವೆ ಸ್ಪರ್ಧೆ ನಡೆಯಿತು. ರಹಸ್ಯ ಮತದಾನದಲ್ಲಿ ಶಾಸ್ತ್ರಿ ಗೆದ್ದು ೯.೬.೬೪ ರಂದು ಪ್ರಧಾನಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು.

ಪರಿಸ್ಥಿತಿ ಸುಧಾರಿಸಿತು ಎನ್ನುವಷ್ಟರಲ್ಲಿ ೧೯೬೫ರ ಮಾರ್ಚ್ ತಿಂಗಳಲ್ಲಿ ಪಾಕಿಸ್ತಾನ ಕಚ್ ಪ್ರದೇಶದ ಮೇಲೆ ಆಕ್ರಮಣ ನಡೆಸಿತು. ಭಾರತ ಪ್ರತಿಭಟನೆ ಸಲ್ಲಿಸಿ ಸುಮ್ಮನಾಯಿತು. ಮತ್ತೆ ೧೯೬೫ ಸೆಪ್ಟೆಂಬರ್ ೧ ನೇ ತಾರೀಖು ಪಾಕಿಸ್ತಾನ ಜಮ್ಮು ವಲಯದಲ್ಲಿ ಭಾರೀ ಪ್ರಮಾಣದಲ್ಲಿ ಆಕ್ರಮಣ ನಡೆಸಿತು. ಸೆಪ್ಟೆಂಬರ್ ೬ ರಂದು ಪ್ರತಿಧಾಳಿಗೆ ಭಾರತ ನಿರ್ಧರಿಸಿತು. ಪ್ರತಿಧಾಳಿ ಆರಂಭಿಸಿದ ಭಾರತ ಪಾಕ್ ಸೇನೆಯನ್ನು ಹಿಮ್ಮೆಟ್ಟಿಸಿ ಪಾಕ್ ಪ್ರದೇಶದೊಳಕ್ಕೆ ನುಗ್ಗಿತು. ರಷ್ಯಾದ ಅಧ್ಯಕ್ಷ ಕೊಸಿಗಿನ್ ಮಧ್ಯಸ್ಥಿಕೆ ವಹಿಸಿದರು. ೧೯೬೬ ಜನವರಿ ೧೦ರಂದು ಲಾಲ್ ಬಹದ್ದೂರ್ ಶಾಸ್ತ್ರಿ ಅಯೂಬ್ ಖಾನ್ ನಡುವೆ ತಾಷ್ಕೆಂಟ್‌ನಲ್ಲಿ ಒಪ್ಪಂದ ಆಯಿತು. ಅದೇ ದಿನ ರಾತ್ರಿ ಲಾಲ್ ಬಹದ್ದೂರ್ ಶಾಸ್ತ್ರಿ ಹಠಾತ್ತಾಗಿ ನಿಧನರಾದರು. ಮತ್ತೆ ನಾಯಕತ್ವಕ್ಕಾಗಿ ಮೊರಾರ್ಜಿ ದೇಸಾಯಿ- ಶ್ರೀಮತಿ ಇಂದಿರಾ ಗಾಂಧಿಯವರ ನಡುವೆ ಸ್ಪರ್ಧೆ ನಡೆಯಿತು. ಕಾಮರಾಜ್, ನಿಜಲಿಂಗಪ್ಪ ಅವರುಗಳು ಶ್ರೀಮತಿ ಇಂದಿರಾಗಾಂಧಿ ಅವರನ್ನು ಬೆಂಬಲಿಸಿದರು. ಕೆಂಗಲ್ ಹನುಮಂತಯ್ಯ, ನೀಲಂ ಸಂಜೀವರೆಡ್ಡಿ, ಪಿ. ಸಿ. ಸೇನ್ ಮೊದಲಾದವರು ಮೊರಾರ್ಜಿ ದೇಸಾಯಿಯವರನ್ನು ಬೆಂಬಲಿಸಿದರು. ೩೫೫-೧೬೯ ಮತಗಳಿಂದ ಶ್ರೀಮತಿ ಇಂದಿರಾಗಾಂಧಿ ಜಯಶಾಲಿಯಾಗಿ ೧೯೬೬ ಜನವರಿ ೨೬ರಂದು ಪ್ರಧಾನಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು.

ಲಾಲ್ ಬಹದ್ದೂರ್ ಶಾಸ್ತ್ರಿಯವರ 'ಜೈ ಜವಾನ್-ಜೈಕಿಸಾನ್' ಘೋಷಣೆ ಯುದ್ಧದಲ್ಲಿ ಪಾಕನ್ನು ಹಿಮ್ಮೆಟ್ಟಿಸಿದ್ದು, ಜನಮನ ಸೆಳೆದು ಕಾಂಗ್ರೆಸ್ ಪಕ್ಷದ ಬಗ್ಗೆ ಜನರಿಗೆ ಸಹಾನುಭೂತಿ ಉಂಟಾಗುವಂತೆ ಮಾಡಿತ್ತು.

## ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ ಪರಿಸ್ಥಿತಿ

೧೯೬೨ರ ವಿಧಾನಸಭಾ ಚುನಾವಣೆಗಳಲ್ಲಿ ಹೊಸದುರ್ಗ ಕ್ಷೇತ್ರದಲ್ಲಿ ಸೋಲನ್ನು ಅನುಭವಿಸಿ ಮತ್ತೆ ಉಪಚುನಾವಣೆಯಲ್ಲಿ ಬಾಗಲಕೋಟೆ ಕ್ಷೇತ್ರದಿಂದ ಅವಿರೋಧವಾಗಿ ಆರಿಸಿ ಬಂದ ನಿಜಲಿಂಗಪ್ಪನವರು ೨೧-೬-೬೨ ರಂದು ಎರಡನೇ ಬಾರಿಗೆ ರಾಜ್ಯದ ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡಿದ್ದರು. ಅದುವರೆಗೆ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ನಿಜಲಿಂಗಪ್ಪನವರ ಸ್ಥಾನಕ್ಕೆ ದಿನಾಂಕ ೨೩-೬-೬೩ರಂದು ನಡೆದ ಚುನಾವಣೆಯಲ್ಲಿ ಮಹಮದ್ ಅಲಿ ಅವರು ಎಚ್. ಎಂ. ಚನ್ನಬಸಪ್ಪನವರನ್ನು ೨೦೧-೨೩ ಅಂತರಗಳ ಭಾರೀ ಬಹುಮತದಿಂದ ಸೋಲಿಸಿ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದರು. ಮಹಮದ್ ಅಲಿ ನಿಜಲಿಂಗಪ್ಪನವರ ಅಭ್ಯರ್ಥಿಯಾಗಿದ್ದರು.

ಪಕ್ಷದಲ್ಲಿ ಒಂದು ಗುಂಪು ಆರಂಭದಿಂದಲೇ ನಿಜಲಿಂಗಪ್ಪನವರಿಗೆ ವಿರುದ್ಧವಾಗಿತ್ತು. ಈ ಗುಂಪಿನಲ್ಲಿ ಸಾಹುಕಾರ್ ಚನ್ನಯ್ಯ, ಟಿ. ಸುಬ್ರಹ್ಮಣ್ಯಂ, ಕಡಿದಾಳು ಮಂಜಪ್ಪ, ಟಿ. ಮರಿಯಪ್ಪ, ಎಚ್. ಎಂ. ಚನ್ನಬಸಪ್ಪ, ಎ. ಜಿ. ರಾಮಚಂದ್ರರಾವ್, ಹೆಚ್. ಸಿದ್ಧವೀರಪ್ಪ, ಬಿ. ಬಸವಲಿಂಗಪ್ಪ, ವೆಂಕಟರಾಮಯ್ಯ, ಅಣ್ಣಾರಾವ್ ಗಣಮುಖಿ ಮುಂತಾದ ಘಟಾನುಘಟಿಗಳಿದ್ದರು. ಕೆಂಗಲ್ ಹನುಮಂತಯ್ಯನವರ ಬೆಂಬಲವೂ ಇವರಿಗಿತ್ತು. ಶರಾವತಿ ಯೋಜನೆಗಳಲ್ಲಿ ಭಾರೀ ಅವ್ಯವಹಾರ ನಡೆದಿದೆ, ಕಂಟ್ರಾಕ್ಟರುಗಳಿಗೆ ಸರ್ಕಾರದ ಹಣವನ್ನು ಹೆಚ್ಚುವರಿಯಾಗಿ ನೀಡಲಾಗಿದೆ ಎಂಬ ಬಲವಾದ ಆರೋಪ ಸರ್ಕಾರದ ಮೇಲೆ ಬಂದಿತ್ತು. ಇದು 'ಶರಾವತಿ ಕರ್ಮಕಾಂಡ'ವೆಂದು ಪ್ರಸಿದ್ಧಿಯಾಗಿತ್ತು. ಕಾಂಗ್ರೆಸ್ ಭಿನ್ನ ಮತೀಯರು ಈ ಬಗ್ಗೆ ನ್ಯಾಯಾಂಗ ತನಿಖೆಗೆ ಒತ್ತಾಯಿಸುತ್ತಿದ್ದರು. ಸಾಧ್ಯವಾದಾಗಲೆಲ್ಲಾ ವಿಧಾನ ಸಭೆಯಲ್ಲೂ ವಿರೋಧಪಕ್ಷದ ಜೊತೆ ಸೇರಿಕೊಂಡು ಈ ವಿಷಯ ಎತ್ತುತ್ತಿದ್ದರು. ತನಿಖೆಗಾಗಿ ಪ್ರಧಾನಿ ಹಾಗೂ ಹೈಕಮಾಂಡ್ ಮೇಲೆ ಒತ್ತಡ ತರುತ್ತಿದ್ದರು. ಈ ಬಗ್ಗೆ ಹೋರಾಡಲು 'ಕಾಂಗ್ರೆಸ್ ಸದಾಚಾರ ವೇದಿಕೆ' ಎಂಬ ಒಂದು ವೇದಿಕೆಯನ್ನು ೧೨-೩-೬೪ ರಂದು ಕಾಂಗ್ರೆಸ್ಸಿಗರು ರಚಿಸಿಕೊಂಡರು.

ನ್ಯಾಯಾಂಗ ತನಿಖೆ ಅಗತ್ಯವಿಲ್ಲ, ಅಗತ್ಯವಾದರೆ ಶ್ವೇತಪತ್ರ, ತರುವುದಾಗಿ ಹೇಳಿದ ನಿಜಲಿಂಗಪ್ಪನವರು ೧೯೬೪ರ ಫೆಬ್ರವರಿ ತಿಂಗಳಲ್ಲಿ ವಿಧಾನಸಭೆಯಲ್ಲಿ ಶ್ವೇತಪತ್ರವನ್ನು ಮಂಡಿಸಿದರು. ಆದರೆ ೧೫-೭-೬೪ರಲ್ಲಿ ಭಿನ್ನಮತೀಯರು ನಿಜಲಿಂಗಪ್ಪನವರ ವಿರುದ್ಧ ೨೪ ಆರೋಪಗಳನ್ನು ಹೊರಿಸಿ ಆರೋಪ ಪಟ್ಟಿಯನ್ನು ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಹಾಗೂ ಗೃಹಸಚಿವ ಗುಲ್ಜಾರಿಲಾಲ್

ನಂದಾ ಅವರಿಗೆ ಕಳುಹಿಸಿದರು. ಈ ಬಗ್ಗೆ ಹೈಕಮಾಂಡ್ ಡಿಸೆಂಬರ್ ೧೯೬೪ರಲ್ಲಿ ನಿಜಲಿಂಗಪ್ಪನವರಿಂದ ವಿವರಣೆ ತರಿಸಿಕೊಂಡಿತು. ಕೊನೆಗೆ ಶಾಸ್ತ್ರಿಯವರು ೨೨-೨-೬೫ರಲ್ಲಿ ಈ ಬಗ್ಗೆ ವಿಚಾರಣೆ ಅನಗತ್ಯ ಎಂದು ಅಭಿಪ್ರಾಯಪಟ್ಟರು. ಈ ರೀತಿ ಶರಾವತಿ ಕರ್ಮಕಾಂಡದ ವಿಚಾರ ನಿಜಲಿಂಗಪ್ಪ ಅವರ ಸರ್ಕಾರವನ್ನು ೧೯೬೨ರಿಂದ ೧೯೬೫ರವರೆಗೆ ಕಾಡಿತು. ಕೊನೆಗೆ ನಿಜಲಿಂಗಪ್ಪನವರ ವಿರೋಧಿಗಳು ೨೮.೪.೬೫ರಂದು ಕಾಂಗ್ರೆಸ್ ಪಕ್ಷವನ್ನು ತ್ಯಜಿಸಿ ಜನತಾಪಕ್ಷವನ್ನು ರಚಿಸಿಕೊಂಡರು. ಸಾಹುಕಾರ್ ಚನ್ನಯ್ಯ ಇದರ ಅಧ್ಯಕ್ಷರಾದರು. ಟಿ. ಸುಬ್ರಹ್ಮಣ್ಯಂ ಇದರಲ್ಲಿ ಪ್ರಧಾನ ಪಾತ್ರ ವಹಿಸಿದರು.

ಚೀನಾ ಆಕ್ರಮಣದ ನಂತರ ದೇಶದಲ್ಲಿ ರಾಷ್ಟ್ರೀಯ ರಕ್ಷಣಾ ನಿಧಿಯ ಸಂಗ್ರಹ ನಡೆಯುತ್ತಿತ್ತಷ್ಟೇ. ಮೈಸೂರು ರಾಜ್ಯ ಇದರಲ್ಲಿ ಹಿಂದೆ ಬೀಳಲಿಲ್ಲ. ೨.೭.೧೯೬೩ರಂದು ಇಡೀ ದೇಶದಲ್ಲಿಯೇ ಪ್ರಪ್ರಥಮವಾಗಿ, ಬಾಗಲಕೋಟೆಯಲ್ಲಿ, ನಿಜಲಿಂಗಪ್ಪ ಮತ್ತು ಇಂದಿರಾ ಗಾಂಧಿಯವರನ್ನು ಜನರು ಚಿನ್ನದಲ್ಲಿ ತುಲಾಭಾರ ಮಾಡಿ ೧೫ ಲಕ್ಷ ರೂಪಾಯಿಗಳ ಬೆಲೆಯ ಚಿನ್ನವನ್ನು ರಾಷ್ಟ್ರೀಯ ರಕ್ಷಣಾ ನಿಧಿಗೆ ಅರ್ಪಿಸಿದರು. ಇದರ ಯಶಸ್ಸು ನಿಜಲಿಂಗಪ್ಪನವರಿಗೆ ಸಂದಿತು. ४.೮.೬೫ರಲ್ಲಿ ನಿಜಲಿಂಗಪ್ಪನವರ ಸರ್ಕಾರ ಪಾನನಿರೋಧವನ್ನು ರದ್ದು ಪಡಿಸಿತು. ಇದನ್ನು ವಿರೋಧಿಸಿ ಶ್ರೀಮತಿ ಯಶೋಧರಮ್ಮ ದಾಸಪ್ಪನವರು ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು.

ಮೈಸೂರು-ಮಹಾರಾಷ್ಟ್ರ ಗಡಿ ವಿವಾದ ತಾರಕಕ್ಕೆ ಏರಿತು. ಜೂನ್ ೬೬ರಲ್ಲಿ ಬೆಳಗಾವಿ ಧಾರವಾಡ ಜಿಲ್ಲಾ ವಿಧಾನಸಭೆ ಸದಸ್ಯರುಗಳು, ಲೋಕಸಭಾ ಸದಸ್ಯರು ರಾಜೀನಾಮೆ ನೀಡಿದರು. ೨೮.೬.೬೬ರಂದು ಎಂ. ಪಿ. ಸಿ.ಸಿ. ಗಡಿ ವಿವಾದ ಪರಿಹಾರಕ್ಕೆ ಆಯೋಗ ನೇಮಿಸುವುದನ್ನು ತಿರಸ್ಕರಿಸಿತು. ಆದರೆ ೨೪-೫-೬೬ರಂದು ರಾಜ್ಯ ಸಚಿವ ಸಂಪುಟ ಗಡಿ ಸಮಸ್ಯೆಯ ಪರಿಹಾರಕ್ಕೆ ಏಕ ಸದಸ್ಯ ಆಯೋಗ ರಚನೆಗೆ ತನ್ನ ತಾತ್ವಿಕ ಒಪ್ಪಿಗೆ ನೀಡಿತು. ಇದನ್ನು ಪ್ರತಿಭಟಿಸಿ ಭಾರೀ ಸಭೆಗಳು, ಪ್ರದರ್ಶನಗಳು, ಹರತಾಳಗಳು ನಡೆದವು.

ಈ ಮಧ್ಯೆ ೧೭-೭-೬೬ರಂದು ದಾವಣಗೆರೆಯಲ್ಲಿ ಪ್ರದೇಶ ಕಾಂಗ್ರೆಸ್ ಚುನಾವಣಾ ಸಮಿತಿ ಸದಸ್ಯರ ಸ್ಥಾನಕ್ಕೆ ಚುನಾವಣೆ ನಡೆಯಿತು. ೭ ಸದಸ್ಯರ ಆಯ್ಕೆ ಆಯಿತು. ಇವರೆಲ್ಲಾ ನಿಜಲಿಂಗಪ್ಪನವರ ಗುಂಪಿಗೆ ಸೇರಿದವರಾಗಿದ್ದರು. ಹೆಚ್. ಕೆ. ವೀರಣ್ಣಗೌಡರು ಚುನಾವಣೆ ಸರಿಯಾಗಿ ನಡೆದಿಲ್ಲ ಎಂದು ಆರೋಪಿಸಿದರು. ಗಡಿ ವಿವಾದದ ವಿಚಾರದಲ್ಲಿ ಮೈಸೂರು ಮಹಾರಾಷ್ಟ್ರ ಮುಖ್ಯಮಂತ್ರಿಗಳ ಮಾತುಕತೆಗಳು ವಿಫಲವಾಗಿ ೧೭-೧೦-೬೬ ರಂದು ಕೇಂದ್ರ ಸರ್ಕಾರ ಮಹಾಜನ್ ಆಯೋಗ ನೇಮಿಸಿತು. ಆಯೋಗದ ವರದಿ ರಾಜ್ಯದ ಹಿತಕ್ಕೆ ಧಕ್ಕೆ ಉಂಟುಮಾಡುವಂತಿದ್ದರೆ ಅದನ್ನು ತಿರಸ್ಕರಿಸುವುದಾಗಿ ನಿಜಲಿಂಗಪ್ಪನವರು ಹೇಳಿದರು. ಭಿನ್ನಮತೀಯರ ಸಮಸ್ಯೆಯಿಂದಾಗಿ ಕಾಂಗ್ರೆಸ್ ಸರ್ಕಾರ ಎರಡು ಬಾರಿ ಅವಿಶ್ವಾಸ ನಿರ್ಣಯವನ್ನು ಎದುರಿಸಬೇಕಾಗಿ ಬಂದಿತು. ೨೧-೧-೬೫ರಂದು ತಂದಿದ್ದ ಅವಿಶ್ವಾಸ ನಿರ್ಣಯ ೧೭೧-೨೯ ಮತಗಳಿಂದ ಬಿದ್ದು ಹೋಯಿತು. ಅದೇ ರೀತಿ ನವೆಂಬರ್ ೧೭, ೧೯೬೬ರಂದು ತಂದಿದ್ದ ಅವಿಶ್ವಾಸ ನಿರ್ಣಯ ಕೂಡಾ ಯಶಸ್ವಿ ಆಗಲಿಲ್ಲ.

ಇಂಥವೇ ಸಮಸ್ಯೆಗಳಿಂದಾಗಿ ನಿಜಲಿಂಗಪ್ಪನವರು ಮಾರ್ಚ್ ೬೨, ಜೂನ್ ೬೨, ಜುಲೈ ೬೨ ಜೂನ್ ೬೫, ಆಗಸ್ಟ್ ೬೬- ಹೀಗೆ ಐದು ಬಾರಿ ಮಂತ್ರಿಮಂಡಲವನ್ನು ಪುನರ್‌ರಚಿಸಬೇಕಾಗಿ ಬಂದಿತ್ತು. ಕೃಷ್ಣಾ-ಗೋದಾವರಿ ನೀರಿನ ಸಮಸ್ಯೆ ಪರಿಹಾರಕ್ಕೆ ಆಯೋಗ ರಚಿಸುವಂತೆ ರಾಜ್ಯ ಸರ್ಕಾರ ಕೇಂದ್ರವನ್ನು ಒತ್ತಾಯಿಸುತ್ತಿತ್ತು. ಈ ಮಧ್ಯೆ ಗೋವಾದಲ್ಲಿ ಜನಮತಗಣನೆ ನಡೆಯಿತು. ಮೈಸೂರು ಸರ್ಕಾರ ಮಹಾರಾಷ್ಟ್ರ ವಿಲೀನ ವಿರೋಧಿಗಳ ಪರವಾಗಿತ್ತು. ಜನಮತಗಣನೆಯ ಫಲಿತಾಂಶ ವಿಲೀನಕ್ಕೆ ವಿರೋಧವಾಗಿತ್ತು. ಇದು ರಾಜ್ಯ ಸರ್ಕಾರಕ್ಕೆ ಸಂದ ಯಶಸ್ಸಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ನಾಲ್ಕನೆಯ ಮಹಾಚುನಾವಣೆಗಳು ರಾಜ್ಯದಲ್ಲಿ ನಡೆದವು.

### ಮಹಾಚುನಾವಣೆ ಕಾಂಗ್ರೆಸ್ ಅಭ್ಯರ್ಥಿಗಳ ಆಯ್ಕೆ- ಉಚ್ಚಾಟನೆ

ಡಿಸೆಂಬರ್ ೧೨, ೧೯೬೬ರಂದು ಕಾಂಗ್ರೆಸ್ ಅಭ್ಯರ್ಥಿಗಳ ಮೊದಲನೇ ಪಟ್ಟಿಯನ್ನು ಕೇಂದ್ರ ಚುನಾವಣಾ ಸಮಿತಿ ಪರಿಶೀಲನೆಯ ನಂತರ ಬಿಡುಗಡೆ ಮಾಡಲಾಯಿತು. ಸುಮಾರು ಅರ್ಧದಷ್ಟು ಹಳಬರಿಗೆ ಟಿಕೆಟ್ ನಿರಾಕರಿಸಲಾಗಿತ್ತು. ದಿನಾಂಕ ೫.೧.೬೭ರಂದು ಎರಡನೆಯ ಪಟ್ಟಿ ಬಿಡುಗಡೆ ಆಯಿತು. ಪ್ರದೇಶ ಕಾಂಗ್ರೆಸ್ ಚುನಾವಣಾ ಸಮಿತಿಗೆ ನಿಜಲಿಂಗಪ್ಪನವರ ಗುಂಪಿನ ವಿರುದ್ಧ ಸ್ಪರ್ಧಿಸಿದ್ದ ದೇವರಾಜ ಅರಸರಿಗೆ ಟಿಕೆಟ್ ನೀಡಲಾಗಿದ್ದು ವಿಶೇಷ. 'ಕಾಂಗ್ರೆಸ್ ನೀತಿಯ ಪ್ರಕಾರ ಸುಮಾರು ಅರ್ಧದಷ್ಟು ಹಳಬರಿಗೆ ಟಿಕೆಟ್ ನಿರಾಕರಿಸಿ, ಹೊಸಬರಿಗೆ ಟಿಕೆಟ್ ನೀಡಲಾಗಿದೆ' ಎಂದು ನಿಜಲಿಂಗಪ್ಪನವರು ತಿಳಿಸಿದರು. 'ಹೊಸಬರಿಗೆ ಟಿಕೆಟ್ ನೀಡಬೇಕೆಂಬುದು ಈ ಬಾರಿಯ ಕಾಂಗ್ರೆಸ್ ನೀತಿಯಾಗಿದೆ. ೧೭ ರಾಜ್ಯಗಳ ३೩೯೫ ವಿಧಾನಸಭಾ ಸ್ಥಾನಗಳ ಪೈಕಿ ೨೦೦೦ ಸ್ಥಾನಗಳಲ್ಲಿ ಹೊಸಬರಿಗೆ ಟಿಕೆಟ್ ನೀಡಲಾಗಿದೆ. ೭೫೦ ಹಾಲಿ ಸದಸ್ಯರಿಗೆ ಟಿಕೆಟ್ ನಿರಾಕರಿಸಲಾಗಿದೆ. ಆದರಂತೆಯೇ ಮೈಸೂರು ರಾಜ್ಯದಲ್ಲಿ ಕೂಡಾ ೬೪ ಹಾಲಿ

ಸದಸ್ಯರಿಗೆ ಟಿಕೆಟ್ ನೀಡಿಲ್ಲ. ೭೨ ಹಾಲಿ ಸದಸ್ಯರಿಗೆ ಹಾಗೂ ೧೩೫ ಹೊಸಬರಿಗೆ ಟಿಕೆಟ್ ನೀಡಲಾಗಿದೆ' ಎಂದು ಕಾಂಗ್ರೆಸ್ ವರಿಷ್ಠರು ದೆಹಲಿಯಲ್ಲಿ ಸ್ಪಷ್ಟನೆ ನೀಡಿದರು.

ಟಿಕೆಟ್ ನೀಡಿಕೆಯನ್ನು ವಿರೋಧಿಸಿ ಪ್ರಪ್ರಥಮವಾಗಿ ೧.೧.೬೭ ರಂದು ಪ್ರದೇಶ ಕಾಂಗ್ರೆಸ್‌ನ ಮಾಜಿ ಅಧ್ಯಕ್ಷ ಹೆಚ್.ಕೆ. ವೀರಣ್ಣಗೌಡ ಹಾಗೂ ವಿ. ವೆಂಕಟಪ್ಪ ಅವರುಗಳು ರಾಜೀನಾಮೆ ನೀಡಿದರು. ಅವರು ಮಂಡ್ಯ ಜಿಲ್ಲಾ ಕಾಂಗ್ರೆಸ್ ಮುಖಂಡರ ಸಭೆ ಕರೆದು ಮೈಸೂರು ಪ್ರದೇಶಕ್ಕೆ ಅನ್ಯಾಯವಾಗಿದೆ ಹಾಗಾಗಿ ಅತ್ಯಂತ ಜಿಗುಪ್ಸೆಯಿಂದ ಪಕ್ಷ ಬಿಡುತ್ತಿರುವುದಾಗಿ ತಿಳಿಸಿದರು. ಎನ್. ಹುಚ್ಚಮಾಸ್ತಿ ಗೌಡ, ವಿ. ಎಲ್. ಶಿವಪ್ಪ, ಟಿ. ಡಿ. ದೇವೇಂದ್ರಪ್ಪ ಮೊದಲಾದ ಮಾಜಿ ಶಾಸಕರು ಒಬ್ಬೊಬ್ಬರಾಗಿ ರಾಜೀನಾಮೆ ನೀಡಲು ಪ್ರಾರಂಭಿಸಿದರು. ೪.೧.೬೭ರಂದು ವೀರಣ್ಣಗೌಡರು- 'ರಾಜ್ಯ ಪುನರ್ ವಿಂಗಡಣೆ ನಂತರ ಹಳೆಯ ಮೈಸೂರು ರಾಜ್ಯಕ್ಕೆ ಸಾಮಾಜಿಕ ಹಾಗೂ ಆರ್ಥಿಕವಾಗಿ ಅನ್ಯಾಯವಾಗಿದೆ, ಆದುದರಿಂದ ಹಳೆಯ ಮೈಸೂರು ಕಾಂಗ್ರೆಸ್ ಪ್ರಾರಂಭಿಸುವ ಯೋಚನೆ ಇದೆ' ಎಂದರು. ೬.೧.೬೭ರಂದು ಎಚ್. ಎಂ. ಚನ್ನಬಸಪ್ಪ ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿ, 'ರಾಜ್ಯದಲ್ಲೂ ಕೂಡಾ ಜನತಾ ಕಾಂಗ್ರೆಸ್ ಪಕ್ಷ ಸ್ಥಾಪಿಸುವ ಆಲೋಚನೆ ಇದೆ' ಎಂದು ಹೇಳಿದರು. ಅವರ ಜೊತೆ ಪಿರಿಯಾಪಟ್ಟಣ ತಾಲೂಕಿನ ಅನೇಕರು ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿದರು. ಈ ಮಧ್ಯೆ ವಿರೋಧಪಕ್ಷಗಳೆಲ್ಲಾ ಒಂದುಗೂಡಿ ಕಾಂಗ್ರೆಸ್ ವಿರುದ್ಧ ಒಂದು ಸಂಯುಕ್ತರಂಗವನ್ನು ರಚಿಸಿಕೊಳ್ಳಬೇಕೆಂದು ಪ್ರಯತ್ನಿಸಿದವು. ೪-೧-೬೭ ರಂದು ಮಂಡ್ಯದಲ್ಲಿ ಕೋಲಾರದಲ್ಲಿ ಸಂಯುಕ್ತರಂಗದ ಸಭೆಗಳು ನಡೆದು ಅಭ್ಯರ್ಥಿಗಳನ್ನು ಆರಿಸಲಾಯಿತು. ಬೆಳಗಾವಿಯಲ್ಲೂ ವಿರೋಧಿ ಸಂಯುಕ್ತ ರಂಗದ ಅಭ್ಯರ್ಥಿಗಳ ಆಯ್ಕೆ ನಡೆಯಿತು. ಆದರೆ ಸ್ವತಂತ್ರಪಕ್ಷ ಈ ಒಕ್ಕೂಟದಿಂದ ಹೊರಬಂದುದರಿಂದ ವಿರೋಧಿ ಮೈತ್ರಿಕೂಟ ರಚನೆ ಬಿದ್ದು ಹೋಯಿತು.

೧೨.೬೭ರಂದು ಕಾಂಗ್ರೆಸ್ ಪಕ್ಷದಿಂದ ಹೆಚ್. ಕೆ. ವೀರಣ್ಣಗೌಡ, ಟಿ. ಪಿ. ಬೋರಯ್ಯ, ಟಿ. ಡಿ. ದೇವೇಂದ್ರಪ್ಪ, ಬಿ.ಎನ್. ಕೆಂಪೇಗೌಡ, ಸಿದ್ಧಮಾದಯ್ಯ ಮುಂತಾದವರು ಸೇರಿದಂತೆ ೪೨ ಜನ ಬಂಡಾಯ ಕಾಂಗ್ರೆಸ್ ಅಭ್ಯರ್ಥಿಗಳನ್ನು ಉಚ್ಚಾಟಿಸಲಾಯಿತು. ಆ ನಂತರದಲ್ಲಿ ಜೆ. ಪಿ. ಸರ್ವೇಶ್, ದುಗ್ಗಪ್ಪ, ವಿ. ಟಿ. ರಾಮರೆಡ್ಡಿ, ಬಿ. ಇ. ರಾಮಯ್ಯ, ಕೆ. ವೆಂಕಟಕೃಷ್ಣಪ್ಪ, ಕೆ. ಎಂ. ತಮ್ಮಯ್ಯ, ಎಂ. ಮಂಚೇಗೌಡ, ವಿ. ಎಲ್ ಶಿವಪ್ಪ, ಎಸ್. ಪುಟ್ಟಸ್ವಾಮಿ, ಬಿ. ಕೆ. ಪುಟ್ಟರಾಮಯ್ಯ, ಹೆಚ್. ಎಂ. ಚನ್ನಬಸಪ್ಪ ಇವರುಗಳನ್ನು ಪಕ್ಷದಿಂದ ಉಚ್ಚಾಟಿಸಲಾಯಿತು. ವಿರೋಧ ಪಕ್ಷಗಳ ಮೈತ್ರಿ ಇಲ್ಲದಿದ್ದರೂ ಕೂಡ ೨೧೪ ಸ್ಥಾನಗಳ ಪೈಕಿ ೬೮ ಕ್ಷೇತ್ರಗಳಲ್ಲಿ ವಿರೋಧ ಪಕ್ಷಗಳು ಕಾಂಗ್ರೆಸ್ ಪಕ್ಷಕ್ಕೆ ನೇರ ಸ್ಪರ್ಧೆಯನ್ನೊಡ್ಡಿದ್ದವು. ೭೨ ಕ್ಷೇತ್ರಗಳಲ್ಲಿ ೧೨ ಕ್ಕೂ ಹೆಚ್ಚು ಅಭ್ಯರ್ಥಿಗಳಿದ್ದರೂ ಹೋರಾಟ ತ್ರಿಮುಖವೇ ಆಗಿತ್ತು.

## ಚುನಾವಣಾ ಪ್ರಣಾಳಿಕೆ - ೧೯೬೭

ರಾಜಕೀಯ ಆರ್ಥಿಕ ಸಾಮಾಜಿಕ ಸಮಾನತೆಯಿಂದ ಕೂಡಿದ ಮುಕ್ತ ಪ್ರಜಾತಾಂತ್ರಿಕ ಸಮಾಜವಾದಿ ಸಮಾಜ ಸ್ಥಾಪನೆ, ಪ್ರಜಾಪ್ರಭುತ್ವವನ್ನು ಸ್ಥಿರವಾಗಿ ನಿಲ್ಲಿಸಿದ ಸಾಧನೆ ಕಳೆದ ಮೂರು ಮಹಾಚುನಾವಣೆಗಳಲ್ಲಿ ರಾಷ್ಟ್ರದ ಜನತೆ ಕಾಂಗ್ರೆಸ್ ಪಕ್ಷದ ನೀತಿ ಹಾಗೂ ಕಾರ್ಯಕ್ರಮಗಳಿಗೆ ಒಪ್ಪಿಗೆ ನೀಡಿದೆ. ಅದರಂತೆ ಕಾಂಗ್ರೆಸ್ ಪಕ್ಷ ಸಮಾಜವಾದಿ ಸಮಾಜ ಸ್ಥಾಪನೆಯತ್ತ ಮುನ್ನಡೆದಿದೆ. ಕಳೆದ ಮೂರು ಪಂಚವಾರ್ಷಿಕ ಯೋಜನೆಗಳಲ್ಲಿ ಅದಕ್ಕನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಕ್ಕೆ ತಂದಿದೆ. ಕಳೆದ ಒಂದೂವರೆ ದಶಕ ವಿವಿಧ ಅಭಿವೃದ್ಧಿ ಕ್ಷೇತ್ರಗಳಲ್ಲಿ ಸಾಧಿಸಿದ ಮುನ್ನಡೆಯ ವಿವರಗಳು ಕೆಳಗಿನಂತಿವೆ.

| ಅಭಿವೃದ್ಧಿ ಕ್ಷೇತ್ರ | ೧೯೫೦-೫೧ | ೧೯೬೫-೬೬ |
|---|---|---|
| ೧. ಉಕ್ಕು ಉತ್ಪಾದನೆ | ೧.೦೪ ಮಿಲಿಯನ್ ಟನ್ | ೪.೬ ಮಿಲಿಯನ್ ಟನ್ |
| ೧. ಸಿಮೆಂಟ್ ಉತ್ಪಾದನೆ | ೨.೭೦ ಮಿಲಿಯನ್ ಟನ್ | ೧೦.೮ ಮಿಲಿಯನ್ ಟನ್ |
| ೩. ಬಟ್ಟೆ ಉತ್ಪಾದನೆ | ೪೮೧೮ ಮಿಲಿಯನ್ ಮೀಟರ್ | ೭೫೮೦ ಮಿಲಿಯನ್ ಮೀಟರ್ |
| ೪. ವಿದ್ಯುಚ್ಛಕ್ತಿ ಉತ್ಪಾದನೆ | ೨.೩ ಎಂ.ಕೆ.ವಿ. | ೧೦.೨ ಎಂ.ಕೆ.ವಿ. |
| ೫. ವಿದ್ಯುದೀಕರಣವಾದ ಹಳ್ಳಿಗಳು | ೩೭೦೦ | ೫೨,೩೦೦ |
| ೬. ಪೆಟ್ರೋಲಿಯಂ ಉತ್ಪನ್ನಗಳು | ೦.೨ ಮಿಲಿಯನ್ ಟನ್ | ೯.೪ ಮಿಲಿಯನ್ ಟನ್ |
| ೭. ಶಾಲೆಗೆ ಹೋಗುತ್ತಿರುವ ಬಾಲಕ-ಬಾಲಕಿಯರು | ೨೪ ಮಿಲಿಯನ್ | ೬೮ ಮಿಲಿಯನ್ |

| | | |
|---|---|---|
| ೮. ಕಾಲೇಜುಗಳಿಗೆ ಹೋಗುತ್ತಿರುವ ವಿದ್ಯಾರ್ಥಿ-ವಿದ್ಯಾರ್ಥಿನಿಯರು | ೩ ಲಕ್ಷ | ೧೧ ಲಕ್ಷ |
| ೯. ರಸಾಯಿನಿಕ ಗೊಬ್ಬರ | ೯,೦೦೦ ಟನ್ | ೨-೩೩ ಲಕ್ಷ ಟನ್ |
| ನೀರಾವರಿ | - | ೪೫ ಮಿಲಿಯನ್ ಎಕರೆ ಹೆಚ್ಚಳ |
| ೧೦. ಆಹಾರಧಾನ್ಯ | ೫೫ ಮಿಲಿಯನ್ ಟನ್ | ೮೮ ಮಿಲಿಯನ್ ಟನ್ |
| ೧೨. ಬೆಳೆ ಸಂರಕ್ಷಣೆ-ಔಷಧಿಗಳ ಉಪಯೋಗ | - | ೪೧ ಮಿಲಿಯನ್ ಎಕರೆ |
| ೧೩. ವಿದ್ಯುತ್ ಪಂಪ್‌ಸೆಟ್‌ಗಳು | - | ೫ ಲಕ್ಷ |
| ೧೪. ತೆರೆದ ಬಾವಿಗಳು | ೭ ಲಕ್ಷ | |
| ೧೫. ಸಹಕಾರಿ ಕ್ಷೇತ್ರಕ್ಕೆ | ೧೨.೪೦ | ೨೦೦ ಕೋಟಿ |
| ೧೬. ಆರ್. ಬಿ. ಐ. ಅಲ್ಪಾವಧಿ ಸಾಲ | ಕೋಟಿ | (೧೯೬೪-೬೫) |
| ೧೭. ಆಸ್ಪತ್ರೆಗಳು | ೮,೬೦೦ | ೧೪,೬೦೦ |
| ೧೮. ಕಾರ್ಮಿಕರ ಸರಾಸರಿ ವಾರ್ಷಿಕ ಆದಾಯ | ೮೮೩ ರೂ. | ೧೪೭೫ ರೂ. |

- ಚೀನಾ ಮತ್ತು ಪಾಕ್ ಆಕ್ರಮಿತ ತಾಯಿನಾಡಿನ ಭೂ ಪ್ರದೇಶಗಳ ತೆರವು ಪ್ರಯತ್ನದ ಬಗ್ಗೆ ಶಪಥ.
- ಸ್ವಯಂ ಪರಿಪೂರ್ಣತೆ, ಆರ್ಥಿಕ ಅಭಿವೃದ್ಧಿಗೆ ನಾಲ್ಕು ಮತ್ತು ಐದನೇ ಯೋಜನೆಗಳಲ್ಲಿ ಸತತ ಪ್ರಯತ್ನ.
- ವಿಜ್ಞಾನ, ತಂತ್ರಜ್ಞಾನಕ್ಕೆ ಪ್ರೋತ್ಸಾಹ. ದೇಶೀಯ ಪ್ರತಿಭೆಗಳಿಗೆ ಮನ್ನಣೆ. ಪ್ರತಿಭಾ ಪಲಾಯನ ತಡೆಗೆ ಸೂಕ್ತ ಕ್ರಮಗಳು.
- ವಿದೇಶಿ ಸಹಕಾರದಿಂದ ಯಾಂತ್ರಿಕತೆ, ಗೊಬ್ಬರ, ಪೆಟ್ರೋಲಿಯಂ, ಗಣಿಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ ಸುಧಾರಿತ ಸ್ವದೇಶಿ ತಂತ್ರಜ್ಞಾನವನ್ನು ಅಳವಡಿಸಿ, ಕೈಗಾರಿಕಾ ಬೆಳವಣಿಗೆ ಮತ್ತು ಅಭಿವೃದ್ಧಿಯ ಸಾಧನೆಗೆ ವಿಜ್ಞಾನಿಗಳು ಹಾಗೂ ತಂತ್ರಜ್ಞರಿಗೆ ಕರೆ. ಸಾರ್ವಜನಿಕ ಕ್ಷೇತ್ರದ ಅಭಿವೃದ್ಧಿಗೆ ಪ್ರೋತ್ಸಾಹ. ಕ್ರಿಯಾತ್ಮಕ ಹಾಗೂ ಶಕ್ತಿಯುತವಾದ ಸಾರ್ವಜನಿಕ ಕ್ಷೇತ್ರ ನಿರ್ಮಾಣಕ್ಕೆ ಕ್ರಮ. ಜೀವವಿಮೆ - ಇಂಪೀರಿಯಲ್ ಬ್ಯಾಂಕುಗಳ ರಾಷ್ಟ್ರೀಕರಣ ಪ್ರಥಮ ಹೆಜ್ಜೆ.
- ಸಹಕಾರ ಚಳವಳಿಗೆ ಪ್ರೋತ್ಸಾಹ. ಕೃಷಿ ಸಾಲ ಸಕಾಲದಲ್ಲಿ ನೀಡಿಕೆ. ಸಣ್ಣ ಮತ್ತು ಮಧ್ಯಮ ಕೈಗಾರಿಕಾ ಕ್ಷೇತ್ರಕ್ಕೆ ಸಹಕಾರ ಚಳವಳಿಯ ವಿಸ್ತರಣೆ. ಬಳಕೆದಾರರ ಸಹಕಾರ ಸಂಘಗಳನ್ನು ಹೆಚ್ಚಾಗಿ ಸ್ಥಾಪಿಸುವ ಮೂಲಕ ಬೆಲೆ ಏರಿಕೆ ತಡೆ.
- ಬ್ಯಾಂಕಿಂಗ್ ಕ್ಷೇತ್ರದ ಠೇವಣಿಗಳಲ್ಲಿ ಶೇಕಡಾ ೩೦ ರಷ್ಟು ಸಾಲ ನೀಡಿಕೆ. ಬ್ಯಾಂಕುಗಳನ್ನು ಸಾಮಾಜಿಕ ನಿಯಂತ್ರಣಕ್ಕೆ ಒಳಪಡಿಸಿ ಆರ್ಥಿಕ ಅಭಿವೃದ್ಧಿ ಸಾಧಿಸಲು ಬ್ಯಾಂಕುಗಳ ಬಳಕೆ. ಉತ್ಪಾದಕರಿಗೆ ಸಾಲ ನೀಡಿಕೆ.
- ಬೆಲೆ ಏರಿಕೆ ನಿಯಂತ್ರಣಕ್ಕೆ ಆರ್ಥಿಕ ಕ್ಷೇತ್ರದಲ್ಲಿ ಕಟ್ಟುನಿಟ್ಟಾದ ನೀತಿ. ಉತ್ಪಾದನೆಯಲ್ಲಿ ಹೆಚ್ಚಳ ಸಾಧನೆಗೆ ಕ್ರಮ. ಸಾಮಾಜಿಕ ಬದಲಾವಣೆಗೆ ಕ್ರಮ. ನಗರ ಪ್ರದೇಶಗಳಲ್ಲಿ ಭೂಮಿತಿ ಜಾರಿಗೆ. ಪಟ್ಟಣ ಪ್ರದೇಶಗಳ ಭೂಮಿಯ ಭೂಗಳ್ಳಜಾಲ (ಲ್ಯಾಂಡ್ ಮಾಫಿಯಾ) ನಿರ್ಮೂಲನೆಗೆ ಕ್ರಮ.
- ನಗರಗಳ ಯದ್ವಾತದ್ವಾ ಬೆಳವಣಿಗೆಗೆ ತಡೆ. ಗ್ರಾಮಾಂತರ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆ. ಹೊಸ ಉಪನಗರಗಳ ನಿರ್ಮಾಣ, ಈ ಉಪನಗರಗಳಲ್ಲಿ ಗ್ರಾಮೀಣ ಪ್ರದೇಶದ ಮಾನವ ಶಕ್ತಿಯ ಬಳಕೆ.
- ಪ್ರತಿಯೊಬ್ಬರಿಗೂ ಅರ್ಥಪೂರ್ಣ ಉಪಯುಕ್ತ ಶಿಕ್ಷಣ. ಶಿಕ್ಷಕರಿಗೆ ಉತ್ತಮ ವೇತನ, ಸ್ಥಾನಮಾನ ನೀಡಲು ಕ್ರಮ. ತಾಂತ್ರಿಕ ಹಾಗೂ ವೈಜ್ಞಾನಿಕ ಶಿಕ್ಷಣಕ್ಕೆ ಆದ್ಯತೆ. ದೇಶಾಭಿವೃದ್ಧಿಯಲ್ಲಿ ಬಹಳ ಮುಖ್ಯ ಪಾತ್ರ. ಕಾರ್ಮಿಕರ ಕಲ್ಯಾಣಕ್ಕೆ ಹೊಸ ಶಾಸನಗಳು. ನ್ಯಾಯವಾದ ವೇತನ ನೀಡಿಕೆ, ಕಾರ್ಮಿಕರ ಪರಿಸ್ಥಿತಿ ಉತ್ತಮಪಡಿಸಲು ಕ್ರಮ. ಕನಿಷ್ಠ ಸಾಮಾಜಿಕ ರಕ್ಷಣೆ. ಆಡಳಿತದಲ್ಲಿ ಕಾರ್ಮಿಕರ ಪಾಲ್ಗೊಳ್ಳುವಿಕೆಗೆ ಪ್ರೋತ್ಸಾಹ. ಹೊಸ ಉದ್ಯೋಗಗಳ ಸೃಷ್ಟಿ. ಕೃಷಿ ಅಭಿವೃದ್ಧಿಯಲ್ಲಿ ಬೆಳವಣಿಗೆ ತರುವ ಮೂಲಕ, ಒಂದು ವರ್ಷದಲ್ಲಿ ಹೆಚ್ಚು ಬೆಳೆ ತೆಗೆಯುವಂತೆ ಮಾಡುವುದರ ಮೂಲಕ ಕೃಷಿ ಕಾರ್ಮಿಕರಿಗೆ ಹೆಚ್ಚು ಉದ್ಯೋಗಾವಕಾಶಗಳನ್ನು ಕಲ್ಪಿಸುವುದು.

- ನೀರಾವರಿ ಯೋಜನೆಗಳ ನಿರ್ಮಾಣ, ಸಾಮಾಜಿಕ ಸಂಸ್ಥೆಗಳ ಸ್ಥಾಪನೆ, ಕೈಗಾರಿಕೆಗಳ ವಿಕೇಂದ್ರೀಕರಣದ ಮೂಲಕ ಉದ್ಯೋಗಾವಕಾಶಗಳಲ್ಲಿ ಹೆಚ್ಚಳ.
- ಗೇಣೀದಾರರ ಪರವಾದ ಭೂಸುಧಾರಣಾ ಕಾಯಿದೆಗಳು ಜಾರಿಗೆ. ಭೂಮಿತಿ ಶಾಸನ, ಭೂ ಸುಧಾರಣಾ ಕಾಯಿದೆಗಳನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವುದು.
- ಕೃಷಿ ಕೈಗಾರಿಕೆಗಳು, ಪಶುಪಾಲನೆ, ಮೀನುಗಾರಿಕೆ ಮುಂತಾದವುಗಳ ಮೂಲಕ ಗ್ರಾಮಾಂತರ ಪ್ರದೇಶದಲ್ಲಿ ಉದ್ಯೋಗಾವಕಾಶಗಳ ಸೃಷ್ಟಿ
- ಕನಿಷ್ಟ ವೇತನ ಕಾಯಿದೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ಜಾರಿಗೆ ತರುವುದು. ಕೃಷಿ ಕ್ಷೇತ್ರದ ಆಧುನೀಕರಣ. ೧೯೭೦-೭೧ರ ವೇಳೆಗೆ ೧೨೦ ಮಿಲಿಯನ್ ಟನ್ ಆಹಾರ ಉತ್ಪಾದನೆಯ ಗುರಿ. ಭಾರೀ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಯೋಜನೆಗಳಿಗೆ ಆದ್ಯತೆ. ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ನೀರಾವರಿ ಸೌಲಭ್ಯ ಕಲ್ಪಿಸಲು ಕ್ರಮ.
- ನೀರಿನ ಸದುಪಯೋಗ. ಅಂತರ್ಜಲ ಅಭಿವೃದ್ಧಿಗೆ ಕೆರೆಗಳ ಜೀರ್ಣೋದ್ದಾರ ಮತ್ತು ನಿರ್ಮಾಣಕ್ಕೆ ಆರ್ಥಿಕ ಹಾಗೂ ಇತರ ಸಾಧನ ಸಲಕರಣೆಗಳ ಸಹಾಯ ನೀಡಿಕೆ. ನೀರನ್ನು ಸಮರ್ಥವಾಗಿ ಸದುಪಯೋಗ ಮಾಡಿಕೊಳ್ಳಲು ಸೂಕ್ತವಾದ ಯೋಜನೆ. ಸಾಧ್ಯವಾದಷ್ಟು ಹೆಚ್ಚು ಪ್ರಮಾಣದಲ್ಲಿ ನೀರಾವರಿ ಪಂಪ್‌ಸೆಟ್‌ಗಳ ವಿದ್ಯುದೀಕರಣ.
- ರೈತರು ಬೆಳೆದ ಆಹಾರಧಾನ್ಯಗಳಿಗೆ ನ್ಯಾಯವಾದ ಬೆಲೆ. ಕೃಷಿ ಸಂಶೋಧನಾ ವಿಸ್ತರಣೆಗೆ ಆದ್ಯತೆ. ಕೃಷಿ ಮತ್ತು ಸಂಶೋಧನೆಗೆ ಸಾಮೀಪ್ಯ ಸಂಬಂಧ ಕಲ್ಪಿಸುವುದು. ಪ್ರಾಕೃತಿಕ ವಿಪತ್ತುಗಳ ವಿರುದ್ಧ ಬೆಳೆ ವಿಮೆ-ಪಶು ವಿಮೆ ಜಾರಿ.
- ಗ್ರಾಮೀಣ ಅಭಿವೃದ್ಧಿ ಕ್ಷೇತ್ರಗಳಿಗೆ ಸಾಲ ನೀಡಿಕೆ. ಲೇವಾದೇವಿಗಾರರ ಕಾಟ ನಿವಾರಣೆಗೆ ಕ್ರಮ. ಬಲವಾದ ಸಹಕಾರ ಚಳವಳಿಗೆ ಪ್ರೋತ್ಸಾಹ. ಪಟ್ಟಭದ್ರ ಹಿತಾಸಕ್ತಿಗಳ ನಿರ್ಮೂಲನೆಗೆ ಕ್ರಮ.
- ಸಂಸ್ಕರಣೆ ಹಾಗೂ ಮಾರಾಟ ಕ್ಷೇತ್ರಗಳ ಮೇಲೆ ಸಾರ್ವಜನಿಕ ನಿಯಂತ್ರಣ. ಈ ಕ್ಷೇತ್ರಗಳ ಅಭಿವೃದ್ದಿಗೆ ಸಾಲ ನೀಡಿಕೆ. ಗ್ರಾಮಾಂತರ ಪ್ರದೇಶಗಳಿಗೆ ನಾಗರಿಕ ಸೌಲಭ್ಯಗಳನ್ನು ಒದಗಿಸುವುದು.
- ಭೂ ರಹಿತ ಕೃಷಿ ಕಾರ್ಮಿಕರಿಗೆ, ಸಣ್ಣ ಹಿಡುವಳಿದಾರರಿಗೆ ಸೌಲಭ್ಯಗಳು. ಇವರಿಗೆ ಉಚಿತ ಹಾಗೂ ಕಡಿಮೆ ಬೆಲೆಯಲ್ಲಿ ಮನೆ, ನಿವೇಶನಗಳ ಹಂಚಿಕೆ.
- ಗ್ರಾಮಾಂತರ ಪ್ರದೇಶಗಳಿಗೆ ಸುರಕ್ಷಿತ ಕುಡಿಯುವ ನೀರಿನ ಸರಬರಾಜು. ಗ್ರಾಮೀಣ ರಸ್ತೆಗಳ ಅಭಿವೃದ್ಧಿಗೆ ಕ್ರಮ. ಈಗ ದೇಶದಲ್ಲಿ ಕೇವಲ ಶೇಕಡಾ ೨೧ ಭಾಗ ಅರಣ್ಯ ಇದೆ. ಈ ಅರಣ್ಯ ಸಂರಕ್ಷಣೆಗೆ ಕ್ರಮ. ಅರಣ್ಯ ಉತ್ಪನ್ನಗಳ ಸರಿಯಾದ ಬಳಕೆಗೆ ಕ್ರಮ. ರಾಷ್ಟ್ರೀಯ ಉತ್ಪನ್ನ ಹೆಚ್ಚಳಕ್ಕೆ ಅರಣ್ಯ ಸಂಪತ್ತಿನ ಕೊಡುಗೆ ದೊರೆಯುವಂತೆ ಎರಡು ವರ್ಷಗಳಲ್ಲಿ ಕ್ರಮ.
- ಪಶುಸಂಪತ್ತು ವೃದ್ಧಿ, ಪಶುಪಾಲನೆಗೆ ವೈಜ್ಞಾನಿಕ ಪದ್ಧತಿಯನ್ನು ಅಳವಡಿಸುವುದು. ಸತ್ತ ಜಾನುವಾರುಗಳ ವೈಜ್ಞಾನಿಕ ಸಂಸ್ಕರಣೆಗೆ ಕ್ರಮ. ಅವುಗಳು ಚರ್ಮ ಹಾಗೂ ಗೊಬ್ಬರದ ಪ್ರಮುಖ ಮೂಲಗಳಾಗಿದ್ದು ಅವುಗಳ ವೈಜ್ಞಾನಿಕ ಬಳಕೆಗೆ ಕ್ರಮ. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಹಿಂದುಳಿದವರ್ಗಗಳ ಅಭಿವೃದ್ಧಿಗೆ ನಾನಾ ರೀತಿಯ ಕಾರ್ಯಕ್ರಮಗಳನ್ನು ಐದನೇ ಯೋಜನೆಯಲ್ಲಿ ರೂಪಿಸಲಾಗುವುದು. ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗೆ ಕ್ರಮ. ಆಹಾರ, ವಸತಿ, ಬಟ್ಟೆ, ಶಿಕ್ಷಣ, ಆರೋಗ್ಯ ಇವುಗಳನ್ನು ರಾಷ್ಟ್ರೀಯ ಕನಿಷ್ಠ ಅವಶ್ಯಕತೆಗಳೆಂದು ಪರಿಗಣಿಸಿ ಪ್ರತಿಯೊಬ್ಬ ವ್ಯಕ್ತಿಗೂ ಇವುಗಳನ್ನು ಒದಗಿಸಲು ಐದನೆಯ ಯೋಜನೆಯಲ್ಲಿ ಪರಿಣಾಮಕಾರಿ ಕ್ರಮ. ಈ ಕ್ಷೇತ್ರಗಳಲ್ಲಿ ತೀವ್ರ ಅಭಿವೃದ್ಧಿ ಸಾಧಿಸಲು ಕ್ರಮ ತೆಗೆದುಕೊಳ್ಳಲಾಗುವುದು.
- ಅಲ್ಪಸಂಖ್ಯಾತರಿಗೆ ಸಂವಿಧಾನವು ನೀಡಿರುವ ಎಲ್ಲ ರೀತಿಯ ಸವಲತ್ತುಗಳನ್ನು ಖಾತ್ರಿಯಾಗಿ ನೀಡುವುದು. ಯಾವುದೇ ಜಾತಿ, ಮತ, ಲಿಂಗ ಭೇದ ಇಲ್ಲದ ರೀತಿಯಲ್ಲಿ ಸಂವಿಧಾನಕ್ಕನುಗುಣವಾಗಿ ಜನತಾಂತ್ರಿಕ ಸಮಾಜವಾದಿ ಸಮಾಜ ನಿರ್ಮಾಣ ಮಾಡುವುದು. ಯಾವುದೇ ತಾರತಮ್ಯವಿಲ್ಲದೆ ಸರ್ವರನ್ನು ಸಮಾನವಾಗಿ ನೋಡುವುದು. ಜಾತ್ಯತೀತ ಶಕ್ತಿಗಳ ಕೈ ಬಲಪಡಿಸುವುದನ್ನು ಮುಂದುವರಿಸುವುದು. ಸಮಾಜದಲ್ಲಿ ಎಲ್ಲರಿಗೂ ಗೌರವಯುತ ಸ್ಥಾನ ನೀಡುವುದು. ಪಾನನಿರೋಧದ ಬಗ್ಗೆ ಕಾಂಗ್ರೆಸ್ ಪಕ್ಷದ ನೀತಿಯ ಮುಂದುವರಿಕೆ ಹಾಗೂ ಅದರ ಪರಿಣಾಮಕಾರಿ ಅನುಷ್ಠಾನ. ಪಾನನಿರೋಧ ನೀತಿಯ ಅನುಷ್ಠಾನದಲ್ಲಿ ಯಾವುದೇ ರೀತಿಯ ಅನಿಷ್ಟಗಳು ನುಸುಳದಂತೆ ಜಾಗ್ರತೆ ವಹಿಸುವುದು. ಜನಸಂಖ್ಯಾ ನಿಯಂತ್ರಣ ಪ್ರಮುಖವಾದುದು. ಕಳೆದ ಹತ್ತು ವರ್ಷಗಳಲ್ಲಿ ೭೮ ಮಿಲಿಯನ್ ಜನಸಂಖ್ಯೆ ಏರಿಕೆಯಾಗಿದೆ. ಪ್ರತಿವರ್ಷ ಹತ್ತು ಮಿಲಿಯನ್ ಜನಸಂಖ್ಯೆ ಬೆಳವಣಿಗೆ ಆಗುತ್ತದೆ.

ಇದರಿಂದ ಆರ್ಥಿಕ ಪ್ರಗತಿಯಲ್ಲಿ ತೀವ್ರ ಹಿಂಜರಿತವಾಗಿದೆ. ಜನಸಂಖ್ಯೆಯನ್ನು ತಡೆಗಟ್ಟಲು ತೀವ್ರ ಹಾಗೂ ಪರಿಣಾಮಕಾರಿ ಕ್ರಮಗಳನ್ನು ಜಾರಿಗೆ ತರುವುದು.

- ಆಡಳಿತದಲ್ಲಿ ದಕ್ಷತೆ ತರಲು ಆಡಳಿತ ಸುಧಾರಣಾ ಆಯೋಗವನ್ನು ನೇಮಿಸಲಾಗಿದೆ. ಅದರ ಶಿಫಾರಸ್ಸನ್ನು ಕೇಂದ್ರ ರಾಜ್ಯಗಳಲ್ಲಿ ಪರಿಣಾಮಕಾರಿಯಾಗಿ ಜಾರಿಗೆ ತರಲಾಗುವುದು. ಆಡಳಿತದಲ್ಲಿ ಗುಣಮಟ್ಟವನ್ನು ಹೆಚ್ಚಿಸಿ ತನ್ಮೂಲಕ ದಕ್ಷತೆ, ನಿಷ್ಠೆ ಹಾಗೂ ಮಿತವ್ಯಯ ಸಾಧಿಸಲು ಕ್ರಮ ತೆಗೆದುಕೊಳ್ಳಲಾಗುವುದು. ವಿದೇಶಾಂಗ ನೀತಿಯಲ್ಲಿ ಜವಹರಲಾಲ್ ನೆಹರುರವರ ನೀತಿಯನ್ನು ಮುಂದುವರಿಸಲಾಗುವುದು. ಶಾಂತಿಯುತ ಸಹಬಾಳ್ವೆ, ಅಲಿಪ್ತನೀತಿ, ನಿಶ್ಶಸ್ತ್ರೀಕರಣ, ನೆರೆಹೊರೆಯವರೊಂದಿಗೆ ಸ್ನೇಹ-ಇವೇ ವಿದೇಶಾಂಗ ನೀತಿಯ ಪ್ರಮುಖ ಅಂಶಗಳು. ದಾಸ್ಯದಲ್ಲಿರುವ ವಸಾಹತುಗಳ ಬಿಡುಗಡೆಗೆ ಬೆಂಬಲ. ದಕ್ಷಿಣ ಆಫ್ರಿಕ, ಈಶಾನ್ಯ ಆಫ್ರಿಕ, ದಕ್ಷಿಣ ರೋಡಿಷಿಯಾ, ಮೊಜಾಂಬಿಕ್, ಅಂಗೋಲಾಗಳಲ್ಲಿ ನಡೆದಿರುವ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ. ವಿಶ್ವಶಾಂತಿಗೆ ವಿಶ್ವಸಂಸ್ಥೆಯೊಂದಿಗೆ ಸಹಕಾರ. ಸಿಲೋನ್, ಬರ್ಮಾ, ನೇಪಾಳಗಳ ಜೊತೆ ಸೌಹಾರ್ದಯುತ ಸಂಬಂಧ. ಚೀನಾ, ಪಾಕ್ ಜೊತೆ ಪರಸ್ಪರ ತಿಳವಳಿಕೆಗೆ ಕ್ರಮ.

## ಪ್ರಚಾರ

ಜನವರಿ ೮ರಿಂದ ೧೧ ರವರೆಗೆ ಪ್ರಧಾನ ಮಂತ್ರಿ ಇಂದಿರಾಗಾಂಧಿಯವರು ರಾಜ್ಯದಲ್ಲಿ ಪ್ರವಾಸ ಮಾಡಿ ಚುನಾವಣಾ ಪ್ರಚಾರ ಸಭೆಗಳಲ್ಲಿ ಪಾಲ್ಗೊಂಡರು. ೮.೧.೬೭ರಂದು ಅವರು ಬೆಂಗಳೂರಿನಲ್ಲಿ ಯುವರೈತ ಸಭೆಯನ್ನುದ್ದೇಶಿಸಿ ಮಾತನಾಡಿ 'ದೇಶದಲ್ಲಿ ಕಷ್ಟ ಪರಿಸ್ಥಿತಿ ಇದೆ, ಯುವಕರು ತ್ಯಾಗಕ್ಕೆ ಸಿದ್ಧರಾಗಿರಬೇಕು, ಹೊಸ ಸಮಾಜ ಕಟ್ಟುವ ಹೊಣೆ ಯುವಕರ ಮೇಲಿದೆ' ಎಂದರು. ಅದೇ ದಿನ ಅವರು ಯುವಕಾಂಗ್ರೆಸ್ ರ್‍ಯಾಲಿಯನ್ನು ಉದ್ಘಾಟಿಸಿ ಯುವಕಾಂಗ್ರೆಸ್ಸಿಗರು ಪಕ್ಷಕ್ಕಾಗಿ ದುಡಿಯಬೇಕೆಂದರು. ಆ ದಿನ ಸಂಜೆ ಬಹಿರಂಗ ಸಭೆಯನ್ನುದ್ದೇಶಿಸಿ ಭಾಷಣ ಮಾಡಿ ದೇಶದ ಪ್ರಗತಿಗೆ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸುವಂತೆ ಕೋರಿದರು. ೯.೧.೬೭ರಂದು ಹೊಸಪೇಟೆಯಲ್ಲಿ ತುಂಗಭದ್ರಾ ಮೇಲ್ದಂಡೆ ಕಾಲುವೆಯನ್ನು ಉದ್ಘಾಟಿಸಿದರು. 'ಹೊಸಪೇಟೆಯಲ್ಲಿ ಉಕ್ಕಿನ ಕಾರ್ಖಾನೆ ಸದ್ಯಕ್ಕಿಲ್ಲ' ಎಂದರು. ಅದೇ ದಿನ ಬಳ್ಳಾರಿ, ಜಗಳೂರು, ದಾವಣಗೆರೆ, ಹರಿಹರಗಳಲ್ಲಿ ಭಾರೀ ಬಹಿರಂಗ ಸಭೆಗಳನ್ನುದ್ದೇಶಿಸಿ ಪ್ರಚಾರ ಭಾಷಣಗಳನ್ನು ಮಾಡಿದರು. ೧೦.೧.೬೭ರಂದು ಇಂದಿರಾ ಗಾಂಧಿಯವರು ರಾಣೆಬೆನ್ನೂರು, ಹಾವೇರಿ, ಹುಬ್ಬಳ್ಳಿ, ಧಾರವಾಡ, ಹಳಿಯಾಳ, ಬೈಲಹೊಂಗಲ, ಬೆಳಗಾವಿಗಳಲ್ಲಿ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಕಿತ್ತೂರು ಚೆನ್ನಮ್ಮನ ಬಗ್ಗೆ ಆಸಕ್ತಿಯಿಂದ ತಿಳಿದುಕೊಂಡು ಬ್ರಿಟಿಷರ ವಿರುದ್ಧ ಅವಳ ಹೋರಾಟವನ್ನು ಪ್ರಶಂಸಿಸಿದರು. ನಿಜಲಿಂಗಪ್ಪನವರು ಇಂದಿರಾ ಗಾಂಧಿಯವರ ಜೊತೆ ಪ್ರವಾಸ ಮಾಡಿದರು. ಇಂದಿರಾ ಗಾಂಧಿ ಪ್ರವಾಸ ಪಕ್ಷದಲ್ಲಿ ನವ ಚೈತನ್ಯ ಮೂಡಿಸಿತ್ತು.

೩.೨.೬೭ರಂದು ಬೆಂಗಳೂರಿನಲ್ಲಿ ಮೊರಾರ್ಜಿ ದೇಸಾಯಿ ಪ್ರಚಾರ ಭಾಷಣ ಮಾಡಿ 'ವಿರೋಧ ಪಕ್ಷಗಳು ಅಧಿಕಾರಕ್ಕೆ ಬಂದರೆ ದೇಶದಲ್ಲಿ ಗಂಡಾಂತರ ಪರಿಸ್ಥಿತಿ ಬರುತ್ತದೆ' ಎಂದರು. ಕೆ. ಹನುಮಂತಯ್ಯನವರು ಮೊರಾರ್ಜಿಯವರ ಸಭೆಗಳಲ್ಲಿ ಭಾಗವಹಿಸಿದ್ದರು. ೫.೨.೬೭ರಂದು ಅಶೋಕ ಮೆಹ್ತ ಬೆಂಗಳೂರಿನಲ್ಲಿ ಪ್ರಚಾರ ಭಾಷಣ ಮಾಡಿ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗೆ ಕಾಂಗ್ರೆಸ್‌ಗೆ ಮತ ನೀಡುವಂತೆ ವಿನಂತಿಸಿದರು. ಸಾದಿಕ್ ಅಲಿಯವರೂ ಬೆಂಗಳೂರಿಗೆ ಬಂದು ಕಾಂಗ್ರೆಸ್ ಪಕ್ಷದ ಪರ ಪ್ರಚಾರ ಮಾಡಿದರು. ಕಾಂಗ್ರೆಸ್ ಬಿಟ್ಟವರ ಬಗ್ಗೆ ಚಿಂತಿಸಬೇಕಾಗಿಲ್ಲ, ಅದರಿಂದ ಪಕ್ಷಕ್ಕೆ ಹಾನಿ ಇಲ್ಲ ಎಂದರು. ಶಿಗ್ಗಾಂವಿಯಿಂದ ನಿಜಲಿಂಗಪ್ಪನವರ ಅವಿರೋಧ ಆಯ್ಕೆಯನ್ನು ೧೯.೧.೬೭ ರಂದು ಪ್ರಕಟಿಸಲಾಯಿತು. ಆ ದಿನ ಅವರಿಗೆ ಶಿಗ್ಗಾಂವಿಯಲ್ಲಿ ಭಾರೀ ಸನ್ಮಾನ ಏರ್ಪಡಿಸಲಾಗಿತ್ತು.

ನಿಜಲಿಂಗಪ್ಪನವರು ರಾಜ್ಯದಾದ್ಯಂತ ಸಂಚರಿಸಿ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. 'ಪಂಚವಾರ್ಷಿಕ ಯೋಜನೆಗಳು ಕಾರ್ಯಗತವಾಗಬೇಕಾದರೆ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬರಬೇಕು. ಹೇಮಾವತಿ ಯೋಜನೆಯನ್ನು ಎರಡೇ ವರ್ಷದಲ್ಲಿ ಪೂರ್ಣಗೊಳಿಸಲಾಗುವುದು, ಕಾಳಿಯೋಜನೆಗೆ ೧೩೦ ಕೋಟಿ ವೆಚ್ಚ ಮಾಡಲಾಗುವುದು, ಹಳೆಯ ಕಾಲದ ಭೂಕಂದಾಯ ಪದ್ಧತಿ ರದ್ದು ಮಾಡಲಾಗುವುದು, ಕೃಷ್ಣಾ, ಗೋದಾವರಿ ಪಾಲಿನ ನೀರನ್ನು ಪೂರ್ಣವಾಗಿ ಪಡೆಯಲಾಗುವುದು ಹಾಗೂ ನೀರಾವರಿ ಯೋಜನೆಗಳನು ಪ್ರಾರಂಭಿಸಲಾಗುವುದು' ಎಂದು ಭರವಸೆ ನೀಡಿದರು. ಕಾಂಗ್ರೆಸ್ ಟಿಕೆಟ್ ಸಿಗದೇ ಇದ್ದ ಹಲವರು ಸ್ವಾರ್ಥಕ್ಕಾಗಿ ಪಕ್ಷ ಬಿಟ್ಟು ಹೋಗಿದ್ದಾರೆಂದು ಟೀಕಿಸಿದರು. ಎ.ಆರ್. ಬದರಿನಾರಾಯಣ ಶಿವಮೊಗ್ಗ ಜಿಲ್ಲೆಯಲ್ಲಿ, ರಾಮಕೃಷ್ಣ ಹೆಗಡೆ ಉತ್ತರ ಕನ್ನಡ ಜಿಲ್ಲೆಯಲ್ಲಿ, ಕೆ. ಹನುಮಂತಯ್ಯ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಎಂ.ಪಿ.ಎಲ್. ಶಾಸ್ತ್ರಿ ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಫೆಬ್ರವರಿ ಮೊದಲ ವಾರದಲ್ಲಿ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು.

## ಫಲಿತಾಂಶ - ವಿಧಾನಸಭೆ

೨೩.೨.೬೭ರಂದು ಪೂರ್ಣ ಫಲಿತಾಂಶ ಹೊರಬಿದ್ದಿತು. ಕಾಂಗ್ರೆಸ್ ೧೨೬ ಸ್ಥಾನಗಳನ್ನು ಗಳಿಸಿ ಬಹುಮತ ಪಡೆದಿತ್ತು. ಹಳೆಯ ಮೈಸೂರಿನಲ್ಲಿ ಕಾಂಗ್ರೆಸ್ ಸ್ಥಾನ ಭದ್ರವಾಗಿತ್ತು. ಕರಾವಳಿ ಜಿಲ್ಲೆಗಳಲ್ಲಿ ಪೆಟ್ಟು ಬಿದ್ದಿತ್ತು. ಹಳೆಯ ಮೈಸೂರಿನ ೧೦ ಜಿಲ್ಲೆಗಳ ೧೩೦ ಸ್ಥಾನಗಳಲ್ಲಿ ಕಾಂಗ್ರೆಸ್ ೭೨ ಸ್ಥಾನ ಗಳಿಸಿತ್ತು. ಹೈದರಾಬಾದ್ ಕರ್ನಾಟಕದ ೨೯ ಸ್ಥಾನಗಳ ಪೈಕಿ ೧೮ ಸ್ಥಾನ ಗಳಿಸಿತ್ತು. ಕರಾವಳಿಯ ದಕ್ಷಿಣ ಕನ್ನಡ ಜಿಲ್ಲೆಯ ೧೪ ಸ್ಥಾನಗಳಲ್ಲಿ ೬ ಸ್ಥಾನ, ಕಾರವಾರ ಜಿಲ್ಲೆಯ ೬ ಸ್ಥಾನಗಳಲ್ಲಿ ಕೇವಲ ಒಂದು ಸ್ಥಾನ ಪಡೆಯುವಲ್ಲಿ ಕಾಂಗ್ರೆಸ್ ಯಶಸ್ವಿ ಆಗಿತ್ತು. ಮೈಸೂರು ಪ್ರದೇಶದ ಕಾಂಗ್ರೆಸ್ ಮುಖಂಡರುಗಳು ಭಾರೀ ಸಂಖ್ಯೆಯಲ್ಲಿ ಪಕ್ಷ ಬಿಟ್ಟಿದ್ದರೂ ಅದರಿಂದ ಕಾಂಗ್ರೆಸ್ ಪಕ್ಷಕ್ಕೆ ಹಾನಿಯೇನೂ ಆಗಲಿಲ್ಲ.

## ಜಿಲ್ಲಾವಾರು ವಿವರ

| ಜಿಲ್ಲೆ | ಒಟ್ಟು ಸ್ಥಾನ | ಕಾಂಗ್ರೆಸ್ ಪಕ್ಷ ಪಡೆದ ಸ್ಥಾನ |
|---|---|---|
| ಬೆಂಗಳೂರು ನಗರ | ೯ | ೫ |
| ಬೆಂಗಳೂರು ಜಿಲ್ಲೆ | ೧೪ | ೮ |
| ತುಮಕೂರು | ೧೩ | ೯ |
| ಮೈಸೂರು | ೧೬ | ೯ |
| ಮಂಡ್ಯ | ೮ | ೫ |
| ಹಾಸನ | ೮ | ೨ |
| ಚಿಕ್ಕಮಗಳೂರು | ೬ | ೧ |
| ಶಿವಮೊಗ್ಗ | ೯ | ೪ |
| ಕೋಲಾರ | ೧೨ | ೮ |
| ಚಿತ್ರದುರ್ಗ | ೧೦ | ೭ |
| ಕೊಡಗು | ೩ | ೧ |
| ದಕ್ಷಿಣ ಕನ್ನಡ | ೧೪ | ೬ |
| ಉತ್ತರ ಕನ್ನಡ | ೬ | ೧ |
| ಧಾರವಾಡ | ೧೮ | ೧೦ |
| ಬೆಳಗಾವಿ | ೧೮ | ೧೪ |
| ವಿಜಾಪುರ | ೧೫ | ೧೧ |
| ಗುಲಬರ್ಗಾ | ೧೩ | ೮ |
| ರಾಯಚೂರು | ೧೦ | ೭ |
| ಬೀದರ್ | ೬ | ೩ |
| ಬಳ್ಳಾರಿ | ೮ | ೭ |
| ಒಟ್ಟು | ೨೧೬ | ೧೨೬ |

## ೧೯೬೭ರ ವಿಧಾನಸಭೆಯಲ್ಲಿ ಕಾಂಗ್ರೆಸ್‌ನಿಂದ ಆಯ್ಕೆಯಾದ ಪ್ರಮುಖರು

ಔರಾದ್‌ನಿಂದ ಮಾಣಿಕರಾವ್ ಪಾಟೀಲ್, ಚಿಂಚೋಳಿಯಿಂದ ವೀರೇಂದ್ರ ಪಾಟೀಲ್, ಆಳಂದದಿಂದ ಡಿ. ಬಿ. ಕಲ್ಮಣಕರ್, ಕುಷ್ಟಗಿಯಿಂದ ಪುಂಡಲೀಕಪ್ಪ ಈಶ್ವರಪ್ಪ, ಹೊಸಪೇಟೆಯಿಂದ ಆರ್. ನಾಗನಗೌಡ, ಸೊಂಡೂರಿನಿಂದ ಅವಿರೋಧವಾಗಿ ಎಂ. ವೈ. ಘೋರ್ಪಡೆ, ದಾವಣಗೆರೆಯಿಂದ ಕೊಂಡಜ್ಜಿ ಬಸಪ್ಪ, ಭರಮಸಾಗರದಿಂದ ಜಿ. ದುಗ್ಗಪ್ಪ, ಚಳ್ಳಕೆರೆಯಿಂದ ಬಿ. ಎಲ್. ಗೌಡ, ಹಿರಿಯೂರಿನಿಂದ ಡಿ. ಮಂಜುನಾಥ್. ತುರುವೆಕೆರೆಯಿಂದ ಬಿ. ಎನ್. ರಾಮಣ್ಣ, ಮಧುಗಿರಿಯಿಂದ ಜೆ.ಬಿ. ಗೋವಿಂದರೆಡ್ಡಿ, ಮುಳಬಾಗಿಲಿನಿಂದ ಟಿ. ಚನ್ನಯ್ಯ, ಚಾಮರಾಜಪೇಟೆಯಿಂದ ಆರ್. ದಯಾನಂದ ಸಾಗರ್, ವರ್ತೂರಿನಿಂದ ಕೆ. ಪ್ರಭಾಕರ್, ಕನಕಪುರದಿಂದ ಕೆ.ಜಿ. ತಿಮ್ಮೇಗೌಡ, ಕುದೂರಿನಿಂದ ಸೋಲೂರು ಸಿದ್ದಪ್ಪ, ಹೊಸಕೋಟೆಯಿಂದ ಎನ್. ಚಿಕ್ಕೇಗೌಡ,

ನಾಗಮಂಗಲದಿಂದ ಕೆ. ಸಿಂಗಾರಿಗೌಡ, ಹನೂರಿನಿಂದ ಹೆಚ್. ನಾಗಪ್ಪ, ನರಸಿಂಹರಾಜದಿಂದ ಅಜೀಜ್ ಸೇಠ್, ಚಾಮುಂಡೇಶ್ವರಿಯಿಂದ ಎಂ. ರಾಜಶೇಖರಮೂರ್ತಿ, ಸಂತೇಮರಳ್ಳಿಯಿಂದ ಬಿ. ರಾಚಯ್ಯ, ಹುಣಸೂರು ಕ್ಷೇತ್ರದಿಂದ ಡಿ. ದೇವರಾಜ್ ಅರಸು, ಪುತ್ತೂರಿನಿಂದ ಬಿ. ವಿಠಲದಾಸ ಶೆಟ್ಟಿ, ಬೆಳ್ತಂಗಡಿಯಿಂದ ಬಿ. ವೈಕುಂಠ ಬಾಳಿಗಾ, ಮಂಗಳೂರು ಕ್ಷೇತ್ರ ಎರಡರಿಂದ ಬಿ. ಎಂ. ಇದಿನಬ್ಬ, ಶೃಂಗೇರಿಯಿಂದ ಕೆ. ಎನ್. ವೀರಪ್ಪಗೌಡ, ಶಿವಮೊಗ್ಗದಿಂದ ಎ. ಆರ್. ಬದರಿನಾರಾಯಣ್, ಸಾಗರದಿಂದ ಕೆ. ಹೆಚ್. ಶ್ರೀನಿವಾಸ್, ಹಳಿಯಾಳದಿಂದ ರಾಮಕೃಷ್ಣ ಹೆಗಡೆ, ಧಾರವಾಡ ಗ್ರಾಮಾಂತರದಿಂದ ಎಸ್. ವಿ. ಅಗ್ನಿಹೋತ್ರಿ, ಶಿಗ್ಗಾಂವಿಯಿಂದ ಅವಿರೋಧವಾಗಿ ಎಸ್. ನಿಜಲಿಂಗಪ್ಪ, ರೋಣಾದಿಂದ ಎಚ್. ದೊಡ್ಡ ಮೇಟಿ, ನವಲಗುಂದದಿಂದ ಆರ್. ಎಂ. ಪಾಟೀಲ್, ಹುಕ್ಕೇರಿಯಿಂದ ಎಸ್. ಎಸ್. ಪಾಟೀಲ್ (ಅಪ್ಪನಗೌಡ), ರಾಯಬಾಗ್‌ನಿಂದ ವಿ. ಎಲ್. ಪಾಟೀಲ್, ಜಮಖಂಡಿಯಿಂದ ಬಿ.ಡಿ.ಜತ್ತಿ, ಹುನಗುಂದದಿಂದ ಎಸ್. ಆರ್. ಕಂಠಿ ಹಾಗೂ ವಿಜಾಪುರದಿಂದ ಬಿ. ಎಂ. ಪಾಟೀಲ್. ಈ ಅವಧಿಯಲ್ಲಿ ನಡೆದ ಒಂಬತ್ತು ಉಪಚುನಾವಣೆಯಲ್ಲಿ ಐದು ಕಾಂಗ್ರೆಸ್ ಅಭ್ಯರ್ಥಿಗಳು ಆಯ್ಕೆಯಾಗಿದ್ದರು.

೧೯೬೯ರ ರಾಷ್ಟ್ರಪತಿ ಚುನಾವಣೆಯ ಸಂದರ್ಭದಲ್ಲಿ ಕಾಂಗ್ರೆಸ್ ವಿಭಜನೆಗೊಂಡು ಪ್ರಧಾನಿ ಇಂದಿರಾ ಗಾಂಧಿ ನೇತೃತ್ವದ ಕಾಂಗ್ರೆಸ್‌ಗೆ ''ಆಡಳಿತ ಕಾಂಗ್ರೆಸ್'' ಎಂದು ನಿಜಲಿಂಗಪ್ಪ ಅವರ ನೇತೃತ್ವದ ಕಾಂಗ್ರೆಸ್‌ಗೆ ''ಸಂಸ್ಥಾ ಕಾಂಗ್ರೆಸ್'' ಎಂದು ಹೆಸರಾಯಿತು. ಇದು ಕಾಂಗ್ರೆಸ್ ಪಕ್ಷದ ಮಹತ್ವದ ವಿಭಜನೆಯಾಗಿದೆ. ಅನಂತರ ಅಂದರೆ ೧೯೭೦ರಲ್ಲಿ ನಡೆದ ಹೊಸಪೇಟೆ, ಶಿವಾಜಿನಗರ ಹಾಗೂ ಹುನಗುಂದ ಉಪಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಜಯಗಳಿಸಿತು. ಇದೇ ಮುಂದಿನ ಕರ್ನಾಟಕ ರಾಜಕೀಯ ಭವಿಷ್ಯದ ಸೂಚನೆಯಾಗಿತ್ತು.

ಕಾಂಗ್ರೆಸ್ ಪಕ್ಷವು ಸುದೀರ್ಘ ಪರಂಪರೆಯನ್ನು ರಾಜ್ಯದ ರಾಜಕಾರಣದಲ್ಲಿ ಬಿಟ್ಟಿದೆ. ಈ ಪಕ್ಷದ ಅಧ್ಯಕ್ಷರುಗಳಾಗಿದ್ದವರು ತಮ್ಮ ವ್ಯಕ್ತಿತ್ವದಿಂದ ಪಕ್ಷಕ್ಕೆ ಕೀರ್ತಿತಂದಿದ್ದಾರೆ. ಅವರುಗಳೆಂದರೆ ಟಿ. ಸಿದ್ಧಲಿಂಗಯ್ಯ (೧೯೩೭ ಮತ್ತು ೧೯೪೭), ಹೆಚ್. ಸಿ. ದಾಸಪ್ಪ (೧೯೩೯), ಕೆ. ಟಿ. ಭಾಷ್ಯಂ (೧೯೪೦), ಹೆಚ್. ಸಿದ್ದಯ್ಯ (೧೯೪೧), ಟಿ. ಸುಬ್ರಹ್ಮಣ್ಯಂ (೧೯೪೨), ಎಸ್. ನಿಜಲಿಂಗಪ್ಪ (೧೯೪೪), ಕೆ.ಸಿ. ರೆಡ್ಡಿ (೧೯೪೬), ಶ್ರೀಮತಿ ಯಶೋಧರಮ್ಮ ದಾಸಪ್ಪ (೧೯೪೮), ಹೆಚ್. ಕೆ. ವೀರಣ್ಣ ಗೌಡ (೧೯೫೩), ಸಾಹುಕಾರ್ ಚನ್ನಯ್ಯ (೧೯೫೪), ವಿ.ವೆಂಕಟಪ್ಪ (೧೯೫೬ ಹಾಗೂ ೧೯೫೯), ಮಹಮ್ಮದಲಿ (೧೯೬೩), ಹಾಗೂ ಡಾ. ಕೆ. ನಾಗಪ್ಪ ಆಳ್ವ (೧೯೬೯), ಕಾಂಗ್ರೆಸ್ ಪಕ್ಷದ ಶಾಸಕಾಂಗದ ನಾಯಕರು ಹಾಗೂ ಮುಖ್ಯಮಂತ್ರಿಗಳಾಗಿದ್ದ ಕೆ.ಸಿ. ರೆಡ್ಡಿ (೧೯೪೭) ಕೆಂಗಲ್ ಹನುಮಂತಯ್ಯ (೧೯೫೨), ಕಡಿದಾಳು ಮಂಜಪ್ಪ ೧೯೫೬, ಎಸ್. ನಿಜಲಿಂಗಪ್ಪ (೧೯೫೬, ೧೯೬೨ ಹಾಗೂ ೧೯೬೭), ಬಿ. ಡಿ. ಜತ್ತಿ (೧೯೫೮), ವೀರೇಂದ್ರ ಪಾಟೀಲ (೧೯೬೮), ಅವರುಗಳು ಕಾಂಗ್ರೆಸ್ ಪಕ್ಷದ ಧ್ಯೇಯೋದ್ದೇಶಗಳ ಅನುಷ್ಠಾನಕ್ಕೆ ಶ್ರಮಿಸಿದ್ದಾರೆ.

## ೧೯೬೭ರ ಲೋಕಸಭಾ ಚುನಾವಣೆ

ಬೀದರ್‌ನಿಂದ ರಾಮಚಂದ್ರಪ್ಪ ವೀರಪ್ಪ, ಕೊಪ್ಪಳದಿಂದ ಎ. ಸಂಗಣ್ಣ, ಬಳ್ಳಾರಿಯಿಂದ, ವಿ. ಕೆ. ಆರ್. ವಿ. ರಾವ್, ಮಧುಗಿರಿಯಿಂದ ಮಾಲಿ ಮರಿಯಪ್ಪ, ಕೋಲಾರದಿಂದ ಜಿ. ವೈ. ಕೃಷ್ಣನ್, ಹೊಸಕೋಟೆಯಿಂದ ಎಂ. ವಿ. ಕೃಷ್ಣಪ್ಪ, ಬೆಂಗಳೂರು ನಗರದಿಂದ ಕೆ. ಹನುಮಂತಯ್ಯ, ಕನಕಪುರದಿಂದ ಎಂ. ವಿ. ರಾಜಶೇಖರನ್, ಮಂಡ್ಯದಿಂದ ಎಂ. ಕೆ. ಶಿವನಂಜಪ್ಪ, ಚಾಮರಾಜನಗರದಿಂದ ಎಸ್. ಎಂ. ಸಿದ್ದಯ್ಯ, ಮೈಸೂರಿನಿಂದ ಹೆಚ್. ಡಿ. ತುಳಸೀದಾಸಪ್ಪ, ಮಂಗಳೂರಿನಿಂದ ಸಿ. ಎಂ. ಪೂಣಚ್ಚ, ಧಾರವಾಡ ದಕ್ಷಿಣದಿಂದ ಎಫ್. ಎಚ್. ಮೊಹಿಸೀನ್, ಧಾರವಾಡ ಉತ್ತರದಿಂದ ಶ್ರೀಮತಿ ಸರೋಜಿನಿ ಮಹಿಷಿ, ಚಿಕ್ಕೋಡಿಯಿಂದ ಬಿ. ಶಂಕರಾನಂದ ಆಯ್ಕೆಯಾಗಿದ್ದರು. ಈ ಸಂದರ್ಭದಲ್ಲಿ ಎಂ. ಕೆ. ಶಿವನಂಜಪ್ಪ ಅವರ ನಿಧನದಿಂದ ತೆರವಾದ ಸ್ಥಾನಕ್ಕೆ ನಡೆದ ಲೋಕಸಭಾ ಉಪ ಚುನಾವಣೆಯಲ್ಲಿ ಮಂಡ್ಯದಿಂದ ಎಸ್. ಎಂ. ಕೃಷ್ಣ ಅವರು ಕಾಂಗ್ರೆಸ್ ಅಭ್ಯರ್ಥಿಯನ್ನು ಸೋಲಿಸಿ ಲೋಕಸಭೆ ಪ್ರವೇಶಿಸಿದರು. ಬಿಜಾಪುರ ಹಾಗೂ ಮಧುಗಿರಿ ಕ್ಷೇತ್ರದ ಉಪ ಚುನಾವಣೆಗಳಲ್ಲಿ ಕಾಂಗ್ರೆಸ್‌ನ ಬಿ.ಕೆ. ಗುಡದಿನ್ನಿ ಹಾಗೂ ಶ್ರೀಮತಿ ಸುಧಾ ವಿ. ರೆಡ್ಡಿ ಅವರುಗಳು ಆಯ್ಕೆಯಾಗಿದ್ದರು.

*ಸಂಶೋಧನ ಸಹಾಯ ಹಾಗೂ ನಿರೂಪಣೆ*

**ಕೆ. ಆರ್. ಕಮಲೇಶ್, ಎಸ್. ನಂಜುಂಡಸ್ವಾಮಿ**

# ಪ್ರಜಾಪಕ್ಷ ಮತ್ತು ಪ್ರಜಾ ಮಿತ್ರಮಂಡಲಿ

ವೈ. ಎಸ್. ವಿಜಯಲಕ್ಷ್ಮಿ

ಮೈಸೂರು ಸಂಸ್ಥಾನ 'ಮಾದರಿ ರಾಜ್ಯ'ವೆಂಬ ಖ್ಯಾತಿಯನ್ನು ಗಳಿಸಿದ್ದಿತು. ಇದಕ್ಕೆ ಮೈಸೂರಿನ ಅರಸರು ಮತ್ತು ಕಾರ್ಯವಿಚಕ್ಷಕರಾದ ದಿವಾನರು ರಾಜ್ಯದ ಪ್ರಗತಿಗಾಗಿ ಅತ್ಯುತ್ತಮ ಕಾರ್ಯಯೋಜನೆಗಳನ್ನು ರೂಪಿಸಿಕೊಂಡು, ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದುದೇ ಕಾರಣವಾಗಿದೆ. ಮೈಸೂರು ರಾಜ್ಯ ಹಲವಾರು ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿದ್ದಿತು. ಪ್ರತಿನಿಧಿ ಸಂಸ್ಥೆಗಳು, ಜಲವಿದ್ಯುತ್ ಯೋಜನೆ, ಉಚಿತ ಪ್ರಾಥಮಿಕ ಶಿಕ್ಷಣ, ಹಿಂದುಳಿದವರ ಕಲ್ಯಾಣ ಯೋಜನೆಗಳು - ಹೀಗೆ ಹಲವು ನಿಟ್ಟಿನಲ್ಲಿ ಸಾಧನೆ ಮಾಡಿ 'ಮಾದರಿ ರಾಜ್ಯ' ವೆಂಬ ಹೆಸರನ್ನು ಅನ್ವರ್ಥಕಗೊಳಿಸಿ ಕೊಂಡಿತ್ತು. ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ಸರ್.ಎಂ. ವಿಶ್ವೇಶ್ವರಯ್ಯ, ಕಾಂತರಾಜ ಅರಸ್ ಮಿರ್ಜಾ ಇಸ್ಮಾಯಿಲ್ ಮೊದಲಾದ ಆಡಳಿತ ಪಟುತ್ವ ಹಾಗೂ ದೂರದರ್ಶಿತ್ವವುಳ್ಳ ದಿವಾನರು, ಮೈಸೂರಿನ ಆಡಳಿತ ಸೂತ್ರವನ್ನು ಹಿಡಿದು, ಸಂಸ್ಥಾನವು ಪ್ರಗತಿಪಥದಲ್ಲಿ ನಡೆಯಲು ಸಹಾಯಕರಾದರು.

ಹೀಗೆ ಮೈಸೂರು ಕರ್ನಾಟಕದ ಒಂದು ಭಾಗವಾಗಿ ರಾಜಕೀಯ, ಸಾಮಾಜಿಕ ಶಕ್ತಿಗಳ ಬೆಳವಣಿಗೆಗೆ ತನ್ನದೇ ಆದ ವಿಶಿಷ್ಟತೆಯನ್ನು ತಂದುಕೊಟ್ಟಿದೆ. ಭಾರತೀಯರಲ್ಲಿ ಸ್ವರಾಜ್ಯ ತತ್ವದ ಚಿಂತನೆ ಮೂಡದಿದ್ದ ಕಾಲದಲ್ಲೇ, ಪ್ರಜಾಪ್ರಭುತ್ವ ಸರ್ಕಾರದ ಪದ್ಧತಿ ಅಸ್ಪಷ್ಟವಾಗಿರುವಾಗಲೇ ಭಾರತದಲ್ಲಿ ಉದಾರವಾದಿ ಪ್ರಜಾಪ್ರಭುತ್ವದ ಚಿಂತನೆಯಿಂದ ಪ್ರಭಾವಿತರಾದ ಮೊಟ್ಟಮೊದಲ ಪ್ರಜಾರಾಜ್ಯವಾದಿ ದಿವಾನ್ ರಂಗಾಚಾರ್ಲುರವರು. ಸ್ವಾತಂತ್ರ್ಯಪೂರ್ವದಲ್ಲಿ ಪ್ರಪ್ರಥಮವಾಗಿ ೧೮೮೧ರಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು ಮೈಸೂರಿನಲ್ಲಿ ಸ್ಥಾಪಿಸಿದ ಹೆಗ್ಗಳಿಕೆ ಶ್ರೀಯುತರದಾದರೆ, ಭಾರತದ ದೇಶೀ ರಾಜ್ಯಗಳಲ್ಲಿ ಪ್ರಜೆಗಳ ಮನೋಗತದಂತೆ ನಡೆಯಲಿಕ್ಕಾಗಿ ಪ್ರಜಾಪ್ರಭುತ್ವದ ಬೀಜಾಂಕುರಕ್ಕೆ ಇಂಬು ನೀಡಿದವರು ಮೈಸೂರಿನ ಅರಸರು.

ಸರ್ಕಾರಕ್ಕೂ ಪ್ರಜೆಗಳಿಗೂ ಇರುವ ಅಂತರವನ್ನು ತೊಲಗಿಸಿ, ಅವೆರಡೂ ಪರಸ್ಪರ ಅನ್ಯೋನ್ಯ ಅಂಗಗಳೆಂಬ ಭಾವನೆಯನ್ನು ದೃಢಪಡಿಸುವ ಆಶಯದಿಂದ ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿ, ನಿಯತವಾಗಿ ವರ್ಷಕ್ಕೊಮ್ಮೆ ಸಭೆ ಸೇರತಕ್ಕುದೆಂದು ರಂಗಚಾರ್ಲುರವರು ಸರ್ಕಾರದ ಹುಕುಂ ಮಾಡಿದರು. ವರ್ಷಕ್ಕೆ ಎರಡು ಬಾರಿ ಸಭೆ ಸೇರುವಂತೆ ಮಾರ್ಪಡಿಸಿದವರು ಪ್ರಾಧಿಕಾರಕ್ಕೆ ಮನ್ನಣೆ ನೀಡಿದ ಸರ್.ಎಂ. ವಿಶ್ವೇಶ್ವರಯ್ಯನವರು. ಹೀಗೆ ಪ್ರಜಾಪ್ರಭುತ್ವಕ್ಕೆ ಬುನಾದಿ ಹಾಕಿ ಸುವರ್ಣ ಇತಿಹಾಸ ನಿರ್ಮಿಸಿದವರು ಮೈಸೂರು ಸಂಸ್ಥಾನದ ಅರಸರು ಹಾಗೂ ದಿವಾನರು.

## ಪ್ರಜಾಮಿತ್ರಮಂಡಲಿ

### ಪಕ್ಷದ ಹಿನ್ನೆಲೆ

ಮೈಸೂರು ಸಂಸ್ಥಾನ ಹಿಂದುಳಿದ ವರ್ಗಗಳ ಚಳವಳಿಯನ್ನು ಕಂಡ ಅನೇಕ ಪ್ರಾಂತ್ಯಗಳಲ್ಲಿ ಒಂದಾಗಿದ್ದು, ಸರ್ಕಾರ ತನ್ನ ರಾಜಕೀಯ ಸಾಮಾಜಿಕ ತುರ್ತಿನಿಂದಾಗಿ ಆ

ವರ್ಗದವರ ಶ್ರೇಯೋಭಿವೃದ್ಧಿಗಾಗಿ ಬಹುಶಃ ಬೇರೆಲ್ಲಾ ಪ್ರಾಂತ್ಯಗಳಿಗೂ ಮೊದಲೇ ಕ್ರಮಕೈಗೊಂಡಿತೆಂಬುದು ವಿಶೇಷ.

ಸಮಾಜ ಮತ್ತು ರಾಜಕೀಯ ಪರಸ್ಪರ ಪೂರಕ ಮತ್ತು ಅವಲಂಬಿತ. ರಾಜಕೀಯವು ವಿಭಿನ್ನ ಸಾಮಾಜಿಕ ಸಂಘರ್ಷಗಳಿಂದ ಬೆಳೆಯುವಂಥದು. ಎರಡೂ ಸಂಸ್ಕೃತಿಯ ಅವಿಭಾಜ್ಯ ಅಂಗಗಳು. ೧೯ನೆಯ ಶತಮಾನದಲ್ಲಿ ಮತ್ತು ೨೦ನೆಯ ಶತಮಾನದಲ್ಲಿ ಭಾರತದಲ್ಲಿ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಹಲವಾರು ಸಾಮಾಜಿಕ ಸಂಘರ್ಷಗಳಾದವು. ಈ ಸಂಘರ್ಷಗಳಲ್ಲಿ ಪ್ರಮುಖವಾದವು - ಬ್ರಾಹ್ಮಣೇತರ ಹಿಂದುಳಿದ ವರ್ಗಗಳ ಚಳವಳಿ ಹಾಗೂ ದಲಿತ ಚಳವಳಿ. ಇವು ಸಮಾಜದಲ್ಲಿ ಪ್ರಭುತ್ವ ಸಾಧಿಸಿದ ಮೇಲ್ವರ್ಗಗಳ ವಿರುದ್ಧವಾಗಿಯೇ ನಡೆದವು. ದಕ್ಷಿಣ ಭಾರತದ ಇತರ ದೇಶೀ ಸಂಸ್ಥಾನಗಳಲ್ಲಿ ಬೆಳೆಯುವ ಹಿಂದುಳಿದ ವರ್ಗಗಳ ಚಳವಳಿ - ಮೈಸೂರಿನಲ್ಲಿ ಬೆಳೆಯಿತು ಹಾಗೂ ಈ ಚಳವಳಿ ದೀರ್ಘಕಾಲ ಉಳಿಯುವಷ್ಟು ಸಶಕ್ತವಾಗಿತ್ತು ಎಂಬುದು ಗಮನಾರ್ಹ ಅಂಶ.

ಹಿಂದುಳಿದ ವರ್ಗದ ಚಳವಳಿಗೆ ಕಾರಣ ಮೈಸೂರು ಸಂಸ್ಥಾನದಲ್ಲಿ ೧೮೮೧ರಿಂದ ರಾಜ್ಯ ಸೇವೆಗೆ ನೇಮಕವಾದವರಲ್ಲಿ ಬಹುಪಾಲು ಬ್ರಾಹ್ಮಣವರ್ಗಕ್ಕೆ ಸೇರಿದವರಾಗಿದ್ದರು. ಶಾನುಭೋಗರಿಂದ ಹಿಡಿದು ದಿವಾನರವರೆಗೆ ಬ್ರಾಹ್ಮಣ ಕೋಮಿಗೆ ಸೇರಿದವರೇ ಆಗಿದ್ದರು. ಗ್ರಾಮದ ರಾಜಕೀಯ ವ್ಯವಸ್ಥೆಯಲ್ಲಿ ಚುನಾಯಿತ ಪ್ರತಿನಿಧಿಗಳಿಗೆ ಅಧಿಕಾರವಿಲ್ಲದೆ, ಸರ್ಕಾರಿ ಆಡಳಿತದಲ್ಲಿ ಅಧಿಕಾರವು ಕೇಂದ್ರೀಕೃತವಾಗಿತ್ತು. ಹೀಗಾಗಿ ಅಧಿಕಾರವೆಂದರೆ ಸರ್ಕಾರಿ ಸೇವೆಯಾಗಿತ್ತು. ದಕ್ಷ ಆಡಳಿತಗಾರರು ಬ್ರಾಹ್ಮಣೇತರರಲ್ಲಿ ಇಲ್ಲವೆಂಬ ಕುಂಟುನೆಪ ಇವರದಾಗಿತ್ತು. ಕೆಳದರ್ಜೆ ಹುದ್ದೆಗಳಲ್ಲಿ ಮಾತ್ರ ಬ್ರಾಹ್ಮಣೇತರರಿದ್ದರು. ಈ ಕಾರಣದಿಂದ ಬ್ರಾಹ್ಮಣರ ಏಕಸ್ವಾಮ್ಯವನ್ನು ಪ್ರಶ್ನಿಸಿ, ತಮಗೆ ದೊರಕಬೇಕಾದ ಅಧಿಕಾರ ಮತ್ತು ಗೌರವಕ್ಕಾಗಿ ಹಿಂದುಳಿದ ವರ್ಗಗಳು ಒಗ್ಗಟ್ಟಾಗಿ ಪ್ರಯತ್ನ ನಡೆಸಿದರು. ಬ್ರಾಹ್ಮಣೇತರರ ನಾಯಕತ್ವವನ್ನು ಸಿ.ಆರ್.ರೆಡ್ಡಿ ಮತ್ತು ಎಂ. ಬಸವಯ್ಯನವರು ವಹಿಸಿಕೊಂಡರು. ಬ್ರಾಹ್ಮಣೇತರರ ಮುಖಂಡರಾದ ಬಸವಯ್ಯನವರು. ಹಿಂದುಳಿದ ವರ್ಗಗಳ ವಿದ್ಯಾಭ್ಯಾಸಕ್ಕಾಗಿ ಒಂದು ಲಕ್ಷ ರೂಪಾಯಿಗಳ ವಿಶೇಷ ಅನುದಾನವನ್ನು ತೆಗೆದಿಡುವ ನಿರ್ಣಯವನ್ನು ನ್ಯಾಯವಿಧಾಯಕ ಸಭೆಯಲ್ಲಿ ಮಂಡಿಸಿದಾಗ ನಿರ್ಣಯದ ಬಗ್ಗೆ ಚರ್ಚೆಗೆ ಆಗಿನ ಅಧ್ಯಕ್ಷರಾದ ದಿವಾನರು ಅವಕಾಶ ಮಾಡಿಕೊಡಲಿಲ್ಲ. ದಿವಾನರ ದಿವ್ಯಮೌನ ಹಿಂದುಳಿದ ವರ್ಗಗಳ ವಿರೋಧಿ ನೀತಿಯೆಂಬ ಟೀಕೆಗೆ ಒಳಗಾಯಿತು. ಆದರೆ ಈ ನಿರ್ಣಯದಲ್ಲಿನ ಗುಣಾಂಶಗಳನ್ನು ಅರಿತ ಮಹಾರಾಜರು ಈ ಮೊತ್ತವನ್ನು ತೆಗೆದಿಡಲು ಒಪ್ಪಿದರೆಂಬುದು ಅಂದಿನ ಮೈಸೂರು ರಾಜಕೀಯ ಮತ್ತು ಸಾಮಾಜಿಕ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲವಂಥದು.

ವಿಶ್ವೇಶ್ವರಯ್ಯನವರು ಮೈಸೂರು ಪಕ್ಷದವರು ಬಯಸಿದಂತೆ ಸರ್ಕಾರಿ ಸೇವೆಯನ್ನು ಬೇಡಿಕೆಗೆ ಒಪ್ಪಿ ಆಜ್ಞೆ ಹೊರಡಿಸಿದರಾದರೂ ಬ್ರಾಹ್ಮಣೇತರರು ಸಮಾಧಾನಗೊಳ್ಳದೆ ವಿಶ್ವೇಶ್ವರಯ್ಯನವರ ಯೋಜನೆಗಳು ಪಟ್ಟಣದ, ವಿದ್ಯಾವಂತ ಬ್ರಾಹ್ಮಣರಿಗೆ ಮಾತ್ರವೆಂದು ಟೀಕಿಸಲಾರಂಭಿಸಿದರು.

ಅವರನ್ನು ತೃಪ್ತಿಪಡಿಸಲೆಂಬಂತೆ ವಿಶ್ವೇಶ್ವರಯ್ಯನವರು ಕನಿಷ್ಠ ವಿದ್ಯಾರ್ಹತೆಯುಳ್ಳ ಬ್ರಾಹ್ಮಣೇತರರಿಗೆ ಸರ್ಕಾರಿ ಸೇವೆಯಲ್ಲಿ ಶೇಕಡಾ ೨೫ರಷ್ಟು ಹುದ್ದೆಯನ್ನು ನೀಡಬೇಕೆಂಬ ನಿರ್ಣಯ ತಳೆದು ೧೯ ಜನ ಬ್ರಾಹ್ಮಣೇತರರನ್ನು ಗೆಜೆಟೆಡ್ ಹುದ್ದೆಗೆ ನಾಮಕರಣ ಮಾಡಿದರೂ ಬ್ರಾಹ್ಮಣೇತರರು ಸಮಾಧಾನಗೊಳ್ಳಲಿಲ್ಲ. ಈ ಅಸಮಾಧಾನವೇ 'ಪ್ರಜಾಮಿತ್ರ ಮಂಡಲಿ' ಹುಟ್ಟಿಗೆ ಕಾರಣವಾಯಿತು.

## ಪ್ರಜಾಮಿತ್ರ ಮಂಡಲಿ ಉಗಮ - ಧ್ಯೇಯೋದ್ದೇಶಗಳು

ಇಲ್ಲಿಂದ ಮುಂದೆ ಹಿಂದುಳಿದ ವರ್ಗಗಳ ಧ್ವನಿಯಾಗಿ, ತಮ್ಮ ಬೇಡಿಕೆಗಳನ್ನು ಸಮರ್ಥವಾಗಿ ಮಂಡಿಸಲು ರಾಜಕೀಯ ವೇದಿಕೆಯ ಅವಶ್ಯಕತೆಯಿದೆಯೆಂಬುದನ್ನು ಹಿಂದುಳಿದ ವರ್ಗಗಳು ಮನಗಂಡವು. ತತ್ಪರಿಣಾಮವಾಗಿ ಮೈಸೂರಿನಲ್ಲಿ ಪ್ರಪ್ರಥಮವಾಗಿ ಬ್ರಾಹ್ಮಣೇತರ ರಾಜಕೀಯ ಪಕ್ಷ 'ಪ್ರಜಾಮಿತ್ರ ಮಂಡಲಿ'ಯು ೧೯೧೭ರಲ್ಲಿ ಅಸ್ತಿತ್ವಕ್ಕೆ ಬಂದಿತು. ಇದಕ್ಕೆ ಸ್ವಲ್ಪ ತಿಂಗಳ ಹಿಂದೆ ಮದರಾಸಿನಲ್ಲಿ ಇದೇ ಉದ್ದೇಶಗಳಿಗಾಗಿ 'ಜಸ್ಟೀಸ್ ಪಾರ್ಟಿ' ಯೆಂಬ ರಾಜಕೀಯ ಪಕ್ಷವೊಂದು ಸ್ಥಾಪಿತವಾಗಿತ್ತು. ಇದೇ ಆಧಾರದ ಮೇಲೆ ಮೈಸೂರಿನಲ್ಲಿ ಬ್ರಾಹ್ಮಣೇತರರ ಚಳವಳಿಗೆ ಅಂಕುರಾರ್ಪಣ ಮಾಡಿದವರು ಬಸವಯ್ಯನವರು, ಇವರ ಸಂಗಡಿಗರಲ್ಲಿ ಜನಾಬ್ ಗುಲಾಂ ಮಹಮದ್ ಮೇಖ್ರಿ, ಕಲಾಮಿ, ಎಂ. ಸುಬ್ಬಯ್ಯನವರು ಈ ಮಂಡಲಿಯ ಪ್ರಮುಖರು. ಈ ರಾಜಕೀಯ ಪಕ್ಷದ ಪ್ರಮುಖ ಉದ್ದೇಶ ಸರ್ಕಾರಿ ಸೇವೆಯಲ್ಲಿ ಕೋಮುವಾರು ಮತ್ತು ಜಾತಿವಾರು ನ್ಯಾಯವನ್ನು ಸಂಪಾದಿಸುವುದಾಗಿತ್ತು.

ಬ್ರಾಹ್ಮಣೇತರರಲ್ಲಿನ ಜಾಗೃತಿ, ಜಾತಿವಾರು ಸಂಸ್ಥೆಗಳನ್ನು ಹುಟ್ಟುಹಾಕಿತಲ್ಲದೆ, ಅಸಂಘಟಿತ ವರ್ಗಗಳು ಸಂಘಟಿತರಾಗತೊಡಗಿದರು. ಅದರ ಪರಿಣಾಮ ೧೯೦೫ರಲ್ಲಿ ಮೈಸೂರು ಲಿಂಗಾಯಿತ ವಿದ್ಯಾಭಿವೃದ್ಧಿ ನಿಧಿ ಸಂಸ್ಥೆ, ೧೯೦೬ರಲ್ಲಿ ಒಕ್ಕಲಿಗರ ಸಂಘ, ಆದಿ ದ್ರಾವಿಡ

ಅಭಿವೃದ್ಧಿ ಸಂಘ, ಕುರುಬರ ಸಂಘ, ೧೯೦೯ರಲ್ಲಿ ಮುಸ್ಲಿಂ ಸಂಘವು ಸ್ಥಾಪನೆಗೊಂಡು ಬ್ರಾಹ್ಮಣೇತರ ಚಳವಳಿಗೆ ಸುಭದ್ರ ಬುನಾದಿ ಹಾಕಿತು. ಈ ಜಾಗೃತಿ ಮೈಸೂರಿನ ಒಡೆಯರ್ ಗಮನಕ್ಕೂ ಬಂದು, ಬ್ರಾಹ್ಮಣೇತರರಿಗೆ ದಿವಾನಗಿರಿಯನ್ನು ನೀಡಲು ಅವರು ಆಲೋಚಿಸಿ ತಂಬೂಚೆಟ್ಟಿಯವರನ್ನು ಮತ್ತೆ ಕರೆಸಿಕೊಳ್ಳುವ ಬಗ್ಗೆ ವಿಚಾರ ಮಾಡಿದರು. ಆದರೆ ತಂಬೂಚೆಟ್ಟಿ ಅಸಮರ್ಥರೆಂದು ಕೆ.ಪಿ. ಪುಟ್ಟಣ್ಣಶೆಟ್ಟಿ ಸಮರ್ಥರಾದರೂ ಅನನುಭವಿಯೆಂದೂ ಬ್ರಿಟಿಷ್ ಭಾರತ ಸರ್ಕಾರ ಒಪ್ಪಿಗೆ ನೀಡಲಿಲ್ಲ. ವಿದ್ಯಾವಂತ ಬ್ರಾಹ್ಮಣೇತರ ವರ್ಗದವರು, ಸರ್ಕಾರದ ಸೇವೆ ಮತ್ತು ವಿದ್ಯಾ ಇಲಾಖೆಯಲ್ಲಿ ಇದ್ದಂಥ ಬಹುಪಾಲು ಬ್ರಾಹ್ಮಣರ ಹಿಡಿತವನ್ನು ವಿರೋಧಿಸಿ ತಮ್ಮ ಪ್ರತಿರೋಧವನ್ನು ಜಾತಿವಾರು ಸಂಘಗಳ ಮೂಲಕ ವ್ಯಕ್ತಪಡಿಸಿದ್ದು ಈ ಸಂಘಗಳು ಬ್ರಾಹ್ಮಣರ ಪ್ರಭುತ್ವದಲ್ಲಿ ಸ್ಥಾನಗಳನ್ನು ಪಡೆಯಲು ಕಷ್ಟಸಾಧ್ಯವೆನಿಸಿದಾಗ ಮಹಾರಾಜರಿಗೆ ಈ ಬಗ್ಗೆ ವಿಶೇಷ ಸವಲತ್ತುಗಳಿಗಾಗಿ ಬೇಡಿಕೆಯನ್ನು ಸಲ್ಲಿಸಲಾರಂಭಿಸಿದವು.

ಪ್ರಜಾಮಿತ್ರ ಮಂಡಲಿಯ ಪ್ರಮುಖ ತತ್ವವೆಂದರೆ : ''ಒಂದು ಜನಾಂಗದ ಯಾವ ಒಂದು ಭಾಗವೂ, ಯಾವ ಒಂದು ಪಂಗಡವೂ ತಾವು ಇತರರಿಗಿಂತ ಹಿಂದುಳಿದಿದ್ದೇವೆ ಎಂದು ಕೊರತೆಪಟ್ಟುಕೊಳ್ಳುವಂತೆ ಇರಬಾರದು. ಯಾವ ಸಮಾಜದಲ್ಲಿಯಾದರೂ ಅದರ ಒಂದು ಭಾಗವು ತನಗೆ ಇತರರಿಂದ ನ್ಯಾಯತಪ್ಪಿತು ಎಂದುಕೊಳ್ಳುವಂತಾದರೆ ಆ ಕೊರತೆಯಿಂದ ಒಟ್ಟು ಸಮಾಜಕ್ಕೆ ಅಂದೋ ಮುಂದೆಯೋ ಅಪಾಯವು ಶತಸ್ಸಿದ್ಧವಾಗಿರುತ್ತದೆ. ಒಂದು ಸರಪಳಿಯಲ್ಲಿ ಒಂದೇ ಒಂದು ಕೊಂಡಿ ಸವೆದಿದ್ದರೂ ಆ ಒಂದು ಸಣ್ಣ ದೌರ್ಬಲ್ಯದಿಂದ ಇಡೀ ಸರಪಣಿ ಅಪಾಯಕ್ಕೊಳಗಾಗುತ್ತದೆ. ಒಂದು ಜನಾಂಗದ ನಾನಾ ಭಾಗಗಳ ಬಲಾಬಲಗಳು ತೃಪ್ತಿ ಅತೃಪ್ತಿಗಳೂ ಅದರಂತೆಯೇ. ಯಾವ ಪಂಗಡದಲ್ಲಿಯೇ ಆಗಲಿ ಅಸಂತೃಪ್ತಿ ತಲೆದೋರಿದ್ದರೆ ಅದರ ಕಾರಣವೇನೇ ಇರಲಿ ಅದು ಸರಿಯಾದದ್ದಾಗಲಿ - ತಪ್ಪು ತಿಳುವಳಿಕೆಯದ್ದಾಗಲಿ ಅದನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಅಲ್ಲಿ ಶಾಂತಿ ನೆಲೆಗೊಳಿಸಲು ಸೂಕ್ತ ವ್ಯವಸ್ಥೆ ಕೈಗೊಳ್ಳುವುದು ಸಮಾಜದ ಹಿತೈಷಿಗಳ ಕರ್ತವ್ಯವಾಗುತ್ತದೆ.''

ಈ ಹಿನ್ನೆಲೆಯಲ್ಲಿ ಪ್ರಜಾಮಿತ್ರ ಮಂಡಲಿಗೆ ರಾಜಮನೆತನದ ಗುಪ್ತ ಬೆಂಬಲವೂ ಇದ್ದುದಾಗಿ ಕಂಡುಬರುತ್ತದೆ. ಈ ಪ್ರಜಾಮಿತ್ರ ಮಂಡಲಿಯ ಪ್ರಮುಖ ಬೇಡಿಕೆಗಳು :

೧) ಬ್ರಾಹ್ಮಣೇತರ ವಿದ್ಯಾರ್ಥಿಗಳಿಗೆ ಸ್ಕೂಲಿನ ಫೀಜಿನಲ್ಲಿ ರಿಯಾಯಿತಿ.

೨) ಸಿವಿಲ್ ಸರ್ವಿಸ್‌ನಲ್ಲಿ ಸ್ಥಳ ಕಾಯ್ದಿರಿಸುವಿಕೆ.

೩) ಸ್ಕಾಲರ್‌ಷಿಪ್ ನೀಡಿಕೆ.

ಆದರೆ ವಿಶ್ವೇಶ್ವರಯ್ಯನವರು ಇವು ಜಾತಿ ಆಧಾರಿತ ಬೇಡಿಕೆಗಳೆಂಬ ಕಾರಣದಿಂದ ತಿರಸ್ಕರಿಸಿ, ವಿದ್ಯಾರ್ಹತೆಯ ಆಧಾರದ ಮೇಲೆ ಅವಕಾಶ ನೀಡಬೇಕೆಂಬ ಆಶಯ ಹೊಂದಿದ್ದವರಾಗಿದ್ದರು. ಈ ಕಾರಣದಿಂದ ವಿಶ್ವೇಶ್ವರಯ್ಯನವರು ಅರ್ಹತೆಯ ಆಧಾರದ ಮೇಲೆ ಆರು ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರ್ ಸ್ಥಾನಕ್ಕೆ ಒಂದೇ ಜಾತಿಗೆ ಸೇರಿದವರನ್ನು ಆರಿಸಲು ಶಿಫಾರಸು ಮಾಡಿದರು. ಮಹಾರಾಜರು ಕೆಳಜಾತಿಗಳ ಸಾಮಾಜಿಕ ಸ್ಥಿತಿಯನ್ನು ದೃಷ್ಟಿಯಲ್ಲಿರಿಸಿಕೊಳ್ಳಬೇಕೆಂಬ ಆಶಯದಿಂದ ಬ್ರಾಹ್ಮಣೇತರರಿಗೂ ಸ್ಥಾನ ನೀಡಬೇಕೆಂದು, ರಾಜ್ಯದ ಜನಸಂಖ್ಯೆಯಲ್ಲಿ ೯೬ ಭಾಗ ಇದ್ದ ಬ್ರಾಹ್ಮಣೇತರ ವರ್ಗದ ವಿರೋಧವನ್ನು ಕಟ್ಟಿಕೊಳ್ಳಲು ಇಚ್ಛಿಸದೆ, ವಿಶ್ವೇಶ್ವರಯ್ಯನವರು ಆರಿಸಿದವರಲ್ಲಿ ಮೂವರನ್ನು ಮಾತ್ರ ಆಯ್ಕೆ ಮಾಡಿದರು. ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್‌ಗೆ ವಿಶ್ವೇಶ್ವರಯ್ಯನವರು ಸೂಚಿಸಿದ ಅಭ್ಯರ್ಥಿಯನ್ನು ಒಪ್ಪದೆ ತಾವೇ ಆಯ್ಕೆ ಮಾಡಿದವರನ್ನು ನೇಮಕ ಮಾಡಿದರು. ರಾಜ್ಯದ ಜನಸಂಖ್ಯೆಯಲ್ಲಿ ೯೬ ಭಾಗ ಇದ್ದ ಬ್ರಾಹ್ಮಣೇತರರು ಕೆಳದರ್ಜೆಯ ಕೆಲಸವೂ ಸೇರಿದಂತೆ ೩೦ ಭಾಗ ಮಾತ್ರ ಪ್ರಾತಿನಿಧ್ಯವನ್ನು ಪಡೆದಿದ್ದರು. ಅವರಿಗೆ ಉನ್ನತ ವಿದ್ಯಾಭ್ಯಾಸದ ಅವಕಾಶವೂ ಕಡಿಮೆ ಇದ್ದುದರಿಂದ, ರಾಜ್ಯದ ಸಿವಿಲ್ ಸರ್ವಿಸ್‌ನಲ್ಲಿ ಉದ್ಯೋಗಾವಕಾಶವೂ ಕಡಿಮೆಯಿದ್ದಿತು. ಮಹಾರಾಜರು ಹಿಂದುಳಿದ ವರ್ಗದವರ ಮನವಿಯ ಮೇರೆಗೆ ವಿದ್ಯಾಭ್ಯಾಸ ಸೌಕರ್ಯ, ಸಿವಿಲ್ ಸರ್ವಿಸ್‌ಗಳಲ್ಲಿ ವಿಶೇಷ ಸವಲತ್ತಿನ ಆಶ್ವಾಸನೆ ನೀಡಿದ್ದಲ್ಲದೆ, ಹಿಂದುಳಿದ ವರ್ಗದವರಿಗಾಗಿ ಹಲವಾರು ಸ್ಕಾಲರ್‌ಷಿಪ್‌ಗಳನ್ನು ನೀಡಿದರು. ಈ ವರ್ಗದವರಿಗೆ ಸರ್ಕಾರಿ ಸೇವೆಯಲ್ಲಿ ಆದ್ಯತೆ ನೀಡುವಂತೆ ಅಧಿಕಾರಿಗಳಿಗೆ ತಾಕೀತು ನೀಡಲಾಯಿತು, ರಿಯಾಯಾತಿ ಬಗ್ಗೆ ಬ್ರಾಹ್ಮಣೇತರರ ಬೇಡಿಕೆ ಮುಂದುವರಿದಾಗ ಮಹಾರಾಜರು ಸಮಿತಿಯೊಂದನ್ನು ನೇಮಿಸುವ ತೀರ್ಮಾನವನ್ನು ಕೈಗೊಂಡರು. ಈ ನೇಮಕ ಹಾಗೂ ತತ್ವವನ್ನು ವಿರೋಧಿಸಿ ವಿಶ್ವೇಶ್ವರಯ್ಯನವರು ದಿವಾನಗಿರಿಗೆ ರಾಜೀನಾಮೆ ಸಲ್ಲಿಸಿದರು.

೧೯೧೮ರಲ್ಲಿ ಹಿಂದುಳಿದ ವರ್ಗವದರ ಪ್ರಾತಿನಿಧ್ಯದ ವಿಚಾರಣೆಗಾಗಿ ನ್ಯಾಯಧೀಶರಾಗಿದ್ದ ಲೆಸ್ಲಿ ಮಿಲ್ಲರ್‌ನ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ನೇಮಿಸಲಾಯಿತು. ಮೈಸೂರು ಅಧಿಕಾರವು ಸಾಮಾಜಿಕ ಬೆಳವಣಿಗೆಗೆ ಅನುಕೂಲಕರವಾಗಿ ಸ್ಪಂದಿಸಿತು ಎಂಬುದು

ಉಲ್ಲೇಖಾರ್ಹ ಸಂಗತಿ. ಇದರ ಪರಿಣಾಮವಾಗಿ ವಿಶ್ವೇಶ್ವರಯ್ಯನವರ ನಂತರ ಕಾಂತರಾಜ ಅರಸರನ್ನು ದಿವಾನ ಹುದ್ದೆಗೆ ನೇಮಕ ಮಾಡಲಾಯಿತು. ಇದರೇ ಪ್ರಥಮ ಬ್ರಾಹ್ಮಣೇತರ ದಿವಾನರು. ಈ ನೇಮಕವು ಅಲ್ಪಸಂಖ್ಯಾತರ ಸಾರ್ವಭೌಮತ್ವವನ್ನು ಎದುರಿಸಿ, ಬಹುಸಂಖ್ಯಾತ ಬ್ರಾಹ್ಮಣೇತರರು ಸ್ಪರ್ಧಿಸಲು ಅನುವು ಮಾಡಿಕೊಟ್ಟಿತಲ್ಲದೆ, ಮೈಸೂರಿನ ರಾಜಕೀಯ ಕ್ಷಿತಿಜದಲ್ಲಿ ಹೊಸ ಆಯಾಮಕ್ಕೆ ಅವಕಾಶ ಕಲ್ಪಿಸಿತು. ಮೈಸೂರು ಸಂಸ್ಥಾನದ ಆಡಳಿತಗಾರರಲ್ಲಿ ಹಿಂದುಳಿದ ಹಾಗೂ ದಲಿತ ವರ್ಗಗಳ ಬಗ್ಗೆ ಕಾಳಜಿಯುಳ್ಳ ಕಾಂತರಾಜರು ಅಧಿಕಾರಶಾಹಿಗಳನ್ನು ವಿರೋಧಿಸಿ, ಹಿಂದುಳಿದ ವರ್ಗಗಳ ಏಳಿಗೆಗಾಗಿ ಕೆಲವು ಯೋಜನೆಗಳನ್ನು ಹಾಕಿಕೊಂಡು ಯಶಸ್ವಿಯಾಗಿ ಜಾರಿಗೆ ತಂದವರಲ್ಲಿ ಮೊದಲಿಗರು. ಮೈಸೂರು ಸಂಸ್ಥಾನದಲ್ಲಿ ಬೆಂಬಲಿಸಿ, ಬೆಳಸಿದವರು. ಇದು ಹಿಂದುಳಿದ ವರ್ಗಗಳ ಯಶಸ್ಸಿನ ಹೆಜ್ಜೆಗುರುತುಗಳನ್ನು ಮೂಡಿಸಿದ ಪರ್ವಕಾಲ.

ಸರದಾರ್ ಎಂ. ಕಾಂತರಾಜ ಅರಸರು ಮಹಾರಾಣಿ ರೀಜೆಂಟರ ತಮ್ಮಂದಿರು. ಹೀಗಾಗಿ ಅವರಿಗೆ ಅರಮನೆ ರಾಜಕೀಯದ ಬಗ್ಗೆ ಅರಿವಿತ್ತು. ವಿವಿಧ ಕ್ಷೇತ್ರಗಳಲ್ಲಿ ಅನುಭವ, ಆಡಳಿತ ಸೂತ್ರದ ಜಾಣ್ಮೆಯನ್ನು ಪಡೆದಿದ್ದ ಕಾಂತರಾಜ ಅರಸರು ದಿವಾನರಾಗಿ ಅಧಿಕಾರ ವಹಿಸಿಕೊಂಡಾಗ ಬ್ರಾಹ್ಮಣೇತರ ಚಳವಳಿಯ ಬಿರುಸು, ಮೊದಲ ಜಾಗತಿಕಯುದ್ಧ, ಅನಾವೃಷ್ಟಿಯ ಪರಿಣಾಮವಾಗಿ ಆರ್ಥಿಕ ಸಂಕಷ್ಟ ಹೀಗೆ ಮೈಸೂರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿತ್ತು. ಈ ಎಲ್ಲವನ್ನೂ ಎದುರಿಸಿ ಬೆಳೆದವರು ಕಾಂತರಾಜ ಅರಸರೆಂಬುದು ಗಮನಾರ್ಹ ಸಂಗತಿ. ಕಾಂತರಾಜ ಅರಸರು ಬ್ರಾಹ್ಮಣೇತರ ಸಮಾವೇಶಗಳಲ್ಲಿ, ಪಾಲ್ಗೊಳ್ಳುತ್ತಿದ್ದರು ಆ ವರ್ಗಗಳ ರಾಜಕೀಯದಲ್ಲಿ ಪರೋಕ್ಷವಾಗಿ ಒಲವು ತೋರಿದ್ದ ಕಾಂತರಾಜರು ದಿವಾನರಾದ ನಂತರ ಹಿಂದುಳಿದವರ ಪ್ರಗತಿಗಾಗಿ ಕೆಲವು ಕ್ರಮಕೈಗೊಂಡರು, ಅವುಗಳಲ್ಲಿ ಪ್ರಮುಖವಾದುದು ಬ್ರಾಹ್ಮಣೇತರರ ಬೇಡಿಕೆಗಳ ಬಗ್ಗೆ ವರದಿ ಸಲ್ಲಿಸಲು ನೇಮಿಸಲಾದ ಮಿಲ್ಲರ್ ಸಮಿತಿಗೆ ಕಾಂತರಾಜರು ತೋರಿದ ಬೆಂಬಲ; ಸೇವೆಯಲ್ಲಿ ಮೀಸಲಾತಿ ಆಜ್ಞೆ ಹೊರಡಿಸಿದ್ದು.

೧೯೧೯ರಲ್ಲಿ ಮಿಲ್ಲರ್ ಸಮಿತಿಯು ಬ್ರಾಹ್ಮಣರನ್ನು ಹೊರತುಪಡಿಸಿ ಸರ್ಕಾರಿ ಸೇವೆಯಲ್ಲಿ ಸಾಕಷ್ಟು ಪ್ರಾತಿನಿಧ್ಯ ಪಡೆಯದ ಉಳಿದೆಲ್ಲ ಬ್ರಾಹ್ಮಣೇತರರನ್ನು ಹಿಂದುಳಿದ ವರ್ಗಗಳೆಂದು ವ್ಯಾಖ್ಯಾನಿಸಿತು. ಈ ವರ್ಗಗಳಿಗೆ ವಿದ್ಯೆಯ ಸವಲತ್ತು, ಸರ್ಕಾರಿ ನೇಮಕಾತಿಯ ಬಗ್ಗೆ ಶಿಫಾರಸನ್ನು ಮಾಡಿತು. ಈ ವರದಿಯ ಬಗ್ಗೆ ಅಭಿಪ್ರಾಯ ನೀಡಲು ರಾಜ್ಯದ ಕೆಲವು ಪ್ರಮುಖ ಅಧಿಕಾರಿಗಳನ್ನು ಕೋರಲಾಯಿತು. ಸಿ.ಆರ್.ರೆಡ್ಡಿ, ಕೆ.ಚಾಂಡಿ ಇಬ್ಬರು ಮಾತ್ರ ವರದಿಯ ಅನುಷ್ಠಾನಕ್ಕೆ ತಮ್ಮ ಸಂಪೂರ್ಣ ಬೆಂಬಲವನ್ನು ವ್ಯಕ್ತಪಡಿಸಿದರು. ಉಳಿದ ಬ್ರಾಹ್ಮಣ ಅಧಿಕಾರಿಗಳು ಸರ್ಕಾರಿ ಸೇವೆಯಲ್ಲಿ ಬ್ರಾಹ್ಮಣ ವರ್ಗವನ್ನು ಹೊರಗಿಟ್ಟಂತಾಗುವುದೆಂಬ ಭೀತಿಯಿಂದ ಪ್ರಬಲ ವಿರೋಧ ವ್ಯಕ್ತಪಡಿಸಿದರು. ರಾಜ್ಯ ಪ್ರಜಾಪ್ರತಿನಿಧಿ ಸಭೆಯಲ್ಲಿ ಚರ್ಚೆಗೆ ಬಂದಾಗ ೩೫ ಬ್ರಾಹ್ಮಣ ಸದಸ್ಯರು ಸಭೆಯನ್ನು ಬಹಿಷ್ಕರಿಸಿದರು. ಮಿಲ್ಲರ್ ಸಮಿತಿ ೧೯೧೯ರಲ್ಲಿಯೇ ವರದಿ ಸಲ್ಲಿಸಿದ್ದರೂ, ವಿರೋಧಿಗಳಿಂದಾಗಿ ಅನುಷ್ಠಾನಕ್ಕೆ ಬರಲು ವಿಳಂಬವಾಯಿತು. ಆದರೆ ಇಷ್ಟೆಲ್ಲ ಪ್ರಬಲ ವಿರೋಧಗಳಿದ್ದರೂ ಅದನ್ನು ಲೆಕ್ಕಿಸದೆ ವರದಿಯನ್ನು ಅನುಷ್ಠಾನಕ್ಕೆ ತರುವ ಎದೆಗಾರಿಕೆಯನ್ನು ತೋರಿದವರು ಕಾಂತರಾಜರು; ಅಷ್ಟೇ ಅಲ್ಲದೆ ಅದರಂತೆ ಎಲ್ಲ ವರ್ಗದವರಿಗೆ ಪ್ರಾತಿನಿಧ್ಯ ನೀಡಿ, ವಾರ್ಷಿಕ ನೇಮಕಾತಿ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸಬೇಕೆಂದು ಸೂಚನೆ ನೀಡಿದರು. ಹೀಗಾಗಿ ಅವರ ದಿವಾನಗಿರಿಯ ಮೊದಲ ವರ್ಷದಲ್ಲಿ ೧೨೬೬ ನೇಮಕಾತಿಗಳಲ್ಲಿ ೫೧೪ ಸ್ಥಾನಗಳನ್ನು ಬ್ರಾಹ್ಮಣೇತರರು ಪಡೆದರು. ಅಲ್ಲದೆ, ಮಿಲ್ಲರ್ ಸಮಿತಿಯ ವರದಿಯ ಮೇರೆಗೆ ಸರ್ಕಾರಿ ಆಜ್ಞೆಯನ್ನು ಹೊರಡಿಸಿದರು. ಈ ವರದಿಯು ''ವರದಿ ಕಾರ್ಯಾನುಷ್ಠಾನಕ್ಕೆ ಬಂದ ಏಳು ವರ್ಷಗಳಲ್ಲಿ ಎಲ್ಲ ಸರ್ಕಾರಿ ಇಲಾಖೆಗಳಲ್ಲಿ ಬ್ರಾಹ್ಮಣೇತರರ ಸಂಖ್ಯೆ ಶೇ. ೫೦ ರಷ್ಟಾದರೂ ಆಗಬೇಕೆಂದು, ಅರ್ಹ ಅಭ್ಯರ್ಥಿಗಳು ಇದ್ದರೆ ಎಲ್ಲ ಜಾಗಗಳಿಗೂ ಈ ವರ್ಗದವರನ್ನೇ ನೇಮಿಸಬೇಕೆಂದು, ನಿಮ್ನ ವರ್ಗಗಳಿಗೆ ಎಲ್ಲರಿಗೂ ಆದ್ಯತೆ ನೀಡಬೇಕೆಂದು ವಿಧಿಸಿದ್ದಲ್ಲದೆ, ಶಾಲಾ ಕಾಲೇಜುಗಳಲ್ಲಿ ಸಹಾಯಧನ, ಫೀ ರಿಯಾಯಿತಿಯನ್ನು, ಪ್ರಾಥಮಿಕ ವಿದ್ಯಾಭ್ಯಾಸದ ವಿಸ್ತರಣೆಯನ್ನು ಹೆಚ್ಚು ಮಾಡಬೇಕೆಂದು ವಿಧಿಸಿತು''.

ಸಾಮಾಜಿಕ, ಆರ್ಥಿಕ ತುಳಿತಕ್ಕೊಳಪಟ್ಟ ವರ್ಗಗಳಿಗೆ ಅವಕಾಶವನ್ನು, ಪ್ರೋತ್ಸಾಹವನ್ನು ಒದಗಿಸಿಕೊಟ್ಟವರಲ್ಲಿ ಕಾಂತರಾಜರು ಮೊದಲಿಗರಾದರೆ, ಮೈಸೂರು - ವಿದ್ಯಾಭ್ಯಾಸಕ್ಕೆ ಹೆಚ್ಚು ಹಿಂದುಳಿದವರನ್ನು ಆಕರ್ಷಿಸಲು ಮಾಧ್ಯಮಿಕ ಹಂತದವರೆಗೆ ಶಿಕ್ಷಣ ಶುಲ್ಕವನ್ನು ಮನ್ನಾ ಮಾಡಿತು. ಸಂಪ್ರದಾಯಸ್ಥರ ವಿರೋಧವನ್ನು ಲೆಕ್ಕಿಸದೆ ಅಸ್ಪೃಶ್ಯರಿಗೆ ಎಲ್ಲ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ ಪ್ರವೇಶದ ಹಕ್ಕು ನೀಡುವ ಸುಧಾರಣೆಯನ್ನು ತಂದದ್ದು ಬಹುಶಃ ಭಾರತದಲ್ಲೇ ಮೈಸೂರು ಪ್ರಥಮವೆಂಬುದು ಗಮನಾರ್ಹ ಸಂಗತಿ.

ಕಾಂತರಾಜ ಅರಸರ ಕಾಲದಲ್ಲಿ ಸಂವಿಧಾನ ಸುಧಾರಣೆಯನ್ನು ಮಾಡಲಾಯಿತು. ಇದರಲ್ಲಿ ಜನಸಂಖ್ಯೆ, ಮತದಾರರ ಸಂಖ್ಯೆಯನ್ನಾಧರಿಸಿ ಕ್ಷೇತ್ರಗಳ ಪುನರ್ವಿಂಗಡಣೆ, ಮತದಾನದ ಹಕ್ಕು ಪಡೆಯಲು ನಿಗದಿಗೊಳಿಸಲಾದ ಅರ್ಹತೆಯಲ್ಲಿ ರಿಯಾಯಿತಿ

ಹಾಗೂ ನ್ಯಾಯ ವಿಧಾಯಕ ಸಭೆಯ ಪುನಾರಚನೆ ಪ್ರಮುಖವಾದುದು. ೧೦೦ ರೂ. ಭೂಕಂದಾಯ ತೆರುವ ಮತ್ತು ೨೦ ರೂ.ಗಳಿಗೂ ಹೆಚ್ಚು ಪುರಸಭಾ ತೆರಿಗೆ ಸಲ್ಲಿಸುವವರಿಗೆ ಮೀಸಲಿದ್ದ ಮತದಾನದ ಹಕ್ಕು ನಿಯಮವನ್ನು ಸಡಿಲಗೊಳಿಸಿ ಈ ತೆರಿಗೆಗಳಲ್ಲಿ ಶೇಕಡಾ ೫೦ರಷ್ಟು ಸಲ್ಲಿಸುವವರಿಗೆ ಮತದಾನದ ಹಕ್ಕನ್ನು ನೀಡಲಾಯಿತು. ಮುಖ್ಯವಾಗಿ ಜಾತಿ ಸಂಘಟನೆಗಳಿಗೆ ಪ್ರತಿನಿಧಿ ಸಭೆಯಲ್ಲಿ ಪ್ರಾತಿನಿಧ್ಯ ನೀಡಿ ೨೫ ಸದಸ್ಯ ಸ್ಥಾನಗಳನ್ನು ಮೀಸಲಿಡಲಾಯಿತು. ನ್ಯಾಯವಿಧಾಯಕ ಸಭೆಯ ಸದಸ್ಯ ಬಲವನ್ನು ೨೧ ರಿಂದ ೩೦ಕ್ಕೇರಿಸಲಾಯಿತು. ಇದರಲ್ಲಿ ೧೮ ಜನ ಅಧಿಕಾರೇತರರು ಇರಬೇಕೆಂದು ಪ್ರಜಾಪ್ರಭುತ್ವದ ಬೆಳವಣಿಗೆಗೆ ಇಂಬು ನೀಡಲಾಯಿತು. ಕಾಂತರಾಜರು ಜಾರಿಗೊಳಿಸಿದ ಸುಧಾರಣೆಗಳು ಹಿಂದುಳಿದ ವರ್ಗದವರಿಗೆ ವಿದ್ಯಾಭ್ಯಾಸ; ಸರ್ಕಾರಿ ಸೇವೆಗಳಲ್ಲಿ ವಿಶೇಷ ಪ್ರಾತಿನಿಧ್ಯ ಮುಖ್ಯವಾದವು. ಪ್ರಜಾಮಿತ್ರ ಮಂಡಲಿಯ ಕೂಗಿಗೆ ಚಾಲನೆ ನೀಡಿದವರು ಕಾಂತರಾಜ ಅರಸರು; ಇದು ಹಿಂದುಳಿದ ಚಳವಳಿಗೆ ಯಶಸ್ಸಿನ ಹೆಜ್ಜೆಗುರುತುಗಳನ್ನು ಮೂಡಿಸಿದ ಕಾಲ. ಈ ಎಲ್ಲ ಕಾರಣಗಳಿಂದಾಗಿ ಹಿಂದುಳಿದ ವರ್ಗಗಳಲ್ಲಿ ಅಕ್ಷರಜ್ಞಾನ ಕ್ರಮೇಣ ಹೆಚ್ಚುತ್ತಾ ಹೋಯಿತು. ೧೯೨೧ರಲ್ಲಿ ೨೭.೭ರಷ್ಟು ಇದ್ದಂತಹ ಸಾಕ್ಷರರ ಸಂಖ್ಯೆ ೧೯೩೧ರ ವೇಳೆಗೆ ೪೨.೩ ರಷ್ಟು ಆಯಿತು. ಹಿಂದುಳಿದ ವರ್ಗಗಳಿಗೆ ನೀಡಿದ ಸ್ಕಾಲರ್‌ಷಿಪ್ ೧೯೧೮-೧೯ರಲ್ಲಿ ೬೦೨೪ ರೂಪಾಯಿಗಳಿದ್ದುದು, ೧೯೨೫-೨೬ರಲ್ಲಿ ೬೭,೧೭೦ ರೂಪಾಯಿಗಳಿಗೆ ಏರಿತು.

೧೯೧೮-೧೯ರಲ್ಲಿ ಸಿವಿಲ್ ಸರ್ವೀಸಿಗಾಗಿ ನೇಮಕಗೊಂಡ ೧೨೬೬ ಸ್ಥಳಗಳಲ್ಲಿ ೫೧೪ ಸ್ಥಳಗಳು ಹಿಂದುಳಿದ ವರ್ಗಗಳಿಗೆ ಕಾದಿರಿಸಲ್ಪಟ್ಟವು. ೧೯೨೨-೨೩ರಲ್ಲಿ ನೇಮಕವಾದ ಎಂಟು ಜನ ಅಮಲ್ದಾರರಲ್ಲಿ ಆರು ಸ್ಥಾನಗಳಲ್ಲಿ ಹಿಂದುಳಿದ ವರ್ಗದವರೇ ನೇಮಕರಾದರು. ೧೯೨೧ರ ಸಮಯಕ್ಕೆ ಕೆಳದರ್ಜೆ ಮಧ್ಯಮದರ್ಜೆ ನೇಮಕಾತಿಗಳಲ್ಲಿ ಶೇಕಡಾ ೩೦ ರಷ್ಟು ಇದ್ದುದು, ೧೯೨೬ರಲ್ಲಿ ೪೨ಕ್ಕೆ ಏರಿತು. ಮೈಸೂರು ಅರಸರು ತೆಗೆದುಕೊಂಡ ಕ್ರಮಗಳಿಂದ ಹಿಂದುಳಿದ ವರ್ಗಗಳ ಪ್ರಾತಿನಿಧ್ಯ ಹೆಚ್ಚಲು ಕಾರಣವಾಯಿತೆಂಬುದು ಐತಿಹಾಸಿಕ ಸತ್ಯ.

## ಪ್ರಜಾಪಕ್ಷ ಹಿನ್ನೆಲೆ :

೧೯೨೬ರ ವರೆಗೆ ಒಗ್ಗಟ್ಟಾಗಿ ರಾಜ್ಯದಲ್ಲಿ ಮೊದಲ ರಾಜಕೀಯ ಪಕ್ಷವನ್ನು ಹುಟ್ಟುಹಾಕಿ ಬ್ರಾಹ್ಮಣೇತರ ಹಿಂದುಳಿದ ವರ್ಗಗಳ ಚಳವಳಿಯ ಮೂಲಕ ಗಣನೀಯ ಸವಲತ್ತುಗಳನ್ನು ಪಡೆಯಿತು. 'ಪ್ರಜಾಮಿತ್ರ ಮಂಡಲಿ'. ಈ ಪಕ್ಷ ತರುವಾಯ ಭಿನ್ನಮತ ಮತ್ತು ಒಡಕುಗಳಿಂದ ಸ್ವಲ್ಪ ಶಕ್ತಿ ಗುಂದಿತು. ಇದಕ್ಕೆ ಚಳವಳಿಯಲ್ಲಿನ ಹಲವು ಬೆಳವಣಿಗೆಗಳು, ರಾಜ್ಯದ ಹೊರಗಿನ ಪರಿಸ್ಥಿತಿಯ ಪರಿಣಾಮವೆನ್ನಬಹುದು. ಮೊದಲನೆಯದಾಗಿ ಬ್ರಾಹ್ಮಣೇತರರಲ್ಲಿ ಅಸ್ಪೃಶ್ಯರನ್ನು ಒಂದು ಪಂಗಡವೆಂದು ಒಪ್ಪಿಕೊಳ್ಳದೇ ಇದ್ದುದು. ಸ್ಪೃಶ್ಯ ಬ್ರಾಹ್ಮಣೇತರರು ಲಾಭದಾಯಕ ದೃಷ್ಟಿಯಿಂದ ಒಪ್ಪಿಕೊಂಡರೂ ತಮ್ಮ ಮುಖ್ಯ ವಾಹಿನಿಯಲ್ಲಿ ಸೇರಿಸಿಕೊಳ್ಳದಿದ್ದುದು. ಮಿಲ್ಲರ್ ಸಮಿತಿಯೂ ಅಸ್ಪಶ್ಯರನ್ನು ಪ್ರತ್ಯೇಕವಾಗಿಯೇ ಪರಿಗಣಿಸಿದ್ದಿತು. ಎರಡನೆಯದಾಗಿ ಬ್ರಾಹ್ಮಣ ವರ್ಗ ಹಿಂದುಳಿದವರ ಟೀಕೆಗಳನ್ನು ಕಷ್ಟವಾದರೂ ಸಂಖ್ಯಾಬಲದ ದೃಷ್ಟಿಯಿಂದ ಅಲ್ಪಸಂಖ್ಯಾತರಾಗಿದ್ದರಿಂದ, ಸರ್ಕಾರ ಹಾಗೂ ಹಿಂದುಳಿದ ವರ್ಗದವರ ನಡುವಿನ ಐಕಮತ್ಯದಿಂದಾಗಿ ಅವಕಾಶಕ್ಕಾಗಿ ಕಾಯುತ್ತಿತ್ತು.

ಮಿರ್ಜಾರವರು ದಿವಾನರಾದ ನಂತರ ಬ್ರಾಹ್ಮಣವರ್ಗದ ಅಸಮಾಧಾನವನ್ನು ತೊಡೆಯಲು ಪ್ರಯತ್ನಿಸಿದರು. ಜಾತಿ-ವರ್ಗ ಸಂಘರ್ಷ ತಡೆಗಟ್ಟಿ, ರಾಜಶಾಹಿಯ ಅಧಿಕಾರನೆಲೆಯ ವಿಸ್ತರಣೆಗೆ ಯತ್ನಿಸಿದರು. ಬ್ರಾಹ್ಮಣ-ಬ್ರಾಹ್ಮಣೇತರರ ಸಂಘರ್ಷ ಹೆಚ್ಚಲು ಕಾರಣವಾಗಿದ್ದ ಮಿಲ್ಲರ್ ವರದಿ ಆಧಾರಿತ ಸರ್ಕಾರಿ ಆಜ್ಞೆಯ ಅನುಷ್ಠಾನದಲ್ಲಿ ಎಲ್ಲ ವರ್ಗಗಳನ್ನು ತೃಪ್ತಿಗೊಳಿಸುವಂತಹ ನೀತಿಯನ್ನು ತರಲು ಇಚ್ಛಿಸಿ ೧೯೨೧ರ ಆಜ್ಞೆಗೆ ತಿದ್ದುಪಡಿ ತಂದರು. ಈ ತಿದ್ದುಪಡಿಯಿಂದಾಗಿ ಹಲವಾರು ಸ್ಥಾನಗಳನ್ನು ವಿಶೇಷ ಅರ್ಹತೆಯುಳ್ಳವರಿಗೆ ಮೀಸಲಿಟ್ಟಂತಾಯಿತು. ಇದರಿಂದ ಸರ್ಕಾರಕ್ಕೆ ಬೆಂಬಲ ನೀಡುತ್ತಿದ್ದ ಬ್ರಾಹ್ಮಣೇತರರು ಅಸಮಾಧಾನಗೊಂಡರು. ಈ ಅಸಮಾಧಾನ ಜೂನ್ ೧೯೨೭ರ ನ್ಯಾಯವಿಧಾಯಕ ಸಭೆಯಲ್ಲಿ ದಿವಾನರನ್ನು ಖಂಡಿಸುವ ಮೂಲಕ ವ್ಯಕ್ತವಾಯಿತು. ಅಲ್ಲದೆ ನೇಮಕಾತಿ ಮಾಡುವ ಅಧಿಕಾರಿಗಳಿಗೆ, ನೇರ ನೇಮಕಾತಿ ಹಾಗೂ ಬಡ್ತಿಯ ಮೂಲಕ ತುಂಬಬೇಕಾದ ಸ್ಥಾನಗಳನ್ನು ನೀಡುವ ಅಧಿಕಾರ ನೀಡಿದ್ದು, ಹಿಂದುಳಿದ ವರ್ಗಗಳ ನಾಯಕರನ್ನು ಕೆರಳಿಸಿತು.

ಬ್ರಾಹ್ಮಣೇತರರಿಗೆ ನಿರಾಶೆಯನ್ನು ತಂದೊಡ್ಡಿದ ಈ ಆಜ್ಞೆ ಇಪ್ಪತ್ತರ ದಶಕದಲ್ಲಿ ಚಳವಳಿಯನ್ನು ಸೇರಿ ಸವಲತ್ತು ಪಡೆಯಲು ತವಕಿಸುತ್ತಿದ್ದ ಒಕ್ಕಲಿಗ, ಕುರುಬ ಕೋಮುಗಳವರಿಗೂ ಹೆಚ್ಚಿನ ಆಘಾತವನ್ನುಂಟುಮಾಡಿತು. ೧೯೨೬ರ ವರೆಗೆ ಹೆಚ್ಚಿನ ಅರ್ಹತೆಯನ್ನು ಪಡೆದ ಮುಸ್ಲಿಮರು ಮತ್ತು ಲಿಂಗಾಯಿತರು ಸರ್ಕಾರಿ ಸವಲತ್ತಿನಿಂದ ಹೆಚ್ಚು ಅನುಕೂಲ ಪಡೆದರು. ಆದರೆ ಬಹುಸಂಖ್ಯಾತ ಇತರ ಬ್ರಾಹ್ಮಣೇತರ ಕೋಮುಗಳು ಅರ್ಹತೆ ಸಂಪಾದಿಸಿಕೊಂಡು, ಸವಲತ್ತುಗಳನ್ನು ಪಡೆಯುವ ಸ್ಥಿತಿಗೆ ಬಂದಾಗ ಸರ್ಕಾರ ಮಿಲ್ಲರ್ ವರದಿ

ಆಧಾರಿತ ಆಜ್ಞೆಗೆ ತಿದ್ದುಪಡಿ ತಂದಿದ್ದು ದೊಡ್ಡ ಆಘಾತವಾಯಿತು. ಎಲ್ಲ ಬ್ರಾಹ್ಮಣೇತರರನ್ನು ಒಂದೇ ವರ್ಗಕ್ಕೆ ಸೇರಿಸಿದ್ದುದು ತಪ್ಪು ಎನ್ನುವ ಅಭಿಪ್ರಾಯ ಅನೇಕರಲ್ಲಿ ಬೆಳೆಯಲಾರಂಭಿಸಿತು.

ಮುಸ್ಲಿಮರ ಸಂಖ್ಯೆ ದಿನದಿಂದ ದಿನಕ್ಕೆ ಸರ್ಕಾರಿ ಸೇವೆಯಲ್ಲಿ ಅಧಿಕವಾಗುತ್ತಿದ್ದುದರಿಂದ, ಹಿಂದುಳಿದವರ ಮುಸ್ಲಿಂ ನಾಯಕ ಅಬ್ಬಾಸ್‌ಖಾನರು, ತಮ್ಮ ಕೋಮಿನ ದಿವಾನರೊಂದಿಗೆ ಸೇರಿ ತಮ್ಮ ಜನರಿಗೆ ಅನುಕೂಲ ಮಾಡಿಕೊಡುತ್ತಿದ್ದಾರೆಂಬ ಗುಮಾನಿ ಹಿಂದೂ ಬ್ರಾಹ್ಮಣೇತರರಲ್ಲಿ ಹೊಗೆಯಾಡತೊಡಗಿತು. ೧೯೨೬ರ ವರೆಗೆ ಸರ್ಕಾರದ ಬಗೆಗೆ ನಿಷ್ಠುರವಾಗಿದ್ದ ಅಬ್ಬಾಸ್‌ಖಾನರು ವಿರೋಧವನ್ನು ಬಿಟ್ಟು ಸಹಕಾರ ನೀಡುತ್ತಿದ್ದುದು ಇದಕ್ಕೆ ಇಂಬು ನೀಡಿತು. ನೇಮಕಾತಿ ತಿದ್ದುಪಡಿಯನ್ನು ಇತರರು ವಿರೋಧಿಸಿದಾಗ ಅಬ್ಬಾಸರು ಈ ಬಗ್ಗೆ ಅಷ್ಟಾಗಿ ಆಸಕ್ತಿ ತೋರಲಿಲ್ಲ. ಈ ವಿದ್ಯಮಾನಗಳಿಂದ ಚಳವಳಿಯಲ್ಲಿ ಭಿನ್ನಾಭಿಪ್ರಾಯ ತಲೆದೋರಿತು. ಈ ಅಸಮಾಧಾನ ಬೆಳೆದು, ಸ್ಫೋಟಗೊಳ್ಳಲು ಅವಕಾಶಕ್ಕೆ ಕಾಯುತ್ತಿತ್ತು. ಸರ್ಕಾರವನ್ನು ವಿರೋಧಿಸುತ್ತಿದ್ದ ಶಕ್ತಿಗಳು ರಾಜಕೀಯ ಬಂಡವಾಳವನ್ನಾಗಿಸಿ ಸಣ್ಣ ಘಟನೆಯನ್ನು ಒಂದು ದೊಡ್ಡ ಕೋಮು ಗಲಭೆಯಾಗಿ ಬೆಳೆಸಲು ಪ್ರೇರಣೆಯಾಯಿತು. ಈ ಗಲಭೆಯೇ ೧೯೨೮ರ ಸುಲ್ತಾನಪೇಟೆಯ ಗಣಪತಿ ಗಲಭೆ. ಈ ಗಲಭೆ ಮಿರ್ಜಾ ಸರ್ಕಾರವನ್ನು ಅಲುಗಾಡಿಸಿದ್ದಲ್ಲದೆ, ಅಬ್ಬಾಸ್‌ಖಾನರ ನಾಯಕತ್ವವನ್ನು ಮುರಿದು, ಬ್ರಾಹ್ಮಣೇತರರ ಚಳವಳಿಯನ್ನು ಒಡೆಯಿತು. ಗಲಭೆಯ ಕಾರಣದಿಂದಾಗಿ ಹಿಂದುಳಿದ ವರ್ಗಗಳ ಚಳವಳಿ ಇಬ್ಭಾಗವಾಗಿ ಸರ್ಕಾರ ಮತ್ತು ಹಿಂದುಳಿದ ವರ್ಗಗಳ ನಡುವೆ ದೊಡ್ಡ ಕಂದಕವನ್ನೇರ್ಪಡಿಸಿತು ಹಾಗೂ ಪ್ರಜಾಮಿತ್ರ ಮಂಡಲಿ ಒಡೆಯಲು ಕಾರಣವಾಯಿತು. ಇದಕ್ಕೆ ಅತೃಪ್ತ ಬ್ರಾಹ್ಮಣ ರಾಜಕಾರಣಿಗಳ ಪಾತ್ರ, ಮಿಲ್ಲರ್ ಸಮಿತಿ ಆಧಾರಿತ ಸರ್ಕಾರಿ ಆಜ್ಞೆಯ ತಿದ್ದುಪಡಿಯು ಕಾರಣವೆಂಬ ವರದಿಗಳಿವೆ.

ಒಟ್ಟಾರೆ, ಅತೃಪ್ತ ಬ್ರಾಹ್ಮಣ ರಾಜಕಾರಣಿಗಳು ಹಿಂದುಳಿದ ವರ್ಗಗಳಲ್ಲಿ ಒಡಕು ಉಂಟುಮಾಡುವುದರಲ್ಲಿ ಯಶಸ್ವಿಯಾದದ್ದು, ರಾಜ್ಯದ ಮುಂದಿನ ಬೆಳವಣಿಗೆಯಲ್ಲಿ ಗುರುತರ ಪರಿಣಾಮವನ್ನು ಬೀರಿತಲ್ಲದೆ ನಂತರದ ಮೈಸೂರು ರಾಜಕೀಯ ಸಂಪೂರ್ಣ ಬೇರೊಂದು ತಿರುವನ್ನು ಪಡೆಯಿತು. ಸುಲ್ತಾನಪೇಟೆಯ ಗಲಭೆಯಿಂದ, ಹಿಂದೂ ಜನರಲ್ಲಿ ಒಗ್ಗಟ್ಟನ್ನುಂಟುಮಾಡಿ ಹಿಂದೂ ಮತ ಹಾಗೂ ಸಮಾಜಕ್ಕೆ ಒದಗಬಹುದಾದ ಆತಂಕ ನಿವಾರಣಾ ಉದ್ದೇಶದಿಂದ ಹಿಂದೂ ಮಹಾಸಭೆ ಸ್ಥಾಪನೆ, ಸಾರ್ವತ್ರಿಕ ರಾಷ್ಟ್ರೀಯ ಜಾಗೃತಿಯಿಂದ ರಾಷ್ಟ್ರೀಯ ಚಳವಳಿಯ ಬಗ್ಗೆ ಒಲವು ಹೊಂದಿದ್ದ ಯುವ ನಾಯಕತ್ವದ ಉಗಮ ಈ ಐತಿಹಾಸಿಕ ಘಟನೆಗಳಿಗೆ ನಾಂದಿ ಹಾಡಿತು. ಜಾತಿ, ಕೋಮು, ಮತ, ಕಸುಬು ಯಾವುದೇ ಇರಲಿ ಜವಾಬ್ದಾರಿ ಸರ್ಕಾರದ ಅಗತ್ಯತೆಯು ಜನಸಾಮಾನ್ಯರ ಮನಸ್ಸಿನಲ್ಲಿ ನೆಲೆಯೂರಿತು. ಆದರೆ ಮೈಸೂರು ಕಾಂಗ್ರೆಸ್ ತಮ್ಮ ಆಸಕ್ತಿಗೆ ವಿರೋಧವಾಗಿದ್ದ ಬ್ರಾಹ್ಮಣ ವರ್ಗದ ಅಧೀನದಲ್ಲಿದ್ದುದರಿಂದ ಈ ಗುಂಪು ಕಾಂಗ್ರೆಸ್ಸನ್ನು ಸೇರದೆ, ಬ್ರಾಹ್ಮಣೇತರ ಪಕ್ಷದಲ್ಲಿಯೇ ಪ್ರಭಾವಶಾಲಿ ಗುಂಪಾಗಿ ಕೆಲಸ ಮಾಡಿತು.

## ಪ್ರಜಾಪಕ್ಷ ಹಾಗೂ ಪ್ರಜಾಸಂಯುಕ್ತ ಪಕ್ಷ ಉಗಮ

ಕೆಲವು ಹಿಂದುಳಿದ ಕೋಮುಗಳು ತಮ್ಮ ಜನಸಂಖ್ಯೆಯ ಆಧಾರದ ಮೇಲೆ ಸವಲತ್ತುಗಳಿಗಾಗಿ ಒತ್ತಾಯ ತರಲೆತ್ನಿಸಿದವು. ೧೯೨೬ರ ನಂತರ ವಿವಿಧ ಕೋಮುಗಳಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿದ್ದರೂ, ಸಮಾನ ಆಸಕ್ತಿಯಿದ್ದಾಗ ಒಂದಾಗುತ್ತಿದ್ದವು. ೧೯೨೯ರಲ್ಲಿ ೩೬ ಗೆಜೆಟೆಡ್ ಅಧಿಕಾರಿಗಳು ಹಾಗೂ ೨೫೩೭ ನಾನ್‌ಗೆಜೆಟೆಡ್ ಅಧಿಕಾರಿಗಳ ನಿವೃತ್ತಿ ಅವಧಿಯ ವಿಸ್ತರಣೆಯನ್ನು ಏಕಕಂಠದಿಂದ ವಿರೋಧಿಸಿದವು. ಇದರಿಂದ ಬ್ರಾಹ್ಮಣರಿಗೆ ಅನುಕೂಲವಾಗಿ ಹಿಂದುಳಿದ ಅಭ್ಯರ್ಥಿಗಳಿಗೆ ಸೇವಾವಕಾಶ ದೊರಕದೆಂಬ ಭಯವಿತ್ತು. ರಾಜಕೀಯದಲ್ಲಿ ನಂಬಿಕೆ ಕಳೆದುಕೊಳ್ಳುತ್ತಿದ್ದ ಯುವನಾಯಕರು ಸರ್ಕಾರವನ್ನು ಟೀಕಿಸಲು ತೊಡಗಿದರು. ಅವು ಸರ್ಕಾರದೊಡನೆ ತಮ್ಮ ಕುಂದುಕೊರತೆಗಳ ಬಗ್ಗೆ ಸಮರ್ಥವಾಗಿ ವ್ಯವಹರಿಸಲು ಅಶಕ್ತವಾಗಿದೆಯೆಂಬ, ಜವಾಬ್ದಾರಿ ಸರ್ಕಾರದ ಬೇಡಿಕೆಗೆ ಅನುಕೂಲಕರವಾಗಿರಲಿಲ್ಲವೆಂಬ ಕಾರಣದಿಂದ ೧೯೩೦ರಲ್ಲಿ ಪ್ರಜಾಮಿತ್ರ ಮಂಡಲಿ ಒಡೆದು ಕೆ. ಸಿ. ರೆಡ್ಡಿ ಹಾಗೂ ವಿ. ವೆಂಕಟಪ್ಪ ಅವರ ನಾಯಕತ್ವದಲ್ಲಿ 'ಪ್ರಜಾಪಕ್ಷ'ವೆಂಬ ಹೊಸಪಕ್ಷ ಸ್ಥಾಪನೆಗೊಂಡು, ಜವಾಬ್ದಾರಿ ಸರ್ಕಾರದ ಹೋರಾಟಕ್ಕೆ ಅಣಿಯಾಯಿತು. ಇದು ತನ್ನನ್ನು ಭದ್ರಪಡಿಸಿಕೊಳ್ಳಬೇಕೆಂಬುದನ್ನು ಅರಿತು ರೈತರ ಸಂಘಟನೆಯನ್ನು ಪ್ರಾರಂಭಿಸಿತು. ೧೯೩೪ರಲ್ಲಿ ಹಿಂದುಳಿದ ವರ್ಗಗಳ ಚಳವಳಿಯ ಎರಡು ಗುಂಪುಗಳಾದ ಪ್ರಜಾಮಿತ್ರಮಂಡಲಿ ಮತ್ತು ಪ್ರಜಾಪಕ್ಷ ಸ್ಥಿತ್ಯಂತರಗೊಂಡ ರಾಜಕೀಯ ಬೆಳವಣಿಗೆಯಲ್ಲಿ ಒಗ್ಗಟ್ಟಿನ ಅನಿವಾರ್ಯತೆಯನ್ನು ಅರಿತು 'ಪ್ರಜಾ ಸಂಯುಕ್ತ ಪಕ್ಷ' ಎಂಬ ಹೊಸ ಪಕ್ಷವಾಗಿ ವಿಲೀನಗೊಂಡವು. ಆದರೆ ಈ ಪಕ್ಷವು ಕಾಂಗ್ರೆಸ್ಸಿನಿಂದ ದೂರ ಉಳಿದು ಕಾಂಗ್ರೆಸ್ ರಾಷ್ಟ್ರೀಯ ಸಂಸ್ಥೆಯು ಬ್ರಾಹ್ಮಣರ ಪಕ್ಷವಾಗಿದೆ ಎಂದು ಹೇಳುತ್ತಿತ್ತು. ಈ ಪಕ್ಷವು ರೈತ ಸಂಘಟನೆಯನ್ನು ಮುಂದುವರಿಸಿ, ರಾಜ್ಯದೆಲ್ಲೆಡೆ ರೈತ ಸಮಾವೇಶ ವ್ಯವಸ್ಥೆ ಮಾಡುವ ಮೂಲಕ, ಆಡಳಿತ ವಿರೋಧವನ್ನು ಅಷ್ಟಾಗಿ ಇಚ್ಛಿಸದ ನಾಯಕರನ್ನು ಕೆರಳಿಸಿತು. ಮಹಾರಾಜರಲ್ಲಿ ದಿವಾನರನ್ನು ವಜಾ ಮಾಡುವಂತೆ ಒತ್ತಾಯಿಸಿತು.

ರೈತರ ವಿಷಯದಲ್ಲಿ ಸರ್ಕಾರ ತೋರಿದ ಧೋರಣೆಯನ್ನು ವಿರೋಧಿಸಿ, ಮಂಡ್ಯ ಜಿಲ್ಲೆಯಿಂದ ಕಾಲ್ನಡಿಗೆಯಲ್ಲಿ ಬಂದ ರೈತರು ತಮ್ಮ ಕುಂದುಕೊರತೆಯನ್ನು ಮನವಿ ಮಾಡಿಕೊಂಡರು. ಹೆಚ್. ಕೆ. ವೀರಣ್ಣಗೌಡರು ಅವರ ಮುಖಂಡತ್ವವನ್ನು ವಹಿಸಿದ್ದರು. ಸುಲ್ತಾನ ಪೇಟೆಯ ಉತ್ಸವದ ಗಲಭೆಯ ವಿಚಾರಣೆಗೆ ನೇಮಕಗೊಂಡ ವಿಶ್ವೇಶ್ವರಯ್ಯ ಸಮಿತಿ ವರದಿಯು ಆಡಳಿತದಲ್ಲಿ ಪ್ರಜೆಗಳಿಗೆ ಹೆಚ್ಚಿನ ಜವಾಬ್ದಾರಿ ಇರಬೇಕೆಂದು ಜವಾಬ್ದಾರಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿತು.

ಈ ರೀತಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ನಡೆದ ಅಖಿಲ ಭಾರತ ಸ್ವಾತಂತ್ರ್ಯ ಆಂದೋಲನದಲ್ಲಿ ಕೇವಲ ಮೈಸೂರು ಸ್ಟೇಟ್ ಕಾಂಗ್ರೆಸ್ ಸಂಸ್ಥೆಯಷ್ಟೇ ಪಾಲ್ಗೊಳ್ಳದೆ, ಅದರ ಜೊತೆಗೆ ಪ್ರಜಾಮಿತ್ರಮಂಡಲಿ ಮತ್ತು ಪ್ರಜಾಪಕ್ಷಗಳು ಒಂದುಗೂಡಿ ಆದ ಪ್ರಜಾಸಂಯುಕ್ತ ಪಕ್ಷವೂ ಕೂಡ ಪಾಲ್ಗೊಂಡು ಜವಾಬ್ದಾರಿ ಸರ್ಕಾರ ರಚನೆಗೆ ಹೋರಾಟ ನಡೆಸಿತು. ಆದ್ದರಿಂದ ಸೈದ್ಧಾಂತಿಕವಾಗಿ ಈ ಎರಡೂ ಪಕ್ಷಗಳ ಹಾಗೂ ಮೈಸೂರು ಸ್ಟೇಟ್ ಕಾಂಗ್ರೆಸ್ ಸಂಸ್ಥೆಯ ಸದಸ್ಯರುಗಳು ಪ್ರೊಗ್ರೆಸಿವ್ ಪಾರ್ಟಿ ಎಂಬ ಹೆಸರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಉದ್ದೇಶಕ್ಕಾಗಿ ಹತ್ತಿರವಾಗತೊಡಗಿದರು.

ಪ್ರಜಾಸಂಯುಕ್ತ ಪಕ್ಷವೂ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಡುವುದೇ ತನ್ನ ಪ್ರಮುಖ ಗುರಿಯೆಂದಿತು. ಈ ರೀತಿಯಲ್ಲಿ ಅಖಿಲ ಭಾರತ ಸ್ವಾತಂತ್ರ್ಯ ಆಂದೋಳನದಲ್ಲಿ ಮೈಸೂರು ಪಾಲ್ಗೊಂಡರೂ ಕಾಂಗ್ರೆಸ್ ಸಂಸ್ಥೆಯೊಂದೇ ಸಂಸ್ಥೆಯಾಗಿರದೆ ಪ್ರಜಾಮಿತ್ರ ಮಂಡಲಿ ಮುತ್ತು ಪ್ರಜಾಪಕ್ಷಗಳು ಒಂದುಗೂಡಿ ಆದ ಪ್ರಜಾಸಂಯುಕ್ತ ಪಕ್ಷವೂ ಜವಾಬ್ದಾರಿ ಸರ್ಕಾರಕ್ಕಾಗಿ ಕೋರಿಕೆ ಸಲ್ಲಿಸುತ್ತಿತ್ತು. ಹೀಗೆ ಎರಡೂ ಪಕ್ಷಗಳ ಧ್ಯೇಯ ಒಂದೇ ಆಗಿದ್ದುದರಿಂದ ಸೈದ್ಧಾಂತಿಕವಾಗಿ ಮತ್ತೊಂದು ಗುರಿಯೆಂದರೆ ದಿವಾನರ ನಿರಂಕುಶ ಆಡಳಿತವನ್ನು ಎದುರಿಸುವುದು. ಹೀಗೆ ಕರ್ನಾಟಕದ ಏಕೀಕರಣವನ್ನು ಪ್ರಮುಖ ಧ್ಯೇಯವಾಗಿಸಿಕೊಂಡ ರಾಜಕೀಯ ಧುರೀಣರು ಮೈಸೂರು ಸಂಸ್ಥಾನದಲ್ಲಿ ಜಾಗೃತರಾದರು.

ಈ ವೇಳೆಗೆ ತಾಟಸ್ಥ್ಯ ತಳೆದಿದ್ದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ತನ್ನ ಶಾಖೆಗಳನ್ನು ರಾಜ್ಯದಲ್ಲಿ ಸ್ಥಾಪಿಸಬೇಕೆಂದು, ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಹೋರಾಡಬೇಕೆಂದು ನಿರ್ಣಯಿಸಿತು. ಈ ಹಂತದಲ್ಲಿ ಗಾಂಧೀಜಿ ಮತ್ತಿತರ ರಾಷ್ಟ್ರನಾಯಕರ ಮೈಸೂರಿನ ಭೇಟಿ ಸಂಸ್ಥಾನದಲ್ಲಿ ಕಾಂಗ್ರೆಸ್ಸನ್ನು ಜನಪ್ರಿಯಗೊಳಿಸತೊಡಗಿತು. ಪ್ರಜಾಪ್ರತಿನಿಧಿ ಸಭೆ, ನ್ಯಾಯ ವಿಧಾಯಕ ಸಭೆಗಳಲ್ಲಿ ಪ್ರಜಾಪ್ರತಿನಿಧಿಗಳು ತಮ್ಮ ಕುಂದುಕೊರತೆಗಳನ್ನು ಸರ್ಕಾರಕ್ಕೆ ತಿಳಿಸುವ ಅವಕಾಶವಿದ್ದಿತಾದರೂ ಸಂಸ್ಥಾನದ ಆಡಳಿತದಲ್ಲಿ ಜನಪ್ರತಿನಿಧಿಗಳ ಅಗತ್ಯವಿದೆಯೆಂಬುದು ರಾಜಕೀಯ ಮುಖಂಡರ ಧ್ಯೇಯವಾಗಿತ್ತು. ಈ ರಾಜಕೀಯ ಸ್ಥಿತ್ಯಂತರಗಳು ಬ್ರಾಹ್ಮಣೇತರ ನಾಯಕರ ರಾಜಕೀಯ ಭವಿಷ್ಯದ ಸುರಕ್ಷತೆ, ಒಂದೇ ಧ್ಯೇಯ ಸಾಧನೆಯ ಹೋರಾಟವು ಕಾಂಗ್ರೆಸ್ಸನ್ನು ಬೆಂಬಲಿಸುವುದರಿಂದ ಮಾತ್ರ ಸಾಧ್ಯವೆಂಬುದನ್ನು ಇತರ ಪಕ್ಷಗಳು ಮನಗಂಡವು. ೧೯೩೫ರ ನೂತನ ರಾಜ್ಯಘಟನೆಯನ್ವಯ ಕಾಂಗ್ರೆಸ್ ಬ್ರಿಟಿಷ್ ಪ್ರಾಂತಗಳಲ್ಲಿ ಚುನಾವಣೆಗೆ ಸ್ಪರ್ಧಿಸಿ, ಜಯಗಳಿಸಿ ಸರ್ಕಾರ ಸ್ಥಾಪಿಸಿತು. ಅದೇ ಸಮಯದಲ್ಲಿ ೧೯೩೭ರಲ್ಲಿ ಬ್ರಾಹ್ಮಣೇತರ ಪಕ್ಷವಾದ ಪ್ರಜಾ ಸಂಯುಕ್ತ ಪಕ್ಷ ಹೆಚ್ಚಿನ ಬ್ರಾಹ್ಮಣರನ್ನು ಹೊಂದಿದ್ದ ಕಾಂಗ್ರೆಸ್‌ನಲ್ಲಿ ವಿಲೀನವಾಗಿ 'ಮೈಸೂರು ಕಾಂಗ್ರೆಸ್' ಅಸ್ತಿತ್ವಕ್ಕೆ ಬಂದಿತು.

ಈ ವಿಲೀನ ರಾಜ್ಯದ ರಾಜಕೀಯಕ್ಕೆ ಮತ್ತೊಂದು ಹೊಸ ಆಯಾಮವನ್ನು ತಂದುಕೊಟ್ಟಿತು. ಪ್ರತಿನಿಧಿ ಸಭೆಯಲ್ಲಿ ಕೇವಲ ೩೦ಕ್ಕೂ ಕಡಿಮೆಯಿದ್ದ ಕಾಂಗ್ರೆಸ್ ಬೆಂಬಲಿಗರ ಸಂಖ್ಯೆ ೧೩೦ಕ್ಕೆ ಏರಿತು. ಬಲಿಷ್ಠ ವಿರೋಧ ಪಕ್ಷವನ್ನು ಸರ್ಕಾರ ಎದುರಿಸಲೇಬೇಕಾಯಿತು.

ಬ್ರಾಹ್ಮಣೇತರ ಪಕ್ಷ ಕಾಂಗ್ರೆಸ್ಸನ್ನು ಸೇರಿದರೂ ಸಾಕಷ್ಟು ಮುಂಜಾಗ್ರತೆ ವಹಿಸಿತು. ಕಾಂಗ್ರೆಸ್ ಅಧ್ಯಕ್ಷ ಸ್ಥಾನದಿಂದ ಹಿಡಿದು ಕಾರ್ಯಕಾರಿಯಲ್ಲಿ ಹೆಚ್ಚಿನ ಹಿಡಿತ ಇಟ್ಟುಕೊಂಡು ಪ್ರಮುಖ ಸ್ಥಾನವನ್ನು ಗಳಿಸಿತು. ಕಾಂಗ್ರೆಸ್ಸಿನ ಮೇಲೆ ಹಿಂದುಳಿದವರ ಹಿಡಿತವನ್ನು ಗಮನಿಸಿ ಮಿರ್ಜಾ ಅವರು ಗಾಂಧೀಜಿಯವರಿಗೆ ಮೈಸೂರು ಕಾಂಗ್ರೆಸ್ ನಿಜವಾದ ಕಾಂಗ್ರೆಸ್ ಅಲ್ಲ ಬ್ರಾಹ್ಮಣೇತರ ಚಳವಳಿ ಎಂಬ ದೂರು ನೀಡಿದರು. ಹಿಂದುಳಿದವರು ಒಂದೇ ಗುರಿ, ಒಂದೇ ವೇದಿಕೆಯನ್ನು ಹಂಚಿಕೊಂಡರಾದರೂ ತಮ್ಮ ವಿರೋಧಿಗಳಿಗೆ ಪ್ರಾಮುಖ್ಯತೆಯನ್ನು ನೀಡಲು ಒಪ್ಪಲಿಲ್ಲ. ಒಂದು ಸ್ಪಷ್ಟ ಸೈದ್ಧಾಂತಿಕ ಗಟ್ಟಿ ನೆಲೆಯನ್ನು ಕಂಡುಕೊಂಡಿದ್ದರಿಂದ ಸರ್ಕಾರದಿಂದ ದೂರ ಸರಿದಿದ್ದರೂ ಸವಲತ್ತಿನಿಂದ ವಂಚಿತರಾಗಲಿಲ್ಲ.

೧೯೪೬ರಲ್ಲಿ ಗೆಜೆಟೆಡ್ ಹುದ್ದೆಗಳಲ್ಲಿ ಶೇ. ೫೦.೬೪ ರಷ್ಟು, ನಾನ್ ಗೆಜೆಟೆಡ್‌ನಲ್ಲಿ ಶೇ. ೬೧.೫೫ರಷ್ಟು, ವೃತ್ತಿಪರ ಶಿಕ್ಷಣ ಕಾಲೇಜುಗಳಲ್ಲಿ ಶೇ. ೫೦ ರಷ್ಟು ಮೀಸಲಾಗಿರಿಸಲಾಯಿತು. ೧೯೨೧-೩೭ರ ಅವಧಿಯಲ್ಲಿ ೭೦ ಜನ ಅಮಲ್ದಾರರಾಗಿ ಬಡ್ತಿ ಪಡೆದವರಲ್ಲಿ ೩೨ ಜನ ಹಿಂದುಳಿದ ವರ್ಗದ ಅಭ್ಯರ್ಥಿಗಳು, ೬೦ ಜನ ನೇಮಕವಾದವರಲ್ಲಿ ೩೧ ಜನ ಹಿಂದುಳಿದ ವರ್ಗದವರು. ಇದು ಹಿಂದುಳಿದ ವರ್ಗಕ್ಕೆ ದೊರೆತ, ಪ್ರಗತಿದಾಯಕ ಪ್ರಾತಿನಿಧ್ಯವನ್ನು ಶ್ರುತಪಡಿಸುತ್ತದೆ. ಮಿರ್ಜಾರವರು ಕಾಂಗ್ರೆಸ್ಸನ್ನು ಹತ್ತಿಕ್ಕಲು ಪ್ರಯತ್ನಿಸುವುದರ ಮೂಲಕ

ಜನತೆಯನ್ನು ಕೆರಳಿಸಿ ಆಡಳಿತ ನಿರಂಕುಶತೆಯಿಂದ ಇತರ ಕ್ರಾಂತೀಯ ಪಕ್ಷಗಳು ಕಾಂಗ್ರೆಸ್ಸನ್ನು ಸೇರಲು ಪರೋಕ್ಷವಾಗಿ ಪ್ರೇರೇಪಿಸಿದರು. ಆ ಮೂಲಕ ಮೈಸೂರು ಕಾಂಗ್ರೆಸ್ ಬೆಳವಣಿಗೆಯಲ್ಲಿ ಸಹಾಯ ಮಾಡಿದರೆಂಬುದು ಐತಿಹಾಸಿಕ ಸತ್ಯ.!

ವಿಲೀನದ ನಂತರ ಏಕಮೇವ ಸಂಸ್ಥೆಯಾದ ಕಾಂಗ್ರೆಸ್ ಮೈಸೂರು ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ ಚುನಾವಣೆಗಳಲ್ಲಿ ಸ್ಪರ್ಧಿಸಬೇಕೆಂಬುದು ತೀರ್ಮಾನಿಸಿ ಚುನಾವಣಾ ಪ್ರಚಾರಕ್ಕಾಗಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರನ್ನು ಆಹ್ವಾನಿಸಿದರು. ಅವರಿಗೆ ಮಾತನಾಡಲು ನಿರ್ಬಂಧಿಸಲಾಯಿತು. ಇಷ್ಟಾದರೂ ಕಾಂಗ್ರೆಸ್ ಎಲ್ಲಾ ಕಡೆ ಜಯ ಸಾಧಿಸಿತು. ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದ ಕೂಡಲೆ ಶಿವಪುರದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು.

ಹೀಗೆ ಅಖಿಲ ಭಾರತ ಸ್ವಾತಂತ್ರ್ಯಾಂದೋಳನದಲ್ಲಿ ಮೈಸೂರು ಭಾಗವಹಿಸಿತಾದರೂ ಕಾಂಗ್ರೆಸ್ ಸಂಸ್ಥೆ, ಏಕಮೇವ ಸಂಸ್ಥೆಯಾಗಿರಲಿಲ್ಲ. 'ಪ್ರಜಾಮಿತ್ರ ಮಂಡಳಿ ಪ್ರಜಾಪಕ್ಷ' ರಾಜಕೀಯ ಪಕ್ಷಗಳು ಶ್ರೀಮನ್ಮಹಾರಾಜರ ನೇತೃತ್ವದಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಡುತ್ತಿದ್ದವು. ೧೯೩೫ರ ನೂತನ ರಾಜ್ಯಘಟನೆಯನ್ವಯ ಕಾಂಗ್ರೆಸ್, ಬ್ರಿಟಿಷ್ ಪ್ರಾಂತಗಳಲ್ಲಿ ಚುನಾವಣೆಗಳಲ್ಲಿ ಸ್ಪರ್ಧಿಸಿ ಜಯಶೀಲವಾಗಿ ಸರ್ಕಾರ ಸ್ಥಾಪಿಸಿದ ಸಮಯದಲ್ಲೇ ಪ್ರಜಾಪಕ್ಷವೂ ಮೈಸೂರು ಕಾಂಗ್ರೆಸ್ ಸಂಸ್ಥೆಯಲ್ಲಿ ವಿಲೀನಗೊಂಡಿತು.

ಚಂಗಲರಾಯರೆಡ್ಡಿ ಮತ್ತು ವಿ. ವೆಂಕಟಪ್ಪನವರು ಪ್ರಜಾಪಕ್ಷವನ್ನು ವಿಸರ್ಜಿಸಿ ಸ್ಥಳೀಯ ಕಾಂಗ್ರೆಸ್ ಜೊತೆ ಕೈಜೋಡಿಸಿ ಮೈಸೂರು ಕಾಂಗ್ರೆಸ್ ಉದಯಕ್ಕೆ ಕಾರಣರಾದರು. ಕಾಂಗ್ರೆಸ್ ತನ್ನ ೧೯೩೭ರ ಚುನಾವಣಾ ಪ್ರಣಾಳಿಕೆಯಲ್ಲಿ ಏಕೀಕರಣ ತನ್ನ ಗುರಿಯೆಂದು ಹೇಳಿತು. ಕಾಂಗ್ರೆಸ್‌ನೊಂದಿಗೆ ವಿಲೀನಗೊಂಡ ಪಕ್ಷಗಳು ಏಕೀರಣವನ್ನು ಬೆಂಬಲಿಸಿ ಠರಾವು ಮಾಡಿದವು. ಒಟ್ಟಾರೆ, ಪ್ರಜಾಪ್ರಕ್ಷವೂ ಕಾಂಗ್ರೆಸ್‌ನೊಂದಿಗೆ ವಿಲೀನಗೊಂಡು, ಕಾಂಗ್ರೆಸ್ ಬಲಿಷ್ಠವಾಗಿ ಬೆಳಯುವಂತೆ ಮಾಡಿತು.



# ಲೋಕಸೇವಕ ಸಂಘ

ಪ್ರೊ. ವಸಂತ ಕುಷ್ಟಗಿ

ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪಕ್ಷಗಳಿಗೆ ಬಹುಮಹತ್ವದ ಸ್ಥಾನವಿದೆ. ಬಹುಮತವನ್ನು ಗಳಿಸಿದ ಪಕ್ಷವು ಜನಪ್ರತಿನಿಧಿಯಾಗಿ ಪ್ರಜಾಹಿತ ಪಾಲನೆಯನ್ನು ಮಾಡಬೇಕಾಗುತ್ತದೆ. ಪ್ರಜಾಹಿತ ಪಾಲನೆಯೆಂದರೆ, ಪ್ರಜಾಪ್ರಭುತ್ವವನ್ನು ಹೊಂದಿದ ರಾಷ್ಟ್ರದ ಸಕಲ ಅಭಿವೃದ್ಧಿಯನ್ನು ಸಾಂಗಗೊಳಿಸುವುದು ಆ ಪಕ್ಷದ ಹೊಣೆಗಾರಿಕೆಯಾಗಿರುತ್ತದೆಂದು ಅರ್ಥ.

ಒಂದು ಸುಂದರವಾದ ಪ್ರಜಾಪ್ರಭುತ್ವವನ್ನು ಹೊಂದಿದ ರಾಷ್ಟ್ರವನ್ನು ಕಟ್ಟಬೇಕಾದರೆ, ರಾಷ್ಟ್ರದ ಮನ್ನಣೆಯನ್ನು ಪಡೆದ ಮೂರಕ್ಕಿಂತ ಹೆಚ್ಚಿನ ರಾಜಕೀಯ ಪಕ್ಷಗಳಿರಬಾರದು. ಆದರೆ ಇಂತಿಷ್ಟೇ ಪಕ್ಷಗಳಿರಬೇಕೆಂದು ಕರಾರುವಾಕ್ಕಾಗಿ ಹೇಳಲು ಬರುವಂತಿಲ್ಲ. ಏಕೆಂದರೆ ರಾಷ್ಟ್ರದ ಮೂಲ ಘಟಕವಾದ ಪ್ರಜೆಯು, ತನ್ನ ವಿವೇಕವನ್ನು ಜನಹಿತಕಾರಿಯಾಗುವಂತೆ ಬಳಸಿ, ಬಹುಮತ ವಿಶ್ವಾಸವನ್ನು ಗಳಿಸುವಲ್ಲಿ ಮೂರಕ್ಕಿಂತ ಹೆಚ್ಚು ರಾಜಕೀಯ ಪಕ್ಷಗಳ ಅಸ್ತಿತ್ವಕ್ಕೆ ಕಾರಣವಾಗಿರುವುದನ್ನು ನಡೆದು ಬಂದ ದಾರಿ ದಸ್ತಾವೇಜು ಮಾಡುತ್ತದೆ. ಅಲ್ಲದೆ ಕೆಲ ಸಂದರ್ಭಗಳಲ್ಲಿ ಕೆಲವೆಡೆ ಎರಡೇ ಪಕ್ಷಗಳಿರುವುದು ಸಾಧ್ಯ.

ರಾಜಕೀಯ ಪಕ್ಷಗಳು ಎಷ್ಟೇ ಇದ್ದರೂ, ಪ್ರತಿಯೊಂದು ರಾಜಕೀಯ ಪಕ್ಷವು ತನ್ನ ದೇಶದ ಹಿತಸಾಧನೆಯನ್ನೇ ತನ್ನ ಗುರಿಯಾಗಿ ಇಟ್ಟುಕೊಂಡಿರುತ್ತದೆ. ಸಾಮಾನ್ಯ ಪ್ರಜೆಗೆ ಬೇಕಾಗುವ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಟ್ಟು, ಒಟ್ಟು ಪ್ರಜೆಗಳ ನೆಮ್ಮದಿಯನ್ನು ಕಾಪಾಡುವ ಹಂಬಲವನ್ನು ತಾಳಿರುತ್ತದೆ. ಯಾವ ಸಂಕೋಚವಿಲ್ಲದೆ ನೀರು, ಗಾಳಿ, ಬೆಳಕು, ಆಹಾರ, ಶಿಕ್ಷಣ, ಬಟ್ಟೆ ಹೀಗೆ ಮರ್ಯಾದೆಯ ಬದುಕು ಶ್ರೀಸಾಮಾನ್ಯನಿಗೆ ಸಮಾನ ಅವಕಾಶಗಳನ್ನು ಸಮಪಾತಳಿಯಲ್ಲಿ ದೊರಕಿಸಿಕೊಡಬೇಕೆಂದೇ ನಿರ್ಧರಿಸುತ್ತದೆ. ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿಯ ಕೊರತೆಗಳನ್ನು ತುಂಬಿಕೊಡಲು ಪರಿಶ್ರಮಪಡುವ ಶಕ್ತಿಯನ್ನು ತಂದು ಕೊಡುತ್ತದೆ. ಅಷ್ಟೇ ಅಲ್ಲ ಯಾವ ಪಕ್ಷವೂ ದೇಶವನ್ನು ಒತ್ತೆ ಹಾಕಿ ತಾನು ನಲಿದಾಡಬೇಕೆಂಬುವ ವಿಚಾರವನ್ನು ಕನಸು ಮನಸಿನಲ್ಲಿಯೂ ತರದೇ ಎಚ್ಚರದಿಂದ ಇರಲು ಯತ್ನಿಸುತ್ತದೆ. ಈ ರೀತಿ ರಾಜಕೀಯ ಪಕ್ಷಗಳಿಗಿರುವ ಸಂಹಿತೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಆಯಾ ಪಕ್ಷದ ಸಾಮಾನ್ಯ ಕಾರ್ಯಕರ್ತರಿಂದ ಹಿಡಿದು ನಾಯಕನವರೆಗೂ ಮೌಲ್ಯಾಧಾರಿತ ವ್ಯಕ್ತಿತ್ವವನ್ನು ಅವರೆಲ್ಲ ರೂಢಿಸಿಕೊಂಡಿರಬೇಕಾಗುತ್ತದೆ. ಎಂದಾಗ ಆಯಾ ಪಕ್ಷಗಳು ತ್ರಿಕರಣ ಶುದ್ಧಿಯಿಂದ ಮಾಡಿದ ಕೆಲಸಗಳು ಜನ ಮೆಚ್ಚುಗೆಯಾಗಿ, ಫಲಾನುಭವವು ಎಲ್ಲಿ ಮುಟ್ಟಬೇಕೋ ಅಲ್ಲಿ ಮುಟ್ಟಿ, ಪ್ರಜಾಪ್ರಭುತದ ಒಳಗಿನ ಇಂಗಿತವು ಸಾರ್ಥಕ ಸ್ವರೂಪದ್ದಾಗಿ ಒಳಹೊರಗುಗಳನ್ನೆಲ್ಲ ನೆಮ್ಮದಿಯ ಅಂತಃಕರಣೆಗೆ ರುಚಿಗೊಳಿಸುತ್ತದೆ. ಈ ಮೌಲ್ಯ ಮಾಪನದಿಂದ ಪ್ರಜಾಹಿತವು ಬಹುಮತಗೊಂಡಾಗ, ಅಂಥ ರಾಜಕೀಯ ಪಕ್ಷವು ಪ್ರಜಾಪ್ರಭುತ್ವದ ಪ್ರತಿನಿಧಿಯಾಗಿ ರಾಜ್ಯಸೂತ್ರಗಳನ್ನು ನಡೆಸುತ್ತದೆ. ಪ್ರಜಾಪ್ರಭುತ್ವವು ಕೊಟ್ಟ ಅವಧಿಯಲ್ಲಿ ಆ ಪಕ್ಷವು 'ಬಹುಜನ ಹಿತಾಯ ಬಹುಜನ ಸುಖಾಯ'ವನ್ನು ಒದಗಿಸಿಕೊಟ್ಟರೆ, ಆಗ ಮುಂದಿನ ಅವಧಿಗೆ ಪ್ರಜಾಪ್ರಭುತ್ವ ಅವಕಾಶ ಕೊಡಬಹುದು. ಇಲ್ಲವೆ ತನಗೆ ಹಿತವೆನಿಸಿದ ಮತ್ತೊಂದು ಪಕ್ಷಕ್ಕೆ ಅವಕಾಶ

ಕೊಡಬಹುದು. ಆದರೆ ರಾಜ್ಯ ಸೂತ್ರಗಳನ್ನು ನಡೆಸುವ ಅಧಿಕಾರವಿರಲಿ ಬಿಡಲಿ ರಾಜಕೀಯ ಪಕ್ಷಗಳು ಕ್ರಿಯಾ ಯೋಜನೆಗಳನ್ನು ಹಾಕಿಕೊಂಡು ಜನಹಿತಕ್ಕಾಗಿ ಸದಾ ಕ್ರಿಯಾತ್ಮಕವಾಗಿ ಪರಿತಪಿಸಬೇಕಾಗುತ್ತದೆ. ಅಲ್ಲದೆ ಆಡಳಿತಾರೂಢ ಪಕ್ಷಕ್ಕೆ ಸದಾ ಮಾರ್ಗದರ್ಶನ ನೀಡಿ ಬೆಂಬಲಿಸಬೇಕಾಗುತ್ತದೆ. ಈ ರೀತಿ ಪಕ್ಷಗಳ ನಡೆವಳಿಕೆಗಳಿದ್ದರೇನೇ ಪ್ರಜಾಪ್ರಭುತ್ತ್ವವು ಮನೋಸ್ವಾಸ್ಥ್ಯದಿಂದ ಕೂಡಿದ್ದು ಎಲ್ಲ ಸ್ವಾಸ್ಥ್ಯಗಳಿಗೆ ಆಗರವಾಗಿ ಆರೋಗ್ಯಧಾಮವಾಗಿರುತ್ತದೆ. ಅಂತಹ ಪ್ರಜಾಪ್ರಭುತ್ತ್ವವನ್ನು ಹೊಂದಿದ ರಾಷ್ಟ್ರವೇ ಸಕಲ ಸಮೃದ್ಧಿಯತ್ತ ಸಾಗುವ ನೆಮ್ಮದಿಯ ರಾಷ್ಟ್ರವಾಗಿರುತ್ತದೆ.

ಇಂತಹ ನೆಮ್ಮದಿಯ ರಾಷ್ಟ್ರವನ್ನು ಸ್ಥಾಯಿಗೊಳಿಸಲು ಭಾರತದಲ್ಲಿಯೂ, ರಾಜಕೀಯ ಪಕ್ಷಗಳು ಹೆಣಗಾಡುತ್ತಿವೆ. ಇಂತಹ ಪಕ್ಷಗಳಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ (ಇಂಡಿಯನ್ ನ್ಯಾಷನಲ್ ಕಾಂಗ್ರೆಸ್), ಭಾರತೀಯ ಜನತಾಪಕ್ಷ, ಜನತಾದಳ (ಸಂಯುಕ್ತ), ಜನತಾದಳ (ಜಾತ್ಯಾತೀತ), ಬಹುಜನ ಸಮಾಜವಾದಿ ಪಕ್ಷ, ಕಮ್ಯುನಿಷ್ಟ ಪಕ್ಷಗಳು ಈ ಮೊದಲಾದವು ಪ್ರಮುಖವಾದುವು. ರಾಷ್ಟ್ರಮಟ್ಟದ ಮಾನ್ಯತೆ ಪಡೆದ ಪ್ರಮುಖ ಪಕ್ಷಗಳಿವು ಎಂದೂ ಗುರುತಿಸಬಹುದು. ಆದರೆ ಇವುಗಳಲ್ಲದೆ ರಾಜ್ಯಮಟ್ಟದಲ್ಲಿ ಪ್ರಾಂತೀಯ ಪಕ್ಷಗಳು ಈ ದೃಷ್ಟಿಯಲ್ಲಿ ಗಣನೀಯವಾದುವು. ಅವು ಕೂಡ ಜನಹಿತಕ್ಕಾಗಿ ಒಟ್ಟಂದದ ರಾಷ್ಟ್ರ ಶಕ್ತಿಯನ್ನು ಸಮೃದ್ಧಗೊಳಿಸುವಲ್ಲಿ ಮಹತ್ತ್ವದ ಹೋರಾಟವನ್ನು ನಡೆಸಿದಂತಹವು. ಲೋಕಶಕ್ತಿ ಲೋಕಸೇವ ಸಂಘ, ಶಿವಸೇನೆ, ಅಕಾಲಿದಳ, ಅಣ್ಣಾ ಡಿ ಎಂ. ಕೆ., ದ್ರಾವಿಡ ಮುನ್ನೇತ್ರ ಕಜಗಂ (ಡಿ.ಎಂ.ಕೆ.) ಇಂತಹ ಹಲವಾರು ಪಕ್ಷಗಳು ರಾಜ್ಯಮಟ್ಟದ ರಾಜಕೀಯ ಪಕ್ಷಗಳಾಗಿ ಪ್ರಜಾಪ್ರಭುತ್ವದ ಇತಿಹಾಸಕ್ಕೆ ತಮ್ಮ ತಮ್ಮ ಮಾದರಿಯ ಪ್ರಕರಣಗಳನ್ನು ಸೇರಿಸುತ್ತ ಸಾಗಿವೆ. ಅನೇಕ ಸಲ ಹಳೆಯ ಪಕ್ಷಗಳು ಮಾಯವಾಗಿ ಹೊಸ ಪಕ್ಷಗಳು ಉದಯಿಸುತ್ತವೆ. ಇಲ್ಲವೆ ವಿಶೇಷ ಜನಮನ್ನಣೆಯನ್ನು ಪಡೆದ ಯಾವುದಾದರೊಂದು ಪಕ್ಷದಲ್ಲಿ ವಿಲೀನವಾಗಿಬಿಡುತ್ತವೆ.

ಭಾರತೀಯ ಪ್ರಜಾಪ್ರಭುತ್ತ್ವದಲ್ಲಿ ಬಹು ಹಳೆಯದು, ನಿರಂತರವಾಗಿ ಈ ವರೆಗೆ ನಡೆದು ಬಂದ ಪಕ್ಷವೆಂದರೆ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಪಕ್ಷ. ಈ ಪಕ್ಷದ ಜಾಡು ಸ್ವಾತಂತ್ರ್ಯ ಪೂರ್ವದಿಂದಲೇ ನಡೆದುಕೊಂಡು ಬಂದುದು. ಭಾರತದಲ್ಲಿ ಬ್ರಿಟಿಷರ ಕಾಲದಿಂದಲೇ ಕಾಂಗ್ರೆಸ್ ಎಂಬ ಹೆಸರಿನ ಸಂಘಟನೆಯು ಅಸ್ತಿತ್ವಕ್ಕೆ ಬಂದು ಬ್ರಿಟಿಷರಿಂದ ಭಾರತವನ್ನು ಸ್ವತಂತ್ರಗೊಳಿಸುವಲ್ಲಿ ಈ ಸಂಘಟನೆಯು ಮುಂಚೂಣಿಯಲ್ಲಿದ್ದು ಮಾಡಿದ ಸಾಧನೆಯು ಬಹು ಮಹತ್ತರವಾದದ್ದು ಮತ್ತು ಅವಿಸ್ಮರಣೀಯವೂ ಹೌದು.

ಕಾಂಗ್ರೆಸ್ ಸಂಘಟನೆಯು ೧೫ನೆಯ ಆಗಸ್ಟ್ ೧೯೪೭ರ ಮೊದಲಿನ ದಶಕಗಳಲ್ಲಿ, ಎಲ್ಲ ಮತ ಪಕ್ಷಗಳನ್ನು, ಜಾತಿ ಧರ್ಮಗಳನ್ನು ಒಂದೆ ಆದ ತನ್ನ ಸಿತಛತ್ರದಲ್ಲಿ ತೆಗೆದುಕೊಂಡು, 'ಸ್ವಾತಂತ್ರ್ಯವೇ ತಮ್ಮ ಹೋರಾಟದ ಏಕಮಾತ್ರ ಗುರಿ' ಎಂಬ ಆಣೆಯನ್ನು ಹೊತ್ತು ಸ್ವಾತಂತ್ರ್ಯ ಸಾಧನೆಯನ್ನು ಮಾಡಿಕೊಟ್ಟಿತು. ಲೋಕಮಾನ್ಯ ಟಿಳಕರು, ಮಹಾತ್ಮ ಗಾಂಧೀಜಿ ಅವರು ಈ ಚಳವಳಿಯ ನೇತೃತ್ವವನ್ನು ವಹಿಸಿದ್ದರು. ಲೋಕಮಾನ್ಯ ಟಿಳಕರ ಅನಂತರ ಮಹಾತ್ಮಾ ಗಾಂಧೀಜಿ ಅವರೇ ಸ್ವಾತಂತ್ರ್ಯ ಸಂಗ್ರಾಮದ ನೇತಾರರಾಗಿ, ಸತ್ಯ ಅಹಿಂಸೆಗಳ ಅನುಷ್ಠಾನದ ಮೌಲ್ಯದಲ್ಲಿ ಭಾರತಕ್ಕೆ ಸ್ವಾತಂತ್ರ್ಯವನ್ನು ಒದಗಿಸಿಕೊಡುವಲ್ಲಿ ಗೆಲುವನ್ನು ತಂದು ಕೊಟ್ಟರು. ಸ್ವಾತಂತ್ರ್ಯದ ಅನಂತರ ಅವರು ಮನಸ್ಸು ಮಾಡಿದ್ದರೆ ರಾಷ್ಟ್ರಪತಿಗಳೂ ಪ್ರಧಾನಮಂತ್ರಿಗಳೂ ಆಗಬಹುದಿತ್ತು. ಆದರೆ ಅವರು ಅಂತಹ ರಾಜಸತ್ತೆಯ ಅಧಿಕಾರದ ವ್ಯಾಮೋಹಕ್ಕೆ ತುತ್ತಾಗಲಿಲ್ಲ. ಮೌಲ್ಯಾಧಾರಿತ ರಾಷ್ಟ್ರೀಯ ಬದುಕನ್ನು ಅರಳಿಸುವಲ್ಲಿ ತಮ್ಮ ಆಧ್ಯಾತ್ಮಿಕ ತಳಹದಿಯ ತಪಸ್ಸನ್ನು ಧಾರೆಯೆರೆಯತೊಡಗಿದರು. ಈ ಚಾರಿತ್ರ್ಯದ ಬಲದಿಂದಲೇ ಅವರನ್ನು ಇಡೀ ದೇಶ 'ಬಾಪೂಜಿ' ಎಂದು ಗುರುತಿಸಿ ಅವರನ್ನು ತಮ್ಮ ಹೃದಯಸಿಂಹಾಸನದಲ್ಲಿಟ್ಟುಕೊಂಡು ಮೆರೆಯುತ್ತಿರುವುದು ಸಾಮಾನ್ಯ ಸಾಧನೆಯ ಮಾತಲ್ಲ. ಬಹುಶಃ ಅಸದಳವಾದ ಈ ಭಕ್ತಿ ವಿಶ್ವಾಸಗಳಿಂದಾಗಿ ಬಾಪೂಜಿ ಮುಂದಿನ ದಿನಗಳಲ್ಲಿ 'ರಾಷ್ಟ್ರಪಿತ' ಎಂಬ ಗೌರವವನ್ನು ಜನಸಾಗರದಿಂದ ಪಡೆದು ಮಾನ್ಯರಾದರು.

ಈ ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರು ಕಾಂಗ್ರೆಸ್ ಸಂಘಟನೆಯ ಬಗ್ಗೆ ಸ್ವಾತಂತ್ರ್ಯ ಪೂರ್ವದಲ್ಲಿಯೇ ಸ್ಪಷ್ಟ ಸ್ವರೂಪವನ್ನು ಕಲ್ಪಿಸಿಕೊಂಡಿದ್ದರು. ಅವರ ಚಿಂತನದ ಸ್ವರೂಪದಲ್ಲಿ ಕಾಂಗ್ರೆಸ್ ಸಂಘಟನೆಯು ಸ್ವಾತಂತ್ರ್ಯದ ಅನಂತರ ವಿಸರ್ಜನೆಗೊಳ್ಳಬೇಕೆಂಬುದೇ ಆಗಿತ್ತು. ಅದರ ವಿಸರ್ಜನೆಯ ಅನಂತರ ಕಾಂಗ್ರೆಸ್ ಕಾರ್ಯಕರ್ತರೆಲ್ಲ ಲೋಕಸೇವಾ ಕಾರ್ಯಕರ್ತರಾಗಿ ಪಕ್ಷಾತೀತವಾದ ಸರಕಾರವನ್ನು ಸ್ಥಾಪಿಸಬೇಕೆಂದು ಅವರು ವಿಚಾರಮಾಡಿದ್ದರಂತೆ. ಈ ವಿಚಾರದ ಉಗಮವು ೧೯೩೪ರಲ್ಲಿ ಆಗಿದ್ದು, ಸ್ವಾತಂತ್ರ್ಯದ ಅನಂತರವೂ ಈ ಬಗ್ಗೆ ಇನ್ನಷ್ಟು ಘನಿಷ್ಟವಾಗಿ ಯೋಚಿಸಿ ಕಾಂಗ್ರೆಸ್ಸನ್ನು ವಿಸರ್ಜಿಸಲು ಪ್ರೇರಣೆ ನೀಡಿದರು. ಅವರು 'ಹೇ ರಾಮ್' ಎಂದು ಹೇಳಿ ಕೊನೆಯ ಉಸಿರನ್ನು ತೆಗೆದುಕೊಳ್ಳುವ ಒಂದು ವಾರ ಮೊದಲು (ಎಂದರೆ ಬಹುಶಃ ೨೯ನೆಯ ಜನವರಿ ೧೯೪೮ ಇರಬಹುದು) ಲೋಕಸೇವಕ ಸಂಘವನ್ನು ಸ್ಥಾಪಿಸಲು ಕಟ್ಟುನಿಟ್ಟಾಗಿ ಸೂಚಿಸಿದ್ದರಂತೆ. ಒಂದುವೇಳೆ ಮುಂದೆ ಬದುಕಿದ್ದರೆ,

ಸತ್ಯಾಗ್ರಹದ ಬಲದಿಂದಲಾದರೂ, ಸಾತ್ತ್ವಿಕ ವರ್ಚಸ್ಸನ್ನು ಬೀರಿ ಕಾಂಗ್ರೆಸ್ ಅನ್ನು ವಿಸರ್ಜಿಸಲಾಗುತ್ತಿತ್ತು. ಇದರಲ್ಲಿ ಸಂಶಯವಿರಲಿಲ್ಲ. ಆದ ದುರ್ದೈವಕ್ಕೆ ಗಾಂಧೀಜಿಯವರು ಬದುಕಿ ಉಳಿಯಲಿಲ್ಲ. ಅದರ ಬದಲಾಗಿ, ದೇಶ ಸ್ವಾತಂತ್ರ್ಯದ ಏಕಮಾತ್ರ ಗುರಿಯನ್ನು ಇಟ್ಟುಕೊಂಡಿದ್ದ ಕಾಂಗ್ರೆಸ್ ಸಂಘಟನೆಯು ರಾಜಕೀಯ ಪಕ್ಷವಾಗಿ ಬೆಳೆಯಿತು. ಅಷ್ಟೇ ಅಲ್ಲ ರಾಜಸತ್ತೆಯನ್ನೂ ಪಡೆಯಿತು.

ಭಾರತದ ಸ್ವಾತಂತ್ರ್ಯ ಇತಿಹಾಸದಲ್ಲಿ ಕಾಂಗ್ರೆಸ್ ಸಂಘಟನೆಯ ಪಾತ್ರವೇ ಪಾತ್ರ. ಅದರ ಶ್ರದ್ಧಾನಿಷ್ಠೆಗಳಿಂದ ಕೂಡಿದ ಏಕೋಭಾವದ ಹೋರಾಟವನ್ನು ಆಸೇತು ಹಿಮಾಚಲ ಎಲ್ಲ ಭಾರತೀಯರು ಒಪ್ಪಿಕೊಂಡು ಗೌರವಿಸಿದ್ದಲ್ಲದೆ ಪ್ರತಿಯೊಬ್ಬರೂ ತಮ್ಮ ತಮ್ಮ ಸ್ವರೂಪ ಸಾಮರ್ಥ್ಯವನ್ನು ವಂಚನೆಯಿಲ್ಲದೆ ಧಾರೆಯೆರೆದರು. ಈ ಬಗೆಯ ಕಾಂಗ್ರೆಸ್ ಸಂಘಟನೆಯು ಎರಡು ರೀತಿಯದಾಗಿತ್ತು. ಒಂದು- ಇಂಗ್ಲಿಷರ ಆಡಳಿತಕ್ಕೆ ಸಂಬಂಧಪಟ್ಟ ಭಾರತ ಪ್ರದೇಶದಲ್ಲಿ ಕಾಂಗ್ರೆಸ್ ಸಂಘಟನೆಯು ನಡೆಸಿದ ಹೋರಾಟದ ಬಗೆ. ಎರಡನೆಯದು- ದೇಶೀ ಸಂಸ್ಥಾನಗಳಲ್ಲಿ ಕಾಂಗ್ರೆಸ್ ಸಂಘಟನೆಯು ನಡೆಸಿದ ಹೋರಾಟದ ಬಗೆ. ದೇಶೀ ಸಂಸ್ಥಾನಗಳಲ್ಲಿ ಕಾಂಗ್ರೆಸ್ ಸಂಘಟನೆಗಳು ಸ್ಟೇಟ್ ಕಾಂಗ್ರೆಸ್ ಎಂಬ ಹೆಸರುಗಳಿಂದ ಗುರುತಿಸಿಕೊಳ್ಳುತ್ತಿದ್ದವು. ಈ ಎರಡೂ ಬಗೆಗೆ ಮಹಾತ್ಮ ಗಾಂಧೀಜೀ ಅವರೇ ಮಾರ್ಗದರ್ಶನ ನೀಡುತ್ತಿದ್ದರು. ಆದರೂ ಆಯಾ ಸ್ಟೇಟ್‌ಗಳಲ್ಲಿ (ದೇಶೀಯ ಸಂಸ್ಥಾನಗಳಲ್ಲಿ) ಆ ಸ್ಟೇಟ್‌ಗಳಲ್ಲಿಯ ಗಾಂಧೀಸ್ವರೂಪಿ ಹಿರಿಯರು ಅಧ್ಯಕ್ಷರಾಗಿ ಮಾರ್ಗದರ್ಶನ ನೀಡುತ್ತಿದ್ದರು. ಬ್ರಿಟಿಷ್ ಭಾರತದ ಜನತೆಗೆ ಬ್ರಿಟಿಷರನ್ನು ಮಾತ್ರ ದೇಶದಿಂದ ಹೊರದೂಡಿ ಸ್ವಾತಂತ್ರ್ಯವನ್ನು ಪಡೆಯುವುದಾಗಿತ್ತು. ಆದರೆ ದೇಶೀ ಸಂಸ್ಥಾನಗಳಲ್ಲಿ ನೇರವಾಗಿ ತಮ್ಮನ್ನು ಆಳುತ್ತಿದ್ದ ದೊರೆಯೋ ಸುಲ್ತಾನನೋ ಆಗಿದ್ದುದರ ಜೊತೆಗೆ ಈ ದೊರೆಗಳನ್ನೂ ಸುಲ್ತಾನರನ್ನೂ ಬಳಸಿ ಹಿಡಿತದಲ್ಲಿಟ್ಟುಕೊಂಡು ಪರ್ಯಾಯವಾಗಿ ಆಳುತ್ತಿದ್ದ ಬ್ರಿಟಿಷರೂ ಅಲ್ಲಿಯ ಜನತೆಯ ಸ್ವಾತಂತ್ರ್ಯವನ್ನು ಹರಣಮಾಡಿ ಶೋಷಣೆಗೆ ಗುರಿಮಾಡುವುದರಲ್ಲಿ ನಿಸ್ಸೀಮರಾಗಿದ್ದರು. ಹೀಗಾಗಿ ದೇಶೀಯ ಸಂಸ್ಥಾನಗಳು ಇಬ್ಬಗೆಯ ಗುಲಾಮಿಯಿಂದ ಪಾರಾಗಲು ಹೋರಾಡಬೇಕಾಗಿತ್ತು. ಆದ್ದರಿಂದ ಈ ಸಂಸ್ಥಾನಗಳು ಬ್ರಿಟಿಷರನ್ನೂ ತಮ್ಮನ್ನಾಳುವ ಸಂಸ್ಥಾನಿಕರನ್ನೂ ದೂರಮಾಡಿ ಸ್ವಾತಂತ್ರ್ಯ ಪಡೆಯಬೇಕಿತ್ತು. ಅಲ್ಲದೆ ಬ್ರಿಟಿಷರು ಭಾರತವನ್ನು ಬಿಟ್ಟು ತೊಲಗುವಾಗ ಯಥಾಸ್ಥಿತಿ ಒಪ್ಪಂದದ ಮೇರೆಗೆ ದೇಶೀ ಸಂಸ್ಥಾನಗಳಿಗೆ ಅಧಿಕಾರ ನೀಡಿ ತೊಲಗಿದರು. ಈ ಒಪ್ಪಂದದ ಒಳಧ್ವನಿಯೆಂದರೆ ದೇಶೀಸಂಸ್ಥಾನಿಕರು ತಮಗೆ ಬೇಕಾದರೆ ಸ್ವತಂತ್ರ ಭಾರತ ಸರಕಾರದಲ್ಲಿ ಸೇರಬಹುದಿತ್ತು, ಇಲ್ಲವೆ ಸ್ವತಂತ್ರ ಪಾಕಿಸ್ತಾನ ಸರಕಾರದಲ್ಲಿ ಸೇರಬಹುದಿತ್ತು. ಇಲ್ಲವೆ ಸ್ವತಂತ್ರವಾಗಿ ತಾವೇ ಸಾರ್ವಭೌಮ ರಾಷ್ಟ್ರವಾಗಬಹುದಿತ್ತು. ಈ ಐಚ್ಛಿಕಗಳಲ್ಲಿ ಹೈದರಾಬಾದ್ ನಿಜಾಂ ಸಂಸ್ಥಾನ ಹಾಗೂ ಜುನಾಗಡ ಸಂಸ್ಥಾನ ಮೊದಲಾದವು ತಾವೇ ಸಾರ್ವಭೌಮವಾಗಲು ಇಚ್ಛಿಸಿದವು. ಇದು ಜನತೆಗೆ ಹಿಡಿಸಲಿಲ್ಲ. ಜನತೆ ಅವರಿಗೆ ಪಾಠ ಕಲಿಸಿದರು. ಈ ಪಾಠ ಸ್ಥಾನಿಕ ಸಂಸ್ಥಾನೀ ಕಾಂಗ್ರೆಸ್ ಸಂಘಟನೆಗಳಿಂದಲೇ ಆಯಿತು. ಈ ಸಂಘಟನೆಗಳು ಆ ಸಂಸ್ಥಾನಗಳನ್ನು ಅರಸೊತ್ತಿಗೆಯಿಂದ ವಿಮೋಚನೆಗೊಳಿಸುವುದರ ಮೂಲಕ, ಅವುಗಳೆಲ್ಲ ಸ್ವತಂತ್ರ ಭಾರತದ ಅವಿಭಾಜ್ಯ ಅಂಗಗಳಾಗಿ ಘೋಷಿತವಾದವು. ಈ ಪ್ರಕ್ರಿಯೆಯ ಅನಂತರ ಇಲ್ಲಿಯೂ ಕಾಂಗ್ರೆಸ್ ಸಂಘಟನೆಯು ವಿಸರ್ಜಿತವಾಗಲಿಲ್ಲ. ರಾಜಕೀಯ ಪಕ್ಷವಾಗಿಯೇ ಬೆಳೆಯಿತು ಮತ್ತು ಯಥಾಪ್ರಕಾರ ರಾಜಸತ್ತೆಯನ್ನು ಪಡೆದು ಗಾಂಧೀಜಿಯವರು ಅಪೇಕ್ಷಿಸಿದ್ದ ಲೋಕಸೇವಾ ನೀತಿ ಕುಂಠಿತವಾಯಿತು.

ಈ ಹಿನ್ನೆಲೆಯಲ್ಲಿ ಬ್ರಿಟಿಷ್ ಭಾರತಕ್ಕೆ ೧೫ನೆಯ ಆಗಸ್ಟರಂದು ಸ್ವಾತಂತ್ರ್ಯವು ದೊರೆಯಿತು. ಆ ದಿನದಂದು ವಿಲೀನವಾದ ಎಲ್ಲ ದೇಶೀ ಸಂಸ್ಥಾನಗಳಿಗೂ ಅಂದೇ ಸ್ವಾತಂತ್ರ್ಯ ದೊರೆತು ಅವುಗಳೆಲ್ಲ ಭಾರತ ದೇಶದ ಅವಿಭಾಜ್ಯ ಅಂಗಗಳಾದುವು. ಆದರೆ ಹೈದರಾಬಾದ್ ನಿಜಾಂ ಸಂಸ್ಥಾನವು ಮಾತ್ರ ೧೭ನೆಯ ಮಾರ್ಚ್ ೧೯೪೮ರಂದು ನಿಜಾಂನಿಂದ ವಿಮೋಚನೆ ಪಡೆದುಕೊಂಡು ಭಾರತದೇಶದ ಅವಿಭಾಜ್ಯ ಅಂಗವಾಯಿತು. ಹೀಗಾಗಿ ಹೈದರಾಬಾದ ಸಂಸ್ಥಾನದ ಪ್ರಜೆಗಳಿಗೆ ದೇಶದ ಸ್ವಾತಂತ್ರ್ಯದ ದೃಷ್ಟಿಯಿಂದ ೧೫.೮.೧೯೪೭ ಹಾಗೂ ೧೭.೯.೧೯೪೮- ಈ ಎರಡೂ ದಿನಗಳು ಮಹತ್ತ್ವದ ದಿವಸಗಳಾಗಿ ಘನತೆ ಪಡೆದಿವೆ. ಈ ಮಾತುಗಳನ್ನು ಇಲ್ಲಿ ದಾಖಲಿಸಲು ಕಾರಣವೆಂದರೆ ಕಾಂಗ್ರೆಸ್ ಸಂಘಟನೆಯು ಗಾಂಧೀಜಿ ಅವರ ನಿಯೋಜಿತ ದೃಷ್ಟಿಯ ಪ್ರಕಾರ ವಿಸರ್ಜಿತವಾಗದೆ, ಒಂದು ದೊಡ್ಡ ರಾಜಕೀಯ ಪಕ್ಷವಾಗಿ ಬೆಳೆದದ್ದರಿಂದ, ಆ ಸಂಘಟನೆಯಲ್ಲಿದ್ದ ವಿವಿಧ ರಾಜಕೀಯ ದೃಷ್ಟಿಗಳನ್ನು ಇಟ್ಟುಕೊಂಡಿದ್ದ ಜನ ಬಹುದಿವಸ ಕಾಂಗ್ರೆಸ್ ಪಕ್ಷದಲ್ಲಿ ಉಳಿಯದೇ- ಸೋಷಲಿಸ್ಟ (ಸಮಾಜವಾದಿ), ಕಮ್ಯುನಿಸ್ಟ, ಹಿಂದೂ ಮುಸ್ಲಿಂ ಧಾರ್ಮಿಕ ದೃಷ್ಟಿಕೋನವುಳ್ಳ ಹಿಂದೂ ಮಹಾಸಭೆ, ಜನಸಂಘ, ಮುಸ್ಲಿಂಲೀಗ್, ದಲಿತವಾದಿ ಇತ್ಯಾದಿ ಭಿನ್ನ ಭಿನ್ನ ಸಾಧನಾ ಕ್ರಮಗಳಲ್ಲಿದ್ದುಕೊಂಡು ವಿವಿಧ ಪಕ್ಷಗಳನ್ನು ಕಟ್ಟಿಕೊಂಡು ಸರಕಾರವನ್ನು ಕಟ್ಟಲು ಮುಂದಾಯಿತು. ಇದೇ ಸಂದರ್ಭದಲ್ಲಿ ಕಾಂಗ್ರೆಸ್ ವಿಸರ್ಜನವಾಗಿದ್ದರೆ ಒಂದು ಆರೋಗ್ಯದಿಂದ ಕೂಡಿದ ವೈಚಾರಿಕ ನೆಲೆಯಲ್ಲಿ ರಾಜಕೀಯ ಪಕ್ಷಗಳು ರೂಪ ತಾಳುತ್ತಿದ್ದವು ಎಂಬುದು ಬಹುತೇಕ ರಾಜಕೀಯ ಚಿಂತಕರ

ಅಭಿಪ್ರಾಯವಾಗಿದೆ. ಎಲ್ಲಕ್ಕೂ ಹೆಚ್ಚಾಗಿ ಪ್ರಜಾಪ್ರಭುತ್ವದಲ್ಲಿ ಭದ್ರತಳಹದಿಯ ಪ್ರತಿಪಕ್ಷ(ಗಳು) ನಿರ್ಮಾಣವಾಗುತ್ತಿದ್ದವೆಂಬುದು ಕೂಡ ಅಷ್ಟೇ ಸತ್ಯವಾದ ಅಭಿಪ್ರಾಯವಾಗಿದೆ.

ಈ ಅಭಿಪ್ರಾಯಗಳ ಹಿನ್ನೆಲೆಯಲ್ಲಿರುವ ಐತಿಹಾಸಿಕ ಎಳೆಗಳನ್ನು ಬಿಡಿಸಿ ಬಿಡಿಸಿ ನೋಡಿದರೆ, ಕಾಂಗ್ರೆಸ್ ಸಂಘಟನೆಯು ವಿಸರ್ಜಿತವಾಗದಿದ್ದರೂ ಆ ಸಂಘಟನೆಯಲ್ಲಿದ್ದ ಅನೇಕ ಚಿಂತನಶೀಲರು ತಮ್ಮ ತಮ್ಮ ಮಟ್ಟಿಗೆ ಕಾಂಗ್ರೆಸ್ಸನ್ನು ವಿಸರ್ಜಿಸಿಕೊಂಡು ಲೋಕಸೇವಕ ಸಂಘವನ್ನು ಸ್ಥಾಪಿಸಿಕೊಂಡು ರಾಷ್ಟ್ರಕಟ್ಟುವ ಕಾರ್ಯದತ್ತ ಕ್ರಿಯಾತ್ಮಕಗೊಂಡುದು ಸತ್ಯ. ಇಂಥ ಜನರು ಗಾಂಧೀಜಿ ಅವರ ಕೊನೆಯ ಇಂಗಿತವನ್ನು ಅರ್ಥಮಾಡಿಕೊಂಡಿದ್ದರೆಂದು ಕಾಣುತ್ತದೆ. ಅಂತಹರಲ್ಲಿ ಕರ್ನಾಟಕದ ಶಿವಮೂರ್ತಿಸ್ವಾಮೀ ಅಳವಂಡಿ ಅವರೂ ಒಬ್ಬರು. ಅವರು ಕರ್ನಾಟಕದ ನೆಲೆಯಿಂದ ಲೋಕಸೇವಕ ಸಂಘವನ್ನು ಕಟ್ಟಲು ಮುಂದಾದವರಲ್ಲಿ ಅಗ್ರಗಣ್ಯರು. ಅವರಿಗೆ ೧೯೫೩ರಲ್ಲಿ ಸರ್ದಾರ ಹುಕುಂಸಿಂಗರಿಂದ ಪ್ರೇರಣೆ ದೊರೆಯಿತೆಂದು ತಿಳಿದುಬರುತ್ತದೆ.

ಸ್ವತಂತ್ರ ಭಾರತದಲ್ಲಿ ಮೊದಲನೆಯ ಮಹಾಚುನಾವಣೆಗಳ ಅನಂತರ ೧೯೫೩ರಲ್ಲಿ ಭಾಷಾವಾರು ಪ್ರಾಂತರಚನೆಗೆ ಒತ್ತಡ ಬರತೊಡಗಿತು. ಇದು ಕೂಡ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರು ಕಲ್ಪನೆ ಮಾಡಿದ್ದ ಸ್ವತಂತ್ರ ಭಾರತದ ಚಿತ್ರವಾಗಿತ್ತು. ಇದನ್ನು ಗಮನಿಸಿ ಪಂಜಾಬದ ಸರದಾರ ಹುಕುಂಸಿಂಗ ಅವರು, ''ಅಖಿಲ ಭಾರತ ಭಾಷಾವಾರು ಪ್ರಾಂತ ರಚನಾ ಪರಿಷತ್ತ''ನ್ನು ಅಮೃತಸರದಲ್ಲಿ ಸ್ಥಾಪಿಸಿದರು. ಅಷ್ಟೊತ್ತಿಗೆ ಆಗಲೆ ಕರ್ನಾಟಕದ ಅಳವಂಡಿ ಶಿವಮೂರ್ತಿ ಸ್ವಾಮಿಗಳ ಸಾಮರ್ಥ್ಯವನ್ನು ಕಂಡುಕೊಂಡಿದ್ದ ಹುಕುಂಸಿಂಗರು ಅವರನ್ನು ಈ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಗಳೆಂದು ನೇಮಕ ಮಾಡಿಕೊಂಡರು. ಆಗ ಅಳವಂಡಿಯವರು ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು ಎಂಬುದನ್ನು ಸ್ಥಾಪಿಸಿದರು. ಅದಕ್ಕೆ ಕೆ.ಆರ್. ಕಾರಂತ ಅವರನ್ನು ಅಧ್ಯಕ್ಷರನ್ನಾಗಿ ಮಾಡಿ ತಾವು ಉಪಾಧ್ಯಕ್ಷರಾಗಿ ಗುರಿಸಾಧನೆಗಾಗಿ ಅವಿರತ ಹೋರಾಡಿದರು. ಅಳವಂಡಿ ಅವರ ಈ ಘೋರಾಟಕ್ಕೆ ಕರ್ನಾಟಕದ ಜನತೆ ಬೆಂಬಲಿಸಿತು. ಕಾಂಗ್ರೆಸ್ಸಿನಲ್ಲಿದ್ದ ಎಸ್. ನಿಜಲಿಂಗಪ್ಪ, ಹಳ್ಳಿಕೇರಿ ಗುದ್ಲೆಪ್ಪ ಆದಿಯಾಗಿ ಎಲ್ಲ ನಾಯಕರೂ ಅಳವಂಡಿಯವರ ನಿಲುವನ್ನು ಅಂತರಂಗದಲ್ಲಿಯಾದರೂ ಮೆಚ್ಚಿಕೊಂಡು ಬೆಂಬಲಿಸಿದರು. ಆದರೆ ಬಹಿರಂಗವಾಗಿ ಬರಲು ಆಗ ಅವರಿಂದ ಸಾಧ್ಯವಾಗಲಿಲ್ಲ. ಏಕೆಂದರೆ ಪ್ರಥಮ ಪ್ರಧಾನಿ ಪಂಡಿತ ಜವಾಹರಲಾಲ ನೆಹರೂ ಅವರಿಗೆ ಭಾಷಾವಾರು ಪ್ರಾಂತಗಳ ರಚನೆಯ ಮಾತು ಹಿಡಿಸುತ್ತಿರಲಿಲ್ಲ. ಅವರ ವಿಶಾಲ ಆದರ್ಶದ ಕನಸುಗಳೇ ಬೇರೆಯಾಗಿದ್ದುವು. ಆದ್ದರಿಂದ ಪಂಡಿತಜೀ ಅವರು ಭಾಷಾವಾರು ಪ್ರಾಂತ ರಚನೆಗೆ ಬೇಗನೇ ಮುಂದಾಗಲಿಲ್ಲ. ಈ ಮೊದಲು ನಾನಲನಗರ ಕಾಂಗ್ರೆಸ್ಸಿನ ಅಧಿವೇಶನದಲ್ಲಿ, ಹೈದರಾಬಾದ್ ಸಂಸ್ಥಾನದ ವಿಮೋಚನಾ ಚಳುವಳಿಯ ನೇತಾರರಾದ, ಎರಡನೆಯ ಮಹಾತ್ಮ ಗಾಂಧೀಜಿ ಎನ್ನಿಸಿಕೊಂಡಿದ್ದ ಸ್ವಾಮೀ ರಾಮಾನಂದ ತೀರ್ಥರು ಹೈದರಾಬಾದ ಸಂಸ್ಥಾನವನ್ನು ವಿಭಜನೆ ಮಾಡಿ ತೆಲಗು, ಮರಾಠಿ, ಕನ್ನಡ ಈ ಮೂರು ಭಾಷೆಗಳ ಪ್ರಾಂತಕ್ಕೆ ಸೇರಿಸಲು ಕೋರಿದ್ದರು ಮತ್ತು ಭಾರತದಾದ್ಯಂತ ಭಾಷೆಯ ನೆಲೆಯ ಮೇಲೆ ಭಾಷಾವಾರು ಪ್ರಾಂತಗಳ ರಚನೆಯಾಗಬೇಕೆಂದೂ ತಿಳಿಹೇಳಿದ್ದರು. ಈ ನಿಲುವಿನಲ್ಲಿಯ ಒತ್ತಡವನ್ನು ಗಮನಿಸಿ ಪಂಡಿತ ಜವಹರಲಾಲರು ಭಾಷಾವಾರು ಪ್ರಾಂತರಚನೆಗೆ ತತ್ತ್ವಶಃ ಒಪ್ಪಿ ನಿರ್ಣಯ ತೆಗೆದುಕೊಂಡಿದ್ದರು. ಆದರೂ ಅದನ್ನು ಅನುಷ್ಠಾನಕ್ಕೆ ತರುವಲ್ಲಿ ಅಷ್ಟು ಆಸಕ್ತರಾಗಿ ಕಾಣಲಿಲ್ಲ. ಆದರೆ ಜನತಾ ಆಂದೋಲನದ ಮುಂದೆ ತಲೆ ಬಾಗಲೇಬೇಕಾಯಿತು. ಏಕೆಂದರೆ ೧೯೫೨ರಲ್ಲಿ ವಿಶಾಲಾಂಧ್ರಕ್ಕಾಗಿ ಪೊಟ್ಟಿ ಶ್ರೀರಾಮಲು ಪ್ರಾಣಾರ್ಪಣೆ ಮಾಡಿದ್ದರು. ಕರ್ನಾಟಕದಲ್ಲಿ ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತಿನ ಹುರಿಯಾಳುಗಳು ಕರ್ನಾಟಕದಲ್ಲಿ ನಡೆದ ಮೂರು ಉಪಚುನಾವಣೆಗಳಲ್ಲಿ ಕಾಂಗ್ರೆಸ್ಸಿಗರನ್ನು ಸೋಲಿಸಿದ್ದರು. ಇಂತಹ ಅಲೆ ಆಗ ದೇಶದಾದ್ಯಂತ ಮುಂಚೂಣಿಯಾಗತೊಡಗಿತು. ಆಗ ಅದನ್ನು ಸೂಕ್ಷ್ಮವಾಗಿ ಗಮನಿಸಿ ಪಂಡಿತಜೀ ಅವರು ಫಜಲ್ ಆಲಿ ಅವರ ಅಧ್ಯಕ್ಷತೆಯಲ್ಲಿ ರಾಜ್ಯಗಳ ಪುನರ್ ವಿಂಗಡಣಾ ಆಯೋಗ (ಸ್ಟೇಟ್ಸ್ ರೀ-ಆರ್ಗನೈಜೇಷನ್ ಕಮಿಷನ್) ನೇಮಿಸಿ, ಭಾಷಾವಾರು ಪ್ರಾಂತ ರಚನೆಗೆ ನಿರತರಾದರು. ಫಜಲ್‌ಆಲಿ ಆಯೋಗದ ವರದಿಗೆ ಗಡಿ ನಿರ್ಣಯದಲ್ಲಿ ಪೂರ್ಣನ್ಯಾಯ ನೀಡಲು ಅನೇಕ ಕಡೆ ಸಾಧ್ಯವಾಗಲಿಲ್ಲ. ಅಂತಹ ಸಂದರ್ಭದಲ್ಲಿ ಆಯಾ ಭಾಷೆಯ ಜನರು ಹೋರಾಟಕ್ಕೆ ಇಳಿಯಬೇಕಾಯಿತು. ಕರ್ನಾಟಕದ ಜನತೆಯು ಇಂತಹ ಅನ್ಯಾಯಗಳನ್ನು ಸರಿಪಡಿಸಿಕೊಳ್ಳಲು ಹೋರಾಟಕ್ಕೆ ಇಳಿದು ಅಂದಿನ ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಸಿರಗುಪ್ಪ, ಹರಪನಹಳ್ಳಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ ಮೊದಲಾದ ತಾಲ್ಲೂಕುಗಳನ್ನು ಉಳಿಸಿಕೊಂಡಿತು. ಆದರೆ ಅನಿವಾರ್ಯವಾಗಿ ಇದೇ ಜಿಲ್ಲೆಯ ಆದವಾನಿ, ಆಲೂರು, ರಾಯದುರ್ಗಗಳನ್ನು ಕೈ ಬಿಡಬೇಕಾಯಿತು. ಇದರಂತೆ ಕಾಸರಗೋಡು, ಉದ್ಗೀರ, ಸೊಲ್ಲಾಪುರ, ಸಾಂಗ್ಲಿ, ಗದ್ವಾಲ, ನಾರಾಯಣಪೇಟ್ ಹೀಗೆ ಇನ್ನೂ ಅನೇಕ ಗಡಿ ಭಾಗಗಳು ಕರ್ನಾಟಕಕ್ಕೆ ಸೇರದೆ ಪರಿತಪಿಸಬೇಕಾಯಿತು. ಆದರೂ ಜನತಾ

ಆಂದೋಲನದ ದಿಟ್ಟ ಹೋರಾಟದಿಂದ ೧೯೫೬ರಲ್ಲಿ ರಾಜ್ಯಗಳ ಪುನರ್ ವಿಂಗಡಣೆಯಾಗಿ ಭಾಷಾವಾರು ಪ್ರಾಂತ ರಚನೆಯ ಕನಸು ನನಸಾಯಿತು. ಆದರೂ ಪೂರ್ಣ ನ್ಯಾಯವು ದೊರೆಯಲಿಲ್ಲವೆಂಬ ಅತೃಪ್ತಿ ಉಳಿಯಿತು. ಇದು ಕೂಡ ಮುಂದೆ ಕರ್ನಾಟಕದಲ್ಲಿ ಲೋಕಸೇವಕ ಸಂಘದ ಆವಿರ್ಭಾವಕ್ಕೆ ಮೂಲ ಕಾರಣಗಳಲ್ಲಿ ಒಂದಾಯಿತು ಎನ್ನಬೇಕು. ಮೊದಲಿನಿಂದಲೇ ಲೋಕಸೇವಕ ಸಂಘದ ಸ್ಥಾಪನೆಗಾಗಿ ಹುಟ್ಟುಹಾಕುತ್ತಿದ್ದ ಅಳವಂಡಿ ಶಿವಮೂರ್ತಿ ಸ್ವಾಮಿಗಳು, ಇಂತಹ ಅಸಮಾನತೆಗಳನ್ನು ಎಲ್ಲ ನಿಟ್ಟಿನಲ್ಲಿಯೂ ದೂರಮಾಡುವ ನಿರ್ಧಾರವನ್ನು ತೆಗೆದುಕೊಂಡು, ಈ ಸಂಸ್ಥೆಯನ್ನು ೧೯೫೬ರಲ್ಲಿ ಪೂರ್ಣ ಅಸ್ತಿತ್ವಕ್ಕೆ ತಂದರು ಮತ್ತು ಈ ಸಂಸ್ಥೆಯ ಸಂಸ್ಥಾಪಕರೆಂಬ ಗೌರವಕ್ಕೆ ಪಾತ್ರರಾದರು.

ಅಳವಂಡಿ ಶಿವಮೂರ್ತಿ ಸ್ವಾಮಿಗಳು ಹುಟ್ಟು ಹೋರಾಟಗಾರರು. ಕೊಪ್ಪಳ ತಾಲ್ಲೂಕಿನ ಅಳವಂಡಿ ಗ್ರಾಮದವರು. ಹಿರೇಮಠದ ಸಿದ್ಧಪ್ಪಯ್ಯ ಸ್ವಾಮಿ ಮತ್ತು ಶ್ರೀಮತಿ ವೀರಮ್ಮ ದಂಪತಿಗಳು ಇವರ ತಂದೆ ತಾಯಿಗಳು. ೨೮ನೆಯ ಜೂನ್ ೧೯೨೬ರಂದು ಶಿವಮೂರ್ತಿ ಸ್ವಾಮಿಗಳು ಜನ್ಮವೆತ್ತಿದವರು. ಪ್ರಾಥಮಿಕ ಶಿಕ್ಷಣ ಅಳವಂಡಿ, ಕೊಪ್ಪಳ, ಅಬ್ಬಿಗೇರಿ, ಹುಬ್ಬಳ್ಳಿಗಳಲ್ಲಿ ಆಯಿತು. ಇಂಟರ್ ಸಾಯನ್ಸ್ ಕಲಬುರಗಿಯಲ್ಲಿ. ಬಿ. ಎಸ್. ಸಿ. ಹೈದರಾಬಾದದಲ್ಲಿರುವ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ. ಇಂಟರ್ ಸೈನ್ಸ್‌ದಲ್ಲಿರುವಾಗಲೇ 'ಚಲೇಜಾವ್' ಚಳವಳಿ ಹಾಗೂ 'ವಂದೇ ಮಾತರಂ' ಚಳುವಳಿಯಲ್ಲಿ ಪಾಲುಗೊಂಡವರು. ಹೈದರಾಬಾದ ಸಂಸ್ಥಾನದ ವಿಮೋಚನಾ ಚಳವಳಿಯಲ್ಲಿ ಭೂಗತರಾಗಿ ಕೆಚ್ಚಿನ ಹೋರಾಟವನ್ನು ಮಾಡಿದವರು. ಈ ಸಂಸ್ಥಾನದ ವಿಮೋಚನಾ ಚಳವಳಿಯ, ನೇತಾರರಾಗಿದ್ದ ಸ್ವಾಮಿ ರಾಮಾನಂದತೀರ್ಥರನ್ನು ಭೆಟ್ಟಿಯಾಗಿ ತಾವೂ ಹೈದರಾಬಾದ ಸ್ಟೇಟ್ ಕಾಂಗ್ರೆಸ್ ಸಂಘಟನೆಯನ್ನು ಸೇರುವುದಾಗಿ ಸ್ವಯಂಪ್ರೇರಣೆಯಿಂದ ಹೇಳಿದವರು. ಇವರ ಬಗ್ಗೆ ಮೊದಲೇ ತಿಳಿದುಕೊಂಡಿದ್ದ ಸ್ಟೇಟ್ ಕಾಂಗ್ರೆಸ್ಸಿನ ಅಧ್ಯಕ್ಷರೂ ಆಗಿದ್ದ ಸ್ವಾಮೀ ರಾಮಾನಂದತೀರ್ಥರು, ಇವರನ್ನು ಧಾರವಾಡ ಬಳ್ಳಾರಿ ಗಡಿಭಾಗದ ವಿಮೋಚನಾ ಚಳುವಳಿಯ ದಂಡನಾಯಕರನ್ನಾಗಿ ನೇಮಿಸಿದರು. ಇವರಾದರೋ ಆಗ ಸಮರ್ಥರೀತಿಯಲ್ಲಿ , ನಿಜಾಮನಿಂದ ಪ್ರೇರಿತರಾದ ಸಶಸ್ತ್ರ ರಜಾಕಾರರನ್ನು ಬಗ್ಗು ಬಡಿಯುವಲ್ಲಿ ಯಶಸ್ಸನ್ನು ಪಡೆದವರು. ಐ. ಎನ್. ಎ. ಸೇನಾಧಿಕಾರಿಗಳ ನೆರವು ಪಡೆದು, ಕಾಂಗ್ರೆಸ್ ಹೋರಾಟಗಾರರಿಗೆ ಸಶಸ್ತ್ರ ಹೋರಾಟದ ತರಬೇತಿಯನ್ನು ನೀಡಲು ಪ್ರಯತ್ನಿಸಿ ಅಂತಹ ದಳವನ್ನು ಕಟ್ಟಿದವರು. ಈ ಕಾರ್ಯದಲ್ಲಿ ಇವರಿಗೆ ಕರಿಸಿದ್ಧ ಸ್ವಾಮಿಗಳು ಅಳವಂಡಿ, ಸಿ. ಎಂ. ಚುರ್ಚಿಹಾಳ ಮಠ ಮುಂಡರಗಿ, ಪ್ರಭುರಾಜ ಪಾಟೀಲ ಸಂಗನಾಳ, ಶಂಕರಪ್ಪ ಯಾರಾಶಿ - ಮೊದಲಾದವರು ಭುಜಬಲವಾದರು. ಅಷ್ಟೇ ಅಲ್ಲದೆ ಯಲಬುರ್ಗಿ ತಾಲ್ಲೂಕಿನ ಕೆಲವು ಹಳ್ಳಿಗಳು ಗುಲಾಮಗಿರಿಯನ್ನು ಕಳೆದುಕೊಂಡು ಸ್ವತಂತ್ರವಾದುವೆಂದು ಘೋಷಿಸುವ ಕಾರ್ಯದಲ್ಲಿ ಮುಂದಾದವರಲ್ಲಿ ಇವರು ಅಗ್ರಗಣ್ಯರು. ಹೈದರಾಬಾದ ಸಂಸ್ಥಾನದ ವಿಮೋಚನೆಯಾಗುವವರೆಗೆ ಆ ಹಳ್ಳಿಗಳು ರೋಣ ತಾಲ್ಲೂಕಿನಲ್ಲಿ ಸಮಾವೇಶಗೊಂಡಿದ್ದುವು ಎಂಬುದಕ್ಕೆ ದಾಖಲೆಗಳಿವೆ. ಇವರ ಸಾಹಸ, ಧೈರ್ಯ, ಸಂಘಟನಾ ಶಕ್ತಿಗಳಿಗೆ ಹೆದರಿದ ನಿಜಾಮನು ''ಶಿವಮೂರ್ತಿಸ್ವಾಮಿ ಅಳವಂಡಿ ಅವರನ್ನು ಸಜೀವ ತಂದು ಒಪ್ಪಿಸಿದವರಿಗೆ ರೂಪಾಯಿ ಇಪ್ಪತ್ತು ಸಾವಿರ, ನಿರ್ಜೀವ ತಂದು ಒಪ್ಪಿಸಿದವರಿಗೆ ರೂಪಾಯಿ ಹತ್ತು ಸಾವಿರ ನಗದು ಬಹುಮಾನ''ವನ್ನು ಘೋಷಿಸಿದ್ದನು. ಹೀಗಾಗಿ ಇವರು ನಿಜಾಂ ಆಡಳಿತಕ್ಕೆ ಸಿಂಹಸ್ವಪ್ನವಾದವರು. ಕಂಚಿನ ಕಂಠದ ಭಾಷಣಗಳಿಂದ ಜನತೆಯನ್ನು ಹುರಿದುಂಬಿಸಿದವರು, ೧೯೪೮ರಿಂದ ನಿಷ್ಠಾವಂತ ಕಾಂಗ್ರೆಸಿಗರಾಗಿ ಅಹರ್ನಿಶಿ ದುಡಿದವರು, ಹೈದರಾಬಾದ ವಿಮೋಚನೆಯ ಅನಂತರ ವಿಸರ್ಜಿತವಾಗದೆ ಉಳಿದ ಕಾಂಗ್ರೆಸ್ಸಿನ ಚಟುವಟಿಕೆಗಳು ಹಿಡಿಸದೇ ಹೋಗಿ ಒಳಗಿನ ಭಿನ್ನ ಮತಕ್ಕೆ ಬೇಸರಿಸಿಕೊಂಡು, ೧೯೫೨ರಲ್ಲಿ ನಡೆದ ದೇಶದ ಪ್ರಥಮ ಚುನಾವಣೆಯಲ್ಲಿ ಕಾಂಗ್ರೆಸ್ಸಿನಿಂದ ಹೊರಬಂದು ಸ್ವತಂತ್ರ ಅಭ್ಯರ್ಥಿಯಾಗಿ ನಿಲ್ಲುವ ಪ್ರಸಂಗ ಒದಗಿತು. ಈ ಸಂದರ್ಭವು ಕೂಡ ಅಳವಂಡಿಯವರು 'ಲೋಕಸೇವಕ ಸಂಘ'ವನ್ನು ಸ್ಥಾಪಿಸಲು ತೀವ್ರವಾದ ಪ್ರಚೋದನೆಯನ್ನು ನೀಡಿತು.

ಈ ಪ್ರಸಂಗವು ಮುಂದೆ ಲೋಕಸೇವಕ ಸಂಘ ಅಸ್ತಿತ್ವಕ್ಕೆ ಮುನ್ಸೂಚನೆಯೆಂಬಂತೆ, ಅಳವಂಡಿ ಶಿವಮೂರ್ತಿಸ್ವಾಮಿಗಳು ಬೆಂಬಲಿಗರನ್ನೆಲ್ಲ ಸೇರಿಸಿ ಹೈದರಾಬಾದ ಸ್ಟೇಟ್ ಕಾಂಗ್ರೆಸ್ ಸಂಘಟನೆಯಲ್ಲಿ 'ಗೋಸಾಯಿ-ದೇಸಾಯಿ' ಎಂಬ ಒಡಕು ಉಂಟಾಗಿರುವ ಪರಿಸ್ಥಿತಿಯನ್ನು ವಿಶ್ಲೇಷಿಸಲು ಒಂದು ಸಭೆಯನ್ನು ಕರೆಯಲು ನಿಶ್ಚಿಯಿಸಿದರು. ಆಗ ಇನ್ನೂ ವಿದ್ಯಾರ್ಥಿಯಾಗಿದ್ದು, ಯಾವ ಪಕ್ಷ ರಾಜಕೀಯಕ್ಕೂ ಸೇರದೆಯಿದ್ದ ಮುದ್ನಾಳ ವಿಶ್ವನಾಥರೆಡ್ಡಿಯವರು ತಮ್ಮ ಯಾದಗಿರಿಯ ಜಿನಿಂಗ್ ಪ್ರೆಸ್ಸಿಂಗ್ಸ್ ಫ್ಯಾಕ್ಟರಿಯಲ್ಲಿ ಅಂತಹ ಸಭೆಯನ್ನು ಸೇರಿಸಿದರು. ಕುಷ್ಟಗಿ ಲೋಕಸಭಾ ಕ್ಷೇತ್ರದಿಂದ ಅಳವಂಡಿ ಶಿವಮೂರ್ತಿಸ್ವಾಮಿಗಳು ಕಾಂಗ್ರೆಸ್ ವಿರುದ್ಧ ಸ್ಪರ್ಧಿಸಬೇಕಲ್ಲದೆ ಕುಷ್ಟಗಿ ಮತ್ತು ರಾಯಚೂರುಗಳ ಲೋಕಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿ ಬರುವ ಎಲ್ಲ ವಿಧಾನಸಭಾ ಸ್ಥಾನಗಳಿಗೆ ಸ್ಪರ್ಧಿಸಲಿರುವ ಸ್ವತಂತ್ರ

ಅಭ್ಯರ್ಥಿಗಳನ್ನು ಬೆಂಬಲಿಸಬೇಕೆಂದು ನಿರ್ಧರಿಸಿದರು. ಆ ನಿರ್ಧಾರಕ್ಕೆ ತಕ್ಕಂತೆ ಅಳವಂಡಿಯವರ ಬೆಂಬಲಿಗರು ಚೆನ್ನಾಗಿ ಚುನಾವಣೆಯ ಪ್ರಚಾರ ಮಾಡಿ ಅವರನ್ನು ಗೆಲ್ಲಿಸಿದರಷ್ಟೇ ಅಲ್ಲ, ದೇವದುರ್ಗ, ಮಾನ್ವಿ ಲಿಂಗಸುಗೂರು, ಸಿಂಧನೂರು, ಗಂಗಾವತಿ, ಕುಷ್ಟಗಿ, ಕೊಪ್ಪಳ, ಯಲಬುರ್ಗಿ ಮೊದಲಾದ ವಿಧಾನಸಭಾ ಕ್ಷೇತ್ರಗಳು ಸ್ವತಂತ್ರ ಅಭ್ಯರ್ಥಿಗಳ ಪಾಲಾದುವು. ಈ ಗೆಲುವಿನ ಪರಾಮರ್ಶೆಯು ಲೋಕಸೇವಕ ಸಂಘದ ಸ್ಥಾಪನೆಗೆ ಅಳವಂಡಿ ಶಿವಮೂರ್ತಿಸ್ವಾಮಿಗಳಲ್ಲಿ ಮತ್ತಷ್ಟು ಆತ್ಮವಿಶ್ವಾಸವನ್ನು ಮೂಡಿಸಿತು. ಈ ಆತ್ಮ ವಿಶ್ವಾಸಕ್ಕೆ ಅವರು ಆಗಲೇ ಸ್ಥಾಪಿಸಿ ಕಾರ್ಯ ಪ್ರವೃತ್ತವಾಗಿದ್ದ ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು ಈ ದಿಸೆಯಲ್ಲಿ ಸಾಕಷ್ಟು ಅನುಭವಗಳನ್ನು ನೀಡಿತ್ತು. ಈ ಸಂಘಟನೆಯ ಹಂಪಿಯ ಅಧಿವೇಶನದಿಂದಾಗಿ, ಅಲ್ಲಿ ತೆಗೆದುಕೊಂಡ ಉಗ್ರಕ್ರಮದ ನಿರ್ಣಯಗಳಿಂದಾಗಿ ಹಂಪಿ, ಹೊಸಪೇಟೆ, ಬಳ್ಳಾರಿ ಮೊದಲಾದವು ಕರ್ನಾಟಕ ರಾಜ್ಯದಲ್ಲಿ ಉಳಿಯುವಂತಾಯಿತು.

ಹೀಗೆ ೧೯೫೬ರಲ್ಲಿ ಭಾಷಾವಾರು ಪ್ರಾಂತ ರಚನೆಗಳಾಗಿ ಕರ್ನಾಟಕ ರಾಜ್ಯವು ವಿಶಾಲ ಮೈಸೂರು ಹೆಸರಿನಿಂದ ಉದಯವಾದ ಮೇಲೆ, ಕೆಲವೇ ತಿಂಗಳುಗಳಲ್ಲಿ ಎರಡನೆಯ ಮಹಾಚುನಾವಣೆ ೧೯೫೭ರಲ್ಲಿ ಬಂದೇಬಿಟ್ಟಿತು. ಆ ಸಮಯಕ್ಕಾಗಲೇ ಅಳವಂಡಿ ಶಿವಮೂರ್ತಿಸ್ವಾಮಿಗಳ ಬೆಂಬಲಿಗರು ರಾಯಚೂರು, ಕಲಬುರಗಿ ಜಿಲ್ಲೆಗಳಿಗೆ ಸೀಮಿತರಾಗಿರದೆ ಉತ್ತರ ಕರ್ನಾಟಕದ ತುಂಬೆಲ್ಲ ನಿಷ್ಠಾವಂತರಾಗಿ ಬೆಳೆಯತೊಡಗಿದ್ದರು. ಆದರೆ ಇವರೆಲ್ಲ ಕಾಂಗ್ರೆಸ್ಸಿಗೆ ಪ್ರಬಲ ವಿರೋಧವನ್ನು ಒಡ್ಡಿದ್ದರೇ ವಿನಾ ಒಂದು ಪ್ರತಿಪಕ್ಷವಾಗಿ ಸಂಘಟನೆಯಾಗಿರಲಿಲ್ಲ. ಅದಕ್ಕಾಗಿ ಒಂದು ಉನ್ನತ ಧ್ಯೇಯದ ರಾಜಕೀಯ ಪಕ್ಷವನ್ನು ಹುಟ್ಟುಹಾಕುವುದಕ್ಕೆ ಆ ಸಮಯವು ಬಹು ಪಕ್ವವಾದ ಸಮಯವೆಂದು ಅಳವಂಡಿ ಶಿವಮೂರ್ತಿಸ್ವಾಮಿಗಳು ಮನದಲ್ಲಿ ನಿರ್ಧರಿಸಿ, ಆ ದಿಸೆಯಲ್ಲಿ ಸಂಘಟನೆ ಮತ್ತು ಸ್ಥಾಪನೆಗಾಗಿ ಮುಂದಾದರು. ಅವರಿಗೆ ಆ ಕ್ಷಣದಲ್ಲಿ ತಮ್ಮ ಬೆಂಬಲಿಗರೊಂದಿಗೆ ಸೋಷಲಿಸ್ಟ್, ಕಮ್ಯುನಿಸ್ಟ್ ಇತ್ಯಾದಿ ಪಕ್ಷಗಳೊಂದಿಗೆ ಸೇರಲು ಇಚ್ಛೆಯಿರಲಿಲ್ಲ. ಆದರೆ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರ ಆಧ್ಯಾತ್ಮಿಕ ನೆಲೆಯ ಮೇಲೆ ಹೊಸ ಪಕ್ಷ ಕಟ್ಟಬೇಕೆಂದು, ಆ ಪಕ್ಷದ ಅಭಿವೃದ್ಧಿಗಾಗಿ ತಮ್ಮ ಎಲ್ಲ ಬೆಂಬಲಿಗರು ಸೇರ್ಪಡೆಯಾಗಿ ದುಡಿದು ಅದನ್ನು ಸಮರ್ಥ ರಾಜಕೀಯ ಪಕ್ಷವನ್ನಾಗಿ ಕಟ್ಟಬೇಕೆಂದು ಹಾರೈಸಿದರು. ಬಸವಣ್ಣನವರು ಬೋಧಿಸಿದ ದಯೆ, ಅನುಕಂಪ, ದೀನದಲಿತರ ಸೇವೆ, ಸಕಲ ಜೀವಾತ್ಮರ ಲೇಸು, ಮೊದಲಾದ ಮೌಲ್ಯಗಳನ್ನು ಅವರು ಕಟ್ಟಬೇಕೆಂದಿರುವ ಹೊಸ ಪಕ್ಷದಲ್ಲಿ ಬಿತ್ತಿ ಬೆಳೆಸಬೇಕೆಂದು ಯೋಚಿಸಿದರು.

ಹೀಗೆ ಅಳವಂಡಿ ಶಿವಮೂರ್ತಿಸ್ವಾಮಿಗಳು ತಾವು ಕಟ್ಟಬೇಕೆಂದಿರುವ ಹೊಸ ಪಕ್ಷಕ್ಕೆ, ಮತ್ತೆ ಬಹಳ ಕಾಲ ಕಾಯದೆ ಜುಲೈ ೧೯೫೭ರಲ್ಲಿ 'ಲೋಕಸೇವಕ ಸಂಘ' ಎಂಬ ಹೆಸರನ್ನಿಟ್ಟುಕೊಂಡೇ, ನಾನಾ ಜಿಲ್ಲೆಗಳ ಬೆಂಬಲಿಗರನ್ನು ಒಂದೆಡೆ ಸೇರಿಸುವ ಸಭೆಯನ್ನು ಕರೆದರು. ಈ ಸಭೆಯನ್ನು ಗದುಗಿನ ಗುರುಸಿದ್ಧಪ್ಪ ಬಳ್ಳಾರಿ ಅವರ ಮಿಲ್ಲಿನಲ್ಲಿ ಸೇರಿಸಲಾಯಿತು. ಈ ಸಭೆಗೆ ಕರ್ನಾಟಕದ ಮೂಲೆ ಮೂಲೆಯಿಂದ ಆಸಕ್ತರು ಬಂದಿದ್ದರು. ಅವರಲ್ಲಿ ಪ್ರಮುಖರಾದವರಲ್ಲಿ ಗೊತ್ತಿದ್ದ ಕೆಲವು ಹೆಸರುಗಳನ್ನಾದರೂ ಇಲ್ಲಿ ಉಲ್ಲೇಖಿಸುವುದು ಒಳಿತು. ಧಾರವಾಡದಿಂದ ಬಿ. ಎಸ್. ಪಾಟೀಲ ವಕೀಲರು, ಶಂಕರಪ್ಪ ದೇಸಾಯಿ ಸುಳ್ಳದ; ಯಾದಗಿರಿಯಿಂದ ವಿಶ್ವನಾಥ ರೆಡ್ಡಿ ಮುದ್ನಾಳ ಮತ್ತು ಶ್ರೀ ಭೀಮನಗೌಡ ಮುದ್ನಾಳ ಅವರ ನೇತೃತ್ವದಲ್ಲಿ ಅವರ ಬಂಧುಗಳು; ರಾಯಚೂರಿನಿಂದ ಶ್ರೀ ಕಲ್ಲೂರ ಸಿದ್ಧಣ್ಣನವರೂ, ಮಾನ್ವಿಯ ಬೆಟದೂರ ಸಹೋದರರು, ಬಸವಲಿಂಗಪ್ಪರಾಯರಡ್ಡಿ ತಳಕಲ್ಲು ಅವರು, ವೀರಭದ್ರಪ್ಪ ಶಿರೂರ ಗದ್ದೀರಪ್ಪ ದೇಸಾಯಿ ಮುಧೋಳ ಅವರು, ಬಸವನ ಗೌಡ ಕವಳೂರು, ಕೊಪ್ಪಳ ಅವರು; ಜಮಖಂಡಿಯಿಂದ ಮುರುಗೋಡ ಮಹಾದೇವಪ್ಪನವರು; ಕುಂದಗೋಳದಿಂದ ಎಸ್. ಆರ್. ಬೊಮ್ಮಾಯಿ ಅವರು; ಕಲಘಟಗಿಯಿಂದ ಬಿ. ಎ. ದೇಸಾಯಿ ಹಂಗರಕಿ ಅವರೂ; ನವಲಗುಂದಿನಿಂದ ಶ್ರೀ ಎಂ. ಕೆ. ಕುಲಕರಣಿ ಅವರು, ಬೆಳಗಾವಿ ಜಿಲ್ಲೆಯ ರಾಮದುರ್ಗದಿಂದ ಮಹಾದೇವಪ್ಪ ಪಟ್ಟಣ ಅವರು ಬಂದಿದ್ದರು.

ಈ ಎಲ್ಲರ ಸಮ್ಮುಖದಲ್ಲಿ ಕೂಲಂಕಷವಾಗಿ ಲೋಕಸೇವಕ ಸಂಘದ ಸ್ಥಾಪನೆ ಕುರಿತು ನಡೆದ ವಿಚಾರ ವಿನಿಮಯದ ಅನಂತರ, ಈ ಪಕ್ಷದ ಸಂಸ್ಥಾಪನೆಯ ಪ್ರಥಮ ಸಂಸ್ಥಾಪನಾ ಅಧಿವೇಶನವನ್ನು ೧ನೆಯ ಆಗಸ್ಟ್ ೧೯೫೬ರಲ್ಲಿ ಗದಗಿನಲ್ಲಿ ನೆರವೇರಿಸಲು ಆಗ ನಿರ್ಧರಿಸಲಾಯಿತು ಈ ಪ್ರಥಮ ಅಧಿವೇಶನದ ಸ್ವಾಗತ ಸಮಿತಿಯ ಅಧ್ಯಕ್ಷರೆಂದು ಅನಂತರಾವ್ ಜಾಲಿಹಾಳ ಅವರನ್ನು ನೇಮಿಸಲಾಯಿತು. ಅವರ ಹಿರಿತನದಲ್ಲಿ ಅಧಿವೇಶನದ ಸಿದ್ಧತೆಗಳು ನಡೆದವು.

ಇದೇ ಸಂದರ್ಭದಲ್ಲಿ ರಾಜ್ಯ ಪುನರ್‌ಘಟನೆಯ ಕುರಿತು ಭಾರತ ಸರಕಾರವು ನಿರ್ಧಾರ ತೆಗೆದುಕೊಳ್ಳುವ ಬಗ್ಗೆ ಖಚಿತವಾದ ಸ್ವರೂಪವು ಹೊರಬಂದಿತು. ಇನ್ನೇನು ಈ ದಿನಾಂಕವು ಖಚಿತಗೊಂಡಿತು. ಅದೆಂದರೆ ೧ ನೆಯ ನವೆಂಬರ್ ೧೯೫೬. ಆದಿನ

ಕರ್ನಾಟಕದ ಭಾಗಗಳೆಲ್ಲ ಒಂದುಗೂಡಿ ನವ ಮೈಸೂರು ರಾಜ್ಯ ನಿರ್ಮಾಣವಾಗುವುದೆಂದು ತಿಳಿದುಬಂದಿತು. ಹಾಗೆ ನಿರ್ಮಾಣವಾಗಲಿರುವ ನವ ಮೈಸೂರು ರಾಜ್ಯದಲ್ಲಿ ಸರ್ವಶ್ರೀ ಎಸ್. ನಿಜಲಿಂಗಪ್ಪ, ಎಸ್. ಆರ್. ಕಂಠಿ, ಬಿ.ಡಿ. ಜತ್ತಿ ಮೊದಲಾದವರ ಪ್ರಭಾವವು ವಿಶೇಷವಾಗಿತ್ತೆಂಬುದು ಆಗ ಎಲ್ಲರಿಗೂ ತಿಳಿದ ವಿಷಯ. ಅದರಿಂದಾಗಿ ಅಳವಂಡಿ ಶಿವಮೂರ್ತಿಸ್ವಾಮಿಗಳ ಬೆಂಬಲಿಗರಲ್ಲಿ ಅನೇಕರು, ಪುನಃ ಕಾಂಗ್ರೆಸ್ಸಿಗೆ ತಿರುಗಿದರು. ಇದನ್ನು ಕಂಡ ಅಳವಂಡಿಯವರಿಗೆ ಬೇಸರವೆನಿಸಿತು. ಏಕೆಂದರೆ ಅವರು ಕಾಂಗ್ರೆಸ್ಸನ್ನು ತ್ಯಜಿಸಿ ಬರುವಾಗ ತಾತ್ತ್ವಿಕ ನೆಲೆಯನ್ನಿಟ್ಟುಕೊಂಡೇ ಹೊರಬಂದವರು. ಆ ನೆಲೆಯೆಂದರೆ ಪಕ್ಷಾತೀತ ಹಾಗೂ ಸದ್ಧರ್ಮ ನಿಷ್ಠ ಸರಕಾರ ಸ್ಥಾಪನೆಯದಾಗಿತ್ತು. ಇದನ್ನೇ ಅವರು 'ಲೋಕಸೇವಕ ಸಂಘ'ದಿಂದ ಸಾಧನೆ ಮಾಡಲು ದೃಢನಿರ್ಧಾರ ಮಾಡಿದ್ದರು. ಅವರ ಬೆಂಬಲಿಗರಲ್ಲಿ ಕೆಲವರು ಬದಲಾದ ಪರಿಸ್ಥಿತಿಯಲ್ಲಿ ಕಾಂಗ್ರೆಸ್ಸಿಗೆ ಒಲಿಕೊಂಡಾಗ, ಅಳವಂಡಿಯವರು ತಮ್ಮ ನಿರ್ಧಾರವನ್ನು ಬದಲಿಸಿದೆ ಅಚಲರಾದರು. ಆಗ ಅವರಿಗೆ ಆನೆ ಬಲವಾಗಿ ನಿಂತವರು ಯಾದಗಿರಿಯ ವಿಶ್ವನಾಥ ಮುದ್ನಾಳ ಅವರು. ಮುದ್ನಾಳ ಅವರು ಆಳುವ ಪಕ್ಷಕ್ಕೊಂದು ಕೇಳುವ ಪಕ್ಷವಿರಬೇಕೆಂದು ಗಟ್ಟಿಯಾಗಿ ನಂಬಿದವರು. ಈ ಗಟ್ಟಿಯಾದ ಮುದ್ನಾಳ ಅವರ ನೂರ್ಮಡಿ ಧೈರ್ಯದ ಬೆಂಬಲದಲ್ಲಿ ತಾವು ಕಟ್ಟಬೇಕೆಂದ 'ಲೋಕ ಸೇವಕ ಸಂಘ'ದ ಸಂಸ್ಥಾಪನಾ ಅಧಿವೇಶನವನ್ನು ಅಳವಂಡಿಯವರು ಗದಗಿನಲ್ಲಿ ೧ ನೆಯ ಆಗಸ್ಟ ೧೯೫೬ರಲ್ಲಿ ನಡೆಸಿದರು. ಈ 'ಲೋಕ ಸೇವಕ ಸಂಘ'ದ ಸಂಸ್ಥಾಪಕ ಅಧ್ಯಕ್ಷರಾಗಿ ಈ ಪಕ್ಷವನ್ನು ಕಟ್ಟುವಲ್ಲಿ ತಮ್ಮ ಎಲ್ಲ ಶ್ರಮವನ್ನು ಧಾರೆಯೆರೆದರು.

ಈ ರೀತಿ ಸ್ಥಾಪನೆಗೊಂಡ ಲೋಕಸೇವಕ ಸಂಘವು ತಾನು ಪರಿಪಾಲಿಸಬೇಕಾದ ಪಂಚಸೂತ್ರಗಳನ್ನು ಸಂಸ್ಥಾಪನಾಧಿವೇಶನದಲ್ಲಿ ಪ್ರಕಟಿಸಿತು. ಅದಕ್ಕೆ ಎಲ್ಲರೂ ಕಟಿಬದ್ಧರಾಗಿರಬೇಕೆಂದು ಒಪ್ಪಿಕೊಳ್ಳಲಾಯಿತು. ಅವು ಇಂತಿವೆ:

**೧. ಸೇವಾಭಾವದ ಸಮಾಜ ರಚನೆ**

ಸ್ವಯಂ ದುಡಿದು, ಸ್ವಯಂ ನಿಬಂಧಗಳಿಗೊಳಪಟ್ಟು, ಯಾರೂ ಯಾರನ್ನೂ ಶೋಷಿಸದೆ ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವ ಸೇವಾ ಪ್ರವೃತ್ತಿಯನ್ನು ಬೆಳೆಸಿಕೊಂಡು ಆದರ್ಶದ ಬದುಕನ್ನು ಎಲ್ಲರೂ ಸಾಗಿಸುವುದು.

**೨. ಸದ್ಧರ್ಮ ರಾಷ್ಟ್ರ ನಿರ್ಮಾಣ**

ಸರ್ವಧರ್ಮಗಳಿಗೆ ಸಮಭಾವನೆಯಿರುವ ಆಧ್ಯಾತ್ಮಿಕ ತಳಹದಿಯ ಮೇಲೆ ರಾಷ್ಟ್ರ ಕಟ್ಟುವುದು. ಏಕೆಂದರೆ ರಾಜ್ಯಾಂಗದಲ್ಲಿರುವ ಧರ್ಮಾತೀತವೆಂಬುದು ಕೇವಲ ಭೌತಿಕವೆನಿಸುತ್ತದೆ.

**೩. ಪಕ್ಷಾತೀತ ಸರಕಾರದ ರಚನೆ**

ಸುಖೀರಾಜ್ಯ ನಿರ್ಮಾಣದ ಗುರಿಯನ್ನು ಹೊಂದಿರುವುದರಿಂದ ಆ ನಿಟ್ಟಿನಲ್ಲಿ ತ್ಯಾಗ ಸಮರ್ಪಣೆ ಭಾವವುಳ್ಳ ಆಡಳಿತವು ಅಸ್ತಿತ್ವಕ್ಕೆ ಬರುವಂತೆ ಶ್ರಮಿಸುವುದು. ಅದಕ್ಕಾಗಿ ಒಳ್ಳೆಯವರನ್ನೇ ಆಡಳಿತ ನಡೆಸಲು ಆಯ್ಕೆ ಮಾಡುವುದು ಮತ್ತು ಒಳ್ಳೆಯವರು ಒಂದೇ ಪಕ್ಷದಲ್ಲಿರುವುದಿಲ್ಲ, ಅವರು ಅಲ್ಲಲ್ಲಿ ಚದುರಿರುತ್ತಾರೆ.

**೪. ಸಂಪೂರ್ಣ ಸ್ವರಾಜ್ಯ**

ಸ್ವದೇಶೀ, ಸ್ವಾವಲಂಬನ, ಸ್ವಯಂ ಆಡಳಿತದ ಪ್ರವೃತ್ತಿಯನ್ನು ಜನರಲ್ಲಿ ಕುದುರಿಸಲು ಅಧಿಕಾರವು ವಿಕೇಂದ್ರವಾಗಿ ಗ್ರಾಮಪಂಚಾಯತಿಯವರೆಗೆ ಹರಿದು ಹಂಚಿಹೋಗಬೇಕು.

**೫. ಶಾಶ್ವತವಾದ ಸ್ವಾಭಾವಿಕ ಆರ್ಥಿಕ ರಚನೆ**

ದುಡಿತಕ್ಕೆ ತಕ್ಕಂತೆ ಫಲ ದೊರೆತು ಯಾರೂ ಯಾರನ್ನೂ ಶೋಷಿಸದಂತೆ ಪಾಲನೆಗೊಂಡು, ಗ್ರಾಮೀಣ ಗೃಹ ಕೈಗಾರಿಕೆಗಳನ್ನು ಪ್ರೋತ್ಸಾಹಿಸಿ, ಮೂಲಭೂತ ಕಚ್ಚಾ ಸಾಮಗ್ರಿ ದೊರೆಯುವ ಬೃಹದ್ ಕೈಗಾರಿಕೆಗಳನ್ನು ಸರಕಾರವೇ ನಡೆಸುವ ಏರ್ಪಾಟು ಮಾಡುವುದು.

ಲೋಕಸೇವಕ ಸಂಘವು ಪ್ರಮುಖವಾದ ಪಂಚಸೂತ್ರಗಳನ್ನು ಸ್ವೀಕರಿಸಿ ಅಸ್ತಿತ್ವಕ್ಕೆ ಬಂದ ಆರೇ ತಿಂಗಳುಗಳಲ್ಲಿ ದ್ವಿತೀಯ ಮಹಾಚುನಾವಣೆಗಳು ದೇಶದಲ್ಲಿ ಬಂದುವು. ಬುಟ್ಟಿಯಿಂದ ರಾಶಿ ಮಾಡುತ್ತಿರುವ ಹೆಣ್ಣುಮಗಳ ಚಿಹ್ನೆಯನ್ನು ಸ್ವೀಕರಿಸಿ ಈ ಹೊಸ ಪಕ್ಷವು ವಿಶೇಷವಾಗಿ ಕಾಂಗ್ರೆಸ್ಸನ್ನು ಸೋಲಿಸಬೇಕೆಂದು ಬಹಳ ಉತ್ಸಾಹದಿಂದ ಕಣಕ್ಕೆ ಇಳಿಯಿತು. ಕನಸೆಲ್ಲ ನನಸಾಗಿ ಶ್ರೀಸಾಮಾನ್ಯನು ಸುಖಿಯಾಗಿ ಬಾಳುತ್ತಾನೆಂದು ಹುಮ್ಮಸ್ಸು ತಾಳಿತು. ಆದರೆ ಫಲಿತಾಂಶವು ಹಾಗೆ ಬರಲಿಲ್ಲ. ಕ್ರಿ.ಶ. ೧೯೫೭ರ ಈ ದ್ವಿತೀಯ ಮಹಾಚುನಾವಣೆಯಲ್ಲಿ ಈ ಪಕ್ಷದ ಸಂಸ್ಥಾಪಕ ಅಧ್ಯಕ್ಷರಾಗಿದ್ದ ಅಳವಂಡಿಯವರು ಕೊಪ್ಪಳ ಲೋಕ ಸಭೆಯ ಸ್ಥಾನವನ್ನು ಕಳೆದುಕೊಂಡರು.

ವಿಶ್ವನಾಥರೆಡ್ಡಿ ಮುದ್ನಾಳ ಅವರೂ ರಾಯಚೂರು ಲೋಕಸಭೆಯ ಸ್ಥಾನವನ್ನು ಕಳೆದುಕೊಂಡರು. ಆರಿಸಿ ಬಂದದ್ದು ಮೂರು ಸ್ಥಳಗಳಾಗಿದ್ದರೆ, ಉಳಿದುದೆಲ್ಲ ಸೋಲೇ ಸೋಲು. ಆರಿಸಿ ಬಂದವರಲ್ಲಿ ಲೋಕಸಭೆಗೆ ವಿಜಾಪುರದಿಂದ ಮುರುಗೆಪ್ಪ ಸುಗಂಧಿ ಒಬ್ಬರಾದರೆ, ಯಾದಗಿರಿ ವಿಧಾನಸಭೆಗೆ ಬಸವಂತರಾಯ ನಾಡಗೌಡರು ಇನ್ನೊಬ್ಬರು, ರಾಮದುರ್ಗ ವಿಧಾನಸಭೆಗೆ ಶ್ರೀಮತಿ ಶಾರದಮ್ಮ ಪಟ್ಟಣ ಎಂಬವರು ಮತ್ತೊಬ್ಬರು. ಈ ನಿರಾಶಾದಾಯಕ ಫಲಿತಾಂಶದಿಂದಾಗಿ ಈ ಪಕ್ಷದ ನಾಯಕರು ಎದೆಗುಂದಲಿಲ್ಲ. ಮತ್ತೆ ಸಾಮಾನ್ಯ ಜನತೆಯಲ್ಲಿ ಪಕ್ಷದ ಧ್ಯೇಯೋದ್ದೇಶಗಳನ್ನು ಪ್ರಚಾರ ಮಾಡತೊಡಗಿದರು. ಸೋಲಿಗೆ ಕಾರಣವೇನು ಎಂದು ಆತ್ಮ ವಿಮರ್ಶೆ ಮಾಡಿಕೊಂಡರು. ಆದರೂ ಆ ಕೊರತೆಗಳನ್ನು ತುಂಬಿಕೊಂಡು ಚೇತರಿಸಿಕೊಳ್ಳಲು ಬಹು ಕಷ್ಟವಾಗತೊಡಗಿತು. ೧೯೫೭ರಲ್ಲಿ ನಡೆದ ಪ್ರಥಮ ಮಹಾಚುನಾವಣೆಯಲ್ಲಿ ಇದ್ದ ಹುರುಪು ಉಳಿಯಲಿಲ್ಲ. ಹೀಗಾಗಿ ಇದೊಂದು ಕೇವಲ ಕೆಲವೇ ಸ್ವಯಂ ವರ್ಚಸ್ಸುಳ್ಳ ನಾಯಕರಿಗೆ ಮೀಸಲಾದ ಪಕ್ಷವಾಗಿ ಬಾಡತೊಡಗಿತು. ಆದರೂ ಅಳವಂಡಿ ಅವರು ಆಶಾವಾದಿಗಳಾಗಿ ದೇಶವನ್ನು ಸುಭಿಕ್ಷವಾಗಿ ಕಟ್ಟುವ ದಿಸೆಯಲ್ಲಿ ಪಕ್ಷವನ್ನು ಬೆಳೆಸುವ ಆಶೆಯನ್ನು ಕೈಬಿಡಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಈ ಪಕ್ಷವು ಮೂರನೆಯ ಮಹಾಚುನಾವಣೆಯನ್ನು ಎದುರಿಸಲು ಮನಸ್ಸು ಮಾಡಿತು. ಮತ್ತೆಯೂ ನಿರೀಕ್ಷಿಸಿದಷ್ಟು ಫಲಿತಾಂಶವು ಬರಲಿಲ್ಲ. ಅಳವಂಡಿಯವರು ಮಾತ್ರ ಆಯ್ಕೆಯಾಗಿ ಲೋಕಸಭೆಯನ್ನು ಮತ್ತೊಮ್ಮೆ ಪ್ರವೇಶಿಸಿದರು. ಉಳಿದ ಕ್ಷೇತ್ರಗಳಲ್ಲಿ ಸೋಲಾಗಿದ್ದರೂ ಮತಗಳನ್ನು ಪಡೆದ ಲೆಕ್ಕವು ಮುಂದೆ ಚೇತರಿಸಿಕೊಳ್ಳಬಹುದೆಂಬ ಸೂಚನೆ ತೋರಿತ್ತು. ಕ್ರಿ.ಶ. ೧೯೬೭ರಲ್ಲಿ ನಾಲ್ಕನೆಯ ಮಹಾಚುನಾವಣೆ ಬಂದಾಗ ಈ ಪಕ್ಷದ ಸಂಸ್ಥಾಪಕ ಅಧ್ಯಕ್ಷರು ಸೋಲನ್ನು ಅನುಭವಿಸಬೇಕಾಯಿತು. ಆದರೆ ನವ ಮೈಸೂರಿನ ವಿಧಾನಸಭೆಯಲ್ಲಿ ಎದ್ದುಕಾಣುವ ಸಂಖ್ಯೆಯಲ್ಲಿ ಸದಸ್ಯರು ಆರಿಸಿ ಹೋಗಿದ್ದು, ಮುದ್ನಾಳ ವಿಶ್ವನಾಥರೆಡ್ಡಿ ಅವರು ಅಲ್ಲಿ ಲೋಕಸೇವಕ ಸಂಘದ ನಾಯಕರಾಗಿ ಪ್ರತಿನಿಧಿಸಿದರು.

ಕ್ರಿ.ಶ. ೧೯೭೧ರಲ್ಲಿ ಅದುವರೆಗೆ ಬಹಳ ಗಟ್ಟಿ ಎನ್ನಿಸಿಕೊಂಡ ಕಾಂಗ್ರೆಸ್ ಪಕ್ಷವು ಒಡೆದು ಎರಡು ಹೋಳಾಯಿತು. ಸಂಸ್ಥಾ ಕಾಂಗ್ರೆಸ್, ರೂಲಿಂಗ್ ಕಾಂಗ್ರೆಸ್ ಎಂಬ ಹೆಸರುಗಳಿಗೆ ಚಿತಾವಣೆ ನೀಡಿತು. ಇದರಿಂದಾಗಿ ಸರಕಾರವು ವಿಸರ್ಜಿತವಾಗಿ ಪುನಃ ಲೋಕಮತವನ್ನು ಅಪೇಕ್ಷಿಸಿತು. ಮಧ್ಯಕಾಲೀನ ಚುನಾವಣೆಗಳನ್ನು ಈ ೧೯೭೧ರಲ್ಲಿ ಎದುರಿಸಬೇಕಾಯಿತು. ಆಗ ಶ್ರೀಮತಿ ಇಂದಿರಾ ಗಾಂಧಿ ಅವರು ಜನಪ್ರಿಯತೆಯನ್ನು ಬಹಳ ಪಡೆದವರಾಗಿದ್ದರು. ಅವರೇ ರೂಲಿಂಗ್ ಕಾಂಗ್ರೆಸ್ಸಿನ ನಾಯಕರಾಗಿದ್ದರು. ಅವರ ಜನಪ್ರಿಯತೆಯ ರಭಸದಲ್ಲಿ ಬಹಳಷ್ಟು ಪಕ್ಷಗಳ ಉಮೇದುವಾರರು ನೆಲಕಚ್ಚಬೇಕಾಯಿತು. ಇಂದಿರಾಗಾಂಧಿ ಅವರು ಬಡವರ ತಾಯಿ ಎಂದೇ ದೇಶದ ಕೋಟಿಕೋಟಿ ಜನ ಒಕ್ಕೊರಲಿನಿಂದ ಹಾಡತೊಡಗಿತು. ಆ ರಭಸದಲ್ಲಿ 'ಲೋಕ ಸೇವಕ ಸಂಘ'ವು ಸಂಸ್ಥಾ ಕಾಂಗ್ರೆಸ್ಸಿನ ಜೊತೆ ಚುನಾವಣಾ ಒಪ್ಪಂದ ಮಾಡಿಕೊಂಡು ಚುನಾವಣಾ ಕಣಕ್ಕೆ ತನ್ನ ಪ್ರಭಾವದ ಸೀಮಿತ ಸ್ಥಾನಗಳಿಗೆ ಅಭ್ಯರ್ಥಿಗಳನ್ನು ನಿಲ್ಲಿಸಿದರೂ ಫಲಿತಾಂಶವು ಇಂದಿರಾ ಕಾಂಗ್ರೆಸ್ಸೆಂದೇ ಪ್ರಖ್ಯಾತಿ ಪಡೆದಿದ್ದ ರೂಲಿಂಗ್ ಕಾಂಗ್ರೆಸ್ಸಿಗೆ ಹೋಯಿತು. ಅಷ್ಟೇಕೆ ಸ್ವತಃ ಅಳವಂಡಿ ಶಿವಮೂರ್ತಿ ಸ್ವಾಮಿಗಳೂ ಈ ಚುನಾವಣೆಯಲ್ಲಿ ಕೊಪ್ಪಳ ಲೋಕಸಭಾ ಸ್ಥಾನಕ್ಕೆ ಸ್ಪರ್ಧಿಸಿ ಸೋಲನ್ನು ಪಡೆದು ಹೌಹಾರಿದರು. ಈ ಪಕ್ಷವು ಕೇವಲ ಬೆರಳೆಣಿಕೆಗೆ ಸಲ್ಲುವ ಪಕ್ಷವಾಯಿತಲ್ಲ ಎಂದು ಚಿಂತಿಸತೊಡಗಿದರು. ಈ ಚಿಂತನೆಯ ಫಲವು ವಸ್ತುನಿಷ್ಠವಾಗಿ ಬರಲಿಲ್ಲ. ಆದ್ದರಿಂದ ಇಂದಿರಾಜೀ ಅವರ ಬಗ್ಗೆ ಸಾಮಾನ್ಯ ಜನತೆ ತಾಳಿದ ಆತ್ಮವಿಶ್ವಾಸ ಪ್ರೀತಿಗಳ ಬಲದಲ್ಲಿ ಲೋಕಸೇವಕ ಸಂಘವು ಕ್ರಿ.ಶ. ೧೯೭೫ ರಲ್ಲಿ ಬಯಲಾಗಬೇಕಾಯಿತು. ಈ ಪರಿಸ್ಥಿತಿಯು ಇದೊಂದೇ ಪಕ್ಷಕ್ಕೆ ಬಂದ ಗತಿಯಾಗಿರಲಿಲ್ಲ. ಉಳಿದ ಅನೇಕ ಸಣ್ಣ ದೊಡ್ಡ ಪಕ್ಷಗಳು ಇಂದಿರಾಜೀ ಅವರ ಪ್ರಭಾವದ ಎದುರು ಸೊರಗಿದುವು.

೧೯೫೬ರಲ್ಲಿ ಆರಂಭಗೊಂಡು ೧೯೭೫ರಲ್ಲಿ ಬಯಲಾದ ಲೋಕಸೇವಕ ಸಂಘವು-ಮಹಾತ್ಮ ಗಾಂಧೀಜಿ ಅವರ ಮನೋವಾಂಛಿತದ ತತ್ತ್ವಗಳನ್ನು ತನ್ನ ತಳಹದಿಯಾಗಿ ಪಡೆದುಕೊಂಡು ಜನ್ಮ ತಾಳಿದ ಪಕ್ಷ; ಸಾರ್ಥಕ ಪ್ರಜಾಪ್ರಭುತ್ವವನ್ನು ನೀಡುವಲ್ಲಿ ಆರೋಗ್ಯಕರವಾದ ಸ್ವಾಸ್ಥ್ಯದ ಪ್ರತಿಪಕ್ಷವನ್ನು ನೀಡಲು ಹೊರಟ ಪಕ್ಷ; ಭಾರತದ ಬೆನ್ನೆಲುವಾಗಿರುವ ರೈತನ ಹಿತದೃಷ್ಟಿಗಳಿಗೆ ಸ್ಪಂದಿಸಲು ಸಿದ್ಧವಾಗಿದ್ದ ರಾಜಕೀಯ ಪಕ್ಷ; ೧೯೬೭ರಲ್ಲಿ ಸರ್ದಾರ ಹುಕುಂಸಿಂಗರು ಮತದಾರರ ಆಯ್ಕೆಯ ಅಭ್ಯರ್ಥಿಯೇ ಚುನಾವಣಾ ಕಣಕ್ಕಿಳಿಯಬೇಕೆಂದು ಸ್ಥಾಪಿಸಿದ 'ಮತದಾತಾ ಪರಿಷತ್ತು' ಎಂಬ ಸಂಸ್ಥೆಯ ಮಾರ್ಗದರ್ಶನವನ್ನು ಪಡೆದ ಈ ಪಕ್ಷ ಕೇವಲ ಒಂದು ದಶಕದ ಆಯುಷ್ಯವನ್ನು ಪಡೆದದ್ದು, ಇದಕ್ಕೆ ಕಾರಣಗಳೇನು? ಎಂಬುದನ್ನು ಆಳವಾದ ಅಭ್ಯಾಸ ಮಾಡಿಯೇ ಕಂಡುಹಿಡಿಯಬೇಕಾದ ವಿಷಯವಾಗಿ ಪರಿಣಮಿಸಿತು. ಇದು ಆಶ್ಚರ್ಯವೇ ಸರಿ.

'ಲೋಕಸೇವಕ ಸಂಘ' ವು ರಾಷ್ಟ್ರದ ಪ್ರತಿಯೊಂದು ರಾಜ್ಯದಲ್ಲಿ ಮನ್ನಣೆಯನ್ನು ಪಡೆಯಬೇಕಾಗಿದ್ದ ರಾಜಕೀಯ ಪಕ್ಷವಾಗಿ ವಿಜೃಂಭಿಸುವ ಪಂಚಸೂತ್ರಗಳನ್ನು ಹೊಂದಿದ್ದುದು ಸತ್ಯ. ಆದರೆ ಅದರ ಪ್ರಸಾರ ತುಂಬ ಸೀಮಿತವಾಯಿತು. ಅದು ಕೊನೆಗೆ ಸವ

ಮೈಸೂರಿನ ಪ್ರಾಂತಕ್ಕೆ ಸೀಮಿತವಾದ ಪಕ್ಷವೂ ಆಗಿ ಉಳಿಯಲಿಲ್ಲ. ಅದು ಕೇವಲ ಬೆರಣಿಕೆಯ ಒಂದೆರಡು ಜಿಲ್ಲೆಗಳಲ್ಲಿ ಭಾಗಶಃ ಮನ್ನಣೆಯನ್ನು ಪಡೆದಿತ್ತು. ಒಂದು ದಶಕದ ಇತಿಹಾಸವನ್ನು ನಿರ್ಮಿಸಿದ 'ಲೋಕಸೇವಕ ಸಂಘ' ವನ್ನು ಕುರಿತು ಬಿ. ಮಹಾದೇವಪ್ಪ ಅವರು ''ಲೋಕ ಸೇವಕ ಸಂಘವನ್ನು ಕಟ್ಟಿದ ನಾಯಕರ ಶಕ್ತಿ ಸಾಮರ್ಥ್ಯಗಳೆಲ್ಲ, ಆದರ್ಶಗಳನ್ನು ನವೀಕರಣ ಗೊಳಿಸುವಲ್ಲಿ ವ್ಯಯವಾಯಿತು'' ಎಂದು ಅಭಿಪ್ರಾಯಪಡುತ್ತ ಅವರು ಮುಂದುವರೆದು, ''ಈ ಪಕ್ಷವು ಕೈ ಬೆರಳೆಣಿಸುವಷ್ಟು ವ್ಯಕ್ತಿಗಳಿಗೆ ಸೀಮಿತವಾಗಿ ಕೊನೆಗೆ ಕ್ರಿ.ಶ. ೧೯೭೫ರಲ್ಲಿ ಸರ್ವಾಧಿಕಾರದ ತುರ್ತು ಪರಿಸ್ಥಿತಿಗೆ ದೇಶವು ಈಡಾಗಿ ಗಾಂಧೀಜಿ ಪ್ರಣೀತ ಲೋಕ ಸೇವಕ ಸಂಘವೆಂಬುದು, ನೇತಾಜಿ ಸುಭಾಷ್ಚಂದ್ರ ಬೋಸ್ ಪ್ರಣೀತ ಫಾರ್ವರ್ಡ್ ಬ್ಲಾಕ್‌ನಂತೆ ಬಯಲಲ್ಲಿ ಬಯಲಾಯಿತು. ಉರಿಯುಂಡ ಕರ್ಪುರಕ್ಕೆ ಇದ್ದಿಲುಂಟೆ? ಜಲರಹಿತ ತಟಾಕದಲ್ಲಿ ಈಜಲುಂಟೆ? ಎಂದು ಬೆರಳು ಕಚ್ಚುವಂತಾದುದು ಮಾತ್ರ ವಿಧಿಯ ವಿಕಟ ಅಟ್ಟಹಾಸ!'' ಎಂದು ಉದ್ಗಾರ ತೆಗೆದಿದ್ದಾರೆ.

ಈಗ ಮತದಾತ ಬಹಳ ಎಚ್ಚರಗೊಂಡಿದ್ದಾನೆ. ''ಲೋಕಸೇವಕ ಸಂಘವು' ತನ್ನ ಪಂಚಸೂತ್ರಗಳನ್ನು ರಚನಾತ್ಮಕ ಕಾರ್ಯಗಳಿಂದಾಗಿ, ಗ್ರಾಮಗಳ ನೆಲೆಯಲ್ಲಿ ಪುನಃ ಅನುಷ್ಠಾನಕ್ಕೆ ಸಾರ್ವತ್ರಿಕವಾಗಿ ತರಲು ಹವಣಿಸಲು ಸಾಧ್ಯ. ಸಮ್ಮಿಶ್ರ ಸರಕಾರಗಳಿಗೆ ಇಂದಿನ ಮತದಾತ ತನ್ನ ಒಪ್ಪಿಗೆಯನ್ನು ನೀಡುತ್ತಿರುವುದನ್ನು ಗಮನಿಸಿದರೆ, ಮಹಾತ್ಮ ಗಾಂಧೀಜಿ ಅವರ ಮನೋವಾಂಛಿತವು ರಾಷ್ಟ್ರದ ಹಿತದೃಷ್ಟಿಯಲ್ಲಿ ಈಗ ಪಕ್ವಗೊಂಡು ಕಾರ್ಯರೂಪಕ್ಕೆ ಬರಲು ಸಾಧ್ಯ. ಅದಕ್ಕಾಗಿ ಲೋಕಸೇವಕ ಸಂಘದ ಪಂಚಸೂತ್ರಗಳ ಬೆಳಕನ್ನು ಮತ್ತೆ ಸಾಂಗಗೊಳಿಸಿ ಎಲ್ಲ ಭಾಗದ, ಎಲ್ಲ ಮಟ್ಟದ ಜನತೆಯನ್ನು ಆ ಪ್ರಭಾವಲಯಕ್ಕೆ ತರಲು ಶತಾಯ ಗತಾಯ ವಿಸ್ತಾರವಾದ ಅನುಭವವನ್ನು ಹೊಂದಿದ ಹಿರಿಯ ನಾಯಕರು ಪ್ರಯತ್ನಿಸಲು ಅವಕಾಶ ಸಾಧ್ಯ. ಆ ವಿಸ್ತಾರದಲ್ಲಿ ಬೆಳಕು ಕಂಡ ಮುಂದಿನ ಜನ ತನ್ನ ತೆಕ್ಕೆಗೆ, ಎಲ್ಲ ಕೊರತೆಗಳನ್ನು ನೀಗಿಕೊಂಡ ಎಲ್ಲರನ್ನೂ ತೆಗೆದುಕೊಂಡು ಸಾಗಿದರೆ, ಗ್ರಾಮಾಂತರದ ನೆಲೆಯಿಂದ ಸೇವಾನಿಷ್ಠರಾಗಿ ಸಂಪನ್ನರಾಗುತ್ತ ಸಾಗಿದರೆ, ಲೋಕಸಭೆಯವರೆಗೂ ರಚನಾತ್ಮಕ ಕಾರ್ಯದ ಸುಭಿಕ್ಷೆಯನ್ನು ಒದಗಿಸಿ 'ಪ್ರಜಾಪ್ರಭುತ್ವ'ವನ್ನು ಸಕಲ ರೀತಿಯಿಂದಲೂ ಫಲಪ್ರದಗೊಳಿಸಲು ಸಾಧ್ಯ.



# ಸ್ವತಂತ್ರ ಪಕ್ಷ

ಬಿ. ಎಸ್. ಸತ್ಯನಾರಾಯಣ

೧೯೪೭-೫೯ರವರೆಗೆ ಭಾರತದಲ್ಲಿದ್ದ ವೈವಿಧ್ಯಮಯ ರಾಜಕೀಯ ಗುಂಪುಗಳು ಮತ್ತು ಅವುಗಳ ತತ್ವಗಳು ಪ್ರಬಲವಾದ, ಪರಿಣಾಮಕಾರಿಯಾದ ಮತ್ತು ಒಗ್ಗೂಡಿದ ಶಕ್ತಿಯಾಗಿ ಕಾರ್ಯ ನಿರ್ವಹಿಸುವುದಕ್ಕೆ ಸಮರ್ಥವಾಗಿರಲಿಲ್ಲ. ಅನೇಕ ಮುಖ್ಯವಾದ ಗುಂಪುಗಳು ಮತ್ತು ವ್ಯಕ್ತಿಗಳು ರಾಜೀನಾಮೆ, ಪ್ರತೀಕಾರದ ಹೆದರಿಕೆ, ಶ್ರೀಮಂತರು ತಮ್ಮ ಶ್ರೀಮಂತಿಕೆ, ಅಧಿಕಾರ, ಪ್ರಭಾವ ಕುಗ್ಗುವ ಹೆದರಿಕೆಯಿಂದ ರಾಜಕೀಯದಲ್ಲಿ ತೆರೆಮರೆಯಲ್ಲಿ ಇರುತ್ತಿದ್ದರು. ಅನೇಕ ಪ್ರಮುಖ ವ್ಯಕ್ತಿಗಳು ವ್ಯವಸ್ಥಿತ ರಾಜಕೀಯ ಗುಂಪಿಗೆ ಬದಲಾಗಿ ವೈಯಕ್ತಿಕವಾಗಿ ಚುನಾವಣೆಯಲ್ಲಿ ಸ್ಪರ್ಧಿಸುತ್ತಿದ್ದರು. ಇನ್ನು ಕೆಲವರು ತಮ್ಮ ನಿಷ್ಠೆಯನ್ನು ಆಳುವ ಪಕ್ಷಕ್ಕೆ ತೋರಿಸುತ್ತಾ, ಯಾವುದೇ ವ್ಯವಸ್ಥಿತವಾದ ರಾಜಕೀಯ ಪಕ್ಷಕ್ಕೆ ಸೇರದೆ ಜಯಗಳಿಸುವುದರಲ್ಲಿ ನಿಷ್ಣಾತರಾಗಿದ್ದರು. ಇದು ಅವರಿಗೆ ಹೆಮ್ಮೆಯ ವಿಷಯವಾಗಿದ್ದಿತು. ಇನ್ನು ಕೆಲವರು ಒಂದೋ ಎರಡೋ ವಿಷಯಗಳನ್ನು ಅಂದರೆ ಭೂಸುಧಾರಣೆ ಶಾಸನ ಮುಂತಾದವುಗಳನ್ನು ವಿರೋಧಿಸುವುದಕ್ಕೆ ಸ್ಥಳೀಯ ಅಥವಾ ರಾಜ್ಯಾದ್ಯಂತದ ಪಕ್ಷಗಳನ್ನು ಕಟ್ಟಿಕೊಂಡು ಅದಕ್ಕಾಗಿ ಹೋರಾಡುತ್ತಿದ್ದು, ಅವರಿಗೆ ಬೆಂಬಲವಾಗಿ ಕೆಲವು ಪಕ್ಷಗಳು, ಜಾತಿಗಳು ಅಥವಾ ತಾತ್ಕಾಲಿಕ ಪಕ್ಷಗಳು ಕೆಲಸ ಮಾಡುತ್ತಿದ್ದುವು. ಆದರೆ ಯಾವುದೇ ವ್ಯವಸ್ಥಿತವಾದ ರಾಜಕೀಯ ಪಕ್ಷಗಳು ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಭಾರತದಲ್ಲಿ ಇದ್ದ ಅಖಿಲ ಭಾರತ ಪಕ್ಷ ಕಾಂಗ್ರೆಸ್ ಒಂದೇ. ಅನೇಕ ಕ್ಷೇತ್ರಗಳಲ್ಲಿ ವಾಮಪಂಥೀಯರು ಒಬ್ಬರ ವಿರುದ್ಧ ಇನ್ನೊಬ್ಬರು ಸ್ಪರ್ಧಿಸಿ ಆ ಪಕ್ಷಗಳು ಒಡೆದುಹೋಗಿ ದುರ್ಬಲವಾಗಿದ್ದವು. ರಾಜ್ಯಗಳ ಮಟ್ಟಗಳಲ್ಲಿ ಕೂಡ ಎರಡು ಪಕ್ಷಗಳ ಪದ್ಧತಿಗೆ ಅಷ್ಟಾಗಿ ಒಲವು ಇರಲಿಲ್ಲ. ಸ್ವಾತಂತ್ರ್ಯಕ್ಕೆ ಮುಂಚೆ ಕಾಂಗ್ರೆಸ್ ಬಹಳ ಹೆಚ್ಚಿನ ಜನಬೆಂಬಲ ಹೊಂದಿದ್ದು ಮತ್ತು ಅದರ ವ್ಯಾಪ್ತಿಯು ರಾಷ್ಟ್ರದಲ್ಲೆಲ್ಲ ಹರಡಿದ್ದು ಸುವ್ಯವಸ್ಥಿತವಾದ ರಾಜಕೀಯ ಪಕ್ಷವಾಗಿದ್ದಿತು. ಅಂತಹ ಸನ್ನಿವೇಶದಲ್ಲಿ ಸ್ವಾತಂತ್ರ್ಯದ ನಂತರ ನಡೆದ ಚುನಾವಣೆಗಳಲ್ಲಿ ಅದನ್ನು ಸೋಲಿಸಲು ಸಾಧ್ಯವಾಗುತ್ತಿರಲಿಲ್ಲ. ಅಲ್ಲದೆ ಅದನ್ನು ವಿರೋಧಿಸುವಂತಹ ಪ್ರಬಲವಾದ ರಾಜಕೀಯ ಪಕ್ಷ ಬೆಳೆಯಲಿಲ್ಲ. ಅವುಗಳಲ್ಲಿ ಭಿನ್ನಾಭಿಪ್ರಾಯಗಳು, ಒಡಕುಗಳು, ಒಳಜಗಳಗಳು ಇದ್ದು ಪರಿಣಾಮಕಾರಿ ವಿರೋಧ ಪಕ್ಷ ಇರಲಿಲ್ಲ. ಅಲ್ಲದೆ ವ್ಯಕ್ತಿಗಳು, ಸ್ಥಳೀಯ ಪಕ್ಷಗಳು ಮತ್ತು ಅಖಿಲ ಭಾರತ ಪಕ್ಷಗಳು ಎಲ್ಲವೂ ಒಟ್ಟಿಗೆ ಸೇರಿದ್ದರೂ ಕೂಡ ಕಾಂಗ್ರೆಸ್ಸನ್ನು ಸೋಲಿಸುವಷ್ಟು ಸಮರ್ಥವಾಗಿರಲಿಲ್ಲ.

ಆಗ ಮುಖ್ಯವಾಗಿ ಇದ್ದಂತಹ ರಾಜಕೀಯ ಪಕ್ಷಗಳ ಅವಲೋಕವ ಮಾಡಿದರೆ ಹಿಂದೂ ಮಹಾಸಭೆ, ಜನಸಂಘ, ರಾಮರಾಜ್ಯ ಪರಿಷತ್, ಗಣತಂತ್ರ ಪರಿಷತ್ ಮತ್ತು ಜನತಾಪಕ್ಷ ಮುಖ್ಯವಾಗಿದ್ದವು. ಇವುಗಳಲ್ಲಿ ಗಣತಂತ್ರ ಪರಿಷತ್ ೧೯೫೯ಕ್ಕೆ ಮುಂಚೆ ಕಾಂಗ್ರೆಸ್‌ನ ಜೊತೆಯಲ್ಲಿ ಒರಿಸ್ಸಾದಲ್ಲಿ ಸಮ್ಮಿಶ್ರ ಸರಕಾರ ರಚಿಸಲು ಸಾಧ್ಯವಾಯಿತು. ಆದ್ದರಿಂದ ಈ ಮೇಲಿನ ಪಕ್ಷಗಳ ವಾಸ್ತವ ಕಾರ್ಯವೈಖರಿಯನ್ನು ಅಳೆಯಲು ಯಾವುದೇ ಉಪಾಯವಿರಲಿಲ್ಲ. ಗಣತಂತ್ರ ಪರಿಷತ್ ಮತ್ತು ಜನತಾಪಕ್ಷವು ಸಂಪೂರ್ಣವಾಗಿ ರಾಜ್ಯ ಮಟ್ಟದಲ್ಲೇ ಇದ್ದವು. ಉಳಿದವು ಅಖಿಲ ಭಾರತ ರೀತಿಯಲ್ಲಿ

ಕೆಲಸಮಾಡುತ್ತಿದ್ದರೂ ಅವುಗಳ ಕಾರ್ಯವ್ಯಾಪ್ತಿಯು ಹಿಂದಿ ಮಾತನಾಡುವ ಉತ್ತರ ಭಾರತಕ್ಕೆ ಸೀಮಿತವಾಗಿತ್ತು. ಅವುಗಳೆಲ್ಲವೂ ವಿಂಧ್ಯ ಪರ್ವತದಿಂದ ಉತ್ತರಕ್ಕೇ ಪ್ರಭಾವ ಹೊಂದಿದ್ದವು. ಸ್ವಾತಂತ್ರ್ಯಕ್ಕೆ ಮುಂಚೆ ಹಿಂದೂ ಮಹಾಸಭೆ ಮಾತ್ರ ಸ್ವಲ್ಪ ಮಟ್ಟಿಗೆ ಸ್ಥಾಪಿತವಾಗಿದ್ದರೂ ಅದರ ವ್ಯವಸ್ಥೆ ಅಷ್ಟೇನೂ ಚೆನ್ನಾಗಿರಲಿಲ್ಲ. ಜನಸಂಘವು ರಾಷ್ಟ್ರೀಯ ಸ್ವಯಂ ಸೇವಕ ಸಂಘದಂತಹ ಅರೆ ಮಿಲಿಟರಿ ಸಾಂಸ್ಕೃತಿಕ ಗುಂಪಿನೊಂದಿಗೆ ಕಂಡುಬರುತ್ತಿದ್ದಿತು. ಸಾಮಾನ್ಯವಾಗಿ ಹೇಳುವುದಾದರೆ, ಪಕ್ಷದ ರಚನೆಗಳು ಆರಂಭದ ಹಂತದಲ್ಲಿಯೇ ಇದ್ದು ಮುಂದುವರಿಯಲೇ ಇಲ್ಲ. ಮತ್ತು ಆಗಲೇ ಪ್ರಭಾವಿತರಾಗಿದ್ದ ಮುಂದಾಳುಗಳು ಉಳಿಸಿರುವ ಬೆಂಬಲದ ಮೇಲೆಯೇ ಪಕ್ಷಗಳು ಅವಲಂಬಿತವಾಗಿದ್ದವು. ವಾಮಪಕ್ಷದಂತಹ ಪಕ್ಷಗಳು ಇತ್ತೀಚಿನವು, ವ್ಯವಸ್ಥೆಯಿಲ್ಲದವು. ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಕೆಲವೇ ಸ್ಥಳಗಳಿಗೆ ಸೀಮಿತವಾಗಿದ್ದವು ಎಂಬುದನ್ನು ಗಮನಿಸಬೇಕು.

ಹೆಚ್ಚಿನ ಮಾಹಿತಿ ದೊರೆಯದಿದ್ದಂತಹ ಜನತಾ ಪಕ್ಷವು ೧೯೫೦ರಲ್ಲಿ ರಾಮಘಡದ ರಾಜಾ ಕಾಮಾಕ್ಯ ನಾರಾಯಣ ಸಿಂಗ್‌ರವರಿಂದ ವ್ಯವಸ್ಥೆಗೊಳಿಸಲ್ಪಟ್ಟಿತು. ಇವರು ರಜಪೂತರಿಗಿದ್ದಂತಹ ಜಂಭ ಮತ್ತು ಆವೇಶಗಳನ್ನು ಹೊಂದಿದ್ದ ಜಮೀನ್ದಾರ - ವ್ಯಾಪಾರಿಯಾಗಿದ್ದರು. ಈ ಪಕ್ಷದ ವ್ಯವಸ್ಥೆ ಮಾಡಿದುದೇಕೆಂದರೆ ಜಮೀನ್ದಾರಿ ಪದ್ಧತಿಯ ಶಾಸನವನ್ನು ಮಂಡಿಸಿರುವ ಕೆ. ಬಿ. ಸಹಾಯರವರಿಗೆ ತಮ್ಮದೇ ಜಿಲ್ಲೆಯಲ್ಲಿ (ಬಿಹಾರಿನಲ್ಲಿ) ಬೆಂಬಲವಿರಲಿಲ್ಲವೆಂಬುದನ್ನು ತೋರಿಸಬೇಕಾಗಿದ್ದಿತು. ಇವರಿಬ್ಬರ ಮಧ್ಯೆ ಇದ್ದ ವಿರಸವು ರಾಜಕೀಯ ಮತಾಂಧತೆಯ ಮಟ್ಟಕ್ಕೆ ಮುಟ್ಟದ್ದಿತು. ನ್ಯಾಯಾಲಯಗಳಲ್ಲಿ ಈ ಶಾಸನವು ಜಾರಿಗೆ ಬರದಂತೆ ತಡೆಯಲು ತತ್ವಶಃ ಜನತಾ ಪಕ್ಷಕ್ಕೆ ಬಿಹಾರದ ಹಜಾರಿಬಾಗ್ ಪ್ರಸ್ಥಭೂಮಿಯಲ್ಲಿ ಹೆಚ್ಚು ಸಂಖ್ಯೆಯ, ಗುಡ್ಡಗಾಡು ಜನರ ಬೆಂಬಲ ಹೆಚ್ಚಾಗಿದ್ದಿತು. ರಾಜಾ ಕಾಮಾಕ್ಯ ಸಿಂಗ್‌ರವರು ಉತ್ಸಾಹಿ ವ್ಯವಸ್ಥೆಗಾರರಾಗಿದ್ದು ತಮ್ಮ ಸೀಮಿತ ಪ್ರದೇಶಕ್ಕೂ ಹೆಚ್ಚಾಗಿ ಜನತಾಪಕ್ಷವನ್ನು ವಿಸ್ತರಿಸಲು, ಅದರಲ್ಲೂ ಹೆಚ್ಚಾಗಿ ಗುಡ್ಡ ಗಾಡು ಪ್ರದೇಶಗಳಿಗೆ ವಿಸ್ತರಿಸಲು ಮನಸ್ಸು ಮಾಡಿದರು. ತಮ್ಮ ಸ್ವಂತದ ಅರಣ್ಯದ ಹಕ್ಕುಗಳನ್ನು ಬಿಟ್ಟುಕೊಟ್ಟದ್ದೂ ಅಲ್ಲದೆ ಹೆಚ್ಚಿನ ಜಮೀನನ್ನು ವಿನೋಬಾಜಿಯವರ ಭೂದಾನ ಚಳವಳಿಗೆ ಬಿಟ್ಟುಕೊಟ್ಟರು. ಅದರಿಂದ ಅವರ ವೈಯಕ್ತಿಕ ಜೀವನಕ್ಕೇನೂ ಕೊರತೆಯುಂಟಾಗಲಿಲ್ಲ. ಅವರ ಪಕ್ಷದ ಮುಖ್ಯ ತತ್ವಗಳೇ ''ಉಳುವವನಿಗೇ ಭೂಮಿ'' ''ಕಡಿಮೆ ಭೂಕಂದಾಯ'' ಮುಂತಾದವಾಗಿದ್ದವು. ಈ ರಾಜರು ಭೂದಾನಕ್ಕೆ ತಮ್ಮ ಜಮೀನನ್ನು ದಾನವಾಗಿ ಕೊಟ್ಟವರು ನಿರೀಕ್ಷಿಸಿದ ಪ್ರತಿಫಲ, ಜಮೀನ್ದಾರಿ ಪದ್ಧತಿ ತನ್ನಷ್ಟಕ್ಕೆ ತಾನೇ ಸ್ವತಃ ಭೂದಾನದಿಂದ ಹೊರಟುಹೋಗಬೇಕೆಂಬುದೇ ಆಗಿದ್ದಿತು. ಇದು ಸಾಧ್ಯವೆ? ಇಲ್ಲ, ಜಮೀನ್ದಾರರಿಗೂ ಹಾಗೆ ಮಾಡಲು ಸಾಧ್ಯವಿರಲಿಲ್ಲ. ಅಂತಿಮವಾಗಿ ಜಮೀನ್ದಾರಿ ಪದ್ಧತಿಯನ್ನು ತೆಗೆದುಹಾಕುವ ಶಾಸನಕ್ಕೆ ವಿರುದ್ಧವಾಗಿ ನಿಂತಿದ್ದ ಕೆಲವು ಜಮೀನ್ದಾರರುಗಳು ಇವರ ಮುಂದಿನ ರಾಜಕೀಯ ಚಟುವಟಿಕೆಯಲ್ಲಿ ಸೇರಲು ನಿರಾಕರಿಸಿದರು.

ಅಲ್ಲದೆ ಈ ಪಕ್ಷವು ಒರಿಸ್ಸಾದ ಮಾಜಿ ರಾಜರುಗಳ ಬೆಂಬಲವನ್ನು ಹೊಂದಿದ್ದಿತೆಂಬುದು ಗಮನಾರ್ಹ ವಿಷಯ. ಈ ಪಕ್ಷವು ಶ್ರೀಮಂತರಿಂದ ಬೆಂಬಲ ಹೊಂದಿದ್ದರೂ, ಅದರ ಜಯಕ್ಕೆ ಕಾರಣ ಅದರಲ್ಲಿದ್ದ ಕೆಲವು ಪ್ರಗತಿಗಾಮಿ ರಾಜರುಗಳಾಗಿದ್ದರು. ಇದಕ್ಕೂ ಮಿಗಿಲಾಗಿ ಸಮಾಜವಾದಿ ನಾಯಕರಾಗಿದ್ದ ಅಶೋಕ ಮೆಹ್ತಾ ಮತ್ತು ಒಬ್ಬ ಪ್ರಮುಖ ಕಾಂಗ್ರೆಸ್ಸಿನವರಾಗಿದ್ದ ಸಾದಿಕ್ ಆಲಿಯವರಿಂದ ಬೆಂಬಲ ದೊರೆತಿದ್ದುದು ಇದಕ್ಕೆ ತುಂಬಾ ಸಹಾಯವಾಯಿತು.

ಹಿಂದೂ ಮಹಾಸಭೆ, ಜನಸಂಘ ಮತ್ತು ರಾಮರಾಜ್ಯ ಪರಿಷತ್ ಪಕ್ಷಗಳು ಜಾತೀಯವಾದವನ್ನು ಹೊಂದಿದ್ದವು. ಧರ್ಮ, ಭಾಷೆ ಮತ್ತು ಶಿಕ್ಷಣದಂತಹ ಸಾಂಸ್ಕೃತಿಕ ವಿಷಯಗಳ ಬಗ್ಗೆ ಹೆಚ್ಚು ಒಲವು ಹೊಂದಿದ್ದವು. ಇವುಗಳನ್ನು ಪಾಶ್ಚಿಮಾತ್ಯ ಪ್ರಭಾವಕ್ಕೆ ಹಿಂದೂ ಪ್ರತಿಕ್ರಿಯೆ ಎಂಬ ಅರ್ಥದಲ್ಲಿ ನೋಡಬೇಕಾಗಿದ್ದಿತು. ರಾಮರಾಜ್ಯ ಪರಿಷತ್ ಸಂಪ್ರದಾಯಬದ್ಧವಾಗಿದ್ದರೂ ಅಷ್ಟಾಗಿ ಪ್ರತಿಗಾಮಿಯಾಗಿರಲಿಲ್ಲ. ಆದರೆ ಮಹಾಸಭೆ ಮತ್ತು ಜನಸಂಘವು ಪ್ರತಿಗಾಮಿ ಪಕ್ಷಗಳಾಗಿದ್ದವು. ಇವುಗಳು ಹೆಚ್ಚಾಗಿ ಹೋರಾಟದ ಮನೋಭಾವವುಳ್ಳವಾಗಿದ್ದು ಹಿಂದೂ ಧರ್ಮದ ಸುಧಾರಕವಾಗಿದ್ದವು. ಹಿಂದೂ ಮಹಾಸಭೆಯು ೧೯೦೭ರಲ್ಲಿ ನಡೆದ ಮೊದಲ ಹಿಂದೂಸಭೆಯಿಂದ ರೂಪುಗೊಂಡಿತು. ಇದನ್ನು ಸ್ಥಾಪಿಸಿದ ಉದ್ದೇಶ ಮುಸ್ಲಿಂ ಲೀಗಿನ ಬೇಡಿಕೆಗಳನ್ನು ವಿರೋಧಿಸುವುದಾಗಿದ್ದಿತು. ಅದು ಅಸ್ತಿತ್ವದಲ್ಲಿರುವವರೆಗೂ ಮುಸ್ಲಿಂ ಲೀಗ್‌ನ ಪಾಕಿಸ್ತಾನದ ಬೇಡಿಕೆಯನ್ನು ಪ್ರತಿಭಟಿಸುತ್ತಿತ್ತು. ಮಹಾತ್ಮ ಗಾಂಧಿ ಮತ್ತು ಜವಹರಲಾಲ್ ನೆಹರೂರವರು ಮುಸ್ಲಿಮರ ಬಗ್ಗೆ ಮೃದುವಾಗಿದ್ದುದರ ಬಗ್ಗೆಯೂ ವಿರೋಧಿಸಿದ್ದಿತು. ಮೊದಲಿಗೆ ಅಂದರೆ ಬಹಳ ಮುಂಚೆಯೇ ಮುಸ್ಲಿಮರಿಗೆ ಪಾಕಿಸ್ತಾನವನ್ನು ಕೊಡಬೇಕೆಂದು ಶಿಫಾರಸು ಮಾಡಿದ ರಾಜಾಜಿಯವರ ಬಗ್ಗೆಯೂ ಆಕ್ಷೇಪವಿತ್ತು. ಹಿಂದೂ ಮಹಾಸಭೆಯು ಹಿಂದೂಗಳಿಗೆ ಮೀಸಲಾಗಿದ್ದು ಮುಸ್ಲಿಮರ ಪರವಾಗಿ ಅಥವಾ ಪಾಕಿಸ್ತಾನದ ಪರವಾಗಿದ್ದವರನ್ನು ಅವಹೇಳನ ಮಾಡುತ್ತಿತ್ತು. ಶಿಕ್ಷಣ, ಧಾರ್ಮಿಕ ಸಂಸ್ಥೆಗಳಿಗೆ ಬೆಂಬಲ, ಮತಾಂತರಗೊಂಡ ಹಿಂದೂಗಳನ್ನು ಹಿಂದಕ್ಕೆ ಸೇರಿಸಿಕೊಳ್ಳುವುದು ಇದರ ಪ್ರಮುಖ ಪ್ರಣಾಳಿಕೆಯಾಗಿತ್ತು. ಅಷ್ಟೇ ಅಲ್ಲ, ಅವರಲ್ಲಿ ಅಂತ್ಯಜರೂ ಸೇರಿರಬೇಕೆಂಬುದರ ಬಗ್ಗೆ ಬೆಂಬಲಿಸದಿದ್ದವರನ್ನು ಕಟುವಾಗಿ

ಟೀಕಿಸಲಾಗುತ್ತಿತ್ತು. ಈ ಪಕ್ಷವು ಪ್ರವರ್ಧಮಾನಕ್ಕೆ ಬರುತ್ತಿದ್ದಂತೆಯೇ ಮಹಾತ್ಮ ಗಾಂಧಿಯವರು ಆರ್.ಎಸ್.ಎಸ್. ಬೆಂಬಲಿಗನೊಬ್ಬನಿಂದ ಕೊಲ್ಲಲ್ಪಟ್ಟರು. ಅಲ್ಲದೆ ನೆಹರುರವರು ಜಾತಿ ಆಧಾರಿತ ಪಕ್ಷಗಳನ್ನು ತೀವ್ರವಾಗಿ ಟೀಕಿಸಿದರು. ಇವುಗಳ ಪರಿಣಾಮವಾಗಿ ೧೯೫೧-೫೨ ಮತ್ತು ೧೯೫೭ರ ಚುನಾವಣೆಯಲ್ಲಿ ಅವು ಶೋಚನೀಯ ಸೋಲನ್ನನುಭವಿಸಿತು. ಆಗ ಆ ಪಕ್ಷದ ಅನೇಕರು ಜನಸಂಘಕ್ಕೆ ಸೇರಿದರು.

ರಾಮರಾಜ್ಯ ಪರಿಷತ್ ಪಕ್ಷವು ೧೯೪೮ರಲ್ಲಿ ಸ್ವಾಮಿ ಕರಪತ್ರಿ ಎಂಬುವರಿಂದ ಸ್ಥಾಪಿಸಲ್ಪಟ್ಟಿತು. ಪ್ರಸಿದ್ಧಿಯನ್ನು ಪಡೆದಿದ್ದ ಬಲ ಪಕ್ಷಗಳಲ್ಲಿ ಇದು ಹೆಚ್ಚು ಸಂಪ್ರದಾಯಬದ್ಧವಾದುದಾಗಿದ್ದಿತು. ಈ ಪಕ್ಷದ ಪ್ರಣಾಳಿಕೆಯು ಶ್ರೀರಾಮನ ಕಾಲದ ಸದ್ಧರ್ಮವನ್ನು ಪ್ರತಿಪಾದಿಸುವಂಥದಾಗಿದ್ದಿತು. ಹೆಚ್ಚಾಗಿ ಗ್ರಾಮೀಣ ವ್ಯವಸ್ಥೆಯದಾಗಿ ಹೆಚ್ಚು ಸಂಪ್ರದಾಯಬದ್ಧವಾದ ರಾಜಾಮಣೆಯ ಪದ್ಧತಿಯಾಗಿದ್ದಿತು. ವಸ್ತುಗಳ ವಿನಿಮಯ ಮತ್ತು ಪುರಾತನ ಕಾಲದ ವೈದ್ಯ ಪದ್ಧತಿಯಾದ ಆಯುರ್ವೇದ, ಮದ್ಯ ಸೇವನೆಯ ನಿಷೇಧ, ಗೋಹತ್ಯ ನಿಷೇಧ ಮುಂತಾದಂತಹ ಪುರಾತನ ವಿಷಯಗಳನ್ನೊಳಗೊಂಡಿದ್ದಿತು. ಶುದ್ಧೀಕರಣ ವ್ಯವಸ್ಥೆಯನ್ನು ಅಸ್ಪೃಶ್ಯರಿಗೇ ವಹಿಸಬೇಕೆಂಬುದು ಈ ಪಕ್ಷದ ನಿಲುವಾಗಿದ್ದಿತು. ಪಕ್ಷವು ತುಂಬಾ ಹಿಂದುಳಿದ ಪ್ರದೇಶಗಳಾದಂತಹ ಮಧ್ಯಪ್ರದೇಶ ಮತ್ತು ರಾಜಾಸ್ಥಾನಗಳಲ್ಲಿ ಸ್ವಲ್ಪ ಬೆಂಬಲವನ್ನು ಪಡೆದಿತ್ತು.

ಈ ಮೇಲಿನ ಪಕ್ಷಗಳಿಗಿಂತ ಹೆಚ್ಚಿನ ಸುವ್ಯವಸ್ಥೆ ಮತ್ತು ಚುನಾವಣಾ ದಾಖಲೆಯನ್ನು ಹೊಂದಿದ್ದುದು, ಮೊದಲು ಹಿಂದೂ ಮಹಾಸಭೆಯಲ್ಲಿದ್ದ ಶ್ಯಾಮಪ್ರಸಾದ ಮುಖರ್ಜಿಯವರು ೧೯೫೧ರಲ್ಲಿ ಸ್ಥಾಪಿಸಿದ ಜನಸಂಘವಾಗಿದ್ದಿತು. ಮುಖರ್ಜಿ ಸ್ವಲ್ಪ ಮಟ್ಟಿಗೆ ಸುಧಾರಿತ ಕ್ರಾಂತಿಕಾರಿ ಹಿಂದುವಾಗಿದ್ದರು. ತಮ್ಮ ಪಕ್ಷದಲ್ಲಿ ಸದಸ್ಯತ್ವವು ಯಾವುದೇ ಜಾತಿಗೆ ಮೀಸಲಿರದೇ ಎಲ್ಲರಿಗೂ ತೆರೆದಿರಬೇಕೆಂಬುದು ಅವರ ಮತವಾಗಿದ್ದಿತು. ಇದರಲ್ಲಿ ಮುಖ್ಯವಾಗಿರುವ ವಿಷಯವೆಂದರೆ ಅವರನ್ನು ಕಾಂಗ್ರೆಸ್ ಮಂತ್ರಿಮಂಡಲಕ್ಕೆ ಸೇರುವಂತೆ ಒತ್ತಾಯಿಸಲಾಯಿತು. ಇದಕ್ಕೆ ಮುಖ್ಯ ಕಾರಣ ಪಕ್ಷದ ಬಲಗುಂಪನ್ನು ಪ್ರತಿನಿಧಿಸುತ್ತಿದ್ದಂತಹ ಸರ್ದಾರ್ ವಲ್ಲಭಬಾಯಿ ಪಟೇಲರ ಕೈಯನ್ನು ಬಲಗೊಳಿಸುವುದಾಗಿದ್ದಿತು. ಮುಖರ್ಜಿ ಅವರು ಸ್ವಲ್ಪ ಕಾಲ ಆ ಹುದ್ದೆಯನ್ನು ಅಲಂಕರಿಸಿದ್ದು ನಂತರ ಪಾಕಿಸ್ತಾನದ ಜೊತೆಗೆ ಕೇಂದ್ರ ಸರಕಾರದ ನಿಲುವಿನ ಬಗ್ಗೆ ಅಸಮಾಧಾನ ತಳೆದು ರಾಜೀನಾಮೆ ನೀಡಿ ಕೆಲವು ರಾಷ್ಟ್ರೀಯ ಸ್ವಯಂ ಸೇವಕರ ಜೊತೆಯಲ್ಲಿ ಜನಸಂಘವನ್ನು ಸ್ಥಾಪಿಸಿದರು. ಇದರಲ್ಲಿ ಮುಖ್ಯವಾಗಿರುವುದೇನೆಂದರೆ- ಈ ಹೊಸ ಪಕ್ಷದಲ್ಲಿ ಮುಸ್ಲಿಮರಿಗೂ ಸದಸ್ಯತ್ವವಿರಬೇಕೆಂದು ಅವರು ಹಟಹಿಡಿದುದು. ಜಾತ್ಯತೀತತೆ ಮತ್ತು ರಾಷ್ಟ್ರೀಯ ನಾಗರಿಕತ್ವದ ಕಡೆಗೆ ಇದು ಪ್ರಮುಖ ಹೆಜ್ಜೆಯಾಗಿದ್ದಿತು. ಇದೂ ಹಿಂದೂ ಮಹಾಸಭೆಯ ಜಾತೀಯ ವಾದಕ್ಕಿಂತ ಭಿನ್ನವಾದ ಹೆಜ್ಜೆಯಾಗಿದ್ದಿತು. ಇಷ್ಟೆಲ್ಲ ಪ್ರಗತಿಗಾಮಿ ತತ್ವಗಳನ್ನು ಹೊಂದಿದ್ದರೂ ಜನಸಂಘವು ಜಾತೀಯತೆಯ ಕಳಂಕದಿಂದ ದೂರವಾಗಲಿಲ್ಲ. ಇದಕ್ಕೆ ಕಾರಣ ಆರ್.ಎಸ್.ಎಸ್. ಜೊತೆಯಲ್ಲಿನ ನಿಕಟಬಾಂಧವ್ಯ, ಸಂಘದ ಆಂಗ್ಲ ಭಾಷಾವಾರು ಪತ್ರಿಕೆಯಾದ ಆರ್ಗನೈಸರ್‌ನಲ್ಲಿ ಮುಸ್ಲಿಮರ ರಾಷ್ಟ್ರ ವಿರೋಧಿ ಚಟುವಟಿಕೆಗಳ ಬಗ್ಗೆ ಕಟುವಾದ ಟೀಕೆ ಮತ್ತು ಇನ್ನೂ ಅನೇಕ ಕಾರಣಗಳಿಂದ ಜನಸಂಘಕ್ಕೆ ಹೋರಾಟದ ಮನೋಭಾವವುಳ್ಳ ಹಿಂದೂಪಕ್ಷವೆಂಬ ಹೆಸರು ಅಂಟಿಕೊಂಡಿತು. ಸಂಘದ 'ಹಿಂದೂ- ಹಿಂದೀ'ಮನೋಭಾವವು ಅದರ ಒಟ್ಟಾರೆ ಸಾಮರ್ಥ್ಯಕ್ಕೆ ಕಳಂಕವಾಗಿದ್ದಿತು. ಹಾಗೆಯೇ ಮದರಾಸಿನ ಡಿ. ಎಂ. ಕೆ. ಪಕ್ಷ ಮತ್ತು ಪಂಜಾಬಿನ ಅಕಾಲಿದಳ ಪಕ್ಷವು ಪ್ರತ್ಯೇಕತಾ ಮನೋಭಾವ ಹೊಂದಿದ್ದು ಹೋರಾಟ ನಡೆಸುತ್ತಿದ್ದವು.

ಆದರೆ ೧೯೫೧-೫೨ ಮತ್ತು ೧೯೫೭ರ ಸಾರ್ವತ್ರಿಕ ಚುನಾವಣೆಗಳಲ್ಲಿ ಲೋಕಸಭೆಗೆ ಮತಗಳಿಸುವುದರಲ್ಲಿ ಈ ಪಕ್ಷಗಳು ಯಶಸ್ವಿಯಾಗಲಿಲ್ಲ ಈ ಎಲ್ಲಾ ಪಕ್ಷಗಳು ಒಟ್ಟಾಗಿ ಸೇರಿ ಹೋರಾಡಿದರೂ ಕಾಂಗ್ರೆಸ್ ಅನ್ನು ಸೋಲಿಸುವುದು ಅಸಾಧ್ಯವಾಯಿತು. ೧೯೫೧-೫೨ರ ಚುನಾವಣೆಗಳಾದ ನಂತರ ಶ್ಯಾಮ ಪ್ರಸಾದ ಮುಖರ್ಜಿಯವರು ಕಮ್ಯೂನಿಸ್ಟರಲ್ಲದ, ಸಮಾಜವಾದಿಗಳಲ್ಲದ ಮತ್ತು ಮುಸ್ಲಿಮೇತರ ವಿರೋಧ ಪಕ್ಷವನ್ನು ರಚಿಸಿದರು. ಅದಕ್ಕೆ ನ್ಯಾಷನಲ್ ಡೆಮೊಕ್ರಾಟಿಕ್ ಪಕ್ಷವೆಂದು ಹೆಸರಿಡಲಾಯಿತು. ೧೯೫೩ರಲ್ಲಿ ಶ್ಯಾಮಪ್ರಸಾದ್ ಮುಖರ್ಜಿಯವರು ನಿಧನಹೊಂದಿದರು. ಒಂದು ವರ್ಷದೊಳಗೆ ಈ ಒಕ್ಕೂಟವು ಒಡೆದುಹೋಯಿತು.

ಇದಾದನಂತರ ಬಂದ ಮುಂದಾಳುಗಳು, ಬೇರೆ ಬೇರೆಯಾಗಿ ಕಾಂಗ್ರೆಸ್ಸನ್ನು ಎದುರಿಸಲಾರದೆ, ಹೋದರು. ಜವಹರಲಾಲ್ ನೆಹ್ರೂ, ಕೃಷ್ಣ ಮೆನನ್ ಮುಂತಾದ ಜಾತ್ಯತೀತ ಪಂಥದವರು ಈ ಹಿಂದೂ ಜಾತೀಯ ಪಕ್ಷಗಳನ್ನು ಟೀಕಿಸಿ ಒಂದು ನೆಲೆಯನ್ನು ಪಡೆಯಲು ಇವುಗಳಿಗೆ ಅಸಾಧ್ಯವೆಂಬ ಭಾವನೆಯನ್ನು ಬಿತ್ತುತ್ತಿದ್ದರು. ಅದನ್ನು ಜನರು ಒಪ್ಪಿಕೊಂಡರು ಮತ್ತು ಒಪ್ಪಿಕೊಳ್ಳಲೂ ಬೇಕಾಯಿತು. ಇವುಗಳಿಗೆ ಪೂರಕವಾಗಿ ನೆಹ್ರೂರವರು ೧೯೫೦ರಲ್ಲಿ ಹಿಂದೂ ಕೋಡ್ ಮಸೂದೆಯನ್ನು ಮಂಡಿಸಿದರು. ಅದರಲ್ಲಿ ಹಿಂದೂ ವಿವಾಹದಲ್ಲಿ ಸುಧಾರಣೆ, ವಿವಾಹ ವಿಚ್ಛೇದನ, ಆಸ್ತಿಯ ಅನುವಂಶಿಕ ಹಕ್ಕುಗಳು ಮತ್ತು ದತ್ತ ಮಸೂದೆ, ಪದ್ಧತಿಗಳಲ್ಲಿ ಸುಧಾರಣೆ ಇತ್ಯಾದಿ ಮಹತ್ವದ ಅಂಶಗಳಿದ್ದವು. ಆಗ ಈ ಮಸೂದೆಗೆ ತುಂಬಾ ವಿರೋಧವಿದ್ದಿತು. ಅಂತಿಮವಾಗಿ ೧೯೫೫ರಲ್ಲಿ ಹಿಂದೂ ವಿವಾಹ ಕಾನೂನಾಗಿ ಜಾರಿಗೆ ಬಂದಿತು. ಇದರ ಜೊತೆಗೆ ಆರ್ಥಿಕ ನೀತಿಯಲ್ಲಿಯೂ ಸುಧಾರಣೆ ತರಲಾಯಿತು. ಭೂಸುಧಾರಣೆ, ಹರಿಜನರ ಅಭಿವೃದ್ಧಿ ಮುಂತಾದವುಗಳ ಬಗ್ಗೆ ಗಮನ ಹರಿಸಲಾಯಿತು.

ಹೀಗೆ ಕಾಂಗ್ರೆಸ್ಸೇತರ ಪಕ್ಷಗಳು ಪೂರ್ಣ ವಿಫಲಗೊಂಡಾಗ ಒಂದು ಪ್ರಬಲವಾದ ಪ್ರತಿಪಕ್ಷವನ್ನು ರಚಿಸಬೇಕೆಂಬ ಮಹದಾಕಾಂಕ್ಷೆ ಅನೇಕ ಮುಂದಾಳುಗಳನ್ನು ಕಾಡತೊಡಗಿತು. ಹಾಗೆ ಹೊಸದೊಂದು ಪಕ್ಷವನ್ನು ರಚಿಸಬೇಕೆಂಬ ಒತ್ತಾಸೆಯನ್ನು ಚಕ್ರವರ್ತಿ ರಾಜಗೋಪಾಲಾಚಾರಿಯವರು ಹೊಂದಿದ್ದರು. ಅದಕ್ಕೆ ಮುಂಚೆ ರಾಜಾಜಿಯವರ ಜೀವನ ಚರಿತ್ರೆಯ ಹಿನ್ನೆಲೆಯನ್ನು ತಿಳಿಯುವುದು ಅಗತ್ಯ. ರಾಜಾಜಿಯವರು ಮಹಾತ್ಮ ಗಾಂಧಿಯವರ ಕಟ್ಟಾ ಅನುಯಾಯಿಗಳಾಗಿದ್ದರು. ಅವರಿಗೆ ಮಹಾತ್ಮರು ಹೇಳಿದ ವಾಕ್ಯ ವೇದವಾಗಿದ್ದಿತು. ರಾಜಾಜಿಯವರು ಮಹಾಮೇಧಾವಿ, ರಾಜಕೀಯ ಮುತ್ಸದ್ದಿ. ಅವರು ಬಹಳ ಮುಂಚೆಯೇ ಪಾಕಿಸ್ತಾನ ವಿಭಜನೆ ಮಾಡುವಂತೆ ಹೇಳಿದ್ದರು. ಆದರೆ ಆಗ ಅವರ ಮಾತಿಗೆ ಬೆಲೆ ಬರಲಿಲ್ಲವಾದರೂ ಕಡೆಗೆ ಅದೇ ನಿಜವಾಯಿತು. ಸ್ವಾತಂತ್ರ್ಯಾನಂತರ ಲಾರ್ಡ್ ಮೌಂಟ್ ಬ್ಯಾಟನ್‌ರವರು ಅಧಿಕಾರವನ್ನು ತ್ಯಜಿಸಿದ ಮೇಲೆ ಭಾರತದ ಪ್ರಪ್ರಥಮ ಭಾರತೀಯ ಗೌರ್ನರ್ ಜನರಲ್ ಆದರು. ೧೯೫೦ರಲ್ಲಿ ಡಾ। ಬಾಬು ರಾಜೇಂದ್ರ ಪ್ರಸಾದ್ ರಾಷ್ಟ್ರಾಧ್ಯಕ್ಷರಾಗಿ ಆಯ್ಕೆಯಾದ ಮೇಲೆ ನೆಹರುರವರ ಮಂತ್ರಿಮಂಡಲದಲ್ಲಿ ೧೯೫೧ರವರೆಗೆ ಗೃಹ ಮಂತ್ರಿಯಾಗಿದ್ದರು. ಅನಂತರ ಎರಡನೇ ಸಲ ಮದರಾಸಿನ ಮುಖ್ಯಮಂತ್ರಿಯಾದರು. ಆದರೆ ನೆಹರೂರವರ ಜೊತೆಯಲ್ಲಿ ರಾಜಾಜಿಯವರ ಭಿನ್ನಾಭಿಪ್ರಾಯಗಳು ಮೂಲಭೂತವಾಗಿದ್ದವು ಮತ್ತು ಬೆಳೆಯುತ್ತಲೇ ಹೋದವು. ಆದರೂ ಅವರಿಬ್ಬರೂ ಒಳ್ಳೆಯ ಸ್ನೇಹಿತರಾಗಿದ್ದರು. ನೆಹರುರವರು ನಿಧನರಾದಾಗ ಅವರನ್ನು ರಾಜಾಜಿ ಹೀಗೆ ಪ್ರಶಂಸಿಸಿದರು. ''ಬಹಳ ನಾಗರಿಕರು, ನನ್ನಂತಹವನನ್ನು ಒಂದು ಸಾವಿರ ಸಲ ಕಳೆದುಕೊಳ್ಳಬಹುದೇ ಹೊರತು ಜವಹರಲಾಲ್ ನೆಹ್ರೂರವರನ್ನಲ್ಲ.''

ಮದರಾಸಿನಲ್ಲಿ ಮುಖ್ಯಮಂತ್ರಿ ಪದವಿಯನ್ನು ತ್ಯಜಿಸಿದ ಮೇಲೆ ಜವಹರಲಾಲ್ ನೆಹ್ರೂರವರು ರಾಜಾಜಿಯವರಿಗೆ ಕೇಂದ್ರದಲ್ಲಿ ಯಾವುದಾದರೂ ಒಂದು ಹುದ್ದೆಯನ್ನು ಕೊಡಬೇಕೆಂದಿದ್ದರು. ಅದನ್ನು ರಾಜಾಜಿ ತಿರಸ್ಕರಿಸಿದರು. ೧೯೫೪ರ ಆಗಸ್ಟ್ ೧೫ ರಂದು ರಾಜಾಜಿಯವರಿಗೆ ದೇಶದ ಅತಿ ದೊಡ್ಡ ಪ್ರಶಸ್ತಿಯಾದ 'ಭಾರತರತ್ನ' ಪ್ರಶಸ್ತಿಯನ್ನು ಘೋಷಿಸಿ ೧೯೫೫ರ ಜನವರಿ ೨೬ರಂದು ಪ್ರದಾನ ಮಾಡಲಾಯಿತು.

ಹಿಂದೆ ಹೇಳಿದಂತೆ ರಾಜಾಜಿಯವರಿಗೆ ಹೊಸ ಪಕ್ಷವೊಂದನ್ನು ಕಟ್ಟಲು ಅನೇಕ ಕಾರಣಗಳಿದ್ದವು. ಕಾಂಗ್ರೆಸ್ಸೇತರ ಪಕ್ಷಗಳು ಒಟ್ಟುಗೂಡಲು ಆಗಲಿಲ್ಲ. ಬರೀ ಅದರ ಬಗ್ಗೆ ಚರ್ಚೆ ನಡೆಯುತ್ತಿದ್ದಿತೇ ವಿನಃ ಏನೂ ಫಲಕಾರಿ ಕಾರ್ಯಗಳು ನಡೆಯಲಿಲ್ಲ. ಇದರಲ್ಲಿ ಅನೇಕ ಸ್ಥಳೀಯ ರಾಜಕಾರಣಿಗಳಿಗೆ ಸ್ಥಳೀಯವಾದ ಆಸೆಗಳು ಮತ್ತು ಆಸಕ್ತಿಗಳೇ ಮುಖ್ಯವಾಗಿ ಅವರು ತಮ್ಮ ಮತಕ್ಷೇತ್ರದಲ್ಲಿ ಉಳಿಯಬಹುದಾಗಿದ್ದಿತೇ ಹೊರತು ದೊಡ್ಡ ಕ್ಷೇತ್ರಕ್ಕೆ ಬರುವಷ್ಟು ಸಾಮರ್ಥ್ಯವಿರಲಿಲ್ಲ. ಅಂತಹವರು ತಮ್ಮ ಪ್ರತಿಷ್ಠೆ, ವೈಯಕ್ತಿಕ ಹಿತಾಸಕ್ತಿ ಮತ್ತು ವೈಯಕ್ತಿಕ ಅಧಿಕಾರಕ್ಕಾಗಿ ಸಣ್ಣ ಸಣ್ಣ ಗುಂಪುಗಳು ಒಗ್ಗೂಡಿ ದೊಡ್ಡದಾಗುವುದಕ್ಕೆ ವಿರೋಧವಾಗಿದ್ದರು, ಅವರಿಗೆ ಸ್ಥಳೀಯ ಮತ್ತು ಸ್ವಂತ ಆಸಕ್ತಿಯಿತ್ತೇ ಹೊರತು ದೊಡ್ಡದಾದ ಪಕ್ಷದ ಬಗ್ಗೆ ಆಸಕ್ತಿ ಇರಲೇ ಇಲ್ಲ. ಇದಲ್ಲದೆ ಬಲಪಕ್ಷಗಳ ಒಗ್ಗೂಡುವಿಕೆಯ ಪ್ರಯತ್ನಗಳ ವಿಫಲತೆಗೆ ಅನೇಕ ವಿವರಣೆಗಳಿದ್ದವು. ಒಗ್ಗೂಡುವುದರ ಬಗ್ಗೆ ಗಂಭೀರವಾದ ಪ್ರಯತ್ನಗಳು ನಡೆದರೂ, ಬಲಪಕ್ಷಗಳು ಚುನಾವಣೆಯಲ್ಲಿ ಸೋಲನ್ನನುಭವಿಸಿಯೂ, ಭವಿಷ್ಯವು ಕಗ್ಗತ್ತಲಾಗಿದ್ದರೂ ಒಟ್ಟುಗೂಡದೆ ಚೂರುಚೂರಾಗಿಯೇ ಉಳಿದವು. ಈ ಕಾರಣಗಳೇ ಸ್ವತಂತ್ರ ಪಕ್ಷದ ಅಸ್ತಿತ್ವಕ್ಕೆ ಕಾರಣವಾಯಿತು.

೧೯೫೬ರ ವರೆಗೆ ಮಾತುಕತೆಗಳು ಮುಂದುವರಿದರೂ ಜನಸಂಘ, ಹಿಂದೂ ಮಹಾಸಭೆ ಮತ್ತು ರಾಮರಾಜ್ಯ ಪರಿಷತ್ ಪಕ್ಷಗಳ ನಡುವೆ ಕೂಡ ಯಾವುದೇ ವಿಲೀನವಾಗಲಿ ಅಥವಾ ಒಗ್ಗೂಡುವ ಕಾರ್ಯ ಚಟುವಟಿಕೆಗಳಾಗಲಿ ಕಂಡುಬರಲಿಲ್ಲ. ಒಟ್ಟಿನಲ್ಲಿ ಗಣತಂತ್ರ ಪರಿಷತ್, ಜನತಾಪಕ್ಷ, ಅಕಾಲಿದಳ ಮತ್ತು ಇತರ ಸ್ಥಳೀಯ ಪಕ್ಷಗಳು ಅದರಲ್ಲಿಯೂ ದಕ್ಷಿಣ ಭಾರತದ ಸಂಪ್ರದಾಯಬದ್ಧ ಪಕ್ಷಗಳು ದೂರ ಉಳಿದವು. ಈ ಅನೇಕ ಪಕ್ಷಗಳು ಸರಿಯಾದ ಮುಂದಾಳತ್ವ, ಕಾರ್ಯಕ್ರಮ ಮತ್ತು ಆರ್ಥಿಕ ಬಲವಿದ್ದರೆ ಅಖಿಲ ಭಾರತ ವಿರೋಧ ಪಕ್ಷದ ಸ್ಥಾಪನೆಗೆ ಬೆಂಬಲ ತೋರಿಸಲು ಇಚ್ಛಿಪಟ್ಟವು. ಇದು ಒಟ್ಟಾರೆ ರಾಷ್ಟ್ರ ಮಟ್ಟದಲ್ಲಿನ ಪ್ರಯತ್ನಗಳಾದರೂ ರಾಜ್ಯ ಮಟ್ಟದಲ್ಲಿನ ಪ್ರಯತ್ನಗಳು ಮತ್ತು ಕಷ್ಟಗಳೂ ಕೂಡ ಅದೇ ರೀತಿಯಲ್ಲಿದ್ದವು. ಇಲ್ಲಿ ರಾಜಾಸ್ತಾನದ ಉದಾಹರಣೆಯೊಂದನ್ನು ಹೇಳಿದರೆ ಸಾಕು. ಅಲ್ಲಿ ರಾಮರಾಜ್ಯ ಪರಿಷತ್, ಜನಸಂಘ ಮತ್ತು ಕೆಲವು ಸ್ವತಂತ್ರರು ಅಸೆಂಬ್ಲಿಯಲ್ಲಿ ಒಂದು ಒಗ್ಗೂಡಿನ ಪಕ್ಷವನ್ನು ರಚಿಸಿಕೊಂಡರೂ ಸ್ವಲ್ಪ ಕಾಲದಲ್ಲಿಯೇ ಒಡೆದುಹೋದವು. ಇದಕ್ಕೆ ಮುಖ್ಯವಾದ ಕಾರಣವೆಂದರೆ ಪಂತ್ ತೀರ್ಪು. ಈ ತೀರ್ಪು ಸಣ್ಣ ಜಾಗೀರುದಾರರ ಹಿಡುವಳಿಗೆ ಧಕ್ಕೆಯುಂಟುಮಾಡುತ್ತಿತ್ತು. ಸಣ್ಣ ರಜಪೂತರ ಪರವಾಗಿ ಜನಸಂಘವು ಹೋರಾಡುತ್ತಿತ್ತು. ಆದರೆ ದೊಡ್ಡ ಜಾಗೀರುದಾರರು, ಸ್ವತಂತ್ರರು ಮತ್ತು ರಾಮರಾಜ್ಯ ಪರಿಷತ್ತಿನವರು ಆಸಕ್ತಿ ತೋರಿಸಲಿಲ್ಲ. ಹಾಗಿದ್ದರೂ ಈ ಪಕ್ಷಗಳು ಒಟ್ಟಾಗಿಯೇ ಇದ್ದವು. ಈ ಒಕ್ಕೂಟದ ಮುಂದಾಳಾಗಿದ್ದ ಜೋಧಪುರದ ಮಹಾರಾಜರು ೧೯೫೧-೫೨ರ ಚುನಾವಣೆಯ ನಂತರ ತೀರಿಹೋದರು.

ಅದೇ ಮುಂದಾಳುತನವನ್ನು ಶ್ಯಾಮಪ್ರಸಾದ ಮುಖರ್ಜಿಯವರಿಂದ ಪಡೆಯಲಾಗಲಿಲ್ಲ. ಏಕೆಂದರೆ ಎಲ್ಲ ವಿಲೀನ ಮತ್ತು ಒಗ್ಗೂಡಿದ ಗುಂಪಿನ ಚಟುವಟಿಕೆಗಳಲ್ಲಿ ಮುಂದಾಳುತನವೇ ಗಂಭೀರವಾದ ಸಮಸ್ಯೆಯಾಗುತ್ತಿತ್ತು.

೧೯೫೬ರಲ್ಲಿ ಹಿಂದಿ ಭಾಷೆಯನ್ನು ರಾಷ್ಟ್ರ ಭಾಷೆಯನ್ನಾಗಿ ಮಾಡುವ ಉದ್ದೇಶವಿದ್ದಾಗ ರಾಜಾಜಿಯವರು ಗುಡುಗಿದರು. ಅವರ ಅಭಿಪ್ರಾಯದಲ್ಲಿ ದಕ್ಷಿಣದವರ ಮೇಲೆ ಹಿಂದಿಯನ್ನು ಹೇರುವುದು ಅಪಾಯಕಾರಿ. ಅವರು ಪ್ರತಿಭಟಿಸಿದಾಗ ಉತ್ತರ ಭಾರತದಲ್ಲಿ ಅವರ ಕೆಲವು ಸ್ನೇಹಿತರಿಗೆ ಆಶ್ಚರ್ಯವಾಯಿತು. ದಕ್ಷಿಣದಲ್ಲಿರುವ ಕಾಂಗ್ರೆಸ್ಸಿನವರು ತಮ್ಮನ್ನು ಪೇಚಾಟಕ್ಕೆ ಸಿಕ್ಕಿಸುತ್ತಿದ್ದಾರೆಂದು ಭಾವಿಸಿದರು. ಹಿಂದಿಯ ಬಗ್ಗೆ ರಾಜಾಜಿಯವರ ಟೀಕೆಗಳು ಡಿ.ಎಂ.ಕೆ. ಪಕ್ಷವು ಮಾಡುತ್ತಿದ್ದ ಟೀಕೆಯಂತೆಯೇ ಇದ್ದವು. ರಾಜಾಜಿಯವರೇ ಮೂವತ್ತರ ದಶಕದಲ್ಲಿ ದಕ್ಷಿಣ ಭಾರತದಲ್ಲಿ ಹಿಂದಿಯ ಪ್ರಚಾರಕ್ಕೆ ಬೆಂಬಲ ನೀಡಿದ್ದರು. ಈಗಲೂ ಆ ಭಾಷೆಯ ಬಗ್ಗೆ ಅವರಿಗೆ ವಿರೋಧವಿರಲಿಲ್ಲ. ಅದನ್ನು ವಿದ್ಯಾಭ್ಯಾಸದ ಒಂದು ಭಾಗವಾಗಿ ಮಾಡಬೇಕೆಂದು ವಾದಿಸುತ್ತಿದ್ದರು. ಆದರೆ ಅದು ಅಧಿಕೃತ ಭಾಷೆಯಾಗಲು ಅವರು ಒಪ್ಪಲಿಲ್ಲ.

ಅವರು ಗೃಹ ಮಂತ್ರಿಯಾಗಿದ್ದಾಗಲೇ ಅಂತಹ ನೀತಿಯ ಬಗ್ಗೆ ವಿರೋಧ ವ್ಯಕ್ತಪಡಿಸಿದ್ದರು. ಅದು ಕಾರ್ಯಸಾಧ್ಯವಲ್ಲ ಎಂಬುದು ಅವರಿಗೆ ಖಂಡಿತವಾಗಿದ್ದಿತು. ದಕ್ಷಿಣದ ನಿವಾಸಿಗಳಿಗೆ ಕೇಂದ್ರ ಸರಕಾರವು ಹಿಂದಿಯಲ್ಲಿ ವಿದೇಶಿ ಪರವಾನಗಿ ಅರ್ಜಿಯನ್ನು ಅಥವಾ ಹಿಂದಿಯಲ್ಲಿ ದೂರವಾಣಿ ಬಿಲ್ಲುಗಳನ್ನು ಕೊಟ್ಟರೆ ಅದಕ್ಕೆ ಅರ್ಥವಿಲ್ಲವೆಂದರು. ದೆಹಲಿ, ಲಕ್ನೋ ಅಥವಾ ಪಾಟ್ನಾ ಮುಂತಾದ ಕಡೆಗಳಿಂದ ದಕ್ಷಿಣದ ಯಾವುದೇ ನಗರಕ್ಕೆ ಹಿಂದಿಯಲ್ಲಿ ಸರಕಾರಿ ಇಲಾಖೆಗಳು ಪತ್ರ ಬರೆದರೆ ಅವರಿಗೆ ಅರ್ಥವಾಗುವುದಿಲ್ಲ. ರಾಜಾಜಿಯವರ ಪ್ರಕಾರ ಆಂಗ್ಲ ಭಾಷೆ ಉತ್ತಮ ಅಧಿಕೃತ ಭಾಷೆಯಾಗಬಲ್ಲದೇ ಹೊರತು ಹಿಂದಿಯಲ್ಲ. ಇದರಿಂದ ಯಾವುದೇ ಹಿಂದಿಯೇತರ ಪ್ರದೇಶಗಳಿಗೆ ಭೇದ ಭಾವ ತೋರಿಸಿದಂತಾಗುವುದಿಲ್ಲ. ''ಕೇಂದ್ರ ಸರಕಾರವು ಇಂಗ್ಲಿಷ್ ಭಾಷೆಯೇ ಅಧಿಕೃತ ಭಾಷೆಯಾಗಿ ಉಳಿಯುತ್ತದೆ ಎಂದು ಘೋಷಿಸಬೇಕೆಂದು'' ರಾಜಾಜಿ ಹೇಳಿದರು. ಹಾಗೆ ಮಾಡದಿದ್ದರೆ ದಕ್ಷಿಣ ಭಾರತವು ಪ್ರತಿಭಟಿಸುತ್ತದೆ. ಆಗ ಭಾರತದ ಏಕತೆ ಉಳಿಯುವುದಿಲ್ಲ ಎಂದರು. ಇಷ್ಟರಲ್ಲಾಗಲೇ ಪ್ರಾಂತೀಯ ಗಡಿಗಳ ವಿಷಯದಲ್ಲಿ ದೊಂಬಿಗಳು ನಡೆದಿದ್ದು ಭಾರತದ ಅನೇಕ ಭಾಗಗಳಲ್ಲಿ ಪ್ರಕ್ಷುಬ್ಧ ಪರಿಸ್ಥಿತಿಯುಂಟಾಗಿದ್ದಿತು. ಹಿಂದಿಯನ್ನು ಹೇರುವುದರ ಬಗ್ಗೆ ಆಗುವ ಸ್ಥಿತಿಗತಿಗಳಿಗೆ ಇದು ನಾಂದಿ ಎಂದು ರಾಜಾಜಿ ಭಾವಿಸಿದ್ದರು. ಉದಾಹರಣೆಗೆ ಮಹಾರಾಷ್ಟ್ರದ ಗಡಿಗಳ ನಿರ್ಧಾರಗಳು ಇವರಿಗೆ ಹಿಡಿಸಲಿಲ್ಲ. ನಂತರ ಅದನ್ನು ಸರಿಪಡಿಸಲಾಯಿತು. ಮುಂಬೈ ಬಗ್ಗೆ ಇದ್ದ ವಿವಾದವು ಬಗೆಹರಿಸಲ್ಪಟ್ಟು ಅದರಲ್ಲಿಯೇ ಕೆಲವು ಪ್ರಾಂತ್ಯಗಳು ಸೇರ್ಪಡೆಯಾದವು. ಮದರಾಸಿನಲ್ಲಿದ್ದ ಮಲೆಯಾಳಂ ಮತ್ತು ಕನ್ನಡ ಜಿಲ್ಲೆಗಳನ್ನು ಆಯಾಯಾ ಪ್ರಾಂತ್ಯಗಳಿಗೆ ಸೇರಿಸುವ ವಿಷಯವು ಅವರಿಗೆ ದುಃಖಕರವಾಗಿದ್ದಿತು. ಆದರೆ ಈಗಾಗಲೇ ತೆಲುಗು ಜಿಲ್ಲೆಗಳನ್ನು ಆಂಧ್ರಪ್ರದೇಶದ ರಚನೆಯಾದಾಗ ಬೇರ್ಪಡಿಸಲಾಗಿತ್ತು - ಭಾಷೆಗಳು ಮತ್ತು ಸಂಸ್ಕೃತಿಗಳ ಮಿಶ್ರಣವು ಪ್ರತಿಯೊಂದು ರಾಜ್ಯದ ಅದರಲ್ಲಿಯೂ ಮದರಾಸಿನ ಬಲ ಎಂಬುದಾಗಿ ಅವರು ತಿಳಿದಿದ್ದರು. 'ಈ ರೀತಿ ಭಾಷಾವಾರು ಸ್ವಾತಂತ್ರ್ಯದಿಂದ ಸಂಕುಚಿತ ಮನೋಭಾವ ಮತ್ತು ತೀವ್ರವಾದ ವಿರೋಧ ಸಂಸ್ಕೃತಿ ಭಾವನೆ ಬೆಳೆದು ದೇಶದ ಪ್ರಗತಿಗೆ ಧಕ್ಕೆಯಾಗುತ್ತದೆಂದು' ರಾಜಾಜಿ ಹೆದರಿದರು. ಇದಕ್ಕೆ ಇವರ ಪರಿಹಾರವೆಂದರೆ ತೆಲುಗು, ಕನ್ನಡ, ತಮಿಳು ಮತ್ತು ಮಲಯಾಳಂಗಳನ್ನೊಳಗೊಂಡ ಒಂದೇ ದೊಡ್ಡದಾದ ದಕ್ಷಿಣ ಪ್ರದೇಶವನ್ನು ರಚಿಸಿದರೆ ಅದರಿಂದ ದಕ್ಷಿಣದ ರಾಜಕೀಯ ಪ್ರಾಮುಖ್ಯತೆಯು ಉಳಿಯುತ್ತದೆ ಎಂಬ ಅವರ ಸಲಹೆಯು ತಿರಸ್ಕರಿಸಲ್ಪಟ್ಟಿತು. ಅನೇಕರಿಗೆ ರಾಜಾಜಿಯ ಅಭಿಪ್ರಾಯಗಳು ಒರಟಾಗಿ ಕಂಡವು. ಆದರೆ ಇವರ ಅಭಿಪ್ರಾಯಗಳಿಗೆ ಬಹಳಷ್ಟು ಕಡೆ ಮನ್ನಣೆಯು ೧೯೫೮ರಲ್ಲಿ ಮೊದಲು ಕಾಂಗ್ರೆಸ್ ಪಕ್ಷ ನಂತರ ಕೇಂದ್ರ ಸರಕಾರವು ಇಂಗ್ಲಿಷ್ ಅಧಿಕೃತ ಭಾಷೆಯಾಗಿ ಮುಂದುವರಿಯುತ್ತದೆ ಎಂದು ಘೋಷಿಸಿದಾಗ ಕೊನೆಯಾಯಿತು. ಆದರೆ ಅದರ ಜೊತೆ ಜೊತೆಯಲ್ಲಿಯೇ ಹಿಂದಿಯನ್ನು ಬಳಸಬೇಕು ಮತ್ತು ಅಂತಿಮವಾಗಿ ಅದು ಅಧಿಕೃತ ಭಾಷೆಯಾಗಬೇಕು ಎಂದು ಹೇಳಲಾಯಿತು. ಹಿಂದಿಯು ಅಧಿಕೃತ ಭಾಷೆಯಾಗುವ ವಿಷಯವನ್ನು ಭವಿಷ್ಯಕ್ಕೆ ಬಿಡಲಾಯಿತು.

೧೯೫೯ರಲ್ಲಿ ರಾಜಾಜಿಗೆ ೮೦ ವರ್ಷ ವಯಸ್ಸಾಗಿದ್ದಾಗ ತಮ್ಮ ಕಾಯಿಲೆಗಳು ಮತ್ತು ದೈಹಿಕ ದುರ್ಬಲತೆಗಳನ್ನು ನಿರ್ಲಕ್ಷಿಸಿ ಜವಹರಲಾಲ್ ನೆಹ್ರೂವನ್ನು ವಿರೋಧಿಸಲು ಮನಸ್ಸು ಮಾಡಿದರು. ಅವರ ಅಭಿಪ್ರಾಯದಲ್ಲಿ ಕಾಂಗ್ರೆಸ್ ಕ್ರಮೇಣ ಭ್ರಷ್ಟಾಚಾರದಲ್ಲಿ ತೊಡಗುತ್ತಿದೆ ಎಂದಾಗಿತ್ತು. ೧೯೫೫ರಲ್ಲಿ ಸಮಾಜವಾದದ ಮಾದರಿ ಎಂದು ಹೇಳುತ್ತಿದ್ದ ಕಾಂಗ್ರೆಸ್ ೧೯೫೯ರ ಹೊತ್ತಿಗೆ ಸಮಾಜವಾದದ ಕಡೆಗೆ ವಾಲಿತು. ಅಲ್ಲದೆ ಕಾಂಗ್ರೆಸ್‌ನವರು ಶ್ರೀಮಂತರಾಗುತ್ತಾ ಇದ್ದರು. ''ಕಾಂಗ್ರೆಸ್ಸಿಗರು ಶ್ರೀಮಂತರಂತೆ ಕಾಣುತ್ತಾರೆ. ಅವರೇನಾದರೂ ಹೊಸ ವೃತ್ತಿಯನ್ನೇನಾದರೂ ಕೈಗೊಂಡಿದ್ದಾರೆಯೆ? ಹಾಗಾದರೆ ಅವರು ಹೇಗೆ ಹಣ ಮಾಡಿದರು?'' ಎಂಬುದೇ ರಾಜಾಜಿಯವರ ಪ್ರಶ್ನೆ, ಅದಕ್ಕೆ ಅವರು ಉತ್ತರ ನೀಡಿದರು ''ಹೇಗೋ, ಯಾವುದೇ ರೀತಿಯಲ್ಲೋ ಪರ್ಮಿಟ್ ಲೈಸೆನ್ಸ್

ರಾಜ್ಯವಾಗುತ್ತಿದೆ. ಇದರಿಂದ ಕಾಂಗ್ರೆಸ್ಸಿಗರು ಶ್ರೀಮಂತರಾಗುತ್ತಿದ್ದಾರೆ'' ಎಂದು ಅವರ ಅಭಿಪ್ರಾಯವಾಗಿತ್ತು, ಸರಕಾರದ ನಿಯಂತ್ರಣದಲ್ಲಿದ್ದ ಸಮಾಜವಾದದ ಮಾದರಿಯಲ್ಲಿ ವಹಿವಾಟುಗಳನ್ನು ಗುತ್ತಿಗೆಗೆ ನೀಡಲಾಗುತ್ತಿತ್ತು. ಇದರಿಂದ ಕಾಂಗ್ರೆಸ್ಸಿಗರು, ಅಧಿಕಾರಿಗಳು ಮತ್ತು ಪ್ರಭಾವಿ ವ್ಯಾಪಾರಿಗಳು ಶ್ರೀಮಂತರಾಗುತ್ತಿದ್ದರು. ಉಳಿದವರಿಗೆ ಇವರುಗಳು ತೊಂದರೆ ಕೊಡುತ್ತಿದ್ದರು. ಸರಕಾರದ ನಿಯಂತ್ರಣವನ್ನು ಎದುರಿಸಬೇಕಾದರೆ ಕಾಂಗ್ರೆಸ್ಸನ್ನು ವಿರೋಧಿಸಬೇಕು. ರಾಜಾಜಿ ಇಂತಹ ಚಿಂತನೆಯಲ್ಲಿರುವಾಗ ಕಾಂಗ್ರೆಸ್ ಒಂದು ಹೊಸ ಕೃಷಿ ನೀತಿಯನ್ನು ಪ್ರಕಟಿಸಿತು. ಈ ನೀತಿಯಲ್ಲಿ ಮೂರು ಅಂಶಗಳಿದ್ದವು. ೧. ಕಾಳಿನ ವ್ಯಾಪಾರವನ್ನು ಸರಕಾರವು ಪಡೆದುಕೊಳ್ಳುವುದು. ೨. ಭೂ ಹಿಡುವಳಿ ಮೇಲೆ ಮಿತಿ. ೩. ಜಮೀನನ್ನು ಸಹಕಾರಿ ರೀತಿಯಲ್ಲಿ ಕೃಷಿ ಮಾಡುವುದು, ಇದನ್ನು ಕಾಂಗ್ರೆಸ್ಸಿನ ನಾಗಪುರ ಅಧಿವೇಶನದಲ್ಲಿ ಅಂಗೀಕರಿಸಲಾಯಿತು. ಈ ನೀತಿಯು ಒಂದು ತೋಳವನ್ನು ಪ್ರತಿನಿಧಿಸುತ್ತಿದ್ದು ಇದಕ್ಕೆ ತಕ್ಷಣ ಸರಪಳಿ ಹಾಕಿ ಕಟ್ಟದಿದ್ದರೆ ದೇಶಕ್ಕೆ ಅಪಾಯ ಎಂದು ರಾಜಾಜಿ ಕರೆಯಿತ್ತರು ಮತ್ತು ಇದರ ಬಗ್ಗೆ ಅನೇಕ ಲೇಖನಗಳನ್ನು ಬರೆದರು. ಅಧಿಕಾರಶಾಹಿಗಳು ಸಮರ್ಥರಾದ ವ್ಯಾಪಾರಗಾರರಾಗುವುದಿಲ್ಲ. ಭೂಮಿತಿಯು ಸಂವಿಧಾನ ಬಾಹಿರ ಮತ್ತು ಆಹಾರ ಧಾನ್ಯಗಳು ನಗರಗಳಿಗೆ ಹರಿದು ಹೋಗಿಬಿಡುತ್ತದೆ. ಹೆಚ್ಚಿನ ಉದ್ಯೋಗಗಳನ್ನು ಒದಗಿಸುವುದಕ್ಕೆ ಅತಿ ಮುಖ್ಯವಾದ ವಿಧಾನವಾದ ಗ್ರಾಮೀಣ ಕೈಗಾರೀಕರಣಕ್ಕೆ ಧಕ್ಕೆ ಬರುತ್ತದೆ. ಏಕೆಂದರೆ ಭೂಮಿತಿಯು ದೊಡ್ಡ ರೈತರನ್ನು ಹಿಂಡಿ ಹಿಪ್ಪೆ ಮಾಡುತ್ತದೆ ಎಂದು ರಾಜಾಜಿ ನುಡಿದರು. ಅಲ್ಲದೆ ಈ ನೀತಿಯು ಮತಗಳನ್ನು ಪಡೆಯುವ ನೀತಿಯಾಗಿದ್ದು ಭೂರಹಿತರಿಗೆ ದಯೆ ತೋರುವುದರ ಬದಲು ದ್ವೇಷ, ಅಸೂಯೆ ಹೆಚ್ಚುತ್ತದೆ. ಸಮಾನತಾ ಪ್ರತಿವಾದಿಗಳು ಜಮೀನನ್ನು ಕಬಳಿಸುವುದಕ್ಕೆ ಹದ್ದಿನಂತೆ ಕಾಯುತ್ತಿರುತ್ತಾರೆ ಎಂದರು.

ಭೂಮಿಯನ್ನು ತುಂಡುಂತುಂಡು ಮಾಡುವುದಕ್ಕೆ ಉತ್ತರವಾಗಿ ಜವರಹರಲಾಲ್ ಮತ್ತು ಅವರ ಕೆಲವು ಸಲಹೆಗಾರರು ಪ್ರತಿಪಾದಿಸುತ್ತಿದ್ದ ಜಂಟಿ ಮಾಲೀಕತ್ವ ಮತ್ತು ಜಂಟಿ ಕೃಷಿ ವಿಚಾರವನ್ನು ತೀವ್ರವಾಗಿ ಟೀಕಿಸಿದರು. ಒಟ್ಟಾರೆ ಕೃಷಿ ಮಾಡುವ ಯೋಜನೆಯು ಅನುಭವದಿಂದಾಗಲಿ ಅಥವಾ ಸರಿಯಾದ ಚಿಂತನೆ ಮಾಡಿದುದರಿಂದಾಗಲಿ ಹುಟ್ಟಿ ಬಂದುದಲ್ಲ ಮತ್ತು ಈ ವಿಧಾನವನ್ನು ವೈಯಕ್ತಿಕ ಸ್ವಾತಂತ್ರ್ಯವಿಲ್ಲದಿರುವ ಮತ್ತು ಕಡ್ಡಾಯವಾದ ಶ್ರಮಜಾರಿಯಲ್ಲಿರುವ ದೇಶಗಳಿಂದ ಅನುಕರಣೆ ಮಾಡಲಾಗಿದೆ, ಇದನ್ನು ಕಮ್ಯೂನಿಸ್ಟರಿಂದ ಪಡೆಯಲಾಗಿದೆ ಎಂದು ಕಟುವಾಗಿ ಟೀಕಿಸಿದರು. ರೈತರು ತಮ್ಮ ಜಮೀನನ್ನು ಕೃಷಿ ಮಾಡಿದಾಗ ಉತ್ತಮವಾಗಿ ಕೆಲಸ ಮಾಡುತ್ತಾರೆ. ಹಾಗಿಲ್ಲದೆ ಒಟ್ಟಾಗಿರುವ ಜಮೀನನ್ನು ಎಲ್ಲರೂ ಸೇರಿ ಕೃಷಿ ಮಾಡಿದಾಗ ಯಾರಿಗೂ ಜವಾಬ್ದಾರಿಯಿರುವುದಿಲ್ಲ. ಸ್ವತಂತ್ರವಾದ ಚಿಂತನೆ ಕಾಂಗ್ರೆಸ್‌ನಲ್ಲಿ ಇಲ್ಲವಾಗುತ್ತಿರುವುದನ್ನು ಕಂಡು ಗಿಣಿಪಾಠದಂತೆ ಬೇರೊಂದು ದೇಶವನ್ನು ಅನುಕರಿಸಿ ಸಮಾಜವಾದವನ್ನು ಜಾರಿಗೆ ತಂದರೆ ಪರಿಣಾಮ ವಿಪರೀತವಾಗುತ್ತದೆ. ಮೊಟ್ಟ ಮೊದಲ ಬಾರಿಗೆ ಅವರು ನೆಹ್ರೂರವರನ್ನು 'ಕಾಂಗ್ರೆಸ್ಸಿನ ಡಿಕ್ಟೇಟರ್' ಎಂದು ಕರೆದರು. ಕಾಂಗ್ರೆಸ್ ಅಧಿವೇಶನಗಳಲ್ಲಿ ಸೇರಿದಾಗ ನೆಹ್ರೂರವರು ಏನು ಹೇಳುತ್ತಾರೆ ಎಂಬುದನ್ನು ಎಲ್ಲರೂ ಕಾಯುತ್ತಿದ್ದು ಅದಕ್ಕೆ ಹೂಂಗುಡುವ ಕಾಲವದಾಗಿದ್ದಿತು. ಯಾರಾದರೂ ವಿರೋಧ ವ್ಯಕ್ತಪಡಿಸಲು ಮುಂದಾದರೆ ಅದನ್ನು ಮೊಳಕೆಯಲ್ಲಿ ಚಿವುಟಿ ಹಾಕಲಾಗುತ್ತಿತ್ತು ಎಂದು ಸ್ವರಾಜ್ಯ ಪತ್ರಿಕೆಯಲ್ಲಿ ರಾಜಾಜಿ ಬರೆದರು.

ಎರಡು ವರ್ಷಗಳಿಗೆ ಮುಂಚೆ ಬಲಪಕ್ಷದ ಪಾತ್ರವನ್ನು ಕುರಿತು ಹೇಳಿದ್ದರು. ಜಂಟಿ ಕೃಷಿಯ ಭಯ ಮತ್ತು ಕಾಂಗ್ರೆಸ್‌ನ ಅಧ್ಯಕ್ಷಿಣಿಯಾಗಿ ಶ್ರೀಮತಿ ಇಂದಿರಾ ಗಾಂಧಿ ಅವರನ್ನು ನಾಮಕರಣ ಮಾಡಿದುದು ಎಲ್ಲವೂ ಸೇರಿ ಒಂದು ಕನ್ಸರ್ವೇಟೀವ್ ಪಕ್ಷಕ್ಕೆ ಕರೆಯಿತ್ತರು. ಒಂದು ವರ್ಷಕ್ಕೂ ಹೆಚ್ಚು ಕಾಲ ಮಿನೂಮಸಾನಿ (ಮೊದಲಿಗೆ ಸೋಷಿಯಲಿಸ್ಟ್ ಆಗಿದ್ದು ಆಗ ಸ್ವತಂತ್ರ ಲೋಕಸಭಾ ಸದಸ್ಯರು) ಒರಿಸ್ಸಾದ ಕಾಳಹಂದಿಯ ಮಹಾರಾಜ ಪಿ. ಕೆ. ದೇವ್, ಫೋರಂ ಆಫ್ ಫ್ರೀ ಎಂಟರ್‌ಪ್ರೈಸಸ್‌ನ ಮೊರಾರ್ಜಿ ವೈದ್ಯ ಮತ್ತು ಒಡೆದುಹೋದ ಕಾಂಗ್ರೆಸ್ ಮುಖಂಡ ಜಾನಕಿನಂದನ್ ಸಿಂಗ್ ಮುಂತಾದವರು ಕಾಂಗ್ರೆಸ್‌ನ ಸಮಾಜವಾದದ ವಿರುದ್ಧ ಒಂದು ಪಕ್ಷವನ್ನು ರಚಿಸಬೇಕೆಂದು ರಾಜಾಜಿಯವರನ್ನು ಒತ್ತಾಯಿಸುತ್ತಿದ್ದರು. ಅಲ್ಲಿಯವರೆಗೆ ರಾಜಾಜಿಯವರು ತಮಗೆ ತುಂಬಾ ವಯಸ್ಸಾಗಿದೆ, ಬಹಳ ಕಾಲದಿಂದ ಕಾಂಗ್ರೆಸ್ಸಿನವನಾಗಿದ್ದೆ ಮತ್ತು ರಾಜಕೀಯದಲ್ಲಿ ಪ್ರತಿಗಾಮಿಯಾಗಿಯೂ ವೈಯಕ್ತಿಕವಾಗಿ ನೆಹರೂರವರಿಗೆ ಬಹಳ ಸಮೀಪವಾಗಿದ್ದೇನೆ ಎಂಬ ಕಾರಣವನ್ನು ಮುಂದೊಡ್ಡಿದರು. ನಾಗಪುರದ ಅಧಿವೇಶನವಾದ ಕೂಡಲೆ ಒತ್ತಾಯ ತುಂಬಾ ಹೆಚ್ಚಾಗಿದ್ದು ರಾಜಾಜಿಯವರು ಅದನ್ನು ಜಯಪ್ರಕಾಶ ನಾರಾಯಣ್ ಕಡೆಗೆ ತಿರುಗಿಸಿದರು. ಜೆ.ಪಿ.ಯವರು ತಾವೇ ಸಮಾಜವಾದಿಗಳಾಗಿದ್ದು ಕಾಂಗ್ರೆಸ್ ಅನ್ನು ವಿರೋಧಿಸುವ ಒಂದು ಕನ್ಸರ್ವೇಟೀವ್ ಪಕ್ಷ ಬೇಕೆಂದು ಹೇಳಿದ್ದು, ರಾಜಾಜಿಯೇ ಅದಕ್ಕೆ ಸೂಕ್ತವ್ಯಕ್ತಿ ಎಂದು ತಮಗೆ ಬಂದ ಆಹ್ವಾನವನ್ನು ನಯವಾಗಿ ತಿರಸ್ಕರಿಸಿದರು. ನಂತರ ಕೆಲವು ವರ್ಷಗಳ ಹಿಂದೆ ನೆಹ್ರೂರವರ ಮಂತ್ರಿಮಂಡಲಕ್ಕೆ ರಾಜೀನಾಮೆ ನೀಡಿದ್ದ ಚಿಂತಾಮಣಿ ದೇಶಮುಖ್‌ರಿಗೆ ಪಕ್ಷದ ಅಧ್ಯಕ್ಷರಾಗಲು ಒತ್ತಾಯಿಸಿದರು. ಅವರೂ ಕೂಡ ತಮ್ಮ ಅಶಕ್ತತೆಯನ್ನು ತೋಡಿಕೊಂಡರು. ಇದೇ ಸಮಯಕ್ಕೆ ನೆಹ್ರೂರವರು ರಾಜಾಜಿಯ ಚಿಂತನೆಗಳ ಬಗ್ಗೆ ಟೀಕಿಸಿದರು. ಇದಾದ ಎರಡು ವಾರಗಳ ನಂತರ

ಬೆಂಗಳೂರಿನಲ್ಲಿ ರಾಜಾಜಿಯವರು ಫೋರಂ ಆಫ್ ಫ್ರೀ ಎಂಟರ್ ಪ್ರೈಸಸ್‌ನ ಸಭೆಯಲ್ಲಿ ಮಾತನಾಡಿದರು. ಮುಂಚಿತವಾಗಿ ಮಸಾನಿಯವರು ಕಾಂಗ್ರೆಸ್ಸನ್ನು ಕಟುವಾಗಿ ಟೀಕಿಸಿದರು. ಮೇ ೩೦ ರಂದು ಹೊಸ ಪಕ್ಷವೊಂದನ್ನು ರಚಿಸಲು ಸಕಾಲವಾಗಿದೆ ಎಂದು ರಾಜಾಜಿ ಮಸಾನಿಗೆ ಹೇಳಿದರು.

ಜೂನ್ ೪ ರಂದು ಅಖಿಲ ಭಾರತ ಕೃಷಿಕರ ಫೆಡರೇಷನ್‌ನ ಸಭೆಯನ್ನು ಉದ್ದೇಶಿಸಿ ಮಸಾನಿಯವರು ಭಾಷಣ ಮಾಡುವುದಿತ್ತು. ಅಲ್ಲಿ ರಾಜಾಜಿಯವರು ಮಸಾನಿ, ಎಸ್. ಜಿ. ರಂಗಾ, ವಿ. ಪಿ. ಮೆನನ್ ಮತ್ತು ಅನೇಕರ ಜೊತೆಯಲ್ಲಿ ಸಮಾಲೋಚಿಸಿದರು. ಈ ಒಕ್ಕೂಟದಲ್ಲಿ ಹೊಸ ಪಕ್ಷದ ಇಪ್ಪತ್ತೊಂದು ತತ್ವಗಳ ಬಗ್ಗೆ ಒಪ್ಪಿಗೆ ದೊರೆಯಿತು. ಹೆಸರಿಡುವಾಗ ಒಬ್ಬೊಬ್ಬರು ಒಂದೊಂದು ಹೆಸರನ್ನು ಸೂಚಿಸಿದರು. ಆದರೆ ಅದೇ ಸಂಜೆ ವಿವೇಕಾನಂದ ಕಾಲೇಜಿನಲ್ಲಿ ಮಸಾನಿಯವರ ಭಾಷಣ ಕೇಳಲು ಸೇರಿದ್ದ ಸಭೆಗೆ ರಾಜಾಜಿ ಮತ್ತು ಜೆ.ಪಿ. ಇಬ್ಬರೂ ಹಾಜರಾದರು. ಆಗ ಎಲ್ಲರಿಗೂ ಆಶ್ಚರ್ಯವುಂಟುಮಾಡುವ ವಿಷಯವನ್ನು ರಾಜಾಜಿ ಹೇಳಿದರು. ಇಂದು ಬೆಳಿಗ್ಗೆ ಒಂದು ಹೊಸ ರಾಜಕೀಯ ಪಕ್ಷ ಉದಯವಾಯಿತು. ಈ ಪಕ್ಷದ ಹೆಸರು ಸ್ವತಂತ್ರ ಪಕ್ಷ. ಎನ್. ಜಿ. ರಂಗಾ ಸ್ವತಂತ್ರ ಪಕ್ಷದ ಮೊದಲ ಅಧ್ಯಕ್ಷರು ಮತ್ತು ಮಸಾನಿಯವರು ಅದರ ಪ್ರಧಾನ ಕಾರ್ಯದರ್ಶಿಯಾದರು. ಆದರೆ ರಾಜಾಜಿಯವರೇ ಪಕ್ಷದ ಮಾರ್ಗದರ್ಶಕರಾಗಬೇಕೆಂದು ನಿರ್ಧಾರವಾಯಿತು. ಈ ಸಭೆಯಲ್ಲಿ ಪ್ರಸಿದ್ಧ ರೈತರು, ರಾಜಕೀಯ ಮುಂದಾಳುಗಳು ಮತ್ತು ಚಿಂತಕರು ಭಾಗವಹಿಸಿದ್ದರು. ಈ ಪಕ್ಷದ ಪ್ರವರ್ತಕರು ಕಾಂಗ್ರೆಸ್‌ಗೆ ಪ್ರತಿಯಾಗಿ ಅಖಿಲ ಭಾರತ ಪಕ್ಷವನ್ನು ರಚಿಸಬೇಕೆಂದು ಬಹಳ ಕಾಲದಿಂದ ಚಿಂತಿಸುತ್ತಿದ್ದರೂ, ಈ ಪಕ್ಷವನ್ನು ರಚಿಸಲು ತಕ್ಷಣದ ಕಾರಣವೆಂದರೆ ೧೯೫೯ರಲ್ಲಿ ನಾಗಪುರದಲ್ಲಿ ಕಾಂಗ್ರೆಸ್ ಪಕ್ಷದ ಸಭೆಯಲ್ಲಿ ಅಂಗೀಕೃತವಾದ ಸಹಕಾರಿ ವ್ಯವಸಾಯದ ಮಸೂದೆಯಾಗಿದ್ದಿತು.

ಈ ಪಕ್ಷವು ಎರಡು ತಿಂಗಳನಂತರ ಅಂದರೆ ೧೯೫೯ರ ಆಗಸ್ಟ್ ೧ ಮತ್ತು ೨ ರಂದು ಮುಂಬಯಿಯಲ್ಲಿ ಸಿದ್ದತೆಯ ಸಮ್ಮೇಳನವೊಂದನ್ನು ನಡೆಸಿತು. ಈ ಸಮ್ಮೇಳನದಲ್ಲಿ ಮೇಲೆ ಹೇಳಿದ ೨೧ ತತ್ವಗಳನ್ನು ಅಂಗೀಕರಿಸಲಾಯಿತು. ಈ ಸಮ್ಮೇಳನವನ್ನು ಉದ್ಘಾಟಿಸಿದ ರಾಜಾಜಿಯವರು ಸ್ವತಂತ್ರ ಪಕ್ಷದ ತತ್ವ ಮತ್ತು ಆದರ್ಶಗಳನ್ನು ಸಾರಾಂಶಗೊಳಿಸಿದರು. ''ಈ ಪಕ್ಷವು ಇತರ ದೇಶಗಳಲ್ಲಿರುವಂತೆ ನಮ್ಮ ದೇಶದ ಜನರ ನೈಜವಾದ ಪ್ರಗತಿ, ಕಲ್ಯಾಣ ಮತ್ತು ಸಂತೋಷವು ವೈಯಕ್ತಿಕ ಕರ್ತೃ ಶಕ್ತಿ, ಉದ್ಯಮಶೀಲತೆ ಮತ್ತು ಶಕ್ತಿ ಎಂಬ ಸತ್ಯದ ಮೇಲೆ ಅವಲಂಬಿಸಿದೆ. ದೇಶವು ಒಂದು ಸಮೂಹ. ಸರ್ಕಾರದ ಹಸ್ತಕ್ಷೇಪ ಮತ್ತು ಸರಕಾರದ ನಿರ್ವಹಣೆಯು ವೈಯಕ್ತಿಕ ಕತೃ ಶಕ್ತಿ, ಉದ್ಯಮಶೀಲತೆ ಮತ್ತು ಶಕ್ತಿಯನ್ನು ನಾಶಪಡಿಸುತ್ತದೆಂಬ ಅಭಿಪ್ರಾಯವನ್ನು ನಾವು ಹೊಂದಿದ್ದೇವೆ.''

## ಪಕ್ಷದ ಗುರಿಗಳು ಮತ್ತು ಉದ್ದೇಶಗಳು

ಸ್ವತಂತ್ರ ಪಕ್ಷವು ಎಲ್ಲ ಜನರಿಗೆ ಸಾಮಾಜಿಕ ನ್ಯಾಯ ಮತ್ತು ಸಮಾನ ಅವಕಾಶವಿದ್ದು ಅದರಲ್ಲಿ ಧರ್ಮ, ಜಾತಿ, ಉದ್ಯೋಗ ಅಥವಾ ರಾಜಕೀಯ ಬಾಧ್ಯತೆಗೆ ಅವಕಾಶವಿಲ್ಲವೆಂಬುದಕ್ಕೆ ಬದ್ಧವಾಗಿದೆ. ಪಕ್ಷವು ವ್ಯಕ್ತಿಗೆ ಗರಿಷ್ಠ ಸ್ವಾತಂತ್ರ್ಯ ಮತ್ತು ಸರ್ಕಾರದಿಂದ ಕನಿಷ್ಟ ಹಸ್ತಕ್ಷೇಪವನ್ನು ಹೊಂದಿದ್ದು ಸಮಾಜ ವಿರೋಧಿ ಚಟುವಟಿಕೆಗಳನ್ನು ರಕ್ಷಿಸುವುದಕ್ಕೆ ಮತ್ತು ಶಿಕ್ಷಿಸುವುದಕ್ಕೆ ಬದ್ಧವಾಗಿದೆ. ಅಲ್ಲದೆ ಸಮಾಜದ ದುರ್ಬಲ ವರ್ಗಗಳನ್ನು ರಕ್ಷಿಸುವುದು ಮತ್ತು ವೈಯಕ್ತಿಕ ತತ್ತ್ವ ಶಕ್ತಿಯು ಪ್ರವರ್ಧಿಸುವ ಮತ್ತು ಫಲಕಾರಿಯಾಗುವ ಪರಿಸ್ಥಿತಿಯನ್ನು ಸೃಷ್ಟಿಸುವ ಹೊಣೆಗಾರಿಕೆಯುಳ್ಳದ್ದಾಗಿದೆ. ಕೇಂದ್ರ ಮಟ್ಟದಲ್ಲಿ ಮತ್ತು ಆಂಧ್ರಪ್ರದೇಶ, ಗುಜರಾತ್, ಒರಿಸ್ಸಾ ಮತ್ತು ರಾಜಸ್ತಾನ ರಾಜ್ಯಗಳಲ್ಲಿ ರಾಷ್ಟ್ರೀಯ ಪಕ್ಷವಾಗಿ ಮಾನ್ಯತೆ ಪಡೆದಿದೆ. ಸ್ವತಂತ್ರ ಪಕ್ಷದ ಚುನಾವಣಾ ಸಂಕೇತ ನಕ್ಷತ್ರ. ಈ ಪಕ್ಷಕ್ಕೆ ಇದರದ್ದೇ ಆದ ಸಂವಿಧಾನವಿದೆ. ಇದರ ಕೇಂದ್ರ ಕಚೇರಿ ಮುಂಬಯಿಯಲ್ಲಿರುತ್ತದೆ.

ಈ ಪಕ್ಷಕ್ಕೆ ಮದರಾಸಿನ ಶ್ರೀಮಂತ ಕೃಷಿಕರು, ಮುಂಬಯಿ ಕೈಗಾರಿಕೋದ್ಯಮಿಗಳು ಮತ್ತು ರಾಜವಂಶಗಳ ಕೆಲವು ಪ್ರಮುಖ ವ್ಯಕ್ತಿಗಳ ಬೆಂಬಲ ದೊರೆಯಿತು. ರಾಮಘಡದ ಮಹಾರಾಜ ಮತ್ತು ಅವರ ಜನತಾಪಕ್ಷವು ಇದಕ್ಕೆ ಸೇರಿಕೊಂಡರು. ಗುಜರಾತಿನ ಕೆಲವು ಜಾತಿಯ ಸಂಘಗಳೂ ಇದನ್ನು ಬೆಂಬಲಿಸಿದವು.

## ಮೂಲಭೂತ ತತ್ವಗಳು

ಸ್ವತಂತ್ರ ಪಕ್ಷದ ಮೂಲಭೂತ ತತ್ವಗಳನ್ನು ಇಪ್ಪತ್ತೊಂದು ಅಂಶಗಳಲ್ಲಿ ನಮೂದಿಸಲಾಗಿದೆ. ಸ್ವತಂತ್ರ ಪಕ್ಷವು ಯಾವ ತತ್ವಗಳ ಆಧಾರದ ಮೇಲೆ ನಿಂತಿದೆ ಎಂಬುದು ಅರ್ಥವಾಗುವುದಿಲ್ಲ ಎಂಬ ನೆಹರುರವರ ಟೀಕೆಗೆ ರಾಜಾಜಿಯವರು ಉತ್ತರಿಸುತ್ತಾ, ''ನಮ್ಮ ಪಕ್ಷವನ್ನು ಅರ್ಥಮಾಡಿಕೊಳ್ಳಲು ನೇರವಾದ ಮತ್ತು ಸುಲಭವಾದ ಮಾರ್ಗವೆಂದರೆ ಪಕ್ಷದ ಅಸ್ತಿಭಾರದ ದಾಖಲೆಯಾದ ಇಪ್ಪತ್ತೊಂದು

ಚಿಕ್ಕ ವಿಧಿಗಳನ್ನು ಒದುವುದಾಗಿರುತ್ತದೆ'' ಎಂದರು. ಈ ಇಪ್ಪತ್ತೊಂದು ಅಂಶಗಳಲ್ಲಿ ಪಕ್ಷದ ಸಿದ್ಧಾಂತಗಳ ತಿರುಳು ಅಡಕವಾಗಿದೆ. ಇದನ್ನು ವಿಸ್ತರಿಸಬಹುದು ಅಥವಾ ಇದಕ್ಕೆ ಹೊಸ ಉಪಅಂಶಗಳನ್ನು ಸೇರಿಸಬಹುದು. ಆದರೆ ಸ್ವತಂತ್ರ ಪಕ್ಷದ ಸ್ವಭಾವ ಮತ್ತು ಪಾತ್ರವನ್ನು ವಿವರಿಸಲು ಇವುಗಳು ಸಾಕಾಗುವುದಿಲ್ಲ. ರಾಜಾಜಿಯವರು ಹೇಳಿರುವಂತೆ ಈ ಮೂಲಭೂತ ತತ್ವಗಳು ಯಾವುದೇ ರೀತಿಯಲ್ಲಿ ಅಸ್ಪಷ್ಟವಾಗಿಲ್ಲ. ಅದು ಸ್ಫಟಿಕದಷ್ಟು ಸ್ವಚ್ಛವಾಗಿದೆ. ಒಟ್ಟಾರೆ ಹೇಳುವುದಾದರೆ ಈ ಇಪ್ಪತ್ತೊಂದು ಅಂಶಗಳು ಪ್ರಧಾನವಾಗಿ ಉದಾರವಾದವುಳ್ಳವಾಗಿವೆ. ಅದರಲ್ಲಿ ಮಧ್ಯಸ್ಥವಾದ ಸಂಪ್ರದಾಯಬದ್ಧವಲ್ಲದ ದೃಷ್ಟಿಕೋನವಿದೆ. ಪ್ರತಿಗಾಮಿ ಮತ್ತು ಅಧಿಕಾರಯುಕ್ತ ರಾಷ್ಟ್ರೀಯತಾ ಅಭಿಪ್ರಾಯಗಳಿಗೆ ರಾಷ್ಟ್ರದ ಮುಂದಾಳುಗಳ ತಿರಸ್ಕಾರವನ್ನು ಇವು ಪ್ರತಿಬಿಂಬಿಸುತ್ತವೆ ಹಾಗೂ ಸಿದ್ಧಾಂತದಲ್ಲಿ ಆಧುನಿಕರ ಪ್ರಭಾವವನ್ನು ಕಾಣಬಹುದು. ಗಾಂಧೀಜಿಯವರ ಮುಖ್ಯ ಅಭಿಪ್ರಾಯ, ಭಾರತದ ಪರಂಪರೆಯೂ ಕೂಡ ಇವುಗಳಲ್ಲಿ ಕಂಡು ಬರುತ್ತದೆಯಾದರೂ ಅವು ಅಷ್ಟೊಂದು ಪ್ರಧಾನವಾಗಿಲ್ಲ.

ಮೂಲಭೂತ ತತ್ವಗಳು ಮುಖ್ಯವಾದವು, ಅದೂ ಅಲ್ಲದೆ ಅವು ಏನು ಹೇಳುತ್ತವೆ, ಹೇಗೆ ಹೇಳುತ್ತವೆ ಮತ್ತು ಅವು ಏನು ಹೇಳುವುದಿಲ್ಲ ಎಂಬುದು ಮುಖ್ಯವಾದವು. ಇವುಗಳಲ್ಲಿ ಹೆಚ್ಚಿನವುಗಳನ್ನು ಬಿಡಲಾಗಿದೆ. ಅಂತಹ ಸಂದರ್ಭಗಳಲ್ಲೆಲ್ಲಾ, ಪಕ್ಷದ ಸದಸ್ಯರುಗಳು ಇಪ್ಪತ್ತೊಂದು ಅಂಶಗಳಿಗೆ ವಿರುದ್ಧವಾಗಿಲ್ಲದ ಯಾವುದೇ ವಿಷಯವನ್ನೂ ಪ್ರತಿಪಾದಿಸಬಹುದು. ಗಣನೀಯವಾಗಿ ವಿದೇಶಿ ನೀತಿ, ಭಾಷಾವಾರು ನೀತಿ ಮತ್ತು ಧಾರ್ಮಿಕ, ಸಾಂಸ್ಕೃತಿಕ ವಿಷಯಗಳಿಗೆ ಸುದೀರ್ಘವಾದ ಗಮನವನ್ನು ಕೊಟ್ಟಿಲ್ಲ. ಹಾಗಾಗಿ ಮುಖ್ಯವಾಗಿರುವ ಉದ್ದೇಶ ಕಾಂಗ್ರೆಸ್ಸನ್ನು ವಿರೋಧಿಸುವುದಾಗಿದೆ. ಇದಕ್ಕೆ ಒಪ್ಪಿಕೊಳ್ಳುವವರು ಕಡಿಮೆ ಪ್ರಾಮುಖ್ಯತೆಯುಳ್ಳ ತತ್ವಗಳಿಗೆ ಗಮನ ಕೊಟ್ಟು ಪಕ್ಷವು ವಿಭಜನೆಯಾಗುವಂತಿರಬಾರದು.

ಈ ಇಪ್ಪತ್ತೊಂದು ಅಂಶಗಳಲ್ಲಿ ಉದಾರತೆಯ ವಿಷಯಗಳು ಬಹಳ ಸ್ಪಷ್ಟವಾಗಿ ಕಾಣುತ್ತವೆ. ಉದಾಹರಣೆಗೆ ಮೊದಲನೆಯ ಅಂಶ ಜಾತಿ, ಮತ, ಉದ್ಯೋಗ ಅಥವಾ ರಾಜಕೀಯ ಸೇರ್ಪಡೆಯಂತ ವಿಷಯಗಳಿಗೆ ಅವಕಾಶವಿಲ್ಲದೆ ಎಲ್ಲರಿಗೂ ಸಮಾನತೆಯಿರಬೇಕು. ಇದನ್ನನುಸರಿಸಿ ವೈಯಕ್ತಿಕ ಕರ್ತೃಶಕ್ತಿ, ಉದ್ಯಮಶೀಲತೆ ರಕ್ಷಣೆಯು ಎಲ್ಲಾ ಕ್ಷೇತ್ರಗಳಲ್ಲಿ ಅದರಲ್ಲಿಯೂ ಆರ್ಥಿಕ ಕ್ಷೇತ್ರದಲ್ಲಿ ಹೆಚ್ಚಾಗಿರಬೇಕು. ಮುಂದಿನ ಅಂಶಗಳನ್ನು ಸಂಖ್ಯಾಶಾಸ್ತ್ರ ವಿರೋಧಿಯಾಗಿ ವಿವರಿಸಲಾಗಿದೆ. ಅದು ಸಂಖ್ಯಾಶಾಸ್ತ್ರದ ನೀತಿ; ಆಸ್ತಿಯ ಒಡೆತನ ಕಸಿದುಕೊಳ್ಳುವುದು, ಸರಕಾರ ಅಧಿಕಾರಿಗಳಿಗೆ ಹೆಚ್ಚು ಹೆಚ್ಚಿನ ಅಧಿಕಾರಗಳನ್ನು ನೀಡುವುದು, ಗ್ರಾಮೀಣ ಅರ್ಥವ್ಯವಸ್ಥೆಯ ಸಾಂಘಿಕ ಸಮಾನತೆ ಮತ್ತು ಅಧಿಕಾರಷಾಹಿ ನಿರ್ವಹಣೆ, ತೆರಿಗೆಯು ಕಡಿಮೆಯಾಗುವುದು, ಅತಿ ಹೆಚ್ಚಾದ ಖೋತಾ ಹಣಕಾಸು ಮತ್ತು ಮರುಪಾವತಿ ಮಾಡಲು ಅಸಾಧ್ಯವಾದಷ್ಟು ವಿದೇಶಿ ಸಾಲಗಳು ಮುಂತಾದ ಅನೇಕ ವಿಷಯಗಳನ್ನು ವಿರೋಧಿಸುತ್ತದೆ. ಶಿಕ್ಷಣದ ಮೇಲೆ ಅಧಿಕೃತ ನಿರ್ದೇಶನಗಳು, ಅಧಿಕಾರಿಗಳ ಮೇಲೆ ರಾಜಕೀಯ ಒತ್ತಡ, ದುರುಪಯೋಗ ಮತ್ತು ಅಸಮರ್ಥತೆ, ಸರಕಾರದ ಹಾಲಿನೀತಿಗಳಿಂದ ಉಂಟಾಗಿರುವ ಅನಿಶ್ಚಿತತೆ ಮುಂತಾದವುಗಳನ್ನು ವಿರೋಧಿಸುತ್ತ ಸರಕಾರದಿಂದ ಕನಿಷ್ಠ ಹಸ್ತಕ್ಷೇಪ ಎಂದು ಹೇಳಿರುವುದರಿಂದ ಭೂಮಿಯಲ್ಲಿ, ಹಡಗು ಮತ್ತು ಕಾರ್ಖಾನೆಗಳಲ್ಲಿ ಖಾಸಗಿ ಕರ್ತೃತ್ವ ಶಕ್ತಿಯನ್ನು ಪುನಃ ಸ್ಥಾಪಿಸುವುದಕ್ಕೆ ಸ್ವತಂತ್ರ ಪಕ್ಷದ ಮುಖಂಡರು ಬದ್ಧರಾಗಿದ್ದಾರೆ. ಆಸ್ತಿಹೊಂದಲು ಸ್ವತಂತ್ರ, ಕಡ್ಡಾಯವಾಗಿ ತೆಗೆದುಕೊಂಡ ಯಾವುದೇ ಆಸ್ತಿಗೆ ನ್ಯಾಯವಾದ ಪರಿಹಾರ, ಮೂಲಭೂತ ಸಂವಿಧಾನದ ಹಕ್ಕುಗಳಿಗೆ ಕಡ್ಡಾಯವಾಗಿ ಬದ್ಧವಾಗಿರುವುದು ಮತ್ತು ಕೊನೆಯಲ್ಲಿ ಸಂವಿಧಾನವು ನ್ಯಾಯಾಲಯಗಳಿಗೆ ನೀಡಿರುವ ನ್ಯಾಯಾಂಗ ಪರಾಮರ್ಶೆ ಅಧಿಕಾರಗಳ ಪೂರ್ಣ ಉಪಯೋಗಕ್ಕೆ ಮನವಿಯನ್ನು ಮಾಡಿದೆ. ಇವುಗಳೆಲ್ಲ ಏನನ್ನು ತೋರಿಸುತ್ತದೆಯೆಂದರೆ ಪಕ್ಷವು ರಾತ್ರಿಯ ಕಾವಲುಗಾರನಂತಿದ್ದು, ೧೯೬೭ರ ಚುನಾವಣಾ ಪ್ರಣಾಳಿಕೆಯಲ್ಲಿ ಹೇಳಿರುವಂತೆ 'ಅತಿ ಕಡಿಮೆ ಆಳುವ ಸರಕಾರವು ಅತಿ ಉತ್ತಮ ಸರಕಾರ ಮತ್ತು ದೇಶದ ವಹಿವಾಟು ದೇಶದ್ದಾಗಿರದೆ ಸರಕಾರದ್ದಾಗಿರುತ್ತದೆ' ಎಂಬುದಕ್ಕೆ ಸ್ವತಂತ್ರ ಪಕ್ಷದ ಮುಂದಾಳುಗಳು ಬದ್ಧರಾಗಿರುತ್ತಾರೆ. ಸರಕಾರದ ಹೆಚ್ಚುತ್ತಿರುವ ಅತಿಕ್ರಮಣದ ವಿರುದ್ಧ ವ್ಯಕ್ತಿಯನ್ನು ರಕ್ಷಿಸುತ್ತದೆ ಎಂಬ ತತ್ವಕ್ಕೆ ಸ್ವತಂತ್ರ ಪಕ್ಷವು ಬದ್ಧವಾಗಿರುತ್ತದೆ ಎಂದು ರಾಜಾಜಿಯವರು ಒತ್ತಿ ಹೇಳಿದ್ದಾರೆ. ಇದು ಭಾರತದ ಕಾಂಗ್ರೆಸ್ ಪಕ್ಷದ ಸಮಾಜವಾದ ತತ್ವಕ್ಕೆ ಸವಾಲನ್ನು ಒಡ್ಡುತ್ತದೆ. ಮಸಾನಿಯವರು ಇನ್ನೊಂದು ರೀತಿಯಲ್ಲಿ ಅದೇ ವಿಷಯವನ್ನು ಹೇಳಿದ್ದಾರೆ. 'ಸಮಾಜವಾದದ ಮಾದರಿಯ ಮುಸುಕಿನಲ್ಲಿ ನವದೆಹಲಿಯ ನವೀನ ಬ್ರಾಹ್ಮಣರು ಹೊಸದಾದ ಶೂದ್ರ ವರ್ಗವನ್ನು ಸೃಷ್ಟಿಸಲು ಹೊರಟಿದ್ದು ಅವರು ಸೌದೆ ಒಡೆಯುವುದು ಮತ್ತು ನೀರನ್ನು ಸೇದುವುದರಲ್ಲಿಯೇ ನಿರತರಾಗುವಂತೆ ಮಾಡಿ ಹೊಸದಾದ ಬಂಡವಾಳಗಾರರ ಒಂದು ವರ್ಗವನ್ನೇ ಸೃಷ್ಟಿಸುತ್ತಿದೆ.' ಇವುಗಳನ್ನು ಕಾಪಾಡುವುದಕ್ಕೆ ಪಕ್ಷವು ಕೆಲವು ನಿರ್ದಿಷ್ಟ ಸಲಹೆಗಳನ್ನು ಮುಂದಿಟ್ಟಿದೆ. ೧. ಅಧಿಕಾರಶಾಹಿಯ ಮೇಲೆ ಕಾವಲು ಕಾಯಲು ಮತ್ತು ಕುಂದುಕೊರತೆಗಳನ್ನು ವಿಚಾರಿಸಲು ಒಬ್ಬ ಮೇಲ್ವಿಚಾರಕನ ಸ್ಥಾನವನ್ನು ಸೃಷ್ಟಿಸುವುದು. ೨. ಪ್ರಸಕ್ತ ಸರಕಾರದ ಶಾಸನದಲ್ಲಿ ಅಗತ್ಯವಾಗಿರುವ ಎಲ್ಲ ಪರ್ಮಿಟ್ಟುಗಳು ಮತ್ತು ಲೈಸನ್ಸುಗಳನ್ನು ನೀಡಲು ಚುನಾವಣಾ ಆಯೋಗದ ಮಾದರಿಯಲ್ಲಿ ಒಂದು ರಾಜಕೀಯೇತರ

ಮಂಡಳಿಯನ್ನು ರಚಿಸುವುದು ೬. ಚೀನಾ ಆಕ್ರಮಣ ಕಾಲದಲ್ಲಿ ಘೋಷಿಸಲಾದ ತುರ್ತುಪರಿಸ್ಥಿತಿಯನ್ನು ಶ್ರೀಘ್ರವಾಗಿ ಮತ್ತು ಮುಂಜಾಗರೂಕತೆಯಾಗಿ, ಸ್ಥಾನಬದ್ಧತೆಯ ಶಾಸನವನ್ನು ಶೀಘ್ರವಾಗಿ ಉಪಯೋಗಿಸುವಾಗ ಹೆಚ್ಚಿನ ಪರ್ಯಾಲೋಚನೆ ಮತ್ತು ನಾಲ್ಕನೆಯ ಸಾರ್ವತ್ರಿಕ ಚುನಾವಣೆಗೆ ತಿಂಗಳುಗಳ ಮೊದಲು ಕಾಂಗ್ರೆಸ್ ಅಧಿಕಾರದಿಂದ ಸ್ವಯಂ ಹೊರಬರುವುದು, ಇವರಿಂದ ಆಳುವ ಪಕ್ಷವು ಚುನಾವಣೆಯ ಮೇಲೆ ಪ್ರಭಾವ ಬೀರುವಂತಾಗಬಾರದು.

ಈ ಪಕ್ಷದಲ್ಲಿ ಪ್ರತಿಭಾನ್ವಿತ ವ್ಯಕ್ತಿಗಳು, ಹಿರಿಯರು ಮುಂತಾದವರು ಇದ್ದುದರಿಂದ ಅನೇಕ ಪಕ್ಷಗಳನ್ನು ಗುಂಪುಗಳನ್ನು ಮತ್ತು ವ್ಯಕ್ತಿಗಳನ್ನು ಆಕರ್ಷಿಸಲು ಸಹಾಯವಾಯಿತು. ಅನೇಕ ರಾಜ್ಯಗಳಲ್ಲಿ ಸ್ವತಂತ್ರಪಕ್ಷವು ಬೇರೂರಲಿಲ್ಲ, ಅನೇಕ ಮುಖ್ಯ ರಾಜ್ಯಗಳಲ್ಲಿ ಬಹಳ ದುರ್ಬಲವಾಗಿದ್ದಿತು. ಅದು ಹೆಚ್ಚಾಗಿ ಶ್ರೀಮಂತರನ್ನು ಅವಲಂಬಿಸಿತ್ತು. ಆದರಿಂದ ಹೆಚ್ಚು ಪ್ರಯೋಜನವಾಗಲಿಲ್ಲ.

ಸ್ವತಂತ್ರ ಪಕ್ಷವು ೧೯೬೨ರಲ್ಲಿ ಮೊದಲನೆಯ ಸಲ ಚುನಾವಣೆಯಲ್ಲಿ ಸ್ಪರ್ಧಿಸಿತು. ಲೋಕಸಭೆಯ ೧೭೨ ಸ್ಥಾನಗಳಿಗೆ ಸ್ಪರ್ಧಿಸಿದ್ದು ೧೮ ಸ್ಥಾನಗಳನ್ನು ಗೆದ್ದುಕೊಂಡಿದೆ. ಹಾಗೆಯೇ ದೇಶದ ಇತರ ರಾಜ್ಯಗಳಲ್ಲಿನ ವಿಧಾನಸಭೆಗಳಲ್ಲಿ ೧೦೧೨ ಸ್ಥಾನಗಳಿಗೆ ಸ್ಪರ್ಧಿಸಿದ್ದು. ೧೭೦ ಸ್ಥಾನಗಳನ್ನು ಗೆದ್ದುಕೊಂಡಿತು. ಕರ್ನಾಟಕದಲ್ಲಿ ೭ ಸ್ಥಾನಗಳಿಗೆ ಸ್ಪರ್ಧಿಸಿದ್ದು ಒಂದು ಸ್ಥಾನವನ್ನು ಗಳಿಸಿತು. ೧೯೭೧ರಲ್ಲಿ ಸ್ವತಂತ್ರ ಪಕ್ಷವು ಕರ್ನಾಟಕದಿಂದ ೫ ಸ್ಥಾನಗಳಿಗೆ ಸ್ಪರ್ಧಿಸಿದ್ದು ಒಂದು ಸ್ಥಾನವನ್ನೂ ಪಡೆಯಲಿಲ್ಲ. ೧೯೭೨ರ ವಿಧಾನಸಭೆ ಚುನಾವಣೆಯಲ್ಲಿ ೨೮ ಸ್ಥಾನಗಳಲ್ಲಿ ಸ್ಪರ್ಧಿಸಿ, ಒಂದು ಸ್ಥಾನವನ್ನೂ ಪಡೆಯಲಿಲ್ಲ.

## ಸ್ವತಂತ್ರ ಪಕ್ಷದ ಚುನಾವಣೆ ಸಾಧನೆ

### ಲೋಕಸಭೆ

೧೯೬೨ರ ಲೋಕಸಭೆ ಚುನಾವಣೆಯಲ್ಲಿ ಸ್ವತಂತ್ರ ಪಕ್ಷದಿಂದ ೭ ಜನ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಅವರುಗಳು ಎಂದರೆ ಗುಲ್ಬರ್ಗಾದಿಂದ ಶರಣಗೌಡ ಇನಾಂದಾರ್ (ಗಳಿಸಿದ ಮತ ಶೇ. ೪೭.೬೨), ಬಿಜಾಪುರ ಉತ್ತರದಿಂದ ಮುರುಗಪ್ಪ ಸಿದ್ದಪ್ಪ ಸುಗಂಧಿ (ಶೇ. ೩೩.೩೯), ಧಾರವಾಡ ದಕ್ಷಿಣದಿಂದ ವೀರಯ್ಯ ವೀರಬಸವಯ್ಯ ಶಿವಳ್ಳಿ (ಶೇ. ೧೩.೦೨), ಬಳ್ಳಾರಿಯಿಂದ ಜೆ. ಎಂ. ಇಮಾಮ್ (ಶೇ. ೪೮.೦೨) ಮಂಗಳೂರಿನಿಂದ ಜೆ. ಎಂ. ಎಲ್. ಪ್ರಭು (ಶೇ, ೩೦.೧೨), ಬೆಂಗಳೂರು ದಕ್ಷಿಣದಿಂದ ವಿ. ಎಸ್. ನಟರಾಜನ್ (ಶೇ. ೨೬.೯) ಹಾಗೂ ಮೈಸೂರಿನಿಂದ ಹೆಚ್. ರಾಮರಾಜ ಅರಸ್ (ಶೇ. ೧೭.೫೨)

### ವಿಧಾನಸಭೆ

ಪ್ರಸ್ತುತ ಚುನಾವಣೆಯಲ್ಲಿ ಸ್ವತಂತ್ರ ಪಕ್ಷದಿಂದ ೪೦ ಅಭ್ಯರ್ಥಿಗಳು ವಿಧಾನಸಭೆಗೆ ಸ್ಪರ್ಧಿಸಿದ್ದರು. ಅವರುಗಳಲ್ಲಿ ೮ ಜನರು ಮಾತ್ರ ಗೆಲವನ್ನು ಸಾಧಿಸಿದ್ದಾರೆ. ಅವರುಗಳು ಎಂದರೆ ಗುಲ್ಬರ್ಗಾದ ಗುರುಮಿಠ್ಕಲ್ ಕ್ಷೇತ್ರದಿಂದ ವಿದ್ಯಾಧರ ಸಾಯಬಣ್ಣ ಗುರೂಜಿ (ಶೇ. ೬೭.೧೮), ಶಹಪುರದಿಂದ ಮಹಾಂತಸ್ವಾಮಿ ವಿರೂಪಾಕ್ಷಯ್ಯ (ಶೇ. ೫೯.೫೫), ಶೋರಾಪುರದಿಂದ ರಾಜಾ ಪಿಡ್ಡ ನಾಯಕ ರಾಜಾ ಕೃಷ್ಣಪ್ಪ ನಾಯಕ (ಶೇ : ೭೪.೬೪), ಇಂಡಿಯಿಂದ ಜೆ. ಡಿ ಪಟೇಲ್ (ಶೇ. ೫೧.೧೨), ಸಿರಗುಪ್ಪದಿಂದ ಸಿ.ಎಂ. ರೇವಣ್ಣ ಸಿದ್ದಯ್ಯ (ಶೇ. ೬೨) ಮೂಡುಬಿದ್ರೆಯಿಂದ ಗೋಪಾಲ ಸಾಲಿಯಾನ (ಶೇ. ೫೦.೬೩), ಹೊಸಕೋಟೆಯಿಂದ ಬಿ. ಚನ್ನಬೈರೇಗೌಡ (ಶೇ. ೬೨.೯೮) ಹಾಗೂ ಹೆಗ್ಗಡದೇವನಕೋಟೆಯಿಂದ ಆರ್. ಪೀರಣ್ಣ (ಶೇ. ೪೭.೨೪)

## ೧೯೬೭ರ ಚುನಾವಣೆ

### ಲೋಕಸಭೆ

ಈ ಚುನಾವಣೆಯಲ್ಲಿ ಲೋಕಸಭೆಗೆ ಸ್ವತಂತ್ರಪಕ್ಷದಿಂದ ೧೦ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಅವರಲ್ಲಿ ನಾಲ್ಕು ಜನರು ವಿಜಯಶಾಲಿಯಾಗಿದ್ದಾರೆ. ಅವರುಗಳೆಂದರೆ ರಾಯಚೂರು ಲೋಕಸಭಾ ಕ್ಷೇತ್ರದಿಂದ ಆರ್. ವಿ. ನಾಯಕ್ ಅವರು ಶೇ. ೫೨.೫೦ ಎಂದರೆ, ೧,೧೭,೨೭೨ ಮತಗಳನ್ನು ಪಡೆದು ಆಯ್ಕೆಯಾದರು. ಚಿತ್ರದುರ್ಗ ಲೋಕಸಭಾ ಕ್ಷೇತ್ರದಿಂದ ಜೆ. ಎಂ. ಇಮಾಮ್ ಅವರು ಶೇ. ೫೩.೭೮ ಅಂದರೆ, ೧,೭೩,೪೦೨ ಮತಗಳನ್ನು ಪಡೆದು ಆಯ್ಕೆಯಾದರು. ಉಡುಪಿ ಲೋಕಸಭಾ ಕ್ಷೇತ್ರದಿಂದ ಜೆ. ಎಂ. ಎಲ್. ಪ್ರಭು ಶೇ. ೪೭.೭೬ ಅಂದರೆ, ೧,೨೨,೮೩೬ ಮತಗಳನ್ನು ಪಡೆದು ಆಯ್ಕೆಯಾದರು. ಬಿಜಾಪುರ ಲೋಕಸಭಾ ಕ್ಷೇತ್ರದಿಂದ ಜೆ. ಡಿ. ಪಾಟೇಲ್‌ರವರು ಶೇಕಡಾ ೪೯.೫೧ ಅಂದರೆ ೧,೧೩,೨೦೮ ಮತಗಳನ್ನು ಪಡೆದು ಆಯ್ಕೆಯಾದರು. ಈ

ಚುನಾವಣೆಯಲ್ಲಿ ಲೋಕಸಭೆಗೆ ಸ್ಪರ್ಧಿಸಿ ಗಣನೀಯ ಮತಗಳನ್ನು ಪಡೆದು ಸೋಲು ಒಪ್ಪಿಕೊಂಡ ಅಭ್ಯರ್ಥಿಗಳು ಎಂದರೆ ಗುಲ್ಬರ್ಗಾದಿಂದ ಎಂ. ವಿರೂಪಾಕ್ಷ, ಬಳ್ಳಾರಿಯಿಂದ ವೈ. ಮಹಾಬಲೇಶ್ವರಪ್ಪ, ಮಧುಗಿರಿಯಿಂದ ಎಸ್. ಸಿ. ತಿಮ್ಮಾರೆಡ್ಡಿ, ಕನಕಪುರದಿಂದ ಬಿ.ಕೆ. ಪುಟ್ಟರಾಮಯ್ಯ, ಚಾಮರಾಜನಗರದಿಂದ ಎನ್. ಸಿ. ಬಿ. ರಂಗಯ್ಯ ಹಾಗೂ ಬೆಳಗಾವಿಯಿಂದ ಎಸ್. ವಿ. ಅಪ್ಪಯ್ಯಪ್ಪ.

## ವಿಧಾನಸಭೆ ಚುನಾವಣೆ

೧೯೬೭ರ ವಿಧಾನಸಭೆಗೆ ಸ್ವತಂತ್ರ ಪಕ್ಷದಿಂದ ೪೩ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಇವರುಗಳಲ್ಲಿ ೧೪ ಅಭ್ಯರ್ಥಿಗಳು ಆಯ್ಕೆಯಾಗಿ ಕರ್ನಾಟಕದಲ್ಲಿ ಸ್ವತಂತ್ರ ಪಕ್ಷಗಳ ಸಮರ್ಥವಾದ ಅಸ್ತಿಭಾರವನ್ನು ಹಾಕಿದ್ದರು. ಹೀಗೆ ಆಯ್ಕೆಯಾದ ಅಭ್ಯರ್ಥಿಗಳು ಎಂದರೆ ಸೇಡಂನಿಂದ ಜಿ. ಎಸ್. ಪಾಪಯ್ಯ, ಜೇವರ್ಗಿಯಿಂದ ಎಸ್. ಸಿದ್ಧರಾಮಗೌಡ, ಶಹಾಪುರದಿಂದ ರಾಜಾ ವೆಂಕಟಪ್ಪನಾಯಕ ಕೃಷ್ಣಪ್ಪ ನಾಯಕ, ದೇವದುರ್ಗದಿಂದ ಸದಾಶಿವಪ್ಪ ಪಾಟೀಲ್ ಬಸವಂತಯ್ಯ ಪಾಟೀಲ್, ಬಳ್ಳಾರಿಯಿಂದ ವಿ. ನಾಗಪ್ಪ, ಹೊಳಲ್ಕೆರೆಯಿಂದ ಬಿ. ಪರಮೇಶ್ವರಪ್ಪ, ಸೋಮವಾರಪೇಟೆಯಿಂದ ಜಿ. ಎಂ. ಮಂಜುನಾಥ್, ಬೇಲೂರಿನಿಂದ ಹೆಚ್. ಎಸ್. ಪುಟ್ಟರಂಗನಾಥ್, ಅರಕಲಗೂಡಿನಿಂದ ಹೆಚ್. ಎನ್. ನಂಜೇಗೌಡ, ಹಾಸನದಿಂದ ಹೆಚ್. ಬಿ. ಜ್ವಾಲನಯ್ಯ, ಸಕಲೇಶಪುರದಿಂದ ಕೆ. ಸಿ. ಚಿಕ್ಕೇಗೌಡ, ಸುಳ್ಯದಿಂದ ಎ. ರಾಮಚಂದ್ರ, ಮೂಡಬಿದ್ರಿಯಿಂದ ರತ್ನಕುಮಾರ್‌ಶೆಟ್ಟಿ, ಶಿರಹಟ್ಟಿಯಿಂದ ಎಸ್. ವಿ. ಕಾಶೀಮಠ, ಮುಧೋಳದಿಂದ ಕೆ. ಸಿ. ನಾಗನಗೌಡ ಹಾಗೂ ಇಂಡಿಯಿಂದ ಎಂ. ಕೆ. ಸುರಪುರ.

## ೧೯೭೧ರ ಲೋಕಸಭೆ ಚುನಾವಣೆ

೧೯೭೧ರ ಲೋಕಸಭೆ ಚುನಾವಣೆಯಲ್ಲಿ ಐದು ಕ್ಷೇತ್ರಗಳಲ್ಲಿ ಸ್ವತಂತ್ರಪಕ್ಷದ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಆದರೆ ಅವರುಗಳಲ್ಲಿ ಯಾರೂ ಜಯಶೀಲರಾಗಲಿಲ್ಲ. ಅವರು ಸ್ಪರ್ಧಿಸಿದ್ದ ಕ್ಷೇತ್ರಗಳು ಎಂದರೆ ರಾಯಚೂರಿನಿಂದ ರಾಜಾ ವೆಂಕಟಪ್ಪ ನಾಯಕ, ಬಳ್ಳಾರಿಯಿಂದ ವೈ. ಮಹಾಬಲೇಶ್ವರಪ್ಪ, ಚಿತ್ರದುರ್ಗದಿಂದ ಜೆ. ಎಂ. ಇಮಾಮ್, ಹಾಸನದಿಂದ ಹೆಚ್. ಬಿ. ಜ್ವಾಲನಯ್ಯ ಹಾಗೂ ಉಡುಪಿಯಿಂದ ಜೆ. ಎಂ. ಎಲ್. ಪ್ರಭು.

## ೧೯೭೨ರ ವಿಧಾನಸಭೆ ಚುನಾವಣೆ

೧೯೭೨ರ ವಿಧಾನಸಭೆ ಚುನಾವಣೆಯಲ್ಲಿ ರಾಜ್ಯದಿಂದ ೨೫ ಕ್ಷೇತ್ರಗಳಲ್ಲಿ ಸ್ವತಂತ್ರಪಕ್ಷದ ಅಭ್ಯರ್ಥಿಗಳು ಕಣಕ್ಕೆ ಇಳಿದಿದ್ದರು. ಅವರಲ್ಲಿ ಯಾರೊಬ್ಬರೂ ಜಯಶೀಲರಾಗಲಿಲ್ಲ. ಸ್ವತಂತ್ರ ಪಕ್ಷದ ದಿಗ್ಗಜರಾದ ರಾಜಾಜಿ, ಪೀಲೂ ಮೋದಿ ಮತ್ತು ಇತರ ನಾಯಕರುಗಳು ರಾಜಕೀಯದಲ್ಲಿ ತಮ್ಮ ಆಸಕ್ತಿಯನ್ನು ಕಳೆದುಕೊಂಡರು. ಹೀಗಾಗಿ ಪಕ್ಷದ ಸಂಘಟನೆ ಅಧೋಗತಿಗೆ ಇಳಿಯಿತು. ೧೯೭೭ರ ಹೊತ್ತಿಗೆ ಸ್ವತಂತ್ರ ಪಕ್ಷ ಕರ್ನಾಟಕ ರಾಜಕೀಯ ರಂಗದಿಂದ ಅದೃಶ್ಯವಾಯಿತು.



# ಭಾರತೀಯ ಜನಸಂಘ

ಎಸ್. ಎ. ಜಗನ್ನಾಥ್

ಭಾರತವು ಸ್ವತಂತ್ರಗೊಂಡ ಸಂದರ್ಭದಲ್ಲಿ ಬಹುಮುಖವಾದ ನವೋದಯ ಮತ್ತು ರಾಷ್ಟ್ರ ಪುನರ್ ನಿರ್ಮಾಣ ಕಾರ್ಯವು ಕ್ರಿಯಾಶೀಲಗೊಂಡವು. ಇಂದಿನ ಮತ್ತು ನಾಳಿನ ಭಾರತಕ್ಕೆ, ಸಾರ್ಥಕವೂ ಸ್ಫೂರ್ತಿದಾಯಕವೂ ಆದ ಜನಜೀವನದ ನವಯೋಜನೆಗೆ ಅನುಗುಣವಾಗಿ ದೇಶದ ಜನತೆಯ ಭಾಗ್ಯವನ್ನು ರೂಪಿಸುವ ಸಶಕ್ತ ಸೃಜನಾತ್ಮಕ ರಾಷ್ಟ್ರದ ನಿರ್ಮಾಣಕ್ಕೆ ಅಂಕುರಾರ್ಪಣವಾಯಿತು. ಇಂದಿನ ನವೋದಯ ಮತ್ತು ರಾಷ್ಟ್ರದ ಪುನರ್ ನಿರ್ಮಾಣಗಳ ಕಾರ್ಯವನ್ನು ಸ್ವಲ್ಪ ಹೆಚ್ಚುಕಡಿಮೆ ಉದ್ದೇಶಪೂರ್ವವಾಗಿಯೇ ಯೋಜಿಸಿ ಕಾರ್ಯರೂಪಕ್ಕೆ ತರುವ ಪ್ರಯತ್ನಗಳು ಇಲ್ಲಿಯವರೆಗೂ ನಡೆಯುತ್ತಲೇ ಇವೆ. ಕಳೆದ ಶತಮಾನದ ಆರಂಭದಲ್ಲಿ ರಾಜಾರಾಮ ಮೋಹನರಾಯರ ಉದಯ ಮತ್ತು ಇವರು ಕೈಗೊಂಡ ಪ್ರಭಾವಿ ಕಾರ್ಯದೊಡನೆ ಭಾರತದಲ್ಲಿ ನವೋದಯ ಯುಗವು ಪ್ರಾರಂಭವಾಯಿತು. ರಾಮಕೃಷ್ಣ ಪರಮಹಂಸರು ಮತ್ತು ಸ್ವಾಮಿ ವಿವೇಕಾನಂದ, ಸ್ವಾಮಿ ದಯಾನಂದ ಸರಸ್ವತಿ, ಅರವಿಂದ ಘೋಷ್, ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕ್, ಲಾಲಾ ಲಜಪತರಾಯ್, ಮಹಾತ್ಮ ಗಾಂಧೀಜಿ, ರವೀಂದ್ರನಾಥ ಟ್ಯಾಗೋರ್, ಡಾ। ಹೆಡಗೇವಾರ್ ಮತ್ತು ವೀರ ಸಾವರ್‌ಕರ್ ಮೊದಲಾದ ಗಣ್ಯ ವಿಚಾರವಂತರು ತಮ್ಮ ಇಡೀ ಜೀವನವನ್ನು ದೇಶಕ್ಕಾಗಿ ಮುಡುಪಾಗಿಟ್ಟು ವಿವಿಧ ಕ್ಷೇತ್ರಗಳಲ್ಲಿ ಪರಿಚಯಿಸಿದ, ಹಲವಾರು ಮಹತ್ತರ ಸುಧಾರಣೆಗಳಿಂದಾಗಿ ಭಾರತ ದೇಶದಲ್ಲಿ ನವೋದಯದ ಕಹಳೆಯು ಮೊಳಗಿತೆಂದು ಅಭಿಪ್ರಾಯಪಡಲಾಗುತ್ತದೆ.

ಸಹಾನುಭೂತಿಯಿಂದ ಭಾರತೀಯ ತತ್ವಜ್ಞಾನ ಸಂಪತ್ತನ್ನು ವಿಶ್ವಕ್ಕೆ ಪರಿಚಯಿಸಲು ಶ್ರಮಿಸಿದ ಶಾಸ್ತ್ರದ ವಿದ್ವಾಂಸರುಗಳು, ಹಾಗೂ ಸಿವೆಲ್ ಮತ್ತು ರಾಧಾಕುಮುದ್ ಮುಖರ್ಜಿ ಮುಂತಾದ ಹಲವಾರು ಇತಿಹಾಸಕಾರರುಗಳ ಪರಿಶ್ರಮದ ಪರಿಣಾವಾಗಿ ಭಾರತದ ಇತಿಹಾಸ ರಚನೆಯಲ್ಲಿ ಆಶಾದಾಯಕ ಮತ್ತು ಸೃಜನಾತ್ಮಕವಾದ ಅಭಿವ್ಯಕ್ತತೆ ಪ್ರಥಮ ಬಾರಿಗೆ ಕಂಡುಬಂದವು. ಬೇರೆ ಬೇರೆ ಯುಗಗಳ ಸವಾಲನ್ನು ಎದುರಿಸಿ ಮತ್ತೆ ಮತ್ತೆ ಪ್ರಬಲವಾದ ರಾಷ್ಟ್ರನಿರ್ಮಾಣ ಕಾರ್ಯವನ್ನು ಕೈಗೊಂಡು ಭಾರತೀಯರಲ್ಲಿ ಉಜ್ವಲ ದೇಶಪ್ರೇಮವನ್ನು ಪುನರುಜ್ಜೀವನಗೊಳಿಸುವಲ್ಲಿ ಭಾರತದಲ್ಲಿ ಶ್ರಮಿಸಿದ ದಾರ್ಶನಿಕರು ಹಾಗೂ ಇತಿಹಾಸಕಾರರು ಬಹಳಷ್ಟು ಮಟ್ಟಿಗೆ ಯಶಸ್ವಿಯಾದರು.

ಭಾರತೀಯ ಸಂಸ್ಕೃತಿಯ ಮೂಲಭೂತ ಅಂಶವೆಂದರೆ ಸಂಪ್ರದಾಯದ ಎಲೆಯನ್ನು ಜನಜೀವನ ಪದ್ಧತಿಗಳಲ್ಲಿ ಹಾಸುಹೊಕ್ಕಾಗಿ ಬೆಳೆದುಬಂದಿರುವುದೇ ಆಗಿದೆ. ಸಿಂಧೂ ಸಂಸ್ಕೃತಿ ಹಾಗೂ ಆರ್ಯರ ಸಂಸ್ಕೃತಿಯಲ್ಲಿ ಕಂಡುಬರುವ ಅನೇಕ ಧಾರ್ಮಿಕ ಪದ್ಧತಿಗಳು ಇಂದೂ ಚಾಲ್ತಿಯಲ್ಲಿರುವುದು ಕುತೂಹಲಕಾರಿಯಾದ ಅಂಶವಾಗಿದೆ. ಉದಾಹರಣೆಗೆ, ಅಶ್ವತ್ಥವೃಕ್ಷದ ಪೂಜೆ, ನಾಗಪೂಜೆ, ವಿವಾಹ ಸಂದರ್ಭದಲ್ಲಿ ಕೈಗೊಳ್ಳಲಾಗುವ ವಿಧಿಗಳು (ಪಾಣಿಗ್ರಹಣ, ಕನ್ಯಾದಾನ, ಸಪ್ತಪದಿ, ಅರುಂಧತಿಯ ದರ್ಶನ ಇತ್ಯಾದಿಗಳು) ಆರ್ಯ ಸಂಸ್ಕೃತಿಯ ಕಾಲದಿಂದಲೂ ಆಚರಣೆಯಲ್ಲಿರುವುದು ಆಶ್ಚರ್ಯಕರವಾಗಿದೆ. ಹಿಂದೂಧರ್ಮದ ಅನುಯಾಯಿಗಳು

ಆಚರಿಸಿಕೊಂಡು ಬರುತ್ತಿರುವ ಹಲವಾರು ಪದ್ಧತಿಗಳು ಸುರಕ್ಷಿತವಾಗಿ ಈಗಲೂ ಆಚರಣೆಯಲ್ಲಿರುವುದಕ್ಕೆ ಸಮಾಜಶಾಸ್ತ್ರಜ್ಞರ ಪ್ರಕಾರ ಪ್ರಮುಖ ಕಾರಣವೆಂದರೆ ಈ ಸಮಾಜದ ಅವಿಭಾಜ್ಯ ಅಂಗವಾಗಿರುವ ಜಾತಿಪದ್ಧತಿಯಾಗಿದೆ. ಪ್ರಸಿದ್ಧ ಇತಿಹಾಸ ತಜ್ಞ ವಿಲ್‌ಡ್ಯೂರಾಂಟ್ ''ಹಿಂದೂ ಧರ್ಮವನ್ನು ವಿಶ್ವದ ಎಲ್ಲಾ ಧರ್ಮಗಳ ಮಾತೆ'' ಎಂದು ಕರೆಯುವುದಲ್ಲದೇ, ಹಿಂದೂ ಸಮಾಜದಲ್ಲಿರುವ ಜಾತಿಪದ್ಧತಿಯು ಈ ಧರ್ಮದ ಸುಭದ್ರ ಕೋಟೆಯಾಗಿದ್ದಲ್ಲದೇ, ಯಾವುದೇ ವಿಷಮ ಸಂದರ್ಭದಲ್ಲೂ ಹಿಂದೂ ಸಮಾಜವನ್ನು ಅನಾಗರಿಕತೆ (Barbaric State) ಯ ಸ್ಥಿತಿಗೆ ದೂಡಲಿಲ್ಲವೆಂದು ಈತನು ಸ್ಪಷ್ಟವಾಗಿ ನುಡಿದಿರುವನು. ಇಂತಹ ಉನ್ನತವಾದ ಸಾಂಸ್ಕೃತಿಕ ಆದರ್ಶ ಹಾಗೂ ದರ್ಶನವನ್ನು ರೂಢಿಸಿಕೊಂಡಿರುವ ಭಾರತೀಯರು ತಮ್ಮ ಪರಂಪರೆಯಲ್ಲಿ ಅಡಕವಾಗಿರುವ ಉದಾತ್ತ ಮೌಲ್ಯಗಳನ್ನು ಸಂರಕ್ಷಿಸಿ ಪೋಷಿಸಲು ಅನುವಾಗುವಂತೆ ರಾಜಕೀಯ ಪಾವಿತ್ರತೆಯನ್ನು ಸಂರಕ್ಷಿಸಿ ಮುಂದುವರೆಸುವುದು ಸ್ವಾತಂತ್ರ್ಯಾನಂತರದ ಭಾರತದ ಪ್ರಮುಖ ಗುರಿಯಾಗಿತ್ತು.

ವಿದೇಶಿಯರ ಆಡಳಿತಕ್ಕೆ ಒಳಪಟ್ಟಿದ್ದ ಭಾರತವು ತನ್ನ ಸಮಾಜದ ಉದಾತ್ತವಾದ ದರ್ಶನ ಹಾಗೂ ಆದರ್ಶಗಳಿಗೆ ವಿರುದ್ಧವಾಗಿ ಪಾಶ್ಚಿಮಾತ್ಯ ಹಾಗೂ ಸಾಮ್ರಾಜ್ಯಶಾಹಿ ಬಿರುಗಾಳಿಗೆ ಸಿಲುಕಿ ನಾಶವಾಗದಂತೆ ಕಾಪಾಡಿಕೊಳ್ಳುವುದು ಕಳೆದ ಶತಮಾನದ ಪೂರ್ವಾರ್ಧ ಹಾಗೂ ಸ್ವಾತಂತ್ರ್ಯಾನಂತರದ ಪ್ರಮುಖ ಅವಶ್ಯಕತೆಯಾಗಿತ್ತು. ತಮ್ಮ ನಾಡಿನಲ್ಲಿ ಜನಿಸಿದ ಭಾರತೀಯರು ಅಪರಿಚಿತರಾಗಿ ಅನಾಮಿಕರಾಗಿ ಬದುಕುವ ಬದಲು ಭಾರತೀಯ ಸಂಸ್ಕೃತಿ ಹಾಗೂ ಪರಂಪರೆಯನ್ನು ಪ್ರಜ್ಞಾಯುತರಾಗಿ ಸದ್‌ಭಾವನಾತ್ಮಕ ಉದ್ದೇಶದೊಂದಿಗೆ ಬಾಳುವಂತೆ ಮಾಡುವುದು, ಅಂದಿನ ಹಲವು ಭಾರತೀಯ ನಾಯಕರ ಸಂಕಲ್ಪವಾಗಿತ್ತು. ಭಾರತೀಯರಲ್ಲಿ ಮಾತೃಭೂಮಿಯ ಪ್ರೀತಿ, ಹಿಂದೂಧರ್ಮ ಹಾಗೂ ಪರಂಪರೆಯ ಬಗೆಗೆ ವಿಶೇಷ ಜಾಗೃತಿಯನ್ನು ಮೂಡಿಸುವಲ್ಲಿ 'ರಾಷ್ಟ್ರೀಯ ಸ್ವಯಂ ಸೇವಕ ಸಂಘ'ದ ಉದಯ ಭಾರತೀಯ ಜನಜೀವನದ ಅತ್ಯಂತ ಪ್ರಮುಖವಾದ ಅವಶ್ಯಕತೆಯನ್ನು ಪೂರ್ಣಗೊಳಿಸುವಂತಾಯಿತು. ಭಾರತೀಯರ ಪ್ರಸ್ತುತ ಜೀವನವು ಸೊಂಪಾಗಿ ಶಕ್ತಿಯುತವಾಗಿ ಬೆಳೆಯುವಂತೆ ಹಾಗೂ ಅದನ್ನು ಮತ್ತೆ ಕಸಿಮಾಡಿ ಹಬ್ಬಿಸಲು ಮಾರ್ಗದರ್ಶನ ಮಾಡಬಲ್ಲ ಜಾತ್ಯತೀತ ಆಂದೋಲನವನ್ನು ಜಾರಿಗೊಳಿಸುವ ಮಹಾನ್ ಉದ್ದೇಶವು ರಾಷ್ಟ್ರೀಯ ಸ್ವಯಂ ಸೇವಕ ಸಂಘಕ್ಕೆ ಇದ್ದುದೇ ಅಲ್ಲದೇ ಮೊಟ್ಟಮೊದಲ ಬಾರಿಗೆ ರಾಷ್ಟ್ರೀಯ ಸಂಘಟನೆ ಮತ್ತು ಜಾಗೃತಿ ಮೂಡಿಸಬಲ್ಲ ಸಂಸ್ಥೆಯಾಗಿ ಅದು ಯಶಸ್ವಿಗೊಂಡಿತ್ತು. ರಾಷ್ಟ್ರೀಯ ಸ್ವಯಂ ಸೇವಕ ಸಂಘವು ಡಾ। ಕೇಶವ ಬಲರಾಮ ಹೆಡಗೇವಾರರ ಬೌದ್ಧಿಕ ಶಿಶುವಾಗಿ ೧೯೨೫ರ ವಿಜಯದಶಮಿಯಂದು ನಾಗಪುರದಲ್ಲಿ ಜನ್ಮತಾಳಿತು. ಈ ಸಂಸ್ಥೆಯ ಸ್ಥಾಪನೆಯು ಅಂದಿನ ರಾಷ್ಟ್ರೀಯ ಅವಶ್ಯಕತೆಯಾಗಿತ್ತು. ಈ ಸಂಸ್ಥೆಯ ಸ್ಥಾಪನೆಯಲ್ಲಿ ಡಾ। ಹೆಡಗೇವಾರರು ಪ್ರಮುಖ ಪಾತ್ರವಹಿಸಿದರು. ಸ್ವಾತಂತ್ರ್ಯಪೂರ್ವದಲ್ಲಿ ಭಾರತದ ಯುವಜನಾಂಗವನ್ನು ಸಂಘಟಿಸಿ ಅವರಲ್ಲಿ ಸ್ವಯಂಸೇವೆಯ ಜ್ಯೋತಿ ಬೆಳಗುವಂತೆ ಮಾಡಿ ಪಾಶ್ಚಿಮಾತ್ಯ ಸಂಸ್ಕೃತಿಯ ಅಂಧಾನುಕರಣೆಯನ್ನು ಖಂಡಿಸಿ, ರಾಷ್ಟ್ರಪ್ರೇಮ ಮತ್ತು ಸ್ವದೇಶಾಭಿಮಾನ ಬೆಳೆಯುವಂತೆ ಮಾಡುವಲ್ಲಿ ರಾಷ್ಟ್ರೀಯ ಸ್ವಯಂ ಸೇವಾಸಂಘವು ಮಾಡಿದುದು ಗಣನೀಯವಾಗಿದೆ. ಈ ಸಂಸ್ಥೆಯು ಮಹಾರಾಷ್ಟ್ರದ ನಾಗಪುರದಲ್ಲಿ ಕೇಂದ್ರೀಕೃತಗೊಂಡು ದೇಶದ ವಿವಿಧ ಭಾಗಗಳಲ್ಲಿ ತನ್ನ ಪ್ರಭಾವವನ್ನು ಹಂತ ಹಂತವಾಗಿ ಬೆಳೆಸಿಕೊಂಡಿತು. ಕರ್ನಾಟಕದಲ್ಲೂ ಈ ಸಂಸ್ಥೆಯು ಕ್ರಮೇಣ ಅಂಕುರಗೊಂಡು ಕನ್ನಡದ ಯುವ ಜನಾಂಗದ ಸಂಘಟನೆಗೆ ಶ್ರಮಿಸಿತು. ಈ ಸಂಸ್ಥೆಯು ಪ್ರತಿವರ್ಷವು ತನ್ನ ಬೈಠಕ್ ಕ್ಯಾಂಪ್‌ಗಳನ್ನು ದೇಶದ ಪ್ರಮುಖ ಕೇಂದ್ರಗಳಲ್ಲಿ ನಡೆಸುವುದು ರೂಢಿಯಲ್ಲಿದೆ. ಒಮ್ಮೆ ಮುಂಬೈಯಲ್ಲಿ ೧೯೩೮ರಲ್ಲಿ ಈ ರೀತಿಯ ಬೈಠಕ್ ನಡೆದಿದ್ದಾಗ ಮಹಾತ್ಮ ಗಾಂಧೀಜಿಯವರು ಭೇಟಿಕೊಟ್ಟು ಡಾ। ಹೆಡಗೇವಾರರನ್ನು ಮುಖ್ಯ ಸಂಭಾಷಣೆಗೆ ಕರೆದು, ತಮ್ಮ ಸಂಘದಲ್ಲಿ ಎಷ್ಟು ಹರಿಜನ ಯುವಕರಿದ್ದಾರೆಂದು ಪ್ರಶ್ನಿಸಿದರು. ಅದಕ್ಕೆ ಉತ್ತರವಾಗಿ ಹೆಡಗೇವಾರರು ಯುವಕರನ್ನು ಸಾಲು ನಿಲ್ಲಲು ಆಜ್ಞಾಪಿಸಿ ಗಾಂಧೀಜಿ ಅವರನ್ನು ಕುರಿತು ತಾವೇ ಸ್ವಯಃ ಸ್ವಯಂ ಸೇವಕರ ಜಾತಿಯ ಬಗೆಗೆ ಪ್ರಶ್ನಿಸಬಹುದೆಂದು ಕೋರಿದರು. ಗಾಂಧೀಜಿ ಅಲ್ಲಿ ಜಮಾಯಿಸಿದ್ದ ಬಹುಸಂಖ್ಯಾತ ಯುವಕರನ್ನು ಪ್ರಶ್ನಿಸಿದಾಗ ಯಾರೊಬ್ಬರೂ ತಮ್ಮ ಜಾತಿಯನ್ನು ಬಯಲುಗೊಳಿಸದೆ ಕೇವಲ 'ಹಿಂದೂ' ಎಂಬ ಉತ್ತರವನ್ನು ನೀಡಿದಾಗ ಗಾಂಧೀಜಿಯವರು ಆಶ್ಚರ್ಯಚಕಿತರಾದರು. ಯುವಕರುಗಳು ನೀಡಿದ ಉತ್ತರದಿಂದ ತೃಪ್ತರಾಗದೆ ಗಾಂಧೀಜಿಯವರು ಹೆಗಡೇವಾರರಲ್ಲಿ ಇನ್ನೊಮ್ಮೆ ಯುವಕರಲ್ಲಿ ಹರಿಜನರ ಸಂಖ್ಯೆಯು ತಮಗೆ ಬೇಕೇಬೇಕೆಂದು ಒತ್ತಾಯಿಸಿದಾಗ, ಹೆಗಡೇವಾರರು ಒಂದು ವೇಳೆ ಸ್ವಯಂ ಸೇವಕರಲ್ಲಿ ಹರಿಜನರು ಯಾರಾದರೂ ಇದ್ದರೆ ಒಂದು ಹೆಜ್ಜೆ ಮುಂದೆ ಬರುವಂತೆ ಸೂಚಿಸಿದಾಗ ಲಾಲ್‌ಕೃಷ್ಣ ಆದ್ವಾನಿಯವರ ಪಕ್ಕದಲ್ಲಿದ್ದ ನಾನಾಜಿ ದೇಶಮುಖ ಮುಂದೆ ಬಂದಾಗ ಅವರ ಪಕ್ಕದಲ್ಲಿದ್ದ ಆದ್ವಾನಿಯವರು ಬೆಚ್ಚಿಬಿದ್ದರಂತೆ. ಗಾಂಧೀಜಿಯವರು ಸ್ವಯಂ ಸೇವಕರಲ್ಲಿ ಜಾತ್ಯತೀತ ಮನೋಭಾವವು ಬೆಳೆದು ಬಂದ ಬಗೆಯನ್ನು ಪ್ರಶಂಸಿಸಿದರೆಂಬುದು ಈಗ ಇತಿಹಾಸ.

ಸ್ವಾತಂತ್ರ್ಯ ಲಭಿಸಿದ ಸಂಭ್ರಮದಲ್ಲಿ ಭಾರತೀಯ ಕಾಂಗ್ರೆಸ್ ಪಕ್ಷವು ರಾಜಕೀಯ ಪ್ರಾಬಲ್ಯತೆಯನ್ನು ಮುಂದುವರಿಸಿ, ಜವಹರಲಾಲ್ ನೆಹರು ಮೊದಲಾದ ಶ್ರೇಷ್ಠ ರಾಷ್ಟ್ರನಾಯಕರುಗಳ ಮಾರ್ಗದರ್ಶನದಲ್ಲಿ ರಾಷ್ಟ್ರದ ಭವಿಷ್ಯವನ್ನು ರೂಪಿಸುವ ಪ್ರಮುಖ ರಾಜಕೀಯ ಪಕ್ಷವಾಗಿತ್ತು. ಗಾಂಧೀಜಿಯವರ ಆಕಸ್ಮಿಕ ನಿಧನದ ತರುವಾಯ ಸರದಾರ್ ವಲ್ಲಭಬಾಯಿ ಪಟೇಲ್ ಅವರ ಮಾರ್ಗದರ್ಶನದಲ್ಲಿ ರಾಷ್ಟ್ರೀಯವಾಗಿ ರೂಪುಗೊಂಡಿದ್ದ ರಾಷ್ಟ್ರೀಯ ಸ್ವಯಂ ಸೇವಕ ಸಂಘವು ಯಾವುದೇ ರಾಜಕೀಯ ಅಭಿಲಾಷೆಗಳಿಲ್ಲದೇ ಕೇವಲ ಸಾಮಾಜಿಕ ಸಂಘಟನೆಗಾಗಿ ಶ್ರಮಿಸುವುದಾಗಿ ಸಂಕಲ್ಪಮಾಡಿ ಮುಂದುವರೆಯುವಂತಾಯಿತು. ಸ್ವಾತಂತ್ರ್ಯಾನಂತರ ದೇಶದಲ್ಲಿ ಸಂಭವಿಸಿದ ಅನೇಕ ಪ್ರಾಕೃತಿಕ ವಿಕೋಪಗಳ ಸಂದರ್ಭದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘವು ಮೂಲಭೂತ ಕಾರ್ಯವನ್ನು ವಹಿಸಿದೆ. ಉದಾಹರಣೆಗೆ ಚಂಡಮಾರುತದಿಂದ ತತ್ತರಿಸಿದ ಆಂಧ್ರಪ್ರದೇಶದ ದೀವಿ ತಾಲೂಕಿನಲ್ಲಿ ಅಪ್ರತಿಮ ಪರಿಹಾರ ಕಾರ್ಯದಲ್ಲಿ ಪಾಲ್ಗೊಂಡು ದೀನದಯಾಳ್ ಉಪಾಧ್ಯಾಯ ನಗರವೆಂಬ ಹೊಸ ಗ್ರಾಮವನ್ನು ಸಂಘದ ಸೇವಕರು ನಿರ್ಮಿಸಿದರು. ಇದು ಇಂದು ಇತಿಹಾಸವಾಗಿದೆ.

### ಜನಸಂಘ ಪಕ್ಷದ ಉದಯ

ರಾಷ್ಟ್ರೀಯ ಕಾಂಗ್ರೆಸ್ ಪಕ್ಷದಲ್ಲಿ ಸಕ್ರಿಯವಾಗಿ ಪಾತ್ರವಹಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ರಾಷ್ಟ್ರದ ಮಹಾನ್ ನಾಯಕ ಡಾ। ಶ್ಯಾಂಪ್ರಸಾದ್ ಮುಖರ್ಜಿಯವರು ಈ ಪಕ್ಷವನ್ನು ಕಲ್ಕತ್ತದಿಂದ ಪ್ರತಿನಿಧಿಸಿದ್ದರು. ಕಲ್ಕತ್ತೆಯ ಭವಾನಿಪುರದಲ್ಲಿ ೬ನೇ ಜುಲೈ ೧೯೦೧ರಲ್ಲಿ ಜನಿಸಿದ ಶ್ಯಾಂಪ್ರಸಾದ್ ಮುಖರ್ಜಿಯವರ ತಂದೆ ಸರ್ ಅಶುತೋಷ್ ಮುಖರ್ಜಿ ಮತ್ತು ತಾಯಿ ಯೋಗ ಮಹಾದೇವಿ. ಬಾಲ್ಯದಿಂದಲೂ ತೀಕ್ಷ್ಣಮತಿಯಾಗಿದ್ದ ಶ್ಯಾಂಪ್ರಸಾದರು ತಾಯಿಯಿಂದ ಧಾರ್ಮಿಕ ಶ್ರೇಷ್ಠತೆಯನ್ನು ಹಾಗೂ ಮನೆಯಲ್ಲಿ ಸದಾ ಜರುಗುತ್ತಿದ್ದ ದೇವತಾ ಪೂಜೆ, ಹವನ-ಹೋಮ, ಪಾರಾಯಣಗಳಿಂದ ಪ್ರಭಾವಿತರಾಗಿ ಶ್ರದ್ಧಾವಂತ ಧಾರ್ಮಿಕ ಮನೋಭಾವವನ್ನು ಸಹಜವಾಗಿಯೇ ತಮ್ಮ ವ್ಯಕ್ತಿತ್ವದಲ್ಲಿ ರೂಢಿಸಿಕೊಂಡರು. ಇವರ ತಂದೆ ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗಿದ್ದ ಕಾರಣ ಇವರ ಮನೆಗೆ ಅನೇಕ ಪಂಡಿತರುಗಳು, ರಾಷ್ಟ್ರ ನಿರ್ಮಾಪಕರುಗಳು ಹಾಗೂ ಹೆಸರಾಂತ ವಕೀಲರುಗಳು ಆಗಿಂದಾಗ್ಗೆ ಬರುತ್ತಿದ್ದರು. ಇವರುಗಳ ಪ್ರಭಾವದಿಂದಾಗಿ ಯುವಕ ಶ್ಯಾಂಪ್ರಸಾದನ ವ್ಯಕ್ತಿತ್ವದಲ್ಲಿ ಸಹನೆ, ವೈಜ್ಞಾನಿಕ ಮನೋಭಾವ, ರಾಷ್ಟ್ರೀಯಪ್ರೇಮ, ಅಭಿಮಾನ ಹಾಗೂ ಮಾನವೀಯ ಮೌಲ್ಯಗಳು ಬೆಳೆದು ಬರಲು ಕಾರಣವಾಯಿತು. ಭವಾನಿಪುರದ ಪ್ರೈಮರಿ ಶಾಲೆಯಿಂದ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪದವೀಧರರಾಗುವವರೆಗೆ ಶಿಕ್ಷಣದ ಎಲ್ಲಾ ಹಂತದಲ್ಲೂ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದಿದ್ದರು. ಇವರ ಕಾಲೇಜು ಜೀವನ ಬಹಳ ಅರ್ಥಪೂರ್ಣವಾಗಿತ್ತು, ಚರ್ಚಾಸ್ಪರ್ಧೆಗಳಲ್ಲಿ ಹಾಗೂ ಹಲವಾರು ವಿಚಾರ ಸಂಕೀರ್ಣಗಳಲ್ಲಿ ಮುಖರ್ಜಿಯವರು ಕ್ರಿಯಾಶೀಲರಾಗಿ ಭಾಗವಹಿಸುತ್ತಿದ್ದರು. ತರುವಾಯ ಪತ್ರಿಕೋದ್ಯಮದಲ್ಲಿ ಆಸಕ್ತಿ ತೋರಿದ ಇವರು ೧೯೨೧ರಿಂದ ೧೯೨೪ರ ವರೆಗೆ ''ಬಂಗವಾಣಿ'' ಎಂಬ ಪತ್ರಿಕೆಯಲ್ಲಿ ಕಾರ್ಯನಿರ್ವಹಿಸಿದರು. ಹಾಗೆಯೇ ಸಮಕಾಲೀನ ರಾಜಕೀಯ ಬೆಳವಣಿಗೆಗಳ ಬಗೆಗೆ ವಿಶೇಷ ಆಸಕ್ತಿ ವಹಿಸುತ್ತಿದ್ದರು. ಗಾಂಧೀಜಿಯವರ ವ್ಯಕ್ತಿತ್ವಕ್ಕೆ ಮಾರುಹೋಗಿ ಕಾಂಗ್ರೆಸ್ ಪಕ್ಷವು ಕೈಗೊಂಡ ಅಸಹಕಾರ, ಕಾನೂನುಭಂಗ ಚಳವಳಿಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಇವರು ೧೯೨೭ ರಲ್ಲಿ ಬಾರ್-ಅಟ್-ಲಾ ಮುಗಿಸಿದ್ದರು. ವಿಚಾರವಾದಿಯಾಗಿದ್ದ ಇವರಿಗೆ ಕಾಂಗ್ರೆಸ್ ಬಗ್ಗೆ ನಿರಾಶೆ ಮೂಡಿದ್ದ ಕಾರಣ ೧೯೨೯ರಲ್ಲಿ ವಿರಸವುಂಟಾಗಿ ರಾಜೀನಾಮೆ ನೀಡಿದ್ದರು. ರಾಜಕೀಯವಾಗಿ ಜಾಗೃತರಾಗಿದ್ದ ಡಾ. ಶ್ಯಾಮಪ್ರಸಾದ್ ಮುಖರ್ಜಿಯವರು ಸಹಜವಾಗಿಯೇ ೧೯೩೭ರಲ್ಲಿ ಪ್ರಥಮಬಾರಿಗೆ ಕಲ್ಕತ್ತ ವಿಶ್ವವಿದ್ಯಾಲಯ ಕೇಂದ್ರದಿಂದ ಪ್ರಾಂತೀಯ ವಿಧಾನಸಭೆಗೆ ಆಯ್ಕೆಗೊಂಡರು. ಆಗ ವಿಧಾನಸಭೆಯಲ್ಲಿದ್ದ ಒಟ್ಟು ೨೫೦ ಸ್ಥಾನಗಳ ಪೈಕಿ ೮೦ ಸ್ಥಾನಗಳನ್ನು ಹಿಂದೂಗಳು ಗೆಲ್ಲುತ್ತಿದ್ದರು ಹಾಗೂ ಉಳಿದೆಲ್ಲಾ ಸ್ಥಾನಗಳನ್ನು ಮುಸಲ್ಮಾನರೇ ಗೆಲ್ಲುತ್ತಿದ್ದರು. ಇದರ ಪೈಕಿ ಕಾಂಗ್ರೆಸ್ ಪಕ್ಷವು ೮೦ ಸ್ಥಾನಗಳನ್ನು ಗೆಲ್ಲುತ್ತಿದ್ದರೂ ಇವರುಗಳು ಹಿಂದೂಗಳ ಹಿತರಕ್ಷಣೆ ಮಾಡುವಲ್ಲಿ ವಿಫಲರಾಗಿದ್ದರು. ಈ ವಿಷಯವು ಅವರ ಮನಸ್ಸಿನ ಮೇಲೆ ಅಗಾಧವಾದ ಪರಿಣಾಮವನ್ನುಂಟುಮಾಡಿತು.

ಅಂದಿನ ಬಂಗಾಳದ ವಿಧಾನಸಭೆಯಲ್ಲಿ ಫಸಲ್‌ಉಲ್ ಹಕ್ ಅವರ ನಾಯಕತ್ವದಲ್ಲಿದ್ದ ಕೃಷಿಕ್ ಪ್ರಜಾಪಕ್ಷ ಹಾಗೂ ಇವರಿಗೆ ವಿರೋಧ ವ್ಯಕ್ತಪಡಿಸಿದ ಮುಸ್ಲಿಂ ಲೀಗ್ ಪ್ರಬಲ ಬಣಗಳಾಗಿದ್ದವು. ಕಾಂಗ್ರೆಸ್ ಪಕ್ಷವು ಕೃಷಿಕ್ ಪಕ್ಷದೊಂದಿಗೆ ಕೈ ಜೋಡಿಸಿದ್ದರೆ ಬಂಗಾಳದಲ್ಲಿ ಮುಸ್ಲಿಮೇತರ ಸರಕಾರ ರಚಿತವಾಗುತ್ತಿತ್ತು. ಆದರೆ, ಇದು ವಾಸ್ತವಿಕವಾಗಿ ಜಾರಿಗೊಳ್ಳದಿದ್ದ ಕಾರಣ ಮುಸ್ಲಿಂ ಲೀಗ್ ಸರಕಾರವು ರಚಿತವಾಗುತ್ತಿತ್ತು. ತರುವಾಯ ಹಕ್ ಮುಖಂಡತ್ವದಲ್ಲಿ ಕೃಷಿಕ್ ಪ್ರಜಾಪಕ್ಷ ಪ್ರಬಲಗೊಂಡು ಅಧಿಕಾರಕ್ಕೆ ಬಂದಾಗ ಶ್ಯಾಮಪ್ರಸಾದ್ ಅವರು ಬೆಂಬಲಿಸಿ ಚುನಾಯಿತರಾಗಿದ್ದ ಕಾರಣ ಅರ್ಥಸಚಿವರಾದರು. ಇವರಿಗೆ ೧೯೩೭ರಲ್ಲಿ ವೀರ ಸಾವರ್‌ಕರ್ ಅವರ ಪರಿಚಯವಾಗಿತ್ತು. ಮುಖರ್ಜಿಯವರ ತಂದೆಯವರು ಕಲ್ಕತ್ತ ವಿಶ್ವವಿದ್ಯಾಲಯದಲ್ಲಿ ಉಪಕುಲಪತಿಗಳಾಗಿದ್ದಂತೆಯೇ, ಇವರು

ತಮ್ಮ ೪೦ನೇ ವಯಸ್ಸಿನಲ್ಲಿಯೇ ಉಪಕುಲಪತಿಗಳಾಗಿ ನೇಮಕಗೊಂಡರು. ಇದು ಇವರ ಬೌದ್ಧಿಕ ಮಟ್ಟದ ಸಾಧನೆಯನ್ನು ಸೂಚಿಸುತ್ತದೆ. ಇದೇ ಸಂದರ್ಭದಲ್ಲಿ ಇವರಿಗೆ ಡಾ। ಹೆಡಗೇವಾರರ ಪರಿಚಯವಾಯಿತು. ಮುಖರ್ಜಿಯವರು ಇವರ ವಿಚಾರಧಾರೆಗೆ ಅತ್ಯಂತ ಪ್ರಬಲವಾಗಿ ಆಕರ್ಷಿತರಾಗಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ತಲೆದೋರಿದ ಜ್ವಲಂತ ರಾಷ್ಟ್ರೀಯ ಸಮಸ್ಯೆಗಳಿಗೆ ಮುಖರ್ಜಿಯವರು ಬಹಳ ಪರಿಣಾಕಾರಿಯಾಗಿ ಸ್ಪಂದಿಸಿದ್ದರು. ದೇಶವು ವಿಭಜನೆಯಾಗುವುದನ್ನು ಇವರು ಪ್ರಬಲವಾಗಿ ವಿರೋಧಿಸಿದ್ದರು. ಬಂಗಾಳದಲ್ಲಿ ೧೯೪೬ರಲ್ಲಿ ನೌಕಾಲಿ ಪ್ರೇರಗಳಲ್ಲಿ ಸಂಭವಿಸಿದ ಹಿಂದೂಗಳ ಕಗ್ಗೊಲೆ ಇವರನ್ನು ತಲ್ಲಣಗೊಳಿಸಿತು. ಈ ಸ್ಥಳಕ್ಕೆ ಧಾವಿಸಿ ಹಿಂದೂಗಳಿಗೆ ರಕ್ಷಣೆ ನೀಡುವಂತೆ ಒತ್ತಾಯಿಸಿದ್ದೇ ಅಲ್ಲದೆ ಹಿಂದೂಗಳಲ್ಲಿ ನೈತಿಕ ಧೈರ್ಯವನ್ನು ತುಂಬಿದರು. ಈ ಸ್ಥಳಕ್ಕೆ ಮುಖರ್ಜಿಯವರ ಭೇಟಿಯ ನಂತರ ಗಾಂಧೀಜಿಯವರು ಬಂದಿದ್ದರು. ಇವರು ತಮ್ಮ ಪರಿಶ್ರಮದಿಂದಾಗಿ ಅರ್ಧ ಬಂಗಾಳ, ಅರ್ಧ ಪಂಜಾಬ್, ಅಸ್ಸಾಂ ಪಾಕಿಸ್ತಾನಕ್ಕೆ ಸೇರುವುದನ್ನು ತಪ್ಪಿಸಿದರು. ಸ್ವಾತಂತ್ರ್ಯಾನಂತರ ರಚಿತವಾದ ಕೇಂದ್ರ ಸರಕಾರಕ್ಕೆ ನೇಮಕಗೊಂಡು ಶ್ಯಾಮಪ್ರಸಾದ್ ಮುಖರ್ಜಿ ಕೇಂದ್ರ ಮಂತ್ರಿಮಂಡಲದ ಕೈಗಾರಿಕೆ ಹಾಗೂ ನಾಗರಿಕ ಪೂರೈಕೆಯ ಸಚಿವರಾಗಿದ್ದರು. ಇವರು ಒತ್ತಾಯಿಸಿದ ಕಾರಣ ಬೆಂಗಳೂರಿನಲ್ಲಿ ವಿಮಾನ ನಿಲ್ದಾಣ, ವಿಶಾಖಪಟ್ಟಣದಲ್ಲಿ ಹಡಗು ಕಾರ್ಖಾನೆ ಇನ್ನೂ ಮೊದಲಾದವುಗಳು ಸ್ಥಾಪಿತಗೊಂಡವು. ಆಡಳಿತದಲ್ಲಿದ್ದ ಕಾಂಗ್ರೆಸ್ ಪಕ್ಷದ ತುಷ್ಟೀಕರಣದಿಂದಾಗಿ ಹಿಂದೂಗಳಿಗೆ ದೇಶಾದ್ಯಂತ ಸಂಭವಿಸಿದ ಅವಮಾನ, ಪ್ರಾಣಹಾನಿ, ಅಭದ್ರತೆಯನ್ನು ವಿರೋಧಿಸಿ ೧೯ನೇ ಏಪ್ರಿಲ್ ೧೯೫೦ರಲ್ಲಿ ತಮ್ಮ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿ, ರಾಷ್ಟ್ರದ ಸನ್ಮಾನ ಬಿಂದುವನ್ನು ಉಳಿಸುವಲ್ಲಿ ಕಾಂಗ್ರೆಸ್ ಸರಕಾರದ ವಿಫಲತೆಯನ್ನು ಹಾಗೂ ಅಧಿಕಾರ ಲಾಲಸೆಯನ್ನು ಇವರು ಕಟುವಾಗಿ ವಿರೋಧಿಸಿದರು.

ಮಾನಸಿಕವಾಗಿ ಬಹಳವಾಗಿ ನೊಂದಿದ್ದ ಡಾ। ಶ್ಯಾಮಪ್ರಸಾದ್ ಮುಖರ್ಜಿಯವರು ಪ್ರಥಮಬಾರಿಗೆ ರಾಷ್ಟ್ರದ ಭವಿಷ್ಯದ ಬಗೆಗೆ ಹಾಗೂ ಹಿಂದೂಗಳ ಸಂರಕ್ಷಣೆಯ ಬಗೆಗೆ ಅಗಾಧವಾದ ಮತ್ತು ದೀರ್ಘವಾದ ಚಿಂತನೆ ನಡೆಸಿದರು. ಇದರ ಪರಮಾವಧಿಯ ಸಂಕೇತವೇ ರಾಷ್ಟ್ರೀಯ ಜನತೆಯ ಮಹತ್ವಾಕಾಂಕ್ಷೆಯಂತೆ ನಿಜವಾದ ರಾಷ್ಟ್ರೀಯ ದೃಷ್ಟಿಕೋನ ನೀಡಲು ಸಮರ್ಥವಾಗುವಂತೆ ಅಕ್ಟೋಬರ್ ೨೧, ೧೯೫೧ರಂದು ಭಾರತೀಯ ಜನಸಂಘ ಪಕ್ಷವನ್ನು ಇವರು ಸ್ಥಾಪಿಸಿದರು. ಅಂದು ದೇಶದಲ್ಲಿ ಹಿಂದೂಗಳ ಸಂರಕ್ಷಣೆಯ ಹೊಣೆಯನ್ನು ಹೊತ್ತಿದ್ದ ಹಿಂದೂ ಮಹಾಸಭೆಗೆ ರಾಜೀನಾಮೆ ನೀಡಿ, ತಮ್ಮ ಹೊಸ ಸಂಕಲ್ಪಯುತ ರಾಷ್ಟ್ರೀಯ ಹಿತವನ್ನು ಗಮನದಲ್ಲಿಟ್ಟುಕೊಂಡು ಹಾಗೂ ಭವ್ಯ ಭಾರತದ ಕನಸನ್ನು ನನಸಾಗಿಸುವ 'ಭಾರತೀಯ ಜನಸಂಘ' ಪಕ್ಷವನ್ನು ಕಟ್ಟಿದರು. ಈ ಪಕ್ಷದ ರಚನೆಯಲ್ಲಿ ಮುಖರ್ಜಿಯವರು ಅಂದಿನ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸರಸಂಘ ಚಾಲಕರಾಗಿದ್ದ ಮಾ. ಸ. ಗೊಳವಾಲಕರ್ (ಗುರೂಜಿ ಎಂದೇ ಪ್ರಸಿದ್ಧರಾಗಿದ್ದರು) ಅವರೊಡನೆ ಚರ್ಚಿಸಿದ್ದಲ್ಲದೆ ಈ ಪಕ್ಷದ ರಚನೆಗೆ ಹಲವು ಯುವ ಸ್ವಯಂ ಸೇವಕರನ್ನು ನೀಡುವಂತೆ ಕೋರಿದರು. ಆಗ ಗುರೂಜಿಯವರು, ಇಂದಿನ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ, ಉಪಪ್ರಧಾನಿ ಎಲ್.ಕೆ. ಆದ್ವಾನಿ ಮತ್ತು ಸುಂದರಸಿಂಗ್ ಭಂಡಾರಿ, ಕರ್ನಾಟಕ ಕೇಸರಿ ಎಂದೇ ಹೆಸರಾದ ಜಗನ್ನಾಥರಾವ್ ಜೋಷಿ, ಬಾಲರಾಜ್ ಮಧೋಕ್, ಪಂಡಿತ್ ದೀನದಯಾಳ ಉಪಾಧ್ಯಾಯರವರಂತಹ ನಿಷ್ಠಾವಂತ ಸಮರ್ಥ ನಾಯಕರನ್ನು ಜನಸಂಘಕ್ಕೆ ನೀಡಿದರು. ಈ ನಾಯಕತ್ವವೇ ಇಂದು ದೇಶದ ಆಡಳಿತದ ಚುಕ್ಕಾಣಿ ಹಿಡಿದು, ವಿಶ್ವದಲ್ಲಿ ರಾಷ್ಟ್ರಕ್ಕೆ ಸಲ್ಲಿಸಬೇಕಾದ ಕೊಡುಗೆ ಹಾಗೂ ಗೌರವವನ್ನು ತರುವಲ್ಲಿ ಯಶಸ್ವಿಯಾಗಿದೆ.

## ಪಕ್ಷದ ಪ್ರಮುಖ ಕಾರ್ಯಕ್ರಮಗಳು

ಜನಸಂಘವು ಸ್ಥಾಪನೆಗೊಂಡ ಹಲವೇ ವರ್ಷಗಳಲ್ಲಿ ರಾಷ್ಟ್ರದ ಏಕತೆಗೆ ಧಕ್ಕೆ ತರಬಲ್ಲಂತಹ ಅನೇಕ ಸಮಸ್ಯೆಗಳ ಬಗೆಗೆ ರಾಷ್ಟ್ರೀಯ ಹೋರಾಟ ನಡೆಸಬೇಕಾಯಿತು. ಡಾ। ಶ್ಯಾಮಪ್ರಸಾದ್ ಮುಖರ್ಜಿಯವರು ಬಹುತೇಕ ಹೋರಾಟಗಳ ನಾಯಕತ್ವವನ್ನು ವಹಿಸಿದ್ದರು. ಭಾರತದ ಮಹಾಬೋಧಿ ಸಂಘದ ಅಧ್ಯಕ್ಷರಾಗಿದ್ದು ಇವರು ರಾಂಚಿಯಲ್ಲಿ ಬೌದ್ಧಸ್ಮಾರಕವನ್ನು ಸ್ಥಾಪಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಕಾಶ್ಮೀರದಲ್ಲಿ ಶೇಖ್ ಅಬ್ದುಲ್ಲಾ ಅನುಸರಿಸಿದ ಕೋಮು ನೀತಿ ಹಾಗೂ ಪ್ರತ್ಯೇಕ ರಾಷ್ಟ್ರದ ಅಥವಾ ದ್ವಿರಾಷ್ಟ್ರದ ವಿರೋಧವಾಗಿ ಪ್ರಬಲ ಹೋರಾಟ ನಡೆಸಿದ ಡಾ। ಮುಖರ್ಜಿಯವರು ''ಏಕ್ ದೇಶ್ ಮೇ ದೋನಿಷಾನ, ಏಕ್ ದೇಶ್ ಮೇ ದೋ ವಿಧಾನ್, ಏಕ್ ದೇಶ್ ಮೇ ದೋ ಪ್ರಧಾನ್ ನಹಿ ಚಲೇಗಿ, ನಹಿ ಚಲೇಗಿ'' ಎಂದು ತಮ್ಮ ಕಂಚಿನ ಧ್ವನಿಯಿಂದ ಘರ್ಜಿಸಿದ್ದರು. ಅಂದಿನ ರಾಷ್ಟ್ರದ ಪ್ರಧಾನಿ ಜವಹರಲಾಲ್ ನೆಹರೂ ಅವರು ಶೇಖ್ ಅಬ್ದುಲ್ಲಾ ಅವರ ಈ ಕೋಮು ನೀತಿಯ ವಿರುದ್ಧ ಚಕಾರವೆತ್ತಲಿಲ್ಲ. ಬಂಗಾಳದಿಂದ ತಮ್ಮ ಜೊತೆಗೆ ಡಾ। ಟೇಕ್ ಚಂದ್, ಅಟಲ್ ಬಿಹಾರಿ ವಾಜಪೇಯಿ, ಡಾ। ಗುರುದತ್ ಮುಂತಾದವರ ಜೊತೆಗೆ ಪಠಾಣ್‌ಕೋಟ್ ಮೂಲಕ ಸತ್ಯಾಗ್ರಹ ಮಾಡಿದಾಗ ಬಂಧನಕ್ಕೊಳಗಾಗುವ ಸಮಯದಲ್ಲಿ ಡಾ। ಮುಖರ್ಜಿಯವರು ಅಟಲ್ ಜೀ ಅವರನ್ನು ಕುರಿತು 'ನಾನು

ಕಾಶ್ಮೀರವನ್ನು ಪ್ರವೇಶಿಸಿ ರಾಷ್ಟ್ರವು ವಿಧಿಸಿದ್ದ ನಿರ್ಬಂಧವನ್ನು ಮುರಿದಿದ್ದೇನೆ. ಕಾಶ್ಮೀರ ಭಾರತ ದೇಶದ ಅವಿಭಾಜ್ಯ ಅಂಗವೆಂಬ ಮಂತ್ರವನ್ನು ದೇಶದ ಮೂಲೆ ಮೂಲೆಗಳಲ್ಲಿ ಹರಡು' ಎಂದು ಆಜ್ಞಾಪಿಸುತ್ತಾರೆ.

ಈ ಅಂಶವನ್ನು ಇಂದಿನ ಪ್ರಧಾನಿಯವರು ಹಲವಾರು ವೇಳೆ ಹೇಳಿಕೊಂಡಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಕಾಶ್ಮೀರ ಹೋರಾಟದಲ್ಲಿ ಸೆರೆಹಿಡಿಯಲ್ಪಟ್ಟ ಡಾ. ಶ್ಯಾಮಪ್ರಸಾದ್ ಮುಖರ್ಜಿ ಅವರನ್ನು ಏಕಾಂತ ಸೆರೆಮನೆ ವಾಸಕ್ಕೆ ಗುರಿಪಡಿಸಿ (ಅವರ ಮಕ್ಕಳನ್ನೂ ಸಹ ನೋಡಲು ಬಿಡದೆ) ದಾಗ ಷೇಕ್ ಅಬ್ದುಲ್ಲಾ ಅವರ ಸ್ವಯಂ ಪ್ರತಿಷ್ಠೆ ಮತ್ತು ಪ್ರಧಾನಿ ಜವಹರಲಾಲ್ ಅವರ ಗಾಢ ಮೌನದಿಂದಾಗಿ ಹಾಗೂ ಜೈಲುವಾಸದಲ್ಲಿ ಯೋಜಿತವಾಗಿ ಕಲ್ಪಿಸಿದ ಏಕಾಂತದ ಸೆರೆವಾಸದ ಪರಿಣಾಮವಾಗಿ ಇವರ ಆರೋಗ್ಯವು ಕುಸಿದು, ದಿನಾಂಕ ೨೩ರ ಜೂನ್ ೧೯೫೩ರಂದು ಮಧ್ಯರಾತ್ರಿ ಹೃದಯವಿದ್ರಾವಕ ಸಾವಿಗೆ ಗುರಿಯಾದರು. ಜನಸಂಘದ ಸ್ಥಾಪನೆಯ ಸಾಧನೆ ಮಾಡಿದ ಒಬ್ಬ ಶ್ರೇಷ್ಠ ದೇಶಭಕ್ತ, ಹಿಂದೂ ಮಹಾನ್ ನಾಯಕನ ಬಾಳು ಇಂತಹ ಕಠಿಣ ಪರಿಸ್ಥಿತಿಯಲ್ಲಿ ಪರಿಸಮಾಪ್ತಿಯಾಗಿತ್ತು.

## ಉನ್ನತ ವ್ಯಕ್ತಿತ್ವ

ಡಾ. ಶ್ಯಾಮಪ್ರಸಾದ್ ಅವರನ್ನು ಮಹಾತ್ಮ ಗಾಂಧೀಜಿ ಪ್ರಬಲ ಹಿಂದೂ ನಾಯಕ ಎಂದು ಒಪ್ಪಿದ್ದರು. ಬಂಗಾಳದ ವಿಭಜನೆಯು ಎರಡನೇ ಬಾರಿಗೆ ೧೯೪೩ರಲ್ಲಿ ಸಂಭವಿಸಿದಾಗ ಇವರು ಬಂಗಾಳದ ಮಂತ್ರಿಮಂಡಲಕ್ಕೆ ರಾಜೀನಾಮೆ ನೀಡಿದ್ದರು. ಬಂಗಾಲದಲ್ಲಿ ಕ್ಷಾಮವು ಸುಳಿದಾಗ ಇವರು ಜನತೆಯ ಪರಿಹಾರಕ್ಕಾಗಿ ಶ್ರಮಿಸಿದರು. ಇದರಿಂದ ಜನತೆ ಇವರನ್ನು ಅಪಾರ ಶ್ರದ್ಧೆಯಿಂದ ತಮ್ಮ ನಾಯಕನೆಂದು ನಂಬಿದ್ದರು. ನೆಹರೂ ಹಿಂದೂಗಳ ರಕ್ಷಣೆಗೆ ಬಾರದ ಕಾರಣ ಮತ್ತು ನೆಹರೂ ಲಿಯಾಖತ್ ಅಲಿಖಾನ್ ಒಪ್ಪಂದದ ವಿರುದ್ಧ ೧೯೫೦ರಲ್ಲಿ ಕೇಂದ್ರಮಂತ್ರಿ ಮಂಡಲಕ್ಕೆ ರಾಜೀನಾಮೆ ನೀಡಿದ್ದರು. ಪಾಕಿಸ್ತಾನದಿಂದ ಸ್ವದೇಶಕ್ಕೆ ನಿರಾಶ್ರಿತರಾಗಿ ಬಂದಿದ್ದ ಹಿಂದೂಗಳ ಆಸ್ತಿಯ ಬೆಲೆಯನ್ನು ಪಡೆಯಲು ಸರಕಾರವನ್ನು ಒತ್ತಾಯಪಡಿಸಿದರು; ಈ ವಿಷಯದಲ್ಲಿ ಸಹಾಯ ಮಾಡದಿದ್ದ ನೆಹರೂ ಅವರ ಬಗೆಗೆ ಕೋಪ ವ್ಯಕ್ತಪಡಿಸಿದರು. ೧೯೫೨ರ ಸಾರ್ವತ್ರಿಕ ಚುನಾವಣೆಯಲ್ಲಿ ಅಂಬೇಡ್ಕರ್ ಮತ್ತು ಆಚಾರ್ಯ ಕೃಪಲಾನಿ ಅಂತಹ ನಾಯಕರುಗಳು ಸೋತರೂ ಡಾ। ಮುಖರ್ಜಿಯವರು ವಿಜಯ ಸಾಧಿಸಿದ್ದು ಅವರ ವ್ಯಕ್ತಿತ್ವದ ಪ್ರಭಾವಕ್ಕೆ ಕನ್ನಡಿ ಹಿಡಿದಂತೆ. ೧೯೫೩ ರಿಂದ ೧೯೭೭ರ ನಡುವೆ ಹೆಮ್ಮರವಾಗಿ ಬೆಳೆದ ಜನಸಂಘ ಭಾರತದ ಉತ್ತರ, ಪಶ್ಚಿಮ ಹಾಗೂ ಪೂರ್ವ ಭಾಗಗಳಲ್ಲಿ ಭಾರತೀಯ ಜನಸಂಘ ಪಕ್ಷವು ಜನಪ್ರಿಯವಾಗಿದ್ದಂತೆ ದಕ್ಷಿಣ ಭಾರತದಲ್ಲಿ ಪ್ರಚಾರಗೊಳ್ಳದಿದ್ದುದು ಗಣನೀಯವಾದ ವಿಷಯವಾಗಿದೆ. ತನ್ನ ಆರಂಭದ ವರ್ಷಗಳಲ್ಲಿ ಈ ಪಕ್ಷವು ಭಾರತದ ಇತರೆಡೆಗಳಲ್ಲಿ ಜನಪ್ರಿಯಗೊಂಡಿದುದಕ್ಕೆ ಆ ಭಾಗಗಳಲ್ಲಿ ಸಂಘಟಿತಗೊಂಡು ಪ್ರಬಲವಾಗಿ ಬೆಳೆದಿದ್ದ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಚಟುವಟಿಕೆಗಳೇ ಪ್ರಮುಖ ಕಾರಣವಾಗಿತ್ತೆಂಬುದು ಈ ಪಕ್ಷದ ಮುಖಂಡರ ಅಭಿಪ್ರಾಯವಾಗಿದೆ. ದಕ್ಷಿಣ ಭಾರತದ ಆಂಧ್ರಪ್ರದೇಶ ಹಾಗೂ ಕರ್ನಾಟಕಗಳಲ್ಲಿ ೧೯೬೦ರ ವೇಳೆಗೆ ರಾಷ್ಟ್ರೀಯ ಸ್ವಯಂ ಸೇವಕ ಸಂಘವು ತನ್ನ ಕ್ರಿಯಾಶೀಲ ಚಟುವಟಿಕೆಗಳನ್ನು ಆಗಲೇ ಪ್ರಚಲಿತಗೊಳಿಸಿತ್ತು. ಇದರ ಪರಿಣಾಮವಾಗಿ ಕಾಲಾನುಕಾಲಕ್ಕೆ ಕರ್ನಾಟಕದ ಪ್ರಮುಖ ನಗರ ಕೇಂದ್ರಗಳಾದ ಬೆಂಗಳೂರು, ಮೈಸೂರು, ಚಿತ್ರದುರ್ಗ, ತುಮಕೂರು, ಶಿವಮೊಗ್ಗ, ಮಂಗಳೂರು, ಹುಬ್ಬಳ್ಳಿ-ಧಾರವಾಡ, ಕುಮಟಾ, ಕಾರವಾರ ಮೊದಲಾದ ಕಡೆ ಭಾರತೀಯ ಜನಸಂಘವು ಕ್ರಮೇಣ ತನ್ನ ಪ್ರಭಾವವನ್ನು ಹೆಚ್ಚು ಮಾಡಿಕೊಂಡಿತು. ಕರಾವಳಿಯ ಕರ್ನಾಟಕ ಮತ್ತು ಕೊಡಗಿನಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘವು ತನ್ನ ಪ್ರಾಬಲ್ಯತೆಯನ್ನು ಅಧಿಕಗೊಳಿಸಿತ್ತು. ಹಿಂದೂ ಮಹಾಸಭಾದ ಪ್ರಭಾವ ಮತ್ತು ಕ್ರಿಯಾತ್ಮಕ ಚಟುವಟಿಕೆಗಳು ಶಿವಮೊಗ್ಗ ಜಿಲ್ಲೆಯಲ್ಲಿ ಈ ವೇಳೆಗೆ ಪ್ರಬಲವಾಗಿ ಕಂಡುಬರುತ್ತಿತ್ತು. ಜನಸಂಘ ಪಕ್ಷವು ಪ್ರಮುಖವಾಗಿ ಜನಸಂಪರ್ಕ ಪಡೆದು ತನ್ನ ರಾಷ್ಟ್ರೀಯ ವ್ಯಾಪಕತೆಯನ್ನು ಕ್ರಮೇಣ ಹೆಚ್ಚಿಸಿಕೊಂಡಿತು. ಪ್ರಮುಖ ಕೇಂದ್ರಸ್ಥಾನವಾಗಿದ್ದ ನಾಗಪುರ, ಸ್ವಯಂ ಸೇವಕ ಸಂಘ ಹಾಗೂ ಭಾರತೀಯ ಜನಸಂಘ ಎರಡೂ ಚಟುವಟಿಕೆಗಳ ಕೇಂದ್ರವಾಗಿದ್ದ ಅಂದಿನ ಮಹಾರಾಷ್ಟ್ರದಲ್ಲಿ ಈ ಪಕ್ಷದ ಪ್ರಭಾವವು ಕಾಲಾನುಕಾಲಕ್ಕೆ ನೆಲೆನಿಲ್ಲುವಂತಾಯಿತು. ಹೀಗಾಗಿ ಮಹಾರಾಷ್ಟ್ರ ಅಥವಾ ಮುಂಬೈ ಆಳ್ವಿಕೆಗೆ ಒಳಪಟ್ಟಿದ್ದ ಕರ್ನಾಟಕದ ಭಾಗಗಳಾಗಿದ್ದ ಧಾರವಾಡ, ಬೆಳಗಾವಿ ಮತ್ತು ವಿಜಾಪುರಗಳಲ್ಲಿ ಕ್ರಮೇಣ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಪ್ರಭಾವವು ವ್ಯಕ್ತವಾಗುತ್ತದೆ.

ಕಾನ್ಪುರದಲ್ಲಿ ೧೯೫೩ರಲ್ಲಿ ಸಮಾವೇಶಗೊಂಡ ಪ್ರಥಮ ಜನಸಂಘದ ಅಧಿವೇಶನದಲ್ಲಿ ಡಾ। ಶ್ಯಾಮಪ್ರಸಾದ್ ಮುಖರ್ಜಿಯವರು ಅಧ್ಯಕ್ಷತೆ ವಹಿಸಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ''ಜನಸಂಘವು ಸ್ಥಾಪಿತವಾದಾಗ ನಿಶ್ಚಿತವಾದ ಧ್ಯೇಯ, ಧೋರಣೆಗಳನ್ನು ನಮ್ಮ ದೇಶದ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಮತ್ತು ಅಂತರರಾಷ್ಟ್ರೀಯ ಮೂಲಭೂತ ಸಮಸ್ಯೆಗಳಿಗೆ ಸ್ಪಂದಿಸುವ ರೀತಿಯಲ್ಲಿ ಹೊಂದಿದ್ದಿತು. ಪರಿಸ್ಥಿತಿಗನುಗುಣವಾಗಿ ಆಗಿಂದಾಗ್ಗೆ ಪಕ್ಷದ ಧ್ಯೇಯೋದ್ದೇಶಗಳಲ್ಲಿ ಅವಶ್ಯ ಬದಲಾವಣೆಗಳನ್ನು ಮಾಡಿರುತ್ತೇವೆ.

ನಮ್ಮ ಪಕ್ಷದ ದ್ವಾರವು ಜಾತಿ, ಮತ, ಭೇದವಿಲ್ಲದೆ ಸರ್ವರಿಗೂ ತೆರೆದಿಡಲ್ಪಟ್ಟಿದೆ. ಜಾತೀಯ ಪ್ರತ್ಯೇಕತಾ ತತ್ವಗಳ ಮೇಲೆ ತನ್ನ ವಿಧಾನವನ್ನು ಆಧಾರಿತಗೊಳಿಸಬೇಕೆಂಬ ಪಾಕಿಸ್ತಾನದ ನಿಲುವನ್ನು ಹಾಗೂ ಪ್ರತಿಕ್ರಿಯಾತ್ಮಕ ಪ್ರವೃತ್ತಿಯನ್ನು ಜನಸಂಘ ಪಕ್ಷವು ಬಯಲಿಗೆಳೆದಿದೆ.'' ಡಾ। ಶ್ಯಾಮಪ್ರಸಾದ್ ಮುಖರ್ಜಿಯವರು ೧೯೫೩ರಲ್ಲೇ ತಮ್ಮ ದೂರದೃಷ್ಟಿಯಿಂದ ಮನಗಂಡಿದ್ದ ಬಗೆಯು ಆ ದೇಶದ ಇಂದಿನ ಸಹಜವಾದ ಧೋರಣೆಗಳ ಬಗ್ಗೆ ಉತ್ತಮ ನಿದರ್ಶನವಾಗಿದೆ. ಈ ಅಧಿವೇಶನದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಜನಸಂಘದ ನಾಯಕರುಗಳೆಂದರೆ ಇಂದಿನ ಪ್ರಧಾನಿಯಾಗಿರುವ ಅಟಲ್ ಬಿಹಾರಿ ವಾಜಪೇಯಿ, ಉಪಪ್ರಧಾನಿಯಾಗಿರುವ ಲಾಲ್ ಕೃಷ್ಣ ಆಡ್ವಾನಿ, ಡಾ। ದೀನದಯಾಳ್ ಉಪಾಧ್ಯಾಯ, ಮೊದಲಾದವರುಗಳು. ಈ ಪಕ್ಷವು ಹಲವು ಉದಾತ್ತ ರಾಷ್ಟ್ರೀಯ ಧೋರಣೆಗಳನ್ನು ತನ್ನಲ್ಲಿ ರೂಡಿಸಿಕೊಂಡು ಡಾ. ಮುಖರ್ಜಿಯವರು ಇದೇ ಸಮಯದಲ್ಲಿ ಬೆಂಗಳೂರಿಗೆ ಬಂದಿದ್ದಾಗ ತಮ್ಮ ಭಾಷಣದಲ್ಲಿ ''ನಮ್ಮಲ್ಲಿ ಒಂದು ತೊಟ್ಟು ರಕ್ತವಿರುವವರೆಗೂ ಅಖಂಡ ಭಾರತಕ್ಕಾಗಿ ಶ್ರಮಿಸುತ್ತೇವೆ'' ಎಂದು ಘೋಷಿಸಿದರು. ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ಪ್ರಬಲಗೊಂಡ ಜನಸಂಘ ಪಕ್ಷವು ಇದೇ ಸಂದರ್ಭದಲ್ಲಿ ಕಾಸರಗೋಡು ಪಂಚಾಯತಿ ಚುನಾವಣೆಗಳಲ್ಲಿ ಸ್ಥಳೀಯ ಜನಸಂಘದ ನಾಯಕ ಶೆಡ್ಡೆ ಲಕ್ಷ್ಮೀನಾರಾಯಣರಾಯರ ಮುಂದಾಳತ್ವದಲ್ಲಿ ಜನಸಂಘಕ್ಕೆ ಅದ್ಭುತ ಜಯ ಲಭಿಸಿತು. ಹೀಗೆ ದೇಶದ ಅನೇಕ ನಗರಗಳಲ್ಲಿದ್ದ ಸ್ಥಳೀಯ ಆಡಳಿತವನ್ನು ಜನಸಂಘ ಪಕ್ಷವು ತನ್ನ ತೆಕ್ಕೆಗೆ ಹಾಕಿಕೊಂಡಿದುದು ಒಂದು ಗಂಭೀರ ಪ್ರಯತ್ನವಾಗಿತ್ತು. ದೇಶದ ಪಾಣಿಪತ್ ಮತ್ತು ನಾವಲ್‌ಪುರ ಮುನ್ಸಿಪಲ್ ಚುನಾವಣೆಗಳಲ್ಲಿ ಜನಸಂಘವು ಸಾಧಿಸಿದ ಜಯವು ಪ್ರಥಮ ವಿಜಯವಾಗಿದ್ದು ಫಲಿತಾಂಶ ಕೆಳಕಂಡಂತೆ ಇತ್ತು.

**೧. ಪಾಣಿಪತ್ ಮುನ್ಸಿಪಲ್ ಚುನಾವಣೆ**

| | |
|---|---|
| **ಒಟ್ಟು ಸ್ಥಾನಗಳು** | ೧೭ |
| ಜನಸಂಘ | ೦೯ |
| ಕಾಂಗ್ರೆಸ್ | ೦೪ |
| ಜನಸಂಘ ಬೆಂಬಲಿತ ಅಭ್ಯರ್ಥಿಗಳು | ೦೩ |
| ಸ್ವತಂತ್ರ ಅಭ್ಯರ್ಥಿಗಳು | ೦೧ |

**೨. ನಾವಲ್‌ಪುರ ಮುನ್ಸಿಪಲ್ ಚುನಾವಣೆ**

| | |
|---|---|
| **ಒಟ್ಟು ಸ್ಥಾನಗಳು** | ೧೫ |
| ಜನಸಂಘ | ೧೨ |
| ಕಾಂಗ್ರೆಸ್ | ೦೩ |

ಇದೇ ಸಂದರ್ಭದಲ್ಲಿ (೧೯೫೪ರಲ್ಲಿ) ದೆಹಲಿಯ ರೋಷನಾರಾ ವಿಧಾನಸಭಾ ಉಪಚುನಾವಣೆಯಲ್ಲಿ ಭಾರತೀಯ ಜನಸಂಘ ಜಯ ಸಾಧಿಸಿತ್ತು. ಜಮ್ಮು ನಗರದ ಟೌನ್ ಏರಿಯಾ ಚುನಾವಣೆಗಳಲ್ಲಿ ಪ್ರಜಾಪರಿಷತ್ತು ಸಾಧಿಸಿದ ಪ್ರಚಂಡ ವಿಜಯವನ್ನು ಕೆಳಕಂಡಂತೆ ದಾಖಲಿಸಲಾಗಿದೆ.

| ನಗರ | ಒಟ್ಟು ಸ್ಥಾನ | ಪ್ರಜಾ ಪರಿಷತ್ | ನ್ಯಾಷನಲ್ ಕಾನ್‌ಫರೆನ್ಸ್ | ಸ್ವತಂತ್ರ ಅಭ್ಯರ್ಥಿಗಳು |
|---|---|---|---|---|
| ಕುಟವಾ | ೯ | ೮ | ೧ | ೦ |
| ರಿಯಾಸಿ | ೭ | ೬ | ೧ | ೦ |
| ನೌಷಹರ್ | ೮ | ೬ | ೦ | ೨ |
| ಅಖನೂರ್ | ೭ | ೬ | ೧ | ೦ |
| ಹೀರಾನಗರ್ | ೮ | ೫ | ೨ | ೧ |
| ಬಿಸೌಲಿ | ೭ | ೪ | ೨ | ೧ |
| ಸಾಂಬಾ | ೮ | ೩ | ೩ | ೨ |
| ಒಟ್ಟು ಮೊತ್ತ | ೫೪ | ೩೮ | ೧೦ | ೬ |

ಜಮ್ಮುವಿನ ಈ ವಿಜಯವು ದೇಶಾದ್ಯಂತ ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿದುದೇ ಅಲ್ಲದೇ ಭಾರತೀಯ ಜನಸಂಘದ ಕೋಮು ನೀತಿಯ ಸರಳತೆಯು ಸಾಮಾನ್ಯ ಮತದಾರರಲ್ಲಿ ಪ್ರಮುಖವಾದ ವಿಶ್ವಾಸವನ್ನು ಮೂಡಿಸಿದ್ದು ಈಗ ಇತಿಹಾಸದ ಅಂಶವಾಗಿದೆ.

ಭಾರತೀಯ ಜನಸಂಘವು ಜನಪರ ಕಾಳಜಿಯನ್ನು ವ್ಯಕ್ತಪಡಿಸಿ ಸಾರ್ವಜನಿಕ ಜೀವನದಲ್ಲಿ ನಿರ್ಮಲ ಚಾರಿತ್ರ್ಯವನ್ನು ಪ್ರತಿಬಿಂಬಿಸಿದ ಕಾರಣ ಈ ಪಕ್ಷವು ಕಾಲಕ್ರಮೇಣ ವಿದ್ಯಾವಂತ ಮತದಾರರ ಹೃದಯವನ್ನು ಗೆಲ್ಲುವಲ್ಲಿ ಯಶಸ್ವಿಯಾಯಿತೆಂದು ಹಲವು ರಾಜಕೀಯ ತಜ್ಞರು ಅಭಿಪ್ರಾಯಪಡುತ್ತಾರೆ. ಅಂದಿನ ಪ್ರಬಲವಾದ ಸಮಸ್ಯೆಯಾಗಿದ್ದ (ಇಂದಿಗೂ ಆಗಿರುವ) ನಿರುದ್ಯೋಗ ಸಮಸ್ಯೆಯ ಬಗ್ಗೆ ಕೇಂದ್ರ ಸರ್ಕಾರದ ಹಾಗೂ ದೇಶದ ಗಮನ ಸೆಳೆಯಲು ಭಾರತೀಯ ಜನಸಂಘವು ದಿನಾಂಕ ೬ ಸೆಪ್ಟೆಂಬರ್ ೧೯೫೩ ರಂದು ನಿರುದ್ಯೋಗ ನಿವಾರಣಾ ದಿನವನ್ನು ದೇಶದಾದ್ಯಂತ ಪ್ರಬಲವಾಗಿ ಆಚರಿಸಿದ್ದು ಗಮನಾರ್ಹವಾಗಿತ್ತು. ಇದೇ ಸಮಯದಲ್ಲಿ ಉತ್ತರ ಪ್ರದೇಶ ನಗರಪಾಲಿಕೆ ಚುನಾವಣೆಗಳಲ್ಲಿ ಜನಸಂಘದ ೧೩ ಉಮೇದುವಾರರುಗಳು ಅವಿರೋಧವಾಗಿ ಆಯ್ಕೆಗೊಂಡರು ಹಾಗೂ ಶೇಕಡಾ ೬೫ ರಷ್ಟು ಸ್ಥಾನಗಳಲ್ಲಿ ಕಾಂಗ್ರೆಸ್ ಪರಾಭವಗೊಂಡಿತು.

ಭಾರತೀಯ ಜನಸಂಘದ ಎರಡನೇ ಅಧಿವೇಶನವು ೨೪ ರಿಂದ ೨೬, ೧೯೫೪ ರಂದು ಸಮಾವೇಶಗೊಂಡು ಕೆಳಕಂಡ ಮಹತ್ತರ ನಿರ್ಣಯಗಳನ್ನು ದೀರ್ಘವಾದ ಚರ್ಚೆಯ ನಂತರ ಕೈಗೊಳ್ಳಲಾಯಿತು.

೧. ಭಾಷಾವಾರು ಪ್ರಾಂತ್ಯಗಳ ಚಳವಳಿಗಳನ್ನು ನಿಲ್ಲಿಸಲು ಕರೆ.
೨. ಹೈದರಾಬಾದ್ ಪ್ರಾಂತ್ಯವನ್ನು ವಿಂಗಡಿಸಿ, ಭಾಷಾ ಪ್ರಾಂತ್ಯದಲ್ಲಿ ಸೇರಿಸಲು ಸಲಹೆ.
೩. ಕಾಶ್ಮೀರದಲ್ಲಿ ಜನ ಮತಗಣನೆ ಮಾತು ನಿಲ್ಲಿಸಲು ಆಗ್ರಹ.
೪. ಪಾಕಿಸ್ತಾನದ ಪರರಾಷ್ಟ್ರ ಧೋರಣೆಯನ್ನು ನೋಡಿಯಾದರೂ ಅದರೊಡನೆ ವಾರ್ತಾಲಾಪ ನಿಲ್ಲಿಸಲು ಆಗ್ರಹ.
೫. ಪರದೇಶದಲ್ಲಿ ರಾಯಭಾರಿಗಳ ಬಲೆಯನ್ನು ಕತ್ತರಿಸಿ ಖರ್ಚು ಕಡಿಮೆ ಮಾಡಲು ಸಲಹೆ.
೬. ಸೈನಿಕ ಶಿಕ್ಷಣ ನೀಡಿ ರಾಷ್ಟ್ರದ ಭದ್ರತಾ ಶಕ್ತಿ ಹೆಚ್ಚಿಸಲು ಒತ್ತಾಯ.
೭. ಗೋಪಾಲಕೃಷ್ಣನ ಭೂಮಿಯಲ್ಲಿ ಗೋಹತ್ಯೆಯನ್ನು ಕಾನೂನಿನ ಮುಖಾಂತರ ಕ್ರಮೇಣ ನಿರೋಧಿಸಲು ಕರೆ.
೮. ಕೃಷಿ ಭೂಮಿ ಪುನರ್ ವಿತರಣೆಯನ್ನು ಕಾನೂನಿನಿಂದ ಸಕ್ರಮಗೊಳಿಸಲು ಕರೆ.
೯. ಭಾರತೀಯ ಪರಂಪರೆಗೆ ಸಂಬಂಧವಿಲ್ಲದ ಶಿಕ್ಷಣ ಮಂತ್ರಿಯನ್ನು ಪದಚ್ಯುತಗೊಳಿಸಲು ಆಗ್ರಹ.

ಈ ಅಧಿವೇಶನದಲ್ಲಿ ಪ್ರಥಮ ಬಾರಿಗೆ ಜನಸಂಘವು ಕೆಳಕಂಡ ಆರ್ಥಿಕ ನೀತಿಯನ್ನು ಪ್ರಕಟಿಸಿತು.

೧. ಜನತೆಯನ್ನು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಯಾಗಿಸಲು ಗ್ರಾಮೀಣ ಕುಟೀರ ಉದ್ಯೋಗಗಳನ್ನು ಪ್ರೋತ್ಸಾಹಿಸಬೇಕು.
೨. ಬಂಡವಾಳ ಕೇಂದ್ರೀಕರಣವನ್ನು ತಪ್ಪಿಸಲು ಸಮಾನ ವಿತರಣೆ ವ್ಯವಸ್ಥೆಯಾಗಬೇಕು.
೩. ಜನಶಕ್ತಿಯ ಸದುಪಯೋಗಕ್ಕಾಗಿ ಭೂ ವಿತರಣೆ ಮಾಡುವಂತೆ ಸರಕಾರವನ್ನು ಒತ್ತಾಯಿಸುವುದು.

ಭಾರತೀಯ ಜನಸಂಘವು ಚುನಾವಣೆಯಿಂದ ಚುನಾವಣೆಗೆ ತನ್ನ ರೆಕ್ಕೆಗಳನ್ನು ದೇಶದಾದ್ಯಂತ ಹರಡುತ್ತಿದ್ದುದು ಸಮೀಕ್ಷಾತ್ಮಕ ದೃಷ್ಟಿಯಿಂದ ನೋಡಿದರೆ ವ್ಯಕ್ತವಾಗುತ್ತದೆ. ಭಾರತದ ೧೯೫೬ನೇ ಇಸವಿಯ ಸಾರ್ವತ್ರಿಕ ಚುನಾವಣೆಯಲ್ಲಿ ಹೋರಾಟ ಮಾಡುವ ದೃಷ್ಟಿಯಿಂದ ತನ್ನ ಪ್ರಗತಿಶೀಲ ಪ್ರಣಾಳಿಕೆಯನ್ನು ಕೆಳಕಂಡಂತೆ ಘೋಷಿಸಿತು.

೧. ರಾಷ್ಟ್ರದ ರಕ್ಷಣೆಗೆ ಪ್ರಮುಖ ಸ್ಥಾನ ನೀಡುವುದು. ಕಡ್ಡಾಯ ಸೈನಿಕ ಶಿಕ್ಷಣ ಹಾಗೂ ರಕ್ಷಣಾ ಕೈಗಾರಿಕೆ ಸ್ಥಾಪನೆ.
೨. ಅಧಿಕಾರ ವಿಕೇಂದ್ರೀಕರಣವುಳ್ಳ ಏಕಾತ್ಮ ಶಾಸನ.
೩. ವ್ಯಕ್ತಿಯ ಮೂಲಭೂತ ಹಕ್ಕಿಗೆ ಚ್ಯುತಿ ತರುವ ಸ್ಥಾನಬದ್ಧತಾಶಾಸನ, ಸಾರ್ವಜನಿಕ ಸಂರಕ್ಷಾ ಶಾಸನ, ಪತ್ರಿಕಾ ಸುದ್ದಿಗಳ ಹತೋಟಿ ಶಾಸನ ಮುಂತಾದವುಗಳನ್ನು ತೆಗೆದುಹಾಕುವುದು.

**ಆರ್ಥಿಕ ಕಾರ್ಯಕ್ರಮಗಳು**

೧. ಕೆಲಸ ಮಾಡುವ ಹಕ್ಕನ್ನು ರಾಜ್ಯಾಂಗದಲ್ಲಿ ಸೇರಿಸುವುದು.
೨. ದ್ವಿತೀಯ ಪಂಚವಾರ್ಷಿಕ ಯೋಜನೆಯಲ್ಲಿ ಮೂಲಭೂತ ಬದಲಾವಣೆಯಾಗಬೇಕು, ಯೋಜನೆ ಅತಿ ಆಕಾಂಕ್ಷೆಗಳಿಂದ

ಕೂಡಿದೆ, ರಾಷ್ಟ್ರೀಕರಣವು ಸರ್ವಾಧಿಕಾರತ್ವಕ್ಕೆ ದಾರಿಯಾಗುತ್ತದೆ, ಚಿಕ್ಕಪ್ರಮಾಣದ ಮತ್ತು ಗೃಹ ಉದ್ಯೋಗಗಳೇ ಆರ್ಥಿಕ ಯೋಜನೆಯ ಆಧಾರವಾಗಿರಬೇಕು.

೩. ತೆರಿಗೆಗಳನ್ನು ಕಡಿಮೆ ಮಾಡುವುದು, ಮಾರಾಟ ತೆರಿಗೆಗಳನ್ನು ವಿಧಿಸುವುದು.
೪. ಸರಕಾರಿ ನೌಕರರ ಸಂಬಳವನ್ನು ಕನಿಷ್ಟ ನೂರು ರೂ. ಗರಿಷ್ಠ ಎರಡು ಸಾವಿರ ರೂ.ಗೆ ಏರಿಸುವುದು.
೫. ಶ್ರಮಿಕರಿಗೆ ಆಡಳಿತ ಹಾಗೂ ಲಾಭದಲ್ಲಿ ಪಾಲುಗಾರಿಕೆ.
೬. ನಿತ್ಯೋಪಯೋಗಿ ವಸ್ತುಗಳ ಬೆಲೆ ಇಳಿತ.
೭. ರಕ್ಷಣಾ ಮತ್ತು ಪ್ರಮುಖ ಕೈಗಾರಿಕೆಗಳನ್ನು ರಾಷ್ಟ್ರೀಕರಣ ಮಾಡುವುದು.

**ಶಿಕ್ಷಣ ಕ್ಷೇತ್ರ**

೧. ವಿಶ್ವವಿದ್ಯಾಲಯಗಳಿಗೆ ಹೆಚ್ಚಿನ ಸ್ವಾಯತ್ತತೆ ನೀಡಿಕೆ.
೨. ಹಿಂದೂ ವಿರೋಧಿ ಶಾಸನಗಳನ್ನು ರದ್ದುಗೊಳಿಸುವುದು.

**ವಿದೇಶಿ ವ್ಯವಹಾರ :**

೧. ಸ್ವಹಿತ ಕಾಪಾಡಿಕೊಂಡು ಯಾವ ಶಕ್ತಿ ಬಣಕ್ಕೂ ಸೇರದಿರುವುದು.
೨. ಗೋವಾ ವಿಮೋಚನೆ ಮಾಡುವುದು.
೩. ಬೇರೆ ಬೇರೆ ದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರಿಗೆ ಸಮಾನ ಹಕ್ಕು ದೊರಕಿಸುವುದು.

**ಭಾರತೀಯ ಜನಸಂಘದ ಚುನಾವಣಾ ಘೋಷಣೆ**

೧. ಗಡಿ ರಕ್ಷಣೆ ಮತ್ತು ರಾಷ್ಟ್ರೀಯ ಏಕತೆ
೨. ಆಡಳಿತ ದಕ್ಷತೆ ಮತ್ತು ಶುದ್ಧತೆ
೩. ದರಗಳ ಸ್ಥಿರೀಕರಣ
೪. ನಿರುದ್ಯೋಗ ನಿರ್ಮೂಲನೆ
೫. ಶಿಕ್ಷಣ ಕ್ರಮದ ಪುನರ್ ಘಟನೆ

**ಜನಸಂಘದ ಚುನಾವಣಾ ಸಾಧನೆ**

| ಪಕ್ಷಗಳು | ಲೋಕಸಭೆ | ರಾಜಧಾನಿ ಪರಿಷತ್ | ಮಹಾನಗರ ಪಾಲಿಕೆ |
|---|---|---|---|
| ಜನಸಂಘ | ೬ | ೩೩ | ೫೨ |
| ಕಾಂಗ್ರೆಸ್ | ೧ | ೧೯ | ೪೧ |
| ಕಮ್ಯೂನಿಸ್ಟ್ | ೦ | ೦ | ೨ |
| ಸಂಸ | ೦ | ೦ | ೨ |
| ರಿಪಬ್ಲಿಕನ್ ಪಾರ್ಟಿ | ೦ | ೧ | ೧ |
| ಸ್ವತಂತ್ರ ಅಭ್ಯರ್ಥಿಗಳು | ೦ | ೩ | ೩ |
| ಒಟ್ಟು | ೭ | ೫೬ | ೧೦೦ |

**ಕರ್ನಾಟಕದ ವಿಧಾನಸಭೆಗೆ ಆಯ್ಕೆಯಾದ ಜನಸಂಘದ ಅಭ್ಯರ್ಥಿಗಳು**

೧. ಬೋಳಾ ರಘುರಾಮ ಶೆಟ್ಟಿ ಕಾರ್ಕಳ
೨. ಲೋಕಯ್ಯ ನಾಯಕ ವಿರಾಜಪೇಟೆ (ಮೀಸಲು)

೩. ಎಸ್. ಎಸ್. ಶೆಟ್ಟರ್ ಹುಬ್ಬಳ್ಳಿ ನಗರ
೪. ಚಂದ್ರಕಾಂತ ಸಿಂಧೋಳ್ ಬೀದರ್

## ಕರ್ನಾಟಕದ ವಿಧಾನಪರಿಷತ್‌ಗೆ ಆಯ್ಕೆಯಾದ ಜನಸಂಘದ ಅಭ್ಯರ್ಥಿಗಳು

೧. ವೈ. ಎಸ್. ಪಾಟೀಲ್
೨. ಎ. ಕೆ. ಸುಬ್ಬಯ್ಯ
೩. ಜಿ. ಎಸ್. ಉಲ್ಲಾಳ್
೪. ಎಸ್. ಮಲ್ಲಿಕಾರ್ಜುನಯ್ಯ

## ಭಾರತೀಯ ಜನಸಂಘ ಮತ್ತು ತುರ್ತು ಪರಿಸ್ಥಿತಿ (೧೯೭೫-೭೭)

ನಮ್ಮ ದೇಶದಲ್ಲಿ ೧೯೭೫ರ ಜೂನ್ ೨೫ರ ಮಧ್ಯರಾತ್ರಿಯಿಂದ ಜಾರಿಯಾಗಿ ೧೯೭೭ರ ಮಾರ್ಚ್ ೨೧ರ ಬೆಳಗ್ಗೆ ಮುಕ್ತಾಯಗೊಂಡ 'ಆಂತರಿಕ ತುರ್ತು ಪರಿಸ್ಥಿತಿ'ಯ ಅವಧಿಯಲ್ಲಿ ನಡೆದ ಹೋರಾಟ ಭಾರತೀಯರು ತಮ್ಮ ಸರ್ವ ಸ್ವಾತಂತ್ರ್ಯಕ್ಕಾಗಿ ನಡೆಸಬೇಕಾದ ಎರಡನೇ ಸ್ವಾತಂತ್ರ್ಯ ಸಮರವಾಗಿತ್ತು. ಈ ನಾಡಿನಲ್ಲಿ ಎಲ್ಲವೂ ಮಾಮೂಲಿಯಾಗಿದ್ದಾಗ ಇದ್ದಕ್ಕಿದ್ದಂತೆ ಸಿಡಿಲಿನಂತೆ ಮೇಲೆರಗಿದ ತುರ್ತುಪರಿಸ್ಥಿತಿಯ ಪರಿಣಾಮದಿಂದ ವೃತ್ತಪತ್ರಿಕೆಗಳ ಬಾಯಿಗೆ ಬೀಗ, ಬುದ್ಧಿ ಜೀವಿಗಳಿಗೆ, ನಾಡನುಡಿಯ ಚಿಂತಕರಿಗೆ, ದೇಶಾಭಿಮಾನಿಗಳಿಗೆ, ಸ್ವಾತಂತ್ರ್ಯ ಸಂರಕ್ಷಣೆಯ ಕನಸುಗಾರರಿಗೆ ಬಯಸದೇ ಬಂದ ಸೆರೆಮನೆವಾಸ. ನ್ಯಾಯದೇವತೆಗೆ ನೇಣುಗಂಬದ ಸಹವಾಸ, ದೇಶಾದ್ಯಂತ ಮಸಣ ಮೌನ, ಎಲ್ಲೆಲ್ಲೂ ಸರ್ವಾಧಿಕಾರಿಣಿಗೆ ಪರಾಕು ಹಾಕುವವರೇ. ಹೀಗಿದ್ದಾಗ ಅನ್ಯಾಯ ಅಪಮಾನಗಳ ಕಲಂಕದಿಂದಾಗಿ ಒಳಗೊಳಗೇ ಕುದಿಯುತ್ತಿದ್ದ ದಾವಾಗ್ನಿ ಮತ್ತು ಪ್ರಜಾಪ್ರಭುತ್ವದ ಮಾರಕ ಶಕ್ತಿಗಳ ಮಾರಣಹೋಮಕ್ಕೆ ಸಿದ್ಧವಾಗುತ್ತಿದ್ದ ಕ್ರಮಬದ್ಧ ತಯಾರಿ; ಆದರೆ ಹೊರನೋಟಕ್ಕೆ ಎಲ್ಲವೂ ಮೌನ ಮತ್ತು ಶಿಸ್ತಿನ ಸೋಗು ಹಾಕಿದ ಜನಜೀವನ ಗೋಚರವಾಗುತ್ತಿತ್ತು. ಅಖಿಲ ಭಾರತದಲ್ಲಿ ನಡೆದ ಈ ಸ್ವಾತಂತ್ರ್ಯ ಸಂಘರ್ಷದ ಸಂಕ್ಷಿಪ್ತ ಚಿತ್ರದ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಸಂಭವಿಸಿದ ಪ್ರಬಲ ಹೋರಾಟದ ಘಟನೆಗಳು ಈಗ ಇತಿಹಾಸವಾಗಿದೆ.

ಭಾರತಾದ್ಯಂತ ಜಯಪ್ರಕಾಶ ನಾರಾಯಣರು ನೀಡಿದ 'ಸಂಪೂರ್ಣ ಕ್ರಾಂತಿ'ಯ ಕರೆಯ ಹಿನ್ನೆಲೆಯಲ್ಲಿ ಪ್ರತಿಪಕ್ಷಗಳು ಸಂಘಟಿತವಾಗಿ ಇದರಲ್ಲಿ ಭಾಗವಹಿಸಿದ್ದು ಆಡಳಿತ ನಡೆಸುತ್ತಿದ್ದ ಕಾಂಗ್ರೆಸ್ ಸರ್ಕಾರಕ್ಕೆ ಪ್ರಬಲವಾದ ಸವಾಲಾಗಿ ಪರಿಣಮಿಸಿತು. ಅಂದಿನ ಪ್ರಧಾನಿಯಾಗಿದ್ದ ಶ್ರೀಮತಿ ಇಂದಿರಾಗಾಂಧಿಯವರು ವ್ಯಕ್ತಿಗತವಾಗಿ ಏಕಸ್ವಾಮ್ಯದ ಒಲವು ಬೆಳೆಸಿಕೊಂಡಿದ್ದು ದೇಶದಲ್ಲಿ ನಡೆದ ಹಲವಾರು ಅನಿಶ್ಚಿತ ನಿರ್ಧಾರಗಳಿಗೆ ಪ್ರಮುಖ ಕಾರಣವಾಗಿತ್ತು. ಈ ಘಟನೆಗಳಲ್ಲಿ ಪ್ರಮುಖವಾದದೆಂದರೆ ಜೂನ್ ೧೨, ೧೯೭೫ರಂದು ಅಲಹಾಬಾದ್ ಉಚ್ಚ ನ್ಯಾಯಾಲಯವು ನೀಡಿದ ಚರಿತ್ರಾರ್ಹ ತೀರ್ಪು. ''ಇಂದಿರಾಗಾಂಧಿ ಅವರು ಚುನಾವಣಾ ಭ್ರಷ್ಟಾಚಾರ ಮಾಡಿದ್ದಾರೆಂಬುದು ಸಾಬೀತಾಗಿದ್ದುದರಿಂದ ಅವರನ್ನು ಲೋಕಸಭೆಯ ಸ್ಥಾನದಿಂದ ತೆಗೆದುಹಾಕಲಾಗಿದೆ ಮತ್ತು ಮುಂದೆ ಆರು ವರ್ಷಗಳ ಕಾಲ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಲು ಅರ್ಹರಲ್ಲ''ವೆಂಬುದು ನ್ಯಾಯಾಲಯದ ಅಭಿಪ್ರಾಯವಾಗಿತ್ತು.' ಜಯಪ್ರಕಾಶ್ ನಾರಾಯಣ ಅವರು ಎಂದೂ ಅಧಿಕಾರವನ್ನು ಬಯಸಿ ರಾಜಕಾರಣ ಮಾಡಿದವರಲ್ಲ. ಪ್ರತಿಯಾಗಿ ತನ್ನನ್ನು ಅರಸಿ ಬಂದ ಅಧಿಕಾರವನ್ನು ತ್ಯಜಿಸಿ ಜನಸೇವಾನಿರತರಾದ ತಪಸ್ವಿ. ಅವರು ನಾಯಕತ್ವವನ್ನು ವಹಿಸಿದ್ದ ಚಳವಳಿಯಾದರೋ ಜನತೆಯ ಅತೃಪ್ತಿಯ ಉದರದಿಂದ ಜನಿಸಿದ್ದ ಹೋರಾಟವಾಗಿತ್ತು. ಈ ಸಂದರ್ಭದಲ್ಲಿ (೨೫.೬.೧೯೭೪) ಪಾಟ್ನ ಗಾಂಧಿ ಮೈದಾನದಲ್ಲಿ ಸಾರ್ವಜನಿಕ ಭಾಷಣ ಮಾಡುತ್ತಾ ಜಯಪ್ರಕಾಶ ಅವರು'' ಈ ಹೋರಾಟವು ಕೇವಲ ಸೀಮಿತ ಉದ್ದೇಶಗಳಿಗೆ ನಡೆಯುತ್ತಿಲ್ಲ. ಇದರ ಉದ್ದೇಶಗಳು ತುಂಬಾ ದೂರಗಾಮಿಯಾಗಿವೆ. ಭಾರತೀಯ ಪ್ರಜಾತಂತ್ರವು ವಾಸ್ತವಿಕವಾಗುವಂತೆ ಅದನ್ನು ಹೊಸದಾಗಿ ಸದೃಢಗೊಳಿಸುವುದು, ನಿಜವಾದ ಜನತಾ ರಾಜ್ಯವನ್ನು ನೆಲೆಗೊಳಿಸುವುದು, ಒಂದು ನೈತಿಕ-ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕ್ರಾಂತಿಯನ್ನು ತರುವುದು, ಒಂದು ಹೊಸ ಬಿಹಾರವನ್ನು ಕಟ್ಟುವುದು, ಕೊನೆಯದಾಗಿ ನವಭಾರತದ ನಿರ್ಮಾಣ ಸಾಧಿಸುವುದು ಇದು ಸಂಪೂರ್ಣ ಕ್ರಾಂತಿ.''

ಸಂಪೂರ್ಣ ಕ್ರಾಂತಿಯ ಓರ್ವ ಪ್ರಭಾವಿ ವಕ್ತಾರರಾದ ಅಟಲ್ ಬಿಹಾರಿ ವಾಜಪೇಯಿಯವರು ''ಕಾಂಗ್ರೆಸ್ ಸರಕಾರವು ದೇಶವನ್ನು ಒಂದು ಭಯಂಕರ ರಾಜಕೀಯ, ಆರ್ಥಿಕ, ನೈತಿಕ ಗಂಡಾಂತರಕ್ಕೆ ತಳ್ಳಿದೆ. ಇವೆಲ್ಲದರ ಪರಿಹಾರ ಕೇವಲ ಪ್ರತಿಪಕ್ಷಗಳು ಅಧಿಕಾರ ಗಳಿಸುವುದರಿಂದಲೇ ಆಗುವಂತಿಲ್ಲ. ಸಮಗ್ರ ಕ್ರಾಂತಿ ಎಂದರೆ, ಅದೊಂದು ಪರಿಶುದ್ಧವಾದ ಭಾರತೀಯ ಕ್ರಾಂತಿ. ಭಾರತೀಯ

ಜೀವನ ಮೌಲ್ಯಗಳ ಬೆಳಕಿನಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮೂಲಭೂತ ಬದಲಾವಣೆ ಮಾಡಿ ಒಂದು ಹೊಸ ರಾಜ್ಯವನ್ನು, ಒಂದು ಹೊಸ ಸಮಾಜವನ್ನು ನಿರ್ಮಿಸುವುದು ಅದರ ಮಹೋದ್ದೇಶ'' ಎಂದು ವಿವರಿಸಿದರು. ಅಂದಿನ ಪರಿಸ್ಥಿತಿಯನ್ನು ನಿವೃತ್ತ ಶ್ರೇಷ್ಠ ನ್ಯಾಯಾಧೀಶ ಎಂ. ಸಿ. ಛಗಲಾ ಯಥಾವತ್ತಾಗಿ ಬಣ್ಣಿಸಿದ್ದಾರೆ. ''ಜನರು ಈ ಸರಕಾರದಲ್ಲಿ ನಂಬಿಕೆ ಕಳೆದುಕೊಂಡಿದ್ದಾರೆ. ಏಕೆಂದರೆ ಸರಕಾರ ಭ್ರಷ್ಟವೂ ಅದಕ್ಷವೂ ಆಗಿದೆ. ಅದು ಜನತೆ ತನಗೆ ಮತನೀಡಿದ ಉದ್ದೇಶವನ್ನೇ ಮರೆತುಬಿಟ್ಟಿದೆ. ಎಷ್ಟು ಅಭಾವವುಂಟುಮಾಡಬೇಕು, ಯಾರಿಗೆ ಹೇಗೆ ಲೈಸೆನ್ಸ್ ಕೊಡಬೇಕು, ಏನು ರಫ್ತು ಮಾಡಬೇಕು. ಇತ್ಯಾದಿ ಬಗ್ಗೆ ಸರಕಾರದ ಧೋರಣೆಗಳನ್ನು ಕಳ್ಳಸಾಗಾಣಿಕೆಗಾರರು, ಕಾಳಸಂತೆಕೋರರು ಮತ್ತು ಅಕ್ರಮ ದಾಸ್ತಾನುಗಾರರು ರೂಪಿಸುತ್ತಾರೆ.'' ಮುಂದೆ ಕಾಂಗ್ರೆಸ್ ಅಧ್ಯಕ್ಷ ದೇವಕಾಂತ್ ಬರುವಾ ಅವರು ''ಭಾರತದಲ್ಲಿ ಸದ್ಯಕ್ಕೆ ವಿರೋಧಪಕ್ಷ ಅಪ್ರಸ್ತುತ'' ಎಂದು ಹೇಳಿದ್ದಲ್ಲದೇ ೧೯೭೫ ಜೂನ್ ೧೮ರ ಕಾಂಗ್ರೆಸ್ ಸಂಸದೀಯ ಪಕ್ಷದ ಸಭೆಯಲ್ಲಿ ''ಇಂದಿರಾ ಅಂದರೆ ಇಂಡಿಯಾ, ಇಂಡಿಯಾ ಅಂದರೆ ಇಂದಿರಾ'' ಎಂದು ಘೋಷಿಸಿ ಇಂದಿರಾಗಾಂಧಿಯವರ ಸರ್ವಾಧಿಕಾರಕ್ಕೆ ನೆಲೆಗಟ್ಟು ಸಿದ್ಧಪಡಿಸಿದರು. ಅಂದಿನ ಪ್ರಧಾನಿಯವರ ಸ್ಥಾನಕ್ಕೆ ಸಂಚಕಾರ ತಂದ ಅಲಹಾಬಾದ್ ಉಚ್ಚ ನ್ಯಾಯಾಲಯದ ತೀರ್ಪು ಜೂನ್ ೧೨, ೧೯೭೫ರಂದು ಪ್ರಕಟವಾಯಿತು. ಇನ್ನೂ ಹಲವಾರು ರಾಜಕೀಯ ಘಟನೆಗಳು ಜರುಗಿ ಇಂದಿರಾಗಾಂಧಿ ಅವರ ಅಧಿಕಾರವನ್ನು ಮೊಟಕುಗೊಳಿಸಲು ಸಂವಿಧಾನಾತ್ಮಕವಾಗಿ ಪ್ರತಿಪಕ್ಷಗಳು ಯೋಚಿಸುತ್ತಿದ್ದ ಹಿನ್ನೆಲೆಯಲ್ಲಿ 'ದೇಶ್‌ಬಚಾವ್' ಎಂಬ ಘೋಷಣೆಯೊಂದಿಗೆ ಜೂನ್ ೨೫, ೧೯೭೫ರ ಮಧ್ಯರಾತ್ರಿ ಪ್ರಧಾನಿ ಇಂದಿರಾಗಾಂಧಿ ಅವರು ತುರ್ತುಪರಿಸ್ಥಿತಿಯ ಘೋಷಣೆಯನ್ನು ತಮ್ಮ ಕೊನೆಯ ಬ್ರಹ್ಮಾಸ್ತ್ರವನ್ನಾಗಿ ಪ್ರಯೋಗಿಸಿದರು. ಈ ಕರಾಳ ಆಜ್ಞೆ ದೇಶದ ಮೇಲೆ ಹೇರಿದ ಪ್ರಬಲ ನಿರ್ಬಂಧವಾಗಿತ್ತು, ಜನತೆಯ ಬಾಯಿ ಹೊಲೆದು, ಕೈಕಾಲು ಕಟ್ಟಿ ಕೆಳಗುರುಳಿಸಿ, ಅವರ ಎದೆಯ ಮೇಲೆ ನಿಂತು ತಾನು ಇನ್ನು ನಿರಾತಂಕವಾಗಿ ರಾಜ್ಯವಾಳಬೇಕೆಂಬ ಹವಣಿಕೆ ಅದಾಗಿತ್ತು. ಹೀಗೆ ಈ ಕರಾಳ ಆಜ್ಞೆ ಹೇರಿದ ನಂತರ ದೇಶಾದ್ಯಂತ ಪ್ರತಿಪಕ್ಷದ ಎಲ್ಲಾ ನಾಯಕರುಗಳನ್ನು ಬೃಹತ್ ಪ್ರಮಾಣದಲ್ಲಿ ಸೆರೆಹಿಡಿಯಲಾಯಿತು. ಜಯಪ್ರಕಾಶ ನಾರಾಯಣರನ್ನು ಪೊಲೀಸರು ಸೆರೆಹಿಡಿದು ಒಯ್ಯುವ ಹಂತದಲ್ಲಿದ್ದಾಗ ಅವರು ತಮ್ಮ ಆಪ್ತ ಕಾರ್ಯದರ್ಶಿ ರಾಧಾಕೃಷ್ಣರ ಕಡೆಗೆ ತಿರುಗಿ ಭವಿಷ್ಯವಾಣಿ ನುಡಿದರು'' ವಿನಾಶಕಾಲೇ ವಿಪರೀತ ಬುದ್ಧಿ''. ಅದೇ ಸಮಯಕ್ಕೆ ಮೊರಾರಜಿ ದೇಸಾಯಿ ಅವರೂ ಸೆರೆಯಾಳಾದರು.

ಬೆಂಗಳೂರಿನ ಶಾಸಕರ ಭವನದಲ್ಲಿ ಸಂಸದೀಯ ಸಮಿತಿಯ ಕೆಲಸಕ್ಕಾಗಿ ಬಂದಿದ್ದ ಭಾರತೀಯ ಜನಸಂಘದ ಅಟಲ್ ಬಿಹಾರಿ ವಾಜಪೇಯಿ, ಲಾಲ್ ಕೃಷ್ಣ ಆದ್ವಾನಿ, ಸಮಾಜವಾದಿ ಪಕ್ಷದ ಪ್ರೊ। ಮಧು ದಂಡವತೆ ಸಂಸ್ಥಾ ಕಾಂಗ್ರೆಸ್ಸಿನ ಶ್ಯಾಮನಂದನ ಮಿಶ್ರ ಅವರುಗಳು ತಂಗಿದ್ದರು. ಬೆಳಕು ಹುಟ್ಟುವುದರೊಳಗೆ ಕರ್ನಾಟಕ ಪೊಲೀಸರು ಇವರುಗಳನ್ನು ಸೆರೆಹಿಡಿದರು. ಇವರುಗಳ ಪೈಕಿ ಪ್ರೊ। ಮಧು ದಂಡವತೆಯವರು ಅಶೋಕ ಹೊಟೆಲ್‌ನಲ್ಲಿದ್ದರು, ಅವರನ್ನು ಅಲ್ಲೇ ಸೆರೆಹಿಡಿಯಲಾಯಿತು. ದಿನದಿಂದ ದಿನಕ್ಕೆ ಕರ್ನಾಟಕದಾದ್ಯಂತ ಸಹಸ್ರಾರು ಸ್ವಯಂ ಸೇವಕರು ಹಾಗೂ ಜನಸಂಘ ಪಕ್ಷದ ಸದಸ್ಯರುಗಳು ಮತ್ತು ಕಾರ್ಯಕರ್ತರುಗಳನ್ನು ಸೆರೆಹಿಡಿಯಲಾಯಿತು. ತುರ್ತುಪರಿಸ್ಥಿತಿ ಜಾರಿಯಾದ ಮೇಲೆ ತಕ್ಷಣ ತಮ್ಮ ಗಂಡು ಧ್ವನಿ ಎತ್ತಿದವರು ಹೆಸರಾಂತಿ ಸಾಹಿತಿ ಡಾ। ಶಿವರಾಮ ಕಾರಂತರು. ಅವರು ಕೈಯಾರೆ ಬರೆದುಕೊಟ್ಟ ಮಾರ್ಮಿಕವಾದ ಘೋಷಣೆಗಳೆಂದರೆ-

೧. ಇದು ಪ್ರಜಾಪ್ರಭುತ್ವದಲ್ಲಿ ಪ್ರಜಾಹಕ್ಕಿನ ವಜಾಪ್ರಭುತ್ವ.
೨. ಆ ಗಾಂಧೀ ರಾಮರಾಜ್ಯ ತರಲು ಬಯಸಿದರು - ಈ ಗಾಂಧಿ ಹರಾಮರಾಜ್ಯ ತಂದರು.
೩. ಸುಗ್ರೀವಾಜ್ಞೆಯಿಂದ ಆಳಲು ಇದೇನು ಕಪಿಗಳ ರಾಜ್ಯವಲ್ಲ.
೪. ಕಂಸ ಅಪ್ಪ ಅಮ್ಮನ್ನು ಸೆರೆಗೆ ತಳ್ಳಿದರೆ ಇಂದಿರಾ ಗುರುಹಿರಿಯರನ್ನು ತಳ್ಳಿದರು.
೫. ಪ್ರಜೆಗೆ ಸಲ್ಲದ ನೀತಿ ಸರಕಾರಕ್ಕೆ ಸಂದೀತೆ?
೬. ಸ್ವಾತಂತ್ರ್ಯ ನಮ್ಮ ಜನ್ಮಸಿದ್ಧ ಹಕ್ಕು. ಪ್ರಧಾನಿ ಕರುಣಿಸಬೇಕಾದ ದಾನವಲ್ಲ.
೭. ಸ್ಥಾನಕ್ಕಾಗಿ ಮಾನ ಮಾರಿಕೊಂಬವರು ಜನತೆಯ ಪ್ರತಿನಿಧಿಗಳೇ?
೮. ಇಪ್ಪತ್ತೇಳು ವರುಷ ಸಾಧಿಸಲಾರದ್ದನ್ನು ಇಪ್ಪತ್ತಂಶಗಳಿಂದ ಸಾಧಿಸುತ್ತಾರಂತೆ !
೯. ದಿಲ್ಲಿಯ ಸಿಂಹಿಣಿ ಒದರಿದಂತೆ, ಗ್ರಾಮದ ಸಿಂಹಗಳು ಬೊಗಳುತ್ತವೆ.
೧೧. ಭಾರತದ ೬೦ ಕೋಟಿ ಮೂಕರಲ್ಲ, ಓ ನೆಹರೂ ಬೇಟಿ.

ಕರ್ನಾಟಕ ರೂಪಿಸಿದ ಪ್ರಮುಖ ಜನಸಂಘದ ಕಾರ್ಯಕ್ರಮಗಳು ತುರ್ತುಪರಿಸ್ಥಿತಿಯಲ್ಲಿ ರಾಜಕೀಯ ಬಿರುಗಾಳಿಯೆನ್ನೆಬ್ಬಿಸಿತು. ಸಾಮಾನ್ಯ ಜನತೆಯಲ್ಲಿ ಹಿಂದೆಂದೂ ಇಲ್ಲದ ಜಾಗೃತಿ ಹಾಗೂ ಹುರುಪನ್ನು ಎಲ್ಲಾ ಭೂಗತ ವೃತ್ತಪತ್ರಿಕೆಗಳ ಮೂಲಕ ಕೆದಕಲಾಯಿತು. ಕರ್ನಾಟಕವು ಕಂಡ ಪ್ರಮುಖ ಜನಸಂಘದ ನಾಯಕರುಗಳೆಂದರೆ, ಪ್ರೊ। ಮಳ್ಳೂರು ಆನಂದರಾವ್, ಡಾ। ಎಂ. ಗೋಪಾಲಕೃಷ್ಣ ಅಡಿಗ, ಯಾದವರಾವ್ ಜೋಷಿ, ಅರಕಲಿ ನಾರಾಯಣ, ಜಡೆ.ಬಿ. ಅಜಿತ್‌ಕುಮಾರ್, ಜಯದೇವ್, ಎಸ್. ಬಿ. ಶೇಷಾದ್ರಿ, ಎಂ. ರಾಮಾಜೋಯಿಸ್, ಎಸ್. ಗುಂಡಯ್ಯ ಶೆಟ್ಟಿ, ಕೆ. ಆರ್. ಶ್ರೀನಿವಾಸ ಅಯ್ಯಂಗಾರ್, ಬಾವೂರಾವ್ ದೇಶಪಾಂಡೆ, ಎಸ್. ಮಲ್ಲಿಕಾರ್ಜುನಯ್ಯ, ಜಿ. ಎಂ. ರಾಜಾಚಾರ್, ಕಾ. ಬೋರಪ್ಪ, ಡಾ. ಕೆ.ವಿ. ಸುಬ್ಬಣ್ಣ, ಟಿ. ಹನುಮಂತೇಗೌಡ, ಡಾ। ವಿ. ಎಸ್. ಭಟ್, ಎಂ. ಟಿ. ವೆಂಕಟರಮಣೇಗೌಡ, ಎ. ಕೆ. ಸುಬ್ಬಯ್ಯ, ಬಿ. ಎ. ಮಾಚಯ್ಯ, ಡಾ। ಶಂಕರಗೌಡ, ರಾಧಾಕೃಷ್ಣ ಮುದಗಲ್ಕರ್, ಪ್ರಹಲ್ಲಾದ್‌ರಾವ್ ಕುಲಕರ್ಣಿ, ಡಾ। ವಿ.ಪಿ. ದೇವುಳಗಾಂವ್‌ಕರ್, ಡಾ. ಹ. ಶಂಕರಮೂರ್ತಿ, ಎಂ. ಸುಬ್ರಹ್ಮಣ್ಯ ಐಯ್ಯರ್, ರಾಮಚಂದ್ರ, ಕೃಷ್ಣಮೂರ್ತಿ, ಜಿ. ನಾಮದೇವ ಕಾಮತ್, ಡಾ। ವಿ.ಎಸ್. ಆಚಾರ್ಯ, ಕೆ. ವಾಸುದೇವ ಪ್ರಭು, ಕೆ. ವಾಸುದೇವ ಕಾಮತ್ ಇನ್ನೂ ಮೊದಲಾದವರುಗಳು ಅವಿರತವಾಗಿ ಆಡಳಿತ ಪಕ್ಷದ ವಿರುದ್ಧ ಹೋರಾಟ ನಡೆಸಿದ್ದರು.

### ಜನಸಂಘದ ಹೊಸ ಹೆಜ್ಜೆ ಹಾಗೂ ಜನತಾಪಕ್ಷದ ಉದಯ

ತುರ್ತು ಪರಿಸ್ಥಿತಿಯ ನಂತರ, ರಾಷ್ಟ್ರದ ಏಕತೆಗಾಗಿ, ಪ್ರಗತಿಗಾಗಿ ದುಡಿದ ಭಾರತೀಯ ಜನಸಂಘ ೧೯೭೭ ಏಪ್ರಿಲ್ ೪ ರಂದು ದೆಹಲಿಯ ತಲ್ಕಟೋರ ಸಭಾಂಗಣದಲ್ಲಿ ಸಭೆ ಸೇರಿ ರಾಷ್ಟ್ರದಲ್ಲಿ ಸರ್ವಾಧಿಕಾರಿ ಪ್ರಭುತ್ವ ಸ್ಥಾಪಿಸಲು ಯತ್ನಿಸಿದ ಶ್ರೀಮತಿ ಇಂದಿರಾ ಗಾಂಧಿಯವರ ಕ್ರಮವನ್ನು ವಿರೋಧಿಸಿ ರಾಷ್ಟ್ರವ್ಯಾಪಿ ಚಳವಳಿ ಪ್ರಾರಂಭಿಸಿದ ಲೋಕನಾಯಕ ಜಯಪ್ರಕಾಶ ನಾರಾಯಣ್‌ರವರ ಮಾರ್ಗದರ್ಶನದಲ್ಲಿ ಅಂದಿನ ಜನಸಂಘದ ಧೀಮಂತ ನಾಯಕರುಗಳು ತೆಗೆದುಕೊಂಡ ನಿರ್ಧಾರ ಈ ಪಕ್ಷಕ್ಕೆ ಹೊಸ ತಿರುವು ನೀಡಿತು. ಜನಸಂಘವು ತನ್ನನ್ನು ತೊಡಗಿಸಿಕೊಂಡು ಮುಂದಾಳತ್ವವಹಿಸಿ ಜನತಾಪಕ್ಷವನ್ನು ರಚಿಸಿ ಪ್ರಚಂಡ ಜಯಗಳಿಸಿ ಹೊಸ ಸರಕಾರ ರಚನೆಗೊಂಡ ಮೇಲೆ ತೆಗೆದುಕೊಂಡ ಸಾರ್ವಜನಿಕ ಪ್ರಮಾಣ ವಚನ ಅದಾಗಿತ್ತು. ಮೊರಾರ್ಜಿ ದೇಸಾಯಿ ಪ್ರಧಾನಿ, ವಿದೇಶಾಂಗ ಸಚಿವರಾಗಿ ಅಟಲ ಬಿಹಾರಿ ವಾಜಪೇಯಿ, ವಾರ್ತಾ ಹಾಗೂ ಪ್ರಸಾರಣ ಮಂತ್ರಿಯಾಗಿ ಲಾಲ್ ಕೃಷ್ಣ ಆಡ್ವಾನಿ ಹಾಗೂ ಹಿಂದಿನ ಜನಸಂಘದ ಅನೇಕ ಪ್ರಮುಖರು ಕೇಂದ್ರ ಸಚಿವರಾಗಿ ಪ್ರಥಮ ಬಾರಿಗೆ ನೇಮಕರಾದರು. ಕರ್ನಾಟಕದಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರ ಸರ್ವಾಧಿಕಾರಿ ನೀತಿಗೆ ಜನಪರ ಹೋರಾಟಕ್ಕೆ ನೇತೃತ್ವ ವಹಿಸಿದ್ದವರು ಸಿದ್ಧವನಹಳ್ಳಿ ನಿಜಲಿಂಗಪ್ಪ ಎಂಬುದು ಸ್ಮರಣೀಯ. ಜನಸಂಘವು ತನ್ನ ಚಿಹ್ನೆಯಾದ ನಂದಾದೀಪವನ್ನು ರದ್ದುಗೊಳಿಸುವ ಮೂಲಕ ವಿಧಿವತ್ತಾಗಿ ಜನತಾ ಪಕ್ಷದಲ್ಲಿ ಲೋಕನಾಯಕ ಜಯಪ್ರಕಾಶ ನಾರಾಯಣ್ ಅವರ ಮಾರ್ಗದರ್ಶನದಲ್ಲಿ ವಿಲೀನಗೊಂಡಿತು.

### ೧೯೫೨ ರಿಂದ ೯೯ರ ವರೆಗಿನ ಲೋಕಸಭಾ ಚುನಾವಣೆಯಲ್ಲಿ ಭಾರತೀಯ ಜನಸಂಘ ಹಾಗೂ ಭಾರತೀಯ ಜನತಾ ಪಕ್ಷದ ಸಾಧನೆ

| ವರ್ಷ | ಸ್ಪರ್ಧಿಸಿದ ಸ್ಥಾನ | ಗೆದ್ದ ಸ್ಥಾನ | ಶೇ.ವಾರು ಮತ | ಹಿಂದಿನ ಚುನಾವಣೆಯಲ್ಲಿ ಶೇ. ಮತ |
|---|---|---|---|---|
| ೧೯೫೨ | ೯೪ | ೩ | ೩.೧ | - |
| ೧೯೫೭ | ೧೩೦ | ೪ | ೫.೯ | ೨.೮ |
| ೧೯೬೨ | ೧೯೬ | ೧೪ | ೬.೪ | ೦.೫ |
| ೧೯೬೭ | ೨೫೧ | ೩೫ | ೯.೪ | ೩ |
| ೧೯೭೧ | ೧೬೦ | ೨೨ | ೭.೪ | -೨ |
| **ಜನತಾ ಪಕ್ಷ** | | | | |
| ೧೯೭೭ | ೪೫೦ | ೨೯೫ | ೪೧.೩ | (ಬಿ.ಎಲ್.ಡಿ. ೩೩.೯) |
| ೧೯೮೦ | ೦ | ೦ | ೦ | ೦.೦೦ |

| | | | | |
|---|---|---|---|---|
| **ಭಾರತೀಯ ಜನತಾ ಪಕ್ಷ** | | | | |
| ೧೯೮೪ | ೨೨೯ | ೨ | ೭.೪ | ೩೩.೯ |
| ೧೯೮೯ | ೨೨೬ | ೮೬ | ೧೧.೫ | ೪.೧ |
| ೧೯೯೧ | ೪೬೮ | ೧೨೦ | ೨೦.೧ | ೮.೬ |
| ೧೯೯೬ | ೪೭೧ | ೧೬೧ | ೨೦.೨೯ | ೦.೧೯ |
| ೧೯೯೮ | ೩೮೮ | ೧೮೨ | ೨೫.೫೯ | ೨೮.೨೯ |
| ೧೯೯೯ | ೩೩೯ | ೧೮೨ | ೨೩.೭೫ | ೨೫-೫೯ |

**೧೯೫೨ರಿಂದ ೯೯ರ ವರೆಗೆ ಭಾರತೀಯ ಜನಸಂಘ ಹಾಗೂ ಭಾರತೀಯ ಜನತಾ ಪಕ್ಷ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕ ಬಿ.ಜೆ.ಪಿ.ಯ ಸಾಧನೆ**

| ವರ್ಷ | ಸ್ಪರ್ಧಿಸಿದ ಸ್ಥಾನ | ಗೆದ್ದ ಸ್ಥಾನ | ಶೇ.ವಾರು ಮತ | ಹಿಂದಿನ ಚುನಾವಣೆಯಲ್ಲಿ ಶೇ. ಮತ |
|---|---|---|---|---|
| ೧೯೫೨ | ೪ | ೦ | ೪.೨ | - |
| ೧೯೫೭ | ೫ | ೦ | ೨.೫ | ೧.೭ |
| ೧೯೬೨ | ೭ | ೦ | ೨.೭ | ೦.೨ |
| ೧೯೬೭ | ೫ | ೦ | ೨.೩ | ೦.೪ |
| ೧೯೭೧ | ೨ | ೦ | ೧.೯ | ೦.೪ |
| **ಜನತಾ ಪಕ್ಷ** | | | | |
| ೧೯೭೭ | ೨೮ | ೨ | ೩೯.೯ | (ಬಿ.ಎಲ್.ಡಿ.) ೩೮.೦೦ |
| ೧೯೮೦ | ೦ | ೦ | ೦ | ೦.೦೦ |
| **ಭಾರತೀಯ ಜನತಾ ಪಕ್ಷ** | | | | |
| ೧೯೮೪ | ೬ | ೦ | ೪.೭ | ೩.೫೨ |
| ೧೯೮೯ | ೫ | ೦ | ೨.೬ | ೨.೧ |
| ೧೯೯೧ | ೨೮ | ೪ | ೨೮.೮ | ೨೬.೨ |
| ೧೯೯೬ | ೨೮ | ೬ | ೨೪.೮೪ | ೩.೯೬ |
| ೧೯೯೮ | ೨೮ | ೧೩ | ೪.೯ | ೧೬.೦೬ |
| ೧೯೯೯ | ೧೮ | ೭ | ೨೭ | ೧೩.೯ |

**೧೯೫೨ರಿಂದ ೯೯ರ ರಾಜ್ಯದ ವಿಧಾನಸಭಾ ಚುನಾವಣೆಯಲ್ಲಿ ಭಾರತೀಯ ಜನಸಂಘ ಹಾಗೂ ಭಾರತೀಯ ಜನತಾಪಕ್ಷದ ಸಾಧನೆ**

| ವರ್ಷ | ಸ್ಪರ್ಧಿಸಿದ ಸ್ಥಾನ | ಗೆದ್ದ ಸ್ಥಾನ | ಶೇ.ವಾರು ಮತ | ಹಿಂದಿನ ಚುನಾವಣೆಯಲ್ಲಿ ಶೇ. ಮತ |
|---|---|---|---|---|
| ೧೯೫೨ | ೨೩ | ೦ | ೨.೩೦ | ೨.೩೦ |
| ೧೯೫೭ | ೨೦ | ೦ | ೧.೩೦ | ೧.೦೦ |
| ೧೯೬೨ | ೬೩ | ೦ | ೨.೩೦ | ೧.೦೦ |

| | | | | |
|---|---|---|---|---|
| ೧೯೬೭ | ೩೭ | ೪ | ೨.೮೦ | ೦.೫೦ |
| ೧೯೭೨ | ೧೦೨ | ೦ | ೪.೩೦ | ೧.೫೦ |
| ೧೯೭೮ | ೦ | ೦ | ೦.೦೦ | ೦.೦೦ |
| **ಭಾರತೀಯ ಜನತಾ ಪಕ್ಷ** | | | | |
| ೧೯೮೩ | ೧೧೦ | ೧೮ | ೭.೯೦ | ೩.೬೦ |
| ೧೯೮೫ | ೧೧೫ | ೨ | ೩.೭೦ | ೪.೨೦ |
| ೧೯೮೯ | ೧೧೯ | ೪ | ೪.೦೦ | ೦.೩೦ |
| ೧೯೯೪ | ೨೨೩ | ೪೦ | ೧೭.೦೦ | ೧೩.೦೦ |
| ೧೯೯೯ | ೧೪೯ | ೪೪ | ೨೦.೬೯ | ೩.೬೯ |

ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಮಾಹಿತಿಗಳೊಂದಿಗೆ ಸಹಕರಿಸಿದ ರಾಜ್ಯದ ಭಾ.ಜ.ಪ.ದ ಹಿರಿಯ ಮುತ್ಸದ್ದಿ ಜಿ. ಎಂ. ರಾಜಾಚಾರ್ಯ ಹಾಗೂ ಸ್ನೇಹಿತರಾದ ಕೆ.ಆರ್. ಕಮಲೇಶ್ ಅವರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.



# ಆಡಳಿತ ಕಾಂಗ್ರೆಸ್

ಎಂ. ವೀರಪ್ಪ ಮೊಯಿಲಿ

## ಅಖಿಲ ಭಾರತ ಕಾಂಗ್ರೆಸ್‌ನ ಮಹಾವಿಭಜನೆ

ದೇಶಕ್ಕೆ ಸ್ವಾತಂತ್ರ್ಯವನ್ನು ತಂದುಕೊಟ್ಟ, ಸ್ವಾತಂತ್ರ್ಯಾ ನಂತರ ೨೦ ವರ್ಷಗಳು ಅಬಾಧಿತವಾಗಿ ಅಧಿಕಾರದಲ್ಲಿ ಮುಂದುವರಿದಿದ್ದ ಕಾಂಗ್ರೆಸ್ ಪಕ್ಷ ೧೯೬೭ರ ಫೆಬ್ರವರಿ ತಿಂಗಳಲ್ಲಿ ಲೋಕಸಭೆಗೆ ನಡೆದ ನಾಲ್ಕನೇ ಮಹಾಚುನಾವಣೆಯಲ್ಲಿ ೨೮೩ ಸ್ಥಾನಗಳನ್ನು ಗಳಿಸಿ ಸ್ಪಷ್ಟ ಬಹುಮತಕ್ಕಿಂತ ಕೇವಲ ೨೦ ಸ್ಥಾನಗಳನ್ನು ಜಾಸ್ತಿಯಾಗಿ ಪಡೆದು ಅಧಿಕಾರಕ್ಕೆ ಬಂದಿತ್ತು. ಅಖಿಲ ಭಾರತ ಮಟ್ಟದಲ್ಲಿ ಅದರ ಪರಿಸ್ಥಿತಿ ಅಷ್ಟು ಆಶಾದಾಯಕವಾಗಿರಲಿಲ್ಲ.

ಶ್ರೀಮತಿ ಇಂದಿರಾಗಾಂಧಿಯವರು ೧೩ ಮಾರ್ಚ್ ೧೯೬೭ರಂದು ಎರಡನೇ ಬಾರಿಗೆ ಪ್ರಧಾನ ಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದ್ದರು. ೧೯೫೨ರಲ್ಲಿ ೩೬೪, ೧೯೫೭ರಲ್ಲಿ ೩೭೧, ೧೯೬೨ರಲ್ಲಿ ೩೬೧ ಸ್ಥಾನಗಳನ್ನು ಗಳಿಸಿದ್ದ ಕಾಂಗ್ರೆಸ್ ಬಲ ೧೯೬೭ರ ಹೊತ್ತಿಗೆ ೨೮೩ ಕ್ಕೆ ಇಳಿದಿತ್ತು.

ಇದು ಅನೇಕ ಕಾಂಗ್ರೆಸ್ ನಾಯಕರನ್ನು ಚಿಂತೆಗೆ ಈಡುಮಾಡಿತ್ತು. ಅಂದು ಅಧಿಕಾರಾರೂಢ ಕಾಂಗ್ರೆಸ್ಸಿನ ಬಹುತೇಕ ಮುಖಂಡರಿಗೆ ಇದು ಅರಿವಾಗಲಿಲ್ಲ. ಮುಂದಿನ ಮಹಾಚುನಾವಣೆಗಳ ಹೊತ್ತಿಗೆ ಈ ನಿರಾಶಾದಾಯಕ ಪರಿಸ್ಥಿತಿಯಿಂದ ಹೊರಬರಬೇಕು, ಕಾಂಗ್ರೆಸ್ ಪಕ್ಷವನ್ನು ಮೊದಲಿನಂತೆ ಪ್ರಭಾವಶಾಲಿ ಹಾಗೂ ಜನಮನ್ನಣೆಯ ಪಕ್ಷವನ್ನಾಗಿ ಕಟ್ಟಬೇಕು, ಮುಂದಿನ ಮಹಾಚುನಾವಣೆಗಳಲ್ಲಿ ತನ್ನ ಬಲವನ್ನು ವೃದ್ಧಿ ಪಡಿಸಿಕೊಂಡು ಅಧಿಕಾರದ ಗದ್ದುಗೆಗೇರಿ ಜನಕಲ್ಯಾಣ ಸಾಧಿಸಬೇಕೆಂಬ ಚರ್ಚೆ ಪ್ರಾರಂಭವಾಯಿತು. ಬಿಹಾರ, ಬಂಗಾಲ, ಆಂಧ್ರದ ಹಲವೆಡೆ ನಕ್ಸಲ್ ಬಾರಿ ಚಳವಳಿಗಳ ಬೀಸುಗಾಳಿ ಬೀಸತೊಡಗಿತು. ಜಮೀನ್ದಾರ ಪರವಾದ ಸಾಂಪ್ರದಾಯಿಕ ಶಕ್ತಿಗಳು ಕಾಂಗ್ರೆಸ್‌ಪಕ್ಷದ ಆಡಳಿತವನ್ನು ತಮ್ಮ ಕಪಿಮುಷ್ಟಿಯಲ್ಲಿಟ್ಟುಕೊಂಡು ಜನಸಾಮಾನ್ಯರ ಮೇಲೆ ಸವಾರಿ ಮಾಡಲು ಪ್ರಾರಂಭಿಸಿದಾಗ ಕಾಂಗ್ರೆಸ್ಸಿನ ಸಾಮಾನ್ಯ ಕಾರ್ಯಕರ್ತರು ಬಂಡೆದ್ದರು. ಜನಸಾಮಾನ್ಯರು ಕ್ರಾಂತಿಯ ಪರ್ಯಾಯ ಮಾರ್ಗಗಳನ್ನು ಹುಡುಕತೊಡಗಿದರು. ಈ ಆಂದೋಳನದ ಚರ್ಚೆ ಕಾಂಗ್ರೆಸ್ ಪಕ್ಷದಲ್ಲಿ ಭುಗಿಲೆದ್ದಿತು. ಕಾಂಗ್ರೆಸ್ ಪಕ್ಷ ದಿನೇ ದಿನೇ ಕ್ಷೀಣಿಸುವುದರ ಜತೆಯಲ್ಲಿ ಕಾಂಗ್ರೆಸಿನೊಳಗಿದ್ದ ಪ್ರಗತಿ ಮತ್ತು ತೀವ್ರಗಾಮಿ ಶಕ್ತಿಗಳು ಪ್ರತಿಗಾಮಿ ಶಕ್ತಿಗಳ ವಿರುದ್ಧ ನಿರಂತರ ಸಮರವನ್ನೇ ಹೂಡಿದವು. ಇಂತಹ ಸಮುದಾಯದ ಮತ್ತು ತೀವ್ರ ಮತ್ತು ಪ್ರಗತಿಗಾಮೀ ಶಕ್ತಿಗಳ ಧ್ವನಿಯಾಗಿ ಶ್ರೀಮತಿ ಇಂದಿರಾ ಗಾಂಧಿ ಎಲ್ಲಾ ಪಟ್ಟಭದ್ರ ಹಿತಾಸಕ್ತಿಗಳ ಜತೆಯಲ್ಲಿ ಸಂಘರ್ಷಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರಲ್ಲಿ ವೈಯಕ್ತಿಕ ಅಧಿಕಾರಕ್ಕೆ ಅಂಟಿಕೊಳ್ಳುವ ಹಂಬಲವಿರಲಿಲ್ಲ. ಅವರು ಕೈಗೆತ್ತಿಕೊಂಡ ಸಾಹಸದಲ್ಲಿ ಅಧಿಕಾರ ಕಳೆದುಕೊಳ್ಳುವ ಅಪಾಯವೇ ಹೆಚ್ಚಾಗಿತ್ತು. ಆದರೆ ಭಾರತದ ಹಸಿವು ಮತ್ತು ಅಪಮಾನಗಳಿಂದ ಕಂಗೆಟ್ಟ, ತುಳಿತಕ್ಕೊಳಗಾದ ಜನರ ಪ್ರಜಾಪ್ರಭುತ್ವದ ಹಂಬಲ ಶ್ರೀಮತಿ ಇಂದಿರಾಗಾಂಧಿಯನ್ನು ಸಂಘರ್ಷದ ಹೆದ್ದಾರಿಗೆ ಸೆಳೆದೊಯ್ದಿತು. ಸಂವಿಧಾನದ ಸ್ವಾತಂತ್ರ್ಯದ ಹಳೆ ಶಬ್ದಗಳಿಗೆ ಹೊಸ ವ್ಯಾಖ್ಯಾನವನ್ನು ನೀಡಿ ನವಜನಾಂಗದಲ್ಲಿ, ಶತಶತಮಾನಗಳಿಂದ ಶೋಷಣೆಗೆ ಒಳಗಾದವರಿಗೆ ಸ್ಪಂದನದ ಸ್ಫೂರ್ತಿಯ

ಸೆಲೆಯನ್ನು ಒದಗಿಸಿದರು. ಜನಾಂಗ, ಭಾಷೆ, ಮತ, ಜಾತಿ ಭೇದವಿಲ್ಲದ ಚಲನಶೀಲ, ಸಾಮಾಜಿಕ ನ್ಯಾಯದ, ಸಮಾನಭಾವದ ರಾಷ್ಟ್ರದ ಕನಸನ್ನು ಕಂಡರು. ಶ್ರೀಮತಿ ಇಂದಿರಾಗಾಂಧಿಯವರು ಕಾಂಗ್ರೆಸ್ ಪಕ್ಷದಲ್ಲಿ ಕಾಂಗ್ರೆಸ್ ಸಂಸದೀಯ ಮಂಡಲಿಯಲ್ಲಿ ಹೆಚ್ಚು ವರ್ಚಸ್ಸನ್ನು, ಹಿಡಿತವನ್ನು ಹೊಂದಿದ್ದರು. ಹಾಗೆಯೇ ಅವರು ಅತ್ಯಂತ ಜನಪ್ರಿಯರೂ ಆಗಿದ್ದರು. ಕಾಂಗ್ರೆಸ್ ಬಲವೃದ್ಧಿಯ ಬಗ್ಗೆ ಚಿಂತನೆ ನಡೆಸುತ್ತಿದ್ದವರೆಲ್ಲರೂ ಸಹಜವಾಗಿಯೇ ಇಂದಿರಾ ಅವರ ಪ್ರಭಾವಕ್ಕೊಳಗಾಗಿ ಅವರ ಬೆಂಬಲಕ್ಕೆ ಬಂದರೆಂದು ತೋರುತ್ತದೆ. ಆದರೆ ಇದು ಬಹಿರಂಗವಾಗಿ ಎಲ್ಲೂ ವ್ಯಕ್ತವಾಗಿರಲಿಲ್ಲವೆಂದೇ ಹೇಳಬಹುದು.

ಬಿಹಾರದ ರಾಮಘರ್ ಮಹಾರಾಜರನ್ನು ಕಾಂಗ್ರೆಸ್ ಕಾರ್ಯಕಾರಿ ಸಮಿತಿಗೆ ಸೇರ್ಪಡೆ ಮಾಡಿಕೊಂಡಿದ್ದನ್ನು ವಿರೋಧಿಸಿ ತಮಿಳುನಾಡು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರು, ಕಾರ್ಯಕಾರಿ ಸಮಿತಿ ಸದಸ್ಯರೂ ಆದ ಸಿ. ಸುಬ್ರಹ್ಮಣ್ಯಂರವರು ರಾಜೀನಾಮೆ ನೀಡಿದರು. ಈ ವಿಚಾರದಲ್ಲಿ ಉಳಿದ ನಾಯಕರೊಡನೆ ಚರ್ಚಿಸಲು ನಿಜಲಿಂಗಪ್ಪನವರು ಮುಂದಾಗಲಿಲ್ಲ. ಸಿ. ಸುಬ್ರಮಣ್ಯಂರವರು ಸಿಡಿಸಿದ ಕ್ರಾಂತಿಯ ಕಿಡಿ ಪಟ್ಟಭದ್ರ ಹಿತಾಸಕ್ತಿಗಳು ಕಟ್ಟಿದ ಸಾಂಪ್ರದಾಯಿಕ ಕೋಟೆಯನ್ನು ಛಿದ್ರಛಿದ್ರದಲ್ಲಿ ಮಾಡುವುದೆಂಬ ಸೂಚನೆಯ ನಿಶಾನೆ ಫರೀದಾಬಾದ್‌ನ ೭೧ನೇ ಕಾಂಗ್ರೆಸ್ ಅಧಿವೇಶನದಲ್ಲಿ ಕಂಡುಬಂದಿತು. ಈ ಅಧಿವೇಶನ ನಡೆಯುತ್ತಿದ್ದಾಗಲೇ ಕಾಂಗ್ರೆಸ್‌ನಲ್ಲಿ ಪ್ರಗತಿಪರರೆಂದು ಗುರುತಿಸಲ್ಪಡುತ್ತಿದ್ದ 'ಯಂಗ್ ಟರ್ಕ್' ಎಂಬ ಗುಂಪು ಮೋಹನ್ ಧಾರಿಯಾ ನೇತೃತ್ವದಲ್ಲಿ ದೆಹಲಿಯಲ್ಲಿ ಪ್ರಧಾನಮಂತ್ರಿಯವರ ನಿವಾಸದಲ್ಲಿ ಸಭೆ ಸೇರಿ ಕಾಂಗ್ರೆಸ್‌ನ ಆರ್ಥಿಕ ನೀತಿಯ ವೈಫಲ್ಯಗಳ ಬಗ್ಗೆ ಚರ್ಚೆ ನಡೆಸಿತು. ಸದರೀ ಅಧಿವೇಶನದಲ್ಲಿ ಕೂಡಾ ಈ ಪ್ರಗತಿಪರರ ಗುಂಪು ಚರ್ಚೆಯಲ್ಲಿ ಭಾಗವಹಿಸಿ, ಕಾಂಗ್ರೆಸ್ ಅವನತಿಯತ್ತ ಸಾಗುತ್ತಿದೆ, ಪಕ್ಷವನ್ನು ಬಲಪಡಿಸಲು, ಪ್ರಗತಿಗಾಮಿ ಸಮಾಜವಾದಿ ಮತ್ತು ಜಾತ್ಯತೀತ ಸಮಾಜ ನಿರ್ಮಾಣಕ್ಕೆ ಹೊಸ ಆರ್ಥಿಕ ನೀತಿ ಮತ್ತು ರಾಜಕೀಯ ಆಯಾಮದ ಅಗತ್ಯವಿದೆ ಎಂದು ಹೇಳಿತು. ಆದರೆ ಎಐಸಿಸಿ, ಅಧ್ಯಕ್ಷ ನಿಜಲಿಂಗಪ್ಪನವರು ಅದನ್ನು ನಿರ್ಲಕ್ಷಿಸಿ ಕಾಂಗ್ರೆಸ್ ಪಕ್ಷ ಮುಳುಗುತ್ತಿರುವ ಹಡಗಲ್ಲ, ಪಕ್ಷದಲ್ಲಿ ಶಿಸ್ತು ಅಗತ್ಯ ಎಂದು ಪ್ರತಿಪಾದಿಸಿ ಆಂದೋಳನದ ಕಾಮನಬಿಲ್ಲುಗಳನ್ನು ಅಲಕ್ಷಿಸಿದರು. ಫರೀದಾಬಾದ್ ಅಧಿವೇಶನದಲ್ಲಿಯೇ ಕಾಂಗ್ರೆಸ್‌ನಲ್ಲಿ ಬಿರುಕಿನ ಚಿಹ್ನೆಗಳು ಗೋಚರಿಸಿದವು. ಕಾಂಗ್ರೆಸ್‌ನ ಹಿರಿಯ ನಾಯಕರುಗಳು ಹಾಗೂ ಶ್ರೀಮತಿ ಇಂದಿರಾಗಾಂಧಿಯವರು ಮತ್ತು ಅವರ ಅನುಯಾಯಿಗಳ ನಡುವೆ ಹೀಗೆ ಭಿನ್ನಾಭಿಪ್ರಾಯಗಳು ತೀವ್ರವಾಗತೊಡಗಿದವು.

ಮೇ ೩, ೧೯೬೯ರಂದು ಹಠಾತ್ತಾಗಿ ರಾಷ್ಟ್ರಪತಿ ಜಾಕೀರ್ ಹುಸೇನ್‌ರು ನಿಧನರಾದರು. ನೂತನ ರಾಷ್ಟ್ರಪತಿ ಹುದ್ದೆಗೆ ಸಂಜೀವರೆಡ್ಡಿಯವರೇ ಕಾಂಗ್ರೆಸ್ ಪಕ್ಷದ ಅಭ್ಯರ್ಥಿ ಎಂದು ನಿಜಲಿಂಗಪ್ಪನವರೇ ಆದಿಯಾಗಿ ಅನೇಕ ಹಿರಿಯ ನಾಯಕರು ಶ್ರೀಮತಿ ಇಂದಿರಾ ಗಾಂಧಿಯವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ಪ್ರತಿಪಾದಿಸಿಕೊಂಡು ಬರತೊಡಗಿದರು. ಜುಲೈ ೧೦, ೧೯೬೯ರಂದು ಬೆಂಗಳೂರು ನಗರದ ಲಾಲ್‌ಬಾಗ್‌ನ ಗಾಜಿನಮನೆಯಲ್ಲಿ ಕಾಂಗ್ರೆಸ್ ಅಧಿವೇಶನ ಆರಂಭವಾಯಿತು. ರಾಷ್ಟ್ರಪತಿ ಹುದ್ದೆಯ ಅಭ್ಯರ್ಥಿಯ ಆಯ್ಕೆಯೂ ಇಲ್ಲಿಯೇ ನಡೆಯುವುದೆಂದು ನಿಗದಿ ಆಯಿತು. ಶ್ರೀಮತಿ ಇಂದಿರಾಗಾಂಧಿಯವರು ಒಂದು ದಿನ ತಡವಾಗಿ ಅಧಿವೇಶನಕ್ಕೆ ಬರುವುದಾಗಿ ತಿಳಿದುಬಂದಿತು. ಆದರೆ ಅವರು ತಮ್ಮ ಬೆಂಬಲಿಗರಾದ ಫಕ್ರುದ್ದೀನ್ ಅಲಿ ಅಹಮದ್ ಅವರ ಕೈಯಲ್ಲಿ ಒಂದು ಟಿಪ್ಪಣಿಯನ್ನು ಕಳುಹಿಸಿದ್ದರು. ೯.೭.೬೯ ರಂದು, ಅಧಿವೇಶನಕ್ಕೆ ಹಿಂದಿನ ದಿನ ನಡೆಯುತ್ತಿದ್ದ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆಯಲ್ಲಿ ಸಿ. ಸುಬ್ರಹ್ಮಣ್ಯಂ ಮತ್ತು ಸಾದಿಕ್ ಆಲಿ ಅವರು ರೂಪಿಸಿದ್ದ ಪಕ್ಷದ ಆರ್ಥಿಕ ನೀತಿಯ ಬಗ್ಗೆ ಚರ್ಚೆ ನಡೆಯುತ್ತಿದ್ದಾಗ ಫಕ್ರುದ್ದೀನ್ ಅಲಿ ಅಹಮದ್‌ರವರು ಪ್ರಧಾನಿಯವರು ಕಳುಹಿಸಿದ್ದ ಆರ್ಥಿಕ ಟಿಪ್ಪಣಿಯನ್ನು ಸಭೆಯ ಮುಂದಿಟ್ಟರು. ಆದರೆ ಈ ರೀತಿಯಾಗಿ ಅಜೆಂಡಾಕ್ಕೆ ಹೊರಗಿನ ವಿಷಯದ ಪರಿಶೀಲನೆ ಮೊರಾರ್ಜಿ ದೇಸಾಯಿ ಹಾಗೂ ಎಸ್. ಕೆ. ಪಾಟೀಲ್ ಅವರಿಗೆ ಒಪ್ಪಿಗೆಯಾಗಲಿಲ್ಲ.

**ಇಂದಿರಾಗಾಂಧಿಯವರಿಂದ ಬಂದಿದ್ದ ಟಿಪ್ಪಣಿಯ ಮುಖ್ಯಾಂಶಗಳು ಈ ಕೆಳಗಿನಂತಿದ್ದುವು :**

೧. ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಿ ಅವುಗಳಲ್ಲಿರುವ ಸಂಪತ್ತನ್ನು ರಾಷ್ಟ್ರದ ಉನ್ನತಿಗೆ ಬಳಕೆ ಮಾಡಿಕೊಳ್ಳುವುದು.

೨. ನಿಜವಾದ ಅರ್ಥದಲ್ಲಿ ಭೂ ಸುಧಾರಣೆ ಜಾರಿಗೆ ತರುವುದು. ಗೇಣಿದಾರರಿಗೆ ಪೂರ್ಣವಾಗಿ ರಕ್ಷಣೆ ನೀಡವುದು (ಅವರನ್ನು ಒಕ್ಕಲೆಬ್ಬಿಸುವುದನ್ನು ತಡೆಯುವುದು)

೩. ನಗರ ಆಸ್ತಿಗಳು ಹಾಗೂ ಭೂ ಹಿಡುವಳಿಯ ಮೇಲೆ ಒಂದು ನಿರ್ದಿಷ್ಟ ಮಿತಿ ನಿಗದಿ ಮಾಡುವುದು.

೪. ಗ್ರಾಮಾಂತರ ಜನಜೀವನವನ್ನು ಸುಧಾರಿಸಲು ಕೃಷಿ ಕಾರ್ಮಿಕರಿಗೆ ಹಸಿರು ಕ್ರಾಂತಿಯ ಫಲದಲ್ಲಿ ಪಾಲನ್ನು ನೀಡುವುದು.

ಬ್ಯಾಂಕ್ ರಾಷ್ಟ್ರೀಕರಣಕ್ಕೆ ಮೊರಾರ್ಜಿ ದೇಸಾಯಿ, ಎಸ್. ಕೆ. ಪಾಟೀಲರ ಒಪ್ಪಿಗೆ ಇರಲಿಲ್ಲ. ಆದರೆ ಸಿ. ಸುಬ್ರಹ್ಮಣ್ಯಂ, ಕಾಮರಾಜ್, ಜಗಜೀವನರಾಂ ಬ್ಯಾಂಕ್ ರಾಷ್ಟ್ರೀಕರಣದ ಪರವಾಗಿದ್ದರು.

ದಿನಾಂಕ ೧೦.೭.೬೯ರಂದು ಶ್ರೀಮತಿ ಇಂದಿರಾಗಾಂಧಿಯವರು ಬಹಿರಂಗ ಅಧಿವೇಶನಕ್ಕೆ ಆಗಮಿಸಿದರು. 'ಕಾಂಗ್ರೆಸ್ ಪಕ್ಷದ ತತ್ವವನ್ನೇ ನನ್ನ ಟಿಪ್ಪಣಿಯಲ್ಲಿ ಸ್ಪಷ್ಟ ಪಡಿಸಿರುತ್ತೇನೆಂದು ಅವರು ಹೇಳಿದರು. ಮುಂದೆ ಮೇಲೆ ಕಾಣಿಸಿದ ಉದಾತ್ತ ಧ್ಯೇಯಗಳು ಬರೇ ಘೋಷಣೆಗಳಾಗದೆ, ಅನುಷ್ಠಾನದ ಮಜಲನ್ನು ಕಂಡವು. ನಿಜಲಿಂಗಪ್ಪನವರು ಪ್ರಾಸ್ತಾವಿಕ ಭಾಷಣ ಮಾಡಿ, 'ಅಸ್ಪೃಶ್ಯತಾ ನಿವಾರಣೆ, ಪರಿಶಿಷ್ಟ ಜಾತಿ ಮತ್ತು ವರ್ಗಗಳ ಅಭಿವೃದ್ಧಿ, ಗ್ರಾಮಾಂತರ ಪ್ರದೇಶಗಳ ಸುಧಾರಣೆ, ಗ್ರಾಮಗಳಿಗೆ ಕುಡಿಯುವ ನೀರು ಪೂರೈಕೆ, ಹಿಂಸಾ ಪ್ರವೃತ್ತಿಯ ಮೂಲೋತ್ಪಾಟನೆ, ದೇಶದಲ್ಲಿ ಶಾಂತಿ ಸ್ಥಾಪನೆ' ಇವುಗಳಿಗೆ ಒತ್ತು ನೀಡಿದರು. ಆರ್ಥಿಕ ನಿರ್ಣಯಗಳ ಬಗ್ಗೆ ಬಿಕ್ಕಟ್ಟು ತಲೆದೋರಿದರೂ ಕೊನೆಗೆ ಸರ್ವಸಮ್ಮತಿಯಿಂದ ಅವುಗಳನ್ನು ಅಂಗೀಕರಿಸಲಾಯಿತು.

ದಿನಾಂಕ ೧೨.೭.೬೯ರಂದು ಸಂಸದೀಯ ಮಂಡಲಿ ಸಭೆ ಸೇರಿ ರಾಷ್ಟ್ರಪತಿಯವರ ಹುದ್ದೆಗೆ ನಿಜಲಿಂಗಪ್ಪನವರ ಗುಂಪಿನ ಅಭ್ಯರ್ಥಿಯಾಗಿದ್ದ ಎನ್. ಸಂಜೀವರೆಡ್ಡಿಯವರನ್ನು ಆರಿಸಿತು. ಶ್ರೀಮತಿ ಇಂದಿರಾಗಾಂಧಿಯವರು ಜಗಜೀವನರಾಮ್ ಹೆಸರನ್ನು ಸೂಚಿಸಿದ್ದರು. ಆದರೆ ೪-೨ ಬಹುಮತಗಳಿಂದ ಸಂಜೀವರೆಡ್ಡಿ ಆಯ್ಕೆಯಾಗಿ ಜಗಜೀವನರಾಂ ಅವರ ಹೆಸರು ಬಿದ್ದುಹೋಯಿತು. ಕಾಂಗ್ರೆಸ್ ಪಕ್ಷದ ಅಧಿಕೃತ ಅಭ್ಯರ್ಥಿಯ ಆಯ್ಕೆ ಆಗಿತ್ತು. ನಿಜಲಿಂಗಪ್ಪನವರ ಗುಂಪಿಗೆ ಸಿಂಡಿಕೇಟ್ ಎಂಬ ಹೆಸರು ಅಂದಿನಿಂದ ರೂಢಿಗೆ ಬಂದಂತೆ ತೋರುತ್ತದೆ. ಶ್ರೀಮತಿ ಇಂದಿರಾಗಾಂಧಿಯವರು ಪತ್ರಿಕಾಗೋಷ್ಠಿಯಲ್ಲಿ ಮಾತನಾಡುತ್ತಾ ಅಭಿವೃದ್ಧಿ ಸಾಧನೆಯ ಹೋರಾಟದಲ್ಲಿ ಪಟ್ಟಭದ್ರರ ಅಡ್ಡಿ ಇದೆ ಎಂದು ಮಾರ್ಮಿಕವಾಗಿ ವಿಶ್ಲೇಷಿಸಿದರು. ಬ್ಯಾಂಕ್ ರಾಷ್ಟ್ರೀಕರಣ ಬೇಗ ಆಗಬೇಕು, ಕಾಂಗ್ರೆಸ್ ಪಕ್ಷದ ಸವಕಲು ಆರ್ಥಿಕ ಕಾರ್ಯಕ್ರಮಗಳು ಹೋಗಬೇಕು ಎಂದು ವೈ. ಬಿ. ಚವಾಣ್, ವಿ.ಸಿ. ಶುಕ್ಲಾ, ಭಗವತ್ ಝಾ ಆಜಾದ್ ಒತ್ತಾಯಿಸಿದರು. ೧೩.೭.೬೯ ರಂದು ಉಪರಾಷ್ಟ್ರಪತಿ ವಿ.ವಿ.ಗಿರಿ ಅವರು ''ರಾಷ್ಟ್ರಪತಿ ಹುದ್ದೆಗೆ, ಪಾರ್ಲಿಮೆಂಟರಿ ಮಂಡಳಿ ಸಂಜೀವರೆಡ್ಡಿಯವರನ್ನು ಅಭ್ಯರ್ಥಿಯನ್ನಾಗಿ ಆರಿಸಿದ್ದು ಅನ್ಯಾಯದ ಕ್ರಮ, ಅದರಿಂದಾಗಿ ತಾವೂ ರಾಷ್ಟ್ರಪತಿ ಹುದ್ದೆಗೆ ಸ್ಪರ್ಧಿಸುವುದಾಗಿ ಹೇಳಿಕೆ ನೀಡಿ ಕಾಂಗ್ರೆಸ್ ವಲಯದಲ್ಲಿ ಅಚ್ಚರಿ ಮೂಡಿಸಿದರು. ಅಂದಿನವರೆಗೆ ಉಪರಾಷ್ಟ್ರಪತಿ ಹುದ್ದೆಯಲ್ಲಿದ್ದವರಿಗೆ ರಾಷ್ಟ್ರಪತಿ ಹುದ್ದೆ ನೀಡುವ ಸಂಪ್ರದಾಯ ಇತ್ತು. ಅವರು ೧೫.೭.೬೯ ರಂದು ಪ್ರಧಾನಿಯವರನ್ನೂ ಭೇಟಿ ಮಾಡಿದರು.

ಸಂಸ್ಥೆಯ ಅಶಿಸ್ತಿನ ನಿರ್ಮೂಲನೆಗೆ ಶಸ್ತ್ರಕ್ರಿಯೆ ಮಾಡಲಾಗುವುದು, ಯಾವುದೇ ಕಾರಣದಿಂದ ರಾಷ್ಟ್ರಪತಿ ಹುದ್ದೆಯ ಅಭ್ಯರ್ಥಿ ಸಂಜೀವರೆಡ್ಡಿಯವರನ್ನು ಬದಲಾಯಿಸುವುದಿಲ್ಲವೆಂದು ನಿಜಲಿಂಗಪ್ಪನವರು ಹೇಳಿದರು. ಮುಂದೆ ದಿನೇದಿನೇ ಅನಿರೀಕ್ಷಿತವಾದ ಬೆಳವಣಿಗೆಗಳು ಶರವೇಗದಲ್ಲಿ ಘಟಿಸತೊಡಗಿದವು. ೧೬-೭-೬೯ರಂದು ಮೊರಾರ್ಜಿ ದೇಸಾಯಿಯವರಿಂದ ಆರ್ಥಿಕ ಶಾಖೆಯನ್ನು ಬದಲಾಯಿಸಲಾಯಿತು. 'ಇದು ನನ್ನ ಆತ್ಮಗೌರವಕ್ಕೆ ಧಕ್ಕೆ' ಎಂದು ಮೊರಾರ್ಜಿಯವರು ಸಚಿವ ಸಂಪುಟಕ್ಕೆ ರಾಜೀನಾಮೆ ನೀಡಿದರು. 'ಬೆಳವಣಿಗೆ ದುರದೃಷ್ಟಕರ. ಕಾದು ನೋಡೋಣ' ಎಂದು ನಿಜಲಿಂಗಪ್ಪನವರು ಹೇಳಿದರು. ಪ್ರಧಾನಿ ಶ್ರೀಮತಿ ಇಂದಿರಾ ಮತ್ತು ಮೊರಾರ್ಜಿ ನಡುವೆ ಸಂಧಾನ ಏರ್ಪಡಿಸುವ ವಿಫಲ ಪ್ರಯತ್ನಗಳು ವೈ. ಬಿ. ಚವಾಣ್, ಕಾಮರಾಜ್ ಮತ್ತು ನಿಜಲಿಂಗಪ್ಪನವರಿಂದ ನಡೆದವು. ಜುಲೈ ೧೯, ೧೯೬೯ರಂದು ಭಾರತದ ಆರ್ಥಿಕ ರಂಗದ ಇತಿಹಾಸದಲ್ಲೇ ಕ್ರಾಂತಿಕಾರಿಯಾದ ದೇಶದ ಹದಿನಾಲ್ಕು ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣದ ಸುಗ್ರೀವಾಜ್ಞೆಯನ್ನು ರಾಷ್ಟ್ರಪತಿಗಳು (ಉಪರಾಷ್ಟ್ರಪತಿ) ಹೊರಡಿಸಿದರು. ಲೋಕಸಭಾ ಅಧಿವೇಶನಕ್ಕೆ ಇನ್ನು ಕೇವಲ ಎರಡು ದಿನ ಬಾಕಿ ಇರುವಾಗಲೇ ಈ ಸುಗ್ರೀವಾಜ್ಞೆ ಹೊರಟಿದ್ದು ಆಶ್ಚರ್ಯ ಹಾಗೂ ವಿರೋಧ ಪಕ್ಷಗಳ ಟೀಕೆಗೆ ಕಾರಣವಾಯಿತು. ಅದೇ ದಿನ ವಿ. ವಿ. ಗಿರಿಯವರು ಉಪರಾಷ್ಟ್ರಪತಿ ಸ್ಥಾನಕ್ಕೆ, ಸಂಜೀವರೆಡ್ಡಿಯವರು ಸ್ಪೀಕರ್ ಹುದ್ದೆಗೆ ರಾಜೀನಾಮೆ ನೀಡಿದರು.

೨೦.೭.೬೯ ರಂದು ಲೋಕಸಭೆ ಅಧಿವೇಶನ ಆರಂಭವಾಯಿತು. ನೀಲಂ ಸಂಜೀವರೆಡ್ಡಿ ರಾಷ್ಟ್ರಪತಿ ಹುದ್ದೆಗೆ ತಮ್ಮ ನಾಮಪತ್ರ ಸಲ್ಲಿಸಿದರು. ಎಲ್ಲಾ ವಿಚಾರಗಳ ಬಗ್ಗೆ ಎ.ಐ.ಸಿ.ಸಿ. ಅಧ್ಯಕ್ಷರ ಜೊತೆ ಮಾತುಕತೆ ನಡೆಸುವಂತೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಪ್ರಧಾನಿಯವರಿಗೆ ಆದೇಶ ನೀಡಿತು. ೨೫.೭.೬೯ರಂದು ಬ್ಯಾಂಕ್ ರಾಷ್ಟ್ರೀಕರಣ ಮಸೂದೆಯು ಲೋಕಸಭೆಯಲ್ಲಿ ೨೬೦-೪೬ ಮತಗಳಿಂದ ಅಂಗೀಕಾರವಾಯಿತು. ದಿನಾಂಕ ೪.೮.೬೯ ರಂದು ಇಂದಿರಾಗಾಂಧಿಯವರು ''ಸಮಾಜವಾದಿ ಸಮಾಜ ನಿರ್ಮಾಣದ ಬಗ್ಗೆ ಭಿನ್ನಮತೀಯರು ಪಿಸುಮಾತಿನಲ್ಲಿ ಚರ್ಚಿಸುವುದನ್ನು ಬಿಟ್ಟು ಬಹಿರಂಗವಾಗಿ ಹೇಳಿಕೆ ನೀಡಬೇಕೆಂದು'' ಸವಾಲು ಹಾಕಿದರು. ಇಂದಿರಾಗಾಂಧಿಯವರು ಮೊದಲಬಾರಿಗೆ ನಿಜಲಿಂಗಪ್ಪನವರ ಗುಂಪನ್ನು 'ಭಿನ್ನಮತೀಯರೆಂದು' ಕರೆದರು. ೫.೮.೬೯ರಂದು 'ಆತ್ಮ

ಸಾಕ್ಷಿಯಂತೆ ತಾವು ಸ್ಪರ್ಧಿಸುತ್ತಿರುವುದಾಗಿಯೂ, ಸೋಲುಗೆಲವುಗಳ ಪರಿವೆ ತಮಗಿಲ್ಲವೆಂದೂ ಹೇಳುವುದರೊಂದಿಗೆ ವಿ. ವಿ. ಗಿರಿ ಅವರು ''ಆತ್ಮ ಸಾಕ್ಷಿ'' ಎಂಬ ಶಬ್ದವನ್ನು ಮೊದಲ ಬಾರಿಗೆ ಬಳಸಿದರು. ಕಾಂಗ್ರೆಸ್ ಭಿನ್ನಮತೀಯರೊಂದಿಗೆ ಬಲಾಬಲಗಳ ಇತ್ಯರ್ಥಕ್ಕೆ ತಾವು ಸಿದ್ಧರಿರುವುದಾಗಿ ಶ್ರೀಮತಿ ಇಂದಿರಾಗಾಂಧಿಯವರು ಘೋಷಿಸಿದರು. ದಿನಾಂಕ ೬.೮.೬೯ರಂದು ದೆಹಲಿಯಲ್ಲಿ ಕಾಂಗ್ರೆಸ್ ಸಂಸದೀಯ ಮಂಡಲಿ ಸಭೆ ಸೇರಿತ್ತು. ಪಕ್ಷದ ಅಧಿಕೃತ ಅಭ್ಯರ್ಥಿ ಸಂಜೀವರೆಡ್ಡಿಯವರಿಗೆ ಮತ ನೀಡಬೇಕೆಂದು ಪ್ರಧಾನಮಂತ್ರಿ ಹಾಗೂ ಎ.ಐ.ಸಿ.ಸಿ. ಅಧ್ಯಕ್ಷರು ಸಾಂಪ್ರದಾಯಿಕವಾಗಿ ಮನವಿ ಮಾಡಿಕೊಳ್ಳಲು ಈ ಸಭೆ ಸೇರಿತ್ತು. ಶ್ರೀಮತಿ ತಾರಕೇಶ್ವರಿ ಸಿನ್ಹಾ ಅವರು ಪ್ರಧಾನ ಮಂತ್ರಿಯವರ ಧೋರಣೆಯನ್ನು ಟೀಕಿಸಿ ಪತ್ರಿಕೆಗಳಿಗೆ ಬರೆದ ಲೇಖನದ ಬಗ್ಗೆ ಶ್ರೀಮತಿ ಇಂದಿರಾಗಾಂಧಿ ಬೆಂಬಲಿಗರು ವಿವರಣೆ ಕೇಳಿ ಸಭೆಯಲ್ಲಿ ವಾಗ್ಯುದ್ಧ ಆರಂಭಿಸಿದರು.

'ಸಂಜೀವರೆಡ್ಡಿಯವರು ಪ್ರಥಮ ಸುತ್ತಿನಲ್ಲಿಯೇ ಜಯಗಳಿಸಬೇಕೆಂಬುದು ತಮ್ಮ ಗುರಿ' ಎಂದು ನಿಜಲಿಂಗಪ್ಪನವರು ಹೇಳಿದರು. ಆದರೆ ಶ್ರೀಮತಿ ಇಂದಿರಾಗಾಂಧಿಯವರು ಅಧಿಕೃತ ಅಭ್ಯರ್ಥಿಯ ಗೆಲುವು ಹಾಗೂ ಅವರಿಗೆ ಮತ ನೀಡುವ ಬಗ್ಗೆ ಏನನ್ನೂ ಹೇಳಲಿಲ್ಲ. ಕೆಂಗಲ್ ಹನುಮಂತಯ್ಯನವರು 'ಪಕ್ಷ ಅಪೇಕ್ಷೆಪಟ್ಟಲ್ಲಿ ತಾವು ಸ್ಪೀಕರ್ ಸ್ಥಾನಕ್ಕೆ ಅಭ್ಯರ್ಥಿ ಆಗಲು ಸಿದ್ಧವೆಂದು' ಹೇಳಿಕೆ ನೀಡಿದರು. ಆದರೆ ಜಿ. ಎಸ್. ಧಿಲ್ಲಾನ್ ಅವರನ್ನು ಸ್ಪೀಕರ್ ಸ್ಥಾನಕ್ಕೆ ಅಭ್ಯರ್ಥಿಯನ್ನಾಗಿ ಆಯ್ಕೆ ಮಾಡಲಾಯಿತು. ೯.೮.೬೯ ರಂದು ಧಿಲ್ಲಾನ್ ರವರು ಸ್ಪೀಕರ್ ಹುದ್ದೆಗೆ ಅವಿರೋಧವಾಗಿ ಆಯ್ಕೆಯಾದರು.

ನೀಲಂ ಸಂಜೀವರೆಡ್ಡಿಯವರಿಗೆ ಮತ ನೀಡುವಂತೆ ಬಿಹಾರ ಶಾಸಕರ ಮೇಲೆ ಒತ್ತಡ ತಂದರೆಂಬ ಆರೋಪ ನಿಜಲಿಂಗಪ್ಪನವರ ಮೇಲೆ ಬಂದಿತು. ಈ ಬಗ್ಗೆ ೭.೮.೬೯ ರಂದು, ಲೋಕಸಭೆಯಲ್ಲಿ ಚರ್ಚೆಗೆ ಅವಕಾಶ ಸಿಗಲಿಲ್ಲವೆಂದು ಕಾಂಗ್ರೆಸ್ ಸದಸ್ಯರೇ ಸಭಾತ್ಯಾಗ ಮಾಡಿದರು. ಅಲ್ಲಿಗೆ ಕಾಂಗ್ರೆಸ್ ಸದಸ್ಯರ ಇಂಗಿತ ಏನೆಂಬುದು ಅರ್ಥವಾಯಿತು. ಮತ್ತೆ ದಿನಾಂಕ ೧೧ ರಂದು ರಾಷ್ಟ್ರಪತಿ ಚುನಾವಣೆ ಬಗ್ಗೆ ಜನಸಂಘ ಹಾಗೂ ಸ್ವತಂತ್ರ ಪಕ್ಷಗಳೊಡನೆ ನಡೆಸಿದ ಮಾತುಕತೆ ಬಗ್ಗೆ ವಿವರ ನೀಡಬೇಕೆಂದು ನಿಜಲಿಂಗಪ್ಪನವರಿಗೆ ಫಕ್ರುದ್ದೀನ್ ಅಲಿ ಅಹಮದ್ ಮತ್ತು ಜಗಜ್ಜೀವನರಾಮ್‌ರವರು ಪತ್ರ ಬರೆದರು. ಕಾಂಗ್ರೆಸ್ ಪಾರ್ಲಿಮೆಂಟರಿ ಮಂಡಳಿ ಸಲಹೆ ಮೇರೆಗೆ ತಾವು ವಿರೋಧ ಪಕ್ಷಗಳೊಡನೆ ಚರ್ಚಿಸಿದ್ದಾಗಿ ನಿಜಲಿಂಗಪ್ಪನವರು ಹೇಳಿದರು. 'ಬ್ಯಾಂಕ್ ರಾಷ್ಟ್ರೀಕರಣದ ವಿಚಾರದಲ್ಲಿ ತಮಗೆ ಕೊಲೆ ಬೆದರಿಕೆ ಬಂದಿದೆ' ಎಂದು ಶ್ರೀಮತಿ ಇಂದಿರಾಗಾಂಧಿಯವರು ಹೇಳಿದ್ದು ಭಾರೀ ಪ್ರಚಾರ ಪಡೆಯಿತು.

'ನೀಲಂ ಸಂಜೀವರೆಡ್ಡಿಯವರಿಗೆ ಮತ ನೀಡುವಂತೆ ಕಾಂಗ್ರೆಸ್ ಸದಸ್ಯರಿಗೆ ಸ್ಪಷ್ಟ ಆದೇಶ ನೀಡುವಂತೆ' ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರಿಗೆ ನಿಜಲಿಂಗಪ್ಪನವರು ೧೨.೮.೬೯ರಂದು ಮನವಿ ಮಾಡಿದರು. 'ಮತ ನೀಡಲು ಆದೇಶ ಬೇಡ. ಸದಸ್ಯರಿಗೆ ಸ್ವಾತಂತ್ರ್ಯ ಇರಬೇಕು' ಎಂದು ಶ್ರೀಮತಿ ಇಂದಿರಾ ತಿಳಿಸಿದರು. 'ಸಂಜೀವರೆಡ್ಡಿಯವರಿಗೆ ಮತ ಹಾಕಲು ಆತ್ಮ ಸಾಕ್ಷಿ ಅಡ್ಡಿಯಾಗುತ್ತಿದೆ' ಎಂದು ಯಂಗ್‌ಟರ್ಕ್ ಗುಂಪು ಹೇಳಿಕೆ ನೀಡಿತು. ಮತ್ತೆ ೧೪.೮.೬೯ ರಂದು ಸಂಜೀವರೆಡ್ಡಿಯವರಿಗೇ ಮತ ನೀಡುವಂತೆ ಪ್ರಧಾನಿಯವರು ಮನವಿ ಮಾಡಬೇಕೆಂಬ ಕಾರ್ಯಕಾರಿ ಸಮಿತಿ ಮನವಿಗೆ ಶ್ರೀಮತಿ ಇಂದಿರಾಗಾಂಧಿ ಅಸಮ್ಮತಿ ವ್ಯಕ್ತಪಡಿಸಿದರು. ೧೬.೮.೧೯೬೯ರಂದು ರಾಷ್ಟ್ರಪತಿ ಆಯ್ಕೆಗೆ ಮತದಾನ ನಡೆಯಿತು. ಸಂಸತ್ ಸದಸ್ಯರ ಒಂದು ಗುಂಪು ಸಿಂಡಿಕೇಟ್ ನಾಯಕರ ವಿರುದ್ಧ ಕ್ರಮಕ್ಕೆ ಒತ್ತಾಯಿಸಿದರೆ, ಗುಜರಾತ್ ಪ್ರದೇಶ ಕಾಂಗ್ರೆಸ್ ಸಮಿತಿ ಪ್ರಧಾನಿ ವಿರುದ್ಧ ಕ್ರಮಕ್ಕೆ ಒತ್ತಾಯಿಸಿತು. ೧೮.೮.೬೯ ರಂದು ನಿಜಲಿಂಗಪ್ಪನವರು ಪ್ರಧಾನಿ ಇಂದಿರಾಗಾಂಧಿ, ಜಗಜೀವನರಾಮ್ ಮತ್ತು ಫಕ್ರುದ್ದೀನ್ ಅಲಿ ಅಹಮದ್‌ರವರಿಗೆ, ರಾಷ್ಟ್ರಪತಿ ಚುನಾವಣೆಯಲ್ಲಿ ಪಕ್ಷದ ಅಧಿಕೃತ ಅಭ್ಯರ್ಥಿಯ ವಿರುದ್ಧ ಕೆಲಸ ಮಾಡಿದ್ದಕ್ಕಾಗಿ ಕಾರಣ ಕೇಳುವ ನೋಟಿಸನ್ನು ಮೊಟ್ಟ ಮೊದಲ ಬಾರಿಗೆ ಜಾರಿ ಮಾಡಿದರು.

'ತಮ್ಮ ಬಗ್ಗೆ ಶಿಸ್ತಿನ ಕ್ರಮದ ಬೆದರಿಕೆ ಹಾಕಲಾಗಿದೆ. ಈ ಬಗ್ಗೆ ಕಾಂಗ್ರೆಸ್ ಅಧ್ಯಕ್ಷರಿಗೆ ಅಧಿಕಾರ ವ್ಯಾಪ್ತಿ ಇಲ್ಲ' ಎಂದು ಶ್ರೀಮತಿ ಇಂದಿರಾ ಗಾಂಧಿಯವರು ೧೮.೮.೬೯ ರಂದೇ ಮರುತ್ತರ ನೀಡಿದರು. 'ಪ್ರಧಾನಿಯವರ ಅಶಿಸ್ತು ಅಕ್ಷಮ್ಯ' ಎಂದು ಮೊರಾರ್ಜಿ ಹೇಳಿದರೆ, 'ಶ್ರೀಮತಿ ಇಂದಿರಾಗಾಂಧಿ ಅಗತ್ಯವಾದಲ್ಲಿ ಪಕ್ಷ ತ್ಯಾಗಮಾಡಲಿ' ಎಂದು ಎಸ್. ಎನ್. ಮಿಶ್ರಾ ಹೇಳಿದರು. ೨೦.೮.೬೯ ರಂದು ರಾಷ್ಟ್ರಪತಿ ಚುನಾವಣೆಯ ಮತಗಳ ಎಣಿಕೆ ನಡೆಯಿತು. ಎರಡನೇ ಸುತ್ತಿನ ಆದ್ಯತಾ ಮತಗಳ ಎಣಿಕೆಯಲ್ಲಿ ವಿ. ವಿ. ಗಿರಿಯವರು ೪,೨೧,೦೭೭ ಮತಗಳನ್ನು ಪಡೆದು ಆಯ್ಕೆಯಾದರೆ, ಕಾಂಗ್ರೆಸ್ ಪಕ್ಷದ ಅಧಿಕೃತ ಅಭ್ಯರ್ಥಿ ನೀಲಂ ಸಂಜೀವ ರೆಡ್ಡಿಯವರಿಗೆ ೪,೦೫,೪೨೭ ಮತಗಳು ಬಂದಿದ್ದವು. ಪಕ್ಷದ ಅಧಿಕೃತ ಅಭ್ಯರ್ಥಿ ಪರಾಜಿತರಾಗಿದ್ದರು. ಮೈಸೂರು ಶಾಸನಸಭೆಯಿಂದ ಸಂಜೀವರೆಡ್ಡಿಯವರಿಗೆ ೧೫೫೧ ಮತಗಳೂ, ಗಿರಿಯವರಿಗೆ ೧೧೩೫ ಮತಗಳೂ ಬಿದ್ದಿದ್ದವು. ಅಲ್ಲಿಗೆ ರಾಜ್ಯದಲ್ಲೂ ಶ್ರೀಮತಿ ಇಂದಿರಾಗಾಂಧಿಯವರ ಗುಂಪು

ಪ್ರಬಲವಾಗಿದೆ ಎಂಬುದು ತಿಳಿದುಬಂತು. ವಿ.ವಿ. ಗಿರಿಯವರನ್ನು ಅಭಿನಂದಿಸಿದ ನಿಜಲಿಂಗಪ್ಪನವರು ಕಾಂಗ್ರೆಸ್ಸಿಗರ ಕರ್ತವ್ಯ ವಿಮುಖತೆಯ ಬಗ್ಗೆ ತಮ್ಮ ದುಃಖವನ್ನು ವ್ಯಕ್ತಪಡಿಸಿದರು. 'ನಿಜಲಿಂಗಪ್ಪನವರ ಮೇಲೆ ಅವಿಶ್ವಾಸ ನಿರ್ಣಯ' ತರಲು ಪಂಜಾಬ್ ಪ್ರದೇಶ ಕಾಂಗ್ರೆಸ್ ಸಮಿತಿ ೨೧.೮.೬೯ರಂದು ಒತ್ತಾಯಿಸಿದರೆ, ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯು 'ಶಿಸ್ತುಭಂಗ ಮಾಡಿದವರಿಗೆ ಶಿಕ್ಷೆ ಆಗಲೇಬೇಕೆಂದು' ಒಂದು ನಿರ್ಣಯ ಅಂಗೀಕರಿಸಿ ನಿಜಲಿಂಗಪ್ಪನವರಲ್ಲಿ ನಿಷ್ಠೆ ವ್ಯಕ್ತಪಡಿಸಿತು. ಈ ಬಗ್ಗೆ ಎ.ಐ.ಸಿ.ಸಿ. ಸದಸ್ಯರೂ ಸೇರಿದಂತೆ ೯೦ ಮಂದಿ ಸಹಿ ಮಾಡಿರುವ ಒಂದು ಪತ್ರವನ್ನು ಎಐಸಿಸಿ ಅಧ್ಯಕ್ಷರಾದ ನಿಜಲಿಂಗಪ್ಪನವರಿಗೆ ಕಳುಹಿಸಲಾಯಿತು. ಡಿ. ಸಂಜೀವಯ್ಯನವರ ನೇತೃತ್ವದಲ್ಲಿ ೨೩.೮.೬೯ ರಂದು ೨೪೮ ಕಾಂಗ್ರೆಸ್ ಸದಸ್ಯರು ಸಭೆ ಸೇರಿ 'ಪಕ್ಷದ ಏಕತೆಗೆ ಧಕ್ಕೆ ತರುವುದು ಸರಿಯಲ್ಲವೆಂದು' ಸಿಂಡಿಕೇಟ್ ಗುಂಪಿಗೆ ಎಚ್ಚರಿಕೆ ನೀಡಿತು. 'ತಾವು ಪಕ್ಷದ ಒಡಕಿಗೆ ಯತ್ನಿಸುತ್ತಿಲ್ಲ, ಪಕ್ಷದ ತತ್ವ ಬಲಿಗೊಟ್ಟು ಏಕತೆ ಸಾಧಿಸುವುದು ತಮಗೆ ಬೇಕಾಗಿಲ್ಲವೆಂದು' ಶ್ರೀಮತಿ ಇಂದಿರಾಗಾಂಧಿ ಹೇಳಿಕೆ ನೀಡಿದರು.

ಅಂತಿಮವಾಗಿ ೨೫.೮.೧೯೬೯ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ಶ್ರೀಮತಿ ಇಂದಿರಾಗಾಂಧಿ ಸೇರಿದಂತೆ ಎಲ್ಲ ೨೧ ಸದಸ್ಯರೂ ಹಾಜರಿದ್ದರು. ಪ್ರಧಾನಿ ಹಾಗೂ ಇತರರ ವಿರುದ್ಧ ಶಿಸ್ತುಕ್ರಮ ಕೈಬಿಡಲಾಯಿತು. 'ಅಂಗೀಕೃತ ನೀತಿ ಕೈಬಿಡದೆ ಪಕ್ಷದ ಏಕತೆಗಾಗಿ ಎಲ್ಲರೂ ಶ್ರಮಿಸಬೇಕೆಂದು' ನಿಜಲಿಂಗಪ್ಪನವರು ಕರೆ ನೀಡಿದರು. ಎಲ್ಲಾ ಸೌಹಾರ್ದಮಯವಾಗಿ ನಡೆದು ಕಾಂಗ್ರೆಸ್ ಪಕ್ಷದ ದೊಡ್ಡ ಬಿಕ್ಕಟ್ಟು ಕೊನೆಗೊಂಡಂತೆ ಕಂಡಿತು. ಮಾರನೇ ದಿವಸ ಶ್ರೀಮತಿ ಇಂದಿರಾಗಾಂಧಿ ಭೋಜನಕೂಟ ಏರ್ಪಡಿಸಿದ್ದರು. ಆದರೆ ದೇಹಾಲಸ್ಯದ ಪ್ರಯುಕ್ತ ನಿಜಲಿಂಗಪ್ಪನವರು ಇದಕ್ಕೆ ಹಾಜರಾಗಲಿಲ್ಲ. ಶ್ರೀಮತಿ ಇಂದಿರಾಗಾಂಧಿಯವರೇ ನಿಜಲಿಂಗಪ್ಪನವರ ಮನೆಗೆ ಆಗಮಿಸಿ ಅವರ ಆರೋಗ್ಯ ವಿಚಾರಿಸಿದರು. ಎಲ್ಲ 'ಮುಗಿಯಿತು' ಎನ್ನುವ ಹೊತ್ತಿಗೆ ಸೆಪ್ಟೆಂಬರ್ ೨೭, ೧೯೬೯ರಂದು ತಮಿಳುನಾಡು ಪ್ರದೇಶ ಕಾಂಗ್ರೆಸ್ ಅಧ್ಯಕ್ಷತೆಗೆ ರಾಜೀನಾಮೆ ನೀಡಿದ ಸಿ. ಸುಬ್ರಹ್ಮಣ್ಯಂರವರು, ''ಕಾಮರಾಜ್‌ರವರು ವೈ.ಬಿ. ಚವಾಣ್ ರವರಿಗೆ ಪ್ರಧಾನಿಪಟ್ಟದ ಆಮಿಷ ನೀಡಿ ಸಿಂಡಿಕೇಟ್ ಗುಂಪಿಗೆ ಎಳೆದುಕೊಳ್ಳಲು ಯತ್ನಿಸಿದ್ದರು'' ಎಂದು ಹೊಸ ವಿವಾದವನ್ನು ಸೃಷ್ಟಿಸಿದರು.

ತಮಿಳುನಾಡು ಕಾಂಗ್ರೆಸ್ ಅಧ್ಯಕ್ಷತೆಗೆ ರಾಜೀನಾಮೆ ನೀಡಿದ್ದ ಸಿ. ಸುಬ್ರಹ್ಮಣ್ಯಂ ಅವರು ನಿಯಮಗಳ ಪ್ರಕಾರ ಕಾರ್ಯಕಾರಿ ಸಮಿತಿ ಸದಸ್ಯ ಸ್ಥಾನ ಕಳೆದುಕೊಳ್ಳುತ್ತಿದ್ದು ಅವರನ್ನು ಕಾರ್ಯಕಾರಿ ಸಮಿತಿಯಿಂದ ಕೈ ಬಿಡಲು ನಿರ್ಣಯಿಸಲಾಯಿತು. ಸಚಿವ ಸಂಪುಟ ಸೇರಿದ್ದ ಕಮಲಾಪತಿ ತ್ರಿಪಾಠಿ ಮತ್ತು ಕಾಕಣಿ ವೆಂಕಟರತ್ನಂ ಅವರನ್ನು ಕ್ರಮವಾಗಿ ಉತ್ತರ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಸ್ಥಾನದಿಂದ, ಆಂಧ್ರಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಸ್ಥಾನದಿಂದ ಬದಲಾಯಿಸಲು ಎ.ಐ.ಸಿ.ಸಿ. ಅಧ್ಯಕ್ಷ ನಿಜಲಿಂಗಪ್ಪನವರು ೧೦.೧೦.೬೯ ರಂದು ಕ್ರಮ ತೆಗೆದುಕೊಂಡರು. ಅದಕ್ಕೆ ಪ್ರತಿಯಾಗಿ ಕಾರ್ಯಕಾರಿಸಮಿತಿ ಸದಸ್ಯರಾದ ಜಗಜೀವನರಾಮ್ ಮತ್ತು ಫಕ್ರುದ್ದೀನ್ ಅಲಿ ಅಹಮದ್‌ರವರು 'ಇಂದಿನ ಪರಿಸ್ಥಿತಿಯಲ್ಲಿ ಕಾರ್ಯಕಾರಿ ಸಮಿತಿಯಿಂದ ಸಿ. ಸುಬ್ರಹ್ಮಣ್ಯಂ ರವರನ್ನು ಕೈಬಿಡುವುದು ಸರಿಯಲ್ಲವೆಂದೂ, ಈ ಎಲ್ಲಾ ವಿಷಯಗಳನ್ನು ಚರ್ಚಿಸಲು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಜೊತೆಗೆ ವಿಶೇಷ ಸಭೆಯನ್ನು ಜೊತೆಗೆ ವಿಶೇಷ ಎ.ಐ.ಸಿ.ಸಿ. ಅಧಿವೇಶನವನ್ನು ಕರೆಯಬೇಕೆಂದೂ' ನಿಜಲಿಂಗಪ್ಪನವರಿಗೆ ಪತ್ರ ಬರೆದು ಒತ್ತಾಯಿಸಿದರು. ಮತ್ತೆ ೩೦.೧೦.೬೯ ರಂದು ವಿಶೇಷ ಎ.ಐ.ಸಿ.ಸಿ. ಅಧಿವೇಶನ ಕರೆಯಬೇಕೆಂದು ಒತ್ತಾಯಿಸಿ ಸುಮಾರು ೪೦೫ ಜನ ಎ.ಐ.ಸಿ.ಸಿ. ಸದಸ್ಯರು ನಿಜಲಿಂಗಪ್ಪನವರಿಗೆ ಪತ್ರ ಬರೆದು ಒತ್ತಾಯಿಸಿದರು.

ದಿನಾಂಕ ೩೧.೧೦.೬೯ರಂದು ದೆಹಲಿಯಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿತು. ಎ.ಐ.ಸಿ.ಸಿ. ಕಚೇರಿ ಎದುರು ಪ್ರಕ್ಷುಬ್ಧ ವಾತಾವರಣ ಏರ್ಪಟ್ಟಿತ್ತು. ಶ್ರೀಮತಿ ಇಂದಿರಾಗಾಂಧಿ ಗುಂಪಿನವರು ಈ ಸಭೆಗೆ ಬಹಿಷ್ಕಾರ ಹಾಕಿದ್ದರು. ಕಾರ್ಯಕಾರಿ ಸಮಿತಿಯ ೨೧ ಸದಸ್ಯರ ಪೈಕಿ ಹನ್ನೊಂದು ಜನ ಸದಸ್ಯರು ಹಾಜರಿದ್ದ ಈ ಸಭೆಯಲ್ಲಿ ಸಿ. ಸುಬ್ರಹ್ಮಣ್ಯಂ ಮತ್ತು ಫಕ್ರುದ್ದೀನ್ ಅಲಿ ಅಹಮದ್‌ರವರನ್ನು ಕಾರ್ಯಕಾರಿ ಸಮಿತಿಯಿಂದ ವಜಾ ಮಾಡುವ ನಿರ್ಧಾರ ಕೈಗೊಳ್ಳಲಾಯಿತು. ವಿಶೇಷ ಅಧಿವೇಶನಕ್ಕೆ ನಕಾರ ವ್ಯಕ್ತಪಡಿಸಿ ಅದು ಮಾಮೂಲಿನಂತೆ ಡಿಸೆಂಬರ್ ೬೯ರಲ್ಲಿ ಗುಜರಾತ್‌ನಲ್ಲಿ ನಡೆಯುತ್ತದೆ ಎಂದು ತಿಳಿಸಲಾಯಿತು.

ಈ ಸಭೆಯನ್ನು ಬಹಿಷ್ಕರಿಸಿದ್ದ ಶ್ರೀಮತಿ ಇಂದಿರಾಗಾಂಧಿಯವರ ಗುಂಪು ಪ್ರಧಾನಿ ನಿವಾಸದಲ್ಲಿ ಮತ್ತೊಂದು ಕಾರ್ಯಕಾರಿ ಸಮಿತಿ ಸಭೆ ನಡೆಸಿತು. ಇದರಲ್ಲಿ ೧೬ ಪಿಸಿಸಿ ಅಧ್ಯಕ್ಷರುಗಳು, ೬ ಜನ ಮುಖ್ಯಮಂತ್ರಿಗಳು ಭಾಗವಹಿಸಿದ್ದರು. ಈ ಸಭೆಯು ನವೆಂಬರ್ ೨೨, ೨೩ ರಂದು ನವದೆಹಲಿಯಲ್ಲಿ ವಿಶೇಷ ಎ.ಐ.ಸಿ.ಸಿ. ಅಧಿವೇಶನ ನಡೆಸಲು ತೀರ್ಮಾನಿಸಿತು. 'ತಾವು ಹೊಸ ಪಕ್ಷ ರಚಿಸುವುದಿಲ್ಲ'ವೆಂದು ಶ್ರೀಮತಿ ಇಂದಿರಾಗಾಂಧಿ ತಿಳಿಸಿದರು. 'ವರಿಷ್ಠರೇ ಕದನಕ್ಕೆ ನಿಂತಾಗ ಮುಂದಿನ ಹೊಣೆ ಬಹುಸಂಖ್ಯಾತರದ್ದು' ಎಂದು ಸಿ. ಸುಬ್ರಹ್ಮಣ್ಯಂ ತಿಳಿಸಿದರು. ೨.೧೧.೬೯ ರಂದೂ ತನ್ನ ಸಭೆಯನ್ನು ಮುಂದುವರಿಸಿದ ನಿಜಲಿಂಗಪ್ಪನವರ ಗುಂಪಿನ ಕಾರ್ಯಕಾರಿ ಸಮಿತಿಯು 'ಪಕ್ಷದ ಏಕತೆ

ಹಾಗೂ ಶಿಸ್ತನ್ನು ಕಾಪಾಡಲು ಸಹಕರಿಸಬೇಕೆಂದು' ಪ್ರಧಾನಿಗೆ ಮನವಿ ಮಾಡಿತು. ನವೆಂಬರ್ ೨೨,೨೩ ರಂದು ದೆಹಲಿಯಲ್ಲಿ ನಡೆಯುವ ಎ.ಐ.ಸಿ.ಸಿ. ಅಧಿವೇಶನಕ್ಕೆ ಹಾಜರಾಗುವವರ ಮೇಲೆ ಶಿಸ್ತಿನ ಕ್ರಮ ಕೈಗೊಳ್ಳಬೇಕಾಗುತ್ತದೆಂದೂ ಘೋಷಿಸಿದರು.

ಈ ಏಕತೆಯ ಮನವಿಯನ್ನು ಇಂದಿರಾ ಗುಂಪಿನ ಫಕ್ರುದ್ದೀನ್ ಅಲಿ ಅಹಮದ್, ಸಿ. ಸುಬ್ರಹ್ಮಣ್ಯಂ, ಶಂಕರ ದಯಾಳ್ ಶರ್ಮ, ವಸಂತರಾವ್ ಪಾಟೀಲ್, ಡಿ. ಸಂಜೀವಯ್ಯ, ಕೆ. ರಘುರಾಮಯ್ಯ, ಪಿ. ಗೋವಿಂದ ಮೆನನ್, ದಿನೇಶ್ ಸಿಂಗ್ ಮೊದಲಾದ ನಾಯಕರು ತಿರಸ್ಕರಿಸಿದರು. ನಿಜಲಿಂಗಪ್ಪನವರು ಪ್ರಧಾನಿಯವರಿಗೆ ಸುದೀರ್ಘ ಪತ್ರ ಬರೆದು 'ಶಿಸ್ತು ಉಲ್ಲಂಘನೆ ಅಕ್ಷಮ್ಯ ಅಪರಾಧ ಇದರ ಬಗ್ಗೆ ವಿವರಣೆ' ನೀಡಬೇಕೆಂದರು. 'ಸ್ವಾರ್ಥಕ್ಕಾಗಿ ನಿಜಲಿಂಗಪ್ಪನವರಿಂದಲೇ ಶಿಸ್ತು ಉಲ್ಲಂಘನೆ ಆಗಿದೆ,' ಎಂದ ಶ್ರೀಮತಿ ಇಂದಿರಾಗಾಂಧಿ, 'ಈ ಪತ್ರಕ್ಕೆ ತಾವು ಉತ್ತರ ನೀಡಬೇಕಾಗಿಲ್ಲ'ವೆಂದರು. ಈ ಮಧ್ಯೆ ರಾಜಸ್ಥಾನದ ಮುಖ್ಯಮಂತ್ರಿ ಮೋಹನಲಾಲ್ ಸುಖಾಡಿಯಾ, ಅಸ್ಸಾಂ ಮುಖ್ಯಮಂತ್ರಿ ಬಿ. ಪಿ. ಚಾಲಿಹಾ, ಮೈಸೂರು ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಬಿಕ್ಕಟ್ಟು ನಿವಾರಣೆಗೆ ಪ್ರಯತ್ನಿಸಿದರು. ವೀರೇಂದ್ರ ಪಾಟೀಲರು ಅದರಲ್ಲಿ ಯಶಸ್ವಿಯೂ ಆದರು. ೭.೧೧.೬೯ರಂದು ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಎ.ಐ.ಸಿ.ಸಿ. ಅಧ್ಯಕ್ಷ ನಿಜಲಿಂಗಪ್ಪ ಇಬ್ಬರೂ ಭೇಟಿಯಾದರು. ಪ್ರಧಾನಿ ನಿವಾಸದಲ್ಲಿ ಈ ಭೇಟಿ ನಡೆಯಿತು. ಮಾತುಕತೆಯ ಫಲಶ್ರುತಿ ತಿಳಿದುಬರಲಿಲ್ಲ. ರಾತ್ರಿ ನಿಜಲಿಂಗಪ್ಪನವರ ಮನೆಗೆ ಭೋಜನಕ್ಕೆ ಬರಬೇಕಾಗಿದ್ದ ಶ್ರೀಮತಿ ಇಂದಿರಾಗಾಂಧಿ ಬರಲಿಲ್ಲ. ಸಂಧಾನ ಪ್ರಕ್ರಿಯೆಗಳು ಮುರಿದುಬಿದ್ದವು.

೧೨.೧೧.೬೯ ರಂದು ನಿಜಲಿಂಗಪ್ಪನವರ ನೇತೃತ್ವದ ಕಾರ್ಯಕಾರಿ ಸಮಿತಿ ಸಭೆ ಸೇರಿ, ಸಂಸದೀಯ ಪಕ್ಷದ ನಾಯಕತ್ವದಿಂದ ಶ್ರೀಮತಿ ಇಂದಿರಾಗಾಂಧಿ ಅವರನ್ನು ಉಚ್ಛಾಟಿಸಿ ಬೇರೆ ನಾಯಕನ ಆಯ್ಕೆ ಮಾಡುವಂತೆ ಸಂಸದೀಯ ಪಕ್ಷದ ಸದಸ್ಯರಿಗೆ ಸೂಚಿಸಿತು. ೧೩.೪.೬೯ರಂದು ಶ್ರೀಮತಿ ಇಂದಿರಾಗಾಂಧಿ ಗುಂಪಿನ ಸಂಸದೀಯ ಪಕ್ಷದ ಸಭೆ ಸೇರಿತು. ಇಂದಿರಾ ನಾಯಕತ್ವದಲ್ಲಿ ನಿಷ್ಠೆ ವ್ಯಕ್ತ ಪಡಿಸಿತು. ೩೩೦ ಸದಸ್ಯರು ಇದರಲ್ಲಿ ಭಾಗವಹಿಸಿದ್ದರೆಂದು ಕಾರ್ಯದರ್ಶಿ ಬಿ. ಶಂಕರಾನಂದ್ ಪ್ರಕಟಿಸಿದರು. 'ಕಾಂಗ್ರೆಸ್ ಪಕ್ಷದ ತತ್ವ ನೀತಿಗಳಿಗೆ ನನ್ನ ಜೀವನ ಮುಡಿಪು. ಕೆಲವು ವ್ಯಕ್ತಿಗಳು ತಮ್ಮ ಅಭಿಪ್ರಾಯಗಳನ್ನು ಬಹುಸಂಖ್ಯಾತರ ಮೇಲೆ ಹೇರಲು ಪ್ರಯತ್ನಿಸಿದ್ದೇ ಇದಕ್ಕೆ ಕಾರಣ' ಎಂದು ೧೫.೧೧.೬೯ ರಂದು ಇಂದಿರಾಗಾಂಧಿಯವರು ಹೇಳಿದರು. ಅದೇ ದಿನ ಕೇಂದ್ರ ಸಚಿವ ಸಿ.ಎಂ. ಪೂಣಚ್ಚ ರಾಜೀನಾಮೆ ನೀಡಿದರು. ದಿನಾಂಕ ೧೬.೧೧.೬೯ರಂದು ಕಾಂಗ್ರೆಸ್ ಸಂಸದೀಯ ಪಕ್ಷ ಇಬ್ಭಾಗವಾಯಿತು. ನಿಜಲಿಂಗಪ್ಪನವರ ನೇತೃತ್ವದ ಕಾಂಗ್ರೆಸ್ ಪಕ್ಷದ ಸಂಸದೀಯ ಪಕ್ಷದ ಅಧ್ಯಕ್ಷರನ್ನಾಗಿ ಮೊರಾರ್ಜಿ ದೇಸಾಯಿ ಅವರನ್ನು ನೇಮಿಸಲಾಯಿತು. ಇದು ಪಕ್ಷದ ಅಂಗರಚನೆಯಲ್ಲಿ ಇಲ್ಲದ ಹೊಸ ಹುದ್ದೆಯಾಗಿತ್ತು ಎಂಬುದು ಗಮನಾರ್ಹ.

ಲೋಕಸಭೆಯಲ್ಲಿ ಈ ಗುಂಪಿನ ಸಂಸದೀಯ ಪಕ್ಷದ ನಾಯಕರನ್ನಾಗಿ ರಾಂಸುಭಾಗ್‌ಸಿಂಗ್‌ರವರನ್ನು, ಉಪನಾಯಕರನ್ನಾಗಿ ಡಿ. ಎಸ್. ರಾಜು ಅವರನ್ನು ನೇಮಿಸಲಾಯಿತು. ರಾಜ್ಯಸಭೆಯಲ್ಲಿ ಎಸ್. ಎನ್. ಮಿಶ್ರಾ ಅವರನ್ನು ನಾಯಕರನ್ನಾಗಿಯೂ, ಎಂ. ಎಸ್. ಗುರುಪಾದಸ್ವಾಮಿ ಅವರನ್ನು ಉಪನಾಯಕರನ್ನಾಗಿಯೂ ನೇಮಿಸಲಾಯಿತು. ಆಗ ಲೋಕಸಭೆಯಲ್ಲಿ ಶ್ರೀಮತಿ ಇಂದಿರಾಗಾಂಧಿ ನೇತೃತ್ವದ ಆಡಳಿತ ಕಾಂಗ್ರೆಸ್ ಸದಸ್ಯರ ಬಲ ೨೧೦ ಹಾಗೂ ರಾಜ್ಯಸಭೆಯಲ್ಲಿ ೧೦೪ ಆಗಿದ್ದಿತು. ಸಂಸದೀಯ ಪಕ್ಷದಲ್ಲಿ ಇಂದಿರಾಗಾಂಧಿಯವರಿಗೆ ಸಂಪೂರ್ಣ ಬೆಂಬಲ ಇತ್ತು. ೧೬.೧೧.೧೯೬೯ರಂದು ಪಾರ್ಲಿಮೆಂಟ್ ಅಧಿವೇಶನ ಆರಂಭವಾಯಿತು. ನಿಜಲಿಂಗಪ್ಪನವರ ಗುಂಪಿನ ೬೩ ಕಾಂಗ್ರೆಸ್ ಸದಸ್ಯರು ಪ್ರತ್ಯೇಕ ಆಸನದಲ್ಲಿ ಕುಳಿತಿದ್ದರು. ಕಾಂಗ್ರೆಸ್ ಮೊದಲ ಬಾರಿಗೆ ವಿರೋಧಿ ಸ್ಥಾನದಲ್ಲಿ ಕುಳಿತಂತಾಯಿತು. ವಿರೋಧ ಪಕ್ಷಗಳು ಇಂದಿರಾ ಸರ್ಕಾರದ ವಿರುದ್ಧ ನಿಲುವಳಿ ಸೂಚನೆಯನ್ನು ತಂದವು. ಅದು ೩೦೬-೧೪೦ ಮತಗಳಿಂದ ಬಿದ್ದು ಹೋಯಿತು. ಶ್ರೀಮತಿ ಇಂದಿರಾ ಗಾಂಧಿ ಜಯಭೇರಿ ಬಾರಿಸಿದ್ದರು. ಶ್ರೀಮತಿ ಇಂದಿರಾಗಾಂಧಿ ಗುಂಪಿನ ಕಾಂಗ್ರೆಸ್ ಪಕ್ಷ ಆಡಳಿತದಲ್ಲಿ ಉಳಿದುಕೊಂಡಿದ್ದರಿಂದ ಅದಕ್ಕೆ 'ಆಡಳಿತ ಕಾಂಗ್ರೆಸ್' ಎಂಬ ಹೆಸರು ರೂಢಿಗೆ ಬಂತು.

೨೨.೧೧.೬೧ ರಂದು 'ಆಡಳಿತ ಕಾಂಗ್ರೆಸ್'ನ ಅಖಿಲ ಭಾರತ ಸಮಾವೇಶ (ವಿಶೇಷ ಎ.ಐ.ಸಿ.ಸಿ. ಅಧಿವೇಶನ) ದೆಹಲಿಯಲ್ಲಿ ಪ್ರಾರಂಭವಾಯಿತು. ೭೦೫ ಎ.ಐ.ಸಿ.ಸಿ. ಸದಸ್ಯರ ಪೈಕಿ ೪೪೫ ಎ.ಐ.ಸಿ.ಸಿ. ಚುನಾಯಿತ ಸದಸ್ಯರು ಹಾಗೂ ೫೪ ನಾಮಕರಣ ಸದಸ್ಯರು ಭಾಗವಹಿಸಿದ್ದರು. ನಿಜಲಿಂಗಪ್ಪನವರನ್ನು ಕಾಂಗ್ರೆಸ್‌ನಿಂದ ಉಚ್ಛಾಟಿಸುವ ನಿರ್ಣಯವನ್ನು ಸೇಠ್ ಗೋವಿಂದದಾಸ್ ಮಂಡಿಸಿದರು. ಸಿದ್ಧಾರ್ಥ ಶಂಕರ ರೇ ಅನುಮೋದಿಸಿದರು. ಸಿ. ಸುಬ್ರಹ್ಮಣ್ಯಂ ಅವರನ್ನು 'ಆಡಳಿತ ಕಾಂಗ್ರೆಸ್' ಅಧ್ಯಕ್ಷರನ್ನಾಗಿ ಆರಿಸಲಾಯಿತು. 'ಮುಂದಿನ ತಿಂಗಳು ಮುಂಬೈನಲ್ಲಿ ಎಐಸಿಸಿ ಅಧಿವೇಶನ ನಡೆಯಲಿದ್ದು ಅಲ್ಲಿ ಪಕ್ಷದ ನೂತನ ಅಧ್ಯಕ್ಷರನ್ನು ಆರಿಸಲಾಗುವುದೆಂದು' ಅವರು ಹೇಳಿದರು. 'ಸಮ್ಮ ಕಾರ್ಯಕ್ರಮ ನೀತಿಗಳಿಗೆ ಒಪ್ಪಿಗೆ ಇರುವವರಿಗೆ ಪಕ್ಷದ ದ್ವಾರ ಸದಾ ಮುಕ್ತವಾಗಿರುತ್ತದೆ' ಎಂದು ಶ್ರೀಮತಿ ಇಂದಿರಾ ಗಾಂಧಿ ಕರೆ ನೀಡಿದರು. 'ಪಕ್ಷ ರೂಪಿಸುವ ಕಾರ್ಯಕ್ರಮಗಳಿಗೆ ಸರ್ಕಾರ ಯಾವಾಗಲೂ ಬದ್ಧ' ಎಂದು ಅವರು ಹೇಳಿದರು.

ಹಳೆಯ ಕಾರ್ಯಕಾರಿ ಸಮಿತಿಯನ್ನು ವಿಸರ್ಜಿಸಲಾಯಿತು. ಹೊಸ ಕಾರ್ಯಕಾರಿ ಸಮಿತಿಯನ್ನು ರಚಿಸಲಾಯಿತು. ಆ ಸಮಿತಿಯಲ್ಲಿ ಚುನಾಯಿತ ಸದಸ್ಯರಾಗಿ ಶ್ರೀಮತಿ ಇಂದಿರಾಗಾಂಧಿ, ಜಗಜೀವನರಾಮ್, ಫಕ್ರುದ್ದೀನ್ ಅಲಿ ಅಹಮದ್, ವೈ. ಬಿ. ಚವಾಣ್, ಬ್ರಹ್ಮಾನಂದ ರೆಡ್ಡಿ, ಮೋಹನಲಾಲ್ ಸುಖಾಡಿಯಾ, ಉಮಾಶಂಕರ ದೀಕ್ಷಿತ್, ಶಂಕರದಯಾಳ್ ಶರ್ಮಾ, ವಿ. ಪಿ. ನಾಯಕ್, ಡಿ. ಪಿ. ಮಿಶ್ರಾ ಅವರುಗಳಿದ್ದರೆ, ನಾಮಕರಣ ಸದಸ್ಯರಾಗಿ ಹೆಚ್. ಎನ್. ಬಹುಗುಣ, ಕೆ. ಆರ್. ಗಣೇಶ್, ವಿ. ಸಿ. ಶುಕ್ಲಾ, ನಂದಿನಿ ಸತ್ಪಥಿ, ಚಂದ್ರಜಿತ್ ಯಾದವ್, ಸಿದ್ದಾರ್ಥ ಶಂಕರ್ ರೇ, ಸೈಯದ್ ಮೀರ್ ಖಾಸಿಂ, ಕೆ. ಕರುಣಾಕರನ್, ಕೊಲ್ಲೂರು ಮಲ್ಲಪ್ಪ, ಡಿ. ಸಂಜೀವಯ್ಯ ಅವರುಗಳಿದ್ದರು. 'ಈ ಕ್ರಮ ದುರಾದೃಷ್ಟಕರ, ಕೋರಿಕೆ ಎ.ಐ.ಸಿ.ಸಿ. ಅಧಿವೇಶನ ಸರಿಯಲ್ಲ ಕ್ರಮಬದ್ಧವಲ್ಲ, ಪ್ರಧಾನಿ ಗುಂಪಿನ ಎಲ್ಲರನ್ನೂ ಪಕ್ಷದಿಂದ ಉಚ್ಚಾಟಿಸಲಾಗುವುದು. ಡಿಸೆಂಬರ್ ೧೯,೨೦ ಹಾಗೂ ೨೧ ರಂದು ಅಹಮದಾಬಾದ್‌ನಲ್ಲಿ ಎ.ಐ. ಸಿ. ಸಿ. ಅಧಿವೇಶನ ನಡೆಯಲಿದ್ದು ಅದಕ್ಕೆ ಎಲ್ಲರನ್ನು ಅಹ್ವಾನಿಸಲಾಗುವುದೆಂದು' ನಿಜಲಿಂಗಪ್ಪನವರು ಹೇಳಿಕೆಯಿತ್ತರು. ೨೯.೧೧.೬೯ರಂದು ದೆಹಲಿಯಲ್ಲಿ ನಿಜಲಿಂಗಪ್ಪ ಗುಂಪಿನ ಎ.ಐ.ಸಿ.ಸಿ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ಶ್ರೀಮತಿ ಇಂದಿರಾಗಾಂಧಿ ಗುಂಪಿನ ಕೆಲವರು ಎ.ಐ.ಸಿ.ಸಿ. ಕಚೇರಿಗೆ ಬೀಗಮುದ್ರೆ ಮಾಡಲು ಹೋದಾಗ ಘರ್ಷಣೆ ನಡೆಯಿತು. ಪಂಜಾಬ್, ಹರಿಯಾಣ, ಹಿಮಾಚಲ ಪ್ರದೇಶ, ಮಧ್ಯ ಪ್ರದೇಶ ಪಿ.ಸಿ.ಸಿ.ಗಳನ್ನು ವಿಸರ್ಜಿಸಲಾಯಿತು. ಕಮಲಾಪತಿ ತ್ರಿಪಾಠಿ, ಹೆಚ್. ಎನ್. ಬಹುಗುಣ ಅವರನ್ನು ಪಕ್ಷದಿಂದ ಸಸ್ಪೆಂಡ್ ಮಾಡಲಾಯಿತು. ಪ್ರಜಾಸತ್ತಾತ್ಮಕ ಸಮಾಜವಾದಿ ಸಮಾಜ ರಚನೆಗೆ ದೀಕ್ಷೆ ವಹಿಸುವ ನಿರ್ಣಯವನ್ನು ಕಾರ್ಯಕಾರಿ ಸಮಿತಿ ಅಂಗೀಕರಿಸಿತು.

'ಮುಂದಿನ ಚುನಾವಣೆ ನಂತರ ಸಂಸ್ಥಾ ಕಾಂಗ್ರೆಸ್ ನಿರ್ನಾಮವಾಗಲಿದೆ' ಎಂದು ಗುಲ್ಜಾರಿಲಾಲ್ ನಂದಾ ೬.೧೨.೬೯ರಂದು ಅಹಮದಾಬಾದ್‌ನ ಹೆರಾಲ್ಡ್ ಲ್ಯಾಸ್ಕಿ ಸಂಸ್ಥೆಯಲ್ಲಿ ಉಪನ್ಯಾಸ ಮಾಡುತ್ತಾ ಭವಿಷ್ಯ ನುಡಿದರು. ೧೦.೧೨.೬೯ರಂದು ನಿಜಲಿಂಗಪ್ಪನವರು ಬೆಂಗಳೂರಿನಲ್ಲಿ ಮಾತನಾಡಿ 'ಈಗ ಜನತಂತ್ರ ವ್ಯವಸ್ಥೆ ಹಾಗೂ ಸರ್ವಾಧಿಕಾರ ಕಮ್ಯುನಿಸಂ ನಡುವೆ ಸಂಘರ್ಷ ನಡೆಯುತ್ತಿದೆ. ವ್ಯಕ್ತಿ ಸ್ವಾತಂತ್ರ್ಯ, ಜನತಾಂತ್ರಿಕ ವ್ಯವಸ್ಥೆ, ನಾಗರಿಕ ಹಕ್ಕುಗಳನ್ನು ಕಾಪಾಡಲು ಜನ ಹೋರಾಟಕ್ಕೆ ಸಿದ್ಧರಾಗಬೇಕು, ಪ್ರಧಾನಿ ಉಚ್ಚಾಟನೆ ಅನಿವಾರ್ಯವಾದ ಕ್ರಮವಾಗಿತ್ತು' ಎಂದರು. ಗೋವಾ, ಗುಜರಾತ್, ಮೈಸೂರು, ಬಂಗಾಳ ಪ್ರದೇಶ ಕಾಂಗ್ರೆಸ್ ಸಮಿತಿಗಳು ನಿಜಲಿಂಗಪ್ಪನವರಿಗೆ ನಿಷ್ಠೆ ವ್ಯಕ್ತಪಡಿಸಿದರೆ, ಆ ಸಮಿತಿಗಳನ್ನು ನಿರ್ಲಕ್ಷಿಸಿ ಆಡಳಿತ ಕಾಂಗ್ರೆಸ್ ಅಧ್ಯಕ್ಷ ಸಿ. ಸುಬ್ರಹ್ಮಣ್ಯಂ ವಿಸರ್ಜಿಸಿ, ಹೊಸ ಅಡ್‌ಹಾಕ್ ಸಮಿತಿಗಳನ್ನು ರಚಿಸಿದರು. ೨೦.೧೨.೬೯ ರಂದು ಅಹಮದಾಬಾದ್‌ನಲ್ಲಿ ಸಂಸ್ಥಾ ಕಾಂಗ್ರೆಸ್ ಅಧಿವೇಶನ ಪ್ರಾರಂಭವಾಯಿತು. ಕೋಮುವಾರು ಪಿಡುಗಿನ ವಿರುದ್ಧ ತುರ್ತು ಕ್ರಮ, ಸಹಕಾರಿ ಕ್ಷೇತ್ರದ ಬೆಳವಣಿಗೆ, ಭೂಸುಧಾರಣೆ ಜಾರಿಗೆ ಪರಿಣಾಮಕಾರಿ ಕ್ರಮ, ತಟಸ್ಥ ವಿದೇಶಾಂಗ ನೀತಿ, ಪಾಕ್-ಚೀನಾ ಆಕ್ರಮಿತ ಪ್ರದೇಶಗಳ ತೆರವು-ಪುನರ್ ಸ್ವಾಧೀನ- ಈ ಬಗ್ಗೆ ಘೋಷಣೆಗಳನ್ನು ಹೊರಡಿಸಿ ನಿರ್ಣಯ ಅಂಗೀಕರಿಸಲಾಯಿತು. ೪೬೫೦ ಎ.ಐ.ಸಿ.ಸಿ. ಸದಸ್ಯರಲ್ಲಿ ೨೭೦೨ ಜನ ಸದಸ್ಯರು ಭಾಗವಹಿಸಿದ್ದರು. ೨೩೩ ಜನ ಬರಲು ಸಾಧ್ಯವಾಗುವುದಿಲ್ಲವೆಂದು ತಿಳಿಸಿದ್ದರು. ಬಹಿರಂಗ ಸಭೆಯಲ್ಲಿ ಐದು ಲಕ್ಷ ಜನ ಭಾಗವಹಿಸಿದ್ದರು. ಎಂದು ವಿವರಣೆ ನೀಡಲಾಯಿತು.

ದಿನಾಂಕ ೨೪,೨೫ ಡಿಸೆಂಬರ್ ೬೯ ರಂದು ಮುಂಬಯಿನಲ್ಲಿ ಆಡಳಿತ ಕಾಂಗ್ರೆಸ್ ಎ.ಐ.ಸಿ.ಸಿ. ಅಧಿವೇಶನ ನಡೆಯಿತು. ಜಗಜೀವನರಾಂ ಅವರನ್ನು ಆಡಳಿತ ಕಾಂಗ್ರೆಸ್ ಅಧ್ಯಕ್ಷರನ್ನಾಗಿ ಆರಿಸಲಾಯಿತು. ಆಮದು ರಾಷ್ಟ್ರೀಕರಣ, ವಿದ್ಯಾವಂತ ನಿರುದ್ಯೋಗಿಗಳಿಗೆ ರಾಷ್ಟ್ರೀಕೃತ ಬ್ಯಾಂಕುಗಳಿಂದ ಸಾಲ, ನಗರ ಪ್ರದೇಶಗಳ ಆಸ್ತಿಮಿತಿ, ಸಾರ್ವತ್ರಿಕ ವಿಮೆ, ಸರ್ಕಾರಿ ಕ್ಷೇತ್ರಗಳ ಉದ್ಯೋಗಾವಕಾಶ ವಿಸ್ತರಣೆ, ಈ ಮುಂತಾದ ಆರ್ಥಿಕ ಕಾರ್ಯಕ್ರಮಗಳ ಬಗ್ಗೆ ಎ.ಐ.ಸಿ.ಸಿ. ಘೋಷಣೆ ಹೊರಡಿಸಿ ನಿರ್ಣಯ ಅಂಗೀಕರಿಸಲಾಯಿತು. ೪೪೪ ಮಂದಿ ಎ.ಐ.ಸಿ.ಸಿ. ಸದಸ್ಯರಲ್ಲಿ ಅದರಲ್ಲಿ ಹಾಜರಿದ್ದರೆನ್ನಲಾಗಿದೆ. 'ಆಡಳಿತ ಕಾಂಗ್ರೆಸ್' ನೀತಿಗಳನ್ನು ಒಪ್ಪದ ಹೊರತು ವಿಭಜಿತ ಕಾಂಗ್ರೆಸ್ ಏಕತೆ ಅಸಾಧ್ಯವೆಂದು ಜಗಜೀವನರಾಂ ಘೋಷಿಸಿದರು. ಆರ್ಥಿಕ ನೀತಿಗಳನ್ನು ನಿಷ್ಠೆಯಿಂದ ಅನುಸರಿಸುವುದಾಗಿ ವೈ. ಬಿ. ಚವಾಣ್ ಘೋಷಿಸಿದರು. ಆಡಳಿತ ಕಾಂಗ್ರೆಸ್‌ಗೆ ಬೆಂಬಲ ನೀಡಲು ಬುದ್ಧಿಜೀವಿಗಳಿಗೆ ಕರೆ ನೀಡಲಾಯಿತು. ಈ ಅಧಿವೇಶನದ ಬಹಿರಂಗ ಸಭೆಗಳಲ್ಲಿ ೧೦ ಲಕ್ಷ ಜನ ಹಾಜರಿದ್ದರು. ನಿಜಲಿಂಗಪ್ಪ ಹಾಗೂ ಜಗಜೀವನರಾಂ ಭಾಷಣಗಳಲ್ಲಿ ಸೈದ್ಧಾಂತಿಕ ವ್ಯತ್ಯಾಸಗಳು ಸ್ಪಷ್ಟವಾಗಿ ಗೋಚರಿಸಿದವು. ಖಾಸಗಿ ವಲಯದ ವಿಸ್ತರಣೆ, ಅದರೊಂದಿಗೆ ಸರ್ಕಾರದ ಸಹಕಾರ, ಭಾರತ ರಷ್ಯಾ ದೂರ ಸರಿಯಬೇಕು, ಅಲಿಪ್ತ ನೀತಿ ಬದಲಾಗಬೇಕು, ಇಂದಿರಾ ಫ್ಯಾಸಿಸ್ಟ್ ಎಂಬುದು ನಿಜಲಿಂಗಪ್ಪನವರ ಅಹಮದಾಬಾದ್ ಅಧಿವೇಶನದ ಮುಖ್ಯ ಅಂಶಗಳಾದರೆ, ಸರ್ಕಾರಿ ವಲಯ ವಿಸ್ತರಣೆ, ನೆಹರೂರವರ ಅಲಿಪ್ತ ವಿದೇಶಾಂಗ ನೀತಿಯ

ಅನುಸರಣೆ ಜಗಜೀವನರಾಂ ಭಾಷಣದ ಮುಖ್ಯ ಅಂಶಗಳು. ಅಲಿಪ್ತ ನೀತಿ ತ್ಯಜಿಸಿ ತಾವು ರಷ್ಯಾಕ್ಕೆ ಶರಣಾಗಿಲ್ಲ ಎಂದು ಶ್ರೀಮತಿ ಇಂದಿರಾಗಾಂಧಿ ತಮ್ಮ ಭಾಷಣದಲ್ಲಿ ಹೇಳಿದರು.

**ಅಲ್ಲಿಗೆ ಕಾಂಗ್ರೆಸ್ ಸಂಸ್ಥಾ ಕಾಂಗ್ರೆಸ್, ಆಡಳಿತ ಕಾಂಗ್ರೆಸ್ ಎಂದು ಎರಡು ಭಾಗವಾದುದರ ಪ್ರಕ್ರಿಯೆ ಸಂಪೂರ್ಣವಾದಂತಾಯಿತು. ಚುನಾವಣಾ ಆಯೋಗವು ಮುಂದೆ ಈ ಕಾಂಗ್ರೆಸ್‌ಗಳನ್ನು ರಾಷ್ಟ್ರೀಯ ಕಾಂಗ್ರೆಸ್ (ಜಗಜೀವನರಾಮ್) NCJ ಮತ್ತು ರಾಷ್ಟ್ರೀಯ ಕಾಂಗ್ರೆಸ್ (ನಿಜಲಿಂಗಪ್ಪ) NCN ಎಂದು ಗುರುತಿಸಿತು. ಆದರೆ ಜನಮನದಲ್ಲಿ ಇವು ಸಂಸ್ಥಾ ಕಾಂಗ್ರೆಸ್, ಆಡಳಿತ ಕಾಂಗ್ರೆಸ್‌ಗಳಾಗಿ ಬೇರೂರಿದವು. ಅವು ಒಂದು ರೀತಿ ಅನ್ವರ್ಥಕವೂ ಆಗಿತ್ತೆಂದು ಹೇಳಬಹುದು.**

## ಮೈಸೂರು ಪ್ರದೇಶ ಕಾಂಗ್ರೆಸ್ ಮೇಲೆ ವಿಭಜನೆಯ ಪರಿಣಾಮಗಳು

ಕಾಂಗ್ರೆಸ್ ವಿಭಜನೆಯ ಹಂತದಲ್ಲಿದ್ದಾಗಲೇ ಮೈಸೂರು ರಾಜ್ಯದ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ೫.೧೧.೬೯ರಂದು ದೆಹಲಿಗೆ ಹೋಗಿ, ಇತರ ಮುಖ್ಯಮಂತ್ರಿಗಳೊಡನೆ ಸೇರಿ ಏಕತೆಯ ಪ್ರಯತ್ನಕ್ಕೆ, ಇಂದಿರಾ-ಎಸ್ಸೆನ್ ಸಂಧಾನಕ್ಕೆ ಪ್ರಯತ್ನಿಸಿದರು. ಅವರು ೭.೧೧.೬೯ ರಂದು ಇಂದಿರಾ-ಎಸ್ಸೆನ್ ಭೇಟಿ ಮಾಡಿ ಮಾತುಕತೆ ನಡೆಸುವಂತೆ ಮಾಡುವುದರಲ್ಲಿ ಯಶಸ್ವಿಯಾದರು. ಆದರೆ ಇಬ್ಬರೂ ಬಿಗಿ ಪಟ್ಟು ಹಿಡಿದುದರಿಂದ ಸಂಧಾನ ಯಶಸ್ವಿ ಆಗಲಿಲ್ಲ. ಸಂಧಾನ ಕಾರ್ಯಕ್ರಮದಲ್ಲಿ ವೀರೇಂದ್ರ ಪಾಟೀಲರು ಏಕಾಂಗಿಯಾದಂತೆ ಕಂಡುಬಂದರೆಂದೇ ಹೇಳಬಹುದು. ಮೈಸೂರಿನ ನಾಲ್ಕು ಜನ ಸಚಿವರೂ ಸೇರಿದಂತೆ ೪೪೫ ಜನ ಎ.ಐ.ಸಿ.ಸಿ. ಸದಸ್ಯರು ದೆಹಲಿಯ ಆಡಳಿತ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಲಿದ್ದಾರೆಂಬ ಸುದ್ದಿ ಹರಡಿತ್ತು. 'ರಾಜ್ಯ ಕಾಂಗ್ರೆಸ್‌ನಲ್ಲಿ ಒಡಕಿಲ್ಲ. ಈ ಸುದ್ದಿ ಕಿಡಿಗೇಡಿತನದ್ದು ಎಂದು ವಿರೇಂದ್ರ ಪಾಟೀಲರು ೧೮.೧೧.೬೯ ರಂದು ಹೇಳಿದರು. ನಕಲಿ ಕಾಂಗ್ರೆಸ್‌ಗೆ ಬೆಂಬಲ ಇಲ್ಲ ಎಂದು ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಡಾ। ನಾಗಪ್ಪ ಆಳ್ವ ಹೇಳಿ ಡಿಸೆಂಬರ್‌ನಲ್ಲಿ ಪಿ.ಸಿ.ಸಿ. ಅಧಿವೇಶನ ನಡೆಯಲಿದೆ ಎಂದರು.

ನವೆಂಬರ್ ೨೨,೨೫, ೧೯೬೯ರಂದು ದೆಹಲಿಯಲ್ಲಿ ನಡೆದ ಆಡಳಿತ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕದ ೩೪ ಜನ ಚುನಾಯಿತ ಎ.ಐ.ಸಿ.ಸಿ. ಸದಸ್ಯರ ಪೈಕಿ ೯ ಜನ ಹಾಜರಿದ್ದರೆಂದು ಒಂದು ಅಂದಾಜು. ಕೊಲ್ಲೂರು ಮಲ್ಲಪ್ಪನವರನ್ನು ಆಡಳಿತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ನಾಮಕರಣ ಸದಸ್ಯರನ್ನಾಗಿ ಮಾಡಲಾಯಿತು. ದೆಹಲಿ ಕಾಂಗ್ರೆಸ್ ಅಧಿವೇಶನದಲ್ಲಿ ರಾಜ್ಯದ ೩೬ ಭಿನ್ನಮತೀಯ ಕಾಂಗ್ರೆಸ್ ನಾಯಕರುಗಳು ಭಾಗವಹಿಸಿದ್ದರು. 'ಈ ಸುದ್ದಿ ದೊಂಬರಾಟದ್ದೆಂದು' ವೀರೇಂದ್ರ ಪಾಟೀಲ್ ಹೇಳಿದರು. (೨೫.೧೧.೬೯). ೨೭.೧೧.೬೯ ರಂದು ಆಡಳಿತ ಕಾಂಗ್ರೆಸ್ ಅಧ್ಯಕ್ಷ ಸಿ. ಸುಬ್ರಹ್ಮಣ್ಯಂರವರು ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ಸಸ್ಪೆಂಡ್ ಮಾಡಿ ೧೧ ಸದಸ್ಯರ ಅಡ್‌ಹಾಕ್ ಸಮಿತಿಯನ್ನು ನೇಮಿಸಿದರು. ಡಿ. ದೇವರಾಜ ಅರಸ್ ಈ ಸಮಿತಿಯ ಸಂಚಾಲಕರಾಗಿದ್ದರು. ಆರ್. ದಯಾನಂದ ಸಾಗರ್, ಕೆ.ಎಸ್. ನಾಗರತ್ನಮ್ಮ, ಎ.ಆರ್. ಬದರಿ ನಾರಾಯಣ್, ಪಿ. ವೆಂಕಟರಮಣ, ಕೆ.ಎನ್. ವೀರಪ್ಪಗೌಡ, ಕೆ.ಜಿ. ತಿಮ್ಮೇಗೌಡ, ಎಂ.ವಿ. ಕೃಷ್ಣಪ್ಪ, ಕೊಲ್ಲೂರು ಮಲ್ಲಪ್ಪ, ಆರ್.ಎಂ. ಪಾಟೀಲ್, ಎಸ್.ಆರ್. ಪಾಟೀಲ್ ಈ ಸಮಿತಿ ಸದಸ್ಯರಾಗಿದ್ದರು.

'ಅಡ್‌ಹಾಕ್ ಸಮಿತಿಗೆ ಯಾವುದೇ ಅಧಿಕಾರ ಇಲ್ಲ. ನನ್ನ ಸಂಪುಟ ಭದ್ರವಾಗಿದೆ. ನಾನು ಎಂದೂ ಪ್ರಗತಿ ವಿರೋಧ ನೀತಿ ಅನುಸರಿಸಿಲ್ಲ' ಎಂದು ವೀರೇಂದ್ರ ಪಾಟೀಲ್ ಹೇಳಿದರು. ೨೮.೧೧.೬೯ ರಂದು ರಾಜ್ಯ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿತು. ೨೪ ಸದಸ್ಯರಲ್ಲಿ ೨೨ ಸದಸ್ಯರು ಭಾಗವಹಿಸಿದ್ದರು. ಸಮಿತಿ ನಿಜಲಿಂಗಪ್ಪನವರಲ್ಲಿ ಅಚಲ ವಿಶ್ವಾಸ ವ್ಯಕ್ತಪಡಿಸಿತು. ಪ್ರದೇಶ ಕಾಂಗ್ರೆಸ್ ಬರ್ತರ್ಫ್ ಆಜ್ಞೆಯನ್ನು ತಿರಸ್ಕರಿಸಿತು. ಶ್ರೀಮತಿ ಇಂದಿರಾ ಗಾಂಧಿ ಗುಂಪು ರಾಜ್ಯದಲ್ಲಿ ವಿರೋಧ ಪಕ್ಷವಾಗಿ ಕೆಲಸ ಮಾಡುತ್ತದೆ ಎಂದು ಅಡ್‌ಹಾಕ್ ಕಾಂಗ್ರೆಸ್ ಸಮಿತಿ ಸಂಚಾಲಕ ದೇವರಾಜ ಅರಸರು ೧.೧೨.೬೯ ರಂದು ಪ್ರಕಟಿಸಿದರು. ನಿಜಲಿಂಗಪ್ಪನವರು ೧೯೬೯ರ ಡಿಸೆಂಬರ್ ಮೊದಲವಾರ ಬೆಂಗಳೂರಿನಲ್ಲಿದ್ದರು. ೧೦.೧೨.೬೮ರಂದು ಅವರ ೬೮ನೇ ಜನ್ಮದಿನದ ಪ್ರಯುಕ್ತ ಪುರಭವನದಲ್ಲಿ ಅವರಿಗೆ ಸನ್ಮಾನ ಸಮಾರಂಭ ಏರ್ಪಡಿಸಲಾಗಿತ್ತು. 'ಕಾಂಗ್ರೆಸ್ ಆಸ್ತಿ ವಿಭಜನೆ ವಿವಾದ ಅರ್ಥವಿಲ್ಲದ್ದು. ಅದು ಕಾಂಗ್ರೆಸ್ಸನ್ನು ಕಟ್ಟಿ ಬೆಳೆಸಿದವರಿಗೆ ಸೇರಿದ್ದು' ಎಂದರು. ರಾಜ್ಯದಲ್ಲಿ ಹಾಗೂ ಇತರ ರಾಜ್ಯಗಳಲ್ಲಿ ಕಾಂಗ್ರೆಸ್ ಭವನಗಳ ಬಗ್ಗೆ ಎರಡು ಗುಂಪುಗಳ ನಡುವೆ ಎದ್ದಿದ್ದ ವಿವಾದವನ್ನು ಗಮನದಲ್ಲಿ ಇಟ್ಟುಕೊಂಡು ಅವರು ಹೇಳಿದರು. ೬.೧೨.೬೯ರಂದು ಪ್ರದೇಶ ಕಾಂಗ್ರೆಸ್ ಅಡ್‌ಹಾಕ್ ಸಮಿತಿ ಬೆಂಗಳೂರಿನಲ್ಲಿ ಸಭೆ ಸೇರಿ, ಇಂದಿರಾ ಕಾಂಗ್ರೆಸ್ ಬಲಪಡಿಸಲು ಹಾಗೂ ಇಂದಿರಾ ಕಾಂಗ್ರೆಸ್ ತತ್ವಗಳನ್ನು ಪ್ರಚಾರ ಮಾಡಲು ನಿರ್ಧರಿಸಿತು.

ಮುಂದೆ ಮಧ್ಯಂತರ ಚುನಾವಣೆಗಳಿಗೆ ಮೊದಲು ಸಚಿವರಾದ ಮಹಮದ್ ಅಲಿ, ಕೆ. ಪುಟ್ಟಸ್ವಾಮಿ ಮೊದಲಾದವರು ಸೇರಿ, ಅನೇಕ ಶಾಸಕರು ಚುನಾವಣೆ ನಂತರ ವಿ. ಎಲ್. ಪಾಟೀಲ್ ಕೆ. ಪ್ರಭಾಕರ್, ಎನ್. ರಾಚಯ್ಯ ಇವರುಗಳು ವೀರೇಂದ್ರರ ಸಚಿವ ಸಂಪುಟಕ್ಕೆ ರಾಜೀನಾಮೆ ನೀಡಿದರು. ಕೆ. ಹೆಚ್. ಪಾಟೀಲರನ್ನು ಪಕ್ಷದಿಂದ ವಜಾ ಮಾಡಲಾಯಿತು. ಕೊನೆಗೆ ಡಿಸೆಂಬರ್ ೩೧, ೧೯೭೧ ರಂದು ವೀರೇಂದ್ರರ ಮಂತ್ರಿಮಂಡಲ ರಾಜೀನಾಮೆ ನೀಡಿತು. ಡಿ. ದೇವರಾಜ ಅರಸ್ ಸರ್ಕಾರ ರಚಿಸಲು ಒಪ್ಪಲಿಲ್ಲ. ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತ ಜಾರಿಗೆ ತರಲಾಯಿತು.

## ರಾಷ್ಟ್ರೀಯ ಮಟ್ಟದಲ್ಲಿ ಆಡಳಿತ ಕಾಂಗ್ರೆಸ್ ಪರಿಸ್ಥಿತಿ : ೧೯೭೧ - ಮಧ್ಯಂತರ ಚುನಾವಣೆ

ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು ಡಿಸೆಂಬರ್ ೨೭, ೧೯೭೦ ರಂದು, ಲೋಕಸಭೆಯನ್ನು ವಿಸರ್ಜಿಸಿ, ಮಧ್ಯಂತರ ಚುನಾವಣೆಗಳನ್ನು ನಡೆಸುವಂತೆ ರಾಷ್ಟ್ರಪತಿಗಳಿಗೆ ಶಿಫಾರಸ್ಸು ಮಾಡಿದರು. ಅದೇ ದಿನ ಅವರು ರಾಷ್ಟ್ರವನ್ನುದ್ದೇಶಿಸಿ ಭಾಷಣ ಮಾಡಿದರು. 'ಅಧಿಕಾರದಲ್ಲಿ ಹೇಗಾದರೂ ಮಾಡಿ ಉಳಿದುಕೊಳ್ಳುವುದು ಮುಖ್ಯವಲ್ಲ, ಆ ಅಧಿಕಾರವನ್ನು ಉಪಯೋಗಿಸಿ ಜನತೆಯ ಕಲ್ಯಾಣವನ್ನು ಸಾಧಿಸುವುದೇ ಮುಖ್ಯ'ವೆಂದು ಅವರು ಹೇಳಿದರು. 'ಈಗಿನ ಪರಿಸ್ಥಿತಿಯಲ್ಲಿ ನಮ್ಮ ಭರವಸೆಗಳನ್ನು ಉಳಿಸಿಕೊಂಡು ನಾವು ಘೋಷಿಸಿದ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲು ಸಾಧ್ಯವಾಗದೇ ಹೋದುದಕ್ಕಾಗಿಯೇ ಮಧ್ಯಂತರ ಚುನಾವಣೆಗಳನ್ನು ಘೋಷಿಸಲಾಗುತ್ತಿದೆ' ಎಂದು ಅವರು ಹೇಳಿದರು. ೨೯, ೧೯೭೦ರಂದು ಅವರು ದೆಹಲಿಯಲ್ಲಿ ಚುನಾವಣಾ ಪ್ರಚಾರವನ್ನು ಉದ್ಘಾಟಿಸಿ ಮಾತನಾಡುತ್ತಾ ''ಪಟ್ಟಭದ್ರ ಹಿತಾಸಕ್ತಿಗಳು, ಬಂಡವಾಳಷಾಹಿಗಳು ಅಭಿವೃದ್ಧಿಗೆ ಅಡಚಣೆ ಒಡ್ಡುತ್ತಿದ್ದಾರೆಂದು'' ಹರಿಹಾಯ್ದರು. ''ಬಂಡವಾಳವನ್ನು ಕೂಡಿ ಹಾಕಿಕೊಂಡಿರುವವರು ಸರ್ಕಾರದ ಕಾರ್ಯಕ್ರಮಗಳನ್ನು ಬದಲಾಯಿಸಲು ಒತ್ತಡ ಹೇರುತ್ತಿದ್ದಾರೆಂದು'' ಅವರು ಹೇಳಿದರು. ಈ ಬಂಡವಾಳಷಾಹಿಗಳ ಹಿಡಿತದಿಂದ ದೇಶದ ಆರ್ಥಿಕ ವ್ಯವಸ್ಥೆಯನ್ನು ಮುಕ್ತಗೊಳಿಸಿ ಸಮಾಜವಾದಿ ಸಮಾಜ ನಿರ್ಮಾಣ ಮಾಡುವುದೇ ನನ್ನ ಗುರಿಯಾಗಿದೆ. ಇದಕ್ಕೆ ದೇಶದ ಜನ ಬೆಂಬಲ ನೀಡಬೇಕೆಂದು ಮನವಿ ಮಾಡಿದರು. ಪ್ರಜಾಪ್ರಭುತ್ವ ಹಾಗೂ ಜಾತ್ಯತೀತ ತತ್ವಗಳ ಆಧಾರದ ಮೇಲೆ ನಿರ್ಭಯವಾಗಿ ಮತದಾನ ಮಾಡುವಂತೆ ಅವರು ಅಲಹಾಬಾದ್‌ನಲ್ಲಿ ಜನತೆಗೆ ಕರೆ ನೀಡಿದರು.

ಕಮ್ಯುನಿಸ್ಟ್ ಅಥವಾ ಮುಸ್ಲಿಂ ಲೀಗ್ ಬೆಂಬಲ ತಮಗೆ ಬೇಕಾಗಿಲ್ಲವೆಂದು ಅವರು ಹೇಳಿ, ಆಡಳಿತ ಕಾಂಗ್ರೆಸ್ ಏಕಾಂಗಿಯಾಗಿ ಚುನಾವಣೆಯನ್ನು ಎದುರಿಸುವುದೆಂದು ೧೦.೧.೭೧ ರಂದು ಹೇಳಿದರು. ಸಮಾಜವಾದ ಸ್ಥಾಪನೆಯೇ ನನ್ನ ಜೀವನದ ಮುಖ್ಯ ಗುರಿ ಎಂದು ೧೬.೧.೭೧ರಂದು ಸೂರತ್‌ನಲ್ಲಿ, ಮೂಲ ಕಾಂಗ್ರೆಸ್ಸನ್ನು ತಾವು ಬಿಟ್ಟಿಲ್ಲ, ನಮ್ಮದೇ ನೈಜ ಕಾಂಗ್ರೆಸ್ ಎಂದು ಅದೇ ದಿನ ರಾಜಕೋಟೆಯಲ್ಲಿ ಹೇಳಿದರು. ಅಗತ್ಯ ವಸ್ತುಗಳ ಬೆಲೆ ಇಳಿಸಲು ತೀವ್ರ ಕ್ರಮ ಕೈಗೊಳ್ಳುವುದಾಗಿ ೧೭.೧.೭೧ರಂದು ಮುಂಬಯಿನಲ್ಲಿ ಹೇಳಿದರು. ಪ್ರಬಲ ಗುಂಪಿನ ಕೈಗೊಂಬೆ ಆಗಿದ್ದರೆ ತಾವು ಎಂದೆಂದೂ ಅಧಿಕಾರದಲ್ಲಿ ಉಳಿಯಬಹುದಾಗಿತ್ತು. ಅದು ಮುಖ್ಯವಲ್ಲ, ಜನತೆಯ ಕಲ್ಯಾಣವೇ ಮುಖ್ಯ ಎಂದು ೭.೨.೭೧ ರಂದು ವೆಲ್ಲೂರಿನಲ್ಲಿ, ನಾನು ಮತ್ತೆ ಪ್ರಧಾನಿ ಆಗಬಹುದು ಅಥವಾ ಆಗದಿರಬಹುದು, ಕಾಂಗ್ರೆಸ್ ಪಕ್ಷದ ಜನ ಕಲ್ಯಾಣ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳು ಎಂದಿಗೂ ನಿಲ್ಲದೇ ಮುಂದುವರಿಯಬೇಕೆಂದು ಮದ್ರಾಸ್‌ನಲ್ಲಿ ಹೇಳಿದರು. ತಮ್ಮ ಪದಚ್ಯುತಿಯೇ ಮೈತ್ರಿಕೂಟದ ಏಕೈಕ ಗುರಿ. ನಮ್ಮ ಗುರಿ ಗರೀಬಿ ಹಟಾವೋ. ಆದರೆ ವಿರೋಧಿ ಪಕ್ಷಗಳ ಗುರಿ ಇಂದಿರಾ ಹಟಾವೋ ಆಗಿದೆ ಎಂದು ಶ್ರೀಮತಿ ಇಂದಿರಾ ಗಾಂಧಿ ಚುನಾವಣಾ ಪ್ರಚಾರದಲ್ಲಿ ಪ್ರಧಾನವಾಗಿ ಪ್ರಸ್ತಾಪ ಮಾಡಿದರು. ಸಮ್ಮಿಶ್ರ ಸರ್ಕಾರಗಳಿಂದ ದೇಶದ ಪ್ರಗತಿ ರಕ್ಷಣೆ ಸಾಧ್ಯವಿಲ್ಲ ಎಂಬುದೂ ಅವರ ಮುಖ್ಯ ಪ್ರಚಾರವಾಗಿತ್ತು.

ಶ್ರೀಮತಿ ಇಂದಿರಾಗಾಂಧಿಯವರು ಜನವರಿ ೧೩ ರಿಂದ ೫೨ ದಿನಗಳ ಕಾಲ ದೇಶಾದ್ಯಂತ ಬಿರುಗಾಳಿಯಂತೆ ಪ್ರಚಾರ ಕಾರ್ಯ ಕೈಗೊಂಡರು. ೪೧ ದಿನಗಳ ಪ್ರವಾಸದಲ್ಲಿ ೩೦,೦೦೦ ಮೈಲಿ ಸಂಚರಿಸಿದರು. ಅದರಲ್ಲಿ ೩೦೦೦ ಮೈಲಿ ರಸ್ತೆಗಳ ಮೂಲಕ ಪ್ರಯಾಣ ಮಾಡಿದರು. ೨೫೨ ಭಾರೀ ಬಹಿರಂಗ ಸಭೆಗಳನ್ನು, ೫೭ ರಸ್ತೆ ಬದಿಯ ಬಹಿರಂಗ ಸಭೆಗಳನ್ನು ಉದ್ದೇಶಿಸಿ ಪ್ರಚಾರ ಮಾಡಿದರು. ಮೊದಲೇ ಏರ್ಪಡಿಸಿದ್ದ ಭಾರೀ ಬಹಿರಂಗ ಸಭೆಗಳಲ್ಲಿ ೧೩ ಮಿಲಿಯನ್ ಜನರು ಸೇರಿದ್ದರೆ, ರಸ್ತೆ ಬದಿಯಲ್ಲಿ ನಡೆಸಿದ ಸಭೆಗಳಲ್ಲಿ ೭.೮ ಮಿಲಿಯನ್ ಜನ ಸೇರಿದ್ದರು ಎಂದು ಅಂದಾಜು ಮಾಡಲಾಗಿದೆ. ಶ್ರೀಮತಿ ಇಂದಿರಾಗಾಂಧಿಯವರು ಮೈಸೂರು ರಾಜ್ಯದಲ್ಲಿ ೧೫ ಬಹಿರಂಗ ಸಭೆಗಳನ್ನುದ್ದೇಶಿಸಿ ಚುನಾವಣಾ ಪ್ರಚಾರ ಮಾಡಿದರು. ಅವರ ಬಿಡುವರಿಯದ ಓಡಾಟ, ಉತ್ಸಾಹ, ಅವರ ಸಭೆಗಳಿಗೆ ಸೇರುತ್ತಿದ್ದ ಜನಸಮೂಹವನ್ನು ಕಂಡು ವಿರೋಧ ಪಕ್ಷಗಳು ದಂಗಾಗಿ ಹೋದವು. ಅವರ ಕಡು ವಿರೋಧಿಗಳು ಕೂಡಾ ಪರಿಣಾಮಕಾರಿ ಭಾಷಣದಿಂದ ಜನ ಸಮೂಹವನ್ನು ಆಕರ್ಷಿಸುವ ಅವರ ಪ್ರಭಾವಶಾಲಿ ವ್ಯಕ್ತಿತ್ವಕ್ಕೆ ಬೆರಗಾಗಿ ಹೋದರು.

## ೧೯೭೧ - ಮಧ್ಯಂತರ ಚುನಾವಣೆ

### ಆಡಳಿತ ಕಾಂಗ್ರೆಸ್ - ಮೈಸೂರು ರಾಜ್ಯದಲ್ಲಿ

ರಾಜ್ಯ ವಿಧಾನಸಭೆಯನ್ನು ವಿಸರ್ಜಿಸುವ ಅಗತ್ಯ ಇಲ್ಲ ಎಂದು ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ೧.೧೨.೬೯ ರಂದು ತಿಳಿಸಿದರು. ರಾಜ್ಯದ ಎಲ್ಲಾ ಸ್ಥಾನಗಳಿಗೆ ಸಂಸ್ಥಾ ಕಾಂಗ್ರೆಸ್ ಮೈತ್ರಿಕೂಟದ ಸ್ಪರ್ಧೆ ಖಚಿತ ಎಂದು ರಾಜ್ಯ ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷ ನಾಗಪ್ಪ ಆಳ್ವ ಹೇಳಿಕೆ ನೀಡಿದರು. ಹೊಸ ವರ್ಷದ (೧೯೭೦) ಆರಂಭದ ದಿನದಂದೇ ರಾಜ್ಯ ಪಿ.ಎಸ್.ಪಿ.ಯಲ್ಲಿ ತಳಮಳ ಆರಂಭ ವಾಯಿತು. ಲೋಕಸಭಾ ಸದಸ್ಯರಾದ ಎಸ್. ಎಂ. ಕೃಷ್ಣ, ಕೆ. ಲಕ್ಕಪ್ಪ, ವಿಧಾನಸಭಾ ಸದಸ್ಯರುಗಳಾದ ಕೆ. ಎಚ್. ರಂಗನಾಥ್, ಸಿ.ಕೆ. ರಾಜಯ್ಯ ಶೆಟ್ಟಿ, ವಿ.ಎಲ್. ಶಿವಪ್ಪ, ಸಿ.ಎಂ.ಎಸ್. ಶಾಸ್ತ್ರಿ ಬಿ. ಭಾಸ್ಕರ್ ಶೆಟ್ಟಿ, ಎಂ.ಎಂ. ಜಾಲಿಸತಿ, ಎಂ.ಎಚ್. ಜಯಪ್ರಕಾಶ ನಾರಾಯಣ್ ಇವರುಗಳು ಆಡಳಿತ ಕಾಂಗ್ರೆಸ್ ಸೇರಲು ನಿರ್ಧರಿಸಿದರು. ಅದೇ ರೀತಿ ಪಿ. ಎಸ್. ಪಿ. ಜಂಟಿ ಕಾರ್ಯದರ್ಶಿ ರಾಮಚಂದ್ರ ಶೆಟ್ಟಿ, ಪಿ.ಎಸ್.ಪಿ. ಮುಖಂಡರುಗಳಾದ ಬಿ.ಜಿ. ಭಗವಾನ್, ಎಂ. ಲಿಂಗಯ್ಯ, ಜಿ. ವಿ. ಆಚಾರ್ಯ, ಕೆ. ತಿಮ್ಮಪ್ಪ, ದಾವಣಗೆರೆ ಪುರಸಭಾಧ್ಯಕ್ಷ ಸಿ. ಕೇಶವಮೂರ್ತಿ, ಎಸ್. ಕೆ. ಚಿಕ್ಕಣ್ಣ, ರಾಮೇಗೌಡ ಮುಂತಾದವರುಗಳು ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆಯಾದರು. ಇವರ ಜೊತೆಗೆ ತುಮಕೂರು ಜಿಲ್ಲೆಯಲ್ಲಿ ೨೦೦೦ ಕಾರ್ಯಕರ್ತರು, ಮಂಡ್ಯದಲ್ಲಿ ೧೦೦೦, ಮಂಗಳೂರಿನಲ್ಲಿ ೧೦೦೦, ಬೆಂಗಳೂರಿನಲ್ಲಿ ೧೦,೦೦೦ ಪಿ. ಎಸ್. ಪಿ. ಕಾರ್ಯಕರ್ತರು ಆಡಳಿತ ಕಾಂಗ್ರೆಸ್ ಸೇರಿದರು. ಒಂದು ರೀತಿಯಲ್ಲಿ ಪಿ.ಎಸ್.ಪಿ. ಆಡಳಿತ ಕಾಂಗ್ರೆಸ್‌ನಲ್ಲಿ ವಿಲೀನವಾದಂತಾಯಿತೆಂದು ಹೇಳಬಹುದು. ೪.೧.೭೧ರಂದು ಮಂಗಳೂರಿನಲ್ಲಿ ೧೫೦ ಜನ ಸಂಸ್ಥಾ ಕಾಂಗ್ರೆಸ್ ಸದಸ್ಯರು ಆಡಳಿತ ಕಾಂಗ್ರೆಸ್ ಸೇರಿದರು.

೪.೧.೭೧ ರಂದು ಚುನಾವಣಾ ಪ್ರಕಟಣೆ ಹೊರಬಿತ್ತು. ಫೆಬ್ರವರಿ ೨೮ ಮತ್ತು ಮಾರ್ಚ್ ೪ ರಂದು ರಾಜ್ಯದಲ್ಲಿ ಮತದಾನ ನಡೆಯುವುದೆಂದು ನಿಗದಿ ಆಯಿತು. ಆಡಳಿತ ಕಾಂಗ್ರೆಸ್ ಪಾಳೆಯದಲ್ಲಿ ಬಿರುಸಿನ ಚಟುವಟಿಕೆ ಆರಂಭವಾಯಿತು. ತಾವು ಆಡಳಿತ ಕಾಂಗ್ರೆಸ್ ಪಕ್ಷ ದೊಡನೆ ಮೈತ್ರಿ ಮಾಡಿಕೊಳ್ಳುವುದಿಲ್ಲವೆಂದು ಪಿ.ಎಸ್.ಪಿ. ಅಧ್ಯಕ್ಷ ಶಿವಪ್ಪ ಪ್ರಕಟಿಸಿದರು ೬.೧.೭೧ರ ಹೊತ್ತಿಗೆ ರಾಜ್ಯ ಆಡಳಿತ ಕಾಂಗ್ರೆಸ್ ೨೦ ಸ್ಥಾನಕ್ಕೆ ತನ್ನ ಅಭ್ಯರ್ಥಿಗಳ ಆಯ್ಕೆ ಮಾಡಿ ಮುಗಿಸಿತ್ತು. 'ಯಾವುದೇ ಪಕ್ಷದೊಂದಿಗೆ ಆಡಳಿತ ಕಾಂಗ್ರೆಸ್ ಮೈತ್ರಿ ಇಲ್ಲ'ವೆಂದು ಅದರ ಸಂಚಾಲಕ ದೇವರಾಜ ಅರಸು ಪ್ರಕಟಿಸಿದರು.

ದಿನಾಂಕ ೧೩.೧.೭೧ ರಂದು ಬೆಂಗಳೂರಿನಲ್ಲಿ ಕಾಂಗ್ರೆಸ್ ಭವನ ಸ್ವಾಧೀನಕ್ಕೆ ಜೆ. ಲಿಂಗಯ್ಯ ನೇತೃತ್ವದಲ್ಲಿ ಆಡಳಿತ ಕಾಂಗ್ರೆಸ್‌ನ ೩೦ ಜನ ಸದಸ್ಯರು ನುಗ್ಗಿದಾಗ ಪ್ರಕ್ಷುಬ್ಧ ವಾತಾವರಣ ಉಂಟಾಯಿತು. ಸಂಸ್ಥಾ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಬಿ. ಜೆ. ಲಿಂಗೇಗೌಡ ಪೋಲೀಸರಿಗೆ ದೂರು ನೀಡಿದರು. ಭವನಕ್ಕೆ ಪೋಲೀಸ್ ಕಾವಲು ಹಾಕಲಾಯಿತು. ಚುನಾವಣಾ ಹೋರಾಟದಲ್ಲಿ ಸಹಕಾರ ನೀಡುವಂತೆ ಪಿ.ಎಸ್.ಪಿ. ಗೆ ದೇವರಾಜ ಅರಸು ಮನವಿ ಮಾಡಿದರು. ಒಪ್ಪಂದ ಆಗದಿದ್ದರೆ ಏಕಾಂಗಿಯಾಗಿ ಸ್ಪರ್ಧೆ ಮಾಡುವುದಾಗಿಯೂ ತಿಳಿಸಿದರು. ೧೭.೧.೭೧ರಂದು ಮಂಗಳೂರಿನಲ್ಲಿ ನಡೆಯಲಿರುವ ಜಿಲ್ಲಾ ಕಾಂಗ್ರೆಸ್ ಮೇಳದಲ್ಲಿ ಆಡಳಿತ ಕಾಂಗ್ರೆಸ್ ಚುನಾವಣಾ ಪ್ರಚಾರ ಉದ್ಘಾಟನೆಯಾಗುವುದೆಂದು ಅವರು ಹೇಳಿದರು. ಆಡಳಿತ ಕಾಂಗ್ರೆಸ್ ಆಹ್ವಾನವನ್ನು ಪಿ.ಎಸ್.ಪಿ. ತಿರಸ್ಕರಿಸಿತು. ಈ ಮಧ್ಯೆ ಬೆಂಗಳೂರು ಮಹಾನಗರ ಪಾಲಿಕೆಯ ಮೇಯರ್ ಚುನಾವಣೆ ನಡೆಯಿತು. ಆಡಳಿತ ಕಾಂಗ್ರೆಸ್ ಪಕ್ಷದ ಜೆ. ಲಿಂಗಯ್ಯನವರು ೩೯-೨೨ ಮತಗಳ ಅಂತರದಿಂದ ಮೇಯರ್ ಸ್ಥಾನಕ್ಕೆ ಆಯ್ಕೆಯಾದರು. ಸಂಸ್ಥಾ ಕಾಂಗ್ರೆಸ್ ಅಭ್ಯರ್ಥಿ ಟಿ. ಆರ್. ಶಾಮಣ್ಣ ಸೋತುಹೋದರು. ಇದು ಮುಂದಿನ ಚುನಾವಣೆಯ ದಿಕ್ಸೂಚಿ ಆಗಿತ್ತೆನ್ನಬಹುದು.

೨೪.೧.೭೧ ರಂದು ಜಮಖಂಡಿ ಕ್ಷೇತ್ರದಲ್ಲಿ ಮೊದಲೇ ನಿಗದಿ ಆಗಿದ್ದಂತೆ ವಿಧಾನಸಭಾ ಉಪಚುನಾವಣೆ ನಡೆಯಿತು. ಸಂಸ್ಥಾ ಕಾಂಗ್ರೆಸ್ ಪಕ್ಷದ ಅಭ್ಯರ್ಥಿ ಶೈಲಪ್ಪ ಅಥಣಿ ಅವರು ಆಡಳಿತ ಕಾಂಗ್ರೆಸ್ ಅಭ್ಯರ್ಥಿಯಾದ ಪಿ. ಎಂ. ಭಂಗಿ ಅವರಿಗಿಂತ ೧೫೦೦ ಮತಗಳನ್ನು ಹೆಚ್ಚಾಗಿ ಪಡೆದು ಆಯ್ಕೆಯಾದರು. ೨೯ ಜನವರಿ ೭೧ ರಂದು ರಾಜ್ಯ ಸಾರಿಗೆ ಸಚಿವ ಮಹಮದ್ ಅಲಿ, ವಿಧಾನ ಪರಿಷತ್ ಸದಸ್ಯ ಆಂಜನೇಯ ರೆಡ್ಡಿ, ಮಾಜಿ ಮಂತ್ರಿ ನಾರಾಯಣಗೌಡ, ಮಾಜಿ ಶಾಸಕ ವೆಂಕಟರಾಯಪ್ಪ ಆಡಳಿತ ಕಾಂಗ್ರೆಸ್‌ಗೆ ಸೇರಿದರು. ೩೦.೧.೭೧ರಂದು ರಾಜ್ಯ ಕಾನೂನು ಸಚಿವ ಕೆ. ಪುಟ್ಟಸ್ವಾಮಿ ಸಂಸ್ಥಾ ಕಾಂಗ್ರೆಸ್‌ಗೆ ರಾಜೀನಾಮೆ ನೀಡಿ ಆಡಳಿತ ಕಾಂಗ್ರೆಸ್ ಸೇರಿದರು. ಶಿರಸಿಯಲ್ಲಿ ೪೨ ಪಿ.ಎಸ್.ಪಿ. ಕಾರ್ಯಕರ್ತರು ರಾಜೀನಾಮೆ ನೀಡಿ ಆಡಳಿತ ಕಾಂಗ್ರೆಸ್ ಸೇರಿದರು. ಸಂಸ್ಥಾ ಕಾಂಗ್ರೆಸ್ ಪಕ್ಷದ ಮಹಾ ಮೈತ್ರಿಕೂಟವು ರಾಜ್ಯದ ೨೭ ಸ್ಥಾನಗಳಿಗೆ ಹೊಂದಾಣಿಕೆ ಮಾಡಿಕೊಳ್ಳುವುದರಲ್ಲಿ ಯಶಸ್ವಿ ಆಯಿತು. ಸ್ವತಂತ್ರ ಪಕ್ಷಕ್ಕೆ ೪, ಜನಸಂಘಕ್ಕೆ

೮, ಪಿ.ಎಸ್.ಪಿ. ಗೆ ೨, ಎಸ್.ಎಸ್.ಪಿ. ಗೆ ಒಂದು, ಎಲ್.ಎಸ್.ಎಸ್.ಗೆ ೧ ಕ್ಷೇತ್ರಗಳನ್ನು ನೀಡಿ ಉಳಿದ ಕ್ಷೇತ್ರಗಳಲ್ಲಿ ತಾನು ಸ್ಪರ್ಧಿಸಲು ತೀರ್ಮಾನಿಸಿತು. ಎಸ್. ನಿಜಲಿಂಗಪ್ಪನವರೇ ಕ್ಷೇತ್ರಗಳ ಹಂಚಿಕೆ ಮಾಡಿದರು.

ನಾಮಪತ್ರ ಸಲ್ಲಿಸುವ ಕೊನೆಯ ದಿನದ ಹೊತ್ತಿಗೆ ೨೭ ಕ್ಷೇತ್ರಗಳಿಗೆ ೪೦೭ ಅಭ್ಯರ್ಥಿಗಳು ತಮ್ಮ ನಾಮಪತ್ರಗಳನ್ನು ಸಲ್ಲಿಸಿದ್ದರು. ಶ್ರೀಮತಿ ಇಂದಿರಾ ಗಾಂಧಿಯವರು ಜನವರಿ ೧೧, ೧೨, ೧೯೭೧ ರಂದು ರಾಜ್ಯದಲ್ಲಿ ಪ್ರವಾಸ ಮಾಡಿದರು. ನೆಲ ಜಲ ವಿವಾದಗಳಲ್ಲಿ ರಾಜ್ಯಕ್ಕೆ ಅನ್ಯಾಯವಾಗದಂತೆ ನೋಡಿಕೊಳ್ಳುವುದಾಗಿ ಹೇಳಿದ ಅವರು, ಸ್ಥಳೀಯ ಸಮಸ್ಯೆಗಳು ಅಮುಖ್ಯ, ಮೂಲಭೂತ ತತ್ವ ಸಿದ್ಧಾಂತಗಳು ಮುಖ್ಯ ಎಂದೂ ಹೇಳಿದರು. 'ಕಾವೇರಿ ಸಮಸ್ಯೆಯನ್ನು ಪಂಚಾಯತಿಗೆ ಒಪ್ಪಿಸಿದರೆ ಉಗ್ರಕ್ರಮ' ಎಂದು ಮುಖ್ಯಮಂತ್ರಿ ವೀರೇಂದ್ರಪಾಟೀಲ್ ಕೇಂದ್ರಕ್ಕೆ ಎಚ್ಚರಿಕೆ ನೀಡಿದರು. 'ಮಹಾಜನ್ ವರದಿ ಜಾರಿಗೆ ಮೈತ್ರಿಕೂಟ ಪೂರ್ಣ ಬದ್ಧವಾಗಿವೆ' ಎಂದು ಎಂ. ಎಸ್. ಗುರುಪಾದಸ್ವಾಮಿ ಮುಂತಾದ ಸಂಸ್ಥಾ ಕಾಂಗ್ರೆಸ್ ನಾಯಕರು ಆಶ್ವಾಸನೆ ನೀಡಿದರು. ಮಾರ್ಚ್ ೪ ಮತ್ತು ೭ ರಂದು ರಾಜ್ಯದಲ್ಲಿ ಮತದಾನ ನಡೆಯಿತು. ಆಡಳಿತ ಕಾಂಗ್ರೆಸ್ ಪಕ್ಷವು ಏಕಾಂಗಿಯಾಗಿ ಚುನಾವಣೆಗೆ ಸ್ಪರ್ಧಿಸಿ ತನ್ನ ಪ್ರಣಾಳಿಕೆಯನ್ನು ಪ್ರಕಟಿಸಿತು. ಮೈತ್ರಿಕೂಟ ಒಟ್ಟಾರೆಯಾಗಿ ಒಂದು ಚುನಾವಣಾ ಪ್ರಣಾಳಿಕೆಯನ್ನು ಕೊನೆ ಕೊನೆಗೆ ಪ್ರಕಟಿಸಿತು. ಆದರೆ ಅವುಗಳ ಜತೆಯಲ್ಲಿ ಪ್ರತ್ಯೇಕ ಪ್ರಣಾಳಿಕೆಗಳೂ ಇರುತ್ತವೆಂದು ಹೇಳಲಾಯಿತು.

**ಆಡಳಿತ ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆ**

೧. ಕೃಷಿ ಕ್ಷೇತ್ರದ ತೀವ್ರ ಅಭಿವೃದ್ಧಿ. ವೈಜ್ಞಾನಿಕ ವಿಧಾನಗಳನ್ನು ಅಳವಡಿಸುವುದು. ಸಣ್ಣ ಹಾಗೂ ಅತಿಸಣ್ಣ ರೈತರಿಗೆ ಕೃಷಿ ಕ್ಷೇತ್ರದ ಅಭಿವೃದ್ಧಿಯಲ್ಲಿ ಸೂಕ್ತ ಫಲ ದೊರಕುವಂತೆ ಮಾಡುವುದು.

೨. ಕೃಷಿ ಕ್ಷೇತ್ರದಲ್ಲಿ ಸುಧಾರಣೆ. ಭೂ ಒಡೆತನದ ಅನಿಶ್ಚಿತತೆಯ ನಿವಾರಣೆ. ಭೂ ಒಡೆತನದಲ್ಲಿನ ಅನಿಶ್ಚಿತತೆಯಿಂದ ಕೃಷಿಯಲ್ಲಿ ವೈಜ್ಞಾನಿಕ ವಿಧಾನ ಅಳವಡಿಕೆಗೆ ಹಾಗೂ ಅಭಿವೃದ್ಧಿಗೆ ಅಡ್ಡಿಯಾಗಿದೆ.

೩. ಈಗ ಜಾರಿಯಲ್ಲಿರುವ ಭೂ ಸುಧಾರಣೆಯನ್ನು ಸರಿಯಾಗಿ ಜಾರಿಗೊಳಿಸದಿರುವುದು ಕೃಷಿ ಕ್ಷೇತ್ರದ ಅಭಿವೃದ್ಧಿಗೆ ಅಡ್ಡಿಯಾಗಿದೆ. ಆದುದರಿಂದ ಭೂ ಸುಧಾರಣಾ ಕಾನೂನುಗಳನ್ನು ತೀವ್ರವಾಗಿ ಜಾರಿಗೆ ತರುವುದು.

೪. 'ಹಸಿರು ಕ್ರಾಂತಿ' ಎಂಬುದು ನೀರಾವರಿ ಪ್ರದೇಶಗಳಿಗೆ ಸೀಮಿತವಾಗಿದೆ. ಸಣ್ಣ ಸಣ್ಣ ರೈತರಿಗೆ ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಳ್ಳಲು ಸಾಧ್ಯವಾಗಿಲ್ಲ. ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕ ಸಾಲ ನೀಡಿಕೆ, ಭೂಸುಧಾರಣೆ ಕಾನೂನುಗಳ ಮೂಲಕ ಭೂ ಒಡೆತನ ನೀಡಿಕೆ ಇವುಗಳ ಮೂಲಕ ಸಣ್ಣ ಸಣ್ಣ ರೈತರೂ ಕೂಡಾ ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡು ಹಸಿರು ಕ್ರಾಂತಿಯಲ್ಲಿ ಪಾಲ್ಗೊಂಡು ಅದು ಫಲ ಪಡೆಯುವಂತೆ ಕ್ರಮ.

೫. ಅಂತರ್ಜಲವನ್ನು ಪೂರ್ಣವಾಗಿ ಉಪಯೋಗಿಸಿಕೊಂಡು ಒಣಬೇಸಾಯ ಅಭಿವೃದ್ಧಿ. ಸಣ್ಣ ಸಣ್ಣ ನೀರಾವರಿ ಯೋಜನೆಗಳ ವಿಸ್ತರಣೆ.

೬. ಗ್ರಾಮೀಣ ಪ್ರದೇಶದ ಬಡವರಿಗೆ, ಕೃಷಿ ಕಾರ್ಮಿಕರಿಗೆ, ಕೂಲಿಗಾರರಿಗೆ ಕೆಲಸ ಒದಗಿಸುವುದು.

೭. ಹಳ್ಳಿಯ ಜೀವನ ಮಟ್ಟದ ಸುಧಾರಣೆ, ಹಳೆಯ ಪದ್ಧತಿಗಳು ಹಾಗೂ ಹೊಸ ವೈಜ್ಞಾನಿಕ ಪದ್ಧತಿಗಳನ್ನು ಅಳವಡಿಸಿಕೊಂಡು ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವುದು.

೮. ಬ್ಯಾಂಕ್ ರಾಷ್ಟ್ರೀಕರಣದ ನಂತರ ಸಣ್ಣ ಸಣ್ಣ ರೈತರಿಗೆ ಹಿಡುವಳಿದಾರರಿಗೆ ಸ್ವಯಂ ಉದ್ಯೋಗಿಗಳಿಗೆ ಸಾಲ ನೀಡುವುದಕ್ಕೆ ಸೂಕ್ತವಾದ ನೀತಿಯನ್ನು ರೂಪಿಸುವುದು. ಇವರುಗಳಿಗೆ ಸಾಲ ನೀಡಲು ಬ್ಯಾಂಕ್ ನಿಯಮಗಳಿಗೆ ಸೂಕ್ತ ತಿದ್ದುಪಡಿ ತರುವುದು.

೯. ೧೯೩೧ರಿಂದಲೇ ಕಾಂಗ್ರೆಸ್ ಸಾರ್ವಜನಿಕ ಕ್ಷೇತ್ರದಲ್ಲಿ ಕೈಗಾರಿಕೆಗಳ ಅಭಿವೃದ್ಧಿಯನ್ನು ಪ್ರತಿಪಾದಿಸಿಕೊಂಡು ಬಂದಿದೆ. ಸಾರ್ವಜನಿಕ ಕ್ಷೇತ್ರದ ಉದ್ಯಮಗಳು ಬೆಳೆಯಬೇಕು ಹಾಗೂ ಅವು ಜನಗಳ ಕೈಯಲ್ಲಿ ಇರಬೇಕು. ಅವು ಇನ್ನೂ ಹೆಚ್ಚು ಸಂಪನ್ಮೂಲಗಳನ್ನು ರೂಢಿಸಿಕೊಳ್ಳುವ ರೀತಿಯಲ್ಲಿ ಮುನ್ನಡೆಯಬೇಕು.

೧೦. ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳಲ್ಲಿ ಆಡಳಿತ ವರ್ಗ ಹಾಗೂ ಕೆಲಸಗಾರರು ಇಬ್ಬರೂ ಕೂಡಿ ಗುರಿ ಸಾಧಿಸಲು ಅರ್ಪಣಾ ಮನೋಭಾವ, ಶ್ರದ್ಧೆ ಶಿಸ್ತಿನಿಂದ ದುಡಿಯಲು ಸೂಕ್ತ ವಾತಾವರಣ ಕಲ್ಪಿಸುವುದು.

೧೧. ಆಡಳಿತದಲ್ಲಿ ಕಾರ್ಮಿಕರು ಪಾಲುಗೊಳ್ಳಲು ಅಗತ್ಯವಾದ ಹೊಸ ವಿಧಾನಗಳನ್ನು ಆದಷ್ಟು ಬೇಗ ಜಾರಿಗೆ ತರುವುದು.

೧೨. ಭಾರತದ ಆಹಾರ ನಿಗಮದ ವಿಸ್ತರಣೆ. ಆಹಾರಧಾನ್ಯ ವಿತರಣೆಗೆ ರಾಷ್ಟ್ರೀಯ ಪಾಲಿಸಿ. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಬಲಪಡಿಸುವುದು.

೧೩. ಖಾಸಗಿ ಉದ್ಯಮಗಳಿಗೆ ಸಾಕಷ್ಟು ರಿಯಾಯಿತಿಗಳು.

೧೪. ಅಲ್ಪಸಂಖ್ಯಾತರ ಹಕ್ಕುಗಳು ಮತ್ತು ಹಿತಾಸಕ್ತಿಯ ರಕ್ಷಣೆ. ಅಲ್ಪಸಂಖ್ಯಾತರ ಭಾಷೆಗಳಿಗೆ ಪ್ರೋತ್ಸಾಹ. ಎಲ್ಲಾ ರಂಗದಲ್ಲೂ ಅವರು ಮುಕ್ತವಾಗಿ ಪಾಲ್ಗೊಳ್ಳಲು ಅವಕಾಶ ಹಾಗೂ ಅದಕ್ಕೆ ಈಗಿರುವ ತಾರತಮ್ಯಗಳನ್ನು ನಿವಾರಣೆ ಮಾಡುವುದು. ಅವರ ಆರ್ಥಿಕ, ಸಾಮಾಜಿಕ ಸಮಸ್ಯೆಗಳ ನಿವಾರಣೆಗೆ ಕ್ರಮ. ಅಲ್ಪಸಂಖ್ಯಾತರು ಶಿಕ್ಷಣ ಸಂಸ್ಥೆಗಳನ್ನು ಸ್ವತಂತ್ರವಾಗಿ ಸ್ಥಾಪಿಸಿ ನಡೆಸಲು ಅವಕಾಶ.

೧೫. ಹಿಂದುಳಿದ ವರ್ಗಗಳ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಿತಾಸಕ್ತಿಯ ರಕ್ಷಣೆಗೆ ಪ್ರೋತ್ಸಾಹಕ್ಕೆ ಕ್ರಮ. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳಿಗೆ ವಿಶೇಷ ಗಮನ. ಅವರ ಕಲ್ಯಾಣಕ್ಕಾಗಿ ವಿವಿಧ ಕಾರ್ಯಕ್ರಮಗಳ ಜಾರಿ.

೧೬. ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತರಿಗೆ ಅವರ ಮಾತೃಭಾಷೆಯಲ್ಲಿಯೇ ಶಿಕ್ಷಣ. ಅವರ ಶಿಕ್ಷಣ ಸಂಸ್ಥೆಗಳಿಗೆ ಸ್ವಾಯತ್ತತೆ. ಜಾತ್ಯತೀತ ಸ್ವರೂಪದ ರಕ್ಷಣೆ.

೧೭. ಪ್ರಾಥಮಿಕ ವಿದ್ಯಾಭ್ಯಾಸಕ್ಕೆ ವಿಶೇಷ ಆದ್ಯತೆ. ಮಕ್ಕಳ ಕಲ್ಯಾಣ ಯೋಜನೆಗಳಿಗೆ ಹೊಂದಿಕೊಂಡಂತೆ ಪ್ರಾಥಮಿಕ ಶಿಕ್ಷಣ ಪದ್ಧತಿಯನ್ನು ರೂಪಿಸುವುದು. ಉದ್ಯೋಗಾಧಾರಿತ ಶಿಕ್ಷಣಕ್ಕೆ ಆದ್ಯತೆ. ಆರ್ಥಿಕ ಪ್ರಗತಿಗೆ ಹೊಂದಿಕೊಳ್ಳುವ ರೀತಿಯಲ್ಲಿ ಶಿಕ್ಷಣದ ಸಮಗ್ರ ಸುಧಾರಣೆಗೆ ಕ್ರಮ. ಮುಖ್ಯವಾಗಿ ಕೃಷಿ-ಕೈಗಾರಿಕೆ ಕ್ಷೇತ್ರಗಳ ಅಭಿವೃದ್ಧಿಗೆ ಹೊಂದಿಕೊಂಡ ಹಾಗೆ ವೈಜ್ಞಾನಿಕ ಹಾಗೂ ತಾಂತ್ರಿಕ ಕ್ಷೇತ್ರದ ವಿಸ್ತರಣೆ.

೧೮. ಕೆಳ ಮತ್ತು ಮಧ್ಯಮವರ್ಗದ ಜನತೆಗೆ ಅನುಕೂಲವಾಗುವ ರೀತಿಯಲ್ಲಿ ಗೃಹ ನಿರ್ಮಾಣ ಯೋಜನೆಗಳನ್ನು ರೂಪಿಸುವುದು. ಕೊಳಚೆ ಪ್ರದೇಶಗಳ ನಿರ್ಮೂಲನೆ ಹಾಗೂ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಸೂಕ್ತ ವಸತಿ ಸೌಲಭ್ಯ ಕಲ್ಪಿಸಲು ಪ್ರಥಮ ಆದ್ಯತೆ. ಗ್ರಾಮೀಣ ಭೂರಹಿತರಿಗೆ ಉಚಿತ ನಿವೇಶನ. ಗ್ರಾಮಾಂತರ ವಸತಿ ಯೋಜನೆಗಳಿಗೆ ಆದ್ಯತೆ.

೧೯. ಆಸ್ತಿ ಹಕ್ಕಿನ ರಕ್ಷಣೆ. ಆದರೆ ನಗರ ಆಸ್ತಿ ಮಿತಿ ಜಾರಿಗೆ. ನಗರ ಪ್ರದೇಶಗಳಲ್ಲಿ ಭೂಮಿಯ ಖರೀದಿ ಮಾರಾಟದಲ್ಲಿ ಇರುವ ದುಷ್ಟ ಜಾಲದ ನಿರ್ಮೂಲನೆ.

೨೦. ವಿದೇಶಾಂಗ ನೀತಿಯಲ್ಲಿ ನೆಹರೂರವರ ಆದರ್ಶ ಪಾಲನೆ ಹಾಗೂ ಅದನ್ನು ಎತ್ತಿ ಹಿಡಿಯುವುದು. ಮಿಲಿಟರಿ ಕೂಟಗಳಿಂದ ಹೊರಗೆ ಅಲಿಪ್ತನೀತಿಯ ಪಾಲನೆ. ಪಾಕ್ ಚೀನಾ ಜೊತೆಗೆ ಉತ್ತಮ ಬಾಂಧವ್ಯ. ದ್ವಿಪಕ್ಷೀಯ ಮಾತುಕತೆಗಳಿಂದ ಸಮಸ್ಯೆ ಬಗೆಹರಿಸುವುದು.

೨೧. ಕೇಂದ್ರದಲ್ಲಿ ಸುಭದ್ರ ದಕ್ಷ ಬಲಿಷ್ಠ ಸರ್ಕಾರ ಸ್ಥಾಪನೆ. ತನ್ಮೂಲಕ ಪ್ರಜಾಸತ್ತಾತ್ಮಕ ರೀತಿಯಲ್ಲಿ ಸಮಾಜವಾದಿ ಸಮಾಜ ನಿರ್ಮಾಣ ಕಾರ್ಯದಲ್ಲಿ ಮುನ್ನಡೆ. ಹಿಂಸಾ ಪ್ರವೃತ್ತಿಯ ಮೂಲೋತ್ಪಾಟನೆ. ಜನ ಸುಖ ಅಶಾಂತಿಯಿಂದ ಜೀವಿಸಲು ಸೂಕ್ತ ವಾತಾವರಣ ನಿರ್ಮಾಣ.

ಮೇಲೆ ನಮೂದಿಸಿದ ಚುನಾವಣಾ ಪ್ರಣಾಳಿಕೆಯ ಘೋಷಣೆಗಳು ಮತಗಳನ್ನು ಗಳಿಸುವ ಒಣ ಭರವಸೆಗಳಾಗದೆ, ರಾಷ್ಟ್ರ ಜೀವನದ ಹೆದ್ದಾರಿಗಳ ಮೈಲಿಗಲ್ಲುಗಳಾದುವು. ಹಸಿರು ಕ್ರಾಂತಿ, ಭೂ ಮಸೂದೆ ಹೊಸ ಕ್ಷಿತಿಜದ ಕಾಮನಬಿಲ್ಲುಗಳಾಗಿ ರಾಷ್ಟ್ರದ ಬದುಕಿನಲ್ಲಿ ಹೊಸ ಚಾಲನೆಯನ್ನು ನೀಡಿದುವು.

### ಕಾಂಗ್ರೆಸ್ - ಜೋಡೆತ್ತಿನ ಚಿಹ್ನೆಯ ಗೊಂದಲ, ನೂತನ ಚಿಹ್ನೆಗಳ ನೀಡಿಕೆ

ಆಡಳಿತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯ ಸಿ. ಸುಬ್ರಹ್ಮಣ್ಯಂರವರು ೨೧-೧೨-೬೯ ರಂದು ಜೋಡೆತ್ತಿನ ಗುರುತನ್ನು ತಮ್ಮ ಪಕ್ಷಕ್ಕೆ ನೀಡಬೇಕೆಂದು ಚುನಾವಣಾ ಆಯೋಗದ ಮುಂದೆ ಅರ್ಜಿ ಸಲ್ಲಿಸಿದರು. ಜನವರಿ ೧೨, ೧೯೭೦ರಂದು ಮುಖ್ಯ ಚುನಾವಣಾ ಕಮೀಷನರ್ ಎಸ್. ಪಿ. ಸೇನ್ ವರ್ಮಾರವರು ಆಡಳಿತ ಕಾಂಗ್ರೆಸ್‌ಗೆ ಜೋಡೆತ್ತಿನ ಗುರುತನ್ನು ನೀಡಿ, ಜಗಜೀವನರಾಂ ನೇತೃತ್ವದ ಕಾಂಗ್ರೆಸ್ಸೇ ಭಾರತ ರಾಷ್ಟ್ರೀಯ ಕಾಂಗ್ರೆಸ್ ಎಂದು ಘೋಷಿಸಿದರು. ಚುನಾವಣಾ ಆಯೋಗ ಸಂಸ್ಥಾ ಕಾಂಗ್ರೆಸ್ ಪಕ್ಷಕ್ಕೆ ರಾಷ್ಟ್ರೀಯ ಪಕ್ಷದ ಸ್ಥಾನಮಾನ ನೀಡಿತು. ಸಂಸ್ಥಾ ಕಾಂಗ್ರೆಸ್ ಈ ಬಗ್ಗೆ ಚುನಾವಣಾ ಆಯೋಗಕ್ಕೆ ತಕರಾರು ಸಲ್ಲಿಸಿದಾಗ, ಚುನಾವಣಾ ಆಯೋಗವು ಬಹುಮತದ ಆಧಾರದ ಮೇಲೆ ಈ ರೀತಿಯ ತೀರ್ಮಾನ ಕೈಗೊಂಡಿರುವುದಾಗಿ ತಿಳಿಸಿತು. ಸುಪ್ರೀಂ ಕೋರ್ಟಿಗೆ ಹೋಗಲು ನಿಜಲಿಂಗಪ್ಪನವರು ಸಂಕಲ್ಪ ಮಾಡಿದರು. ೨೦.೧.೭೧ರಂದು ಸುಪ್ರೀಂ ಕೋರ್ಟ್‌ನ ಸಂವಿಧಾನ ಪೀಠವು ಈ ಬಗ್ಗೆ ತೀರ್ಪನ್ನು ನೀಡಿ

ಜೋಡೆತ್ತಿನ ಚಿಹ್ನೆಯನ್ನು ಸ್ಥಗಿತಗೊಳಿಸಿತು. 'ಎರಡೂ ಗುಂಪುಗಳಿಗೆ ಈ ಚಿಹ್ನೆಯನ್ನು ಪಡೆಯಲು ಅರ್ಹತೆ ಇಲ್ಲ' ಎಂದು ಘೋಷಿಸಿತು. ಜಗಜೀವನರಾಮ್ ನೇತೃತ್ವದ ಕಾಂಗ್ರೆಸ್ಸನ್ನು ಭಾರತ ರಾಷ್ಟ್ರೀಯ ಕಾಂಗ್ರೆಸ್ ಎಂದು ಘೋಷಿಸಿದ್ದ ಮುಖ್ಯ ಚುನಾವಣಾ ಕಮೀಷನರ್ ಆದೇಶ ಜಾರಿಗೆ ತರಬಾರದೆಂದು ಸುಪ್ರೀಂಕೋರ್ಟ್ ಆದೇಶಿಸಿತು. ಎರಡೂ ಬಣಗಳಿಗೆ ಬೇರೆ ಚಿಹ್ನೆಯನ್ನು ನೀಡಲು ಚುನಾವಣಾ ಆಯೋಗಕ್ಕೆ ಅಧಿಕಾರವಿದೆ ಎಂದು ಅದು ತಿಳಿಸಿತು.

ನಿಜಲಿಂಗಪ್ಪನವರು ಸುಪ್ರೀಂ ಕೋರ್ಟ್ ಆದೇಶದ ಬಗ್ಗೆ ಸಂತೋಷ ವ್ಯಕ್ತಪಡಿಸಿ 'ನಮಗೆ ನ್ಯಾಯ ದೊರಕಿದೆ' ಎಂದು ಹೇಳಿದರು. ಸಂಸ್ಥಾ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಸಾದಿಕ್ ಅಲಿ ಅವರು ಚುನಾವಣಾ ಆಯೋಗಕ್ಕೆ ಪತ್ರ ಬರೆದು ಮಹಿಳೆ ನೂಲುತ್ತಿರುವ ಚರಕ, ಮಗುವನ್ನು ಎತ್ತಿಕೊಂಡಿರುವ ತಾಯಿ ಅಥವಾ ಜೋಳದ ಹೊರೆ ಹೆಗಲ ಮೇಲೆ ಹೊತ್ತ ರೈತ ಈ ಮೂರು ಗುರುತುಗಳಲ್ಲಿ ಒಂದನ್ನು ಸಂಸ್ಥಾ ಕಾಂಗ್ರೆಸ್‌ಗೆ ನೀಡುವಂತೆ ಕೋರಿದರು. ಆಡಳಿತ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಹೆಚ್.ಎನ್. ಬಹುಗುಣ ಅವರು ಸಂಸ್ಥಾ ಕಾಂಗ್ರೆಸ್‌ಗೆ ಚರಕದ ಗುರುತನ್ನು ಕೊಡಬಾರದೆಂದು ತಕರಾರು ತೆಗೆದರು. ಈ ಬಗ್ಗೆ ಚುನಾವಣಾ ಆಯೋಗಕ್ಕೆ ಪತ್ರ ಬರೆದರು. ಆದರೆ ೨೫.೧.೭೧ ರಂದು ಚುನಾವಣಾ ಆಯೋಗ ಸಂಸ್ಥಾ ಕಾಂಗ್ರೆಸ್‌ಗೆ ಚರಕಾ ಚಿಹ್ನೆಯನ್ನು ನೀಡಿತು. ಆಡಳಿತ ಕಾಂಗ್ರೆಸ್‌ಗೆ ಹಸು-ಕರು ಗುರುತನ್ನು ನೀಡಿತು.

## ಆಡಳಿತ ಕಾಂಗ್ರೆಸ್ ಚುನಾವಣೆ ಸಾಧನೆ

೧೯೭೧ರಲ್ಲಿ ಆಡಳಿತ ಕಾಂಗ್ರೆಸ್‌ನಿಂದ ಲೋಕಸಭೆಗೆ ಸ್ಪರ್ಧಿಸಿದ್ದ ಎಲ್ಲಾ ೨೭ಅಭ್ಯರ್ಥಿಗಳು ಪ್ರಚಂಡ ಬಹುಮತದಿಂದ ಚುನಾಯಿತರಾದರು. ಇದಕ್ಕೆ ಶ್ರೀಮತಿ ಇಂದಿರಾಗಾಂಧಿಯವರ ವ್ಯಕ್ತಿತ್ವ ಹಾಗೂ ಅವರು ಘೋಷಿಸಿದ ಜನಪರ ಕಾರ್ಯಕ್ರಮಗಳು ಪ್ರೇರಣೆ ಕೊಟ್ಟಿತ್ತು. ಈ ಚುನಾವಣೆಯಲ್ಲಿ ಗೆದ್ದ ಪ್ರಮುಖ ಲೋಕಸಭಾ ಸದಸ್ಯರುಗಳು ಎಂದರೆ-

ಬೀದರ್‌ನಿಂದ ಶಂಕರದೇವ್ ಬಾಲಾಜಿರಾವ್ (ಗಳಿಸಿದ ಶೇ. ಮತ ೬೬.೩೪), ಗುಲ್ಬರ್ಗಾದಿಂದ ಧರ್ಮರಾವ್ ಶರಣಪ್ಪ ಅಫಜಲ್‌ಪುರ (ಶೇ. ೬೮.೧೦), ರಾಯಚೂರಿನಿಂದ ಪಾಪಣ್ಣಗೌಡ ಶೇಖರಪ್ಪಗೌಡ ಆತನೂರ್ (ಶೇ. ೭೪.೫೦), ಕೊಪ್ಪಳದಿಂದ ಸಿದ್ಧರಾಮೇಶ್ವರಸ್ವಾಮಿ ಬಸಯ್ಯ (ಶೇ. ೭೫.೨೦), ಬಳ್ಳಾರಿಯಿಂದ ವಿ.ಕೆ.ಆರ್.ವಿ. ರಾವ್ (ಶೇ. ೭೨.೭೦), ಚಿತ್ರದುರ್ಗದಿಂದ ಕೊಂಡಜ್ಜಿ ಬಸಪ್ಪ (ಶೇ. ೭೪.೫೭), ತುಮಕೂರಿನಿಂದ ಕೆ. ಲಕ್ಕಪ್ಪ (ಶೇ. ೭೪.೪೮), ಮಧುಗಿರಿಯಿಂದ ಕೆ. ಮಲ್ಲಣ್ಣ (ಶೇ. ೮೪.೧೦), ಕೋಲಾರದಿಂದ ಜಿ. ವೈ. ಕೃಷ್ಣನ್ (ಶೇ. ೮೧.೩೨), ಹೊಸಕೋಟೆಯಿಂದ ಎಂ. ವಿ. ಕೃಷ್ಣಪ್ಪ (ಶೇ. ೭೭.೧೬), ಬೆಂಗಳೂರು ದಕ್ಷಿಣದಿಂದ ಕೆ. ಹನುಮಂತಯ್ಯ (ಶೇ. ೬೫.೧೩), ಕನಕಪುರದಿಂದ ಸಿ. ಕೆ. ಜಾಫರ್ ಷರೀಫ್ (ಶೇ. ೭೯.೯೭), ಮಂಡ್ಯದಿಂದ ಎಸ್. ಎಂ. ಕೃಷ್ಣ (ಶೇ. ೭೧.೨೧), ಚಾಮರಾಜನಗರದಿಂದ ಎಸ್. ಎಂ. ಸಿದ್ಧಯ್ಯ (ಶೇ. ೬೧.೯೪), ಮೈಸೂರಿನಿಂದ ಹೆಚ್.ಡಿ. ತುಳಸೀದಾಸಪ್ಪ (ಶೇ. ೭೪.೪೧), ಮಂಗಳೂರಿನಿಂದ ಕೆ. ಕೆ. ಶೆಟ್ಟಿ (ಶೇ. ೬೪.೫೯), ಉಡುಪಿಯಿಂದ ಪಿ. ರಂಗನಾಥ ಶೆಣೈ (ಶೇ. ೬೫.೮೦), ಹಾಸನದಿಂದ ಎನ್. ಶಿವಪ್ಪ (ಶೇ. ೬೨.೩೩), ಚಿಕ್ಕಮಗಳೂರಿನಿಂದ ಡಿ. ಬಿ. ಚಂದ್ರೇಗೌಡ (ಶೇ. ೭೨.೧೦), ಶಿವಮೊಗ್ಗದಿಂದ ಟಿ. ವಿ. ಚಂದ್ರಶೇಖರಪ್ಪ (ಶೇ. ೭೧.೮೪), ಕೆನರಾದಿಂದ ನಾಯಕ್ ಬಾಲಕೃಷ್ಣ ವೆಂಕಣ್ಣ (ಶೇ. ೬೭.೮೪), ಧಾರವಾಡ ದಕ್ಷಿಣದಿಂದ ಎಫ್. ಹೆಚ್. ಮೊಹಿಸಿನ್ (ಶೇ. ೬೯), ಧಾರವಾಡ ಉತ್ತರದಿಂದ ಶ್ರೀಮತಿ ಸರೋಜಿನಿ ಮಹಿಷಿ (ಶೇ. ೬೬.೮೨), ಬೆಳಗಾವಿಯಿಂದ ಎ. ಕೆ. ಕೊಟ್ರಶೆಟ್ಟಿ (ಶೇ. ೬೧.೫೭), ಚಿಕ್ಕೋಡಿಯಿಂದ ಬಿ. ಶಂಕರಾನಂದ (ಶೇ. ೬೫.೮೩), ಬಾಗಲಕೋಟೆಯಿಂದ ಎಸ್. ಬಿ. ಪಾಟೀಲ್ (ಶೇ. ೬೮.೨೭), ಹಾಗೂ ಬಿಜಾಪುರದಿಂದ ಬಿ.ಇ. ಚೌಧರಿ (ಶೇ. ೬೧.೦೮)

ಆಡಳಿತ ಕಾಂಗ್ರೆಸ್ ಚಲಾಯಿತ ಮತಗಳ ಪೈಕಿ ೫೬,೧೮,೫೩೬ ಮತಗಳನ್ನು ಪಡೆದು ಶೇಕಡಾ ೭೧ರ ಭಾರೀ ಪ್ರಮಾಣದಲ್ಲಿ ಮತ ಗಳಿಸಿದ್ದು ಅದು ಗಳಿಸಿದ್ದ ಜನಾದರಣೀಯತೆಗೆ ಸಾಕ್ಷಿಯಾಗಿತ್ತು. ೨ ಲಕ್ಷದಿಂದ ಹಿಡಿದು ೮೦ ಸಾವಿರ ಮತಗಳ ಅಂತರದಿಂದ ಆಡಳಿತ ಕಾಂಗ್ರೆಸ್ ಅಭ್ಯರ್ಥಿಗಳು ಜಯಶೀಲರಾದರು. ಅಂದರೆ ಅಂದು ಆಳ್ವಿಕೆಯಲ್ಲಿದ್ದ ವೀರೇಂದ್ರ ಪಾಟೀಲರ ನೇತೃತ್ವದ ಸಂಸ್ಥಾ ಕಾಂಗ್ರೆಸ್ ಸರ್ಕಾರ ಮತದಾರರ ಮೇಲೆ ಯಾವುದೇ ಪ್ರಭಾವ ಬೀರಲು ವಿಫಲವಾಗಿತ್ತು. ಶ್ರೀಮತಿ ಇಂದಿರಾ ಗಾಂಧಿಯವರು ರೂಪಿಸಿದ ಜನೋಪಯೋಗಿ ಕಾರ್ಯಕ್ರಮಗಳು ಶ್ರೀಸಾಮಾನ್ಯನನ್ನು ಕಾಂಗ್ರೆಸ್‌ನತ್ತ ಸೆಳೆಯುವಲ್ಲಿ ಸಮರ್ಥವಾದವು. ೧೯೬೭ರ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಅತ್ಯಂತ ದುಸ್ಥಿತಿಯಲ್ಲಿತ್ತು ಎಂಬುದಕ್ಕೆ ಅದರ ಅಂಕಿಅಂಶಗಳು ಸಾಕ್ಷಿಯಾಗಿವೆ. ಆದರೆ ಶ್ರೀಮತಿ ಇಂದಿರಾ ಗಾಂಧಿಯವರು ಕಾಂಗ್ರೆಸ್ ಮಹಾಸಂಸ್ಥೆಯ ರಕ್ಷಕರಾಗಿ ತಾವು ಒಬ್ಬರೇ ಚುನಾವಣೆಯನ್ನು ಗೆದ್ದುಕೊಡುವ ಸಾಮರ್ಥ್ಯ ತಮಗೆ ಇದೆ ಎಂಬುದನ್ನು ಈ ಚುನಾವಣೆಯ ಮೂಲಕ ಸಾಬೀತುಪಡಿಸಿದರು.

## ೧೯೭೨ - ವಿಧಾನಸಭಾ ಚುನಾವಣೆಗಳು

### ಭಾರತ ರಾಷ್ಟ್ರೀಯ ಕಾಂಗ್ರೆಸ್ (ಆರ್.)

೧೯೭೧ರ ಮಾರ್ಚ್ ೧ ರಿಂದ ೫ ರವರೆಗೆ ನಡೆದ ಲೋಕಸಭಾ ಮಧ್ಯಂತರ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಪಕ್ಷವು ಇಂದಿರಾ ಗಾಂಧಿಯವರ ನೇತೃತ್ವದಲ್ಲಿ ೩೫೨ ಸ್ಥಾನಗಳನ್ನು ಗಳಿಸಿ ಅಧಿಕಾರಕ್ಕೆ ಬಂದಿತು. ಆನಂತರ ಭಾರೀ ಸಂಖ್ಯೆಯಲ್ಲಿ ರಾಜ್ಯ ವಿಧಾನ ಸಭೆಗಳ ಶಾಸಕರು, ಮುಖಂಡರುಗಳು, ಕಾರ್ಯಕರ್ತರುಗಳು ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಪಕ್ಷಾಂತರ ಮಾಡತೊಡಗಿದರು. ಅಧಿಕಾರದಲ್ಲಿದ್ದ ಸಂಸ್ಥಾ ಕಾಂಗ್ರೆಸ್ ಹಾಗೂ ವಿರೋಧಿ ಪಕ್ಷಗಳ ಸಮ್ಮಿಶ್ರ ಸರ್ಕಾರಗಳು ಉರುಳತೊಡಗಿದವು. ಮೊದಲನೆಯದಾಗಿ ಮೈಸೂರು ರಾಜ್ಯದಲ್ಲಿ ಅಧಿಕಾರದಲ್ಲಿದ್ದ ವೀರೇಂದ್ರ ಪಾಟೀಲರ ಸಂಸ್ಥಾ ಕಾಂಗ್ರೆಸ್ ಸರ್ಕಾರ ಮಾರ್ಚ್ ೨೭, ೧೯೭೧ ರಂದು ರಾಜೀನಾಮೆ ನೀಡಿತು. ಏಪ್ರಿಲ್ ೧೪ ರಂದು ರಾಷ್ಟ್ರಪತಿ ಆಡಳಿತ ಜಾರಿಗೆ ಬಂದಿತು.

ಅದೇ ರೀತಿ ಮಾರ್ಚ್ ೩೦ ರಂದು ಉತ್ತರ ಪ್ರದೇಶದ ಸಂಯುಕ್ತ ವಿಧಾಯಕ ದಳದ ಸರ್ಕಾರ ಉರುಳಿ, ಏಪ್ರಿಲ್ ೧೧ ರಂದು ಕಮಲಾಪತಿ ತ್ರಿಪಾಠಿ ನೇತೃತ್ವದ ಆಡಳಿತ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂತು. ಮೇ ೧೩ರಂದು ಗುಜರಾತ್‌ನ ಹಿತೇಂದ್ರ ದೇಸಾಯಿ ನೇತೃತ್ವದ ಸಂಸ್ಥಾ ಕಾಂಗ್ರೆಸ್ ಸರ್ಕಾರ ಉರುಳಿ ರಾಷ್ಟ್ರಪತಿ ಆಡಳಿತ ಜಾರಿಗೆ ಬಂದಿತು. ಜೂನ್ ೧ ರಂದು ಬಿಹಾರದ ಕರ್ಪೂರಿ ಠಾಕೂರ್ ಸರ್ಕಾರ ಉರುಳಿ ಜಗನ್ನಾಥ ಮಿಶ್ರಾ ಸರ್ಕಾರ ಅಧಿಕಾರಕ್ಕೆ ಬಂತು. ಜೂನ್ ೧೩ ರಂದು ಪಂಜಾಬ್ ಅಕಾಲಿ ದಳದ ಸರ್ಕಾರ ಉರುಳಿ ರಾಷ್ಟ್ರಪತಿ ಆಡಳಿತ ಜಾರಿಗೆ ಬಂದಿತು. ಇದರ ಜೊತೆಗೆ ಆಡಳಿತ ಕಾಂಗ್ರೆಸ್ ಸರ್ಕಾರವೇ ಇದ್ದ ರಾಜಾಸ್ಥಾನದಲ್ಲಿ ಮುಖ್ಯಮಂತ್ರಿ ಮೋಹನಲಾಲ್ ಸುಖಾಡಿಯಾ ಮತ್ತು ಆಂಧ್ರದಲ್ಲಿ ಬ್ರಹ್ಮಾನಂದ ರೆಡ್ಡಿಯವರನ್ನು ಬದಲಾಯಿಸಲಾಯಿತು.

ನವೆಂಬರ್ ೧೧, ೧೯೭೧ರಂದು ಸುಪ್ರೀಂ ಕೋರ್ಟ್ ಜಗಜೀವನರಾಂ ನೇತೃತ್ವದ ಕಾಂಗ್ರೆಸ್ ಅಂದರೆ ಆಡಳಿತ ಕಾಂಗ್ರೆಸ್ಸೇ ನಿಜವಾದ ಕಾಂಗ್ರೆಸ್ ಎಂದು ತೀರ್ಪು ನೀಡಿ ನೊಗ ಹೂಡಿದ ಜೋಡಿ ಎತ್ತಿನ ಗುರುತನ್ನು ಅದಕ್ಕೆ ನೀಡಿತು. ಹಸು-ಕರು ಚಿಹ್ನೆಯಲ್ಲಿ ಯಸಸ್ಸು ಕಂಡಿದ್ದ ಪಕ್ಷ ಆ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ. ಆ ಗುರುತನ್ನು ಪುನಃ ಹೊಂದಲೂ ಇಚ್ಛಿಸಲಿಲ್ಲ. ಶ್ರೀಮತಿ ಇಂದಿರಾ ಗಾಂಧಿಯವರು ಅಂತರರಾಷ್ಟ್ರೀಯವಾಗಿಯೂ ಭಾರೀ ಮನ್ನಣೆ ಪಡೆದಿದ್ದರು. ೯ ಆಗಸ್ಟ್ ೧೯೭೧ರಂದು ರಷ್ಯಾದ ಜೊತೆ ಶಾಂತಿ ಸ್ನೇಹದ ಒಪ್ಪಂದ ಮಾಡಿಕೊಂಡಿದ್ದರು. ಡಿಸೆಂಬರ್ ೧೭, ೧೯೭೧ರಂದು ನೂತನ 'ಬಾಂಗ್ಲಾ ದೇಶದ' ಉದಯಕ್ಕೆ ಕಾರಣಕರ್ತರಾಗಿದ್ದರು. ೨೬-೧-೧೯೭೨ರಂದು ಅವರಿಗೆ 'ಭಾರತ ರತ್ನ' ಪ್ರಶಸ್ತಿ ನೀಡಲಾಗಿತ್ತು. ಏಪ್ರಿಲ್, ೩, ೧೯೭೧ ರಂದು ದೆಹಲಿಯಲ್ಲಿ ಅಖಿಲ ಭಾರತ ಆಡಳಿತ ಕಾಂಗ್ರೆಸ್ ಅಧಿವೇಶನ ನಡೆದು ಮತ್ತೆ ಜಗಜೀವನರಾಂ ಅಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಜುಲೈ ೧೭, ೧೯೭೧ ರಂದು ಇಂದಿರಾ ಗಾಂಧಿ ಮೈಸೂರು ರಾಜ್ಯಕ್ಕೆ ಭೇಟಿ ನೀಡಿದ್ದರು. ಇದರ ಜೊತೆಗೆ ಶ್ರೀಮತಿ ಇಂದಿರಾ ಗಾಂಧಿಯವರು ರಾಷ್ಟ್ರದಲ್ಲಿ ಅನೇಕ ಆರ್ಥಿಕ ಹಾಗೂ ಸಾಮಾಜಿಕ ಮುನ್ನಡೆ ಕಾರ್ಯಕ್ರಮಗಳನ್ನು ಕೈಗೊಂಡಿದ್ದರು. ೨೮.೧೨.೭೧ ರಂದು ರಾಜಧನ ರದ್ದು ಮಾಡಿದ್ದರು. ಡಿಸೆಂಬರ್ ೩, ೭೧ ರಂದು ಪಾಕ್ ಆಕ್ರಮಣದ ವಿರುದ್ಧ ಯುದ್ಧ ಕಾಲೀನ ಅಂತರಿಕ ತುರ್ತು ಪರಿಸ್ಥಿತಿ ಘೋಷಿಸಲಾಗಿತ್ತು. ೧೯೭೧ ಮೇ ೭ ರಂದು ಆಂತರಿಕ ಭದ್ರತಾ ನಿರ್ವಹಣಾ ಶಾಸನ - ಮೀಸಾ - ಜಾರಿಗೆ ಬಂತು. ಅದು ಜೂನ್ ೧೮ ರಂದು ಲೋಕಸಭೆಯ ಅಂಗೀಕಾರ ಪಡೆಯಿತು. ಇಂತಹ ಸನ್ನಿವೇಶದಲ್ಲಿ ದೇಶದ ೧೬ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ಡಿಸೆಂಬರ್ ೨೨, ೧೯೭೧ ರಂದು ಚುನಾವಣೆಗಳನ್ನು ಘೋಷಿಸಲಾಯಿತು. ೧೯೭೨ರ ಮಾರ್ಚ್ ೫ ರಿಂದ ೯ ರವರೆಗೆ ಈ ಚುನಾವಣೆಗಳು ನಡೆಯುವುದಾಗಿ ನಿಗದಿಯಾಯಿತು.

### ಮೈಸೂರು ರಾಜ್ಯದ ಪರಿಸ್ಥಿತಿ

೧೯೭೧ರ ಮಾರ್ಚ್‌ನಲ್ಲಿ ನಡೆದ ಲೋಕಸಭಾ ಮಧ್ಯಂತರ ಚುನಾವಣೆಯಲ್ಲಿ ಮೈಸೂರು ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಪಕ್ಷವು ಡಿ. ದೇವರಾಜ ಅರಸರ ಸಂಚಾಲಕತ್ವದಲ್ಲಿ ೨೭ ಕ್ಕೆ ೨೭ ಸ್ಥಾನಗಳನ್ನು ಗಳಿಸಿ ಜಯಭೇರಿ ಬಾರಿಸಿತ್ತು. ಅನಂತರ ದೇವರಾಜ ಅರಸರನ್ನೇ ಪ್ರದೇಶ ಆಡಳಿತ ಕಾಂಗ್ರೆಸ್ ಅಧ್ಯಕ್ಷರನ್ನಾಗಿ ನೇಮಿಸಲಾಗಿತ್ತು. ಎಲ್ಲಾ ಜಿಲ್ಲೆಗಳಲ್ಲಿ, ತಾಲ್ಲೂಕುಗಳಲ್ಲಿ ಆಡಳಿತ ಕಾಂಗ್ರೆಸ್ ಅಡ್‌ಹಾಕ್ ಸಮಿತಿಗಳು ರಚನೆಯಾಗಿದ್ದವು. ೧೯೬೯ರ ಕಾಂಗ್ರೆಸ್ ವಿಭಜನೆ ಕಾಲಕ್ಕೆ ಪ್ರಾರಂಭವಾದ ಆಡಳಿತ ಕಾಂಗ್ರೆಸ್‌ಗೆ ಪಕ್ಷಾಂತರ ಮಾಡುವ ಕ್ರಿಯೆ, ಲೋಕಸಭಾ ಚುನಾವಣೆ ಕಾಲದಲ್ಲಿ ಹಾಗೂ ಆ ನಂತರದಲ್ಲಿ ಮುಂದುವರಿಯಿತು. ೧೯೬೯ರ ಕಾಂಗ್ರೆಸ್ ವಿಭಜನಾ ಪೂರ್ವಕಾಲದಲ್ಲಿ ರಾಜ್ಯದಲ್ಲಿ ನಡೆದ ಆರು ವಿಧಾನಸಭಾ ಉಪ ಚುನಾವಣೆಗಳಲ್ಲಿ ಹಳೆಯ ಕಾಂಗ್ರೆಸ್ ಐದು ಸ್ಥಾನ ಗಳಿಸಿತ್ತು. ವಿಭಜನೆಯ ನಂತರ ನಡೆದ ನಾಲ್ಕು ಉಪ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಮೂರರಲ್ಲಿ, ಸಂಸ್ಥಾ ಕಾಂಗ್ರೆಸ್ ಒಂದರಲ್ಲಿ ಜಯಗಳಿಸಿತು.

ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಬಲ ವೃದ್ಧಿಯಾಗಿತ್ತು. ಲೋಕಸಭಾ ಚುನಾವಣಾ ಫಲಿತಾಂಶದ ನಂತರವೂ ವೀರೇಂದ್ರ ಪಾಟೀಲರ ಸಂಸ್ಥಾ ಕಾಂಗ್ರೆಸ್ ಸರ್ಕಾರ ಮುಂದುವರಿದಿತ್ತು. ಸಚಿವರಾಗಿದ್ದ ಮಹಮದ್ ಅಲಿ ೧೯೭೧ರ ಜನವರಿ ೨೯ ರಂದು, ವಿ.ಎಲ್. ಪಾಟೀಲ್ ಫೆಬ್ರವರಿ ೨೫ ರಂದು ರಾಜೀನಾಮೆ ನೀಡಿದರು. ರಾಜ್ಯ ಬಜೆಟ್ ಅಧಿವೇಶನ ಮಾರ್ಚ್ ೧೫ ರಂದು ಆರಂಭವಾಯಿತು.

ಮಾರ್ಚ್ ೧೬ ರಂದು ರಾಜ್ಯ ಪ್ರಜಾಸಮಾಜವಾದಿ ಪಕ್ಷ ಆಡಳಿತ ಕಾಂಗ್ರೆಸ್‌ನಲ್ಲಿ ವಿಲೀನವಾಯಿತು. ಆ ಪಕ್ಷದ ೧೧ ಶಾಸಕರು ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆಯಾದರು. ಅನಂತರ ಸಚಿವ ಬಿ. ಎಂ. ಪಾಟೀಲ್ ರಾಜೀನಾಮೆ ನೀಡಿದರು. ಬಹುಮತ ಕಳೆದುಕೊಂಡ ವೀರೇಂದ್ರರ ಸಚಿವ ಸಂಪುಟ ಮಾರ್ಚ್ ೨೭, ೧೯೭೧ರಂದು ರಾಜೀನಾಮೆ ಸಲ್ಲಿಸಿತು. ರಾಷ್ಟ್ರಪತಿ ಆಡಳಿತ ಅಥವಾ ವಿಧಾನಸಭಾ ವಿಸರ್ಜನೆಗೆ ಶಿಫಾರಸ್ಸು ಮಾಡಲಿಲ್ಲ.

ವಿರೋಧ ಪಕ್ಷದ ನಾಯಕರಾಗಿದ್ದ ಎಚ್. ಸಿದ್ಧವೀರಪ್ಪ ಆಡಳತ ಕಾಂಗ್ರೆಸ್ ಸರ್ಕಾರ ರಚಿಸಲು ಪ್ರಯತ್ನಿಸಿದರು. 'ಪಕ್ಷಾಂತರಿಗಳಿಂದ ಕೂಡಿದ ಸರ್ಕಾರದ ರಚನೆ ಬೇಡ, ಚುನಾವಣೆ ಎದುರಿಸಿ ಜನಾದೇಶ ಪಡೆದು ಅಧಿಕಾರಕ್ಕೆ ಬರೋಣ' ಎಂದು ದೇವರಾಜ ಅರಸರು ಪಟ್ಟು ಹಿಡಿದರು. ಅಖಿಲ ಭಾರತ ಕಾಂಗ್ರೆಸ್ (ಆರ್) ಪ್ರಧಾನ ಕಾರ್ಯದರ್ಶಿ ಶಂಕರ ದಯಾಳ್ ಶರ್ಮಾ ವೀಕ್ಷಕರಾಗಿ ಬಂದರು. ಸರ್ಕಾರ ರಚನೆಯ ಪ್ರಯತ್ನವನ್ನು ಕೈಬಿಡಲಾಯಿತು. ಮಾರ್ಚ್ ೨೬, ೧೯೭೧ರಂದು ರಾಜ್ಯಪಾಲರು ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತ ಜಾರಿಗೆ ಶಿಫಾರಸ್ಸು ಮಾಡಿದರು.

## ರಾಜ್ಯ ಚುನಾವಣಾ ಸಮಿತಿ

೧೯೭೧ರ ನವೆಂಬರ್ ವೇಳೆಗೆ ಬೆಳಗಾವಿಯಲ್ಲಿ ಮೈಸೂರು ಪ್ರದೇಶ ಆಡಳಿತ ಕಾಂಗ್ರೆಸ್ ಅಧಿವೇಶನ ನಡೆಯಿತು. ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ಇದರಲ್ಲಿ ಭಾಗವಹಿಸಿದ್ದರು. ಅರಸು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿ ಮುಂದುವರಿದರು. ರಾಜ್ಯ ಚುನಾವಣಾ ಸಮಿತಿಯನ್ನು ರಚಿಸಲಾಯಿತು. ದೇವರಾಜ ಅರಸ್ ಅದರ ಅಧ್ಯಕ್ಷರಾದರು.

## ಅಭ್ಯರ್ಥಿಗಳ ಆಯ್ಕೆ

ವಿಧಾನಸಭಾ ಚುನಾವಣೆಗೆ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಂತೆ ಸೂಚಿಸಲಾಯಿತು. ಜಿಲ್ಲಾ ಅಡ್‌ಹಾಕ್ ಕಾಂಗ್ರೆಸ್ ಸಮಿತಿಗಳು ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಿ ಕಳುಹಿಸಿಕೊಡುವಂತೆ ಸೂಚಿಸಲಾಯಿತು. ಸುಮಾರು ಒಂದು ಸಾವಿರ ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದರು. ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು ಚುನಾವಣೆಗೆ ಸ್ಪರ್ಧಿಸುವಂತಿಲ್ಲವೆಂದೂ, ಹಾಗೆ ಸ್ಪರ್ಧಿಸಬೇಕಾದರೆ ರಾಜೀನಾಮೆ ನೀಡಬೇಕೆಂದೂ ಸೂಚಿಸಲಾಯಿತು. ೧೯೭೧ರ ಡಿಸೆಂಬರ್ ಅಂತ್ಯದ ವೇಳೆಗೆ ಜಿಲ್ಲಾ ಅಡ್‌ಹಾಕ್ ಸಮಿತಿಗಳು ಅಭ್ಯರ್ಥಿಗಳ ಪಟ್ಟಿಯನ್ನು ರಾಜ್ಯ ಚುನಾವಣಾ ಸಮಿತಿಗೆ ಕಳುಹಿಸಿದೆವು. 'ಮಧ್ಯಕಾಲೀನ ಚುನಾವಣೆ ನಂತರ ಪಕ್ಷ ಸೇರಿದವರಿಗೆ ಟಿಕೆಟ್ ಇಲ್ಲವೆಂದೂ, ಆದರೆ ಪಕ್ಷದಲ್ಲಿ ವಿಲೀನವಾಗಿರುವ ಪ್ರಜಾ ಸಮಾಜವಾದಿ ಪಕ್ಷದವರಿಗೆ ಇದು ಅನ್ವಯಿಸುವುದಿಲ್ಲವೆಂದೂ, ಚುನಾವಣೆಗೆ ನಿಲ್ಲುವ ಜಿಲ್ಲಾ ಅಧ್ಯಕ್ಷರುಗಳು ತಮ್ಮ ಸ್ಥಾನ ತೆರವು ಮಾಡಬೇಕಾಗಿಲ್ಲವೆಂದೂ' ದೇವರಾಜ ಅರಸರು ಸ್ಪಷ್ಟಪಡಿಸಿದರು. ೧೯.೧.೭೨ ರಿಂದ ರಾಜ್ಯ ಚುನಾವಣಾ ಸಮಿತಿ ಅಭ್ಯರ್ಥಿಗಳ ಆಯ್ಕೆಯನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿತು. ಕೇಂದ್ರ ವೀಕ್ಷಕರುಗಳಾದ ಜೈಸುಖಾಲಾಲ್ ಹಾಥಿ ಮತ್ತು ಮಹಾಜನ್ ಹಾಜರಿದ್ದರು. ಅಭ್ಯರ್ಥಿಗಳ ಆಯ್ಕೆ ಬಗ್ಗೆ ನೂರಾರು ದೂರುಗಳು ಚುನಾವಣಾ ಸಮಿತಿಗೆ ಸಲ್ಲಿಸಲ್ಪಟ್ಟವು. ಅಂತಿಮ ಪಟ್ಟಿಯನ್ನು ಸಿದ್ಧಪಡಿಸಲಾಯಿತು. ಪರಿಶೀಲನೆಗಾಗಿ ದೆಹಲಿಗೆ ತೆಗೆದುಕೊಂಡು ಹೋಗುವುದಾಗಿಯೂ, ಹಿಂದುಳಿದ ವರ್ಗದವರಿಗೆ ಶೇಕಡಾ ೫೦ ಸ್ಥಾನಗಳನ್ನು ನೀಡಿರುವುದಾಗಿಯೂ ದೇವರಾಜ ಅರಸರು ೨೧-೧-೭೨ರಂದು ತಿಳಿಸಿದರು.

ಮೈಸೂರು ಹಾಗೂ ಬಿಹಾರ ರಾಜ್ಯಗಳ ಅಭ್ಯರ್ಥಿಗಳ ಪಟ್ಟಿಯನ್ನು ಅಂತಿಮಗೊಳಿಸುವುದೇ ಕೇಂದ್ರ ಚುನಾವಣಾ ಸಮಿತಿಗೆ ತಲೆನೋವಾಗಿದೆ ಎಂದೂ ಅಭ್ಯರ್ಥಿಗಳ ಆಯ್ಕೆಯಲ್ಲಿ ತೀವ್ರ ಭಿನ್ನಾಭಿಪ್ರಾಯ ಮೂಡಿರುವುದು ಕೇಂದ್ರ ನಾಯಕತ್ವದ ಕಳವಳಕ್ಕೆ ಕಾರಣವಾಗಿದೆ ಎಂದೂ ದೆಹಲಿಯಲ್ಲಿ ಅಭಿಪ್ರಾಯಪಡಲಾಯಿತು. 'ರಾಜ್ಯ ಚುನಾವಣಾ ಸಮಿತಿ ತಯಾರಿಸಿರುವ ಅಭ್ಯರ್ಥಿಗಳ ಪಟ್ಟಿಯಲ್ಲಿ ನಿಷ್ಠಾವಂತರಿಗೆ ಅನ್ಯಾಯವಾಗಿದೆ' ಎಂದು ರಾಜ್ಯದ ಅನೇಕ ಸಂಸತ್ ಸದಸ್ಯರು ದಿನಾಂಕ ೩೧.೧.೭೨ ರಂದು ಪ್ರಧಾನ ಮಂತ್ರಿಗಳಿಗೇ ದೂರು ನೀಡಿದರು. ಕೇಂದ್ರ ಚುನಾವಣಾ ಸಮಿತಿ ಅಭ್ಯರ್ಥಿಗಳ ಪಟ್ಟಿಯನ್ನು ಮರುಪರಿಶೀಲಿಸುತ್ತದೆ ಎಂದು ಭರವಸೆ ನೀಡಲಾಯಿತು. ೧.೨.೭೨ ರಂದು ಅಭ್ಯರ್ಥಿಗಳ ಪಟ್ಟಿಯನ್ನು ಮರುಪರಿಶೀಲಿಸಿದ ಕೇಂದ್ರ ಚುನಾವಣಾ ಮಂಡಲಿ, ಪಟ್ಟಿಯಲ್ಲಿ ಹೆಚ್ಚು ಬದಲಾವಣೆ ಮಾಡದೆ ಮೊದಲ ಹಂತದಲ್ಲಿ ೧೫೬ ಅಭ್ಯರ್ಥಿಗಳನ್ನು ಆಯ್ಕೆ ಮಾಡಿತು. ೨.೨.೭೨ ರಂದು ಒಟ್ಟಾರೆ ೧೯೮ ಅಭ್ಯರ್ಥಿಗಳ ಆಯ್ಕೆಯನ್ನು

ಅಂತಿಮಗೊಳಿಸಿ ೪ ಸ್ಥಾನಗಳನ್ನು ಕಮ್ಯುನಿಸ್ಟ್ ಪಕ್ಷಕ್ಕೆ ಬಿಟ್ಟುಕೊಡಲಾಗಿದೆ, ಇನ್ನು ೧೪ ಸ್ಥಾನಗಳಿಗೆ ಅಭ್ಯರ್ಥಿಗಳನ್ನು ಇತ್ಯರ್ಥ ಮಾಡಿಲ್ಲ ಎಂದು ಹೇಳಿತು.

'ನಿಮ್ನ ಹಾಗೂ ಹಿಂದುಳಿದ ವರ್ಗಗಳ ಹಿತರಕ್ಷಕರಿಗೆ ಮಾತ್ರ ಟಿಕೆಟ್ ಲಭಿಸಿದೆ' ಎಂದು ಬಿ. ಬಸವಲಿಂಗಪ್ಪನವರು ೨.೨.೭೨ ರಂದು ಹೇಳಿಕೆ ನೀಡಿದರು. ಈ ಪಟ್ಟಿಯಲ್ಲಿ ಕೆ. ಪುಟ್ಟಸ್ವಾಮಿ, ಮಹಮದ್ ಅಲಿ, ವಿ. ಎಲ್. ಪಾಟೀಲರಿಗೆ ಟಿಕೆಟ್ ನೀಡಿರಲಿಲ್ಲ. ಇನ್ನೂ ಹಲವಾರು ಆಕಾಂಕ್ಷಿಗಳಿಗೆ ಟಿಕೆಟ್ ಲಭ್ಯವಾಗಿರಲಿಲ್ಲ. ಅನೇಕ ಹಾಲಿ ಶಾಸಕರನ್ನು ಕೈ ಬಿಡಲಾಗಿತ್ತು. ಅದರಿಂದಾಗಿ ಈ ಪಟ್ಟಿಯ ಬಗ್ಗೆ ಅತೃಪ್ತಿ ಜಾಸ್ತಿ ಆಯಿತು. 'ಟಿಕೆಟ್.. ನೀಡಿಕೆಯಲ್ಲಿ ಪ್ರಜಾ ಸೋಷಲಿಸ್ಟ್ ಪಾರ್ಟಿಯಿಂದ ಬಂದು ಸೇರಿದವರಿಗೆ ಅನ್ಯಾಯವಾಗಿದೆ'' ಎಂದು ಎಸ್. ಶಿವಪ್ಪ, ಮುಲ್ಕಾಗೋವಿಂದ ರೆಡ್ಡಿ, ಎ. ಹೆಚ್. ಶಿವಾನಂದಸ್ವಾಮಿ, ಶ್ರೀನಿವಾಸ ಶೆಟ್ಟಿ, ಜಿ. ವಿ. ಆಂಜನಪ್ಪ ಇವರುಗಳು ದಿನಾಂಕ ೪.೨.೭೨ ರಂದು ತೀವ್ರ ಅತೃಪ್ತಿ ವ್ಯಕ್ತಪಡಿಸಿದರು.

ದಿನಾಂಕ ೪.೨.೭೨ರಂದು ಕೇಂದ್ರ ಚುನಾವಣಾ ಸಮಿತಿ ಅಂತಿಮ ಪಟ್ಟಿಯನ್ನು ಸಿದ್ಧಪಡಿಸಿತು. ಅಭ್ಯರ್ಥಿಗಳ ಆಯ್ಕೆಯಲ್ಲಿ ಅಲ್ಪ ಸಂಖ್ಯಾತರು ಮತ್ತು ಹಿಂದುಳಿದ ವರ್ಗದವರಿಗೆ ನ್ಯಾಯ ಒದಗಿಸಲಾಗಿವೆ. ದಕ್ಷ, ಯೋಗ್ಯ, ವಿದ್ಯಾವಂತ ಅಭ್ಯರ್ಥಿಗಳ ಆಯ್ಕೆಗೆ ಶಕ್ತಿ ಮೀರಿ ಪ್ರಯತ್ನಿಸಲಾಗಿದೆ. ಮಲ್ಲೇಶ್ವರಂ, ಬೆಳಗಾವಿ, ಬಂಟವಾಳ, ಹುಮ್ನಾಬಾದ್ ಕ್ಷೇತ್ರಗಳನ್ನು ಸಿ. ಪಿ. ಐ. ಪಕ್ಷಕ್ಕೆ ಬಿಟ್ಟು ಕೊಡಲಾಗಿದೆ, 'ಪಿ. ಎಸ್. ಪಿ. ಯಿಂದ ಬಂದವರಿಗೆ ಅನ್ಯಾಯವಾಗಿದೆ ಎಂಬುದು ಸರಿಯಿಲ್ಲ, ಅವರು ತಾವು ಪಿ. ಎಸ್. ಪಿ. ಯವರು ಎಂಬುದನ್ನು ಅವರು ಮರೆಯಬೇಕು' ಎಂದು ದೇವರಾಜ ಅರಸು ಕೊನೆಗೆ ಹೇಳಿಕೆ ನೀಡಿದರು. ಚುನಾವಣೆಗಳಿಗೆ ದೇವರಾಜ ಅರಸರು ಸ್ಪರ್ಧಿಸಲಿಲ್ಲ. ಮಹಮದ್ ಅಲಿ, ವಿ. ಎಲ್. ಪಾಟೀಲ್, ಕೆ. ಪುಟ್ಟಸ್ವಾಮಿ ಇವರುಗಳಿಗೂ ಟಿಕೆಟ್ ನೀಡಲಾಯಿತು. ಕಾಂಗ್ರೆಸ್ ೨೧೨ ಸ್ಥಾನಗಳಿಗೆ ಸ್ಪರ್ಧಿಸಿತು. ಪಟ್ಟಿಯಲ್ಲಿ ೧೦೩ ಜನ ಹೊಸಬರಿದ್ದರು. ಲಿಂಗಾಯತರು, ಒಕ್ಕಲಿಗರು ಸೇರಿದಂತೆ ಪ್ರಬಲ ಕೋಮಿನವರಿಗೆ ೯೦ ಸ್ಥಾನ ಮಾತ್ರ ನೀಡಲಾಗಿತ್ತು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಮೀಸಲಾಗಿದ್ದ ೨೬ ಸ್ಥಾನ ಬಿಟ್ಟರೆ ಉಳಿದಂತೆ ಸುಮಾರು ೧೦೦ ಸ್ಥಾನಗಳನ್ನು ಹಿಂದುಳಿದವರು ಮತ್ತು ಅಲ್ಪಸಂಖ್ಯಾತರಿಗೆ ನೀಡಲಾಗಿತ್ತು. ೧೯೬೭ರ ಚುನಾವಣೆಗಳಲ್ಲಿ ಲಿಂಗಾಯಿತರಿಗೆ ೯೦, ಒಕ್ಕಲಿಗರಿಗೆ ೬೩ ಸ್ಥಾನಗಳನ್ನು ನೀಡಿದ್ದನ್ನು ಇಲ್ಲಿ ಸ್ಮರಿಸಿದರೆ ಹಿಂದುಳಿದ ವರ್ಗದ ಪರವಾದ ಬದಲಾವಣೆಯ ಪ್ರಮಾಣ ತಿಳಿದುಬರುತ್ತದೆ.

## ಬಂಡಾಯ ಅಭ್ಯರ್ಥಿಗಳು

ಪಕ್ಷದ ಅಧಿಕೃತ ಅಭ್ಯರ್ಥಿಗಳ ವಿರುದ್ಧ ಸ್ಪರ್ಧಿಸಿದ್ದ ಬಂಡಾಯ ಅಭ್ಯರ್ಥಿಗಳ ಸಂಖ್ಯೆ ಜಾಸ್ತಿ ಇತ್ತು. ಹೈಕಮಾಂಡ್ ಆದೇಶ ಉಲ್ಲಂಘಿಸುವವರ ಮೇಲೆ ಕ್ರಮ ಜರುಗಿಸಲಾಗುವುದೆಂದು ಎ.ಐ.ಸಿ.ಸಿ. (ಆರ್) ಪ್ರಧಾನ ಕಾರ್ಯದರ್ಶಿಗಳಾದ ಶಂಕರ ದಯಾಳ್ ಶರ್ಮ, ಹೆನ್ರಿ ಆಸ್ಟಿನ್ ಎಚ್ಚರಿಕೆ ನೀಡಿದರು. ಕೋಲಾರ, ಬೆಂಗಳೂರು, ತುಮಕೂರು, ಮೈಸೂರು, ಬೀದರ್‌ಗಳಲ್ಲಿ ಬಂಡಾಯ ಅಭ್ಯರ್ಥಿಗಳ ಸಂಖ್ಯೆ ಹೆಚ್ಚಾಗಿತ್ತು. ಸುಮಾರು ೨೫ ಬಂಡಾಯ ಅಭ್ಯರ್ಥಿಗಳು ೧೦.೨.೭೨ ರಂದು ತಮ್ಮ ನಾಮಪತ್ರಗಳನ್ನು ವಾಪಸ್ಸು ಪಡೆದರು. ಸ್ಪರ್ಧೆಯಲ್ಲಿ ಉಳಿದಿದ್ದ ಎಚ್. ಸಿ. ಲಿಂಗಾರೆಡ್ಡಿ, ಕೆ. ಬಿ. ಪಿಳ್ಳಪ್ಪ, ಜವರೇಗೌಡ ಮುಂತಾದವರು ಸೇರಿದಂತೆ ೩೩ ಮಂದಿಯನ್ನು ಆಡಳಿತ ಕಾಂಗ್ರೆಸ್‌ನಿಂದ ಉಚ್ಚಾಟಿಸಲಾಗಿದೆ ಎಂದು ದೇವರಾಜ ಅರಸರು ೧೪.೨.೭೨ ರಂದು ಪ್ರಕಟಿಸಿದರು.

## ಆಡಳಿತ ಕಾಂಗ್ರೆಸ್‌ಗೆ ಸೇರ್ಪಡೆಗಳು

ಚುನಾವಣಾ ಕಾಲದಲ್ಲೂ ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆಯಾಗುವವರ ಸಂಖ್ಯೆ ಹೆಚ್ಚಾಗಿಯೇ ಇತ್ತು. ರಾಜ್ಯದ ನಾನಾ ಜಿಲ್ಲೆಗಳಲ್ಲಿ ಅನೇಕ ನಾಯಕರು, ಸಾವಿರಾರು ಕಾರ್ಯಕರ್ತರು ಆಡಳಿತ ಕಾಂಗ್ರೆಸ್ ಸೇರಿದರು. ೫.೨.೭೨ರಂದು ಕಳ್ಳಂಬೆಳ್ಳದ ಬಿ. ಗಂಗಣ್ಣ ತಮ್ಮ ಅನುಯಾಯಿಗಳೊಂದಿಗೆ ಆಡಳಿತ ಕಾಂಗ್ರೆಸ್ ಸೇರಿದರು. ಚಿಂತಾಮಣಿಯ ಮಾಜಿ ಶಾಸಕ ಟಿ. ಗಂಗಿರೆಡ್ಡಿಯವರು ೨೦೦೦ ಕಾರ್ಯಕರ್ತರೊಡನೆ ೧೪.೨.೭೨ರಂದು ಪಕ್ಷವನ್ನು ಸೇರಿದರು. ಇದೇ ದಿನ ಮಾಜಿ ಶಾಸಕ ವೈ. ರಾಮಚಂದ್ರ ಪಕ್ಷಕ್ಕೆ ಸೇರಿದರು. ೧೭.೨.೭೨ ರಂದು ಜಗಳೂರು ತಾಲ್ಲೂಕು ಸಂಸ್ಥಾ ಕಾಂಗ್ರೆಸ್ ಮುಖಂಡರು ಸಾಮೂಹಿಕವಾಗಿ ಆಡಳಿತ ಕಾಂಗ್ರೆಸ್‌ಗೆ ಸೇರಿದರು. ಅದೇ ರೀತಿ ಹಾಸನ, ಮದ್ದೂರು, ತಿಪಟೂರು ಮುಂತಾದ ಕಡೆ ಅನೇಕ ಪ್ರಮುಖ ಮುಖಂಡರು ಕಾರ್ಯಕರ್ತರು ಪಕ್ಷವನ್ನು ಸೇರಿದರು. ಹೊಳಲ್ಕೆರೆ ಪಕ್ಷೇತರ ಅಭ್ಯರ್ಥಿ ಎಂ. ಪಿ. ಈಶ್ವರಪ್ಪ ತಮ್ಮ ಬೆಂಬಲಿಗರೊಡನೆ ೨೪.೨.೭೨ರಂದು ಆಡಳಿತ ಕಾಂಗ್ರೆಸ್ ಸೇರಿದರು. ಗುಬ್ಬಿ ತಾಲ್ಲೂಕು ಬೋರ್ಡ್ ಅಧ್ಯಕ್ಷರು ತಮ್ಮ ಬೆಂಬಲಿಗರೊಡನೆ ೨೮.೨.೭೨ರಂದು ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆಯಾದರು. ಈ ರೀತಿಯಾಗಿ ಆಡಳಿತ ಕಾಂಗ್ರೆಸ್ ಸೇರುವವರ ಸಂಖ್ಯೆ ಮುಂದುವರಿದಿತ್ತು.

## ಪ್ರಚಾರ ಕಾರ್ಯ

ಆಡಳಿತ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಹೆಚ್. ಟಿ. ರೆಡ್ಡಿ ನೇತೃತ್ವದಲ್ಲಿ ಪ್ರಚಾರ ವಿಭಾಗವನ್ನು ರಚಿಸಲಾಗಿತ್ತು. ಚುನಾವಣಾ ಪ್ರಚಾರಕ್ಕೆ ಮಾರ್ಗದರ್ಶನ ಮಾಡಲು, ನೆರವಾಗಲು ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಮಥುರಾ ದಾಸ್ ಬೆಂಗಳೂರಿನಲ್ಲಿದ್ದರು.

ಪ್ರಧಾನಿ ಇಂದಿರಾ ಗಾಂಧಿಯವರು ಫೆಬ್ರವರಿ ೧೭ ರಂದು ಬಿಜಾಪುರ, ೧೮ ರಂದು ಬಾಗಲಕೋಟೆ, ಹುಬ್ಬಳ್ಳಿ, ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ಉಡುಪಿ, ಮಂಗಳೂರುಗಳಲ್ಲಿ, ೧೯ ರಂದು ಮಡಿಕೇರಿ, ಮೈಸೂರು, ಮಂಡ್ಯ, ಕೆ.ಜಿ.ಎಫ್., ಬೆಂಗಳೂರು ನಗರಗಳಲ್ಲಿಯ ಭಾರೀ ಬಹಿರಂಗ ಸಭೆಗಳನ್ನುದ್ದೇಶಿಸಿ ಪ್ರಚಾರ ಭಾಷಣ ಮಾಡಿದರು. ಅವರು ಹೆಲಿಕಾಪ್ಟರ್ ಹಾಗೂ ರಸ್ತೆಗಳ ಮೂಲಕ ಸಂಚಾರ ಮಾಡಿದರು.

'ರಾಜ್ಯದಲ್ಲಿಯೂ ಬಲಿಷ್ಠ ಸುಭದ್ರ ಸರ್ಕಾರ ಅಗತ್ಯ, ದೇಶದ ದಾರಿದ್ರ್ಯ ತೊಡೆದು ಹಾಕಲು ರೂಪಿಸಿರುವ ಕಾರ್ಯಕ್ರಮಗಳನ್ನು ಜಾರಿಗೆ ತರಲು ರಾಜ್ಯಗಳಲ್ಲಿ ಬಲಿಷ್ಠ ಸರ್ಕಾರ ಇರಬೇಕಾಗುತ್ತದೆ. ದೇಶ ಅಭಿವೃದ್ಧಿಯತ್ತ ಸಾಗುತ್ತಿದೆ. ಕಾಂಗ್ರೆಸ್ ಪಕ್ಷಕ್ಕೆ ಬೆಂಬಲ ನೀಡಿದಲ್ಲಿ ಅದು ಅಲಿಪ್ತತೆ, ಜಾತ್ಯತೀತತೆ, ಪ್ರಜಾಸತ್ತೆಯ ನೀತಿಗೆ ನೀಡಿದ ಬೆಂಬಲವಾಗುತ್ತದೆ. ರಾಷ್ಟ್ರ ಕಲ್ಯಾಣಕ್ಕಾಗಿ, ಆರ್ಥಿಕ ಸಾಮಾಜಿಕ ಪ್ರಗತಿಗಾಗಿ, ದೇಶದ ಮುಂದಿರುವ ದೊಡ್ಡ ದೊಡ್ಡ ಸವಾಲುಗಳನ್ನು ಎದುರಿಸಲು, ಜಾತಿವಾದಿ ಶಕ್ತಿಗಳನ್ನು ಎದುರಿಸಲು ತಮ್ಮ ಕೈ ಬಲಪಡಿಸಬೇಕೆಂದರು. ನಾನು ಸರ್ವಾಧಿಕಾರಿಯಲ್ಲ, ಚುನಾವಣೆ ಮುಗಿದ ನಂತರ ರಾಜ್ಯದಲ್ಲಿ ಭೂ ಸುಧಾರಣೆಯನ್ನು ಜಾರಿಗೆ ತರಲಾಗುವುದು, ರಾಜ್ಯದ ಆರ್ಥಿಕ ಪ್ರಗತಿಗಾಗಿ ಶ್ರಮಿಸಲಾಗುವುದು ಎಂದು, ಲೋಕಸಭಾ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸಿದಂತೆ ಈ ಚುನಾವಣೆಗಳಲ್ಲಿಯೂ ಜನ ನಮ್ಮ ಪಕ್ಷವನ್ನು ಬೆಂಬಲಿಸಬೇಕೆಂದು' ಈ ಬಹಿರಂಗ ಸಭೆಗಳಲ್ಲಿ ವಿನಂತಿ ಮಾಡಿಕೊಂಡರು.

ಶಿವಮೊಗ್ಗದಲ್ಲಿ ಅವರಿಗೆ ೧೯೨೦ರಲ್ಲಿ ಮಹಾತ್ಮ ಗಾಂಧೀಜಿ ನೆಟ್ಟಿದ್ದ ತೆಂಗಿನ ಮರದ ಎಳನೀರನ್ನು ನೀಡಲಾಯಿತು. ಬಿಜಾಪುರದಲ್ಲಿ ಹರಿಜನ ಕನ್ಯಾ ಮಂದಿರದ ಬಾಲಕಿಯರು ಅವರಿಗೆ ಖಾದಿ ಸೀರೆ ನೀಡಿದರು. ಅವರ ಪ್ರತಿಯೊಂದು ಸಭೆಯಲ್ಲಿಯೂ ೨೦ ಸಾವಿರದಿಂದ ೫೦ ಸಾವಿರದವರೆಗೂ ಜನರು ಭಾಗವಹಿಸುತ್ತಿದ್ದರು. ಶ್ರೀಮತಿ ಇಂದಿರಾ ಗಾಂಧಿ ಪ್ರವಾಸ ಆಡಳಿತ ಕಾಂಗ್ರೆಸ್‌ನಲ್ಲಿ ನವಚೇತನ ಮೂಡಿಸಿತು. ದಿನಾಂಕ ೨೭.೨.೭೨ ರಂದು ಅವರು ರಾಜ್ಯದ ಜನತೆಗೆ ಬಹಿರಂಗ ಪತ್ರವೊಂದನ್ನು ಬರೆದು ಆಡಳಿತ ಕಾಂಗ್ರೆಸ್‌ಗೆ ಬೆಂಬಲ ನೀಡುವಂತೆ ವಿನಂತಿಸಿದ್ದರು. ದಿನಾಂಕ ೭,೮ ಫೆಬ್ರವರಿ ೭೨ ರಂದು ಬೆಂಗಳೂರಿಗೆ ಭೇಟಿ ನೀಡಿದ್ದ ಕೆಂಗಲ್ ಹನುಮಂತಯ್ಯ ಮಂಗಳೂರು - ಹಾಸನ ಬ್ರಾಡ್‌ಗೇಜ್ ಪರಿವರ್ತನೆಯ ಆಶ್ವಾಸನೆ ನೀಡಿದರು. ಮತ್ತೆ ೨೬.೨.೭೨ರಂದು ಬೆಂಗಳೂರಿಗೆ ಭೇಟಿ ನೀಡಿದ್ದ ಅವರು ಕಂಟೋನ್ಮೆಂಟ್ ರೈಲು ನಿಲ್ದಾಣದ ನವೀಕರಣ ಯೋಜನೆಗೆ ಶಂಕುಸ್ಥಾಪನೆ ಮಾಡಿದರು. ಮೈಸೂರು ಎಕ್ಸ್‌ಪ್ರೆಸ್ ರೈಲನ್ನು ಪ್ರಾರಂಭಿಸಿದರು. ಅನೇಕ ಬಹಿರಂಗ ಸಭೆಗಳಲ್ಲಿ ಭಾಗವಹಿಸಿ ಆಡಳಿತ ಕಾಂಗ್ರೆಸ್‌ನ್ನು ಬೆಂಬಲಿಸುವಂತೆ ಕೋರಿದರು.

ಫೆಬ್ರವರಿ ೨೪ ರಂದು ಗಂಗಾವತಿಗೆ ಭೇಟಿ ನೀಡಿದ್ದ ಕೇಂದ್ರ ಹಣಕಾಸಿನ ಸಚಿವ ಸಿ. ಸುಬ್ರಹ್ಮಣ್ಯಂ ಗಂಗಾವತಿ ಸಹಕಾರಿ ಸಕ್ಕರೆ ಕಾರ್ಖಾನೆಗೆ ಶಂಕುಸ್ಥಾಪನೆ ಮಾಡಿದರು. ಫೆಬ್ರವರಿ ೨೮, ೨೯ ರಂದು ಬೆಂಗಳೂರಿಗೆ ಭೇಟಿ ನೀಡಿದ ಅವರು ಜನಸಾಮಾನ್ಯರ ಬೆಂಬಲ ಕಳೆದುಕೊಂಡಿರುವ ಸಂಸ್ಥಾ ಕಾಂಗ್ರೆಸ್ ಮರಣಶಯ್ಯೆಯಲ್ಲಿದ್ದು ತನ್ನ ಕೊನೆಯ ಹೋರಾಟ ನಡೆಸುತ್ತಿದೆ. ಬಡತನ ಹಾಗೂ ನಿರುದ್ಯೋಗ ನಿವಾರಣೆಗೆ ಇಷ್ಟರಲ್ಲಿಯೇ ಆಡಳಿತ ಕಾಂಗ್ರೆಸ್ ಪಕ್ಷ ಬೃಹತ್ ಯೋಜನೆಗಳನ್ನು ಪ್ರಕಟಿಸುವುದು, ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಆಡಳಿತ ಕಾಂಗ್ರೆಸ್‌ಗೆ ಮತ ನೀಡಬೇಕೆಂದು ಅವರು ವಿನಂತಿ ಮಾಡಿದರು. ೨೮.೨.೭೨ರಂದು ಕೇಂದ್ರ ಸಚಿವ ಕೆ. ಆರ್. ಗಣೇಶ್ ಬೆಂಗಳೂರಿನಲ್ಲಿ ಪ್ರಚಾರ ಭಾಷಣ ಮಾಡಿದರು. ಸಿ.ಪಿ.ಐ. ಮುಖಂಡ ಭೂಪೇಶ ಗುಪ್ತಾ ೨೦.೨.೭೨ರಂದು ಬೆಂಗಳೂರಿನಲ್ಲಿ ಪತ್ರಿಕಾ ಗೋಷ್ಠಿಯಲ್ಲಿ ಭಾಗವಹಿಸಿ, ಸಂಸ್ಥಾ ಕಾಂಗ್ರೆಸ್ ಮತ್ತು ಜನಸಂಘಗಳ ವಿರುದ್ಧ ಹೋರಾಡಲು, ವಾಮ ಪ್ರಜಾಸತ್ತಾತ್ಮಕ ಶಕ್ತಿಗಳನ್ನು ಸಂಘಟಿಸಲು ಕಾಂಗ್ರೆಸ್ ಜೊತೆ ಮೈತ್ರಿ ಮಾಡಿಕೊಳ್ಳಲಾಗಿದೆ ಎಂದರು.

ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ದೇವರಾಜ ಅರಸರು ಫೆಬ್ರವರಿ ೧೫ ರಿಂದ ಚುನಾವಣೆಗಳವರೆಗೂ ರಾಜ್ಯದಾದ್ಯಂತ ಸಂಚರಿಸಿ ಚುನಾವಣಾ ಪ್ರಚಾರ ಮಾಡಿದರು. ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಸರ್ಕಾರ ಬಂದ ಕೂಡಲೇ ಗಡಿ ಹಾಗೂ ನದಿ ನೀರಿನ ವಿವಾದ ಗಳಿಗೆ ತೃಪ್ತಿಕರ ಪರಿಹಾರ ರೂಪಿಸಲಾಗುವುದು. ಈ ವಿಚಾರದಲ್ಲಿ ಇಂದಿನ ಪರಿಸ್ಥಿತಿಗೆ ಸಂಸ್ಥಾ ಕಾಂಗ್ರೆಸ್ ಮುಖಂಡರೇ ಹೊಣೆ ಎಂದರು. ಬಡವರು, ಹಿಂದುಳಿದ ವರ್ಗದವರು ಮಹಿಳೆಯರು ಯುವಕರ ಶ್ರೇಯೋಭಿವೃದ್ಧಿಗೆ ಆಡಳಿತ ಕಾಂಗ್ರೆಸ್‌ಗೆ ಬೆಂಬಲ ನೀಡಬೇಕೆಂದರು ಈಗಾಗಲೇ ರಾಜ್ಯಗಳಿಗೆ ಸಾಕಷ್ಟು ಅಧಿಕಾರ ಇದೆ. ಕೇಂದ್ರದಿಂದ ಅಭಿವೃದ್ಧಿಗೆ ಹೆಚ್ಚಿನ ನೆರವನ್ನು ಪಡೆಯುವುದೇ ಮುಖ್ಯ ಎಂದು

ಹೇಳಿದರು. ಎಸ್. ಎಂ. ಕೃಷ್ಣ ತುಳಸೀದಾಸ್ ದಾಸಪ್ಪ ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಸಂಚರಿಸಿ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು .

**ಚುನಾವಣಾ ಪ್ರಣಾಳಿಕೆ**

೧೮.೧.೧೯೭೨ರ ರಂದು ಕೇಂದ್ರ ಚುನಾವಣಾ ಸಮಿತಿಯು ವಿಧಾನಸಭಾ ಚುನಾವಣೆಗಳಿಗೆ ಒಂದು ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿತು. ಸದರಿ ಪ್ರಣಾಳಿಕೆಯ ಮುಖ್ಯಾಂಶಗಳು ಕೆಳಗಿನಂತಿವೆ.

- ಸರ್ವರಿಗೂ ಉದ್ಯೋಗ ಕಲ್ಪಿಸಲು ಸರ್ಕಾರಿ ಕ್ಷೇತ್ರದ ವಿಸ್ತರಣೆ
- ನಗರ ಪ್ರದೇಶದ ಆಸ್ತಿಮಿತಿ ಭೂ ಸುಧಾರಣೆ ಜಾರಿಗೆ ಕ್ರಮ
- ೧೪ ವರ್ಷದ ಒಳಗಿನ ಮಕ್ಕಳಿಗೆ ಉಚಿತ ಕಡ್ಡಾಯ ವಿದ್ಯಾಭ್ಯಾಸ
- ಗಂಗಾಕಾವೇರಿ ಸಂಪರ್ಕಕ್ಕೆ ಕ್ರಮ

ಭಾರತ್ ಪಾಕ್ ಯುದ್ಧದಲ್ಲಿ ಬಲಿದಾನ ಮಾಡಿದ ಯೋಧರ ಕುಟುಂಬದವರು, ಅಂಗವಿಕಲ ಯೋಧರು, ಗಡಿ ಪ್ರದೇಶದಲ್ಲಿ ಶತ್ರುಗಳ ಬಾಂಬ್ ಧಾಳಿಗೆ ತುತ್ತಾದವರು, ಗಡಿ ರಕ್ಷಣೆಯಲ್ಲಿ ನೆರವಾದ ಸಾರ್ವಜನಿಕರು ತಮ್ಮ ಮಾಮೂಲು ಜೀವನವನ್ನು ನಿರಾತಂಕವಾಗಿ ನಡೆಸಲು ಪೂರ್ಣ ನೆರವು, ಕೇಂದ್ರ ರಾಜ್ಯಗಳಲ್ಲಿ ಸುಭದ್ರ ಸರ್ಕಾರ, ಆದರೆ ರಾಜ್ಯಗಳ ಹಕ್ಕಿಗೆ ಚ್ಯುತಿ ಇಲ್ಲ. ಅಲ್ಪ ಸಂಖ್ಯಾತರು, ಪರಿಶಿಷ್ಟ ಜಾತಿ, ಪರಿಶಿಷ್ಟವರ್ಗದವರು, ಹಿಂದುಳಿದ ವರ್ಗಗಳಿಗೆ ನೆರವು. ಅವರ ಅಭಿವೃದ್ಧಿಗೆ ಅನೇಕ ಆರ್ಥಿಕ ಸಾಮಾಜಿಕ ಯೋಜನೆಗಳು ಸಧ್ಯದಲ್ಲೇ ಜಾರಿ.

ಬಡತನ ನಿವಾರಣೆಗೆ ಅನೇಕ ಯೋಜನೆಗಳು, ಕೃಷಿ ಕಾರ್ಮಿಕರಿಗೆ ಉದ್ಯೋಗ, ಜನತಾಂತ್ರಿಕ ಪ್ರಜಾಪ್ರಭುತ್ವದ ಆಧಾರದ ಮೇಲೆ ಸಮಾಜವಾದಿ ಸಮಾಜ ನಿರ್ಮಾಣ.

ಇದಕ್ಕೆ ಹೊರತಾಗಿ ರಾಜ್ಯ ಚುನಾವಣಾ ಸಮಿತಿಯೂ ಒಂದು ಚುನಾವಣಾ ಪ್ರಣಾಳಿಕೆಯನ್ನು ೧೬.೨.೭೨ ರಂದು ಬಿಡುಗಡೆ ಮಾಡಿತು. ಚುನಾವಣಾ ಪ್ರಣಾಳಿಕೆಯಲ್ಲಿ ನಿಮ್ನ ಹಾಗೂ ಹಿಂದುಳಿದ ವರ್ಗಗಳ ಹಿತರಕ್ಷಣೆ ಬಗ್ಗೆ ಮಾಡಬೇಕಾದ ಕಾರ್ಯಕ್ರಮಗಳನ್ನು ಅಳವಡಿಸಲು ರೂಪುರೇಷೆಗಳನ್ನು ಸಿದ್ಧಪಡಿಸಲಾಗುತ್ತಿದೆ. ಇದಕ್ಕಾಗಿ ಒಂದು ಸಮಿತಿಯನ್ನು ನೇಮಿಸಲಾಗಿದೆ ಎಂದು ಬಿ. ಬಸವಲಿಂಗಪ್ಪನವರು ೨.೧.೭೨ ರಂದು ಒಂದು ಹೇಳಿಕೆ ನೀಡಿದ್ದರು.

**ರಾಜ್ಯ ಚುನಾವಣಾ ಪ್ರಣಾಳಿಕೆಯ ಮುಖ್ಯಾಂಶಗಳು ಕೆಳಗಿನಂತಿವೆ**

೧೯೬೭ರ ಚುನಾವಣೆಗಳ ನಂತರ ನೆಹರೂರವರ ನೇತೃತ್ವದಲ್ಲಿ ಕಟ್ಟಿದ್ದ ಸಮಾಜವಾದಿ ಸಮಾಜ ರಚನೆ ಕುಸಿದುಬೀಳುವಂತಾಗಿದೆ. ಈ ಪರಿಸ್ಥಿತಿಯ ಗಂಭೀರತೆಯನ್ನು ಅರಿತವರು ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರೊಬ್ಬರೆ. ಅವರು ಕಾಂಗ್ರೆಸ್ ಸಂಸ್ಥೆಯನ್ನು ಪುನರುಜ್ಜೀವನಗೊಳಿಸಿ ಅದನ್ನು ಇಂದಿನ ಆರ್ಥಿಕ ವ್ಯವಸ್ಥೆಯಲ್ಲಿ ಕ್ರಾಂತಿಕಾರಕ ಬದಲಾವಣೆ ತರುವ ಉಪಕರಣವಾಗಿ ಪರಿವರ್ತಿಸಲು ಹೃತ್ಪೂರ್ವಕ ಪ್ರಯತ್ನಗಳನ್ನು ನಡೆಸಿದ್ದಾರೆ.

ಕಾಂಗ್ರೆಸ್ ಪಕ್ಷ ಸೈದ್ಧಾಂತಿಕ ಕಾರಣಗಳಿಗಾಗಿ ಒಡೆದಿದೆ. ಮಧ್ಯಂತರ ಚುನಾವಣೆಗಳಲ್ಲಿ ರಾಜ್ಯದಲ್ಲಿ ೨೭ ಲೋಕಸಭಾ ಸ್ಥಾನಗಳಲ್ಲಿ ಗೆಲುವು ಸಾಧಿಸಿ, ಬಹುಮತ ಪಡೆದು ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿರುವ ಆಡಳಿತ ಕಾಂಗ್ರೆಸ್ ಪಕ್ಷವೇ ಸಂಪೂರ್ಣ ಬೆಳವಣಿಗೆ ಹೊಂದಿದ ನಿಜವಾದ ಕಾಂಗ್ರೆಸ್ ಪಕ್ಷವಾಗಿದೆ. ಇದಕ್ಕೆ ಕಾರಣ ಶ್ರೀಮತಿ ಇಂದಿರಾ ಗಾಂಧಿಯವರ ಅಪ್ರತಿಮ ವ್ಯಕ್ತಿತ್ವ, ಅನುಪಮ ನಾಯಕತ್ವ, ಹೊಸ ಕಾಂಗ್ರೆಸ್ ಪಕ್ಷದ ಧೋರಣೆಗಳು ಹಾಗೂ ಕಾರ್ಯಕ್ರಮಗಳು. ೧೯೬೨ ರಿಂದ ೧೯೭೨ ಮಾರ್ಚ್ ೨೬ರಲ್ಲಿ ವಿಧಾನಸಭೆ ವಿಸರ್ಜಿಸುವವರೆಗೆ ನಿಜಲಿಂಗಪ್ಪನವರು, ವೀರೇಂದ್ರ ಪಾಟೀಲರು ನಡೆಸಿರುವ ದುರಾಡಳಿತವೇ ಇಂದಿನ ಸ್ಥಿತಿಗೆ ಕಾರಣ. ಆಡಳಿತ ಯಂತ್ರ ಕೆಟ್ಟುಹೋಗಿದೆ. ಸ್ವಜನಪಕ್ಷಪಾತ, ಭ್ರಷ್ಟಾಚಾರ, ವಿಶೇಷ ಅನುಗ್ರಹಗಳನ್ನು ಇವರು ಪೋಷಿಸಿಕೊಂಡು ಬಂದಿದ್ದಾರೆ. ಈ ಸ್ಥಿತಿಯಲ್ಲಿ ಜನರು ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರಲ್ಲಿ ತಮ್ಮ 'ರಕ್ಷಕ ಶಕ್ತಿ' ಕಂಡುಕೊಂಡಿದ್ದಾರೆ.

ಜನತೆಯ ಆಶೋತ್ತರಗಳನ್ನು ಕಾಂಗ್ರೆಸ್ ಪೂರ್ಣವಾಗಿ ಅರಿತಿದೆ. ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಪಕ್ಷವು ಬಹುಮತ ಪಡೆದು ಅಧಿಕಾರಕ್ಕೆ ಬಂದರೆ, ರಾಜ್ಯದಲ್ಲಿ ದಕ್ಷ, ಬಲಿಷ್ಠ, ಸುಸ್ಥಿರ ಸರ್ಕಾರವನ್ನು ಸ್ಥಾಪಿಸಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ಭರವಸೆ ನೀಡುತ್ತದೆ. ಮುಖ್ಯಾಂಶಗಳು ಕೆಳಗಿನಂತಿವೆ.

- ಮೈಸೂರು, ಮಹಾರಾಷ್ಟ್ರ ಗಡಿ ವಿವಾದದಲ್ಲಿ ಮೈಸೂರು ರಾಜ್ಯಕ್ಕೆ ಸಂಪೂರ್ಣ ನ್ಯಾಯ ದೊರಕಿಸುವುದು .
- ನದಿ ನೀರಿನ ವಿವಾದದಲ್ಲಿ ರಾಜ್ಯಕ್ಕೆ ನ್ಯಾಯ ಹಾಗೂ ಕೃಷ್ಣಾ, ಕಾವೇರಿ ನದಿ ಕೊಳ್ಳದ ಎಲ್ಲಾ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸುವುದು.
- ಮಧ್ಯಮ ಹಾಗೂ ಸಣ್ಣ ಪ್ರಮಾಣದ ನೀರಾವರಿ ಯೋಜನೆಗಳಿಗೂ ಆದ್ಯತೆ. ನೀರಾವರಿ ಕ್ಷೇತ್ರದ ವಿಸ್ತರಣೆ.
- ಭೂ ಸುಧಾರಣಾ ಕಾಯಿದೆ ಜಾರಿ. ಉಳುವವನೇ ಭೂಮಿಯ ಒಡೆಯ ತತ್ವದ ಅನುಷ್ಠಾನ.
- ಭೂ ಹಿಡುವಳಿ ಕನಿಷ್ಠ ಮಟ್ಟಕ್ಕೆ.
- ನಗರ ಆಸ್ತಿಮಿತಿ ಜಾರಿ.
- ವಸತಿ ಕಾರ್ಯಕ್ರಮಗಳಿಗೆ ಆದ್ಯತೆ. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಹಿಂದುಳಿದ ವರ್ಗಗಳು ಹಾಗೂ ಅಲ್ಪ ಸಂಖ್ಯಾತ ವರ್ಗದ ಬಡವರಿಗೆ ಉಚಿತ ನಿವೇಶನ ಹಂಚಿಕೆ.
- ಗ್ರಾಮಗಳಿಗೆ ಶುದ್ಧ ಕುಡಿಯುವ ನೀರಿನ ಪೂರೈಕೆ, ರಸ್ತೆ ಸೌಕರ್ಯ.

  ದಕ್ಷ, ಸ್ವಚ್ಛ ಆಡಳಿತ. ಎಲ್ಲಾ ಹಂತಗಳಲ್ಲೂ ಆಡಳಿತ ಭಾಷೆಯಾಗಿ ಕನ್ನಡ ಜಾರಿ.

## ಫಲಿತಾಂಶ

೫.೩.೭೨ ರಂದು ೧೦೭ ವಿಧಾನಸಭಾ ಸ್ಥಾನಗಳಿಗೆ ಹಾಗೂ ೯.೩.೭೨ ರಂದು ಉಳಿದ ೧೮೯ ಸ್ಥಾನಗಳಿಗೆ ಮತದಾನ ನಡೆಯಿತು. ೪೫ ಕ್ಷೇತ್ರಗಳಲ್ಲಿ ನೇರ ಸ್ಪರ್ಧೆ ಇತ್ತು. ೭೦ ಕ್ಷೇತ್ರಗಳಲ್ಲಿ ತ್ರಿಕೋಣ ಸ್ಪರ್ಧೆ ಇದ್ದರೆ, ೪೧ ಕ್ಷೇತ್ರಗಳಲ್ಲಿ ನಾಲ್ಕು ಜನರ ಸ್ಪರ್ಧೆ ಇತ್ತು. ೧೭ ಕ್ಷೇತ್ರಗಳಲ್ಲಿ ಆರು ಜನರ ಸ್ಪರ್ಧೆ, ೬ ಕ್ಷೇತ್ರಗಳಲ್ಲಿ ೭ ಜನರ ಸ್ಪರ್ಧೆ, ೨ ಕ್ಷೇತ್ರಗಳಲ್ಲಿ ಎಂಟು ಜನರ ಸ್ಪರ್ಧೆ, ೨ ಕ್ಷೇತ್ರಗಳಲ್ಲಿ ಒಂಬತ್ತು ಜನರ ಸ್ಪರ್ಧೆ, ಒಂದು ಸ್ಥಾನದಲ್ಲಿ ೧೦ ಜನ ಸ್ಪರ್ಧೆ, ಒಂದು ಸ್ಥಾನದಲ್ಲಿ ೧೨ ಜನರ ಸ್ಪರ್ಧೆ ಇತ್ತು.

೧೨.೩.೭೨ರ ಹೊತ್ತಿಗೆ ಪೂರ್ಣ ಫಲಿತಾಂಶ ಹೊರಬಿತ್ತು. ಆಡಳಿತ ಕಾಂಗ್ರೆಸ್ ೧೬೫ ಸ್ಥಾನಗಳಲ್ಲಿ ಜಯಭೇರಿ ಬಾರಿಸಿ ಮೂರನೇ ಎರಡು ಬಹುಮತ ಪಡೆದಿತ್ತು. ೧೧.೩.೭೨ ರಂದೇ ದೆಹಲಿಗೆ ಹೋಗಿದ್ದ ದೇವರಾಜ ಅರಸರು ವರಿಷ್ಠರಿಗೆ ಫಲಿತಾಂಶದ ಬಗ್ಗೆ ವಿವರ ನೀಡಿದರು. ೧೪.೩.೭೨ ರಂದು ಕೆ. ಎಚ್. ಪಾಟೀಲ್, ಸಿದ್ಧವೀರಪ್ಪ ಇವರುಗಳು ದೆಹಲಿಗೆ ಹೋದರು. ೧೭.೩.೭೨ ರಂದು ರಾಜ್ಯದ ಎಲ್ಲಾ ಜಿಲ್ಲೆಗಳ ಆಡಳಿತ ಕಾಂಗ್ರೆಸ್ ಮುಖಂಡರು ಬೆಂಗಳೂರಿನಲ್ಲಿ ಸಭೆ ಸೇರಿ ದೇವರಾಜ ಅರಸುರವರ ನಾಯಕತ್ವಕ್ಕೆ ಬೆಂಬಲ ವ್ಯಕ್ತ ಪಡಿಸಿದರು. ಕೇಂದ್ರ ಸಚಿವ ಉಮಾಶಂಕರ ದೀಕ್ಷಿತ್ ನಾಯಕನ ಆಯ್ಕೆಗೆ ವೀಕ್ಷಕರಾಗಿ ಬೆಂಗಳೂರಿಗೆ ಆಗಮಿಸಿದರು. ಕೇಂದ್ರ ಅರಸು ನಾಯಕತ್ವಕ್ಕೆ ಬೆಂಬಲಿಸಿದ ವಿಚಾರ ಎಲ್ಲರಿಗೂ ತಿಳಿದಿತ್ತು.

೧೮.೩.೭೨ರಂದು ಶಾಸಕಾಂಗ ಪಕ್ಷದ ನಾಯಕನ ಆಯ್ಕೆ ನಡೆಯಿತು. ಸಿದ್ದವೀರಪ್ಪನವರು ದೇವರಾಜ ಅರಸರ ಹೆಸರನ್ನು ನಾಯಕತ್ವಕ್ಕೆ ಸೂಚಿಸಿದರು. ಕೆ. ಎಚ್. ಪಾಟೀಲ್ ಅನುಮೋದಿಸಿದರು. ಅದೇ ದಿನ ದೇವರಾಜ ಅರಸ್ ಮುಖ್ಯಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ಅವರ ಜೊತೆ ಕೆ. ಎಚ್. ಪಾಟೀಲ್, ಎಚ್. ಎಂ. ಚನ್ನಬಸಪ್ಪ ಕ್ಯಾಬಿನೆಟ್ ಸಚಿವರಾಗಿ ಅಧಿಕಾರ ಸ್ವೀಕರಿಸಿದರು.

## ೧೯೭೨ರ ವಿಧಾನಸಭೆ ಚುನಾವಣೆ - ಗೆದ್ದ ಪ್ರಮುಖರು

೧೯೭೧ರ ಲೋಕಸಭಾ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ ಅದ್ಭುತ ವಿಜಯ ಗಳಿಸಿದ ಕಾರಣ ಈ ವಿಧಾನಸಭೆ ಚುನಾವಣೆಯಲ್ಲಿ ಯುವಕರಿಗೆ, ಹಿಂದುಳಿದವರಿಗೆ, ಮಹಿಳೆಯರಿಗೆ ಹಾಗೂ ಅಲ್ಪಸಂಖ್ಯಾತರಿಗೆ ಅತಿ ಹೆಚ್ಚಿನ ಪ್ರಾತಿನಿಧ್ಯದೊಂದಿಗೆ ಟಿಕೇಟು ನೀಡಲು ಪಕ್ಷ ನಿರ್ಧರಿಸಿತು. ಈ ಚುನಾವಣೆಯಿಂದಾಗಿ ರಾಜ್ಯದ ೧೯ ಜಿಲ್ಲೆಗಳಿಂದಲೂ ಹತ್ತಾರು ಹೊಸ ಪ್ರತಿಭೆಗಳು ರಾಜ್ಯದ ರಾಜಕಾರಣಕ್ಕೆ ಪಾದಾರ್ಪಣೆ ಮಾಡಿದವು. ನಿಂತ ನೀರಿನಂತೆ ಇದ್ದ ರಾಜ್ಯದ ರಾಜಕಾರಣದಲ್ಲಿ ಚೈತನ್ಯಶೀಲತೆ ಉಗಮವಾಯಿತು. ಅಂದಾಕ್ಷಣ ಅನುಭವಿಗಳು ಯಾರೂ ಆಡಳಿತ ಕಾಂಗ್ರೆಸ್‌ನಿಂದ ಈ ಸಲದ ವಿಧಾನಸಭೆಗೆ ಚುನಾಯಿತರಾಗಿಲ್ಲವೆಂದು ಹೇಳುವಂತಿಲ್ಲ. ಹಿರಿಯರಾದ ಹೆಚ್. ಎಂ. ಚನ್ನಬಸಪ್ಪ, ಹೆಚ್. ಸಿದ್ದವೀರಪ್ಪ, ಕೆ. ಹೆಚ್. ರಂಗನಾಥ್, ಎಂ. ವೈ. ಘೋರ್ಪಡೆ, ಕೆ. ಪುಟ್ಟಸ್ವಾಮಿ, ಬಿ. ಬಸವಲಿಂಗಪ್ಪ, ಅಜೀಜ್‌ಸೇಠ್, ಮೊದಲಾದವರು ಈ ಸಲದ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ ಮೂಲಕ ವಿಧಾನಸಭೆಗೆ ಆಯ್ಕೆಯಾಗಿದ್ದರು.

೧೯೭೮ರ ವಿಧಾನಸಭೆ ಚುನಾವಣೆಯಲ್ಲಿ ಗೆದ್ದ ಹೊಸ ಮುಖಗಳು ಎಂದರೆ ಭಾಲ್ಕಿಯಿಂದ ಸುಭಾಷ್ ಅಷ್ಟೂರೆ, ಜೇವರ್ಗಿಯಿಂದ ಧರ್ಮಸಿಂಗ್, ಗುರುಮಿಠ್ಕಲ್‌ನಿಂದ ಮಲ್ಲಿಕಾರ್ಜುನ ಖರ್ಗೆ, ರಾಯಚೂರಿನಿಂದ ನಜೀರ್ ಅಹಮದ್ ಸಿದ್ದಿಕಿ, ಗಂಗಾವತಿಯಿಂದ ಹೆಚ್.ಆರ್. ಶ್ರೀರಾಮುಲು, ಹರಪನಹಳ್ಳಿಯಿಂದ ಡಿ. ನಾರಾಯಣದಾಸ್, ದಾವಣಗೆರೆಯಿಂದ ಶ್ರೀಮತಿ ನಾಗಮ್ಮ ಕೇಶವಮೂರ್ತಿ, ಜಗಳೂರಿನಿಂದ ಜಿ. ಹೆಚ್. ಅಶ್ವತ್ಥರೆಡ್ಡಿ, ಗುಬ್ಬಿಯಿಂದ ಗಟ್ಟಿ ಚಂದ್ರಶೇಖರ್, ಕುಣಿಗಲ್‌ನಿಂದ ಅಂದಾನಯ್ಯ, ಗೌರಿಬಿದನೂರಿನಿಂದ ವಿ. ಕೃಷ್ಣರಾವ್, ಬೆಂಗಳೂರಿನ ಬಸವನಗುಡಿಯಿಂದ ಅಮೀರ್ ರಹಮತುಲ್ಲಾಖಾನ್, ಪಾಂಡವಪುರದಿಂದ ಡಿ. ಹಲಗೇಗೌಡ, ನಂಜನಗೂಡಿನಿಂದ ಕೆ. ಬಿ. ಶಿವಯ್ಯ, ಸೋಮವಾರಪೇಟೆಯಿಂದ ಆರ್. ಗುಂಡೂರಾವ್, ಸುರತ್ಕಲ್‌ನಿಂದ ಬಿ. ಸುಬ್ಬಯ್ಯಶೆಟ್ಟಿ, ಉಡುಪಿಯಿಂದ ಶ್ರೀಮತಿ ಮನೋರಮಾ ಮಧ್ವರಾಜ್, ಕಾರ್ಕಳದಿಂದ ಎಂ. ವೀರಪ್ಪ ಮೊಯಿಲಿ, ಚಿಕ್ಕಮಗಳೂರಿನಿಂದ ಶ್ರೀಮತಿ ಈವಾ ವಾಜ್, ಶಿಕಾರಿಪುರದಿಂದ ಕೆ. ಯಂಕಟಪ್ಪ, ಭಟ್ಕಳದಿಂದ ಎಸ್. ಎಂ. ಯಾಹ್ಯಾ, ಹುಬ್ಬಳ್ಳಿ ಗ್ರಾಮಾಂತರದಿಂದ ಗೋಪಿನಾಥ ಸಾಂಡ್ರಾ, ಹಿರೇಕೆರೂರಿನಿಂದ ಬಿ.ಜಿ. ಬಣಕಾರ್, ಮುಂಡರಗಿಯಿಂದ ಕೆ. ಹೆಚ್. ಕುರಡಗಿ, ರಾಮದುರ್ಗದಿಂದ ಆರ್.ಎಸ್. ಪಾಟೀಲ್, ಅರಭಾವಿಯಿಂದ ವಿ.ಎಸ್. ಕೌಜಲಗಿ, ರಾಯಭಾಗ್‌ನಿಂದ ಆರ್.ಡಿ. ಕಿತ್ತೂರ್, ಬಿಜಾಪುರದಿಂದ ಕೆ. ಟಿ. ರಾಥೋಡ್ ಮುಂತಾದವರು ಆಯ್ಕೆಯಾದರು.

ಶ್ರೀಮತಿ ಇಂದಿರಾ ಗಾಂಧಿಯವರ ನೇತೃತ್ವದಲ್ಲಿ ಆಡಳಿತ ಕಾಂಗ್ರೆಸ್ ಪಕ್ಷ ಉದಯವಾಗದೇ ಹೋಗಿದ್ದರೆ ಎಷ್ಟೋ ಪ್ರತಿಭೆಗಳು ರಾಜಕಾರಣಕ್ಕೆ ಬರುತ್ತಿರಲಿಲ್ಲ. ಅನೇಕ ಜಾತಿಗಳು ಶಾಸನ ಸಭೆಯ ಸದಸ್ಯತ್ವವನ್ನು ಪಡೆಯುತ್ತಿರಲಿಲ್ಲ. ರಾಜ್ಯದ ರಾಜಕಾರಣದಲ್ಲಿ ಹೊಸ ನೀರು ಹಾಗೂ ಹೊಸಚಿಂತನೆ ಬರಲು ಆಡಳಿತ ಕಾಂಗ್ರೆಸ್ ಕಾರಣವಾಯಿತೆಂದು ಈ ಕಾಲದ ರಾಜಕೀಯ ವಿಮರ್ಶಕರು ವಿಶ್ಲೇಷಿಸುತ್ತಾರೆ.

## ೧೯೭೭-ಆರನೆ ಲೋಕಸಭಾ ಚುನಾವಣೆ: ಆಡಳಿತ ಕಾಂಗ್ರೆಸ್ ಹಿನ್ನೆಲೆ

೧೯೭೧ ರ ಮಾರ್ಚ್ ತಿಂಗಳಲ್ಲಿ ನಡೆದಿದ್ದ ಐದನೇ ಲೋಕಸಭಾ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಇಂದಿರಾ ಗಾಂಧಿಯವರ ನೇತೃತ್ವದಲ್ಲಿ ೩೫೨ ಸ್ಥಾನಗಳಿಸಿ ಭಾರೀ ಬಹುಮತದೊಂದಿಗೆ ಕೇಂದ್ರದಲ್ಲಿ ಅಧಿಕಾರದಲ್ಲಿತ್ತು. ೧೯೭೨ರ ಮಾರ್ಚ್ ತಿಂಗಳಲ್ಲಿ ೧೬ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ನಡೆದ ವಿಧಾನಸಭಾ ಚುನಾವಣೆಗಳಲ್ಲಿ ೧೪ ರಾಜ್ಯಗಳಲ್ಲಿ ಹಾಗೂ ದೆಹಲಿ ಕೇಂದ್ರಾಡಳಿತ ಪ್ರದೇಶದಲ್ಲಿ ಆಡಳಿತ ಕಾಂಗ್ರೆಸ್ ಪಕ್ಷ ಭಾರೀ ಬಹುಮತದೊಂದಿಗೆ ಅಧಿಕಾರಕ್ಕೆ ಬಂದಿತ್ತು. ಆಡಳಿತ ಕಾಂಗ್ರೆಸ್‌ನಲ್ಲಿ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ಪ್ರಶ್ನಾತೀತ ಪ್ರಬಲ ನಾಯಕರಾಗಿದ್ದರು. ಅನೇಕ ಆರ್ಥಿಕ, ಸಾಮಾಜಿಕ ನ್ಯಾಯದ ಕಾರ್ಯಕ್ರಮಗಳನ್ನು ಹಾಕಿಕೊಂಡು ದೇಶವನ್ನು ಅಭಿವೃದ್ಧಿ ಪಥದತ್ತ ಮುನ್ನಡೆಸುತ್ತಿದ್ದರು.

೧೯೭೫ ಜೂನ್ ೨ ರಂದು ಅಲಹಾಬಾದ್ ಹೈಕೋರ್ಟ್ ರಾಯ್‌ಬರೇಲಿ ಕ್ಷೇತ್ರದಿಂದ ಶ್ರೀಮತಿ ಇಂದಿರಾ ಗಾಂಧಿಯವರ ಆಯ್ಕೆಯನ್ನು ರದ್ದುಗೊಳಿಸಿತು. ಶ್ರೀಮತಿ ಇಂದಿರಾಗಾಂಧಿ ಜೂನ್ ೨೦ ರಂದು ಸುಪ್ರೀಂ ಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಿದರು. ಕಮ್ಯುನಿಸ್ಟೇತರ ವಿರೋಧ ಪಕ್ಷಗಳು ಜಯಪ್ರಕಾಶ ನಾರಾಯಣರ ನೇತೃತ್ವದಲ್ಲಿ ಜೂನ್ ೨೫ ರಿಂದ ಇಂದಿರಾ ಅವರ ರಾಜೀನಾಮೆಗೆ ಒತ್ತಾಯಿಸಿ ರಾಷ್ಟ್ರದಾದ್ಯಂತ ಚಳವಳಿ ಹಮ್ಮಿಕೊಳ್ಳುವುದಾಗಿ ಪ್ರಕಟಿಸಿದವು. ಆದರೆ ಅದೇ ದಿನ ಅಂದರೆ ಜೂನ್ ೨೫, ೧೯೭೫ ರಂದು ರಾಷ್ಟ್ರೀಯ ತುರ್ತು ಪರಿಸ್ಥಿತಿ ಘೋಷಿಸಲ್ಪಟ್ಟಿತು. ೨೬ ರಂದು ಪತ್ರಿಕಾ ಸೆನ್ಸಾರ್ ಜಾರಿ ಆಯಿತು. ರಾಜಕೀಯ ಪಕ್ಷಗಳ ನಾಯಕರುಗಳನ್ನು ಬಂಧಿಸಿ ಸ್ಥಾನ ಬದ್ಧತೆಯಲ್ಲಿಡಲು ಆರಂಭಿಸಲಾಯಿತು. ಅದೇ ದಿನ ಪ್ರಧಾನಿಯವರು ರಾಷ್ಟ್ರವನ್ನುದ್ದೇಶಿಸಿ ಪ್ರಸಾರ ಭಾಷಣ ಮಾಡಿ ಬಹುಮತದ ಪ್ರಜಾಪ್ರಭುತ್ವ ನೀತಿಗೆ ಅಪಾಯ ಬಂದುದರಿಂದ ತುರ್ತು ಪರಿಸ್ಥಿತಿ ಘೋಷಿಸಲಾಯಿತು ಎಂದೂ ಇದರಿಂದ ಜನತೆಗೆ ಯಾವುದೇ ತೊಂದರೆ ಇಲ್ಲವೆಂದೂ ಹೇಳಿದರು. ಜೂನ್ ೨೯ ರಂದು ಮೀಸಾಕ್ಕೆ ತಿದ್ದುಪಡಿ ತರಲಾಯಿತು. ಜುಲೈ ೧ ರಿಂದ ಕಾಫಿಪೋಸಾ ಕಾಯಿದೆ ಜಾರಿಗೆ ಬಂತು. ಜುಲೈ ೪ ರಂದು ಆರ್. ಎಸ್. ಎಸ್., ವಿ.ಎಚ್.ಪಿ., ಆನಂದ ಮಾರ್ಗ, ಜೆ.ಇ.ಐ., ನಕ್ಸಲೈಟ್ ಸೇರಿದಂತೆ ೨೭ ಸಂಸ್ಥೆಗಳನ್ನು ನಿಷೇಧಿಸಲಾಯಿತು. ಜುಲೈ ೨೨ ರಂದು ಲೋಕಸಭೆ ತುರ್ತು ಪರಿಸ್ಥಿತಿ ಸುಗ್ರೀವಾಜ್ಞೆಯನ್ನು ೩೩೬-೫೮ ಮತಗಳಿಂದಲೂ, ರಾಜ್ಯಸಭೆ ೧೩೬-೩೩ ಮತಗಳಿಂದಲೂ ಅಂಗೀಕರಿಸಿತು. ೧೯೭೫ ಡಿಸೆಂಬರ್ ೨೮ ರಂದು ದೇವಕಾಂತ ಬರೂವಾ ಎ.ಐ.ಸಿ.ಸಿ. ಅಧ್ಯಕ್ಷರಾಗಿ ಆಯ್ಕೆಯಾದರು. ೧೯೭೬ ಜನವರಿ ೧ ರಿಂದ ನಾಲ್ಕು ದಿನಗಳ ಕಾಲ ಚಂಡೀಘಡದಲ್ಲಿ ಎ.ಐ.ಸಿ.ಸಿ. ಅಧಿವೇಶನ ನಡೆಯಿತು. ತುರ್ತು ಪರಿಸ್ಥಿತಿ ತಾತ್ಕಾಲಿಕ, ಸಧ್ಯದಲ್ಲಿಯೇ ತುರ್ತು ಪರಿಸ್ಥಿತಿಯನ್ನು ರದ್ದುಗೊಳಿಸಿ ಚುನಾವಣೆಗಳನ್ನು ನಡೆಸಲಾಗುವುದೆಂದು ಘೋಷಿಸಿದರು.

ಜನವರಿ ೫ ರಂದು ಚಂದ್ರಶೇಖರ್, ಮೋಹನ್ ಧಾರಿಯಾ ಸೇರಿದಂತೆ ೭ ಜನ ಸಂಸದರನ್ನು ಪಕ್ಷದಿಂದ ಉಚ್ಚಾಟಿಸಲಾಯಿತು. ಅವರಲ್ಲಿ ಕೆಲವರನ್ನು ಸ್ಥಾನಬದ್ಧತೆಯಲ್ಲಿಡಲಾಯಿತು. ಅಖಿಲಭಾರತ ಯುವಕಾಂಗ್ರೆಸ್ ಪ್ರವರ್ಧಮಾನಕ್ಕೆ ಬಂದಿತ್ತು. ಸಂಜಯಗಾಂಧಿ ಅದರ ನೇತಾರರಾಗಿದ್ದರು. ಶ್ರೀಮತಿ ಅಂಬಿಕಾ ಸೋನಿ ಅಖಿಲ ಭಾರತ ಯುವ ಕಾಂಗ್ರೆಸ್ ಅಧ್ಯಕ್ಷೆಯಾಗಿದ್ದರು. ೭ ನವೆಂಬರ್ ೭೫ರಂದು ಸುಪ್ರೀಂ ಕೋರ್ಟ್ ಇಂದಿರಾ ಆಯ್ಕೆ ಕ್ರಮಬದ್ಧ ಎಂದು ಘೋಷಿಸಿ ಅಲಹಾಬಾದ್ ಹೈಕೋರ್ಟ್ ತೀರ್ಪನ್ನು ರದ್ದುಗೊಳಿಸಿತ್ತು. ಮಾರ್ಚ್ ೭೬ರಲ್ಲಿ ಮುಗಿಯಬೇಕಾಗಿದ್ದ ಪಾರ್ಲಿಮೆಂಟಿನ ಅವಧಿಯನ್ನು ಫೆಬ್ರವರಿ ೫, ೧೯೭೬ ರಂದು ಒಂದು ವರ್ಷದ ಮಟ್ಟಿಗೆ ಹೆಚ್ಚಿಸಲಾಯಿತು. ಆನಂತರ ಫೆಬ್ರವರಿ ೭೭ ರಲ್ಲಿ ಲೋಕಸಭೆಯ ಅವಧಿಯನ್ನು ಮತ್ತೆ ಮಾರ್ಚ್ ೭೮ರ ವರೆಗೆ ವಿಸ್ತರಿಸಲಾಯಿತು. ಮೂಲಭೂತ ಹಕ್ಕುಗಳಿಗಿಂತ ಕರ್ತವ್ಯಕ್ಕೇ ಪ್ರಾಧಾನ್ಯತೆ ನೀಡುವ ಸಂವಿಧಾನದ ೪೨ನೇ ತಿದ್ದುಪಡಿ ಜನವರಿ ೭೭ ರಂದು ಜಾರಿಗೆ ಬಂದಿತು.

ಭಾರತದ ಅತ್ಯಂತ ಪ್ರಸಿದ್ಧ ಪತ್ರಿಕೆ Illustrated Weekly of India ತನ್ನ ಏಪ್ರಿಲ್ ೬, ೧೯೭೫ರ ಸಂಚಿಕೆಯಲ್ಲಿ 'ಪೂರ್ಣಕ್ರಾಂತಿ' (Total Revolution) ಎಂಬ ಶೀರ್ಷಿಕೆಯಲ್ಲಿ ಎಂಟು ಪುಟದ ಲೇಖನವೊಂದನ್ನು ಪ್ರಕಟಿಸಿತ್ತು. ಅದರಲ್ಲಿ 'ಜಯಪ್ರಕಾಶ್ ನಾರಾಯಣ್‌ರವರ ಬೆಂಬಲಿಗರಲ್ಲಿ ಹಲವರು ಅವಕಾಶವಾದಿಗಳ ಸಮುದಾಯದವರಿದ್ದು ಶ್ರೀಮತಿ ಇಂದಿರಾ ಗಾಂಧಿಯವರ ಮೇಲಿನ ಹಗೆತನವೇ ಅವರನ್ನು ಬೆಸೆದ ಐಕ್ಯತೆಯ ಕೊಂಡಿಯೆಂದು ಹೇಳಲಾಗಿದೆ' ಎಂದಿತು. ಅದರ ಸಂಪಾದಕರಾಗಿದ್ದ ಖುಷವಂತ ಸಿಂಗ್‌ರವರು ಜಯಪ್ರಕಾಶ್ ನಾರಾಯಣ್‌ರವರ ಆಂದೋಲನವನ್ನು ವಿವರಿಸುತ್ತಾ 'ಸ್ಥಾಪಿತ ಸರಕಾರಗಳನ್ನು ಸಂವಿಧಾನ ಬಾಹಿರವಾಗಿ ಉರುಳಿಸುವ ಪ್ರವೃತ್ತಿ ಸರಿಯಾದುದಲ್ಲವೆಂದೂ, ಇಂದೊಂದು ಪ್ರಜಾಸತ್ತಾತ್ಮಕ ವಿಧಾನಕ್ಕೆ ಘಾತುಕವೆಂದೂ' ಹೇಳಿದ್ದರು.

ಪಕ್ಷರಹಿತ ರಾಜಕೀಯವೆಂಬ ಜಯಪ್ರಕಾಶ ನಾರಾಯಣ್‌ರವರ ಘೋಷಣೆಯನ್ನು ಭಾರತದ ಮತ್ತು ಜಗತ್ತಿನ ಸರ್ವೇಸಾಮಾನ್ಯ ಎಲ್ಲಾ ರಾಜಕೀಯ ಪಂಡಿತರು ಬಲವಾಗಿ ಖಂಡಿಸಿದ್ದಾರೆ. ಅದರಲ್ಲಿಯೂ ಜೆ.ಪಿ.ಯವರು ಮತ್ತು ಅವರ ಸಂಗಡಿಗರು ಪೊಲೀಸ್ ಮತ್ತು ಸೈನಿಕರ ಸರಕಾರದ ಆಜ್ಞೆಗಳನ್ನು ತಿರಸ್ಕರಿಸಿ ದಂಗೆ ಏಳಬೇಕೆಂದು ನೀಡಿದ ಕರೆ ದೇಶದ ಸಂವಿಧಾನದ ವ್ಯವಸ್ಥೆಯನ್ನೇ ಬುಡಮೇಲು ಮಾಡುವ ಕ್ರಮವಾಗಿತ್ತು. ಅಲ್ಲದೆ ಆ ಕಾಲದಲ್ಲಿ ನಡೆದ ಕೇಂದ್ರದ ಸಚಿವರಾದ ಎಲ್.ಎನ್. ಮಿಶ್ರಾ ಅವರ ಬರ್ಬರ ಕೊಲೆ ಮತ್ತು ಅಂದಿನ ಸುಪ್ರೀಮ್ ಕೋರ್ಟಿನ ಮುಖ್ಯ ನ್ಯಾಯಾಧೀಶರ ಮೇಲೆ ಮಾಡಿದ ಕೊಲೆ ಯತ್ನ ದೇಶದ ಪ್ರಜಾಪ್ರಭುತ್ವದ ಉಳಿವಿಗೆ ಮಾರಕ ಪ್ರಾಯವಾಗಿತ್ತು. ಮತ್ತೊಂದೆಡೆ ನಡೆಯುತ್ತಿದ್ದ ರೈಲ್ವೆ ಮುಷ್ಕರ ಭಾರತದ ಮೂಲೆ ಮೂಲೆಗೆ ಸರಬರಾಜು ಮಾಡಬೇಕಾಗಿದ್ದ ಆಹಾರ ಧಾನ್ಯಗಳ ಸಾಗಾಣಿಕೆಗೆ ತಡೆಯನ್ನುಂಟುಮಾಡಿತ್ತು. ಇಷ್ಟು ಮಾತ್ರವಲ್ಲದೆ ರೈಲ್ವೆ ಮತ್ತು ಇನ್ನಿತರ ಮೂಲಭೂತ ಸೌಲಭ್ಯಗಳನ್ನು ನಾಶಮಾಡುವ ವಿಧ್ವಂಸಕ ಕೃತ್ಯಗಳು ಅನೇಕ ಕಡೆ ನಡೆಯುತ್ತಿತ್ತು. ಇಷ್ಟು ಮಾತ್ರವಲ್ಲದೆ ನಕ್ಸಲೈಟ್ ಮತ್ತು ಇನ್ನಿತರ ಅನೇಕ ವಿಧ್ವಂಸಕ ಶಕ್ತಿಗಳು ಮತ್ತು ಮತೀಯ ಶಕ್ತಿಗಳು ಅರಾಜಕತೆಯ ಲಾಭವನ್ನು ಪಡೆಯಲು ಹವಣಿಸುತ್ತಿದ್ದುವು. ಯಾವುದೇ ಜನೋಪಕಾರಿ ಕಾರ್ಯಕ್ರಮ ಅನುಷ್ಠಾನ ಮಾಡದ ರೀತಿಯಲ್ಲಿ ಪಟ್ಟಭದ್ರ ಹಿತಾಸಕ್ತಿಗಳು ಅರಾಜಕತೆಯ ಜಾಲವನ್ನು ಹರಡಿ ಸೆಟೆದು ನಿಂತಿದ್ದವು. ಬಹುಶಃ ಭಾರತದ ಇತಿಹಾಸದಲ್ಲಿ ಎಂದೆಂದಿಗೂ ಕಾಣದ ಕ್ಷೋಭೆ ತಲೆದೋರಿದಾಗ ಶ್ರೀಮತಿ ಇಂದಿರಾ ಗಾಂಧಿಯವರು ದೇಶದಲ್ಲಿ ತುರ್ತು ಪರಿಸ್ಥಿತಿಯನ್ನು ಘೋಷಿಸಿದರು. ಅದರ ಯುಕ್ತಾಯುಕ್ತತೆಯ ಬಗ್ಗೆ ಭಾರತದ ಹಲವೆಡೆ ಅನೇಕ ರೀತಿಯ ಚರ್ಚೆ ನಡೆಯಿತು. ಅಂದು ದೇಶದಲ್ಲಿ ನಡೆಯುತ್ತಿದ್ದ ವಿದ್ಯಮಾನಗಳ ದೃಷ್ಟಿಯಿಂದ ಮತ್ತು ಅನಂತರ ದೇಶದಲ್ಲಿ ರೂಪುಗೊಂಡ ಶಾಂತಿ, ರಾಷ್ಟ್ರೀಯ ಶಿಸ್ತು ಮತ್ತು ಅನುಷ್ಠಾನಗೊಂಡ ಅನೇಕ ರಕ್ತರಹಿತ ಕ್ರಾಂತಿಯ ಜನೋಪಕಾರಿ ಮತ್ತು ಪ್ರಗತಿಪರ ಕಾರ್ಯಕ್ರಮಗಳ ಅನುಷ್ಠಾನದ ಹಿನ್ನೆಲೆಯಲ್ಲಿ ಇಂದು ಚರ್ಚೆ ಮಾಡಬೇಕಾಗಿದೆ.

## ಆರ್ಥಿಕ ಸಾಮಾಜಿಕ ಕಾರ್ಯಕ್ರಮಗಳು

೧೯೭೪ ಏಪ್ರಿಲ್ ೨೮ ರಂದು ನವದೆಹಲಿಯಲ್ಲಿ ನಡೆದ ಅಖಿಲ ಭಾರೆತ ಕಾಂಗ್ರೆಸ್ ಸಮ್ಮೇಳನದಲ್ಲಿ ಕಾಂಗ್ರೆಸ್ ಪಕ್ಷದ ಆರ್ಥಿಕ ರೀತಿ ನೀತಿಗಳನ್ನು ರೂಪಿಸಲು ಡಾ. ಶಂಕರದಯಾಳ್ ಶರ್ಮಾ ಅವರ ಅಧ್ಯಕ್ಷತೆಯಲ್ಲಿ ೧೨ ಜನರಿಂದ ಕೂಡಿದ ಒಂದು ಉನ್ನತಾಧಿಕಾರ ಸಮಿತಿಯನ್ನು ರಚಿಸಲಾಗಿತ್ತು. ಈ ಸಮಿತಿಯ ವರದಿಯ ಆಧಾರದ ಮೇಲೆ ೧ ಜುಲೈ ೧೯೭೫ ರಂದು ಪ್ರಧಾನಿ ಇಂದಿರಾ ಗಾಂಧಿಯವರು ೨೦ ಅಂಶಗಳ ಆರ್ಥಿಕ ಕಾರ್ಯಕ್ರಮಗಳನ್ನು ಪ್ರಕಟಿಸಿದರು. ದೇಶದ ಆರ್ಥಿಕ ಹಾಗೂ ಗ್ರಾಮೀಣ ಅಭಿವೃದ್ಧಿ ಇತಿಹಾಸದಲ್ಲಿ ಈ ಕಾರ್ಯಕ್ರಮಗಳು ಚರಿತ್ರಾರ್ಹ ಸ್ಥಾನ ಪಡೆದಿವೆ ಎಂದರೆ ಅತಿಶಯೋಕ್ತಿ ಆಗಲಾರದು. ಆನಂತರ ಯುವ ಕಾಂಗ್ರೆಸ್ ನಾಯಕರಾಗಿದ್ದ ಗಾಂಧಿಯವರು ೫ ಅಂಶಗಳ ಕಾರ್ಯಕ್ರಮಗಳನ್ನು ಪ್ರಕಟಿಸಿದರು. ಈ ೨೫ ಅಂಶಗಳ ಆರ್ಥಿಕ, ಸಾಮಾಜಿಕ

ಕಾರ್ಯಕ್ರಮಗಳ ಜಾರಿಗೆ ಶ್ರೀಮತಿ ಇಂದಿರಾಗಾಂಧಿಯವರು ವಿಶೇಷ ಆಸಕ್ತಿ ವಹಿಸಿದರು ಹಾಗೂ ಈ ಕಾರ್ಯಕ್ರಮಗಳ ಜಾರಿಗೆ ರಾಜ್ಯ ಸರ್ಕಾರಗಳಿಗೆ ಸೂಚನೆಗಳನ್ನು ನೀಡಿದರು. ಕೇಂದ್ರದಿಂದ ನೆರವನ್ನು ಒದಗಿಸಿದರು. ದೇಶವು ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ತಕ್ಕಮಟ್ಟಿಗೆ ಮುನ್ನಡೆಯನ್ನು ಸಾಧಿಸಿತು ಎಂದು ಧಾರಾಳವಾಗಿ ಹೇಳಬಹುದು.

## ಮೈಸೂರು ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಪರಿಸ್ಥಿತಿ

೧೯೭೨ರಲ್ಲಿ ನಡೆದ ವಿಧಾನಸಭಾ ಚುನಾವಣೆಗಳಲ್ಲಿ ದೇವರಾಜ ಅರಸು ಸಂಚಾಲಕತ್ವದಲ್ಲಿ ಆಡಳಿತ ಕಾಂಗ್ರೆಸ್ ಮೂರನೆಯ ಎರಡು ಬಹುಮತ ಪಡೆದು ಅಧಿಕಾರಕ್ಕೆ ಬಂದಿತ್ತು. ದೇವರಾಜ ಅರಸರು ಮುಖ್ಯಮಂತ್ರಿಗಳಾಗಿ ಪಕ್ಷದ ಆರ್ಥಿಕ ಸಾಮಾಜಿಕ ಕಾರ್ಯಕ್ರಮಗಳನ್ನು ಭರದಿಂದ ಜಾರಿಗೆ ಕೊಡುತ್ತಿದ್ದರು. ತುರ್ತುಪರಿಸ್ಥಿತಿ ರಾಜ್ಯದ ಜನಸಾಮಾನ್ಯರ ಮೇಲೆ ಯಾವುದೇ ಪರಿಣಾಮ ಬೀರಲಿಲ್ಲ ಇದನ್ನು ಚುನಾವಣಾ ಫಲಿತಾಂಶಗಳೇ ಸಾಬೀತುಪಡಿಸಿದವೆಂದು ಹೇಳಬಹುದು. ೧೯೭೪ರ ಮಾರ್ಚ್ ೧ ನೇ ತಾರೀಖಿನಿಂದ ಇಡೀ ದೇಶದಲ್ಲಿಯೇ ಕ್ರಾಂತಿಕಾರಕವಾದ ಭೂ ಸುಧಾರಣಾ ಮಸೂದೆ ಜಾರಿಗೆ ಬಂತು. ೫,೩೦,೪೪೧ ಗೇಣೀದಾರರಿಗೆ ೪೨,೪೯,೧೭೪ ಎಕರೆಗಳ ಭೂಮಾಲೀಕತ್ವವನ್ನು ದೊರಕಿಸಿಕೊಟ್ಟಿತ್ತು. ಉಳುವವನೇ ಭೂಮಿಯ ಒಡೆಯ ಎಂಬ ತತ್ವ ಸಾಕಾರವಾಗಿ ಜಾರಿಗೆ ಬಂದಿತ್ತು. ೩೭, ೧೮೧೨ ಎಕರೆ ಭೂಮಿಯನ್ನು ೭೧೨೧ ಭೂ ರಹಿತರಿಗೆ ಹಂಚಲಾಗಿತ್ತು. ೭.೨೨ ಲಕ್ಷ ಮನೆ, ನಿವೇಶನಗಳನ್ನು ನಿವೇಶನರಹಿತ ಬಡವರಿಗೆ ದುರ್ಬಲ ವರ್ಗಗಳಿಗೆ ಹಂಚಲಾಗಿತ್ತು. ಅದರಲ್ಲಿ ೨.೪೭ಲಕ್ಷ ಜನ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಕ್ಕೆ ಸೇರಿದ್ದರು. ೭೫ ಸಾವಿರ ಜನತಾ ಮನೆಗಳನ್ನು ನಿರ್ಮಿಸಲು ಮಂಜೂರಾತಿ ನೀಡಲಾಗಿತ್ತು. ಅದರಲ್ಲಿ ೪೫ ಸಾವಿರ ಮನೆಗಳನ್ನು ನಿರ್ಮಿಸಿ ಹಂಚಿಕೆ ಮಾಡಲಾಗಿತ್ತು. ಫಲಾನುಭವಿಗಳಲ್ಲಿ ಶೇಕಡಾ ೫೦ ಹರಿಜನ ಗಿರಿಜನ ವರ್ಗಕ್ಕೆ ಸೇರಿದವರಾಗಿದ್ದರು. ಬರ ಪರಿಹಾರ ಕಾರ್ಯಕ್ರಮ, ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ ಸ್ಥಾಪನೆ, ಋಣ ಪರಿಹಾರ ಕಾಯಿದೆ, ಜೀತ ವಿಮೋಚನೆ ಮುಂತಾದ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಮೂಲಕ ಇಪ್ಪತ್ತೈದು ಅಂಶಗಳ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿತ್ತು. ೭೫ ಸಾವಿರ ಜನರನ್ನು ಜೀತವಿಮುಕ್ತರನ್ನಾಗಿ ಮಾಡಲಾಗಿತ್ತು. ನಗರ ಆಸ್ತಿಮಿತಿ ಶಾಸನ ಜಾರಿಗೆ ಬಂದಿತ್ತು. ಅವಶ್ಯಕ ವಸ್ತುಗಳ ಕಾಯಿದೆ ಜಾರಿಗೆ ಬಂದಿತ್ತು. ತಲೆ ಮೇಲೆ ಮಲ ಹೊರುವ ಪದ್ಧತಿಯನ್ನು ನಿಷೇಧಿಸಲಾಗಿತ್ತು. ಹಿಂದುಳಿದ ವರ್ಗಗಳಿಗೆ ಉದ್ಯೋಗ ಹಾಗೂ ಶಿಕ್ಷಣದಲ್ಲಿ ಮೀಸಲಾತಿ ಕಲ್ಪಿಸುವ ಬಗ್ಗೆ ಹಾವನೂರ್ ಆಯೋಗ ರಚಿಸಲಾಗಿತ್ತು. ಅದು ಡಿಸೆಂಬರ್ ೭೬ರಲ್ಲಿ ತನ್ನ ವರದಿ ನೀಡಿತ್ತು. ಈ ಆಯೋಗದ ವರದಿಯನ್ನು ೨೧.೨.೭೭ರಿಂದ ಜಾರಿಗೆ ತಂದು ಹಿಂದುಳಿದ ವರ್ಗದವರಿಗೆ ಶೇಕಡಾ ೪೦ ರಷ್ಟು ಉದ್ಯೋಗಾವಕಾಶ ಹಾಗೂ ಶಿಕ್ಷಣದಲ್ಲಿ ಪ್ರವೇಶವನ್ನು ಮೀಸಲಾಗಿ ಇಡಲಾಯಿತು. ವೈದ್ಯಕೀಯ ಹಾಗೂ ಎಂಜಿನಿಯರಿಂಗ್ ಕಾಲೇಜುಗಳಲ್ಲಿ ಕ್ಯಾಪಿಟೇಷನ್ ಶುಲ್ಕವನ್ನು ನಿಗದಿಗೊಳಿಸಲಾಯಿತು. ನಿವೃತ್ತಿ ವಯಸ್ಸನ್ನು ೫೮ ರಿಂದ ೫೫ ಕ್ಕೆ ಇಳಿಸಿ ಅಪಾರ ಉದ್ಯೋಗಾವಕಾಶ ಕಲ್ಪಿಸಲಾಯಿತು. ಈ ರೀತಿಯಾಗಿ ದೇವರಾಜ ಅರಸರ ಆಡಳಿತ ಕಾಂಗ್ರೆಸ್ ಸರ್ಕಾರ ರಾಜ್ಯದಲ್ಲಿ ಅಭೂತಪೂರ್ವ ಆರ್ಥಿಕ ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡಿತ್ತು.

ರಾಜಕೀಯವಾಗಿ ಆಡಳಿತ ಕಾಂಗ್ರೆಸ್‌ನಲ್ಲಿ ದೇವರಾಜ ಅರಸರ ಒಂದು ಗುಂಪು, ಕೆ. ಎಚ್. ಪಾಟೀಲರ ಮತ್ತೊಂದು ಗುಂಪು. ಕ್ರಿಯಾಶಾಲಿಯಾಗಿದ್ದವು. ಭಿನ್ನಮತ ಬೆಳೆದು ೨೮ ಅಕ್ಟೋಬರ್ ೭೩ ರಂದು ಕೆ. ಎಚ್. ಪಾಟೀಲರು ಸಚಿವ ಸಂಪುಟಕ್ಕೆ ರಾಜೀನಾಮೆ ನೀಡಿದರು. ೧೯೭೩ರ ಮೇ ತಿಂಗಳಿನಲ್ಲಿ ನಡೆದ ಬೂಸಾ ಹಗರಣದಿಂದ ಸಚಿವ ಬಸವಲಿಂಗಪ್ಪ ಅವರ ರಾಜೀನಾಮೆ ಪಡೆದ ಅರಸರು, ಬಸವಲಿಂಗಪ್ಪ ಅಜೀಜ್ ಸೇಟ್, ಶಂಕರ ಆಳ್ವಾ, ಎಚ್.ಎನ್. ನಂಜೇಗೌಡ, ಬಿ. ಶಿವಣ್ಣ ಇವರುಗಳನ್ನು ಕೈಬಿಟ್ಟು ಡಿಸೆಂಬರ್ ೭೩ರಲ್ಲಿ ಸಚಿವ ಸಂಪುಟ ಪುನರ್‌ರಚಿಸಿದರು. ಕೆ. ಎಚ್. ಪಾಟೀಲ್ ೧೯೭೪ ಡಿಸೆಂಬರ್ ಹೊತ್ತಿಗೆ ಕೆ.ಪಿ.ಸಿ.ಸಿ. ಅಧ್ಯಕ್ಷರಾದರು. ಪಕ್ಷಕ್ಕೂ ಸರ್ಕಾರಕ್ಕೂ ತಿಕ್ಕಾಟ ಪ್ರಾರಂಭವಾಯಿತು. ಭಿನ್ನಾಭಿಪ್ರಾಯ ಜಾಸ್ತಿ ಆಯಿತು. ತಮ್ಮನ್ನು ಟೀಕಿಸಿದ್ದಕ್ಕಾಗಿ ಸಚಿವ ಎಲ್. ಜಿ. ಹಾವನೂರ್ ಅವರನ್ನು ಕೆ. ಎಚ್. ಪಾಟೀಲ್ ಪಕ್ಷದಿಂದ ಸಸ್ಪೆಂಡ್ ಮಾಡಿದರು. ಸರ್ಕಾರ ಯಾವುದಾದರೂ ಒಂದು ಸಮಿತಿ ನೇಮಿಸಿದರೆ ಪಾಟೀಲರು ಅದಕ್ಕೆ ಪ್ರತಿಯಾಗಿ ಮತ್ತೊಂದು ಸಮಿತಿ ನೇಮಿಸುತ್ತಿದ್ದರು. ಪಾಟೀಲ್ ಬೆಂಬಲಿಗರಾದ ಎಚ್. ಎನ್. ನಂಜೇಗೌಡ ಮೊದಲಾದವರನ್ನು ಅರಸು ಸಚಿವಸಂಪುಟದಿಂದ ಕೈ ಬಿಟ್ಟರು. ಪುಟ್ಟದಾಸು, ಲಿಂಗಪ್ಪ, ಕೆಂಚೇಗೌಡ, ಕೋಳಿವಾಡ್ ಅವರನ್ನು ಅರಸು ಪಕ್ಷದಿಂದ ಸಸ್ಪೆಂಡ್ ಮಾಡಿಸಿದರು. ಅದಕ್ಕೆ ಪ್ರತಿಯಾಗಿ ಪಾಟೀಲರು ಅರಸು ಬೆಂಬಲಿಗರನ್ನು ಪಕ್ಷದಿಂದ ಸಸ್ಪೆಂಡ್ ಮಾಡಿದರು. ಈ ಭಿನ್ನಮತವನ್ನು ಪರಿಹರಿಸಲು ಪಕ್ಷದ ವರಿಷ್ಠರ ಆದೇಶದ ಮೇರೆಗೆ ೨.೧.೭೭ರಂದು ಕೆ. ಎಚ್. ಪಾಟೀಲರನ್ನು ಮತ್ತೆ ಸಚಿವ ಸಂಪುಟಕ್ಕೆ ಸೇರಿಸಿಕೊಳ್ಳಲಾಯಿತು.

ಇಷ್ಟಾದರೂ ಕೆಲವು ಶಾಸಕರು ಆಡಳಿತ ಕಾಂಗ್ರೆಸ್ ಪಕ್ಷ ಸೇರುತ್ತಿದ್ದರು. ಅಕ್ಟೋಬರ್ ೭೪ರಲ್ಲಿ ಸಂಸ್ಥಾ ಕಾಂಗ್ರೆಸ್ ಶಾಸಕ ಬಿ. ಎಸ್. ಪಾಟೀಲ್ ಆಡಳಿತ ಪಕ್ಷ ಸೇರಿದರು. ನವೆಂಬರ್ ೭೬ರಲ್ಲಿ ಶಾಸಕರುಗಳಾದ ಎಚ್. ಟಿ. ಕೃಷ್ಣಪ್ಪ, ವಿ. ವೆಂಕಟಪ್ಪ ಬಿ.ಡಿ. ಇನಾಂದಾರ್, ಕೆ. ಮಾದೇಗೌಡ, ಬಾಪೂಗೌಡ, ಜೆ.ಎಲ್. ಕಬಾಡೆ, ಎ. ನಂಜಪ್ಪ, ಕೆ. ಎಚ್. ಹನುಮೇಗೌಡ, ಎಸ್. ಬಂಗಾರಪ್ಪ ಅವರುಗಳು ಸಾಮೂಹಿಕವಾಗಿ ಆಡಳಿತ ಕಾಂಗ್ರೆಸ್ ಸೇರಿದರು.

## ೧೯೭೭ರ ಚುನಾವಣೆಗಳು

ಇಂತಹ ಪರಿಸ್ಥಿತಿಯಲ್ಲಿ ಜನವರಿ ೧೮, ೧೯೭೭ ರಂದು ಹಟಾತ್ ಬೆಳವಣಿಗೆಯೊಂದರಲ್ಲಿ, ಶ್ರೀಮತಿ ಇಂದಿರಾ ಗಾಂಧಿ ಅವರು ರಾಷ್ಟ್ರವನ್ನುದ್ದೇಶಿಸಿ ಪ್ರಸಾರ ಭಾಷಣ ಮಾಡಿ, ಲೋಕಸಭೆಯನ್ನು ವಿಸರ್ಜಿಸಿ, ಹೊಸದಾಗಿ ಚುನಾವಣೆಗಳನ್ನು ನಡೆಸುವಂತೆ ರಾಷ್ಟ್ರಪತಿಗಳಿಗೆ ಶಿಫಾರಸ್ಸು ಮಾಡಲಾಗಿದೆ ಎಂದು ತಿಳಿಸಿದರು. ತುರ್ತು ಪರಿಸ್ಥಿತಿಯನ್ನು ಸಡಿಲಿಸಲಾಗಿದೆ. ರಾಜಕೀಯ ನಾಯಕರುಗಳನ್ನು ಸ್ಥಾನ ಬದ್ಧತೆಯಿಂದ ಬಿಡುಗಡೆ ಮಾಡಲಾಗುವುದೆಂದು ಅವರು ತಿಳಿಸಿದರು. ಪತ್ರಿಕಾ ಸೆನ್ಸಾರ್ ತೆಗೆದುಹಾಕಲಾಯಿತು. ಅದರಂತೆ ಮಾರ್ಚ್ ೭೭ರಲ್ಲಿ ಲೋಕಸಭೆಗೆ ಚುನಾವಣೆಗಳು ನಡೆಯುವುದಾಗಿ ನಿಗದಿ ಆಯಿತು. ೨.೨.೭೭ ರಂದು ಚುನಾವಣಾ ಆಯೋಗದ ಅಧಿಕೃತ ಪ್ರಕಟಣೆ ಹೊರಬಿತ್ತು. ಮಾರ್ಚ್ ೧೬, ೧೭, ೧೯೭೭ರಂದು ಚುನಾವಣೆಗಳು ನಿಗದಿಯಾದವು.

## ಅಭ್ಯರ್ಥಿಗಳ ಆಯ್ಕೆ

ಮಾರ್ಚ್ ೧೬ ಮತ್ತು ೧೯ ರಂದು ರಾಜ್ಯದಲ್ಲಿ ಚುನಾವಣೆಗಳು ನಡೆಯುವುದಾಗಿ ನಿಗದಿ ಆಯಿತು. ರಾಜ್ಯದ ಲೋಕಸಭಾ ಕ್ಷೇತ್ರಗಳ ಸಂಖ್ಯೆ ೨೭ ರಿಂದ ೨೮ಕ್ಕೆ ಏರಿಕೆ ಆಗಿತ್ತು. ದಾವಣಗೆರೆ ಒಂದು ಹೊಸ ಸಾಮಾನ್ಯ ಕ್ಷೇತ್ರವಾಗಿ ಸೇರ್ಪಡೆ ಆಯಿತು. ೨೦.೧.೭೭ ರಂದು ಎಸ್. ಬಿ. ನಾಗರಾಳ್ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ನೇಮಕವಾದರು. ಜನವರಿ ೨೬ರ ಒಳಗಾಗಿ ಅಭ್ಯರ್ಥಿಗಳ ಆಯ್ಕೆ ಮಾಡಲಾಗುವುದೆಂದು ದೇವರಾಜ ಅರಸು ಹೇಳಿದರು. ೨೯.೧.೭೭ ರಂದು ಕರ್ನಾಟಕ ಪ್ರದೇಶ ಕಾರ್ಯಕಾರಿ ಸಮಿತಿ ಸಭೆ ಸೇರಿ ಅಭ್ಯರ್ಥಿಗಳ ಆಯ್ಕೆ ಬಗ್ಗೆ ಚರ್ಚಿಸಿತು. ರಾಜ್ಯ ಕಾಂಗ್ರೆಸ್ ಅಭ್ಯರ್ಥಿಗಳ ಪಟ್ಟಿಯ ಬಗ್ಗೆ ಅಂತಿಮ ನಿಷ್ಕರ್ಷೆಯನ್ನು ಪ್ರಧಾನ ಮಂತ್ರಿಗಳ ತೀರ್ಮಾನಕ್ಕೆ ಬಿಡಬೇಕೆನ್ನುವ ಒಂದು ನಿರ್ಣಯವನ್ನು ಆರ್. ಗುಂಡೂರಾವ್ ಮಂಡಿಸಿದರು. ಅದು ಸರ್ವಾನುಮತದಿಂದ ಅಂಗೀಕಾರವಾಯಿತು.

೨೮ ಸ್ಥಾನಗಳಿಗೆ ೯೫೦ ಅಭ್ಯರ್ಥಿಗಳ ಹೆಸರುಗಳು ಬಂದಿದ್ದವು. ಜಿಲ್ಲಾ ಸಮಿತಿಗಳಿಂದ ೨೦೦ ಹೆಸರುಗಳು ಶಿಫಾರಸ್ಸಾಗಿ ಬಂದಿದ್ದರೆ, ಕೆ.ಪಿ.ಸಿ.ಸಿ.ಗೆ ನೇರವಾಗಿ ೭೫೦ ಅರ್ಜಿಗಳು ಬಂದಿದ್ದವು. ಕೇಂದ್ರ ಚುನಾವಣಾ ಸಮಿತಿಯು ಅಭ್ಯರ್ಥಿಗಳ ಆಯ್ಕೆ ಬಗ್ಗೆ ಪರಿಶೀಲಿಸಲು ಫೆಬ್ರವರಿ ೨ ಮತ್ತು ೩ ರಂದು ದೆಹಲಿಯಲ್ಲಿ ಸಭೆ ಸೇರುವುದಾಗಿಯೂ ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸುವುದಾಗಿಯೂ ತಿಳಿದುಬಂದಿತು. ೩೧.೧.೭೭ ರಂದು ದೇವರಾಜ ಅರಸ್‌ರವರು ಅಭ್ಯರ್ಥಿಗಳ ಆಯ್ಕೆ ವಿಚಾರದಲ್ಲಿ ಶಾಸಕರೊಡನೆ ಸಮಾಲೋಚನೆ ನಡೆಸಿದರು. ಅಭ್ಯರ್ಥಿಗಳ ಆಯ್ಕೆ ವಿಚಾರದಲ್ಲಿ ಪ್ರಧಾನಿ ಇಂದಿರಾ ಗಾಂಧಿ ಹಾಗೂ ಎ.ಐ.ಸಿ.ಸಿ. ಅಧ್ಯಕ್ಷ ಡಿ. ಕೆ. ಬರೂವಾ ಅವರೂ ೧.೨.೭೭ರಂದು ದೆಹಲಿಯಲ್ಲಿ ಚರ್ಚಿಸಿದರು. ಕಾಂಗ್ರೆಸ್ ಅಭ್ಯರ್ಥಿಗಳ ಆಯ್ಕೆಯಲ್ಲಿ ಕೇಂದ್ರ ಚುನಾವಣಾ ಸಮಿತಿಯದೇ ಅಂತಿಮ ನಿರ್ಧಾರ ಎಂದು ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ವಿ. ಬಿ. ರಾಜು ತಿಳಿಸಿದರು. ಯುವ ಕಾಂಗ್ರೆಸ್ ಅಭ್ಯರ್ಥಿಗಳ ಆಯ್ಕೆ ವಿಚಾರವನ್ನು ಸಂಜಯಗಾಂಧಿ ಅವರಿಗೆ ಬಿಡಲಾಗಿದೆ ಎಂದು ಯುವ ಕಾಂಗ್ರೆಸ್ ಅಧ್ಯಕ್ಷೆ ಅಂಬಿಕಾ ಸೋನಿ ಪ್ರಕಟಿಸಿದರು. ಈ ಮಧ್ಯೆ ದಿನಾಂಕ ೩.೨.೭೭ ರಂದು ಪ್ರದೇಶ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಮಹಮದ್ ಅಲಿ ನೇತೃತ್ವದಲ್ಲಿ ಕೆಲವು ಕಾಂಗ್ರೆಸ್ ನಾಯಕರು, ಯುವ ಕಾಂಗ್ರೆಸ್ ನಾಯಕರು ವರಿಷ್ಠರನ್ನು ಪ್ರಧಾನಿಯವರನ್ನು ಭೇಟಿಯಾಗಿ, ರಾಜ್ಯ ಕಾಂಗ್ರೆಸ್ ಅಭ್ಯರ್ಥಿಗಳ ಪಟ್ಟಿಯನ್ನು ಅವರಿಗೆ ನೀಡಿದರು. ೯.೨.೧೯೭೭ ರಂದು ರಾಜ್ಯ ಕಾಂಗ್ರೆಸ್ ಅಭ್ಯರ್ಥಿಗಳ ಪಟ್ಟಿಯನ್ನು ಕೇಂದ್ರ ಚುನಾವಣಾ ಸಮಿತಿ ಬಿಡುಗಡೆ ಮಾಡಿತು.

## ಚುನಾವಣಾ ಪ್ರಚಾರ

೧೬.೨.೭೭ ರಿಂದ ಅಧಿಕೃತವಾಗಿ ಪ್ರಚಾರ ಕಾರ್ಯವನ್ನು ಆರಂಭಿಸಲು ರಾಜ್ಯ ಚುನಾವಣಾ ಕಾರ್ಯಕಾರಿ ಸಮಿತಿ ಸಭೆಯಲ್ಲಿ ನಿರ್ಧರಿಸಲಾಯಿತು. ಈ ಸಭೆಯಲ್ಲಿ ವೀಕ್ಷಕರಾಗಿ ಶಂಕರ್ ಘೋಷ್ ಹಾಜರಿದ್ದು ಸಲಹೆ ಸೂಚನೆಗಳನ್ನು ನೀಡಿದರು. ಶ್ರೀಮತಿ ಇಂದಿರಾ ಗಾಂಧಿಯವರು ದಿನಾಂಕ ೫, ಮಾರ್ಚ್ ೭೭ ರಂದು ಗುಲಬರ್ಗಾ, ಬಿಜಾಪುರ, ಹುಬ್ಬಳ್ಳಿ, ಶಿವಮೊಗ್ಗ, ಮೈಸೂರು, ಹಾಸನಗಳಲ್ಲಿ ಭಾರೀ ಬಹಿರಂಗ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಎಂದಿನಂತೆ ಶ್ರೀಮತಿ ಇಂದಿರಾ ಗಾಂಧಿಯವರ ಈ ಬಹಿರಂಗ

ಸಭೆಗಳಿಗೆ ಐವತ್ತು ಸಾವಿರದವರೆಗೂ ಜನಸಂದಣಿ ಸೇರಿತ್ತು. ೬.೩.೭೭ ರಂದು ಶ್ರೀಮತಿ ಇಂದಿರಾಗಾಂಧಿಯವರು ಬೆಂಗಳೂರು ಮಂಗಳೂರುಗಳಲ್ಲಿ ಇದೇ ರೀತಿಯ ಭಾರೀ ಬಹಿರಂಗ ಸಭೆಗಳನ್ನುದ್ದೇಶಿಸಿ ಪ್ರಚಾರ ಭಾಷಣ ಮಾಡಿದರು.

''ಪ್ರಜಾತಂತ್ರಕ್ಕೆ ಕಾಂಗ್ರೆಸ್ ಬದ್ಧವಾಗಿದೆ. ಭವ್ಯ ಭವಿಷ್ಯಕ್ಕಾಗಿ ಕಾಂಗ್ರೆಸ್ ಪಕ್ಷಕ್ಕೆ ಮತ ನೀಡಿ, ಜನತಾಪಕ್ಷ ಪಕ್ಷವಲ್ಲ; ಪ್ರತಿಪಕ್ಷಗಳು ಅಧಿಕಾರಕ್ಕೆ ಬಂದರೆ ದೇಶದಲ್ಲಿ ಅಸ್ಥಿರತೆ ಉಂಟಾಗುತ್ತದೆ. ಪ್ರಜಾತಂತ್ರ ರಕ್ಷಣೆಗಾಗಿ ತುರ್ತು ಪರಿಸ್ಥಿತಿಯನ್ನು ಜಾರಿಗೆ ತರಬೇಕಾಯಿತೇ ಹೊರತು, ಅವನ್ನು ಜಾರಿಗೆ ತರುವುದು ನನಗೂ ಇಷ್ಟವಿಲ್ಲದ ವಿಷಯವಾಗಿತ್ತು, ರಾಜ್ಯಗಳ ಅಧಿಕಾರ ಮೊಟಕಾಗದಂತೆ ಬಲಿಷ್ಠ ಕೇಂದ್ರ ಸರ್ಕಾರದ ರಚನೆ ಅಗತ್ಯವಿದೆ, ಬಡವರು ದುರ್ಬಲವರ್ಗದವರು ಅಲ್ಪಸಂಖ್ಯಾತರ ಏಳಿಗೆಯೇ ಕಾಂಗ್ರೆಸ್ ಗುರಿ'' ಎಂದು ಅವರು ತಮ್ಮ ಭಾಷಣದಲ್ಲಿ ಪ್ರಮುಖವಾಗಿ ಪ್ರತಿಪಾದನೆ ಮಾಡಿದರು. ಬೇರೆ ಕೇಂದ್ರ ನಾಯಕರಾರೂ ರಾಜ್ಯದಲ್ಲಿ ಚುನಾವಣಾ ಪ್ರಚಾರ ಕೈಗೊಳ್ಳಲಿಲ್ಲ.

ಮುಖ್ಯಮಂತ್ರಿ ದೇವರಾಜ ಅರಸರು ವಾಸ್ತವವಾಗಿ ಜನವರಿ ೭೭ರಿಂದಲೇ ಚುನಾವಣಾ ಪ್ರಚಾರ ಆರಂಭಿಸಿದ್ದರು. ರಾಜ್ಯ ಸರ್ಕಾರದ ಸಾಧನೆಗಳನ್ನು ಮುಂದಿಟ್ಟುಕೊಂಡು ಜನತೆಯ ಬಳಿ ಮತಯಾಚನೆಗೆ ಹೋಗುವುದಾಗಿಯೂ ಕಾಂಗ್ರೆಸ್ ಪಕ್ಷಕ್ಕೆ ೨೮ಕ್ಕೆ ೨೮ ಸ್ಥಾನ ಖಚಿತ ಎಂದೂ ಅವರು ೨೯.೧.೭೭ರಂದೇ ಹೇಳಿದ್ದರು. 'ಹಲವು ಕಾಂಗ್ರೆಸ್ ಶಾಸಕರು ಪಕ್ಷ ತೊರೆದು ಜಗಜೀವನ ರಾಂ ಪಕ್ಷ ಸೇರಿದಾಗ, 'ಈ ಪಕ್ಷಾಂತರದಿಂದ ಆಡಳಿತ ಕಾಂಗ್ರೆಸ್‌ಗೆ ಹಾನಿ ಇಲ್ಲ. ಸಿ.ಎಫ್.ಡಿ. ಗರ್ಭದಲ್ಲೇ ಸತ್ತ ಶಿಶು. ಸರ್ಕಾರ ಕೈಗೊಂಡಿರುವ ದುರ್ಬಲ ವರ್ಗಗಳ ಉದ್ಧಾರ ಕಾರ್ಯಕ್ರಮದಿಂದ ಕಾಂಗ್ರೆಸ್‌ಗೆ ೨೮ ಸ್ಥಾನಗಳೂ ಲಭಿಸಲಿವೆ' ಎಂದು ಅವರು ೧೫.೨.೭೭ ರಂದು ಪತ್ರಿಕಾ ಗೋಷ್ಠಿಯಲ್ಲಿ ಹೇಳಿದರು. ೧೮.೨.೭೭ ರಂದು ಬೆಂಗಳೂರಿನಲ್ಲಿ ಅವರು ಅಧಿಕೃತವಾಗಿ ಪ್ರಚಾರ ಉದ್ಘಾಟಿಸುತ್ತಾ ''ಮನೆ ಮನೆಗೆ ಹೋಗಿ ಸರ್ಕಾರದ ಸಾಧನೆ ತಿಳಿಸಿ. ಕಾರು ಕೇಳಬೇಡಿ, ಸೈಕಲ್ ಮೇಲೆ ಹೋಗಿ, ನಡೆದುಕೊಂಡು ಹೋಗಿ ಪ್ರಚಾರ ಮಾಡಿ'' ಎಂದು ಕಾರ್ಯಕರ್ತರಿಗೆ ಕರೆ ನೀಡಿದರು.

ದೇವರಾಜ ಅರಸರು ೨೪.೨.೭೭ ರಂದು ಹರಿಹರ, ದಾವಣಗೆರೆ, ೨೫ ರಂದು ಚಾಮರಾಜನಗರ, ೨೬ ಕನಕಪುರ, ೨೮ ರಂದು ಮಂಗಳೂರಿನಲ್ಲಿ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಅನಂತರ ಮಾರ್ಚ್ ೩ ರಂದು ಬೆಂಗಳೂರು, ೬ ರಂದು ತಿಪಟೂರು, ೭ರಂದು ಬೆಂಗಳೂರು, ೮ ರಂದು ಶಿರ್ಸಿ, ೧೬ ರಂದು ಅರಸೀಕೆರೆ ಹೀಗೆ ರಾಜ್ಯದ ಮೂಲೆ ಮೂಲೆಗಳಲ್ಲಿ ಪ್ರಚಾರ ಕಾರ್ಯ ಕೈಗೊಂಡರು. ''ನಮ್ಮ ಸಾಧನೆ ನಿಮಗೆ ಇಷ್ಟವಾಗಿದ್ದರೆ ಆಡಳಿತ ಕಾಂಗ್ರೆಸ್‌ಗೆ ಮತ ಕೊಡಿ, ಕಾಂಗ್ರೆಸ್ ಜನಹಿತ ಕಾರ್ಯ ಸಹಿಸದವರು ಅಪಪ್ರಚಾರ ಮಾಡುತ್ತಿದ್ದಾರೆ. ಇದು ದಲಿತರು ದುಷ್ಟಶಕ್ತಿಗಳ ನಡುವಿನ ಹೋರಾಟ. ಬಡವರ ಕಲ್ಯಾಣಕ್ಕೆ ಇರತಕ್ಕ ಅಡ್ಡಿ ಆಮಿಷಗಳ ನಿವಾರಣೆಗೆ ಯಾವುದೇ ಕ್ರಮ ತೆಗೆದುಕೊಳ್ಳಲು ಯಾವುದೇ ಶಾಸನ ಜಾರಿಗೆ ತರಲು ಸರ್ಕಾರ ಸಿದ್ಧ. ಕಾಂಗ್ರೆಸ್‌ಗೆ ಓಟು ನೀಡುವುದು ಹಿಂದುಳಿದ ವರ್ಗಗಳ ಪರಮ ಕರ್ತವ್ಯ'' ಎಂಬುದು ಅರಸು ಅವರ ಚುನಾವಣಾ ಪ್ರಚಾರ ಭಾಷಣದ ಮುಖ್ಯ ಅಂಶಗಳಾಗಿದ್ದವು. ಕೆ.ಪಿ.ಸಿ.ಸಿ. ಅಧ್ಯಕ್ಷ ಕೆ. ಟಿ. ರಾಥೋಡ್, ರಾಜ್ಯ ಸಚಿವ ಸಂಪುಟದ ಸದಸ್ಯರುಗಳು, ಹಿರಿಯ ಮುಖಂಡರು ಚುನಾವಣಾ ಪ್ರಚಾರದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಶಿಕಾರಿಪುರದಲ್ಲಿ ಒಂದು ಘರ್ಷಣೆಯಾಗಿ ಆಡಳಿತ ಕಾಂಗ್ರೆಸ್ ಕಾರ್ಯಕರ್ತನೊಬ್ಬ ಮೃತಪಟ್ಟದ್ದರ ಹೊರತಾಗಿ ಪ್ರಚಾರ ಶಾಂತಿಯುತವಾಗಿತ್ತು.

## ಪ್ರಣಾಳಿಕೆ

೮.೨.೧೯೭೭ ರಂದು ಕಾಂಗ್ರೆಸ್ ಪಕ್ಷ ತನ್ನ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿತು. ಮುಖ್ಯಾಂಶಗಳು ಹೀಗಿವೆ:

ಜನಕೋಟಿಯ ಶ್ರೇಯೋಭಿವೃದ್ಧಿಗಾಗಿ ಏನನ್ನು ಸಾಧಿಸಿದ್ದೇವೆ, ಏನನ್ನು ಸಾಧಿಸುತ್ತೇವೆ ಎಂಬುದನ್ನು ಧೈರ್ಯವಾಗಿ ಹೇಳುವ ಒಂದು ಕಾರ್ಯಕ್ರಮವನ್ನು ದೇಶದ ಮುಂದಿಡುವ ಏಕೈಕ ಪಕ್ಷ ಕಾಂಗ್ರೆಸ್ ಪಕ್ಷ. ಅಖಂಡ ಜನಸಮುದಾಯಕ್ಕೆ ನಾಯಕತ್ವ ನೀಡಬಲ್ಲ ಏಕೈಕ ಪಕ್ಷ ಕಾಂಗ್ರೆಸ್ ಪಕ್ಷ.

ಶಾಂತಿಯುತ ಕ್ರಾಂತಿಯ ಮೂಲಕ ದೇಶದ ಸಾಮಾಜಿಕ ರಾಜಕೀಯ ಭದ್ರತೆ, ರಾಷ್ಟ್ರದ ಐಕ್ಯತೆ, ಸಮಗ್ರತೆಗಳನ್ನು ಸಂರಕ್ಷಿಸಬಲ್ಲ ಏಕೈಕ ಪಕ್ಷ ಕಾಂಗ್ರೆಸ್. ಇಂತಹ ಸಾಧನೆ ಇನ್ನು ಯಾವ ಪಕ್ಷದಿಂದಲೂ ಸಾಧ್ಯವಿಲ್ಲ.

ಇತ್ತೀಚಿನ ತಿಂಗಳುಗಳಲ್ಲಿ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯವಾಗಿ ಬದಲಾದ ಪರಿಣಾಮವಾಗಿ ಭಾರತದ ಜನತೆಯಲ್ಲಿ ಆತ್ಮವಿಶ್ವಾಸ ಮತ್ತು ಕರ್ತವ್ಯ ಪರಿಪಾಲನೆ ಮನೋಭಾವನೆ ಬೆಳೆದು ರಾಷ್ಟ್ರವನ್ನು ಪ್ರಗತಿಪಥದಲ್ಲಿ ಮುಂದುವರಿಸಲು ಸಹಾಯಕವಾಗಿದೆ.

ಈಗಿನ ಚುನಾವಣೆಯ ನಿಮಿತ್ತವಾಗಿಯೇ ವಿರೋದ ಪಕ್ಷಗಳು ರಚಿಸಿಕೊಂಡಿರುವ ಮೈತ್ರಿ ಹೊಂದಾಣಿಕೆ ಶಾಶ್ವತವಲ್ಲ. ಇದು ಖಂಡನೀಯ. ಇದು ೧೯೭೧ರಲ್ಲಿ ಮಾಡಿಕೊಂಡಿದ್ದ ಮೈತ್ರಿ ಹೊಂದಾಣಿಕೆಯ ರೀತಿಯಲ್ಲಿದೆ. ಪ್ರಜಾಸತ್ತೆಗೆ ಗಂಡಾಂತರ ಬಂದಾಗ ಅವನ್ನು ನಿವಾರಿಸಲು ಪ್ರಜಾಪ್ರಭುತ್ವದ ರಕ್ಷಣೆ ಮಾಡಲು ಆಪತ್ಕಾಲೀನ ಪರಿಸ್ಥಿತಿಯನ್ನು ಘೋಷಿಸಲಾಯಿತು.

ರಾಜಕೀಯ ಮತ್ತು ಆರ್ಥಿಕ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ಸ್ವಾರ್ಥಕ್ಕಾಗಿ ಪ್ರಗತಿಗೆ ಅಡ್ಡಿ ಉಂಟುಮಾಡಿದಾಗ ಅದರ ನಿವಾರಣೆಗಾಗಿ ರಾಜ್ಯಾಂಗಕ್ಕೆ ೪೨ನೇ ತಿದ್ದುಪಡಿಯನ್ನು ತರಲಾಗಿದೆಯೇ ಹೊರತು ಸರ್ಕಾರದ ಅಧಿಕಾರ ಹಾಗೂ ಶಕ್ತಿಯನ್ನು ಹೆಚ್ಚಿಸಿ ಕೊಳ್ಳಲು ಅಲ್ಲ.

ನ್ಯಾಯಾಂಗ ಅಥವಾ ಶಾಸಕಾಂಗಗಳ ಅಧಿಕಾರ ಮೊಟಕು ಮಾಡುವ ಉದ್ದೇಶ ಇಲ್ಲ. ರಾಷ್ಟ್ರ ಹಾಗೂ ಜನತೆಯ ರಕ್ಷಣೆಯೇ ರಾಜ್ಯಾಂಗ ತಿದ್ದುಪಡಿಯ ಮೂಲ ಉದ್ದೇಶ.

ಜನತೆ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸಿ ಅಧಿಕಾರಕ್ಕೆ ತಂದಲ್ಲಿ ಜನತೆಯ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಕಾರ್ಯ ಕ್ರಮಗಳನ್ನು ಹಮ್ಮಿಕೊಂಡು ಜಾರಿಗೆ ತರುತ್ತದೆ.

೧. ಜಾತ್ಯತೀತ ಆದರ್ಶವನ್ನು ಎತ್ತಿ ಹಿಡಿಯುತ್ತದೆ. ಅಲ್ಪಸಂಖ್ಯಾತರ ಹಿತರಕ್ಷಣೆ ಮಾಡುತ್ತದೆ. ತನ್ನದೇ ಆದ ಜೀವನ ಮಾರ್ಗ ಮತ್ತು ನಂಬಿಕೆಯನ್ನು ಅನುಸರಿಸಲು ಪ್ರತಿಯೊಬ್ಬ ವ್ಯಕ್ತಿಗೂ ಇರತಕ್ಕಂಥ ನಂಬಿಕೆಯನ್ನು ಎತ್ತಿ ಹಿಡಿಯುತ್ತದೆ.
೨. ಪ್ರಜಾಪ್ರಭುತ್ವವನ್ನು ರಕ್ಷಿಸಿ ಸಂವರ್ಧಿಸುತ್ತದೆ. ಜನತೆ ಶಾಂತಿಯಿಂದ, ಸಾಮರಸ್ಯದಿಂದ ಬದುಕುವಂತೆ ಸಾಧ್ಯ ಮಾಡುವುದಕ್ಕಾಗಿ ಎಲ್ಲಾ ರೀತಿಯ ಹಿಂಸಾಚಾರ ಗೊಂದಲಗಳ ನಿವಾರಣೆ ಮಾಡುತ್ತದೆ.
೩. ಬಡತನ, ಅಜ್ಞಾನ, ರೋಗ, ಅಸಮಾನತೆ ವಿರುದ್ಧ ಹೋರಾಡಿ ಸಂಪದ್ಭರಿತ ಸಮಾಜವಾದಿ ಸಮಾಜ ನಿರ್ಮಿಸುತ್ತದೆ.
೪. ಮನುಷ್ಯ ಮನುಷ್ಯನ ಮಧ್ಯೆ ಇರತಕ್ಕಂಥ ಎಲ್ಲ ಅಸಮಾನತೆಗಳನ್ನು ತೊಡೆದು ಹಾಕಲು ಪ್ರಯತ್ನಿಸುತ್ತದೆ. ಎಲ್ಲಾ ರೂಪದ ಶೋಷಣೆಯನ್ನು ಕೊನೆಗೊಳಿಸುತ್ತದೆ.
೫. ವ್ಯವಸಾಯ ಹಾಗೂ ಅದಕ್ಕೆ ಸಂಬಂಧಿಸಿದ ಇತರ ಕಾರ್ಯಚಟುವಟಿಕೆಗಳನ್ನು ಅಭಿವೃದ್ಧಿಪಡಿಸುವುದಕ್ಕೋಸ್ಕರ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ತ್ವರಿತವಾಗಿ ಜಾರಿಗೊಳಿಸುತ್ತದೆ. ಗ್ರಾಮೀಣ ಜೀವನವನ್ನು ಸಂಪೂರ್ಣವಾಗಿ ಪುನರುಜ್ಜೀವನಗೊಳಿಸುತ್ತದೆ.
೬. ಸಣ್ಣ ರೈತರಿಗೆ, ಬಡ ರೈತರಿಗೆ, ಕೃಷಿ ಕಾರ್ಮಿಕರಿಗೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ, ಹಿಂದುಳಿದವರಿಗೆ ಸೂಕ್ತ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ ಅವರ ಹಿತರಕ್ಷಣೆ ಮಾಡುತ್ತದೆ.
೭. ದೇಶದ ಕೈಗಾರಿಕಾ ನೆಲೆಯನ್ನು ಬಲಪಡಿಸಿ ವೈವಿಧ್ಯಗೊಳಿಸುತ್ತದೆ. ಸಾರ್ವಜನಿಕ ಉದ್ಯಮ ಕ್ಷೇತ್ರದ ವಿಸ್ತರಣೆಯ ಜೊತೆಗೆ, ಸಂಪತ್ತು ಹಾಗೂ ಶಕ್ತಿಯ ಧ್ರುವೀಕರಣಕ್ಕೆ ಆಸ್ಪದ ಕೊಡದೆ, ಆದ್ಯತೆಗಳಿಗೆ ಒಳಪಟ್ಟು ಖಾಸಗಿ ಉದ್ಯಮ ಕ್ಷೇತ್ರಗಳಿಗೆ ಅವಕಾಶ ನೀಡುತ್ತದೆ.
೮. ಉತ್ಪಾದಕ ಉದ್ಯೋಗಗಳ ಅವಕಾಶಗಳನ್ನು ವಿಸ್ತರಿಸಲು ಒಂದು ಭಾರೀ ಕಾರ್ಯಕ್ರಮ ಕೈಗೊಳ್ಳುತ್ತದೆ.
೯. ಕಾರ್ಮಿಕ ವರ್ಗದ ಹಿತರಕ್ಷಣೆ ಮಾಡುವುದರ ಜೊತೆಗೆ ಆಡಳಿತದಲ್ಲಿ ಹಾಗೂ ದುಡಿಮೆಯ ಪ್ರತಿಫಲದಲ್ಲಿ ಅವರು ನ್ಯಾಯವಾದ ಪಾಲು ಪಡೆದುಕೊಳ್ಳುವಂತೆ ಮಾಡುತ್ತದೆ.
೧೦. ಬೆಲೆಗಳನ್ನು ಹತೋಟಿಯಲ್ಲಿ ಇಟ್ಟು, ಅವಶ್ಯಕ ವಸ್ತುಗಳು ಜನತೆಗೆ ನ್ಯಾಯವಾದ ಬೆಲೆಯಲ್ಲಿ ಸುಲಭವಾಗಿ ಸಿಗುವಂತೆ ನೋಡಿ ಕೊಳ್ಳುತ್ತದೆ.
೧೧. ಎಲ್ಲಾ ಮಕ್ಕಳಿಗೂ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣ ಒದಗಿಸುವುದರ ಜೊತೆಗೆ ಮಾಧ್ಯಮಿಕ ಹಾಗೂ ಪ್ರೌಢ ಶಿಕ್ಷಣದ ವ್ಯಾಪ್ತಿಯನ್ನು ಉತ್ತಮಪಡಿಸುತ್ತದೆ.
೧೨. ಜನತೆಯ ಕ್ಷೇಮಾಭಿವೃದ್ಧಿ ಕಾರ್ಯಕ್ರಮಗಳನ್ನು ವಿಸ್ತರಿಸುತ್ತದೆ. ಆರೋಗ್ಯ ಮತ್ತು ಔಷಧ ಸೌಕರ್ಯಗಳನ್ನು ವಿಸ್ತರಿಸುತ್ತದೆ.

## ಆಡಳಿತ ಕಾಂಗ್ರೆಸ್‌ಗೆ ಸೇರ್ಪಡೆ

ಚುನಾವಣಾ ಕಾಲದಲ್ಲಿ ಕೂಡಾ ಆಡಳಿತ ಕಾಂಗ್ರೆಸ್‌ಗೆ ಸೇರುವವರ ಸಂಖ್ಯೆ ಹೆಚ್ಚಾಗಿಯೇ ಇತ್ತು. ಎಸ್. ಬಿ. ನಾಗರಾಳ್ ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿ ನೇಮಕವಾದ ತಕ್ಷಣ ವಿಜಾಪುರ ಜಿಲ್ಲಾ ಸಂಸ್ಥಾ ಕಾಂಗ್ರೆಸ್ ಘಟಕ ಅದರ ಅಧ್ಯಕ್ಷರಾದ ಎಸ್. ಎಸ್. ಮಳ್ಳಿಗೇರಿ, ವಿಧಾನ ಪರಿಷತ್ ಸದಸ್ಯ ಬಿ. ಕೆ. ಗುಡದಿನ್ನಿ ಅವರ ನೇತೃತ್ವದಲ್ಲಿ ಆಡಳಿತ ಕಾಂಗ್ರೆಸ್‌ನಲ್ಲಿ ವಿಲೀನವಾಯಿತು.

ದಿನಾಂಕ ೨.೨.೭೭ ರಂದು ಹಾಸನ ಜಿಲ್ಲಾ ಕಾಂಗ್ರೆಸ್ ಮುಖಂಡರಾದ ಹಾರನಹಳ್ಳಿ ರಾಮಸ್ವಾಮಿ, ಕೆ. ಪಿ. ಚಿಕ್ಕೇಗೌಡ, ಡಿ. ನಂಜಪ್ಪ, ಬಿ.ಎಚ್. ಲಕ್ಷ್ಮಣಯ್ಯ, ಡಿ. ಬಿ. ಬಸವೇಗೌಡ, ಡಿ. ಬಿ. ಗಂಗಾಧರಪ್ಪ ಎಸ್. ಜಿ. ಚಿನ್ನೇಗೌಡ, ಸಿ. ಎಂ. ತಿಮ್ಮಪ್ಪ ಗೌಡ, ಜಿ. ಪುಟ್ಟಸ್ವಾಮಿಗೌಡ, ಆಲನಹಳ್ಳಿ ಕೇಶವಮೂರ್ತಿ ಇವರು ಆಡಳಿತ ಕಾಂಗ್ರೆಸ್ ಸೇರಿದರು. ೧೨.೨.೭೭ ರಂದು ಬೆಳಗಾವಿ ಜಿಲ್ಲೆಯ ವಿಧಾನ ಪರಿಷತ್ ಸದಸ್ಯರಾದ ಬಿ. ಎ. ಬೋಳಶೆಟ್ಟಿ ಹಾಗೂ ಬಿ. ಎ. ಕಟ್ಟಿ ಆಡಳಿತ ಕಾಂಗ್ರೆಸ್ ಸೇರಿದರು. ೧೩.೨.೭೭ ರಂದು ದೇವದುರ್ಗ ಶಾಸಕ ಎ. ಶರಣಪ್ಪ ಆಡಳಿತ ಕಾಂಗ್ರೆಸ್ ಸೇರಿದರು. ಅದೇ ದಿನ ಬೆಳಗಾವಿ, ನರಗುಂದ, ಧಾರವಾಡ ಜಿಲ್ಲೆಯ ಸಂಸ್ಥಾ ಕಾಂಗ್ರೆಸ್ ಮುಖಂಡರುಗಳು ಆಡಳಿತ ಕಾಂಗ್ರೆಸ್ ಸೇರಿದರು.

### ಆಡಳಿತ ಕಾಂಗ್ರೆಸ್ ಬಿಟ್ಟವರು

೨.೨.೭೭ ರಂದು ಜಗಜ್ಜೀವನರಾಮ್ ಕಾಂಗ್ರೆಸ್ ಪಕ್ಷವನ್ನು ತೊರೆದು ಸಿಎಫ್‌ಡಿ ಪಕ್ಷ ಕಟ್ಟಿದರಷ್ಟೆ. ಅದರ ಪರಿಣಾಮ ಕರ್ನಾಟಕದ ಮೇಲೆ ಅಲ್ಪವಾಗಿ ಆಯಿತು. ೧೪.೨.೭೭ ರಂದು ಆಡಳಿತ ಕಾಂಗ್ರೆಸ್ ಶಾಸಕರಾದ ಬಾಪೂಗೌಡ ದರ್ಶನಾಪುರ, ಆರ್. ವೀರಣ್ಣ ಎಚ್. ಬಿ. ಕೆಂಚೇಗೌಡ, ಸತ್ಯನಾರಾಯಣಸಿಂಗ್, ಕೆ. ಎಂ. ರುದ್ರಪ್ಪ, ಸೂರ್ಯನಾರಾಯಣ ಗೌಡ, ದೊಡ್ಡತಿಮ್ಮಯ್ಯ, ಪಿ. ಸಿ. ಶೆಟ್ಟರ್, ಕೆ.ಪಿ. ನಾಡಗೌಡ, ಎಸ್. ಎಂ. ಲಿಂಗಪ್ಪ, ಜಿ. ಮಾದೇಗೌಡ, ಅಬ್ದುಲ್ ಖುದ್ದೂಸ್ ಅನ್ವರ್ ಇವರುಗಳು ಸಿ.ಎಫ್.ಡಿ. ಸೇರಿದರು. ಅವರ ಜೊತೆ ಕಾಂಗ್ರೆಸ್‌ನ ಕೆಲವು ಮಾಜಿ ಶಾಸಕರು, ಮಾಜಿ ಸಂಸದರು, ಜಿಲ್ಲಾ ಮತ್ತು ತಾಲ್ಲೂಕು ಕಾಂಗ್ರೆಸ್ ಸಮಿತಿ ಅಧ್ಯಕ್ಷರುಗಳು ಸಿ.ಎಫ್.ಡಿ. ಸೇರಿದರು. ೨೧.೨.೭೭ ರಂದು ಧಾರವಾಡ ಜಿಲ್ಲೆಯ ಕಾಂಗ್ರೆಸ್ ಮುಖಂಡರುಗಳು ಜನತಾ ಪಕ್ಷಕ್ಕೆ ಸೇರಿದರು. ೧.೩.೭೭ ರಂದು ಭಕ್ತವತ್ಸಲ, ರಾಜಗೋಪಾಲ್ ಎಂಬುವವರ ನೇತೃತ್ವದ ಯುವ ಕಾಂಗ್ರೆಸ್ ಕಾರ್ಯಕರ್ತರು ಜನತಾ ಪಕ್ಷಕ್ಕೆ ಸೇರಿದರು. ೨.೩.೭೭ ರಂದು ಮಾಜಿ ಮೇಯರ್ ತಿಮ್ಮರಾಯಿಗೌಡ ಜನತಾ ಪಕ್ಷಕ್ಕೆ ಸೇರಿದರು.

೧೬.೩.೭೭ ರಂದು ಕನಕಪುರ, ಚಿಕ್ಕಬಳ್ಳಾಪುರ, ಚಿತ್ರದುರ್ಗ, ವಿಜಾಪುರ, ಬೆಳಗಾವಿ, ಚಿಕ್ಕೋಡಿ, ಧಾರವಾಡ ಉತ್ತರ, ಉಡುಪಿ, ಚಾಮರಾಜನಗರ, ಕಲಬುರ್ಗಿ, ರಾಯಚೂರು, ಉತ್ತರ ಕನ್ನಡ, ಚಿಕ್ಕಮಗಳೂರು ಕ್ಷೇತ್ರಗಳಲ್ಲಿ ಮತದಾನ ನಡೆಯಿತು.

೧೯.೩.೭೭ ರಂದು ಕೊಪ್ಪಳ, ಬಳ್ಳಾರಿ, ದಾವಣಗೆರೆ, ತುಮಕೂರು, ಕೋಲಾರ, ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಮಂಡ್ಯ, ಮೈಸೂರು, ಮಂಗಳೂರು, ಹಾಸನ, ಶಿವಮೊಗ್ಗ, ಧಾರವಾಡ ಉತ್ತರ ಮತ್ತು ಬಾಗಲಕೋಟೆಗಳಲ್ಲಿ ಮತದಾನ ನಡೆಯಿತು. ಶೇಕಡಾ ೬೩ರಷ್ಟು ಮತದಾನವಾಯಿತು.

ಕಾಂಗ್ರೆಸ್ ಪಕ್ಷ ಚಲಾವಣೆಯಾದ ೧೦,೨೮೧,೮೪೨ ಪುರಸ್ಕೃತ ಮತಗಳ ಪೈಕಿ ೫,೮೩೩,೫೬೭ ಮತಗಳನ್ನು ಪಡೆದು ಶೇಕಡಾ ೫೬.೭೪ ಮತಗಳನ್ನು ಪಡೆಯಿತು. ೨೮ ಅಭ್ಯರ್ಥಿಗಳಲ್ಲಿ ೨೬ ಅಭ್ಯರ್ಥಿಗಳು ಆರಿಸಿಬಂದರು.

ಬೆಂಗಳೂರು ದಕ್ಷಿಣ ಕ್ಷೇತ್ರದಿಂದ ಸ್ಪರ್ಧಿಸಿದ್ದ ಕಾಂಗ್ರೆಸ್ ಅಭ್ಯರ್ಥಿ ಕೆಂಗಲ್ ಹನುಮಂತಯ್ಯ ೪೧,೦೦೦ ಮತಗಳ ಅಂತರದಿಂದ ಸೋತರೆ, ಹಾಸನದ ಕಾಂಗ್ರೆಸ್ ಅಭ್ಯರ್ಥಿ ನಲ್ಲೂರೇಗೌಡರಂತೂ ಕೇವಲ ೧೦೮೧ ಮತಗಳ ಅಂತರದಿಂದ ಸೋತರು.

### ಫಲಿತಾಂಶ

ರಾಜ್ಯದ ೨೮ ಲೋಕಸಭಾ ಸ್ಥಾನಗಳಲ್ಲಿ ಆಡಳಿತ ಕಾಂಗ್ರೆಸ್‌ಗೆ ಪ್ರಸ್ತುತ ಚುನಾವಣೆಯಲ್ಲಿ ೨೬ ಸ್ಥಾನಗಳು ದೊರೆತವು. ಪ್ರತಿಷ್ಠಿತ ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರವು ಮೊದಲಬಾರಿಗೆ ಆಡಳಿತ ಕಾಂಗ್ರೆಸ್‌ನ ಕೈತಪ್ಪಿ ಹೋಯಿತು. ಇದನ್ನೇ ಗುರಿಯಾಗಿ ಇಟ್ಟುಕೊಂಡ ಮಾಧ್ಯಮಗಳು ವಿದ್ಯಾವಂತ ಜನತೆ ಆಡಳಿತ ಕಾಂಗ್ರೆಸ್ಸಿನ ವಿರುದ್ಧ ಜಿಗುಪ್ಸೆ ಹೊಂದಿದ್ದಾರೆ ಎಂದು ವಿಶ್ಲೇಷಿಸಿದವು. ಸ್ವಲ್ಪ ಅಂತರದಲ್ಲಿ ಹಾಸನ ಲೋಕಸಭಾ ಕ್ಷೇತ್ರವೂ ಆಡಳಿತ ಕಾಂಗ್ರೆಸ್‌ನಿಂದ ಕೈತಪ್ಪಿಹೋಯಿತು. ಈ ಚುನಾವಣೆ ಸಂದರ್ಭದಲ್ಲಿ ಮೊದಲಾದ ಆಡಳಿತ ಕಾಂಗ್ರೆಸ್ ವಿರುದ್ಧದ ಮಾಧ್ಯಮಗಳ ಸಮರವು ಬಹುಕಾಲ ಮುಂದುವರೆಯಿತು. ಇದಕ್ಕೆ ಅನೇಕ ಕಾರಣಗಳನ್ನು ಕೊಡಬಹುದು.

೨೬ ಲೋಕಸಭಾ ಕ್ಷೇತ್ರಗಳಲ್ಲಿ ಆಡಳಿತ ಕಾಂಗ್ರೆಸ್‌ನ ಅಭ್ಯರ್ಥಿಗಳು ಜಯಗಳಿಸಿದ್ದರೂ ಅವರು ಹಿಂದೆ ಪಡೆದ ಮತಕ್ಕಿಂತ ಈ ಚುನಾವಣೆಯಲ್ಲಿ ಪಡೆದ ಮತಗಳ ಪ್ರಮಾಣ ತುಂಬಾ ಕಡಿಮೆಯಾಗಿತ್ತು. ಉತ್ತರ ಭಾರತದಲ್ಲಿ ಈ ಚುನಾವಣೆ ಸಂದರ್ಭದಲ್ಲಿ ಕಾಂಗ್ರೆಸ್ ಸಂಪೂರ್ಣವಾಗಿ ನೆಲೆ ಕಳೆದುಕೊಂಡಿತು. ಆದರೆ ದಕ್ಷಿಣ ಭಾರತದಲ್ಲಿ ಅದರ ಬೇರುಗಳು ಇನ್ನೂ ಆಳವಾಗಿದ್ದವು. ಈ ಚುನಾವಣೆಯಲ್ಲಿ ಕಾಂಗ್ರೆಸ್‌ನಿಂದ ಗೆದ್ದ ಅಭ್ಯರ್ಥಿಗಳೆಂದರೆ-

ಬೀದರಿನಿಂದ ಶಂಕರದೇವ್ ಬಾಲಾಜಿರಾವ್ (ಶೇ. ೫೫.೯೨), ಗುಲ್ಬರ್ಗಾದಿಂದ ಸಿದ್ಧರಾಮರೆಡ್ಡಿ (ಶೇ. ೬೦.೬೭), ರಾಯಚೂರಿನಿಂದ ರಾಜಶೇಖರ ಮಲ್ಲಪ್ಪ (ಶೇ. ೭೩.೬೮), ಕೊಪ್ಪಳದಿಂದ ಸಿದ್ಧರಾಮೇಶ್ವರಸ್ವಾಮಿ ಬಸಯ್ಯ (ಶೇ. ೬೮.೦೩), ಬಳ್ಳಾರಿಯಿಂದ ಕೆ. ಎಸ್. ವೀರಭದ್ರಪ್ಪ (ಶೇ. ೬೯.೫೮), ದಾವಣಗೆರೆಯಿಂದ ಕೊಂಡಜ್ಜಿ ಬಸಪ್ಪ (ಶೇ. ೫೯.೨೪), ಕೋಲಾರದಿಂದ ಜಿ. ವೈ. ಕೃಷ್ಣನ್ (ಶೇ. ೫೫.೫೮), ಕನಕಪುರದಿಂದ ಎಂ. ವಿ. ಚಂದ್ರಶೇಖರಮೂರ್ತಿ (ಶೇ. ೪೭.೧೫), ಬೆಂಗಳೂರು ಉತ್ತರದಿಂದ ಸಿ. ಕೆ. ಜಾಫರ್ ಷರೀಫ್ (ಶೇ. ೫೪.೮೧), ಮಂಡ್ಯದಿಂದ ಕೆ. ಚಿಕ್ಕಲಿಂಗಯ್ಯ (ಶೇ. ೪೮.೩೯), ಚಾಮರಾಜನಗರದಿಂದ ಬಿ. ರಾಚಯ್ಯ (ಶೇ. ೫೫.೧೫), ಮೈಸೂರಿನಿಂದ ಎಚ್. ಡಿ. ತುಳಸೀದಾಸಪ್ಪ (ಶೇ. ೫೩.೬೮), ಮಂಗಳೂರಿನಿಂದ ಜನಾರ್ಧನ ಪೂಜಾರಿ (ಶೇ. ೬೦.೦೮), ಉಡುಪಿಯಿಂದ ಟಿ.ಎ. ಪೈ (ಶೇ. ೬೧.೫೩), ಚಿಕ್ಕಮಗಳೂರಿನಿಂದ ಡಿ. ಬಿ. ಚಂದ್ರೇಗೌಡ (ಶೇ. ೫೯.೧೫), ಶಿವಮೊಗ್ಗದಿಂದ ಎ. ಆರ್. ಬದರಿನಾರಾಯಣ (ಶೇ. ೫೯.೪೨), ಕೆನರಾದಿಂದ ಬಿ. ಪಿ. ಕದಂ (ಶೇ. ೫೧.೭೧), ಧಾರವಾಡ ದಕ್ಷಿಣದಿಂದ ಎಫ್.ಹೆಚ್. ಮೊಹಿಸಿನ್ (ಶೇ. ೬೦.೬೬), ಧಾರವಾಡ ಉತ್ತರದಿಂದ ಶ್ರೀಮತಿ ಸರೋಜಿನಿ ಮಹಿಷಿ (ಶೇ. ೫೭.೬೩), ಬೆಳಗಾವಿಯಿಂದ ಎ. ಕೆ. ಕೊಟ್ರಶೆಟ್ಟಿ (ಶೇ. ೫೫.೫೯), ಚಿಕ್ಕೋಡಿಯಿಂದ ಬಿ. ಶಂಕರಾನಂದ (ಶೇ. ೫೩.೭೪), ಬಾಗಲ ಕೋಟೆಯಿಂದ ಎಸ್. ಬಿ. ಪಾಟೀಲ್ (ಶೇ. ೬೦.೨೨) ಹಾಗೂ ಬಿಜಾಪುರದಿಂದ ಕೆ. ಬಿ. ಚೌಧರಿ (ಶೇ. ೫೩.೩೩).

೧೯೭೧ ರಿಂದಲೂ ಆಡಳಿತ ಕಾಂಗ್ರೆಸ್ ತನ್ನ ಅಭ್ಯರ್ಥಿಗಳ ಆಯ್ಕೆ ಸಂದರ್ಭದಲ್ಲಿ ತನ್ನ ಸಾಮಾಜಿಕ ಬದ್ಧತೆಗೆ ಆದ್ಯತೆ ಕೊಡುತ್ತಿತ್ತೇ ಹೊರತು ಜಾತಿ, ಮತ ಹಾಗೂ ಪಂಗಡಕ್ಕೆ ಅಲ್ಲ. ೧೯೭೨ರ ವಿಧಾನಸಭೆ ಚುನಾವಣೆಯಲ್ಲಿ ಬೆಂಗಳೂರಿನ ಬಸವನಗುಡಿಯಿಂದ ಅಲ್ಪಸಂಖ್ಯಾತ ಒಬ್ಬರಿಗೆ ಟಿಕೇಟು ಕೊಟ್ಟು ಗೆಲ್ಲಿಸಿದ ಕೀರ್ತಿ ಅದರದ್ದು. ಗ್ರಾಮೀಣ ಹಾಗೂ ನಗರ ಪ್ರದೇಶಗಳು ಅಲ್ಲದೆ ಎಲ್ಲ ಪ್ರದೇಶಗಳಲ್ಲೂ ಏಕಪ್ರಕಾರವಾಗಿ ಜನಪ್ರಿಯತೆ ಗಳಿಸಿಕೊಂಡಿದ್ದ ಆಡಳಿತ ಕಾಂಗ್ರೆಸ್ ಪಕ್ಷ ತನ್ನ ಧ್ಯೇಯೋದ್ದೇಶಗಳನ್ನು ಮುಂದಿಟ್ಟು ಜನರಲ್ಲಿ ಮತಯಾಚನೆ ಮಾಡುವ ಪರಂಪರೆಯನ್ನು ಬೆಳೆಸಿಕೊಂಡಿತು. ವಿಶೇಷವಾಗಿ ಬಡವರ ಹಾಗೂ ಮಧ್ಯಮವರ್ಗದವರ ಕಣ್ಮಣಿ ಎನಿಸಿದ ಶ್ರೀಮತಿ ಇಂದಿರಾ ಗಾಂಧಿಯವರು ಕರ್ನಾಟಕದ ರಾಜಕಾರಣದಲ್ಲಿ ಹೊಸ ವಿಕ್ರಮವನ್ನು ಸ್ಥಾಪಿಸಿದ್ದರು. ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್‌ನ ನೇತೃತ್ವ ವಹಿಸಿದ ಮುಖ್ಯಮಂತ್ರಿ ಡಿ. ದೇವರಾಜ ಅರಸ್ ಅವರು ಸಾಮಾಜಿಕ ನ್ಯಾಯ ಹಾಗೂ ಗೇಣಿದಾರರ ಪರವಾಗಿರುವ ನಿಲುವಿನಿಂದಾಗಿ ರಾಜಕಾರಣದಲ್ಲಿ ಹೊಸ ಚಿಂತನೆಗೆ ಪ್ರೇರಣೆ ಕೊಟ್ಟರು.

ಸಾಮಾನ್ಯವಾಗಿ ಸಾವಿರ ಬಡವರ ಧ್ವನಿಗಿಂತ ಒಬ್ಬ ಬಲಿಷ್ಠನ ಧ್ವನಿ ಹೆಚ್ಚಾಗಿ ಎಲ್ಲೆಡೆ ಪ್ರತಿಧ್ವನಿಸುತ್ತದೆ. ಈ ಬಲಿಷ್ಠ ಧ್ವನಿಗೆ ಹೆದರಿ ಸಾವಿರ ಬಡವರ ಧ್ವನಿಗಳು ತಾತ್ಕಾಲಿಕವಾಗಿ ಬಲಹೀನವಾಗುವುದೂ ಉಂಟು. ಸಾಮಾಜಿಕ ನ್ಯಾಯ ಹಾಗೂ ಪಕ್ಷದಿಂದ ಸತ್ಫಲಗಳನ್ನು ಪಡೆದುಕೊಂಡು ಅನೇಕ ಶ್ರೀಸಾಮಾನ್ಯರು ಆಡಳಿತ ಕಾಂಗ್ರೆಸ್‌ನ ಬೆಂಬಲಕ್ಕೆ ಸದಾ ಹಾತೊರೆಯುತ್ತಿದ್ದರು. ಆದರೆ ಅಡ್ಡಗೋಡೆ ಮೇಲೆ ಕುಳಿತ ಜನ ಗಟ್ಟಿಧ್ವನಿಗೆ ಹೆದರಿ ಆಗಾಗ ಬೇರೆಬೇರೆ ಪಕ್ಷಗಳಿಗೆ ಪಲಾಯನ ಮಾಡಿದ ಪ್ರಸಂಗಗಳೂ ಇವೆ. ಅಲ್ಲಿ ಭ್ರಮನಿರಸನಗೊಂಡ ಅವರು ಮತ್ತೆ ಆಡಳಿತ ಕಾಂಗ್ರೆಸ್‌ಗೆ ಅದರ ಉತ್ತರಾಧಿಕಾರಿಯಾಗಿ ಕಾಂಗ್ರೆಸ್(ಐ) ಪಕ್ಷಕ್ಕೆ ವಾಲಿರುವುದನ್ನು ಇತಿಹಾಸ ಸ್ಪಷ್ಟಪಡಿಸುತ್ತದೆ. ಅದಕ್ಕೆ ರಾಜ್ಯದ ಕಾಂಗ್ರೆಸ್ ಪಕ್ಷದ ರಾಜಕೀಯ ಘಟನಾವಳಿಗಳೇ ಸಾಕ್ಷಿ ಎನಿಸಿವೆ.

ನಿರೂಪಣೆ ಹಾಗೂ ಸಂಶೋಧನಾ ಸಹಾಯ

**ಕೆ.ಆರ್. ಕಮಲೇಶ್, ಎಸ್. ನಂಜುಂಡಸ್ವಾಮಿ**



# ಸಂಸ್ಥಾ ಕಾಂಗ್ರೆಸ್

ವಿ. ಎಸ್. ಕೃಷ್ಣಯ್ಯರ್

## ಹಿನ್ನೆಲೆ

೧೯೬೯ನೇ ಇಸವಿಯಿಂದ ಕಾಂಗ್ರೆಸ್ ಪಕ್ಷದಲ್ಲಿ ಹಳಬರು, ಹಿರಿಯರಿಂದ ಕೂಡಿದ್ದ ನಿಜಲಿಂಗಪ್ಪನವರ ಗುಂಪಿಗೂ ಹೊಸಬರು, ಉತ್ಸಾಹಿಗಳಿಂದ ಕೂಡಿದ್ದ ಪ್ರಧಾನಿ ಇಂದಿರಾಗಾಂಧಿಯವರ ಗುಂಪಿಗೂ ತಾತ್ವಿಕ ಹಾಗೂ ಸೈದ್ಧಾಂತಿಕ ಭಿನ್ನಭಿಪ್ರಾಯಗಳು ಮೂಡಿ ಬರತೊಡಗಿದವು. ಜುಲೈ ೧೦, ೧೯೬೯ರಂದು ಬೆಂಗಳೂರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಈ ಭಿನ್ನಾಭಿಪ್ರಾಯಗಳು ಪೂರ್ಣ ಪ್ರಮಾಣದಲ್ಲಿ ಗೋಚರವಾಗತೊಡಗಿದವು. ಅಂದಿನಿಂದಲೇ ಆಗಸ್ಟ್ ೨೦, ೧೯೬೯ ರಂದು ಆತ್ಮಸಾಕ್ಷಿ ಮತದಾನದ ಮೇಲೆ ವಿ.ವಿ. ಗಿರಿಯವರು ರಾಷ್ಟ್ರಪತಿಯಾಗಿ ಆಯ್ಕೆಯಾಗಿ ಕಾಂಗ್ರೆಸ್ ಪಕ್ಷದ ಅಧಿಕೃತ ಅಭ್ಯರ್ಥಿ ಸಂಜೀವರೆಡ್ಡಿಯವರಿಗೆ ಸೋಲಾದಾಗ ಈ ಭಿನ್ನಾಭಿಪ್ರಾಯ ತಾರಕಕ್ಕೇರಿತು. ೧೨ ನವೆಂಬರ್ ೧೯೬೯ ರಂದು ಶ್ರೀಮತಿ ಇಂದಿರಾಗಾಂಧಿಯವರನ್ನು ಕಾಂಗ್ರೆಸ್ ಶಾಸಕಾಂಗ ಪಕ್ಷದ ನಾಯಕ ಸ್ಥಾನದಿಂದ ಉಚ್ಚಾಟಿಸಲಾಯಿತು. ೨೨-೧೧-೬೯ ರಂದು ದೆಹಲಿಯಲ್ಲಿ ಸೇರಿದ್ದ ವಿಶೇಷ ಕಾಂಗ್ರೆಸ್ ಅಧಿವೇಶನದಲ್ಲಿ ನಿಜಲಿಂಗಪ್ಪನವರನ್ನು ಪಕ್ಷದಿಂದ ಉಚ್ಚಾಟಿಸಿದ ಶ್ರೀಮತಿ ಇಂದಿರಾಗಾಂಧಿಯವರ ಗುಂಪು, ಸಿ. ಸುಬ್ರಹ್ಮಣ್ಯಂ ಅವರನ್ನು ನೂತನ ಅಧ್ಯಕ್ಷರನ್ನಾಗಿ ಆರಿಸಿಕೊಂಡಿತು. ೨೦.೧೨.೧೯೬೯ರಿಂದ ಮೂರು ದಿನಗಳ ಕಾಲ ಅಹಮದಾಬಾದ್‌ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನವೇ ಸಂಸ್ಥಾ ಕಾಂಗ್ರೆಸ್‌ನ ಪ್ರಥಮ ಅಧಿವೇಶನ ಎಂದು ಹೇಳಬಹುದು. ಈ ಅಧಿವೇಶನದಲ್ಲಿ ಪಕ್ಷವನ್ನು ಉಳಿಸಿ ಬೆಳೆಸಲು ನಿರ್ಧರಿಸಲಾಯಿತು. ಮತ್ತೆ ನಿಜಲಿಂಗಪ್ಪನವರು ಅಧ್ಯಕ್ಷರಾಗಿ ಆಯ್ಕೆಯಾದರು. ಚುನಾವಣಾ ಆಯೋಗ ಈ ಪಕ್ಷವನ್ನು ಐ.ಎನ್.ಸಿ. (ಒ) ಎಂದು ಗುರುತಿಸಿತು. ''ಒ'' ಎಂದರೆ ಆರ್ಗನೈಸೇಷನ್ ಅಥವಾ ಸಂಸ್ಥೆ. ಹೀಗಾಗಿ ನಿಜಲಿಂಗಪ್ಪನವರ ಅಧ್ಯಕ್ಷತೆಯ ಕಾಂಗ್ರೆಸ್ ಪಕ್ಷಕ್ಕೆ ಸಂಸ್ಥಾ ಕಾಂಗ್ರೆಸ್ ಎಂಬ ಹೆಸರು ರೂಢಿಗೆ ಬಂದಿತು.

೧೯೭೧ರ ಮಾರ್ಚ್ ತಿಂಗಳಲ್ಲಿ ನಡೆದ ಲೋಕಸಭಾ ಮಧ್ಯಂತರ ಚುನಾವಣೆಯ ಕಾಲಕ್ಕೆ ಸಂಸ್ಥಾ ಕಾಂಗ್ರೆಸ್ ಪಕ್ಷ, ಸ್ವತಂತ್ರ ಪಕ್ಷ, ಜನಸಂಘ, ಸಂಯುಕ್ತ ಸಮಾಜವಾದಿ ಪಕ್ಷ ಹಾಗೂ ಶೋಷಿತದಳಗಳೊಡನೆ ಚುನಾವಣಾ ಮೈತ್ರಿ ಮಾಡಿಕೊಂಡು ಚುನಾವಣೆಗಳಿಗೆ ಸ್ಪರ್ಧಿಸಿತು. ಅಖಿಲ ಭಾರತ ಮಟ್ಟದಲ್ಲಿ ತಾನು ಸ್ಪರ್ಧಿಸಿದ್ದ ಸ್ಥಾನಗಳ ಪೈಕಿ ಕೇವಲ ೧೬ ಸ್ಥಾನಗಳನ್ನು ಪಡೆಯುವಲ್ಲಿ ಅದು ಯಶಸ್ವಿ ಆಯಿತು. ಶೇಕಡಾ ೧೦.೪ ಪ್ರಮಾಣದಲ್ಲಿ ಮತ ಗಳಿಸಿತ್ತು. ಮೈಸೂರು ರಾಜ್ಯದಲ್ಲಿ ಚುನಾವಣಾ ಮೈತ್ರಿಯಂತೆ ಸಂಸ್ಥಾ ಕಾಂಗ್ರೆಸ್ ೧೭ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಆದರೆ ಒಂದೇ ಒಂದು ಸ್ಥಾನವನ್ನೂ ಗಳಿಸಲಿಲ್ಲ. ಶೇಕಡಾ ೧೬.೪೦ ಪ್ರಮಾಣದಲ್ಲಿ ಮತಗಳಿಸುವಲ್ಲಿ ಅದು ಯಶಸ್ವಿ ಆಯಿತು.

ಏಪ್ರಿಲ್ ೨, ೧೯೭೧ರಂದು ದೆಹಲಿಯಲ್ಲಿ ಸಂಸ್ಥಾ ಕಾಂಗ್ರೆಸ್ ಸಭೆ ಸೇರಿ ಚುನಾವಣಾ ಫಲಿತಾಂಶಗಳನ್ನು ಪರಿಶೀಲಿಸಿತು. ಮೈತ್ರಿ ಕೂಟ ಯಶಸ್ವಿಯಾಗದೇ ಹೋದುದೇ ಸೋಲಿಗೆ ಕಾರಣವೆಂದು ವಿಶ್ಲೇಷಿಸಿತು.

೧೯೭೧ರ ಮೇ ೧೪ರಿಂದ ಮುಂಬಯಿಯಲ್ಲಿ ಮೂರುದಿನಗಳ ಸಂಸ್ಥಾ ಕಾಂಗ್ರೆಸ್ ಅಧಿವೇಶನ ನಡೆಯಿತು. ಸಾದಿಕ್ ಅಲಿ ನೂತನ ಅಧ್ಯಕ್ಷರಾಗಿ ಆಯ್ಕೆಯಾದರು. ೧೯೭೨ರ ಚುನಾವಣೆಗಳ ಕಾಲಕ್ಕೆ ಮೈಸೂರು ಪ್ರದೇಶ ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷರಾಗಿ ವೀರೇಂದ್ರ ಪಾಟೀಲ್, ಉಪಾಧ್ಯಕ್ಷರಾಗಿ ರಾಮಕೃಷ್ಣ ಹೆಗಡೆ ಇದ್ದರು.

## ೧೯೭೧ - ಮಧ್ಯಂತರ ಲೋಕಸಭಾ ಚುನಾವಣೆ - ವಿರೋಧಿ ಮೈತ್ರಿಕೂಟ

೩೧.೧೨.೭೦ರಂದು ಕಮ್ಯುನಿಸ್ಟೇತರ ಪಕ್ಷಗಳ ಜೊತೆ ಚುನಾವಣಾ ಮೈತ್ರಿ ಏರ್ಪಡಿಸಿಕೊಳ್ಳುವ ಬಗ್ಗೆ ದೆಹಲಿಯಲ್ಲಿ ನಿಜಲಿಂಗಪ್ಪನವರು, ವಾಜಪೇಯಿ ಮತ್ತು ಮಿನೂ ಮಸಾನಿಯವರ ಜೊತೆಗೆ ಚರ್ಚೆ ಆರಂಭಿಸಿದರು. ಮಧ್ಯಂತರ ಚುನಾವಣೆಯ ನಂತರ ಕೇಂದ್ರದಲ್ಲಿ ಸಮ್ಮಿಶ್ರ ಸರ್ಕಾರ ಸ್ಥಾಪನೆಯಾಗಲಿದೆಯೆಂದು ಜನಸಂಘದ ಅಧ್ಯಕ್ಷ ವಾಜಪೇಯಿ ನುಡಿದರು. ಮಹಾಮೈತ್ರಿಗೆ ಮಾತುಕತೆಗಳು ಮುಂದುವರೆದವು. ಆದರೆ ಆರಂಭದಲ್ಲಿ ಭಾರತೀಯ ಕ್ರಾಂತಿದಳದ ಚರಣಸಿಂಗ್, ಎಸ್. ಎಸ್. ಪಿ. ನಾಯಕ ರಾಜನಾರಾಯಣರು ಈ ಚರ್ಚೆಗಳಲ್ಲಿ ಭಾಗವಹಿಸಲಿಲ್ಲ. ಆಡಳಿತ ಕಾಂಗ್ರೆಸ್ ಮತ್ತು ಎಸ್.ಎಸ್.ಪಿ. ನಡುವೆ ಚುನಾವಣಾ ಹೊಂದಾಣಿಕೆಯ ಸಾಧ್ಯತೆ ಇದೆ. ಈ ಬಗ್ಗೆ ಪಿ.ಎಸ್.ಪಿ. ನಾಯಕರ ಜೊತೆ ಚರ್ಚೆ ನಡೆಯಲಿದೆ. ಎಂದು ಜಗಜೀವನರಾಂ ತಿಳಿಸಿದರು. ಪಿ. ಎಸ್. ಪಿ. ಪ್ರಧಾನ ಕಾರ್ಯದರ್ಶಿ ಪ್ರೇಂ ಬಾಸಿನ್‌ರವರೂ ಕೂಡಾ ಆಡಳಿತ ಕಾಂಗ್ರೆಸ್ ಜೊತೆ ಈ ಬಗ್ಗೆ ಜನವರಿ ೪ ರಂದು ಚರ್ಚೆ ನಡೆಯಲಿದೆ ಎಂದು ಹೇಳಿದರು. ೩.೧.೭೧ರಂದು ನವದೆಹಲಿಯಲ್ಲಿ ಸಂಸ್ಥಾ ಕಾಂಗ್ರೆಸ್, ಜನಸಂಘ, ಎಸ್. ಎಸ್. ಪಿ. ಸ್ವತಂತ್ರ ಪಕ್ಷಗಳು ಒಗ್ಗೂಡಿ ಮೈತ್ರಿಕೂಟ ರಂಗ ರಚನೆ ಮಾತುಕತೆಗಳು ಮುಂದುವರೆದವು. ಸಂಸ್ಥಾ ಕಾಂಗ್ರೆಸ್‌ನ ಅನಿಶ್ಚಿತ ನೀತಿಯ ಬಗ್ಗೆ ಸ್ವತಂತ್ರ ಪಕ್ಷದ ನಾಯಕ ಮಿನೂ ಮಸಾನಿ ಅತೃಪ್ತಿ ವ್ಯಕ್ತಪಡಿಸಿ ತಮ್ಮ ನಿರ್ಧಾರವನ್ನು ಮುಂದಕ್ಕೆ ಹಾಕಿದರು. ಇಂದಿರಾ ಹಠಾವ್ ತಮ್ಮ ಗುರಿ, ಕೇಂದ್ರದಲ್ಲಿ ಈಗಿರುವ ಸರ್ಕಾರವನ್ನು ಪರಾಭವಗೊಳಿಸುವುದೇ ವಿನಹ ಬೇರೆ ಯಾವುದೇ ಕನಿಷ್ಠ ಕಾರ್ಯಕ್ರಮ ಇಲ್ಲ, ಚುನಾವಣಾ ಹೊಂದಾಣಿಕೆಗಾಗಿ ಮಾತ್ರ ಕೂಟ ಇರಬೇಕೆಂಬ ಎಸ್. ಎಸ್. ಪಿ. ನಾಯಕರ ನಿಲುವಿನಿಂದ ಸ್ವತಂತ್ರ ಪಾರ್ಟಿಯು ಮೈತ್ರಿಕೂಟದಿಂದ ಹೊರಹೋಗುವುದಾಗಿ ಹೇಳಿತು. ಯಾವುದೇ ಪಕ್ಷದೊಡನೆ ತಾನು ಹೊಂದಾಣಿಕೆ ಮಾಡಿಕೊಳ್ಳುವುದಿಲ್ಲ ಎಂದು ಭಾರತೀಯ ಕ್ರಾಂತಿದಳ ಜನವರಿ ೩ ರಂದು ಪ್ರಕಟಿಸಿತು. ಆಡಳಿತ ಪಕ್ಷದೊಡನೆ ತಾನು ಒಗ್ಗೂಡುವುದಿಲ್ಲ ಎಂದು ಪ್ರಜಾ ಸೋಷಲಿಸ್ಟ್ ಪಕ್ಷವು ಅಹಮದಾಬಾದ್‌ನಲ್ಲಿ ನಡೆದ ೧೧ನೇ ರಾಷ್ಟ್ರೀಯ ಸಮ್ಮೇಳನದಲ್ಲಿ ೩.೧.೭೧ ರಂದು ನಿರ್ಧರಿಸಿತು.

ಆಡಳಿತ ಕಾಂಗ್ರೆಸ್ ಪರಾಭವವೇ ಮೈತ್ರಿಕೂಟ ರಂಗದ ಗುರಿ ಎಂದು ನಾಯಕ ಮಧುಲಿಮಯೆ ೪.೧.೭೭ ರಂದು ದೆಹಲಿಯಿಂದ ಹೇಳಿಕೆ ನೀಡಿದರು. ಜನವರಿ ೮,೯ ರಂದು ಮದ್ರಾಸ್‌ನಲ್ಲಿ ಸ್ವತಂತ್ರ ಪಕ್ಷದ ರಾಷ್ಟ್ರೀಯ ಕಾರ್ಯಕಾರಿ ನಡೆಯಿತು. ಸ್ವತಂತ್ರ ಪಕ್ಷದ ಚುನಾವಣಾ ಪ್ರಣಾಳಿಕೆಗೆ ಸಂಸ್ಥಾ ಕಾಂಗ್ರೆಸ್‌ನ ಜೂನ್ ೨೮, ೧೯೬೮ರ ಫರೀದಾಬಾದ್ ಅಧಿವೇಶನದಲ್ಲಿ ಅಂಗೀಕರಿಸಿದ್ದ ನಿರ್ಣಯಗಳೇ ಆಧಾರವಾಗಿದೆ ಎಂದು ಅದರ ನಾಯಕರು ಹೇಳಿದರು. ಜನವರಿ ೨೦ ರಂದು ದೆಹಲಿಯಲ್ಲಿ ನಡೆಯಬೇಕಾಗಿದ್ದ ಮೈತ್ರಿ ಕೂಟದ ಸಭೆ ಹಠಾತ್ ಮುಂದಕ್ಕೆ ಹೋಯಿತು. ಆಡಳಿತ ಪಕ್ಷದ ಪತನವೇ ಎಸ್.ಎಸ್.ಪಿ. ಯ ಏಕೈಕ ಗುರಿ ಅಲ್ಲ ಎಂದು ಮಧುಲಿಮಯೆ ದಿನಾಂಕ ೨೧.೧.೭೧ ರಂದು ನವದೆಹಲಿಯಲ್ಲಿ ತಮ್ಮ ಹಿಂದಿನ ಹೇಳಿಕೆಯನ್ನು ಮಾರ್ಪಡಿಸಿಕೊಂಡರು.

೨೪.೧.೭೧ರಂದು ನಡೆದ ಉಪಚುನಾವಣೆಯಲ್ಲಿ ಉತ್ತರ ಪ್ರದೇಶದ ಮುಖ್ಯಮಂತ್ರಿ ಟಿ. ಎನ್. ಸಿಂಗ್‌ರವರನ್ನು ಆಡಳಿತ ಕಾಂಗ್ರೆಸ್‌ನ ರಾಮಕೃಷ್ಣ ದ್ವಿವೇದಿ ೧೬,೦೦೦ ಬಹುಮತಗಳ ಅಂತರದಿಂದ ಸೋಲಿಸಿದರು. ೨೫.೧.೭೧ರಂದು ಆಂಧ್ರಪ್ರದೇಶದ ನಾಯಕ ಸಂಸ್ಥಾ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಪಿ. ವೆಂಕಟಸುಬ್ಬಯ್ಯ ರಾಜೀನಾಮೆ ನೀಡಿ ಆಡಳಿತ ಕಾಂಗ್ರೆಸ್ ಸೇರಿದರು. ರಾಷ್ಟ್ರೀಯ ರಂಗದ ಅಭ್ಯರ್ಥಿಗಳ ಪಟ್ಟಿ ಬೇಗ ಬಿಡುಗಡೆ ಆಗಬೇಕೆಂಬ ಒತ್ತಡ ಪ್ರಾರಂಭವಾಯಿತು. ೨೮.೧.೭೧ ರಂದು ವಾಜಪೇಯಿ ಅವರು ಹೇಳಿಕೆ ನೀಡಿ ೪೫೦ ಸ್ಥಾನಗಳಿಗೆ ಮೈತ್ರಿರಂಗದ ಪೂರ್ಣ ಒಪ್ಪಿಗೆ ಆಗಿದೆ, ಸದ್ಯದಲ್ಲೇ ಪಟ್ಟಿ ಬಿಡುಗಡೆ ಆಗಲಿದೆ ಎಂದರು. ೧.೨.೭೧ರಂದು ಉತ್ತರ ಪ್ರದೇಶದ ಸಂಯುಕ್ತ ವಿದಾಯ ದಳದಿಂದ ಬಿ. ಕೆ. ಡಿ. ಹೊರಕ್ಕೆ ಬಂದದ್ದು ಮೈತ್ರಿಕೂಟಕ್ಕೆ ಹೊಡೆತ ನೀಡಿತು. ಕೊನೆಗೆ ಸಂಸ್ಥಾ ಕಾಂಗ್ರೆಸ್, ಸ್ವತಂತ್ರ, ಜನಸಂಘ, ಎಸ್. ಎಸ್. ಪಿ. ಶೋಷಿತದಳ ಇವುಗಳು ಸಾಧ್ಯವಾದ ರಾಜ್ಯಗಳಲ್ಲಿ ಒಪ್ಪಂದ ಮಾಡಿಕೊಳ್ಳಲು ನಿರ್ಧರಿಸಿದವು. ಫೆಬ್ರವರಿ ೧೮, ೧೯೭೧ರಂದು ಒಂದು ಸಂಯುಕ್ತ ಪ್ರಣಾಳಿಕೆ ಬಿಡುಗಡೆ ಮಾಡಿದವು.

## ಮೈಸೂರು ರಾಜ್ಯದಲ್ಲಿ ವಿರೋಧಿ ಮೈತ್ರಿಕೂಟ

ಮೈಸೂರಿನಲ್ಲಿ ಸಂಸ್ಥಾ ಕಾಂಗ್ರೆಸ್‌ಗೆ ನಿಷ್ಠವಾದ ವೀರೇಂದ್ರ ಪಾಟೀಲರ ಸರ್ಕಾರ ಅಸ್ತಿತ್ವದಲ್ಲಿತ್ತು. ಸಂಸ್ಥಾನ ಕಾಂಗ್ರೆಸ್ ಅಧ್ಯಕ್ಷ ನಿಜಲಿಂಗಪ್ಪನವರು ೧೯೭೧ರ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ಸನ್ನು ಎದುರಿಸಲು ವಿರೋಧಿ ಮೈತ್ರಿಕೂಟ ರಚನೆಗೆ ಬಹಳ

ಪ್ರಾಧಾನ್ಯತೆಯನ್ನು ನೀಡಿದ್ದರು. ಸಂಸ್ಥಾ ಕಾಂಗ್ರೆಸ್‌ನಿಂದ ಆಡಳಿತ ಕಾಂಗ್ರೆಸ್‌ಗೆ ಮಂತ್ರಿಗಳು, ಶಾಸಕರು ರಾಜ್ಯದಲ್ಲಿ ಪಕ್ಷಾಂತರ ಮಾಡಿದರು. ಸರ್ಕಾರಕ್ಕೆ ಯಾವುದೇ ಅಪಾಯ ಬರಲಿಲ್ಲ. ಎಂ. ವಿ. ಕೃಷ್ಣಪ್ಪ, ಕೆಂಗಲ್ ಹನುಮಂತಯ್ಯ, ಕೊಲ್ಲೂರು ಮಲ್ಲಪ್ಪ, ದಯಾನಂದ ಸಾಗರ್, ಮಲ್ಲಿಕಾರ್ಜುನಸ್ವಾಮಿ, ಬದರಿನಾರಾಯಣ ಅಯ್ಯಂಗಾರ್, ಕೆ. ಎಚ್. ಪಾಟೀಲ್, ಸಿದ್ಧವೀರಪ್ಪ, ಮಹಮದ್ ಆಲಿ, ಕೆ. ಪುಟ್ಟಸ್ವಾಮಿ ಮೊದಲಾದ ಘಟಾನುಘಟಿಗಳು ಆಡಳಿತ ಕಾಂಗ್ರೆಸ್ ಪಾಳಯದಲ್ಲಿದ್ದರು. ದೇವರಾಜ ಅರಸ್‌ರವರು ಆಡಳಿತ ಕಾಂಗ್ರೆಸ್‌ನ ಸಂಚಾಲಕರೆಂದು ನೇಮಿಸಲ್ಪಟ್ಟಿದ್ದರು.

೧.೧.೭೧ರಂದೇ ಎಸ್. ಎಂ. ಕೃಷ್ಣ ಕೆ. ಲಕ್ಕಪ್ಪ ಮೊದಲಾಗಿ ಅನೇಕ ಅಗ್ರಪಂಕ್ತಿಯ ಪಿ.ಎಸ್. ಪಿ. ನಾಯಕರು ಸಾವಿರಾರು ಕಾರ್ಯಕರ್ತರು ಆಡಳಿತ ಕಾಂಗ್ರೆಸ್ ಸೇರಲು ಉದ್ಯುಕ್ತರಾದರು. ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಜೊತೆ ಮೈತ್ರಿ ಇಲ್ಲವೆಂದು ಅದರ ಸಂಸದೀಯ ಪಕ್ಷದ ನಾಯಕ ಹಾಗೂ ಅಧ್ಯಕ್ಷ ಶಿವಪ್ಪ ಪ್ರಕಟಿಸಿದರು. ಸಾಧ್ಯವಾದರೆ ಪಿ.ಎಸ್.ಪಿ. - ಎಸ್.ಎಸ್.ಪಿ. ಹೊಂದಾಣಿಕೆ ಆಗಬಹುದೆಂದು ಅಭಿಪ್ರಾಯಪಟ್ಟರು. ೬.೧.೭೧ರಂದು ಸಂಸ್ಥಾ ಕಾಂಗ್ರೆಸ್ ಅಭ್ಯರ್ಥಿಗಳ ಆಯ್ಕೆ ಸಮಿತಿ ರಚಿತವಾಯಿತು. ಮುಖ್ಯಮಂತ್ರಿ ವೀರೇಂದ್ರ ಪಾಟೀಲ್, ಹಣಕಾಸುಮಂತ್ರಿ ರಾಮಕೃಷ್ಣ ಹೆಗಡೆ, ಶಿಕ್ಷಣ ಮಂತ್ರಿ ಕೆ. ವಿ. ಶಂಕರಗೌಡ, ಕೃಷಿ ಮಂತ್ರಿ ಬಿ. ರಾಚಯ್ಯ, ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಡಾ. ನಾಗಪ್ಪ ಆಳ್ವ ಈ ಸಮಿತಿಯಲ್ಲಿದ್ದರು. ಚುನಾವಣಾ ಪ್ರಚಾರ ಸಮಿತಿ ಅಧ್ಯಕ್ಷರನ್ನಾಗಿ ಬಿ. ರಾಚಯ್ಯ ಇವರನ್ನು ನೇಮಿಸಲಾಯಿತು. ೯.೧.೭೧ರಂದು ಎಸ್. ಎಸ್. ಪಿ. ಪಾರ್ಲಿಮೆಂಟರಿ ಮಂಡಳಿ ಸಭೆ ಬೆಂಗಳೂರಿನಲ್ಲಿ ನಡೆಯಿತು. ಹತ್ತು ಲೋಕಸಭಾ ಸ್ಥಾನಗಳಿಗೆ ಅಭ್ಯರ್ಥಿಗಳನ್ನು ಆರಿಸಲಾಯಿತು. ಚಿಕ್ಕಮಗಳೂರು - ಶಾಂತವೇರಿ ಗೋಪಾಲಗೌಡ, ಶಿವಮೊಗ್ಗ-ಜೆ. ಹೆಚ್. ಪಟೇಲ್, ಮೈಸೂರು, ಜೆ. ಎನ್. ನಾಗರಾಜ್, ಚಿತ್ರದುರ್ಗ - ಕೆ.ಜಿ. ಮಹೇಶ್ವರಪ್ಪ, ಕೋಲಾರ-ಎನ್. ರಾಚಯ್ಯ, ಕಾರವಾರ-ಎಸ್. ಬಂಗಾರಪ್ಪ, ಹೊಸಕೋಟೆ-ಮುನಿವೆಂಕಟರಮಣಯ್ಯ ಅಥವಾ ಬಿ.ಕೆ. ಶ್ರೀರಾಮಯ್ಯ ಬೆಂಗಳೂರು - ಎಸ್. ವೆಂಕಟರಾಮ್. ಸಾಧ್ಯವಾದಲ್ಲಿ ಪಿ.ಎಸ್.ಪಿ. ಜೊತೆ ಹೊಂದಾಣಿಕೆ ಮಾಡಿಕೊಳ್ಳಲು ಇಂಗಿತ ವ್ಯಕ್ತಪಡಿಸಲಾಯಿತು. ಶ್ರಮ ನಿರರ್ಥಕವಾಗದಂತೆ ಅಭ್ಯರ್ಥಿಗಳನ್ನು ನಿಲ್ಲಿಸಬೇಕೆಂದು ಅಭಿಪ್ರಾಯಪಡಲಾಯಿತು. ಒಪ್ಪಂದ ಮಾಡಿಕೊಳ್ಳುವ ಪಕ್ಷಗಳು ಆಡಳಿತ ಕಾಂಗ್ರೆಸ್ಸನ್ನು ಸೋಲಿಸುವಲ್ಲಿ ಸಾಫಲ್ಯ ಗಳಿಸುವ ವಿಧಾನ ಅನುಸರಿಸಬೇಕೆಂದು ಮಂಡಳಿ ವಿರೋಧಪಕ್ಷಗಳನ್ನು ಕೋರಿತು. ವಿರೋಧ ಪಕ್ಷಗಳೊಡನೆ ಸಂಧಾನ ನಡೆಸಲು ವಿಧಾನ ಪರಿಷತ್ ಸದಸ್ಯ ವೈ. ಆರ್. ಪರಮೇಶ್ವರಪ್ಪ, ರಾಜ್ಯಶಾಖೆ ಪಾರ್ಲಿಮೆಂಟರಿ ಮಂಡಳಿ ಅಧ್ಯಕ್ಷ ಕೆ. ಜಿ. ಮಹೇಶ್ವರಪ್ಪ, ಪಕ್ಷದ ರಾಜ್ಯಶಾಖೆ ಅಧ್ಯಕ್ಷ ಮಾಧವನ್, ಬಿ. ಎನ್. ಚಂದ್ರಶೇಖರ್ ಮತ್ತು ಜೆ. ಹೆಚ್. ಪಟೇಲ್ ಅವರನ್ನು ಒಳಗೊಂಡ ಉಪಸಮಿತಿಯನ್ನು ರಚಿಸಲಾಯಿತು. ಈ ಬಗ್ಗೆ ತಾವು ಮುಖ್ಯಮಂತ್ರಿ ವೀರೇಂದ್ರ ಪಾಟೀಲರೊಡನೆ ಚರ್ಚಿಸುವುದಾಗಿ ಜೆ. ಹೆಚ್. ಪಟೇಲ್ ಹೇಳಿದರು. ರಾಜ್ಯ ಪಿ.ಎಸ್.ಪಿ. ನಿಲುವು ಅಸ್ಪಷ್ಟವಾಗಿತ್ತು. ಆ ಪಕ್ಷದ ಅನೇಕ ಹಿರಿಯ ಧುರೀಣರು ಪಕ್ಷ ತ್ಯಜಿಸಿದ್ದರು. ಪಕ್ಷವು ೧೯೬೭ರಲ್ಲಿ ಗೆದ್ದಿದ್ದ ಉತ್ತರ ಕನ್ನಡ, ಚಿಕ್ಕಮಗಳೂರು, ಮಂಡ್ಯ ತುಮಕೂರು ಕ್ಷೇತ್ರಗಳನ್ನು ಯಾವ ಕಾರಣಕ್ಕೂ ಪಕ್ಷ ಬಿಟ್ಟುಕೊಡುವುದಿಲ್ಲ ಅದರ ಜೊತೆಗೆ ಸ್ವಂತ ಬಲದ ಮೇಲೆ ಬೆಂಗಳೂರು ನಗರ, ಧಾರವಾಡ ದಕ್ಷಿಣ, ಮೈಸೂರು, ಮಧುಗಿರಿ, ಹಾಸನ, ಚಿತ್ರದುರ್ಗ ಉಡುಪಿ, ಬಳ್ಳಾರಿ, ಉತ್ತರ ಕನ್ನಡ ಜಿಲ್ಲೆಗಳಲ್ಲಿಯೂ ಪಕ್ಷ ಸ್ಪರ್ಧಿಸಲಿದೆ ಎಂದು ೧೦.೧.೭೧ರಂದು ಮುಲ್ಕಾ ಗೋವಿಂದ ರೆಡ್ಡಿ, ಹೆಚ್. ವಿ. ಕಾಮತ್ ಪ್ರತಿಪಾದಿಸಿದರು. ಚುನಾವಣಾ ಹೊಂದಾಣಿಕೆ ಪಿ.ಎಸ್.ಪಿ. ಆಡಳಿತ ಕಾಂಗ್ರೆಸ್‌ನೊಡನೆ ನಡೆಸಿದ ಮಾತುಕತೆ ಮುರಿದು ಬಿತ್ತು. ರಾಷ್ಟ್ರೀಯ ಜನತಾಂತ್ರಿಕ ರಂಗದ ಪಟ್ಟಿ ಸದ್ಯದಲ್ಲಿಯೇ ಸಿದ್ಧವಾಗಲಿದೆ ಎಂದು ನಿಜಲಿಂಗಪ್ಪನವರು ೧೩.೧.೭೧ ರಂದು ಹೇಳಿದರು. ಕೊನೆಗೆ ಜನತಾಂತ್ರಿಕ ರಂಗದ (ಪ್ರಜಾಸತ್ತಾತ್ಮಕ ಮೈತ್ರಿಕೂಟ) ಹೊಂದಾಣಿಕೆ ಯಶಸ್ವಿ ಆಯಿತು. ಎಸ್. ನಿಜಲಿಂಗಪ್ಪನವರೇ ಕ್ಷೇತ್ರಗಳ ಹಂಚಿಕೆ ಮಾಡಿದರು. ೧೭ ಕ್ಷೇತ್ರಗಳಲ್ಲಿ ಸಂಸ್ಥಾ ಕಾಂಗ್ರೆಸ್ ವಿರೋಧ ಪಕ್ಷಗಳೊಡನೆ ಹೊಂದಾಣಿಕೆ ಮಾಡಿಕೊಂಡಿತು. ಉಡುಪಿ, ಚಿತ್ರದುರ್ಗ, ರಾಯಚೂರು, ಬಳ್ಳಾರಿಗಳನ್ನು ಸ್ವತಂತ್ರ ಪಕ್ಷಕ್ಕೂ, ಬೆಂಗಳೂರು ನಗರವನ್ನು ಜನಸಂಘಕ್ಕೂ ಹಾಸನ, ಕಾರವಾರವನ್ನು ಪಿ. ಎಸ್. ಪಿ.ಗೂ ಶಿವಮೊಗ್ಗ ಕ್ಷೇತ್ರವನ್ನು, ಪಿ.ಎಸ್.ಪಿ.ಗೂ ಚಿಕ್ಕೋಡಿ ಕ್ಷೇತ್ರವನ್ನು ಎಲ್.ಎಸ್.ಎಸ್.ಗೂ ಬಿಟ್ಟುಕೊಡಲಾಯಿತು. ಆದರೂ ವಿರೋಧ ಪಕ್ಷಗಳಲ್ಲಿ ಗೊಂದಲ ಮುಂದುವರಿದೇ ಇತ್ತು ಎಂದು ಹೇಳಬಹುದು.

## ಪ್ರಜಾಸತ್ತಾತ್ಮಕ ಮೈತ್ರಿಕೂಟದ ಸಂಯುಕ್ತ ಪ್ರಣಾಳಿಕೆ

ಸಮೃದ್ಧಿಯುತ ಭವಿಷ್ಯಕ್ಕಾಗಿ, ಸಂಸ್ಥಾ ಕಾಂಗ್ರೆಸ್, ಬಿ.ಕೆ.ಡಿ, ಸ್ವತಂತ್ರ, ಜನಸಂಘ, ಎಸ್. ಎಸ್. ಪಿ. ಶೋಷಿತದಳ (ಪಕ್ಷೇತರ) ಬಂಗ್ಲಾ ಕಾಂಗ್ರೆಸ್‌ಗಳು ೧೮.೨.೧೯೭೧ ರಂದು ಹೊರಡಿಸಿದ ಸಂಯುಕ್ತ ಪ್ರಣಾಳಿಕೆಗೆ ಮೇಲ್ಕಂಡ ಎಲ್ಲಾ ಪಕ್ಷಗಳ ನಾಯಕರೂ ಸಹಿ ಹಾಕಿದ್ದರು.

**ಪ್ರಣಾಳಿಕೆಯ ಮುಖ್ಯಾಂಶಗಳು ಕೆಳಗಿನಂತಿವೆ**

೧. ಆಡಳಿತ ಕಾಂಗ್ರೆಸ್‌ನ ಸರ್ವಾಧಿಕಾರ ಖಂಡನೆ.

೨. ಈಗಿನ ಸರ್ಕಾರದ ವೈಫಲ್ಯ ಹಾಗೂ ಕಾಂಗ್ರೆಸ್‌ನ ಆಡಳಿತದಿಂದ ೧೫೦ ದಶಲಕ್ಷಕ್ಕೂ ಹೆಚ್ಚು ನಿರುದ್ಯೋಗಿಗಳು ಸೃಷ್ಟಿಯಾಗಿದ್ದಾರೆ. ಆಡಳಿತ ಕಾಂಗ್ರೆಸ್ ಬಳಿ ಜನತೆಗೆ ನೀಡಲು ಏನೂ ಇಲ್ಲ.

೩. ಈ ಶತಮಾನದ ಅಂತ್ಯದ ವೇಳೆಗೆ ೧೦೦ ಕೋಟಿ ಜನರ ಬೇಡಿಕೆಗಳಿಗೆ ಅಗತ್ಯವಾದ ಪ್ರಮಾಣದಲ್ಲಿ ಉತ್ಪಾದನಾ ಸಾಮರ್ಥ್ಯ ಏರಿಕೆ. ೭೫೦ ದಶಲಕ್ಷಟನ್ ಉಕ್ಕು, ೪೦೦೦ ದಶಲಕ್ಷಟನ್ ತೈಲ, ೪೦ ದಶಲಕ್ಷ ಮೋಟಾರ್ ಕಾರು, ೧೦ ದಶಲಕ್ಷ ಲಾರಿ, ೫೦,೦೦೦ ದಶಲಕ್ಷ ಮೀಟರ್ ಬಟ್ಟೆಯ ಉತ್ಪಾದನೆಯ ಗುರಿ. ಸಿಮೆಂಟ್ ಕಾಗದ ಔಷಧಿ ಉತ್ಪಾದನೆಯಲ್ಲಿ ಏರಿಕೆ.

೪. ಪ್ರತಿಯೊಬ್ಬ ವ್ಯಕ್ತಿಯ ವಾರ್ಷಿಕ ತಲಾ ಆದಾಯ ೨೫,೦೦೦ ರೂ. ಹಾಗೂ ಪ್ರತಿಯೊಂದು ಕುಟುಂಬದ ವಾರ್ಷಿಕ ವರಮಾನ ೫೦ ಸಾವಿರ ರೂ. ಇರುವಂತೆ ಮಾಡಲು ಕ್ರಮ.

೫. ಒಂದು ಲಕ್ಷ ಕಡಿಮೆ ಮೌಲ್ಯದ ಆಸ್ತಿ ಹೊಂದಿರುವ ಕುಟುಂಬಗಳು ದಿವಾಳಿ ಎಂದು ಪರಿಗಣನೆ. ಅವರಿಗೆ ಅಗತ್ಯ ಸೌಲಭ್ಯಗಳ ನೀಡಿಕೆ.

೬. ಪ್ರತಿಯೊಂದು ಕುಟುಂಬಕ್ಕೆ ಒಂದು ಮನೆ, ಒಂದು ಕಾರು.

೭. ಜನಶಕ್ತಿ, ಸಂಪನ್ಮೂಲ, ಬುದ್ಧಿ ಕೌಶಲದ ಗರಿಷ್ಠ ಪ್ರಮಾಣದ ಬಳಕೆಗೆ ಆಸ್ಪದ ನೀಡುವ ಕೈಗಾರಿಕಾ ನೀತಿ.

೮. ಭರವಸೆ ತುಂಬಿದ, ರಾಷ್ಟ್ರ ಪರಂಪರೆಯ ಆಧ್ಯಾತ್ಮಿಕ ಮೌಲ್ಯಗಳನ್ನು ಹೊಂದಿದ ಸಮಾಜ ನಿರ್ಮಾಣ.

೯. ಪ್ರತಿ ಮಗುವಿಗೂ ವಿದ್ಯಾಭ್ಯಾಸ ಸೌಕರ್ಯ.

೧೦. ತೊಂದರೆಯಲ್ಲಿರುವ ವೃದ್ಧರಿಗೆ ಆರಾಮದಾಯಕ ಜೀವನ.

೧೧. ದುಡಿಮೆಯ ಸಾಮರ್ಥ್ಯ ಉಳ್ಳ ಎಲ್ಲರಿಗೂ ಉದ್ಯೋಗ.

೧೨. ಮೂಲಭೂತ ಹಕ್ಕುಗಳಿಗೆ ಚ್ಯುತಿ ಇಲ್ಲ.

೧೩. ಶಾಂತಿ ಮತ್ತು ಪ್ರಗತಿಯ ರಂಗದಲ್ಲಿ ಮುನ್ನಡೆ.

೧೪. ಎಲ್ಲಾ ಪ್ರಜೆಗಳಿಗೂ ಆಹಾರ ಒದಗಿಸುವುದು, ಕೃಷಿ ಉತ್ಪಾದನೆ ಹೆಚ್ಚಿಸಲು ರೈತಾಪಿ ವರ್ಗಕ್ಕೆ ನೆರವಾಗುವುದಕ್ಕಾಗಿ ಕಡಿಮೆ ಬೆಲೆಯಲ್ಲಿ ವಿದ್ಯುಚ್ಛಕ್ತಿ, ನೀರು, ರಸಗೊಬ್ಬರಗಳ ಪೂರೈಕೆ ಯಂತ್ರಗಳು, ವಿಜ್ಞಾನ ಹಾಗೂ ತಾಂತ್ರಿಕ ಅನುಕೂಲಗಳ ಪೂರೈಕೆ.

೧೫. ಭೂ ಕಂದಾಯ ರದ್ದು, ತುಂಡು ಜಮೀನುಗಳನ್ನು ಒಂದುಗೂಡಿಸಲು ಯತ್ನ. ಹಿಡುವಳಿ ಪ್ರಮಾಣ ಇಳಿಸಿ ಉತ್ಪಾದನೆಗೆ ತೊಂದರೆ ಮಾಡುವುದಿಲ್ಲ. ನೆರೆಹಾವಳಿ ತಡೆದು ಜಮೀನಿಗೆ ರಕ್ಷಣೆ .

೧೬. ಪ್ರತಿಯೊಂದು ಕುಟುಂಬಕ್ಕೆ ಒಂದು ಮನೆ. ಪ್ರತಿವರ್ಷ ೫೦ ಲಕ್ಷ ಮನೆಗಳ ನಿರ್ಮಾಣ. ಮನೆ ಇಲ್ಲದವರಿಗೆ ವಸತಿ ಸೌಲಭ್ಯಕ್ಕೆ ಸಹಾಯ, ಕೊಳಚೆ ಪ್ರದೇಶಗಳ ನಿರ್ಮೂಲನೆಗೆ ವಿಶೇಷ ಗಮನ. ಬಾಡಿಗೆದಾರರಿಗೆ ರಕ್ಷಣೆ. ಮನೆ ಒಡೆತನ ಪ್ರಮಾಣದಲ್ಲಿ ಹೆಚ್ಚಳ.

ನಗರ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಮನೆ ಕಟ್ಟಿಕೊಳ್ಳಲು ಸಾಕಷ್ಟು ಧಾರಾಳ ಷರತ್ತುಸಾಲ ಒದಗಿಸುವುದು.

ಸಹಕಾರ ಗೃಹ ನಿರ್ಮಾಣ ಸಂಘಗಳಿಗೆ, ಸ್ವಯಂ ಪ್ರೇರಿತ ಸಂಸ್ಥೆಗಳಿಗೆ, ಕಾರ್ಮಿಕರ ಕಾಲೋನಿಗಳ ನಿರ್ಮಾಣಕ್ಕೆ ಉತ್ತೇಜನ.

೧೭. ಪ್ರತಿಗ್ರಾಮಕ್ಕೆ ರಸ್ತೆ, ಕುಡಿಯುವ ನೀರು, ಒಳಚರಂಡಿ, ವಿದ್ಯುತ್, ಶಿಕ್ಷಣ ಸೌಲಭ್ಯ ಒದಗಿಸುವುದು. ಗ್ರಾಮಾಂತರ ಪ್ರದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆ, ಉದ್ಯೋಗಾವಕಾಶಗಳ ಕಲ್ಪನೆ, ಪಟ್ಟಣ ವಲಸೆ ತಡೆ.

೧೮. ಕೈಗಾರಿಕೆಗಳ ಮೇಲೆ ವಿಧಿಸಿದ ಎಲ್ಲ ಹತೋಟಿ ರದ್ದು, ಸಹಸ್ರಾರು ಸಣ್ಣ ಹಾಗೂ ದೊಡ್ಡ ಕೈಗಾರಿಕೆಗಳ ಸ್ಥಾಪನೆ, ಉದ್ಯೋಗಾವಕಾಶಗಳ ಹೆಚ್ಚಳಕ್ಕೆ ಕಟ್ಟಡ ನಿರ್ಮಾಣ ಕಾಮಗಾರಿಗಳ ಹೆಚ್ಚಳ.

೧೯. ಆದಾಯ ಹೆಚ್ಚು ಮಾಡಿ ಕಡಿಮೆ ತೆರಿಗೆ ವಿಧಿಸುವಿಕೆ. ಅನಾವಶ್ಯಕ ಸರ್ಕಾರಿ ವೆಚ್ಚಗಳ ಕಡಿತ. ಉಳಿತಾಯದಲ್ಲಿ ಹೆಚ್ಚಳ. ಎಲ್ಲಾ ವಿಧದ ಉಳಿತಾಯಕ್ಕೆ ಉತ್ತೇಜನ.

೨೦. ಸರ್ಕಾರಿ ವೆಚ್ಚದಲ್ಲಿ ಕಡಿತ. ಕೇವಲ ನಾಲ್ಕು ಸಚಿವ ಶಾಖೆಗಳು ೧. ಆಂತರಿಕ ಹಾಗೂ ಗಡಿ ಭದ್ರತೆ ೨. ಕೇಂದ್ರ ರಾಜ್ಯಗಳ ಸಂಬಂಧ, ೩. ಆರ್ಥಿಕ ಅಭಿವೃದ್ಧಿ, ೪. ಆರೋಗ್ಯ, ಶಿಕ್ಷಣ, ಗೃಹನಿರ್ಮಾಣ ಈ ವ್ಯವಸ್ಥೆಯಿಂದ ಆಡಳಿತದಲ್ಲಿ ದಕ್ಷತೆ ಸಾಧನೆ.

೨೧. ಪ್ರಾದೇಶಿಕ ಅಸಮಾನತೆಯ ನಿವಾರಣೆ.

೨೨. ಕಾರ್ಮಿಕರ ಜೊತೆ ನ್ಯಾಯಯುತವಾದ ವ್ಯವಹಾರ.

೨೩. ಉತ್ತಮ ಮಟ್ಟದ ಕೆಲಸಗಳಿಗೆ ತರಬೇತಿ.

೨೪. ಸ್ಥಿರವಾದ ಬೆಲೆ.

೨೫. ಉತ್ತಮ ಶಿಕ್ಷಣ.

೨೬. ಕಾನೂನಿನ ಆಡಳಿತ, ನ್ಯಾಯಾಂಗಕ್ಕೆ ಸಂಪೂರ್ಣ ಸ್ವಾತಂತ್ರ್ಯ.

೨೭. ಆಕಾಶವಾಣಿ - ದೂರದರ್ಶನಗಳನ್ನು ಸ್ವಾಯತ್ತ ಸಂಸ್ಥೆಗಳನ್ನಾಗಿ ಮಾರ್ಪಡಿಸುವುದು.

೨೮. ಅಲ್ಪಸಂಖ್ಯಾತರು ಹರಿಜನ ಗಿರಿಜನರಿಗೆ ರಕ್ಷಣೆ.

೨೯. ಪರಿಸರ ರಕ್ಷಣೆ, ಪರಿಸರ ನೈರ್ಮಲ್ಯ.

೨೯. ಕೇಂದ್ರದಲ್ಲಿ ಪ್ರಬಲವಾದ ಸುಭದ್ರ ಸರ್ಕಾರ.

**ಫಲಿತಾಂಶಗಳು**

೧೯೭೧ ಮಾರ್ಚ್ ೪ ಮತ್ತು ೭ ರಂದು ರಾಜ್ಯದಲ್ಲಿ ಚುನಾವಣೆಗಳು ನಡೆದವು. ಮಾರ್ಚ್ ಎರಡನೇ ವಾರದಲ್ಲಿ ಫಲಿತಾಂಶಗಳು ಪ್ರಕಟವಾದವು. ಇಂದಿರಾಗಾಂಧಿಯವರ ಲೆಕ್ಕಾಚಾರ ಹಾಗೂ ಅವರ ಗುರಿ ಫಲ ನೀಡಿತು. ಆಡಳಿತ ಕಾಂಗ್ರೆಸ್ ೩೫೦ ಸ್ಥಾನಗಳನ್ನು ಗಳಿಸಿ ಮೂರನೇ ಎರಡಕ್ಕಿಂತಲೂ ಹೆಚ್ಚು ಬಹುಮತ ಪಡೆದು ಜಯಭೇರಿ ಬಾರಿಸಿತು. ಇಡೀ ದೇಶದಲ್ಲಿ ಸಂಸ್ಥಾ ಕಾಂಗ್ರೆಸ್ ನೆಲಕಚ್ಚಿ ಕೇವಲ ೧೬ ಸ್ಥಾನಗಳನ್ನು ಪಡೆಯುವಲ್ಲಿ ಯಶಸ್ವಿ ಆಯಿತು. ಎಸ್. ಎಸ್. ಪಿ. ಮತ್ತು ಪಿ. ಎಸ್. ಪಿ.ಗಳು ನಿರ್ನಾಮವಾಗುವ ಹಂತ ತಲುಪಿದವು. ಕರ್ನಾಟಕದಲ್ಲಿ ೨೭ ಸ್ಥಾನಗಳ ಪೈಕಿ ಎಲ್ಲಾ ೨೭ ಸ್ಥಾನಗಳನ್ನು ಪಡೆದ ಆಡಳಿತ ಕಾಂಗ್ರೆಸ್ ಮೊದಲಬಾರಿಗೆ ದಾಖಲೆ ಫಲಿತಾಂಶ ಪಡೆಯಿತು. ಕರ್ನಾಟಕದಲ್ಲಿ ವಿರೋಧ ಪಕ್ಷಗಳು ಒಂದೇ ಒಂದು ಸ್ಥಾನವನ್ನು ಪಡೆಯಲಿಲ್ಲ ಎಂದರೆ ಶ್ರೀಮತಿ ಇಂದಿರಾ ಗಾಂಧಿರವರ ಆಡಳಿತ ಕಾಂಗ್ರೆಸ್ ಎಷ್ಟು ಬಲವಾಗಿ ಬೇರೂರಿತ್ತು ಎಂಬುದನ್ನು ತಿಳಿಯಬಹುದು. ಸಂಸ್ಥಾ ಕಾಂಗ್ರೆಸ್ ಹಾಗೂ ವಿರೋಧ ಪಕ್ಷಗಳ ಹೊಂದಾಣಿಕೆ ಜನರನ್ನು ಸೆಳೆಯುವುದರಲ್ಲಿ ವಿಫಲವಾಯಿತು.

## ೧೯೭೧ ಮಧ್ಯಂತರ ಚುನಾವಣೆ

### ಮೈಸೂರು

| ಪಕ್ಷ | ಪಡೆದಮತಗಳು | ಶೇಕಡಾವಾರು ಮತಗಳು | ಸ್ಪರ್ಧಿಸಿದ್ದ ಸ್ಥಾನಗಳು | ಗಳಿಸಿದ ಸ್ಥಾನಗಳು |
|---|---|---|---|---|
| ಆಡಳಿತ ಕಾಂಗ್ರೆಸ್ | ೫೬,೧೮,೫೩೬ | ೭೧,೦೦ | ೨೭ | ೨೭ |
| ಸಂಸ್ಥಾ ಕಾಂಗ್ರೆಸ್ | ೧೨,೫೧,೨೫೫ | ೧೬.೪೦ | ೧೭ | - |
| ಸ್ವತಂತ್ರ | ೨,೭೯,೬೧೦ | ೩.೬೦ | ೫ | - |
| ಜನಸಂಘ | ೧,೪೫,೫೩೧ | ೧.೯೦ | ೨ | - |
| ಸಿ.ಪಿ.ಐ. | ೬,೯೧೪ | ೦.೦೮ | ೧ | - |
| ಸಿ.ಪಿ.ಐ.ಎಂ. | ೪೫,೧೮೮ | ೦.೬೦ | ೨ | - |
| ಪಿ.ಎಸ್. ಪಿ. | ೯೭,೩೦೧ | ೧.೨೮ | ೫ | - |
| ಎಸ್.ಎಸ್.ಪಿ. | ೭೯,೧೧೧ | ೧.೦೪ | ೧ | - |
| ಪಕ್ಷೇತರರು | ೩,೨೧,೯೦೧ | ೪.೧೦ | ೪೩ | - |

| | |
|---|---|
| ಒಟ್ಟು ಮತದಾರರು | ೧,೩೭,೮೯,೬೮೩ |
| ಚಲಾವಣೆಯಾದ ಮತಗಳು | ೭೬,೪೫,೩೪೭ |
| ಶೇಕಡ ಮತದಾನ | ೫೫ |

## ೧೯೭೨ರ ವಿಧಾನಸಭಾ ಚುನಾವಣೆಗಳು

ವಿಧಾನಸಭೆಗೆ ೧೯೭೨ರ ಮಾರ್ಚ್ ತಿಂಗಳಲ್ಲಿ ಚುನಾವಣೆಗಳು ನಡೆಯುವ ವಿಚಾರ ೧೯೭೧ರ ಡಿಸೆಂಬರ್ ವೇಳೆಗೇ ತಿಳಿದು ಬಂದಿತು. ಆಗ ಕರ್ನಾಟಕದಲ್ಲಿ ವೀರೇಂದ್ರ ಪಾಟೀಲರ ಸಂಸ್ಥಾ ಕಾಂಗ್ರೆಸ್ ನೇತೃತ್ವದ ಸರ್ಕಾರ ವಿಸರ್ಜನೆಯಾಗಿ ರಾಷ್ಟ್ರಪತಿ ಆಡಳಿತ ಜಾರಿಯಲ್ಲಿತ್ತು. ಆಗ ರಾಜ್ಯದ ಕೆಲವು ಸಂಸ್ಥಾ ಕಾಂಗ್ರೆಸ್ ಮುಖಂಡರುಗಳು ಪಕ್ಷದ ಕೇಂದ್ರ ನಾಯಕರ ನಿಷ್ಕ್ರಿಯತೆಯ ಬಗ್ಗೆ ತಮ್ಮ ತೀವ್ರ ಅತೃಪ್ತಿ ವ್ಯಕ್ತಪಡಿಸಿ, ರಾಜ್ಯದ ಸಂಸ್ಥಾ ಕಾಂಗ್ರೆಸ್ ಘಟಕವನ್ನು ಕೇಂದ್ರ ಪಕ್ಷದಿಂದ ಬೇರ್ಪಡಿಸಿ ಪ್ರತ್ಯೇಕವಾಗಿ ರಾಜ್ಯ ಮಟ್ಟದ ಪಕ್ಷವನ್ನು ರಚಿಸಿಕೊಂಡು ಚುನಾವಣೆಗಳನ್ನು ಎದುರಿಸುವ ಮಾತನಾಡಿದರು. ೫.೧.೭೨ರಂದು ಮಾಜಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಒಂದು ಹೇಳಿಕೆಯನ್ನು ನೀಡಿ ಮೈಸೂರಿನಲ್ಲಿ ಸಂಸ್ಥಾ ಕಾಂಗ್ರೆಸ್ ಕೇಂದ್ರ ಪಕ್ಷದಿಂದ ಬೇರ್ಪಡುವುದಿಲ್ಲ, ನಿರಾಶೆಪಡುವ ಅಗತ್ಯವಿಲ್ಲ, ಎಲ್ಲರೂ ಒಗ್ಗಟ್ಟಿನಿಂದ ಚುನಾವಣೆಗಳನ್ನು ಎದುರಿಸಬೇಕು ಎಂದು ಹೇಳಿಕೆ ನೀಡಿದರು.

೯.೧.೭೨ರಂದು ರಾಜ್ಯ ಸಂಸ್ಥಾ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ಡಾ. ನಾಗಪ್ಪ ಆಳ್ವ, ರಾಮಕೃಷ್ಣ ಹೆಗಡೆ, ವೀರೇಂದ್ರ ಪಾಟೀಲ್ ಮೊದಲಾಗಿ ಅನೇಕರು ಬಾಗವಹಿಸಿದ್ದರು. ಮೈಸೂರು ರಾಜ್ಯದಲ್ಲಿ ಸಂಸ್ಥಾ ಕಾಂಗ್ರೆಸ್ಸನ್ನು ಮುಂದುವರಿಸಿಕೊಂಡು ಹೋಗಲು, ಪ್ರಬಲವಾದ ರೀತಿಯಲ್ಲಿ ಸಂಘಟನೆಗೊಂಡು ಚುನಾವಣೆಗಳನ್ನು ಎದುರಿಸಲು ಕಾರ್ಯಕಾರಿ ಸಮಿತಿ ನಿರ್ಣಯಿಸಿತು. ಚುನಾವಣೆಗೆ ಸಂಬಂಧಿಸಿದಂತೆ ಸಂಸ್ಥಾ ಕಾಂಗ್ರೆಸ್ ರಾಜ್ಯ ಘಟಕಗಳಿಗೆ ಪೂರ್ಣ ಸ್ವಾತಂತ್ರ್ಯ ನೀಡಲಾಗಿದೆ. ಪಕ್ಷಕ್ಕೆ ಹೆಚ್ಚು ಬೆಂಬಲ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ನೋಡಿಕೊಂಡು ರಾಜ್ಯ ಘಟಕಗಳು ಸ್ಪರ್ಧಿಸಬಹುದು. ಬೇರೆ ಪಕ್ಷಗಳೊಡನೆ ಹೊಂದಾಣಿಕೆ ಮಾಡಿಕೊಳ್ಳಬಾರದು ಎಂದು ಅಖಿಲಭಾರತ ಸಂಸ್ಥಾ ಕಾಂಗ್ರೆಸ್ ಕೇಂದ್ರ ಘಟಕ ಆದೇಶ ನೀಡಿತು. ಚುನಾವಣೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ, ಅಭ್ಯರ್ಥಿಗಳ ಪಟ್ಟಿಯನ್ನು ಕೇಂದ್ರ ಪಾರ್ಲಿಮೆಂಟರಿ ಮಂಡಲಿಯ ಅನುಮೋದನೆಗೆ ಕಳುಹಿಸಿಕೊಡಬೇಕೆಂದೂ ಕೂಡಾ ೬.೧.೭೨ರಂದು ಸೂಚನೆ ನೀಡಲಾಯಿತು. ೮.೧.೭೨ರಂದು ದೆಹಲಿಯಲ್ಲಿ ಕೇಂದ್ರ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ವೀರೇಂದ್ರ ಪಾಟೀಲರು ಅದರಲ್ಲಿ ಭಾಗವಹಿಸಿದ್ದರು. ಸಂಸ್ಥಾ ಕಾಂಗ್ರೆಸ್ ಸ್ವರೂಪದಲ್ಲಿ ಯಾವುದೇ ಬದಲಾವಣೆ ಇಲ್ಲವೆಂದು ರಾಜ್ಯಮಟ್ಟದ ಪಕ್ಷ ಸ್ಥಾಪನೆಗೆ ವಿರೋಧವನ್ನು ಸಮಿತಿ ವ್ಯಕ್ತಪಡಿಸಿತು. ರಾಮಕೃಷ್ಣ ಹೆಗಡೆಯವರೂ ಕೂಡಾ ಸಮಿತಿ ಸಭೆಯಲ್ಲಿ ಭಾಗವಹಿಸಿದ್ದರು.

ದಿನಾಂಕ ೯.೧.೭೨ರಂದು ವೀರೇಂದ್ರ ಪಾಟೀಲರು ಬೆಂಗಳೂರಿನಲ್ಲಿ ಸಂಸ್ಥಾ ಕಾಂಗ್ರೆಸ್ ಸತ್ತಿಲ್ಲ. ಜೀವಶಕ್ತಿ, ಉತ್ಸಾಹ ಇದೆ. ಮುಂದಿನ ಚುನಾವಣೆಗಳಲ್ಲಿ ಎಲ್ಲರೂ ಧೈರ್ಯ ಉತ್ಸಾಹಗಳಿಂದ ಪಾಲ್ಗೊಳ್ಳಬೇಕು. ವಾಸ್ತವವಾಗಿ ನಮ್ಮ ರಾಜ್ಯದಲ್ಲಿ ಆಡಳಿತ ಕಾಂಗ್ರೆಸ್ ಎಂದರೆ ನಮ್ಮದೇ ಎಂದರು, ಇಷ್ಟರಲ್ಲಿಯೇ ಮೈಸೂರು ಪ್ರದೇಶ ಕಾಂಗ್ರೆಸ್ ಸರ್ವಸದಸ್ಯರ ಸಭೆಯನ್ನು ಕರೆಯಲಾಗುವುದೆಂದರು. ಜಯಪುರದಲ್ಲಿ ಸಂಸ್ಥಾ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಮನೂಭಾಯಿ ಪಟೇಲ್‌ರವರು ವಿಧಾನಸಭಾ ಚುನಾವಣೆಗಳಲ್ಲಿ ದೇಶದಾದ್ಯಂತ ಒಂದು ಸಾವಿರ ಸ್ಥಾನಗಳಿಗೆ ಸಂಸ್ಥಾ ಕಾಂಗ್ರೆಸ್ ಸ್ಪರ್ಧಿಸುತ್ತದೆ ಎಂದು ೯.೧.೭೨ರಂದು ಹೇಳಿಕೆ ನೀಡಿದರು. ಗುಜರಾತ್, ಬಿಹಾರ, ಮೈಸೂರು ರಾಜ್ಯಗಳಲ್ಲಿ ಎಲ್ಲಾ ವಿಧಾನಸಭಾ ಸ್ಥಾನಗಳಿಗೆ ಪಕ್ಷ ಸ್ಪರ್ಧಿಸುವುದಾಗಿ ಪಕ್ಷದ ಅಧ್ಯಕ್ಷ ಸಾದಿಕ್ ಅಲಿ ೧೨.೧.೭೨ರಂದು ದೆಹಲಿಯಲ್ಲಿ ತಿಳಿಸಿದರು. ೧೬.೧.೭೨ರಂದು ವೀರೇಂದ್ರ ಪಾಟೀಲರ ಅಧ್ಯಕ್ಷತೆಯಲ್ಲಿ ಕೇಂದ್ರ ನೀತಿ ನಿರೂಪಣಾ ಸಮಿತಿಯನ್ನು ರಚಿಸಲಾಯಿತು. ಎಂ. ಎಸ್. ಗುರುಪಾದಸ್ವಾಮಿ, ಶ್ಯಾಮನಂದನ ಮಿಶ್ರ, ಹಿತೇಂದ್ರ ದೇಸಾಯಿ, ಶ್ರೀಮತಿ ಸುಚೇತಾ ಕೃಪಲಾನಿ, ಎ.ಕೆ. ದತ್ತ, ಸತ್ಯೇಂದ್ರನಾರಾಯಣ ಸಿನ್ಹಾ, ಬನಾರಸಿದಾಸ್, ಫಿ. ರಾಮಚಂದ್ರನ್, ಸಿಕಂದರ್ ಭಕ್ತ್ ಈ ಸಮಿತಿಯ ಸದಸ್ಯರುಗಳಾಗಿದ್ದರು. ಜನವರಿ ೩೧ರ ಹೊತ್ತಿಗೆ ಸಂಸ್ಥಾ ಕಾಂಗ್ರೆಸ್ ಅಭ್ಯರ್ಥಿಗಳ ಅಂತಿಮ ಪಟ್ಟಿ ಹೊರಬೀಳುವುದೆಂದು ವೀರೇಂದ್ರಪಾಟೀಲರು ೨೧.೧.೭೨ರಂದು ತಿಳಿಸಿದರು. ದಕ್ಷ ಪ್ರಾಮಾಣಿಕ ಆಡಳಿತಕ್ಕೆ ವಾಗ್ದಾನ ನೀಡುವ ಚುನಾವಣಾ ಪ್ರಣಾಳಿಕೆಯನ್ನು ೨೯-೧-೭೨ ರಂದು ಬಿಡುಗಡೆ ಮಾಡಲಾಯಿತು. ಮೈಸೂರು ರಾಜ್ಯದಲ್ಲಿ ಸಂಸ್ಥಾ ಕಾಂಗ್ರೆಸ್‌ಗೆ ಭವಿಷ್ಯ ಇದೆ ಎಂದು ಎ.ಐ.ಸಿ.ಸಿ. ಖಜಾಂಚಿಯಾಗಿದ್ದ ನಿಜಲಿಂಗಪ್ಪನವರು ಬೆಂಗಳೂರಿನಲ್ಲಿ ಪ್ರಣಾಳಿಕೆ ಬಿಡುಗಡೆ ಸಂದರ್ಭದಲ್ಲಿ ತಿಳಿಸಿದರು. ಹಾಸನ ಜಿಲ್ಲೆಯಲ್ಲಿ ಎಂಟು ವಿಧಾನಸಭಾ ಸ್ಥಾನಗಳಿಗೂ ಸಂಸ್ಥಾ ಕಾಂಗ್ರೆಸ್ ಸ್ಪರ್ಧಿಸುವುದಾಗಿ ಪಕ್ಷದ ಜಿಲ್ಲಾ ಅಧ್ಯಕ್ಷ ಹಾರನಹಳ್ಳಿ ರಾಮಸ್ವಾಮಿ ತಿಳಿಸಿದರು. ೨.೨.೭೨ರಂದು ೮೭ ಅಭ್ಯರ್ಥಿಗಳ ಮೊದಲ ಪಟ್ಟಿಯನ್ನು ಬಿಡುಗಡೆ ಮಾಡಿದ ವೀರೇಂದ್ರ ಪಾಟೀಲರು ಅಂತಿಮ

ಪಟ್ಟಿಯನ್ನು ೪.೨.೭೮ ರ ಹೊತ್ತಿಗೆ ಬಿಡುಗಡೆ ಮಾಡಲಾಗುವುದೆಂದರು. ೩.೨.೭೮ ರಂದು ಎರಡನೆ. ಪಟ್ಟಿ ಬಿಡುಗಡೆ ಆಯಿತು. ಆಡಳಿತ ಕಾಂಗ್ರೆಸ್ ಪಕ್ಷದಲ್ಲಿ ಟಿಕೆಟ್ ಸಿಗದವರು ಸಂಸ್ಥಾ ಕಾಂಗ್ರೆಸ್ ಪಕ್ಷದ ಕಡೆ ಬರುತ್ತಿದ್ದುದರಿಂದ, ಪಕ್ಷದ ಟಿಕೆಟ್ಟಿಗೆ ಇಲ್ಲೂ ನೂಕು ನುಗ್ಗಲು ಉಂಟಾಗತೊಡಗಿತು. ೫.೨.೭೮ರಂದು ಸಂಸ್ಥಾ ಕಾಂಗ್ರೆಸ್ ೧೭೬ ಅಭ್ಯರ್ಥಿಗಳ ಮೂರನೆಯ ಪಟ್ಟಿ ಬಿಡುಗಡೆ ಮಾಡಿತು. ಅಂತಿಮವಾಗಿ ೬.೨.೭೮ರಂದು ನಾಲ್ಕನೆಯ ಪಟ್ಟಿಯನ್ನೂ, ೭.೨.೭೮ರಂದು ಅಂತಿಮ ಐದನೆಯ ಪಟ್ಟಿಯನ್ನೂ ಬಿಡುಗಡೆ ಮಾಡಲಾಯಿತು. ಸಂಸ್ಥಾ ಕಾಂಗ್ರೆಸ್ ೧೮೦ ಸ್ಥಾನಗಳಿಗೆ ಏಕಾಂಗಿಯಾಗಿ ಸ್ಪರ್ಧಿಸಲು ನಿರ್ಧರಿಸಿತ್ತು. ಅಭ್ಯರ್ಥಿಗಳ ಸಂಖ್ಯೆ ಜಾಸ್ತಿಯಾಗಿದ್ದು ಕಾರ್ಯಕರ್ತರ ಉತ್ಸಾಹ ಅಪರಿಮಿತವಾಗಿದೆ. ಇದರಿಂದ ಅಭ್ಯರ್ಥಿಗಳ ಆಯ್ಕೆ ಕಷ್ಟಕರವಾಗಿ ನಿಧಾನವಾಯಿತು ಎಂದು ಪ್ರಧಾನ ಕಾರ್ಯದರ್ಶಿ ಬಿ. ಜೆ. ಲಿಂಗೇಗೌಡ ೭.೨.೭೮ರಂದು ತಿಳಿಸಿದರು.

ಅಭ್ಯರ್ಥಿಗಳ ಆಯ್ಕೆ ವಿಚಾರದಲ್ಲಿ ರಾಮಕೃಷ್ಣ ಹೆಗಡೆಯವರು ೯.೨.೭೮ರಂದು ವಿವರಗಳನ್ನು ನೀಡಿದರು. ೩೦ ಮಂದಿ ಹಿಂದಿನ ವಿಧಾನಸಭಾ ಸದಸ್ಯರು, ೧೦ ಮಂದಿ ಮಾಜಿ ಸಚಿವರು, ಇಬ್ಬರು ನಿವೃತ್ತ ಸರ್ಕಾರಿ ಅಧಿಕಾರಿಗಳು, ಒಬ್ಬರು ಮಾಜಿ ಸಂಸತ್ ಸದಸ್ಯರುಗಳಿಗೆ ಟಿಕೆಟ್ ನೀಡಲಾಗಿದೆ. ಶೇಕಡಾ ೫೦ ಮಂದಿ ಪದವೀಧರರು, ಸ್ನಾತಕೋತ್ತರ ಪದವೀಧರರು ಇದ್ದಾರೆ. ಅಭ್ಯರ್ಥಿಗಳ ಸರಾಸರಿ ವಯಸ್ಸು ೪೩. ಜಾತಿ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿಲ್ಲ. ಕಾರಣ ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಜಾತಿ ವೈಷಮ್ಯ ಬೆಳೆಸುವ ಇಚ್ಛೆ ಪಕ್ಷಕ್ಕೆ ಇಲ್ಲ. ಹಿಂದುಳಿದವರಲ್ಲಿ ಕೂಡಾ ಜಾತಿಯನ್ನು ಗಮನಿಸದೆ ಅರ್ಹತೆ ಆಧಾರದ ಮೇಲೆ ಟಿಕೆಟ್ ನೀಡಲಾಗಿದೆ. ವೀರೇಂದ್ರರ ಮಂತ್ರಿಮಂಡಲದಲ್ಲಿದ್ದ ಒಬ್ಬರಿಗೆ ಮಾತ್ರ ಟಿಕೆಟ್ ನೀಡಲಾಗಿದೆ. ಸಂಸ್ಥಾ ಕಾಂಗ್ರೆಸ್ ಬಿಟ್ಟುಹೋಗಿ ಆಡಳಿತ ಕಾಂಗ್ರೆಸ್‌ನಲ್ಲಿ ಟಿಕೆಟ್ ಸಿಗದೇ ವಾಪಸ್ ಬಂದವರಿಗೆ ಟಿಕೆಟ್ ಇಲ್ಲ ಎಂದು ಅವರು ತಿಳಿಸಿದರು. ಆದರೆ ಕಲ್ಮಲ ಕ್ಷೇತ್ರದ ನಾಗಮ್ಮನವರ ವಿಚಾರದಲ್ಲಿ ಮಾತ್ರ ಈ ರೀತಿ ಮಾಡಲಾಗಿದೆ, ಕಾರಣ ಅವರು ಹಿಂದುಳಿದ ವರ್ಗಕ್ಕೆ ಸೇರಿದ ಮಹಿಳೆ ಆಗಿದ್ದಾರೆ ಎಂದು ಹೆಗಡೆ ವಿವರಿಸಿದರು. 'ರಾಜ್ಯ ಸರ್ಕಾರಗಳಿಗೆ ಹೆಚ್ಚಿನ ಅಧಿಕಾರ ಎಂಬುದು ಸಂಸ್ಥಾ ಕಾಂಗ್ರೆಸ್ ಗುರಿಯಾಗಿದೆ' ಎಂದು ಅವರು ಹೇಳಿದರು. ರಾಮಕೃಷ್ಣ ಹೆಗಡೆ ಮತ್ತು ವೀರೇಂದ್ರ ಪಾಟೀಲರು ಚುನಾವಣೆಗಳಿಗೆ ಸ್ಪರ್ಧಿಸಲಿಲ್ಲ. ಅಂತಿಮವಾಗಿ ೧೭೬ ಮಂದಿ ಸಂಸ್ಥಾ ಕಾಂಗ್ರೆಸ್ ಅಭ್ಯರ್ಥಿಗಳು ಕಣದಲ್ಲಿ ಉಳಿದರು.

## ಚುನಾವಣಾ ಪ್ರಣಾಳಿಕೆ

ದಕ್ಷ ಪ್ರಾಮಾಣಿಕ ಆಡಳಿತ ನೀಡಲು ಸಂಸ್ಥಾ ಕಾಂಗ್ರೆಸ್ ವಾಗ್ದಾನ ಮಾಡುವುದಾಗಿ ಹೇಳಿತು. ೨೯.೧.೭೮ರಂದು ಕೇಂದ್ರ ಚುನಾವಣಾ ಸಮಿತಿ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿತು. ಪ್ರಣಾಳಿಕೆಯ ಮುಖ್ಯಾಂಶಗಳು ಕೆಳಗಿನಂತಿದ್ದವು.

- ದಕ್ಷ, ಪ್ರಾಮಾಣಿಕ ಆಡಳಿತ, ಭ್ರಷ್ಟಾಚಾರ ತೊಡೆಯಲು ಕ್ರಮ.
- ಕೇಂದ್ರ, ರಾಜ್ಯಗಳ ಮಧುರ ಬಾಂಧವ್ಯಕ್ಕಾಗಿ ರಾಜ್ಯಗಳಿಗೆ ಹೆಚ್ಚು ಅಧಿಕಾರ.
- ಸರ್ಕಾರಿ ಹಾಗೂ ಖಾಸಗಿ ಕ್ಷೇತ್ರಗಳಿಗೆ ಸಮಾನ ಪ್ರೋತ್ಸಾಹ.
- ನಿರುದ್ಯೋಗ ನಿವಾರಣೆ.
- ಭೂ ಸುಧಾರಣಾ ಕಾಯಿದೆಯ ಅನುಷ್ಠಾನ.

ರಾಜ್ಯ ಘಟಕಗಳು ತಮ್ಮ ತಮ್ಮ ರಾಜ್ಯಗಳಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಿರುವ ಕಾರ್ಯಕ್ರಮಗಳು, ಸಾಧಿಸಿರುವ ಸಾಧನೆಗಳು ಇವುಗಳನ್ನೊಳಗೊಂಡಂತೆ ಪ್ರಣಾಳಿಕೆಗಳನ್ನು ತಯಾರಿಸಿ ಬಿಡುಗಡೆ ಮಾಡಬೇಕೆಂದು ಸಂಸ್ಥಾ ಕಾಂಗ್ರೆಸ್‌ನ ಅಧ್ಯಕ್ಷ ಅಶೋಕ ಮೆಹ್ತ ಹೇಳಿದರು.

ಅದರಂತೆ ಸಂಸ್ಥಾ ಕಾಂಗ್ರೆಸ್ ರಾಜ್ಯ ಘಟಕದ ಪ್ರಧಾನ ಕಾರ್ಯದರ್ಶಿ ರಾಮಕೃಷ್ಣ ಹೆಗಡೆಯವರು ೯.೨.೧೯೭೮ರಂದು ಸಂಸ್ಥಾ ಕಾಂಗ್ರೆಸ್‌ನ ರಾಜ್ಯ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿದರು. ಅದರ ಪ್ರಮುಖ ಅಂಶಗಳು ಕೆಳಗಿನಂತಿವೆ.

೧. ನಿರ್ಮಲ ಆಡಳಿತ, ಸುಭದ್ರ ಸರ್ಕಾರ ನೀಡಿಕೆಯಲ್ಲಿ ಸಂಸ್ಥಾ ಕಾಂಗ್ರೆಸ್ ಸಲ್ಲಿಸಿರುವ ಸೇವೆಯನ್ನು ನಿಷ್ಪಕ್ಷಪಾತವಾಗಿ ನಿರ್ಣಯಿಸಿ ಈ ಚುನಾವಣೆಗಳಲ್ಲೂ ಕೂಡಾ ಜನತೆ ಬೆಂಬಲ ನೀಡುವಂತೆ ಸಂಸ್ಥಾ ಕಾಂಗ್ರೆಸ್ ವಿನಂತಿಸುತ್ತದೆ.

೨. ಆಡಳಿತ ಕಾಂಗ್ರೆಸ್ ಪಕ್ಷದ ಪ್ರಜಾಸತ್ತೆ ಅಡ್‌ಹಾಕ್ ಮಾದರಿಯದಾಗಿತ್ತು. ಅದರ ಸಮಾಜವಾದದ ಘೋಷಣೆ ಕೇವಲ ವಂಚನೆಯದು.

೩. ರಾಜ್ಯದ ನೆಲ ಜಲಗಳ ಸಮಸ್ಯೆಗಳ ಬಗ್ಗೆ ಕೇಂದ್ರ ಸರ್ಕಾರ ಅನುಸರಿಸುತ್ತಿರುವ ರೀತಿನೀತಿಗಳು ರಾಜ್ಯದ ಹಿತಾಸಕ್ತಿಗೆ ವಿರೋಧವಾಗಿದ್ದು ಇದು ಖಂಡನೀಯ. ಸಂಸ್ಥಾ ಕಾಂಗ್ರೆಸ್ ಪಕ್ಷ ಇದುವರೆಗಿನ ತನ್ನ ಹತ್ತು ವರ್ಷಗಳ ಆಡಳಿತ ಹಾಗೂ ಸೇವಾ ಅವಧಿಯಲ್ಲಿ ಮಾಡಿರುವ ಸಾಧನೆಗಳು ಈ ಕೆಳಗಿನಂತಿವೆ :

೧. ಸರ್ಕಾರಿ ಆದಾಯ ೨೨೫ ಕೋಟಿಯಿಂದ ೬೦೦ ಕೋಟಿಗೆ ಏರಿಕೆ.

೨. ತಲಾ ಆದಾಯ ೨೨೫ ರೂ ಗಳಿಂದ ೬೦೦ ರೂ.ಗೆ ಏರಿಕೆ.

೩. ವಿದ್ಯುತ್ ಉತ್ಪಾದನೆ ೨ ಲಕ್ಷ ಮೆಗಾವ್ಯಾಟ್‌ನಿಂದ ೧೨ ಲಕ್ಷ ಮೆಗಾವ್ಯಾಟ್‌ಗೆ ಏರಿಕೆ.

೪. ತಲಾ ವಿದ್ಯುತ್ ಬಳಕೆ ಪ್ರಮಾಣ ೨೩ ಯೂನಿಟ್‌ನಿಂದ ೧೨೩ ಯೂನಿಟ್‌ಗೆ ಏರಿಕೆ.

೫. ವಿದ್ಯುತ್ ಸಂಪರ್ಕ ಹೊಂದಿದ ನಗರ ಹಳ್ಳಿಗಳ ಸಂಖ್ಯೆ ೩೯೦೦ ರಿಂದ ೧೨೦೦೦ ಕ್ಕೆ ಹೆಚ್ಚಳ. ಕೃಷಿ ಪಂಪ್‌ಸೆಟ್‌ಗಳ ಸಂಖ್ಯೆ ೧೪೭೫೯ರಿಂದ ೧,೫೦,೦೦೦ ಕ್ಕೆ ಏರಿಕೆ. ಆಹಾರದಲ್ಲಿ ಕೊರತೆ ಅನುಭವಿಸುತ್ತಿದ್ದ ರಾಜ್ಯ ಇಂದು ಉಳಿಕೆ ರಾಜ್ಯವಾಗಿದೆ. ಆಹಾರ ಉತ್ಪಾದನೆ ೩೮ ಲಕ್ಷ ಟನ್ ನಿಂದ ೬೦ ಲಕ್ಷ ಟನ್‌ಗೆ ಏರಿದೆ.

೬. ನೀರಾವರಿಗೆ ತೊಡಗಿಸಿರುವ ಹಣ ೭೦ ಕೋಟಿಯಿಂದ ೨೫೦ ಕೋಟಿಗೆ ಹೆಚ್ಚಳ.

೭. ಪಿ.ಯು.ಸಿ. ವರೆಗೆ ಉಚಿತ ಶಿಕ್ಷಣ ನೀಡಿಕೆ. ಪ್ರಾಥಮಿಕ ಶಾಲೆಗಳ ಸಂಖ್ಯೆ ೨೭೦೦೦ ದಿಂದ ೪೫೦೦೦ ಕ್ಕೆ ಏರಿಕೆ.

೮. ಬೆಂಗಳೂರು ವಿಶ್ವವಿದ್ಯಾನಿಲಯ, ಕೃಷಿ ವಿಶ್ವವಿದ್ಯಾನಿಲಯ, ಹೀಗೆ ಎರಡು ವಿಶ್ವವಿದ್ಯಾನಿಲಯಗಳನ್ನು ರಾಜ್ಯದಲ್ಲಿ ಸ್ಥಾಪಿಸಲಾಗಿದೆ.

೯. ನಾಲ್ಕು ಹೊಸ ಮೆಡಿಕಲ್ ಕಾಲೇಜುಗಳನ್ನು, ಅನೇಕ ಎಂಜಿನಿಯರಿಂಗ್ ಮತ್ತು ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ.

೧೦. ರಸ್ತೆಗಳ ಉದ್ದ ೨೮,೦೦೦ ಮೈಲಿ ಇದ್ದುದನ್ನು ೪೦,೦೦೦ ಮೈಲಿಗೆ ವಿಸ್ತರಿಸಲಾಗಿದೆ. ಎಲ್ಲ ಅಂತರ ತಾಲ್ಲೂಕು ರಸ್ತೆಗಳನ್ನು ಆಸ್ಫಾಲ್ಟ್ ಮಾಡಲಾಗಿದೆ. ಭೂ ಅಭಿವೃದ್ಧಿಗಾಗಿ ರೈತರಿಗೆ ೩೧ ಕೋಟಿ ರೂಪಾಯಿಗಳ ದೀರ್ಘಾವಧಿ ಸಾಲ ನೀಡಲಾಗಿದೆ. ಕೃಷಿ ಕಾರ್ಮಿಕರ ಕನಿಷ್ಟ ದಿನಗೂಲಿಯನ್ನು ರೂ. ೧.೫೦ರಿಂದ ರೂ ೨.೫೦ ಕ್ಕೆ ಏರಿಸಲಾಗಿದೆ.

೧೧. ವೃದ್ಧರಿಗೆ ಮಾಸಿಕ ೩೦ ರೂಪಾಯಿಗಳ ಪೆನ್‌ಷನ್ ನೀಡುವ ಯೋಜನೆ ಜಾರಿಗೆ ತರಲಾಗಿದೆ.

೧೨. ದೇಶದ ಯಾವುದೇ ರಾಜ್ಯಗಳಲ್ಲಿ ಈ ಯೋಜನೆ ಇಲ್ಲ ಎಂಬುದೇ ವಿಶೇಷ. ಹಿಂದುಳಿದವರ್ಗಗಳು, ಪರಿಶಿಷ್ಟ ಜಾತಿ, ಪರಿಶಿಷ್ಟವರ್ಗದ ಸ್ಥಿತಿಗತಿ ಸುಧಾರಣೆಗೆ ಅನೇಕ ಕಾರ್ಯಕ್ರಮಗಳನ್ನು ರೂಪಿಸಲಾಗಿದೆ - ಈ ವರ್ಗಗಳಿಗಾಗಿ ಪ್ರಾರಂಭಿಸಿರುವ ವಸತಿ ನಿರ್ಮಾಣ ಯೋಜನೆ ದೇಶದಲ್ಲೇ ಅದ್ವಿತೀಯ. ಇದಕ್ಕಾಗಿ ೪ ಕೋಟಿ ಹಣ ವೆಚ್ಚ ಮಾಡಲಾಗಿದೆ.

೧೩. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರಿಗೆ ೩೦ ಸಾವಿರ ಎಕರೆಗಿಂತ ಹೆಚ್ಚು ಭೂಮಿಯನ್ನು ಹಂಚಿಕೆ ಮಾಡಲಾಗಿದೆ. ಗೃಹ ನಿವೇಶನ ಹಂಚಿಕೆ, ಈ ಜನರಿಗೆ ಮೀಸಲು ಲಭ್ಯವಿರುವ ಕಡೆ ಈ ವರ್ಗದ ಜನರಿಗೆ ಉಚಿತ ಗೃಹ ನಿವೇಶನ ಹಂಚಲಾಗಿದೆ. ಈ ಜನಾಂಗದ ಸದಸ್ಯರೊಬ್ಬರು ಹೈಕೋರ್ಟ್ ನ್ಯಾಯಾಧೀಶರ ಪದವಿಗೆ ಏರಿರುತ್ತಾರೆ. ಇನ್ನೊಬ್ಬರು ಲೋಕಸೇವಾ ಆಯೋಗದ ಸದಸ್ಯರಾಗಿರುತ್ತಾರೆ. ಹತ್ತು ಎಕರೆಗಿಂತ ಕಡಿಮೆ ಭೂಮಿಗೆ ಭೂ ಕಂದಾಯ ರದ್ದುಪಡಿಸಲಾಗಿದೆ.

೧೪. ಸುಶಿಕ್ಷಿತ ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸಲು ಅನೇಕ ಯೋಜನೆಗಳನ್ನು ರೂಪಿಸಲಾಗಿದೆ. ಗ್ರಾಮೀಣ ಕಾರ್ಮಿಕರ, ಕೃಷಿ ಕಾರ್ಮಿಕರ ನಿರುದ್ಯೋಗ ನಿವಾರಣೆಗೆ ಭೂ ಸೇನೆಯನ್ನು ಪ್ರಾರಂಭಿಸಲಾಗಿದೆ. ದೇಶದಲ್ಲಿ ಯಾವ ರಾಜ್ಯ ಸರ್ಕಾರವೂ ಇದನ್ನು ಪ್ರಾರಂಭಮಾಡಿಲ್ಲ.

೧೫. ಪ್ರತಿಯೊಂದು ಹಳ್ಳಿಗೂ ಕುಡಿಯುವ ನೀರಿನ ಬಾವಿ ನಿರ್ಮಿಸಲಾಗಿದೆ. ವಿವಿಧ ಪಟ್ಟಣ ಮತ್ತು ದೊಡ್ಡ ದೊಡ್ಡ ಗ್ರಾಮಗಳಿಗೆ ನಲ್ಲಿ ನೀರು ಒದಗಿಸುವುದಕ್ಕೆ ಹತ್ತು ಕೋಟಿ ರೂಪಾಯಿ ವೆಚ್ಚದಲ್ಲಿ ಯೋಜನೆಗಳನ್ನು ಮಂಜೂರು ಮಾಡಲಾಗಿದೆ. ಬೆಂಗಳೂರು ನಗರಕ್ಕೆ ಕಾವೇರಿ ನೀರು ಪೂರೈಕೆಗೆ ೩೫ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಬೃಹತ್ ಯೋಜನೆಯನ್ನು ಕೈಗೊಳ್ಳಲಾಗಿದೆ. ೪೫ ಕೋಟಿ ರೂಪಾಯಿ ವೆಚ್ಚದಲ್ಲಿ ಕಾಳಿನದಿ ಯೋಜನೆ ಮೊದಲನೇ ಹಂತ ಮಂಜೂರು ಮಾಡಲಾಗಿದೆ. ಕಾವೇರಿ ನದಿ ಕೊಳ್ಳದಲ್ಲಿ ಎಲ್ಲಾ ಯೋಜನೆಗಳನ್ನು ಮಂಜೂರು ಮಾಡಲಾಗಿದ್ದು ಅವೆಲ್ಲಾ

ಕಾರ್ಯಗತವಾಗುತ್ತಿದೆ. ಕಳೆದ ಮೂರು ವರ್ಷಗಳಲ್ಲಿ ಪ್ರತಿವರ್ಷ ನೀರಾವರಿಗಾಗಿ ೨೫ ಕೋಟಿ ರೂಪಾಯಿಗಳನ್ನು ತೆಗೆದಿರಿಸಲಾಗುತ್ತಿದೆ.ಮೈಸೂರು ರಾಜ್ಯದ ಇತಿಹಾಸದಲ್ಲಿಯೇ ಇದು ಅನುಪಮವಾದ ಮಾದರಿ ಕಾರ್ಯವಾಗಿದೆ.

೧೯. ಕನ್ನಡಕ್ಕೆ ಪ್ರಾಶಸ್ತ್ಯ ನೀಡಲಾಗುತ್ತಿದೆ. ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಜಾರಿಗೆ ತರಲಾಗಿದೆ. ಸಾಹಿತ್ಯ ಸಂಸ್ಥೆಗಳು ತಮ್ಮ ಚಟುವಟಿಕೆಗಳನ್ನು ವಿಸ್ತರಿಸಲು ಹೆಚ್ಚಿನ ಧನಸಹಾಯ ನೀಡಲಾಗುತ್ತಿದೆ.

೧೭. ಭೂ ಸುಧಾರಣಾ ಕಾಯಿದೆಯನ್ನೂ ಶೀಘ್ರವಾಗಿ ತಂದು ಕಾರ್ಯಗತಗೊಳಿಸಲು ಪ್ರತ್ಯೇಕ ವ್ಯವಸ್ಥೆ ಮಾಡಲಾಗಿದೆ. ರೆವಿನ್ಯೂ ಹಾಗೂ ಅರಣ್ಯಭೂಮಿಗಳನ್ನು ಭೂರಹಿತರಿಗೆ, ಸಣ್ಣ ಹಿಡುವಳಿದಾರರಿಗೆ ಹಂಚಿಕೆ ಮಾಡಲು ವಿಶೇಷ ಏರ್ಪಾಡು ಮಾಡಲಾಗಿದೆ.

## ಈಡೇರದ ಗುರಿಗಳು

ನಮ್ಮ ಪಕ್ಷಕ್ಕೆ ಬಹುಮತ ನೀಡಿ ಅಧಿಕಾರಕ್ಕೆ ತಂದಲ್ಲಿ ಈ ಕೆಳಗಿನ ಯೋಜನೆಗಳನ್ನು ಗಮನದಲ್ಲಿ ಇಟ್ಟುಕೊಂಡು ಜಾರಿಗೆ ತರಲು ಶ್ರಮಿಸಲಾಗುವುದು. ಈ ಕಾರ್ಯಕ್ರಮಗಳನ್ನು ೧೯೭೧-೭೨ನೇ ಸಾಲಿನ ಆಯವ್ಯಯ ಪತ್ರದಲ್ಲಿ ಕಾಣಿಸಲಾಗಿದ್ದರೂ ಕೂಡಾ ದುರ್ದೈವದಿಂದ ಅವುಗಳನ್ನು ಕಾರ್ಯಗತಗೊಳಿಸಲು ಅವಕಾಶವಾಗಲಿಲ್ಲ. ನೂರು ಕೋಟಿ ರೂಪಾಯಿ ವೆಚ್ಚದಿಂದ ರಾಜ್ಯದ ಕೃಷಿ ಪರಿಸ್ಥಿತಿಯನ್ನು ಸುಧಾರಿಸುವುದು. ಬಡ ರೈತರಿಗೆ ಬೆಳೆ ಹಾಗೂ ಪಶು ವಿಮಾ ಯೋಜನೆ ಜಾರಿ. ೧೯೭೪ರ ಒಳಗಾಗಿ ಕಾವೇರಿ ಕೊಳ್ಳದ ಯೋಜನೆಗಳನ್ನು ಪೂರ್ಣಗೊಳಿಸುವುದು ಮತ್ತು ಕೃಷ್ಣ ಯೋಜನೆಯ ಕಾರ್ಯಾನುಷ್ಠಾನವನ್ನು ಪೂರ್ಣಗೊಳಿಸುವುದು. ಪ್ರತಿಯೊಂದು ತಾಲ್ಲೂಕು ಕೇಂದ್ರಕ್ಕೆ ಕನಿಷ್ಠ ೨೫ ಹಾಸಿಗೆಗಳ ಆಸ್ಪತ್ರೆ.

## ಅಕ್ರಾಯ್ ಪದ್ಧತಿ ರದ್ದು

ಮುಂದಿನ ನಾಲ್ಕು ವರ್ಷಗಳಲ್ಲಿ ಎಲ್ಲಾ ಹಳ್ಳಿಗೂ ವಿದ್ಯುತ್ ಪೂರೈಕೆ. ದಕ್ಷಿಣ ಭಾರತದಲ್ಲಿಯೇ ಪ್ರಥಮವೆನಿಸುವ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಥಾಪನೆ. ಸದೃಢರಿರುವ ಎಲ್ಲರಿಗೂ ಕೆಲಸ ನೀಡಿಕೆ ಹಾಗೂ ನಿರುದ್ಯೋಗ ವಿಮಾ ಯೋಜನೆ. ಖಾಸಗಿ ಕ್ಷೇತ್ರದ ಕೈಗಾರಿಕೆಗಳಲ್ಲಿ ಮುಂದಿನ ಐದು ವರ್ಷಗಳಲ್ಲಿ ಎರಡು ಸಾವಿರ ಕೋಟಿ ರೂಪಾಯಿ ಬಂಡವಾಳ ತೊಡಗಿಸುವುದು. ಇದರಿಂದ ವಾರ್ಷಿಕ ಅಭಿವೃದ್ಧಿಯ ವೇಗ ಮತ್ತು ತಲಾ ಆದಾಯವನ್ನು ಇಮ್ಮಡಿಗೊಳಿಸುವುದು.

## ಮುಂದಿನ ಯೋಜನೆಗಳು

ಮೈಸೂರು ರಾಜ್ಯದ ಸರ್ವತೋಮುಖ ಪ್ರಗತಿಗೆ, ಅಭಿವೃದ್ಧಿಗೆ ಮೇಲ್ಕಂಡ ಎಲ್ಲಾ ಯೋಜನೆಗಳೂ ಅಗತ್ಯ. ಈ ಯೋಜನೆಗಳಲ್ಲದೆ ಇನ್ನೂ ಈ ಕೆಳಗಿನ ಯೋಜನೆಗಳನ್ನು ಕೈಗೊಳ್ಳುವುದಾಗಿ ನಮ್ಮ ಪಕ್ಷ ಮೈಸೂರು ರಾಜ್ಯದ ಜನತೆಗೆ ಭರವಸೆ ಕೊಡುತ್ತದೆ. ಗ್ರಾಮಾಂತರ ಮತ್ತು ನಗರ ಪ್ರದೇಶಗಳಲ್ಲಿ ಜನರ ಕನಿಷ್ಠ ಮಾಸಿಕ ಆದಾಯವನ್ನು ೧೫೦ ರೂಪಾಯಿಗಳಿಗೆ ಏರಿಸುವುದು. ಒಂದು ವರ್ಷದ ಒಳಗಾಗಿ ಭೂಸುಧಾರಣಾ ಕಾಯಿದೆ ಪೂರ್ತಿ ಜಾರಿಗೆ. ಭೂಮಾಲೀಕ, ಗೇಣಿದಾರ ಎಂಬ ಭೇದಭಾವ ತೊಡೆದುಹಾಕುವುದು. ಉಳುವವನೇ ಭೂಮಿಗೆ ಒಡೆಯನಾಗಬೇಕು ಮತ್ತು ಪ್ರತಿಯೊಬ್ಬನಿಗೂ ಅವನ ಶಕ್ತಿಗೆ ತಕ್ಕಷ್ಟು ಭೂಮಿ ದೊರೆಯುವಂತೆ ಮಾಡುವುದು. ರಾಜ್ಯದ ಅಭಾವ ಪೀಡಿತ ಪ್ರದೇಶಗಳಲ್ಲಿ ನೀರಾವರಿ ಬಾವಿಗಳ ನಿರ್ಮಾಣ. ಪ್ರತಿವರ್ಷ ಕನಿಷ್ಟ ೩೦ ಸಾವಿರ ಬಾವಿಗಳನ್ನು ತೋಡಿಸಲು ಕ್ರಮ.

ನಗರ ಆಸ್ತಿ ನಿರ್ಬಂಧದ ಬಗ್ಗೆ ರಾಜ್ಯ ಸರ್ಕಾರ ಕಾನೂನು ಮಾಡುವುದು. ಈ ಬಗ್ಗೆ ಸೂಕ್ತ ಕಾನೂನು ಮಾಡುವಂತೆ ಕೇಂದ್ರ ಸರ್ಕಾರವನ್ನು ಆಗ್ರಹಪಡಿಸುವುದು. ೩೬೦೦ ರೂಪಾಯಿಗಿಂತ ಕಡಿಮೆ ವಾರ್ಷಿಕ ಆದಾಯ ಇರುವ ಮಕ್ಕಳಿಗೆಲ್ಲಾ ಪದವಿ ಮಟ್ಟದವರೆಗೆ ಉಚಿತ ಶಿಕ್ಷಣ. ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಪಂಚಾಯತ್ ರಾಜ್ಯ ಸಂಸ್ಥೆಗಳಿಗೆ ಸಾಕಷ್ಟು ಅಧಿಕಾರ ದೊರೆಯುವಂತೆ ಒಂದು ವರ್ಷದ ಒಳಗಾಗಿ ಪಂಚಾಯತ್ ರಾಜ್ಯ ವಿಧೇಯಕವನ್ನು ಜಾರಿಗೆ ತರುವುದು. ಸುಶಿಕ್ಷಿತ ನಿರುದ್ಯೋಗಿಗಳಿಗೆ ಉದ್ಯೋಗ ಮತ್ತು ಗ್ರಾಮಾಂತರ ನಿರುದ್ಯೋಗಿಗಳಿಗೆ ಭೂಸೇನೆ ಮೂಲಕ ಉದ್ಯೋಗ ಒದಗಿಸುವುದು. ವಿವಿಧ ಯುವಜನ ಸೇವಾ ಯೋಜನೆಗಳನ್ನು ಕಾರ್ಯಗತಗೊಳಿಸುವುದು. ನಮ್ಮ ಸರ್ಕಾರ ಅಧಿಕಾರದಲ್ಲಿದ್ದಾಗ ಯುವಜನ ಸೇವಾ ಸಂಸ್ಥೆಗಳಿಗೆ ಸಾಕಷ್ಟು ಹಣ ತೆಗೆದಿರಿಸಿದ್ದರೂ ಕೇಂದ್ರ ಸರ್ಕಾರದಿಂದ ಸಾಕಷ್ಟು ನೆರವು ದೊರೆಯದೇ ಹೋದ ಕಾರಣ ಆ ಯೋಜನೆಗಳಾವುವೂ ಜಾರಿಗೆ ಬರಲಿಲ್ಲ.

ಹದಿನೆಂಟು ವರ್ಷ ಮೇಲಿನವರಿಗೆಲ್ಲಾ ಮತದಾನದ ಹಕ್ಕು. ಕನ್ನಡವನ್ನು ಎಲ್ಲಾ ಮಟ್ಟಗಳಲ್ಲಿ ಆಡಳಿತ ಭಾಷೆಯನ್ನಾಗಿ ಮಾಡುವುದು. ರಾಜ್ಯಕ್ಕೆ ಹೆಚ್ಚಿನ ಸ್ವಾಯತ್ತ ಅಧಿಕಾರ. ಕೇಂದ್ರದ ಮಲತಾಯಿ ಧೋರಣೆ ನಿವಾರಣೆಗೆ ದೃಢ ನಿರ್ಧಾರದಿಂದ ಹೋರಾಟ.

ಈ ಮೇಲ್ಕಂಡ ಸಂಸ್ಥಾ ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆಯನ್ನು ಅವಲೋಕಿಸಿದಾಗ, ಪಂಚಾಯತ್ ರಾಜ್ಯ ವಿಧೇಯಕ, ಹದಿನೆಂಟು ವರ್ಷ ಮೇಲ್ಪಟ್ಟವರಿಗೆ ಮತದಾನದ ಹಕ್ಕು, ಭೂಸುಧಾರಣಾ ಕಾಯಿದೆ ಜಾರಿಗೆ ಕೊಡುವುದು, ಮುಂತಾದ ಅನೇಕ ಕ್ರಾಂತಿಕಾರಿ ಕಾರ್ಯಕ್ರಮಗಳ ಪ್ರಸ್ತಾಪವನ್ನು ಪ್ರಮುಖವಾಗಿ ಗಮನಿಸಬಹುದು. ೧೯೮೩ರಲ್ಲಿ ಜನತಾ ಸರ್ಕಾರ ಆಡಳಿತಕ್ಕೆ ಬಂದಾಗ ಈ ಪಂಚಾಯತ್ ರಾಜ್ ವಿಧೇಯಕ ಜಾರಿಗೆ ಬಂದಿತು. ೧೯೮೯ರಲ್ಲಿ ರಾಜೀವ್ ಗಾಂಧಿ ಸರ್ಕಾರ ಪಂಚಾಯತ್ ರಾಜ್ ವಿಧೇಯಕ ಅಖಿಲ ಭಾರತ ಮಟ್ಟದಲ್ಲಿ ಜಾರಿಗೆ ತಂದು ಇದನ್ನು ಕೇಂದ್ರ ಶಾಸನವನ್ನಾಗಿ ಮಾಡಿತು. ೧೯೮೯ರಲ್ಲಿ ರಾಜೀವ್‌ಗಾಂಧಿ ಸರ್ಕಾರ ೧೮ ವರ್ಷದವರಿಗೆ ಮತದಾನದ ಹಕ್ಕನ್ನು ನೀಡಿತು. ಈ ದೃಷ್ಟಿಯಿಂದ ಸಂಸ್ಥಾ ಕಾಂಗ್ರೆಸ್ ಪ್ರಣಾಳಿಕೆಯ ದೂರದೃಷ್ಟಿ ಹಾಗೂ ದೂರಗಾಮಿ ಪರಿಣಾಮಗಳ ಅರಿವಾಗುತ್ತದೆಂದು ಹೇಳಬಹುದು ಹಾಗೂ ಕಾರ್ಯಸಾಧ್ಯವಾದ ಸರಳ ಪ್ರಾಮಾಣಿಕ ಪ್ರಣಾಳಿಕೆ ಆಗಿದ್ದಿತೆಂದೂ ಹೇಳಬಹುದು.

## ಪ್ರಚಾರ ಕಾರ್ಯ

೧೪.೨.೭೨ ರಂದು ಚನ್ನಪಟ್ಟಣದಲ್ಲಿ ವೀರೇಂದ್ರ ಪಾಟೀಲರು ಸಂಸ್ಥಾ ಕಾಂಗ್ರೆಸ್ ಚುನಾವಣಾ ಪ್ರಚಾರವನ್ನು ಉದ್ಘಾಟಿಸಿದರು. ಸಂಸ್ಥಾ ಕಾಂಗ್ರೆಸ್ ಭವನಕ್ಕೆ ಬೀಗ ಮುದ್ರೆ ಇದ್ದುದರಿಂದ, ಕಾಂಗ್ರೆಸ್ ವಸ್ತು ಪ್ರದರ್ಶನದ ಷೆಡ್‌ನಲ್ಲಿ ಸಂಸ್ಥಾ ಕಾಂಗ್ರೆಸ್ ಕಚೇರಿಯನ್ನು ಸ್ಥಾಪಿಸಲಾಗಿತ್ತು. ಫೆಬ್ರವರಿ ೧೫, ೧೬ರಂದು ಮೊರಾರ್ಜಿ ದೇಸಾಯಿ ಅವರು ಬೆಳಗಾವಿ, ಬಿಜಾಪುರ, ಹುಬ್ಬಳ್ಳಿಗಳಲ್ಲಿ ಸಂಸ್ಥಾ ಕಾಂಗ್ರೆಸ್ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಮಾತನಾಡಿ, ಆಡಳಿತ ಕಾಂಗ್ರೆಸ್ ವಿಚಾರದಲ್ಲಿ ಜಾಗ್ರತರಾಗಿರಲು ಜನತೆಗೆ ಕರೆ ನೀಡಿದರು. ಆಡಳಿತ ಕಾಂಗ್ರೆಸ್‌ನಿಂದ ಪ್ರಜಾಪ್ರಭುತ್ವಕ್ಕೆ ಅಪಾಯ ಒದಗಿದೆ ಎಂದೂ ಅವರು ಹೇಳಿದರು. ಅಹಿಂಸೆ, ಅಭಿವೃದ್ಧಿ, ಪ್ರಜಾಪ್ರಭುತ್ವದ ರಕ್ಷಣೆಗಾಗಿ ಸಂಸ್ಥಾ ಕಾಂಗ್ರೆಸ್‌ಗೆ ಮತ ನೀಡುವಂತೆ ಅವರು ವಿನಂತಿ ಮಾಡಿದರು.

ಸಂಸ್ಥಾ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ರವೀಂದ್ರ ವರ್ಮಾ ೨೯.೨.೭೨ರಿಂದ ೨.೩.೭೨ರ ವರೆಗೆ ಬೆಳಗಾವಿ, ಧಾರವಾಡ, ಹುಬ್ಬಳ್ಳಿ, ವಿಜಾಪುರ, ಬಾಗಲಕೋಟೆಗಳಲ್ಲಿ ಚುನಾವಣಾ ಪ್ರಚಾರ ಮಾಡಿ ಸಂಸ್ಥಾ ಕಾಂಗ್ರೆಸ್‌ಗೆ ಮತ ನೀಡುವಂತೆ ವಿನಂತಿಸಿದರು. ಶ್ರೀಮತಿ ಇಂದಿರಾ ಗಾಂಧಿಯವರ ಸರ್ವಾಧಿಕಾರಿ ಧೋರಣೆಯನ್ನು ಖಂಡಿಸಿದರು. ಸಂಸ್ಥಾ ಕಾಂಗ್ರೆಸ್ ಮಾಜಿ ಅಧ್ಯಕ್ಷರೂ ಹಾಗೂ ಖಜಾಂಚಿಗಳೂ ಆದ ನಿಜಲಿಂಗಪ್ಪನವರು ಫೆಬ್ರವರಿ ೨೭ ಮತ್ತು ೨೮ ರಂದು ವಿಜಾಪುರ ಜಿಲ್ಲೆಯಲ್ಲಿ, ೨೯, ೩೦ ರಂದು ಬೆಳಗಾವಿ, ಧಾರವಾಡ, ಮಾರ್ಚ್ ೧ ಮತ್ತು ೨ ರಂದು ಚಿತ್ರದುರ್ಗ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಸಂಸ್ಥಾ ಕಾಂಗ್ರೆಸ್ ಚುನಾವಣಾ ಪ್ರಚಾರ ಸಭೆಗಳಲ್ಲಿ ಪಾಲ್ಗೊಂಡರು. ರಾಜ್ಯದ ಅಭಿವೃದ್ಧಿಗೆ ಸಂಸ್ಥಾ ಕಾಂಗ್ರೆಸ್‌ಗೆ ಮತ ನೀಡಬೇಕೆಂದರು. ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷರಾದ ಸಾದಿಕ್ ಅಲಿಯವರು ಫೆಬ್ರವರಿ ೨೨ ರಿಂದ ೨೯ ರವರೆಗೆ ತುಮಕೂರು, ಹಾಸನ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಚುನಾವಣಾ ಪ್ರಚಾರ ಮಾಡಿದರು. ಆಡಳಿತ ಕಾಂಗ್ರೆಸ್ ಪಕ್ಷಾಂತರಕ್ಕೆ ಪ್ರೋತ್ಸಾಹಿಸುತ್ತಿದೆ, ಪಕ್ಷಕ್ಕೆ ನಿಧಿ ಅಕ್ರಮವಾಗಿ ಸಂಗ್ರಹ ಮಾಡುತ್ತಿದೆ, ಬಡವರ ಕಲ್ಯಾಣ ಅದಕ್ಕೆ ಬೇಕಾಗಿಲ್ಲ, ಸರ್ವಾಧಿಕಾರಿ ಪ್ರವೃತ್ತಿಯನ್ನು ಬೆಳೆಸುತ್ತಿದೆ, ಅದರ ಜಾತ್ಯತೀತತೆ ಜನರನ್ನು ಮೋಸಗೊಳಿಸುವ ತಂತ್ರ, ಶಾಂತಿ ಸಮೃದ್ಧಿಗೆ ಪ್ರಜಾಸತಾತ್ತಕ ಪವಿತ್ರ ವಿಧಾನಗಳ ರಕ್ಷಣೆಗೆ ಸಂಸ್ಥಾ ಕಾಂಗ್ರೆಸ್‌ಗೆ ಮತ ನೀಡಬೇಕೆಂಬುದು ಅವರ ಭಾಷಣಗಳ ಮುಖ್ಯ ಅಂಶಗಳಾಗಿದ್ದವು.

ಮಾಜಿ ಮುಖ್ಯಮಂತ್ರಿ, ರಾಜ್ಯ ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷ ವೀರೇಂದ್ರ ಪಾಟೀಲರು ರಾಜ್ಯದಾದ್ಯಂತ ಚುನಾವಣಾ ಪ್ರಚಾರ ಮಾಡಿದರು. ಫೆಬ್ರವರಿ ೧೬ ರಂದು ಹಾಸನ, ೧೯ ರಂದು ಸಕಲೇಶಪುರ, ೨೨ ರಂದು ಮಡಿಕೇರಿ, ಮಂಗಳೂರು ೨೬ ರಂದು ಹುಬ್ಬಳ್ಳಿ ಹೀಗೆ ಅನೇಕ ಕಡೆಗಳಲ್ಲಿ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ನಾಡಿನ ಭವಿಷ್ಯಕ್ಕಾಗಿ ಸಂಸ್ಥಾ ಕಾಂಗ್ರೆಸ್‌ಗೆ ಮತ ನೀಡಿ, ಆಡಳಿತ ಕಾಂಗ್ರೆಸ್‌ನಿಂದ ರೈತರ ಹಿತ ಸಾಧ್ಯವಿಲ್ಲ, ಬಡವರಿಗೆ ಅನುಕೂಲವಿಲ್ಲ. ರಾಜ್ಯದ ಸರ್ವತೋಮುಖ ಅಭಿವೃದ್ಧಿ ಸಂಸ್ಥಾ ಕಾಂಗ್ರೆಸ್‌ನಿಂದ ಸಾಧ್ಯ, ತನ್ನ ಆಡಳಿತದ ಕಾಲದಲ್ಲಿ ಸಂಸ್ಥಾ ಕಾಂಗ್ರೆಸ್ ಅದನ್ನು ಮಾಡಿ ತೋರಿಸಿದೆ ಎಂಬುದು ಅವರ ಭಾಷಣದ ಮುಖ್ಯ ಅಂಶಗಳಾಗಿದ್ದವು. ರಾಜ್ಯದಲ್ಲಿ ಆಗಿರುವಷ್ಟು ಭೂ ಸುಧಾರಣೆ ಎಲ್ಲೂ ಆಗಿಲ್ಲ. ಗೇಣೀದಾರರನ್ನು ಒಕ್ಕಲೆಬ್ಬಿಸುವುದನ್ನು ನಿಷೇಧಿಸಿ ಕಾನೂನು ಮಾಡಿದ್ದು ಸಂಸ್ಥಾ ಕಾಂಗ್ರೆಸ್ ಸರ್ಕಾರ ಎಂದು ಅವರು ಪ್ರಧಾನಿಗೆ ಸವಾಲು ಹಾಕಿದರು. ಪ್ರಧಾನಮಂತ್ರಿಗಳ ಕಾರ್ಯಕ್ರಮದಲ್ಲಿ ಹೊಸದೇನಿಲ್ಲ, ಅದೆಲ್ಲಾ ಸಂಸ್ಥಾ ಕಾಂಗ್ರೆಸ್‌ನ ನೀತಿ ಹಾಗೂ ಕಾರ್ಯಕ್ರಮಗಳಾಗಿವೆ ಎಂದು ಅವರು ಹೇಳಿದರು.

ಉಪಾಧ್ಯಕ್ಷ ರಾಮಕೃಷ್ಣ ಹೆಗಡೆಯವರು ಬೆಂಗಳೂರು, ಮಂಡ್ಯ, ಉತ್ತರ ಕನ್ನಡ, ಮೈಸೂರು ಜಿಲ್ಲೆಗಳಲ್ಲಿ ಚುನಾವಣಾ ಪ್ರಚಾರ ಕೈಗೊಂಡರು. ಪ್ರಧಾನ ಕಾರ್ಯದರ್ಶಿ ವಿ.ಎಸ್. ಕೃಷ್ಣಯ್ಯರ್ ಬೆಂಗಳೂರು ನಗರದಲ್ಲಿ, ಎಂ. ಎಸ್. ಗುರುಪಾದಸ್ವಾಮಿ ಮೈಸೂರು, ಮಂಡ್ಯ, ಬೆಂಗಳೂರು ಜಿಲ್ಲೆಗಳಲ್ಲಿ, ಮೈಸೂರು ಜಿಲ್ಲಾ ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷ ಟಿ. ಎನ್. ನರಸಿಂಹಮೂರ್ತಿ ಮೈಸೂರು ಜಿಲ್ಲೆಯಲ್ಲಿ ಪ್ರಚಾರ ಮಾಡಿದರು. ೧೯.೨.೭೨ ರಂದು ನಂಜನಗೂಡು ತಾಲ್ಲೂಕಿನಲ್ಲಿ ಎರಡು ಸಾವಿರ ಜನ ಸಂಸ್ಥಾ ಕಾಂಗ್ರೆಸ್ ಸೇರಿದರು. ಕೆ. ಆರ್. ನಗರ ತಾಲ್ಲೂಕಿನಲ್ಲಿ ನೂರಾರು ಮುಖಂಡರು ಸಂಸ್ಥಾ ಕಾಂಗ್ರೆಸ್ ಸೇರಿ, ಪಕ್ಷದ ಚುನಾವಣಾ ನಿಧಿಗೆ ತಲಾ ೫೦೦ ರೂಪಾಯಿಗಳನ್ನು ನೀಡಿದ್ದು (೨೩.೨.೭೨) ವಿಶೇಷವಾಗಿತ್ತು.

## ಫಲಿತಾಂಶ

ಮಾರ್ಚ್ ೫ ಹಾಗೂ ೯ ರಂದು ಚುನಾವಣೆಗಳು ನಡೆದು ಮಾರ್ಚ್ ೧೨ರ ಹೊತ್ತಿಗೆ ಫಲಿತಾಂಶಗಳು ಪ್ರಕಟವಾದವು. ಸಂಸ್ಥಾ ಕಾಂಗ್ರೆಸ್ ೨೪ ಸ್ಥಾನಗಳಲ್ಲಿ ಮಾತ್ರ ಜಯಗಳಿಸಲು ಸಾಧ್ಯವಾಯಿತು. ಆದರೂ ಕೂಡಾ ಅದು ೨೩,೬೧,೩೦೮ ಮತಗಳನ್ನು ಗಳಿಸಿ ಶೇಕಡಾ ೨೬.೨೨ ರಷ್ಟು ಮತಗಳನ್ನು ಗಳಿಸಿದ್ದು ನಿಜಕ್ಕೂ ಒಂದು ಸಾಧನೆಯೇ ಆಗಿತ್ತೆಂದು ಹೇಳಬಹುದು. ೧೬೫ ಸ್ಥಾನ ಗಳಿಸಿದ್ದ ಆಡಳಿತ ಕಾಂಗ್ರೆಸ್ ೪೬,೯೮,೮೨೪ ಮತಗಳನ್ನು ಪಡೆದು ಶೇಕಡಾ ೫೨.೧೭ ಮತಗಳನ್ನು ಪಡೆದಿತ್ತು. ಪಕ್ಷೇತರರಿಂದ ಸಂಸ್ಥಾ ಕಾಂಗ್ರೆಸ್‌ಗೆ ಹೊಡೆತ ಬಿದ್ದಿತ್ತು. ೨೧ ಪಕ್ಷೇತರರು ಆಯ್ಕೆಯಾಗಿ ೧೧.೭೩.೭೭೩ ಮತಗಳನ್ನು ಶೇಕಡಾ ೧೩.೦೩ ಪ್ರಮಾಣದಲ್ಲಿ ಅವರು ಪಡೆದಿದ್ದರು. ೧೯೭೭ರಲ್ಲಿ ಸಂಸ್ಥಾ ಕಾಂಗ್ರೆಸ್ ಜಯಪ್ರಕಾಶ್ ನಾರಾಯಣರ ನೇತೃತ್ವದಲ್ಲಿ ಸ್ಥಾಪಿತವಾದ ಜನತಾ ಪಕ್ಷದ ಅವಿಭಾಜ್ಯ ಅಂಗವಾಯಿತು.

*ನಿರೂಪಣೆ ಹಾಗೂ ಸಂಶೋಧನ ಸಹಾಯ*

**ಕೆ. ಆರ್. ಕಮಲೇಶ್, ಎಸ್. ನಂಜುಂಡಸ್ವಾಮಿ**


ಕೆ.ಎಂ.ಪಿ.ಪಿ.


ಪಿ.ಎಸ್.ಪಿ.


ಎಸ್.ಎಸ್.ಪಿ.

# ಸಮಾಜವಾದಿ ಪಕ್ಷಗಳು

ಎಂ. ಪಿ. ಈಶ್ವರಪ್ಪ

ರಾಷ್ಟ್ರದ ಹಿರಿಯ ರಾಜಕಾರಣಿಯಾಗಿದ್ದ, ತತ್ವನಿಷ್ಠರಾಗಿದ್ದ, ತಮ್ಮ ನಿಸ್ವಾರ್ಥ ಸೇವೆಯಿಂದ ರಾಜ್ಯ ಹಾಗೂ ದೇಶಕ್ಕೆ ಸೇವೆ ಸಲ್ಲಿಸಿದ ದಿವಂಗತ ಸಿದ್ಧವನಹಳ್ಳಿ ನಿಜಲಿಂಗಪ್ಪನವರ ಜನ್ಮ ಶತಮಾನೋತ್ಸವವನ್ನು ಆಚರಿಸುತ್ತಿರುವುದು ನಮ್ಮೆಲ್ಲರ ಭಾಗ್ಯ. ಎಸ್. ನಿಜಲಿಂಗಪ್ಪರವರ ಬದುಕು ತೆರೆದ ಪುಸ್ತಕ ಇದ್ದಂತೆ. ಏಕೀಕರಣ ಚಳವಳಿ ಸಂದರ್ಭದಿಂದಲೂ ನಾನು ನಿಜಲಿಂಗಪ್ಪನವರನ್ನು ಬಲ್ಲೆ. ಅವರಿಂದ ಅಂತಹ ಸಹಾಯ ಏನೂ ಆಗದಿದ್ದರೂ ಅಥವಾ ೧೯೬೭ರ ಮಹಾ ಚುನಾವಣೆಯಲ್ಲಿ ಅವರಿಂದ ನನಗೆ ಅನ್ಯಾಯ ಆದರೂ ಕೂಡ, ಅವುಗಳನ್ನು ಮರೆತು ನೋಡುವುದಾದರೆ ದಿವಂಗತ ನಿಜಲಿಂಗಪ್ಪನವರು ರಾಷ್ಟ್ರ ಕಂಡ ಅಪರೂಪದ ನಾಯಕರುಗಳಲ್ಲಿ ಒಬ್ಬರಾಗಿದ್ದಾರೆ. ಒಂದು ತತ್ವಕ್ಕಾಗಿ ತಮ್ಮ ಬದುಕನ್ನು ಮೀಸಲಿಟ್ಟ ವ್ಯಕ್ತಿಗಳಲ್ಲಿ ಅವರು ಒಬ್ಬರು. ಯಾವುದೇ ಸ್ವಾರ್ಥಕ್ಕಾಗಿ ತತ್ವದೊಡನೆ ರಾಜಿ ಮಾಡಿಕೊಳ್ಳಲು ಒಪ್ಪದ ಅವರು ಭಾರತದ ರಾಜಕಾರಣಕ್ಕೆ ಬಿಟ್ಟುಹೋದ ಸತ್‌ಪರಂಪರೆ ದೊಡ್ಡದು. ಪ್ರಾಮಾಣಿಕತೆ ಹಾಗೂ ನಿಸ್ವಾರ್ಥ ದುಡಿಮೆ ಅವರ ವ್ಯಕ್ತಿತ್ವದ ವೈಶಿಷ್ಟ್ಯ. ಕರ್ನಾಟಕ ರಾಜ್ಯಕ್ಕೆ ಅನೇಕ ನೀರಾವರಿ ಯೋಜನೆಗಳನ್ನು ರೂಪಿಸಿದ ಕೀರ್ತಿ ಅವರದ್ದು. ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದಾಗ ಅವರು ತೆಗೆದುಕೊಂಡ ನಿರ್ಧಾರ, ಅನಂತರ ಅವರು ನಡೆದುಕೊಂಡ ರೀತಿ ಇಡಿ ದೇಶವೇ ಬಲ್ಲುದು. ಇಂತಹ ಅಚಲ ನಿರ್ಧಾರದಿಂದಾಗಿಯೇ ನಿಜಲಿಂಗಪ್ಪನವರು ಇಂದೂ ಕೂಡ ನಮಗೆ ಪ್ರಿಯರಾಗಿದ್ದಾರೆ. ಅವರು ಮುಖ್ಯಮಂತ್ರಿಗಳಾಗಿದ್ದಾಗ ನಾನು ವಿಧಾನ ಪರಿಷತ್ತಿನಲ್ಲಿ ವಿರೋಧ ಪಕ್ಷದ ನಾಯಕನಾಗಿದ್ದೆ. ಒಮ್ಮೆ ಶರಾವತಿ ಕರ್ಮಕಾಂಡದ ಬಗ್ಗೆ ಮಾತನಾಡುತ್ತಾ ಅಲ್ಲಿನ ಲೋಪದೋಷಗಳನ್ನು ಎಳೆ ಎಳೆಯಾಗಿ ಬಿಡಿಸಿ ಎತ್ತಿ ಹೇಳಿ ''ಇಂಥ ದ್ರೋಹ ಮಾಡಿದವರು ಲಂಚ ಹೊಡೆದಿರಬೇಕು ಅಥವಾ ಮುಟ್ಠಾಳ ಇರಬೇಕು''- ಎಂದು ಹೇಳಿ ನನ್ನ ಮಾತನ್ನು ಮುಗಿಸಿದ್ದೆ. ಭೋಜನ ವಿರಾಮಕ್ಕೆ ಸದನ ಬಿಡುವು ತೆಗೆದುಕೊಂಡಾಗ ಮುಖ್ಯಮಂತ್ರಿಗಳಾಗಿದ್ದ ನಿಜಲಿಂಗಪ್ಪನವರು ನನ್ನನ್ನು ಹುಡುಕಿಕೊಂಡು ಬಂದು ನನ್ನ ಹತ್ತಿರ ನಿಂತುಕೊಂಡು ''ಈಶ್ವರಪ್ಪ, ನಾನು ಹತ್ತು ನಯಾ ಪೈಸೆ ಯಾರಿಂದಲೂ ಲಂಚ ತೆಗೆದುಕೊಂಡಿಲ್ಲ. ನನ್ನ ಮಾತನ್ನು ನಂಬು''- ಎಂದರು. ಆಗ ಅವರ ಕಣ್ಣಾಲಿಗಳಲ್ಲಿ ನೀರು ತುಂಬಿಕೊಂಡಿತ್ತು. ಇಂತಹ ಸಂದರ್ಭಗಳಲ್ಲಿ ವೈಯಕ್ತಿಕವಾಗಿ ಮಾತನಾಡಿ ವಿರೋಧ ಪಕ್ಷವನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಪರಂಪರೆ ಈಗ ಎಲ್ಲಿದೆ? ನಿಜಲಿಂಗಪ್ಪನವರ ವೈಯಕ್ತಿಕ ಬದುಕನ್ನು ಕಂಡಾಗ ಅವರು ಎಷ್ಟು ಪ್ರಾಮಾಣಿಕರು ಎಂಬುದು ಎಲ್ಲರಿಗೂ ಮನವರಿಕೆಯಾಗುತ್ತದೆ.

ಇನ್ನೊಂದು ೧೯೬೭ರಲ್ಲಿ ನಡೆದ ಘಟನೆ. ಒಮ್ಮೆ ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಕೆಮ್ಮಣ್ಣುಗುಂಡಿಯಲ್ಲಿ ತಂಗಿದ್ದರು. ನಾನು ಅಷ್ಟು ಹೊತ್ತಿಗಾಗಲೇ ಅಶೋಕ ಮೆಹತಾರವರ ಜೊತೆ ಕಾಂಗ್ರೆಸ್ ಸೇರಿದ್ದೆ. ಈ ಸಂದರ್ಭದಲ್ಲಿ ನಾನು ನಿಜಲಿಂಗಪ್ಪನವರನ್ನು ನೋಡಲು ಕೆಮ್ಮಣ್ಣುಗುಂಡಿಗೆ ಹೋಗಿದ್ದೆ. ಆಗ ಅವರು ''ಬಾ, ಈಶ್ವರಪ್ಪ, ಇಲ್ಲಿ ಎಲ್ಲೋ ನಮ್ಮ ಗೋಪಾಲಗೌಡರು ಇದ್ದಾರಂತೆ, ನೋಡಿಕೊಂಡು ಬರೋಣ'' - ಎಂದು ಹೇಳಿ ನನ್ನನ್ನು

ಕರೆದುಕೊಂಡು ಹೋದರು. ಆಗ ಗೋಪಾಲಗೌಡರು ಅಲ್ಲಿನ ಕಾಟೇಜ್ ಒಂದರಲ್ಲಿ ವಿಶ್ರಾಂತಿಯನ್ನು ಪಡೆಯುತ್ತಿದ್ದರು. ಆಗ ಅವರ ಆರೋಗ್ಯ ಏನೇನೂ ಚೆನ್ನಾಗಿರಲಿಲ್ಲ. ನಿಜಲಿಂಗಪ್ಪನವರು ಗೋಪಾಲಗೌಡರ ಆರೋಗ್ಯವನ್ನು ವಿಚಾರಿಸಿ ''ಗೋಪಾಲಗೌಡರೇ, ಈಗ ನೀವು ಮೊದಲಿನಂತಿಲ್ಲ. ಈಗ ಮದುವೆಯಾಗಿದ್ದೀರಿ. ನಿಮಗೆ ಏನೂ ಆಸ್ತಿ ಇಲ್ಲ ಎಂದು ನಾನು ಕೇಳಿದ್ದೇನೆ. ಒಂದು ಹತ್ತು ಎಕರೆ ಜಮೀನಿಗೆ ಅರ್ಜಿ ಹಾಕಿ. ನಾನು ಮಂಜೂರು ಮಾಡಿಕೊಡುತ್ತೇನೆ'' ಎಂದು ಹೇಳಿದರು. ಆ ಗೋಪಾಲಗೌಡರು ನಮ್ರತೆಯಿಂದ ಕೈಮುಗಿದು ''ನನಗೆ ಏನೂ ಬೇಡ'' - ಎಂದು ಹೇಳಿದರು. ನಿಜಲಿಂಗಪ್ಪನವರು ಕೂಡ ಸದುದ್ದೇಶದಿಂದಲೇ ಈ ಮಾತನ್ನು ಹೇಳಿದ್ದರು ಎಂದು ನಾನು ಈಗಲೂ ಭಾವಿಸಿದ್ದೇನೆ. ಅಂದು ಮುಖ್ಯಮಂತ್ರಿಯಾಗಿದ್ದವರು ಅಥವಾ ಇತರ ಜವಾಬ್ದಾರಿ ಸ್ಥಾನದಲ್ಲಿದ್ದವರು ವಿರೋಧಪಕ್ಷಗಳನ್ನು ಹಾಗೂ ಅದರ ನಾಯಕರನ್ನು ಮುಗಿಸಿ ತಮ್ಮ ದಾರಿಯನ್ನು ಸುಗಮ ಮಾಡಿಕೊಳ್ಳಬೇಕೆಂದು ಭಾವಿಸಿದವರಲ್ಲ. ಅವರಿಗೆಲ್ಲಾ ವಿಶಿಷ್ಟ ಮಾನವೀಯತೆ ಇತ್ತು. ಕೆಳವರ್ಗದ ಜನರ ಬಗ್ಗೆ ಚಿಂತನೆ ಅವರಲ್ಲಿ ರಕ್ತಗತವಾಗಿ ಒಡಮೂಡಿತ್ತು. ಗ್ರಾಮೀಣ ಪ್ರದೇಶಗಳಿಂದ ಬಂದು ಕೆಳವರ್ಗದ ಜನರ ನಾಡಿಮಿಡಿತವನ್ನು ಚೆನ್ನಾಗಿ ಬಲ್ಲವರಾಗಿದ್ದ ಇಂತಹ ನಾಯಕರು ಸಮಾಜಕ್ಕೆ ಕೊಟ್ಟ ಕೊಡುಗೆ ಅನನ್ಯವಾದುದು. ಇದೇ ಸಮಾಜವಾದದ ವೈಶಿಷ್ಟ್ಯವೂ ಹೌದು. ಇಂತಹ ಸಮಾಜವಾದ ಭಾರತದಲ್ಲಿ ಹಾಗೂ ಕರ್ನಾಟಕದಲ್ಲಿ ಬೆಳೆದುಬಂದ ಪರಿಯನ್ನು ಇದೀಗ ನೋಡೋಣ.

ಭಾರತ ದೇಶದ ರಾಜಕಾರಣದಲ್ಲಿ ಸಮಾಜವಾದದ ಬಗ್ಗೆ ವಿಶೇಷವಾದಂಥ ಕಾಳಜಿಯನ್ನು ಗುರುತಿಸಬಹುದು. ಸಮಾಜವಾದೀ ಚಿಂತನೆ ಮಾರ್ಕ್ಸ್‌ವಾದದಿಂದ ಬೇರ್ಪಟ್ಟು, ಗಾಂಧೀವಾದವು ಕೂಡ ಅದರಲ್ಲಿ ಸಮ್ಮಿಲನಗೊಂಡು ತನ್ನದೇ ಆದ ಹೊಸ ರೂಪವನ್ನು ಭಾರತದ ಸಮಾಜವಾದಿ ನೆಲೆ ಪಡೆದುಕೊಂಡಿದೆ. ಬಂಡವಾಳಶಾಹಿಗಳ ವಿರುದ್ಧವಾಗಿ ದೇಶದ ಜನಸಾಮಾನ್ಯರ ಸಂಘಟನೆ ಹಾಗೂ ಹಿತವನ್ನು ಸಮಾಜವಾದಿಗಳು ತಮ್ಮೆದುರು ಇಟ್ಟುಕೊಂಡಿದ್ದನ್ನು ಗಮನಿಸಬಹುದು.

## ಸಮಾಜವಾದದ ಮುಖ್ಯಾಂಶಗಳು

''ಸಮಾಜವಾದ ಎರಡು ಅಂಶಗಳನ್ನು ವ್ಯಾಖ್ಯಾನಿಸುತ್ತದೆ. ಅದು ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಕ್ಕೆ ಸಂಬಂಧಪಟ್ಟಿದ್ದು. ಸಮಾಜವಾದಿ ವ್ಯವಸ್ಥೆಯಲ್ಲಿ ಮೂಲಭೂತ ಆರ್ಥಿಕ ಅಧಿಕಾರಗಳು ಅಂದರೆ ಭೂಮಿ, ಖನಿಜ, ಬಂಡವಾಳ, ಬ್ಯಾಂಕು ಹಾಗೂ ವಿದೇಶಿ ವ್ಯಾಪಾರ ಸರಕಾರದ ಕೈಯ್ಯಲ್ಲಿರುತ್ತದೆ. ಸಮಾಜವಾದ ಖಾಸಗಿ ಆಸ್ತಿ ಹಕ್ಕನ್ನು ತಿರಸ್ಕರಿಸುವುದಿಲ್ಲ. ಆದರೆ ಒಬ್ಬ ವ್ಯಕ್ತಿ ಗುಡಿಸಲು ಕಟ್ಟುವುದಕ್ಕೂ ಮತ್ತೊಬ್ಬ ವ್ಯಕ್ತಿ ಗಗನಚುಂಬಿ ಭವನ ಕಟ್ಟುವುದಕ್ಕೂ ವ್ಯತ್ಯಾಸವಿದೆಯೆಂದು ಅದು ಭಾವಿಸುತ್ತದೆ. ವ್ಯಕ್ತಿ ವ್ಯಕ್ತಿಗಳ ನಡುವಿನ ಆದಾಯ ಏಳು ಪಟ್ಟು ವ್ಯತ್ಯಾಸವಿರದಂತೆ ನೋಡಿಕೊಳ್ಳಲು ಸಮಾಜವಾದ ಆದ್ಯತೆ ಕೊಡುತ್ತದೆ. ಇನ್ನು ರಾಜಕೀಯ ಕ್ಷೇತ್ರದಲ್ಲಿ ಸಮಾಜವಾದ ವಿಶೇಷವಾಗಿ ಜನಸಾಮಾನ್ಯರನ್ನು ದೃಷ್ಟಿಯಲ್ಲಿ ಇಟ್ಟುಕೊಂಡಿರುತ್ತದೆ. ವ್ಯಕ್ತಿಯ ಅಗತ್ಯಕ್ಕೆ ಇರುವ ಮೂಲಭೂತ ಸೌಕರ್ಯಗಳು, ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ಸಾಮಾಜಿಕ ಭದ್ರತೆಯನ್ನು ಒದಗಿಸಬೇಕು ಎಂಬುದಕ್ಕೆ ಸಮಾಜವಾದ ಬದ್ಧವಾಗಿರುತ್ತದೆ.''

> ''ಸಮಾಜವಾದ ಮೂರು ಮಾರ್ಗಗಳನ್ನು ಗುರುತಿಸಿಕೊಂಡಿದೆ. ಒಂದು ಅಹಿಂಸಾತ್ಮಕ ಕ್ರಾಂತಿಯ ಮಾರ್ಗ. ಎರಡು, ಸಂಪೂರ್ಣ ಸಂವಿಧಾನಾತ್ಮಕ ಪ್ರಜಾಪ್ರಭುತ್ವವಾದಿ ಮಾರ್ಗ. ಮೂರನೆಯದು, ಚುನಾವಣೆಯನ್ನು ಒಳಗೊಂಡಂತೆ ಮುಷ್ಕರ, ಸತ್ಯಾಗ್ರಹ ಹಾಗೂ ಅಸಹಕಾರ ಚಳವಳಿ ಮಾರ್ಗ. ಕೆಲವೊಮ್ಮೆ ಸಮಾಜವಾದಿಗಳು ತಮ್ಮ ಧ್ಯೇಯೋದ್ದೇಶಕ್ಕಾಗಿ ಹಿಂಸಾ ಮಾರ್ಗ ಕೂಡ ಬೇಕೆಂದು ವಾದಿಸಿದ್ದೂ ಉಂಟು. ಆದರೆ ಇದು ಅಷ್ಟೊಂದು ಜನಪ್ರಿಯತೆ ಗಳಿಸಲಿಲ್ಲ.''

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿಯೂ ಕೂಡ ಸಮಾಜವಾದಿಗಳು ಪ್ರಮುಖ ಪಾತ್ರ ವಹಿಸಿದ್ದರು. ಕಾಂಗ್ರೆಸ್ ಪಕ್ಷದಲ್ಲಿಯೇ ಸಮಾಜವಾದಿಗಳ ಒಂದು ಪ್ರಬಲವಾದ ಗುಂಪು ಇದ್ದುದನ್ನು ವಿಶೇಷವಾಗಿ ಗಮನಿಸಬೇಕು. ೧೯೩೪ರನೇ ಇಸವಿಯಲ್ಲಿ ಸಮಾಜವಾದಿ ಪಕ್ಷ ಕಾಂಗ್ರೆಸ್‌ನಲ್ಲಿ ಸ್ಥಾಪನೆಯಾಯಿತು. ಈ ಸ್ಥಾಪನೆಗೆ ಮೂರು ಕಾರಣಗಳನ್ನು ಕೊಡಲಾಗಿದೆ. ಮೊದಲನೆಯದು ಭಾರತ ಸ್ವಾತಂತ್ರ್ಯ ಆಂದೋಳನದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಹಲವಾರು ಮುಖಂಡರುಗಳು ಮಾರ್ಕ್ಸ್‌ವಾದ ಮತ್ತು ಸಮಾಜವಾದದ ಪ್ರಭಾವಕ್ಕೆ ಒಳಗಾಗಿದ್ದರು. ಎರಡನೆಯದು ೧೯೩೨ರ ನಂತರ ಪ್ರಾರಂಭವಾದ ಕಾನೂನುಭಂಗ ಚಳವಳಿ ತಣ್ಣಗಾಗಿ ದೇಶದಲ್ಲಿ ವಿಶೇಷವಾಗಿ ಕಾಂಗ್ರೆಸ್‌ನಲ್ಲಿ ಬಲಪಂಥೀಯರ ಪ್ರಭಾವ ಹೆಚ್ಚಾಯಿತು. ಮೂರನೆಯದು ಕಾನೂನುಭಂಗ ಚಳವಳಿಯಲ್ಲಿ ಬಂಧಿತರಾದ ಹಲವಾರು ಮುಖಂಡರುಗಳನ್ನು ನಾಸಿಕ್ ಜೈಲ್‌ನಲ್ಲಿ ಇಟ್ಟಿದ್ದರು. ಅವರೆಲ್ಲರೂ ಒಂದೆಡೆ ಸೇರಿ ಸಮಾಲೋಚನೆ ಮಾಡಿ ತಮ್ಮದೇ ಆದ ಧ್ಯೇಯೋದ್ದೇಶಗಳುಳ್ಳ ಪಕ್ಷವನ್ನು ಸಂಘಟನೆ ಮಾಡುವ ಅಗತ್ಯ ಕಂಡುಕೊಂಡರು. ೧೯೩೨ರಲ್ಲಿ ನಾಸಿಕ್ ಜೈಲ್‌ನಲ್ಲಿ ಇದ್ದ ಪ್ರಮುಖ

ಸಮಾಜವಾದಿಗಳು ಅಂದರೆ, ಶ್ರೀಯುತರುಗಳಾದ, ಜಯಪ್ರಕಾಶ ನಾರಾಯಣ್, ಅಚ್ಯುತ ಪಟವರ್ಧನ, ಅಶ್ರಫ್ ಆಲಿ, ಅಶೋಕ ಮೆಹತಾ, ಯೂಸುಫ್ ಮೆಹ್ರಾಲಿ, ಎನ್. ಜಿ. ಗೋರೆ, ಮೀನೂಮಸಾನಿ ಹಾಗೂ ಎಂ. ಎಲ್. ದಾಂತವಾಲ ಮೊದಲಾದವರು.

೧೯೩೪ರ ಮೇ ೧೭ ರಂದು ಆಚಾರ್ಯ ನರೇಂದ್ರ ದೇವರವರ ಅಧ್ಯಕ್ಷತೆಯಲ್ಲಿ ಪಾಟ್ನಾದಲ್ಲಿ ಸಭೆ ಸೇರಿದ ಸಮಾಜವಾದಿಗಳು ಕಾಂಗ್ರೆಸ್‌ನ ಆಶ್ರಯದಲ್ಲಿ ಸಮಾಜವಾದಿಗಳ ಅಖಿಲಭಾರತ ಸಂಘಟನೆಯೊಂದನ್ನು ಹುಟ್ಟುಹಾಕಲು ನಿರ್ಧರಿಸಿದರು. ಅದೇ ವರ್ಷದ ಆಕ್ಟೋಬರ್ ೨೧ ಹಾಗೂ ೨೨ ರಂದು ಮುಂಬಯಿಯಲ್ಲಿಯ ಡಾ। ಸಂಪೂರ್ಣಾನಂದರ ಅಧ್ಯಕ್ಷತೆಯಲ್ಲಿ ಸಮಾಜವಾದಿಗಳ ಪ್ರಪ್ರಥಮ ಸಮ್ಮೇಳನವು ಜರುಗಿತು. ಅದೇ ಸಮಾಜವಾದಿ ಪಕ್ಷಕ್ಕೆ ಬೀಜಾಂಕುರವಾಯಿತು. ಕಾಂಗ್ರೆಸ್‌ನ ಸಮಾಜವಾದಿ ಪಕ್ಷವು ಮೊಟ್ಟಮೊದಲಿಗೆ ಮಾರ್ಕ್ಸ್‌ವಾದಿ ಪಕ್ಷವೇ ಆಗಿತ್ತು. ೧೯೩೬ ರಲ್ಲಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ - ಅವರ ಅಧ್ಯಕ್ಷತೆಯಲ್ಲಿ ಮೀರತ್‌ನಲ್ಲಿ ನಡೆದ ಪಕ್ಷದ ಸಮ್ಮೇಳನವು ಮಾರ್ಕ್ಸ್‌ವಾದದ ಹಿನ್ನೆಲೆಯಲ್ಲಿ ಪಕ್ಷವನ್ನು ಸಂಘಟಿಸಲು ಹೊರಟರೆ ಜನತೆಯ ವಿಶ್ವಾಸವನ್ನು ಗಳಿಸಿಕೊಳ್ಳಬಹುದು ಎಂಬ ಆಶಾವಾದವನ್ನು ವ್ಯಕ್ತಪಡಿಸಿತು.

೧೯೪೨ರ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' - ಚಳವಳಿಯಲ್ಲಿ ಸಮಾಜವಾದಿ ಮುಖಂಡರುಗಳು ಸಕ್ರಿಯವಾಗಿ ಭಾಗವಹಿಸಿ ಬಂಧನಕ್ಕೆ ಒಳಗಾದರು. ಜಯಪ್ರಕಾಶ ನಾರಾಯಣರಂಥ ಉಗ್ರವಾದಿಗಳೂ ಈ ಚಳವಳಿಯನ್ನು ರೂಪಿಸಲು ಮಹಾತ್ಮ ಗಾಂಧೀಜಿಯವರ ಮೇಲೆ ಒತ್ತಡ ಹಾಕಿದ್ದನ್ನು ಕೆಲವು ಇತಿಹಾಸಕಾರರು ಗುರುತಿಸಿದ್ದಾರೆ. ಮೀನೂ ಮಸಾನಿಯವರು, ಡಾ. ರಾಮಮನೋಹರ ಲೋಹಿಯರವರು ಈ ಸಂದರ್ಭದಲ್ಲಿ ಮಾರ್ಕ್ಸ್‌ವಾದ ಹಾಗೂ ಸಮಾಜವಾದದ ಬಗೆಗಿನ ಸೈದ್ಧಾಂತಿಕ ವಿಚಾರಗಳನ್ನು ಚರ್ಚೆ ಮಾಡಿ ಮಾರ್ಕ್ಸ್‌ವಾದದ ಹಿನ್ನೆಲೆ ಬಿಟ್ಟು ಪ್ರಜಾಪ್ರಭುತ್ವ ಮಾದರಿಯಲ್ಲಿ ಸಮಾಜವಾದ ಸ್ಥಾಪನೆ ಮಾಡಬೇಕೆಂದು ಕರೆಕೊಟ್ಟರು. ೧೯೪೬ರಲ್ಲಿ ಪ್ರೇಮ ಬಾಸಿನ್ ಎಂಬ ಸಮಾಜವಾದಿ ನಾಯಕರು 'ಕಾಂಗ್ರೆಸ್ ಸಮಾಜವಾದಿ ಪಕ್ಷವು ಒಂದು ಕ್ರಾಂತಿಕಾರಿ. ಆದರೆ ಮಾರ್ಕ್ಸ್‌ವಾದ ಒಂದು ಸಂಘಟನೆ' - ಎಂದು ಹೇಳುವುದರ ಮೂಲಕ ಇವೆರಡರ ಅನ್ಯೋನ್ಯ ಸಂಬಂಧವನ್ನು ಜನತೆಯ ಮುಂದಿಟ್ಟರು. ಎರಡನೇ ಮಹಾಯುದ್ಧದ ನಂತರ ಮಾರ್ಕ್ಸ್‌ವಾದದಲ್ಲಿನ ಕೆಲವು ಅಸಂಗತ ನಡವಳಿಕೆಗಳು ಸಮಾಜ ವಾದಿಗಳಿಗೆ ಭ್ರಮನಿರಸನ ಉಂಟುಮಾಡಿತು. ೧೯೩೮ರಲ್ಲಿ ಲಾಹೋರಿನಲ್ಲಿ ನಡೆದ ಸಮಾಜವಾದಿ ಸಮ್ಮೇಳನದಲ್ಲಿ ಸಮಾಜವಾದ ಮಾರ್ಕ್ಸ್‌ವಾದದ ಸರ್ವಾಧಿಕಾರಿ ಪ್ರವೃತ್ತಿಯನ್ನು ಖಂಡಿಸಿ ಪ್ರಜಾಪ್ರಭುತ್ವ ಮಾದರಿಯಲ್ಲಿ ಹೊಸ ಸಮಾಜ ನಿರ್ಮಾಣಕ್ಕೆ ಒತ್ತುಕೊಟ್ಟಿತು. ೧೯೪೭ರಲ್ಲಿ ಕಾನ್‌ಪುರದಲ್ಲಿ ನಡೆದ ಪ್ರಥಮ ಯುದ್ಧೋತ್ತರ ಕಾಂಗ್ರೆಸ್ ಸಮಾಜವಾದಿ ಪಕ್ಷದ ಸಮ್ಮೇಳನದಲ್ಲಿ 'ಪ್ರಜಾಪ್ರಭುತ್ವ ಇಲ್ಲದೆ ಸಮಾಜವಾದ ಇಲ್ಲ. ಜನತಾಂತ್ರಿಕ ವ್ಯವಸ್ಥೆಯ ಮೇಲೆ ಸಮಾಜವಾದಿ ಪಕ್ಷ ಕಟ್ಟುವುದು ತಮ್ಮ ಉದ್ದೇಶ' ಎಂದು ಸ್ಪಷ್ಟಪಡಿಸಿತು.

ಪ್ರಾರಂಭದಲ್ಲಿ ಗಾಂಧೀವಾದದಲ್ಲಿ ಒಲವು ಇಲ್ಲದಿದ್ದ ಜಯಪ್ರಕಾಶ ನಾರಾಯಣ್‌ರವರು ೧೯೫೮ರ ನಾಸಿಕ್ ಸಮ್ಮೇಳನದಲ್ಲಿ ''ಮಹಾತ್ಮ ಗಾಂಧೀಜಿಯವರು ನಮಗೆ ಅನೇಕ ಪಾಠಗಳನ್ನು ಕಲಿಸಿದ್ದಾರೆ. ಅವರು ಕಲಿಸಿದ ಅತೀ ಮುಖ್ಯವಾದ ಪಾಠ ಎಂದರೆ, ಸಾಧ್ಯ ಹಾಗೂ ಸಾಧನೆಗಳು. ಅಶುದ್ಧ ಸಾಧನೆಗಳು ನಮ್ಮನ್ನು ಶುದ್ಧ ಸಾಧ್ಯಗಳ ಕಡೆಗೆ ಕೊಂಡೊಯ್ಯಲಾರವು ಹಾಗೂ ಶುದ್ಧ ಸಾಧ್ಯಗಳ ಸಾಧನೆಗೆ ಶುದ್ಧ ಸಾಧನಗಳೇ ಬೇಕು'' - ಎಂದರು. ಅಂದರೆ ಗುರಿ ಸಾಧನೆಗಿಂತ ಅದರತ್ತ ನಡೆಯುವ ಮಾರ್ಗ ಮುಖ್ಯ ಎಂಬುದು ಅವರ ಆಶಯವಾಗಿತ್ತು. ಇದನ್ನೇ ಮಹಾತ್ಮ ಗಾಂಧೀಜಿಯವರು ಕೂಡ ಮತ್ತೆ ಮತ್ತೆ ಹೇಳಿದರು.

೧೯೪೮ರಲ್ಲಿ ಕಾಂಗ್ರೆಸ್ ತನ್ನ ಪಕ್ಷದಲ್ಲಿದ್ದುಕೊಂಡು ಬೇರೆಯ ಸಂಘಟನೆಯ ಬಗ್ಗೆ ನಿಷ್ಠೆ ತೋರಿಸುವುದನ್ನು ಅಥವಾ ಬೇರೆ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುವುದನ್ನು ನಿಷೇಧಿಸಿತು. ಇದಕ್ಕಾಗಿ ಸಮಾಜವಾದಿಗಳು ಕಾಂಗ್ರೆಸ್‌ನೊಳಗಿದ್ದುಕೊಂಡು ಹೋರಾಡುವ ತಮ್ಮ ಧ್ಯೇಯವನ್ನು ಬಿಟ್ಟು ಬೇರೆ ಪಕ್ಷವನ್ನು ಸಂಘಟಿಸುವ ಅಗತ್ಯವನ್ನು ಕಂಡುಕೊಂಡರು. ೧೯೪೮ರಲ್ಲಿ ಸಮಾಜವಾದಿ ಪಕ್ಷ ಆಚಾರ್ಯ ನರೇಂದ್ರದೇವ್ ಅವರ ಅಧ್ಯಕ್ಷತೆಯಲ್ಲಿ ಅಸ್ತಿತ್ವಕ್ಕೆ ಬಂದಿತು. ಕಾಂಗ್ರೆಸ್ ಪಕ್ಷದಿಂದ ಆರಿಸಿಬಂದು ಈ ಸಂದರ್ಭದಲ್ಲಿ ಶಾಸನಸಭೆಯಲ್ಲಿ ಸದಸ್ಯರಾಗಿದ್ದ ಆಚಾರ್ಯ ನರೇಂದ್ರದೇವ್ ಮತ್ತು ಇತರರು ಆಗ ಶಾಸನಸಭೆಯ ಸ್ಥಾನಗಳಿಗೆ ರಾಜೀನಾಮೆ ಕೊಟ್ಟು ತಮ್ಮ ಆದರ್ಶ ಹಾಗೂ ನೈತಿಕತೆಯನ್ನು ಪ್ರದರ್ಶಿಸಿದರು. ೧೯೫೩ರಲ್ಲಿ ಪಂಡಿತ್ ಜವಹರಲಾಲ್ ನೆಹರೂರವರು ಹಾಗೂ ಜಯಪ್ರಕಾಶ ನಾರಾಯಣರವರುಗಳ ನಡುವೆ ಮಾತುಕತೆ ನಡೆದು ನೆಹರುರವರು ಎಲ್ಲಾ ಸಮಾಜವಾದಿಗಳನ್ನು ಕಾಂಗ್ರೆಸ್ ಪಕ್ಷಕ್ಕೆ ಸೇರ್ಪಡೆಯಾಗುವಂತೆ ಕರೆ ಕೊಟ್ಟರು. ಆಗ ಜಯಪ್ರಕಾಶ್ ನಾರಾಯಣರವರು ಹದಿನಾಲ್ಕು ಅಂಶಗಳ ಒಂದು ಕಾರ್ಯಕ್ರಮವನ್ನು ರೂಪಿಸಿ ನೆಹರೂರವರ ಮುಂದಿಟ್ಟರು. ಅದರಲ್ಲಿ ವಿಶೇಷವಾಗಿ ದುರ್ಬಲರಿಗೆ ಭೂ-ಒಡೆತನ ಹಾಗೂ ಬ್ಯಾಂಕ್ ರಾಷ್ಟ್ರೀಕರಣ ವಿಚಾರವನ್ನು ಪ್ರಸ್ತಾಪಿಸಲಾಗಿತ್ತು. ಕಾಂಗ್ರೆಸ್ ಸೇರುವ ಮೂಲಕ ಸರಕಾರವನ್ನು ಬಲಪಡಿಸಿ ಸಮಾಜವಾದದ ತತ್ವವನ್ನು ಅನುಷ್ಠಾನ ಮಾಡಬೇಕೆಂಬ ಗುಂಪಿಗೆ ಡಾ. ಅಶೋಕ ಮೆಹತಾರವರು ಸೇರಿದ್ದರು. ಕಾಂಗ್ರೆಸ್‌ನ್ನು ಸೋಲಿಸಲು ವಿರೋಧಪಕ್ಷಗಳನ್ನು ಒಗ್ಗಟ್ಟು ಮಾಡಬೇಕೆಂದು ಸೇರುವ ಗುಂಪಿಗೆ

ಡಾ. ರಾಮಮನೋಹರ ಲೋಹಿಯಾರವರು ಸೇರಿದ್ದರು. ಜಯಪ್ರಕಾಶ ನಾರಾಯಣರನ್ನು ಡಾ. ಲೋಹಿಯಾರವರು ಈ ಸಂದರ್ಭದಲ್ಲಿ ಅತ್ಯಂತ ಹೀನಾಯ ಮತ್ತು ಲಘುವಾದ ಮಾತುಗಳಿಂದ ಟೀಕಿಸಿದ ಕಾರಣ ಅವರು ರಾಜಕೀಯವನ್ನು ತ್ಯಜಿಸಿ ಶ್ರೀ ವಿನೋಬಾ ಭಾವೆಯವರ ಭೂದಾನ ಚಳವಳಿಯನ್ನು ಬೆಂಬಲಿಸಿದರು. ಈ ಸಿದ್ಧಾಂತದ ಹೊಯ್ದಾಟದಲ್ಲಿ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರವರು ರಾಜಕೀಯದಿಂದಲೇ ನಿವೃತ್ತಿಯನ್ನು ಹೊಂದಿದರು. ಡಾ. ರಾಮಮನೋಹರ ಲೋಹಿಯಾರವರು ಸೋಷಲಿಸ್ಟ್ (ಸಮಾಜವಾದಿ) ಪಕ್ಷವನ್ನು ಕಟ್ಟಿದರು.

೧೯೫೨ರ ಸಂದರ್ಭದಲ್ಲಿ ಆಚಾರ್ಯ ಕೃಪಲಾನಿಯವರ ನೇತೃತ್ವದಲ್ಲಿ ಕಿಸಾನ್ ಮಜದೂರ ಪ್ರಜಾ ಪಾರ್ಟಿ (ಕೆ.ಎಂ.ಪಿ.ಪಿ.) ಅಸ್ತಿತ್ವಕ್ಕೆ ಬಂದಿತು. ೧೯೫೨ರಲ್ಲಿ ಪಂಚಮಡಿಯಲ್ಲಿ ನಡೆದ ಸಮಾಜವಾದಿ ಸಮ್ಮೇಳದಲ್ಲಿ ಸಮಾಜವಾದಿ ಪಕ್ಷಗಳು ಜೊತೆಗೂಡಿ ದೇಶವನ್ನು ಸಂಪೂರ್ಣವಾಗಿ ಕ್ರಾಂತಿಯತ್ತ ಕೊಂಡೊಯ್ಯಬೇಕೆಂಬ ನಿರ್ಣಯವನ್ನು ಕೈಗೊಳ್ಳಲಾಯಿತು. ೧೯೫೩.ರಲ್ಲಿ ಸಮಾಜವಾದಿ ಪಕ್ಷ ಮತ್ತು ಕಿಸಾನ್ ಮಜದೂರ್ ಪ್ರಜಾಪಾರ್ಟಿ ಮಿಲನವಾಗಿ ಪ್ರಜಾ ಸೋಶಲಿಸ್ಟ್ ಪಾರ್ಟಿ ಉದಯವಾಯಿತು. ವಿಲೀನದ ನಂತರ ಜೆ. ಬಿ. ಕೃಪಲಾನಿ ಅವರು ಮೊದಲ ವರ್ಷದ ಅಧ್ಯಕ್ಷರಾದರು. ೧೯೫೩ರಲ್ಲಿ ಪ್ರಜಾ ಸಮಾಜವಾದಿ ಪಕ್ಷಕ್ಕೆ ಆಚಾರ್ಯ ನರೇಂದ್ರ ದೇವ ಅಧ್ಯಕ್ಷರಾಗಿ, ಡಾ. ರಾಮಮನೋಹರ ಲೋಹಿಯಾ ಪ್ರಧಾನ ಕಾರ್ಯದರ್ಶಿಯಾದರು. ಪ್ರಜಾ ಸಮಾಜವಾದಿ ಪಕ್ಷದ ಅಂಗರಚನೆ, ಸಂವಿಧಾನ, ಬಾವುಟಗಳು ತೀರ್ಮಾನವಾದವು. ಕೆಂಪು ಬಣ್ಣ ಹಿಮ್ಮಡಿಯಲ್ಲಿದ್ದು, ಚರಕ ಹಾಗೂ ಚಕ್ರ ಇರಬೇಕೆಂದು ಒಪ್ಪಂದವಾಯಿತು. ಸೋಷಲಿಸ್ಟ್ ಪಾರ್ಟಿಯ ನೀತಿ ನಿರೂಪಣೆಯನ್ನೇ ಪಿ. ಎಸ್. ಪಿ. ಒಪ್ಪಿಕೊಂಡಿತು. ಕೆ. ಎಂ. ಪಿ. ಪಿ. ಯವರು ಗಾಂಧಿವಾದಿಗಳಾಗಿದ್ದರೆ, ಸೋಷಲಿಸ್ಟರು ಮಾರ್ಕ್ಸ್‌ವಾದಿಗಳಾಗಿದ್ದರು.

೧೯೬೪ರಲ್ಲಿ ಪ್ರಜಾಸೋಶಲಿಸ್ಟ್ ಪಾರ್ಟಿಯ ಅಶೋಕ ಮೆಹತಾರವರು ಯೋಜನಾ ಆಯೋಗದ ಅಧ್ಯಕ್ಷತೆಯನ್ನು ಒಪ್ಪಿಕೊಂಡಿದ್ದರಿಂದ ಪಕ್ಷದಿಂದ ಹೊರಹಾಕಿದರು. ಅವರನ್ನು ಅವರ ಅನುಯಾಯಿಗಳಾದ ನನ್ನಂತಹವರು ಲಕ್ನೋದಲ್ಲಿನ ಸಮ್ಮೇಳನದಲ್ಲಿನ ತೀರ್ಮಾನದಂತೆ ಕಾಂಗ್ರೆಸ್ ಪಕ್ಷದಲ್ಲಿ ವಿಲೀನಗೊಂಡೆವು. ೧೯೬೪ರಲ್ಲಿ ಡಾ. ಲೋಹಿಯಾರವರ ಸಮಾಜವಾದಿ ಪಕ್ಷ ಮತ್ತು ಕಾಂಗ್ರೆಸ್ ವಿಲೀನದಿಂದ ಹೊರಗುಳಿದ ಪ್ರಜಾ ಸೋಷಲಿಸ್ಟ್ ಪಾರ್ಟಿ ವಿಲೀನ ಹೊಂದಿ ಸಂಯುಕ್ತ ಸಮಾಜವಾದಿ ಪಕ್ಷವು ರಚನೆಯಾಯಿತು. ಅದೇ ವರ್ಷ ಪ್ರಜಾ ಸಮಾಜವಾದಿ ಪಕ್ಷ ಮತ್ತೆ ತನ್ನ ಪ್ರತ್ಯೇಕತೆಯನ್ನು ಉಳಿಸಿಕೊಳ್ಳಲು ಹೆಣಗಿತು. ೧೯೭೧ರಲ್ಲಿ ಲೋಕಸಭೆಗೆ ನಡೆದ ಮಧ್ಯಕಾಲೀನ ಚುನಾವಣೆಯಲ್ಲಿ ಎರಡೂ ಪಕ್ಷಗಳು ಸೋಲನ್ನು ಅನುಭವಿಸಬೇಕಾಯಿತು. ೧೯೭೧ರಲ್ಲಿ ಈ ಎರಡೂ ಪಕ್ಷಗಳು ಸೇರಿ ಸಮಾಜವಾದಿ ಪಕ್ಷ ರಚನೆಯಾಯಿತು. ೧೯೭೪ರಲ್ಲಿ ಜಯಪ್ರಕಾಶ ನಾರಾಯಣರವರ ಸಮಗ್ರ ಕ್ರಾಂತಿ ಅಂದೋಲನ ಪ್ರಾರಂಭವಾದಾಗ ಭಾರತದ ಸಮಾಜವಾದಿಗಳು ಈ ಕ್ರಾಂತಿಯಡಿಯಲ್ಲಿ ಒಂದಾದರು. ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ಭೂಗತವಾಗಿದ್ದುಕೊಂಡು ಬಹುದೊಡ್ಡ ಹೋರಾಟ ಮಾಡಿದರು. ೧೯೭೭ರ ಮಹಾಚುನಾವಣೆಯಲ್ಲಿ ಜನತಾ ಪಕ್ಷದಲ್ಲಿ ಸಮಾಜವಾದಿಗಳು ಸಮ್ಮಿಲನಗೊಂಡರು.

ಭಾರತದ ರಾಜಕಾರಣದಲ್ಲಿ ಸಮಾಜವಾದಿಗಳ ಪ್ರಭಾವವು ಅನನ್ಯವಾದುದು. ಭಾರತದ ಮೊದಲನೆಯ ಪ್ರಧಾನಿಯವರಾಗಿದ್ದ ಪಂಡಿತ್ ಜವಹರಲಾಲ್ ನೆಹರುರವರು ಸಹ ಸಮಾಜವಾದದ ಆಕರ್ಷಣೆಗೆ ಒಳಗಾಗಿದ್ದರು. ಪ್ರಾರಂಭದಿಂದಲೂ ಅಂದರೆ, ೧೯೫೩ರಿಂದಲೂ ನೆಹರೂರವರು ಸಮಾಜವಾದಿಗಳನ್ನು ಕಾಂಗ್ರೆಸ್ ಪಕ್ಷದತ್ತ ಸೆಳೆದುಕೊಳ್ಳಲು ನಿರಂತರವಾಗಿ ಪ್ರಯತ್ನಿಸಿದರು. ಇದು ಸಮಾಜವಾದ ಚಳವಳಿ ದುರ್ಬಲವಾಗಲು ಕಾರಣವಾದ ಅಂಶವೂ ಹೌದು.

ಪಂಡಿತ್ ಜವಹರಲಾಲ್ ನೆಹರುರವರ ನಂತರ ಬಂದ ಶ್ರೀಮತಿ ಇಂದಿರಾ ಗಾಂಧಿಯವರಂತೂ ಸಮಾಜವಾದದಲ್ಲಿ ತಮಗೆ ನಂಬಿಕೆ ಇದೆ ಎಂದು ಹೇಳಿದ್ದಷ್ಟೇ ಅಲ್ಲ, ಸಮಾಜವಾದಿಗಳ ಆಲೋಚನೆಗಳನ್ನು ತಮ್ಮ ಪ್ರಣಾಳಿಕೆಯಲ್ಲಿ ತುರುಕಿದರು. ಬ್ಯಾಂಕ್ ರಾಷ್ಟ್ರೀಕರಣ, ರಾಜಧನ ರದ್ದು, ಭೂ-ಒಡೆತನದ ಸಾರ್ವತ್ರೀಕರಣ ಮೊದಲಾದ ಅನೇಕ ವಿಚಾರಗಳನ್ನು ಶ್ರೀಮತಿ ಇಂದಿರಾ ಗಾಂಧಿಯವರು ಸಮಾಜವಾದದಿಂದಲೇ ಪಡೆದಿದ್ದಾರೆ. ಅಷ್ಟೇ ಅಲ್ಲ, ಬಲಪಂಥೀಯ ಪಕ್ಷವೆಂದು ಖ್ಯಾತವಾದ ಬಿ.ಜೆ.ಪಿ. ಕೂಡ ಸಮಾಜವಾದಿಂದ ಪ್ರೇರಣೆ ಪಡೆದಿದೆ.

ಕರ್ನಾಟಕವನ್ನು ಆಳಿದ ಅನೇಕ ಮುಖ್ಯಮಂತ್ರಿಗಳು ತಮಗೆ ಅರಿವು ಇಲ್ಲದೆ ಸಮಾಜವಾದವನ್ನು ಬೆಂಬಲಿಸಿದ್ದುಂಟು. ಕಂದಾಯ ಮಂತ್ರಿಯಾಗಿದ್ದ ಕಡಿದಾಳು ಮಂಜಪ್ಪನವರ ಅಲ್ಪ ಪ್ರಮಾಣದ. ಭೂ - ಸುಧಾರಣೆ ಕೂಡ ಸಮಾಜವಾದದಿಂದ ಪ್ರೇರಣೆ ಪಡೆದಿತ್ತು. ಇನ್ನು ದೇವರಾಜ ಅರಸ್‌ರವರಂತೂ ತಾವು ಸಮಾಜವಾದಿಗಳೆಂದು ಹೇಳಿಕೊಳ್ಳದೇ ಇದ್ದರೂ ಅದರ ಅನೇಕ ಆಲೋಚನೆಗಳನ್ನು

ಅನುಷ್ಠಾನಕ್ಕೆ ತಂದರು ಭೂ-ಸುಧಾರಣೆ, ಹಾವನೂರು ಆಯೋಗದ ಅನುಷ್ಠಾನ, ಜೀತದ ಆಳುಗಳ ಮುಕ್ತಿ, ಮಲ ಹೊರುವ ಪದ್ಧತಿಯ ನಿಷೇಧ - ಮುಂತಾದ ಅವರ ಅನೇಕ ಕಾರ್ಯಕ್ರಮಗಳ ಹಿಂದೆ ಸಮಾಜವಾದದ ಆಶಯವಿದೆ. ಅನಂತರದ ರಾಜಕಾರಣಿಗಳೂ ತಾವು ಸಮಾಜವಾದಿಗಳು ಎಂದು ಹೇಳಿಕೊಳ್ಳಲು ಮುಂದಾಗಿದ್ದನ್ನು ನಾವು ಗಮನಿಸಬಹುದು. ಭಾರತದ ರಾಜಕಾರಣದಲ್ಲಿ ಸಮಾಜವಾದಿಗಳ ಪ್ರಭಾವ ಹಾಗೂ ದುಡಿಮೆ ಮಾನ್ಯ ಮಾಡುವಂತದ್ದು. ಲೋಕನಾಯಕ ಜಯಪ್ರಕಾಶ ನಾರಾಯಣರವರು ಮೂಲತಃ ಒಬ್ಬ ಸಮಾಜವಾದಿ ನಾಯಕರಾಗಿದ್ದರು. ಹಜಾರಿಭಾಗ್ ಜೈಲ್‌ನಿಂದ ತಪ್ಪಿಸಿಕೊಂಡು ಹೋಗಿ ಭೂಗತರಾಗಿ ಕ್ರಾಂತಿಕಾರಿ ಚಟುವಟಿಕೆಗಳ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ಇಂಬು ಕೊಟ್ಟ ಜಯಪ್ರಕಾಶ ನಾರಾಯಣರವರು ನಾಡಿನ ಯುವಕರ ಕಣ್ಮಣಿಗಳು. ಅನಂತರ ಅನೇಕ ಸಮಾಜವಾದಿ ನಾಯಕರು ಭಾರತದ ರಾಜಕಾರಣದಲ್ಲಿ ಬೆಳಗಿದ್ದಾರೆ. ಆಚಾರ್ಯ ನರೇಂದ್ರದೇವ್, ಆಚಾರ್ಯ ಕೃಪಲಾನಿ, ಯೂಸುಫ್ ಮೆಹ್ರಾಲಿ, ಪೀಟರ್ ಆಳ್ವಾರೀಸ್, ನಾಥ್ ಪೈ, ಅಶೋಕ ಮೆಹತಾ, ಅಚ್ಯುತ ಪಟವರ್ಧನ್, ಎನ್. ಜಿ. ಗೋರೆ, ಮೀನು ಮಸಾನಿ, ಅಶ್ರಫ್ ಆಲಿ, ಡಾ. ರಾಮಮನೋಹರ ಲೋಹಿಯಾ, ಎಸ್. ಎಂ. ಜೋಷಿ, ಪ್ರಮಿಳಾ ಉಷಾ ಮೆಹತಾ, ಮೃಣಾಲ್ ಗೋರೆ, ಪ್ರೊ. ಮಧುದಂಡವತೆ, ಕೇರಳದ ಮುಖ್ಯಮಂತ್ರಿಯಾಗಿದ್ದ ಪಟ್ಟಂಥಾನು ಪಿಳ್ಳೈ, ಮಾಜಿ ಪ್ರಧಾನಿಗಳಾದ ಚಂದ್ರಶೇಖರ್, ಜಾರ್ಜ್ ಫರ್ನಾಂಡಿಸ್, ಮುಲಾಯಂ ಸಿಂಗ್ ಯಾದವ್, ಲಾಲೂ ಪ್ರಸಾದ್ ಯಾದವ್, ಮೊದಲಾದ ಒಂದು ಸಮಾಜವಾದಿಗಳ ತಂಡವೇ ಭಾರತದ ರಾಜಕಾರಣದಲ್ಲಿದೆ. ಭಾರತದ ಚುನಾವಣೆಗಳಲ್ಲಿ ಸಮಾಜವಾದಿ ಪಕ್ಷವು ಪ್ರಾರಂಭದಲ್ಲಿ ಅಂಥ ಸಾಧನೆಯೇನೂ ಮಾಡಲಿಲ್ಲ. ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ಅದು ಕೇವಲ ಹನ್ನೆರಡು ಸ್ಥಾನಗಳಲ್ಲಿ ಮಾತ್ರ ಜಯಗಳಿಸಿತು. ದೇಶದ ನೂರ ಎಪ್ಪತ್ತೆರಡು ವಿಧಾನಸಭಾ ಕ್ಷೇತ್ರಗಳನ್ನು ಮಾತ್ರ ಅದು ತನ್ನದಾಗಿಸಿಕೊಂಡಿತು. ಎರಡನೆ ಸಾರ್ವತ್ರಿಕ ಚುನಾವಣೆಯ ವೇಳೆಗೆ ಅದು ೧೯ ಲೋಕಸಭಾ ಸ್ಥಾನಗಳನ್ನು ಮತ್ತು ೧೯೫ ವಿಧಾನಸಭಾ ಸ್ಥಾನಗಳನ್ನು ತನ್ನದ್ದಾಗಿಸಿಕೊಂಡಿತು. ಮೂರನೇ ಸಾರ್ವತ್ರಿಕ ಚುನಾವಣೆ ವೇಳೆಯಲ್ಲಿ ೧೮ ಲೋಕಸಭಾ ಸ್ಥಾನಗಳನ್ನು ಹಾಗೂ ೩೦೮ ವಿಧಾನಸಭಾ ಸ್ಥಾನಗಳನ್ನು ಅದು ತನ್ನ ಮಡಿಲಿಗೆ ಹಾಕಿಕೊಂಡಿತು. ಮೂರನೇ ಸಾರ್ವತ್ರಿಕ ಚುನಾವಣೆಯ ವೇಳೆಗೆ ಸಮಾಜವಾದಿ ಪಕ್ಷಗಳು ಕಾಂಗ್ರೆಸ್ ಪಕ್ಷಕ್ಕೆ ಪ್ರಬಲ ವಿರೋಧವನ್ನು ಒಡ್ಡಲು ಸಮರ್ಥವಾದವು. ೧೯೬೯ ರಲ್ಲಿ ನಡೆದ ಕಾಂಗ್ರೆಸ್ ಪಕ್ಷದ ಮಹಾವಿಭಜನೆ ಹಾಗೂ ಶ್ರೀಮತಿ ಇಂದಿರಾಗಾಂಧಿಯವರು ಸಮಾಜವಾದಿ ತತ್ವಗಳನ್ನು ಅಳವಡಿಸಿಕೊಂಡ ಕಾರಣ ಈ ಸಮಾಜವಾದಿ ಪಕ್ಷಗಳು ತಮ್ಮ ನೆಲೆ ಕಳೆದುಕೊಂಡವು. ೧೯೭೧ರ ಚುನಾವಣೆ ವೇಳೆಗೆ ಅದು ಕೇವಲ ಮೂರು ಸ್ಥಾನಗಳನ್ನು ಮಾತ್ರ ಗಳಿಸಿಕೊಳ್ಳುವಲ್ಲಿ ಯಶಸ್ವಿಯಾಯಿತು. ತುರ್ತು ಪರಿಸ್ಥಿತಿಯು ಜಾರಿಗೆ ಬಂದ ನಂತರ ಸಮಾಜವಾದಿ ನಾಯಕರುಗಳಲ್ಲಿ ನೈಜ ಜಾಗೃತಿ ಉಂಟಾಯಿತು. ಕಾಂಗ್ರೆಸ್ ಪಕ್ಷದ ನಯವಾದ ಮಾತುಗಳಿಗೆ ಮರುಳಾದ ಬಗ್ಗೆ ಪಶ್ಚಾತ್ತಾಪ ಆಯಿತು. ಆದರೆ ಅಷ್ಟು ಹೊತ್ತಿಗೆ ಅಖಿಲ ಭಾರತ ಮಟ್ಟದಲ್ಲಿ ಸಮಾಜವಾದಿ ಪಕ್ಷಗಳು ಸಂಪೂರ್ಣವಾಗಿ ಛಿದ್ರವಾಗಿದ್ದವು. ಅವರೆಲ್ಲ ಬೇರೆಬೇರೆ ರಾಜಕೀಯ ಪಕ್ಷಗಳಲ್ಲಿ ಚದುರಿಹೋಗಿದ್ದರು. ಸಮಾಜವಾದಿಗಳು ಸತತ ಪಕ್ಷವನ್ನು ಒಡೆಯದೆ ಒಟ್ಟಾಗಿ ಇದ್ದರೆ ಇಲ್ಲವೇ, ೧೯೫೭ರ ಪ್ರಧಾನಿ ನೆಹರುರವರ ಕರೆಗೆ ಓಗೊಟ್ಟು ಒಟ್ಟಾಗಿ ಕಾಂಗ್ರೆಸ್ ಪಕ್ಷವನ್ನು ಸೇರಿದ್ದರೆ ಈ ದೇಶದಲ್ಲಿ ಸಮಾಜವಾದವನ್ನು ಯಶಸ್ವಿಯಾಗಿ ಜಾರಿಗೆ ತರಬಹುದಿತ್ತು.

## ಕರ್ನಾಟಕದಲ್ಲಿ ಸಮಾಜವಾದಿ ಚಳವಳಿ

ಕರ್ನಾಟಕದಲ್ಲಿ ೧೯೩೬ರಿಂದಲೂ ಕೂಡ ಕಾಂಗ್ರೆಸ್ ಪಕ್ಷದ ಒಳಗಿನ ಸಮಾಜವಾದಿ ಗುಂಪು ಕ್ರಿಯಾಶೀಲವಾಗಿತ್ತು. ೧೯೪೨ರ ಕ್ವಿಟ್ ಇಂಡಿಯಾ ಚಳವಳಿ ಸಂದರ್ಭದಲ್ಲಿ ಜಯಪ್ರಕಾಶ ನಾರಾಯಣರವರು ಕೂಡ ಕರ್ನಾಟಕಕ್ಕೆ ಭೇಟಿ ಕೊಟ್ಟಿದ್ದರು. ಹಳೆಯ ಮೈಸೂರು ಪ್ರಾಂತ್ಯದಲ್ಲಿ ಜರುಗಿದ ಬ್ರಾಹ್ಮಣೇತರ ಚಳವಳಿಯ ಮುಖ್ಯಾಂಶಗಳು ಸಮಾಜವಾದದಿಂದ ಎರವಲು ಪಡೆದುದು ಆಗಿತ್ತು. ಪ್ರಜಾ ಮಿತ್ರ ಮಂಡಳಿ ಹಾಗೂ ಪ್ರಜಾ ಪಕ್ಷಗಳು ಸಹ ತಮ್ಮ ಆಶಯಗಳೊಡನೆ ಸಮಾಜವಾದವನ್ನು ಗುರಿಯಾಗಿ ಇಟ್ಟುಕೊಂಡಿದ್ದವು. ೧೯೪೬ರಲ್ಲಿ ವಿದ್ಯಾರ್ಥಿ ಕಾಂಗ್ರೆಸ್ ಮುಖಂಡರಾಗಿದ್ದ ಎಂ. ಪಿ. ಈಶ್ವರಪ್ಪ, ವೇದಾಂತ ಹೆಮ್ಮಿಗೆ, ಎಂ. ಎಸ್. ಗುರುಪಾದಸ್ವಾಮಿ ಮೊದಲಾದವರು ಮೈಸೂರು ಸಂಸ್ಥಾನದಲ್ಲಿ ಸಮಾಜವಾದಿ ಚಳುವಳಿಯು ಬೇರೂರಲು ಮುಖ್ಯ ಕಾರಣಕರ್ತರು. ೧೯೪೬ರಲ್ಲಿ ಮೈಸೂರಿನಲ್ಲಿ ಸಮಾಜವಾದಿ ವಿದ್ಯಾರ್ಥಿ ಕಾಂಗ್ರೆಸ್‌ನ ಸಭೆಯನ್ನು ಉದ್ದೇಶಿಸಿ ಸಮಾಜವಾದಿ ನಾಯಕರಾದ ಅಶೋಕ ಮೆಹತಾರವರು ಹಾಗೂ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರವರು ಭಾಷಣ ಮಾಡಬೇಕಾಗಿತ್ತು. ಆಗಿನ ಸರಕಾರ ಅಂದರೆ, ಮೈಸೂರಿನ ಅಳರಸರ ಸರಕಾರ ಈ ಸಭೆಯು ಮೈಸೂರಿನಲ್ಲಿ ನಡೆಯದಂತೆ ೧೪೪ನೇ ಸೆಕ್ಷನನ್ನು ಜಾರಿ ಮಾಡಿತು. ಆಗ ಸಭೆಯು ನಂಜನಗೂಡಿನಲ್ಲಿ ನಡೆಯಿತು. ಇದು ಕರ್ನಾಟಕದಲ್ಲಿ ಸಮಾಜವಾದಿ ಚಳುವಳಿಯು ಪ್ರಾರಂಭಗೊಂಡ ಮೊದಲ ಘಟ್ಟವಾಗಿದೆ. ೧೯೪೬ರಲ್ಲಿ ಜಯಪ್ರಕಾಶ ನಾರಾಯಣರವರು ಮೈಸೂರು ಸಂಸ್ಥಾನದ ಪ್ರವಾಸ ಕೈಗೊಂಡರು. ಅವರಿಗೆ ಅದ್ದೂರಿಯ ಸ್ವಾಗತ ದೊರೆಯಿತು.

ಕೆ. ಕಾಳಯ್ಯ, ಡಿ. ಎಂ. ಪ್ರಾಣೇಶರಾವ್, ಪರಮೇಶ್ವರಪ್ಪ ದಾಸ್ ಸಾಲೋಮನ್, ಖಾದ್ರಿ ಶಾಮಣ್ಣ ಶ್ರೀಕಂಠಪ್ಪ ನಾಗಭೂಷಣ, ಕೃಷ್ಣಮೂರ್ತಿ ಮೊದಲಾದವರು ಅಂದಿನ ಸಮಾಜವಾದಿ ಚಳವಳಿಯಲ್ಲಿದ್ದ ಯುವ ಮುಖಂಡರುಗಳು. ೧೯೪೮ರಲ್ಲಿ ಕಾಂಗ್ರೆಸ್ ಪಕ್ಷದಿಂದ ಹೊರಬಂದ ಸಮಾಜವಾದಿಗಳು ಸೋಷಲಿಸ್ಟ್ ಪಾರ್ಟಿಯ ಸಮ್ಮೇಳನವನ್ನು ಶಿವಮೊಗ್ಗದಲ್ಲಿ ಸಂಘಟನೆ ಮಾಡಿದರು. ಅದರ ಉದ್ಘಾಟನೆಯನ್ನು ಅಶೋಕ ಮೆಹತಾರವರು ನೆರವೇರಿಸಿದರು. ಸಿ.ಜಿ.ಕೆ. ರೆಡ್ಡಿಯವರು ಸಮ್ಮೇಳನದ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸಿದ್ದರು. ೧೯೫೧ರಲ್ಲಿ ನಡೆದ ಕಾಗೋಡು ಸತ್ಯಾಗ್ರಹ ಕರ್ನಾಟಕದ ಸಮಾಜವಾದಿ ಚಳುವಳಿಯಲ್ಲಿ ಅತ್ಯಂತ ಪ್ರಮುಖವಾದ ಘಟನೆಯಾಗಿದೆ. ಗೇಣಿದಾರರ ಸಂಘ ಕಾಗೋಡಿನ ಗೇಣಿದಾರರಿಗೆ ಭೂ ಮಾಲೀಕತ್ವ ಕೊಡಿಸಲು ಮುಂದಾಯಿತು. ಈ ಸತ್ಯಾಗ್ರಹದ ನೇತೃತ್ವವನ್ನು ಡಾ. ರಾಮಮನೋಹರ ಲೋಹಿಯಾರವರು ವಹಿಸಿಕೊಂಡು ಈ ಚಳವಳಿಗೆ ರಾಷ್ಟ್ರೀಯ ಖ್ಯಾತಿಯನ್ನು ತಂದುಕೊಟ್ಟರು. ಶಿವಮೊಗ್ಗ ಜಿಲ್ಲೆಯ ಸಾಗರ ತಾಲ್ಲೂಕಿನ ಕಾಗೋಡಿನಂತಹ ಒಂದು ಸಣ್ಣ ಗ್ರಾಮಕ್ಕೆ ಆಗಮಿಸಿದ ಡಾ. ಲೋಹಿಯಾರವರು ಪ್ರತಿಬಂಧಕಾಜ್ಞೆಯನ್ನು ಮೀರಲು ಮುಂದಾದಾಗ ಅವರನ್ನು ಸ್ಥಳೀಯ ಪೋಲೀಸರು ಬಂಧಿಸಿದರು. ಮೊದಲು ಅವರನ್ನು ಶಿವಮೊಗ್ಗ ಜೈಲಿನಲ್ಲಿ ಇರಿಸಿಕೊಂಡು ಅನಂತರ ಬೆಂಗಳೂರಿನ ಸೆಂಟ್ರಲ್ ಜೈಲಿಗೆ ವರ್ಗಾಯಿಸಲಾಯಿತು. ಸ್ವಾತಂತ್ರ್ಯದ ನಂತರ ಜನಹಿತದ ಸಲುವಾಗಿ ಹೋರಾಟ ಮಾಡಲು ಬಂದ ಡಾ. ಲೋಹಿಯಾರವರನ್ನು ಬಂಧಿಸಿದ್ದು ಒಂದು ಮಹತ್ವದ ರಾಷ್ಟ್ರೀಯ ಸುದ್ದಿ ಆಯಿತು. ಯುಗೋಸ್ಲೋವಿಯಾ ಸರಕಾರದ ಆಹ್ವಾನದ ಮೇರೆಗೆ ವಿದೇಶಕ್ಕೆ ಹೊರಟಿದ್ದ ಲೋಹಿಯಾರವರನ್ನು ಪ್ರಧಾನಿ ಪಂಡಿತ್ ಜವಹರಲಾಲ್ ನೆಹರುರವರ ಸಲಹೆಯಂತೆ ಅಂದಿನ ಮೈಸೂರು ಸರಕಾರ ಬಿಡುಗಡೆ ಮಾಡಿತು. ಆದರೆ ಡಾ. ಲೋಹಿಯಾರವರು ಕರ್ನಾಟಕದಲ್ಲಿ ಸಮಾಜವಾದಿ ಪಕ್ಷಗಳಿಗೆ ಭದ್ರ ನೆಲೆಯನ್ನು ಒದಗಿಸಿ ವಿದೇಶಕ್ಕೆ ಹೋದರು. ಕಾಂಗ್ರೆಸ್‌ಗೆ ಪರ್ಯಾಯವಾಗಿ ವಿರೋಧ ಪಕ್ಷವಾಗಿ ಬೆಳೆಯುವ ಅವಕಾಶವನ್ನು ಲೋಹಿಯಾರವರು ಕಲ್ಪಿಸಿದರು. ಅಂದಿನಿಂದ ಭೂ - ಸುಧಾರಣೆ ಸಮಾಜವಾದಿಗಳ ಪ್ರಮುಖ ಧ್ಯೇಯವಾಯಿತು. ಇದೇ ಸಂದರ್ಭದಲ್ಲಿ ಸಮಾಜವಾದಿ ನಾಯಕರಾದ ಶಾಂತವೇರಿ ಗೋಪಾಲಗೌಡರು ತಮ್ಮ ಅಪೂರ್ವ ಸಂಘಟನೆ ಹಾಗೂ ಅಪರಿಮಿತ ನಿಷ್ಠೆಯಿಂದ ಜನಮನವನ್ನು ಗೆದ್ದು ರಾಜ್ಯದಲ್ಲಿ ಸಮಾಜವಾದಿ ನಾಯಕರಾದರು. ಸ್ವಾತಂತ್ರ್ಯದ ನಂತರ ಮೈಸೂರಿನ ದಸರಾ ಸಂದರ್ಭದಲ್ಲಿ ಮಹಾರಾಜರನ್ನು ಆನೆಯ ಮೇಲೆ ಕೂರಿಸಿ ಮೆರವಣಿಗೆ ಮಾಡುವುದನ್ನು ಅಂದಿನ ಸಮಾಜವಾದಿಗಳು ವಿರೋಧಿಸಿ ಆಂದೋಳನಕ್ಕೆ ಮುಂದಾದರು. ಸರಕಾರ ಸಮಾಜವಾದಿಗಳ ಆಶಯವನ್ನು ಮನಗಂಡು ಮಹಾರಾಜರನ್ನು ಆನೆಯ ಮೇಲೆ ಕೂರಿಸಿ ಮೆರವಣಿಗೆ ಮಾಡುವ ಪದ್ಧತಿಯನ್ನು ಕೈಬಿಟ್ಟಿತು. ಇದು ಸಮಾಜವಾದಿ ಚಳವಳಿಗೆ ದೊರೆತ ಜಯವಾಯಿತು. ೧೯೬೭ರ ತನಕ ಕರ್ನಾಟಕದಲ್ಲಿ ಸಮಾಜವಾದದ ಹಿನ್ನೆಲೆಯುಳ್ಳ ರಾಜಕೀಯ ಪಕ್ಷಗಳು ಜೀವಂತವಾಗಿದ್ದವು. ಅಷ್ಟೇ ಅಲ್ಲ, ತುಂಬ ಪ್ರಭಾವಶಾಲಿಯೂ ಆಗಿದ್ದವು.

ಸಮಾಜವಾದಿ ಚಳುವಳಿಯಲ್ಲಿ ಗೇಣೇದಾರರ ಹಿತಕಾಯಲು ನಡೆಸಿದ 'ಸೊಂಡೂರು' ಸತ್ಯಾಗ್ರಹ ಅತ್ಯಂತ ಪ್ರಮುಖವಾದ ಘಟನೆಯಾಗಿದೆ. ೧೯೭೩ರಲ್ಲಿ ಈ ಘಟನೆ ನಡೆಯಿತು. ಆಗ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದವರು, ಡಿ. ದೇವರಾಜ ಅರಸು. ಅವರ ಸಚಿವ ಸಂಪುಟದಲ್ಲಿ ಹಣಕಾಸು ಖಾತೆ ಸಚಿವರಾಗಿದ್ದ. ಎಂ.ವೈ. ಘೋರ್ಪಡೆಯವರು 'ಇನಾಂ ಅಬಾಲಿಷನ್ ಆಕ್ಟ್'ನ ದೌರ್ಬಲ್ಯವನ್ನು ಬಳಸಿಕೊಂಡು ಸ್ವಹಿತ ರಕ್ಷಿಸಿಕೊಳ್ಳಲು ಮುಂದಾಗಿದ್ದರು. ಸೊಂಡೂರು ಕಾರ್ತಿಕಸ್ವಾಮಿ ದೇವಸ್ಥಾನದ ಹದಿನೈದು ಎಕರೆ ಜಮೀನನ್ನು ಹದಿನೈದಕ್ಕೂ ಹೆಚ್ಚು ರೈತರು ತಲತಲಾಂತರದಿಂದ ಅನುಭವಿಸಿಕೊಂಡು ಬರುತ್ತಿದ್ದರು. ಅವರಿಗೆ ಜಮೀನಿನ ಸ್ವಾಧೀನಕೊಡಿಸಲು ಪಟ್ಟಭದ್ರ ಹಿತಾಸಕ್ತಿಗಳು ಒಪ್ಪಲಿಲ್ಲ. ಆಗ ಸೋಷಲಿಸ್ಟ್ ಪಾರ್ಟಿಯ ಜಿಲ್ಲಾ ಅಧ್ಯಕ್ಷರಾಗಿದ್ದ ಎಂ. ಪಿ. ಪ್ರಕಾಶ್ ನೇತೃತ್ವದಲ್ಲಿ ೩೧ ದಿನಗಳ ಕಾಲ ರೈತರ ಪ್ರತಿಭಟನೆ ನಡೆಯಿತು. ವೈ. ತಿಮ್ಮಯ್ಯ ಅವರು ರೈತ ಪ್ರತಿನಿಧಿಗಳ ಅಧ್ಯಕ್ಷರಾಗಿದ್ದರು. ಈ ಹೋರಾಟಕ್ಕೆ ಸೋಷಲಿಸ್ಟ್ ಪಾರ್ಟಿಯ ರಾಷ್ಟ್ರೀಯ ಅಧ್ಯಕ್ಷರಾದ ಜಾರ್ಜ್‌ಫರ್ನಾಂಡಿಸ್, ಶ್ರೀಮತಿ ಮೃಣಾಳ ಗೋರೆ, ರಾಜ್ಯ ಸೋಷಲಿಸ್ಟ್ ಪಾರ್ಟಿಯ ಅಧ್ಯಕ್ಷರಾದ ಕೆ.ಜಿ. ಮಹೇಶ್ವರಪ್ಪ ಹಾಗೂ ನಾಯಕರಾದ ಜೆ. ಹೆಚ್. ಪಟೇಲ್‌ರವರು ಆಗಮಿಸಿದ್ದರು. ವಾಸ್ತವಾಂಶವನ್ನು ತಿಳಿದ ಮುಖ್ಯಮಂತ್ರಿ ದೇವರಾಜ ಅರಸುರವರು ರೈತರಿಗೆ ನ್ಯಾಯ ದೊರಕಿಸಿಕೊಟ್ಟರು. ರಾಜ್ಯದ ಸಮಾಜವಾದಿ ನಾಯಕರಿಗೆ ಜನತೆಯನ್ನು ತಲುಪಲು ಈ ಹೋರಾಟ ಸಹಾಯಕವಾಯಿತು.

೧೯೭೧ರಲ್ಲಿ ಮಹಾಮೈತ್ರಿ ಮಾಡಿಕೊಂಡ ನಂತರ ಸಮಾಜವಾದಿ ಪಕ್ಷವು ಕ್ಷೀಣಿಸತೊಡಗಿತು. ಸಮಾಜವಾದವು ಕರ್ನಾಟಕ ರಾಜ್ಯದ ರಾಜಕಾರಣಕ್ಕೆ ತನ್ನ ಅಮೂಲ್ಯ ಕೊಡುಗೆಯನ್ನು ಕೊಡುವುದರೊಂದಿಗೆ, ಸಾಹಿತ್ಯ, ಸಂಸ್ಕೃತಿ, ಸಂಗೀತ, ನಾಟಕ, ಕಲೆ, ಪತ್ರಿಕೋದ್ಯಮ ಮುಂತಾದ ಕ್ಷೇತ್ರಗಳಿಗೂ ಅದು ಮಹತ್ವದ ಕೊಡುಗೆಯನ್ನು ಕೊಟ್ಟಿದೆ. ಡಾ। ಎಂ. ಗೋಪಾಲಕೃಷ್ಣ ಅಡಿಗ, ದಿನಕರ

ದೇಸಾಯಿ, ಡಾ. ಅನಂತಮೂರ್ತಿ, ಪಿ. ಲಂಕೇಶ್, ಯು.ಆರ್. ಅನಂತಮೂರ್ತಿ, ಖಾದ್ರಿ ಶಾಮಣ್ಣ, ಕೆ. ಪಿ. ಪೂರ್ಣಚಂದ್ರ ತೇಜಸ್ವಿ, ಪ್ರೊ. ಚಂದ್ರಶೇಖರ ಪಾಟೀಲ, ದೇವನೂರು ಮಹದೇವ, ವಿಷ್ಣುನಾಯಕ, ಮೊದಲಾದ ಅನೇಕರು ಸಾಹಿತ್ಯ ಕ್ಷೇತ್ರದಲ್ಲಿ ಸಮಾಜವಾದಿ ತಾತ್ವಿಕ ನೆಲೆಗಟ್ಟಿನಿಂದ ಕೆಲಸ ಮಾಡಿದ್ದಾರೆ.

೧೯೭೦ರ ದಶಕದ ಆದಿ ಭಾಗದಿಂದಲೇ ಕರ್ನಾಟಕದ ಸಮಾಜವಾದಿ ಪಕ್ಷದಿಂದ ಮುಖ್ಯವಾಗಿ ಲೇಖಕರು, ಬರಹಗಾರರು, ಕಲಾವಿದರು, ಯುವಜನರ ಒಂದು ಪಡೆ ಪ್ರತ್ಯೇಕಗೊಂಡು ಸಾಹಿತ್ಯಕ್ಷೇತ್ರ ಸೇರಿದಂತೆ ಸಮಾಜದೊಂದಿಗೆ ಸ್ವತಂತ್ರವಾಗಿ ಬೆರೆಯಲು ಪ್ರಾರಂಭಿಸಿತು. ರಾಜ್ಯದ ಹಲವಾರು ಜಿಲ್ಲೆಗಳಲ್ಲಿ ಚಟುವಟಿಕೆಗಳನ್ನು ಚುರುಕುಗೊಳಿಸಲಾಯಿತು. ಸಮಾಜವಾದಿ ಪಕ್ಷದ ಯುವವಿಭಾಗ ''ಸಮಾಜವಾದಿ ಯುವಜನ ಸಭಾ''ದಿಂದ ಹೊರಬಿದ್ದಿದ್ದ ಈ ಗುಂಪು, ಪ್ರತ್ಯೇಕವಾಗಿ ಕಾರ್ಯನಿರತವಾಯಿತು. ಇದರ ಮುಖಂಡರಾಗಿ ಪ್ರೊ. ಎಂ.ಡಿ. ನಂಜುಂಡಸ್ವಾಮಿ, ಪಿ. ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ಪ್ರೊ. ಚಂದ್ರಶೇಖರ ಪಾಟೀಲ, ದೇವನೂರ ಮಹಾದೇವ ಪ್ರೊ. ಕೆ. ರಾಮದಾಸ್ ಮುಂತಾದವರು ನೇಮಿಸಿಕೊಂಡರು. ಜಿಲ್ಲೆ ಜಿಲ್ಲೆಗಳಲ್ಲಿ ಸಮಾಜವಾದಿ ಯುವಜನ ಸಭಾ ರಚಿಸಿ, ಯುವಜನರನ್ನು ಕಾರ್ಯಶೀಲಗೊಳಿಸಿದರು. ಕರ್ನಾಟಕ ವಿಚಾರವಾದಿ ಒಕ್ಕೂಟವನ್ನು ಸ್ಥಾಪಿಸಿ, ಕರ್ನಾಟಕ ಲೋಹಿಯಾ ವಿಚಾರ ಮಂಚವನ್ನು ಸ್ಥಾಪಿಸಿ ಕಿರುಪುಸ್ತಕಗಳ ಪ್ರಕಟಣೆ, ಮೂಢನಂಬಿಕೆಗಳ ವಿರುದ್ಧ ಜನಜಾಗೃತಿ ಆಂದೋಲನ, ಜಾತಿ ವಿನಾಶ ಸಮ್ಮೇಳನಗಳ ಸಂಘಟನೆ, ಸಾಯಿಬಾಬಾ ವಿರುದ್ಧ ಚಳವಳಿ, ಜಾತಿ ಸಮ್ಮೇಳನಗಳ ವಿರುದ್ಧ ಪ್ರತಿಭಟನೆಗಳ ಸಂಘಟನೆ ಮುಂತಾದ ಚಟುವಟಿಕೆಗಳನ್ನು ವ್ಯಾಪಕವಾಗಿ ಪ್ರಾರಂಭಿಸಿದರು.

೧೯೭೪ರಲ್ಲಿ ಗುಜರಾತ್-ಬಿಹಾರಗಳಲ್ಲಿ ಲೋಕನಾಯಕ ಜಯಪ್ರಕಾಶನಾರಾಯಣರ ನೇತೃತ್ವದಲ್ಲಿ ಕಾಣಿಸಿಕೊಂಡ ನವ ನಿರ್ಮಾಣ ಚಳವಳಿಗೆ ಸಮಾಜವಾದಿ ಯುವಜನ ಸಭಾ ಸಂಪೂರ್ಣವಾಗಿ ಪ್ರತಿಕ್ರಿಯಿಸಿತು; ತನ್ನ ಅಸ್ತಿತ್ವವನ್ನೇ ಅದರಲ್ಲಿ ವಿಲೀನಗೊಳಿಸಿತು. ರಾಜ್ಯಾದ್ಯಂತ ನವನಿರ್ಮಾಣ ಕ್ರಾಂತಿಯ ಅಲೆ ಎದ್ದಿತು. ಜೆ.ಪಿ. ರಾಜ್ಯ ಪ್ರವಾಸ ಕೈಗೊಂಡಾಗ ರಾಜ್ಯದಲ್ಲಿನ ಯಾವ ರಾಜಕೀಯ ಪಕ್ಷವೂ ಅವರನ್ನು ರಾಜ್ಯದ ಮೂಲೆಗಳಿಗೆ ಕರೆದೊಯ್ಯಲಿಲ್ಲ; ಅವರಿಗೆ ಬೆಂಗಳೂರು, ಮೈಸೂರು, ಹುಬ್ಬಳ್ಳಿ, ದಾವಣಗೆರೆ, ಬೆಳಗಾವಿಗಳಲ್ಲಿ ಬಹಿರಂಗ ಸಭೆಗಳನ್ನು ಏರ್ಪಾಟು ಮಾಡುವುದರಲ್ಲಿ ಸಮಾಜವಾದಿ ಯುವಜನ ಸಭಾ ಸಕ್ರಿಯ ಪಾತ್ರ ವಹಿಸಿತು.

ಕರ್ನಾಟಕಾದ್ಯಂತ ಜೆ.ಪಿ. ಚಳವಳಿಯನ್ನು ವ್ಯಾಪಕವಾಗಿಸಿದ್ದು ಸಮಾಜವಾದಿ ಯುವಜನ ಸಭಾ ರಾಜಶೇಖರ ಕೋಟಿ ಅವರ ಸಂಪಾದಕತ್ವದಲ್ಲಿ ಆಗ ಧಾರವಾಡದಿಂದ ಪ್ರಕಟವಾಗುತ್ತಿದ್ದ ಆಂದೋಲನ ವಾರಪತ್ರಿಕೆ ಜೆ.ಪಿ. ಚಳವಳಿಗೆ ಮುಖವಾಣಿಯಾಯಿತು. ರಾಜ್ಯದ ವಿಶ್ವವಿದ್ಯಾಲಯಗಳಲ್ಲಿದ್ದ ಯುವಜನರು ಜೆ.ಪಿ. ಚಳವಳಿಗೆ ಮಾರು ಹೋದರು. ಯುವಜನರ ಪಡೆ ಇಡೀ ರಾಜ್ಯಾದ್ಯಂತ ಬಿರುಸಿನ ಪ್ರಚಾರವನ್ನು ಪ್ರಾರಂಭಿಸಿತು; ಕಾಂಗ್ರೆಸ್ ವಿರುದ್ಧ, ಇಂದಿರಾ ಗಾಂಧಿ ಸರ್ವಾಧಿಕಾರದ ವಿರುದ್ಧ, ಇಂಡಿಯಾ ಅಂದರೆ ಇಂದಿರಾ ಎಂದಿದ್ದ ಕಾಂಗ್ರೆಸ್ಸಿನ ರಾಷ್ಟ್ರೀಯ ಅಧ್ಯಕ್ಷರ ದೇವಕಾಂತ ಬರುವಾ ವಿರುದ್ಧ ಜನಾಭಿಪ್ರಾಯ ಮೂಡಿಸಿತು; ಜಾತಿ ಪದ್ಧತಿ, ರುದ್ಧ ಶಿಕ್ಷಣ ನೀತಿಯ ಮಾರ್ಪಾಡಿಗೆ ಒತ್ತಾಯಿಸಿ, ಭ್ರಷ್ಟಾಚಾರದ ವಿರುದ್ಧ ಯುವಜನರು ದೊಡ್ಡ ದನಿ ಎತ್ತಿದರು.

ಸುಮಾರು ಒಂದೂವರೆ ವರ್ಷ ಕಾಲ ನವನಿರ್ಮಾಣ ಚಳವಳಿ ಪ್ರವಾಹಕ್ಕೆ ಕ್ರಮೇಣ ಕರ್ನಾಟಕದ ರಾಜಕೀಯ ಪಕ್ಷಗಳು ಸ್ಪಂದಿಸಿದವು. ಅಂದಿನ ಸಂಸ್ಥಾ ಕಾಂಗ್ರೆಸ್, ಜನಸಂಘ ಮುಂತಾದ ಪಕ್ಷಗಳ ಮುಖಂಡರಲ್ಲದೆ ಗಾಂಧಿವಾದಿ-ಸರ್ವೋದಯವಾದಿ ಜನರೂ ಚಳವಳಿ ಕಡೆ ಒಲಿದರು. ನೋಡ ನೋಡುತ್ತಿದ್ದ ಹಾಗೆ ಜೆ.ಪಿ. ಚಳವಳಿಯನ್ನು - ಇಡೀ ದೇಶದಲ್ಲಿ ಮಾಡಿದ ಹಾಗೆ - ರಾಜ್ಯದಲ್ಲೂ ರಾಜಕೀಯ ಮುಖಂಡರು ತಮ್ಮ ಕೈವಶ ಮಾಡಿಕೊಂಡರು.

ಜೂನ್ ೨೫ರ ರಾತ್ರಿ ದೇಶದಲ್ಲಿ ತುರ್ತುಪರಿಸ್ಥಿತಿಯನ್ನು ಜಾರಿಗೊಳಿಸಲಾಯಿತು. ಜೆಪಿ ಗೃಹಬಂಧನಕ್ಕೆ ಗುರಿಯಾದರು ದೇಶಾದ್ಯಂತ ವಿರೋಧ ಪಕ್ಷದ ನಾಯಕರನ್ನು ಬಂಧಿಸಲಾಯಿತು. ಜನಸಂಘದ ಆಡ್ವಾಣಿ, ಸಮಾಜವಾದಿ ಪಕ್ಷದ ಮಧು ದಂಡವತೆ, ಜೆ.ಎಚ್. ಪಟೇಲ್ ಮುಂತದಾದವರನ್ನು ಬೆಂಗಳೂರಿನ ಜೈಲಿನಲ್ಲಿಡಲಾಯಿತು. ದೇಶದ ವಿವಿಧ ಮೂಲೆಗಳಲ್ಲೂ ವಿರೋಧ ಪಕ್ಷದ ನಾಯಕರು ಜೈಲು ಸೇರಿದರು. ಸಮಾಜವಾದಿ ಪಕ್ಷಕ್ಕೆ ಅಂದು ರಾಷ್ಟ್ರೀಯ ಅಧ್ಯಕ್ಷರಾಗಿದ್ದ ಜಾರ್ಜ್ ಫರ್ನಾಂಡೀಸ್ ತುರ್ತುಪರಿಸ್ಥಿತಿಯ ವಿರುದ್ಧ ಅಭೂತಪೂರ್ವ ರೀತಿಯಲ್ಲಿ ಸಂಘರ್ಷ ನಡೆಸಿದರು. ೧೯೪೨ರ ಕಾಲದಲ್ಲಿ ಸಮಾಜವಾದಿಗಳು ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಜೆಪಿ, ಲೋಹಿಯಾ ಮುಂತಾದವರು ನಡೆಸಿದ ರೀತಿಯನ್ನು ನೆನಪಿಸುವ ಹಾಗೆ ಜಾರ್ಜ್ ನೇತೃತ್ವದಲ್ಲಿ ತುರ್ತು ಪರಿಸ್ಥಿತಿ ವಿರುದ್ಧ ಹೋರಾಟ ನಡೆಯಿತು. ಕಡೆಗೆ ಅವರೂ ಬಿಹಾರದ ಮುಜಫರಪುರ ಜೈಲಿನಲ್ಲಿ ಬಂದಿಯಾದರು.

ಜನವರಿ ೧೯೭೭ರಲ್ಲಿ ತುರ್ತು ಪರಿಸ್ಥಿತಿಯನ್ನು ಸಡಿಲಿಸಲಾಯಿತು. ಪ್ರಧಾನಿ ಇಂದಿರಾ ಸಲಹೆಯಂತೆ ಅಂದಿನ ರಾಷ್ಟ್ರಪತಿ ಫಕ್ರುದ್ದೀನ್ ಅವರು ಮಾರ್ಚ್‌ನಲ್ಲಿ ಚುನಾವಣೆ ಘೋಷಿಸಿದರು. ವಿರೋಧ ಪಕ್ಷಗಳ ಹಾಗೆ ಸಮಾಜವಾದಿ ಪಕ್ಷವೂ ಆ ಕ್ಷಣದಲ್ಲಿ ಅತಂತ್ರಾವಸ್ಥೆಯಲ್ಲಿತ್ತು; ನಾಯಕರೆಲ್ಲರೂ ಬಹುತೇಕವಾಗಿ ಜೈಲಿನಲ್ಲಿದ್ದರು. ಚನಾವಣಾ ಪ್ರಕ್ರಿಯೆ ಪ್ರಾರಂಭವಾಗುತ್ತಿದ್ದ ಹಾಗೆ ಮತ್ತೆ ದೇಶಾದ್ಯಂತ ಸ್ವಾತಂತ್ರ್ಯದ ಗಾಳಿ ಬೀಸಲಾರಂಭಿಸಿತು. ವಿರೋಧ ಪಕ್ಷಗಳು ಒಂದುಗೂಡತೊಡಗಿದವು. ಜಾರ್ಜ್ ಫರ್ನಾಂಡೀಸ್ ಜೈಲಿನಲ್ಲಿದ್ದೇ ಪಕ್ಷದ ಮುಂದಿನ ಹಂತದ ಹೆಜ್ಜೆಗಳಿಗೆ ಮಾರ್ಗದರ್ಶನ ನೀಡುತ್ತಿದ್ದರು. ಕಾಂಗ್ರೆಸ್ಸಿನ ವಿರುದ್ಧ ಪಕ್ಷಗಳೆಲ್ಲಾ ಒಂದುಗೂಡಬೇಕೆಂಬ ಜೆ.ಪಿ. ಒತ್ತಾಯಕ್ಕೆ ಮಾನ್ಯತೆ ಸಿಕ್ಕಿತು. ಸಂಸ್ಥಾ ಕಾಂಗ್ರೆಸ್, ಜಗಜೀವನರಾಂ ಅವರ ಕಾಂಗ್ರೆಸ್ ಫಾರ್ ಡೆಮಾಕ್ರಸಿ, ಸಮಾಜವಾದಿ ಜನತಾ ಪಕ್ಷ ರಚನೆಯಾಯಿತು. ಜೆಪಿ ಮತ್ತು ಆಚಾರ್ಯ ಕೃಪಲಾನಿ ಮಾರ್ಗದರ್ಶನದಲ್ಲಿ ಎಲ್ಲಾ ಪಕ್ಷಗಳೂ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಜನತಾ ಪಕ್ಷದಲ್ಲಿ ವಿಲೀನಗೊಂಡವು. ಸಮಾಜವಾದಿ ಪಕ್ಷ ಕೂಡ ಅಂದೂ ತನ್ನ ಸ್ವತಂತ್ರ ಅಸ್ತಿತ್ವವನ್ನು ಬಿಟ್ಟುಕೊಟ್ಟಿತು. ೧೯೩೪ರಿಂದ ನಡೆದ ಪ್ರಕ್ರಿಯೆಯ ಪ್ರತಿಫಲವಾಗಿ ರೂಪುಗೊಂಡಿದ್ದ ಸಮಾಜವಾದಿ ಪಕ್ಷ ವಿದ್ಯುಕ್ತವಾಗಿ ೧೯೭೭ರಲ್ಲಿ ಇಲ್ಲವಾಯಿತು.

ಕರ್ನಾಟಕ ಕಂಡ ಎರಡು ಅತ್ಯಂತ ಪ್ರಬಲ ಚಳವಳಿಗಳೆಂದರೆ ದಲಿತ ಚಳವಳಿ ಮತ್ತು ರೈತ ಚಳವಳಿ. ಎರಡೂ ಚಳವಳಿಗಳು ರಾಜಕೀಯ ಪಕ್ಷಗಳ ನಾಯಕರಿಂದ ಒಡಮೂಡಿದವುಗಳಲ್ಲ. ವಿಚಾರವಂತರು, ಬುದ್ಧಿಜೀವಿಗಳು, ವಿದ್ಯಾವಂತರು ಪ್ರಾರಂಭಿಸಿದ ಚಳವಳಿಗಳಿವು. ೧೯೭೪ರಲ್ಲೇ ವಿದ್ಯಾವಂತ, ಪ್ರಜ್ಞಾವಂತ, ಸ್ವಾಭಿಮಾನಿ ದಲಿತ ಚಳವಳಿಯ ಮೊಳಕೆಗಳು ಕಾಣಿಸಿಕೊಂಡವು. ಇದೇ ಕಾಲಾನುಕ್ರಮದಲ್ಲಿ ರಾಜ್ಯದ ಅಭೂತಪೂರ್ವ ಸ್ವಾಭಿಮಾನಿ ಆಂದೋಲನವಾಗಿ ರೂಪು ತಾಳಿತು.

ರೈತ ಚಳವಳಿಯೂ ಅಷ್ಟೇ. ಹಳ್ಳಿಗಾಡಿನ ರೈತರಲ್ಲಿ ಅಪೂರ್ವ ಸ್ವಾಭಿಮಾನವನಕಳ್ಳು ಹಾಗೂ ವಿಚಾರವಂತಿಕೆಯನ್ನು ಮೂಡಿಸಿದ ಹೆಗ್ಗಳಿಕೆ ರೈತ ಚಳವಳಿಯದ್ದು. ಹಳ್ಳಿಐಗಾಡಿನಿಂದ ಹೋದ ರಾಜಕೀಯ ಪುಢಾರಿಗಳು ಹಳ್ಳಿಗಳನ್ನು ಕೊಳ್ಳೆ ಹೊಡೆಯುವ ಕಾರ್ಯದಲ್ಲೇ ಮಗ್ನರಾಗಿದ್ದಾರೆಂಬ ಕಟು ಸತ್ಯವನ್ನು ಜನತೆಗೆ ಮನಗಾಣಿಸಿಕೊಟ್ಟದ್ದು ರೈತ ಚಳವಳಿಯ ವೈಶಿಷ್ಟ್ಯವಾದರೆ, ದಲಿತ ಸಮುದಾಯಗಳಿಂದಲೇ ಬಂದು ಮೀಸಲು ಕ್ಷೇತ್ರಗಳಿಂದ ಚುನಾಯಿತರಾಗಿ ರಾಜಕೀಯ ಪಕ್ಷಗಳ ಪುಢಾರಿಗಳಾಗಿ ಬೆಳೆದ ದಲಿತ ಮುಖಂಡರು ಸಮುದಾಯ ಹಿತವನ್ನು ಕಡೆಗಾಣಿಸಿದ ಸತ್ಯವನ್ನು ದಲಿತರ ಕೇರಿ ಕೇರಿಗಳಲ್ಲಿ ಮನಗಾಣಿಸಿ ಕೊಟ್ಟ ವೈಶಿಷ್ಟ್ಯ ದಲಿತ ಚಳವಳಿಯದು.

ಗಮನಿಸಬೇಕಾದ ಸಂಗತಿಯೆಂದರೆ ದಲಿತ ಚಳವಳಿ ಮತ್ತು ರೈತ ಚಳವಳಿಯ ಬೇರುಗಳು ಕರ್ನಾಟಕದ ಸಮಾಜವಾದಿ ಚಿಂತನೆ-ಆಂದೋಲನ-ಚಳವಳಿಯಲ್ಲಿ ಕಾಣುವುದು. ಆ ಮಟ್ಟಿಗೆ ಸಮಾಜವಾದಿ ಚಳವಳಿ ನಿಜಕ್ಕೂ ಅನುಪಮವಾದ ಮಹತ್ವವನ್ನು ಪಡೆದಿದೆ. ಕರ್ನಾಟಕ ಕಂಡ ರೈತ ಹೋರಾಟ ಹಾಗೂ ದಲಿತರು ಪ್ರಾರಂಭಿಸಿದ ಸ್ವಾಭಿಮಾನ ಆಂದೋಲನದ ಹಿನ್ನೆಲೆ ಸಮಾಜವಾದದಿಂದಲೇ ಪ್ರೇರಿತವಾಗಿದೆ. ಶಿವಮೊಗ್ಗ ಜಿಲ್ಲೆಯು ರೈತ ಹೋರಾಟದ ಕಾರ್ಯಸ್ಥಾನ. ಹಾಗೆಯೇ ಸಮಾಜವಾದದ ಜನನ ಕೂಡ ಇಲ್ಲಿಂದಲೇ ನಡೆದಿದೆ.

ಭಾರತದಲ್ಲಿನ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಪ್ರಾಣತ್ಯಾಗ ಮಾಡಿದ ಶ್ರೀಮತಿ ಸ್ನೇಹಲತಾ ರೆಡ್ಡಿಯವರು ಕರ್ನಾಟಕದ ಪ್ರಸಿದ್ಧ ಸಮಾಜವಾದಿ ಚಿಂತಕರಲ್ಲಿ ಒಬ್ಬರಾಗಿದ್ದರು. ಅವರ ಪತಿ ಪಟ್ಟಾಭಿರಾಮರೆಡ್ಡಿಯವರು ರಾಷ್ಟ್ರದ ಪ್ರಸಿದ್ಧ ಸಮಾಜವಾದಿ ಚಿಂತಕರು ಹಾಗೂ ಚಲನಚಿತ್ರ ನಿರ್ದೇಶಕರಾಗಿದ್ದರು. ಅನೇಕ ರಂಗಕರ್ಮಿಗಳನ್ನು ಸಮಾಜವಾದವು ಈ ಸಂದರ್ಭದಲ್ಲಿ ರಾಜ್ಯಕ್ಕೆ ಕೊಟ್ಟದೆ. ೧೯೬೦ ಮತ್ತು ೧೯೭೦ರ ದಶಕದಲ್ಲಿ ಕರ್ನಾಟಕ ರಾಜ್ಯದ ಸೃಜನಶೀಲ ಪ್ರತಿಭೆಗಳಿಗೆ ಸಮಾಜವಾದವು ಪ್ರೋತ್ಸಾಹದ ನೀರೆರೆದಿದೆ. ಅನೇಕ ನಾಯಕರು ಸಮಾಜವಾದದ ಹಿನ್ನೆಲೆಯಲ್ಲಿ ಮೂಡಿಬಂದಿದ್ದಾರೆ. ಶ್ರೀಯುತರುಗಳವರಾದ ಶಾಂತವೇರಿ ಗೋಪಾಲಗೌಡ, ಎಂ. ಎಸ್. ಗುರುಪಾದಸ್ವಾಮಿ, ಸದಾಶಿವರಾಯರು, ಅಮ್ಮೆಂಬಳ ಬಾಳಪ್ಪ, ದಿನಕರ ದೇಸಾಯಿ, ಎ. ಹೆಚ್. ಶಿವಾನಂದಸ್ವಾಮಿ, ಪಾರ್ಪಕಜೆ ಈಶ್ವರ ಭಟ್ಟ, ಕೆ. ಜಿ. ಮಹೇಶ್ವರಪ್ಪ, ಜೆ. ಬಿ. ಮಲ್ಲಾರಾಧ್ಯ, ಬಾಪು ಹೆದ್ದೂರ ಶೆಟ್ಟಿ, ರಮೇಶ್ ಬಂದಗದ್ದೆ, ವೈ. ಎಸ್. ಸುಬ್ರಮಣ್ಯ, ಎಸ್. ವೆಂಕಟರಾಮ್, ಅಮ್ಮೆಂಬಳ ಆನಂದ, ಎ. ಜಿ. ನಾಯಕ್, ಎಂ. ಪಿ. ಪ್ರಕಾಶ್, ಕಾಶಿನಾಥ್ ಬೇಲೂರೆ, ವೈಜನಾಥ ಪಾಟೀಲ್, ದಯಾನಂದ ಸಾಗರ್ ಬಿರಾದಾರ, ಎಸ್.ಕೆ. ಕಾಂತಾ, ಡಾ. ದೇವೂಳ್‌ಗಾಂವ್‌ಕರ್, ಅಬ್ಬಿಗೇರಿ ವಿರೂಪಾಕ್ಷಪ್ಪ, ನೀಲಗಂಗಯ್ಯ ಪೂಜಾರ್, ಗಣಪತಿಯಪ್ಪ, ಟಿ. ಕೆ. ಮೆಹಮೂದ್, ಎಸ್. ಶಿವಪ್ಪ, ಜೆ. ಎಂ. ಇಮಾಮ್, ಎಸ್. ಎಲ್. ಶಿವಪ್ಪ, ಎಂ. ಪಿ. ಈಶ್ವರಪ್ಪ, ಮುಲ್ಕಾ ಗೋವಿಂದರೆಡ್ಡಿ, ಬಿ. ಎಲ್. ಗೌಡ, ಬಿ. ಹುಚ್ಚೇಗೌಡ, ಎಂ. ನಾಗಪ್ಪ, ಅಜೀಜ್ ಸೇಠ್, ಕೆ. ಲಕ್ಕಪ್ಪ, ಆರ್. ಎ. ಬಿಡಪ್, ಎಸ್. ಎಂ. ಕೃಷ್ಣ, ಎಂ. ಎಸ್. ಗುರುಪಾದಸ್ವಾಮಿ, ಜೆ. ಹೆಚ್. ಪಟೇಲ್, ಎಸ್. ಬಂಗಾರಪ್ಪ,

ಕಾಗೋಡು ತಿಮ್ಮಪ್ಪ, ಜೆ. ಬಸವಣ್ಯಪ್ಪ ಕೋಣಂದೂರು ಲಿಂಗಪ್ಪ ಮೊದಲಾದವರು ಸಮಾಜವಾದದ ಹಿನ್ನೆಲೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡಿದ್ದಾರೆ.

## ಕರ್ನಾಟಕದಲ್ಲಿ ಸಮಾಜವಾದಿ ಪಕ್ಷಗಳ ಚುನಾವಣಾ ಸಾಧನೆ

೧೯೫೨ರ ಮೊದಲ ಸಾರ್ವತ್ರಿಕ ಚುನಾವಣೆಯಲ್ಲಿ ಲೋಕಸಭೆಗೆ ಕಿಸಾನ್ ಮಜದೂರ್ ಪ್ರಜಾ ಪಾರ್ಟಿ ಹಾಗೂ ಸೋಶಲಿಸ್ಟ್ ಪಾರ್ಟಿಗಳು ಸ್ಪರ್ಧಿಸಿದ್ದವು. ಕಿಸಾನ್ ಮಜದೂರ್ ಪಾರ್ಟಿಯಿಂದ ಲೋಕಸಭೆಗೆ ತುಮಕೂರು ಕ್ಷೇತ್ರದಿಂದ ಎಂ. ಎಲ್. ಶ್ರೀಕಂಠಯ್ಯ, ಬೆಂಗಳೂರು ದಕ್ಷಿಣದಿಂದ ಕೆ. ಶ್ರೀನಿವಾಸ್‌ರಾವ್, ಮಂಡ್ಯದಿಂದ ಎಂ. ಸಿ. ಲಿಂಗೇಗೌಡ, ಮೈಸೂರಿನಿಂದ ಎಂ. ಎಸ್. ಗುರುಪಾದ ಸ್ವಾಮಿ ಹಾಗೂ ಎಸ್. ಎಂ. ಸಿದ್ಧಯ್ಯ - ಇವರುಗಳು ಸ್ಪರ್ಧಿಸಿದ್ದರು. ಅದೇ ರೀತಿ ಸೋಷಲಿಸ್ಟ್ ಪಾರ್ಟಿ ಮೂಲಕ ತುಮಕೂರಿನಿಂದ ಖಾದ್ರಿಶಾಮಣ್ಣ ಬೆಂಗಳೂರು ಉತ್ತರದಿಂದ ಸಿ. ಜಿ. ಕೆ. ರೆಡ್ಡಿ ಹಾಗೂ ಶಿವಮೊಗ್ಗದಿಂದ ಟಿ. ಎಸ್. ಕಲ್ಲಯ್ಯ ಅವರು ಸ್ಪರ್ಧಿಸಿದ್ದರು.

೧೯೫೨ರ ವಿಧಾನಸಭೆ ಚುನಾವಣೆಗೆ ಕರ್ನಾಟಕ ಕಿಸಾನ್ ಮಜದೂರ್ ಪ್ರಜಾಪಾರ್ಟಿಯಿಂದ ಸ್ಪರ್ಧಿಸಿದ್ದ ಅಭ್ಯರ್ಥಿಗಳು ಅಂದರೆ, ಪಾವಗಡದಿಂದ ಪಿ. ನಾರಾಯಣ ನಾಯಕ್, ಕೊರಟಗೆರೆ ಬಿ. ಮತಕ್ಷೇತ್ರದಿಂದ ಎಸ್. ಹನುಮಂತಯ್ಯ ಹಾಗೂ ನಾಭಿರಾಜಯ್ಯ, ಕುಣಿಗಲ್ ಕ್ಷೇತ್ರದಿಂದ ಬಿ. ಬೈರಪ್ಪ ತುಮಕೂರಿನಿಂದ ಟಿ. ಎನ್. ಕೆಂಪಹೊನ್ನಯ್ಯ, ಗುಬ್ಬಿಯಿಂದ ಬಿ. ಜಿ. ಭಗವಾನ್, ಬೆಂಗಳೂರು ಬಸವನಗುಡಿಯಿಂದ ಆರ್. ದಯಾನಂದ ಸಾಗರ್, ಕಬ್ಬನ್‌ಪೇಟೆಯಿಂದ ಕೆ. ಎಂ. ನಾಗಣ್ಣ, ದೊಡ್ಡ ಬಳ್ಳಾಪುರದಿಂದ ಹೆಚ್. ಸಿ. ಸುಬ್ಬಣ್ಣ, ಮಾಗಡಿಯಿಂದ ಬಿ. ಸಿಂಗಾರಿಗೌಡ, ಹೊಸಕೋಟೆಯಿಂದ ಬಿ. ಚನ್ನಭೈರೇಗೌಡ, ಚನ್ನಪಟ್ಟಣದಿಂದ ಬಿ. ಕೆ. ಪುಟ್ಟರಾಮಯ್ಯ, ಮದ್ದೂರಿನಿಂದ ಎಸ್. ಸಿ. ಮಲ್ಲಯ್ಯ, ಪಾಂಡವಪುರದಿಂದ ಬಿ. ಚೆನ್ನಯ್ಯ, ಮೈಸೂರು ದಕ್ಷಿಣದಿಂದ ಎಂ. ವೆಂಕಟೇಶಯ್ಯ ಹಾಗೂ ಯಳಂದೂರಿನಿಂದ ಬಿ. ರಾಚಯ್ಯ.

ಈ ಪಕ್ಷದಿಂದ ಗೆದ್ದ ಅಭ್ಯರ್ಥಿಗಳು ಅಂದರೆ ಮಳವಳ್ಳಿ ದ್ವಿಕ್ಷೇತ್ರದಿಂದ ಬಿ. ಪಿ. ನಾಗರಾಜಮೂರ್ತಿ. ಇವರು ೧೮,೩೧೪ ಮತಗಳನ್ನು ಪಡೆದು ಜಯಶೀಲರಾದರು. ಅವರ ಪ್ರತಿಸ್ಪರ್ಧಿ, ಕಾಂಗ್ರೆಸ್‌ನ ಕೆ. ವಿ. ವೀರಪ್ಪ - ಅವರು ೧೮,೧೧೪ ಮತಗಳನ್ನು ಪಡೆದಿದ್ದರು. ತರೀಕೆರೆಯಿಂದ ಟಿ. ನಾಗಪ್ಪ - ಇವರು ೮, ೯೩ ಮತಗಳನ್ನು ಪಡೆದು ಆಯ್ಕೆಯಾದರು. ಅವರ ಪ್ರತಿಸ್ಪರ್ಧಿ, ಕಾಂಗ್ರೆಸ್‌ನ ಟಿ. ಬಿ. ಬಸಪ್ಪ ಅವರು ೮,೦೫೯ ಮತಗಳನ್ನು ಪಡೆದರು. ಟಿ. ನರಸೀಪುರದಿಂದ ಕಿಸಾನ್ ಮಜದೂರ್ ಪಕ್ಷದಿಂದ ಟಿ. ಎಸ್. ಶ್ರೀನಿವಾಸ್ ಅಯ್ಯಂಗಾರ್ ಅವರು ೧೦,೦೫೭ ಮತಗಳನ್ನು ಪಡೆದು ಆಯ್ಕೆಯಾದರು. ಅವರ ಪ್ರತಿಸ್ಪರ್ಧಿ, ಕಾಂಗ್ರೆಸ್‌ನ ಟಿ. ಪಿ. ಬೋರಯ್ಯ ಅವರು ೮,೬೦೭ ಮತಗಳನ್ನು ಪಡೆದರು. ಚಾಮರಾಜನಗರದಿಂದ ಯು. ಎಂ. ಮಾದಪ್ಪ - ಅವರು ೭,೫೮೯ ಮತಗಳನ್ನು ಪಡೆದು ಆಯ್ಕೆಯಾದರು. ಚನ್ನಗಿರಿಯಿಂದ ಎಲ್. ಸಿದ್ಧಪ್ಪನವರು ೧೭,೨೯೨ ಮತಗಳನ್ನು ಪಡೆದು ಆಯ್ಕೆಯಾದರು. ಜಗಳೂರಿನಿಂದ ಜೆ. ಎಂ. ಇಮಾಮ್ ಅವರು ೧೪,೧೨೩ ಮತಗಳನ್ನು ಪಡೆದು ಆಯ್ಕೆಯಾದರು. ಅಂದರೆ ಕಿಸಾನ್ ಮಜದೂರ್ ಪಕ್ಷದಿಂದ ಆರು ಜನ ಅಭ್ಯರ್ಥಿಗಳು ವಿಧಾನಸಭೆಯನ್ನು ಪ್ರವೇಶಿಸಿದ್ದರು.

ಸೋಶಲಿಸ್ಟ್ ಪಾರ್ಟಿಯ ಅಭ್ಯರ್ಥಿಗಳು ಎಂದರೆ ಮಾಲೂರಿನಿಂದ ಟಿ. ನಾರಾಯಣಸ್ವಾಮಿ, ಬಂಗಾರಪೇಟೆಯಿಂದ ನಾಗಭೂಷಣಗೌಡ, ಗುಡಿಬಂಡೆಯಿಂದ ಬಿ. ವಿ. ನಾರಾಯಣರೆಡ್ಡಿ, ಮಧುಗಿರಿಯಿಂದ ಪಿ. ಆರ್. ಮಾಧವರಾವ್, ಕೊರಟಗೆರೆಯಿಂದ ಕೆ. ಭೀಮಯ್ಯ, ತಿಪಟೂರಿನಿಂದ ಕೆ. ಪಿ. ರೇವಣಸಿದ್ಧಯ್ಯ ಹಾಗೂ ಚಿಕ್ಕಮಗಳೂರಿನಿಂದ ಲಕ್ಷ್ಮಣಗೌಡ, ಹೊಸನಗರ ಕ್ಷೇತ್ರದಿಂದ ಶಾಂತವೇರಿ ಗೋಪಾಲಗೌಡರು ೧೩,೭೨೨ ಮತಗಳನ್ನು ಪಡೆದು ಕಾಂಗ್ರೆಸ್‌ನ ಎ. ಆರ್. ಬದರಿನಾರಾಯಣ ಅವರನ್ನು ಸೋಲಿಸಿದರು. ೧೧,೪೯೮ ಮತಗಳನ್ನು ಪಡೆದ ಮುಲ್ಕಾ ಗೋವಿಂದರೆಡ್ಡಿಯವರು ಕಾಂಗ್ರೆಸ್ ಅಭ್ಯರ್ಥಿಯನ್ನು ಸೋಲಿಸಿ ಚಿತ್ರದುರ್ಗ ಕ್ಷೇತ್ರದಿಂದ ವಿಧಾನಸಭೆಯನ್ನು ಪ್ರವೇಶಿಸಿದರು.

## ೧೯೫೭ರ ಚುನಾವಣೆ

೧೯೫೭ರ ಚುನಾವಣೆಯಲ್ಲಿ ಪಿ. ಎಸ್. ಪಿ. ಪಕ್ಷ ಹನ್ನೊಂದು ಲೋಕಸಭೆ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅವುಗಳೆಂದರೆ ಬೆಳಗಾವಿಯಿಂದ ಹೆದ್ದೂರಶೆಟ್ಟಿ ವಿರೂಪಾಕ್ಷಪ್ಪ ಚೆನ್ನಬಸಪ್ಪ, ಉತ್ತರ ಕನ್ನಡದಿಂದ ದಿವಾಕರ ಮಹಾಬಲೇಶ್ವರ ರುದ್ರ, ಗುಲಬರ್ಗದಿಂದ ಆರ್. ವಿ. ಬಿಡಪ್, ಶಿವಮೊಗ್ಗದಿಂದ ಟಿ. ಎಲ್. ಕಲ್ಲಯ್ಯ, ಮಂಡ್ಯದಿಂದ ಎಂ. ಸಿ. ಲಿಂಗೇಗೌಡ, ತಿಪಟೂರಿನಿಂದ ಬಿ. ಹುಚ್ಚೇಗೌಡ, ತುಮಕೂರಿನಿಂದ ಬಿ. ಪಿ. ಗಂಗಾಧರ. ಬೆಂಗಳೂರಿನಿಂದ ಎಂ. ಶಿವಲಿಂಗಯ್ಯ, ಮೈಸೂರಿನಿಂದ ಎಂ. ಎಸ್. ಗುರುಪಾದಸ್ವಾಮಿ,

ಉಡುಪಿಯಿಂದ ಡಿ. ಮೋಹನರಾವ್. ಈ ಕ್ಷೇತ್ರಗಳಲ್ಲಿ ಈ ಚುನಾವಣೆಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಎಂದರೆ ಚಿತ್ರದುರ್ಗದಿಂದ ಸ್ಪರ್ಧಿಸಿದ್ದ ಅವರು ಗಳಿಸಿದ ಮತಗಳು, ೧,೨೯,೮೪೮ ಅಂದರೆ ಶೇಕಡ ೫೨.೨೪ ರಷ್ಟು ಮತಗಳಿಸಿ ಆಯ್ಕೆಯಾದರು. ಅವರ ವಿರುದ್ಧ ಕಾಂಗ್ರೆಸ್ಸಿನ ಎಸ್. ರಂಗರಾವ್ - ೧,೧೮,೬೪೯ ಮತಗಳನ್ನು ಗಳಿಸಿದ್ದರು. ಇದು ಶೇಕಡ ೪೭.೭೬.

೧೯೫೭ರ ವಿಧಾನಸಭೆ ಚುನಾವಣೆಯಲ್ಲಿ ಪಿ. ಎಸ್. ಪಿ. ಪಕ್ಷದಿಂದ ಆಯ್ಕೆಯಾದವರೆಂದರೆ ಬೀದರ್ ಜಿಲ್ಲೆಯ ಹುಲಸೂರದಿಂದ ಮಾಧವರಾವ್ ಅವರು ೧೨, ೧೧೬ ಮತಗಳನ್ನು ಪಡೆದಿದ್ದರು. ಕುರುಗೋಡಿನಿಂದ ಎಂ. ಎಂ. ಜೆ. ಸದ್ಯೋಜಾತಪ್ಪ ಅವರು ಕಾಂಗ್ರೆಸ್ಸಿನ ಎಂ. ದಾನಪ್ಪ ಅವರ ವಿರುದ್ಧ ಜಯಗಳಿಸಿದರು. ಅವರು ಪಡೆದ ಮತಗಳು ೩೮,೫೫೦. ಶ್ರವಣಬೆಳಗೊಳದಿಂದ ಎನ್. ಜೆ. ನರಸಿಂಹೇಗೌಡ ಅವರು ೧೬,೯೨೯ ಮತಗಳನ್ನು ಪಡೆದು ಆಯ್ಕೆಯಾದರು. ತಿಪಟೂರಿನಿಂದ ಕೆ. ಪಿ. ರೇವಣಸಿದ್ಧಪ್ಪನವರು ೧೬,೦೬೩ ಮತಗಳನ್ನು ಪಡೆದು ಆಯ್ಕೆಯಾದರು. ಸಿ. ಕೆ. ರಾಜಯ್ಯ ಶೆಟ್ಟಿ ಅವರು ಚಿಕ್ಕನಾಯಕನಹಳ್ಳಿ ಕ್ಷೇತ್ರದಿಂದ ೧೪, ೮೫೬ ಮತಗಳನ್ನು ಪಡೆದು ಆಯ್ಕೆಯಾದರು. ತುಮಕೂರಿನಿಂದ ಜಿ. ಎನ್. ಪುಟ್ಟಣ್ಣ ಅವರು ೧೪,೫೫೫ ಮತಗಳನ್ನು ಪಡೆದು ಆಯ್ಕೆಯಾದರು. ಚೆನ್ನಪಟ್ಟಣದಿಂದ ಬಿ.ಕೆ. ಪುಟ್ಟರಾಮಯ್ಯ ಅವರು ೧೪,೩೪೩ ಮತಗಳನ್ನು ಪಡೆದು ಆಯ್ಕೆಯಾದರು. ಕನಕಪುರ ಕ್ಷೇತ್ರದಿಂದ ಎಂ. ಸಿ. ಲಿಂಗೇಗೌಡ ಅವರು ೧೫, ೭೨೫ ಮತಗಳನ್ನು ಪಡೆದು ಆಯ್ಕೆಯಾದರು, ಚಾಮರಾಜನಗರದಿಂದ ಯು. ಎಂ. ಮಾದಪ್ಪ ೨೧,೬೪೮ ಮತಗಳನ್ನು ಪಡೆದು ಆಯ್ಕೆಯಾಗಿದ್ದರೆ, ಹರಿಹರದಿಂದ ಎಂ. ರಾಮಪ್ಪ ಅವರು ೨೨,೨೧೨ ಮತಗಳನ್ನು ಪಡೆದು ಆಯ್ಕೆಯಾದರು. ಕುಂದಾಪುರದಿಂದ ವಿ. ಶ್ರೀನಿವಾಸ ಶೆಟ್ಟಿ ಅವರು ೧೬,೬೯೩ ಮತಗಳನ್ನು ಪಡೆದು ಆಯ್ಕೆಯಾದರು. ದಾವಣಗೆರೆಯಿಂದ ಕೆ. ಟಿ. ಜಂಬಣ್ಣ ಅವರು ೧೯, ೫೩೮ ಮತಗಳನ್ನು ಪಡೆದು ಆಯ್ಕೆಯಾದರು. ಈ ಅವಧಿಯಲ್ಲಿ ನಡೆದ ಉಪ-ಚುನಾವಣೆಯಲ್ಲಿ ನಂಜನಗೂಡಿನಿಂದ ಎನ್. ರಾಚಯ್ಯನವರನ್ನು ಸೋಲಿಸಿ ಜೆ. ಬಿ. ಮಲ್ಲಾರಾಧ್ಯ ಅವರು ವಿಧಾನಸಭೆಗೆ ಆಯ್ಕೆಯಾದರು. ವಿರಾಜಪೇಟೆಯಿಂದ ಕೆ. ಪಿ. ಕರುಂಬಯ್ಯ ಅವರು ಆಯ್ಕೆಯಾದರು. ಒಟ್ಟು ೧೯ ಜನ ಪಿ. ಎಸ್. ಪಿ. ಅಭ್ಯರ್ಥಿಗಳು ಈ ಸಂದರ್ಭದಲ್ಲಿ ರಾಜ್ಯ ವಿಧಾನಸಭೆಯಲ್ಲಿದ್ದರು. ಈ ಕಾಲದಲ್ಲಿ ಸೋತ ಪ್ರಮುಖ ಅಭ್ಯರ್ಥಿಗಳೆಂದರೆ ಕಾರವಾರದಿಂದ ಬಿ. ಪಿ. ಕದಂ, ಹೊನ್ನಾವರದಿಂದ ಡಿ. ಕೆ. ನಾಯಕ್, ಭಾಲ್ಕಿಯಿಂದ ಭೀಮಣ್ಣ ಶಂಕರಪ್ಪ, ಸಿರಗುಪ್ಪದಿಂದ ಸಿ. ಎಂ. ರೇವಣಸಿದ್ಧಯ್ಯ, ಕೊಪ್ಪಳದಿಂದ ಅಂಗಡಿ ಚೆನ್ನಬಸಪ್ಪ, ಭದ್ರಾವತಿಯಿಂದ ಎಂ. ಪಿ. ಈಶ್ವರಪ್ಪ, ಹೊನ್ನಾಳಿ ಡಿ. ಪರಮೇಶ್ವರಪ್ಪ, ಪಾಂಡವಪುರದಿಂದ ಚಾಮಯ್ಯ, ಮೈಸೂರಿನಿಂದ ವೇದಾಂತ ಹೆಮ್ಮಿಗೆ ಹಾಗೂ ಯಳಂದೂರಿನಿಂದ ಕೆ. ಪಿ. ಶಾಂತಮೂರ್ತಿ ಮುಂತಾದವರು.

## ೧೯೬೨ರ ಚುನಾವಣೆ

೧೯೬೨ರ ಲೋಕಸಭಾ ಚುನಾವಣೆಯಲ್ಲಿ ಸುಮಾರು ೧೦ ಅಭ್ಯರ್ಥಿಗಳು ಪಿ. ಎಸ್. ಪಿ.ಯಿಂದ ಸ್ಪರ್ಧಿಸಿದ್ದರು. ಅದರಲ್ಲಿ ಯಾರೂ ಜಯವನ್ನು ಪಡೆಯಲಿಲ್ಲ. ಬೀದರ್‌ನಿಂದ ಶಾಮಸುಂದರ್, ಧಾರವಾಡ ದಕ್ಷಿಣದಿಂದ ಎಸ್. ಆರ್. ನೇಸ್ವಿ, ಚಿತ್ರದುರ್ಗದಿಂದ ಜೆ. ಬಸಪ್ಪ, ಶಿವಮೊಗ್ಗದಿಂದ ವಿ. ಕೆ. ಲಕ್ಷ್ಮಣಗೌಡ, ಹಾಸನದಿಂದ ಡಿ. ಆರ್. ಕರೀಗೌಡ ಹಾಗೂ ತಿಪಟೂರಿನಿಂದ ಸಿ. ಕೆ ರಾಜಯ್ಯ ಶೆಟ್ಟಿ - ಸ್ಪರ್ಧಿಸಿದ್ದವರಲ್ಲಿ ಪ್ರಮುಖರು.

೧೯೬೨ರ ವಿಧಾನಸಭೆ ಚುನಾವಣೆಯಲ್ಲಿ ಪಿ. ಎಸ್. ಪಿ. ಪಕ್ಷ ಅತ್ಯುತ್ತಮ ಸಾಧನೆಯನ್ನು ಮಾಡಿದೆ. ೨೨ ಜನ ಅಭ್ಯರ್ಥಿಗಳು ಈ ಚುನಾವಣೆಯಲ್ಲಿ ವಿಧಾನಸಭೆಗೆ ಆಯ್ಕೆಯಾಗಿದ್ದರು. ಅವರುಗಳೆಂದರೆ ಭಾಲ್ಕಿಯಿಂದ ಭೀಮಣ್ಣ ಶಿವಲಿಂಗಪ್ಪ, ಹಡಗಲಿಯಿಂದ ಅಂಗಡಿ ಚೆನ್ನಬಸಪ್ಪ, ಹೊಸಪೇಟೆಯಿಂದ ಶ್ರೀಮತಿ ಮುರಾರಿ ಕಮಲಾ ಎಂ. ಶ್ರೀರಾಮಲು, ಹೊನ್ನಾಳಿಯಿಂದ ಡಿ. ಪರಮೇಶ್ವರಪ್ಪ, ಕಾಪುವಿನಿಂದ ಬಿ. ಭಾಸ್ಕರ ಶೆಟ್ಟಿ, ಕಾರ್ಕಳದಿಂದ ದಯಾನಂದ ಕಲ್ಲೆ, ಮೂಡಿಗೆರೆಯಿಂದ ಕೆ. ಹೆಚ್. ರಂಗನಾಥ್, ಅರಸೀಕೆರೆಯಿಂದ ಬಿ. ಪಿ. ಬೋಪಣ್ಣ, ಗಂಡಸಿಯಿಂದ ಹೆಚ್. ಆರ್. ಕೇಶವಮೂರ್ತಿ, ತುರುವೇಕೆರೆಯಿಂದ ಬಿ. ಹುಚ್ಚೇಗೌಡ, ತಿಪಟೂರಿನಿಂದ ಕೆ. ಪಿ. ರೇವಣಸಿದ್ದಪ್ಪ, ಹೆಬ್ಬೂರಿನಿಂದ ಕೆ. ಲಕ್ಕಪ್ಪ, ಮಧುಗಿರಿಯಿಂದ ಟಿ. ಎನ್. ಶಿವಣ್ಣ, ಮಾಗಡಿಯಿಂದ ಸಿ. ಆರ್. ರಂಗೇಗೌಡ, ಮದ್ದೂರಿನಿಂದ ಪಿ. ಎಸ್. ಪಿ. ಬೆಂಬಲಿತ ಎಸ್. ಎಂ. ಕೃಷ್ಣ, ಬನ್ನೂರಿನಿಂದ ಎಸ್. ಸಿದ್ಧಯ್ಯ, ಮೈಸೂರು ನಗರದಿಂದ ಬಿ.ಕೆ. ಪುಟ್ಟಯ್ಯ, ಕೊರಟಗೆರೆಯಿಂದ ಎಸ್. ಆಂಜನೇಯ ಮತ್ತು ತುರುವೇಕೆರೆಯಿಂದ ಬಿ. ಭೈರಪ್ಪಾಜಿ. ಅಂದರೆ ಈ ಚುನಾವಣೆಯಲ್ಲಿ ಪಿ. ಎಸ್. ಪಿ. ಪಕ್ಷವು ಅದ್ಭುತ ಸಾಧನೆಯನ್ನು ಮಾಡಿತು. ಹೊಸದುರ್ಗದಿಂದ ಮುಖ್ಯಮಂತ್ರಿ ನಿಜಲಿಂಗಪ್ಪ ಅವರನ್ನು ಪಿ. ಎಸ್. ಪಿ. ಅಭ್ಯರ್ಥಿ ಟಿ.ಜಿ. ರಂಗಪ್ಪನವರು ಹೆಚ್ಚಿನ ಅಂತರದಿಂದ ಸೋಲಿಸಿದರು. ಟಿ. ಜಿ. ರಂಗಪ್ಪ ಅವರಿಗೆ ೨೨, ೦೨೪ ಮತಗಳು ದೊರೆತಿದ್ದರೆ ನಿಜಲಿಂಗಪ್ಪ ಅವರಿಗೆ ೧೪, ೩೧೫ ಮತಗಳು ದೊರಕಿದ್ದವು.

ಸೋಷಲಿಸ್ಟ್ ಪಾರ್ಟಿ ಮೂಲಕ ತೀರ್ಥಹಳ್ಳಿ ಕ್ಷೇತ್ರದಿಂದ ಶಾಂತವೇರಿ ಗೋಪಾಲಗೌಡ ಅವರು ಆಯ್ಕೆಯಾದರು. ಅದೇ ಪಕ್ಷದಿಂದ ಚನ್ನಗಿರಿಯಿಂದ ಸ್ಪರ್ಧಿಸಿದ್ದ ಜೆ. ಹೆಚ್. ಪಟೇಲರು ಸೋಲನ್ನು ಅನುಭವಿಸಿದರು. ಈ ಚುನಾವಣೆಯಿಂದಾಗಿ ರಾಜ್ಯದಲ್ಲಿ ಪಿ. ಎಸ್. ಪಿ. ಪಕ್ಷ ಅಧಿಕೃತ ಪಕ್ಷವಾಗಿ ಮಾನ್ಯತೆಯನ್ನು ಪಡೆಯಿತು.

**೧೯೬೭ರ ಚುನಾವಣೆ**

೧೯೬೭ರ ಲೋಕಸಭಾ ಚುನಾವಣೆಯಲ್ಲಿ ಆಯ್ಕೆಯಾದವರೆಂದರೆ ತುಮಕೂರು ಕ್ಷೇತ್ರದಿಂದ ಕೆ. ಲಕ್ಕಪ್ಪ ಅವರು. ಅವರು ಪಡೆದ ಮತಗಳ ಸಂಖ್ಯೆ ೧,೧೫,೩೧೨. ಅವರ ಪ್ರತಿಸ್ಪರ್ಧಿ ಕಾಂಗ್ರೆಸ್ಸಿನ ಸಿ. ಆರ್. ಬಸಪ್ಪ ಅವರು ಪಡೆದ ಮತಗಳ ಸಂಖ್ಯೆ ೧,೧೫,೦೫೧ ಗೆಲುವಿನ ಅಂತರ ೨೭೧. ಚಿಕ್ಕಮಗಳೂರಿನಿಂದ ಬಿ. ಹುಚ್ಚೇಗೌಡ ಅವರು ಆಯ್ಕೆಯಾಗಿದ್ದರು. ಅವರು ಪಡೆದ ಮತಗಳು ೧,೦೬,೮೧೨. ಮಂಡ್ಯ ಕ್ಷೇತ್ರದಿಂದ ಕಾಂಗ್ರೆಸ್‌ನ ಎಂ. ಕೆ. ಶಿವನಂಜಪ್ಪ ಅವರು ಈ ಚುನಾವಣೆಯಲ್ಲಿ ಲೋಕಸಭೆಗೆ ಆಯ್ಕೆಯಾದರು. ಅವರ ಅಕಾಲಿಕ ನಿಧನದಿಂದಾಗಿ ಈ ಕ್ಷೇತ್ರಕ್ಕೆ ಉಪ-ಚುನಾವಣೆ ೨೪-೧೧-೧೯೬೮ರಂದು ನಡೆಯಿತು. ಈ ಉಪ-ಚುನಾವಣೆಯಲ್ಲಿ ಪಿ.ಎಸ್.ಪಿ. ಅಭ್ಯರ್ಥಿ ಎಸ್. ಎಂ. ಕೃಷ್ಣ ಅವರು ೧,೮೪,೦೫೪ ಮತಗಳನ್ನು ಪಡೆದು ಲೋಕಸಭೆಗೆ ಆಯ್ಕೆಯಾದರು. ಕಾಂಗ್ರೆಸ್ಸಿನ ಹೆಚ್. ಡಿ. ಚೌಡಯ್ಯ ಅವರು ೧,೨೭,೧೦೭ ಮತಗಳನ್ನು ಪಡೆದರು. ಇದೇ ಚುನಾವಣೆಯಲ್ಲಿ ಶಿವಮೊಗ್ಗದಿಂದ ಜೆ.ಹೆಚ್. ಪಟೇಲ್ ಅವರು ೧,೪೩,೨೯೭ ಮತಗಳನ್ನು ಪಡೆದು ಲೋಕಸಭೆಗೆ ಆಯ್ಕೆಯಾದರು. ಧಾರವಾಡದಿಂದ ಎ. ಆರ್. ರಹೀಮ್ ಅವರು, ಮೈಸೂರಿನಿಂದ ಟಿ, ಎನ್. ನಾಗರಾಜಯ್ಯ ಅವರು ಈ ಚುನಾವಣೆಯಲ್ಲಿ ಸೋಲನ್ನಪ್ಪಿದ್ದರೂ ಕೂಡ ಮತಗಳಿಕೆ ದೃಷ್ಟಿಯಿಂದ ತುಂಬಾ ಗಣನೀಯ ಸಾಧನೆಯನ್ನು ಮಾಡಿದರು.

೧೯೬೭ರ ವಿಧಾನಸಭೆ ಚುನಾವಣೆಯಲ್ಲಿ ಪಿ. ಎಸ್. ಪಿ.ಯಿಂದ ೨೧ ಜನ ಹಾಗೂ ಎಸ್. ಪಿ.ಯಿಂದ ಮೂವರು ಆಯ್ಕೆಯಾಗಿದ್ದರು. ರಾಯಚೂರಿನಿಂದ ಎಂ. ನಾಗಪ್ಪ, ಚಿಕ್ಕನಾಯಕನಹಳ್ಳಿಯಿಂದ ಸಿ. ಕೆ. ರಾಜಯ್ಯಶೆಟ್ಟಿ, ಗೂಳೂರಿನಿಂದ ಗಂಗಾಭೋವಿ, ತುಮಕೂರಿನಿಂದ ಬಿ. ಪಿ. ಗಂಗಾಧರನ್, ಮಾಗಡಿಯಿಂದ ಸಿ. ಆರ್. ರಂಗೇಗೌಡ, ನರಸಿಂಹರಾಜದಿಂದ ಅಜೀಜ್‌ಸೇಠ್, ಕಾಪುವಿನಿಂದ ವಿ. ಭಾಸ್ಕರ ಶೆಟ್ಟಿ, ಕುಂದಾಪುರದಿಂದ ವಿನ್ನಿಫ್ರೆಡ್ ಫರ್ನಾಂಡೀಸ್, ಮೂಡಿಗೆರೆಯಿಂದ ಕೆ. ಹೆಚ್. ರಂಗನಾಥ್, ತರೀಕೆರೆಯಿಂದ ಹಂಜಿ ಶಿವಣ್ಣ, ಭದ್ರಾವತಿಯಿಂದ ಅಬ್ದುಲ್ ಖುದ್ದೂಸ್ ಅನ್ವರ್, ಸಿರ್ಸಿಯಿಂದ ಎಂ. ಹೆಚ್. ಜಯಪ್ರಕಾಶನಾರಾಯಣ್, ಭಟ್ಕಳದಿಂದ ಎಂ. ಎಂ. ಜಾಲಿಸತಗಿ, ಅಂಕೋಲದಿಂದ ಡಿ. ಎನ್. ನಾಡಕರ್ಣಿ ಹಾಗೂ ತಿಪಟೂರಿನಿಂದ ವಿ. ಎಲ್. ಶಿವಪ್ಪ, ಆಳಂದ್‌ನಿಂದ ದಿಗಂಬರರಾವ್ ಕಲ್ಮಣಕರ್ ಆಯ್ಕೆಯಾಗಿದ್ದವರಾಗಿದ್ದರು. ಎಸ್. ಎಸ್. ಪಿ. ಮೂಲಕ ಚನ್ನಗಿರಿಯಿಂದ ಎನ್. ಜಿ. ಹಾಲಪ್ಪ, ಸೊರಬದಿಂದ ಬಂಗಾರಪ್ಪ ಹಾಗೂ ಶಿಕಾರಿಪುರದಿಂದ ಜಿ. ಬಸವಣ್ಯಪ್ಪ ಅವರು ಆಯ್ಕೆಯಾದರು.

೧೯೭೨ರ ಚುನಾವಣೆ ಹೊತ್ತಿಗಾಗಲೇ ಸಮಾಜವಾದಿಗಳು ರಾಜ್ಯದಲ್ಲಿ ತಮ್ಮ ನೆಲೆಯನ್ನು ಕಳೆದುಕೊಂಡಿದ್ದರು. ಬಹುತೇಕ ಪಿ. ಎಸ್. ಪಿ. ನಾಯಕರುಗಳೆಲ್ಲ ಶ್ರೀಮತಿ ಇಂದಿರಾ ಗಾಂಧಿಯವರ ಆಡಳಿತ ಕಾಂಗ್ರೆಸ್ಸನ್ನು ಸೇರಿದ್ದರು. ತುಮಕೂರು ಲೋಕಸಭಾ ಕ್ಷೇತ್ರದಿಂದ ಕೆ. ಲಕ್ಕಪ್ಪ ಅವರು, ಮಂಡ್ಯ ಕ್ಷೇತ್ರದಿಂದ ಎಸ್. ಎಂ. ಕೃಷ್ಣ ಅವರು ಆಡಳಿತ ಕಾಂಗ್ರೆಸ್ ಮೂಲಕ ಲೋಕಸಭೆಯನ್ನು ಪ್ರವೇಶಿಸಿದರು. ಇಂತಹ ಸಂದರ್ಭಲ್ಲಿ ನಡೆದ ವಿಧಾನಸಭೆ ಚುನಾವಣೆಯಲ್ಲಿ ಕೇವಲ ಮೂರು ಸ್ಥಾನಗಳು ಮಾತ್ರ ಸಮಾಜವಾದಿ ಪಕ್ಷಕ್ಕೆ (ಸೋಷಲಿಸ್ಟ್ ಪಾರ್ಟಿ-ಎಸ್. ಒ. ಪಿ.) ದೊರಕಿದವು. ಅವರುಗಳೆಂದರೆ ಸೊರಬದಿಂದ ಎಸ್. ಬಂಗಾರಪ್ಪ (ದೊರೆತ ಮತಗಳು - ೨೨, ೫೩೭), ಸಾಗರದಿಂದ ಕಾಗೋಡು ತಿಮ್ಮಪ್ಪ (ದೊರೆತ ಮತಗಳು - ೧೬,೯೯೪) ಮತ್ತು ತೀರ್ಥಹಳ್ಳಿಯಿಂದ ಕೋಣಂದೂರು ಲಿಂಗಪ್ಪ (ದೊರೆತ ಮತಗಳು - ೧೫,೪೨೫).

ನಿರೂಪಣೆ

**ಕೆ. ಆರ್. ಕಮಲೇಶ್**

ನೆರವು

**ಮೋಹನ ವರ್ಣೇಕರ್, ರಘು ಎಸ್. ಶೆಟ್ಟಿಗಾರ್**



# ಜನತಾ ಪಕ್ಷ

**ಬಿ. ಎಲ್. ಶಂಕರ್**

## ಭಾರತದ ರಾಜಕಾರಣದಲ್ಲಿ ಜನತಾಪಕ್ಷದ ಉದಯ

ಭಾರತದ ರಾಜಕೀಯ ಇತಿಹಾಸದಲ್ಲಿ ಜನತಾ ಪಕ್ಷಕ್ಕೆ ಗಣನೀಯವಾದ ಪ್ರಾಮುಖ್ಯತೆಯಿದೆ. ಭಾರತದ ಪ್ರಜಾಪ್ರಭುತ್ವವನ್ನು ನೇರದಾರಿಯಲ್ಲಿ ಕೊಂಡೊಯ್ದ ಕೀರ್ತಿ ಇದರದು. ಕಾಂಗ್ರೆಸ್ ಪಕ್ಷ ಮಹಾತ್ಮ ಗಾಂಧೀಜಿಯವರ ಮಾರ್ಗದರ್ಶನದಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿ ಭಾರತ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಕೀರ್ತಿ ಪಡೆಯಿತು. ಮದ್ದುಗುಂಡುಗಳಿಲ್ಲದೆ, ಅಹಿಂಸೆ, ಸತ್ಯಾಗ್ರಹ ಹಾಗೂ ಜನಜಾಗೃತಿಯಂತಹ ವಿಭಿನ್ನ ಪಥದ ಮೂಲಕ ಈ ಸ್ವಾತಂತ್ರ್ಯ ಪಡೆಯಲಾಗಿದೆ. ಇದು ವಿಶ್ವದಲ್ಲೇ ದಾಖಲಾರ್ಹವಾದ ಘಟನೆಯಾಗಿದೆ. ಇಂತಹುದೇ ಮಹತ್ವದ ಘಟನೆ ಜನತಾಪಕ್ಷದ ಮೂಲಕ ಭಾರತದ ಇತಿಹಾಸದಲ್ಲಿ ನಡೆದಿದೆ. ನಾಲ್ಕಾರು ವಿಭಿನ್ನ ಧ್ಯೇಯೋದ್ದೇಶಗಳನ್ನು ಹೊಂದಿದ ವಿರೋಧ ಪಕ್ಷಗಳು ಲೋಕನಾಯಕ ಜಯಪ್ರಕಾಶ ನಾರಾಯಣ ಅವರ ಆಶಯಕ್ಕನುಗುಣವಾಗಿ ಸಮ್ಮಿಲನಗೊಂಡು 'ಜನತಾ ಪಕ್ಷ' ರಚನೆಯಾಯಿತು. ಈ ಜನತಾ ಪಕ್ಷ ಪ್ರಜಾಪ್ರಭುತ್ವ ಮಾದರಿಯಲ್ಲಿ ಹೋರಾಟ ಮಾಡಿ ಚುನಾವಣೆಯಲ್ಲಿ ಮತ್ತೊಮ್ಮೆ ಅಭೂತಪೂರ್ವವಾದ ಜಯಗಳಿಸಿ ಭಾರತದಲ್ಲಿ ಜನತೆಯ ಆಳ್ವಿಕೆಯನ್ನು ಪ್ರತಿಷ್ಠಾಪಿಸಿತು. ಇದು ಸಾಮಾನ್ಯ ಸಂಗತಿಯಲ್ಲ. ಈ ಹೋರಾಟ ಹೆಚ್ಚು ಕಡಿಮೆ ಗಾಂಧಿ ಮಾರ್ಗದಲ್ಲೇ ಸಾಗಿರುವುದು ಗಮನಾರ್ಹ. ಮತಪೆಟ್ಟಿಗೆಯ ಮೂಲಕ ಯಾವುದೇ ಸರ್ಕಾರವನ್ನು ಆಯ್ಕೆಮಾಡಿಕೊಳ್ಳುವಷ್ಟು ಪ್ರಬುದ್ಧತೆ ಭಾರತೀಯ ಮತದಾರರಿಗೆ ಇದೆಯೆಂಬ ಸತ್ಯ ಜನತಾಪಕ್ಷದ ಮೂಲಕ ವಿಶ್ವಕ್ಕೆ ಮನದಟ್ಟಾಯಿತು. ಭಾರತದಲ್ಲಿ ಪ್ರಜಾಪ್ರಭುತ್ವ ಬೆಳವಣಿಗೆಯ ಅಧ್ಯಯನದಲ್ಲಿ ಜನತಾ ಪಕ್ಷ ಸಾಧನೆ ಮಹತ್ವದ ಘಟ್ಟವಾಗಿದೆ.

೧೯೭೫ ಜೂನ್ ೨೫ರಂದು ಭಾರತದಲ್ಲಿ ಆಂತರಿಕ ತುರ್ತು ಪರಿಸ್ಥಿತಿ ಹೇರಲ್ಪಟ್ಟಿತು. ೧೯ ತಿಂಗಳ ಕಾಲ ತುರ್ತು ಪರಿಸ್ಥಿತಿಯ ಕರಾಳ ವ್ಯವಸ್ಥೆ ಈ ದೇಶದಲ್ಲಿತ್ತು. ೧೯೭೭ರ ಮೇ ೧ ರಂದು ಜನತಾಪಕ್ಷದ ಉದಯವಾಯಿತು. ತುರ್ತು ಪರಿಸ್ಥಿತಿಯ ಸಂದರ್ಭದಲ್ಲೇ ಚುನಾವಣೆ ಎದುರಿಸಲು ನಾಲ್ಕು ರಾಷ್ಟ್ರೀಯ ಪಕ್ಷಗಳು ಅನಿವಾರ್ಯವಾಗಿ ಜನತಾ ಪಕ್ಷವನ್ನು ಹುಟ್ಟು ಹಾಕಿದವು. ಸಂಸ್ಥಾ ಕಾಂಗ್ರೆಸ್, ಭಾರತೀಯ ಲೋಕದಳ, ಜನಸಂಘ ಹಾಗೂ ಸಮಾಜವಾದಿ ಪಕ್ಷಗಳು ವಿಲೀನಗೊಂಡು ಭಾರತೀಯ ಲೋಕದಳದ ನೇಗಿಲು ಹೊತ್ತ ರೈತನ ಚಿಹ್ನೆಯೊಡನೆ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಲು ನಿರ್ಧರಿಸಿದವು.

ಆಡಳಿತ ಕಾಂಗ್ರೆಸ್‌ನ ಒಂದು ಗುಂಪು ಬಾಬು ಜಗಜೀವನರಾಮ್ ನೇತೃತ್ವದಲ್ಲಿ ಕಾಂಗ್ರೆಸ್‌ನಿಂದ ಹೊರಬಂದು 'ಕಾಂಗ್ರೆಸ್ ಫಾರ್ ಡೆಮಾಕ್ರಸಿ' ಎಂಬ ಹೊಸ ಪಕ್ಷವನ್ನು ರಚಿಸಿಕೊಂಡಿತು. ಈ ಗುಂಪು ಸಹ ಜನತಾಪಕ್ಷದೊಂದಿಗೆ ಸ್ಥಾನ ಹೊಂದಾಣಿಕೆ ಮಾಡಿಕೊಂಡು ಕಾಂಗ್ರೆಸ್‌ಗೆ ಪ್ರಬಲ ಸ್ಪರ್ಧೆಯನ್ನು ಒಡ್ಡಿತು. ೫.೫.೧೯೭೭ರಂದು ಅಶೋಕ ಮೆಹ್ತಾರವರು ಕೇಂದ್ರ ಚುನಾವಣಾ ಮುಖ್ಯಾಧಿಕಾರಿಗಳಿಗೆ ಪತ್ರ ಬರೆದು 'ಸಂಸ್ಥಾ ಕಾಂಗ್ರೆಸ್ ೩೦.೪.೧೯೭೭ ರಂದು ದೆಹಲಿಯಲ್ಲಿ ಸಭೆ ಸೇರಿ ೧.೫.೧೯೭೭ರಂದು ಪ್ರಾರಂಭವಾಗಲಿರುವ ಜನತಾಪಕ್ಷದೊಡನೆ

ವಿಲೀನಗೊಂಡಿದೆ. ಈ ತನಕ ಸಂಸ್ಥಾ ಕಾಂಗ್ರೆಸ್ ಪಕ್ಷ ಬಳಸುತ್ತಿದ್ದ 'ಚರಕ ತಿರುಗಿಸುವ ಮಹಿಳೆ' ಗುರುತನ್ನು ಇನ್ನು ಮುಂದೆ ಬಳಸುವುದಿಲ್ಲ ಭಾರತೀಯ ಲೋಕದಳ ಚಿಹ್ನೆಯನ್ನು ಅಂದರೆ ಪ್ರಾರಂಭವಾಗದಿರುವ ಜನತಾಪಕ್ಷದ ಅಧಿಕೃತ ಚಿಹ್ನೆಯಾದ ನೇಗಿಲು ಹೊತ್ತ ರೈತನ ಚಿಹ್ನೆ ಬಳಸುತ್ತದೆ. ಆ ಕಾರಣ ಸಂಸ್ಥಾ ಕಾಂಗ್ರೆಸ್ ಚಿಹ್ನೆಯನ್ನು ಸ್ಥಗಿತಗೊಳಿಸಬೇಕು. ಸಂಸ್ಥಾ ಕಾಂಗ್ರೆಸ್‌ನ ಈ ಮನವಿಯನ್ನು ಒಪ್ಪಿಕೊಳ್ಳಬೇಕೆಂದು' ಕೋರಿದ್ದರು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಜನತಾ ಪಕ್ಷ ರಾಷ್ಟ್ರಾದ್ಯಂತ ಶೇಕಡ ೪೩ರಷ್ಟು ಮತಗಳಿಸಿ ರಾಷ್ಟ್ರೀಯ ಪಕ್ಷವೆಂಬ ಮನ್ನಣೆ ಪಡೆಯಿತು.

೨೭.೫.೧೯೭೭ ರಂದು ಜನತಾ ಪಕ್ಷದ ಪ್ರಧಾನ ಕಾರ್ಯದರ್ಶಿಗಳೆಂದರೆ ರಾಮಕೃಷ್ಣ ಹೆಗಡೆ, ನಾನಾಜಿ ದೇಶಮುಖ್, ಮಧುಲಿಮಯೆ, ರಬಿರಾಯ್, ಬಿಜೋಸಿಂಗ್ ನಹರಾ (Bijoy Singh Nahar), ಆಲೀಸ್‌ಬೇಗ್, ಬಾಯಿ ಮಹಾವೀರ, ಕುಶಬಾವುಠಾಕರೆ, ಕೆ. ಕೃಷ್ಣಮೂರ್ತಿ, ಕೃಷ್ಣಕಾಂತ್, ಎಲ್. ಕೆ. ಆದ್ವಾನಿ, ಶ್ರೀಮತಿ ಲಕ್ಷ್ಮೀಕಾಂತಮ್ಮ, ಮೊರಾರ್ಜಿ ದೇಸಾಯಿ, ಶ್ರೀಮತಿ ಮೃಣಾಲಿನಿ ಗೋರೆ, ದಯಾನಂದ ತಿವಾರಿ, ವೈ. ರಾಮಕೃಷ್ಣ, ರಾಮನರೇಶ ಯಾದವ್, ಶ್ರೀಮತಿ ಸುಕಲಿಕರ್, (Srimati Sukalikar), ಸುರೇಂದ್ರ ಸಿಂಗ್ ಭಂಡಾರಿ, ಡಾ. ಎಂ. ಸಂತೋಷ್, ವೀರೇನ್ ಜೆ. ಷಹಾ ಹಾಗೂ ಯೋಗದತ್ತಶರ್ಮ, (Yoga Dutt Sharma). ರಾಷ್ಟ್ರೀಯ ಮಂಡಳಿಯ ಸದಸ್ಯರುಗಳೆಂದರೆ ಚೌಧರಿ ಚರಣ್ ಸಿಂಗ್, ಚಾಂದರಾಮ್, ಹೆಚ್. ಎನ್. ಬಹುಗುಣ, ಜಗಜೀವನರಾಂ, ಕರ್ಪೂರಿ ಠಾಕೂರ್, ಶ್ರೀಮತಿ ನಂದಿನಿ ಸತ್ಪಥಿ, ಪಿ.ಸಿ. ಸೇಠಿ, ಪೀಲೂಮೋದಿ, ರಾಜ್‌ನಾರಾಯಣ, ಪಿ. ರಾಮಚಂದ್ರನ್, ಸುರೇಂದ್ರಮೋಹನ್, ಸತ್ಯೇಂದ್ರನಾರಾಯಣ ಸಿನ್ಹಾ, ಸಮರಗುಹಾ, ಎಸ್. ಎನ್. ಮಿಶ್ರ ಹಾಗೂ ಡಾ. ಶಾಂತಿ ಜಿ. ಪಾಟೀಲ. ರಾಷ್ಟ್ರೀಯ ಮಂಡಲಿಯ ಖಾಯಂ ಆಹ್ವಾನಿತರೆಂದರೆ ಬಿಜು ಪಟ್ನಾಯಿಕ್, ಶೇಖಾವತ್, ಡಿ. ಎನ್. ತಿವಾರಿ, ದೌಲತ್ ರಾಮ್ ಸರ್ಲಿನ್, ಎರಾಚೆಳಿಯನ್, ಹೆಚ್. ಡಿ. ದೇವೇಗೌಡ, ಸರ್ದಾರ್ ಹರಭಜನ್‌ಸಿಂಗ್, ಜಗನ್ನಾಥ್‌ರಾವ್ ಜೋಷಿ, ಜ್ಞಾನೇಶ್ವರ ಮಿಶ್ರಾ, ಜೆ.ಪಿ. ಮಾಥೂರ್, ಜೆ.ಪಿ. ಗೋಯಲ್, ಅಹಮದ್ ಆಲಿಖಾನ್, ಶ್ರೀಮತಿ ರೇಣುಕಾದೇವಿ ಬಾರ್ ಕಟಕಿ, (Renuka Devi Bar Kataki), ಎಸ್. ಎಂ. ಜೋಷಿ, ಎಂ. ಎಸ್. ಗುರುಪಾದಸ್ವಾಮಿ, ಟಿ. ವಿಶ್ವನಾಥನ್, ಎಲ್.ಪಿ. ತ್ಯಾಗಿ, ಹಾಗೂ ವೀರೇಂದ್ರ ಪಾಟೀಲ್.

## ಕರ್ನಾಟಕದಲ್ಲಿ ಜನತಾ ಪಕ್ಷ

ಡಿಸೆಂಬರ್ ೪, ೧೯೭೭ ರಂದು ಜನತಾ ಪಕ್ಷದ ಖಾಯಂ ಪ್ರಧಾನ ಕಾರ್ಯದರ್ಶಿ ಎನ್. ಬಾಲಕೃಷ್ಣನ್ ಅವರು ಆಗಿನ ಕರ್ನಾಟಕ ಜನತಾಪಕ್ಷದ ಪ್ರಧಾನ ಕಾರ್ಯದರ್ಶಿ ಅವರಿಗೆ ಪತ್ರ ಬರೆದು ಸಂಸ್ಥಾ ಕಾಂಗ್ರೆಸ್ ಜನತಾ ಪಕ್ಷದೊಡನೆ ವಿಲೀನಗೊಂಡಿರುವ ಬಗ್ಗೆ ರಾಜ್ಯ ಘಟಕ ಹೇಗೆ ಕಾರ್ಯಾಚರಣೆ ಮಾಡಬೇಕೆಂಬುದಕ್ಕೆ ಸ್ಪಷ್ಟ ಮಾರ್ಗದರ್ಶನ ನೀಡಿದ್ದಾರೆ. ರಾಜ್ಯದಲ್ಲಿ ವೀರೇಂದ್ರ ಪಾಟೀಲ್ ಜನತಾ ಪಕ್ಷದ ರಾಜ್ಯ ಘಟಕದ ಅಧ್ಯಕ್ಷರಾಗಿದ್ದರು. ಹೆಚ್. ಡಿ. ದೇವೇಗೌಡ ಅವರು ವಿಧಾನಸಭೆಯ ವಿರೋಧ ಪಕ್ಷದ ಅಧಿಕೃತ ಹಿರಿಯ ನಾಯಕರಾಗಿದ್ದರು. ರಾಮಕೃಷ್ಣ ಹೆಗಡೆ ಅವರು ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ನಿಜಲಿಂಗಪ್ಪ ಅವರ ಮಾರ್ಗದರ್ಶನದಲ್ಲಿ ರಾಜ್ಯ ಘಟಕ ಜನಜಾಗೃತಿಯ ಕಾರ್ಯವನ್ನು ಹಮ್ಮಿಕೊಂಡಿತು.

## ೧೯೭೭ರ ಲೋಕಸಭಾ ಚುನಾವಣೆ

ಜನತಾಪಕ್ಷ ಸೆರೆಮನೆಯಿಂದಲೇ ಉದಯವಾಯಿತು. ಆ ಪಕ್ಷದ ವಿವಿಧ ನಾಯಕರು ತುರ್ತು ಪರಿಸ್ಥಿತಿಯ ದೆಸೆಯಿಂದಾಗಿ ತುರಂಗವಾಸ ಅನುಭವಿಸುತ್ತಿದ್ದರು. ದಿಢೀರನೆ ಚುನಾವಣೆಯ ಘೋಷಣೆಯಿಂದಾಗಿ ಪ್ರಮುಖ ವಿರೋಧ ಪಕ್ಷದ ನಾಯಕರ ಬಿಡುಗಡೆಯಾಯಿತು. ಜಾರ್ಜ್ ಫರ್ನಾಂಡೀಸ್‌ರಂತಹ ನಾಯಕರು ಸೆರೆಮನೆಯಿಂದಲೇ ಚುನಾವಣೆಗೆ ಸ್ಪರ್ಧಿಸುತ್ತಿದ್ದರು. ರಾಜ್ಯದ ಸೆರೆಮನೆಗಳಲ್ಲಿ ಶ್ರೀಯುತರುಗಳಾದ ಎಲ್. ಕೆ. ಅದ್ವಾನಿ, ಎ. ಬಿ. ವಾಜಪೇಯಿ ಮೊದಲಾದ ರಾಷ್ಟ್ರೀಯ ನಾಯಕರ ಜೊತೆ ರಾಮಕೃಷ್ಣ ಹೆಗಡೆ, ಹೆಚ್. ಡಿ. ದೇವೇಗೌಡ, ಜೆ.ಹೆಚ್. ಪಟೇಲ್ ಮುಂತಾದ ನಾಯಕರು ಸೆರೆವಾಸದಲ್ಲಿದ್ದರು.

ಕರ್ನಾಟಕದ ೨೮ ಸ್ಥಾನಗಳಿಗೆ ಜನತಾಪಕ್ಷ ತನ್ನ ಅಭ್ಯರ್ಥಿಯನ್ನು ನಿಲ್ಲಿಸಿತು. ರಾಷ್ಟ್ರಮಟ್ಟದಲ್ಲಿ ಸಿದ್ಧಮಾಡಿದ ಪ್ರಣಾಳಿಕೆಯನ್ನು ರಾಜ್ಯದಲ್ಲೂ ಪ್ರಚುರಪಡಿಸಲಾಯಿತು. ಈ ಜನತಾಪಕ್ಷದ ಚುನಾವಣಾ ಪ್ರಣಾಳಿಕೆ ಸರ್ವಾಧಿಕಾರದ ವಿರುದ್ಧ ಪ್ರಜಾಪ್ರಭುತ್ವ ಸ್ಥಾಪನೆಯೇ ತನ್ನ ಮುಖ್ಯಗುರಿಯೆಂದು ಹೇಳಿಕೊಳ್ಳುತ್ತದೆ. ಈ ಪ್ರಣಾಳಿಕೆಯ ಮುಖ್ಯ ಉದ್ದೇಶ ಜನತೆಯನ್ನು ಜಾಗ್ರತರನ್ನಾಗಿ ಮಾಡುವುದು, ವ್ಯವಸ್ಥೆಯ ವಿರುದ್ಧ ಸಿಡಿದೇಳುವಂತೆ ಮಾಡುವುದೇ ಆಗಿದೆ. ಇಡೀ ಪ್ರಣಾಳಿಕೆಯಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಸ್ಥಿರಗೊಳಿಸುವುದೇ ಅದರ ಉದ್ದೇಶವೆಂಬಂತೆ ಅದರ ಚಿಂತನಾ ಲಹರಿ ಹರಿದಿದೆ. ೧೯೭೫ ಜೂನ್ ೨೫ ರಂದು ತುರ್ತು ಪರಿಸ್ಥಿತಿ

ಘೋಷಣೆಯ ನಂತರ ರಾಷ್ಟ್ರದಲ್ಲಿ ಆದ ಬದಲಾವಣೆಯ ಬಗ್ಗೆ ಜನತಾಪಕ್ಷ ಮತದಾರರಿಗೆ ಪ್ರಣಾಳಿಕೆ ಮೂಲಕ ಸ್ಪಷ್ಟ ಮಾಹಿತಿ ನೀಡಿದೆ.

## ಪಕ್ಷದ ಪ್ರಣಾಳಿಕೆಯ ಮುಖ್ಯಾಂಶಗಳು

'ಭಾರತದ ಮತದಾರರಿಗೆ ಈ ಚುನಾವಣೆ ಸ್ವಾತಂತ್ರ್ಯ ಹಾಗೂ ಗುಲಾಮೀತನ ನಡುವಿನ ಆಯ್ಕೆ. ಸರ್ವಾಧಿಕಾರ, ಅಭದ್ರತೆ, ಸೈನಿಕ ಆಳ್ವಿಕೆ ಮೊದಲಾದ ಸರ್ವಾಧಿಕಾರದ ವ್ಯವಸ್ಥೆ ಬೇಕೋ? ವ್ಯಕ್ತಿ ಆಧಾರಿತವಾದ ರಾಷ್ಟ್ರ ನಿರ್ಮಾಣದ ವ್ಯವಸ್ಥೆ ಬೇಕೋ?' 'ತುರ್ತು ಪರಿಸ್ಥಿತಿಯ ಈ ಅವಧಿಯಲ್ಲಿ ದೇಶದಲ್ಲಿ ಎಲ್ಲೆಲ್ಲೂ ಮಿಲಿಟರಿ ಆಡಳಿತ ವಿಜೃಂಭಿಸುತ್ತಿದೆ. ಮೀಸಾ ಕಾಯಿದೆ ಪ್ರಜಾಪ್ರಭುತ್ವಕ್ಕೆ ಅವಹೇಳನಕಾರಿಯಾಗಿದೆ. ನಾಗರಿಕರಿಗೆ ಯಾವುದೇ ಸಹಜ ಹಕ್ಕು ದೊರೆಯುತ್ತಿಲ್ಲ. ನೂರಾರು ರಾಜಕೀಯ ಕಾರ್ಯಕರ್ತರು ಹಾಗೂ ಸಮಾಜ ಸೇವಕರು ಸೆರೆಮನೆಯಲ್ಲಿದ್ದಾರೆ. ನ್ಯಾಯಾಂಗ ಕೂಡಾ ಭಯದ ವಾತಾವರಣದಲ್ಲಿ ಕೆಲಸ ಮಾಡಬೇಕಾದ ದುಸ್ಥಿತಿಯಿದೆ. ಪತ್ರಿಕಾಸ್ವಾತಂತ್ರ್ಯಕ್ಕೆ ಧಕ್ಕೆಯಾಗಿದೆ.'

'ಬದ್ಧತೆಯನ್ನು ಪತ್ರಿಕಾರಂಗ, ಕಾರ್ಯಾಂಗ ಹಾಗೂ ನ್ಯಾಯಾಂಗ ಇಂದು ಬಯಸುತ್ತಿದೆ. ಆಕಾಶವಾಣಿ, ದೂರದರ್ಶನ ಹಾಗೂ ಸುದ್ದಿ ಸಂಸ್ಥೆಗಳು ಸರ್ಕಾರದ ಹಿಡಿತಕ್ಕೆ ಸಿಲುಕಿವೆ. ಅವು ಆಳುವ ಪಕ್ಷದ ತುತ್ತೂರಿಗಳಾಗಿವೆ. ವಿರೋಧಪಕ್ಷಗಳ ಅವಹೇಳನವೇ ಅದರ ಗುರಿಯಾಗಿದೆ. ಸ್ವಾತಂತ್ರ್ಯವನ್ನು ಯಾವುದೇ ಲೌಕಿಕ ಸೌಲಭ್ಯಗಳೊಂದಿಗೆ ಹೋಲಿಕೆ ಮಾಡುವಂತಿಲ್ಲ.'

## ದೇಶದ ಪರಿಸ್ಥಿತಿಯ ಅವಲೋಕನ

''ಅಲಹಾಬಾದ್‌ನಲ್ಲಿ ನ್ಯಾಯಾಲಯದ ತೀರ್ಪು ಹಾಗೂ ಗುಜರಾತ್ ಜನತೆ ಆಡಳಿತ ಪಕ್ಷದ ವಿರುದ್ಧ ಕೊಟ್ಟ ತೀರ್ಪಿನಿಂದಾಗಿ ತುರ್ತು ಪರಿಸ್ಥಿತಿ ಹೇರಿಕೆಯನ್ನು ದೇಶ ಅನುಭವಿಸಬೇಕಾಗಿದೆ.'' ''ಕಾನೂನಿನ ಎದುರು ಎಲ್ಲರೂ ಸಮಾನರು, ಎಂಬ ಪ್ರಜಾಪ್ರಭುತ್ವ ತತ್ವ ಮಾಸಿಹೋಗಿ ಏಕವ್ಯಕ್ತಿ ಅಂದರೆ ಪ್ರಧಾನಿಮಂತ್ರಿಯ ಕೈಯಲ್ಲಿ ಅಧಿಕಾರ ಕೇಂದ್ರೀಕರಣ ಮಾಡುವ ವ್ಯವಸ್ಥೆ ನಡೆದಿದೆ.'' ''ಪ್ರಜಾಪ್ರತಿನಿಧಿ ಶಾಸನ ತಿದ್ದುಪಡಿಯು ಚುನಾವಣೆಗೆ ಭ್ರಷ್ಟಾಚಾರ ಗಂಗ್ರೋತ್ರಿಯಾಗುವಂತೆ ಮಾಡಲಾಗಿದೆ. ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳನ್ನು ಅವಹೇಳನ ಮಾಡಲಾಗಿದೆ. ಸಂವಿಧಾನೇತರ ಅಧಿಕಾರ ಶಕ್ತಿಕೇಂದ್ರ ಸ್ಥಾಪಿತವಾಗಿದೆ. ಅನೇಕ ಕಾರ್ಖಾನೆಗಳಲ್ಲಿ ತುರ್ತು ಪರಿಸ್ಥಿತಿಯಿಂದಾಗಿ ನೌಕರರು ತಮ್ಮ ಸಹಜ ಹಕ್ಕು ಬಾಧ್ಯತೆಗಳಿಂದ ವಂಚಿತರಾಗಿದ್ದಾರೆ.''

## ೪೨ನೆಯ ತಿದ್ದುಪಡಿ

೧೯೫೦ರಲ್ಲಿ ಸಂವಿಧಾನದ ನಿರ್ಮಾಪಕರ ಆಶಯವನ್ನು ಮಣ್ಣುಗೂಡಿಸಿ ತಂದ ೪೨ನೆಯ ತಿದ್ದುಪಡಿ ಪ್ರಧಾನಿ ಅಧಿಕಾರವನ್ನು ಬಲಗೊಳಿಸುವ ಏಕೈಕ ಉದ್ದೇಶವನ್ನು ಹೊಂದಿದೆ. ಈ ತಿದ್ದುಪಡಿ ಒಕ್ಕೂಟ ವ್ಯವಸ್ಥೆಯನ್ನು ಹಾಳುಮಾಡುವುದರ ಜೊತೆ ಶಾಸಕಾಂಗ ನ್ಯಾಯಾಂಗ, ಕಾರ್ಯಾಂಗದ ತಪ್ಪು ನೀತಿಗಳಿಂದಾಗಿ ರಾಜ್ಯ ಹಾಗೂ ಕೇಂದ್ರಗಳ ಮಧ್ಯೆ ಗೊಂದಲ ಹುಟ್ಟಿಸಿದೆ.

## ಕೈಗಾರಿಕೆ

ಸುಮಧುರ ಬಾಂಧವ್ಯದ ಕೊರತೆಯಿಂದಾಗಿ ದೇಶದ ಹತ್ತಿ ಗಿರಣಿ, ಕಬ್ಬಿಣ ಮತ್ತು ಉಕ್ಕು, ಸಣ್ಣ ಕೈಗಾರಿಕೆ ಮೊದಲಾದವುಗಳು ಅತ್ಯಂತ ದುಸ್ಥಿತಿಯಲ್ಲಿವೆ. ಪ್ರಸ್ತುತ ದೇಶದಲ್ಲಿ ೧.೫ ದಶಲಕ್ಷದಷ್ಟು ನಿರುದ್ಯೋಗಿಗಳಿದ್ದಾರೆಂದು ಹೇಳಲಾಗಿದೆ.

## ಬೆಲೆಯೇರಿಕೆ

೧೯೭೧ರ ಮಾರ್ಚ್ ತಿಂಗಳಲ್ಲಿ ಶೇಕಡ ೧೨ರಷ್ಟು ಬೆಲೆ ಏರಿರುವುದನ್ನು ಗಮನಿಸಬಹುದು. ೧೯೭೬ರ ಆಗಸ್ಟ್ ತಿಂಗಳ ಚಿಲ್ಲರೆ ಮಾರಾಟ ದರ ಗಮನಿಸಿದರೆ, ಯಾವುದೇ ಬೆಲೆಯ ಇಳಿಕೆ ಕಾಣದಿರುವುದನ್ನು ಗಮನಿಸಬಹುದು. ಬಟ್ಟೆ, ಸಕ್ಕರೆ, ಎಣ್ಣೆ, ಬೇಳೆಕಾಳು ಮುಂತಾದವುಗಳಲ್ಲಿ ದರ ಏರಿಕೆಯಿರುವುದನ್ನು ಗಮನಿಸಬಹುದು. ಕಬ್ಬಿಣ, ಸಿಮೆಂಟು, ಅಲ್ಯೂಮಿನಿಯಂ ಮುಂತಾದ ವಸ್ತುಗಳ ರಫ್ತು ಪ್ರಮಾಣದಲ್ಲಿ ಗಣನೀಯ ಇಳಿಕೆ ಕಂಡುಬರುತ್ತದೆ. ೧೭ ದಶಲಕ್ಷ ಟನ್ ಆಹಾರ ಪದಾರ್ಥಗಳು ಉಗ್ರಾಣದಲ್ಲಿ ಕೊಳೆಯುತ್ತಿದ್ದರೂ ದೇಶದಲ್ಲಿ ಲಕ್ಷಾಂತರ ಜನ ಇಂದಿಗೂ ಹಸಿವಿನಿಂದ ಸಾಯುತ್ತಿದ್ದಾರೆ.

## ಆಡಳಿತ ಪಕ್ಷದ ರಕ್ಷಾಕವಚದಲ್ಲಿರುವವರು

ಸರ್ಕಾರ ಕಳ್ಳ ಸಾಗಾಣಿಕೆದಾರರನ್ನು ಶಿಕ್ಷಿಸುತ್ತದೆಂದು ಹೇಳಿಕೊಳ್ಳುತ್ತಿದೆ. ಆದರೆ ಪ್ರಸ್ತುತಃ ಕಳ್ಳ ಸಾಕಾಣಿಕೆದಾರರು, ಕಳ್ಳ ವ್ಯವಹಾರ ಮಾಡುವವರರು, ತೆರಿಗೆ ಕದಿಯುವವರು ಹಾಗೂ ವಿದೇಶಿ ಹಣ ದುರುಪಯೋಗ ಪಡಿಸಿಕೊಳ್ಳುವವರು ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ದೇಣಿಗೆ ಕೊಟ್ಟು ರಕ್ಷಣೆ ಪಡೆಯುತ್ತಿದ್ದಾರೆ. ಕಡ್ಡಾಯ ಕುಟುಂಬ ನಿಯಂತ್ರಣ ಯೋಜನೆಯು ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಸ್ಪಷ್ಟವಾಗಿ ದುರುಪಯೋಗಗೊಂಡಿದ್ದು ಕಾಣಬರುತ್ತಿದೆ. ಲಕ್ಷಾಂತರ ಸರ್ಕಾರಿ ನೌಕರರು ಕುಟುಂಬ ನಿಯಂತ್ರಣಕ್ಕೆ ಒಳಪಟ್ಟಿಲ್ಲವೆಂಬ ಕಾರಣಕ್ಕಾಗಿ ನ್ಯಾಯೋಚಿತವಾಗಿ ದೊರೆಯಬೇಕಾದ ಸೌಲಭ್ಯದಿಂದ ವಂಚಿತರಾಗಿದ್ದಾರೆ. ಅಲ್ಪಸಂಖ್ಯಾತರನ್ನು ಹತೋಟಿಯಲ್ಲಿಟ್ಟು ಕೊಳ್ಳುವ ಸಾಧನವಾಗಿ ಕುಟುಂಬ ಕಲ್ಯಾಣ ನಿಯಂತ್ರಣ ಬಳಸಿಕೊಳ್ಳಲಾಗಿದೆ. ಕುಟುಂಬ ಕಲ್ಯಾಣದ ನಿಯಂತ್ರಣಕ್ಕೆ ಬಳಸುವ ಕ್ಯಾಂಪ್‌ಗಳು ಅಮಾನವೀಯ ತಾಣಗಳಾಗಿವೆ.

## ಅತಿರೇಕದ ವರ್ತನೆ

ದೆಹಲಿ ಮುಂತಾದ ಕಡೆ ಅತ್ಯಂತ ಬಡವರು ನಿರ್ಮಿಸಿಕೊಂಡ ಗುಡಿಸಲನ್ನು ತುರ್ತು ಪರಿಸ್ಥಿತಿಯ ಅವಧಿಯಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ ಏಕಾಏಕಿ ಹಾಳುಮಾಡಲಾಗಿದೆ. ಇದೊಂದು ಪಾಶವೀಕೃತ್ಯವಾಗಿದೆ. ತುರ್ತು ಪರಿಸ್ಥಿತಿ ಭ್ರಷ್ಟಾಚಾರವನ್ನು ಕೆಳಹಂತಕ್ಕೆ ನೂಕಿದೆ. ತುರ್ತು ಪರಿಸ್ಥಿತಿಯ ಛತ್ರಿಯಡಿಯಲ್ಲಿ ಪೊಲೀಸ್, ಕಂದಾಯ ಹಾಗೂ ಇತರ ಅಧಿಕಾರಿಗಳು ತಮ್ಮ ಹಿತವನ್ನು ಕಾಯ್ದುಕೊಳ್ಳುತ್ತಿದ್ದಾರೆ.

## ದೇಶದ ಆರ್ಥಿಕ ಪರಿಸ್ಥಿತಿಯ ಹಿನ್ನಡೆ

೧. ೧೯೬೦ ಕ್ಕಿಂತ ೧೯೭೭ರಲ್ಲಿ ಬಂಡವಾಳ ಹೂಡಿಕೆ ಕಡಿಮೆಯಾಗಿದೆ.
೨. ಪ್ರಸ್ತುತ ಉತ್ಪಾದನೆ ಮೂರನೇ ಪಂಚವಾರ್ಷಿಕ ಯೋಜನೆಗಿಂತ ತುಂಬಾ ಕಡಿಮೆ ಮಟ್ಟದಲ್ಲಿದೆ.
೩. ೧೯೬೫-೬೬ರಕ್ಕಿಂತ ಕಡಿಮೆ ಕಲ್ಲಿದ್ದಲು ಉತ್ಪಾದನೆ ಈಗಿನ ಅವಧಿಯಲ್ಲಿದೆ.
೪. ಆಹಾರ ಉತ್ಪಾದನೆಯಲ್ಲಿ ನಾಲ್ಕನೆಯ ಯೋಜನೆಗಿಂತ ಶೇ. ೧೧ ರಷ್ಟು ಕಡಿಮೆಯಾಗಿದೆ.

ದೇಶದಲ್ಲಿ ಇಂದು ಶೇ. ೬೫ರಷ್ಟು ಜನ ಬಡತನದ ರೇಖೆಗಿಂತ ಕೆಳಗಿದ್ದಾರೆ. ಶೇ. ೨೮ರಷ್ಟು ಜನ ಕಾಲು ಶತಮಾನದಷ್ಟು ಹಿಂದುಳಿದಿದ್ದಾರೆ. ೧೧ ದಶಲಕ್ಷ ವಿದ್ಯಾವಂತ ನಿರುದ್ಯೋಗಿಗಳು ಸರ್ಕಾರದ ಉದ್ಯೋಗ ಕಚೇರಿಗಳಲ್ಲಿ ನೋಂದಣಿ ಮಾಡಿಕೊಂಡಿದ್ದಾರೆ. ನಿರುದ್ಯೋಗಿಗಳಾಗಿದ್ದರೂ ನೋಂದಾವಣೆ ಮಾಡಿಕೊಳ್ಳದಿರುವವರ ಪ್ರಮಾಣ ಇದಕ್ಕಿಂತ ಏಳುಪಟ್ಟು ಹೆಚ್ಚಾಗಿದೆ. ಬ್ಯಾಂಕಿಂಗ್ ವ್ಯವಹಾರವಂತೂ ಅನಪೇಕ್ಷಿತ ರಾಜಕೀಯ ವ್ಯವಹಾರದಿಂದಾಗಿ ಅವನತಿಯ ಹಾದಿಯಲ್ಲಿದೆ. 'ಗರೀಬಿ ಹಟಾವೊ' ಎಂಬ ಘೋಷಣೆ ಸಂಪೂರ್ಣವಾಗಿ ವಿಫಲವಾಗಿರುವುದನ್ನು ಗಮನಿಸಬಹುದು.

## ತುರ್ತುಪರಿಸ್ಥಿತಿ ಹಾಗೂ ಜನತಾ ಪಕ್ಷ

ಪ್ರಜಾಪ್ರಭುತ್ವ ಹಕ್ಕಿನ ಸ್ಥಾಪನೆಗಾಗಿ ಸಂಸ್ಥಾ ಕಾಂಗ್ರೆಸ್, ಭಾರತೀಯ ಲೋಕದಳ, ಜನಸಂಘ ಹಾಗೂ ಸೋಷಲಿಸ್ಟ್ ಪಕ್ಷ ಮತ್ತು ಈ ವಿಷಯದಲ್ಲಿ ಸಹಮತ ಹೊಂದದಿರುವ ಆಡಳಿತ ಕಾಂಗ್ರೆಸ್ ಪಕ್ಷದ ಕೆಲವು ನಾಯಕರು ಒಮ್ಮತದಿಂದ 'ಜನತಾಪಕ್ಷ' ಸ್ಥಾಪನೆಗೆ ಮುಂದಾಗಿದ್ದಾರೆ. ಈ ಚುನಾವಣಾ ಪ್ರಣಾಳಿಕೆ ಕೂಡ ಅವರುಗಳ ಸಹಮತದಿಂದ ಸಿದ್ಧವಾಗಿದೆ. ನ್ಯಾಯಾಂಗ, ಕಾರ್ಯಾಂಗ ಹಾಗೂ ಶಾಸಕಾಂಗಗಳ ನಿರ್ಭೀತ ಕಾರ್ಯಾಚರಣೆಗೆ ಆದ್ಯತೆ ಕೊಡುವುದು. ಮೂಲಭೂತ ಹಕ್ಕು ಹಾಗೂ ಸ್ವಾತಂತ್ರ್ಯ ರಕ್ಷಣೆ, ಪತ್ರಿಕಾ ರಂಗದ ಮೇಲೆ ಹೇರಿರುವ ನಿರ್ಬಂಧಗಳನ್ನು ತೊಡೆದುಹಾಕುವುದು. ಅಭಿವೃದ್ಧಿ ದೃಷ್ಟಿಯಿಂದಾಗಿ ಅಧಿಕಾರ ವಿಕೇಂದ್ರೀಕರಣಕ್ಕೆ ಆದ್ಯತೆ; ಸಣ್ಣ ಘಟಕಗಳ ಅಭಿವೃದ್ಧಿಗೆ ''ಮೈಕ್ರೋ ಪ್ಲಾನ್'' ಸಿದ್ಧತೆ ಮಾಡುವುದು.

## ಜನತಾ ಪಕ್ಷದ ಆಶ್ವಾಸನೆ

- ತುರ್ತು ಪರಿಸ್ಥಿತಿಯಿಂದಾಗಿ ಇಡೀ ದೇಶವೇ ಭಯದ ವಾತಾವರಣದಲ್ಲಿದೆ. ಜನತೆಯಲ್ಲಿ ಆತ್ಮವಿಶ್ವಾಸ ಮೂಡಿಸಬೇಕು.
- ಜನತಾಪಕ್ಷ ಅಧಿಕಾರಕ್ಕೆ ಬಂದ ತಕ್ಷಣ ಸುಗ್ರೀವಾಜ್ಞೆಯ ಮೂಲಕ ದೇಶದ ಜನತೆಗೆ ಮೂಲಭೂತ ಹಕ್ಕುಗಳನ್ನು ಕೊಡುವುದು. ತುರ್ತು ಪರಿಸ್ಥಿತಿ ತೆಗೆದುಹಾಕುವುದು.

- 'ಮೀಸಾ' ಕಾಯಿದೆಯನ್ವಯ ಬಂಧಿತರಾದ ರಾಜಕೀಯ ನಾಯಕರನ್ನು ಬಿಡುಗಡೆ ಮಾಡಲಾಗುವುದು. ಇತರ ಪ್ರಕರಣಗಳನ್ನು ರಾಜಕೀಯ ಹೊರತುಪಡಿಸಿ ಎಲ್ಲಾ ಪ್ರಕರಣಗಳನ್ನು ಮಾನವೀಯ ಅನುಕಂಪದ ಮೇಲೆ ತೀರ್ಮಾನ ಮಾಡಲಾಗುವುದು.
- ನ್ಯಾಯಾಂಗದ ಸ್ಪಷ್ಟ ಆದೇಶವಿಲ್ಲದೆ ಸಾಮಾಜಿಕ ಹಾಗೂ ರಾಜಕೀಯ ಸಂಘಟನೆಗಳನ್ನು ರದ್ದು ಮಾಡಲಾಗುವುದಿಲ್ಲ.
- ೪೨ನೆಯ ಸಂವಿಧಾನ ತಿದ್ದುಪಡಿಯನ್ನು ರದ್ದು ಮಾಡಲಾಗುವುದು.
- ಭಾರತ ಸಂವಿಧಾನದ ೩೫೨ನೆಯ ವಿಧಿಗೆ ತಿದ್ದುಪಡಿ ತಂದು ವೈಯಕ್ತಿಕ ಹಾಗೂ ಸಮೂಹ ಹಿತವನ್ನು ಕಾಯ್ದುಕೊಳ್ಳಲು ತೀರ್ಮಾನಿಸಲಾಗಿದೆ.
- ಭಾರತ ಸಂವಿಧಾನದ ನಿಯಮ ೩೫೦ನ್ನು ದುರುಪಯೋಗಪಡಿಸಿಕೊಂಡು ರಾಜ್ಯಗಳಲ್ಲಿ ಅನಾವಶ್ಯಕವಾಗಿ ರಾಷ್ಟ್ರಪತಿ ಆಡಳಿತ ಹೇರದಂತೆ ನೋಡಿಕೊಳ್ಳಲಾಗುವುದು.
- Tarkage ಸಮಿತಿಯ ಆಧಾರದ ಮೇಲೆ ಚುನಾವಣಾ ಪದ್ಧತಿಗೆ ಸುಧಾರಣೆಗಳನ್ನು ತರಲಾಗುವುದು. ಚುನಾಯಿತ ಪ್ರತಿನಿಧಿಯನ್ನು ಮತದಾರರು ವಾಪಸ್ಸು ಕರೆಸುವ ಹಾಗೂ ಮತದಾರರ ವಯೋಮಿತಿಯನ್ನು ೨೧ ರಿಂದ ೧೮ಕ್ಕೆ ಇಳಿಸುವ ಬಗ್ಗೆ ಚಿಂತಿಸಲಾಗುವುದು.
- ಜನಪ್ರತಿನಿಧಿ ಶಾಸನದ ಪುನರ್ ವಿಮರ್ಶೆಗೆ ಕ್ರಮ ಕೈಗೊಳ್ಳಲಾಗುವುದು.
- ಸ್ವತಂತ್ರ ನ್ಯಾಯಾಲಯಗಳ ವ್ಯವಸ್ಥೆಯಿಂದ ನ್ಯಾಯಾಂಗದ ಪಾವಿತ್ರ್ಯತೆ ಉಳಿಯುತ್ತದೆಂಬ ನಂಬಿಕೆ ಜನತಾ ಪಕ್ಷದ್ದು.
- ಕಾನೂನಿನ ಮುಂದೆ ಎಲ್ಲರೂ ಸಮಾನರು ಎಂಬ ತತ್ವ ಜಾರಿಗೆ ತರಲಾಗುವುದು.
- ಪತ್ರಿಕಾ ಸ್ವಾತಂತ್ರ್ಯಕ್ಕೆ ಸರ್ಕಾರ ಬದ್ಧವಾಗಿರುತ್ತದೆ. ಪತ್ರಿಕೆಗಳ ಮೇಲಿನ ಎಲ್ಲ ರೀತಿಯ 'ಸೆನ್ಸಾರ್‌ಷಿಪ್' ತೆಗೆದು ಹಾಕಲಾಗುವುದು. ಹಿಂದಿನಂತೆ ಶಾಸನಸಭೆಗಳ ಕಾರ್ಯಕಲಾಪ ವರದಿ ಮಾಡಲು ಅವಕಾಶ ಕೊಡಲಾಗುವುದು.
- ಆಕಾಶವಾಣಿ, ದೂರದರ್ಶನ ಹಾಗೂ ಸುದ್ದಿ ಸಂಸ್ಥೆಗಳಿಗೆ ಪೂರ್ಣ ರೀತಿಯ ಸ್ವಾಯತ್ತತೆ ಕೊಡಲಾಗುವುದು.
- ಪ್ರಜಾಪ್ರಭುತ್ವದ ಭಾಗವಾದ ಶಾಂತಿಯುತ, ಅಹಿಂಸಾ ರೀತಿಯ ಪ್ರತಿಭಟನೆಗೆ ಅವಕಾಶ ಮಾಡಿಕೊಡಲಾಗುವುದು.

**ಹೊಸ ಆರ್ಥಿಕ ನೀತಿ**

ಸಾಮಾಜಿಕ ನ್ಯಾಯ ಎಂಬುದು ಉತ್ತಮ ಸಿದ್ಧಾಂತ. ವೈಜ್ಞಾನಿಕ ತತ್ವ ತಳಹದಿಯ ಮೇಲೆ ಸಾಮಾಜಿಕ ನ್ಯಾಯವನ್ನು ಅನುಷ್ಠಾನ ಮಾಡಬೇಕು. ಗಾಂಧೀಜಿ ಹೇಳಿದ 'ಅಂತ್ಯೋದಯ' ಕಾರ್ಯಕ್ರಮದ ಅನುಷ್ಠಾನದಲ್ಲಿ ಜನತಾಪಕ್ಷ ಬದ್ಧವಾಗಿದೆ. ಕೃಷಿ ಹಾಗೂ ಸಣ್ಣ ಕೈಗಾರಿಕೆಗಳಿಗೆ ಹೆಚ್ಚಿನ ಆದ್ಯತೆ ಕೊಡುವುದು ಪಕ್ಷದ ಹೆಗ್ಗುರಿ. ಜನತಾಪಕ್ಷ ದೇಶದ ಪ್ರತಿಯೊಂದು ಕುಟುಂಬವೂ ಬಡತನದ ರೇಖೆಗಿಂತ ಮೇಲಿರಬೇಕೆಂದು ಬಯಸುತ್ತದೆ.

ಸಂವಿಧಾನದ ನಿರ್ದೇಶಕ ತತ್ವ ಹಾಗೂ ನಿಯಮ ೪೧ರ ಪ್ರಕಾರ ಆಯಾಯ ರಾಜ್ಯಗಳು ತಮ್ಮ ಸಂಪನ್ಮೂಲ ಸಂಗ್ರಹದ ಜೊತೆಗೆ ಜನತೆಗೆ ದುಡಿಮೆಯ ಹಕ್ಕು ಹಾಗೂ ಶಿಕ್ಷಣವನ್ನು ಒದಗಿಸುವುದು. ನಿರುದ್ಯೋಗಿಗಳಿಗೆ, ವೃದ್ಧರಿಗೆ, ಅಂಗವಿಕಲರಿಗೆ ಹಾಗೂ ರೋಗಿಗಳಿಗೆ ಪ್ರತ್ಯೇಕ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು. ನಿರುದ್ಯೋಗ ಪರಿಹಾರಕ್ಕೆ ವ್ಯಾಪಕವಾದ ಕಾರ್ಯಕ್ರಮ ರೂಪಿಸಿ 'ಸ್ವಯಂ ಉದ್ಯೋಗ' ಯೋಜನೆಯನ್ನು ಜಾರಿಗೆ ತರಲಾಗುವುದು. ಕಳೆದ ಮೂರು ದಶಕಗಳಿಂದ ಆಳಿದ ಕಾಂಗ್ರೆಸ್ ಪಕ್ಷ ಯೋಜನೆಯ ಅನುಷ್ಠಾನದಲ್ಲಿ ವಿಫಲವಾಗಿರುವುದರಿಂದ ಈ ದೇಶದ ಬಹುಮಟ್ಟಿನ ಜನರಿಗೆ ಆಹಾರ, ಶುದ್ಧ ಕುಡಿಯುವ ನೀರು, ವಸತಿ, ಶಿಕ್ಷಣ, ಆರೋಗ್ಯ, ಅಗತ್ಯ ಸೌಲಭ್ಯಗಳನ್ನು ಕೊಡಲಾಗುತ್ತಿಲ್ಲ. ಪ್ರಸ್ತುತ ೧,೧೬,೦೦೦ ಹಳ್ಳಿಗಳಲ್ಲಿ ಅಗತ್ಯ ಸೌಕರ್ಯಗಳಿಲ್ಲ. ಗ್ರಾಮೀಣ ಹಾಗೂ ನಗರ ಪ್ರದೇಶದ ಬದುಕಿನಲ್ಲಿರುವ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸಲಾಗುವುದು. ಕೃಷಿ ಹಾಗೂ ಗುಡಿ ಕೈಗಾರಿಕೆಗಳಿಗೆ ಹೆಚ್ಚಿನ ಇಂಬು ಕೊಡುವ ಮೂಲಕ ಭಾರತದ ಗ್ರಾಮೀಣ ಬದುಕಿಗೆ ಹೊಸ ರೂಪ ಕೊಡುವುದು ಜನತಾ ಪಕ್ಷದ ಉದ್ದೇಶ. ಕೃಷಿ ಚಟುವಟಿಕೆಗಳಿಗೆ ಪೂರಕವಾಗಿ ಜಮೀನ್ದಾರಿಕೆ ರದ್ದು, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗಗಳಿಗೆ ಭೂಮಿ ಹಂಚಿಕೆ, ಕೃಷಿ ಕಾರ್ಮಿಕರ ಬಗ್ಗೆ ಚಿಂತನೆ ಜನತಾಪಕ್ಷದ ಧ್ಯೇಯವಾಗಿದೆ.

ಗ್ರಾಮೀಣಾಭಿವೃದ್ಧಿಯಲ್ಲಿ ವಿಶಿಷ್ಟ ದೃಷ್ಟಿಕೋನ ಹೊಂದಲಾಗಿದೆ. ಕೃಷಿಗೆ ಹೊಂದಿಕೊಂಡಂತೆ, ಉತ್ಪಾದನೆಗೆ ಹೊಂದಿಕೊಂಡಂತೆ ಸಮರ್ಪಕ ಭೂಬಳಕೆ, ಜಲ ಸಂಪನ್ಮೂಲದ ಹೆಚ್ಚಳ, ಭೂ ಸಾರದ ಹೆಚ್ಚಳ, ಭೂ ಸುಧಾರಣೆ, ಪಶು ಸಂಗೋಪನೆ, ಮೀನುಗಾರಿಕೆ

ಮುಂತಾದ ಉಪ ವೃತ್ತಿಗಳಿಗೆ ಹೆಚ್ಚಿನ ಒತ್ತು ಕೊಡಲಾಗುವುದು. ಬ್ಯಾಂಕ್ ಹಾಗೂ ಇತರ ಹಣಕಾಸು ಸಂಸ್ಥೆಗಳಿಂದ ಕೃಷಿಗೆ ಕೊಡುವ ಆರ್ಥಿಕ ನೆರವಿಗೆ ಸ್ಪಷ್ಟ ನಿರ್ದೇಶನಗಳನ್ನು ಕೊಡಲಾಗುವುದು. ೨.೫ ಹೆಕ್ಟೇರು ಭೂಮಿಗಿಂತ ಕೆಳಗಿನ ಭೂಮಿಗೆ ಕಂದಾಯ ನಿಗದಿ ಮಾಡಲಾಗುವುದು. ಗ್ರಾಮೀಣ ಪ್ರದೇಶದಲ್ಲಿರುವ ಬಡಗಿ, ನೇಕಾರ, ಕಮ್ಮಾರ, ಚಮ್ಮಾರ, ಕಲ್ಲುಕುಟಗಿ, ಚಿನ್ನ ಬೆಳ್ಳಿ ಕೆಲಸ ಮಾಡುವ ರೂವಾರಿ- ಹೀಗೆ ಎಲ್ಲಾ ಕುಶಲಕರ್ಮಿಗಳಿಗೆ ಆದ್ಯತೆ ಕೊಡಲಾಗುವುದು. ಕೈಗಾರೀಕರಣದ ಹೊಸ ದೃಷ್ಟಿಕೋನವನ್ನು ಜನತಾಪಕ್ಷ ಹೊಂದಿದೆ. ಸಮೂಹ ಬಳಕೆಯ ವಸ್ತುಗಳ ಉತ್ಪಾದನೆ ಹೆಚ್ಚಾಗಬೇಕು.

ವಿಜ್ಞಾನ ಹಾಗೂ ತಾಂತ್ರಿಕತೆಯ ಆವಿಷ್ಕಾರಗಳು ಜನತೆಗೆ ತಲುಪಬೇಕೆಂಬ ಮಹತ್ವಾಕಾಂಕ್ಷೆ ಜನತಾಪಕ್ಷದ್ದು. ಸ್ವದೇಶಿ ತತ್ವದ ಹಿನ್ನೆಲೆಯಲ್ಲಿ ತಾಂತ್ರಿಕ ಉನ್ನತಿಯನ್ನು ಪಕ್ಷ ಬಯಸುತ್ತದೆ. ಹತ್ತಿಗಿರಣಿ, ಸಕ್ಕರೆ, ಕಾಗದ, ಪಶುಸಂಗೋಪನೆ, ಸಿಮೆಂಟ್, ಕೋಳಿ ಸಾಕಾಣಿಕೆ, ಮೊದಲಾದವುಗಳಿಗೆ ಹೆಚ್ಚಿನ ಬೆಂಬಲ ಕೊಡಲಾಗುವುದು. ರಾಷ್ಟ್ರೀಕರಣ ಎಂಬುದಕ್ಕೆ ಇತಿಶ್ರೀ ಹಾಡಿ ವಿವಿಧ ಉದ್ಯಮಗಳು ಪೂರ್ಣವಾಗಿ ಖಾಸಗಿ ಒಡೆತನದಲ್ಲಿ ಬೆಳೆಯುವಂತೆ ನೋಡಲಾಗುವುದು. ಕೃಷಿ ಹಾಗೂ ಕೈಗಾರಿಕೆಗಳಲ್ಲಿ 'ದುಡಿಯುವ ಹಕ್ಕ'ನ್ನು ಕಾರ್ಮಿಕರಿಗೆ ಕೊಡಲಾಗುವುದು. ವೇತನ ಅಥವಾ ಕೂಲಿಯಿಂದ ಬೋನಸ್‌ನ್ನು ಪ್ರತ್ಯೇಕವಾಗಿಸಲು ವ್ಯವಸ್ಥೆ ಮಾಡಲಾಗುವುದು. ಕಾರ್ಮಿಕರ ಹಿತವನ್ನು ಕಾಯ್ದುಕೊಳ್ಳಲಾಗುವುದು. ಕಾರ್ಮಿಕ ವೇತನ ಹಾಗೂ ಬೆಲೆ ನೀತಿಯ ಬಗ್ಗೆ ಅನ್ಯೋನ್ಯತೆ ಕಾಯ್ದುಕೊಳ್ಳಲಾಗುವುದು. ಬೆಲೆಯೇರಿಕೆಯನ್ನು ಹಿಡಿತದಲ್ಲಿಟ್ಟುಕೊಂಡು ಜನಸಾಮಾನ್ಯರ ಹಿತವನ್ನು ಕಾಯ್ದುಕೊಳ್ಳಲಾಗುವುದು. ಗ್ರಾಹಕರು ಹೆಚ್ಚು ಉಪಯೋಗಿಸುವ ವಸ್ತುಗಳಿಗೆ ಅಬ್ಕಾರಿ ಹಾಗೂ ಮಾರಾಟ ಸುಂಕವನ್ನು ಕಡಿಮೆ ಮಾಡಲಾಗುವುದು. ತಿಂಗಳಿಗೆ ಹತ್ತುಸಾವಿರ ರೂಪಾಯಿಗಳಿಗೂ ಅಧಿಕ ಆದಾಯವಿರುವವರು ಮಾತ್ರ ತೆರಿಗೆ ಕಟ್ಟಬೇಕಾಗುತ್ತದೆ. 'ರಾಷ್ಟ್ರೀಯ ಜಲ ನೀತಿ' ರೂಪಿಸಲಾಗುವುದು.

## ಆರ್ಥಿಕ ಅಧ್ಯಾಯ

- ದುಡಿಯುವ ಹಕ್ಕು ಹಾಗೂ ಉದ್ಯೋಗ ಸೃಷ್ಟಿ.
- ಆಸ್ತಿ ಹೊಂದುವುದನ್ನು ಮೂಲಭೂತ ವಿಧಿಯಿಂದ ರದ್ದು ಮಾಡುವುದು.
- ಗಾಂಧೀಜಿಯವರ ಅಂತ್ಯೋದಯ ಕಾರ್ಯಕ್ರಮದ ಮೂಲಕ ವಿಕೇಂದ್ರೀಕರಣ ವ್ಯವಸ್ಥೆಗೆ ಆದ್ಯತೆ.
- ಹತ್ತು ವರ್ಷದಲ್ಲಿ ಹಣದುಬ್ಬರ ಇಳಿಕೆ.
- ಸ್ವಾವಲಂಬನೆಗಾಗಿ ತಾಂತ್ರಿಕ ಪದ್ಧತಿ.
- ಕುಡಿಯುವ ನೀರು, ಕೃಷಿ, ಗ್ರಾಮೀಣಾಭಿವೃದ್ಧಿ, ಹಾಗೂ ಗುಡಿ ಕೈಗಾರಿಕೆಗಳಿಗೆ ಹೆಚ್ಚಿನ ಆದ್ಯತೆ.
- ಗ್ರಾಮೀಣ ಹಾಗೂ ನಗರ ಬದುಕಿನ ಅಂತರ ಕಡಿಮೆ ಮಾಡಿ ಸಮನ್ವಯ ಸಾಧಿಸುವುದು.
- 'ರಾಷ್ಟ್ರೀಯ ಜಲ ನೀತಿ', 'ರಾಷ್ಟ್ರೀಯ ಇಂಧನ ನೀತಿ', 'ಪರಿಸರ ಸಂರಕ್ಷಣೆ', ಮೊದಲಾದವುಗಳಿಗೆ ಬೆಂಬಲ ಕೊಡಲಾಗುವುದು.

ಶಿಕ್ಷಣ, ಆರೋಗ್ಯ ಹಾಗೂ ಸಾಮೂಹಿಕ ವಿಮೆ ಮೊದಲಾದವುಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸಾರ್ವಜನಿಕರು ಪಾಲುಗೊಳ್ಳುವಂತೆ ಮಾಡಲಾಗುವುದು. ಬಲವಂತದ ಕುಟುಂಬ ಕಲ್ಯಾಣ ಕಾರ್ಯಕ್ರಮದ ಬದಲಾಗಿ ಜನರ ಮನ ಒಲಿಕೆಯ ಮೂಲಕ ಇದನ್ನು ಅನುಷ್ಠಾನ ಮಾಡಲಾಗುವುದು. ಮಹಿಳೆ ಹಾಗೂ ಮಕ್ಕಳ ಆರೋಗ್ಯ ರಕ್ಷಣೆಗೆ ಸಾಕಷ್ಟು ಗಮನ ಕೊಡಲಾಗುವುದು. ಮಾನವ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳಲು ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ಕೊಡಲಾಗುವುದು. ಮಗುವಿಗೆ ೧೨ ವರ್ಷದವರೆಗೆ ಕಡ್ಡಾಯ ಶಿಕ್ಷಣವನ್ನು ವ್ಯವಸ್ಥೆ ಮಾಡಲಾಗುವುದು. ಅಸಂಪ್ರಾದಾಯಿಕ ಶಿಕ್ಷಣ ಹಾಗೂ ವಯಸ್ಕರ ಶಿಕ್ಷಣವನ್ನು ಬಲಪಡಿಸಲಾಗುವುದು. ವೃತ್ತಿ ಕೌಶಲ್ಯ ಹೆಚ್ಚಿಸುವ ಶಿಕ್ಷಣಕ್ಕೆ ಮಹತ್ವ ಕೊಡಲಾಗುತ್ತದೆ. ತಾಂತ್ರಿಕ ಶಿಕ್ಷಣಕ್ಕೆ ಸಾಕಷ್ಟು ಮಹತ್ವ. ಅನಕ್ಷರತೆಯ ದಮನಕ್ಕೆ ಹೆಚ್ಚಿನ ಮಹತ್ವ, ಸಾಕ್ಷರತಾ ಕಾರ್ಯಕ್ಕೆ ಹೆಚ್ಚಿನ ಒತ್ತು, ತ್ರಿಭಾಷಾ ಸೂತ್ರಕ್ಕೆ ಮಾನ್ಯತೆ, ಹಿಂದಿ ಮತ್ತು ಉರ್ದು ಭಾಷೆಗಳಿಗೆ ಪ್ರೋತ್ಸಾಹ.

ಶುದ್ಧ ಕುಡಿಯುವ ನೀರು ಪೂರೈಕೆ ಹಾಗೂ ಸಮೂಹ ಆರೋಗ್ಯ ವಿಮೆ ಎಂಬ ಹೊಸ ಯೋಜನೆಯನ್ನು ರೂಪಿಸಲಾಗುವುದು. ವಸತಿ ಸಹಕಾರ ಸಂಘಗಳ ಸ್ಥಾಪನೆಗೆ ಪ್ರೋತ್ಸಾಹ. ಜನತಾ ಪಕ್ಷ ನಗರೀಕರಣ ಹಾಗೂ ಗ್ರಾಮೀಣಾಭಿವೃದ್ಧಿಯನ್ನು ಒಂದೇ ನಾಣ್ಯದ ಎರಡು ಮುಖಗಳೆಂದು ಭಾವಿಸುತ್ತದೆ. ವೃದ್ಧರಿಗೆ, ನಿರ್ಗತಿಕರಿಗೆ, ಅಂಗವಿಕಲರಿಗೆ, ಬೀದಿಮಕ್ಕಳಿಗೆ, ಬುದ್ಧಿಮಾಂದ್ಯರಿಗೆ ಹಾಗೂ ನಿವೃತ್ತರಾದವರಿಗೆ ಸಾಮಾಜಿಕ ರಕ್ಷಣೆ ಕೊಡಲು ಜನತಾ ಪಕ್ಷ ಬದ್ಧವಾಗಿರುತ್ತದೆ. ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರಿಗೆ ಸೂಕ್ತಸ್ಥಾನ ಕೊಡಲು ಪಕ್ಷ ಬದ್ಧವಾಗಿರುತ್ತದೆ. ಉತ್ತಮ ಶಿಕ್ಷಣ, ಆರೋಗ್ಯ, ಮನರಂಜನೆ, ಉದ್ಯೋಗ ಪಡೆಯುವುದು ಮಕ್ಕಳ

ಹಕ್ಕುಗಳಾಗಬೇಕು. ಯುವಜನಾಂಗಕ್ಕೆ ತಮ್ಮ ಪ್ರತಿಭೆ ತೋರಿಸಲು ಎಲ್ಲಾ ರೀತಿಯ ಅವಕಾಶ. ಮತೀಯ ಹಾಗೂ ಭಾಷಾ ಅಲ್ಪಸಂಖ್ಯಾತರಿಗೆ ಸೂಕ್ತ ರಕ್ಷಣೆ.

ಮಾನವ ಹಕ್ಕಿನ ಬಗ್ಗೆ ಸ್ವತಂತ್ರ ಸ್ವಾಯತ್ತ ಸಂಸ್ಥೆಯ ಪ್ರಾರಂಭ. ಅಲ್ಪಸಂಖ್ಯಾತರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸೂಕ್ತ ರಕ್ಷಣೆ. ಸ್ವಾತಂತ್ರ್ಯಗಳಿಸಿ ಮೂರು ದಶಕಗಳು ಉರುಳಿದರೂ, ಹಿಂದುಳಿದ ವರ್ಗಗಳಿಗೆ ಯಾವುದೇ ಸಾಮಾಜಿಕ ಸ್ಥಾನ ದೊರೆತಿಲ್ಲ. ಅವರ ಸಾಮಾಜಿಕ ಹಾಗೂ ಆರ್ಥಿಕ ಉನ್ನತಿಗೆ ದುಡಿಯುವುದು. ಹಿಂದುಳಿದ ವರ್ಗಗಳಿಗೆ ಶೇ. ೩೩ ರಷ್ಟು ಸರ್ಕಾರಿ ನೌಕರಿಯಲ್ಲಿ ಮೀಸಲಾತಿ. ಅಸ್ಪೃಶ್ಯತಾ ನಿವಾರಣೆ, ಪರಿಶಿಷ್ಟ ಜಾತಿ ಹಾಗೂ ವರ್ಗದ ಅಭಿವೃದ್ಧಿಗೆ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಪರಿಶಿಷ್ಟ ವರ್ಗದವರ ಭೂಮಿ ಹಾಗೂ ಅವರಿಗೆ ಅರಣ್ಯದ ಬಗ್ಗೆಯಿರುವ ಹಕ್ಕನ್ನು ಮಾನ್ಯ ಮಾಡಲಾಗುವುದು. ಬೇಚರಕ್ ಗ್ರಾಮವನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲಾಗುವುದು. ದೇಶದಲ್ಲಿ ಹಿಂದುಳಿದ ಈಶಾನ್ಯ ಭಾಗ, ಜಮ್ಮು-ಕಾಶ್ಮೀರ, ಹಿಮಾಚಲ ಹಾಗೂ ಮಲೆನಾಡು ಮುಂತಾದ ಪ್ರದೇಶಗಳ ಅಭಿವೃದ್ಧಿಗೆ ವಿಶೇಷ ಕಾರ್ಯಕ್ರಮ ರೂಪಿಸಲಾಗುವುದು.

ದೇಶದ ಸಾರ್ವಜನಿಕ ಕ್ಷೇತ್ರದಲ್ಲಿ ಕ್ಯಾನ್ಸರ್‌ನಂತೆ ಹಬ್ಬಿರುವ ಭ್ರಷ್ಟಾಚಾರವನ್ನು ಹತೋಟಿಗೆ ತರಲಾಗುವುದು. ದೇಶದ ಪ್ರಧಾನಿ ರಾಜ್ಯದ ಮುಖ್ಯಮಂತ್ರಿಗಳನ್ನು ಸೇರಿದಂತೆ ಎಲ್ಲ ಸಾರ್ವಜನಿಕ ಧುರೀಣರನ್ನು ಲೋಕಪಾಲ ಹಾಗೂ ಲೋಕಾಯುಕ್ತ ವ್ಯಾಪ್ತಿಗೆ ತರಲಾಗುವುದು. ದೇಶದಲ್ಲಿರುವ ಸೃಜನಶೀಲ ಪ್ರತಿಭೆಯನ್ನು ಪ್ರೋತ್ಸಾಹಿತಸಲು ಜನಪದ ಕಲೆಗಳಿಗೆ ಸಾಕಷ್ಟು ಪ್ರೋತ್ಸಾಹ ಕೊಡಲಾಗುವುದು.

## ಸಾಮಾಜಿಕ ಚಿತ್ರಣ

- ೧೨ ವರ್ಷದ ದೇಶದ ಎಲ್ಲಾ ಮಕ್ಕಳಿಗೂ ಉಚಿತ ಶಿಕ್ಷಣ.
- ಅನಕ್ಷರತೆಯ ನಿರ್ಮೂಲನೆ.
- ಹಳ್ಳಿಗಳಿಗೆ ಶುದ್ಧ ಕುಡಿಯವ ನೀರು.
- ಸಮುದಾಯದ ಆರೋಗ್ಯ ರಕ್ಷಣೆ ಹಾಗೂ ಸಮೂಹ ಆರೋಗ್ಯ ವಿಮೆ.
- ಗ್ರಾಮಾಭಿವೃದ್ಧಿ ಹೊಸ ಆಂದೋಲನ.
- ಸಮುದಾಯಗಳಿಗೆ ಕಡಿಮೆ ವೆಚ್ಚದಲ್ಲಿ ಮನೆ ನಿರ್ಮಾಣ.
- ನಗರೀಕರಣ ಕುರಿತಂತೆ ನೀತಿ ನಿರೂಪಣೆ.
- ಬಹುಸಂಖ್ಯಾತ ಹಾಗೂ ಅಲ್ಪಸಂಖ್ಯಾತರನ್ನೊಳಗೊಂಡಂತೆ ಶೋಷಣೆಯಿಲ್ಲದೆ ಹೊಸ ಕುಟುಂಬ ಯೋಜನೆ ನೀತಿ.
- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಹಾಗೂ ಇತರ ದುರ್ಬಲ ವರ್ಗಗಳಿಗೆ ರಕ್ಷಣೆ.
- ನಾಗರಿಕ ಹಕ್ಕು ಆಯೋಗ ಸ್ಥಾಪನೆ.
- ಭ್ರಷ್ಟಾಚಾರ ನಿರ್ಮೂಲನಕ್ಕೆ ವ್ಯವಸ್ಥೆ.
- ಮಹಿಳಾ ಹಕ್ಕಿನ ರಕ್ಷಣೆ ಹಾಗೂ ಯುವಜನ ಸೇವೆಯಲ್ಲಿ ಹೊಸ ದೃಷ್ಟಿಕೋನ.
- ದುರ್ಬಲವರ್ಗದವರಿಗೆ ಉಚಿತ ಕಾನೂನು ನೆರವು.
- ಸ್ವಯಂ ಸೇವಾ ಸಂಸ್ಥೆಗಳಿಗೆ ಪ್ರೋತ್ಸಾಹ.

## ವಿದೇಶಾಂಗ ನೀತಿ

ವಿದೇಶಾಂಗ ನೀತಿಯಲ್ಲಿ ಜನತಾಪಕ್ಷ ಪ್ರಗತಿಪರವಾಗಿದ್ದು ದೇಶದ ರಕ್ಷಣೆಯ ಜೊತೆಗೆ ನೆರೆಹೊರೆಯವರೊಡನೆ ಉತ್ತಮ ಬಾಂಧವ್ಯಕ್ಕೆ ಪ್ರಯತ್ನ, ನಿಶ್ಶಸ್ತ್ರೀಕರಣ ಹಾಗೂ ವಿಶ್ವಶಾಂತಿಗೆ ಭಾರತದ ಸತತ ಪ್ರಯತ್ನ. ಮೂರನೆಯ ರಾಷ್ಟ್ರದ ಒಕ್ಕೂಟಕ್ಕೆ ದುಡಿಮೆ. ನೆರೆಹೊರೆಯವರೊಡನೆ ಉಂಟಾಗಿರುವ ಗಡಿ ವಿವಾದವನ್ನು ಕುರಿತು ಮಾತುಕತೆಯ ಮೂಲಕ ಸೌಹಾರ್ದಯುತ ಇತ್ಯರ್ಥಕ್ಕೆ ಪ್ರಯತ್ನ. ಪ್ರಾಂತೀಯ ಸ್ನೇಹ ಸಂವರ್ಧನ ವ್ಯವಹಾರಗಳಿಗೆ, ಒಪ್ಪಂದಗಳಿಗೆ ಆದ್ಯತೆ.

## ರಕ್ಷಣೆ

ದೇಶದ ರಕ್ಷಣೆಗೆ ಕಂಕಣಬದ್ಧವಾಗಿರುವ ರಕ್ಷಣಾ ಇಲಾಖೆಗೆ ಹೊಸ ದೃಷ್ಟಿಕೋನ ಕೊಡಲಾಗುವುದು. ಆಧುನಿಕ ಶಸ್ತ್ರಾಸ್ತ್ರಗಳನ್ನು ರಕ್ಷಣಾ ಇಲಾಖೆಗೆ ಒದಗಿಸಿ ಅದನ್ನು ಮತ್ತಷ್ಟು ಬಲಗೊಳಿಸಲಾಗುವುದು. ಐ.ಎ.ಎಫ್.ಗೆ (Indian Air Force). ಉತ್ತಮ ತರಬೇತಿ ಕೊಡಲಾಗುವುದು. ಭಾರತೀಯ ಗಡಿ ರಕ್ಷಣಾ ದಳವನ್ನು (BSF) ಪ್ರಾರಂಭಿಸಲಾಗುವುದು. ನಿವೃತ್ತ ಸೈನಿಕರಿಗೆ ವಿಶೇಷ ಕಲ್ಯಾಣ ಯೋಜನೆ ಪ್ರಾರಂಭ.

## ಭವಿಷ್ಯದಲ್ಲಿ ನಂಬಿಕೆ

ಜನತಾ ಪಕ್ಷಕ್ಕೆ ಭಾರತದ ಮಹಾನ್ ಜನತೆಯಲ್ಲಿ ಅಪಾರ ವಿಶ್ವಾಸ. ಭಾರತಕ್ಕೆ ತನ್ನದೇ ಆದ ಪರಂಪರೆಯಿದೆ. ಮೌಲ್ಯ, ಧೈರ್ಯ, ಮಾನವೀಯತೆ ಹಾಗೂ ಅರ್ಪಣಾ ಮನೋಭಾವದ ಗುಣಗಳಿವೆ. ಆದರೆ ಇಂದು ಅವುಗಳನ್ನೆಲ್ಲಾ ದಮನ ಮಾಡಲಾಗಿದೆ. ಜನತಾ ಪಕ್ಷ ಸರ್ಕಾರ ಈ ಮೌಲ್ಯಗಳ ಪುನರುತ್ಥಾನಕ್ಕೆ ಶ್ರಮಿಸುತ್ತದೆ. ಪ್ರತಿಯೊಬ್ಬ ನಾಗರಿಕ ಕೂಡ ಮುಕ್ತವಾಗಿ ಮಾತನಾಡುತ್ತ, ದೇಶದ ಅಭಿವೃದ್ಧಿಗೆ ಸ್ವಯಂಪ್ರೇರಿತನಾಗಿ ಚಿಂತಿಸುತ್ತಾ ದೇಶವನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯುವ ಗುರಿ ಹೊಂದುವಂತೆ ಮಾಡಲಾಗುವುದು. 'ವಿಜಯ' 'ಸ್ವಾತಂತ್ರ್ಯ' ಹಾಗೂ 'ಪ್ರಗತಿ' ಜನತಾಪಕ್ಷದ ಪ್ರಣಾಳಿಕೆಯ ಕೊಡುಗೆಗಳಾಗಿವೆ. ಸ್ವಾತಂತ್ರ್ಯಾನಂತರ ವಿರೋಧ ಪಕ್ಷವೊಂದು ಇಷ್ಟೊಂದು ಸಮಗ್ರವಾಗಿ ಯೋಚಿಸಿರುವುದು ಇದೇ ಮೊದಲ ಬಾರಿಗೆ ಎನ್ನಬಹುದು.

## ಚುನಾವಣಾ ಫಲಿತಾಂಶ

ಈ ಚುನಾವಣಾ ಪ್ರಣಾಳಿಕೆ ಸಮಗ್ರವಾದ ದೃಷ್ಟಿಕೋನವನ್ನು ಹೊಂದಿದೆ. ಜನತಾಪಕ್ಷ ೧೯೭೭ ರಲ್ಲಿ ಸ್ಥಾಪಿಸಿದ ವಿಜಯ ಅತ್ಯದ್ಭುತವಾದುದು. ಸ್ವತಃ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರೇ ರಾಯಬರೇಲಿ ಕ್ಷೇತ್ರದಿಂದ ಸೋಲನ್ನಪ್ಪಿದರು. ದಕ್ಷಿಣ ರಾಜ್ಯಗಳಿಗಿಂತ ಉತ್ತರ ರಾಜ್ಯದಲ್ಲಿ ಜನತಾಪಕ್ಷ ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಗಣನೀಯ ಸಾಧನೆ ಮಾಡಿದೆ. ಅಷ್ಟೇ ಅಲ್ಲ ಸ್ವಾತಂತ್ರ್ಯಾನಂತರದ ಮೂರು ದಶಕಗಳ ನಂತರ ಮೊದಲ ಬಾರಿಗೆ ಕಾಂಗ್ರೆಸ್ಸೇತರ ಸರ್ಕಾರವನ್ನು ಕೇಂದ್ರದಲ್ಲಿ ಸ್ಥಾಪಿಸಿದ ಕೀರ್ತಿ ಜನತಾಪಕ್ಷದ್ದು. ಈ ಮಹತ್ವದ ಚುನಾವಣೆಯಲ್ಲಿ ಕರ್ನಾಟಕದಿಂದ ಜನತಾ ಪಕ್ಷ ಎರಡು ಸ್ಥಾನಗಳನ್ನು ಗಳಿಸುವಲ್ಲಿ ಮಾತ್ರ ಯಶಸ್ವಿಯಾಯಿತು. ಬೆಂಗಳೂರು ಲೋಕಸಭಾ ಕ್ಷೇತ್ರದಿಂದ ರಾಷ್ಟ್ರದ ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಕೆ. ಎಸ್. ಹೆಗಡೆ ಅವರು ೪೧,೧೬೫ ಮತಗಳ ಅಂತರದಿಂದ ಜಯ ಗಳಿಸಿದರು. ಜನತಾ ಪಕ್ಷದ ಪರವಾಗಿ ಸ್ಪರ್ಧಿಸಿದ್ದ ಕೆ. ಎಸ್. ಹೆಗಡೆ ಅವರು ೨,೨೧,೯೭೪ ಮತಗಳಿಸಿದರೆ, ಅವರ ಪ್ರತಿಸ್ಪರ್ಧಿ ಆಡಳಿತ ಕಾಂಗ್ರೆಸ್‌ನ ಕೆ. ಹನುಮಂತಯ್ಯನವರು ೧,೮೦,೮೦೯ ಮತಗಳಿಸಿದರು. ಕೆ. ಎಸ್. ಹೆಗಡೆ ಅವರು ಶೇಕಡಾ ೫೩.೦೪ ಮತಗಳಿಸಿದರೆ. ಕೆ. ಹನುಮಂತಯ್ಯ ಅವರು ಶೇಕಡಾ ೪೩.೨೧ ರಷ್ಟು ಮತ ಗಳಿಸಿದರು.

ಹಾಸನ ಲೋಕಸಭಾ ಕ್ಷೇತ್ರದಿಂದ ಜನತಾ ಪಕ್ಷದ ಪರವಾಗಿ ಎಸ್. ನಂಜೇಶಗೌಡರವರು ಆಡಳಿತ ಕಾಂಗ್ರೆಸ್‌ನ ಜಿ. ಎಲ್. ನಲ್ಲೂರೇಗೌಡ ಅವರಿಗಿಂತ ೧೦೯ ಮತಗಳ ಅಂತರದಿಂದ ಆಯ್ಕೆಯಾದರು. ಎಸ್. ನಂಜೇಶ್‌ಗೌಡ ಅವರು ೨,೦೭,೫೬೦ ಮತಗಳಿಸಿದರೆ, ಜಿ. ಎಲ್. ನಲ್ಲೂರೇಗೌಡ ಅವರು ೨,೦೬,೪೫೧ ಮತಗಳಿಸಿದರು. ೧೯೭೭ರ ಚುನಾವಣೆಯಲ್ಲಿ ಜನತಾ ಪಕ್ಷ ಹೆಚ್ಚು ಸ್ಥಾನ ಗೆಲ್ಲಲು ಸಾಧ್ಯವಾಗದಿದ್ದರೂ ಅನೇಕ ಕ್ಷೇತ್ರಗಳಲ್ಲಿ ಅದು ಅತ್ಯುತ್ತಮ ಸಾಧನೆ ಮಾಡಿರುವುದನ್ನು ಗಮನಿಸಬಹುದು. ಉದಾಃ ಕನಕಪುರ ಲೋಕಸಭಾ ಕ್ಷೇತ್ರದಿಂದ ಜನತಾ ಪಕ್ಷದ ಅಭ್ಯರ್ಥಿಯಾಗಿದ್ದ ಎಂ. ವಿ. ರಾಜಶೇಖರನ್ ೧,೮೭,೪೫೫ ಮತಗಳಿಸಿ ಶೇ. ೪೬.೬೧ ರಷ್ಟು ಮತಗಳಿಸಿದ್ದರು. ವಿಜೇತ ಕಾಂಗ್ರೆಸ್ ಅಭ್ಯರ್ಥಿ ೧,೯೨,೧೧೧ ಮತಗಳಿಸಿ ಶೇ. ೪೭.೧೫ ಮತಗಳಿಸಿದ್ದರು. ಇವರಿಬ್ಬರ ನಡುವಿನ ಅಂತರ ೪,೬೫೬.

ಬೀದರ್‌ನ ರಾಮಚಂದ್ರ ವೀರಪ್ಪ, ದಾವಣಗೆರೆಯ ಕೆ.ಜಿ. ಮಹೇಶ್ವರಪ್ಪ, ಮಂಡ್ಯದ ಎಂ. ಶ್ರೀನಿವಾಸ್, ಬಿಜಾಪುರದ ಪಿ. ಸಿ. ನಾಗಠಾಣ ಅವರುಗಳು ಕೂದಲೆಳೆಯ ಅಂತರದಿಂದ ಸೋಲಪ್ಪಿದ್ದಾರೆ. ಆದರೆ ಈ ಚುನಾವಣೆ ಮೂಲಕ ಕರ್ನಾಟಕದಲ್ಲಿ ಜನತಾ ಪಕ್ಷ ಭದ್ರವಾಗಿ ನೆಲೆಯೂರಿತು. ಅತಿ ಹೆಚ್ಚು ಶೇಕಡಾವಾರು ಮತ ಗಳಿಸುವಲ್ಲಿ ಯಶಸ್ವಿಯಾಯಿತು. ಕಾಂಗ್ರೆಸ್ಸೇತರ ಸರ್ಕಾರ ಸ್ಥಾಪಿಸುವ ವಿರೋಧ ಪಕ್ಷಗಳ ಆಸೆಗೆ ಜೀವಂತಿಕೆ ತಂದುಕೊಟ್ಟ ಚುನಾವಣೆ ಇದಾಗಿದೆ.

## ೧೯೭೮ರ ವಿಧಾನಸಭಾ ಚುನಾವಣೆಗಳು

### ಹಿನ್ನೆಲೆ

ಲೋಕನಾಯಕ ಜಯಪ್ರಕಾಶ್ ನಾರಾಯಣರವರ ಆಶೋತ್ತರ, ಆಶೀರ್ವಾದಗಳೊಡನೆ ೧೯೭೭ರ ಮೇ ತಿಂಗಳಲ್ಲಿ ರೂಪು ತಳೆದ ಜನತಾ ಪಕ್ಷವು ಅದೇ ವರ್ಷದಲ್ಲಿ ನಡೆದ ಆರನೆಯ ಲೋಕಸಭಾ ಚುನಾವಣೆಯಲ್ಲಿ ಜಯಭೇರಿ ಬಾರಿಸಿ ಮೊಟ್ಟಮೊದಲ ಬಾರಿಗೆ ಕೇಂದ್ರದಲ್ಲಿ ಕಾಂಗ್ರೆಯೇತರ ಸರ್ಕಾರವನ್ನು ರಚಿಸಿತು. ಕರ್ನಾಟಕದಲ್ಲಿ ೭೧ ತಿಂಗಳಿನಿಂದ ಆಡಳಿತ ನಡೆಸುತ್ತಿದ್ದ ಡಿ. ದೇವರಾಜ ಅರಸು ನೇತೃತ್ವದ ಕಾಂಗ್ರೆಸ್ ಸರ್ಕಾರವನ್ನು ಕೇಂದ್ರ ಸರ್ಕಾರವು ಸಂವಿಧಾನದ ೩೫೬ನೆ ವಿಧಿಯ ಪ್ರಕಾರ ವಿಸರ್ಜಿಸಿ ೩೧.೧೨.೧೯೭೭ರ ಮಧ್ಯರಾತ್ರಿಯಿಂದ ರಾಷ್ಟ್ರಪತಿ ಆಡಳಿತವನ್ನು ಜಾರಿಗೆ ತಂದಿತು.

೧೩.೧.೧೯೭೮ರಂದು ಮುಖ್ಯಚುನಾವಣಾ ಕಮಿಷನರ್ ಎಸ್. ಎಲ್. ಶಕ್ದರ್ ಅವರು ಫೆಬ್ರವರಿ ೨೫ ರಂದು ಕರ್ನಾಟಕ ರಾಜ್ಯದ ವಿಧಾನಸಭೆಗೆ ಚುನಾವಣೆ ನಡೆಯುವುದೆಂದು ಘೋಷಿಸಿದರು. ೨೨,೨೫ ಜನವರಿ ೭೮ರಂದು ಚುನಾವಣೆ ಸಮೀಕ್ಷೆ ನಡೆಸಿದ ಪತ್ರಿಕೆಗಳು ''ರಾಜ್ಯದಲ್ಲಿ ಜನತಾ ಪಕ್ಷದ ಟಿಕೇಟಿಗಾಗಿ ನೂಕು ನುಗ್ಗಲಿದೆ. ಪಕ್ಷದ ಕಚೇರಿಯಲ್ಲಿ ಜಾಗ ಸಾಲದ ಚುನಾವಣಾ ಸಮಿತಿಯ ಸಭೆಯನ್ನು ಬೆಂಗಳೂರಿನ ಹೊರವಲಯದ ಕೈಗಾರಿಕಾ ಅತಿಥಿ ಗೃಹಕ್ಕೆ ಸ್ಥಳಾಂತರಿಸಲಾಗಿದೆ. ೨೨೪ ವಿಧಾನಸಭಾ ಕ್ಷೇತ್ರಗಳಿಗೆ ೨೩೦೦ ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದ್ದಾರೆ. ಬೆಂಗಳೂರಿನ ೧೨ ಕ್ಷೇತ್ರಗಳಿಗೆ ೨೩೧ ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದ್ದಾರೆ.'' ಎಂಬುದಾಗಿ ಬರೆದವು. ೨೯.೧.೧೯೭೮ರಂದು ಚುನಾವಣಾ ಅಭ್ಯರ್ಥಿಗಳ ಪಟ್ಟಿ ಪ್ರಕಟವಾಯಿತು. ಜನತಾ ಪಕ್ಷದ ಪಟ್ಟಿಯಲ್ಲಿ ೧೧ ಮಹಿಳಾ ಅಭ್ಯರ್ಥಿಗಳು, ೧೭ ಮುಸ್ಲಿಂ ಅಭ್ಯರ್ಥಿಗಳು, ೪೩ ಹಿಂದುಳಿದ ವರ್ಗಗಳ ಅಭ್ಯರ್ಥಿಗಳು ಸ್ಥಾನ ಪಡೆದಿದ್ದರು. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಮೀಸಲು ಸ್ಥಾನಗಳನ್ನು ಹೊರತುಪಡಿಸಿ) ೨೯.೧.೧೯೭೯ ರಾಜ್ಯ ಚುನಾವಣಾ ರಂಗದಲ್ಲಿ ವಿರೋಧಪಕ್ಷಗಳೊಡನೆ ಜನತಾ ಮೈತ್ರಿ ನುಚ್ಚುನೂರಾಯಿತು. ಸಿಪಿಎಂ, ಸಿಪಿಐ, ಡಿಎಂಕೆ, ಜನತಾ ಕಾಂಗ್ರೆಸ್‌ಗಳು, ರೆಡ್ಡಿ ಕಾಂಗ್ರೆಸ್ ಪ್ರತ್ಯೇಕವಾಗಿ ಸ್ಪರ್ಧಿಸಿದವು. ೨೨೪ ಕ್ಷೇತ್ರಗಳಲ್ಲಿ ಕೇವಲ ಕಿತ್ತೂರು ಮತ್ತು ಸಾಗರಗಳಲ್ಲಿ ಮಾತ್ರ ನೇರ ಸ್ಪರ್ಧೆ ಏರ್ಪಟ್ಟಿತು. ಉಳಿದಂತೆ ೨೨೨ ಸ್ಥಾನಗಳಿಗೆ ಸುಮಾರು ೧೦೫೦ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಈ ಮಧ್ಯೆ ೩೧.೧.೭೮ರಂದು ಜನತಾಪಕ್ಷದ ಹಿರಿಯ ನಾಯಕ ಎಸ್. ನಿಜಲಿಂಗಪ್ಪನವರು ಜನತಾ ಪಕ್ಷ ಹಾಗೂ ರಾಜಕೀಯ ಎರಡನ್ನೂ ತ್ಯಜಿಸುವ ತಮ್ಮ ಅನಿರೀಕ್ಷಿತ ನಿರ್ಧಾರವನ್ನು ಪ್ರಕಟಿಸಿದರು. ಇದು ಜನತಾ ಪಕ್ಷಕ್ಕೆ ಭಾರಿ ಆಘಾತವನ್ನುಂಟುಮಾಡಿತು. ೧೯.೨.೧೯೭೮ರಂದು ಜನತಾ ಪಕ್ಷ ಸಂಸ್ಥಾಪಕರಾದ ಲೋಕನಾಯಕ ಜಯಪ್ರಕಾಶ ನಾರಾಯಣರು ಅನಾರೋಗ್ಯದ ನಿಮಿತ್ತ ಎಲ್ಲಾ ಸಂಘ ಸಂಸ್ಥೆಗಳೊಡನೆ ತಾವು ಹೊಂದಿದ್ದ ಸಂಬಂಧವನ್ನು ತ್ಯಾಗ ಮಾಡುವುದಾಗಿ ಘೋಷಣೆ ಮಾಡಿದ್ದರು. ರಾಜ್ಯ ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆ ಅಸದೃಶ್ಯವಾಗಿರುತ್ತದೆಂದು ರಾಜ್ಯ ಜನತಾ ಪಕ್ಷದ ಪ್ರಧಾನ ಕಾರ್ಯದರ್ಶಿ ವೈ. ರಾಮಕೃಷ್ಣ ಅವರು ೮.೧.೭೮ರಂದು ಹೊಳೆನರಸೀಪುರದ ಸಭೆಯೊಂದರಲ್ಲಿ ಹೇಳಿದರು. ಜನತಾ ಪಕ್ಷದ ರಾಷ್ಟ್ರೀಯ ಕಾರ್ಯಕಾರಿ ಸಮಿತಿಯ ಸಭೆಯು ೨೧ ಹಾಗೂ ೨೨ ಜನವರಿ ೭೮ ರಂದು ಬೆಂಗಳೂರಿನ ಸಮೀಪದ ತಿಪ್ಪಗೊಂಡನಹಳ್ಳಿಯಲ್ಲಿ ನಡೆಯಿತು. ಚುನಾವಣಾ ಪ್ರಣಾಳಿಕೆ ಅಂಶಗಳ ಬಗ್ಗೆ ಚರ್ಚಿಸಿ ಅಂತಿಮ ರೂಪರೇಷೆಗಳನ್ನು ಸಿದ್ಧಪಡಿಸಿತು. ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತ ಆಯೋಗದ ರಚನೆಯನ್ನು ಮಾಡಲು ತೀರ್ಮಾನಿಸಿತು.

### ಚುನಾವಣಾ ಪ್ರಣಾಳಿಕೆ

೭.೨.೨೦೦೨ ರಂದು ಜನತಾ ಪಕ್ಷದ ಪ್ರಣಾಳಿಕೆಯನ್ನು ಬಿಡುಗಡೆ ಮಾಡಲಾಯಿತು. ಪ್ರಣಾಳಿಕೆಯ ಮುಖ್ಯಾಂಶಗಳು ಕೆಳಗಿನಂತಿದ್ದವು.

- ಹದಿನೈದು ವರ್ಷಗಳಲ್ಲಿ ಎಲ್ಲಾ ಭೂಮಿಗೆ ನೀರಾವರಿ.
- ಐದು ವರ್ಷಗಳಲ್ಲಿ ಅಸ್ಪೃಶ್ಯತಾ ನಿರ್ಮೂಲನೆ.
- ಐದು ವರ್ಷಗಳಲ್ಲಿ ಎಲ್ಲರಿಗೂ ಶಿಕ್ಷಣ, ಶೇಕಡ ನೂರರಷ್ಟು ಸಾಕ್ಷರತೆ.
- ಹತ್ತು ವರ್ಷಗಳಲ್ಲಿ ಪೂರ್ಣ ಉದ್ಯೋಗ.
- ರಾಜ್ಯ ಆದಾಯದಲ್ಲಿ ಶೇ. ೪೦ ರಷ್ಟು ಸಂಪನ್ಮೂಲ ಬೇಸಾಯಕ್ಕೆ ಮೀಸಲು.
- ಕೃಷಿ ಉಪಕರಣಗಳ ಮೇಲಿನ ಅಬ್ಕಾರಿ ಸುಂಕ ಮೂರು ವರ್ಷಗಳಲ್ಲಿ ರದ್ದು.
- ಮೂರು ವರ್ಷಗಳಲ್ಲಿ ಭೂಸುಧಾರಣೆ ಪೂರ್ಣ ಪ್ರಮಾಣದಲ್ಲಿ ಅನುಷ್ಠಾನ.

- ಹತ್ತು ವರ್ಷಗಳಲ್ಲಿ ಸಣ್ಣ ಹಾಗೂ ಗೃಹ ಕೈಗಾರಿಕಾ ಕ್ಷೇತ್ರದಲ್ಲಿ ಸೋಪು, ಪಾದರಕ್ಷೆ, ಬಟ್ಟೆ ಮೊದಲಾದ ಗೃಹ ಬಳಕೆ ವಸ್ತುಗಳ ತಯಾರಿಕೆ.
- ಪ್ರತಿವರ್ಷ ೩೫ ಸಾವಿರ ಜನತಾ ಮನೆಗಳ ನಿರ್ಮಾಣ.
- ಗ್ರಾಮೀಣ ಪ್ರದೇಶಗಳಿಗೆ ಅತಿ ಶೀಘ್ರದಲ್ಲಿಯೆ ರಸ್ತೆ ಹಾಗೂ ಕುಡಿಯುವ ನೀರಿನ ಸೌಲಭ್ಯ.
- ಹತ್ತು ವರ್ಷಗಳಲ್ಲಿ ಬಡತನ ನಿರ್ಮೂಲನೆ.
- ರಾಜಕೀಯ ಹಾಗೂ ಆಡಳಿತದಲ್ಲಿ ಅಧಿಕಾರ ವಿಕೇಂದ್ರೀಕರಣ.
- ಪ್ರತಿ ಕುಟುಂಬಕ್ಕೆ ಆಹಾರ, ಬಟ್ಟೆ, ವಸತಿ ಹಾಗೂ ಆರೋಗ್ಯ ಲಭ್ಯವಾಗುವಂತೆ ಕಾರ್ಯಕ್ರಮ.
- ಭೂ ಸುಧಾರಣೆ. ಭೂಮಿ ಗರಿಷ್ಠ ಮಿತಿಯಲ್ಲಿ ಏರಿಕೆ ಇಲ್ಲ. ಈಗಾಗಲೇ ಆಕ್ರಮಿಸಿಕೊಂಡು ಸಾಗುವಳಿ ಮಾಡುತ್ತಿರುವ ಭೂಮಿಯ ವಾಪಸಾತಿ ಇಲ್ಲ. ತಕ್ಷಣದಲ್ಲಿ ಗೇಣಿದಾರರಿಗೆ ಮಾಲೀಕತ್ವದ ಹಕ್ಕು. ಅರ್ಹ ಫಲಾನುಭವಿಗಳಿಗೆ ಭೂ ಹಂಚಿಕೆ.
- ಭೂ ಕಾರ್ಮಿಕರಿಗೆ ವೈದ್ಯಕೀಯ ನೆರವಿನ ಜೊತೆಗೆ ಸಾಮಾಜಿಕ ಭದ್ರತೆ, ಹೆರಿಗೆ ಸೌಲಭ್ಯ ಹಾಗೂ ವೃದ್ಧಾಪ್ಯ ವೇತನ.
- ಗ್ರಾಮೀಣ ಕೃಷಿ ಅಭಿವೃದ್ಧಿಗೆ ವ್ಯವಸ್ಥೆ ಕಲ್ಪಿಸುವ ಭೂಸೇನಾ ನಿರ್ಮಾಣ.
- ಗೃಹ ಕೈಗಾರಿಕೆಗಳ ಮೂಲಕ ಸ್ವಯಂ ಉದ್ಯೋಗ.
- ವಿಶೇಷವಾಗಿ ಸಣ್ಣ ನೀರಾವರಿ ಯೋಜನೆಗಳ ನಿರ್ಮಾಣ ಕಾರ್ಯ ಪೂರ್ಣಗೊಳಿಸುವಿಕೆ, ನೀರಿನ ವೈಜ್ಞಾನಿಕ ಬಳಕೆ, ಖುಷ್ಕಿ ಜಮೀನು ಬೇಸಾಯ, ಸುಧಾರಿತ ತಂತ್ರಜ್ಞಾನ ಬಳಕೆ, ಕೃಷಿ ಸಾಲ, ಕೀಟ ನಾಶಕ ಔಷಧ, ಕೃಷಿ ಸಲಕರಣೆಗಳನ್ನು ಕಡಿಮೆ ಬೆಲೆಯಲ್ಲಿ ಪೂರೈಸುವುದು.
- ಬಳಕೆದಾರರು, ಬೆಳೆಗಾರರ ನಡುವೆ ಸಮತೋಲನ ಸಾಧಿಸುವ ಹೊಸ ಬೆಲೆ ನೀತಿ.
- ಗ್ರಾಮ ಪಂಚಾಯಿತಿ, ಪುರಸಭೆ, ತಾಲ್ಲೂಕು ಮಂಡಳಿಗಳಿಗೆ ತಕ್ಷಣ ಚುನಾವಣೆ. ಈ ಸಂಸ್ಥೆಗಳಿಗೆ ಹೆಚ್ಚು ಪ್ರಜಾಸತ್ತಾತ್ಮಕ ಅಧಿಕಾರ ನೀಡಲು ಕಾನೂನಿನಲ್ಲಿ ತಿದ್ದುಪಡಿ.
- ಶಾಸನಾಧಿಕಾರ ಸಂಸ್ಥೆಗಳ ಹಣಕಾಸು ಸಂಪನ್ಮೂಲಗಳಲ್ಲಿ ಹೆಚ್ಚಳ.
- ನ್ಯಾಯಪಂಚಾಯತಿಗಳು, ಗ್ರಾಮಪಂಚಾಯತಿಗಳ ಒಂದು ಭಾಗವೆಂದು ಪರಿಗಣಿಸುವುದು. ಪ್ರತಿಯೊಬ್ಬ ಮತದಾರನೂ ಗ್ರಾಮಸಭೆಯ ಆಗುಹೋಗುಗಳಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸುವಂತೆ ಮಾಡುವುದು.
- ಬೀಡಿ ಕಾರ್ಮಿಕರು, ಹೆಂಡ ಇಳಿಸುವವರು ಮುಂತಾದ ಅಸಂಘಟಿತ ಹಾಗೂ ದುರ್ಬಲ ಕಾರ್ಮಿಕರ ಸಾಮಾಜಿಕ ಭದ್ರತೆ ಹಾಗೂ ಕಲ್ಯಾಣಕ್ಕಾಗಿ ಮಂಡಳಿಗಳ ರಚನೆ.
- ಕಾರ್ಮಿಕ ಶಾಸನ, ಒಪ್ಪಂದ, ತೀರ್ಪುಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಿ ಕಾರ್ಮಿಕರ ಸಾಮೂಹಿಕ ಸಂಧಾನಶಕ್ತಿ ಹೆಚ್ಚಿಸಲು ಕ್ರಮ.
- ಎಲ್ಲಾ ಮಟ್ಟಗಳಲ್ಲಿ ಕನ್ನಡ ಭಾಷೆಯ ಬಳಕೆ ಜಾರಿಗೆ.
- ಆಡಳಿತಕ್ಕೆ ಇರುವ ನಿರ್ಧಾರ ಕೈಗೊಳ್ಳುವ ಅಧಿಕಾರವನ್ನು ವಿಕೇಂದ್ರೀಕರಣಗೊಳಿಸುವುದು.
- ಸಾರ್ವಜನಿಕ ಕುಂದುಕೊರತೆಗಳ ಪರಶೀಲನೆಗೆ ಒಂದು ಪ್ರತ್ಯೇಕ ಇಲಾಖೆ.
- ಹಲವಾರು ವರ್ಷಗಳಿಂದ ಖಾಯಂ ಆಗದೆ ಇರುವ ನೌಕರರನ್ನು ಖಾಯಂಗೊಳಿಸುವುದು.
- ಶಿಕ್ಷಣದ ಎಲ್ಲಾ ಹಂತಗಳಲ್ಲಿ ಕ್ರಮೇಣವಾಗಿ ಕನ್ನಡ ಮಾಧ್ಯಮ ಜಾರಿ.
- ವಯಸ್ಕರ ಶಿಕ್ಷಣಕ್ಕಾಗಿ ಅಕ್ಷರ ಸೇನೆ.
- ಪ್ರತಿಯೊಬ್ಬರಿಗೂ ಉಚಿತ ಉದ್ದೇಶನಿಷ್ಠ ಶಿಕ್ಷಣ.
- ಶಿಕ್ಷಕರು, ಸಿಬ್ಬಂದಿ ಮತ್ತು ವಿದ್ಯಾರ್ಥಿಗಳಿಗೆ ಆಡಳಿತ ವರ್ಗದಿಂದ ಆಗುತ್ತಿರುವ ಶೋಷಣೆಗೆ ಕೊನೆ.
- ಅಗತ್ಯವೆನಿಸಿದ ಪ್ರದೇಶಕ್ಕೆ ಪ್ರತ್ಯೇಕ ವಿಶ್ವವಿದ್ಯಾಲಯ.
- ಸರ್ಕಾರಿ-ಖಾಸಗಿ ಶಾಲಾ ಶಿಕ್ಷಕರ ನಡುವಣ ಅಂತರ ಅಂತ್ಯ.
- ವಿಶ್ವವಿದ್ಯಾನಿಲಯಗಳಿಗೆ ಸ್ವಾಯತ್ತತೆ.

- ಬಡವರು ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳು.
- ಜೀವನಾವಶ್ಯಕ ವಸ್ತುಗಳ ಪೂರೈಕೆಯಲ್ಲಿ ನಗರ ಗ್ರಾಮಗಳ ನಡುವೆ ಕಂಡುಬರುತ್ತಿರುವ ತಾರತಮ್ಯ ನಿವಾರಣೆ.
- ಗ್ರಾಮೀಣ ಪ್ರದೇಶಗಳಲ್ಲಿ ಕನಿಷ್ಠ ವೆಚ್ಚದ ಎರಡು ಲಕ್ಷ ಮನೆಗಳನ್ನು ಮುಂದಿನ ಐದು ವರ್ಷಗಳಲ್ಲಿ ಬಡವರಿಗಾಗಿ ನಿರ್ಮಿಸಿಕೊಡುವುದು.
- ನಗರ ಕೊಳಚೆ ಪ್ರದೇಶಗಳ ಅಭಿವೃದ್ಧಿಗೆ, ಪುನರ್ ವಸತಿಗೆ ಕಾರ್ಯಕ್ರಮ.
- ಮಧ್ಯಮವರ್ಗದವರಿಗೆ, ಸ್ವಯಂ ಉದ್ಯೋಗಿಗಳಿಗೆ ಮನೆ ಕಟ್ಟಿಕೊಳ್ಳಲು ನೆರವು.
- ಕುಟುಂಬದ ಆದಾಯ ತಿಂಗಳಿಗೆ ಹತ್ತು ಸಾವಿರ ರೂಪಾಯಿಗಳಿಗಿಂತ ಕಡಿಮೆ ಇರುವವರಿಗೆ ರಾಜ್ಯ ಸಬ್ಸಿಡಿ ನೆರವಿನ ವಿಶೇಷ ಯೋಜನೆ.
- ಜೀವನಾಧಾರವಿಲ್ಲದೆ ೬೦ ವರ್ಷಕ್ಕೆ ಮೇಲ್ಪಟ್ಟವರಿಗೆ ನಿವೃತ್ತಿ ವೇತನ.
- ಸಾಮಾಜಿಕ, ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ಶಿಕ್ಷಣ, ಉದ್ಯೋಗಗಳಲ್ಲಿ ನ್ಯಾಯಬದ್ಧ ಅವಕಾಶ.
- ಅಸ್ಪೃಶ್ಯತೆ-ಪರಿಶಿಷ್ಟವರ್ಗಗಳ ಹಿತಾಸಕ್ತಿ ಕಾಪಾಡಲು ಕೇಂದ್ರ ಸರ್ಕಾರ ರಚಿಸಿರುವ ಆಯೋಗಗಳ ಫಲ ಕರ್ನಾಟಕದ ಜನತೆಗೆ ತ್ವರಿತವಾಗಿ ದೊರಕುವಂತೆ ಮಾಡುವುದು.
- ಅಲ್ಪಸಂಖ್ಯಾತರು ತಮ್ಮ ತಮ್ಮ ಕಾರ್ಯಕ್ಷೇತ್ರಗಳಲ್ಲಿ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ತೊಡಗಿ ಸಮಾಜದ ಮತ್ತು ರಾಷ್ಟ್ರದ ಪ್ರಗತಿಗೆ ಮಹತ್ತರವಾದ ಕೊಡುಗೆ ನೀಡಲು ಸಾಧ್ಯವಾಗುವಂತೆ ಮುಸಲ್ಮಾನ ಜನಾಂಗಕ್ಕೆ ಅವಕಾಶಗಳನ್ನು ಕಲ್ಪಿಸುವುದು, ಉರ್ದು ಶಾಲೆಗಳ ಸಂಖ್ಯೆ ಹೆಚ್ಚಿಸುವುದು.
- ವಿವಿಧ ಧರ್ಮ ಹಾಗೂ ಭಾಷೆಗಳ ವೈಶಿಷ್ಟ್ಯವನ್ನು ಅಧ್ಯಯನ ಮಾಡಲು ಶ್ರೀರಂಗಪಟ್ಟಣದಲ್ಲಿ ಧರ್ಮ-ಸಂಸ್ಕೃತಿಗಳ ತುಲನಾತ್ಮಕ ಅಧ್ಯಯನ ಸಂಸ್ಥೆಯ ಸ್ಥಾಪನೆ.
- ಹೈದ್ರಾಬಾದ್ ಕರ್ನಾಟಕದಲ್ಲಿ ಉರ್ದು ಅಕಾಡೆಮಿ ಸ್ಥಾಪನೆ.
- ಬದುಕಿನ ಎಲ್ಲ ಕ್ಷೇತ್ರಗಳಲ್ಲಿ ಮಹಿಳೆಯರು ಸಂಪೂರ್ಣವಾಗಿ ಸ್ಪರ್ಧಾತ್ಮಕವಾಗಿ ಭಾಗವಹಿಸಲು ಅವಕಾಶ. ಮಹಿಳೆಯರನ್ನು ಕೀಳಾಗಿ ಕಾಣುವುದರ ವಿರುದ್ಧ ಕಠಿಣ ಕ್ರಮ.
- ಯುವಜನರು ಸಕ್ರಿಯವಾಗಿ ಪಾಲ್ಗೊಳ್ಳಲು ಸಾಧ್ಯವಾಗುವಂತಹ ವಿಶೇಷ ಯೋಜನೆಗಳು. ಯುವಶಕ್ತಿಯ ಪಾಲನೆಗೆ ಬೇಕಾದ ವ್ಯವಸ್ಥೆಯ ನಿರ್ಮಾಣ.

**ಫಲಿತಾಂಶಗಳು**

ಫೆಬ್ರವರಿ ೨೮ರ ಹೊತ್ತಿಗೆ ಚುನಾವಣಾ ಫಲಿತಾಂಶಗಳು ಪ್ರಕಟವಾದವು. ಜನತಾ ಪಕ್ಷವು ತಾನು ಸ್ಪರ್ಧಿಸಿದ್ದ ೨೨೨ ಸ್ಥಾನಗಳ ಪೈಕಿ ಕೇವಲ ೫೯ ಸ್ಥಾನಗಳನ್ನು ಪಡೆದು ಬಲಿಷ್ಠ ವಿರೋಧ ಪಕ್ಷವಾಗಿ ಹೊರಹೊಮ್ಮುವುದರಲ್ಲಿ ಸಫಲವಾಯಿತು. ಈ ಫಲಿತಾಂಶ, ಜನತಾ ಪಕ್ಷಕ್ಕೆ ಇರಲಿ, ಈ ಚುನಾವಣೆಯಲ್ಲಿ ಜಯಭೇರಿ ಬಾರಿಸಿದ ಇಂದಿರಾ ಕಾಂಗ್ರೆಸ್ ಪಕ್ಷಕ್ಕೇ ವಿಸ್ಮಯವುಂಟುಮಾಡಿತು. ಅದೃಶ್ಯ ಮತದಾರ ತನ್ನ ಅಭಿಪ್ರಾಯ ವ್ಯಕ್ತ ಪಡಿಸಿದ್ದ. ಕಾಂಗ್ರೆಸ್ ಪರವಾಗಿ ತನ್ನ ನಿರ್ಣಯ ನೀಡಿದ್ದ. ಜನತಾಪಕ್ಷ ಶೇ ೩೭.೯೫ ರಷ್ಟು ಮತ ಗಳಿಸಿದ್ದು ೪೭,೫೪,೧೧೮ ರಷ್ಟು ಮತಗಳನ್ನು ಪಡೆಯಿತು. ಮತದಾನದ ಪ್ರಮಾಣವನ್ನು ಗಮನಿಸಿದಾಗ ಕೆಲವು ಪತ್ರಿಕೆಗಳು ಜನತಾ ಪಕ್ಷವು, ರೆಡ್ಡಿ ಕಾಂಗ್ರೆಸ್ ಹಾಗೂ ಇತರ ವಿರೋಧ ಪಕ್ಷಗಳೊಡನೆ ಒಪ್ಪಂದ ಮಾಡಿಕೊಂಡಿದ್ದರೆ ಅಧಿಕಾರಕ್ಕೆ ಬರುವ ಸಾಧ್ಯತೆಯಿತ್ತೆಂದು ಅಭಿಪ್ರಾಯಪಟ್ಟವು.

ಪಕ್ಷದ ಟಿಕೆಟ್ಟು ಹಂಚಿಕೆಯಲ್ಲಿ ಎಡವಿದ ಕಾರಣ ಜನತಾ ಪಕ್ಷಕ್ಕೆ ಸೋಲುಂಟಾಯಿತೆಂದು ಪತ್ರಿಕೆಯೊಂದು ಹೇಳಿತು. ರಾಜ್ಯದ ಹಿರಿಯ ರಾಜಕಾರಣಿ ಎಸ್. ನಿಜಲಿಂಗಪ್ಪನವರು ಸಕ್ರಿಯ ರಾಜಕೀಯದಿಂದ ನಿವೃತ್ತರಾಗುವುದಾಗಿ ಘೋಷಿಸಿದ್ದು, ಲೋಕನಾಯಕ ಜಯಪ್ರಕಾಶ ನಾರಾಯಣ ಅವರ ಅಕಾಲಿಕ ರಾಜಕೀಯ ಸಂನ್ಯಾಸದ ನಿರ್ಧಾರ ರಾಜ್ಯದಲ್ಲಿ ಜನತಾ ಪಕ್ಷ ಹಿನ್ನಡೆಗೆ ಕಾರಣವಾದ ವಿಷಯಗಳಾದವು.

## ಗೆದ್ದ ಪ್ರಮುಖ ವ್ಯಕ್ತಿಗಳು

ಜನತಾ ಪಕ್ಷದಿಂದ ೧೯೭೮ರ ಚುನಾವಣೆಯಲ್ಲಿ ಗೆದ್ದ ಪ್ರಮುಖರು ಇಂತಿದ್ದಾರೆ. ಬೀದರ್ ಜಿಲ್ಲೆ ಹುಮ್ನಾಬಾದ್ ಕ್ಷೇತ್ರದಿಂದ ಬಸವರಾಜ ಹಾವಗಪ್ಪ ಪಾಟೀಲ್, ಗುಲ್ಬರ್ಗ ಜಿಲ್ಲೆಯ ಕಮಲಾಪುರ, ಆಳಂದ ಹಾಗೂ ಅಫಜಲ್ಪುರ ಕ್ಷೇತ್ರದಿಂದ ಕ್ರಮವಾಗಿ ಗೋವಿಂದ ಪಿ. ಒಡೆಯರಾಜ್, ಅಣ್ಣಾರಾವ್ ಭೀಮರಾವ್ ಪಾಟೀಲ್ ಕೊರಹಳ್ಳಿ ಹಾಗೂ ಎಂ. ವೈ. ಪಾಟೀಲ್ ಅವರುಗಳು ಆಯ್ಕೆಯಾಗಿದ್ದರು. ಹೈದ್ರಾಬಾದ್ ಕರ್ನಾಟಕದಿಂದ ಕೇವಲ ನಾಲ್ಕು ಜನ ಮಾತ್ರ ಆಯ್ಕೆಯಾಗಿರುವುದನ್ನು ಗಮನಿಸಬಹುದು. ಚಿತ್ರದುರ್ಗ ಜಿಲ್ಲೆ ಜಗಳೂರಿನಿಂದ ಜಿ. ಹೆಚ್. ಅಶ್ವಥ್‌ರೆಡ್ಡಿ, ತುಮಕೂರು ಜಿಲ್ಲೆಯ ಬೆಳ್ಳಾವಿ ಕ್ಷೇತ್ರದಿಂದ ಜಿ. ಎಸ್. ಶಿವನಂಜಪ್ಪ ಅದೇ ಜಿಲ್ಲೆಯ ಹುಲಿಯೂರು ದುರ್ಗದ ಕ್ಷೇತ್ರದಿಂದ ಡಿ.ಟಿ. ಮಾಯಣ್ಣ, ಬೆಂಗಳೂರು ನಗರ ಜಿಲ್ಲಾ ವಿಧಾನಸಭಾ ಕ್ಷೇತ್ರಗಳಾದ ಮಲ್ಲೇಶ್ವರದಿಂದ ಪಿ. ರಾಮದೇವ್, ರಾಜಾಜಿನಗರದಿಂದ ಮಳ್ಳೂರು ಆನಂದರಾವ್, ಚಿಕ್ಕಪೇಟೆಯಿಂದ ಪ್ರೊ। ಎ. ಲಕ್ಷ್ಮಿಸಾಗರ್, ಚಾಮರಾಜಪೇಟೆಯಿಂದ ಶ್ರೀಮತಿ ಎಸ್. ಪ್ರಮೀಳಾ ಬಸವನಗುಡಿಯಿಂದ ಟಿ. ಆರ್. ಶಾಮಣ್ಣ, ಜಯನಗರದಿಂದ ಎಂ. ಚಂದ್ರಶೇಖರ್, ಶಿವಾಜಿನಗರದಿಂದ ಸಿ.ಎಂ. ಇಬ್ರಾಹಿಂ, ಜಯಮಹಲ್‌ದಿಂದ ಡಾ। ಜೀವರಾಜ ಆಳ್ವ, ಉತ್ತರಹಳ್ಳಿಯಿಂದ ಎಂ. ವಿ. ರಾಜಶೇಖರನ್, ವರ್ತೂರಿನಿಂದ ಬಿ.ವಿ. ರಾಮಚಂದ್ರರೆಡ್ಡಿ, ಸಾತನೂರಿನಿಂದ ಕೆ. ಎಲ್. ಶಿವಲಿಂಗೇಗೌಡ, ಮಾಗಡಿಯಿಂದ ಬೆಟ್ಟಸ್ವಾಮಿಗೌಡ, ಹೊಸಕೋಟೆ ಹಾಗೂ ದೇವನಹಳ್ಳಿ ಮತ್ತು ಅನೇಕಲ್‌ನಿಂದ ಕ್ರಮವಾಗಿ ಬಿ. ಎನ್. ಬಚ್ಚೇಗೌಡ, ಕೆ. ನಾರಾಯಣಪ್ಪ ಹಾಗೂ ವೈ. ರಾಮಕೃಷ್ಣ ಅವರು ಆಯ್ಕೆಯಾಗಿದ್ದರು. ಬೆಂಗಳೂರು ನಗರ ಜಿಲ್ಲೆ ಹಾಗೂ ಗ್ರಾಮಾಂತರ ಪ್ರದೇಶಗಳ ೨೩ ಕ್ಷೇತ್ರಗಳಿಂದ ೧೬ ಜನ ಜನತಾ ಪಕ್ಷದ ಅಭ್ಯರ್ಥಿಗಳ ಆಯ್ಕೆಯಾಗಿರುವುದನ್ನು ಗಮನಿಸಬಹುದು. ನಗರ ಪ್ರದೇಶದ ವಿದ್ಯಾವಂತ ಜನರ ಮೆಚ್ಚುಗೆಯನ್ನು ಪಡೆಯುವಲ್ಲಿ ಜನತಾ ಪಕ್ಷ ಯಶಸ್ವಿಯಾಗಿರುವುದನ್ನು ಗಮನಿಸಬಹುದು.

ಮಂಡ್ಯದಲ್ಲಿ ವರುಣ ನಾಲಾ ಚಳವಳಿಯ ಫಲವಾಗಿ ಎಂಟು ವಿಧಾನಸಭಾ ಕ್ಷೇತ್ರಗಳಲ್ಲಿ ಜನತಾ ಪಕ್ಷ ಜಯಭೇರಿ ಬಾರಿಸಿದ್ದನ್ನು ವಿಶೇಷವಾಗಿ ದಾಖಲಿಸಬೇಕು. ನಾಗಮಂಗಲ ಮಾತ್ರ ಕಾಂಗ್ರೆಸ್ (ಐ) ನ ಬೆಂಬಲಿತ ಸ್ವತಂತ್ರ ಅಭ್ಯರ್ಥಿಯ ಆಯ್ಕೆಯಾಯಿತು. ಮೈಸೂರು ಜಿಲ್ಲೆಯ ಕೃಷ್ಣರಾಜ ಹಾಗೂ ಚಾಮರಾಜ ಕ್ಷೇತ್ರದಿಂದ ಕ್ರಮವಾಗಿ ಹೆಚ್. ಗಂಗಾಧರನ್, ಹಾಗೂ ಕೆ. ಪುಟ್ಟಸ್ವಾಮಿ, ಚಾಮರಾಜನಗರದಿಂದ ಎಂ. ಸಿ. ಬಸಪ್ಪ, ಪಿರಿಯಾಪಟ್ಟಣದಿಂದ ಕೆ. ಎಸ್. ಕಾಳಮರಿಗೌಡ ಅವರು ಆಯ್ಕೆಯಾದರು. ಹಾಸನ ಜಿಲ್ಲೆಯ ಬೇಲೂರಿನಿಂದ ಬಿ. ಹೆಚ್. ಲಕ್ಷ್ಮಣಯ್ಯ, ಹೊಳೆನರಸೀಪುರದಿಂದ ಹೆಚ್. ಡಿ. ದೇವೇಗೌಡ, ಅರಕಲಗೂಡಿನಿಂದ ಕೆ. ಬಿ. ಮಲ್ಲಪ್ಪ ಅವರುಗಳು ಆಯ್ಕೆಯಾಗಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯದಿಂದ ಎ. ರಾಮಚಂದ್ರ, ಪುತ್ತೂರಿನಿಂದ ಕೆ. ರಾಮಭಟ್, ಚಿಕ್ಕಮಗಳೂರು ಜಿಲ್ಲೆಯ ಕಡೂರಿನಿಂದ ಕೆ. ಎಂ. ತಮ್ಮಯ್ಯ, ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯಿಂದ ಜೆ. ಹೆಚ್. ಪಟೇಲ್, ಉತ್ತರ ಕನ್ನಡ ಜಿಲ್ಲೆಯ ಸಿರಸಿಯಿಂದ ಬೋರಕರ್ ಉಮಾಕಾಂತ್, ಅಂಕೋಲಾದಿಂದ ಅನಸೂಯ ಗಜಾನನ ಶರ್ಮ, ಧಾರವಾಡದಿಂದ ಬಾವುರಾವ್ ದೇಶಪಾಂಡೆ, ಹುಬ್ಬಳ್ಳಿಯಿಂದ ಜೆ. ಎಂ. ಗೋವಿಂದ ಸಾ, ಹುಬ್ಬಳ್ಳಿ ಗ್ರಾಮಾಂತರ ಪ್ರದೇಶದಿಂದ ಎಸ್. ಆರ್. ಬೊಮ್ಮಾಯಿ, ಗದಗಿನಿಂದ ಮುತ್ತಿನ ಪೆಂಡಿಮಠ್ (ಕೆ. ಹೆಚ್. ಪಾಟೀಲರನ್ನು ಸೋಲಿಸಿ) ಮೊದಲಾದವರು ಆಯ್ಕೆಯಾದರು. ಬೆಳಗಾಂ ಜಿಲ್ಲೆ ಕಿತ್ತೂರಿನಿಂದ ಅರವಳ್ಳಿ ಪಾಟೀಲ್ ಪರ್ವತಗೌಡ ಬಸವನಗೌಡ, ರಾಯಬಾಗ್‌ನಿಂದ ನಡೋನಿರಾಮ ಶಿದ್ಲಿಂಗ್, ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳದಿಂದ ದೇಶಮುಖ್ ಜಗದೇವರಾವ್ ಸಂಗನ ಬಸಪ್ಪ, ಹಿಪ್ಪರಗಿ ಕ್ಷೇತ್ರದಿಂದ ಪಾಟೀಲ್ ಬಸವನಗೌಡ ಸೋಮನಗೌಡ, ತಿಕೋಟಾದಿಂದ ಪಾಟೀಲ್ ಬಾಬುಗೌಡ, ಬಳ್ಳೊಳ್ಳಿಯಿಂದ ಅಂಕೇರಿ ಸಿದ್ಧಾರ್ಥ ಸಂಗಪ್ಪ ಹಾಗೂ ಇಂಡಿಯಿಂದ ಕಲ್ಲೂರು ರೇವಣ ಸಿದ್ದಪ್ಪ ರಾಮನಗೌಡ ಅವರುಗಳು ಆಯ್ಕೆಯಾಗಿದ್ದರು. ೭೮ರ ವಿಧಾನಸಭಾ ಚುನಾವಣೆ ಫಲಿತಾಂಶ ಅತ್ಯಂತ ವಿಸ್ಮಯಕಾರಿಯಾಗಿದ್ದು ಜನತಾ ಪಕ್ಷದ ನಾಯಕರುಗಳಿಗೆ ದೊಡ್ಡ ನಿರಾಸೆಯನ್ನುಂಟುಮಾಡಿತು.

## ೧೯೮೦ರ ಲೋಕಸಭಾ ಚುನಾವಣೆಗಳು

೧೯೭೮ರ ಫೆಬ್ರವರಿ ತಿಂಗಳಲ್ಲಿ ನಡೆದಿದ್ದ ರಾಜ್ಯ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ (ಐ) ಪಕ್ಷ ೧೪೯ ಸ್ಥಾನಗಳನ್ನು ಗಳಿಸಿ ಜಯಭೇರಿ ಬಾರಿಸಿ ರಾಜ್ಯ ಸರ್ಕಾರದ ಆಡಳಿತ ಸೂತ್ರವನ್ನು ಹಿಡಿದಿತ್ತು. ಜನತಾ ಪಕ್ಷ ೫೯ ಸ್ಥಾನ ಗಳಿಸಿ ಪ್ರಬಲ ವಿರೋಧ ಪಕ್ಷವಾಗಿ ರೂಪುಗೊಂಡಿತು. ೧೯೭೯ರ ಜುಲೈ ತಿಂಗಳಲ್ಲಿ ಜನತಾ ಪಕ್ಷವು ಇಬ್ಭಾಗವಾಯಿತು. ಚಂದ್ರಶೇಖರ್ ನೇತೃತ್ವದ ಒಂದು ಗುಂಪು, ಚರಣಸಿಂಗ್ ನೇತೃತ್ವದ ಮತ್ತೊಂದು ಗುಂಪು. ಚುನಾವಣಾ ಆಯೋಗವು ಚಂದ್ರಶೇಖರ್ ಗುಂಪಿಗೆ ಮಾನ್ಯತೆ ನೀಡಿ ರಾಷ್ಟ್ರೀಯ ಜನತಾ ಪಕ್ಷವೆಂದು ಅದನ್ನು ಗುರುತಿಸಿತು. ಚಕ್ರದೊಳಗೆ ನೇಗಿಲು ಹಿಡಿದ ರೈತನ ಚಿಹ್ನೆಯನ್ನು ಅದಕ್ಕೆ ನೀಡಿತು.

ಚರಣಸಿಂಗ್ ಗುಂಪಿಗೆ ಜನತಾ ಪಾರ್ಟಿ (ಸೆಕ್ಯೂಲರ್) ಎಂದು ಮಾನ್ಯತೆ ನೀಡಿತು. ನೇಗಿಲು ಹಿಡಿದು ಹೊಲ ಉಳುವ ರೈತನ ಚಿನ್ಹೆಯನ್ನು ಈ ಪಕ್ಷಕ್ಕೆ ನೀಡಿತು. ಕರ್ನಾಟಕದಲ್ಲಿ ಚಂದ್ರಶೇಖರ್ ನೇತೃತ್ವದ ಜನತಾ ಪಕ್ಷ ತನ್ನ ನೆಲೆಯನ್ನು ಕಂಡುಕೊಂಡಿತು.

ಕಾಂಗ್ರೆಸ್ ನೆರವಿನಿಂದ ಕೇಂದ್ರದಲ್ಲಿ ಸರ್ಕಾರ ರಚಿಸಿದ ಚರಣಸಿಂಗ್ ಸರ್ಕಾರ ಲೋಕಸಭೆಯನ್ನು ಎದುರಿಸದೆ ರಾಜೀನಾಮೆ ಕೊಟ್ಟಿತು. ಲೋಕಸಭೆ ವಿಸರ್ಜನೆಯಾದ ಕಾರಣ ೧೯೮೦ ಮಧ್ಯಂತರ ಲೋಕಸಭಾ ಚುನಾವಣೆ ಅನಿವಾರ್ಯವಾಯಿತು.

ಶ್ರೀಮತಿ ಇಂದಿರಾಗಾಂಧಿ ಮತ್ತು ದೇವರಾಜ ಅರಸು ನಡುವಣ ವ್ಯಕ್ತಿಗತ ಪ್ರತಿಷ್ಠೆಯಿಂದ ಕರ್ನಾಟಕದಲ್ಲಿ ಆಡಳಿತಾರೂಢ ಕಾಂಗ್ರೆ ವಿಭಜನೆಯಾಯಿತು. ದೇವರಾಜ ಅರಸರು ತಮ್ಮದೇ ಆದ ಪಕ್ಷ ರಚಿಸಿಕೊಂಡರು. ಇದನ್ನು ಕರ್ನಾಟಕ ಕಾಂಗ್ರೆಸ್ ಎಂದು ಕರೆಯಲಾಯಿತು. ಸಿದ್ಧರಾಮರೆಡ್ಡಿ ಇದರ ಅಧ್ಯಕ್ಷರಾದರು. ೨೬.೧೧.೭೯ರಂದು ಕರ್ನಾಟಕ ಕಾಂಗ್ರೆಸ್ ಮತ್ತು ಕರ್ನಾಟಕ ಪ್ರದೇಶ ಕಾಂಗ್ರೆಸ್ (ರೆಡ್ಡಿ) ಸಮಿತಿಯಲ್ಲಿ ವಿಲೀನಗೊಂಡಿತು. ಹಾರನಹಳ್ಳಿ ರಾಮಸ್ವಾಮಿ ಕರ್ನಾಟಕದಲ್ಲಿ ಈ ಪಕ್ಷದ ಶಾಖೆಯ ಅಧ್ಯಕ್ಷರಾಗಿ ಆಯ್ಕೆಯಾದರು. ಕರ್ನಾಟಕದಲ್ಲಿ ಅರಸು ಕಾಂಗ್ರೆಸ್ ರೆಡ್ಡಿ ಕಾಂಗ್ರೆಸ್‌ನಲ್ಲಿ ವಿಲೀನವಾದರೆ ಇದಕ್ಕೆ ವಿರುದ್ಧವಾಗಿ ೩೦.೧೧.೭೯ ರಂದು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಬ್ರಹ್ಮಾನಂದ ರೆಡ್ಡಿ ಅವರು ತಮ್ಮ ಬೆಂಬಲಿಗರೊಡನೆ ಕಾಂಗ್ರೆಸ್ (ಐ) ಸೇರಿದರು. ವಿಲೀನಕ್ಕೆ ಒಪ್ಪಿಗೆ ನೀಡಿದ್ದ ಕೆ. ಹೆಚ್. ಪಾಟೀಲರು ಕೂಡ ೨.೧೨.೧೯೭೯ರಂದು ೧೭ ಜಿಲ್ಲಾ ಕಾಂಗ್ರೆಸ್ ಸಮಿತಿಗಳ ಕೆಲವು ಪದಾಧಿಕಾರಿಗಳೊಡನೆ ಕಾಂಗ್ರೆಸ್ (ಐ) ಸೇರಿದರು.

ದೇವರಾಜ ಅರಸು ಅವರು ನೇತೃತ್ವ ವಹಿಸಿದ ಕಾಂಗ್ರೆಸ್ ಪಕ್ಷವು ಭಾರತ ರಾಷ್ಟ್ರೀಯ ಕಾಂಗ್ರೆಸ್ (ಯು) ಎಂಬ ಹೆಸರಿನೊಡನೆ ಚರಕ ಗುರುತು ಪಡೆದು ಏಕಾಂಗಿಯಾಗಿ ಲೋಕಸಭಾ ಚುನಾವಣೆಗೆ ಸ್ಪರ್ಧಿಸಿತು. ಜನತಾ ಪಕ್ಷ ಸಹ ಏಕಾಂಗಿಯಾಗಿ ಈ ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿತು. ಗ್ರೋವರ್ ಆಯೋಗದ ಬಗ್ಗೆ ಹಿಂದಿನ ಜನತಾ ಪಕ್ಷ ತೀವ್ರ ಆಸಕ್ತಿ ತೋರಿಸಿದರೆ ಚರಣ್‌ಸಿಂಗ್ ನೇತೃತ್ವದ ಕೇಂದ್ರ ಸರ್ಕಾರ ವಿಳಂಬ ನೀತಿ ಅನುಸರಿಸಿತು. ನವೆಂಬರ್ ೫ ರಂದು ದೆಹಲಿಯಲ್ಲಿ ಜರುಗಿದ ಜನತಾ ಪಕ್ಷದ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಗ್ರೋವರ್ ವರದಿಯನ್ನು ಒಪ್ಪಿಕೊಂಡು ಕ್ರಮ ಜರುಗಿಸುವಂತೆ ಒತ್ತಾಯ ಮಾಡಿತು. ಅಂದರೆ ಅರಸು ಸರ್ಕಾರದ ಭ್ರಷ್ಟಾಚಾರವನ್ನು ಚುನಾವಣಾ ಬಂಡವಾಳವನ್ನಾಗಿ ಮಾಡಿಕೊಳ್ಳಲು ಜನತಾ ಪಕ್ಷ ನಿರ್ಧರಿಸಿದಂತೆ ಕಾಣುತ್ತದೆ.

೬.೧೧.೭೯ರಂದು ದೆಹಲಿಯಲ್ಲಿ ಸಭೆ ಸೇರಿದ್ದ ಜನತಾ ಪಕ್ಷದ ಕಾರ್ಯಕಾರಿ ಸಮಿತಿ ಬಾಬು ಜಗಜೀವನರಾಂ ಅವರನ್ನು ಪ್ರಧಾನ ಮಂತ್ರಿಯ ಅಭ್ಯರ್ಥಿಯೆಂದು ಸಾರಿ ಅವರ ನಾಯಕತ್ವದಲ್ಲಿ ಚುನಾವಣೆ ಎದುರಿಸುವುದಾಗಿ ಹೇಳಿತು. ಕರ್ನಾಟಕ ರಾಜ್ಯದಲ್ಲಿ ಜನತಾ ಪಕ್ಷ ಎಲ್ಲಾ ೨೮ ಸ್ಥಾನಗಳಿಗೂ ಸ್ಪರ್ಧಿಸುವುದಾಗಿ ಹೇಳಿತು. ೬.೧೨.೧೯೭೮ರಂದು ಜನತಾ ಪಕ್ಷ ರಾಜ್ಯ ಲೋಕಸಭಾ ಕ್ಷೇತ್ರಗಳ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಕಟಿಸಿತು.

## ಚುನಾವಣಾ ಪ್ರಣಾಳಿಕೆ

ದಿನಾಂಕ ೫-೬ ನವೆಂಬರ್ ೧೯೭೯ರಂದು ದೆಹಲಿಯಲ್ಲಿ ಜನತಾ ಪಕ್ಷದ ರಾಷ್ಟ್ರೀಯ ಕಾರ್ಯಕಾರಿ ಸಭೆ ನಡೆಯಿತು. ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆಗೆ ಅಂತಿಮ ರೂಪು ಕೊಡುವ ಬಗ್ಗೆ ಚರ್ಚೆ ನಡೆಯಿತು. ೪೮ ಪುಟಗಳ ಕರಡು ಚುನಾವಣಾ ಪ್ರಣಾಳಿಕೆಯನ್ನು ಮಂಡಿಸಿ ಪರಿಶೀಲಿಸಲಾಯಿತು. ಸರ್ವಾಧಿಕಾರ, ಕುಟುಂಬದ ಆಡಳಿತ ವಿರುದ್ಧ ಹೋರಾಟ. ಜಯಪ್ರಕಾಶ ನಾರಾಯಣ್ ಅವರ ತತ್ವಗಳಿಗೆ ಬದ್ಧರಾಗಿರುವ ರೀತಿಯಲ್ಲಿ ಪ್ರಣಾಳಿಕೆಯನ್ನು ರೂಪಿಸಲಾಗಿದೆ. ಸಮೃದ್ಧ ಭಾರತದ ನಿರ್ಮಾಣ ಜನತಾ ಪಕ್ಷದ ಪ್ರಣಾಳಿಕೆಯ ಗುರಿಯೆಂದು ಅದು ಹೇಳುತ್ತದೆ.

೧೯೭೭ರ ಜನತಾ ಪಕ್ಷದ ಪ್ರಣಾಳಿಕೆ ಜನತೆಗೆ ಸ್ವಾತಂತ್ರ್ಯದ ಜೊತೆಗೆ ರೊಟ್ಟಿ ಒದಗಿಸಿಕೊಡುವ ಆಶ್ವಾಸನೆ ನೀಡಿತು. ಈಗ ಪ್ರಜಾಪ್ರಭುತ್ವ ಮತ್ತು ವ್ಯಕ್ತಿ ಸ್ವಾತಂತ್ರ್ಯಕ್ಕೆ ಬಂದಿದ್ದ ಅಡಚಣೆಗಳನ್ನು ನಿವಾರಣೆ ಮಾಡಲಾಗಿದೆ. ಮುಂದಿನ ಐದು ವರ್ಷಗಳಲ್ಲಿ ಎಲ್ಲಾ ಆಶ್ವಾಸನೆಯನ್ನು ಈಡೇರಿಸಲಾಗುವುದು ಎಂದು ಹೇಳಲಾಯಿತು. ೨೬.೧೧.೭೭ ರಂದು ಅಧಿಕೃತವಾಗಿ ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಲಾಯಿತು. ಪ್ರಣಾಳಿಕೆಯ ಮುಖ್ಯಾಂಶಗಳು ಈ ಕೆಳಗಿನಂತಿವೆ. ಮುಖ್ಯವಾಗಿ ಪ್ರಜಾತಂತ್ರ ರಕ್ಷಣೆ, ಸರ್ವಾಧಿಕಾರಿ ಶಕ್ತಿಯ ವಿರುದ್ಧ ಹೋರಾಟ ಹಾಗೂ ಪಕ್ಷಾಂತರಿಗಳನ್ನು ಧಿಕ್ಕರಿಸಲು ಜನತಾ ಪಕ್ಷ ಮತದಾರರಿಗೆ ಕರೆಕೊಟ್ಟಿತು. ಪಕ್ಷಾಂತರ ನಿಷೇಧ ವಿಧೇಯಕವನ್ನು ತಂದು ಅದನ್ನು ಕಾಯ್ದೆ ರೂಪದಲ್ಲಿ ಜಾರಿಗೊಳಿಸುವುದು ತನ್ನ ಮುಖ್ಯ ಗುರಿಯೆಂದು ಜನತಾ ಪಕ್ಷ ಹೇಳಿಕೊಂಡಿತು. ಅಲಿಘಡ ವಿಶ್ವವಿದ್ಯಾಲಯಕ್ಕೆ ಸ್ವಾಯುತ್ತತೆ ನೀಡಿಕೆ, ಅದರ ಮೂಲ ಸ್ವರೂಪವನ್ನು ಪುನರ್ ಸ್ಥಾಪಿಸುವುದು, ಅಲಿಘಡ ವಿಶ್ವವಿದ್ಯಾನಿಲಯವನ್ನು ಮುಸ್ಲಿಂ ಜನತೆಯ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಕೇಂದ್ರವನ್ನಾಗಿ ಮಾಡಲು ಯೋಗ್ಯ ಶಾಸನ ತರುವುದು. ಅಭಿವೃದ್ಧಿ ಪಥವಲ್ಲಿರುವ ಹಿಂದುಳಿದ ವರ್ಗಗಳಿಗೆ ನ್ಯಾಯವಾದ ಪಾಲನ್ನು ದೊರಕಿಸಿಕೊಡುವುದು.

ಯಾವುದೇ ಧಾರ್ಮಿಕ ಭಾವನೆಯನ್ನು ಒಪ್ಪಿಕೊಳ್ಳುವ, ಆಚರಿಸುವ ಹಾಗೂ ಪ್ರಚಾರ ಮಾಡುವ ಸ್ವಾತಂತ್ರ್ಯವನ್ನು ಯಾವುದೇ ಅಡೆತಡೆಯಿಲ್ಲದೆ ಪ್ರತಿಯೊಬ್ಬ ನಾಗರಿಕನೂ ಹೊಂದುವುದು. ಪ್ರತಿಯೊಬ್ಬ ಪ್ರಜೆಯೂ ತಾನು ಇಷ್ಟಪಟ್ಟ ಧರ್ಮವನ್ನು ಒಪ್ಪಿಕೊಳ್ಳುವುದು. ಈ ಸ್ವಾತಂತ್ರ್ಯವನ್ನು ಸಂವಿಧಾನವೇ ಜನತೆಗೆ ನೀಡಿದ್ದು ಇದನ್ನು ಮೊಟಕುಗೊಳಿಸುವ ಯಾವುದೇ ಕ್ರಮವನ್ನು ಜನತಾ ಪಕ್ಷ ವಿರೋಧಿಸುತ್ತದೆಂದು ಅದು ತನ್ನ ಪ್ರಣಾಳಿಕೆಯಲ್ಲಿ ಸ್ಪಷ್ಟಪಡಿಸಿತು. ೩-೬ ನೆಯ ಜನವರಿ ೧೯೮೦ರಂದು ಚುನಾವಣೆಗಳು ನಡೆದವು. ಕಾಂಗ್ರೆಸ್ ಪಕ್ಷ ೨೭ ಸ್ಥಾನಗಳನ್ನು ಪಡೆಯಿತು. ಜನತಾ ಪಕ್ಷ ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರದ ಒಂದೇ ಸ್ಥಾನವನ್ನು ಪಡೆಯುವಲ್ಲಿ ಯಶಸ್ವಿಯಾಯಿತು. ಜನತಾ ಪಕ್ಷದ ಟಿ. ಆರ್. ಶಾಮಣ್ಣ ಅವರು ಕಾಂಗ್ರೆಸ್ ಅಭ್ಯರ್ಥಿಗಿಂತ ಕೇವಲ ೨,೭೨೭ ರಷ್ಟು ಹೆಚ್ಚಿನ ಮತ ಗಳಿಸಿ ಜಯಶೀಲರಾದರು. ಟಿ. ಆರ್. ಶಾಮಣ್ಣ ಅವರು ೧,೯೮,೩೯೦ ಮತಗಳನ್ನು ಪಡೆದರೆ, ಕಾಂಗ್ರೆಸ್ಸಿನ ಡಿ.ಪಿ. ಶರ್ಮ ಅವರು ೧,೯೫,೬೬೩ ಮತಗಳನ್ನು ಪಡೆದರು. ಜನತಾ ಪಕ್ಷ ಶೇಕಡಾ ೨೩.೪೪ ರಷ್ಟು ಮತ ಪಡೆಯಿತು.

೧೯೮೦ರ ಲೋಕಸಭಾ ಚುನಾವಣೆಯಲ್ಲಿ ಕಾಂಗೈ ೬೧.೫೪ ಲಕ್ಷ ಮತಗಳಿಸಿತು. ಶೇಕಡಾ ೫೬.೨೫ ರಷ್ಟು ಮತಗಳು ಅದರ ಪಾಲಾಗಿತ್ತು. ಇದಕೆ ವಿರುದ್ಧವಾಗಿ ವಿರೋಧ ಪಕ್ಷಗಳು ಕೇವಲ ೪೭.೮೬ ಲಕ್ಷ ಮತ ಪಡೆದಿದ್ದವು. ೧೯೮೦ರ ಚುನಾವಣೆಯಲ್ಲಿ ವಿರೋಧ ಪಕ್ಷಗಳೆಲ್ಲ ಒಟ್ಟಾಗಿ ಸ್ಪರ್ಧಿಸಿದ್ದರೂ ಕಾಂಗೈ ವಿರುದ್ಧ ಜಯಗಳಿಸುವುದು ಅಷ್ಟು ಸುಲಭ ಮಾತಾಗಿರಲಿಲ್ಲ. ೧೯೭೭ ರಲ್ಲಿ ಕೇಂದ್ರದಲ್ಲಿ ಜನತಾ ಪಕ್ಷವನ್ನು ಈ ದೇಶದ ಶ್ರೀ ಸಾಮಾನ್ಯರು ಭಾರಿ ಭರವಸೆಯೊಂದಿಗೆ ಅಧಿಕಾರಕ್ಕೆ ತಂದಿದ್ದರು. ಆದರೆ ಜನತಾ ಪಕ್ಷ ಅಂತಃಕಲಹಕ್ಕೆ ತುತ್ತಾಗಿ ಅಧಿಕಾರ ಕಳೆದುಕೊಂಡಿದ್ದುದು ನಿರಾಸೆಯುಂಟುಮಾಡಿತು. ಈ ನಿರಾಸೆಯನ್ನು ಜನತಾ ಪಕ್ಷಕ್ಕೆ ವಿರುದ್ಧವಾಗಿ ಮತ ಚಲಾಯಿಸುವುದರ ಮೂಲಕ ಭಾರತದ ಮತದಾರ ಸ್ಪಷ್ಟವಾಗಿ ತೋರಿಸಿದ್ದುಂಟು. ೧೯೮೩ರ ಚುನಾವಣೆಯ ತನಕ ಕಾಯುವುದು ಜನತಾ ಪಕ್ಷಕ್ಕೆ ಅನಿವಾರ್ಯವಾಗಿತ್ತು.

## ೧೯೮೩ರ ವಿಧಾನಸಭಾ ಚುನಾವಣೆಗಳು

೧೯೭೭ರಲ್ಲಿ ರಾಷ್ಟ್ರಮಟ್ಟದಲ್ಲಿ ಜನತಾ ಪಕ್ಷವೇನೋ ಉದಯವಾಯಿತು. ಕೇವಲ ಮೂವತ್ತು ತಿಂಗಳ ಅವಧಿಯಲ್ಲಿ ಕಿತ್ತಾಟದಿಂದ ಕೇಂದ್ರದಲ್ಲಿ ಜನತಾ ಪಕ್ಷ ಅಧಿಕಾರದಿಂದ ಕೆಳಗಿಳಿಯಿತು. ಜನತೆ ವಿರೋಧ ಪಕ್ಷಗಳು ತಮಗೆ ಕೊಟ್ಟ ವಚನದಿಂದ ಭ್ರಷ್ಟರಾದ ಕಾರಣ ಅವರನ್ನು ಕ್ರೂರವಾಗಿ ಶಿಕ್ಷಿಸಿತು. ಮತ್ತೆ ಕಾಂಗ್ರೆಸ್ ಅಧಿಕಾರದ ಗದ್ದುಗೆ ಏರಿತು. ಈ ಮಧ್ಯೆ ೧೯೭೮ರಲ್ಲಿ ನಡೆದ ರಾಜ್ಯ ವಿಧಾನಸಭೆ ಚುನಾವಣೆಯಲ್ಲಿ 'ಜನತಾ ಪಕ್ಷ' ಬಹುಮಟ್ಟಿನ ಜನತೆಯ ನಿರೀಕ್ಷೆಯನ್ನು ಹುಸಿಗೊಳಿಸಿತು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ರಾಜ್ಯದ ಜನತೆ ತೋರಿದ ಉತ್ಸಾಹ ಕಂಡು ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಇದು ಅಧಿಕಾರಕ್ಕೆ ಬಂದೇ ಬರುತ್ತದೆಂಬ ಅತಿಯಾದ ವಿಶ್ವಾಸ ಆ ಪಕ್ಷದ ಅಭಿಮಾನಿಗಳಲ್ಲಿತ್ತು. ಈ ಮಧ್ಯ ಆಡಳಿತ ಕಾಂಗ್ರೆಸ್ ಕೂಡ ವಿಭಜನೆಯಾಯಿತು. ಆದರೆ ಇವೆಲ್ಲದರ ನಿರೀಕ್ಷೆಯನ್ನು ಕರ್ನಾಟಕದ ಜನತೆ ಹುಸಿಗೊಳಿಸಿದರು. ಡಿ. ದೇವರಾಜ ಅರಸು ಅವರ ರಚನಾತ್ಮಕ ಕೆಲಸ ಹಾಗೂ ಶ್ರೀಮತಿ ಇಂದಿರಾಗಾಂಧಿ ಅವರ ಬಿರುಸಿನ ಪ್ರಚಾರದಿಂದಾಗಿ ಕಾಂಗೈ ಆಗ ಅದ್ಭುತ ವಿಜಯಗಳಿಸಿತು. ಜನತಾ ಪಕ್ಷ ೫೯ ವಿಧಾನಸಭಾ ಸ್ಥಾನಗಳನ್ನು ಗೆಲ್ಲುವುದರ ಮೂಲಕ ತಕ್ಕಮಟ್ಟಿಗೆ ಜನತೆಯು ವಿಶ್ವಾಸ ಗಳಿಸಿತು.

೧೯೮೩ರಲ್ಲಿ ನಡೆದ ರಾಜ್ಯ ವಿಧಾನಸಭಾ ಚುನಾವಣೆ ಹತ್ತು ಹಲವು ದೃಷ್ಟಿಯಿಂದ ಪ್ರಮುಖವಾದದ್ದು. ಕರ್ನಾಟಕದಲ್ಲಿ ಮಾತ್ರವಲ್ಲ ತಮಿಳುನಾಡು, ಆಂಧ್ರಪ್ರದೇಶ ಹಾಗೂ ಕೇರಳ ರಾಜ್ಯಗಳಲ್ಲಿ ವಿರೋಧ ಪಕ್ಷಗಳು ಸರ್ಕಾರ ರಚಿಸಲು ಸಮರ್ಥವಾದವು. ೧೯೭೭ರಲ್ಲಿ ರಾಷ್ಟ್ರಮಟ್ಟದಲ್ಲಿ ಜನತಾ ಪಕ್ಷ ಹುಟ್ಟು ಹಾಕಿದ್ದ ಜಾಗೃತಿ ರಾಜ್ಯದ ತನಕ ಹರಿದು ಬಂತು. ೧೯೮೩ರಲ್ಲಿ ಕರ್ನಾಟಕದಲ್ಲಿ ಜನತಾ ಪಕ್ಷ ಅಧಿಕಾರಕ್ಕೆ ಬರಲು ಹಲವಾರು ಕಾರಣಗಳಿದ್ದವು. ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಡಿ. ದೇವರಾಜ ಅರಸು ಕಾಂಗ್ರೆಸ್‌ನಿಂದ ಹೊರಬಂದು ಕಾಂಗ್ರೆಸ್ (ಯು) ಸ್ಥಾಪಿಸಿ ಲೋಕಸಭಾ ಚುನಾವಣೆಯಲ್ಲಿ ದಯನೀಯ ಸೋಲು ಅನುಭವಿಸಿದರು. ಅನಂತರ ಆರ್. ಗುಂಡೂರಾವ್ ಮುಖ್ಯಮಂತ್ರಿಗಳಾದರು. ದೇವರಾಜ ಅರಸು ಅವರು 'ಕರ್ನಾಟಕ ಕ್ರಾಂತಿರಂಗ' ಎಂಬ ಪ್ರಾದೇಶಿಕ ಪಕ್ಷ ಸ್ಥಾಪಿಸಿದರು. ಕಾಂಗ್ರೆಸ್‌ನಲ್ಲಿದ್ದ ಎಸ್. ಬಂಗಾರಪ್ಪ ಹೊರಬಂದು ಡಿ. ದೇವರಾಜ ಅರಸು ಅವರ ನಿಧನವಾದನಂತರ ಕ್ರಾಂತಿರಂಗಕ್ಕೆ ಸೇರ್ಪಡೆಯಾದರು. ಕಾಂಗೈ ಹೊರತಾಗಿಯೂ ಅನೇಕ ಪ್ರಬಲ ನಾಯಕರು ವಿರೋಧ ಪಕ್ಷದಲ್ಲಿದ್ದರು.

ಹಿಂದೆಂದೂ ಕಾಣದ ರೀತಿ ರೈತರು ಸರ್ಕಾರದ ವಿರುದ್ಧ ಆಕ್ರೋಶ ವ್ಯಕ್ತಪಡಿಸಿದ್ದುಂಟು. ಭಾಷಾ ಚಳುವಳಿಯ ಮೂಲಕ ಜನಜಾಗೃತಿ ನಡೆದದ್ದನ್ನು ಕಾಣಬಹುದು. ವಿರೋಧ ಪಕ್ಷ ಸಂಘಟನೆ ಮತ್ತೊಮ್ಮೆ ಈ ಕಾಲದಲ್ಲಿ ನಡೆಯಿತು. ಹೀಗೆ ಆಡಳಿತ ಪಕ್ಷದ ವಿರುದ್ಧವಾಗಿ ಭಾರಿ ರೀತಿಯ ಷಡ್ಯಂತ್ರ ರೂಪಿಸಲಾಯಿತು. ೧೯೮೩ ರಲ್ಲಿ ಜನತಾ ಪಕ್ಷ ಕರ್ನಾಟಕ ಕ್ರಾಂತಿರಂಗ ಒಕ್ಕೂಟ, ಸಿಪಿಐ,

ಲೋಕದಳ (ಕ) ಮೈತ್ರಿ ಮಾಡಿಕೊಂಡು ಸ್ಪರ್ಧೆ ನಡೆಸಿದವು. ಕರ್ನಾಟಕ ಕ್ರಾಂತಿರಂಗ ಜನತಾಪಕ್ಷ 'ನೇಗಿಲು ಹೊತ್ತ ರೈತನ ಚಿಹ್ನೆ'ಯ ಮೇಲೆ ಸ್ಪರ್ಧಿಸಿದವು.

೧೯೭೭ರ ಲೋಕಸಭಾ ಚುನಾವಣೆಯಲ್ಲಿ ತುರ್ತು ಪರಿಸ್ಥಿತಿ ಹಾಗೂ ಪ್ರಧಾನ ಮಂತ್ರಿಯ ಸರ್ವಾಧಿಕಾರ ಮನೋಭಾವವನ್ನೇ ಜನತಾ ಪಕ್ಷ ಮುಖ್ಯವಾಗಿ ಜನತೆಯ ಎದುರು ಪ್ರತಿಬಿಂಬಿಸಿತು. ೧೯೮೩ರಲ್ಲಿ ಕರ್ನಾಟಕದಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಜನತಾ ಪಕ್ಷ ರಾಜ್ಯದ ಕಾಂಗ್ರೆಸ್ ಸರ್ಕಾರದ ಮುಖ್ಯಮಂತ್ರಿ ಹಾಗೂ ಅವರ ಆಡಳಿತದಲ್ಲಿನ ಲೋಪದೋಷಗಳನ್ನೇ ಪ್ರಮುಖ ಗುರಿಯನ್ನಾಗಿಟ್ಟುಕೊಂಡು ಚುನಾವಣಾ ಪ್ರಣಾಳಿಕೆ ಸಿದ್ಧ ಮಾಡಿತು. ವ್ಯವಸ್ಥೆಯ ವಿರುದ್ಧ ಜನರ ಆಕ್ರೋಶವನ್ನು ಬಳಸಿಕೊಳ್ಳುವ ಯತ್ನವನ್ನು ಇಲ್ಲಿ ಕಾಣಬಹುದು. ೧೯೮೩ರ ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆಯ ಮುಖ್ಯಾಂಶಗಳು ಹೀಗಿವೆ:

## ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆ

ಇಂದಿರಾ ಕಾಂಗ್ರೆಸ್ ಕಳೆದ ಐದು ವರ್ಷಗಳಲ್ಲಿ ಯಾವರಂಗದಲ್ಲೂ ಯಾವುದೇ ಸಾಧನೆ ಮಾಡಿಲ್ಲ, ದಬ್ಬಾಳಿಕೆ ಮಾತ್ರ ಯಾವ ಹಿಂದಿನ ಸರ್ಕಾರಕ್ಕಿಂತಲೂ ಮಿಗಿಲು. ಮೂರು ವರ್ಷಗಳಲ್ಲಂತೂ ಏನೂ ಮಾಡಿಲ್ಲ, ಮೇರೆ ಮೀರಿದ ದೌರ್ಜನ್ಯ ತೋರಿಸಿದೆ. ಒಬ್ಬ ಅಪ್ರಬುದ್ಧ ಮುಖ್ಯಮಂತ್ರಿ ನೇತೃತ್ವದಲ್ಲಿ ರಾಷ್ಟ್ರದಲ್ಲೇ ಭ್ರಷ್ಟ ಮಂತ್ರಿಮಂಡಲ, ಜನತೆಯ ಮೇಲೆ ಸರಾಸರಿ ತಿಂಗಳಿಗೆ ಒಂದರಂತೆ ಗೋಲಿಬಾರು, ಸುಮಾರು ೧೩೯ ಅಸಹಾಯಕರ ಬಲಿ, ನರಗುಂದ, ನವಲಗುಂದಗಳಿಂದ ಹಿಡಿದು ಗೆಜ್ಜಲಗೆರೆಯವರೆಗೆ ಎಷ್ಟೊಂದು ಗೋಲಿಬಾರುಗಳು, ರೈತರ ಮೇಲೆ ದಬ್ಬಾಳಿಕೆ, ಬೆಂಗಳೂರು ನಗರ ಸರ್ಕಾರಿ ವಲಯದ ಕಾರ್ಖಾನೆಗಳ ಕಾರ್ಮಿಕರ ೭೮ ದಿನಗಳ ಅಖಂಡ ಮುಷ್ಕರ, ಬೀಗಮುದ್ರೆ, ಕಾರ್ಮಿಕರ ಮೇಲೆ ಗುಂಡು, ನ್ಯಾಯ ಬೇಡಿದರೆ ಗುಂಡಿನ ಸುರಿಮಳೆ ಎಂಬುದು ಸರ್ಕಾರದ ನಡೆ. ಸಾರ್ವಜನಿಕ ಜೀವನದಲ್ಲಿ ಭ್ರಷ್ಟಾಚಾರದ ಹಾಸುಹೊಕ್ಕು. ಈ ಸರ್ಕಾರದ ಸಾಧನೆಗಳು ಮೂರು ರೀತಿಯಾಗಿವೆ. ೧. ದೌರ್ಜನ್ಯದಲ್ಲಿ ವಿಕ್ರಮ ೨. ಮುಗಿಲೆತ್ತರದ ಭ್ರಷ್ಟಾಚಾರ ೩. ಆಡಳಿತ ಯಂತ್ರದ ದುರುಪಯೋಗ. ಈ ಹಿನ್ನೆಲೆಯಲ್ಲಿ ಜನತಾ ರಂಗ ಕರ್ನಾಟಕದ ಜನತೆಗೆ ಕೊಟ್ಟ ಆಶ್ವಾಸನೆಗಳಿವು:

- ಜನತೆಯ ಸರ್ಕಾರವೇ ನಮ್ಮ ಗುರಿ.
- ಕಾಂಗ್ರೆಸ್‌ನ ನಿರಂಕುಶ ಪಾರುಪತ್ಯ ತೊಡೆದುಹಾಕಿ ಜನತೆಯ ಕೈಗೆ ಅಧಿಕಾರ ಕೊಡುವ ಉದ್ದೇಶ.
- ಹಳ್ಳಿಗಳ ಏಳಿಗೆ, ಕರ್ನಾಟಕದ ೨೬ ಸಾವಿರ ಹಳ್ಳಿಗಳಲ್ಲಿ ವಾಸವಾಗಿರುವ ರೈತರಿಗೆ ಭೂ ಒಡೆತನ ಕೊಡುವುದು ಹಾಗೂ ಅಲ್ಲಿರುವ ಹಿಂದುಳಿದ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ಜನತೆಗೆ ನ್ಯಾಯ ದೊರಕಿಸಿಕೊಡುವುದು. ಭೂಸೇನಾ ಸಂಸ್ಥೆಯನ್ನು ನೈಜವಾದ ಕೂಲಿಕಾರರ ಸಂಸ್ಥೆಯಾಗಿ ಮಾರ್ಪಡಿಸುವುದು.
- ಉತ್ಪಾದಕ ಉದ್ಯೋಗ, ಖಾದಿ ಗ್ರಾಮೋದ್ಯೋಗ, ಗುಡಿ ಕೈಗಾರಿಕೆ ಹಾಗೂ ಪಶುಪಾಲನೆಗೆ ಹೆಚ್ಚಿನ ಆದ್ಯತೆ ಕೊಟ್ಟು ಪ್ರತಿ ವರ್ಷ ೭೫೦೦೦ ಉತ್ಪಾದಕ ಹುದ್ದೆಗಳನ್ನು ಸೃಷ್ಟಿಸಲಾಗುವುದು.
- ಕಾರ್ಮಿಕ ಕಲ್ಯಾಣ, ೧೦ ಕೋಟಿ ರೂ. ವೆಚ್ಚದಲ್ಲಿ ೪೦ ಲಕ್ಷ ಭೂ ರಹಿತ ಕೂಲಿ ಕಾರ್ಮಿಕರಿಗೆ ಮನೆ ಕಟ್ಟುವ ಯೋಜನೆ. ಎರಡು ಲಕ್ಷ ಮನೆಗಳನ್ನು ಪ್ರತಿವರ್ಷ ಗ್ರಾಮೀಣ ಪ್ರದೇಶಗಳಲ್ಲಿ ನಿರ್ಮಾಣ ಮಾಡುವುದು. ಸರ್ಕಾರದ ಒಟ್ಟು ವೆಚ್ಚದಲ್ಲಿ ಶೇ. ೪೫ ರಷ್ಟು ಹಣವನ್ನು ಗ್ರಾಮೀಣ ಪ್ರದೇಶಗಳಿಗೆ ಮೀಸಲಾಗಿಡುವುದು.
- ಬಡತನ ರೇಖೆಗಿಂತ ಕೆಳಗಿನವರೆಗೆ ೨ ರೂ. ಗೆ ೧. ಕಿ.ಲೋ. ಅಕ್ಕಿ. ಸಂಘಟಿತ ಕಾರ್ಮಿಕರ ಹಕ್ಕು ಮೊಟಕಾಗದಂತೆ ನೋಡಿಕೊಳ್ಳುವುದು.
- **ರೈತ ಕಲ್ಯಾಣ ಯೋಜನೆ** : ರೈತನ ಬೆಳೆಗಳಿಗೆ ಬೆಂಬಲ ಬೆಲೆ ಘೋಷಣೆ. ರೈತರು ಬಳಸುವ ವಸ್ತುಗಳ ಮೇಲೆ ಮಾರಾಟ ತೆರಿಗೆ ರದ್ದು. ರೈತರ ಸಾಲ ನೀಡಿಕೆಯಲ್ಲಿ ಸುಗಮ ಪದ್ಧತಿ ಅಳವಡಿಕೆ. ರೈತರ ಸಾಲದ ಮೇಲಿನ ಬಡ್ಡಿ ದರದ ಪುನರ್ ಪರಿಶೀಲನೆ.
- **ನೀರಾವರಿ** : ವಿದ್ಯುತ್ ಹಾಗೂ ಸಣ್ಣ ನೀರಾವರಿ ಯೋಜನೆಗಳನ್ನು ಕಾಲ ಮಿತಿಯಲ್ಲಿ ಪೂರೈಸುವುದು. ಅಂತರ್ಜಲದ ಸದ್ಬಳಕೆ, ಭೂ ಸ್ವಾಧೀನಗೊಳಿಸಿಕೊಂಡ ಒಂದು ವರ್ಷದೊಳಗೆ ಹಣ ಪಾವತಿ. ಹತ್ತು ಎಕರೆಗಿಂತ ಕಡಿಮೆಯಿರುವ ಭೂ ಹಿಡುವಳಿದಾರರಿಗೆ ವಿಶೇಷ ಹಣಕಾಸಿನ ನೆರವು. ಎಲ್ಲ ಹಳ್ಳಿಗಳಿಗೂ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ. ಪ್ರತಿ ಗ್ರಾಮಕ್ಕೆ ರಸ್ತೆ ಸೌಲಭ್ಯ.

- **ಅಂತ್ಯೋದಯ** : ಬಡತನದ ರೇಖೆಗಿಂತ ಕೆಳಗಿರುವಂತಹವರಿಗೆ ಮಹಾತ್ಮ ಗಾಂಧೀಜಿ ಅವರ ಆಶಯದಂತೆ ಹಾಕಿಕೊಂಡ ಕಾರ್ಯಕ್ರಮ. ಹಳ್ಳಿಗಳಲ್ಲಿರುವ ಐದು ಬಡಕುಟುಂಬಗಳನ್ನು ಗುರುತಿಸಿ ಅವರ ಆರ್ಥಿಕ ಮಟ್ಟದ ಹೆಚ್ಚಳಕ್ಕೆ ವಿಶೇಷ ಕಾರ್ಯಕ್ರಮ. ಪ್ರತಿಯೊಬ್ಬ ಪ್ರಾಪ್ತ ವಯಸ್ಕನಿಗೂ ಉದ್ಯೋಗ ನೀಡಿಕೆಯ ಭರವಸೆ.
- **ಬಳಕೆದಾರರ ಹಿತರಕ್ಷಣೆ** : ರೈತ ಮಾರುವ ಬೆಲೆ, ಗ್ರಾಹಕ ಕೊಳ್ಳುವ ಬೆಲೆಗಳ ನಡುವಣ ಅಂತರ ಶೇ. ೨೫ ಕ್ಕಿಂತ ಹೆಚ್ಚಿಲ್ಲದಂತೆ ನೋಡಿಕೊಳ್ಳುವುದು. ಗ್ರಾಮಗಳಲ್ಲಿ ಇಂಧನಕ್ಕಾಗಿ ಗೊಬ್ಬರ ಅನಿಲ ಯಂತ್ರ ಸ್ಥಾಪನೆ.
- **ಉದ್ಯಮ ವಿಕಾಸ** : ಸಣ್ಣ ಮತ್ತು ಮಧ್ಯಮ ಕೈಗಾರಿಕಾ ಉದ್ಯಮಿಗಳಿಗೆ ವಿಶೇಷ ಸೌಲಭ್ಯ-ಇಂತಹ ಯೋಜನೆಯಡಿಯಲ್ಲಿ ಉದ್ಯಮ ಸ್ಥಾಪಿಸುವವರಿಗೆ ಐದು ವರ್ಷಗಳ ಕಾಲ ತೆರಿಗೆ ವಿನಾಯ್ತಿ. ಬಾಲ ಕಾರ್ಮಿಕರ ಹಿತರಕ್ಷಣೆ.
- **ಶಿಕ್ಷಣ** : ಸಂವಿಧಾನ ತತ್ವಗಳಲ್ಲಿ ನಿಗದಿ ಪಡಿಸಿರುವಂತೆ ಪ್ರಾಥಮಿಕ ಶಿಕ್ಷಣವನ್ನು ೨ ರಿಂದ ೧೦ ವಯಸ್ಸಿನ ಕಡು ಬಡಮಕ್ಕಳಿಗೆ ಕಡ್ಡಾಯಗೊಳಿಸುವುದು.
- **ಮಕ್ಕಳ ಕಲ್ಯಾಣ** : ಬಡ ಮಕ್ಕಳಿಗೆ ಪೌಷ್ಟಿಕ ಆಹಾರ ಪೂರೈಕೆ. ಜೊತೆಗೆ ಎರಡು ಸಮವಸ್ತ್ರ ನೀಡಿಕೆ. ಗುರುಕುಲ ಶಿಕ್ಷಣ ಪದ್ಧತಿ ಪ್ರಾರಂಭ. ವೃತ್ತಿ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ.
- **ತಾಂತ್ರಿಕ ಶಿಕ್ಷಣ** : ಇಂದು ಇಂಜಿನಿಯರಿಂಗ್ ಹಾಗೂ ವೈದ್ಯಕೀಯ ಶಿಕ್ಷಣವು ವ್ಯಾಪಾರೀಕರಣವಾಗಿದೆ. ಇದನ್ನು ತಪ್ಪಿಸಲು ಡೊನೇಷನ್ ರದ್ದು ಮಾಡಲಾಗುವುದು. ಗ್ರಾಮಾಂತರ ಪ್ರದೇಶದಲ್ಲಿ ವಿದ್ಯಾರ್ಥಿಗಳಿಗೆ ವಿಶೇಷ ಪ್ರಾಶಸ್ತ್ಯ ಕೊಡಲಾಗುವುದು.
- **ವಿಶ್ವವಿದ್ಯಾನಿಲಯಗಳಿಗೆ ಸ್ವಾಯತ್ತತೆ** : ಸೆನೆಟ್, ಸಿಂಡಿಕೇಟ್, ಅಕಾಡೆಮಿಕ್ ಕೌನ್ಸಿಲ್‌ಗಳಿಗೆ ಹೆಚ್ಚಿನ ಅಧಿಕಾರ ನೀಡಲಾಗುವುದು. ಕುಲಪತಿಗಳ ಆಯ್ಕೆಗೆ ಸ್ವತಂತ್ರ ಮಂಡಲಿ ರಚಿಸಿ ಅವರ ಶಿಫಾರಸ್ಸುಗಳನ್ನು ಅನುಸರಿಸಲಾಗುವುದು. ಶಿಕ್ಷಣ ಕ್ಷೇತ್ರದಲ್ಲಿ ಯಾವುದೇ ರಾಜಕೀಯ ಒತ್ತಡಕ್ಕೆ ಬಲಿಯಾಗದಂತೆ ನೋಡಿಕೊಳ್ಳಲಾಗುವುದು.
- **ಹಿಂದುಳಿದವರ ಅಭಿವೃದ್ಧಿ** : ಶತಮಾನಗಳಿಂದ ಅವಕಾಶದಿಂದ ವಂಚಿತರಾದ ಸಾಮಾಜಿಕ ಹಾಗೂ ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಸೌಲಭ್ಯ ಜಾರಿಗೆ ತರಲು ಮಂಡಲ ಆಯೋಗದ ಶಿಫಾರಸ್ಸಿನ ಅನುಷ್ಠಾನ.
- **ಆರೋಗ್ಯ ರಕ್ಷಣೆ** : ಗ್ರಾಮಾಂತರ ಪ್ರದೇಶದಲ್ಲಿ ಆರೋಗ್ಯ ರಕ್ಷಣೆಗೆ ವಿಶೇಷ ಕಾರ್ಯಕ್ರಮ. ಆರೋಗ್ಯ ವಿಮೆ ಜಾರಿಗೆ. ದೇಶೀಯ ವೈದ್ಯಕೀಯ ಪದ್ಧತಿಗೆ ಪ್ರೋತ್ಸಾಹ.
- **ಮಹಿಳಾ ಮುನ್ನಡೆ** : ಮಹಿಳೆಯರ ಕಲ್ಯಾಣಕ್ಕೆ ವಿಶೇಷ ಕಾರ್ಯಕ್ರಮ ನಿರೂಪಣೆ. ದೌರ್ಜನ್ಯಗಳಿಂದ ಅವರನ್ನು ರಕ್ಷಿಸುವುದು. ಹಳ್ಳಿಗಳಲ್ಲಿನ ಮಹಿಳೆಯರಿಗೆ ಶೌಚಾಲಯ ವ್ಯವಸ್ಥೆ.
- **ಕನ್ನಡಕ್ಕೆ ಅಗ್ರಪಟ್ಟ** : ವಿಧಾನಸೌಧದಿಂದ ಗ್ರಾಮ ಪಂಚಾಯತಿಯ ತನಕ ಕನ್ನಡದಲ್ಲಿ ಆಡಳಿತ ನಡೆಸುವುದು. ಲೋಕಸೇವಾ ಆಯೋಗದ ಪರೀಕ್ಷೆಗಳನ್ನು ಕನ್ನಡದಲ್ಲಿ ನಡೆಸುವುದು. ಶಿಶುವಿಹಾರದಿಂದ ಸ್ನಾತಕೋತ್ತರ ತರಗತಿಯವರೆಗೆ ಕನ್ನಡದಲ್ಲಿ ವ್ಯಾಸಂಗ ಮಾಡುವವರಿಗೆ ಪ್ರೋತ್ಸಾಹ. ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ಅನುದಾನ ರದ್ದು. ಉರ್ದು, ತಮಿಳು, ತೆಲುಗು, ಮರಾಠಿ, ಹಿಂದಿ ಮೊದಲಾದ ಮಾತೃಭಾಷೆಗಳನ್ನಾಡುವವರಿಗೆ ಎಲ್ಲ ರೀತಿಯ ಪ್ರೋತ್ಸಾಹ, ಭಾಷಾ ಅಲ್ಪ ಸಂಖ್ಯಾತರಿಗೆ ರಕ್ಷಣೆ.
- **ಯುವಶಕ್ತಿಯ ಬಳಕೆ** : ಯುವಜನರ ದೈಹಿಕ ಹಾಗೂ ಮಾನಸಿಕ ಅಭಿವೃದ್ಧಿಗೆ ಕಾರ್ಯಕ್ರಮ ರೂಪಿಸುವುದು. ಹರಿಜನ-ಗಿರಿಜನ ಮಕ್ಕಳಿಗೆ ವಿದ್ಯಾರ್ಥಿ ನಿಲಯ, ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ವಸತಿ ನಿಲಯ ಮುಂತಾದವುಗಳಿಗೆ ಆದ್ಯತೆ ಕೊಡಲಾಗುವುದು.
- **ಭ್ರಷ್ಟಾಚಾರ ನಿರೋಧ** : ಹಿಂದಿನ ಆಡಳಿತ ವ್ಯವಸ್ಥೆಯಲ್ಲಿದ್ದ ಭ್ರಷ್ಟಾಚಾರವನ್ನು ತೊಡೆದುಹಾಕಲು ಲೋಕಾಯುಕ್ತ ವ್ಯವಸ್ಥೆಯ ಸ್ಥಾಪನೆ. ಎಲ್ಲಾ ಅಧಿಕಾರ ಸ್ಥಾನದಲ್ಲಿರುವ ಶಾಸಕರು ಇತರರಿಗೆ ಪ್ರತಿವರ್ಷ ಆಸ್ತಿ ಘೋಷಣೆ ಕಡ್ಡಾಯ. ಭ್ರಷ್ಟಾಚಾರದ ಉಗಮ ಸ್ಥಾನವಾದ ಚುನಾವಣೆಗಳ ಸುಧಾರಣೆ.
- **ಕರಭಾರ ಕಡಿತ, ವೃತ್ತಿ ತೆರಿಗೆ ರದ್ದತಿ** : ನೆರೆಹೊರೆ ರಾಜ್ಯಗಳಿಗೆ ಸಮಾನವಾದ ಮಾರಾಟ ತೆರಿಗೆ ಹಾಗೂ ನಿಯಂತ್ರಿತ ಮಾರಾಟ ತೆರಿಗೆ ಜಾರಿ.
- **ಸರ್ಕಾರಿ ನೌಕರರು** : ಇದೀಗ ಸರ್ಕಾರಿ ನೌಕರರ ನಿವೃತ್ತಿ ವಯಸ್ಸು ೫೮ರಿಂದ ೫೫ಕ್ಕೆ ಇಳಿದಿದೆ. ಅವರ ನಿವೃತ್ತಿ ವಯಸ್ಸನ್ನು ೫೮ಕ್ಕೆ ಏರಿಸುವುದು. ಕೇಂದ್ರ ಸರ್ಕಾರದ ನೌಕರರೊಂದಿಗೆ ಸಮಾನತೆ ಸ್ಥಾಪಿಸುವುದು.
- **ಜನತಂತ್ರ**: ಜನಸಾಮಾನ್ಯರ ಕೈಗೆ ಅಧಿಕಾರ ಕೊಡುವುದು. ಪಕ್ಷಾಂತರ ನಿಷೇಧ ಶಾಸನ ಅನುಷ್ಠಾನ. ತಾಲ್ಲೂಕು ಅಭಿವೃದ್ಧಿ ಮಂಡಳಿ, ಜಿಲ್ಲಾ ಪಂಚಾಯತ್ ವ್ಯವಸ್ಥೆ, ಪುರಸಭೆ, ನಗರಸಭೆ ಹಾಗೂ ಮಹಾನಗರಪಾಲಿಕೆಗೆ ನಿಯಮಿತವಾಗಿ ಚುನಾವಣೆ.

- **ಪತ್ರಿಕಾ ಸ್ವಾತಂತ್ರ್ಯ** : ಕರ್ನಾಟಕದಲ್ಲಿ ಹಿಂದೆಂದೂ ಕಾಣದಷ್ಟು ದೌರ್ಜನ್ಯ ಪತ್ರಿಕಾ ರಂಗದ ಮೇಲೆ ನಡೆದಿದೆ. ಪತ್ರಿಕಾಲಯಗಳಿಗೆ ಬೀಗಮುದ್ರೆ ಹಾಕಲಾಗಿದೆ. ಪೊಲೀಸ್ ಶಾಸನದ ೩೫ನೆಯ ವಿಧಿಯ ದುರ್ಬಳಕೆ ನಡೆದಿದೆ. ಇದೆಲ್ಲವನ್ನು ಶಾಶ್ವತವಾಗಿ ಸ್ತಬ್ಧಗೊಳಿಸುವುದು, ಮೂಲಭೂತ ಹಕ್ಕು ಹಾಗೂ ಸ್ವಾತಂತ್ರ್ಯ ಕೊಡುವುದು ಪೊಲೀಸ್ ಕರ್ತವ್ಯ ಆಗಬೇಕು.
- **ಸಮಗ್ರ ಮುನ್ನಡೆ** : ಕರ್ನಾಟಕದ ಅರಣ್ಯ ಸಂಪತ್ತು, ಖನಿಜ ಸಂಪತ್ತುಗಳನ್ನು ಸದುಪಯೋಗಪಡಿಸಿಕೊಂಡು ಪರಿಸರ ಮಾಲಿನ್ಯವನ್ನು ತಡೆಗಟ್ಟಿ ಉತ್ತಮ ವಾತಾವರಣ ಸೃಷ್ಟಿಸುವುದು.
- ಸ್ವರಾಜ್ಯ ಸ್ಪರ್ಶವನ್ನು ಜನಸ್ತೋಮಕ್ಕೆ ಕೊಡುವುದೇ ನಮ್ಮ ಪಣ. ಜನತೆಯ ಕೈಗೇ ಎಲ್ಲಾ ಅಧಿಕಾರ. ಇದು ಜನತಾ ಪಕ್ಷ ನೀಡುವ ಅಭಿವಚನ.

**ಚುನಾವಣಾ ಫಲಿತಾಂಶ**

ಜನತಾ ಪಕ್ಷ ೧೯೮೩ರ ಈ ಚುನಾವಣೆಯಲ್ಲಿ ೧೯೪ ವಿಧಾನ ಸಭಾ ಕ್ಷೇತ್ರಗಳಲ್ಲಿ ಸ್ಪರ್ಧಿಸಿತು. ಒಟ್ಟು ೪೨,೭೫,೩೫೫ ಮತಗಳನ್ನು ಪಡೆಯಿತು. ೯೫ ಜನ ಶಾಸಕರು ಜನತಾ ಪಕ್ಷದಿಂದ ಆಯ್ಕೆಯಾಗಿದ್ದರು. ಅದರಲ್ಲಿ ೩೨ ಕರ್ನಾಟಕ ಕ್ರಾಂತಿರಂಗದ ಸದಸ್ಯರಾಗಿದ್ದರು. ಅದು ಶೇ ೩೩.೦೯ ಮತಗಳಿಸಿತು. ವಿರೋಧ ಪಕ್ಷಗಳಾದ ಬಿಜೆಪಿ ೧೮, ಸಿಪಿಐ ಹಾಗೂ ಸಿಪಿಎಂ ತಲಾ ಮೂರು ಜನ ಶಾಸಕರನ್ನು ಹೊಂದಿದ್ದವು. ೨೨ ಜನ ಸ್ವತಂತ್ರ ಅಭ್ಯರ್ಥಿಗಳು ಆಯ್ಕೆಯಾಗಿದ್ದರು. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಈ ಚುನಾವಣೆಯಲ್ಲಿ ೨೨೧ ಸ್ಥಾನಗಳಿಗೆ ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿತ್ತು. ಅದರಲ್ಲಿ ೮೨ರಲ್ಲಿ ಜಯಗಳಿಸಿತು. ಈ ಪಕ್ಷ ೫೨,೨೧,೪೧೯ ಮತಗಳನ್ನು ಗಳಿಸಿತು. ಶೇ ೪೦. ೪೨ ರಷ್ಟು ಮತವನ್ನು ಕಾಂಗ್ರೆಸ್ ಪಕ್ಷ ಪಡೆದಿದ್ದುಂಟು. ಜನತಾ ಪಕ್ಷಕ್ಕಿಂತ ಶೇ ೭ ರಷ್ಟು ಹೆಚ್ಚಿನ ಮತಗಳನ್ನು ಕಾಂಗ್ರೆಸ್ ಪಡೆದಿದ್ದರೂ ಸ್ಥಾನ ಗಳಿಕೆಯಿಂದ ಅದಕ್ಕೆ ಜನತಾ ಪಕ್ಷಕ್ಕಿಂತ ೧೩ ಕಡಿಮೆ ಸ್ಥಾನಗಳು ಬಂದಿದ್ದವು. ಸ್ವತಃ ಮುಖ್ಯಮಂತ್ರಿಗಳೇ ಈ ಚುನಾವಣೆಯಲ್ಲಿ ಸೋಲು ಅನುಭವಿಸಿದ್ದರು. ಹೀಗಾಗಿ ಕಾಂಗ್ರೆಸ್ ಏಕಸ್ವಾಮ್ಯತೆ ಅಳಿಯುವಂತಾಯಿತು.

ಬೀದರ್ ಜಿಲ್ಲೆಯ ೬ ವಿಧಾನಸಭಾ ಕ್ಷೇತ್ರಗಳಲ್ಲಿ ಜನತಾ ಪಕ್ಷ ಕೇವಲ ಒಂದು ಸ್ಥಾನ ಗಳಿಸಿತು. ಗುಲ್ಬರ್ಗ ಜಿಲ್ಲೆಯ ೧೩ ಸ್ಥಾನಗಳಲ್ಲಿ ಜನತಾ ಪಕ್ಷ ೬ ಸ್ಥಾನಗಳನು ತನ್ನದಾಗಿಸಿಕೊಂಡಿತು. ರಾಯಚೂರು ಜಿಲ್ಲೆಯ ೧೧ ಸ್ಥಾನಗಳಲ್ಲಿ ಕೇವಲ ಒಂದು ಸ್ಥಾನ ಮಾತ್ರ ಜನತಾಪಕ್ಷಕ್ಕೆ ದೊರೆಯಿತು. ಬಳ್ಳಾರಿ ಜಿಲ್ಲೆಯ ೯ ಸ್ಥಾನಗಳಲ್ಲಿ ೪ ಸ್ಥಾನ ಜನತಾ ಪಕ್ಷಕ್ಕೆ ದೊರೆಯಿತು. ಹೈದ್ರಾಬಾದ್ ಕರ್ನಾಟಕದ ನಾಲ್ಕು ಜಿಲ್ಲೆಗಳಿಂದ ಜನತಾ ಪಕ್ಷಕ್ಕೆ ೧೨ ಸ್ಥಾನಗಳು ದೊರಕಿದವು. ಅದಕ್ಕೆ ಬದಲಾಗಿ ಕಾಂಗ್ರೆಸ್ ಪಕ್ಷಕ್ಕೆ ೨೨ ಸ್ಥಾನಗಳು ದೊರಕಿದ್ದನ್ನು ಗಮನಿಸಬೇಕು. ಹೈದ್ರಾಬಾದ್ ಕರ್ನಾಟಕದ ನಾಲ್ಕು ಜಿಲ್ಲೆಗಳಿಂದ ಒಟ್ಟು ೩೯ ವಿಧಾನಸಭಾ ಸ್ಥಾನಗಳಿವೆ.

ಚಿತ್ರದುರ್ಗದಲ್ಲಿ ೧೧ ವಿಧಾನಸಭಾ ಕ್ಷೇತ್ರಗಳಲ್ಲಿ ಜನತಾ ಪಕ್ಷ ೭ ಸ್ಥಾನ ಪಡೆಯಿತು. ಶಿವಮೊಗ್ಗ ಜಿಲ್ಲೆಯ ೯ ಸ್ಥಾನಗಳಲ್ಲಿ ಜನತಾ ಪಕ್ಷ ೫ ಸ್ಥಾನಗಳನ್ನು ಪಡೆಯಿತು. ತುಮಕೂರು ಜಿಲ್ಲೆಯ ೧೩ ಸ್ಥಾನಗಳಲ್ಲಿ ೬ ಸ್ಥಾನ ಇದಕ್ಕೆ ದೊರೆಯಿತು. ಬೆಂಗಳೂರು ನಗರ ಜಿಲ್ಲೆಯ ೧೨ ಸ್ಥಾನಗಳಲ್ಲಿ ೧೧ ವಿಧಾನಸಭಾ ಕ್ಷೇತ್ರಗಳು ಜನತಾ ಪಕ್ಷದ ಪಾಲಾದವು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ೧೩ ಸ್ಥಾನಗಳಲ್ಲಿ ೯ ವಿಧಾನಸಭಾ ಕ್ಷೇತ್ರಗಳು ಜನತಾ ಪಕ್ಷದ ಪಾಲಾದವು. ಬೆಂಗಳೂರು ವಿಭಾಗದಲ್ಲಿ ಒಟ್ಟು ೭೧ ವಿಧಾನಸಭಾ ಕ್ಷೇತ್ರಗಳಿವೆ. ಅದರಲ್ಲಿ ಜನತಾ ಪಕ್ಷಕ್ಕೆ ೩೦ ಸ್ಥಾನಗಳು ಲಭ್ಯವಾದವು ಮತ್ತು ೭ ಸ್ವತಂತ್ರ ಅಭ್ಯರ್ಥಿಗಳು ಆಯ್ಕೆಯಾದರು. ಬೆಂಗಳೂರು ನಗರದಿಂದ ೧೨ ವಿಧಾನಸಭಾ ಕ್ಷೇತ್ರಗಳಲ್ಲಿ ೧೧ ಜನತಾ ಪಕ್ಷ ಹಾಗೂ ಒಂದು ಸಿಪಿಐ ಪಕ್ಷದ ಪಾಲಾದವು. ಇಲ್ಲಿ ಕಾಂಗ್ರೆಸ್‌ಪಕ್ಷ ಖಾತೆಯನ್ನೂ ತೆರೆದಿಲ್ಲ. ಜನತಾ ಪಕ್ಷ ವಿದ್ಯಾವಂತ ಜನತೆಯ ವಿಶ್ವಾಸ ಗಳಿಸುವಲ್ಲಿ ಯಶಸ್ವಿಯಾಗಿತ್ತು.

ಮೈಸೂರು ವಿಭಾಗದಲ್ಲಿ ಒಟ್ಟು ೫೫ ವಿಧಾನಸಭಾ ಕ್ಷೇತ್ರಗಳಿವೆ. ಅದರಲ್ಲಿ ೨೫ ಸ್ಥಾನಗಳು ಜನತಾ ಪಕ್ಷಕ್ಕೆ ದಕ್ಕಿದವು. ಮಂಡ್ಯ ಜಿಲ್ಲೆಯ ೯ ವಿಧಾನಸಭಾ ಕ್ಷೇತ್ರಗಳಲ್ಲಿ ೪ ಜನತಾ ಪಕ್ಷಕ್ಕೆ ದೊರೆಯಿತು. ಮೈಸೂರು ಜಿಲ್ಲೆಯಲ್ಲಿ ೧೪ ವಿಧಾನಸಭಾ ಕ್ಷೇತ್ರಗಳಲ್ಲಿ ೮ ಸ್ಥಾನಗಳು ಜನತಾ ಪಕ್ಷಕ್ಕೆ ದೊರೆತವು. ಕೊಡಗಿನ ೩ ವಿಧಾನಸಭಾ ಕ್ಷೇತ್ರಗಳಲ್ಲಿ ೧ ಸ್ಥಾನ ಜನತಾ ಪಕ್ಷಕ್ಕೆ ದೊರೆಯಿತು. ಹಾಸನ ಜಿಲ್ಲೆಯ ೮ ವಿಧಾನಸಭಾ ಕ್ಷೇತ್ರಗಳಲ್ಲಿ ೩ ಸ್ಥಾನ ಜನತಾ ಪಕ್ಷಕ್ಕೆ ದೊರೆಯಿತು. ದಕ್ಷಿಣ ಕನ್ನಡ ಜಿಲ್ಲೆಯ ೧೫ ವಿಧಾನಸಭಾ ಕ್ಷೇತ್ರಗಳಲ್ಲಿ ೩ ಸ್ಥಾನ ಮಾತ್ರ ಜನತಾ ಪಕ್ಷಕ್ಕೆ ದೊರೆಯಿತು. ಎಂಟು ಸ್ಥಾನಗಳು ಬಿಜೆಪಿಗೆ ದೊರಕಿದ್ದನ್ನು ವಿಶೇಷವಾಗಿ ಗುರುತಿಸಬೇಕು. ಚಿಕ್ಕಮಗಳೂರಿನ ೬ ವಿಧಾನಸಭಾ ಕ್ಷೇತ್ರಗಳಲ್ಲಿ ೪ ಸ್ಥಾನಗಳನ್ನು ಜನತಾ ಪಕ್ಷ ಗಳಿಸುವಲ್ಲಿ ಯಶಸ್ವಿಯಾಯಿತು.

ಬೆಳಗಾಂ ವಿಭಾಗದ ೫೭ ವಿಧಾನಸಭಾ ಕ್ಷೇತ್ರಗಳಲ್ಲಿ ಜನತಾ ಪಕ್ಷ ೧೭ ಸ್ಥಾನಗಳಲ್ಲಿ ಮಾತ್ರ ಜಯ ಪಡೆಯಿತು. ಇನ್ನುಳಿದಂತೆ ೨೬ ಸ್ಥಾನಗಳು ಕಾಂಗ್ರೆ ಪಾಲಾಯಿತು. ಉತ್ತರ ಕನ್ನಡ ಜಿಲ್ಲೆಯ ೬ ಸ್ಥಾನಗಳಲ್ಲಿ ಜನತಾ ಪಕ್ಷಕ್ಕೆ ೩ ಸ್ಥಾನಗಳು ದೊರಕಿತು. ಧಾರವಾಡ ಜಿಲ್ಲೆಯ ೧೮ ವಿಧಾನಸಭಾ ಕ್ಷೇತ್ರಗಳಲ್ಲಿ ೫ ಸ್ಥಾನಗಳನ್ನು ಮಾತ್ರ ಜನತಾ ಪಕ್ಷ ತನ್ನದಾಗಿಸಿಕೊಂಡಿತು. ಬಿಜಾಪುರ ಜಿಲ್ಲೆಯ ೧೫ ಸ್ಥಾನಗಳ ಪೈಕಿ ಕೇವಲ ೪ ಸ್ಥಾನಗಳು ಜನತಾ ಪಕ್ಷಕ್ಕೆ ದೊರೆಯಿತು. ಧಾರವಾಡ, ಬೆಳಗಾವಿ ಬಿಜಾಪುರ ಜಿಲ್ಲೆಗಳಲ್ಲಿ ಕಾಂಗ್ರೆಸ್ ಪಕ್ಷ ಮೇಲುಗೈ ಸಾಧಿಸಿತು. ಜನತಾ ಪಕ್ಷ ಈ ಚುನಾವಣೆಯಲ್ಲಿ ೫ ಮಹಿಳಾ ಅಭ್ಯರ್ಥಿಗಳನ್ನು ನಿಲ್ಲಿಸಿತು. ಅದರಲ್ಲಿ ಶ್ರೀಮತಿ ಚಂದ್ರಪ್ರಭಾ ಅರಸು ಅವರು ಮಾತ್ರ ಜನತಾ ಪಕ್ಷದಿಂದ ಆಯ್ಕೆಯಾದ ಮಹಿಳಾ ಅಭ್ಯರ್ಥಿಯಾಗಿದ್ದರು.

## ಜನತಾ ಪಕ್ಷದಿಂದ ಗೆದ್ದ ಪ್ರಮುಖ ನಾಯಕರು

ಬೀದರ್ ಜಿಲ್ಲೆಯ ಬಸವ ಕಲ್ಯಾಣದಿಂದ ಜನತಾ ಪಕ್ಷದಿಂದ ಗೆದ್ದ ಏಕೈಕ ಅಭ್ಯರ್ಥಿ ಬಸವರಾಜ ಶೇಖರಪ್ಪ ಪಾಟೀಲ್. ಶೇ. ೪೪.೪೦ ರಷ್ಟು ಮತಗಳಿಸಿದ ಬಸವರಾಜ ಶೇಖರಪ್ಪ ಪಾಟೀಲರು. ೨೭.೯೪೪ ಮತ ಗಳಿಸಿದ್ದರು. ಜನತಾ ಪಕ್ಷ ಬೀದರ್ ಜಿಲ್ಲೆಯಲ್ಲಿ ತನ್ನ ನೆಲೆಯನ್ನು ಈ ಗೆಲುವಿನ ಮೂಲಕ ಸ್ಥಾಪಿಸಿತು. ಗುಲ್ಬರ್ಗ ಜಿಲ್ಲೆಯ ಆಳಂದದಲ್ಲಿ ಜನತಾ ಪಕ್ಷದ ಬಿ. ಆರ್. ಪಾಟೀಲ್ ಅವರು ೧೯,೫೦೧ ಮತಗಳಿಸಿದ್ದರು. ಅಂದರೆ ಅವರು ಶೇ ೪೪.೯೩ರಷ್ಟು ಮತಗಳಿಸಿ ವಿಜೇತರಾದರು. ಗುಲ್ಬರ್ಗದ ಎಸ್. ಕೆ. ಕಾಂತ ಅವರು ೨೫,೫೦೩ ಮತಗಳನ್ನು ಅಂದರೆ ಶೇ. ೩೬.೭೯ರಷ್ಟು ಮತ ಗಳಿಸಿದ್ದರು. ಅವರ ಸಮೀಪದ ಸ್ಪರ್ಧಿ ಸ್ವತಂತ್ರ ಅಭ್ಯರ್ಥಿ ಖಮರುಲ್ ಇಸ್ಲಾಂ ೨೩,೫೧೫ ಮತಗಳಿಸಿದ್ದರು. ಯಾದಗೀರ ವಿಧಾನಸಭಾ ಕ್ಷೇತ್ರದಿಂದ ವಿಶ್ವನಾಥರೆಡ್ಡಿ ಮುದ್ನಾಳ್ ಜಯಶೀಲರಾದರು. ಅಫಜಲ್ಪುರದಿಂದ ಹನುಮಂತರಾವ್ ದೇಸಾಯಿ ಅವರು ೨೪,೬೮೮ ಮತಗಳಿಸಿ ಆಯ್ಕೆಯಾದರು. ನೇರ ಸ್ಪರ್ಧೆಯಲ್ಲಿ ಜನತಾ ಪಕ್ಷದ ಬಾಪೂಗೌಡ ದರ್ಶನಾಪೂರ ಅವರು ೩೧,೦೮೯ ಮತಗಳಿಸಿ ಷಹಾಪುರದಿಂದ ಆಯ್ಕೆಯಾದರು. ಗುಲ್ಬರ್ಗ ಜಿಲ್ಲೆಯಿಂದ ಈ ಐದು ಜನ ಅಭ್ಯರ್ಥಿಗಳು ಜನತಾ ಪಕ್ಷದಿಂದ ಗೆದ್ದ ಪ್ರಮುಖ ನಾಯಕರಾಗಿದ್ದಾರೆ.

ರಾಯಚೂರು ವಿಧಾನಸಭಾ ಕ್ಷೇತ್ರದಿಂದ ಸಂಗಮೇಶ್ ಸರ್ದಾರ್ ಅವರು ೨೪,೭೭೭ ಮತ ಗಳಿಸಿ ಆಯ್ಕೆಯಾಗಿದ್ದರು. ಅವರು ಶೇ. ೫೩.೪೪ ರಷ್ಟು ಮತ ಪಡೆದಿದ್ದರು. ಬಳ್ಳಾರಿ ಜಿಲ್ಲೆಯ ಕೊಟ್ಟೂರು ವಿಧಾನಸಭಾ ಕ್ಷೇತ್ರದಿಂದ ಬಿ. ಎಸ್. ವೀರಭದ್ರಪ್ಪ ಅವರು ಸಚಿವರಾಗಿದ್ದ ಕಾಂಗ್ರೆನ ಎಂ.ಜೆ.ಎಂ. ಸದ್ಯೋಜಾತಪ್ಪ ಅವರನ್ನು ಸೋಲಿಸಿ ೧೩,೯೩೨ ಮತಗಳ ಅಂತರದಿಂದ ಆಯ್ಕೆಯಾದರು. ಹಡಗಲಿ ಕ್ಷೇತ್ರದಿಂದ ಎಂ. ಪಿ. ಪ್ರಕಾಶ್ ಅವರು ೩೬,೭೪೦ ಮತ ಪಡೆದು ಕಾಂಗ್ರೆಸ್ ವಿರುದ್ಧ ೧೫,೦೨೧ ಮತಗಳಿಂದ ಆಯ್ಕೆಯಾದರು. ಚಿತ್ರದುರ್ಗ ಜಿಲ್ಲೆಯ ಹರಿಹರ ಕ್ಷೇತ್ರದಿಂದ ಜನತಾ ಪಕ್ಷದ ಕೆ. ಮಲ್ಲಪ್ಪ ಅವರು ೪೩,೧೯೬ ಮತಗಳನ್ನು ಪಡೆದು ಕಾಂಗ್ರೆಸ್‌ನ ಹೆಚ್. ಶಿವಪ್ಪ ಅವರನ್ನು ೧೩ ಸಾವಿರಕ್ಕೂ ಹೆಚ್ಚು ಮತಗಳ ಅಂತರದಿಂದ ಸೋಲಿಸಿ ಗೆಲುವು ಸ್ಥಾಪಿಸಿದರು. ಅದೇ ಜಿಲ್ಲೆಯ ಭರಮ ಸಾಗರ, ಕ್ಷೇತ್ರದಿಂದ ಕೆ. ಶಿವಮೂರ್ತಿ ಅವರು ೩೫, ೧೬೩ ಮತಗಳಿಸಿ ೧೫.೬೨೩ ಮತಗಳ ಅಂತರದಿಂದ ಜಯಗಳಿಸಿದರು. ಚಿತ್ರದುರ್ಗ ಕ್ಷೇತ್ರದಿಂದ ಜನತಾ ಪಕ್ಷದ ಬಿ.ಎಲ್. ಗೌಡ ಅವರು ೩೩,೫೭೬ ಮತ ಪಡೆದು ವಿಜಯಶಾಲಿಗಳಾದರು. ಕಾಂಗ್ರೆಸ್‌ನ ವಿ. ಮುನಿಯಪ್ಪ ಅವರು ೧೭,೫೧೩ ರಷ್ಟು ಮತ ಪಡೆದರು. ಹೊಸದುರ್ಗದಲ್ಲಿ ಜಿ. ಬಸಪ್ಪನವರು ೩೯,೮೭೭ ಮತ ಪಡೆದು ಕಾಂಗ್ರೆಸ್‌ನ ಎಂ. ವಿ. ರುದ್ರಪ್ಪ ಅವರನ್ನು ೧೧,೮೬೪ ಮತಗಳ ಅಂತರದಿಂದ ಸೋಲಿಸಿದರು.

ತುಮಕೂರು ಜಿಲ್ಲೆಯ ಮಧುಗಿರಿ ಕ್ಷೇತ್ರದಿಂದ ಜನತಾ ಪಕ್ಷದ ರಾಜವರ್ಧನ್ ೨೯,೧೫೯ ಮತಗಳನ್ನು ಗಳಿಸಿ ಗಂಗಹನುಮಯ್ಯ ಅವರನ್ನು ಕೇವಲ ೬೭೬ ಮತಗಳ ಅಂತರದಿಂದ ಸೋಲಿಸಿಧರು. ಕೊರಟಗೆರೆ ಕ್ಷೇತ್ರದಿಂದ ಸಿ. ವೀರಣ್ಣ ಅವರು ೩೭,೧೩೯ ಮತಗಳನ್ನು ಗಳಿಸಿ ೧೩ ಸಾವಿರಕ್ಕೂ ಹೆಚ್ಚಿನ ಮತದಿಂದ ಕಾಂಗ್ರೆಸ್ ಪಕ್ಷವನ್ನು ಸೋಲಿಸಿದರು. ತುಮಕೂರು ಲಕ್ಷ್ಮೀನರಸಿಂಹಯ್ಯ ಅವರು ೩೭,೧೩೯ ಮತಗಳನ್ನು ಗಳಿಸಿ ಕಾಂಗ್ರೆಸ್(ಐ) ಷಫೀ ಅಹಮದ್ ಅವರನ್ನು ೧೦ ಸಾವಿರ ಮತಗಳ ಅಂತರದಿಂದ ಸೋಲಿಸಿದರು. ಕುಣಿಗಲ್ ಕ್ಷೇತ್ರದಿಂದ ವೈ.ಕೆ. ರಾಮಯ್ಯ ಅವರು ೩೪,೧೯೮(ಶೇ ೫೮.೫೬) ಮತಗಳಿಸಿ ೧೨,೩೯೯ ಮತಗಳ ಅಂತರದಿಂದ ಕಾಂಗ್ರೆಸ್ (ಐ) ರುದ್ರಯ್ಯ ಅವರನ್ನು ಸೋಲಿಸಿದರು. ಕೋಲಾರ ಜಿಲ್ಲೆಯ ಕೋಲಾರ ಕ್ಷೇತ್ರದಿಂದ ಕೆ. ಆರ್. ಶ್ರೀನಿವಾಸಯ್ಯ ಅವರು ೩೯,೦.೦೫೫ (ಶೇ ೬೪.೮೮) ಮತ ಗಳಿಸಿ ೧೯,೨೫೦ ಮತಗಳ ಅಂತರದಿಂದ ಕಾಂಗ್ರೆ ಪ್ರತಿಸ್ಪರ್ಧಿಯನ್ನು ಸೋಲಿಸಿದರು. ವೇಮಗಲ್ ಕ್ಷೇತ್ರದಿಂದ ಸ್ವತಂತ್ರ ಅಭ್ಯರ್ಥಿ ಜನತಾ ಪಕ್ಷದ ಬೆಂಬಲ ಪಡೆದಿದ್ದ ಸಿ. ಬೈರೇಗೌಡ ಅವರು ೩೩,೯೦೭ ಮತಗಳ ಅಂತರದಿಂದ ಕಾಂಗ್ರೆಸ್ ಪಕ್ಷವನ್ನು ಸೋಲಿಸಿದರು.

ಬೆಂಗಳೂರು ನಗರ ಜಿಲ್ಲೆಯ ಜನತಾ ಪಕ್ಷ ಸಂಪೂರ್ಣ ಬೆಂಬಲ ಕೊಟ್ಟ ಜಿಲ್ಲೆ. ಚಿಕ್ಕಪೇಟೆ ಕ್ಷೇತ್ರದಿಂದ ಪ್ರೊ। ಎ. ಲಕ್ಷ್ಮೀಸಾಗರ್, ಬಸವನಗುಡಿಯಿಂದ ಡಾ। ಹೆಚ್.ಎಲ್. ತಿಮ್ಮೇಗೌಡ, ಜಯನಗರದಿಂದ ಎಂ. ಚಂದ್ರಶೇಖರ್, ಶಾಂತಿನಗರದಿಂದ ಪಿ.ಡಿ. ಗೋವಿಂದರಾಜು, ಶಿವಾಜಿನಗರದಿಂದ ಎಂ. ರಘುಪತಿ, ಜಯಮಹಲ್‌ನಿಂದ ಡಾ। ಜೀವರಾಜ ಆಳ್ವ, ಭಾರತೀನಗರದಿಂದ ಮೈಕೇಲ್ ಫರ್ನಾಂಡೀಸ್, ಯಲಹಂಕ ಕ್ಷೇತ್ರದಿಂದ ಎ. ಶ್ರೀನಿವಾಸ್, ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ಪಿ.ಜಿ.ಆರ್, ಸಿಂಧ್ಯ, ಚನ್ನಪಟ್ಟಣದಿಂದ ಎಂ. ವರದೇಗೌಡ, ದೊಡ್ಡಬಳ್ಳಾಪುರದಿಂದ ಆರ್. ಎಲ್. ಜಾಲಪ್ಪ ಮೊದಲಾದವರು ಈ ಕಾಲದಲ್ಲಿ ವಿಧಾನಸಭೆ ಪ್ರವೇಶಿಸಿದರು. ಬಸನಗುಡಿ ಕ್ಷೇತ್ರದಲ್ಲಿ ಬಿಜೆಪಿ-ಜನತಾ ಪಕ್ಷಕ್ಕೆ ನೇರ ಹಣಾಹಣಿ ನಡೆಯಿತು. ಉಳಿದೆಡೆ ಕಾಂಗ್ರೆಸ್-ಜನತಾ ಪಕ್ಷಗಳ ನಡುವೆ ಹೋರಾಟ ನಡೆದಿತ್ತು.

ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ಕ್ಷೇತ್ರದಿಂದ ಜೆ.ಹೆಚ್. ಪಟೇಲ್, ಹೊಳೆಹೊನ್ನೂರು ಕ್ಷೇತ್ರದಿಂದ ಜಿ. ಬಸವಣ್ಣೆಪ್ಪ, ತೀರ್ಥಹಳ್ಳಿಯಿಂದ ಡಿ. ಬಿ. ಚಂದ್ರೇಗೌಡ ಹಾಗೂ ಸೊರಬ ಕ್ಷೇತ್ರದಿಂದ ಎಸ್. ಬಂಗಾರಪ್ಪ ಅವರುಗಳು ಜನತಾಪಕ್ಷದಿಂದ ಆಯ್ಕೆಯಾದರು. ಮೈಸೂರು ಜಿಲ್ಲೆಯಿಂದ ಕೊಳ್ಳೇಗಾಲದ ಬಿ. ಬಸವಯ್ಯ, ನರಸಿಂಹರಾಜ ಕ್ಷೇತ್ರದಿಂದ ಅಜೀಜ್ ಸೇಠ್, ಚಾಮುಂಡೇಶ್ವರಿ ಕ್ಷೇತ್ರದಿಂದ ಜನತಾ ಪಕ್ಷದ ಬೆಂಬಲಿತ ಅಭ್ಯರ್ಥಿ ಸಿದ್ದರಾಮಯ್ಯ, ಸಂತೇಮಾರನಹಳ್ಳಿಯಿಂದ ಬಿ. ರಾಚಯ್ಯ ಹಾಗೂ ಹುಣಸೂರು ಕ್ಷೇತ್ರದಿಂದ ಆಯ್ಕೆಯಾದ ಏಕೈಕ ಮಹಿಳಾ ಅಭ್ಯರ್ಥಿ ಶ್ರೀಮತಿ ಚಂದ್ರಪ್ರಭಾ ಅರಸು ಅವರು ಈ ಕಾಲದಲ್ಲಿ ಗೆದ್ದ ಪ್ರಮುಖ ವಿಧಾನಸಭಾ ಸದಸ್ಯರು. ಮಂಡ್ಯ ಜಿಲ್ಲೆ ಮಳವಳ್ಳಿಯಿಂದ ಬಿ. ಸೋಮಶೇಖರ್, ಶ್ರೀರಂಗಪಟ್ಟಣದಿಂದ ಬಂಡಿಸಿದ್ಧೇಗೌಡ ಅವರು ಜನತಾ ಪಕ್ಷದಿಂದ ಆಯ್ಕೆಯಾಗಿದ್ದರು. ಕೊಡಗು ಜಿಲ್ಲೆಯ ಸೋಮವಾರಪೇಟೆ ಕ್ಷೇತ್ರದಲ್ಲಿ ಪಕ್ಷದ ಬಿ. ಎ. ಜೀವಿಜಯ ಅವರು ೩೧,೫೪೪ ಮತಗಳನ್ನು ಪಡೆದರು. ಶೇ. ೫೭.೬೪ ಮತ ಗಳಿಸಿದ್ದರು. ಕಾಂಗ್ರೆಸ್ ಪಕ್ಷದಿಂದ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಆರ್. ಗುಂಡೂರಾವ್ ಅವರು ೨೬,೧೬೭ (ಶೇ. ೪೩.೬೭) ಮತಗಳನ್ನು ಪಡೆದು ಸೋಲನ್ನುಂಡರು. ಹೊಳೆನರಸೀಪುರದಿಂದ ಹೆಚ್. ಡಿ. ದೇವೇಗೌಡ, ಬೇಲೂರು ಮೀಸಲು ಕ್ಷೇತ್ರದಿಂದ ಡಿ. ಮಲ್ಲೇಶ್, ಅರಕಲಗೂಡು ಕ್ಷೇತ್ರದಿಂದ ಕೆ. ಬಿ. ಮಲ್ಲಪ್ಪ, ಹಾಸನದಿಂದ ಬಿ.ವಿ. ಕರೀಗೌಡ ಅವರು ಜನತಾ ಪಕ್ಷದಿಂದ ಆಯ್ಕೆಯಾಗಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯಿಂದ ಸುರತ್ಕಲ್ ಕ್ಷೇತ್ರದಿಂದ ಜನತಾ ಪಕ್ಷದ ಮೂಲಕ ಲೋಕಯ್ಯಶೆಟ್ಟಿ ಹಾಗೂ ಬೈಂದೂರು ಕ್ಷೇತ್ರದಿಂದ ಅಪ್ಪಣ್ಣ ಹೆಗಡೆ ಅವರುಗಳು ಆಯ್ಕೆಯಾಗಿದ್ದರು. ಮೂಡಬಿದರೆ ಕ್ಷೇತ್ರದಿಂದ ಅಮರನಾಥ ಶೆಟ್ಟಿ ಅವರು ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯನ್ನು ಸೋಲಿಸಿ ವಿಧಾನಸಭೆ ಪ್ರವೇಶಿಸಿದರು. ಚಿಕ್ಕಮಗಳೂರು ಜಿಲ್ಲೆ ಶೃಂಗೇರಿ ಕ್ಷೇತ್ರದಿಂದ ಜನತಾ ಪಕ್ಷದ ಮೂಲಕ ಹೆಚ್. ಜಿ. ಗೋವಿಂದಗೌಡ ಶೇಕಡಾ ೫೪.೬೭ ರಷ್ಟು ಮತಗಳಿಸಿ ಸಚಿವರಾಗಿದ್ದ ಬೇಗಾನೆ ರಾಮಯ್ಯ ಅವರನ್ನು ಸೋಲಿಸಿ ವಿಧಾನಸಭೆ ಪ್ರವೇಶಿಸಿದರು. ಮೂಡಿಗೆರೆ ಮೀಸಲು ಕ್ಷೇತ್ರದಿಂದ ಪಿ. ತಿಪ್ಪಯ್ಯ ಅವರು ೨೦,೮೩೦ ಮತಗಳನ್ನು ಪಡೆದು ಕಾಂಗ್ರೆಸ್‌ನ ಶ್ರೀಮತಿ ಮೋಟಮ್ಮ ಅವರನ್ನು ೭೧೯ ಮತಗಳ ಅಂತರದಿಂದ ಸೋಲಿಸಿದರು. ಬೀರೂರು ಕ್ಷೇತ್ರದಿಂದ ಎಸ್. ಆರ್. ಲಕ್ಷ್ಮಯ್ಯ ಅವರು ಕಾಂಗ್ರೆಸ್‌ನ ಮಲ್ಲಿಕಾರ್ಜುನ ಪ್ರಸನ್ನ ಅವರನ್ನು ೫೪೦ ಮತಗಳ ಅಂತರದಿಂದ ಸೋಲಿಸಿದರು. ಉತ್ತರ ಕನ್ನಡ ಜಿಲ್ಲೆಯ ಹಳಿಯಾಳದಿಂದ ಆರ್. ವಿ. ದೇಶಪಾಂಡೆ ಅವರು ಕಾಂಗ್ರೆಸ್‌ನ ವಿರೂಪಕ್ಷಪ್ಪ ಮಲ್ಲಪ್ಪ ಅವರನ್ನು ೧೨,೮೩೧ ಮತಗಳ ಅಂತರದಿಂದ ಸೋಲಿಸಿದರು. ಸಿರಸಿ ಮೀಸಲು ಕ್ಷೇತ್ರದಿಂದ ಗೋಪಾಲ ಮುಕುಂದ ಕಾನಡೆ ಅವರು ೨೩,೫೪೦ ಮತಗಳಿಸಿ ಜನತಾ ಪಕ್ಷದ ಮೂಲಕ ಆಯ್ಕೆಯಾದರು.

ಧಾರವಾಡ ಜಿಲ್ಲೆಯ ಹುಬ್ಬಳ್ಳಿ ಗ್ರಾಮೀಣ ಕ್ಷೇತ್ರದಿಂದ ಜನತಾ ಪಕ್ಷದ ಎಸ್. ಆರ್. ಬೊಮ್ಮಾಯಿ ಅವರು ೩೧,೬೪೪ ಮತಗಳಿಸಿ ಕಾಂಗ್ರೆಸ್‌ನ ವಾಲಿ ರಾಚಪ್ಪ ಗಂಗಪ್ಪ ಅವರನ್ನು ಸೋಲಿಸಿದರು. ರೋಣ ಮತಕ್ಷೇತ್ರದಿಂದ ದೊಡ್ಡಮೇಟಿ ಜ್ಞಾನದೇವ ಅವರು ೩೧,೭೨೧ ಮತಗಳಿಸಿ ಜನತಾ ಪಕ್ಷದ ಮೂಲಕ ಆಯ್ಕೆಯಾದರು. ನರಗುಂದ ವಿಧಾನಸಭಾ ಕ್ಷೇತ್ರದಿಂದ ಬಿ. ಆರ್. ಯಾವಗಲ್ ಅವರು ೨೨,೬೭೫(ಶೇ. ೫೫.೦೨) ಮತಗಳಿಸಿದರೆ, ಕಾಂಗ್ರೆಸ್‌ನ ಬಿ. ಆರ್. ಪಾಟೀಲ್ ಅವರು ೧೬,೧೫೦ ಮತಗಳನ್ನು ಮಾತ್ರ ಗಳಿಸಿದರು. ಬೆಳಗಾಂ ಜಿಲ್ಲೆಯ ಕಿತ್ತೂರು ಕ್ಷೇತ್ರದಿಂದ ಜಯಗಳಿಸಿದ ಡಿ. ಬಿ. ಇನಾಂದಾರ್ ಅವರು ೩೪,೮೫೦ ಮತಗಳಿಸಿ ಕಾಂಗ್ರೆಸ್, ಎಂ. ಎಸ್. ನಾಗನೂರು ಅವರನ್ನು ಸೋಲಿಸಿದರು. ಇವರ ಗೆಲುವಿನ ಅಂತರ ೯,೯೬೭ ಮತಗಳು. ರಾಜ್ಯದ ಎರಡನೆಯ ಗೋಕಾಕ್ ಮೀಸಲು ಕ್ಷೇತ್ರದಿಂದ ಎಂ. ಎಸ್. ಲಕ್ಷ್ಮಣ್ ಅವರು ೨೬,೨೫೮ ಮತಗಳನ್ನು ಪಡೆದು ಎಲ್. ಎಸ್. ನಾಯಕ್ ಅವರನ್ನು ಸೋಲಿಸಿದರು. ಚಿಕ್ಕೋಡಿ ಮೀಸಲು ಕ್ಷೇತ್ರದಿಂದ ಪಿ. ಪಿ. ಹೆಗ್ಗರೆ ಅವರು ೨೨,೫೮೬ ಮತಗಳಿಸಿ ಕಾಂಗ್ರೆಸ ಚಿಕ್ಕೋಡಿ ಸಿದ್ರಾಮ ದುಂಡಪ್ಪ ಅವರನ್ನು ೬೧೯ ಮತಗಳಿಂದ ಸೋಲಿಸಿದರು. ರಾಯಬಾಗ್ ಕ್ಷೇತ್ರದಿಂದ ಎಸ್. ಎಸ್. ಕಾಂಬಳೆ, ಕಾಗವಾಡ ಕ್ಷೇತ್ರದಿಂದ ವಿ. ಎಲ್. ಪಾಟೀಲ್ ಜನತಾ ಪಕ್ಷದಿಂದ ಆಯ್ಕೆಯಾದರು.

ಬಿಜಾಪುರ ಜಿಲ್ಲೆಯ ಜಮಖಂಡಿ ಕ್ಷೇತ್ರದಿಂದ ಜಿ. ಎಸ್. ಬಾಗಲಕೋಟೆ, ಹುನುಗುಂದ ಕ್ಷೇತ್ರದಿಂದ ಕಡಪಟ್ಟಿ ಶಿವಸಂಗಪ್ಪ, ಮುದೇಬಿಹಾಳ ಕ್ಷೇತ್ರದಿಂದ ಜಿ. ಎಸ್. ದೇಶಮುಖ್ ಹಾಗೂ ಬಳ್ಳೊಳ್ಳಿ ಮೀಸಲು ಕ್ಷೇತ್ರದಿಂದ ರಮೇಶ ಜಿಗಜಿಣಗಿ ಅವರು ಆಯ್ಕೆಯಾಗಿದ್ದರು.

## ೧೯೮೪ - ಲೋಕಸಭಾ ಚುನಾವಣೆ

೧೯೮೩ ರಲ್ಲಿ ಜನತಾ ಪಕ್ಷ ರಾಜ್ಯದಲ್ಲಿ ಅಧಿಕಾರ ಸೂತ್ರ ಹಿಡಿಯಿತಷ್ಟೇ. ಅಲ್ಪ ಬಹುಮತದ ಜನತಾಪಕ್ಷದ ಸರ್ಕಾರವನ್ನು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರು ಅತ್ಯಂತ ಚಾಣಾಕ್ಷತನದಿಂದ ನಡೆಸಿಕೊಂಡು ಹೋಗುತ್ತಿದ್ದರು. ೧೯೮೪ರ ಅಕ್ಟೋಬರ್ ೩೦ ರಂದು ಪ್ರಧಾನಮಂತ್ರಿ ಶ್ರೀಮತಿ ಇಂದಿರಾ ಗಾಂಧಿ ಅವರ ತಮ್ಮ ಅಂಗರಕ್ಷಕರಿಂದಲೆ ಕೊಲೆಗೀಡಾದರು. ಸಹಜವಾಗಿ ಅವರ ಮಗ ರಾಜೀವಗಾಂಧಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ದೇಶದ ಪ್ರಧಾನಿಯಾದರು.

ಲೋಕಸಭೆಗೆ ರಾಜೀವಗಾಂಧಿಯವರ ನೇತೃತ್ವದಲ್ಲಿ ೩೧.೧೨.೧೯೮೪ರಂದು ಚುನಾವಣೆ ನಡೆಯಿತು. ದೇಶದೆಲ್ಲೆಡೆ ಇಂದಿರಾಗಾಂಧಿ ಅವರ ಸಾವಿನಿಂದಾಗಿ ಭಾರೀ ಅನುಕಂಪದ ಅಲೆ ಕಾಂಗ್ರೆ ಪರವಾಗಿತ್ತು. ಕರ್ನಾಟಕದಲ್ಲಾದರೂ ರಾಮಕೃಷ್ಣ ಹೆಗಡೆ ಅವರ ನೇತೃತ್ವದ ಜನತಾ ಪಕ್ಷ ತನ್ನ ಒಂದೂವರೆ ವರ್ಷದ ಸಾಧನೆಯನ್ನು ಜನತೆಯ ಮುಂದಿಟ್ಟು ಮತ ಯಾಚಿಸಿತು. ಜನತಾ ಪಕ್ಷ ಎಷ್ಟೇ ಪ್ರಭಾವಶಾಲಿಯಾಗಿ ಚುನಾವಣಾ ಪ್ರಚಾರ ಕೈಗೊಂಡಾಗ್ಯೂ ಕಾಂಗ್ರೆಸ್ ಪಕ್ಷದ ಪರವಾದ ಪ್ರಚಂಡ ಅಲೆಯ ಎದುರು ನಿಲ್ಲಲಾಗಲಿಲ್ಲ. ಜನತಾ ಪಕ್ಷ ರಾಜ್ಯದಲ್ಲಿ ಕೇವಲ ೪ ಲೋಕಸಭಾ ಕ್ಷೇತ್ರದ ಸ್ಥಾನಗಳನ್ನು ಗೆಲ್ಲಲು ಸಫಲವಾಯಿತು. ಮಂಡ್ಯದಿಂದ ಕೆ.ವಿ. ಶಂಕರಗೌಡ, ಬೆಂಗಳೂರು ಕ್ಷೇತ್ರದಿಂದ ವಿ. ಎಸ್. ಕೃಷ್ಣ ಅಯ್ಯರ್, ಬಿಜಾಪುರ ಕ್ಷೇತ್ರದಿಂದ ಎಸ್. ಎಂ. ಗುರೆಡ್ಡಿ ಹಾಗೂ ಕೋಲಾರದಿಂದ ಡಾ। ವೆಂಕಟೇಶ್ ಅವರುಗಳು ಜನತಾ ಪಕ್ಷದ ಮೂಲಕ ಲೋಕಸಭೆ ಪ್ರವೇಶಿಸಿದರು. ಜನತಾ ಪಕ್ಷದ ಈ ಸೋಲಿನ ನೈತಿಕ ಹೊಣೆ ಹೊತ್ತು ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರು ವಿಧಾನಸಭೆ ವಿಸರ್ಜಿಸಿ ಮತ್ತೆ ಜನಾದೇಶ ಪಡೆಯಲು ಸಂಕಲ್ಪಿಸಿದರು. ಇದೇ ೧೯೮೫ರ ವಿಧಾನಸಭಾ ಚುನಾವಣೆಗೆ ಕಾರಣವಾದ ಅಂಶ.

## ೧೯೮೫ - ವಿಧಾನಸಭಾ ಚುನಾವಣೆ

೧೯೮೫ರ ಕರ್ನಾಟಕ ವಿಧಾನಸಭೆ ಚುನಾವಣೆ ರಾಜ್ಯ ರಾಜಕೀಯ ದೃಷ್ಟಿಯಿಂದ ಅತ್ಯಂತ ಗಮನಾರ್ಹವಾದುದು. ಜನತಾ ಪಕ್ಷ ಹಾಗೂ ಕರ್ನಾಟಕ ಕ್ರಾಂತಿರಂಗ ಒಟ್ಟುಗೂಡಿ ಚುನಾವಣೆ ಎದುರಿಸಿದ್ದರೂ, ಅನಂತರ ಜನತಾ ಪಕ್ಷದ ಸರ್ಕಾರವೆಂದೇ ಅದು ಜನಪ್ರಿಯತೆ ಪಡೆದಿತ್ತು. ೧೯೮೪ರಲ್ಲಿ ಶ್ರೀಮತಿ ಇಂದಿರಾ ಗಾಂಧಿ ಅವರ ಕಗ್ಗೊಲೆಯಿಂದಾಗಿ ಹಿಂದೆಂದೂ ಕಾಣದಷ್ಟು ಬಹುಮತವನ್ನು ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಡೆಯಿತು. ಕರ್ನಾಟಕದಲ್ಲಿ ಕೇವಲ ೪ ಸ್ಥಾನಗಳನ್ನು ಮಾತ್ರ ಜನತಾ ಪಕ್ಷ ಪಡೆಯಲು ಸಾಧ್ಯವಾಯಿತು. ಅಂದಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರು ಲೋಕಸಭಾ ಚುನಾವಣೆಯಲ್ಲಿ ಪಕ್ಷದ ಹೀನಾಯ ಸೋಲಿನ ಹೊಣೆ ಹೊತ್ತು ರಾಜೀನಾಮೆ ಕೊಟ್ಟರು. ಕೇವಲ ಎರಡು ತಿಂಗಳ ಅವಧಿಯಲ್ಲಿ ಮತ್ತೆ ಚುನಾವಣೆ ಎದುರಿಸಬೇಕಾಯಿತು. ಆಗ ಕರ್ನಾಟಕದ ವಿಧಾನಸಭೆಗೆ ಮಧ್ಯಕಾಲೀನ ಚುನಾವಣೆ ನಡೆಯಿತು. ಈ ಸಂದರ್ಭದ ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆ ವಿಶಿಷ್ಟ ರೀತಿಯಲ್ಲಿದೆ, ಎರಡು ವರ್ಷದ ಸಾಧನೆ ಹಾಗೂ ಮುಂದೆ ಮಾಡಬಹುದಾದ ಕಾರ್ಯಕ್ರಮಗಳ ಭರವಸೆಯನ್ನು ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆಯಲ್ಲಿ ಕೊಡಲಾಗಿದೆ. ಚುನಾವಣಾ ಪ್ರಣಾಳಿಕೆಯ ಪ್ರಾರಂಭದಲ್ಲಿ ಅದು ಹೇಳುವ ಮಾತುಗಳಲ್ಲೇ ಅದರ ದೃಷ್ಟಿ ಕೋನವನ್ನು ತಿಳಿಯಬಹುದು.

''ಎರಡು ವರ್ಷಗಳ ಕಾಲ ಅಧಿಕಾರ ನೀಡಿದ ಕರ್ನಾಟಕದ ಮಹಾಜನತೆಗೆ ನಾವು ಕೃತಜ್ಞರು. ಜನತಾ ಪಕ್ಷದ ವಿಜಯದ ಹಿಂದೆ ಹೋರಾಡುವ ರೈತರಿದ್ದರು. ಕನ್ನಡ ಭಾಷೆಗೆ ಈ ನಾಡಿನಲ್ಲಿ ಆದ್ಯತೆ ದೊರೆಯಬೇಕೆಂಬ ನಿಷ್ಠಾವಂತ ಚಳುವಳಿಗಾರರಿದ್ದರು. ನಿತ್ಯ ಜೀವನವನ್ನು ಕಲುಷಿತಗೊಳಿಸುವ ಭ್ರಷ್ಟಾಚಾರವನ್ನು ಕೊನೆಗಾಣಿಸಿಬೇಕೆಂಬ ಆದರ್ಶ ನಿಲುವಿನ ಯುವಕರಿದ್ದರು. ಮರ್ಯಾದೆಯಿಂದ ಬಾಳುವ ಸಾಮಾನ್ಯ ಗೃಹಸ್ಥರು, ಗೃಹಿಣಿಯರಿದ್ದರು'' ಹೀಗೆ ಚುನಾವಣಾ ಪ್ರಣಾಳಿಕೆಯ ಮೂಲಕವೇ ಜನತೆಯನ್ನು ಸೆಳೆದುಕೊಳ್ಳುವ ವಿಶಿಷ್ಟ ಪ್ರಯತ್ನ ನಡೆದುದನ್ನು ಗಮನಿಸಬಹುದು. ಎರಡು ವರ್ಷಗಳ ಕಾಲ ಅಧಿಕಾರಕ್ಕೆ ಬರುವ ಮುನ್ನ ನಾವು ನುಡಿದಂತೆ ನಡೆಯುವ ಪ್ರಯತ್ನದಲ್ಲಿ ಎದುರಿಸಬೇಕಾಗಿ ಬಂದ ಅಡ್ಡಿ ಆತಂಕಗಳು ಯಾರನ್ನಾದರೂ ಎದೆಗುಂದಿಸುವಂಥದ್ದಾಗಿತ್ತು. ಕರ್ನಾಟಕ ಜನತೆ ತಾವು ಕೊಟ್ಟ ಮತದ ಪಾವಿತ್ರ್ಯವನ್ನು ಕಣ್ಣಿಟ್ಟು ಕಾದುದರ ಫಲವಾಗಿ ನಮ್ಮಿಂದ ಅಧಿಕಾರವನ್ನು ಏನಕೇನ ಕಸಿದುಕೊಳ್ಳುವ ಪ್ರತಿಪಕ್ಷದ ಹುನ್ನಾರುಗಳು ನಿಷ್ಫಲಗೊಂಡವು. ಅಲ್ಪ ಬಹುಮತ ಹೊಂದಿದ ಜನತಾ ಪಕ್ಷ ಸರ್ಕಾರವನ್ನು ಉಳಿಸಿಕೊಳ್ಳಲು ಅಂದಿನ ನಾಯಕರು ಹೆಣಗಿದ್ದರು. ಅವರ ಈ ಪ್ರಯತ್ನವನ್ನು ಮತದಾರರಿಗೆ ಮುಟ್ಟಿಸುವ ಜವಾಬ್ದಾರಿ ಜನತಾ ಪಕ್ಷದ ಮೇಲಿತ್ತು.'' ಆರ್ಥಿಕ, ಸಾಮಾಜಿಕ ಕಾರ್ಯಕ್ರಮಗಳ ಜೊತೆಗೆ

ಜನತಾಪಕ್ಷದ ಸರ್ಕಾರ ಮೌಲ್ಯಾಧಾರಿತ ರಾಜಕೀಯವನ್ನು ಪುನರುಜ್ಜೀವನ ಮಾಡುತ್ತದೆಂದು ಈ ಪ್ರಣಾಳಿಕೆ ಹೇಳುತ್ತದೆ. ಜನತಾ ಪಕ್ಷದ ಈ ಚುನಾವಣಾ ಪ್ರಣಾಳಿಕೆ ಜನತಾ ಪಕ್ಷ ಸರ್ಕಾರದ ಎರಡು ವರ್ಷಗಳ ಸಾಧನೆಯನ್ನು ಹೇಳಿ ನಂತರ ತಮ್ಮ ಯೋಜನೆಯನ್ನು 'ಭರವಸೆ' ಎಂದು ಪ್ರತ್ಯೇಕವಾಗಿ ಉಲ್ಲೇಖಿಸುತ್ತದೆ. ಎರಡು ವರ್ಷಗಳ ಅವಧಿಯಲ್ಲಿ ಅಧಿಕಾರ ವಿಕೇಂದ್ರೀಕರಣದ ಚಿಂತನೆಯ ಫಲವಾಗಿ ಜಿಲ್ಲಾ ಪರಿಷತ್ ಹಾಗೂ ಮಂಡಲ ಪಂಚಾಯತ್ ಮಸೂದೆಗಳನ್ನು ಎರಡು ಸದನಗಳಲ್ಲೂ ಅಂಗೀಕರಿಸಿ ರಾಷ್ಟ್ರಪತಿಗಳ ಅಂಕಿತಕ್ಕೆ ಕಳುಹಿಸಿ ಕೊಡಲಾಗಿದೆಯೆಂದು ಪ್ರಣಾಳಿಕೆ ಹೇಳುತ್ತದೆ. 'ಅಧಿಕಾರ ಚಲಾವಣೆ ದೆಹಲಿಯಿಂದಲ್ಲ, ಇಲ್ಲಿಂದಲೇ. ಪ್ರತಿ ಗ್ರಾಮದಲ್ಲೂ ಚುನಾಯಿತ ಪ್ರತಿನಿಧಿಯಿದ್ದು ಆತನೇ ಆ ಗ್ರಾಮದ ಜನಹಿತ ಕಾರ್ಯಗಳಿಗೆ ಜವಾಬ್ದಾರ.'

## ಬಾಯಾರಿದ ಜನರಿಗಾಗಿ

ಎರಡು ವರ್ಷಗಳ ಅವಧಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ೩೭,೯೮೫ ಕೊಳವೆ ಬಾವಿ ತೋಡಿಸಲಾಗಿದೆ. ಐದು ವರ್ಷಗಳಲ್ಲಿ ಎರಡು ಸಾವಿರಕ್ಕಿಂತ ಅಧಿಕ ಜನಸಂಖ್ಯೆಯಿರುವ ಪ್ರತಿಹಳ್ಳಿಗೂ ನಲ್ಲಿಗಳ ಮೂಲಕ ನೀರೊದಗಿಸುವ ಗುರಿ ಹೊಂದಲಾಗಿದೆ. ಕಿರು ನೀರು ಸರಬರಾಜು ಯೋಜನೆಯನ್ನು ಅಸ್ತಿತ್ವಕ್ಕೆ ತರಲಾಗುವುದು.

## ಹಳ್ಳಿಯ ಒಟ್ಟು ಹಿತ

ಗ್ರಾಮೀಣ ಉದ್ಯೋಗ ಯೋಜನೆಯ ದೃಢೀಕರಣ ಯೋಜನೆಯಡಿಯಲ್ಲಿ ೮೯ ತಾಲ್ಲೂಕುಗಳಲ್ಲಿ ೩ ಲಕ್ಷ ದುಡಿಮೆಗಾರರಿಗೆ ಕೆಲಸ ಕೊಡಲಾಗುವುದು. ೧೯೮೬ರ ಜನವರಿ ವೇಳೆಗೆ ರಾಜ್ಯದ ೨೭ ಸಾವಿರ ಹಳ್ಳಿಗಳಲ್ಲಿ ಉದ್ಯೋಗ ದೃಢೀಕರಣ ಯೋಜನೆ ಅಸ್ತಿತ್ವಕ್ಕೆ ಬರಲಿದೆಯೆಂಬ ಭರವಸೆ ಕೊಡಲಾಗಿದೆ. ಅಸಂಘಟಿತ ಕಾರ್ಮಿಕರಿಗೆ ಜನತಾ ವಿಮೆ, ಕುಶಲಕರ್ಮಿಗಳಿಗೆ ಹೊಸ ಯೋಜನೆ ಕೊಡಲಾಗಿದೆ. ಗ್ರಾಮೀಣ ಪ್ರವೇಶಕ್ಕೆ ನೈರ್ಮಲ್ಯ ಹಾಗೂ ಒಳಚರಂಡಿ ವ್ಯವಸ್ಥೆ.

## ಕುಟುಂಬದ ಜೀವಾಳವಾದ ಸ್ತ್ರೀ ಶಕ್ತಿ

ಸ್ಥಳೀಯ ಹಾಗೂ ಪ್ರಾಥಮಿಕ ಸಹಕಾರ ಸಂಘಗಳಲ್ಲಿ ಮಹಿಳೆಯರಿಗೆ ಶೇ. ೨೦ರಷ್ಟು ಸ್ಥಾನ ಮೀಸಲಾಗಿರಿಸಲಾಗಿದೆ. ದೇವದಾಸಿ ಪದ್ಧತಿಯ ಶಾಸನಬದ್ಧ ರದ್ದು, ಒಂದೂವರೆ ಲಕ್ಷ ಬಡ ವಿಧವೆಯರಿಗೆ ಪ್ರತಿ ತಿಂಗಳೂ ೫೦ ರೂ ಗಳ ಮಾಶಾಸನ, ಗರ್ಭಿಣಿಯರಿಗೆ ೩ ತಿಂಗಳು ಕೊಡುತ್ತಿರುವ ೩೦೦ ರೂ. ಗಳ ಹೆರಿಗೆ ಭತ್ಯೆಯನ್ನು ೨೧ ಸಾವಿರ ಸ್ತ್ರೀಯರು ಪಡೆದಿದ್ದಾರೆ. ತಾಳಿಭಾಗ್ಯ ಯೋಜನೆ ಅಡಿಯಲ್ಲಿ ಎರಡು ಜನತಾ ಸೀರೆ, ದೋತ್ರ ಹಾಗೂ ಕುಟುಂಬ ಜೀವನಕ್ಕೆ ಬೇಕಾದ ಸಲಕರಣೆಗಳನ್ನು ಒದಗಿಸುವುದು ರಿಯಾಯಿತಿ ದರದಲ್ಲಿ ವಸ್ತ್ರ, ಒಲೆ ಒದಗಿಸುವುದು, ನ್ಯಾಯ ಬೆಲೆ ಅಂಗಡಿಗಳ ಮೂಲಕ ಸೌದೆ ಹಾಗೂ ದನದ ಮೇವು ಮಾರಾಟ.

## ಅಂತ್ಯೋದಯ

೧೯೮೩-೮೪ರಲ್ಲಿ ಪ್ರತಿ ಹಳ್ಳಿಯ ಐದು ಬಡ ಕುಟುಂಬಗಳನ್ನು ಹುಡುಕಿ ಅವರಿಗೆ ಆರ್ಥಿಕ ಸಹಾಯ ನೀಡುವ ಯೋಜನೆಯ ಅನುಷ್ಠಾನ. ಈಗಾಗಲೇ ೧೬ ಸಾವಿರ ಕುಟುಂಬಗಳು ಇದರ ಪ್ರಯೋಜನ ಪಡೆದಿವೆ. ಕುಟಂಬದಲ್ಲಿ ಒಬ್ಬರಿಗಾದರೂ ಉದ್ಯೋಗ. ಬಡವರಿಗೆ ಒಂದು ಲಕ್ಷ ಮನೆ ನಿರ್ಮಾಣ, ಗ್ರಾಮೀಣ ಗೃಹ ನಿರ್ಮಾಣ ಯೋಜನೆಯಡಿಯಲ್ಲಿ ಹಳ್ಳಿಗರಿಗೆ ಮನೆ ರಿಪೇರಿ ಮಾಡಿಕೊಳ್ಳಲು ೨೦ ಸಾವಿರ ರೂ.ಗಳವರೆಗೆ ಸರಳ ಸಾಲ, ತಾಂತ್ರಿಕ ತರಬೇತಿ ಕೊಡಲು ಕೈಗಾರಿಕಾ ಸಂಸ್ಥೆ ಸ್ಥಾಪನೆ.

## ಅಕ್ಷರ ಸೇನೆ

ಶಾಲೆ ಬಿಟ್ಟ ಮಕ್ಕಳಿಗಾಗಿ ೧೧ ಸಾವಿರ ಅಲ್ಪ ಸಮುದಾಯದ ಶಾಲೆ ತೆರೆಯಲಾಗಿದೆ. ೧ ರಿಂದ ೧೦ ನೇ ತರಗತಿವರೆಗಿನ ಎಲ್ಲ ಸರ್ಕಾರಿ ಹಾಗೂ ಸ್ಥಳೀಯ ಸಂಸ್ಥೆಗಳ ಶಾಲಾ ವಿದ್ಯಾರ್ಥಿಗಳಿಗೆ ಉಚಿತ ಪಠ್ಯ ಪುಸ್ತಕ. ಸ್ಥಳೀಯ ಸಂಸ್ಥೆಗಳಲ್ಲಿ ೧ ರಿಂದ ೧೦ ನೆಯ ತರಗತಿ ಓದುತ್ತಿರುವ ವಿದ್ಯಾರ್ಥಿಗಳಿಗೆ ಎರಡು ಜೊತೆ ಸಮವಸ್ತ್ರ ವಿದ್ಯಾರ್ಥಿಗಳಿಗೆ ಪುಸ್ತಕ ಬ್ಯಾಂಕ್, ಜಿಲ್ಲೆಗೊಂದರಂತೆ ಹರಿಜನ ಗಿರಿಜನ ವಿದ್ಯಾರ್ಥಿ ನಿಲಯ. ಪ್ರತಿ ಹಳ್ಳಿಯಲ್ಲೂ ಗ್ರಂಥಾಲಯ ಸ್ಥಾಪಿಸಲಾಗುವುದು.

## ರೈತರ ಏಳಿಗೆ

ರೈತರ ಹಿತಕ್ಕಾಗಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಮಾಡಲಾಗಿದೆ.

- ಬೇಸಾಯದ ಉಪಕರಣಗಳ ಮೇಲಿನ ಮಾರಾಟ ತೆರಿಗೆ ರದ್ದು.

- ಐದು ವರ್ಷ ಹೊಸ ನೀರಾವರಿ ವ್ಯವಸ್ಥೆಗೆ ನೀರಿನ ಕರ ವಿನಾಯಿತಿ.
- ಬಡ್ಡಿ ಮತ್ತು ಸುಸ್ತಿ ಬಡ್ಡಿ ಮನ್ನಾ ಮೂಲಕ ೫೦ ಕೋಟಿ ರೂ. ರೈತರ ಸಮುದಾಯಕ್ಕೆ ಕೊಡುಗೆ.
- ೫.೫ ಕೋಟಿ ರೂ. ಗಳಷ್ಟು ಸಹಕಾರಿ ಸಾಲ ಮನ್ನಾ.
- ಅವಧಿಗೆ ಮುನ್ನಾ ಮರುಪಾವತಿ ಮಾಡಿದ ಎಲ್ಲಾ ಕೃಷಿ ಸಾಲಗಳಿಗೆ ಸಹಾಯ ಯೋಜನೆ.

೮೩ರಿಂದ ೮೪ರ ವರೆಗೆ ತೊಡಲಾದ ಬಾವಿಗಳಲ್ಲಿ ನೀರು ಬರದಿದ್ದರೆ ರೈತರು ಪಡೆದ ಸಾಲವನ್ನು ಸರ್ಕಾರವೇ ಹಿಂತಿರುಗಿಸುವ ಹೊಸ ಯೋಜನೆ. ಸುಮಾರು ೬೨,೦೦೦ ನೀರಾವರಿ ಪಂಪ್ ಸೆಟ್‌ಗಳಿಗೆ ವಿದ್ಯುತ್ ನೀಡಿಕೆ. ಕೇಂದ್ರ ಸರ್ಕಾರ ಭತ್ತಕ್ಕೆ ನಿಗದಿಗೊಳಿಸಿದ ಬೆಲೆಗೆ ರಾಜ್ಯ ಸರ್ಕಾರದಿಂದ ೨೫ ರೂ.ಗಳ ಹೆಚ್ಚಿನ ಕೊಡುಗೆ. ಶೇಕಡಾ ೮೦ರಷ್ಟು ವ್ಯವಸಾಯ ಭೂಮಿಗೆ ಹೊಸ ರೀತಿಯ ಬೆಳೆಯ ಪ್ರಯೋಗ. ಐದು ವರ್ಷಗಳಲ್ಲಿ ಒಂದು ಲಕ್ಷಕ್ಕೂ ಹೆಚ್ಚಿನ ಬಾವಿಗಳನ್ನು ತೋಡಿಸಿ ಅದಕ್ಕೆ ವಿದ್ಯುತ್ ನೀಡಿಕೆ. ಬೆಳೆ ವಿಫಲವಾದರೆ ಬೆಳೆ ವಿಮೆ ಜಾರಿಗೆ. ರೈತರ ಸಮಸ್ಯೆ ಬಗೆಗೆ ಕೇಂದ್ರದೊಡನೆ ಚರ್ಚಿಸಿ ಹೊಸ ರೈತ ಕಲ್ಯಾಣ ಯೋಜನೆ ಜಾರಿಗೆ. ಸದಾ ಕ್ಷಾಮಕ್ಕೆ ತುತ್ತಾಗುತ್ತಿರುವ ಪ್ರದೇಶಗಳಿಗೆ ವಿಶೇಷ ಯೋಜನೆ ರೂಪಣೆ. ಸೌರಶಕ್ತಿಯ ಬಳಕೆಯ ಮೂಲಕ ಸಮರ್ಥವಾಗಿ ವಿದ್ಯುತ್ ಉತ್ಪಾದಿಸಿ ಅದರ ಅಭಾವ ನೀಗಿಸುವುದು.

## ಯುವ ಶಕ್ತಿ ಸಂಘಟನೆ

ಪ್ರತಿ ವರ್ಷ ೭೫,೦೦೦ ಉತ್ಪಾದಕ ಉದ್ಯೋಗಗಳ ಸೃಷ್ಟಿ.

## ಅಲ್ಪ ಸಂಖ್ಯಾತರ ಅಭಿವೃದ್ಧಿ

ರಾಜ್ಯದಲ್ಲಿ ಮೊದಲ ಬಾರಿಗೆ ಈ ಕ್ಷೇತ್ರದಲ್ಲಿ ಅಪೂರ್ವ ಸಾಧನೆ ಮಾಡಲಾಗಿದೆ.

- ಅಲ್ಪ ಸಂಖ್ಯಾತ ಆಯೋಗದ ರಚನೆ.
- ವಕ್ಫ್ ಮಂಡಲಿಗೆ ೫೦ ಲಕ್ಷ ರೂ. ಗಳ ಕೊಡುಗೆ.
- ಒಂದು ಕೋಟಿ ರೂ. ಷೇರು ಬಂಡವಾಳದೊಡನೆ ಅಲ್ಪಸಂಖ್ಯಾತ ನಿಗಮದ ಸ್ಥಾಪನೆಯ ಬಗ್ಗೆ ಚಿಂತನೆ.
- ಅಲ್ಪಸಂಖ್ಯಾತರ ಭಾಷಾ ನಿರ್ದೇಶನಾಲಯದ ಸ್ಥಾಪನೆ.

## ದಲಿತರ ಏಳಿಗೆ

- ಎರಡನೆಯ ಹಿಂದುಳಿದ ವರ್ಗಗಳ ಆಯೋಗದ ರಚನೆ.
- ಸರ್ಕಾರಿ ಸೇವೆಯಲ್ಲಿ ಹರಿಜನ-ಗಿರಿಜನರಿಗೆ ಮೀಸಲಾತಿ ಪ್ರಮಾಣ ೧೮ ರಿಂದ ೨೫ ಕ್ಕೆ ಏರಿಕೆ.
- ಅತಿ ಹೆಚ್ಚು ಅಂಕ ಗಳಿಸಿದ ಪ್ರತಿಭಾವಂತ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ನೇರ ನೇಮಕಾತಿ.
- ಮೆಟ್ರಿಕ್ ಪೂರ್ವದ ವಿದ್ಯಾರ್ಥಿಗಳ ವಿದ್ಯಾರ್ಥಿವೇತನವನ್ನು ೭೫ರೂ.ಗಳಿಂದ ೧೦೦ ರೂ. ಗಳಿಗೆ ಏರಿಕೆ.
- ಕಾಲೇಜು ವಿದ್ಯಾರ್ಥಿಗಳ ವಿದ್ಯಾರ್ಥಿವೇತನ ೧೦೦ ರೂ. ಗಳಿಂದ ೧೫೦ರೂ.ಗಳಿಗೆ ಏರಿಕೆ.
- ಹಿಂದುಳಿದ ಹಾಗೂ ಅಲ್ಪಸಂಖ್ಯಾತ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ೨೦೦ ರೂ. ನಗದು ಬಹುಮಾನ.
- ನಾಲ್ಕು ಸಾವಿರ ಗಿರಿಜನ ಕುಟುಂಬಗಳಿಗೆ ೩.೭೪ ಲಕ್ಷ ರೂ. ಸಹಾಯಧನ ನೀಡಿಕೆ.

## ಸರ್ಕಾರಿ ಸ್ಥಾನಗಳಲ್ಲಿ ಮೀಸಲಾತಿ

ಸಾಮಾಜಿಕ ಸ್ಥಾನಮಾನ ಪಡೆಯುವಲ್ಲಿ ದಲಿತ ಹಾಗೂ ಹಿಂದುಳಿದವರಿಗೆ ಗಣನೀಯ ಸ್ಥಾನ ಕೊಡಲು ಕ್ರಮ. ಮಂಡಲ್ ಆಯೋಗದ ಶಿಫಾರಸ್ಸು ಅನುಷ್ಠಾನವನ್ನು ರಾಜ್ಯದಲ್ಲಾದರೂ ತರುವ ಪ್ರಾಮಾಣಿಕ ಪ್ರಯತ್ನ ಮಾಡಲಾಗುವುದು.

## ಆಡಳಿತದಲ್ಲಿ ಕನ್ನಡ

೧೯೮೩ರ ಫೆಬ್ರವರಿ ೧೫ರಿಂದ ಆಡಳಿತದ ಎಲ್ಲಾ ಹಂತಗಳಲ್ಲೂ ಕನ್ನಡ ಕಡ್ಡಾಯಗೊಳಿಸಲಾಗಿದೆ. ಇದಕ್ಕೆ ಬರುವ ಅಡ್ಡಿ ಆತಂಕಗಳನ್ನು ನಿವಾರಿಸಲು ಕಾವಲು ಸಮಿತಿ ರಚಿಸಲಾಗಿದೆ. ದೂರದರ್ಶನ ಮೊದಲಾದ ಕಡೆ ಕನ್ನಡಕ್ಕೆ ಅಗ್ರಸ್ಥಾನ ಕೊಡಿಸಲು ಹೋರಾಟ ಮಾಡಲಾಗುವುದು.

### ಕೈಗಾರಿಕೋದ್ಯಮದಲ್ಲಿ ಹೊಸ ಜಾಡು

ಹಿಂದುಳಿದ ಜಿಲ್ಲೆಗಳಲ್ಲಿ ಹೊಸ ಉದ್ಯಮ ಸ್ಥಾಪಿಸಲು ಮುಂದೆ ಬರುವವರಿಗೆ ಹಣಕಾಸು ನೆರವು. ಹೊಸ ಸಣ್ಣ ಕೈಗಾರಿಕೆ ಸ್ಥಾಪಿಸುವವರಿಗೆ ಅನುಕೂಲವಾಗುವಂತೆ ಏಕಗವಾಕ್ಷಿ ಯೋಜನೆ ಜಾರಿ. ಆಡಳಿತಾತ್ಮಕ ತೊಂದರೆ ನಿವಾರಣೆ. ಹೊಸ ಯುವ ಸೃಜನಶೀಲ ಪ್ರತಿಭೆಗಳನ್ನು ಎಲೆಕ್ಟ್ರಾನಿಕ್ಸ್‌ನಲ್ಲಿ ತೊಡಗಿಸಲು ನಿರ್ಧಾರ. ಎಲೆಕ್ಟ್ರಾನಿಕ್ ಹಾಗೂ ಕಂಪ್ಯೂಟರ್‌ಗಳು ರಾಜ್ಯದ ಪ್ರಮುಖ ಕ್ಷೇತ್ರವಾಗಬೇಕೆಂಬುದು ಜನತಾಪಕ್ಷದ ಆಶಯ.

### ಶಿಕ್ಷಣ ಕ್ಷೇತ್ರದಲ್ಲಿ ಹೊಸ ಜಾಗೃತಿ

ಎರಡು ವರ್ಷಗಳಲ್ಲಿ ೯೦೦ ಪ್ರೌಢಶಾಲೆ, ೩೫೭ ಕಾಲೇಜುಗಳ ಪ್ರಾರಂಭ. ಶಿವಮೊಗ್ಗದಲ್ಲಿ ಸಹ್ಯಾದ್ರಿ ವಿಶ್ವವಿದ್ಯಾನಿಲಯ ಪ್ರಾರಂಭವಾಗುವುದು.

### ಭ್ರಷ್ಟಾಚಾರ ನಿರ್ಮೂಲನೆ

ಮುಖ್ಯಮಂತ್ರಿ ಹಾಗೂ ಸಚಿವರನ್ನು ಒಳಗೊಂಡಂತೆ ಎಲ್ಲ ಸಾರ್ವಜನಿಕ ಸೇವಕರನ್ನು ವಿಚಾರಣೆ ಮಾಡುವ ಅಧಿಕಾರವನ್ನು ಲೋಕಾಯುಕ್ತಕ್ಕೆ ವಹಿಸಿಕೊಡಲಾಗಿದೆ. ಇಂತಹ ಮಸೂದೆಯನ್ನು ರಾಷ್ಟ್ರದಲ್ಲೇ ಪ್ರಥಮವಾಗಿ ಜಾರಿಗೆ ತಂದ ಕೀರ್ತಿ ಕರ್ನಾಟಕದ್ದು. ಜಿಲ್ಲಾ ಪಂಚಾಯತ್ ಹಾಗೂ ಮಂಡಲ್ ಪಂಚಾಯತ್ ವ್ಯವಸ್ಥೆ ಮಾಡಿದ್ದರಿಂದ ಅಧಿಕಾರಶಾಹಿ ದಬ್ಬಾಳಿಕೆ ಕಡಿಮೆ ಆಗಿ ಜನತೆಗೆ ಪ್ರಯೋಜನ ದೊರೆಯುತ್ತದೆಂಬ ಭರವಸೆ.

### ಕಾರ್ಮಿಕರ ಹಿತರಕ್ಷಣೆ

ಅಧಿಕಾರಕ್ಕೆ ಬಂದ ತರುಣದಲ್ಲೇ ಕನಿಷ್ಠವೇತನ ಸಲಹಾ ಸಮಿತಿಯೊಂದನ್ನು ರಚಿಸಿ ಅಸಂಘಟಿತ ಕಾರ್ಮಿಕರಿಗೆ ವೇತನ ನಿಗದಿ ಮಾಡಲಾಗಿದೆ. ಕಾರ್ಮಿಕ ಹಾಗೂ ಮಾಲೀಕರ ನಡುವಣ ವ್ಯಾಜ್ಯಗಳನ್ನು ಬಗೆಹರಿಸಲು ಸ್ವಯಂ ಪ್ರೇರಿತರಾಗಿ ಮಧ್ಯಸ್ಥಿಕೆ ವ್ಯವಸ್ಥೆಯನ್ನು ಪ್ರಾರಂಭಿಸುವ ಆಸಕ್ತಿ ಜನತಾ ಪಕ್ಷಕ್ಕಿದೆ.

### ಕೇಂದ್ರ - ರಾಜ್ಯಗಳ ಸಂಬಂಧ

ಕೇಂದ್ರ - ರಾಜ್ಯಗಳ ನಡುವಣ ಸಂಬಂಧ, ರಾಜ್ಯಪಾಲರ ಹುದ್ದೆಯ ದುರುಪಯೋಗ ಇವುಗಳ ಬಗ್ಗೆ ರಾಷ್ಟ್ರಾದ್ಯಂತ ಚರ್ಚೆ ನಡೆಸಿದ ಕೀರ್ತಿ ಜನತಾ ಪಕ್ಷದ್ದು. ತನ್ನ ಇತಿಮಿತಿಯಲ್ಲಿ ರಾಜ್ಯ ಸರ್ಕಾರ ಪಕ್ಷಾಂತರ ನಿಷೇಧ ಮಸೂದೆಯನ್ನು ಜಾರಿಗೆ ತಂದಿದೆ. ಕೇಂದ್ರ-ರಾಜ್ಯಗಳ ಸಂಬಂಧದ ವಿಷಯದಲ್ಲಿ ಸರ್ಕಾರ ತೆರೆದ ಮನಸ್ಸಿನಿಂದಿದ್ದು ರಾಜ್ಯ ಸರ್ಕಾರಗಳ ಆತ್ಮಗೌರವವನ್ನು ಕೇಂದ್ರ ಗೌರವಿಸಬೇಕೆಂದು ಪಕ್ಷ ಬಯಸುತ್ತದೆ.

### ದೂರಿಗೆ ತೆರೆದ ಬಾಗಿಲು

ಜನತಾ ಪಕ್ಷ ಅಧಿಕಾರಕ್ಕೆ ಬಂದ ಪ್ರಾರಂಭದಲ್ಲೇ ವಿಧಾನಸೌಧದ ಬಾಗಿಲು ಸಾರ್ವಜನಿಕರಿಗೆ ಮುಕ್ತವಾಗಿ ತೆರೆಯಿತು. ೧೫ ದಿನಗಳಲ್ಲಿ ಸಾರ್ವಜನಿಕರ ಅರ್ಜಿಯನ್ನು ವಿಲೇವಾರಿ ಮಾಡಬೇಕೆಂಬ ಹೊಸ ನಿಯಮಾವಳಿ ರೂಪಿಸಲಾಗಿದೆ.

### ಉಚಿತ ಕಾನೂನು ನೆರವು

ದೀನ, ದುರ್ಬಲ ಅಸಹಾಯಕರಿಗೆ ಉಚಿತ ಕಾನೂನು ನೆರವು ನೀಡುವ ಆಲೋಚನೆಯಿದೆ.

### ಮಾಧ್ಯಮಗಳ ಸ್ವಾತಂತ್ರ್ಯ - ರಾಜ್ಯ ಸರ್ಕಾರದ ಪಾತ್ರ

ಆಕಾಶವಾಣಿ ಮತ್ತು ದೂರದರ್ಶನಕ್ಕೆ ಸ್ವಾಯತ್ತತೆ ಇರಬೇಕೆಂಬುದು ಜನತಾ ಪಕ್ಷದ ನಿಲುವು. ಇದನ್ನು ಸಮರ್ಪಕವಾಗಿ ಅನುಷ್ಠಾನಕ್ಕೆ ತರಲು ಪ್ರತ್ಯೇಕ ಚಾನಲ್ ವ್ಯವಸ್ಥೆ ಮಾಡಬೇಕೆಂದು ಕೇಂದ್ರ ಸರ್ಕಾರವನ್ನು ಒತ್ತಾಯ ಮಾಡಲಾಗುವುದು. ಕರ್ನಾಟಕದ ಸ್ವಾಭಿಮಾನಕ್ಕಾಗಿ ದುಡಿಯುವ ಜನತಾ ಪಕ್ಷದ ಪ್ರಮುಖ ಭರವಸೆಯಿದು

- ಪ್ರತಿಯೊಂದು ಕುಟುಂಬದಲ್ಲೂ ಒಬ್ಬರಿಗೆ ಉದ್ಯೋಗ.
- ಬಡಮಕ್ಕಳಿಗೆ ಉಚಿತ ಬಟ್ಟೆ ಹಾಗೂ ಪುಸ್ತಕ.

- ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರು ಹಾಗೂ ವೈದ್ಯಕೀಯ ವ್ಯವಸ್ಥೆ.
- ಸಾಮೂಹಿಕ ವಿವಾಹವಾಗುವ ಬಡವರಿಗೆ ತಾಳಿ, ಸೀರೆ ಹಾಗೂ ಪಂಚೆ ನೀಡಿಕೆ.
- ಹಳ್ಳಿಗಳಲ್ಲಿ ಪಡಿತರ ವ್ಯವಸ್ಥೆಯ ಮೂಲಕ ಸೌದೆ ಹಾಗೂ ಮೇವು ವಿತರಣೆ.
- ಅಸಂಘಟಿತ ಕಾರ್ಮಿಕರಿಗೆ ಕನಿಷ್ಠ ವೇತನ.
- ಭ್ರಷ್ಟಾಚಾರದ ನಿರ್ಮೂಲನಕ್ಕೆ ಲೋಕಾಯುಕ್ತದ ಸಮರ್ಥ ಬಳಕೆ.
- ಜನಶಕ್ತಿಯ ಬಳಕೆಗಾಗಿ ಅಧಿಕಾರ ವಿಕೇಂದ್ರೀಕರಣ.
- ದೂರದರ್ಶನ ಮತ್ತು ಆಕಾಶವಾಣಿ ಸ್ವಾಯತ್ತತೆಗಾಗಿ ಹೋರಾಟ.
- ರೈತರಿಗೆ ಐದು ವರ್ಷಗಳಲ್ಲಿ ಒಂದು ಲಕ್ಷ ಬಾವಿ ಮತ್ತು ಎರಡು ಲಕ್ಷ ಪಂಪ್‌ಸೆಟ್ ನೀಡಿಕೆ.
- ಬೆಳೆವಿಮೆ, ಮಂಡಲ್ ಆಯೋಗದ ಅನುಷ್ಠಾನ, ಜಿಲ್ಲೆಗೊಂದರಂತೆ ಹರಿಜನ ಗಿರಿಜನ ವಿದ್ಯಾರ್ಥಿನಿಲಯ.

೫.೩.೧೯೮೫ ರಂದು ನಡೆದ ರಾಜ್ಯ ವಿಧಾನಸಭಾ ಚುನಾವಣೆಯಲ್ಲಿ ಜನತಾ ಪಕ್ಷ ೧೩೯ ಸ್ಥಾನಗಳನ್ನು ಗಳಿಸಿತು. ಇಂದಿರಾ ಗಾಂಧಿ ಅವರ ಸಾವಿನಿಂದಾಗಿ ಲೋಕಸಭೆ ಚುನಾವಣೆಯಲ್ಲಿ ಕಾಂಗ್ರೆಸ್‌ಪಕ್ಷ ಅಭೂತಪೂರ್ವ ವಿಜಯಗಳಿಸಿತು. ಕೇವಲ ಎರಡು ತಿಂಗಳ ಅವಧಿಯಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ಸನ್ನು ಸೋಲಿಸಿ ಜನತಾ ಪಕ್ಷ ಅದ್ಭುತ ವಿಜಯ ಗಳಿಸಿತು. ಜನತಾ ಪಕ್ಷ ೧೩೯ ಸ್ಥಾನಗಳಲ್ಲಿ ಜಯಗಳಿಸಿದರೆ ಕಾಂಗ್ರೆಸ್, ಕೇವಲ ೬೬ ಸ್ಥಾನಗಳಲ್ಲಿ ಮಾತ್ರ ಜಯಗಳಿಸುವಲ್ಲಿ ಯಶಸ್ವಿಯಾಯಿತು. ೧೯೮೩ರಲ್ಲಿ ನಡೆದ ಚುನಾವಣೆಗಿಂತ ೧೬ ಸ್ಥಾನಗಳನ್ನು ಕಡಿಮೆ ಗಳಿಸಿತು. ಅದೇ ಜನತಾ ಪಕ್ಷ ೧೯೮೩ಕ್ಕಿಂತ ೪೪ ಹೆಚ್ಚಿನ ಸ್ಥಾನಗಳನ್ನು ಪಡೆದು ಕೊಂಡಿತು. ಬಿಜೆಪಿ ೧೮ ಸ್ಥಾನಗಳಿಂದ ೨ ಸ್ಥಾನಗಳಿಗೆ ಇಳಿಯಿತು. ೧೯೮೫ರ ಚುನಾವಣೆಯಲ್ಲಿ ಜನತಾ ಪಕ್ಷ ರಾಜ್ಯದ ಇಪ್ಪತ್ತು ಜಿಲ್ಲೆಗಳಿಂದ ತನ್ನ ಬೆಂಬಲ ಪಡೆದುಕೊಂಡಿತು. ಬೀದರ್-೪, ಗುಲ್ಬರ್ಗ-೩, ರಾಯಚೂರು-೮, ಬಳ್ಳಾರಿ-೪, ಚಿತ್ರದುರ್ಗ-೭, ತುಮಕೂರು-೧೦, ಕೋಲಾರ-೯, ಬೆಂಗಳೂರು ನಗರ-೯, ಬೆಂಗಳೂರು ಗ್ರಾಮಾಂತರ-೧೦, ಮಂಡ್ಯ-೬, ಮೈಸೂರು-೧೧, ಕೊಡಗು-೧, ಹಾಸನ-೮, ದಕ್ಷಿಣ ಕನ್ನಡ-೧೧, ಚಿಕ್ಕಮಗಳೂರು-೪, ಶಿವಮೊಗ್ಗ-೫, ಧಾರವಾಡ-೧೮, ಉತ್ತರ ಕನ್ನಡ-೩, ಬೆಳಗಾಂ-೧೨, ಬಿಜಾಪುರ - ೧೨, ಹೀಗೆ ರಾಜ್ಯದ ಎಲ್ಲಾ ಜಿಲ್ಲೆಗಳಿಂದ ವಿಧಾನಸಭಾ ಸ್ಥಾನಗಳನ್ನು ಪಡೆದಿವೆ. ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ಶಿವಕಾಂತ ಚತುರೆ, ಎ. ಪುಷ್ಪಾವತಿ ಹಾಗೂ ಚೌಗುಲೆ ಶಕುಂತಲಾ ಅವರುಗಳು ಜನತಾ ಪಕ್ಷದಿಂದ ಆಯ್ಕೆಯಾದ ಮಹಿಳಾ ಅಭ್ಯರ್ಥಿಗಳು.

ಈ ಚುನಾವಣೆಯಲ್ಲಿ ಜನತಾ ಪಕ್ಷದಿಂದ ಆಯ್ಕೆಯಾದ ಪ್ರಮುಖ ನಾಯಕರೆಂದರೆ ಔರಾದ್‌ನಿಂದ ಗುರುಪಾದಪ್ಪ ನಾಗಮಾರಪಲ್ಲಿ, ಬಸವಕಲ್ಯಾಣದಿಂದ ಬಸವರಾಜ ಪಾಟೀಲ್ ಅಟ್ಟೂರ್, ಗುಲ್ಬರ್ಗಾದಿಂದ ಎಸ್. ಕೆ. ಕಾಂತ, ಯಾದಗಿರಿಯಿಂದ ವಿಶ್ವನಾಥರೆಡ್ಡಿ, ಮಾನ್ವಿಯಿಂದ ಬಸವರಾಜ ಪಾಟೀಲ್ ಅನ್ವರಿ, ಯಲಬುರ್ಗದಿಂದ ಬಸವರಾಜ ರಾಯರೆಡ್ಡಿ, ಹಡಗಲಿಯಿಂದ ಎಂ. ಪಿ. ಪ್ರಕಾಶ್, ಕುಣಿಗಲ್‌ನಿಂದ ವೈ. ಕೆ. ರಾಮಯ್ಯ, ಶ್ರೀನಿವಾಸಪುರದಿಂದ ರಮೇಶ್‌ಕುಮಾರ್, ವೇಮಗಲ್‌ನಿಂದ ಸಿ. ಬೈರೇಗೌಡ, ಮಲ್ಲೇಶ್ವರದಿಂದ ಎಂ. ರಘುಪತಿ, ಚಿಕ್ಕಪೇಟೆಯಿಂದ ಪ್ರೊ। ಎಂ. ಲಕ್ಷ್ಮೀಸಾಗರ್, ಬಿನ್ನಿಪೇಟೆಯಿಂದ ಜಿ. ನಾರಾಯಣ ಕುಮಾರ್, ಬಸವನಗುಡಿಯಿಂದ ರಾಮಕೃಷ್ಣ ಹೆಗಡೆ, ಜಯನಗರದಿಂದ ಎಂ. ಚಂದ್ರಶೇಖರ್, ಜಯಮಹಲ್‌ನಿಂದ ಡಾ। ಜೀವರಾಜ ಆಳ್ವ, ಕನಕಪುರದಿಂದ ಪಿ.ಜಿ.ಆರ್. ಸಿಂಧ್ಯ, ದೊಡ್ಡಬಳ್ಳಾಪುರದಿಂದ ಆರ್. ಎಲ್. ಜಾಲಪ್ಪ, ನಾಗಮಂಗಲದಿಂದ ಹೆಚ್. ಟಿ. ಕೃಷ್ಣಪ್ಪ, ಮಳವಳ್ಳಿ ಕ್ಷೇತ್ರದಿಂದ ಸೋಮಶೇಖರ್, ಕೃಷ್ಣರಾಜಪೇಟೆಯಿಂದ ಕೃಷ್ಣ, ಚಾಮುಂಡೇಶ್ವರಿಯಿಂದ ಸಿದ್ಧರಾಮಯ್ಯ, ಸಂತೆಮರಹಳ್ಳಿಯಿಂದ ಬಿ. ರಾಚಯ್ಯ, ಸೋಮವಾರಪೇಟೆಯಿಂದ ಬಿ. ಎ. ಜೀವಿಜಯ, ಹೊಳೇನರಸೀಪುರದಿಂದ ಹೆಚ್. ಡಿ. ದೇವೇಗೌಡ, ಮೂಡಬಿದರೆ ಯಿಂದ ಅಮರನಾಥ ಶೆಟ್ಟಿ, ಶೃಂಗೇರಿಯಿಂದ ಹೆಚ್. ಜಿ. ಗೋವಿಂದಗೌಡ, ಚನ್ನಗಿರಿಯಿಂದ ಜೆ. ಹೆಚ್. ಪಟೇಲ್, ಹೊಳೆಹೊನ್ನೂರಿನಿಂದ ಜಿ. ಬಸವಣ್ಣೆಪ್ಪ, ಹಳಿಯಾಳದಿಂದ ಆರ್.ವಿ. ದೇಶಪಾಂಡೆ, ಹುಬ್ಬಳ್ಳಿ ಗ್ರಾಮಾಂತರದಿಂದ ಎಸ್.ಆರ್. ಬೊಮ್ಮಾಯಿ, ನರಗುಂದದಿಂದ ಬಿ.ಆರ್. ಯಾವಗಲ್, ಬೈಲಹೊಂಗಲದಿಂದ ಶಿವಾನಂದ ಕೌಜಲಗಿ, ಕಿತ್ತೂರಿನಿಂದ ಡಿ.ಬಿ. ಇನಾಂದಾರ್, ಹಿರೇಕೆರೂರಿನಿಂದ ಬಿ. ಜಿ. ಬಣಕಾರ್, ಕಾಗವಾಡದಿಂದ ಎ. ಎಲ್. ಪಾಟೀಲ್, ಬಳ್ಳೊಳ್ಳಿಯಿಂದ ರಮೇಶ ಜಿಗಜಿಣಗಿ ಮೊದಲಾದವರು ಆಯ್ಕೆಯಾಗಿದ್ದರು. ಜನತಾ ಪಕ್ಷ ಶೇಕಡಾ ೪೩.೮೪ ರಷ್ಟು ಮತ ಗಳಿಸಿತು. ಕಾಂಗ್ರೆಸ್ ಪಕ್ಷ ಅದಕ್ಕನುಗುಣವಾಗಿ ಶೇಕಡಾ ೪೧.೧೦ ರಷ್ಟು ಮತಗಳಿಸಿತು. ಜನತಾ ಪಕ್ಷ ೨೦೭ ಕಡೆ ಸ್ಪರ್ಧಿಸಿ ೧೩೯ ಸ್ಥಾನಗಳಲ್ಲಿ ಜಯಗಳಿಸಿತು. ಒಟ್ಟಾರೆ ಈ ಚುನಾವಣೆಯಿಂದ ಜನತಾ ಪಕ್ಷ ರಾಜ್ಯದಲ್ಲಿ ಆಳವಾದ ಬೇರುಗಳನ್ನು ಬಿಟ್ಟಿತು.

## ೧೯೮೯ರ ವಿಧಾನಸಭಾ ಹಾಗೂ ಲೋಕಸಭಾ ಚುನಾವಣೆಗಳು

ಕರ್ನಾಟಕದಲ್ಲಿ ೧೯೮೫ರಲ್ಲಿ ಅತ್ಯಂತ ಬಹುಮತದಿಂದ ಆಯ್ಕೆಯಾದ ಜನತಾ ಪಕ್ಷದ ಸರ್ಕಾರವು ದೇಶದ ಇತರ ಯಾವುದೇ ರಾಜ್ಯ ಸರ್ಕಾರಗಳಂತೆ ದೌರ್ಬಲ್ಯಗಳಿಗೆ ಒಳಗಾದರೂ ತನ್ನೆಲ್ಲ ದೌರ್ಬಲ್ಯಗಳ ನಡುವೆಯೂ ಉತ್ತಮ ಆಡಳಿತವನ್ನು ನೀಡುತ್ತ ಅಧಿಕಾರ ನಡೆಸಿಕೊಂಡು ಬರುತ್ತಿತ್ತು. ೧೯೮೮ರ ಆಗಸ್ಟ್ ೮ ರಂದು ಕರ್ನಾಟಕದ ಪ್ರಮುಖ ರಾಜಕಾರಣಿಗಳ ದೂರವಾಣಿ ಕರೆಗಳನ್ನು ಕದ್ದಾಲಿಸಲು ಪೊಲೀಸ್ ಗುಪ್ತ ದಳದವರಿಗೆ ಸರ್ಕಾರ ಆದೇಶ ನೀಡಿತ್ತು ಎಂಬ ವಿಚಾರ ಬಹಿರಂಗಕ್ಕೆ ಬಂದು ದೊಡ್ಡ ಕೋಲಾಹಲಕ್ಕೆ ನಾಂದಿಯಾಯಿತು. ನೈತಿಕ ಹೊಣೆ ಹೊತ್ತು ರಾಮಕೃಷ್ಣ ಹೆಗಡೆಯವರು ಆಗಸ್ಟ್ ೧೦ ರಂದು ರಾಜೀನಾಮೆ ಕೊಟ್ಟರು. ಆಗಸ್ಟ್ ೧೩ ರಂದು ಎಸ್. ಆರ್. ಬೊಮ್ಮಾಯಿಯವರು ಮುಖ್ಯಮಂತ್ರಿಯಾದರು. ಈ ಮಧ್ಯೆ ಅಕ್ಟೋಬರ್ ೧೧, ೧೯೮೮ರಂದು ಜನತಾ ಪಕ್ಷ, ಜನಮೋರ್ಚಾ, ಲೋಕದಳ (ಬಿ), ಮೂರು ಪಕ್ಷಗಳು ಬೆಂಗಳೂರು ಅರಮನೆ ಮೈದಾನದಲ್ಲಿ ನಡೆದ ಬೃಹತ್ ಸಮಾವೇಶದಲ್ಲಿ ಒಂದಾಗಿ 'ಜನತಾ ದಳ' ಎಂಬ ನೂತನ ಪಕ್ಷವನ್ನು ರಚಿಸಿಕೊಂಡವು. ಈ ನೂತನ ಪಕ್ಷಕ್ಕೆ ವಿ. ಪಿ.ಸಿಂಗ್ ಅಧ್ಯಕ್ಷರಾಗಿ ಆಯ್ಕೆಯಾದರು. ದೇವೇಗೌಡರು ಈ ಸಮಾವೇಶದಲ್ಲಿ ಪಾಲ್ಗೊಂಡಿದ್ದರೂ ಕೂಡ ಹೊಸ ಪಕ್ಷ ರಚನೆಯ ವಿಚಾರದಲ್ಲಿ ಹಾಗೂ ಜನತಾ ಪಕ್ಷದ ಶಾಸಕರು ಹಾಗೂ ಪದಾಧಿಕಾರಿಗಳ ಸಸ್ಪೆನ್ಷನ್ ರದ್ದು ಮಾಡುವ ವಿಚಾರದಲ್ಲಿ, ಸಮಾವೇಶಕ್ಕೆ ಮೊದಲು ಹಾಗೂ ನಂತರ ತಮ್ಮ ಅತೃಪ್ತಿ ವ್ಯಕ್ತಪಡಿಸಿದರು. ಜನತಾ ದಳದ ಚಾಲನಾ ಸಮಿತಿಯಲ್ಲಿ ಜನತಾ ಪಕ್ಷಕ್ಕೆ ಸರಿಯಾದ ಪ್ರಾತಿನಿಧ್ಯ ಇಲ್ಲ ಎಂದು ಮೊದಲೇ ರಾಜೀನಾಮೆ ಕೊಟ್ಟಿದ್ದ ಜನತಾಪಕ್ಷದ ರಾಷ್ಟ್ರೀಯ ಉಪಾಧ್ಯಕ್ಷ ಇಂದೂಬಾಯಿ ಪಟೇಲ್‌ರು ತಾವು ಜನತಾ ಪಕ್ಷದಲ್ಲೇ ಮುಂದುವರಿಯುವುದಾಗಿ ಘೋಷಿಸಿದರು. ಡಾ। ಸುಬ್ರಹ್ಮಣ್ಯ ಸ್ವಾಮಿ ಇದಕ್ಕೆ ಜೊತೆಗೂಡಿಸಿದರು. ಡಿಸೆಂಬರ್ ೩೦ ರಂದು ಜನತಾ ಪಕ್ಷದ ಹೆಸರು ಚುನಾವಣಾ ಸಂಕೇತ ಹಾಗೂ ಧ್ಯೇಯಗಳನ್ನು ಉಳಿಸಿಕೊಂಡು ಬರುವುದಾಗಿ ಪಕ್ಷದ ಹಿರಿಯ ಉಪಾಧ್ಯಕ್ಷ ಇಂದೂಬಾಯಿ ಪಟೇಲ್, ಸಂಸತ್ ಸದಸ್ಯರುಗಳಾದ ಸರೋಜಿನಿ ಮಹಿಷಿ, ಡಾ। ಸುಬ್ರಹ್ಮಣ್ಯ ಸ್ವಾಮಿ, ಶಹಾಬುದೀನ್ ಹಾಗೂ ಕರ್ನಾಟಕದ ಲೋಕೋಪಯೋಗಿ ಮತ್ತು ನೀರಾವರಿ ಸಚಿವರಾದ ಹೆಚ್. ಡಿ. ದೇವೇಗೌಡರವರು ಘೋಷಿಸಿದರು.

೧೬.೧.೧೯೮೯ರಂದು ಹೆಚ್. ಡಿ. ದೇವೇಗೌಡರವನ್ನು ಹೊರತುಪಡಿಸಿ ಉಳಿದ ಎಲ್ಲಾ ಸಚಿವರು ಜನತಾ ದಳ ಸರ್ಕಾರಕ್ಕೆ ಬೆಂಬಲ ಕೊಡುವುದಾಗಿ ಹೇಳಿದರು. ಅಂದರೆ ಜನತಾ ದಳ ಸರ್ಕಾರ ಕರ್ನಾಟಕದಲ್ಲಿ ಅಧಿಕೃತವಾಗಿ ಅಸ್ತಿತ್ವಕ್ಕೆ ಬಂದಂತಾಯಿತೆಂದು ಹೇಳಬಹುದು. ೧೯.೧.೧೯೮೯ರಂದು ಹೆಚ್. ಡಿ. ದೇವೇಗೌಡರವರು ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. ೧.೨.೧೯೮೯ರಂದು ದೆಹಲಿಯಲ್ಲಿ ಜನತಾ ಪಕ್ಷದ ರಾಷ್ಟ್ರೀಯ ಕಾರ್ಯಕಾರಿಣಿ ಸಭೆ ನಡೆಸಲಾಗುವುದೆಂದು ಅವರು ಹೇಳಿದರು. ೨೨.೧.೧೯೮೯ರಂದು ಬೆಂಗಳೂರಿನ ನ್ಯಾಷನಲ್ ಕಾಲೇಜು ಮೈದಾನದಲ್ಲಿ ಜನತಾ ಪಕ್ಷದ ಸಮಾವೇಶವೊಂದು ಜರುಗಿತು. ಜನತಾ ದಳದಲ್ಲಿ ೧೯.೪.೧೯೮೯ ರಂದು ಆಂತರಿಕ ಅತೃಪ್ತಿ ಉಂಟಾಗಿ ೨೦ ಜನ ಶಾಸಕರು ಸರ್ಕಾರಕ್ಕೆ ತಮ್ಮ ಬೆಂಬಲವನ್ನು ಹಿಂತೆಗೆದುಕೊಂಡರು. ೨೧.೪.೧೯೮೯ರಂದು ರಾತ್ರಿ ಕೇಂದ್ರ ಸರ್ಕಾರ ರಾಜ್ಯ ವಿಧಾನಸಭೆಯನ್ನು ವಿಸರ್ಜಿಸಿ ರಾಷ್ಟ್ರಪತಿ ಆಡಳಿತವನ್ನು ಜಾರಿಗೆ ತಂದಿತು. ರಾಷ್ಟ್ರಪತಿ ಆಡಳಿತ ಜಾರಿಗೆ ಬಂದ ನಂತರ ರಾಜ್ಯದಲ್ಲಿ ದೇವೇಗೌಡರ ಅಧ್ಯಕ್ಷತೆಯ ಜನತಾ ಪಕ್ಷ ತನ್ನ ಸಂಘಟನೆಯನ್ನು ತೀವ್ರಗೊಳಿಸಿತು. ದೇವೇಗೌಡರು ರಾಜ್ಯಾದ್ಯಂತ ಪ್ರವಾಸ ಮಾಡಿ ಸಂಘಟನಾ ಕಾರ್ಯದಲ್ಲಿ ತೊಡಗಿದರು. ಜನತಾ ದಳಕ್ಕೆ ಹಾಗೂ ಜನತಾ ಪಕ್ಷಕ್ಕೆ ಸೇರಿದ್ದ ಸುಮಾರು ೩೦ ಜನ ಮಾಜಿ ಶಾಸಕರು ದೇವೇಗೌಡರಿಗೆ ಬೆಂಬಲವಾಗಿ ನಿಂತರು.

ಮೊದಲು ೧೨.೧೦.೧೯೮೯ರಂದು ಕೇವಲ ಲೋಕಸಭೆಗೆ ಮಾತ್ರ ನವೆಂಬರ್ ೨೨-೨೪ರಂದು ಚುನಾವಣೆ ನಡೆಸುವುದಾಗಿ ಚುನಾವಣಾ ಆಯೋಗ ಘೋಷಿಸಿತು. ನಂತರ ೧೮.೧೦.೧೯೮೯ರಂದು ರಾಜ್ಯ ವಿಧಾನಸಭೆಗೂ ದಿನಾಂಕ ೨೪.೧೧.೮೯ ರಂದು ಚುನಾವಣೆ ನಡೆಯುವುದಾಗಿ ಚುನಾವಣಾ ಆಯೋಗದಿಂದ ಘೋಷಣೆ ಹೊರಬಂದಿತು. ದಿನಾಂಕ ೨೧.೧೦.೧೯೮೯ರಂದು ಚುನಾವಣಾ ಆಯೋಗವು ನೇಗಿಲು ಹೊತ್ತ ರೈತನ ಚಿಹ್ನೆಯನ್ನು ಸ್ಥಗಿತಗೊಳಿಸಿತು. ೨೨.೧೦.೧೯೮೯ರಂದು ಜನತಾ ದಳಕ್ಕೆ ಚಕ್ರ ಚಿಹ್ನೆ ಹಾಗೂ ಜನತಾ ಪಕ್ಷಕ್ಕೆ ಚಕ್ರದೊಳಗೆ ಗುದ್ದಲಿ ಹಿಡಿದು ಬಗ್ಗಿನಿಂತ ರೈತನ ಚಿಹ್ನೆ ದೊರಕಿತು. ಚುನಾವಣಾ ಆಯೋಗವು ಆದೇಶ ನೀಡಿ ಜನತಾ ಪಕ್ಷವನ್ನು ರಾಷ್ಟ್ರೀಯ ಪಕ್ಷವೆಂದು ಮನ್ನಣೆ ನೀಡಿತು. ಪಕ್ಷದ ಹೆಸರಿನ ಮುಂದೆ ಜೆ.ಪಿ. ಎಂದು ಸೇರಿಸಿಕೊಳ್ಳಲು ಅನುಮತಿ ನೀಡಿರುವ ಬಗ್ಗೆ ದೇವೇಗೌಡರು ಹರ್ಷ ವ್ಯಕ್ತಪಡಿಸಿದರು. ನೇಗಿಲು ಹೊತ್ತ ರೈತ ಚಿಹ್ನೆ ಸ್ಥಗಿತಗೊಂಡಿದ್ದಕ್ಕೆ ಜನತಾ ಪಕ್ಷದ ಧುರೀಣರಲ್ಲಿ ಅಸಮಾಧಾನವಿತ್ತು.

ಸಮೃದ್ಧ ಸ್ವಾಭಿಮಾನಿ ಕರ್ನಾಟಕ ಹಾಗೂ ನೀರಾವರಿಗೆ ಆದ್ಯತೆ, ನಿರುದ್ಯೋಗ ನಿವಾರಣೆ, ಇದು ಜನತಾ ಪಕ್ಷ (ಜೆ.ಪಿ.) ಪ್ರಮುಖ ಗುರಿಯೆಂದು ಸ್ಪಷ್ಟಪಡಿಸಲಾಯಿತು. ೨೮.೧೦.೧೯೮೯ರಂದು ದೆಹಲಿಯಲ್ಲಿ ಜನತಾ ಪಕ್ಷದ ಅಧ್ಯಕ್ಷರಾದ ಇಂದೂಬಾಯಿ ಪಟೇಲ್ ಹಾಗೂ ಡಾ। ಸುಬ್ರಹ್ಮಣ್ಯಸ್ವಾಮಿ ಇವರುಗಳು ಪಕ್ಷದ ರಾಷ್ಟ್ರೀಯ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿದರು. ಭ್ರಷ್ಟಾಚಾರ ನಿರ್ಮೂಲನೆ, ಬೆಲೆ ಏರಿಕೆ ನಿಯಂತ್ರಣ, ನಿರುದ್ಯೋಗ ನಿರ್ಮೂಲನೆ, ಆಕಾಶವಾಣಿ ಹಾಗೂ ದೂರದರ್ಶನ ಸ್ವಾಯತ್ತತೆ ಹಾಗೂ ಅವುಗಳಿಗೆ ಪ್ರತ್ಯೇಕ ನಿಗಮಗಳ ಸ್ಥಾಪನೆ, ತೆರಿಗೆ ಹಾಗೂ ಆರ್ಥಿಕ ಸುಧಾರಣೆ, ನ್ಯಾಯಾಂಗ ವ್ಯವಸ್ಥೆಯ ಸುಧಾರಣೆ, ಆಡಳಿತ ವಿಕೇಂದ್ರೀಕರಣ, ಬೋಫೋರ್ಸ್ ಅಕ್ರಮದಲ್ಲಿ ಭಾಗಿಯಾಗಿರುವ ಭಾರತೀಯರ ತನಿಖೆ, ವಾರ್ಷಿಕ ೫೦,೦೦೦ ರೂಪಾಯಿಗಳಿಗಿಂತ ಕಡಿಮೆ ಆದಾಯದ ಮೇಲಿನ ವೃತ್ತಿ ತೆರಿಗೆ ರದ್ದು, ರೈತರಿಗೆ ನಿವೃತ್ತಿ ವೇತನ ಮುಂತಾದ ೧೫ ಅಂಶಗಳ ಪ್ರಣಾಳಿಕೆಯೊಂದನ್ನು ಬಿಡುಗಡೆ ಮಾಡಲಾಯಿತು. ಜನತಾಪಕ್ಷ (ಜೆ.ಪಿ.) ರಾಜ್ಯದಲ್ಲಿ ೨೧೫ ಅಭ್ಯರ್ಥಿಗಳನ್ನು ನಿಲ್ಲಿಸಿತು. ಲೋಕಸಭೆಯ ೨೮ ಸ್ಥಾನಗಳಲ್ಲಿ ಜನತಾ ಪಕ್ಷ ೨೬ ಸ್ಥಾನಗಳಲ್ಲಿ ಸ್ಪರ್ಧಿಸಿತು. ೧೯.೧೧.೧೯೮೯ರಂದು **ಸಮೃದ್ಧ ಸ್ವಾಭಿಮಾನಿ ಕರ್ನಾಟಕ ನಿರ್ಮಾಣದ ಆಸೆ; ಅದಕ್ಕಾಗಿ ನಾಡಿನ ಜನತೆಗೆ ಜನತಾ ಪಕ್ಷ (ಜೆ.ಪಿ.) ಭರವಸೆ** ಎಂಬ ತಲೆ ಬರಹವನ್ನುಳ್ಳ ೨೭ ಪುಟಗಳ ಪ್ರಣಾಳಿಕೆಯನ್ನು ರಾಜ್ಯದಲ್ಲಿ ಜನತಾ ಪಕ್ಷ ಬಿಡುಗಡೆ ಮಾಡಿತು. ಆ ಪ್ರಣಾಳಿಕೆ ಮುಖ್ಯಾಂಶಗಳು ಹೀಗಿವೆ.

- ನೀರಾವರಿ ಯೋಜನೆಗಳ ನಿರ್ವಹಣೆಗೆ ೫ ವರ್ಷಗಳಲ್ಲಿ ೨೨,೦೦೦ ಕೋಟಿ ರೂಪಾಯಿ, ಕಾವೇರಿ-ಕೃಷ್ಣ ನದಿಗಳ ನೀರಿನ ಪಾಲನ್ನು ನಿರ್ದಿಷ್ಟ ಅವಧಿಯೊಳಗೆ ಪೂರ್ಣವಾಗಿ ಬಳಸಿಕೊಳ್ಳುವುದು.
- ದುಡಿಯುವ ಕೈಗಳಿಗೆ ಕೆಲಸ, ವಿದ್ಯಾವಂತ ನಿರುದ್ಯೋಗಿಗಳಿಗೆ ಸ್ವಯಂ ಉದ್ಯೋಗಿಗಳಾಗಲು ನೆರವು.
- ಬಡವರ ಬಗ್ಗೆರ್ ಹುಕುಂ ಸಾಗುವಳಿ ಖಾಯಂ.
- ಅನುತ್ಪಾದಕ ಯೋಜನೆಗಳ ಬದಲಾವಣೆ.
- ಮಹಿಷಿ ವರದಿ ಜಾರಿ, ಮಹಾಜನ್ ವರದಿ ಅನುಷ್ಠಾನಕ್ಕೆ ಒತ್ತಾಯ.
- ಶ್ರಮಜೀವಿಗಳಿಗೆ ಜನತಾ ವಿಮೆ.
- ಗಂಗಾ ಕಲ್ಯಾಣಕ್ಕೆ ಪ್ರತ್ಯೇಕ ಇಲಾಖೆ.
- ಸ್ಟೈಪೆಂಡರಿ, ಗುತ್ತಿಗೆ, ದಿನಗೂಲಿ ಮತ್ತಿತರ ಸ್ಥಳೀಯ ನೇಮಕಾತಿಗಳ ಖಾಯಂ (ಸುಪ್ರೀಂ ಕೋರ್ಟ್‌ನ ತೀರ್ಪಿಗೆ ಒಳಪಟ್ಟು).
- ನೀರಾವರಿ ಯೋಜನೆಗಳನ್ನು ಆದ್ಯತೆ ಮೇಲೆ ಅನುಷ್ಠಾನಕ್ಕೆ ತರಲು ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಸಚಿವ ಸಂಪುಟ ಉಪ ಸಮಿತಿ ರಚನೆ.
- ಖಾಸಗಿ ಕ್ಷೇತ್ರಕ್ಕೆ ವಿದ್ಯುತ್.
- ಬೆಂಗಳೂರು ನಗರ ಬಿಟ್ಟು ಬೇರೆ ಕಡೆ ಕೈಗಾರಿಕೆ ಸ್ಥಾಪಿಸಲು ಪ್ರೋತ್ಸಾಹ. ಅದರಲ್ಲಿ ಕರ್ನಾಟಕದವರಿಗೆ ಆದ್ಯತೆ.
- ಖಾಸಗಿ ಶಿಕ್ಷಣ ಸಂಸ್ಥೆಗಳ ನಿರ್ಮಾಣ ವೆಚ್ಚ ಸರಿದೂಗಿಸಲು ಅಷ್ಟಕ್ಕೆ ಮಾತ್ರ ಕ್ಯಾಪಿಟೇಷನ್ ಶುಲ್ಕಕ್ಕೆ ಅವಕಾಶ.
- ೧೪ ನೇ ವಯಸ್ಸಿನವರೆಗೆ ಎಲ್ಲಾ ಮಕ್ಕಳಿಗೆ ಕಡ್ಡಾಯ ಶಿಕ್ಷಣ. ವೃತ್ತಿಪರ, ಪ್ರಾಥಮಿಕ, ಪೂರ್ವ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ. ವಿದ್ಯಾರ್ಥಿ ನಿಲಯಗಳ ಸ್ಥಾಪನೆ.
- ನಗರದ ವಿಕ್ಟೋರಿಯಾ ಆಸ್ಪತ್ರೆಯನ್ನು ರಾಷ್ಟ್ರದಲ್ಲೇ ಪ್ರಥಮ ದರ್ಜೆ ಆಸ್ಪತ್ರೆಯನ್ನಾಗಿ ಮಾರ್ಪಡಿಸುವುದು.
- ಪ್ರತಿ ತಾಲ್ಲೂಕಿನಲ್ಲೂ ೫೦ ಹಾಸಿಗೆಗಳ ಆಸ್ಪತ್ರೆ.
- ಪ್ರತಿ ಹೋಬಳಿಯಲ್ಲಿ ಆರೋಗ್ಯ ಕೇಂದ್ರದ ಜೊತೆ ಹೆರಿಗೆ ಆಸ್ಪತ್ರೆಗಳ ಸ್ಥಾಪನೆ.
- ವೈದ್ಯಕೀಯ ಆಸ್ಪತ್ರೆಗಳಿಗೆ ಹೊಂದಿಕೊಂಡಂತೆ ಕ್ಯಾನ್ಸರ್ ಆಸ್ಪತ್ರೆ.
- ಅಲ್ಪಸಂಖ್ಯಾತರಿಗೆ ಸಾಮಾಜಿಕ ನ್ಯಾಯ.
- ಆರ್ಥಿಕ ಸ್ಥಿತಿಯ ಸುಧಾರಣೆ ಕ್ರಮ.
- ರೆವಿನ್ಯೂ ನಿವೇಶನಗಳ ಸಮಸ್ಯೆ ಆರು ತಿಂಗಳಲ್ಲಿ ಬಗೆಹರಿಸುವಿಕೆ.
- ದಲಿತರ ಹಿತರಕ್ಷಣೆಗೆ ಹೋಬಳಿಗಳಲ್ಲಿ ವಸತಿ ಶಾಲೆ, ಈ ವರ್ಗದ ಜನತಾ ಮನೆಗಳ ಮೇಲಿನ ಸಾಲ ಮನ್ನಾ. ಕಡುಬಡವರಿಗೆ ಉಚಿತ ವಸತಿ ಸೌಕರ್ಯ. ಇತರರಿಗೆ ಸ್ಟಾಂಪ್ ಶುಲ್ಕ ವಿನಾಯಿತಿ. ಶೇ ೧೮ರಷ್ಟು ಹಣ ಆರ್ಥಿಕ ವರ್ಷದ ಆರಂಭದಿಂದಲೇ

ಪೂರ್ಣ ಬಳಕೆ. ದಲಿತರ ಕೇರಿಗಳ ಹತ್ತಿರ ಮದ್ಯಪಾನ ಮಾರಾಟದ ಅಂಗಡಿಗಳನ್ನು ತೆಗೆದುಹಾಕುವುದು. ದಲಿತರ ಮೇಲಿನ ದೌರ್ಜನ್ಯಕ್ಕೆ ಉಗ್ರ ಶಿಕ್ಷೆ ವಿಧಿಸುವುದು.

- ಭ್ರಷ್ಟಾಚಾರ ನಿರ್ಮೂಲನೆಗೆ ಲೋಕಾಯುಕ್ತ ಕಾಯಿದೆಗೆ ತಿದ್ದುಪಡಿ. ಅಧಿಕಾರಾರೂಢ ಎಲ್ಲಾ ರಾಜಕಾರಣಿಗಳನ್ನು ಇದರ ವ್ಯಾಪ್ತಿಗೆ ತರುವುದು.
- ಬಡವರಿಗೆ ಕಡಿಮೆ ಖರ್ಚಿನಲ್ಲಿ ನ್ಯಾಯ ದೊರಕುವಂತೆ ಮಾಡಲು ನ್ಯಾಯಾಂಗ ಶುಲ್ಕ ಕಡಿಮೆ ಮಾಡುವುದು. ಮೊಕದ್ದಮೆಗಳ ಶೀಘ್ರ ವಿಲೇವಾರಿಗೆ ಹೆಚ್ಚಿನ ನ್ಯಾಯಾಲಯಗಳ ಸ್ಥಾಪನೆ. ಹುಬ್ಬಳ್ಳಿಯಲ್ಲಿ ವಿಭಾಗೀಯ ಪೀಠ ಸ್ಥಾಪನೆ.
- ವೃತ್ತಿ ತೆರಿಗೆ ಕೈಬಿಡುವುದು.
- ಹೆಂಡವನ್ನು ಹಂತ ಹಂತವಾಗಿ ಐದು ವರ್ಷಗಳಲ್ಲಿ ಕೈಬಿಡುವುದು.
- ಕಳ್ಳ ಸಾಗಾಣಿಕೆ, ಕಲಬೆರಕೆ ಮಾಡುವವರಿಗೆ ಉಗ್ರ ಶಿಕ್ಷೆ.
- ಗ್ರಾಹಕರ ಅನುಕೂಲಕ್ಕಾಗಿ ಸಾರ್ವಜನಿಕ ವಿತರಣಾ ಪದ್ಧತಿಯ ವ್ಯವಸ್ಥಿತ ವಿಸ್ತರಣೆ.
- ಮಂಡಲ್ ಆಯೋಗದ ವರದಿ ಜಾರಿಗೆ ಕೇಂದ್ರಕ್ಕೆ ಒತ್ತಾಯ.
- ಸಣ್ಣ ಹಿಡುವಳಿದಾರರು, ಅಸಂಘಟಿತ ಬಡವರು. ಇವರುಗಳ ೧೦,೦೦೦ ರೂಪಾಯಿವರೆಗಿನ ಸಾಲ ಮನ್ನಾ. ಇಲ್ಲವೇ ತೊಂದರೆಯಾಗದಂತೆ ಸಾಲ ಮರುಪಾವತಿಗೆ ಆದೇಶ.
- ಅಸಂಘಟಿತ ಕಾರ್ಮಿಕರಿಗೆ ಜೀವವಿಮಾ ಸೌಲಭ್ಯ. ೧೦,೦೦೦ ರೂಪಾಯಿವರೆಗೆ ವಿಮೆಯ ಅರ್ಧ ಕಂತನ್ನು ಸರ್ಕಾರದಿಂದಲೇ ಪಾವತಿಸುವುದು.
- ಅರಣ್ಯದ ರಕ್ಷಣೆಗೆ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಗೆ ಹೆಚ್ಚಿನ ಅಧಿಕಾರ.
- ಎಲ್ಲಾ ಹಂತಗಳಲ್ಲಿ ಕನ್ನಡ ಕಡ್ಡಾಯ.
- ಮತದಾರರಿಗೆ ಗುರುತಿನ ಚೀಟಿ ಕಡ್ಡಾಯ. ನಕಲಿ ಮತದಾನಕ್ಕೆ ಕಠಿಣ ಶಿಕ್ಷೆಗೆ ಒತ್ತಾಯ.

ತಾಲ್ಲೂಕು ಕೇಂದ್ರಗಳಲ್ಲಿ ಮಹಿಳೆಯರಿಗೆ ಗುಡಿ ಕೈಗಾರಿಕಾ ಕೇಂದ್ರ. ಮಹಿಳೆಯರ ವಿದ್ಯಾಭ್ಯಾಸಕ್ಕೆ ಒತ್ತು. ಪ್ರತಿ ತಾಲ್ಲೂಕಿನಲ್ಲಿ ಮಹಿಳೆಯರಿಗೆ ಹಾಸ್ಟೆಲ್ ಸೌಲಭ್ಯ.

## ಚುನಾವಣಾ ಸಾಧನೆ

೨೧.೧೧.೧೯೮೯ರಂದು ರಾಜ್ಯದಲ್ಲಿ ೨೨ ವರ್ಷಗಳ ನಂತರ ಮೊದಲ ಬಾರಿಗೆ ರಾಜ್ಯ ವಿಧಾನಸಭೆ ಹಾಗೂ ಲೋಕಸಭೆಗಳಿಗೆ ಒಟ್ಟಾಗಿ ಚುನಾವಣೆ ನಡೆಯಿತು. ೨೬.೧೧.೧೯೮೯ರಂದು ಫಲಿತಾಂಶ ಪ್ರಕಟವಾಯಿತು. ಜನತಾಪಕ್ಷ (ಜೆ.ಪಿ.)ದ ಚಿಹ್ನೆಯೊಂದಿಗೆ ಅಧಿಕೃತವಾಗಿ ಸ್ಪರ್ಧಿಸಿದ್ದ ೨೦೫ ಸ್ಥಾನಗಳ ಪೈಕಿ ಕೇವಲ ೨ ಸ್ಥಾನ ಗಳಿಸಿತು. ೨೦,೬೪,೬೫೩ ಮತಗಳು ಜನತಾ ಪಕ್ಷದ ಪರವಾಗಿ ಚಲಾಯಿಸಲ್ಪಟ್ಟವು. ಜನತಾಪಕ್ಷ ಶೇಕಡಾ ೧೧.೪.ರಷ್ಟು ಮಾತ್ರ ಮತ ಪಡೆಯಿತು. ಕೋಲಾರ ಜಿಲ್ಲೆ ವೇಮಗಲ್ ಕ್ಷೇತ್ರದಿಂದ ಸಿ. ಬೈರೇಗೌಡ ಹಾಗೂ ಮೈಸೂರು ಜಿಲ್ಲೆಯ ಹೆಚ್. ಡಿ. ಕೋಟೆಯಿಂದ ವೆಂಕಟೇಶ್ ಮಾತ್ರ ಈ ಬಾರಿ ಆಯ್ಕೆಯಾಗಿದ್ದರು. ಪಕ್ಷದ ಅಧ್ಯಕ್ಷ ದೇವೇಗೌಡರೇ ಹೊಳೆನರಸೀಪುರ ಹಾಗೂ ಕನಕಪುರ ಈ ಎರಡೂ ಕ್ಷೇತ್ರಗಳಲ್ಲಿ ಪರಾಭವಗೊಂಡಿದ್ದು ಪಕ್ಷಕ್ಕೆ ತೀವ್ರ ಹಿನ್ನಡೆ ಹಾಗೂ ಮುಖಭಂಗವನ್ನು ಉಂಟುಮಾಡಿತು. ಅದೇ ರೀತಿ ಪಕ್ಷವು ಅಧಿಕೃತವಾಗಿ ೨೬ ಲೋಕಸಭೆ ಸ್ಥಾನಗಳಿಗೆ ಸ್ಪರ್ಧಿಸಿತ್ತು. ೨೧ ಸ್ಥಾನಗಳಲ್ಲಿ ಅದಕ್ಕೆ ಠೇವಣಿ ನಷ್ಟವಾಯಿತು. ಒಂದು ಸ್ಥಾನದಲ್ಲೂ ಜನತಾ ಪಕ್ಷ ಜಯ ಗಳಿಸಲಿಲ್ಲ. ೧೯,೫೧,೭೩೦ ಮತಗಳು ಜನತಾ ಪಕ್ಷದ ಪರವಾಗಿ ಚಲಾಯಿಸಲ್ಪಟ್ಟವು. ಅದು ಶೇಕಡಾ ೧೦.೫೯ ರಷ್ಟು ಮತ ಗಳಿಸಿತು. ೧೯೯೧ರ ಲೋಕಸಭಾ ಚುನಾವಣೆಯ ಹೊತ್ತಿಗೆ ರಾಜ್ಯದಲ್ಲಿ ಜನತಾ ಪಕ್ಷ ಪೂರ್ಣವಾಗಿ ತೆರೆಮರೆಗೆ ಸೇರಿ ಹೋಯಿತು. ಆಗ ನಡೆದ ಲೋಕಸಭಾ ಚುನಾವಣೆಯಲ್ಲಿ ಹಾಸನ ಲೋಕಸಭಾ ಕ್ಷೇತ್ರದಿಂದ ಜನತಾ ಪಕ್ಷ ಹಾಗೂ ಜನತಾದಳ ಸಂಯುಕ್ತ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ಹೆಚ್. ಡಿ. ದೇವೇಗೌಡ ಅವರು ಅದ್ಭುತ ವಿಜಯ ಗಳಿಸಿದರು. ಈ ಚುನಾವಣೆ ಮುಂದೆ ರಾಜ್ಯದಲ್ಲಿ ಜನತಾ ದಳ ಆಳ್ವಿಕೆಯ ದಿಕ್ಸೂಚಿ ಆಯಿತು.

ನಿರೂಪಣೆ : **ಕೆ. ಆರ್. ಕಮಲೇಶ್**
ಸಂಶೋಧನ ಸಹಾಯ : **ಎಸ್. ನಂಜುಂಡಸ್ವಾಮಿ**



# ಇಂದಿರಾ ಕಾಂಗ್ರೆಸ್ (ಕಾಂಗ್ರೆ)

ಎ. ಎಸ್. ಜಯಸಿಂಹ

## ಕಾಂಗ್ರೆಸ್‌ನ ಮತ್ತೊಂದು ವಿಭಜನೆ

೧೯೭೭ ಮಾರ್ಚ್‌ನಲ್ಲಿ ನಡೆದ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಸೋಲನ್ನು ಅನುಭವಿಸಿತ್ತು. ರಾಯ್‌ಬರೇಲಿ ಕ್ಷೇತ್ರದಲ್ಲಿ ಸ್ವತಃ ಸೋಲನ್ನು ಅನುಭವಿಸಿದ ಅದರ ನಾಯಕಿ ಶ್ರೀಮತಿ ಇಂದಿರಾ ಗಾಂಧಿ ಮಾರ್ಚ್ ೨೨, ೧೯೭೭ ರಂದು ಪ್ರಧಾನಿ ಹುದ್ದೆಗೆ ರಾಜೀನಾಮೆ ನೀಡಿದರು. ಅದೇ ದಿನ ಸಭೆ ಸೇರಿದ್ದ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ರಚನಾತ್ಮಕ ವಿರೋಧ ಪಕ್ಷವಾಗಿ ಕೆಲಸ ಮಾಡಲು ತೀರ್ಮಾನಿಸಿತು. ವೈ. ಬಿ. ಚವಾಣ್ ಅವರನ್ನು ಶಾಸಕಾಂಗ ಪಕ್ಷದ ನಾಯಕರನ್ನಾಗಿ ಆರಿಸಲಾಯಿತು. ಕಾರ್ಯಕಾರಿ ಸಮಿತಿ ಸದಸ್ಯರಾದ ಶ್ರೀಮತಿ ಇಂದಿರಾ ಗಾಂಧಿ ಪಕ್ಷಕ್ಕೆ ಮಾರ್ಗದರ್ಶನ ಮಾಡುತ್ತಾರೆ ಎಂದು ಪಕ್ಷದ ಪ್ರಧಾನ ಕಾರ್ಯದರ್ಶಿ ಗಣ್ಯ ಮುಖರ್ಜಿ ತಿಳಿಸಿದರು. ಮಾರ್ಚ್ ೨೬ರಂದು ಚಂದ್ರಜಿತ್ ಯಾದವ್ ಅವರ ಮನೆಯಲ್ಲಿ ಸುಮಾರು ೧೨೫ ಜನ ಸಂಸತ್ ಸದಸ್ಯರು ಹಾಗೂ ಇತರ ರಾಜ್ಯ ನಾಯಕರುಗಳು ಸಭೆ ಸೇರಿ ಎ.ಐ.ಸಿ.ಸಿ. ಅಧ್ಯಕ್ಷ ಡಿ. ಕೆ. ಬರೂವಾ ರಾಜೀನಾಮೆ ನೀಡಬೇಕು, ಪಕ್ಷದ ಸೋಲಿಗೆ ಮುಖ್ಯ ಕಾರಣಕರ್ತರಾದ ಸಂಜಯ ಗಾಂಧಿ, ಬನ್ಸಿಲಾಲ್, ಓಂ ಮೆಹ್ತಾ ಮುಂತಾದವರು ಪಕ್ಷದಿಂದ ಹೊರ ಹೋಗಬೇಕೆಂದು ಒತ್ತಾಯಿಸಿದರು. ಮತ್ತೆ ೧೧ ಏಪ್ರಿಲ್ ೭೭ ರಂದು ೧೪೫ ಎ.ಐ.ಸಿ.ಸಿ. ಸದಸ್ಯರು ಸಭೆ ಸೇರಿ, ಎ.ಐ.ಸಿ.ಸಿ. ಸಭೆ ಕರೆಯಬೇಕೆಂದು ಅಂತಿಮವಾದ ಸೂಚನೆ ನೀಡಿದರು. ಏಪ್ರಿಲ್ ೧೩ ರಂದು ದೇವಕಾಂತ ಬರೂವಾ ಎ.ಐ.ಸಿ.ಸಿ. ಅಧ್ಯಕ್ಷತೆಗೆ ರಾಜೀನಾಮೆ ನೀಡಿದರು. ಏಪ್ರಿಲ್ ೧೪, ೭೭ ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿತು. ಬನ್ಸಿಲಾಲ್‌ರನ್ನು ಆರು ವರ್ಷಗಳ ಕಾಲ ಪಕ್ಷದಿಂದ ಉಚ್ಚಾಟಿಸಿತು. ವಿ.ಸಿ. ಶುಕ್ಲಾ ಅವರನ್ನು ವಾಗ್ದಂಡನೆಗೆ ಗುರಿ ಮಾಡಿತು. ಸರ್ದಾರ್ ಸ್ವರ್ಣಸಿಂಗ್ ಹಂಗಾಮಿ ಅಧ್ಯಕ್ಷರಾಗಿ ಆಯ್ಕೆಯಾದರು. ಇದು ಶ್ರೀಮತಿ ಇಂದಿರಾ ಗಾಂಧಿ ಬೆಂಬಲಿಗರಿಗೆ ಇಷ್ಟವಾಗಲಿಲ್ಲ. ಶ್ರೀಮತಿ ಇಂದಿರಾ ಗಾಂಧಿ ನಮ್ಮ ನಾಯಕಿ ಎಂದು ಕಾರ್ಯಕಾರಿ ಸಮಿತಿ ಸಭೆ ಹೇಳಿತು. ಹಳೆಯ ಕಾರ್ಯಕಾರಿ ಸಮಿತಿ ಸದಸ್ಯರನ್ನೇ ಸ್ವರ್ಣಸಿಂಗ್ ಮುಂದುವರಿಸಿದರು.

ಏಪ್ರಿಲ್‌ನಿಂದ ಅಕ್ಟೋಬರ್ ೭೭ರವರೆಗೆ ಕಾಂಗ್ರೆಸ್ ಪಕ್ಷ ಹಾಗೂ ಶ್ರೀಮತಿ ಇಂದಿರಾ ಗಾಂಧಿಯವರಿಗೆ ಕಷ್ಟಕಾಲ. ತುರ್ತು ಪರಿಸ್ಥಿತಿ ಕಾಲದಲ್ಲಿ ನಡೆದ ಅತಿರೇಕಗಳ ವಿಚಾರಣೆಗೆ ಏಪ್ರಿಲ್ ೧೮ ರಂದು ಷಹಾ ಆಯೋಗವನ್ನು ನೇಮಕಮಾಡಲಾಯಿತು. ಈ ಅವಧಿಯಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರ ಮೇಲೆ ಸುಮಾರು ೪೮ ಆರೋಪಗಳನ್ನು ಹೊರಿಸಿ ವಿಚಾರಣೆಗೆ ಗುರಿಪಡಿಸಲಾಯಿತು. ಪಕ್ಷದ ಚುನಾವಣಾ ಪ್ರಚಾರಕ್ಕೆ ಒದಗಿಸಿದ್ದ ಜೀಪ್‌ಗಳ ಹಗರಣದಲ್ಲಿ ಅಕ್ಟೋಬರ್ ೩ ರಂದು ಶ್ರೀಮತಿ ಇಂದಿರಾ ಗಾಂಧಿಯವರನ್ನು ಸಿ.ಬಿ.ಐ. ಪೋಲೀಸರು ಬಂಧಿಸಿದರು. ಅಕ್ಟೋಬರ್ ೪ ರಂದೇ ಅವರ ಬಿಡುಗಡೆಯೂ ಆಯಿತು. ಏಪ್ರಿಲ್ ೧೬ ರಂದು ಕಾಂಗ್ರೆಸ್ ಪಕ್ಷದಲ್ಲಿ ಸಮಾಜವಾದಿ ಕಾಂಗ್ರೆಸ್ಸಿಗರ ಒಂದು ಗುಂಪು ಎಚ್. ಡಿ. ಮಾಳವೀಯ ನೇತೃತ್ವದಲ್ಲಿ ರಚನೆಯಾಗಿ, ಪಕ್ಷದ ಸೋಲಿಗೆ ಹಾಗೂ ತುರ್ತುಸ್ಥಿತಿ ಜಾರಿಗೆ ಶ್ರೀಮತಿ ಇಂದಿರಾ

ಗಾಂಧಿ, ಸಂಜಯ್‌ರನ್ನು ನೇರ ಹೊಣೆಗಾರರು ಎಂದು ಟೀಕಿಸಿತು. ಮೇ ೫,೬, ೧೯೭೭ರಂದು ದೆಹಲಿಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ನಡೆಯಿತು. ವೇದಿಕೆಯಲ್ಲಿ ನೆಹರೂ ಹಾಗೂ ಶ್ರೀಮತಿ ಇಂದಿರಾ ಗಾಂಧಿ ಭಾವಚಿತ್ರವನ್ನು ಹಾಕಿಲ್ಲವೆಂದು ಅವರ ಬೆಂಬಲಿಗರು ಪ್ರತಿಭಟಿಸಿದರು. ಟಿ.ಎ.ಪೈ, ಎಂ.ವಿ. ಕೃಷ್ಣಪ್ಪ, ಭಗವತ್ ಝಾ ಆಜಾದ್ ವೇದಿಕೆಯಿಂದ ದುಷ್ಟಕೂಟವನ್ನು ಹಳಿದರು.

ದಿನಾಂಕ ೬ ರಂದು ಅಖಿಲ ಭಾರತದ ಕಾಂಗ್ರೆಸ್ ಕಾಂಗ್ರೆಸ್ ಸಮಿತಿ ಅಧ್ಯಕ್ಷತೆಗೆ ಚುನಾವಣೆ ನಡೆಯಿತು. ३೭೭ ಮತಗಳನ್ನು ಗಳಿಸಿದ ಬ್ರಹ್ಮಾನಂದರೆಡ್ಡಿ ಅಧ್ಯಕ್ಷರಾಗಿ ಆಯ್ಕೆಯಾದರು. ರೆಡ್ಡಿಯವರ ಪ್ರಬಲ ಪ್ರತಿಸ್ಪರ್ಧಿ ಸಿದ್ದಾರ್ಥ ಶಂಕರ ರೇ ೧೬೦ ಮತಗಳನ್ನು, ಕರಣಸಿಂಗ್ ೧೬ ಮತಗಳನ್ನು, ನೇಕ್‌ರಾಮ್ ಶರ್ಮಾ ३ ಮತಗಳನ್ನೂ ಪಡೆದು ಪರಾಭವಗೊಂಡರು. ಬ್ರಹ್ಮಾನಂದರೆಡ್ಡಿಯವರಿಗೆ ಇಂದಿರಾ ಗಾಂಧಿ ಬೆಂಬಲ ನೀಡಿದ್ದರು. ಮೇ ೭ ರಂದು ಕಾರ್ಯಕಾರಿ ಸಮಿತಿಗೆ ನಡೆದ ಚುನಾವಣೆಯಲ್ಲಿ ಎಂಟು ಜನ ಇಂದಿರಾ ಗಾಂಧಿ ಬೆಂಬಲಿಗರು ಸದಸ್ಯರಾಗಿ ಆಯ್ಕೆಯಾದರು. ಚಂದ್ರಜಿತ್‌ಯಾದವ್, ಪ್ರಿಯರಂಜನ್‌ದಾಸ್ ಮುನ್ಷಿ ಕೂಡಾ ಸಮಿತಿ ಸದಸ್ಯರಾಗಿ ಆಯ್ಕೆಯಾದರು. ಇವರು ಇಂದಿರಾ ಗಾಂಧಿ ವಿರೋಧಿ ಗುಂಪಿಗೆ ಸೇರಿದ್ದರು. ಅಧ್ಯಕ್ಷ ರೆಡ್ಡಿಯವರು ೧೦ ಜನರನ್ನು ಕಾರ್ಯಕಾರಿ ಸಮಿತಿಗೆ ನಾಮಕರಣ ಮಾಡಿದರು. ಅದರಲ್ಲಿ ಇಂದಿರಾ ಗಾಂಧಿಯವರೂ ಒಬ್ಬರು. ಸಿದ್ದಾರ್ಥ ಶಂಕರರೇ ಕಾರ್ಯಕಾರಿ ಸಮಿತಿ ಸದಸ್ಯರಾಗಲು ಒಪ್ಪಲಿಲ್ಲ.

ಜೂನ್ ೧೦ ರಿಂದ ೧೪ ರವರೆಗೆ ಹತ್ತು ರಾಜ್ಯಗಳು ಹಾಗೂ ಎರಡು ಕೇಂದ್ರಾಡಳಿತ ಪ್ರದೇಶಗಳಲ್ಲಿ ಚುನಾವಣೆ ನಡೆಯಿತು. ಈ ಚುನಾವಣಾ ಪ್ರಚಾರ ಕಾರ್ಯಗಳಲ್ಲಿ ಇಂದಿರಾ ಗಾಂಧಿಯವರು ಭಾಗವಹಿಸಲಿಲ್ಲ. ಈ ಎಲ್ಲಾ ರಾಜ್ಯಗಳಲ್ಲಿ ಜನತಾ ಪಕ್ಷ ಹಾಗೂ ಅದರ ಮಿತ್ರಪಕ್ಷಗಳು ಜಯಭೇರಿ ಬಾರಿಸಿ ಅಧಿಕಾರಕ್ಕೆ ಬಂದವು. ಕಾಂಗ್ರೆಸ್ ಸಾಧನೆ ನಿರಾಶಾದಾಯಕವಾಗಿತ್ತು. ಜೂನ್ ೨३ ರಂದು, ರಾಜ್ಯಗಳ ಚುನಾವಣಾ ಫಲಿತಾಂಶ ಪರಿಶೀಲನೆಗೆ ಕಾರ್ಯಕಾರಿ ಸಮಿತಿ ಸಭೆ ಸೇರಿತು. ಇಂದಿರಾ ಗಾಂಧಿಯವರು ಈ ಸಭೆಗೆ ಹಾಜರಾಗಲಿಲ್ಲ. ತುರ್ತು ಪರಿಸ್ಥಿತಿ ಜಾರಿಗೆ ತರುವ ವಿಚಾರ ಕೊನೆಯವರೆಗೂ ತಮಗೆ ತಿಳಿದಿರಲಿಲ್ಲವೆಂದೂ, ಕೊನೆಯಲ್ಲಿ ತಾವು ಹಾಗೂ ಪಿ. ಎನ್. ಹಕ್ಸರ್ ಇದನ್ನು ವಿರೋಧಿಸಿದ್ದಾಗಿಯೂ ರೆಡ್ಡಿ ಸಭೆಯಲ್ಲಿ ಹೇಳಿದರು. ಜುಲೈ ೨೨ ರಂದು ಇಂದಿರಾ ಗಾಂಧಿ ಚವಾಣ್‌ರವರಿಗೂ ತಿಳಿಸದೇ ಪವನಾರ್ ಆಶ್ರಮಕ್ಕೆ ಹೋಗಿ ವಿನೋಬಾಜೀ ಅವರನ್ನು ಭೇಟಿ ಮಾಡಿದರು. ತುರ್ತುಪರಿಸ್ಥಿತಿಯನ್ನು ವಿನೋಬಾ ಖಂಡಿಸಿರಲಿಲ್ಲ. ಈ ಸಂದರ್ಭದಲ್ಲಿ ದಾರಿಯ ಉದ್ದಕ್ಕೂ ಅಲ್ಲಲ್ಲಿ ಶ್ರೀಮತಿ ಇಂದಿರಾ ಗಾಂಧಿ ಅನೇಕ ಸಾರ್ವಜನಿಕ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಜನ ಅಪಾರ ಸಂಖ್ಯೆಯಲ್ಲಿ ಸೇರಿದ್ದರು.

ಈ ಸಂದರ್ಭದಲ್ಲಿ ಕಾಂಗ್ರೆಸ್ ಅಧ್ಯಕ್ಷ ಬ್ರಹ್ಮಾನಂದರೆಡ್ಡಿಯವರು ಪ್ರದೇಶ ಹಾಗೂ ಜಿಲ್ಲಾ ಕಾಂಗ್ರೆಸ್ ಸಮಿತಿಗಳನ್ನು ಆಮೂಲಾಗ್ರವಾಗಿ ಬದಲಾಯಿಸಲಾಗುವುದೆಂದು ಪ್ರಕಟಿಸಿದರು. ಮೊದಲನೆಯದಾಗಿ ಜುಲೈ ೨೬ ರಂದು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದ ಎಸ್. ಬಿ. ನಾಗರಾಳ್ ಅವರನ್ನು ಬದಲಾಯಿಸಿ ಆ ಸ್ಥಾನಕ್ಕೆ ಕೆ. ಎಚ್. ಪಾಟೀಲರನ್ನು ನೇಮಿಸಲಾಯಿತು. ಇಂದಿರಾ ಗಾಂಧಿಯವರ ಕಟ್ಟಾ ಬೆಂಬಲಿಗರಾಗಿದ್ದ ದೇವರಾಜ ಅರಸರನ್ನು ಗಮನದಲ್ಲಿಟ್ಟುಕೊಂಡು, ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಕೈಗೊಂಡ ಕ್ರಮ ಇದೆಂದು ರಾಜಕೀಯ ಪಂಡಿತರು ಹೇಳಿದರು. ಬ್ರಹ್ಮಾನಂದರೆಡ್ಡಿ, ಚವಾಣ್ ಮತ್ತು ಇಂದಿರಾ ಗಾಂಧಿ ಇವರ ನಡುವೆ ಭಿನ್ನಾಭಿಪ್ರಾಯಗಳು ಬೆಳೆಯತೊಡಗಿದವು. ೨೭ ಜುಲೈ ೧೯೭೭ ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿತು. ವ್ಯಕ್ತಿ ಪೂಜೆಯ ಬಗ್ಗೆ ಖಂಡನೆ, ಶ್ರೀಮತಿ ಇಂದಿರಾ ಗಾಂಧಿ ರಾಜಕೀಯ ಮರುಪ್ರವೇಶದ ಬಗ್ಗೆ ಟೀಕೆ ಕೇಳಿಬಂತು. ಶ್ರೀಮತಿ ಇಂದಿರಾ ಹಾಗೂ ಚವಾಣ್ ಮತ್ತು ಬ್ರಹ್ಮಾನಂದರೆಡ್ಡಿ ಇವರುಗಳನ್ನು ಒಗ್ಗೂಡಿಸುವ ಪ್ರಯತ್ನಗಳು ಪ್ರಾರಂಭವಾದವು. ಆಗಸ್ಟ್ ३ ರಂದು ಕರ್ನಾಟಕದ ಸಂಸತ್ ಸದಸ್ಯರೂ ಆಗಸ್ಟ್ ೫ ರಂದು ಇಂದಿರಾ ಬೆಂಬಲಿಗರೂ ಲೋಕಸಭೆಯಲ್ಲಿ ಕಾಂಗ್ರೆಸ್ ಪಕ್ಷದ ಮುಖ್ಯ ಸಚೇತಕರಾಗಿದ್ದ ಎಂ. ವಿ. ಕೃಷ್ಣಪ್ಪನವರನ್ನು ಭೇಟಿಯಾಗಿ, ಇಂದಿರಾ, ಚವಾಣ್, ರೆಡ್ಡಿ ಈ ತ್ರಿಮೂರ್ತಿಗಳನ್ನು ಒಂದೆಡೆ ಸೇರಿಸಿ ಭಿನ್ನಾಭಿಪ್ರಾಯವನ್ನು ಬಗೆಹರಿಸಲು ಒಂದು ಸೌಹಾರ್ದ ಕೂಟವನ್ನು ಏರ್ಪಡಿಸಬೇಕೆಂದು ಒತ್ತಾಯಿಸಿದರು. ಆದರೆ ರೆಡ್ಡಿ, ಚವಾಣ್ ಇದಕ್ಕೆ ಒಪ್ಪಲಿಲ್ಲ. ಇಂದಿರಾ ಗಾಂಧಿಯವರೇ ಈ ಬಗ್ಗೆ ಪಕ್ಷದ ಹಿರಿಯ ನಾಯಕರ ಜೊತೆ ಚರ್ಚಿಸಬಹುದು ಎಂದರು. ಆದರೆ ಶ್ರೀಮತಿ ಇಂದಿರಾ ಗಾಂಧಿ ಇವರುಗಳ ಭೇಟಿಯನ್ನು ಉದ್ದೇಶಪೂರ್ವಕವಾಗಿ ತಪ್ಪಿಸುತ್ತಿದ್ದರು.

ಸಿ. ಸುಬ್ರಹ್ಮಣ್ಯಂರವರು ಈ ಮೂರೂ ಜನರನ್ನು ಒಟ್ಟುಗೂಡಿಸಲು ಯತ್ನಿಸುತ್ತಿದ್ದರು. ಇವರ ಪ್ರಯತ್ನದಿಂದ ಇಂದಿರಾ ಗಾಂಧಿಯವರು ಕಾರ್ಯಕಾರಿ ಸಮಿತಿ ಹಾಗೂ ಪಕ್ಷದ ಪಾರ್ಲಿಮೆಂಟರಿ ಸಮಿತಿ ಸಭೆಗಳಿಗೆ ಹಾಜರಾಗಲು ಒಪ್ಪಿದರು. ಪಕ್ಷದ ನಿರ್ಧಾರಗಳಲ್ಲಿ ತಮ್ಮ ಮಾತಿಗೂ ಬೆಲೆ ಇರಬೇಕೆಂದರು. ಆಗಸ್ಟ್ ೭ ರಂದು ನಡೆದ ಕಾರ್ಯಕಾರಿ ಸಮಿತಿ ಸಭೆಗೆ ಹಾಜರಾದರು. ಜನತಾ ಸರ್ಕಾರ ಎಂದು ಕರೆಯಬಾರದು, ಜನತಾ ಪಕ್ಷದ ಸರ್ಕಾರ ಎಂದು ಕರೆಯಬೇಕು ಎಂಬುದಾಗಿ ತಾವು ಮಂಡಿಸಿದ ಒಂದು ನಿರ್ಣಯದಲ್ಲಿ ಸೂಚಿಸಿದರು.

ಮೇ ತಿಂಗಳಲ್ಲಿ ಬಿಹಾರದ ಬೆಲ್ಚಿಯಲ್ಲಿ ನಡೆದ ಒಂದು ಹತ್ಯಾಕಾಂಡದಲ್ಲಿ ೧೧ ಹರಿಜನರನ್ನು ಸಜೀವವಾಗಿ ದಹಿಸಲಾಗಿತ್ತು, ಈ ಊರಿಗೆ ಆಗಸ್ಟ್ ೧೬, ೧೭ ರಂದು ಭೇಟಿ ನೀಡುವುದಾಗಿ ಕಾಂಗ್ರೆಸ್ ಪಕ್ಷದ ನಾಯಕ ವೈ. ಬಿ. ಚವಾಣ್ ಹೇಳಿದ್ದರು. ಆದರೆ ಇಂದಿರಾ ಗಾಂಧಿಯವರು ಹಠಾತ್ತಾಗಿ ಆಗಸ್ಟ್ ೧೩ ರಂದು ಬೆಲ್ಚಿಗೆ ಭೇಟಿ ನೀಡಿದರು. ಇಂದಿರಾ ಅವರ ಈ ಭೇಟಿಗೆ ಭಾರೀ ಪ್ರಚಾರ ದೊರೆಯಿತು. ಆಗಸ್ಟ್ ೧೪ ರಂದು ಅವರು ಪಾಟ್ನಾದಲ್ಲಿ ಜಯಪ್ರಕಾಶ್ ನಾರಾಯಣರನ್ನೂ ಭೇಟಿ ಮಾಡಿದರು. ತಮ್ಮ ರಾಜಕೀಯ ಪುನರುತ್ಥಾನಕ್ಕೆ ಇಂದಿರಾ ಗಾಂಧಿ ಲೆಕ್ಕಾಚಾರದ, ದೃಢವಾದ ಹೆಜ್ಜೆಗಳನ್ನು ಇರಿಸತೊಡಗಿದರು. ಆಗಸ್ಟ್ ೨೩ರಂದು ಕಾಂಗ್ರೆಸ್ ಸಂಸತ್‌ಸದಸ್ಯರ ಒಂದು ಗುಂಪು ಸಭೆ ಸೇರಿ ಇಂದಿರಾ ಗಾಂಧಿ ಹಾಗೂ ತುರ್ತು ಪರಿಸ್ಥಿತಿ ದುಷ್ಟಕೂಟ ಸದಸ್ಯರ ಪುನರಾಗಮನಕ್ಕೆ ವಿರೋಧ ವ್ಯಕ್ತಪಡಿಸಿತು. ಈ ಬಗ್ಗೆ ಕಾರ್ಯಕಾರಿ ಸಮಿತಿ ಸಭೆ ಸೇರಿ ದೃಢವಾದ ನಿರ್ಧಾರ ತೆಗೆದುಕೊಳ್ಳಬೇಕೆಂದು ಒತ್ತಾಯಿಸಿತು.

ಆದರೆ ಆಗಸ್ಟ್ ೧೪ ರಂದು ಪಕ್ಷದ ಆರು ಕೋಟಿ ಹಣ ದುರುಪಯೋಗದ ಆಪಾದನೆ ಮೇಲೆ, ಪಿ.ಸಿ. ಸೇಠಿ, ಆರ್.ಕೆ. ಧವನ್, ಯಶ್‌ಪಾಲ್ ಕಪೂರ್ ಇವರುಗಳನ್ನು ಬಂಧಿಸಲಾಯಿತು. ಇವರೆಲ್ಲಾ ಇಂದಿರಾ ಗಾಂಧಿಯವರ ಆಪ್ತವಲಯಕ್ಕೆ ಸೇರಿದವರಾಗಿದ್ದರು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸಭೆ ಆಗಸ್ಟ್ ೨೪ ಮತ್ತು ೨೫ ರಂದು ಸೇರಿತು. ಜನತಾ ಪಕ್ಷದ ಸರ್ಕಾರ ಕಾಂಗ್ರೆಸ್ ಪಕ್ಷವನ್ನು ನಾಶಮಾಡಲು ಸಂಚುಮಾಡಿದೆ ಎಂಬ ನಿರ್ಣಯವನ್ನು ಅಂಗೀಕರಿಸಲಾಯಿತು. ಆದರೆ ಭ್ರಷ್ಟಾಚಾರವನ್ನು ಕಾಂಗ್ರೆಸ್ ಸಮರ್ಥಿಸುವುದಿಲ್ಲ ಎಂದು ಹೇಳಲಾಯಿತು. ಆದರೆ ಇಂದಿರಾ ಗಾಂಧಿ ಬೆಂಬಲಿಗರ ಬಂಧನದ ಬಗ್ಗೆ ಏನೂ ಹೇಳಲಿಲ್ಲ. ಅಕ್ಟೋಬರ್ ೩, ೧೯೭೭ ರಂದು ಸಿ.ಬಿ.ಐ. ಪೋಲೀಸರು ಇಂದಿರಾ ಗಾಂಧಿಯವರನ್ನು ಬಂಧಿಸಿದರು. ೪ ರಂದು ನ್ಯಾಯಾಲಯ ಅವರನ್ನು ಬಿಡುಗಡೆ ಮಾಡಿತು. ದಿನಾಂಕ ೩-೪ ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿ ಶ್ರೀಮತಿ ಇಂದಿರಾ ಗಾಂಧಿ ಬಂಧನವನ್ನು ಖಂಡಿಸಿತು. ಅಕ್ಟೋಬರ್ ೯ ರಂದು ದಮನವಿರೋಧಿ ದಿನಾಚರಣೆ ಆಚರಿಸಲಾಯಿತು. ಮುಂದೆ ಈ ರೀತಿಯ ಬಂಧನಗಳಾದರೆ ಜನರು ತಮ್ಮ ತಮ್ಮ ಪ್ರದೇಶಗಳಲ್ಲೇ ಪ್ರತಿಭಟಿಸಬೇಕೆಂದು ಕರೆ ನೀಡಿದರು.

ಅಕ್ಟೋಬರ್ ೫ ರಿಂದ ಮೂರು ದಿನಗಳ ಕಾಲ ಇಂದಿರಾ ಗಾಂಧಿ ಗುಜರಾತ್ ಪ್ರವಾಸ ಕೈಗೊಂಡರು. ಜನತಾ ಪಕ್ಷದ ಸರ್ಕಾರ ಕಾಂಗ್ರೆಸ್ ಪಕ್ಷ ಬಡವರ ಪರ ಕಾರ್ಯಕ್ರಮಗಳನ್ನು ಕೈಬಿಡುತ್ತಿದೆ ಎಂದು ಆಪಾದಿಸಿದರು. ಇಂದಿರಾ ಗಾಂಧಿಯವರ ಬಹಿರಂಗ ಸಭೆಗಳಿಗೆ ಭಾರೀ ಜನ ಜಂಗುಳಿ ಇತ್ತು. ಇಂದಿರಾ ಗಾಂಧಿಯವರನ್ನೇ ಕಾಂಗ್ರೆಸ್ ಪಕ್ಷದ ಅಧ್ಯಕ್ಷರನ್ನಾಗಿ ಆರಿಸುವ ನಿಟ್ಟಿನಲ್ಲಿ ಅವರ ಬೆಂಬಲಿಗರು ಅಕ್ಟೋಬರ್ ೭ ರಂದು ಪ್ರಯತ್ನಗಳನ್ನು ಆರಂಭಿಸಿದರು. ಅಕ್ಟೋಬರ್ ೧೧ ರಂದು ದೆಹಲಿಯ ಕರ್ನಾಟಕ ಭವನದಲ್ಲಿ ಇಂದಿರಾ ಗಾಂಧಿ ಬೆಂಬಲಿಗರು ಸಭೆ ಸೇರಿ ಚರ್ಚಿಸಿದರು. ಬಂಧನದ ನಂತರ ನ್ಯಾಯಾಲಯದಿಂದ ಬೇಷರತ್ ಬಿಡುಗಡೆಯಾದ ಮೇಲೆ ಇಂದಿರಾ ಗಾಂಧಿಯವರ ಪ್ರತಿಷ್ಠೆ ಪ್ರಭಾವ ಹೆಚ್ಚಿತು. ಇದನ್ನು ಪಕ್ಷದ ಬಲವರ್ಧನೆಗೆ ಉಪಯೋಗಿಸಿಕೊಳ್ಳಬೇಕು, ಅವರನ್ನೆ ಅಧ್ಯಕ್ಷರನ್ನಾಗಿ ಮಾಡಬೇಕು ಎಂಬ ವಿಚಾರಗಳು ಪ್ರಸ್ತಾಪವಾದವು. ರೆಡ್ಡಿ, ಚವಾಣ್ ಈ ಚಹಾಕೂಟಕ್ಕೆ ಹಾಜರಾಗಲಿಲ್ಲ. ಪಕ್ಷದಲ್ಲಿ ಏಕತೆ ಮೂಡಿಸುವ ವಿಚಾರದಲ್ಲಿ ಅನೇಕ ಸಭೆಗಳು ಮಾತುಕತೆಗಳು ನಡೆದವು. ಸಿ. ಸುಬ್ರಹ್ಮಣ್ಯಂ ಇದರಲ್ಲಿ ಪ್ರಧಾನ ಪಾತ್ರ ವಹಿಸಿದ್ದರು. ರೆಡ್ಡಿಯವರೇ ಕಾಂಗ್ರೆಸ್ ಅಧ್ಯಕ್ಷರಾಗಿ ಮುಂದುವರಿಯುವುದು, ಪಕ್ಷದ ನೀತಿ ನಿರ್ಧಾರಗಳ ತೀರ್ಮಾನದಲ್ಲಿ ಇಂದಿರಾ ಗಾಂಧಿಯವರಿಗೆ ಪ್ರಾಧಾನ್ಯತೆ ನೀಡುವುದು ಎಂಬ ಸೂತ್ರ ಮಂಡಿಸಲಾಯಿತು. ಆದರೆ ರೆಡ್ಡಿ ಇದಕ್ಕೆ ಒಪ್ಪಲಿಲ್ಲ. ಅಕ್ಟೋಬರ್ ೧೪ ರಂದು ಸೇರಿದ್ದ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಇಂದಿರಾ ಗಾಂಧಿಯವರ ಬಂಧನದ ಬಗ್ಗೆ ಜನತಾ ಪಕ್ಷದ ಸರ್ಕಾರವನ್ನು ಖಂಡಿಸಿತು. ಪಕ್ಷದ ಏಕತೆ ಸೂತ್ರಕ್ಕೆ ಅದು ತನ್ನ ಒಪ್ಪಿಗೆ ನೀಡಲಿಲ್ಲ. ಬ್ರಹ್ಮಾನಂದರೆಡ್ಡಿಯವರು ನಾನು ರಬ್ಬರ್‌ಸ್ಟಾಂಪ್ ಅಧ್ಯಕ್ಷನಾಗಲಾರೆ, ಪಕ್ಷದ ಪದಾಧಿಕಾರಿಗಳ ಚುನಾವಣೆ ಏಪ್ರಿಲ್ ೧೯೭೮ರಲ್ಲಿ ನಡೆಯುವವರೆಗೆ ನಾನು ಅಧ್ಯಕ್ಷನಾಗಿರುತ್ತೇನೆ ಎಂದರು.

ಇಂದಿರಾ ಗಾಂಧಿ ಬೆಂಬಲಿಗರು ಅಕ್ಟೋಬರ್ ೧೪ ರಂದು ಕರ್ನಾಟಕ ಭವನದಲ್ಲಿ ಸಭೆ ಸೇರಿದರು. ಸುಮಾರು ೧೪೦ ಜನ ಹಾಜರಿದ್ದರು. ದೇವರಾಜ ಅರಸರು ಈ ಸಭೆಯನ್ನು ಏರ್ಪಡಿಸಿದ್ದರು. ಇಲ್ಲಿ ಏರ್ಪಡಿಸಿದ್ದ ಚಹಾಕೂಟಕ್ಕೆ ರೆಡ್ಡಿಯವರನ್ನು ಆಹ್ವಾನಿಸಲಾಗಿತ್ತು, ಆದರೆ ಅವರು ಹಾಜರಾಗಲಿಲ್ಲ. ಈ ಸಭೆ ಮುಗಿದ ತಕ್ಷಣ ಸುಮಾರು ೮೦-೧೦೦ ಇಂದಿರಾ ಗಾಂಧಿ ಬೆಂಬಲಿಗರು ಪ್ರಣವ್ ಮುಖರ್ಜಿ, ವಸಂತ ಸಾಠೆ, ತಾರಕೇಶ್ವರಿ ಸಿನ್ಹಾ ನೇತೃತ್ವದಲ್ಲಿ ಬ್ರಹ್ಮಾನಂದರೆಡ್ಡಿಯವರ ಮನೆಗೆ ಧಾವಿಸಿ, ಅವರ ರಾಜೀನಾಮೆಗೆ ಒತ್ತಾಯಿಸಿದರು. ಇಂದಿರಾ ಗಾಂಧಿಯವರು ಬಂಧನಕ್ಕೆ ಒಳಗಾದುದಕ್ಕೆ ನಾನು ರಾಜೀನಾಮೆ ನೀಡಬೇಕೇ, ನಾನು ಆ ದಿನ ತಕ್ಷಣ ಅವರನ್ನು ಹೋಗಿ ಭೇಟಿ ಮಾಡಿ, ಅದೇ ದಿನ ಕಾರ್ಯಕಾರಿ ಸಮಿತಿ ಸಭೆ ಕರೆದು ಇಂದಿರಾ ಗಾಂಧಿ ಬಂಧನವನ್ನು ಖಂಡಿಸಿದ್ದೇನೆ ಎಂದರು. ಅದೇ ದಿನ ಸುಮಾರು ೩೦೦ ಜನ ಯುವ ಕಾಂಗ್ರೆಸ್ಸಿಗರು ಇಂದಿರಾ ಗಾಂಧಿಯವರಿಗೆ ಬೆಂಬಲ ವ್ಯಕ್ತಪಡಿಸಿ ದೆಹಲಿಯಲ್ಲಿ ಮೆರವಣಿಗೆ ನಡೆಸಿದರು. ಈ ರೀತಿಯ ಎಲ್ಲ ಒತ್ತಡಗಳಿಗೆ ಬ್ರಹ್ಮಾನಂದ ರೆಡ್ಡಿಯವರು ಮಣಿಯದೇ ಹೋದಾಗ ಹಸ್ತಾಕ್ಷರ

ಚಳವಳಿಯನ್ನು ಆರಂಭಿಸಲಾಯಿತು. ಬ್ರಹ್ಮಾನಂದರೆಡ್ಡಿ ಕೂಡಲೇ ರಾಜೀನಾಮೆ ನೀಡಬೇಕು, ಇಂದಿರಾ ಗಾಂಧಿಯವರು ಕಾಂಗ್ರೆಸ್ ಅಧ್ಯಕ್ಷರಾಗಬೇಕು, ಅಧ್ಯಕ್ಷರು ರಾಜೀನಾಮೆ ನೀಡದಿದ್ದರೆ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಕೋರಿಕೆ ಮೇರೆಗೆ ಅಧಿವೇಶನ ಕರೆಯಬೇಕೆಂಬ ಮನವಿ ಪತ್ರ ತಯಾರಿಸಲಾಯಿತು. ಅದಕ್ಕೆ ೬೫೭ ಎ.ಐ.ಸಿ.ಸಿ. ಸದಸ್ಯರ ಪೈಕಿ ೪೧೧ ಜನರು ಸಹಿ ಹಾಕಿದ್ದರೆಂದು ತಿಳಿದುಬಂದಿತು.

ಈ ಮೊದಲೇ ಕರೆದಿದ್ದಂತೆ ಅಕ್ಟೋಬರ್ ೧೫ ರಂದು ಕಾಂಗ್ರೆಸ್ ಅಧಿವೇಶನ ದೆಹಲಿಯಲ್ಲಿ ಸೇರಿತು. ಇಂದಿರಾ ಗಾಂಧಿ ಬೆಂಬಲಿಗರು ನಾಯಕತ್ವ ಬದಲಾವಣೆಗೆ ಒತ್ತಾಯಿಸಿದರೂ ನಂತರ ಅಧಿವೇಶನ ಸಾವಧಾನವಾಗಿ ನಡೆಯಿತು. ಜನತಾ ಪಕ್ಷದ ದಮನಕಾರಿ ನೀತಿಯ ಬಗ್ಗೆ ರೆಡ್ಡಿಯವರು ಖಂಡನೆ ಮಾಡಿದರು. ಆದರೆ ಇಂದಿರಾ ಗಾಂಧಿಯವರು ಮಾತನಾಡಿ, ಕಳೆದ ಆರು ತಿಂಗಳ ಕಾಂಗ್ರೆಸ್ ಹಿರಿಯ ನಾಯಕರ ಸಾಧನೆಯ ಬಗ್ಗೆ ತಮ್ಮ ಕೋಪತಾಪಗಳನ್ನು ಪ್ರದರ್ಶಿಸಿದರು. 'ಕಾರ್ಯಕರ್ತರಿಗೆ ಹಾಗೂ ಜನತೆಗೆ ಮಾರ್ಗದರ್ಶನ ಮಾಡುವಲ್ಲಿ ಇವರು ವಿಫಲರಾಗಿದ್ದಾರೆ, ಕೆಲವು ಕಾಂಗ್ರೆಸ್ ನಾಯಕರು ನನ್ನ ಬಂಧನವಾಗಬೇಕೆಂದು ಇಚ್ಛಿಸಿದ್ದರು, ಅವರು ಜನತಾ ಪಕ್ಷದ ಜೊತೆ ಸಂಪರ್ಕ ಇರಿಸಿಕೊಂಡಿದ್ದರು. ನನ್ನ ವಿರುದ್ಧ ಕೆಲವರು ಹೇಳಿಕೆಗಳನ್ನು ನೀಡುತ್ತಿದ್ದಾರೆ, ಅವರ ಬಗ್ಗೆ ಹೇಳಲು ನನ್ನ ಹತ್ತಿರವೂ ಬೇಕಾದಷ್ಟಿದೆ. ನಾನು ನಾಯಕತ್ವಕ್ಕಾಗಿ ಆಸೆ ಪಡುತ್ತಿಲ್ಲ, ಅದು ಈಗ ನನಗೆ ಬೇಕಾಗಿಲ್ಲ, ದುಷ್ಟಕೂಟ ಎಂಬುದು ಜನರ ಕಲ್ಪನೆ' ಎಂದು ಗುಡುಗಿದರು. ಮಾರನೆಯ ದಿವಸ ಇಂದಿರಾ ಗಾಂಧಿಯವರ ಭಾಷಣದ ಬಗ್ಗೆ ರೆಡ್ಡಿ, ಚವಾಣ್ ಹಾಗೂ ಹಿರಿಯ ನಾಯಕರು ತಮ್ಮ ತೀವ್ರ ಅಸಂತೋಷ ವ್ಯಕ್ತಪಡಿಸಿದರು. ಅನೇಕ ನಾಯಕರು ವಾತಾವರಣವನ್ನು ತಿಳಿಗೊಳಿಸಲು ಯತ್ನಿಸಿದರು. ತಮ್ಮ ಭಾಷಣದ ಬಗ್ಗೆ ಇಂದಿರಾ ಗಾಂಧಿಯವರು ವಿಷಾದ ವ್ಯಕ್ತಪಡಿಸಬೇಕೆಂದು ರೆಡ್ಡಿ, ಚವಾಣ್ ಆಶಿಸಿದರು.

ಇಂದಿರಾ ಗಾಂಧಿಯವರು ಪತ್ರಕರ್ತರೊಡನೆ ಮಾತನಾಡುತ್ತ 'ನಾನು ಯಾರ ಹೆಸರನ್ನೂ ಹೇಳಿಲ್ಲ. ಆದುದರಿಂದ ಕೆಲವರು ನನ್ನ ಮಾತುಗಳು ತಮಗೆ ಅನ್ವಯಿಸುತ್ತದೆಂದು ತಿಳಿದುಕೊಳ್ಳುವುದು ತಪ್ಪು' ಎಂದರು. ಕೋರಿಕೆ ಅಧಿವೇಶನದ ಬಗ್ಗೆ 'ಅದನ್ನು ನಾನು ಬೆಂಬಲಿಸುವುದೂ ಇಲ್ಲ. ಅಲ್ಲಗಳೆಯುವುದೂ ಇಲ್ಲ' ಎಂದರು. ಅಕ್ಟೋಬರ್ ೧೮ ರಂದು ಕಾಂಗ್ರೆಸ್ ಪಾರ್ಲಿಮೆಂಟರಿ ಮಂಡಳಿ ಸಭೆ ನಡೆದು ಈಗಿನ ನಾಯಕತ್ವ ಏಪ್ರಿಲ್ ೭೮ರವರೆಗೆ ಮುಂದುವರಿಯುತ್ತದೆಂದು ತೀರ್ಮಾನಿಸಿತು. ಕೋರಿಕೆ ಅಧಿವೇಶನಕ್ಕೆ ಒತ್ತಾಯ ಜಾಸ್ತಿ ಆಯಿತು. ಅದು ಪಕ್ಷದ ಸಂವಿಧಾನಕ್ಕೆ ವಿರುದ್ಧ ಎಂದು ರೆಡ್ಡಿಯವರು ಅಕ್ಟೋಬರ್ ೨೦ರಂದು ಹೇಳಿದರು. ಅಕ್ಟೋಬರ್ ೨೧ ರಂದು ರೆಡ್ಡಿಯವರು ಎಲ್ಲಾ ಕಾಂಗ್ರೆಸ್ ಮುಖ್ಯಮಂತ್ರಿಗಳು ಹಾಗೂ ನಾಯಕರಿಗೆ ಪತ್ರ ಬರೆದು ಪಕ್ಷದಲ್ಲಿ ಏಕತೆಯನ್ನು ಕಾಪಾಡಿಕೊಂಡು ಹೋಗುವಂತೆ ವಿನಂತಿ ಮಾಡಿದರು. ಇಂದಿರಾ ಗಾಂಧಿ ಬೆಂಬಲಿಗರು ಕೋರಿಕೆ ಅಧಿವೇಶನದ ಪತ್ರಕ್ಕೆ ಸಹಿ ಹಾಕುತ್ತಿರುವವರ ಸಂಖ್ಯೆ ಜಾಸ್ತಿಯಾಗುತ್ತಿದೆ ಎಂದು ಹೇಳಿದರು. ಸುಮಾರು ೪೧೧ ಸದಸ್ಯರ ಸಹಿ ಇದ್ದ ಮನವಿ ಪತ್ರವನ್ನು ಅವರು ಅಕ್ಟೋಬರ್ ೨೫ರಂದು ಕಮಲಾಪತಿ ತ್ರಿಪಾಠಿಯವರಿಗೆ ನೀಡಿ ಅದನ್ನು ಸೂಕ್ತಕಾಲದಲ್ಲಿ ಬ್ರಹ್ಮಾನಂದರೆಡ್ಡಿಯವರಿಗೆ ತಲುಪಿಸುವ ಅಧಿಕಾರವನ್ನು ಅವರಿಗೆ ನೀಡಿದರು. ಅಕ್ಟೋಬರ್ ೨೭ರಂದು ಚವಾಣ್‌ರವರು ಇಂದಿರಾ ಗಾಂಧಿಯವರೊಡನೆ ಮುಕ್ತ ಮಾತುಕತೆ ನಡೆಸಿದರು. ಕೋರಿಕೆ ಪತ್ರದ ಬಗ್ಗೆ ಒತ್ತಾಯ ಮಾಡುವುದಿಲ್ಲ ಎಂದು ಇಂದಿರಾ ಗಾಂಧಿ ತಿಳಿಸಿದರು. ತಾವು ಯಾವತ್ತೂ ಏಕತೆಯ ಪರ, ಪಕ್ಷವನ್ನು ಒಡೆಯುವ ಇಚ್ಛೆ ತಮಗಿಲ್ಲವೆಂದು ಇಂದಿರಾ ತಿಳಿಸಿದರು. ಕೋರಿಕೆ ಪತ್ರವನ್ನು ಕೈಬಿಡುವ ವಿಚಾರದಲ್ಲಿ ತಾವು ಏನೂ ಹೇಳುವುದಿಲ್ಲ ಎಂದರು. ಅಕ್ಟೋಬರ್ ೨೯, ೩೦ ರಂದು ತಮಿಳುನಾಡಿಗೆ ಭೇಟಿ ನೀಡಿದ ಇಂದಿರಾ ಗಾಂಧಿ, ನವೆಂಬರ್ ೩ ರಿಂದ ಮೂರು ದಿನಗಳ ಕಾಲ ಕರ್ನಾಟಕದಲ್ಲಿ ಪ್ರವಾಸ ಮಾಡಿದರು. ಇದಕ್ಕೆ ಕೆ. ಎಚ್. ಪಾಟೀಲ್ ನೇತೃತ್ವದ ಕೆ.ಪಿ.ಸಿ.ಸಿ. ವಿರೋಧ ವ್ಯಕ್ತಪಡಿಸಿತ್ತು. ಕರ್ನಾಟಕದ ಭೇಟಿ ಸಂದರ್ಭದಲ್ಲಿ ಬೆಂಗಳೂರು ಸೇರಿದಂತೆ ಅನೇಕ ಕಡೆ ಗಲಭೆಗಳಾದವು. ಆಂಧ್ರ ಭೇಟಿಯನ್ನು ಅವರು ರದ್ದು ಪಡಿಸಿದರು.

ಕೋರಿಕೆ ಅಧಿವೇಶನ ಹಾಗೂ ಕೋರಿಕೆ ಪತ್ರವನ್ನು ಬ್ರಹ್ಮಾನಂದರೆಡ್ಡಿಯವರಿಗೆ ನೀಡುವ ಬಗ್ಗೆ, ಎರಡೂ ಗುಂಪುಗಳಲ್ಲಿ ಸಾಮರಸ್ಯ ಏರ್ಪಡಿಸುವ ಬಗ್ಗೆ, ಇಂದಿರಾ, ರೆಡ್ಡಿ, ಚವಾಣ್ ಈ ತ್ರಿಮೂರ್ತಿಗಳ ಸಭೆ ಏರ್ಪಡಿಸಿ ಬಿಕ್ಕಟ್ಟನ್ನು ಪರಿಹರಿಸುವ ಬಗ್ಗೆ ಸಭೆಗಳು, ಸಮಾಲೋಚನೆಗಳು ನಡೆದೇ ಇದ್ದವು. ೧-೧೧-೭೭ರಂದು ಚಂದ್ರಜಿತ್‌ಯಾದವ್, ವೈ.ಬಿ. ಚವಾಣ್ ಸಭೆ ಸೇರಿ ಚರ್ಚಿಸಿದರು. ೪-೧೧-೭೭ ರಂದು ವಸಂತ್‌ರಾವ್ ಪಾಟೀಲ್, ವಿ. ಬಿ. ರಾಜು ಈ ಬಗ್ಗೆ ನಾಗಪುರ, ಹೈದರಾಬಾದ್‌ನಲ್ಲಿ ಹೇಳಿಕೆ ನೀಡಿದರು. ೫-೧೧-೭೭ರಂದು ವಸಂತ್‌ಸಾಠೆ ಇಂದಿರಾ ಗಾಂಧಿಗೆ ಪಕ್ಷದ ಒಡಕು ಬೇಡ, ಆದರೆ ಪಕ್ಷದಲ್ಲಿ ಗೌರವಾನ್ವಿತ ಸ್ಥಾನ ಬೇಕು ಎಂದು ಹೇಳಿದರು. ೭-೧೧-೭೭ ರಂದು ಇಂದಿರಾ ಗಾಂಧಿ ಗುಂಪು ರಾಜಿಗೆ ಸಿದ್ಧವೆಂದೂ ಆದರೆ ಎ.ಐ.ಸಿ.ಸಿ. ಕರೆದು ಪಕ್ಷದ ಬಲಾಬಲ ಪರೀಕ್ಷೆ ಮಾಡಬೇಕೆಂದೂ ಹೇಳಿತು. ಬ್ರಹ್ಮಾನಂದರೆಡ್ಡಿಯವರು ನವೆಂಬರ್ ೭ ರಂದು ಹೈದರಾಬಾದ್‌ನಲ್ಲಿ ಮಾತನಾಡುತ್ತಾ ಇಂದಿರಾ ಗಾಂಧಿ ಅವರನ್ನು ಪಕ್ಷದಿಂದ ದೂರ ಇರಿಸಲು ಮೇ ೬ ರಂದು ನಡೆದ ಎ.ಐ.ಸಿ.ಸಿ.ಯಲ್ಲಿ ಸಾಮೂಹಿಕ ನಾಯಕತ್ವದ ನಿರ್ಧಾರ

ಕೈಗೊಳ್ಳಲಾಗಿದೆ. ಸಂಸದೀಯ ಮತ್ತು ಕಾರ್ಯಕಾರಿ ಮಂಡಲಿ ಸದಸ್ಯರಾದ ಇಂದಿರಾ ಗಾಂಧಿಯವರು ಪಕ್ಷದ ವಿಚಾರದಲ್ಲಿ ಯಾವುದೇ ರೀತಿಯ ಸಲಹೆ ಬೇಕಾದರೂ ನೀಡಬಹುದು ಎಂದರು. ೧೫-೧೧-೭೭ರಂದು ದೆಹಲಿಯ ಕರ್ನಾಟಕ ಭವನದಲ್ಲಿ ಕೋರಿಕೆ ಮನವಿ ಸಭೆ ನಡೆಯಿತು. ಇಂದಿರಾ-ಅರಸು ಭೇಟಿ ಹಾಗೂ ಮಾತುಕತೆ ನಡೆಯಿತು. ಸಿ. ಸುಬ್ರಹ್ಮಣ್ಯಂ ಹಾಗೂ ಡಿ. ಪಿ. ಸಿಂಗ್‌ರವರು ಬಿಕ್ಕಟ್ಟಿನ ಇತ್ಯರ್ಥಕ್ಕೆ ಒಂದು ಸೂತ್ರ ರೂಪಿಸಿದರು. ಮನವಿದಾರರು ತಮ್ಮ ಮನವಿ ಪತ್ರ ಹಿಂತೆಗೆದುಕೊಳ್ಳುವರು, ಆದರೆ ಕಾಂಗ್ರೆಸ್ ಅಧ್ಯಕ್ಷರು ವಿಧಾನಸಭಾ ಚುನಾವಣೆಗಳಲ್ಲಿ ಪಕ್ಷದ ಟಿಕೆಟ್ ನೀಡುವ ವಿಚಾರದಲ್ಲಿ, ಪಕ್ಷದ ಪದಾಧಿಕಾರಿಗಳ ಹುದ್ದೆಯ ವಿಚಾರದಲ್ಲಿ ಕೆಲವು ಹೊಂದಾಣಿಕೆ ಮಾಡಿಕೊಳ್ಳಬೇಕೆಂಬುದು ಈ ಸೂತ್ರದ ಮುಖ್ಯ ಅಂಶವಾಗಿತ್ತು. ಕೊನೆಗೆ ವಿಶೇಷ ಎ.ಐ.ಸಿ.ಸಿ. ಅಧಿವೇಶನ ಕೋರಿಕೆ ಮನವಿಯನ್ನು ೧೮-೧೧-೭೭ರಂದು ಬ್ರಹ್ಮಾನಂದ ರೆಡ್ಡಿಯವರಿಗೆ ನೀಡುವುದೆಂದು ತೀರ್ಮಾನವಾಯಿತು. ಆದರೆ ೧೭-೧೧-೭೭ ರಂದು ಇಂದಿರಾ ಗಾಂಧಿಯವರ ನಿವಾಸದಲ್ಲಿ ಮನವಿದಾರರ ಸಭೆ ನಡೆಯಿತು. ದೇವರಾಜ ಅರಸ್, ಕಮಲಾಪತಿ ತ್ರಿಪಾಠಿ, ಕೆ. ಸಿ. ಪಂತ್, ವಿ. ಪಿ. ಸಾಠೆ, ಅರ್ಜುನ್‌ಸಿಂಗ್ ಇವರಿಗೆ ತಮ್ಮ ಸಂಧಾನ ಮುಂದುವರಿಯುವ ನಿರೀಕ್ಷೆ ಉಂಟಾಯಿತು.

## ವಿಭಜನೆಯಲ್ಲಿ ದೇವರಾಜ ಅರಸರ ಪಾತ್ರ

೧೯೬೯ರ ಕಾಂಗ್ರೆಸ್ ವಿಭಜನೆ ಕಾಲದಲ್ಲಿ ಇಂದಿರಾ ಗಾಂಧಿಯವರ ಜೊತೆಗಿದ್ದು, ೧೯೭೧ ಹಾಗೂ ೧೯೭೨ರ ಲೋಕಸಭಾ ಮತ್ತು ವಿಧಾನಸಭಾ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಪಕ್ಷದ ಗೆಲುವಿಗೆ ಕಾರಣರಾಗಿದ್ದ ದೇವರಾಜ ಅರಸರು ಮುಖ್ಯಮಂತ್ರಿಗಳಾಗಿ ಅಧಿಕಾರದಲ್ಲಿದ್ದರು. ಅವರು, ಅವರ ಮಂತ್ರಿಮಂಡಲದ ಅನೇಕ ಸದಸ್ಯರು, ಬಹುತೇಕ ಶಾಸಕರು ಇಂದಿರಾ ಗಾಂಧಿಯವರ ಪ್ರಬಲ ಬೆಂಬಲಿಗರಾಗಿದ್ದರು. ೧೯೭೨ರ ವಿಧಾನಸಭಾ ಚುನಾವಣೆಗಳ ನಂತರ ಮೊದಲು ಸಚಿವರಾಗಿ, ಆ ನಂತರ ಕೆ.ಪಿ.ಸಿ.ಸಿ ಅಧ್ಯಕ್ಷರಾಗಿ, ಮತ್ತೆ ಸಚಿವರಾಗಿ ನೇಮಕಗೊಂಡಿದ್ದ ಕೆ. ಎಚ್. ಪಾಟೀಲರು ಹಾಗೂ ಅವರ ಗುಂಪು ದೇವರಾಜ ಅರಸರನ್ನು ವಿರೋಧಿಸುತ್ತಾ ಭಿನ್ನ ಮತೀಯರೆನಿಸಿಕೊಂಡಿದ್ದರು. ೨೮ ಮಾರ್ಚ್ ೭೮ರಂದು ದೇವರಾಜ ಅರಸು ಸಚಿವ ಸಂಪುಟದ ಸದಸ್ಯರಾಗಿದ್ದ ಕೆ. ಎಚ್. ಪಾಟೀಲರು ಅರಸು ಕೋರಿಕೆ ಮೇರೆಗೆ ೨೮ ಅಕ್ಟೋಬರ್ ೭೩ ರಂದು ರಾಜೀನಾಮೆ ನೀಡಿದರು. ೧೯೭೪ರ ಡಿಸೆಂಬರ್ ಹೊತ್ತಿಗೆ ಕೆ. ಎಚ್. ಪಾಟೀಲರು ಪುನಃ ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿ ನೇಮಿಸಲ್ಪಟ್ಟರು. ಪಕ್ಷಕ್ಕೂ ಸರ್ಕಾರಕ್ಕೂ ತಿಕ್ಕಾಟ ಜಾಸ್ತಿಯಾಯಿತು. ಭಿನ್ನಮತ ಬೆಳೆಯಿತು. ಕೊನೆಗೆ ವರಿಷ್ಠರು ರಾಜೀಸೂತ್ರ ಮಂಡಿಸಿ ಕೆ. ಎಚ್. ಪಾಟೀಲರು ೫-೨-೭೭ರಂದು ಸಚಿವ ಸಂಪುಟದ ಸದಸ್ಯರಾಗುವಂತೆ ನೋಡಿಕೊಂಡರು. ಮತ್ತೆ ಭಿನ್ನಮತ ಜಾಸ್ತಿ ಆಯಿತು, ಕೆ. ಎಚ್. ಪಾಟೀಲರ ಬೆಂಬಲಿಗರಾದ ಎಚ್. ಸಿದ್ದವೀರಪ್ಪ, ಮಹಮದ್ ಅಲಿ, ಎನ್. ಹುಚ್ಚಮಾಸ್ತಿಗೌಡ, ಎಸ್. ಎಂ. ಕೃಷ್ಣ ಎನ್. ಚಿಕ್ಕೇಗೌಡ, ಸಿ. ಎನ್. ಪಾಟೀಲ್ ಇವರಿಂದ ಸಚಿವ ಸ್ಥಾನಕ್ಕೆ ರಾಜೀನಾಮೆ ಪಡೆದ ದೇವರಾಜ ಅರಸರು, ಅದೇ ದಿನ ಅಂದರೆ ೨೭-೭-೭೭ ರಂದು ಕೆ. ಎಚ್. ಪಾಟೀಲರನ್ನು ಸಚಿವ ಸಂಪುಟದಿಂದ ವಜಾ ಮಾಡಿದರು.

ಇದಕ್ಕೆ ಮುನ್ನಾದಿನವೇ ಅಂದರೆ ೨೬-೭-೭೭ರಂದು ಅಖಿಲಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಬ್ರಹ್ಮಾನಂದರೆಡ್ಡಿಯವರು, ಕೆ.ಪಿ.ಸಿ.ಸಿ. ಅಧ್ಯಕ್ಷ ಎಸ್. ಬಿ. ನಾಗರಾಳ ಅವರನ್ನು ಕಿತ್ತುಹಾಕಿ ಆ ಸ್ಥಾನಕ್ಕೆ ಕೆ. ಎಚ್. ಪಾಟೀಲರನ್ನು ನೇಮಕ ಮಾಡಿದ್ದರು. ಆ ನಂತರ ದೇವರಾಜ ಅರಸರು ಪಾಟೀಲರನ್ನು ಶಾಸಕಾಂಗ ಪಕ್ಷದಿಂದ ಸಸ್ಪೆಂಡ್ ಮಾಡಿದರೆ., ಕೆ. ಎಚ್. ಪಾಟೀಲರು ದೇವರಾಜ ಅರಸರನ್ನು ಪಕ್ಷದಿಂದ ಸಸ್ಪೆಂಡ್ ಮಾಡಿದರು. ಡಿಸೆಂಬರ್ ೭೩ರಲ್ಲಿ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದ್ದ ಹೆಚ್. ಎನ್. ನಂಜೇಗೌಡ, ಬಿ. ಶಿವಣ್ಣ ಮೊದಲಾದವರು ಕೆ.ಪಿ.ಸಿ.ಸಿ. ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ದೇವರಾಜ ಅರಸರು ಕಾಂಗ್ರೆಸ್ಸಿಗರೇ ಅಲ್ಲ ಎಂದು ಕೆ. ಎಚ್. ಪಾಟೀಲರು ಹೇಳುತ್ತಿದ್ದರು. ಈ ಹಂತದಲ್ಲಿ ಇಂದಿರಾ ಗಾಂಧಿ ಹಾಗೂ ಬ್ರಹ್ಮಾನಂದರೆಡ್ಡಿ ವಿರಸ ತಲೆದೋರಿತ್ತು. ನವೆಂಬರ್ ೭೭ರ ವೇಳೆಗೆ ಅದು ಪರಕಾಷ್ಠೆಗೆ ಮುಟ್ಟಿತು. ಅಖಿಲ ಭಾರತ ಮಟ್ಟದ ಕಾಂಗ್ರೆಸ್ ಬಿಕ್ಕಟ್ಟು ಹಾಗೂ ಕರ್ನಾಟಕ ಪ್ರದೇಶ ಕಾಂಗ್ರೆಸ್ ಬಿಕ್ಕಟ್ಟು ಒಂದಕ್ಕೊಂದಕ್ಕೆ ತಳುಕು ಹಾಕಿಕೊಂಡಿತು. ಎರಡನ್ನೂ ಒಟ್ಟಿಗೆ ಬಗೆಹರಿಸಬೇಕೆಂದು ದೇವರಾಜ ಅರಸರು ಒತ್ತಾಯ ಮಾಡತೊಡಗಿದರು. ಕೋರಿಕೆ ಎ.ಐ.ಸಿ.ಸಿ. ಅಧಿವೇಶನಕ್ಕೆ ಸಹಿ ಸಂಗ್ರಹಣೆ, ಇಂದಿರಾ ಬೆಂಬಲಿಗರ ಸಭೆಗಳನ್ನು ಏರ್ಪಡಿಸುವಲ್ಲಿ ದೇವರಾಜ ಅರಸರು ಪ್ರಧಾನ ಪಾತ್ರ ವಹಿಸುತ್ತಿದ್ದರು.

ಈ ಹಂತದಲ್ಲಿ ದೇವರಾಜ ಅರಸರು ಇಂದಿರಾ ಗಾಂಧಿಯವರನ್ನು ರಾಜ್ಯ ಪ್ರವಾಸಕ್ಕೆ ಕರೆಸಿದರು. ಈ ಬಗ್ಗೆ ಹಾಗೂ ಇತರ ವಿಚಾರಗಳ ಬಗ್ಗೆ ಚರ್ಚಿಸಲು ಅರಸರು ೩೦-೧೦-೭೭ ರಂದು ಬಾಲುಬ್ರೂಯಿಯಲ್ಲಿ ತಮ್ಮ ಬೆಂಬಲಿಗರ ಸಭೆ ಕರೆದರು. ಈ ಸಭೆಯಲ್ಲಿ ಭಾಗವಹಿಸುವವರ ಮೇಲೆ ಶಿಸ್ತು ಕ್ರಮ ಕೈಗೊಳ್ಳಲಾಗುವುದೆಂದು ಪಾಟೀಲರು ಗುಡುಗಿದರು. ಪಕ್ಷದ ಅಂಗರಚನೆಗೆ ವಿರುದ್ಧವಾಗಿ

ವರ್ತಿಸುತ್ತಿದ್ದ ೧೭ ಜನರಿಗೆ ಈಗಾಗಲೇ ಶೋಕಾಸ್ ನೋಟೀಸ್ ನೀಡಲಾಗಿದೆ ಎಂದು ಪಾಟೀಲರು ಹೇಳಿದರು. ಇಂದಿರಾ ಗಾಂಧಿಯವರು ರಾಜ್ಯ ಪ್ರವಾಸ ಕೈಗೊಳ್ಳಬಾರದೆಂದು, ರೈತರು, ವಿದ್ಯಾರ್ಥಿಗಳು ದೇವರಾಜ ಅರಸರ ವಿರುದ್ಧ ತಿರುಗಿ ಬಿದ್ದಿದ್ದಾರೆಂದು, ದೇವರಾಜ ಅರಸರ ಸಂಪರ್ಕ ಕಡಿದುಕೊಳ್ಳಬೇಕೆಂದು ಪಾಟೀಲರು, ರಾಜ್ಯ ಕಾರ್ಯಕಾರಿ ಸಮಿತಿಯವರು, ೧೮ ಜಿಲ್ಲಾ ಕಾಂಗ್ರೆಸ್ ಸಮಿತಿಗಳವರು, ಸಂಸದೀಯ ಪಕ್ಷದ ಉಪನಾಯಕ ಮುಲ್ಕಾ ಗೋವಿಂದರೆಡ್ಡಿ, ಸಂಸತ್ತಿನ ಕಾಂಗ್ರೆಸ್ ಶಾಸಕಾಂಗ ಪಕ್ಷದ ಮುಖ್ಯ ಸಚೇತಕ ಎಂ. ವಿ. ಕೃಷ್ಣಪ್ಪ, ಅನೇಕ ಶಾಸಕರು ಇಂದಿರಾ ಗಾಂಧಿಯವರಿಗೆ ಮನವಿ ಮಾಡಿದರು. ಈ ಸಮಯದಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ಚಳವಳಿ ಹಾಗೂ ಮಂಡ್ಯ ಜಿಲ್ಲೆಯಲ್ಲಿ ವರುಣಾನಾಲೆ ಚಳವಳಿಗಳು ನಡೆದಿದ್ದವು. ಆದರೆ ಇಂದಿರಾ ಗಾಂಧಿಯವರು ೨-೧೧-೭೭ರಂದು ಹೈದರಾಬಾದ್‌ನಿಂದ ದೇವರಾಜ ಅರಸರ ಜೊತೆ ಕಾರಿನಲ್ಲೇ ಬಂದರು. ಆ ದಿನ ಗುಲಬರ್ಗಾ, ಬಿಜಾಪುರ, ಹುಬ್ಬಳ್ಳಿಗಳಲ್ಲಿ, ೩-೧೧-೭೭ರಂದು, ದಾವಣಗೆರೆ, ತಿಪಟೂರು, ಶಿವಮೊಗ್ಗ ಚಿಕ್ಕಮಗಳೂರು, ಹಾಸನದಲ್ಲಿ ೪-೧೧-೭೭ರಂದು, ಮೈಸೂರು, ಕನಕಪುರ, ಕೆ.ಜಿ. ಎಫ್. ಬೆಂಗಳೂರಿನಲ್ಲಿ ಬಹಿರಂಗ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಶಿವಮೊಗ್ಗದಲ್ಲಿ ಇಂದಿರಾರವರಿಗೆ ಕಲ್ಲಿನೇಟು ಬಿದ್ದಿತು. ಹಾಸನ, ತಿಪಟೂರು ಚಿಕ್ಕಮಗಳೂರುಗಳಲ್ಲೂ ಕಲ್ಲು, ಚಪ್ಪಲಿ ತೂರಾಟ ನಡೆಯಿತು. ಬೆಂಗಳೂರಿನಲ್ಲಿ ಭಾರೀ ಗಲಭೆಯಾಗಿ ಅಶ್ರುವಾಯು, ಲಾಠಿ ಚಾರ್ಜ್ ಮಾಡಲಾಯಿತು. ಈ ಬಗ್ಗೆ ವಿಷಾದ ವ್ಯಕ್ತಪಡಿಸಿದ ಇಂದಿರಾ ಗಾಂಧಿಯವರು, ಈ ಗಲಭೆಗಳ ಹಿಂದೆ ಕೆಲವರ ಕೈವಾಡ ಇರುವುದು ತಮಗೆ ಗೊತ್ತಿದೆ ಎಂದರು. ಅರಸು ವಿರೋಧಿ ಶಾಸಕರು ೭-೧೧-೭೭ರಂದು ದೆಹಲಿ ಯಾತ್ರೆ ಕೈಗೊಂಡರು. ಪ್ರಧಾನ ಕಾರ್ಯದರ್ಶಿ ಎಚ್. ಎನ್. ನಂಜೇಗೌಡರ ಪ್ರಕಾರ ೫೪ ವಿಧಾನಸಭಾ ಸದಸ್ಯರು, ೮ ವಿಧಾನ ಪರಿಷತ್ ಸದಸ್ಯರು, ೭ ಜನ ಸಂಸತ್ ಸದಸ್ಯರು ಅರಸು ವಿರೋಧಿ ಪಾಳೆಯದಲ್ಲಿದ್ದರೆಂದು ತಿಳಿದು ಬಂತು. ಅರಸು ಬಹುಮತ ಕಳೆದುಕೊಂಡಿದ್ದಾರೆ ಎಂದು ವಿರೋಧಿ ಬಣದವರು ಹೇಳತೊಡಗಿದರು. ೮ ರಂದು ಅರಸು ವಿರುದ್ಧ ಕೇಂದ್ರ ಶಿಸ್ತು ಸಮಿತಿಗೆ ದೂರು ನೀಡಲಾಯಿತು. ಶಿಸ್ತು ಸಮಿತಿ ಅದನ್ನು ಪರಿಶೀಲನೆಗೆ ತೆಗೆದುಕೊಂಡಿತು. ದೇವರಾಜು ಅರಸು ವಿರುದ್ಧದ ಆರೋಪಗಳ ತನಿಖೆಗೆ ಕೇಂದ್ರ ಸರ್ಕಾರ ಗ್ರೋವರ್ ಆಯೋಗವನ್ನು ನೇಮಿಸಿತ್ತು. ಈ ಬಗ್ಗೆ ಅರಸು ಸುಪ್ರೀಂ ಕೋರ್ಟ್‌ನಿಂದ ತಡೆಯಾಜ್ಞೆ ತಂದಿದ್ದರು. ಈ ತಡೆಯಾಜ್ಞೆಯನ್ನು ತೆರವು ಮಾಡಿದ ಸುಪ್ರೀಂ ಕೋರ್ಟ್ ೬-೧೧-೭೭ರಂದು ಅರಸು ಅರ್ಜಿಯನ್ನು ವಜಾಮಾಡಿತು. ದೇವರಾಜ ಅರಸರು ತಮ್ಮ ಮೇಲಿನ ಆರೋಪಗಳ ತನಿಖೆಗೆ ತಾವೇ ನೇಮಿಸಿಕೊಂಡಿದ್ದ ಮೀರ್ ಇಕ್ಬಾಲ್ ಹುಸೇನ್ ಆಯೋಗ ಅಸೂರ್ಜಿತ ಎಂದು ಹೈಕೋರ್ಟ್ ೨-೧೧-೭೭ರಂದು ತೀರ್ಪು ನೀಡಿತ್ತು. ಈ ಆಯೋಗದ ಮುಂದಿದ್ದ ೨೭ ಆಪಾದನೆಗಳೂ ಗ್ರೋವರ್ ಆಯೋಗದ ಮುಂದೆ ಬಂದವು.

೮-೧೧-೭೭ರಂದು ವರುಣಾ ನಾಲೆ ವಿರೋಧಿ ನಿಯೋಗ ಕೆ. ವಿ. ಶಂಕರಗೌಡ ಹಾಗೂ ಮಂಡ್ಯ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಕೆ. ಎನ್. ನಾಗೇಗೌಡರ ನೇತೃತ್ವದಲ್ಲಿ ದೆಹಲಿಗೆ ಹೋಗಿ ಪ್ರಧಾನಿಯವರನ್ನು ಭೇಟಿ ಮಾಡಿ ಮನವಿ ಸಲ್ಲಿಸಿತು. ೧೩-೧೧-೭೭ರಂದು ಸಚಿವ ಸಂಪುಟ ಸಭೆ ಸೇರಿ ದೇವರಾಜ ಅರಸರಿಗೆ ತನ್ನ ಪೂರ್ಣ ಬೆಂಬಲ ನೀಡಿತು. ಕಾಂಗ್ರೆಸ್ ಬಿಕ್ಕಟ್ಟಿನಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಲು ಅವರಿಗೆ ಅಧಿಕಾರ ನೀಡಿತು. ಈ ರೀತಿಯ ಪರಿಸ್ಥಿತಿಯಲ್ಲಿ ೧೭-೧೧-೭೭ರಂದು ಇಂದಿರಾ ಗಾಂಧಿ ನಿವಾಸದಲ್ಲಿ ನಡೆದ ಸಭೆಯಲ್ಲಿ ಕೋರಿಕೆ ಅಧಿವೇಶನದ ಮನವಿಯನ್ನು ತಾತ್ಕಾಲಿಕವಾಗಿ ರದ್ದು ಮಾಡಲಾಯಿತು.

## ವಿಭಜನೆಯ ಹಾದಿಯಲ್ಲಿ ಮುಂದುವರಿಕೆ

೧೭-೧೧-೭೭ರಂದು ಇಂದಿರಾ ಗಾಂಧಿ ವಿರುದ್ಧ ಲೋಕಸಭೆಯಲ್ಲಿ ಹಕ್ಕು ಚ್ಯುತಿ ಮಂಡಿಸಲ್ಪಟ್ಟು ಅದನ್ನು ಹಕ್ಕುಬಾಧ್ಯತಾ ಸಮಿತಿಗೆ ಒಪ್ಪಿಸಲಾಯಿತು. ೧೮-೧೧-೭೭ರಂದು ಬ್ರಹ್ಮಾನಂದರೆಡ್ಡಿಯವರ ಮನೆಯಲ್ಲಿ ಇಂದಿರಾ ಗಾಂಧಿ-ರೆಡ್ಡಿ ಮಾತುಕತೆ ನಡೆಯಿತು. ಕೋರಿಕೆ ಮನವಿ ಕೈಬಿಡಲು ಇಂದಿರಾ ಗಾಂಧಿ ಬೆಂಬಲಿಗರು ಒಂಬತ್ತು ಷರತ್ತುಗಳನ್ನು ವಿಧಿಸಿದರು. ಎ.ಐ.ಸಿ.ಸಿ. ಪುನರ್ರಚನೆ, ಅದರಲ್ಲಿ ಇಂದಿರಾ ಗಾಂಧಿಯವರಿಗೆ ಮಹತ್ವ ನೀಡುವುದು ಮುಖ್ಯ ಅಂಶಗಳಾಗಿದ್ದವು. ಸಭೆಯ ನಂತರ ಬ್ರಹ್ಮಾನಂದರೆಡ್ಡಿಯವರು ಹೇಳಿಕೆ ನೀಡಿ ಕೋರಿಕೆ ಸಭೆಗೆ ಬೇಡಿಕೆ ಇಲ್ಲ, ಕಾಂಗ್ರೆಸ್‌ನಲ್ಲಿ ಮೈತ್ರಿ, ವೈಯಕ್ತಿಕ ವಿರಸ ಕೈಬಿಡಿ ಎಂದು ಹೇಳಿಕೆ ನೀಡಿದರು. ಕಾಂಗ್ರೆಸ್‌ನ ಬಿರುಗಾಳಿ ಈಗ ಶಮನವಾಗಿದೆ ಎಂದು ರೆಡ್ಡಿ ದಿನಾಂಕ ೨೩-೧೧-೭೭ ರಂದು ಮದ್ರಾಸ್‌ನಲ್ಲಿ ಹೇಳಿಕೆ ನೀಡಿದರು. ೨೪-೧೧-೭೭ರಂದು ವರುಣಾ ನಾಲೆ ವಿರೋಧಿ ಚಳವಳಿಯಲ್ಲಿ, ಚಡ್ಡಿ ಧರಿಸಿದ ಐವತ್ತು ಸಹಸ್ರ ರೈತರ ಜಾಥಾ ಮಂಡ್ಯದಿಂದ ಬೆಂಗಳೂರಿಗೆ ಬಂತು. ದೇವರಾಜ ಅರಸ್, ಚಳವಳಿ ನಾಯಕ ಶಂಕರಗೌಡರನ್ನು ಭೇಟಿ ಮಾಡಿದರು. ಜಾಥಾವನ್ನುದ್ದೇಶಿಸಿ ಅರಸು ಭಾಷಣ ಮಾಡುತ್ತಿದ್ದಾಗ ಗೊಂದಲವಾಗಿ ಅವರ ಭಾಷಣ ಅರ್ಧಕ್ಕೆ ನಿಂತಿತು.

೨೭-೧೧-೭೭ ರಂದು ಕಾಂಗ್ರೆಸ್ ಐಕ್ಯತಾರಂಗದ ಸಭೆ ಕರೆಯುವುದಾಗಿ ಆರ್. ದಯಾನಂದ ಸಾಗರ್ ಹೇಳಿಕೆ ನೀಡಿದರು. ಈ ಸಭೆ ಸರಿಯಿಲ್ಲ ಎಂದು ಪಾಟೀಲ್ ಗುಂಪಿನ ಕೆ.ಪಿ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಪುಟ್ಟದಾಸು ಹೇಳಿದರೆ ಈ ಸಭೆಗೂ ನನಗೂ ಸಂಬಂಧ ಇಲ್ಲವೆಂದು ದೇವರಾಜ ಅರಸು ಹೇಳಿದರು. ಈ ಮಧ್ಯೆ ಹೈಕಮಾಂಡ್ ಕರ್ನಾಟಕದ ಸಮಸ್ಯೆಯನ್ನು ಬಗೆಹರಿಸದಿದ್ದಲ್ಲಿ ಅರಸು ಪ್ರತ್ಯೇಕ ಪಕ್ಷ ರಚನೆ ಮಾಡುತ್ತಾರೆಂಬ ಸುದ್ದಿಯೂ ಕೇಳಿ ಬಂದಿತು. ಕೆ. ಎಚ್. ಪಾಟೀಲರು ೨೮-೧೧-೭೭ ರಂದು ಬ್ಲಾಕ್ ಕಾಂಗ್ರೆಸ್ ಪದಾಧಿಕಾರಿಗಳ ಸಮ್ಮೇಳನ ನಡೆಸಿದರು. ಅದರಲ್ಲಿ ೨೦೯ ಬ್ಲಾಕ್ ಕಾಂಗ್ರೆಸ್ ಸಮಿತಿ ಅಧ್ಯಕ್ಷರು. ೧೯೬ ಉಪಾಧ್ಯಕ್ಷರು, ೯೮ ಇತರ ಬ್ಲಾಕ್ ಮಟ್ಟದ ಪದಾಧಿಕಾರಿಗಳು ಭಾಗವಹಿಸಿದ್ದರೆಂದೂ, ಇದು ಪಾಟೀಲರ ಬಲಾಬಲ ಪ್ರದರ್ಶನವೆಂದೂ ಸುದ್ದಿ ಹರಡಿತು. 'ಕಾಂಗ್ರೆಸ್ ಬಿಟ್ಟುಹೋಗುವವರು ಹೋಗಲಿ, ಕಾಂಗ್ರೆಸ್‌ಗೆ ವ್ಯಕ್ತಿಗಳು ಮುಖ್ಯವಲ್ಲ, ತತ್ವ ಆದರ್ಶ ಮುಖ್ಯ' ಎಂದು ಪಾಟೀಲರು ಹೇಳಿದರು.

೧-೧೧-೭೭ರಂದು ತೋಟಗಾರಿಕಾ ಸಚಿವ ವಿ. ಎಲ್ ಪಾಟೀಲ್ ಸಚಿವ ಸಂಪುಟಕ್ಕೆ ರಾಜೀನಾಮೆ ನೀಡಿ ಕೆ. ಎಚ್. ಪಾಟೀಲರ ಪಾಳಯದಲ್ಲಿ ಕಾಣಿಸಿಕೊಂಡರು. ೨-೧೨-೭೭ರಂದು ಎ.ಐ.ಸಿ.ಸಿ. ಕೇಂದ್ರ ವೀಕ್ಷಕರಾದ ಚಂದ್ರಜಿತ್ ಯಾದವ್ ರಾಜ್ಯ ಕಾಂಗ್ರೆಸ್ ಬಿಕ್ಕಟ್ಟನ್ನು ಪರಿಹರಿಸಲು ನಗರಕ್ಕೆ ಆಗಮಿಸಿದರು. ಸುಮಾರು ೧೫೦೦ ಕಾಂಗ್ರೆಸ್ ಕಾರ್ಯಕರ್ತರನ್ನು, ಅನೇಕ ನಾಯಕರುಗಳನ್ನು ಭೇಟಿಯಾಗಿ ಅಭಿಪ್ರಾಯ ಸಂಗ್ರಹಿಸಿದರು. ಹದಿನೈದು ದಿನಗಳ ಒಳಗಾಗಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರ ಆಯ್ಕೆಗೆ ಚುನಾವಣೆ ನಡೆಯದಿದ್ದರೆ ಮುಂದಿನ ಕ್ರಮ ತೆಗೆದುಕೊಳ್ಳುವುದಾಗಿ ಅರಸು ಬೆಂಬಲಿಗರು ಯಾದವ್‌ಗೆ ತಿಳಿಸಿದರು. ಅರಸು ನಾಯಕತ್ವ ಬದಲಿಸಲು ಕೆ. ಎಚ್. ಪಾಟೀಲ್, ಸಿದ್ದವೀರಪ್ಪ ಮೊದಲಾದ ನಾಯಕರು ಒತ್ತಾಯಿಸಿದರು. ೬-೧೨-೭೭ ರಂದು ಯಾದವ್ ಕರ್ನಾಟಕದ ಬಿಕ್ಕಟ್ಟಿನ ಪರಿಹಾರಕ್ಕೆ ಐದು ಅಂಶದ ಸೂತ್ರ ಪ್ರಕಟಿಸಿದರು. ವಿಧಾನಸಭಾ ಚುನಾವಣೆಗೆ ಅಭ್ಯರ್ಥಿಗಳ ಆಯ್ಕೆ ದೆಹಲಿಯಲ್ಲಿ, ದೇವರಾಜ ಅರಸು ಖಾಯಂ ಆಹ್ವಾನಿತರು, ಪ್ರದೇಶ ಕಾಂಗ್ರೆಸ್ ಚುನಾವಣಾ ಸಮಿತಿಯಲ್ಲಿ ಪಾಟೀಲರ ಗುಂಪಿಗಿಂತ ಅರಸು ಗುಂಪಿನ ಸದಸ್ಯರ ಸಂಖ್ಯೆ ಹೆಚ್ಚಾಗಿರುವುದು, ಅರಸು ಅವರು ರಚಿಸಿರುವ ಪರ್ಯಾಯ ಕಾಂಗ್ರೆಸ್ ಸಮಿತಿ ವಿಸರ್ಜನೆ, ಎಲ್ಲಾ ಶಿಸ್ತು ಕ್ರಮಗಳ ರದ್ದು, ಕೆ. ಎಚ್. ಪಾಟೀಲ್ ಕೆ. ಪಿ. ಸಿ. ಸಿ. ಅಧ್ಯಕ್ಷರಾಗಿ ಮುಂದುವರಿಯುವುದು, ಇವೇ ಆ ಐದು ಅಂಶಗಳಾಗಿತ್ತು. ಈ ಸೂತ್ರಕ್ಕೆ ಎರಡೂ ಬಣಗಳು ಅಸಮಾಧಾನ ವ್ಯಕ್ತಪಡಿಸಿದವು. ಈ ಸೂತ್ರದ ಬಗ್ಗೆ ಚರ್ಚಿಸಲು, ತ್ರಿಪಾಠಿ ಹಾಗೂ ಚವಾಣರನ್ನು ಭೇಟಿಯಾಗಲು ಅರಸು ನಿರಾಕರಿಸಿದರು.

ಕರ್ನಾಟಕದ ಸಮಸ್ಯೆ ಬಗ್ಗೆ ದೃಢನಿರ್ಧಾರ ತೆಗೆದುಕೊಳ್ಳಲು ೧೦-೧೨-೭೭ರಂದು ಕಾಂಗ್ರೆಸ್ ಕಾರ್ಯ ಸಮಿತಿ ದೆಹಲಿಯಲ್ಲಿ ಸಭೆ ಸೇರಿತು. ಆದರೆ ಕಾರ್ಯ ಸಮಿತಿ ಇಬ್ಭಾಗವಾಗಿ ಅದರ ೨೧ ಸದಸ್ಯರ ಪೈಕಿ ೧೦ ಜನ ಸದಸ್ಯರು ಇಂದಿರಾ ಗಾಂಧಿ ನಿವಾಸದಲ್ಲಿ ಸಭೆ ಸೇರಿದರು. ಕಮಲಾಪತಿ ತ್ರಿಪಾಠಿ, ಸೈಯದ್ ಮೀರ್ ಖಾಸಿಂ, ವಿ. ಪಿ. ನಾಯಕ್, ಶಂಕರದಯಾಳ್ ಶರ್ಮ, ಎಂ. ಪಿ. ಶರ್ಮಾ, ವೀರೇಂದ್ರವರ್ಮ, ಮರಗತಂ ಚಂದ್ರಶೇಖರ್, ಪಿ.ವಿ. ನರಸಿಂಹರಾವ್, ಬೂಟಾಸಿಂಗ್ ಇವರೇ ಇಂದಿರಾ ಗಾಂಧಿ ನಿವಾಸದಲ್ಲಿ ಸಭೆ ಸೇರಿದ್ದವರು. ಕೆ. ಸಿ. ಪಂತರ ಬೆಂಬಲ ಕೂಡ ತಮಗೇ ಇದೆ ಎಂದು ಕಾರ್ಯ ಸಮಿತಿ ಹೇಳಿತು. ಅರಸು, ವಿರುದ್ಧ ಕ್ರಮಕ್ಕೆ ಸ್ವಲ್ಪ ಕಾಲ ಕಾಯಲು ಪಾಟೀಲರ ಗುಂಪು ೧೧-೧೨-೭೭ರಂದು ನಿರ್ಧರಿಸಿತು. ೧೪-೧೨-೭೭ರಂದು ಅರಸು ಚವಾಣ್ ಭೇಟಿಯಾಗಿ ಮಾತುಕತೆ ನಡೆಸಿದರು. ಆದರೆ ಅದು ವಿಫಲವಾಯಿತು. ಕಾಂಗ್ರೆಸ್ ವಿಭಜನೆಯ ಹಂತ ತಲುಪಿತು. ಮುಖ್ಯಮಂತ್ರಿ ದೇವರಾಜ ಅರಸು ಪರವಾಗಿ ಬೆಂಗಳೂರಿನಲ್ಲಿ ಸಚಿವ ಅಜೀಜ್‌ಸೇಠ್‌ರವರು ಪೂರ್ವಭಾವಿ ಪ್ರಕಟಣೆ ನೀಡಿದರು. ಇದಕ್ಕಾಗಿ ಸೇಠ್‌ರನ್ನು ಸಂಪುಟದಿಂದ ಕೈಬಿಡುವಂತೆ ಬ್ರಹ್ಮಾನಂದರೆಡ್ಡಿ ಅರಸುಗೆ ಆದೇಶ ನೀಡಿದರು. ಅರಸು ಆದೇಶ ಪಾಲಿಸಲಿಲ್ಲ.

೧೮-೧೨-೭೭ರಂದು ಇಂದಿರಾ ಗಾಂಧಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿಗೆ ರಾಜೀನಾಮೆ ನೀಡಿದರು. ನಮ್ಮದೇ ನಿಜವಾದ ಕಾಂಗ್ರೆಸ್ ಎಂದು ಇಂದಿರಾ ಬೆಂಬಲಿಗರು ಹೇಳಿದರು. ದಿನಾಂಕ ೨೧-೧೨-೭೭ ರಂದು ಇಂದಿರಾ ಗಾಂಧಿ ಬೆಂಬಲಿಗರ ಸಭೆ ದೆಹಲಿಯಲ್ಲಿಯೇ ಏರ್ಪಾಡಾಯಿತು. ಬ್ರಹ್ಮಾನಂದರೆಡ್ಡಿಯವರು ೧೯-೧೨-೭೭ ರಂದು ಇಂದಿರಾ ಗಾಂಧಿ ರಾಜೀನಾಮೆ ಅಂಗೀಕರಿಸಿದರು. ಇಂದಿರಾ ಗಾಂಧಿ ಪರ ವಾದಿಗಳು ಕರೆದಿರುವ ಸಭೆಗೆ ಹಾಜರಾದವರ ಮೇಲೂ ಶಿಸ್ತು ಕ್ರಮ ಕೈಗೊಳ್ಳುವುದಾಗಿ ರೆಡ್ಡಿ ತಿಳಿಸಿದರು. ನಾನು ಕಾಂಗ್ರೆಸ್ ತ್ಯಜಿಸುವುದಿಲ್ಲವೆಂದು ಸ್ಪಷ್ಟನೆ ನೀಡಿದ ಇಂದಿರಾ ಗಾಂಧಿ ನನ್ನನ್ನು ಹೊರದೂಡಲು ನಾಯಕರು ಯತ್ನಿಸುತ್ತಿದ್ದಾರೆ, ಇವರಿಗೆ ದೇಶದ ಮುಂದಿರುವ ಸಮಸ್ಯೆಗಳ ಚಿಂತೆ ಇಲ್ಲ ಎಂದರು. ೨೧-೧೨-೭೭ ರಂದು ಇಂದಿರಾ ಗಾಂಧಿ ಬೆಂಬಲಿಗರು ಸಭೆ ನಡೆಸಿ ಡಿಸೆಂಬರ್ ೩೧ ಜನವರಿ ೧೯೭೮ರಂದು ಎ.ಐ.ಸಿ.ಸಿ ಅಧಿವೇಶನ ನಡೆಸಲು ತೀರ್ಮಾನಿಸಿದರು. ಇದೇ

ದಿನ ಕಾಂಗ್ರೆಸ್ ಪಕ್ಷದ ಸಂಸದೀಯ ಮಂಡಲಿ ಸಭೆ ನಡೆಯಿತು. ಅರಸು ವಿರುದ್ಧ ಯಾವುದೇ ಕ್ರಮ ಜರುಗಲಿಲ್ಲ. ಇದು ಪಾಟೀಲ್ ಗುಂಪಿಗೆ ನಿರಾಶೆ ತಂದಿತು. ಆದರೂ ಪಾಟೀಲರು ಐಕ್ಯತೆಗಾಗಿ ಸಂಸದೀಯ ಮಂಡಲಿ ನಡೆಸಿರುವ ಪ್ರಯತ್ನ ಸ್ವಾಗತಾರ್ಹ ಎಂದರು.

೨೩-೧೨-೭೭ ರಂದು ಪಾಟೀಲರ ನೇತೃತ್ವದಲ್ಲಿ ಅರಸು ವಿರೋಧಿ ಬಣದ ಬಲವರ್ಧನೆಗೆ ಯತ್ನ ನಡೆಯಿತು. ಪಾಟೀಲರೇ ಬೆಂಗಳೂರಿನ ಶಾಸಕರ ಭವನಕ್ಕೆ ಬಂದರು. ಉಪನಾಯಕ ಸಿದ್ಧವೀರಪ್ಪ ಎಲ್ಲಾ ಶಾಸಕರ ಬೆಂಬಲ ಕೋರಿ ಪತ್ರ ಬರೆದರು. ಈಗ ಅರಸು ವಿರೋಧಿ ಬಣದ ಸಂಖ್ಯೆ ೬೧ ಇದ್ದು, ಇದು ೯೧ ಕ್ಕೆ ಏರಬಹುದು ಎಂದು ಎಚ್. ಎನ್. ನಂಜೇಗೌಡ ತಿಳಿಸಿದರು. ೨೪-೧೨-೭೭ರಂದು ದೆಹಲಿಯಲ್ಲಿ ತ್ರಿಪಾಠಿ ನಿವಾಸದಲ್ಲಿ ಇಂದಿರಾ ಗಾಂಧಿ, ರೆಡ್ಡಿ, ಚವಾಣ್ ಈ ತ್ರಿಮೂರ್ತಿಗಳನ್ನು ಚಹಾ ಕೂಟದಲ್ಲಿ ಒಂದುಗೂಡಿಸಲಾಯಿತು. ೩೦೭ ಎ.ಐ.ಸಿ.ಸಿ. ಸದಸ್ಯರು, ಕಾರ್ಯಕಾರಿ ಸಮಿತಿ ಸದಸ್ಯರು ಹಾಜರಿದ್ದರು. ಆದರೆ ಈ ಚಹಾಕೂಟ ಯಾವುದೇ ಫಲ ನೀಡಲಿಲ್ಲ. ಕಾಂಗ್ರೆಸ್ ಪಕ್ಷ ವಿಭಜನೆಯಾದರೆ ನಮ್ಮ ಬೆಂಬಲ ಅರಸು ಮತ್ತು ಇಂದಿರಾ ಗಾಂಧಿಯವರಿಗೆ ಎಂದು ಕರ್ನಾಟಕ ಸಚಿವ ಸಂಪುಟದ ಸದಸ್ಯರು ೨೪ರಂದು ಸಭೆ ಸೇರಿ ತೀರ್ಮಾನಿಸಿದರು.

ಇಂದಿರಾ ಗಾಂಧಿ ಬಣದ ಅಧಿವೇಶನವನ್ನು ದಿನಾಂಕ ೧ ಮತ್ತು ೨ ರಂದು ದೆಹಲಿಯಲ್ಲಿ ನಡೆಸಲು ನಿರ್ಧರಿಸಲಾಯಿತು. ಪಕ್ಷ ವಿರೋಧಿ ಚಟುವಟಿಕೆಗಳಿಗಾಗಿ ದೇವರಾಜ ಅರಸರನ್ನು ಕಾಂಗ್ರೆಸ್ ಅಧ್ಯಕ್ಷ ಬ್ರಹ್ಮಾನಂದರೆಡ್ಡಿ ೨೬-೧೨-೭೭ರಂದು ಸಸ್ಪೆಂಡ್ ಮಾಡಿದರು. ಇದು ಪಕ್ಷದ ವಿಭಜನೆಗೆ ಮತ್ತೊಂದು ಹೆಜ್ಜೆ ಎಂದು ಅರಸರು ಪ್ರತಿಕ್ರಿಯಿಸಿದರು. ಕಾಂಗ್ರೆಸ್ ಶಾಸಕಾಂಗ ಪಕ್ಷದಿಂದ ಕೆ. ಎಚ್. ಪಾಟೀಲ್, ಸಿದ್ಧವೀರಪ್ಪ, ಹುಚ್ಚಮಾಸ್ತಿಗೌಡ, ಎಸ್. ಎಂ. ಕೃಷ್ಣ, ಮಹಮದ್ ಅಲಿ ಇವರುಗಳನ್ನು ದೇವರಾಜ ಅರಸರು ಸಸ್ಪೆಂಡ್ ಮಾಡಿದರು. ೨೭-೧೨-೭೭ರಂದು ಅರಸು ವಿರುದ್ಧ ಕ್ರಮವನ್ನು ಪ್ರತಿಭಟಿಸಿ ಕಾರ್ಯಕಾರಿ ಸಮಿತಿ ಸದಸ್ಯರಾದ ಕಮಲಾಪತಿ ತ್ರಿಪಾಠಿ, ಮೀರ್ ಖಾಸಿಂ, ಪಿ. ವಿ. ನರಸಿಂಹರಾವ್, ವೀರೇಂದ್ರ ವರ್ಮಾ, ಬೂಟಾಸಿಂಗ್, ಮರಗತಮ್ ಚಂದ್ರಶೇಖರ್, ಎ. ಪಿ. ಶರ್ಮಾ ಇವರುಗಳು ರಾಜೀನಾಮೆ ನೀಡಿದರು. ಜಗನ್ನಾಥ ಮಿಶ್ರಾ, ವಿ. ಸಿ. ಶುಕ್ಲಾ ಇಂದಿರಾ ಗಾಂಧಿಗೆ ತಮ್ಮ ಬೆಂಬಲ ವ್ಯಕ್ತಪಡಿಸಿದರು. ವಿ. ಪಿ. ನಾಯಕ್, ಸಿ. ಸುಬ್ರಹ್ಮಣ್ಯಂ, ಸ್ವರ್ಣಸಿಂಗ್, ಬ್ರಹ್ಮಾನಂದ ರೆಡ್ಡಿಯವರನ್ನು ಭೇಟಿ ಮಾಡಿ ಸಂಧಾನದ ಪ್ರಯತ್ನ ನಡೆಸಿದರು. ಇಂದಿರಾ ಗಾಂಧಿಯವರು ನಡೆಸುವ ಸಮಾವೇಶ ಪಕ್ಷ ವಿರೋಧಿ ಸಮಾವೇಶ ಎಂದು ಬ್ರಹ್ಮಾನಂದರೆಡ್ಡಿ, ವೈ. ಬಿ. ಚವಾಣ್ ಉಗ್ರವಾಗಿ ಟೀಕಿಸಿದರು.

೨೮.೧೨.೭೭ರ ಹೊತ್ತಿಗೆ ಅರಸು ವಿರೋಧಿ ಶಾಸಕರ ಸಂಖ್ಯೆ ೧೦೮ಕ್ಕೆ ಏರಿದೆ ಎಂದು ಪಾಟೀಲ್ ಗುಂಪಿನವರು ತಿಳಿಸಿದರು. ರಾಷ್ಟ್ರಪತಿ ಆಳ್ವಿಕೆಗೆ ಕೆಂಗಲ್ ಒತ್ತಾಯಿಸಿದರು. ೩೧-೧೨-೭೭ ರಂದು ಅರಸು ಸರ್ಕಾರವನ್ನು ವಜಾಮಾಡಿ ರಾಷ್ಟ್ರಪತಿ ಆಳ್ವಿಕೆಯನ್ನು ಜಾರಿಗೆ ತರಲಾಯಿತು. ೧-೧-೭೮ ರಂದು ದೆಹಲಿಯಲ್ಲಿ ಇಂದಿರಾ ಗಾಂಧಿ ಕಾಂಗ್ರೆಸ್ ಅಧಿವೇಶನ ಸೇರಿತು. ಶ್ರೀಮತಿ ಇಂದಿರಾ ಗಾಂಧಿ ಇದ್ದಲ್ಲೇ ಇಂಡಿಯಾ ಮತ್ತು ಇಂದಿರಾ ಗಾಂಧಿ ಇದ್ದಲ್ಲೇ ಕಾಂಗ್ರೆಸ್ ಎಂಬ ಘೋಷಣೆಯೊಂದಿಗೆ ಅಧಿವೇಶನ ಆರಂಭವಾಯಿತು. ಮತ್ತೆ ತಪ್ಪು ಮಾಡುವುದಿಲ್ಲ ಎಂದ ಶ್ರೀಮತಿ ಇಂದಿರಾಗಾಂಧಿ, ರಾಜಕೀಯದಿಂದ ದೂರ ಇರಲು ದುಷ್ಟ ಕೂಟಕ್ಕೆ ಸಲಹೆ ನೀಡಿದರು. ಅರಸು ಮೇಲಿನ ಶಿಸ್ತಿನ ಕ್ರಮವನ್ನು ಖಂಡಿಸಲಾಯಿತು. ಅಧಿವೇಶನದ ಅಧ್ಯಕ್ಷತೆಯನ್ನು ಇಂದಿರಾ ಗಾಂಧಿ ವಹಿಸಬೇಕೆಂದು ಕಮಲಾಪತಿ ತ್ರಿಪಾಠಿ ಸೂಚಿಸಿದರು. ಡಾ. ಚೆನ್ನಾರೆಡ್ಡಿ ಅನುಮೋದಿಸಿದರು. ತಮ್ಮದೇ ನಿಜವಾದ ಕಾಂಗ್ರೆಸ್ ಎಂದು ಭಾಷಣಕಾರರು ಹೇಳಿದರು. ಇಂದಿರಾ ಗಾಂಧಿಯವರು ಕಾಂಗ್ರೆಸ್ ಅಧ್ಯಕ್ಷರಾಗಿ ಪಕ್ಷವನ್ನು ಮುನ್ನಡೆಸಬೇಕು, ಬ್ರಹ್ಮಾನಂದರೆಡ್ಡಿಯವರನ್ನು ಪಕ್ಷದ ಅಧ್ಯಕ್ಷತೆಯಿಂದ ತೆಗೆದುಹಾಕಬೇಕು, ವೈ.ಬಿ. ಚವಾಣರನ್ನು ಸಂಸದೀಯ ಪಕ್ಷದ ನಾಯಕತ್ವದಿಂದ ತೆಗೆಯಬೇಕು ಎನ್ನುವುದು ಅಧಿವೇಶನದ ಒಟ್ಟಾರೆ ಅಭಿಪ್ರಾಯವಾಗಿತ್ತು. ಕಮಲಾಪತಿ ತ್ರಿಪಾಠಿ, ಮೀರ್ ಖಾಸಿಂ. ಪಿ. ವಿ. ನರಸಿಂಹರಾವ್ ಎಂ. ಪಿ. ಶರ್ಮಾ, ವೀರೇಂದ್ರವರ್ಮಾ, ಬೂಟಾಸಿಂಗ್, ಮರಗತಂ ಚಂದ್ರಶೇಖರ್ ಈ ಏಳು ಜನರ ಕಾರ್ಯಕಾರಿ ಸಮಿತಿ ನಿರ್ಧಾರದಂತೆ ಇಂದಿರಾಗಾಂಧಿಯವರು ಕಾಂಗ್ರೆಸ್ ಅಧ್ಯಕ್ಷರಾಗಬೇಕೆಂಬ ನಿರ್ಣಯವನ್ನು ಮೀರ್ ಖಾಸಿಂ ೨-೧-೭೮ರಂದು ಮಂಡಿಸಿದರು. ದೇವರಾಜ ಅರಸು, ಚೆನ್ನಾರೆಡ್ಡಿ, ಟಿ. ಅಂಜಯ್ಯ, ಉಮಾಶಂಕರ ದೀಕ್ಷಿತ್, ಜಗನ್ನಾಥ ಮಿಶ್ರಾ, ಎನ್. ಡಿ. ತಿವಾರಿ, ಜೆ. ಬಿ. ಪಟ್ನಾಯಕ್ ನಿರ್ಣಯವನ್ನು ಅನುಮೋದಿಸಿದರು. ಇಂದಿರಾ ಗಾಂಧಿ ಅಧ್ಯಕ್ಷರಾದರು. ಹೀಗೆ 'ಇಂದಿರಾ ಕಾಂಗ್ರೆಸ್' ಉದಯವಾಯಿತು. ನಾನು ಅಲ್ಪಾವಧಿಯ ಅಧ್ಯಕ್ಷೆ ಎಂದು ಇಂದಿರಾ ಗಾಂಧಿ ಹೇಳಿದರು. ಅಧಿವೇಶನದಲ್ಲಿ ೩೪೭ ಎ.ಐ.ಸಿ.ಸಿ. ಸದಸ್ಯರು, ೧೦೩ ಸಂಸತ್ ಸದಸ್ಯರು, ೯೬೭ ಶಾಸಕರು, ೨೦೦ ಮಾಜಿ ಸಂಸದರು, ಸಹಸ್ರಾರು ಕಾರ್ಯಕರ್ತರು ಭಾಗವಹಿಸಿದ್ದರೆಂದು ಹೇಳಲಾಯಿತು.

೪-೧-೭೮ ರಂದು ಇಂದಿರಾ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿ ಬ್ರಹ್ಮಾನಂದರೆಡ್ಡಿ ಹಾಗೂ ವೈ. ಬಿ. ಚವಾಣ್ ಅವರನ್ನು ಉಚ್ಚಾಟಿಸಿತು. ರೆಡ್ಡಿ ಗುಂಪಿಗೆ ಹಸು-ಕರು ಚಿಹ್ನೆ ನೀಡುವ ಬಗ್ಗೆ ತನ್ನ ಆಕ್ಷೇಪವನ್ನು ಚುನಾವಣಾ ಆಯೋಗಕ್ಕೆ ಸಲ್ಲಿಸಿತು. ದಿನಾಂಕ

೧೨-೧-೭೮ರಂದು ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ಇಂದಿರಾ ಕಾಂಗ್ರೆಸ್ ಪ್ರದೇಶ ಸಮಿತಿ ಸಭೆ ಸೇರಿತು. ಇಂದಿರಾ ಕಾಂಗ್ರೆಸ್‌ನ ಪ್ರದೇಶ ಸಮಿತಿ ಅಧ್ಯಕ್ಷ ಸ್ಥಾನಕ್ಕೆ ದೇವರಾಜ ಅರಸು ಅವರ ಹೆಸರನ್ನು ಬಸವಲಿಂಗಪ್ಪ, ಜಾಫರ್ ಷರೀಫ್, ಭಾಸ್ಕರ ನಾಯ್ಡು, ಭಾಸ್ಕರ ಶೆಟ್ಟಿ ಸೂಚಿಸಿದರು. ಅದು ಸರ್ವಾನುಮತದಿಂದ ಅಂಗೀಕಾರವಾಯಿತು. ಆರ್ಥಿಕ ಸಮಾನತೆ, ಸಮಾಜವಾದ ಆಧಾರಿತ ಸಮತಾವಾದಿ ತತ್ವ ನಿಷ್ಠ ಹೋರಾಟವೇ ಇಂದಿರಾ ಗಾಂಧಿ ಕಾಂಗ್ರೆಸ್ ಗುರಿ ಎಂದು ಅರಸು ಘೋಷಿಸಿದರು. ೨೨೧ ಚುನಾಯಿತ ಸದಸ್ಯರ ಪೈಕಿ ೧೮೭ ಮಂದಿ ಹಾಜರಿದ್ದರು. ೨೩-೧-೭೮ರಂದು ಚುನಾವಣಾ ಆಯೋಗ ಹಸು-ಕರು ಗುರುತನ್ನು ರೆಡ್ಡಿ ಕಾಂಗ್ರೆಸ್‌ಗೆ ನೀಡಿತು. ೨೯-೧-೭೮ ಮತ್ತು ೩೦-೧-೭೮ ರಂದು ಬೆಂಗಳೂರಿನಲ್ಲಿ ಇಂದಿರಾ ಕಾಂಗ್ರೆಸ್‌ನ ಎರಡು ದಿನದ ಅಧಿವೇಶನ ನಡೆಯಿತು. ಇಂದಿರಾ ಗಾಂಧಿಯವರು ಭಾಗವಹಿಸಿದ್ದರು. ರೆಡ್ಡಿ ಕಾಂಗ್ರೆಸ್‌ಗೆ ಜನತಾ ಪಕ್ಷದ ನೆರವಿದೆ ಎಂದು ಇಂದಿರಾ ಆಪಾದಿಸಿದರು. ಇದು ಎರಡನೇ ಸ್ವಾತಂತ್ರ್ಯ ಸಮರ, ಅದಕ್ಕೆ ಸಿದ್ಧರಾಗಿ ಎಂದು ಇಂದಿರಾ ಗಾಂಧಿ ಬಣ್ಣಿಸಿದರು. ನಮ್ಮ ಬಳಿ ಹಣ ಇಲ್ಲ, ಅಧಿಕಾರ ಇಲ್ಲ, ಆದರೂ ಕೂಡಾ ಕಾರ್ಯಕರ್ತರು, ಜನ ನಮ್ಮ ಕಡೆಗಿದ್ದಾರೆ ಎಂದು ಇಂದಿರಾ ಗಾಂಧಿ ಹೇಳಿದರು.

ಕಾರ್ಯಕಾರಿ ಸಮಿತಿ ಸಭೆಯೂ ನಡೆಯಿತು. ಜನತಾ ಪಕ್ಷದ ಸರ್ಕಾರ ರಾಷ್ಟ್ರದ ಅರ್ಥವ್ಯವಸ್ಥೆಯನ್ನೇ ಬದಲಿಸುತ್ತಿದೆ. ಗಾಂಧೀ ನೀತಿಗೆ ವಿರುದ್ಧವಾಗಿದೆ. ಉತ್ತರ ಭಾರತದಲ್ಲಿ ದಲಿತರ ಮೇಲೆ ದೌರ್ಜನ್ಯ ಹೆಚ್ಚಾಗಿದೆ. ಆದರೆ ಅದು ಯಾವುದೂ ಪತ್ರಿಕೆಗಳಲ್ಲಿ ಬರುತ್ತಿಲ್ಲ. ಇದು ಖಂಡನೀಯ ಎಂದು ನಿರ್ಣಯಗಳನ್ನು ಅಂಗೀಕರಿಸಿತು. ರೆಡ್ಡಿ ಕಾಂಗ್ರೆಸ್‌ಗೆ ಹಸು-ಕರು ಗುರುತು ನೀಡಿರುವುದು ಕ್ರಮ ಬದ್ಧ ಎಂದು ಸುಪ್ರೀಂ ಕೋರ್ಟ್ ೩೧-೧-೭೮ರಂದು ತೀರ್ಪು ನೀಡಿತು. ೨-೨-೭೮ರಂದು ಚುನಾವಣಾ ಆಯೋಗ ಇಂದಿರಾ ಕಾಂಗ್ರೆಸ್‌ಗೆ ಹಸ್ತದ (ಕೈ) ಗುರುತನ್ನು ನೀಡಿ, ಅದನ್ನು ರಾಷ್ಟ್ರೀಯ ಪಕ್ಷವೆಂದು ಮನ್ನಣೆ ನೀಡಿತು.

## ೧೯೭೮ರ ವಿಧಾನಸಭಾ ಚುನಾವಣೆಗಳು

೨-೧-೧೯೭೮ರಂದು ಇಂದಿರಾ ಕಾಂಗ್ರೆಸ್ ಉದಯವಾಯಿತು. ದೇವರಾಜ ಅರಸರು ಪ್ರದೇಶ ಕಾಂಗ್ರೆಸ್ ಸಮಿತಿ ನಾಯಕರಾಗಿ ದಿನಾಂಕ ೮-೧-೭೮ ರಂದು ಆಯ್ಕೆಯಾದರು. ಕೇಂದ್ರ ಕಾರ್ಯಕಾರಿ ಸಮಿತಿಗೆ ದೇವರಾಜ ಅರಸು ಮತ್ತು ಬಿ. ಬಸವಲಿಂಗಪ್ಪನವರನ್ನು ಖಾಯಂ ಆಹ್ವಾನಿತರನ್ನಾಗಿ ಎ.ಐ.ಸಿ.ಸಿ (ಐ) ಪ್ರಧಾನ ಕಾರ್ಯದರ್ಶಿ ಬೂಟಾಸಿಂಗ್ ನೇಮಕ ಮಾಡಿದರು. ೧೨-೧-೭೮ ರಂದು ಬೆಂಗಳೂರಿನಲ್ಲಿ ನಡೆದ ಇಂದಿರಾ ಗಾಂಧಿ ಕಾಂಗ್ರೆಸ್ ಪ್ರದೇಶ ಸಮಿತಿ ಸಮ್ಮೇಳನದಲ್ಲಿ ದೇವರಾಜ ಅರಸರನ್ನು ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ವಿಧಾನಸಭೆಗೆ ಫೆಬ್ರವರಿ ೨೫ರಂದು ಚುನಾವಣೆಗಳು ನಡೆಯುವುದಾಗಿ ಘೋಷಣೆಯಾಗಿತ್ತು. ಈ ಸಂದರ್ಭದಲ್ಲಿ ಇಂದಿರಾ ಗಾಂಧಿಯವರು ಷಾ ಆಯೋಗದ ವಿಚಾರಣೆಗಳನ್ನು ಎದುರಿಸುತ್ತಿದ್ದರು. ದೇವರಾಜ ಅರಸು ಗ್ರೋವರ್ ಆಯೋಗದ ವಿಚಾರಣೆಗಳನ್ನು ಎದುರಿಸುತ್ತಿದ್ದರು. ಆಯೋಗದ ಮುಂದೆ ಸಾಕ್ಷ್ಯ ನೀಡಲು ನಿರಾಕರಿಸಿದ್ದಕ್ಕಾಗಿ ಇಂದಿರಾ ಗಾಂಧಿಯವರ ಮೇಲೆ ಮೊಕದ್ದಮೆ ಹೂಡುವಂತೆ ನ್ಯಾಯಮೂರ್ತಿ ಜೆ. ಸಿ. ಷಾ ೧೧-೧-೭೮ರಂದು ಆದೇಶ ನೀಡಿದರು. ಅರಸು ತಪ್ಪಿತಸ್ಥರು ಎಂದು ನ್ಯಾಯಮೂರ್ತಿ ಎಂ. ಎನ್. ಗ್ರೋವರ್ ೧೩-೧-೭೮ ರಂದು ಮಧ್ಯಂತರ ವರದಿ ನೀಡಿದರು.

ವಿಧಾನಸಭಾ ಚುನಾವಣೆಗಾಗಿ ಅಭ್ಯರ್ಥಿಗಳ ಆಯ್ಕೆ ನಡೆದಿತ್ತು. ದೇವರಾಜ ಅರಸರ ಅಧಿಕೃತ ನಿವಾಸ ಬಾಲುಬ್ರೂಯಿ ಮುಂದೆ ಜನಸಂದಣಿ ನೆರೆದಿತ್ತು. ಈ ಸಂದರ್ಭದಲ್ಲಿ ೨೮-೧-೭೮ ರಂದು ಸಚಿವ ಹಾಗೂ ಮಾಜಿ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಎಸ್. ಬಿ. ನಾಗರಾಳ್ ಟಿಕೆಟ್ ನೀಡಿಕೆ ವಿಚಾರದಲ್ಲಿ ಅಸಮಾಧಾನಗೊಂಡು ಇಂದಿರಾ ಕಾಂಗ್ರೆಸ್‌ನಿಂದ ನಿರ್ಗಮಿಸಿದರು. ೨೯,೩೦ ಜನವರಿ ೭೮ ರಂದು ಬೆಂಗಳೂರಿನಲ್ಲಿ ಇಂದಿರಾ ಕಾಂಗ್ರೆಸ್ ಅಧಿವೇಶನ ನಡೆಯಿತು. ೩೧ ರಂದು ಇಂದಿರಾ ಗಾಂಧಿ ಅವರು ತುಮಕೂರು, ಗುಬ್ಬಿ, ಚನ್ನರಾಯಪಟ್ಟಣ, ಚಿಕ್ಕನಾಯಕನಹಳ್ಳಿ, ಕುಣಿಗಲ್, ಮಾಗಡಿ, ನೆಲಮಂಗಲ ಮುಂತಾದ ಕಡೆ ಪ್ರವಾಸ ಮಾಡಿ ಚುನಾವಣಾ ಪ್ರಚಾರ ಭಾಷಣ ಆರಂಭಿಸಿಯೇಬಿಟ್ಟರು. ಚನ್ನರಾಯಪಟ್ಟಣದಲ್ಲಿ ಇಂದಿರಾ ಕಾರಿನತ್ತ ಸೋಡಾ ಶೀಶೆಗಳನ್ನು ಎಸೆಯಲಾಯಿತು. ೩೧-೧-೭೮ರಂದು ಎಂ. ವೈ. ಘೋರ್ಪಡೆ ತಾವು ರಾಜಕೀಯ ಸನ್ಯಾಸ ತೆಗೆದುಕೊಂಡಿರುವುದಾಗಿಯೂ ಸಧ್ಯಕ್ಕೆ ಚುನಾವಣೆಗಳಲ್ಲಿ ಸ್ಪರ್ಧಿಸುವುದಿಲ್ಲವೆಂದೂ ಹೇಳಿದರು. ಇದು ಅರಸು ಅವರಿಗೆ ಆತಂಕ ಉಂಟುಮಾಡಿತು.

೩೧-೧-೭೮ ರಂದೇ ಇಂದಿರಾ ಗಾಂಧಿ ಕಾಂಗ್ರೆಸ್ ಅಭ್ಯರ್ಥಿಗಳ ಪಟ್ಟಿಯನ್ನು ಪ್ರಧಾನ ಕಾರ್ಯದರ್ಶಿಗಳಾದ ಟಿ.ಎನ್. ನರಸಿಂಹಮೂರ್ತಿ, ಡಿ. ಎಂ. ಸಿದ್ದಯ್ಯ, ಕೆ. ಎಚ್. ಶ್ರೀನಿವಾಸ್ ಬಿಡುಗಡೆ ಮಾಡಿದರು. ೮೪ ಹಿಂದುಳಿದ ವರ್ಗದವರು, ೩೯ ಒಕ್ಕಲಿಗರು, ೧೯ ಮುಸ್ಲಿಮರು, ೩೩ ಲಿಂಗಾಯಿತರು, ೧೩ ಬ್ರಾಹ್ಮಣರು, ೩೪ ಪರಿಶಿಷ್ಟ ಜಾತಿ, ವರ್ಗದವರಿಗೆ ಟಿಕೆಟ್

ನೀಡಲಾಗಿದೆಯೆಂದೂ, ಒಟ್ಟು ಆರು ಜನ ಮಹಿಳೆಯರು ಈ ಪಟ್ಟಿಯಲ್ಲಿ ಸೇರಿದ್ದಾರೆಂದೂ, ಪಕ್ಷಾಂತರಿಗಳಿಗೆ ಟಿಕೆಟ್ ಇಲ್ಲವೆಂದೂ ತಿಳಿಸಲಾಯಿತು. ಇಂದಿರಾ ಕಾಂಗ್ರೆಸ್ - ಸಿ ಪಿ.ಐ.ನಡುವೆ ಚುನಾವಣಾ ಮೈತ್ರಿ ಏರ್ಪಟ್ಟಿತ್ತು. ೨-೨-೭೮ ರಂದು ಇಂದಿರಾ ಕಾಂಗ್ರೆಸ್‌ಗೆ ಹಸ್ತದ ಚಿಹ್ನೆ (ಕೈ ಗುರುತು) ನೀಡಿ ಅದನ್ನು ರಾಷ್ಟ್ರೀಯ ಪಕ್ಷವೆಂದು ಚುನಾವಣಾ ಆಯೋಗ ಮಾನ್ಯ ಮಾಡಿತು. ಇಂದಿರಾ ಕಾಂಗ್ರೆಸ್‌ಗೆ ಬಡವರ ಬೆಂಬಲ ಕುಗ್ಗಿಲ್ಲ ಎಂದು ದೇವರಾಜ ಅರಸರು ಬೆಂಗಳೂರಿನಲ್ಲಿ ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದರು. ೯-೨-೭೮ರಂದು ಇಂದಿರಾ ಗಾಂಧಿಯವರು ಮತ್ತೆ ಬೆಂಗಳೂರಿನಲ್ಲಿ ಭಾರೀ ಬಹಿರಂಗ ಸಭೆಯನ್ನುದ್ದೇಶಿಸಿ ಮಾತನಾಡಿ ಕಳೆದ ಬಾರಿಯ ಪ್ರವಾಸದಲ್ಲಿ ನನ್ನ ಮೇಲೆ ಕಲ್ಲೆಸೆತ ನನ್ನ ಕೊಲೆ ಯತ್ನ ಎಂದು ಆಪಾದಿಸಿದರು. ವಿರೋಧ ಪಕ್ಷದವರು ಪಕ್ಷದ ಧ್ವಜದಲ್ಲಿ ಏನಿದೆ ಎಂದು ಹೇಳಿದ್ದಾರೆ. ಆದರೆ ನಾನು ನಡುವೆ ಚರಕಾ ಇರುವ ತ್ರಿವರ್ಣ ಧ್ವಜವನ್ನು ಪಡೆಯಲು ಹೋರಾಡುತ್ತೇನೆ ಎಂದರು. ನಾನು ಹೇಳಿದ ಸುಳ್ಳನ್ನು ತೋರಿಸಲಿ ಎಂದು ಚರಣ್‌ಸಿಂಗ್‌ಗೆ ಸವಾಲು ಹಾಕಿದರು.

ದೇವರಾಜ ಅರಸರು, ಅವರ ಮಂತ್ರಿ ಮಂಡಲದಲ್ಲಿದ್ದ ಸಚಿವರುಗಳು ಇತರ, ನಾಯಕರು ರಾಜ್ಯದಾದ್ಯಂತ ಚುನಾವಣಾ ಪ್ರಚಾರ ಕೈಗೊಂಡರು. ೬-೨-೭೮ರಂದು ಇಂದಿರಾ ಕಾಂಗ್ರೆಸ್ ಪಕ್ಷದ ಚುನಾವಣಾ ಪ್ರಣಾಳಿಕೆಯನ್ನು ಪ್ರಧಾನ ಕಾರ್ಯದರ್ಶಿಗಳಾದ ಮರಗತಂ ಚಂದ್ರಶೇಖರ್ ಹಾಗೂ ಪಿ. ವಿ. ನರಸಿಂಹರಾವ್ ದೆಹಲಿಯಲ್ಲಿ ಬಿಡುಗಡೆ ಮಾಡಿದರು. ಪ್ರಣಾಳಿಕೆಯ ಮುಖ್ಯಾಂಶಗಳು ಹೀಗಿವೆ. ಐದು ಎಕರೆವರೆಗಿನ ಖುಷ್ಕಿ ಭೂಮಿಗೆ ಕಂದಾಯ ರದ್ದು. ಸಣ್ಣ, ಮಧ್ಯಮ ರೈತರಿಗೆ ಕೃಷಿ ಉದ್ದೇಶಕ್ಕಾಗಿ ಸಾಕಷ್ಟು ಸಾಲ ನೀಡಿಕೆ. ಬೆಳೆ ವಿಮೆ- ಜಾನುವಾರು ವಿಮೆ ಆದಷ್ಟು ಬೇಗ ಜಾರಿಗೆ. ಗ್ರಾಮಾಂತರ ಪ್ರದೇಶದಲ್ಲಿ ಬೃಹತ್ ಪ್ರಮಾಣದಲ್ಲಿ ಕೃಷಿ ಕೈಗಾರಿಕೆಗಳ ಸ್ಥಾಪನೆ. ಆರ್ಥಿಕವಾಗಿ ದುರ್ಬಲ ವರ್ಗಗಳಿಗೆ ವಿಶೇಷ ಸೌಲಭ್ಯಗಳ ವಿಸ್ತರಣೆ.

ಮಕ್ಕಳ ಆರೋಗ್ಯ ರಕ್ಷಣೆಗೆ ಕ್ರಮ. ಆರೋಗ್ಯ ಪರೀಕ್ಷೆಗಳು, ಔಷಧಿ ಉಪಚಾರ ವಿಸ್ತರಣೆ. ಪ್ರಜೆಗಳ ಆರೋಗ್ಯ ರಕ್ಷಣೆ. ಆರೋಗ್ಯ ಪರೀಕ್ಷೆ ದಾಖಲೆಗೆ ಹೆಲ್ತ್ ಕಾರ್ಡ್ ಯೋಜನೆ ಜಾರಿಗೆ. ಜನನ ಕಾಲದಲ್ಲಿ ನೀಡುವ ಈ ಕಾರ್ಡ್‌ಗಳು ಜೀವಮಾನ ಪೂರ್ತಿ ವ್ಯಕ್ತಿಯ ಬಳಿ ಇರುತ್ತವೆ. ಇದರಿಂದ ಅವನ ಆರೋಗ್ಯ ಸ್ಥಿತಿಗತಿ ತಿಳಿದು ಔಷಧೋಪಚಾರ ತಿಳಿಯಲು ಸಹಕಾರಿಯಾಗುತ್ತದೆ. ಶಿಕ್ಷಣದ ಗುಣಮಟ್ಟ ಹೆಚ್ಚಳ. ರಾಜ್ಯಗಳಲ್ಲಿ ಶಾಲೆಗಳನ್ನು ಸುಸಜ್ಜಿತಗೊಳಿಸಲು ಕ್ರಮ. ಗ್ರಾಮಾಂತರ ಪ್ರದೇಶಗಳ ಹಾಗೂ ಹಿಂದುಳಿದ ಪ್ರದೇಶಗಳ ಶಾಲೆಗಳ ಬಗ್ಗೆ ವಿಶೇಷ ಆಸಕ್ತಿ. ದೇಶದಲ್ಲಿ ಹಿಂದುಳಿದ ಶಾಲೆ ಇಲ್ಲದಂತೆ ಮಾಡಲು ಕ್ರಮ. ದುರ್ಬಲ ವರ್ಗಗಳ ಆಶೋತ್ತರಗಳನ್ನು ಈಡೇರಿಸಲು ಇಂದಿರಾ ಕಾಂಗ್ರೆಸ್ ಬದ್ಧ. ದೇಶದಲ್ಲಿ ಜಾತ್ಯತೀತ ಸಮಾಜವಾದಿ ಸಮಾಜ ರಚನೆ. ಸಂಸದೀಯ ಪ್ರಜಾಸತ್ತೆಯ ಸ್ಥಾಪನೆಗೆ ಬದ್ಧ. ಸಾಮಾಜಿಕ ಆರ್ಥಿಕ ಕಾರ್ಯಕ್ರಮಗಳಲ್ಲಿ ಪಕ್ಷದ ಕಾರ್ಯಕರ್ತರು ಸಕ್ರಿಯವಾಗಿ ಪಾತ್ರ ವಹಿಸಲು ಕ್ರಮ. ಆರ್ಥಿಕ ಅಸಮಾನತೆ ಅನ್ಯಾಯಗಳ ವಿರುದ್ಧ ಸಾಮೂಹಿಕ ಚಳವಳಿ. ಕೃಷಿ ಕ್ಷೇತ್ರ ಮತ್ತು ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿ ಬಗ್ಗೆ ವಿಶೇಷ ಕ್ರಮ. ಜನತಾ ಪಕ್ಷದ ಆಡಳಿತ ಸಂಪೂರ್ಣ ವಿಫಲವಾಗಿ ಜನ ರಕ್ಷಣೆ ಹಾಗೂ ಅಭಿವೃದ್ಧಿಗಾಗಿ ಇಂದಿರಾ ಕಾಂಗ್ರೆಸ್‌ನತ್ತ ನೋಡುತ್ತಿದ್ದಾರೆ. ಜನತಾ ಪಕ್ಷದ ನಾಯಕರ ಮಾತಿನ ಮೋಡಿಗೆ ಬೀಳದೆ ಇಂದಿರಾ ಗಾಂಧಿಯವರ ನೇತೃತ್ವದ ಕಾಂಗ್ರೆಸ್ ಪಕ್ಷಕ್ಕೆ ಮತ ನೀಡಲು ಮನವಿ.

## ಫಲಿತಾಂಶ

ದಿನಾಂಕ ೨೫-೨-೭೮ ರಂದು ಚುನಾವಣೆಗಳು ನಡೆದು ೨೮-೨-೭೮ರ ಹೊತ್ತಿಗೆ ಪೂರ್ಣ ಫಲಿತಾಂಶಗಳು ಪ್ರಕಟವಾದವು. ಇಂದಿರಾ ಕಾಂಗ್ರೆಸ್ ಜಯಭೇರಿ ಬಾರಿಸಿತ್ತು. ತಾನು ಸ್ಪರ್ಧಿಸಿದ್ದ ೨೧೪ ಸ್ಥಾನಗಳ ಪೈಕಿ ೧೫೦ ಸ್ಥಾನಗಳಲ್ಲಿ ಜಯಗಳಿಸಿತ್ತು. ಮೈತ್ರಿ ಪಕ್ಷವಾದ ಸಿಪಿಐ ೩ ಸ್ಥಾನಗಳಲ್ಲಿ ಜಯಗಳಿಸಿತ್ತು. ೧,೭೮,೪೨,೩೭೪ ಚಲಾಯಿತ ಮತಗಳಲ್ಲಿ ಇಂದಿರಾ ಕಾಂಗ್ರೆಸ್ ೫೫,೩೬,೨೬೭ ಮತಗಳನ್ನು ಪಡೆದು ಶೇಕಡಾ ೪೪.೩ ಪ್ರಮಾಣದಲ್ಲಿ ಮತಗಳಿಸಿತ್ತು. ಕೇವಲ ಐದು ಅಭ್ಯರ್ಥಿಗಳು ಮಾತ್ರ ಠೇವಣಿ ಕಳೆದು ಕೊಂಡಿದ್ದರು.

## ೧೯೮೦ರ ಲೋಕಸಭಾ ಚುನಾವಣೆಗಳು

## ಹಿನ್ನೆಲೆ ಹಾಗೂ ಪ್ರಮುಖ ರಾಜಕೀಯ ಬೆಳವಣಿಗೆಗಳು

### ೧. ಇಂದಿರಾ ಕಾಂಗ್ರೆಸ್ - ಅರಸು ಕಾಂಗ್ರೆಸ್ - ಕರ್ನಾಟಕ ಕಾಂಗ್ರೆಸ್

೧೯೭೮ರ ಫೆಬ್ರವರಿಯಲ್ಲಿ ನಡೆದ ವಿಧಾನಸಭಾ ಚುನಾವಣೆಗಳಲ್ಲಿ ಮಹಾರಾಷ್ಟ್ರ, ಕರ್ನಾಟಕ, ಆಂಧ್ರ ಪ್ರದೇಶಗಳಲ್ಲಿ ಇಂದಿರಾ ಕಾಂಗ್ರೆಸ್ ಜಯಭೇರಿ ಬಾರಿಸಿತು. ಕಾಂಗ್ರೆಸ್ (ಐ) ಬಲ ಹಿಗ್ಗತೊಡಗಿತು. ೧೯೭೮ರ ಮಾರ್ಚ್ ೯ ರ ಹೊತ್ತಿಗೆ ರಾಜ್ಯಸಭೆಯಲ್ಲಿ ೬೧ ಸದಸ್ಯಬಲ ಹೊಂದಿದ್ದ ಕಾಂಗ್ರೆಸ್ (ಐ) ಎರಡನೆಯ ಅತಿ ದೊಡ್ಡ ವಿರೋಧ ಪಕ್ಷವಾಗಿತ್ತು. ಏಪ್ರಿಲ್ ೧೨ ರ ಹೊತ್ತಿಗೆ

ಲೋಕಸಭೆಯಲ್ಲಿ ಕಾಂಗ್ರೆಸ್ (ಐ) ೭೧ ಸದಸ್ಯ ಬಲ ಹೊಂದಿ ಪ್ರಮುಖ ವಿರೋಧ ಪಕ್ಷದ ನಾಯಕನ ಸ್ಥಾನ ಪಡೆಯಿತು. ಸಿ. ಎಂ. ಸ್ಟೀಫನ್ ವಿರೋಧ ಪಕ್ಷದ ನಾಯಕರಾದರು. ರಾಜ್ಯಸಭೆಯಲ್ಲಿ ಕಮಲಾಪತಿ ತ್ರಿಪಾಠಿ ನಾಯಕರಾದರು. ಮೇ ೭, ೧೯೭೮ರಂದು ನಡೆದ ಆಜಮ್‌ಘರ್ ಲೋಕಸಭಾ ಚುನಾವಣೆಗಳಲ್ಲಿ ಇಂದಿರಾ ಗಾಂಧಿ ಪ್ರಧಾನ ಪಾತ್ರವಹಿಸಿದರು. ಇಂದಿರಾ ಕಾಂಗ್ರೆಸ್‌ನ ಮೊಹಿಸಿನಾ ಕಿದ್ವಾಯ್ ಆರಿಸಿ ಬಂದರು. ಕಾಂಗ್ರೆಸ್ (ಎಸ್) ಚಂದ್ರಜಿತ್ ಯಾದವ್ ಸೋಲನ್ನು ಕಂಡರು.

ಮೇ ೧೦, ೧೯೭೮ರಂದು ಲೋಕಸಭೆಯಲ್ಲಿ ವಿರೋಧಿ ನಾಯಕ ಸ್ಟೀಫನ್ ಆಜಮ್‌ಘರ್ ಚುನಾವಣೆಯಿಂದ ಜನತೆ ಇಂದಿರಾ ಗಾಂಧಿಯವರ ನಾಯಕತ್ವವನ್ನು ಅಂಗೀಕರಿಸಿದ್ದಾರೆ ಎಂದು ಜನತಾ ಸರ್ಕಾರದ ವಿರುದ್ಧ ಒಂದು ಅವಿಶ್ವಾಸ ನಿರ್ಣಯವನ್ನು ಮಂಡಿಸಿ ಮಾತನಾಡುತ್ತಾ ತಿಳಿಸಿದರು. ಮೇ ೧೫, ೭೮ ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿ ಇಂದಿರಾ ಬಂಧನವಾದಲ್ಲಿ ಪ್ರತಿಭಟನೆ ನಡೆಸಬೇಕೆಂದು ನಿರ್ಣಯವನ್ನು ಅಂಗೀಕರಿಸಿತು. ಈ ಮಧ್ಯೆ ಬ್ರಹ್ಮಾನಂದರೆಡ್ಡಿ ರಾಜೀನಾಮೆಯಿಂದ ತೆರವಾಗಿದ್ದ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಮಾರ್ಚ್ ೧೯೭೮ ರಂದು ಸರ್ದಾರ್ ಸ್ವರ್ಣಸಿಂಗ್ ಅಧ್ಯಕ್ಷರಾಗಿ ಚುನಾಯಿತರಾಗಿದ್ದರು. ರಾಜ್ಯ ಸಭೆಯಲ್ಲಿ ಕಾಂಗ್ರೆಸ್ (ಎಸ್) ಬಲ ೭೨ ಆಗಿದ್ದರೆ, ಲೋಕಸಭೆಯಲ್ಲಿ ೬೮ ಸದಸ್ಯಬಲ ಹೊಂದಿತ್ತು. ಮೇ ೧೫,೧೬, ೧೯೭೮ ರಂದು ಕಾಂಗ್ರೆಸ್ (ಎಸ್) ರಾಜಕೀಯ ಸಮ್ಮೇಳನ ದೆಹಲಿಯಲ್ಲಿ ನಡೆದು, ಕಾಂಗ್ರೆಸ್ (ಐ)ನೊಂದಿಗೆ ವಿಲೀನವನ್ನು ವಿರೋಧಿಸಿತು.

೧೯೭೮ ಮೇ ೧೯ ರಂದು ಇಂದಿರಾ ಗಾಂಧಿಯವರು ಕರ್ನಾಟಕಕ್ಕೆ ಬಂದು ೯ ದಿನಗಳ ವಿಶ್ರಾಂತಿ ಪಡೆದರು. ಈ ಅವಧಿಯಲ್ಲಿ ದೇವರಾಜ ಅರಸರು, ಇಂದಿರಾ ಗಾಂಧಿಯವರು ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಬಹುದೆಂಬ ವಿಷಯವನ್ನು ಇಂದಿರಾ ಗಾಂಧಿಯವರ ಮುಂದಿಟ್ಟರು. ಈ ಮಧ್ಯೆ ಕಾಂಗ್ರೆಸ್ (ಎಸ್) ಮತ್ತು ಕಾಂಗ್ರೆ ವಿಲೀನಕ್ಕೆ ಪ್ರಯತ್ನಗಳು ನಡೆಯುತ್ತಿದ್ದವು. ಇದಕ್ಕೆ ಇಂದಿರಾ ಗಾಂಧಿಯವರು ಅಂತಹ ಉತ್ಸಾಹವನ್ನೇನೂ ತೋರಿಸಲಿಲ್ಲ. ಮಹಾರಾಷ್ಟ್ರದಲ್ಲಿದ್ದ ಕಾಂಗ್ರೆಸ್ (ಎಸ್) ಮತ್ತು ಕಾಂಗ್ರೆಸ್ (ಐ) ಸಮ್ಮಿಶ್ರ ಸರ್ಕಾರ ಜುಲೈ ೧೮,೧೯೭೮ರಂದು ಬಿದ್ದು ಹೋಯಿತು. ವೈ. ಬಿ. ಚವಾಣ್ ಗುಂಪಿಗೆ ಸೇರಿದ್ರ ಕಾಂಗ್ರೆಸ್ (ಎಸ್)ನ ನಾಯಕ ಶರದ್ ಪವಾರ್ ತಮ್ಮ ಬೆಂಬಲ ಹಿಂತೆಗೆದುಕೊಂಡಿದ್ದೇ ಇದಕ್ಕೆ ಕಾರಣ. ಹೀಗಾಗಿ ಎರಡು ಕಾಂಗ್ರೆಸ್‌ಗಳ ವಿಲೀನ ದೂರವೇ ಆಯಿತು. ಶರದ್ ಪವಾರ್ ತಾವೇ ಸರ್ಕಾರ ರಚಿಸಿದರು. ಆಗಸ್ಟ್ ೨೩, ೧೯೭೮ ರಂದು ದೇವರಾಜ ಅರಸರು ದೆಹಲಿಯಲ್ಲಿ ವಿಲೀನದ ಪರವಾಗಿರುವ ಸಂಸದರ ಸಹಿ ಪಡೆಯುವ ಕಾರ್ಯ ಕೈಗೊಂಡರು. ೩೦ ಜನ ಸಹಿ ಹಾಕಿದ್ದರು. ಆದರೆ ಶ್ರೀಮತಿ ಇಂದಿರಾ ಗಾಂಧಿಯವರ ಸೂಚನೆ ಮೇರೆಗೆ ಈ ಕಾರ್ಯ ಅಷ್ಟಕ್ಕೇ ನಿಂತಿತು.

ಮೇ ೨೯ ರಂದು ಜನತಾ ಪಕ್ಷದಲ್ಲಿ ಒಳಜಗಳ ಆರಂಭವಾಯಿತು. ಮೇ ೩೦ ರಂದು ಚರಣ್‌ಸಿಂಗ್, ರಾಜನಾರಾಯಣ್ ಸಚಿವ ಪದವಿಗೆ ರಾಜೀನಾಮೆ ನೀಡಿದರು (ಜನವರಿ ೨೪,೭೯ ರಂದು ಚರಣ್ ಮತ್ತೆ ಸಚಿವ ಸಂಪುಟ ಸೇರಿದರು). ಜುಲೈ ೧೧, ೧೯೭೮ ರಂದು ಇಂದಿರಾ ಗಾಂಧಿಯವರ ವಿರುದ್ಧ, ಷಾ ಆಯೋಗದ ವರದಿ ಆಧಾರದ ಮೇಲೆ ಮೊಕದ್ದಮೆ ದಾಖಲಾಯಿತು. ಇಂದಿರಾ ಗಾಂಧಿಯವರು ತಮ್ಮದೇ ನಿಜವಾದ ಕಾಂಗ್ರೆಸ್ ಎಂಬುದನ್ನು ಸಾಧಿಸಲು ಹಾಗೂ ಷಾ ಆಯೋಗ, ಅದರ ವರದಿ, ತಮ್ಮ ಮೇಲಿನ ಮೊಕದ್ದಮೆ ಈ ವಿಚಾರಗಳನ್ನು ರಾಜಕೀಯಗೊಳಿಸಲು ಪ್ರಯತ್ನ ನಡೆಸಿದ್ದರು. ಇಂದಿರಾ ಗಾಂಧಿಯವರು ಕರ್ನಾಟಕದ ಚಿಕ್ಕಮಗಳೂರಿನಿಂದ ಲೋಕಸಭೆಗೆ ಸ್ಪರ್ಧಿಸಿ ನವೆಂಬರ್ ೮, ೧೯೭೮ರಂದು ೭೭,೩೩೩ ಬಹುಮತಗಳ ಅಂತರದಿಂದ ಆಯ್ಕೆಯಾದರು. ಈ ಚುನಾವಣೆಗಳಲ್ಲಿ ದೇವರಾಜ ಅರಸರ ಕಾಂಗ್ರೆ ಸರ್ಕಾರ ಪ್ರಮುಖ ಪಾತ್ರ ವಹಿಸಿತ್ತು. ಡಿ. ಬಿ. ಚಂದ್ರೇಗೌಡ ತಮ್ಮ ಸ್ಥಾನವನ್ನು ಇಂದಿರಾ ಗಾಂಧಿಯವರಿಗಾಗಿ ತೆರವು ಮಾಡಿಕೊಟ್ಟಿದ್ದರು.

ನವೆಂಬರ್ ೧೧,೧೯೭೮ ರಂದು ಲೋಕಸಭೆಯಲ್ಲಿ ವಿರೋಧಿನಾಯಕ ಸಿ. ಎಂ. ಸ್ಟೀಫನ್ ಷಾ ಆಯೋಗವನ್ನು ರದ್ದುಗೊಳಿಸುವಂತೆ ಒತ್ತಾಯಿಸಿದರು. ಇಂದಿರಾ ಗಾಂಧಿಯವರು ನವೆಂಬರ್ ೧೭ರಂದು ಟಿ.ವಿ. ಸಂದರ್ಶನದಲ್ಲಿ ಷಾ ಆಯೋಗವನ್ನು ನಮ್ಮ ಪಕ್ಷ ಒಪ್ಪುವುದಿಲ್ಲ, ಅದರಂತೆ ದೇಶದ ಜನತೆಯೂ ಒಪ್ಪುವುದಿಲ್ಲ ಎಂದರು. ನವೆಂಬರ್ ೨೦, ೧೯೭೮ರಂದು ಲೋಕಸಭಾ ಸದಸ್ಯರಾಗಿ ಪ್ರಮಾಣ ವಚನ ಸ್ವೀಕರಿಸಿದರು. ನವೆಂಬರ್ ೨೧ ರಂದು ಇಂದಿರಾ ಗಾಂಧಿಯವರು, ಮತ್ತೆ ಕಾಂಗ್ರೆಸ್‌ಗಳ ವಿಲೀನದ ಬಗ್ಗೆ ಪ್ರಸ್ತಾಪ ಮಾಡಿದರು. ಕೇವಲ ಎರಡು ಕಾಂಗ್ರೆಸ್‌ಗಳ ವಿಲೀನವಲ್ಲ ಜನತಾ ಪಕ್ಷ ಸೇರಿದಂತೆ ಎಲ್ಲಾ ಪಕ್ಷಗಳಲ್ಲಿರುವ ಕಾಂಗ್ರೆಸ್ಸಿಗರೂ ಒಂದಾಗಬೇಕೆಂದು ಕರೆ ನೀಡಿದರು. ನವೆಂಬರ್ ೨೧ ರಂದು ಲೋಕಸಭೆಯ ಹಕ್ಕು ಬಾಧ್ಯತೆಗಳ ಸಮಿತಿ, ಇಂದಿರಾ ಗಾಂಧಿಯವರ ವಿರುದ್ಧ ಮಂಡಿಸಲಾಗಿದ್ದ ಹಕ್ಕು ಚ್ಯುತಿ ಸೂಚನೆಯನ್ನು ಪರಿಶೀಲಿಸಿದ ನಂತರ ತನ್ನ ವರದಿಯನ್ನು ಸಲ್ಲಿಸಿತು. ಇಂದಿರಾ ಗಾಂಧಿ ಲೋಕಸಭೆಯ ಹಕ್ಕು ಚ್ಯುತಿ ಮಾಡಿದ್ದಾರೆ. ಅವರು ದಂಡನಾರ್ಹರು ಎಂದು ವರದಿಯಲ್ಲಿ ಹೇಳಲಾಗಿತ್ತು. ಡಿಸೆಂಬರ್ ೧೯, ೧೯೭೮

ರಂದು ಲೋಕಸಭೆಯಿಂದ ಅವರನ್ನು ಈ ಕಾರಣಕ್ಕಾಗಿ ಉಚ್ಚಾಟಿಸಲಾಯಿತು, ಅಧಿವೇಶನ ಮುಗಿಯುವವರೆಗೆ ಅವರಿಗೆ ಜೈಲುವಾಸದ ಶಿಕ್ಷೆ ವಿಧಿಸಿತು. ಡಿಸೆಂಬರ್ ೨೬ರಂದು ಇಂದಿರಾ ಗಾಂಧಿ ಬಿಡುಗಡೆ ಆಯಿತು. ಈ ನಾಲ್ಕು ದಿನಗಳ ಕಾಲ ಇಡೀ ದೇಶದಾದ್ಯಂತ ಹಿಂಸಾತ್ಮಕ ಪ್ರತಿಭಟನಾ ಪ್ರದರ್ಶನಗಳು ನಡೆದವು. ಕರ್ನಾಟಕದಲ್ಲಂತೂ ಇದು ಹೆಚ್ಚಾಗಿತ್ತು. ಇಡೀ ದೇಶದಾದ್ಯಂತ ೧,೨೦,೦೦೦ ಜನ ಕಾಂಗ್ರೆಸ್ ಕಾರ್ಯಕರ್ತರು ಹಾಗೂ ಪ್ರತಿಭಟನೆಕಾರರನ್ನು ಬಂಧಿಸಲಾಗಿತ್ತು.

ದಿನಾಂಕ ೧೨ ಮಾರ್ಚ್ ೯, ೧೯೭೯ ರಂದು ದೆಹಲಿಯಲ್ಲಿ ಸಭೆ ಸೇರಿದ್ದ ಕಾಂಗ್ರೆಸ್ (ಎಸ್) ಕಾರ್ಯಕಾರಿ ಸಮಿತಿ ವಿಲೀನದ ಪ್ರಯತ್ನಗಳನ್ನು ನಿಲ್ಲಿಸಿತು. ಮಾರ್ಚ್ ೨೧, ೧೯೭೯ ರಂದು ಲೋಕಸಭೆಯಲ್ಲಿ ವಿಶೇಷ ಕೋರ್ಟ್ ಸ್ಥಾಪನೆಯ ಮಸೂದೆ ಅಂಗೀಕಾರವಾಯಿತು. ಕಾಂಗ್ರೆಸ್ (ಎಸ್) ಇದನ್ನು ಬೆಂಬಲಿಸಿತು. ಇಂದಿರಾ ಗಾಂಧಿ ಹಾಗೂ ಅವರ ಬೆಂಬಲಿಗರನ್ನು ತುರ್ತು ಪರಿಸ್ಥಿತಿ ಅತಿರೇಕಗಳಿಗಾಗಿ ವಿಚಾರಣೆ ನಡೆಸುವ ಉದ್ದೇಶದಿಂದ ಈ ವಿಶೇಷ ಕೋರ್ಟ್ ಸ್ಥಾಪನೆಯ ಮಸೂದೆಯನ್ನು ತರಲಾಗಿತ್ತು. ಈ ಮಧ್ಯೆ ಕಾಂಗ್ರೆಸ್ (ಐ) ಪಕ್ಷದಲ್ಲಿ ಯುವಕ ಕಾಂಗ್ರೆಸ್ಸಿಗರ ಪಾತ್ರ ಹಾಗೂ ಸಂಜಯ್ ಗಾಂಧಿ ಹಾಗೂ ಮಿತ್ರರ ಉಪಟಳದ ಬಗ್ಗೆ ಗುಸುಗುಸು ಆರಂಭವಾಗಿತ್ತು. ಆದರೆ ಇಂದಿರಾ ಗಾಂಧಿಯವರು ಯುವಕಾಂಗ್ರೆಸ್ಸನ್ನು ಬೆಂಬಲಿಸಿದರು. ಏಪ್ರಿಲ್ ೭, ೧೯೭೯ರಂದು ಆಂಧ್ರಪ್ರದೇಶದ ನಾಗಾರ್ಜುನ ಸಾಗರದಲ್ಲಿ ನಾಲ್ಕು ದಿನಗಳ ಯುವಕಾಂಗ್ರೆಸ್ ತರಬೇತಿ ಶಿಬಿರವನ್ನು ಉದ್ಘಾಟಿಸಿದರು.

## ೨. ಇಂದಿರಾ - ಅರಸು ಭಿನ್ನಾಭಿಪ್ರಾಯ

ಏಪ್ರಿಲ್ ೧೨,೧೯೭೯ ರಂದು ದೆಹಲಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ (ಐ)ಸಭೆಯಲ್ಲಿ ದೇವರಾಜ ಅರಸರು ರಾಜಕೀಯ ನಿರ್ಣಯದ ಮೇಲೆ ಮಾತನಾಡುತ್ತಾ ಕಾಂಗ್ರೆಸ್ (ಐ) ರಾಜಕೀಯ ಚಟುವಟಿಕೆಗಳಲ್ಲಿ ಸಂಜಯ ಗಾಂಧಿಯ ಹಸ್ತಕ್ಷೇಪಗಳ ಬಗ್ಗೆ ದನಿ ಎತ್ತಿದರು. ಈ ವಿಷಯವೇ ಚರ್ಚೆಯ ಪ್ರಧಾನ ಅಂಶವಾಗಿ ಬೆಳೆದು ತಾರಕೇಶ್ವರಿ ಸಿನ್ಹಾರವರೂ ಕೂಡಾ ಈ ಬಗ್ಗೆ ಪ್ರತಿಭಟಿಸಿ ಸಭಾತ್ಯಾಗ ಮಾಡಿದರು. ಈ ಸಭೆಯಲ್ಲಿ ಸಂಜಯ ಗಾಂಧಿ ವಿಷಯ ಪ್ರಸ್ತಾಪವಾಗಿ ಗಂಭೀರ ಚರ್ಚೆಗೆ ಎಡೆ ಮಾಡಿಕೊಟ್ಟದ್ದು ಇಂದಿರಾ ಗಾಂಧಿಯವರಿಗೆ ತೀವ್ರ ಇರಿಸುಮುರಿಸು ಉಂಟುಮಾಡಿತು. ಇಂದಿರಾ ಗಾಂಧಿ ತಾರಕೇಶ್ವರಿ ಸಿನ್ಹಾ ನಡುವೆ ವಾಗ್ಯುದ್ಧವೇ ಆಗಿಹೋಯಿತು. ಈ ಸಭೆಯು ಪಕ್ಷದ ಆಗುಹೋಗುಗಳ ಬಗ್ಗೆ ಮಾತ್ರ ಚರ್ಚೆ ನಡೆಸಲು ಕರೆದ ಸಭೆಯಾಗಿದೆ, ವೈಯಕ್ತಿಕ ವಿಚಾರಗಳ ಪ್ರಸ್ತಾಪ ಸರಿಯಲ್ಲ ಎಂದು ಇಂದಿರಾ ಗಾಂಧಿ ಹೇಳಿದರು. ದೇವರಾಜ ಅರಸರು ಯುವಕಾಂಗ್ರೆಸ್ ಕಾಂಗ್ರೆಸ್ (ಐ) ಪಕ್ಷವನ್ನು ಜನರಿಂದ ದೂರ ಇಡುವ ಸಂಘಟನೆಯಾಗಿದೆ ಎಂದರು.

ಇಂದಿರಾ ಗಾಂಧಿ ಬೆಂಬಲಿಗರು ಈ ಅನಾಹುತಕ್ಕೆಲ್ಲಾ ದೇವರಾಜ ಅರಸೇ ಕಾರಣ, ವಿನಾಕಾರಣವಾಗಿ ಅವರು ರಾಜಕೀಯ ನಿರ್ಣಯ ಮಂಡಿಸಿ ಮಾತನಾಡುವಾಗ ಸಂಜಯ ಗಾಂಧಿ ಹೆಸರನ್ನು ಪ್ರಸ್ತಾಪಿಸಿ ರಂಪಕ್ಕೆ ಕಾರಣರಾದರು ಎಂದು ಇಂದಿರಾ ಗಾಂಧಿಯವರ ಕಿವಿಯೂದಿದರು. ಸಭೆಯ ಮೂಲ ಉದ್ದೇಶವನ್ನೇ ಮರೆಮಾಡಿದರು ಎಂದೂ ಹೇಳಿದರು. ಮೇ ೧೨,೧೯೭೯ ರಂದು ಇಂದಿರಾಗಾಂಧಿ ಬೆಂಗಳೂರಿಗೆ ಬಂದರು. ಕಾಂಗ್ರೆಸ್ ಪಾರ್ಲಿಮೆಂಟರಿ ಮಂಡಲಿ ನಿರ್ಣಯದಂತೆ ದೇವರಾಜ ಅರಸರು ಮುಖ್ಯಮಂತ್ರಿ ಹಾಗೂ ಕೆ.ಪಿ.ಸಿ.ಸಿ.(ಐ) ಅಧ್ಯಕ್ಷತೆ ಎರಡೂ ಹುದ್ದೆಗಳಲ್ಲಿ ಇರುವ ಹಾಗಿಲ್ಲ. ಅವರು ಅಧ್ಯಕ್ಷ ಸ್ಥಾನವನ್ನು ಬಿಡಬೇಕೆಂದರು. ಮೇ ತಿಂಗಳ ಆದಿಭಾಗದಲ್ಲೇ ಅರಸು ವಿರೋಧಿಗಳು ಅರಸರ ವಿರುದ್ಧ ಶ್ರೀಮತಿ ಇಂದಿರಾ ಗಾಂಧಿಯವರ ಬಳಿ ದೂರು ಹೇಳಿದ್ದರು. ತಾನೂ ಶ್ರೀಮತಿ ಇಂದಿರಾ ಗಾಂಧಿಗೆ ಸರಿಸಮಾನ, ಇಂದಿರಾ ಗಾಂಧಿ ರಾಜಕೀಯ ಪುನರ್ಜನ್ಮ ಪಡೆದದ್ದು ತನ್ನಿಂದಲೇ ಎಂದು ಅರಸು ಹೇಳುತ್ತಿರುತ್ತಾರೆ, ಎಂಬ ಗಾಳಿ ಸುದ್ದಿ ಇಂದಿರಾರನ್ನು ತಲುಪಿತ್ತು. ಅದೂ ಅಲ್ಲದೆ ವಿಶೇಷ ಕೋರ್ಟ್ ಸ್ಥಾಪನೆ ವಿಧೇಯಕದ ವಿರುದ್ಧ ದೇವರಾಜ ಅರಸರು ಮೇ ೧೬ ರಂದು ದೆಹಲಿಯಲ್ಲಿ ಇಂದಿರಾ ಗಾಂಧಿ ಅನುಮತಿ ಪಡೆಯದೇ ಪ್ರತಿಭಟನಾ ರ್‍ಯಾಲಿಯನ್ನು ಮಾಡಿಸಿದ್ದೂ ಇಂದಿರಾರವರನ್ನು ಕೆರಳಿಸಿತ್ತು. ಇಂದಿರಾರವರು ಮೇ ೧೨, ೧೩ ರಂದು ಬೆಂಗಳೂರಿಗೆ ಬಂದಿದ್ದಾಗ, ಅರಸು ವಿರೋಧಿ ಗುಂಪನ್ನು ಭೇಟಿಯಾಗಿದ್ದರು ಹಾಗೂ ಅರಸುರವರ ವರ್ತನೆ ಬಗ್ಗೆ ಬಹಿರಂಗವಾಗಿ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದ್ದರು.

ಅರಸುರವರು ಇಂದಿರಾ ಸೂಚನೆಯಂತೆ ಪ್ರದೇಶ ಕಾಂಗ್ರೆ ಅಧ್ಯಕ್ಷ ಸ್ಥಾನ ಬಿಡಲು ಒಪ್ಪಿದರು. ಆದರೆ ಪ್ರದೇಶ ಕಾಂಗ್ರೆ ಅಧ್ಯಕ್ಷರು, ಪ್ರದೇಶ ಕಾಂಗ್ರೆ ಸಮಿತಿಯಿಂದಲೇ ಆಯ್ಕೆ ಆಗಬೇಕೆಂದು ಪಟ್ಟು ಹಿಡಿದರು. ದೇವರಾಜ ಅರಸರು ಪ್ರಜಾಸತ್ತಾತ್ಮಕವಾಗಿ ಆಯ್ಕೆ ಆದ ಅಧ್ಯಕ್ಷರಲ್ಲ ಎಂದು ಹೇಳಿದರೆ, ದೇವರಾಜ ಅರಸರು ತಾವು ಜನವರಿ ೧೨, ೧೯೭೮ ರಂದು ಪಿ.ಸಿ.ಸಿ. ಯಿಂದ ಪ್ರಜಾಸತ್ತಾತ್ಮಕವಾಗಿ ಆಯ್ಕೆ ಆಗಿದ್ದೇನೆ. ಕಾಂಗ್ರೆಸ್ ವಿಭಜನೆಗೆ ಮುನ್ನ ಒಟ್ಟು ೨೪೦ ಪಿಸಿಸಿ ಸದಸ್ಯರಿದ್ದರು, ಅವರಲ್ಲಿ ೧೯೦ ಜನ ಪಿಸಿಸಿ (ಐ)ಗೆ ಬಂದರು, ಅವರು ನನ್ನನ್ನು ಆರಿಸಿದ್ದಾರೆ. ಆದ್ದರಿಂದ ನಾನು ಪಿಸಿಸಿ (ಐ) ಚುನಾಯಿತ ಅಧ್ಯಕ್ಷನಾಗಿದ್ದೇನೆ ಎಂದರು. ಆದ್ದರಿಂದ ಹೊಸ ಅಧ್ಯಕ್ಷರೂ

ಕೂಡಾ ಪಿ.ಸಿಸಿ (ಐ) ನಿಂದ ಚುನಾಯಿತರಾಗಬೇಕಾಗುತ್ತದೆಂದು ಜೂನ್ ೮ ರಂದು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು. ಇದೇ ದಿನ ಇಂದಿರಾ ಗಾಂಧಿ ಅವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದ ಕಾಂಗ್ರೆ ಪಾರ್ಲಿಮೆಂಟರಿ ಮಂಡಲಿ ಅರಸು ವಾದವನ್ನು ತಿರಸ್ಕರಿಸಿ, ತಕ್ಷಣ ಅವರು ಕೆ.ಪಿ.ಸಿ.ಸಿ. (ಐ) ಅಧ್ಯಕ್ಷ ಸ್ಥಾನದಿಂದ ಕೆಳಗಿಳಿಯುವಂತೆ ಸೂಚಿಸಿತು.

ಜೂನ್ ೧೦, ೭೯ ರಂದು ಬೆಂಗಳೂರಿನಲ್ಲಿ ಜಿಲ್ಲಾ ಕಾಂಗ್ರೆಸ್ (ಐ) ಸಮಿತಿಗಳ ಅಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಪದಾಧಿಕಾರಿಗಳ ಸಮ್ಮೇಳನ ನಡೆಯಿತು. ಅರಸು ನಿಲುವನ್ನು ಸಮರ್ಥಿಸಿತು. ಅರಸು ಅಧ್ಯಕ್ಷ ಸ್ಥಾನದಿಂದ ಇಳಿದರೆ ಪ್ರದೇಶ ಕಾಂಗ್ರೆ ಅಧ್ಯಕ್ಷರ ಆಯ್ಕೆ ಆಗಬೇಕೆಂದು ಹೇಳಿತು. ಹೊಸ ಅಧ್ಯಕ್ಷರ ನೇಮಕ ಆಗುವುದಾದರೆ ಅದು ಕೇವಲ ಪಿ.ಸಿ.ಸಿ. (ಐ) ಆಯ್ಕೆಯಿಂದ ಮಾತ್ರ ಆಗಬೇಕೆಂದು ಅರಸು ಮತ್ತು ಅವರ ಬೆಂಬಲಿಗರು ಪಟ್ಟು ಹಿಡಿದರು. ಜೂನ್ ೧೫ ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಕರ್ನಾಟಕ ಪ್ರದೇಶ ಕಾಂಗ್ರೆಸ್ (ಐ) ಸಮಿತಿಯನ್ನು ವಿಸರ್ಜಿಸಿ ಬಂಗಾರಪ್ಪನವರ ಅಧ್ಯಕ್ಷತೆಯಲ್ಲಿ ಅಡ್‌ಹಾಕ್ ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ನೇಮಕ ಮಾಡಿತು.

ಜೂನ್ ೧೬ ರಂದು ಅರಸು ಸಚಿವ ಬಂಗಾರಪ್ಪನವರನ್ನು ಮಂತ್ರಿಮಂಡಲದಿಂದ ವಜಾ ಮಾಡಿ, ಸಚಿವರಾದ ಗುಂಡೂರಾವ್ ಹಾಗೂ ಮನೋರಮಾ ಮಧ್ವರಾಜರ ರಾಜೀನಾಮೆ ಕೇಳಿದರು. ರಾಜೀನಾಮೆ ನೀಡಲು ಒಪ್ಪದ ಗುಂಡೂರಾಯರನ್ನು ಜೂನ್ ೧೭ ರಂದು ವಜಾ ಮಾಡಿದರು. ಮನೋರಮಾ ಮಧ್ವರಾಜ್ ಅರಸುಗೆ ನಿಷ್ಠರಾಗಿ ಉಳಿದರು. ಜೂನ್ ೧೭ ರಂದು ಕಾಂಗ್ರೆಸ್ (ಐ) ಶಾಸಕಾಂಗ ಪಕ್ಷದ ಸಭೆ ಸೇರಿತು. ೧೧ ಜನರ ಕಾಂಗ್ರೆಸ್ ಅಡ್‌ಹಾಕ್ ಸಮಿತಿಗೆ ನೇಮಕರಾಗಿದ್ದರು. ಆದರೆ ಬಿ. ಬಸವಲಿಂಗಪ್ಪ, ಅಬ್ದುಲ್ ಸಮದ್, ಬಿ. ಎನ್ ಕೆಂಗೇಗೌಡ, ಅಡ್‌ಹಾಕ್ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಲು ಒಪ್ಪಲಿಲ್ಲ. ೧೫೬ ಕಾಂಗ್ರೆಸ್ (ಐ) ಶಾಸಕರ ಪೈಕಿ ೧೪೨ ಜನ ಅರಸುಗೆ ಪೂರ್ಣ ಬೆಂಬಲ ವ್ಯಕ್ತ ಪಡಿಸಿದರು. ಅರಸು ಕೆ.ಪಿ.ಸಿ. (ಐ) ನ ಚುನಾಯಿತ ಅಧ್ಯಕ್ಷರಾಗಿದ್ದಾರೆ, ಅವರ ಮೇಲೆ ಕೇಂದ್ರ ಕಾರ್ಯಕಾರಿ ಸಮಿತಿ ಯಾವುದೇ ಕ್ರಮ ತೆಗೆದುಕೊಂಡರೂ. ಅದು ಇಡೀ ಶಾಸಕಾಂಗ ಪಕ್ಷದ ಮೇಲೆ ತೆಗೆದುಕೊಂಡ ಕ್ರಮವಾಗುತ್ತದೆ ಎಂದು ಘಂಟಾಘೋಷವಾಗಿ ಹೇಳಿ ಇದರಿಂದ ರಾಜ್ಯದಲ್ಲಿ ಪಕ್ಷದ ಮೇಲೆ ತೀವ್ರ ಪ್ರತಿಕೂಲ ಪರಿಣಾಮ ವಾಗುತ್ತದೆಂದು ಹೇಳಿತು. ಕಾಂಗ್ರೆ ಕಾರ್ಯಕಾರಿ ಸಮಿತಿಯು ದೇವರಾಜ ಅರಸುರವರಿಗೆ ಷೋಕಾಸ್ ನೋಟೀಸ್ ನೀಡಿತು. ಕರ್ನಾಟಕ ಪ್ರದೇಶ ಕಾಂಗ್ರೆಸ್ (ಐ) ಘಟಕವನ್ನು ಇಂದಿರಾ ಗಾಂಧಿಯವರ ಜೀತದಾಳಾಗಲು ಬಿಡುವುದಿಲ್ಲ ಎಂದು ಕಟುವಾಗಿ ಉತ್ತರಿಸಿದ ದೇವರಾಜ ಅರಸರು, ೧೯೬೯ರ ಕಾಂಗ್ರೆಸ್ ವಿಭಜನೆ ಕಾಲಕ್ಕೆ ಶ್ರೀಮತಿ ಇಂದಿರಾಗಾಂಧಿಯವರು ಪಕ್ಷದ ಶಿಸ್ತನ್ನು ಗಾಳಿಗೆ ತೂರಿದುದನ್ನು ಜ್ಞಾಪಿಸಿದರು.

ಜೂನ್ ೨೪, ೧೯೭೯ ರಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ದೇವರಾಜ ಅರಸರನ್ನು ಪಕ್ಷದಿಂದ ಆರು ವರ್ಷಗಳ ಕಾಲ ಉಚ್ಚಾಟಿಸಿತು. ಅದೇ ದಿನ ಕರ್ನಾಟಕದ ಪ್ರದೇಶ ಕಾಂಗ್ರೆಸ್ ಸಮಿತಿ ಸಾಮಾನ್ಯ ಸಭೆ ನಡೆಯಿತು. ೨೪೦ ಪಿ. ಸಿ.ಸಿ.ಐ. ಸದಸ್ಯರ ಪೈಕಿ ೨೦೮ ಜನ ಸದಸ್ಯರು ಹಾಜರಿದ್ದರು. ೧೫೪ ವಿಧಾನಸಭಾ ಸದಸ್ಯರ ಪೈಕಿ ೧೨೬ ಜನ ಶಾಸಕರೂ, ೨೮ ವಿಧಾನ ಪರಿಷತ್ ಸದಸ್ಯರ ಪೈಕಿ ೨೪ ಪರಿಷತ್ ಸದಸ್ಯರೂ ಹಾಜರಿದ್ದರು. ದೇವರಾಜ ಅರಸರು ತಮ್ಮದು ಕರ್ನಾಟಕ ಕಾಂಗ್ರೆಸ್ ಪಕ್ಷ ಎಂದರು. ಈ ರೀತಿ ಕರ್ನಾಟಕ ಕಾಂಗ್ರೆಸ್ ಉದಯವಾಯಿತು. ರಾಜಕೀಯ ಧ್ರುವೀಕರಣ ಆರಂಭವಾಗಿದೆ, ಎಲ್ಲಾ ಪಕ್ಷಗಳಲ್ಲಿರುವ ಪ್ರಗತಿಪರರು ಬಡವರ ಪಕ್ಷಪಾತಿಗಳೂ ಅನ್ಯಾಯವನ್ನು ಪ್ರತಿಭಟಿಸುವವರೂ ಒಂದುಗೂಡುವ ಕಾಲ ಬಂದಿದೆ ಎಂದು ಅರಸರು ಪತ್ರಿಕಾಗೋಷ್ಠಿಯಲ್ಲಿ ತಿಳಿಸಿದರು. ಜುಲೈ ೪, ೧೯೭೯ರಂದು ಬೆಂಗಳೂರಿನಲ್ಲಿ ಕಾಂಗ್ರೆಸಿಗರ ಒಂದು ಸಮ್ಮೇಳನವನ್ನು ಸಂಘಟಿಸಲಾಯಿತು. ಕಾಂಗ್ರೆಸ್ (ಎಸ್)ಗೆ ಸೇರಿದ ಬಹುಸಂಖ್ಯೆಯ ಪ್ರತಿನಿಧಿಗಳು ಹಾಜರಾದರು. ಮಹಾರಾಷ್ಟ್ರ, ಆಂಧ್ರ, ಬಿಹಾರ, ಕಾಶ್ಮೀರ, ಉತ್ತರ ಪ್ರದೇಶ, ಪಶ್ಚಿಮ ಬಂಗಾಳ, ಪಂಜಾಬ್, ದೆಹಲಿಯ ಕಾಂಗ್ರೆಸ್ (ಐ) ಭಿನ್ನ ಮತೀಯರೂ ಇದರಲ್ಲಿ ಹಾಜರಿದ್ದರು. ಕರ್ನಾಟಕ ಕಾಂಗ್ರೆಸ್ ಪ್ರಸ್ತಾಪ ಇದರಲ್ಲಿ ಬರಲಿಲ್ಲ. ೧೯೭೮ ರ ವಿಭಜನಾಪೂರ್ವ ಎ.ಐ.ಸಿ.ಸಿ. ಅಧಿವೇಶನ ಕರೆಯಲು ಸಮ್ಮೇಳನದಲ್ಲಿ ನಿರ್ಧಾರ ತೆಗೆದುಕೊಳ್ಳಲಾಯಿತು.

ದೇವರಾಜ ಅರಸರು ಜನತಾ ಪಕ್ಷಕ್ಕೆ ಪರ್ಯಾಯವಾಗಿ ೧೯೬೯ರ ವಿಭಜನಾಪೂರ್ವ ಕಾಂಗ್ರೆಸ್ ಪಕ್ಷವನ್ನು ಸಂಘಟಿಸಲು ಉದ್ದೇಶಿಸಿದ್ದರು. ಆದರೆ ಅದು ಪ್ರಾಯೋಗಿಕವಲ್ಲ ಎಂದು ೧೯೭೮ರ ವಿಭಜನಾಪೂರ್ವ ಕಾಂಗ್ರೆಸ್ ಸಮ್ಮೇಳನ ನಡೆಸುವಷ್ಟಕ್ಕೆ ಸೀಮಿತರಾದರು. ಇಂದಿರಾ ಗಾಂಧಿಯವರ ವಿರೋಧಿಗಳು ಸೇರಿ ಸಮ್ಮೇಳನ ನಡೆಸಿದ್ದಾರೆ. ಇವರಿಗೆ ಯಾವುದೇ ತತ್ವ, ಸಿದ್ಧಾಂತಗಳು ಇಲ್ಲ, ಉದ್ದೇಶ ಇಲ್ಲ ಎಂದು ಕಾಂಗ್ರೆಸ್ (ಐ) ಅಡ್‌ಹಾಕ್ ಸಮಿತಿ ಅಧ್ಯಕ್ಷ ಬಂಗಾರಪ್ಪ ಟೀಕಿಸಿದರು. ಈ ಸಮ್ಮೇಳನದ ಫಲಶ್ರುತಿಯಾಗಿ ಮತ್ತೆ ವೈ. ಬಿ. ಚವಾಣ್ ಲೋಕಸಭೆಯಲ್ಲಿ ವಿರೋಧಪಕ್ಷದ ನಾಯಕರಾದರು. ಸಿ. ಎಂ. ಸ್ಟೀಫನ್ ಕೆಳಗಿಳಿಯ ಬೇಕಾಯಿತು. ಜುಲೈ

೯, ೧೯೭೯ ರಂದು ಪಾರ್ಲಿಮೆಂಟ್ ಅಧಿವೇಶನ ಆರಂಭವಾಯಿತು. ಜುಲೈ ೨೫ ರಂದು ಲೋಕಸಭೆಯಲ್ಲಿ ಕಾಂಗ್ರೆಸ್ (ಎಸ್) ಪಕ್ಷದ ಬಲ ೭೫ಕ್ಕೆ ಏರಿತು. ಕಾಂಗ್ಯೆ ಬಲ ೭೧ಕ್ಕೆ ಇಳಿಯಿತು. ಅರಸು ಬಂಡಾಯದಿಂದ ಕಾಂಗ್ಯೆ ಬಲ ಅಷ್ಟೇನೂ ಊಹಿಸಿದಂತೆ ಇಳಿಮುಖವಾಗಲಿಲ್ಲ.

## ೩. ಜನತಾ ಸರ್ಕಾರದ ಪತನ

ಒಳಜಗಳದ ಕಾರಣ ಜುಲೈ ೧೫, ೧೯೭೯ರಂದು ಮೊರಾರ್ಜಿ ದೇಸಾಯಿ ಪ್ರಧಾನಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಕಾಂಗ್ರೆಸ್ (ಎಸ್) ಸಹಕಾರದೊಡನೆ ಚರಣ್‌ಸಿಂಗ್ ಸರ್ಕಾರ ರಚಿಸಿ ೧೯೭೯ ಜುಲೈ ೨೮ ರಂದು ಪ್ರಧಾನಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು. ಕಾಂಗ್ರೆಸ್ (ಎಸ್) ನಾಯಕ ವೈ. ಬಿ. ಚವಾಣ್ ಉಪಪ್ರಧಾನಮಂತ್ರಿಯಾದರು. ಒಟ್ಟು ೧೨ ಜನ ಕಾಂಗ್ರೆಸ್ (ಎಸ್) ಸಂಸದರು ಕೇಂದ್ರ ಸಚಿವರಾದರು. ಅದರಲ್ಲಿ ಕರ್ನಾಟಕದ ಬಿ. ರಾಚಯ್ಯ ಹಾಗೂ ಟಿ. ಎ. ಪೈ ಸೇರಿದ್ದರು. ಜಗಜೀವನರಾಂ ವಿರೋಧಿನಾಯಕರಾದರು. ಮೂರು ವಾರಗಳ ಒಳಗಾಗಿ ಬಹುಮತ ಸಾಬೀತುಪಡಿಸಲು ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿ ಚರಣ್ ಸಿಂಗ್‌ರಿಗೆ ಸೂಚಿಸಿದ್ದರು. ಆದರೆ ಅದು ಸಾಧ್ಯವಾಗದೆ ಆಗಸ್ಟ್ ೨೦ ರಂದು ಚರಣ್‌ಸಿಂಗ್ ರಾಜೀನಾಮೆ ನೀಡಿದರು. ೨೧ ರಂದು ಲೋಕಸಭೆ ವಿಸರ್ಜನೆಯಾಯಿತು. ಚರಣ್‌ಸಿಂಗ್‌ರ ಉಸ್ತುವಾರಿ ಸರ್ಕಾರದ ಮುಂದುವರಿಕೆಗೆ ರಾಷ್ಟ್ರಪತಿಯವರು ಅವಕಾಶ ನೀಡಿದರು.

## ೪. ಅಖಿಲ ಭಾರತ ಕಾಂಗ್ರೆಸ್ (ಯು) ಅಥವಾ ಅರಸು ಕಾಂಗ್ರೆಸ್ ಉದಯ

ಅರಸು ಸ್ಥಾಪಿಸಿದ್ದ ಕರ್ನಾಟಕ ಕಾಂಗ್ರೆಸ್‌ಗೆ ಗುಲ್ಬರ್ಗಾ ಲೋಕಸಭಾ ಸದಸ್ಯ ಸಿದ್ಧರಾಮರೆಡ್ಡಿ ಅಧ್ಯಕ್ಷರಾದರು. ಸೆಪ್ಟೆಂಬರ್ ೧೨, ೧೩, ೧೯೭೯ ರಂದು ಬೆಂಗಳೂರಿನಲ್ಲಿ ಅಖಿಲ ಭಾರತ ಕಾಂಗ್ರೆಸ್ (ಎಸ್) ಸಮ್ಮೇಳನ ಏರ್ಪಾಡಾಯಿತು. ಸರ್ದಾರ್ ಸ್ವರ್ಣಸಿಂಗ್ ಕಾಂಗ್ರೆಸ್ ಅಧ್ಯಕ್ಷತೆಯನ್ನು ಬಿಟ್ಟು ಕೊಟ್ಟರು. ದೇವರಾಜ ಅರಸರು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದರು. ಇದೇ ಅರಸು ಕಾಂಗ್ರೆಸ್ ಎಂದು ಕರೆಸಿಕೊಂಡಿತು. ಚರಣಸಿಂಗರ ಲೋಕದಳ ಪಕ್ಷದೊಂದಿಗೆ ಮೈತ್ರಿ ಏರ್ಪಡಿಸಿಕೊಂಡು ಲೋಕಸಭಾ ಚುನಾವಣೆಗಳನ್ನು ಎದುರಿಸಲು ಸಮ್ಮೇಳನ ನಿರ್ಧರಿಸಿತು.

## ೫. ಕರ್ನಾಟಕ ಕಾಂಗ್ರೆಸ್ - ಅರಸು ಕಾಂಗ್ರೆಸ್ ವಿಲೀನ

ಕರ್ನಾಟಕದಲ್ಲಿ ಕೆ.ಪಿ.ಸಿ.ಸಿ. (ಯು) ಅಧ್ಯಕ್ಷರಾಗಿ ಕೆ. ಎಚ್. ಪಾಟೀಲರು ಮುಂದುವರಿದರು. ಇದರ ಜೊತೆಗೆ ಅರಸು ಸ್ಥಾಪಿಸಿದ್ದ ಸಿದ್ದರಾಮರೆಡ್ಡಿ ಅಧ್ಯಕ್ಷತೆಯ ಕರ್ನಾಟಕ ಕಾಂಗ್ರೆಸ್ ಒಂದಿತ್ತು. ಲೋಕಸಭಾ ಚುನಾವಣೆಗಳ ದೃಷ್ಟಿಯಿಂದ ಇವೆರಡರ ವಿಲೀನ ಅಗತ್ಯವಾಗಿತ್ತು. ರಾಜ್ಯದಲ್ಲಿ ಎರಡೂ ಕಾಂಗ್ರೆಸ್‌ಗಳು ವಿಲೀನವಾದ ಪಕ್ಷದಲ್ಲಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು ಯಾರಾಗಬೇಕು, ಈಗಿನ ಜಿಲ್ಲಾ ಹಾಗೂ ತಾಲ್ಲೂಕು ಕಾಂಗ್ರೆಸ್ (ಯು) ಘಟಕಗಳ ಪದಾಧಿಕಾರಿಗಳ ಸ್ಥಾನಮಾನ ಏನು, ಕರ್ನಾಟಕ ಕಾಂಗ್ರೆಸ್ ಪದಾಧಿಕಾರಿಗಳ ಹಾಗೂ ಸರ್ಕಾರದ ಸ್ಥಾನಮಾನ ಏನು ಎಂಬ ಪ್ರಶ್ನೆ ಎದುರಾಯಿತು. ೭-೧೧-೭೯ ರಂದು ಕಾಂಗ್ರೆಸ್ (ಯು) ಸೇರಲು ಕರ್ನಾಟಕ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ತೀರ್ಮಾನಿಸಿತು. ೧೯೭೯ರ ಸೆಪ್ಟೆಂಬರ್ ೧೨, ೧೩ ರಂದು ಬೆಂಗಳೂರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಕರ್ನಾಟಕ ಕಾಂಗ್ರೆಸ್ ಕಾಂಗ್ರೆಸ್ (ಯು) ನಲ್ಲಿ ವಿಲೀನವಾಗಬೇಕೆಂಬ ಆಹ್ವಾನಕ್ಕೆ ಕರ್ನಾಟಕ ಕಾಂಗ್ರೆಸ್ ಪುರಸ್ಕಾರ ನೀಡಿತು. ಕರ್ನಾಟಕ ಕಾಂಗ್ರೆಸ್‌ನ ಈಗಿನ ಘಟಕಗಳನ್ನು ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ (ಯು) ಘಟಕಗಳೆಂದು ಪರಿಗಣಿಸಬೇಕು ಎಂಬ ಮನವಿಯನ್ನು ಕಾಂಗ್ರೆಸ್ (ಯು) ಅಧ್ಯಕ್ಷ ದೇವರಾಜ ಅರಸರ ಮುಂದಿಡಲಾಗಿದೆ. ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷವನ್ನು ಒಗ್ಗಟ್ಟಿನಿಂದ ನಡೆಸಲು ಅಗತ್ಯ ಕ್ರಮ ಕೈಗೊಳ್ಳುವ ಅಧಿಕಾರವನ್ನು ದೇವರಾಜ ಅರಸರಿಗೆ ನೀಡುವ ನಿರ್ಣಯವನ್ನು ಕರ್ನಾಟಕ ಕಾಂಗ್ರೆಸ್ ಸಮಿತಿ ಅಂಗೀಕರಿಸಿತು. ದೇವರಾಜ ಅರಸರು, ಕೆ. ಎಚ್. ಪಾಟೀಲರನ್ನೂ, ಸಿದ್ದರಾಮರೆಡ್ಡಿಯವರನ್ನು ಕರೆಸಿ ಸಭೆ ನಡೆಸಿ, ೧೯೭೩ರ ವಿಭಜನಾಪೂರ್ವ ಕಾಂಗ್ರೆಸ್ ಅಧಿವೇಶನ ಕರೆಯಬೇಕು, ಮುಂದಿನ ಅಧ್ಯಕ್ಷರನ್ನೂ ಈ ಸಭೆ ಆರಿಸಬೇಕು, ಜಿಲ್ಲಾ ಮಟ್ಟದಲ್ಲಿ ತಾಲ್ಲೂಕು ಮಟ್ಟದಲ್ಲಿ ಅಲ್ಲಿನ ಘಟಕಗಳೇ ಸಭೆ ಸೇರಿ ಅಲ್ಲಿನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಂಡು ಒಂದಾಗಬೇಕೆಂಬ ಅಭಿಪ್ರಾಯಗಳು ಮೂಡಿಬಂತು.

ದಿನಾಂಕ ೮-೧೧-೭೯ರಂದು ಕರ್ನಾಟಕ ಕಾಂಗ್ರೆಸ್ ಸರ್ವ ಸದಸ್ಯರ ಸಭೆ ನಡೆಯಿತು. ಕಾಂಗ್ರೆಸ್ (ಯು) ಜೊತೆ ವಿಲೀನಕ್ಕೆ ಸರ್ವಾನುಮತದಿಂದ ಒಪ್ಪಿಗೆ ನೀಡಿತು. ಸಚಿವ ಕೆ. ಎಚ್. ರಂಗನಾಥ್ ನಿರ್ಣಯ ಮಂಡಿಸಿದರು. ಎಸ್. ಎಂ. ಯಾಹ್ಯಾ, ಡಿ. ಬಿ. ಚಂದ್ರೇಗೌಡ, ಕೆ. ಎಚ್. ಶ್ರೀನಿವಾಸ್, ಬಿ. ಬಸವಲಿಂಗಪ್ಪ ಅನುಮೋದಿಸಿದರು. ಪ್ರದೇಶ ಕಾಂಗ್ರೆಸ್ (ಯು) ಅಧ್ಯಕ್ಷ

ಕೆ. ಎಚ್. ಪಾಟೀಲರ ಜೊತೆ ಸಾಮರಸ್ಯ ಸಾಧಿಸಲು ಮೂರು ಜನರ ಸಮಿತಿ ನೇಮಿಸಲಾಯಿತು. ಪಕ್ಷದ ಅಸ್ತಿತ್ವಕ್ಕೆ ಧಕ್ಕೆ ಬಾರದ ರೀತಿಯಲ್ಲಿ, ಸರ್ಕಾರ ಉಳಿಸಿಕೊಂಡು ಹೋಗಲು ಸಾಧ್ಯವಾಗುವ ರೀತಿಯಲ್ಲಿ ವಿಲೀನವಾಗಲು ತೀರ್ಮಾನಿಸಲಾಯಿತು. ಜಿ.ಕೆ. ಟಕ್ಕೇದ್ ಕರ್ನಾಟಕ ಕಾಂಗ್ರೆಸ್ ಪದಾಧಿಕಾರಿಗಳ ಸ್ಥಾನಮಾನದ ಬಗ್ಗೆ ಶಂಕೆ ವ್ಯಕ್ತಪಡಿಸಿದರು. ಎನ್. ಜಿ. ಗೋವಿಂದಗೌಡ

ಎ ೦ ಬ ೨ ವ ’ ವ ’ ೧ ’ ೨

ಈ ನಿರ್ಣಯಕ್ಕೆ ನನ್ನ ವಿರೋಧವಿದೆ ಎಂದರು. ಎಂ. ಸಿ. ಪೆರುಮಾಳ್, ಎಸ್. ವೆಂಕಟರಾಮಯ್ಯ, ವಿ.ಸಿ. ತಿಮ್ಮರಾಯಪ್ಪ, ಎಂ.ಪಿ. ಈಶ್ವರಪ್ಪ, ಬಿ. ಎಂ. ಸಾಣೆಕೊಪ್ಪ, ಕೆ. ಕೆ. ಶೆಟ್ಟಿ, ಗಟ್ಟಿ ಚಂದ್ರಶೇಖರ್, ಪಿ. ಎನ್. ರೆಡ್ಡಿ, ಲೋಕೂರ್ ಎಲ್ಲರೂ ನಿರ್ಣಯವನ್ನು ಸಮರ್ಥಿಸಿ ಮಾತನಾಡಿದರು. ಈ ವಿಲೀನದ ನಿರ್ಧಾರವನ್ನು ಕೆ. ಎಚ್. ಪಾಟೀಲ್ ಸ್ವಾಗತಿಸಿದರು. ನಾವೆಲ್ಲಾ ಒಂದಾಗಿದ್ದೇವೆ ಪರಸ್ಪರ ಭೀತಿ, ಅನುಮಾನ ಇಟ್ಟುಕೊಳ್ಳುವುದು ಬೇಡ ಎಂದರು. ೧೧-೧೨-೭೯ ರಂದು ದೇವರಾಜ ಅರಸು ಮತ್ತು ಕೆ. ಎಚ್. ಪಾಟೀಲರು ಭೇಟಿ ಮಾಡಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷತೆ ಬಗ್ಗೆ ಚರ್ಚಿಸಿದರು. ಆದರೆ ಯಾವುದೇ ಪರಿಹಾರ ಸಿಗಲಿಲ್ಲ. ಅರಸು ಬೆಂಬಲಿಗರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರ ಬದಲಾವಣೆಗೆ ಪಟ್ಟು ಹಿಡಿದಿದ್ದರು. ಅರಸು ಇಕ್ಕಟ್ಟಿನಲ್ಲಿ ಸಿಲುಕಿದ್ದರು. ವಿಲೀನ ಕೆಳಮಟ್ಟದಿಂದ ಆರಂಭವಾಗಿ ಮೇಲ್ಮಟ್ಟಕ್ಕೆ ಬರಬೇಕು ಎಂದು ಪಾಟೀಲರು ಹೇಳಿದರು. ಪ್ರತ್ಯೇಕ ಸಭೆ ಕರೆಯುವಂತೆ ಪಾಟೀಲರ ಬೆಂಬಲಿಗರು ಒತ್ತಾಯಿಸುತ್ತಿದ್ದರು.

ಏಕೀಕೃತ ಪ್ರದೇಶ ಕಾಂಗ್ರೆಸ್ ಪಕ್ಷದ ಅಧ್ಯಕ್ಷ ಸ್ಥಾನಕ್ಕೆ ಹೊಸ ಅಧ್ಯಕ್ಷರ ನೇಮಕ ಮಾಡುವ ಬಗ್ಗೆ ಪ್ರಯತ್ನಗಳು ನಡೆಯುತ್ತಿದ್ದವು. ೨೨-೧೧-೭೯ ರಂದು ಹಾರನಹಳ್ಳಿ ರಾಮಸ್ವಾಮಿಯವರನ್ನು ನೂತನ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲು ತೀರ್ಮಾನಿಸಲಾಯಿತು. ಕೆ. ಎಚ್. ಪಾಟೀಲ್ ತಮ್ಮ ಸ್ಥಾನ ತೆರವು ಮಾಡಲು ಒಪ್ಪಿದರು. ೨೬ನೇ ತಾರೀಖು ಎರಡೂ ಘಟಕಗಳ ಕಾರ್ಯಕಾರಿ ಸಮಿತಿಗಳು ಪ್ರತ್ಯೇಕವಾಗಿ ಸಭೆ ಸೇರಿ ಈ ಬಗ್ಗೆ ನಿರ್ಣಯ ಕೈಗೊಳ್ಳಲು ತೀರ್ಮಾನಿಸಲಾಯಿತು. ಕೆ. ಎಚ್. ಪಾಟೀಲರು ನೂತನ ಪಕ್ಷದಲ್ಲಿ ತಾವು ಯಾವುದೇ ಸ್ಥಾನವನ್ನೂ ಕೇಳುವುದಿಲ್ಲ ಎಂದರು. ೨೬-೧೧-೭೯ ರಂದು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿ (ಅರಸು) ಅಧ್ಯಕ್ಷರಾಗಿ ಗಂಡಸಿ ಕ್ಷೇತ್ರದ ಶಾಸಕ ಹಾರನಹಳ್ಳಿ ರಾಮಸ್ವಾಮಿ ಆಯ್ಕೆ ಆದರು. ಏಕೀಕೃತ ಕಾರ್ಯಕಾರಿ ಸಮಿತಿ ಸಭೆಯ ಅಧ್ಯಕ್ಷತೆಯನ್ನು ಕೆ. ಎಚ್. ಪಾಟೀಲರೇ ವಹಿಸಿದ್ದರು. ಕರ್ನಾಟಕ ಕಾಂಗ್ರೆಸ್ ಅಧ್ಯಕ್ಷ ಸಿದ್ದರಾಮರೆಡ್ಡಿ, ಉಭಯ ಘಟಕಗಳ ಪ್ರಧಾನ ಕಾರ್ಯದರ್ಶಿಗಳು, ಕಾರ್ಯಕಾರಿ ಸಮಿತಿ ಸದಸ್ಯರು ಈ ಸಭೆಯಲ್ಲಿ ಪಾಲ್ಗೊಂಡಿದ್ದರು. ಕೆ. ಎಚ್. ರಂಗನಾಥ್, ಬಿ. ಸುಬ್ಬಯ್ಯ ಶೆಟ್ಟಿ ಎಲ್. ಜಿ. ಹಾವನೂರ್, ಎ. ಬಿ. ಜಕನೂರ್, ಕೆ. ಬಿ. ಶಿವಯ್ಯ, ಎಚ್. ಸಿ. ಶ್ರೀಕಂಠಯ್ಯ ಮುಂತಾದವರು ಸಭೆಯಲ್ಲಿ ಪಾಲ್ಗೊಂಡಿದ್ದರು.

ಪಾಟೀಲರ ಬೆಂಬಲಿಗರಿಗೆ ಅಸಮಾಧಾನವಾಗಿತ್ತು. ಅಷ್ಟರಲ್ಲಿ ೨೭-೧೧-೭೯ರಂದು ಸಚಿವ ಸ್ಥಾನಕ್ಕೆ ಹಾಗೂ ಕಾಂಗ್ರೆಸ್ (ಯು) ಪಕ್ಷಕ್ಕೆ ಬ್ರಹ್ಮಾನಂದರೆಡ್ಡಿ ರಾಜೀನಾಮೆ ನೀಡಿ, ಇಂದಿರಾ ಕಾಂಗ್ರೆಸ್ ಸೇರಿದರು. ಅದರ ಬೆನ್ನ ಹಿಂದೆಯೇ ದಿನಾಂಕ ೨೮.೧೧.೭೯ ರಂದು ಕೆ. ಎಚ್. ಪಾಟೀಲರು ಕಾಂಗ್ರೆಸ್ (ಯು) ಪಕ್ಷದಿಂದ ನಿರ್ಗಮಿಸಿದರು. ಪಾಟೀಲರು ಡಿಸೆಂಬರ್ ೨, ೧೯೭೯ ರಂದು ತಮ್ಮ ಬೆಂಬಲಿಗರ ಸಭೆ ನಡೆಸಿದರು. ೨೧ ಜಿಲ್ಲಾ ಕಾಂಗ್ರೆಸ್ ಸಮಿತಿಗಳ ಪೈಕಿ ೧೭ ಜಿಲ್ಲೆಗಳ ಕಾಂಗ್ರೆಸ್ ಸಮಿತಿಗಳ ಪದಾಧಿಕಾರಿಗಳು ಇಂದಿರಾ ಕಾಂಗ್ರೆಸ್ ಸೇರಿದರು. ಅನಂತಕೃಷ್ಣ ಕೂಡಾ ಇಂದಿರಾ ಕಾಂಗ್ರೆಸ್ ಸೇರಿದರು. ೧೯೮೦ರ ಜನವರಿ ತಿಂಗಳಿನಲ್ಲೇ ರೆಡ್ಡಿ ಕಾಂಗ್ರೆಸ್‌ನ ನಾಯಕರಾಗಿದ್ದ ಎಸ್. ಎಂ. ಕೃಷ್ಣ ಅವರ ತಂಡ ಕಾಂಗ್ರೆಸ್ ಏಕತಾವೇದಿಕೆ ಎಂದು ಒಂದು ಗುಂಪನ್ನು ನಿರ್ಮಿಸಿಕೊಂಡು ತದನಂತರ ಆ ಮೂಲಕ ಇಂದಿರಾ ಕಾಂಗ್ರೆಸ್ ಸೇರಿದರು. ದೇವರಾಜ ಅರಸು ಕಾಂಗ್ರೆಸ್ (ಯು) ಅಧ್ಯಕ್ಷರಾದ ನಂತರ ಹೆಚ್. ಎನ್. ನಂಜೇಗೌಡ, ರಘುಪತಿ ಮತ್ತಿತರರು ಇಂದಿರಾ ಕಾಂಗ್ರೆಸ್ ಸೇರಿದ್ದರು. ದಿನಾಂಕ ೩೦-೧೧-೭೯ ರಂದು ಕೆ. ಎಸ್. ನಾಗರತ್ನಮ್ಮ, ಬೆಳ್ಳಿಯಪ್ಪ, ಅಬ್ದುಲ್ ನಜೀರ್, ಎಂ. ಎಂ. ಸೂರ್ಯನಾರಾಯಣಗೌಡ ಇವರುಗಳು ಇಂದಿರಾ ಕಾಂಗ್ರೆಸ್ ಸೇರಿದರು. ಹುಬ್ಬಳ್ಳಿ, ಧಾರವಾಡ ನಗರಸಭೆಯ ಎಲ್ಲಾ ಸದಸ್ಯರೂ ಕೆ. ಎಚ್. ಪಾಟೀಲರಿಗೆ ಬೆಂಬಲ ವ್ಯಕ್ತಪಡಿಸಿ ಇದೇ ದಿನ ಇಂದಿರಾ ಕಾಂಗ್ರೆಸ್ ಸೇರಿದರು. ೧೦-೧೨-೭೯ರಂದು ವಿಧಾನ ಪರಿಷತ್ ಸದಸ್ಯೆ ಬಸವರಾಜೇಶ್ವರಿ, ಸಚಿವ ಪಾಟೀಲ್ ಕಾಂಗ್ರೆಸ್ (ಯು) ತ್ಯಜಿಸಿ ಕಾಂಗ್ರೆ ಸೇರಿದರು. ರಾಯಚೂರು ಪುರಸಭಾಧ್ಯಕ್ಷ ಪಾರಸ್‌ಮಲ್ ಸುಖಾನಿ ಕೂಡಾ ಇಂದಿರಾ ಕಾಂಗ್ರೆಸ್ ಸೇರಿದರು. ೨೬-೧೨-೭೯ರಂದು ಚುನಾವಣೆಗೆ ಪೂರ್ವದಲ್ಲಿ ಸಚಿವ ಎ.ಬಿ. ಜಕನೂರ್ ಕಾಂಗ್ರೆಸ್ (ಯು) ತ್ಯಜಿಸಿ ಇಂದಿರಾ ಕಾಂಗ್ರೆಸ್ ಸೇರಿದರು. ಈ ರೀತಿ ಆರಂಭದಿಂದಲೇ ಪ್ರದೇಶ ಕಾಂಗ್ರೆಸ್ (ಯು) ಪಕ್ಷಾಂತರದ ಪಿಡುಗಿಗೆ ಒಳಗಾಯಿತು. ಅದರ ಬಲ ಕ್ಷೀಣಿಸತೊಡಗಿತು.

### ೭. ೧೯೮೦ರ ಲೋಕಸಭಾ ಚುನಾವಣೆ - ಕಾಂಗ್ರೆಸ್ (ಐ) ಸಿದ್ಧತೆ / ಅಭ್ಯರ್ಥಿಗಳ ಆಯ್ಕೆ

ಇಂದಿರಾ ಗಾಂಧಿ ಹಾಗೂ ದೇವರಾಜ ಅರಸರ ನಡುವೆ ಉಂಟಾದ ತೀವ್ರ ರಾಜಕೀಯ ಭಿನ್ನಾಭಿಪ್ರಾಯಗಳ ಫಲವಾಗಿ, ಇಂದಿರಾ ಗಾಂಧಿಯವರು ಕರ್ನಾಟಕದಲ್ಲಿದ್ದ ದೇವರಾಜ ಅರಸರ ತಮ್ಮದೇ ಆದ ಸರ್ಕಾರವನ್ನೂ ಲೆಕ್ಕಿಸದೆ, ಜೂನ್ ೧೬,

೧೯೭೯ರಂದು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ವಿಸರ್ಜಿಸಿ, ಎಸ್. ಬಂಗಾರಪ್ಪನವರ ಅಧ್ಯಕ್ಷತೆಯಲ್ಲಿ ಅಡ್‌ಹಾಕ್ ಕಾಂಗ್ರೆಸ್ ಸಮಿತಿಯನ್ನು ನೇಮಿಸಿದರು. ಕರ್ನಾಟಕ ಸರ್ಕಾರವನ್ನು ತಮ್ಮ ಪೂರ್ಣ ನಿಯಂತ್ರಣಕ್ಕೆ ತೆಗೆದುಕೊಳ್ಳಬೇಕೆನ್ನುವ ಇಂದಿರಾ ಗಾಂಧಿಯವರ ತಂತ್ರ ಫಲಿಸಲಿಲ್ಲ. ಶಾಸಕರು, ಕೆ.ಪಿ.ಸಿ.ಸಿ. ಪದಾಧಿಕಾರಿಗಳು, ಜಿಲ್ಲಾ ತಾಲ್ಲೂಕು ಘಟಕಗಳ ಅಧ್ಯಕ್ಷರು, ಪದಾಧಿಕಾರಿಗಳು, ಸಚಿವ ಸಂಪುಟದ ಬಹುತೇಕ ಸಚಿವರು ದೇವರಾಜ ಅರಸರ ಹಿಂದೆ ಬಂಡೆಗಲ್ಲಿನಂತೆ ನಿಂತರು. ತಮ್ಮದೇ ಆದ ಪಕ್ಷ ರಚಿಸಿಕೊಂಡರು. ಆದರೆ ಬಂಗಾರಪ್ಪ, ವೀರಪ್ಪ ಮೊಯಿಲಿ, ಗುಂಡೂರಾವ್ ಮುಂತಾದ ಇಂದಿರಾ ಕಾಂಗ್ರೆಸ್ ಪಕ್ಷದ ನಾಯಕರು ಧೃತಿಗೆಡದೆ ಕರ್ನಾಟಕದಲ್ಲಿ ಪಕ್ಷದ ಬಲವರ್ಧನೆಗೆ ಶ್ರಮಿಸಿದರು. ಇಂದಿರಾ ಗಾಂಧಿಯವರ ವ್ಯಕ್ತಿತ್ವ ಹಾಗೂ ಪ್ರಭಾವಳಿಯನ್ನು ಜನಮನದಲ್ಲಿ ಮತ್ತೆ ಪ್ರತಿಷ್ಠಾಪಿಸುವ ಕೆಲಸ ಮಾಡಿದರು.

ಲೋಕಸಭಾ ಸ್ಥಾನಗಳಿಗೆ ಸ್ಪರ್ಧಿಗಳನ್ನು ಆರಿಸುವ ಕೆಲಸ ಪ್ರಾರಂಭವಾಗಿತ್ತು. ನವೆಂಬರ್ ೧೦ ರ ಹೊತ್ತಿಗೆ ರಾಜ್ಯ ಕಾಂಗ್ರೆಸ್ ಅಭ್ಯರ್ಥಿಗಳ ಪಟ್ಟಿ ಸಿದ್ಧವಾಗುವುದೆಂದೂ, ಇತ್ತೀಚೆಗೆ ಪಕ್ಷ ಒಡೆದಾಗ ಯಾವ ಯಾವ ಸಂಸದರು ಇಂದಿರಾ ಗಾಂಧಿ ಪಕ್ಷದಲ್ಲಿ ಉಳಿದರೋ ಅವರಿಗೆಲ್ಲಾ ಟಿಕೆಟ್ ಸಿಗುವ ಸಂಭವ ಇದೆ ಎಂದೂ ಕೆ. ಪಿ.ಸಿ.ಸಿ (ಐ) ಅಧ್ಯಕ್ಷ ಬಂಗಾರಪ್ಪನವರು ದಿನಾಂಕ ೬-೧೧-೭೯ ರಂದು ಹೇಳಿದರು. ದಿನಾಂಕ ೧೦ ರಂದು ರಾಜ್ಯ ಕಾಂಗ್ರೆ ಕಾರ್ಯಕಾರಿ ಸಮಿತಿ ಸಭೆ ಹಾಗೂ ಚುನಾವಣಾ ಸಮಿತಿ ಸಭೆ ಸೇರಿತ್ತು. ಕೇಂದ್ರ ವೀಕ್ಷಕರಾಗಿ ಜನಗನ್ನಾಥ ಪಹಾಡಿಯಾ ಆಗಮಿಸಿದ್ದರು. ತುಮಕೂರು, ಹರಿಹರ ವಿಧಾನಸಭಾ ಉಪಚುನಾವಣೆಗಳು ಹಾಗೂ ಲೋಕಸಭಾ ಅಭ್ಯರ್ಥಿಗಳ ಪಟ್ಟಿಯನ್ನು ಪರಿಶೀಲಿಸಲಾಯಿತು. ಜಿಲ್ಲಾ ಘಟಕಗಳ ಅಧ್ಯಕ್ಷರೂ ಶಾಸಕರೂ ಸಭೆಯಲ್ಲಿ ಹಾಜರಿದ್ದರು. ಜಿಲ್ಲಾ ಸಮಿತಿಗಳ ಶಿಫಾರಸ್ಸುಗಳನ್ನು ಪರಿಶೀಲಿಸಲಾಯಿತು. ಅಂತಿಮವಾಗಿ ಅಭ್ಯರ್ಥಿಗಳ ಆಯ್ಕೆ ಅಧಿಕಾರವನ್ನು ಇಂದಿರಾಗಾಂಧಿಯವರಿಗೆ ನೀಡಲು ಸಭೆಯಲ್ಲಿ ತೀರ್ಮಾನಿಸಲಾಯಿತು.

'ರಾಜ್ಯದಲ್ಲಿ ದೇವರಾಜ ಅರಸು ವಿರೋಧಿ ವಾತಾವರಣ ಇದೆ. ಇಂದಿರಾ ಕೀರ್ತಿ ಶಿಖರಾಗ್ರದಲ್ಲಿದೆ. ರಾಜ್ಯದಲ್ಲಿ ಕಾಂಗ್ರೆ ಗೆಲುವು ನಿಶ್ಚಿತ' ಎಂದು ಪ್ರಧಾನ ಕಾರ್ಯದರ್ಶಿ ವೀರಪ್ಪ ಮೊಯಿಲಿ ಹೇಳಿದರು. 'ರಾಜ್ಯದಲ್ಲಿ ಇಂದಿರಾ ಅಲೆ ಮತ್ತೆ ಆರಂಭವಾಗಿದೆ. ಕಾಂಗ್ರೆಸ್ (ಐ) ಜಯಗಳಿಸುವುದರಲ್ಲಿ ಅನುಮಾನವಿಲ್ಲ' ಎಂದು ಅಧ್ಯಕ್ಷ ಬಂಗಾರಪ್ಪ ಹೇಳಿದರು. ಗುಂಡೂರಾವ್ ಅವರನ್ನು ಕೇಂದ್ರ ಕಾರ್ಯಕಾರಿ ಸಮಿತಿ ಸದಸ್ಯರನ್ನಾಗಿ, ಪಾರ್ಲಿಮೆಂಟರಿ ಮಂಡಳಿಯ ಖಾಯಂ ಆಹ್ವಾನಿತರನ್ನಾಗಿ ನೇಮಕ ಮಾಡಿರುವ ಬಗ್ಗೆ ಸಭೆ ಇಂದಿರಾ ಗಾಂಧಿಯವರಿಗೆ ಕೃತಜ್ಞತೆ ಅರ್ಪಿಸಿತು. ಕಾಂಗ್ರೆ ಸಂಸದೀಯ ಮಂಡಲಿ ಸಭೆ ೨೫ ರಂದು ನಡೆಯಲಿದ್ದು ಅಲ್ಲಿ ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸುವುದಾಗಿ ತಿಳಿದುಬಂದಿತು. ಕರ್ನಾಟಕದಲ್ಲಿ ೨೮ ಸ್ಥಾನಗಳಿಗೆ ೩೧೦ ಮಂದಿ ಅರ್ಜಿ ಸಲ್ಲಿಸಿದ್ದಾರೆ. ಟಿಕೆಟ್ ಆಕಾಂಕ್ಷಿಗಳಲ್ಲಿ ವೀರೇಂದ್ರ ಪಾಟೀಲರೂ ಒಬ್ಬರು. ವಿಸರ್ಜಿತ ಲೋಕಸಭೆಯ ೧೩ ಸದಸ್ಯರು ಇಂದಿರಾ ಪರವಾಗಿದ್ದು ಅವರಿಗೆ ಟಿಕೆಟ್ ಸಿಗುವ ಸಂಭವ ಇದೆ ಎಂದು ಹೇಳಲಾಯಿತು.

ದಿನಾಂಕ ೨೧-೧೧-೭೯ ರಂದು ಬಹುಗುಣ ತಮ್ಮ ಸಿ. ಎಫ್. ಡಿ ಪಕ್ಷವನ್ನು ಇಂದಿರಾ ಕಾಂಗ್ರೆಸ್‌ನಲ್ಲಿ ವಿಲೀನಗೊಳಿಸಿದರು. ದೆಹಲಿಯ ಶಾಹಿ ಇಮಾಮ್ ಬಹುಗುಣರವರು ಕಾಂಗ್ರೆ ಸೇರಲು ತಮ್ಮ ಬೆಂಬಲ ನೀಡಿದರು. ೨-೧೨-೭೯ ರಂದು ೧೪೭ ಕಾಂಗ್ರೆಸ್ (ಐ) ಅಭ್ಯರ್ಥಿಗಳ ಪ್ರಥಮ ಪಟ್ಟಿಯನ್ನು ಬಿಡುಗಡೆ ಮಾಡಲಾಯಿತು. ಅದರಲ್ಲಿ ಆಂಧ್ರ ೨೭, ಅಸ್ಸಾಂ ೧೩, ಗುಜರಾತ್ ೨೨, ಹರ್‍ಯಾಣ ೯, ಹಿಮಾಚಲ ಪ್ರದೇಶ ೪, ಮಹಾರಾಷ್ಟ್ರ ೩೪, ಉತ್ತರ ಪ್ರದೇಶ ೩೩, ಮೇಘಾಲಯ ೧, ಅರುಣಾಚಲ ಪ್ರದೇಶ ೨, ಅಂಡಮಾನ್ ೧, ದಾದರ್ ನಗರ್ ಹವೇಲಿ ೧ ಅಭ್ಯರ್ಥಿಗಳು ಸೇರಿದ್ದರು. ಪ್ರಥಮ ಪಟ್ಟಿಯಲ್ಲಿ ಇಂದಿರಾ, ಸಂಜಯ, ಬನ್ಸಿಲಾಲ್ ಸೇರಿದ್ದರು.

ದಿನಾಂಕ ೪-೧೨-೭೯ರಂದು ಕಾಂಗ್ರೆಸ್ (ಐ) ಅಭ್ಯರ್ಥಿಗಳ ಎರಡನೇ ಪಟ್ಟಿ ಬಿಡುಗಡೆ ಆಯಿತು. ಅದೇ ದಿನ ಕರ್ನಾಟಕದ ಅಭ್ಯರ್ಥಿಗಳ ಪಟ್ಟಿಯೂ ಬಿಡುಗಡೆ ಆಯಿತು. ಶಿವಮೊಗ್ಗ ಕ್ಷೇತ್ರಕ್ಕೆ ಇನ್ನೂ ಅಭ್ಯರ್ಥಿಯನ್ನು ಪ್ರಕಟಿಸಿರಲಿಲ್ಲ. ಬೀದರ್ - ನರಸಿಂಗ ಹುಲ್ಲ, ಗುಲ್ಬರ್ಗಾ - ಧರ್ಮಸಿಂಗ್, ರಾಯಚೂರು - ಬಿ. ವಿ. ದೇಸಾಯಿ, ಕೊಪ್ಪಳ-ಹೆಚ್. ಜಿ ರಾಮುಲು, ಬಳ್ಳಾರಿ - ರಣಜಿತ್ ಘೋರ್ಪಡೆ, ಚಿಕ್ಕೋಡಿ-ಶಂಕರಾನಂದ್, ಬೆಳಗಾವಿ - ಎಸ್. ಬಿ. ಸಿದ್ನಾಳ್, ಬಾಗಲಕೋಟೆ - ವೀರೇಂದ್ರ ಪಾಟೀಲ್, ವಿಜಾಪುರ - ಕೆ. ಬಿ. ಚೌಧರಿ, ಧಾರವಾಡ ಉತ್ತರ - ಡಿ. ಕೆ. ನಾಯ್ಕರ್, ಧಾರವಾಡ ದಕ್ಷಿಣ - ಎಫ್. ಎಚ್. ಮೊಹಿಸೀನ್, ಉತ್ತರ ಕನ್ನಡ - ದೇವರಾಯನಾಯಕ್, ಬೆಂಗಳೂರು ಉತ್ತರ-ಜಾಫರ್ ಷರೀಫ್, ಉಡುಪಿ-ಆಸ್ಕರ್ ಫರ್ನಾಂಡಿಸ್, ಬೆಂಗಳೂರು ದಕ್ಷಿಣ - ಡಿ. ಪಿ. ಶರ್ಮಾ, ಮಂಗಳೂರು - ಜನಾರ್ದನ ಪೂಜಾರಿ, ಚಾಮರಾಜನಗರ-ವಿ. ಶ್ರೀನಿವಾಸ ಪ್ರಸಾದ್, ಮೈಸೂರು -

ಎಂ. ರಾಜಶೇಖರ ಮೂರ್ತಿ, ಮಂಡ್ಯ-ಎಸ್. ಎಂ. ಕೃಷ್ಣ ಚಿಕ್ಕಬಳ್ಳಾಪುರ- ಎಸ್. ಎನ್ ಪ್ರಸನ್ನಕುಮಾರ್, ತುಮಕೂರು - ಕೆ. ಲಕ್ಕಪ್ಪ, ಚಿತ್ರದುರ್ಗ - ಕೆ. ಮಲ್ಲಣ್ಣ, ದಾವಣಗೆರೆ-ಟಿ.ವಿ. ಚಂದ್ರಶೇಖರಪ್ಪ, ಚಿಕ್ಕಮಗಳೂರು - ಡಿ. ಎಂ. ಪುಟ್ಟೇ ಗೌಡ, ಹಾಸನ - ಎಚ್. ಎನ್. ನಂಜೇಗೌಡ, ಕೋಲಾರ - ಜಿ. ವೈ. ಕೃಷ್ಣನ್, ಕನಕಪುರ - ಎಂ. ವಿ. ಚಂದ್ರಶೇಖರಮೂರ್ತಿ, ಶಿವಮೊಗ್ಗ - ಎಸ್. ಟಿ. ಖಾದ್ರಿ ಇವರುಗಳಿಗೆ ಟಿಕೆಟ್ ದೊರಕಿತ್ತು.

## ೮. ಪ್ರಚಾರ

ಎಸ್. ಬಂಗಾರಪ್ಪರವರ ಸಂಚಾಲಕತ್ವದಲ್ಲಿ ಕಾಂಗ್ರೆಸ್ ಪ್ರಚಾರ ಸಮಿತಿ ರಚಿತವಾಗಿತ್ತು. ಎಲ್. ಟಿ. ಕಾರ್ಲೆ ಪತ್ರಿಕಾ ಪ್ರಚಾರ ಸಮಿತಿ, ಟಿ. ವಿ. ವೆಂಕಟಸ್ವಾಮಿ ಪ್ರಚಾರ ಸಮಿತಿ, ಎಚ್. ಹನುಮಂತಪ್ಪ ಸಂಯೋಜನಾ ಸಮಿತಿ, ಎಚ್. ಆರ್. ಪುಟ್ಟದಾಸ್ ಸಾರಿಗೆ ಸಮಿತಿ ಸಂಚಾಲಕರುಗಳಾಗಿ ನೇಮಕವಾಗಿದ್ದರು. ನವೆಂಬರ್ ೧೭,೧೮ ರಂದೇ ಇಂದಿರಾ ಗಾಂಧಿಯವರು ರಾಜ್ಯದಲ್ಲಿ ಎರಡು ದಿನಗಳ ಚುನಾವಣಾ ಪ್ರಚಾರ ಪ್ರವಾಸ ಕೈಗೊಂಡಿದ್ದರು. ಆದರೆ ಹೆಲಿಕಾಪ್ಟರ್ ತೊಂದರೆಯಿಂದ ಅವರು ಕೇವಲ ಒಂದು ದಿನ ಪ್ರವಾಸ ಮಾಡಿದರು. ೧೬ ರಂದು ರಾತ್ರಿ ಬೀದರ್‌ಗೆ ಬಂದವರು ಬೀದರ್, ಬಳ್ಳಾರಿ, ಕೊಪ್ಪಳ, ಗದಗ, ಹುಬ್ಬಳ್ಳಿ, ಧಾರವಾಡಗಳಲ್ಲಿ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ೧೭ ರ ಮುಂಜಾನೆ ಧಾರವಾಡಕ್ಕೆ ಬಂದರು. ಆ ದಿನ ಬಿಜಾಪುರ ಜಿಲ್ಲೆ ಪ್ರವಾಸ ರದ್ದು ಮಾಡಿ ಚಿಕ್ಕೋಡಿ, ನಿಪ್ಪಾಣಿ, ಸಂಕೇಶ್ವರ, ಬೆಳಗಾವಿಗಳಿಗೆ ಭೇಟಿ ನೀಡಿ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು.

ಅವೇಳೆಯಲ್ಲಿ ಬಂದರೂ ಸಹಸ್ರಾರು ಜನರು ಇಂದಿರಾ ಅವರ ಬಹಿರಂಗ ಸಭೆಗಳಲ್ಲಿ ನೆರೆದಿದ್ದು ಕಂಡುಬಂದಿತು. 'ನನ್ನನ್ನು ಹಾಗೂ ನನ್ನ ಕುಟುಂಬವನ್ನು ಕೋರ್ಟಿಗೆ ಎಳೆಯುವುದು, ಜೈಲಿಗೆ ಕಳುಹಿಸಬೇಕೆಂಬುದು ಒಂದೇ ಜನತಾ ಪಕ್ಷದ ಕಾರ್ಯಕ್ರಮ. ಬಹುಮತ ಪಡೆದು ಅಧಿಕಾರಕ್ಕೆ ಬಂದರೂ ದೇಶವನ್ನು ಆಳಲು, ಅಭಿವೃದ್ಧಿ ಪಥದಲ್ಲಿ ಕೊಂಡೊಯ್ಯಲು ಅವರಿಗೆ ಸಾಧ್ಯವಾಗಲಿಲ್ಲ. ಎಲ್ಲವನ್ನೂ ಹಾಳು ಮಾಡಿದರು. ಇಂದಿರಾ ಹಠಾವೋ ಎಂಬುದೇ ಅವರ ಮಂತ್ರ, ಅಂತಹ ಅವರ ಜೊತೆ ದೇವರಾಜ ಅರಸರು ಕೈ ಜೋಡಿಸಿದ್ದಾರೆ' ಎಂಬುದು ಇಂದಿರಾ ಗಾಂಧಿ ಅವರ ಪ್ರಚಾರ ಭಾಷಣದ ಪ್ರಮುಖ ಅಂಶವಾಗಿತ್ತು. ಸ್ಥಿರತೆ, ಕೇಂದ್ರದಲ್ಲಿ ಬಲಿಷ್ಠ ಸರ್ಕಾರ, ಬಡವರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಕಾಂಗ್ರೆಸ್ (ಐ) ಪಕ್ಷವನ್ನೇ ಬೆಂಬಲಿಸಬೇಕೆಂದು ಜನರಿಗೆ ಅವರು ಕರೆ ನೀಡಿದರು. ಅರಸು ಪಕ್ಷವು ಸರ್ಕಾರದ ಹಣ ಖರ್ಚು ಮಾಡಿ ಸಮ್ಮೇಳನಗಳನ್ನು ಏರ್ಪಡಿಸುತ್ತಿದೆ. ಇದರ ಬಗ್ಗೆ ತನಿಖೆ ಆಗಬೇಕೆಂದು ಬಂಗಾರಪ್ಪ ಆರೋಪಿಸಿದರು. ದೇವರಾಜ ಅರಸರೇ ಇಂದಿರಾ ಗಾಂಧಿಯವರಿಗೆ ದ್ರೋಹ ಬಗೆದಿದ್ದಾರೆ ಎಂದು ಅವರು ತಮ್ಮ ಪ್ರಚಾರ ಸಭೆಗಳಲ್ಲಿ ಹೇಳಿದರು.

ಇಂದಿರಾ ಗಾಂಧಿಯವರು ಮತ್ತೆ ಡಿಸೆಂಬರ್ ಮೂರನೇ ವಾರದಲ್ಲಿ ಮೈಸೂರು, ಮಂಡ್ಯ, ಕೋಲಾರ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಚುನಾವಣಾ ಪ್ರಚಾರ ಕೈಗೊಂಡರು. ೨೮-೧೨-೭೯ ರಂದು ಮಂಗಳೂರಿನ ಅವರ ಸಭೆಯಲ್ಲಿ ಕಲ್ಲು ತೂರಾಟ ನಡೆಯಿತು. ಈ ಬಾರಿ ಇಂದಿರಾ ತುರ್ತುಪರಿಸ್ಥಿತಿಯನ್ನು ಸಮರ್ಥಿಸಿಕೊಂಡರು. ತುರ್ತುಸ್ಥಿತಿ ಕಾಲದಲ್ಲಿ ಸಮಾಜಘಾತಕ ವ್ಯಕ್ತಿಗಳನ್ನು ಬಂಧಿಸಲಾಗಿತ್ತು. ಜನಸಾಮಾನ್ಯರಿಗೆ ಏನೂ ತೊಂದರೆ ಆಗಲಿಲ್ಲ. ಆಗ ನಡೆದಷ್ಟು ಬಡವರ ಅಭಿವೃದ್ಧಿ ಕಾರ್ಯಕ್ರಮಗಳು ಯಾವಾಗಲೂ ನಡೆದಿಲ್ಲ ಆಗಿನ ಸಾಧನೆಗಳನ್ನು ಜನತಾ ಸರ್ಕಾರ ಅಳಿಸಿಹಾಕಿತು ಎಂದು ಹೇಳಿದರು.

## ೯. ೧೯೮೦ರ ಲೋಕಸಭಾ ಚುನಾವಣೆ - ಕಾಂಗ್ರೆಸ್ (ಐ) ಪ್ರಣಾಳಿಕೆ

ದಿನಾಂಕ ೧-೧೨-೧೯೭೯ರಂದು ಕಾಂಗ್ರೆಸ್ (ಐ) ಪಕ್ಷದ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಲಾಯಿತು. ಪ್ರಣಾಳಿಕೆಯ ಮುಖ್ಯಾಂಶಗಳು ಕೆಳಗಿನಂತಿವೆ. ಜನತಾ ಪಕ್ಷದ ದುರಾಡಳಿತದಿಂದ ಉಂಟಾಗಿರುವ ಸರ್ವತೋಮುಖ ಅವನತಿಯನ್ನು ಸರಿಪಡಿಸಿ ರಾಷ್ಟ್ರದ ಉದ್ಧಾರ ಮಾಡಲು ಸಮರ್ಥವಾದ ಪಕ್ಷ ಕಾಂಗ್ರೆಸ್ (ಐ) ಪಕ್ಷ ಒಂದೇ. ಶ್ರೀಮತಿ ಇಂದಿರಾ ಗಾಂಧಿ ಒಬ್ಬರೇ ಅದರ ನಾಯಕಿ. ಜಾತ್ಯತೀತ ಭಾವನೆಯಲ್ಲಿ ನಂಬಿಕೆಯನ್ನು ದೃಢಪಡಿಸುತ್ತದೆ. ಪ್ರಜಾಸತ್ತಾತ್ಮಕ ಸಮಾಜವಾದಿ ಸಮಾಜ ನಿರ್ಮಾಣವೇ ಗುರಿ. ಚೈತನ್ಯ ಶೀಲ, ಅರ್ಥಪೂರ್ಣ, ಕ್ರಮಬದ್ಧ ಸಾಮಾಜಿಕ ಬದಲಾವಣೆ ಹಾಗೂ ಸ್ಥಿರತೆ, ಬಲಿಷ್ಠ ಕೇಂದ್ರ ಸರ್ಕಾರ, ಅಲ್ಪಸಂಖ್ಯಾತರ ಆಯೋಗಕ್ಕೆ ಶಾಸನಬದ್ಧ ಸ್ಥಾನಮಾನ, ಹಣಕಾಸಿನ ನೀತಿಗಳ ಪ್ರಯೋಜನ ಅಲ್ಪಸಂಖ್ಯಾತರಿಗೆ, ಪರಿಶಿಷ್ಟ ಜಾತಿ - ವರ್ಗದವರಿಗೆ ದುರ್ಬಲವರ್ಗದವರಿಗೆ ನಿಜವಾಗಲೂ ತಲುಪುತ್ತಿದೆಯೇ ಎಂಬುದನ್ನು ಪರಿಶೀಲಿಸಲು ಉನ್ನತ ಅಧಿಕಾರದ ಮಂಡಲಿಯ ರಚನೆ. ಅಲಿಘಡ ಮುಸ್ಲಿಂ ವಿಶ್ವವಿದ್ಯಾನಿಲಯದ ಅಲ್ಪಸಂಖ್ಯಾತ ಸ್ವರೂಪ ರಕ್ಷಣೆ.

ಎಲ್ಲಾ ಭಾಷೆಗಳಿಗೂ ಸಮಾನ ಪ್ರೋತ್ಸಾಹ - ಹಿಂದಿ ಹೇರಿಕೆ ಇಲ್ಲ. ಮಧ್ಯಮವರ್ಗದ ಮೇಲಿನ ಹೊರೆ ಕಡಿಮೆ ಮಾಡಲು ಪ್ರಸಕ್ತ ತೆರಿಗೆ ವ್ಯವಸ್ಥೆಯ ಸುಧಾರಣೆಗೆ ಪರಿಶೀಲನೆ, ಸಣ್ಣ ವ್ಯಾಪಾರಿಗಳಿಗೆ ಕಿರುಕುಳ ತಪ್ಪಿಸುವುದು, ಮಾರಾಟ ತೆರಿಗೆ ಬದಲು ರಾಜ್ಯಗಳ ಸಹಕಾರ ಪಡೆದು ಬೇರೆ ಪರಿಣಾಮಕಾರಿಯಾದ ವ್ಯವಸ್ಥೆಯನ್ನು ಜಾರಿಗೆ ತರುವುದು, ಆಕ್ಟ್ರಾಯ್ ಜಾರಿ ಇರುವ ರಾಜ್ಯಗಳಲ್ಲಿ ಅದನ್ನು ರದ್ದು ಮಾಡಲು ಮನ ಒಲಿಸುವುದು, ಸ್ಥಳೀಯ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಹುಡುಕುವುದು, ಕೃಷಿ ಆಧುನೀಕರಣ ಮತ್ತು ಕೃಷಿ ಉತ್ಪನ್ನಗಳ ಶೀಘ್ರ ಹೆಚ್ಚಳಕ್ಕೆ ಸೂಕ್ತಕ್ರಮ. ಕೃಷಿ ಬೆಲೆ ಆಯೋಗ ಮತ್ತು ಆಹಾರ ನಿಗಮಗಳ ಕಾರ್ಯಕ್ಷಮತೆ ಹೆಚ್ಚಿಸಲು ಕ್ರಮ, ಜನತಾ ಪಕ್ಷ ವಿಸರ್ಜಿಸಿರುವ ಸರ್ಕಾರಿ ವಿತರಣಾ ವ್ಯವಸ್ಥೆಯ ಪುನರುದ್ಧಾರ ಮತ್ತು ಪುನಃಶ್ಚೇತನ, ಗ್ರಾಮೀಣ ಹಾಗೂ ನಗರ ಕುಶಲ ಕರ್ಮಿಗಳಿಗೆ ಹೆಚ್ಚಿನ ಉದ್ಯೋಗಾವಕಾಶ. ಕಾಲಮಿತಿ ನಿಗದಿಯಾದ ಕಾರ್ಯಕ್ರಮದಲ್ಲಿ ಪ್ರತಿಯೊಂದು ಕುಟುಂಬದಲ್ಲಿ ಒಬ್ಬರಿಗಾದರೂ ಸಾಮಾಜಿಕ ಸಮ್ಮತವಾದ ನಿಶ್ಚಿತ ವೇತನ ಬರುವಂತೆ ಮಾಡುವುದು, ಉದ್ಯಮಗಳ ವಿಸ್ತರಣೆ, ಹಿಂದುಳಿದ ಪ್ರದೇಶ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಉದ್ಯಮಗಳ ವಿಕೇಂದ್ರೀಕರಣ, ಹೆಚ್ಚು ಉದ್ಯೋಗಾವಕಾಶ ಸೃಷ್ಟಿಸುವ ಹೊಸ ಉದ್ಯಮಗಳಿಗೆ ಆದ್ಯತೆ, ಕೃಷಿ ಕಾರ್ಮಿಕರಿಗೆ ವಿಶೇಷ ಕಾರ್ಯಕ್ರಮಗಳು, ಮನೆ ನಿವೇಶನ ಹಾಗೂ ಇತರ ಸೌಲಭ್ಯಗಳ ನೀಡಿಕೆಯಲ್ಲಿ ಆದ್ಯತೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಮೀಸಲು ಸೌಲಭ್ಯದ ಅವಧಿ ವಿಸ್ತರಣೆಗೆ ಸಂವಿಧಾನ ತಿದ್ದುಪಡಿಗೆ ತುರ್ತು ಕ್ರಮ, ಹಣದುಬ್ಬರದ ತಡೆಗೆ ಎಲ್ಲಾ ವಲಯಗಳಲ್ಲಿ ಇರತಕ್ಕ ಉತ್ಪಾದನಾ ಸಾಮರ್ಥ್ಯದ ಪೂರ್ಣ ಬಳಕೆ, ದಕ್ಷತೆ ಸಾಧನೆಗೆ ತೀವ್ರ ಕ್ರಮ, ವಿಶಾಲ ವ್ಯಾಪ್ತಿಯ ರಾಷ್ಟ್ರೀಯ ವರಮಾನ ನೀತಿ ರೂಪಿಸುವುದು, ವಿದ್ಯುಚ್ಛಕ್ತಿ ವಲಯದ ಪುನರ್ ವ್ಯವಸ್ಥೆಗೆ ತುರ್ತುಕ್ರಮ ಕಾಂಪೂಚಿಯಾ ಸರ್ಕಾರಕ್ಕೆ ಮನ್ನಣೆ, ನೆರೆಹೊರೆಯವರೊಡನೆ ಸ್ನೇಹ ಶಾಂತಿ.

**೧೦. ಫಲಿತಾಂಶ**

ಕಾಂಗ್ರೆಸ್ (ಐ) ಪಕ್ಷ ೨೮ ಸ್ಥಾನಗಳಲ್ಲಿ ೨೭ ನ್ನು ಗೆದ್ದು ಜಯಭೇರಿ ಬಾರಿಸಿತು. ೨೩ ಅಭ್ಯರ್ಥಿಗಳು ಒಂದು ಲಕ್ಷಕ್ಕೂ ಹೆಚ್ಚು ಬಹುಮತದಿಂದ ಆರಿಸಿ ಬಂದದ್ದು ವಿಶೇಷವಾಗಿತ್ತು. ಕಾಂಗ್ರೆಸ್ (ಐ) ೬೧,೫೪,೭೪೬ ಮತಗಳನ್ನು ಪಡೆದು ಶೇಕಡಾ ೫೬.೨೫ ಪ್ರಮಾಣದಲ್ಲಿ ಮತವನ್ನು ಪಡೆಯಿತು. ಇದಕ್ಕೆ ವಿರುದ್ಧವಾಗಿ ಕಾಂಗ್ರೆಯೇತರ ಪಕ್ಷಗಳೆಲ್ಲಾ ಸೇರಿ ಪಡೆದ ಮತಗಳು ೪೭.೮೬ಲಕ್ಷ ಎಂಬುದನ್ನು ನೋಡಿದಾಗ, ಇಡೀ ವಿರೋಧ ಪಕ್ಷಗಳೆಲ್ಲಾ ಒಂದಾಗಿ ಹೋರಾಡಿದ್ದರೂ ಕಾಂಗ್ರೆಸ್ (ಐ) ಪಕ್ಷವನ್ನು ಸೋಲಿಸಲು ಸಾಧ್ಯವಾಗುತ್ತಿರಲಿಲ್ಲ ಎಂದೆನಿಸುತ್ತದೆ. ರಾಜ್ಯದಲ್ಲಿ ಕಾಂಗ್ರೆಸ್ (ಐ) ಪಕ್ಷ ಅಷ್ಟೊಂದು ಆಳವಾಗಿ ಬೇರು ಬಿಟ್ಟಿತ್ತು ಹಾಗೂ ಇಂದಿರಾ ಗಾಂಧಿಯವರ ಪ್ರಭಾವ ಜನತೆಯ ಮೇಲೆ ಅಪರಿಮಿತವಾಗಿತ್ತು.

## ೧೯೮೩ - ವಿಧಾನಸಭಾ ಚುನಾವಣೆಗಳು

**೧. ಹಿನ್ನೆಲೆ - ರಾಜಕೀಯ ಪರಿಸ್ಥಿತಿ**

೧೯೮೩, ಜನವರಿ ತಿಂಗಳಲ್ಲಿ ಕರ್ನಾಟಕ, ತ್ರಿಪುರಾ ಮತ್ತು ಆಂಧ್ರಪ್ರದೇಶ ವಿಧಾನಸಭೆಗಳಿಗೆ ಚುನಾವಣೆಗಳು ನಡೆದವು. ಈ ವೇಳೆಗೆ ಇಂದಿರಾ ಕಾಂಗ್ರೆಸ್ ಒಂದನ್ನು ಹೊರತು ಪಡಿಸಿ ಉಳಿದ ಎಲ್ಲ ಕಾಂಗ್ರೆಸ್‌ಗಳೂ ನೆಲಕಚ್ಚಿದ್ದವು. ೧೯೭೭ರಲ್ಲಿ ಉದಯವಾದ ಜನತಾ ಪಕ್ಷವೂ ಒಡೆದು ಛಿದ್ರವಾಗಿತ್ತು. ೧೯೮೦ರ ಜನವರಿ ತಿಂಗಳಲ್ಲಿ ನಡೆದ ಲೋಕಸಭಾ ಚುನಾವಣೆಗಳಲ್ಲಿ ಕರ್ನಾಟಕದಲ್ಲಿ ಜನತಾ ಪಕ್ಷ ಹಾಗೂ ಅರಸು ಕಾಂಗ್ರೆಸ್‌ಗಳು ದಯನೀಯವಾದ ಸೋಲನ್ನು ಅನುಭವಿಸಿದ್ದವು. ೧೯೮೦ ಜನವರಿ ೭ ರಂದು ಫಲಿತಾಂಶ ಘೋಷಣೆಯಾದ ತಕ್ಷಣ ದೇವರಾಜ ಅರಸರು ತಮ್ಮ ಮಂತ್ರಿಮಂಡಲದ ರಾಜೀನಾಮೆ ಸಲ್ಲಿಸಿದರು. ಆದರೆ ವಿಧಾನಸಭೆ ವಿಸರ್ಜನೆಗೆ ಅವರು ಶಿಫಾರಸ್ಸು ಮಾಡಲಿಲ್ಲ. ಎಚ್. ಸಿ. ಶ್ರೀಕಂಠಯ್ಯನವರ ನೇತೃತ್ವದಲ್ಲಿ ಸುಮಾರು ೭೦ ಜನ ಶಾಸಕರು ಆಗಲೇ ಅಸ್ತಿತ್ವದಲ್ಲಿದ್ದ ಇಂದಿರಾ ಕಾಂಗ್ರೆಸ್ ಗುಂಪಿಗೆ ಬೆಂಬಲ ನೀಡಿದರು. ಇಂದಿರಾ ಕಾಂಗ್ರೆಸ್ ಗುಂಪಿನ ಶಾಸಕಾಂಗ ಪಕ್ಷದ ಮುಖಂಡ ಹಾಗೂ ವಿರೋಧ ಪಕ್ಷದ ನಾಯಕರಾಗಿದ್ದ ಗುಂಡೂರಾವ್ ದಿನಾಂಕ ೧೨, ಜನವರಿ ೧೯೮೦ರಂದು ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು. ಸುಮಾರು ೪೦ ಜನ ಶಾಸಕರು ದೇವರಾಜ ಅರಸರ ಕಡೆ ಅಂದರೆ ಅರಸು ಕಾಂಗ್ರೆಸ್‌ನಲ್ಲಿಯೇ ಉಳಿದರು. ಅರಸು ವಿರೋಧ ಪಕ್ಷದ ನಾಯಕರಾದರು.

ಜೂನ್ ೧೬, ೧೯೮೦ರಂದು ಅಡ್‌ಹಾಕ್ ಕಾಂಗ್ರೆಸ್ (ಐ) ಪ್ರದೇಶ ಸಮಿತಿ ಅಧ್ಯಕ್ಷರಾಗಿ ಬಂಗಾರಪ್ಪನವರನ್ನು ನೇಮಿಸಲಾಗಿತ್ತು. ಆಗ ಬಂಗಾರಪ್ಪ, ವೀರಪ್ಪ ಮೊಯಿಲಿ, ಗುಂಡೂರಾವ್ ನೇತೃತ್ವದಲ್ಲಿ ಸುಮಾರು ೪೦ ಶಾಸಕರು ಅರಸು ಕಾಂಗ್ರೆಸ್ (ಕರ್ನಾಟಕ ಕಾಂಗ್ರೆಸ್) ಸೇರದೇ ಇಂದಿರಾ ಗಾಂಧಿಯವರಿಗೇ ನಿಷ್ಠರಾಗಿ ಉಳಿದಿದ್ದರು. ಗುಂಡೂರಾವ್ ಮುಖ್ಯಮಂತ್ರಿಗಳಾದರು.

ಎಸ್. ಬಂಗಾರಪ್ಪ ಕೃಷಿ ಮತ್ತು ರೆವಿನ್ಯೂ ಸಚಿವರಾದರು. ವೀರಪ್ಪ ಮೊಯಿಲಿ ಹಣಕಾಸು- ಅಬ್ಕಾರಿ ಸಹಕಾರ ಸಚಿವರಾದರು. ೨೫ ಫೆಬ್ರವರಿ ೮೦ ರಂದು ಮಂತ್ರಿಮಂಡಲ ವಿಸ್ತರಣೆ ಆಯಿತು. ಎಂಟು ಕ್ಯಾಬಿನೆಟ್ ಸಚಿವರು, ೪ ರಾಜ್ಯಸಚಿವರನ್ನು ಸೇರಿಸಿಕೊಳ್ಳಲಾಯಿತು. ಆದರೆ ಎಚ್. ಸಿ. ಶ್ರೀಕಂಠಯ್ಯನವರಿಗೆ ಸಚಿವಸ್ಥಾನ ನೀಡಲಿಲ್ಲ. ಅಕ್ಟೋಬರ್ ೩,೧೯೮೦ ರಂದು ಪಿ. ವೆಂಕಟರಮಣ ಹಾಗೂ ಕಾಗೋಡು ತಿಮ್ಮಪ್ಪನವರವನ್ನು ಕ್ಯಾಬಿನೆಟ್ ಸಚಿವರನ್ನಾಗಿ ನೇಮಿಸಲಾಯಿತು. ೧೨ ಡಿಸೆಂಬರ್ ೮೦ ರಂದು ಎಚ್. ಸಿ. ಶ್ರೀಕಂಠಯ್ಯ, ಮಲ್ಲಿಕಾರ್ಜುನ ಖರ್ಗೆ, ಜಿ. ಮಾದೇಗೌಡ, ಎಂ. ಎಸ್. ಪಾಟೀಲ್, ನಾಗಮ್ಮ ಕೇಶವಮೂರ್ತಿ, ಬಿ. ಬಿ. ಚಿಮ್ಮನಕಟ್ಟಿ ಇವರುಗಳನ್ನು ಸಚಿವರನ್ನಾಗಿ ಸಂಪುಟಕ್ಕೆ ಸೇರಿಸಿಕೊಳ್ಳಲಾಯಿತು. ಗುಂಡೂರಾಯರ ಸರ್ಕಾರ ಉತ್ತಮ ಆಡಳಿತಾತ್ಮಕ ಕ್ರಮಗಳನ್ನು ಕೈಗೊಂಡರೂ ಬಹಳವಾಗಿ ಸಾರ್ವಜನಿಕ ಟೀಕೆಗೆ ಗುರಿ ಆಯಿತು. ರೋಲೆಕ್ಸ್ ವಾಚ್ ಹಗರಣದಲ್ಲಿ ಸಿ.ಎಂ. ಇಬ್ರಾಹಿಂ ರಾಜೀನಾಮೆ ನೀಡಬೇಕಾಗಿ ಬಂತು. ಅವರು ೪ ಆಗಸ್ಟ್ ೮೧ ರಂದು ರಾಜೀನಾಮೆ ನೀಡಿದರು. ಬಂಗಾರಪ್ಪನವರಿಗೂ ಗುಂಡೂರಾಯರಿಗೂ ಭಿನ್ನಮತ ತೀವ್ರವಾಗಿ ಬೆಳೆದು ೮ ಜನವರಿ ೮೧ ರಂದು ಬಂಗಾರಪ್ಪನವರು ಸಚಿವ ಸಂಪುಟಕ್ಕೆ ರಾಜೀನಾಮೆ ನೀಡಿದರು.

### ೨. ಪತ್ರಿಕಾರಂಗ - ಕಾಂಗ್ರೆ ಸರ್ಕಾರ

ಪತ್ರಿಕಾ ಕಚೇರಿಗಳಿಗೆ ಯುವಕಾಂಗ್ರೆ ಕಾರ್ಯಕರ್ತರು ಘೆರಾವೋ ಮಾಡಿ ಬೀಗ ಹಾಕಿದರು. ಗುಂಡೂರಾಯರು ಪತ್ರಕರ್ತರ ಬಗ್ಗೆ ಆಡಿದ ಮಾತುಗಳಿಂದ ಪತ್ರಿಕೆಗಳು ಅವಕಾಶ ಸಿಕ್ಕಿದಾಗಲೆಲ್ಲಾ ಗುಂಡೂರಾವ್ ಸರ್ಕಾರವನ್ನು ಟೀಕಿಸುತ್ತಿದ್ದವು. ೨೪-೧೧-೮೨ ರಂದು ನಡೆಯುತ್ತಿದ್ದ ವಿಧಾನಸಭಾ ಅಧಿವೇಶನದಲ್ಲಿಯೇ ಪತ್ರಿಕೆಯೊಂದರ ಸಂಪಾದಕೀಯದಲ್ಲಿ ವಿಧಾನಸಭೆಯ ಕಲಾಪಗಳನ್ನು ಅತ್ಯಂತ ಲಘುವಾದ ರೀತಿಯಲ್ಲಿ ಕಂಡು ಟೀಕೆ ಮಾಡಿರುವ ಬಗ್ಗೆ ಕಾಂಗ್ರೆಸ್ ಪಕ್ಷದ ಸದಸ್ಯರು ಕೆರಳಿದರು. ಸಂಸದೀಯ ವ್ಯವಹಾರಗಳ ಮಂತ್ರಿ ರಾಮಕೃಷ್ಣರವರು ಮಾತನಾಡಿ, 'ಬಿಹಾರ ಮಾದರಿಯ ಪತ್ರಿಕಾ ವಿಧೇಯಕವನ್ನು ರಾಜ್ಯದಲ್ಲೂ ತರುವ ರೀತಿಯಲ್ಲಿ ಪತ್ರಿಕೆಗಳವರು ಪ್ರಚೋದನೆ ನೀಡುತ್ತಿದ್ದಾರೆ' ಎಂದರು. ಆದರೆ ಮಾರನೇ ದಿನ ತಮಗೆ ಪತ್ರಿಕೆಗಳ ಬಗ್ಗೆ ಗೌರವ ಇದೆ ಎಂದು ಹೇಳಿದರು. ಹೀಗೆ ಪತ್ರಿಕಾರಂಗ ಹಾಗೂ ಸರ್ಕಾರದ ಬಾಂಧವ್ಯ ಸುಮಧುರವಾಗಿರಲಿಲ್ಲ.

### ಗೋಕಾಕ್ ಚಳವಳಿ-ಕಾಂಗ್ರೆ ಸರ್ಕಾರ

ಪ್ರಾಥಮಿಕ ಪ್ರೌಢಶಾಲೆಗಳಲ್ಲಿ ಕನ್ನಡ ಭಾಷೆಯ ಸ್ಥಾನಮಾನ ಕುರಿತು ರಾಜ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ೫ ಜುಲೈ ೮೦ ರಂದು ಸರ್ಕಾರ ಗೋಕಾಕ್ ಸಮಿತಿಯನ್ನು ನೇಮಿಸಿತು. ಕನ್ನಡವನ್ನು ಕಡ್ಡಾಯ ಪ್ರಥಮ ಭಾಷೆಯಾಗಿ ಮಾಡಬೇಕೆಂದು ಗೋಕಾಕ್ ಸಮಿತಿಯು ೩-೪ ತಿಂಗಳಲ್ಲಿಯೇ ತನ್ನ ವರದಿಯನ್ನು ಸರ್ಕಾರಕ್ಕೆ ನೀಡಿತು. ೧೯೮೧-೮೨ ರ ಶೈಕ್ಷಣಿಕ ವರ್ಷದಿಂದ ಇದರ ಬಗ್ಗೆ ಸರ್ಕಾರಿ ಆದೇಶ ಹೊರಡಿಸಬೇಕಾಗಿತ್ತು. ಆದರೆ ಹೊರಡಿಸಲಿಲ್ಲ. ಈ ವರದಿಯನ್ನು ವಿರೋಧಿಸಿ ಅಲ್ಪಸಂಖ್ಯಾತರು ವಿಧಾನಸೌಧದ ಎದುರು ಎಫ್. ಎಂ. ಖಾನ್ ನೇತೃತ್ವದಲ್ಲಿ ಪ್ರದರ್ಶನ ನಡೆಸಿದರು. ಮಾರ್ಚ್ ೧೬, ೧೯೮೨ರಿಂದ ಕನ್ನಡಪರ ಹೋರಾಟಗಾರರು ವಿಧಾನಸೌಧದ ಎದುರು ಆಮರಣ ನಿರಶನ ಆರಂಭಿಸಿದರು. ಉಪವಾಸನಿರತ ರೆಹಮಾನ್‌ಖಾನ್ ಅವರು ತೀವ್ರವಾಗಿ ಬಳಲಿದರು. ಅನಂತರ ಸಾಹಿತಿಗಳೂ ರಾಜಕೀಯ ನಾಯಕರೂ, ದೇವರಾಜ ಅರಸರೂ ಬಂದು ಉಪವಾಸ ನಿಲ್ಲಿಸುವಂತೆ ಮನವಿ ಮಾಡಿದರು ಹಾಗೂ ಗೋಕಾಕ್ ವರದಿಗೆ ಬೆಂಬಲ ವ್ಯಕ್ತಪಡಿಸಿದರು. ನಿರಶನ ನಿಲ್ಲಿಸಲಾಯಿತು. ಏಪ್ರಿಲ್ ೧೩, ೧೯೮೨ ರಂದು ಗೋಕಾಕ್ ವರದಿ ಜಾರಿಗೆ ತರುವ ಬಗ್ಗೆ ಸರ್ಕಾರದ ಮೇಲೆ ಒತ್ತಡ ತರಲು ಸಾಹಿತಿ ಮತ್ತು ಕಲಾವಿದರ ಬಳಗ ಅಸ್ತಿತ್ವಕ್ಕೆ ಬಂದಿತು. ಪ್ರಮುಖ ಹಿರಿಯ ಸಾಹಿತಿಗಳು, ಕಲಾವಿದರು ಬೀದಿಗಿಳಿದರು. ಮೈಸೂರಿನಲ್ಲಿ ಗುಂಡೂರಾಯರನ್ನು ಘೆರಾವೋ ಮಾಡಲಾಯಿತು. ಸಂಗೀತ ನೃತ್ಯ ಅಕಾಡೆಮಿ ಅಧ್ಯಕ್ಷ ಸ್ಥಾನಕ್ಕೆ ಗಂಗೂಬಾಯಿ ಹಾನಗಲ್ ರಾಜೀನಾಮೆ ನೀಡಿದರು. ಕಮ್ಯುನಿಸ್ಟ್ ಪಕ್ಷ ಹೊರತುಪಡಿಸಿ ಉಳಿದೆಲ್ಲಾ ಪಕ್ಷಗಳೂ ಚಳವಳಿಗೆ ಬೆಂಬಲ ನೀಡಿದವು. ಡಾ। ರಾಜ್‌ಕುಮಾರ್ ನೇತೃತ್ವದಲ್ಲಿ ಕಲಾವಿದರು. ಏಪ್ರಿಲ್ ೧೭ ರಂದು ಚಳವಳಿಗೆ ಧುಮುಕಿದರು. ಡಾ। ರಾಜ್‌ಕುಮಾರ್ ಆಗಮನದಿಂದ ಕಾಂಗ್ರೆ ಸರ್ಕಾರ ತತ್ತರಿಸಿತು. ಏಪ್ರಿಲ್ ೧೯ ರಂದು ಸರ್ಕಾರ ಒಂದು ಭಾಷಾ ಸೂತ್ರ ಪ್ರಕಟಿಸಿತು. ಈ ಸೂತ್ರವನ್ನು ಚಳುವಳಿಗಾರರ ಕೇಂದ್ರ ಕ್ರಿಯಾ ಸಮಿತಿ ತಿರಸ್ಕರಿಸಿತು. ಏಪ್ರಿಲ್ ೨೧ರಂದು ಕರ್ನಾಟಕ ಬಂದ್ ಆಚರಿಸಲಾಯಿತು. ಪ್ರತಿದಿನ ಚಳವಳಿಗಾರರ ಬಂಧನ, ಬಿಡುಗಡೆ ನಡೆಯತೊಡಗಿತು. ಮೇ ೧೬ ರಿಂದ ಡಾ। ರಾಜಕುಮಾರ್ ಹಾಗೂ ಸಿನಿಮಾ ಕಲಾವಿದರು ಡಾ। ಪಾಟೀಲ ಪುಟ್ಟಪ್ಪ, ಚಿದಾನಂದಮೂರ್ತಿ, ಚಂಪಾ ಮುಂತಾದವದ ನೇತೃತ್ವದಲ್ಲಿ ಬೆಳಗಾವಿಯಿಂದ ಜಾಥಾ ಆರಂಭಿಸಿದರು. ೮-೧೦ ದಿನಗಳ ಕಾಲ ಇಡೀ ರಾಜ್ಯದಲ್ಲಿ ಸುತ್ತಾಡಿದರು. ಚನ್ನಪಟ್ಟಣದಲ್ಲಿ ಜಾಥಾ ಮುಗಿಯಿತು. ಚಳವಳಿ ನಿರತರ ಬಂಧನ, ಅವರಿಗೆ ಹಿಂಸೆ ನೀಡುವುದು ನಡೆಯಿತು. ಮೇ ೧೭ ರಿಂದ ಜೈಲ್ ಭರೋ ಆರಂಭವಾಯಿತು. ಜೂನ್ ೪ ರಂದು ಸರ್ಕಾರ

ಚಳವಳಿಗೆ ಸಂಬಂಧಿಸಿದ ಎಲ್ಲರ ಸಭೆ ಕರೆಯಿತು. ಮುಖ್ಯಮಂತ್ರಿ ಗುಂಡೂರಾವ್ ಬೆಳಗ್ಗೆ ೮ ರಿಂದ ಸಂಜೆ ೬ ರವರೆಗೆ ಚಳವಳಿಗಾರರ ಜೊತೆ ಸಭೆ ನಡೆಸಿ ಚರ್ಚಿಸಿ, ಸದ್ಯದಲ್ಲೇ ಪರಿಷ್ಕೃತ ಆಜ್ಞೆ ಹೊರಡಿಸುವುದಾಗಿ ಒಪ್ಪಿಕೊಂಡರು. ಸರ್ಕಾರ ಪ್ರಕಟಿಸಿದ ಸೂತ್ರಕ್ಕೆ ನ್ಯಾಯಾಲಯ ತಡೆಯಾಜ್ಞೆ ನೀಡಿತು. ಒಟ್ಟಿನಲ್ಲಿ ಈ ಚಳವಳಿ ತೀವ್ರವಾದ ಇರಿಸುಮುರಿಸನ್ನು ಸರ್ಕಾರಕ್ಕೆ ಉಂಟುಮಾಡಿತು. ಗೋಕಾಕ್ ಚಳವಳಿ ನಿರತರ ಮೇಲೆ ಪೋಲೀಸರು ನೂರಾರು ಮೊಕದ್ದಮೆಗಳನ್ನು ದಾಖಲು ಮಾಡಿದ್ದರು. ಇವುಗಳನ್ನೆಲ್ಲಾ ವಾಪಸ್ ತೆಗೆದುಕೊಳ್ಳುವಂತೆ ಸರ್ಕಾರದ ಮೇಲೆ ಒತ್ತಡ ಬರಲಾರಂಭಿಸಿತು. ಎಂಟು ಪ್ರಕರಣ ಬಿಟ್ಟು ಉಳಿದೆಲ್ಲಾ ಪ್ರಕರಣಗಳನ್ನು ಕೈ ಬಿಡಲಾಗಿದೆ ಎಂದು ಹೇಳಿದ ಸರ್ಕಾರ ಗೋಕಾಕ್ ಸಮಿತಿ ವರದಿ ಅನುಷ್ಠಾನದ ಬಗ್ಗೆ ೧೨ ಜನರ ಸಮಿತಿಯನ್ನು ನೇಮಿಸಿತು.

## ೪. ರೈತ ಚಳವಳಿ - ಕಾಂಗ್ರೆಸ್ ಸರ್ಕಾರ

ಮಲಪ್ರಭಾ ಅಚ್ಚುಕಟ್ಟು ಪ್ರದೇಶಕ್ಕೆ ಸೇರಿದ್ದ ನರಗುಂದ, ನವಲಗುಂದ, ರೋಣ, ಸವದತ್ತಿ, ಹುಬ್ಬಳ್ಳಿ, ಬೈಲಹೊಂಗಲ ತಾಲ್ಲೂಕುಗಳಲ್ಲಿ ನೀರಾವರಿ ಸೌಕರ್ಯ ಕಲ್ಪಿಸಲು ೧೯೭೩-೭೪ರಿಂದ ನಾಲಾ ಕೆಲಸಗಳನ್ನು ಆರಂಭಿಸಲಾಗಿತ್ತು. ೧೯೭೯-೮೦ರ ಹೊತ್ತಿಗೆ ಈ ಕೆಲಸ ಪೂರ್ಣವಾಯಿತು. ಆದರೆ ಈ ಯೋಜನೆ ಸರಿಯಾಗಿ ಕಾರ್ಯಗತವಾಗಿಲ್ಲವೆಂದು ರೈತರು ದೂರು ನೀಡಿದರು. ಸರ್ಕಾರ ರೈತರ ಮೇಲೆ ಬೆಟರ್‌ಮೆಂಟ್ ಲೆವಿ (ಅಭಿವೃದ್ಧಿ ಕಂದಾಯ) ವಿಧಿಸಿತು. ಈ ಪ್ರದೇಶದಲ್ಲಿ ಬೆಳೆಯುತ್ತಿದ್ದ ವರಲಕ್ಷ್ಮಿ ಹತ್ತಿ ಬೆಲೆ ಕ್ವಿಂಟಾಲ್‌ಗೆ ೧೦೦೦ ರೂ. ಇದ್ದದ್ದು ೩೫೦ ರೂಪಾಯಿಗಳಿಗೆ ಇಳಿಯಿತು. ರೈತರು ಶಾಸಕರಿಗೆ, ಸಚಿವರಿಗೆ, ಸರ್ಕಾರಕ್ಕೆ, ಮುಖ್ಯಮಂತ್ರಿಗಳಿಗೆ ಅನೇಕ ಬಾರಿ ಮನವಿ ಸಲ್ಲಿಸಿದರು. ೧೯೮೦ ರಲ್ಲಿ ನರಗುಂದ ತಾಲ್ಲೂಕು ರೈತ ಕೂಲಿಕಾರರ ಸಂಘ ಅಸ್ತಿತ್ವಕ್ಕೆ ಬಂದಿತ್ತು. ಜುಲೈ ೨೧ ರಂದು ಸಹಸ್ರಾರು ರೈತರು ನರಗುಂದ ತಾಲ್ಲೂಕು ಕಚೇರಿ ಎದುರು ಜಮಾಯಿಸಿದರು. ತಾಲ್ಲೂಕು ಕಚೇರಿಯನ್ನು ಮುಚ್ಚಬೇಕೆಂಬ ಬೇಡಿಕೆ ಇಟ್ಟರು. ಆದರೆ ತಹಸೀಲ್ದಾರ್ ಒಪ್ಪಲಿಲ್ಲ. ರೈತರು ಘೇರಾವ್ ಮಾಡಿದರು. ಆಗ ಅಲ್ಲಿದ್ದ ಪೋಲೀಸ್ ಅಧಿಕಾರಿ ರೈತರ ಮೇಲೆ ಗುಂಡು ಹಾರಿಸತೊಡಗಿದರು. ಸ್ಥಳದಲ್ಲೇ ಒಬ್ಬ ರೈತ ಸತ್ತ. ನರಗುಂದ, ನವಲಗುಂದ, ಸವದತ್ತಿಯಲ್ಲಿ ಬಂದ್‌ಗೆ ಕರೆಕೊಡಲಾಗಿತ್ತು. ರೊಚ್ಚಿಗೆದ್ದ ರೈತರು ಪೋಲೀಸ್ ಸಬ್ ಇನ್‌ಸ್ಪೆಕ್ಟರ್ ಹಾಗೂ ಪೋಲೀಸ್ ಪೇದೆಯನ್ನು ಕೊಂದುಹಾಕಿದರು. ಕರ್ಫ್ಯೂ ವಿಧಿಸಲಾಯಿತು. ೨೧ ರಿಂದ ೨೯ರವರೆಗೆ ಬಂದ್, ಚಳವಳಿ ಮುಂದುವರಿದು ಸುಮಾರು ೨೦ ರೈತರು ಪೋಲೀಸರ ಗೋಲೀಬಾರಿಗೆ ಗುರಿಯಾಗಿ ಪ್ರಾಣತೆತ್ತರು. ಕೊನೆಗೆ ೧೯೮೦ ಜುಲೈ ೩೦ ರಂದು ಕಾಂಗ್ರೆಸ್ ಸರ್ಕಾರ ರೈತರ ಪ್ರತಿಭಟನೆಗೆ ಮಣಿದು ೮೫ ಕೋಟಿ ರೂಪಾಯಿ ಮಧ್ಯಂತರ ಪರಿಹಾರ ಘೋಷಿಸಿತು. ಬೆಟರ್‌ಮೆಂಟ್ ಲೆವಿ ಮತ್ತು ವಾಟರ್‌ರೇಟನ್ನು ತಾತ್ಕಾಲಿಕವಾಗಿ ಮನ್ನಾ ಮಾಡಿತು. ಈ ಬಗ್ಗೆ ಪರಿಶೀಲಿಸಲು ಸರ್ಕಾರ ಬಂಗಾರಪ್ಪ ಸಮಿತಿಯನ್ನು ನೇಮಿಸಿತು. ಆ ಸಮಿತಿಯು ರೈತರ ಉತ್ಪನ್ನಗಳಿಗೆ ಹೆಚ್ಚಿನ ಬೆಲೆ ನೀಡಬೇಕೆಂದು ಶಿಫಾರಸ್ಸು ಮಾಡಿತು. ಮತ್ತೆ ಎಸ್. ಆರ್. ಬೊಮ್ಮಾಯಿ ಸಮಿತಿಯನ್ನು ನೇಮಿಸಲಾಯಿತು. ಸೆಪ್ಟೆಂಬರ್ ೮೦ ರಲ್ಲಿ ವರದಿ ಸಲ್ಲಿಸಿದ ಬೊಮ್ಮಾಯಿ ಸುಸ್ತಿದಾರರರಾದ ರೈತರಿಗೂ ಸಾಲ ನೀಡಬೇಕೆಂದು ಹೇಳಿತು. ಬೆಟರ್‌ಮೆಂಟ್ ಲೆವಿ ವಿಚಾರದಲ್ಲಿ ಏನನ್ನೂ ಹೇಳಲಿಲ್ಲ. ವಿವಿಧ ಕಡೆ ರೈತರ ಚಳವಳಿ ಆರಂಭವಾಯಿತು.

೧೯೮೦ ಅಕ್ಟೋಬರ್ ೧೭ನೇ ತಾರೀಖು ಶಿವಮೊಗ್ಗದಲ್ಲಿ ಕರ್ನಾಟಕ ರಾಜ್ಯ ರೈತ ಸಂಘವನ್ನು ಸ್ಥಾಪಿಸಲಾಯಿತು. ೧೯ ಬೇಡಿಕೆಗಳನ್ನು ಸರ್ಕಾರದ ಮುಂದೆ ಇಟ್ಟಿತು. ಈ ಬೇಡಿಕೆಗಳಲ್ಲಿ ೧೨ ಬೇಡಿಕೆಗಳನ್ನು ಈಡೇರಿಸುವುದಾಗಿ ಸರ್ಕಾರ ಘೋಷಿಸಿತು. ಗೋಕಾಕ್ ಚಳವಳಿಗೂ ರಾಜ್ಯ ರೈತಸಂಘ ತನ್ನ ಬೆಂಬಲ ಸೂಚಿಸಿತು. ೧೯೮೨ರ ಅಕ್ಟೋಬರ್ ೨ ರಂದು ಬೆಂಗಳೂರಿನ ಕಬ್ಬನ್ ಉದ್ಯಾನವನದಲ್ಲಿ ಸುಮಾರು ಎರಡು ಲಕ್ಷ ರೈತರು ಸಮಾವೇಶಗೊಂಡು, ಸರ್ಕಾರ ತಾನು ಭರವಸೆ ನೀಡಿದಂತೆ ರೈತರ ಬೇಡಿಕೆಗಳನ್ನು ಈಡೇರಿಸಬೇಕೆಂದು ಮನವಿ ಸಲ್ಲಿಸಿತು. ಈ ಮಧ್ಯೆ ರಾಜ್ಯದಲ್ಲಿ ಬರಗಾಲ ಪರಿಸ್ಥಿತಿ ತಲೆದೋರಿತು. ೧೨ ಸಾವಿರ ಹಳ್ಳಿಗಳಲ್ಲಿ ಬರಗಾಲ ಪರಿಸ್ಥಿತಿ ಇದೆ. ಖಾರಿಫ್ ಬೆಳೆ ಶೇಕಡಾ ೪೦ ರಷ್ಟು ಕಡಿಮೆಯಾಗುವ ಸಾಧ್ಯತೆ ಇದೆ ಎಂದು ಕಂದಾಯ ಸಚಿವ ಮಲ್ಲಿಕಾರ್ಜುನ ಖರ್ಗೆ ೧೯-೧೦-೮೨ ರಂದು ಹೇಳಿದರು. ಕರ್ನಾಟಕ ರಾಜ್ಯ ರೈತ ಸಂಘವು ಗಣಿಗಾರಿಕೆ ವಿರುದ್ಧ ತನ್ನ ಚಳವಳಿ ಪ್ರಾರಂಭಿಸಿ ಕಲ್ಲು ಸಾಗಿಸುವ ಲಾರಿಗಳನ್ನು ತಡೆಯತೊಡಗಿತು. ರೈತರ ಬಂಧನವಾಗತೊಡಗಿತು. ಅಕ್ಟೋಬರ್ ೧೨ ಮತ್ತು ೧೩ ಈ ಎರಡು ದಿವಸಗಳಲ್ಲಿ ಸುಮಾರು ೭೦೦ ರೈತರನ್ನು ಕನಕಪುರದಲ್ಲಿ ಬಂಧಿಸಲಾಯಿತು.

ಮದ್ಯಪಾನ ನಿಷೇಧ ಚಳವಳಿಗೂ ರೈತ ಸಂಘ ಧುಮುಕಿತು. ಸಾರಾಯಿ ಅಂಗಡಿ ಮುಚ್ಚಿಸುವುದು, ಹರಾಜು ತಡೆಯುವುದು ಇದರಲ್ಲಿ ರೈತರು ಭಾಗವಹಿಸತೊಡಗಿದರು. ನೀಲಗಿರಿ ಗಿಡಗಳನ್ನು ಕಿತ್ತೊಗೆಯುವ ಚಳವಳಿಯನ್ನು ಸಹ ರೈತರು ಕೈಗೊಂಡರು. ಈ ಘಟನೆಗಳಲ್ಲಿ ೪೦೦ ಕ್ಕೂ ಹೆಚ್ಚು ರೈತರನ್ನು ಬಂಧಿಸಲಾಯಿತು.

ಕಬ್ಬಿಗೆ ಹೆಚ್ಚು ಬೆಲೆ ನಿಗದಿ, ಸಕ್ಕರೆ ಕಾರ್ಖಾನೆಗಳು ರೈತರಿಗೆ ನೀಡಬೇಕಾದ ಬಾಕಿಯನ್ನು ತಕ್ಷಣ ನೀಡುವುದು, ಲೆವಿ ಸಕ್ಕರೆ ರದ್ದು ಈ ಅಂಶಗಳನ್ನೊಳಗೊಂಡಂತೆ ರೈತಸಂಘ ಶಿವಮೊಗ್ಗ, ಹಾಸನ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಚಳವಳಿ ಪ್ರಾರಂಭಿಸಿತು. ಮಂಡ್ಯ ಜಿಲ್ಲೆಯಲ್ಲಿ ಈ ಚಳವಳಿ ಪ್ರಬಲವಾಗಿ ೨೩-೧೧-೮೨ ರಂದು ಗೆಜ್ಜಲಗೆರೆಯಲ್ಲಿ ರೈತರ ಮೇಲೆ ಗೋಲೀಬಾರ್ ಆಗಿ, ಇಬ್ಬರು ರೈತರು ಸತ್ತರು. ೨೪ ರಂದು ವಿಧಾನಸಭೆಯಲ್ಲಿ ಈ ಬಗ್ಗೆ ಚರ್ಚೆಗೆ ಪಟ್ಟು ಹಿಡಿದ ೧೬ ಶಾಸಕರನ್ನು ಹೊರಹಾಕಲಾಯಿತು. ಮೇಲ್ಮನೆಯಲ್ಲಿ ಧರಣಿ ನಡೆಯಿತು. ಮಂಡ್ಯ ಬಂದ್ ಆಚರಿಸಲಾಯಿತು. ರೈತ ಚಳವಳಿ ರಾಜಕೀಯಾತೀತವಾಗಿರಬೇಕೆಂದು ನಿರ್ಧರಿಸಿದ್ದ ಕರ್ನಾಟಕ ರಾಜ್ಯ ರೈತಸಂಘ, ತನ್ನ ನಿಲುವನ್ನು ಬದಲಿಸಿ ದಿನಾಂಕ ೨೭-೧೨-೮೯ರಂದು ಮಂಡ್ಯದಲ್ಲಿ ಒಂದು ಬೃಹತ್ ಸಮಾವೇಶ ನಡೆಸಿ ರಾಜ್ಯದ ಕಾಂಗ್ರೆ ಸರ್ಕಾರದ ವಿರುದ್ಧ ಮತನೀಡಲು ನಿರ್ಧರಿಸಿತು. ಚುನಾವಣೆಗೆ ಇನ್ನು ಕೆಲವೇ ದಿನಗಳಿದ್ದವು. ಅದರ ಜೊತೆಗೆ ಆ ವೇಳೆಗೆ ಬೆಂಗಳೂರಿನಲ್ಲಿ ಕಳ್ಳಭಟ್ಟಿ ದುರಂತ ಸಂಭವಿಸಿ ನೂರಾರು ಜನ ಸತ್ತಿದ್ದರು. ವೀನಸ್ ಸರ್ಕಸ್ ಬೆಂಕಿ ದುರಂತ ಸಂಭವಿಸಿ ಅನೇಕರು ಮರಣ ಹೊಂದಿದ್ದರು. ನಗರದಲ್ಲಿ ಕಟ್ಟುತ್ತಿದ್ದ ಗಂಗಾರಾಮ್ ಕಟ್ಟಡ ಕುಸಿದು ನೂರಾರು ಕೂಲಿ ಕಾರ್ಮಿಕರು ಸತ್ತಿದ್ದರು.

ಕೊಡಗಿನಲ್ಲಿ ಮರಗಳ ಲೂಟಿ ನಡೆಯುತ್ತಿದೆ, ಮರ ಕಡಿಯಲು ಅವಕಾಶ ನೀಡಬಾರದು, ಈಗ ನೀಡಿರುವ ಲೈಸೆನ್ಸ್ ರದ್ದು ಮಾಡಬೇಕೆಂದು ಬಿ. ಜೆ. ಪಿ. ಅಧ್ಯಕ್ಷ ಎ. ಕೆ. ಸುಬ್ಬಯ್ಯ ಹೈಕೋರ್ಟಿನಲ್ಲಿ ಮೊಕದ್ದಮೆ ಹೂಡಿದ್ದರು. ಗಣಿಕಾರಿಕೆ ತಡೆಗಟ್ಟುವಂತೆ ಕೂಡಾ ಹೈಕೋರ್ಟಿನಲ್ಲಿ ಮೊಕದ್ದಮೆ ದಾಖಲಾಗಿತ್ತು. ಶ್ರವಣಬೆಳಗೊಳ ಬೆಟ್ಟದ ಸುತ್ತ ಮುತ್ತ ಗಣಿಗಾರಿಕೆ ನಡೆಯಬಾರದೆಂದು ಸರ್ಕಾರ ನಿಷೇಧಿಸಿದ್ದರೂ ಅಲ್ಲಿ ಕಲ್ಲು ತೆಗೆಯುವ ಕಾರ್ಯ ನಡೆದಿದೆ ಎಂದೂ, ಅದಕ್ಕೆ ಸಚಿವ ಶ್ರೀಕಂಠಯ್ಯನವರ ಬೆಂಬಲ ಇದೆಯೆಂದೂ ಸುದ್ದಿ ಹರಡಿತು. ರೇಷ್ಮೆ ಮಂಡಲಿಯ ನೇಮಕಾತಿಗಳಲ್ಲಿ ಅಕ್ರಮ ನಡೆದಿದೆ ಎಂಬ ದೂರೂ ಇತ್ತು. ಹೀಗೆ ಸರ್ಕಾರಕ್ಕೆ ಅನೇಕ ಕಡೆಗಳಿಂದ ಪೇಚಿನ ಪ್ರಸಂಗಗಳು ಎದುರಾಗುತ್ತಿದ್ದವು.

ಹದಿಮೂರು ಸಾವಿರ ಸ್ಟೈಪೆಂಡಿಯರಿ ಪದವೀಧರರು ತಮ್ಮ ಸ್ಟೈಪೆಂಡನ್ನು ೫೦೦ ರೂ.ಗಳಿಗೆ ಹೆಚ್ಚಿಸಬೇಕು ಹಾಗೂ ಒಂದೇ ಸಲ ತಮ್ಮನ್ನು ಖಾಯಂ ಮಾಡಬೇಕೆಂದು ೨೩-೧೨-೮೨ರಂದು ವಿಧಾನಸೌಧದ ಮುಂದೆ ಬೃಹತ್ ಪ್ರದರ್ಶನ ಮಾಡಿದರು. ೨೩-೧೧-೮೨ರಿಂದ ನಾಲ್ಕು ದಿನಗಳ ವಿಧಾನಸಭಾ ಅಧಿವೇಶನ ಆರಂಭವಾಯಿತು. ಪ್ರತಿಪಕ್ಷಗಳ ಐದು ಅಂಶದ ಬೇಡಿಕೆ ಮೇಲೆ ನಿಲುವಳಿ ಸೂಚನೆಗೆ ಒಪ್ಪಬೇಕೆಂದು ಪ್ರತಿಪಕ್ಷಗಳು ಪಟ್ಟು ಹಿಡಿದವು. ೧೯ ವಿರೋಧಿ ಸದಸ್ಯರನ್ನು ದಿನದ ಮಟ್ಟಿಗೆ ಸದನದಿಂದ ಉಚ್ಚಾಟಿಸಲಾಯಿತು. ೨೫-೧೧-೮೨ರಂದು ಗೆಜ್ಜಲಗೆರೆ ಗೋಲೀಬಾರ್ ಬಗ್ಗೆ ನ್ಯಾಯಾಂಗ ತನಿಖೆ ಹಾಗೂ ಚರ್ಚೆಗೆ ಒತ್ತಾಯಿಸಿದ ೧೬ ಜನ ಶಾಸಕರನ್ನು ಸಭೆಯಿಂದ ಹೊರಹಾಕಲಾಯಿತು ಹೀಗೆ ವಿಧಾನಸಭಾ ಅಧಿವೇಶನವೂ ಕೂಡಾ ಸರ್ಕಾರಕ್ಕೆ ಪೇಚಿನ ಪ್ರಸಂಗಗಳನ್ನು ತಂದು ಸರ್ಕಾರದ ವಿರುದ್ಧ ಪ್ರಚಾರಕ್ಕೆ ಕಾರಣವಾಯಿತು. ಮುಖ್ಯಮಂತ್ರಿ ಗುಂಡೂರಾವ್ ಹಾಗೂ ಸುಧೀಂದ್ರರಾವ್ ಕಸಬೆಯವರ ಮೇಲೆ ರಾಜ್ಯ ಬಿ. ಜೆ. ಪಿ. ಅಧ್ಯಕ್ಷ ಎ.ಕೆ. ಸುಬ್ಬಯ್ಯ ೭-೧೧-೮೨ರಂದು ಕೆಲವು ಆಪಾದನೆಗಳನ್ನು ಮಾಡಿದರು.

ಎಚ್. ಸಿ. ಶ್ರೀಕಂಠಯ್ಯನವರು ರವೀಂದ್ರ ಡಿಸ್ಟಿಲರೀಸ್‌ನಲ್ಲಿ ಪಾಲುಗಾರರಾಗಿದ್ದಾರೆ. ೧೦ ಲಕ್ಷ ರೂ. ಬೆಲೆಯ ಎಣ್ಣೆಗಿರಣಿ ಸ್ಥಾಪಿಸಿದ್ದಾರೆ. ೪೦ ಲಕ್ಷ ರೂಪಾಯಿ ವೆಚ್ಚದಲ್ಲಿ ಚಲನಚಿತ್ರಮಂದಿರ ನಿರ್ಮಿಸಿದ್ದಾರೆ, ಆದಾಯ ತೆರಿಗೆ ವಂಚನೆ ಮಾಡಿದ್ದಾರೆ. ಇವರ ಮೇಲೆ ಖಟ್ಲೆ ಹೂಡಲು ಅನುಮತಿ ನೀಡುವಂತೆ ಜಿ. ಪುಟ್ಟಸ್ವಾಮಿಗೌಡರು ರಾಜ್ಯಪಾಲರಿಗೆ ಮನವಿ ಸಲ್ಲಿಸಿದರು. ಅಲ್ಲದೆ ಇವರು ಕ್ರಾಂತಿರಂಗದ ನಾಯಕರೊಂದಿಗೆ ಸರಸವಾಡುತ್ತಿದ್ದಾರೆಂಬ ಆರೋಪ ಕೇಳಿಬಂತು. ಕಾಂಗ್ರೆ ಸಂಸದ ಎಚ್.ಎನ್. ನಂಜೇಗೌಡರೇ ಶ್ರೀಕಂಠಯ್ಯನವರ ಮೇಲೆ ಪಕ್ಷ ವಿರೋಧಿ ಚಟುವಟಿಕೆ ಆರೋಪ ಹೊರಿಸಿ ಪಕ್ಷದ ವರಿಷ್ಠರಿಗೆ ದೂರು ನೀಡುತ್ತಲೇ ಇದ್ದರು. ಸಚಿವ ಎ. ಜಕನೂರ್ ಮನೆಯಿಂದ ಸಿ. ಬಿ. ಐ. ನವರು ಎರಡು ಕೋಟಿ ರೂಪಾಯಿ ವಶಪಡಿಸಿಕೊಂಡಿದ್ದಾರೆಂದು ಸಂಜಯ್ ವಿಚಾರ ಮಂಚದ ಅಧ್ಯಕ್ಷೆ ಮನೇಕಾ ಗಾಂಧಿ, ಡಂಪಿ ಅಕ್ಬರ್ ಅಹಮದ್ ದಿನಾಂಕ ೨.೧೨.೮೨ ರಂದು ಬೆಳಗಾವಿಯಲ್ಲಿ ಆರೋಪಿಸಿದರು. ಹೀಗೆ ಸರ್ಕಾರದ ವಿರುದ್ಧ ಭಾರೀ ಮಟ್ಟದಲ್ಲಿ ಅಪಪ್ರಚಾರಗಳು ನಡೆದವು. ಇಮ ಚುನಾವಣೆಗಳಲ್ಲಿ ಕಾಂಗ್ರೆ ಹಿನ್ನಡೆಗೆ ಕಾರಣವಾದವು.

ಗೋಕಾಕ್ ಚಳವಳಿಗೆ ಧುಮಕಿದ್ದ ಡಾ। ರಾಜ್‌ಕುಮಾರ್ ತಾವು ರಾಜಕೀಯ ಪ್ರವೇಶ ಮಾಡುವುದಿಲ್ಲ ಎಂದು ದಿನಾಂಕ ೫-೧೧-೮೨ರಂದು ಘಂಟಾಘೋಷವಾಗಿ ಹೇಳಿದರು. ಆದರೆ ಚುನಾವಣೆಗಳು ಸಮೀಪಿಸುತ್ತಿದ್ದಂತೆ ದಿನಾಂಕ ೨೯.೧೧.೮೨ ರಂದು ಅವರು ಸಮಾರಂಭ ಒಂದರಲ್ಲಿ ಬಂಗಾರಪ್ಪನವರಿಗೆ ಬಹಿರಂಗವಾಗಿ ಬೆಂಬಲ ನೀಡಿದರು. ಬಂಗಾರಪ್ಪನವರ ರಾಜಕೀಯ ಆದರ್ಶಗಳನ್ನು ರಾಜಕುಮಾರ್ ಮುಕ್ತಕಂಠದಿಂದ ಪ್ರಶಂಸಿಸಿದರು. ಇದರಿಂದ ಕ್ರಾಂತಿರಂಗಕ್ಕೆ ಬಲ ಬಂದಂತಾಯಿತು. ದೇವರಾಜ ಅರಸರು ಕ್ರಾಂತಿರಂಗವನ್ನು ಸಂಘಟಿಸಲು ಇಡೀ ರಾಜ್ಯದಾದ್ಯಂತ ಪ್ರವಾಸ ಕೈಗೊಂಡು ಪ್ರಚಾರ ಭಾಷಣಗಳನ್ನು ಮಾಡಿದ್ದರು. ಈ

ಕಾರ್ಯದಲ್ಲಿ ತೊಡಗಿದ್ದಾಗಲೇ ಅವರು ದಿನಾಂಕ ೬ ಜೂನ್ ೮೨ ರಂದು ಹಠಾತ್ತಾಗಿ ನಿಧನರಾದರು. ಅವರ ಸಾವಿನ ಅನುಕಂಪದ ಅಲೆ ಕೂಡಾ ಜನರು ಕಾಂಗ್ರೆಸ್ ಬಗ್ಗೆ ಯೋಚಿಸುವಂತೆ ಮಾಡಿತು.

### ೫. ಕಾಂಗ್ರೆ ಸರ್ಕಾರ ಹಾಗೂ ಸಂಘರ್ಷ ಸಮಿತಿ

ಸಾಮಾಜಿಕ, ಆರ್ಥಿಕ ಕಾರಣಗಳಿಂದಾಗಿ, ವೈಯಕ್ತಿಕ ಕಾರಣಗಳಿಂದಾಗಿ ಅಲ್ಲಲ್ಲಿ ದಲಿತರ ಮೇಲೆ ಹಲ್ಲೆ ಪ್ರಕರಣಗಳು ವರದಿಯಾದವು. ೧೭-೧೦-೮೨ ರಂದು ರಾಮನಗರ ತಾಲ್ಲೂಕು ಹಳ್ಳಿಮಾಳ ಗ್ರಾಮದ ದಲಿತರ ಮೇಲೆ ಹಲ್ಲೆಯಾಗಿ ಎಂಟು ಜನರಿಗೆ ಗಾಯಗಳಾಯಿತು. ಅದೇ ರೀತಿ ಅಕ್ಟೋಬರ್ ೧೫ ರಂದು ಶ್ರೀರಂಗಪಟ್ಟಣ ತಾಲ್ಲೂಕು ನೇರಲಗೆರೆ ಗ್ರಾಮದ ದಲಿತರ ಮೇಲೆ ಹಲ್ಲೆ ನಡೆದ ವಿಚಾರ ವರದಿಯಾಯಿತು. ಅಂಬಳೆ ಗ್ರಾಮದಲ್ಲಿ ಹರಿಜನರ ಮೇಲೆ ಸಾಮೂಹಿಕ ಬಹಿಷ್ಕಾರ ಹಾಕಿದ್ದಾರೆಂಬ ಸುದ್ದಿ ೪-೧೧-೮೨ ರಂದು ವರದಿ ಆಯಿತು. ಫೆಬ್ರವರಿ ೨೭, ೧೯೮೨ ರಂದು ರಾಜ್ಯದ ಎಲ್ಲಾ ದಲಿತ ಮಂತ್ರಿಗಳು ಶಾಸಕರ ಮನೆಮುಂದೆ ದಲಿತ ಸಂಘರ್ಷ ಸಮಿತಿ ಧರಣಿ ನಡೆಸಿತು. ದಲಿತರ ಮೇಲಿನ ದೌರ್ಜನ್ಯ ಹೆಚ್ಚಾಗುತ್ತಿರುವುದಕ್ಕೆ ದಲಿತ ಮಂತ್ರಿಗಳು ಹಾಗೂ ಶಾಸಕರು ಮೌನವಾಗಿರುವುದೇ ಕಾರಣ ಎಂದು ಸಮಿತಿ ಆಪಾದಿಸಿತು.

ವಿಧಾನಸಭಾ ಚುನಾವಣೆಗಳಲ್ಲಿ ದಲಿತ ಮಂತ್ರಿ ಮತ್ತು ಶಾಸಕರನ್ನು ಸೋಲಿಸುವಂತೆ ದಲಿತ ಸಂಘರ್ಷ ಸಮಿತಿ ಕರೆ ನೀಡಿತು. ಇದರಿಂದಾಗಿ ಕಾಂಗ್ರೆ ಪಕ್ಷದ ಬೆಂಬಲದಿಂದ ಕೆ. ಜಿ.ಎಫ್. ನಿಂದ ಸ್ಪರ್ಧಿಸಿದ್ದ ಸಿ. ಎಂ. ಆರ್ಮುಗಂ ಹಾಗೂ ಟಿ. ನರಸೀಪುರದಿಂದ ಸ್ಪರ್ಧಿಸಿದ್ದ ಸಮಾಜ ಕಲ್ಯಾಣ ಸಚಿವ ಪಿ. ವೆಂಕಟರಮಣ ಚುನಾವಣೆಗಳಲ್ಲಿ ಸೋತರು. ಇದು ಕಾಂಗ್ರೆ ಪಕ್ಷದ ಮೇಲೂ ಪರಿಣಾಮ ಬೀರಿತು.

### ೬. ವಿರೋಧ ಪಕ್ಷಗಳ ಒಕ್ಕೂಟ ರಚನೆ

ದೇವರಾಜ ಅರಸರು ಅಧ್ಯಕ್ಷರಾಗಿದ್ದ ಕಾಂಗ್ರೆಸ್ (ಯು) ಆಗಸ್ಟ್ ೫, ೮೧ ರಂದು ಒಡೆಯಿತು. ಜಗಜೀವನರಾಂ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಎಂಬ ಪಕ್ಷವನ್ನು ಸ್ಥಾಪಿಸಿದರು. ಇದರಿಂದ ಬೇಸತ್ತ ಹಾಗೂ ಪ್ರಾದೇಶಿಕ ಪಕ್ಷ ಕಟ್ಟಲು ಯೋಚಿಸಿದ್ದ ದೇವರಾಜ ಅರಸು ಆಗಸ್ಟ್ ೨೪, ೮೧ ರಂದು ಕಾಂಗ್ರೆಸ್ ಅಧ್ಯಕ್ಷತೆಗೆ ರಾಜೀನಾಮೆ ನೀಡಿದರು. ಶರದ್ ಪವಾರ್ ಹೊಸ ಅಧ್ಯಕ್ಷರಾದರು. ೧೯೮೧ರ ಡಿಸೆಂಬರ್ ತಿಂಗಳಲ್ಲಿ ದೇವರಾಜ ಅರಸರು ಬೆಂಗಳೂರಿನಲ್ಲಿ ನಿಜಲಿಂಗಪ್ಪನವರ ೮೦ನೇ ಹುಟ್ಟು ಹಬ್ಬ ಆಚರಣೆಯ ದಿನದಂದು ವಿರೋಧ ಪಕ್ಷಗಳ ಐಕ್ಯತಾ ವೇದಿಕೆಯನ್ನು ಸ್ಥಾಪಿಸಿದರು. ಈ ವೇದಿಕೆಯ ಮೇಲೆ ಚಂದ್ರಶೇಖರ್, ಜಾರ್ಜ್ ಫರ್ನಾಂಡಿಸ್ ರಾಮಕೃಷ್ಣ ಹೆಗಡೆ, ಚರಣಸಿಂಗ್ ಮುಂತಾದವರನ್ನು ಒಟ್ಟಾಗಿ ಕರೆತಂದರು. ಆದರೆ ಮುಂದೆ ಲೋಕದಳ ಒಡೆದು ವಿರೋಧಿ ಒಕ್ಕೂಟ ಕನಸಾಯಿತು. ಇದರಿಂದ ನೊಂದ ಅರಸರು, ಕರ್ನಾಟಕ ಕ್ರಾಂತಿರಂಗ ಎಂಬ ಪ್ರಾದೇಶಿಕ ಪಕ್ಷವನ್ನು ಸ್ಥಾಪಿಸಿದರು. ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿದ್ದ ಬಂಗಾರಪ್ಪ, ರಘುಪತಿ ಕ್ರಾಂತಿರಂಗವನ್ನು ಸೇರಿದರು. ಅರಸು ಜೂನ್ ೬, ೮೨ರಂದು ನಿಧನರಾದರು. ಕ್ರಾಂತಿರಂಗದಲ್ಲಿ ಪಟೇಲರ ಗುಂಪು, ಬಂಗಾರಪ್ಪನವರ ಗುಂಪುಗಳಾದವು. ಮತ್ತೆ ಅವು ೨-೧೦-೮೨ ರಂದು ಒಂದುಗೂಡಿದವು. ಅಬ್ದುಲ್ ನಜೀರ್ ಸಾಬ್ ಪಕ್ಷದ ಅಧ್ಯಕ್ಷರಾದರು. ಬಿ. ರಾಚಯ್ಯ ಪಾರ್ಲಿಮೆಂಟರಿ ಬೋರ್ಡ್ ಅಧ್ಯಕ್ಷರಾದರು. ಇದೇ ಸಮಯದಲ್ಲಿ ಆಂಧ್ರಪ್ರದೇಶದಲ್ಲಿ ಎನ್. ಟಿ. ರಾಮರಾವ್ ತೆಲುಗುದೇಶಂ ಪಕ್ಷವನ್ನು ಸಂಘಟಿಸುತ್ತಿದ್ದರು.

ಸೆಪ್ಟೆಂಬರ್೨೬, ೧೯೮೨ ರಂದು ಹಾಸನ ಜಿಲ್ಲೆ ದೊಡ್ಡಹಳ್ಳಿಯಲ್ಲಿ ಗೋಲೀಬಾರ್ ನಡೆದು ಇಬ್ಬರು ರೈತರು ಮೃತಪಟ್ಟಿದ್ದರು. ಈ ಗೋಲೀಬಾರ್‌ಗೆ ದೇವೇಗೌಡರೇ ಕಾರಣ ಎಂಬ ವದಂತಿ ದಟ್ಟವಾಗಿ ಹಬ್ಬಿತ್ತು. ಇದರ ಬಗ್ಗೆ ನ್ಯಾಯಾಂಗ ತನಿಖೆ ನಡೆಸುವಂತೆ ಒತ್ತಾಯಿಸಿ ದೇವೇಗೌಡರು ದಿನಾಂಕ ೪.೧೧.೮೨ ರಿಂದ ಬೆಂಗಳೂರಿನಲ್ಲಿ ನಿರಶನ ಆರಂಭಿಸಿದರು. ೧೦-೧೧-೮೨ರಂದು ಅವರು ತೀರಾ ನಿತ್ರಾಣಗೊಂಡು ಆಸ್ಪತ್ರೆಗೆ ಸಾಗಿಸಲ್ಪಟ್ಟರು. ಸರ್ವಪಕ್ಷಗಳ ವಿನಂತಿ ಮೇರೆಗೆ ಅವರು ೧೨.೧೧.೮೨ ರಂದು ತಮ್ಮ ನಿರಶನ ಅಂತ್ಯಗೊಳಿಸಿದರು. ಮೈಸೂರು ವಿಭಾಗಾಧಿಕಾರಿಯವರನ್ನು ದೊಡ್ಡಹಳ್ಳಿ ಗೋಲೀಬಾರ್ ಪ್ರಕರಣದ ತನಿಖೆಗೆ ನೇಮಿಸಲಾಯಿತು. ಆದರೆ ದೇವೇಗೌಡರು ಇದನ್ನು ಒಪ್ಪಲಿಲ್ಲ. ೧೦.೧೧.೧೯೮೨ರಂದು ವಿರೋಧಿ ಮುಖಂಡ ಬಹುಗುಣ ಬೆಂಗಳೂರಿಗೆ ಭೇಟಿ ನೀಡಿದ್ದರು. ಬಂಗಾರಪ್ಪನವರು ಅವರ ಗೌರವಾರ್ಥ ಚಹಾಕೂಟ ಏರ್ಪಡಿಸಿದ್ದರು. ಈ ಸಭೆಯಲ್ಲಿ ಜನತಾ ಪಕ್ಷದ ಮುಖಂಡರೂ ಭಾಗವಹಿಸಿದ್ದರು. ಮುಂದಿನ ಚುನಾವಣೆಗಳಲ್ಲಿ ಮೈತ್ರಿ ಅಥವಾ ಒಕ್ಕೂಟ ರಚನೆಯ ಬಗ್ಗೆ ಪ್ರಸ್ತಾಪ ಮಾಡಲಾಯಿತು.

ದಿನಾಂಕ ೧೨ ಅಕ್ಟೋಬರ್ ೮೨ರಂದು ವಿರೋಧ ಪಕ್ಷಗಳ ಏಕತೆಯ ಬಗ್ಗೆ ವಿಧಿ ವಿಧಾನಗಳನ್ನು ರೂಪಿಸಲು ೧೨ ಜನರ ಒಂದು ಸಮಿತಿಯನ್ನು ನೇಮಿಸಲಾಯಿತು. ಪ್ರೊ। ಎ. ಲಕ್ಷ್ಮೀಸಾಗರ್ ಹಾಗೂ ಎ.ಂ ಸಿ. ಪೆರುಮಾಳ್ ಈ ಸಮಿತಿಯ ಸಂಚಾಲಕರುಗಳಾಗಿದ್ದರು.

೧.೧.೮೨ ರಂದು ಹುಣಸೂರು ತಾಲ್ಲೂಕಿನ ಕಾಂಗ್ರೆ ಕಾರ್ಯಕರ್ತರು ಕ್ರಾಂತಿರಂಗ ಸೇರಿದರು. ಈ ರೀತಿ ಅನೇಕ ಸೇರ್ಪಡೆಗಳಾದವು. ದಿನಾಂಕ ೧ ನವೆಂಬರ್ ೮೨ ರಂದು ರಾಜ್ಯೋತ್ಸವದ ದಿನ ನಡೆದ ಕಾವೇರಿ ಎರಡನೇ ಹಂತದ ನೀರು ಸರಬರಾಜು ಯೋಜನೆಯ ಉದ್ಘಾಟನಾ ಕಾರ್ಯಕ್ರಮಕ್ಕೆ ಪ್ರತಿಪಕ್ಷಗಳು ಬಹಿಷ್ಕಾರ ಹಾಕಿದವು. ಅಭಿವೃದ್ಧಿ ಕಾರ್ಯಕ್ರಮಗಳ ವಿಚಾರದಲ್ಲಿ ರಾಜಕೀಯ ಸರಿಯಲ್ಲವೆಂದು ಗುಂಡೂರಾವ್ ಪ್ರತಿಪಕ್ಷಗಳನ್ನು ತರಾಟೆಗೆ ತೆಗೆದುಕೊಂಡರು. ಅದೇ ದಿನ ರಾಜ್ಯೋತ್ಸವದ ಆಚರಣೆ ಅರ್ಥಹೀನ ಎಂದು ಸಾಹಿತಿಗಳು ಕಲಾವಿದರು ವಿಧಾನಸೌಧದ ಎದುರು ಸಾಂಕೇತಿಕ ಧರಣಿ ಮಾಡಿದರು.

೧೨-೧೧-೮೨ ರಂದು ಜನತಾ, ಬಿಜೆಪಿ, ಸಮಾಜವಾದಿ, ಕ್ರಾಂತಿರಂಗ, ಸಿಪಿಐ, ಸಿಪಿಎಂ ಈ ಆರು ಪಕ್ಷಗಳ ಕ್ರಿಯಾಸಮಿತಿಯು ಐದು ಬೇಡಿಕೆಗಳ ಬಗ್ಗೆ ಮುಖ್ಯಮಂತ್ರಿಗಳಿಗೆ ಮನವಿ ಸಲ್ಲಿಸಿದವು. ಕೋಲಾರ ಚಿನ್ನದಗಣಿ, ಮಳವಳ್ಳಿ, ದೊಡ್ಡಹಳ್ಳಿಗಳಲ್ಲಿ ನಡೆದ ಗೋಲೀಬಾರ್ ಬಗ್ಗೆ ತನಿಖೆ, ಕನ್ನಡ ಚಳವಳಿಗಾರರ ಮೇಲೆ ಹೂಡಿರುವ ಎಲ್ಲಾ ಮೊಕದ್ದಮೆಗಳ ವಾಪಸಾತಿ, ಕಳ್ಳಭಟ್ಟಿ ದುರಂತ, ವೀನಸ್ ಸರ್ಕಸ್ ದುರಂತ, ಗಂಗಾರಾಂ ಕಟ್ಟಡ ದುರಂತ ಇತ್ಯಾದಿ ತನಿಖಾ ಆಯೋಗಗಳ ವರದಿಗಳ ಬಹಿರಂಗ, ರೈತರಿಗೆ ನೀಡಿರುವ ಭರವಸೆಗಳ ಈಡೇರಿಕೆ- ಈ ಬೇಡಿಕೆಗಳನ್ನು ಮುಂದಿಟ್ಟಿದ್ದವು. ಆದರೆ ಮುಖ್ಯಮಂತ್ರಿಗಳು ಇವೆಲ್ಲಾ ಚುನಾವಣೆಯಲ್ಲಿ ಪ್ರಸ್ತಾಪವಾಗುವ ಅಂಶಗಳಾಗಿವೆ. ಇದರ ಬಗ್ಗೆ ನಿರ್ಧಾರವನ್ನು ಜನತೆಗೇ ಬಿಡೋಣ ಎಂದು ಹೇಳಿದರು. ೧೨-೧೧-೮೨ ರಂದು ಎಲ್ಲಾ ಪಕ್ಷಗಳ ಮುಖಂಡರು ವಿಧಾನಸೌಧದ ಮುಂದೆ ಧರಣಿ ನಡೆಸಿ ಉಪವಾಸ ಸತ್ಯಾಗ್ರಹ ಮಾಡಿದರು.

ಕೊನೆಗೆ ಚುನಾವಣೆಗಳಲ್ಲಿ ಬಿ.ಜೆ.ಪಿ. ಪ್ರತ್ಯೇಕವಾಗಿ ಸ್ಪರ್ಧಿಸಲು ನಿರ್ಧರಿಸಿತು. ಉಳಿದ ಪಕ್ಷಗಳು ಅದರಲ್ಲೂ ಮುಖ್ಯವಾಗಿ ಜನತಾ, ಕ್ರಾಂತಿರಂಗ ಹೊಂದಾಣಿಕೆ ಮಾಡಿಕೊಂಡು ಚುನಾವಣೆಯಲ್ಲಿ ಸ್ಪರ್ಧಿಸಿದವು. ಸಂಜಯ ವಿಚಾರ ಮಂಚ ಎಂಬ ಪಕ್ಷವನ್ನು ಜನವರಿ ೨೬, ೧೯೮೨ ರಂದು ಮನೇಕಾ ಗಾಂಧಿ ಅಸ್ತಿತ್ವಕ್ಕೆ ತಂದರು. ಸದರಿ ಪಕ್ಷದ ಕರ್ನಾಟಕ ಶಾಖೆಯ ಸಂಚಾಲಕರಾಗಿ ಗಣೇಶ್‌ರಾಜ್ ಎಂಬುವವರು ನೇಮಕವಾಗಿದ್ದರು. ತಮ್ಮ ಪಕ್ಷ ಎಲ್ಲಾ ಸಚಿವರ ವಿರುದ್ಧ ಸ್ಪರ್ಧಿಸುವುದಾಗಿ ಅವರು ೨೭ ನವೆಂಬರ್ ೮೨ ರಂದು ಪ್ರಕಟಿಸಿದರು. ಮನೇಕಾ ಗಾಂಧಿ, ಡಂಪಿ ಅಕ್ಬರ್ ಅಹಮದ್ ಅವರುಗಳು ಚುನಾವಣಾ ಪ್ರಚಾರಕ್ಕಾಗಿ ಕರ್ನಾಟಕಕ್ಕೆ ಬಂದರು. ಕಾಂಗ್ರೆನಿಂದ ಉಚ್ಚಾಟಿಸಲ್ಪಟ್ಟ ಗೂಳಪ್ಪ ಉಪನಾಳ್ ತಾವು ಈ ಪಕ್ಷದ ಅಭ್ಯರ್ಥಿ ಎಂದು ಹೇಳಿ ಶಿರಹಟ್ಟಿ ಕ್ಷೇತ್ರದಿಂದ ಸ್ಪರ್ಧಿಸಿ ಆಯ್ಕೆಯೂ ಆದರು. ಈ ರೀತಿಯಾಗಿ ವಿರೋಧ ಪಕ್ಷಗಳ ಏಕತೆ, ಮೈತ್ರಿ ಕಾಂಗ್ರೆ ಪಕ್ಷದ ಗೆಲುವಿಗೆ ಅಡ್ಡಿ ಆಯಿತೆಂದು ಹೇಳಬಹುದು.

## ೭. ಕಾಂಗ್ರೆ ಸರ್ಕಾರದ ಜನೋಪಯೋಗಿ ಕಾರ್ಯಗಳು

ಇಷ್ಟಾದರೂ ರಾಜ್ಯದಲ್ಲಿದ್ದ ಕಾಂಗ್ರೆಸ್ (ಐ) ಸರ್ಕಾರ ಹಲವಾರು ಜನೋಪಯೋಗಿ ಕಾರ್ಯಕ್ರಮಗಳನ್ನು ಜಾರಿಗೆ ತಂದಿತು. ೧-೧೦-೮೨ ರಿಂದ ಕೃಷಿ ಕಾರ್ಮಿಕರಿಗೆ ಆಶಾಕಿರಣ ಎಂಬ ಅಪಘಾತ ವಿಮಾಯೋಜನೆಯನ್ನು ಜಾರಿಗೆ ತಂದಿತು. ಇದಕ್ಕಾಗಿ ವರ್ಷಕ್ಕೆ ೫೩-೬೦ಲಕ್ಷ ರೂ. ಪ್ರೀಮಿಯಂ ಖರ್ಚನ್ನು ನಿಗದಿಗೊಳಿಸಿತು. ಚುನಾವಣೆ ಹತ್ತಿರವಾದಾಗ ಈ ಯೋಜನೆಗೆ ಕುಂಬಾರರು, ನಯನಜ ಕ್ಷತ್ರಿಯರು ಇನ್ನೂ ಮುಂತಾದ ಗ್ರಾಮೀಣ ಕುಲಕಸುಬುದಾರರನ್ನು ಸೇರಿಸಿತು. ಕಾವೇರಿ ಮೂರನೇ ಹಂತದ ಕುಡಿಯುವ ನೀರಿನ ಯೋಜನೆಗೆ ಮಂಜೂರಾತಿ ನೀಡಿತು. ಇದಕ್ಕಾಗಿ ೨೪೦ ಕೋಟಿ ರೂಪಾಯಿಗಳ ಯೋಜನೆ ಜಾರಿಗೆ ಬಂತು.

ಹುನಗುಂದ ಮುದ್ದೇಬಿಹಾಳ ಕುಡಿಯುವ ನೀರು ಸರಬರಾಜು ಯೋಜನೆ, ಮಿಣ್ಣೆತ್ತುಹಳ್ಳಿ, ಜೋಡಿ ತಿಮ್ಮಾಪುರ, ಹಿರೇ ಮೇಗಳ ಕೆರೆ ಏತ ನೀರಾವರಿ ಯೋಜನೆಗಳನ್ನು ಸುಮಾರು ೧೮೦ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಆರಂಭಿಸಲು ನಿರ್ಧರಿಸಿತು. ಇದರಿಂದ ೫೦೦೦ ಎಕರೆಗೆ ನೀರಾವರಿ ಆಗುತ್ತದೆಂದು ಹೇಳಲಾಯಿತು. ಬೆಳಗಾವಿ ಜಿಲ್ಲೆಯಲ್ಲಿ ೧೨೧ ಲಕ್ಷ ರೂ. ವೆಚ್ಚದಲ್ಲಿ ಗ್ರಾಮೀಣ ಮಾಹಿತಿ ಕೇಂದ್ರ ಸ್ಥಾಪಿಸಲು ನಿರ್ಧರಿಸಿತು. ಸುಮಾರು ೫೦ ಸಾವಿರ ಗ್ರೂಪ್-ಸಿ ಖಾಲಿ ಹುದ್ದೆಗಳ ಭರ್ತಿಗೆ ೨೨ ಇಲಾಖಾ ನೇಮಕ ಸಮಿತಿಗಳನ್ನು ಸೆಪ್ಟೆಂಬರ್ ೨೨,೧೯೮೨ ರಂದು ಸರ್ಕಾರ ರಚಿಸಿತು. ರಾಜಕೀಯ ಹಸ್ತಕ್ಷೇಪವಿಲ್ಲದೆ ಬೇಗ ಈ ಹುದ್ದೆಗಳ ಭರ್ತಿ ಆಗಬೇಕೆಂಬ ಉದ್ದೇಶದಿಂದ ಅಧಿಕಾರೇತರ ಸದಸ್ಯರನ್ನು ಇದಕ್ಕೆ ನೇಮಿಸದೇ ಕೇವಲ ಅಧಿಕಾರಿಗಳು ಮತ್ತು ದಕ್ಷ ನಿವೃತ್ತ ಅಧಿಕಾರಿಗಳನ್ನು ಈ ಸಮಿತಿಗೆ ನೇಮಿಸಿತು. ಆದರೆ ಪಕ್ಷದ ನಾಯಕರು ಅಧಿಕಾರೇತರ ಸದಸ್ಯರನ್ನು ಈ ಸಮಿತಿಗಳಿಗೆ ಹಾಕಬೇಕೆಂದು ಒತ್ತಡ ತಂದರು. ಸಹಕಾರಿ ಸಂಸ್ಥೆಗಳಿಗೆ ಚುನಾವಣೆಗಳು ನಡೆದಿರಲಿಲ್ಲ. ಚುನಾವಣೆ ಇಲ್ಲದೆಯೂ ಸಹ ಈ ಸಂಸ್ಥೆಗಳು ವಿಶೇಷ ಸರ್ವಸದಸ್ಯರ ಸಭೆ ನಡೆಸಬಹುದೆಂದು ಸರ್ಕಾರ ೮-೧೦-೮೨ ರಂದು ಆಜ್ಞೆ ಹೊರಡಿಸಿತು.

ವಿಧಾನಸಭಾ ಸದಸ್ಯರ ಕ್ಷೇತ್ರಾಭಿವೃದ್ಧಿಗಾಗಿ ಹತ್ತು ಲಕ್ಷ ರೂಪಾಯಿಗಳ ನಿಧಿಯನ್ನು ಪ್ರತಿ ಶಾಸಕರಿಗೆ ಒದಗಿಸಲಾಯಿತು. ಈ ಬಗ್ಗೆ ಸಂಸತ್ ಸದಸ್ಯರು ಹಾಗೂ ನಿಷ್ಠಾವಂತ ಶಾಸಕರೆನಿಸಿಕೊಂಡವರು ತಕರಾರು ತೆಗೆದರು. ಕಾರ್ಪೊರೇಷನ್ ಬೀದಿ ದೀಪಗಳ

ನಿರ್ವಹಣೆಯನ್ನು ಸರ್ಕಾರ ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿಗೆ ವಹಿಸಿತು. ಇದನ್ನು ಹಿಂತೆಗೆದುಕೊಳ್ಳಬೇಕೆಂದು ಬೆಂಗಳೂರು ನಗರದ ಕಾಂಗ್ರೆಸ್ ಪಕ್ಷದ ಶಾಸಕರು ಇತರ ಶಾಸಕರು ಒತ್ತಾಯ ತಂದರು. ಧರಣಿ ಮಾಡಲೂ ತೀರ್ಮಾನಿಸಿದರು. ಬಿ.ಡಿ.ಎ. ಯಿಂದ ಇನ್ನು ನಾಲ್ಕು ವರ್ಷಗಳ ಕಾಲ ಅರ್ಜಿ ಸ್ವೀಕಾರ ಇಲ್ಲವೆಂದೂ ಈಗಾಗಲೇ ಅರ್ಜಿ ಹಾಕಿರತಕ್ಕ ಎಲ್ಲರಿಗೂ ನಿವೇಶನ ಹಂಚಿಕೆ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದೆಂದೂ ೨೨-೧೦-೮೨ ರಂದು ಪ್ರಕಟಿಸಲಾಯಿತು. ಇದೂ ಸಾರ್ವಜನಿಕರ ಅಸಮಾಧಾನಕ್ಕೆ ಕಾರಣವಾಯಿತು.

ಬೆಟರ್‌ಮೆಂಟ್ ಲೆವಿಯನ್ನು ನವೆಂಬರ್ ೨ ರಿಂದ ರದ್ದು ಮಾಡುವುದಾಗಿಯೂ ಈ ಬಗ್ಗೆ ಅಂದು ನಿರ್ಧರಿಸಿ ಪ್ರಕಟಣೆ ಹೊರಡಿಸಲಾಗುವುದೆಂದೂ ಇದರಿಂದ ಸರ್ಕಾರಕ್ಕೆ ೨.೫೫ ಕೋಟಿ ಖರ್ಚು ಬರಲಿರುವುದಾಗಿಯೂ ಹಣಕಾಸು ಸಚಿವ ವೀರಪ್ಪ ಮೊಯಿಲಿ ಪ್ರಕಟಿಸಿದರು. ಅದೇ ರೀತಿ ವಾಟರ್ ರೇಟ್ ರದ್ದಿನಿಂದ ೬ ಕೋಟಿ, ವಿದ್ಯುತ್ ದರ ಪುನರ್‌ವಿಮರ್ಶೆಯಿಂದ ೧.೫ ಕೋಟಿ ರೂಪಾಯಿ, ಕಬ್ಬಿನ ಮೇಲಿನ ತೆರಿಗೆ ರಿಯಾಯಿತಿಯಿಂದ ೩.೭೪ ಕೋಟಿ, ಕೃಷಿ ಆದಾಯತೆರಿಗೆ ಮಿತಿ ಏರಿಕೆಯಿಂದ ೮೨ ಲಕ್ಷ, ದಂಡದ ಬಡ್ಡಿ ರದ್ದತಿಯಿಂದ ೨.೦೬ ಕೋಟಿ, ತಕಾವಿ ರದ್ದಿನಿಂದ ೨.೩೭ ಕೋಟಿ, ಭೂಸಾರ ಸಂರಕ್ಷಣೆ ಬಗ್ಗೆ ರೈತರು ನೀಡಬೇಕಾಗಿದ್ದ ವೆಚ್ಚದ ರದ್ದತಿಯಿಂದ ೧೦ ಕೋಟಿ, ಗೊಬ್ಬರ ಹಾಗೂ ಕೀಟನಾಶಕಗಳ ಮೇಲಿನ ತೆರಿಗೆ ಕಡಿತದಿಂದ ೩೫. ೩೪ ಕೋಟಿ, ಬೆಂಬಲ ಬೆಲೆ ಏರಿಕೆಯಿಂದ ೩೫. ಕೋಟಿ, ಸಾಗುವಳಿ ಚೀಟಿ ನೀಡಿಕೆಗೆ ೩ ಕೋಟಿ, ಹಾಲಿನ ಖರೀದಿ ದರ ಹೆಚ್ಚಳದಿಂದ ೫ ಕೋಟಿ ರೂಪಾಯಿಗಳ ಹೊರೆ ೧೯೮೧-೮೨ನೇ ಸಾಲಿನಲ್ಲಿ ಸರ್ಕಾರದ ಮೇಲೆ ಬಿದ್ದಿದೆ. ಹೀಗೆ ರೈತರಿಗೆ ಸುಮಾರು ೧೦೦ ಕೋಟಿ ರೂಪಾಯಿಗಳ ಪರಿಹಾರ ನೀಡಲಾಗಿದೆ ಎಂದು ವೀರಪ್ಪ ಮೊಯಿಲಿ ಪ್ರಕಟಿಸಿದರು. ನೀರಾವರಿ ಪ್ರದೇಶದ ರೈತರ ಮೇಲಿನ ಲೆವಿಯನ್ನು ೧೯೮೦ ರಲ್ಲಿಯೇ ರದ್ದುಗೊಳಿಸಲಾಗಿದೆ, ಇದನ್ನು ರದ್ದು ಮಾಡದೇ ಇದ್ದ ಪಕ್ಷದಲ್ಲಿ ಸರ್ಕಾರಕ್ಕೆ ೬೭೮ ಕೋಟಿ ಆದಾಯ ಬರುತ್ತಿತ್ತು. ಆದರೆ ಈ ಲೆವಿ ಕೆಳಗೆ ಈಗ ಕೇವಲ ೧೨.೫ ಕೋಟಿಯನ್ನು ಸರ್ಕಾರ ಸಂಗ್ರಹ ಮಾಡಿರುತ್ತದೆ ಎಂದೂ, ಇದನ್ನು ಹಿಂತಿರುಗಿಸುವ ಬಗ್ಗೆ ಸರ್ಕಾರ ಯೋಚಿಸುತ್ತಿದೆ ಎಂದೂ ಅವರು ಹೇಳಿದರು. ಈ ರೀತಿ ರೈತರಿಗೆ ಬಹಳ ದೊಡ್ಡ ರೀತಿಯಲ್ಲಿ ಸರ್ಕಾರ ಪರಿಹಾರವನ್ನು ನೀಡಿದೆ ಎಂದು ವೀರಪ್ಪ ಮೊಯಿಲಿಯವರು ೨೫.೧೦.೮೨ ರಂದು ಪ್ರಕಟಿಸಿದರು. ಅದೇ ದಿನ ಮುಖ್ಯಮಂತ್ರಿ ಗುಂಡೂರಾಯರು ಅಥಣಿಯಲ್ಲಿ ರೈತರ ಬೃಹತ್ ರ್‍ಯಾಲಿಯನ್ನುದ್ದೇಶಿಸಿ ಮಾತನಾಡಿದರು.

ರಾಜ್ಯೋತ್ಸವದ ಪ್ರಯುಕ್ತ ೧೫೮ ಹಿರಿಯ ಸಾಹಿತಿ ಕಲಾವಿದರುಗಳಿಗೆ ಸರ್ಕಾರ ಮಾಸಿಕ ೫೦೦ ರೂಪಾಯಿ ಗೌರವಧನವನ್ನು, ೧೧೧ ಸಾಹಿತಿಗಳು ಕಲಾವಿದರಿಗೆ ಮಾಸಿಕ ೨೫೦ ರೂಪಾಯಿಗಳ ಗೌರವಧನವನ್ನು ಸರ್ಕಾರ ಮಂಜೂರು ಮಾಡಿತು. ೧-೧೧-೮೨ ರಿಂದ ಕಾವೇರಿ ಎರಡನೇ ಹಂತದ ಯೋಜನೆ ಕಾರ್‍ಯಾರಂಭಮಾಡಿ ನಗರದ ಜನತೆಗೆ ಕುಡಿಯುವ ನೀರಿನ ಹೆಚ್ಚಿನ ಸರಬರಾಜು ಆರಂಭವಾಯಿತು. ಶಿವಮೊಗ್ಗ ಜಿಲ್ಲಾ ರೈತರ ಮೇಲಿನ ಎಲ್ಲ ಮೊಕದ್ದಮೆಗಳನ್ನು ವಾಪಸ್ ಪಡೆಯಲು ಸರ್ಕಾರ ೨-೧೧-೮೨ರಂದು ತೀರ್ಮಾನಿಸಿತು. ೧೯೮೨ರ ನವೆಂಬರ್-ಡಿಸೆಂಬರ್‌ನಲ್ಲಿ ೯ ಕೋಟಿ ರೂ. ವೆಚ್ಚದಲ್ಲಿ ವಿಶ್ವ ಕನ್ನಡ ಸಮ್ಮೇಳನವನ್ನು ಮೈಸೂರಿನಲ್ಲಿ ನಡೆಸಲು ಸರ್ಕಾರ ಸಕಲ ಸಿದ್ಧತೆ ಮಾಡಿತ್ತು. ಖ್ಯಾತ ಲೇಖಕರ ಸುಮಾರು ೧೧೭ ಕೃತಿಗಳನ್ನು ಸರ್ಕಾರವೇ ಮುದ್ರಿಸಿ ಅತ್ಯಂತ ಸುಲಭ ಬೆಲೆಗೆ ನೀಡಲು ನಿರ್ಧರಿಸಿತು. ಆದರೆ ಚುನಾವಣೆ ಪ್ರಯುಕ್ತ ಈ ಸಮ್ಮೇಳನವನ್ನು ಮುಂದೂಡಬೇಕಾಗಿ ಬಂದಿತು. ಇವನ್ನು ಮುಂದೆ ಜನತಾ ಪಕ್ಷದ ಸರ್ಕಾರ ೧೯೮೫ರ ಡಿಸೆಂಬರ್ ೧೫ರಿಂದ ೧೭ ರವರೆಗೆ ನಡೆಸಿತು. ಹಿಂದಿನ ಸರ್ಕಾರ ಪ್ರಕಟಿಸಿದ್ದ ೧೧೭ ಕೃತಿಗಳ ಜೊತೆಗೆ ಮತ್ತೆ ೫೦ ಕೃತಿಗಳನ್ನು ಪ್ರಕಟಿಸಿತು.

ದೇವದಾಸಿ ಕುಟುಂಬದ ಹೆಣ್ಣು ಮಕ್ಕಳನ್ನು ಮದುವೆಯಾಗುವವರಿಗೆ ಸರ್ಕಾರ ೫ ಸಾವಿರ ರೂಪಾಯಿಗಳ ನೆರವನ್ನು ದಿನಾಂಕ ೨೪.೧೧.೮೨ರಂದು ಪ್ರಕಟಿಸಿತು. ಅದೇ ರೀತಿ ಎಲ್ಲಾ ಮಾಜಿ ಪಟೇಲರುಗಳಿಗೂ ಸರ್ಕಾರ ಮಾಸಾಶನ ಮಂಜೂರು ಮಾಡುವುದಾಗಿಯೂ ಮುಖ್ಯಮಂತ್ರಿಗಳು ೨೫.೧೧.೮೨ರಂದು ಪ್ರಕಟಿಸಿದರು. ಕೃಷಿ ವರಮಾನ ತೆರಿಗೆ ಮಿತಿ ಏರಿಕೆಯಿಂದಾಗಿ ಪ್ರತಿವರ್ಷ ಸರ್ಕಾರಕ್ಕೆ ಒಂದೂವರೆ ಕೋಟಿ ರೂ. ಆದಾಯ ತಪ್ಪಿತು. ಕೃಷಿ ವರಮಾನ ತೆರಿಗೆ ನೀಡುವವರ ಸಂಖ್ಯೆ ೧೦೮೦೦ದಿಂದ ಕೇವಲ ೧೦ಸಾವಿರಕ್ಕೆ ಇಳಿಯಿತು. ಸ್ಟೈಪೆಂಡಿಯರಿ ಪದವೀಧರರನ್ನು ಹಂತ ಹಂತವಾಗಿ ಖಾಯಂ ಮಾಡಲೂ ಸರ್ಕಾರ ನಿರ್ಧರಿಸಿ ಈ ಬಗ್ಗೆ ಸಮಿತಿಯನ್ನೂ ರಚಿಸಿತು. ಈ ರೀತಿ ಅನೇಕ ಅಭಿವೃದ್ಧಿಪರ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಕಾಂಗ್ರೆ ಸರ್ಕಾರ ತೆಗೆದುಕೊಂಡರೂ ಎಲ್ಲಾ ಬಣ್ಣವನ್ನು ಮಸಿ ನುಂಗಿತು ಎಂಬಂತೆ ಆಯಿತು.

## ಅಭ್ಯರ್ಥಿಗಳ ಆಯ್ಕೆ - ಭಿನ್ನಮತೀಯ ಚಟುವಟಿಕೆ

೧೯೮೩ರ ಮಾರ್ಚ್ ತಿಂಗಳಲ್ಲಿ ಕರ್ನಾಟಕ ವಿಧಾನಸಭಾ ಚುನಾವಣೆಗಳು ನಡೆಯಬೇಕಾಗಿದ್ದಿತು. ಆದರೆ ಪ್ರಧಾನಮಂತ್ರಿ ಇಂದಿರಾ ಗಾಂಧಿಯವರು ಪ್ರಾದೇಶಿಕ ಪಕ್ಷಗಳು ಪ್ರವರ್ಧಮಾನಕ್ಕೆ ಬರುವ ಮುನ್ನ, ವಿರೋಧ ಪಕ್ಷಗಳು ಒಗ್ಗೂಡುವ ಮುನ್ನ, ಎರಡು ತಿಂಗಳ ಮೊದಲೇ ಅಂದರೆ ಜನವರಿಯಲ್ಲಿಯೇ ಚುನಾವಣೆಗಳನ್ನು ನಡೆಸುವ ಬಗ್ಗೆ ಉದ್ದೇಶಿಸಿದ್ದರು. ಬಂಗಾರಪ್ಪನವರು ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ಕೊಟ್ಟು ಹೋದ ನಂತರ ಸಂಸತ್ ಸದಸ್ಯ ಕೆ. ಮಲ್ಲಣ್ಣರವರನ್ನು ತಾತ್ಕಾಲಿಕವಾಗಿ ಕೆ.ಪಿ.ಸಿ.ಸಿ.(ಐ) ಅಧ್ಯಕ್ಷರನ್ನಾಗಿ ನೇಮಕ ಮಾಡಲಾಯಿತು. ಅಕ್ಟೋಬರ್ ೭, ೧೯೮೨ ರಂದೇ ಗುಂಡೂರಾಯರು ಪ್ರಧಾನಿಯವರನ್ನು ಭೇಟಿ ಮಾಡಿ ಪ್ರದೇಶ ಕಾಂಗ್ರೆಸ್ ಸಮಿತಿ ಪುನರ್‌ರಚನೆ ಬಗ್ಗೆ ಚರ್ಚಿಸಿದ್ದರು. ವೀರಪ್ಪ ಮೊಯಿಲಿ, ಎಚ್. ಸಿ. ಶ್ರೀಕಂಠಯ್ಯ, ಡಿ. ಕೆ. ನಾಯ್ಕರ್, ಎಫ್. ಎಚ್. ಮೊಹಿಸೀನ್, ಮೋನಿಕಾ ದಾಸ್, ಮಲ್ಲಣ್ಣ, ವೀರೇಂದ್ರ ಪಾಟೀಲ್, ಶಂಕರಾನಂದ್, ಜಾಫರ್‌ಷರೀಫ್ ಇವರುಗಳೂ ಚರ್ಚೆಯಲ್ಲಿ ಹಾಜರಿದ್ದರು. ಅದೇ ದಿನ ಎಐಸಿಸಿ(ಯುವ ಕಾಂಗ್ರೆಸ್) ಅಧ್ಯಕ್ಷ ಕೆ. ಜೆ. ಜಾರ್ಜ್ ನೇತೃತ್ವದಲ್ಲಿ ೨೦೦ ಯುವ ಕಾಂಗ್ರೆ ಕಾರ್ಯಕರ್ತರು ಪ್ರದೇಶ ಕಾಂಗ್ರೆಸ್ ಸಮಿತಿ ಪುನರ್‌ರಚನೆಗೆ ಪ್ರದರ್ಶನ ನಡೆಸಿದರು. ಗುಂಡೂರಾಯರು ಎಸ್. ಬಿ. ನಾಗರಾಳ್ ಅವರನ್ನು ಅಧ್ಯಕ್ಷರನ್ನಾಗಿ ಮಾಡಬೇಕೆಂದಿದ್ದರು. ಕೇಂದ್ರ ವರಿಷ್ಠರು ಹರಿಜನ ಅಥವಾ ಅಲ್ಪಸಂಖ್ಯಾತ ವ್ಯಕ್ತಿಯೊಬ್ಬನನ್ನು ಅಧ್ಯಕ್ಷನನ್ನಾಗಿ ಮಾಡಲು ಇಚ್ಛಿಸಿದ್ದರು. ಆ ದಿನ ಯಾವುದೇ ತೀರ್ಮಾನಕ್ಕೆ ಬರಲಿಲ್ಲ. ಮತ್ತೆ ೮-೧೦-೮೨ ರಂದು ಪಾರ್ಲಿಮೆಂಟರಿ ಬೋರ್ಡ್ ಸದಸ್ಯ ಸಂಸದ ಕೆ. ಲಕ್ಕಪ್ಪನವರ ನೇತೃತ್ವದಲ್ಲಿ ೧೨ ಜನ ಕಾಂಗ್ರೆ ಸಂಸದರು ಪ್ರದೇಶ ಕಾಂಗ್ರೆಸ್ ಸಮಿತಿ ಪುನರ್‌ರಚನೆಗೆ ಒತ್ತಾಯಿಸಿ ವರಿಷ್ಠರಿಗೆ ಮನವಿ ಸಲ್ಲಿಸಿದರು. ಟಿ. ಎನ್. ನರಸಿಂಹಮೂರ್ತಿಗಳು ಕೂಡಾ ಪ್ರಧಾನಮಂತ್ರಿಯವರನ್ನು ಭೇಟಿಯಾಗಿ ಚರ್ಚಿಸಿದರು. ಷಹಾ ಆಯೋಗದ ಮುಂದೆ ಸಾಕ್ಷ್ಯ ನೀಡಿದವರೂ ಕೂಡಾ ಈಗಿನ ಪ್ರದೇಶ ಕಾಂಗ್ರೆ ಸಮಿತಿಯಲ್ಲಿದ್ದಾರೆ ಎಂಬುದು ಸಂಸದರ ಆಕ್ಷೇಪವಾಗಿತ್ತು.

ಆದರೆ ದಿನಾಂಕ ೯.೧೦.೮೨ರಂದು ದೆಹಲಿಯಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿ ಸದ್ಯದಲ್ಲಿ ಪಕ್ಷದ ಚುನಾವಣೆಗಳನ್ನು ನಡೆಸದಿರಲು ನಿರ್ಧರಿಸಿತು. ಮಲ್ಲಣ್ಣ ವಿವಾದಾಸ್ಪದ ವ್ಯಕ್ತಿಯಲ್ಲವಾದ್ದರಿಂದ ಅವರನ್ನು ಮುಂದುವರಿಸಲಾಗುವುದೆಂಬ ಸುದ್ದಿ ಕೇಳಿಬಂತು. ಸಿ.ಡಬ್ಲ್ಯು.ಸಿ. ಸಭೆಗೆ ಗುಂಡೂರಾವ್, ವೀರಪ್ಪ ಮೊಯಿಲಿ, ಶ್ರೀಕಂಠಯ್ಯ ಮುಂತಾದವರು ಹೋದಾಗ ಜೊತೆಯಲ್ಲಿಯೇ ಆಗ ಸಭಾಧ್ಯಕ್ಷರಾಗಿದ್ದ ರಂಗನಾಥ್‌ರವರೂ ಹೋದರು ಎಂಬ ವಿಷಯ ತೀವ್ರ ಜಿಜ್ಞಾಸೆಗೆ ಎಡೆ ಮಾಡಿಕೊಟ್ಟಿತು. ಲೋಕಸಭಾ ಚುನಾವಣೆ ನಂತರ ಪಕ್ಷ ಸೇರಿದ್ದ ಬಸವಲಿಂಗಪ್ಪನವರನ್ನು ಕಾರ್ಯಕಾರಿ ಸಮಿತಿ ಸಭೆಗೆ ಆಹ್ವಾನಿತರನ್ನಾಗಿ ನೇಮಿಸಿದ್ದರ ಬಗ್ಗೆ ಲಕ್ಕಪ್ಪ ತೀವ್ರ ಆಕ್ಷೇಪ ವ್ಯಕ್ತಪಡಿಸಿದರು. ಜನವರಿಯಲ್ಲಿ ಎಐಸಿಸಿ ಅಧಿವೇಶನ ನಡೆಸಲು ಉದ್ದೇಶಿಸಲಾಗಿದೆ ಎಂದೂ ಆಗ ಪಕ್ಷದ ಚುನಾವಣೆಗಳನ್ನು ನಡೆಸಲಾಗುವುದೆಂದೂ ಕೂಡಾ ತಿಳಿದುಬಂದಿತು. ದಿನಾಂಕ ೯ ಮತ್ತು ೧೦ ಎರಡೂ ದಿನಗಳು ಕಾರ್ಯಕಾರಿ ಸಮಿತಿ ಸಭೆಯಲ್ಲಿ ಕರ್ನಾಟಕದ ವಿಷಯವನ್ನು ದೀರ್ಘವಾಗಿ ಚರ್ಚಿಸಲಾಯಿತು. ಕರ್ನಾಟಕದ ಮುಖಂಡರುಗಳ ಜೊತೆಗೆ ಪಿ. ವಿ. ನರಸಿಂಹರಾವ್, ಸಿ. ಎಂ. ಸ್ಟೀಫನ್, ಪ್ರಣಬ್ ಮುಖರ್ಜಿ, ವಿಜಯ ಭಾಸ್ಕರ ರೆಡ್ಡಿ, ರಾಜೀವ್‌ಗಾಂಧಿ ಚರ್ಚಿಸಿದರು.

ಕೆ.ಪಿ.ಸಿ.ಸಿ. ಪುನರ್‌ರಚನೆಗೆ ಕೆ. ಲಕ್ಕಪ್ಪ ಒತ್ತಾಯಿಸುತ್ತಲೇ ಇದ್ದರು. ಅವರದ್ದೇ ಜಿಲ್ಲೆಗೆ ಸೇರಿದ ಕೆ. ಮಲ್ಲಣ್ಣನವರನ್ನು ಅಧ್ಯಕ್ಷಗಿರಿಯಿಂದ ಬದಲಾಯಿಸಬೇಕೆಂಬುದು ಅವರ ಉದ್ದೇಶವಾಗಿತ್ತು. ಕೆ.ಪಿ.ಸಿ.ಸಿ. ಪುನರ್‌ರಚನೆ ಖಂಡಿತ ಎಂದು ಅವರು ಮತ್ತೆ ೧೩.೧೦.೮೨ ರಂದು ಒಂದು ಹೇಳಿಕೆ ನೀಡಿದರು. ಹದಿಮೂರು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರುಗಳು ಪಕ್ಷಾಂತರಿಗಳಿಗೆ ಟಿಕೆಟ್ ನೀಡಬಾರದೆಂದು ಹೇಳಿದ್ದಾರೆ. ಆದರೆ ಪಕ್ಷದಲ್ಲಿ ನಿಷ್ಠಾವಂತರು, ಪಕ್ಷಾಂತರಿಗಳು, ಮೊದಲು ಬಂದವರು, ಆಮೇಲೆ ಬಂದವರು ಎಂಬುದಿಲ್ಲ ಎಂದು ಕೆ. ಪಿ. ಸಿ.ಸಿ.(ಐ) ಅಧ್ಯಕ್ಷ ಮಲ್ಲಣ್ಣ ದಿನಾಂಕ ೧೨ ಸವೆಂಬರ್ ೮೨ ರಂದು ಹೇಳಿದರು. ಮಂತ್ರಿಗಳ ಪಕ್ಷ ವಿರೋಧಿ ಚಟುವಟಿಕೆಗಳ ಬಗ್ಗೆ ದೂರು ಬಂದಿದೆ. ಆ ಬಗ್ಗೆ ಪರಿಶೀಲಿಸಲಾಗುವುದು ಎಂದು ಹೇಳಿದರು. ಈ ಬಾರಿ ರಾಜ್ಯ ಮಟ್ಟದಲ್ಲಿ ಚುನಾವಣಾ ಸಮಿತಿ ರಚನೆ ಇಲ್ಲವೆಂದು ಜಿಲ್ಲಾ ಸಮಿತಿಗಳು ಕಳುಹಿಸಿದ ಅಭ್ಯರ್ಥಿಗಳ ಪಟ್ಟಿಯನ್ನು ಎ.ಐ.ಸಿ.ಸಿ.ಗೆ ಕಳುಹಿಸಲಾಗುವುದೆಂದೂ ಹೈಕಮಾಂಡ್ ಅಭ್ಯರ್ಥಿಗಳ ಆಯ್ಕೆ ಮಾಡುತ್ತದೆಂದೂ ಮಲ್ಲಣ್ಣ ೨೮-೧೧-೮೨ ರಂದು ಪ್ರಕಟಿಸಿದರು. ಡಿ.ಸಿ.ಸಿ.ಗಳು ೯ ಡಿಸೆಂಬರ್ ವೇಳೆಗೆ ಅಭ್ಯರ್ಥಿಗಳ ಪಟ್ಟಿಯನ್ನು ಕಳುಹಿಸಿಕೊಡಬೇಕೆಂದು ಅವರು ತಿಳಿಸಿದರು.

ಕೆ.ಪಿ.ಸಿ.ಸಿ. ಕಾರ್ಯಾಲಯಕ್ಕೆ ಸುಮಾರು ೭ ಸಾವಿರ ಅರ್ಜಿಗಳು ಟಿಕೆಟ್ ಕೋರಿ ಬಂದವು. ಕಾಂಗ್ರೆ ಟಿಕೆಟ್‌ಗೆ ಏನೋ ಭಾರೀ ಬೇಡಿಕೆ ಇತ್ತು. ಆದರೆ ಬಂಡಾಯದ ಸಮಸ್ಯೆ ಪಕ್ಷವನ್ನು ಆವರಿಸಿತ್ತು. ನಿಷ್ಠಾವಂತರು, ಭಿನ್ನಮತೀಯರು ಎಂಬ ಸಮರ ಮುಂದುವರಿದಿತ್ತು. ಎರಡು ಗುಂಪುಗಳಲ್ಲಿ ಅಂತರ ಹೆಚ್ಚಾಯಿತು. ಅದರ ಜೊತೆಗೆ ಪ್ರತಿಯೊಬ್ಬ ನಾಯಕರದ್ದೂ ಒಂದೊಂದು ಒಳಗುಂಪಾಗಿತ್ತು. ಚುನಾವಣಾ ಸಮಿತಿ ರಚನೆ ಆದಲ್ಲಿ ಅದರಲ್ಲಿ ತಮ್ಮ ವಿರೋಧಿಗಳು ತುಂಬಿಕೊಳ್ಳಬಹುದೆಂಬ ಭೀತಿ ಮುಖ್ಯಮಂತ್ರಿಗಳಿಗೆ ಇರುವುದರಿಂದ

ಅವರು ಚುನಾವಣಾ ಸಮಿತಿ ರಚನೆಗೆ ಆಸ್ಪದ ಕೊಡುತ್ತಿಲ್ಲ ಎಂಬ ದೂರುಗಳು ಕೇಳಿಬಂದವು. ಚುನಾವಣಾ ಸಮಿತಿಯ ರಚನೆ ಬಗ್ಗೆ ವರಿಷ್ಠ ಮಂಡಲಿ ಎರಡು ಮೂರು ದಿನ ವಿಚಾರ ಮಾಡಿ ಕೊನೆಗೆ ಅದನ್ನು ಕೈಬಿಟ್ಟಿತು. ಚುನಾವಣಾ ಸಮಿತಿಗಳ ರಚನೆ ಆಗಲಿಲ್ಲ. ಆಗ ಕಾಂಗ್ರೆಸ್ ಪಕ್ಷದಲ್ಲಿ ಅನೇಕ ಗುಂಪುಗಳಿದ್ದವು. ಇಂದಿರಾ ಗಾಂಧಿಯವರ ಜೊತೆಯೇ ಉಳಿದವರು ನಿಷ್ಠಾವಂತರು. ಇವರು ಲೋಕಸಭಾ ಚುನಾವಣೆಗಳಲ್ಲಿ ಇಂದಿರಾ ಗಾಂಧಿಯವರ ಜೊತೆಗೇ ಇದ್ದರು. ೧೯೮೦ ಜನವರಿ ೬ ರಂದು ಲೋಕಸಭಾ ಚುನಾವಣೆ ಪ್ರಕಟಣೆ ಆದಕೂಡಲೇ ಪಕ್ಷಾಂತರ ಮಾಡಿದವರು, ಇವರು ಮೊದಲು ಬಂದವರು. ಚುನಾವಣಾ ಫಲಿತಾಂಶ ಘೋಷಣೆಯಾಗಿ ಅರಸು ರಾಜೀನಾಮೆ ನಂತರ ಶ್ರೀಕಂಠಯ್ಯ ನೇತೃತ್ವದಲ್ಲಿ ಪಕ್ಷ ಸೇರಿ ಸರ್ಕಾರ ರಚನೆಗೆ ಕಾರಣರಾದವರದ್ದು ಒಂದು ವರ್ಗ. ಇವೆಲ್ಲಾ ಆದ ನಂತರ ಪಕ್ಷಕ್ಕೆ ಬಂದವರದ್ದು ಪಕ್ಷಾಂತರಿಗಳ ಒಂದು ವರ್ಗ. ಇವರಲ್ಲಿ ಅರಸು ಕಾಂಗ್ರೆಸ್‌ನಿಂದ ಬಂದವರು, ಜನತಾ ಪಕ್ಷದಿಂದ ಬಂದವರು ಎಂಬ ಗುಂಪುಗಳು. ಈ ರೀತಿ ಕಾಂಗ್ರೆ ಗುಂಪುಗಾರಿಕೆಯಿಂದ ತುಂಬಿತ್ತು. ಕಾಂಗ್ರೆ ಗುಂಪುಗಾರಿಕೆ. ಗುಜರಾತ್, ಮಹಾರಾಷ್ಟ್ರ, ಆಂಧ್ರಗಳಲ್ಲೂ ಬೃಹದಾಕಾರವಾಗಿ ಬೆಳೆದಿತ್ತು. ಪ್ರಧಾನಿ ಇಂದಿರಾ ಗಾಂಧಿ ಪದೇ ಪದೇ ಪಕ್ಷದ ಏಕತೆಗೆ ಕರೆ ನೀಡುತ್ತಿದ್ದರು. ಎಚ್ಚರಿಕೆ ನೀಡುತ್ತಿದ್ದರು.

ಕರ್ನಾಟಕದ ಕಾಂಗ್ರೆಸ್ ವ್ಯವಹಾರಗಳಿಗೆ, ಅಭ್ಯರ್ಥಿಗಳ ಆಯ್ಕೆಗೆ ಎಸ್. ಡಿ. ಶರ್ಮಾ, ಕರುಣಾಕಾರನ್ ವೀಕ್ಷಕರಾಗಿ ನೇಮಕಗೊಂಡರು. ಡಿಸೆಂಬರ್ ೪ ರ ಹೊತ್ತಿಗೆ ಇವರು ರಾಜ್ಯ ಸಂಸದರು, ಡಿ.ಸಿ.ಸಿ. ಅಧ್ಯಕ್ಷರು, ಶಾಸಕರುಗಳೊಡನೆ ಸಮಾಲೋಚನೆಗಳನ್ನು ಮುಗಿಸಿ ೫ ನೇ ತಾರೀಖಿನ ಹೊತ್ತಿಗೆ ಒಂದು ಪಟ್ಟಿಯನ್ನು ಹೈಕಮಾಂಡ್‌ಗೆ ಸಲ್ಲಿಸಲಾಗುವುದೆಂದು ತಿಳಿದು ಬಂತು. ಡಿಸೆಂಬರ್ ೨ ರಂದು ಎಲ್ಲಾ ಬಣಗಳ ನಾಯಕರನ್ನು ಕಾಂಗ್ರೆ ವರಿಷ್ಠರು ಸಮಾಲೋಚನೆಗಾಗಿ ದೆಹಲಿಗೆ ಬರುವಂತೆ ಕರೆ ನೀಡಿದರು. ಮುಖ್ಯಮಂತ್ರಿ ಗುಂಡೂರಾವ್ ಮತ್ತು ಕಾಂಗ್ರೆ ಅಧ್ಯಕ್ಷ ಮಲ್ಲಣ್ಣ ಅವರು ಒಂದು ಪಟ್ಟಿಯನ್ನು ಸಿದ್ಧಪಡಿಸಿದರು. ಹೆಚ್. ಸಿ. ಶ್ರೀಕಂಠಯ್ಯನವರು ಒಂದು ಪಟ್ಟಿಯನ್ನು ಸಿದ್ಧಪಡಿಸಿದ್ದರು. ಲೋಕಸಭಾ ಸದಸ್ಯರು ತಮ್ಮ ಕ್ಷೇತ್ರಗಳಲ್ಲಿ ಬರುವ ವಿಧಾನಸಭಾ ಕ್ಷೇತ್ರಗಳ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಿದ್ದರು. ನಿಷ್ಠಾವಂತರು ಮತ್ತು ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರುಗಳ ಪರವಾಗಿ ಕೆ. ಎನ್. ನಾಗೇಗೌಡರು ಒಂದು ಪಟ್ಟಿಯನ್ನು ಸಿದ್ಧಪಡಿಸಿದ್ದಾರೆ ಎಂದು ತಿಳಿದುಬಂದಿತು.

ಈ ಬಗ್ಗೆ ಮನವಿಗಳನ್ನು ಸ್ವೀಕರಿಸಿ ಪರಿಶೀಲಿಸಲು ವರಿಷ್ಠರು, ಪಿ. ವಿ. ನರಸಿಂಹರಾವ್, ಎ.ಪಿ. ಶರ್ಮಾ, ಪ್ರಣಬ್ ಮುಖರ್ಜಿ, ಆರ್. ವೆಂಕಟರಾಮನ್ ಇವರ ಒಂದು ಸಮಿತಿಯನ್ನು ೫-೧೨-೮೨ ರಂದು ನೇಮಿಸಿದರು. ದೆಹಲಿಯ ವರಿಷ್ಠರ ಮೇಲೆ ಎಷ್ಟು ಒತ್ತಡ ಇತ್ತೆಂದರೆ ಟಿಕೆಟ್‌ಗಾಗಿ ದೆಹಲಿಯಾತ್ರೆ ಮಾಡುವವರಿಗೆ ಟಿಕೆಟ್ ಇಲ್ಲ ಎಂಬ ಆದೇಶವನ್ನೂ ಹೊರಡಿಸಲಾಯಿತು. ಮೇಲ್ಕಂಡ ಸಮಿತಿಯವರು ಎಲ್ಲರ ಜೊತೆ ಸಮಾಲೋಚನೆ ನಡೆಸಿದರು. ಚುನಾವಣಾ ತಂತ್ರ ಕುರಿತು ವರಿಷ್ಠ ಮಂಡಲಿಯು ೭ ಮತ್ತು ೮ ಡಿಸೆಂಬರ್ ೮೨ ರಂದು ರಾಜ್ಯ ಮುಖಂಡರೊಡನೆ ಚರ್ಚಿಸಿತು. ೯-೧೨-೮೨ ರಂದು ಕಾಂಗ್ರೆಸ್ (ಐ) ಪಕ್ಷದ ೨೨೧ ಅಭ್ಯರ್ಥಿಗಳ ಪಟ್ಟಿ ಬಿಡುಗಡೆ ಮಾಡಲಾಯಿತು. ಎಲ್ಲಾ ಸಚಿವರಿಗೂ ಟಿಕೆಟ್ ನೀಡಲಾಗಿತ್ತು. ಹಾಲಿ ೧೮೩ ಮಂದಿ ಶಾಸಕರ ಪೈಕಿ ೯೯ ಮಂದಿಗೆ ಟಿಕೆಟ್ ನೀಡಲಾಗಿತ್ತು. ಶ್ರೀಕಂಠಯ್ಯ ಗುಂಪಿನ ಬಹುತೇಕ ಮಂದಿಗೆ ಟಿಕೆಟ್ ನೀಡಲಾಗಿತ್ತು. ೫೯ ಪಕ್ಷಾಂತರಿಗಳಿಗೆ ಟಿಕೆಟ್ ನೀಡಲಾಯಿತೆಂದು ತಿಳಿದುಬಂದಿತು. ಈ ಬಗ್ಗೆ ರಾಜ್ಯದ ೭ ಸಂಸದರು ಪ್ರತಿಭಟಿಸಿ ಪ್ರಧಾನಮಂತ್ರಿಗಳಿಗೆ ಮನವಿ ಅರ್ಪಿಸಿದರು. ಈ ಪಟ್ಟಿಯಲ್ಲಿ ೪೩ ಲಿಂಗಾಯಿತ, ೪೧ ಒಕ್ಕಲಿಗ, ೧೭ ಬ್ರಾಹ್ಮಣ, ೧೭ ಮುಸ್ಲಿಂ, ಹಿಂದುಳಿದ ವರ್ಗ ಹಾಗೂ ಜಾತಿಗೆ ೪೦, ಅತೀ ಹಿಂದುಳಿದ ಅಲ್ಪಸಂಖ್ಯಾತ ಸಣ್ಣಪುಟ್ಟ ಜಾತಿಗಳಿಗೆ ೩೫, ಉಳಿದಂತೆ ಪರಿಶಿಷ್ಟ ಜಾತಿ ಮತ್ತು ವರ್ಗದವರಿಗೆ ಮೀಸಲಾದ ಸ್ಥಾನಗಳು- ಇವರಿಗೆ ಟಿಕೆಟ್ ನೀಡಲಾಗಿದೆಂದು ತಿಳಿದುಬಂದಿತು. ಒಂದು ಸ್ಥಾನವನ್ನು ಆರ್. ಪಿ. ಐ. ಗೆ ನೀಡಲಾಗಿತ್ತು.

ಪೊಲೀಸ್ ಮಾಹಿತಿ ಆಧರಿಸಿ ಅನೇಕರಿಗೆ ಟಿಕೆಟ್ ನೀಡಲಾಗಿದೆ. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಸಭೆ ನಡೆದಾಗ ಗೂಢಚರ್ಯೆ ವಿಭಾಗದ ಡಿ. ಆರ್. ಕಾರ್ತಿಕೇಯನ್‌ರವರು ಗುಂಡೂರಾವ್ ಪಕ್ಕದಲ್ಲೇ ಕುಳಿತಿದ್ದರು ಎಂಬ ಆರೋಪಗಳು ಬಂದವು. ಚುನಾವಣೆಯಲ್ಲಿ ಇವರ ಹಸ್ತಕ್ಷೇಪ ಜಾಸ್ತಿ ಆಗಿದೆ ಎಂಬ ದೂರು ಚುನಾವಣಾ ಆಯೋಗಕ್ಕೆ ಹೋಯಿತು. ಚುನಾವಣಾ ಆಯೋಗ ೨೬.೧೨.೮೨ ರಂದು ಚುನಾವಣೆ ಮುಗಿಯುವವರೆಗೆ ಕಾರ್ತಿಕೇಯನ್ ಅವರನ್ನು ಸರ್ಕಾರಿ ಸೇವೆಯಿಂದ ದೂರ ಇಡಬೇಕೆಂದು ಆದೇಶ ನೀಡಿತು. ಇದು ಕಾಂಗ್ರೆಸ್ ಪಕ್ಷಕ್ಕೆ ತೀವ್ರವಾದ ಇರಿಸುಮುರಿಸನ್ನು ಉಂಟುಮಾಡಿದ ವಿಚಾರವಾಯಿತು. ಪಟ್ಟಿಯ ಪುನರ್‌ವಿಮರ್ಶೆ ಇಲ್ಲವೆಂದೂ, ಯಾವುದೇ ರೀತಿಯಲ್ಲೂ ದುಡುಕಿ ಕ್ರಮ ತೆಗೆದುಕೊಳ್ಳಬಾರದೆಂದೂ ಕರ್ನಾಟಕದ ಕಾಂಗ್ರೆ ಮುಖಂಡರಿಗೆ ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಸತ್ಯನಾರಾಯಣರಾವ್ ಕರೆನೀಡಿದರು. ನೂರಕ್ಕೂ ಹೆಚ್ಚು ಕಾಂಗ್ರೆ ಬಂಡಾಯ ಅಭ್ಯರ್ಥಿಗಳು ಚುನಾವಣಾ ಕಣದಲ್ಲಿ ಉಳಿದಿದ್ದಾರೆಂಬ ವರದಿ ಬಂತು. ಚುನಾವಣಾ ಕಣದಿಂದ ನಿವೃತ್ತರಾಗುವಂತೆ ಕಾಂಗ್ರೆ ವರಿಷ್ಠರು ಬಂಡಾಯ ಅಭ್ಯರ್ಥಿಗಳಿಗೆ ಕರೆ

ನೀಡಿದರು. ೧೭ ಕ್ಷೇತ್ರಗಳಲ್ಲಿ ಕಾಂಗ್ರೆಗೆ ನೇರ ಸ್ಪರ್ಧೆ ಕಂಡುಬಂದರೂ, ಪ್ರಮುಖರಲ್ಲದ ಅಭ್ಯರ್ಥಿಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ೧೨೦ ಕ್ಷೇತ್ರಗಳಲ್ಲಿ ಕಾಂಗ್ರೆಗೆ ಪ್ರಮುಖ ವಿರೋಧ ಪಕ್ಷಗಳಾದ ಕ್ರಾಂತಿರಂಗ, ಜನತಾದಿಂದ ನೇರ ಸ್ಪರ್ಧೆ ಕಂಡುಬಂದಿತ್ತು. ೨೨.೧೨.೮೨ ರಂದು ಕಾಂಗ್ರೆ ಅನೇಕ ಬಂಡಾಯ ಸ್ಪರ್ಧಿಗಳನ್ನು ಉಚ್ಚಾಟಿಸಿತು. ಟಿಕೆಟ್ ಸಿಗದೇ ಬಂಡಾಯ ಅಭ್ಯರ್ಥಿಗಳಾಗಿ ಸ್ಪರ್ಧಿಸಿದ್ದ ೧೨ ಹಾಲಿ ಶಾಸಕರನ್ನು ಪಕ್ಷದಿಂದ ಉಚ್ಚಾಟಿಸಲಾಯಿತು. ಅವರೆಂದರೆ ಅಂಬಣ್ಣನಾಯಕ್-ಮಾನ್ವಿ, ಕುಮಾರನಾಯಕ್-ಶೋರಾಪುರ, ರಾಮಕೃಷ್ಣಯ್ಯ, ತುರುವೇಕೆರೆ - ವಿ. ಎಲ್. ಶಿವಪ್ಪ - ತಿಪಟೂರು, ಮುನಿಸ್ವಾಮಪ್ಪ-ಶಿಡ್ಲಘಟ್ಟ, ರಮೇಶಕುಮಾರ್ - ಶ್ರೀನಿವಾಸಪುರ, ನಾರಾಯಣದಾಸ್-ಹರಪನಹಳ್ಳಿ, ರಾಜೇಗೌಡ--ಹನೂರು, ಗಂಗಾಧರಪ್ಪ-ಅರಸೀಕೆರೆ, ಎಂ. ಎಂ. ಮಾಳಿಗಿ-ಬ್ಯಾಡಗಿ, ಗೂಳಪ್ಪ ಉಪನಾಳ್-ಶಿರಹಟ್ಟಿ, ಜಿ. ರಾಜಶೇಖರ್-ಭದ್ರಾವತಿ - ಉಳಿದಂತೆ ಎಲ್ಲಾ ಬಂಡಾಯ ಅಭ್ಯರ್ಥಿಗಳನ್ನು ಎ.ಐ.ಸಿ.ಸಿ. ಸಂಚಾಲಕ ಸತ್ಪಾಲ್ ಮಿಟ್ಟಲ್ ಕಾಂಗ್ರೆ ಪಕ್ಷದಿಂದ ಉಚ್ಚಾಟಿಸಿದರು. ಆಂಧ್ರ ಪ್ರದೇಶದಲ್ಲೂ ಬಂಡಾಯದ ಕಾಟ ಜಾಸ್ತಿಯಾಗಿ ಅಲ್ಲಿಯೂ ೮೫ ಜನರನ್ನು ಪಕ್ಷದಿಂದ ಉಚ್ಚಾಟಿಸಲಾಯಿತು. ಶಾಸಕ ಬಿ.ಎನ್.ಕೆ. ಪಾಪಯ್ಯ ಹಾಗೂ ಇತರ ೨೭ ಬಂಡಾಯಗಾರರನ್ನು ೨೬.೧೨.೮೨ ರಂದು ಪಕ್ಷದಿಂದ ಉಚ್ಚಾಟಿಸಲಾಯಿತು. ಹೀಗೆ ಕಾಂಗ್ರೆ ಪಕ್ಷ ೮೩ ರ ವಿಧಾನಸಭಾ ಚುನಾವಣೆಗಳಲ್ಲಿ ಭಿನ್ನಮತೀಯರು, ಬಂಡಾಯಗಾರರ ಗೂಡಾಗಿ ಪರಿಣಮಿಸಿತ್ತು.

## ೯. ಚುನಾವಣಾ ಪ್ರಚಾರ

ವಾಸ್ತವವಾಗಿ ಅಕ್ಟೋಬರ್ ತಿಂಗಳಿನಿಂದಲೇ ಕಾಂಗ್ರೆಸ್ (ಐ) ತನ್ನ ಚುನಾವಣಾ ಪ್ರಚಾರ ಕಾರ್ಯವನ್ನು ಆರಂಭಿಸಿತೆನ್ನಬಹುದು. ಮುಖ್ಯಮಂತ್ರಿ ಗುಂಡೂರಾಯರು ೨೦ ಅಂಶಗಳ ಆರ್ಥಿಕ ಕಾರ್ಯಕ್ರಮಗಳ ಪರಿಶೀಲನಾ ಸಭೆಗಳನ್ನು ನಡೆಸುತ್ತಾ ಹೊಸ ಯೋಜನೆಗಳಿಗೆ ಶಂಕುಸ್ಥಾಪನೆಯನ್ನು ನೆರವೇರಿಸುತ್ತಾ ರಾಜ್ಯದ ಪ್ರವಾಸ ಕೈಗೊಂಡರು. ಅಕ್ಟೋಬರ್ ೧೨ ರಿಂದ ೧೬ರ ವರೆಗೆ ಅವರು ವಿಜಾಪುರ, ರಾಯಚೂರು, ಬಳ್ಳಾರಿ ಜಿಲ್ಲೆಗಳಲ್ಲಿ ಅನೇಕ ಸಭೆ ಸಮಾರಂಭಗಳಲ್ಲಿ ಪಾಲ್ಗೊಂಡರು. ೧೯ ರಂದು ಕೋಲಾರ ಜಿಲ್ಲೆಯಲ್ಲಿ ಪ್ರವಾಸ ಮಾಡಿದರು. ಅದೇ ರೀತಿ ೨೪, ೨೫ ರಂದು ಬೆಳಗಾವಿ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡು ಸಭೆ ಸಮಾರಂಭಗಳಲ್ಲಿ ಪಾಲ್ಗೊಂಡರು. ೨.೧೧.೮೨ರಂದು ಅವರು ಹುಬ್ಬಳ್ಳಿಯಲ್ಲಿ ರಾಜ್ಯ ಮೆಡಿಕಲ್ ವಿದ್ಯಾರ್ಥಿಗಳ ಸಂಘವನ್ನು ಉದ್ಘಾಟಿಸಿ ಹಳ್ಳಿಗಳಿಗೆ ಹೋಗಿ ಸೇವೆ ಮಾಡುವಂತೆ ಕರೆ ನೀಡಿದರು. ಕಾಂಗ್ರೆಸ್ ಪಕ್ಷ ೨೦ ಅಂಶಗಳ ಕಾರ್ಯಕ್ರಮ ಹಾಕಿಕೊಂಡು ಜನಸೇವೆ ಮಾಡುತ್ತಿದೆ. ಆದರೆ ವಿರೋಧ ಪಕ್ಷಗಳಿಗೆ ಕಾಂಗ್ರೆಸ್ ಸರ್ಕಾರವನ್ನು ಉರುಳಿಸುವ ಒಂದೇ ಒಂದು ಅಂಶದ ಕಾರ್ಯಕ್ರಮವಿದೆ ಎಂದು ಮುಖ್ಯಮಂತ್ರಿ ಗುಂಡೂರಾವ್ ಹೇಳಿದರು. ೮-೧೧-೮೨ರಂದು ರಾಜೀವ್ ಗಾಂಧಿಯವರಿಂದ ಬೀದರ್ ಜಿಲ್ಲೆ ಭಾಲ್ಕಿಯಲ್ಲಿ ಅಧಿಕೃತವಾಗಿ ಕಾಂಗ್ರೆಸ್ (ಐ) ಚುನಾವಣಾ ಪ್ರಚಾರ ಆರಂಭವಾಯಿತು. ರಾಜೀವ್ ಗಾಂಧಿಯವರು ಭಾಲ್ಕಿಯಲ್ಲಿ ಭಾರೀ ರೈತ ಮೇಳವನ್ನು ಉದ್ಘಾಟಿಸಿ ಬಹಿರಂಗ ಸಭೆಯನ್ನುದ್ದೇಶಿಸಿ ಮಾತನಾಡಿದರು. ರೈತರ ಉನ್ನತಿ ಎಂದರೆ ದೇಶದ ಉನ್ನತಿ, ರೈತರ ಅಭಿವೃದ್ಧಿಗಾಗಿ ಕಾಂಗ್ರೆಸ್ ಪಕ್ಷ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ ಎಂದರು. ಪ್ರಾದೇಶಿಕ ಪಕ್ಷಗಳಿಂದ ದೇಶದ ಏಕತೆ ಸಮಗ್ರತೆಗೆ ಭಂಗ ಬರುತ್ತದೆ ಎಂದರು. ಭೀಮಣ್ಣ ಖಂಡ್ರೆಯವರು ಇದರ ಉಸ್ತುವಾರಿಯನ್ನು ಹೊತ್ತಿದ್ದರು. ಗುಂಡೂರಾವ್ ಸಭೆಯನ್ನುದ್ದೇಶಿಸಿ ಮಾತನಾಡಿದರು. ರಾಜೀವ್ ಗಾಂಧಿಯವರು ೮ ರಿಂದ ೧೦ ರವರೆಗೆ ಬೀದರ್, ಗುಲ್ಬರ್ಗಾ, ಬಳ್ಳಾರಿ ಜಿಲ್ಲೆಗಳಲ್ಲಿ ಪ್ರವಾಸ ಮಾಡಿದರು. ೧೬.೧೨.೮೨ರಂದು ಬೆಂಗಳೂರು ನಗರದಲ್ಲಿ ಚುನಾವಣಾ ಪ್ರಚಾರ ಸಭೆಗಳಲ್ಲಿ ಮಾತನಾಡಿದರು. ಸಭೆಗಳಲ್ಲಿ ಗೊಂದಲಗಳು ಉಂಟಾದವು. ಪ್ರಾದೇಶಿಕ ಪಕ್ಷಗಳ ಸಂಕುಚಿತ ಭಾವನೆಯನ್ನು ಖಂಡಿಸಿ ಮಾತನಾಡಿದರು.

ಇಂದಿರಾ ಗಾಂಧಿಯವರು ೧೮ ಡಿಸೆಂಬರ್ ೮೨ ರಂದು ಮಂಗಳೂರು, ಉಡುಪಿ, ಕೊಲ್ಲೂರು, ಬೆಳ್ತಂಗಡಿ, ಧರ್ಮಸ್ಥಳ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಅರಸೀಕೆರೆ, ಚನ್ನರಾಯಪಟ್ಟಣ, ಕೃಷ್ಣರಾಜಪೇಟೆ, ಮೈಸೂರುಗಳಲ್ಲಿಯೂ, ೧೯ ರಂದು ಹುಣಸೂರು, ಮಡಿಕೇರಿ, ಸೋಮವಾರಪೇಟೆ, ಕೊಟ್ಟೂರು, ಚನ್ನಗಿರಿ, ದಾವಣಗೆರೆ, ಹೊಸಪೇಟೆ, ಪಾವಗಡ, ತುಮಕೂರು, ದೊಡ್ಡಬಳ್ಳಾಪುರ, ಬೆಂಗಳೂರುಗಳಲ್ಲಿಯೂ, ೨೦ ರಂದು ಚಿತ್ರದುರ್ಗ, ಹುಬ್ಬಳ್ಳಿ, ಬಾಗಲಕೋಟೆ, ಶಹಾಪುರ, ಗುಲ್ಬರ್ಗಾ, ಹುಮ್ನಾಬಾದ್, ಬೀದರ್‌ಗಳಲ್ಲಿಯೂ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಪ್ರಮುಖವಾಗಿ ಪ್ರಾದೇಶಿಕ ಪಕ್ಷಗಳನ್ನು ಅವರು ಖಂಡಿಸಿದರು. ಖರ್ಚಿಗಾಗಿ ಪಕ್ಷವನ್ನೇ ಹರಾಜು ಹಾಕುವವರಿಗೆ ಮತ ನೀಡಬೇಡಿ ಎಂದು ಅವರು ಜನತಾ ಪಕ್ಷವನ್ನುದ್ದೇಶಿಸಿ ಹೇಳಿದರು. ಇಂದಿರಾ ಗಾಂಧಿಯವರ ಆಕರ್ಷಣೆ ಕಡಿಮೆ ಆಗಿರಲಿಲ್ಲ. ಸಹಸ್ರಾರು ಜನ ಬಹಿರಂಗ ಸಭೆಗಳಲ್ಲಿ

ಸೇರುತ್ತಿದ್ದರು. ಗುಂಡೂರಾವ್ ಅವರು ಈ ಸಭೆಗಳಲ್ಲಿ ಇಂದಿರಾ ಗಾಂಧಿಯವರ ಜೊತೆ ಪಾಲ್ಗೊಳ್ಳುತ್ತಿದ್ದರು. ಕೆ. ಕರುಣಾಕರನ್, ಜಾಫರ್ ಷರೀಫ್ ಅವರುಗಳೂ ಇಂದಿರಾ ಗಾಂಧಿಯವರ ಜೊತೆ ಅನೇಕ ಸಭೆಗಳಲ್ಲಿ ಪಾಲ್ಗೊಂಡರು.

ಮತ್ತೆ ಇಂದಿರಾ ಗಾಂಧಿಯವರು ಎರಡನೇ ಸುತ್ತಿನಲ್ಲಿ ೨೮ ರಂದು ಬೆಂಗಳೂರು, ಚನ್ನಪಟ್ಟಣ, ಮಂಡ್ಯ, ಕೊಳ್ಳೇಗಾಲ, ನಂಜನಗೂಡು, ಪುತ್ತೂರು, ಉಳ್ಳಾಲ, ಕಾರ್ಕಳ, ಶಿರಸಿ, ಆನವಟ್ಟಿ, ಶಿಕಾರಿಪುರ, ಶೃಂಗೇರಿಗಳಲ್ಲಿಯೂ, ೨೯ ರಂದು ಕಾರವಾರ, ಹಾನಗಲ್, ರೋಣ್, ಜಮಖಂಡಿ, ಯಾದಗಿರಿ, ಶೋರಾಪುರ, ರಾಯಚೂರು, ಗಂಗಾವತಿ, ಸಿಂಧನೂರು, ಸಿರಗುಪ್ಪ ಬಳ್ಳಾರಿಗಳಲ್ಲಿಯೂ, ೩೦ ರಂದು ಬಳ್ಳಾರಿ, ಕೊಟ್ಟೂರು, ಚಳ್ಳಕೆರೆ, ಕುಣಿಗಲ್, ಚಿಕ್ಕಬಳ್ಳಾಪುರ, ಕೋಲಾರ, ಕನಕಪುರ, ಮದ್ದೂರು, ಹೊಸಕೋಟೆ ಬೆಂಗಳೂರುಗಳಲ್ಲಿಯೂ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಮಾತನಾಡಿದರು. ರಾಜೀವ್ ಗಾಂಧಿಯವರು ಡಿಸೆಂಬರ್ ೩೧ರಂದು ಬೆಳಗಾವಿ, ಕಾರವಾರ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿಯೂ, ಜನವರಿ ೧, ೮೩ ರಂದು ದಕ್ಷಿಣ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿಯೂ, ೨ ಜನವರಿ ೮೩ ರಂದು ಹಾಸನ, ಕೋಲಾರ, ಮೈಸೂರು, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿಯೂ, ೩ರಂದು ರಾಯಚೂರು, ಬೀದರ್, ಗುಲ್ಬರ್ಗಾ ಜಿಲ್ಲೆಗಳಲ್ಲಿಯೂ ಚುನಾವಣಾ ಪ್ರಚಾರ ಭಾಷಣಗಳನ್ನು ಮಾಡಿದರು.

ಹೆಲಿಕಾಪ್ಟರ್ ಹಾಗೂ ರಸ್ತೆಯ ಮೂಲಕ ಇವರುಗಳು ಪ್ರವಾಸ ಮಾಡಿದರು. ಇಂದಿರಾ ಗಾಂಧಿ ಹಾಗೂ ರಾಜೀವ್ ಗಾಂಧಿಯವರ ಪ್ರವಾಸ ಎಷ್ಟು ವ್ಯಾಪಕವಾಗಿತ್ತೆಂದರೆ ಕಾಂಗ್ರೆಸ್ (ಐ) ಪಕ್ಷದಲ್ಲಿ ಪ್ರಚಾರ ಮಾಡಲು ಇವರಿಬ್ಬರೇ ಇದ್ದಾರೆ ಎಂದು ವಿರೋಧ ಪಕ್ಷಗಳು ಗೇಲಿ ಮಾಡಿದವು.

## ೧೦. ಚುನಾವಣಾ ಪ್ರಣಾಳಿಕೆ

ಡಿಸೆಂಬರ್ ಮೊದಲನೇ ವಾರದಲ್ಲಿ ಕಾಂಗ್ರೆಸ್ (ಐ) ಚುನಾವಣಾ ಪ್ರಣಾಳಿಕೆ ಬಿಡುಗಡೆ ಆಯಿತು. ಮುಖ್ಯವಾಗಿ ವಿರೋಧ ಪಕ್ಷಗಳನ್ನು ಅದರಲ್ಲಿಯೂ ಜನತಾ ಪಕ್ಷವನ್ನು, ಅದರ ಆಡಳಿತ ವೈಫಲ್ಯವನ್ನು ಪ್ರಣಾಳಿಕೆಯಲ್ಲಿ ಟೀಕಿಸಲಾಗಿತ್ತು. ಹಾಗೂ ಕಾಂಗ್ರೆಸ್ ಸರ್ಕಾರದ ಇತ್ತೀಚಿನ ಸಾಧನೆಗಳನ್ನೂ ಹಾಗೂ ಸದ್ಯದಲ್ಲಿಯೇ ಕೈಗೊಳ್ಳಲಿರುವ ಕಾರ್ಯಕ್ರಮಗಳನ್ನೂ ವಿವರಿಸಲಾಗಿತ್ತು. ಪ್ರಣಾಳಿಕೆಯ ಮುಖ್ಯಾಂಶಗಳು ಈ ಕೆಳಗಿನಂತಿವೆ. ಅನುಭವ ಇಲ್ಲದ ಸಮ್ಮಿಶ್ರ ಸರ್ಕಾರ ೧೯೭೭ರಲ್ಲಿ ನಡೆಸಿದ ಪ್ರಯೋಗವನ್ನು ಪುನಃ ಕೈಗೊಳ್ಳುವುದಕ್ಕೆ ಸಾಧ್ಯವಿಲ್ಲ. ಭಾರತದ ಪ್ರಗತಿ ಅಪಾಯದಲ್ಲಿದೆ. ಯಶಸ್ವಿಯಾಗಿ ಪರೀಕ್ಷಿಸಿ ಅನುಸರಿಸಿದ್ದ ಧೋರಣೆಗಳನ್ನು ಜನತಾ ಪಕ್ಷ ಸರ್ಕಾರದ ಆಡಳಿತ ಕಾಲದಲ್ಲಿ ಕೈಬಿಡಲಾಯಿತು. ಆರ್ಥಿಕ ವ್ಯವಸ್ಥೆ ಕುಸಿಯಿತು. ಹಣದುಬ್ಬರ ಹಿಂದೆಂದಿಗಿಂತಲೂ ಅಧಿಕವಾಯಿತು.

ಸಮಾಜಘಾತಕರ ಕೈ ಮೇಲಾಯಿತು. ಜಾತಿಮತಗಳ ನಡುವೆ ಬಹಿರಂಗ ಹೋರಾಟ ಪ್ರಾರಂಭವಾಯಿತು. ತೀವ್ರಗಾಮಿಗಳಿಗೆ ಅವಕಾಶವಾಯಿತು. ರಾಜ್ಯಸರ್ಕಾರಗಳು ಕೇಂದ್ರ ಸರ್ಕಾರದೊಡನೆ ಪೂರ್ಣ ಹೊಂದಾಣಿಕೆಯಿಂದ ಕೆಲಸಮಾಡಬೇಕು. ಎಲ್ಲರ ಅಭಿವೃದ್ಧಿಗಾಗಿ ಯೋಜನೆಗಳನ್ನು ಕಾರ್ಯಗತಗೊಳಿಸುವ ನಿರ್ಧಾರ ಅವುಗಳಿಗೆ ಇರಬೇಕು. ಅಂತಹ ಸರ್ಕಾರಗಳನ್ನು ನೀಡುವ ಪಕ್ಷ ಎಂದರೆ ಕಾಂಗ್ರೆಸ್ (ಐ) ಒಂದೇ. ಜನತೆ ಕೆಲಸ ಮಾಡುವ ಸರ್ಕಾರವನ್ನು ಆರಿಸಬೇಕು. ಕರ್ನಾಟಕದಲ್ಲಿ ಭೂ ಸುಧಾರಣೆ ಅನ್ವಯ ೪.೬೩ಲಕ್ಷ ಗೇಣೀದಾರರು ಭೂ ಒಡೆತನ ಹೊಂದಿದ್ದು ನೇಗಿಲ ಭಾಗ್ಯ ಯೋಜನೆ ಅನ್ವಯ ಇಂತಹ ರೈತರಿಗೆ ಅಗತ್ಯ ಸಾಲ ಸೌಲಭ್ಯ, ವ್ಯವಸಾಯ ಉಪಕರಣಗಳನ್ನು ದೊರಕಿಸಿಕೊಡಲಾಗುತ್ತಿದೆ.

ಹರಿಜನ ಗಿರಿಜನರ ಅಭಿವೃದ್ಧಿಗಾಗಿ ವಿಶೇಷ ಘಟಕ ಯೋಜನೆ, ಬುಡಕಟ್ಟು ಉಪಯೋಜನೆ ಮೊದಲಾದ ಕಾರ್ಯಕ್ರಮಗಳ ಮೂಲಕ ಸಹಾಯ ಕಲ್ಪಿಸಲಾಗುವುದು. ಇದರಿಂದ ೧.೬೧ ಲಕ್ಷ ಹರಿಜನ ಗಿರಿಜನರ ದಾರಿದ್ರ್ಯ ನಿವಾರಣೆಯಾಗಿ ಅವರು ಬಡತನ ರೇಖೆಯನ್ನು ದಾಟಲು ಸಾಧ್ಯವಾಗುವುದು. ೩೦ ಲಕ್ಷ ಜನರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಲಾಗುವುದು. ಗ್ರಾಮೀಣ ಪ್ರದೇಶದವರಿಗೆ ಹಾಗೂ ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗ ಭರವಸೆ ಕಾರ್ಯಕ್ರಮ ಜಾರಿಗೆ. ೮೨-೮೩ರಲ್ಲಿ ೨೦೦೦ ಹಳ್ಳಿಗಳ ೨೦,೦೦೦ ಕೃಷಿ ಪಂಪ್‌ಸೆಟ್‌ಗಳಿಗೆ ವಿದ್ಯುಚ್ಛಕ್ತಿ ಒದಗಿಸುವುದು. ೭೦ ತಾಲ್ಲೂಕುಗಳು ಕೇಂದ್ರ ಸರ್ಕಾರದ ಯೋಜನೆ ಅನ್ವಯ ಅಭಾವ ಪೀಡಿತ ಪ್ರದೇಶ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಸೇರಿದ್ದು ಈ ತಾಲ್ಲೂಕುಗಳ ಸುಧಾರಣೆಗಾಗಿ ನೆರವು ನೀಡಲಾಗುವುದು. ೧೯೮೨-೮೩ರಲ್ಲಿ ೬,೫೦೦ ಹಳ್ಳಿಗಳಲ್ಲಿ ಕುಡಿಯುವ ನೀರಿನ ಪೂರೈಕೆ ಯೋಜನೆ ಪ್ರಾರಂಭ ಮಾಡಲಾಗುವುದು.

ಜನತಾ ಗೃಹ ನಿರ್ಮಾಣ ಯೋಜನೆ ಅಡಿಯಲ್ಲಿ ಸುಮಾರು ೨ ಲಕ್ಷ ಮನೆಗಳನ್ನು ಕಟ್ಟಲಾಗಿದ್ದು, ಗ್ರಾಮೀಣ ಬಡ ಜನರಿಗಾಗಿ ಪ್ರತಿ ವರ್ಷ ಒಂದು ಲಕ್ಷ ಮನೆಗಳನ್ನು ಕಟ್ಟಲಾಗುವುದು. ಕರ್ನಾಟಕದಲ್ಲಿ ಆಹಾರೋತ್ಪಾದನೆ ೮೦-೮೧ರಲ್ಲಿ ೫೭ ಲಕ್ಷ ಟನ್ ಇದ್ದದ್ದು ೮೧-೮೨ರಲ್ಲಿ ೬೭ ಲಕ್ಷ ಟನ್‌ಗೆ ಏರಿಕೆಯಾಗಿದೆ.

## ರಾಷ್ಟ್ರಮಟ್ಟದ ಕಾರ್ಯಕ್ರಮಗಳು

ವಿದ್ಯುತ್ ಉತ್ಪಾದನೆ ೮೧-೮೨ರಲ್ಲಿ ೧೨.೩೦ ಕೋಟಿ ಕಿಲೋ ವ್ಯಾಟ್ಸ್‌ಗೆ ಹೆಚ್ಚಿದೆ. ಕಲ್ಲಿದ್ದಲಿನಲ್ಲಿ ದಾಖಲೆ ಉತ್ಪಾದನೆ ಸಾಧಿಸಲಾಗಿದೆ. ರಸಗೊಬ್ಬರ ಉತ್ಪಾದನೆ ೮೨ರಲ್ಲಿ ಅದರ ಹಿಂದಿನ ವರ್ಷಕ್ಕಿಂತ ಶೇಕಡಾ ೪೫ ರಷ್ಟು ಹೆಚ್ಚಾಗಿದೆ. ಸಿಮೆಂಟ್ ಉತ್ಪಾದನೆ ಶೇಕಡಾ ೧೨.೭ ರಷ್ಟು, ಕಚ್ಚಾ ಪೆಟ್ರೋಲ್ ಉತ್ಪಾದನೆ ಶೇಕಡಾ ೫೪ ರಷ್ಟು ಅಧಿಕಗೊಂಡಿದೆ. ರಸಗೊಬ್ಬರದ ಉತ್ಪಾದನೆ ೬೧,೦೦,೦೦೦ ಟನ್ ಮುಟ್ಟಿದ್ದು ಇದೊಂದು ದಾಖಲೆಯಾಗಿದೆ. ೮೧-೮೨ರಲ್ಲಿ ೨,೯೬,೦೦೦ ಹಳ್ಳಿಗಳನ್ನು ವಿದ್ಯುದ್ಧೀಕರಿಸಲಾಗಿದೆ. ರೈತರಿಗೆ ಸಹಾಯ ಮಾಡುವ ಉದ್ದೇಶದಿಂದ ಗೋಧಿ, ಭತ್ತ, ಜೋಳ, ಕಬ್ಬು ಇವುಗಳ ಸಂಗ್ರಹಣಾ ಬೆಲೆಯಲ್ಲಿ ಹೆಚ್ಚಳ. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಬಲಪಡಿಸಲಾಗಿದೆ. ಹೊಸ ನ್ಯಾಯಬೆಲೆ ಅಂಗಡಿಗಳನ್ನು ತೆರೆಯಲಾಗಿದೆ. ಆಹಾರೋತ್ಪಾದನೆ ೬೭.೩೭ಲಕ್ಷ ಟನ್ ಮುಟ್ಟಿದ್ದು, ೮೨-೮೩ರಲ್ಲಿ ೮೫ ಲಕ್ಷ ಟನ್ ಹೆಚ್ಚಿಸಲು ಕಾರ್ಯಕ್ರಮ ರೂಪಿಸಲಾಗಿದೆ.

೮೨-೮೩ನೇ ಸಾಲಿನಲ್ಲಿ ವಿದ್ಯುತ್ ಉತ್ಪಾದನೆಯನ್ನು ೧೮೪೭ ಮೆಗಾವ್ಯಾಟ್ಸ್‌ನಷ್ಟು ಹೆಚ್ಚಿಸಲಾಗುವುದು. ೮೨-೮೩ರಲ್ಲಿ ೧೪೧ ಕೋಟಿ ರೂಪಾಯಿ ವೆಚ್ಚದಿಂದ ನೀರಾವರಿ ಕ್ಷೇತ್ರವನ್ನು ೧ ಕೋಟಿ ೧೩ ಲಕ್ಷ ಹೆಕ್ಟೇರ್‌ನಷ್ಟು ಹೆಚ್ಚಿಸಲಾಗುವುದು. ೮೨-೮೩ರಲ್ಲಿ ಎಣ್ಣೆಕಾಳುಗಳ ಉತ್ಪಾದನೆ ೧೫ ಲಕ್ಷ ಟನ್‌ಗೆ ಹೆಚ್ಚಿಸಲಾಗುವುದು. ೮೨-೮೩ರಲ್ಲಿ ೨೪. ೫೪ಲಕ್ಷ ಜನರಿಗೆ ರೇಷ್ಮೆ ಉದ್ಯಮದಲ್ಲಿ ಉದ್ಯೋಗಾವಕಾಶಗಳನ್ನು ಕಲ್ಪಿಸಲಾಗುವುದು. ವೃದ್ಧಾಪ್ಯ ವೇತನ ಯೋಜನೆಗೆ ಪ್ರೋತ್ಸಾಹ, ಸಾವಿರಾರು ಸಾಹಿತಿಗಳು ಕಲಾವಿದರಿಗೆ ಪ್ರತಿವರ್ಷ ಮಾಸಾಶನ ನೀಡುವ ಯೋಜನೆ ಜಾರಿಗೆ ತರಲಾಗುವುದು.

## ೧೧. ಫಲಿತಾಂಶ

೨೨೧ ಸ್ಥಾನಗಳಿಗೆ ಸ್ಪರ್ಧಿಸಿದ್ದ ಕಾಂಗ್ರೆಸ್ (ಐ) ಪಕ್ಷ ೮೨ ಸ್ಥಾನಗಳನ್ನು ಪಡೆಯಿತು. ಅದು ೫೨,೨೧,೪೮೯ ಮತಗಳನ್ನು ಪಡೆಯಿತು. ಅದು ಪಡೆದ ಮತಗಳ ಶೇಕಡಾ ಪ್ರಮಾಣ ೪೦.೪೨. ಆದರೆ ಇತರ ಪಕ್ಷಗಳು ಪಡೆದ ಮತಗಳ ಪ್ರಮಾಣ ನೋಡಿದರೆ ಕಾಂಗ್ರೆಸ್ ಸಾಧನೆ ಗಣನೀಯವಾಗಿತ್ತೆಂದು ಹೇಳಬಹುದು. ಆದರೆ ಅದು ಪಡೆದ ಸ್ಥಾನಗಳ ಸಂಖ್ಯೆ ಕಡಿಮೆ ಆಯಿತು. ಜನತಾ ಪಕ್ಷ ೪೨,೭೫,೩೫೫ ಮತಗಳನ್ನು ಪಡೆದರೂ ಸ್ಥಾನಗಳ ಸಂಖ್ಯೆ ೯೫ ಆಗಿತ್ತು. ಜನತಾ ಶೇ. ೩೩.೦೯ ಭಾರತೀಯ ಜನತಾ ಪಕ್ಷ ಶೇ. ೭.೯೩ (೧೮ ಸ್ಥಾನ) ಬಿಟ್ಟರೆ ಪಕ್ಷೇತರರು ಶೇಕಡಾ ೧೫.೩೦ ಮತಗಳನ್ನು (೨೨ ಸ್ಥಾನ) ಪಡೆದಿದ್ದರು. ಜನತಾ, ಬಿಜೆಪಿ ಹಾಗೂ ಪಕ್ಷೇತರರು ಒಟ್ಟಾಗಿ ಸೇರಿದರೂ ಅವರು ಗಳಿಸಿದ ಮತಗಳ ಶೇಕಡಾ ಪ್ರಮಾಣ ೫೬.೩೨ ಆಗಿದ್ದು ಸ್ಥಾನಗಳ ಸಂಖ್ಯೆ ೧೩೫ ಆಗಿತ್ತು. ಶೇಕಡಾ ೪೦.೪೨ ಮತಗಳನ್ನು ಪಡೆದ ಕಾಂಗ್ರೆಸ್ ೮೨ ಸ್ಥಾನ ಪಡೆಯಿತು. ವಿರೋಧ ಪಕ್ಷಗಳಿಗಿಂತ ಕಾಂಗ್ರೆಸ್ ಹೆಚ್ಚಿನ ದೂರದಲ್ಲಿ ಇರಲಿಲ್ಲ. ವಿರೋಧ ಪಕ್ಷಗಳಿಗಿಂತ ಹೆಚ್ಚಾಗಿ ಆಂತರಿಕ ಭಿನ್ನಮತವೇ ಅದಕ್ಕೆ ಪ್ರಮುಖ ಹೊಡೆತ ನೀಡಿತ್ತು ಎನ್ನಬಹುದು.

### ಕಾಂಗ್ರೆಸ್ (ಐ) ಪಕ್ಷ ಜಿಲ್ಲಾವಾರು ಪಡೆದ ಸ್ಥಾನಗಳ ವಿವರ ಕೆಳಗಿನಂತಿದೆ

ಬೀದರ್-೪, ಗುಲಬರ್ಗಾ-೫, ರಾಯಚೂರು-೮, ಬಳ್ಳಾರಿ-೫, ಕೋಲಾರ-೫, ಮೈಸೂರು- ೫, ಧಾರವಾಡ-೮, ಬೆಳಗಾವಿ-೮, ಬಿಜಾಪುರ-೮, ಮಂಡ್ಯ-೪ ಇಲ್ಲೆಲ್ಲಾ ಕಾಂಗ್ರೆಸ್ (ಐ) ಚೆನ್ನಾಗಿಯೇ ಸ್ಥಾನಗಳನ್ನು ಗಳಿಸಿತು. ಚಿತ್ರದುರ್ಗ, ತುಮಕೂರು ಬೆಂಗಳೂರು ಗ್ರಾಮೀಣ, ಹಾಸನ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅದು ತಲಾ ೩ ಸ್ಥಾನಗಳನ್ನು ಗಳಿಸಿತು. ಉಳಿದಂತೆ ಕೊಡಗು-೨, ಚಿಕ್ಕಮಗಳೂರು-೨, ಉತ್ತರ ಕನ್ನಡ-೨, ಬಿಜಾಪುರ-೨ ಸ್ಥಾನಗಳನ್ನು ಪಡೆದರೆ ಶಿವಮೊಗ್ಗ ಜಿಲ್ಲೆಯಲ್ಲಿ ಒಂದೇ ಒಂದು ಸ್ಥಾನ ಗಳಿಸಿತು. ಬೆಂಗಳೂರು ನಗರದ ೧೧ ಸ್ಥಾನಗಳಲ್ಲಿ ಅದು ಒಂದನ್ನೂ ಪಡೆಯಲಿಲ್ಲ.

## ೧೯೮೪ - ಲೋಕಸಭಾ ಚುನಾವಣೆ

### ರಾಷ್ಟ್ರೀಯ ಪರಿಸ್ಥಿತಿ-ಚುನಾವಣಾ ಸಿದ್ಧತೆ

೧೯೮೦ರ ಜನವರಿ ತಿಂಗಳಲ್ಲಿ ನಡೆದ ಲೋಕಸಭಾ ಚುನಾವಣೆಗಳಲ್ಲಿ ಇಂದಿರಾ ಗಾಂಧಿಯವರು ದೊಡ್ಡ ಪ್ರಮಾಣದಲ್ಲಿಯೇ ರಾಜಕೀಯ ಮರುಪ್ರವೇಶ ಮಾಡಿದ್ದರು. ಆಂತರಿಕ ಬಿಕ್ಕಟ್ಟು, ಒಳಜಗಳಗಳಿಂದ ಜನತಾ ಸರ್ಕಾರ ಕುಸಿದು ಬಿದ್ದಿತ್ತು. ಕಾಂಗ್ರೆಸ್ ೩೫೭ ಸ್ಥಾನಗಳನ್ನು ಗಳಿಸಿತ್ತು. ಕರ್ನಾಟಕದಲ್ಲಿ ೨೮ಕ್ಕೆ ೨೭ ಸ್ಥಾನ ಗಳಿಸಿತ್ತು. ಆದರೆ ೧೯೮೩ ರಲ್ಲಿ ಕರ್ನಾಟಕದಲ್ಲಿ ನಡೆದ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ (ಐ) ಸೋತು ಅಧಿಕಾರವನ್ನು ಕಳೆದುಕೊಂಡಿತ್ತು. ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಕಾಂಗ್ರೆಯೇತರ

ಸರ್ಕಾರ ಅಧಿಕಾರಕ್ಕೆ ಬಂದಿತ್ತು. ಆದರೆ ಕಾಂಗ್ರೆ ಸಾಧನೆ ಕಳಪೆಯಾಗಿರಲಿಲ್ಲ. ಅದು ೮೨ ಸ್ಥಾನಗಳನ್ನು ಗಳಿಸಿ ಮುಂದೆ ನಡೆದ ಉಪ ಚುನಾವಣೆ ಹಾಗೂ ಪಕ್ಷಾಂತರದಿಂದ ತನ್ನ ಬಲವನ್ನು ೮೮ಕ್ಕೆ ಏರಿಸಿಕೊಂಡಿತ್ತು. ಇಂದಿರಾ ಅಧಿಕಾರಕ್ಕೆ ಬಂದ ನಂತರ ಅಧ್ಯಕ್ಷೀಯ ಮಾದರಿ ಸರ್ಕಾರದ ಬಗ್ಗೆ ಪ್ರಸ್ತಾಪಗಳು ಶುರುವಾದವು. ಕಾಂಗ್ರೆ ಪ್ರಧಾನ ಕಾರ್ಯದರ್ಶಿ ಈ ಪ್ರಸ್ತಾಪವನ್ನು ಮೊದಲ ಬಾರಿಗೆ ಪ್ರಾರಂಭಿಸಿದರು. ಪಿ.ಸಿ. ಸಾಠೆ ಇದಕ್ಕೆ ದನಿಗೂಡಿಸಿದರು. ಕಾಂಗ್ರೆಸ್-ಐ ಪ್ರಧಾನ ಕಾರ್ಯದರ್ಶಿ ಕೆ. ಕೆ. ತಿವಾರಿ ಮತ್ತು ರಾಜೀವ್ ಗಾಂಧಿ ಇದನ್ನು ವಿರೋಧಿಸಿದರು. ಎರಡನೆಯದಾಗಿ ಪಂಜಾಬ್ ಭಯೋತ್ಪಾದಕರ ಸಮಸ್ಯೆ ಬೃಹದಾಕಾರವಾಗಿ ದೇಶದ ಮುಂದೆ ಬೆಳೆದು ನಿಂತಿತ್ತು. ಅಕಾಲಿ ದಳದ ಮುಖಂಡರನ್ನು ಕೇಂದ್ರ ಸರ್ಕಾರ ಅನೇಕ ಬಾರಿ ಮಾತುಕತೆಗೆ ಆಹ್ವಾನಿಸಿದರೂ ಅವರು ಮಾತುಕತೆಗೆ ಬರದೇ ಮೊಂಡುತನ ಪ್ರದರ್ಶಿಸುತ್ತಿದ್ದರು. ಸ್ವರ್ಣ ಮಂದಿರದ ಒಳಗೆ ಆಶ್ರಯ ಪಡೆದಿದ್ದ ಭಯೋತ್ಪಾದಕರನ್ನು ಬಿಟ್ಟುಕೊಡಲು ಶಿರೋಮಣಿ ಗುರುದ್ವಾರ ಪ್ರಬಂಧಕ ಸಮಿತಿ ಹಾಗೂ ಅಕಾಲಿದಳ ಮುಖಂಡರು ಒಪ್ಪಲಿಲ್ಲ. ಭಯೋತ್ಪಾದಕರ ಮುಖಂಡ ಜರ್ನೈಲ್ ಸಿಂಗ್ ಬಿಂದ್ರನ್‌ವಾಲೆ ನಿಮಿತ್ತವಾಗಿ ಅಕಾಲಿದಳವೇ ಒಡೆಯಿತು. ಹೆಚ್ಚು ಜನ ಬಿಂದ್ರನ್‌ವಾಲೆ ಪರ ವಹಿಸಿದರು. ಅನೇಕ ಮಾತುಕತೆಗಳು ಅಕಾಲಿದಳದ ಮೊಂಡುತನದಿಂದ ಮುರಿದುಬಿದ್ದವು. ೧೯೮೩ ಏಪ್ರಿಲ್ ೧ ರಿಂದ ಅಕಾಲಿದಳದ ನಾಯಕರ ಬಂಧನ ಆರಂಭವಾಯಿತು. ೧೨೦೦ ಕ್ಕೂ ಹೆಚ್ಚು ಅಕಾಲಿ ಮುಖಂಡರನ್ನು ಬಂಧಿಸಲಾಯಿತು. ಜರ್ನೈಲ್ ಸಿಂಗ್ ಬಿಂದ್ರನ್‌ವಾಲೆ ವಿರುದ್ಧ ಕ್ರಮಕ್ಕೆ ಲೋಕಸಭೆಯಲ್ಲಿ ೧೯೮೩ ಡಿಸೆಂಬರ್ ೨ ರಂದು ಸರ್ವಪಕ್ಷಗಳು ಒತ್ತಾಯಿಸಿದವು. ಪ್ರಕಾಶ್‌ಸಿಂಗ್ ಬಾದಲ್‌ರವರು ೮೪ ಫೆಬ್ರವರಿ ೨೭ರಂದು ಸಂವಿಧಾನದ ೨೫ನೇ ವಿಧಿಯನ್ನು ಬಹಿರಂಗವಾಗಿ ಸುಟ್ಟು ಹಾಕಿ ಬಂಧನಕ್ಕೊಳಗಾದರು. ಭಯೋತ್ಪಾದಕರು ಸ್ವರ್ಣ ಮಂದಿರದೊಳಗಿನಿಂದಲೇ ಗುಂಡು ಹಾರಿಸಲು ಪ್ರಾರಂಭಿಸಿದರು. ಬೇರೆ ಗತ್ಯಂತರವಿಲ್ಲದೆ ೫ ಜೂನ್ ೮೪ ರಂದು ಸ್ವರ್ಣ ಮಂದಿರದೊಳಕ್ಕೆ ಸೇನೆಯನ್ನು ನುಗ್ಗಿಸುವ ದಿಟ್ಟ ನಿರ್ಧಾರವನ್ನು ಇಂದಿರಾ ಗಾಂಧಿ ಕೈಗೊಂಡರು. ಇದೇ ಬ್ಲೂ ಸ್ಟಾರ್ ಕಾರ್ಯಾಚರಣೆ. ಭಯೋತ್ಪಾದಕರನ್ನು ದಮನ ಮಾಡಲಾಯಿತು. ೩೦ ಸೆಪ್ಟೆಂಬರ್ ೮೪ ರಂದು ಸ್ವರ್ಣ ಮಂದಿರದಿಂದ ಸೇನೆಯನ್ನು ಹಿಂತೆಗೆದುಕೊಳ್ಳಲಾಯಿತು.

ಇದೇ ಕಾರಣವಾಗಿ ೩೧ ಅಕ್ಟೋಬರ್ ೮೪ ರಂದು ಬೆಳಗ್ಗೆ ೯.೧೬ಕ್ಕೆ ಇಂದಿರಾ ಗಾಂಧಿಯವರನ್ನು ಅವರ ಅಂಗರಕ್ಷಕರು ಹತ್ಯೆ ಮಾಡಿದರು. ದಿನಾಂಕ ೩೧ ಅಕ್ಟೋಬರ್ ೮೪ ರಂದೇ ರಾಜೀವ್ ಗಾಂಧಿ ಪ್ರಧಾನ ಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ೧೩ ನವೆಂಬರ್ ೮೪ ರಂದು ಅಖಿಲಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ಅಧಿಕಾರ ಸ್ವೀಕರಿಸಿದರು. 'ಮಿಸ್ಟರ್ ಕ್ಲೀನ್' ಎಂಬ ಹೆಸರನ್ನು ಪಡೆದಿದ್ದ ಅವರು ಇಂದಿರಾ ಗಾಂಧಿ ಹತ್ಯೆಯ ಅನುಕಂಪವನ್ನು ಉಪಯೋಗಿಸಿಕೊಂಡು ಚುನಾವಣೆಗಳನ್ನು ಎದುರಿಸಲು ತೀರ್ಮಾನಮಾಡಿದರು. ಲೋಕಸಭೆಯನ್ನು ವಿಸರ್ಜಿಸಿ ಚುನಾವಣೆಗಳನ್ನು ನಡೆಸುವಂತೆ ಶಿಫಾರಸ್ಸು ಮಾಡಿ, ಉಸ್ತುವಾರಿ ಪ್ರಧಾನ ಮಂತ್ರಿಗಳಾಗಿ ಮುಂದುವರಿದರು. ಡಿಸೆಂಬರ್ ೨೪, ೧೯೮೪ ರಂದು ಲೋಕಸಭೆ ಚುನಾವಣೆಗಳನ್ನು ನಡೆಸಲು ಚುನಾವಣಾ ಆಯೋಗ ತೀರ್ಮಾನಿಸಿತು.

೧೨ ನವೆಂಬರ್ ೮೪ ರಂದು ರಾಜೀವ್ ಗಾಂಧಿ ತಮ್ಮ ಅಧ್ಯಕ್ಷತೆಯಲ್ಲಿ ಪಾರ್ಲಿಮೆಂಟರಿ ಬೋರ್ಡನ್ನು ಪುನರ್ರಚಿಸಿದರು. ಕಮಲಾಪತಿ ತ್ರಿಪಾಠಿ, ಎ.ಬಿ.ಎ. ಘನೀಖಾನ್ ಚೌಧುರಿ, ದರ್ಬಾರ್ ಸಿಂಗ್, ಕೆ. ಕರುಣಾಕರನ್, ಪಿ. ವಿ. ನರಸಿಂಹರಾವ್, ಪ್ರಣಬ್ ಮುಖರ್ಜಿ, ಮರಗತಂ ಚಂದ್ರಶೇಖರ್ ಈ ಮಂಡಲಿಯ ಸದಸ್ಯರಾಗಿ ನೇಮಿಸಲ್ಪಟ್ಟರು. ಆರು ಮಂದಿ ಚುನಾವಣಾ ಪ್ರಣಾಳಿಕೆ ಸಮಿತಿ ಸದಸ್ಯರನ್ನು ಪಿ. ವಿ. ನರಸಿಂಹರಾವ್ ಸಂಚಾಲಕತ್ವದಲ್ಲಿ ನೇಮಿಸಲಾಯಿತು. ವೈ. ಬಿ. ಚವಾಣ್, ಅರುಣ್ ಸಿಂಗ್, ಕೆ. ಸಿ. ಪಂತ್, ಪ್ರಣಬ್ ಮುಖರ್ಜಿ, ಬನ್ಸಿಲಾಲ್ ಈ ಸಮಿತಿಯಲ್ಲಿದ್ದರು. ೧೯ ರಂದು ಈ ಸಮಿತಿಗೆ ವಸಂತ್ ಸಾಠೆಯವರನ್ನೂ ನೇಮಿಸಲಾಯಿತು. ಹನ್ನೆರಡು ಜನರ ಕಾಂಗ್ರೆ ಕಾರ್ಯಕಾರಿ ಸಮಿತಿಯನ್ನು ರಾಜೀವ್ ಗಾಂಧಿ ರಚಿಸಿದರು. ಕಮಲಾಪತಿ ತ್ರಿಪಾಠಿ, ಘನಿಖಾನ್ ಚೌಧರಿ, ಕರುಣಾಕರನ್, ಹಿತೇಶ್ವರ ಸೈಕಿಯಾ, ಪಿ. ವಿ. ನರಸಿಂಹರಾವ್, ಪ್ರಣಬ್ ಮುಖರ್ಜಿ, ಮರಗತಂ ಚಂದ್ರಶೇಖರ್, ದರ್ಬಾರ್ ಸಿಂಗ್, ಬಿ. ಶಂಕರಾನಂದ್, ಜೆ. ಬಿ. ಪಟ್ನಾಯಕ್ ಮತ್ತು ಆರ್. ಗುಂಡೂರಾವ್ ಈ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು. ಜಿ.ಕೆ. ಮೂಪನಾರ್, ರಾಜೇಂದ್ರಕುಮಾರಿ ಬಾಜಪೈ, ಚಂದೂಲಾಲ್ ಚಂದ್ರಾಕರ್, ಅಬ್ದುಲ್ ಗಫೂರ್, ಎ.ಕೆ. ಆಂಟೋನಿ, ಚಾಂದ್‌ರಾಮ್, ಮತ್ತು ಅರುಣ್ ನೆಹರು ಇವರನ್ನು ಪ್ರಧಾನ ಕಾರ್ಯದರ್ಶಿಗಳನ್ನಾಗಿ ನೇಮಿಸಲಾಯಿತು. ಕಮಲಾಪತಿ ತ್ರಿಪಾಠಿ ಅಧ್ಯಕ್ಷತೆಯಲ್ಲಿ ೨೭ ಜನರಿಂದ ಕೂಡಿದ ಚುನಾವಣಾ ಪ್ರಚಾರ ಸಮಿತಿಯನ್ನು ರಾಜೀವ್ ಗಾಂಧಿ ರಚಿಸಿದರು. ಪ್ರಣಬ್ ಮುಖರ್ಜಿ ಸಂಚಾಲಕರಾಗಿದ್ದರು. ಕರ್ನಾಟಕದವರಾಗಿ ಕೊಲ್ಲೂರು ಮಲ್ಲಪ್ಪ ಈ ಸಮಿತಿಯಲ್ಲಿದ್ದರು. ಹೀಗೆ ರಾಜೀವ್ ಗಾಂಧಿ ಚುನಾವಣೆಗೆ ಸಿದ್ಧತೆಯನ್ನು ಮಾಡಿದರು.

## ರಾಜ್ಯದಲ್ಲಿ ಪಕ್ಷದ ಸಿದ್ಧತೆ

೧೯೮೩ ಜನವರಿಯಲ್ಲಿ,ರಾಜ್ಯದಲ್ಲಿ ಪ್ರಪ್ರಥಮ ಬಾರಿಗೆ ಕಾಂಗ್ರೆಸ್ಸೇತರ ಜನತಾ ಸರ್ಕಾರ ಆಡಳಿತಕ್ಕೆ ಬಂದಿತ್ತು. ಪಂಚಾಯತ್ ರಾಜ್ಯ ಕಾಯಿದೆ, ಸಮಗ್ರ ಶಿಕ್ಷಣ ಮಸೂದೆ ಮೊದಲಾದ ಪ್ರಗತಿಪರ ಕಾನೂನುಗಳು ಜಾರಿಗೆ ಬಂದವು. ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಸಚಿವ ನಜೀರ್‌ಸಾಬರು ಹಳ್ಳಿಹಳ್ಳಿಗಳಲ್ಲಿ ಬೋರ್‌ವೆಲ್‌ಗಳನ್ನು ತೆಗೆಸಿ ಗ್ರಾಮೀಣ ಕುಡಿಯುವ ನೀರಿನ ಸಮಸ್ಯೆಯನ್ನು ತಕ್ಕ ಮಟ್ಟಿಗೆ ಬಗೆಹರಿಸಿದ್ದರು. ಕಾಂಗ್ರೆಸ್ (ಐ) ಪಕ್ಷ ಸಮರ್ಥ ವಿರೋಧ ಪಕ್ಷವಾಗಿ ಕಾರ್ಯನಿರ್ವಹಿಸುತ್ತಿತ್ತು. ಎಂ. ವೀರಪ್ಪ ಮೊಯಿಲಿಯವರು ವಿರೋಧಪಕ್ಷದ ನಾಯಕರಾಗಿ ವಿಧಾನಸಭೆಯ ಒಳಗೆ ಹಾಗೂ ಹೊರಗೆ ಸಮರ್ಥವಾದ ರೀತಿಯಲ್ಲಿ ಅಂಕಿ ಅಂಶಗಳ ಸಮೇತ ಆಡಳಿತ ಪಕ್ಷವನ್ನು ಟೀಕಿಸುತ್ತಿದ್ದರು. ಕೆ. ಎಚ್. ಪಾಟೀಲರು ಕೆ.ಪಿ.ಸಿ.ಸಿ. (ಐ) ಅಧ್ಯಕ್ಷರಾಗಿದ್ದರು. ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಎ. ಕೆ. ಆಂಟೋನಿ ಅವರು ಕರ್ನಾಟಕದ ವ್ಯವಹಾರಗಳನ್ನು ನೋಡಿಕೊಳ್ಳಲು ಕೇಂದ್ರ ವರಿಷ್ಠ ಮಂಡಲಿಯಿಂದ ನೇಮಕ ಮಾಡಲ್ಪಟ್ಟಿದ್ದರು.

ಜೂನ್ ೨೫ ರಂದು ಬಂಗಾರಪ್ಪನವರು ತಮ್ಮ ಕ್ರಾಂತಿರಂಗ ಗುಂಪಿನೊಡನೆ ಜನತಾ ಪಕ್ಷದಿಂದ ಹೊರಕ್ಕೆ ಬಂದರು. ಮಾಜಿ ಮುಖ್ಯಮಂತ್ರಿ ಗುಂಡೂರಾವ್ ಆಪ್ತರಾಗಿದ್ದ ಎಫ್. ಎಂ. ಖಾನರನ್ನು ಪಕ್ಷದಿಂದ ಉಚ್ಚಾಟಿಸಲಾಗಿತ್ತು. ಸೆಪ್ಟೆಂಬರ್ ಅಂತ್ಯದಲ್ಲಿ ಕಾಂಗ್ರೆ ಕಚೇರಿ ಎದುರು ೨೦೦ ಜನ ಪ್ರದರ್ಶನ ಹಾಗೂ ನಿರಶನ ಆಚರಿಸಿದರು. ಹಾರನಹಳ್ಳಿ ರಾಮಸ್ವಾಮಿಯವರನ್ನೂ ಪಕ್ಷದಿಂದ ಸಸ್ಪೆಂಡ್ ಮಾಡಲಾಗಿತ್ತು. ಆದರೆ ಆಂಟೋನಿಯವರು ಸೆಪ್ಟೆಂಬರ್ ಅಂತ್ಯದಲ್ಲಿ ಬೆಂಗಳೂರಿಗೆ ಬಂದಾಗ ಅದನ್ನು ಹಿಂತೆಗೆಸಿದ್ದರು. ಇದರಿಂದ ಪಕ್ಷದ ಅಧ್ಯಕ್ಷ ಪಾಟೀಲರಿಗೆ ಹಾಗೂ ನಂಜೇಗೌಡರಿಗೆ ಭಾರೀ ಮುಖಭಂಗ ಆದಂತಾಗಿದೆ ಎಂದು ಭಾವಿಸಲಾಗಿತ್ತು. ೧೯೮೪ರ ಜುಲೈ ತಿಂಗಳಲ್ಲಿ ಬೆಂಗಳೂರಿನಲ್ಲಿ ಅಖಿಲಭಾರತ ಯುವಕ ಕಾಂಗ್ರೆಸ್ ಅಧಿವೇಶನವೂ, ಸೆಪ್ಟೆಂಬರ್ ೧೫ ರಂದು ಅಖಿಲಭಾರತ ಮಹಿಳಾ ಕಾಂಗ್ರೆಸ್ ಅಧಿವೇಶನವೂ ಯಶಸ್ವಿಯಾಗಿ ನಡೆದಿದ್ದವು. ಮಹಿಳಾ ಕಾಂಗ್ರೆಸ್ ಅಧಿವೇಶನದಲ್ಲಿ ಇಂದಿರಾ ಗಾಂಧಿಯವರೇ ಭಾಗವಹಿಸಿದ್ದರು.

ಆದರೆ ರಾಜ್ಯ ಕಾಂಗ್ರೆಸ್ (ಐ) ಪಕ್ಷದಲ್ಲಿ ೧೯೮೩ರಲ್ಲಿ ಆರಂಭವಾಗಿದ್ದ ಗುಂಪುಗಾರಿಕೆ ಹಾಗೆಯೇ ಮುಂದುವರಿದಿತ್ತು. ಕೆ.ಪಿ.ಸಿ.ಸಿ. (ಐ) ಅಧ್ಯಕ್ಷ ಕೆ. ಎಚ್. ಪಾಟೀಲರದ್ದೇ ಒಂದು ಗುಂಪು, ಉಪಾಧ್ಯಕ್ಷ ಶ್ರೀಕಂಠಯ್ಯನವರ ಬೆಂಬಲಿಗರದ್ದೇ ಒಂದು ಗುಂಪು, ವಿರೋಧ ಪಕ್ಷದ ನಾಯಕ ವೀರಪ್ಪ ಮೊಯಿಲಿಯವರ ಬೆಂಬಲಿಗರದ್ದೇ ಆದ ಒಂದು ಗುಂಪು, ಮಾಜಿ ಮುಖ್ಯಮಂತ್ರಿ ಗುಂಡೂರಾಯರ ಬೆಂಬಲಿಗರ ಒಂದು ಗುಂಪು ಒಳಗೊಳಗೇ ಸಕ್ರಿಯವಾಗಿದ್ದರು. ಮೇಲು ನೋಟಕ್ಕೆ ರಾಜ್ಯ ಕಾಂಗ್ರೆನಲ್ಲಿ ಯಾವುದೇ ಗುಂಪುಗಾರಿಕೆ ಇಲ್ಲ ಎಂದು ಬಿಂಬಿಸಲಾಗುತ್ತಿತ್ತು. ೧೯೮೫ರ ಜನವರಿ ಹೊತ್ತಿಗೆ ಲೋಕಸಭಾ ಚುನಾವಣೆಗಳು ನಡೆಯಬೇಕಾಗಿತ್ತು. ಅದಕ್ಕಾಗಿ ಪಕ್ಷದ ಸಿದ್ಧತೆಗಳು ಆರಂಭವಾಗಿತ್ತು. ೧೨-೧೦-೮೪ರಂದು ರಾಜ್ಯದ ಕಾಂಗ್ರೆ ನಾಯಕರುಗಳಾದ ಕೆ. ಎಚ್. ಪಾಟೀಲ್, ವೀರೇಂದ್ರ ಪಾಟೀಲ್, ಜಾಫರ್ ಷರೀಫ್, ಬಿ. ಶಂಕರಾನಂದ್, ಆರ್. ಗುಂಡೂರಾವ್, ವೀರಪ್ಪ ಮೊಯಿಲಿ, ಟಿ. ಎನ್. ನರಸಿಂಹ ಮೂರ್ತಿ, ಎಚ್. ಸಿ. ಶ್ರೀಕಂಠಯ್ಯ, ಬಿ. ಬಸವಲಿಂಗಪ್ಪ, ಹಾರನಹಳ್ಳಿ ರಾಮಸ್ವಾಮಿ ಇವರುಗಳು ದೆಹಲಿಯಲ್ಲಿ ಪಕ್ಷದ ವರಿಷ್ಠರೊಡನೆ, ಪ್ರಧಾನ ಕಾರ್ಯದರ್ಶಿ ಎ.ಕೆ. ಆಂತೋಣಿ ಅವರೊಡನೆ ರಾಜ್ಯದ ರಾಜಕೀಯ ಪರಿಸ್ಥಿತಿ ಹಾಗೂ ಚುನಾವಣೆಗಳ ವಿಚಾರದಲ್ಲಿ ಸುದೀರ್ಘವಾಗಿ ಚರ್ಚಿಸಿದರು. ರಾಜ್ಯದಲ್ಲಿ ಕಾಂಗ್ರೆಸ್‌ಗೆ ಅನುಕೂಲಕರ ವಾತಾವರಣ ಇದೆ ಎಂದು ಅಭಿಪ್ರಾಯಪಡಲಾಯಿತು.

೨೦-೧೦-೮೪ರಂದು ಬೆಂಗಳೂರಿಗೆ ಎ.ಕೆ. ಆಂತೋಣಿ ಭೇಟಿ ನೀಡಿದರು. ಅಭ್ಯರ್ಥಿಗಳ ಆಯ್ಕೆಗೆ ಸಮನ್ವಯ ಸಮಿತಿಯನ್ನು ರಚಿಸುವ ಬಗ್ಗೆ ಚರ್ಚಿಸಿದರು. ಆದರೆ ಇದಕ್ಕೆ ಬಹುಪಾಲು ಕಾಂಗ್ರೆಸ್ಸಿಗರು ವಿರೋಧ ವ್ಯಕ್ತಪಡಿಸಿದರು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಆದೇಶದಂತೆ ಪ್ರದೇಶ ಕಾಂಗ್ರೆಸ್ ಸಮಿತಿಯು ಪ್ರತಿ ಲೋಕಸಭಾ ಕ್ಷೇತ್ರದಲ್ಲಿ ಸಂಚರಿಸಿ ಅಲ್ಲಿನ ಪರಿಸ್ಥಿತಿಯನ್ನು ಅಧ್ಯಯನ ಮಾಡಿ ಅಭ್ಯರ್ಥಿಗಳನ್ನು ಸೂಚಿಸಲು ರಾಜ್ಯದ ಕಾಂಗ್ರೆಸ್-ಐ ನಾಯಕರುಗಳನ್ನು ನೇಮಿಸಿ, ಅವರಿಗೆ ಈ ಕೆಳಕಂಡಂತೆ ಲೋಕಸಭಾ ಕ್ಷೇತ್ರಗಳ ಜವಾಬ್ದಾರಿಯನ್ನು ನೀಡಲಾಯಿತು. ಅದರ ವಿವರಗಳು ಹೀಗಿವೆ: ಧರ್ಮಸಿಂಗ್ - ಗುಲಬರ್ಗಾ. ಎಚ್. ಹನುಮಂತಪ್ಪ - ಬೆಳಗಾಂ, ಚಿಕ್ಕೋಡಿ, ಕಾರವಾರ. ಕೆ. ಎಚ್. ಶ್ರೀನಿವಾಸ್ - ಚಿಕ್ಕಮಗಳೂರು, ಹಾಸನ. ಭೀಮಣ್ಣ ಖಂಡ್ರೆ - ರಾಯಚೂರು, ಕೊಪ್ಪಳ, ಬಳ್ಳಾರಿ. ತಾರಾದೇವಿ - ತುಮಕೂರು. ಬಸವರಾಜಪ್ಪ - ಶಿವಮೊಗ್ಗ. ಎಚ್. ಪುಟ್ಟದಾಸ್ - ಮಂಡ್ಯ, ಕನಕಪುರ. ವೀರಪ್ಪ ಮೊಯಿಲಿ - ಚಿತ್ರದುರ್ಗ, ದಾವಣಗೆರೆ. ಟಿ. ಎನ್. ನರಸಿಂಹಮೂರ್ತಿ - ಮೈಸೂರು, ಚಾಮರಾಜನಗರ. ಕೆ. ಎಚ್. ರಂಗನಾಥ್ - ಬೆಂಗಳೂರು ಉತ್ತರ- ದಕ್ಷಿಣ. ಎಚ್.ಸಿ. ಶ್ರೀಕಂಠಯ್ಯ - ಮಂಗಳೂರು, ಉಡುಪಿ. ಬಿ. ಎಂ. ಪಾಟೀಲ್ - ವಿಜಾಪುರ, ಬಾಗಲಕೋಟೆ, ಮಖ್ಬೂದ್ ಅಲಿಖಾನ್-ಚಿಕ್ಕಬಳ್ಳಾಪುರ, ಕೋಲಾರ. ಡಿ.ಕೆ. ನಾಯ್ಕರ್-ಧಾರವಾಡ ಉತ್ತರ ಧಾರವಾಡ ದಕ್ಷಿಣ.

ಅನೇಕ ಸಂಸದರು ಹಾಗೂ ಶಾಸಕರುಗಳು ಎ.ಕೆ. ಆಂಟೋನಿಯವರಿಗೆ ಮನವಿ ಪತ್ರ ಅರ್ಪಿಸಿ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಕಾಂಗೈ ಕಾರ್ಯಕರ್ತರ ಸಮಾಲೋಚನೆ ನಂತರ ಪಕ್ಷದ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸುವುದು ಒಳ್ಳೆಯದೆಂದು ಸಲಹೆ ನೀಡಿದರು. ತಾವೇ ಕಾಂಗೈ ನಾಯಕರು ಎಂದು ಹೇಳಿಕೊಂಡು ತಿರುಗುತ್ತಿರುವವರು ಜನಸಾಮಾನ್ಯರ ಸಂಪರ್ಕ ಕಳೆದುಕೊಂಡಿದ್ದಾರೆಂದೂ, ಹೈಕಮಾಂಡ್‌ಗೆ ತಪ್ಪು ಮಾಹಿತಿ ನೀಡಿ ದಾರಿ ತಪ್ಪಿಸುತ್ತಿದ್ದಾರೆಂದೂ ಕಾಂಗೈ ಶಾಸಕರನ್ನು ಯುವಕಾರ್ಯಕರ್ತರನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತಿಲ್ಲವೆಂದೂ ಅವರು ದೂರಿದರು. ಮೊದಲು ಕಾಂಗೈ ನಾಯಕರು ಗುಂಪು ರಾಜಕೀಯ ನಡೆಸುವುದನ್ನು ನಿಲ್ಲಿಸಬೇಕು. ತಾಲ್ಲೂಕು, ಜಿಲ್ಲಾ ಮಟ್ಟದ ಕಾಂಗೈ ಕಾರ್ಯಕರ್ತರ ಸಮ್ಮೇಳನವನ್ನು ನಡೆಸಬೇಕು. ಈಗಿನಿಂದಲೇ ಪ್ರಾರಂಭಿಸಿ. ಚುನಾವಣೆಗಳವರೆಗೂ ವ್ಯಾಪಕ ಪ್ರವಾಸ ಕೈಗೊಳ್ಳಬೇಕು, ಕೆಳಗಿನ ಮಟ್ಟದಲ್ಲಿ ಪಕ್ಷವನ್ನು ಸಂಘಟಿಸಬೇಕು. ಈ ಬಗ್ಗೆ ನಾಯಕರಿಗೆ ಎ.ಐ.ಸಿ.ಸಿ. ಸೂಕ್ತ ಸೂಚನೆ ನೀಡಬೇಕೆಂದು ಒತ್ತಾಯಿಸಿದರು. ಪಿ. ಎಸ್. ರಾಣೆ, ಎಂ. ದಿವಾಕರ್ ಬಾಬು, ಸುಭಾಷ್‌ಚಂದ್ರ ಪಾಟೀಲ್, ಜಿ. ಕೆ. ವೆಂಕಟಶಿವಾರೆಡ್ಡಿ ಮುಂತಾದವರು ಆಂಟೋನಿಯವರಿಗೆ ಈ ಮನವಿ ಅರ್ಪಿಸುವುದರಲ್ಲಿ ಮುಂದಾಳತ್ವ ವಹಿಸಿದ್ದರು. ಪ್ರದೇಶ ಕಾಂಗೈ ಅಧ್ಯಕ್ಷ ಕೆ. ಎಚ್. ಪಾಟೀಲರೂ ಆಂಟೋನಿಯವರನ್ನು ಭೇಟಿಯಾಗಿ ಮಾತುಕತೆ ನಡೆಸಿದರು. ಈ ರೀತಿಯಾಗಿ ಚುನಾವಣೆಗೆ ಸಿದ್ಧತೆಗಳು ಆರಂಭವಾದವು. ೨೧ ರಂದು ಮಲ್ಲಿಕಾರ್ಜುನ ಖರ್ಗೆ ನೇತೃತ್ವದಲ್ಲಿ ೩೦ ಮಂದಿ ಕಾಂಗೈ ಶಾಸಕರು ಪಕ್ಷದಲ್ಲಿ ಹಾಗೂ ಚುನಾವಣಾ ಕಾರ್ಯದಲ್ಲಿ ಮಾಜಿ ಮುಖ್ಯಮಂತ್ರಿ ಗುಂಡೂರಾವ್ ಅವರಿಗೆ ಪ್ರಾಧಾನ್ಯತೆ ನೀಡಲು ವರಿಷ್ಠರನ್ನು ಒತ್ತಾಯಿಸಿದರು. ಆಂಟೋನಿ ಅವರಿಗೆ ಮನವಿ ಸಲ್ಲಿಸಿದರು. ಇನ್ನೊಂದು ಕಡೆ ೧೩ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷರುಗಳು, ಪದಾಧಿಕಾರಿಗಳು, ಪಕ್ಷದಲ್ಲಿ ಅಧ್ಯಕ್ಷ ಕೆ. ಎಚ್. ಪಾಟೀಲರಿಗೇ ಪ್ರಾಧಾನ್ಯತೆ ಇರಬೇಕೆಂದೂ, ಅವರು ಚೆನ್ನಾಗಿ ಕೆಲಸ ಮಾಡುತ್ತಿದ್ದಾರೆಂದೂ ಆಂಟೋನಿ ಅವರಿಗೆ ಮನವಿ ಅರ್ಪಿಸಿದರು. ವರಿಷ್ಠರು ಭಿನ್ನಮತೀಯರಿಗೆ ಪ್ರಾಧಾನ್ಯತೆ ನೀಡಿರುವ ಬಗ್ಗೆ ತಮ್ಮ ಅಸಮಾಧಾನ ವ್ಯಕ್ತಪಡಿಸಿದರು. ಅಕ್ಟೋಬರ್ ೨೨ ರಂದು ಮಾಜಿ ಸಚಿವ ಹಾವನೂರ್‌ರವರು ಪ್ರದೇಶ ಕಾಂಗೈ ಅಧ್ಯಕ್ಷತೆಯನ್ನು ಗುಂಡೂರಾವ್ ಅವರಿಗೆ ನೀಡುವಂತೆ ಒತ್ತಾಯಿಸಿದರು. ಈ ಎಲ್ಲಾ ವಿಚಾರಗಳ ಬಗ್ಗೆ ಪ್ರಧಾನಿಯವರಿಗೆ ವರದಿ ಸಲ್ಲಿಸುವುದಾಗಿ ಆಂಟೋನಿಯವರು ಹೇಳಿದರು.

ಅಕ್ಟೋಬರ್ ೨೭ರಂದು ಶಾಸಕರುಗಳಾದ ಬಸವರಾಜ ಪಾಟೀಲ್ ಅನ್ವರಿ, ರಾಜಾ ಅಮರಪ್ಪ ನಾಯಕ, ಮುತ್ತಿನ ಪೆಂಡಿಮಠ ಕಾಂಗೈ ಪಕ್ಷಕ್ಕೆ ರಾಜೀನಾಮೆ ನೀಡಿ ಜನತಾ ಪಕ್ಷ ಸೇರಿದರು. ಕಾಂಗೈ ತೊರೆದ ಶಾಸಕರು ಶಾಸಕ ಸ್ಥಾನಕ್ಕೂ ರಾಜೀನಾಮೆ ನೀಡಬೇಕೆಂದು ಅಧ್ಯಕ್ಷ ಕೆ. ಎಚ್. ಪಾಟೀಲ್ ಆಗ್ರಹಪಡಿಸಿದರು. ೨೮ ರಂದು ಮಂಡ್ಯ ಜಿಲ್ಲಾ ಕಾಂಗೈ ಅಧ್ಯಕ್ಷತೆಗೆ ಕೆ. ಎನ್. ನಾಗೇಗೌಡ ರಾಜೀನಾಮೆ ನೀಡಿ ಜನತಾ ಪಕ್ಷ ಸೇರಿದರು. ಈ ಹಂತದಲ್ಲಿದ್ದಾಗ ೩೧ ಅಕ್ಟೋಬರ್ ೮೪ ರಂದು ಇಂದಿರಾ ಗಾಂಧಿಯವರ ಹತ್ಯೆ ಆಯಿತು. ಅದೇ ದಿನ ಕಾಂಗೈ ಪ್ರಧಾನ ಕಾರ್ಯದರ್ಶಿ ಆಗಿದ್ದ ರಾಜೀವ್ ಗಾಂಧಿಯವರು ಪ್ರಧಾನ ಮಂತ್ರಿಗಳಾಗಿ ಪ್ರಮಾಣವಚನ ಸ್ವೀಕರಿಸಿದರು. ಕಾಂಗೈ ಸಂಸದೀಯ ಮಂಡಲಿ ೨ ನವೆಂಬರ್ ೮೪ ರಂದು ರಾಜೀವ್ ಗಾಂಧಿ ನಾಯಕತ್ವಕ್ಕೆ ಒಪ್ಪಿಗೆ ನೀಡಿತು. ರಾಜೀವ್ ಸಮರ್ಥ ನಾಯಕನೆಂದು ವೀರಪ್ಪ ಮೊಯಿಲಿ ಹೇಳಿದರು. ದಿನಾಂಕ ೬ ರಂದು ಎಸ್. ಎಂ. ಕೃಷ್ಣ ಅವರ ನೇತೃತ್ವದಲ್ಲಿ ರಾಜ್ಯ ಕಾಂಗೈ ನಿಯೋಗವೊಂದು ದೆಹಲಿಯಲ್ಲಿ ರಾಜೀವ್ ಗಾಂಧಿಯವರನ್ನು ಭೇಟಿಯಾಗಿ ಅವರ ನಾಯಕತ್ವಕ್ಕೆ ಬೆಂಬಲ ನೀಡಿತು. ಶಾಸಕಾಂಗ ಪಕ್ಷದ ಕಾರ್ಯದರ್ಶಿ ಮಲ್ಲಿಕಾರ್ಜುನ ಖರ್ಗೆ, ಪ್ರದೇಶ ಕಾಂಗೈ ಪ್ರಧಾನ ಕಾರ್ಯದರ್ಶಿ ಧರ್ಮಸಿಂಗ್ ಮೊದಲಾದವರು ಈ ನಿಯೋಗದಲ್ಲಿದ್ದರು.

''ಇಂದಿರಾ ಕೆ ಯಾದ್ ಮೆ, ರಾಜೀವ್ ಕೆ ಸಾಥ್ ಮೆ, ಮೊಹರ್ ಲಗೇಗಿ ಹಾಥ್ ಮೆ'' ಎಂಬ ಘೋಷಣೆಯೊಂದಿಗೆ ಮುಂಬರುವ ಚುನಾವಣೆಗಳಲ್ಲಿ ಕಾಂಗ್ರೆಸ್-ಐ ಪಕ್ಷ ಮತ ಯಾಚಿಸಲಿದೆ ಎಂದು ಕೇಂದ್ರ ಸಚಿವ ವಸಂತ ಸಾಠೆ ಅವರು ೬ ರಂದು ಪ್ರಕಟಿಸಿದರು. ೮-೧೧-೮೪ ರಂದು ಬಂಗಾರಪ್ಪ ನೇತೃತ್ವದ ಕರ್ನಾಟಕ ಕ್ರಾಂತಿರಂಗ ಪಕ್ಷವು ಕಾಂಗ್ರೆಸ್-ಐ ಪಕ್ಷದಲ್ಲಿ ಬೇಷರತ್ತಾಗಿ ವಿಲೀನಗೊಂಡಿತು. ಎಂ. ವೈ. ಘೋರ್ಪಡೆ, ಅಜೀಜ್ ಸೇಠ್, ಚಂದ್ರಪ್ರಭಾ ಅರಸು ಕಾಂಗೈ ಸೇರಿದರು. ಕಾಂಗೈ ಪಕ್ಷದ ಶಾಸಕರ ಸಂಖ್ಯೆ ೮೮ ಕ್ಕೆ ಏರಿತು. ತವರಿಗೆ ಹಿಂದಿರುಗಲು ಕೇಂದ್ರ ಸಚಿವ ಎಸ್. ಎಂ. ಕೃಷ್ಣ ರಾಜ್ಯ ಕಾಂಗ್ರೆಸ್ಸಿಗರಿಗೆ ಕರೆ ನೀಡಿದರು. ಈ ಮಧ್ಯೆ ರಾಜೀವ್ ಗಾಂಧಿಯವರೇ ಎ.ಐ.ಸಿ.ಸಿ. ಅಧ್ಯಕ್ಷರಾಗುವಂತೆ ರಾಜ್ಯ ಕಾಂಗೈ ಕಾರ್ಯಕಾರಿ ಸಮಿತಿ ೧೦ ರಂದು ಕೆ. ಎಚ್. ಪಾಟೀಲರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಒತ್ತಾಯಿಸಿತು. ೧೨ ರಂದು ರಾಜೀವ್ ಗಾಂಧಿ ಸರ್ವಾನುಮತದಿಂದ ಎ.ಐ.ಸಿ.ಸಿ. (ಐ) ಅಧ್ಯಕ್ಷರಾಗಿ ಆಯ್ಕೆ ಆದರು.

## ಅಭ್ಯರ್ಥಿಗಳ ಆಯ್ಕೆ

ಇಂದಿರಾ ಗಾಂಧಿ ಸಾವಿನ ನಂತರ ಪರಿಸ್ಥಿತಿ ಬದಲಾಯಿತು. ರಾಜ್ಯದಲ್ಲಿ ಕಾಂಗ್ರೆಸ್ (ಐ) ಪಕ್ಷವನ್ನು ಸೇರುವವರ ಸಂಖ್ಯೆ ಜಾಸ್ತಿ ಆಯಿತು. ಡಿಸೆಂಬರ್ ತಿಂಗಳಲ್ಲೇ ಚುನಾವಣೆ ನಡೆಸಲು ಕೇಂದ್ರ ಸರ್ಕಾರ ೧೩-೧೧-೮೪ರಂದು ಚುನಾವಣಾ ಆಯೋಗಕ್ಕೆ ಶಿಫಾರಸ್ಸು ಮಾಡಿತು. ಡಿಸೆಂಬರ್ ೨೪ ರಂದು ಚುನಾವಣೆ ನಡೆಯುತ್ತದೆಂದು ತಿಳಿದು ಬಂತು. ಅದೇ ದಿನ ರಾಜೀವ್ ಗಾಂಧಿಯವರು ಕಾಂಗ್ರೆ ಮುಖ್ಯಮಂತ್ರಿಗಳು ಹಾಗೂ ಅಧ್ಯಕ್ಷರುಗಳ ಜೊತೆ ಚುನಾವಣೆಗಳ ಬಗ್ಗೆ ಸಮಾಲೋಚನೆ ನಡೆಸಿದರು. ವಿರೋಧ ಪಕ್ಷದ ನಾಯಕ ವೀರಪ್ಪ ಮೊಯಿಲಿ, ಶಾಸಕಾಂಗ ಪಕ್ಷದ ನಾಯಕ ಖರ್ಗೆ, ಬಂಗಾರಪ್ಪ ಅವರುಗಳೂ ರಾಜೀವ್ ಗಾಂಧಿಯವರು ನಡೆಸಿದ ಸಮಾಲೋಚನೆಯಲ್ಲಿ ಹಾಜರಿದ್ದರು. ೧೪-೧೧-೮೪ರಂದು ಎ.ಐ.ಸಿ.ಸಿ. (ಐ) ಹನ್ನೆರಡು ಜನರ ರಾಜ್ಯ ಚುನಾವಣಾ ಸಮಿತಿಯನ್ನು ರಚಿಸಿತು. ಕೆ.ಪಿ.ಸಿ.ಸಿ. (ಐ) ಅಧ್ಯಕ್ಷ ಕೆ. ಎಚ್. ಪಾಟೀಲ್, ವೀರಪ್ಪ ಮೊಯಿಲಿ, ಬಿ. ಶಿವಣ್ಣ, ಬಿ. ಶಂಕರಾನಂದ್, ವೀರೇಂದ್ರ ಪಾಟೀಲ್, ಗುಂಡೂರಾವ್, ಕೊಲ್ಲೂರು ಮಲ್ಲಪ್ಪ, ಜಾಫರ್ ಷರೀಫ್, ಆಸ್ಕರ್ ಫರ್ನಾಂಡಿಸ್, ಎಚ್. ಸಿ. ಶ್ರೀಕಂಠಯ್ಯ, ಧರ್ಮಸಿಂಗ್, ಜನಾರ್ಧನ ಪೂಜಾರಿ ಈ ಸಮಿತಿಯಲ್ಲಿದ್ದರು. ನಂತರ ಎಸ್. ಎಂ. ಕೃಷ್ಣ ಅವರನ್ನು ಈ ಸಮಿತಿಗೆ ಸೇರಿಸಲಾಯಿತು.

ದಿನಾಂಕ ೧೫ ರಿಂದ ಅರ್ಜಿಗಳ ಪರಿಶೀಲನೆ ಆರಂಭವಾಯಿತು. ಒಟ್ಟು ೪೩೨ ಅರ್ಜಿಗಳು ಬಂದಿದ್ದವು. ಅವುಗಳನ್ನೆಲ್ಲಾ ಪರಿಶೀಲಿಸಿ ಅಂತಿಮವಾಗಿ ೮೯ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಿ ಅದನ್ನು ಹೈಕಮಾಂಡ್ ಪರಿಶೀಲನೆಗೆ ಶಿಫಾರಸ್ಸು ಮಾಡಲಾಯಿತು. ೧೯ ರಂದು ಕೆ.ಪಿ.ಸಿ.ಸಿ. (ಐ) ಅಧ್ಯಕ್ಷ ಕೆ. ಎಚ್. ಪಾಟೀಲರು ಹಾಗೂ ಚುನಾವಣಾ ಸಮಿತಿಯ ಇತರ ಮುಖಂಡರುಗಳು ದೆಹಲಿಗೆ ಹೋದರು. ಅದೇ ದಿನ ದೆಹಲಿಯಲ್ಲಿ ಪಿಸಿಸಿ(ಐ) ಸಭೆ ನಡೆಯಿತು. ಮತ್ತೆ ೨೦ ರಂದು ದೆಹಲಿಯಲ್ಲಿ ನಡೆದ ಪ್ರದೇಶ ಕಾಂಗ್ರೆ ಚುನಾವಣಾ ಸಮಿತಿ ಸಭೆಯಲ್ಲಿ ಅಭ್ಯರ್ಥಿಗಳ ಅಂತಿಮ ಆಯ್ಕೆ ಬಗ್ಗೆ ನಿರ್ಧಾರಕ್ಕೆ ಬರಲು ಸಾಧ್ಯವಾಗಲಿಲ್ಲ, ೨೧ ಕ್ಷೇತ್ರದ ಅಭ್ಯರ್ಥಿಗಳ ಬಗ್ಗೆ ಭಿನ್ನಮತ ಉಂಟಾಯಿತು.

ಶಂಕರಾನಂದ್, ವೀರೇಂದ್ರ ಪಾಟೀಲ್, ಜಾಫರ್ ಷರೀಫ್, ಎಸ್. ಎಂ. ಕೃಷ್ಣ, ಜನಾರ್ಧನ ಪೂಜಾರಿ, ಆಸ್ಕರ್ ಫರ್ನಾಂಡಿಸ್, ಎಚ್. ಜಿ. ಶ್ರೀರಾಮುಲು ಇವರ ಹೆಸರುಗಳು ಸರ್ವಾನುಮತದಿಂದ ಅನುಮೋದಿಸಲ್ಪಟ್ಟವು. ರಾಜ್ಯ ಅಭ್ಯರ್ಥಿಗಳ ಅಂತಿಮ ಆಯ್ಕೆಗೆ ದಿನಾಂಕ ೨೨ ರಂದು ಕೇಂದ್ರ ಸಂಸದೀಯ ಮಂಡಲಿ ಉಪಸಮಿತಿಯನ್ನು ರಚಿಸಲಾಯಿತು. ೨೩ ರಂದು ಕೇಂದ್ರ ಸಂಸದೀಯ ಮಂಡಲಿ ಸಭೆ ಸೇರಿ, ಉಪಮಂಡಲಿ ಆರಿಸಿದ್ದ ಅಭ್ಯರ್ಥಿಗಳ ಪಟ್ಟಿಗೆ ಮಂಜೂರಾತಿ ನೀಡಿ, ೨೫ ರಂದು ಅಂತಿಮ ಪಟ್ಟಿಯನ್ನು ಬಿಡುಗಡೆ ಮಾಡಲಾಯಿತು. ಹೈಕಮಾಂಡ್ ಬಿಡುಗಡೆ ಮಾಡಿದ ಅಭ್ಯರ್ಥಿಗಳ ಪಟ್ಟಿ ಈ ರೀತಿ ಇತ್ತು.

ಬೀದರ್ - ನರಸಿಂಗ್ ಸೂರ್ಯವಂಶಿ, ಗುಲಬರ್ಗಾ - ವೀರೇಂದ್ರ ಪಾಟೀಲ್, ರಾಯಚೂರು - ಬಿ. ವಿ. ದೇಸಾಯಿ, ಕೊಪ್ಪಳ - ಎಚ್. ಜಿ. ಶ್ರೀರಾಮುಲು, ಬಳ್ಳಾರಿ - ಶ್ರೀಮತಿ ಬಸವರಾಜೇಶ್ವರಿ, ದಾವಣಗೆರೆ - ಚನ್ನಯ್ಯ ಒಡೆಯರ್, ಚಿತ್ರದುರ್ಗ - ಕೆ. ಎಚ್. ರಂಗನಾಥ್, ತುಮಕೂರು - ಜಿ. ಎಸ್. ಬಸವರಾಜ್, ಚಿಕ್ಕಬಳ್ಳಾಪುರ - ವಿ. ಕೃಷ್ಣ ರಾವ್, ಕೋಲಾರ - ಜಿ. ವೈ. ಕೃಷ್ಣನ್, ಕನಕಪುರ - ಎಂ. ವಿ. ಚಂದ್ರಶೇಖರಮೂರ್ತಿ, ಬೆಂಗಳೂರು ಉತ್ತರ - ಸಿ. ಕೆ. ಜಾಫರ್ ಷರೀಫ್, ಬೆಂಗಳೂರು ದಕ್ಷಿಣ - ವೆಂಕಟಗಿರಿಗೌಡ, ಮಂಡ್ಯ - ಎಸ್. ಎಂ. ಕೃಷ್ಣ ಚಾಮರಾಜನಗರ - ವಿ. ಶ್ರೀನಿವಾಸ ಪ್ರಸಾದ್, ಮೈಸೂರು - ಶ್ರೀಕಂಠದತ್ತ ನರಸಿಂಹರಾಜ ಒಡೆಯರ್, ಮಂಗಳೂರು - ಜನಾರ್ಧನ ಪೂಜಾರಿ, ಉಡುಪಿ - ಆಸ್ಕರ್ ಫರ್ನಾಂಡಿಸ್, ಹಾಸನ - ಎಚ್. ಎನ್. ನಂಜೇಗೌಡ, ಶಿವಮೊಗ್ಗ - ಟಿ. ವಿ. ಚಂದ್ರಶೇಖರಪ್ಪ, ಚಿಕ್ಕಮಗಳೂರು - ಡಿ.ಕೆ. ತಾರಾದೇವಿ, ಉತ್ತರ ಕನ್ನಡ - ದೇವರಾಯ ನಾಯಕ್, ಧಾರವಾಡ ದಕ್ಷಿಣ - ಅಜೀಜ್ ಸೇಠ್, ಧಾರವಾಡ ಉತ್ತರ - ಡಿ. ಕೆ. ನಾಯಕರ್, ಬೆಳಗಾವಿ - ಎಸ್. ಬಿ. ಸಿದ್ನಾಳ್, ಚಿಕ್ಕೋಡಿ - ಶಂಕರಾನಂದ್, ಬಾಗಲಕೋಟೆ-ಎಸ್. ಬಿ. ಪಾಟೀಲ್, ವಿಜಾಪುರ - ಡಾ। ಆರ್. ಬಿ. ಚೌಧರಿ.

ಇದರಲ್ಲಿ ಹನ್ನೊಂದು ಹೊಸ ಮುಖಗಳಿಗೆ ಅವಕಾಶ ನೀಡಲಾಗಿತ್ತು. ಧಾರವಾಡ ದಕ್ಷಿಣ ಕ್ಷೇತ್ರದ ಅಭ್ಯರ್ಥಿ ಆಯ್ಕೆಯನ್ನು ಪ್ರದೇಶ ಕಾಂಗ್ರೆಸ್ ಸಮಿತಿಗೆ ಬಿಡಲಾಗಿದ್ದು ಅದು ಅಜೀಜ್ ಸೇಠರನ್ನು ಅಭ್ಯರ್ಥಿಯನ್ನಾಗಿ ಆರಿಸಿತು. ಬಂಡುಕೋರರ ಕಾಟ ಕಾಂಗ್ರೆಗೆ ತಪ್ಪಿರಲಿಲ್ಲ, ಚುನಾವಣಾ ಕಣದಲ್ಲಿ ಉಳಿದಿದ್ದ ಐವರು ಬಂಡಾಯ ಅಭ್ಯರ್ಥಿಗಳನ್ನು ೧-೧೨-೮೪ ರಂದು ಉಚ್ಚಾಟಿಸಲಾಯಿತು. ಭಾಸ್ಕರ್ ನಾಯ್ಡು-ಬಳ್ಳಾರಿ, ಎಂ. ವೆಂಕಟಪ್ಪ-ಕೋಲಾರ, ಎಸ್. ಸಿದ್ದಪ್ಪ-ಚಿತ್ರದುರ್ಗ, ವಿ. ಬಿ. ನಾಯಕ್- ಉತ್ತರ ಕನ್ನಡ ಇವರೇ ಉಚ್ಚಾಟಿತ ಬಂಡಾಯ ಅಭ್ಯರ್ಥಿಗಳು. ನಾಗಮಂಗಲ ವಿಧಾನಸಭಾ ಕ್ಷೇತ್ರದ ಬಂಡುಕೋರ ಅಭ್ಯರ್ಥಿ ಹೆಚ್. ಟಿ. ಕೃಷ್ಣಪ್ಪನವರನ್ನೂ ಉಚ್ಚಾಟಿಸಲಾಗಿದೆ, ಮಾಜಿ ಸಂಸದ ಆರ್. ಎಲ್. ನಾಯಕರವರಿಗೆ ಬಂಡಾಯ ಚಟುವಟಿಕೆಗಾಗಿ ಶೋಕಾಸ್ ನೋಟೀಸ್ ನೀಡಲಾಗಿದೆ ಎಂದು ಕೆ. ಎಚ್. ಪಾಟೀಲರು ಪ್ರಕಟಿಸಿದರು.

## ಪ್ರಚಾರ ಕಾರ್ಯ

ಕೆ. ಎಚ್. ಪಾಟೀಲರ ಅಧ್ಯಕ್ಷತೆಯಲ್ಲಿ ಕೇಂದ್ರ ಚುನಾವಣಾ ಪ್ರಚಾರ ಸಮಿತಿಯನ್ನು ನೇಮಿಸಲಾಯಿತು. ಕೊಲ್ಲೂರು ಮಲ್ಲಪ್ಪ, ಆರ್. ಗುಂಡೂರಾವ್, ಎಸ್. ಬಂಗಾರಪ್ಪ, ವೀರಪ್ಪ ಮೊಯಿಲಿ, ಟಿ. ಎನ್. ನರಸಿಂಹಮೂರ್ತಿ ಇತ್ಯಾದಿ ಶಾಸಕರು; ಸಂಸದರು ಸೇರಿದಂತೆ ೪೩ ಜನ ಸಮಿತಿಯಲ್ಲಿದ್ದರು. ಎಚ್. ಕೆ ಪಾಟೀಲ್ ಸಾರಿಗೆ ಸಮಿತಿ ಅಧ್ಯಕ್ಷರಾಗಿದ್ದರು. ಕೆ. ಎಚ್. ಶ್ರೀನಿವಾಸ್ ಪ್ರವಾಸ ಹಾಗೂ ಪ್ರಚಾರ ಸಮಿತಿ ಅಧ್ಯಕ್ಷರಾಗಿದ್ದರು. ೨೮-೧೧-೮೪ರಂದು ಬೆಂಗಳೂರಿನಲ್ಲಿ ಕಾಂಗ್ರೆಸ್ (ಐ) ಚುನಾವಣಾ ಕಚೇರಿಯನ್ನು ಉದ್ಘಾಟಿಸಲಾಯಿತು. ಜನತಾ ಪಕ್ಷದ ಬಗ್ಗೆ ಜನರಿಗೆ ಭ್ರಮನಿರಸನವಾಗಿದ್ದು ಕಾಂಗ್ರೆಗೆ ಅನುಕೂಲಕರ ವಾತಾವರಣ ಇದೆ ಎಂದು ಕೆ. ಎಚ್. ಪಾಟೀಲ್ ತಿಳಿಸಿದರು. ಕ್ರಾಂತಿರಂಗದವರೆಲ್ಲಾ ಕಾಂಗ್ರೆಸ್ (ಐ) ಸೇರಬೇಕೆಂದು ಬಂಗಾರಪ್ಪ ಕರೆ ನೀಡಿದರು.

೩-೧೨-೮೪ ರಂದು ಬೀದರ್, ಬೆಳಗಾವಿ, ಹೊಸಪೇಟೆಗಳಲ್ಲಿ ರಾಜೀವ್ ಗಾಂಧಿ ಪ್ರಚಾರ ಭಾಷಣಗಳನ್ನು ಮಾಡಿದರು. ದೇಶದ ಹಿತದೃಷ್ಟಿ ಇಲ್ಲದ ಪ್ರತಿಪಕ್ಷಗಳಿಗೆ ಪಾಠ ಕಲಿಸಲು ಅವರು ಕರೆ ನೀಡಿದರು. ೪-೧೨-೮೪ರಂದು ಕೋಲಾರ, ಬೆಂಗಳೂರುಗಳಲ್ಲಿ ರಾಜೀವ್ ಪ್ರಚಾರ ಭಾಷಣ ಮಾಡಿದರು. 'ರಾಜ್ಯ ಜನತಾ ಸರ್ಕಾರ ಅವ್ಯವಸ್ಥೆಯ ಆಗರವಾಗಿದೆ' ಎಂದರು. ಬಂಗಾರಪ್ಪ, ಕೆ. ಎಚ್. ಪಾಟೀಲ್, ಮೊದಲಾದವರು ರಾಜೀವ್‌ಗಾಂಧಿ ಪ್ರವಾಸದಲ್ಲಿ ಹಾಜರಿದ್ದರು. ೧೪-೧೨-೮೪ರಂದು ರಾಜೀವ್ ಗಾಂಧಿಯವರು ಚಾಮರಾಜ ನಗರದಲ್ಲಿ ಪ್ರಚಾರ ಭಾಷಣ ಮಾಡಿ ಜಾತಿ ಮತ ಪರಿಗಣನೆ ಇಲ್ಲದ ನವರಾಷ್ಟ್ರ ನಿರ್ಮಾಣವೇ ಕಾಂಗ್ರೆಸ್ (ಐ) ಗುರಿ ಎಂದರು.

೧೬ ರಂದು ಚಿಕ್ಕಮಗಳೂರು, ಶಿವಮೊಗ್ಗ, ಹುಬ್ಬಳ್ಳಿಗಳಲ್ಲಿ ಅವರು ಪ್ರಚಾರ ಭಾಷಣ ಮಾಡಿ 'ರೈತರ ಶ್ರೇಯಸ್ಸು ಕಾಂಗ್ರೆ ಗುರಿ ಹಾಗೂ ಶುದ್ಧ ಆಡಳಿತಕ್ಕೆ ತಮ್ಮ ಪಕ್ಷ ಬದ್ಧವಾಗಿದೆ' ಎಂದು ಹೇಳಿದರು. ೨೧ ರಂದು ಮತ್ತೆ ಬೆಂಗಳೂರಿನಲ್ಲಿ ಚುನಾವಣಾ ಪ್ರಚಾರ ಮಾಡಿದರು. ಶಿವಾಜಿ ಗಣೇಶನ್‌ರವರೂ ಅವರ ಜೊತೆ ೨೧ರಂದು ಬೆಂಗಳೂರಿನಲ್ಲಿ ಪ್ರಚಾರ ಸಭೆಗಳಲ್ಲಿ ಪಾಲ್ಗೊಂಡರು. ೨೨ ರಂದು ಕನಕಪುರ, ದೊಡ್ಡಬಳ್ಳಾಪುರಗಳಲ್ಲಿ ಪ್ರಚಾರ ಸಭೆಯನ್ನುದ್ದೇಶಿಸಿ ಭಾಷಣ ಮಾಡಿದರು. ಒಟ್ಟಾರೆ ರಾಜೀವ್ ಗಾಂಧಿಯವರು ದೇಶದುದ್ದಕ್ಕೂ ಐದು ಸಾವಿರ ಕಿಲೋಮೀಟರ್ ದೂರ ಕ್ರಮಿಸಿ ಪ್ರಚಾರ ಭಾಷಣಗಳನ್ನು ಮಾಡಿದರು. ಅವರು ಒಟ್ಟಾರೆ ೨೩ ನವೆಂಬರ್‌ನಿಂದ ೨೬ ಡಿಸೆಂಬರ್‌ವರೆಗೆ ೨೨ ದಿನ ೨೩೩ ಲೋಕಸಭಾ ಕ್ಷೇತ್ರಗಳಿಗೆ ಭೇಟಿ ನೀಡಿ ೨೦೦ ಕ್ಕೂ ಹೆಚ್ಚು ಬಹಿರಂಗ ಸಭೆಗಳನ್ನುದ್ದೇಶಿಸಿ ಪ್ರಚಾರ ಭಾಷಣ ಮಾಡಿದರೆಂದು ಲೆಕ್ಕಾಚಾರ ಮಾಡಲಾಗಿದೆ. ಕರ್ನಾಟಕದಲ್ಲಿ ಕೆ. ಎಚ್. ಪಾಟೀಲ್, ವೀರಪ್ಪ ಮೊಯಿಲಿ, ಬಂಗಾರಪ್ಪ, ಗುಂಡೂರಾವ್ ಮುಂತಾದ ಅನೇಕ ಮುಖಂಡರು ರಾಜ್ಯದಾದ್ಯಂತ ಸಂಚರಿಸಿ ಚುನಾವಣಾ ಪ್ರಚಾರ ಸಭೆಗಳನ್ನು ಉದ್ದೇಶಿಸಿ ಭಾಷಣ ಮಾಡಿದರು.

ಬಂಗಾರಪ್ಪನವರು ೬ ರಿಂದ ೧೯ ಡಿಸೆಂಬರ್‌ರವರೆಗೆ ಕನಕಪುರ ಹಾಗೂ ಮೈಸೂರು ಲೋಕಸಭಾ ಕ್ಷೇತ್ರಗಳಲ್ಲಿ ಪ್ರವಾಸ ಮಾಡಿದರು. ಮಾಜಿ ಮುಖ್ಯಮಂತ್ರಿ ಆರ್. ಗುಂಡೂರಾವ್‌ರವರು ಡಿಸೆಂಬರ್ ೧೫ ಜಮಖಂಡಿ, ಮುಧೋಳ್, ಲೋಕಾಪುರ, ರಾಮದುರ್ಗ, ಬಸವನಬಾಗೇವಾಡಿ, ಸವದತ್ತಿ, ಗೋಕಾಕ್, ಬೈಲಹೊಂಗಲ, ಧಾರವಾಡ, ಹುಬ್ಬಳ್ಳಿಗಳಲ್ಲಿ ಸಂಚರಿಸಿ ಚುನಾವಣಾ ಪ್ರಚಾರ ಮಾಡಿ ಬಹಿರಂಗ ಸಭೆಗಳನ್ನುದ್ದೇಶಿಸಿ ಮಾತನಾಡಿದರು. ಅವರು ದಿನಾಂಕ ೧೬ ರಂದು ಕಲಘಟಗಿ, ಯಲ್ಲಾಪುರ, ಕಾರವಾರ, ಶಿರಸಿ, ಹಾನಗಲ್, ಹಾವೇರಿ, ಹರಪನಹಳ್ಳಿಗಳಲ್ಲಿ, ೧೭ ರಂದು ಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಗಿ, ಜಗಳೂರು, ದಾವಣಗೆರೆ, ಚಿತ್ರದುರ್ಗ ಹಿರಿಯೂರು, ಸಿರಾಗಳಲ್ಲಿ ಸಂಚರಿಸಿ ಪ್ರಚಾರ ಭಾಷಣಗಳನ್ನು ಮಾಡಿದರು. ಜನತಾ ಪಕ್ಷ ೪೨ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ಭೂಮಿಯನ್ನು ಮಂಜೂರು ಮಾಡುವ ಮೂಲಕ ಚುನಾವಣೆಗೆ ಹಣ ಸಂಗ್ರಹ ಮಾಡಿದೆ ಎಂದು ಕೆ.ಪಿ.ಸಿ.ಸಿ. ಅಧ್ಯಕ್ಷ ಕೆ. ಎಚ್. ಪಾಟೀಲರು ಆರೋಪಿಸಿದರು.

## ಚುನಾವಣಾ ಘರ್ಷಣೆಗಳು

೧೯೮೪ರ ಲೋಕಸಭಾ ಚುನಾವಣೆಗಳಲ್ಲಿ ರಾಜ್ಯದಲ್ಲಿ ಅಲ್ಲಲ್ಲಿ ಘರ್ಷಣೆಗಳು ಸಂಭವಿಸಿದವು. ೧೧-೧೨-೮೪ ರಂದು ಬೆಳ್ಳೂರಿನಲ್ಲಿ ನಾಗಮಂಗಲ ವಿಧಾನಸಭಾ ಕ್ಷೇತ್ರ ಕಾಂಗ್ರೆ ಅಭ್ಯರ್ಥಿ ಕೆಂಪಮ್ಮ ಚಿಗರಿಗೌಡ ಅವರ ಕಾರಿಗೆ ಕಲ್ಲೇಟು ಬಿತ್ತು. ೧೨-೧೨-೮೪ ರಂದು ಕಾಳಮುದ್ದನದೊಡ್ಡಿಯಲ್ಲಿ ಕೇಂದ್ರ ಸಚಿವ ಎಸ್. ಎಂ. ಕೃಷ್ಣ ಅವರ ಕಾರಿಗೆ ಕಲ್ಲೇಟು ಬಿದ್ದು ಅವರಿಗೆ ಗಾಯವಾಯಿತು. ಕಾರ್ಯಕರ್ತರ ನಡುವೆ ಘರ್ಷಣೆಗಳಾದವು. ಅದೇ ದಿನ ಬೆಳಗಾವಿ ಜಿಲ್ಲೆ ಐನಾಪುರದಲ್ಲಿ ಶಂಕರಾನಂದ್‌ರವರ ಸಭೆಗೆ ಅಡ್ಡಿಪಡಿಸಲಾಯಿತು. ಕಾರ್ಯಕರ್ತರ ಘರ್ಷಣೆ ವಿಕೋಪಕ್ಕೆ ಹೋಗಿ ಗಾಳಿಯಲ್ಲಿ ಗುಂಡು ಹಾರಿಸಲಾಯಿತು. ೧೫-೧೨-೮೪ರಂದು ಬಸವನಬಾಗೇವಾಡಿಯಲ್ಲಿ ಆರ್. ಗುಂಡೂರಾವ್ ಭಾಗವಹಿಸಿದ್ದ ಬಹಿರಂಗ ಸಭೆಯಲ್ಲಿ ಕಲ್ಲೆಸೆತವಾಯಿತು.

ಅದೇ ದಿನ ಗುರುಮಠಕಲ್‌ನಲ್ಲಿ ವೀರೇಂದ್ರರ ಮೇಲೆ ಹಲ್ಲೆ ಪ್ರಯತ್ನ ನಡೆಯಿತು. ಪೊಲೀಸರು ಲಾಠಿ ಪ್ರಹಾರ ಮಾಡಿದರು. ಶ್ರೀನಿವಾಸಪುರ ಪುರಸಭಾಧ್ಯಕ್ಷರನ್ನು ಗೃಹಬಂಧನದಲ್ಲಿ ಇಡಲಾಗಿದೆ ಎಂಬ ಬಗ್ಗೆ ೨೦-೧೨-೮೪ ರಂದು ಚುನಾವಣಾ ಆಯೋಗಕ್ಕೆ ದೂರು ನೀಡಲಾಯಿತು. ರಾಜ್ಯದಲ್ಲಿ ಜನತಾ ಪಕ್ಷದ ಸರ್ಕಾರದಿಂದ ಚುನಾವಣಾ ಭಯೋತ್ಪಾದನೆ ನಡೆದಿದೆ, ಕೇಂದ್ರ ಪೋಲೀಸರನ್ನು ರಕ್ಷಣಾ ಕಾರ್ಯಕ್ಕೆ ನೇಮಿಸಬೇಕೆಂದು ಕೆ. ಎಚ್. ಪಾಟೀಲ್ ಒತ್ತಾಯಿಸಿದರು.

**ಪ್ರಣಾಳಿಕೆ**

ದಿನಾಂಕ ೫-೧೨-೮೪ರಂದು ಕಾಂಗ್ರೆಸ್ (ಐ) ಕಾರ್ಯನಿರತ ಅಧ್ಯಕ್ಷ ಕಮಲಾಪತಿ ತ್ರಿಪಾಠಿ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿದರು. ಭ್ರಷ್ಟಾಚಾರ ನಿರ್ಮೂಲನೆ, ದಕ್ಷ ಸ್ವಚ್ಛ ಆಡಳಿತ ನೀಡಲು ಕಾಂಗ್ರೆಸ್ (ಐ) ಭರವಸೆ ನೀಡಿತ್ತು. ೧೯೭೭ರ ವಿರೋಧ ಪಕ್ಷಗಳ ಒಗ್ಗಟ್ಟು ಅಧಿಕಾರವನ್ನು ದೃಷ್ಟಿಯಲ್ಲಿ ಇಟ್ಟುಕೊಂಡಿತ್ತೇ ಹೊರತು ದೇಶದ ಅಭಿವೃದ್ಧಿಯ ಬಗ್ಗೆ ಇರಲಿಲ್ಲ. 'ಚುನಾವಣೆ ಬಂದಾಗ ಎಚ್ಚರಗೊಂಡು ಒಂದಾಗುವುದು ನಂತರ ಕಿತ್ತಾಡುವುದು ವಿರೋಧ ಪಕ್ಷಗಳ ಹವ್ಯಾಸವಾಗಿದೆ' ಎಂದು ಟೀಕಿಸಲಾಗಿತ್ತು. ಪ್ರಣಾಳಿಕೆಯ ಮುಖ್ಯಾಂಶಗಳು ಹೀಗಿವೆ: ಸಮಾಜವಾದ ಮತ್ತು ಯೋಜನಾಬದ್ಧ ಪ್ರಗತಿಗೆ ಪಕ್ಷ ಬದ್ಧವಾಗಿದೆ. ಬಡತನ ನಿರ್ಮೂಲನೆ, ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದು. ಸೈದ್ಧಾಂತಿಕ ವಿಧಾನಗಳಲ್ಲಿ ಅರ್ಥಪೂರ್ಣ ಬೆಳವಣಿಗೆ, ಕಡಿಮೆ ಆದಾಯದವರಿಗೆ ತೆರಿಗೆ ಹೊರೆ ಕಡಿಮೆ, ಕಡ್ಡಾಯ ಠೇವಣಿ ಯೋಜನೆ ರದ್ದು, ಅಲ್ಪಸಂಖ್ಯಾತರ ಮತೀಯ ಶೈಕ್ಷಣಿಕ-ಸಾಂಸ್ಕೃತಿಕ ಹಕ್ಕುಗಳ ರಕ್ಷಣೆ.

ಅಲಿಘಡ ಮುಸ್ಲಿಂ ವಿಶ್ವವಿದ್ಯಾನಿಲಯದ ಅಲ್ಪಸಂಖ್ಯಾತ ಸ್ವರೂಪವನ್ನು ಉಳಿಸಿಕೊಂಡು ಬರಲಾಗುವುದು. ಜನರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗೆ ಸಾಧಕವಾಗುವ ಕ್ರಮಗಳನ್ನು ತೆಗೆದುಕೊಳ್ಳಲು ರಾಜ್ಯ ಸರ್ಕಾರಗಳು ಸಮರ್ಥವಾಗಿರಬೇಕು. ದೇಶದ ಏಕತೆ, ಸಮಗ್ರತೆಗಳನ್ನು ರಕ್ಷಿಸಿಕೊಂಡು ಬರಲು ಕೇಂದ್ರ ಸರ್ಕಾರ ಬಲಿಷ್ಠವಾಗಿರಬೇಕು. ಅಲಿಪ್ತ ನೀತಿ ಮುಂದುವರಿಕೆ. ಶಾಂತಿ ಮತ್ತು ಎಲ್ಲ ರಾಷ್ಟ್ರಗಳೊಂದಿಗೆ ಸರಕಾರ ಮತ್ತು ಮೈತ್ರಿಗಳನ್ನು ಹೊಂದುವಂತಹ ನೀತಿಯನ್ನು ಮುಂದುವರೆಸಿಕೊಂಡು ಬರುವುದು. ಚೀನಾದೊಡನೆ ಸಂಬಂಧ ಸುಧಾರಣೆ, ರಷ್ಯಾ ಮತ್ತು ಇತರ ಸಮಾಜವಾದಿ ದೇಶಗಳೊಡನೆ ಮೈತ್ರಿಯನ್ನು ಮತ್ತಷ್ಟು ವೃದ್ಧಿಪಡಿಸುವುದು. ೭ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಶೇಕಡಾ ೫ ರಷ್ಟು ಬೆಳವಣಿಗೆ ಗುರಿ ಸಾಧನೆಗೆ ಪ್ರಯತ್ನ. ಈ ಗುರಿ ಸಾಧಿಸಲು ೧,೮೦,೦೦೦ ಕೋಟಿ ರೂಪಾಯಿ ಬಂಡವಾಳ ಹೂಡಿಕೆ. ಜನರಿಗೆ ಆಹಾರ ಉದ್ಯೋಗ ಒದಗಿಸಿ ಉತ್ಪಾದನೆ ಹೆಚ್ಚಿಸಲು ಹೆಚ್ಚಿನ ಒತ್ತು ನೀಡುವುದು.

## ಸಾಧಿಸಿರುವ ಅಭಿವೃದ್ಧಿ

| ಕ್ಷೇತ್ರ ಪರಿಸ್ಥಿತಿ | ೧೯೮೧-೮೨ರ ಸಾಧನೆ | ೧೯೮೩-೮೪ರ |
|---|---|---|
| ಬೀಜಪೂರೈಕೆ | ೨೯ ಲಕ್ಷ ಕ್ವಿಂಟಾಲ್ | ೫೭ ಲಕ್ಷ ಕ್ವಿಂಟಾಲ್ |
| ರಸಗೊಬ್ಬರ | ೨,೯೪,೦೦೦ ಟನ್ (೧೯೬೧-೬೨ರಲ್ಲಿ) | ೭೦ ಲಕ್ಷ ಟನ್ |
| ನೀರಾವರಿ ಕ್ಷೇತ್ರ | ೨೩೦ ಲಕ್ಷ ಹೆಕ್ಟೇರ್ (೧೯೫೦-೫೧ ರಲ್ಲಿ) | ೬೪೦ ಲಕ್ಷ ಹೆಕ್ಟೇರ್ |
| ಕೃಷಿ ಕ್ಷೇತ್ರಕ್ಕೆ ಸಾಲ | ೪೫೦೦ ಕೋಟಿ | ೨೪೦೦೦ ಕೋಟಿ |
| ಆಹಾರ ಧಾನ್ಯ ಉತ್ಪಾದನೆ | - | ೧೫೦೦ ದ. ಲಕ್ಷ ಟನ್ |

ಕಳೆದ ಐದು ವರ್ಷಗಳಲ್ಲಿ ಭಾರತದ ಸರಾಸರಿ ವಾರ್ಷಿಕ ಔದ್ಯೋಗಿಕ ವಿಕಾಸ ಪ್ರಮಾಣ. ೪.೯ (ಅಮೆರಿಕ ೧.೨. ಬ್ರಿಟನ್ ೦.೩) ಕಲ್ಲಿದ್ದಲು ಉತ್ಪಾದನೆ ೭೯-೮೦ರಲ್ಲಿ ೧೦೪೦ ಲಕ್ಷ ಟನ್, ೮೩-೮೪ರಲ್ಲಿ ೧೩೮೦ ಲಕ್ಷ ಟನ್, ಕಚ್ಚಾ ಆಯಿಲ್ ೮೧-೮೨ರಲ್ಲಿ ೧೨೦ ಲಕ್ಷಟನ್, ೮೩-೮೪ರಲ್ಲಿ ೧೩೮೦ ಲಕ್ಷ ಟನ್, ಎಂಜಿನಿಯರಿಂಗ್ ಕ್ಷೇತ್ರದಲ್ಲಿ ಶೇಕಡಾ ೨೭ ರಷ್ಟು ಉದ್ಯೋಗಾವಕಾಶ ಕಳೆದ ಐದು ವರ್ಷಗಳಲ್ಲಿ ೫೦೦ ಕೋಟಿ ಮೌಲ್ಯದ ಶ್ರೇಷ್ಠ ವರ್ಗದ ಸಂಸ್ಕರಣ ಪದಾರ್ಥಗಳ ರಫ್ತು.

## ಮುಂದಿನ ಐದು ವರ್ಷಗಳಲ್ಲಿ ಕಾಂಗ್ರೆಸ್ (ಐ) ಯೋಜನೆ

ಹೆಚ್ಚುತ್ತಿರುವ ಜನಸಂಖ್ಯೆಗೆ ತಕ್ಕಂತೆ ಆಹಾರ ಕೃಷಿ ಉತ್ಪನ್ನ ಪ್ರಮಾಣವನ್ನು ಶೇಕಡಾ ೪ ರ ಪ್ರಮಾಣದಲ್ಲಿ ಹೆಚ್ಚಿಸಲು ಯೋಜನೆ. ಉತ್ತರ ಪ್ರದೇಶ, ಪಶ್ಚಿಮ ಬಂಗಾಳ, ಒರಿಸ್ಸಾ, ಮಧ್ಯಪ್ರದೇಶ, ಅಸ್ಸಾಂಗಳಲ್ಲಿ ಅಕ್ಕಿ ಉತ್ಪನ್ನ ಹೆಚ್ಚಿಸಲು ಕ್ರಮ. ಕ್ಷಾರಯುಕ್ತ ಭೂಮಿಯನ್ನು ಕೃಷಿ ಯೋಗ್ಯ ಭೂಮಿಯನ್ನಾಗಿ ಮಾಡುವುದು, ಬೀಳುಭೂಮಿ ಬೇಸಾಯಕ್ಕೆ ಸುಧಾರಣಾ ತಂತ್ರ ಪ್ರಯೋಗ. ಬೇಳೆ ಕಾಳುಗಳು ಮತ್ತು ಎಣ್ಣೆ ಬೀಜಗಳ ಉತ್ಪನ್ನದಲ್ಲಿ ಭಾರಿ ವೃದ್ಧಿಗಾಗಿ ಕ್ರಮ. ಸಣ್ಣ ರೈತರಿಗೆ ವಿಶೇಷ ಗಮನ ನೀಡಿಕೆ. ಕೃಷಿ ಸುಧಾರಣೆಗಳನ್ನು ತೀವ್ರವಾಗಿ ಕಾರ್ಯರೂಪಕ್ಕೆ ತರುವುದು. ಕೃಷಿ ಕಾರ್ಮಿಕರು, ನಿರುದ್ಯೋಗಿಗಳು, ವಿದ್ಯಾವಂತ ನಿರುದ್ಯೋಗಿಗಳು, ಸ್ತ್ರೀಯರಿಗೆ ರಾಷ್ಟ್ರೀಯ ಉದ್ಯೋಗ ಯೋಜನೆ, ತರಬೇತಿ ಸೌಕರ್ಯಗಳ ವಿಸ್ತರಣೆ, ಗ್ರಾಮೀಣ ಕುಶಲ ಕರ್ಮಿಗಳ ಉದ್ಯಮಗಳಿಗೆ ಉತ್ತಮ ಸ್ಥಾನ ಕಲ್ಪನೆ. ಮನೆ ಇಲ್ಲದವರಿಗೆ ಮನೆ. ಒಂದು ಕೋಟಿ ಎಪ್ಪತ್ತು ಲಕ್ಷ ಹೊಸ ಮನೆಗಳ ನಿರ್ಮಾಣಕ್ಕೆ ಒಂದು ರಾಷ್ಟ್ರೀಯ ಯೋಜನೆ. ಪಟ್ಟಣಗಳಲ್ಲಿ ವಿದ್ಯುಚ್ಛಕ್ತಿ, ನೀರು ಸರಬರಾಜು, ಕೊಳಚೆ ನಿರ್ಮೂಲನೆ ಮತ್ತು ಕಸ ವಿಲೇವಾರಿ ಇವುಗಳಿಗೆ ವ್ಯಾಪಕ ಕ್ರಮ. ಕೊಳಚೆ ಪ್ರದೇಶಗಳ ಸುಧಾರಣೆಗೆ ಕ್ರಮ. ಗೃಹ ನಿರ್ಮಾಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲು ಕಾನೂನು ತಿದ್ದುಪಡಿ.

ಗ್ರಾಮೀಣ ಪ್ರದೇಶದಲ್ಲಿ ಜೀವನ ಸೌಕರ್ಯಗಳ ವಿಸ್ತರಣೆ. ಪ್ರತಿಯೊಂದು ಗ್ರಾಮಕ್ಕೆ ಕುಡಿಯುವ ನೀರು, ವಿದ್ಯುಚ್ಛಕ್ತಿ ಒದಗಿಸುವುದು. ಕುಶಲಕಲೆಗಳ ವಿಕಾಸಕ್ಕೆ ಪ್ರಚಾರ ಮಾಧ್ಯಮದ ಉಪಯೋಗ. ಕುಟುಂಬ ಕಲ್ಯಾಣ, ಆರೋಗ್ಯ ರಕ್ಷಣೆಗೆ ಕಾರ್ಯಕ್ರಮಗಳು. ಕುಟುಂಬ ಯೋಜನೆ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮಗಳು ಜನರ ಆಂದೋಲನವಾಗುವಂತೆ ಮಾಡುವುದು. ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಹೆಚ್ಚಾಗಿ ತೆರೆಯುವುದು. ಕುಷ್ಠರೋಗ, ಕ್ಷಯರೋಗ, ಕುರುಡುತನಗಳನ್ನು ನಿವಾರಿಸಲು ತೀವ್ರ ಪ್ರಯತ್ನಗಳನ್ನು ಮಾಡುವುದು. ಹಿಂದುಳಿದ ಪ್ರದೇಶಗಳಲ್ಲಿ ಆರ್ಥಿಕ ದುರ್ಬಲ ವರ್ಗದ ಗರ್ಭಿಣಿ ಸ್ತ್ರೀಯರು ಮತ್ತು ಹಾಲುಣಿಸುವ ತಾಯಂದಿರಿಗೆ, ಮಕ್ಕಳಿಗೆ ಪೋಷಕಾಂಶಗಳ ಆಹಾರ ನೀಡುವ ಕಾರ್ಯಕ್ರಮ. ಎಲ್ಲರಿಗೂ ವಿದ್ಯಾಭ್ಯಾಸ. ೧೯೯೦ ರೊಳಗಾಗಿ ೬ ರಿಂದ ೧೪ ವರ್ಷ ವಯಸ್ಸಿನ ಎಲ್ಲಾ ಮಕ್ಕಳಿಗೆ ವ್ಯಾಪಕ ಪ್ರಾಥಮಿಕ ವಿದ್ಯಾಭ್ಯಾಸ. ೬೦೦ ಲಕ್ಷ ಮಕ್ಕಳು ವಿದ್ಯಾಭ್ಯಾಸಕ್ಕೆ ದಾಖಲಾಗಲು ಸೌಕರ್ಯ.

ಬಾಲಕಿಯರು ಮತ್ತು ಅನುಸೂಚಿತ ವರ್ಗಗಳ ಮಕ್ಕಳ ವಿದ್ಯಾಭ್ಯಾಸಕ್ಕೆ ವಿಶೇಷ ಪ್ರೋತ್ಸಾಹ. ಸೆಕೆಂಡರಿ ಮತ್ತು ಉಚ್ಚ ಶಿಕ್ಷಣದಲ್ಲಿ ಆಮೂಲಾಗ್ರ ಸುಧಾರಣೆ. ಪ್ರೌಢ ಶಿಕ್ಷಣಕ್ಕೆ ಜನ ಆಂದೋಲನ. ಔದ್ಯೋಗಿಕ ವಿಕಾಸದಲ್ಲಿ ಹೊಸ ಯುಗ. ಗ್ರಾಮೀಣ ಸಣ್ಣ ಉದ್ಯಮಗಳಿಗೆ ಉತ್ತಮ ತಂತ್ರಜ್ಞಾನ ವಿಸ್ತರಣೆ. ಕೈಮಗ್ಗ ವಲಯ ವಿಸ್ತರಣೆ. ಭಾರಿ ಹಾಗೂ ಮಧ್ಯಮ ಕೈಗಾರಿಕೆಗಳು ಅಧಿಕ ಕಾರ್ಯ ಸಾಮರ್ಥ್ಯ ಹೊಂದುವಂತೆ ಹಾಗೂ ಸೃಜನಶೀಲವಾಗುವಂತೆ ಮಾಡಲು ಆಧುನಿಕ ಯೋಜನೆಗಳು. ಸಾರ್ವಜನಿಕ ಕ್ಷೇತ್ರದ ಉದ್ಯಮಗಳ ಪಾತ್ರವನ್ನು ಬಲಪಡಿಸಲು ಅವುಗಳ ಕೌಶಲ ಹಾಗೂ ಉತ್ಪಾದಕತೆಯಲ್ಲಿ ಸುಧಾರಣೆ.

### ಫಲಿತಾಂಶ

ರಾಜ್ಯದಲ್ಲಿ ಶೇಕಡಾ ೬೦ ರಷ್ಟು ಮತದಾನವಾಯಿತು. ಕಾಂಗ್ರೆಸ್ (ಐ) ತಾನು ಸ್ಪರ್ಧಿಸಿದ್ದ ೨೮ ಲೋಕಸಭಾ ಸ್ಥಾನಗಳ ಪೈಕಿ ೨೪ ಸ್ಥಾನಗಳನ್ನು ಗಳಿಸಿತು. ನಾಲ್ಕು ಸ್ಥಾನ ಜನತಾ ಪಕ್ಷಕ್ಕೆ ಹೋಯಿತು. ೧೯೭೭ರಲ್ಲಿ ೨೬, ೧೯೮೦ರಲ್ಲಿ ೨೭ ಸ್ಥಾನಗಳನ್ನು ಗಳಿಸಿದ್ದ ಕಾಂಗ್ರೆಸ್ (ಐ) ಪಕ್ಷಕ್ಕೆ ಇದು ಹಿನ್ನಡೆಯೆಂದೇ ಹೇಳಬಹುದು. ಶ್ರೀಮತಿ ಇಂದಿರಾ ಗಾಂಧಿ ಹತ್ಯೆಯ ಸಹಾನುಭೂತಿಯ ನೆರಳಲ್ಲಿ ನಡೆದ ಈ ಚುನಾವಣೆಯಲ್ಲೂ ಅದು ಇನ್ನೂ ಮೂರು ಸ್ಥಾನಗಳನ್ನು ಬಿಟ್ಟುಕೊಡಬೇಕಾಗಿ ಬಂದಿತು. ಎ.ಐ.ಎ.ಡಿ.ಎಂ.ಕೆ., ಮುಸ್ಲಿಂ ಲೀಗ್, ಕ್ರಾಂತಿರಂಗ ಗುಂಪಿನ ಬೆಂಬಲ ಇದ್ದರೂ ಕೂಡಾ ಕಾಂಗ್ರೆಸ್ ನಾಲ್ಕು ಸ್ಥಾನಗಳನ್ನು ಕಳೆದುಕೊಂಡಿದ್ದು ಮುಂದಿನ ವಿಧಾನಸಭಾ ಚುನಾವಣೆಗಳ ಫಲಿತಾಂಶದ ಮುನ್ಸೂಚನೆಯಂತೆ ಇತ್ತು ಎಂದು ಹೇಳಬಹುದು.

ಆದರೆ ಜನತಾ ಪಕ್ಷದಿಂದ ಸ್ಪರ್ಧಿಸಿದ್ದ ಆರು ಸಚಿವರು ಸೋತಿದ್ದು ಒಂದು ವಿಶೇಷ. ಕೇಂದ್ರದ ಕಾಂಗ್ರೆ ಸರ್ಕಾರದ ನಾಲ್ಕು ಮಂತ್ರಿಗಳೂ ಮತ್ತೆ ಗೆದ್ದು ಬಂದರು. ಗುಲಬರ್ಗಾದಿಂದ ವೀರೇಂದ್ರ ಪಾಟೀಲ್, ಬೆಂಗಳೂರು ಉತ್ತರದಿಂದ ಜಾಫರ್ ಷರೀಫ್, ಚಿಕ್ಕೋಡಿಯಿಂದ ಶಂಕರಾನಂದ್, ಮಂಗಳೂರಿನಿಂದ ಜನಾರ್ಧನ ಪೂಜಾರಿ ಇವರೇ ಆಯ್ಕೆಯಾದ ಕೇಂದ್ರ ಸಚಿವರು. ಜಾಫರ್ ಷರೀಫ್ ಅವರು ಜಾರ್ಜ್ ಫರ್ನಾಂಡಿಸ್ ಅವರನ್ನು ಸೋಲಿಸಿದ್ದು, ಆಸ್ಕರ್ ಫರ್ನಾಂಡಿಸ್ ಉಡುಪಿಯಲ್ಲಿ ಮಾಜಿ ಸ್ಪೀಕರ್ ಕೆ. ಎಸ್. ಹೆಗಡೆಯವರನ್ನು ಸೋಲಿಸಿದ್ದು ವಿಶೇಷವಾಗಿತ್ತು.

## ೧೯೮೫ - ವಿಧಾನಸಭಾ ಚುನಾವಣೆಗಳು

೧೯೮೪ ಡಿಸೆಂಬರ್ ೨೪ ರಂದು ಲೋಕಸಭೆ ಚುನಾವಣೆಗಳು ನಡೆದವು. ಕಾಂಗ್ರೆಸ್ (ಐ) ಚುನಾವಣೆ ನಡೆದ ೫೦೮ ಸ್ಥಾನಗಳ ಪೈಕಿ ೪೦೧ ಸ್ಥಾನಗಳನ್ನು ಗಳಿಸಿ ಶೇಕಡಾ ೭೯ ಸ್ಥಾನಗಳನ್ನು ಪಡೆದು ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿತು. ಇದಕ್ಕೆ ಮುನ್ನ ೧೯೮೩ ಜನವರಿ ತಿಂಗಳಲ್ಲಿ ರಾಜ್ಯ ವಿಧಾನಸಭೆಗೆ ಚುನಾವಣೆ ನಡೆದು ಜನತಾ ಪಕ್ಷದ ಸರ್ಕಾರ ಬಿ.ಜೆ.ಪಿ. ಬೆಂಬಲದೊಂದಿಗೆ ಅಧಿಕಾರಕ್ಕೆ ಬಂದಿತ್ತು. ರಾಜ್ಯದ ೨೮ ಲೋಕಸಭಾ ಸ್ಥಾನಗಳಲ್ಲಿ ೨೪ ಕಾಂಗ್ರೆ ಪಾಲಾಗಿತ್ತು. ೪ ಸ್ಥಾನ ಜನತಾ ಪಕ್ಷಕ್ಕೆ ಸಿಕ್ಕಿತ್ತು. ಲೋಕಸಭಾ ಚುನಾವಣೆಗಳಲ್ಲಿ ಪಕ್ಷದ ಸೋಲಿನ ನೈತಿಕ ಜವಾಬ್ದಾರಿಯನ್ನು ಹೊತ್ತು ೧೯೮೫ ಜನವರಿ ೨ ರಂದು ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿ ವಿಧಾನಸಭೆ ವಿಸರ್ಜನೆಗೆ ಶಿಫಾರಸ್ಸು ಮಾಡಿದರು. ರಾಜ್ಯಪಾಲ ಎ.ಎನ್. ಬ್ಯಾನರ್ಜಿ ಸಚಿವ ಸಂಪುಟದ ತೀರ್ಮಾನದಂತೆ ವಿಧಾನಸಭೆಯನ್ನು ವಿಸರ್ಜಿಸಿ ರಾಮಕೃಷ್ಣ ಹೆಗಡೆಯವರ ಸಚಿವ ಸಂಪುಟಕ್ಕೆ ಉಸ್ತುವಾರಿ ಸರ್ಕಾರದ ಹೊಣೆ ಹೊರಲು ಸೂಚಿಸಿದರು. ಜನವರಿ ೨೯ ರಂದು ಚುನಾವಣಾ ಆಯೋಗ ಅಧಿಸೂಚನೆ ಹೊರಡಿಸಿ, ಮಾರ್ಚ್ ೨ ಮತ್ತು ೫, ೧೯೮೫ರಂದು ವಿಧಾನಸಭಾ ಚುನಾವಣೆಗಳನ್ನು ನಡೆಸುವುದಾಗಿ ಘೋಷಿಸಿತು. ಕರ್ನಾಟಕವೂ ಸೇರಿದಂತೆ ಹತ್ತು ರಾಜ್ಯಗಳು ಹಾಗೂ ಒಂದು ಕೇಂದ್ರಾಡಳಿತ ಪ್ರದೇಶದಲ್ಲಿ ಚುನಾವಣೆಗಳು ನಡೆಯಲು ನಿಗದಿಯಾಯಿತು.

ಹೆಗಡೆಯವರ ಕ್ರಮ ಮುತ್ಸದ್ದಿತನದ ಸಂಕೇತವೆಂದು ಸಾರ್ವಜನಿಕರೂ ಪತ್ರಿಕೆಗಳೂ ಅಭಿಪ್ರಾಯಪಟ್ಟರೆ, ಕಾಂಗ್ರೆ ನಾಯಕರು ಹೆಗಡೆಯವರ ಉಸ್ತುವಾರಿ ಸರ್ಕಾರ ಮುಂದುವರಿಕೆಗೆ ತಮ್ಮ ತೀವ್ರ ಅಸಮಾಧಾನ ವ್ಯಕ್ತ ಪಡಿಸಿದರು. ಸರ್ಕಾರ ರಚನೆಗೆ ಕಾಂಗ್ರೆಸ್-ಐ ಪಕ್ಷಕ್ಕೆ ಅವಕಾಶ ನೀಡಬೇಕಾಗಿತ್ತು ಎಂಬ ಮಾತುಗಳೂ ಕೇಳಿಬಂದವು. ಆದರೆ ವಿರೋಧ ಪಕ್ಷದ ನಾಯಕ ವೀರಪ್ಪ ಮೊಯಿಲಿಯವರು ಕಾಂಗ್ರೆಸ್ ಸರ್ಕಾರ ರಚನೆಗೆ ಅಥವಾ ಪಕ್ಷಾಂತರಕ್ಕೆ ಯತ್ನಿಸಿಲ್ಲ ಎಂದು ೪-೧-೮೫ರಂದು ಸ್ಪಷ್ಟನೆ ನೀಡಿದರು.

### ರಾಷ್ಟ್ರೀಯ ಪರಿಸ್ಥಿತಿ

ರಾಜೀವ್ ಗಾಂಧಿಯವರು ಅಧಿಕಾರಕ್ಕೆ ಬಂದ ತಕ್ಷಣ ಆರ್ಥಿಕ-ಸಾಮಾಜಿಕವಾಗಿ ಆಮೂಲಾಗ್ರ ಬದಲಾವಣೆಗಳನ್ನು ತರಲು ಉದ್ದೇಶಿಸಿದರು. ಅದರ ಅಂಗವಾಗಿ ಅವರು ೫-೧-೮೫ ರಂದು ಹತ್ತು ಅಂಶಗಳ ಕಾರ್ಯಕ್ರಮ ಒಂದನ್ನು ರೂಪಿಸಿ ಬಿಡುಗಡೆ ಮಾಡಿದರು. ಈ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಸರ್ಕಾರ ತೀವ್ರ ಕ್ರಮ ತೆಗೆದುಕೊಳ್ಳುತ್ತದೆಂದು ಅವರು ನುಡಿದರು. ರಾಜೀವ್ ಗಾಂಧಿ ದಶಾಂಶ ಕಾರ್ಯಕ್ರಮಗಳು ಈ ಕೆಳಗಿನಂತಿವೆ:

೧. ಸರ್ಕಾರಿ ಕ್ಷೇತ್ರದಲ್ಲಿ ಬದಲಾವಣೆ ತರುವ ನಿರೂಪಿತ ದೂರಗಾಮಿ ಸಲಹೆಗಳ ಪರಾಮರ್ಶೆ.
೨. ಪ್ರತಿವರ್ಷ ೫೦ ಲಕ್ಷ ಹೆಕ್ಟೇರ್‌ಗಳನ್ನು ಸೌದೆ ಮತ್ತು ಮೇವಿಗಾಗಿ ಹಸಿರುಗೊಳಿಸುವ ರಾಷ್ಟ್ರೀಯ ಬಂಜರು ಭೂಮಿ ಅಭಿವೃದ್ಧಿ ಮಂಡಳಿ ಸ್ಥಾಪನೆ.
೩. ಗಂಗಾ ಮತ್ತು ಇತರ ನದಿಗಳ ಮಾಲಿನ್ಯ ತಡೆಯಲು ಕ್ರಿಯಾಶೀಲ ಯೋಜನೆ ಅನುಷ್ಠಾನ. ಗಂಗಾ ಪ್ರಾಧಿಕಾರ ರಚನೆ.
೪. ಆಡಳಿತಾತ್ಮಕ ಸಂಸ್ಥೆಗಳ ನೀತಿ ನಿಯಮಗಳ ಸಂಪೂರ್ಣ ಪರಾಮರ್ಶೆ.
೫. ಶೀಘ್ರ ನಿರ್ಧಾರಕ್ಕೆ ಅನುಗುಣವಾಗುವಂತೆ ಕಾನೂನು ಕಟ್ಟಳೆಗಳ ಆಮೂಲಾಗ್ರ ಸರಳೀಕರಣ. ನಿಯಮಗಳ ನಿಧಾನಗತಿಯ ಅನುಸರಣೆಗಿಂತ ಫಲಪ್ರದ ಶೀಘ್ರ ತೀರ್ಮಾನದ ಕಡೆಗೆ ಆದ್ಯ ಗಮನ.
೬. ಸಾರ್ವಜನಿಕ ಕುಂದುಕೊರತೆಗಳ ಪರಿಹಾರಕ್ಕೆ ಪರಿಣಾಮಕಾರಿ ವ್ಯವಸ್ಥೆ.
೭. ಮೂಲಭೂತ ಸಾಮಾಜಿಕ ಮೌಲ್ಯಗಳಿಗೆ ಅನುಗುಣವಾಗಿ ಸಾಮರ್ಥ್ಯ ಮತ್ತು ಅಭಿವೃದ್ಧಿಗೆ ಸರ್ಕಾರಿ ಸೇವೆಯ ಎಲ್ಲ ವರ್ಗಗಳಿಗೆ ಸೂಕ್ತ ತರಬೇತಿ.
೮. ನೂತನ ರಾಷ್ಟ್ರೀಯ ಶೈಕ್ಷಣಿಕ ನೀತಿ ನಿರೂಪಣೆ ಹಂತದಲ್ಲಿ.
೯. ಅತಿ ಸುಲಭವಾಗಿ ಎಲ್ಲರಿಗೂ ಉನ್ನತ ಶಿಕ್ಷಣ ದೊರಕಿಸಲು ಮುಕ್ತ ವಿಶ್ವವಿದ್ಯಾನಿಲಯ ಸ್ಥಾಪನೆ. ಕೇಂದ್ರೀಯ ಶಾಲೆಗಳ ವಿಸ್ತರಣೆ. ರಾಷ್ಟ್ರದ ಎಲ್ಲ ಜಿಲ್ಲೆಗಳಲ್ಲಿ ಇದರ ನಿರ್ವಹಣೆ.
೧೦. ಕೃಷಿ ಮತ್ತು ಕೈಗಾರಿಕೆ ಸಂಪರ್ಕ ಮತ್ತಿತರ ಉತ್ಪಾದನಾ ಕ್ಷೇತ್ರಗಳಿಗೆ ಹೊಂದಿಕೊಳ್ಳುವ ವೃತ್ತಿ ಶಿಕ್ಷಣ ಪುನರ್ ಸಂಘಟನೆ.

ಜಾತ್ಯಂಧತೆಯ ವಿರುದ್ಧ ಸೈದ್ಧಾಂತಿಕ ಸಮರ ಸಾರುವುದಾಗಿಯೂ ದ್ವೇಷ ಹಿಂಸೆ ಶಮನ ಮಾಡಲು ಶ್ರಮಿಸುವುದಾಗಿಯೂ ಅವರು ಹೇಳಿದರು. ಕೇಂದ್ರ ಯೋಜನಾ ಆಯೋಗವನ್ನು ತಮ್ಮ ಅಧ್ಯಕ್ಷತೆಯಲ್ಲಿ ಪುನರ್ ರಚಿಸಿದರು. ಮನಮೋಹನಸಿಂಗ್, ಎಂ.ಜಿ.ಕೆ. ಮೆನನ್, ಸಿ. ಎಚ್. ಹನುಮಂತರಾವ್, ಪಿ. ವಿ. ನರಸಿಂಹರಾವ್, ವಿ.ಪಿ. ಸಿಂಗ್, ರಾಜಾ ಚೆಲ್ಲಯ್ಯ, ಹಿತೇನ್ ಭಯ್ಯಾ, ಅಬೀದ್ ಹುಸೇನ್ ಇದರ ಸದಸ್ಯರಾಗಿದ್ದರು.

ದೇಶದ ಸಮಸ್ಯೆಗಳ ನಿವಾರಣೆಗೆ ಕೇಂದ್ರ ಸರ್ಕಾರ ಕೈಗೊಂಡಿರುವ ಕ್ರಮಗಳಿಗೆ ವಿರೋಧ ಪಕ್ಷಗಳು ಸಹಕಾರ ನೀಡಬೇಕೆಂದು ಕಾಂಗ್ರೆಸ್ (ಐ) ಕಾರ್ಯಾಧ್ಯಕ್ಷ ಕಮಲಾಪತಿ ತ್ರಿಪಾಠಿ ಕರೆ ನೀಡಿದರು. ವಿರೋಧ ಪಕ್ಷದ ಸದಸ್ಯರ ಸಂಖ್ಯೆ ಬಹಳ ಕಡಿಮೆ ಇದ್ದು ಪ್ರಮುಖ ವಿರೋಧಿ ನಾಯಕರೆಲ್ಲಾ ಪರಾಭವಗೊಂಡಿರುವುದರಿಂದ, ಸರ್ಕಾರದ ಕಾರ್ಯಕ್ರಮಗಳ ಬಗ್ಗೆ ಕಾಂಗ್ರೆಸ್ (ಐ) ತನ್ನಲ್ಲಿಯೇ ವಿವರವಾಗಿ ಚರ್ಚಿಸುತ್ತದೆ, ವಿರೋಧ ಪಕ್ಷದ ಮುಖಂಡರುಗಳ ಸಲಹೆ ಪಡೆಯಲು ಪ್ರಯತ್ನಿಸುತ್ತದೆ ಎಂದು ಪ್ರಧಾನಿ ರಾಜೀವ್ ಗಾಂಧಿ ಜನವರಿ ೮ ರಂದು ತಿಳಿಸಿದರು. ಸಚಿವಾಲಯ ಹಾಗೂ ವಿವಿಧ ಇಲಾಖೆಗಳಿಗೆ ಸಂಬಂಧಿಸಿದಂತೆ ಸಾರ್ವಜನಿಕ ಕುಂದು ಕೊರತೆಗಳ ಸಮಿತಿಗಳನ್ನು ರಚಿಸಲು ಕೇಂದ್ರ ಸರ್ಕಾರ ಜನವರಿ ೧೧ ರಂದು ನಿರ್ಧಾರ ತೆಗೆದುಕೊಂಡಿತು. ಬಲಿಷ್ಠ ಭಾರತ ನಿರ್ಮಾಣ ಯುವ ಪೀಳಿಗೆಯ ಮೇಲಿದೆ. ಜನವರಿ ೧೨ ಸ್ವಾಮಿ ವಿವೇಕಾನಂದರ ಜನ್ಮದಿನವಾಗಿದ್ದು ಅದನ್ನು ರಾಷ್ಟ್ರೀಯ ಯುವಕರ ದಿನವೆಂದು ಆಚರಿಸಲಾಗುವುದು ಎಂದು ರಾಜೀವ್ ಗಾಂಧಿ ಸಮಾರಂಭದಲ್ಲಿ ತಿಳಿಸಿದರು.

ಸಂವಿಧಾನದ ಚೌಕಟ್ಟಿನಲ್ಲಿ ಅಸ್ಸಾಂ, ಪಂಜಾಬ್ ಸಮಸ್ಯೆಗಳನ್ನು ಬಗೆಹರಿಸಲಾಗುವುದೆಂದು ರಾಜೀವ್ ಗಾಂಧಿ ಜನವರಿ ೧೫ರಂದು ಪಾರ್ಲಿಮೆಂಟಿನಲ್ಲಿ ತಿಳಿಸಿದರು. ದಿನಗೂಲಿಗಳಿಗೂ ಇ. ಎಸ್. ಐ. ಸೌಲಭ್ಯವನ್ನು ವಿಸ್ತರಿಸಿ ಜನವರಿ ೧೬ ರಂದು ಆಜ್ಞೆ ಹೊರಡಿಸಲಾಯಿತು. ೧೭-೧-೮೫ರಂದು ರಾಜೀವ್ ಗಾಂಧಿಯವರು ತಮ್ಮ ಹತ್ತು ಅಂಶಗಳ ಕಾರ್ಯಕ್ರಮವನ್ನು ಪುನರ್ರಚಿಸಿ ಪ್ರಕಟಿಸಿದರು. ಪುನರ್ರಚಿತ ದಶಾಂಶ ಕಾರ್ಯಕ್ರಮಗಳು ಕೆಳಗಿನಂತಿವೆ:

೧. ಚುನಾವಣಾ ವ್ಯವಸ್ಥೆಯಲ್ಲಿ ಸುಧಾರಣೆಗಾಗಿ ಪ್ರತಿಪಕ್ಷಗಳ ಜೊತೆಗೆ ಚರ್ಚೆ.
೨. ಸಂಸತ್ತಿನ ಪ್ರಸ್ತುತ ಅಧಿವೇಶನದಲ್ಲಿ ಪಕ್ಷಾಂತರ ನಿಷೇಧ ಮಸೂದೆಯ ಮಂಡನೆ.
೩. ಆಡಳಿತಾತ್ಮಕ ವ್ಯವಸ್ಥೆಯಲ್ಲಿ ವ್ಯಾಪಕ ಹಾಗೂ ಪರಿಣಾಮಕಾರಿ ಸುಧಾರಣೆ.
೪. ಹೊಸ ಜವಳಿ ನೀತಿ.
೫. ಹೊಸ ಶಿಕ್ಷಣ ನೀತಿ.
೬. ದೀನದಲಿತ ವರ್ಗದವರಿಗಾಗಿ ಸುಲಭವಾಗಿ ಹಾಗೂ ತ್ವರಿತವಾಗಿ ನ್ಯಾಯಾಂಗದಿಂದ ಪರಿಹಾರ ದೊರಕಿಸಲು ಕ್ರಮ.
೭. ಮಹಿಳೆಯರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಉನ್ನತಿಗಾಗಿ ಕಾರ್ಯಕ್ರಮ. ಪ್ರೌಢಶಾಲೆಯವರೆಗೆ ಬಾಲಕಿಯರಿಗೆ ಉಚಿತ ಶಿಕ್ಷಣ.
೮. ೧೯೮೫ ಯುವವರ್ಷವಾಗಿ ಆಚರಣೆ.
೯. ಅರಣ್ಯ, ವನ್ಯಜೀವಿ ಹಾಗೂ ಬಂಜರು ಭೂ ಅಭಿವೃದ್ಧಿಗೆ ಮಂಡಳಿ.
೧೦. ಪವಿತ್ರ ಗಂಗಾ ಜಲಮಾಲಿನ್ಯ ತಡೆಗೆ ಪ್ರಾಧಿಕಾರ ರಚನೆ.

ಈ ದಶಾಂಶ ಕಾರ್ಯಕ್ರಮವನ್ನು ಎಲ್ಲರೂ ಸ್ವಾಗತಿಸಿದರು. ರಾಮಕೃಷ್ಣ ಹೆಗಡೆಯವರೂ ಕೂಡಾ ಈ ಕಾರ್ಯಕ್ರಮವನ್ನು ಸ್ವಾಗತಿಸಿ ಜನವರಿ ೧೮ ರಂದು ಹೇಳಿಕೆ ನೀಡಿದರು. ಕೇಂದ್ರ ಸರ್ಕಾರದ ರಕ್ಷಣಾ ಇಲಾಖೆಯಲ್ಲಿ ಬೇಹುಗಾರಿಕೆ ಪ್ರಕರಣವೊಂದು ಬೆಳಕಿಗೆ ಬಂದಿತು. ಐದು ಹಿರಿಯ ಅಧಿಕಾರಿಗಳೂ ಸೇರಿದಂತೆ ೧೧ ಜನರನ್ನು ಕೇಂದ್ರ ಸರ್ಕಾರ ಬಂಧಿಸಿತು. ರಾಜೀವ್ ಗಾಂಧಿಯವರ ಮುಖ್ಯ ಕಾರ್ಯದರ್ಶಿ ಆಗಿದ್ದ ಪಿ. ಸಿ. ಅಲೆಗ್ಸಾಂಡರ್ ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು. ಅಲೆಕ್ಸಾಂಡರ್ ಅವರ ಮೇಲೂ ಕ್ರಮ ಜರುಗಿಸಬೇಕೆಂದು ವಿರೋಧ ಪಕ್ಷದವರು ತೀವ್ರವಾದ ವಾಗ್ದಾಳಿ ನಡೆಸಿದರು. ದಿನಾಂಕ ೨೪ ಜನವರಿ ೮೫ ರಂದು ಲೋಕಸಭೆಯಲ್ಲಿ ಪಕ್ಷಾಂತರ ನಿಷೇಧ ವಿಧೇಯಕವನ್ನು ಮಂಡಿಸಲಾಯಿತು. ಅದು ೩೧ ರಂದು ಸ್ವೀಕೃತವಾಯಿತು. ಅದೇ ದಿನ ಸಂಸತ್ ಅಧಿವೇಶನ ಮುಂದೂಡಲ್ಪಟ್ಟಿತು. ೧೫.೨.೮೫ ರಂದು ರಾಷ್ಟ್ರಪತಿಗಳ ಅಂಕಿತ ಪಡೆದ ಪಕ್ಷಾಂತರ ನಿಷೇಧ ವಿಧೇಯಕ ಜಾರಿಗೆ ಬಂದಿತು. ಇದು ರಾಜೀವ್ ಗಾಂಧಿಯವರ ಅಪೂರ್ವ ಸಾಧನೆ ಆಯಿತು.

## ರಾಜ್ಯದ ರಾಜಕೀಯ ಪರಿಸ್ಥಿತಿ

ಜನತಾ ಉಸ್ತುವಾರಿ ಸರ್ಕಾರ ಮುಂದುವರಿಕೆಗೆ ಕಾಂಗ್ರೆ ನಾಯಕರು ಅಸಂತೃಪ್ತಿ ವ್ಯಕ್ತಪಡಿಸಿದ್ದರು. ಅಧಿಕ ಸಂಖ್ಯೆಯಲ್ಲಿ ಸರ್ಕಾರಿ ನೌಕರರ ವರ್ಗಾವಣೆಯಾಗುತ್ತಿದೆ ಇದನ್ನು ನಿಲ್ಲಿಸಬೇಕು ಹಾಗೂ ಜನತಾ ಸರ್ಕಾರದಿಂದ ನೇಮಿಸಲ್ಪಟ್ಟಿದ್ದ ನಿಗಮ, ಮಂಡಳಿಗಳ ಅಧ್ಯಕ್ಷರು, ಸದಸ್ಯರುಗಳು, ರಾಜೀನಾಮೆ ನೀಡಬೇಕು ಎಂದು ಪ್ರದೇಶ ಕಾಂಗ್ರೆ ಅಧ್ಯಕ್ಷ ಕೆ. ಎಚ್. ಪಾಟೀಲ್ ೭-೧-೮೫ ರಂದು ಆರೋಪಿಸಿದರು. ಸರ್ಕಾರಿ ವೆಚ್ಚದಲ್ಲಿ ಜನತಾ ಪಕ್ಷದ ಜಾಹೀರಾತುಗಳನ್ನು ಸತತವಾಗಿ ನೀಡಲಾಗುತ್ತಿದೆ, ನಿಧಿ ಸಂಗ್ರಹಣೆಗೆ ಜನರಿಗೆ

ಬೆದರಿಕೆ ಹಾಕಲಾಗುತ್ತಿದೆ, ರಾಮಕೃಷ್ಣ ಹೆಗಡೆ ಮಿತಿಮೀರಿ ವರ್ತಿಸುತ್ತಿದ್ದಾರೆಂದು ಜನವರಿ ೧೨ ರಂದು ಸೇರಿದ್ದ ಕಾಂಗ್ರೆ ಕಾರ್ಯಕಾರಿ ಸಮಿತಿ ಅಭಿಪ್ರಾಯಪಟ್ಟಿತು.

ಹೆಗಡೆ ಉಸ್ತುವಾರಿ ಸರ್ಕಾರದ ಕಾರ್ಯ ನೀತಿಯ ಬಗ್ಗೆ ವಿರೋಧ ಪಕ್ಷದ ನಾಯಕ ವೀರಪ್ಪ ಮೊಯಿಲಿಯವರೂ ಜನವರಿ ೧೭ ರಂದು ತೀವ್ರ ಆಕ್ಷೇಪ ವ್ಯಕ್ತ ಪಡಿಸಿದರು. ಪ್ರದೇಶ ಕಾಂಗ್ರೆಸ್ ನಾಯಕತ್ವದಲ್ಲಿ ಬದಲಾವಣೆ ಆಗಬೇಕು, ಗುಂಡೂರಾವ್ ಅವರನ್ನು ಪ್ರದೇಶ ಕಾಂಗ್ರೆಸ್ (ಐ) ಅಧ್ಯಕ್ಷರನ್ನಾಗಿ ಮಾಡಬೇಕೆಂದು ಎಲ್. ಜಿ. ಹಾವನೂರ್ ದಿನಾಂಕ ೨೦ ರಂದು ಬಹಿರಂಗವಾಗಿ ಹೇಳಿಕೆ ನೀಡಿದರು. ಇದು ಕಾಂಗ್ರೆ ವಲಯದಲ್ಲಿ ಭಾರೀ ಬಿರುಗಾಳಿಯನ್ನು ಎಬ್ಬಿಸಿತು. ಚಂದ್ರಪ್ರಭಾ ಅರಸು, ಬಿ. ಬಸವಲಿಂಗಪ್ಪ, ಹಾರನಹಳ್ಳಿ ರಾಮಸ್ವಾಮಿ, ಪ್ರಮೀಳಾ ನೇಸರ್ಗಿ, ಎಸ್. ಶಿವಪ್ಪ ಹಾವನೂರ್ ಅವರ ಹೇಳಿಕೆಗೆ ತೀವ್ರ ವಿರೋಧ ವ್ಯಕ್ತಪಡಿಸಿದರು. ಈ ಬಗ್ಗೆ ಕೆ.ಪಿ.ಸಿ.ಸಿ. ಅಧ್ಯಕ್ಷ ಪಾಟೀಲರು ಯಾವುದೇ ಕ್ರಮ ತೆಗೆದುಕೊಳ್ಳಲಿಲ್ಲ ಹಾಗೂ ಅದನ್ನು ತೀವ್ರವಾಗಿ ಪರಿಗಣಿಸಲಿಲ್ಲ. ಹಾವನೂರ್ ಅವರು ಹಿಂದಿನಿಂದಲೂ ಹಲವಾರು ಬಾರಿ ಈ ರೀತಿ ಹೇಳಿಕೊಂಡು ಬರುತ್ತಿದ್ದಾರೆ ಎಂದು ಪಾಟೀಲ್ ಹೇಳಿದರು.

ಚಿತ್ರದುರ್ಗದಲ್ಲಿ ದಿನಾಂಕ ೨೧ರಂದು ಜಿಲ್ಲಾ ಯುವ ಕಾಂಗ್ರೆಸ್ (ಐ) ಅಧಿವೇಶನ ನಡೆಯಿತು. ಕೆ.ಪಿ.ಸಿ.ಸಿ. (ಐ) ಪ್ರಧಾನ ಕಾರ್ಯದರ್ಶಿ ಕೆ. ಎಚ್. ಶ್ರೀನಿವಾಸ್ ಅಧಿವೇಶನವನ್ನು ಉದ್ಘಾಟಿಸಿ ಹುದ್ದೆಗೆ ಹಾತೊರೆಯದೆ ಪಕ್ಷದ ಶ್ರೇಯಸ್ಸಿಗೆ ಶ್ರಮಿಸುವಂತೆ ಕರೆ ನೀಡಿದರು. ಆರ್. ಮಂಜುನಾಥ್ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ ವಿಧಾನ ಸಭೆಗೆ ಮಾರ್ಚ್ ೫ ರಂದು ಚುನಾವಣೆಗಳು ನಡೆಯುತ್ತವೆಂದು ಮುಖ್ಯ ಚುನಾವಣಾ ಕಮೀಷನರ್ ಆರ್. ಕೆ. ತ್ರಿವೇದಿ ೨೨ ರಂದು ಪ್ರಕಟಿಸಿದರು. ನಮ್ಮ ಪಕ್ಷ ಚುನಾವಣೆಗೆ ಸಿದ್ಧವಾಗಿದೆ ಎಂದು ಪ್ರದೇಶ ಕಾಂಗ್ರೆ ಅಧ್ಯಕ್ಷ ಕೆ. ಎಚ್. ಪಾಟೀಲ್ ಪ್ರಕಟಿಸಿದರು.

ರಾಜ್ಯದಲ್ಲಿ ಜನತಾ ಪಕ್ಷದ ಸರ್ಕಾರ ಅಧಿಕಾರಕ್ಕೆ ಬರುವಂತೆ ಶ್ರಮಿಸಿದ ಪಾಪದ ಪ್ರಾಯಶ್ಚಿತ್ತಕ್ಕಾಗಿ ಚುನಾವಣೆಗಳಲ್ಲಿ ಕಾಂಗ್ರೆ ಪರ ತಾವು ಪ್ರಚಾರ ಮಾಡುವುದಾಗಿ, ಬಿ.ಜೆ.ಪಿ.ಯನ್ನು ತೊರೆದು ಬಂದಿದ್ದ ಅದರ ಮಾಜಿ ಅಧ್ಯಕ್ಷ ಎ.ಕೆ. ಸುಬ್ಬಯ್ಯ ೨೪-೧-೮೫ರಂದು ಹೇಳಿಕೆ ನೀಡಿದರು. ತಾವು ಕಾಂಗ್ರೆಸ್ ಪಕ್ಷ ಸೇರುವುದಿಲ್ಲ, ಯಾವುದೇ ಹುದ್ದೆ ಬಯಸುವುದಿಲ್ಲ, ಚುನಾವಣೆಯಲ್ಲಿ ಸ್ಪರ್ಧಿಸುವುದಿಲ್ಲ ಎಂದ ಅವರು, ರಾಜೀವ್ ಗಾಂಧಿ ಕಾಂಗ್ರೆನ ಕೆಟ್ಟ ಸಂಸ್ಕೃತಿಯನ್ನು ದೂರೀಕರಿಸಿ ಹೊಸ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಿದ್ದಾರೆ, ಸಾರ್ವಜನಿಕ ಜೀವನದ ಸುಧಾರಣೆಗೆ ಪ್ರಾಮಾಣಿಕ ಗಮನಹರಿಸಿದ್ದಾರೆ, ಆದುದರಿಂದ ತಾವು ಕಾಂಗ್ರೆ ಪರ ಪ್ರಚಾರ ಮಾಡುವುದಾಗಿ ಸುಬ್ಬಯ್ಯ ಹೇಳಿದರು. ಸುಬ್ಬಯ್ಯ ಸತ್ಯ ಹೇಳುತ್ತಿದ್ದಾರೆ ಎಂದು ಗುಂಡೂರಾವ್ ಅವರ ಹೇಳಿಕೆಯನ್ನು ಸ್ವಾಗತಿಸಿದರು. ಜನತಾ ಪಕ್ಷದ ಮಾಜಿ ಶಾಸಕ ಹಾಗೂ ಸ್ಥಳೀಯ ಸಂಸ್ಥೆ ಹಣಕಾಸು ಆಯೋಗದ ಅಧ್ಯಕ್ಷರಾಗಿದ್ದ ಕಲಘಟಗಿಯ ಫಾದರ್ ಜೇಕಬ್ ಕಾಂಗ್ರೆಸ್ (ಐ) ಪಕ್ಷ ಸೇರಿರುವುದಾಗಿ ಕೆ. ಎಚ್. ಪಾಟೀಲ್ ೨೭ ರಂದು ಪ್ರಕಟಿಸಿದರು.

ರಾಜ್ಯದಲ್ಲಿ ನಿಷ್ಕ್ರಿಯವಾಗಿರುವ ಜಿಲ್ಲಾ ತಾಲ್ಲೂಕು ಕಾಂಗ್ರೆ ಘಟಕಗಳನ್ನು ಗುರುತಿಸಿ ಅಕ್ಟೋಬರ್ ಹೊತ್ತಿಗೆ ಅವುಗಳನ್ನು ಪುನರ‍್ರಚಿಸುವುದಾಗಿ ಕಾಂಗ್ರೆ ಪ್ರಧಾನ ಕಾರ್ಯದರ್ಶಿ ಕೆ. ಜೆ. ಜಾರ್ಜ್ ಪ್ರಕಟಿಸಿದರು. ಜನತಾಪಕ್ಷದ ಸರ್ಕಾರದಿಂದ ನೇಮಕಗೊಂಡಿದ್ದ ಮಂಡಲಿ, ನಿಗಮಗಳ ಅಧ್ಯಕ್ಷರುಗಳು, ಸದಸ್ಯರುಗಳು ರಾಜೀನಾಮೆ ಸಲ್ಲಿಸಬೇಕೆಂದು ರಾಜ್ಯಪಾಲರು ದಿನಾಂಕ ೪ ಫೆಬ್ರವರಿ ೮೫ ರಂದು ಆದೇಶ ಹೊರಡಿಸಿದರು. ನಟ ವಜ್ರಮುನಿ ೧೨-೨-೮೫ ರಂದು ಕಾಂಗ್ರೆ ಸೇರಿದರು. ಚಿತ್ರನಟಿ ಮಂಜುಳಾ ಕಾಂಗ್ರೆ ಪಕ್ಷಕ್ಕೆ ತಮ್ಮ ಬೆಂಬಲ ವ್ಯಕ್ತಪಡಿಸಿದರು.

## ಅಭ್ಯರ್ಥಿಗಳ ಆಯ್ಕೆ - ಚುನಾವಣಾ ಸಿದ್ಧತೆ

ಕಾಂಗ್ರೆಸ್ (ಐ) ವರಿಷ್ಠರು ವಿಧಾನಸಭಾ ಚುನಾವಣೆಗೆ ಅಭ್ಯರ್ಥಿಗಳ ಆಯ್ಕೆಗೆ ಸೂತ್ರ ಒಂದನ್ನು ಜನವರಿ ೨೦ ರಂದು ರೂಪಿಸಿ ಪ್ರಕಟಿಸಿದರು. ಅದರ ಪ್ರಕಾರ ಯುವಕರೂ, ಜನಪ್ರಿಯರೂ, ಕ್ಷೇತ್ರಕ್ಕೆ ಪರಿಣಾಮಕಾರಿ ಸೇವೆ ಸಲ್ಲಿಸಿರುವವರೂ ಆಗಿರುವಂತಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕು. ಯಾವುದೇ ಗುಂಪುಗಾರಿಕೆಗೆ ಅವಕಾಶ ಇರಕೂಡದು ಎಂಬುದು ಈ ಸೂತ್ರವಾಗಿತ್ತು. ಕೆ.ಪಿ.ಸಿ.ಸಿ. ಅಧ್ಯಕ್ಷ ಕೆ. ಎಚ್. ಪಾಟೀಲರು ಬಹುತೇಕ ಎಲ್ಲ ಜಿಲ್ಲೆಗಳಲ್ಲಿ ಬ್ಲಾಕ್ ಕಾಂಗ್ರೆಸ್ (ಐ) ಸಮಿತಿಗಳನ್ನು ಪುನರ‍್ರಚಿಸಿದ್ದರು. ಚುನಾವಣೆ ಟಿಕೆಟ್ ಕೋರಿ ಬಂದಿದ್ದ ಅರ್ಜಿಗಳನ್ನು ಪರಿಶೀಲಿಸಲು ಪ್ರಾರಂಭಿಸಿದರು. ದೆಹಲಿಯ ವರಿಷ್ಠರೂ ಕೂಡಾ ಪಕ್ಷದ ಪ್ರಧಾನ ಕಾರ್ಯದರ್ಶಿ ಹಾಗೂ ಕರ್ನಾಟಕ ಕಾಂಗ್ರೆ ವ್ಯವಹಾರಗಳ ಹೊಣೆ ಹೊತ್ತಿದ್ದ ಎ. ಕೆ. ಆಂಟೋನಿಯವರ ಮೂಲಕ ವರದಿಯನ್ನು ತರಿಸಿಕೊಂಡು ಪರಿಶೀಲಿಸುತ್ತಿದ್ದಾರೆ ಎಂಬ ಸುದ್ದಿಯೂ ತಿಳಿದುಬಂದಿತು.

ದಿನಾಂಕ ೨೧ ಜನವರಿ ೮೫ರಂದು ಪ್ರಧಾನ ಕಾರ್ಯದರ್ಶಿ ಆಂಟೋನಿಯವರು 'ರಾಜ್ಯದಲ್ಲಿ ಚುನಾವಣಾ ಪೂರ್ವ ಸಮೀಕ್ಷೆ ನಡೆಸಲಾಗುವುದು, ಜನರ ಜೊತೆ ಒಳ್ಳೆಯ ಸಂಪರ್ಕ ಇಟ್ಟುಕೊಂಡಿರುವವರಿಗೆ ಮಾತ್ರ ಚುನಾವಣೆಗಳಲ್ಲಿ ಸ್ಪರ್ಧಿಸಲು ಅವಕಾಶ ನೀಡಲಾಗುವುದು' ಎಂದು ಬೆಂಗಳೂರಿನಲ್ಲಿ ಸ್ಪಷ್ಟಪಡಿಸಿದರು. ಅವರು ಕೆ.ಪಿ.ಸಿ.ಸಿ. ಅಧ್ಯಕ್ಷ ಕೆ. ಎಚ್. ಪಾಟೀಲ್, ಪ್ರತಿಪಕ್ಷದ ನಾಯಕ ವೀರಪ್ಪ ಮೊಯಿಲಿ, ವಿಧಾನ ಪರಿಷತ್ತಿನ ವಿರೋಧ ಪಕ್ಷದ ನಾಯಕ ಟಿ. ಎನ್. ನರಸಿಂಹಮೂರ್ತಿ ಹಾಗೂ ಇತರ ಪ್ರಮುಖ ನಾಯಕರುಗಳೊಡನೆ ಸಮಾಲೋಚನೆ ನಡೆಸಿದರು. ರಾಜ್ಯದ ನಾಯಕತ್ವ ಬದಲಾವಣೆಯ ಬಗ್ಗೆ ತಮಗೆ ಯಾವುದೇ ಒತ್ತಾಯಗಳೂ ಬಂದಿಲ್ಲ ಎಂದ ಅವರು ಚುನಾವಣಾಪೂರ್ವ ಸಮೀಕ್ಷಾ ವರದಿಯನ್ನು ಪ್ರಧಾನ ಮಂತ್ರಿಗಳಿಗೆ ಸಲ್ಲಿಸಲಾಗುವುದೆಂದರು.

ರಾಜ್ಯ ವಿಧಾನಸಭೆಗೆ ಮಾರ್ಚ್ ೫ ರಂದು ಚುನಾವಣೆ ನಡೆಯುವುದಾಗಿ ನಿಗದಿ ಆಯಿತು. ಕಾಂಗ್ರೆ ಕಚೇರಿಯ ಮುಂದೆ ಟಿಕೆಟ್‌ಗಾಗಿ ನೂಕುನುಗ್ಗಲು ಆರಂಭವಾಯಿತು. ಬಿರುಸಿನ ಚಟುವಟಿಕೆ ಶುರುವಾಯಿತು. ೨೩-೧-೮೫ರಂದು ರಾಜ್ಯ ಚುನಾವಣಾ ಸಮಿತಿಯನ್ನು ಎ.ಐ.ಸಿ.ಸಿ. ಅಧ್ಯಕ್ಷ ರಾಜೀವ್‌ಗಾಂಧಿ ಪುನರ್‌ರಚಿಸಿದರು. ಪ್ರದೇಶ ಕಾಂಗ್ರೆ ಅಧ್ಯಕ್ಷ ಕೆ. ಎಚ್. ಪಾಟೀಲ್ ಸಂಚಾಲಕರಾಗಿದ್ದ ಈ ಸಮಿತಿಗೆ ವೀರಪ್ಪ ಮೊಯಿಲಿ, ಬಿ. ಶಿವಣ್ಣ, ಬಿ. ಶಂಕರಾನಂದ, ವೀರೇಂದ್ರ ಪಾಟೀಲ್, ಕೊಲ್ಲೂರು ಮಲ್ಲಪ್ಪ, ಸಿ. ಕೆ. ಜಾಫರ್ ಷರೀಫ್, ಆಸ್ಕರ್ ಫರ್ನಾಂಡಿಸ್, ಎಚ್. ಸಿ. ಶ್ರೀಕಂಠಯ್ಯ, ಧರ್ಮಸಿಂಗ್, ಜನಾರ್ಧನ ಪೂಜಾರಿ, ಡಿ. ಕೆ. ತಾರಾದೇವಿ, ಮಾರ್ಗರೇಟ್ ಆಳ್ವ, ಎಸ್. ಬಿ. ಸಿದ್ನಾಳ್ ಸದಸ್ಯರಾಗಿದ್ದರು. ಪ್ರದೇಶ ಯುವಕ ಕಾಂಗ್ರೆಸ್ (ಐ) ಅಧ್ಯಕ್ಷರು. ಕಾಂಗ್ರೆ ಸೇವಾದಳ ಮತ್ತು ಮಹಿಳಾ ವಿಭಾಗದ ಮುಖ್ಯಸ್ಥರನ್ನು ಪದನಿಮಿತ್ತ ಸದಸ್ಯರನ್ನಾಗಿ ನೇಮಿಸಲಾಗಿತ್ತು. ಬಂಗಾರಪ್ಪ ಹಾಗೂ ಗುಂಡೂರಾವ್ ಇವರುಗಳನ್ನು ಸಮಿತಿಯಿಂದ ಕೈಬಿಟ್ಟಿದ್ದು ವಿಶೇಷವಾಗಿತ್ತು. ಕಾಂಗ್ರೆಸ್ (ಐ) ಟಿಕೆಟ್ ಬಯಸಿ ೧೨ ಸಾವಿರ ಅರ್ಜಿಗಳು ಬಂದಿದ್ದವು. ಅರ್ಜಿ ಸ್ವೀಕರಣೆ ೨೫-೧-೮೫ಕ್ಕೆ ಮುಗಿಯಿತು. ರಾಜ್ಯ ಚುನಾವಣಾ ಸಮಿತಿ ಜನವರಿ ೨೬ ರಿಂದ ಮೂರು ದಿನ ಸಭೆ ಸೇರಿ ಅರ್ಜಿಗಳನ್ನು ಪರಿಶೀಲಿಸಿತು. ಎ.ಐ.ಸಿ.ಸಿ. ವೀಕ್ಷಕರಾಗಿ ದಿಗ್ವಿಜಯಸಿಂಗ್, ಶ್ರೀಮತಿ ಪ್ರಭಾ ರಾವ್ ಬಂದಿದ್ದರು.

ವೀಕ್ಷಕರು, ಎಲ್ಲಾ ಜಿಲ್ಲಾ ಹಾಗೂ ಬ್ಲಾಕ್ ಕಾಂಗ್ರೆ ಅಧ್ಯಕ್ಷರನ್ನು, ಸದಸ್ಯರುಗಳನ್ನು ಭೇಟಿ ಮಾಡಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿದರು. ವೀರಪ್ಪ ಮೊಯಿಲಿ, ಗುಂಡೂರಾವ್ ಅವರುಗಳ ನಿವಾಸದಲ್ಲಿ ಆಕಾಂಕ್ಷಿಗಳ ಕಾರ್ಯಕರ್ತರ ದಂಡೇ ನೆರೆದಿತ್ತು. ಸುಮಾರು ಮೂರು ಸಾವಿರ ಕಾರ್ಯಕರ್ತರುಗಳನ್ನು ಅವರು ಭೇಟಿಯಾಗಿ ಅರ್ಜಿ ಸ್ವೀಕರಿಸಿದರೆಂದು ತಿಳಿದು ಬಂದಿತು. ಒಂದೊಂದು ಕ್ಷೇತ್ರಕ್ಕೆ ४೦-೫೦ ಸ್ಪರ್ಧಿಗಳು ಆಕಾಂಕ್ಷಿಗಳಾಗಿದ್ದರು.

ಕರ್ನಾಟಕ ವಿಧಾನಸಭೆಯ ಅಭ್ಯರ್ಥಿಗಳ ಪಟ್ಟಿ ಸಿದ್ಧಪಡಿಸಲು ಎ.ಐ.ಸಿ.ಸಿ. ಕೆ. ಕರುಣಾಕರನ್ ಅಧ್ಯಕ್ಷತೆಯಲ್ಲಿ ಒಂದು ಉಪಸಮಿತಿಯನ್ನು ದಿನಾಂಕ ೨೯ ರಂದು ರಚಿಸಿತು. ಎ. ಕೆ. ಆಂಟೋನಿ, ಕುಮಾರಿ ಕಮಲಾ ಕುಮಾರ್, ಶ್ರೀಮತಿ ಸುಶೀಲಾ ರೋಹಟಗಿ, ಶ್ರೀಮತಿ ಪ್ರಭಾ ರಾವ್, ದಿಗ್ವಿಜಯಸಿಂಗ್ ಇದರ ಸದಸ್ಯರಾಗಿದ್ದರು. ಈ ಉಪಸಮಿತಿ ತಯಾರಿಸುವ ಪಟ್ಟಿಯನ್ನು ಅಂತಿಮ ಒಪ್ಪಿಗೆಗಾಗಿ ಫೆಬ್ರುವರಿ ೩ ರಂದು ಕೇಂದ್ರ ಸಂಸದೀಯ ಮಂಡಲಿಗೆ ಒಪ್ಪಿಸಲಾಗುವುದೆಂದು ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಶ್ರೀಕಾಂತ ವರ್ಮಾ ದೆಹಲಿಯಲ್ಲಿ ಹೇಳಿದರು. ಕಾಂಗ್ರೆಸ್ ಅಭ್ಯರ್ಥಿಗಳ ಆಯ್ಕೆಗೆ ಹತ್ತು ಅಂಶಗಳ ಕಾರ್ಯಸೂಚಿಯನ್ನು ಜನವರಿ ೩೧ ರಂದು ಕೇಂದ್ರ ಚುನಾವಣಾ ಸಮಿತಿ ರೂಪಿಸಿತು. ಕಳೆದ ಲೋಕಸಭಾ ಚುನಾವಣೆಯಲ್ಲಿ ಪರಾಭವಗೊಂಡ ಕ್ಷೇತ್ರಗಳ ಶಾಸಕರಿಗೆ ಟಿಕೆಟ್ ನಿರಾಕರಣೆ, ಲೋಕಸಭಾ ಚುನಾವಣೆಗಳಲ್ಲಿ ಪರಾಭವಗೊಂಡ ಅಭ್ಯರ್ಥಿಗಳು ವಿಧಾನಸಭಾ ಚುನಾವಣೆಗೆ ಸ್ಪರ್ಧಿಸುವಂತಿಲ್ಲ, ಲೋಕ ಸಭಾ ಚುನಾವಣೆಯಲ್ಲಿ ಅಭ್ಯರ್ಥಿಗಳು ಅತೀ ಕಡಿಮೆ ಅಂತರದಿಂದ ಸೋತಿದ್ದರೆ ಅಂತಹ ಅಭ್ಯರ್ಥಿಗಳಿಗೆ ವಿಧಾನಸಭೆಗೆ ಟಿಕೆಟ್ ನೀಡುವ ಬಗ್ಗೆ ಆಳವಾದ ಪರಿಶೀಲನೆ, ४೫ ವರ್ಷದ ಒಳಗಿರುವವರಿಗೆ ಆದ್ಯತೆ, ಕಾಂಗ್ರೆಸ್ ಸೇವಾದಳ, ಯುವ ಕಾಂಗ್ರೆಸ್, ಭಾರತ ರಾಷ್ಟ್ರೀಯ ವಿದ್ಯಾರ್ಥಿ ಸಂಘ (NSUI), ಪಕ್ಷದ ಕಾರ್ಮಿಕ ವಿಭಾಗಗಳಿಗೆ ಸೂಕ್ತ ಪ್ರಾತಿನಿಧ್ಯ ನೀಡುವುದು ಇವೇ ಕಾರ್ಯಸೂಚಿಯ ಮುಖ್ಯ ಅಂಶಗಳಾಗಿದ್ದವು.

ದಿನಾಂಕ ೬-೨-೮೫ರಂದು ಕಾಂಗ್ರೆ ಅಭ್ಯರ್ಥಿಗಳ ಪಟ್ಟಿ ಬಿಡುಗಡೆಯಾಗಿತ್ತು. ಗುಂಡೂರಾವ್, ಶ್ರೀಕಂಠಯ್ಯನವರಿಗೆ ಟಿಕೆಟ್ ನೀಡಿರಲಿಲ್ಲ. ಕೆ. ಎಚ್. ಪಾಟೀಲ್, ವೀರಪ್ಪ ಮೊಯಿಲಿ, ಬಂಗಾರಪ್ಪ, ಕೆ. ಎಸ್. ನಾಗರತ್ನಮ್ಮ ಮುಂತಾದ ಹಳಬರಿಗೆ ಟಿಕೆಟ್ ನೀಡಲಾಗಿತ್ತು. ವಿಸರ್ಜಿತ ವಿಧಾನಸಭೆಯ ೮೮ ಕಾಂಗ್ರೆ ಸದಸ್ಯರಲ್ಲಿ ೨೮ ಲಿಂಗಾಯಿತರು, ೧४ ಒಕ್ಕಲಿಗರು, ಹಿಂದುಳಿದ ವರ್ಗಗಳವರು ೨೮, ಬ್ರಾಹ್ಮಣರು ೩, ಪರಿಶಿಷ್ಟ ಜಾತಿಯವರು ೩ ಮತ್ತು ಮುಸಲ್ಮಾನರು ಒಬ್ಬರು ಇದ್ದರು. ಈಗ ४೩ ಲಿಂಗಾಯಿತರು, ೩೨ ಒಕ್ಕಲಿಗರು, ೧೯ ಮುಸಲ್ಮಾನರು, ೩೫ ಹರಿಜನ-ಗಿರಿಜನರು, ೬೦ ಹಿಂದುಳಿದ ವರ್ಗದವರು, ೮ ಬ್ರಾಹ್ಮಣರು, ರೆಡ್ಡಿಗಳು ೩ ಇತರ ಸಣ್ಣ ಪುಟ್ಟ

ಜಾತಿಯವರು ೪, ಜೈನರು ೪ ಈ ರೀತಿಯಾಗಿ ಟಿಕೆಟ್ ಹಂಚಿಕೆ ಮಾಡಲಾಗಿತ್ತು. ೪೫ ವಯಸ್ಸಿಗಿಂತ ಕಡಿಮೆ ಇರುವ ೧೨೩ ಜನರಿಗೆ ೪೫ರಿಂದ ೬೦ ವಯಸ್ಸಿನೊಳಗಿರುವ ೯೪ ಜನರಿಗೆ ೬೦ ವಯಸ್ಸಿನ ಮೇಲಿರುವ ಕೇವಲ ೭ ಜನರಿಗೆ ಟಿಕೆಟ್ ನೀಡುವ ಮೂಲಕ ಯುವಕರಿಗೆ ಪ್ರಾಧಾನ್ಯತೆ ನೀಡಲಾಗಿತ್ತು. ಹಾಲಿ ೮೮ ವಿಧಾನಸಭಾ ಸದಸ್ಯರ ಪೈಕಿ ೬೨ ಜನರಿಗೆ ಪುನಃ ಟಿಕೆಟ್ ನೀಡಲಾಗಿತ್ತು. ೫೭ ಜನ ಹೊಸಬರಿಗೆ ಅವಕಾಶ ಕಲ್ಪಿಸಲಾಗಿತ್ತು. ೧೪ ಮಹಿಳೆಯರಿಗೆ ಟಿಕೆಟ್ ನೀಡಲಾಗಿತ್ತು. ಸೇವಾದಳದಿಂದ ಬಂದ ಮೂವರಿಗೆ ಟಿಕೆಟ್ ನೀಡಲಾಗಿತ್ತು. ದೇಶದ ಇತರ ೯ ರಾಜ್ಯಗಳಲ್ಲಿ ನಡೆಯುತ್ತಿರುವ ವಿಧಾನಸಭಾ ಚುನಾವಣೆಗಳಲ್ಲಿಯೂ ಕೂಡಾ ಹಾಲಿ ಸದಸ್ಯರಾಗಿದ್ದ ೧೦೦೦ ಜನರಿಗೆ ಟಿಕೆಟ್ ನಿರಾಕರಿಸಲಾಗಿತ್ತು. ಮೊದಲ ಬಾರಿಗೆ ವ್ಯವಸ್ಥಿತವಾದ ರೀತಿಯಲ್ಲಿ ಟಿಕೆಟ್‌ಗಳನ್ನು ನೀಡಲು ಕ್ರಮ ತೆಗೆದುಕೊಳ್ಳಲಾಗಿತ್ತು. ಟಿಕೆಟ್ ನೀಡಿಕೆಯ ಬಗ್ಗೆ ಅಸಮಾಧಾನಗೊಂಡಿದ್ದ ಜಾಫರ್ ಷರೀಫ್ ರಾಜೀನಾಮೆ ನೀಡಿದ್ದಾರೆ ಎಂಬ ವದಂತಿಗಳು ಹರಡಿದವು. ಆದರೆ ಅವರು ಅದನ್ನು ಅಲ್ಲಗಳೆದರು.

೧೨ ಕ್ಷೇತ್ರಗಳಲ್ಲಿ ನೇರ ಸ್ಪರ್ಧೆ, ೨೨ ಕ್ಷೇತ್ರಗಳಲ್ಲಿ ತ್ರಿಕೋಣ ಸ್ಪರ್ಧೆ, ಉಳಿದ ಕ್ಷೇತ್ರಗಳಲ್ಲಿ ಬಹುಮುಖ ಸ್ಪರ್ಧೆಯನ್ನು ಕಾಂಗ್ರೆ ಎದುರಿಸಬೇಕಾಗಿ ಬಂದಿತು. ಜಿ. ಪುಟ್ಟಸ್ವಾಮಿಗೌಡರಿಗೆ ಟಿಕೆಟ್ ನೀಡಿಲ್ಲವೆಂದು, ೧೪-೨-೮೫ ರಂದು ನಡೆದ ಹಾಸನ ಜಿಲ್ಲಾ ಕಾಂಗ್ರೆ ಸಮಿತಿ ಸಭೆಯಲ್ಲಿ, ಎ.ಐ.ಸಿ.ಸಿ. ವೀಕ್ಷಕ ತಂಗಬಾಲು-ಅಮರಜಿತ್ ಕೌರ್, ಎಚ್.ಎನ್. ನಂಜೇಗೌಡ ಇವರ ಎದುರಿನಲ್ಲಿ ಮಾರಾಮಾರಿ ನಡೆಯಿತು. ಎಚ್. ಡಿ ದೇವೇಗೌಡರ ವಿರುದ್ಧ ಹೊಳೇನರಸಿಪುರದಿಂದ ಸ್ಪರ್ಧಿಸಲು ಕಾಂಗ್ರೆ ಟಿಕೆಟ್ ಪಡೆದಿದ್ದ ಟಿ. ಎಲ್. ಕೃಷ್ಣಕುಮಾರ್ ಚುನಾವಣಾ ಕಣದಿಂದ ನಿವೃತ್ತರಾಗಲು ವರಿಷ್ಠರ ಅನುಮತಿ ಕೋರಿದರು. ಕಾಂಗ್ರೆ ಟಿಕೆಟ್ ಹಂಚಿಕೆಯಲ್ಲಿ ಎಲ್ಲವೂ ಸರಿಯಾಗಿಲ್ಲ ಎಂಬ ಅಂಶ ಇದರಿಂದ ಬೆಳಕಿಗೆ ಬಂತು. ಟಿಕೆಟ್ ನೀಡದಿದ್ದರೂ ಕೂಡಾ ತಾವು ಕಾಂಗ್ರೆ ಪಕ್ಷ ಬಿಡುವುದಿಲ್ಲ ಎಂದು ಗುಂಡೂರಾವ್ ಪ್ರಕಟಿಸಿದರು. ಅಧಿಕೃತ ಅಭ್ಯರ್ಥಿಗಳ ವಿರುದ್ಧ ಸ್ಪರ್ಧಿಸಿದ್ದ ಜಿ. ಪುಟ್ಟಸ್ವಾಮಿಗೌಡ ಹಾಗೂ ಬಿ.ಎಚ್. ಲಕ್ಷ್ಮಣಯ್ಯ ಇವರುಗಳನ್ನು ಪಕ್ಷದಿಂದ ವಜಾ ಮಾಡಲು ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯಿಸಲಾಯಿತು. ೧೮-೨-೮೫ ರಂದು ಕಾಂಗ್ರೆನಿಂದ ೧೩ ಬಂಡಾಯ ಅಭ್ಯರ್ಥಿಗಳನ್ನು ಸಸ್ಪೆಂಡ್ ಮಾಡಲಾಯಿತು. ಬಾಪೂರಾವ್ ಹುಲ್ಸೂರ್‌ಕರ್, ಬಿ. ಭಾಸ್ಕರಶೆಟ್ಟಿ, ವಿ. ಎಸ್. ಕೌಜಲಗಿ ಅದರಲ್ಲಿ ಪ್ರಮುಖರು. ಉಳಿದಂತೆ ಎಸ್. ಎಂ. ಕಲೀಮುದ್ದೀನ್- ಬಸವಕಲ್ಯಾಣ, ಚಂದ್ರಶೇಖರ್‌ರೆಡ್ಡಿ ದೇಶಮುಖ - ಸೇಡಂ, ಎಸ್. ಕೆ. ಸಿದ್ದಣ್ಣ-ಶಿರಾ, ಎನ್. ಬಸವಯ್ಯ-ಚಿಕ್ಕನಾಯಕನಹಳ್ಳಿ, ಎ. ಸೋಮಶೇಖರರೆಡ್ಡಿ - ವರ್ತೂರು, ಜಿ. ರಾಜೂಗೌಡ-ಹನೂರು, ಅರ್ಷದ್ ಮೀರ್ ಮಹಮದ್ ಖಾನ್-ನರಸಿಂಹರಾಜ (ಮೈಸೂರು), ಟಿ ಭಾಸ್ಕರ ಶೆಟ್ಟಿ - ಕಾಪು, ಪಿ. ಬಿ. ಓಂಕಾರಮೂರ್ತಿ-ಕಡೂರು, ಹೆಚ್. ಕೆ. ಲಕ್ಷ್ಮಣಗೌಡ-ಶಿಕಾರಿಪುರ, ಎನ್. ಬಿ. ಶೂರ್ಪಾಲಿ-ಧಾರವಾಡ ನಗರ ಇವರುಗಳು ಸಸ್ಪೆಂಡ್ ಆದ ಬಂಡಾಯ ಅಭ್ಯರ್ಥಿಗಳಾಗಿದ್ದರು.

ಜಿ. ಕೃಷ್ಣಪ್ಪ-ದೊಡ್ಡಬಳ್ಳಾಪುರ ಹಾಗೂ ಕೆ. ಜಿ. ಚನ್ನಾನಾಯಕ - ಹೊಳೆಹೊನ್ನೂರು ಇವರುಗಳು ಸ್ಪರ್ಧೆಯಿಂದ ಹಿಂದೆ ಸರಿದಿದ್ದಾರೆ ಎಂದೂ, ಜಿ. ಪುಟ್ಟಸ್ವಾಮಿಗೌಡರೂ ಸ್ಪರ್ಧೆಯಿಂದ ಹಿಂದೆ ಸರಿಯುವ ಆಶಾಭಾವನೆ ಇರುವುದರಿಂದ ಅವರ ಮೇಲೆ ಕ್ರಮ ತೆಗೆದುಕೊಂಡಿಲ್ಲ ಎಂದು ಕೆ. ಎಚ್ ಪಾಟೀಲ್ ಹೇಳಿದರು. ಮಡಿಕೇರಿ ಹಾಗೂ ಚಿತ್ರದುರ್ಗ ಜಿಲ್ಲಾ ಕಾಂಗ್ರೆ ಕಾರ್ಯಕರ್ತರಲ್ಲಿ ಟಿಕೆಟ್ ನೀಡಿಕೆ ವಿಚಾರದಲ್ಲಿ ತೀವ್ರ ಅಸಮಾಧಾನ ಉಂಟಾಗಿದೆ ಎಂಬ ವರದಿಗಳು ಬಂದವು. ನಮ್ಮ ಪಕ್ಷ ಚುನಾವಣೆಯಲ್ಲಿ ೨೦೦ ಸ್ಥಾನಗಳನ್ನು ಪಡೆಯುತ್ತದೆ. ಶಾಸಕಾಂಗ ಪಕ್ಷದ ನಾಯಕನನ್ನಾಗಿ ನನ್ನನ್ನು ಆರಿಸಿದರೆ ನಾನು ಹೊಣೆ ಹೊರಲು ಸಿದ್ಧ ಎಂದು ಕೆ ಎಚ್. ಪಾಟೀಲರು ಹೇಳಿದ್ದು ಕಾಂಗ್ರೆ ನಾಯಕರ ವಲಯದಲ್ಲಿ ತೀವ್ರ ವಿವಾದ ಹಾಗೂ ಅಸಮಾಧಾನ ಉಂಟುಮಾಡಿತು. ಕೊನೆಗೆ ಕೆ. ಎಚ್. ಪಾಟೀಲರೇ ನಾಯಕತ್ವ ವಿಷಯದಲ್ಲಿ ಅನಗತ್ಯ ಗೊಂದಲ, ವಿವಾದ ಬೇಡ ಎಂದು ಹೇಳಬೇಕಾಯಿತು. ಪಕ್ಷದ ನಾಯಕರಾದ ಗುಂಡೂರಾವ್, ವೀರಪ್ಪ ಮೊಯಿಲಿ, ಬಂಗಾರಪ್ಪ ಅವರ ಬಗ್ಗೆ ತಾವು ದ್ವೇಷ ಮನೋಭಾವ ಹೊಂದಿಲ್ಲವೆಂದು ಅವರು ದಿನಾಂಕ ೨೫.೨.೮೫ ರಂದು ಹುಬ್ಬಳ್ಳಿಯಲ್ಲಿ ಸ್ಪಷ್ಟಪಡಿಸಿದರು.

'ನಿಷ್ಠಾವಂತ ಕಾಂಗ್ರೆಸ್ಸಿಗರು ರದ್ದಿ ಕಾಗದಕ್ಕಿಂತ ಕಡೆಯಾಗಿದ್ದಾರೆ. ಸಂಜಯ ಗಾಂಧಿ ಬೆಂಬಲಿಗರನ್ನು ಉದ್ದೇಶಪೂರ್ವಕವಾಗಿ ಕಡೆಗಣಿಸಲಾಗಿದೆ. ರಾಮಕೃಷ್ಣ ಹೆಗಡೆಯವರ ಮೇಲಿನ ಅನಗತ್ಯ ಟೀಕೆಗೆ ಅರ್ಥ ಇಲ್ಲ, ಅಭ್ಯರ್ಥಿಗಳ ಆಯ್ಕೆ ಸರಿಯಾಗಿಲ್ಲ, ಪಂಜಾಬ್ ಸಮಸ್ಯೆಯನ್ನು ಬಗೆಹರಿಸುವಲ್ಲಿ ಕಾಂಗ್ರೆ ವಿಫಲವಾಗಿದೆ' ಎಂಬ ಟೀಕೆಗಳು ಕಾಂಗ್ರೆ ವಲಯದಿಂದಲೇ ಕೇಳಿಬಂದಿದ್ದು ಪಕ್ಷದಲ್ಲಿದ್ದ ಅಸಮಾಧಾನವನ್ನು ಬಹಿರಂಗಗೊಳಿಸಿತು. ಇದು ಚುನಾವಣೆಗಳಲ್ಲಿ ಕಾಂಗ್ರೆಗೆ ಭಾರೀ ಹೊಡೆತ ನೀಡಲು ಕಾರಣವಾಯಿತೆಂದೇ ಹೇಳಬಹುದು.

## ಚುನಾವಣಾ ಪ್ರಚಾರ

ಪ್ರಧಾನ ಮಂತ್ರಿ ರಾಜೀವ್ ಗಾಂಧಿಯವರು ಫೆಬ್ರವರಿ ೧೪ ರಂದು ಹುಬ್ಬಳ್ಳಿ, ಹಾಸನ, ಮಡಿಕೇರಿಗಳಲ್ಲಿ ಪ್ರವಾಸ ಮಾಡಿ ಚುನಾವಣಾ ಪ್ರಚಾರ ಕೈಗೊಂಡರು. ಮತ್ತೆ ಫೆಬ್ರವರಿ ೨೭ ಮತ್ತು ೨೮ ರಂದು ಕ್ರಮವಾಗಿ ಬೆಂಗಳೂರು, ರಾಮನಗರ, ಮಂಡ್ಯ ಚಿಂತಾಮಣಿ, ತುಮಕೂರು, ಹಿರಿಯೂರು, ಬಳ್ಳಾರಿ, ಗದಗ್, ಬಾಗಲಕೋಟೆ, ಗೋಕಾಕ್, ಉಗಾರಗೋಳ, ವಿಜಾಪುರ, ಕಲಬುರ್ಗಿ, ಹುಮ್ನಾಬಾದ್‌ಗಳಲ್ಲಿ ಚುನಾವಣಾ ಪ್ರಚಾರ ಭಾಷಣಗಳನ್ನು ಮಾಡಿದರು. ಕ್ರಿಯಾಶಾಲಿ ಸರ್ಕಾರ ಕಾಂಗ್ರೆನಿಂದ ಮಾತ್ರ ಸಾಧ್ಯ, ಅಭಿವೃದ್ಧಿಗಾಗಿ ಕೇಂದ್ರ ಹಾಗೂ ರಾಜ್ಯಗಳಲ್ಲಿ ಏಕ ಪಕ್ಷದ ಸರ್ಕಾರ ಅತ್ಯಗತ್ಯ, ತತ್ವಾಧಾರಿತ ರಾಜಕೀಯ ಕಾಂಗ್ರೆ ಗುರಿಯಾಗಿದೆ, ಜನತಾ ಸರ್ಕಾರದ ದೋಷಪೂರಿತ ಆಡಳಿತದಿಂದ ಆರ್ಥಿಕ ವ್ಯವಸ್ಥೆ ಹದಗೆಟ್ಟಿದೆ. ಜನತಾ ಪಕ್ಷದ ಅಸಾಮರ್ಥ್ಯವೇ ಇಂದಿನ ಚುನಾವಣೆಗಳಿಗೆ ಕಾರಣವಾಯಿತು. ರಾಜ್ಯದಲ್ಲಿ ಕಾಂಗ್ರೆ ಅಧಿಕಾರಕ್ಕೆ ಬಂದರೆ ಇಲ್ಲಿಂದಲೇ ಆಡಳಿತ ನಡೆಯುತ್ತದೆಯೇ ಹೊರತು ದೆಹಲಿಯಿಂದ ಅಲ್ಲ ಎಂಬುದು ರಾಜೀವ್ ಗಾಂಧಿಯವರ ಭಾಷಣದ ಮುಖ್ಯಾಂಶಗಳಾಗಿದ್ದವು. ರಾಜೀವ್ ಗಾಂಧಿಯವರು ೧೦ ರಾಜ್ಯಗಳು, ೧ ಕೇಂದ್ರಾಡಳಿತ ಪ್ರದೇಶಕ್ಕೆ ನಡೆದ ಈ ಚುನಾವಣೆಯಲ್ಲಿ ೨೦ ದಿನಗಳ ಕಾಲ ಪ್ರವಾಸ ಕೈಗೊಂಡು ಈ ೧೧ ರಾಜ್ಯಗಳ ೨೫೩೩ ವಿಧಾನಸಭಾ ಕ್ಷೇತ್ರಗಳಿಗೆ ಭೇಟಿ ನೀಡಿ, ೨೧೯ ಬಹಿರಂಗ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಕೇಂದ್ರ ಆರೋಗ್ಯ ಸಚಿವರಾದ ಮೊಹಸೀನಾ ಕಿದ್ವಾಯ್‌ರವರು ೨೬ ರಿಂದ ಮೂರು ದಿನಗಳ ಕಾಲ ರಾಜ್ಯದಲ್ಲಿ ಚುನಾವಣಾ ಪ್ರಚಾರ ಕೈಗೊಂಡರು.

ಚಲನಚಿತ್ರ ನಟಿ ಮಂಜುಳಾ ಫೆಬ್ರವರಿ ೨೮ ರಿಂದ ಮಾರ್ಚ್ ೩ ರವರೆಗೆ ಧಾರವಾಡ, ಬಿಜಾಪುರ, ಬಳ್ಳಾರಿ ಜಿಲ್ಲೆಗಳಲ್ಲಿ ಕಾಂಗ್ರೆ ಪಕ್ಷದ ಪರವಾಗಿ ಚುನಾವಣಾ ಪ್ರಚಾರ ಮಾಡಿದರು. ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಶ್ರೀಕಾಂತ ವರ್ಮಾ ೨೭ರಂದು ಬೆಂಗಳೂರಿನಲ್ಲಿ ಪತ್ರಿಕಾ ಗೋಷ್ಠಿಯಲ್ಲಿ ಮಾತನಾಡಿ ಖಲಿಸ್ತಾನವಾದಿಗಳ ಜೊತೆ ಜಾರ್ಜ್ ಫರ್ನಾಂಡಿಸ್ ಇಂಗ್ಲೆಂಡಿನಲ್ಲಿ ಒಂದು ಸಮಾರಂಭದಲ್ಲಿ ಭಾಗವಹಿಸಿದ್ದರು ಎಂಬ ಆರೋಪ ಮಾಡಿದರು. ದಿನಾಂಕ ೨-೩-೮೫ ರಂದು ಕೇರಳ ಮುಖ್ಯಮಂತ್ರಿ ಕೆ. ಕರುಣಾಕರನ್ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರವಾಸ ಮಾಡಿ ಚುನಾವಣಾ ಪ್ರಚಾರ ಮಾಡಿದರು. ಚುನಾವಣಾ ಪ್ರಚಾರದಲ್ಲಿ ಅಂತಹ ಕಾವು ಇರಲಿಲ್ಲ. ೨೧-೨-೮೫ ರಂದು ಹುಣಸೂರಿನಲ್ಲಿ ಕಾಂಗ್ರೆ ಜನತಾ ಕಾರ್ಯಕರ್ತರ ನಡುವೆ ಘರ್ಷಣೆಯಾಗಿ ಗೋಲೀಬಾರ್ ಆಯಿತು. ಮಾಜಿ ಮಂತ್ರಿ ಚಂದ್ರಪ್ರಭಾ ಅರಸು ಕಾಂಗ್ರೆಗೆ ಸೇರಿದ್ದರ ಬಗ್ಗೆ ಕಾರ್ಯಕರ್ತರು ಪ್ರತಿಭಟಿಸುತ್ತಿದ್ದರೆಂದು ತಿಳಿದು ಬಂದಿತ್ತು. ಇದನ್ನು ಬಿಟ್ಟರೆ ಚುನಾವಣಾ ಪ್ರಚಾರ ಶಾಂತಿಯುತವಾಗಿತ್ತು. ಬಂಗಾರಪ್ಪನವರು ಫೆಬ್ರವರಿ ೧೬ ರಂದು ಪತ್ರಿಕಾ ಗೋಷ್ಠಿಯಲ್ಲಿ, ಚುನಾವಣಾ ನಿಧಿಗಾಗಿ ಕಮೀಷನ್ ಮೇಲೆ ಜನತಾ ಸರ್ಕಾರ ಸ್ಪಿರಿಟ್ ಪೂರೈಕೆ ಮಾಡುತ್ತಿದೆ, ಈ ಬಗ್ಗೆ ತನಿಖೆ ಆಗಬೇಕೆಂದು ಒತ್ತಾಯಿಸಿದರು.

ದಿನಾಂಕ ೧೯ ರಂದು ವೀರಪ್ಪ ಮೊಯಿಲಿಯವರು ಜನತಾ ಸರ್ಕಾರದ ಸಾಧನೆ ಸೊನ್ನೆ, ಸರ್ಕಾರಿ ನೌಕರರಿಗೆ ವೇತನ ನೀಡಲಾಗದಷ್ಟು ಮಟ್ಟಿಗೆ ಸರ್ಕಾರದ ಹಣಕಾಸಿನ ವ್ಯವಸ್ಥೆ ಹದಗೆಟ್ಟಿದೆ, ಹೆಗಡೆ ತಮ್ಮ ವೈಫಲ್ಯತೆ ಮುಚ್ಚಿಕೊಳ್ಳಲು ಮೌಲ್ಯಾಧಾರಿತ ರಾಜಕಾರಣ, ನೈತಿಕತೆ ಎಂಬ ನೆಪಗಳನ್ನು ಮುಂದೂಡುತ್ತಿದ್ದಾರೆಂದು ಪತ್ರಿಕಾಗೋಷ್ಠಿಯಲ್ಲಿ ಆಪಾದಿಸಿದರು. ಕೇರಳ ಮುಖ್ಯಮಂತ್ರಿ ಕೆ. ಕರುಣಾಕರನ್, ಬಿ. ಸುಬ್ಬಯ್ಯ ಶೆಟ್ಟಿ, ಹಾರನಹಳ್ಳಿ ರಾಮಸ್ವಾಮಿ ಈ ಪತ್ರಿಕಾ ಗೋಷ್ಠಿಯಲ್ಲಿ ಹಾಜರಿದ್ದು, ಕಾಂಗ್ರೆಗೆ ಮತ ನೀಡುವಂತೆ ಜನತೆಗೆ ವಿನಂತಿ ಮಾಡಿದರು. ವೀರಪ್ಪ ಮೊಯಿಲಿಯವರು ೨೩, ೨೪ ರಿಂದ ಶಿವಮೊಗ್ಗ ಜಿಲ್ಲೆಯಲ್ಲಿ ಚುನಾವಣಾ ಪ್ರಚಾರ ಮಾಡಿದರು. ಟಿ.ಎನ್. ನರಸಿಂಹಮೂರ್ತಿಯವರು ೨೪ ರಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಚುನಾವಣಾ ಪ್ರಚಾರ ಮಾಡಿದರು. ಕೆ. ಎಚ್. ಪಾಟೀಲರು ೨೩ ರಿಂದ ೨೬ ರವರೆಗೆ ಚಿತ್ರದುರ್ಗ, ದಾವಣಗೆರೆ, ರಾಣೆಬೆನ್ನೂರು, ಧಾರವಾಡ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಚುನಾವಣಾ ಪ್ರಚಾರ ಮಾಡಿದರು.

## ಕೆ.ಪಿ.ಸಿ.ಸಿ. ಪ್ರಣಾಳಿಕೆ

ದಿನಾಂಕ ೧೮-೨-೮೫ ರಂದು ಪ್ರದೇಶ ಕಾಂಗ್ರೆಸ್ (ಐ) ವಿಧಾನಸಭಾ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿತು. ಅದರ ಮುಖ್ಯಾಂಶಗಳು ಕೆಳಗಿನಂತಿವೆ. ರಾಜಕೀಯ ಭ್ರಷ್ಟಾಚಾರ ನಿರ್ಮೂಲನೆಗೆ ಕಠಿಣ ಶಾಸನ. ಸರ್ಕಾರಿ ಕಚೇರಿಗಳಲ್ಲಿ ಭ್ರಷ್ಟಾಚಾರ ನಿರ್ಮೂಲನೆಗೆ ಬಿಗಿ ಕ್ರಮ. ೨೦ ಅಂಶಗಳ ಆರ್ಥಿಕ ಕಾರ್ಯಕ್ರಮಕ್ಕೆ ಪುನಃಶ್ಚೇತನ. ಕಾರ್ಯನಿರ್ವಹಣೆ ಪರಿಶೀಲನೆಗೆ ಉನ್ನತಾಧಿಕಾರ ಸಮಿತಿ. ಪ್ರತಿಹಳ್ಳಿಗೂ ರಸ್ತೆ, ಕುಡಿಯುವ ನೀರು. ಪ್ರತಿ ತಾಲ್ಲೂಕಿನಲ್ಲಿ ವ್ಯವಸಾಯ ಆಧಾರಿತ ಸಹಕಾರಿ ಉದ್ಯಮ ಸ್ಥಾಪನೆ. ಬರಪೀಡಿತ

ಪ್ರದೇಶಗಳ ಅಭಿವೃದ್ಧಿಗೆ ಸ್ವತಂತ್ರವಾದ, ಪ್ರತ್ಯೇಕವಾದ ವಿಶೇಷ ವ್ಯವಸ್ಥೆ. ಮೆಡಿಕಲ್, ಇಂಜನಿಯರಿಂಗ್ ಕಾಲೇಜುಗಳ ಜೊತೆಗೆ ಎಲ್ಲಾ ಶಾಲಾ ಕಾಲೇಜುಗಳಲ್ಲಿ ಕ್ಯಾಪಿಟೇಷನ್ ಶುಲ್ಕಕ್ಕೆ ಕಡಿವಾಣ.

ಯುವಸೇನೆ ರಚನೆ. ಮಹಿಳೆಯರ ಮೇಲಿನ ದಬ್ಬಾಳಿಕೆ ತಡೆಗೆ ಕ್ರಮ. ಕೊಳಚೆ ಪ್ರದೇಶಗಳಲ್ಲಿ ಕಲಿಕಾ ಕೇಂದ್ರಗಳ ಸ್ಥಾಪನೆ. ಅಣುವಿದ್ಯುತ್ ಉತ್ಪಾದನಾ ಕೇಂದ್ರ ಸ್ಥಾಪನೆಗೆ ಮತ್ತು ರಾಜ್ಯದ ನ್ಯಾಯಯುತ ಪಾಲಿನ ವಿದ್ಯುತ್ ಪಡೆಯಲು ಕೇಂದ್ರದ ಮೇಲೆ ಒತ್ತಾಯ. ವಿಜಯನಗರ ಉಕ್ಕು ಕಾರ್ಖಾನೆ ಸ್ಥಾಪನೆಗೆ ಒತ್ತಾಯಪೂರ್ವಕ ಆಗ್ರಹ. ಬೆಂಗಳೂರಿಗೆ ವರ್ತುಲ ರೈಲ್ವೆ ಮಾರ್ಗಕ್ಕೆ ಒತ್ತಾಯ ಮತ್ತು ಕಾವೇರಿ ಕುಡಿಯುವ ನೀರಿನ ಯೋಜನೆ ಮೂರನೇ ಹಂತಕ್ಕೆ ಒತ್ತಾಯ. ಪ್ರತಿ ಕುಟುಂಬಕ್ಕೆ ಮನೆ, ನಿವೇಶನ. ಬಡವರಿಗೆ ಆದ್ಯತೆಯ ಮೇಲೆ ನಿವೇಶನ. ಎಲ್ಲಾ ಹಂತಗಳಲ್ಲಿ ಕನ್ನಡ ಆಡಳಿತ ಭಾಷೆ. ಐವತ್ತು ಸಾವಿರಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ಪಟ್ಟಣಗಳಿಗೆ ಸಂರಕ್ಷಿತ ಕುಡಿಯುವ ನೀರಿನ ಯೋಜನೆ. ಖೋಟಾ ಔಷಧಿಗಳ ಉತ್ಪಾದನೆ ಮಾರಾಟಕ್ಕೆ ಕಡಿವಾಣ. ರೈತರಿಗೆ ಯೋಗ್ಯ ಬೆಲೆ, ರಾಜ್ಯ ಮಟ್ಟದ ಕೃಷಿ ಬೆಲೆ ಆಯೋಗ ರಚನೆ.

ಕೃಷಿ ವಿಶ್ವವಿದ್ಯಾನಿಲಯ ಹಾಗೂ ಇತರ ಸಂಶೋಧನಾ ಸಂಸ್ಥೆಗಳ ಸಂಶೋಧನೆಯ ಫಲವನ್ನು ರೈತರಿಗೆ ಮುಟ್ಟಿಸಲು ಜಮೀನಿಗೇ ಪ್ರಯೋಗಾಲಯ. ರೈತರ ಸಾಲ ಬಾಕಿ ಮರುಪಾವತಿಯ ಬಗ್ಗೆ ಮತ್ತು ಇತರ ಸಮಸ್ಯೆಗಳ ಬಗ್ಗೆ ಸಮಗ್ರ ಪರಿಶೀಲನೆಗೆ ರೈತ ಪ್ರತಿನಿಧಿಗಳ ಉನ್ನತಾಧಿಕಾರ ಸಮಿತಿ ರಚನೆ. ಹಳ್ಳಿಗಳಲ್ಲಿ ಹೆಚ್ಚು ಪಶುಸಂಗೋಪನಾ ಆಸ್ಪತ್ರೆಗಳು, ಸಂಚಾರಿ ಪಶು ಚಿಕಿತ್ಸಾಲಯಗಳ ಸ್ಥಾಪನೆ. ಎಲ್ಲಾ ಹರಿಜನ ಗಿರಿಜನ ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗ ಒದಗಿಸುವ ಭರವಸೆ. ಹರಿಜನ ಗಿರಿಜನ ಅಭಿವೃದ್ಧಿ ಕಾರ್ಪೊರೇಷನ್ ಬಲಪಡಿಸಲು ಇನ್ನೂ ಹೆಚ್ಚು ಹಣಕಾಸಿನ ನೆರವು ನೀಡಿ ಸಾಲಸೌಲಭ್ಯ ಒದಗಿಸಲು ಕ್ರಮ. ಅಸ್ಪೃಶ್ಯತಾ ನಿವಾರಣೆಗೆ ಕಟ್ಟುನಿಟ್ಟಿನ ಕ್ರಮ. ವಕ್ಫ್ ಆಸ್ತಿಗಳ ರಕ್ಷಣೆಗೆ ಕ್ರಮ. ವಕ್ಫ್ ಅಭಿವೃದ್ಧಿ ಮಂಡಲಿಗೆ ಹೆಚ್ಚಿನ ಹಣಕಾಸು.

ಅಂತರ ರಾಜ್ಯ ನದಿ ನೀರಿನ ವಿವಾದಗಳನ್ನು ಸೌಹಾರ್ದಯುತವಾಗಿ ಇತ್ಯರ್ಥಪಡಿಸಿಕೊಳ್ಳಲು ಪ್ರಯತ್ನ, ಬೆಂಗಳೂರು ಸುತ್ತ ಮುತ್ತಲೂ ಹಸಿರು ಪ್ರದೇಶ ಯೋಜನೆಯನ್ನು ಕಾರ್ಯಗತ ಮಾಡಲು ಅಗತ್ಯ ಕ್ರಮ. ಗೃಹ ನಿರ್ಮಾಣ ಸಹಕಾರ ಸಂಘಗಳು ತಮ್ಮ ಆರ್ಥಿಕ ಸ್ಥಿತಿ ಉತ್ತಮಪಡಿಸಿಕೊಳ್ಳಲು ಸರ್ಕಾರದಿಂದ ನೆರವು. ಶ್ರೀಮಂತರು ಸರ್ಕಾರಿ ಭೂಮಿಯನ್ನು ಒತ್ತುವರಿ ಮಾಡಿಕೊಂಡಿರುವ ಪ್ರಕರಣಗಳಲ್ಲಿ ಅವರನ್ನು ಅಲ್ಲಿಂದ ಉಚ್ಚಾಟಿಸಿ ಬಡವರಿಗೆ ಆ ಭೂಮಿಯನ್ನು ಹಂಚುವುದು. ಸಣ್ಣ ಮತ್ತು ಮಧ್ಯಮ ರೈತರು ಭೂಮಿಯನ್ನು ಅತಿಕ್ರಮಿಸಿ ಬೆಳೆ ಬೆಳೆಯುತ್ತಿದ್ದರೆ ಅದನ್ನು ಅವರಿಗೆ ಖಾಯಂಗೊಳಿಸಲು ಕ್ರಮ. ಗ್ರಾಮೀಣ ವಸತಿ ಯೋಜನೆ ಬಗ್ಗೆ ವಿಶೇಷ ಕ್ರಮ. ಹರಿಜನ ಗಿರಿಜನರಿಗೆ ವಿಶೇಷ ಆದ್ಯತೆ. ರೆವಿನ್ಯೂ ನಿವೇಶನಗಳಲ್ಲಿ ಅನಧಿಕೃತವಾಗಿ ಕಟ್ಟಡ ಕಟ್ಟಿಕೊಂಡಿರುವವರ ಸಮಸ್ಯೆಗಳ ಬಗ್ಗೆ ಸಹಾನುಭೂತಿಯ ಪರಿಶೀಲನೆ. ಮಾಸ್ಟರ್ ಪ್ಲಾನ್ ಅಗತ್ಯಗಳನ್ನು ಗಮನಿಸಿ ಅವುಗಳನ್ನು ಕ್ರಮಬದ್ಧಗೊಳಿಸುವುದು. ಹುಡ್ಕೋ ನೆರವಿನಿಂದ ಬೃಹತ್ ವಸತಿ ಯೋಜನೆ.

## ಎ.ಐ.ಸಿ.ಸಿ. ಪ್ರಣಾಳಿಕೆ

ದಿನಾಂಕ ೧೮-೨-೮೫ ರಂದು ಅಖಿಲಭಾರತ ಕಾಂಗ್ರೆಸ್ ಸಮಿತಿ (ಐ) ರಾಜ್ಯ ವಿಧಾನಸಭಾ ಚುನಾವಣೆಗಳಿಗೆ ಸಂಬಂಧಿಸಿದಂತೆ ಪ್ರಣಾಳಿಕೆಯನ್ನು ಪ್ರಕಟಿಸಿತು. ಮುಖ್ಯಾಂಶಗಳು: ದೇಶದ ಏಕತೆ ಸಮಗ್ರತೆಯ ರಕ್ಷಣೆ. ಅಲ್ಪಸಂಖ್ಯಾತರ ಶೈಕ್ಷಣಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಹಕ್ಕುಗಳ ಸಂರಕ್ಷಣೆ. ದಕ್ಷ ಸ್ವಚ್ಛ ಸೌಜನ್ಯಯುತ ಆಡಳಿತ ನೀಡಲು ಬದ್ಧ, ಕೃಷಿ ಕೈಗಾರಿಕೆಗಳ ತ್ವರಿತ ಅಭಿವೃದ್ಧಿಗೆ ಕ್ರಮ, ತ್ವರಿತ ಗ್ರಾಮೀಣ ಅಭಿವೃದ್ಧಿಗೆ ಯೋಜನೆಗಳು. ಭ್ರಷ್ಟಾಚಾರ ನಿರ್ಮೂಲನೆ. ೨೦ ಅಂಶಗಳ ಆರ್ಥಿಕ ಕಾರ್ಯಕ್ರಮಗಳ ತ್ವರಿತ ಜಾರಿಗೆ ಕ್ರಮ. ತೆರಿಗೆದಾರರಿಗೆ ಕಡ್ಡಾಯ ಠೇವಣಿಯಿಂದ ಮುಕ್ತಿ. ಕಡುಬಡವರಿಗೆ ಕಾನೂನು ಸೌಲಭ್ಯ. ಕಪ್ಪುಹಣ, ಕಾಳಸಂತೆ ನಿರ್ಮೂಲನೆಗೆ ಪರಿಣಾಮಕಾರಿ ಕ್ರಮ. ಉದ್ಯೋಗಾವಕಾಶ ಹೆಚ್ಚಿಸಲು ಕಾರ್ಯಕ್ರಮಗಳು. ಭೂ ರಹಿತ ಕೃಷಿ ಕಾರ್ಮಿಕ ಕುಟುಂಬದ ಒಬ್ಬನಿಗೆ ಉದ್ಯೋಗ. ಗ್ರಾಮೀಣ ಭೂ ರಹಿತ ಕೃಷಿ ಕಾರ್ಮಿಕರಿಗೆ, ಕಾರ್ಮಿಕರಿಗೆ ಸೂಕ್ತ ಆರ್ಥಿಕ ನೆರವು. ಆಹಾರೋತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸಲು ಕ್ರಮ. ಉತ್ಪಾದನೆಯಲ್ಲಿ ಹೆಚ್ಚಳದ ಆಧಾರದ ಮೇಲೆ ಕಾರ್ಮಿಕರಿಗೆ ಹಂತ ಹಂತವಾಗಿ ವೇತನ ಏರಿಕೆ. ಆಡಳಿತದಲ್ಲಿ ಕಾರ್ಮಿಕರ ಪ್ರಾತಿನಿಧ್ಯಕ್ಕೆ ಆಗ್ರಹ. ಬುಡಕಟ್ಟು ಜನಾಂಗದ ಸರ್ವತೋಮುಖ ಅಭಿವೃದ್ಧಿಗೆ ವ್ಯಾಪಕ ಕ್ರಮ. ವರದಕ್ಷಿಣೆ, ಜಾತಿಪದ್ಧತಿ ಮುಂತಾದ ಸಾಮಾಜಿಕ ಪಿಡುಗುಗಳ ನಿವಾರಣೆಗೆ ಕ್ರಮ. ಮಹಿಳೆಯರ ಶಿಕ್ಷಣ ಮಟ್ಟ ಹೆಚ್ಚಿಸಲು ಪ್ರೋತ್ಸಾಹ ಹಾಗೂ ಸೂಕ್ತ ಯೋಜನೆಗಳು.

**ಫಲಿತಾಂಶ**

೫-೩-೮೫ ರಂದು ರಾಜ್ಯದಲ್ಲಿ ಮತದಾನ ನಡೆಯಿತು. ರಾಜ್ಯದಲ್ಲಿ ಶೇಕಡಾ ೬೦ ರಷ್ಟು ಮತದಾನ ಆಯಿತು. ೭ರಂದು ಪೂರ್ಣ ಫಲಿತಾಂಶಗಳು ಪ್ರಕಟವಾದವು. ೨೨೪ ಸ್ಥಾನಗಳಿಗೆ ಸ್ಪರ್ಧಿಸಿದ್ದ ಕಾಂಗ್ರೆಸ್ (ಐ) ಪಕ್ಷ ಕೇವಲ ೬೬ ಸ್ಥಾನಗಳನ್ನು ಗೆಲ್ಲುವಲ್ಲಿ ಯಶಸ್ವಿಯಾಯಿತು. ಶೇಕಡಾ ೪೧.೧೦ ಪ್ರಮಾಣದಲ್ಲಿ ೬೦,೫೦,೩೪೦ ಮತಗಳನ್ನು ಪಡೆಯಿತು. ಆದರೆ ಕೇವಲ ೪೩. ೮೪ ಪ್ರಮಾಣದಲ್ಲಿ ೬೪,೫೩,೬೧೧ ಮತಗಳನ್ನು ಪಡೆದ ಜನತಾ ಪಕ್ಷ ೧೩೯ ಸ್ಥಾನಗಳನ್ನು ಪಡೆಯಿತು. ೧೯೮೩ರ ಚುನಾವಣೆಯಲ್ಲಿ ಶೇಕಡಾ ೪೦.೪೨ ಮತಗಳಿಸಿದ್ದ ಕಾಂಗ್ರೆಸ್ (ಐ) ೮೨ ಸ್ಥಾನಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿತ್ತು ಎಂಬುದನ್ನು ಇಲ್ಲಿ ಸ್ಮರಿಸಬಹುದು.

ಬಂಡಾಯದ ಬಿಸಿ ಕಾಂಗ್ರೆಸ್‌ಗೆ ಸೋಲನ್ನು ತಂದಿತ್ತು. ದಿನಾಂಕ ೭ ರಂದು ಕೆ.ಪಿ.ಸಿ.ಸಿ. (ಐ) ಅಧ್ಯಕ್ಷ ಸ್ಥಾನಕ್ಕೆ ಕೆ. ಎಚ್. ಪಾಟೀಲ್ ರಾಜೀನಾಮೆ ನೀಡಿದರು. ಎಲ್. ಜಿ. ಹಾವನೂರ್ ಭವಿಷ್ಯ ನಿಜವಾಯಿತು, ಗುಂಡೂರಾವ್ ನಾಯಕತ್ವ ವಹಿಸಬೇಕಾಗಿತ್ತು ಎಂದು ಕೆಲವರು ವಿಶ್ಲೇಷಿಸಿದರು. ಕಾಂಗ್ರೆ ಅಭ್ಯರ್ಥಿಗಳ ಪಟ್ಟಿ ತಯಾರಿಸಿದವರ ವಜಾಕ್ಕೆ ಎಂ. ವೈ. ಘೋರ್ಪಡೆ ಒತ್ತಾಯಿಸಿದರು. ಸೋಲಿಗೆ ಕಾರಣಕರ್ತರಾದವರನ್ನು ಪತ್ತೆ ಹಚ್ಚಿ ಪಕ್ಷದಿಂದ ಉಚ್ಚಾಟಿಸಲು ಮೊಯಿಲಿ ಒತ್ತಾಯಿಸಿದರು. ಉಳಿದಂತೆ ದೇಶದ ೮ ರಾಜ್ಯಗಳಲ್ಲಿ ಕಾಂಗ್ರೆ ಅಧಿಕಾರಕ್ಕೆ ಬಂದಿತ್ತು. ರಾಜೀವ್ ಗಾಂಧಿ ನಾಯಕತ್ವಕ್ಕೆ ಸಮರ್ಥನೆ ದೊರಕಿತ್ತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತ್ರ ೧೫ ಸ್ಥಾನಗಳಲ್ಲಿ ೧೩ ಸ್ಥಾನಗಳನ್ನು ಗಳಿಸಿ ಕಾಂಗ್ರೆ ಜಯಭೇರಿ ಬಾರಿಸಿತ್ತು. ಗುಲ್ಬರ್ಗಾ ಜಿಲ್ಲೆಯ ೧೩ ಸ್ಥಾನಗಳಲ್ಲಿ ಎಂಟು ಸ್ಥಾನಗಳನ್ನು ಪಡೆದಿತ್ತು. ಉಳಿದಂತೆ ಎಲ್ಲಾ ಜಿಲ್ಲೆಗಳಲ್ಲಿಯೂ ಕಾಂಗ್ರೆ ಎರಡರಿಂದ ನಾಲ್ಕು ಸ್ಥಾನ ಗಳಿಸಿತ್ತು. ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಕಾಂಗ್ರೆ ಒಂದೇ ಒಂದು ಸ್ಥಾನವನ್ನೂ ಪಡೆಯಲು ಆಗಲಿಲ್ಲ.

## ೧೯೮೯ರ ಲೋಕಸಭೆ-ವಿಧಾನಸಭೆ ಚುನಾವಣೆಗಳು

೨೨ ವರ್ಷಗಳ ಬಳಿಕ ರಾಜ್ಯದಲ್ಲಿ ವಿಧಾನಸಭೆ, ಲೋಕಸಭೆಗಳಿಗೆ ಏಕಕಾಲದಲ್ಲಿ ಚುನಾವಣೆ ನಡೆಯುವ ಪ್ರಸಂಗ ಬಂದಿತು. ನವೆಂಬರ್ ೨೧, ೧೯೮೯ ರಂದು ಈ ಚುನಾವಣೆಗಳು ನಡೆದವು.

**ರಾಷ್ಟ್ರದ ರಾಜಕೀಯ ಪರಿಸ್ಥಿತಿ**

೧೯೮೪ ಡಿಸೆಂಬರ್ ೨೪ ರಂದು ಇಂದಿರಾ ಹತ್ಯೆಯ ನೆರಳಿನಲ್ಲಿ ನಡೆದಿದ್ದ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ (ಐ) ಪಕ್ಷ ೪೦೧ ಸ್ಥಾನಗಳನ್ನು ಪಡೆದು ಆ ಪಕ್ಷದ ಇತಿಹಾಸದಲ್ಲೇ ಅತೀ ಹೆಚ್ಚಿನ ಬಹುಮತ ಹಾಗೂ ಸ್ಥಾನಗಳನ್ನು ಪಡೆದು ಅಧಿಕಾರಕ್ಕೆ ಬಂದಿತು. ರಾಜೀವ್ ಗಾಂಧಿಯವರು ಮಿಸ್ಟರ್ ಕ್ಲೀನ್ ಎಂಬ ಪ್ರಭಾವಳಿಯನ್ನು ಹೊಂದಿದ್ದರು. ಅವರು ಪ್ರಧಾನಮಂತ್ರಿಯವರಾದ ತಕ್ಷಣ ರಾಷ್ಟ್ರದ ಆರ್ಥಿಕ ಸಾಮಾಜಿಕ ಅಭಿವೃದ್ಧಿಗೆ ಹತ್ತು ಅಂಶಗಳ ಕಾರ್ಯಕ್ರಮವನ್ನು ಹಾಕಿದರು. ದೇಶದ ರಾಜಕೀಯ ಇತಿಹಾಸದಲ್ಲೇ ಮೊದಲಬಾರಿಗೆ ಪಕ್ಷಾಂತರ ನಿಷೇಧ ವಿಧೇಯಕವನ್ನು ಮಂಡಿಸಿದರು. ಜನವರಿ ೩೧, ೧೯೮೫ರಂದು ಲೋಕಸಭೆ, ರಾಜ್ಯಸಭೆಗಳಲ್ಲಿ ಈ ವಿಧೇಯಕ ಒಪ್ಪಿಗೆ ಪಡೆದು ೧೫-೨-೮೫ರಂದು ರಾಷ್ಟ್ರಪತಿಗಳ ಒಪ್ಪಿಗೆ ಪಡೆದು ಕಾನೂನಾಗಿ ಜಾರಿಗೆ ಬಂದಿತು. ಇದರಿಂದ ರಾಜಕೀಯ ಪಕ್ಷಗಳಿಗೆ ಸಾಂಕ್ರಾಮಿಕದಂತೆ ಅಂಟಿದ್ದ ಪಕ್ಷಾಂತರದ ಪಿಡುಗು ಕಡಿಮೆಯಾದರೂ, ಅದು ಇನ್ನೊಂದು ರೂಪ ಪಡೆದು ಪಕ್ಷಗಳ ವಿಭಜನೆಗೆ ನಾಂದಿ ಹಾಡಿತೆಂದು ಹೇಳಬಹುದು. ಪ್ರಧಾನಮಂತ್ರಿ ರಾಜೀವ್ ಗಾಂಧಿಯವರು ಜುಲೈ ೨೭, ೧೯೮೫ರಂದು ಅಕಾಲಿದಳದ ಅಧ್ಯಕ್ಷ ಹರಚಂದ್‌ಸಿಂಗ್ ಲೋಂಗೋವಾಲರ ಜೊತೆ ಒಪ್ಪಂದ ಮಾಡಿಕೊಂಡು ಪಂಜಾಬ್ ಸಮಸ್ಯೆಗೆ ಪರಿಹಾರ ಒದಗಿಸಿದರು. ಆಗಸ್ಟ್ ೨೦ ರಂದು ಲೋಂಗೋವಾಲರ ಹತ್ಯೆ ಆಯಿತು. ಪಂಜಾಬ್‌ನಲ್ಲಿ ಸೆಪ್ಟೆಂಬರ್ ೨೫ ರಂದು ಚುನಾವಣೆಗಳು ನಡೆದು ಅಕಾಲಿದಳದ ಸರ್ಕಾರ ರಚನೆ ಆಯಿತು.

ಅಸ್ಸಾಂನಲ್ಲಿ ಚುನಾವಣೆಗಳನ್ನು ನಡೆಸಲಾಯಿತು. ಡಿಸೆಂಬರ್ ೨೪ ರಂದು ಅಸ್ಸಾಂ ಗಣಪರಿಷತ್ ಸರ್ಕಾರ ರಚಿಸಿತು. ಡಿಸೆಂಬರ್ ೨೬, ೧೯೮೫ ರಂದು ಕಾಂಗ್ರೆಸ್ ಸಂಸ್ಥೆಯ ಶತಮಾನೋತ್ಸವವನ್ನು ಆಚರಿಸಲಾಯಿತು. ಗಡಿನಾಡು ಗಾಂಧಿ ಖಾನ್ ಅಬ್ದುಲ್ ಗಫಾರ್‌ಖಾನ್ ಈ ಸಮಾರಂಭಕ್ಕೆ ಬಂದಿದ್ದರು. ಮುಸ್ಲಿಂ ಜನಾಂಗದ ವಿಚ್ಛೇದಿತ ಮಹಿಳೆಯರಿಗೆ ಪರಿಹಾರ ನೀಡುವ ವಿಧೇಯಕವನ್ನು ಲೋಕಸಭೆಯಲ್ಲಿಟ್ಟು ಅಂಗೀಕಾರ ಆಗುವಂತೆ ಮಾಡಿದರು. ಅದಕ್ಕೆ ಮೇ ೧೯, ೧೯೮೬ರಂದು ರಾಷ್ಟ್ರಪತಿಗಳು ಒಪ್ಪಿಗೆ ನೀಡಿದರು.

ಜೂನ್ ೩೦, ೧೯೮೬ರಂದು ಮಿಜೊರಾಮ್‌ನ ಲಾಲ್ ಡೆಂಗಾ ಜೊತೆ ಒಪ್ಪಂದ ಮಾಡಿಕೊಂಡು ಅಲ್ಲಿ ಚುನಾವಣೆಗಳನ್ನು ನಡೆಸಿದರು. ಫೆಬ್ರವರಿ ೧೮, ೧೯೮೭ರಂದು ಅಲ್ಲಿ ಮಿಜೋ ನ್ಯಾಷನಲ್ ಫ್ರಂಟ್ ಪಕ್ಷದ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಬೋಫೋರ್ಸ್

ಹಗರಣ ಹಾಗೂ ಫೇರ್ ಫ್ಯಾಕ್ಸ್ ಹಗರಣಗಳು ಬೆಳಕಿಗೆ ಬಂದು ಕೋಲಾಹಲವಾಯಿತು. ಇದೇ ಕಾರಣದಿಂದ ಏಪ್ರಿಲ್ ೧೨, ೧೯೮೭ ರಂದು ವಿ. ಪಿ. ಸಿಂಗ್ ಕಾಂಗ್ರೆಸ್‌ಗೆ ಹಾಗೂ ರಕ್ಷಣಾ ಸಚಿವರ ಹುದ್ದೆಗೆ ರಾಜೀನಾಮೆ ನೀಡಿ ಹೊರಬಂದರು. ಅದರ ಜೊತೆಗೆ ಜುಲೈ ೧೫ ರಂದು ಅರುಣ್ ನೆಹರು, ವಿ. ಸಿ. ಶುಕ್ಲಾ, ಆರಿಫ್ ಮೊಹಮದ್ ಖಾನ್ ಇವರುಗಳನ್ನು ಕಾಂಗ್ರೆನಿಂದ ಉಚ್ಚಾಟಿಸಲಾಯಿತು. ಜೂನ್ ೨೦ ರಂದು ಹರ್ಯಾಣದಲ್ಲಿ ದೇವಿಲಾಲ್ ನೇತೃತ್ವದ ಭಾಜಪ ಮತ್ತು ಲೋಕದಳ ಸರ್ಕಾರ ಅಧಿಕಾರಕ್ಕೆ ಬಂತು. ಜುಲೈ ೨೫ ರಂದು ಆರ್. ವೆಂಕಟರಾಮನ್ ರಾಷ್ಟ್ರಪತಿಯಾಗಿ ಅಧಿಕಾರ ಸ್ವೀಕರಿಸಿದರು. ಲಂಕಾ ತಮಿಳರ ಸಮಸ್ಯೆಗೆ ಪರಿಹಾರ ರೂಪಿಸಲು ರಾಜೀವ್ ಗಾಂಧಿಯವರು ಶ್ರೀಲಂಕಾ ಸರ್ಕಾರದೊಡನೆ ಒಪ್ಪಂದ ಮಾಡಿಕೊಂಡು ಶ್ರೀಲಂಕಾದಲ್ಲಿ ಭಾರತೀಯ ಶಾಂತಿ ಸ್ಥಾಪನಾ ಪಡೆಯನ್ನು ಸ್ಥಾಪಿಸಿದರು. ಮುಂದೆ ಇದೇ ಅವರ ಜೀವಕ್ಕೆ ಕುತ್ತಾಯಿತು. ಇದು ಶ್ರೀಲಂಕಾದವರಿಗಾಗಲೀ, ತಮಿಳರಿಗಾಗಲೀ ಇಷ್ಟವಾಗಲಿಲ್ಲ, ಜುಲೈ ೩೦, ೧೯೮೭ ರಂದು ಅವರು ಶ್ರೀಲಂಕಾಕ್ಕೆ ಭೇಟಿ ನೀಡಿದ್ದಾಗ, ಶ್ರೀಲಂಕಾ ನೌಕಾಪಡೆಯ ಯೋಧನೊಬ್ಬ ಅವರ ಮೇಲೆ ಹಲ್ಲೆ ಮಾಡಿದನು. ತ್ರಿಪುರಾದಲ್ಲಿ ಅಲ್ಲಿನ ಉಪಜಾತಿ ಸಮಿತಿ ಪಕ್ಷದೊಡನೆ ಒಪ್ಪಂದ ಮಾಡಿಕೊಂಡರು. ಫೆಬ್ರವರಿ ೫, ೧೯೮೮ ರಂದು ಕಾಂಗ್ರೆ-ತ್ರಿಪುರಾ ಉಪಜಾತಿ ಸರ್ಕಾರ ಅಲ್ಲಿ ಅಧಿಕಾರಕ್ಕೆ ಬಂತು. ಈ ಮಧ್ಯೆ ಬಿ. ಶಂಕರಾನಂದ್ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ಸಂಯುಕ್ತ ಸಂಸದೀಯ ಸಮಿತಿ ಬೋಫೋರ್ಸ್‌ನಲ್ಲಿ ರಾಜೀವ್‌ಗಾಂಧಿಯವರ ಪಾತ್ರ ಏನಿಲ್ಲ ಎಂದು ಏಪ್ರಿಲ್ ೨೬, ೧೯೮೮ ರಂದು ವರದಿ ನೀಡಿತು. ಫೇರ್ ಫ್ಯಾಕ್ಸ್ ಹಗರಣದ ತನಿಖೆ ನಡೆಸಿದ್ದ ಠಕ್ಕರ್ ನಟರಾಜನ್ ಆಯೋಗದ ವರದಿಯನ್ನು ಮಂಡಿಸುವಂತೆ ವಿರೋಧ ಪಕ್ಷಗಳು ಒತ್ತಾಯಿಸಿದವು. ಈ ಬಗ್ಗೆ ಮಾರ್ಚ್ ೧೬, ೧೯೮೯ರಂದು ೬೨ ಜನ ವಿರೋಧ ಪಕ್ಷದ ಸಂಸದರನ್ನು ಲೋಕಸಭೆಯಿಂದ ಹೊರಕ್ಕೆ ಹಾಕಲಾಯಿತು. ವರದಿ ಮಂಡನೆ ಆಗಲಿಲ್ಲ. ಬೋಡೋ ಲ್ಯಾಂಡ್ ಮತ್ತು ಗೂರ್ಖಾ ನ್ಯಾಷನಲ್ ಫ್ರಂಟ್‌ನ ಚಳವಳಿಗಳೂ ೧೯೮೯ಕ್ಕೆ ಆರಂಭವಾದವು. ಎಲ್ಲಕ್ಕಿಂತ ಮುಖ್ಯವಾಗಿ ೧೯೮೯ ಮೇ ೧೫ ರಂದು ಪಂಚಾಯತ್ ರಾಜ್ಯ ವಿಧೇಯಕ ಪಾರ್ಲಿಮೆಂಟ್‌ನಲ್ಲಿ ಮತ್ತೆ ಅಂಗೀಕಾರವಾಯಿತು. ಮೇ ೨೩ ರಂದು ೧೮ ವರ್ಷದವರಿಗೆ ಮತದಾನದ ಹಕ್ಕನ್ನು ನೀಡಿದ್ದು ರಾಜೀವ್ ಗಾಂಧಿಯವರ ಸ್ಮರಣಾರ್ಹ ಸಾಧನೆಗಳಾದವು. ಆರ್ಥಿಕ ಉದಾರೀಕರಣ ಹಾಗೂ ದೇಶದ ರಫ್ತನ್ನು ಹೆಚ್ಚು ಮಾಡಿದ್ದು ರಾಜೀವ್‌ಗಾಂಧಿ ಸರ್ಕಾರದ ಸಾಧನೆಯಾಗಿತ್ತು.

## ಕರ್ನಾಟಕ ರಾಜ್ಯದ ಪರಿಸ್ಥಿತಿ

೧೯೮೫ರ ಮಾರ್ಚ್ ತಿಂಗಳಲ್ಲಿ ಏಕಾಂಗಿಯಾಗಿ ಚುನಾವಣೆಗಳನ್ನು ಎದುರಿಸಿದ ಜನತಾ ಪಕ್ಷ ಭಾರೀ ಬಹುಮತದೊಂದಿಗೆ ಅಧಿಕಾರಕ್ಕೆ ಬಂದಿತ್ತು. ರಾಮಕೃಷ್ಣ ಹೆಗಡೆ ಮುಖ್ಯಮಂತ್ರಿಗಳಾಗಿದ್ದರು. ಬಾಟ್ಲಿಂಗ್ ಹಗರಣದಲ್ಲಿ ಕರ್ನಾಟಕದ ಉಚ್ಚ ನ್ಯಾಯಾಲಯವು ಸರ್ಕಾರದ ವಿರುದ್ಧ ತೀರ್ಪು ನೀಡಿತು. ರಾಮಕೃಷ್ಣ ಹೆಗಡೆಯವರು ನೈತಿಕ ಹೊಣೆ ಹೊತ್ತು ಫೆಬ್ರವರಿ ೧೧, ೧೯೮೬ ರಂದು ಮುಖ್ಯಮಂತ್ರಿ ಪದವಿಗೆ ರಾಜೀನಾಮೆ ನೀಡಿದರು. ಆದರೆ ಪಕ್ಷದ ಕಾರ್ಯಕರ್ತರು, ಶಾಸಕರ ಭಾರೀ ಒತ್ತಡಕ್ಕೆ ಮಣಿದು ಅವರು ಅಧಿಕಾರದಲ್ಲಿ ಮುಂದುವರಿದರು. ನೀರಾವರಿ ಬಾಬ್ತಿಗೆ ಸಾಕಷ್ಟು ಹಣ ಒದಗಿಸುತ್ತಿಲ್ಲವೆಂದು ಆಪಾದಿಸಿ ಲೋಕೋಪಯೋಗಿ ಮತ್ತು ನೀರಾವರಿ ಸಚಿವ ಹೆಚ್. ಡಿ. ದೇವೇಗೌಡರು ೨೯ ಮಾರ್ಚ್ ೧೯೮೮ ರಂದು ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಅವರ ಬೆಂಬಲಿಗರಾಗಿದ್ದ ವೈ. ಕೆ. ರಾಮಯ್ಯ ಏಪ್ರಿಲ್, ೨೯ ರಂದು ರಾಜೀನಾಮೆ ನೀಡಿದರೆ, ಸಚಿವರಾಗಿದ್ದ ಬಿ. ಎ. ಜೀವಿಜಯ, ಸಿದ್ಧರಾಮಯ್ಯ, ಕೆ. ಎಂ. ಮುನಿಯಪ್ಪ, ಕೆ. ಬಿ. ಮಲ್ಲಪ್ಪ, ಮೇ ೨, ೧೯೮೮ ರಂದು ರಾಜೀನಾಮೆ ನೀಡಿದರು. ದೇವೇಗೌಡರ ಬೆಂಬಲಿಗರಾಗಿದ್ದ ಸಚಿವ ಬಿ. ಎಲ್. ಶಂಕರ್ ಅವರನ್ನು ೩ ಮೇ ೮೮ ರಂದು ಸಚಿವ ಸಂಪುಟದಿಂದ ಕೈಬಿಡಲಾಯಿತು. ರ..ವ್ ಕೊಲೆ ಪ್ರಕರಣದಲ್ಲಿ ಗೃಹ ಸಚಿವ ಆರ್. ಎಲ್. ಜಾಲಪ್ಪ ೭ ಮೇ ೮೮ರಂದು ರಾಜೀನಾಮೆ ನೀಡಿದರು. ಭಿನ್ನಾಭಿಪ್ರಾಯಗಳ ನಿ... ಸಚಿವ ಬಿ. ಸೋಮಶೇಖರ್ ೮ ಜುಲೈ ೮೮ ರಂದು ರಾಜೀನಾಮೆ ನೀಡಿದರು.

ಫೋನ್ ಕದ್ದಾಲಿಕೆ ಹಗರಣದ ನೈತಿಕ ಹೊಣೆ ಹೊತ್ತು ರಾಮಕೃಷ್ಣ ಹೆಗಡೆಯವರು ಆಗಸ್ಟ್ ೧೦, ೧೯೮೮ ರಂದು ಮುಖ್ಯಮಂತ್ರಿ ಪದತ್ಯಾಗ ಮಾಡಿದರು. ಆಗಸ್ಟ್ ೧೩, ೧೯೮೮ ರಂದು ಬೊಮ್ಮಾಯಿಯವರು ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. ದೇವೇಗೌಡರು ಮತ್ತೆ ಲೋಕೋಪಯೋಗಿ ಮತ್ತು ನೀರಾವರಿ ಸಚಿವರಾಗಿ ಬೊಮ್ಮಾಯಿ ಮಂತ್ರಿಮಂಡಲ ಸೇರಿದರು. ರಾಷ್ಟ್ರಮಟ್ಟದಲ್ಲಿ ವಿರೋಧಪಕ್ಷಗಳ ಏಕತೆಯ ಪ್ರಯತ್ನ ಸಾಗಿತು. ಈ ಪ್ರಯತ್ನದ ಫಲವಾಗಿ ೧೧-೧೦-೮೮ ರಂದು ಬೆಂಗಳೂರಿನಲ್ಲಿ ಜನತಾದಳ ಉದಯವಾಯಿತು. ರಾಮಕೃಷ್ಣ ಹೆಗಡೆ ಹಾಗೂ ಮುಖ್ಯಮಂತ್ರಿ ಬೊಮ್ಮಾಯಿಯವರು ಈ ವಿರೋಧ ಪಕ್ಷಗಳ ಏಕತೆಯ ಹಿಂದೆ ಇದ್ದರು. ರಾಜ್ಯ ಜನತಾ ಪಕ್ಷದ ಶಾಸಕರುಗಳು ಜನತಾದಳದ ಶಾಸಕರೆಂದು ಗುರುತಿಸಿಕೊಂಡರು. ಜನತಾದಳ ಪಕ್ಷದ ಮಂತ್ರಿಮಂಡಲ ಅಧಿಕಾರದಲ್ಲಿದೆ ಎನ್ನುವಂತಹ ಪರಿಸ್ಥಿತಿ ಉಂಟಾಯಿತು. ದೇವೇಗೌಡರು ತಾವು ಜನತಾ ಪಕ್ಷದಲ್ಲೇ ಇರುವುದಾಗಿಯೂ ಜನತಾದಳ

ಸೇರುವುದಿಲ್ಲವೆಂದೂ ಹೇಳಿದರು. ದೇವೇಗೌಡರ ಬೆಂಬಲಿಗರಾಗಿದ್ದ ಸಚಿವರುಗಳೂ ತಾವು ಜನತಾದಳ ಸೇರಿದ್ದಾಗಿ ಹೇಳಿದರು. ನಾಲ್ಕಾರು ಶಾಸಕರು ಮಾತ್ರ ದೇವೇಗೌಡರಿಗೆ ನಿಷ್ಠರಾಗಿ ಉಳಿದರು. ದಿನಾಂಕ ೧೯-೧-೮೯ ರಂದು ದೇವೇಗೌಡರು ಸಚಿವಸ್ಥಾನಕ್ಕೆ ರಾಜೀನಾಮೆ ನೀಡಿದರು, ೨೦ ರಂದು ಅವರ ರಾಜೀನಾಮೆ ಅಂಗೀಕೃತವಾಯಿತು. ಆದರೆ ಜನತಾದಳದಲ್ಲಿ ಅಂತರಿಕ ಅತೃಪ್ತಿ, ಭಿನ್ನಮತಗಳು ಜಾಸ್ತಿಯಾಗಿ ದಿನಾಂಕ ೧೯-೪-೮೯ ರಂದು ಸುಮಾರು ೨೦ ಜನ ಶಾಸಕರು ಜನತಾದಳದ ಸರ್ಕಾರಕ್ಕೆ ತಮ್ಮ ಬೆಂಬಲ ಹಿಂತೆಗೆದುಕೊಂಡರು. ೨೧-೪-೮೯ರಂದು ರಾಜ್ಯಪಾಲರು ವಿಧಾನಸಭೆಯನ್ನು ವಿಸರ್ಜಿಸಿ ರಾಷ್ಟ್ರಪತಿ ಆಡಳಿತವನ್ನು ಜಾರಿಗೆ ತಂದರು.

ರಾಜೀವ್ ಗಾಂಧಿಯವರು ವೀರೇಂದ್ರ ಪಾಟೀಲರನ್ನು ಪ್ರದೇಶ ಕಾಂಗ್ರೆ ಅಧ್ಯಕ್ಷರನ್ನಾಗಿ ನೇಮಿಸಿದರು. ರಾಜ್ಯದಾದ್ಯಂತ ವಿರೋಧ ಪಕ್ಷಗಳು ಅಕ್ಟೋಬರ್ ೮೯ ರಲ್ಲಿ ಬೆಲೆ ಏರಿಕೆ ವಿರುದ್ಧ ಚಳವಳಿ ನಡೆಸುತ್ತಿದ್ದವು. ಆಹಾರ ವಸ್ತುಗಳ ವಿತರಣೆಯಲ್ಲಿರುವ ಲೋಪ ದೋಷಗಳನ್ನು ಸರಿಪಡಿಸಿ, ಬೆಲೆ ಏರಿಕೆ ತಡೆಗಟ್ಟಲು ಕ್ರಮ ತೆಗೆದುಕೊಳ್ಳುವಂತೆ ವೀರೇಂದ್ರರ ನೇತೃತ್ವದಲ್ಲಿ ಕಾಂಗ್ರೆ ನಿಯೋಗ ೬-೧೦-೮೯ರಂದು ರಾಜ್ಯಪಾಲರಿಗೆ ಮನವಿ ಅರ್ಪಿಸಿತು. ಜನತಾ ಏಜೆಂಟರುಗಳು ೮ ನ್ಯಾಯಬೆಲೆ ಅಂಗಡಿಗಳನ್ನು ನಡೆಸುತ್ತಿರುವುದರಿಂದ ಈ ರೀತಿ ಪರಿಸ್ಥಿತಿ ಆಗಿದೆ ಎಂದು ಅವರು ಆಪಾದಿಸಿದರು. ಬೆಲೆ ಏರಿಕೆ ತಡೆಗಟ್ಟಲು ಕಾಂಗ್ರೆ ಜಯದೇವರಾಜ ಅರಸು ನೇತೃತ್ವದಲ್ಲಿ ಒಂದು ಸಮಿತಿ ರಚಿಸಿತು. ವೀರೇಂದ್ರ ಪಾಟೀಲರು ರಾಷ್ಟ್ರಪತಿ ಆಡಳಿತವನ್ನು ರದ್ದುಪಡಿಸಿ ರಾಜ್ಯದಲ್ಲಿ ಚುನಾವಣೆಗಳನ್ನು ನಡೆಸುವಂತೆ ಕೇಂದ್ರದ ಮೇಲೆ ಒತ್ತಡ ತರುತ್ತಿದ್ದರು.

### ಚುನಾವಣೆಗೆ ಸಿದ್ಧತೆ - ಟಿಕೆಟ್ ಹಂಚಿಕೆ

ವೀರೇಂದ್ರ ಪಾಟೀಲರನ್ನು ಕರ್ನಾಟಕ ಪ್ರದೇಶ ಕಾಂಗ್ರೆ ಅಧ್ಯಕ್ಷರನ್ನಾಗಿ ನೇಮಿಸಲಾಗಿತ್ತು. ಆದರೆ ಪ್ರದೇಶ ಕಾರ್ಯಕಾರಿ ಸಮಿತಿ ರಚನೆಯ ವಿಚಾರ ನೆನೆಗುದಿಗೆ ಬಿದ್ದಿತ್ತು. ಕೊನೆಗೆ ೧೬-೯-೮೯ ರಂದು ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಗುಲಾಮ್ ನಬಿ ಆಜಾದ್ ಸುಮಾರು ೭೪ ಜನರಿಂದ ಕೂಡಿದ ಬೃಹತ್ ಕಾರ್ಯಕಾರಿ ಸಮಿತಿಯನ್ನು ಪ್ರಕಟಿಸಿದರು. ವೀರೇಂದ್ರರು ಅಧ್ಯಕ್ಷರಾಗಿದ್ದ ಅದರಲ್ಲಿ ೧೩ ಉಪಾಧ್ಯಕ್ಷರು, ೧೨ ಪ್ರಧಾನ ಕಾರ್ಯದರ್ಶಿಗಳು, ೧೦ ಜಂಟಿ ಕಾರ್ಯದರ್ಶಿಗಳು, ೨೧ ಕಾರ್ಯಕಾರಿ ಸಮಿತಿ ಸದಸ್ಯರುಗಳು ಇದ್ದರು. ಅದರ ಜೊತೆಗೆ ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಆಸ್ಕರ್ ಫರ್ನಾಂಡಿಸ್ ಸೇರಿದಂತೆ ಕೇಂದ್ರದಲ್ಲಿ ರಾಜ್ಯವನ್ನು ಪ್ರತಿನಿಧಿಸುವ ಎಲ್ಲ ಸಚಿವರು ವಿಶೇಷ ಆಹ್ವಾನಿತರಾಗಿ ನೇಮಕವಾಗಿದ್ದರು. ಮಾಜಿ ಪಿ.ಸಿ.ಸಿ. ಅಧ್ಯಕ್ಷ ಕೆ. ಎಚ್. ಪಾಟೀಲ್, ಎಸ್. ಬಂಗಾರಪ್ಪ, ಕೆ. ಮಲ್ಲಣ್ಣ, ವೀರಪ್ಪ ಮೊಯಿಲಿ, ಕೆ. ಎಸ್. ನಾಗರತ್ನಮ್ಮ, ಚಂದ್ರಶೇಖರಮೂರ್ತಿ, ಕೆ. ಎಸ್ ನಾಗರತ್ನಮ್ಮ, ಕೆ. ಎಚ್. ಶ್ರೀನಿವಾಸ್ ಇವರುಗಳು ವಿಶೇಷ ಆಹ್ವಾನಿತರಾಗಿದ್ದ ರಾಜ್ಯ ಮುಖಂಡರುಗಳಾಗಿದ್ದರು.

ಕಾಂಗ್ರೆ ಪಕ್ಷದಲ್ಲಿ ನಿಷ್ಠಾವಂತರನ್ನು ಕಡೆಗಣಿಸಲಾಗಿದೆ, ಇದು ರಾಜೀವ್ ಗಾಂಧಿಗೆ ಅವಮಾನ ಮಾಡಿದ ಹಾಗೆಂದು ಎ. ಕೆ. ಸುಬ್ಬಯ್ಯ ೨೩ ರಂದು ಪ್ರತಿಕ್ರಿಯೆ ವ್ಯಕ್ತಪಡಿಸಿದರು. ಬೃಹತ್ ಕಾರ್ಯಕಾರಿ ಸಮಿತಿಯ ಬಗ್ಗೆ ವೀರೇಂದ್ರರೂ ಕೂಡಾ ಅಸಮಾಧಾನ ವ್ಯಕ್ತಪಡಿಸಿದ್ದರು. ಕಾರ್ಯಕಾರಿ ಸಮಿತಿಯಲ್ಲಿ ೧೦ ಲಿಂಗಾಯಿತರು, ೧೪ ಒಕ್ಕಲಿಗರು, ೧೪ ದಲಿತರು, ೧೬ ಹಿಂದುಳಿದ ವರ್ಗದವರು, ೧೯ ಅಲ್ಪಸಂಖ್ಯಾತರುಗಳು ಇದ್ದಾರೆಂದು ತಿಳಿದುಬಂದಿತು. ಕಾರ್ಯಕಾರಿ ಸಮಿತಿ ಬಗ್ಗೆ ಅತೃಪ್ತಿ ಉಂಟಾಯಿತು. ಎಚ್. ಸಿ. ಶ್ರೀಕಂಠಯ್ಯ, ಕೆ.ಎನ್. ನಾಗೇಗೌಡ, ಚಂದ್ರಶೇಖರಮೂರ್ತಿ, ಎಸ್. ಬಂಗಾರಪ್ಪ, ಡಿ.ಬಿ. ಕಲ್ಮಣಕರ್, ಜಿ.ಎಸ್. ಬಸವರಾಜ್, ಬಿ.ಎಂ. ಪಾಟೀಲ್, ಎಚ್. ಕೆ. ಪಾಟೀಲ್, ಬಿ. ಬಸವಲಿಂಗಪ್ಪ ಇವರುಗಳು ಸೆಪ್ಟೆಂಬರ್ ತಿಂಗಳ ಅಂತ್ಯದಲ್ಲಿ ದೆಹಲಿ ಯಾತ್ರೆ ಕೈಗೊಂಡು ವರಿಷ್ಠರಿಗೆ ತಮ್ಮ ಅತೃಪ್ತಿಯನ್ನು ತಿಳಿಸಿ ಬಂದರು.

ಸೆಪ್ಟೆಂಬರ್ ೪, ೧೯೮೯ರಂದು ಕಾರ್ಯಕಾರಿ ಸಮಿತಿಯ ಮೊದಲ ಸಭೆ ನಡೆಯಿತು. ಪ್ರಾದೇಶಿಕ ಅಸಮತೋಲನ ಇದ್ದಲ್ಲಿ ಅದನ್ನು ಸರಿಪಡಿಸಲಾಗುವುದು ಎಂದು ಗುಲಾಮ್ ನಬಿ ಆಜಾದ್ ಹೇಳಿದರು. ಭಿನ್ನಾಭಿಪ್ರಾಯ ಮರೆತು ಎಲ್ಲರೂ ಪಕ್ಷದ ಹಿತದೃಷ್ಟಿಯಿಂದ ಕೆಲಸ ಮಾಡಬೇಕೆಂದು ವೀರೇಂದ್ರ ಪಾಟೀಲ್ ಕರೆ ನೀಡಿದರು. ರಾಷ್ಟ್ರಪತಿ ಆಡಳಿತ ಪಕ್ಷಕ್ಕೆ ಪ್ರತಿಕೂಲವಾಗಿದೆ. ಬೇಗ ರಾಷ್ಟ್ರಪತಿ ಆಡಳಿತವನ್ನು ತೆಗೆದು ಚುನಾವಣೆಗಳನ್ನು ನಡೆಸಬೇಕೆಂದು ವೀರೇಂದ್ರರು ವರಿಷ್ಠರಲ್ಲಿ ವಿನಂತಿಸಿದರು. ಕೊನೆಗೆ ಅಕ್ಟೋಬರ್ ೧೮ ರಂದು ಲೋಕಸಭೆ ಜೊತೆಗೆ ವಿಧಾನಸಭೆಗೂ ನವೆಂಬರ್ ೨೪ ರಂದು ಚುನಾವಣೆಗಳನ್ನು ನಡೆಸಲು ನಿರ್ಧರಿಸಲಾಯಿತು. ಈ ಬಗ್ಗೆ ಚುನಾವಣಾ ಆಯೋಗದ ಪ್ರಕಟಣೆಯೂ ಹೊರಬಿತ್ತು. ದಿನಾಂಕ ೨೦ ಅಕ್ಟೋಬರ್ ೮೯ ರಂದು ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ವಿಠಲ್ ಗಾಡ್ಗೀಳ್ ರವರು ಪ್ರದೇಶ ಕಾಂಗ್ರೆಸ್ (ಐ) ಚುನಾವಣಾ ಸಮಿತಿಯನ್ನು ರಚಿಸಿದರು. ವೀರೇಂದ್ರ ಪಾಟೀಲ್ ಅಧ್ಯಕ್ಷರಾಗಿದ್ದ ಈ ಸಮಿತಿಯಲ್ಲಿ ಬಿ. ಶಂಕರಾನಂದ್, ಸಿ.ಕೆ. ಜಾಫರ್ ಷರೀಫ್, ಮಾರ್ಗರೆಟ್ ಆಳ್ವ, ಜನಾರ್ಧನ ಪೂಜಾರಿ, ಕೆ. ಎಚ್. ಪಾಟೀಲ್,

ಬಿ. ಬಸವಲಿಂಗಪ್ಪ, ವೀರಪ್ಪ ಮೊಯಿಲಿ, ಕೆ. ಎಸ್. ನಾಗರತ್ನಮ್ಮ, ಟಿ. ಎನ್. ನರಸಿಂಹಮೂರ್ತಿ, ಎಸ್. ಬಂಗಾರಪ್ಪ, ಎಚ್. ಹನುಮಂತಪ್ಪ, ಎಸ್. ಎಂ. ಕೃಷ್ಣ, ಎಚ್. ಸಿ. ಶ್ರೀಕಂಠಯ್ಯ, ಧರ್ಮಸಿಂಗ್, ಎಚ್. ಜಿ. ರಾಮುಲು, ಡಿ. ಬಿ. ಕಲ್ಮಣಕರ್, ಡಿ.ಕೆ. ನಾಯ್ಕರ್, ಕೊಲ್ಲೂರು ಮಲ್ಲಪ್ಪ, ಕೆ.ಜೆ. ಜಾರ್ಜ್, ಟಿ. ವಿ. ಚಂದ್ರಶೇಖರಪ್ಪ, ಸದಸ್ಯರಾಗಿದ್ದರು. ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಆಸ್ಕರ್ ಫರ್ನಾಂಡಿಸ್ ಸೇರಿದಂತೆ ಐವರು ಆಹ್ವಾನಿತ ಸದಸ್ಯರು ಇದರಲ್ಲಿ ಸೇರಿದ್ದರು. ಈ ರೀತಿ ಸಮಿತಿಯಲ್ಲಿ ಒಟ್ಟು ೨೬ ಸದಸ್ಯರು ಸೇರಿದ್ದರು.

ಲೋಕಸಭಾ ಅಭ್ಯರ್ಥಿಗಳ ಜೊತೆಗೆ ವಿಧಾನಸಭಾ ಅಭ್ಯರ್ಥಿಗಳ ಪಟ್ಟಿಯನ್ನು ಚುನಾವಣಾ ಸಮಿತಿ ತಯಾರಿಸಿ ಅಕ್ಟೋಬರ್ ೨೧ ರೊಳಗೆ ಹೈಕಮಾಂಡ್‌ಗೆ ಕಳುಹಿಸಬೇಕು. ಅಕ್ಟೋಬರ್ ೨೨ ರಂದು ಹೈಕಮಾಂಡ್ ಸಭೆ ಸೇರಿ ಪಟ್ಟಿಯನ್ನು ಪರಿಶೀಲಿಸುತ್ತದೆಂದು ಗಾಡ್ಗೀಳ್ ಹೇಳಿದರು. ಪ್ರಣಾಳಿಕೆ ಸಮಿತಿ ಅಧ್ಯಕ್ಷರನ್ನಾಗಿ ಪ್ರಣಬ್ ಮುಖರ್ಜಿ ಅವರನ್ನು ನೇಮಿಸಲಾಗಿದೆ ಎಂದು ಅವರು ಹೇಳಿದರು.

ಚುನಾವಣಾ ಸಮಿತಿಯ ಬಗ್ಗೆ ವೀರೇಂದ್ರರು ಎ.ಐ.ಸಿ.ಸಿ. ಸಮನ್ವಯ ಸಮಿತಿ ಅಧ್ಯಕ್ಷೆ ಮೊಹಿಸೀನಾ ಕಿದ್ವಾಯ್ ಅವರೊಡನೆ ಮಾತನಾಡಿ ತಮ್ಮ ಅಸಮಾಧಾನ ವ್ಯಕ್ತಪಡಿಸಿದರು. ಸಮಿತಿ ಚಿಕ್ಕದಾಗಿರಬೇಕು ಹಾಗೂ ತಾವು ಸೂಚಿಸಿದವರು ಸಮಿತಿಯಲ್ಲಿ ಇರಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ವರಿಷ್ಠರು ಅವರನ್ನು ದೆಹಲಿಗೆ ಕರೆಸಿ ಚರ್ಚಿಸಿದರು. ಚುನಾವಣಾ ಸಮಿತಿಯ ಬಗ್ಗೆ ವೀರೇಂದ್ರರಿಗೆ ಸಂಪೂರ್ಣ ಸಮಾಧಾನ ಇರಲಿಲ್ಲ. ಅಕ್ಟೋಬರ್ ೨೧ ರಂದು ಮಾಜಿ ಮುಖ್ಯಮಂತ್ರಿ ಗುಂಡೂರಾಯರು ದೆಹಲಿಯನ್ನು ಸೇರಿದರು. ಕಾಂಗ್ರೆ ಪ್ರಧಾನ ಕಾರ್ಯದರ್ಶಿ ಶ್ರೀಮತಿ ಶೀಲಾ ಕೌಲ್‌ರವರು ಗುಂಡೂರಾವ್ ಮತ್ತು ಶ್ಯಾಮನಂದನ ಮಿಶ್ರಾ ಇವರುಗಳನ್ನು ಕಾಂಗ್ರೆಸ್ ಪಕ್ಷಕ್ಕೆ ಸೇರಿಸಿಕೊಳ್ಳಲಾಗಿದೆ ಎಂದು ಪ್ರಕಟಿಸಿದರು. ಅದೇ ದಿನ ನಗರಕ್ಕೆ ಆಗಮಿಸಿದ ಗುಂಡೂರಾಯರಿಗೆ ಭಾರೀ ಸ್ವಾಗತ ನೀಡಲಾಯಿತು. ಪಕ್ಷದ ಯಶಸ್ಸಿಗೆ ಶ್ರಮಿಸುವೆ, ಹೈಕಮಾಂಡ್ ವಹಿಸಿದ ಕೆಲಸವನ್ನು ನಿಷ್ಠೆಯಿಂದ ಮಾಡುವೆ ಎಂದು ಅವರು ಹೇಳಿದರು. ೨೩ ರಂದು ಬೆಂಗಳೂರಿನಲ್ಲಿ ಯುವ ಕಾಂಗ್ರೆಸ್ (ಐ) ಪಕ್ಷದ ಕಾರ್ಯಕರ್ತರ ಭಾರೀ ಸಭೆಯನ್ನು ಏರ್ಪಡಿಸಲಾಯಿತು. ಗುಂಡೂರಾವ್ ಅಧ್ಯಕ್ಷತೆ ವಹಿಸಿದ್ದರು. ಪ್ರತಿಪಕ್ಷದಲ್ಲಿ ೧೫ ಜನ ಪ್ರಧಾನಿಗಳಿದ್ದಾರೆಂದು ಅವರು ಲೇವಡಿ ಮಾಡಿದರು.

ಅಕ್ಟೋಬರ್ ೨೦ ರಂದು ಅರಮನೆ ಆವರಣದಲ್ಲಿ ಕಾಂಗ್ರೆಸ್ (ಐ) ಚುನಾವಣಾ ಪ್ರಚಾರ ಸಮಿತಿ ಕಚೇರಿಯನ್ನು ಉದ್ಘಾಟಿಸಲಾಯಿತು. ಅದೇ ದಿನ ಅಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷರುಗಳು ಉಪಾಧ್ಯಕ್ಷರುಗಳ ಸಭೆಯನ್ನು ಏರ್ಪಡಿಸಲಾಗಿತ್ತು. ವೀರೇಂದ್ರ ಪಾಟೀಲರು ದೆಹಲಿಗೆ ಹೋಗಿದ್ದರಿಂದ ಉಪಾಧ್ಯಕ್ಷ ಹಾರನಹಳ್ಳಿ ರಾಮಸ್ವಾಮಿ ಹಾಗೂ ಎಚ್. ಸಿ ಶ್ರೀಕಂಠಯ್ಯನವರ ನೇತೃತ್ವದಲ್ಲಿ ಈ ಸಭೆ ನಡೆಯಿತು. ಪಕ್ಷದ ಕಾರ್ಯಕರ್ತರ ಉತ್ಸಾಹ ಅದ್ಭುತವಾಗಿದೆ, ಲೋಕಸಭಾ ಅಭ್ಯರ್ಥಿಗಳ ಆಯ್ಕೆ ದೆಹಲಿಯಲ್ಲಿ ಇತ್ಯರ್ಥವಾಗಲಿದೆ. ೨೮ ಅಭ್ಯರ್ಥಿಗಳಲ್ಲಿ ೮ ಜನರಾದರೂ ಹೊಸಬರು ಇರುತ್ತಾರೆ ಎಂದು ಉಪಾಧ್ಯಕ್ಷ ಹಾರನಹಳ್ಳಿ ರಾಮಸ್ವಾಮಿ ಹೇಳಿದರು. ಲೋಕಸಭೆ, ವಿಧಾನಸಭೆ ಟಿಕೆಟ್‌ಗೆ ಅರ್ಜಿಸಲ್ಲಿಸುವ ಕಾರ್ಯ ಆರಂಭವಾಗಿತ್ತು. ಲೋಕಸಭಾ ಅಭ್ಯರ್ಥಿಯು ಸಲ್ಲಿಸುವ ಅರ್ಜಿಗೆ ಒಂದು ಸಾವಿರ ರೂಪಾಯಿ, ವಿಧಾನಸಭೆ ಅಭ್ಯರ್ಥಿಯು ಸಲ್ಲಿಸುವ ಅರ್ಜಿಗೆ ೫೦೦ ರೂಪಾಯಿ ನಿಗದಿ ಮಾಡಲಾಗಿತ್ತು. ಏಳು ಸಾವಿರಕ್ಕೂ ಹೆಚ್ಚು ಜನ ಕಾಂಗ್ರೆಸ್ ಟಿಕೆಟ್ ಕೋರಿ ಅರ್ಜಿ ಸಲ್ಲಿಸಿದರು. ಅರ್ಜಿಗಳ ಮಾರಾಟದಿಂದಲೇ ಪಕ್ಷಕ್ಕೆ ೪೦ ಲಕ್ಷ ರೂಪಾಯಿ ಸಂಗ್ರಹವಾಯಿತು ಎಂದು ತಿಳಿದುಬಂದಿತು. ೨೩ ರಂದು ಚಿಕ್ಕಬಳ್ಳಾಪುರ ರಸ್ತೆಯ ಎಸ್ಟೇಟ್ ಒಂದರಲ್ಲಿ ಕಾಂಗ್ರೆ ಚುನಾವಣಾ ಸಮಿತಿ ಸಭೆ ಸೇರಿ ಅರ್ಜಿಗಳನ್ನು ಪರಿಶೀಲಿಸಿತು. ಲೋಕಸಭಾ ಅಭ್ಯರ್ಥಿಗಳ ಆಯ್ಕೆಯನ್ನು ವರಿಷ್ಠರಿಗೆ ಬಿಡಲು ತೀರ್ಮಾನಿಸಲಾಯಿತು. ವಿಧಾನಸಭಾ ಅಭ್ಯರ್ಥಿಗಳ ಆಯ್ಕೆ ಬಗ್ಗೆಯೂ ದೆಹಲಿಯಲ್ಲೇ ಸಭೆ ನಡೆಸಿ ತೀರ್ಮಾನ ಕೈಗೊಳ್ಳಲು ನಿರ್ಧರಿಸಲಾಯಿತು. ವಿಧಾನಸಭೆಯ ೨೨೪ ಸ್ಥಾನಗಳಿಗೆ ೭೮೦೦ ಅರ್ಜಿಗಳು ಬಂದಿದ್ದವು. ರಾಜ್ಯ ಮಟ್ಟದ ಯುವ ಕಾಂಗ್ರೆಸ್ (ಐ) ಸಮಾವೇಶ ಬೆಂಗಳೂರಿನಲ್ಲಿ ೨೩ ರಂದೇ ನಡೆಯಿತು. ಶೇಕಡಾ ೫೦ ಸ್ಥಾನಗಳನ್ನು ಯುವಕಾಂಗ್ರೆ ನೀಡಲು ಸದರಿ ಸಮಾವೇಶನದಲ್ಲಿ ನಿರ್ಣಯ ಕೈಗೊಳ್ಳಲಾಯಿತು. ಹಿಂದಿನ ಯುವ ಕಾಂಗ್ರೆ ಅಧ್ಯಕ್ಷರುಗಳಾದ ಆರ್. ಗುಂಡೂರಾವ್, ವೀರಣ್ಣ ಮತ್ತಿಕಟ್ಟಿ, ಕೆ.ಜೆ. ಜಾರ್ಜ್, ಎಸ್. ರಮೇಶ್ ಅವರುಗಳನ್ನು ಸತ್ಕರಿಸಲಾಯಿತು. ಯುವ ಕಾಂಗ್ರೆ ಅಧ್ಯಕ್ಷ ಆರ್. ಆಂಜನೇಯ ಗೊತ್ತುವಳಿ ಮಂಡಿಸಿದರು. ಅಕ್ಟೋಬರ್ ೨೪ ರಂದು ಕಾಂಗ್ರೆಸ್ (ಐ) ಟಿಕೆಟ್ ನೀಡಿಕೆ ಚಟುವಟಿಕೆ ದೆಹಲಿಗೆ ಸ್ಥಳಾಂತರಗೊಂಡಿತು. ಸಹಸ್ರಾರು ಅರ್ಜಿಗಳೊಂದಿಗೆ ಪ್ರದೇಶ ಕಾಂಗ್ರೆ ಅಧ್ಯಕ್ಷರು, ಚುನಾವಣಾ ಸಮಿತಿಯವರು ದೆಹಲಿಗೆ ಹೋದರು. ಕಾಂಗ್ರೆ ಟಿಕೆಟ್‌ಗಾಗಿ ದೆಹಲಿಗೆ ಹೋಗಲು ವಿಮಾನದ ಟಿಕೆಟ್‌ಗೆ ನೂಕುನುಗ್ಗಲು ಉಂಟಾಯಿತು.

**ಲೋಕಸಭೆ ಪಟ್ಟಿ ಪ್ರಕಟಣೆ**

ಅಕ್ಟೋಬರ್ ೨೫ ರಂದು ರಾಜ್ಯದ ಲೋಕಸಭಾ ಕ್ಷೇತ್ರಗಳ ಅಭ್ಯರ್ಥಿಗಳ ಮೊದಲನೇ ಪಟ್ಟಿ ಬಿಡುಗಡೆ ಆಯಿತು. ಮೊದಲನೇ ಪಟ್ಟಿಯಲ್ಲಿ ಟಿಕೆಟ್ ಪಡೆದ ಕಾಂಗ್ರೆ ಅಭ್ಯರ್ಥಿಗಳ ವಿವರ ಕೆಳಗಿನಂತಿದೆ

| | | | | | |
|---|---|---|---|---|---|
| ಬೀದರ್ | - | ನರಸಿಂಗರಾವ್, ಸೂರ್ಯವಂಶಿ | ಗುಲಬರ್ಗಾ | - | ವೀರೇಂದ್ರ ಪಾಟೀಲ್ |
| ಬಳ್ಳಾರಿ | - | ಬಸವರಾಜೇಶ್ವರಿ | ದಾವಣಗೆರೆ | - | ಚನ್ನಯ್ಯ ಒಡೆಯರ್ |
| ತುಮಕೂರು | - | ಜಿ. ಎಸ್. ಬಸವರಾಜ್ | ಚಿಕ್ಕಬಳ್ಳಾಪುರ | - | ವಿ. ಕೃಷ್ಣರಾವ್ |
| ಕನಕಪುರ | - | ಎಂ. ವಿ. ಚಂದ್ರಶೇಖರಮೂರ್ತಿ | ಬೆಂಗಳೂರು ಉತ್ತರ | - | ಸಿ. ಕೆ. ಜಾಫರ್ ಷರೀಫ್ |
| ಚಾಮರಾಜನಗರ | - | ವಿ. ಶ್ರೀನಿವಾಸ ಪ್ರಸಾದ್ | ಮೈಸೂರು | - | ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ |
| ಮಂಗಳೂರು | - | ಜನಾರ್ದನ ಪೂಜಾರಿ | ಉಡುಪಿ | - | ಆಸ್ಕರ್ ಫರ್ನಾಂಡಿಸ್ |
| ಬೆಳಗಾವಿ | - | ಎಸ್. ಬಿ. ಸಿದ್ನಾಳ್ | ಚಿಕ್ಕೋಡಿ | - | ಬಿ. ಶಂಕರಾನಂದ್ |
| ಧಾರವಾಡ ಉತ್ತರ | - | ಡಿ. ಕೆ. ನಾಯ್ಕರ್ | | | |

ಲೋಕಸಭಾ ಅಭ್ಯರ್ಥಿಗಳ ಎರಡನೆಯ ಪಟ್ಟಿಯನ್ನು ೨೬ ರಂದು ಪ್ರಕಟಿಸಲಾಯಿತು. ಐದು ಜನ ಹೊಸಬರಿಗೆ ಟಿಕೆಟ್ ನೀಡಲಾಗಿತ್ತು.

| | | | | | |
|---|---|---|---|---|---|
| ವಿಜಾಪುರ | - | ಬಿ.ಕೆ. ಗುಡದಿನ್ನಿ | ಬಾಗಲಕೋಟೆ | - | ಎಸ್. ಟಿ. ಪಾಟೀಲ್ |
| ಧಾರವಾಡ ದಕ್ಷಿಣ | - | ಬಿ. ಎಂ. ಮುಜಾಹಿದ್ | ಚಿತ್ರದುರ್ಗ | - | ಮೂಡಲಗಿರಿಯಪ್ಪ |
| ರಾಯಚೂರು | - | ರಾಜಾ ಅಂಬಣ್ಣನಾಯಕ | ಕಾರವಾರ | - | ದೇವರಾಯನಾಯ್ಕ |
| ಚಿಕ್ಕಮಗಳೂರು | - | ಡಿ. ಎಂ. ಪುಟ್ಟೇಗೌಡ | ಮಂಡ್ಯ | - | ಜಿ. ಮಾದೇಗೌಡ |
| ಶಿವಮೊಗ್ಗ | - | ಟಿ. ವಿ. ಚಂದ್ರಶೇಖರಪ್ಪ | ಕೊಪ್ಪಳ | - | ಎಚ್. ಜಿ. ರಾಮುಲು |

ಡಿ. ಕೆ. ತಾರಾದೇವಿ, ಎಸ್. ಎಂ. ಕೃಷ್ಣ ಅವರಿಗೆ ಟಿಕೆಟ್ ನೀಡಿರಲಿಲ್ಲ. ಮಂಡ್ಯ, ಬೆಂಗಳೂರು ದಕ್ಷಿಣ, ವಿಜಾಪುರ, ಕೋಲಾರ ಕ್ಷೇತ್ರಗಳಲ್ಲಿ ಸೋತವರಿಗೆ ಟಿಕೆಟ್ ನೀಡಿರಲಿಲ್ಲ. ಎಂ. ವೈ. ಘೋರ್ಪಡೆ, ಅಜೀಜ್ ಸೇಠ್ ಲೋಕಸಭಾ ಚುನಾವಣೆಗೆ ಸ್ಪರ್ಧಿಸಲು ನಿರಾಕರಿಸಿದರು. ದಿನಾಂಕ ೩೦ ರಂದು ಲೋಕಸಭಾ ಅಭ್ಯರ್ಥಿಗಳ ಪಟ್ಟಿಯನ್ನು ಪುನರ್ ಪರಿಶೀಲಿಸಲಾಯಿತು. ಕೆಲವು ಬದಲಾವಣೆಗಳನ್ನು ಮಾಡಲಾಯಿತು. ಡಿ.ಕೆ. ತಾರಾದೇವಿ ಅವರಿಗೆ ಚಿಕ್ಕಮಗಳೂರಿನಿಂದ, ಆರ್. ಗುಂಡೂರಾವ್ ಅವರಿಗೆ ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರದಿಂದ ಟಿಕೆಟ್ ನೀಡಲಾಯಿತು. ಕೋಲಾರ ಕ್ಷೇತ್ರಕ್ಕೆ ಇನ್ನೂ ಅಭ್ಯರ್ಥಿಯನ್ನು ನಿರ್ಧರಿಸಲಾಗಿರಲಿಲ್ಲ. ವೀರೇಂದ್ರ ಪಾಟೀಲರಿಗೆ ಲೋಕಸಭೆ, ವಿಧಾನಸಭೆ ಎರಡಕ್ಕೂ ಟಿಕೆಟ್ ನೀಡಲಾಗಿತ್ತು. ೨-೧೧-೮೯ ರಂದು ಲೋಕಸಭೆಗೆ ವೀರೇಂದ್ರರ ಬದಲು ಜವಳಿಯವರಿಗೆ, ಕೋಲಾರದಿಂದ ವೈ. ರಾಮಕೃಷ್ಣ ಇವರಿಗೆ ಟಿಕೆಟ್ ನೀಡಲಾಯಿತು. ಕೆ. ಲಕ್ಕಪ್ಪನವರು ಬಂಡಾಯ ಏಳುತ್ತಾರೆ ಎಂಬ ಸೂಚನೆಗಳು ಕಂಡವು. ಅವರಿಗೆ ಕುಣಿಗಲ್ ಕ್ಷೇತ್ರದಿಂದ ವಿಧಾನ ಸಭೆಗೆ ಟಿಕೆಟ್ ನೀಡಲಾಯಿತು. ವಿಧಾನಸಭಾ ಅಭ್ಯರ್ಥಿಗಳ ಪಟ್ಟಿಯನ್ನು ಅಕ್ಟೋಬರ್ ೨೯ ರೊಳಗೆ ಬಿಡುಗಡೆ ಮಾಡಲಾಗುವುದೆಂದು ೨೫ ರಂದು ತಿಳಿಸಲಾಯಿತು. ಪ್ರದೇಶ ಕಾಂಗ್ರೆ ಚುನಾವಣಾ ಸಮಿತಿ ಪಟ್ಟಿ ತಯಾರಿಕೆಯಲ್ಲಿ ನಿರತವಾಗಿತ್ತು. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಭಿನ್ನಮತ ಉಂಟಾಯಿತು. ಚುನಾವಣಾ ಸಮಿತಿ ಸಂಸದರ ಅಭಿಪ್ರಾಯ ಪಡೆದು ಕ್ರಮ ತೆಗೆದುಕೊಳ್ಳುತ್ತಿದೆ. ೮೫ರ ಚುನಾವಣೆಗಳಲ್ಲಿ ಪಕ್ಷ ಸೋಲಲು ಸಂಸದರ ಅಭಿಪ್ರಾಯ ಪಡೆಯದೇ ಹೋದುದೇ ಕಾರಣವೆಂದು ಹೇಳಲಾಗಿದ್ದರಿಂದ ಈ ರೀತಿಯ ಕ್ರಮ ಅನುಸರಿಸಲಾಗಿದೆ ಎಂದು ಹೇಳಲಾಯಿತು. ವಿಸರ್ಜಿತ ವಿಧಾನಸಭೆಯ ಎಲ್ಲಾ ೬೬ ಸದಸ್ಯರಿಗೆ ಟಿಕೆಟ್ ನೀಡಬೇಕೆಂಬ ಒತ್ತಡ ಬಂದಿತು. ಚುನಾವಣಾ ಸಮಿತಿ ಇಬ್ಭಾಗವಾಯಿತು. ಎರಡೂ ಗುಂಪುಗಳು ಒಂದೊಂದು ಪಟ್ಟಿಯನ್ನು ತಯಾರುಮಾಡಿದವು. ಅದನ್ನು ದರ್ಬಾರಾಸಿಂಗ್ ನೇತೃತ್ವದ ಸಮಿತಿ ಸಭೆ ಸೇರಿ ಪರಿಶೀಲಿಸಲಿದೆ ಎಂದು ವರದಿ ಆಯಿತು. ಅಭ್ಯರ್ಥಿಗಳ ಆಯ್ಕೆ ಗೊಂದಲ ನಿವಾರಿಸಲು ಒಂದು ದೂರು ವಿಭಾಗವನ್ನೇ ತೆರೆಯಲಾಯಿತು.

ದಿನಾಂಕ ೨೮-೧೦-೮೯ರಂದು ೯೭ ಅಭ್ಯರ್ಥಿಗಳ ಪಟ್ಟಿ ಸಿದ್ಧವಾಗಿದೆ, ವಿಸರ್ಜಿತ ವಿಧಾನಸಭೆಯ ಎಲ್ಲಾ ೬೬ ಜನರಿಗೆ ಟಿಕೆಟ್ ನೀಡಲಾಗಿದೆ, ಉಳಿಕೆ ೧೨೭ ಸ್ಥಾನಗಳ ಅಭ್ಯರ್ಥಿಗಳ ಆಯ್ಕೆಯನ್ನು ಅಖೈರುಗೊಳಿಸುವ ಕಾರ್ಯ ಮುಂದುವರಿದಿದೆ ಎಂದು ತಿಳಿದು ಬಂದಿತು. ಅಭ್ಯರ್ಥಿಗಳ ಆಯ್ಕೆ ವಿಚಾರದಲ್ಲಿ ವೀರೇಂದ್ರರ ವರ್ತನೆ ಬಗ್ಗೆ ವರಿಷ್ಠರು ಅತೃಪ್ತಿ ವ್ಯಕ್ತಪಡಿಸಿದರೆಂದು ತಿಳಿದುಬಂದಿತು. ೧೯೬೯ರಲ್ಲಿ ತಮಗೆ ಬೆಂಬಲವಾಗಿ ನಿಂತವರಿಗೆ ಟಿಕೆಟ್ ಕೊಡಿಸಲು ವೀರೇಂದ್ರ ಪಾಟೀಲರು ತೀವ್ರ ಪ್ರಯತ್ನ ಪಡುತ್ತಿದ್ದಾರೆ ಎಂಬ

ದೂರುಗಳು ಕೇಳಿಬಂದವು. ತಮ್ಮ ಬೆಂಬಲಿಗರೇ ಅಧಿಕವಾಗಿದ್ದರೆ ಮುಖ್ಯಮಂತ್ರಿಗಳ ಹುದ್ದೆ ಪಡೆಯುವುದು ಸುಲಭವಾಗುತ್ತದೆಂಬ ಲೆಕ್ಕಾಚಾರ ಹಾಕಿದ್ದಾರೆ ಎಂದು ದೂರು ಕೇಳಿ ಬಂದಿತು. ೨೯ ರಂದು ೧೨೪ ಅಭ್ಯರ್ಥಿಗಳ ಪಟ್ಟಿ ಸಿದ್ಧವಾಯಿತು. ಅಭ್ಯರ್ಥಿಗಳ ಪಟ್ಟಿಯನ್ನು ಪರಿಶೀಲಿಸುತ್ತಿದ್ದ ದರ್ಬಾರಾಸಿಂಗ್ ಸಮಿತಿಗೆ ಕೆ. ಎಸ್. ನಾಗರತ್ನಮ್ಮನವರನ್ನು ಸೇರಿಸಲಾಯಿತು.

೩೧-೧೦-೮೯ರಂದು ರಾಜ್ಯ ವಿಧಾನಸಭಾ ಅಭ್ಯರ್ಥಿಗಳ ಅಂತಿಮ ಪಟ್ಟಿಯನ್ನು ಬಿಡುಗಡೆ ಮಾಡಲಾಯಿತು. ಪಟ್ಟಿಯ ಬಗ್ಗೆ ಅತೃಪ್ತಿಯ ಅಲೆಯೇ ಎದ್ದಿತು. ಎನ್. ಎಂ. ಅದ್ಯಂತಾಯ ಮತ್ತು ಬಿ. ಎ. ಉಮರಬ್ಬ ಬಿಟ್ಟು ಉಳಿದ ಎಲ್ಲಾ ವಿಸರ್ಜಿತ ವಿಧಾನಸಭೆ ಸದಸ್ಯರಿಗೆ ಟಿಕೆಟ್ ನೀಡಲಾಗಿತ್ತು. ಹಳೆಯ ಹುಲಿಗಳಿಗೆ ಮತ್ತೆ ಅವಕಾಶ ಕಲ್ಪಿಸಲಾಗಿತ್ತು. ನಾಮಪತ್ರ ಸಲ್ಲಿಸಲು ಕೊನೆಯ ದಿನವಾಗಿದ್ದ ೩೧ರಂದು ೨೨೪ ಸ್ಥಾನಗಳಿಗೆ ೪ ಸಾವಿರ ಅಭ್ಯರ್ಥಿಗಳು, ಲೋಕಸಭೆಯ ೨೮ ಸ್ಥಾನಗಳಿಗೆ ೫೦೦ ಕ್ಕೂ ಹೆಚ್ಚು ಅಭ್ಯರ್ಥಿಗಳು ನಾಮ ಪತ್ರ ಸಲ್ಲಿಸಿದ್ದರು. ೨-೧೧-೮೯ರಂದು ವಿಧಾನಸಭಾ ಅಭ್ಯರ್ಥಿಗಳ ಪಟ್ಟಿಯಲ್ಲಿ ಬದಲಾವಣೆ ಮಾಡಲಾಯಿತು. ೩೦-೪೦ ವಿಧಾನ ಸಭಾ ಕ್ಷೇತ್ರಗಳ ಅಭ್ಯರ್ಥಿಗಳಲ್ಲಿ ಬದಲಾವಣೆ ಆಗುತ್ತಿದೆ ಎಂಬ ಸೂಚನೆ ಬಂದಿತು. ಗುಂಡೂರಾವ್ ರಾಜೀವ್‌ಗಾಂಧಿಯವರನ್ನು ಭೇಟಿಯಾಗಿ ಮಾತುಕತೆ ನಡೆಸಿದರು. ಎ.ಐ.ಸಿ.ಸಿ. ವೀಕ್ಷಕರಾಗಿದ್ದ ತಂಗಬಾಲು, ಎಂ. ಎಂ. ಜೇಕಬ್, ಸ್ವಾಮಿ ಅವರುಗಳಿಗೆ ಅಸಂಖ್ಯಾತ ಅತೃಪ್ತರು ಮನವಿ ಪತ್ರ ಸಲ್ಲಿಸಿದರು. ಆಮದು ಅಭ್ಯರ್ಥಿಗಳಿಗೆ ಅವಕಾಶ ಇರಬಾರದು, ಸ್ಥಳೀಯರಿಗೇ ಆದ್ಯತೆ ನೀಡಬೇಕೆಂಬುದು ಇವರ ನಿಲುವಾಗಿತ್ತು. ಕೊನೆಗೆ ೩೦ ವಿಧಾನಸಭಾ ಕ್ಷೇತ್ರದ ಅಭ್ಯರ್ಥಿಗಳಲ್ಲಿ ಬದಲಾವಣೆ ಮಾಡಲಾಯಿತು. ವೀರೇಂದ್ರ ಪಾಟೀಲರು ಈ ಬದಲಾವಣೆಗಳನ್ನು ೨-೧-೮೯ರಂದು ಪ್ರಕಟಿಸಿದರು. ೪ ರಂದು ನಾಮಪತ್ರ ಹಿಂತೆಗೆಯಲು ಕೊನೆಯ ದಿನವಾಗಿತ್ತು.

೨೨೩ ಅಭ್ಯರ್ಥಿಗಳಲ್ಲಿ ೫೧ ಹಿಂದುಳಿದ ವರ್ಗದವರು, ೫೧ ಲಿಂಗಾಯಿತರು, ೪೯ ಒಕ್ಕಲಿಗರು, ೧೮ ಮುಸಲ್ಮಾನರು, ೩ ಕ್ರಿಶ್ಚಿಯನ್ನರು, ೨ ಜೈನರು, ೮ ಬ್ರಾಹ್ಮಣರು, ೫ ಲಂಬಾಣಿ, ೨ ಬೋವಿ, ೩೪ ಹರಿಜನ ಗಿರಿಜನರುಗಳು ಇರುತ್ತಾರೆಂದು, ೭ ಮಹಿಳೆಯರಿಗೆ ಟಿಕೆಟ್ ನೀಡಲಾಗಿದೆ ಎಂದು ತಿಳಿದುಬಂದಿತು. ಉಮರಬ್ಬ, ಅದ್ಯಂತಾಯರವರಿಗೆ ಟಿಕೆಟ್ ನೀಡದ ಬಗ್ಗೆ ಮಂಗಳೂರಿನಲ್ಲಿ ಜನಾರ್ದನ ಪೂಜಾರಿಯವರಿಗೆ ಘೇರಾವೋ ಮಾಡಲಾಯಿತು. ಚಿತ್ರದುರ್ಗದಲ್ಲಿ ಆರ್. ಮಂಜುನಾಥ್‌ಗೆ ಟಿಕೆಟ್ ನೀಡಿದ್ದನ್ನು ಪ್ರತಿಭಟನೆ ಮಾಡಲಾಯಿತು. ಕೊನೆಗೆ ಅವರೇ ಕಾಂಗ್ರೆಸ್ಸಿನ ಅಧಿಕೃತ ಅಭ್ಯರ್ಥಿ ಎಂದು ಹೇಳಲಾಯಿತು. ಆ ನಂತರ ಅವರನ್ನು ಬದಲಾಯಿಸಿ ಮೊಹಮದ್ ನೂರುಲ್ಲಾ ಷರೀಫ್‌ಗೆ ಟಿಕೆಟ್ ನೀಡಲಾಯಿತು. ಭಾಲ್ಕಿಯಲ್ಲಿ ವಿಜಯಕುಮಾರ್ ಖಂಡ್ರೆಯವರಿಗೆ ಟಿಕೆಟ್ ನೀಡದ್ದನ್ನು ವಿರೋಧಿಸಿ, ಬೀದರ್ ಜಿಲ್ಲಾ ಕಾಂಗ್ರೆಸ್ ಇಬ್ಭಾಗವಾಗಿ ವಿಜಯಕುಮಾರ್ ಪರವಾಗಿ ಹೆಚ್ಚು ಜನ ಬೆಂಬಲಿಗರು ನಿಂತರು. ಬಂಡಾಯ ಅಭ್ಯರ್ಥಿಯಾಗಿ ಅವರು ಸ್ಪರ್ಧಿಸಿದರು. ಪಾರಸಗಡ ಕ್ಷೇತ್ರಕ್ಕೆ ಮಹದೇವ ಹೊರಟ್ಟಿಯವರಿಗೆ ಟಿಕೆಟ್ ನೀಡಿದ್ದನ್ನು ಜನ ಪ್ರತಿಭಟಿಸಿದರು. ಅವರಿಗೆ ನಾಮಪತ್ರ ಸಲ್ಲಿಸಲು ಅವಕಾಶವನ್ನೇ ಕೊಡಲಿಲ್ಲ. ಕೊನೆಗೆ ಜನರ ಪ್ರತಿಭಟನೆಗೆ ಮಣಿದು ಸುಭಾಷ್ ಕೌಜಲಗಿ ಅವರಿಗೆ ಟಿಕೆಟ್ ನೀಡಲಾಯಿತು.

ಕಲ್ಮಲಾ ಕ್ಷೇತ್ರದ ಅಧಿಕೃತ ಅಭ್ಯರ್ಥಿ ಕೆ. ಭೀಮಣ್ಣ ಅವರು ನಾಮಪತ್ರ ಸಲ್ಲಿಸಲು ಹೋಗುತ್ತಿದ್ದಾಗ ಅವರ ಕಾರನ್ನು ಅಡ್ಡ ಹಾಕಿ ನಾಮಪತ್ರ ಕಸಿದುಕೊಳ್ಳುವ ಪ್ರಯತ್ನ ದಿನಾಂಕ ೨ ರಂದು ನಡೆಯಿತು. ಆದರೆ ಅನಾಹುತವೇನೂ ಆಗಲಿಲ್ಲ. ಬಂಡಾಯದ ಬಿಸಿ ವಿಪರೀತವಾಗಿತ್ತು. ಬಿನ್ನಿಪೇಟೆ, ಜಯಮಹಲ್, ಭರಮಸಾಗರ, ಮಾಯಕೊಂಡ, ನೆಲಮಂಗಲಗಳಲ್ಲಿ ಸ್ಥಳೀಯರಿಗೇ ಟಿಕೆಟ್ ನೀಡಬೇಕೆಂಬ ಒತ್ತಾಯಗಳು ಬಂದವು. ಈ ರೀತಿ ಟಿಕೆಟ್ ನೀಡಿಕೆಯ ಗೊಂದಲ ಕೊನೆಯವರೆಗೂ ಮುಂದುವರಿದಿತ್ತು. ಕೊನೆಗೆ ೨೮ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಅಭ್ಯರ್ಥಿಗಳನ್ನು ಬದಲಾಯಿಸಲಾಗಿದೆಯೆಂದು ದಿನಾಂಕ ೩ ರಂದು ಪ್ರಕಟಿಸಲಾಯಿತು. ಕೆ. ಎಚ್. ರಂಗನಾಥ್, ಅಜೀಜ್ ಸೇಠ್, ರೇಣುಕಾರಾಜೇಂದ್ರನ್, ಗಂಗಾಧರಗೌಡ ಮುಂತಾದವರಿಗೆ ಟಿಕೆಟ್ ದೊರೆಯಿತು. ಸಿ. ಕಣ್ಣನ್, ಮುಕ್ತರುನ್ನೀಸಾ ಬೇಗಂ, ತಾರಾದೇವಿ, ಎಂ. ವಿ. ರಾಜಶೇಖರನ್, ಪಿ. ರತ್ನಾಕರ್, ಡಿ. ಪಿ. ಸಾಲಪ್ಪ ಇವರುಗಳನ್ನು ಪಟ್ಟಿಯಿಂದ ಕೈಬಿಡಲಾಯಿತು.

## ಪ್ರಚಾರ ಕಾರ್ಯ

ರಾಜೀವ್ ಗಾಂಧಿಯವರು ನವೆಂಬರ್ ೭ ರಂದು- ಬೆಂಗಳೂರು, ಚಿಕ್ಕಬಳ್ಳಾಪುರ, ಕೋಲಾರಗಳಲ್ಲಿ- ೯ ರಂದು ಚಿಂಚೋಳಿ, ದಾವಣಗೆರೆ, ಚಿಕ್ಕಮಗಳೂರು - ಉಡುಪಿಗಳಲ್ಲಿ ಚುನಾವಣಾ ಪ್ರಚಾರ ಮಾಡಿದರು. ಮತ್ತೆ ೧೨ ರಂದು ಬೆಂಗಳೂರಿನಲ್ಲಿ ಚುನಾವಣಾ ಪ್ರಚಾರ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದರು. ಜನತೆಗೇ ಅಧಿಕಾರ ಎಂಬುದು ಕಾಂಗ್ರೆಸ್(ಐ) ಗುರಿಯಾಗಿದೆ. ಸ್ಥಳೀಯ ಸಂಸ್ಥೆಗಳಿಗೆ

ಹೆಚ್ಚಿನ ಅಧಿಕಾರ ನೀಡುವ ತಿದ್ದುಪಡಿ ವಿಧೇಯಕವನ್ನು ರಾಜ್ಯಸಭೆಯಲ್ಲಿ ವಿರೋಧ ಪಕ್ಷಗಳು ಸೋಲಿಸಿ, ಜನತೆಗೆ ದ್ರೋಹ ಬಗೆದಿವೆ, ರಾಜ್ಯಗಳಿಗೆ ಪರಮಾಧಿಕಾರ ನೀಡುವುದು ರಾಷ್ಟ್ರದ ಏಕತೆಗೆ ಅಪಾಯ ಉಂಟು ಮಾಡುತ್ತದೆ, ಜನತಾದಳದ ಸರ್ಕಾರ ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಹಾಳುಗೆಡವಿದೆ ಎಂಬುದು ಅವರ ಭಾಷಣಗಳಲ್ಲಿ ಮುಖ್ಯಾಂಶಗಳಾಗಿದ್ದವು.

೨೦-೧೧-೮೯ರಂದು ಅರಸೀಕೆರೆಯಲ್ಲಿ ಕಲ್ಲು ತೂರಾಟವಾಗಿ ಕಾಂಗ್ರೆ ಅಭ್ಯರ್ಥಿಗೆ ಪೆಟ್ಟು ಬಿತ್ತು, ದಿನಾಂಕ ೨೧ ರಂದು ಚಿಂಚೋಳಿಯಲ್ಲಿ ವೀರೇಂದ್ರರ ಕಾರಿಗೆ ಕಲ್ಲುಬಿತ್ತು. ಈ ರೀತಿ ಸಣ್ಣ ಪುಟ್ಟ ಘರ್ಷಣೆಗಳನ್ನು ಹೊರತುಪಡಿಸಿದರೆ ಚುನಾವಣಾ ಪ್ರಚಾರ ಶಾಂತವಾಗಿತ್ತು. ಹೆಚ್ಚಾಗಿ ರಾಜೀವ್, ಇಂದಿರಾ, ನೆಹರು ಕಟ್‌ಔಟ್‌ಗಳು ಹಾಗೂ ಕರಪತ್ರ, ಸ್ಟಿಕ್ಕರ್‌ಗಳು, ಭಿತ್ತಿ ಪತ್ರಗಳ ಉಪಯೋಗ ವಿಪರೀತವಾಗಿತ್ತು. ೧೦-೧೧-೮೯ ರಂದು ಅಯೋಧ್ಯೆಯಲ್ಲಿ ರಾಮಮಂದಿರ ಶಿಲಾನ್ಯಾಸ ನಡೆದು ದೇಶದಾದ್ಯಂತ ಕೋಮು ಗಲಭೆಗಳಾದವು. ರಾಜ್ಯದಲ್ಲಿ ಅರಸೀಕೆರೆ, ಧಾರವಾಡ, ಹುಬ್ಬಳ್ಳಿ, ಶಿವಮೊಗ್ಗಗಳಲ್ಲಿ ಹಿಂಸಾಕೃತ್ಯಗಳು ನಡೆದು ಕರ್ಫ್ಯೂ ವಿಧಿಸಲಾಗಿತ್ತು. ಸುಮಾರು ೧೫ ನೇ ತಾರೀಖಿನವರೆಗೆ ಹಲವಾರು ಕಡೆ ನಿಷೇಧಾಜ್ಞೆ ಜಾರಿಯಲ್ಲಿತ್ತು. ಶಿವಮೊಗ್ಗದಲ್ಲಿ ಇರಿತಕ್ಕೆ ಒಬ್ಬರ ಬಲಿ ಆಯಿತು. ಈ ಗಲಭೆ ಹಾಗೂ ಕರ್ಫ್ಯೂಗಳಿಂದಾಗಿ ರಾಜ್ಯದಲ್ಲಿ ಚುನಾವಣಾ ಪ್ರಚಾರಕ್ಕೆ ಹಿಂದೇಟಾಯಿತು.

## ಎ.ಐ.ಸಿ.ಸಿ. ಪ್ರಣಾಳಿಕೆ

ದಿನಾಂಕ ೬-೧-೮೯ ರಂದು ಕಾಂಗ್ರೆ ಅಧ್ಯಕ್ಷ ಪ್ರಧಾನಮಂತ್ರಿ ರಾಜೀವ್ ಗಾಂಧಿಯವರು ಪಕ್ಷದ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿದರು. ಪ್ರಣಾಳಿಕೆಯ ಮುಖ್ಯಾಂಶಗಳು ಮುಂದಿನಂತಿವೆ. ಸಂಸತ್ತಿನ ಮುಂದೆ ಮತ್ತೆ ಪಂಚಾಯತ್ ರಾಜ್- ನಗರ ಪಾಲಿಕೆ ವಿಧೇಯಕ ಮಂಡನೆ, ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರ. ಮಹಿಳೆಯರ ಉನ್ನತಿಗೆ ಇಂದಿರಾ ಮಹಿಳಾ ಯೋಜನೆ, ರಫ್ತು ಉತ್ಪಾದನೆ ಹೆಚ್ಚಳ. ವಿದೇಶಿ ವಿನಿಮಯ ವರ್ಧನೆ, ತ್ವರಿತ ನ್ಯಾಯದಾನಕ್ಕಾಗಿ ನ್ಯಾಯಾಂಗ ವ್ಯವಸ್ಥೆ ಸುಧಾರಣೆ, ಸಹಕಾರಿ ಚಳವಳಿಗೆ ಹೊಸ ರೂಪ, ಕೃಷಿ ಕ್ಷೇತ್ರಕ್ಕೆ ಆದ್ಯತೆ. ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ವ್ಯವಸ್ಥೆ, ಕೃಷಿ ಆಧಾರಿತ ಉದ್ಯಮಗಳಿಗೆ ಆದ್ಯತೆ ಹಾಗೂ ಅವುಗಳ ಅಭಿವೃದ್ಧಿಗೆ ಕ್ರಮ. ೧೯೯೫ ರೊಳಗೆ ಎಲ್ಲರಿಗೂ ವಸತಿ ಉದ್ಯೋಗಾವಕಾಶ ಹೆಚ್ಚಿಸಲು ಕೈಗಾರಿಕಾ ಆರ್ಥಿಕ ನೀತಿಯ ಪುನರ್ ವಿನ್ಯಾಸ. ನೆರೆಹೊರೆಯವರೊಡನೆ ಸ್ನೇಹ ಹಸ್ತ. ಅಲಿಪ್ತ ನೀತಿ ಮುಂದುವರಿಕೆ. ದೇಶದ ಏಕತೆ ಸಮಗ್ರತೆಯ ರಕ್ಷಣೆಗೆ ಪಣ. ಕೋಮುವಾರು ಭಾವನೆ ದಮನಕ್ಕೆ ಕ್ರಮ. ಪ್ರತಿಹಳ್ಳಿಗೆ ದೂರವಾಣಿ- ನೇರ ಡಯಲಿಂಗ್ ಸೌಲಭ್ಯ ವಿಸ್ತರಣೆ.

ಗ್ರಾಮಗಳಿಗೆ ರಸ್ತೆ, ನೀರು, ವಿದ್ಯುತ್, ಅಡಿಗೆ ಅನಿಲ ವ್ಯವಸ್ಥೆಗೆ ಕ್ರಮ. ಪಂಚಾಯತಿ ರಾಜ್ಯ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಶೇಕಡಾ ೩೦ ಸ್ಥಾನ ಮೀಸಲು, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರಿಗೆ ಜನಸಂಖ್ಯೆಗೆ ಅನುಗುಣವಾಗಿ ಸ್ಥಾನಗಳ ಮೀಸಲಾತಿ. ಪ್ರತಿ ಪಂಚಾಯತಿಯೂ ತನ್ನ ಅಗತ್ಯಕ್ಕೆ ತಕ್ಕಂತೆ ತಾನೇ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿಕೊಂಡು ಕಾರ್ಯಾಚರಣೆಗೆ ತರಲು ಅಧಿಕಾರ ನೀಡುವುದು. ಚುನಾಯಿತ ಪ್ರತಿನಿಧಿಗಳ ಸಂಖ್ಯೆಯನ್ನು ಹೆಚ್ಚಿಸುವುದು. ಪಂಚಾಯತಿಗಳಲ್ಲಿ ೫೦೦ ರಿಂದ ೧೦೦೦ ಜನರಿಗೆ ಒಬ್ಬ ಪ್ರತಿನಿಧಿ ಇರುವಂತೆ ನೋಡಿಕೊಳ್ಳುವುದು. ಸಮಾಜದ್ರೋಹಿಗಳನ್ನು, ಅಪರಾಧಿಗಳನ್ನು ಪಂಚಾಯತ್ ರಾಜ್ಯ ಚುನಾವಣೆಗಳಿಂದ ದೂರ ಇಡುವುದು.

## ಪ್ರದೇಶ ಕಾಂಗ್ರೆ ಚುನಾವಣಾ ಘೋಷಣೆ

ಪ್ರದೇಶ ಕಾಂಗ್ರೆಸ್ (ಐ) ಸಮಿತಿಯು ೧೧-೧೧-೮೯ರಂದು ತನ್ನ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿತು. ಅದರ ಮುಖ್ಯಾಂಶಗಳು ಹೀಗಿವೆ: ೨೦ ಅಂಶಗಳ ಕಾರ್ಯಕ್ರಮಗಳಿಗೆ ಹೊಸ ಚೇತನ. ಹತ್ತು ಸಾವಿರ ರೂಪಾಯಿಗಳವರೆಗಿನ ಕೃಷಿ ಸಾಲ ಮನ್ನಾ. ಕೃಷಿ ಪಂಪ್ ಸೆಟ್‌ಗಳಿಗೆ ಅಶ್ವಶಕ್ತಿ ಒಂದಕ್ಕೆ ೫೦ ರೂಪಾಯಿನಂತೆ ವಿದ್ಯುತ್ ದರ ನಿಗದಿ. ನೀರಾವರಿ ಯೋಜನೆಗಳಿಗೆ ೩೦೦ ಕೋಟಿ ರೂಪಾಯಿ. ಜಲ ವಿದ್ಯುತ್ ಯೋಜನೆಗಳ ಕಾರ್ಯಗತಕ್ಕೆ ಪ್ರತ್ಯೇಕ ನಿಗಮ. ಇಂಜಿನಿಯರಿಂಗ್, ಮೆಡಿಕಲ್ ಇತರ ಯಾವುದೇ ಕಾಲೇಜುಗಳಲ್ಲಿ ಶಾಲೆಗಳಲ್ಲಿ ಕ್ಯಾಪಿಟೇಶನ್ ಶುಲ್ಕ ರದ್ದು.

ಜನತಾ ಪಕ್ಷದ ಸರ್ಕಾರದಲ್ಲಿ, ಆಡಳಿತಾತ್ಮಕವಾಗಿ ರಾಜಕೀಯವಾಗಿ ಆರ್ಥಿಕವಾಗಿ ಅಧೋಗತಿ ಉಂಟಾಗಿದ್ದು, ಪಕ್ಷಾಂತರ ನಿಷೇಧ ಕಾಯಿದೆ ಜಾರಿಯಲ್ಲಿದ್ದರೂ ಕೂಡಾ ಅಧಿಕಾರ ಉಳಿಸಿಕೊಳ್ಳಲು ಆಗಲಿಲ್ಲ. ಮೌಲ್ಯಾಧಾರಿತ ರಾಜಕಾರಣ ಹೇಳುವವರೇ ಸರ್ಕಾರವನ್ನು ಉರುಳಿಸಿದರು. ಹೊಸ ಪಂಚಾಯತ್ ರಾಜ್ಯ ಕಾಯಿದೆ ಜಾರಿಗೆ ತರುವುದು, ಪಂಚಾಯತ್ ವ್ಯವಸ್ಥೆಯನ್ನು ಸಶಕ್ತಗೊಳಿಸುವುದು. ಕೃಷಿ ಉತ್ಪಾದನೆಗಳಿಗೆ ಲಾಭದಾಯಕವಾದ ಬೆಲೆ, ತಮ್ಮ ಕೃಷಿ ಉತ್ಪನ್ನಗಳನ್ನು ಬೇರೆ ದೇಶಗಳಿಗೆ ರಫ್ತು ಮಾಡಲು

ರಾಜ್ಯದ ರೈತರಿಗೆ ಅವಕಾಶ, ಹತ್ತಿ, ಕಬ್ಬು, ತಂಬಾಕು, ಕಡಲೆಕಾಯಿ (ಶೇಂಗಾ) ಬೆಳೆಗಳ ಅಭಿವೃದ್ಧಿಗೆ ವಿಶೇಷ ಗಮನ. ಕೀಟಹಾವಳಿ ರಾಷ್ಟ್ರೀಯ ಪಿಡುಗು ಎಂದು ಪರಿಗಣಿಸಲು ಶಿಫಾರಸ್ಸು. ಬೆಳೆಗಳಿಗೆ ತಗಲುವ ಸೋಂಕು ರೋಗಗಳಿಗೆ ಪರಿಹಾರ ಕಲ್ಪಿಸಿಕೊಡುವುದು.

ಹುಬ್ಬಳ್ಳಿ-ಕಾರವಾರ ಹೊಸ ರೈಲು ಮಾರ್ಗ ರಚನೆ. ಮೈಸೂರು - ಬೆಂಗಳೂರು, ಹುಬ್ಬಳ್ಳಿ-ಬಳ್ಳಾರಿ ರೈಲು ಮಾರ್ಗಗಳು ಬ್ರಾಡ್‌ಗೇಜ್‌ಗೆ ಪರಿವರ್ತನೆಗೆ ಕ್ರಮ. ಭೂ ಸ್ವಾಧೀನ ಹಾಗೂ ವಿತರಣೆಗೆ ಸರಳ ಕ್ರಮ. ಭೂರಹಿತರಿಗೆ ಮನೆ ನಿವೇಶನ. ರಾಜ್ಯದಲ್ಲಿ ಪ್ರತಿಯೊಂದು ಬಡ ಕುಟುಂಬಕ್ಕೂ ಮನೆ ಕಟ್ಟಿಕೊಡುವ ದೊಡ್ಡ ಪ್ರಮಾಣದ ಯೋಜನೆ. ವಿಶ್ವಬ್ಯಾಂಕ್‌ನಿಂದ ೧೦೦ ಕೋಟಿ ರೂಪಾಯಿ ನೆರವಿನ ಗ್ರಾಮೀಣ ಕುಡಿಯುವ ನೀರು ಸರಬರಾಜು ಯೋಜನೆಗಳ ಅಭಿವೃದ್ಧಿ. ನಗರ, ಗ್ರಾಮಾಂತರ ಪ್ರದೇಶದ ಕೊಳಚೆ ಪ್ರದೇಶ ನಿವಾಸಿಗಳಿಗೆ, ದುರ್ಬಲ ವರ್ಗಗಳಿಗೆ ಅಗತ್ಯವಾದ ದಿನಬಳಕೆ ವಸ್ತುಗಳನ್ನು ಪೂರೈಸಲು ಜನತಾ ಬಜಾರ್ ವ್ಯವಸ್ಥೆ, ಕೂಲಿಗಾಗಿ ಕಾಳು ಯೋಜನೆ ಜಾರಿಗೆ.

ಸರ್ಕಾರದಲ್ಲಿ ಖಾಲಿ ಇರುವ ಎಲ್ಲಾ ಹುದ್ದೆಗಳನ್ನು ಒಂದು ವರ್ಷದ ಒಳಗೆ ಭರ್ತಿ ಮಾಡಲು ಕ್ರಮ. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರಿಗೆ ಉದ್ಯೋಗದ ಮೂಲಭೂತ ಹಕ್ಕನ್ನು ನೀಡಲು ಕೇಂದ್ರದ ಜೊತೆ ವ್ಯವಹಾರ. ಕರ್ನಾಟಕದ ಅಭಿವೃದ್ಧಿಗೆ ಅಗತ್ಯವಿರುವ ಪೂರ್ಣ ಪ್ರಮಾಣದ ದೂರದರ್ಶನ, ಪ್ರತ್ಯೇಕ ನೈರುತ್ಯ ರೈಲ್ವೆ ವಲಯ, ಹೊಸ ರೈಲು ಮಾರ್ಗಗಳು ಇವುಗಳ ಬಗ್ಗೆ ತೀವ್ರ ಆಸಕ್ತಿ ವಹಿಸುವುದು.

**ಫಲಿತಾಂಶ**

೨೪-೧೧-೮೯ರಂದು ರಾಜ್ಯದಲ್ಲಿ ಶಾಂತಿಯುತ ಮತದಾನ ನಡೆಯಿತು. ಶೇಕಡಾ ೬೦ ರಿಂದ ೭೦ರವರೆಗೆ ಮತದಾನವಾಯಿತು. ಪ್ರಥಮ ಬಾರಿಗೆ ೧೮ ವರ್ಷದವರು ಮತದಾನ ಮಾಡಿದರು. ತಾನು ಸ್ಪರ್ಧಿಸಿದ್ದ ೨೧೯ ಸ್ಥಾನಗಳ ಪೈಕಿ ಕಾಂಗ್ರೆಸ್ (ಐ) ೧೭೬ ಸ್ಥಾನಗಳನ್ನು ಗಳಿಸಿ ಚರಿತ್ರಾರ್ಹವಾದ ಸಾಧನೆಯನ್ನು ಮಾಡಿತು. ಚಲಾಯಿತ ಮತಗಳಲ್ಲಿ ೭೯,೨೭,೩೯೨ ಮತಗಳನ್ನು ಪಡೆಯಿತು. ಕಾಂಗ್ರೆಸ್ (ಐ) ಪಡೆದ ಮತಗಳ ಶೇಕಡಾ ಪ್ರಮಾಣ ೪೩.೭೭. ಜನತಾದಳ, ಜನತಾ ಪಕ್ಷಗಳು, ಭಾರತೀಯ ಜನತಾ ಪಕ್ಷ, ಕರ್ನಾಟಕ ರಾಜ್ಯ ರೈತಸಂಘ ಪ್ರತ್ಯೇಕವಾಗಿ ಸ್ಪರ್ಧಿಸಿದ್ದು ಇದಕ್ಕೆ ಒಂದು ಕಾರಣ.

ಜನತಾದಳ ಶೇಕಡಾ ೨೭.೩೦, ಜನತಾ ಪಕ್ಷ ಶೇಕಡಾ ೧೧.೪೦, ಭಾ.ಜ.ಪ. ಶೇಕಡಾ ೪.೧೩, ಕ.ರಾ. ರೈ.ಸಂ. ೩.೬೩ ಮತಗಳನ್ನು ಪಡೆದವು. ಇವುಗಳೆಲ್ಲದರ ಒಟ್ಟು ಶೇಕಡಾ ಪ್ರಮಾಣ ೪೬. ೪೯ ಆಗಿತ್ತು. ಜೊತೆಗೆ ೧೦೫೫ ಪಕ್ಷೇತರರು ಸ್ಪರ್ಧಿಸಿದ್ದು ಅವರು ೧೨ ಸ್ಥಾನಗಳನ್ನು ಪಡೆದು ಶೇಕಡಾ ೭.೭೭ ಮತಗಳನ್ನು ಗಳಿಸಿದ್ದರು. ಕಾಂಗ್ರೆಸ್ (ಐ) ಅಮೋಘವಾಗಿ ಸಾಧನೆ ಮಾಡಿ ಗೆದ್ದ ಸ್ಥಾನಗಳ ಸಂಖ್ಯೆ ಹಾಗೂ ಜಿಲ್ಲೆಗಳ ವಿವರ ಕೆಳಗಿನಂತಿದೆ. ಆವರಣದಲ್ಲಿರುವುದು ಒಟ್ಟು ವಿಧಾನಸಭಾ ಸ್ಥಾನಗಳ ಸಂಖ್ಯೆ.

| | | | |
|---|---|---|---|
| ಗುಲಬರ್ಗಾ | ೧೨(೧೩) | ತುಮಕೂರು | ೧೧(೧೩) |
| ಕೋಲಾರ | ೯(೧೨) | ಬೆಂಗಳೂರು ನಗರ | ೯(೧೧) |
| ಬೆಂಗಳೂರು ಗ್ರಾಮೀಣ | ೭(೯) | ಮಂಡ್ಯ | ೮(೯) |
| ಮೈಸೂರು | ೧೪(೧೬) | ಕೊಡಗು | ೩(೩) |
| ಹಾಸನ | ೮(೮) | ದಕ್ಷಿಣ ಕನ್ನಡ | ೧೪(೧೬) |
| ಚಿಕ್ಕಮಗಳೂರು | ೬(೬) | ಶಿವಮೊಗ್ಗ | ೭(೧೦) |
| ಉತ್ತರ ಕನ್ನಡ | ೫(೬) | ಹುಬ್ಬಳ್ಳಿ-ಧಾರವಾಡ | ೧೪(೧೭) |
| ಬೆಳಗಾವಿ | ೧೦(೧೮) | ಬಿಜಾಪುರ | ೧೧(೧೫) |

ಲೋಕಸಭೆಯ ೨೮ ಸ್ಥಾನಗಳ ಪೈಕಿ ೨೭ ಸ್ಥಾನಗಳನ್ನು ಕಾಂಗ್ರೆಸ್ (ಐ) ಪಡೆಯಿತು. ಕೇವಲ ಒಂದು ಸ್ಥಾನ ಜನತಾದಳಕ್ಕೆ ಹೋಯಿತು. ಕಾಂಗ್ರೆಸ್ (ಐ) ೯೦,೦೮,೯೮೦ ಮತಗಳನ್ನು ಪಡೆಯಿತು. ಅದು ಪಡೆದ ಮತಗಳ ಶೇಕಡಾ ಪ್ರಮಾಣ ೫೭.೩೯ ಆಗಿತ್ತು. ಆದರೆ ಇಲ್ಲಿ ಜನತಾ, ಜನತಾದಳಗಳು ಸೇರಿ ಒಟ್ಟಾಗಿ ಪಡೆದ ಮತಗಳ ಶೇಕಡಾ ಪ್ರಮಾಣ ೩೯ ಆಗಿತ್ತು. ಅಂದರೆ ಕಾಂಗ್ರೆಸ್ (ಐ) ಅತ್ಯುತ್ತಮ ಸಾಧನೆ ಮಾಡಿತ್ತು. ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ (ಐ) ಕರ್ನಾಟಕದಲ್ಲಿ ೨೮ ಕ್ಕೆ ೨೭ ಸ್ಥಾನಗಳನ್ನು ಗಳಿಸಿತು. ಆದರೆ ರಾಷ್ಟ್ರಮಟ್ಟದಲ್ಲಿ ಅದು ಅತ್ಯಂತ ಕಳಪೆ ಸಾಧನೆ ಮಾಡಿ ಕೇವಲ ೧೯೩ ಸ್ಥಾನಗಳನ್ನು ಪಡೆಯಿತು. ಆಂಧ್ರದಲ್ಲಿ ೩೯, ಕೇರಳದಲ್ಲಿ

೧೪, ಮಹಾರಾಷ್ಟ್ರದಲ್ಲಿ ೨೮, ತಮಿಳುನಾಡಿನಲ್ಲಿ ೨೪ ಸ್ಥಾನಗಳನ್ನು ಪಡೆದುದೇ ಅದರ ಸಾಧನೆಯಾಯಿತು. ಕೇಂದ್ರದಲ್ಲಿ ವಿ. ಪಿ. ಸಿಂಗ್‌ರವರ ಸಮ್ಮಿಶ್ರ ಸರ್ಕಾರ ಅಸ್ತಿತ್ವಕ್ಕೆ ಬಂದಿತು.

## ೧೯೯೧- ಹತ್ತನೆಯ ಲೋಕಸಭಾ ಚುನಾವಣೆಗಳು

ಒಂಬತ್ತನೆಯ ಲೋಕಸಭಾ ಚುನಾವಣೆಗಳು ೧೯೮೯ನೇ ನವೆಂಬರ್ ೨೨,೨೪ ರಂದು ನಡೆದವು. ದಕ್ಷಿಣ ಭಾರತದ ರಾಜ್ಯಗಳಲ್ಲಿ ಉತ್ತಮ ಸಾಧನೆ ಮಾಡಿದ ಕಾಂಗ್ರೆಸ್ (ಐ) ಪಕ್ಷ ಉತ್ತರ ಭಾರತದ ಬಿಹಾರ, ದೆಹಲಿ, ಗುಜರಾತ್, ಹಿಮಾಚಲ ಪ್ರದೇಶ, ಮಧ್ಯ ಪ್ರದೇಶ, ಒರಿಸ್ಸಾ, ರಾಜಾಸ್ಥಾನ, ಉತ್ತರ ಪ್ರದೇಶ, ಪಶ್ಚಿಮ ಬಂಗಾಳಗಳಲ್ಲಿ ಮುಗ್ಗರಿಸಿತು. ಒಟ್ಟಾರೆ ೧೯೫ ಸ್ಥಾನಗಳನ್ನು ಪಡೆದು ಏಕೈಕ ದೊಡ್ಡ ಪಕ್ಷವಾಗಿ ಹೊರಹೊಮ್ಮಿದ್ದರೂ ಕೂಡಾ ರಾಜೀವ್ ಗಾಂಧಿ ವಿಪಕ್ಷಗಳ ನೆರವಿನಿಂದ ಸರ್ಕಾರ ರಚಿಸುವ ಗೋಜಿಗೆ ಹೋಗಲಿಲ್ಲ. ಒಂದು ವೇಳೆ ಆ ಪ್ರಯತ್ನ ಮಾಡಿದ್ದರೂ ಕೂಡಾ ಕಮ್ಯುನಿಸ್ಟ್ ಸೇರಿದಂತೆ ಯಾವುದೇ ವಿರೋಧ ಪಕ್ಷವೂ ಕಾಂಗ್ರೆಸ್ (ಐ) ಗೆ ಸಹಕಾರ ನೀಡುವ ಮನಃಸ್ಥಿತಿಯಲ್ಲಿ ಇರಲಿಲ್ಲವೆಂದೇ ಹೇಳಬಹುದು.

೧೪೦ ಸ್ಥಾನಗಳನ್ನು ಪಡೆದ ಜನತಾದಳ ಎರಡನೇ ಅತಿದೊಡ್ಡ ಪಕ್ಷವಾಗಿತ್ತು. ರಾಷ್ಟ್ರೀಯ ರಂಗದ ಮಿತ್ರಪಕ್ಷಗಳ ನೆರವಿನಿಂದ ಅದು ಸರ್ಕಾರ ರಚನೆಗೆ ಮುಂದಾಯಿತು. ದೇವಿಲಾಲ್, ಚಂದ್ರಶೇಖರ್, ವಿ. ಪಿ. ಸಿಂಗ್ ಇವರಲ್ಲಿ ಪ್ರಧಾನ ಮಂತ್ರಿಗಳು ಯಾರಾಗಬೇಕೆಂಬ ಪ್ರಶ್ನೆ ಬಂದಾಗ ದೇವೀಲಾಲ್ ವಿ. ಪಿ. ಸಿಂಗ್‌ಗೆ ಬೆಂಬಲ ನೀಡಿದರು. ರಾಷ್ಟ್ರೀಯ ರಂಗದ ಇತರ ಪಕ್ಷಗಳ ಬೆಂಬಲ ವಿ. ಪಿ. ಸಿಂಗ್‌ಗೆ ಇತ್ತು. ೮೬ ಸ್ಥಾನ ಪಡೆದು ಮೂರನೇ ಅತೀ ದೊಡ್ಡ ಪಕ್ಷ ವಾಗಿದ್ದ ಬಿ. ಜೆ. ಪಿ. ರಾಷ್ಟ್ರೀಯರಂಗ ಸರ್ಕಾರಕ್ಕೆ ಹೊರಗಿನಿಂದ ಬೆಂಬಲ ನೀಡುವುದಾಗಿ ಘೋಷಿಸಿತು ಜನತಾಳದಳ (೧೪೦), ಸಿಪಿಎಂ. (೩೩), ಸಿಪಿಐ (೧೨) ಆರ್ ಎಸ್ ಪಿ (೪), ಫಾರ್‌ವರ್ಡ್ ಬ್ಲಾಕ್ (೩), ತೆಲುಗು ದೇಶಂ (೨), ಬಿ.ಎಸ್.ಪಿ. (೩), ಅಕಾಲಿ (೫)- ಇವುಗಳ ನೆರವಿನಿಂದ ರಾಷ್ಟ್ರೀಯ ರಂಗ ಸರ್ಕಾರ ರಚನೆ ಆಯಿತು. ಡಿಸೆಂಬರ್ ೨, ೧೯೮೯ರಂದು ವಿ. ಪಿ.ಸಿಂಗ್ ಪ್ರಧಾನ ಮಂತ್ರಿಗಳಾಗಿ, ದೇವಿಲಾಲ್ ಉಪಪ್ರಧಾನಿಗಳಾಗಿ ಅಧಿಕಾರ ಸ್ವೀಕರಿಸಿದರು. ಡಿಸೆಂಬರ್ ೫ ರಂದು ೧೪ ಕ್ಯಾಬಿನೆಟ್ ಸಚಿವರ ಸಂಪುಟವನ್ನು ರಚಿಸಿದರು.

ತಾನು ರಚನಾತ್ಮಕ ವಿರೋಧ ಪಕ್ಷವಾಗಿ ಕೆಲಸ ಮಾಡುವುದಾಗಿ ಕಾಂಗ್ರೆಸ್ (ಐ) ಹೇಳಿತು. ಆದರೆ ಈ ಮೈತ್ರಿಕೂಟ ಬಹಳ ದಿನ ಬಾಳಲಿಲ್ಲ. ಬೋಫೋರ್ಸ್ ಪ್ರಕರಣದಲ್ಲಿ ಕೇಂದ್ರ ಸಚಿವರಾದ ಅರುಣ್ ನೆಹರು, ಅರಿಫ್ ಮೊಹಮದ್‌ಖಾನ್ ಭ್ರಷ್ಟಾಚಾರ ಎಸಗಿದ್ದಾರೆ, ಇವರ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ಪ್ರಧಾನಿ ವಿ. ಪಿ. ಸಿಂಗ್‌ರವರೇ ನವೆಂಬರ್ ೮೭ರಲ್ಲಿ ರಾಷ್ಟ್ರಪತಿಗಳಿಗೆ ಪತ್ರ ಬರೆದಿದ್ದಾರೆ ಎಂದು ದೇವಿಲಾಲ್ ಆಪಾದಿಸಿದರು. ಈ ರೀತಿಯ ದೋಷಾರೋಪಣೆಗಾಗಿ ಹಾಗೂ (ವಿ. ಪಿ. ಸಿಂಗ್ ರವರ) ಪತ್ರ ನಕಲಿ ಸೃಷ್ಟಿ ಎಂದು ಹೇಳಿ, ಪ್ರಧಾನಿ ವಿ. ಪಿ. ಸಿಂಗ್, ಆಗಸ್ಟ್ ೧ ೧೯೯೦ ರಂದು ಉಪಪ್ರಧಾನಿ ದೇವಿಲಾಲರನ್ನು ಸಂಪುಟದಿಂದ ವಜಾ ಮಾಡಿದರು. ಆದರೆ ರಾಷ್ಟ್ರೀಯ ರಂಗದ ಬಹುತೇಕ ಸಂಸದರು ವಿ. ಪಿ. ಸಿಂಗ್‌ರವರಲ್ಲಿ ವಿಶ್ವಾಸ ವ್ಯಕ್ತ ಪಡಿಸಿದರು. ಸರ್ಕಾರಕ್ಕೆ ಅಪಾಯವೇನೂ ಆಗಲಿಲ್ಲ. ರೈತರ ಸಮಸ್ಯೆ ಬಗ್ಗೆ ಗಮನ ಸೆಳೆಯಲು ದೆಹಲಿಯ ಬೋಟ್ ಕ್ಲಬ್‌ನಲ್ಲಿ ೧೫-೨೦ ಲಕ್ಷ ರೈತರ ಬೃಹತ್ ರ್‍ಯಾಲಿಯೊಂದನ್ನು ದೇವಿಲಾಲ್ ಸಂಘಟಿಸಿದರು. ೯ ಆಗಸ್ಟ್ ೯೦ ರಂದು ನಡೆದ ಈ ರ್‍ಯಾಲಿಯಲ್ಲಿ ಚಂದ್ರಶೇಖರ್, ಕಾನ್ಷಿರಾಮ್, ದೇವೇಗೌಡ ಭಾಗವಹಿಸಿದ್ದರು.

ಹತ್ತು ವರ್ಷ ಹಳೆಯದಾದ ಮಂಡಲ್ ಆಯೋಗದ ವರದಿಯನ್ನು ಜಾರಿಗೆ ತರುವುದಾಗಿಯೂ, ಆ ಪ್ರಕಾರ ಶೇಕಡಾ ೨೭ ರಷ್ಟು ಸರ್ಕಾರಿ ಹುದ್ದೆಗಳನ್ನು ಹಿಂದುಳಿದ ವರ್ಗದವರಿಗೆ ಕಾಯ್ದಿರಿಸುವುದಾಗಿಯೂ ೭ ಆಗಸ್ಟ್ ೯೦ ರಂದು ವಿ. ಪಿ. ಸಿಂಗ್ ಲೋಕಸಭೆಯಲ್ಲಿ ಪ್ರಕಟಿಸಿದರು. ಅಲ್ಪಸಂಖ್ಯಾತರು ಹಾಗೂ ಆರ್ಥಿಕವಾಗಿ ಹಿಂದುಳಿದ ಮೇಲುಜಾತಿಯವರಿಗೂ ಮೀಸಲಾತಿ ಸೌಲಭ್ಯ ಕಲ್ಪಿಸಿಕೊಡಬೇಕೆಂದು ರಾಜೀವ್‌ಗಾಂಧಿ ದಿನಾಂಕ ೮ ರಂದು ಲೋಕಸಭೆಯಲ್ಲಿ ಹೇಳಿದರು. ೧೦ ಆಗಸ್ಟ್ ೯೦ ರಂದು ಮಂಡಲ್ ವರದಿ ಜಾರಿಯ ವಿರುದ್ಧ ದೆಹಲಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಪ್ರತಿಭಟನೆ ಪ್ರಾರಂಭಿಸಿದರು. ಚಳವಳಿ ಉಗ್ರ ಸ್ವರೂಪ ತಳೆಯಿತು. ಸ್ವಲ್ಪ ದಿವಸಗಳಲ್ಲೇ ಈ ಮೀಸಲಾತಿ ವಿರೋಧಿ ಚಳವಳಿ ವಾರಣಾಸಿ, ಪಾಟ್ನಾ, ಗೋರಕ್‌ಪುರಗಳಿಗೆ ಹರಡಿತು. ಹಿಂಸಾತ್ಮಕ ರೂಪಕ್ಕೆ ತಿರುಗಿತು. ಉತ್ತರ ಪ್ರದೇಶದ ೫೨ ಜಿಲ್ಲೆಗಳಿಗೆ ಈ ಚಳವಳಿ ಹಬ್ಬಿತು. ಬಿಹಾರ, ರಾಜಾಸ್ಥಾನ, ಮಧ್ಯ ಪ್ರದೇಶ, ಒರಿಸ್ಸಾ, ಜಮ್ಮು ಕಾಶ್ಮೀರ ಹಾಗೂ ಆಂಧ್ರ ಪ್ರದೇಶಕ್ಕೂ ಈ ಮಂಡಲ್ ವಿರೋಧಿ ಚಳವಳಿ ವ್ಯಾಪಿಸಿತು. ಸಾರ್ವಜನಿಕ ಆಸ್ತಿ ಪಾಸ್ತಿಗೆ ಹಾನಿ ಆಯಿತು. ವಿಶ್ವವಿದ್ಯಾನಿಲಯಗಳನ್ನು ಮುಚ್ಚಲಾಯಿತು. ೩೦-೪೦ ವಿದ್ಯಾರ್ಥಿಗಳು ಆತ್ಮಾಹುತಿ ಮಾಡಿಕೊಂಡರು. ಗೋಲೀಬಾರ್‌ನಲ್ಲಿ ಅನೇಕರು ಸತ್ತರು.

ಮಂಡಲ್ ವರದಿ ಆತುರದ ಕ್ರಮ, ಮಿತ್ರ ಪಕ್ಷಗಳೊಡನೆ ಈ ಬಗ್ಗೆ ಸಮಾಲೋಚನೆ ನಡೆಸಿಲ್ಲ ಎಂಬ ಅಭಿಪ್ರಾಯ ಬಂತು. ಇದರ ಬಗ್ಗೆ ನಮ್ಮ ಪಕ್ಷದ ಜೊತೆ ಸಮಾಲೋಚನೆ ನಡೆಸಿಲ್ಲ ಎಂದು ಬಿ.ಜೆ.ಪಿ. ಅಧ್ಯಕ್ಷ ಆದ್ವಾನಿ ಹೇಳಿದರು. ಮಂಡಲ್ ವರದಿ ಶಿಕ್ಷಣ ಸಂಸ್ಥೆಗಳಿಗೆ, ಸೇನೆ, ಪ್ಯಾರಾಮಿಲಿಟರಿ ನೇಮಕಾತಿಗಳಿಗೆ, ಬಡ್ತಿಗಳಿಗೆ ಅನ್ವಯಿಸುವುದಿಲ್ಲ. ಇದು ಕೇವಲ ಸರ್ಕಾರಿ ಹುದ್ದೆಗಳ ನೇಮಕಾತಿಗೆ ಅನ್ವಯಿಸುತ್ತದೆ, ವಿದ್ಯಾರ್ಥಿಗಳ ಜೊತೆ ತಾವು ಮಾತುಕತೆಗೆ ಸಿದ್ಧ ಎಂದು ವಿ. ಪಿ. ಸಿಂಗ್ ಹೇಳಿದರು. ಮಂಡಲ್ ವರದಿ ಜಾರಿ ಕೈಬಿಟ್ಟರೆ ಇನ್ನೂ ಹಿಂಸಾತ್ಮಕ ಪ್ರದರ್ಶನಗಳಾಗಬಹುದೆಂದು ೩-೧೦-೯೦ ರಂದು ಹೇಳಿ ಅದನ್ನು ಸಮರ್ಥನೆ ಮಾಡಿಕೊಂಡರು. ಆದರೂ ಚಳವಳಿ ಮುಂದುವರಿದಿತ್ತು.

ಸೆಪ್ಟೆಂಬರ್ ೧೪ ರಿಂದ ೧೬ ರವರೆಗೆ ಭೂಪಾಲ್‌ನಲ್ಲಿ ನಡೆದ ಭಾರತೀಯ ಜನತಾ ಪಕ್ಷದ ಸಮ್ಮೇಳನದಲ್ಲಿ, ಆದ್ವಾನಿಯವರು, ನಮ್ಮ ಬೆಂಬಲ ಯಾವಾಗಲೂ ಇದೆ ಎಂದು ಹೇಳಿ ಮನ ಬಂದಂತೆ ವರ್ತಿಸಲು ಸಾಧ್ಯವಿಲ್ಲ ಎಂದು ವಿ. ಪಿ. ಸಿಂಗ್‌ಗೆ ಎಚ್ಚರಿಕೆ ನೀಡಿದರು. ಆದರೆ ಭಾ. ಜ. ಪ. ಮಂಡಲ್ ವರದಿಯನ್ನು ಸಮರ್ಥಿಸಲೂ ಇಲ್ಲ, ಅದನ್ನು ವಿರೋಧಿಸಲೂ ಇಲ್ಲ. ಅದರ ಬದಲಿಗೆ ಜನರ ಗಮನ ಬೇರೆಡೆ ಸೆಳೆಯಲು ಸೆಪ್ಟೆಂಬರ್ ೨೫ ರಿಂದ ಸೋಮನಾಥ್‌ನಿಂದ ರಥಯಾತ್ರೆಯನ್ನು ಆದ್ವಾನಿಯವರು ಪ್ರಾರಂಭಿಸಿದರು. ಅಕ್ಟೋಬರ್ ೨೩ ರಂದು ಬಿಹಾರದ ಸಮಷ್ಟಿಪುರದಲ್ಲಿ ಆದ್ವಾನಿಯವರನ್ನು ಬಂಧಿಸಲಾಯಿತು. ರಥಯಾತ್ರೆಗೆ ತಡೆ ಉಂಟಾಯಿತು. ಬಿ. ಜೆ., ಪಿ. ಭಾರತ್ ಬಂದ್ ಆಚರಿಸಿತು. ರಾಷ್ಟ್ರೀಯ ರಂಗ ಸರ್ಕಾರಕ್ಕೆ ತನ್ನ ಬೆಂಬಲ ಹಿಂತೆಗೆದುಕೊಂಡಿರುವುದಾಗಿ ಘೋಷಿಸಿತು. ಅಕ್ಟೋಬರ್ ೨೪, ೯೦ ರಂದು ರಾಷ್ಟ್ರತಿಯವರು ನವೆಂಬರ್ ೭ ರಂದು ಬಹುಮತ ಸಾಬೀತು ಪಡಿಸುವಂತೆ ವಿ. ಪಿ. ಸಿಂಗ್‌ರವರಿಗೆ ಸೂಚಿಸಿದರು. ಜನತಾದಳದ ಆಂತರಿಕ ಭಿನ್ನಮತ ಸ್ಫೋಟಿಸಿತು. ನವೆಂಬರ್ ೫ ರಂದು ದಳ ಇಬ್ಭಾಗವಾಯಿತು. ೬೮ ಜನ ಸಂಸದರು ಚಂದ್ರಶೇಖರ್ ನಾಯಕತ್ವದಲ್ಲಿ ಹೊರಬಂದು ಜನತಾದಳ (ಎಸ್) ರಚನೆ ಮಾಡಿಕೊಂಡರು. ಜನತಾದಳದ ಅಧ್ಯಕ್ಷ ಬೊಮ್ಮಾಯಿಯವರು ನವೆಂಬರ್ ೫ ರಂದು ಚಂದ್ರಶೇಖರ್ ಸೇರಿದಂತೆ ೨೫ ಸಂಸದರು ೬ ರಾಜ್ಯಸಭಾ ಸದಸ್ಯರನ್ನು ಪಕ್ಷದಿಂದ ಉಚ್ಚಾಟಿಸಿದರು. ನವೆಂಬರ್ ೬ ರಂದು ಕಾಂಗ್ರೆಸ್ (ಐ) ಪಕ್ಷ ಚಂದ್ರಶೇಖರ್ ಗುಂಪಿಗೆ ತನ್ನ ಬೆಂಬಲ ಘೋಷಿಸಿತು. ನವೆಂಬರ್ ೭, ೧೯೯೦ ರಂದು ವಿ. ಪಿ. ಸಿಂಗ್ ವಿಶ್ವಾಸಮತ ಯಾಚಿಸಿದರು. ಅವಿಶ್ವಾಸ ನಿರ್ಣಯ ೩೪೬-೧೪೨ ಮತಗಳಿಂದ ಅಂಗೀಕೃತವಾಗಿ ಅದೇ ದಿನ ಪ್ರಧಾನ ಮಂತ್ರಿ ಹುದ್ದೆಗೆ ರಾಜೀನಾಮೆ ಸಲ್ಲಿಸಿದರು. ಆದರೆ ಲೋಕಸಭೆ ವಿಸರ್ಜನೆಗೆ ಶಿಫಾರಸ್ಸು ಮಾಡಲಿಲ್ಲ. ಕಾಂಗ್ರೆಸ್ (ಐ), ಬಿ. ಜೆ.ಪಿ. ಚಂದ್ರಶೇಖರ್ ಗುಂಪು (೫೬ ಜನ) ಅವಿಶ್ವಾಸ ನಿರ್ಣಯದ ಪರವಾಗಿ ಮತ ನೀಡಿತು.

ನವೆಂಬರ್ ೯, ೯೦ ರಂದು ಚಂದ್ರಶೇಖರ್ ರಾಷ್ಟ್ರಪತಿಯವರನ್ನು ಭೇಟಿ ಮಾಡಿ, ತಮ್ಮ ಬೆಂಬಲಿಗರ ಪಟ್ಟಿ ಸಲ್ಲಿಸಿದರು. ರಾಷ್ಟ್ರಪತಿ ಸರ್ಕಾರ ರಚನೆಗೆ ಅವಕಾಶ ಮಾಡಿಕೊಟ್ಟರು. ನವೆಂಬರ್ ೧೦ ರಂದು ಚಂದ್ರಶೇಖರ್ ಪ್ರಧಾನಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿದರು. ನವೆಂಬರ್ ೧೪ ರಂದು ಬಹುಮತ ಸಾಬೀತುಪಡಿಸಿದರು. ೨೮೦-೨೧೪ ಬಹುಮತದಿಂದ ಅವರ ಸರ್ಕಾರ ಉಳಿಯಿತು. ಕಾಂಗ್ರೆಸ್ (ಐ) ಚಂದ್ರಶೇಖರ್‌ಗೆ ಬೆಂಬಲ ನೀಡಿತು. ೧೯೯೧ ಜನವರಿ ೧೧ ರಂದು ಲೋಕಸಭಾಧ್ಯಕ್ಷ ರಬಿ ರೇ, ಜನತಾದಳದ (ಎಸ್) ಇಬ್ಬರು ಕ್ಯಾಬಿನೆಟ್ ಮಂತ್ರಿಗಳು, ೩ ರಾಜ್ಯ ಮಂತ್ರಿಗಳೂ ಸೇರಿದಂತೆ ಎಂಟು ಜನರನ್ನು ಪಕ್ಷಾಂತರ ನಿಷೇಧ ಕಾಯಿದೆ ಅನ್ವಯ ಸದಸ್ಯತ್ವದಿಂದ ಅನೂರ್ಜಿತಗೊಳಿಸಿದರು. ಈ ಸಚಿವರುಗಳು ರಾಜೀನಾಮೆ ನೀಡಬೇಕೆಂದು ಕಾಂಗ್ರೆಸ್ (ಐ) ಒತ್ತಾಯಿಸಿತು. ಚಂದ್ರಶೇಖರ್ ಈ ಬಗ್ಗೆ ತಮ್ಮ ಅಸಮ್ಮತಿ ವ್ಯಕ್ತಪಡಿಸಿದರು. ಇದರಿಂದ ಸರ್ಕಾರಕ್ಕೆ ಬಿಕ್ಕಟ್ಟಿಲ್ಲ ಎಂದರು.

ಈ ಮಧ್ಯೆ ೧೭-೧-೯೧ರಿಂದ ಕೊಲ್ಲಿಯುದ್ಧ ಆರಂಭವಾಯಿತು. ಅಮೆರಿಕ ಯುದ್ಧ ವಿಮಾನಗಳಿಗೆ ಇಂಧನ ಪೂರೈಕೆ ಬಗ್ಗೆ ೭-೨-೯೧ ರಂದು ಕಾಂಗ್ರೆ ತನ್ನ ಅಸಮಾಧಾನ ವ್ಯಕ್ತ ಪಡಿಸಿತು. ರಾಜೀವ್ ಗಾಂಧಿ ಚಂದ್ರಶೇಖರ್ ಸರ್ಕಾರದ ಬಗ್ಗೆ ತೀವ್ರ ಅತೃಪ್ತಿ ವ್ಯಕ್ತಪಡಿಸಿದರು. ೫೪ ಎಂ. ಪಿ. ಗಳ ಸರ್ಕಾರ ಯಾವುದೇ ಮಹತ್ವದ ನಿರ್ಧಾರ ತೆಗೆದುಕೊಳ್ಳುವಂತಿಲ್ಲ ಎಂದರು. ಇಂಧನ ಪೂರೈಕೆ ನಿಲ್ಲಿಸುವಂತೆ ಮತ್ತೆ ೧೬ ರಂದು ಎಚ್ಚರಿಕೆ ನೀಡಲಾಯಿತು. ಈ ಬಗ್ಗೆ ನಿರ್ಧಾರ ಕೈಗೊಳ್ಳಲು ಕಾಲಾವಕಾಶ ಬೇಕು ಎಂದು ಚಂದ್ರಶೇಖರ್ ೧೮ ರಂದು ಹೇಳಿದರು ಚಂದ್ರಶೇಖರ್ ಸರ್ಕಾರಕ್ಕೆ ಎಲ್ಲಿಯವರೆಗೆ ಬೆಂಬಲ ನೀಡಬೇಕೆಂದು ಸಮಯ ನಿಗದಿ ಪಡಿಸಿಲ್ಲ, ಆದರೆ ಜೂನ್ ನಂತರ ಮಧ್ಯಕಾಲೀನ ಚುನಾವಣೆ ನಡೆಯಲಿದೆ. ಕಾಂಗ್ರೆಗೆ ೩೦೦ ಸ್ಥಾನ ಸಿಗಲಿದೆ ಎಂದು ಮಧ್ಯಂತರ ಚುನಾವಣೆ ಬಗ್ಗೆ ರಾಜೀವ್ ಗಾಂಧಿ ದಿನಾಂಕ ೨೩ ರಂದು ಮುನ್ಸೂಚನೆ ನೀಡಿದರು. ೧೯೯೦ರ ಅಕ್ಟೋಬರ್ ತಿಂಗಳಿನಿಂದಲೂ ಅಮೆರಿಕಾ ಯುದ್ಧ ವಿಮಾನಗಳಿಗೆ ಇಂಧನ ಪೂರೈಕೆ ಮಾಡಲಾಗುತ್ತಿತ್ತು. ಈ ಬಗ್ಗೆ ಇರಾಕ್ ಪ್ರತಿಭಟಿಸಿರಲಿಲ್ಲ ಎಂದು ಪ್ರಧಾನಿ ಚಂದ್ರಶೇಖರ್ ೨೭.೨.೯೧ ರಂದು ಹೇಳಿದರು. ೧.೩.೯೧ರಂದು ಕೊಲ್ಲಿ ಯುದ್ಧ ಅಂತ್ಯವಾಯಿತು. ಇರಾಕ್ ಪೂರ್ಣವಾಗಿ ಸೋತು ವಿಶ್ವಸಂಸ್ಥೆಯ ಷರತ್ತುಗಳಿಗೆ ಒಪ್ಪಿಗೆ ನೀಡಿತು.

೪.೩.೯೧ ರಂದು ಕೇಂದ್ರದ ಮಧ್ಯಂತರ ಬಜೆಟ್ ಮಂಡನೆ ಆಯಿತು. ಅದೇ ದಿನ ರಾಜೀವ್ ಗಾಂಧಿಯವರ ಮನೆ ಬಳಿ ಗೂಢಚರ್ಯೆ ನಡೆಸಲಾಗುತ್ತಿದೆ ಎಂದು ಸಂಸತ್ತಿನಲ್ಲಿ ಕಾಂಗ್ರೆಸ್ (ಐ) ಭಾರೀ ಪ್ರತಿಭಟನೆ ಮಾಡಿತು. ಇಬ್ಬರನ್ನು ಬಂಧಿಸಿ ತನಿಖೆಗೂ ಆಜ್ಞೆ ಮಾಡಲಾಯಿತು. ಈ ಬಗ್ಗೆ ಜಂಟಿ ಸಂಸದೀಯ ಸಮಿತಿ ರಚಿಸಲೂ ತಾವು ಸಿದ್ಧ ಎಂದು ಚಂದ್ರಶೇಖರ್ ೫.೩.೯೧ ರಂದು ಹೇಳಿದರು. ೬ ರಂದು ಲೋಕಸಭೆ ಸೇರಿತು. ಕಾಂಗ್ರೆ ಸದಸ್ಯರು ಹಾಜರಾಗಲಿಲ್ಲ. ಕೋರಂ ಅಭಾವದಿಂದ ಎರಡು ಬಾರಿ ಸಭೆಯನ್ನು ಮುಂದಕ್ಕೆ ಹಾಕಲಾಯಿತು. ಚಂದ್ರಶೇಖರ್ ಪೇಚಿಗೆ ಸಿಲುಕಿದ್ದರು. ಸಂಸತ್ ಅಧಿವೇಶನಕ್ಕೆ ಕಾಂಗ್ರೆ ಬಹಿಷ್ಕಾರ ಹಾಕಿತ್ತು. ಅದೇ ದಿನ ಅಂದರೆ ೬.೩.೯೧ರಂದು ಪ್ರಧಾನ ಮಂತ್ರಿ ಚಂದ್ರಶೇಖರ್ ರಾಜೀನಾಮೆ ನೀಡಿ ಲೋಕಸಭೆಯನ್ನು ವಿಸರ್ಜಿಸಲು ಶಿಫಾರಸ್ಸು ಮಾಡಿದರು.

ಇದು ಏಕಪಕ್ಷೀಯ ನಿರ್ಧಾರ ಎಂದು ರಾಜೀವ್ ಗಾಂಧಿ ಹೇಳಿದರು. ಕಾಂಗ್ರೆಸ್ (ಐ) ವರ್ತನೆ ಕಟು ಟೀಕೆಗೆ ಆಸ್ಪದ ಮಾಡಿಕೊಟ್ಟಿತು. ಚಂದ್ರಶೇಖರ್‌ರವರಿಗೆ ಇನ್ನೂ ನಮ್ಮ ಬೆಂಬಲ ಇದೆ ಎಂದು ರಾಜೀವ್ ಗಾಂಧಿಯವರು ದಿನಾಂಕ ೯.೩.೯೧ ರಂದು ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರನ್ನು ಭೇಟಿಯಾಗಿ ತಿಳಿಸಿದರು. ೧೩ ರಂದು ರಾಷ್ಟ್ರಪತಿಗಳು ಲೋಕಸಭೆಯನ್ನು ವಿಸರ್ಜಿಸಿದರು. ಚಂದ್ರಶೇಖರ್‌ರವರ ಉಸ್ತುವಾರಿ ಸರ್ಕಾರವನ್ನು ಮುಂದುವರಿಸಿದರು. ಮೇ ಕೊನೇ ವಾರದಲ್ಲಿ ಚುನಾವಣೆಗಳನ್ನು ನಡೆಸುವಂತೆ ಸೂಚಿಸಿದರು. ಅಲ್ಲಿಗೆ ರಾಜಕೀಯ ಅನಿಶ್ಚಿತತೆ ಕೊನೆಗೊಂಡು ಎಲ್ಲಾ ಪಕ್ಷಗಳೂ ಚುನಾವಣಾ ಸಿದ್ಧತೆಯಲ್ಲಿ ತೊಡಗಿದವು.

## ಕಾಂಗ್ರೆಸ್ (ಐ) ಪಕ್ಷದ ಚುನಾವಣಾ ಸಿದ್ಧತೆ

ಚುನಾವಣೆಗಳಲ್ಲಿ ಪರಾಭವ ಅನುಭವಿಸಿದ ನಂತರ ಪಕ್ಷವನ್ನು ಪುನಶ್ಚೇತನಗೊಳಿಸಲು ರಾಜೀವ್ ಗಾಂಧಿಯವರು ೧೯೯೦ ರ ಜುಲೈ - ಆಗಸ್ಟ್‌ನಲ್ಲಿ ಭಾರತ ಯಾತ್ರೆ ಕೈಗೊಂಡರು. ರೈಲಿನಲ್ಲಿ ದ್ವಿತೀಯ ದರ್ಜೆ ಬೋಗಿಯಲ್ಲಿ ಕುಳಿತು ಎಲ್ಲಾ ರಾಜ್ಯಗಳಿಗೆ ಹೋಗಿ, ಅಲ್ಲಿ ಕಾಂಗ್ರೆಸ್ ಕಾರ್ಯಕರ್ತರೊಡನೆ ಬೆರೆತು ಬಹಿರಂಗ ಸಭೆಗಳಲ್ಲಿ ಭಾಗವಹಿಸಿದರು. ಪಕ್ಷದ ಗುಂಪುಗಾರಿಕೆ ಒಳಜಗಳಗಳ ಪ್ರತ್ಯಕ್ಷ ಅನುಭವ ಪಡೆದರು. ಮಂಡಲ್ ಮೀಸಲಾತಿ ವಿರೋಧಿ ಚಳವಳಿ ನಡೆಯುತ್ತಿದ್ದಾಗ ೨೮-೮-೯೦ ರಂದು ಸಂಸತ್ತಿನಲ್ಲಿ ಕಾಂಗ್ರೆಸ್ (ಐ) ರಾಷ್ಟ್ರೀಯ ರಂಗ ಸರ್ಕಾರದ ವಿರುದ್ಧ ಪ್ರಬಲವಾದ ಟೀಕೆ ಮಾಡಿತು. ಎಲ್ಲಾ ವರ್ಗಗಳಲ್ಲಿರುವ ಬಡವರು ಹಾಗೂ ಅಲ್ಪಸಂಖ್ಯಾತರಿಗೆ ಈ ಸೌಲಭ್ಯ ದೊರೆಯಬೇಕೆಂದು ರಾಜೀವ್‌ಗಾಂಧಿ ಹೇಳಿದರು. ಈ ಬಗ್ಗೆ ಒಂದು ಹಕ್ಕುಚ್ಯುತಿ ಸೂಚನೆಯನ್ನು ವಿ. ಪಿ. ಸಿಂಗ್ ವಿರುದ್ಧ ಕಾಂಗ್ರೆ ಮಂಡಿಸಿತ್ತು. ೨-೧೦-೯೦ ರಿಂದ ರಾಜೀವ್ ಸದ್ಭಾವನಾ ಯಾತ್ರೆ ಆರಂಭಿಸಿದರು. ರಾಷ್ಟ್ರೀಯ ಏಕತೆ ಹಾಗೂ ಮತೀಯ ಸೌಹಾರ್ದತೆಯೇ ಈ ಯಾತ್ರೆಯ ಗುರಿ ಎಂದು ಅವರು ಹೇಳಿದರು. ಯಾತ್ರೆ ಮುಂಬಯಿನಲ್ಲಿದ್ದ ಸಮಯದಲ್ಲಿ ೩-೧೦-೯೦ರಿಂದ ಕರ್ನಾಟಕದ ಅನೇಕ ಪಟ್ಟಣಗಳಲ್ಲಿ ಹಿಂದೆಂದೂ ಕಾಣದ ರೀತಿಯ ಕೋಮುಗಲಭೆಗಳಾದವು. ರಾಜೀವ್ ಗಾಂಧಿ ೬-೧೦-೯೦ ರಂದು ಹಠಾತ್ತಾಗಿ ಕರ್ನಾಟಕಕ್ಕೆ ಭೇಟಿ ನೀಡಿದರು. ಮುಖ್ಯಮಂತ್ರಿ ವೀರೇಂದ್ರ ಪಾಟೀಲರ ಬದಲಾವಣೆಗೆ ನಿರ್ಧಾರ ತೆಗೆದುಕೊಂಡರು. ೧೮ ರಂದು ಬಂಗಾರಪ್ಪ ನೂತನ ಮುಖ್ಯಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ರಥಯಾತ್ರೆ ನಿಲ್ಲಿಸುವಂತೆ ಕಾಂಗ್ರೆ ೨೨-೧೦-೯೦ ರಂದು ಆಗ್ರಹಪಡಿಸಿತು. ವಿವಾದಾತ್ಮಕ ಪ್ರದೇಶವನ್ನು ಸುಗ್ರೀವಾಜ್ಞೆ ಮೂಲಕ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡು ಸಮಸ್ಯೆಯನ್ನು ಇನ್ನಷ್ಟು ಜಟಿಲಗೊಳಿಸಿದೆ, ಎಂದು ಕಾಂಗ್ರೆ ಆರೋಪಿಸಿತು. ೧೯೯೧ರ ಫೆಬ್ರವರಿ ತಿಂಗಳಲ್ಲಿ ತಮಿಳುನಾಡಿನಲ್ಲಿ ಅಣ್ಣಾ ಡಿ. ಎಂ. ಕೆ. ಪಕ್ಷದೊಡನೆ ಕಾಂಗ್ರೆಸ್ (ಐ) ಚುನಾವಣಾ ಮೈತ್ರಿ ಮಾಡಿಕೊಂಡಿತು. ೭-೩-೯೧ರಂದು ಚಂದ್ರಶೇಖರ್‌ರವರ ಸರ್ಕಾರಕ್ಕೆ ಬೆಂಬಲ ಹಿಂತೆಗೆದುಕೊಂಡ ಕಾಂಗ್ರೆಸ್ (ಐ) ಪಕ್ಷ ಮಧ್ಯಂತರ ಚುನಾವಣೆಗೆ ಕಾರಣವಾಯಿತು. ಆದರೆ ಮಧ್ಯಂತರ ಚುನಾವಣೆ ಬಗ್ಗೆ ರಾಜೀವ್‌ಗಾಂಧಿ ಆಶಾಭಾವನೆ ಹೊಂದಿದ್ದರೆ, ಪಕ್ಷದ ಕೆಲವು ಹಿರಿಯ ನಾಯಕರು ಈಗ ಮಧ್ಯಂತರ ಚುನಾವಣೆಗೆ ಸಕಾಲವಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

೧೬-೩-೯೧ರಂದು ದೆಹಲಿಯಲ್ಲಿ ರಾಜೀವ್ ಗಾಂಧಿ ಚುನಾವಣಾ ಪ್ರಚಾರ ಆರಂಭಿಸಿಯೇಬಿಟ್ಟರು. ಸುಭದ್ರ ಸರ್ಕಾರಕ್ಕೆ, ಅಭಿವೃದ್ಧಿಗೆ ಕಾಂಗ್ರೆ ಪಕ್ಷಕ್ಕೇ ಮತ ನೀಡುವಂತೆ ವಿನಂತಿಸಿದರು. ಚುನಾವಣೆಗೆ ಕಾಂಗ್ರೆಸ್ ಪಕ್ಷ ಸಿದ್ಧವಾಗಿದೆ ಎಂದರು. ಜನತಾದಳ (ಎಸ್) ಮತ್ತು ಕಾಂಗ್ರೆಸ್ (ಐ) ಮೈತ್ರಿಯ ಮಾತುಕತೆಗಳು ನಡೆಯುತ್ತಿದ್ದವು. ಆದರೆ ಅದು ಅಷ್ಟು ತೀವ್ರವಾಗಿ ನಡೆಯಲಿಲ್ಲ. ಹೊಂದಾಣಿಕೆಗಾಗಿ ಕಾಂಗ್ರೆಸ್ (ಐ) ಪಕ್ಷದ ಜೊತೆ ಮಾತುಕತೆ ನಡೆಸುತ್ತಿದ್ದ ಕೇಂದ್ರ ವಾಣಿಜ್ಯಸಚಿವ ಡಾ. ಸುಬ್ರಹ್ಮಣ್ಯ ಸ್ವಾಮಿಯನ್ನು ಪ್ರಧಾನಮಂತ್ರಿ ಚಂದ್ರಶೇಖರ್ ಕಟುವಾಗಿ ಟೀಕಿಸಿದರು. 'ಕಾಂಗ್ರೆ ಜೊತೆ ಅವರು ಶಾಮೀಲಾಗಿದ್ದಾರೆಂದು ಹೇಳಿದರು. ದೇಶ ಎದುರಿಸುತ್ತಿರುವ ಇಂದಿನ ಆರ್ಥಿಕ ಸಮಸ್ಯೆಗಳಿಗೆ ಕಾಂಗ್ರೆ ಕಾರಣ ಅಂತಹ ಪಕ್ಷದ ಜೊತೆ ಒಪ್ಪಂದ ಹೊಂದಾಣಿಕೆ ಸಾಧ್ಯ ಇಲ್ಲ' ಎಂದರು. ೪-೪-೯೧ರಂದು

ಉತ್ತರ ಪ್ರದೇಶದ ಮುಲಾಯಂ ಸಿಂಗ್ ಸರ್ಕಾರಕ್ಕೆ ೯೪ ಸದಸ್ಯ ಬಲ ಇದ್ದ ಕಾಂಗ್ರೆ ತನ್ನ ಬೆಂಬಲ ಹಿಂತೆಗೆದುಕೊಂಡಿತು. ದಳ(ಎಸ್) ಸರ್ಕಾರ ಪತನವಾಯಿತು. ಅಲ್ಲಿಗೆ ಕಾಂಗ್ರೆಸ್ (ಐ) ಮತ್ತು ದಳ (ಎಸ್) ಮೈತ್ರಿಯ ವಿಷಯ ಕೊನೆಗೊಂಡಿತು.

## ಕಾಂಗ್ರೆಸ್ (ಐ) ಪಕ್ಷ - ಕರ್ನಾಟಕದ ಪರಿಸ್ಥಿತಿ

೧೯೮೯ರ ನವೆಂಬರ್ ತಿಂಗಳಲ್ಲಿ ನಡೆದ ರಾಜ್ಯ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ೧೭೦ ಸ್ಥಾನಗಳನ್ನು ಪಡೆದು ಭಾರೀ ಬಹುಮತದೊಂದಿಗೆ ಅಧಿಕಾರಕ್ಕೆ ಬಂದಿತ್ತು. ೩೦-೧೧-೮೯ ರಂದು ವೀರೇಂದ್ರ ಪಾಟೀಲರು ರಾಜ್ಯ ಮುಖ್ಯಮಂತ್ರಿಗಳಾಗಿ ಅಧಿಕಾರ ವಹಿಸಿಕೊಂಡರು. ಕೇವಲ ಹತ್ತು ಕ್ಯಾಬಿನೆಟ್ ದರ್ಜೆ ಸಚಿವರು, ಒಬ್ಬರು ರಾಜ್ಯ ಸಚಿವರಿಂದೊಡಗೂಡಿದ ಚಿಕ್ಕ ಚೊಕ್ಕ ಮಂತ್ರಿಮಂಡಲ ರಚಿಸಿದರು. ಅಧಿಕಾರಕ್ಕೆ ಬಂದ ತಕ್ಷಣ ಮಂತ್ರಿಗಳಿಗೆ ನೀಡುತ್ತಿದ್ದ ಎಸ್ಕಾರ್ಟ್ ರಕ್ಷಣಾ ಪದ್ಧತಿಯನ್ನು ತೆಗೆದುಹಾಕಿದರು.

ಮಂತ್ರಿಮಂಡಲ ವಿಸ್ತರಣೆಗೆ ಹಾಗೂ ನಿಗಮ, ಮಂಡಲಿಗಳಿಗೆ ಅಧ್ಯಕ್ಷರನ್ನು ನೇಮಿಸಲು ವೀರೇಂದ್ರರ ಮೇಲೆ ಪಕ್ಷದ ನಾಯಕರು, ಕಾರ್ಯಕರ್ತರಿಂದ ಭಾರೀ ಒತ್ತಡ ಬಂದಿತು. ಆದರೂ ಅವರು ಆ ಬಗ್ಗೆ ಯಾವುದೇ ಕ್ರಮ ತೆಗೆದುಕೊಳ್ಳಲಿಲ್ಲ. ಆಡಳಿತದ ವೆಚ್ಚ ಕಡಿಮೆ ಮಾಡುವುದು ಅವರ ಉದ್ದೇಶವಾಗಿತ್ತು. ಆಸ್ಕರ್ ಫರ್ನಾಂಡಿಸ್ ಆಗ ಪ್ರದೇಶ ಕಾಂಗ್ರೆ ಅಧ್ಯಕ್ಷರಾಗಿದ್ದರು. ಪ್ರದೇಶ ಕಾಂಗ್ರೆ ಅಧ್ಯಕ್ಷರು ಈ ಬಗ್ಗೆ ಸೂಚಿಸಿದರೂ ವೀರೇಂದ್ರರು ಸುಮ್ಮನಾದರು. ಇದು ಪ್ರದೇಶ ಕಾಂಗ್ರೆ ಅಧ್ಯಕ್ಷರ ಅಸಮಾಧಾನಕ್ಕೆ ಕಾರಣವಾಯಿತು. ಆಕಾಂಕ್ಷಿ ಶಾಸಕರು ಹಾಗೂ ಕಾರ್ಯಕರ್ತರ ಅತೃಪ್ತಿಗೂ ಕಾರಣವಾಯಿತು ಎಂದು ಹೇಳಬಹುದು. ಸುಮಾರು ೭-೮ ತಿಂಗಳ ಅವಧಿಯಲ್ಲಿ ಕಾಂಗ್ರೆಸ್ ಸರ್ಕಾರ ಉತ್ತಮವಾದ ಸಾಧನೆ ಮಾಡಿತ್ತೆಂದೇ ಹೇಳಬಹುದು. ಶೇಂದಿ ಮಾರಾಟ ನಿಷೇಧದಿಂದ ೬೦ ಕೋಟಿ ರೂಪಾಯಿ ನಷ್ಟವಾಗಿದ್ದರೂ, ಸೆಕೆಂಡ್ಸ್ ತಡೆ, ಅಬ್ಕಾರಿ ತೆರಿಗೆ, ಮಾರಾಟ ತೆರಿಗೆ, ಸಾರಿಗೆ ಹಾಗೂ ಸ್ಟಾಂಪ್ ತೆರಿಗೆಗಳ ಕಟ್ಟುನಿಟ್ಟಾದ ವಸೂಲಿಯಿಂದ ೫೫೦ ಕೋಟಿ ಆದಾಯ ಸಾಧಿಸಿ ೬೩೧.೯೦ ಕೋಟಿ ಹಳೆಯ ಬಾಕಿಯನ್ನು ತೀರಿಸಿ ಅಭಿವೃದ್ಧಿ ಕಾರ್ಯಕ್ರಮಗಳ ಸಾಧನೆಗೆ ಕ್ರಮ ತೆಗೆದುಕೊಂಡಿತ್ತು. ಆಡಳಿತ ವ್ಯವಸ್ಥೆಯನ್ನು ಚುರುಕುಗೊಳಿಸಿ ಭ್ರಷ್ಟ ಅಧಿಕಾರಿಗಳ ವಿರುದ್ಧ ತೀವ್ರ ಕ್ರಮ ಕೈಗೊಂಡಿತ್ತು. ಕೊಂಕಣ ರೈಲ್ವೆಗೆ ೩೭.೫ ಕೋಟಿ, ಹೈದರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿಗೆ ೫೩ ಕೋಟಿ, ಪರಿಶಿಷ್ಟ ಜಾತಿ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ, ಹಾಸ್ಟೆಲ್ ನಿರ್ವಹಣಾ ಭತ್ಯದಲ್ಲಿ ಹೆಚ್ಚಳ, ಹಾಸ್ಟೆಲ್‌ಗಳ ನಿರ್ಮಾಣಕ್ಕೆ ೩ ಕೋಟಿ ರೂಪಾಯಿ, ಕುಡಿಯುವ ನೀರಿನ ಯೋಜನೆಗಳಿಗೆ ೧೩೦ ಕೋಟಿ, ೧೦೦೦ ಹಳ್ಳಿಗಳ ಕುಡಿಯುವ ನೀರು ಮತ್ತು ನೈರ್ಮಲ್ಯ ವ್ಯವಸ್ಥೆಗೆ ವಿಶ್ವಬ್ಯಾಂಕ್ ನೆರವಿನಿಂದ ಯೋಜನೆ ಹಾಕಿ ಅದಕ್ಕೆ ೧೪೩ ಕೋಟಿ ರೂ, ೧೮,೦೦೦ ಶಿಕ್ಷಕರ ನೇಮಕ, ೫೦ ಸಾವಿರ ಶಾಲಾ ಕೊಠಡಿ ನಿರ್ಮಾಣಕ್ಕೆ ೧೦ ಕೋಟಿ ರೂಪಾಯಿ ಬಿಡುಗಡೆ, ಕನ್ನಡ ವಿಶ್ವವಿದ್ಯಾಲಯ ಸ್ಥಾಪನಾ ಕೆಲಸ ಕಾರ್ಯಗಳಿಗೆ ೧ ಕೋಟಿ ರೂಪಾಯಿ, ಲೋಕ ಅದಾಲತ್ ಮೂಲಕ ೧,೯೧,೭೪೫ ಹಳೆಯ ಪ್ರಕರಣಗಳ ಇತ್ಯರ್ಥ- ಹೀಗೆ ಅಲ್ಪಾವಧಿಯಲ್ಲಿಯೇ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಂಡು ಜಾರಿಗೆ ತರುತ್ತಿತ್ತು.

ಕೃಷ್ಣಾನದಿ ನೀರಿನ ವಿವಾದ ಬಗೆ ಹರಿಸುವ ಬಗ್ಗೆ ಕರ್ನಾಟಕ, ಆಂಧ್ರ ಹಾಗೂ ಮಹಾರಾಷ್ಟ್ರ ಮುಖ್ಯಮಂತ್ರಿಗಳು ೨೨-೮-೯೦ ರಂದು ಮೈಸೂರಿನಲ್ಲಿ ಮಾತುಕತೆ ನಡೆಸಿದರು. ಈ ಸಭೆ ರಾಜೀವ್ ಗಾಂಧಿ ವಿರುದ್ಧ ಸಂಚು ಎಂದು ಸುದ್ದಿ ಹಬ್ಬಿಸಲಾಯಿತು. ಸಭೆ ನೀರಿನ ಹಂಚಿಕೆಗೆ ಮಾತ್ರ ಸೀಮಿತವಾಗಿತ್ತು ಎಂದು ವೀರೇಂದ್ರರೂ, ರಾಜೀವ್ ನಾಯಕತ್ವಕ್ಕೂ ಇದಕ್ಕೂ ಯಾವ ಸಂಬಂಧ ಇಲ್ಲ, ರಾಜೀವ್ ನಾಯಕತ್ವಕ್ಕೆ ಧಕ್ಕೆ ಇಲ್ಲ ಎಂದು ಮಹಾರಾಷ್ಟ್ರ ಮುಖ್ಯಮಂತ್ರಿ ಶರದ್ ಪವಾರರೂ ಸ್ಪಷ್ಟಪಡಿಸಬೇಕಾಯಿತು. ಮಂಡಲಗಳ ಸಂಖ್ಯೆಯನ್ನು ಇಳಿಸಿ ಅದರ ಅರ್ಧದಷ್ಟು ಗ್ರಾಮ ಪಂಚಾಯಿತಿಗಳನ್ನು ರಚಿಸಿ, ಗ್ರಾಮಸಭೆಗಳನ್ನು ಕಡ್ಡಾಯ ಮಾಡಲು, ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ಸುಧಾರಣೆ ಮಾಡಲು ಸರ್ಕಾರ ಯೋಚಿಸಿತ್ತು.

ಈ ರೀತಿ ಇರುವಾಗ ಅಕ್ಟೋಬರ್ ೩, ೯೦ ರಂದು ಚನ್ನಪಟ್ಟಣದಲ್ಲಿ ಕೋಮುಗಲಭೆಗಳು ಆರಂಭವಾದವು. ಅದು ಕೋಲಾರ, ರಾಮನಗರಗಳಿಗೂ ಹಬ್ಬಿತು. ಗೋಲೀಬಾರ್, ಬೆಂಕಿ ಹಚ್ಚುವ ಪ್ರಕರಣಗಳು ನಡೆದವು. ಚನ್ನಪಟ್ಟಣದಲ್ಲೇ ೧೭ ಜನರು ಸಾವಿಗೀಡಾದರು. ಈ ಘರ್ಷಣೆಗಳು ಬೀದರ್, ದಾವಣಗೆರೆ, ಶಿವಮೊಗ್ಗ, ಮಂಡ್ಯ ಜಿಲ್ಲೆಗಳಿಗೆ ಹಬ್ಬಿದವು. ದಾವಣಗೆರೆಯಲ್ಲಿ ಗೋಲೀಬಾರ್ ಇರಿತಗಳಿಗೆ ೧೨ ಬಲಿ ಆಯಿತು. ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಅನಾರೋಗ್ಯಪೀಡಿತರಾಗಿದ್ದರು. ೬ ರಂದು ರಾಜೀವ್ ಗಾಂಧಿ ದಿಢೀರನೆ ಬೆಂಗಳೂರಿಗೆ ಬಂದರು. ರಾಜ್ಯದಲ್ಲಿ ಸದ್ಭಾವನಾ ಯಾತ್ರೆಯನ್ನು ರದ್ದುಮಾಡಲಾಯಿತು. ಚನ್ನಪಟ್ಟಣ ರಾಮನಗರಗಳಿಗೆ ಭೇಟಿ ನೀಡಿದರು. ವೀರೇಂದ್ರರ ಬದಲಾವಣೆಗೆ ೭ ರಂದು ನಿರ್ಧರಿಸಿದರು. ಅವರ ರಾಜೀನಾಮೆಗೆ ಸೂಚಿಸಿದರು. ಶಾಸಕಾಂಗ ಪಕ್ಷದ ವಿಶ್ವಾಸ ನನ್ನ ಮೇಲಿದೆ. ಶಾಸಕಾಂಗ ಪಕ್ಷ ಕೇಳಿದರೆ ಮಾತ್ರ ರಾಜೀನಾಮೆ ಎಂದರು ವೀರೇಂದ್ರ. ಶಾಸಕಾಂಗ ಪಕ್ಷದ ಸಭೆ ಕರೆಯಲು

ಸೂಚಿಸಲಾಯಿತು. ತಾವು ಸಭೆ ಕರೆಯುವುದಿಲ್ಲ ಎಂದರು. ಹೈಕಮಾಂಡ್‌ಗೆ ಶಾಸಕಾಂಗ ಪಕ್ಷದ ಸಭೆ ಕರೆಯಲು ಅಧಿಕಾರ ಇದೆ ಎಂದು ಪ್ರದೇಶ ಕಾಂಗ್ರೆ ಅಧ್ಯಕ್ಷ ಫರ್ನಾಂಡಿಸ್ ಹೇಳಿದರು. ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿಗಳಾದ ಮಹಾವೀರ ಪ್ರಸಾದ್, ಜಿ. ಕೆ. ಮೂಪನಾರ್ ನಗರಕ್ಕೆ ಬಂದರು. ಶರದ್ ಪವಾರ್ ಕೂಡಾ ನಗರಕ್ಕೆ ಬಂದು ವೀರೇಂದ್ರರ ಜೊತೆ ಸಂಧಾನ ಮಾಡಿದರು. ವೀರೇಂದ್ರರು ಜಗ್ಗಲಿಲ್ಲ. ದಿನಾಂಕ ೯ ರಂದು ೧೪೫ ಶಾಸಕರು ರಾಜಭವನಕ್ಕೆ ತೆರಳಿ ವೀರೇಂದ್ರರ ನಾಯಕತ್ವದ ವಿರುದ್ಧ ಮನವಿ ಸಲ್ಲಿಸಿದರು. ದೆಹಲಿಯಲ್ಲಿ ಕಾಂಗ್ರೆ ಕಾರ್ಯಕಾರಿ ಸಮಿತಿ ಸಭೆ ಸೇರಿ ವೀರೇಂದ್ರರ ಪದತ್ಯಾಗದ ಬಗ್ಗೆ ರಾಜೀವ್ ಗಾಂಧಿ ಸೂಚನೆಗೆ ತನ್ನ ಅನುಮೋದನೆ ನೀಡಿತು. ರಾಜ್ಯದ ೨೦ ಸಂಸದರು ವಿರೇಂದ್ರ ಪಾಟೀಲ್ ಬದಲಾವಣೆಗೆ ಬೆಂಬಲ ವ್ಯಕ್ತಪಡಿಸಿದರು.

೧೦ ರಂದು ರಾಜ್ಯಪಾಲರು ವಿಧಾನಸಭೆಯನ್ನು ತಾತ್ಕಾಲಿಕವಾಗಿ ಅಮಾನತ್ತಿನಲ್ಲಿಟ್ಟು ರಾಷ್ಟ್ರಪತಿ ಆಡಳಿತ ಜಾರಿಗೊಳಿಸಿದರು. ಆದಷ್ಟು ಬೇಗ ಜನಪ್ರಿಯ ಸರ್ಕಾರ ಸ್ಥಾಪಿಸುವುದಾಗಿ ಹೇಳಿದರು. ೧೨-೧೦-೯೦ ರಂದು ಶಾಸಕಾಂಗ ಪಕ್ಷದ ಸಭೆ ಸೇರಿ ವೀರೇಂದ್ರ ಪಾಟೀಲರನ್ನು ಉಚ್ಚಾಟಿಸಿತು. ನಾಯಕನ ಆಯ್ಕೆಯನ್ನು ರಾಜೀವ್ ಗಾಂಧಿ ನಿರ್ಧಾರಕ್ಕೆ ಬಿಟ್ಟಿತು. ಈ ಸಭೆಯನ್ನು ತಾವು ಕರೆದಿಲ್ಲ ಎಂದು ವೀರೇಂದ್ರರು ಹೇಳಿದರು. ೧೩ ರಂದು ಬಂಗಾರಪ್ಪ ಶಾಸಕಾಂಗ ಪಕ್ಷದ ನೂತನ ನಾಯಕರಾಗಿ ಆಯ್ಕೆಯಾದರು. ರಾಜೀವ್ ಗಾಂಧಿ ಆದೇಶ ಪಾಲನೆ ಮಾಡುವುದಾಗಿ ತಿಳಿಸಿದರು. ವೀರೇಂದ್ರರನ್ನು ಪಕ್ಷದಿಂದ ಸಸ್ಪೆಂಡ್ ಮಾಡಲಾಗಿದೆ, ಈ ಬಗ್ಗೆ ಎ.ಐ.ಸಿ.ಸಿ. ನಿರ್ಣಯ ತೆಗೆದುಕೊಂಡಿದೆ ಎಂದು ಆಸ್ಕರ್ ಫರ್ನಾಂಡಿಸ್ ಪ್ರಕಟಿಸಿದರು. ಬಂಗಾರಪ್ಪನವರಿಗೆ ಸರ್ಕಾರ ರಚಿಸಲು ಅವಕಾಶ ನೀಡುವ ಇಂಗಿತವನ್ನು ರಾಜ್ಯಪಾಲರು ಪ್ರಕಟಿಸಿದರು. ೧೮ ಅಕ್ಟೋಬರ್ ೯೦ ರಂದು ಬಂಗಾರಪ್ಪ ಮುಖ್ಯ ಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ಏಳು ಜನರ ಸಚಿವ ಸಂಪುಟ ರಚಿಸಿದರು. ಆನಂತರ ೧೮-೧೧-೯೦ ರಂದು ಐದು ಕ್ಯಾಬಿನೆಟ್ ಮತ್ತು ೮ ರಾಜ್ಯ ಸಚಿವರನ್ನು ಸಂಪುಟಕ್ಕೆ ಸೇರಿಸಿಕೊಂಡರು. ಬಡವರಿಗೆ ಮನೆ ನಿವೇಶನ ಹಂಚಿಕೆಯ ಬಗ್ಗೆ ಕಾಲಮಿತಿ ಕಾರ್ಯಕ್ರಮ ಹಾಕಿಕೊಳ್ಳುವಂತೆ ಅಧಿಕಾರಿಗಳಿಗೆ ಸೂಚಿಸಿದರು. ಕೈಮಗ್ಗ ನೇಕಾರರಿಗೆ ವಿಮಾ ಯೋಜನೆಯನ್ನು ಡಿಸೆಂಬರ್ ೩೧, ೧೯೯೦ರಿಂದ ಸರ್ಕಾರ ಜಾರಿಗೆ ತಂದಿತು. ೧೮ ರಿಂದ ೬೦ ವರ್ಷದವರೆಗಿನ ನೇಕಾರರು ಮೃತಪಟ್ಟಲ್ಲಿ ಅವರಿಗೆ ಮೂರು ಸಾವಿರ ರೂ. ವಿಮಾಹಣ ಬರುವಂತೆ, ವಾರ್ಷಿಕ ೧೫ ಲಕ್ಷ ಪ್ರೀಮಿಯಂ ಕೊಡಲು ಸರ್ಕಾರ ಕಾರ್ಯಕ್ರಮ ಹಾಕಿತು. ವೈಯಕ್ತಿಕ ಕಾರಣಗಳಿಗಾಗಿ ೧-೧-೯೧ರಂದು ರಾಜ್ಯಪಾಲ ಭಾನುಪ್ರತಾಪ್‌ಸಿಂಗ್ ರಾಜೀನಾಮೆ ನೀಡಿದರು. ೬ ರಂದು ಖುರ್ಷಿದ್ ಆಲಂ ಖಾನ್ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದರು. ಅಕ್ಟೋಬರ್ ೫ ರಂದು ಪ್ರಭಾಕರರಾವ್ ಸರ್ಕಾರದ ಮುಖ್ಯ ಕಾರ್ಯದರ್ಶಿಯಾಗಿ ಅಧಿಕಾರ ಸ್ವೀಕರಿಸಿದರು. ಜಿಲ್ಲಾ ಪರಿಷತ್ ವಿಧೇಯಕಕ್ಕೆ ತಿದ್ದುಪಡಿ ತರುವ ವಿಚಾರದಲ್ಲಿ ಸಚಿವ ಸಂಪುಟದಲ್ಲಿ ಭಿನ್ನಾಭಿಪ್ರಾಯ ಮೂಡಿಬಂತು. ರಾಜೀವ್‌ಗಾಂಧಿಯವರ ಜೊತೆ ಚರ್ಚಿಸಿ ತಿದ್ದುಪಡಿ ತರುವುದಾಗಿ ಬಂಗಾರಪ್ಪ ೧೦ ರಂದು ಪ್ರಕಟಿಸಿದರು. ಜಿಲ್ಲಾ ಪಂಚಾಯತ್ ಅಧ್ಯಕ್ಷರುಗಳ ಪದಚ್ಯುತಿಗೆ ಸರಳ ಬಹುಮತ ಸಾಕು ಎಂಬ ಸುಗ್ರೀವಾಜ್ಞೆಯನ್ನು ಸರ್ಕಾರ ಜಾರಿಗೆ ತಂದಿತು. ಇದರಿಂದ ಎಂಟು ಜಿಲ್ಲಾ ಪರಿಷತ್‌ಗಳಲ್ಲಿ ಅಧಿಕಾರದಲ್ಲಿದ್ದ ಜನತಾ ಹಾಗೂ ಜನತಾದಳದ ಅಧ್ಯಕ್ಷರುಗಳು ಪದಚ್ಯುತರಾಗುವ ಸಂಭವ ಬಂದಿತು. ರಾಜ್ಯ ಸರ್ಕಾರದ ಕಾರ್ಯವೈಖರಿಯ ಬಗ್ಗೆ ಅನೇಕ ಅಪಸ್ವರಗಳು ಕೇಳಿ ಬಂದವು. ಕಾಂಗ್ರೆ ವರಿಷ್ಠರ ಸೂಚನೆಯ ಮೇರೆಗೆ ಪ್ರಣವ್ ಮುಖರ್ಜಿ, ಮಣಿಶಂಕರ ಅಯ್ಯರ್, ಎಂ. ಜೆ. ಅಕ್ಬರ್ ಬೆಂಗಳೂರಿಗೆ ಭೇಟಿ ನೀಡಿ ಅಭಿಪ್ರಾಯ ಸಂಗ್ರಹಣೆ ಮಾಡಿ ಹಿಂದಿರುಗಿದರು.

೮.೨.೯೧ ರಂದು ಬೆಂಗಳೂರಿನ ವಿಧಾನಸೌಧದ ಮುಂದೆ ನೆಹರೂ ಪ್ರತಿಮೆಯನ್ನು ಅನಾವರಣ ಮಾಡಿದ ರಾಜೀವ್ ಗಾಂಧಿ ಸಂವಿಧಾನದ ೬೪ನೇ ತಿದ್ದುಪಡಿಗೆ ಅನುಗುಣವಾಗಿ ಜಿಲ್ಲಾ ಪಂಚಾಯತ್ ಕಾಯಿದೆಗೆ ತಿದ್ದುಪಡಿ ತರಲು ಸೂಚಿಸಿದರು. ಮಾರ್ಚ್ ೯೧ ರಲ್ಲಿ ರಾಜ್ಯ ವಿಧಾನ ಮಂಡಲ ಅಧಿವೇಶನ ಆರಂಭವಾಯಿತು. ಪಂಚಾಯತ್‌ರಾಜ್ ಸಚಿವ ಬಸವಲಿಂಗಪ್ಪನವರು ಎರಡು ಮೂರು ಬಾರಿ ಸದನದಲ್ಲಿ ಆಡಿದ ಮಾತುಗಳಿಂದ ಭಾರೀ ಗೊಂದಲ ಉಂಟಾಯಿತು. ಒಂದು ಬಾರಿಯಂತೂ (೧೯-೩-೯೧) ಮುಖ್ಯ ಮಂತ್ರಿ ಬಂಗಾರಪ್ಪನವರೇ ಅವರ ಪರವಾಗಿ ಸದನದ ಕ್ಷಮೆ ಯಾಚಿಸಬೇಕಾಗಿ ಬಂದಿತು. ೧೧-೩-೯೧ರಂದು ಬಂಗಾರಪ್ಪನವರು ೧೭ ಕೋಟಿ ರೂ. ತೆರಿಗೆ ಹಾಗೂ ೫೪ ಕೋಟಿ ರೂ. ಕೊರತೆಯ ಬಜೆಟ್ ಮಂಡಿಸಿದರು. ಬಜೆಟ್ ಬಗ್ಗೆ ಭಾರೀ ಟೀಕೆ ಕೇಳಿ ಬಂತು.

ಬಾಕಿ ಇದ್ದ ೨೫೬೦ ಫೈಲುಗಳ ಪೈಕಿ ೨೧೦೦ ಫೈಲುಗಳನ್ನು ತಾವು ವಿಲೇವಾರಿ ಮಾಡಿರುವುದಾಗಿಯೂ, ಕೆ.ಎ.ಟಿ. ಪುನರ್ರಚನೆ ಮಾಡುವುದಾಗಿಯೂ, ಅಧಿಕಾರ ವಿಕೇಂದ್ರೀಕರಣಕ್ಕಾಗಿ ಸಂವಿಧಾನದ ೬೪ನೇ ತಿದ್ದುಪಡಿ ಆಧಾರದ ಮೇಲೆ ತಿದ್ದುಪಡಿ ತಂದು ಪಂಚಾಯತ್ ರಾಜ್ಯ ಪದ್ಧತಿಯ ಪುನರ್ ವ್ಯವಸ್ಥೆ ಮಾಡುವುದಾಗಿಯೂ, ಚಿನ್ನಪ್ಪರೆಡ್ಡಿ ಏಕಸದಸ್ಯ ಸಮಿತಿಯ ವರದಿಯನ್ನು ಪರಿಶೀಲಿಸಿ ಆದಷ್ಟು ಬೇಗ ಜಾರಿಗೆ ತರುವುದಾಗಿಯೂ, ಅರಣ್ಯ ಕಾಲೇಜನ್ನು ಆರಂಭಿಸುವುದಾಗಿಯೂ, ಆಡಳಿತದ ತ್ವರಿತ ನಿರ್ವಹಣೆಗಾಗಿ ಪಂಚ

ಸೂತ್ರವನ್ನು ಜಾರಿಗೆ ತಂದಿರುವುದಾಗಿಯೂ, ಹತ್ತು ಸಾವಿರ ರೂಪಾಯಿವರೆಗಿನ ಕೃಷಿ ಸಾಲ ಮನ್ನಾ ಮಾಡುವುದಾಗಿಯೂ ಬಂಗಾರಪ್ಪನವರು ಪ್ರಕಟಿಸಿದರು. ಪಂಚಾಯತ್ ರಾಜ್ಯ ತಿದ್ದುಪಡಿ ವಿಧೇಯಕ ವಿಧಾನಸಭೆಯಲ್ಲಿ ಒಪ್ಪಿಗೆ ಪಡೆಯಿತು, ವಿಧಾನ ಪರಿಷತ್ತಿನಲ್ಲಿ ಚರ್ಚೆಗೆ ಬಂದು ಕೋಲಾಹಲ ಆದಾಗ ಹಠಾತ್ತಾಗಿ ಪರಿಷತ್ತನ್ನು ಮುಂದೂಡಲಾಯಿತು. ಹಾಗೂ ಅದು ನೆನೆಗುದಿಗೆ ಬಿತ್ತು.

ಸಚಿವ ಸಂಪುಟದ ವಿಸ್ತರಣೆ ಹಾಗೂ ನಿಗಮ ಮಂಡಲಿಗಳ ಅಧ್ಯಕ್ಷತೆಗೆ ನೇಮಕ ಮುಂತಾದ ಬೇಡಿಕೆಗಳನ್ನು ಈಡೇರಿಸುವಂತೆ ಒತ್ತಾಯ ಬರುತ್ತಿತ್ತು. ಪ್ರದೇಶ ಕಾಂಗ್ರೆ ಈ ಬಗ್ಗೆ ಗಮನಹರಿಸದಿದ್ದರೆ ಲೋಕಸಭಾ ಚುನಾವಣೆಗಳನ್ನು ಬಹಿಷ್ಕರಿಸುವುದಾಗಿಯೂ ಕೆಲವು ಶಾಸಕರು ತೀವ್ರ ಬೆದರಿಕೆ ಹಾಕಿದ್ದರು. ಸಚಿವ ಸಂಪುಟ ವಿಸ್ತರಣೆಗೆ ಏಪ್ರಿಲ್ ೨ ರವರೆಗೆ ಗಡುವನ್ನೂ ವಿಧಿಸಲಾಯಿತು. ಹೆಚ್ಚು ಸಚಿವ ಸ್ಥಾನ ನೀಡುವಂತೆ ಲಿಂಗಾಯಿತ ಹಾಗೂ ಒಕ್ಕಲಿಗ ಶಾಸಕರು ಒತ್ತಡ ತರುತ್ತಿದ್ದರು. ಮಂತ್ರಿಮಂಡಲ ವಿಸ್ತರಣೆಗೆ ಶಾಸಕರು ಪಟ್ಟು ಹಿಡಿದಿದ್ದರೆ ಸಂಸದರು ವಿರೋಧ ವ್ಯಕ್ತಪಡಿಸುತ್ತಿದ್ದರು. ವಿಧಾನಸಭೆಯನ್ನು ವಿಸರ್ಜಿಸಿ ಒಟ್ಟಿಗೆ ಚುನಾವಣೆ ನಡೆಸುವಂತೆ ೨೫ ಸಂಸದರು ಒತ್ತಾಯಿಸಿದರು. ಬಂಗಾರಪ್ಪನವರು ದೆಹಲಿಗೆ ಹೋಗಿ ಬಂದರು. ವಿಧಾನಸಭೆಯ ವಿಸರ್ಜನೆ ಇಲ್ಲ, ಚುನಾವಣೆಯ ನಂತರ ಸಚಿವ ಸಂಪುಟ ವಿಸ್ತರಣೆ ಎಂದು ೨೪.೩.೯೧ ರಂದು ಸ್ಪಷ್ಟಪಡಿಸಿದರು.

''ರೈತ ಚಳವಳಿಗಾರರ ಮೇಲಿನ ಎಲ್ಲ ಮೊಕದ್ದಮೆಗಳನ್ನೂ ಹಿಂದಕ್ಕೆ ಪಡೆಯಲಾಗುವುದು. ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆ ನಿಗದಿಪಡಿಸಲು ರೈತ ಮುಖಂಡರುಗಳು ತಜ್ಞರಿಂದ ಕೂಡಿದ ಸಮಿತಿ ರಚಿಸಲಾಗಿದೆ'' ಎಂದು ಬಂಗಾರಪ್ಪ ಪ್ರಕಟಿಸಿರು. ಹರಿಜನ ಗಿರಿಜನೇತರ ಮಕ್ಕಳಿಗೂ ಉಚಿತ ಸಮವಸ್ತ್ರ, ಪುಸ್ತಕ ನೀಡುವುದಾಗಿ ಸರ್ಕಾರ ೮-೪-೯೧ರಂದು ಪ್ರಕಟಿಸಿತು. ೩೦ ಲಕ್ಷ ಶಾಲಾ ಮಕ್ಕಳಿಗೆ ಮಧ್ಯಾಹ್ನದ ಊಟದ ಯೋಜನೆಯನ್ನು ದಿನಾಂಕ ೧೧-೪-೯೧ರಂದು ಸರ್ಕಾರ ಪ್ರಕಟಿಸಿ, ಇದಕ್ಕಾಗಿ ಪ್ರತ್ಯೇಕ ನಿರ್ದೇಶಕರನ್ನು ನೇಮಕಮಾಡಿ ಪ್ರತಿವರ್ಷ ೨೫ ಕೋಟಿ ರೂಪಾಯಿ ಒದಗಿಸಲು ತೀರ್ಮಾನಿಸಿತು. ಹಂಪಿ ವಿಶ್ವವಿದ್ಯಾಲಯದ ಕೆಲಸ ಕಾರ್ಯಗಳಿಗೆ ವಿಶೇಷ ಅಧಿಕಾರಿಯನ್ನು ನೇಮಿಸಿತು. ರಾಜ್ಯದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದವರಿಗೆ ಎರಡು ಲಕ್ಷ ಮನೆಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ, ಇದಕ್ಕಾಗಿ ಫಲಾನುಭವಿಗಳ ಆದಾಯ ಮಿತಿಯನ್ನು ೪೮೦೦ ರೂಪಾಯಿಗಳಿಗೆ ಮಿತಿಗೊಳಿಸಲಾಗಿದೆ. ಎಂದು ಸರ್ಕಾರ ಪ್ರಕಟಿಸಿತು. ರಾಜ್ಯದಲ್ಲಿ ಮೇ ೨೩, ೨೬ ರಂದು ಚುನಾವಣೆಗಳನ್ನು ನಿಗದಿ ಮಾಡಿ ಚುನಾವಣಾ ಆಯೋಗ ದಿನಾಂಕ ೧೭-೪-೯೧ರಂದು ಅಧಿಕೃತ ಪ್ರಕಟಣೆ ಹೊರಡಿಸಿತು.

## ರಾಜ್ಯದಲ್ಲಿ ಕಾಂಗ್ರೆಸ್ (ಐ) ಚುನಾವಣಾ ಸಿದ್ಧತೆ - ಅಭ್ಯರ್ಥಿಗಳ ಆಯ್ಕೆ

ಲೋಕಸಭಾ ಚುನಾವಣೆಗಳು ೧೯೯೧ರ ಮೇ ತಿಂಗಳಲ್ಲಿ ನಡೆಯುವುದು ಖಚಿತವಾಗಿತ್ತು. ೧೮-೩-೯೧ ರಂದು ಅಖಿಲಭಾರತ ಕಾಂಗ್ರೆಸ್ ಸಮಿತಿಯು ೧೪ ಜನರ ಪ್ರದೇಶ ಚುನಾವಣಾ ಸಮಿತಿಯನ್ನು ನೇಮಿಸಿತು. ಮುಖ್ಯಮಂತ್ರಿ ಎಸ್. ಬಂಗಾರಪ್ಪ, ಪ್ರದೇಶ ಕಾಂಗ್ರೆ ಅಧ್ಯಕ್ಷ ಆಸ್ಕರ್ ಫರ್ನಾಂಡಿಸ್, ಬಿ. ಶಂಕರಾನಂದ, ಜನಾರ್ಧನ ಪೂಜಾರಿ, ಆರ್. ಗುಂಡೂರಾವ್, ಸಿ.ಕೆ. ಜಾಫರ್ ಷರೀಫ್, ವೀರಪ್ಪ ಮೊಯಿಲಿ, ಕೆ. ಎಚ್. ಪಾಟೀಲ್, ಎಂ. ವಿ. ಚಂದ್ರಶೇಖರಮೂರ್ತಿ, ಕೆ. ಎಸ್. ನಾಗರತ್ನಮ್ಮ, ಧರ್ಮಸಿಂಗ್, ಟಿ. ಎನ್. ನರಸಿಂಹಮೂರ್ತಿ, ಶ್ರೀಮತಿ ತಾರಾದೇವಿ ಈ ಸಮಿತಿಯಲ್ಲಿದ್ದರು. ಲೋಕಸಭಾ ಚುನಾವಣೆಯಲ್ಲಿ ಹೊರಗಿನವರಿಗೆ ಟಿಕೆಟ್ ನೀಡಬಾರದೆಂದು ಅನೇಕ ಶಾಸಕರು ಕಾರ್ಯಕರ್ತರು ದಿನಾಂಕ ೨೨ ಮಾರ್ಚ್ ೯೧ ರಂದು ಆಗ್ರಹ ಪಡಿಸಿದರು. ಮುಖ್ಯವಾಗಿ ಬಸವರಾಜೇಶ್ವರಿ ಅವರಿಗೆ ಬಳ್ಳಾರಿಯಿಂದ, ಚಂದ್ರಶೇಖರಮೂರ್ತಿ ಅವರಿಗೆ ಕನಕಪುರದಿಂದ, ಮೂಡಲಗಿರಿಯಪ್ಪ ಅವರಿಗೆ ಚಿತ್ರದುರ್ಗದಿಂದ ಟಿಕೆಟ್ ಕೊಡಬಾರದೆಂದೂ ಅವರು ಹೊರಗಿನವರೆಂದೂ ಅವರ ವಾದವಾಗಿತ್ತು. ಏಪ್ರಿಲ್ ೩ ರಂದು ಬೆಂಗಳೂರಿನಲ್ಲಿ ಪ್ರದೇಶ ಕಾಂಗ್ರೆ ಚುನಾವಣಾ ಸಮಿತಿ ಸಭೆ ನಡೆಯಿತು. ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಲಾಯಿತು. ಚುನಾವಣಾ ಸಮಿತಿ ಸದಸ್ಯರು ದೆಹಲಿಗೆ ಹೋದರು. ಏಪ್ರಿಲ್ ೪ ರಂದು ದೆಹಲಿಯಲ್ಲಿ ಕೇಂದ್ರ ಮಾಜಿ ಸಚಿವ ಶಂಕರಾನಂದ ಮನೆಯಲ್ಲಿ ಚುನಾವಣಾ ಸಮಿತಿ ಸಭೆ ಸೇರಿತು. ಎ.ಐ.ಸಿ.ಸಿ. ವೀಕ್ಷಕ ಜಗಪ್ರವೇಶ ಚಂದ್ರ ಅವರೂ ಭಾಗವಹಿಸಿದ್ದರು. ಲೋಕಸಭೆ ಕ್ಷೇತ್ರವಾರು ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ಧಪಡಿಸಿ ಕಾಂಗ್ರೆ ವರಿಷ್ಠ ಮಂಡಲಿಗೆ ಸಲ್ಲಿಸಲು ತೀರ್ಮಾನಿಸಲಾಯಿತು. ಧಾರವಾಡ, ಕಾರವಾರ ಅಭ್ಯರ್ಥಿಗಳ ಆಯ್ಕೆ ಬಗ್ಗೆ ಭಿನ್ನಭಿಪ್ರಾಯ ತಲೆದೋರಿತು. ಶಿವಮೊಗ್ಗ ಅಭ್ಯರ್ಥಿ ಆಯ್ಕೆಯನ್ನು ಮುಖ್ಯಮಂತ್ರಿಗಳು ತಮಗೇ ಬಿಡಬೇಕೆಂದರು. ಮತ್ತೆ ೫ ರಂದು ಸಭೆ ಸೇರಿ, ಅಭ್ಯರ್ಥಿಗಳ ಆಯ್ಕೆ ಬಗ್ಗೆ ಚರ್ಚಿಸಲಾಯಿತು.

೧೯೮೯ರಲ್ಲಿ ಸ್ಪರ್ಧಿಸಿದ್ದ ಬಹುತೇಕ ಅಭ್ಯರ್ಥಿಗಳಿಗೆ ಟಿಕೆಟ್ ನೀಡುವ ಸಂಭವ ಕಂಡುಬಂದಿತ್ತು. ಬಂಗಾರಪ್ಪ ಮತ್ತು ಆಸ್ಕರ್ ಫರ್ನಾಂಡಿಸ್ ಇಬ್ಬರೂ ಒಂದೊಂದು ಪಟ್ಟಿ ತಯಾರಿಸಿ ಕೇಂದ್ರ ಸಂಸದೀಯ ಮಂಡಲಿಯ ಮುಂದೆ ಮಂಡಿಸಲಿದ್ದಾರೆ. ಅದರ ಬಗ್ಗೆ ಕೇಂದ್ರ ಸಂಸದೀಯ ಮಂಡಲಿ ಅಂತಿಮ ತೀರ್ಮಾನ ಕೈಗೊಳ್ಳಲಿದೆ ಎಂದು ತಿಳಿದುಬಂದಿತು. ಹತ್ತು ಜನ ಲೋಕಸಭಾ ಸದಸ್ಯರಿಗೆ ಟಿಕೆಟ್ ನೀಡದಂತೆ ಕಾಂಗ್ರೆಸ್ (ಐ) ನಾಯಕರುಗಳಾದ ಕೆ. ಎಚ್. ರಂಗನಾಥ್, ಎನ್. ಹುಚ್ಚಮಾಸ್ತಿಗೌಡ, ಕೆ. ಮಲ್ಲಣ್ಣ, ಕೆ. ಲಕ್ಕಪ್ಪ, ಸಿ. ಜೆ. ಮುಕ್ಕಣ್ಣಪ್ಪ. ಜಯಣ್ಣ ಮುಂತಾದವರು ಕಾಂಗ್ರೆ ವರಿಷ್ಠ ಮಂಡಳಿಗೆ ಮನವಿ ಸಲ್ಲಿಸಿ ಒತ್ತಾಯಿಸಿದರು. ಈ ಹತ್ತು ಜನರಲ್ಲಿ ತುಮಕೂರಿನ ಬಸವರಾಜ್, ದಾವಣಗೆರೆಯ ಚನ್ನಯ್ಯ ಒಡೆಯರ್, ಚಿತ್ರದುರ್ಗದ ಮೂಡಲಗಿರಿಯಪ್ಪ, ಬೀದರ್, ಕೋಲಾರ, ಬೆಂಗಳೂರು ಗ್ರಾಮಾಂತರದ ಪ್ರತಿನಿಧಿಗಳು ಇದ್ದಾರೆ ಎಂದು ತಿಳಿದುಬಂದಿತು.

ಮಾಜಿ ಪ್ರಧಾನಿ ರಾಜೀವ್ ಗಾಂಧಿಯವರು ರಾಜ್ಯದ ಯಾವುದಾದರೂ ಕ್ಷೇತ್ರದಿಂದ ಸ್ಪರ್ಧಿಸುವಂತೆ ಪ್ರದೇಶ ಕಾಂಗ್ರೆ ಚುನಾವಣಾ ಸಮಿತಿ ಆಹ್ವಾನ ನೀಡಿ ನಿರ್ಣಯ ಅಂಗೀಕರಿಸಿತು. ಅಭ್ಯರ್ಥಿಗಳ ಆಯ್ಕೆ ಹಾಗೂ ಚುನಾವಣಾ ತಂತ್ರದ ಬಗ್ಗೆಯೂ ಕೂಡಾ ೧೨-೪-೯೧ರಂದು ಚರ್ಚಿಸಿತು. ಅಭ್ಯರ್ಥಿಗಳ ಬಗ್ಗೆ ಚುನಾವಣಾ ಸಮಿತಿ ಶಿಫಾರಸ್ಸು ಮಾಡುತ್ತದೆ. ಅದರ ಆಧಾರದ ಮೇಲೆ ಹೈ ಕಮಾಂಡ್ ಟಿಕೆಟ್ ನೀಡುತ್ತದೆ ಎಂದು ಕಾಂಗ್ರೆ ಅಧ್ಯಕ್ಷ ಆಸ್ಕರ್ ತಿಳಿಸಿದರು. ೧೪ ರಂದು ಬಂಗಾರಪ್ಪ, ಆಸ್ಕರ್ ಹಾಗೂ ಚುನಾವಣಾ ಸಮಿತಿ ಸದಸ್ಯರು ದೆಹಲಿಗೆ ಹೋದರು. ಬೆಂಗಳೂರಿನಲ್ಲಿ ಚುನಾವಣಾ ಸಮಿತಿ ಸಭೆ ನಡೆದರೆ ಪತ್ರಿಕೆಗಳಿಗೆ ಸುದ್ದಿ ಹೋಗಿ ಗೊಂದಲ ಉಂಟಾಗುವ ಅಪಾಯ ಇರುವುದರಿಂದ, ದೆಹಲಿಯಲ್ಲೇ ಸಭೆ ನಡೆಸಲು ತೀರ್ಮಾನಿಸಲಾಯಿತು. ಅಭ್ಯರ್ಥಿಗಳ ಅಂತಿಮ ಪಟ್ಟಿಯನ್ನು ತಯಾರಿಸಿ, ಕೇಂದ್ರ ಸಂಸದೀಯ ಉಪಮಂಡಳಿ ಪರಿಶೀಲನೆಗೆ ಒಪ್ಪಿಸಲು ತೀರ್ಮಾನಿಸಲಾಯಿತು.

ಕನಿಷ್ಟ ೧೧ ಸ್ಥಾನಗಳಲ್ಲಿ ಹಿಂದುಳಿದ ವರ್ಗದವರಿಗೆ ಟಿಕೆಟ್ ನೀಡುವಂತೆ ಪ್ರದೇಶ ಕಾಂಗ್ರೆ ಹಿಂದುಳಿದ ವರ್ಗದವರ ವಿಭಾಗ ೧೭-೪-೯೧ ರಂದು ಒತ್ತಾಯಿಸಿತು. ಬಂಗಾರಪ್ಪ, ಆಸ್ಕರ್ ಫರ್ನಾಂಡಿಸ್ ಸಿದ್ಧಪಡಿಸಿದ ಪಟ್ಟಿಯನ್ನು ಪರಿಶೀಲಿಸಿದ ಹೈಕಮಾಂಡ್, ಪರಿಷ್ಕೃತ ಪಟ್ಟಿ ನೀಡುವಂತೆ ೧೮ ರಂದು ರಾಜ್ಯ ಕಾಂಗ್ರೆ ಚುನಾವಣಾ ಸಮಿತಿಗೆ ಸೂಚಿಸಿತು. ಅಂತಿಮವಾಗಿ ೨೩-೪-೯೧ ರಂದು ರಾಜ್ಯ ಲೋಕಸಭಾ ಕ್ಷೇತ್ರದ ಅಭ್ಯರ್ಥಿಗಳ ಪಟ್ಟಿಯನ್ನು ಬಿಡುಗಡೆ ಮಾಡಲಾಯಿತು. ಚಂದ್ರಪ್ರಭಾ ಅರಸು - ಮೈಸೂರು, ವೆಂಕಟೇಶನಾಯಕ್ - ರಾಯಚೂರು, ಕೆ. ಎಚ್. ಮುನಿಯಪ್ಪ - ಕೋಲಾರ, ಕೆ. ಜಿ. ಶಿವಪ್ಪ - ಶಿವಮೊಗ್ಗ, ಸಿದ್ದು ನ್ಯಾಮಗೌಡ- ಬಾಗಲಕೋಟೆ ಈ ಐದು ಮಂದಿ ಹೊಸಬರಿಗೆ ಟಿಕೆಟ್ ನೀಡಲಾಗಿತ್ತು. ಬಸವರಾಜ ಪಾಟೀಲ್ ಅನ್ವರಿ - ಕೊಪ್ಪಳ, ಡಿ. ಕೆ. ತಾರಾದೇವಿ-ಚಿಕ್ಕಮಗಳೂರು ಇವರಿಗೆ ಟಿಕೆಟ್ ನೀಡಿ ಎಚ್.ಜಿ. ರಾಮುಲು, ಪುಟ್ಟೇಗೌಡ ಇವರಿಗೆ ಟಿಕೆಟ್ ನಿರಾಕರಿಸಲಾಯಿತು. ಉಳಿದಂತೆ ವಿಸರ್ಜಿತ ಲೋಕಸಭೆಯ ಎಲ್ಲ. ಸದಸ್ಯರಿಗೂ ಟಿಕೆಟ್ ನೀಡಲಾಗಿತ್ತು.

| | | | | | |
|---|---|---|---|---|---|
| ನರಸಿಂಗ್ ಸೂರ್ಯವಂಶಿ | - | ಬೀದರ್ | ಬಿ.ಜಿ. ಜವಳಿ | - | ಕಲಬುರ್ಗಿ |
| ಬಸವರಾಜೇಶ್ವರಿ | - | ಬಳ್ಳಾರಿ | ಚನ್ನಯ್ಯ ಒಡೆಯರ್ | - | ದಾವಣಗೆರೆ |
| ಮೂಡಲಗಿರಿಯಪ್ಪ | - | ಚಿತ್ರದುರ್ಗ | ಜಿ. ಎಸ್. ಬಸವರಾಜ್ | - | ತುಮಕೂರು, |
| ಎ. ಕೃಷ್ಣ ರಾವ್ | - | ಚಿಕ್ಕಬಳ್ಳಾಪುರ | ಎಂ. ವಿ. ಚಂದ್ರಶೇಖರ ಮೂರ್ತಿ | - | ಕನಕಪುರ, |
| ಜಾಫರ್ ಷರೀಫ್ | - | ಬೆಂಗಳೂರು ಉತ್ತರ | ಆರ್. ಗುಂಡೂರಾವ್ | - | ಬೆಂಗಳೂರು ದಕ್ಷಿಣ |
| ಜಿ. ಮಾದೇಗೌಡ | - | ಮಂಡ್ಯ | ಶ್ರೀನಿವಾಸ ಪ್ರಸಾದ್ | - | ಚಾಮರಾಜನಗರ |
| ಎಚ್. ಸಿ. ಶ್ರೀಕಂಠಯ್ಯ | - | ಹಾಸನ | ಆಸ್ಕರ್ ಫರ್ನಾಂಡಿಸ್ | - | ಉಡುಪಿ |
| ಜನಾರ್ಧನ ಪೂಜಾರಿ | - | ಮಂಗಳೂರು | ದೇವರಾಯ ನಾಯ್ಕರ್ | - | ಉತ್ತರ ಕನ್ನಡ |
| ಬಿ. ಎಂ. ಮುಜಾಹಿದ್ | - | ಧಾರವಾಡ ದಕ್ಷಿಣ | ಎಸ್. ಬಿ. ಸಿದ್ನಾಳ್ | - | ಬೆಳಗಾವಿ |
| ಡಿ. ಕೆ. ನಾಯ್ಕರ್ | - | ಧಾರವಾಡ ಉತ್ತರ | ಬಿ. ಶಂಕರಾನಂದ್ | - | ಚಿಕ್ಕೋಡಿ |
| ಬಿ. ಕೆ. ಗುಡದಿನ್ನಿ | - | ಬಿಜಾಪುರ | | | |

ಅಂಬಣ್ಣ ನಾಯಕ್ (ರಾಯಚೂರು), ವೈ. ರಾಮಕೃಷ್ಣ (ಕೋಲಾರ), ಎಸ್. ಟಿ. ಪಾಟೀಲ್ (ಬಾಗಲಕೋಟೆ), ಡಿ. ಎಂ. ಪುಟ್ಟೇಗೌಡ (ಚಿಕ್ಕಮಗಳೂರು), ರಾಮುಲು (ಕೊಪ್ಪಳ), ಟಿ. ಎ. ಚಂದ್ರಶೇಖರಪ್ಪ (ಶಿವಮೊಗ್ಗ) ಇವರುಗಳನ್ನು ಕೈಬಿಡಲಾಯಿತು.

ಕೆ. ಎಚ್. ಪಾಟೀಲ್ ಹಾಗೂ ಬಿ. ಶಂಕರಾನಂದ್ ಅವರ ಮಾತು ಟಿಕೆಟ್ ನೀಡಿಕೆ ವಿಚಾರದಲ್ಲಿ ನಡೆದಿಲ್ಲ ಎಂಬ ಮಾತು ಕೇಳಿಬಂತು. ಡಿ. ಆರ್. ಪಾಟೀಲರಿಗೆ ಟಿಕೆಟ್ ಕೊಡಿಸುವಲ್ಲಿ ಹಾಗೂ ಡಿ. ಕೆ. ನಾಯ್ಕರ್‌ಗೆ ಟಿಕೆಟ್ ಸಿಗದಂತೆ ಮಾಡುವಲ್ಲಿ ಅವರು

ವಿಫಲರಾಗಿದ್ದಾರೆಂದು ಹೇಳಲಾಯಿತು. ಎಸ್. ಬಿ. ಸಿದ್ನಾಳಗೆ ಟಿಕೆಟ್ ಸಿಗದಂತೆ ಮಾಡುವಲ್ಲಿ ಶಂಕರಾನಂದ ವಿಫಲರಾದರು. ದೇವರಾಯನಾಯಕ್, ಚಂದ್ರಶೇಖರಪ್ಪ ಬಂಗಾರಪ್ಪನವರ ವಿರುದ್ಧ ಇದ್ದು, ದೇವರಾಯನಾಯಕ್ ರಾಜಿ ಆದುದರಿಂದ ಟಿಕೆಟ್ ದೊರೆಯಿತು, ಟಿ. ವಿ. ಚಂದ್ರಶೇಖರಪ್ಪ ರಾಜಿ ಆಗದೇ ಹೋದುದರಿಂದ ಟಿಕೆಟ್ ದೊರೆಯಲಿಲ್ಲ. ಎಚ್. ಜಿ. ರಾಮುಲು ಅವರಿಗೆ ಟಿಕೆಟ್ ದೊರಕಿಸುವಲ್ಲಿ ಬಂಗಾರಪ್ಪ ವಿಫಲರಾದರು. ಆದರೆ ಜಿ. ಎಸ್. ಬಸವರಾಜ್, ಡಿ.ಕೆ. ತಾರಾದೇವಿ, ವೆಂಕಟೇಶನಾಯಕ್‌ರಿಗೆ ಟಿಕೆಟ್ ಕೊಡಿಸುವಲ್ಲಿ ಸಫಲರಾದರು ಎಂದು ವಿಮರ್ಶೆ ಮಾಡಲಾಯಿತು. ಜವಳಿ, ಜಿ. ಕೆ. ಗುಡದಿನ್ನಿ, ಜಿ. ಮಾದೇಗೌಡ ಎಸ್. ಬಿ. ಸಿದ್ನಾಳ್, ಡಿ. ಕೆ. ನಾಯ್ಕರ್, ಬಸವರಾಜೇಶ್ವರಿ, ಜಿ. ಎಸ್. ಬಸವರಾಜ್, ಎಂ. ವಿ. ಚಂದ್ರಶೇಖರಮೂರ್ತಿ ವೀರೇಂದ್ರ ಪಾಟೀಲ್ ಬೆಂಬಲಿಗರಾಗಿದ್ದಾರೆ ಎಂದು ವಿಶ್ಲೇಷಣೆ ಮಾಡಲಾಯಿತು. ಚಂದ್ರಪ್ರಭಾ ಅರಸ್ ಅವರಿಗೆ ಬಲವಂತವಾಗಿ ಟಿಕೆಟ್ ನೀಡಲಾಗಿದೆ ಎಂದು ತಿಳಿದುಬಂದಿತು. ರಾಜ್ಯದಲ್ಲಿ ಮುಸ್ಲಿಂ ಲೀಗ್ ಕಾಂಗ್ರೆಗೆ ಬೇಷರತ್ ಬೆಂಬಲ ನೀಡಿದೆ ಎಂದು ಐ.ಯು.ಎಂ.ಎಲ್. ರಾಜ್ಯ ಘಟಕದ ಪ್ರಧಾನ ಕಾರ್ಯದರ್ಶಿ ಖಮುರುಲ್ ಇಸ್ಲಾಂ ೨೫ ರಂದು ಪ್ರಕಟಿಸಿದರು. ಬಂಡುಕೋರ ಅಭ್ಯರ್ಥಿಗಳಿಗೆ ಎ.ಐ.ಸಿ.ಸಿ. ೨೭ ರಂದು ಎಚ್ಚರಿಕೆ ನೀಡಿತು. ರಾಜ್ಯದಲ್ಲಿ ಬಂಡಾಯಗಾರರ ಹಾವಳಿ ಕಂಡುಬರಲಿಲ್ಲ. ಅಭ್ಯರ್ಥಿಗಳ ಆಯ್ಕೆ ಬಗ್ಗೆ ಅಂತಹ ಪ್ರತಿರೋಧವೇನೂ ಕಂಡುಬರಲಿಲ್ಲ.

## ಕಾಂಗ್ರೆ ಚುನಾವಣಾ ಪ್ರಚಾರ - ರಾಜೀವ್‌ಗಾಂಧಿ ಹತ್ಯೆ

ರಾಜೀವ್ ಗಾಂಧಿಯವರು ಹೇಗಾದರೂ ಮಾಡಿ ಕಾಂಗ್ರೆಸ್ (ಐ) ಪಕ್ಷವನ್ನು ಅಧಿಕಾರಕ್ಕೆ ತರಬೇಕೆಂದು ಸತತ ಪ್ರಚಾರದಲ್ಲಿ ತೊಡಗಿದ್ದರು. ಅವರು ಏಪ್ರಿಲ್ ೧೫ರ ಹೊತ್ತಿಗೆ ಸುಮಾರು ಎಂಟು ಸಾವಿರ ಕಿಲೋಮೀಟರ್ ಕ್ರಮಿಸಿ ಉತ್ತರ ಪ್ರದೇಶದಲ್ಲಿ ೯, ರಾಜಾಸ್ಥಾನದಲ್ಲಿ ೬, ಬಿಹಾರದಲ್ಲಿ ೬, ಗುಜರಾತ್‌ನಲ್ಲಿ ૩, ಒರಿಸ್ಸಾದಲ್ಲಿ ೪, ಮಧ್ಯಪ್ರದೇಶದ ೪ ಜಿಲ್ಲೆಗಳಲ್ಲಿ ಚುನಾವಣಾ ಪ್ರಚಾರ ಮಾಡಿದ್ದರು. ಅವರು ಪ್ರಚಾರಕ್ಕೆ ಸಿ.-೯೦ ಬೀಚ್ ಕ್ರಾಫ್ಟ್ ಕಿಂಗ್ ಏರ್ ಟ್ಯಾಕ್ಸಿಯನ್ನು ಬಳಸುತ್ತಿದ್ದರು. ಜೊತೆಗೆ ರಸ್ತೆಗಳ ಮೂಲಕವೂ ಪ್ರಯಾಣ ಮಾಡುತ್ತಿದ್ದರು. ಆದರೆ ಕಾಂಗ್ರೆ ಪ್ರಚಾರ ತಂತ್ರದಲ್ಲಿ ಕುಂಠಿತವಾಯಿತು. ಪ್ರಚಾರದ ಉಸ್ತುವಾರಿಯನ್ನು ಸ್ಯಾಮ್ ಪಿಟ್ರೋಡಾ ಮತ್ತು ಆರ್. ಡಿ. ಪ್ರಧಾನ್ ಅವರುಗಳಿಂದ ಎಚ್. ಎಸ್. ಅಹ್ಲುವಾಲಿಯಾ, ಜಗದೀಶ್ ಟೈಟ್ಲರ್, ಆನಂದ್ ಶರ್ಮಾ ಅವರು ಕಸಿದುಕೊಂಡರು ಎಂಬ ವಾರ್ತೆ ಹರಡಿತು. ಜಾಹೀರಾತು ಸಂಸ್ಥೆಗಳ ಮೂಲಕ ಪ್ರಬಲ ಪ್ರಚಾರ ಮಾಡಲು ತೀರ್ಮಾನಿಸಲಾಯಿತು.

ರಾಜೀವ್ ಗಾಂಧಿಯವರು ಮೊದಲನೇ ಸುತ್ತಿನಲ್ಲಿ ರಾಜ್ಯದಲ್ಲಿ ೧೦.೫.೯೧ ರಂದು ಮಂಗಳೂರು ಬೆಂಗಳೂರಿನಲ್ಲಿ, ೧೧.೫.೯೧ ರಂದು ಮೈಸೂರು, ಹಾಸನ, ಶಿವಮೊಗ್ಗ, ದಾವಣಗೆರೆ, ಹುಬ್ಬಳ್ಳಿ, ಬೆಳಗಾವಿ, ಬೀದರ್‌ಗಳಲ್ಲಿ ಪ್ರವಾಸ ಮಾಡಿ ಚುನಾವಣಾ ಪ್ರಚಾರ ಮಾಡಿದರು. ೧೨.೫.೯೧ ರಂದು ಬಾದಾಮಿ, ಗುಳೇದಗುಡ್ಡ, ಹುನಗುಂದ, ಬಾಗಲಕೋಟೆ, ಬೀಳಗಿ, ಮುಧೋಳ್, ಜಮಖಂಡಿ, ವಿಜಾಪುರ, ೧೩-೫-೯೧ರಂದು ಸಿಂಧಗಿ, ಇಂಡಿ, ಬಳ್ಳೊಳ್ಳಿ, ಅಥಣಿ, ರಾಯಭಾಗ, ಚಿಕ್ಕೋಡಿ, ೧೪.೫.೯೧ ರಂದು ಸಂಕೇಶ್ವರ, ಹುಕ್ಕೇರಿ, ಬೆಳಗಾವಿ, ಖಾನಾಪುರ, ಬೈಲಹೊಂಗಲ, ಕಿತ್ತೂರು, ಧಾರವಾಡ, ಹುಬ್ಬಳ್ಳಿಗಳಲ್ಲಿ, ೧೫.೫.೯೧ರಂದು ಕಾರವಾರ, ಎಲ್ಲಾಪುರ, ಹಳಿಯಾಳ, ಅಂಕೋಲ, ಶಿಗ್ಗಾಂವಿ, ಹುಬ್ಬಳ್ಳಿಗಳಲ್ಲಿ ಪ್ರಚಾರ ಮಾಡಿದರು. ರಾಜೀವ್ ಗಾಂಧಿಯವರು ೨೨ ರಿಂದ ೨೪ ರವರೆಗೆ ರಾಯಚೂರು, ಧಾರವಾಡ, ಬಿಜಾಪುರ ಜಿಲ್ಲೆಗಳಲ್ಲಿ ಪ್ರವಾಸ ಮಾಡುವ ಕಾರ್ಯಕ್ರಮ ಇತ್ತು.

೨೦.೫.೯೧ರಂದು ೨೦೪ ಕ್ಷೇತ್ರಗಳಲ್ಲಿ ಮೊದಲನೇ ಹಂತದ ಚುನಾವಣೆಗಳು ನಡೆದವು. ೨೦-೫-೯೧ರಂದು ಅವರು ನವದೆಹಲಿಯ ಮತಗಟ್ಟೆಯೊಂದರಲ್ಲಿ ಮತ ಚಲಾಯಿಸಿದರು. ೨೧ ರಂದು ಅವರು ತಮಿಳುನಾಡು ಪ್ರವಾಸಕ್ಕೆ ಹೊರಟರು. ಅದೇ ದಿನ ರಾತ್ರಿ ಅವರು ತಮಿಳು ನಾಡಿನ ಶ್ರೀಪೆರಂಬದೂರಿನಲ್ಲಿ ಬಹಿರಂಗ ಸಭೆ ಉದ್ದೇಶಿಸಿ ಮಾತನಾಡಲು ಸಿದ್ಧರಾಗುತ್ತಿದ್ದಾಗ ಎಲ್. ಟಿ. ಟಿ. ಇ. ಯ ಮಾನವಬಾಂಬ್ ಧಾಳಿಗೆ ಬಲಿಯಾದರು. ತಕ್ಷಣ ಚುನಾವಣಾ ಆಯೋಗ ಮೇ ೨೩, ೨೬ ರಂದು ನಡೆಯ ಬೇಕಾಗಿದ್ದ ಚುನಾವಣೆಗಳನ್ನು ಜೂನ್ ೧೨ ಮತ್ತು ೧೫ ಕ್ಕೆ ಮುಂದೂಡಿತು.

ಕಾಂಗ್ರೆ ಕಾರ್ಯಕಾರಿ ಸಮಿತಿ ಸೋನಿಯಾ ಗಾಂಧಿ ಅವರನ್ನು ಎ.ಐ.ಸಿ.ಸಿ. ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ೨೨ ರಂದು ಆರಿಸಿತು. ಆದರೆ ಅವರು ಅದನ್ನು ಒಪ್ಪಲಿಲ್ಲ. ಅಧ್ಯಕ್ಷ ಹುದ್ದೆಯನ್ನು ನಿರಾಕರಿಸಿದರು. ೨೪.೫.೯೧ ರಂದು ದೆಹಲಿಯಲ್ಲಿ ರಾಜೀವ್ ಗಾಂಧಿ ಅಂತ್ಯಕ್ರಿಯೆ ನಡೆಯಿತು. ೨೯.೫.೯೧ ರಂದು ಪಿ. ವಿ. ನರಸಿಂಹರಾವ್ ಅವರನ್ನು ಕಾಂಗ್ರೆ ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆರಿಸಲಾಯಿತು. ರಾಜೀವ್ ಹತ್ಯೆ ತನಿಖೆಗೆ ನ್ಯಾಯಮೂರ್ತಿ ವರ್ಮಾ ಆಯೋಗ ನೇಮಿಸಲಾಯಿತು. ೧.೬.೯೧ರಂದು ರಾಜೀವ್ ಗಾಂಧಿಗೆ ಶ್ರದ್ಧಾಂಜಲಿ ಅರ್ಪಿಸಲು ಕಾಂಗ್ರೆಸ್ (ಐ) ಸಮಿತಿ ಬೃಹತ್ ಶ್ರದ್ಧಾಂಜಲಿ ಸಭೆ ಏರ್ಪಡಿಸಿತ್ತು. ರಾಜೀವ್ ಗಾಂಧಿಯವರ

ನೀತಿಯ ಅನುಷ್ಠಾನಕ್ಕೆ ಕಾಂಗ್ರೆ ನಾಯಕರು ಪಣ ತೊಟ್ಟರು. ಹೊಸ ತಂತ್ರದೊಡನೆ, ಹೊಸ ಸಾಮಗ್ರಿಗಳೊಡನೆ ಪ್ರಚಾರ ಕೈಗೊಳ್ಳಲು ಕಾಂಗ್ರೆ ನಿರ್ಧರಿಸಿತು. ಕೊಟ್ಟ ಮಾತಿಗೆ ಕಾಂಗ್ರೆಸ್ ಪಕ್ಷ ತಪ್ಪುವುದಿಲ್ಲ ಎಂದು ಕಾಂಗ್ರೆ ಅಧ್ಯಕ್ಷ ಪಿ. ವಿ. ನರಸಿಂಹರಾವ್ ೨-೬-೯೧ ರಂದು ಘೋಷಿಸಿದರು. ಟೆಲಿವಿಷನ್, ರೇಡಿಯೋ ಹಾಗೂ ಪತ್ರಿಕೆಗಳ ಮೂಲಕ ಹೊಸ ರೀತಿಯ ಪ್ರಚಾರಕ್ಕೆ ಕಾಂಗ್ರೆ ನಾಯಕರು ಪ್ರತಿಪಾದಿಸಿದರು. ೩.೬.೯೧ ರಂದು ರಾಜೀವ್ ಗಾಂಧಿಗೆ ರಾಜ್ಯಸಭೆ ಶ್ರದ್ಧಾಂಜಲಿ ಅರ್ಪಿಸಿತು. ರಾಜೀವ್‌ಗೆ ರಕ್ಷಣೆ ಕೊಡಲು ಸರ್ಕಾರ ವಿಫಲವಾಯಿತು ಎಂದು ಕಾಂಗ್ರೆ ಸದಸ್ಯರು ಆಪಾದಿಸಿದರು. ರಾಜೀವ್ ಗಾಂಧಿಯವರ ಆದರ್ಶಗಳ ಅನುಷ್ಠಾನಕ್ಕೆ ಚಂದ್ರಶೇಖರ್ ಕರೆ ನೀಡಿದರು. ವರ್ಮಾ ಆಯೋಗದ ವ್ಯಾಪ್ತಿಯನ್ನು ವಿಸ್ತರಿಸುವುದಾಗಿ ಹೇಳಿದರು. ೫.೬.೯೧ ರಿಂದ ಎರಡನೇ ಹಂತದ ಪ್ರಚಾರ ಆರಂಭವಾಯಿತು. ಮುಂಗಾರು ಮಳೆ ವಿಪರೀತವಾಗಿ ಸುರಿಯುತ್ತಿತ್ತು. ಕಾಂಗ್ರೆ ಮನೆಮನೆಗೆ ಹೋಗಿ ಮತ ಯಾಚಿಸಲು ತೀರ್ಮಾನಿಸಿತು. ರಾಜೀವ್ ಗಾಂಧಿ ಶವಯಾತ್ರೆಯ ದೊಡ್ಡ ಭಾವಚಿತ್ರಗಳನ್ನು ಪತ್ರಿಕೆಗಳಲ್ಲಿ ಸತತವಾಗಿ ಪ್ರಕಟಿಸಿ, ಅದರ ಅಡಿಯಲ್ಲಿ ''ರಾಜೀವ್‌ಗಾಂಧಿ ದೇಶಕ್ಕಾಗಿ ತಮ್ಮ ಜೀವ ತೆತ್ತರು, ಭಾರತದ ಏಕತೆಯನ್ನು ಕಾಪಾಡುವುದಕ್ಕೆ, ಜಾತಿ ಮತಗಳ ದ್ವೇಷ ಮತ್ತು ಮತಧರ್ಮಗಳ ಅಸೂಯೆಯನ್ನು ಹೋಗಲಾಡಿಸುವುದಕ್ಕೆ ತಮ್ಮ ಜೀವ ತೆತ್ತರು, ಭಾರತವನ್ನು ಮತ್ತೆ ಪ್ರಗತಿಪಥದಲ್ಲಿ ತರುವ ಪ್ರಯತ್ನದಲ್ಲಿ ಜೀವ ತೆತ್ತರು, ಬನ್ನಿ ನಾವೆಲ್ಲರೂ ಸೇರಿ ರಾಜೀವ್ ಗಾಂಧಿಯವರ ಕನಸನ್ನು ನನಸು ಮಾಡೋಣ.'' ಎಂದು ಪ್ರಕಟಿಸಿ ಮತ ಯಾಚಿಸಿತು. ಶ್ರೀಮತಿ ಇಂದಿರಾ ಗಾಂಧಿ, ರಾಜೀವ್ ಗಾಂಧಿ ಫೋಟೋಗಳನ್ನು ಪ್ರಕಟಿಸಿ ಅವರ ಚಿರಸ್ಮರಣೆಗೆ, ಅವರ ಆದರ್ಶಗಳ ಅನುಷ್ಠಾನಕ್ಕೆ ಕಾಂಗ್ರೆಗೆ ಮತ ನೀಡಿ ಎಂದು ಮತ ಯಾಚಿಸಲಾಯಿತು.

ಮುಖ್ಯಮಂತ್ರಿ ಬಂಗಾರಪ್ಪನವರು ೨.೪.೯೧ ರಂದು ತುಮಕೂರು ಜಿಲ್ಲೆಯಲ್ಲಿ, ೧೨.೫.೯೧ ರಂದು ಬೀದರ್ ಜಿಲ್ಲೆಯಲ್ಲಿ ೬.೫.೯೧ ರಂದು ಮಂಡ್ಯ ಜಿಲ್ಲೆಯಲ್ಲಿ, ೭.೫.೯೧ರಂದು ಮೈಸೂರು ಜಿಲ್ಲೆಯಲ್ಲಿ, ೧೪-೫-೯೧ರಂದು ವಿಜಾಪುರ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡು ಚುನಾವಣಾ ಪ್ರಚಾರ ಮಾಡಿದರು. ೮-೬-೯೧ ರಂದು ಧಾರವಾಡ, ವಿಜಾಪುರ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಪ್ರಚಾರ ಮಾಡಿದರು. ಕಾಂಗ್ರೆ ಧುರೀಣರಾದ ವೀರಪ್ಪ ಮೊಯಿಲಿ, ಬಸವಲಿಂಗಪ್ಪ, ಕೆ. ಎಚ್. ಪಾಟೀಲರುಗಳು ಹಾಗೂ ಇನ್ನೂ ಅನೇಕರು ರಾಜ್ಯದಾದ್ಯಂತ ಸಂಚರಿಸಿ ಚುನಾವಣಾ ಪ್ರಚಾರ ಮಾಡಿದರು. ರಾಮಕೃಷ್ಣ ಹೆಗಡೆಯವರ ಸ್ಪರ್ಧೆಯಿಂದಾಗಿ ಮಹತ್ವದ ಕ್ಷೇತ್ರಗಳಲ್ಲಿ ಒಂದಾಗಿದ್ದ ಬಾಗಲಕೋಟೆಯಲ್ಲಿ, ಚಿಕ್ಕಪಡಸಲಗಿ ಬ್ಯಾರೇಜ್‌ನ ರೂವಾರಿ ಸಿದ್ದು ನ್ಯಾಮಗೌಡರನ್ನು ಕಾಂಗ್ರೆ ಕಣಕ್ಕೆ ಇಳಿಸಿದ್ದು, ಅಲ್ಲಿ ಚಿಕ್ಕಪಡಿಸಲಗಿ ಬ್ಯಾರೇಜ್‌ನ ನಿರ್ಮಾಣ ಕಾರ್ಯವನ್ನೇ ಪ್ರಧಾನವಾಗಿ ಪ್ರಚಾರ ಮಾಡಲಾಯಿತು. ಬ್ಯಾರೇಜ್ ನಿರ್ಮಾಣಕ್ಕೆ ರಾಮಕೃಷ್ಣ ಹೆಗಡೆ ಹಾಗೂ ನೀರಾವರಿ ಸಚಿವರಾಗಿದ್ದ ದೇವೇಗೌಡರು ಯಾವುದೇ ಸಹಕಾರ ನೀಡಲಿಲ್ಲ, ಆರ್ಥಿಕ ನೆರವು ಹೋಗಲಿ ಯೋಜನೆ ನಿರ್ಮಾಣಕ್ಕೆ ಸರ್ಕಾರದ ಒಪ್ಪಿಗೆ ನೀಡುವಲ್ಲೂ ವಿಳಂಬ ಮಾಡಿದರು ಎಂಬುದು ಕಾಂಗ್ರೆ ಪ್ರಚಾರವಾಗಿತ್ತು. ಜಮಖಂಡಿ ತಾಲ್ಲೂಕಿನ ೩೩ ಹಳ್ಳಿಗಳಿಗೆ ಈ ಬ್ಯಾರೇಜ್‌ನಿಂದ ಅನುಕೂಲವಾಗಿತ್ತು. ಬಾಗಲಕೋಟೆ ಕ್ಷೇತ್ರದಲ್ಲಿ ಇದೇ ನಿರ್ಣಾಯಕ ಅಂಶವಾಗಿತ್ತು ಎನಿಸುತ್ತದೆ.

## ವೀರೇಂದ್ರ ಪಾಟೀಲ್ ಪ್ರಕರಣ

ವೀರೇಂದ್ರ ಪಾಟೀಲರು ಕಾಂಗ್ರೆಸ್ (ಐ) ಪಕ್ಷವನ್ನು ತೊರೆಯಲಿದ್ದಾರೆ ಎಂಬ ಗಾಳಿ ಸುದ್ದಿಗಳು ಹರಡಿದ್ದವು. ವೀರೇಂದ್ರರು ಕಾಂಗ್ರೆನಲ್ಲೇ ಇರುತ್ತಾರೆಂಬ ಆಶಯವನ್ನು ಬಂಗಾರಪ್ಪ ೨೪-೩- ೯೧ ರಂದು ವ್ಯಕ್ತಪಡಿಸಿದರು. ಕಾಂಗ್ರೆ ಬಿಡುವ ಉದ್ದೇಶ ತಮಗಿಲ್ಲ ಎಂದು ವೀರೇಂದ್ರರು ೨೭ ರಂದು ಸ್ಪಷ್ಟಪಡಿಸಿದರು. ವೀರೇಂದ್ರ ಪಾಟೀಲರನ್ನು ಪಕ್ಷದಿಂದ ಸಸ್ಪೆಂಡ್ ಮಾಡಲಾಗಿದೆ. ಎಂಬುದನ್ನು ಎ.ಐ.ಸಿ.ಸಿ. ಪ್ರಧಾನ ಕಾರ್ಯದರ್ಶಿ ಎಂ. ಜೆ. ಅಕ್ಬರ್ ೨೭ ರಂದು ನಿರಾಕರಿಸಿದರು. ಇದರಿಂದ ಹೊಸದೊಂದು ವಿವಾದ ಪ್ರಾರಂಭವಾಯಿತು. ಅಶಿಸ್ತಿನ ವರ್ತನೆ ಮೇರೆಗೆ ತಮ್ಮನ್ನು ಪಕ್ಷದಿಂದ ಸಸ್ಪೆಂಡ್ ಮಾಡಲಾಗಿದೆ ಎಂದು ಹೇಳಿಕೆ ನೀಡಿದ್ದ ಪ್ರದೇಶ ಕಾಂಗ್ರೆ ಅಧ್ಯಕ್ಷ ಆಸ್ಕರ್ ಫರ್ನಾಂಡಿಸ್ ಮೇಲೆ ಕ್ರಮ ತೆಗೆದುಕೊಳ್ಳಬೇಕೆಂದು ವೀರೇಂದ್ರ ಪಾಟೀಲ್ ಒತ್ತಾಯಿಸಿದರು.

ದೆಹಲಿಯಲ್ಲಿ ಹೈಕಮಾಂಡ್ ಜೊತೆ ಚರ್ಚಿಸಿ ಈ ಬಗ್ಗೆ ಹೇಳಿಕೆ ನೀಡುವುದಾಗಿ ಪ್ರದೇಶ ಕಾಂಗ್ರೆ ಅಧ್ಯಕ್ಷ ಆಸ್ಕರ್ ಫರ್ನಾಂಡಿಸ್ ೩-೪-೯೧ರಂದು ತಿಳಿಸಿದರು. ಈ ವಿಚಾರದಲ್ಲಿ ಪ್ರತಿಪಕ್ಷಗಳು ಇಲ್ಲಸಲ್ಲದ ವಿವಾದ ಉಂಟುಮಾಡುತ್ತಿವೆ. ಅನಾರೋಗ್ಯದ ನಿಮಿತ್ತ ಸರಿಯಾಗಿ ಆಡಳಿತ ನಡೆಸಲು ಸಾಧ್ಯವಾಗುವುದಿಲ್ಲ ಎಂಬ ಕಾರಣದಿಂದ ಸ್ಥಾನ ತ್ಯಜಿಸುವಂತೆ ವೀರೇಂದ್ರರಿಗೆ ರಾಜೀವ್ ಗಾಂಧಿ ಸೂಚಿಸಿದರು. ಇದರಲ್ಲಿ ಬೇರೆ ಏನೂ ಇಲ್ಲ ಎಂದು ವೀರಪ್ಪ ಮೊಯಿಲಿ ಹೇಳಿದರು. ಎ.ಐ.ಸಿ.ಸಿ. ಆದೇಶದ ಮೇಲೆ ವೀರೇಂದ್ರ ಪಾಟೀಲರನ್ನು ಪಕ್ಷದಿಂದ ಸಸ್ಪೆಂಡ್ ಮಾಡಲಾಗಿತ್ತು. ಇದರ ಬಗ್ಗೆ ನಾನಾಗಲೀ ಆಸ್ಕರ್ ಫರ್ನಾಂಡಿಸ್‌ರವರಾಗಲೀ ಹೇಳುವುದೇನೂ ಇಲ್ಲ. ಏನಾದರೂ ಹೇಳಿದರೆ ಎ.ಐ.ಸಿ.ಸಿ. ಮಾತ್ರ ಹೇಳಬೇಕೆಂದು ಮುಖ್ಯಮಂತ್ರಿ ಬಂಗಾರಪ್ಪ ೬.೪.೯೧ ರಂದು ಹೇಳಿದರು.

ಕಾಂಗ್ರೆ ತ್ಯಜಿಸಲು ವೀರೇಂದ್ರ ಪಾಟೀಲರು ಸಂಕಲ್ಪ ಮಾಡಿದ್ದಾರೆ. ಅವರ ಜೊತೆ ಕೆಲವು ಶಾಸಕರೂ ಪಕ್ಷ ತ್ಯಜಿಸಲಿದ್ದಾರೆ ಎಂಬ ದಟ್ಟವಾದ ವದಂತಿಗಳು ಹಬ್ಬಿದವು. ವೀರೇಂದ್ರರ ವಿಷಯ ಕಗ್ಗಂಟಾಗಿದ್ದು ಆಸ್ಕರ್ ಫರ್ನಾಂಡಿಸ್ ದೆಹಲಿಯಲ್ಲಿ ರಾಜೀನಾಮೆ ಸಲ್ಲಿಸಿದ್ದಾರೆ ಎಂದೂ ಕೂಡಾ ಗಾಳಿ ಸುದ್ದಿಗಳು ಹರಡಿದವು. ಕಾಂಗ್ರೆಸ್ (ಐ)ನಲ್ಲೇ ಇರಲು ತಾವು ನಿರ್ಧರಿಸಿರುವುದಾಗಿ ವೀರೇಂದ್ರಪಾಟೀಲ್ ೧೦-೪-೯೧ರಂದು ಸ್ಪಷ್ಟಪಡಿಸಿದರು. ಆದರೆ ಅವರು ಚುನಾವಣಾ ಸಿದ್ಧತೆಗಳು ನಡೆಯುತ್ತಿದ್ದಾಗ ೧.೫.೯೧ರಂದು ಚಿಕಿತ್ಸೆಗಾಗಿ ಅಮೆರಿಕದ ಲಾಸ್ ಏಂಜಲೀಸ್‌ಗೆ ಹೊರಟುಹೋದರು. ಮತ್ತೆ ಅವರು ರಾಜೀವ್ ಗಾಂಧಿ ಹತ್ಯೆಯಾದ ಮಾರನೆಯ ದಿವಸವೇ ನಗರಕ್ಕೆ ಹಿಂತಿರುಗಿದರು. ಕಾಂಗ್ರೆ ಅಧ್ಯಕ್ಷ ಸ್ಥಾನ ವಹಿಸಿಕೊಳ್ಳುವಂತೆ ತಾವು ಸೋನಿಯಾ ಗಾಂಧಿಯವರಿಗೆ ಸೂಚನೆಯನ್ನೇನೂ ನೀಡಿಲ್ಲ ಎಂದು ಅವರು ಹೇಳಿದರು.

## ಕಾಂಗ್ರೆಸ್ (ಐ) ಪ್ರಣಾಳಿಕೆ

ಸ್ಥಿರತೆ, ಸಮಾನತೆ ಆಧಾರದ ಮೇಲೆ ಪಾಲುಗೊಳ್ಳುವಿಕೆ, ದಳ್ಳಾಳಿಗಳ ಕೈಯಿಂದ ಜನತೆಯ ಕೈಗೆ ಅಧಿಕಾರ ಇದು ಕಾಂಗ್ರೆಸ್ (ಐ) ಚುನಾವಣಾ ಪ್ರಣಾಳಿಕೆಯ ಮುಖ್ಯ ಅಂಶವಾಗಿತ್ತು. ೪೪ ವರ್ಷಗಳ ದೇಶದ ಇತಿಹಾಸದಲ್ಲಿ ೪೦ ವರ್ಷ ಕಾಂಗ್ರೆಸ್ (ಐ) ದೇಶವನ್ನು ಕಟ್ಟುತ್ತಾ ಬಂದಿದೆ, ಆದರೆ ೪ ವರ್ಷಗಳಲ್ಲಿ ವಿರೋಧ ಪಕ್ಷಗಳು ದೇಶವನ್ನು ವಿನಾಶದ ಅಂಚಿಗೆ ತಳ್ಳುತ್ತಿವೆ ಎಂಬುದು ಇನ್ನೊಂದು ಮುಖ್ಯ ಅಂಶವಾಗಿತ್ತು. ಮಸೀದಿ ಕೆಡವದೆ ಮಂದಿರ ನಿರ್ಮಾಣ, ಅಲ್ಪಸಂಖ್ಯಾತರಿಗೂ ಮೀಸಲಾತಿ, ನೂರು ದಿನಗಳಲ್ಲಿ ಬೆಲೆಗಳನ್ನು ೧೯೯೦ ಜುಲೈನಲ್ಲಿ ಇದ್ದ ಮಟ್ಟಕ್ಕೆ ತರುವುದು ಪ್ರಮುಖ ಅಂಶಗಳಾಗಿದ್ದವು. ೩೨ ಪುಟಗಳ ಪ್ರಣಾಳಿಕೆಯನ್ನು ಏಪ್ರಿಲ್ ೧೩ ರಂದು ದೆಹಲಿಯಲ್ಲಿ ರಾಜೀವ್ ಗಾಂಧಿ ಬಿಡುಗಡೆ ಮಾಡಿದರು. ಕಾಲಮಿತಿಯ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದು ಕಾಂಗ್ರೆಸ್ ಪ್ರಣಾಳಿಕೆಯ ವಿಶೇಷವಾಗಿದ್ದು ಅದರ ಮುಖ್ಯಾಂಶಗಳು ಕೆಳಗಿನಂತಿವೆ.

## ಮೊದಲ ನೂರು ದಿನಗಳಲ್ಲಿ

ಸ್ಥಾನಿಕ ಸಂಸ್ಥೆಗಳಿಗೆ ಅಧಿಕಾರ ವಿಕೇಂದ್ರೀಕರಣ ಮಾಡಲು ಪಂಚಾಯತ್ ರಾಜ್ಯ ನಗರಪಾಲಿಕೆ ಬಗೆಗಿನ ಸಂವಿಧಾನ ತಿದ್ದುಪಡಿ ವಿಧೇಯಕವನ್ನು ಸಂಸತ್ತಿನಲ್ಲಿ ಮಂಡಿಸಿ ಅಂಗೀಕರಿಸುವುದು. ಪಂಚಾಯತ್ ಮತ್ತು ನಗರಪಾಲಿಕೆ ಒಳಗೊಂಡಂತೆ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಹಾಗೂ ಸಮಿತಿಗಳಲ್ಲಿ ಶೇಕಡಾ ೩೦ ರಷ್ಟು ಸ್ಥಾನವನ್ನು ಮಹಿಳೆಯರಿಗೆ ಕಾಯ್ದಿರಿಸುವುದು. ಅವಶ್ಯಕ ಸಾಮಗ್ರಿಗಳ ಬೆಲೆಗಳನ್ನು ಹತೋಟಿಯಲ್ಲಿಡುವುದು. ಸೀಮೆ ಎಣ್ಣೆ, ಉಪ್ಪು, ಖಾದ್ಯತೈಲ, ಸೈಕಲ್, ದ್ವಿಚಕ್ರವಾಹನಗಳು ವಿದ್ಯುತ್ ಬಲ್ಪ್‌ಗಳು, ೪೦ ಕೌಂಟ್‌ಗಿಂತ ಕಡಿಮೆ ಇರುವ ಹತ್ತಿ ಬಟ್ಟೆಯ ಸೀರೆ, ಧೋತರಗಳು, ಸ್ಟವ್‌ಗಳು, ಮುದ್ರಣ ಕಾಗದ, ಅಂಚೆ ಸಾಮಗ್ರಿಗಳ ಬೆಲೆಯನ್ನು ೧೯೯೦ರ ಜುಲೈ ಮಟ್ಟಕ್ಕೆ ಇಳಿಸುವುದು.

ಪ್ರತ್ಯಕ್ಷ ಕರಗಳಲ್ಲಿ ೫ ವರ್ಷದ ಮಟ್ಟಿಗೆ ಸ್ಥಿರ ಕರಾಕರಣೆ ವ್ಯವಸ್ಥೆ ಜಾರಿಗೆ ತರುವುದು. ಸುಂಕ ಮತ್ತು ಅಬ್ಕಾರಿ ಕರಗಳಲ್ಲಿ ಪ್ರಸಕ್ತ ಹಣಕಾಸು ವರ್ಷದಿಂದ ಸ್ಥಿರ ಕರಾಕರಣೆಯ ದರಗಳು ಜಾರಿಗೆ. ಕಡಿಮೆ ಮತ್ತು ಮಧ್ಯಮವರ್ಗದ ಆದಾಯದವರ ಗುಂಪಿನ ಮನೆಗಳು, ಹೆದ್ದಾರಿಗಳು, ರಸ್ತೆಗಳು, ಸೇತುವೆಗಳು, ಸಾಂಪ್ರದಾಯಕವಲ್ಲದ ಇಂಧನ ಉತ್ಪಾದನೆ, ಶಾಲಾ ಕಟ್ಟಡ ಮತ್ತು ಕುಡಿಯುವ ನೀರು ಸರಬರಾಜು ಯೋಜನೆಗಳ ಮೇಲೆ ಬಂಡವಾಳವನ್ನು ಮತ್ತೆ ಹೂಡಿದ್ದರೆ ಅದರಿಂದ ಬರುವ ಲಾಭವನ್ನು ತೆರಿಗೆ ಮುಕ್ತಗೊಳಿಸುವುದು, ಸಣ್ಣ ಉಳಿತಾಯದ ಬಡ್ಡಿ ಪ್ರಮಾಣ ಹೆಚ್ಚಳ, ಮತೀಯ ಗಲಭೆಗಳನ್ನು ಹತ್ತಿಕ್ಕಲು ಕ್ಷಿಪ್ರ ಕಾರ್ಯಾಚರಣೆಗೆ ಕ್ರಮ. ಎಲ್ಲಾ ಪೂಜಾ ಸ್ಥಳಗಳಿಗೂ ೧೯೪೭ ಆಗಸ್ಟ್ ೧೫ರಂದು ಇದ್ದ ಸ್ಥಾನಮಾನ ನೀಡಿ ಹೊಸದಾಗಿ ವಿವಾದ ಸೃಷ್ಟಿ ಆಗದಂತೆ ನೋಡಿಕೊಳ್ಳುವುದು. ಇದಕ್ಕಾಗಿ ಸೂಕ್ತವಾದ ವಿಧೇಯಕವನ್ನು ಅಂಗೀಕರಿಸುವುದು. ಹಿಂದುಳಿದ ವರ್ಗದವರ ಅಭಿವೃದ್ಧಿ ನಿಗಮ ಸ್ಥಾಪನೆ.

## ಮೊದಲ ೩೬೫ ದಿವಸಗಳಲ್ಲಿ

ಪ್ರತಿಯೊಂದು ಗ್ರಾಮ ಪಂಚಾಯತಿಗೆ ಜವಹರ್ ರೋಜ್‌ಗಾರ್ ಯೋಜನೆ ಮುಖಾಂತರ ಹಣ ಪೂರೈಕೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ, ತಾಲ್ಲೂಕು ಸಮಿತಿ ಮಟ್ಟಗಳಲ್ಲಿ ಪಂಚಾಯತ್ ಸಂಸ್ಥೆಗಳಿಗೆ ನೇರವಾಗಿ ಹಣ ಒದಗಿಸುವುದು. ಪ್ರತಿವರ್ಷ ಗ್ರಾಮೀಣ ಉದ್ಯೋಗ ಯೋಜನೆ ಅಡಿಯಲ್ಲಿ ನೂರು ಕೋಟಿ ಮಾನವ ದಿನಗಳ ಸೃಷ್ಟಿ. ಪ್ರತಿವರ್ಷ ಒಂದು ಕೋಟಿ ಉದ್ಯೋಗ ಸೃಷ್ಟಿಸಿ ೨೦೦೦ ನೇ ವರ್ಷದೊಳಗೆ ಒಟ್ಟು ಹತ್ತು ಕೋಟಿ ಹೊಸ ಉದ್ಯೋಗ ಸೃಷ್ಟಿ ಆಗುವಂತೆ ನೋಡಿಕೊಳ್ಳುವುದು. ಸಾರ್ವಜನಿಕ ವಲಯದ ಕಂಪನಿಗಳ ಷೇರುಗಳನ್ನು ಕಾರ್ಮಿಕರು, ಚಿಕ್ಕ ಮತ್ತು ಮಧ್ಯಮ ಬಂಡವಾಳಗಾರರಿಗೆ ಕೊಡಮಾಡುವುದು. ಸರ್ಕಾರಿ ವೆಚ್ಚದಲ್ಲಿ

ಪೋಲು ಕಡಿಮೆ ಮಾಡುವುದು. ಮೊದಲನೆಯ ವರ್ಷ ಅಭಿವೃದ್ಧಿಯೇತರ ವೆಚ್ಚವನ್ನು ಶೇಕಡಾ ಹತ್ತರಷ್ಟು ಕಡಿಮೆ ಮಾಡಿ, ದ್ವಿತೀಯ ಮತ್ತು ತೃತೀಯ ವರ್ಷಗಳಲ್ಲಿ ವೆಚ್ಚದ ಅದೇ ಮಟ್ಟವನ್ನು ಕಾಯ್ದುಕೊಳ್ಳುವುದು.

ಪ್ರತಿಯೊಂದು ಹಿಂದುಳಿದ ಜಿಲ್ಲೆಯಲ್ಲಿ ಮುಕ್ತ ಬಂಡವಾಳ ಹೂಡಿಕೆಯ ಕೈಗಾರಿಕಾ ಕೇಂದ್ರ ಸ್ಥಾಪನೆ. ಮೊದಲ ೩೬೫ ದಿನಗಳಲ್ಲಿ ಹೂಡಿದ ಬಂಡವಾಳಕ್ಕೆ ತೆರಿಗೆ ವಿನಾಯಿತಿ. ಹೆದ್ದಾರಿ ಮತ್ತು ಸೇತುವೆಗಳ ನಿರ್ಮಾಣ ವಲಯವನ್ನು ಖಾಸಗಿ ಹಾಗೂ ಜಂಟಿ ವಲಯಕ್ಕೆ ಮುಕ್ತಗೊಳಿಸುವುದು. ಖಾಸಗಿ ರಂಗದಲ್ಲಿ ಪೆನ್‌ಷನ್ ಖಾತ್ರಿ ನಿಧಿಗಳ ಸ್ಥಾಪನೆಗೆ ಅನುಮತಿ.

- ಸಾರ್ವಜನಿಕ ಹಾಗೂ ಖಾಸಗಿ ರಂಗದ ಬ್ಯಾಂಕುಗಳಲ್ಲಿ ವಿದೇಶಿ ನಿಧಿಗಳನ್ನು ಎತ್ತುವುದಕ್ಕೆ ಅನುಮತಿ ನೀಡಿಕೆ.
- ಕೃಷಿ ಬೆಲೆಗಳ ನಿರ್ಧಾರಕ್ಕೆ ಹೊಸ ಸೂತ್ರ.
- ಪ್ರತಿವರ್ಷ ೧೦ ಲಕ್ಷ ನೀರಾವರಿ ಬಾವಿಗಳ ನಿರ್ಮಾಣ.
- ರಿಕ್ಷಾ ಚಾಲಕರಿಗೆ ಬಡತನ ತಳಹದಿ ಮೇಲೆ ಕೈಯಿಂದ ಎಳೆಯುವ ರಿಕ್ಷಾ ಬದಲು ಸೈಕಲ್ ರಿಕ್ಷಾ ಕೊಡುವುದು.
- ನಗರ ಪ್ರದೇಶಗಳಲ್ಲಿ ಪ್ರತಿವರ್ಷ ಸಹಸ್ರ ರಾತ್ರಿ ತಂಗುದಾಣ ಹಾಗೂ ಸುಲಭ ಶೌಚಾಲಯ ನಿರ್ಮಾಣ.
- ಜನತೆಯ ಗುಂಪು ಅಥವಾ ವರ್ಗಗಳ ನಾಗರಿಕ ಹಕ್ಕುಗಳನ್ನು ಒಳಗೊಂಡಂತೆ ಮಾನವೀಯ ಹಕ್ಕುಗಳ ಉಲ್ಲಂಘನೆ ಕುರಿತು ತನಿಖೆ ಹಾಗೂ ವಿಚಾರಣೆಗೆ ಕಾನೂನಿನ ಮೇರೆಗೆ ಮಾನವ ಹಕ್ಕುಗಳ ಆಯೋಗ ರಚನೆ.
- ಮತೀಯ ಗಲಭೆ ಪೀಡಿತರಿಗೆ ಪರಿಹಾರ ಒದಗಿಸಲು ಶಾಸನದ ಮೂಲಕ ಅವಕಾಶ ಕಲ್ಪಿಸುವುದು.
  ಆದಿವಾಸಿಗಳ ಹಕ್ಕು ಮತ್ತು ಹಿತಾಸಕ್ತಿಗಳ ರಕ್ಷಣೆಗೆ ವಿಶೇಷ ನ್ಯಾಯಾಲಯಗಳ ರಚನೆ.
- ಯಾವುದೇ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆದ ಪರಿಶಿಷ್ಟ ಜಾತಿ ಮತ್ತು ವರ್ಗದ ವಿದ್ಯಾರ್ಥಿಗಳಿಗೆ ಗರಿಷ್ಠ ಆರು ವರ್ಷ ಟ್ಯೂಷನ್ ಫೀ ಮತ್ತು ನಿರ್ವಹಣಾ ಭತ್ಯ ನೀಡಿಕೆ.
- ಪರಿಶಿಷ್ಟ ಜಾತಿ ಮತ್ತು ವರ್ಗಗಳ ಜನತೆಗೆ ಪ್ರತಿವರ್ಷ ಹತ್ತು ಲಕ್ಷ ಮನೆಗಳ ನಿರ್ಮಾಣ.
- ಗ್ರಾಮಾಂತರ ಪ್ರದೇಶಗಳ ಬಡ ಹಿಂದುಳಿದ ವರ್ಗಗಳಿಗೆ ಪ್ರತಿವರ್ಷ ಹತ್ತು ಲಕ್ಷ ಮನೆಗಳ ನಿರ್ಮಾಣ.
- ಪ್ರಸಾರ ಭಾರತಿಯೊಡನೆ ಸ್ಪರ್ಧಿಸಲು ಸಾರ್ವಜನಿಕ ನಿಗಮಗಳಿಗೆ ಬಾನುಲಿ ಹಾಗೂ ದೂರದರ್ಶನ ಪ್ರಸಾರದ ಹಕ್ಕುಗಳನ್ನು ನೀಡುವುದು.
- ಮಹಿಳೆಯರ ಹಕ್ಕುಗಳ ರಕ್ಷಣೆಗೆ ಕಮಿಷನರ್ ನೇಮಕ.
- ಶ್ರೇಷ್ಠ ನ್ಯಾಯಾಲಯಗಳಲ್ಲಿ ತೆರವಾಗಿರುವ ಎಲ್ಲಾ ಸ್ಥಾನಗಳಿಗ ನ್ಯಾಯಮೂರ್ತಿಗಳ ನೇಮಕ. ಕೇಂದ್ರ ಸರ್ಕಾರಿ ನೌಕರರ ಪೆನ್‌ಷನ್‌ಗಾಗಿ ಟ್ರಸ್ಟ್ ನಿಧಿ ರಚನೆ.

ಒಂದು ಹುದ್ದೆ, ಒಂದು ಪೆನ್‌ಷನ್ ಬಗೆಗಿನ ನಿವೃತ್ತ ಸೈನಿಕರ ಬೇಡಿಕೆಗಳ ಬಗ್ಗೆ ಹೊಸ ಪರಿಹಾರ ಕಂಡುಕೊಳ್ಳುವುದು. ಸಿವಿಲ್ ಸರ್ವೀಸಸ್ ಬೋರ್ಡ್ ವ್ಯವಸ್ಥೆ ಮೂಲಕ ಅಖಿಲ ಭಾರತ ಸೇವೆ ಅಧಿಕಾರಿಗಳ ಆಯ್ಕೆ ಮತ್ತು ನೇಮಕಾತಿ ಬಗ್ಗೆ ನ್ಯಾಯ ದೊರಕುವಂತೆ ನೋಡಿಕೊಳ್ಳುವುದು. ಸಾರ್ವಜನಿಕ ವಲಯದ ಉದ್ದಿಮೆಗಳ ಮಟ್ಟದಲ್ಲಿ ಎಲ್ಲಾ ಹುದ್ದೆಗಳನ್ನು ತುಂಬಿಕೊಳ್ಳುವುದು.

## ಮೊದಲ ೭೩೦ ದಿನಗಳಲ್ಲಿ

- ಯೋಜನಾಬದ್ಧ ಅಭಿವೃದ್ಧಿ ವಿಕೇಂದ್ರೀಕರಣ. ಪಂಚಾಯತ್ ಮತ್ತು ನಗರಪಾಲಿಕೆಗಳ ಮೂಲಕ ಯೋಜನೆಗಳನ್ನು ಜಿಲ್ಲಾ ಮತ್ತು ಬ್ಲಾಕ್ ಮಟ್ಟಕ್ಕೆ ಒಯ್ಯುವುದು.
- ಸಮಗ್ರ ಬೆಳೆ ಮತ್ತು ಜಾನುವಾರು ವಿಮೆ ಯೋಜನೆ ಜಾರಿಗೆ.
- ಯಾವುದೇ ಉತ್ಪಾದಕ ರಂಗದಲ್ಲಿ ಏಕಸ್ವಾಮ್ಯ ರದ್ದುಪಡಿಸಿ ಮುಕ್ತ ಸ್ಪರ್ಧೆಗೆ ಅವಕಾಶ.
- ಪ್ರತಿಯೊಂದು ರಾಜ್ಯದ ರಾಜಧಾನಿಯಲ್ಲಿ ಉಚ್ಚಮಟ್ಟದ ವಿಶೇಷ ಸೌಲಭ್ಯಗಳನ್ನು ಒಳಗೊಂಡ ವೈದ್ಯಕೀಯ ವಿಜ್ಞಾನ ಆಸ್ಪತ್ರೆಯನ್ನು ಪ್ರಾರಂಭಿಸಲು ಖಾಸಗಿ ಅಥವಾ ಜಂಟಿ ರಂಗಕ್ಕೆ ಉತ್ತೇಜನ ನೀಡುವುದು.
- ಮಾಹಿತಿ ಸ್ವಾತಂತ್ರ್ಯಕ್ಕೆ ಶಾಸನ.

## ಮೊದಲ ೧೦೦೦ ದಿನಗಳು

- ಖಾಸಗಿ ಮತ್ತು ಜಂಟಿ ರಂಗಗಳು ಸಮರ್ಥವಾಗಿ ಬೆಳೆದಿರುವ ಕ್ಷೇತ್ರಗಳಲ್ಲಿ ಸಾರ್ವಜನಿಕ ರಂಗವನ್ನು ಕ್ರಮೇಣ ಹಿಂತೆಗೆದುಕೊಳ್ಳುವುದು.
- ಪ್ರತಿಯೊಂದು ರಾಜ್ಯದಲ್ಲಿ ಲಭ್ಯವಿರುವ ರೈಲು ಮಾರ್ಗಗಳ ಮೂಲಕ ಪ್ರಮುಖ ನಗರಗಳನ್ನು ಜೋಡಿಸಲು ಅಂತರ ರಾಜ್ಯ ವೇಗದ ರೈಲು ಗಾಡಿಗಳನ್ನು ಓಡಿಸುವುದು.
- ಪ್ರತಿಯೊಂದು ಅಂಚೆ ಕಚೇರಿಯಲ್ಲಿ ಸಾರ್ವಜನಿಕ ದೂರವಾಣಿ.
- ಪ್ರತಿಯೊಂದು ಜಿಲ್ಲೆಯಲ್ಲಿ ನವೋದಯ ಶಾಲೆ, ಅಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳ ಮಕ್ಕಳಿಗೆ ಮೀಸಲಾತಿ.
- ಶಾಲೆಗಳಲ್ಲಿ ಪರಿಶಿಷ್ಟ ಜಾತಿ, ವರ್ಗ ಹಾಗೂ ಇತರ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿಸಲು ವಿಶೇಷ ಕ್ರಮ. ರಾಷ್ಟ್ರೀಯ ಮಧ್ಯಾಹ್ನದ ಊಟ ಕಾರ್ಯಕ್ರಮ.
- ಯೋಗ್ಯ ಬೆಲೆಗೆ ಆಹಾರಧಾನ್ಯಗಳು, ಅವಶ್ಯಕವಸ್ತುಗಳು ದೊರೆಯುವಂತೆ ದೇಶದ ಸಾರ್ವಜನಿಕ ವಿತರಣಾ ವ್ಯವಸ್ಥೆ ಬಲಪಡಿಸುವುದು.

ಐದು ವರ್ಷಗಳಿಂದ ಇತ್ಯರ್ಥ ಆಗದೇ ಉಳಿದಿರುವ ಸಿವಿಲ್ ಮತ್ತು ಕ್ರಿಮಿನಲ್ ಅಪೀಲುಗಳನ್ನು ಮೂರು ವರ್ಷಗಳಲ್ಲಿ ಇತ್ಯರ್ಥಗೊಳಿಸಲು ಅನುಕೂಲವಾಗುವಂತೆ ನಿವೃತ್ತ ಹೈಕೋರ್ಟ್ ನ್ಯಾಯಮೂರ್ತಿಗಳ ಸೇವೆಯನ್ನು ಪಡೆಯುವುದು. ಮಂಡಲ್ ವರದಿಯ ಬಗ್ಗೆ ಕಾಂಗ್ರೆಸ್ ಪ್ರಣಾಳಿಕೆಯಲ್ಲಿ ಸ್ಪಷ್ಟವಾಗಿ ಏನೂ ಹೇಳಿರಲಿಲ್ಲ. ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದಿರುವ ವರ್ಗಗಳನ್ನು ವೈಜ್ಞಾನಿಕವಾಗಿ ಗುರುತಿಸಿದ ನಂತರ ವಿವಿಧ ರಾಜ್ಯಗಳಲ್ಲಿ ಈ ವರ್ಗಗಳ ಪರಿಸ್ಥಿತಿಯ ಬಗ್ಗೆ ಪರಾಮರ್ಶೆ ನಡೆಸಿ ನಂತರ ಮಂಡಲ್ ವರದಿ ಜಾರಿಗೆ ಕ್ರಮ ಎಂದು ಹೇಳಲಾಗಿತ್ತು. ೧೩ ರಂದು ಬಿಡುಗಡೆ ಆಗಬೇಕಾಗಿದ್ದ ಕಾಂಗ್ರೆಸ್ ಪ್ರಣಾಳಿಕೆ ೯ ರಂದೇ ಬಹಿರಂಗವಾಗಿ ಭಾರತೀಯ ಜನತಾ ಪಕ್ಷದ ಕಚೇರಿಯಲ್ಲಿ ಸಿಕ್ಕಿದ ಬಗ್ಗೆ ಕಾಂಗ್ರೈ ಅಧ್ಯಕ್ಷ ರಾಜೀವ್‌ಗಾಂಧಿ ವರಿಷ್ಠರನ್ನು ತರಾಟೆಗೆ ತೆಗೆದುಕೊಂಡರೆಂದು ತಿಳಿದುಬಂದಿತು. ಮಂಡಲ್ ಹಾಗೂ ಮಂದಿರದ ಬಗ್ಗೆ ಕಾಂಗ್ರೈ ನಿಲುವೇನು ಎಂಬುದನ್ನು ತಿಳಿದುಕೊಳ್ಳಲು ಬಿ. ಜೆ. ಪಿ. ಈ ರೀತಿ ಮಾಡಿದೆ ಎಂಬ ಶಂಕೆ ಮೂಡಿತ್ತು ಎಂಬುದಾಗಿ ಹೇಳಲಾಯಿತು.

## ಕಾಂಗ್ರೈ ಪಕ್ಷಕ್ಕೆ ರಾಜೀನಾಮೆ ಹಾಗೂ ಸೇರ್ಪಡೆಗಳು

ಮೈಸೂರು ಅರಸು ಮನೆತನದವರು ಸಂಸತ್ ಸದಸ್ಯರೂ ಆಗಿದ್ದ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ೧೨-೪-೯೧ರಂದು ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿ ಬಿ. ಜೆ. ಪಿ. ಸೇರಿದರು. ರಾಜ್ಯದಲ್ಲಿ ಜನತಾದಳ ಮತ್ತು ಸಮಾಜವಾದಿ ಜನತಾ ಪಕ್ಷ ಚುನಾವಣಾ ಒಪ್ಪಂದ ಮಾಡಿಕೊಂಡವು. ಇದನ್ನು ವಿರೋಧಿಸಿ ಜನತಾದಳದ ಅನೇಕರು ಕಾಂಗ್ರೆಸ್ ಸೇರಿದರು. ಮಾಜಿ ಸಚಿವರಾದ ವೀರಣ್ಣ, ಎಫ್. ಎಚ್. ಮೊಹಿಸೀನ್, ಮಹಮದ್ ಮೊಹಿಯುದ್ದೀನ್ ೧.೫.೯೧ರಂದು ಕಾಂಗ್ರೈ ಸೇರಿದರು. ಅದೇ ದಿನ ಮಾಜಿ ಶಾಸಕ ಶೀರ್ನಾಳಿ ಚಂದ್ರಶೇಖರ್ ಸೇರಿದಂತೆ ಶಿವಮೊಗ್ಗದ ಹನ್ನೆರಡು ಜನ ಪ್ರಮುಖ ನಾಯಕರುಗಳು ಅವರ ಬೆಂಬಲಿಗರ ಜೊತೆ ಕಾಂಗ್ರೈ ಸೇರಿದರು.

೨.೫.೯೧ರಂದು ಮಾಜಿ ಸಚಿವರಾದ ಎಂ. ಎಸ್. ನಾಗನೂರು, ಶಿವಕಾಂತ ಚತುರೆ, ಮಾಜಿ ಶಾಸಕಿ ಶಕುಂತಲಾ ಚೌಗುಲೆ ಹಾಗೂ ಬೆಳಗಾವಿ ಜಿಲ್ಲೆಯ ಅನೇಕ ಪ್ರಮುಖ್ಯರು ಕಾಂಗ್ರೈ ಸೇರಿದರು. ೩.೫.೯೧ರಂದು ಮಾಜಿ ಸಚಿವರಾದ ವಿ. ಎಲ್. ಪಾಟೀಲ್, ಡಿ. ಬಿ. ಇನಾಂದಾರ್ ಅವರು ತಮ್ಮ ಬೆಂಬಲಿಗರೊಡನೆ ಕಾಂಗ್ರೈ ಸೇರಿದರು. ಅದೇ ದಿನ ಮಾಜಿ ಸಚಿವ ಯಂಕಟಪ್ಪ ಕಾಂಗ್ರೈ ಬಿಟ್ಟು ದಳ ಸೇರಿದರು. ೪.೫.೯೧ರಂದು ಮಾಜಿ ಶಾಸಕರಾದ ಎಂ. ಸಿ. ಪೆರುಮಾಳ್, ಪಿ. ಎಸ್. ರೆಡ್ಡಿ ಕಾಂಗ್ರೆಸ್ (ಐ) ಸೇರಿದರು. ೭.೫.೯೧ ರಂದು ಮಾಜಿ ಶಾಸಕ ಗೂಳಪ್ಪ ಉಪನಾಳ್ ಸಂಜಯ ವಿಚಾರ ಮಂಚ ತೊರೆದು ಕಾಂಗ್ರೈ ಸೇರಿದರು.

## ನಿಜಲಿಂಗಪ್ಪನವರಿಂದ ರಾಷ್ಟ್ರೀಯ ಸರ್ಕಾರದ ಪ್ರಸ್ತಾಪ

ದೇಶವನ್ನು ಆತಂಕಕಾರಿ ಪರಿಸ್ಥಿತಿಯಿಂದ ಪಾರುಮಾಡಲು ಭಾರತೀಯ ಜನತಾ ಪಕ್ಷವನ್ನು ಹೊರತುಪಡಿಸಿ ಮಿಕ್ಕೆಲ್ಲ ರಾಜಕೀಯ ಪಕ್ಷಗಳು ಜನಸಾಮಾನ್ಯರ ಜೀವನವನ್ನು ಸುಧಾರಿಸುವ ಕಾರ್ಯಕ್ರಮವೊಂದರ ಆಧಾರದ ಮೇಲೆ ಒಂದಾಗಿ ಪಕ್ಷರಹಿತ ಸರ್ಕಾರ ಒಂದನ್ನು ರಚಿಸುವುದು ಒಳ್ಳೆಯದೆಂದು ಹಿರಿಯ ಧುರೀಣ ಎಸ್. ನಿಜಲಿಂಗಪ್ಪನವರು ೩೧-೩-೯೧ರಂದು ಸಲಹೆ ಮಾಡಿದರು. ಬಿ. ಜೆ. ಪಿ.

ಶಿಸ್ತುಬದ್ಧ ಪಕ್ಷ ಎಂಬುದು ನಿಜ, ಆದರೆ ಶಿಸ್ತು ಆಚರಣೆಗಳನ್ನು ಕೋಮುವಾರು ಭಾವನೆಯ ಸಿದ್ಧಾಂತಕ್ಕೆ ಬಳಸಿಕೊಳ್ಳಬಾರದು. ರಾಮ ಒಬ್ಬ ಮಹಾಪುರುಷ ನಿಜ. ಆತನ ಹೆಸರನ್ನು ಏತಕ್ಕೆ ದುರುಪಯೋಗಪಡಿಸಿಕೊಳ್ಳಬೇಕೆಂದು ಅವರು ಕೇಳಿದರು. ಇಂತಹ ಆತಂಕಕಾರಿ ಸನ್ನಿವೇಶದಲ್ಲಿ ಕಾಂಗ್ರೆಸ್ (ಐ) ಸೇರಿದಂತೆ ಎಲ್ಲಾ ರಾಜಕೀಯ ಪಕ್ಷಗಳು ಒಂದೇ ವೇದಿಕೆಯ ಮೇಲೆ ಸೇರಲಿ, ಚುನಾವಣೆಯಲ್ಲಿ ಗೆದ್ದರೂ ಯಾವುದೇ ಅಧಿಕಾರ ಸ್ಥಾನಗಳನ್ನು ಒಪ್ಪಿಕೊಳ್ಳುವುದಿಲ್ಲ, ಸಂವಿಧಾನದ ಉದಾತ್ತ ಧ್ಯೇಯಗಳಿಗೆ ಅನುಗುಣವಾಗಿ ನಡೆದುಕೊಳ್ಳುತ್ತೇನೆಂದು ಜನರಿಗೆ ಮುಚ್ಚಳಿಕೆ ಬರೆದುಕೊಡಲಿ ಎಂದು ಅವರು ಹೇಳಿದರು. ಈ ವಿಷಯ ರಾಜೀವ್ ಹತ್ಯೆಯ ನಂತರ ಮತ್ತೊಮ್ಮೆ ರಾಷ್ಟ್ರದ ಗಮನ ಸೆಳೆಯಿತು. ರಾಜೀವ್‌ಗಾಂಧಿ ಹತ್ಯೆಯ ಬಳಿಕ ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರು ರಾಷ್ಟ್ರೀಯ ಸರ್ಕಾರ ರಚಿಸುವ ಸಲಹೆಯನ್ನು ೨೩.೫.೯೧ ರಂದು ಎಲ್ಲಾ ಪಕ್ಷಗಳ ಮುಂದೆ ಇಟ್ಟರು. ರಾಷ್ಟ್ರೀಯ ರಂಗ, ಎಡರಂಗ, ಜನತಾದಳ (ಎಸ್), ಕಾಂಗ್ರೆಸ್ (ಐ) ಈ ಪ್ರಸ್ತಾಪವನ್ನು ವಿರೋಧಿಸಿದವು. ರಾಷ್ಟ್ರೀಯ ಸರ್ಕಾರ ರಚನೆಗೆ ಭಾರತೀಯ ಜನತಾ ಪಕ್ಷ ತನ್ನ ಒಲವನ್ನು ವ್ಯಕ್ತಪಡಿಸಿತು. ಆದರೆ ಈ ವಿಚಾರ ಅಷ್ಟಕ್ಕೇ ಮುಕ್ತಾಯವಾಯಿತು.

## ಚುನಾವಣಾ ಆಯೋಗದ ತಕರಾರುಗಳು

ಅಧಿಕಾರಿಗಳ ವರ್ಗಾವಣೆ ಬಗ್ಗೆ ಚುನಾವಣಾ ಆಯೋಗ ರಾಜ್ಯ ಸರ್ಕಾರದ ಸ್ಪಷ್ಟೀಕರಣ ಕೇಳಿತು. ರೈತರ ಸಾಲ ಮನ್ನಾ ಮತ್ತು ರಿಸರ್ವ್‌ಬ್ಯಾಂಕ್ ಹಾಗೂ ನಬಾರ್ಡ್‌ಗಳಿಗೆ ಕೊಟ್ಟಿರುವ ಮಾತು ಈಡೇರಿಕೆ ಬಗ್ಗೆ ಮುಖ್ಯಮಂತ್ರಿ ಬಂಗಾರಪ್ಪ ಚುನಾವಣಾ ಕಾಲದಲ್ಲಿ ನೀಡಿದ್ದ ಹೇಳಿಕೆ ಬಗ್ಗೆ ಆಯೋಗ ವಿವರಣೆ ಕೇಳಿತು. ಈ ಬಗ್ಗೆ ಮುಖ್ಯಮಂತ್ರಿಗಳು ಮಾರ್ಚ್ ತಿಂಗಳಲ್ಲಿ ವಿಧಾನ ಮಂಡಲದ ಅಧಿವೇಶನದಲ್ಲಿ ಘೋಷಣೆ ಮಾಡಿದ್ದು ಅದನ್ನೇ ಮತ್ತೆ ಹೇಳಿದ್ದಾರೆ ಎಂದು ರಾಜ್ಯ ಸರ್ಕಾರ ಚುನಾವಣಾ ಆಯೋಗಕ್ಕೆ ಸ್ಪಷ್ಟಪಡಿಸಿತು. ರಾಜ್ಯ ಸರ್ಕಾರದಲ್ಲಿ ಚುನಾವಣಾ ನೀತಿ ಸಂಹಿತೆ ಉಲ್ಲಂಘನೆ ಆಗಿಲ್ಲವೆಂದು ಚುನಾವಣಾ ಆಯೋಗ ೧೧.೫.೯೧ರಂದು ಅಭಿಪ್ರಾಯ ಪಟ್ಟಿತು. ಸಚಿವರಾದ ಅಜೀಜ್ ಸೇಠ್ ಮತ್ತು ಚಂದ್ರಪ್ರಭಾ ಅರಸ್‌ರವರು ಮೈಸೂರಿನಲ್ಲಿ ಕಾಂಗ್ರೆಸ್-ಐ ಕಾರ್ಯಕರ್ತರ ಸಭೆಗೆ ಸರ್ಕಾರಿ ಕಾರು ಬಳಸಿದರೆಂಬ ದೂರನ್ನು ಪರಿಶೀಲಿಸಿ ಚುನಾವಣಾ ಆಯೋಗ ಅವರಿಂದ ಸದರಿ ವೆಚ್ಚ ವಸೂಲು ಮಾಡುವಂತೆ ೨೬.೪.೯೧ ರಂದು ಆದೇಶಿಸಿತು. ಚುನಾವಣೆ ಪ್ರಯುಕ್ತ ಮೇ ೨೧ ರಿಂದ ೨೮ರವರೆಗೆ ಮದ್ಯ ಮಾರಾಟವನ್ನು ಪೂರ್ಣವಾಗಿ ನಿಲ್ಲಿಸಿದ ಚುನಾವಣಾ ಆಯೋಗದ ಕ್ರಮದ ಬಗ್ಗೆ ಬಂಗಾರಪ್ಪ ಅತೃಪ್ತಿ ವ್ಯಕ್ತಪಡಿಸಿದರು. ಹಾಗೂ ಈ ನಿರ್ಧಾರ ಮರುಪರಿಶೀಲಿಸಲು ಚುನಾವಣಾ ಆಯೋಗಕ್ಕೆ ಟೆಲೆಕ್ಸ್ ಕಳುಹಿಸಲಾಯಿತೆಂದು ೧೯.೫.೯೧ ರಂದು ವರದಿ ಆಯಿತು. ಚುನಾವಣಾ ಆಯೋಗ ಮಳೆಗಾಲದಲ್ಲಿ ಚುನಾವಣೆಗಳನ್ನು ನಿಗದಿ ಮಾಡಿದ್ದರ ಬಗ್ಗೆಯೂ ಕೂಡಾ ಮುಖ್ಯಮಂತ್ರಿ ಎಸ್. ಬಂಗಾರಪ್ಪ ಟೀಕಿಸಿದರು.

## ಹಿಂಸಾಚಾರ

ಏಪ್ರಿಲ್ ೩೦ ರಂದು ಹೊಳೇನರಸಿಪುರ ತಾಲ್ಲೂಕಿನ ಕಟ್ಟೆ ಹೊಸಹಳ್ಳಿ ಗ್ರಾಮದಲ್ಲಿ ಜನತಾ ಪಕ್ಷದ ಕಾರ್ಯಕರ್ತನ ಕೊಲೆ ಆಯಿತು. ಕಾಂಗ್ರೆಸ್ ಕಾರ್ಯಕರ್ತರು ಈ ಕೊಲೆ ಮಾಡಿದ್ದಾರೆಂದು ಆರೋಪಿಸಲಾಯಿತು. ಈ ಬಗ್ಗೆ ನಿಷ್ಪಕ್ಷಪಾತ ತನಿಖೆ ಮಾಡುವುದಾಗಿ ಮುಖ್ಯಮಂತ್ರಿ ಬಂಗಾರಪ್ಪ ತಿಳಿಸಿದರು. ದೇವೇಗೌಡರೇ ಇದಕ್ಕೆ ಕಾರಣ. ಅವರಿಗೆ ಚುನಾವಣೆ ನಿಲ್ಲಿಸುವುದು ಬೇಕಾಗಿದೆ. ಇಲ್ಲಿಗೆ ವಿಶೇಷ ಪೊಲೀಸ್ ಪಡೆ ನೇಮಿಸಬೇಕೆಂದು ಸಚಿವ ಪುಟ್ಟಸ್ವಾಮಿಗೌಡ ಒತ್ತಾಯಿಸಿದರು. ೧೮.೫.೯೧ರಂದು ಭಟ್ಕಳದಲ್ಲಿ ಚುನಾವಣಾ ಘರ್ಷಣೆ ನಡೆಯಿತು. ಭಾರೀ ಹಿಂಸಾಚಾರವಾಗಿ ಗೋಲೀಬಾರ್‌ಗೆ ಇಬ್ಬರು ಬಲಿಯಾದರು. ತಕ್ಷಣ ಸ್ಥಳಕ್ಕೆ ಭೇಟಿ ನೀಡಿದ ಮುಖ್ಯಮಂತ್ರಿ ಬಂಗಾರಪ್ಪ ಗಲಭೆಗಳಿಗೆ ಬಿ.ಜೆ.ಪಿ. ಕಾರಣ ಎಂದರು. ೨.೬.೯೧ರಂದು ಅಫಜಲಪುರದಲ್ಲಿ ಗುಲಬರ್ಗಾ ಜಿಲ್ಲಾ ಪಂಚಾಯತ್‌ನ ಜನತಾ ಪಕ್ಷದ ಸದಸ್ಯರ ಹತ್ಯೆ ಆಯಿತು. ಸಿ.ಬಿ.ಐ. ತನಿಖೆಗೆ ದೇವೇಗೌಡರು ಒತ್ತಾಯಿಸಿದರು.

## ಫಲಿತಾಂಶ

೧೨.೬.೯೧ ರಂದು ಉಡುಪಿ, ಶಿವಮೊಗ್ಗ, ಹಾಸನ, ಬೆಳಗಾವಿ, ಮಂಡ್ಯ, ಉತ್ತರ ಕನ್ನಡ, ಚಿಕ್ಕಮಗಳೂರು, ಚಿಕ್ಕೋಡಿ, ಮಂಗಳೂರು ಈ ಒಂಬತ್ತು ಕ್ಷೇತ್ರಗಳಲ್ಲಿ ಮತದಾನ ನಡೆಯಿತು. ಶೇಕಡಾ ೫೫ ರಷ್ಟು ಮತದಾನ ನಡೆಯಿತು. ೧೫-೬-೯೧ರಂದು ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ, ಬಳ್ಳಾರಿ, ದಾವಣಗೆರೆ, ಚಿತ್ರದುರ್ಗ, ತುಮಕೂರು, ಕೋಲಾರ, ಕನಕಪುರ ಬೆಂಗಳೂರು ಉತ್ತರ, ಬೆಂಗಳೂರು ದಕ್ಷಿಣ, ಬಾಗಲಕೋಟೆ, ಧಾರವಾಡ ಉತ್ತರ, ವಿಜಾಪುರ, ಚಾಮರಾಜನಗರ, ಮೈಸೂರು,

ಚಿಕ್ಕಬಳ್ಳಾಪುರ ಈ ೧೮ ಕ್ಷೇತ್ರಗಳಲ್ಲಿ ಮತನಾದ ನಡೆಯಿತು. ಶೇಕಡಾ ೫೦ ರಿಂದ ೫೫ ಪ್ರಮಾಣದಲ್ಲಿ ಮತದಾನ ಆಯಿತು. ೨೭ ಸ್ಥಾನಗಳಲ್ಲಿ ೨೨ ಸ್ಥಾನಗಳನ್ನು ಗಳಿಸುವಲ್ಲಿ ಕಾಂಗ್ರೆಸ್ (ಐ) ಪಕ್ಷ ಯಶಸ್ವಿಯಾಯಿತು. ಒಟ್ಟಾರೆ ಚಲಾವಣೆಯಾದ ಮತಗಳಲ್ಲಿ ೬೨,೫೮,೫೪೭ ಮತಗಳನ್ನು ಶೇಕಡಾ ೪೧.೯೮ ಪ್ರಮಾಣದಲ್ಲಿ ಅದು ಪಡೆಯಿತು. ನಾಲ್ಕು ಸ್ಥಾನ ಭಾರತೀಯ ಜನತಾ ಪಕ್ಷಕ್ಕೆ, ಒಂದು ಸ್ಥಾನ ಜನತಾದಳ (ಎಸ್)ಗೆ ದೊರೆಯಿತು. ಜನತಾದಳ ಒಂದೂ ಸ್ಥಾನ ಗಳಿಸಲಿಲ್ಲ. ಆದರೆ ಬಿಜೆಪಿ ಶೇಕಡಾ ೨೮.೬೮, ಜನತಾದಳ ಶೇಕಡಾ ೧೮.೫೫ ಮತ್ತು ಜನತಾದಳ (ಎಸ್) ಶೇಕಡಾ ೩.೯೫ ಮತಗಳನ್ನು ಗಳಿಸಿದ್ದು ಗಮನಾರ್ಹವಾದ ಸಾಧನೆ ಆಗಿತ್ತು. ಕರ್ನಾಟಕ ರಾಜ್ಯ ರೈತಸಂಘವೂ ಶೇಕಡಾ ೩.೦೪ ಮತಗಳನ್ನು ಗಳಿಸಿತು. ಇದು ಜನತಾದಳಕ್ಕೆ ಭಾರೀ ಹೊಡೆತ ನೀಡಿತ್ತು. ನವೆಂಬರ್‌ನಲ್ಲಿ ನಡೆದ ಧಾರವಾಡ ದಕ್ಷಿಣ ಕ್ಷೇತ್ರದ ಉಪಚುನಾವಣೆಯಲ್ಲಿ ಕಾಂಗ್ರೆ ಜಯಗಳಿಸಿ ತನ್ನ ಬಲವನ್ನು ೨೩ ಕ್ಕೆ ಏರಿಸಿಕೊಂಡಿತು. ಆದರೆ ಇಂದಿರಾ ಹತ್ಯೆಯ ನೆರಳಲ್ಲಿ ನಡೆದಿದ್ದ ಚುನಾವಣೆಗಳಲ್ಲಿ ೨೮ರಲ್ಲಿ ೨೭ ಸ್ಥಾನಗಳಿಸಿದ್ದ ಕಾಂಗ್ರೆಸ್-ಐ ರಾಜೀವ್ ಹತ್ಯೆಯ ನೆರಳಲ್ಲಿ ನಡೆದ ಈ ಚುನಾವಣೆಯಲ್ಲಿ ಮುನ್ನಡೆ ಸಾಧಿಸಲು ವಿಫಲವಾಯಿತೆಂದೇ ಹೇಳಬಹುದು. ಬಾಗಲಕೋಟೆಯಲ್ಲಿ ರಾಮಕೃಷ್ಣ ಹೆಗಡೆ ೨೧ ಸಾವಿರ ಮತಗಳ ಅಂತರದಿಂದ ಸೋತದ್ದು, ಮೈಸೂರಿನಲ್ಲಿ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ೧೬೯೦೩ ಮತಗಳಿಂದ ಪರಾಜಯ ಅನುಭವಿಸಿದ್ದು, ವಿರೋಧ ಪಕ್ಷಗಳ ಹಿನ್ನಡೆ ಎಂದೇ ಹೇಳಬಹುದು.

## ೧೯೯೪ರ ವಿಧಾನಸಭಾ ಚುನಾವಣೆ

೧೯೯೪ರ ವಿಧಾನಸಭಾ ಚುನಾವಣೆ ಕಾಂಗ್ರೆಸ್ (ಐ) ಪಕ್ಷದ ದೃಷ್ಟಿಯಿಂದ ಅತ್ಯಂತ ಪ್ರಮುಖವಾದ ಚುನಾವಣೆಯಾಗಿದೆ. ೧೯೮೯ರಲ್ಲಿ ಅಂದಿನ ಜನತಾದಳವನ್ನು ಭಾರಿ ಬಹುಮತದಿಂದ ಸೋಲಿಸಿ ಕಾಂಗ್ರೆಸ್ (ಐ) ರಾಜ್ಯದಲ್ಲಿ ಅಧಿಕಾರಕ್ಕೆ ಬಂದಿತು. ಅಂದು ಕಾಂಗ್ರೆಸ್ (ಐ) ಅಧ್ಯಕ್ಷರಾದ ವೀರೇಂದ್ರ ಪಾಟೀಲ್ ಅವರು ಸಹಜವಾಗಿ ಕಾಂಗ್ರೆಸ್ ಸರ್ಕಾರದ ಮುಖ್ಯಮಂತ್ರಿಗಳಾದರು. ಅವರು ಅನಿರೀಕ್ಷಿತವಾಗಿ ಅನಾರೋಗ್ಯಕ್ಕೆ ಈಡಾದಾಗ ಪಕ್ಷದ ಅಧ್ಯಕ್ಷರಾದ ರಾಜೀವ್‌ಗಾಂಧಿ ಅವರು ೧೯೯೦ರಲ್ಲಿ ಬಂಗಾರಪ್ಪನವರನ್ನು ಮುಖ್ಯಮಂತ್ರಿಯನ್ನಾಗಿ ಮಾಡಿದರು. ಈ ಮಧ್ಯೆ ೧೯೯೧ರಲ್ಲಿ ಲೋಕಸಭೆಗೆ ಮಧ್ಯಂತರ ಚುನಾವಣೆ ನಡೆದು ಕೇಂದ್ರದಲ್ಲಿ ಕಾಂಗ್ರೆಸ್ (ಐ) ಸರ್ಕಾರ ಅಸ್ತಿತ್ವಕ್ಕೆ ಬಂತು. ಪಿ. ವಿ. ನರಸಿಂಹರಾವ್ ಕಾಂಗ್ರೆಸ್ (ಐ) ಸರ್ಕಾರದ ಪ್ರಧಾನ ಮಂತ್ರಿಗಳಾದರು. ೧೯೯೨ರಲ್ಲಿ ಪಕ್ಷದ ಆಂತರಿಕ ಹೊಯ್ದಾಟದಿಂದಾಗಿ ಬಂಗಾರಪ್ಪನವರು ಅಧಿಕಾರ ಕಳೆದುಕೊಂಡು ಎಂ. ವೀರಪ್ಪ ಮೊಯಿಲಿ ಅವರು ಮುಖ್ಯಮಂತ್ರಿಗಳಾದರು. ಎಸ್. ಬಂಗಾರಪ್ಪನವರು ತಮ್ಮ ಅಸಮಾಧಾನವನ್ನು ೧೯೯೪ರ ಚುನಾವಣೆಯಲ್ಲಿ ಕೆಸಿಪಿ (ಕರ್ನಾಟಕ ಕಾಂಗ್ರೆಸ್ ಪಕ್ಷ)ಯನ್ನು ಸ್ಥಾಪಿಸುವುದರ ಮೂಲಕ ಹೊರಹಾಕಿದರು. ವೀರಪ್ಪ ಮೊಯಿಲಿ ಅವರ ನೇತೃತ್ವದಲ್ಲಿ ಕಾಂಗ್ರೆ ಸರ್ಕಾರ ಈ ಚುನಾವಣೆಯನ್ನು ಎದುರಿಸಿತು. ೧೯೯೨ರ ಡಿಸೆಂಬರ್ ೬ರಂದು ಬಾಬ್ರಿ ಮಸೀದಿಯ ಧ್ವಂಸವಾದ ಕಾರಣ ಅಲ್ಪಸಂಖ್ಯಾತರು ಪಿ. ವಿ. ನರಸಿಂಹರಾವ್ ನೇತೃತ್ವದ ಕಾಂಗ್ರೆ ಸರ್ಕಾರದ ವಿರುದ್ಧ ತಮ್ಮ ಅಸಂತೃಪ್ತಿಯನ್ನು ವ್ಯಕ್ತಪಡಿಸಿದರು. ರಾಜ್ಯದಲ್ಲಿ ಐದು ವರ್ಷಗಳಲ್ಲಿ ಮೂರು ಮುಖ್ಯಮಂತ್ರಿಗಳು ಬದಲಾದ ಬಗ್ಗೆ ಮತದಾರರಲ್ಲಿ ಸಣ್ಣ ಪ್ರಮಾಣದ ಅತೃಪ್ತಿಯಿತ್ತು. ವೀರಪ್ಪ ಮೊಯಿಲಿ ಅವರು ಅತ್ಯಂತ ಹಿಂದುಳಿದ ಸಮುದಾಯದಿಂದ ಬಂದವರಾಗಿದ್ದು ಅವರಿಗೆ ಬಹುಸಂಖ್ಯಾತ ಸಮುದಾಯದಿಂದ ಪೂರ್ಣ ಬೆಂಬಲವಿರಲಿಲ್ಲ. ಚಿನ್ನಪ್ಪರೆಡ್ಡಿ ಆಯೋಗವನ್ನು ವೀರಪ್ಪ ಮೊಯಿಲಿ ಅವರು ಅನುಷ್ಠಾನಗೊಳಿಸಿದ ಕಾರಣಕ್ಕಾಗಿ ರಾಜ್ಯದ ಎರಡು ಬಲಾಢ್ಯ ಕೋಮಿನವರು ಇವರ ವಿರುದ್ಧ ಅತೃಪ್ತಿ ಹೊಂದಿದ್ದರು. ಜನತಾದಳ ರಾಮಕೃಷ್ಣ ಹೆಗಡೆ ಹಾಗೂ ದೇವೇಗೌಡರ ನೇತೃತ್ವದಲ್ಲಿ ಬೇರೆ ಬೇರೆಯಾಗಿದ್ದು ಈ ಚುನಾವಣಾ ಪೂರ್ವದಲ್ಲಿ ಅವೆರಡೂ ಪಕ್ಷಗಳು ಒಂದಾಗಿ ದೇವೇಗೌಡರು ಜನತಾದಳದ ಅಧ್ಯಕ್ಷರಾದರು. ಒಕ್ಕಲಿಗ ಜನಾಂಗದ ನಾಯಕರಾದ ದೇವೇಗೌಡರು ರಾಜ್ಯದ ಮುಂದಿನ ಮುಖ್ಯಮಂತ್ರಿ ಎಂದು ಕರ್ನಾಟಕದ ದಕ್ಷಿಣ ಭಾಗದಲ್ಲಿ ಜನತಾದಳ ಜೋರಾಗಿ ಪ್ರಚಾರ ಮಾಡಿತು. ರಾಮಕೃಷ್ಣ ಹೆಗಡೆ ಅವರು ಹಾಗೂ ಇತರರು ಉತ್ತರದಲ್ಲಿ ಮತ್ತೊಂದು ಬಲಾಢ್ಯ ಸಮುದಾಯವನ್ನು ಸೆಳೆಯಲು ಬಿರುಸಿನ ಪ್ರಚಾರ ಕೈಗೊಂಡರು. ಹೀಗೆ ಈ ಚುನಾವಣೆ ಸಂದರ್ಭದಲ್ಲಿ ಕಾಂಗ್ರೆ ವಿರುದ್ಧ ಎಲ್ಲ ಶಕ್ತಿಗಳು ಒಂದಾಗಿ ಹೋರಾಟ ಮಾಡಿದ್ದನ್ನು ವಿಶೇಷವಾಗಿ ಗುರುತಿಸಬಹುದು.

'ಚೆಲುವ ಕನ್ನಡನಾಡಿನ ಸಮಗ್ರ ಅಭಿವೃದ್ಧಿಗೆ ಸಮರ್ಥ ಕಾರ್ಯತಂತ್ರ' ಎಂಬ ಹೆಸರಿನಲ್ಲಿ ಚುನಾವಣೆ ಪ್ರಣಾಳಿಕೆ ಪ್ರಕಟವಾಗಿದೆ. ಸುಮಾರು ೧೫೦ ಪುಟಗಳ ಸುದೀರ್ಘವಾದ ಪ್ರಣಾಳಿಕೆಯ ಪುಸ್ತಕವಿದು. ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಈ ತನಕ ಮಾಡಿನ ಸಾಧನೆಯ ವಿವರಗಳನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

## ನೀರಾವರಿ : ಹೆಚ್ಚುವರಿಯಾಗಿ ೧೬.೫ ಲಕ್ಷ ಹೆ. ಭೂಮಿಗೆ ನೀರಾವರಿ ಸೌಲಭ್ಯ

★ ಐದು ವರುಷಗಳಲ್ಲಿ ಬಾಕಿ ಉಳಿದಿರುವ ಮಧ್ಯಮ ಹಾಗೂ ಸಣ್ಣ ಪ್ರಮಾಣದ ಎಲ್ಲಾ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸುವುದು.

★ ಕ್ರಿ.ಶ. ೨೦೦೦ ದ ವೇಳೆಗೆ ಬಚಾವತ್ ತೀರ್ಪಿನ ಅನ್ವಯ ಕೃಷ್ಣಾನದಿಯ ನೀರನ್ನು ಸಂಪೂರ್ಣವಾಗಿ ಬಳಸಿಕೊಳ್ಳುವುದು.

★ ಕೃಷ್ಣಾ ಕೊಳದಲ್ಲಿ ಈಗಾಗಲೇ ಕೈಗೊಂಡ ಹದಿನಾರು ಯೋಜನೆಗಳನ್ನು ಪೂರ್ಣಗೊಳಿಸುವುದು.

★ ಕಾವೇರಿ ಕೊಳ್ಳದಲ್ಲಿ ಕೈಗೊಂಡ ಹತ್ತೊಂಬತ್ತು ಭಾರಿ ಹಾಗೂ ಮಧ್ಯಮ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸುವುದು.

★ ಗೋದಾವರಿ ನದಿ ಪ್ರದೇಶದಲ್ಲಿ ಮೂರು ಹೊಸ ಯೋಜನೆಗಳನ್ನು ಸ್ಥಾಪಿಸುವುದು.

★ ೭೫ ಕೋಟಿ ರೂ. ವಾರ್ಷಿಕ ಬಡ್ಜೆಟ್ ಅನುದಾನದೊಂದಿಗೆ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ಕಾಡಾ) ಸ್ಥಾಪನೆ.

★ ೧ ಲಕ್ಷ ಕೊಳವೆ ಬಾವಿಗಳನ್ನು ೫ ವರ್ಷಗಳಲ್ಲಿ ತೆಗೆಯುವುದು.

★ ಹನಿ ಮತ್ತು ತುಂತುರು ನೀರಾವರಿಗೆ ಆದ್ಯತೆ.

★ ಬಯಲುಸೀಮೆ ಅಭಿವೃದ್ಧಿ ಮಂಡಳಿ ರಚನೆ - ಅದರ ಮೂಲಕ ಕೆರೆಗಳಲ್ಲಿ ಹೊಳೆತ್ತುವ ಕಾರ್ಯಕ್ರಮ.

## ವಿದ್ಯುತ್

★ ಮುಂದಿನ ಐದು ವರ್ಷಗಳಲ್ಲಿ ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು ೯ ಸಾವಿರ ಮೆ. ವ್ಯಾ.ಗೆ ಹೆಚ್ಚಿಸುವುದು. ಇದಕ್ಕೆ ೧೮,೦೦೦ ಕೋಟಿ ರೂ.ಗಳ ಬಂಡವಾಳ ಹೂಡಿಕೆ.

★ ಕ್ರಿ.ಶ. ೨೦೦೦ ದ ವೇಳೆಗೆ ಎಲ್ಲಾ ವಿ.ಐ.ಪಿ. ಸೆಟ್‌ಗಳಿಗೆ ವಿದ್ಯುತ್ ಪೂರೈಕೆ.

★ ಅಸಾಂಪ್ರದಾಯಕ ಇಂಧನ ಮೂಲಗಳ ಬಳಕೆ ಹೆಚ್ಚಿಸುವುದು.

## ಸಾರಿಗೆ ಸಂಪರ್ಕ

★ ರಾಜ್ಯದ ಹೆದ್ದಾರಿಗಳನ್ನು ರಾಷ್ಟ್ರೀಯ ಹೆದ್ದಾರಿಗಳ ಮಟ್ಟಕ್ಕೇರಿಸುವುದು.

★ ಆಂಧ್ರ ಪ್ರದೇಶದ ಗುಂತಕಲ್-ಬಳ್ಳಾರಿ ಮಾರ್ಗವಾಗಿ ಕಾರವಾರವನ್ನು ಸಂಪರ್ಕಿಸುವ ಏಳನೆಯ ಸಂಖ್ಯೆ ರಾಷ್ಟ್ರೀಯ ಹೆದ್ದಾರಿಯನ್ನು ೧೭ ಸಂಖ್ಯೆಯ ರಾಷ್ಟ್ರೀಯ ಹೆದ್ದಾರಿಗೆ ಜೋಡಿಸುವುದು.

★ ಬೆಂಗಳೂರು - ಮೈಸೂರು ಹೆದ್ದಾರಿಯನ್ನು ಊಟಿ-ಕೊಯಮತ್ತೂರು ಮೂಲಕ ರಾಷ್ಟ್ರೀಯ ಹೆದ್ದಾರಿ ಸಂಖ್ಯೆಯ ೪೭ಕ್ಕೆ ಜೋಡಣೆ.

★ ಮೈಸೂರು, ಶ್ರೀರಂಗಪಟ್ಟಣ, ಗುಲ್ಬರ್ಗಾ, ಹುಮ್ನಾಬಾದ್ ರಸ್ತೆಗಳು ರಾಷ್ಟ್ರೀಯ ಹೆದ್ದಾರಿ ೯ ಕ್ಕೆ ಸಂಪರ್ಕ.

★ ಬೆಂಗಳೂರು, ಮೈಸೂರು, ಮಂಗಳೂರು ಮೂಲಕ ರಾಷ್ಟ್ರೀಯ ಹೆದ್ದಾರಿ ೧೭ಕ್ಕೆ ಸಂಪರ್ಕ.

★ ಬೆಳಗಾವಿ, ಬಾಗಲಕೋಟೆ, ಮೆಹಬೂಬ್ ನಗರಗಳ ಮೂಲಕ ಆಂಧ್ರ ಪ್ರದೇಶಕ್ಕೆ ಸಂಪರ್ಕ.

★ ರಾಷ್ಟ್ರೀಯ ಹೆದ್ದಾರಿ ೧೭ರಲ್ಲಿರುವ ಅಂಕೋಲವನ್ನು ಹುಬ್ಬಳ್ಳಿ ಬೀಳಗಿ ಮೂಲಕ ರಾಷ್ಟ್ರೀಯ ಹೆದ್ದಾರಿ ೧೩ ಕ್ಕೆ ಬಿಜಾಪುರದಲ್ಲಿ ಸೇರ್ಪಡೆ.

★ ಪ್ರಮುಖ ಸ್ಥಳಗಳಲ್ಲಿ ಟ್ರಕ್ ನಿರ್ಮಾಣ.

★ ಮೈಸೂರು, ಬೆಂಗಳೂರು ನಡುವೆ ನಾಲ್ಕು ಪಥದ ಹೆದ್ದಾರಿ ನಿರ್ಮಾಣ.

★ ರಾಜ್ಯಾದ್ಯಂತ ೧೦,೦೦೦ಕಿ.ಮೀ. ರಸ್ತೆಗಳಿಗೆ ಡಾಂಬರೀಕರಣ.

## ವಿಮಾನ ನಿಲ್ದಾಣ

★ ಬೆಂಗಳೂರಿಗೆ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ.

★ ಮಂಗಳೂರಿನಲ್ಲಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಸ್ಥಾಪನೆಗೆ ಕ್ರಮ.

★ ಮೈಸೂರು, ಹಾಸನ, ಬಳ್ಳಾರಿ, ಹುಬ್ಬಳ್ಳಿ, ಬೆಳಗಾಂ, ಗುಲ್ಬರ್ಗಾ ಹಾಗೂ ಬಿಜಾಪುರಗಳಲ್ಲಿ ಬೋಯಿಂಗ್ ೭೩೭ ವಿಮಾನ ಇಳಿಯುವಂತೆ ಮಾಡುವುದು.

## ರೈಲ್ವೆ

★ ಉತ್ತರ ಕರ್ನಾಟಕದ ಅಭಿವೃದ್ಧಿಗೆ ಹುಬ್ಬಳಿ-ಕಾರವಾರ ರೈಲುಮಾರ್ಗ ನಿರ್ಮಾಣ.
★ ಅರಸಿಕೆರೆ-ಮಂಗಳೂರು, ಕೊಪ್ಪಳ-ಗದಗ್ ರೈಲು ಮಾರ್ಗ ಬ್ರಾಡ್‌ಗೇಜಿಗೆ ಪರಿವರ್ತನೆ.
★ ಮೈಸೂರು, ಕೊಡಗು, ಮಂಗಳೂರು ಹಾಗೂ ತಾಳಗುಪ್ಪ ರೈಲು ಮಾರ್ಗಗಳ ಅಭಿವೃದ್ಧಿ.

## ದೂರ ಸಂಪರ್ಕ

★ ಕರ್ನಾಟಕ ರಾಜ್ಯವನ್ನು ದೂರ ಸಂಪರ್ಕ ಸೌಲಭ್ಯವನ್ನು ರಾಜ್ಯವನ್ನಾಗಿ ಮಾಡಲು ರಾಜ್ಯದ ಎಲ್ಲ ಹಳ್ಳಿಗಳಿಗೂ ಕನಿಷ್ಠ ಒಂದು ದೂರವಾಣಿ ಸೌಲಭ್ಯ ದೊರೆಯುವಂತೆ ಮಾಡುವುದು.

## ಬಂದರು

★ ಮಂಗಳೂರು ಬಂದರನ್ನು ವರ್ಷವಿಡೀ ಬಳಸಬಹುದಾದ ಸರ್ವಋತು ಬಂದರನ್ನಾಗಿ ಮಾಡುವುದು.
★ ಕಾರವಾರ ಬಂದರಿನ ಸಂಪೂರ್ಣ ಅಭಿವೃದ್ಧಿ.
★ ಸಮುದ್ರದ ಕೊರೆತವನ್ನು ತಪ್ಪಿಸುವುದು.

## ವಾಣಿಜ್ಯ ಹಾಗೂ ಕೈಗಾರಿಕೆ

★ ಮುಂದಿನ ೫ ವರ್ಷಗಳಲ್ಲಿ ರಾಜ್ಯದ ಕೈಗಾರಿಕಾ ಕ್ಷೇತ್ರಕ್ಕೆ ಒಂದು ಲಕ್ಷ ಬಂಡವಾಳಗಾರರನ್ನು ಆಕರ್ಷಿಸಲು ಕ್ರಮ.
★ ಬೆಂಗಳೂರಿನಲ್ಲಿ ಮಾಹಿತಿ ತಂತ್ರಜ್ಞಾನದ ಉದ್ಯಾನ (Information & Technology Park)ದ ಅಭಿವೃದ್ಧಿ.
★ ಐದು ವರ್ಷಗಳಲ್ಲಿ ಒಂದು ಲಕ್ಷ ಉದ್ಯೋಗ ಸೃಷ್ಟಿ.
★ ಬೆಂಗಳೂರು ನಗರಕ್ಕಿರುವ ಏಷ್ಯಾದ ಖಂಡದ ಸಿಲಿಕಾನ್ ಕಣಿವೆ ಎಂಬ ಹೆಸರನ್ನು ಮತ್ತಷ್ಟು ಉಜ್ವಲಗೊಳಿಸುವುದು.
★ ೫ ಸಕ್ಕರೆ ಕಾರ್ಖಾನೆಗಳ ಸ್ಥಾಪನೆ.

## ಗ್ರಾಮಜೀವನ ಸಮೃದ್ಧಿ

★ ಐದು ವರ್ಷಗಳಲ್ಲಿ ೧೦ ಲಕ್ಷ ಹೆಕ್ಟೇರು ಭೂಮಿಯನ್ನು ಜಲ ನಿರ್ವಹಣಾ ಕಾರ್ಯಕ್ರಮದ ವ್ಯಾಪ್ತಿಗೆ ತರುವುದು.
★ ಕೃಷಿ ಅಭಿವೃದ್ಧಿ ಕುರಿತಂತೆ ಸತೀಶ್ ಚಂದ್ರನ್ ಮತ್ತು ದ್ವಾರಕಾನಾಥ್ ಸಮಿತಿಗಳ ಶಿಫಾರಸ್ಸನ್ನು ಅನುಷ್ಠಾನ ಮಾಡುವುದು.
★ ಕ್ಷಾಮ ಹಾಗೂ ಪ್ರವಾಹ ನಿಯಂತ್ರಣಕ್ಕೆ ಪರಿಣಾಮಕಾರಿ ಕಾರ್ಯಕ್ರಮ.

## ಸಾಮಾಜಿಕ ಭದ್ರತೆ

★ ಸಣ್ಣ ಹಾಗೂ ಅತಿ ಸಣ್ಣ ರೈತರಿಗೆ ಬೆಳೆ ವಿಮೆ, ಜೀವವಿಮೆ ಹಾಗೂ ಆರೋಗ್ಯ ವಿಮೆ ಕಾರ್ಯಕ್ರಮಗಳನ್ನು ಜಾರಿಗೆ ತರುವುದು.
★ ಈರುಳ್ಳಿ, ಆಲೂಗಡ್ಡೆ, ಮೆಣಸಿನಕಾಯಿ ಮೊದಲಾದ ಬೆಳೆಗಳನ್ನು ಬೆಳೆಯುವ ರೈತರ ಅನುಕೂಲಕ್ಕಾಗಿ ಸಣ್ಣ ವಸ್ತುಗಳ ಮಂಡಳಿ ರಚನೆ.
★ ಕೃಷಿ ಉತ್ಪನ್ನಗಳ ಕುರಿತು ರಾಜ್ಯಮಟ್ಟದ ಸಲಹಾ ಸಮಿತಿ ಸ್ಥಾಪನೆ.
★ ತೋಟಗಾರಿಕಾ ಉತ್ಪನ್ನಗಳ ರಫ್ತಿಗೆ ಉತ್ತೇಜನ.
★ ಪುಷ್ಪೋದ್ಯಮ ಹಾಗು ತೋಟಗಾರಿಕೆಗೆ ಅನುಕೂಲವಾಗುವಂತೆ ಶೈತ್ಯಾಗಾರಗಳ ಸ್ಥಾಪನೆ ಹಾಗೂ ಮಾರುಕಟ್ಟೆ ಸೌಲಭ್ಯದ ವಿಸ್ತರಣೆ.
★ ಉತ್ತರ ಕರ್ನಾಟಕದಲ್ಲಿ ರೇಷ್ಮೆ ನೂಲು ಸುತ್ತುವ ಕಾರ್ಯಕ್ಕೆ ಉತ್ತೇಜನ.

## ಅರಣ್ಯ

★ ಖಾಸಗಿಯವರ ಸಹಯೋಗವಲ್ಲಿ ಅರಣ್ಯೀಕರಣದ ಕಾರ್ಯಕ್ರಮಕ್ಕೆ ಚಾಲನೆ.
★ ರಾಜ್ಯದ ನಿರುದ್ಯೋಗಿಗಳನ್ನು ಅರಣ್ಯೀಕರಣದ ಯೋಜನೆಯಲ್ಲಿ ಸಮರ್ಥವಾಗಿ ಬಳಸಿಕೊಂಡು ಅವರಿಗೆ ಆರ್ಥಿಕ ಸವಲತ್ತು ಕೊಡುವುದು.

**ಗ್ರಾಮಾಭಿವೃದ್ಧಿ**

★ ಗ್ರಾಮಗಳಿಗೆ ಭೂ ಯೋಜನೆ.

★ ಗೋಮಾಳ ಹಾಗೂ ಪಾಳುಭೂಮಿಯನ್ನು ಅಭಿವೃದ್ಧಿಪಡಿಸಿ ಪಶುಸಂಗೋಪನೆಗೆ ಸಹಾಯ ಮಾಡುವುದು.

★ ಗ್ರಾಮಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸುವುದು.

★ ಪ್ರತಿಯೊಂದು ಹಳ್ಳಿಯ ಹಳ್ಳಿಗನಿಗೂ ಪ್ರತಿದಿನ ತಲಾ ಇಪ್ಪತ್ತು ಲೀಟರ್ ಶುದ್ಧ ನೀರು ಒದಗಿಸುವ ಗುರಿ ಹೊಂದಲಾಗಿದೆ.

★ ಗ್ರಾಮೀಣ ಪ್ರದೇಶಗಳಿಗೆ ಸುಲಭ ಶೌಚಾಲಯದ ವಿಸ್ತರಣೆ.

**ನಗರಾಭಿವೃದ್ಧಿ**

★ ಬೆಂಗಳೂರು ನಗರ ಸಂಚಾರ ಹಾಗೂ ಸಾರಿಗೆ ಸೌಲಭ್ಯ, ವರ್ತುಲರಸ್ತೆ, ನಿವೇಶನ ಹಾಗೂ ಇತರ ಸೌಲಭ್ಯಗಳ ಕಲ್ಪನೆಗೆ ಬೆಂಗಳೂರು ಮೆಗಾಸಿಟಿ ಯೋಜನೆ ಕೈಗೆತ್ತಿಕೊಳ್ಳುವುದು.

★ ಬೆಂಗಳೂರಿನ ಕುಡಿಯುವ ನೀರಿನ ಸೌಲಭ್ಯ ಹೆಚ್ಚಿಸಲು ಕಾವೇರಿ ४ನೇ ಹಂತದ ಯೋಜನೆಯನ್ನು ಪೂರ್ಣಗೊಳಿಸುವುದು.

★ ೫ ವರ್ಷಗಳಲ್ಲಿ ನಗರ ಪ್ರದೇಶದಲ್ಲಿ ಸಾಕಾಗುವಷ್ಟು ಕುಡಿಯುವ ನೀರು ಒದಗಿಸುವುದು.

★ ನಗರ ಪ್ರದೇಶದ ಪ್ರತಿಯೊಂದು ಪ್ರದೇಶದಲ್ಲೂ ಸುಲಭ ಶೌಚಾಲಯವನ್ನು ಒದಗಿಸುವುದು.

★ ಕ್ರಿ.ಶ. ೨೦೦೦ದ ವೇಳೆಗೆ ಎಲ್ಲಾ ಕೊಳಗೇರಿ ನಿವಾಸಿಗಳಿಗೆ ಕುಡಿಯುವ ನೀರು, ವಿದ್ಯುತ್, ಬೀದಿ ದೀಪ, ಹಾಗೂ ಒಳಚರಂಡಿ ವ್ಯವಸ್ಥೆಯನ್ನು ಒದಗಿಸುವುದು.

**ವಸತಿ**

★ ಮಧ್ಯಮ ವರ್ಗದವರಿಗೆ ಅನುಕೂಲವಾಗುವಂತೆ ಕೃಷಿ ಭೂಮಿಯನ್ನು ಕೃಷಿಯೇತರ ಉಪಯೋಗಕ್ಕೆ ಪರಿವರ್ತಿಸಲು ಪಡೆಯಬೇಕಾದ ನಿಬಂಧನೆಯನ್ನು ನಿಲ್ಲಿಸಲಾಗುವುದು

★ ಪ್ರತಿವರ್ಷ ದುರ್ಬಲ ವರ್ಗದವರಿಗೆ ೩ ಲಕ್ಷ ನಿವೇಶನ ಹಾಗೂ ೨ ಲಕ್ಷ ಮನೆಗಳನ್ನು ಒದಗಿಸಲಾಗುವುದು

★ ಸರ್ಕಾರಿ ವಲಯದಲ್ಲಿರುವಂತೆ ಸಾರ್ವಜನಿಕ ಹಾಗೂ ಖಾಸಗಿ ವಲಯದ ನೌಕರಿಗೂ ಸಾಲ ಮಂಜೂರು ಮಾಡಲು ಸೂಕ್ತ ವ್ಯವಸ್ಥೆ ಮಾಡುವುದು

**ಸಾಮಾಜಿಕ ಕಲ್ಯಾಣ**

★ ಪರಿಶಿಷ್ಟ ಜಾತಿ, ಪಂಗಡ ಹಾಗೂ ಹಿಂದುಳಿದ ಸಮುದಾಯಗಳಿಗೆ ಶೈಕ್ಷಣಿಕ, ಸಾಮಾಜಿಕ ಹಾಗೂ ಆರ್ಥಿಕ ಸಹಾಯ ಕೊಡಲು ತೀವ್ರ ಕ್ರಮ ಕೈಗೊಳ್ಳುವುದು. ಈ ಸಮುದಾಯದಲ್ಲಿರುವ ಭೂರಹಿತ ಕುಟುಂಬಕ್ಕೆ ತಲಾ ಒಂದು ಹೆಕ್ಟೇರ್‌ನಷ್ಟು ಭೂಮಿಯನ್ನು ಒದಗಿಸುವುದು.

★ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ.

**ಪರಿಶಿಷ್ಟರಿಗೆ ಪ್ರತಿವರ್ಷ ೧ ಲಕ್ಷ ಮನೆಗಳ ಹಂಚಿಕೆ**

★ ವಿಶೇಷ ಘಟಕ ಯೋಜನೆ ಹಾಗೂ ಗುಡ್ಡಗಾಡು ಯೋಜನೆಗಳಡಿಯಲ್ಲಿ ೫ ವರ್ಷಗಳಲ್ಲಿ ೧೨ ಲಕ್ಷ ಫಲಾನುಭವಿಗಳಿಗೆ ಸೌಲಭ್ಯ.

★ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ರಾಜ್ಯ ಆಯೋಗ ಸ್ಥಾಪನೆ

★ ಲಂಬಾಣಿ ಅಭಿವೃದ್ಧಿ ನಿಗಮ ಸ್ಥಾಪನೆ.

★ ಜೇನು ಕುರುಬ, ಕೊರಗ ಹಾಗೂ ಸೋಲಿಗರಿಗೆ ವಿಶೇಷ ಯೋಜನೆಗಳು.

★ ಪರಿಶಿಷ್ಟ ಕುಶಲ ಕರ್ಮಿಗಳಿಗೆ ವಿಶೇಷ ಕಾರ್ಯಕ್ರಮ.

**ಹಿಂದುಳಿದ ವರ್ಗಗಳು**

★ ಹಿಂದುಳಿದ ವರ್ಗ ನಿಗಮದಿಂದ ೨ ಲಕ್ಷ ಹಿಂದುಳಿದವರಿಗೆ ವಿವಿಧ ಕಾರ್ಯಕ್ರಮ

★ ಹಿಂದುಳಿದ ವರ್ಗ ಮತ್ತು ಅಲ್ಪ ಸಂಖ್ಯಾತರ ಅಭಿವೃದ್ಧಿಗೆ ಕ್ರಿಯಾ ಯೋಜನೆ ತಯಾರಿ, ೧೦ ಲಕ್ಷ ಜನರಿಗೆ ಪ್ರಯೋಜನ.

★ ಹಿಂದುಳಿದವರ ವಾಸಸ್ಥಾನದ ಅಭಿವೃದ್ಧಿಗೆ 'ಬೆಳ್ಳಿಬೆಳಕು' ಯೋಜನೆ ಮುಂದುವರಿಕೆ.
★ ಹಿಂದುಳಿದ ವರ್ಗಗಳ ಯುವಕರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ತರಬೇತಿ.

**ಅಲ್ಪ ಸಂಖ್ಯಾತರು**

★ ಅಲ್ಪ ಸಂಖ್ಯಾತ ಆಯೋಗಕ್ಕೆ ಶಾಸನ ಬದ್ಧ ಸ್ಥಾನಮಾನ.
★ ಶ್ರೀರಂಗಪಟ್ಟಣದಲ್ಲಿ ಟಿಪ್ಪುಸುಲ್ತಾನ್ ಸೈನಿಕಶಾಲೆ ಸ್ಥಾಪನೆಗೆ ಕಾರ್ಯಕ್ರಮ.
★ ೫ ವರ್ಷಗಳಲ್ಲಿ ೭೫ ಸಾವಿರ ಅಲ್ಪ ಸಂಖ್ಯಾತ ಫಲಾನುಭವಿಗಳಿಗೆ ಸಹಾಯ.
★ ವಕ್ಫ್ ಅಭಿವೃದ್ಧಿಗೆ ಸಹಾಯ.
★ ವಾರ್ಷಿಕ ೬,೪೦೦ ರೂಪಾಯಿಗಿಂತ ಕಡಿಮೆ ಆದಾಯವಿರುವ ಅಲ್ಪಸಂಖ್ಯಾತರಿಗೆ ಮನೆ ಸೌಲಭ್ಯ.
★ ೧೫,೦೦೦ ಜನಸಂಖ್ಯೆಯಿರುವ ಅಲ್ಪಸಂಖ್ಯಾತ ತಾಲ್ಲೂಕು ಕೇಂದ್ರಗಳಲ್ಲಿ ಭಾಷಾ ಅಲ್ಪಸಂಖ್ಯಾತರ ಪ್ರೌಢಶಾಲೆ.
★ ಕೋಮುಗಲಭೆಗೆ ತುತ್ತಾದವರಿಗೆ ಪುನರ್‌ವಸತಿಗೆ ನಿಧಿ ಸ್ಥಾಪನೆ.
★ ಸಣ್ಣ ಪುಟ್ಟ ದೇವರುಗಳ ಹಾಗೂ ದುರ್ಬಲವರ್ಗದ ಜನ ಪೂಜಿಸುವ ದೇವಾಲಯಗಳ ಅಭಿವೃದ್ಧಿಗೆ 'ಆರಾಧನಾ' ಯೋಜನೆ.

**ಸಾರಾಯಿ ರದ್ದು**

★ ೧೯೯೫ ಜುಲೈ ೧ ರಿಂದ ಸಾರಾಯಿ ತಯಾರಿಕೆ ಹಾಗೂ ಮಾರಾಟ ಸಂಪೂರ್ಣವಾಗಿ ರದ್ದು.

**ಮಹಿಳೆ ಮತ್ತು ಮಗು**

★ ರಾಜ್ಯ ಮಹಿಳಾ ಆಯೋಗ ಸ್ಥಾಪನೆ.
★ ೬ ಲಕ್ಷ ಮಹಿಳೆಯರಿಗೆ ಸ್ವಯಂ ಉದ್ಯೋಗ ಸೌಲಭ್ಯ.
★ ೧ ಲಕ್ಷ ಜನಸಂಖ್ಯೆ ಇರುವ ಸ್ಥಳಗಳಲ್ಲಿ ವರ್ಕಿಂಗ್ ಮಹಿಳಾ ಹಾಸ್ಟೆಲ್‌ಗಳ ಸ್ಥಾಪನೆ.
★ ಸರ್ಕಾರಿ ಪಾಲಿಟೆಕ್ನಿಕ್, ಐಟಿಐ ಮತ್ತು ವೃತ್ತಿಪರ ಶಿಕ್ಷಣಗಳಲ್ಲಿ ಮಹಿಳೆಯರಿಗೆ ಉಚಿತ ಪ್ರವೇಶ.
★ ಸ್ಥಳೀಯ ಸಂಸ್ಥೆಗಳಲ್ಲಿ ೧/೩ ರಷ್ಟು ಸ್ಥಾನ ಮಹಿಳೆಯರಿಗೆ ಮೀಸಲು.
★ ಹೆರಿಗೆ ಭತ್ಯ ಹಾಗೂ ವಿಧವಾ ಮಾಸಾಶನ ಕ್ರಮವಾಗಿ ೧೦೦ ರಿಂದ ೧೫೦ ಹಾಗೂ ೫೦ ರಿಂದ ೧೦೦ಕ್ಕೆ ಹೆಚ್ಚಳ.

**ಶಿಕ್ಷಣ**

★ ಈಗ ಪ್ರಾರಂಭಿಸಿರುವ ಶಿಕ್ಷಕರ ನೇಮಕಾತಿಯನ್ನು ಮತ್ತಷ್ಟು ವಿಸ್ತಾರಗೊಳಿಸುವುದು.
★ ೧ರಿಂದ ೭ನೆಯ ತರಗತಿವರೆಗಿನ ಮಕ್ಕಳಿಗೆ ಮಧ್ಯಾಹ್ನ ಉಚಿತ ಊಟದ ವ್ಯವಸ್ಥೆ.
★ ಪ್ರತಿಯೊಂದು ಗ್ರಾಮಪಂಚಾಯತಿಗೂ ಪ್ರೌಢಶಾಲೆ.

**ಆರೋಗ್ಯ**

★ ಗ್ರಾಮೀಣ ಪ್ರದೇಶದ ಆಸ್ಪತ್ರೆ ಸಿಬ್ಬಂದಿಗೆ ವಸತಿ ಸೌಲಭ್ಯ.
★ ಪ್ರತಿ ಹಳ್ಳಿಗೂ ಎಎನ್‌ಎಂ ನೇಮಕ.
★ ಮೂರು ಪಂಚಾಯಿತಿಗೊಂದರಂತೆ ಆರೋಗ್ಯ ಕೇಂದ್ರ.
★ ಪ್ರತಿ ತಾಲ್ಲೂಕು ಕೇಂದ್ರದಲ್ಲಿ ಕನಿಷ್ಠ ೧೦೦ ಹಾಸಿಗೆಗಳುಳ್ಳ ಆಸ್ಪತ್ರೆ ಸ್ಥಾಪನೆ.
★ ೬೫ ವರ್ಷ ವಯಸ್ಸಿನ ಹಿರಿಯ ನಾಗರಿಕರಿಗೆ ಉಚಿತ ವೈದ್ಯಕೀಯ ಸೇವೆ.
★ ವೃದ್ಧಾಪ್ಯ ವೇತನದ ಹೆಚ್ಚಳ.

**ಕನ್ನಡ-ಕರ್ನಾಟಕ**

★ ಎಲ್ಲ ಹಂತಗಳಲ್ಲೂ ಕನ್ನಡ ಭಾಷೆಯ ಅನುಷ್ಠಾನ.
★ ಸರೋಜಿನಿ ಮಹಿಷಿ ವರದಿ ಜಾರಿಗೆ.
★ ಕನಕ-ಪುರಂದರರ ಜನಪ್ರಿಯ ಆವೃತ್ತಿಗಳ ಪ್ರಕಟಣೆ.
★ ಪ್ರತ್ಯೇಕ ಕನ್ನಡ ದೂರದರ್ಶನ ಚಾನಲ್ ಆರಂಭ.
★ ಬೆಂಗಳೂರಿನಿಂದ ಹೊರಗೆ ಶ್ರೇಷ್ಠ ನ್ಯಾಯಾಲಯದ ಪೀಠ ಸ್ಥಾಪನೆ.
★ ಕನ್ನಡ ಅಭಿವೃದ್ಧಿಗೆ ಶ್ರಮಿಸುತ್ತಿರುವ ಕನ್ನಡ ಪರ ಸಂಘಟನೆಗೆ ಚಾಲನೆ.
★ ಕಿತ್ತೂರು ರಾಣಿ ಚೆನ್ನಮ್ಮ ಟ್ರಸ್ಟ್‌ಗೆ ಸಹಾಯ.
★ ಸಂಗೊಳ್ಳಿ ರಾಯಣ್ಣನ ನೆನಪನ್ನು ಸ್ಥಿರಸ್ಥಾಯಿಗೊಳಿಸುವುದು.
★ ಗಡಿ ಪ್ರದೇಶದಲ್ಲಿ ಕನ್ನಡ ಶಾಲೆಗಳ ಪ್ರಾರಂಭಕ್ಕೆ ಸಂಕಲ್ಪ.

**ಪ್ರವಾಸೋದ್ಯಮ**

★ ರಾಜ್ಯದ ಪ್ರವಾಸೋದ್ಯಮ ಅಭಿವೃದ್ಧಿಗೆ ಬೃಹತ್ ಯೋಜನೆ.
★ ದಕ್ಷಿಣ ವೃತ್ತ ಮತ್ತು ಉತ್ತರ ವೃತ್ತಗಳೆರಡರ ಅಭಿವೃದ್ಧಿ.

**ಸ್ವಚ್ಛ ಮತ್ತು ದಕ್ಷ ಆಡಳಿತ**

★ ಜಿಲ್ಲೆ, ತಾಲ್ಲೂಕು ಹಾಗೂ ಗ್ರಾಮ ಮಟ್ಟಗಳಲ್ಲಿ ಆಡಳಿತ ವಿಮರ್ಶಾಸಭೆಗಳು.
★ ಆಡಳಿದಲ್ಲಿ ಅನುತ್ಪಾದನಾ ವೆಚ್ಚವನ್ನು ಕಡಿಮೆ ಮಾಡುವುದು.
★ ಸಂಪನ್ಮೂಲ ಕ್ರೋಡೀಕರಣಕ್ಕೆ ಆದ್ಯತೆ.

**ಪಂಚಾಯತ್ ರಾಜ್ಯ**

★ ಗ್ರಾಮ ಪಂಚಾಯಿತಿಗಳಿಗೆ ನಿಗದಿತ ಕಾಲದಲ್ಲಿ ಚುನಾವಣೆ.
★ ಪ್ರತಿ ಗ್ರಾಮಪಂಚಾಯಿತಿಗೆ ೧ ಕೋಟಿ ರೂ. ಸಾಂಸ್ಥಿಕ ಹಣಕಾಸು ಬೆಂಬಲ.

**ಕಾರ್ಮಿಕರು**

★ ಸಂಘಟಿತ ವಲಯ ಹಾಗೂ ಅಸಂಘಟಿತ ವಲಯಗಳೆರಡರಲ್ಲೂ ವೃತ್ತಿ ತೆರಿಗೆ ವಿನಾಯಿತಿ.
★ ಈ ಎರಡೂ ವಲಯದ ಕಾರ್ಮಿಕರಿಗೂ ಸಾಮೂಹಿಕ ವಿಮೆ.
★ ಬಾಲ ಕಾರ್ಮಿಕರ ದುರ್ಬಳಕೆ ತಪ್ಪಿಸುವುದು.

**ಸಾರ್ವಜನಿಕ ವಿತರಣಾ ವ್ಯವಸ್ಥೆ**

★ ಪ್ರತಿ ಹಳ್ಳಿಗೊಂದರಂತೆ ನ್ಯಾಯಬೆಲೆ ಅಂಗಡಿ.
★ ಸಹಕಾರಿ ಸಂಸ್ಥೆಗಳಿಗೆ ಯುವಕ ಮಂಡಳಿ ಹಾಗೂ ಮಹಿಳಾ ಮಂಡಳಿಗಳಿಗೆ ನ್ಯಾಯಬೆಲೆ ಅಂಗಡಿ ಮಂಜೂರು.
★ ದುರ್ಬಲ ವರ್ಗದ ಪ್ರತಿ ಕುಟುಂಬಕ್ಕೂ ಪಡಿತರ ಬೆಲೆಯಲ್ಲಿ ದವಸಧಾನ್ಯ ಪೂರೈಕೆ.

**ಬಡತನ ಹಾಗೂ ನಿರುದ್ಯೋಗ**

★ ಕನಿಷ್ಟ ೪೦ ರೂ. ಗಳ ಕೂಲಿ ನಿಗದಿ.
★ ಗ್ರಾಮ ಪಂಚಾಯಿತಿಗಳ ಆಶ್ರಯದಲ್ಲಿ ನಿರುದ್ಯೋಗಿಗಳಿಗೆ ೧೫೦ ದಿನಗಳ ಖಾತ್ರಿ ಉದ್ಯೋಗ.

★ ಮುಂದಿನ ೫ ವರ್ಷಗಳಲ್ಲಿ ಕರ್ನಾಟಕದಲ್ಲಿ ೨ ಕೋಟಿ ಜನಗಳಿಗೆ ಉದ್ಯೋಗ.

★ ವಿಶ್ವಬ್ಯಾಂಕ್ ಹಾಗೂ ಇತರ ವಿದೇಶಿ ಸಹಯೋಗದೊಂದಿಗೆ ಬಡತನ ನಿರ್ಮೂಲನೆಗೆ ೨ ಸಾವಿರ ಕೋಟಿ ವಿಶೇಷ ಯೋಜನೆ.

**ಇತರೆ**

★ ಕೋಮು ಸೌಹಾರ್ದಕ್ಕೆ ರಾಜೀವ ಗಾಂಧಿ ಪ್ರಶಸ್ತಿ

★ ಕ್ರಿ.ಶ. ೨೦೦೦ ದ ವೇಳೆಗೆ ಅನಧಿಕೃತ ಸಾಗುವಳಿ ಮಾಡಿದ ಕೃಷಿ ಭೂಮಿ ಅಕ್ರಮ ಸಕ್ರಮ

★ ೭೫ ಕೋಟಿ ವಾರ್ಷಿಕ ಆಯವ್ಯಯದೊಂದಿಗೆ ಕರಾವಳಿ ಅಭಿವೃದ್ಧಿ ಪ್ರಾಧಿಕಾರ ರಚನೆ

★ ಲಂಬಾಣಿ ತಾಂಡಗಳನ್ನು ಕಂದಾಯ ಭೂಮಿಗಳನ್ನಾಗಿ ಪರಿವರ್ತಿಸುವುದು

★ ಅಂಗನವಾಡಿ ಕಾರ್ಯಕರ್ತರ, ಗ್ರಾಮ ಸಹಾಯಕರ ಹಾಗೂ ಅರೆಕಾಲಿಕ ಉಪನ್ಯಾಸಕರ ಸೇವಾ ತೊಡಕನ್ನು ಬಗೆಹರಿಸುವುದು

★ ಶೇ. ೧೦೦ ರಷ್ಟು ಸಾಕ್ಷರತೆಯ ಸಾಧನೆ

★ ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿಗೆ ವಾರ್ಷಿಕ ೬೫ ಕೋಟಿ ರೂ. ಅನುದಾನವನ್ನು ೧೦೦ ಕೋಟಿ ರೂ.ಗಳಿಗೆ ಏರಿಸುವುದು. ಅದೇ ರೀತಿ ಮಲೆನಾಡು ಅಭಿವೃದ್ಧಿ ಮಂಡಳಿಯ ಅನುದಾನ ೩೫ ಕೋಟಿ ರೂ.ಗಳಿಂದ ೭೫ ಕೋಟಿ ರೂ.ಗಳಿಗೆ ಏರಿಕೆ

ಈ ಅಂಶಗಳನ್ನು ಹೇಳಿದ ಕಾಂಗ್ರೆ ಪ್ರಣಾಳಿಕೆ ಸ್ಥಿರ ಹಾಗೂ ಸುಭದ್ರ ಸರ್ಕಾರವನ್ನು ನೀಡಿ ಇಡೀ ವಿಶ್ವದಲ್ಲೇ ಭಾರತವನ್ನು ಅಗ್ರ ಪಂಕ್ತಿಯ ರಾಷ್ಟ್ರವನ್ನಾಗಿ ರೂಪಿಸುತ್ತೇವೆಂದು ಜನತೆಗೆ ಆಶ್ವಾಸನೆ ಕೊಡುತ್ತದೆ. ಈ ಚುನಾವಣಾ ಪ್ರಣಾಳಿಕೆಯು ಮಹತ್ತರವಾದ ಆಶಯಗಳನ್ನು ಹೊಂದಿದೆ. ವಿಶೇಷವಾಗಿ ಸಾಮಾನ್ಯ ಜನತೆಯನ್ನು ಸೆಳೆಯುವುದಕ್ಕೆ ಈ ಚುನಾವಣಾ ಪ್ರಣಾಳಿಕೆ ಹೆಚ್ಚಿನ ಆದ್ಯತೆ ನೀಡುತ್ತದೆ. ಆದರೆ ವಾಸ್ತವಿಕ ಸ್ಥಿತಿಯನ್ನು ಈ ಚುನಾವಣಾ ಪ್ರಣಾಳಿಕೆ ಬಹುಮಟ್ಟಿಗೆ ಮರೆಯುತ್ತದೆ, ಸಂಪನ್ಮೂಲಗಳ ಬಗ್ಗೆ ಅದು ಚಿಂತಿಸಿ ಪ್ರಣಾಳಿಕೆಯನ್ನು ರೂಪಿಸಿಕೊಳ್ಳಬೇಕಾಗಿತ್ತೆಂದು ಕೆಲವು ಪತ್ರಿಕೆಗಳು ಈ ಪ್ರಣಾಳಿಕೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದುಂಟು.

## ಚುನಾವಣಾ ಸಾಧನೆ

೧೯೯೪ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ೨೨೩ ಅಭ್ಯರ್ಥಿಗಳನ್ನು ಕಣಕ್ಕೆ ಇಳಿಸಿತ್ತು. ಅದು ಶೇ. ೨೭.೪೦. ಅಂದರೆ ೫೬,೭೧,೨೫೨ ಮತಗಳನ್ನು ಪಡೆಯಿತು. ಅದರ ೩೬ ಅಭ್ಯರ್ಥಿಗಳು ವಿಧಾನಸಭೆಯನ್ನು ಪ್ರವೇಶಿಸಿದರು. ಬೀದರ್, ಚಿತ್ರದುರ್ಗ, ಕೋಲಾರ, ಬೆಂಗಳೂರು ನಗರ, ಚಿಕ್ಕಮಗಳೂರು, ಶಿವಮೊಗ್ಗಗಳಿಂದ ತಲಾ ೧, ರಾಯಚೂರು, ಹಾಸನದಿಂದ ತಲಾ ೨, ಬಳ್ಳಾರಿ, ತುಮಕೂರು, ಧಾರವಾಡದಿಂದ ತಲಾ ೩, ಗುಲ್ಬರ್ಗಾ, ದಕ್ಷಿಣ ಕನ್ನಡ, ಬೆಳಗಾಂನಿಂದ ತಲಾ ೪, ಹಾಗೂ ಬಿಜಾಪುರದಿಂದ ೫ ಜನರು ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ಜಯಶೀಲರಾಗಿದ್ದಾರೆ.

ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ಗೆದ್ದ ಪ್ರಮುಖ ಅಭ್ಯರ್ಥಿಗಳೆಂದರೆ ಭಾಲ್ಕಿಯಿಂದ ಭೀಮಣ್ಣ ಖಂಡ್ರೆ, ಗುರುಮಿಟ್‌ಕಲ್‌ನಿಂದ ಮಲ್ಲಿಕಾರ್ಜುನ ಖರ್ಗೆ, ಜೇವರ್ಗಿಯಿಂದ ಧರ್ಮಸಿಂಗ್, ಗಂಗಾವತಿಯಿಂದ ಶ್ರೀರಂಗ ದೇವರಾಯಲು, ಕುರಗೋಡಿನಿಂದ ಅಲ್ಲಂ ವೀರಭದ್ರಪ್ಪ, ದಾವಣಗೆರೆಯಿಂದ ಮಲ್ಲಿಕಾರ್ಜುನ್, ಬೆಳ್ಳಾವಿಯಿಂದ ಆರ್. ನಾರಾಯಣ್, ಶಿಡ್ಲಘಟ್ಟದಿಂದ ಬಿ. ಮುನಿಯಪ್ಪ, ಜಯನಗರದಿಂದ ರಾಮಲಿಂಗಾರೆಡ್ಡಿ, ಗಂಡಸಿಯಿಂದ ಬಿ. ಶಿವರಾಂ, ಬಂಟ್ವಾಳದಿಂದ ರಮಾನಾಥ ರೈ, ಕಾಪುವಿನಿಂದ ವಸಂತ ವಿ. ಸಾಲಿಯಾನ, ಕಾರ್ಕಳದಿಂದ ಮುಖ್ಯಮಂತ್ರಿ ಎಂ: ವೀರಪ್ಪ ಮೊಯಿಲಿ, ಚಿಕ್ಕಮಗಳೂರಿನಿಂದ ಸಿ.ಆರ್. ಸಗೀರ್ ಅಹಮ್ಮದ್, ಧಾರವಾಡ ಗ್ರಾಮಾಂತರದಿಂದ ಅಂಬಡಿಗಟ್ಟಿ ಶ್ರೀಕಾಂತ್, ಶಿಗ್ಗಾಂವ್‌ನಿಂದ ಮಂಜುನಾಥ್ ಕುನ್ನೂರು, ಗದಗ್‌ನಿಂದ ಡಿ. ಆರ್. ಪಾಟೀಲ್, ಕಿತ್ತೂರಿನಿಂದ ಡಿ. ಬಿ. ಇನಾಂದಾರ್, ಅರಭಾವಿಯಿಂದ ವಿ. ಎಸ್. ಕೌಜಲಗಿ, ಬಾದಾಮಿಯಿಂದ ಬಿ. ಬಿ. ಚಿಮ್ಮನಕಟ್ಟಿ ಹಾಗೂ ಹುನಗುಂದದಿಂದ ಎಸ್. ಆರ್. ಕಾಶಪ್ಪನವರ್.

## ದಾಖಲಾರ್ಹವಾದ ವಿಚಾರ

ಈ ಚುನಾವಣೆಯಲ್ಲಿ ಕಾಂಗ್ರೆಸ್ (ಐ)ನ ಘಟಾನುಘಟಿಗಳು ಸೋತಿದ್ದು ಗಮನಾರ್ಹವಾದ ವಿಚಾರ. ಉಪಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರು ಮದ್ದೂರು ಕ್ಷೇತ್ರವನ್ನು ಕಳೆದುಕೊಂಡರು. ಕೆ. ಎಚ್. ಹನುಮೇಗೌಡ, ಜಿ. ಪುಟ್ಟಸ್ವಾಮಿಗೌಡ, ಎಚ್. ಸಿ. ಶ್ರೀಕಂಠಯ್ಯ, ಕೆ. ಹೆಚ್. ರಂಗನಾಥ್, ಅಜೀಜ್ ಸೇಠ್, ಎಂ. ಮಹದೇವ್, ಹೆಚ್. ವಿಶ್ವನಾಥ್, ರಾಜೂಗೌಡ,

ಡಾ. ಜಿ. ಪರಮೇಶ್ವರ್, ಚೌಡರೆಡ್ಡಿ, ಹೆಚ್. ಎಂ. ರೇವಣ್ಣ, ಜಿ. ಹೆಚ್. ಅಶ್ವತ್ಥ ರೆಡ್ಡಿ, ಜಿ. ರಾಮಕೃಷ್ಣ, ಬಿ. ಶಿವಣ್ಣ, ಡಾ. ವೈ. ನಾಗಪ್ಪ, ಶ್ರೀಮತಿ ಮೋಟಮ್ಮ, ಕೆ. ಹೆಚ್. ಶ್ರೀನಿವಾಸ್, ಎಂ. ಎಂ. ಹಿಂಡಸಗೇರಿ, ಮನೋಹರ ತಹಶೀಲ್ದಾರ್, ವಿ. ಎಸ್. ಕೌಜಲಗಿ, ರೇವಣ್ಣ, ಎ. ಬಿ. ಜಕನೂರು ಹಾಗೂ ಆರ್. ಬಿ. ತಿಮ್ಮಾಪುರ್ ಮೊದಲಾದವರು ಸೋಲನ್ನೊಪ್ಪಿಕೊಂಡು ಕಾಂಗ್ರೆಸ್ ಪಕ್ಷ ರಾಜ್ಯದ ಚುನಾವಣೆಯಲ್ಲಿ ಅತ್ಯಂತ ಕಡಿಮೆ ಸ್ಥಾನಗಳನ್ನು ಪಡೆದ ಚುನಾವಣೆ ಇದಾಗಿತ್ತು. ಅಧಿಕೃತ ವಿರೋಧ ಪಕ್ಷಕ್ಕೆ ಬೇಕಾದ ಸ್ಥಾನಗಳೂ ಕೂಡಾ ಅದಕ್ಕೆ ದೊರಕಿರಲಿಲ್ಲ. ಬಿಜೆಪಿಯೇ ಅಧಿಕೃತ ವಿರೋಧ ಪಕ್ಷವಾಗಿತ್ತು. ಬಂಗಾರಪ್ಪ ನೇತೃತ್ವದ ಕೆಸಿಪಿ ಸದಸ್ಯರು ಕಾಂಗೈಗೆ ವಿಲೀನವಾದ ನಂತರ ಕಾಂಗೈನ ಮಲ್ಲಿಕಾರ್ಜುನ ಖರ್ಗೆ ಅವರು ವಿರೋಧಿ ಪಕ್ಷದ ನಾಯಕರಾದರು. ೧೯೯೪ರ ರಾಜ್ಯ ವಿಧಾನಸಭಾ ಚುನಾವಣೆ ಕಾಂಗ್ರೆಸ್ (ಐ) ಪಾಲಿಗೆ ಮರೆಯಲಾರದ ದುಃಸ್ವಪ್ನ ವೆಂದೇ ಹೇಳಬೇಕು.

## ೧೯೯೬ನೇ ಲೋಕಸಭಾ ಚುನಾವಣೆ

### ರಾಷ್ಟ್ರದ ರಾಜಕೀಯ ಪರಿಸ್ಥಿತಿ

ಭಾರತದ ಇತಿಹಾಸದಲ್ಲಿ ೧೯೯೬ರ ಹನ್ನೊಂದನೇ ಲೋಕಸಭಾ ಚುನಾವಣೆ ಅತ್ಯಂತ ಮಹತ್ವಪೂರ್ಣದ್ದಾಗಿದೆ. ೧೯೯೧ರಲ್ಲಿ ರಾಜೀವ ಗಾಂಧಿಯವರ ಹತ್ಯೆಯ ನಂತರ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಸರಕಾರ ಪಿ. ವಿ. ನರಸಿಂಹರಾವ್‌ರವರ ನೇತೃತ್ವದಲ್ಲಿ ಐದು ವರ್ಷಗಳ ಅವಧಿಯನ್ನು ಪೂರ್ಣಗೊಳಿಸಿತು. ಹಳೆಯ ಕಾಂಗ್ರೆಸ್ಸಿಗರಾದ ಪಿ. ವಿ. ನರಸಿಂಹರಾವ್‌ರವರು ನಿರ್ಣಯಗಳನ್ನು ತೆಗೆದುಕೊಳ್ಳುವಲ್ಲಿ ಅನುಸರಿಸಿದ ವಿಳಂಬ ನೀತಿಯಿಂದಾಗಿ ಪಕ್ಷದಲ್ಲಿ ಆಂತರಿಕ ಗೊಂದಲ ಹಾಗೂ ಅಸಮಾಧಾನ ಉಂಟಾಯಿತು. ೧೯೯೨ರ ಡಿಸೆಂಬರ್ ೬ ರಂದು ಉತ್ತರ ಪ್ರದೇಶದ ಅಯೋಧ್ಯೆಯಲ್ಲಿ ಬಿ.ಜೆ.ಪಿ. ನೇತೃತ್ವದ ಕಲ್ಯಾಣ ಸಿಂಗ್‌ರವರ ಸರಕಾರ ಹಿಂದೂ ಮತೀಯ ವಾದಿಗಳಿಗೆ ಮನಸೋತು ಬಾಬರಿ ಮಸೀದಿಗೆ ಹಾನಿಯುಂಟುಮಾಡಲು ಅವಕಾಶ ಮಾಡಿಕೊಟ್ಟಿತು. ಸುಪ್ರೀಂ ಕೋರ್ಟ್‌ನಲ್ಲಿ ಬಾಬರಿ ಮಸೀದಿಯನ್ನು ರಕ್ಷಿಸುವುದಾಗಿ ರಾಜ್ಯ ಸರಕಾರವು ಹೇಳಿದ್ದರೂ, ಅದು ವಚನ ಭ್ರಷ್ಟತೆಗೆ ಈಡಾಯಿತು. ಆದರೆ ಅದಕ್ಕಿಂತ ಹೆಚ್ಚಾಗಿ ಕಾಂಗ್ರೆಸ್ (ಐ)ನ ಕೇಂದ್ರ ಸರಕಾರಕ್ಕೆ ಆದ ಪೆಟ್ಟು ಬಹು ದೊಡ್ಡದು. ಬಿ.ಜೆ.ಪಿ. ಹೊರತಾಗಿ ಅನೇಕ ಜಾತ್ಯತೀತ ಪಕ್ಷಗಳು ಪಿ. ವಿ. ನರಸಿಂಹರಾವ್ ನೇತೃತ್ವದ ಕಾಂಗ್ರೆಸ್ [ಐ] ಸರಕಾರವೇ ಬಾಬರಿ ಮಸೀದಿ ಧ್ವಂಸಕ್ಕೆ ಕಾರಣವೆಂದು ದೊಡ್ಡ ಧ್ವನಿಯಲ್ಲಿ ಹೇಳತೊಡಗಿದವು. ವಿಶೇಷವಾಗಿ ಪಿ. ವಿ. ನರಸಿಂಹರಾವ್‌ರವರು ಬಿ.ಜೆ.ಪಿ. ನಾಯಕರೊಡನೆ ಸೌಹಾರ್ದ ಸಂಬಂಧ ಇಟ್ಟುಕೊಂಡಿದ್ದರೆಂಬ ಆರೋಪವನ್ನು ಅವರ ಮೇಲೆ ಹೊರಿಸಲಾಯಿತು. ಕಾಂಗ್ರೆಸ್ (ಐ) ಪಕ್ಷದ ಅಧ್ಯಕ್ಷ ಸ್ಥಾನ ಹಾಗೂ ಪ್ರಧಾನಮಂತ್ರಿ ಹುದ್ದೆ ಎರಡನ್ನೂ ಪಿ. ವಿ. ನರಸಿಂಹರಾವ್ ಅವರೇ ಇಟ್ಟುಕೊಂಡಿದ್ದು ಪಕ್ಷ ಸಂಘಟನೆಗೆ ಕೊಡಬೇಕಾದ ಸಮಯವನ್ನು ಅವರು ಕೊಡಲಿಕ್ಕೆ ಆಗಲಿಲ್ಲ. ೧೯೯೦ ರಲ್ಲಿ ಅಧಿಕಾರಕ್ಕೆ ಬಂದ ಬಂಗಾರಪ್ಪನವರ ಸರಕಾರದ ವಿರುದ್ಧ ರಾಜ್ಯದಲ್ಲಿ ನಡೆದ ಭಿನ್ನಮತೀಯ ಚಟುವಟಿಕೆಗಳಾಗಲೀ, ೧೯೯೨ರಲ್ಲಿ ಅಧಿಕಾರಕ್ಕೆ ಬಂದ ವೀರಪ್ಪ ಮೊಯಿಲಿಯವರ ಸರಕಾರದ ವಿರುದ್ಧದ ಭಿನ್ನಮತೀಯ ಚಟುವಟಿಕೆಗಳ ಬಗ್ಗೆಯಾಗಲೀ ಪ್ರತಿಕ್ರಿಯಿಸದೆ, ಘೋರ ಮೌನವನ್ನು ತಾಳಿದ್ದೂ ಅಲ್ಲದೆ ತಾಟಸ್ಥ್ಯ ನೀತಿಯನ್ನು ಅನುಸರಿಸಿದ್ದು ಪಕ್ಷದ ಸಂಘಟನೆಗೆ ದೊಡ್ಡ ಪೆಟ್ಟಾಯಿತು. ಅದರ ಪರಿಣಾಮವಾಗಿ ೧೯೯೪ರಲ್ಲಿ ಕರ್ನಾಟಕ ರಾಜ್ಯದಲ್ಲಿ ಕಾಂಗ್ರೆಸ್ (ಐ) ಪಕ್ಷವು ಅಧಿಕಾರ ಕಳೆದುಕೊಂಡಿತು. ಅನಂತರ ಕೂಡ ಪಕ್ಷವನ್ನು ಸಂಘಟಿಸುವತ್ತ ರಾಜ್ಯದ ಕಾಂಗ್ರೆಸ್ ನಾಯಕರು ಹೆಚ್ಚಿನ ಗಮನ ಕೊಟ್ಟಂತೆ ಕಾಣಲಿಲ್ಲ. ಡಿ. ಕೆ. ನಾಯ್ಕರ್‌ರವರು ಈ ಸಂದರ್ಭದಲ್ಲಿ ಕಾಂಗ್ರೆಸ್ (ಐ) ನ ಅಧ್ಯಕ್ಷರಾಗಿದ್ದರು.

ಈ ನಡುವೆ ಸಿ. ಕೆ. ಜಾಫರ್ ಷರೀಫ್ ಮತ್ತು ಪ್ರಧಾನಿ ಪಿ. ವಿ. ನರಸಿಂಹರಾವ್‌ರವರ ನಡುವೆ ಭಿನ್ನಾಭಿಪ್ರಾಯದ ಕಂದರ ದೊಡ್ಡದಾಯಿತು. ಅವರನ್ನು ರೈಲ್ವೇ ಖಾತೆಯಿಂದ ಬದಲಾವಣೆ ಮಾಡಲಾಯಿತು. ಟಾಡಾ ಕಾಯಿದೆಯನ್ನು ಹಿಂತೆಗೆದುಕೊಳ್ಳಬೇಕು, ಅದು ಅಲ್ಪಸಂಖ್ಯಾತರಿಗೆ ಕಿರುಕುಳ ಕೊಡುವ ಸಾಧನವಾಗಿದೆ ಎಂದು ಜಾಫರ್ ಷರೀಫ್‌ರವರು ಬಹಿರಂಗವಾಗಿ ಟೀಕಿಸಿದ್ದರು. ನವೆಂಬರ್ ೩, ೧೯೯೫ರಂದು ಅವರು ತಮ್ಮ ಸಚಿವ ಖಾತೆಗೆ ರಾಜೀನಾಮೆ ಕೊಟ್ಟರು.

ಆಗಸ್ಟ್ ೨೪,೧೯೯೫ರಂದು ಶ್ರೀಮತಿ ಸೋನಿಯ ಗಾಂಧಿಯವರು ರಾಜೀವ್ ಗಾಂಧೀಯವರ ಲೋಕಸಭಾ ಕ್ಷೇತ್ರವಾದ ಅಮೇಥಿಯ ಸಾರ್ವಜನಿಕ ಸಭೆಯಲ್ಲಿ ತಮ್ಮ ಅಳಲನ್ನು ದೇಶದ ಜನತೆಯ ಮುಂದೆ ತೋಡಿಕೊಂಡರು. ''ನನ್ನ ಪತಿ ರಾಜೀವ ಗಾಂಧಿಯವರು ೧೯೯೦ರಲ್ಲಿ ಹತ್ಯೆಯಾದರು. ಇದು ನಡೆದು ನಾಲ್ಕು ವರ್ಷ, ಮೂರು ತಿಂಗಳುಗಳಾದರೂ ಅವರ ಹತ್ಯೆಯ ಬಗ್ಗೆ ತನಿಖೆ ಮಾಡುತ್ತಿರುವ ಜೈನ್ ಆಯೋಗದ ಕಲಾಪಗಳಲ್ಲಿ ಯಾವುದೇ ಪ್ರಗತಿಯಿಲ್ಲ. ಜವಹರಲಾಲ್ ನೆಹರೂ, ಇಂದಿರಾ ಗಾಂಧಿ ಹಾಗೂ ರಾಜೀವ್ ಗಾಂಧಿಯವರು ಕೆಲವು ತತ್ವಗಳಿಗೆ ಹಾಗೂ ಜಾತ್ಯತೀತ ಶಕ್ತಿಗಳ ಪುನರುತ್ಥಾನಕ್ಕೆ ಹೋರಾಟ ಮಾಡಿದ್ದರು. ಆದರೆ

ಇಂದು ಆ ತತ್ವಗಳೇ ಪರೀಕ್ಷೆಗೆ ಒಳಗಾಗಿವೆ'' ಎಂದು ಅವರು ಹೇಳಿದರು. ಸೋನಿಯ ಗಾಂಧಿಯವರು ಹೇಳಿದ ಈ ಮಾತುಗಳು ಕಾಂಗ್ರೆಸ್ ಪಕ್ಷದಲ್ಲಿ ಅಲ್ಲೋಲಕಲ್ಲೋಲ ಉಂಟುಮಾಡಿತು. ಸೋನಿಯಾ ಗಾಂಧಿಯವರು ರಾಜಕೀಯ ಪ್ರವೇಶಿಸಲು ಸಮ್ಮತಿಸಿದ್ದಾರೆಂದು ಅವರ ಬೆಂಬಲಿಗರು ಭಾವಿಸಿಕೊಂಡರು.

ಈ ಮಧ್ಯೆ ಪಿ.ವಿ. ನರಸಿಂಹರಾವ್‌ರವರ ಸಚಿವ ಸಂಪುಟದಲ್ಲಿ ಹಿರಿಯ ಸದಸ್ಯರಾಗಿದ್ದ ಅರ್ಜುನ ಸಿಂಗ್‌ರವರು ಮಾಜಿ ಪ್ರಧಾನಿ ರಾಜೀವ್ ಗಾಂಧಿಯವರ ಹತ್ಯೆಗೆ ಸಂಬಂಧಪಟ್ಟಂತೆ ಜೈನ್ ಆಯೋಗದ ಕಾರ್ಯನಿರ್ವಹಣೆ ಬಗ್ಗೆ ತಮ್ಮ ಅಸಂತೃಪ್ತಿಯನ್ನು ವ್ಯಕ್ತಪಡಿಸಿದರು. ರಾಜೀವ್ ಗಾಂಧಿ ಹತ್ಯೆಯ ತನಿಖೆಯನ್ನು ಮುಚ್ಚಿಹಾಕಲು ಪ್ರಧಾನಮಂತ್ರಿಗಳ ಕಚೇರಿಯಲ್ಲಿನ ರಹಸ್ಯ ಕಡತವನ್ನು ನಾಶ ಮಾಡಲಾಗಿದೆಯೆಂದು ಅವರು ಆರೋಪಿಸಿದ್ದೂ ಉಂಟು. ಅಧಿಕಾರ ಪಡೆಯಲು ರಾಜೀವ್ ಗಾಂಧಿಯವರ ಹೆಸರನ್ನು ಉಪಯೋಗಿಸಿ ಕೊಂಡು ಪಿ. ವಿ. ನರಸಿಂಹರಾವ್‌ರವರು ನೆಹರು ಕುಟುಂಬವನ್ನು ಅತ್ತ ಸರಿಸಲು ಪ್ರಯತ್ನಿಸುತ್ತಿದ್ದಾರೆ ಎಂದು ಅವರು ಹಾಗೂ ಅವರ ಬೆಂಬಲಿಗರು ಬಹಿರಂಗವಾಗಿ ಹೇಳಿದರು. ಡಿಸೆಂಬರ್ ೧೦, ೧೯೯೫ ರಂದು ಹರಿಯಾಣದ ಜಿಂದ್‌ನಲ್ಲಿ ಅರ್ಜುನ್‌ಸಿಂಗ್‌ರವರ ನೇತೃತ್ವದಲ್ಲಿ ಕಾಂಗ್ರೆಸ್ ಸಮ್ಮೇಳನ ನಡೆಯಿತು. 'ಸೋನಿಯಾ ಗಾಂಧೀ ಲಾವೋ, ದೇಶ್ ಬಚಾವೋ' - ಎಂಬುದೇ ಅಲ್ಲಿನ ಪ್ರಮುಖ ಘೋಷಣೆ ಆಗಿತ್ತು. ಅರ್ಜುನ್‌ಸಿಂಗ್‌ರವರು ಬಹಿರಂಗವಾಗಿ ಪಿ. ವಿ. ನರಸಿಂಹರಾವ್‌ರವರ ವಿರುದ್ಧ ಬಂಡಾಯ ಎದ್ದರು ಮತ್ತು ಉತ್ತರ ಪ್ರದೇಶದ ಹಿರಿಯ ನಾಯಕರಾದ ನಾರಾಯಣದತ್ತ ತಿವಾರಿಯವರ ನೇತೃತ್ವದಲಿ ಹೊಸ ಪಕ್ಷವೊಂದನ್ನು ರೂಪಿಸಿಕೊಂಡರು. ಅದನ್ನೇ 'ತಿವಾರಿ ಕಾಂಗ್ರೆಸ್' ಎಂದು ಗುರುತಿಸಲಾಗಿದೆ.

ತಮಿಳುನಾಡಿನಲ್ಲಿ ಪಿ. ವಿ. ನರಸಿಂಹರಾವ್ ಅವರ ಕಾರ್ಯ ವೈಖರಿಯನ್ನು ಪ್ರತಿಭಟಿಸಿ ಜಿ. ಕೆ. ಮೂಪನಾರ್ ಅವರು ತಮಿಳು ಮನಿಲಾ ಕಾಂಗ್ರೆಸ್ಸನ್ನು ಪ್ರಾರಂಭಿಸಿದರು. ೧೯೯೬ರಲ್ಲಿ ಜಯಲಲಿತಾರೊಡನೆ ಚುನಾವಣಾ ಒಪ್ಪಂದ ಮಾಡಿಕೊಂಡಿದ್ದಕ್ಕಾಗಿ ಜಿ. ಕೆ. ಮೂಪನಾರ್ ಅವರು ಕಾಂಗ್ರೆಸ್‌ನಿಂದ ಹೊರಬಂದು ಬೇರೆ ಪಕ್ಷವನ್ನು ಸ್ಥಾಪಿಸಿಕೊಂಡರು; ಅದರ ಪ್ರಭಾವ ತಮಿಳುನಾಡು ಸೇರಿದಂತೆ ದಕ್ಷಿಣ ರಾಜ್ಯಗಳ ಮೇಲೆಲ್ಲಾ ಹರಡಿತು. ಪಿ.ವಿ. ನರಸಿಂಹರಾವ್ ಸಚಿವಸಂಪುಟದಲ್ಲಿದ್ದರೂ ಕೇರಳ ನಾಯಕರಾದ ಕೆ. ಕರುಣಾಕರನ್ ಪಿ.ವಿ. ನರಸಿಂಹರಾವ್ ಅವರ ಜೊತೆ ಅಸಮಾಧಾನ ಬೆಳೆಸಿಕೊಂಡಿದ್ದರು.

## ಕಾಂಗ್ರೆಸ್ ಪಕ್ಷದ ಜನಬೆಂಬಲ ಇಳಿಮುಖ

ಪಿ.ವಿ. ನರಸಿಂಹರಾವ್‌ರವರು ತಂದ ಆರ್ಥಿಕ ನೀತಿ ಕಾಂಗ್ರೆಸ್ ಪಕ್ಷದಲ್ಲಿನ ಭಿನ್ನಮತೀಯರಿಂದ ಸಾಕಷ್ಟು ಟೀಕೆಗೆ ಗ್ರಾಸವಾಯಿತು. ಉದಾರೀಕರಣದಿಂದ ಸಾಮಾಜಿಕ ನ್ಯಾಯಕ್ಕೆ ದೊಡ್ಡ ಆಘಾತವಾಗುತ್ತದೆ ಎಂದು ಅವರು ಹೇಳಲಾರಂಭಿಸಿದರು. ಭ್ರಷ್ಟಾಚಾರ ಹಾಗೂ ಅಲ್ಪಸಂಖ್ಯಾತರ ಅಸಮಾಧಾನವೇ ಕಾರಣವಾಗಿ ಕಾಂಗ್ರೆಸ್‌ಗೆ ಮುಂದಿನ ಚುನಾವಣೆಯಲ್ಲಿ ದೊಡ್ಡ ಹೊಡೆತ ಬೀಳುತ್ತದೆ ಎಂದು ಈ ಭಿನ್ನಮತೀಯ ನಾಯಕರು ಭಾವಿಸಿದರು. ಮೇ ೧೯,೧೯೯೫ರಲ್ಲಿ ದೆಹಲಿಯಲ್ಲಿ ಎಐಸಿಸಿ ಭಿನ್ನಮತೀಯರ ಸಮಾವೇಶವೊಂದು ಜರುಗಿ ರಾಜಕೀಯವಾಗಿ ಕಾಂಗ್ರೆಸ್ ಪಕ್ಷವನ್ನು ಅಧೋಗತಿಗೆ ಕೊಂಡೊಯ್ಯುತ್ತಿರುವ ಪ್ರಧಾನಮಂತ್ರಿ ಪಿ. ವಿ. ನರಸಿಂಹರಾವ್ ಅವರು ಕಾಂಗ್ರೆಸ್ ಅಧ್ಯಕ್ಷರಾಗಿ ಮುಂದುವರಿಯುವ ನೈತಿಕ ಹಕ್ಕನ್ನು ಕಳೆದುಕೊಂಡಿದ್ದಾರೆಂದು ನಿರ್ಣಯ ಕೈಗೊಳ್ಳಲಾಯಿತು.

ಈ ಮಧ್ಯೆ ಹವಾಲಾ ಪ್ರಕರಣದಲ್ಲಿ ಸಿಲುಕಿದ್ದಾರೆ ಎಂಬ ಕಾರಣಕ್ಕೆ ಮಾಧವರಾವ್ ಸಿಂಧಿಯಾ ಅವರಿಗೆ ಲೋಕಸಭೆಯಲ್ಲಿ ಸ್ಪರ್ಧಿಸಲು ಟಿಕೇಟ್‌ನ್ನು ನಿರಾಕರಿಸಲಾಯಿತು. ಅವರು ಮಧ್ಯಪ್ರದೇಶದ ವಿಕಾಸ ಕಾಂಗ್ರೆಸ್ ಎಂಬ ಹೊಸ ಪಕ್ಷವನ್ನು ಸ್ಥಾಪಿಸಿಕೊಂಡು ಗ್ವಾಲಿಯರ್‌ನಿಂದ ೧೯೯೬ರ ಚುನಾವಣೆಗೆ ಸ್ಪರ್ಧಿಸಲು ನಿರ್ಧರಿಸಿದರು. ಪಿ. ವಿ. ನರಸಿಂಹರಾವ್‌ರವರ ಆರ್ಥಿಕ ನೀತಿ ಹಾಗೂ ಬಾಬರಿ ಮಸೀದಿ ವಿಚಾರದಲ್ಲಿ ತೆಗೆದುಕೊಂಡ ವಿಳಂಬ ನೀತಿ ಅವರಿಗೆ ಸಾಕಷ್ಟು ಹೊಡೆತವನ್ನು ಈ ಚುನಾವಣೆಯಲ್ಲಿ ಕೊಟ್ಟಿತು.

## ಕ್ರಿಯಾಶೀಲವಾದ ರಾಜ್ಯ ಜನತಾದಳ ಸರ್ಕಾರ

೧೯೯೫ರಲ್ಲಿ ಕರ್ನಾಟಕ ರಾಜ್ಯದಲ್ಲಿ ಅಧಿಕಾರಕ್ಕೆ ಬಂದ ದೇವೇಗೌಡರ ಸರಕಾರವು ಕ್ರಿಯಾಶೀಲವಾಗಿ ಕೆಲಸ ಮಾಡಲು ಮುಂದಾಗಿ ಜನರ ವಿಶ್ವಾಸವನ್ನು ಗಳಿಸಿಕೊಳ್ಳುವ ತನ್ನ ಪ್ರಯತ್ನವನ್ನು ಮುಂದುವರಿಸಿತು. ಸ್ವತಃ ದೇವೇಗೌಡರು ಈ ಚುನಾವಣೆ ಪೂರ್ವದಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಿಗೂ ಭೇಟಿ ಇತ್ತು, ಜನಸಂದರ್ಶನ ಕಾರ್ಯಕ್ರಮಗಳನ್ನು ನಡೆಸಿದರು. ಜನರ ನಡುವೆ ನಡೆದ ದೇವೇಗೌಡರ ಈ ಕಾರ್ಯಕ್ರಮ ಜನತಾದಳಕ್ಕೆ ಸಾಕಷ್ಟು ಜನಬೆಂಬಲವನ್ನು ದೊರಕಿಸಿಕೊಟ್ಟಿತು. ಈ ಸಂದರ್ಭದಲ್ಲಿ ಜನತಾದಳ ಸರಕಾರ ಹಮ್ಮಿಕೊಂಡ ಕೆಲವು ಕಾರ್ಯಕ್ರಮಗಳು ೧೯೯೬ ಚುನಾವಣೆಯಲ್ಲಿ ಅಭೂತಪೂರ್ವ ಬೆಂಬಲವನ್ನು ದೊರಕಿಸಿಕೊಡಲು ಕಾರಣವಾಗಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬೇಕಾಗುತ್ತದೆ. ಅವರ ಕಾರ್ಯಕ್ರಮಗಳು ಎಂದರೆ:

ರಸಗೊಬ್ಬರ ವಹಿವಾಟು ತೆರಿಗೆ ರದ್ದು (೫.೨.೯೫), ಮಹಿಳಾ ಆಯೋಗ ರಚನೆ (೨೩.೬.೯೫), ಕಬ್ಬು ಬೆಳೆಗಾರರಿಗೆ ರಿಯಾಯತಿ., ಸರಕಾರಿ ಹುದ್ದೆಯಲ್ಲಿ ಮಹಿಳೆಯರಿಗೆ ಶೇಕಡ ೨೫ ರಷ್ಟು ಮೀಸಲಾತಿ, ಕೇವಲ ಒಂದು ವರ್ಷದಲ್ಲಿ ೧೩,೧೭೦ ಶಿಕ್ಷಕರುಗಳ ನೇಮಕಾತಿ, ರಾಜ್ಯ ನೀರಾವರಿ ಯೋಜನೆಗೆ ೧೧೦ ಕೋಟಿ ರೂಪಾಯಿಗಳ ನಬಾರ್ಡ್ ಸಾಲ, ನಗರದ ಬಡ ಜನರಿಗೂ ಕೆ. ಜಿ.ಗೆ ರೂಪಾಯಿ ೩.೨೦ ರಂತೆ ಅಕ್ಕಿ ವಿತರಣೆ, ಕೃಷ್ಣ ಮೇಲ್ದಂಡೆ ಯೋಜನೆಗಾಗಿ ೮೦೦ ಕೋಟಿ ರೂಪಾಯಿಗಳ ಸಾಲವನ್ನು ಸಾರ್ವಜನಿಕರಿಂದ ಸಂಗ್ರಹಿಸಲು ಬಾಂಡ್‌ಗಳ ವಿತರಣೆ, ಮೊದಲ ಹಂತವಾಗಿ ಅಕ್ಟೋಬರ್, ೧೯೯೫ರಲ್ಲಿ ೧೮೮ ಕೋಟಿ ರೂಪಾಯಿಗಳ ಸಂಗ್ರಹ, ಗ್ರಾಮಾಂತರ ಕುಡಿಯುವ ನೀರಿನ ಯೋಜನೆಗೆ ೨೦೦ ಕೋಟಿ ರೂಪಾಯಿಗಳ ಬಿಡುಗಡೆ, ಸಮಗ್ರ ಶಿಕ್ಷಣ ಕಾಯಿದೆ ಜಾರಿ, ಗಂಗಾಕಲ್ಯಾಣ ಯೋಜನೆಯ ಪ್ರಾರಂಭ, ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ೧೫,೦೦೦ ಎಕರೆ ಪ್ರದೇಶಗಳಿಗೆ ನೀರಾವರಿ ಸೌಲಭ್ಯ ನೀಡುವ ಯೋಜನೆ - ಈ ಕಾರ್ಯಕ್ರಮಗಳು ರಾಜ್ಯದಲ್ಲಿ ಜನತಾದಳದ ಬಗ್ಗೆ ಜನರಿಗೆ ಗೌರವ ಭಾವನೆ ಮೂಡಿಸಿದವು. ಇದಕ್ಕೆ ವಿರುದ್ಧವಾಗಿ ಕೇಂದ್ರ ಹಾಗೂ ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷ ತನ್ನ ಆಂತರಿಕ ತಿಕ್ಕಾಟದಲ್ಲಿ ಮಗ್ನವಾಗಿದ್ದು ಜನರಿಂದ ದೂರ ಸರಿಯುವ ಪ್ರಯತ್ನ ಮಾಡುತ್ತಿತ್ತು.

## ಕಾಂಗ್ರೆಸ್ (ಐ) ಪಕ್ಷದ ಚುನಾವಣಾ ಪ್ರಣಾಳಿಕೆ

೧೯೯೬ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಚುನಾವಣಾ ಪ್ರಣಾಳಿಕೆಯ ಮುಖ್ಯ ಅಂಶಗಳು ಹೀಗಿವೆ : ಅದರ ಪ್ರಮುಖ ಘೋಷಣೆ- ಭದ್ರತೆ, ಪ್ರಗತಿ, ರಾಷ್ಟ್ರೀಯ ಐಕ್ಯತೆ ಹಾಗೂ ಜಾತ್ಯತೀತ ಮನೋಭಾವ. ಕಾಂಗ್ರೆಸ್ ತನ್ನ ಪ್ರಣಾಳಿಕೆಯಲ್ಲಿ ವಿರೋಧ ಪಕ್ಷಗಳು ೧೯೭೭-೧೯೭೯-೧೯೯೦ ಹಾಗೂ ೧೯೯೧ ರಲ್ಲಿ ಸರಕಾರ ರಚಿಸಿದ್ದವು. ಆದರೆ ಅವುಗಳು ಆಂತರಿಕ ಕಲಹದಿಂದಾಗಿ ಪೂರ್ಣ ಅವಧಿಯನ್ನು ಮುಗಿಸಲಿಲ್ಲ. ಅಧಿಕಾರಕ್ಕೆ ಬರುವ ಮುಂಚೆ ಆದರ್ಶದ ಮಾತುಗಳನ್ನು ಹೇಳಿದ ವಿರೋಧ ಪಕ್ಷಗಳು ಅಧಿಕಾರ ದೊರೆತ ನಂತರ ತಮ್ಮೊಳಗೆ ಆಂತರಿಕವಾಗಿ ಕಿತ್ತಾಡಿಕೊಂಡು ಜನಹಿತ ಮರೆಯುತ್ತಿವೆ. ಇದಕ್ಕೆ ವಿರುದ್ಧವಾಗಿ ಕಾಂಗ್ರೆಸ್ ಸುಭದ್ರ ಸರಕಾರವನ್ನು ಕೊಡುವುದರ ಜೊತೆಗೆ ರಾಷ್ಟ್ರೀಯ ಹಾಗೂ ಮತೀಯ ಸೌಹಾರ್ದತೆಗೆ ಬೆಲೆ ಕೊಟ್ಟಿದೆ. ೧೯೯೧ರಲ್ಲಿ ಅಧಿಕಾರಕ್ಕೆ ಬಂದ ಪಿ.ವಿ. ನರಸಿಂಹರಾವ್ ಸರಕಾರ ಅಲ್ಪ ಬಹುಮತ ಹೊಂದಿದ್ದಾಗ್ಯೂ ಅದು ಸರ್ಕಾರ ನಡೆಸಿದ ರೀತಿಯನ್ನು ಈ ಪ್ರಣಾಳಿಕೆ ವಿಶೇಷವಾಗಿ ಉಲ್ಲೇಖಿಸುತ್ತದೆ. ಇದರ ಜೊತೆಗೆ ೧೯೫೨ ರಿಂದ ಅಧಿಕಾರ ನಡೆಸಿದ ಕಾಂಗ್ರೆಸ್ ಸರಕಾರ ಆಹಾರ, ಕೈಗಾರಿಕೆ, ರಕ್ಷಣೆ, ಶಿಕ್ಷಣ, ವಾಣಿಜ್ಯ, ಹಿಂದುಳಿದವರ ಕಲ್ಯಾಣ ಹಾಗೂ ದೇಶದ ಭಾವೈಕ್ಯತೆ ದೃಷ್ಟಿಯಿಂದ ಮಾಡಿದ ಕೆಲಸಗಳನ್ನು ಮತದಾರರ ಮುಂದೆ ಇಡುತ್ತದೆ.

## ಪಿ. ವಿ. ನರಸಿಂಹರಾವ್ ಸರ್ಕಾರದ ಸಾಧನೆ

ಈ ಪ್ರಣಾಳಿಕೆಯಲ್ಲಿ ವಿಶೇಷವಾಗಿ ಒತ್ತು ಕೊಟ್ಟದ್ದು ಪಿ. ವಿ. ನರಸಿಂಹರಾವ್‌ರವರ ಆರ್ಥಿಕ ನೀತಿ ಬಗ್ಗೆ. ಪಿ. ವಿ. ನರಸಿಂಹರಾವ್ ರವರ ಸರಕಾರ ೨೧ ಜೂನ್, ೧೯೯೧ರಲ್ಲಿ ಅಧಿಕಾರಕ್ಕೆ ಬಂದಿತು. ಆಗ ವಿದೇಶಿ ವಿನಿಮಯ ಕೊರತೆ ಇದ್ದುದು ೨,೧೦೦ ಕೋಟಿ ರೂಪಾಯಿಗಳು. ಹಣದುಬ್ಬರ ಶೇಕಡಾ ೧೩ರಿಂದ ೧೭ಕ್ಕೆ ಏರುವ ಸಂಭವ ಇತ್ತು. ಎಲ್ಲಾ ಕೈಗಾರಿಕೆಗಳು ಅವನತಿಯ ಹಾದಿ ಹಿಡಿದಿದ್ದವು. ಎಂಟನೆಯ ಪಂಚವಾರ್ಷಿಕ ಯೋಜನೆಯನ್ನು ಕಳೆದ ಎರಡು ಸರಕಾರಗಳು ಎಂದರೆ ವಿ. ಪಿ. ಸಿಂಗ್ ಮತ್ತು ಚಂದ್ರಶೇಖರ್‌ರವರ ಸರ್ಕಾರಗಳು ಪ್ರಾರಂಭ ಮಾಡಲಾಗದ ಸ್ಥಿತಿಯಲ್ಲಿದ್ದವು. ವಿದೇಶದಲ್ಲಿ ಚಿನ್ನವನ್ನು ಅಡವಿಟ್ಟು ವಿದೇಶಿ ವಿನಿಮಯವನ್ನು ಪಡೆಯುವ ದುಸ್ಥಿತಿ ಅಂದಿನ ಸರಕಾರಕ್ಕೆ ಇತ್ತು ಎಂದು ಅದು ಹೇಳುತ್ತದೆ. ಇಂಥ ಸಂದರ್ಭವನ್ನು ನಿಭಾಯಿಸಿದ ಬಗ್ಗೆ ಪಿ.ವಿ. ನರಸಿಂಹರಾವ್‌ರವರ ಸರಕಾರ ಹೀಗೆ ಹೇಳತೊಡಗುತ್ತದೆ. ''ಪ್ರಸ್ತುತ ೬೦,೦೦೦ ಕೋಟಿ ವಿದೇಶಿ ವಿನಿಮಯ ಭಾರತ ಸರಕಾರದಲ್ಲಿದೆ. ಬಿಹಾರ್, ಮಧ್ಯಪ್ರದೇಶ, ಪಶ್ಚಿಮ ಬಂಗಾಲ, ಒರಿಸ್ಸಾ-ಮುಂತಾದ ರಾಜ್ಯಗಳಲ್ಲಿ ಕ್ರಾಂತಿಕಾರಕ ಬದಲಾವಣೆ ವ್ಯವಸಾಯ ಕ್ಷೇತ್ರದಲ್ಲಿ ನಡೆದಿದೆ. ೧೯.೧ ಕೋಟಿ ಟನ್‌ಗಳಷ್ಟು ಆಹಾರ ಉತ್ಪಾದನೆಯನ್ನು ಭಾರತದ ರೈತರು ಮಾಡಿ ದಾಖಲೆಯನ್ನು ಸ್ಥಾಪಿಸಿದ್ದಾರೆ. ವಿಶ್ವದಲ್ಲಿ ಅಕ್ಕಿ ಮತ್ತು ಗೋಧಿ ರಫ್ತು ಮಾಡುವ ದೇಶಗಳಲ್ಲಿ ಇಂದು ಭಾರತ ಪ್ರಮುಖವಾದ ದೇಶವಾಗಿದೆ.''

## ಆರ್ಥಿಕ ಚಿಂತನೆ

ಕೈಗಾರಿಕಾ ಕ್ಷೇತ್ರಕ್ಕೆ ಪುನಶ್ಚೇತನ ಕೊಡುವ ಉದ್ದೇಶದಿಂದ ಉದಾರೀಕರಣ ನೀತಿಯನ್ನು ಅನುಸರಿಸಲಾಗಿದೆ. ಶೇಕಡ ೧೦ರಷ್ಟು ಕೈಗಾರಿಕಾ ಬೆಳವಣಿಗೆಯನ್ನು ಗುರುತಿಸಲಾಗಿದೆ. ಸ್ಕೂಟರ್, ಟ್ರಾಕ್ಟರ್, ಬೈಸಿಕಲ್, ಟೆಲಿವಿಷನ್, ರಸಗೊಬ್ಬರ, ಕಾಗದ, ಜವಳಿ, ಸ್ಟೀಲ್ ಮೊದಲಾದವುಗಳ ಉತ್ಪಾದನೆಯಲ್ಲಿ ವಿಕ್ರಮವನ್ನು ಸಾಧಿಸಲಾಗಿದ್ದು, ಸ್ಥಳೀಯ ಅಗತ್ಯಗಳನ್ನು ಪೂರೈಸಿ ರಫ್ತು ಮಾಡುವಷ್ಟು ಪ್ರಗತಿಯನ್ನು

ಸಾಧಿಸಲಾಗಿದೆ. ಕಳೆದ ಐದು ವರ್ಷಗಳಲ್ಲಿ ೩೦೦೦ ಉದ್ಯೋಗಗಳನ್ನು ಸೃಷ್ಟಿಸಿದ ಕೀರ್ತಿ ಈ ಸರಕಾರದ್ದು. ೧೯೯೦-೯೧ರಲ್ಲಿ ಭಾರತದ ಜಿ.ಡಿ.ಪಿ. ಶೇ. ೧ರಷ್ಟು ಇದ್ದದ್ದು ೧೯೯೫-೯೬ರಲ್ಲಿ ಅದು ಶೇ. ೬ ರಷ್ಟು ಆಗಿರುವುದನ್ನು ಗಮನಿಸಿದರೆ ಆರ್ಥಿಕ ಕ್ಷೇತ್ರದ ಬೆಳವಣಿಗೆಯನ್ನು ಯಾರು ಬೇಕಾದರೂ ಊಹಿಸಬಹುದು. ಕಳೆದ ಮೂರು ವರ್ಷಗಳಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಶೇ. ೨೦ ರಷ್ಟು ರಫ್ತಿನ ಪ್ರಮಾಣ ಹೆಚ್ಚಾಗಿದೆ. ಕಳೆದ ಹತ್ತು ವರ್ಷಗಳಿಂದಲೂ ಇಳಿಯದ ಹಣದುಬ್ಬರ ಈಗ ಶೇಕಡಾ ೫ ರಷ್ಟು ಇಳಿದಿರುವುದು ಸಾರ್ವಕಾಲಿಕ ದಾಖಲೆಯಾಗಿದೆ. ಪ್ರಸ್ತುತ ಭಾರತ ವಿಶ್ವದ ಆರನೇ ಬೃಹತ್ ಆರ್ಥಿಕ ರಾಷ್ಟ್ರವಾಗಿದ್ದು ಅದನ್ನು ನಾಲ್ಕಕ್ಕೆ ಏರಿಸುವುದು ನಮ್ಮ ಸರ್ಕಾರದ ಪಣ.

## ಸ್ವಾವಲಂಬನೆ

ಕಾಂಗ್ರೆಸ್ ಪಕ್ಷದ ಧ್ಯೇಯವಾದ ಸ್ವಾವಲಂಬಿತ ಆರ್ಥಿಕ ನೀತಿಗೆ ಪಿ. ವಿ. ನರಸಿಂಹರಾವ್ ನೇತೃತ್ವದ ಸರ್ಕಾರ ಹೆಚ್ಚಿನ ಆದ್ಯತೆಯನ್ನು ಕೊಟ್ಟಿದೆ. ಇಲ್ಲಿಯ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಹೊಸ ತಾಂತ್ರಿಕ ಆವಿಷ್ಕಾರಗಳೊಡನೆ ಕೈಗಾರಿಕೆಗಳನ್ನು ಸ್ಥಾಪಿಸಲು ಆಸಕ್ತವಾಗಿರುವ ದೇಶಗಳಿಗೆ ಆಹ್ವಾನವನ್ನು ಕೊಡಲಾಗಿದೆ. ಸ್ಥಳೀಯ ಕೈಗಾರಿಕೆಗಳನ್ನು ಸಂಪೂರ್ಣ ಸ್ವಾವಲಂಬಿತವಾಗಿ ಮಾಡುವುದು ಕಾಂಗ್ರೆಸ್ ಸರ್ಕಾರದ ಗುರಿಯಾಗಿದೆ.

## ಪಂಜಾಬ್‌ನಲ್ಲಿ ಶಾಂತಿ

ಚಂದ್ರಶೇಖರ್‌ರವರು ಪ್ರಧಾನಮಂತ್ರಿಗಳಾಗಿದ್ದಾಗ ಪಂಜಾಬ್ ರಾಜ್ಯದ ಚುನಾವಣೆಯನ್ನು ಘೋಷಿಸಲಾಯಿತು. ಆಗ ೨೨ ಜನ ಅಭ್ಯರ್ಥಿಗಳನ್ನು ಭಯೋತ್ಪಾದಕರು ಕೊಂದುಹಾಕಿದರು. ಪಿ. ವಿ. ನರಸಿಂಹರಾವ್ ನೇತೃತ್ವದ ಹೊಸ ಸರ್ಕಾರ ಬಂದತಕ್ಷಣ ಪಂಜಾಬ್‌ನಲ್ಲಿ ಶಾಂತಿ ಹಾಗೂ ಕಾನೂನನ್ನು ಸುವ್ಯವಸ್ಥೆಗೊಳಿಸಲು ಆದ್ಯ ಗಮನ ಕೊಡಲಾಯಿತು. ಕಾಂಗ್ರೆಸ್ ಸರ್ಕಾರ ಪಂಜಾಬ್‌ನಲ್ಲಿ ಮುಕ್ತ ಹಾಗೂ ನಿರ್ಭೀತ ಚುನಾವಣೆಯನ್ನು ನಡೆಸಿತು. ಪಂಜಾಬಿನ ಜನ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸಿದರು. ಪ್ರಸ್ತುತ ಪಂಜಾಬಿನಲ್ಲಿ ಶಾಂತಿ ನೆಲೆಸಿದ್ದು ಅದು ದೇಶದ ಪ್ರಗತಿಯಲ್ಲಿ ಮಿಳಿತವಾಗುತ್ತಿದೆ. ಇಂತಹ ದಿಟ್ಟ ಬದಲಾವಣೆಗೆ ಮುತ್ಸದ್ದಿ ಪಿ. ವಿ. ನರಸಿಂಹರಾವ್ ಅವರ ದೂರದೃಷ್ಟಿ ಕಾರಣವಾಗಿದೆ.

## ಜಮ್ಮು ಮತ್ತು ಕಾಶ್ಮೀರ ಸಮಸ್ಯೆಗೆ ಹೊಸ ದೃಷ್ಟಿಕೋನ

೧೯೮೯ರ ಪೂರ್ವದಲ್ಲಿ ಕಾಶ್ಮೀರ ಸಮಸ್ಯೆಯನ್ನು ಕಾಂಗ್ರೆಸ್ ತುಂಬ ಚಾಣಾಕ್ಷತೆಯಿಂದ ನಿರ್ವಹಿಸಿತ್ತು. ಅನಂತರ ಅಧಿಕಾರಕ್ಕೆ ಬಂದ ಎರಡು ಸರ್ಕಾರಗಳು ಈ ಸಮಸ್ಯೆಯನ್ನು ನಿರ್ವಹಿಸುವಲ್ಲಿ ವಿಫಲವಾದವು. ವಿಶೇಷವಾಗಿ ವಿ. ಪಿ. ಸಿಂಗ್ ಅವರ ಸರ್ಕಾರವಿದ್ದಾಗ ಗೃಹಸಚಿವರೊಬ್ಬರ ಮಗಳನ್ನು ಭಯೋತ್ಪಾದಕರಿಂದ ಬಿಡಿಸಲು ಅವರು ಹಾಕಿದ ಎಲ್ಲ ಷರತ್ತುಗಳಿಗೂ ಒಪ್ಪಲಾಯಿತು. ಅದು ಇಲ್ಲಿಯ ಶಾಂತಿಪಾಲಕರ ನೈತಿಕ ಸ್ಥೈರ್ಯವನ್ನು ಕಡಿಮೆ ಮಾಡಿತು. ಜಮ್ಮು ಮತ್ತು ಕಾಶ್ಮೀರಕ್ಕೆ ಸಂವಿಧಾನದ ೩೭೦ನೇ ವಿಧಿಯನ್ವಯ ಎಲ್ಲ ಸೌಲಭ್ಯಗಳನ್ನು ಕೊಡುವುದರ ಜತೆಗೆ ಅವರು ತಮಗೆ ಇಷ್ಟ ಬಂದ ಸರ್ಕಾರವನ್ನು ಆಯ್ಕೆ ಮಾಡಿಕೊಳ್ಳಲು ಸಮರ್ಥರು ಎಂಬ ಭಾವನೆಯನ್ನು ಮೂಡಿಸಲಾಗಿದೆ. ಜಮ್ಮು ಮತ್ತು ಕಾಶ್ಮೀರದಲ್ಲಿ ಪ್ರಜಾಸತ್ತಾತ್ಮಕ ಸರ್ಕಾರ ಸ್ಥಾಪಿಸುವ ಗುರಿ ಕಾಂಗ್ರೆಸ್ ಪಕ್ಷದ್ದು.

## ಪಂಚಾಯತ್ ರಾಜ್

ರಾಜೀವಗಾಂಧಿಯವರ ಕನಸಾದ ಪಂಚಾಯತ್ ರಾಜ್ ಮಸೂದೆಯನ್ನು ಪೂರ್ಣವಾಗಿ ಅನುಷ್ಠಾನ ಮಾಡುವ ಜವಾಬ್ದಾರಿಯನ್ನು ಪಿ.ವಿ. ನರಸಿಂಹರಾವ್ ಸರ್ಕಾರ ಹೊತ್ತುಕೊಂಡಿತು. ಈಗಾಗಲೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ಈ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಸೂಕ್ತ ಅವಕಾಶ ಕೊಡಿಸಲು ಮಸೂದೆಯನ್ನು ಭಾರತ ಸರ್ಕಾರ ತಂದಿತು. ೨೪.೪.೯೩ ರಂದು ಪಂಚಾಯತ್ ಹಾಗೂ ನಗರಪಾಲಿಕಾ ಮಸೂದೆ ಜಾರಿಗೆ ಬಂದಿತು. ಇದರನ್ವಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಗೆ ಅಧ್ಯಕ್ಷ ಸ್ಥಾನಕ್ಕೆ ಮೀಸಲಾತಿ ದೊರೆಯಿತು. ಶೇಕಡಾ ೩೦ ರಷ್ಟು ಮೀಸಲಾತಿ ಮಹಿಳಾ ಅಭ್ಯರ್ಥಿಗಳಿಗೆ ದೊರೆಯಿತು. ಇದರನ್ವಯ ಭಾರತದ ಎಲ್ಲ ರಾಜ್ಯಗಳಲ್ಲಿ ಎಂದರೆ ಮೂರು ರಾಜ್ಯಗಳ ಹೊರತಾಗಿ ಎಲ್ಲೆಡೆ ಸ್ಥಳೀಯ ಸಂಸ್ಥೆಗಳಿಗೆ ಯಶಸ್ವಿಯಾಗಿ ಚುನಾವಣೆ ನಡೆಯಿತು. ಇದರ ಮೂಲಕ ೩೦ ಲಕ್ಷ ಜನಪ್ರತಿನಿಧಿಗಳು ದೇಶದಾದ್ಯಂತ ಹೊರಹೊಮ್ಮಿದ್ದು, ಗ್ರಾಮಮಟ್ಟದಲ್ಲಿ ಅವರು ಜನಸೇವೆ ಮಾಡುತ್ತಿದ್ದಾರೆ.

## ಮಂಡಲ್ ಆಯೋಗ

ಹಿಂದುಳಿದ ವರ್ಗಗಳಿಗೆ ಮೀಸಲಾತಿ ಕೊಡಿಸಬೇಕು ಎಂಬ ಸಾಮಾಜಿಕ ನ್ಯಾಯದ ದೃಷ್ಟಿ ಕಾಂಗ್ರೆಸ್ ಪಕ್ಷಕ್ಕೆ ೧೯೫೨ರಿಂದಲೂ ಇದೆ. ೧೯೯೦ರಲ್ಲಿ ಮಂಡಲ್ ಆಯೋಗದ ಅನುಷ್ಠಾನ ಸಂದರ್ಭದಲ್ಲಿ ರಾಷ್ಟ್ರಾದ್ಯಂತ ಅನಾವಶ್ಯಕವಾಗಿ ಹಿಂಸಾಚಾರ ನಡೆದಿದ್ದನ್ನು ಕಾಂಗ್ರೆಸ್ ಸರ್ಕಾರ ನೊಂದ ಹೃದಯದಿಂದ ಗಮನಿಸಿತು. ಪಿ. ವಿ. ನರಸಿಂಹರಾವ್ ನೇತೃತ್ವದ ಸರ್ಕಾರ ಹಿಂದುಳಿದ ವರ್ಗಗಳಿಗೆ ಸರ್ಕಾರಿ ಹಾಗೂ ಅರೆಸರ್ಕಾರಿ ಹುದ್ದೆಗಳಲ್ಲಿ ಶೇಕಡಾ ೨೭ರಷ್ಟು ಮೀಸಲಾತಿಯನ್ನು ಯಾವುದೇ ಗಲಾಟೆ ಇಲ್ಲದೆಯೇ ಅನುಷ್ಠಾನ ಮಾಡಿದ ಕೀರ್ತಿ ಪಡೆದಿದೆ. ಐ.ಎ.ಎಸ್. ಹಾಗೂ ಐ.ಪಿ.ಎಸ್. ಸ್ಪರ್ಧೆಗಳಲ್ಲೂ ಕೂಡ ಅನೇಕ ಹಿಂದುಳಿದ ಸಮುದಾಯದವರು ಮಂಡಲ್ ಆಯೋಗದ ಮೂಲಕ ಈಗ ಹೊರಬರುತ್ತಿದ್ದಾರೆ. ಅದರ ಕೀರ್ತಿ ಕಾಂಗ್ರೆಸ್ ಪಕ್ಷಕ್ಕೆ ಸೇರುತ್ತದೆ. ರಾಷ್ಟ್ರೀಯ ಹಿಂದುಳಿದ ಆಯೋಗವನ್ನು ಕಾಂಗ್ರೆಸ್ ಪಕ್ಷ ಅಸ್ತಿತ್ವಕ್ಕೆ ತಂದಿದೆ. ರಾಷ್ಟ್ರೀಯ ಹಿಂದುಳಿದ ಹಣಕಾಸು ಹಾಗೂ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಿ ಅದಕ್ಕೆ ೨೦೦ ಕೋಟಿ ರೂಪಾಯಿಗಳ ಸಹಾಯಧನವನ್ನು ಒದಗಿಸಲಾಗಿದೆ.

## ಬಡವರ ಪರವಾದ ಕಾರ್ಯಕ್ರಮಗಳು

ಪ್ರಧಾನಿ ಇಂದಿರಾ ಗಾಂಧಿ ಹಾಗೂ ರಾಜೀವ್‌ಗಾಂಧಿಯವರು ತಂದ ಬಡವರ ಪರವಾದ ಎಲ್ಲ ಕಾರ್ಯಕ್ರಮಗಳನ್ನು ಮುಂದುವರೆಸಿಕೊಂಡುಬಂದ ಕೀರ್ತಿ ಪಿ. ವಿ. ನರಸಿಂಹರಾವ್ ನೇತೃತ್ವದ ಕಾಂಗ್ರೆಸ್ (ಐ) ಸರ್ಕಾರದ್ದು. ಜೊತೆಗೆ ಅನೇಕ ಹೊಸ ಕಾರ್ಯಕ್ರಮಗಳನ್ನು ಸರ್ಕಾರ ಹಮ್ಮಿಕೊಂಡಿತು. ೧೯೯೧ರಿಂದ ೯೬ವರೆಗೆ ಗ್ರಾಮೀಣ ಪ್ರದೇಶದ ಬಡವರ ಅಭಿವೃದ್ಧಿಗಾಗಿ ೩೪ ಸಾವಿರ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಗಿದೆ. ಮುಂದಿನ ಐದು ವರ್ಷಗಳಲ್ಲಿ ಅಂದರೆ ಇದು ಅಧಿಕಾರಕ್ಕೆ ಬಂದನಂತರ ೯೦ ಸಾವಿರ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡುವ ಗುರಿಯನ್ನು ಕಾಂಗ್ರೆಸ್ ಪಕ್ಷ ಹೊಂದಿದೆ. ನಾಲ್ಕು ವರ್ಷಗಳಲ್ಲಿ, ಪಿ. ವಿ. ನರಸಿಂಹರಾವ್ ನೇತೃತ್ವದ ಕಾಂಗ್ರೆಸ್ (ಐ) ಸರ್ಕಾರ ಐ. ಆರ್. ಡಿ. ಪಿ. (ಇಂಟಿಗ್ರೇಟಡ್ ರೂರಲ್ ಡೆವಲಪ್‌ಮೆಂಟ್ ಪ್ರೋಗ್ರಾಮ್)ನಲ್ಲಿ ೧೧೫ ಲಕ್ಷ ಕುಟುಂಬಗಳಿಗೆ ಸಹಾಯ ಮಾಡಿದೆ.

೮.೧೨ ಲಕ್ಷ ಬಾವಿಗಳನ್ನು ಈ ಅವಧಿಯಲ್ಲಿ ತೋಡಿಸಲಾಗಿದೆ. ಇಂದಿರಾ ಆವಾಸ್, ಅಂಬೇಡ್ಕರ್ ಆವಾಸ್ ಮೊದಲಾದ ಯೋಜನೆಗಳ ಮೂಲಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ೨೮ ಲಕ್ಷ ಮನೆಗಳನ್ನು ನಿರ್ಮಿಸಿಕೊಡಲಾಗಿದೆ. ೨.೬ ಲಕ್ಷ ಹಳ್ಳಿಗಳಿಗೆ ಗ್ರಾಮೀಣ ಕಿರುನೀರು ಕುಡಿಯುವ ಯೋಜನೆ ಮೂಲಕ ಕುಡಿಯುವ ನೀರನ್ನು ಒದಗಿಸಿಕೊಡಲಾಗಿದೆ. ೨೧ ಲಕ್ಷ ಸುಲಭ ಶೌಚಾಲಯಗಳನ್ನು ಗ್ರಾಮಾಂತರ ಪ್ರದೇಶಗಳಿಗೆ ಒದಗಿಸಿಕೊಡಲಾಗಿದೆ. ೪.೧೨.ಲಕ್ಷ ಕರಕುಶಲಕರ್ಮಿಗಳ ಕಿಟ್‌ನ್ನು, ೩,೮೫,೬೯೮ ಮಂದಿ ಗ್ರಾಮಾಂತರ ಪ್ರದೇಶದ ಕುಶಲಕರ್ಮಿಗಳಿಗೆ ಒದಗಿಸಲಾಗಿದೆ. ಡಿ. ಡಬ್ಲ್ಯೂ.ಸಿ.ಆರ್.ಎ. (ಡೆವಲಪ್‌ಮೆಂಟ್ ಆಫ್ ವಿಮೆನ್ ಅಂಡ್ ಚಿಲ್ಡ್ರನ್ ಇನ್ ದಿ ರೂರಲ್ ಏರಿಯಾಸ್) ಯೋಜನೆ ಅಡಿಯಲ್ಲಿ ೧.೨ ಲಕ್ಷ ಜನರಿಗೆ ಸಹಾಯವನ್ನು ಕೊಡಲಾಗಿದೆ. ಗ್ರಾಮೀಣ ಯುವಜನರ ಸ್ವಯಂ ಉದ್ಯೋಗ ಯೋಜನೆ ಅಡಿಯಲ್ಲಿ ೧೩ ಲಕ್ಷ ಯುವಕರಿಗೆ ತರಬೇತಿ ಕೊಡಲಾಗಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ಕೆಲಸ ಮಾಡುವ ೧೬೦೦ ಸ್ವಯಂ ಸೇವಾ ಸಂಸ್ಥೆಗಳಿಗೆ ೧೬೦.೮೫ ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಲು ೭೮೩೭ ಪ್ರಸ್ತಾಪನೆಗಳಿಗೆ ಒಪ್ಪಿಗೆ ಕೊಡಲಾಗಿದೆ. ಕಾಂಗ್ರೆಸ್ (ಐ) ಪಕ್ಷದ ಪ್ರಮುಖ ಗುರಿ ಎಂದರೆ ಉದ್ಯೋಗ ಸೃಷ್ಟಿ. ಉದ್ಯೋಗ ದೃಢೀಕರಣ ಯೋಜನೆಯಡಿಯಲ್ಲಿ ದೇಶದ ೩೧೯೮ ಬ್ಲಾಕ್‌ಗಳಿದ್ದು ದುಡಿಯುವ ಕೈಗಳಿಗೆ ಕೆಲಸವನ್ನು ಕೊಡಲಾಗಿದೆ. ಜವಹರ್ ರೋಜಗಾರ್ ಯೋಜನೆ ಮೂಲಕ ಸ್ವಾವಲಂಬಿಯಾಗಿ ಕೆಲಸ ಮಾಡುವ ನಿರುದ್ಯೋಗಿ ಯುವಕರಿಗೆ ಆರ್ಥಿಕ ಸಹಾಯವನ್ನು ಕೊಡಲಾಗಿದೆ.

## ರಾಷ್ಟ್ರೀಯ ಸಾಮಾಜಿಕ ಸಹಾಯ ಕಾರ್ಯಕ್ರಮ

ಇದು ೧೯೯೫ರ ಆಗಸ್ಟ್ ೧೫ರಂದು ಪ್ರಾರಂಭವಾಗಿದ್ದು ಇದಕ್ಕೆ ೧೫೦೦ ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ. ಇದರ ಪ್ರಕಾರ ದೇಶದ ಅರ್ಹ ವೃದ್ಧರಿಗೆ ಹಾಗೂ ಅಸಹಾಯಕರಿಗೆ ವೃದ್ಧಾಪ್ಯ ವೇತನವನ್ನು ಕೊಡಲಾಗುತ್ತಿದೆ. ಈಗಾಗಲೇ ೫೪ ಲಕ್ಷ ಜನ ಇದರ ಉಪಯೋಗವನ್ನು ಪಡೆದುಕೊಂಡಿದ್ದಾರೆ. ರಾಷ್ಟ್ರೀಯ ಕುಟುಂಬ ಯೋಜನೆ ಕಾರ್ಯಕ್ರಮದ ಅಡಿಯಲ್ಲಿ ಅಸಹಾಯಕ ಕುಟುಂಬಗಳಿಗೆ ಸಹಾಯ ಮಾಡಲು ನಿರ್ಧರಿಸಲಾಗಿದ್ದು ಅಸಹಜ ಸಾವು ಹಾಗೂ ಅಪಘಾತವಾದರೆ ಅಂತಹ ಕುಟುಂಬಗಳಿಗೆ ಐದು ಸಾವಿರದಿಂದ ಹತ್ತು ಸಾವಿರ ರೂಪಾಯಿಗಳವರೆಗೆ ಪರಿಹಾರ ಕೊಡಲು ನಿರ್ಧರಿಸಲಾಗಿದೆ. ಪಿ. ವಿ. ನರಸಿಂಹರಾವ್ ಅವರ ನೇತೃತ್ವದ

ಸರ್ಕಾರ ಭಾರತದ ಆರ್ಥಿಕ ಬೆನ್ನೆಲುಬಾದ ವ್ಯವಸಾಯ ಕ್ಷೇತ್ರಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಟ್ಟಿತ್ತು. ಎಂಟನೇ ಆರ್ಥಿಕ ಯೋಜನೆಯಲ್ಲಿ ವ್ಯವಸಾಯ ಕ್ಷೇತ್ರಕ್ಕೆ ೧೦ ಸಾವಿರ ಕೋಟಿ ರೂಪಾಯಿಗಳನ್ನು ಮೀಸಲಾಗಿಡುವುದರ ಜತೆಗೆ ಶೇಕಡಾ ೧೮೦ ರಷ್ಟು ಹೆಚ್ಚಳವನ್ನು ಅದಕ್ಕೆ ಒದಗಿಸಿತು. ೧೯೯೧ರಲ್ಲಿ ಭತ್ತದ ಬೆಂಬಲ ಬೆಲೆಯನ್ನು ೨೩೦ ರಿಂದ ೩೬೦ ರೂ.ಗಳಿಗೆ ಹೆಚ್ಚಿಸಿತು. ಇದೇ ರೀತಿ ಗೋಧಿ ಬೆಂಬಲ ಬೆಲೆಯನ್ನು ೨೭೫ ರಿಂದ ೩೮೦ ರೂಪಾಯಿಗೆ ಏರಿಸಿತು. ದೇಶದಲ್ಲಿ ೧೯೯೪-೯೫ರ ಅವಧಿಯಲ್ಲಿ ೧೯.೧ ಕೋಟಿ ಟನ್ ಆಹಾರ ಉತ್ಪಾದನೆಯಾಗಿತ್ತು. ಎಂಟನೆಯ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಒಂದು ಸಾವಿರ ಕೋಟಿ ತೋಟಗಾರಿಕೆ ಉತ್ಪನ್ನ ಪಡೆಯುವ ಗುರಿ ಸರ್ಕಾರಕ್ಕೆ ಇದೆ. ಹಾಲು ಉತ್ಪಾದನೆಯಲ್ಲಿ ಅದು ವಿಕ್ರಮ ಸಾಧಿಸಿದ್ದು ೧೯೯೦-೯೧ರ ಅವಧಿಯಲ್ಲಿ ೫.೩೯ ಕೋಟಿ ಟನ್ ಹಾಲು ಉತ್ಪಾದನೆಯಾಗಿದೆ. ೧೯೯೪-೯೫ರ ಅವಧಿಯಲ್ಲಿ ೬.೩೦ ಕೋಟಿ ಟನ್ ಹಾಲು ಉತ್ಪಾದನೆಯಾಗಿದೆ. ಭಾರತದ ಚರಿತ್ರೆಯಲ್ಲಿ ಮೊಟ್ಟಮೊದಲನೇ ಬಾರಿಗೆ ೧೯೯೪-೯೫ರ ಅವಧಿಯಲ್ಲಿ ಅಮೆರಿಕದ ಒಂದು ಬಿಲಿಯನ್ ಯು. ಎಸ್. ಡಾಲರ್‌ನಷ್ಟು ವ್ಯವಸಾಯೋತ್ಪನ್ನಗಳನ್ನು ರಫ್ತು ಮಾಡಲಾಗಿದೆ. ವ್ಯವಸಾಯ ಕ್ಷೇತ್ರಕ್ಕೆ ಮತ್ತಷ್ಟು ಪುಷ್ಟಿ ಕೊಡಲು ಎನ್‌ಡಬ್ಲ್ಯೂಡಿಪಿಆರ್‌ಎ. (ನ್ಯಾಷನಲ್ ವಾಟರ್ ಶೆಡ್ ಡೆವಲಪ್‌ಮೆಂಟ್ ಪ್ರಾಜೆಕ್ಟ್ಸ್ ಫಾರ್ ರೈನ್‌ಫೆಡ್ ಏರಿಯಾಸ್. ಡಿ.ಪಿ.ಎ.ಪಿ. (ಡ್ರೌಟ್‌ಪ್ರೋನ್ ಏರಿಯಾಸ್ ಪ್ರೋಗ್ರಾಮ್), ಐ.ಡಬ್ಲ್ಯೂ.ಡಿ.ಪಿ. (ಇಂಟಿಗ್ರೇಟೆಡ್ ವೇಸ್ಟ್‌ಲ್ಯಾಂಡ್ ಡೆವಲಪ್‌ಮೆಂಟ್ ಪ್ರಾಜೆಕ್ಟ್) ಮೊದಲಾದವುಗಳಿಗೆ ಹೆಚ್ಚಿನ ಒತ್ತನ್ನು ಕೊಡಲಾಗಿದೆ. ಪಶುಸಂಗೋಪನೆ, ಕುರಿ ಅಭಿವೃದ್ಧಿ, ಮೀನುಗಾರಿಕೆ ಹಾಗೂ ಇತರ ವ್ಯವಸಾಯ ಆಶ್ರಿತ ಉದ್ಯೋಗಗಳಿಗೆ ಹೆಚ್ಚಿನ ಬೆಂಬಲ ಕೊಡಲಾಗಿದೆ. ಅಕ್ಕಿ, ಸಕ್ಕರೆ, ಗೋಧಿ ಎಣ್ಣೆ, ಸೀಮೆಎಣ್ಣೆ ಮೊದಲಾದ ಅಗತ್ಯ ವಸ್ತುಗಳನ್ನು ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸಲು ಸರ್ಕಾರ ವ್ಯಾಪಕ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ. ವಿಶೇಷವಾಗಿ ದೇಶದ ೧೭೫೨ ಹಿಂದುಳಿದ ಹಾಗೂ ಬರಗಾಲಪೀಡಿತ ಪ್ರದೇಶಗಳಲ್ಲಿ ಈ ಸಾರ್ವಜನಿಕ ವಿತರಣೆ ವ್ಯವಸ್ಥೆಯನ್ನು ಸಮರ್ಪಕವಾಗಿ ಹಾಗೂ ದಕ್ಷತೆಯಿಂದ ನಿರ್ವಹಿಸಲಾಗಿದೆ. ೧೯೯೫-೯೬ರಲ್ಲಿ ಇದಕ್ಕೆ ೫೫೦೦ ಕೋಟಿ ರೂಪಾಯಿಗಳ ಸಹಾಯಧನವನ್ನು ಕೊಡಲಾಗಿದೆ.

### ಪರಿಶಿಷ್ಟ ಜಾತಿ

ರಾಷ್ಟ್ರೀಯ ಸಫಾಯಿ ಕರ್ಮಚಾರಿ ಆಯೋಗ ಕಳೆದ ಎರಡು ವರ್ಷಗಳಿಂದ ಕೆಲಸ ಮಾಡುತ್ತಿದ್ದು ಸಫಾಯಿ ಕರ್ಮಚಾರಿಗಳ ಹಿತರಕ್ಷಣೆ ಮಾಡುತ್ತಿದೆ. ಸಂವಿಧಾನದ ೧೫ ಮತ್ತು ೧೬ ನೇ ವಿಧಿಪ್ರಕಾರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಕ್ಕೆ ದೊರಕಿರುವ ಮೀಸಲಾತಿ ಸೌಲಭ್ಯ ಈಗ ಎಲ್ಲೆಡೆ ಇದೆ. ಈ ಮೀಸಲಾತಿ ಸೌಲಭ್ಯವನ್ನು ಮುಂದುವರಿಸುವುದಕ್ಕಾಗಿ ಸರ್ಕಾರ ಈಗಾಗಲೇ ಸಂವಿಧಾನಕ್ಕೆ ತಿದ್ದುಪಡಿಯನ್ನು ತಂದಿದೆ. ಡಾ। ಅಂಬೇಡ್ಕರ್ ಅವರ ಸಾಮಾಜಿಕ ನ್ಯಾಯದ ಸಂದೇಶವನ್ನು ಹರಡಲು ಅನುಕೂಲವಾಗುವಂತೆ ಡಾ। ಅಂಬೇಡ್ಕರ್ ಫೌಂಡೇಶನ್ ಅನ್ನು ಸರ್ಕಾರ ಪ್ರಾರಂಭಿಸಿದೆ. ಲಕ್ನೋದ ಡಾ। ಅಂಬೇಡ್ಕರ್ ವಿಶ್ವವಿದ್ಯಾನಿಲಯವನ್ನು ಕೇಂದ್ರ ವಿಶ್ವವಿದ್ಯಾನಿಲಯವನ್ನಾಗಿ ಮಾರ್ಪಡಿಸಲಾಗಿದೆ. ದೇಶದ ಒಂಬತ್ತು ವಿಶ್ವವಿದ್ಯಾನಿಲಯಗಳಲ್ಲಿ ಡಾ। ಅಂಬೇಡ್ಕರ್ ಪೀಠವನ್ನು ಸ್ಥಾಪಿಸಲಾಗಿದೆ. ಪ್ರತಿಭಾವಂತ ಪರಿಶಿಷ್ಟ ಜಾತಿ ಮಕ್ಕಳಿಗೆ ಅಂಬೇಡ್ಕರ್ ವಿದ್ಯಾರ್ಥಿ ವೇತನ ಮತ್ತು ಸಾಮಾಜಿಕ ನ್ಯಾಯ ಅನುಷ್ಠಾನದಲ್ಲಿ ಕೆಲಸ ಮಾಡಿದ ವ್ಯಕ್ತಿಗೆ ಡಾ। ಅಂಬೇಡ್ಕರ್ ರಾಷ್ಟ್ರೀಯ ಪ್ರಶಸ್ತಿಯನ್ನು ಕೊಡಲು ನಿರ್ಧರಿಸಲಾಗಿದೆ.

### ಬುಡಕಟ್ಟು ಜನಾಂಗದ ಅಭಿವೃದ್ಧಿ

ಟ್ರೈಬಲ್ ಕೋ-ಆಪರೇಟಿವ್ ಮಾರ್ಕೆಟಿಂಗ್ ಡೆವಲಪ್‌ಮೆಂಟ್ ಫೆಡರೇಶನ್‌ಗೆ ಕೊಡುವ ಸಹಾಯಧನವನ್ನು ೫೦ ಕೋಟಿ ರೂ.ಗಳಿಂದ ೧೦೦ ಕೋಟಿ ರೂ.ಗಳಿಗೆ ಹೆಚ್ಚಿಸಲಾಗಿದೆ.

### ಮಹಿಳೆ

ಕಾಂಗ್ರೆಸ್ ಸರ್ಕಾರ ರಾಷ್ಟ್ರೀಯ ಮಹಿಳಾ ಕೋಶವನ್ನು ಅಭಿವೃದ್ಧಿ ಪಡಿಸಿದ್ದು ಮಹಿಳೆ ಸ್ವಾವಲಂಬಿತವಾಗಿ ಬದುಕಲು ಬೇಕಾದ ಪ್ರೋತ್ಸಾಹ ಕ್ರಮವನ್ನು ರೂಪಿಸಿದೆ. ಆಕೆ ಅಂಚೆ ಕಚೇರಿಯಲ್ಲಿ ೩೦೦ ರೂ.ಗಳನ್ನು ಉಳಿತಾಯ ಮಾಡಿದರೆ ೩೭೫ ರೂಪಾಯಿಗಳನ್ನು ಆಕೆಗೆ ಒಂದು ವರ್ಷದ ನಂತರ ಕೊಡಲಾಗುತ್ತದೆ. ರಾಷ್ಟ್ರೀಯ ಮಹಿಳಾ ಆಯೋಗವನ್ನು ಈಗಾಗಲೇ ಪ್ರಾರಂಭಿಸಲಾಗಿದ್ದು ಮಹಿಳೆಯರ ಹಕ್ಕು ಬಾಧ್ಯತೆಗಳ ಬಗ್ಗೆ ಇದು ಚಿಂತಿಸುತ್ತದೆ. ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿಯನ್ನು ಕೂಡ ಈಗಾಗಲೇ ಒದಗಿಸಲಾಗಿದೆ.

## ಅಲ್ಪಸಂಖ್ಯಾತರ ಅಭಿವೃದ್ಧಿ

ಕಾಂಗ್ರೆಸ್ ಸರ್ಕಾರ ಭಾರತದ ಎಲ್ಲ ಜನರನ್ನು ಒಂದೇ ಎಂಬಂತೆ ನೋಡುತ್ತದೆ. ಆದರೂ ಅಲ್ಪಸಂಖ್ಯಾತರ ಅಭಿವೃದ್ಧಿಗೆ ವಿಶೇಷ ಆದ್ಯತೆಯನ್ನು ಈ ಪಕ್ಷ ನೀಡಿದೆ. ಅಲ್ಪಸಂಖ್ಯಾತರ ಅಭಿವೃದ್ಧಿಗಾಗಿ ೧೫ ಅಂಶಗಳ ಕಾರ್ಯಕ್ರಮವನ್ನು ರೂಪಿಸಲಾಗಿದೆ. ಕಾಂಗ್ರೆಸ್ ಸರ್ಕಾರ ರಾಷ್ಟ್ರೀಯ ಅಲ್ಪಸಂಖ್ಯಾತರ ಹಣಕಾಸು ಮತ್ತು ಅಭಿವೃದ್ಧಿ ನಿಗಮವನ್ನು ಸ್ಥಾಪಿಸಿದ್ದು ಅದಕ್ಕೆ ೫೦೦ ಕೋಟಿ ರೂಪಾಯಿಗಳ ಬಂಡವಾಳವನ್ನು ಒದಗಿಸಲಾಗಿದೆ. ಈ ಆಯೋಗಕ್ಕೆ ಶಾಸನಬದ್ಧ ಅಧಿಕಾರವನ್ನು ಕೊಡಲಾಗಿದ. ಮುಸ್ಲಿಂ ನಾಯಕರು ಹಾಗೂ ಧರ್ಮಗುರುಗಳ ಸಲಹೆ ತೆಗೆದುಕೊಂಡು ಅವರ ಇಚ್ಛಾನುಸಾರ ೧.೧.೧೯೯೬ರಿಂದ ವಕ್ಫ್ ಕಾನೂನಿಗೆ ತಿದ್ದುಪಡಿಯನ್ನು ಮಾಡಲಾಗಿದೆ. 'ಮೌಲಾನ ಆಜಾದ್ ಫೌಂಡೇಶನ್' ಅನ್ನು ಸ್ಥಾಪಿಸಿ ಅದಕ್ಕೆ ೩೦ ಕೋಟಿ ರೂಪಾಯಿಗಳ ಸಹಾಯಧನ ಒದಗಿಸಿ ಅಲ್ಪಸಂಖ್ಯಾತರ ಶಿಕ್ಷಣದ ಅಭಿವೃದ್ಧಿ ಕೈಗೊಳ್ಳಲು ಸಂಕಲ್ಪಿಸಲಾಗಿದೆ. ಮುಸ್ಲಿಂ ಹಾಗೂ ಇತರ ಅಲ್ಪಸಂಖ್ಯಾತರಿಗೆ ಸಂವಿಧಾನ ನೀಡಿರುವ ಎಲ್ಲ ಸೌಲಭ್ಯಗಳನ್ನು ಒದಗಿಸಿಕೊಡಲು ಕಾಂಗ್ರೆಸ್ ಬದ್ಧವಾಗಿದೆ.

## ಕಾರ್ಮಿಕರು

ಕಾಂಗ್ರೆಸ್ ಸರ್ಕಾರ ಶ್ರಮಜೀವಿಗಳ ಬಗ್ಗೆ ಅಪಾರ ಗೌರವವನ್ನು ಹೊಂದಿದೆ. ಈ ಅವಧಿಯಲ್ಲಿ ಬೋನಸ್ ನೀಡಿಕೆಗೆ ಬೇಕಾದ ಹಣಕಾಸು ಸೌಲಭ್ಯವಾಗಿ ೨೫೦೦ ಕೋಟ ರೂ.ಗಳಿಂದ ೩೫೦೦ ಕೋಟಿ ರೂ.ಗಳವರೆಗೆ ಒದಗಿಸಲಾಗಿದೆ. ಬೋನಸ್ ಮೊತ್ತವನ್ನು ಕೂಡ ೧೬೦೦ರಿಂದ ೨೦೦೦ ರೂ.ಗೆ ಹೆಚ್ಚಿಸಲಾಗಿದೆ.

## ನಿವೃತ್ತ ಸೈನಿಕರು

೧೯೯೨ರಲ್ಲಿ ಕಾಂಗ್ರೆಸ್ ಸರ್ಕಾರ ಒನ್‌ಟೈಮ್ ಇನ್‌ಕ್ರೀಸ್ (ಒಂದು ಬಾರಿ ಹೆಚ್ಚಳ) ಯೋಜನೆಯಲ್ಲಿ ನಿವೃತ್ತ ಸೈನಿಕರ ನಿವೃತ್ತಿ ವೇತನ ಹಾಗೂ ಇತರ ಸೌಲಭ್ಯಗಳನ್ನು ಗಣನೀಯ ಪ್ರಮಾಣದಲ್ಲಿ ಹೆಚ್ಚಿಸಲಾಗಿದೆ. ಐದು ಸಾವಿರ ನಿವೃತ್ತ ಸೈನಿಕರು ಇದರ ಪ್ರಯೋಜನವನ್ನು ಪಡೆದಿದ್ದಾರೆ.

## ಅಂಗವಿಕಲರು

ಅಂಗವಿಕಲರ ಕಲ್ಯಾಣಕ್ಕಾಗಿ ವಿಶೇಷವಾಗಿ ಮಕ್ಕಳ ಮನೋವಿಕಾಸ ಮತ್ತು ಅಭಿವೃದ್ಧಿಗಾಗಿ ಕಳೆದ ಸಾರಿ ಲೋಕಸಭೆಯಲ್ಲಿ ಕಾಯಿದೆಯೊಂದನ್ನು ಮಂಡಿಸಲಾಯಿತು. ರಾಷ್ಟ್ರೀಯ ಹಣಕಾಸು ನಿಗಮದಿಂದ ಈ ವರ್ಗದ ಜನರ ಕಲ್ಯಾಣಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಕಾರ್ಯಕ್ರಮಗಳನ್ನು ಕೈಗೊಳ್ಳಲು ಷೇರ್ ಕ್ಯಾಪಿಟಲ್ ಆಗಿ ೨೦೦ ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ.

## ಶಿಕ್ಷಣ

ಪಿ. ವಿ. ನರಸಿಂಹರಾವ್ ಅವರ ನೇತೃತ್ವದ ಸರ್ಕಾರ ಶಿಕ್ಷಣದಲ್ಲಿ ಅತ್ಯಮೋಘವಾದ ಸಾಧನೆಯನ್ನು ಮಾಡಿದೆ. ದೇಶದಲ್ಲಿ ನಿಂತುಹೋಗಿದ್ದ ಮಧ್ಯಾಹ್ನ ಉಪಹಾರ ಯೋಜನೆಯನ್ನು ಮತ್ತೆ ಪ್ರಾರಂಭಿಸಲಾಗಿದೆ. ಇದರಿಂದಾಗಿ ೧೧ ಕೋಟಿ ಮಕ್ಕಳು ಶಾಲೆಗೆ ಬರುವಂತಾಗಿದೆ. ದೇಶದ ೪೨ ಹಿಂದುಳಿದ ಜಿಲ್ಲೆಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಒತ್ತು ಕೊಡಲು ಪ್ರಾಥಮಿಕ ಶಿಕ್ಷಣ ಯೋಜನೆಯನ್ನು ರೂಪಿಸಲಾಗಿದೆ. ಈಗಾಗಲೇ ದೇಶದ ೩೦೦ ಜಿಲ್ಲೆಗಳಲ್ಲಿ ಸಂಪೂರ್ಣ ಸಾಕ್ಷರತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ರಾಷ್ಟ್ರೀಯ ಸಾಕ್ಷರತಾ ಮಿಷನ್ ಮೂಲಕ ಇದನ್ನು ಸಮರೋಪಾದಿಯಲ್ಲಿ ಕೈಗೊಳ್ಳಲಾಗುತ್ತಿದೆ. ಕಾಂಗ್ರೆಸ್ ಸರ್ಕಾರ ೨೦೦೧ ರ ವೇಳೆಗೆ ದೇಶದ ಎಲ್ಲ ಮಕ್ಕಳಿಗೂ ಉತ್ತಮ ಶಿಕ್ಷಣ ನೀಡುವ ಭರವಸೆಯನ್ನು ನೀಡುತ್ತದೆ. ವಿಶೇಷವಾಗಿ ಹೆಣ್ಣು ಮಗುವಿನ ಶಿಕ್ಷಣಕ್ಕೆ ಅದು ಆದ್ಯತೆಯನ್ನು ಕೊಡುತ್ತದೆ. ತಾಂತ್ರಿಕ ಶಿಕ್ಷಣ, ವೃತ್ತಿ ಶಿಕ್ಷಣ ಹಾಗೂ ಪ್ರೌಢಶಿಕ್ಷಣವನ್ನು ಉತ್ತಮಗೊಳಿಸಲು ವಿಶೇಷ ಕಾರ್ಯಕ್ರಮಗಳನು ಹಮ್ಮಿಕೊಳ್ಳುತ್ತದೆ.

## ವಿದ್ಯುತ್ ಉತ್ಪಾದನೆ

ಪ್ರತಿವರ್ಷ ಖಾಸಗಿಯವರ ನೆರವಿನಿಂದ ದೇಶದ ವಿದ್ಯುತ್ ಉತ್ಪಾದನಾ ವಲಯಕ್ಕೆ ೪೫೦೦ ಮೆಗಾವ್ಯಾಟ್ ವಿದ್ಯುತ್ತನ್ನು ಸೇರಿಸುವ ಸಂಕಲ್ಪ ಕಾಂಗ್ರೆಸ್(ಐ) ಸರ್ಕಾರದ್ದು. ವಿದ್ಯುತ್ ಕ್ಷೇತ್ರದಲ್ಲಿ ಖಾಸಗಿಯವರ ಸಹಭಾಗಿತ್ವವನ್ನು ಪಡೆಯಲು ಕೇಂದ್ರ ಸರ್ಕಾರ ಈಗಾಗಲೇ ಸೂಕ್ತ ಕಾರ್ಯಕ್ರಮವನ್ನು ಕೈಗೊಂಡಿದೆ. ೧೦೦೦ ಮೆಗಾವ್ಯಾಟ್ ವಿದ್ಯುದಾಗಾರವನ್ನು ಖಾಸಗಿ ವಲಯದಿಂದ ಪ್ರಾರಂಭಿಸಲು ಸಿದ್ಧತೆಗಳು ನಡೆದಿದೆ. ೧೯೯೦-೯೧ ರಲ್ಲಿ ೨೬೪.೭ ಬಿಲಿಯನ್ ಯುನಿಟ್ಸ್ ಉತ್ಪಾದನೆಯಾದರೆ, ೧೯೯೫-೯೬ರ ಅವಧಿಯಲ್ಲಿ ೩.೭೯.೮ ಬಿಲಿಯನ್ ಯುನಿಟ್ಸ್ ಉತ್ಪಾದನೆಯಾಗಿದೆ. ಅಂದರೆ ಉತ್ಪಾದನೆಯಲ್ಲಿ ಶೇಕಡಾ ೩೨.೫ ರಷ್ಟು ಹೆಚ್ಚಳವನ್ನು ಗುರುತಿಸಬಹುದು. ಈ ಐದು ವರ್ಷಗಳ ಅವಧಿಯಲ್ಲಿ ೭೫ ಸಾವಿರ ಹೊಸ ಹಳ್ಳಿಗಳಿಗೆ ಹಾಗೂ ೨೧ ಲಕ್ಷ ವ್ಯವಸಾಯ ಉಪಯೋಗಿ ಪಂಪ್‌ಸೆಟ್ಟುಗಳಿಗೆ ವಿದ್ಯುದೀಕರಣ ಮಾಡಲಾಗಿದೆ.

## ರಸಗೊಬ್ಬರ

ಈ ಅವಧಿಯಲ್ಲಿ ೧೦೪.೩ ಲಕ್ಷ ಟನ್ ರಸಗೊಬ್ಬರ ಉತ್ಪಾದನೆಯಾಗಿದ್ದು ಇದು ಒಂದು ಸಾರ್ವಕಾಲಿಕ ದಾಖಲೆಯಾಗಿದೆ. ಈ ಕ್ಷೇತ್ರದಲ್ಲಿ ೪೨೦೦ ಕೋಟಿ ರೂಪಾಯಿಗಳ ಬಂಡವಾಳವನ್ನು ತೊಡಗಿಸಲಾಗಿದೆ.

## ದೂರಸಂಪರ್ಕ

ಪಿ.ವಿ. ನರಸಿಂಹರಾವ್ ನೇತೃತ್ವದ ಕಾಂಗ್ರೆಸ್ ಸರ್ಕಾರ ದೂರ ಸಂಪರ್ಕ ಯುಗದಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ಮಾಡಿದೆ. ೧೯೯೪ರಲ್ಲಿ ರಾಷ್ಟ್ರೀಯ ದೂರಸಂಪರ್ಕ ನೀತಿಯನ್ನು ಜಾರಿಗೊಳಿಸಲಾಯಿತು. ಕಳೆದ ನಾಲ್ಕು ವರ್ಷಗಳಲ್ಲಿ ೧.೩೯ ಲಕ್ಷ ಹಳ್ಳಿಗಳಿಗೆ ದೂರವಾಣಿ ಸಂಪರ್ಕವನ್ನು ಒದಗಿಸಿಕೊಂಡಲಾಗಿದೆ. ೧,೫೫,೪೧೦ ಜನರಿಗೆ ಟೆಲಿಫೋನ್ ಸಂಪರ್ಕವನ್ನು ಕಲ್ಪಿಸಿಕೊಡಲಾಗಿದೆ. ೧೯೯೭ ರೊಳಗೆ ದೇಶದ ಪ್ರತಿಯೊಂದು ಗ್ರಾಮ ಪಂಚಾಯತಿ ಅಥವಾ ಹಳ್ಳಿಗೆ ಟೆಲಿಫೋನ್ ಒದಗಿಸುವ ಗುರಿಯನ್ನು ಹೊಂದಲಾಗಿದೆ. ಎಸ್.ಟಿ.ಡಿ. ಬೂತ್‌ಗಳ ಮೂಲಕ ಸುಮಾರು ೧೦ ಲಕ್ಷ ಜನರಿಗೆ ಉದ್ಯೋಗವನ್ನು ಒದಗಿಸಿಕೊಡಲಾಗಿದೆ.

## ಸಣ್ಣ ಕೈಗಾರಿಕೆ

ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಎಸ್. ಐ. ಡಿ. ಬಿ. ಐ. (ಸ್ಮಾಲ್ ಇಂಡಸ್ಟ್ರೀಸ್ ಡೆವಲಪ್‌ಮೆಂಟ್ ಬ್ಯಾಂಕ್ ಆಫ್ ಇಂಡಿಯಾ)ವನ್ನು ಪ್ರಾರಂಭಿಸಲಾಗಿದೆ. ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಸಹಾಯಕ ಸಲಹಾ ಕೇಂದ್ರಗಳಾಗಿ ದೇಶದ ಎಲ್ಲೆಡೆ ೧೦೦ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ. ಖಾದಿ ಮತ್ತು ಗ್ರಾಮೀಣ ಕೈಗಾರಿಕೆ ಅಭಿವೃದ್ಧಿಗಾಗಿ ೧೦೦೦ ಕೋಟಿ ರೂಪಾಯಿಗಳ ಯೋಜನೆಯೊಂದನ್ನು ಅನುಷ್ಠಾನ ಮಾಡುವ ಗುರಿಯನ್ನು ಹೊಂದಲಾಗಿದೆ.

## ಸಾರ್ವಜನಿಕ ವಲಯ

ಸಾರ್ವಜನಿಕ ಉದ್ದಿಮೆಗಳನ್ನು ಲಾಭದಾಯಕವನ್ನಾಗಿ ಮಾಡಲು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಇದರಲ್ಲಿ ೧,೫೦,೦೦೦ ಕೋಟಿ ರೂಪಾಯಿ ಹಣವನ್ನು ಸಾರ್ವಜನಿಕ ವಲಯದಲ್ಲಿ ತೊಡಗಿಸಲಾಗಿದೆ. ಆದರೆ ೩೦೦೦ ಕೋಟಿ ರೂಪಾಯಿಗಳು ಮಾತ್ರ ಇದರಿಂದ ಹಿಂದೆ ಬರುತ್ತದೆ. ಇಂತಹ ಏರುಪೇರನ್ನು ತಪ್ಪಿಸಲು ಸಾರ್ವಜನಿಕ ಉದ್ದಿಮೆಗಳ ಕಾರ್ಯಾಚರಣೆಯನ್ನು ತೀವ್ರವಾಗಿ ಪರಿಶೀಲನೆ ಮಾಡಲಾಗಿದೆ. ಕೇಂದ್ರ ಸರ್ಕಾರದ ನ್ಯಾಷನಲ್ ರಿನ್ಯೂಯಲ್ ಫಂಡ್‌ನ್ನು ಅಸ್ತಿತ್ವಕ್ಕೆ ತಂದಿದ್ದು ಇದರ ಯೋಜನೆಯಡಿ ೨೦೦೦ ಕೋಟಿ ರೂಪಾಯಿಗಳನ್ನು ಸಹಾಯಧನವಾಗಿ ಕೊಡುವ ಗುರಿಯನ್ನು ಹೊಂದಲಾಗಿದೆ.

## ವಿಜ್ಞಾನ ಮತ್ತು ತಾಂತ್ರಿಕ

ಇಂದಿರಾ ಗಾಂಧಿ ಹಾಗೂ ರಾಜೀವ್‌ಗಾಂಧಿಯವರು ಪ್ರಾರಂಭಿಸಿದ ತಾಂತ್ರಿಕ ಕ್ಷೇತ್ರದ ಕ್ರಾಂತಿಯನ್ನು ಈ ಕಾಲದಲ್ಲಿ ಶ್ರದ್ಧೆಯಿಂದ ಮುಂದುವರಿಸಿಕೊಂಡು ಬರಲಾಗಿದೆ. ಬಾಹ್ಯಾಕಾಶದಲ್ಲಿ ಮಾಡಿದ ಸಾಧನೆಯಿಂದಾಗಿ ದೂರಸಂಪರ್ಕ, ದೂರದರ್ಶನ ಹಾಗೂ ಹವಾಮಾನ ಅರಿವಿಗೆ ತುಂಬಾ ಲಾಭವಾಗಿದೆ. ವಿಜ್ಞಾನ ಹಾಗೂ ತಾಂತ್ರಿಕ ಕ್ಷೇತ್ರದ ಫಲಗಳನ್ನು ರೈತರಿಗೆ ಮುಟ್ಟಿಸಲು ತೀವ್ರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಮೊದಲಬಾರಿಗೆ ಆಓರಲ್ ಟ ಪೋಲಿಯೊ ವ್ಯಾಕ್ಸಿನೇಶನ್‌ನನ್ನು ಮಕ್ಕಳಿಗೆ ಹಾಕುವ ವ್ಯಾಪಕ ಕಾರ್ಯಕ್ರಮವನ್ನು ದೇಶಾದ್ಯಂತ ಹಮ್ಮಿಕೊಳ್ಳಲಾಗಿದ್ದು ೨೦ ದಶಲಕ್ಷ ಮಕ್ಕಳು ಇದರ ಪ್ರಯೋಜನವನ್ನು ಪಡೆದಿದ್ದಾರೆ. ಕಂಪ್ಯೂಟರ್ ತಂತ್ರಜ್ಞಾನ ಎಲ್ಲೆಡೆ ಜನಪ್ರಿಯವಾಗುವಂತೆ ಮಾಡಲಾಗಿದೆ.

## ಉತ್ತರದಾಯತ್ವ

ಇಡೀ ದೇಶದ ಜನತೆಗೆ ಲೋಕಸಭೆ ಹಾಗೂ ಇತರ ಶಾಸನಸಭೆಗಳು ಉತ್ತರದಾಯಿತ್ವವಾಗಿರಬೇಕೆಂದು ಹಿರಿಯ ಆಸೆ ಕಾಂಗ್ರೆಸ್ ಪಕ್ಷದ್ದು. ಜನಪ್ರತಿನಿಧಿಗಳು ಕೂಡ ಜನತೆಗೆ ಜವಾಬ್ದಾರಿಯುತವಾಗಿರಬೇಕು. ಕಾರ್ಯಾಂಗ, ಶಾಸಕಾಂಗ ಹಾಗೂ ನ್ಯಾಯಾಂಗಗಳು ಪರಸ್ಪರ ಉತ್ತರದಾಯಿತ್ವದ ಹೊಣೆಯನ್ನು ಹೊರಬೇಕು. ನ್ಯಾಯಾಂಗದ ಸ್ವಾತಂತ್ರ್ಯವನ್ನು ಕಾಂಗ್ರೆಸ್ ಪಕ್ಷ ಗೌರವಿಸುತ್ತದೆ. ಲೋಕಪಾಲ ಮಸೂದೆಯನ್ನು ಅನುಷ್ಠಾನಕ್ಕೆ ತಂದ ಕೀರ್ತಿ ಕಾಂಗ್ರೆಸ್‌ನದ್ದು. ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾದ ಜನಪ್ರತಿನಿಧಿಗಳು ಒಂದು ವರ್ಷದೊಳಗೆ ತಮ್ಮ ಆಸ್ತಿಯನ್ನು ಘೋಷಿಸುವುದನ್ನು ಕಡ್ಡಾಯ ಮಾಡಲಾಗಿದೆ. ಲೋಕಸಭಾ ಸದಸ್ಯರಿಗೆ ಅವರ ಕ್ಷೇತ್ರಾಭಿವೃದ್ಧಿಗೆ ಪ್ರತಿವರ್ಷ ಒಂದು ಕೋಟಿ ರೂಪಾಯಿ ಹಣ ಕೊಡುವ ವಿನೂತನ ಕಾರ್ಯಕ್ರಮ ಜಾರಿಗೆ ಬಂದಿದೆ.

## ರಕ್ಷಣಾ ವ್ಯವಸ್ಥೆ

ದೇಶದ ರಕ್ಷಣಾ ವ್ಯವಸ್ಥೆಯನ್ನು ಸುವ್ಯವಸ್ಥಿತಗೊಳಿಸಲು ಕಾಂಗ್ರೆಸ್ ಸರ್ಕಾರ ಆದ್ಯ ಗಮನವನ್ನು ನೀಡಿದೆ. ಅರ್ಜುನ್ ಟ್ಯಾಂಕ್ ಅಭಿವೃದ್ಧಿ., ಪೃಥ್ವಿ, ನಾಗ್, ಆಕಾಶ್ ಮೊದಲಾದ ಕ್ಷಿಪಣಿಗಳ ಅಭಿವೃದ್ಧಿ. ಅಗ್ನಿ ಯೋಜನೆಯ ಯಶಸ್ವಿ ಜಾರಿ, ಎಲ್. ಸಿ. ಎ.(ಲೈಟ್ ಕಾಂಬ್ಯಾಟ್ ಏರ್‌ಕ್ರಾಫ್ಟ್) ಲಘು ವಿಮಾನ ಆವಿಷ್ಕಾರ, ಪ್ರಸ್ತುತ ಭಾರತದ ರಕ್ಷಣಾ ವ್ಯವಸ್ಥೆ ಸುವ್ಯವಸ್ಥಿತವಾಗಿದ್ದು ಇಡೀ ದೇಶದ ರಕ್ಷಣಾ ಭಾರವನ್ನು ಅದು ಹೊತ್ತಿದೆ.

## ವಿದೇಶಾಂಗ ನೀತಿ

ಕಳೆದ ಐದು ವರ್ಷಗಳಿಂದ ಪಿ. ವಿ. ನರಸಿಂಹರಾವ್ ನೇತೃತ್ವದ ಭಾರತ ಸರ್ಕಾರ ದೂರದೃಷ್ಟಿಪೂರಿತವಾದ ವಿದೇಶಾಂಗ ನೀತಿಯನ್ನು ಅನುಸರಿಸಿಕೊಂಡುಬಂದಿದೆ. ಭಾರತದ ಘನತೆ ಹಾಗೂ ಗೌರವವನ್ನು ಕಾಪಾಡಲು ಬೇಕಾದ ಕಾರ್ಯಕ್ರಮಗಳನ್ನು ಅದು ಹಮ್ಮಿಕೊಂಡಿದೆ. ಅಮೆರಿಕ, ಜಪಾನ್, ಕೆನಡಾ, ಆಸ್ಟ್ರೇಲಿಯಾ ನ್ಯೂಜಿಲ್ಯಾಂಡ್, ಇಂಗ್ಲೆಂಡ್ ಮೊದಲಾದ ದೇಶಗಳೊಡನೆ ಸುಮಧುರ ಬಾಂಧವ್ಯವನ್ನು ಅದು ಇಟ್ಟುಕೊಂಡಿದೆ. ೧೯೯೩ರಲ್ಲಿ ಪ್ರಧಾನಿ ಪಿ. ವಿ. ನರಸಿಂಹರಾವ್ ಅವರು ಚೀಣಾ ದೇಶಕ್ಕೂ, ೧೯೯೪ರಲ್ಲಿ ಅಮೆರಿಕಕ್ಕೂ ಭೇಟಿಕೊಟ್ಟು ಆ ದೇಶಗಳೊಡನೆ ಸುಮಧುರ ಬಾಂಧವ್ಯವನ್ನು ಸ್ಥಾಪಿಸಲು ಕಾರಣಕರ್ತರಾಗಿದ್ದಾರೆ. ಜಪಾನ್, ಇಂಗ್ಲೆಂಡ್, ಜರ್ಮನಿ ಮೊದಲಾದ ದೇಶಗಳು ಭಾರತದ ಪ್ರಧಾನಿಯವರ ಭೇಟಿಯಿಂದ ಸ್ಫೂರ್ತಿಗೊಂಡು ಅನೇಕ ಒಪ್ಪಂದಗಳಿಗೆ ಸಹಿ ಹಾಕಿವೆ. ಇಸ್ರೇಲ್, ದಕ್ಷಿಣ ಕೊರಿಯಾ, ಮತ್ತು ದಕ್ಷಿಣ ಆಫ್ರಿಕ ದೇಶಗಳೊಡನೆ ಹೊಸ ಸಂಬಂಧಗಳು ಏರ್ಪಟ್ಟಿವೆ. ಸಾರ್ಕ್ ಮೂಲಕ ಹೊಸ ಆಯಾಮವನ್ನು ಭಾರತಕ್ಕೆ ಕೊಡಲಾಗಿದೆ. ಬಾಂಗ್ಲಾ ದೇಶದೊಡನೆ ಸುಮಧುರ ಬಾಂಧವ್ಯವನ್ನು ಇಟ್ಟುಕೊಳ್ಳಲಾಗಿದೆ. ನೇಪಾಳದೊಡನೆ ಇದ್ದ ಮಹಾಕಾಳಿ ನದಿಯ ವಿವಾದವನ್ನು ಬಗೆಹರಿಸಲಾಗಿದೆ. ಪಾಕಿಸ್ತಾನದೊಡನೆ ಕೂಡ ಉತ್ತಮ ಸಂಬಂಧವನ್ನು ಇಟ್ಟುಕೊಳ್ಳಲು ಸರ್ಕಾರ ಬದ್ಧವಾಗಿದೆ.

## ನಮ್ಮ ಪಣ

೧೯೯೧ ರಿಂದ ೯೬ರವರೆಗೆ ಕಾಂಗ್ರೆಸ್ (ಐ) ಸರ್ಕಾರದ ಸಾಧನೆಗಳ ಹಿನ್ನೆಲೆಯಲ್ಲಿ ನಾವು ಕೆಳಕಂಡ ವಿಚಾರಗಳನ್ನು ಮತದಾರರ ಮುಂದೆ ಇಡಲು ಬಯಸುತ್ತೇವೆ. ದೇಶದಲ್ಲಿ ಕೋಮು ಸೌಹಾರ್ದತೆ ಕಾಪಾಡಿ ಆಂತರಿಕವಾಗಿ ರಾಷ್ಟ್ರೀಯ ಭದ್ರತೆ. ರಾಜಕೀಯ ಸ್ಥಿರತೆ ಹಾಗೂ ಶಾಂತಿ ಸ್ಥಾಪನೆ ಕಾಂಗ್ರೆಸ್ ಪಕ್ಷದ ಪ್ರಮುಖ ಗುರಿಯಾಗಿದೆ. ಕಳೆದ ಐದು ವರ್ಷಗಳ ಸಾಧನೆಯ ಹಿನ್ನೆಲೆಯಲ್ಲಿ ಈ ಕೆಳಗಿನ ಕಾರ್ಯಕ್ರಮಗಳನ್ನು ಕಾಂಗ್ರೆಸ್ (ಐ) ಪಕ್ಷ ಹಮ್ಮಿಕೊಳ್ಳುತ್ತದೆ.

## ಮೂಲಭೂತ ಅವಶ್ಯಕತೆ

- ಮನೆ ಇಲ್ಲದವರಿಗೆ ಮನೆ.
- ೨೦೦೨ರೊಳಗೆ ಉದ್ಯೋಗ ಇಲ್ಲದ ಎಲ್ಲರಿಗೂ ಉದ್ಯೋಗಾವಕಾಶ.
- ಎಲ್ಲ ಗ್ರಾಮಗಳಿಗೂ ಶುದ್ಧ ಕುಡಿಯುವ ನೀರು.
- ದೇಶದ ಎಲ್ಲ ಪ್ರಾಥಮಿಕ ಶಾಲಾ ಮಕ್ಕಳಿಗೂ ಮಧ್ಯಾಹ್ನದ ಉಪಹಾರ ಯೋಜನೆ.
- ಮಕ್ಕಳಿಗೆ ಉತ್ತಮ ಆರೋಗ್ಯ ಹಾಗೂ ಶಿಕ್ಷಣ ದೊರಕಿಸಿಕೊಡಲು ಪ್ರಾಮಾಣಿಕ ಪ್ರಯತ್ನ.
- ೯ ನೆಯ ಯೋಜನೆಯೊಳಗೆ ಆಪರೇಷನ್ ಬ್ಲಾಕ್‌ಬೋರ್ಡ್ ಯೋಜನೆಯನ್ನು ಸಂಪೂರ್ಣವಾಗಿ ಅನುಷ್ಠಾನ ಮಾಡುವುದು.
- ದೇಶದ ಎಲ್ಲ ರೈಲು ಹಳಿಗಳನ್ನು ಬ್ರಾಡ್‌ಗೇಜ್‌ಗೆ ಪರಿವರ್ತಿಸುವುದು.
- ಎಲ್ಲ ಹಳ್ಳಿಗಳಿಗೂ ಸಂಪರ್ಕ ಕಲ್ಪಿಸುವುದು.
- ಲೋಕಸಭೆ ಹಾಗೂ ಶಾಸನಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ.
- ಕೇಂದ್ರ ಸರ್ಕಾರಿ ನೌಕರರಿಗೆ ಹೊಸ ವೇತನ ಆಯೋಗದ ಜಾರಿ.
- ರೈತರ ಉತ್ಪನ್ನಗಳಿಗೆ ಸೂಕ್ತ ಬೆಲೆ.
- ಆರ್ಥಿಕ ಯೋಜನೆ ಹಾಗೂ ಸಾಂಸ್ಕೃತಿಕ ಸುಧಾರಣೆ.

- ದೇಶದ ಜನತೆಯ ತಲಾ ಆದಾಯವನ್ನು ಶೇಕಡಾ ೭ರಿಂದ ೮ ಕ್ಕೆ ಹೆಚ್ಚಿಸಲು ಸೂಕ್ತ ಕ್ರಮ. ಗ್ರಾಮೀಣ ಮೂಲಭೂತ ಸೌಕರ್ಯಗಳು ಪ್ರಗತಿ ಕಾಣುವಂತಾಗಲು ರಾಷ್ಟ್ರೀಯ ಸುಧಾರಣೆ.
- ವಿಶೇಷವಾಗಿ ಹಿಂದುಳಿದ ಪ್ರದೇಶಗಳಿಗೆ ಒತ್ತು ಕೊಟ್ಟು ಅವುಗಳ ಅಭಿವೃದ್ಧಿಗೆ ಸೂಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.
- ಹಿಂದುಳಿದ ಪ್ರದೇಶಗಳ ಅಭಿವೃದ್ಧಿಗೆ ವೈಜ್ಞಾನಿಕ ಹಾಗೂ ತಾಂತ್ರಿಕ ಕೌಶಲ್ಯವನ್ನು ಬಳಸಿಕೊಳ್ಳುವುದು.
- ವ್ಯವಸಾಯ ಆಧಾರಿತ ಕೈಗಾರಿಕೆಗಳನ್ನು ಜನಪ್ರಿಯಗೊಳಿಸಲು ಸೂಕ್ತ ಕಾರ್ಯಕ್ರಮ ಹಮ್ಮಿಕೊಳ್ಳುವುದು.
- ಬರಗಾಲ ಹಾಗೂ ಪ್ರವಾಹ ನಿಯಂತ್ರಣಕ್ಕೆ ಸೂಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅವುಗಳಿಂದ ದೇಶದ ಜನತೆಯನ್ನು ರಕ್ಷಿಸುವುದು.
- ವ್ಯವಸಾಯ ವಿಸ್ತೀರ್ಣ ಕಾರ್ಯಕ್ರಮಕ್ಕೆ ಹೆಚ್ಚಿನ ಆದ್ಯತೆ ಕೊಡುವುದು.
- ವ್ಯವಸಾಯದ ಉತ್ಪನ್ನಗಳಿಗೆ ಬೆಲೆಯನ್ನು ನಿಗದಿಮಾಡುವಾಗ ವೈಜ್ಞಾನಿಕ ರೀತಿಯ ಕ್ರಮಗಳನ್ನು ಕೈಗೊಳ್ಳುವುದು.
- ಪ್ರಜಾಪ್ರಭುತ್ವ ಮಾದರಿಯನ್ನು ಬೆಂಬಲಿಸುವ ಸಹಕಾರ ಚಳವಳಿಯನ್ನು ಮತ್ತಷ್ಟು ಬಲಗೊಳಿಸುವುದು.
- ರಾಜ್ಯಗಳೊಡನೆ ಸಮಾಲೋಚಿಸಿ ೯ನೆಯ ಯೋಜನೆಗೆ ವ್ಯಾಪಕವಾದ ಆಯಾಮವನ್ನು ದೊರಕಿಸಿಕೊಡುವುದು.
- ಸ್ಥಳೀಯ ಸಂಸ್ಥೆಗಳ ಆರ್ಥಿಕ ಸೌಲಭ್ಯಕ್ಕೆ ಹೊಸ ಕಾರ್ಯಕ್ರಮಗಳನ್ನು ರೂಪಿಸುವುದು.

## ಬಡತನ ಹಾಗೂ ನಿರುದ್ಯೋಗ ನಿವಾರಣೆ

ಬಡತನ ಹಾಗೂ ನಿರುದ್ಯೋಗ ನಿವಾರಣೆಗೆ ದೇಶದ ೪೯೯೭ ಘಟಕಗಳಲ್ಲಿ ಉದ್ಯೋಗ ದೃಢೀಕರಣ ಯೋಜನೆ ಹಾಗೂ ಜವಹರ್ ರೋಜಗಾರ್ ಯೋಜನೆಯನ್ನು ಅನುಷ್ಠಾನ ಮಾಡುವುದು. ದೇಶದ ೩೧೯೮ ಹಿಂದುಳಿದ ಘಟಕಗಳಿಗೆ ಸಾರ್ವಜನಿಕ ವಿತರಣಾ ವ್ಯವಸ್ಥೆ ಮೂಲಕ ಆಹಾರಪದಾರ್ಥಗಳನ್ನು ಒದಗಿಸುವುದು. ಎರಡು ರೂಪಾಯಿಗೆ ಒಂದು ಕೆ. ಜಿ. ಅಕ್ಕಿಯನ್ನು ಒದಗಿಸುವುದು. ದೇಶದ ೪೯೯೭ ಘಟಕಗಳಲ್ಲಿನ ಮಕ್ಕಳಿಗೆ ೧೫೦ ಗ್ರಾಂ ಪೌಷ್ಟಿಕ ಆಹಾರವನ್ನು ಒದಗಿಸಲು ಸೂಕ್ತ ಕ್ರಮವನ್ನು ಕೈಗೊಳ್ಳುವುದು. ದೇಶದ ಎಲ್ಲ ಯುವಕರಿಗೂ ಸ್ವಯಂ ಉದ್ಯೋಗ ಕೈಗೊಳ್ಳಲು ಬೇಕಾದ ಸೌಲಭ್ಯಗಳನ್ನು ಒದಗಿಸಿಕೊಡುವುದು. ಎಲ್ಲಾ ಮೂಲಗಳಿಂದ ೧೯೯೭ರಿಂದ ೨೦೦೨ರ ವೇಳೆಗೆ ೬೬೦ ಲಕ್ಷ ಉದ್ಯೋಗಗಳನ್ನು ಸೃಷ್ಟಿಸುವ ಜವಾಬ್ದಾರಿಯನ್ನು ಹೊರುತ್ತದೆ. ಎನ್‌ಎಸ್‌ಎ ಪಿ ಮೂಲಕ (ನ್ಯಾಷನಲ್ ಸೋಷಿಯಲ್ ಅಸಿಸ್ಟೆನ್ಸ್ ಪ್ರೋಗ್ರಾಂ) ಪಂಚಾಯತಿ ಹಾಗೂ ಪುರಸಭೆಯ ವ್ಯಾಪ್ತಿಯಲ್ಲಿ ಬರುವ ೬೫ ವರ್ಷದ ಮೇಲ್ಪಟ್ಟ ಅಸಹಾಯಕ ವ್ಯಕ್ತಿಗಳಿಗೆ ತಿಂಗಳಿಗೆ ೬೫ ರೂ. ಗಳ ವೃದ್ಧಾಪ್ಯ ವೇತನ. ಹೆರಿಗೆ ಭತ್ಯೆ ೫೦೦ ರೂ. ಗಳಿಗೆ ಹೆಚ್ಚಳ. ಮಹಿಳಾ ಸಮೃದ್ಧಿ ಯೋಜನೆಯ ಪ್ರಯೋಜನವನ್ನು ಗ್ರಾಮೀಣ ಪ್ರದೇಶದ ಉಳಿತಾಯ ಮಾಡಿದ ಮಹಿಳೆಯರ ಮನೆಗೆ ತಲುಪಿಸಲಾಗುವುದು. ಅಪ್ರಾಪ್ತ ವಯಸ್ಕ ಮಕ್ಕಳ ದುಡಿಮೆಯನ್ನು ರದ್ದು ಮಾಡಲಾಗುವುದು.

## ಮಾನವ ಸಂಪನ್ಮೂಲದ ಅಭಿವೃದ್ಧಿ ಮತ್ತು ಮೂಲಭೂತ ಸೌಕರ್ಯ

ಜಿಡಿಪಿಯಲ್ಲಿ ಶೇಕಢ ೬ರಷ್ಟನ್ನು ವಿದ್ಯಾಕ್ಷೇತ್ರಕ್ಕೆ ಖರ್ಚು ಮಾಡಲು ಪಣ ತೊಡಲಾಗಿದೆ. ದೇಶದ ಪ್ರತಿಯೊಂದು ಹಳ್ಳಿಗೂ ಶೌಚಾಯಲಯ ಸೌಲಭ್ಯ ಕಲ್ಪಿಸಲು ಸಮರೋಪಾದಿಯಲ್ಲಿ ಕಾರ್ಯಕ್ರಮ ರೂಪಿಸಲಾಗುವುದು. ಪಂಚಾಯತ್, ನಗರಪಾಲಿಕೆ ಹಾಗೂ ಸ್ವಯಂ ಸೇವಾಸಂಸ್ಥೆಗಳಿಗೆ ಸಹಾಯವನ್ನು ಇದರಲ್ಲಿ ಬಳಸಿಕೊಳ್ಳಲಾಗುವುದು. ಶಾಲಾ ಮಕ್ಕಳಿಗೆ ಅಗತ್ಯವಿರುವ 'ಆರೋಗ್ಯ ಶಿಕ್ಷಣ' ಒದಗಿಸಿಕೊಡಲಾಗುವುದು. ಕಳೆದ ಐದು ವರ್ಷಗಳಲ್ಲಿ ದೇಶದ ಪ್ರಮುಖ ಹಳ್ಳಿಗೆ ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಲಾಗಿದ್ದರೂ, ಸಾವಿರಾರು ಹಳ್ಳಿಗಳು ಶುದ್ಧ ಕುಡಿಯುವ ನೀರಿನ ಸೌಲಭ್ಯದಿಂದ ವಂಚಿತವಾಗಿವೆ. ಗ್ರಾಮೀಣ ಕುಡಿಯುವ ನೀರಿನ ಸರಬರಾಜು ಯೋಜನೆ ಹಾಗೂ ರಾಜೀವ್ ಗಾಂಧಿ ಕುಡಿಯುವ ನೀರಿನ ಮಿಷನ್ ಮೂಲಕ ಎಲ್ಲಾ ಹಳ್ಳಿಗಳಿಗೂ ಕುಡಿಯುವ ನೀರು ಒದಗಿಸಲಾಗುವುದು.

೧೯೯೧ರ ಜನಗಣತಿಯ ಲೆಕ್ಕಾಚಾರದ ಪ್ರಕಾರ ದೇಶದಲ್ಲಿ ೧.೩ ಕೋಟಿ ಮನೆಗಳ ಅವಶ್ಯಕತೆಯಿದೆ. ಇಂದಿರಾ ಅವಾಸ್ ಯೋಜನೆಯ ಮೂಲಕ ಈ ಗುರಿಯನ್ನು ಮುಟ್ಟಲಾಗುವುದು. ವಸತಿ ನಿರ್ಮಾಣಕ್ಕೆ ವ್ಯಾಪಕ ಕಾರ್ಯಕ್ರಮ ರೂಪಿಸಲಾಗುವುದು. ಹುಡ್ಕೋ, ಎಲ್.ಐ.ಸಿ. ಹಾಗೂ ಜಿ.ಐ.ಸಿ. ನೆರವು ಪಡೆಯಲಾಗುವುದು. ಗೃಹನಿರ್ಮಾಣಕ್ಕೆ ಕೊಡುವ ಸಾಲದ ಪ್ರಕ್ರಿಯೆಯನ್ನು ಸರಳಗೊಳಿಸಲಾಗುವುದು. ರೈತರ ತೋಟಗಾರಿಕೆ ಉತ್ಪನ್ನಗಳಿಗೆ ಜಿಲ್ಲಾ ಕೇಂದ್ರಗಳಲ್ಲಿ ಉಗ್ರಾಣ ಹಾಗೂ ಶೀತಲ ಗೃಹ ನಿರ್ಮಿಸಲಾಗುವುದು.

ಪರಿಸರ ಸಂರಕ್ಷಣೆ ಹಾಗೂ ಅದರ ಸಮತೋಲನಕ್ಕೆ ತಜ್ಞರ ಅಭಿಪ್ರಾಯಗಳಂತೆ ಕಾರ್ಯಕ್ರಮ ರೂಪಿಸಲಾಗುವುದು. ಬೃಹತ್ ಕೈಗಾರಿಕೆಗೆ ಹೊಂದಿಕೊಂಡಂತಿರುವ ಗ್ರಾಮಗಳನ್ನು ದತ್ತು ತೆಗೆದುಕೊಂಡು ಅದರ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸುವುದು.

## ತುಳಿತಕ್ಕೊಳಗಾದ ಜನರ ರಕ್ಷಣೆ

ಎಲ್ಲಾ ಸಮುದಾಯದವರಿಗೂ ಸಮಾನ ಅವಕಾಶ ಕಲ್ಪಿಸುವುದು. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಅಂಗವಿಕಲರಿಗೆ ವಿಶೇಷ ಆದ್ಯತೆ ಕೊಡುವುದು. ಮಹಿಳಾ ಆಯೋಗ, ಪರಿಶಿಷ್ಟ ಜಾತಿ ಕಲ್ಯಾಣ ಆಯೋಗ, ಪರಿಶಿಷ್ಟ ವರ್ಗ, ಬುಡಕಟ್ಟು ಮತ್ತು ಹಿಂದುಳಿದವರ ಕಲ್ಯಾಣಗಳಿಗೆ ನೇಮಕವಾದ ಆಯೋಗವು ಹೆಚ್ಚು ಕ್ರಿಯಾಶೀಲವಾಗಿ ಕೆಲಸ ಮಾಡುವಂತೆ ಮಾಡುವುದು. ಮೀಸಲಾತಿಯ ಸೌಲಭ್ಯವನ್ನು ದಲಿತ ಕ್ರಿಶ್ಚಿಯನ್ನರಿಗೆ ಕೊಡುವುದು. ಸಂವಿಧಾನದ ನಿಯಮ ೩೩೯(೧)ರ ಪ್ರಕಾರ ಬುಡಕಟ್ಟು ಕಲ್ಯಾಣ ಅಧ್ಯಯನ ಆಯೋಗ ನೇಮಿಸುವುದು. ಒಂದು ವರ್ಷದೊಳಗೆ ಅದರ ಶಿಫಾರಸ್ಸುಗಳ ಅನುಷ್ಠಾನ.

## ರಾಷ್ಟ್ರೀಯ ಭದ್ರತೆ

ಆಂತರಿಕ ಭದ್ರತೆ ಹಾಗೂ ಸುರಕ್ಷತೆ ಕಾಪಾಡಲು ಭಯೋತ್ಪಾದನೆ ಹಾಗೂ ಸಮಾಜ ಘಾತಕ ಶಕ್ತಿಗಳ ವಿರುದ್ಧ ಹೋರಾಡಲು ಕಠಿಣ ಕ್ರಮ ಕೈಗೊಳ್ಳುವುದು. ಇದಕ್ಕೆ ರಾಜ್ಯ ಸರ್ಕಾರ ಹಾಗೂ ಗಡಿ ರಾಜ್ಯಗಳ ನೆರವು ಪಡೆಯುವುದು. ಸಂಘಟಿತ ಸಮಾಜಘಾತಕ ಶಕ್ತಿಗಳ ದಮನಕ್ಕೆ ಎಲ್ಲಾ ರೀತಿಯ ಕಾರ್ಯಕ್ರಮ ಹಮ್ಮಿಕೊಳ್ಳುವುದು. ರಾಜ್ಯ ಸರ್ಕಾರಗಳ ಪೊಲೀಸ್ ವ್ಯವಸ್ಥೆಯ ಆಧುನೀಕರಣಕ್ಕೆ ಕೇಂದ್ರ ವಿಶೇಷ ನೆರವು ನೀಡುತ್ತದೆ. ಆಂತರಿಕ ಭದ್ರತೆಯ ಬಗ್ಗೆ ಅಧ್ಯಯನ ಮಾಡಲು ಕೇಂದ್ರ ಸರಕಾರವು ಕ್ಯಾಬಿನೆಟ್ ಉಪಸಮಿತಿ ನೇಮಿಸಿದೆ. ರಕ್ಷಣೆ, ವಿದೇಶಾಂಗ ಹಾಗೂ ಆಂತರಿಕ ಭದ್ರತೆಗಳಿಗೆ ನೇಮಿಸಿದ ಸಚಿವ ಸಂಪುಟದ ಸಮಿತಿಗಳ ತೀರ್ಮಾನವನ್ನು ಅನುಷ್ಠಾನಗೊಳಿಸಲಾಗುವುದು.

## ಜಾಗೃತದಳ ಹಾಗೂ ಭ್ರಷ್ಟಾಚಾರ ನಿರ್ಮೂಲನೆ

ನ್ಯಾಯಾಧೀಶರು, ಲೋಕಸಭೆಯ ಹಿರಿಯ ಸದಸ್ಯರು ಹಾಗೂ ಸಮಾಜ ಸೇವಕರನ್ನು ಒಳಗೊಂಡ ಭ್ರಷ್ಟಾಚಾರ ನಿರ್ಮೂಲನೆಗೆ ಉನ್ನತ ಮಟ್ಟದ ಸಮಿತಿ ನೇಮಿಸಲಾಗುವುದು. ಲೋಕಪಾಲರ ಪರಿಧಿಗೆ ಪ್ರಧಾನಮಂತ್ರಿ ಹಾಗೂ ಮುಖ್ಯಮಂತ್ರಿ ಸೇರಿದಂತೆ ಎಲ್ಲಾ ಚುನಾಯಿತ ಪ್ರತಿನಿಧಿಗಳನ್ನು ಒಳಪಡಿಸುವುದು. ಆಡಳಿತ ವೆಚ್ಚ ತಗ್ಗಿಸಲು ಮಂತ್ರಿಗಳನ್ನು ಕಡಿಮೆ ಮಾಡುವುದು. ಆಡಳಿತದಲ್ಲಿ ಪಾರದರ್ಶಕತೆ ತರಲು ಪ್ರಾಮಾಣಿಕ ಪ್ರಯತ್ನ. ಎಲ್ಲಾ ಚುನಾಯಿತ ಪ್ರತಿನಿಧಿಗಳು ಅಧಿಕಾರ ಸ್ವೀಕರಿಸಿದ ದಿನ ಹಾಗೂ ಅಧಿಕಾರ ಬಿಟ್ಟ ದಿನ ಕಡ್ಡಾಯವಾಗಿ ಆಸ್ತಿ ಘೋಷಣೆ ಮಾಡುವುದು. ರಾಜ್ಯ ಹಾಗೂ ಕೇಂದ್ರಗಳ ನಡುವೆ ಸಮನ್ವಯ ಬಾಂಧವ್ಯ ಏರ್ಪಡಿಸುವುದು.

ಭ್ರಷ್ಟಾಚಾರದ ನಿರ್ಮೂಲನೆಯಲ್ಲಿ ಸಾರ್ವಜನಿಕರ ಸಹಾಯ ಪಡೆಯುವುದು. ಸಾರ್ವಜನಿಕರನ್ನು ಆಡಳಿತದಲ್ಲಿ ಮಿಳಿತಗೊಳಿಸುವುದು. ಸರ್ಕಾರಿ, ಅರೆ ಸರ್ಕಾರಿ, ಮೊದಲಾದ ಭ್ರಷ್ಟಾಚಾರ ವಿರುದ್ಧ ಹೋರಾಡಲು ಜಾಗೃತದಳದ ರಚನೆ. ಕಾಂಗ್ರೆಸ್ ಪಕ್ಷದ ಮುಖ್ಯ ಉದ್ದೇಶ ಸಮರ್ಥ, ಕ್ರಿಯಾಶೀಲ, ಸುಭದ್ರ ಸರ್ಕಾರ. ದೇಶದ ಭಾವೈಕ್ಯತೆ ಹಾಗೂ ಸಮಗ್ರತೆ ಕಾಪಾಡುವುದರ ಜೊತೆಗೆ ಸೌಹಾರ್ದಯುತ ಬದುಕಿನ ಭಾರತ ನಿರ್ಮಾಣವೇ ಕಾಂಗ್ರೆಸ್ ಪಕ್ಷದ ಗುರಿ. ಅದಕ್ಕಾಗಿ ೧೯೯೬ರ ಹನ್ನೊಂದನೆಯ ಲೋಕಸಭಾ ಚುನಾವಣೆಯಲ್ಲಿ ಅಖಿಲ ಭಾರತ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸಲು ದೇಶದ ಎಲ್ಲಾ ಮತದಾರರಲ್ಲೂ ವಿನಂತಿಸಲಾಗಿದೆ.

## ಚುನಾವಣಾ ಸಾಧನೆ

೨೭-೪-೯೬ ರಂದು ರಾಜ್ಯದ ೧೮ ಕ್ಷೇತ್ರಗಳಿಗೆ ಮತದಾನ ನಡೆಯಿತು. ೨.೫.೯೬ರಂದು ಇನ್ನುಳಿದ ಹತ್ತು ಕ್ಷೇತ್ರಗಳಿಗೆ ಮತದಾನ ನಡೆಯಿತು. ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ರಾಜ್ಯದ ೨೮ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದರಲ್ಲಿ ಕೇವಲ ಐದು ಅಭ್ಯರ್ಥಿಗಳು ಮಾತ್ರ ಜಯಶೀಲರಾದರು. ರಾಜ್ಯದ ಕಾಂಗ್ರೆಸ್ ಇತಿಹಾಸದಲ್ಲಿ ಇಷ್ಟೊಂದು ಕಡಿಮೆ ಸ್ಥಾನವನ್ನು ಆ ಪಕ್ಷ ಎಂದೂ ಗಳಿಸಿರಲಿಲ್ಲ. ಆ ಪಕ್ಷ ಶೇಕಡಾ ೩೦.೨೯ ಅಂದರೆ ೫೬,೬೮,೯೮೮ ಮತಗಳನ್ನು ಗಳಿಸಿತ್ತು. ಈ ಚುನಾವಣೆಯಲ್ಲಿ ಗೆದ್ದ ಅಭ್ಯರ್ಥಿಗಳೆಂದರೆ:

೧. ಬಳ್ಳಾರಿಯಿಂದ - ಕೆ. ಸಿ. ಕೊಂಡಯ್ಯ (ಶೇ. ೪೩. ೮೯)

೨. ಕೋಲಾರದಿಂದ - ಕೆ. ಹೆಚ್. ಮುನಿಯಪ್ಪ (ಶೇ. ೪೪. ೩೯)

೩. ಮೈಸೂರಿನಿಂದ - ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ (ಶೇ. ೩೪. ೮೨)

೪. ಉಡುಪಿಯಿಂದ - ಆಸ್ಕರ್ ಫರ್ನಾಂಡೀಸ್ (ಶೇ. ೩೭.೩೬)
೫. ಧಾರವಾಡದಿಂದ - ಪ್ರೊ। ಐ. ಜಿ. ಸನದಿ (ಶೇ. ೩೨.೪೮)

**ಹೊಸಮುಖಗಳಿಗೆ ಅವಕಾಶ**

ಬೀದರ್‌ನಿಂದ ತಾತ್ಯಾರಾವ್ ಕಾಂಬ್ಳೆ, ತುಮಕೂರಿನಿಂದ ಆರ್. ಮಂಜುನಾಥ್, ಚಿಕ್ಕಬಳ್ಳಾಪುರದಿಂದ ವಿ. ಮುನಿಯಪ್ಪ, ಬೆಂಗಳೂರು ಉತ್ತರದಿಂದ ಮಹಮದ್ ಒಬೇದುಲ್ಲಾ ಷರೀಫ್, ಬೆಂಗಳೂರು ದಕ್ಷಿಣದಿಂದ ಶ್ರೀಮತಿ ವರಲಕ್ಷ್ಮಿ ಗುಂಡೂರಾವ್, ಚಾಮರಾಜನಗರದಿಂದ ಎಲ್. ಎಚ್. ಬಾಲಕೃಷ್ಣ ಹಾಸನದಿಂದ ಎಸ್. ಎಂ. ಆನಂದ, ಕೆನರಾದಿಂದ ಆರ್. ಎನ್. ನಾಯಕ್, ಬೆಳಗಾಂನಿಂದ ಪ್ರಭಾಕರ ಕೋರೆ ಹಾಗೂ ವಿಜಾಪುರದಿಂದ ಪ್ರಕಾಶ್ ರಾಥೋಡ್- ಹೀಗೆ ಕಾಂಗ್ರೆಸ್ ಪಕ್ಷ ಈ ಲೋಕಸಭಾ ಚುನಾವಣೆಯಲ್ಲಿ ಹತ್ತು ಹೊಸ ಮುಖಗಳಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಮಾಡಿಕೊಟ್ಟಿತು. ೧೯೭೧, ೧೯೭೭ ಹಾಗೂ ೧೯೮೦ರ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಇಂದಿರಾ ಗಾಂಧಿ ಅವರ ಹೆಸರಿನ ಮೇಲೆ ಗೆಲ್ಲುವ ಸಾಮರ್ಥ್ಯ ಪಡೆದಿತ್ತು. ಪಿ. ವಿ. ನರಸಿಂಹರಾವ್ ಅವರಿಗೆ ಇಂದಿರಾ ಗಾಂಧಿ ಅವರ ಜನಪ್ರಿಯತೆಯಾಗಲೀ ಅಥವಾ ಪ್ರಾಯೋಗಿಕ ರಾಜಕೀಯ ಅನುಭವವಾಗಲೀ ಇಲ್ಲವೆಂದು ಅವರು ಟಿಕೇಟ್ ಹಂಚಿದ ರೀತಿಯಿಂದಲೇ ಗುರುತಿಸಬಹುದು. ಸಿ. ಕೆ. ಜಾಫರ್ ಷರೀಫ್, ಹೆಚ್. ಸಿ. ಶ್ರೀಕಂಠಯ್ಯ, ಜಿ. ಪುಟ್ಟಸ್ವಾಮಿಗೌಡ, ಎಂ. ರಾಜಶೇಖರಮೂರ್ತಿ, ಎಂ. ವೀರಪ್ಪ ಮೊಯಿಲಿ ಮೊದಲಾದ ಹಿರಿಯ ನಾಯಕರು ಚುನಾವಣಾ ಸಂದರ್ಭದಲ್ಲಿ ಬಲವಂತ ತಾಟಸ್ಥ್ಯ ವಹಿಸಿದ್ದರು. ಕಾಂಗ್ರೆಸ್‌ನಿಂದ ಸಿಡಿದುಹೋಗಿದ್ದ ಎಸ್. ಬಂಗಾರಪ್ಪ ಕೆ.ಪಿ.ಸಿ. ಮೂಲಕ ಶಿವಮೊಗ್ಗದಲ್ಲಿ ಈ ಚುನಾವಣೆಗೆ ಸ್ಪರ್ಧಿಸಿದ್ದರು. ಯಾವ ದಿಕ್ಕಿನಿಂದ ನೋಡಿದರೂ ಕಾಂಗ್ರೆಸ್ ವಿವಿಧ ವರ್ಗಗಳಲ್ಲಿನ ತನ್ನ ಜನಬೆಂಬಲವನ್ನು ಕಳೆದುಕೊಂಡಿತು. ರಾಜ್ಯದಲ್ಲಿ ಸರ್ಕಾರವಿಲ್ಲದ ಕಾಂಗ್ರೆಸ್ ಪಕ್ಷ ಸ್ವಾಭಾವಿಕವಾಗಿ ಕುಸಿದಿತ್ತು. ಅಸಮರ್ಪಕ ಟಿಕೇಟು ಹಂಚಿಕೆ ಅದನ್ನು ಸಂಪೂರ್ಣವಾಗಿ ನೆಲ ಕಚ್ಚುವಂತೆ ಮಾಡಿತು. ಅದರ ವಿರುದ್ಧವಾಗಿ ಮುಖ್ಯಮಂತ್ರಿ ಎಚ್. ಡಿ. ದೇವೇಗೌಡ ಸಮರೋಪಾದಿಯಲ್ಲಿ ಈ ಚುನಾವಣೆಯನ್ನು ಎದುರಿಸಲು ಸಿದ್ಧತೆ ಮಾಡಿಕೊಂಡಿದ್ದರು. ಹಿಂದೆಂದೂ ಕಾಣದಷ್ಟು ಸಂಪನ್ಮೂಲವನ್ನು ಜನತಾದಳ ಅಭ್ಯರ್ಥಿಗಳು ಈ ಸಲದ ಚುನಾವಣೆಯಲ್ಲಿ ಕಂಡರು. ಹಿಂದುಳಿದ ಮತ್ತು ಅಲ್ಪಸಂಖ್ಯಾತ ಹಾಗೂ ಪರಿಶಿಷ್ಟ ಜಾತಿ-ವರ್ಗದವರನ್ನು ತಮ್ಮ ಜೊತೆ ಕರೆದೊಯ್ಯಲು ಹೆಚ್. ಡಿ. ದೇವೇಗೌಡ ಅವರು ವಿಶೇಷ ಕಾರ್ಯಕ್ರಮ ಹಮ್ಮಿಕೊಂಡರು. ಎಲ್ಲಾ ಹಿಂದುಳಿದ ಜಾತಿಯವರ ವಿಶ್ವಾಸ ಗಳಿಸಿದರು. ಆ ಕಾರಣ ಜನತಾದಳ ೧೬ ಲೋಕಸಭಾ ಸ್ಥಾನಗಳನ್ನು ಗಳಿಸಿ ಎಚ್. ಡಿ. ದೇವೇಗೌಡ ರವರು ಪ್ರಧಾನಮಂತ್ರಿಯಾಗಲು ಅವಕಾಶ ಮಾಡಿಕೊಟ್ಟಿತು.

**೧೯೯೮ - ಹನ್ನೆರಡನೆ ಲೋಕಸಭಾ ಚುನಾವಣೆಗಳು - ಹಿನ್ನೆಲೆ**

ಏಪ್ರಿಲ್ ೨೭ ಮತ್ತು ಮೇ ೨, ೧೯೯೬ ರಂದು ೧೧ ನೇ ಲೋಕಸಭಾ ಚುನಾವಣೆಗಳು ನಡೆದವು. ಭಾರತೀಯ ಜನತಾ ಪಕ್ಷ ೧೬೦ ಸ್ಥಾನಗಳನ್ನು ಪಡೆದು ಅತಿದೊಡ್ಡ ಪಕ್ಷವಾಗಿ ಹೊರಹೊಮ್ಮಿತ್ತು. ಕಾಂಗ್ರೆಸ್ (ಐ) ೬ ಡಿಸೆಂಬರ್ ೧೯೯೨ ರಂದು ಬಾಬರಿ ಮಸೀದಿ ನೆಲಸಮ ಆದ ಘಟನೆಯಿಂದ ಕಾಂಗ್ರೆಸ್ ಮೊದಲಬಾರಿ ಭಾರೀ ಪ್ರಮಾಣದಲ್ಲಿ ಮುಸ್ಲಿಂ ಮತಗಳಿಂದ ವಂಚಿತವಾಗಿ ಕೇವಲ ೧೪೦ ಸ್ಥಾನಗಳನ್ನು ಗಳಿಸಿತ್ತು. ೧೬-೫-೯೬ ರಂದು ಅಟಲ್ ಬಿಹಾರಿ ವಾಜಪೇಯಿ ಅವರು ಪ್ರಧಾನಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ಭಾ.ಜ.ಪ.(೧೬೦), ಶಿವಸೇನಾ (೧೫), ಸಮತಾ (೮), ಅಕಾಲಿ (೮) ಎಚ್. ವಿ.ಪಿ. (೩) ಸೇರಿ ಒಟ್ಟಾರೆ ೧೯೪ ಸದಸ್ಯರ ಬಲ ಸರ್ಕಾರಕ್ಕೆ ಇತ್ತು. ಆದರೆ ಸಂಸತ್ತಿನಲ್ಲಿ ಬಹುಮತವನ್ನು ಸಾಬೀತು ಪಡಿಸಲು ಸಾಧ್ಯವಾಗದೆ ಅದಕ್ಕೆ ಮುನ್ನವೇ ೧.೬.೯೬ ರಂದು ವಾಜಪೇಯಿ ರಾಜೀನಾಮೆ ನೀಡಿದರು.

ಸಂಯುಕ್ತ ರಂಗದ ಎಚ್. ಡಿ. ದೇವೇಗೌಡರು ದಿನಾಂಕ ೧.೬.೯೬ ರಂದು ಪ್ರಧಾನಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದರು. ಸಂಯುಕ್ತ ರಂಗದ ಬಲ ೧೯೪ ಆಗಿದ್ದು ೧೪೦ ಸದಸ್ಯ ಬಲದ ಕಾಂಗ್ರೆ ಹೊರಗಿನಿಂದ ತನ್ನ ಬೆಂಬಲ ನೀಡಿತ್ತು. ಪಿ. ವಿ. ನರಸಿಂಹರಾವ್ ಅವರು ಕಾಂಗ್ರೆಸ್ (ಐ) ಸಂಸದೀಯ ಪಕ್ಷದ ನಾಯಕರಾಗಿರುವವರೆಗೆ ಹಾಗೂ ಅವರು ಪಕ್ಷದ ಅಧ್ಯಕ್ಷರಾಗಿರುವವರೆಗೆ ದೇವೇಗೌಡರಿಗೆ ಕಾಂಗ್ರೆಸ್ (ಐ) ಬಲ ಅಬಾಧಿತವಾಗಿ ಮುಂದುವರಿದಿತ್ತು. ಆದರೆ ಬಾಬರಿ ಮಸೀದಿ ಘಟನೆಯ ಬಗ್ಗೆ ಅಜಾಗರೂಕತೆಯಿಂದ ವರ್ತಿಸಿ ಕಾಂಗ್ರೆ ಸೋಲಿಗೆ ಅವರೇ ಕಾರಣರಾದರು ಎಂದು ನಾಯಕತ್ವದಿಂದ ಅವರನ್ನು ಬದಲಾಯಿಸಲಾಯಿತು. ಸೀತಾರಾಂ ಕೇಸರಿ ಕಾಂಗ್ರೆ ಸಂಸದೀಯ ಪಕ್ಷದ ನಾಯಕರಾದರು. ಆ ನಂತರ ದೇವೇಗೌಡ ಹಾಗೂ ಕಾಂಗ್ರೆ ಸಂಬಂಧ ಹಳಸಿತು. ದೇವೇಗೌಡ ಸರ್ಕಾರಕ್ಕೆ ಕಾಂಗ್ರೆ ಬೆಂಬಲ ಹಿಂತೆಗೆದುಕೊಂಡಿತು. ೨೧-೪-೯೭ ರಂದು ದೇವೇಗೌಡರು ಪ್ರಧಾನ ಮಂತ್ರಿ ಹುದ್ದೆಗೆ ತಮ್ಮ ರಾಜೀನಾಮೆ ಸಲ್ಲಿಸಿದರು.

ಆದರೆ ಕಾಂಗ್ರೆ ಸಂಯುಕ್ತರಂಗಕ್ಕೆ ತನ್ನ ಬೆಂಬಲ ಮುಂದುವರಿಸಿತು. ಐ. ಕೆ. ಗುಜ್ರಾಲ್ ಅವರು ೨೧-೪-೯೭ ರಂದು ಸಂಯುಕ್ತ ರಂಗ ಸರ್ಕಾರದ ನೂತನ ಪ್ರಧಾನಮಂತ್ರಿಗಳಾಗಿ ಆಯ್ಕೆಯಾದರು. ಜೈನ್ ಕಮೀಷನ್ ವರದಿಯನ್ನು ನೆಪವಾಗಿಟ್ಟುಕೊಂಡು ಕಾಂಗ್ರೆ ಸಂಯುಕ್ತ ರಂಗ ಸರ್ಕಾರಕ್ಕೆ ತನ್ನ ಬೆಂಬಲ ಹಿಂತೆಗೆದುಕೊಂಡಿತು. ೨೮ ನವೆಂಬರ್ ೯೭ರಂದು ಐ.ಕೆ. ಗುಜ್ರಾಲ್ ರಾಜೀನಾಮೆ ನೀಡಿದರು. ರಾಜೀವ್ ಗಾಂಧಿ ಹತ್ಯೆಯ ಬಗ್ಗೆ ತನಿಖೆ ನಡೆಸಿದ್ದ ಜೈನ್ ಆಯೋಗ ತಮಿಳುನಾಡಿನಲ್ಲಿ ಎಲ್. ಟಿ. ಟಿ. ಇ. ಭಯೋತ್ಪಾದಕರು ಬೇರು ಬಿಡಲು ಡಿ. ಎಂ. ಕೆ. ಸರ್ಕಾರ ಪ್ರಮುಖ ಕಾರಣ. ಭಯೋತ್ಪಾದಕರ ಬಗ್ಗೆ ಡಿ. ಎಂ. ಕೆ. ಸರ್ಕಾರ ಸಹಾನುಭೂತಿ ಹೊಂದಿತ್ತು. ಇದೇ ರಾಜೀವ್ ಹತ್ಯೆಗೆ ಮೂಲವಾಯಿತು, ವಿ. ಪಿ. ಸಿಂಗ್ ಸರ್ಕಾರ ಡಿ. ಎಂ. ಕೆ. ಬಗ್ಗೆ ಯಾವುದೇ ಕ್ರಮ ತೆಗೆದುಕೊಳ್ಳಲಿಲ್ಲ ಹಾಗೂ ರಾಜೀವ್ ಗಾಂಧಿಯ ರಕ್ಷಣೆಗೆ ಸೂಕ್ತ ಕ್ರಮ ತೆಗೆದುಕೊಳ್ಳಲಿಲ್ಲ, ಚಂದ್ರಶೇಖರ್ ಸರ್ಕಾರದಲ್ಲೂ ಅದು ಮುಂದುವರಿಯಿತು, ಕಾರಣಕ್ಕಾಗಿ ಸಂಯುಕ್ತ ರಂಗ ಸರ್ಕಾರದಿಂದ ಡಿ. ಎಂ. ಕೆ. ಸಚಿವರನ್ನು ಕೈ ಬಿಡುವಂತೆ ಕಾಂಗ್ರೆಸ್ ಪಕ್ಷ ಒತ್ತಾಯಿಸಿತು. ಆದರೆ ಐ.ಕೆ. ಗುಜ್ರಾಲ್ ಇದನ್ನು ಒಪ್ಪಲಿಲ್ಲ. ಇದರಿಂದಾಗಿ ೨೮ ನವೆಂಬರ್ ೯೭ ರಂದು ಕಾಂಗ್ರೆ ತನ್ನ ಬೆಂಬಲ ಹಿಂತೆಗೆದುಕೊಂಡಿತು. ಗುಜ್ರಾಲ್ ಸರ್ಕಾರ ಉಸ್ತುವಾರಿ ಸರ್ಕಾರವಾಗಿ ಮಾರ್ಚ್ ೧೮, ೧೯೯೮ ರವರೆಗೆ ಮುಂದುವರಿಯಿತು. ಡಿಸೆಂಬರ್, ೪, ೧೯೯೭ ರಂದು ರಾಷ್ಟ್ರಪತಿ ಕೆ. ಆರ್. ನಾರಾಯಣ್ ಲೋಕಸಭೆಯನ್ನು ವಿಸರ್ಜಿಸಿದರು. ಮಾರ್ಚ್ ೧೫, ೧೯೯೮ ರೊಳಗಾಗಿ ಹೊಸ ಲೋಕಸಭೆ ರಚನೆಯಾಗಬೇಕೆಂದು ಆದೇಶ ನೀಡಿದರು. ಜನವರಿ ೧, ೧೯೯೮ರಂದು ಚುನಾವಣಾ ಆಯೋಗವು ಫೆಬ್ರವರಿ ೧೬, ೨೨, ೨೮ ಮತ್ತು ಮಾರ್ಚ್ ೭ ರಂದು ನಾಲ್ಕು ಹಂತಗಳಲ್ಲಿ ಲೋಕಸಭೆಗೆ ಚುನಾವಣೆ ನಡೆಯುವುದೆಂದು ಅಧಿಕೃತ ಪ್ರಕಟಣೆ ಹೊರಡಿಸಿತು.

ಫೆಬ್ರವರಿ ೧೬ ರಂದು ೨೨೨ ಕ್ಷೇತ್ರಗಳಲ್ಲಿ, ಫೆಬ್ರವರಿ ೨೨ ರಂದು ೧೮೬ ಕ್ಷೇತ್ರಗಳಲ್ಲಿ, ಫೆಬ್ರವರಿ ೨೮ ರಂದು ೧೩೨ ಕ್ಷೇತ್ರಗಳಲ್ಲಿ ಹಾಗೂ ಮಾರ್ಚ್ ೭ ರಂದು ೩ ಕ್ಷೇತ್ರಗಳಲ್ಲಿ ಚುನಾವಣೆಯನ್ನು ನಿಗದಿಗೊಳಿಸಿತು. ಕರ್ನಾಟಕದಲ್ಲಿ ಫೆಬ್ರವರಿ ೧೬ ರಂದು ೧೮ ಕ್ಷೇತ್ರಗಳಲ್ಲಿ, ಫೆಬ್ರವರಿ ೨೨ ರಂದು ೧೦ ಕ್ಷೇತ್ರಗಳಲ್ಲಿ ಮತದಾನವನ್ನು ನಿಗದಿ ಪಡಿಸಿತು.

**ಸೋನಿಯಾ ರಾಜಕೀಯ ಪ್ರವೇಶ**

೧೯೯೬ನೇ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ (ಐ) ತೀವ್ರ ಮುಖಭಂಗ ಅನುಭವಿಸಿತ್ತು. ಸಂಯುಕ್ತ ರಂಗಕ್ಕೆ ಹೊರಗಿನಿಂದ ಬೆಂಬಲ ನೀಡಿ ಬಿ.ಜೆ.ಪಿ. ವಿರುದ್ಧ ಕೇಂದ್ರದಲ್ಲಿ ಸಮ್ಮಿಶ್ರ ಸರ್ಕಾರ ಸ್ಥಾಪಿಸಲೂ ಅದು ಸಿದ್ಧವಾಗಿರಲಿಲ್ಲ. ೧.೬.೯೬ ರಿಂದ ೨೧.೪.೯೭ರವರೆಗೆ ಅದು ದೇವೇಗೌಡ ಹಾಗೂ ಐ. ಕೆ. ಗುಜ್ರಾಲ್ ನೇತೃತ್ವದ ಸಂಯುಕ್ತ ರಂಗದ ಸರ್ಕಾರಕ್ಕೆ ಹೊರಗಿನಿಂದ ಬೆಂಬಲ ನೀಡಿ ಅವನ್ನು ಹಿಂತೆಗೆದುಕೊಂಡು, ಹೊಸದಾಗಿ ಲೋಕಸಭಾ ಚುನಾವಣೆಗಳು ಘೋಷಣೆಯಾಗಲು ಕಾರಣವಾಗಿತ್ತು. ೧೨ನೇ ಲೋಕಸಭಾ ಚುನಾವಣೆಗಳು ಘೋಷಣೆ ಆದಾಗ ವಾಜಪೇಯಿಗೆ ಸರಿಸಮಾನವಾದಂತಹ ನಾಯಕತ್ವಕ್ಕಾಗಿ ಕಾಂಗ್ರೆ ಪಕ್ಷ ಹುಡುಕಾಟ ನಡೆಸಿತ್ತು. ಆ ನಾಯಕತ್ವವನ್ನು ಅದು ಸೋನಿಯಾ ಗಾಂಧಿಯಲ್ಲಿ ಕಂಡುಕೊಂಡಿತ್ತು. ಅದುವರೆಗೆ ಸೋನಿಯಾ ರಾಜಕೀಯದಿಂದ ದೂರ ಉಳಿದಿದ್ದರು. ಬೋಫೋರ್ಸ್ ಪ್ರಕರಣ ವಿಚಿತ್ರ ತಿರುವು ಪಡೆದುಕೊಳ್ಳುತ್ತಿತ್ತು. ಭಾರತೀಯ ಜನತಾಪಕ್ಷ ಅಧಿಕಾರಕ್ಕೆ ಬರುವ ಮುನ್ಸೂಚನೆಗಳು ಕಂಡುಬರುತ್ತಿದ್ದವು. ಇಂತಹ ಪರಿಸ್ಥಿತಿಯಲ್ಲಿ ನೆಹರು - ಇಂದಿರಾ ಅವರ ಪ್ರಭಾವಳಿಯನ್ನು ಉಪಯೋಗಿಸಿಕೊಂಡು ಕಾಂಗ್ರೆಸ್ ಪಕ್ಷವನ್ನು ಅಧಿಕಾರಕ್ಕೆ ತರಲು ಶ್ರೀಮತಿ ಸೋನಿಯಾ ಗಾಂಧಿ ಸಂಕಲ್ಪಮಾಡಿ ರಾಜಕೀಯ ಪ್ರವೇಶ ಮಾಡಿದರು.

ಸೋನಿಯಾ ಗಾಂಧಿಯವರು ದಿನಾಂಕ ೨೫.೫.೧೯೯೭ ರಂದು ಕಾಂಗ್ರೆಸ್ ಪಕ್ಷದ ಪ್ರಾಥಮಿಕ ಸದಸ್ಯತ್ವವನ್ನು ಪಡೆದರು. ದಿನಾಂಕ ೨೨.೩.೧೯೯೮ ರಂದು ಅವರು ಕಾಂಗ್ರೆಸ್ (ಐ) ಪಕ್ಷದ ಅಧ್ಯಕ್ಷರಾದರು. ''ಇದುವರೆಗೆ ವಿರೋಧ ಪಕ್ಷದ ಆರು ಸರ್ಕಾರಗಳು ಬಂದುಹೋದವು. ಬೋಫೋರ್ಸ್ ಹಿಂದಿನ ಸತ್ಯ ಏನೆಂಬುದನ್ನು ಹೊರತರಲು ಅವುಗಳಿಂದ ಸಾಧ್ಯವಾಗಿಲ್ಲ. ಈ ಪ್ರಕರಣವನ್ನು ನನ್ನ ಪತಿ ರಾಜೀವ್ ಗಾಂಧಿಯ ತೇಜೋವಧೆಗೆ ಬಳಸಿಕೊಳ್ಳಲಾಗುತ್ತಿವೆ. ರಾಜೀವ್ ಗಾಂಧಿಯ ವಿದೇಶಿ ಬ್ಯಾಂಕ್ ಖಾತೆ ನಂಬರ್‌ಗಳು ತಮ್ಮ ಜೇಬಿನಲ್ಲಿವೆ ಎಂದು ಹೇಳುತ್ತಿದ್ದ ವಿರೋಧಿ ನಾಯಕರು ಅದನ್ನು ಈವರೆಗೆ ಬಹಿರಂಗಪಡಿಸಿಲ್ಲ, ಇದೆಲ್ಲಾ ಸುಳ್ಳು ಪ್ರಚಾರಗಳಾಗಿವೆ. ನನ್ನ ಪತಿಯನ್ನು ಭಯೋತ್ಪಾದಕರು ನನ್ನಿಂದ ಕಿತ್ತುಕೊಂಡಿರಬಹುದು. ಆದರೆ ಅವರ ಆದರ್ಶಗಳನ್ನು ಕಿತ್ತುಕೊಳ್ಳಲು ಸಾಧ್ಯವಿಲ್ಲ, ಅಯೋಧ್ಯೆಯ ವಿವಾದಾತ್ಮಕ ಕಟ್ಟಡವನ್ನು ಉರುಳಿಸಿರುವವರ ಬಗ್ಗೆ ಸಹಿಸಿಕೊಳ್ಳಲು ಸಾಧ್ಯವಿಲ್ಲ, ನನ್ನ ಪತಿಯ ಸಾವಿನ ನಂತರ ನಾನು ಮೌನವಹಿಸಿದ್ದೆ, ಆದರೆ ಸುಳ್ಳು ಸುದ್ದಿಗಳು ಹರಡುತ್ತಿದ್ದು ನಾನು ಇನ್ನು ಮೌನವಾಗಿರಲು ಸಾಧ್ಯವಿಲ್ಲ'' ಎಂಬುದಾಗಿ ಭಾಷಣಗಳನ್ನು ಮಾಡುತ್ತಾ ಅವರು ನೇರವಾಗಿ ಚುನಾವಣಾ ಪ್ರಚಾರಕ್ಕೆ ಇಳಿದುಬಿಟ್ಟರು. ಜನವರಿ ೧೧, ೧೯೯೮ರಂದು ಶ್ರೀಪೆರಂಬದೂರಿನಿಂದ ಪ್ರಚಾರ ಆರಂಭಿಸಿದ ಅವರು ೩೪ ದಿನಗಳಲ್ಲಿ ೧೩೮ ಲೋಕಸಭಾ ಕ್ಷೇತ್ರಗಳಲ್ಲಿ ಪ್ರವಾಸ ಮಾಡಿ ನೂರಾರು ಬಹಿರಂಗ ಸಭೆಗಳಲ್ಲಿ

ಮಾತನಾಡಿ ಕಾಂಗ್ರೆಸ್ (ಐ) ಪಕ್ಷಕ್ಕೆ ಮತ ನೀಡುವಂತೆ ಮನವಿ ಮಾಡಿದರು. ವಾಜಪೇಯಿ ಅವರನ್ನು ಸುಳ್ಳುಗಾರನೆಂದು ಅವರು ಕರೆದುದು ಕಾಂಗ್ರೆಸ್‌ಗೆ ಸ್ವಲ್ಪ ಪ್ರತಿಕೂಲವಾಯಿತು. ಬೋಫೋರ್ಸ್ ಪ್ರಕರಣದ ಬಗ್ಗೆ ಭಾರತೀಯ ಜನತಾ ಪಕ್ಷವೂ ಪ್ರಬಲವಾಗಿಯೇ ಪ್ರಚಾರ ಮಾಡಿದ್ದು ಕಾಂಗ್ರೆಗೆ ಹಿನ್ನಡೆ ಉಂಟಾಗಲು ಕಾರಣವಾಯಿತು.

## ಕಾಂಗ್ರೆಸ್ (ಐ) ಪ್ರಣಾಳಿಕೆಯ ಮುಖ್ಯಾಂಶಗಳು

ಬಾಬರಿ ಮಸೀದಿ ಘಟನೆಯ ಬಗ್ಗೆ ಕಾಂಗ್ರೆಸ್ (ಐ) ಪಕ್ಷ ಬೇಷರತ್ತಾಗಿ ಜನತೆಯ ಕ್ಷಮೆ ಯಾಚಿಸಿದ್ದು ಕಾಂಗ್ರೆಸ್ ಪ್ರಣಾಳಿಕೆಯ ಪ್ರಮುಖ ಅಂಶವಾಗಿತ್ತು. ಪ್ರಣಾಳಿಕೆಯ ಮುಖ್ಯಾಂಶಗಳು ಹೀಗಿವೆ: ಡಿಸೆಂಬರ್ ೬, ೧೯೯೨ರ ಘಟನೆಯ ಬಗ್ಗೆ ಪಕ್ಷ ಬೇಷರತ್ತಾಗಿ ಭಾರತದ ಜನತೆಯ ಕ್ಷಮೆಯಾಚಿಸುತ್ತದೆ. ಕ್ಷಮೆಯಾಚನೆ ಬಗ್ಗೆ ಯಾವುದೇ ಅಭ್ಯಂತರವಿಲ್ಲ. ಮುಂದೆಂದೂ ಈ ರೀತಿಯ ಘಟನೆ ನಡೆಯದಂತೆ ನೋಡಿಕೊಳ್ಳಲು ಕಾಂಗ್ರೆಸ್ ಬದ್ಧವಾಗಿದೆ. ಹಾಗೂ ಈ ಬಗ್ಗೆ ಪಣತೊಡುತ್ತದೆ. ಅಯೋಧ್ಯ ವಿಚಾರದಲ್ಲಿ ಸುಪ್ರೀಂ ಕೋರ್ಟ್ ನೀಡುವ ತೀರ್ಪಿಗೆ ಪಕ್ಷ ಬದ್ಧವಾಗಿದೆ. ಕೋರ್ಟಿನ ಹೊರತಾಗಿ ಯಾವುದೇ ಹೊರಗಿನ ಪರಿಹಾರಕ್ಕೆ ಒಪ್ಪುವುದಿಲ್ಲ. ಪೂಜಾ ಸ್ಥಳಗಳ ರಕ್ಷಣೆಯ ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುತ್ತದೆ. ಕೇಂದ್ರ ರಾಜ್ಯಗಳ ಸಂಬಂಧದ ಬಗ್ಗೆ ೧೨ ನೇ ಹಣಕಾಸು ಆಯೋಗವನ್ನು ರಚಿಸುವುದು. ವಿಧಾನಸಭೆಗಳು ನಿರ್ಣಯಿಸಿರುವ ಪ್ರಕಾರ ಉತ್ತರಾಂಚಲ್, ಜಾರ್ಖಂಡ್ ರಾಜ್ಯಗಳನ್ನು ರಚಿಸುವುದು.

ಭ್ರಷ್ಟಾಚಾರ ನಿವಾರಣೆಗೆ ಕ್ರಮ. ಪ್ರಧಾನಮಂತ್ರಿ ಹಾಗೂ ಮುಖ್ಯಮಂತ್ರಿಗಳನ್ನೂ ಒಳಪಡಿಸಿದಂತೆ ಲೋಕಪಾಲ್ ರಚನೆ. ಕೇಂದ್ರೀಯ ತನಿಖಾ ದಳ (ಸಿ.ಬಿ.ಐ.)ಕ್ಕೆ ಸ್ವಾಯತ್ತ ಕಾರ್ಯನಿರ್ವಹಣಾ ಅಧಿಕಾರ ನೀಡಿಕೆ. ಭ್ರಷ್ಟಾಚಾರ ಪ್ರಕರಣಗಳನ್ನು ಕಾಲಮಿತಿಯೊಳಗೆ ತನಿಖೆಗೆ ಒಳಪಡಿಸುವುದು ಹಾಗೂ ತನಿಖೆಯಲ್ಲಿ ಪಾರದರ್ಶಕತೆ.

## ಆರ್ಥಿಕ ಕ್ಷೇತ್ರದ ಸರ್ವತೋಮುಖ ಅಭಿವೃದ್ಧಿಗೆ ಕ್ರಮ

ಕೃಷಿ ಮತ್ತು ಗ್ರಾಮೀಣ ಮೂಲಭೂತ ಸೌಲಭ್ಯ ಅಭಿವೃದ್ಧಿ ಕ್ಷೇತ್ರಗಳಿಗೆ ಹೆಚ್ಚು ಬಂಡವಾಳ ಹೂಡಿಕೆಗೆ ಕ್ರಮ. ಬಂಡವಾಳ ಮಾರುಕಟ್ಟೆ ಕ್ಷೇತ್ರಗಳ ಪುನಶ್ಚೇತನಕ್ಕೆ ಕ್ರಮ. ವಿದೇಶಿ ಬಂಡವಾಳ ಹೂಡಿಕೆಗೆ ಉತ್ತೇಜನ. ಸಾರ್ವಜನಿಕ ವಲಯದ ಉದ್ಯಮಗಳಿಂದ ಬಂಡವಾಳ ಹಿಂತೆಗೆಯಲು ಕ್ರಮ. ರಾಷ್ಟ್ರೀಕೃತ ಬ್ಯಾಂಕುಗಳಿಗೆ ಹೆಚ್ಚಿನ ಸ್ವಾಯತ್ತತೆ. ಬಡ್ಡಿಯ ದರಗಳಲ್ಲಿ ಕಡಿತ. ವಿದೇಶಿ ಬಂಡವಾಳ ಹೂಡಿಕೆ ಸಂಸ್ಥೆಗಳಲ್ಲಿ ವಿಶ್ವಾಸ ಮೂಡಿಸಿ ಬಂಡವಾಳ ಹೂಡಲು ಉತ್ತೇಜನ ನೀಡುವುದು. ಆಮದು ರಫ್ತು ವ್ಯವಸ್ಥೆಯನ್ನು ಬಲಪಡಿಸುವುದು. ರಕ್ಷಣೆ ಹಾಗೂ ಭದ್ರತೆಗೆ ಸಂಬಂಧಿಸಿದ ಕೈಗಾರಿಕೆಗಳನ್ನು ಹೊರತುಪಡಿಸಿ ಉಳಿದೆಲ್ಲ ಕೈಗಾರಿಕೆಗಳಿಗೆ ಲೈಸೆನ್ಸ್ ಪಡೆಯುವುದನ್ನು ತಪ್ಪಿಸುವುದು.

ವಿಶ್ವ ವ್ಯಾಪಾರ ಸಂಸ್ಥೆಯ ಜೊತೆ ಸೂಕ್ತವಾಗಿ ನಿರ್ವಹಣೆ ಮಾಡುವ ದೃಷ್ಟಿಯಿಂದ ಕೈಗಾರಿಕಾ ಕ್ಷೇತ್ರದ ಜೊತೆ ಸುಗಮ ಕಾರ್ಯನಿರ್ವಹಣೆ. ಹೊಸ ಕಂಪನಿ ಕಾಯ್ದೆ ಜಾರಿಗೆ ತರುವುದು. ಹೊಸ ವಿದೇಶಿ ವಿನಿಮಯ ನಿರ್ವಹಣಾ ಕಾಯಿದೆ ಜಾರಿಗೆ ತರುವುದು. ರೋಗಗ್ರಸ್ತ ಉದ್ದಿಮೆಗಳು, ಕಂಪನಿಗಳ ಕಾಯಿದೆಯನ್ನು ಪುನರ್‌ರೂಪಿಸುವಿಕೆ. ಅನ್ಯೋನ್ಯ ಸಂಬಂಧ ಕಲ್ಪನೆ, ಸುಸಂಘಟನೆ ಹಾಗೂ ಸಮಗ್ರತೆಯನ್ನು ನಿರ್ವಹಿಸಲು ಅಲ್ಪಸಂಖ್ಯಾತರಿಗಾಗಿ ಪ್ರತ್ಯೇಕ ಮಂತ್ರಾಲಯ ಸ್ಥಾಪನೆ. ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗಳಿಗೆ ಒಂದು ಪ್ರತ್ಯೇಕ ಕಮಿಷನ್ ಸ್ಥಾಪನೆ. ಏಕರೂಪದ ನಾಗರಿಕ ಸಂಹಿತೆ ಜಾರಿ ಇಲ್ಲ. ಪೋಲೀಸ್ ಮತ್ತು ಸೇನಾದಳದಲ್ಲಿ ಹೆಚ್ಚು ಅಲ್ಪಸಂಖ್ಯಾತರ ನೇಮಕಾತಿ. ಯು. ಪಿ. ಎಸ್. ಸಿ. ಯಲ್ಲಿ ಅಲ್ಪಸಂಖ್ಯಾತರ ನೇಮಕಾತಿ ಹೆಚ್ಚಿಸಲು ವಿಶೇಷ ಕ್ರಮ, ಉರ್ದು ಭಾಷೆಗೆ ಸೂಕ್ತ ಸ್ಥಾನಮಾನ. ಮೌಲಾನಾ ಅಬುಲ್ ಕಲಮ್ ಆಜಾದ್ ಫೌಂಡೇಷನ್‌ಗೆ ಗಣನೀಯ ಪ್ರಮಾಣದಲ್ಲಿ ನೆರವು ನೀಡಿಕೆ.

ಪಾಕ್ ಪ್ರಾಯೋಜಿತ ಭಯೋತ್ಪಾದನೆಯ ವಿರುದ್ಧ ಸಮರ. ಆರ್ಥಿಕ, ವ್ಯಾಪಾರ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಪಾಕೀಸ್ತಾನದೊಡನೆ ಬಾಂಧವ್ಯ ವೃದ್ಧಿಗೆ ಕ್ರಮ. ರಕ್ಷಣಾ ಸಂಬಂಧಿ ಉಪಕರಣಗಳ ಸುಧಾರಣೆಗೆ ಒಂದು ಉನ್ನತ ಮಟ್ಟದ ಆಯೋಗ ರಚನೆಗೆ ಕ್ರಮ. ಮಹಿಳೆಯರ ಬಗ್ಗೆ ಇರತಕ್ಕ ಪಕ್ಷಪಾತ, ಭೇದಭಾವಗಳನ್ನು ಕೊನೆಗೊಳಿಸಲು ಒಂದು ರಾಜಕೀಯ ಚಳವಳಿ ಮಹಿಳೆಯರಿಗೆ ಮನೆ ಮತ್ತು ಭೂಮಿಯನ್ನು ನೀಡಲು ವಿಶೇಷ ಯೋಜನೆಗಳನ್ನು ರೂಪಿಸುವುದು. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಮುಂತಾದ ಬಡತನ ನಿವಾರಣೆ ಯೋಜನೆಗಳಲ್ಲಿ ಮಹಿಳೆಯರಿಗೆ ಸಾಲ ಸೌಲಭ್ಯ ಒದಗಿಸಲು ಕ್ರಮ. ಉದ್ಯೋಗ ಸೃಷ್ಟಿಗೆ ಕ್ರಮ. ೯ ನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಬಗ್ಗೆ ವಿವರಗಳು ಹಾಗೂ ಕ್ರಿಯಾ ಯೋಜನೆಗಳನ್ನು ಪ್ರಕಟಿಸಲು ಕ್ರಮ. ಸಾಕ್ಷರತೆ, ಕುಟುಂಬ ಕಲ್ಯಾಣ, ಸಾಮಾಜಿಕ ಸುಧಾರಣಾ, ಅರಣ್ಯೀಕರಣ ಮುಂತಾದ ಕಾರ್ಯಕ್ರಮಗಳಲ್ಲಿ ನಿರುದ್ಯೋಗಿ ಯುವಕರನ್ನು ತೊಡಗಿಸಿ ಅವರಿಗೆ ಮಾಸಿಕ ನಿರ್ವಹಣಾ ಭತ್ಯೆ ನೀಡಲು ''ದೇಶ್ ಕೆ ಲಿಯೆ ಏಕ್ ಸಾಲ್'' ಕಾರ್ಯಕ್ರಮ ಹಮ್ಮಿಕೊಳ್ಳುವುದು. ಈ ಯೋಜನೆಯಲ್ಲಿ

ಕೆಲಸ ಮಾಡುವ ನಿರುದ್ಯೋಗಿ ಯುವಕರು ಸ್ಟೈಪೆಂಡ್ ಪಡೆಯುವುದನ್ನು ಬಿಟ್ಟು ಬೇರೆ ಉದ್ಯೋಗಗಳನ್ನು ಅರಸಿ ಹೋಗಲು ಅವಕಾಶ ಕಲ್ಪಿಸುವುದು.

ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಕೇಂದ್ರದ ಬಳಿ ಇರತಕ್ಕ ೮೦೦೦ ಕೋಟಿ ರೂಪಾಯಿಗಳನ್ನು ಜಿಲ್ಲಾ ಪರಿಷತ್ತುಗಳಿಗೆ ವರ್ಗಾಯಿಸುವುದು. ಎಲ್ಲಾ ಕಾಂಗ್ರೆಸ್ ಸಂಸತ್ ಸದಸ್ಯರು, ವಿಧಾನಸಭಾ ಸದಸ್ಯರು ತಾವು ಸದಸ್ಯರಾದ ದಿನ ಹಾಗೂ ಸದಸ್ಯತ್ವ ಬಿಡುವ ದಿನ ತಮ್ಮ ಆಸ್ತಿಪಾಸ್ತಿಗಳ ಘೋಷಣೆ ಮಾಡಿಕೊಳ್ಳುವುದಕ್ಕೆ ಕ್ರಮ. ಮಾಹಿತಿ ಹಕ್ಕು ಕಾಯಿದೆ ಜಾರಿಗೆ. ರಹಸ್ಯ ಸಂಸ್ಕೃತಿಗೆ ಕೊನೆ. ಸಚಿವರ ವಿವೇಚನಾ ಅಧಿಕಾರಗಳ ಪುನರ್ ವಿಮರ್ಶೆ. ಹದಿನಾಲ್ಕು ವರ್ಷದವರೆಗಿನ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಕಡ್ಡಾಯ ಮೂಲಭೂತ ಹಕ್ಕನ್ನಾಗಿ ಮಾಡಲು ಸಂವಿಧಾನ ತಿದ್ದುಪಡಿ. ವಿಮಾ ಕ್ಷೇತ್ರದ ಖಾಸಗೀಕರಣ. ಆದರೆ ಭಾರತೀಯ ಮೂಲದ ಕಂಪೆನಿಗಳು ಹೆಚ್ಚು ಷೇರುಗಳನ್ನು ಹೊಂದಿರುವಂತೆ ನೋಡಿಕೊಳ್ಳುವುದು. ನಗರ ಮೂಲಭೂತ ಸೌಲಭ್ಯ ಯೋಜನೆಗಳಲ್ಲಿ ಭಾರತೀಯ ಹಾಗೂ ವಿದೇಶಿ ಕಂಪನಿಗಳಿಗೆ ಅವಕಾಶ ಕಲ್ಪನೆ. ವಿದ್ಯುತ್ ಸರಬರಾಜು ಖಾಸಗಿ ಕ್ಷೇತ್ರಕ್ಕೆ. ಈ ಬಗ್ಗೆ ವಿದ್ಯುತ್ ಸರಬರಾಜು ಕಾಯಿದೆ ಜಾರಿಗೆ. ವಿದ್ಯುತ್ ದರ ನಿಗದಿ ಹಾಗೂ ನಿಯಂತ್ರಣಕ್ಕೆ ಕಾನೂನುಬದ್ಧ ಸಂಸ್ಥೆಗಳ ಸ್ಥಾಪನೆ.

ಚುನಾವಣೆಗಳಿಗೆ ಸರ್ಕಾರದ ಹಣ. ಒದಗಿಸುವ ಪದ್ಧತಿ ಆರಂಭಕ್ಕೆ ಕ್ರಮ. ಪ್ರತಿಯೊಂದು ಪಕ್ಷಗಳಿಗೆ ಈ ಹಣವನ್ನು ನೀಡುವ ಅಧಿಕಾರ ಚುನಾವಣಾ ಆಯೋಗಕ್ಕೆ. ನಿವೃತ್ತಿ ವಯಸ್ಸನ್ನು ೬೦ ಕ್ಕೆ ಏರಿಸುವುದು, ಎಲ್ಲಾ ಶಾಲೆಗಳಲ್ಲಿ ಎನ್. ಸಿ. ಸಿ. ಕಡ್ಡಾಯ, ಕೇಂದ್ರ ಸರ್ಕಾರದ ಆಡಳಿತ ಪರಿಷ್ಕರಣೆಗೆ ಹೊಸ ಆಡಳಿತ ಸುಧಾರಣಾ ಆಯೋಗ ಸ್ಥಾಪನೆ. ಪರಿಶಿಷ್ಟ ಜಾತಿಯವರಿಗಾಗಿ ಪ್ರತ್ಯೇಕ ರಾಷ್ಟ್ರೀಯ ಆಯೋಗ ರಚನೆ. ಮೀಸಲಾತಿಯನ್ನು ನ್ಯಾಯಬದ್ಧಗೊಳಿಸಿ ಸಂವಿಧಾನದ ೯ ನೇ ಷೆಡ್ಯೂಲ್‌ನಲ್ಲಿ ಸೇರಿಸುವುದು.

## ಫಲಿತಾಂಶ

ಸದರಿ ಚುನಾವಣೆಗಳಲ್ಲಿ ಬೊಂಬಾಯಿ ಕರ್ನಾಟಕ ಪ್ರದೇಶದಲ್ಲಿ ಕಾಂಗ್ರೆ ತನ್ನ ನೆಲೆಯನ್ನು ಕಳೆದುಕೊಂಡಿತು. ಬಿಜಾಪುರದ ಒಂದೇ ಸ್ಥಾನ ಅಲ್ಲಿ ಕಾಂಗ್ರೆಗೆ ದಕ್ಕಿತು. ಹಳೇ ಮೈಸೂರು, ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕಾಂಗ್ರೆ ತನ್ನ ಹಿಡಿತವನ್ನು ಹೊಂದಿತ್ತು. ೧೯೯೬ರಲ್ಲಿ ಕೇವಲ ಐದು ಸ್ಥಾನ ಗಳಿಸಿದ್ದ ಕಾಂಗ್ರೆಸ್ ೧೯೯೮ರ ಚುನಾವಣೆಗಳಲ್ಲಿ ಇನ್ನೂ ನಾಲ್ಕು ಸ್ಥಾನಗಳನ್ನು ಹೆಚ್ಚಾಗಿ ಪಡೆದು ತನ್ನ ಸಂಖ್ಯಾಬಲವನ್ನು ಒಂಬತ್ತಕ್ಕೆ ಏರಿಸಿಕೊಂಡಿದ್ದೇ ಒಂದು ಸಾಧನೆಯಾಗಿತ್ತು. ಸೋನಿಯಾ ಗಾಂಧಿಯವರು ಕರ್ನಾಟಕದಲ್ಲಿ ಎರಡು ಸುತ್ತು ಪ್ರವಾಸ ಕೈಗೊಂಡು ಪ್ರಚಾರ ಮಾಡಿದರೂ ಅದು ಹೆಚ್ಚಿನ ಪರಿಣಾಮ ಬೀರಲಿಲ್ಲ.

ಈ ಚುನಾವಣೆಯಲ್ಲಿ ೯ ಅಭ್ಯರ್ಥಿಗಳು ಗೆದ್ದು, ಕಾಂಗ್ರೆಸ್ ಐ ಪಕ್ಷ ಶೇ. ೩೬.೨೨ ಮತಗಳಿಸಿತು. ಅಂದರೆ ಅದು ಪಡೆದ ಮತ ೭೬,೪೩,೨೫೦. ರಾಯಚೂರಿನಿಂದ ವೆಂಕಟೇಶನಾಯಕ್ (ಶೇ. ೪೪. ೮೯), ಕೊಪ್ಪಳದಿಂದ ಹೆಚ್. ಜಿ. ರಾಮುಲು (೪೦. ೯೪), ಬಳ್ಳಾರಿಯಿಂದ ಕೆ. ಸಿ. ಕೊಂಡಯ್ಯ (ಶೇ. ೩೯.೭೬), ದಾವಣಗೆರೆಯಿಂದ ಶ್ಯಾಮನೂರು ಶಿವಶಂಕರಪ್ಪ (ಶೇ. ೪೨. ೨೧), ಚಿತ್ರದುರ್ಗದಿಂದ ಸಿ. ವಿ. ಮೂಡಲಗಿರಿಯಪ್ಪ (ಶೇ. ೪೨. ೮೮), ಚಿಕ್ಕಬಳ್ಳಾಪುರದಿಂದ ಆರ್. ಎಲ್. ಜಾಲಪ್ಪ (ಶೇ. ೪೪. ೪೧) ಕೋಲಾರದಿಂದ ಕೆ. ಎಚ್. ಮುನಿಯಪ್ಪ (ಶೇ. ೩೯.೬೨), ಬೆಂಗಳೂರು ಉತ್ತರದಿಂದ ಸಿ.ಕೆ. ಜಾಫರ್ ಷರೀಫ್ (ಶೇ. ೪೨. ೧೧) ಹಾಗೂ ಬಿಜಾಪುರದಿಂದ ಪಟೇಲ್ ಮಲ್ಲನಗೌಡ (ಶೇ. ೪೦.೩೨) ಅವರುಗಳು ಕಾಂಗ್ರೆಸ್ ಐ ಪಕ್ಷದ ಮೂಲಕ ಲೋಕಸಭೆಯನ್ನು ಪ್ರವೇಶಿಸಿದರು. ೯೬ರ ಚುನಾವಣೆಗಿಂತ ಇದು ಹೆಚ್ಚುವರಿಯಾಗಿ ನಾಲ್ಕು ಸ್ಥಾನಗಳನ್ನು ಗಳಿಸಿತ್ತು ಹಾಗೂ ಮತಗಳಿಕೆಯಲ್ಲಿ ಕೂಡಾ ಕಳೆದ ಚುನಾವಣೆಗಿಂತ ಗಣನೀಯ ಸಾಧನೆಯನ್ನು ಮಾಡಿತ್ತು.

## ೧೯೯೯ರ ಲೋಕಸಭೆ ಮತ್ತು ವಿಧಾನಸಭೆ ಚುನಾವಣೆ

೧೯೯೪ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕರ್ನಾಟಕ ರಾಜ್ಯದಲ್ಲಿ ಕಾಂಗ್ರೆಸ್ (ಐ) ಪಕ್ಷವು ಅಧಿಕಾರವನ್ನು ಕಳೆದುಕೊಂಡಿತು. ಜನತಾದಳದ ಹೆಚ್. ಡಿ. ದೇವೇಗೌಡರು ಮುಖ್ಯಮಂತ್ರಿಗಳಾದರು. ಆಗ ಕೇಂದ್ರದಲ್ಲಿ ಕಾಂಗ್ರೆಸ್ (ಐ) ಪಕ್ಷದ ನೇತೃತ್ವವನ್ನು ಪಿ. ವಿ. ನರಸಿಂಹರಾವ್ ಅವರು ವಹಿಸಿದ್ದರು. ೧೯೯೬ರಲ್ಲಿ ಪಿ. ವಿ. ನರಸಿಂಹರಾವ್ ಅವರ ಸರ್ಕಾರ ಲೋಕಸಭಾ ಚುನಾವಣೆಯಲ್ಲಿ ಸೋಲನ್ನು ಒಪ್ಪಿಕೊಂಡು ದೇವೇಗೌಡರ ನೇತೃತ್ವದಲ್ಲಿ ನ್ಯಾಷನಲ್ ಫ್ರಂಟ್ ಸರ್ಕಾರ ಕೇಂದ್ರದಲ್ಲಿ ಅಸ್ತಿತ್ವಕ್ಕೆ ಬಂದಿತು. ಕಾಂಗ್ರೆಸ್ (ಐ) ಪಕ್ಷವು ದೇವೇಗೌಡರ ನೇತೃತ್ವದ ಸರ್ಕಾರಕ್ಕೆ ಹೊರಗಿನಿಂದ ಬೆಂಬಲ ಕೊಡಲು ನಿರ್ಧರಿಸಿತು. ದೇವೇಗೌಡ ಹಾಗೂ ಕಾಂಗ್ರೆಸ್ (ಐ) ನಡುವಣ ಶೀತಲ ಸಮರದಲ್ಲಿ ದೇವೇಗೌಡರು ತಮ್ಮ ಪ್ರಧಾನಿ ಸ್ಥಾನವನ್ನು ಕಳೆದುಕೊಂಡು ಐ. ಕೆ. ಗುಜ್ರಾಲ್‌ರವರು

ಪ್ರಧಾನಮಂತ್ರಿಯಾದರು. ೧೯೯೮ರಲ್ಲಿ ನಡೆದ ಲೋಕಸಭೆ ಮಧ್ಯಂತರ ಚುನಾವಣೆಯಲ್ಲಿ ಬಿ. ಜೆ. ಪಿ. ನಾಯಕ ಅಟಲ್ ಬಿಹಾರಿ ವಾಜಪೇಯಿ ಅವರ ನೇತೃತ್ವದ ಎನ್. ಡಿ. ಎ. ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಅಣ್ಣಾ ಡಿ. ಎಂ. ಕೆ. ನಾಯಕಿ ಜಯಲಲಿತಾ ಅವರು ಬೆಂಬಲವನ್ನು ವಾಪಾಸ್ಸು ತೆಗೆದುಕೊಂಡ ಕಾರಣ ಮತ್ತೆ ಲೋಕಸಭೆಗೆ ಮಧ್ಯಂತರ ಚುನಾವಣೆ ಏರ್ಪಟ್ಟಿತು. ಆಗ ರಾಜ್ಯ ವಿಧಾನಸಭೆ ಚುನಾವಣೆಯನ್ನು ಕೂಡ ಜೊತೆ ಜೊತೆಯಲ್ಲಿ ನಡೆಸಲು ಚುನಾವಣಾ ಆಯೋಗ ನಿರ್ಧಾರವನ್ನು ತೆಗೆದುಕೊಂಡಿತು. ಆಗ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಜನತಾದಳದ ಜೆ. ಹೆಚ್. ಪಟೇಲ್ ಅವರು ವಿಧಾನಸಭೆ ಹಾಗೂ ಲೋಕಸಭೆ ಚುನಾವಣೆಗಳು ಪ್ರತ್ಯೇಕವಾಗಿ ನಡೆಯಬೇಕು ಎಂದು ಹೇಳಿದ್ದೂ ಉಂಟು. ಆದರೆ ಚುನಾವಣಾ ಆಯೋಗ ಎರಡೂ ಚುನಾವಣೆಗಳನ್ನು ರಾಜ್ಯದಲ್ಲಿ ಒಟ್ಟಿಗೆ ನಡೆಸಲು ನಿರ್ಧರಿಸಿತು.

೧೯೯೬ರಲ್ಲಿ ಕಾಂಗ್ರೆಸ್ (ಐ) ಸರ್ಕಾರ ಅಧಿಕಾರ ಕಳೆದುಕೊಂಡ ನಂತರ ಸೀತಾರಾಮ್ ಕೇಸರಿಯವರು (೧೯೯೭) ಅಖಿಲ ಭಾರತ ಕಾಂಗ್ರೆಸ್ (ಐ)ನ ಅಧ್ಯಕ್ಷರಾದರು. ಸೋನಿಯಾ ಗಾಂಧಿಯವರು ಕಾಂಗ್ರೆಸ್ (ಐ) ಪಕ್ಷದ ಕಾರ್ಯಕಾರಿ ಸಮಿತಿಯ ಸದಸ್ಯರಾದರು. ೧೯೯೮ರ ಹೊತ್ತಿಗೆ ಸ್ವತಃ ಸೋನಿಯಾ ಗಾಂಧಿಯವರು ಕಾಂಗ್ರೆಸ್ (ಐ) ನ ಅಧ್ಯಕ್ಷರಾದರು. ೧೯೯೪ರಿಂದ ೯೯ರ ಈ ಐದು ವರ್ಷಗಳ ಅವಧಿಯಲ್ಲಿ ರಾಜ್ಯ ಹಾಗೂ ರಾಷ್ಟ್ರರಾಜಕಾರಣದಲ್ಲಿ ಅನೇಕ ಬದಲಾವಣೆಗಳು ನಡೆದುದನ್ನು ರಾಜಕೀಯ ವಿಶ್ಲೇಷಣೆಕಾರರು ಗುರುತಿಸಿದ್ದಾರೆ. ಗಂಗಾ, ಯಮುನಾ, ಕಾವೇರಿ ನದಿಗಳಲ್ಲಿ ಸಾಕಷ್ಟು ನೀರು ಹರಿದುಹೋದಂತೆ ಅನೇಕ ರಾಜಕೀಯ ಚಿಂತನೆಗಳು, ಘರ್ಷಣೆಗಳು ಈ ಕಾಲದಲ್ಲಿ ನಡೆದದ್ದೂ ಉಂಟು. ೧೯೯೨ರಲ್ಲಿ ನಡೆದ ಬಾಬರಿ ಮಸೀದಿ ಧ್ವಂಸದಿಂದಾಗಿ ಅಲ್ಪಸಂಖ್ಯಾತರು ಕಾಂಗ್ರೆಸ್ (ಐ) ಪಕ್ಷವನ್ನು ಅನುಮಾನಾಸ್ಪದ ದೃಷ್ಟಿಯಿಂದ ನೋಡಲಾರಂಭಿಸಿದ್ದರು. ಉತ್ತರ ಭಾರತದಲ್ಲಿ ಕಾಂಗ್ರೆಸ್ (ಐ) ಗೆ ಹಿಂದುಳಿದವರ್ಗಗಳ ಹಾಗೂ ದಲಿತರ ಬೆಂಬಲ ಬಹುಮಟ್ಟಿಗೆ ಕ್ಷೀಣಿಸಿತ್ತು. ಮುಲಾಯಂಸಿಂಗ್ ಯಾದವ್, ಲಾಲೂ ಪ್ರಸಾದ್ ಯಾದವ್ ಅವರುಗಳು ಹಿಂದುಳಿದ ವರ್ಗಗಳ ಸಂಘಟನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದರು. ಬಹುಜನ ಸಮಾಜವಾದಿ ಪಕ್ಷದ ಕಾನ್ಷಿರಾಮ್ ಹಾಗೂ ಮಾಯಾವತಿಯವರು ಉತ್ತರ ಪ್ರದೇಶದಲ್ಲಿ ದಲಿತರನ್ನು ರಾಜಕೀಯವಾಗಿ ಏಕೀಕೃತಗೊಳಿಸಿದ್ದರು. ಇಂತಹ ಪರಿಸ್ಥಿತಿಯಲ್ಲಿ ಬಿ.ಜೆ.ಪಿ. ಹಿಂದೂತ್ವವನ್ನು ತನ್ನ ಮುಖ್ಯವಾದ ವಿಚಾರವನ್ನಾಗಿ ಮಾಡಿಕೊಂಡು ಉತ್ತರ ಭಾರತ, ರಾಜಸ್ತಾನ, ಗುಜರಾತ್‌ಗಳಲ್ಲಿ ತನ್ನ ಪ್ರಾಬಲ್ಯವನ್ನು ಸ್ಥಾಪಿಸಿತು. ಈ ಮಧ್ಯೆ ಸೋನಿಯಾ ಗಾಂಧಿಯವರು ಅಧ್ಯಕ್ಷರಾದ ನಂತರ ಡೆಲ್ಲಿಯಲ್ಲಿ ನಡೆದ ೧೯೯೮ರ ಅಕ್ಟೋಬರ್‌ನಲ್ಲಿ ನಡೆದ ವಿಧಾನಸಭೆ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಪಕ್ಷ ಅದ್ಭುತ ವಿಜಯವನ್ನು ಗಳಿಸಿತು. ಮಧ್ಯಪ್ರದೇಶದಲ್ಲಿ ೧೯೯೮ರಲ್ಲಿ ಸೆಪ್ಟೆಂಬರ್, ಚುನಾವಣೆಯಲ್ಲಿ ದಿಗ್ವಿಜಯಸಿಂಗ್ ಅವರು ಕಾಂಗ್ರೆಸ್ (ಐ) ಪಕ್ಷಕ್ಕೆ ಅದ್ಭುತ ವಿಜಯವನ್ನು ಗಳಿಸಿಕೊಟ್ಟರು. ರಾಜಾಸ್ಥಾನದ ಪಚ್‌ಮರಿಯಲ್ಲಿ ೧೯೯೮ ಸೆಪ್ಟೆಂಬರ್ ೪-೫ರಂದು ನಡೆದ ಕಾಂಗ್ರೆಸ್ ಸಮಾವೇಶದಲ್ಲಿ ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳ ಬಗ್ಗೆ ಹೊಸ ತಿರುವನ್ನು ಕೊಡಲಾಯಿತು. ಸಂಘಟನೆಗೆ ಹೊಸ ರೂಪವನ್ನು ಕೊಡುವ ಪ್ರಯತ್ನವನ್ನು ಮಾಡಲಾಯಿತು. ಪಚ್‌ಮರಿಯ ಈ ನಿರ್ಣಯಗಳು ಹೀಗಿವೆ -

ಕಳೆಗುಂದಿದ್ದ ಕಾರ್ಯಕರ್ತರಲ್ಲಿ ಧೈರ್ಯ ಹಾಗೂ ವಿಶ್ವಾಸವನ್ನು ತುಂಬಿ ವಿರೋಧಪಕ್ಷಗಳ ದಬ್ಬಾಳಿಕೆಯಿಂದ ಅವರನ್ನು ರಕ್ಷಿಸುವುದು. ಕಾಂಗ್ರೆಸ್ ಪಕ್ಷ ಮೊದಲಿನಿಂದಲೂ ನಡೆಸಿಕೊಂಡು ಬಂದ ಸಾಮೂಹಿಕ ನಾಯಕತ್ವಕ್ಕೆ ಹೆಚ್ಚಿನ ಇಂಬು ಕೊಡುವುದು. ಪಕ್ಷದಿಂದ ಸಿಡಿದುಹೋಗಿರುವ ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ದಲಿತ ವರ್ಗದ ವಿಶ್ವಾಸ ಗಳಿಸುವುದು, ಸಾಂಸ್ಥಿಕ ಮಟ್ಟದಲ್ಲಿ ದಲಿತ, ಹಿಂದುಳಿದ ಹಾಗೂ ಮಹಿಳೆಯರಿಗೆ ಸ್ಥಾನ ಕಲ್ಪಿಸಲು ಕಾಂಗ್ರೆಸ್ ಪಕ್ಷದ ಸಂವಿಧಾನಕ್ಕೆ ತಿದ್ದುಪಡಿಯನ್ನು ತರುವುದು. ಮಹಿಳೆಯರು ಹಾಗೂ ದುರ್ಬಲವರ್ಗದವರ ಏಳಿಗೆಗೆ ಅಗತ್ಯ ಕಾರ್ಯಕ್ರಮ ಕೈಗೊಳ್ಳುವುದು. ಜಾತ್ಯತೀತ ಶಕ್ತಿಗಳನ್ನು ಉತ್ತೇಜಿಸಿ ಕೋಮುವಾದಿಗಳ ವಿರುದ್ಧ ಸಂಘಟಿತ ಹೋರಾಟ ನಡೆಸುವುದು. ರಾಜಕಾರಣದಲ್ಲಿ ಅಪರಾಧೀಕರಣವನ್ನು ತಡೆಗಟ್ಟುವುದು. ಕಾಂಗ್ರೆಸ್ (ಐ) ಪಕ್ಷ ಮೊದಲಿನಿಂದಲೂ ಅನುಸರಿಸಿಕೊಂಡುಬಂದ ಬಡವರ ಪರವಾದ ಆರ್ಥಿಕ ನೀತಿಯನ್ನು ಮುಂದುವರಿಸುವುದು.

ಸಾಮೂಹಿಕ ನಾಯಕತ್ವದಲ್ಲಿ ದಲಿತ, ಹಿಂದುಳಿದ ಹಾಗೂ ಬಡವರನ್ನು ಸಂಘಟನೆ ಮಾಡಿ ಪಕ್ಷವನ್ನು ರಾಜ್ಯ ಹಾಗೂ ಕೇಂದ್ರದಲ್ಲಿ ಅಧಿಕಾರಕ್ಕೆ ತರಬೇಕು ಎಂದು ಕಾಂಗ್ರೆಸ್ಸಿನ ಚಿಂತಕರ ಚಾವಡಿ ನಿರ್ಧರಿಸಿತು. ಕರ್ನಾಟಕ ರಾಜ್ಯದಲ್ಲಿ ೧೯೯೪ರಿಂದಲೂ ಅಂದರೆ ಅಧಿಕಾರ ಕಳೆದುಕೊಂಡ ದಿನದಿಂದಲೂ ಕಾಂಗ್ರೆಸ್ಸಿನ ನಾಯಕರು ಬಿ. ಜೆ. ಪಿ. ಹಾಗೂ ಜನತಾದಳದ ವಿರುದ್ಧ ಸಂಘಟನಾತ್ಮಕವಾಗಿ ಹೋರಾಡುತ್ತಲೇ ಬಂದಿದ್ದಾರೆ. ಕಾಂಗ್ರೆಸ್‌ನಿಂದ ಸಿಡಿದು ಹೋಗಿದ್ದ ಕೆ. ಸಿ. ಪಿ. ಮತ್ತೆ ಮಾತೃಪಕ್ಷಕ್ಕೆ ಬಂದಮೇಲೆ ಕಾಂಗ್ರೆಸ್‌ಗೆ ಮತ್ತಷ್ಟು ಬಲ ಬಂದಿತು. ಕೆ. ಸಿ. ಪಿ. ಸದಸ್ಯರಿಂದ ಕಾಂಗ್ರೆಸ್ (ಐ)ಗೆ ವಿಧಾನಸಭೆಯಲ್ಲಿ ಅಧಿಕೃತ ವಿರೋಧಪಕ್ಷದ ಸ್ಥಾನ ದೊರಕಿತು. ಈ ಅವಧಿಯಲ್ಲಿ ವಿರೋಧಪಕ್ಷದ ನಾಯಕರಾಗಿ ಮಲ್ಲಿಕಾರ್ಜುನ ಖರ್ಗೆಯವರು ತಮ್ಮ ದಿಟ್ಟ ಹೋರಾಟವನ್ನು ಸದನದ ಒಳಗೆ ಹಾಗೂ

ಹೊರಗೆ ಪ್ರದರ್ಶಿಸಿದ್ದು ಉಂಟು. ಜನತಾದಳದ ಆಂತರಿಕ ಹೊಯ್ದಾಟವನ್ನು ಜನತೆಯ ಎದುರು ಅವರು ಸಮರ್ಪಕವಾಗಿ ತೆರೆದಿಟ್ಟರು. ರೈತರು, ಕಾರ್ಮಿಕರು, ಮಹಿಳೆಯರು, ವಿದ್ಯಾರ್ಥಿಗಳು, ಶ್ರೀಸಾಮಾನ್ಯರು ಹಾಗೂ ಸಮಾಜದ ಇತರ ಎಲ್ಲ ವರ್ಗಗಳ ಬೆಂಬಲವನ್ನು ಕಾಂಗ್ರೆಸ್ (ಐ) ಗೆ ಮತ್ತೆ ಪಡೆಯಲು ವಿರೋಧಪಕ್ಷದ ನಾಯಕರಾಗಿ ಮಲ್ಲಿಕಾರ್ಜುನ ಖರ್ಗೆಯವರು ಪರಿಣಾಮಕಾರಿಯಾಗಿ ದುಡಿದಿರುವುದು ಉಂಟು. ಇದಕ್ಕೆ ಅಂದಿನ ಸದನದ ಕಲಾಪಗಳು ಸಾಕ್ಷಿ ನುಡಿಯುತ್ತವೆ. ಕರ್ನಾಟಕ ವಿಧಾನಪರಿಷತ್‌ನ ವಿರೋಧಪಕ್ಷದ ನಾಯಕರಾಗಿ ಹೆಚ್. ಕೆ. ಪಾಟೀಲರು ಇದೇ ಸಂದರ್ಭದಲ್ಲಿ ಜನತಾದಳದ ವಿರುದ್ಧ ಪ್ರಜ್ಞಾಪೂರ್ವಕ ರೀತಿಯಲ್ಲಿ ಹೋರಾಟವನ್ನು ನಡೆಸಿದರು. ವಕೀಲರು, ಶಿಕ್ಷಕರು, ಉಪನ್ಯಾಸಕರು, ವೈದ್ಯರು ಹಾಗೂ ಇತರ ಎಲ್ಲ ಬುದ್ಧಿಜೀವಿಗಳು ಜನತಾದಳದ ವಿರುದ್ಧ ಬೇಸರ ಬೆಳೆಸಿಕೊಳ್ಳುವಂತೆ ಅವರು ವಿರೋಧ ಪಕ್ಷದ ನಾಯಕತ್ವದ ಹೊಣೆಯನ್ನು ನಿರ್ವಹಿಸಿದರು.

ಡಿ. ಕೆ. ನಾಯ್ಕರ್ ಅವರು ಕಾಂಗ್ರೆಸ್‌ನ ಅಧ್ಯಕ್ಷ ಪದವಿಯನ್ನು ತೊರೆದ ನಂತರ ಧರ್ಮಸಿಂಗ್ ಅವರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ಕಾಂಗ್ರೆಸ್ (ಐ) ಪಕ್ಷದ ಬಗ್ಗೆ ಅಚಲ ನಿಷ್ಠೆ ಹೊಂದಿದ ಹಿರಿಯ ನಾಯಕರಲ್ಲಿ ಧರ್ಮಸಿಂಗ್ ಅವರೂ ಒಬ್ಬರು. ಅವರು ಇಂದಿರಾ ಗಾಂಧಿ ನೇತೃತ್ವದ ಕಾಂಗ್ರೆಸ್‌ನಿಂದ ೧೯೭೨ರಲ್ಲಿ ರಾಜಕೀಯವನ್ನು ಪ್ರವೇಶಿಸಿ ಅಂದಿನಿಂದಲೂ ಕಾಂಗ್ರೆಸ್ (ಐ) ಪಕ್ಷದ ಬಗ್ಗೆ ಅಸಾಧಾರಣ ನಿಷ್ಠೆ ಉಳ್ಳವರಾಗಿದ್ದಾರೆ. ತಮ್ಮ ಅಧಿಕಾರ ಅವಧಿಯಲ್ಲಿ ಕಾಂಗ್ರೆಸ್ (ಐ) ಪಕ್ಷಕ್ಕೆ ಹಿಂದುಳಿದವರು ಹಾಗೂ ಶ್ರೀಸಾಮಾನ್ಯರ ಬೆಂಬಲ ದೊರಕಿಸಿಕೊಡಲು ಅವರು ಸಾಕಷ್ಟು ಪ್ರಾಮಾಣಿಕ ಪ್ರಯತ್ನ ಪಟ್ಟಿದ್ದೂ ಉಂಟು. ವಿಶೇಷವಾಗಿ ಪಕ್ಷವನ್ನು ಸಂಘಟಿಸುವಲ್ಲಿ ಅವರದ್ದು ಹಿರಿದಾದ ಪಾತ್ರ. ಅವರ ನೇತೃತ್ವದಲ್ಲಿ ೧೯೯೮ರಲ್ಲಿ ಲೋಕಸಭೆ ಚುನಾವಣೆ ಕೂಡ ನಡೆದು ಅದರಲ್ಲಿ ಕಾಂಗ್ರೆಸ್ (ಐ) ಪಕ್ಷ ಗಣನೀಯವಾದ ಸಾಧನೆಯನ್ನು ಮಾಡಿರುವುದನ್ನು ಗಮನಿಸಬಹುದು.

ಅಖಿಲ ಭಾರತ ಕಾಂಗ್ರೆಸ್ ಸಮಿತಿ ಕರ್ನಾಟಕ ವಿಧಾನಸಭೆ ಚುನಾವಣೆಗೆ ಒಂದು ವರ್ಷಕ್ಕೆ ಮೊದಲೇ ರಾಜ್ಯದ ಚುನಾವಣೆ ಬಗ್ಗೆ ಕ್ರಿಯಾಯೋಜನೆಯನ್ನು ರೂಪಿಸಿತು. ರಾಜಕೀಯದ ಧ್ರುವೀಕರಣವನ್ನು ಗಮನಿಸಿ ರಾಜ್ಯಸಭಾ ಸದಸ್ಯರಾಗಿದ್ದ ಎಸ್. ಎಂ. ಕೃಷ್ಣ ಅವರನ್ನು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರನ್ನಾಗಿ ಈ ಸಂದರ್ಭದಲ್ಲಿ ನೇಮಿಸಲಾಯಿತು. ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷದ ಉಸ್ತುವಾರಿಯನ್ನು ನೋಡಿಕೊಳ್ಳುವ ಹೊಣೆಯನ್ನು ಗುಲಾಂ ನಬಿ ಆಜಾದ್ ಅವರಿಗೆ ವಹಿಸಲಾಯಿತು. ಗುಲಾಂ ನಬಿ ಆಜಾದ್‌ರವರು ಜನತಾದಳದ ಆಂತರಿಕ ಭಿನ್ನಾಭಿಪ್ರಾಯವನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡು ಮೂಲತಃ ಕಾಂಗ್ರೆಸ್‌ನವರಾಗಿದ್ದು ೮೦ರ ದಶಕದಲ್ಲಿ ಜನತಾದಳಕ್ಕೆ ವಲಸೆ ಹೋಗಿದ್ದ ನಾಯಕರನ್ನು ಮತ್ತೆ ಪಕ್ಷಕ್ಕೆ ಕರೆತರುವಲ್ಲಿ ಹಿರಿದಾದ ಪಾತ್ರವನ್ನು ವಹಿಸಿದರು. ಶ್ರೀಯುತರುಗಳಾದ ಆರ್. ಎಲ್. ಜಾಲಪ್ಪ, ಆರ್. ವಿ. ದೇಶಪಾಂಡೆ, ಡಿ. ಬಿ. ಚಂದ್ರೇಗೌಡ, ರೋಷನ್ ಬೇಗ್, ನೂರುಲ್ ಇಸ್ಲಾಂ, ಗುರುಪಾದಪ್ಪ ನಾಗಮಾರಪಲ್ಲಿ, ವೈ.ಕೆ. ರಾಮಯ್ಯ, ಬಿ. ಆರ್. ಯಾವಗಲ್ ಮೊದಲಾದ ಹಿರಿಯ ನಾಯಕರುಗಳನ್ನು ಕಾಂಗ್ರೆಸ್‌ಗೆ ಅವರು ಸೇರ್ಪಡೆ ಮಾಡಿಸಿಕೊಂಡರು.

ಎಸ್. ಎಂ. ಕೃಷ್ಣ ಅವರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದಾಗ ಅವರ ನೇತೃತ್ವದಲ್ಲಿ ಪಾಂಚಜನ್ಯ ಯಾತ್ರೆ ೩.೬.೧೯೯೭ ರಂದು ಬೆಂಗಳೂರುನಿಂದ ಹೊರಟಿತು. ಈ ಪಾಂಚಜನ್ಯ ರಾಜ್ಯದ ೨೯೪೦ ಕಿ.ಮೀ. ಸಂಚರಿಸಿತು. ೫೧೭ ಕ್ಕೂ ಹೆಚ್ಚಿನ ಸಾರ್ವಜನಿಕ ಸಮಾರಂಭ ಕಾಂಗ್ರೆಸ್‌ನ ಧ್ಯೇಯೋದ್ದೇಶಗಳನ್ನು ಪ್ರಚುರಪಡಿಸಲಾಯಿತು. ಜನಜಾಗೃತಿ ಜತೆಗೆ ಕಾಂಗ್ರೆಸ್ (ಐ) ಪಕ್ಷವನ್ನು ಜನಮನದಲ್ಲಿ ಮತ್ತೆ ಪ್ರತಿಷ್ಠಾಪಿಸುವುದು ಈ ಯಾತ್ರೆಯ ಪ್ರಮುಖ ಉದ್ದೇಶವಾಗಿತ್ತು. ಅನೇಕ ವಿಚಾರಗಳಲ್ಲಿ ಕಾಂಗ್ರೆಸ್ (ಐ) ಪಕ್ಷ ಒಡೆದ ಮನೆಯಾಗಿತ್ತು. ಅಂತಹ ಸನ್ನಿವೇಶದಲ್ಲಿ ಎಸ್. ಎಂ. ಕೃಷ್ಣ ಹಾಗೂ ಗುಲಾಂ ನಬಿ ಆಜಾದ್ ನೇತೃತ್ವದ ಈ ಪಾಂಚಜನ್ಯ ಯಾತ್ರೆ ಈ ನಾಯಕರನ್ನು ಒಂದಾಗಿ ಬೆಸೆಯುವ ದಿಸೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿತ್ತು. ಹಾಸನ, ಮಂಡ್ಯ, ತುಮಕೂರು ಮೊದಲಾದ ಕಡೆಗೆ ಪಾಂಚಜನ್ಯ ಯಾತ್ರೆ ಪಕ್ಷವನ್ನು ಸಂಘಟಿಸುವಲ್ಲಿ ತುಂಬಾ ಪ್ರಮುಖ ಪಾತ್ರವಹಿಸಿತು. ರಾಜ್ಯದ ಕಾಂಗ್ರೆ ಇತಿಹಾಸದಲ್ಲಿ ಮೊಟ್ಟಮೊದಲಬಾರಿಗೆ ಸಾಮೂಹಿಕ ನಾಯಕತ್ವವನ್ನು ಪ್ರತಿಬಿಂಬಿಸಿದ ಯಾತ್ರೆ ಇದಾಗಿತ್ತು. ಈ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಪಕ್ಷ ರಾಜ್ಯ ವಿಧಾನಸಭೆ ಮತ್ತು ಲೋಕಸಭೆ ಚುನಾವಣೆಗಳಲ್ಲಿ ಮಹತ್ವದ ಸಾಧನೆ ಮಾಡಿತು. ಬಿ. ಜೆ. ಪಿ. ವಿರುದ್ಧ ಇಂತಹ ಗಣನೀಯವಾದ ಸಾಧನೆ ಮಾಡಲು ಕಾರಣವಾದದ್ದು ರಾಜ್ಯದ ಕಾಂಗ್ರೆಸ್ (ಐ) ಪಕ್ಷದ ನಾಯಕರ ಸಂಘಟನಾತ್ಮಕ ಹೋರಾಟದಿಂದ ಎಂದು ಹೇಳಬಹುದು. ಉತ್ತರ ಕನ್ನಡ, ಉಡುಪಿ, ಚಿಕ್ಕಬಳ್ಳಾಪುರ, ತುಮಕೂರು, ಮೈಸೂರು, ಬಾಗಲಕೋಟೆ, ಗುಲ್ಬರ್ಗಾ, ಕೊಪ್ಪಳ, ಹಾಸನ, ಕನಕಪುರ ಮೊದಲಾದ ಲೋಕಸಭಾ ಕ್ಷೇತ್ರಗಳು ಕಾಂಗ್ರೆಸ್ (ಐ) ಗೆ ದೊರಕಲು ಈ ನಾಯಕರುಗಳು ನಡೆಸಿದ ಸಂಘಟನಾತ್ಮಕ ಹೋರಾಟ ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಚುನಾವಣೆಯಲ್ಲಿ ಕಾಂಗ್ರೆಸ್ (ಐ) ಪಕ್ಷದ ಧ್ಯೇಯೋದ್ದೇಶಗಳನ್ನು ತಿಳಿಯೋಣ.

೧೯೯೯ರ ಚುನಾವಣಾ ಪ್ರಣಾಳಿಕೆಯು ೩೨ ಪುಟಗಳ ಒಂದು ಕಿರುಪುಸ್ತಕವಾಗಿದೆ. ಕಾಂಗ್ರೆಸ್ (ಐ) ಪಕ್ಷದ ಬಗ್ಗೆ ಸಾಕಷ್ಟು ಮಾಹಿತಿಯನ್ನು ಹಾಗೂ ಆ ಪಕ್ಷ ನಡೆಸಿಕೊಂಡು ಬಂದ ಜನಪರ ಹೋರಾಟವನ್ನು ಈ ಪ್ರಣಾಳಿಕೆಯಲ್ಲಿ ಮತದಾರರಿಗೆ ಪರಿಚಯಿಸಲಾಗಿದೆ. ರಾಜ್ಯದಲ್ಲಿ ಜನತಾದಳದ ಆಳ್ವಿಕೆಯಲ್ಲಿನ ಆಂತರಿಕ ಕಲಹ ಹಾಗೂ ಕೇಂದ್ರದಲ್ಲಿ ಬಿ. ಜೆ. ಪಿ. ನೇತೃತ್ವದ ಸರ್ಕಾರ ನಡೆಸುತ್ತಿರುವ ಮತೀಯ ವಾದವನ್ನು ಮತ್ತೆ ಮತ್ತೆ ಈ ಚುನಾವಣಾ ಪ್ರಣಾಳಿಕೆಯಲ್ಲಿ ಪ್ರಸ್ತಾಪಿಸಲಾಗಿದೆ. ಇಂದಿರಾ ಗಾಂಧಿಯವರ ೨೦ ಅಂಶಗಳ ಯೋಜನೆ ಹಾಗೂ ಡಿ. ದೇವರಾಜ್ ಅರಸು ಅವರ ಸಾಮಾಜಿಕ ನ್ಯಾಯದ ಮೇಲಿನ ಆಡಳಿತದ ಬಗ್ಗೆ ಚುನಾವಣೆ ಪ್ರಣಾಳಿಕೆಯಲ್ಲಿ ಸಾಕಷ್ಟು ಮಾಹಿತಿಯನ್ನು ಕೊಟ್ಟು, ಅದು ಹೀಗೆ ಆಶ್ವಾಸನೆ ನೀಡುತ್ತದೆ: 'ಮುಂಬರುವ ಲೋಕಸಭೆ ಹಾಗೂ ವಿಧಾನಸಭೆ ಚುನಾವಣೆಗಳಲ್ಲಿ ಸೋನಿಯಾ ಗಾಂಧಿ ನೇತೃತ್ವದ ಕಾಂಗ್ರೆಸ್ ಪಕ್ಷವು ಪ್ರಜಾತಂತ್ರವನ್ನು ಬಲಪಡಿಸಿ ಜಾತ್ಯತೀತ ಅಭಿವೃದ್ಧಿಪರ ಯೋಜನೆ ಹಾಗೂ ಸಾಮಾಜಿಕ ನ್ಯಾಯವನ್ನು ಎತ್ತಿಹಿಡಿಯುವ ಗುರುತರ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸುತ್ತದೆ.

ಕರ್ನಾಟಕದಲ್ಲಿ ಜನತಾದಳದ ಆಡಳಿತದ ಬಗ್ಗೆ ಅದರ ಟೀಕೆ ಹೀಗಿದೆ. ''ಕರ್ನಾಟಕದಲ್ಲಿ ಜನತೆಯ ಅಗತ್ಯಗಳಿಗೆ ಕಿಂಚಿತ್ತೂ ಸ್ಪಂದಿಸದ ಕ್ರಿಯಾಶೂನ್ಯ ಸರ್ಕಾರ ಜನತಾದಳ ಸರ್ಕಾರ. ಕೇಂದ್ರದಲ್ಲಿ ಬಿ. ಜೆ. ಪಿ. ಸರ್ಕಾರ ಉರುಳಿದ ಬಗ್ಗೆ ಅದರ ಅಭಿಪ್ರಾಯ ಈ ರೀತಿ ಇದೆ. ಬಿ. ಜೆ.ಪಿ. ನೇತೃತ್ವದ ಸರ್ಕಾರವನ್ನು ಯಾರೂ ಉರುಳಿಸಲಿಲ್ಲ. ಅದು ತನ್ನದೇ ಆದ ಆಂತರಿಕ ಕಲಹದಿಂದಾಗಿ ಕುಸಿದುಬಿತ್ತು. ಸಂಯುಕ್ತ ಸರ್ಕಾರದ ಒಳಗೆ ಇದ್ದ ಭಿನ್ನಾಭಿಪ್ರಾಯ, ಪ್ರಧಾನಿ ಹಾಗೂ ಗೃಹಸಚಿವರ ನಡುವೆ ನಡೆದ ಮುಸುಕಿನ ಯುದ್ಧದ ಫಲವಾಗಿ ಈ ಸರ್ಕಾರ ಕುಸಿದಿದೆ. ಕೇಂದ್ರಸರ್ಕಾರದ ವಿರುದ್ಧ ಅದರ ಗದಾಪ್ರಹಾರ ಈ ರೀತಿ ಇದೆ. ಅಗತ್ಯವಸ್ತುಗಳ ಬೆಲೆಯನ್ನು ನಿಯಂತ್ರಿಸಲು ಆಗದೇ ಹೋದ ಕಾರಣ ಈರುಳ್ಳಿ, ಆಲೂಗಡ್ಡೆ ಹಾಗೂ ತರಕಾರಿಗಳ ಬೆಲೆಗಳು ಗಗನಕ್ಕೆ ಏರಿದವು. ಗೋಧಿ, ಸಕ್ಕರೆ, ಯೂರಿಯಾ, ಅಡಿಗೆ ಅನಿಲ ಹಾಗೂ ದೂರವಾಣಿ ದರಗಳು ತೀರಾ ದುಬಾರಿಯಾದ ಪರಿಣಾಮವಾಗಿ ಗ್ರಾಮೀಣ ಹಾಗೂ ನಗರಪ್ರದೇಶದ ಜನರಿಗೆ ಬಹಳ ತೊಂದರೆಯಾಗಿದೆ. ಕರ್ನಾಟಕವನ್ನು ಬಿ.ಜೆ.ಪಿ. ಹೇಗೆ ಕಡೆಗಣಿಸಿದೆ ಎಂಬುದಕ್ಕೆ ಪ್ರಸ್ತುತ ಪ್ರಣಾಳಿಕೆ ಮಾಹಿತಿಯನ್ನು ಒದಗಿಸುತ್ತದೆ: 'ಬಿ.ಜೆ.ಪಿ. ಸರ್ಕಾರದ ಕೆಲವು ನಿರ್ಣಯಗಳು ಕರ್ನಾಟಕದ ಮೇಲೆ ಅತ್ಯಂತ ಪ್ರತಿಕೂಲ ಪರಿಣಾಮ ಬೀರಿತು. ಸಕ್ಕರೆ, ರೇಷ್ಮೆ ಹಾಗೂ ತೈಲವನ್ನು ಆಮದುಮಾಡಿಕೊಳ್ಳುವ ತೀರ್ಮಾನದಿಂದಾಗಿ ನಮ್ಮ ರೈತರಿಗೆ ಅಪಾರ ನಷ್ಟ ಉಂಟಾಗಿದೆ.'

'ಬೆಂಗಳೂರು ದಕ್ಷಿಣ ಕ್ಷೇತ್ರವನ್ನು ಪ್ರತಿನಿಧಿಸಿದ ಕನ್ನಡಿಗರೊಬ್ಬರು ಕೇಂದ್ರ ವಿಮಾನಯಾನ ಸಚಿವರಾಗಿದ್ದರೂ ಕೂಡ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಯೋಜನೆಯನ್ನು ಜಾರಿಗೊಳಿಸದೇ ಹೋದದ್ದು ಅತ್ಯಂತ ಗಮನಾರ್ಹ ಹಾಗೂ ಅಷ್ಟೇ ಖಂಡನೀಯ.' ಈ ಪ್ರಣಾಳಿಕೆಯಲ್ಲಿ ಜನತಾದಳದ ರಾಜ್ಯಸರ್ಕಾರವನ್ನು ಸಹ ಸಾಕಷ್ಟು ತರಾಟೆಗೆ ತೆಗೆದುಕೊಂಡಿದೆ. ಈ ಪ್ರಣಾಳಿಕೆಯಲ್ಲಿ ಸಮರ್ಪಕ ಅಂಕಿ ಅಂಶಗಳನ್ನು ಕೊಟ್ಟಿರುವುದನ್ನು ಕೂಡ ನಾವು ಗಮನಿಸಬಹುದು. ಜನತಾದಳ ಸರ್ಕಾರದ ಬಗ್ಗೆ ಜನರನ್ನು ಈ ಚುನಾವಣಾ ಪ್ರಣಾಳಿಕೆ ಜಾಗ್ರತಗೊಳಿಸಿದ ಕ್ರಮ ಹೀಗಿದೆ: ಅದು ೧೯೯೪ರ ವಿಧಾನಸಭೆ ಚುನಾವಣೆ ಹಿನ್ನೆಲೆಯಲ್ಲಿ ಜನತಾದಳದ ನಾಯಕರು ತಾವು ಪರಸ್ಪರ ಜಗಳ ಕಾಯದೆ ಐದು ವರ್ಷಗಳ ಕಾಲ ಸಮರ್ಥವಾಗಿ ಆಡಳಿತ ನಡೆಸುವುದಾಗಿ ಆಶ್ವಾಸನೆ ನೀಡಿದ್ದರು. ಆದರೆ ಈಗ ಮತ್ತೆ ಜನತಾದಳ ಒಡೆದಿರುವುದನ್ನು ಜನತೆ ಕಣ್ಣಾರೆ ನೋಡಿದೆ.''

'ಹಿಂದಿನ ಯಾವ ಸರ್ಕಾರವೂ ಕಂಡರಿಯದಷ್ಟು ಆಡಳಿತ ಯಂತ್ರ ಹದಗೆಟ್ಟು ಹೋಗಿದೆ. ಹಾಲು, ವಿದ್ಯುತ್, ಬಸ್‌ದರಗಳು ಪದೆಪದೇ ಏರಿವೆ.' 'ಕ್ರಿಸ್ತಶಕ ೨೦೦೦ನೇ ಇಸವಿ ಮೇ ಒಳಗೆ ಕೃಷ್ಣಾ ನದಿ ನೀರಿನಲ್ಲಿ ಕರ್ನಾಟಕದ ಪಾಲನ್ನು ಬಳಸಿಕೊಳ್ಳುವುದು ಕಷ್ಟ ಸಾಧ್ಯವೆಂದು ಕರ್ನಾಟಕದ ಮುಖ್ಯಮಂತ್ರಿಗಳು ದೇಶದ ಸರ್ವೋಚ್ಚ ನ್ಯಾಯಾಲಯದ ಮೊರೆ ಹೋಗಿದ್ದಾರೆ. ''೧೯೯೬-೯೭ರ ಅವಧಿಯಲ್ಲಿ ರಾಜ್ಯ ಸರ್ಕಾರದ ಸಾರ್ವಜನಿಕ ಸಾಲದ ಪ್ರಮಾಣ ೨೩೦೪ ಕೋಟಿಗೆ ಏರಿದೆ. ಅಂದರೆ ಶೇಕಡಾ ೭೪ರಷ್ಟು ಏರಿಕೆಯನ್ನು ಕಂಡಿದೆ.'' ಈ ವಿಚಾರಗಳನ್ನು ಪ್ರಸ್ತಾಪಿಸಿದ ಕಾಂಗ್ರೆಸ್ (ಐ) ಪಕ್ಷ, ಜನತೆಗೆ ನೀಡುವ ಆಶ್ವಾಸನೆಗಳು ಹೀಗಿವೆ:

## ಕಾಂಗ್ರೆಸ್ ಪಕ್ಷದ ಪ್ರಮುಖ ಚುನಾವಣಾ ಭರವಸೆಗಳು

ಕಾಂಗ್ರೆಸ್ ಪಕ್ಷವು ಪೂರ್ಣ ಐದು ವರ್ಷಗಳ ಕಾಲ ಸ್ಥಿರ ಸರ್ಕಾರವನ್ನು ನೀಡುವುದೆಂದು ಮಾನ್ಯ ಮತದಾರರಿಗೆ ಭರವಸೆ ನೀಡುತ್ತದೆ. ವಿವಿಧ ಇಲಾಖೆಗಳು ಹಾಗೂ ಕಚೇರಿಗಳು ಸಾಮಾನ್ಯ ಜನರ ಅಗತ್ಯಗಳಿಗೆ ಸ್ಪಂದಿಸುವಂತೆ ಆಡಳಿತಾತ್ಮಕ ಸಿದ್ಧಾಂತಗಳನ್ನು ಜಾರಿಗೊಳಿಸುವುದು. ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಕಾರ್ಯಕ್ರಮ ಕೈಗೊಳ್ಳುವುದು. ಪದವಿ, ಮೆಟ್ರಿಕ್, ಐ.ಟಿ.ಐ., ಡಿಪ್ಲೊಮಾ ಪಡೆದಿರುವ ನಿರುದ್ಯೋಗಿಗಳ ಬಗ್ಗೆ ವಿಶೇಷ ಗಮನ ಕೊಡಲಾಗುವುದು. ೧೯೯೭ರಲ್ಲಿ ಬೆಂಗಳೂರು ನಗರ ನಿರ್ವಹಣೆ ಕುರಿತಂತೆ ಸರ್ಕಾರ ನೇಮಿಸಿದ ಸಮಿತಿಯು ಮುಂದಿಟ್ಟ ಶಿಫಾರಸ್ಸುಗಳಿಗೆ ಅನುಗುಣವಾಗಿ ನಗರದ ಸಾರ್ವಜನಿಕ ಸಾರಿಗೆ, ಕಸವಿಲೇವಾರಿ, ದೀಪ, ವಾಯುಮಾಲಿನ್ಯ ನಿಯಂತ್ರಣ ಹಾಗೂ ಕಳಪೆ ರಸ್ತೆಗಳ ಸಮಸ್ಯೆಯನ್ನು ನಿವಾರಿಸಲಾಗುವುದು. ೧೯೯೩ರಲ್ಲಿ ಕರ್ನಾಟಕ ಪಂಚಾಯತ್

ಮುಸೂದೆಯನ್ನು ಜಾರಿಗೆ ತಂದು ಅದರಲ್ಲಿ ಹಿಂದುಳಿದ, ಅಲ್ಪಸಂಖ್ಯಾತರ ಹಾಗೂ ಮಹಿಳೆಯರಿಗೆ ರಾಜಕೀಯ ಮೀಸಲಾತಿ ಕೊಟ್ಟ ಕೀರ್ತಿ ಕಾಂಗ್ರೆಸ್ (ಐ) ಪಕ್ಷದ್ದು. ಅದನ್ನು ಮುಂದುವರೆಸಿಕೊಂಡು ಹೋಗಲು ಈಗ ಮಧ್ಯಪ್ರದೇಶದಲ್ಲಿ ಜಾರಿಯಲ್ಲಿರುವಂತೆ ಜಿಲ್ಲಾ ಪಂಚಾಯತ್‌ಗಳಿಗೆ ಹೆಚ್ಚಿನ ಅಧಿಕಾರವನ್ನು ನೀಡಲಾಗುವುದು.

ಪ್ರಾದೇಶಕ ಅಸಮಾನತೆಯನ್ನು ನೀಗುವಲ್ಲಿ ಉನ್ನತ ಮಟ್ಟದ ಸಮಿತಿಯನ್ನು ರಚಿಸಿ ಅದರ ಶಿಫಾರಸ್ಸುಗಳನ್ನು ಅನುಷ್ಠಾನ ಮಾಡಲಾಗುವುದು. ಹೈದರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕ ಹಾಗೂ ಹಳೆಯ ಮೈಸೂರಿನ ಹಿಂದುಳಿದ ತಾಲ್ಲೂಕುಗಳನ್ನು ಅಭಿವೃದ್ಧಿ ಮಾಡಲು ವಿಶೇಷ ಕ್ರಿಯಾಯೋಜನೆಗಳನ್ನು ತಯಾರಿಸಲಾಗುವುದು. ಈ ಜಿಲ್ಲೆಗಳಲ್ಲಿ ಇರುವ ಬಡತನ, ಅನಕ್ಷರತೆ, ಅನಾರೋಗ್ಯ ಹಾಗೂ ಅಸಮರ್ಪಕ ಸಾರಿಗೆ ವ್ಯವಸ್ಥೆಯನ್ನು ತೊಡೆದುಹಾಕಿ ಉತ್ತಮ ವ್ಯವಸ್ಥೆಯನ್ನು ರೂಪಿಸುವುದು. ಜಿಲ್ಲೆಯ ಅಭಿವೃದ್ಧಿಯನ್ನು ಗಣನೆಗೆ ತೆಗೆದುಕೊಂಡು ಮಾನವ ಸಂಪನ್ಮೂಲಗಳನ್ನು ರೂಪಿಸುವುದು. ರೇಷ್ಮೆ ಉದ್ಯಮವನ್ನು ಅಭಿವೃದ್ಧಿಗೊಳಿಸಲು ಎಲ್ಲ ರೀತಿಯ ನೆರವನ್ನು ನೀಡಲಾಗುವುದು. ರೈತರಿಗೆ ಅತ್ಯಾಧುನಿಕ ಸಂಶೋಧನಾ ಫಲಗಳನ್ನು ತಿಳಿಸಲಾಗುವುದು.

ಭೂಸಾರ ಸಂರಕ್ಷಣೆ ಹಾಗೂ ಒಣ ಬೇಸಾಯದ ಬಗ್ಗೆ ಕಾಂಗ್ರೆಸ್ ಪಕ್ಷ ವಿಶೇಷವಾದ ಆಸಕ್ತಿಯನ್ನು ಹೊಂದಿದೆ. ಕೃಷಿ ಜತೆಗೆ ಪಶುಸಂಗೋಪನೆ, ತೋಟಗಾರಿಕೆ ಹಾಗೂ ಇತರ ಕ್ಷೇತ್ರಗಳಿಗೆ ಆದ್ಯತೆ ಕೊಡಲಾಗುವುದು. ಕೋಳಿ ಸಾಕಾಣಿಕೆಯಲ್ಲಿ ಸ್ಥಳೀಯ ತಳಿಗಳ ಬಗ್ಗೆ ಹೆಚ್ಚಿನ ಗಮನವನ್ನು ಕೊಡಲಾಗುವುದು. ಕೃಷಿ ಕ್ಷೇತ್ರದಲ್ಲಿ ಮಾರಾಟ ವ್ಯವಸ್ಥೆ ಅತ್ಯಂತ ಪ್ರಮುಖವಾದದ್ದು. ರೈತನ ಉತ್ಪಾದನೆಗಳಿಗೆ ಶೇಕಡಾ ೫೦ ರಷ್ಟು ಮುಂಗಡ ನೀಡಿ ಆತ ಯಾವುದೇ ಒತ್ತಡಕ್ಕೆ ಮಣಿಯದೆ ಕಡಿಮೆ ಬೆಲೆಗೆ ತನ್ನ ಉತ್ಪನ್ನವನ್ನು ಮಾರಾಟ ಮಾಡಿಕೊಳ್ಳದಂತೆ ನೋಡಿಕೊಳ್ಳಲಾಗುವುದು. ಕೇಂದ್ರ ಸರ್ಕಾರದೊಡನೆ ವ್ಯವಹರಿಸಿ ರೈತರ ಉತ್ಪನ್ನಗಳಿಗೆ ಉತ್ತಮ ಬೆಲೆಯನ್ನು ದೊರಕಿಸಿಕೊಡಲು ಪ್ರಯತ್ನಿಸಲಾಗುವುದು. ಈಗಾಗಲೇ ವಿದ್ಯುತ್ ಕ್ಷೇತ್ರದಲ್ಲಿ ಅಸ್ತಿತ್ವದಲ್ಲಿರುವ ರೆಗ್ಯುಲೇಟರಿ ಕಮೀಶನ್‌ಗೆ ಹೆಚ್ಚಿನ ಅಧಿಕಾರ ಕೊಡಲಾಗುವುದು.

ಈಗ ರೈತರ ಬೆಳೆಗಳನ್ನು ನಿರ್ಧರಿಸಲು ತಾಲ್ಲೂಕನ್ನು ಘಟಕವನ್ನಾಗಿ ಇಟ್ಟುಕೊಳ್ಳಲಾಗಿದೆ. ಆದರೆ ಕಾಂಗ್ರೆಸ್ ಪಕ್ಷ ಗ್ರಾಮಗಳನ್ನು ಘಟಕವನ್ನಾಗಿ ಇಟ್ಟುಕೊಂಡು ಬೆಳೆ ವಿಮೆ ಯೋಜನೆಯನ್ನು ಜಾರಿಗೆ ತರುತ್ತವೆ. ರೈತರ ಸಂಕಷ್ಟ ನಿಧಿಯನ್ನು ಸ್ಥಾಪಿಸಲಾಗುವುದು. ಬಿ. ಜೆ. ಪಿ. ಸರ್ಕಾರವು ರೇಷ್ಮೆ ಆಮದು ಮಾಡಿಕೊಂಡ ಕಾರಣ ಕೋಲಾರ, ಬೆಂಗಳೂರು ಗ್ರಾಮಾಂತರ, ತುಮಕೂರು ಜಿಲ್ಲೆಗಳಲ್ಲಿ ರೇಷ್ಮೆ ಉದ್ಯಮಕ್ಕೆ ಭಾರಿ ಪೆಟ್ಟು ಬಿದ್ದಿದೆ. ಕಾಂಗ್ರೆಸ್ ಸರ್ಕಾರ ಈ ಆಮದು ನೀತಿಗೆ ಬದಲಾವಣೆಯನ್ನು ತಂದು ರೈತರ ಹಿತವನ್ನು ಕಾಯುವುದು. ಕಾಂಗ್ರೆಸ್ (ಐ) ಸರ್ಕಾರಕ್ಕೆ ನೀರಾವರಿ ತುಂಬಾ ಪ್ರಿಯವಾದ ವಿಚಾರ. ಹಳೆಯ ಕಾಲುವೆ ಹಾಗೂ ಕೆರೆಗಳನ್ನು ಆಧುನೀಕರಣಗೊಳಿಸಿ ಬೃಹತ್ ಪ್ರಮಾಣದಲ್ಲಿ ಕೆರೆಗಳಲ್ಲಿ ಹೂಳೆತ್ತುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುವುದು.

ಕೃಷ್ಣಾ, ಕಾವೇರಿ ಮೊದಲಾದ ಯೋಜನೆಗಳಿಗೆ ಸಕಾಲಿಕ ನೆರವು ಕೊಡಲಾಗುವುದು. ಪದೇಪದೇ ಬರಗಾಲಕ್ಕೆ ತುತ್ತಾಗುತ್ತಿರುವ ಬಳ್ಳಾರಿ, ತುಮಕೂರು, ಚಿತ್ರದುರ್ಗ, ಹಾಗೂ ಕೋಲಾರ ಜಿಲ್ಲೆಗಳಿಗೆ ಬಚಾವತ್ ಆಯೋಗದ ಬಿ. ಸ್ಕೀಮಿಗೆ ಅನುಗುಣವಾಗಿ ಮರು ಹಂಚಿಕೆಯಾದ ನೀರನ್ನು ಒದಗಿಸಲಾಗುವುದು. ನೀರು ಅಮೂಲ್ಯವಾದ ವಸ್ತು. ಅದರ ನಿರ್ವಹಣೆ ಹಾಗೂ ಶೇಖರಣೆಯಲ್ಲಿ ಅತ್ಯಂತ ಕ್ರಿಯಾತ್ಮಕವಾಗಿ ಕೆಲಸ ಮಾಡಬೇಕು ಎಂಬುದು ನಮ್ಮ ಪಕ್ಷಕ್ಕೆ ಅರಿವಾಗಿರುವ ವಿಚಾರ. ಅಂತರ್ಜಲ ಅಭಿವೃದ್ಧಿಗೆ ನಮ್ಮ ಪಕ್ಷ ಆದ್ಯತೆಯನ್ನು ಕೊಡುತ್ತದೆ. ಅರಣ್ಯ ಪ್ರದೇಶಗಳನ್ನು ಶಕ್ತಿಯ ಕೇಂದ್ರಗಳನ್ನಾಗಿ ಮಾಡುವ ಯೋಜನೆ ನಮ್ಮದು. ಬಡಜನರ ಇಂಧನ ವ್ಯವಸ್ಥೆಗೆ ಕಾಂಗ್ರೆಸ್ ಸರ್ಕಾರವು ರಾಷ್ಟ್ರೀಯ ನೀತಿಯೊಂದನ್ನು ರೂಪಿಸುತ್ತದೆ. ಗೋಬರ್ ಗ್ಯಾಸ್ ವ್ಯವಸ್ಥೆಯನ್ನು ಮತ್ತಷ್ಟು ವ್ಯಾಪಕಗೊಳಿಸಲಾಗುವುದು. ಅಸಂಪ್ರದಾಯಿಕ ಇಂಧನ ಮೂಲ ಹಾಗೂ ಸೌರಶಕ್ತಿಯನ್ನು ಹೆಚ್ಚು ಜನಪ್ರಿಯಗೊಳಿಸಲಾಗುವುದು.

ಸಾಮಾಜಿಕ ಅರಣ್ಯ ಯೋಜನೆಗೆ ಹೆಚ್ಚು ಉತ್ತೇಜನ ಕೊಡಲಾಗುತ್ತದೆ. ವಿದ್ಯುಚ್ಛಕ್ತಿ ಉತ್ಪಾದನೆಯನ್ನು ಹೆಚ್ಚಿಸುವುದರ ಜತೆಗೆ ಅದರ ಪೂರೈಕೆ ಹಾಗೂ ಹಂಚಿಕೆಯಲ್ಲಿ ದಕ್ಷತೆ ತೋರಿಸಿ ಶೇಕಡಾ ೨೫ ರಷ್ಟು ನಷ್ಟವನ್ನು ಕಡಿಮೆ ಮಾಡುವ ಯೋಜನೆ ಕಾಂಗ್ರೆಸ್ ಪಕ್ಷಕ್ಕೆ ಇದೆ. ವಿದ್ಯುಚ್ಛಕ್ತಿಗೆ ಮೀಸಲಾಗಿರುವ ಮೊತ್ತವನ್ನು ಹೆಚ್ಚಿಸುವುದು. ರಾಜ್ಯದ ಎಲ್ಲ ಹಳ್ಳಿಗಳಿಗೂ ವಿದ್ಯುತ್ ಪೂರೈಕೆಯಾಗುವಂತೆ ನೋಡಿಕೊಳ್ಳುವುದು. ಐದು ವರ್ಷಗಳಲ್ಲಿ ಜನತಾದಳದ ಆಂತರಿಕ ಕಿತ್ತಾಟದಿಂದಾಗಿ ಕರ್ನಾಟಕದಲ್ಲಿ ಬಂಡವಾಳ ಹೂಡಿಕೆಯ ಸಾಧ್ಯತೆಗಳು ತುಂಬಾ ಕಡಿಮೆಯಾಗಿದೆ. ವಿದೇಶಿ ಬಂಡವಾಳದ ಹೂಡಿಕೆಗೆ ರಾಜ್ಯದಲ್ಲಿರುವ ಮೂಲಭೂತ ಸೌಕರ್ಯಗಳ ಕೊರತೆ ಕಾರಣವಾಗಿದೆ. ಈ ಬಗ್ಗೆ ಕಾಂಗ್ರೆಸ್ (ಐ) ಸರ್ಕಾರ ಆದ್ಯತೆಯನ್ನು ಕೊಡುವುದು. ಬಂಡವಾಳ ಹೂಡಿಕೆದಾರರನ್ನು ರಾಜ್ಯದತ್ತ ಆಕರ್ಷಿಸಲು ಹಲವಾರು ಯೋಜನೆಗಳನ್ನು ರೂಪಿಸುವ ನಿರ್ಧಾರ ನಮ್ಮ ಕಾಂಗ್ರೆಸ್ ಸರ್ಕಾರದ್ದು. ಈ ಹೂಡಿಕೆ ಪ್ರಕ್ರಿಯೆಗಳನ್ನು

ಸರಳಗೊಳಿಸಿ ಉದ್ಯಮಿಗಳನ್ನು ಆಕರ್ಷಿಸಲಾಗುವುದು. ಮಂಗಳೂರಿನಲ್ಲಿ ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕನ್ನು ನಿರ್ಮಿಸಲಾಗುವುದು. ಸಣ್ಣ ಕೈಗಾರಿಕೆಗಳ ಪುನಶ್ಚೇತನಕ್ಕೆ ತಂತ್ರಜ್ಞಾನ ಹಾಗೂ ಆಧುನೀಕರಣ ನಿಧಿಯೊಂದನ್ನು ಸ್ಥಾಪಿಸಲಾಗುವುದು.

ಗುಡಿ ಕೈಗಾರಿಕೆಯನ್ನು ಸ್ಥಾಪಿಸಲು ಕರಕುಶಲ ಗ್ರಾಮ ಎಂಬ ಯೋಜನೆಯನ್ನು ಕಾರ್ಯರೂಪಕ್ಕೆ ತರಲಾಗುವುದು. ಶಿಕ್ಷಣದ ಬಗ್ಗೆ ಕಾಂಗ್ರೆಸ್ ಸರ್ಕಾರದ್ದು ಮೂಲಭೂತವಾದ ಆದ್ಯತೆ. ಪ್ರತಿ ಕುಟುಂಬದ ಪ್ರತಿ ಮಗುವಿಗೆ ಉತ್ತಮ ಪ್ರಾಥಮಿಕ ಶಿಕ್ಷಣವನ್ನು ಒದಗಿಸುವ ಜವಾಬ್ದಾರಿ ಕಾಂಗ್ರೆಸ್ ಸರ್ಕಾರದ್ದು. ಹಿಂದೆ ಕಾಂಗ್ರೆಸ್ ಪಕ್ಷ ಸ್ಥಾಪಿಸಿದ ಸಿ.ಇ.ಟಿ. ಅಥವಾ ಸಾಮಾನ್ಯ ಪರೀಕ್ಷೆ ಘಟಕವನ್ನು ಮತ್ತಷ್ಟು ಪಾರದರ್ಶಕತೆಯೊಂದಿಗೆ ಸುಧಾರಣೆ ಮಾಡಲಾಗುವುದು. ಶಿಕ್ಷಣ ಕ್ಷೇತ್ರದಲ್ಲಿ ವ್ಯಾಪಾರೀಕರಣವನ್ನು ತಡೆಗಟ್ಟುವುದು. ೧೯೮೪ರ ಶಿಕ್ಷಣ ಮಸೂದೆಯನ್ನು ಜಾರಿಗೊಳಿಸಿದ ಕೀರ್ತಿ ಕೂಡ ಕಾಂಗ್ರೆಸ್ ಸರ್ಕಾರದ್ದು. ಪ್ರತಿ ತಾಲ್ಲೂಕಿನಲ್ಲೂ ಆಶ್ರಮ ಶಾಲೆಯೊಂದನ್ನು ರೂಪಿಸಲಾಗುವುದು. ಕರ್ನಾಟಕದಲ್ಲಿ ಜನರ ಸರಾಸರಿ ಆಯಸ್ಸು ೬೨ವರ್ಷ ಇದೆ. ಕೇರಳದಲ್ಲಿ ೭೦ ವರ್ಷಕ್ಕೂ ಹೆಚ್ಚಿಗೆ ಇದೆ. ರಾಷ್ಟ್ರೀಯ ಸರಾಸರಿ ಆಯಸ್ಸು ೫೯ ವರ್ಷ. ಕೇರಳದಲ್ಲಿರುವಷ್ಟು ಗುರಿಯನ್ನು ಸಾಧಿಸಲು ನಮ್ಮ ಸರ್ಕಾರ ಪ್ರಯತ್ನಿಸುತ್ತದೆ.

ಎಲ್ಲ ಗ್ರಾಮಗಳಿಗೂ ಶುದ್ಧ ಕುಡಿಯುವ ನೀರನ್ನು ಒದಗಿಸುವುದು ಹಾಗೂ ಕಾಲದಿಂದ ಕಾಲಕ್ಕೆ ವೈದ್ಯಕೀಯ ತಪಾಸಣೆಯನ್ನು ವ್ಯವಸ್ಥೆಗೊಳಿಸುವುದು ಕಾಂಗ್ರೆಸ್ ಸರ್ಕಾರದ ಉದ್ದೇಶ. ಬಡ ಜನರಿಗೆ ಮೂತ್ರಪಿಂಡ ರೋಗ, ಹೃದಯ ರೋಗ ಹಾಗೂ ಕ್ಯಾನ್ಸರ್ ಕಾಯಿಲೆಗಳಿಗೆ ಅಧಿಕ ಪ್ರಮಾಣದಲ್ಲಿ ಧನಸಹಾಯ ಮಾಡುವುದು. ವಸತಿ ಯೋಜನೆ ಕಾಂಗ್ರೆಸ್ ಸರ್ಕಾರದ ಆದ್ಯತೆಯ ವಿಷಯ. ಸಮರೋಪಾದಿಯಲ್ಲಿ ಕಾಂಗ್ರೆಸ್ ಸರ್ಕಾರ ರಾಜ್ಯದ ಜನತೆಗೆ ವಸತಿ ಸೌಕರ್ಯವನ್ನು ಒದಗಿಸಿಕೊಡುವುದು. ಬಡತನವನ್ನು ನೀಗುವುದೇ ಉದ್ಯೋಗದ ಕೆಲಸ. ವ್ಯವಸಾಯ ಪದ್ಧತಿ ಹಾಗೂ ವ್ಯವಸಾಯೇತರ ಚಟುವಟಿಕೆಗಳು ಎಂದರೆ ಪಶುಸಂಗೋಪನೆ, ತೋಟಗಾರಿಕೆ, ಹಾಗೂ ಮೀನುಗಾರಿಕೆ ಕ್ಷೇತ್ರಗಳನ್ನು ಬಲಪಡಿಸಿ ಹೊಸ ಉದ್ಯೋಗಗಳನ್ನು ಸೃಷ್ಟಿಸಲಾಗುವುದು. ಸ್ವಸಹಾಯ ಗುಂಪುಗಳಿಗೆ ಸುಲಭವಾಗಿ ಸಾಲ ದೊರೆಯುವಂತೆ ಮಾಡುವುದು. ಸಣ್ಣ ನೀರಾವರಿ, ನಾಲಾಬಂಡುಗಳ ನಿರ್ಮಾಣ, ಏತನೀರಾವರಿ ಹಾಗೂ ಕೆರೆಗಳಲ್ಲಿ ಹೂಳೆತ್ತುವ ಕಾರ್ಯಗಳಿಂದಾಗಿ ಸಾಕಷ್ಟು ಉದ್ಯೋಗಗಳನ್ನು ಸೃಷ್ಟಿಸುವುದು.

ಈ ಹಿಂದೆ ಕಾಂಗ್ರೆಸ್ (ಐ) ಸರ್ಕಾರ ಜಾರಿಗೆ ತಂದಿದ್ದ ೨೦ ಅಂಶಗಳ ಕಾರ್ಯಕ್ರಮಗಳಿಗೆ ಹಿಂದುಳಿದವರ ಕಲ್ಯಾಣಕ್ಕಾಗಿ ಮತ್ತೆ ಚಾಲನೆ ಕೊಡಲಾಗುವುದು. ವಿವಿಧ ಇಲಾಖೆಗಳಲ್ಲಿ ಹಂಚಿಹೋಗಿರುವ ವಿಶೇಷ ಯೋಜನೆಗಳನ್ನು ಒಂದೇ ಸೂರಿನಡಿ ತರಲಾಗುವುದು. ನೆನೆಗುದಿಗೆ ಬಿದ್ದಿರುವ ಭೂಹಂಚಿಕೆಯನ್ನು ಮತ್ತೆ ಪ್ರಾರಂಭಿಸಲಾಗುವುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಶಿಕ್ಷಣ ಸಂಸ್ಥೆಗಳಿಗೆ ಸಹಾಯಧನ ನೀಡುವ ಯೋಜನೆಯನ್ನು ಮತ್ತೆ ಜಾರಿಗೆ ತರಲಾಗುವುದು. ಗ್ರಾಮೀಣ ಶಿಕ್ಷಣ ಸಂಸ್ಥೆಗಳಲ್ಲಿ ಓದುವ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ವಿಶೇಷ ಕೃಪಾಂಕ ವ್ಯವಸ್ಥೆಯನ್ನು ಜಾರಿಗೆ ತರಲಾಗುವುದು. ದೇವರಾಜು ಅರಸು ಸಂಶೋಧನಾ ಸಂಸ್ಥೆಗೆ ವಾರ್ಷಿಕ ಆಯವ್ಯಯದಲ್ಲಿ ನಿರ್ದಿಷ್ಟ ಮೊತ್ತವನ್ನು ಕಾಯ್ದಿರಿಸುವುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಅನುಕೂಲವನ್ನು ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೂ ನೀಡುವುದು. ಹಿಂದುಳಿದ ವರ್ಗಗಳ ಆಯೋಗದ ಕಾರ್ಯವಿಧಾನವನ್ನು ಪರಶೀಲಿಸಿ ಅದರ ಸಮರ್ಥ ಕಾರ್ಯನಿರ್ವಹಣೆಗೆ ಅಗತ್ಯ ಸೌಲಭ್ಯ ಕಲ್ಪಿಸುವುದು. ಹಿಂದುಳಿದ ವರ್ಗಗಳನ್ನು ಮುಖ್ಯವಾಹಿನಿಗೆ ತರಲು ಪ್ರಾಮಾಣಿಕವಾಗಿ ಪ್ರಯತ್ನಿಸಲಾಗುವುದು.

೧೯೯೮ರಲ್ಲಿ ದೇಶಾದ್ಯಂತ ಕ್ರಿಶ್ಚಿಯನ್ ಹಾಗೂ ಇತರ ಅಲ್ಪಸಂಖ್ಯಾತರ ಮೇಲೆ ಮೂಲಭೂತವಾದಿಗಳು ದಾಳಿ ಮಾಡಿದ್ದರ ಹಿನ್ನೆಲೆಯಲ್ಲಿ ಕಾಂಗ್ರೆಸ್ ಸರ್ಕಾರವು ಅವರಿಗೆ ಸೂಕ್ತ ರಕ್ಷಣೆಯನ್ನು ಕೊಡುವುದು. ಅಲ್ಪಸಂಖ್ಯಾತರ ಬಗ್ಗೆ ವಿಶೇಷ ಆರ್ಥಿಕ ಯೋಜನೆಯೊಂದನ್ನು ರೂಪಿಸಲಾಗುವುದು. ಸಂವಿಧಾನದ ೨೯ ಮತ್ತು ೩೦ ರ ವಿಧಿಯಲ್ಲಿರುವ ಎಲ್ಲ ಭರವಸೆಗಳನ್ನು ಅನುಷ್ಠಾನ ಮಾಡಲಾಗುವುದು. ಮದರಸಾ ಶಿಕ್ಷಣ ಮಂಡಳಿಯನ್ನು ಸ್ಥಾಪಿಸಿ ಆಧುನಿಕ ಶಿಕ್ಷಣವನ್ನು ಅವರು ಕೊಡುವಂತೆ ಪ್ರೋತ್ಸಾಹಿಸುವುದು. ಅಲ್ಪಸಂಖ್ಯಾತರ ಅಭಿವೃದ್ಧಿ ಮಂಡಳಿ ಹಾಗೂ ವಕ್ಫ್ ಮಂಡಳಿ ಪ್ರತಿಷ್ಠಾಪನೆಗೆ ಹೆಚ್ಚಿನ ಆರ್ಥಿಕ ನೆರವನ್ನು ನೀಡಲಾಗುವುದು. ವಕ್ಫ್ ನಿಧಿಯಿಂದ ವಿವಾಹ ವಿಚ್ಛೇದಿತ ಮುಸ್ಲಿಂ ಮಹಿಳೆಯರಿಗೆ ಪಾಲನಾ ಧನಸಹಾಯ ಕೊಡಲಾಗುವುದು. ಅಲ್ಪಸಂಖ್ಯಾತರು ಸಹಕಾರಿ ಸಂಸ್ಥೆಯನ್ನು ರಚಿಸಿಕೊಳ್ಳಲು ಉತ್ತೇಜನ ಕೊಡಲಾಗುವುದು.

ಅಭಿವೃದ್ಧಿ ಯೋಜನೆಯಲ್ಲಿ ಮಹಿಳೆ ಮತ್ತು ಪುರುಷರು ಸಮಸಮವಾಗಿ ಪಾಲ್ಗೊಳ್ಳಬೇಕು ಎಂಬುದು ಕಾಂಗ್ರೆಸ್ ಪಕ್ಷದ ನಿಲುವು. ಎಲ್ಲ ಕ್ಷೇತ್ರಗಳಲ್ಲೂ ಮಹಿಳೆಯರಿಗೆ ಆದ್ಯತೆಯನ್ನು ಕೊಡಲಾಗುವುದು. ಕಾಲೇಜು ಮಟ್ಟದವರೆಗೆ ಮಹಿಳೆಯರಿಗೆ ಉಚಿತ ಶಿಕ್ಷಣ. ಮಾನವಾಭಿವೃದ್ಧಿ ಮಾನದಂಡಗಳ ಅನ್ವಯ ಮಹಿಳೆಯರ ಸರ್ವತೋಮುಖ ಅಭಿವೃದ್ಧಿ, ದೇವದಾಸಿ ಪುನರ್ ವಸತಿ, ವರದಕ್ಷಿಣೆ

ನಿರ್ಮೂಲನೆ ಹಾಗೂ ಮೂಲಭೂತ ಆರೋಗ್ಯ ಸೇವೆಗಳನ್ನು ಒದಗಿಸುವ ದಿಸೆಯಲ್ಲಿ ಮಹಿಳಾ ನೇತೃತ್ವದ ಸಾಮಾಜಿಕ ಸೇವಾಸಂಸ್ಥೆಗಳನ್ನು ಬಳಸಿಕೊಳ್ಳಲಾಗುವುದು. ನೆಲೆಸಲು ಸೂರಿಲ್ಲದ ವಯೋವೃದ್ಧರಿಗೆ ವೃದ್ಧಾಶ್ರಮ ಕಟ್ಟಿಕೊಡಲು ಕಾಂಗ್ರೆಸ್ ಪಕ್ಷ ಕಂಕಣಬದ್ಧವಾಗಿದೆ.

ಕಾಂಗ್ರೆಸ್ (ಐ) ಪಕ್ಷ ಆಡಳಿತದಲ್ಲಿ ಕ್ರಿಯಾಶೀಲತೆಯನ್ನು ತರಲು ಪ್ರಯತ್ನಿಸುತ್ತದೆ. ಆಡಳಿತ, ಸಂಘಟನೆ ಮತ್ತು ವಿಧಾನಗಳು ಪಾರದರ್ಶಕವಾಗಿ ಇರಬೇಕೇ ಹೊರತು ಗೊಂದಲಮಯವಾಗಿ ಇರಬಾರದು. ಆಡಳಿತದಲ್ಲಿ ಜನಪರ ನಿಲುವನ್ನು ತೆಗೆದುಕೊಳ್ಳಲು ಅನುಕೂಲವಾಗುವಂತೆ ಆಡಳಿತ ಸುಧಾರಣಾ ಮಂಡಳಿಯನ್ನು ಸ್ಥಾಪಿಸಲಾಗುವುದು. ಆಡಳಿತದಲ್ಲಿ ಪಾರದರ್ಶಕತೆ ತರುವುದು ಸರ್ಕಾರದ ಆದ್ಯತೆಯ ವಿಷಯ. ಕಂದಾಯ, ಪುರಸಭೆ ನಗರಪಾಲಿಕೆಗಳಿಂದ ಪಡೆಯಬೇಕಾದ ಪ್ರಮಾಣ ಪತ್ರಗಳು, ನಾಗರಿಕರಿಗೆ ಶೀಘ್ರವಾಗಿ ದೊರೆಯುವಂತೆ ಮಾಡಲಾಗುವುದು. ಬೆಂಗಳೂರು ನಗರದ ಸಮರ್ಥ ನಿರ್ವಹಣೆಯನ್ನು ಕಾಂಗ್ರೆಸ್ ಸರ್ಕಾರ ವಿಶೇಷ ಜವಾಬ್ದಾರಿಯಿಂದ ವಹಿಸಿಕೊಳ್ಳುತ್ತದೆ. ನಗರಪಾಲಿಕೆಯ ಆರ್ಥಿಕ ಸಂಪನ್ಮೂಲಗಳನ್ನು ಹೆಚ್ಚಿಸುವುದಲ್ಲದೆ ಆಮೆ ಗತಿಯ ಯೋಜನೆಗಳನ್ನು ಬದಲಾಯಿಸಿ ಅದಕ್ಕೆ ವೇಗವನ್ನು ಕೊಡಲಾಗುವುದು. ಸಂಚಾರ ವ್ಯವಸ್ಥೆಗೆ ಹೊಸ ರೂಪವನ್ನು ಕೊಡಲಾಗುವುದು. ಅದಕ್ಕೆ ಅಗತ್ಯವಿರುವ ಮೇಲು ಸೇತುವೆಗಳ ನಿರ್ಮಾಣ, ಹಗುರ ರೈಲು ವ್ಯವಸ್ಥೆ, ನಗರ ಸಾರಿಗೆ ವ್ಯವಸ್ಥೆಯಲ್ಲಿ ಸುಧಾರಣೆ - ಇವು ಕಾಂಗ್ರೆಸ್ ಪಕ್ಷದ ಪ್ರಮುಖ ಧ್ಯೇಯವಾಗಿದೆ. ವಾಯುಮಾಲಿನ್ಯವನ್ನು ಕೂಡ ತಡೆಗಟ್ಟಲಾಗುವುದು.

ಬೆಂಗಳೂರು ಸೇರಿದಂತೆ ರಾಜ್ಯದ ಇತರ ಕಡೆ ವ್ಯರ್ಥ ವಸ್ತುಗಳ ನಿರ್ವಹಣೆ ದೊಡ್ಡ ಜವಾಬ್ದಾರಿಯಾಗಿದೆ. ಇದರ ಬಗ್ಗೆ ವೈಜ್ಞಾನಿಕ ನಿರ್ವಹಣೆ ಇಲ್ಲದ ಕಾರಣ ಇಡೀ ಪರಿಸರ ಮಾಲಿನ್ಯವನ್ನು ನಿಯಂತ್ರಿಸಲು ಪರಿಸರ ಘಟಕವನ್ನು ಸ್ಥಾಪಿಸಲಾಗುವುದು. ತಜ್ಞರನ್ನು ಒಳಗೊಂಡ ಬೆಂಗಳೂರು ಪರಿಸರ ಸಮಿತಿಯನ್ನು ರಚಿಸಲಾಗುತ್ತದೆ. ಜನತಾದಳ ಸರ್ಕಾರದ ಆಡಳಿತ ಕಾಲದಲ್ಲಿ ಕಾನೂನು ವ್ಯವಸ್ಥೆ ತುಂಬಾ ಕ್ಷೀಣಿಸಿದೆ. ಅಪರಾಧಗಳ ಪ್ರಮಾಣದಲ್ಲಿ ಪಾಟ್ನಾ ನಂತರ ಬೆಂಗಳೂರು ಎರಡನೇ ಸ್ಥಾನದಲ್ಲಿರುವುದು ಗಾಬರಿ ಹುಟ್ಟಿಸುವ ವಿಷಯ. ಸಮಾಜಘಾತುಕ ಶಕ್ತಿಗಳನ್ನು ನಿಯಂತ್ರಿಸಲು ಸರ್ಕಾರ ಕಠಿಣ ಕ್ರಮಗಳನ್ನು ಕೈಗೊಳ್ಳುತ್ತದೆ. ಬೆಂಗಳೂರಿನಲ್ಲಿ ಕೊಳೆಗೇರಿ ನಿವಾಸಿಗಳ ಸಂಖ್ಯೆ ೧೨ ಲಕ್ಷ ಇದೆ. ಅವರಿಗೆ ಪುನರ್‌ವಸತಿ ಕಲ್ಪಿಸುವುದು ಕಾಂಗ್ರೆಸ್ ಸರ್ಕಾರದ ಪ್ರಮುಖ ಧ್ಯೇಯವಾಗಿದೆ.

೮೦ ಸಾವಿರ ಅಂಗನವಾಡಿ ಕಾರ್ಯಕರ್ತರು ಇದ್ದು ಅವರ ಯೋಗಕ್ಷೇಮ ನೋಡಿಕೊಳ್ಳುವ ಹೊಣೆಯನ್ನು ಕಾಂಗ್ರೆಸ್ ಸರ್ಕಾರ ಹೊರುತ್ತದೆ. ಅಸಂಘಟಿತ ಕಾರ್ಮಿಕರ ಬಗ್ಗೆ ಕಾಂಗ್ರೆಸ್ ಪಕ್ಷಕ್ಕೆ ವಿಶೇಷ ಅನುಕಂಪ ಇದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಹಾಸ್ಟೆಲ್‌ಗಳಲ್ಲಿ ಕೆಲಸ ಮಾಡುವ ಬಾಣಸಿಗರು ಅಲ್ಪ ಪ್ರಮಾಣದ ವೇತನದಲ್ಲಿ ದುಡಿಯುತ್ತಿದ್ದಾರೆ. ಅವರಿಗೆ ಕನಿಷ್ಟ ಪ್ರಮಾಣದ ವೇತನವನ್ನು ಕೊಡುವುದು. ವಯೋವೃದ್ಧರ ಮಾಸಿಕ ವೇತನವನ್ನು ೧೦೦ ರೂ. ಗಳಿಂದ ೧೨೫ ರೂ.ಗೆ ಏರಿಸಲಾಗುವುದು. ಕಾಫಿ,ಚಾ ಮುಂತಾದ ಬೆಳೆಗಳಲ್ಲಿ ತೊಡಗಿರುವ ತೋಟ ಕಾರ್ಮಿಕರಿಗೆ ಕನಿಷ್ಟ ಕೂಲಿಯನ್ನು ನಿಗದಿಮಾಡಲಾಗುವುದು. ಮಾಹಿತಿ ತಂತ್ರಜ್ಞಾನ ನಮ್ಮ ಸಮಾಜವನ್ನೇ ಪರಿವರ್ತನೆ ಮಾಡುವ ಮಹತ್ವದ ಕ್ಷೇತ್ರ. ಈ ತಂತ್ರಜ್ಞಾನದ ಬಳಕೆಯಿಂದ ಇಡೀ ವಿಶ್ವವನ್ನು ಸಂಪರ್ಕಿಸಬಹುದು. ಶಿಕ್ಷಣ, ಕೈಗಾರಿಕೆ, ಆಡಳಿತ ಮೊದಲಾದ ಕ್ಷೇತ್ರಗಳಲ್ಲಿ ಇದನ್ನು ಸಮರ್ಪಕವಾಗಿ ಬಳಸಿಕೊಳ್ಳಲಾಗುವುದು.

ಸಾಗರ ಕೊರೆತ, ಅರಣ್ಯನಾಶ, ಕುಡಿಯುವ ನೀರು, ಜಲ ಮತ್ತು ವಾಯು ಮಾಲಿನ್ಯ ಮುಂತಾದ ಪ್ರತಿಕೂಲ ಬೆಳವಣಿಗೆಯಿಂದ ಕರ್ನಾಟಕದಲ್ಲಿ ಪರಿಸರ ಹಾನಿಯಾಗುತ್ತಿದೆ. ಅದನ್ನು ತಪ್ಪಿಸಲು ಕಾರ್ಯಕ್ರಮ ಕೈಗೊಳ್ಳಲಾಗುವುದು. ಕರಾವಳಿ ಪ್ರದೇಶದ ಬಗ್ಗೆ ವಿಶೇಷ ಕಾರ್ಯಕ್ರಮವನ್ನು ರೂಪಿಸಲಾಗುವುದು. ಅಭಿವೃದ್ಧಿ ಯೋಜನೆಗಳ ಅನುಷ್ಠಾನದಲ್ಲಿ ವೃಥಾ ವಿಳಂಬವನ್ನು ತಪ್ಪಿಸಲು ಜನತೆ ಮತ್ತು ಸರ್ಕಾರಗಳ ಜಂಟಿ ಸಮಿತಿಗಳನ್ನು ರೂಪಿಸಲಾಗುವುದು. ಸಾಮಾಜಿಕ ಬದಲಾವಣೆ ಹಾಗೂ ಸಂರಕ್ಷಣೆಯಲ್ಲಿ ಯುವಜನಾಂಗ ಎಂಬ ಬೃಹತ್ ಯೋಜನೆಯನ್ನು ನಮ್ಮ ಪಕ್ಷ ಪ್ರಾರಂಭಿಸಿ ಕರ್ನಾಟಕದ ಉತ್ಸಾಹಿ ಯುವಕ, ಯುವತಿಯರ ಶಕ್ತಿ, ಸಾಮರ್ಥ್ಯಗಳನ್ನು ಸಮರ್ಪಕವಾಗಿ ಬಳಸಿಕೊಳ್ಳಲಾಗುವುದು. ಸಾಕ್ಷರತೆ, ಅರಣ್ಯೀಕರಣ, ಮತ್ತು ಸಮಾಜ ಸುಧಾರಣೆ ಯೋಜನೆಯಲ್ಲಿ ಯುವ ಜನತೆಯನ್ನು ಸಮರ್ಪಕವಾಗಿ ಬಳಸಿಕೊಳ್ಳಲಾಗುವುದು. ಕಾಂಗ್ರೆಸ್ ಪಕ್ಷ ಈ ಮೇಲಿನ ಭರವಸೆಗಳನ್ನು ನೀಡುತ್ತ ಕರ್ನಾಟಕದ ಸಮಸ್ತ ಜನತೆಯ ಆಶೀರ್ವಾದವನ್ನು ಕೋರಿ ಜನತೆಯು ಈ ಚುನಾವಣೆಯಲ್ಲಿ ತನ್ನನ್ನು ಬೆಂಬಲಿಸಬೇಕೆಂದು ಮತ್ತು ತಾನು ಕೊಟ್ಟ ಭರವಸೆಯನ್ನು ಚಾಚೂ ತಪ್ಪದೆ ಅನುಷ್ಠಾನ ಮಾಡುವುದಾಗಿ ಅದು ಹೇಳಿತು.

## ಚುನಾವಣೆ ಸಾಧನೆ

ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ ೧೯೯೯ರ ಲೋಕಸಭಾ ಚುನಾವಣೆ ಕಾಂಗ್ರೆಸ್ (ಐ) ಪಕ್ಷದ ದೃಷ್ಟಿಯಿಂದ ತುಂಬ ಮಹತ್ವದ ಚುನಾವಣೆಯಾಗಿದೆ. ೧೯೯೮ರಲ್ಲಿ ನಡೆದ ಲೋಕಸಭೆ ಚುನಾವಣೆಯಲ್ಲಿ ಬಿ.ಜೆ.ಪಿ. ೧೩ ಸ್ಥಾನಗಳನ್ನು ಗಳಿಸಿ ತನ್ನ ಪ್ರಾಬಲ್ಯವನ್ನು

ಸ್ಥಾಪಿಸಿತ್ತು. ಕಾರ್ಗಿಲ್ ಯುದ್ಧ ಹಾಗೂ ಮಧ್ಯಮ ವರ್ಗದ ಮತದಾರರ ಮೇಲೆ ಅಟಲ್ ಬಿಹಾರಿ ವಾಜಪೇಯಿಯವರ ದಿಟ್ಟವಾದ ಅದ್ಭುತ ಪ್ರಭಾವದಿಂದಾಗಿ ಬಿ.ಜೆ.ಪಿ. ಈ ಚುನಾವಣೆಯಲ್ಲಿ ಹಿಂದೆಂದೂ ಸಾಧಿಸದ ವಿಜಯವನ್ನು ಪಡೆಯಿತು. ಇದು ಕಾಂಗ್ರೆಸ್ ಪಕ್ಷ ಮತ್ತು ಜನತಾದಳಕ್ಕೆ ತುಂಬ ದೊಡ್ಡ ಪೆಟ್ಟಾಗಿತ್ತು. ಮಾಧ್ಯಮಗಳು ೧೯೯೯ರ ಲೋಕಸಭೆ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಸಾಧನೆ ಬಗ್ಗೆ ಸಂಶಯ ವ್ಯಕ್ತಪಡಿಸಿದ್ದು ಉಂಟು. ಈ ಹಿನ್ನೆಲೆಯಲ್ಲಿ ಕಾಂಗ್ರೆ ಪಕ್ಷ ಅಪೂರ್ವ ರೀತಿಯಲ್ಲಿ ಚುನಾವಣೆ ಸಾಧನೆ ಮಾಡಿರುವುದನ್ನು ಗಮನಿಸಬಹುದು.

ರಾಜ್ಯದ ಒಟ್ಟು ೨೮ ಲೋಕಸಭೆ ಸ್ಥಾನಗಳಿಗೆ ಕಾಂಗ್ರೆಸ್ ಪಕ್ಷ ಸ್ಪರ್ಧಿಸಿತ್ತು. ಅದರಲ್ಲಿ ೨೫ ಮಂದಿ ಪುರುಷರು ಮತ್ತು ಮೂವರು ಮಹಿಳೆಯರು. ಕಾಂಗ್ರೆಸ್ ಪಕ್ಷ ಈ ಚುನಾವಣೆಯಲ್ಲಿ ಶೇಕಡಾ ೪೫.೪೧ ಎಂದರೆ ೧,೦೧,೫೦,೭೬೫ ಮತಗಳನ್ನು ಪಡೆಯಿತು. ಅದರ ೧೮ ಅಭ್ಯರ್ಥಿಗಳು ಲೋಕಸಭೆಯನ್ನು ಪ್ರವೇಶಿಸಿದರು. ಕಾಂಗ್ರೆಸ್‌ನಿಂದ ಲೋಕಸಭೆಯನ್ನು ಪ್ರವೇಶಿಸಿದ ಅಭ್ಯರ್ಥಿಗಳು ಎಂದರೆ ಗುಲ್ಬರ್ಗಾದಿಂದ ಇಕ್ಬಾಲ್ ಅಹಮದ್ ಸರಡಗಿ, ರಾಯಚೂರಿನಿಂದ ಎ. ವೆಂಕಟೇಶ ನಾಯಕ್, ಕೊಪ್ಪಳದಿಂದ ಹೆಚ್. ಜಿ. ರಾಮುಲು, ಬಳ್ಳಾರಿಯಿಂದ ಸೋನಿಯಾ ಗಾಂಧಿ, ತುಮಕೂರಿನಿಂದ ಜಿ. ಎಸ್. ಬಸವರಾಜ್, ಚಿಕ್ಕಮಗಳೂರಿನಿಂದ ಆರ್. ಎಲ್. ಜಾಲಪ್ಪ, ಕೋಲಾರದಿಂದ ಕೆ. ಹೆಚ್. ಮುನಿಯಪ್ಪ, ಕನಕಪುರದಿಂದ ಎಂ. ವಿ. ಚಂದ್ರಶೇಖರಮೂರ್ತಿ, ಬೆಂಗಳೂರು ಉತ್ತರದಿಂದ ಸಿ. ಕೆ. ಜಾಫರ್ ಷರೀಫ್, ಮಂಡ್ಯದಿಂದ ಅಂಬರೀಶ್, ಮೈಸೂರಿನಿಂದ ಶ್ರೀಕಂಠದತ್ತ ನರಸಿಂಹರಾಜ ಒಡೆಯರ್, ಉಡುಪಿಯಿಂದ ವಿನಯಕುಮಾರ್ ಸೊರಕೆ, ಹಾಸನದಿಂದ ಜಿ. ಪುಟ್ಟಸ್ವಾಮಿಗೌಡ, ಶಿವಮೊಗ್ಗದಿಂದ ಎಸ್. ಬಂಗಾರಪ್ಪ, ಕೆನರಾದಿಂದ ಮಾರ್ಗರೇಟ್ ಆಳ್ವ, ಧಾರವಾಡ ದಕ್ಷಿಣದಿಂದ ಪ್ರೊ। ಐ. ಜಿ. ಸನದಿ, ಬೆಳಗಾವಿಯಿಂದ ಅಮರಸಿಂಹ ವಸಂತರಾವ್ ಪಾಟೀಲ್, ಹಾಗೂ ಬಾಗಲಕೋಟೆಯಿಂದ ಆರ್.ಎಸ್. ಪಾಟೀಲ್. ಕಾಂಗ್ರೆಸ್ (ಐ) ಪಕ್ಷದಿಂದ ಸೋನಿಯಾ ಗಾಂಧಿ ಮತ್ತು ಮಾರ್ಗರೇಟ್ ಆಳ್ವರವರು ಮಾತ್ರ ಮಹಿಳಾ ಅಭ್ಯರ್ಥಿಗಳಾಗಿ ಲೋಕಸಭೆಯನ್ನು ಪ್ರವೇಶಿಸಿದರು. ಸೋನಿಯ ಗಾಂಧಿಯವರು ಉತ್ತರ ಪ್ರದೇಶದ ಅಮೇಥಿ ಕ್ಷೇತ್ರವನ್ನು ಉಳಿಸಿಕೊಂಡ ಕಾರಣ ಕರ್ನಾಟಕದ ಬಳ್ಳಾರಿ ಕ್ಷೇತ್ರಕ್ಕೆ ರಾಜೀನಾಮೆ ನೀಡಿದರು. ಈ ಕಾರಣಕ್ಕೆ ನಡೆದ ಬಳ್ಳಾರಿ ಲೋಕಸಭೆ ಉಪಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಕೆ. ಬಸವನಗೌಡ ಆಯ್ಕೆಯಾದರು.

ಕನಕಪುರದಿಂದ ಕಾಂಗ್ರೆ ಪಕ್ಷದ ಅಭ್ಯರ್ಥಿಯಾಗಿ ಲೋಕಸಭೆಗೆ ಚುನಾಯಿತರಾಗಿದ್ದ ಎಂ. ವಿ. ಚಂದ್ರಶೇಖರಮೂರ್ತಿಯವರು ನಿಧನರಾದ ಪ್ರಯುಕ್ತ ಮೇ ೨೦೦೨ರಲ್ಲಿ ಈ ಕ್ಷೇತ್ರಕ್ಕೆ ಉಪಚುನಾವಣೆ ನಡೆಯಿತು. ಜನತಾ ಪರಿವಾರದಿಂದ ಅಭ್ಯರ್ಥಿಯಾಗಿ ಭಾರತದ ಮಾಜಿ ಪ್ರಧಾನಿ ಹೆಚ್. ಡಿ. ದೇವೇಗೌಡ ಅವರು ಕಾಂಗ್ರೆಸ್‌ನಿಂದ ಈ ಲೋಕಸಭೆ ಸ್ಥಾನವನ್ನು ಗೆದ್ದುಕೊಂಡರು. ವಾಸ್ತವವಾಗಿ ರಾಜ್ಯದ ೧೭ ಮಂದಿ ಲೋಕಸಭಾ ಸದಸ್ಯರುಗಳು ಕಾಂಗ್ರೆಸ್ (ಐ) ಪಕ್ಷದವರಾಗಿದ್ದಾರೆ.

## ವಿಧಾನಸಭೆ ಚುನಾವಣೆ

೧೯೯೯ರ ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ೨೨೩ ಸ್ಥಾನಗಳಿಗೆ ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿತ್ತು. ಅವರಲ್ಲಿ ೧೩ ಜನ ಮಹಿಳೆಯರು. ಅದು ಒಟ್ಟು ೧೩೨ ಸ್ಥಾನಗಳಲ್ಲಿ ವಿಜಯಶಾಲಿ ಆಯಿತು. ಈ ಪಕ್ಷದ ವತಿಯಿಂದ ೧೨೬ ಜನ ಪುರುಷರು ಮತ್ತು ೬ ಜನ ಮಹಿಳೆಯರು ಆಯ್ಕೆಯಾದರು. ಕಾಂಗ್ರೆಸ್ ಪಕ್ಷ ಈ ಚುನಾವಣೆಯಲ್ಲಿ ಶೇಕಡಾ ೪೧.೧೬ ರಷ್ಟು ಎಂದರೆ ೯೧,೨೬,೪೭೯ ಮತಗಳನ್ನು ಗಳಿಸಿತು. ಎಲ್ಲ ಜನತೆಯ ನಿರೀಕ್ಷೆಗೂ ಮೀರಿ ಕಾಂಗ್ರೆಸ್ ಪಕ್ಷ ಈ ಚುನಾವಣೆಯಲ್ಲಿ ಅದ್ಭುತ ವಿಜಯವನ್ನು ಗಳಿಸಿತು. ಎಲ್ಲ ಪತ್ರಿಕೆಗಳು ಸಹ 'ರಾಜ್ಯದಲ್ಲಿ ಸಮ್ಮಿಶ್ರ ಸರ್ಕಾರ ಬರುತ್ತದೆ. ಅತಂತ್ರ ವಿಧಾನಸಭೆ ರೂಪಿತವಾಗುತ್ತದೆ' ಎಂದು ಈ ಚುನಾವಣೆ ಪೂರ್ವದಲ್ಲಿ ಭವಿಷ್ಯ ನುಡಿದಿದ್ದವು. ಆದರೆ ಕರ್ನಾಟಕದ ಮತದಾರ ಅವುಗಳೆಲ್ಲವನ್ನೂ ವಿಫಲಗೊಳಿಸಿ ಕಾಂಗ್ರೆಸ್‌ಗೆ ಅದ್ಭುತ ವಿಜಯ ದೊರೆಯುವಂತೆ ಮಾಡಿದ. ಬೀದರ್ ಜಿಲ್ಲೆಯನ್ನು ಹೊರತುಪಡಿಸಿ ಕಾಂಗ್ರೆಸ್ ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಉತ್ತಮ ಸಾಧನೆ ಮಾಡಿರುವುದನ್ನು ಈ ಚುನಾವಣೆಯಲ್ಲಿ ಗಮನಿಸಬಹುದು. ಬೀದರ್‌ನ ೮ ಸ್ಥಾನಗಳ ಪೈಕಿ ಒಂದೂ ಸ್ಥಾನ ಕೂಡ ಕಾಂಗ್ರೆಸ್ ಪಕ್ಷಕ್ಕೆ ದೊರೆಯಲಿಲ್ಲ.

ರಾಜ್ಯದ ಲೋಕಸಭಾ ಕ್ಷೇತ್ರಗಳಲ್ಲಿ ಕಾಂಗ್ರೆಸ್ ಪಕ್ಷಕ್ಕೆ ದೊರಕಿದ ಸ್ಥಾನಗಳು ಹೀಗಿವೆ: ಗುಲ್ಬರ್ಗಾ-೭, ರಾಯಚೂರು -೭, ಬಳ್ಳಾರಿ-೮, ಕೊಪ್ಪಳ-೫, ದಾವಣಗೆರೆ-೨, ಚಿತ್ರದುರ್ಗ-೫, ತುಮಕೂರು -೪, ಚಿಕ್ಕಬಳ್ಳಾಪುರ-೪, ಕೋಲಾರ-೪, ಕನಕಪುರ-೬,

ಬೆಂಗಳೂರು (ಉತ್ತರ)-೬, ಬೆಂಗಳೂರು(ದಕ್ಷಿಣ)-೪, ಮಂಡ್ಯ-೬, ಚಾಮರಾಜನಗರ-೪, ಮೈಸೂರು -೪, ಮಂಗಳೂರು-೪, ಉಡುಪಿ-೬, ಹಾಸನ-೪, ಚಿಕ್ಕಮಗಳೂರು-೫, ಶಿವಮೊಗ್ಗ-೬, ಉತ್ತರಕನ್ನಡ-೫, ಧಾರವಾಡ-೪, ಧಾರವಾಡ(ಉತ್ತರ)-೪, ಬೆಳಗಾಂ-೪, ಚಿಕ್ಕೋಡಿ-೫, ಬಾಗಲಕೋಟೆ-೭, ಹಾಗೂ ಬಿಜಾಪುರ-೫.

ಈ ಚುನಾವಣೆಯಲ್ಲಿ ಗೆದ್ದ ಪ್ರಮುಖ ನಾಯಕರುಗಳು ಎಂದರೆ ಜೇವರ್ಗಿಯಿಂದ ಧರ್ಮಸಿಂಗ್, ಗುರುಮಿಟ್ಕಲ್‌ನಿಂದ ಮಲ್ಲಿಕಾರ್ಜುನ ಖರ್ಗೆ, ಕಲಮಲದಿಂದ ರಾಜಾ ಅಮರೇಶ್ವರ ನಾಯಕ್, ಕನಕಗಿರಿಯಿಂದ ಮಲ್ಲಿಕಾರ್ಜುನ ನಾಗಪ್ಪ, ಕುರುಗೋಡಿನಿಂದ ಅಲ್ಲಂ ವೀರಭದ್ರಪ್ಪ, ಸಂಡೂರಿನಿಂದ ಎಂ. ವೈ. ಘೋರ್ಪಡೆ, ದಾವಣಗೆರೆಯಿಂದ ಎಸ್. ಎಸ್. ಮಲ್ಲಿಕಾರ್ಜುನ್, ಕಳ್ಳಂಬೆಳ್ಳದಿಂದ ಟಿ. ಬಿ. ಜಯಚಂದ್ರ, ಮಧುಗಿರಿಯಿಂದ ಡಾ| ಜಿ. ಪರಮೇಶ್ವರ, ಹುಲಿಯೂರುದುರ್ಗದಿಂದ ವೈ. ಕೆ. ರಾಮಯ್ಯ, ಶಿಡ್ಲಘಟ್ಟದಿಂದ ವಿ. ಮುನಿಯಪ್ಪ, ಮುಳಬಾಗಿಲಿನಿಂದ ಎಂ. ವಿ. ವೆಂಕಟಪ್ಪ, ಮಲ್ಲೇಶ್ವರದಿಂದ ಎಂ. ಆರ್. ಸೀತಾರಾಂ, ಗಾಂಧಿನಗರದಿಂದ ದಿನೇಶ್ ಗುಂಡೂರಾವ್, ಜಯನಗರದಿಂದ ರಾಮಲಿಂಗಾರೆಡ್ಡಿ, ಸಾತನೂರಿನಿಂದ ಡಿ.ಕೆ. ಶಿವಕುಮಾರ್, ಮಾಗಡಿಯಿಂದ ಹೆಚ್. ಎಂ. ರೇವಣ್ಣ ಮದ್ದೂರಿನಿಂದ ಎಸ್. ಎಂ. ಕೃಷ್ಣ, ಕೃಷ್ಣರಾಜನಗರದಿಂದ ಹೆಚ್. ವಿಶ್ವನಾಥ್, ಚಾಮುಂಡೇಶ್ವರಿಯಿಂದ ಎ.ಎಸ್. ಗುರುಸ್ವಾಮಿ, ವಿರಾಜಪೇಟೆಯಿಂದ ಶ್ರೀಮತಿ ಸುಮಾ ವಸಂತ, ಶ್ರವಣಬೆಳಗೊಳದಿಂದ ಹೆಚ್. ಸಿ. ಶ್ರೀಕಂಠಯ್ಯ, ಬಂಟ್ವಾಳದಿಂದ ರಮಾನಾಥ ರೈ, ಕಾಪುವಿನಿಂದ ವಸಂತ ಸಾಲಿಯಾನ, ಶೃಂಗೇರಿಯಿಂದ ಡಿ. ಬಿ. ಚಂದ್ರೇಗೌಡ, ಮೂಡಿಗೆರೆಯಿಂದ ಶ್ರೀಮತಿ ಮೋಟಮ್ಮ, ಚಿಕ್ಕಮಗಳೂರಿನಿಂದ ಸಿ. ಆರ್. ಸಗೀರ್ ಅಹಮದ್, ಸಾಗರದಿಂದ ಕಾಗೋಡು ತಿಮ್ಮಪ್ಪ, ಶಿಕಾರಿಪುರದಿಂದ ಮಹಾಲಿಂಗಪ್ಪ, ಹಳಿಯಾಳದಿಂದ ಆರ್. ವಿ. ದೇಶಪಾಂಡೆ, ಗದಗದಿಂದ ಡಿ. ಆರ್. ಪಾಟೀಲ್, ಹಾನಗಲ್‌ದಿಂದ ಮನೋಹರ್ ತಹಶೀಲ್ದಾರ್, ನರಗುಂದದಿಂದ ಬಿ. ಆರ್. ಯಾವಗಲ್, ಅರೆಬಾವಿಯಿಂದ ವಿ. ಎಸ್. ಕೌಜಲಗಿ, ಕಿತ್ತೂರಿನಿಂದ ಡಿ. ಬಿ. ಇನಾಂದಾರ್, ಮುಧೋಳದಿಂದ ಆರ್. ಬಿ. ತಿಮ್ಮಾಪುರ, ಬಾದಾಮಿಯಿಂದ ಬಿ. ಬಿ. ಚಿಮ್ಮನಕಟ್ಟಿ, ಹೂವಿನ ಹಿಪ್ಪರಗಿಯಿಂದ ಬಿ. ಎಸ್. ಪಾಟೀಲ್ (ಸಾಸನೂರು) ಮೊದಲಾದ ನಾಯಕರು ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದಿಂದ ವಿಧಾನಸಭೆಯನ್ನು ಪ್ರವೇಶಿಸಿದ್ದಾರೆ.

೧೯೯೯ರ ಚುನಾವಣೆ ಪೂರ್ವದಲ್ಲಿ ಭಾರತೀಯ ಜನತಾಪಕ್ಷಕ್ಕೆ ವಿಶೇಷವಾದ ಮಹತ್ವಾಕಾಂಕ್ಷೆ ಇತ್ತು. ಕಾರ್ಗಿಲ್ ಯುದ್ಧದ ನಂತರ ಸುಶಿಕ್ಷಿತ ಮತದಾರರಲ್ಲಿ ಬಿ. ಜೆ. ಪಿ. ಬಗ್ಗೆ ಒಲವು ಮೂಡಿತ್ತು. ೧೯೯೮ರ ಲೋಕಸಭೆ ಚುನಾವಣೆಯಲ್ಲಿ ಬಿ.ಜೆ.ಪಿ. ೧೩ ಲೋಕಸಭಾ ಸ್ಥಾನಗಳನ್ನು ಗೆಲ್ಲುವುದರ ಮೂಲಕ ರಾಜ್ಯದಲ್ಲಿ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿತ್ತು. ಜನತಾದಳ ಸರ್ಕಾರದ ಅವಧಿಯಲ್ಲಿ ಬಿ. ಜೆ. ಪಿ. ನಾಯಕರುಗಳು ರೈತರ ಹಿತಾಸಕ್ತಿಯನ್ನು ಹಿಡಿದುಕೊಂಡು ಬಹಳ ದೊಡ್ಡ ಹೋರಾಟವನ್ನು ಮಾಡಿದ್ದರು. ಕೇಂದ್ರದಲ್ಲಿ ತಮ್ಮ ನಾಯಕರಾದ ಅಟಲ್ ಬಿಹಾರಿ ವಾಜಪೇಯಿ ಅವರ ನೇತೃತ್ವದಲ್ಲಿ ಸರ್ಕಾರವನ್ನು ರೂಪಿಸಿಕೊಂಡಮೇಲೆ ಅವರ ಹೋರಾಟ ಮತ್ತಷ್ಟು ಚುರುಕುಗೊಂಡಿತು. ಈ ಸಾಧಾರಣ ಹುಮ್ಮಸ್ಸು ಕಂಡು ಅನೇಕರು ಸೇರ್ಪಡೆಯಾದರು. ಎಂ. ರಾಜಶೇಖರಮೂರ್ತಿಯವರು ಸಹ ಕಾಂಗ್ರೆಸ್‌ನ್ನು ತೊರೆದು ಬಿ.ಜೆ.ಪಿ.ಯನ್ನು ಸೇರಿದ ನಂತರ ಆ ಪಕ್ಷದ ಉತ್ಸಾಹ ಇನ್ನೂ ಹೆಚ್ಚಾಯಿತು. ಬಿ.ಜೆ.ಪಿ.ಯ ಅನೇಕ ನಾಯಕರುಗಳು ರಾಜ್ಯದಲ್ಲಿ ಮುಂದಿನದ್ದು ತಮ್ಮ ಸರ್ಕಾರ ಎಂದು ಘೋಷಿಸತೊಡಗಿದರು. ಶಿವಮೊಗ್ಗದ ಸಾರ್ವಜನಿಕ ಸಭೆಯೊಂದರಲ್ಲಿ ಕೇಂದ್ರ ಸಚಿವರು ಸ್ಥಳೀಯ ಬಿ.ಜೆ.ಪಿ. ಅಭ್ಯರ್ಥಿಯನ್ನು ಮುಂದಿನ ಗೃಹಸಚಿವ ಎಂದೇ ಸಂಬೋಧಿಸಿದರು. ರಾಷ್ಟ್ರ ಚುನಾವಣಾ ಸಮೀಕ್ಷೆಗಳು ಸಹ ಕೇಂದ್ರದಲ್ಲಿ ಬಿ.ಜೆ.ಪಿ. ನೇತೃತ್ವದ ಎನ್. ಡಿ. ಎ. ಸರ್ಕಾರ ಸ್ಥಾಪಿತವಾಗುವುದರಲ್ಲಿ ಯಾವ ಸಂಶಯವೂ ಇಲ್ಲವೆಂದು ದಾಖಲು ಮಾಡತೊಡಗಿದವು. ಇದಕ್ಕೆ ಒತ್ತಾಸೆ ಎಂಬಂತೆ ರಾಮಕೃಷ್ಣ ಹೆಗಡೆಯವರು ಲೋಕಶಕ್ತಿಯನ್ನು ಜನತಾದಳದೊಡನೆ ವಿಲೀನಗೊಳಿಸಿದರು. ಜನತಾದಳ (ಯು) ಎಂಬ ಹೊಸಪಕ್ಷದ ರಚನೆಯಾಗಿ ಕೇಂದ್ರ ನಾಯಕರ ಆದೇಶದಂತೆ ರಾಜ್ಯದಲ್ಲಿ ಅನಿವಾರ್ಯವಾಗಿ ಜನತಾದಳ (ಯು) ಮತ್ತು ಬಿ.ಜೆ.ಪಿ. ಪಕ್ಷಗಳ ನಡುವೆ ಚುನಾವಣಾ ಒಪ್ಪಂದ ಏರ್ಪಟ್ಟಿತು. ಬಿ.ಜೆ.ಪಿ.ಯವರು ತಾವು ಸ್ವತಂತ್ರವಾಗಿ ಸರ್ಕಾರ ರಚಿಸುವಷ್ಟರ ಮಟ್ಟಿಗೆ ತಮ್ಮ ಅಭ್ಯರ್ಥಿಗಳು ಜಯಶೀಲರಾಗುತ್ತಾರೆ ಎಂದು ಭಾವಿಸಿದ್ದರು. ಆದರೆ ಚುನಾವಣೆ ಫಲಿತಾಂಶಗಳು ಬಿ.ಜೆ.ಪಿ.ಗೆ ಭಾರಿ ನಿರಾಶೆಯನ್ನುಂಟುಮಾಡಿದ್ದೂ ಅಲ್ಲದೆ ಅದರ ಪ್ರಮುಖ ನಾಯಕರಿಗೆ ಮರೆಯಲಾಗದ ಆಘಾತವನ್ನೂ ಕೂಡ ಕೊಟ್ಟಿತು. ಕರ್ನಾಟಕದ ಮತದಾರನ ಸೂಕ್ಷ್ಮ ಪ್ರಜ್ಞೆ ಹಾಗೂ ತಿಳುವಳಿಕೆಗೆ ಈ ಚುನಾವಣೆ ಒಂದು ಮಾನದಂಡ ಎಂದು ಅನೇಕ ರಾಜಕೀಯ ವಿಶ್ಲೇಷಣಾಕಾರರು ಹೇಳಿರುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು. ಬಲಾಢ್ಯ ಕೋಮುಗಳನ್ನು ಹೊರತುಪಡಿಸಿ ಹಿಂದುಳಿದ ಹಾಗೂ ಅಲ್ಪಸಂಖ್ಯಾತರು ಒಗ್ಗೂಡಿ ಸರ್ಕಾರ ರಚಿಸಬಹುದೆಂಬುದನ್ನು ಈ ಚುನಾವಣೆ ಸಾಬೀತುಪಡಿಸಿತು.

ಕಾಂಗ್ರೆಸ್ (ಐ) ಪಕ್ಷ ರೂಪುಗೊಂಡ ನಂತರ ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದವರು ಡಿ. ದೇವರಾಜ ಅರಸು-೧೯೭೮, ಎಸ್. ಬಂಗಾರಪ್ಪ - ೧೯೭೯, ಕೆ. ಟಿ. ರಾಠೋಡ್ - ೧೯೮೦, ಕೆ. ಮಲ್ಲಣ್ಣ - ೧೯೮೨, ಕೆ. ಹೆಚ್. ಪಾಟೀಲ್ - ೧೯೮೩, ಕೆ. ಹೆಚ್. ರಂಗನಾಥ್ - ೧೯೮೫, ಆಸ್ಕರ್ ಫರ್ನಾಂಡೀಸ್ - ೧೯೮೬, ಜನಾರ್ಧನ ಪೂಜಾರಿ - ೧೯೮೭, ವೀರೇಂದ್ರ ಪಾಟೀಲ್ - ೧೯೮೮, ಆಸ್ಕರ್ ಫರ್ನಾಂಡೀಸ್ - ೧೯೮೯, ವಿ. ಕೃಷ್ಣರಾವ್ - ೧೯೯೨, ಡಿ. ಕೆ. ನಾಯ್ಕರ್ - ೧೯೯೫, ಧರ್ಮಸಿಂಗ್ - -೧೯೯೬, ಎಸ್. ಎಂ. ಕೃಷ್ಣ - ೧೯೯೯, ವಿ.ಎಸ್. ಕೌಜಲಗಿ - ೨೦೦೨, ಅಲ್ಲಂ ವೀರಭದ್ರಪ್ಪ - ೨೦೦೨, ಜನಾರ್ಧನ ಪೂಜಾರಿ - ೨೦೦೩, ಕಾಂಗ್ರೆಸ್ ಪಕ್ಷದ ಶಾಸಕಾಂಗ ಪಕ್ಷದ ನಾಯಕರು ಅಂದರೆ ಮುಖ್ಯಮಂತ್ರಿಗಳಾಗಿದ್ದವರು: ಡಿ. ದೇವರಾಜ ಅರಸು, ೧೯೭೮ ಆರ್. ಗುಂಡೂರಾವ್ - ೧೯೮೦, ವೀರೇಂದ್ರ ಪಾಟೀಲ್ - ೧೯೮೯, ಎಸ್. ಬಂಗಾರಪ್ಪ - ೧೯೯೦, ಎಂ. ವೀರಪ್ಪ ಮೊಯ್ಲಿ- ೧೯೯೨, ಎಸ್. ಎಂ. ಕೃಷ್ಣ - ೧೯೯೯.

ಕಾಂಗ್ರೆಸ್ (ಐ) ಪಕ್ಷದ ಶಾಸಕಾಂಗ ಪಕ್ಷದ ನಾಯಕರಾಗಿ ವಿರೋಧ ಪಕ್ಷದ ನಾಯಕರಾಗಿದ್ದವರು ಎಂ. ವೀರಪ್ಪಮೊಯಿಲಿ - ೧೯೮೩, ಎಸ್. ಬಂಗಾರಪ್ಪ - ೧೯೮೫, ಕೆ. ಎಸ್. ನಾಗರತ್ನಮ್ಮ - ೧೯೮೬ ಹಾಗೂ ಮಲ್ಲಿಕಾರ್ಜುನ ಖರ್ಗೆ - ೧೯೯೪.

ನಿರೂಪಣೆ : **ಕೆ. ಆರ್. ಕಮಲೇಶ್**

ಸಂಶೋಧನಾ ಸಹಾಯ : **ಎಸ್. ನಂಜುಂಡಸ್ವಾಮಿ, ಮೋಹನ ವರ್ಣೇಕರ್, ರಘು ಎಸ್. ಶೆಟ್ಟಿಗಾರ್**



# ಭಾರತೀಯ ಜನತಾಪಕ್ಷ

**ಎಚ್ಚೆಸ್ಕೆ**

ಭಾರತೀಯ ಜನತಾ ಪಕ್ಷ! ಈ ಹೆಸರು ಕೇಳಿದೊಡನೆ ಹುಬ್ಬೇರಿಸುವವರು ಎಷ್ಟೋ ಜನ. ಅಭಿಮಾನದಿಂದ ಮೈ ಪುಳಕಕ್ಕೆ ಒಳಗಾಗುವವರೂ ಎಷ್ಟೋ ಮಂದಿ. ಬಹುಶಃ ಎಲ್ಲ ರಾಜಕೀಯ ಪಕ್ಷಗಳಿಗೂ ಅನ್ವಯವಾಗುವ ಅನುಭವ ಇದು. ಯಾವುದೇ ರಾಜಕೀಯ ಪಕ್ಷದ ಸ್ವರೂಪವೇ ಇಂಥದು. ಒಂದು ಪಕ್ಷದ ಹಿಂದೆ ಹುರುಪಿನಿಂದ ಗುಂಪುಗೂಡುವಂತೆಯೇ, ಅದರ ಧ್ಯೇಯ ಧೋರಣೆಗಳನ್ನು ವಿರೋಧಿಸಿ ಇತರ ಪಕ್ಷಗಳ ಹಿಂದೆ ಗರಿಗೂಡಿಸಿಕೊಂಡು ತಮ್ಮ ಆಕಾಂಕ್ಷೆಗಳಿಗೆ ಕಾವು ನೀಡಿ ಹಲವರು ಹಣ್ಣು ಮಾಡಿಕೊಳ್ಳುವುದೂ ಸಾಮಾನ್ಯವೇ. ''ಸಮಾನವಾದ ರಾಜಕೀಯ ದೃಷ್ಟಿ ಹೊಂದಿರುವ, ಒಂದು ರಾಜಕೀಯ ಘಟಕವಾಗಿ ಕಾರ್ಯಪ್ರವೃತ್ತರಾಗುವ, ಸರ್ಕಾರವನ್ನು ನಿಯಂತ್ರಿಸಲು ಯತ್ನಿಸುವ ಪ್ರಜೆಗಳ ಸಂಘಟಿತ ಸಮೂಹವೇ ರಾಜಕೀಯ ಪಕ್ಷ'' ಎಂದು ಗಿಲ್‌ಕ್ರೈಸ್ಟ್ ಎಂಬ ವಿದ್ವಾಂಸ ಹೇಳುತ್ತಾನೆ.

ಅಂತೆಯೇ ರಾಜಕೀಯ ಪಕ್ಷವೊಂದರ ಸ್ಥಾಪನೆಗೆ ನಾಲ್ಕು ಅಂಶಗಳು ಅವಶ್ಯ ಎನಿಸುತ್ತದೆ. ೧. ಸಂಘಟನೆ, ೨. ತತ್ತ್ವಗಳು, ನೀತಿಗಳು ಮತ್ತು ಕಾರ್ಯಕ್ರಮಗಳು; ೩. ಅಧಿಕಾರ ಪಿಪಾಸೆ, ೪. ರಾಷ್ಟ್ರಹಿತ. ಶಾಂತಿಯುತವಾಗಿ, ಸಂವೈಧಾನಿಕ ವಿಧಾನಗಳ ಮೂಲಕ, ಪತ್ರಿಕಾ ಮಾಧ್ಯಮದ ಪ್ರಚಾರದ ಬೆಂಬಲದಿಂದ ಹಾಗೂ ಇತರ ಬಗೆಯ ಪ್ರಚಾರಗಳ ಮೂಲಕ ತಮ್ಮ ಕಾರ್ಯಕ್ರಮ ಗಳನ್ನು ಜಾರಿಗೊಳಿಸಲು ಯತ್ನಿಸುವುದು ಪ್ರಜಾಪ್ರಭುತ್ವದಲ್ಲಿ ಅವಶ್ಯ. ಆದರೆ ನಮ್ಮ ರಾಜಕೀಯ ಪಕ್ಷಗಳು ಯಾವಾಗಲೂ ಈ ಸಂಭಾವಿತ ಮಾರ್ಗವನ್ನೇ ಅನುಸರಿಸುತ್ತವೆಯೇ ಎಂಬುದು ಸಾವಿರ ಸವರನ್ ಪ್ರಶ್ನೆ.

ಪ್ರತಿಯೊಂದು ರಾಜಕೀಯ ಪಕ್ಷವೂ ಅಧಿಕಾರವನ್ನು ಕಸಿದುಕೊಳ್ಳುವುದಕ್ಕೆ ಆದ್ಯತೆ ನೀಡುತ್ತದೆ. ತಾನು ಕಂಡ ಕನಸನ್ನು ನನಸು ಮಾಡುವುದಕ್ಕೆ ಅಧಿಕಾರ ಅತ್ಯವಶ್ಯ. ಆದರೆ ಈ ಪ್ರಯತ್ನದಲ್ಲಿ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವುದು ಅತ್ಯವಶ್ಯವೇ. ಅಧಿಕಾರಕ್ಕಾಗಿ ಏನು ಬೇಕಾದರೂ ಮಾಡಬಹುದು ಎಂದುಕೊಂಡರೆ ಪ್ರಜೆಗಳ ಕಣ್ಣಿನಲ್ಲಿ ಅದು ತನ್ನ ಸ್ವರೂಪವನ್ನು ಕಳೆದುಕೊಳ್ಳಬೇಕಾದೀತು. ಆದರೂ ಅಧಿಕಾರವನ್ನು ಪಡೆಯಲೇಬೇಕೆಂಬ ಛಲವನ್ನು ಬಿಡುವಂತಿಲ್ಲ. ಅಧಿಕಾರ ಗ್ರಹಣಕ್ಕಾಗಿ ಅದು ಅನುಸರಿಸುವ ಹಾದಿಗಳು ನಾಲ್ಕು : ೧. ಅದರ ಸಂಘಟನೆ, ಸಂರಚನೆ ಸುಭದ್ರವಾಗಿರಬೇಕು. ೨. ತನ್ನ ಪಾಳೆಯದಲ್ಲೇ ಒಡಕುಗಳು ಮೂಡಬಾರದು. ಭಿನ್ನಮತೀಯರು ಹುಟ್ಟಿಕೊಳ್ಳಬಾರದು, ಪ್ರಬಲರಾಗಬಾರದು. ೩. ಆಂತರಿಕ ಅಭದ್ರತೆಯೇ, ಭಿನ್ನ ಭಿನ್ನ ಪ್ರವೃತ್ತಿಗಳೇ, ಆಂತರಿಕ ವೈರುಧ್ಯಗಳೇ ಪತನಹೇತು, ಮೃತ್ಯುವಿಗೆ ನೇರದಾರಿ. ೪. ತನ್ನ ರೂಪವನ್ನು ಕಾಯ್ದುಕೊಳ್ಳುವುದಷ್ಟೇ ಅಲ್ಲ, ಅದನ್ನು ಬೆಳೆಸಿಕೊಳ್ಳುತ್ತಾ ಹೋಗಬೇಕು, ಹೊಸ ಹೊಸದಾಗಿ ಸದಸ್ಯರನ್ನು ಸೇರಿಸಿಕೊಳ್ಳಬೇಕು. ಹೊಸ ರಕ್ತವನ್ನು ತುಂಬಿಕೊಳ್ಳಬೇಕು, ಹಿರಿಯ ಕಿರಿಯ ತಲೆಮಾರುಗಳು ಬೆರೆಯಬೇಕು. ಸದಸದ್ವಿವೇಕ, ಉತ್ಸಾಹ, ಚೈತನ್ಯಗಳು ಕೂಡಬೇಕು. ಸುಶಿಕ್ಷಿತ ಮತದಾರರೇ ಸುದೃಢ ಪಕ್ಷದ, ರಾಜಕೀಯ ವ್ಯವಸ್ಥೆಯ, ಅಸ್ತಿಭಾರ. Let us educate our master: ನಮ್ಮ ಯಜಮಾನರನ್ನು

ಸುಶಿಕ್ಷಿತರನ್ನಾಗಿ ಮಾಡೋಣ ಎಂಬುದೊಂದು ಜನಪ್ರಿಯ ಘೋಷಣೆ. ರಾಜಕೀಯ ಪಕ್ಷಗಳು ತಮ್ಮ ಮತದಾರರಿಗೆ ಸರಿಯಾದ ನಿಟ್ಟನಲ್ಲಿ ತಿಳಿವು ನೀಡಬೇಕು. ಅವರಲ್ಲಿ ರಾಜಕೀಯ ಪ್ರಜ್ಞೆಯನ್ನು ಮೂಡಿಸಬೇಕು. ಯಾವುದೇ ಸಿದ್ಧಾಂತದ ತೆಕ್ಕೆಗೆ ಬಿದ್ದ ರಾಜಕೀಯ ಪಕ್ಷ ತನ್ನ ಮತದಾರರಲ್ಲಿ ಆ ಸಿದ್ಧಾಂತವನ್ನು ಸ್ಥಾಪಿಸಿ, ತನ್ಮೂಲಕ ಅವರು ಸದಾ ತನಗೇ ಬೆಂಬಲ ನೀಡುವಂತೆ ಮಾಡಬಹುದು. ಅವರ ಮನಸ್ಸುಗಳಲ್ಲಿ ತನ್ನ ಸಿದ್ಧಾಂತವನ್ನು ಶಾಶ್ವತವಾಗಿ ನೆಲೆಗೊಳಿಸಿ, ಅವರು ಯಾವಾಗಲೂ ತನಗೇ ಮತ ನೀಡುವಂತೆ ಮಾಡಬಹುದು. ಒಂದಿಲ್ಲೊಂದು ಪಕ್ಷಕ್ಕೆ ಸಂಪೂರ್ಣವಾಗಿ ಬದ್ಧರಾದ ಮತದಾರರ ಸಮೂಹಗಳನ್ನು ನಾವು ಕಾಣಬಹುದು. ಕೆಲವು ವರ್ಗಗಳ, ಜಾತಿಗಳ ಅಥವಾ ಮತ ಧರ್ಮಗಳ ಜನರು ತಮ್ಮ ಪಕ್ಷಕ್ಕೇ ಒಲಿಯುವಂತೆ ಮಾಡಬಹುದು. ಪಕ್ಷದ ಹಿತವೂ, ಯಾವುದೇ ವರ್ಗದ, ಜಾತಿಯ ಅಥವಾ ಮತದ ಹಿತವೂ ಒಂದೇ ಎನಿಸಿದಾಗ ಇಂಥ ಪರಿಸ್ಥಿತಿ ಬೆಳೆಯುತ್ತದೆ. ಆಗ ಆ ಪಕ್ಷದ, ಆ ವರ್ಗದ, ಜಾತಿ ಮತದ ಹಿತಕ್ಕೆ ಧಕ್ಕೆ ಉಂಟಾಗುವುದೆನಿಸುವ ಯಾವುದೇ ಕಾರ್ಯಕ್ರಮದಲ್ಲಿ ಅದು ತೊಡಗುವುದಿಲ್ಲ. ತನಗೆ ಬದ್ಧವಾದ ಮತಗುಂಪಿನ, ವೋಟ್ ಬ್ಯಾಂಕಿನ, ಮತಮಾನ್ಯದ ಮೇಲೆ ಅದು ಸದಾ ಕಣ್ಣಿಟ್ಟಿರುತ್ತದೆ.

ಹೀಗೆ ತನಗೆ ಶಾಶ್ವತವಾಗಿ ಒಲಿದ ವರ್ಗಗಳು, ಗುಂಪುಗಳು, ಮತಗಳೇ ಅಲ್ಲದೆ ಇತರ ಮತದಾರರನ್ನು ತನ್ನತ್ತ ಒಲಿಸಿಕೊಳ್ಳಲು ಒಂದು ರಾಜಕೀಯ ಪಕ್ಷ ಶ್ರಮಿಸುತ್ತದೆ. ಎಲ್ಲ ಮತದಾರರೂ ತನ್ನ ಕಕ್ಷೆಗೆ ಒಳಪಡುವಂತೆ ಮಾಡಲು ಕೂಡ ಅದು ಕಾರ್ಯಕ್ರಮ ರೂಪಿಸಿಕೊಳ್ಳಬೇಕು. 'ಸಕಲ ಜನ ಹಿತಾಯ, ಸಕಲ ಜನ ಸುಖಾಯ' ಎಂಬ ರೀತಿಯಲ್ಲಿ ಅದು ಘೋಷಣೆ ಕೂಗುತ್ತಿರುತ್ತದೆ. ಚುನಾವಣೆಯ ಸಂದರ್ಭದಲ್ಲಿ ಇದನ್ನು ನಾವು ಪ್ರಧಾನವಾಗಿ ಕಾಣಬಹುದು. 'ಅಂದಿರಿಕಿ ಮಂಚಿವಾಳು' ಎಲ್ಲರಿಗೂ ಎಲ್ಲವನ್ನೂ ನೀಡುವುದಾಗಿ ವಾಗ್ದಾನ ಮಾಡಬಹುದು. ಈ ವಾಗ್ದಾನ ಏಕಮುಖವಾದ್ದರಿಂದ ಇದು ಕಾನೂನು ರೀತ್ಯ ಬದ್ಧವಾಗುವುದಿಲ್ಲ. ಇಂಥ ಪೊಳ್ಳು ವಾಗ್ದಾನಗಳಿಂದ ಆ ರಾಜಕೀಯ ಪಕ್ಷದ ಬಗ್ಗೆ ಜನ ಅಂಥ ಒಳ್ಳೆಯ ಭಾವನೆಯನ್ನೇನೂ ತಳೆಯದೇ ಹೋಗಬಹುದು. ಆದರೆ ಸಾರ್ವಜನಿಕ ಸ್ಮೃತಿಗೆ ಬಲು ಅಲ್ಪಾಯಸ್ಸು! ಜನ ಬಲು ಬೇಗ ಅದನ್ನು ಮರೆತುಬಿಡಬಹುದು. ಮತ್ತೆ ಅದೇ ಪಕ್ಷವನ್ನೇ ಅವರು ತಬ್ಬಿಕೊಳ್ಳಲೂಬಹುದು. ಇದೆಲ್ಲಾ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಾಮಾನ್ಯ. ಯಾವುದೇ ಉದಾತ್ತತೆಯ ಚಿತ್ರವನ್ನು ಕಲ್ಪಿಸಿದರೂ, ಪ್ರತಿಯೊಂದು ಪಕ್ಷವೂ ಅಧಿಕಾರಕ್ಕಾಗಿ ಹಲವು ವೇಳೆ ಅಷ್ಟೇ ಶ್ಲಾಘನೀಯವೆನಿಸದ ಚರ್ಯೆಯಲ್ಲಿ ತೊಡಗಬಹುದು. ಒಳಿತು-ಕೆಡುಕುಗಳ ಮಿಶ್ರಣವೇ ರಾಜಕಾರಣ. ಅನಿಷ್ಟವೂ ಅನೇಕಸಾರಿ ಅನಿವಾರ್ಯ, ಅವಶ್ಯ ಎನಿಸಬಹುದು. ಆಗ ಕಡಿಮೆ ಅನಿಷ್ಟಕಾರಕ ಯಾವುದು ಎಂಬುದನ್ನು ಆರಿಸಿಕೊಳ್ಳಬೇಕಾದೀತು. ಆದ್ದರಿಂದಲೇ ಒಂದು ಮಾತು ತುಂಬ ಪ್ರಚಾರದಲ್ಲಿದೆ. Politics is the art of the possible ಯಾವುದು ಸಾಧ್ಯ ಎಂಬುದನ್ನು ಅರಿತು ಅದನ್ನು ಆಗುಮಾಡಿಸುವ ಕಲೆಯೇ ರಾಜಕಾರಣ ಎಂಬುದು ಆ ಮಾತು.

ಭಾರತದ ಪ್ರಮುಖ ರಾಜಕೀಯ ಪಕ್ಷಗಳಲ್ಲೊಂದಾದ, ಕೇಂದ್ರದಲ್ಲಿ ಇತರ ಪಕ್ಷಗಳ ಸಾಹಚರ್ಯದಲ್ಲೂ ಹಲವು ರಾಜ್ಯಗಳಲ್ಲಿ ಸ್ವತಂತ್ರವಾಗಿಯೂ ಅಧಿಕಾರದಲ್ಲಿರುವ ಭಾರತೀಯ ಜನತಾ ಪಕ್ಷವನ್ನು ಕುರಿತು ಬರೆಯುವಾಗಲೂ ಈ ಎಲ್ಲ ವಿಚಾರಗಳನ್ನು ಮರೆಯದಿರುವುದು ಅತ್ಯವಶ್ಯ. ಅದೂ ಸಂದರ್ಭಾನುಸಾರವಾಗಿ ಕೆಲವು ರಾಜಿಗಳನ್ನು ಆಗಾಗ ಮಾಡಿಕೊಳ್ಳಬೇಕಾಗಿ ಬಂದಿದೆ. ನೇರಮಾರ್ಗ ಬಿಟ್ಟು ಅತ್ತಿತ್ತ ಚಲಿಸಬೇಕಾಗಿ ಬಂದಿದೆ. ದ್ವಿರುಕ್ತಿ ತಳೆಯಬೇಕಾಗಿ ಬಂದಿದೆ. ಇಲ್ಲವೆಂದು ಸಾಧಿಸುವುದರಿಂದ ಸತ್ಯಕ್ಕೆ ಅಪಚಾರ ಮಾಡಿದಂತೆ. ಯಾವುದೇ ಪಕ್ಷದ ಪಕ್ಷ ಹಿಡಿದು ವಾದ ಮಾಡುವುದಾದರೆ ಆಗ ಸತ್ಯಾನ್ವೇಷಣೆ ಆಗದು. ಪ್ರಜಾಪ್ರಭುತ್ವದ ಆರೋಗ್ಯಕರ ಬೆಳವಣಿಗೆಗೆ ಅದರಿಂದ ಕುಂದುಂಟಾಗುತ್ತದೆ.

ಇಂದಿನ ಭಾರತೀಯ ಜನತಾ ಪಾರ್ಟಿ ಇಂದಿನ ಸ್ವರೂಪದಲ್ಲಿ ಅಸ್ತಿತ್ವಕ್ಕೆ ಬಂದದ್ದು ೧೯೮೦ ರಲ್ಲಿ. ಕಳೆದ ಎರಡು ದಶಕಗಳಿಗೂ ಹೆಚ್ಚಿನ ಅವಧಿಯಲ್ಲಿ ಈ ಪಕ್ಷ ಗಮನಾರ್ಹವಾಗಿ ಬೆಳೆದಿದೆ. ಇದರ ಸಂಪನ್ಮೂಲವೂ ಸದಸ್ಯ ಸಂಪತ್ತು ವರ್ಧಿಸಿದೆ. ಕೇಂದ್ರದಲ್ಲಿ ಹಲವು ರಾಜ್ಯಗಳಲ್ಲೂ ಇದು ಇತರ ಪಕ್ಷಗಳಿಂದ ಕೂಡಿಯೇ, ಸ್ವತಂತ್ರವಾಗಿಯೇ ಅಧಿಕಾರ ಗ್ರಹಣ ಮಾಡಿದೆ. ಆದರೆ ಇಂದಿನ ಭಾರತೀಯ ಜನತಾ ಪಾರ್ಟಿಗೂ ಹಿಂದೆ ಇದ್ದಂಥ ಪಕ್ಷ ಭಾರತೀಯ ಜನಸಂಘ. ಆದರ ಪ್ರಸ್ತುತ ರೂಪವೇ ಭಾರತೀಯ ಜನತಾ ಪಾರ್ಟಿ. ಭಾರತೀಯ ಜನಸಂಘ ಸ್ಥಾಪಿತವಾದದ್ದು ೧೯೫೧ರಲ್ಲಿ, ಡಾ। ಶ್ಯಾಮಪ್ರಸಾದ್ ಮುಖರ್ಜಿ ಅವರಿಂದ. ತಮ್ಮಂತೆ ಚಿಂತಿಸುತ್ತಿದ್ದ ಹಲವರನ್ನು ಸೇರಿಸಿಕೊಂಡು ಅವರು ಜನಸಂಘವನ್ನು ಸ್ಥಾಪಿಸಿದರು. ಆದರೆ ಈ ಸಂಘದ ಸ್ಥಾಪನೆಗೂ ಮುಂಚೆ ಹಲವಾರು ವರ್ಷಗಳಿಂದ ಅನೇಕ ಮಂದಿ ಧ್ಯೇಯವಾದಿಗಳು ನಮ್ಮ ದೇಶದ ಭವಿಷ್ಯ ಯಾವ ರೀತಿ ರೂಪಿತವಾಗಬೇಕು, ಅದರ ಮುಂದೆ ಯಾವ ದರ್ಶನ ಇರಬೇಕು ಎಂಬ ಬಗ್ಗೆ ಚಿಂತನೆ ನಡೆಸಿದ್ದರು. ಭಾರತೀಯ ಜನಸಂಘ ಈ ಎಲ್ಲ ಚಿಂತನೆಗಳ ಫಲವಾಗಿ ರೂಪುಗೊಂಡ ಪಕ್ಷ.

ಭಾರತೀಯ ಜನಸಂಘದ ಬಗ್ಗೆಯಾಗಲಿ, ಅನಂತರ ಬಂದ ಭಾರತೀಯ ಜನತಾ ಪಾರ್ಟಿಯನ್ನು ಕುರಿತಾಗಲಿ ನಾವು ಚಿಂತನೆ ನಡೆಸುವ ಮುನ್ನ ಇವಕ್ಕೂ ಹಿಂದೆ ಇದ್ದ, ಈಗಲೂ ಮುಂದುವರಿಯುತ್ತಿರುವ ಕೆಲವು ಸಂಘಟನೆಗಳನ್ನು ಕುರಿತು ವಿವೇಚನೆ ನಡೆಸಬೇಕು.

ಇಂದಿಗೂ ಭಾರತೀಯ ಜನತಾ ಪಾರ್ಟಿಯ ಹಿಂದಣ ಪ್ರೇರಣ ಶಕ್ತಿಗಳೆಂದರೆ ಈ ಸಂಘಟನೆಗಳೇ. ಭಾರತೀಯ ಜನತಾ ಪಾರ್ಟಿ ಇವುಗಳಿಂದ ಸ್ಫೂರ್ತಿಯನ್ನೂ ಶಕ್ತಿಯನ್ನೂ ಪಡೆದುಕೊಳ್ಳುತ್ತಲೇ ಬಂದಿದೆ. ಒಂದು ರೀತಿಯಲ್ಲಿ ಇವು ಭಾಜಪದ ಭೌತಿಕ ಹಾಗೂ ದಾರ್ಶನಿಕ ತಳಹದಿ ಎನ್ನಬಹುದು. ಅದನ್ನೆಲ್ಲ ಸಾರಾ ಸಗಟಾಗಿ 'ಸಂಘ ಪರಿವಾರ' ಎಂದು ಕರೆಯುವುದು ರೂಢಿಗತವಾಗಿ ಬಂದಿದೆ. ಮೊದಲನೆಯದಾಗಿ ಆರ್‌ಎಸ್‌ಎಸ್ ಅಥವಾ ರಾಷ್ಟ್ರೀಯ ಸ್ವಯಂಸೇವಕ ಸಂಘ. ಈ ಪರಿವಾರಕ್ಕೆ ಸೇರಿದ ರಾಜಕೀಯ ಪಕ್ಷ ಬಿಜೆಪಿ (ಭಾರತೀಯ ಜನತಾ ಪಾರ್ಟಿ). ರಾಷ್ಟ್ರೀಯ ಸ್ವಯಂಸೇವಕ ಸಂಘ ರಾಜಕೀಯ ಸಂಘಟನೆಯಲ್ಲಿ ತಮ್ಮದು ಸಾಂಸ್ಕೃತಿಕ ಸಂಘಟನೆ ಎಂದು ಅದರ ನೇತಾರರೂ ಕಾರ್ಯಕರ್ತರೂ ಹೇಳಿಕೊಳ್ಳುತ್ತಾರೆ. ರಾಜಕೀಯ ಕ್ಷೇತ್ರದಲ್ಲಿ ಅದರ ಆದರ್ಶ, ಸಿದ್ಧಾಂತಗಳನ್ನು ಕಾರ್ಯರೂಪಕ್ಕೆ ತರುವ ಹೊಣೆ ಹೊತ್ತ ಸಂಸ್ಥೆ ಮೊದಲು ಭಾರತೀಯ ಜನಸಂಘ, ಈಗ ಭಾರತೀಯ ಜನತಾ ಪಾರ್ಟಿ. ಶೈಕ್ಷಣಿಕ ಕ್ಷೇತ್ರದಲ್ಲಿ ಆರೆಸ್ಸೆಸ್ಸಿನ ವಿಚಾರಗಳನ್ನು ಆಚರಣೆಗೆ ತರುವ ಹೊಣೆ ಹೊತ್ತಿರುವ ಸಂಸ್ಥೆಗಳು ಅಖಿಲಭಾರತ ವಿದ್ಯಾರ್ಥಿ ಪರಿಷತ್ ಮತ್ತು ಭಾರತೀಯ ಸಾಹಿತ್ಯಕಾರ ಸಂಘ. ಕಾರ್ಮಿಕ ವಲಯಕ್ಕೆ ಸಂಬಂಧಿಸಿದಂತೆ ಜನಮನ ತಳೆದ ಸಂಸ್ಥೆ ಭಾರತೀಯ ಮಜ್ದೂರ್ ಸಂಘ. ಅಂತರರಾಷ್ಟ್ರೀಯ ವಲಯದಲ್ಲಿ ಈ ವಿಚಾರಗಳನ್ನು ಪ್ರಚಾರಕ್ಕೆ ತರಲು, ಆಂತರಿಕವಾಗಿ ಅನುಸ್ಥಾಪನೆಗೊಳಿಸಲು ಕಂಕಣಬದ್ಧವಾಗಿರುವ ಸಂಸ್ಥೆ ವಿಶ್ವಹಿಂದೂ ಪರಿಷತ್. ಹೀಗಾಗಿ, ಅಂದಿನ ಭಾರತೀಯ ಜನಸಂಘವೆಂಬ ರಾಜಕೀಯ ತೇರಿಗೆ, ಇಂದಿನ ಭಾಜಪ ರಥಕ್ಕೆ, ರಾಷ್ಟ್ರೀಯ ಸ್ವಯಂಸೇವಕ ಸಂಘವೇ ಕುದುರೆ. ವಿದ್ಯಾರ್ಥಿ ಪರಿಷತ್, ಸಾಹಿತ್ಯಕಾರ ಸಂಘ, ಭಾರತೀಯ ಮಜ್ದೂರ್ ಸಂಘ ಮತ್ತು ವಿಶ್ವ ಹಿಂದೂ ಪರಿಷತ್- ಈ ನಾಲ್ಕೂ ಚಕ್ರಗಳು. ಭಾಜಪದ ಧ್ಯೇಯಧೋರಣೆ, ಆಚರಣೆಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಈ ಕುದುರೆ ಹಾಗೂ ಚಕ್ರಗಳ ಸ್ವರೂಪವನ್ನು ಸ್ವಲ್ಪಮಟ್ಟಿಗೆ ಪರಿಶೀಲಿಸಬೇಕು.

ಹಿಂದಿನ ಜನಸಂಘಕ್ಕೆ, ಇಂದಿನ ಭಾಜಪಕ್ಕೆ ಸ್ಫೂರ್ತಿ ಕೇಂದ್ರವಾದ ಆರ್.ಎಸ್.ಎಸ್.ನ ಜನಕ ಕೇಶವ ಬಲರಾಂ ಹೆಡ್ಗೆವಾರ್, ೧೯೨೫ರಲ್ಲಿ ಹುಟ್ಟಿದ ಈ ಸಂಸ್ಥೆಯ ಪ್ರಕಾರ ಈ ನಾಡಿನ ಮೂಲ ಮಕ್ಕಳು ಹಿಂದೂಗಳು. ಇವರು ಹಿಂದಿನಿಂದಲೂ ಇಲ್ಲಿ ಬಾಳಿದವರು. ತಮ್ಮ ಅಸ್ತಿತ್ವವನ್ನು ರಕ್ಷಿಸಿಕೊಳ್ಳಲು ಸಮಸ್ತ ತ್ಯಾಗವನ್ನು ಮಾಡಿ ಹೋರಾಡಿದವರು. ಆರ್ಯರು ಇಲ್ಲಿಯವರೇ, ಹೊರಗಿನಿಂದ ಬಂದವರಲ್ಲ. ಅವರ ಸಂಸ್ಕೃತಿ ಇದೇ ದೇಶದ ಸಂಸ್ಕೃತಿ, ಈ ದೇಶದಲ್ಲಿರುವ ಇತರ ಮತೀಯರು, ಅಲ್ಪಸಂಖ್ಯಾತರು, ಅವರೂ ಈ ಪರಂಪರೆಗೆ ಸೇರಿದವರು. ಅವರೂ ಈ ದೇಶದವರೇ. ಇವರು ಬಹುತೇಕ ಹಿಂದೂ ಮತದಿಂದ ಒಂದು ಕಾಲದಲ್ಲಿ ಪರಿವರ್ತನೆಗೊಂಡವರು, ಹಲವು ಬಲಪ್ರಯೋಗದಿಂದಾಗಿ ಅನ್ಯಮತಾವಲಂಬಿಗಳಾದರು. ಹಿಂದೂಗಳಿಗೆ ಈ ನಾಡನ್ನು ಬಿಟ್ಟು ಬೇರೆ ಯಾವುದೇ ನಾಡಿನಲ್ಲಿ ನಿಷ್ಠೆ ಹೊಂದಲಾರರು. ಈ ಅಲ್ಪಸಂಖ್ಯಾತರೂ ಈ ನಾಡಿನಲ್ಲೇ ನಿಷ್ಠೆ ಹೊಂದಿದ್ದಾರೆ. ಯಾವುದೇ ತೊಡಕಿಲ್ಲ. ಇದಕ್ಕೆ ವಿರುದ್ಧವಾಗಿ ನಡೆದುಕೊಂಡಾಗ ಘರ್ಷಣೆ ಸಹಜ. ಕೇಸರಿವರ್ಣದ ಭಗವಾಧ್ವಜ ನಮ್ಮ ಪ್ರಾಚೀನ ಹಿಂದೂ ಸಂಸ್ಕೃತಿಯ ಹಾಗೂ ರಾಷ್ಟ್ರದ ಏಕತೆಯ ಸಂಕೇತ. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಹರಿದು ಬರುವ ಅಖಂಡ ಭಾರವನ್ನು ಸ್ನೇಹದ ಮೂಲಕ ಸಾಧಿಸಲು ಅದು ಕಂಕಣ ಬದ್ಧ. ಅದರ ಕನಸು ದೇಶದ ಅಖಂಡತೆ ಮತ್ತು ಸಾರ್ವಭೌಮತ್ವ ರಕ್ಷಣೆ ಅದರ ಗುರಿ ವರ್ಗರಹಿತ ಸಮಾಜದಲ್ಲಿ ಅದಕ್ಕೆ ನಂಬಿಕೆಯಿಲ್ಲ. ಸಂಪತ್ತು ಕೆಲವರಲ್ಲೇ ಸಂಗ್ರಹವಾಗುವುದನ್ನು ಅದು ವಿರೋಧಿಸುತ್ತದೆ. ಸಹಕಾರ ತತ್ತ್ವದ ಮೇಲೆ ಕೈಗಾರಿಕೆಗಳ ಸ್ಥಾಪನೆ, ನಿರ್ವಹಣೆಗಳನ್ನು ಅದು ಸಮರ್ಥಿಸುತ್ತದೆ. ಜನಸಾಮಾನ್ಯರ ಜೀವನ ಮಟ್ಟವನ್ನು ಎತ್ತರಿಸಲು ಅದು ಶ್ರಮಿಸುತ್ತದೆ.

೧೯೫೧ರಲ್ಲಿ ಸ್ಥಾಪಿತವಾದ ರಾಜಕೀಯ ಪಕ್ಷವಾದ ಭಾರತೀಯ ಜನಸಂಘಕ್ಕೆ ಆರೆಸ್ಸೆಸ್ಸಿನ ಈ ಧ್ಯೇಯ ಧೋರಣೆ ಹಾಗೂ ಕಾರ್ಯಕ್ರಮಗಳಲ್ಲಿ ಸಂಪೂರ್ಣ ನಂಬಿಕೆ. ಆರೆಸ್ಸೆಸ್ ಶಿಸ್ತು ಬದ್ಧ ಸಂಸ್ಥೆ, ಆ ಸಂಘದ ಸ್ವಯಂ ಸೇವಕರ ಸೇವೆಯಿಂದಲೇ ಭಾರತೀಯ ಜನಸಂಘ ಸದೃಢವಾಗಿ ಬೆಳೆದಿದ್ದು, ಡಾ। ಶ್ಯಾಮಪ್ರಸಾದ ಮುಖರ್ಜಿಯ ಜೊತೆಗೆ ಸೇರಿದ ದೀನದಯಾಳ್ ಉಪಾಧ್ಯಾಯ, ಬಲರಾಜ ಮುಧೋರ್, ಅಟಲ್‌ಬಿಹಾರಿ ವಾಜಪೇಯಿ, ಡಾ। ಮಹಾವೀರ್ ಇವರೆಲ್ಲ ಜನಸಂಘೀಯರೇ.

ಭಾರತೀಯ ಸಂಸ್ಕೃತಿ ಮತ್ತು ಪರಂಪರೆಗಳಿಗೆ ಅನುಗುಣವಾಗಿ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಪ್ರಜಾಪ್ರಭುತ್ವವಾಗಿ ಭಾರತ ರಾಷ್ಟ್ರದ ಪುನರ್‌ರಚನೆ, ಅಭ್ಯುದಯಶೀಲ ಸಶಕ್ತ ಸಂಘಟಿತ ರಾಷ್ಟ್ರ ನಿರ್ಮಾಣಕ್ಕೆ ಅನುವಾಗುವಂತೆ ಎಲ್ಲ ಪ್ರಜೆಗಳಿಗೂ ಸಮಾನ ಅವಕಾಶಗಳ ಕಲ್ಪನೆ, ಸ್ವಾತಂತ್ರ್ಯ ಭರವಸೆ, ಅನ್ಯರ ಆಕ್ರಮಣಗಳನ್ನು ಎದುರಿಸಿ ನಿಂತು, ಪ್ರಗತಿಪರ, ಆಧುನಿಕ ಹಾಗೂ ವಿಕಸನ ಶೀಲ ದೃಷ್ಟಿ ತಳೆದು ವಿಶ್ವಶಾಂತಿಯ ಸಾಧನೆಗಾಗಿ ಇತರ ದೇಶಗಳಿಗೆ ಹೆಗಲೆಣೆಯಾಗಿ, ಅವುಗಳ ಮಧ್ಯೆ ತಲೆಯೆತ್ತಿ ನಿಲ್ಲುವ ಸಾಮರ್ಥ್ಯದ ಬೆಳವಣಿಗೆ - ಇವು ಭಾರತೀಯ ಜನಸಂಘದ ಉದ್ದೇಶಗಳು. ಭಾರತದಲ್ಲಿನ ಜನರೆಲ್ಲ ಒಂದು ಎಂಬ ಭಾವನೆಯನ್ನು ಪೋಷಿಸಲು ಭಾರತೀಯ ಸಂಸ್ಕೃತಿಯನ್ನು ಚರ್ಚಿಸಲು ಅಧಿಕಾರ ಕೇಂದ್ರೀಕೃತವಾಗಿರಬೇಕು. ಪ್ರಬಲ ಕೇಂದ್ರ ಸರ್ಕಾರ ವ್ಯವಸ್ಥೆ, ದಕ್ಷ ಆಡಳಿತ, ಅಗ್ಗದ ಹಾಗೂ ಎಲ್ಲರಿಗೂ ಸುಲಭವಾಗಿ ಲಭ್ಯವಾಗುವ ನ್ಯಾಯ ವ್ಯವಸ್ಥೆ, ಆಧುನಿಕ ಶಿಸ್ತಿನಿಂದ ಸುಸಜ್ಜಿತವಾದ ಸೇನಾಬಲ, ದೇಶದ

ಗೌರವದ ಸಂಕೇತವಾದ ಗೋವಿನ ಸಂರಕ್ಷಣೆ, ಭಾರತೀಯ ಸಂಸ್ಕೃತಿಯನ್ನು ಬಿಂಬಿಸುವ ಶಿಕ್ಷಣ ವ್ಯವಸ್ಥೆ - ಇವು ಜನಸಂಘದ ಕೆಲವು ಮುಖ್ಯ ಗುರಿಗಳು.

೧೯೫೧ರಲ್ಲಿ ಜನ ಸಂಘ ಅಸ್ತಿತ್ವಕ್ಕೆ ಬರಲು ಮುಖ್ಯವಾಗಿ ಭಾರತದ ವಿಭಜನೆ, ಸ್ವಾತಂತ್ರ್ಯಾನಂತರ ನೆಹರೂ ನಾಯಕತ್ವದಲ್ಲಿ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಸರ್ಕಾರದ ಆಡಳಿತ ವೈಖರಿ ಇವೇ ಕಾರಣ ಎನ್ನಬಹುದು. ೧೯೪೭ರ ಆಗಸ್ಟ್ ೧೫ರಂದು, ಸ್ವಾತಂತ್ರ್ಯಾನಂತರ ರಚನೆಗೊಂಡ ಮಂತ್ರಿಮಂಡಲದಲ್ಲಿ ಡಾ. ಶ್ಯಾಮಪ್ರಸಾದ್ ಮುಖರ್ಜಿ ಅವರೂ ಒಬ್ಬ ಮಂತ್ರಿಯಾಗಿದ್ದರು ಪ್ರಧಾನಿ ನೆಹರೂ ಅವರು ಆಡಳಿತದ ರೀತಿನೀತಿ ಅವರಿಗೆ ಒಪ್ಪಿಗೆಯಾಗಲಿಲ್ಲ. ಪಾಕಿಸ್ತಾನದ ಬಗ್ಗೆ ಅವರು ತೆಗೆದುಕೊಳ್ಳುತ್ತಿದ್ದ ತೀರ್ಮಾನಗಳು, ಕಾಶ್ಮೀರಕ್ಕೆ ಸ್ವಾಯತ್ತತೆ, ಒಂದೇ ದೇಶದಲ್ಲಿ ಎರಡು ಧ್ವಜ, ಎರಡು ಸಂವಿಧಾನ ಮತ್ತು ಇಬ್ಬರು ಪ್ರಧಾನಿಗಳ ಎಂಬ ನೀತಿಯಿಂದ ಡಾ। ಮುಖರ್ಜಿ ಅವರು ಅಸಮಾಧಾನಗೊಂಡರು. ಇದನ್ನು ಪ್ರತಿಭಟಿಸಿ ಡಾ। ಶ್ಯಾಮಪ್ರಸಾದ್ ಮುಖರ್ಜಿ ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ನೀಡಿ ಸರ್ಕಾರದಿಂದ ಹೊರಬಂದರು.

೧೯೪೮ರ ಜನವರಿ ೩೦ ರಂದು ಒಂದು ಮಹಾ ದುರಂತ ಸಂಭವಿಸಿತು. ಆರಂಭದಿಂದಲೂ ಭಾರತದ ವಿಭಜನೆಯನ್ನು ವಿರೋಧಿಸುತ್ತಿದ್ದ, ಸರ್ಕಾರ ಪಾಕಿಸ್ತಾನದ ಬಗ್ಗೆ ತಳೆದ ನೀತಿಯನ್ನು ಟೀಕಿಸುತ್ತ, ಪಾಕಿಸ್ತಾನವನ್ನು ತಣಿಸುವ ಕ್ರಮಗಳನ್ನು ಗಾಂಧೀಜಿ ಎತ್ತಿ ಹಿಡಿಯುತ್ತಿದ್ದದ್ದನ್ನು ವಿರೋಧಿಸುತ್ತಿದ್ದ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಮೇಲೆ ಸರ್ಕಾರ ನಿರ್ಬಂಧ ವಿಧಿಸಿತು. ಆರ್.ಎಸ್.ಎಸ್. ನಾಯಕ ಗೋಳ್ವಾಲ್ಕರ್‌ಗೆ ಸಹಜವಾಗಿಯೇ ಇದರಿಂದ ಅಪಾರ ಕೋಪ ಮತ್ತು ವ್ಯಥೆ ಉಂಟಾದುವು. ತಮ್ಮ ಪರವಾಗಿ ಸರ್ಕಾರದ ಮುಂದೆ ವಿಚಾರ ಮಂಡಿಸಲು, ಆರೆಸ್ಸೆಸ್ಸನ್ನು ಸಮರ್ಥಿಸಲು ಯಾರಾದರೂ ಇರಬೇಕಾಗಿತ್ತು ಎಂದು ಗೋಳ್ವಾಲ್ಕರರಿಗೆ ಅನಿಸಿತು. ಇಂಥ ಸಂದರ್ಭದಲ್ಲಿ ಗೋಲ್ವಾಲ್ಕರ್ ಮತ್ತು ಡಾ। ಶ್ಯಾಮಪ್ರಸಾದ್ ಮುಖರ್ಜಿಯವರ ಭೇಟಿ ಆಯಿತು. ನೆಹರೂ ವಿರುದ್ಧ ಹಾಗೂ ಅವರ ಪಾಕಿಸ್ತಾನ ಪರವಾದ ಧೋರಣೆ ವಿರುದ್ಧ ಹೋರಾಡುವ ಸಂಘಟನೆಯೊಂದರ ಅಗತ್ಯವಿದೆಯೆಂದುಕೊಂಡಿದ್ದ ಡಾ। ಶ್ಯಾಮಪ್ರಸಾದ ಮುಖರ್ಜಿಗೆ ಗೋಳ್ವಾಲ್ಕರರು ಒಂದು ಸಲಹೆ ನೀಡಿದರು. ಆರೆಸ್ಸೆಸ್ಸನ್ನೇ ಒಂದು ರಾಜಕೀಯ ಸಂಘಟನೆಯಾಗಿ ಪರಿವರ್ತಿಸುವ ಇಚ್ಛೆ ಗೋಳ್ವಾಲ್ಕರರಿಗೆ ಇರಲಿಲ್ಲ. ಡಾ. ಮುಖರ್ಜಿಯವರು ರಾಜಕೀಯ ಪಕ್ಷವೊಂದನ್ನು ಸ್ಥಾಪಿಸುವುದಾದರೆ ಅದಕ್ಕೆ ತಮ್ಮ ಸಂಘದಿಂದ ಕಾರ್ಯಕರ್ತರನ್ನು ಒದಗಿಸುವುದಾಗಿ ಗೋಳ್ವಾಲ್ಕರರು ಹೇಳಿದರು. ಹೀಗಾಗಿ ೧೯೫೨ರಲ್ಲಿ ಡಾ. ಶ್ಯಾಮಪ್ರಸಾದ ಮುಖರ್ಜಿಯವರ ನಾಯಕತ್ವದಲ್ಲಿ ಭಾರತೀಯ ಜನಸಂಘ ಎಂಬ ರಾಷ್ಟ್ರೀಯ ದೃಷ್ಟಿಯ ರಾಜಕೀಯ ಪಕ್ಷದ ಉದಯವಾಯಿತು. ಹಲವು ಆರ್.ಎಸ್.ಎಸ್. ನಾಯಕರು ಪಕ್ಷ ಸೇರಿದರು. ಡಾ। ಮುಖರ್ಜಿ ಆ ಪಕ್ಷದ ಸಂಸ್ಥಾಪಕ ಅಧ್ಯಕ್ಷರು.

೧೯೫೭ರಲ್ಲಿ ನಡೆದ ಪ್ರಥಮ ಮಹಾ ಚುನಾವಣೆಯಲ್ಲಿ ಭಾರತೀಯ ಜನಸಂಘಕ್ಕೆ ದೊರಕಿದ ಲೋಕಸಭಾ ಸ್ಥಾನಗಳು ಕೇವಲ ಮೂರು. ಆದರೆ ರಾಷ್ಟ್ರೀಯ ಪಕ್ಷವಾಗಿ ಜನಸಂಘ ದೇಶದ ಗಮನ ಸೆಳೆಯಿತು. ಕಾಂಗ್ರೆಸ್ಸಿಗೆ ತಮ್ಮದು ಪರ್ಯಾಯ ಪಕ್ಷ ಎಂದು ಅದರ ಸದಸ್ಯರು ನಂಬಿದ್ದರು.

೧೯೫೩ರಲ್ಲಿ ಡಾ। ಶ್ಯಾಮಪ್ರಸಾದ ಮುಖರ್ಜಿ ಸರ್ಕಾರದ ಕಾಶ್ಮೀರ ನೀತಿಯ ವಿರುದ್ಧ ಸತ್ಯಾಗ್ರಹ ಆರಂಭಿಸಿದರು, ಒಂದೇ ರಾಷ್ಟ್ರ, ಒಂದೇ ಧ್ವಜ, ಕಾಶ್ಮೀರ ಭಾರತದ ಅವಿಭಾಜ್ಯ ಅಂಗ ಒಂದು ದೇಶ, ಒಬ್ಬ ಪ್ರಧಾನಿ ಎಂಬುದು ಘೋಷಣೆ, ಸರ್ಕಾರ ಡಾ। ಮುಖರ್ಜಿಯವರನ್ನು ಬಂಧಿಸಿ ಕಾರಾಗೃಹದಲ್ಲಿಟ್ಟಿತು. ಶ್ರೀನಗರದ ಕಾರಾಗೃಹದಲ್ಲಿ ಅವರು ಸಾವನ್ನಪ್ಪಿದರು. ಇದೊಂದು ರಾಜಕೀಯ ಕೊಲೆ ಎಂಬುದು ಜನಸಂಘೀಯರ ಅನಿಸಿಕೆ.

ಆರೆಸ್ಸೆಸ್ಸಿನಿಂದ ಬಂದ ಕಾರ್ಯಕರ್ತರೂ ಮುಖಂಡರೂ ಜನಸಂಘವನ್ನು ಮುನ್ನಡೆಸಿದರು. ಆದರೆ ಅದರ ಬೆಳವಣಿಗೆ ಅಷ್ಟೇನೂ ಗಮನಾರ್ಹವಾಗಿರಲಿಲ್ಲ. ಸಮಾಜವಾದಿ ಪಕ್ಷ, ಪ್ರಜಾಸಮಾಜವಾದಿ ಪಕ್ಷ, ಸ್ವತಂತ್ರ ಪಕ್ಷ ಮುಂತಾದ ಹಲವಾರು ರಾಜಕೀಯ ಪಕ್ಷಗಳು ಕಣದಲ್ಲಿದ್ದವು. ೧೯೬೭ರ ಮಹಾ ಚುನಾವಣೆಯಲ್ಲಿ ಒಂದಂಶ ಸ್ಫುಟವಾಗಿ ಗೋಚರವಾಯಿತು ಕಾಂಗ್ರೆಸ್ ಗಳಿಸಿದ ಮತಗಳ ಸಂಖ್ಯೆಗೂ, ಇತರ ಎಲ್ಲ ರಾಜಕೀಯ ಪಕ್ಷಗಳು ಗಳಿಸಿದ ಮತಗಳ ಸಂಖ್ಯೆಗೂ ಅಷ್ಟೇನೂ ಅಂತರವಿರಲಿಲ್ಲ. ಇದಕ್ಕೆ ಮುಂಚೆ ಸಂಘದ ಅಧ್ಯಕ್ಷರಾದ ದೀನದಯಾಳ್ ಉಪಾಧ್ಯಾಯರು ಎಲ್ಲ ವಿರೋಧ ಪಕ್ಷಗಳ ನಾಯಕರೊಂದಿಗೆ ಸಮಾಲೋಚನೆ ನಡೆಸಿ, ಒಂದೊಂದು ಕ್ಷೇತ್ರಕ್ಕೂ ವಿರೋಧ ಪಕ್ಷಗಳ ಒಬ್ಬೊಬ್ಬ ಸರ್ವಸಮ್ಮತ ವ್ಯಕ್ತಿಯನ್ನು ಕಾಂಗ್ರೆಸ್ಸಿಗೆ ಇದಿರಾಗಿ ನಿಲ್ಲಿಸುವ ವಿಚಾರವನ್ನು ಅವರಿಗೆ ಮನವರಿಕೆ ಮಾಡಿಕೊಟ್ಟಿದ್ದರು. ಇದರಿಂದ ಪರಿಸ್ಥಿತಿ ಸ್ವಲ್ಪ ಸುಧಾರಿಸಿತು. ಜನಸಂಘವೂ ತನ್ನ ರೆಕ್ಕೆ ಪುಕ್ಕ ಬಲಿಸಿಕೊಳ್ಳುತ್ತಾ ಬಂತು. ೧೯೫೭ರಲ್ಲಿ ಮೂರು ಸ್ಥಾನ ಗಳಿಸಿದ್ದ ಜನಸಂಘ ೧೯೫೭ರಲ್ಲಿ ನಾಲ್ಕು, ೧೯೬೭ರಲ್ಲಿ ಆರು ಸ್ಥಾನಗಳು ೧೯೬೭ರಲ್ಲಿ ಒಟ್ಟು ಮೂವತ್ತೈದು ಸ್ಥಾನಗಳನ್ನು ಗಿಟ್ಟಿಸಿಕೊಂಡಿತು. ದೀನದಯಾಳ್ ಉಪಾಧ್ಯಾಯರ ಪ್ರಭಾವ ಬೆಳೆಯುತ್ತಿತ್ತು. ಸಮಾಜವಾದ, ವೃತ್ತಿ ಪ್ರಧಾನವಾದ ಈ ಎರಡರ

ಘರ್ಷಣೆಯಾಗಿ ವಿವಿಧ ಪಕ್ಷಗಳ ಧ್ರುವೀಕರಣವಾಗುತ್ತಿದ್ದ ಸಂದರ್ಭದಲ್ಲಿ ಉಪಾಧ್ಯಾಯರ ಸೂತ್ರ ಹಲವರ ಗಮನ ಸೆಳೆಯಿತು. 'ಸಮಾಜವೂ ನಗಣ್ಯವಲ್ಲ, ವ್ಯಕ್ತಿಯೂ ನಗಣ್ಯನಲ್ಲ. ವ್ಯಕ್ತಿ ಪ್ರಧಾನ ಸಮಾಜ ಇರಬಹುದು. ಸಮಾಜ ಪ್ರಧಾನ ವ್ಯವಸ್ಥೆ ಇರಬಾರದು. ಈ ಎರಡರ ಸಾಮರಸ್ಯವೇ ಏಕಾತ್ಮ ಮಾನವತಾವಾದ' ಎಂಬುದು ಅವರು ಮಂಡಿಸಿದ ವಿನೂತನ ವಿಚಾರ ಚಿಂತನೆ. ಇದರಿಂದ ಜನಸಂಘಕ್ಕೂ ಒಂದು ಹೊಸ ದಿಕ್ಕು ಪ್ರಾಪ್ತವಾಯಿತು.

ದೀನದಯಾಳ್ ಉಪಾಧ್ಯಾಯರ ಉತ್ಕರ್ಷೆಯಿಂದ ಹಲವರಲ್ಲಿ ಅಸೂಯೆ ಮೂಡಿತು. ಅವರು ಕೊಲೆಯಾದರು. ಸಂಘಕ್ಕೆ ಮತ್ತೆ ಪೆಟ್ಟು ಬಿತ್ತು. ವಾಜಪೇಯಿಯವರು ಪಕ್ಷ ಸಂಘಟನೆ ಹಾಗೂ ನೇತೃತ್ವದ ಹೊಣೆ ಹೊತ್ತರು. ೧೯೭೧ರಲ್ಲಿ ಬಾಂಗ್ಲಾ ವಿಮೋಚನಾ ಸಮರದ ಅನಂತರ ಚುನಾವಣೆಯಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಮಹಾವಿಜಯ ಗಳಿಸಿದರು. ಜನಸಂಘವೂ ಸೇರಿದಂತೆ ಎಲ್ಲ ವಿರೋಧ ಪಕ್ಷಗಳ ಹಿನ್ನಡೆ ಸಂಭವಿಸಿತು. ೧೯೭೫ರಲ್ಲಿ ಇಂದಿರಾಗಾಂಧಿ ಸಮಸ್ತ ಅಧಿಕಾರವನ್ನು ತಮ್ಮ ಮುಷ್ಟಿಯೊಳಗೆ ಸಂಗ್ರಹಿಸಿಕೊಂಡು ತುರ್ತು ಪರಿಸ್ಥಿತಿ ಘೋಷಿಸಿದರೂ ಜನಸಂಘ ಮೊದಲ್ಗೊಂಡು ಎಲ್ಲ ವಿರೋಧ ಪಕ್ಷಗಳ ನಾಯಕರೂ ಬಂಧನಕ್ಕೆ ಒಳಗಾದರು. ಜಯಪ್ರಕಾಶ ನಾರಾಯಣರ ಆಶಯದಂತೆ ಸರ್ವಾಧಿಕಾರದ ದಮನಕ್ಕೆ ಎಲ್ಲ ಪಕ್ಷಗಳು ಒಂದಾಗಬೇಕೆಂಬ ಗುರಿಯ ಸಾಧನೆಗಾಗಿ ಜನಸಂಘ ವಿಸರ್ಜನೆಗೊಂಡಿತು (೧೯೭೭). ಜನತಾ ಪಾರ್ಟಿಯಲ್ಲಿ ಜನಸಂಘ, ಸಂಸ್ಥಾ ಕಾಂಗ್ರೆಸ್, ಸಮಾಜವಾದಿ ಪಕ್ಷಗಳು ಮತ್ತು ಸ್ವತಂತ್ರ ಪಕ್ಷಗಳು ಸೇರಿದವು. ಚುನಾವಣೆಯಲ್ಲಿ ಕಾಂಗ್ರೆಸ್ ಪರಾಭವಹೊಂದಿತು. ಮೊರಾರ್ಜಿದೇಸಾಯಿಯವರ ನಾಯಕತ್ವದಲ್ಲಿ ಸರ್ಕಾರದ ರಚನೆಯಾಯಿತು. ವಿಜಯಗಳಿಸಿದ ಜನತಾ ಪಾರ್ಟಿಯ ಸದಸ್ಯರಲ್ಲಿ ಹಿಂದಿನ ಜನಸಂಘದ ಸದಸ್ಯರ ಸಂಖ್ಯೆಯೇ ಅಧಿಕವಾಗಿತ್ತು.

ಹೊಸ ಸರ್ಕಾರದಲ್ಲಿ ವಾಜಪೇಯಿ ವಿದೇಶಾಂಗ ನೀತಿ ಮತ್ತು ಆಡ್ವಾನಿಯವರಿಗೆ ವಾರ್ತಾ ಮತ್ತು ಪ್ರಸಾರ ಖಾತೆ ದೊರೆಯಿತು. ವಾಜಪೇಯಿಯವರ ವಿದೇಶಾಂಗ ನೀತಿ ಹೇಗಿದ್ದೀತೋ ಎಂಬುದು ಹಲವರ ಆತಂಕವಾಗಿತ್ತು. ಅವರು ಮುಸ್ಲಿಂ ವಿರೋಧಿ ಎಂಬ ಭಯ ಹಲವರಿಗೆ, ಆದರೆ ಭಾರತ ಪಾಕಿಸ್ತಾನಗಳೆರಡೂ ಸ್ನೇಹದಿಂದಿರುವುದು ಅಗತ್ಯವೆಂದು ಅವರು ಸಾರಿದರು. ಎರಡೂ ದೇಶದ ಜನತೆಯ ಪರಸ್ಪರ ಸಂದರ್ಶನಕ್ಕೆ ಇದ್ದ ಅಡಚಣೆಗಳನ್ನು ಅವರು ತೆಗೆದುಹಾಕಿದರು. ಆಗ ಉದ್ಭವಿಸಿದ ಒಂದು ದೊಡ್ಡ ತೊಡಕೆಂದರೆ ದ್ವಿಸದಸ್ಯತ್ವದ ಪ್ರಶ್ನೆ. ಹಿಂದಿನ ಜನಸಂಘದ ಸದಸ್ಯರಲ್ಲಿ ಹಲವರು ಆರೆಸ್ಸೆಸ್‌ನಿಂದ ಬಂದವರು. ಅವರು ಆರೆಸ್ಸೆಸ್ಸಿನ ಸದಸ್ಯತ್ವವನ್ನು ಉಳಿಸಿಕೊಂಡಿದ್ದರೂ ಆರೆಸ್ಸೆಸ್ ರಾಜಕೀಯ ಸಂಘಟನೆಯಲ್ಲ, ಅದೊಂದು ಸಾಂಸ್ಕೃತಿಕ ಸಂಘ. ಆದ್ದರಿಂದ ಜನತಾಪಾರ್ಟಿಯ ಸದಸ್ಯರು ಆರೆಸ್ಸೆಸ್ ಸದಸ್ಯರಾಗಿದ್ದರೆ ತಪ್ಪಲ್ಲ ಎನ್ನುವುದು ಅವರ ವಾದ. ಆದರೆ ಇದರಿಂದ ಆರೆಸ್ಸೆಸ್ ಹಾಗೂ ಮಾಜಿ ಜನಸಂಘೀಯರ ಪ್ರಾಬಲ್ಯ ಹೆಚ್ಚುವುದೆಂಬ ಭಯದಿಂದ ಹಲವರು ಇದನ್ನು ದ್ವಿಸದಸ್ಯತ್ವವೆಂದು ತರ್ಕಿಸಿ, ಇದಕ್ಕೆ ಅವಕಾಶ ಇರಕೂಡದು ಎಂದು ವಾದಿಸಿದರು. ಆ ಜನರು ಆರೆಸ್ಸೆಸ್ಸನ್ನು ತ್ಯಜಿಸಬೇಕು ಎಂಬುದು ಅವರ ಬೇಡಿಕೆ.

ಆದರೆ ಆರೆಸ್ಸೆಸ್ ಮತ್ತು ಮಾಜಿ ಜನಸಂಘೀಯರು ಇದಕ್ಕೆ ಒಪ್ಪಲಿಲ್ಲ. ೧೯೮೦ರ ಏಪ್ರಿಲ್ ತಿಂಗಳಲ್ಲಿ ಅವರು ಸಭೆ ಸೇರಿ ಭಾರತೀಯ ಜನತಾ ಪಾರ್ಟಿಯನ್ನು ಸ್ಥಾಪಿಸಿಕೊಂಡರು. ವಾಜಪೇಯಿ ಅಧ್ಯಕ್ಷರಾಗಿ, ಆಡ್ವಾನಿ ಮಹಾಕಾರ್ಯದರ್ಶಿಯಾಗಿ ನೇಮಕ ಗೊಂಡರು. ಲೋಕಸಭೆಗೆ ಆರಿಸಿಬಂದಿದ್ದ ಜನತಾ ಪಾರ್ಟಿಯ ಸದಸ್ಯರಲ್ಲಿ ೩೧ ಮಂದಿ ಮಾಜಿ ಜನಸಂಘೀಯರಾಗಿದ್ದರೂ ಅವರು ಭಾಜಪದ ಸದಸ್ಯರಾಗಿದ್ದರು. ೧೯೮೪ರಲ್ಲಿ ಇಂದಿರಾ ಗಾಂಧಿಯವರ ಕೊಲೆಯಾಯಿತು. ಭಾರತೀಯ ಜನತಾ ಪಕ್ಷ ಆನಂತರ ನಡೆದ ಚುನಾವಣೆಯಲ್ಲಿ ಭಾರೀ ಪರಾಭವ ಅನುಭವಿಸಿತು. ಲೋಕಸಭೆಯಲ್ಲಿ ಅದರ ಸದಸ್ಯರ ಸಂಖ್ಯೆ ಕೇವಲ ಎರಡಕ್ಕೆ ಇಳಿಯಿತು. ೧೯೮೯ ಬಂತು. ಮತ್ತೆ ಭಾಜಪದ ಉತ್ಕರ್ಷೆ. ಅದಕ್ಕೆ ದೊರಕಿದ ಸ್ಥಾನಗಳು ೮೬. ವಿ. ಪಿ. ಸಿಂಗರ ಪ್ರಧಾನಿತ್ವದಲ್ಲಿ ರೂಪುಗೊಂಡ ಜನತಾದಳದ ಸರ್ಕಾರಕ್ಕೆ ಭಾಜಪ ಹೊರಗಡೆಯಿಂದ ಬೆಂಬಲ ನೀಡಿತು. ಅನಂತರ ಅದು ಅಯೋಧ್ಯಾ ಚಳವಳಿಯನ್ನು ಆರಂಭಿಸಿತು. ಆಡ್ವಾಣಿಯವರ ರಾಮರಥಯಾತ್ರೆ, ಅನಂತರ ಅವರ ಸುರಾಜ್ಯಯಾತ್ರೆ, ಮುರಳಿ ಮನೋಹರ ಜೋಷಿಯವರ ಏಕತಾಯಾತ್ರೆ, ಕೋಲಾಹಲ ಹುಟ್ಟಿಸಿದವು. ಜನರ ಗಮನ ಸೆಳೆಯುವ ಪ್ರಯತ್ನಗಳಿವು, ಜನಸಾಮಾನ್ಯರನ್ನು ಹಿಂದುತ್ವದ ಬಗ್ಗೆ ಕೆರಳಿಸಲು, ಅವರನ್ನು ಸಂಘಟಿಸಲು ನಡೆಸಿದ ಯತ್ನಗಳಿವು, ಮುಂದಿನ ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡು ನಡೆಸಿದ ಚಳವಳಿಗಳು ಇವು-ಎಂದು ಹಲವರು ಹಲುಬಿದರು, ಹಳಿದರು.

ಭಾರತೀಯ ಜನತಾ ಪಾರ್ಟಿ ೧೯೯೧ರಲ್ಲಿ ೧೨೦ ಸ್ಥಾನಗಳನ್ನು, ೧೯೯೬ರಲ್ಲಿ ೧೬೧ ಸ್ಥಾನಗಳನ್ನು, ೧೯೯೮ರಲ್ಲಿ ೧೮೨ ಸ್ಥಾನಗಳನ್ನು, ೧೯೯೯ರಲ್ಲಿ ೧೮೨ ಸ್ಥಾನಗಳನ್ನು ಗಳಿಸಿತು. ೧೯೫೨ರ ಪ್ರಥಮ ಮಹಾಚುನಾವಣೆಯಲ್ಲಿ ಅದು ಶೇ. ೩.೧ ರಷ್ಟು

ಮತಗಳಿಸಿದ್ದರೆ, ೧೯೯೯ರ ವೇಳೆಗೆ ಈ ಸಂಖ್ಯೆ ಶೇ. ೨೩.೮. ಕ್ಕೆ ಏರಿತು. ಇತರ ಪಕ್ಷಗಳೊಡನೆ ಕೇಂದ್ರದಲ್ಲಿ ಸರ್ಕಾರ ರಚಿಸಿರುವ ಭಾಜಪ ಮುಂದೆ ತಾನೊಂದೇ ಸರ್ಕಾರ ರಚಿಸುವ ಕನಸು ತಳೆದು ಆ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಿದೆ.

ಕರ್ನಾಟಕದಲ್ಲಿ ಭಾರತೀಯ ಜನಸಂಘದ ಮತ್ತು ಅನಂತರ ಭಾರತೀಯ ಜನತಾ ಪಾರ್ಟಿಯ ಬೆಳವಣಿಗೆ ಒಂದೇ ಸಮನಾಗಿಲ್ಲ. ಅದು ಹಲವಾರು ಎಡರು ತೊಡರುಗಳನ್ನು ಎದುರಿಸುತ್ತ ಬಂದಿದೆ. ಕಾಂಗ್ರೆಸ್ಸಿನಂಥ ಪಕ್ಷವಲ್ಲ; ಶಿಸ್ತು, ಸ್ವಾರ್ಥತ್ಯಾಗ, ಸೇವಾ ಮನೋಧರ್ಮ, ಅಖಂಡ ರಾಷ್ಟ್ರಾಭಿಮಾನ-ಇವು ತಮ್ಮ ವೈಶಿಷ್ಟ್ಯ ಎಂದು ಪಕ್ಷದವರು ಹೊಗಳಿಕೊಳ್ಳುತ್ತಾರೆ. ಆದರೆ ಇತರ ಪಕ್ಷಗಳಲ್ಲಿರುವಂತೆಯೇ ಇಲ್ಲೂ ಅಧಿಕಾರಕ್ಕಾಗಿ ಬಡಿದಾಟ ನಾನಾ ಬಗೆಯ ಹೊಂಚುಗಾರಿಕೆ, ಭ್ರಷ್ಟಾಚಾರ, ಒಳಜಗಳಗಳು, ಪಕ್ಷಾಂತರ ಮುಂತಾದ ಪಿಡುಗುಗಳಿವೆ. ಕೆಲವು ವೇಳೆ ರಾಷ್ಟ್ರ ಮಟ್ಟದ ಮತ್ತು ಪ್ರಾದೇಶಿಕ ಮಟ್ಟದ ನಾಯಕತ್ವಗಳ ನಡುವೆ ತಿಕ್ಕಾಟ, ಪರಸ್ಪರ ಅಸೂಯೆ ಬೆಳೆದಿರುವುದನ್ನು ಕಾಣಬಹುದು. ಅಖಿಲ ಭಾರತ ಮಟ್ಟದಲ್ಲಿ ಸಂಘೀಯರು ಮತ್ತು ನೇರವಾಗಿ ರಾಜಕೀಯ ಪಕ್ಷಕ್ಕೆ ಬಂದವರು - ಇವರ ನಡುವೆ ಪರಸ್ಪರ ಅಪನಂಬಿಕೆ ಹಾಗೂ ಮೇಲುಗೈ ಪಡೆಯುವ ಪ್ರಯತ್ನ ನಡೆದಿರುವಂತೆ ಇಲ್ಲಿಯೂ ಅಂಥ ಬೆಳವಣಿಗೆಗಳಾಗಿವೆ. ಅಧಿಕಾರದಿಂದ ಒಬ್ಬರನ್ನು ಕಿತ್ತು ಇನ್ನೊಬ್ಬರನ್ನು ತಂದು, ಪರಸ್ಪರ ದೋಷಾರೋಪಣೆ ಮಾಡುವುದು-ಇವು ಸಾಮಾನ್ಯ, ಎಲ್ಲ ರಾಜಕೀಯ ಪಕ್ಷಗಳ ಮೂಲಸಾಮಗ್ರಿ ಎಂದರೆ ಸದಸ್ಯ ಬಲ ಒಂದೇ. ಆದ್ದರಿಂದ ಈ ಎಲ್ಲ ವ್ಯಾಧಿಗಳು ಎಲ್ಲ ಪಕ್ಷಗಳಿಗೂ ಸಾಮಾನ್ಯ; ಬಿಜೆಪಿಯೇನೂ ಪ್ರತ್ಯೇಕವಲ್ಲ-ಎಂಬ ಭಾವನೆಯೂ ಸಾರ್ವಜನಿಕರಲ್ಲಿ ಬೆಳೆದಿದೆ. ಹಲವರಿಗೆ ಭ್ರಮನಿರಸನವಾಗಿದೆ. ಪಕ್ಷದ ಒಳಗೂ ಇಂಥ ನಿರಸನ ಪ್ರವೃತ್ತಿ, ನಿರಾಶೆ, ಬೆಳೆದಿದ್ದರೆ ಆಶ್ಚರ್ಯವಿಲ್ಲ. ಹಾಗಾಗದಿದ್ದರೆ ಅದೊಂದು ಪವಾಡವೇ ಎನಿಸುತ್ತಿತ್ತು!

ಕರ್ನಾಟಕದಲ್ಲಿ ಭಾರತೀಯ ಜನತಾ ಪಕ್ಷದ, ಅದಕ್ಕೂ ಹಿಂದೆ ಭಾರತೀಯ ಜನಸಂಘದ ಪ್ರಭಾವ ಬೆಳೆಯಲು ಆದ್ಯ ಸ್ಫೂರ್ತಿ ಬಂದದ್ದು ಡಾ। ಶ್ಯಾಮಪ್ರಸಾದ ಮುಖರ್ಜಿಯವರಿಂದ. ಜಗನ್ನಾಥರಾವ್ ಜೋಷಿ ಅವರ ಉಜ್ವಲ ಭಾಷಣಗಳು ಹಲವರ ಮನಸ್ಸುಗಳನ್ನು ಸೆಳೆದವು. ಹಾಸ್ಯ, ವ್ಯಂಗ್ಯ, ಆದರ್ಶ, ಸ್ಫೂರ್ತಿ ಇವು ಅವರ ಭಾಷಣದ ಲಕ್ಷಣಗಳು. ಅನಂತರ ಭಾವುರಾವ್ ದೇಶಪಾಂಡೆ ಪಕ್ಷದ ಸಂಘಟನಾ ಕಾರ್ಯದರ್ಶಿಯಾಗಿ ಕರ್ನಾಟಕದಲ್ಲಿ ಪಕ್ಷವನ್ನು ಬೆಳೆಸಲು ಹೆಣಗಿದರು. ಎ.ಕೆ. ಸುಬ್ಬಯ್ಯ ಅವರೂ ಶಿವಮೊಗ್ಗದ ಡಾ। ಕೆ.ಎಸ್. ದತ್ತಾತ್ರಿಯವರೂ ಪಕ್ಷದ ಜನಪ್ರಿಯತೆಗೆ ಪ್ರಯತ್ನಿಸಿದರು. ವರದರಾಜಶೆಟ್ಟಿ, ಮಲ್ಲಿಕಾರ್ಜುನ ರಾಜ, ಕರಂಬಳ್ಳಿ ಸಂಜೀವ ಶೆಟ್ಟಿ, ಡಾ। ವಿ. ಎಸ್. ಆಚಾರ್ಯ, ಡಿ. ಎಚ್. ಶಂಕರಮೂರ್ತಿ ಇವರ ಪಾತ್ರವೂ ಕಡಿಮೆಯೇನಲ್ಲ. ೧೯೮೦ರಲ್ಲಿ ಭಾರತೀಯ ಜನತಾ ಪಾರ್ಟಿ ಹುಟ್ಟಿಕೊಂಡಿತು. ಇದು, ಹಿಂದೆ ಹೇಳಿದ ಹಾಗೆ, ಭಾರತೀಯ ಜನಸಂಘದ ಮರುಹುಟ್ಟು. ಕರ್ನಾಟಕದಲ್ಲಿ ಇದರ ಅವತಾರ ಆದದ್ದು ಲಾಲ್‌ಬಾಗಿನ ರಜತಮಹೋತ್ಸವ ಭವನದಲ್ಲಿ, ಅಲ್ಲಿ ಸೇರಿದ್ದ ಸಭೆಯಲ್ಲಿ ಎ.ಕೆ. ಸುಬ್ಬಯ್ಯನವರು ರಾಜ್ಯದ ಶಾಖೆಯ ಅಧ್ಯಕ್ಷರಾದರು. ಹಲವು ತರುಣರು ಇದರಿಂದ ಆಕರ್ಷಿತರಾದರು. ಪಕ್ಷದ ಬೆನ್ನೆಲುಬಾದ ಆರೆಸ್ಸೆಸ್ ರಾಜ್ಯದಲ್ಲಿ ಹಲವು ವರ್ಷಗಳಿಂದ ಬೆಳೆಯುತ್ತ ಬಂದಿತ್ತು. ಇವರೆಲ್ಲ ಉತ್ಸಾಹದಿಂದ, ಶ್ರದ್ಧೆಯಿಂದ, ನಿಷ್ಠೆಯಿಂದ ಭಾಜಪ ತೇರನ್ನೆಳೆಯಲು ಸಜ್ಜಾಗಿ ನಿಂತರು.

೧೯೮೩ರಲ್ಲಿ ರಾಜ್ಯದಲ್ಲಿ ಚುನಾವಣೆ ಬಂತು. ಕಾಂಗ್ರೆಸ್ ವಿರೋಧಿ ಬಲಗಳನ್ನೆಲ್ಲ ಒಂದುಗೂಡಿಸಲು ನಡೆಸಿದ ಪ್ರಯತ್ನ ಫಲಿಸಲಿಲ್ಲ. ಬಿಜೆಪಿ ಯಾವ ಹೊಂದಾಣಿಕೆಗೂ ಒಪ್ಪಲಿಲ್ಲ. ಇತರ ಪಕ್ಷಗಳ, ಮುಖ್ಯವಾಗಿ ಜನತಾ ಪಕ್ಷದ ಕುತಂತ್ರದಿಂದ, ಸ್ವಾರ್ಥದಿಂದ ಮಾತುಕತೆ ಮುರಿದುಬಿತ್ತು ಎಂಬುದು ಭಾಜಪದವರ ಆರೋಪ. ಚುನಾವಣೆ ಎರಡು ಪಕ್ಷಗಳಿಗೆ ಪಾಠ ಕಲಿಸಿತು. ತಾನು ಬಹುಮತ ಪಡೆದು ಸ್ವತಂತ್ರವಾಗಿ ಸರ್ಕಾರ ರಚಿಸುವುದೆಂಬ ಕನಸು ಕಂಡಿದ್ದ ಜನತಾ ಪಕ್ಷಕ್ಕೆ ೬೧ ಸ್ಥಾನಗಳು ಬಂದಿದ್ದವು. ಭಾಜಪ ಗಳಿಸಿದ ಸ್ಥಾನಗಳು ೧೮. ಭಾಜಪದ ಬೆಂಬಲದಿಂದ ಸರ್ಕಾರ ರಚಿಸಲು ರಾಮಕೃಷ್ಣ ಹೆಗಡೆ ನಡೆಸಿದ ಪ್ರಯತ್ನ ಫಲಿಸಲಿಲ್ಲ. ರಾಜ್ಯದ ಬಿಜೆಪಿ ನಾಯಕರು ಇದಕ್ಕೆ ವಿರುದ್ಧವಾಗಿದ್ದರು. ಹೆಗಡೆಯವರು ರಾಷ್ಟ್ರಮಟ್ಟದ ಭಾಜಪ ನಾಯಕರೊಂದಿಗೆ ಸಮಾಲೋಚನೆ ನಡೆಸಿ ಅವರ ಒಪ್ಪಿಗೆ ಪಡೆದರು. ರಾಜ್ಯದಲ್ಲಿ ಕಾಂಗ್ರೆಸ್ಸನ್ನು ಮತದಾರರು ತಿರಸ್ಕರಿಸಿದ್ದಾರೆ. ಕಾಂಗ್ರೆಸ್ ವಿರೋಧಿ ಸರ್ಕಾರ ಬರಬೇಕೆಂಬುದು ಜನತೆಯ ಇಚ್ಛೆ. ಆದ್ದರಿಂದ ಜನರ ಆಶಯವನ್ನು ಮನ್ನಿಸಿ ಅವರ ಹಿತಕ್ಕಾಗಿ ಭಾಜಪವೂ ಜನತಾಪಕ್ಷವೂ ಒಂದಾಗಿ ಸರ್ಕಾರ ರಚಿಸಬೇಕು ಎಂಬುದು ವಾಜಪೇಯಿಯವರ ನಿಲುವಾಗಿತ್ತು. ಭಾಜಪದ ಬೆಂಬಲದಿಂದ ಜನತಾಪಕ್ಷದ ಸರ್ಕಾರ ರಚನೆಯಾಯಿತು. ಬಿಜೆಪಿಯ ಬೆಂಬಲದಿಂದ ಅಧಿಕಾರಕ್ಕೆ ಬಂದರೂ ರಾಮಕೃಷ್ಣ ಹೆಗಡೆಯವರು ಭಾಜಪವನ್ನು ಕಡೆಗಣಿಸಿ ತಮ್ಮ ಪ್ರಭಾವವನ್ನು ಬೆಳೆಸಿಕೊಂಡರೆಂಬುದು ಆ ಪಕ್ಷದ ಆರೋಪ. ರಾಜ್ಯದಲ್ಲಿ ಭಾಜಪದ ಬೆಳವಣಿಗೆಗೆ ತಮ್ಮ ಪ್ರಭಾವಶಾಲಿ ನಾಯಕತ್ವವೇ ಕಾರಣವೆಂದು ಅಧ್ಯಕ್ಷ ಎ.ಕೆ. ಸುಬ್ಬಯ್ಯನವರು ವರ್ತಿಸುತ್ತಿದ್ದಾರೆಂದು ಅವರು ಆಕ್ಷೇಪಣೆಗೆ ಗುರಿಯಾದರು, ಅಧ್ಯಕ್ಷತೆಯನ್ನೂ ಕಳೆದುಕೊಂಡರು. ಬಿ. ಬಿ. ಶಿವಪ್ಪ ಅಧ್ಯಕ್ಷರಾದರು.

೧೯೮೪ ಬಂತು. ಇಂದಿರಾ ಗಾಂಧಿಯವರ ಹತ್ಯೆಯಿಂದಾಗಿ ಲೋಕಸಭೆಗೆ ನಡೆದ ಚುನಾವಣೆಯಲ್ಲಿ ಕಾಂಗ್ರೆಸ್ ಗಳಿಸಿದ ಜಯ ಅದ್ಭುತ. ಭಾಜಪಕ್ಕೆ ದೊರಕಿದ ಸ್ಥಾನಗಳು ಎರಡು ಮಾತ್ರ. ಕರ್ನಾಟಕದಿಂದ ಲೋಕಸಭೆಗೆ ಸ್ಪರ್ಧಿಸಿದ್ದ ಜನತಾ ಪಕ್ಷವೂ

ಸೋಲನ್ನನುಭವಿಸಿತು. ಮರುವರ್ಷ ಹೆಗಡೆ ಸರ್ಕಾರ ರಾಜೀನಾಮೆ ನೀಡಿತು. ವಿಧಾನಸಭೆಗೆ ನಡೆದ ಚುನಾವಣೆಯನ್ನು ಜನತಾ ಪಕ್ಷ ಹಾಗೂ ಭಾಜಪ ನಡುವೆ ಸ್ಥಾನ ಹೊಂದಾಣಿಕೆಯ ಒಪ್ಪಂದವಾಗಲಿಲ್ಲ. ಜನತಾಪಕ್ಷ ಬಹುಮತಗಳಿಸಿ ಸರ್ಕಾರ ರಚಿಸಿತು. ಹಿಂದಿನ ಸಭೆಯಲ್ಲಿ ೧೮ ಸದಸ್ಯರನ್ನು ಹೊಂದಿದ್ದ ಭಾಜಪ ಈ ಬಾರಿ ಕೇವಲ ೨ ಸ್ಥಾನಗಳನ್ನು ಪಡೆಯಿತು. ಹಿಂದಿನ ಚುನಾವಣೆಯಲ್ಲಿ ಭಾಜಪದ ರಾಜ್ಯ ಘಟಕದ ಅಧ್ಯಕ್ಷರಾಗಿದ್ದ ಎ. ಕೆ. ಸುಬ್ಬಯ್ಯನವರ ಪ್ರಭಾವದಿಂದಾಗಿ ಅದಕ್ಕೆ ೧೮ ಸ್ಥಾನಗಳು ದೊರಕಿದ್ದುವೆಂದೂ, ಈ ಬಾರಿ ಅವರಿಲ್ಲದ್ದರಿಂದ ಸದಸ್ಯರ ಬಲ ೨ ಕ್ಕೆ ಇಳಿಯಿತೆಂದೂ ಕೆಲವರು ಪ್ರಚಾರ ಮಾಡಿದರು. ಅದೇನೇ ಇರಲಿ, ಭಾಜಪದ ಪ್ರಭಾವ ಬಹಳಷ್ಟು ಇಳಿಯಿತೆನ್ನಬೇಕು.

ಅಖಿಲ ಭಾರತಕ್ಕೆ ಸಂಬಂಧಿಸಿದಂತೆಯೇ ಭಾಜಪದ ಬಲ ಬಹಳಷ್ಟು ಕುಗ್ಗಿದೆಯಾದ್ದರಿಂದ ಇನ್ನು ಅದು ಚೇತರಿಸಿಕೊಳ್ಳಲಾಗದು ಎಂದೂ ಹೇಳಲಾಗುತ್ತಿತ್ತು. ಆದರೆ ಅಟಲ್ ಬಿಹಾರಿ ವಾಜಪೇಯಿಯವರು ಹೇಳಿದ 'ನ ದೈನ್ಯಂ ನ ಪಲಾಯನಂ' 'ದೈನ್ಯವೂ ಇಲ್ಲ ಪಲಾಯನವೂ ಇಲ್ಲ' - ಎಂಬ ನುಡಿ ರಾಜ್ಯದ ಭಾಜಪ ಸದಸ್ಯರಲ್ಲೂ ಕಾರ್ಯಕರ್ತರಲ್ಲೂ ಧೈರ್ಯ ತುಂಬಿತು. ಭಾಜಪದ ರಾಜ್ಯ ಘಟಕದ ಅಧ್ಯಕ್ಷ ಯಡಿಯೂರಪ್ಪನವರು, ವೈ. ಎಸ್. ಪಾಟೀಲ್, ಗುಂಡಯ್ಯ ಶೆಟ್ಟಿ ಮುಂತಾದವರು ತಮ್ಮ ಜೊತೆಗಾರರೊಡಗೂಡಿ ಪ್ರಚಾರ ಕಾರ್ಯದಲ್ಲಿ ತೊಡಗಿದರು. 'ಗ್ರಾಮರಾಜ್ಯ ಉಳಿಸಿ' ಎಂಬ ಘೋಷಣೆಯೊಡನೆ ರಾಜ್ಯದಲ್ಲಿ ಪಂಚಾಯತಿ ಚುನಾವಣೆ ನಡೆಸಬೇಕೆಂಬ ಕೂಗು; ಇದರ ಅಂಗವಾಗಿ ಶಿವಮೊಗ್ಗದಿಂದ ಬೆಂಗಳೂರಿನವರೆಗೆ ಪಾದಯಾತ್ರೆ. ರೈತರ ಸಾಲವನ್ನು ಮನ್ನಾ ಮಾಡಬೇಕೆಂದು ಬಸವನಬಾಗೇವಾಡಿಯಿಂದ ಮೂರು ಬಾರಿ ರಾಜ್ಯಾದ್ಯಂತ ಪ್ರವಾಸ, ಸಭೆಗಳಲ್ಲಿ ಭಾಷಣ; ಹರಿಜನ ಗಿರಿಜನ ಜಮೀನನ್ನು ಸರ್ಕಾರ ವಶಪಡಿಸಿಕೊಳ್ಳುವ ಮಸೂದೆಯನ್ನು ಕೈಬಿಡಬೇಕೆಂದು ವಿಧಾನಸಭೆಯಲ್ಲಿ ಇವರ ಅಶ್ರುಪೂರಿತ ಒಂಟಿದನಿ; ಸರ್ಕಾರದ ಒಪ್ಪಿಗೆ. ಭಾಜಪ ಕೇವಲ ನಗರ ಪ್ರದೇಶಗಳಿಗೆ ಸೀಮಿತ ಎಂಬ ಭಾವನೆಯನ್ನು ತೊಡೆದುಹಾಕಲು, ಅದನ್ನು ರೈತರ ಕಾರ್ಮಿಕರ ಪರವಾದ ಪಕ್ಷವೆಂಬ ನಂಬಿಕೆ ಮೂಡಿಸಲು ಅನುವಾಗುವಂಥ ಹೋರಾಟ- ಹೀಗೆ ರಾಜ್ಯದ ಭಾಜಪ ನಾಯಕರಿಂದ ಅವಿರತ ಪ್ರಯತ್ನ.

ಭಾಜಪದ ರಾಜ್ಯಘಟಕದಲ್ಲಿ ಇಂದು ಹಲವರು ನಾಯಕರು ಹೊಮ್ಮಿದ್ದಾರೆ. ಕೇಂದ್ರ ಸಚಿವ ಅನಂತಕುಮಾರ್, ಧನಂಜಯ ಕುಮಾರ್, ಕೆ. ಎಸ್. ಈಶ್ವರಪ್ಪ, ಡಾ। ಎಂ. ಆರ್. ತಂಗಾ, ಡಿ. ಹೆಚ್. ಶಂಕರಮೂರ್ತಿ, ಡಾ। ವಿ. ಎಸ್. ಆಚಾರ್ಯ, ಕೆ. ನರಹರಿ, ರಾಮಚಂದ್ರಗೌಡ, ಜಗದೀಶ್ ಶೆಟ್ಟರ್, ಸದಾನಂದಗೌಡ, ಡಾ। ಶಿವಯೋಗಿಸ್ವಾಮಿ-ಹೀಗೆ ಹಲವರನ್ನು ಹೆಸರಿಸಬಹುದು. ರಾಜಕೀಯ ಅಧಿಕಾರಗ್ರಹಣ ಪ್ರಯತ್ನದ ಜೊತೆಜೊತೆಗೇ ಪಕ್ಷವನ್ನು ರಾಜ್ಯದಲ್ಲಿ ಬಲಗೊಳಿಸಲು ಪಕ್ಷದ ಕರ್ನಾಟಕ ಘಟಕ ನಾನಾ ಕಾರ್ಯಕ್ರಮಗಳನ್ನು ಹಾಕಿಕೊಂಡು ಮುಂದುವರೆದಿದೆ. ರಾಜ್ಯದಲ್ಲಿ ಪಕ್ಷದ ಸದಸ್ಯರ ಸಂಖ್ಯೆ ೬.೭೫ಲಕ್ಷವನ್ನೂ ಮೀರಿದೆ. ಹೊಸದಾಗಿ ಸೇರಿಸಲಾದ ಸದಸ್ಯರು ಸುಮಾರು ೧.೭೬ ಲಕ್ಷ. ಇವರಲ್ಲಿ ಸಕ್ರಿಯ ಸದಸ್ಯರು ೭,೨೨೬. ಗ್ರಾಮಾಂತರ ಸ್ಥಳೀಯ ಸಮಿತಿಗಳು ಒಟ್ಟು ೫,೬೫೯. ನಗರ ಪ್ರದೇಶದ ಸ್ಥಾನೀಯ ಸಮಿತಿಗಳು ೫,೦೧೦. ಶಕ್ತಿ ಕೇಂದ್ರಗಳು ೧,೯೯೧. ಒಟ್ಟು ಮಂಡಲಗಳು ೪೪೧. ಹದಿನೈದು ಮಂದಿ ಪ್ರಮುಖರು ಜಿಲ್ಲೆಗಳ ಸಂಘಟನಾತ್ಮಕ ಉಸ್ತುವಾರಿ ನಡೆಸುತ್ತಾರೆ. ಆರು ಮೋರ್ಚಾಗಳು, ೧೪ ವೇದಿಕೆಗಳು ರಚಿತವಾಗಿವೆ. ರಾಜ್ಯ ಸರ್ಕಾರದ ವೈಫಲ್ಯಕ್ಕೆ ಪ್ರತಿಭಟನೆ, ವಿದ್ಯುತ್ ಏರಿಕೆ ವಿರುದ್ಧ ಚಳವಳಿ, ಕೋಮು ಪ್ರಚೋದಕ ಹೇಳಿಕೆಗಳಿಗೆ ಪ್ರತಿಫಲನೆ, ರೈತರ ಸಮಸ್ಯೆಯ ಪರಿಹಾರ, ಚುನಾವಣೆಗಳಲ್ಲಿ ಪಾಲ್ಗೊಳ್ಳುವಿಕೆ- ಹೀಗೆ ನಾನಾ ನಿಟ್ಟುಗಳಲ್ಲಿ ಅದು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

ಆದರೆ ರಾಜ್ಯದಲ್ಲಿ ಬಿಜೆಪಿಯ ಶಾಸಕ ಬಲ ಬಲುಕಡಿಮೆಯೇ. ಅಖಿಲ ಭಾರತದ ವಿದ್ಯಮಾನಗಳು, ರಾಜ್ಯಮಟ್ಟದಲ್ಲಿ ಸಂಭವಿಸಿದ ಕೆಲವು ಅಹಿತಕರ ಘಟನೆಗಳು ಮುಂತಾದವೆಲ್ಲ ರಾಜ್ಯದಲ್ಲಿ ಪಕ್ಷದ ಹಿನ್ನಡೆಗೆ ಕಾರಣಗಳಾಗಿವೆ. ನಾವು ಸ್ವೀಕರಿಸಿರುವ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಂತಿಮವಾಗಿ ಎಲ್ಲ ಪಕ್ಷಗಳೂ ಹೆಚ್ಚು ಕಡಿಮೆ ಒಂದೇ ಬಗೆಯ ನೀತಿ ನಿಲುವುಗಳನ್ನು ಅನುಸರಿಸುವ ಪ್ರವೃತ್ತಿಗಳು ಪ್ರಬಲವಾಗುತ್ತದೆ. ತೀವ್ರ ಓರೆಕೋರೆಗಳನ್ನೆಲ್ಲ-ಅವು ಎಷ್ಟೇ ಪ್ರಧಾನವೆಂದು ಗಣಿಸಲಿ- ನಿವಾರಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಹೊಂದಾಣಿಕೆ, ಸಾಮರಸ್ಯ, ಜನರ ನಿತ್ಯ ಬವಣೆಗೆ ಗಮನ ಇಂಥ ಮಾರ್ಗ ಅನುಸರಿಸದೆ ವಿಧಿಯಿಲ್ಲ. ಅಮೆರಿಕದಲ್ಲಾಗಲಿ, ಬ್ರಿಟನ್ನಿನಲ್ಲೇ ಆಗಲಿ ಅಧಿಕಾರದ ದೃಷ್ಟಿಯಿಂದ ಪ್ರಬಲವೆನಿಸಿದ ಪಕ್ಷಗಳು ಸಾಮಾನ್ಯವಾಗಿ ಎರಡೇ. ಮೂರನೆಯದು ಬಲು ದೂರ. ಈ ಪಕ್ಷಗಳ ಹೆಸರುಗಳು ಬೇರೆಯೆನಿಸಿದರೂ ಅಂಥ ವ್ಯತ್ಯಾಸವೇನೂ ಎದ್ದು ಕಾಣುವುದಿಲ್ಲ. ಭಾಜಪವೂ ಈ ನಿಟ್ಟಿನಲ್ಲಿ ಹೆಜ್ಜೆ ಹಾಕುತ್ತಿದೆಯೇ ಎಂಬುದನ್ನು ಆ ಪಕ್ಷವೇ ಆತ್ಮಶೋಧನೆ ಮಾಡಿಕೊಂಡು ಕಂಡುಕೊಳ್ಳಬೇಕು.

### ಚುನಾವಣಾ ಸಾಧನೆ

೧೯೮೦ ಲೋಕಸಭೆ ಚುನಾವಣೆಯಲ್ಲಿ ಜನತಾ ಪಕ್ಷವು ಕರ್ನಾಟಕ ರಾಜ್ಯದಲ್ಲಿ ಶೇಕಡಾ ೨೨.೯೩ರಷ್ಟು ಮತಗಳನ್ನು ಗಳಿಸಿತ್ತು. ಇದು ಚುನಾವಣೆಯಲ್ಲಿ ಪಡೆದ ಮತಗಳು ೨೫,೦೮,೮೪೬. ಇದರಲ್ಲಿ ಭಾರತೀಯ ಜನತಾ ಪಕ್ಷದ ಮತಗಳು ಸಹ ಸೇರ್ಪಡೆಯಾಗಿವೆ. ತುಮಕೂರಿನಿಂದ ಜನತಾ ಪಕ್ಷದ ವತಿಯಿಂದ ಸ್ಪರ್ಧಿಸಿದ್ದ ಎಸ್. ಮಲ್ಲಿಕಾರ್ಜುನಯ್ಯ, ಮಂಗಳೂರಿನಿಂದ ಸ್ಪರ್ಧಿಸಿದ್ದ ಕರಂಬಳ್ಳಿ ಸಂಜೀವಶೆಟ್ಟಿ, ಉಡುಪಿ ಕ್ಷೇತ್ರದಿಂದ ಸ್ಪರ್ಧಿಸಿದ್ದ ಡಾ। ವಿ. ಎಸ್. ಆಚಾರ್ಯ ಹಾಗೂ ಶಿವಮೊಗ್ಗ ಜಿಲ್ಲೆಯಿಂದ ಸ್ಪರ್ಧಿಸಿದ್ದ ಡಿ. ಹೆಚ್. ಶಂಕರಮೂರ್ತಿಯವರು ಜನಸಂಘದ ಮೂಲಕ ಬಂದವರು. ಅನಂತರ ಅವರು ಬಿ.ಜೆ.ಪಿ. ಪಕ್ಷದ ಹಿರಿಯ ನಾಯಕರಾದುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

### ೧೯೮೩ರ ವಿಧಾನ ಸಭೆ ಚುನಾವಣೆ

ಈ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷವು ೧೧೦ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಇದು ಶೇ. ೭.೯೩ರಷ್ಟು, ಅಂದರೆ ೧೦,೨೪,೮೯೨ ಮತಗಳನ್ನು ಪಡೆಯಿತು. ಅದರ ೧೮ ಅಭ್ಯರ್ಥಿಗಳು ಈ ಸಂದರ್ಭದಲ್ಲಿ ವಿಧಾನಸಭೆಗೆ ಆಯ್ಕೆಯಾದರು. ಬೀದರ್, ಗುಲ್ಬರ್ಗಾ, ತುಮಕೂರು, ಮೈಸೂರು, ಉತ್ತರ ಕನ್ನಡ ಮತ್ತು ಧಾರವಾಡ ಕ್ಷೇತ್ರಗಳಿಂದ ತಲಾ ಒಂದೊಂದು, ಶಿವಮೊಗ್ಗ ಮತ್ತು ಬಿಜಾಪುರ ಕ್ಷೇತ್ರಗಳಿಂದ ತಲಾ ಎರಡು ಮತ್ತು ದಕ್ಷಿಣ ಕನ್ನಡದಿಂದ ಎಂಟು- ಹೀಗೆ ಒಟ್ಟು ಹದಿನೆಂಟು ಬಿ.ಜೆ.ಪಿ. ಅಭ್ಯರ್ಥಿಗಳು ರಾಜ್ಯದ ವಿವಿಧ ಜಿಲ್ಲೆಗಳಿಂದ ಆಯ್ಕೆಯಾಗಿದ್ದರು.

ಬೀದರ್‌ನಿಂದ ನಾರಾಯಣರಾವ್ ಮುನವಳ್ಳಿ, ಸೇಡಂದಿಂದ ನಾರಾಯಣರೆಡ್ಡಿ ಲಚ್ಚಮ್ಮರೆಡ್ಡಿ ಪಾಟೀಲ್, ಚಿಕ್ಕನಾಯಕನ ಹಳ್ಳಿಯಿಂದ ಎಸ್. ವೈ. ರಾಮಲಿಂಗಯ್ಯ, ಮೈಸೂರು ನಗರದ ಕೃಷ್ಣರಾಜದಿಂದ ಹೆಚ್. ಗಂಗಾಧರನ್, ಸುಳ್ಯದಿಂದ ಬಾಕಿಲ ಹುಕ್ರಪ್ಪ, ಪುತ್ತೂರಿನಿಂದ ಕೆ. ರಾಮಭಟ್, ವಿಟ್ಲದಿಂದ ರುಕ್ಮಯ್ಯ ಪೂಜಾರಿ, ಬೆಳ್ತಂಗಡಿಯಿಂದ ವಸಂತ ಬಂಗೇರ, ಬಂಟ್ವಾಳದಿಂದ ಎನ್. ಶ್ರೀನಿವಾಸರಾವ್, ಮಂಗಳೂರಿನಿಂದ ವಿ. ಧನಂಜಯಕುಮಾರ್, ಉಡುಪಿಯಿಂದ ಡಾ। ವಿ. ಎಸ್. ಆಚಾರ್ಯ, ಬ್ರಹ್ಮಾವರದಿಂದ ಬಿ.ಡಿ. ಶೆಟ್ಟಿ, ಶಿವಮೊಗ್ಗದಿಂದ ಎಂ. ಆನಂದರಾವ್; ಶಿಕಾರಿಪುರದಿಂದ ಬಿ.ಎಸ್. ಯುಡಿಯೂರಪ್ಪ, ಕುಮಟಾದಿಂದ ಡಾ। ಎಂ.ಪಿ. ಕರ್ಕಿ, ಹುಬ್ಬಳ್ಳಿಯಿಂದ ಜಿ. ಎಂ. ಗೋವಿಂದ ಸಾ, ಗುಳೇದಗುಡ್ಡದಿಂದ ಬನ್ನಿ ಮಲ್ಲಿಕಾರ್ಜುನ ವೀರಪ್ಪ, ಬಿಜಾಪುರದಿಂದ ಗಂಜೀಮಠ ಚಂದ್ರಶೇಖರ ಗುರುಪಾದಯ್ಯ ಗಚ್ಚಿನಮಠ - ಇವರುಗಳು ವಿಜೇತರಾದ ಅಭ್ಯರ್ಥಿಗಳು.

### ೧೯೮೫ರ ವಿಧಾನಸಭೆ ಚುನಾವಣೆ

ಈ ವಿಧಾನಸಭೆ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷ ೧೧೭ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದು ಶೇಕಡಾ ೩.೮೪ರಷ್ಟು ಮತಗಳನ್ನು ಮಾತ್ರ ಪಡೆಯಿತು. ಅದು ಒಟ್ಟು ಪಡೆದ ಮತಗಳು ೫,೬೫,೮೧೮. ದಕ್ಷಿಣ ಕನ್ನಡ ಹಾಗೂ ಶಿವಮೊಗ್ಗ ದಿಂದ ಕೇವಲ ಒಬ್ಬೊಬ್ಬ ಅಭ್ಯರ್ಥಿಗಳು ಮಾತ್ರ ಆಯ್ಕೆಯಾದರು. ಬೆಳ್ತಂಗಡಿಯಿಂದ ಕೆ. ವಸಂತ ಬಂಗೇರ ಹಾಗೂ ಶಿಕಾರಿಪುರದಿಂದ ಬಿ. ಎಸ್. ಯಡಿಯೂರಪ್ಪ ಅವರುಗಳು ಮಾತ್ರ ಈ ಪಕ್ಷದಿಂದ ವಿಧಾನಸಭೆಯನ್ನು ಪ್ರವೇಶಿಸಿದರು.

### ೧೯೮೯ರ ಲೋಕಸಭೆ ಚುನಾವಣೆ

ಈ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷ ಕರ್ನಾಟಕ ರಾಜ್ಯದಿಂದ ಲೋಕಸಭೆಗೆ ನಾಲ್ವರನ್ನು ಕಳಿಸಿತು. ಬೀದರ್‌ನಿಂದ ರಾಮಚಂದ್ರಪ್ಪ ವೀರಪ್ಪನವರು ಶೇಕಡಾ ೫೦.೬೭ ಎಂದರೆ ೨,೨೭,೮೬೭ ಮತಗಳನ್ನು ಪಡೆದು ಆಯ್ಕೆಯಾದರು. ತುಮಕೂರಿನಿಂದ ಎಸ್. ಮಲ್ಲಿಕಾರ್ಜುನಯ್ಯರವರು, ಬೆಂಗಳೂರು ದಕ್ಷಿಣದಿಂದ ಕೆ. ವೆಂಕಟಗಿರಿಗೌಡ ಹಾಗೂ ಮಂಗಳೂರಿನಿಂದ ವಿ. ಧನಂಜಯ ಕುಮಾರ್ ಅವರುಗಳು ಲೋಕಸಭೆಯನ್ನು ಪ್ರವೇಶಿಸಿದರು.

### ೧೯೯೪ರ ವಿಧಾನಸಭೆ ಚುನಾವಣೆ

ಈ ಚುನಾವಣೆಯಲ್ಲಿ ಬಿ.ಜೆ.ಪಿ. ರಾಜ್ಯದ ೨೨೩ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದು ಶೇಕಡಾ ೧೭ ರಷ್ಟು ಎಂದರೆ, ೩೫,೧೭,೧೧೫ ಮತಗಳನ್ನು ಪಡೆಯಿತು. ಅದರ ೪೦ ಅಭ್ಯರ್ಥಿಗಳು ವಿಧಾನಸಭೆಗೆ ಆಯ್ಕೆಯಾದರು. ಬೀದರ್, ಗುಲ್ಬರ್ಗಾ, ಬಳ್ಳಾರಿ, ಚಿತ್ರದುರ್ಗ, ಬೆಂಗಳೂರು ಗ್ರಾಮಾಂತರ, ಬಿಜಾಪುರ ಹಾಗೂ ಹಾಸನ ಜಿಲ್ಲೆಯಿಂದ ತಲಾ ಒಬ್ಬರು, ತುಮಕೂರು ಮತ್ತು ಬೆಂಗಳೂರು ಜಿಲ್ಲೆಯಿಂದ

ತಲಾ ಇಬ್ಬರು, ಬೆಂಗಳೂರು ನಗರ, ಮೈಸೂರು, ಶಿವಮೊಗ್ಗ ಮತ್ತು ಧಾರವಾಡದಿಂದ ತಲಾ ನಾಲ್ಕು ಮಂದಿ, ಕೊಡಗು ಹಾಗೂ ಉತ್ತರ ಕನ್ನಡದಿಂದ ತಲಾ ಮೂರು ಮಂದಿ ಮತ್ತು ದಕ್ಷಿಣ ಕನ್ನಡದಿಂದ ಏಳು ಅಭ್ಯರ್ಥಿಗಳು ಈ ಚುನಾವಣೆಯಲ್ಲಿ ಆಯ್ಕೆಯಾಗಿದ್ದರು. ೧೯೮೫ರ ವಿಧಾನಸಭಾ ಚುನಾವಣೆಗಳಲ್ಲಿ ನೆಲಕಚ್ಚಿದ್ದ ಬಿ.ಜೆ.ಪಿ. ಈ ಚುನಾವಣೆಗಳಲ್ಲಿ ರಾಜ್ಯದಲ್ಲಿ ತನ್ನ ನೆಲೆಯನ್ನು ಕಂಡುಕೊಂಡಿತ್ತು. ಬೇರೆ ಬೇರೆ ಪಕ್ಷಗಳಿಂದ ಬಿ.ಜೆ.ಪಿ.ಗೆ ಬಂದ ಹಿರಿಯ ರಾಜಕಾರಣಿಗಳು ಹಾಗೂ ಹೊಸ ತಲೆಮಾರಿನ ಯುವಕರ ಉತ್ಸಾಹ ಇದಕ್ಕೆ ಕಾರಣವೆಂದು ಹೇಳಬಹುದು.

ಹುಲಸೂರ್‌ನಿಂದ ಸಿ. ಕೆ. ಚವಾಣ್, ಕಮಲಾಪುರದಿಂದ ರೇವುನಾಯಕ್, ಹೊಸಪೇಟೆಯಿಂದ ಜಿ. ಶಂಕರಗೌಡ, ಮಾಯಕೊಂಡದಿಂದ ಎಸ್. ಎ. ರವೀಂದ್ರನಾಥ, ತಿಪಟೂರಿನಿಂದ ಬಿ. ನಂಜಾಮರಿ, ರಾಜಾಜಿನಗರದಿಂದ ಎಸ್. ಸುರೇಶ್‌ಕುಮಾರ್, ಚಿಕ್ಕಪೇಟೆಯಿಂದ ಡಾ। ಜೀವರಾಜ ಆಳ್ವ, ಬೆಂಗಳೂರಿನ ಬಸವನಗುಡಿಯಿಂದ ಹೆಚ್. ಎನ್. ನಂಜೇಗೌಡ. ಆನೇಕಲ್‌ನಿಂದ ವೈ. ರಾಮಕೃಷ್ಣ, ಉತ್ತರಹಳ್ಳಿಯಿಂದ ಎಂ. ಶ್ರೀನಿವಾಸ್, ಮೈಸೂರಿನ ಕೃಷ್ಣರಾಜದಿಂದ ಎ. ರಾಮದಾಸ್, ಚಾಮರಾಜದಿಂದ ಹೆಚ್.ಎಸ್. ಶಂಕರಲಿಂಗೇಗೌಡ, ನರಸಿಂಹರಾಜದಿಂದ ಇ. ಮಾರುತಿರಾವ್ ಪವಾರ್, ಹುಣಸೂರಿನಿಂದ ಸಿ.ಹೆಚ್. ವಿಜಯಶಂಕರ್, ವಿರಾಜಪೇಟೆಯಿಂದ ಹೆಚ್. ಡಿ. ಬಸವರಾಜ್, ಮಡಿಕೇರಿಯಿಂದ ಡಿ. ಎಸ್. ಮಾದಪ್ಪ, ಸಕಲೇಶಪುರದಿಂದ ಬಿ.ಬಿ. ಶಿವಪ್ಪ, ಇವರುಗಳಲ್ಲದೆ ಸುಳ್ಯ, ಪುತ್ತೂರು, ವಿಟ್ಲ, ಬೆಳ್ತಂಗಡಿ, ಬಂಟ್ವಾಳ, ಉಳ್ಳಾಲ ಹಾಗೂ ಸುರತ್ಕಲ್‌ಗಳಿಂದ ಬಿ.ಜೆ.ಪಿ. ಅಭ್ಯರ್ಥಿಗಳು ಆಯ್ಕೆಯಾಗಿದ್ದರು. ಶಿವಮೊಗ್ಗದ ತೀರ್ಥಹಳ್ಳಿ, ಹೊಸನಗರ ಹಾಗೂ ಶಿಕಾರಿಪುರ ಕ್ಷೇತ್ರಗಳು ಬಿ.ಜೆ.ಪಿ. ಅಭ್ಯರ್ಥಿಗಳನ್ನು ಆರಿಸಿಕೊಂಡವು. ಧಾರವಾಡ ಗ್ರಾಮಾಂತರ, ಹುಬ್ಬಳ್ಳಿ ಹಾಗೂ ಹುಬ್ಬಳ್ಳಿ ಗ್ರಾಮಾಂತರ ಕ್ಷೇತ್ರಗಳು ಸಹ ಬಿ.ಜೆ.ಪಿ. ಅಭ್ಯರ್ಥಿಗಳಿಗೆ ಬೆಂಬಲ ಕೊಟ್ಟಿದ್ದವು. ಬಿಜಾಪುರದಿಂದ ಸಹ ಬಿ.ಜೆ..ಪಿ. ಅಭ್ಯರ್ಥಿಯ ಆಯ್ಕೆಯಾಯಿತು.

## ೧೯೯೬ರ ಲೋಕಸಭೆ ಚುನಾವಣೆ

ಈ ಚುನಾವಣೆಯಲ್ಲಿ ಬಿ.ಜೆ.ಪಿ. ಕರ್ನಾಟಕದಿಂದ ೨೮ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದು ಶೇಕಡಾ ೨೪.೮೫ ಅಂದರೆ ೪೬,೪೯,೫೯೮ ಮತಗಳನ್ನು ಗಳಿಸಿತ್ತು. ಅದರ ಆರು ಅಭ್ಯರ್ಥಿಗಳು ಈ ಚುನಾವಣೆಯಿಂದ ಲೋಕಸಭೆಯನ್ನು ಪ್ರವೇಶಿಸಿದರು. ಅವರುಗಳೆಂದರೆ ಬೀದರ್‌ನಿಂದ ರಾಮಚಂದ್ರಪ್ಪ ವೀರಪ್ಪ, ದಾವಣಗೆರೆಯಿಂದ ಜಿ. ಮಲ್ಲಿಕಾರ್ಜುನಪ್ಪ, ಬೆಂಗಳೂರು ದಕ್ಷಿಣದಿಂದ ಅನಂತಕುಮಾರ್, ಮಂಗಳೂರಿನಿಂದ ವಿ. ಧನಂಜಯಕುಮಾರ್, ಉತ್ತರ ಕನ್ನಡದಿಂದ ಅನಂತಕುಮಾರ್ ಡಿ. ಹೆಗಡೆ ಹಾಗೂ ಧಾರವಾಡ ಉತ್ತರದಿಂದ ವಿಜಯ ಸಂಕೇಶ್ವರ.

## ೧೯೯೮ರ ಲೋಕಸಭೆ ಚುನಾವಣೆ

ಈ ಚುನಾವಣೆಯಲ್ಲಿ ಬಿ.ಜೆ.ಪಿ. ೧೮ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದು ಶೇಕಡಾ ೨೬.೯೪ ಮತಗಳನ್ನು ಅಂದರೆ ೫೬,೮೬,೧೫೧ ಮತಗಳನ್ನು ಪಡೆಯಿತು. ಭಾರತೀಯ ಜನತಾ ಪಕ್ಷವು ೧೩ ಸ್ಥಾನಗಳನ್ನು ಈ ಲೋಕಸಭೆ ಚುನಾವಣೆಯಲ್ಲಿ ಗೆಲ್ಲುವುದರ ಮೂಲಕ ಹಿಂದೆಂದೂ ಕಂಡರಿಯದ ಅದ್ಭುತ ವಿಜಯವನ್ನು ಗಳಿಸಿತು. ಇದು ರಾಜ್ಯದ ವಿಧಾನಸಭೆಯ ವಿರೋಧಪಕ್ಷಕ್ಕೆ ಸಂದ ಅಪರೂಪದ ಜಯ ಆಗಿತ್ತು. ಈ ಸಂದರ್ಭದಲ್ಲಿ ಪಕ್ಷದಿಂದ ಗೆದ್ದ ಪ್ರಮುಖ ನಾಯಕರುಗಳು ಎಂದರೆ - ಬೀದರ್‌ನಿಂದ ರಾಮಚಂದ್ರಪ್ಪ ವೀರಪ್ಪ, ಗುಲ್ಬರ್ಗಾದಿಂದ ಬಸವರಾಜ ಪಾಟೀಲ್ ಸೇಡಂ, ತುಮಕೂರಿನಿಂದ ಎಸ್. ಮಲ್ಲಿಕಾರ್ಜುನಯ್ಯ, ಕನಕಪುರದಿಂದ ಎಂ. ಶ್ರೀನಿವಾಸ್, ಬೆಂಗಳೂರು ದಕ್ಷಿಣದಿಂದ ಅನಂತಕುಮಾರ್, ಮೈಸೂರಿನಿಂದ ಸಿ. ಆರ್. ವಿಜಯಶಂಕರ್, ಮಂಗಳೂರಿನಿಂದ ವಿ. ಧನಂಜಯ ಕುಮಾರ್, ಉಡುಪಿಯಿಂದ ಐ. ಎಂ. ಜಯರಾಮಶೆಟ್ಟಿ, ಚಿಕ್ಕಮಗಳೂರಿನಿಂದ ಡಿ. ಸಿ. ಶ್ರೀಕಂಠಪ್ಪ, ಶಿವಮೊಗ್ಗದಿಂದ ಆಯನೂರು ಮಂಜುನಾಥ, ಉತ್ತರ ಕನ್ನಡದಿಂದ ಅನಂತಕುಮಾರ್ ಡಿ. ಹೆಗಡೆ, ಧಾರವಾಡದಿಂದ ವಿಜಯ ಸಂಕೇಶ್ವರ ಹಾಗೂ ಬೆಳಗಾವಿಯಿಂದ ಬಾಪುಗೌಡ ರುದ್ರಗೌಡ ಪಾಟೀಲ್.

## ೧೯೯೯ರ ಲೋಕಸಭೆ ಚುನಾವಣೆ

ಪ್ರಸ್ತುತ ಲೋಕಸಭೆ ಚುನಾವಣೆಯಲ್ಲಿ ಭಾರತೀಯ ಜನತಾ ಪಕ್ಷವು ರಾಜ್ಯದಿಂದ ೧೯ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಆದರೆ ಅದರ ಕೇವಲ ೭ ಅಭ್ಯರ್ಥಿಗಳು ಮಾತ್ರ ಲೋಕಸಭೆಯನ್ನು ಪ್ರವೇಶಿಸಿದರು. ಅದು ೨೭.೧೮ರಷ್ಟು ಅಂದರೆ ೬೦,೭೭,೦೨೦ ಮತಗಳನ್ನು ಪಡೆಯಿತು. ಈ ಪಕ್ಷದಿಂದ ಗೆದ್ದ ಅಭ್ಯರ್ಥಿಗಳು ಎಂದರೆ ಬೀದರ್‌ನಿಂದ ರಾಮಚಂದ್ರಪ್ಪ ವೀರಪ್ಪ, ದಾವಣಗೆರೆಯಿಂದ

ಜಿ. ಮಲ್ಲಿಕಾರ್ಜುನಪ್ಪ, ಬೆಂಗಳೂರು ದಕ್ಷಿಣದಿಂದ ಅನಂತಕುಮಾರ್, ಮಂಗಳೂರಿನಿಂದ ವಿ. ಧನಂಜಯಕುಮಾರ್, ಚಿಕ್ಕಮಗಳೂರಿನಿಂದ ಡಿ. ಸಿ. ಶ್ರೀಕಂಠಪ್ಪ, ಧಾರವಾಡ ಉತ್ತರದಿಂದ ವಿಜಯ ಸಂಕೇಶ್ವರ ಹಾಗೂ ಬಿಜಾಪುರದಿಂದ ಬಸವನಗೌಡ ರಾಯನಗೌಡ ಪಾಟೀಲ್ ಯತ್ನಾಳ್.

## ೧೯೯೯ರ ವಿಧಾನಸಭೆ ಚುನಾವಣೆ

ಭಾರತೀಯ ಜನತಾ ಪಕ್ಷವು ರಾಜ್ಯದ ಒಟ್ಟು ೨೨೪ ಸ್ಥಾನಗಳ ಪೈಕಿ ೧೯೪ ಸ್ಥಾನಗಳಿಗೆ ಮಾತ್ರ ಸ್ಪರ್ಧಿಸಿತ್ತು. ಅದು ಶೇಕಡಾ ೨೦.೬೯ ಎಂದರೆ ೪೫,೯೮, ೭೪೧ ಮತಗಳನ್ನು ಪಡೆಯಿತು. ಅದರ ೪೪ ಅಭ್ಯರ್ಥಿಗಳು ವಿಧಾನಸಭೆಯನ್ನು ಪ್ರವೇಶಿಸಿದರು. ಅದು ರಾಜ್ಯದ ಅಧಿಕೃತ ವಿರೋಧಪಕ್ಷ ಎಂಬ ಮಾನ್ಯತೆಯನ್ನು ಪಡೆಯಿತು. ರಾಜ್ಯದ ವಿವಿಧ ವಿಧಾನಸಭಾ ಕ್ಷೇತ್ರಗಳಲ್ಲಿ ಪಡೆದ ಸ್ಥಾನಗಳು ಹೀಗಿವೆ.

ಬೀದರ್‌ನಿಂದ ೬, ಮೈಸೂರು, ಮಂಗಳೂರು ಹಾಗೂ ಹಾಸನದಿಂದ ತಲಾ ೪, ಬೆಂಗಳೂರು ದಕ್ಷಿಣ ಹಾಗೂ ಧಾರವಾಡ ಉತ್ತರದಿಂದ ತಲಾ ೩, ದಾವಣಗೆರೆ, ತುಮಕೂರು, ಬೆಂಗಳೂರು ಗ್ರಾಮಾಂತರ, ಚಾಮರಾಜನಗರ, ಉತ್ತರ ಕನ್ನಡ ಹಾಗೂ ಬಿಜಾಪುರ ಜಿಲ್ಲೆಗಳಲ್ಲಿ ತಲಾ ೨, ಚಿತ್ರದುರ್ಗ, ಚಿಕ್ಕಬಳ್ಳಾಪುರ, ಬೆಂಗಳೂರು ಉತ್ತರ, ಉಡುಪಿ, ಚಿಕ್ಕಮಗಳೂರು, ಶಿವಮೊಗ್ಗ, ಬೆಳಗಾವಿ, ಬಾಗಲಕೋಟೆ ಕ್ಷೇತ್ರಗಳಲ್ಲಿ ತಲಾ ಒಂದು ಸ್ಥಾನವನ್ನು ಪಡೆದಿದೆ.

ಬಿ.ಜೆ.ಪಿ.ಯಿಂದ ಗೆದ್ದ ಪ್ರಮುಖ ನಾಯಕರುಗಳು ಎಂದರೆ ಭಾಲ್ಕಿಯಿಂದ ಪ್ರಕಾಶ ಖಂಡ್ರೆ, ಕಮಲಾಪುರದಿಂದ ರೇವುನಾಯಕ, ಮಾಯಕೊಂಡದಿಂದ ಎನ್. ಎ ರವೀಂದ್ರನಾಥ, ಹೊಳಲ್ಕೆರೆಯಿಂದ ಪಿ. ರಮೇಶ್, ತುಮಕೂರಿನಿಂದ ಎಸ್. ಶಿವಣ್ಣ ರಾಜಾಜಿನಗರದಿಂದ ಎಸ್. ಸುರೇಶಕುಮಾರ್, ಉತ್ತರಹಳ್ಳಿಯಿಂದ ಆರ್. ಅಶೋಕ್, ಬಸವನಗುಡಿಯಿಂದ ಕೆ.ಎನ್. ಸುಬ್ಬಾರೆಡ್ಡಿ, ಮೈಸೂರಿನ ಕೃಷ್ಣರಾಜದಿಂದ ಎ. ರಾಮದಾಸ್, ಚಾಮರಾಜದಿಂದ ಹೆಚ್. ಎಸ್. ಶಂಕರಲಿಂಗೇಗೌಡ, ಚಾಮರಾಜನಗರದಿಂದ ಸಿ. ಗುರುಸ್ವಾಮಿ, ಸಕಲೇಶಪುರದಿಂದ ಬಿ. ಬಿ. ಶಿವಪ್ಪ, ಪುತ್ತೂರಿನಿಂದ ಡಿ. ವಿ. ಸದಾನಂದಗೌಡ, ಮಂಗಳೂರಿನಿಂದ ಎನ್. ಯೋಗೀಶ್ ಭಟ್, ತೀರ್ಥಹಳ್ಳಿಯಿಂದ ಆರಗ ಜ್ಞಾನೇಂದ್ರ, ಸಿರ್ಸಿಯಿಂದ ವಿವೇಕಾನಂದ ವೈದ್ಯ, ಹುಬ್ಬಳ್ಳಿಯಿಂದ ಜಗದೀಶ ಶೆಟ್ಟರ್, ಬಾಗಲಕೋಟೆಯಿಂದ ಪಿ. ಹೆಚ್. ಪೂಜಾರ್, ಬಸವನಬಾಗೇವಾಡಿಯಿಂದ ಬೆಳ್ಳುಬ್ಬಿ ಸಂಕಪ್ಪ ಕಲ್ಲಪ್ಪ, ಧಾರವಾಡದಿಂದ ಚಂದ್ರಕಾಂತ ಬೆಲ್ಲದ್, ಸುಳ್ಯದಿಂದ ಎಸ್. ಅಂಗಾರ, ಹಾಸನದಿಂದ ಕೆ. ಹೆಚ್. ಹನುಮೇಗೌಡ ಮುಂತಾದವರು.

ಆದರೆ ಪಕ್ಷ ಇತ್ತೀಚೆಗೆ ಆಂತರಿಕ ಭಿನ್ನಮತ ಹಾಗೂ ಪಕ್ಷಾಂತರದ ಸುಳಿಗೆ ಸಿಲುಕಿ ತನ್ನ ಜನಪ್ರಿಯತೆ ಹಾಗೂ ಪ್ರಭಾವವನ್ನು ನಿಕಷಕ್ಕೆ ಒಡ್ಡಿದೆ. ಈ ಪರೀಕ್ಷೆಯಲ್ಲಿ ಅದು ಯಾವ ರೀತಿ ಯಶಸ್ವಿಯಾಗುತ್ತದೆ ಎಂಬುದನ್ನು ಕಾಲ ಹಾಗೂ ಮುಂದಿನ ಚುನಾವಣೆಗಳೇ ಹೇಳಬೇಕು.



# ಜನತಾದಳ

ಎಂ. ಪಿ. ಪ್ರಕಾಶ್

ಶ್ರೀಮತಿ ಇಂದಿರಾ ಗಾಂಧಿಯವರ ಹತ್ಯೆಯ ನೆರಳಲ್ಲಿ ನಡೆದ ೧೯೮೪ರ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ (ಐ) ಪಕ್ಷ ೪೧೫ ಸ್ಥಾನಗಳನ್ನು ಪಡೆದು ದಾಖಲೆ ಬಹುಮತದೊಡನೆ ಅಧಿಕಾರಕ್ಕೆ ಬಂದಿತು. ಜನತಾ ಪಕ್ಷ ೧೦ ಸ್ಥಾನ ಪಡೆದರೆ, ಜನತಾ (ಎಸ್) ಮತ್ತು ಲೋಕದಳಗಳು ಶೂನ್ಯ ಸಂಪಾದನೆ ಮಾಡಿದವು. ಅನಂತರದ ದಿನಗಳಲ್ಲಿ ವಿ. ಪಿ. ಸಿಂಗ್ ಜನಮೋರ್ಚಾ ಎಂಬ ಪಕ್ಷವನ್ನು ಸ್ಥಾಪಿಸಿ ಅಲಹಾಬಾದ್‌ನಿಂದ ಗೆದ್ದು ಬಂದರು. ತೆಲುಗುದೇಶಂ, ಡಿ.ಎಂ.ಕೆ. ಅಸ್ಸಾಂ ಗಣಪರಿಷತ್ ಪ್ರಾದೇಶಿಕ ಪಕ್ಷಗಳಾಗಿ ಗೆದ್ದು ಬಂದಿದ್ದವು. ಈ ಎಲ್ಲಾ ಏಳು ಪಕ್ಷಗಳೂ ಸೇರಿ ರಾಷ್ಟ್ರೀಯ ರಂಗವನ್ನು ಸ್ಥಾಪಿಸಿಕೊಂಡಿದ್ದವು. ವಿ. ಪಿ. ಸಿಂಗ್ ಅದರ ಸಂಚಾಲಕರಾಗಿದ್ದರು. ವಿರೋಧ ಪಕ್ಷದ ಏಕತೆ ಒಳ್ಳೆಯದು, ದೇಶದಲ್ಲಿ ಪ್ರಬಲ ವಿರೋಧ ಪಕ್ಷ ಇರಬೇಕು ಎಂದು ಹೇಳಿದ ಪ್ರಧಾನಿ ರಾಜೀವ್ ಗಾಂಧಿ ಈಗಿನ ವಿರೋಧ ಪಕ್ಷಗಳ ಏಕತೆ ಸಮಯಸಾಧಕತನದಿಂದ ಕೂಡಿದೆ ಎಂದೂ ಟೀಕಿಸುತ್ತಿದ್ದರು. ೧-೯-೮೮ರಂದು ತೆಲುಗುಗಂಗಾ ಹಾಗೂ ಆಂಧ್ರಪ್ರದೇಶದ ಇತರ ನೀರಾವರಿ ಯೋಜನೆಗಳಿಗೆ ಒಪ್ಪಿಗೆ ನೀಡುವಂತೆ ಒತ್ತಾಯಿಸಿ ಆಂಧ್ರದ ಸಂಸದರು, ಶಾಸಕರುಗಳಿಂದ ಕೂಡಿದ ೪೦೦ ಜನರ ಒಂದು ಗುಂಪು ನಿಷೇದಾಜ್ಞೆ ಉಲ್ಲಂಘಿಸಿ ಪ್ರಧಾನಿ ನಿವಾಸದತ್ತ ನುಗ್ಗಿತ್ತು. ಈ ಗುಂಪಿನ ಮೇಲೆ ಲಾಠಿ ಪ್ರಹಾರ ಮಾಡಲಾಯಿತು. ಆಗ ವಿ. ಪಿ. ಸಿಂಗರು ೨.೯.೮೮ರಿಂದ ಒಂದು ವಾರಗಳ ಕಾಲ ರಾಷ್ಟ್ರೀಯ ರಂಗವು ಈ ಸರ್ವಾಧಿಕಾರಿ ಮನೋಭಾವದ ವಿರೋಧಿ ಸಪ್ತಾಹವನ್ನು ಆಚರಿಸುತ್ತದೆಂದು ಹೇಳಿದರು. ಪ್ರತಿಪಕ್ಷಗಳ ಏಕತೆಯಲ್ಲಿ ಇದೂ ಒಂದು ಬೆಳವಣಿಗೆ ಆಯಿತು. ಹಾಗೂ ಜನತಾ ಪಕ್ಷ, ಜನ ಮೋರ್ಚಾ, ಕಾಂಗ್ರೆಸ್ (ಎಸ್), ಲೋಕದಳ (ಬಿ) ಈ ನಾಲ್ಕು ಪಕ್ಷಗಳು ಒಗ್ಗೂಡಿ ಸಮಾಜವಾದಿ ಜನತಾದಳ ರಚನೆ ಮಾಡಿ ಕೊಳ್ಳಬೇಕೆಂದು ವಿ.ಪಿ. ಸಿಂಗ್ ಪ್ರಯತ್ನಿಸುತ್ತಿದ್ದರು. ೧೯೮೮ರ ಮಾರ್ಚ್‌ನಲ್ಲಿ ಚಂದ್ರಶೇಖರ್ ಅಧ್ಯಕ್ಷತೆಯಲ್ಲಿ ಜನತಾ ಪಕ್ಷ ಹಾಗೂ ಅಜಿತ್‌ಸಿಂಗ್ ಅಧ್ಯಕ್ಷತೆಯ ಲೋಕದಳ (ಬಿ) ಒಗ್ಗೂಡಿ, ಜನತಾ ಪಕ್ಷವನ್ನು ರಚಿಸಿಕೊಂಡಿದ್ದವು. ಚಂದ್ರಶೇಖರ್, ಅಜಿತ್ ಸಿಂಗ್‌ರವರನ್ನು ಈ ಪಕ್ಷದ ಕಾರ್ಯಾಧ್ಯಕ್ಷರನ್ನಾಗಿ ನೇಮಿಸಿದ್ದರು. ಆದರೆ ಬಹುಗುಣ ನೇತೃತ್ವದ ಲೋಕದಳ (ಬಿ) ಹೊರಗೇ ಉಳಿದಿತ್ತು. ಸಮಾಜವಾದಿ ಜನತಾದಳ ರಚನೆಯಲ್ಲಿ ವಿಳಂಬವಾಗುತ್ತಿದೆ ಎಂದು ಆರೋಪಿಸಿದ ರಾಮಕೃಷ್ಣ ಹೆಗಡೆಯವರು ಸೆಪ್ಟೆಂಬರ್ ೨, ೧೯೮೮ರಂದು ಮುಂಬಯಿನಲ್ಲಿ ಮೂಲ ಜನತಾ ಪಕ್ಷವನ್ನು ಪುನರುಜ್ಜೀವನಗೊಳಿಸಲಾಗುವುದು ಎಂದು ಹೇಳಿಕೆ ನೀಡಿದರು. ಅಜಿತ್‌ಸಿಂಗ್ ಹಾಗೂ ರಾಮಕೃಷ್ಣ ಹೆಗಡೆಯವರಿಗೆ ರಾಜಕೀಯ ಭಿನ್ನಾಭಿಪ್ರಾಯಗಳಿದ್ದುದರಿಂದ ಹೆಗಡೆ ಈ ರೀತಿಯ ಕ್ರಮ ಕೈಗೊಳ್ಳುತ್ತಿದ್ದಾರೆಂದು ಕೇಳಿ ಬಂದಿತು. ಈ ಬಗ್ಗೆ ೨೩.೯.೮೮ ರಂದು ಒಂದು ಸಭೆ ನಡೆಸಲಾಗುವುದೆಂದೂ ಅಕ್ಟೋಬರ್ ೨ ರಂದು ಒಂದು ಸಮಾವೇಶ ನಡೆಸಲಾಗುವುದೆಂದೂ, ಹೆಗಡೆ ಹೇಳಿದರು. ಆನಂತರ ಸಮಾಜವಾದಿ ಜನತಾದಳ ರಚನೆಯ ಪ್ರಯತ್ನಗಳು ಚುರುಕಾದವು.

ಜನತಾಪಕ್ಷದ ನೇತೃತ್ವದಲ್ಲಿ ಸಂಯುಕ್ತ ವಿರೋಧಿ ಪಕ್ಷ ರಚನೆಯನ್ನು ಮಾಡಲಾಗುವುದೆಂದೂ ಈ ಬಗ್ಗೆ ಸೆಪ್ಟೆಂಬರ್ ೩೦ ರಂದು ಬೆಂಗಳೂರಿನಲ್ಲಿ ಸಭೆ ನಡೆಸಲಾಗುವುದೆಂದೂ, ಕೃಷ್ಣಕಾಂತ್, ಸುರೇಂದ್ರ ಮೋಹನ್, ಜೈಪಾಲರೆಡ್ಡಿಯವರು ದೆಹಲಿಯಲ್ಲಿ ಈ ಸಮ್ಮೇಳನದ ಕರೆಯೋಲೆ ಬಿಡುಗಡೆ ಮಾಡಿದರು. ಈ ಕರೆಯೋಲೆಯಲ್ಲಿ ರಾಮಕೃಷ್ಣ ಹೆಗಡೆ, ಮಧು ದಂಡವತೆ ಅವರ ಹೆಸರುಗಳು ಸೇರಿದಂತೆ ೪೦ ಹೆಸರುಗಳಿದ್ದವು. ಜನರಲ್ಲಿ ಮೂಡುತ್ತಿರುವ ತಪ್ಪು ಭಾವನೆ ನಿವಾರಿಸಲು. ಕಾಂಗ್ರೆಗೆ ಪರ್ಯಾಯ ರಂಗ ರಚನೆಯಲ್ಲಿ ಜನತಾ ಪಕ್ಷಕ್ಕೆ ಆಸಕ್ತಿ ಇದೆ ಎಂಬುದನ್ನು ತೋರಿಸಲು ಈ ಸಮ್ಮೇಳನ ನಡೆಸಲಾಗುತ್ತಿದೆ ಎಂದು ಆ ಪತ್ರದಲ್ಲಿ ತಿಳಿಸಲಾಗಿತ್ತು. ಈ ಮಧ್ಯೆ ಅಜಿತ್ ಸಿಂಗ್‌ರವರು ಸೆಪ್ಟೆಂಬರ್ ೨೩ ರಂದು ದೆಹಲಿಯಲ್ಲಿ ಜನತಾ ಪಕ್ಷದ ರಾಷ್ಟ್ರೀಯ ಕಾರ್ಯನಿರ್ವಾಹಕ ಸಭೆಯನ್ನು ಕರೆದರು. ಈ ಸಭೆ ಕರೆಯುವ ಹಕ್ಕು ಅಜಿತ್‌ಸಿಂಗ್‌ಗೆ ಇಲ್ಲ ಎಂದು ಜೈಪಾಲರೆಡ್ಡಿ ಹೇಳಿದರೆ, ಪಕ್ಷದ ಅಂಗರಚನೆ ಪ್ರಕಾರ ಅಜಿತ್‌ಸಿಂಗ್ ಕಾರ್ಯಾಧ್ಯಕ್ಷರಾಗುವುದು ಸಾಧ್ಯವಿಲ್ಲವೆಂದೂ, ಇದು ಬಲವಂತದ ವಿಲೀನವೆಂದೂ ಅಜಿತ್‌ಸಿಂಗ್, ಡಾ। ಸುಬ್ರಹ್ಮಣ್ಯಸ್ವಾಮಿ ಇವರನ್ನು ಪಕ್ಷದಿಂದ ವಜಾ ಮಾಡಬೇಕೆಂದೂ ಹೆಗಡೆ ಬಣದವರು ಒತ್ತಾಯ ಮಾಡತೊಡಗಿದರು. ದಿನಾಂಕ ೨೩.೯.೮೮ ರಂದು ಕರೆದಿರುವ ಜನತಾ ರಾಷ್ಟ್ರೀಯ ಕಾರ್ಯಕಾರಿ ಸಭೆ ಸಿಂಧು ಎಂದು ಅಜಿತ್ ಬಣದ ಪ್ರಧಾನ ಕಾರ್ಯದರ್ಶಿ ಹರಿಕೇಶ್ ಬಹದ್ದೂರ್ ಹೇಳಿದರು. ಹಳೆಯ ಜನತಾ ಪಕ್ಷ ಪುನರುಜ್ಜೀವನಕ್ಕೆ ಕರೆಯಲಾಗಿರುವ ಸೆಪ್ಟೆಂಬರ್ ೩೦ರ ಅಧಿವೇಶನ ನಡೆದೇ ನಡೆಯುತ್ತದೆಂದೂ ಲೋಕದಳ (ಎ) - ಜನತಾ ಪಕ್ಷ ವಿಲೀನವಾಗುವುದರ ಮುಂಚಿನ ಜನತಾ ರಾಷ್ಟ್ರೀಯ ಮಂಡಳಿ ಸಭೆಯನ್ನು ಸೆಪ್ಟೆಂಬರ್ ೨೯ ರಂದು ನಡೆಸಲಾಗುವುದೆಂದು ಹೆಗಡೆ ಬಣದವರು ಹೇಳಿದರು. ಲೋಕದಳ (ಎ) ಮತ್ತು ಜನತಾ ಪಕ್ಷ ವಿಲೀನ ಬೇಕೇ ಬೇಡವೇ ಎಂದು ಬೆಂಗಳೂರು ಸಮಾವೇಶದಲ್ಲಿ ನಿರ್ಧರಿಸಲಾಗುವುದೆಂದೂ ಹೆಗಡೆ ಹೇಳಿದರು. ಹೆಗಡೆ ಬಣದವರು ಸೆಪ್ಟೆಂಬರ್ ೩೦ರ ಸಮಾವೇಶ ಖಂಡಿತ ಎಂದರೆ, ಅಜಿತ್ ಸಿಂಗ್ ಬಣದವರು ಸೆಪ್ಟೆಂಬರ್ ೨೩ರ ರಾಷ್ಟ್ರೀಯ ಕಾರ್ಯನಿರ್ವಹಣ ಮಂಡಲಿಯ ಸಭೆ ಖಚಿತ ಎಂದರು.

ಈ ಗೊಂದಲದ ಸನ್ನಿವೇಶದಲ್ಲಿ ಜನವರಿ ೧೭, ೧೯೮೮ರಂದು ಮದ್ರಾಸ್‌ನಲ್ಲಿ ಜನತಾ, ಲೋಕದಳ (ಬಿ), ಜನಮೋರ್ಚಾ, ಕಾಂಗ್ರೆಸ್ (ಎಸ್), ಡಿ.ಎಂ.ಕೆ., ತೆಲುಗು ದೇಶಂ, ಅಸ್ಸಾಂ ಗಣಪರಿಷತ್, ಮಣಿಪುರ ಪೀಪಲ್ಸ್ ಪಾರ್ಟಿ, ಪೀಪಲ್ಸ್ ಪಾರ್ಟಿ ಆಫ್ ಅರುಣಾಚಾಲ ಪ್ರದೇಶ ಈ ಪಕ್ಷಗಳ ರಾಷ್ಟ್ರೀಯ ರಂಗ ಅಸ್ತಿತ್ವಕ್ಕೆ ಬಂದಿತು. ಈ ರಂಗದ ಸದಸ್ಯ ಪಕ್ಷಗಳು ತಮ್ಮ ಆಂತರಿಕ ವ್ಯವಹಾರದಿಂದ ರಂಗವನ್ನು ದೂರ ಇರಿಸಬೇಕೆಂದು ನಿರ್ಣಯ ಆಯಿತು. ಈ ಸಮಾವೇಶದಲ್ಲಿ ದೇವೀಲಾಲ್‌ರವರು ಲೋಕದಳ (ಬಿ) ತ್ಯಜಿಸಿ ಹೊಸ ಪಕ್ಷ ರಚಿಸುವಂತೆ ಹೆಚ್. ಎನ್. ಬಹುಗುಣರಿಗೆ ಸವಾಲು ಹಾಕಿದರು. ಜನತಾ ಸರ್ಕಾರಕ್ಕೆ ಗಂಡಾಂತರ ತಪ್ಪಿಸಲು ಬೆಂಗಳೂರಿನ ಸೆಪ್ಟೆಂಬರ್ ೩೦ರ ಸಮಾವೇಶ ಕೈಬಿಡಿ ಎಂದು ಜನತಾ ಕಾರ್ಯಾಧ್ಯಕ್ಷ ಅಜಿತ್‌ಸಿಂಗ್, ರಾಮಕೃಷ್ಣ ಹೆಗಡೆ, ಮಧು ದಂಡವತೆ ಅವರನ್ನು ಕೋರಿದರು. ಈ ಮಧ್ಯೆ ಬೆಂಗಳೂರು ಸಮಾವೇಶದಲ್ಲಿ ಜನತಾ ಬಲಾಬಲ ಪ್ರದರ್ಶನ ತಪ್ಪಿಸಬೇಕೆಂಬ ಪ್ರಯತ್ನಗಳು ಜಾರ್ಜ್ ಫರ್ನಾಂಡಿಸ್‌ರಿಂದ ನಡೆಯಿತು. ೧೮.೯.೮೮ ರಂದು ದೆಹಲಿಯಲ್ಲಿ ಚಂದ್ರಶೇಖರ್, ರಾಮಕೃಷ್ಣ ಹೆಗಡೆ ಮಾತುಕತೆ ನಡೆಯಿತು. ಆದರೆ ಯಾವುದೇ ಒಮ್ಮತ ಮೂಡಿಬರಲಿಲ್ಲ. ವಿರೋಧಪಕ್ಷಗಳು ವಿಲೀನವಾದಲ್ಲಿ ಅದಕ್ಕೆ ವಿ.ಪಿ. ಸಿಂಗ್ ಅಧ್ಯಕ್ಷರಾಗುವ ಸಾಧ್ಯತೆ ಇದೆ; ಆಗ ಪ್ರಧಾನಮಂತ್ರಿ ಹುದ್ದೆಗೆ ತಮ್ಮ ಹಕ್ಕು ಸ್ಥಾಪಿಸಲು ಆಗುವುದಿಲ್ಲ ಎಂಬ ಕಾರಣಕ್ಕಾಗಿ ಚಂದ್ರಶೇಖರ್ ವಿರೋಧ ಪಕ್ಷಗಳ ವಿಲೀನ ಹಾಗೂ ಸಮಾಜವಾದಿ ಜನತಾದಳ ರಚನೆಗೆ ನಿಧಾನಿಸುತ್ತಿದ್ದಾರೆ ಎಂಬ ಅಭಿಪ್ರಾಯ ಒಂದು ಕಡೆ ಕೇಳಿ ಬಂತು. ಉತ್ತರ ಪ್ರದೇಶ, ಬಿಹಾರಗಳಲ್ಲಿ ಲೋಕದಳ (ಎ) ಜನತಾದಲ್ಲಿ ವಿಲೀನವಾಗಿಲ್ಲ, ದೆಹಲಿ ಕಚೇರಿ ಹಾಗೇ ಇದೆ, ವಿರೋಧ ಪಕ್ಷಗಳು ಒಂದಾಗಿ ಸಮಾಜವಾದಿ ಜನತಾದಳ ಅಸ್ತಿತ್ವಕ್ಕೆ ಬಂದರೆ ತಮ್ಮ ಸ್ಥಾನಕ್ಕೆ ಕುತ್ತು ಬರುತ್ತದೆಂದು ಅಜಿತ್‌ಸಿಂಗ್ ಈ ರೀತಿ ಮಾಡುತ್ತಿದ್ದಾರೆಂಬ ಅಭಿಪ್ರಾಯ ಇನ್ನೊಂದೆಡೆ ಕೇಳಿ ಬಂತು.

ಅಜಿತ್‌ಸಿಂಗ್‌ರವರನ್ನು ಪಕ್ಷದಿಂದ ಹೊರ ಹಾಕಬೇಕೆಂಬುದು ಬೆಂಗಳೂರು ಸಮಾವೇಶದ ಉದ್ದೇಶ. ಈ ರೀತಿ ಅವರನ್ನು ಹೊರ ಹಾಕಿದರೆ ಅವರ ಬೆಂಬಲದಿಂದ ಹೆಗಡೆಯವರ ಮೇಲೆ ವಿರೋಧ ಸಾಧಿಸುತ್ತಿರುವ ದೇವೇಗೌಡರ ಗುಂಪು ಜನತಾಪಕ್ಷದಲ್ಲಿ ಉಳಿಯುತ್ತದೆಯೇ, ದೇವೇಗೌಡರ ಗುಂಪು ಹೊರ ಬಂದರೆ ರಾಜ್ಯದ ಜನತಾ ಸರ್ಕಾರಕ್ಕೆ ಅಪಾಯ ಇಲ್ಲವೇ ಎಂಬುದೂ ಇನ್ನೊಂದು ಅಭಿಪ್ರಾಯವಾಗಿತ್ತು. ದೇವೇಗೌಡರು ರಾಜ್ಯದ ಜನತಾ ಸರ್ಕಾರವನ್ನು ಬೀಳಿಸಿದರೆ ಲಿಂಗಾಯಿತರು ಅವರ ವಿರುದ್ಧ ತಿರುಗಿ ಬೀಳುತ್ತಾರೆ. ಅದಕ್ಕಾಗಿ ಅವರು ಈ ಸಾಹಸಕ್ಕೆ ಕೈ ಹಾಕಲಾರರು ಎಂಬುದು ಮತ್ತೊಂದು ಅಭಿಪ್ರಾಯವಾಗಿತ್ತು. ೨೨.೯.೮೮ರಂದು ದೆಹಲಿಯಲ್ಲಿ ಜನತಾ ರಾಷ್ಟ್ರೀಯ ಕಾರ್ಯನಿರ್ವಹಣ ಮಂಡಲಿ ಸಭೆ ಸೇರಿತು. ಹೆಗಡೆ - ಅಜಿತ್‌ಸಿಂಗ್ ಮುಖಾಮುಖಿ ಸಭೆ ರದ್ದಾಯಿತು. ಎರಡೂ ಬಣಗಳು ಪರಸ್ಪರ ವಿರೋಧಿ ಸಭೆಗಳನ್ನು ರದ್ದುಪಡಿಸಲು ನಿರ್ಧರಿಸಿದವು. ಜನತಾ ಬಿಕ್ಕಟ್ಟು ಪರಿಹಾರವಾಯಿತು. ಜನತಾ, ಜನಮೋರ್ಚಾ, ಲೋಕದಳ, ಕಾಂಗ್ರೆಸ್ (ಎಸ್) ಈ ನಾಲ್ಕು ಪಕ್ಷಗಳ ವಿಲೀನಕ್ಕೆ ವೇದಿಕೆ ಸಿದ್ಧಪಡಿಸಲು ವಿಧಿ ವಿಧಾನಗಳನ್ನು

ರೂಪಿಸಲು ವಿ. ಪಿ. ಸಿಂಗ್ ನಾಯಕತ್ವದಲ್ಲಿ ಚಾಲಕ ಸಮಿತಿಯನ್ನು ರಚಿಸಲು ತೀರ್ಮಾನಿಸಲಾಯಿತು. ಪ್ರೊ। ಮಧು ದಂಡವತೆ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚಂದ್ರಶೇಖರ್, ರಾಮಕೃಷ್ಣ ಹೆಗಡೆ, ಎಸ್.ಆರ್. ಬೊಮ್ಮಾಯಿ ಸೇರಿ ೧೦ ಸದಸ್ಯರು ೧೧ ಆಹ್ವಾನಿತರು ಭಾಗವಹಿಸಿದ್ದರು. ಈ ನಾಲ್ಕೂ ಪಕ್ಷಗಳು ೧೯೮೮ ಜುಲೈ ೨೮ ರಂದು ವಿಲೀನದ ಬಗ್ಗೆ ಸಿದ್ಧಪಡಿಸಿದ್ದ ಸಲಹೆಯನ್ನು ಅನುಮೋದಿಸುವ ನಿರ್ಣಯವನ್ನು ಚಂದ್ರಶೇಖರ್ ಮಂಡಿಸಿದರು. ಪ್ರೊ। ಮಧು ದಂಡವತೆ ಅನುಮೋದಿಸಿದರು. ಸಮಾವೇಶವನ್ನು ಜಯಪ್ರಕಾಶ್ ನಾರಾಯಣ್ ಜನ್ಮದಿನವಾದ ಅಕ್ಟೋಬರ್ ೧೧ ರಂದು ಬೆಂಗಳೂರಿನಲ್ಲಿ ಏರ್ಪಡಿಸಲು ತೀರ್ಮಾನಿಸಲಾಯಿತು. ಅಕ್ಟೋಬರ್ ೧೧ ರಂದು ಬೆಂಗಳೂರಿನಲ್ಲಿ ಸಮಾಜವಾದಿ ಜನತಾದಳ ಉದ್ಘಾಟನೆ ಆಗುವುದೆಂದೂ, ಪಕ್ಷದ ಬಿಕ್ಕಟ್ಟನ್ನು ಬಗೆಹರಿಸಿದ ಚಂದ್ರಶೇಖರ್ ಅಭಿನಂದನೀಯರು ಎಂದೂ ದೇವೀಲಾಲ್ ೨೩.೯.೮೮ ರಂದು ಚಂಡೀಘಡದಿಂದ ಹೇಳಿಕೆ ನೀಡಿದರು. ಎಸ್ ಜೆ. ಪಿ ರಚನೆ ವಿರೋಧ ಪಕ್ಷಗಳ ಏಕತೆಯಲ್ಲಿ ಭಾರೀ ಹೆಜ್ಜೆ ಎಂದು ಭುವನೇಶ್ವರದಿಂದ ಜನತಾ ಪಕ್ಷ ಮುಖಂಡ ಬಿಜು ಪಟ್ನಾಯಕ್ ೨೭.೯.೮೮ ರಂದು ಹೇಳಿದರು. ಸಮಾಜವಾದಿ ಜನತಾದಳ ರಚನೆಯ ಚಾಲಕ ಸಮಿತಿ ೨೯.೮.೮೮ರಂದು ರಚನೆ ಆಯಿತು. ಜನತಾ ಪಕ್ಷದಿಂದ ಅಜಿತ್‌ಸಿಂಗ್, ಚಂದ್ರಶೇಖರ್, ರಾಮಕೃಷ್ಣ ಹೆಗಡೆ, ಬಿಜು ಪಟ್ನಾಯಕ್, ಚಿಮನ್‌ಬಾಯ್ ಪಟೇಲ್, ರಾಮ್‌ವಿಲಾಸ್ ಪಾಸ್ವಾನ್ ಸಮಿತಿಯಲ್ಲಿದ್ದರೆ ಈ ಪಕ್ಷದ ಪ್ರೊ। ಮಧು ದಂಡವತೆ ವಿಶೇಷ ಆಹ್ವಾನಿತರಾಗಿದ್ದರು. ಲೋಕದಳದಿಂದ ದೇವಿಲಾಲ್, ಎಚ್.ಎನ್. ಬಹುಗುಣ, ಮುಲಾಯಂಸಿಂಗ್ ಯಾದವ್, ಶರದ್‌ಯಾದವ್ ಅವರುಗಳು ಸದಸ್ಯರಾಗಿದ್ದರು. ಜನಮೋರ್ಚಾದಿಂದ ವಿ.ಪಿ. ಸಿಂಗ್, ರಾಂಧನ್, ವಿ.ಪಿ. ಶುಕ್ಲಾ, ಮಫ್ತಿ ಮಹಮದ್ ಸಯೀದ್ ಅವರುಗಳು ಸದಸ್ಯರಾಗಿದ್ದರು. ಕಾಂಗ್ರೆಸ್ (ಎಸ್) ನಿಂದ ಕೆ. ಪಿ. ಉನ್ನಿ ಕೃಷ್ಣನ್, ಎಸ್. ಪಿ. ಸಿನ್ಹಾ, ಕಿಶೋರ ಚಂದ್ರದೇವ್ ಸದಸ್ಯರಾಗಿದ್ದರು. ಮೊದಲ ಸಭೆ ಅಕ್ಟೋಬರ್ ೧, ೧೯೮೮ರಂದು ನಡೆಯಿತು. ಈ ಚಾಲನ ಸಮಿತಿಯಲ್ಲಿ ಜನತಾ ಪಕ್ಷಕ್ಕೆ ಸೂಕ್ತ ಪ್ರಾತಿನಿಧ್ಯ ಇಲ್ಲ ಎಂದು ಅದರ ಉಪಾಧ್ಯಕ್ಷ ಇಂದೂಬಾಯಿ ಪಟೇಲ್ ಪಕ್ಷಕ್ಕೆ ರಾಜೀನಾಮೆ ನೀಡಿದರು. ಅಕ್ಟೋಬರ್ ೧, ೧೯೮೮ರಂದು ಸಭೆ ಸೇರಿದ್ದ ಚಾಲನ ಸಮಿತಿ ಪಕ್ಷದ ಹೆಸರು, ಧ್ವಜ, ಸಂಕೇತಗಳ ಬಗ್ಗೆ ಜುಲೈ ೨೬, ೧೯೮೮ರ ಸಭೆಯಲ್ಲಿ ತೆಗೆದುಕೊಂಡಿದ್ದ ನಿರ್ಧಾರಗಳನ್ನೇ ಅಂಗೀಕರಿಸಿತು. ವಿರೋಧ ಪಕ್ಷಗಳ ವಿಲೀನ ಅವಸರದಲ್ಲಿ ಸಲ್ಲದು- 'ಹೊಸ ಪಕ್ಷ ರಚಿಸುವ ಮುನ್ನ ಪಕ್ಷದ ನೀತಿ, ಕಾರ್ಯಕ್ರಮಗಳ ಚರ್ಚೆ ಅಗತ್ಯ' ಎಂದು ಹೆಚ್. ಡಿ ದೇವೇಗೌಡರು ಹೇಳಿದರು.

ಸಮಾವೇಶದ ಪೂರ್ವಸಿದ್ಧತೆ ಬಗ್ಗೆ ನಡೆದ ಸಭೆಗಳಿಗೆ ಅನಾರೋಗ್ಯದ ಕಾರಣ ನೀಡಿ ಅವರು ಹಾಜರಾಗಲಿಲ್ಲ. ೧.೧೦.೮೮ ರಂದು ಬೆಂಗಳೂರಿನಲ್ಲಿ ಮುಖ್ಯಮಂತ್ರಿಗಳ ಗೃಹ ಕಚೇರಿಯಲ್ಲಿ ಸಮಾವೇಶದ ಪೂರ್ವಸಿದ್ಧತಾ ಸಭೆ ನಡೆಯಿತು. ವಸತಿ ಸೌಕರ್ಯ ಸಮಿತಿಗೆ ಆರ್. ವಿ. ದೇಶಪಾಂಡೆ, ಊಟೋಪಚಾರ ಸಮಿತಿಗೆ ವಿ. ಎಸ್. ಕೃಷ್ಣಯ್ಯರ್, ಸಾರಿಗೆ ಸೌಕರ್ಯ ಸಮಿತಿಗೆ ಪಿ. ಜಿ. ಆರ್. ಸಿಂಧ್ಯಾ, ಸಿದ್ದರಾಮಯ್ಯ, ಟಿ. ಪ್ರಭಾಕರ್, ಪ್ರಚಾರ ಸಮಿತಿಗೆ ಬಾಪೂ ಹೆದ್ದೂರ್ ಶೆಟ್ಟಿ ಹಾಗೂ ವೈ.ಎಸ್.ವಿ. ದತ್ತ ಇವರುಗಳನ್ನು ನೇಮಿಸಲಾಯಿತು. ದಿನಾಂಕ ೪.೧೦.೮೮ ರಂದು ಸಮಾವೇಶದ ಅಂಗವಾಗಿ ಬೆಂಗಳೂರಿನಲ್ಲಿ ಜನತಾ ಪಕ್ಷದ ಕಾರ್ಯಕಾರಿ ಸಮಿತಿ ಸಭೆಯ ಬದಲು ಬಿ. ಎಲ್. ಶಂಕರ್ ಪಕ್ಷದ ಮುಖಂಡರ ಸಮಾವೇಶ ನಡೆಸಿದರು. ಜನತಾ ಪಕ್ಷದ ಶಾಸಕರು, ಸಂಸದರು, ಜಿಲ್ಲಾ ಪರಿಷತ್ ಅಧ್ಯಕ್ಷ, ಉಪಾಧ್ಯಕ್ಷರ ಸಭೆ ನಡೆಯಿತು. ಸಮಾವೇಶಕ್ಕೆ ಮೊದಲು ಈಗ ಪಕ್ಷದಿಂದ ಸಸ್ಪೆಂಡ್ ಆಗಿರತಕ್ಕ ಶಾಸಕರು ಹಾಗೂ ಪದಾಧಿಕಾರಿಗಳ ಸಸ್ಪೆನ್‌ಷನ್ ರದ್ದು ಮಾಡಬೇಕೆಂದು ಡಾ। ಹೆಚ್.ಎಲ್. ತಿಮ್ಮೇಗೌಡ ಸಭೆಯಲ್ಲಿ ಒತ್ತಾಯ ಮಾಡಿದರು. ದೇವೇಗೌಡರು ಈ ಸಭೆಯಲ್ಲೂ ಭಾಗವಹಿಸಲಿಲ್ಲ. ಇದೇ ದಿನ ದೆಹಲಿಯಲ್ಲಿ ನಡೆದ ಪೂರ್ವಭಾವಿ ಸಭೆಯಲ್ಲಿ ಹೊಸ ಪಕ್ಷದ ನೀತಿ, ಕಾರ್ಯಕ್ರಮಗಳನ್ನು ಸಿದ್ಧಪಡಿಸಲು ಒಂದು ಉಪಸಮಿತಿ ರಚಿಸಿ ಅದಕ್ಕೆ ಅಜಿತ್‌ಸಿಂಗ್‌ರವರನ್ನು ಅಧ್ಯಕ್ಷರನ್ನಾಗಿ ಮಾಡಲಾಯಿತು. ಹೆಚ್. ಎನ್. ಬಹುಗುಣ. ರಾಂ ಧನ್ ಈ ಸಭೆಗೆ ಗೈರುಹಾಜರಾಗಿದ್ದರು.

ಚಂದ್ರಶೇಖರ್ ಹಾಗೂ ಬಹುಗುಣ ಅವರನ್ನು ಹೊಸ ಪಕ್ಷದಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಬೇಕೆಂದು ವಿ. ಪಿ. ಸಿಂಗ್ ಪ್ರಯತ್ನಿಸುತ್ತಿದ್ದರು. ಈ ಸಮಯದಲ್ಲಿ ವಿಧಾನಸಭಾ ಅಧಿವೇಶನ ನಡೆಯುತ್ತಿತ್ತು. ಫೋನ್ ಕದ್ದಾಲಿಕೆ ಹಗರಣಕ್ಕೆ ಸಂಬಂಧಿಸಿದಂತೆ ಹಕ್ಕುಚ್ಯುತಿ ಮಂಡಿಸಿ, ಹೆಗಡೆ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡುವಂತೆ ವಿರೋಧ ಪಕ್ಷವಾದ ಕಾಂಗ್ರೆಸ್ ಭಾರೀ ಒತ್ತಾಯ ಮಾಡಿತು (೬.೧೦.೮೮) 'ಧೈರ್ಯ ಇದ್ದರೆ ನೀವೇ ಕ್ರಿಮಿನಲ್ ಮೊಕದ್ದಮೆ ಹೂಡಿ' ಎಂದು ಕಾಂಗ್ರೆ ನಾಯಕರಿಗೆ ಹೆಗಡೆ ಸವಾಲು ಹಾಕಿದರು. ಮೈಸೂರು ಲ್ಯಾಂಪ್ಸ್ ಕಾರ್ಖಾನೆ ಹಾಗೂ ಎನ್. ಜಿ. ಇ. ಎಫ್. ಅವ್ಯವಹಾರ ಪ್ರಕರಣದ ಬಗ್ಗೆಯೂ ಭಾರೀ ಚರ್ಚೆ ನಡೆದು ಕಾಂಗ್ರೆ ಶಾಸಕರು ಧರಣಿ ನಡೆಸಿದರು. ಒಟ್ಟಿನಲ್ಲಿ ರಾಮಕೃಷ್ಣ ಹೆಗಡೆಯವರ ವಿರುದ್ಧ ಕಾಂಗ್ರೆಸವರ ವ್ಯವಸ್ಥಿತ ಧಾಳಿ ನಡೆಯಿತು. ಹಕ್ಕುಚ್ಯುತಿ ಸೂಚನೆ ಚರ್ಚೆಯ ಕಾಲದಲ್ಲಿ ಹೆಗಡೆ ಹಾಜರಿರಲೇಬೇಕೆಂದು ನಿರ್ದೇಶನ ನೀಡುವಂತೆ ವಿರೋಧ ಪಕ್ಷದ ನಾಯಕರಾದ ವೀರಪ್ಪ

ಮೊಯಿಲಿಯವರು ಮಾಡಿದ ಪ್ರಸ್ತಾಪದ ಬಗ್ಗೆ ೨-೩ ಘಂಟೆಗಳ ಕಾಲ ಚರ್ಚೆ ನಡೆಯಿತು. ಆರು ಜನ ಶಾಸಕರ ಸಸ್ಪೆನ್‌ಷನ್‌ನ್ನು ಪಕ್ಷದ ಅಧ್ಯಕ್ಷ ಅಜಿತ್‌ಸಿಂಗ್ ರದ್ದುಪಡಿಸಿದ್ದರೆಂದು ದೆಹಲಿಯಿಂದ ೯.೧೦.೮೮ ರಂದು ಸುದ್ದಿ ಬಂದಿತು. ಶಾಸಕ ಭೈರೇಗೌಡರನ್ನು ಹೊರತು ಪಡಿಸಿ ಉಳಿದ ಶಾಸಕರ ಅಮಾನತ್ತು ಈ ಮೊದಲೇ ರದ್ದಾಗಿತ್ತೆಂದು ಎಂ.ಪಿ. ಪ್ರಕಾಶ್ ಹೇಳಿದರು. ಅಮಾನತ್ತು ರದ್ದಿನ ಗೊಂದಲಗಳು ನಿವಾರಣೆ ಆಗಲಿಲ್ಲ. ಶಿಸ್ತು ಕ್ರಮ ರದ್ದತಿಗೆ ಅಧ್ಯಕ್ಷ ಅಜಿತ್‌ಸಿಂಗ್‌ಗೆ ಅಧಿಕಾರವಿಲ್ಲ. ಕೇಂದ್ರ ಶಿಸ್ತು ಸಮಿತಿಗೆ ಮಾತ್ರ ಅಧಿಕಾರ ಇದೆ ಎಂದು ರಾಮಕೃಷ್ಣ ಹೆಗಡೆ ದೆಹಲಿಯಿಂದ ಹೇಳಿದರೆ, ಶಿಸ್ತು ಕ್ರಮದ ವಿಚಾರ ನಾಳೆ ವಿವರವಾಗಿ ಪರಿಶೀಲಿಸಲಾಗುವುದೆಂದು ಎಸ್.ಆರ್. ಬೊಮ್ಮಾಯಿ ಹೇಳಿದರು. ಈ ಗೊಂದಲ ಅಷ್ಟಕ್ಕೇ ನಿಂತಿತು. ಜನತಾ ಪಕ್ಷದವರು ಇದನ್ನು ದೊಡ್ಡದು ಮಾಡಲು ತಯಾರಿಲ್ಲ ಎಂದು ಬೊಮ್ಮಾಯಿ ಹೇಳಿಕೆ ನೀಡಿದರು. ೧೦.೧೦.೮೮ರಂದು ವಿಲೀನ ಸಮಾವೇಶಕ್ಕೆ ಮುನ್ನಾದಿನ, ಜನತಾ ರಾಷ್ಟ್ರೀಯ ಕಾರ್ಯಕಾರಿ ಸಮಿತಿ ಸಭೆ ನಡೆಯಲಿಲ್ಲ, ಅದೇ ರೀತಿ ನಾಯಕರು ಆಗಮಿಸದೇ ಇದ್ದ ಕಾರಣ ಚಾಲನಾ ಸಮಿತಿ ಸಭೆಯೂ ನಡೆಯಲಿಲ್ಲ. ೧೧.೧೦.೮೮ ರಂದು ಬೆಂಗಳೂರು ಅರಮನೆ ಮೈದಾನದಲ್ಲಿ ಪಕ್ಷಗಳ ವಿಲೀನ ಹಾಗೂ ಜನತಾ ದಳದ ಉದಯದ ಸಭೆ ನಡೆಯಿತು. ಎಸ್.ಆರ್. ಬೊಮ್ಮಾಯಿ ಅಧ್ಯಕ್ಷತೆ ವಹಿಸಿದ್ದರು. ಮೂರೇ ಪಕ್ಷಗಳ ವಿಲೀನವಾಗಿ, ಕಾಂಗ್ರೆಸ್ (ಎಸ್) ಹೊರಗುಳಿಯಿತು. ಸಮಾಜವಾದಿ ಎಂಬ ಶಬ್ದವನ್ನು ತೆಗೆದುಹಾಕಿ ಜನತಾದಳ ಎಂಬ ಹೆಸರನ್ನು ಉಳಿಸಿಕೊಳ್ಳಲಾಯಿತು. ಈ ಬಗ್ಗೆ ನಿರ್ಣಯವನ್ನು ಅಂಗೀಕರಿಸಿದ ತಕ್ಷಣ 'ಜನತಾದಳ ನಿಮ್ಮ ಮಗು ಅದನ್ನು ನಿಮ್ಮ ಕೈಗಿಡುತ್ತಿದ್ದೇವೆ' ಎಂದು ಸಮಾವೇಶದಲ್ಲಿ ಸೇರಿದ್ದ ಭಾರೀ ಜನ ಸ್ತೋಮವನ್ನುದ್ದೇಶಿಸಿ ಎಸ್. ಆರ್. ಬೊಮ್ಮಾಯಿ ಸಂಭ್ರಮದಿಂದ ಪ್ರಕಟಿಸಿದರು. ನೂತನ ಪಕ್ಷದ ನಿರ್ಣಯವನ್ನು ಅಂಗೀಕರಿಸಲಾಯಿತು. ಅಧಿಕಾರ ವಿಕೇಂದ್ರೀಕರಣ, ನಿರುದ್ಯೋಗ ನಿವಾರಣೆ, ಕೃಷಿ ಹಾಗೂ ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿ ಈ ನಿರ್ಣಯದ ಪ್ರಮುಖ ಅಂಶಗಳಾಗಿತ್ತು. ಜನತಾದಳ ಅಧಿಕಾರಕ್ಕೆ ಬಂದರೆ ಈ ಉದ್ದೇಶಗಳಿಗಾಗಿ ಬಜೆಟ್‌ನ ಶೇಕಡಾ ೫೦ ರಷ್ಟು ಹಣ ಮೀಸಲಾಗಿಡುವುದಾಗಿಯೂ ಘೋಷಿಸಲಾಯಿತು. ಆರ್ಥಿಕ ನಿರ್ಣಯಗಳನ್ನು ಚಂದ್ರಶೇಖರ್ ಮಂಡಿಸಿದರು. ನೂತನ ಪಕ್ಷ ಅಂಗೀಕರಿಸಿದ ನಿರ್ಣಯಗಳು, ಆರ್ಥಿಕ ನೀತಿಗಳು ಈ ಕೆಳಗಿನಂತಿವೆ.

೧. ಅಧಿಕಾರ ವಿಕೇಂದ್ರೀಕರಣ. ೨. ನಿರುದ್ಯೋಗ ನಿವಾರಣೆ. ೩. ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಗೆ ಆದ್ಯತೆ.

೪. ಮಂಡಲ್ ಆಯೋಗದ ಶಿಫಾರಸ್ಸು ಜಾರಿ. ಹರಿಜನ ಗಿರಿಜನ ಆದಿವಾಸಿಗಳು, ಅಲ್ಪಸಂಖ್ಯಾತರು ಮತ್ತು ದುರ್ಬಲ ವರ್ಗದವರ ರಕ್ಷಣೆ ಮತ್ತು ಅವರ ಏಳಿಗೆಗೆ ಆದ್ಯತೆ.

೫. ಮಕ್ಕಳಿಗೆ ಪೌಷ್ಟಿಕ ಆಹಾರ. ಪ್ರಾಥಮಿಕ ಶಿಕ್ಷಣ ಪ್ರಾಥಮಿಕ ಆರೋಗ್ಯಕ್ಕೆ ಒತ್ತು ಕೊಡುವುದು.

೬. ಕೃಷಿ ಆಧಾರಿತ ಭೂ ಸೇನೆ, ಸಾಕ್ಷರತೆಗೆ ಅಕ್ಷರ ಸೇನೆ ಸ್ಥಾಪನೆಯ ಮೂಲಕ ರಾಷ್ಟ್ರಕ್ಕೆ ಅಗತ್ಯವಾಗಿರುವ ಮಾನವ ಸಂಪನ್ಮೂಲವನ್ನು ಬಳಕೆ ಮಾಡಿಕೊಳ್ಳುವುದು. ಅದಕ್ಕಾಗಿ ಅಗತ್ಯವಾಗಿರುವ ಗ್ರಾಮೀಣ ಗುಡಿ ಕೈಗಾರಿಕೆಗಳನ್ನು ಸ್ಥಾಪಿಸಲು ಆಸಕ್ತಿ ವಹಿಸುವುದು.

೭. ದೇಶದ ಬೆನ್ನೆಲುಬಾದ ರೈತನ ಜೀವನ ಹಸನಾದ ಹೊರತು ದೇಶದ ಪ್ರಗತಿ ಸಾಧ್ಯವಿಲ್ಲ.

೮. ವರ್ಗರಹಿತ, ಜಾತಿರಹಿತ ಸಮಾಜ ಸೃಷ್ಟಿ. ಕೋಮುವಾದದ ವಿರುದ್ಧ ಹೋರಾಟ, ನವಸಮಾಜ ಸ್ಥಾಪನೆ.

ಹೆಸರು, ಧ್ವಜ ಚಿಹ್ನೆಯ ನಿರ್ಣಯವನ್ನು ದೇವಿಲಾಲ್ ಮಂಡಿಸಿದರು. ಮಫ್ತಿ ಮಹಮದ್ ಸಯೀದ್ ಅನುಮೋದಿಸಿದರು. ಹಸಿರು ಬಾವುಟದ ಮಧ್ಯೆ ಚಕ್ರದೊಳಗೆ ನೇಗಿಲು ಹೊತ್ತ ರೈತನ ಬಿಳಿ ಚಿಹ್ನೆ ಇರುತ್ತದೆಂದು ಪ್ರಕಟಿಸಲಾಯಿತು. ಚಂದ್ರಶೇಖರ್, ವಿ. ಪಿ. ಸಿಂಗ್ ಹಸ್ತಲಾಘವ ಮಾಡಿ 'ಭಿನ್ನಾಭಿಪ್ರಾಯ ಬಗೆಹರಿದಿದೆ, ಜನತೆಗೆ ದ್ರೋಹ ಮಾಡುವುದಿಲ್ಲ' ಎಂದರು. ದೇವೇಗೌಡರು ಸಮಾವೇಶದಲ್ಲಿ ಪಾಲ್ಗೊಂಡು ಈ ಬಗ್ಗೆ ಇದ್ದ ಶಂಕೆಯನ್ನು ನಿವಾರಿಸಿದರು. ಕಾಂಗ್ರೆಸ್ (ಎಸ್) ಜನತಾದಳದಲ್ಲಿ ವಿಲೀನವಾಗಲು ಮುಕ್ತ ಚರ್ಚೆಗೆ ಸಿದ್ಧವಾಗಿರುವುದಾಗಿ ಕೆ. ಪಿ. ಉನ್ನಿಕೃಷ್ಣನ್ ೧೨.೧೦.೮೮ ರಂದು ಹೇಳಿಕೆ ನೀಡಿದರು.

### ಜನತಾ ಪಕ್ಷ ವಿಭಜನೆಯ ಪರಿಣಾಮಗಳು

ಕರ್ನಾಟಕದಲ್ಲಿ ೧೯೮೫ರಲ್ಲಿ ಅತ್ಯಂತ ಬಹುಮತದಿಂದ ಆಯ್ಕೆಯಾದ ಜನತಾ ಪಕ್ಷದ ಸರ್ಕಾರವು, ದೇಶದ ಇತರ ಯಾವುದೇ ರಾಜ್ಯ ಸರ್ಕಾರಗಳಂತೆ ದೌರ್ಬಲ್ಯಗಳಿಗೆ ಒಳಗಾದರೂ, ತನ್ನೆಲ್ಲ ದೌರ್ಬಲ್ಯಗಳ ನಡುವೆಯೂ ಉತ್ತಮ ಆಡಳಿತವನ್ನು ನೀಡುತ್ತಾ ಅಧಿಕಾರವನ್ನು ನಡೆಸಿಕೊಂಡು ಬರುತ್ತಿತ್ತು. ಆದರೆ ೧೯೮೮ರ ಆಗಸ್ಟ್ ೮ ರಂದು, ಕರ್ನಾಟಕದ ಪ್ರಮುಖ ರಾಜಕಾರಣಿಗಳ ದೂರವಾಣಿ ಕರೆಗಳನ್ನು ಕದ್ದಾಲಿಸಲು ಪೊಲೀಸ್ ಗುಪ್ತ ದಳದವರಿಗೆ ಸರ್ಕಾರ ಆದೇಶ ನೀಡಿತ್ತು ಎಂಬ ವಿಚಾರ ಬಹಿರಂಗಕ್ಕೆ ಬಂದು ದೊಡ್ಡ ಕೋಲಾಹಲಕ್ಕೆ ನಾಂದಿಯಾಯಿತು. ಈ ದೂರವಾಣಿ ಕದ್ದಾಲಿಕೆಯ ಆರೋಪದ ನೈತಿಕ ಹೊಣೆಯನ್ನು ಹೊತ್ತು ರಾಮಕೃಷ್ಣ ಹೆಗಡೆಯವರು

ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಆಗಸ್ಟ್ ೧೩ರಂದು ಎಸ್. ಆರ್. ಬೊಮ್ಮಾಯಿಯವರು ಮುಖ್ಯಮಂತ್ರಿಗಳಾಗಿ ಪ್ರಮಾಣ ವಚನ ಸ್ವೀಕರಿಸಿದರು. ಈ ಮಧ್ಯೆ ಕಾಂಗ್ರೆಸ್ ಹಾಗೂ ಬಿ.ಜೆ.ಪಿ. ಪಕ್ಷಗಳಿಗೆ ಪರ್ಯಾಯವಾದ ವಿರೋಧ ಪಕ್ಷವೊಂದನ್ನು ರೂಪಿಸುವ ಪ್ರಯತ್ನಗಳು ನಡೆಯುತ್ತಿದ್ದವು. ಅದರ ಅಂಗವಾಗಿ ಸೆಪ್ಟೆಂಬರ್ ೧೬ರಂದು ಮದ್ರಾಸಿನಲ್ಲಿ ನಡೆದ ಬೃಹತ್ ರ್‍ಯಾಲಿಯಲ್ಲಿ ಏಳು ಪಕ್ಷಗಳ ರಾಷ್ಟ್ರೀಯ ರಂಗ ರಚನೆಯ ಬಗ್ಗೆ ವಿಧ್ಯುಕ್ತ ಪ್ರಕಟಣೆಯನ್ನು ಮಾಡಿ ಎಲ್ಲಾ ಪ್ರತಿಪಕ್ಷಗಳ ಏಕತೆಗೆ ಕರೆ ನೀಡಲಾಯಿತು. ನವೆಂಬರ್ ೧೧, ೧೯೮೮ ರಂದು ಬೆಂಗಳೂರಿನಲ್ಲಿ ನಡೆದ ಬೃಹತ್ ಸಮಾವೇಶದಲ್ಲಿ ಜನತಾದಳದ ಉದಯವೂ ಆಯಿತು. ದೇವೇಗೌಡರೂ ಈ ಸಮಾವೇಶದಲ್ಲಿ ಭಾಗವಹಿಸಿದ್ದರು. ಆದರೆ ಜನತಾದಳ ರಚನೆಯ ಚಾಲನಾ ಸಮಿತಿಗೆ ಮೊದಲೇ ರಾಜೀನಾಮೆ ನೀಡಿದ್ದ ಇಂದೂಬಾಯಿ ಪಟೇಲ್ ಇದ್ದಕ್ಕಿದ್ದ ಹಾಗೆ ಹೊಸ ವಿವಾದ ಒಂದನ್ನು ಹುಟ್ಟುಹಾಕಿದರು.

ಡಿಸೆಂಬರ್ ೩೦ ರಂದು ಜನತಾಪಕ್ಷದ ಹೆಸರು, ಚುನಾವಣಾ ಸಂಕೇತ, ಧ್ವಜ ಹಾಗೂ ಧ್ಯೇಯಗಳನ್ನು ಉಳಿಸಿಕೊಂಡು ಬರುವುದಾಗಿ ಪಕ್ಷದ ಹಿರಿಯ ಉಪಾಧ್ಯಕ್ಷ ಇಂದೂಭಾಯಿ ಪಟೇಲ್ ಸಂಸತ್ ಸದಸ್ಯರುಗಳಾದ ಶ್ರೀಮತಿ ಸರೋಜಿನಿ ಮಹಿಷಿ, ಸುಬ್ರಮಣಿಯನ್ ಸ್ವಾಮಿ, ಡಾ। ಷಹಾಬುದ್ದೀನ್ ಹಾಗೂ ಕರ್ನಾಟಕದ ಲೋಕೋಪಯೋಗಿ ಮತ್ತು ನೀರಾವರಿ ಸಚಿವ ಎಚ್.ಡಿ. ದೇವೇಗೌಡರು ಘೋಷಿಸಿದರು. ಉದ್ದೇಶಿತ ಜನತಾದಳದಲ್ಲಿ ಜನತಾ ಪಕ್ಷದ ವಿಲೀನವನ್ನು ಖಂಡತುಂಡವಾಗಿ ವಿರೋಧಿಸಿದರು. ಲೋಕನಾಯಕ ಜಯಪ್ರಕಾಶ ನಾರಾಯಣ್ ಅವರ ಮಾರ್ಗದರ್ಶನದಲ್ಲಿ ಜನತಾ ಪಕ್ಷ ಅಸ್ತಿತ್ವಕ್ಕೆ ಬಂದದ್ದು ಒಂದು ಐತಿಹಾಸಿಕ ಘಟನೆ. ಈ ಪಕ್ಷ ಕಾಂಗ್ರೆಸ್ ವಿರುದ್ಧ ಜನತೆಯ ಹೋರಾಟದ ಸಂಕೇತ. ಜಯಪ್ರಕಾಶ, ನಾರಾಯಣರ ಧ್ಯೇಯೋದ್ದೇಶ ಕಾಪಾಡಿಕೊಂಡು ಬರಲು ಜನತಾದಳದಿಂದ ಸಾಧ್ಯವಿಲ್ಲ ಅದರ ಅಧ್ಯಕ್ಷರು (ವಿ. ಪಿ. ಸಿಂಗ್) ಅಧಿಕಾರ ವ್ಯಾಮೋಹಿ, ಏಕ ಕಾಲದಲ್ಲಿ ಮೂರು ಹುದ್ದೆಗಳನ್ನು ಆಕ್ರಮಿಸಿಕೊಂಡಿದ್ದಾರೆ. ಸೈದ್ಧಾಂತಿಕ ತಾಕಲಾಟ, ಸರ್ವಾಧಿಕಾರಿ ಪ್ರವೃತ್ತಿ ಹಾಗೂ ರಾಜಕೀಯ ಅಸಮರ್ಥತೆಗೆ ಅವರು ಹೆಸರಾಗಿದ್ದಾರೆಂದು ಅವರುಗಳು ತಮ್ಮ ಹೇಳಿಕೆಯಲ್ಲಿ ತಿಳಿಸಿದರು. ಡಿಸೆಂಬರ್ ೩೧ರಂದು ದೇವೇಗೌಡರು ತಾವು ಜನತಾ ಪಕ್ಷದಲ್ಲೇ ಇರುವುದಾಗಿಯೂ, ಜನತಾ ಪಕ್ಷದ ಅಸ್ತಿತ್ವವನ್ನು ಉಳಿಸಿಕೊಳ್ಳುವುದಾಗಿಯೂ, ಮುಖ್ಯಮಂತ್ರಿಗಳು ಕೇಳಿದರೆ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡುವುದಾಗಿಯೂ ತಿಳಿಸಿದರು. ಸರ್ಕಾರಕ್ಕೆ ನಿಷ್ಠಾವಂತರಾದ ಶಾಸಕರು ಹಾಗೂ ವಿರೋಧಿ ಪಾಳಯವೆಂದು ಬಣ್ಣಿಸಲ್ಪಟ್ಟ ಜನತಾ ಪಕ್ಷ ಹಾಗೂ ದೇವೇಗೌಡರಿಗೆ ನಿಷ್ಠರಾದ ಬಣದವರ ಮಧ್ಯೆ ಪರ ವಿರೋಧಿ ಹೇಳಿಕೆಗಳ ಸಮರವೇ ನಡೆಯತೊಡಗಿತು.

ಮಾಜಿ ಸಚಿವರಾದ ಸಿ. ವೀರಣ್ಣ ಬಿ ಸೋಮಶೇಖರ್, ಎಂ. ರಘುಪತಿ ಇವರುಗಳು, ಜನತಾದಳದ ವಿವಾದಿತ ಶಾಸಕರಾದ ಎಸ್. ಡಿ. ಜಯರಾಂ, ಎಂ. ವರದೇಗೌಡ ಹಾಗೂ ಯುವ ಜನತಾ ಪಕ್ಷದ ಅಧ್ಯಕ್ಷರಾದ ಉಗ್ರಪ್ಪ ಇವರುಗಳು ಜನತಾ ಪಕ್ಷದ ಪರವಾದ ಹೇಳಿಕೆಗಳ ಸಮರದಲ್ಲಿ ಪಾಲ್ಗೊಂಡರು. ಬೆಂಗಳೂರಿನಲ್ಲಿರುವ ಜನತಾ ಪಕ್ಷದ ಕಾರ್ಯಾಲಯದ ವಿಚಾರವೂ ವಿವಾದದ ಸುಳಿಗೆ ಸಿಲುಕಿತು. ಜನತಾ ಪಕ್ಷದ ಕಾರ್ಯಕರ್ತರು ಈ ಭವನವನ್ನು ವಶಪಡಿಸಿಕೊಳ್ಳಲು ಯತ್ನಿಸುತ್ತಿದ್ದಾರೆಂಬ ವಾರ್ತೆ ಹರಡಿತು. ೨.೧೧.೮೯ ರಂದು ಮುಖ್ಯಮಂತ್ರಿಗಳಾದ ಬೊಮ್ಮಾಯಿಯವರು ಜನತಾ ಪಕ್ಷದ ಅಸ್ತಿತ್ವದ ಪ್ರಶ್ನೆ ಇಲ್ಲ ಹಾಗೂ ದೇವೇಗೌಡರ ರಾಜೀನಾಮೆಯನ್ನು ಕೇಳುವುದಿಲ್ಲವೆಂದು ಪ್ರತಿಕ್ರಿಯಿಸಿದರು. ಬೊಮ್ಮಾಯಿಯವರಿಗೆ ೧೧೦ ಶಾಸಕರ ಬೆಂಬಲ ಇದೆ ಎಂದು ಜನತಾ ದಳದ ಅಧ್ಯಕ್ಷ ಎಂ. ಪಿ. ಪ್ರಕಾಶ್ ಸ್ಪಷ್ಟಪಡಿಸಿದರು.

ಪತ್ರಿಕೆಗಳು ಜನತಾ ಪಕ್ಷದ ಪರವಾದ ಸಂಪಾದಕೀಯ ಹಾಗೂ ಸುದ್ದಿ ವಿಶ್ಲೇಷಣೆಗಳನ್ನು ಪ್ರಕಟಿಸಿದವು. ೩.೧.೮೯ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಎಸ್. ಜಿ. ಮೈಸೂರುಮಠ ಅವರು ''ಶಾಸ್ತ್ರೋಕ್ತವಾಗಿ ಇನ್ನೂ ಹುಟ್ಟಿ ಬರದ ಜನತಾದಳ, ರಾಜ್ಯದಲ್ಲಿ ಜನತಾ ಪಕ್ಷದ ಮೇಲೆ ಎಸಗಿರುವ ಹಾವಳಿ ಜನತಾ ಪಕ್ಷವನ್ನು ಹೋಳಾಗಿಸುವ ಮಟ್ಟಕ್ಕೆ ತಂದಿದೆ'' ಎಂದು ವ್ಯಾಖ್ಯಾನಿಸಿದರು. ೪೫ ಶಾಸಕರ ಜೊತೆ ಜನತಾ ಪಕ್ಷದಲ್ಲೇ ಉಳಿಯುವುದಾಗಿ ದೇವೇಗೌಡರು ಘೋಷಿಸಿದ್ದಾರೆಂದೂ ಅವರು ಬರೆದರು. ಹಠಾತ್ ಬೆಳವಣಿಗೆ ಒಂದರಲ್ಲಿ ೩.೧.೮೯ ರಂದು ಜನತಾ ಪಕ್ಷದ ಕಚೇರಿಯ ಮೇಲೆ ಜನತಾದಳದ ಹೆಸರು ಫಲಕ ಹಾಕಿ, ಧ್ವಜ ಏರಿಸಿ ಜನತಾದಳದ ಕಚೇರಿಯನ್ನು ವಿಧ್ಯುಕ್ತವಾಗಿ ಆರಂಭಿಸಲಾಯಿತು. ಈ ಮಧ್ಯೆ ಕಾಂಗ್ರೆಸ್ ನಾಯಕರು ಚುನಾವಣೆಗಳಿಗಾಗಿ ಒತ್ತಾಯಿಸತೊಡಗಿಸಿದರು. ೯.೧.೮೯ ರಂದು ಮುಖ್ಯ ಚುನಾವಣಾಧಿಕಾರಿಗಳು ಚುನಾವಣೆಗಳಿಗೆ ಸಿದ್ಧತೆ ಮಾಡಿಕೊಳ್ಳುವಂತೆ ರಾಜ್ಯಗಳಿಗೆ ಸೂಚನೆ ನೀಡಿದರು. ದೇವೇಗೌಡರನ್ನು ಜನತಾದಳದಲ್ಲೇ ಉಳಿಸಿಕೊಳ್ಳಲು ತೆರೆಮರೆಯ ಸಂಧಾನಗಳು ನಡೆಯತೊಡಗಿದವು. ಸಂಧಾನಕ್ಕೆ ಏನೂ ಉಳಿದಿಲ್ಲವೆಂದು ದಿನಾಂಕ ೯.೧.೮೯ ರಂದು ದೇವೇಗೌಡರು ಘೋಷಿಸಿದರು.

೧೦.೧.೮೯ ರಂದು ಈ ಬಗ್ಗೆ ಪ್ರಜಾವಾಣಿ ಪತ್ರಿಕೆ ''ಮತದಾರರಿಗೆ ಮೋಸ'' ಎಂಬ ಶಿರೋನಾಮೆಯಲ್ಲಿ ಸಂಪಾದಕೀಯ ವನ್ನು ಬರೆದು ''ಇತ್ತೀಚಿನ ವಿದ್ಯಮಾನಗಳಿಂದ ಜನತೆಗೆ ನಿರಾಶೆಯಾಗಿದೆ. ಜನತೆಯ ವಿಶ್ವಾಸವನ್ನು ರಾಮಕೃಷ್ಣ ಹೆಗಡೆಯವರು

ಉಳಿಸಿಕೊಳ್ಳಲಿಲ್ಲ. ಬೊಮ್ಮಾಯಿ ರಾಷ್ಟ್ರರಾಜಕಾರಣದ ಹಂಬಲ ಇಲ್ಲದ ವ್ಯಕ್ತಿ. ಅವರು ರಾಜ್ಯವನ್ನು ಅಭಿವೃದ್ಧಿ ಪಥದಲ್ಲಿ ಒಯ್ಯಬಹುದಾಗಿತ್ತು. ಆದರೆ ಅವರನ್ನು ಅವರಷ್ಟಕ್ಕೆ ಬಿಡುತ್ತಿಲ್ಲ. ಜನತಾದಳ ಕಾಂಗ್ರೆಸ್‌ಗೆ ಪರ್ಯಾಯ ಎಂಬುದು ಬರೀ ಭ್ರಮೆ'' ಎಂದು ವ್ಯಾಖ್ಯಾನಿಸಿತು. ೧೧.೧.೮೯ ರಂದು ಜನತಾದಳಕ್ಕೆ ಸೇರಲು ಜನವರಿ ೧೫ರವರೆಗೆ ಶಾಸಕರಿಗೆ ಗಡುವು ನೀಡಲಾಯಿತು. ಅದೇ ದಿನ ಹೊರಬಿದ್ದ ಜಿಲ್ಲಾ ಮತ್ತು ಮಂಡಲ ಪಂಚಾಯತ್ ಉಪ ಚುನಾವಣೆಗಳಲ್ಲಿ ಕಾಂಗ್ರೆಸ್‌ಗೆ ಗಣನೀಯ ಸಂಖ್ಯೆಯ ಸ್ಥಾನಗಳು ಬಂದಾಗ ''ಮುಂಬರುವ ಚುನಾವಣೆಗಳಲ್ಲಿ ಅರ್ಧಕ್ಕಿಂತ ಹೆಚ್ಚು ಸ್ಥಾನ ಕಾಂಗ್ರೆಸ್‌ಗೆ ಬರುವ ಸಂಭವ ಇದೆಯೆಂದು'' ಸಂಪಾದಕೀಯಗಳು ಪ್ರಕಟವಾದವು. (ಪ್ರವಾ. ೧೨.೧.೮೯)

ಬೊಮ್ಮಾಯಿ ಸರ್ಕಾರ ಹಾಗೂ ಜನತಾದಳಕ್ಕೆ ಬೆಂಬಲ ವ್ಯಕ್ತಪಡಿಸಿ ದಿನಾಂಕ ೧೫.೧.೮೯ರ ಹೊತ್ತಿಗೆ ೧೩೭ ಶಾಸಕರಲ್ಲಿ ೧೧೭ ಶಾಸಕರು ಸಹಿ ಹಾಕಿದ್ದರೆ ದೇವೇಗೌಡ, ಸಿದ್ದರಾಮಯ್ಯ, ಎಂ. ಚಂದ್ರಶೇಖರ್ ಹಾಗೂ ಕೃಷ್ಣ ಈ ನಾಲ್ವರು ಸಚಿವರು ಸಹಿ ಹಾಕಿಲ್ಲವೆಂದು ವರದಿಗಳು ಪ್ರಕಟವಾದವು. ಆರು ಮಂದಿ ಪಕ್ಷೇತರರೂ ಕೂಡಾ ಜನತಾದಳ ಸರ್ಕಾರಕ್ಕೆ ಬೆಂಬಲ ವ್ಯಕ್ತಪಡಿಸಿದ್ದಾರೆ ಎಂದು ವರದಿ ಆಯಿತು. ೧೬.೧.೮೯ರಂದು ದೇವೇಗೌಡರನ್ನು ಹೊರತುಪಡಿಸಿ ಉಳಿದ ಸಚಿವರು ಕೂಡಾ ಜನತಾದಳ ಸರ್ಕಾರಕ್ಕೆ ಬೆಂಬಲ ವ್ಯಕ್ತಪಡಿಸಿ ಸಹಿ ಹಾಕಿದರು. ದಳ ಸೇರದಿದ್ದರೆ ರಾಜೀನಾಮೆ ಕೊಡಿ ಎಂದು ಮುಖ್ಯಮಂತ್ರಿ ಬೊಮ್ಮಾಯಿಯವರು ದಿನಾಂಕ ೧೭.೧.೮೯ರಂದು ದೇವೇಗೌಡರಿಗೆ ಪತ್ರ ಬರೆದರು. ಜನತಾದಳ ಸೇರುವಂತೆ ದೇವೇಗೌಡರಿಗೆ ಚಂದ್ರಶೇಖರ್ ಸಲಹೆ ನೀಡಿದರೆಂದೂ ಅದಕ್ಕೆ ದೇವೇಗೌಡರು ನಕಾರ ವ್ಯಕ್ತಪಡಿಸಿದರೆಂದೂ ವರದಿಗಳು ಪ್ರಕಟವಾದವು. ೧೯.೧.೮೯ ರಂದು ದೇವೇಗೌಡರು ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಜನತಾ ಪಕ್ಷದ ಪ್ರತ್ಯೇಕ ಅಸ್ತಿತ್ವ ಉಳಿಸಲು ೧.೨.೮೯ರಂದು ದೆಹಲಿಯಲ್ಲಿ ರಾಷ್ಟ್ರೀಯ ಕಾರ್ಯಕಾರಿಣಿ ಸಭೆ ನಡೆಸಲಾಗುವುದೆಂದೂ ೨೨.೧.೮೯ರಂದು ಬೆಂಗಳೂರಿನ ನ್ಯಾಷನಲ್ ಕಾಲೇಜು ಮೈದಾನದಲ್ಲಿ ಜನತಾ ಸಮಾವೇಶವನ್ನು ನಡೆಸಲಾಗುವುದು ಎಂದೂ ತಿಳಿಸಿದರು. ೨೫.೧.೮೯ರಂದು ಎಸ್. ಆರ್. ಬೊಮ್ಮಾಯಿಯವರು ಜನತಾ ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಯಾಗುವುದರೊಂದಿಗೆ ಜನತಾ ಪಕ್ಷವು ವಿಧ್ಯುಕ್ತವಾಗಿ ಇಬ್ಭಾಗವಾದಂತಾಯಿತು. ದಿನಾಂಕ ೨೭.೧.೮೯ ರಂದು ಕಾಂಗ್ರೆಸ್ ನಾಯಕ ಹಾಗೂ ಅಧ್ಯಕ್ಷರಾದ ವೀರೇಂದ್ರ ಪಾಟೀಲರು ರಾಜ್ಯಪಾಲರನ್ನು ಭೇಟಿಮಾಡಿ ವಿಧಾನಸಭೆಯಲ್ಲಿ ಸರ್ಕಾರದ ಬಹುಮತ ಸಾಬೀತಿಗೆ ಗಡುವು ನಿಗದಿ ಮಾಡುವಂತೆ ರಾಜ್ಯಪಾಲರಲ್ಲಿ ವಿನಂತಿ ಮಾಡಿಕೊಂಡರು.

ಚುನಾವಣಾ ಆಯೋಗವು ೨೮.೨.೮೯ರಂದು ಚುನಾವಣಾ ಚಿಹ್ನೆಯ ಬಗ್ಗೆ ಇಂದೂಭಾಯಿ ಪಟೇಲರ ವಾದವನ್ನು ತಿರಸ್ಕರಿಸಿ ಅಜಿತ್‌ಸಿಂಗ್ ಬಣಕ್ಕೆ ನೇಗಿಲು ಹೊತ್ತ ರೈತ ಚಿಹ್ನೆಯನ್ನು ನೀಡಿತು. ಇದು ಜನತಾ ಪಕ್ಷಕ್ಕೆ ಭಾರೀ ಆಘಾತ ಉಂಟುಮಾಡಿತು. ಈ ಮಧ್ಯೆ ೨.೩.೮೯ರಂದು ಜನತಾದಳದ ಅಧ್ಯಕ್ಷರಾಗಿ ಬಿ. ರಾಚಯ್ಯ, ಮಹಾಪ್ರಧಾನ ಕಾರ್ಯದರ್ಶಿಯವರಾಗಿ ಜೀವರಾಜ ಆಳ್ವ ಆಯ್ಕೆಯಾದರು. ಚುನಾವಣಾ ಚಿಹ್ನೆಯ ವಿಚಾರದಲ್ಲಿ ಮಾತನಾಡಿದ ದೇವೇಗೌಡರು ದಳದ ನಾಯಕರ ಇಬ್ಬಗೆ ನೀತಿಯನ್ನು ಖಂಡಿಸಿ ''ಚುನಾವಣಾ ಆಯೋಗದ ಎದುರಿಗೆ ತಮ್ಮದೇ ನಿಜವಾದ ಜನತಾಪಕ್ಷ ಎಂದು ಹೇಳುತ್ತಾರೆ. ಹೊರಗೆ ರಾಷ್ಟ್ರೀಯ ರಂಗ ಕಟ್ಟುತ್ತೇವೆಂದು ಅಬ್ಬರಿಸುತ್ತಾರೆ. ಆದರೆ ಚುನಾವಣಾ ಚಿಹ್ನೆಯ ವಿಚಾರದಲ್ಲಿ ತಾವು ನ್ಯಾಯಾಲಯಕ್ಕೆ ಹೋಗುವುದಿಲ್ಲ''ವೆಂದು ಹೇಳಿದರು. ಶಿವಮೊಗ್ಗದಲ್ಲಿ ೪.೩.೮೯ ರಂದು ಬೃಹತ್ ರ್‍ಯಾಲಿಯನ್ನು ಉದ್ದೇಶಿಸಿ ಮಾತನಾಡುತ್ತಾ'' ತನ್ನ ತಪ್ಪಿನಿಂದಲೇ ಬೊಮ್ಮಾಯಿ ಸರ್ಕಾರ ಪದಚ್ಯುತಿ ಆಗುತ್ತದೆ. ಆದರೆ ತಾವು ಯಾವುದೇ ಕಾರಣದಿಂದ ಜನತಾಪಕ್ಷದ ಸರ್ಕಾರವನ್ನು ಕೆಳಗಿಳಿಸುವುದಿಲ್ಲ'' ಎಂದರು. ರಾಜಾಜಿನಗರದ ಕಾರ್ಯಕರ್ತರ ಸಭೆಯಲ್ಲಿ ೯.೩.೮೯ ರಂದು ಮಾತನಾಡಿದ ಅವರು ತಾವು ವಿರೋಧ ಪಕ್ಷದಲ್ಲಿ ಕೂರಲೂ ಸಿದ್ಧ ಎಂದರು. ಈಗಾಗಲೇ ತಾವು ೧೮ ಜಿಲ್ಲೆಗಳ ಕಾರ್ಯಕರ್ತರ ಸಭೆಯಲ್ಲಿ ಪಾಲ್ಗೊಂಡಿದ್ದು, ಎಲ್ಲ ೨೨೪ ವಿಧಾನಸಭಾ ಕ್ಷೇತ್ರಗಳಿಗೂ ಭೇಟಿ ನೀಡುವುದಾಗಿ ತಿಳಿಸಿದರು. ಮಾಜಿ ಸಚಿವ ಬಿ.ಎಲ್. ಶಂಕರ್ ಈ ಸಭೆಯಲ್ಲಿ ಭಾಗವಹಿಸಿದ್ದರು.

ಮಾರ್ಚ್ ೧೩ರಂದು ಬೊಮ್ಮಾಯಿ ಸರ್ಕಾರದ ಸಂಪುಟ ವಿಸ್ತರಣೆ ಆಯಿತು. ೧೭ರಿಂದ ವಿಧಾನಸಭಾ ಅಧಿವೇಶನ ಸೇರಿ ಮಾರ್ಚ್ ೩೧ಕ್ಕೆ ಮುಗಿಯಿತು. ಕೆಲವು ಅನಿರೀಕ್ಷಿತ ಘಟನೆಗಳು ನಡೆದು ವಿಧಾನ ಪರಿಷತ್ತಿನಲ್ಲಿ ೧೦ ಜನ ಸದಸ್ಯರನ್ನು ಒಂದು ದಿನ ಸಸ್ಪೆಂಡ್ ಮಾಡಲಾಗಿತ್ತು. ೨೫.೩.೮೯ ರಂದು ಚನ್ನರಾಯಪಟ್ಟಣದಲ್ಲಿ ಜನತಾ ಕಾರ್ಯಕರ್ತರು ಮನೆಗೊಂದು ತೆಂಗಿನ ಕಾಯಿ ಸಂಗ್ರಹಿಸಿ ಮಾರಾಟ ಮಾಡಿ ಬಂದ ಹಣದಿಂದ ಮೂರು ಲಕ್ಷ ರೂ. ಸಂಗ್ರಹಿಸಿ ಗಂಗಾವಾಹಿನಿ ಎಂಬ ಪ್ರಚಾರ ವಾಹನ ಕೊಂಡುಕೊಳ್ಳಲು ಮೂರು ಲಕ್ಷದ ಚೆಕ್ಕನ್ನು ದೇವೇಗೌಡರಿಗೆ ನೀಡಿದರು. ಏಪ್ರಿಲ್ ೧೦ ರಿಂದ ಕರ್ನಾಟಕ ರಾಜ್ಯ ರೈತಸಂಘ ಚಳವಳಿ ಆರಂಭಿಸಿತು. ಚಳವಳಿ ಕೈಬಿಡಲು ಬೊಮ್ಮಾಯಿ ಮನವಿ ಮಾಡಿದರು. ೧೨ರಂದು ಚಳವಳಿಯನ್ನು ಹಿಂತೆಗೆದುಕೊಳ್ಳಲಾಯಿತು. ಮತ್ತೆ

ಏಪ್ರಿಲ್ ೧೫ ರಂದು ಸಂಪುಟ ವಿಸ್ತರಣೆಯಾಗಿ ೧೩ ಮಂದಿ ಸಚಿವರನ್ನು ಸೇರ್ಪಡೆ ಮಾಡಿಕೊಳ್ಳಲಾಯಿತು. ಜನತಾದಳದ ಶಾಸಕರ ಸಂಖ್ಯೆ ೧೧೧ ಹಾಗೂ ಸಹಸದಸ್ಯರು ೭ ಜನ ಎಂಬುದಾಗಿ ಮುಖ್ಯಮಂತ್ರಿಗಳು ಹೇಳಿದರು.

ಜನತಾದಳದಲ್ಲಿ ಆಂತರಿಕ ಅತೃಪ್ತಿ ಉಂಟಾಗಿ ೨೦ ಜನ ಶಾಸಕರು ೧೯.೪.೮೯ ರಂದು ಬೆಂಬಲ ಹಿಂತೆಗೆದುಕೊಂಡರು. ೨೧.೪.೮೯ರಂದು ರಾತ್ರಿ ಕೇಂದ್ರ ರಾಜ್ಯ ವಿಧಾನಸಭೆಯನ್ನು ವಿಸರ್ಜಿಸಿ ರಾಷ್ಟ್ರಪತಿ ಆಡಳಿತವನ್ನು ಜಾರಿಗೆ ತಂದಿತು. ಜನತಾದಳವು ಜನತಾ ಪಕ್ಷದ ಬೆಂಬಲ ಕೇಳಿದ್ದರೆ ಕೊಡಬಹುದಾಗಿತ್ತು. ನಮ್ಮಲ್ಲಿ ೨೭ ಜನ ಶಾಸಕರಿದ್ದರು. ಆದರೆ ದಳ ಬೆಂಬಲ ಕೇಳಲಿಲ್ಲ ಎಂದು ೨೩.೪.೮೯ರಂದು ಜನತಾ ಪಕ್ಷದ ಅಧ್ಯಕ್ಷ ಇಂದೂಭಾಯಿ ಪಟೇಲ್ ಹೇಳಿದರು. ಕಾಂಗ್ರೆ-ದಳ ಎದುರಿಸಲು ಪಕ್ಷಕ್ಕೆ ವಾಪಸ್ಸು ಬನ್ನಿ ಎಂದ ಜನತಾ ಪಕ್ಷದ ನಿಷ್ಠ ಶಾಸಕರಿಗೆ ದೇವೇಗೌಡರು ೨೪.೪.೮೯ರಂದು ಕರೆ ನೀಡಿದರು. ಜನತಾದಳ ಅಸ್ತಿತ್ವದಲ್ಲೇ ಇಲ್ಲ ಎಂದು ಅವರು ೨೭ ರಂದು ರಾಷ್ಟ್ರಪತಿ ಆಡಳಿತ ಹೇರಿಕೆ ವಿರುದ್ಧ ಕರೆದಿರುವ ಬಂದ್‌ಗೆ ತಮ್ಮ ಸಹಕಾರ ಇಲ್ಲ ಎಂದರು. ಈ ಮಧ್ಯೆ ಜನತಾ ಪಕ್ಷ ಹಾಗೂ ಬಹುಜನ ಸಮಾಜ ಪಕ್ಷಗಳು ಸೇರಿ, ಪರಿವರ್ತನಾಶೀಲ ಮೋರ್ಚಾ ರಚಿಸಿಕೊಂಡು ರಾಜ್ಯ ವಿಧಾನಸಭೆಯ ಎಲ್ಲ ಸ್ಥಾನಗಳಿಗೂ ಸ್ಪರ್ಧಿಸಲಾಗುವುದೆಂದು ದೇವೇಗೌಡರು ಮೈಸೂರಿನ ರ್‍ಯಾಲಿಯಲ್ಲಿ ೩೦.೯.೮೯ ರಂದು ಹೇಳಿದರು.

೨.೧೦.೮೯ ರಂದು ಪ್ರಜಾವಾಣಿಯು ಸಂಪಾದಕೀಯವನ್ನು ಬರೆದು ಇನ್ನು ಮೂರು ತಿಂಗಳ ಒಳಗಾಗಿ ಲೋಕಸಭೆ ಹಾಗೂ ಹಲವಾರು ವಿಧಾನಸಭೆಗಳಿಗೆ ಚುನಾವಣೆ ನಡೆಯಲಿದೆ, ಜನತಾದಳದಲ್ಲಿ ಆಂತರಿಕ ವಿರಸ ಕೊನೆಗೊಂಡು ಏಕತೆಯ ಚಿತ್ರವನ್ನು ಜನತೆಯ ಮುಂದಿಡಲು ಸಾಧ್ಯವಾಗುತ್ತಿಲ್ಲ. ಇದು ಒಡೆದ ಮನೆಗೆ ತೇಪೆ ಹಾಕಿದಂತಿದೆ ಎಂದು ವ್ಯಾಖ್ಯಾನಿಸಿತು. ಈ ಸಮಯದಲ್ಲಿ ಅವಶ್ಯಕ ವಸ್ತುಗಳ ಬೆಲೆಯಲ್ಲಿ ಯದ್ವಾತದ್ವಾ ಏರಿಕೆಯಾಯಿತು. ಜನತಾದಳ, ಬಿಜೆಪಿ, ಕಾಂಗ್ರೆಸ್-ಐಗಳು ಚಳವಳಿ ನಡೆಸಿ ರಾಜ್ಯಪಾಲರಿಗೆ ಮನವಿ ಸಲ್ಲಿಸಿದವು. ಜನತಾ ಪಕ್ಷದ ರಾಷ್ಟ್ರೀಯ ಅಧ್ಯಕ್ಷ ಇಂದೂಭಾಯಿ ಪಟೇಲ್ ಹಾಗೂ ನಾಯಕ ಡಾ. ಸುಬ್ರಮಣಿಯನ್‌ಸ್ವಾಮಿ ೩.೧೦.೮೯ರಂದು ರಾಜ್ಯಪಾಲರನ್ನು ಭೇಟಿ ಮಾಡಿ ವಿಧಾನಸಭೆ ಚುನಾವಣೆ ದಿನಾಂಕ ವಿಳಂಬಕ್ಕೆ ಪ್ರತಿಭಟನೆ ಸಲ್ಲಿಸಿದರು. ಪತ್ರಿಕೆಗಳು ಸಂಪಾದಕೀಯವನ್ನು ಬರೆದು ಈಗಿನ ಪರಿಸ್ಥಿತಿಗೆ ಚುನಾವಣೆಯೊಂದೇ ಮದ್ದು ಎಂದು ಹೇಳಿದವು. ಅನೇಕ ಮುಖಂಡರುಗಳು ಜನತಾಪಕ್ಷಕ್ಕೆ ಸೇರ್ಪಡೆ ಆಗತೊಡಗಿದರು. ದೇವೇಗೌಡರು ರಾಜ್ಯದ ಅನೇಕ ಕಡೆ ರ್‍ಯಾಲಿಗಳನ್ನು ಉದ್ದೇಶಿಸಿ ಪ್ರಚಾರ ಮಾಡತೊಡಗಿದರು.

೧೨.೧೦.೮೯ ರಂದು ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತವನ್ನು ಆರು ತಿಂಗಳು ವಿಸ್ತರಿಸಲಾಯಿತು. ಪತ್ರಿಕೆಗಳು ಇದನ್ನು ಖಂಡಿಸಿ ಸಂಪಾದಕೀಯವನ್ನು ಬರೆದು ರಾಜ್ಯದಲ್ಲಿ ವಿಧಿಸಲಾಗಿದ್ದ ರಾಷ್ಟ್ರಪತಿ ಆಡಳಿತವನ್ನು ಕೊನೆಗೊಳಿಸುವ ಆಶಯವನ್ನು ಕೇಂದ್ರ ಸರ್ಕಾರ ಒಮ್ಮೆಯೂ ವ್ಯಕ್ತಪಡಿಸದೇ ಇರುವುದು ವಿಷಾದಕರ ಎಂದು ಟೀಕಿಸಿದವು. ಆದರೆ ಹಠಾತ್ತಾಗಿ ೧೨.೧೦.೮೯ರಂದು ಲೋಕಸಭೆಗೆ ನವೆಂಬರ್ ೨೨,೨೪ ರಂದು, ೧೮.೧೦.೮೯ ರಂದು ರಾಜ್ಯ ವಿಧಾನಸಭೆಗೂ ನವೆಂಬರ್ ೨೪ ರಂದು ಚುನಾವಣೆ ನಡೆಸುವುದಾಗಿ ಘೋಷಣೆ ಹೊರಟಿತು. ನಾಮಪತ್ರ ಸಲ್ಲಿಕೆ ಅಕ್ಟೋಬರ್ ೩ ರಿಂದ ಆರಂಭವಾಗಿ ೩೧ ಕ್ಕೆ ಮುಗಿಯುವುದಾಗಿಯೂ ನಾಮಪತ್ರ ಪರಿಶೀಲನೆ ನವೆಂಬರ್ ೨ ರಂದು, ವಾಪಸಾತಿಗೆ ನವೆಂಬರ್ ೪ ರಂದು ಕೊನೇ ದಿನ ಎಂದೂ ನಿಗದಿಯಾಯಿತು. ನವೆಂಬರ್ ೨೪ ರಂದು ಚುನಾವಣೆಗಳು ನಡೆದು ೨೬ಕ್ಕೆ ಮತಗಳ ಎಣಿಕೆ ಹಾಗೂ ಫಲಿತಾಂಶ ಘೋಷಣೆ ಎಂದು ನಿಗದಿಯಾಯಿತು.

ಇದ್ದಕ್ಕಿದ್ದ ಹಾಗೆ ಚುನಾವಣೆಗಳು ಘೋಷಣೆ ಆಗಿದೆ, ರಾಜಕೀಯ ರಂಗದಲ್ಲಿ ಅನಿಶ್ಚಿತ ಪರಿಸ್ಥಿತಿ ಇದೆ. ೨೮ ಲೋಕಸಭಾ ಸ್ಥಾನಗಳಿಗೂ ಅಭ್ಯರ್ಥಿಗಳನ್ನು ನಿಲ್ಲಿಸಲು ಜನತಾ ಪಕ್ಷಕ್ಕೆ ಸಾಧ್ಯವೇ ಎಂಬುದಾಗಿ ರಾಜಕೀಯ ವೀಕ್ಷಕರು ಅಭಿಪ್ರಾಯಪಟ್ಟರು. ಚುನಾವಣಾ ಆಯೋಗವು ೧೯.೧೦.೮೯ ರಂದು ಎಲ್ಲಾ ರಾಜಕೀಯ ಪಕ್ಷಗಳಿಗೆ ಏಳು ಅಂಶಗಳ ಆಚಾರ ಸಂಹಿತೆಯನ್ನು ಘೋಷಿಸಿತು.

ಕರ್ನಾಟಕದಲ್ಲಿ ಜನತಾದಳ ೧೯೮೯ರ ಚುನಾವಣೆಯಲ್ಲಿ ಸ್ಪರ್ಧಿಸಿತ್ತು. ರಾಷ್ಟ್ರ ಇತಿಹಾಸದಲ್ಲಿ ಜನತಾದಳ ಚುನಾವಣೆ ಎದುರಿಸದೆ ಸರ್ಕಾರವೊಂದನ್ನು ರಚಿಸಿದ ಕೀರ್ತಿಗೆ ಭಾಜನವಾಯಿತು. ಎಸ್. ಆರ್. ಬೊಮ್ಮಾಯಿ ಅವರ ನೇತೃತ್ವದ ಜನತಾ ಪಕ್ಷ ಸರ್ಕಾರ ರಾಜ್ಯದಲ್ಲಿ ಜನತಾದಳ ಸರ್ಕಾರವಾಗಿ ಮಾರ್ಪಟ್ಟಿತು. ಜನತಾದಳದ ಆಂತರಿಕ ಭಿನ್ನಾಭಿಪ್ರಾಯದಿಂದಾಗಿ ಕೆಲವು ಜನ ಶಾಸಕರು ಬೊಮ್ಮಾಯಿ ಅವರ ಸರ್ಕಾರಕ್ಕೆ ಬೆಂಬಲವನ್ನು ಹಿಂತೆಗೆದುಕೊಂಡರು. ಆಗ ತಾತ್ಕಾಲಿಕವಾಗಿ ಕರ್ನಾಟಕದಲ್ಲಿ ರಾಷ್ಟ್ರಪತಿ ಆಡಳಿತ ಹೇರಲ್ಪಟ್ಟಿತು. ರಾಷ್ಟ್ರಪತಿ ಆಡಳಿತದ ಅವಧಿಯಲ್ಲೇ ಕರ್ನಾಟಕದ ವಿಧಾನಸಭೆ ಹಾಗೂ ಲೋಕಸಭೆಗೆ ೧೯೮೯ರಲ್ಲಿ ಚುನಾವಣೆ ನಡೆಯಿತು. ಇದೊಂದು ಮಹತ್ವದ ಚುನಾವಣೆ. ವಿರೋಧಪಕ್ಷವಾದ ಜನತಾ ಪಕ್ಷ ಅರ್ಥಾತ್ ಜನತಾದಳ ಆಂತರಿಕ ಭಿನ್ನಾಭಿಪ್ರಾಯದಿಂದಾಗಿ ಅಧಿಕಾರ ಕಳೆದುಕೊಂಡಿದ್ದನ್ನು ವಿಶೇಷವಾಗಿ ಗಮನಿಸಬೇಕು.

೧೯೮೯ರ ಈ ಚುನಾವಣೆಯಲ್ಲಿ ಜನತಾ ಪಕ್ಷದ ಚುನಾವಣಾ ಪ್ರಣಾಳಿಕೆಯು ಪಕ್ಷದ ನೀತಿ. ಕಾರ್ಯಕ್ರಮಗಳು ಅಧ್ಯಕ್ಷರಾದ ವೈ. ರಾಮಚಂದ್ರ ಅವರ ಹೆಸರಿನಲ್ಲಿ ಪ್ರಕಟವಾಯಿತು. ೧೯೮೫ರಲ್ಲಿ ಕರ್ನಾಟಕದಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ ಜನತಾ ಪಕ್ಷ ಅನುಸರಿಸಿದ ನೀತಿಯನ್ನೇ ಇಲ್ಲೂ ಅನುಸರಿಸಲಾಗಿದೆ. ಅಂದರೆ ಸರ್ಕಾರ ಮಾಡಿರುವ ಸಾಧನೆಯ ಜೊತೆ ಮುಂದಿನ ಗುರಿಯನ್ನು ಹೇಳಲಾಗಿದೆ. ಕೇಂದ್ರದ ಕಾಂಗ್ರೆಸ್ ಸರ್ಕಾರ ರಾಜ್ಯ ಸರ್ಕಾರವನ್ನು ಬೀಳಿಸಲು ಷಡ್ಯಂತ್ರಗಳನ್ನು ರೂಪಿಸಿತೆಂದು ಈ ಪ್ರಣಾಳಿಕೆ ಹೇಳುತ್ತದೆ.

### ಪ್ರಣಾಳಿಕೆಯ ಮುಖ್ಯಾಂಶಗಳು

ಕಳೆದ ಐದು ವರ್ಷಗಳಲ್ಲಿ ಭೀಕರ ಬರಗಾಲವನ್ನು ಎದುರಿಸಲು ರಾಜ್ಯ ಸರ್ಕಾರ ೭೫೨ ಕೋಟಿ ರೂ. ವೆಚ್ಚ ಮಾಡಿದೆ. ಕೇಂದ್ರ ಸರ್ಕಾರ ಕೇವಲ ೨೦೧ ಕೋಟಿ ರೂ.ಗಳನ್ನು ಮಾತ್ರ ಇದಕ್ಕೆ ನೀಡಿದೆ.

೧. ಅಧಿಕಾರ ವಿಕೇಂದ್ರೀಕರಣದ ಹಿನ್ನೆಲೆಯಲ್ಲಿ ಜಿಲ್ಲಾ ಪಂಚಾಯತ್ ಹಾಗೂ ಮಂಡಲ್ ಪಂಚಾಯತ್‌ಗಳನ್ನು ಈಗಾಗಲೇ ರೂಪಿಸಲಾಗಿದೆ. ಶೇಕಡಾ ೬೦ ರಷ್ಟು ಸ್ಥಾನವನ್ನು ಮೀಸಲಾಗಿಡುವುದರ ಜೊತೆಗೆ ರಾಜ್ಯದ ಸಂಪನ್ಮೂಲದಲ್ಲಿ ಶೇ. ೫೦ ರಷ್ಟನ್ನು ಈ ಪಂಚಾಯಿತಿಗಳಿಗೆ ಕೊಡಲಾಗುವುದು.

೨. ಗ್ರಾಮಾಭಿವೃದ್ಧಿಗೆ ವಿಶೇಷ ಒತ್ತು ಕೊಟ್ಟ ಜನತಾ ಸರ್ಕಾರ ೧೫ ಲಕ್ಷಕ್ಕಿಂತ ಹೆಚ್ಚು ಕೃಷಿ ಉದ್ಯೋಗವನ್ನೊದಗಿಸಿದೆ. ಕುಡಿಯುವ ನೀರು, ಗ್ರಾಮೀಣ ವಿದ್ಯುದೀಕರಣ, ರೈತರ ಹೊಲ-ಗದ್ದೆಗಳಿಗೆ ವಿದ್ಯುದೀಕರಣ ಮೊದಲಾದವುಗಳಲ್ಲಿ ನಮ್ಮ ಸರ್ಕಾರ ಗಣನೀಯ ಸಾಧನೆ ಮಾಡಿದೆ.

೩. ಇನ್ನು ಮುಂದಿನ ಐದು ವರ್ಷಗಳಲ್ಲಿ ಶೇ. ೨೫ ರಷ್ಟು ಗ್ರಾಮೀಣ ವಸತಿ ಸೌಕರ್ಯಗಳನ್ನು ಹೆಚ್ಚಿಸಲಾಗುವುದು. ಅದೇ ರೀತಿ ಸುಲಭ ಶೌಚಾಲಯಗಳನ್ನೊದಗಿಸಲಾಗುವುದು.

೪. ರೈತರ ಸಹಕಾರಿ ಕೃಷಿ ಸಾಲಗಳ ಮೇಲಿನ ಬಡ್ಡಿಯನ್ನು ವಜಾ ಮಾಡಲಾಗಿದೆ. 'ಒಣಭೂಮಿಯ ಅಭಿವೃದ್ಧಿ', 'ಒಣ ಕೃಷಿ ಭೂಮಿ ಅಭಿವೃದ್ಧಿ' 'ಜಲಸಂರಕ್ಷಣೆ' ಮೊದಲಾದವುಗಳ ಬಗ್ಗೆ ವಿಶೇಷ ಕಾರ್ಯಕ್ರಮ ರೂಪಿಸಿದ ಕೀರ್ತಿ ನಮ್ಮದು. ಶೇ. ೭ ರಂತೆ ಸಹಕಾರಿ ಕೃಷಿ ಸಾಲ ರೈತರಿಗೆ ದೊರೆಯುತ್ತಿದೆ.

೫. ಮುಂದಿನ ದಿನಗಳಲ್ಲಿ ನಬಾರ್ಡ್‌ನ ವಿರೋಧವಿದ್ದರೂ ರೈತರಿಗೆ ಶೇ. ೭ ರಷ್ಟು ಬಡ್ಡಿ ಸವಲತ್ತನ್ನು ಮುಂದುವರೆಸಲಾಗುವುದು. ಭಾರಿ ನೀರಾವರಿಗೆ ೩೫೦ ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಲಾಗುವುದು. ಖಾಸಗಿ ನೀರಾವರಿ, ಲಘು ನೀರಾವರಿ ಹಾಗೂ ಖುಷ್ಕಿ ಭೂ ಅಭಿವೃದ್ಧಿ, ಕೆರೆಗಳ ಪುನರುಜ್ಜೀವನ ಹಾಗೂ ಅಂತರ್ಜಲ ಸಂರಕ್ಷಣೆಗೆ ಕಾರ್ಯಕ್ರಮ ರೂಪಿಸಲಾಗುವುದು. ನೀರಾವರಿ ಪಂಪ್ ಸೆಟ್ಟುಗಳನ್ನು ೧೦ ಲಕ್ಷಕ್ಕೆ ಏರಿಸಲಾಗುವುದು. ೨೦ ಲಕ್ಷ ರೈತ ಕಾರ್ಮಿಕರಿಗೆ ಶಾಶ್ವತ ಉದ್ಯೋಗ ಒದಗಿಸಲಾಗುವುದು. ೬೦ ವರ್ಷ ದಾಟಿದ ಭೂ ರಹಿತ ಕೃಷಿ ಕಾರ್ಮಿಕರಿಗೆ ಪ್ರತಿ ತಿಂಗಳು ನೂರು ರೂಪಾಯಿ ಕಿಸಾನ್ ಪೆನ್ಶನ್ ಹಾಗೂ ಆರೋಗ್ಯ ವಿಮೆಯನ್ನು ಕೊಡಲಾಗುವುದು. ಬಡರೈತರ ಬಗರ್‌ಹುಕುಂ ಸಾಗುವಳಿಯನ್ನು ಸಕ್ರಮ ಮಾಡಲಾಗುವುದು.

೬. ಕೈಗಾರಿಕಾ ಕ್ಷೇತ್ರದಲ್ಲಿ ನಮ್ಮ ಸರ್ಕಾರ ವಿಶೇಷವಾದ ಸಾಧನೆ ಮಾಡಿದ್ದು ೨೦ ಕೋಟಿ ರೂಪಾಯಿಗಳ ಸಹಾಯಧನ ನೀಡಿದೆ. ಕಳೆದ ೭೬ ವರ್ಷಗಳಲ್ಲಿ ೫೦,೦೦೦ ಘಟಕಗಳನ್ನು ಸ್ಥಾಪಿಸಿ ಉದ್ಯೋಗಾವಕಾಶ ಸೃಷ್ಟಿಸಿದೆ. ಖಾದಿ ಗ್ರಾಮೋದ್ಯೋಗ ಹಾಗೂ ಕೈಮಗ್ಗ ಅಭಿವೃದ್ಧಿಗೆ ವಿಶೇಷ ಒತ್ತು ನೀಡಿದೆ.

೭. ಪರಿಸರ ಮಾಲಿನ್ಯ ನಿಯಂತ್ರಣ ದೃಷ್ಟಿಯಿಂದ ಬೆಂಗಳೂರು ನಗರದಲ್ಲಿ ಇನ್ನು ಮುಂದೆ ಯಾವುದೇ ಕೈಗಾರಿಕೆ ಸ್ಥಾಪಿಸದಿರುವ ಭರವಸೆ ಕೊಡುತ್ತೇವೆ. ವಿದ್ಯಾವಂತ ನಿರುದ್ಯೋಗಿಗಳಿಗೆ ೨೫,೦೦೦, ತಾಂತ್ರಿಕ ಪದವೀಧರರಿಗೆ ೧ ಲಕ್ಷ ರೂಪಾಯಿಗಳನ್ನು ಸ್ವಯಂ ಉದ್ಯೋಗ ಪ್ರಾರಂಭಿಸಲು ಬಂಡವಾಳವಾಗಿ ಕೊಡಲಾಗುವುದು. ರಫ್ತಾಧಾರಿತ ಜವಳಿ ಉದ್ಯಮಕ್ಕೆ ಹೊಸರೂಪ ಕೊಡಲಾಗುವುದು. ಕೇಂದ್ರ ಸರ್ಕಾರದ ಜವಳಿ ನೀತಿಯಿಂದಾಗಿ ಸಂಕಷ್ಟಕ್ಕೊಳಗಾಗಿರುವ ಹತ್ತಿಗಿರಣಿಗಳ ಪುನಶ್ಚೇತನಕ್ಕೆ ವಿಶೇಷ ಪ್ರಯತ್ನ. ನೇಕಾರಿಕೆಯಲ್ಲಿ ತರಬೇತಿ ಪಡೆಯುವ ಯುವಕರಿಗೆ ೫೦೦ ರೂ.ಗಳ ಮಾಸಾಶನ.

೮. ಕಾರ್ಮಿಕ ನ್ಯಾಯಾಲಯಗಳನ್ನು ಸ್ಥಾಪಿಸಿ ವಿಳಂಬವಿಲ್ಲದೆ ಪರಿಹಾರ ಒದಗಿಸಲಾಗಿದೆ. ೩೬ ಕೈಗಾರಿಕೆಗಳಲ್ಲಿ ಕನಿಷ್ಠ ವೇತನವನ್ನು ನಿಗದಿ ಮಾಡಲಾಗಿದೆ. ಕನಿಷ್ಠ ವೇತನದೊಂದಿಗೆ ಬೋನಸ್ ದೊರೆಯುವಂತೆ ಈಗಾಗಲೇ ಮಾಡಲಾಗಿದೆ. ಎಲ್ಲಾ ಕೈಗಾರಿಕೆಗಳಲ್ಲೂ ಆಡಳಿತವರ್ಗದ ಸಹಭಾಗಿತ್ವಕ್ಕೆ ಶಾಸನಬದ್ಧ ಮಾನ್ಯತೆ ನೀಡಲಾಗಿದೆ.

೯. ಮುಂದಿನ ದಿನಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಶಾಸನಬದ್ಧ ರಕ್ಷಣೆ ಹಾಗೂ ಸೌಲಭ್ಯ ನೀಡಲಾಗುವುದು.

೧೦. ಜನತಾ ಸರ್ಕಾರದ ಅವಧಿಯಲ್ಲಿ ೨೪೬೫ ಹೊಸ ಸಹಕಾರಿ ಸಂಘಗಳು ಪ್ರಾರಂಭವಾಗಿದ್ದು ೭ ಲಕ್ಷ ಜನ ಸಹಕಾರಿ ಆಂದೋಲನಕ್ಕೆ ಬಂದಿದ್ದಾರೆ. ಈ ಅವಧಿಯಲ್ಲಿ ಸಹಕಾರಿ ಸಂಘಗಳ ಕಾರ್ಯನಿರತ ಬಂಡವಾಳ ರೂ. ೨ ೭೫೦ ಕೋಟಿ.

೧೧. ಸಹಕಾರಿ ಸಂಸ್ಥೆಗಳ ಕಾನೂನಿನಲ್ಲಿ ತಿದ್ದುಪಡಿ ಮಾಡುವ ಸಲುವಾಗಿ ಸಮಿತಿಯ ವರದಿಯನ್ನು ಜಾರಿಗೊಳಿಸಲಾಗುವುದು.

ಜನತಾ ಪಕ್ಷ ಸರ್ಕಾರ ಅಧಿಕಾರಕ್ಕೆ ಬಂದ ತಕ್ಷಣ ಹನ್ನೊಂದು ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಮಹಾನಗರ ಪಾಲಿಕೆ ಚುನಾವಣೆಗಳನ್ನು ನಡೆಸಿ ನಗರವಾಸಿಗಳಿಗೆ ಮೂಲಭೂತ ಹಕ್ಕು ಹಾಗೂ ಸೌಲಭ್ಯ ಕೊಡಿಸಿದೆ. ಕೊಳಚೆ ಪ್ರದೇಶದ ಜನರಿಗೆ ಕನಿಷ್ಠ ನಾಗರಿಕ ಸೌಲಭ್ಯ ಕೊಡಲು ಉತ್ತಮ ಕಾರ್ಯಕ್ರಮ ಕೈಗೊಳ್ಳಲಾಗಿದೆ.

೧೨. ರಾಜ್ಯದಲ್ಲಿರುವ ಎಲ್ಲ ಕೊಳಗೇರಿಗಳನ್ನು ಒಂದೇ ಆಡಳಿತದ ಪರಿಧಿಯೊಳಗೆ ತಂದು ಅಲ್ಲಿ ಭೂ ಒಡೆತನ, ಗೃಹ ನಿರ್ಮಾಣ, ಕನಿಷ್ಠ ಸೌಕರ್ಯಗಳನ್ನು ಕೊಡಲಾಗುವುದು. ನಗರ ಪ್ರದೇಶದವರಿಗೂ ಹಸಿರುಕಾರ್ಡ್ ಯೋಜನೆಯ ಪ್ರಯೋಜನವನ್ನು ವಿಸ್ತರಿಸಲಾಗುವುದು. ನಿರ್ಗತಿಕರಿಗೆ ವೃದ್ಧಾಶ್ರಮಗಳನ್ನು ಸ್ಥಾಪಿಸಲಾಗುವುದು.

೧೩. ಇಡಿ ದೇಶದಲ್ಲೇ ಪರಿಶಿಷ್ಟ ಜನಾಂಗಕ್ಕೆ ಶೇ. ೧೫ರಷ್ಟು ಮೀಸಲಾತಿ ದೊರೆಯುವ ಇಲಾಖೆಯಲ್ಲಿ ಮೀಸಲಾತಿಯ ಪ್ರಮಾಣವನ್ನು ೨೫ಕ್ಕೆ ಏರಿಸಲಾಗಿದೆ: ಸ್ಥಳೀಯ ಜಿಲ್ಲಾ ಹಾಗೂ ಮಂಡಲ್ ಪಂಚಾಯಿತಿಗಳಲ್ಲಿ ಶೇ. ೧೫ ಮೀಸಲಾತಿಯನ್ನು ಒದಗಿಸಿದ ಕಾರಣ ೧೯೪ ಪರಿಶಿಷ್ಟ ಜಾತಿಯ ಜಿಲ್ಲಾ ಪಂಚಾಯತ್ ಸದಸ್ಯರಿದ್ದಾರೆ. ೧೯ ಜನ ಅದರಲ್ಲಿ ಮಹಿಳೆಯರು. ಹಾಗೆಯೇ ೧೪,೪೩೭ ಪರಿಶಿಷ್ಟ ಜನಾಂಗದ ಪ್ರತಿನಿಧಿಗಳು ಮಂಡಲ್ ಪಂಚಾಯತ್ ಸದಸ್ಯರಾಗಿದ್ದಾರೆ. ಅದರಲ್ಲಿ ೪೪೪೯ ಜನ ಮಹಿಳೆಯರು.

೧೪. ಸಹಕಾರಿ ಮೀಸಲಾತಿ ತತ್ವವನ್ನು ಸಹಕಾರಿ ಸಂಸ್ಥೆಗಳಿಂದ ಹಣಕಾಸು ಸೌಲಭ್ಯ ಪಡೆಯುವ ಎಲ್ಲ ಸಂಸ್ಥೆಗಳಿಗೂ ವಿಸ್ತರಿಸಲಾಗುವುದು. ಪರಿಶಿಷ್ಟ ಜನಾಂಗದ ಮೇಲೆ ನಡೆಯುವ ದೌರ್ಜನ್ಯಗಳನ್ನು ಹತ್ತಿಕ್ಕಲಾಗುವುದು. ಹಾಗೆ ನೊಂದವರಿಗೆ ಒಂದು ತಿಂಗಳೊಳಗಾಗಿ ಪರಿಹಾರ ಕೊಡಲಾಗುವುದು. ಜಿಲ್ಲಾ ಪಂಚಾಯತ್ ಹಾಗೂ ಮಂಡಲ್ ಪಂಚಾಯತ್ ಮಸೂದೆಗಳಿಗೆ ತಿದ್ದುಪಡಿ ತಂದು ಅಲ್ಲಿನ ಅಧ್ಯಕ್ಷ, ಉಪಾಧ್ಯಕ್ಷ ಹಾಗೂ ಪ್ರಧಾನರ ಸ್ಥಾನಗಳನ್ನು 'ರೋಟೇಶನಲ್' ಆಧಾರದ ಮೇಲೆ ದೊರೆಯುವಂತೆ ಮಾಡಲಾಗುವುದು. ಪ್ರತಿಯೊಂದು ತಾಲ್ಲೂಕಿನಲ್ಲೂ ಒಂದು ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ವಸತಿ ಶಾಲೆ ಪ್ರಾರಂಭಿಸಲಾಗುವುದು.

೧೫. ಎಲ್ಲ ಸರ್ಕಾರಿ ಹಾಗೂ ಅನುದಾನ ಪಡೆಯುವ ಎಲ್ಲ ಸಂಸ್ಥೆಗಳಲ್ಲಿ ಶೇ. ೩೦ ರಷ್ಟು ಶಾಸನಬದ್ಧ ಮೀಸಲಾತಿ ಒದಗಿಸಲಾಗುವುದು. ಸರ್ಕಾರ ಕೊಡುವ ನಿವೇಶನ, ಮನೆ ಮತ್ತಿತರ ಸೌಲಭ್ಯಗಳಲ್ಲಿ ಗಂಡ ಹೆಂಡತಿ ಹೆಸರನ್ನು ಜಂಟಿಯಾಗಿ ನಮೂದಿಸಲಾಗುವುದು. ಪುರುಷರಂತೆ ಮಹಿಳೆಯರಿಗೂ ಆಸ್ತಿಯ ಹಕ್ಕಿರುವಂತೆ ನೋಡಿಕೊಳ್ಳಲಾಗುವುದು. ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ಸೌಲಭ್ಯ ಕೊಡಲು ಕಾನೂನು ತರಲಾಗುವುದು. ಮಹಿಳಾ ವಿಶ್ವವಿದ್ಯಾನಿಲಯ ಸ್ಥಾಪನೆ, ಆರ್ಥಿಕವಾಗಿ ಹಿಂದುಳಿದ ಮಹಿಳೆಯರಿಗೆ ಪದವಿಯ ತನಕ ಉಚಿತ ಶಿಕ್ಷಣ ನೊಂದ ಮಹಿಳೆಯರಿಗೆ ತಾತ್ಕಾಲಿಕ ಶಾಂತಿಪಾಲನ ಕೇಂದ್ರ, ಜಿಲ್ಲಾ ಕೇಂದ್ರಗಳಲ್ಲಿ ಮಹಿಳಾ ವಸತಿಗೃಹಗಳ ಪ್ರಾರಂಭ.

೧೬. ಚುನಾವಣೆಗಳಲ್ಲಿ ಗೆಲ್ಲಲಸಾಧ್ಯವಾದ ಅನೇಕ ಹಿಂದುಳಿದ ವರ್ಗಗಳಿಗೆ ನಾಮಕರಣದ ಮೂಲಕ ಪ್ರಾತಿನಿಧ್ಯ ಕೊಡಲಾಗಿದೆ. ಈಗಾಗಲೇ ಐದು ಸಾವಿರ ಜನ ಮಂಡಲ್ ಸದಸ್ಯರು ನಾಮಕರಣಗೊಂಡಿದ್ದಾರೆ. ಮುಂದಿನ ದಿನಗಳಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ಹಿಂದುಳಿದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟವರ್ಗ, ಮಹಿಳೆ ಹಾಗೂ ಅಲ್ಪಸಂಖ್ಯಾತ ಸಮುದಾಯಕ್ಕೆ ಶೇ. ೬೦ ರಷ್ಟು ಸ್ಥಾನವನ್ನು ಮೀಸಲಿಡಲಾಗುವುದು. ಸರ್ಕಾರದ ಸಮಿತಿಗಳಲ್ಲಿ ೧/೩ ಭಾಗದಷ್ಟು ಪ್ರಾತಿನಿಧ್ಯವನ್ನು ಹಿಂದುಳಿದವರಿಗೆ ಕಡ್ಡಾಯ ಮಾಡಲಾಗುವುದು. ಮಂಡಲ್ ಆಯೋಗವನ್ನು ಒಂದೇ ವರ್ಷದಲ್ಲಿ ಜಾರಿಗೆ ತರುವಂತೆ ಕೇಂದ್ರ ಸರ್ಕಾರಕ್ಕೆ ಒತ್ತಾಯ ಮಾಡಲಾಗುವುದು.

೧೭. ಇಡೀ ರಾಷ್ಟ್ರದಲ್ಲಿ ಪ್ರಥಮಬಾರಿಗೆ ಅಲ್ಪ ಸಂಖ್ಯಾತ ಆಯೋಗವನ್ನು ರಚಿಸಿದ ಕೀರ್ತಿ ಕರ್ನಾಟಕದ ಜನತಾ ಪಕ್ಷಕ್ಕೆ ಸೇರುತ್ತದೆ. ಅಲ್ಪ ಸಂಖ್ಯಾತರ ಭಾಷಾ ನಿರ್ದೇಶನಾಲಯ ಹಾಗೂ ಉರ್ದು ಅಕಾಡೆಮಿಯನ್ನು ಈಗಾಗಲೇ ಪ್ರಾರಂಭಿಸಲಾಗಿದೆ. ಸರ್ಕಾರದ ಸಮಿತಿಗಳಲ್ಲಿ ಅಲ್ಪ ಸಂಖ್ಯಾತ ಪ್ರತಿನಿಧಿಯಿರಬೇಕೆಂದು ಆದೇಶ ಹೊರಡಿಸಲಾಗಿದೆ. ಕೋಮುಗಲಭೆಗಳಲ್ಲಿ ನೊಂದವರಿಗೆ ಪರಿಹಾರ ಕೊಡಲಾಗುವುದು ಹಾಗೂ ವಕ್ಫ್ ಬೆಳವಣಿಗೆಗೆ ನೀಡುತ್ತಿರುವ ಅನುದಾನವನ್ನು ಹೆಚ್ಚಿಸಲಾಗುವುದು. ಇಡೀ ರಾಷ್ಟ್ರದಲ್ಲೇ ಸ್ಥಳೀಯ ಸಂಸ್ಥೆಗಳಲ್ಲಿನ ಚುನಾವಣೆಗಳಲ್ಲಿ ಮತದಾನದ ವಯೋಮಿತಿಯನ್ನು ೨೧ ರಿಂದ ೧೮ ಕ್ಕೆ ಇಳಿಸಿದ ಹೆಗ್ಗಳಿಕೆ ನಮ್ಮ ಸರ್ಕಾರದ್ದು. ಆ ಕಾರಣ ಸಾವಿರಾರು ಮಂಡಲ್ ಪ್ರಧಾನರು ಯುವಕರಾಗಿದ್ದಾರೆ. ವಿದ್ಯಾವಂತ ನಿರುದ್ಯೋಗಿಗಳಿಗೆ ಸುಲಭ ಸ್ವಂತ ಉದ್ಯಮ ಸ್ಥಾಪಿಸಲು ಹಾಗೂ ಕಡಿಮೆ ಬಡ್ಡಿ ದರಗಳಲ್ಲಿ ಸಾಲ ಸೌಲಭ್ಯ, ಸರ್ಕಾರಿ ಬಸ್ಸುಗಳಲ್ಲಿ ಉದ್ಯೋಗ ಸಂದರ್ಶನಾರ್ಥಿಗಳಿಗೆ ಉಚಿತ

ಪ್ರಯಾಣ ಸೌಲಭ್ಯ, ಉದ್ಯೋಗವನ್ನು ಮೂಲಭೂತ ಹಕ್ಕನ್ನಾಗಿ ಪರಿಗಣಿಸುವಂತೆ ಕೇಂದ್ರಕ್ಕೆ ಒತ್ತಾಯ, ನಿರುದ್ಯೋಗಿ ಪದವೀಧರರಿಗೆ ಯಾವುದೇ ಜಾಮೀನಿಲ್ಲದೆ ೨೫,೦೦೦ ರೂ.ಗಳವರೆಗೆ ಸುಲಭ ಬಡ್ಡಿದರದಲ್ಲಿ ಸಾಲ ಸೌಲಭ್ಯ.

೧೮. ಶಿಕ್ಷಣವನ್ನು ಸ್ವಾತಂತ್ರ್ಯ, ಸಮಾನತೆ ಹಾಗೂ ಸೋದರತ್ವದ ತತ್ವದ ಮೇಲೆ ರೂಪಿಸಲಾಗುವುದು. ಮೌಲ್ಯಾಧಾರಿತ ಶಿಕ್ಷಣಕ್ಕೆ ಹೆಚ್ಚಿನ ಒತ್ತು ಕೊಡಲಾಗುವುದು. ಅನೌಪಚಾರಿಕ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ. ಕರ್ನಾಟಕದಲ್ಲಿ ಕನ್ನಡವೇ ಆಡಳಿತ ಭಾಷೆಯಾಗಬೇಕೆಂದು ಸರ್ಕಾರ ನಿರ್ಧರಿಸಿದ್ದು, ಅದಕ್ಕೆ ಕಾವಲು ಸಮಿತಿ ಕೂಡಾ ರಚಿಸಿದೆ. ಕರ್ನಾಟಕ ಸಂಸ್ಕೃತಿಯನ್ನುಳಿಸಿ ಬೆಳೆಸಲು ನಮ್ಮ ಸರ್ಕಾರ ಕಂಕಣಬದ್ಧ. ಕರ್ನಾಟಕ ಜಾನಪದ ಕಲಾಕೇಂದ್ರವನ್ನು ಸ್ಥಾಪಿಸಲಾಗುವುದು. ಕರ್ನಾಟಕದಲ್ಲಿ ಹಿಂದೆ ಕಾಂಗ್ರೆಸ್ ಸರ್ಕಾರ ಬೆಳೆಸಿದ್ದ ಚಾಕು ಚೂರಿ ಹಾಗೂ ಗೂಂಡಾ ಸಂಸ್ಕೃತಿಯನ್ನು ದಮನ ಮಾಡಿ ಶಾಂತಿಯುತ ಪರಿಸರವನ್ನು ಸ್ಥಾಪಿಸಿದ ಕೀರ್ತಿ ಜನತಾ ಸರ್ಕಾರದ್ದು. ಭ್ರಷ್ಟಾಚಾರವನ್ನು ನಿಯಂತ್ರಿಸಲು ಲೋಕಾಯುಕ್ತ ಸಂಸ್ಥೆಯನ್ನು ರಚಿಸಲಾಗಿದೆ. ಇದರ ವ್ಯಾಪ್ತಿಗೆ ಮುಖ್ಯಮಂತ್ರಿ ಸಹ ಬರುತ್ತಾರೆ. ಅದನ್ನು ಮತ್ತಷ್ಟು ಬಿಗಿಗೊಳಿಸಲಾಗುವುದು. ಆಡಳಿತದಲ್ಲಿರುವವರಿಗೆ ನೀತಿ ಸಂಹಿತೆ ರೂಪಿಸಲಾಗುವುದು. ಅದರ ಕಾರ್ಯಾಚರಣೆಗೆ ಹಿರಿಯರ ಸಮಿತಿ ರಚಿಸಲಾಗುವುದು. ಮದ್ಯಪಾನ ಸಂಯಮ ನೀತಿಯನ್ನು ಜಾರಿಗೊಳಿಸಲಾಗುವುದು. ಹೆಂಡ ಮಾರಾಟವನ್ನು ಐದು ವರ್ಷಗಳಲ್ಲಿ ನಿಷೇಧಿಸಲಾಗುವುದು.

ನಿಮ್ಮ ಬೆಂಬಲವನ್ನು ಕೋರುವ ನಮ್ಮ ಕೊನೆಯ ಮಾತುಗಳು ಹೀಗಿವೆ

ಸ್ವಚ್ಛ ಶುದ್ಧ ಆಡಳಿತದ ಆಧಾರದ ಮೇಲೆ ಶೋಷಣೆ ರಹಿತವಾದ ಸ್ವಾತಂತ್ರ್ಯ, ಸಮಾನತೆ ಹಾಗೂ ಸಹೋದರ ಭಾವಗಳಿಂದ ಕೂಡಿದ ಸುಖೀ ಕರ್ನಾಟಕವನ್ನು ಕಟ್ಟಬೇಕೆಂಬ ಹಂಬಲ ನಮ್ಮದು. ಮಹಾತ್ಮ ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕಲ್ಪನೆಯನ್ನು ಜಯಪ್ರಕಾಶ ನಾರಾಯಣರ ಸಂಪೂರ್ಣ ಕ್ರಾಂತಿಯ ಕನಸನ್ನು ನನಸು ಮಾಡುವ ಹಂಬಲ ನಮ್ಮದು. ಇದಕ್ಕಾಗಿ ನಮಗೆ ಬೇಕು ನಿಮ್ಮ ಬೆಂಬಲ.

**ಚುನಾವಣಾ ಫಲಿತಾಂಶ**

ಜನತಾದಳವು ೧೯೮೯ರ ವಿಧಾನಸಭಾ ಚುನಾವಣೆಯಲ್ಲಿ ೨೦೮ ಸ್ಥಾನಗಳಿಗೆ ತನ್ನ ಅಭ್ಯರ್ಥಿಯನ್ನು ನಿಲ್ಲಿಸಿತ್ತು. ಜನತಾ ಪಕ್ಷದ ವಿಭಜನೆ ಹಾಗೂ ನಾಯಕರುಗಳ ಆಂತರಿಕ ಕಿತ್ತಾಟದಿಂದ ಜನತಾದಳ ಸಾಕಷ್ಟು ಹಿನ್ನಡೆಯನ್ನು ಅನುಭವಿಸಿತು. ವಿಶೇಷವಾಗಿ ೮೩ರಿಂದ ೮೮ ರವರೆಗೆ ಪಕ್ಷದ ಸರ್ಕಾರ ರಾಜ್ಯದಲ್ಲಿ ಜಾರಿಗೆ ತಂದ ಪ್ರಗತಿಪರ ಕಾರ್ಯಕ್ರಮಗಳಾವುವೂ ಜನತೆಯ ಮನಸ್ಸು ಗೆಲ್ಲುವಲ್ಲಿ ಸಮರ್ಥವಾಗಲಿಲ್ಲ. ೧೯೮೯ ನವೆಂಬರ್ ತಿಂಗಳಲ್ಲಿ ನಡೆದ ವಿಧಾನಸಭಾ ಹಾಗೂ ಲೋಕಸಭಾ ಚುನಾವಣೆಗಳು ಜನತಾದಳದ ಪಾಲಿಗೆ ಕಹಿ ಘಟನೆಯೆಂದೇ ಹೇಳಬೇಕು. ೨೦೮ ಅಭ್ಯರ್ಥಿಗಳ ಪೈಕಿ ಕೇವಲ ೨೪ ಜನ ಅಭ್ಯರ್ಥಿಗಳು ಜನತಾದಳದಿಂದ ಆಯ್ಕೆಯಾದರು. ಚಲಾವಣೆಯಾದ ಮತದಲ್ಲಿ ಶೇ. ೨೭.೩೦ ರಷ್ಟು ಮತ ಮಾತ್ರ ಜನತಾದಳಕ್ಕೆ ದೊರಕಿತು. ಅಂದರೆ ಜನತಾದಳವು ವಿಧಾನಸಭಾ ಚುನಾವಣೆಯಲ್ಲಿ ೪೯,೪೩,೭೬೯ ಮತಗಳನ್ನು ಮಾತ್ರ ಪಡೆದಿತ್ತು. ೨೧ ಜಿಲ್ಲೆಗಳಲ್ಲಿ ಗೆದ್ದ ಅಭ್ಯರ್ಥಿಗಳ ವಿವರ ಈ ರೀತಿ ಇದೆ:

ಬೀದರ್-೨, ರಾಯಚೂರು-೩, ಬಳ್ಳಾರಿ-೧, ಚಿತ್ರದುರ್ಗ-೧, ತುಮಕೂರು-೧, ಕೋಲಾರ-೧, ಬೆಂಗಳೂರು ನಗರ-೨, ಬೆಂಗಳೂರು ಗ್ರಾಮಾಂತರ-೨, ಶಿವಮೊಗ್ಗ-೧, ಉತ್ತರಕನ್ನಡ-೧, ಧಾರವಾಡ-೨, ಬೆಳಗಾಂ-೩ ಹಾಗೂ ಬಿಜಾಪುರ-೪ ಹೀಗೆ ಈ ಚುನಾವಣೆಯಲ್ಲಿ ಜನತಾದಳದಿಂದ ಆಯ್ಕೆಯಾಗಿದ್ದರು. ಗುಲ್ಬರ್ಗಾ, ಬೆಂಗಳೂರು ಜಿಲ್ಲೆ, ಮಂಡ್ಯ, ಮೈಸೂರು, ಕೊಡಗು, ಹಾಸನ, ದಕ್ಷಿಣ ಕನ್ನಡ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಜನತಾದಳ ತನ್ನ ಖಾತೆಯನ್ನೇ ತೆರೆಯಲಿಲ್ಲ.

೮೯ರ ವಿಧಾನಸಭಾ ಚುನಾವಣೆಯಲ್ಲಿ ಜನತಾದಳದಿಂದ ಗೆದ್ದ ಪ್ರಮುಖ ಅಭ್ಯರ್ಥಿಗಳೆಂದರೆ - ಬೀದರ್ ಜಿಲ್ಲೆಯ ಔರಾದ್ ಕ್ಷೇತ್ರದಿಂದ ಗುರುಪಾದಪ್ಪ ನಾಗಮಾರಪಲ್ಲಿ, ಹಾಗೆಯೇ ಅದೇ ಜಿಲ್ಲೆಯ ಬಸವಕಲ್ಯಾಣದಿಂದ ಬಸವರಾಜ ಪಾಟೀಲ ಅಟ್ಟೂರು, ರಾಯಚೂರಿನಿಂದ ಎಂ. ಎಸ್. ಪಾಟೀಲ್, ಸಿಂಧನೂರು ಕ್ಷೇತ್ರದಿಂದ ಬರಡೋಲಿ ಹಂಪನಗೌಡ, ಯಲಬುರ್ಗಾದಿಂದ ಬಸವರಾಜ ರಾಯರೆಡ್ಡಿ, ಬಳ್ಳಾರಿ ಜಿಲ್ಲೆಯ ಹೊಸಪೇಟೆ ಕ್ಷೇತ್ರದಿಂದ ಗುಜ್ಜಾಲ ಹನುಮಂತಪ್ಪ, ಚಿತ್ರದುರ್ಗ ಕ್ಷೇತ್ರದಿಂದ ಹೆಚ್. ಏಕಾಂತಯ್ಯ, ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ಕ್ಷೇತ್ರದಿಂದ ಜೆ. ಸಿ. ಮಾಧುಸ್ವಾಮಿ, ಕೋಲಾರ ಜಿಲ್ಲೆ ಬೇತಮಂಗಲ ಕ್ಷೇತ್ರದಿಂದ ಎಂ. ನಾರಾಯಣಸ್ವಾಮಿ, ಬೆಂಗಳೂರು ನಗರ ಜಿಲ್ಲೆಯ ಮಲ್ಲೇಶ್ವರಂನಿಂದ ಡಾ। ಜೀವರಾಜ ಆಳ್ವ, ಬಸವನಗುಡಿ ಕ್ಷೇತ್ರದಿಂದ ರಾಮಕೃಷ್ಣ ಹೆಗಡೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರದಿಂದ ಪಿ.ಜಿ.ಆರ್. ಸಿಂಧ್ಯಾ, ದೊಡ್ಡಬಳ್ಳಾಪುರದಿಂದ ಆರ್. ಎಲ್. ಜಾಲಪ್ಪ, ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿಯಿಂದ ಡಿ. ಬಿ. ಚಂದ್ರೇಗೌಡ, ಉತ್ತರಕನ್ನಡ ಜಿಲ್ಲೆ ಹಳಿಯಾಳದಿಂದ ಆರ್. ವಿ. ದೇಶಪಾಂಡೆ,

ಧಾರವಾಡ ಜಿಲ್ಲೆ ಕಲಘಟಗಿಯಿಂದ ಪಿ.ಸಿ. ಸಿದ್ದನಗೌಡರ್, ಹಿರೇಕೆರೂರಿನಿಂದ ಬಿ. ಎಚ್. ಬನ್ನಿಕೋಡ್, ಬೆಳಗಾಂ ಜಿಲ್ಲೆ ಬೈಲಹೊಂಗಲದಿಂದ ಶಿವಾನಂದ ಹೆಚ್. ಕೌಜಲಗಿ, ಅದೇ ಜಿಲ್ಲೆ ಹುಕ್ಕೇರಿ ಕ್ಷೇತ್ರದಿಂದ ಉಮೇಶ್ ಕತ್ತಿ, ನಿಪ್ಪಾಣಿಯಿಂದ ಸುಭಾಷ್ ಜೋಷಿ, ಬಿಜಾಪುರದ ಬೀಳಗಿ ಕ್ಷೇತ್ರದಿಂದ ಎಲಗುತ್ತಿ ಗಂಗಾಧರಪ್ಪ ಗುರುಸಿದ್ಧಪ್ಪ, ಬಾಗಲಕೋಟೆಯಿಂದ ಅಜಯಕುಮಾರ ಸರನಾಯಕ್, ಬಾದಾಮಿಯಿಂದ ಎಂ. ಕೆ. ಪಟ್ಟಣಶೆಟ್ಟಿ ಹಾಗೂ ಗುಳೇದಗುಡ್ಡದಿಂದ ಹೆಚ್. ವೈ. ಮೇಟಿ ಅವರು ಆಯ್ಕೆಯಾಗಿದ್ದರು.

ಒಟ್ಟಾರೆ ೮೯ರ ಈ ಚುನಾವಣೆಯಲ್ಲಿ ಕೇಂದ್ರದಲ್ಲಿ ಜನತಾದಳ ಸರ್ಕಾರ ಅಸ್ತಿತ್ವಕ್ಕೆ ಬಂತು. ಕೊಪ್ಪಳ ಲೋಕಸಭಾ ಕ್ಷೇತ್ರದಿಂದ ಬಸವರಾಜ ಪಾಟೀಲ್‌ಅನ್ವರಿಯವರು ಮಾತ್ರ ಆಯ್ಕೆಯಾಗಿದ್ದರು. ಅವರೊಬ್ಬರೆ ದಕ್ಷಿಣ ಭಾರತದಲ್ಲೇ ಜನತಾದಳದಿಂದ ಚುನಾಯಿತರಾದ ಲೋಕಸಭಾ ಸದಸ್ಯರಾಗಿದ್ದರು. ಕೇಂದ್ರದಲ್ಲಿ ವಿ. ಪಿ. ಸಿಂಗ್ ನೇತೃತ್ವದಲ್ಲಿ ಜನತಾದಳ ಸರ್ಕಾರ ಅಸ್ತಿತ್ವಕ್ಕೆ ಬಂತು. ಮೊದಲ ಬಾರಿಗೆ ಕಮ್ಯೂನಿಸ್ಟ್ ಹಾಗೂ ಬಿ.ಜೆ.ಪಿ.ಗಳ ನೆರವು ಪಡೆದು ಕಾಂಗ್ರೆಯೇತರ ಸರ್ಕಾರ ರಚಿಸಲು ವಿ.ಪಿ. ಸಿಂಗ್ ಸಮರ್ಥರಾದರು. ಆದರೆ ಜನತಾದಳ ಪಕ್ಷದ ಉದಯಕ್ಕೆ ಕಾರಣವಾದ ಕರ್ನಾಟಕದಲ್ಲೇ ಅದು ಅಧಿಕಾರ ಕಳೆದುಕೊಂಡದ್ದು ಇತಿಹಾಸದ ಕ್ರೂರ ವ್ಯಂಗ್ಯಗಳಲ್ಲಿ ಒಂದಾಗಿದೆ.

**೧೯೯೧ರ ಚುನಾವಣೆ**

೧೯೮೯ರ ಲೋಕಸಭಾ ಚುನಾವಣೆಯಲ್ಲಿ ಜನತಾದಳ ಕೇಂದ್ರದಲ್ಲಿ ಬಿಜೆಪಿ ಹಾಗೂ ಕಮ್ಯೂನಿಸ್ಟ್ ಪಕ್ಷದವರ ಸಹಾಯದ ಫಲವಾಗಿ ಸರ್ಕಾರ ಸ್ಥಾಪಿಸಿದುದು ಸರಿಯಷ್ಟೆ. ವಿ.ಪಿ. ಸಿಂಗ್ ಅವರು ೨.೧೨.೮೯ರಂದು ಜನತಾದಳದ ಈ ಸರ್ಕಾರದಲ್ಲಿ ಪ್ರಧಾನ ಮಂತ್ರಿಗಳಾಗಿದ್ದರು, ದೇವೀಲಾಲ್ ಉಪಪ್ರಧಾನಿಯಾದರು. ವಿ.ಪಿ. ಸಿಂಗ್ ಅವರು ೧೯೭೭ರಲ್ಲಿ ಜನತಾ ಪಕ್ಷ ನೇಮಿಸಿದ್ದ ಮಂಡಲ್ ಆಯೋಗದ ಅನುಷ್ಠಾನಕ್ಕೆ ೭.೮.೧೯೯೦ರಂದು ಕ್ರಮ ಕೈಗೊಂಡರು. ವಿಶೇಷವಾಗಿ ಉತ್ತರ ಭಾರತದಲ್ಲಿ ಇದರ ವಿರುದ್ಧ ವ್ಯಾಪಕ ಪ್ರತಿಭಟನೆ ಕಂಡುಬಂತು. ಆತ್ಮಾಹುತಿಗಳೂ ಕೂಡಾ ನಡೆದದ್ದುಂಟು. ಈ ಸಂದರ್ಭದಲ್ಲಿ ಬಿಜೆಪಿ ತನ್ನ ನೆಲೆಯನ್ನು ಕಂಡುಕೊಳ್ಳಲು 'ರಥಯಾತ್ರೆ' ಎಂಬ ವಿನೂತನ ಜನಾಂದೋಲನವನ್ನು ಕೈಗೊಂಡಿತು. ಸಮಾಜದ ಕೋಮು ಸಾಮರಸ್ಯಕ್ಕೆ ಧಕ್ಕೆ ಬರುತ್ತದೆಂಬ ಕಾರಣಕ್ಕಾಗಿ ಕೇಂದ್ರದ ಜನತಾದಳದ ಸರ್ಕಾರ ಈ ರಥಯಾತ್ರೆಯನ್ನು ವಿರೋಧಿಸಿತು. ಬಿಹಾರದ ಮುಖ್ಯಮಂತ್ರಿ, ಜನತಾದಳದ ಪ್ರಮುಖ ನಾಯಕರಾದ ಲಾಲೂ ಪ್ರಸಾದ್ ಯಾದವ್ ಅವರು ೨೩.೧೦.೧೯೯೦ ರಂದು ರಥಯಾತ್ರೆ ನೇತೃತ್ವ ವಹಿಸಿದ್ದನು ಬಿಜೆಪಿ ನಾಯಕರಾದ ಎಲ್.ಕೆ. ಆದ್ವಾನಿ ಅವರನ್ನು ಬಿಹಾರದ ಸಮಷ್ಟಿಪುರದಲ್ಲಿ ಬಂಧಿಸಿದರು. ರಥಯಾತ್ರೆ ತಟಸ್ಥವಾಯಿತು. ಈ ಹಿನ್ನೆಲೆಯಲ್ಲಿ ಬಿಜೆಪಿ- ವಿ.ಪಿ. ಸಿಂಗ್ ಅವರಿಗೆ ನೀಡಿದ್ದ ಬಾಹ್ಯ ಬೆಂಬಲವನ್ನು ಹಿಂತೆಗೆದುಕೊಂಡಿತು. ಆಗ ಜನತಾದಳ ಸರ್ಕಾರ ಕುಸಿಯಿತು.

ಜನತಾದಳದ ಒಂದು ಗುಂಪು ಚಂದ್ರಶೇಖರ್ ಅವರ ನೇತೃತ್ವದಲ್ಲಿ ಹೊರಬಂದು ಸಮಾಜವಾದಿ ಜನತಾ ಪಕ್ಷವಾಗಿ ರೂಪುಗೊಂಡಿತು. ಆಗ ವಿರೋಧ ಪಕ್ಷವಾಗಿದ್ದ ಕಾಂಗ್ರೆ ಚಂದ್ರಶೇಖರ್ ಅವರಿಗೆ ಬಾಹ್ಯ ಬೆಂಬಲ ನೀಡಿ ಸರ್ಕಾರ ರಚನೆಗೆ ಪ್ರೋತ್ಸಾಹ ಕೊಟ್ಟಿತು. ಚಂದ್ರಶೇಖರ್ ೧೦, ೧೯೯೦ ರಂದು ಪ್ರಧಾನಮಂತ್ರಿಗಳಾದರು. ವಿರೋಧ ಪಕ್ಷದ ನಾಯಕರೂ ಕಾಂಗ್ರೆಸ ಅಧ್ಯಕ್ಷರೂ ಆದ ರಾಜೀವ್ ಗಾಂಧಿ ಅವರ ನಿವಾಸದ ಎದುರು ಕೇಂದ್ರ ಸರ್ಕಾರದ ವತಿಯಿಂದ ಬೇಹುಗಾರಿಕೆ ನಡೆಯಿತೆಂಬ ಕಾರಣ ಮುಂದೊಡ್ಡಿ ಚಂದ್ರಶೇಖರ್ ಅವರಿಗೆ ನೀಡಿದ್ದ ಬೆಂಬಲವನ್ನು ಕಾಂಗ್ರೆ ಹಿಂತೆಗೆದುಕೊಂಡಿತು. ೬.೩.೧೯೯೧ ಚಂದ್ರಶೇಖರ್ ತಮ್ಮ ಸರ್ಕಾರದ ರಾಜೀನಾಮೆ ನೀಡಿದರು. ಈ ಕಾರಣಕ್ಕಾಗಿ ೧೨.೬.೧೯೯೧ರಂದು ಲೋಕಸಭೆಗೆ ಮಧ್ಯಕಾಲೀನ ಸಾರ್ವತ್ರಿಕ ಚುನಾವಣೆ ನಡೆಸಲು ನಿರ್ಧಾರವಾಯಿತು.

ಈ ಚುನಾವಣೆಯ ಸಂದರ್ಭದಲ್ಲಿ ಜನತಾದಳ ಪಕ್ಷವು ತೀರಾ ಗೊಂದಲದಲ್ಲಿತ್ತು. ರಾಜ್ಯದಲ್ಲಿ ಕಾಂಗ್ರೆ ಸರ್ಕಾರ ಅಸ್ತಿತ್ವದಲ್ಲಿತ್ತು. ಕೇಂದ್ರದಲ್ಲಿ ವಿ.ಪಿ.ಸಿಂಗ್ ನೇತೃತ್ವದ ಜನತಾದಳ ಸರ್ಕಾರ ಪತನವಾದ ಆಘಾತದಿಂದ ಸ್ಥಳೀಯ ಘಟಕ ಇನ್ನೂ ಚೇತರಿಸಿಕೊಂಡಿರಲಿಲ್ಲ. ಅಷ್ಟೇ ಅಲ್ಲ, ಮಂಡಲ್ ಆಯೋಗ ಅದರ ಹಿಂದು ಮುಂದಿನ ಘಟನಾವಳಿಗಳನ್ನು ಸಮರ್ಥಿಸಿಕೊಳ್ಳಲು ಕೂಡಾ ಅವರು ತುಂಬಾ ಕಷ್ಟಪಡುತ್ತಿದ್ದರು. ಕೇಂದ್ರ ಸರ್ಕಾರ ತೀವ್ರವಾದ ಆರ್ಥಿಕ ಬಿಕ್ಕಟ್ಟನ್ನು ಎದುರಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ಚುನಾವಣೆ ಘೋಷಣೆಯಾಯಿತು. ರಾಷ್ಟ್ರ ಚುನಾವಣಾ ಆಯುಕ್ತರನ್ನಾಗಿ ಟಿ. ಎನ್. ಶೇಷನ್ ಅವರನ್ನು ಚಂದ್ರಶೇಖರ್ ಸರ್ಕಾರವೇ ನೇಮಿಸಿತ್ತು. ರಾಷ್ಟ್ರದಲ್ಲಿ ಮೊದಲ ಬಾರಿಗೆ ಚುನಾವಣಾ ಪ್ರಕ್ರಿಯೆಯಲ್ಲಿ ವಿಶ್ವಾಸಾರ್ಹತೆ ಮೂಡಿಸಲು ಚುನಾವಣಾ ಆಯೋಗ ಕ್ರಾಂತಿಕಾರಕ ಕ್ರಮಗಳನ್ನು ಕೈಗೊಂಡಿತು.

ಎರಡು ಹಂತದಲ್ಲಿ ನಡೆದ ಈ ಚುನಾವಣೆಯ ಮೊದಲ ಭಾಗ ಮುಗಿದ ಮೇಲೆ ವಿರೋಧ ಪಕ್ಷದ ನಾಯಕರೂ, ಕಾಂಗ್ರೆ ಅಧ್ಯಕ್ಷರೂ ಆದ ರಾಜೀವ್ ಗಾಂಧಿ ಅವರು ೨೧.೫.೧೯೯೧ ರಂದು ಚುನಾವಣಾ ಪ್ರಚಾರಕ್ಕೆ ತಮಿಳುನಾಡಿನ ಶ್ರೀ ಪೆರಂಬದೂರಿಗೆ ಆಗಮಿಸಿದರು. ಎಲ್‌ಟಿಟಿಇ ಬೆಂಬಲಿತ ಭಯೋತ್ಪಾದಕರೊಬ್ಬರು ಮಾನವಬಾಂಬ್ ಮೂಲಕ ರಾಜೀವ್ ಗಾಂಧಿಯನ್ನು ಹತ್ಯೆ ಮಾಡಿದರು. ಚುನಾವಣೆ ತಾತ್ಕಾಲಿಕವಾಗಿ ಮುಂದೂಡಲ್ಪಟ್ಟಿತು. ಅನಂತರ ನಡೆದ ಚುನಾವಣೆ ಕಾಂಗ್ರೆಗೆ ಸಾಕಷ್ಟು ಸಹಾನುಭೂತಿಯನ್ನು ದೊರಕಿಸಿಕೊಟ್ಟಿತು. ಈ ಚುನಾವಣೆಯಲ್ಲಿ ಜನತಾದಳ ಅಲ್ಪ ಸಂಖ್ಯಾತರ ಹಾಗೂ ಹಿಂದುಳಿದ ವರ್ಗಗಳ ಮತಗಳ ಮೇಲೆ ಕಣ್ಣಿಟ್ಟಿತು. ಮಂಡಲ್ ಆಯೋಗವನ್ನು ಕೇಂದ್ರ ಸರ್ಕಾರ ಒಪ್ಪಿಕೊಂಡಿದ್ದರ ಗುಡ್‌ವಿಲ್ ಪಡೆಯಲು ಅದು ಪ್ರಯತ್ನಿಸಿದ್ದುಂಟು. ಅದೇ ರೀತಿ ಅಲ್ಪ ಸಂಖ್ಯಾತರ ಬೆಂಬಲ ಪಡೆಯಲು ರಥಯಾತ್ರೆ ತಡೆದ ವಿಚಾರವನ್ನು ಚುನಾವಣಾ ಸಂದರ್ಭದಲ್ಲಿ ಬಳಸಿಕೊಂಡಿತು. ಆದರೆ ಇವಾವುದೂ ಕರ್ನಾಟಕದ ಮತದಾರರ ಮೇಲೆ ತೀವ್ರ ಪ್ರಭಾವವನ್ನು ಬೀರಲಿಲ್ಲ. ಜನತಾ ಪಕ್ಷ ಹಾಗೂ ಜನತಾದಳಗಳಾಗಿ ಒಡೆದು ಹೋಗಿದ್ದ ಕಾರಣ ಅದರ ಸಂಪೂರ್ಣ ಶಕ್ತಿ ಕೂಡಾ ಈ ಚುನಾವಣೆಯಲ್ಲಿ ಪ್ರತಿಫಲನವಾಗಲಿಲ್ಲ.

ಹಾಸನ ಲೋಕಸಭಾ ಕ್ಷೇತ್ರದಿಂದ ಜನತಾ ಪಕ್ಷದಿಂದ ಸ್ಪರ್ಧಿಸಿದ್ದ ಹೆಚ್. ಡಿ. ದೇವೇಗೌಡ ಅವರಿಗೆ ಜನತಾದಳ ಬೆಂಬಲ ಕೊಟ್ಟಿತು. ಈ ಕಾರಣಕ್ಕಾಗಿ ಹೆಚ್. ಡಿ. ದೇವೇಗೌಡ ಅವರು ಅಲ್ಪಮತದ ಅಂತರದಿಂದ ಲೋಕಸಭೆಗೆ ಆಯ್ಕೆಯಾದರು. ಅವರು ೩,೬೦,೭೬೧ ಮತ ಪಡೆದಿದ್ದರು. ಅದು ಶೇ. ೩೭.೬೧. ಅವರ ಸಮೀಪದ ಪ್ರತಿ ಸ್ಪರ್ಧಿ ಹೆಚ್. ಸಿ. ಶ್ರೀಕಂಠಯ್ಯ ಅವರು ೨,೫೭,೫೭೦ ಮತಗಳನ್ನು ಪಡೆದರು. ಅವರು ಶೇ. ೩೭.೧೫ ಮತ ಗಳಿಸಿದ್ದರು. ಹೆಚ್. ಡಿ. ದೇವೇಗೌಡ ಅವರ ಗೆಲುವಿನ ಅಂತರ ೨,೧೯೧.

ಜನತಾದಳದಿಂದ ಈ ಚುನಾವಣೆಯಲ್ಲಿ ಅನೇಕ ನಾಯಕರು ಲೋಕಸಭೆಗೆ ಸ್ಪರ್ಧಿಸಿ ಸೋಲನ್ನು ಅನುಭವಿಸಿದ್ದಾರೆ: ರಾಯಚೂರಿನಿಂದ ನಸೀರ್ ಅಹಮ್ಮದ್ ಸಿದ್ದಿಕಿ, ಕೊಪ್ಪಳದಿಂದ ಸಿದ್ಧರಾಮಯ್ಯ, ದಾವಣಗೆರೆಯಿಂದ ಡಿ. ಜಿ. ಬಸವನಗೌಡ, ಚಿಕ್ಕಬಳ್ಳಾಪುರದಿಂದ ಆರ್. ಎಲ್. ಜಾಲಪ್ಪ, ಕನಕಪುರದಿಂದ ಪಿ. ಜಿ. ಆರ್.ಸಿಂಧ್ಯಾ, ಬೆಂಗಳೂರು ಉತ್ತರದಿಂದ ನಾರಾಯಣಸ್ವಾಮಿ, ಬೆಂಗಳೂರು ದಕ್ಷಿಣದಿಂದ ವಿ. ಎಸ್. ಕೃಷ್ಣಯ್ಯರ್, ಮಂಡ್ಯದಿಂದ ಹೆಚ್. ಟಿ. ಕೃಷ್ಣಪ್ಪ, ಮೈಸೂರು ಕ್ಷೇತ್ರದಿಂದ ಹೆಚ್. ಸಿ. ಮಹದೇವಪ್ಪ.

ಉತ್ತರ ಕನ್ನಡ ಜಿಲ್ಲೆಯಿಂದ ಆರ್. ವಿ. ದೇಶಪಾಂಡೆ, ಧಾರವಾಡ ಉತ್ತರದಿಂದ ಬಿ. ಆರ್. ಯಾವಗಲ್, ಬೆಳಗಾಂನಿಂದ ಲೀಲಾದೇವಿ ಆರ್. ಪ್ರಸಾದ್, ಬಾಗಲಕೋಟೆಯಿಂದ ರಾಮಕೃಷ್ಣ ಹೆಗಡೆ ಮೊದಲಾದ ನಾಯಕರು ಈ ಚುನಾವಣೆಯಲ್ಲಿ ಜನತಾದಳದಿಂದ ಸ್ಪರ್ಧಿಸಿದ್ದರು. ಈ ಚುನಾವಣೆಯ ಫಲಿತಾಂಶದ ಮೂಲಕ ಜನತಾ ಪಕ್ಷ ಹಾಗೂ ಜನತಾದಳ ಏಕೀಕೃತಗೊಂಡು ಇನ್ನು ಮುಂದೆ ಕಾರ್ಯನಿರ್ವಹಿಸಬೇಕೆಂದು ಜನತೆ ಆದೇಶ ನೀಡಿದರೆಂದು ಈ ಎರಡೂ ಪಕ್ಷದ ನಾಯಕರುಗಳು ಭಾವಿಸಿದ್ದರು. ಅದರ ಫಲಿತಾಂಶವನ್ನು ೧೯೯೪ರ ರಾಜ್ಯ ವಿಧಾನಸಭಾ ಚುನಾವಣೆಯಲ್ಲಿ ನೋಡಬಹುದು.

## ೧೯೯೪ರ ವಿಧಾನಸಭಾ ಚುನಾವಣೆ

ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಹಾಗೂ ಜನತಾದಳದ ಬೆಳವಣಿಗೆಯಿಂದ ಇದೊಂದು ಪ್ರಮುಖವಾದ ಚುನಾವಣೆಯಾಗಿದೆ. ದಿನಾಂಕ ೨೬.೧೦.೯೪ ಹಾಗೂ ೧.೧೨.೯೪ರಂದು ಚುನಾವಣಾ ಫಲಿತಾಂಶ ಪ್ರಕಟವಾಯಿತು. ಮುಂದಿನ ರಾಷ್ಟ್ರ ರಾಜಕಾರಣಕ್ಕೆ ಇದೊಂದು ದಿಕ್ಸೂಚಿಯೆಂದು ಅದು ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಹೇಳಿಕೊಂಡಿರುವುದನ್ನು ಗಮನಿಸಬಹುದು. ೮೯ರಿಂದ ರಾಜ್ಯದಲ್ಲಿ ಅಧಿಕಾರದಲ್ಲಿದ್ದ ಕಾಂಗ್ರೆ ಸರ್ಕಾರವನ್ನು ಹಾಗೂ ೯೨ ರಿಂದ ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಪಿ.ವಿ. ನರಸಿಂಹರಾವ್ ನೇತೃತ್ವದ ಕಾಂಗ್ರೆ ಸರ್ಕಾರದ ವಿಮರ್ಶೆಯನ್ನು ಈ ಪ್ರಣಾಳಿಕೆ ಮಾಡಿದೆ.

ಪ್ರಣಾಳಿಕೆಯ ೨ ನೆಯ ಪುಟದಲ್ಲೇ "ಕೊಟ್ಟ ಮಾತಿಗೆ ತಪ್ಪಲಿಲ್ಲ" ಎಂಬ ಶೀರ್ಷಿಕೆಯಡಿಯಲ್ಲಿ ೮೩ರಿಂದ ೮೯ರವರೆಗೆ ರಾಜ್ಯದಲ್ಲಿ ಆಳ್ವಿಕೆ ನಡೆಸಿದ ಜನತಾ ಪಕ್ಷ ಹಾಗೂ ಜನತಾದಳದ ಸರ್ಕಾರದ ಸಾಧನೆಯನ್ನು ವಿಸ್ತಾರವಾಗಿ ಹೇಳುತ್ತದೆ. ಅಧಿಕಾರ ವಿಕೇಂದ್ರೀಕರಣ ಅಂದರೆ ಜಿಲ್ಲಾ ಪಂಚಾಯತ್ ಹಾಗೂ ಮಂಡಲ್ ಪಂಚಾಯತ್ ವ್ಯವಸ್ಥೆ, ಕುಡಿಯುವ ನೀರಿಗೆ ನಜೀರ್ ಸಾಬ್ ಕೊಟ್ಟ ಆದ್ಯತೆ, ಹೆರಿಗೆ ಭತ್ಯೆ, ವಿಧವಾ ಮಾಸಾಶನ, ಹಸಿರು ಕಾರ್ಡ್ ಯೋಜನೆ, ತಾಳಿಭಾಗ್ಯ, ಉಚಿತ ಪಠ್ಯಪುಸ್ತಕ, ರೈತರ ಸಾಲದ ಮೇಲಿನ ಬಡ್ಡಿ ವಜಾ, ಗಂಗಾ ಕಲ್ಯಾಣ, ಅಂತ್ಯೋದಯ, ಮತದಾನದ ವಯಸ್ಸಿನ ಇಳಿಕೆ, ಅಲ್ಪಸಂಖ್ಯಾತ ಆಯೋಗ ರಚನೆ, ಬೆಲೆ ನಿಯಂತ್ರಣ, ಕನ್ನಡ ಕಾವಲು ಸಮಿತಿ ರಚನೆ- ಇತ್ಯಾದಿ ವಿಚಾರಗಳನ್ನು ಪ್ರಣಾಳಿಕೆ ಪ್ರಸ್ತಾಪಿಸಿ ಮತದಾರರಲ್ಲಿ ಭಾವನಾತ್ಮಕ ಅಲೆಯನ್ನು ಎಬ್ಬಿಸುತ್ತದೆ. ನಮ್ಮ ಆಂತರಿಕ ಕಿತ್ತಾಟದಿಂದ ನಾವು ಅಧಿಕಾರ ಕಳೆದುಕೊಂಡೆವೇ ಹೊರತು ಜನತೆಗೆ ನಮ್ಮಲ್ಲಿ ವಿಶ್ವಾಸ ಹೋಗಿಲ್ಲ ಎಂಬುದು ಈ ಪ್ರಣಾಳಿಕೆಯಲ್ಲಿನ ಪ್ರಮುಖ ಅಂಶ.

ಕಾಂಗ್ರೆ ಸರ್ಕಾರದ ಲೋಪದೋಷಗಳನ್ನು ಬಿಚ್ಚಿಡುವಲ್ಲಿ ಪ್ರಣಾಳಿಕೆ ಹಿಂದೆ ಸರಿದಿಲ್ಲ. ಅದರ ಐದನೆಯ ಪುಟದಲ್ಲಿನ ಕೆಲವು ಮಾತುಗಳು ಹೀಗಿವೆ - 'ಒಂದು ಆಶ್ವಾಸನೆಗಳ ಅತಿಸಾರ, ಎರಡು ಕಾರ್ಯಸಾಧನೆಯ ಮಲಬದ್ಧತೆ, ಖಾಲಿ ಪಾತ್ರೆಗಳು ಹೆಚ್ಚು ಸಪ್ಪಳ ಮಾಡುತ್ತವೆ ಎಂಬಂತೆ ಸಂಬಳಕ್ಕೆ ಕಾಸಿಲ್ಲದ ಸ್ಥಿತಿ. ರಾಜ್ಯ ಬೊಕ್ಕಸಕ್ಕಾದರೂ ಮುಖ್ಯಮಂತ್ರಿಯ ಆಶ್ವಾಸನೆಯ ಅಬ್ಬರಕ್ಕೆ ಇತಿಯೂ ಇಲ್ಲ ಮಿತಿಯೂ ಇಲ್ಲ. ಸರ್ಕಾರಿ ನೌಕರರಿಗೆ ಸಂಬಳ ಕೊಡಲು ಕಲ್ಕತ್ತಾದ ಖಾಸಗಿ ಸಂಸ್ಥೆಯಿಂದ ಸಾಲ ಪಡೆಯುವ ಸ್ಥಿತಿ. ವರ್ಷಕ್ಕೊಬ್ಬ ಮುಖ್ಯಮಂತ್ರಿಯನ್ನು ಕಾಣುವಂತಾದರೂ ಸ್ಥಿರ ಆಡಳಿತದ ಬಗ್ಗೆ ಇವರದು ಮಾತು''

ಆರನೆಯ ಪುಟದಲ್ಲಿ ಕಾಂಗ್ರೆ ಸರ್ಕಾರವನ್ನು ಅದು ಟೀಕಿಸುವ ಕ್ರಮ ಹೀಗಿದೆ - ''ಈ ಕಾಂಗ್ರೆ ಸರ್ಕಾರದ ಸಾಧನೆಗಳು ಮೂರೇ ಮೂರು. ದೌರ್ಜನ್ಯದಲ್ಲಿ ವಿಕ್ರಮ, ಭ್ರಷ್ಟಾಚಾರದಲ್ಲಿ ಮುಗಿಲೆತ್ತರ, ಸುಳ್ಳುಹೇಳುವುದರಲ್ಲಿ ನಿಸ್ಸೀಮತೆ''

ಇಂತಹ ಆಕ್ರಮಣಕಾರಿ ಮಾತುಗಳಿಂದ ಪ್ರಣಾಳಿಕೆಯನ್ನು ಪ್ರಾರಂಭಿಸುವ ಜನತಾದಳ ಪಕ್ಷ ಪ್ರಣಾಳಿಕೆಯಲ್ಲಿ ಕೊಡುವ ಆಶ್ವಾಸನೆಗಳು ಹೀಗಿವೆ- ೧. ರೈತರೇ ನಮ್ಮ ಮೂಲಾಧಾರ. ನಮ್ಮ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರ್ಯಕ್ರಮಗಳಿಗೆ ರೈತರೇ ಆದ್ಯತೆ ಹಾಗೂ ಅಂತಿಮ ಗುರಿ. ೨. ಕ್ರಿ.ಶ. ೨೦೦೦ ದೊಳಗೆ ಕೃಷ್ಣಾ ನದಿಯ ನೀರನ್ನು ಸಂಪೂರ್ಣ ಬಳಕೆ ಮಾಡಿಕೊಳ್ಳಲು ನಾವು ವಚನ ಬದ್ಧರು. ನೀರಾವರಿ ಯೋಜನೆಗೆ ಬೇಕಾಗುವ ಸಂಪನ್ಮೂಲ ಕ್ರೋಢೀಕರಣಕ್ಕೆ ನಮ್ಮದು ಆದ್ಯತೆ. ರಾಷ್ಟ್ರೀಯ ಜಲನೀತಿ ರೂಪಿಸುವಂತೆ ಕೇಂದ್ರ ಸರ್ಕಾರದ ಮೇಲೆ ಒತ್ತಾಯ ಹೇರುತ್ತೇವೆ. ೩. ರಾಜ್ಯದ ರೈತನನ್ನು ಋಣಮುಕ್ತನನ್ನಾಗಿ ಮಾಡಲು ಗ್ರಾಮೀಣ ಸಾಲಸೌಲಭ್ಯ ಯೋಜನೆ ಜಾರಿಗೆ ತರಲಾಗುವುದು. ಇಲ್ಲಿ ಸಾಲ ವಿತರಣಾ ವ್ಯವಸ್ಥೆ ಸರಳವಾಗಿದ್ದು ವಿಳಂಬ ಹಾಗೂ ಭ್ರಷ್ಟಾಚಾರಕ್ಕೆ ಅವಕಾಶವಿಲ್ಲದಂತೆ ನೋಡಿಕೊಳ್ಳಲಾಗುವುದು. ೪. ತರಹೇವಾರಿ ನೀರಾವರಿ : ಇಲ್ಲಿ ಕೆರೆಕಟ್ಟೆಗಳ ಅಭಿವೃದ್ಧಿಗೆ ಹಾಗೂ ಹನಿ ನೀರಾವರಿ ಮತ್ತು ಅಂತರ್ಜಲ ಬಳಕೆಗೆ ಗಮನ ಕೊಡಲಾಗುವುದು. ೫. ಗಂಗಾಕಲ್ಯಾಣ ಜನತಾದಳ ಸರ್ಕಾರದ ವಿಶೇಷ ಯೋಜನೆ. ಅದಕ್ಕೆ ಪುನಶ್ಚೇತನ ಕೊಡಲಾಗುವುದು. ಒಣ ಬೇಸಾಯ ಅಭಿವೃದ್ಧಿಗೆ ವಿಶೇಷ ಯೋಜನೆ ರೂಪಿಸಲಾಗುವುದು. ೬. ದಿನವೊಂದಕ್ಕೆ ಕನಿಷ್ಠ ಹತ್ತು ಗಂಟೆಗಳ ಕಾಲ ತಡೆರಹಿತ ವಿದ್ಯುಚ್ಛಕ್ತಿ ಪೂರೈಕೆಯ ಭರವಸೆ. ೭. ಮೀನು, ತರಕಾರಿ ಹಾಗೂ ಫಲಪುಷ್ಪಗಳಿಗೆ ಅನುಕೂಲವಾಗುವಂತೆ ಎಲ್ಲ ತಾಲ್ಲೂಕು ಕೇಂದ್ರಗಳಲ್ಲೂ ಶೈತ್ಯಾಗಾರ ಸ್ಥಾಪಿಸಲಾಗುವುದು. ೮. ರಾಜ್ಯದ ಹೈದ್ರಾಬಾದ್ ಕರ್ನಾಟಕ ಹಾಗೂ ಇತರೆಡೆ ಗಣನೀಯ ಪ್ರಮಾಣದಲ್ಲಿ ಎಣ್ಣೆಕಾಳು ಉತ್ಪಾದನೆಯಾಗುತ್ತಿದ್ದು ಅದರ ಮೇಲಿನ ಖರೀದಿ ಹಾಗೂ ಮಾರಾಟ ತೆರಿಗೆಯನ್ನು ರದ್ದುಪಡಿಸಲಾಗುವುದು. ೯. ಕೊಡಗಿನಲ್ಲಿ ಜಮ್ಮ, ಜಮ್ಮ ಬಾಣೆ ಹಾಗೂ ಉಂಬಳಿ ಜಾಗಗಳ ಮೇಲಿನ ನಿರ್ಬಂಧವನ್ನು ತೆಗೆದು ಹಾಕಿ ಅದರ ಫಲಾನುಭವಿಗಳಿಗೆ ಸಂಪೂರ್ಣ ಸ್ವಾಮಿತ್ವವನ್ನು ಕೊಡಲಾಗುವುದು. ೧೦. ರೈತರಿಗೆ ಸುಲಭವಾಗಿ ಹಾಗೂ ರಿಯಾಯಿತಿ ದರದಲ್ಲಿ ಸುಧಾರಿತ ಬೀಜ, ಕ್ರಿಮಿನಾಶಕ ಔಷಧಿ, ರಸಗೊಬ್ಬರ, ವ್ಯವಸಾಯೋಪಕರಣ, ರೋಗ ರಹಿತ ರೇಷ್ಮೆ ಮೊಟ್ಟೆಗಳು ಸಿಗುವಂತೆ ಮಾಡಲು ಕ್ರಮ ಕೈಗೊಳ್ಳಲಾಗುವುದು. ೧೧. ನಿರುದ್ಯೋಗಿಗಳಿಗೆ ಉದ್ಯೋಗ ಕೊಡುವ ಬಗ್ಗೆ ಚಿಂತಿಸಲಾಗುವುದು ವಿದ್ಯಾವಂತ ನಿರುದ್ಯೋಗಿಗಳನ್ನು ಸ್ವಾವಲಂಬಿತರನ್ನಾಗಿ ಮಾಡಲಾಗುವುದು. ಇನ್ನು ಮುಂದೆ ನೇಮಕವಾಗುವ ಸರ್ಕಾರಿ ಹುದ್ದೆಗಳಲ್ಲಿ ಶೇ. ೭೦ ರಷ್ಟು ಗ್ರಾಮೀಣ ಮಕ್ಕಳಿಗೆ ಕೊಡಲಾಗುವುದು. ೧೨. ಸ್ವಾವಲಂಬಿತ ಬದುಕು ನಡೆಸುವ ಯುವಕ / ಯುವತಿಯರಿಗೆ ರಿಯಾಯಿತಿ ದರದಲ್ಲಿ ಸಾಲ ಸೌಲಭ್ಯ. ೧೩. ನಜೀರ್‌ಸಾಬ್‌ರ ಕನಸಿನ ಕೂಸಾದ ಭೂಸೇನೆ ಇಲಾಖೆಗೆ ಕಾಯಕಲ್ಪ ಮಾಡಿ ಅದನ್ನು ಉದ್ಯೋಗ ಭರವಸೆಯ ಯೋಜನೆಯನ್ನಾಗಿ ಮಾರ್ಪಡಿಸಲಾಗುವುದು. ಸಾಮಾಜಿಕ ಅರಣ್ಯ ಯೋಜನೆಯಲ್ಲಿ ನಿರುದ್ಯೋಗಿ ಯುವಕ/ ಯುವತಿಯರನ್ನು ಬಳಸಿಕೊಳ್ಳಲಾಗುವುದು. ೧೪. ಗ್ರಾಮೀಣ ಪ್ರದೇಶದ ಕುಶಲಕರ್ಮಿಗಳಿಗೆ ಬೇಕಾದ ಉಪಕರಣಗಳನ್ನು ಸರ್ಕಾರವೇ ಕೊಡುತ್ತದೆ. ಜನ ಸಮುದಾಯದ ಅಭಿರುಚಿಗೆ ಹಾಗೂ ಬೇಡಿಕೆಗನುಗುಣವಾದ ತಾಂತ್ರಿಕ ಜ್ಞಾನ ಹಾಗೂ ತರಬೇತಿಯನ್ನು ಈ ಸಮುದಾಯಕ್ಕೆ ಸರ್ಕಾರವೇ ಕಲ್ಪಿಸುವುದು. ೧೫. ಗ್ರಾಮೀಣ ಆರೋಗ್ಯದ ಬಗ್ಗೆ ನಮ್ಮ ಪಕ್ಷದ್ದು ವಿಶೇಷ ಕಾಳಜಿಯಿದೆ. ಬಡತನದ ರೇಖೆಗಿಂತ ಕೆಳಗಿರುವ ಜನರಿಗೆ ಹಳದಿ ಕಾರ್ಡ್ ವಿತರಿಸಲಾಗುವುದು. ಇದನ್ನು ಹೊಂದಿದವರಿಗೆ ವರ್ಷಕ್ಕೆ ಎರಡು ಬಾರಿ ಉಚಿತವಾಗಿ ಆರೋಗ್ಯ ತಪಾಸಣೆ ಮಾಡಲಾಗುವುದು. ಅದಕ್ಕೆ ತಕ್ಕ ಚಿಕಿತ್ಸೆಗಳನ್ನು ನೀಡಲಾಗುವುದು. ಇಂತಹವರನ್ನು ಆರೋಗ್ಯ ಗುಂಪುವಿಮೆಗೆ ಒಳಪಡಿಸಲಾಗುವುದು. ಪ್ರತಿಯೊಂದು ಹೋಬಳಿ ಮಟ್ಟದಲ್ಲಿ ಸುಸಜ್ಜಿತವಾದ ಹೆರಿಗೆ ಆಸ್ಪತ್ರೆ ಸ್ಥಾಪಿಸಲಾಗುವುದು. ೧೬. ಕರ್ನಾಟಕದ ನೈರ್ಮಲ್ಯೀಕರಣವನ್ನು ಉತ್ತಮಪಡಿಸುವುದಕ್ಕಾಗಿ 'ನಿರ್ಮಲ ಕರ್ನಾಟಕ' ಎಂಬ ಯೋಜನೆಯನ್ನು ರೂಪಿಸಲಾಗುವುದು. ಐದು ವರ್ಷದೊಳಗಾಗಿ ಪ್ರತಿಯೊಂದು ಹಳ್ಳಿಗೂ ಸುಲಭ ಶೌಚಾಲಯವನ್ನು ಒದಗಿಸಲಾಗುವುದು. ೧೭. ರೈತರನ್ನು ಬಿಟ್ಟರೆ ಮಹಿಳೆಯರೇ ಶೋಷಿತ ವರ್ಗ. ಅವರಿಗೆ ಸಮಾನ ಶಿಕ್ಷಣ ಹಾಗೂ ಸಮಾನ ಅವಕಾಶ ಒದಗಿಸಲಾಗುವುದು. ೧೮. ಪ್ರತಿಯೊಂದು ವಿಧಾನಸಭಾ ಕ್ಷೇತ್ರದಲ್ಲಿ ಸಕ್ರಿಯ ಯುವಜನ ಸಂಘಗಳನ್ನು ಗುರುತಿಸಿ ಅದಕ್ಕೆ ಆರ್ಥಿಕ ಸಹಾಯ ಮಾಡುವುದು. ವಿದ್ಯುದುತ್ಪಾದನೆ ಹಾಗೂ

ಸರಬರಾಜಿನ ಜವಾಬ್ದಾರಿಯನ್ನು ಸರ್ಕಾರ ಹೊತ್ತುಕೊಂಡು ವಿಶೇಷವಾದ ಪ್ರಗತಿಯನ್ನು ಈ ಕ್ಷೇತ್ರದಲ್ಲಿ ಕಾಣುವಂತೆ ಮಾಡುತ್ತದೆ. ಖಾಸಗಿ ಸಂಸ್ಥೆಗಳನ್ನು ಪ್ರೋತ್ಸಾಹಿಸುವುದು ನಮ್ಮ ಗುರಿಯಾಗಿರುತ್ತದೆ. ೧೯. ಹಸಿರು ಕಾರ್ಡು ಯೋಜನೆ ಹಿಂದಿನ ಜನತಾ ಸರ್ಕಾರದ ಕೊಡುಗೆ. ಬಡಜನರ ಕಲ್ಯಾಣಕ್ಕಾಗಿ ಈ ಯೋಜನೆಗೆ ಪುನಶ್ಚೇತನ ಕೊಡಲಾಗುವುದು. ೨೦. ಶಿಶುಗಳ ಆರೋಗ್ಯ ರಕ್ಷಣೆ, ವರದಕ್ಷಿಣೆಯನ್ನು ತೊಡೆದುಹಾಕುವುದು, ಹೆಣ್ಣು ಮಗುವಿನ ರಕ್ಷಣೆ, ಪಕ್ಷದ ಆದ್ಯತೆಗಳಾಗಿವೆ. ೨೧. ಮಹಿಳೆಯನ್ನು ಪ್ರಗತಿಯಲ್ಲಿ ಮಿಳಿತಗೊಳಿಸಲು 'ಮನೆ ಬೆಳಕು' ಎಂಬ ವಿಶೇಷ ಯೋಜನೆಯನ್ನು ರೂಪಿಸಲಾಗುವುದು. ಸ್ಥಳೀಯ ಸಂಸ್ಥೆಗಳಲ್ಲಿ ಶೇ. ೨೫ ರಷ್ಟು ಸ್ಥಾನಗಳನ್ನು ಮೀಸಲಿರಿಸಿದ ಕೀರ್ತಿ ಜನತಾಪಕ್ಷದ್ದು. ಈಗ ಸರ್ಕಾರಿ ಸೇವೆಗಳಲ್ಲಿ ಮಹಿಳೆಯರಿಗೆ ಶೇ. ೩೦ರಷ್ಟು ಹುದ್ದೆಗಳನ್ನು ಮೀಸಲಿಡಲು ಕ್ರಮಕೈಗೊಳ್ಳುತ್ತೇವೆಂದು ಈ ಮೂಲಕ ಆಶ್ವಾಸನೆ ನೀಡುತ್ತೇವೆ. ೨೨. ಪ್ರತಿಯೊಂದು ತಾಲ್ಲೂಕಿನಲ್ಲೂ ಉದ್ಯೋಗಸ್ಥ ಮಹಿಳೆಗೆ ವಸತಿ ನಿಲಯ, ವೃದ್ಧ ಮತ್ತು ಅಂಗವಿಕಲರಿಗೆ ವೃದ್ಧಾಶ್ರಮ ತೆರೆಯಲಾಗುವುದು. ೨೩. ಐದು ವರ್ಷಗಳಲ್ಲಿ ರಾಜ್ಯದಲ್ಲಿ ೧೦೦ ಕ್ಕೆ ೧೦೦ರಷ್ಟು ಸಾಕ್ಷರತೆ ಸಾಧಿಸಲಾಗುವುದು. ಅಲ್ಲದೆ ಶಿಕ್ಷಣ ಕ್ಷೇತ್ರದಲ್ಲಿ ಶೋಷಣೆಯನ್ನು ಹತ್ತಿಕ್ಕಲಾಗುವುದು. ೨೪. ರಾಜ್ಯದ ಮೂಲಾದಾಯವಾದ ಸಾರಾಯಿ ವಿತರಣೆಗೆ ಹರಾಜು ಹಾಕುವ ಬದಲು ನೇರವಾಗಿ ಲೈಸೆನ್ಸ್ ನೀಡುವ ಪದ್ಧತಿಯನ್ನು ಜಾರಿಗೆ ತರುವುದು. ಇದರಿಂದ ಅಬಕಾರಿ ಆದಾಯ ಹೆಚ್ಚಾಗುತ್ತದೆ. ೨೫. ಭ್ರಷ್ಟಾಚಾರದ ನಿರ್ಮೂಲನೆಗೆ ಲೋಕಾಯುಕ್ತ ವ್ಯವಸ್ಥೆ ತಂದ ಕೀರ್ತಿ ಜನತಾಪಕ್ಷದ್ದು. ಲೋಕಾಯುಕ್ತವನ್ನು ಸ್ವಾಯತ್ತಗೊಳಿಸಿ ಅದಕ್ಕೆ ಅಪರಾಧಿಗಳಿಗೆ ಶಿಕ್ಷೆ ನೀಡುವ ಅಧಿಕಾರವನ್ನು ಒದಗಿಸುತ್ತೇವೆ ಎಂದು ಹೇಳುತ್ತೇವೆ. ೨೬. ಮಂಡಲ್ ಆಯೋಗವನ್ನು ಅನುಷ್ಠಾನಗೊಳಿಸಿದ್ದು ಕೂಡ ಕೇಂದ್ರದಲ್ಲಿ ಜನತಾದಳ ಸರ್ಕಾರವೆಂದೇ ಹೇಳಲು ಹೆಮ್ಮೆಯಾಗುತ್ತದೆ. ರಾಜ್ಯ ಸರ್ಕಾರದ ಗೊಂದಲ ನೀತಿಯಿಂದಾಗಿ ಮೀಸಲಾತಿ ವಿಚಾರ ನ್ಯಾಯಾಲಯದ ಆಕ್ಷೇಪಕ್ಕೆ ತುತ್ತಾಗಿದೆ. ವೈಜ್ಞಾನಿಕ ಮತ್ತು ಕಾರ್ಯಸಾಧುವಾದ ಮೀಸಲಾತಿ ನೀತಿಯನ್ನು ರೂಪಿಸುತ್ತೇವೆ. ೨೭. ಅಲ್ಪಸಂಖ್ಯಾತ ಅಭಿವೃದ್ಧಿ ನಿಗಮ ಕೊಡುವ ಸಾಲದಲ್ಲಿ ಈ ಮೊದಲು ಮಾರ್ಜಿನ್ ಹಣವನ್ನು ಫಲಾನುಭವಿಗಳೂ ಕೊಡಬೇಕಾಗಿತ್ತು. ಅದನ್ನು ಇನ್ನು ಮುಂದೆ ಸರ್ಕಾರವೇ ಕೊಡುವಂತೆ ಮಾಡುತ್ತೇವೆ. ಅಲ್ಪಸಂಖ್ಯಾತರು ದ್ವೀಪಗಳಾಗದೆ ಜನವಾಹಿನಿಯಲ್ಲಿ ಬೆರೆಯಬೇಕೆಂಬುದು ಪಕ್ಷದ ಆಸೆ. ಕೋಮುಗಲಭೆಗಳ ವಿಚಾರಣೆಗೆ ವಿಶೇಷ ನ್ಯಾಯಾಲಯ ಸ್ಥಾಪಿಸಲಾಗುವುದು. ೨೮. ಹಿಂದೆ ಸ್ಥಳೀಯ ಸಂಸ್ಥೆಯನ್ನು ಪುನಶ್ಚೇತನಗೊಳಿಸಿ ಜನತೆಯ ಕೈಗೆ ಅಧಿಕಾರ ಕೊಟ್ಟಿದ್ದೇ ಜನತಾಪಕ್ಷ. ಅದೇ ಮಾರ್ಗದಲ್ಲಿ ಮುಂದುವರೆದು ಪಂಚಾಯತ್ ರಾಜ್ ವ್ಯವಸ್ಥೆಯ ನ್ಯೂನತೆಯನ್ನು ತೊಡೆದುಹಾಕಿ ನೈಜ ವಿಕೇಂದ್ರೀಕರಣ ವ್ಯವಸ್ಥೆಯನ್ನು ಪುನಶ್ಚೇತನಗೊಳಿಸಲಾಗುವುದು. ೨೯. ನಗರಾಭಿವೃದ್ಧಿಗೆ ವಿಶೇಷ ಕಾರ್ಯಕ್ರಮ ರೂಪಿಸಲಾಗುವುದು. ಬೆಂಗಳೂರು ನಗರಕ್ಕೆ ಬರುತ್ತಿರುವ ಜನರ ವಲಸೆ ನಿಯಂತ್ರಣಕ್ಕೆ ವಿಶೇಷ ಕಾನೂನು ರಚಿಸಲಾಗುವುದು. ಬೆಂಗಳೂರಿನಲ್ಲಿ ಸಂಚಾರ ವ್ಯವಸ್ಥೆಯನ್ನು ಸುಗಮಗೊಳಿಸಲು ವರ್ತುಲ ರೈಲ್ವೆ, ಮೆಟ್ರೊರೈಲ್ವೆ ಹಾಗೂ ಫ್ಲೈ ಓವರ್ ವ್ಯವಸ್ಥೆಗಳನ್ನು ಕಲ್ಪಿಸಬೇಕೆಂದು ಜನತಾದಳ ಪಕ್ಷ ಬಯಸುತ್ತದೆ. ೩೦. ನೀರು ಸರಬರಾಜು ಮತ್ತು ಒಳಚರಂಡಿ, ಜಲಮಂಡಳಿ, ವಿದ್ಯುಚ್ಛಕ್ತಿ ಮಂಡಳಿ ಹಾಗೂ ನಗರಸಭೆಗಳ ನಡುವೆ ಹೊಂದಾಣಿಕೆ ಇರುವಂತೆ ಮಾಡಲು ವಿಶೇಷ ಸಮನ್ವಯ ಘಟಕವನ್ನು ಸ್ಥಾಪಿಸಲಾಗುವುದು. ೩೧. ಕೊಳಗೇರಿ ಕತ್ತಲು ಕೂಪಗಳಾಗಿವೆ. ಇಲ್ಲಿಗೆ ನಾಗರಿಕ ಸೌಲಭ್ಯ ಕೊಡುವುದು ನಮ್ಮ ಆದ್ಯ ಕರ್ತವ್ಯ. ೩೨. ರೆವಿನ್ಯೂ ನಿವೇಶನಗಳಿಗೆ ನ್ಯಾಯೋಚಿತ ಅಭಿವೃದ್ಧಿ ಕರವನ್ನು ವಿಧಿಸಿ ಒಂದು ವರ್ಷದೊಳಗೆ ಅದನ್ನು ಸಕ್ರಮಗೊಳಿಸಲಾಗುವುದು. ೩೩. ನಗರ ಪ್ರದೇಶಗಳಲ್ಲಿ ಸಾಂಕ್ರಾಮಿಕ ರೋಗ ಹರಡದಂತೆ ಮುಂಜಾಗ್ರತಾ ಕ್ರಮ ಕೈಗೊಳ್ಳಲಾಗುವುದು. ಅದಕ್ಕಾಗಿ ವೈಜ್ಞಾನಿಕ ಸಮೀಕ್ಷೆ ನಡೆಸಲಾಗುವುದು. ೩೪. ರಾಷ್ಟ್ರದಲ್ಲೇ ಪ್ರವಾಸೋದ್ಯಮಕ್ಕೆ ಕರ್ನಾಟಕ ರಾಜ್ಯ ಹೆಸರಾಗಿದೆ. ವನಸುಮಗಳಂತಿರುವ ಅಪರೂಪದ ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸಲಾಗುವುದು. ೩೫. ಖಾಸಗಿ ಹಾಗೂ ಸಾರ್ವಜನಿಕರ ನೆರವಿನಿಂದ ಕೋಟ್ಯಂತರ ಸಸಿಗಳನ್ನು ನೆಡಿಸಿ ಅದನ್ನು ಸಂರಕ್ಷಿಸಿ ಪರಿಸರ ರಕ್ಷಣೆಗೆ ಗರಿಷ್ಠ ಮಟ್ಟದ ಎಚ್ಚರವಹಿಸುವುದು. ೩೬. ಆಡಳಿತಕ್ಕೆ ಚಿಕ್ಕದಾಗಿದ್ದರೆ ಒಳಿತೆಂಬ ಕಲ್ಪನೆಯಿಂದ ಜಿಲ್ಲೆಗಳನ್ನು ಪುನರ್ ವಿಂಗಡಣೆ ಮಾಡಲಾಗುವುದು. ೩೭. ಸರ್ಕಾರಿ ನೌಕರರ ವರ್ಗಾವಣೆ ಭ್ರಷ್ಟಾಚಾರದ ಮೂಲ ಸೆಲೆಯಾಗಿದೆ. ಅದಕ್ಕಾಗಿ ವರ್ಗಾವಣೆಗಾಗಿ ಸರ್ವಸಮ್ಮತ ನೀತಿಯೊಂದನ್ನು ರೂಪಿಸಲಾಗುವುದು. ೩೮. ಗ್ರಾಮಗಳಲ್ಲಿ ಸಾರಿಗೆ ಸಂಪರ್ಕ ಅತ್ಯಂತ ದುಸ್ಥಿತಿಯಲ್ಲಿದೆ. ಹಣ್ಣು, ಹಾಲು, ಮೊಟ್ಟೆ, ಹೂವು ಮೊದಲಾದುವುಗಳನ್ನು ಮಾರುಕಟ್ಟೆಗೆ ತರಲು ರೈತ ತುಂಬಾ ಸಾಹಸಪಡುತ್ತಿದ್ದಾನೆ. ಅದಕ್ಕಾಗಿ ನಗದು ಸಾಗಾಣಿಕೆಗಾಗಿಯೇ ಮಾದರಿ ಬಸ್ಸುಗಳನ್ನು ಓಡಿಸಲಾಗುವುದು. ರಸ್ತೆಗಳ ಅಭಿವೃದ್ಧಿಗಾಗಿ ಹಳ್ಳಿ ಹೆದ್ದಾರಿ ಹಾಗೂ ಸೇತು ಬಂಧನ ಎಂಬ ಕಾರ್ಯಕ್ರಮ ರೂಪಿಸಲಾಗುವುದು. ೩೯. ಭಾಷೆ ಜನರ ಭಾವಾನಾತ್ಮಕವಾದ ವಿಚಾರ. ಕನ್ನಡ ಮತ್ತು ಸಂಸ್ಕೃತಿಯ ಅಭಿವೃದ್ಧಿಗೆ ಜನತಾ ದಳ ಕಂಕಣ ಬದ್ಧವಾಗಿರುತ್ತದೆ. ೪೦. ಜನನಿಷ್ಠ ಜವಾಬ್ದಾರಿಯುತ ಸರ್ಕಾರ ಜನತಾದಳದ ಉದ್ದೇಶ ಮುಕ್ತ, ಸರಳ, ನಿರಾಡಂಬರ, ಜನಪರ ಕಾಳಜಿಯ ಆಡಳಿತ ನೀಡುವ ಹಂಬಲ ನಮ್ಮದು ದಕ್ಷತೆ, ಪ್ರಾಮಾಣಿಕತೆಯಿಂದ ಕೂಡಿದ ಸರ್ಕಾರವನ್ನು ನೀಡುತ್ತೇವೆ. ಸ್ವಾಭಿಮಾನಿ

ಸಮೃದ್ಧ ಕರ್ನಾಟಕದ ನಿರ್ಮಾಣ ನಮ್ಮ ಆಶಯ. ೮೩ರಿಂದ ೮೯ರವರೆಗೆ ಜನತಾ ಪಕ್ಷ ಹಾಗೂ ಜನತಾದಳ ನೀಡಿದ ಪ್ರಗತಿಪರ ಸರ್ಕಾರವನ್ನು ಮತ್ತೊಮ್ಮೆ ನೀಡುವ ಬಯಕೆ ಜನತಾದಳಕ್ಕಿದೆ.

## ಚುನಾವಣಾ ಫಲಿತಾಂಶ

೧೯೯೪ರ ವಿಧಾನಸಭಾ ಚುನಾವಣೆ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಅತ್ಯಂತ ಪ್ರಮುಖ ಘಟನೆ ಆಗಿದೆ. ೧೯೮೩ರಲ್ಲಿ ಅಂದಿನ ಕಾಂಗ್ರೆ ಸರ್ಕಾರದ ವಿರುದ್ಧ ರಾಜ್ಯದ ಜನತೆ ಅರೆಮನಸ್ಸಿನ ತೀರ್ಪು ನೀಡಿದ್ದರು. ೧೯೮೫ರಲ್ಲಿ ಎರಡು ವರ್ಷಗಳ ಜನತಾ ಪಕ್ಷದ ಆಳ್ವಿಕೆ ಗಮನಿಸಿ ಅದಕ್ಕೆ ಬಹುಮತ ನೀಡಿದ್ದರು. ೧೯೮೯ರಲ್ಲಿ ನಡೆದ ಚುನಾವಣೆಯಲ್ಲಿ ಜನತಾದಳ ಜನತಾ ಪಕ್ಷಗಳ ಆಂತರಿಕ ಕಿತ್ತಾಟಕ್ಕೆ ಬೇಸತ್ತು ರಾಜ್ಯದ ಜನರು ವೀರೇಂದ್ರ ಪಾಟೀಲ್ ನೇತೃತ್ವದ ಕಾಂಗ್ರೆಸ್ ಪಕ್ಷಕ್ಕೆ ಹಿಂದೆಂದೂ ಸಿಗದ ಭಾರಿ ಬಹುಮತವನ್ನು ಒದಗಿಸಿಕೊಟ್ಟರು. ಆದರೆ ೧೯೯೪ರ ಚುನಾವಣೆಯಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ ಪಕ್ಷಕ್ಕೆ ಅಧಿಕೃತ ವಿರೋಧ ಪಕ್ಷಕ್ಕಾಗುವಷ್ಟು ಕೂಡ ಸ್ಥಾನವನ್ನು ಕೊಡಲಿಲ್ಲ ಎಂದರೆ ಮತದಾರರ ಆಕ್ರೋಶವನ್ನು ಗಮನಿಸಬೇಕಾಗುತ್ತದೆ. ಈ ಗೆಲುವಿಗೆ ಮುಖ್ಯ ಕಾರಣ ಈ ಚುನಾವಣೆಯಲ್ಲಿ ರಾಮಕೃಷ್ಣ ಹೆಗಡೆ, ಎಚ್. ಡಿ. ದೇವೇಗೌಡ ಅವರು ಒಟ್ಟುಗೂಡಿ ಚುನಾವಣೆ ಎದುರಿಸಿದ್ದು. ಇದರಿಂದಾಗಿ ಪಕ್ಷದ ಕೆಳಹಂತದ ಕಾರ್ಯಕರ್ತರಲ್ಲಿ ಆತ್ಮವಿಶ್ವಾಸ ಮೂಡಿತು.

ಕಾಂಗ್ರೆಸ್ ಪಕ್ಷ ಐದು ವರ್ಷಗಳಲ್ಲಿ ಮೂರು ಮುಖ್ಯಮಂತ್ರಿಗಳನ್ನು ರಾಜ್ಯದ ಜನತೆಗೆ ಒದಗಿಸಿತ್ತು. ವೀರೇಂದ್ರ ಪಾಟೀಲ್, ಎಸ್. ಬಂಗಾರಪ್ಪ, ಎಂ. ವೀರಪ್ಪ ಮೊಯಿಲಿ ಅವರು ಈ ಅವಧಿಯಲ್ಲಿ ಕಾಂಗ್ರೆಸ್ ಸರ್ಕಾರದ ಮುಖ್ಯಮಂತ್ರಿಗಳಾಗಿದ್ದರು. ಈ ಬದಲಾವಣೆ ಆ ಪಕ್ಷದ ಸಂಘಟನೆಯ ಮೇಲೆ ಪ್ರಭಾವ ಬೀರಿದ್ದಲ್ಲದೆ ಚುನಾವಣಾ ಸಂದರ್ಭದಲ್ಲಿ ಮತದಾರರ ಮೇಲೂ ಪರಿಣಾಮ ಬೀರಿತು. ಅತೃಪ್ತಿ ತಟಸ್ಥವಾಗಿ ಉಳಿದ ಕಾರಣಕ್ಕೋ ಅಥವಾ ಬೇರೆ ಪಕ್ಷವನ್ನು ಕಟ್ಟಿದ ಕಾರಣಕ್ಕೋ ಕಾಂಗ್ರೆಸ್ ಅಭ್ಯರ್ಥಿಗಳು ಚುನಾವಣಾ ಕಣದಲ್ಲಿ ಬಲಹೀನರಾದರು. ಇದು ಜನತಾದಳದ ಅಭ್ಯರ್ಥಿಗಳಿಗೆ ವರದಾನವಾಯಿತು. ಬಂಗಾರಪ್ಪ ನೇತೃತ್ವದ ಕರ್ನಾಟಕದ ಕಾಂಗ್ರೆಸ್ ಅಥವಾ. ಕೆ. ಸಿ. ಪಿ. ಈ ಚುನಾವಣೆಯಲ್ಲಿ ಶೇ. ೭.೨೮ ಮತಗಳನ್ನು ಪಡೆದಿತ್ತು. ಒಟ್ಟು ೧೫,೦೭,೪೮೧ ಮತಗಳನ್ನು ಈ ಪಕ್ಷ ಪಡೆದಿತ್ತು. ಆ ಪಕ್ಷದಿಂದ ೧೦ ಅಭ್ಯರ್ಥಿಗಳು ವಿಧಾನಸಭೆಯನ್ನು ಪ್ರವೇಶಿಸಿದ್ದರು. ೨೧೮ ಸ್ಥಾನಗಳಲ್ಲಿ ಕರ್ನಾಟಕ ಕಾಂಗ್ರೆಸ್ ಸ್ಪರ್ಧಿಸಿತ್ತು. ಇದು ಗಳಿಸಿದ ಮತ ಬಹುಮಟ್ಟಿಗೆ ಕಾಂಗ್ರೆಸ್‌ನ ಮತಗಳೇ ಆಗಿತ್ತು. ಡಿಸೆಂಬರ್ ೬ ರಂದು ಧ್ವಂಸಗೊಂಡ ಬಾಬರಿ ಮಸೀದಿ ಈ ಚುನಾವಣೆಯ ಮೇಲೆ ಕರಿನೆರಳು ಬೀರಿದೆ. ಅಲ್ಪಸಂಖ್ಯಾತ ಸಮುದಾಯ ಕಾಂಗ್ರೆಸ್ ವಿರುದ್ಧದ ಆಕ್ರೋಶವನ್ನು ಈ ಚುನಾವಣೆಯಲ್ಲಿ ತೋರಿಸಿರುವುದು ಸ್ಪಷ್ಟವಾಗಿದೆ. ಈ ಕಾರಣಗಳಿಂದ ಜನತಾದಳ ಈ ಚುನಾವಣೆಯಲ್ಲಿ ೨೨೧ ಸ್ಥಾನಗಳಿಗೆ ಸ್ಪರ್ಧಿಸಿತು. ೧೧೫ ಸ್ಥಾನಗಳಲ್ಲಿ ಜಯಶಾಲಿ ಆಯಿತು. ಶೇ. ೩೩.೫೬ ಮತಗಳನ್ನು ಜನತಾದಳ ಈ ಚುನಾವಣೆಯಲ್ಲಿ ಗಳಿಸಿದೆ. ೬೯,೪೪,೫೪೨ ಮತಗಳನ್ನು ಇದು ಈ ಚುನಾವಣೆಯಲ್ಲಿ ಪಡೆದುಕೊಂಡಿತ್ತು.

ಕರ್ನಾಟಕದ ೨೧ ಜಿಲ್ಲೆಗಳಲ್ಲಿ ಅದು ಗಳಿಸಿದ ಸ್ಥಾನಗಳು ಹೀಗಿವೆ: ಬೀದರ್ - ೩, ಗುಲ್ಬರ್ಗಾ-೪, ರಾಯಚೂರು-೮. ಬಳ್ಳಾರಿ-೩, ಚಿತ್ರದುರ್ಗ-೫, ತುಮಕೂರು-೬, ಕೋಲಾರ-೮, ಬೆಂಗಳೂರು -೬, ಬೆಂಗಳೂರು ಜಿಲ್ಲೆ-೨, ಬೆಂಗಳೂರು ಗ್ರಾಮಾಂತರ-೭, ಮೈಸೂರು-೧೧, ದಕ್ಷಿಣ ಕನ್ನಡ-೩, ಚಿಕ್ಕಮಗಳೂರು - ೪, ಶಿವಮೊಗ್ಗ-೨, ಉತ್ತರ ಕನ್ನಡ-೨, ಧಾರವಾಡ-೧೦, ಬೆಳಗಾಂ-೧೧, ಬಿಜಾಪುರ-೮ ಹಾಗೂ ಹಾಸನ-೫. ಈ ಪಕ್ಷದಿಂದ ಆಯ್ಕೆ ಆದ ಮಹಿಳಾ ಅಭ್ಯರ್ಥಿಗಳೆಂದರೆ, ರಾಯಚೂರು ಜಿಲ್ಲೆ ದೇವದುರ್ಗದಿಂದ ಶ್ರೀಮತಿ ಬಿ. ಟಿ. ಲಲಿತಾನಾಯಕ್, ಕೋಲಾರ ಜಿಲ್ಲೆ ಗೌರಿಬಿದನೂರಿನಿಂದ ಶ್ರೀಮತಿ ಜ್ಯೋತಿರೆಡ್ಡಿ, ಬೆಂಗಳೂರು ಶಾಂತಿನಗರದಿಂದ ಶ್ರೀಮತಿ ವಿಜಯಲಕ್ಷ್ಮಿ ಬಂಡಿಸಿದ್ದೇಗೌಡ, ಬೆಳಗಾಂನ ಅಥಣಿಯಿಂದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ಬಿಜಾಪುರದ ಮುದ್ದೇಬಿಹಾಳದಿಂದ ಶ್ರೀಮತಿ ವಿಮಲಾಬಾಯಿ ದೇಶ್‌ಮುಖ್.

ಹಾಗೆಯೇ ಕೆಲವರು ಪ್ರಮುಖ ಅಭ್ಯರ್ಥಿಗಳು ಹೀಗಿದ್ದಾರೆ: ಬೀದರ್ ಜಿಲ್ಲೆಯ ಔರಾದ್ ಕ್ಷೇತ್ರದಿಂದ ಗುರುಪಾದಪ್ಪ ನಾಗಮಾರಪಲ್ಲಿ, ಬಸವಕಲ್ಯಾಣದಿಂದ ಬಸವರಾಜ ಪಾಟೀಲ್ ಅಟ್ಟೂರ್, ಚಿಂಚೋಳಿಯಿಂದ ವೈಜನಾಥ ಪಾಟೀಲ್, ಗುಲ್ಬರ್ಗ ಜಿಲ್ಲೆ ಶಹಾಬಾದ್‌ನಿಂದ ಸಿ. ಗುರುನಾಥ್, ಶಹಾಪುರದಿಂದ ಶರಣಬಸಪ್ಪ ದರ್ಶನಾಪೂರ, ರಾಯಚೂರು ಜಿಲ್ಲೆ ರಾಯಚೂರು ಕ್ಷೇತ್ರದಿಂದ ಎಂ. ಎಸ್. ಪಾಟೀಲ್, ಕಲ್ಮಲದಿಂದ ಮುದ್ದಪ್ಪ ಮುನಿಯಪ್ಪ, ಲಿಂಗಸುಗೂರುನಿಂದ ಅಮರೇಗೌಡ ಲಿಂಗನಗೌಡ ಪಾಟೀಲ್, ಕುಷ್ಟಗಿಯಿಂದ ಕೆ. ಶರಣಪ್ಪ, ಯಲಬುರ್ಗಿಯಿಂದ ಬಸವರಾಜ ರಾಯರೆಡ್ಡಿ; ಬಳ್ಳಾರಿ ಜಿಲ್ಲೆ ಶಿರಗುಪ್ಪದಿಂದ ಟಿ. ಎಂ. ಚಂದ್ರಶೇಖರಯ್ಯ, ಕೂಡ್ಲಿಗಿಯಿಂದ ಎಂ. ಎಸ್. ನಬಿ, ಹಡಗಲಿಯಿಂದ ಎಂ. ಪಿ. ಪ್ರಕಾಶ್; ಚಿತ್ರದುರ್ಗ ಜಿಲ್ಲೆ

ಭರಮಸಾಗರದಿಂದ ಚಂದ್ರಪ್ಪ, ಚಳ್ಳಕೆರೆಯಿಂದ ತಿಪ್ಪೇಸ್ವಾಮಿ, ಹಿರಿಯೂರಿನಿಂದ ಡಿ. ಮಂಜುನಾಥ್; ತುಮಕೂರು ಜಿಲ್ಲೆ ಪಾವಗಡದಿಂದ ಸೋಮ್ಲಾನಾಯಕ್, ಮಧುಗಿರಿಯಿಂದ ಗಂಗಹನುಮಯ್ಯ, ಶಿರಾದಿಂದ ಬಿ. ಸತ್ಯನಾರಾಯಣ ಹುಲಿಯೂರುದುರ್ಗದಿಂದ ಡಿ. ನಾಗರಾಜಯ್ಯ; ಕೋಲಾರ ಜಿಲ್ಲೆ ಚಿಂತಾಮಣಿಯಿಂದ ಕೆ. ಎಂ. ಕೃಷ್ಣಾರೆಡ್ಡಿ, ಶ್ರೀನಿವಾಸಪುರದಿಂದ ರಮೇಶ್‌ಕುಮಾರ್, ವೇಮಗಲ್‌ನಿಂದ ಸಿ. ಬೈರೇಗೌಡ; ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಗೆ ಬರುವ ಮಲ್ಲೇಶ್ವರದಿಂದ ಚಲನಚಿತ್ರನಟ ಅನಂತನಾಗ್, ಬಿನ್ನಿಪೇಟೆಯಿಂದ ವಿ. ಸೋಮಣ್ಣ, ಶಿವಾಜಿನಗರದಿಂದ ಆರ್. ರೋಷನ್‌ಬೇಗ್, ಭಾರತೀನಗರದಿಂದ ಎನ್. ರಾಜಣ್ಣ; ಬೆಂಗಳೂರು ಜಿಲ್ಲೆ ಯಲಹಂಕದಿಂದ ಎಂ. ಎಚ್. ಜಯಪ್ರಕಾಶ್ ನಾರಾಯಣ, ವರ್ತೂರಿನಿಂದ ಅಶ್ವತ್ಥರೆಡ್ಡಿ; ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರದಿಂದ ಪಿ.ಜಿ. ಆರ್. ಸಿಂಧ್ಯ, ಚನ್ನಪಟ್ಟಣದಿಂದ ಎಂ. ವರದೇಗೌಡ, ರಾಮನಗರದಿಂದ ಎಚ್. ಡಿ. ದೇವೇಗೌಡ, ನೆಲಮಂಗಲದಿಂದ ಡಾ। ಎಂ. ಶಂಕರನಾಯಕ್, ದೇವನಹಳ್ಳಿಯಿಂದ ಜಿ. ಚಂದ್ರಣ್ಣ, ಹೊಸಕೋಟೆಯಿಂದ ಬಿ. ಎನ್. ಬಚ್ಚೇಗೌಡ, ದೊಡ್ಡಬಳ್ಳಾಪುರದಿಂದ ಆರ್. ಎಲ್. ಜಾಲಪ್ಪ, ಮಂಡ್ಯ ಜಿಲ್ಲೆ ಮದ್ದೂರಿನಿಂದ ಡಾ। ಎಂ. ಮಹೇಶ್ ಚಂದ್, ಕಿರುಗಾವಲಿನಿಂದ ಕೆ. ಎನ್. ನಾಗೇಗೌಡ, ಮಳವಳ್ಳಿಯಿಂದ ಬಿ. ಸೋಮಶೇಖರ್, ಕೆ. ಆರ್. ಪೇಟೆಯಿಂದ ಕೃಷ್ಣ; ಮೈಸೂರು ಜಿಲ್ಲೆ ಹನೂರಿನಿಂದ ಹೆಚ್. ನಾಗಪ್ಪ, ಟಿ. ನರಸೀಪುರದಿಂದ ಡಾ। ಎಚ್. ಸಿ. ಮಹದೇವಪ್ಪ, ಚಾಮುಂಡೇಶ್ವರಿ ಕ್ಷೇತ್ರದಿಂದ ಸಿದ್ಧರಾಮಯ್ಯ, ನಂಜನಗೂಡಿನಿಂದ ಡಿ. ಟಿ. ಜಯಕುಮಾರ್, ಹೆಗ್ಗಡದೇವನಕೋಟೆಯಿಂದ ಎನ್. ನಾಗರಾಜು, ಗುಂಡ್ಲುಪೇಟೆಯಿಂದ ಹೆಚ್. ಎಸ್. ಮಹದೇವಪ್ರಸಾದ್, ಕೆ. ಆರ್. ನಗರದಿಂದ ಎಸ್. ನಂಜಪ್ಪ, ಪಿರಿಯಾಪಟ್ಟಣದಿಂದ ಕೆ. ವೆಂಕಟೇಶ್; ಹಾಸನ ಜಿಲ್ಲೆ ಬೇಲೂರು ಕ್ಷೇತ್ರದಿಂದ ಎಚ್.ಕೆ. ಕುಮಾರಸ್ವಾಮಿ, ಶ್ರವಣಬೆಳಗೊಳದಿಂದ ಜಿ. ಎಸ್. ಪುಟ್ಟೇಗೌಡ, ಹೊಳೆನರಸೀಪುರದಿಂದ ಎಚ್. ಡಿ ರೇವಣ್ಣ, ಹಾಸನದಿಂದ ಎಚ್. ಎಸ್. ಪ್ರಕಾಶ್; ದಕ್ಷಿಣ ಕನ್ನಡ ಜಿಲ್ಲೆ ಬೆಳ್ತಂಗಡಿ ಕ್ಷೇತ್ರದಿಂದ ಕೆ. ವಸಂತ ಬಂಗೇರಾ, ಬ್ರಹ್ಮಾವರದಿಂದ ಕೆ. ಜಯಪ್ರಕಾಶ್ ಹೆಗ್ಗಡೆ, ಮೂಡುಬಿದರೆಯಿಂದ ಕೆ. ಅಮರನಾಥ ಶೆಟ್ಟಿ; ಚಿಕ್ಕಮಗಳೂರು ಜಿಲ್ಲೆ ಶೃಂಗೇರಿಯಿಂದ ಎಚ್. ಜಿ. ಗೋವಿಂದಗೌಡ, ಮೂಡಿಗೆರೆಯಿಂದ ಬಿ. ಬಿ ನಿಂಗಯ್ಯ, ಬೀರೂರಿನಿಂದ ಎಸ್. ಆರ್. ಲಕ್ಷ್ಮಯ್ಯ, ಕಡೂರಿನಿಂದ ಕೆ. ಎಂ. ಕೃಷ್ಣಮೂರ್ತಿ; ಶಿವಮೊಗ್ಗ ಜಿಲ್ಲೆ ಚನ್ನಗಿರಿಯಿಂದ ಜೆ. ಹೆಚ್. ಪಟೇಲ್. ಹೊಳೆಹೊನ್ನೂರು ಕ್ಷೇತ್ರದಿಂದ ಜಿ. ಬಸವಣ್ಣೆಪ್ಪ; ಉತ್ತರ ಕನ್ನಡ ಜಿಲ್ಲೆ ಶಿರಸಿಯಿಂದ ಪಿ. ಎಸ್. ಜೈವಂತ, ಹಳಿಯಾಳದಿಂದ ಆರ್. ವಿ. ದೇಶಪಾಂಡೆ; ಧಾರವಾಡ ಜಿಲ್ಲೆ ಕಲಘಟಗಿಯಿಂದ ಪಿ. ಸಿ. ಸಿದ್ದನಗೌಡ, ಹಾನಗಲ್‌ನಿಂದ ಸಿ. ಎಂ. ಉದಾಸಿ, ಹಾವೇರಿಯಿಂದ ಬಸವರಾಜ್ ನೀಲಣ್ಣನವರ್, ನರಗುಂದದಿಂದ ಬಿ. ಆರ್. ಯಾವಗಲ್; ಬೆಳಗಾಂ ಜಿಲ್ಲೆ ಬೈಲಹೊಂಗಲ ಕ್ಷೇತ್ರದಿಂದ ಕೆ. ಹೆಚ್. ಕೌಜಲಗಿ, ಬಾಗೇವಾಡಿಯಿಂದ ಮಾಳಂಗಿ ಶಿವಪುತ್ರಪ್ಪ ಚನ್ನಬಸಪ್ಪ, ಹುಕ್ಕೇರಿಯಿಂದ ಉಮೇಶ್ ಕತ್ತಿ, ಸಂಕೇಶ್ವರದಿಂದ ಎಂ. ಬಿ. ಪಾಟೀಲ್, ಕಾಗವಾಡದಿಂದ ಶಹಾ ಮೋಹನ್ ಹೀರಾಚಂದ್; ಬಿಜಾಪುರ ಜಿಲ್ಲೆ ಬಾಗಲಕೋಟೆಯಿಂದ ಅಜಯ್‌ಕುಮಾರ್ ಸರನಾಯಕ್, ಗುಳೇದಗುಡ್ಡದಿಂದ ಎಚ್. ವೈ. ಮೇಟಿ, ತ್ರಿಕೋಟಾ ಕ್ಷೇತ್ರದಿಂದ ಪಾಟೀಲ್ ಶಿವಾನಂದ ಶಿದ್ರಾಮಪ್ಪ, ಬೆಳ್ಳೊಳ್ಳಿ ಕ್ಷೇತ್ರದಿಂದ ರಮೇಶ್ ಜಿಗಜಿಣಗಿ ಹಾಗೂ ಸಿಂಧಗಿ ಕ್ಷೇತ್ರದಿಂದ ಮನಗೂಳಿ ಮಲ್ಲಪ್ಪ ಚನ್ನವೀರಪ್ಪ.

**ಜನತಾದಳ ಚುನಾವಣಾ ಪ್ರಣಾಳಿಕೆ ೧೯೯೬**

೧೯೮೯ರಲ್ಲಿ ಕೇಂದ್ರದಲ್ಲಿ ಹನ್ನೊಂದು ತಿಂಗಳು ಆಳಿದ ರಾಷ್ಟ್ರೀಯ ಮೋರ್ಚಾ (ನ್ಯಾಷನಲ್ ಫ್ರಂಟ್) ಸರ್ಕಾರ ಜನಪರ ಕಾರ್ಯಕ್ರಮಗಳ ಮೂಲಕ ಹೆಚ್ಚು ಜನಪ್ರಿಯವಾಗಿದ್ದರೂ, ಬಿ. ಜೆ. ಪಿ. ಮತ್ತು ಕಾಂಗ್ರೆಸ್ (ಐ)ಗಳ ಪಿತೂರಿಯಿಂದಾಗಿ ಅಧಿಕಾರ ಕಳೆದುಕೊಳ್ಳಬೇಕಾಯಿತು. ಮಂಡಲ್ ಆಯೋಗದ ಶಿಫಾರಸ್ಸು ಜಾರಿಗೊಳಿಸಿದ್ದರಿಂದಾಗಿ ಹಿಂದುಳಿದ ವರ್ಗಗಳಿಗೆ ಹೆಚ್ಚು ಅನುಕೂಲವಾಗಿದ್ದು, ಇದನ್ನು ಸಹಿಸದ ರಾಜಕೀಯ ಪಕ್ಷಗಳು ಈ ಸರ್ಕಾರವನ್ನು ಕೆಳಗಿಳಿಸುವುದಕ್ಕೆ ಎಲ್ಲಿಲ್ಲದ ಪ್ರಯತ್ನ ಮಾಡಿ ಜಯಗಳಿಸಿದರು. ಕಾಂಗ್ರೆಸ್ (ಐ)ನ ಉದಾರೀಕರಣ ಮತ್ತು ಬಿಜೆಪಿಯ ಕೋಮುವಾದದಿಂದಾಗಿ ದೇಶ ಜರ್ಜರಿತವಾಗಿದ್ದು, ಇವುಗಳಿಂದ ದೇಶವನ್ನು ಪಾರುಮಾಡಲು ಜನತಾದಳ ಒಂದೇ ಸಮರ್ಥವಾದ ಪಕ್ಷ. ಹವಾಲಾ ಪ್ರಕರಣ, ಬಾಬ್ರಿ ಮಸೀದಿ ನೆಲಸಮಗೊಳಿಸಿದ್ದು ಮುಂತಾದ ಅನೇಕ ಪ್ರಕರಣಗಳಲ್ಲಿ ಎರಡೂ ಪಕ್ಷದವರ ಪಾತ್ರ ಕಣ್ಣಿಗೆ ರಾಚುತ್ತಿದ್ದ ಈ ಎರಡೂ ಪಕ್ಷಗಳನ್ನು ಅಧಿಕಾರದಿಂದ ದೂರವಿಡಲು ಜನತಾದಳ ಮತ್ತು ಇದರ ರಾಷ್ಟ್ರೀಯ ಮೋರ್ಚಾದ ಅಂಗಪಕ್ಷಗಳು ಹಾಗೂ ಎಡಪಕ್ಷಗಳು ಒಟ್ಟಾಗಿ ಆರ್ಥಿಕವಾಗಿ ಸಬಲವಾದ,, ಕೋಮು ಸೌಹಾರ್ದದ, ಹಗರಣಮುಕ್ತ ರಾಜಕೀಯದ, ಬಡವರ ಹಿತರಕ್ಷಿಸುವ, ಸ್ವಾಭಿಮಾನಿ ಭಾರತಕ್ಕೆ ಒಂದು ಜನಪರ ಸರ್ಕಾರ ನೀಡಲು ಯೋಜಿಸಿದ್ದು ಸ್ವಾಗತಾರ್ಹ ಬೆಳವಣಿಗೆ.

### ೧. ಆರ್ಥಿಕ ಸ್ಥಿತಿಗತಿ

ಕಾಂಗ್ರೆಸ್ ಸರ್ಕಾರದ ಉದಾರೀಕರಣ, ಖಾಸಗೀಕರಣ ಮುಂತಾದ ನೀತಿಯಿಂದಾಗಿ ದೇಶದ ಆರ್ಥಿಕ ಸ್ಥಿತಿ ಪದಗೆಟ್ಟಿದ್ದು ೧೯೯೧-೯೨ರಲ್ಲಿದ್ದ ರೆವಿನ್ಯೂ ಕೊರತೆ ಶೇ. ೨.೫ ರಿಂದ ಶೇ. ೪ ಕ್ಕೆ ಏರಿತು. ಇದರಿಂದಾಗಿ ಆರ್ಥಿಕ ಬದಲಾವಣೆಯ ಉದ್ದೇಶ ಫಲಕಾರಿಯಾಗಿಲ್ಲ.

### ೨. ವಿದೇಶಿ ಸಾಲದ ಹಿಡಿತದಲ್ಲಿ

೧೯೭೮-೮೦ರಲ್ಲಿದ್ದ ರೂ. ೨೦,೦೦೦ ಕೋಟಿ ಸಾಲ ೧೯೮೯ರಲ್ಲಿ ೮೯,೦೦೦ ಆಗಿದ್ದು ಆತಂಕಕಾರಿ ವಿಚಾರ. ನಮ್ಮ ವಿದೇಶಿ ವಿನಿಮಯ ಸಂಗ್ರಹ ೨೧ ಬಿಲಿಯನ್ ಡಾಲರ್ ಇದ್ದದ್ದು ೧೬ ಬಿಲಿಯನ್ ಡಾಲರ್‌ಗೆ ಇಳಿದಿದೆ. ನಾವು ವಿದೇಶೀ ಸಾಲದ ಹಿಡಿತಕ್ಕೆ ಬೀಳುವವರಾಗಿದ್ದೇವೆ. ಎಂಎನ್‌ಸಿಗಳ ಹಾವಳಿಯಿಂದಾಗಿ ನಮ್ಮ ದೇಶೀಯ ಕಾರ್ಖಾನೆಗಳು ಅದರಲ್ಲೂ ಸಣ್ಣ ಪ್ರಮಾಣದ ಕಾರ್ಖಾನೆಗಳು ನೆಲ ಕಚ್ಚುತ್ತಿವೆ. ಅಲ್ಪಾವಧಿಯ ಲಾಭದ ಚಟುವಟಿಕೆಗಳಿಗೆ ಉತ್ತೇಜನ ನೀಡಿ ಹಸಿರು ಭೂಮಿ ಚಟುವಟಿಕೆಗಳನ್ನು ಕಡೆಗಣಿಸಲಾಗಿದೆ.

### ೩. ಕುಗ್ಗುತ್ತಿರುವ ಉದ್ಯೋಗ

ನಿರುದ್ಯೋಗ ಹೆಚ್ಚುತ್ತಿದೆ. ಸರ್ಕಾರ ರೂ. ೧೩೦೦ ಕೋಟಿಗಳನ್ನು ಸಾರ್ವಜನಿಕ ಉದ್ದಿಮೆಗಳಲ್ಲಿ ತೊಡಗಿಸಿದರೂ ೭೫ ಸಾವಿರ ಕೆಲಸಗಾರರನ್ನು ಸ್ವಯಂ ನಿವೃತ್ತಿ ಯೋಜನೆಯಲ್ಲಿ ಹೊರಹಾಕಲಾಗಿದೆ. ೫೩ ಕೇಂದ್ರ ಸಾರ್ವಜನಿಕ ಉದ್ದಿಮೆಗಳು ನಷ್ಟ ಅನುಭವಿಸುತ್ತಿವೆ. ಮೂರೂವರೆ ಲಕ್ಷ ಕಾರ್ಮಿಕರು ಬೀದಿ ಪಾಲಾಗುವ ಭಯವಿದೆ. ೨ ಲಕ್ಷ ೫೦ ಸಾವಿರ ರೋಗಗ್ರಸ್ತ ಖಾಸಗಿ ಕೈಗಾರಿಕೆ ಘಟಕಗಳಿದ್ದು ಇವುಗಳು ಮುಚ್ಚಿದಲ್ಲಿ ಎರಡೂವರೆ ಮಿಲಿಯನ್ ಜನರು ಕೆಲಸ ಕಳೆದುಕೊಳ್ಳುವ ಸಾಧ್ಯತೆ ಇದೆ.

### ೪. ಬೆಲೆ ಏರಿಕೆ

ಗ್ರಾಹಕ ಬೆಲೆ ಸೂಚ್ಯಂಕ ಏರುತ್ತಲೇ ಇದೆ. ೧೯೮೨-೯೫ರ ವರೆಗೆ ಒಂದು ರೂಪಾಯಿಯ ಬೆಲೆ ಶೇ. ೬೭ರಷ್ಟು ಇಳಿದಿದ್ದು, ಅದರ ಬೆಲೆ ಕೇವಲ ೩೩ ಪೈಸೆಯಾಗಿದೆ. ಇದರಿಂದ ಹಣದುಬ್ಬರ ಎಷ್ಟು ಪ್ರಮಾಣದಲ್ಲಿ ಏರುತ್ತಿದೆ ಎನ್ನುವುದು ಗೊತ್ತಾಗುತ್ತದೆ. ಭಾರತದ ಜನಸಂಖ್ಯೆಯ ಶೇ. ೪೦ ರಷ್ಟು ಜನರು ಇನ್ನೂ ಕೂಡ ಬಡತನ ರೇಖೆಯ ಕೆಳಗೇ ಇದ್ದಾರೆ. ಸಾರ್ವಜನಿಕ ಉದ್ದಿಮೆಗಳಲ್ಲಿ ಷೇರುಗಳ ಮಾರಾಟದಿಂದ ೫ ಸಾವಿರ ಕೋಟಿ ನಷ್ಟವಾಗಿದೆ.

### ೫. ಬದಲಿ ಆರ್ಥಿಕ ವ್ಯವಸ್ಥೆ

ನಮ್ಮ ದೇಶದ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿ-ಗತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡ ಅಭಿವೃದ್ಧಿ ಆಧಾರದ ಆರ್ಥಿಕ ನೀತಿಯ ಅಗತ್ಯವಿದೆ. ಜನತಾ ದಳ ಅದಕ್ಕಾಗಿ ಹೆಚ್ಚು ಉದ್ಯೋಗವನ್ನು ನೀಡುವ, ಕೃಷಿ ಮತ್ತು ಅದಕ್ಕೆ ಸಂಬಂಧಪಟ್ಟ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವ, ನಿರುದ್ಯೋಗ, ವಸತಿ, ಶಿಕ್ಷಣ, ಆರೋಗ್ಯ ಹಾಗೂ ಆಹಾರ ಅಗತ್ಯಗಳನ್ನು ಪೂರೈಸುವ ಪರಿಸರಸ್ನೇಹಿ ಉದ್ದಿಮೆಗಳನ್ನು ಉತ್ತೇಜಿಸುವ ಆರ್ಥಿಕ ನೀತಿಯನ್ನು ಜಾರಿಗೊಳಿಸಲು ಬಯಸುತ್ತದೆ.

### ೬. ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ

ರಾಷ್ಟ್ರೀಯ ಮೋರ್ಚಾ ಸರ್ಕಾರ ಕೃಷಿಕರ, ಭೂರಹಿತ ಕಾರ್ಮಿಕರ ಹಾಗೂ ಕುಶಲಕರ್ಮಿಗಳ ಸಾಲದಲ್ಲಿ ೧೦ ಸಾವಿರ ರೂಪಾಯಿಗಳನ್ನು ಮನ್ನಾ ಮಾಡುವ ಕ್ರಮ ಕೈಗೊಂಡಿತ್ತು. ಗೋಧಿ, ಅಕ್ಕಿ, ಸಕ್ಕರೆ ಮತ್ತು ಹತ್ತಿಯ ಬೆಲೆಯನ್ನು ಹೆಚ್ಚಿಸುವುದರಲ್ಲಿ ಸಫಲವಾಗಿತ್ತು. ೧೯೯೦-೯೧ರಲ್ಲಿ ಸರ್ಕಾರ ಶೇ. ೪೯ರಷ್ಟು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ ಮೀಸಲಾಗಿಟ್ಟರೆ ೮ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಶೇ. ೫೦ ರಷ್ಟು ಮೀಸಲಾಗಿಟ್ಟಿದೆ. ಜನತಾ ಸರ್ಕಾರ ಇದನ್ನು ಮುಂದುವರೆಸುವ ಯೋಜನೆಯನ್ನು ಹೊಂದಿದೆ. ರಾಷ್ಟ್ರೀಯ ಕೃಷಿ ನೀತಿಯನ್ನು ಹೊರತರಲು, ಅದರಲ್ಲಿ ಕೃಷಿ ಉತ್ಪನ್ನಗಳಿಗೆ ಸರ್ಕಾರ ಬೆಂಬಲ ಬೆಲೆಯನ್ನು ಘೋಷಿಸಲಿದೆ. ಆರ್ಥಿಕ ಸಂಸ್ಥೆಗಳಿಂದ ಶೇ. ೧೫ ರಷ್ಟು ನೀಡುವ ಸಹಾಯವನ್ನು ಶೇ. ೨೦ ಕ್ಕೆ ಏರಿಸಲಾಗುವುದು. ಒಟ್ಟು ಆಯವ್ಯಯದ ಶೇ. ೬೦ ರಷ್ಟನ್ನು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗಾಗಿ ಮೀಸಲಾಗಿಡಲಾಗುವುದು. ಕೃಷಿ ಉತ್ಪನ್ನಗಳ ಸಾಗಾಣಿಕೆಗೆ ಇರುವ ಎಲ್ಲಾ ರೀತಿಯ ಅಡೆತಡೆಗಳನ್ನು ನಿವಾರಿಸಿ, ಒಣ ಭೂಮಿ ಅಭಿವೃದ್ಧಿ ಹಾಗೂ ಕೃಷಿ ಉತ್ಪನ್ನಗಳ ರಫ್ತಿಗೆ ಹೆಚ್ಚು ಪುಷ್ಟಿ ನೀಡಲಾಗುವುದು.

### ೭. ಕೈಗಾರಿಕಾ ನೀತಿ

ಸಣ್ಣ ಕೈಗಾರಿಕೆ, ಗುಡಿಕೈಗಾರಿಕೆ ಹಾಗೂ ಕೃಷಿ ಆಧಾರಿತ ಕೈಗಾರಿಕೆಗಳಿಗೆ ಹೆಚ್ಚು ಪ್ರೋತ್ಸಾಹ ನೀಡಲಾಗುವುದು. ಕೈಮಗ್ಗ ಹಾಗೂ ಇನ್ನಿತರ ಗ್ರಾಮೋದ್ಯೋಗಗಳಿಗೆ ಉತ್ತೇಜನ ನೀಡಿ ಈಗಿರುವ ಕೈಗಾರಿಕೆಗಳನ್ನು ಆಧುನೀಕರಣಗೊಳಿಸಲಾಗುವುದು. ಖಾಸಗೀಕರಣ ಗೊಂಡ ಸಾರ್ವಜನಿಕ ಉದ್ದಿಮೆಗಳ ಷೇರುಗಳಲ್ಲಿ ಶೇಕಡ ೪೦ ರಷ್ಟನ್ನು ರಾಷ್ಟ್ರೀಯ ಸಾಮಾಜಿಕ ಭದ್ರತಾ ಠೇವಣಿಯಲ್ಲಿ ತೊಡಗಿಸಿ ಶೇ. ೧೦ ರಷ್ಟನ್ನು ಉದ್ಯೋಗಿಗಳಿಗೆ, ಉಳಿದಿದ್ದನ್ನು ಸಾರ್ವಜನಿಕರಲ್ಲಿ ವಿತರಿಸಲಾಗುದು. ಕೃಷಿ ಭೂಮಿಯನ್ನು ಕೈಗಾರಿಕೆಗೆ ಬಳಸುವುದನ್ನು ತಡೆಯಲಾಗುವುದು.

ಉದಾರೀಕರಣ ಹೆಚ್ಚು ಸ್ಪರ್ಧೆಯನ್ನು ಸೃಷ್ಟಿಸಿದರೂ ಸ್ಟಾಕ್ ಮಾರ್ಕೆಟ್‌ನಲ್ಲಿ ನಡೆಯುವ ಕೈಚಳಕದಿಂದಾಗಿ ನಿರೀಕ್ಷಿತ ಬದಲಾವಣೆಗಳು ಕಂಡುಬರುತ್ತಿಲ್ಲ. ಕೃಷಿ ಮತ್ತು ಸಣ್ಣ ಕೈಗಾರಿಕೆಗಳನ್ನು ಕೂಡ ಉದಾರೀಕರಿಸಬೇಕಾಗುತ್ತದೆ. ಬಹುರಾಷ್ಟ್ರೀಯ ಸಂಸ್ಥೆಗಳ ಬೇಕು-ಬೇಡಗಳ ಪಟ್ಟಿ ತಯಾರಿಸಲಾಗುವುದು. ಮೂಲಭೂತ ಸೌಲಭ್ಯಗಳನ್ನು ಸೃಷ್ಟಿಸುವ ಕಾರ್ಯವನ್ನು ಕೇವಲ ಖಾಸಗಿ ಹಾಗೂ ಬಹುರಾಷ್ಟ್ರೀಯ ಸಂಸ್ಥೆಗಳಿಗೆ ನೀಡುವುದು ತರವಲ್ಲ. ಸರ್ಕಾರ ಕೂಡ ಈ ಜವಾಬ್ದಾರಿ ತೆಗೆದುಕೊಳ್ಳಬೇಕಾಗುತ್ತದೆ. ಜಾಗತೀಕರಣಕ್ಕೆ ಲಗಾಮು ಹಾಕುವ ಅಗತ್ಯವಿದೆ. ನಮ್ಮ ದೇಶದ ಹೆಸರಾಂತ ಕಂಪನಿಗಳನ್ನು ಬಹುರಾಷ್ಟ್ರೀಯ ಸಂಸ್ಥೆಗಳು ಕೊಂಡುಕೊಳ್ಳದೆ ಇರುವಂತೆ ಕಾಯಬೇಕಾಗಿದೆ. ನಮ್ಮ ಆರ್ಥಿಕ ಸಾರ್ವಭೌಮತ್ವಕ್ಕೆ ಚ್ಯುತಿ ಬಾರದಂತೆ ಯೋಜನೆ ರೂಪಿಸಬೇಕಾಗಿದೆ.

### ೮. ಯೋಗ್ಯ ದರದಲ್ಲಿ ಅವಶ್ಯಕ ವಸ್ತುಗಳು

ಜನತಾ ದಳ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮೂಲಕವಾಗಿ ಅಗತ್ಯವಸ್ತುಗಳಾದ ಅಕ್ಕಿ, ಗೋಧಿ, ಸಕ್ಕರೆ, ಖಾದ್ಯ ತೈಲ, ಅಗ್ಗದ ಬಟ್ಟೆ - ಇವುಗಳನ್ನು ಬಡ ಜನರಿಗೆ ಕಡಿಮೆ ದರದಲ್ಲಿ ಮುಟ್ಟಿಸುವ ವ್ಯವಸ್ಥೆ ಮಾಡಲಿದೆ.

### ೯. ಜಲ ನಿರ್ವಹಣೆ

ಜನತಾದಳ ಜಲ ನಿರ್ವಹಣೆಗೆ ಆದ್ಯತೆ ನೀಡುತ್ತದೆ. ಮಳೆ ನೀರನ್ನು ಸಂಗ್ರಹಿಸುವುದು, ಕೃಷಿ ಮತ್ತು ಕೈಗಾರಿಕೆಗಳಿಗೆ ನೀರನ್ನು ಉಪಯೋಗಿಸುವುದು, ನೀರಿನ ದುರುಪಯೋಗವಾಗುವುದನ್ನು ತಡೆಯುವುದು ನಮ್ಮ ಉದ್ದೇಶವಾಗಿದೆ. ಜನತಾದಳ ರಾಷ್ಟ್ರೀಯ ನದಿಗಳ ನೀರನ್ನು ಸದ್ಬಳಕೆ ಮಾಡುವ ಸಲುವಾಗಿ ಒಂದು ದೀರ್ಘಕಾಲದ ಯೋಜನೆಯನ್ನು ರೂಪಿಸಿದೆ. ಬ್ರಹ್ಮಪುತ್ರ ನದಿಯಲ್ಲಿ ಆಗಾಗ ಬರುವ ಪ್ರವಾಹವನ್ನು ತಡೆಯಲು ಆ ನೀರನ್ನು ಸದ್ವಿನಿಯೋಗ ಮಾಡಲು ಯೋಜನೆ ತಯಾರಿಸಿದೆ.

### ೧೦. ಭೂ ಸುಧಾರಣೆ

ಪ್ರಸ್ತುತ ಇರುವ ಭೂಸುಧಾರಣೆ ಕಾನೂನಿನಲ್ಲಿರುವ ಲೋಪದೋಷಗಳನ್ನು ಸರಿಪಡಿಸಿ ಅದನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲು ಜನತಾದಳ ಬಯಸುತ್ತದೆ. ಹೆಚ್ಚುವರಿ ಭೂಮಿಯನ್ನು ಬಡವರಲ್ಲಿ ಹಂಚಲು ಅವಕಾಶ ಮಾಡುವಲ್ಲಿ ತುರ್ತಾಗಿ ಸಾಲದ ವ್ಯವಸ್ಥೆಯನ್ನು ಮಾಡಲಾಗುವುದು.

### ೧೧. ನಗರಾಭಿವೃದ್ಧಿ

ನಗರಗಳಿಗೆ ಆಗುವ ವಲಸೆಯನ್ನು ತಡೆಯಲು ಕ್ರಮ ಕೈಗೊಳ್ಳಲಾಗುವುದಲ್ಲದೆ, ಸಣ್ಣ ಪಟ್ಟಣಗಳ ನಿರ್ಮಾಣಕ್ಕೆ ಆದ್ಯತೆ ನೀಡಲಾಗುವುದು. ಸುಮಾರು ನಾಲ್ಕು ಸಾವಿರ ಹೊಸ ಪಟ್ಟಣಗಳನ್ನು ಗ್ರಾಮೀಣ ಪ್ರದೇಶಗಳ ಕೇಂದ್ರದಲ್ಲಿ ಸ್ಥಾಪಿಸಲಾಗುವುದು. ಕೊಳಚೆ ಪ್ರದೇಶಗಳ ಅಭಿವೃದ್ಧಿ, ಸರ್ಕಾರ ಹಾಗೂ ಖಾಸಗಿ ಕ್ಷೇತ್ರಗಳ ಸಹಯೋಗದಲ್ಲಿ ಹೊಸ ಮನೆಗಳನ್ನು ಕಟ್ಟಿಸಿಕೊಡುವುದು ಮುಂತಾದ ಯೋಜನೆಗಳನ್ನು ಜಾರಿಗೊಳಿಸಲಾಗುವುದು. ರಸ್ತೆ, ವಾಹನದ ಅನುಕೂಲತೆ ಜೊತೆಗೆ ಆರೋಗ್ಯ, ಶಿಕ್ಷಣ, ಒಳಚರಂಡಿ ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ಶುದ್ಧ ಗಾಳಿ ನೀಡುವ ವ್ಯವಸ್ಥೆ ಮಾಡಲಾಗುವುದು.

### ೧೨. ಆಹಾರ ಭದ್ರತೆ

ಸ್ಥಳೀಯ ಸಮಾಜಗಳ ಸಹಭಾಗಿತ್ವದಲ್ಲಿ ಆಹಾರ ಸಂರಕ್ಷಣೆ, ಪರಿಸರಸ್ನೇಹಿ ತಂತ್ರಜ್ಞಾನದ ಕೃಷಿ, ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಬಲಗೊಳಿಸುವುದು, ಕೃಷಿ ಭೂಮಿಯನ್ನು ವಾಣಿಜ್ಯ ಭೂಮಿಯನ್ನಾಗಿ ಪರಿವರ್ತಿಸದಂತೆ ನೋಡಿಕೊಳ್ಳಲಾಗುವುದು. ಆಹಾರ

ಬೆಳೆಗಳ ಬದಲಿಗೆ ವಾಣಿಜ್ಯ ಬೆಳೆ ಬೆಳೆಯುವುದನ್ನು ತಡೆಯುವುದು, ಬಡ ಜಿಲ್ಲೆಗಳಲ್ಲಿ ಗಂಜಿ ಕೇಂದ್ರಗಳನ್ನು ಅಗತ್ಯವಿದ್ದಲ್ಲಿ ತೆರೆಯುವುದು - ಮುಂತಾದ ಯೋಜನೆಗಳಿಂದ ಜನರಲ್ಲಿ ಆಹಾರ ಭದ್ರತೆಯನ್ನು ತರಲು ಪ್ರಯತ್ನಿಸಲಾಗುವುದು.

### ೧೩. ಕೆಲಸದ ಹಕ್ಕು

ಕೆಲಸದ ಹಕ್ಕನ್ನು ಭಾರತದ ಎಲ್ಲಾ ಪ್ರಜೆಗಳ ಮೂಲಭೂತ ಹಕ್ಕನ್ನಾಗಿಸುವುದು ಜನತಾದಳದ ಉದ್ದೇಶ. ಇದಕ್ಕಾಗಿ ಉದ್ಯೋಗ ಭರವಸೆ ಯೋಜನೆಯನ್ನು ಜಾರಿಗೆತರಲು ಬಯಸಿದ್ದು, ಇದಕ್ಕಾಗಿ ಬೇಕಾದ ವಾತಾವರಣವನ್ನು ಸೃಷ್ಟಿಸಲು ಎಲ್ಲಾ ಪ್ರಯತ್ನವನ್ನು ಮಾಡಲಾಗುವುದು. ಅಲ್ಲದೆ, ಬಡವರಿಗಾಗಿ ಸ್ವಯಂ ಉದ್ಯೋಗ ಯೋಜನೆಗೆ ವಿಶೇಷ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು.

### ೧೪. ಜವಾಬ್ದಾರಿಯುತ ಆಡಳಿತ ವ್ಯವಸ್ಥೆ

ಸಾಮಾನ್ಯ ಜನರ ಅಭಿಲಾಷೆಗಳಿಗೆ ಒತ್ತು ಕೊಡುವ ಆಡಳಿತ ವ್ಯವಸ್ಥೆಯನ್ನು ಜಾರಿಗೆ ತರುವುದು ಜನತಾದಳದ ಉದ್ದೇಶ. ಈಗಿರುವ ವಸಾಹತುಶಾಹಿ ಆಡಳಿತ ವ್ಯವಸ್ಥೆಯನ್ನು ಬದಲಾಯಿಸಿ ಎಲ್ಲಾ ಹಂತದಲ್ಲೂ ಪ್ರಾಮಾಣಿಕ ಹಾಗೂ ಜವಾಬ್ದಾರಿಯುತ ನಾಗರಿಕ ಸೇವಕರನ್ನು ನಿಯುಕ್ತಿಗೊಳಿಸುವುದು ಪಕ್ಷದ ಉದ್ದೇಶ.

### ೧೫. ಭ್ರಷ್ಟಾಚಾರ

ರಾಷ್ಟ್ರದಲ್ಲಿ ಭ್ರಷ್ಟಾಚಾರವನ್ನು ನಿರ್ಮೂಲನೆಗೊಳಿಸಲು ಲೋಕಪಾಲ ಮಸೂದೆಯನ್ನು ಜಾರಿಗೊಳಿಸಿ ಇದರಲ್ಲಿ ಪ್ರಧಾನ ಮಂತ್ರಿ, ಕೇಂದ್ರ ಸಚಿವರು, ಮುಖ್ಯಮಂತ್ರಿಗಳನ್ನು ಒಳಗೊಂಡಂತೆ ಉನ್ನತ ಸ್ಥಾನದಲ್ಲಿರುವ ಎಲ್ಲಾ ವ್ಯಕ್ತಿಗಳನ್ನು ಇದರ ವ್ಯಾಪ್ತಿಗೆ ತರಲು ವ್ಯವಸ್ಥೆ ಮಾಡಲಾಗುವುದು.

ಉನ್ನತ ಸ್ಥಾನಗಳಲ್ಲಿರುವ ಎಲ್ಲರೂ ತಮ್ಮ ವಾರ್ಷಿಕ ಆದಾಯವನ್ನು ಘೋಷಿಸುವುದಲ್ಲದೆ, ಇದನ್ನು ಒಂದು ಸ್ವತಂತ್ರ ಆಯೋಗವು ಪರಿಶೀಲಿಸಲು ವ್ಯವಸ್ಥೆ ಮಾಡಲಾಗುವುದು. ಸರ್ಕಾರಿ ಗೋಪ್ಯತಾ ಕಾನೂನನ್ನು ಬದಲಾಯಿಸಿ, ಮಾಹಿತಿ ಹಕ್ಕನ್ನು ಮೂಲಭೂತ ಹಕ್ಕಿನ ಜೊತೆಗೆ ಸೇರಿಸಲಾಗುವುದು. ಸಿಬಿಐಯನ್ನು ಪ್ರತ್ಯೇಕಿಸಿ, ಅದಕ್ಕೆ ಸ್ವಾಯತ್ತೆ ನೀಡಲಾಗುವುದು. ಎಲ್ಲಾ ಕ್ಷೇತ್ರಗಳಲ್ಲೂ ಪಾರದರ್ಶಕತೆಯನ್ನು ತರಲಾಗುವುದು.

### ೧೬. ಚುನಾವಣಾ ಸುಧಾರಣೆಗಳು

ದಿನೇಶ್ ಗೋಸ್ವಾಮಿ ಸಮಿತಿಯ ವರದಿಯ ಆಧಾರದ ಮೇಲೆ ಚುನಾವಣಾ ಸುಧಾರಣೆ ತರಲು ಬೇಕಾದ ಅಗತ್ಯ ಕ್ರಮ ತೆಗೆದುಕೊಳ್ಳಲಾಗುವುದು.

### ೧೭. ಧರ್ಮನಿರಪೇಕ್ಷತೆ

ದೇಶದ ಸಾಂಸ್ಕೃತಿಕ ಬದುಕಿನ ಹಿನ್ನೆಲೆಯಲ್ಲಿ ಮತೀಯ ಭಾವನೆಗಳನ್ನು ಹೋಗಲಾಡಿಸಿ, ಧರ್ಮನಿರಪೇಕ್ಷತೆಯನ್ನು ಬಲಗೊಳಿಸಲಾಗುವುದು. ಪಠ್ಯಪುಸ್ತಕಗಳಲ್ಲಿ ಇದಕ್ಕೆ ಹೆಚ್ಚು ಒತ್ತು ನೀಡಲಾಗುವುದು.

### ೧೮. ಸಾಮಾಜಿಕ ನ್ಯಾಯ

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಈಗಿರುವ ಮೀಸಲಾತಿಯನ್ನು ಅವರ ಜನಸಂಖ್ಯೆಗೆ ಅನುಗುಣವಾಗಿ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುವುದು. ಅಲ್ಲದೆ, ದಲಿತ ಕ್ರಿಶ್ಚಿಯನ್ನರಿಗೂ ಕೂಡ ಅವರಿಗೆ ಸಿಗಬೇಕಾದ ಅನುಕೂಲತೆ ಒದಗಿಸಲಾಗುವುದು. ಹಿಂದುಳಿದ ವರ್ಗಗಳಿಗಿರುವ ಮೀಸಲಾತಿಯನ್ನು ನ್ಯಾಯಾಂಗಕ್ಕೂ ವಿಸ್ತರಿಸಲಾಗುವುದು. ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಹಿಂದುಳಿದ ವರ್ಗಗಳಿಗೆ ಸ್ಥಾನ ಮೀಸಲಾತಿ ನೀಡಲಾಗುವುದು. ಪದೋನ್ನತಿಯಲ್ಲಿಯೂ ಕೂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಅನುಕೂಲತೆ ಕಲ್ಪಿಸಲು ಸಂವಿಧಾನಕ್ಕೆ ಅಗತ್ಯ ತಿದ್ದುಪಡಿ ತರಲಾಗುವುದು. ಮೀಸಲಾತಿಯ ಪ್ರಮಾಣವನ್ನು ನಿಗದಿಪಡಿಸಲು ಒಂದು ಸ್ವತಂತ್ರ ಆಯೋಗವನ್ನು ರಚಿಸಲಾಗುವುದು. ಜನತಾದಳವು ಕೆನೆಪದರ (ಕ್ರೀಮಿ ಲೇಯರ್)ಕ್ಕೆ ಇರುವ ಮೀಸಲಾತಿಯನ್ನು ತೆಗೆಯುವುದರ ಬಗ್ಗೆ ವಿರೋಧವಿದೆ. ಆರ್ಥಿಕವಾಗಿ ಹಿಂದುಳಿದ ವರ್ಗದವರಿಗೂ ಮೀಸಲಾತಿ ನೀಡಲು ಜನತಾದಳ ಬಯಸುತ್ತದೆ. ಸಾರ್ವಜನಿಕ ಉದ್ದಿಮೆಗಳ ಜೊತೆಗೆ ಖಾಸಗಿ ಉದ್ದಿಮೆಗಳಲ್ಲೂ ಕೂಡ ಮೀಸಲಾತಿ ಸೌಲಭ್ಯವನ್ನು ತರಲು ಪ್ರಯತ್ನಿಸಲಾಗುವುದು.

## ೧೯. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು

ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಎಲ್ಲಾ ಪ್ರಯತ್ನವನ್ನು ಮಾಡಲಾಗುವುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ರಿಕ್ತ ಸ್ಥಾನಗಳನ್ನು ತುಂಬಲು ಕ್ರಮ ಕೈಗೊಳ್ಳಲಾಗುವುದು. ವಿಶೇಷ ಘಟಕ ಯೋಜನೆಗೆ ಮೀಸಲಾದ ಹಣವನ್ನು ಹೆಚ್ಚಿಸಲಾಗುವುದು. ಪರಿಶಿಷ್ಟ ಜಾತಿ ಮತ್ತು ಪಂಗಡದವರ ಸಹಕಾರ ಸಂಘಗಳ ಉತ್ಪನ್ನಗಳನ್ನು ಮಧ್ಯವರ್ತಿಗಳ ಹಾವಳಿಯಿಂದ ತಪ್ಪಿಸಲಾಗುವುದು. ತಾತ್ಕಾಲಿಕ ಸಫಾಯಿ ಕರ್ಮಚಾರಿಗಳನ್ನು ಖಾಯಂಗೊಳಿಸಲು ಕ್ರಮ ಕೈಗೊಳ್ಳಲಾಗುವುದು. ಗಿರಿಜನರನ್ನು ಅಗತ್ಯವಿದ್ದಲ್ಲಿ ಮಾತ್ರ ಸ್ಥಳಾಂತರಿಸಲಾಗುವುದು. ಇಲ್ಲದಿದ್ದಲ್ಲಿ ಅವರಿಗೆ ಬೇಕಾದ ಅನುಕೂಲತೆಗಳನ್ನು ಅಲ್ಲಿಯೇ ಒದಗಿಸಿಕೊಡಲಾಗುವುದು.

## ೨೦. ಅಲ್ಪಸಂಖ್ಯಾತರ ಹಕ್ಕುಗಳ ರಕ್ಷಣೆ

ಮತೀಯ ಸಂಘರ್ಷವನ್ನು ತಡೆದು ಅಲ್ಪಸಂಖ್ಯಾತರಿಗೆ ಎಲ್ಲಾ ರೀತಿಯ ರಕ್ಷಣೆ ನೀಡುವುದು ಪಕ್ಷದ ಉದ್ದೇಶವಾಗಿದೆ. ಒಂದು ವಿಶೇಷ 'ಗಲಭೆ ವಿರೋಧಿ ದಳ'ವನ್ನು ರಚಿಸಿ ಮತೀಯ ಗಲಭೆ ನಡೆದಲ್ಲಿ ಅವರಿಂದ ನಿಷ್ಪಕ್ಷಪಾತವಾದ ವಿಚಾರಣೆ ಮಾಡಿಸಲಾಗುವುದು. ವಕ್ಫ್ ಆಸ್ತಿಯನ್ನು ಬಾಡಿಗೆ ನಿಯಂತ್ರಣ ಕಾಯಿದೆಯಿಂದ ಹೊರಗಿಡಲಾಗುವುದು. ಅಲ್ಪಸಂಖ್ಯಾತರ ಆಯೋಗಕ್ಕೆ ಶಾಸನಾತ್ಮಕ ಸ್ಥಾನಮಾನವನ್ನು ನೀಡಲಾಗುವುದು. ಅಲ್ಪಸಂಖ್ಯಾತರ ಹಣಕಾಸು ನಿಗಮವನ್ನು ಸ್ಥಾಪಿಸಿ ಅಲ್ಪಸಂಖ್ಯಾತರು ವೃತ್ತಿಪರ ಕಾಲೇಜುಗಳನ್ನು ಪ್ರಾರಂಭಿಸಲು ಬೇಕಾದ ಹಣಸಹಾಯ ಮಾಡಲು ವ್ಯವಸ್ಥೆ ಮಾಡಲಾಗುವುದು. ಸಂವಿಧಾನದಲ್ಲಿ ಅಲ್ಪಸಂಖ್ಯಾತರ ಸಂಸ್ಥೆಗಳಿಗೆ ನೀಡಲಾದ ಸ್ಥಾನಮಾನಗಳನ್ನು ಕಾಯ್ದುಕೊಳ್ಳಲಾಗುವುದು. ಸಂಸತ್ತಿನಲ್ಲಿ ಅಂಗೀಕರಿಸಲಾದ ಧಾರ್ಮಿಕ ಕ್ಷೇತ್ರಗಳ ಸಂರಕ್ಷಣೆಯನ್ನು ಗೌರವಿಸಲಾಗುವುದು.

## ೨೧. ಮಹಿಳೆ

ಎಲ್ಲಾ ಹಂತಗಳಲ್ಲಿಯೂ ಮೂರನೇ ಒಂದು ಭಾಗದಷ್ಟು ಹುದ್ದೆಗಳನ್ನು ಮಹಿಳೆಯರಿಗೆ ಮೀಸಲಾಗಿಡುವುದು ಪಕ್ಷದ ಉದ್ದೇಶ. ಇದರಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾದ ಹುದ್ದೆಗಳು ಕೂಡ ಸೇರುತ್ತವೆ. ಮನೆ, ಜಮೀನುಗಳಲ್ಲೂ ಕೂಡ ಗಂಡ-ಹೆಂಡತಿ ಇಬ್ಬರ ಸಂಯುಕ್ತ ಮಾಲೀಕತ್ವ ಇರುವಂತೆ ನೋಡಿಕೊಳ್ಳಲಾಗುವುದು. ಹೆಣ್ಣು ಮಕ್ಕಳಿಗೆ ರಾಷ್ಟ್ರೀಯ ಶಿಕ್ಷಣ ವಿಮಾ ಯೋಜನೆಯನ್ನು ಜಾರಿಗೊಳಿಸಿ ಅವರ ಶಿಕ್ಷಣಕ್ಕೆ ಅನುಕೂಲ ಮಾಡಿಕೊಡಲಾಗುವುದು. ಸ್ವಯಂ ಉದ್ಯೋಗ ಯೋಜನೆಯಲ್ಲಿ ಮಹಿಳೆಯರಿಗೆ ವಿಶೇಷ ಆದ್ಯತೆ ನೀಡಲಾಗುವುದು. ಸ್ಥಳೀಯ ಸಂಸ್ಥೆಗಳಲ್ಲಿ ಶೇ. ೩೦ ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಲಾಗುವುದು.

## ೨೨. ಯುವನೀತಿ

ಯುವಜನರ ಸಾಂಸ್ಕೃತಿಕ, ಸಾಮಾಜಿಕ ಹಾಗೂ ಆರ್ಥಿಕ ಬೆಳವಣಿಗೆಗೆ ರಾಷ್ಟ್ರ, ರಾಜ್ಯ ಹಾಗೂ ಜಿಲ್ಲಾಮಟ್ಟದಲ್ಲಿ ಯುವ ಪರಿಷತ್ತುಗಳನ್ನು ಸ್ಥಾಪಿಸಲಾಗುವುದು. ಸ್ವಯಂ ಉದ್ಯೋಗ ಯೋಜನೆಯಲ್ಲಿ ಯುವಕರನ್ನು ತೊಡಗಿಸಲಾಗುವುದು.

## ೨೩. ಮಕ್ಕಳು

ಶಿಶು ಮರಣವನ್ನು ತಡೆಯಲು ಕ್ರಮ ಕೈಗೊಳ್ಳುವುದಲ್ಲದೆ, ಬಾಲ ಕಾರ್ಮಿಕ ವ್ಯವಸ್ಥೆಯನ್ನು ನಿರ್ಮೂಲನೆಗೊಳಿಸಲು ಪ್ರಯತ್ನಿಸಲಾಗುವುದು. ಮಕ್ಕಳ ಹಕ್ಕನ್ನು ಕಾಯ್ದುಕೊಳ್ಳುವುದಲ್ಲದೆ, ಮಕ್ಕಳ ಆರೋಗ್ಯ, ಶಿಕ್ಷಣಕ್ಕೆ ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುವುದು. ಮಹಿಳಾ ಸಾಕ್ಷರತೆಗೆ ಒತ್ತು ನೀಡಲಾಗುವುದು.

## ೨೪. ಭಾಷಾ ನೀತಿ

ರಾಜ್ಯ ಮಟ್ಟದಲ್ಲಿ ಪ್ರಾದೇಶಿಕ ಭಾಷೆಗಳಿಗೆ ಒತ್ತು ನೀಡಿ, ಉರ್ದು ಭಾಷೆ ಬೆಳವಣಿಗೆಗೆ ಗುಜ್ರಾಲ್ ಸಮಿತಿ ನೀಡಿದ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗುವುದು.

**೨೫. ಒಕ್ಕೂಟ ವ್ಯವಸ್ಥೆ**

ಒಕ್ಕೂಟ ವ್ಯವಸ್ಥೆಗೆ ಹೆಚ್ಚು ಒತ್ತು ನೀಡಿ ಸಂವಿಧಾನದ ೩೫೬ನೇ ವಿಧಿಯನ್ನು ಕೇಂದ್ರ ಸರ್ಕಾರ ದುರ್ಬಳಕೆ ಮಾಡದಂತೆ ನೋಡಿಕೊಳ್ಳಲಾಗುವುದು. ಕೇಂದ್ರ ಮತ್ತು ರಾಜ್ಯಗಳ ಸಂಬಂಧದ ಬಗ್ಗೆ ಸರ್ಕಾರಿ ಆಯೋಗ ನೀಡಿದ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗುವುದು. ಅಂತರರಾಜ್ಯ ಮಂಡಳಿ ಮತ್ತು ರಾಷ್ಟ್ರೀಯ ಅಭಿವೃದ್ಧಿ ಮಂಡಳಿ - ಇವುಗಳನ್ನು ಹೆಚ್ಚು ಬಲಪಡಿಸಲಾಗುವುದು.

**೨೬. ರಾಜ್ಯಪಾಲರ ಪಾತ್ರ**

ರಾಜ್ಯಪಾಲರನ್ನು ಪಕ್ಷದ ಏಜೆಂಟರಾಗಿ ಬಳಸುವುದನ್ನು ತಡೆಯಲಾಗುವುದು.

**೨೭ ಸಣ್ಣ ರಾಜ್ಯಗಳು**

ಆಡಳಿತದ ದೃಷ್ಟಿಯಿಂದ ಅತಿ ದೊಡ್ಡ ರಾಜ್ಯಗಳನ್ನು ವಿಭಜಿಸಿ ಸಣ್ಣ ರಾಜ್ಯಗಳನ್ನಾಗಿ ಮಾಡಲಾಗುವುದು.

**೨೮. ಪಂಚಾಯತ್‌ರಾಜ್ ಸಂಸ್ಥೆಗಳು**

ಪಂಚಾಯತ್ ರಾಜ್ ಸಂಸ್ಥೆಗಳನ್ನು ಬಲಪಡಿಸಿ ಸಾಕಷ್ಟು ಆರ್ಥಿಕ ಸ್ವಾತಂತ್ರ್ಯವನ್ನು ನೀಡಿ, ಮಹಿಳೆಯರು ಮತ್ತು ಹಿಂದುಳಿದ ವರ್ಗದವರು ಪ್ರಮುಖ ಪಾತ್ರ ವಹಿಸುವಂತೆ ನೋಡಿಕೊಳ್ಳಲಾಗುವುದು.

**೨೯. ಔದ್ಯೋಗಿಕ ಸಂಬಂಧ**

ಉತ್ತಮ ಔದ್ಯೋಗಿಕ ಸಂಬಂಧವನ್ನು ಬೆಳೆಸುವ ದೃಷ್ಟಿಯಿಂದ ಕಾರ್ಮಿಕ ಸಂಘಟನೆ ಮತ್ತು ಕಾರ್ಮಿಕ ಕಾನೂನನ್ನು ಬಲಪಡಿಸಲಾಗುವುದು.

**೩೦. ಸಾಮಾಜಿಕ ಭದ್ರತೆ**

ಕಾರ್ಮಿಕರಿಗೆ ಸಾಮಾಜಿಕ ಭದ್ರತೆಯನ್ನು ಅವರ ಆರೋಗ್ಯ ರಕ್ಷಣೆ, ಪಿಂಚಣಿ, ಭವಿಷ್ಯನಿಧಿಗಳ ಮೂಲಕ ಒದಗಿಸಲಾಗುವುದು.

**೩೧. ಮಾನವ ಹಕ್ಕುಗಳು**

ಮಾನವ ಹಕ್ಕು ಆಯೋಗಕ್ಕೆ ಎಲ್ಲ ಅನುಕೂಲತೆಗಳನ್ನು, ಸ್ವಾತಂತ್ರ್ಯವನ್ನು ನೀಡಿ ಬಲಪಡಿಸಲಾಗುವುದು. ರಾಜ್ಯ ಮತ್ತು ಜಿಲ್ಲಾ ಮಟ್ಟದಲ್ಲಿ ಕೂಡ ಮಾನವ ಹಕ್ಕು ಆಯೋಗಗಳನ್ನು ರಚಿಸಲಾಗುವುದು.

**೩೨. ಶಿಕ್ಷಣ**

ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣಕ್ಕೆ ಒತ್ತು ಕೊಟ್ಟು ಹೆಚ್ಚು ಮಕ್ಕಳು ಶಾಲೆಗೆ ಬರುವಂತೆ ಮಾಡಲಾಗುವುದು. ರಾಷ್ಟ್ರೀಯ ಒಟ್ಟು ವರಮಾನದಲ್ಲಿ ಶೇ. ೬ ರಷ್ಟನ್ನು ಶಿಕ್ಷಣಕ್ಕೆ ಮೀಸಲಿಡಲಾಗುವುದು. ಧಾರ್ಮಿಕ ಹಾಗೂ ಭಾಷಾ ಅಲ್ಪಸಂಖ್ಯಾತರ ಶಿಕ್ಷಣಕ್ಕೆ ಒತ್ತು ಕೊಡಲಾಗುವುದು. ಆಚಾರ್ಯ ರಾಮಮೂರ್ತಿ ಸಮಿತಿಯ ವರದಿ (೧೯೯೦) ಯನ್ನು ಜಾರಿಗೊಳಿಸಲಾಗುವುದು.

**೩೩. ಜನಾರೋಗ್ಯ**

ಏಡ್ಸ್ ಮುಂತಾದ ಮಾರಕ ರೋಗಗಳ ನಿಯಂತ್ರಣಕ್ಕೆ ಕ್ರಮ ತೆಗೆದುಕೊಳ್ಳಲಾಗುವುದು. ಶಿಶು ಮರಣವನ್ನು ತಡೆಗಟ್ಟುವುದು, ಸಾರ್ವತ್ರಿಕ ಲಸಿಕೆ ಕಾರ್ಯಕ್ರಮ, ಪೌಷ್ಟಿಕ ಆಹಾರದ ಕೊರತೆ ಇವುಗಳನ್ನು ನೀಗಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**೩೪. ಪರಿಸರ**

ಪರಿಸರ ನಾಶವನ್ನು ತಡೆಗಟ್ಟಲು ಈಗಿರುವ ಕಾನೂನನ್ನು ಬಲಪಡಿಸಿ, ಶಕ್ತಿಯುತಗೊಳಿಸಲಾಗುವುದು.

**೩೫. ವಿಜ್ಞಾನ-ತಂತ್ರಜ್ಞಾನ**

ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಗೆ ಹೆಚ್ಚು ಒತ್ತು ನೀಡಲಾಗುವುದು. ಹೊಸ ವಿಜ್ಞಾನ ಮತ್ತು ತಂತ್ರಜ್ಞಾನ ನೀತಿಯನ್ನು ಜಾರಿಗೆ ತಂದು ವಿಜ್ಞಾನಿಗಳು, ಇಂಜನಿಯರುಗಳು, ವೈದ್ಯರು ಸಮಾಜಕ್ಕೆ ಹೆಚ್ಚು ಬದ್ಧರಾಗಿರುವಂತೆ ನೋಡಿಕೊಳ್ಳಲಾಗುವುದು.

**೩೬. ಮಾಜಿ ಸೈನಿಕರು**

ಇದುವರೆಗೆ ಮಾಜಿ ಸೈನಿಕರ ಜವಾಬ್ದಾರಿ ರಾಜ್ಯಸರ್ಕಾರದ್ದಾಗಿದ್ದು, ಇನ್ನು ಮುಂದೆ ಕೇಂದ್ರ ಹಾಗೂ ರಾಜ್ಯ ಸರ್ಕಾರ ಎರಡೂ ಜೊತೆಗೂಡಿ ಅವರ ಕ್ಷೇಮಾಭಿವೃದ್ಧಿ ನೋಡಿಕೊಳ್ಳುವಂತೆ ಮಾಡಲಾಗುವುದು.

**೩೭. ಮಾಧ್ಯಮ ನೀತಿ**

ಪ್ರಸಾರ ಭಾರತಿ ಮಸೂದೆಗೆ ಬದಲಾವಣೆ ತಂದು ನಮ್ಮ ಸಂಸ್ಕೃತಿ ಮತ್ತು ಪರಂಪರೆಯನ್ನು ಬಿಂಬಿಸುವಂತೆ ನೋಡಿಕೊಳ್ಳಲಾಗುವುದು. ಖಾಸಗಿ ಪ್ರಸಾರಗಳಿಗೆ ನಿಯಂತ್ರಣ ಹಾಕಲಾಗುವುದು. ಎಲ್ಲಾ ಹಂತದ ಪತ್ರಿಕೆಗಳಿಗೂ ಉತ್ತೇಜನ ನೀಡಿ ಅವುಗಳು ಬೆಳೆಯಲು ಅವಕಾಶ ನೀಡಲಾಗುವುದು.

**೩೮. ಈಶಾನ್ಯ ರಾಜ್ಯಗಳು**

ಈಶಾನ್ಯ ರಾಜ್ಯಗಳು ಭಾರತದ ಇತರ ರಾಜ್ಯಗಳೊಡನೆ ಭಾವನಾತ್ಮಕ ಸಂಬಂಧ ಬೆಳೆಸಿಕೊಳ್ಳುವಂತೆ ನೋಡಿಕೊಳ್ಳಲಾಗುವುದು. ಅವುಗಳ ಸಮಸ್ಯೆಗಳನ್ನು ಅರಿತು ಅವುಗಳ ಪರಿಹಾರಕ್ಕೆ ಪ್ರಯತ್ನಿಸಲಾಗುವುದು.

**೩೯. ಜಮ್ಮು ಮತ್ತು ಕಾಶ್ಮೀರ**

ಜಮ್ಮು ಮತ್ತು ಕಾಶ್ಮೀರದಲ್ಲಿ ಮುಕ್ತ ಹಾಗೂ ನ್ಯಾಯಯುತ ಚುನಾವಣೆ ನಡೆಯುವಂತೆ ನೋಡಿಕೊಳ್ಳಲಾಗುವುದು. ಸಂವಿಧಾನದ ೩೭೦ನೆಯ ವಿಧಿಯನ್ನು ಬಲಪಡಿಸಿ ಹೆಚ್ಚು ಸ್ವಾಯತ್ತತೆ ನೀಡಲು ಪ್ರಯತ್ನಿಸಲಾಗುವುದು. ಪಾಕಿಸ್ತಾನದ ಜೊತೆ ಮಾತುಕತೆ ನಡೆಸಿ, ಕಾಶ್ಮೀರ ಸಮಸ್ಯೆ ಪರಿಹಾರಕ್ಕೆ ಪ್ರಯತ್ನಿಸಲಾಗುವುದು.

**೪೦. ವಿದೇಶಿ ನೀತಿ-ರಕ್ಷಣಾ ವ್ಯವಸ್ಥೆ**

ನೆರೆಹೊರೆಯವರಲ್ಲಿ ಉತ್ತಮ ಬಾಂಧವ್ಯ, ಸಹಕಾರ ಬೆಳೆಸುವದರ ಜೊತೆಗೆ ಸಂಬಂಧವನ್ನು ವೃದ್ಧಿಸಲು ಪ್ರಯತ್ನಿಸಲಾಗುವುದು. ಸಾರ್ಕ್ ದೇಶಗಳ ಮಧ್ಯೆ ವ್ಯಾಪಾರ ವ್ಯವಹಾರ ಸುಗಮವಾಗಿ ನಡೆಯುವಂತೆ ಪ್ರಯತ್ನಿಸಲಾಗುವುದು. ಅಮೆರಿಕಾದಂಥ ಬಲಾಢ್ಯ ರಾಷ್ಟ್ರಗಳು ದಕ್ಷಿಣ ಏಷ್ಯ ದೇಶಗಳ ವ್ಯವಹಾರದಲ್ಲಿ ಕೈಹಾಕದಂತೆ ನೋಡಿಕೊಳ್ಳಲಾಗುವುದು. ಎನ್.ಪಿ.ಟಿ. ಮತ್ತು ಸಿ.ಟಿ.ಬಿ.ಟಿ.ಗಳನ್ನು ವಿರೋಧಿಸುತ್ತೇವೆ ಮತ್ತು ಶಸ್ತ್ರಾಸ್ತ್ರ ಪೈಪೋಟಿಯನ್ನು ಖಂಡಿಸುತ್ತೇವೆ. ವಿಶ್ವಸಂಸ್ಥೆ ಇನ್ನೂ ಹೆಚ್ಚು ಅಧಿಕಾರಯುತವಾಗಿ ಕಾರ್ಯ ನಿರ್ವಹಿಸುವಂತೆ ಪ್ರಯತ್ನಿಸಲಾಗುವುದು. ದೇಶದ ಸುರಕ್ಷತೆಗಾಗಿ ರಾಷ್ಟ್ರೀಯ ಭದ್ರತಾ ಮಂಡಳಿಯನ್ನು ಸ್ಥಾಪಿಸಿ, ರಾಷ್ಟ್ರೀಯ ಭದ್ರತಾ ನೀತಿಯನ್ನು ಜಾರಿಗೊಳಿಸಲಾಗುವುದು.

**೪೧. ಮತ ಯಾಚನೆ**

ಜನತಾದಳ ರಾಷ್ಟ್ರೀಯ ಮೋರ್ಚಾ ಮತ್ತು ಎಡಪಕ್ಷಗಳ ಸಹಯೋಗತ್ವದಲ್ಲಿ ಸಮೃದ್ಧಿ, ಸ್ವಾವಲಂಬಿ ಹಾಗೂ ಸೌಹಾರ್ದ ದೇಶವನ್ನು ಕಟ್ಟಲು ಜನರ ಬೆಂಬಲವನ್ನು ಕೋರಿ ಮತ ಯಾಚಿಸುತ್ತದೆ.

೧೯೯೬ರ ಲೋಕಸಭಾ ಚುನಾವಣೆಯು ಅನೇಕ ದೃಷ್ಟಿಗಳಿಂದ ತುಂಬಾ ಮಹತ್ವ ಪಡೆದುಕೊಂಡಿದೆ. ಕರ್ನಾಟಕ ರಾಜ್ಯದಲ್ಲಿ ಜನತಾದಳ ಪಕ್ಷ ಸರ್ಕಾರ ರಚಿಸಿದ ಒಂದು ವರ್ಷದ ನಂತರ ಈ ಚುನಾವಣೆ ನಡೆಯಿತು. ಇದು ಮುಖ್ಯಮಂತ್ರಿ ಹೆಚ್.ಡಿ. ದೇವೇಗೌಡರ ಸರ್ಕಾರದ ಮೌಲ್ಯಮಾಪನವೆಂದು ಪತ್ರಿಕೆಗಳು ಬರೆದವು. ೨೭.೪.೯೬ ಹಾಗೂ ೨.೫.೯೬ಗಳಲ್ಲಿ ಈ ಚುನಾವಣೆ ನಡೆಯಿತು. ೨೮ ಲೋಕಸಭಾ ಕ್ಷೇತ್ರಗಳಲ್ಲಿ ಜನತಾದಳ ೧೬ ಲೋಕಸಭಾ ಸ್ಥಾನವನ್ನು ಗೆಲ್ಲುವಲ್ಲಿ ಯಶಸ್ವಿ ಆಯಿತು. ಇದೊಂದು ಸಾರ್ವಕಾಲಿಕ ದಾಖಲೆ ಆಗಿದೆ. ಕಾಂಗ್ರೆಯೇತರ ವಿರೋಧಪಕ್ಷ ಇಷ್ಟೊಂದು ಲೋಕಸಭಾ ಸ್ಥಾನಗಳನ್ನು ಗೆದ್ದಿರುವುದು ಇದೇ ಮೊದಲೆಂದು ಪತ್ರಿಕೆಗಳು ವಿಶ್ಲೇಷಿಸಿದುವು. ಜನತಾದಳ ೨೭ ಲೋಕಸಭಾ ಸ್ಥಾನಗಳಿಗೆ ಸ್ಪರ್ಧಿಸಿ ಶೇ. ೩೪.೯೧ ಮತವನ್ನು ಗಳಿಸಿತು. ಅದರ ೧೬ ಅಭ್ಯರ್ಥಿಗಳು ಲೋಕಸಭೆ ಪ್ರವೇಶಿಸಿದರು. ೬೫,೩,೨೦೪ ಮತಗಳನ್ನು ಈ ಚುನಾವಣೆಯಲ್ಲಿ ಅದು ಪಡೆಯಿತು. ಅದರ ವಿಜೇತರಾದ ಅಭ್ಯರ್ಥಿಗಳೆಂದರೆ - ಗುಲ್ಬರ್ಗಾ ಲೋಕಸಭಾ ಕ್ಷೇತ್ರದಿಂದ ಜನತಾದಳದ ಖಮರುಲ್ ಇಸ್ಲಾಂ ಅವರು ಶೇ ೩೫.೯೫ ಮತಗಳನ್ನು ಅಂದರೆ ೨,೦೩,೫೨೧ ಮತಗಳನ್ನು ಗಳಿಸಿ ಆಯ್ಕೆ ಆದರು. ಅವರ ಸಮೀಪ ಸ್ಪರ್ಧಿ ಬಿ.ಜೆ.ಪಿ.ಯ ಬಸವರಾಜ ಸೇಡಂ ಅವರು ಶೇ. ೩೩. ೧೬ ಅಂದರೆ ೧,೮೭,೯೯೬ ಮತಗಳನ್ನು ಪಡೆದರು. ಕಾಂಗ್ರೆಸ್‌ನ ಡಾ। ಬಿ. ಜಿ. ಜವಳಿ

ಅವರು ಶೇ. ೨೩.೩೫ ಮತಗಳಿಸಿ ೩ ನೇ ಸ್ಥಾನ ಪಡೆದಿದ್ದರು. ರಾಯಚೂರು ಲೋಕಸಭಾ ಕ್ಷೇತ್ರದಿಂದ ರಾಜಾ ರಂಗಪ್ಪ ನಾಯ್ಕ ಅವರು ಶೇ. ೪೪.೭೮ ಅಂದರೆ ೨,೧೪,೯೨೦ ಮತಗಳಿಸಿ ಆಯ್ಕೆ ಆದರೆ ಅವರ ಸಮೀಪದ ಪ್ರತಿಸ್ಪರ್ಧಿ ಕಾಂಗ್ರೆಸ್‌ನ ಎ. ವೆಂಕಟೇಶ್ ನಾಯ್ಕ ಅವರು ಶೇಖಡವಾರು ೩೩.೧೭ ಮತಗಳಿಸಿ ಎರಡನೇ ಸ್ಥಾನಕ್ಕೆ ತೃಪ್ತಿಪಡಬೇಕಾಯಿತು. ಕೊಪ್ಪಳ ಲೋಕಸಭಾ ಕ್ಷೇತ್ರದಿಂದ ಬಸವರಾಜ ರಾಯರೆಡ್ಡಿ ಅವರು ಶೇಕಡವಾರು ೪೫.೮೬ ಅಂದರೆ ೨,೭೬,೮೯೭ ಮತಗಳಿಸಿದರೆ, ಸಮೀಪ ಸ್ಪರ್ಧಿ ಬಿಜೆಪಿಯ ಶಂಕರಗೌಡ ಅವರು ಶೇ. ೧೮.೧೦ ಅಂದರೆ, ೧,೦೯,೨೯೯ ಮತ ಗಳಿಸಿದ್ದರು. ಚಿತ್ರದುರ್ಗ ಲೋಕಸಭಾ ಕ್ಷೇತ್ರದಿಂದ ಪಿ. ಕೋದಂಡರಾಮಯ್ಯ ಅವರು ಶೇ. ೩೫.೬೭ ಅಂದರೆ ೨,೫೧,೬೧೭ ಮತಗಳಿಸಿ ಆಯ್ಕೆ ಆದರೆ ಅವರ ಸಮೀಪದ ಸ್ಪರ್ಧಿ ಕಾಂಗ್ರೆಸ್‌ನ ಸಿ. ಪಿ. ಮೂಡಲಗಿರಿಯಪ್ಪ ಅವರು ಶೇ ೩೨.೧೨ ಅಂದರೆ ೨,೩೫,೨೩೫ ಮತಗಳನ್ನು ಪಡೆದು ಎರಡನೇ ಸ್ಥಾನ ಹೊಂದಿದರು. ತುಮಕೂರು ಲೋಕಸಭಾ ಕ್ಷೇತ್ರದಿಂದ ಜನತಾದಳದ ಸಿ. ಎನ್. ಭಾಸ್ಕರಪ್ಪ ಅವರು ಶೇ. ೨೮. ೬೧,೯೨,೨೨೮ ಮತ ಪಡೆದು ಆಯ್ಕೆಯಾದರೆ ಸಮೀಪ ಸ್ಪರ್ಧಿ ಬಿ.ಜೆ.ಪಿ.ಯ ಎಸ್. ಮಲ್ಲಿಕಾರ್ಜುನಯ್ಯ ಅವರು ಶೇ. ೨೬.೨೬ ಅಂದರೆ ೧,೭೬,೫೧೬ ಮತ ಪಡೆದಿದ್ದರು. ಕನಕಪುರ ಎಚ್. ಡಿ. ಕುಮಾರಸ್ವಾಮಿ ಅವರು ಶೇ ೪೨.೧೨ ಅಂದರೆ ೩,೪೪,೬೨೮ ಮತಗಳಿಸಿ ಆಯ್ಕೆ ಆಗಿದ್ದರು. ಇವರ ಸಮೀಪದ ಸ್ಪರ್ಧಿ ಕಾಂಗ್ರೆಸ್‌ನ ಎಂ.ವಿ. ಚಂದ್ರಶೇಖರ ಮೂರ್ತಿ ಅವರು ಶೇ. ೩೧.೮೫ ಅಂದರೆ, ೩,೩೩,೪೨೦ ಮತ ಪಡೆದಿದ್ದುದು ಬೆಂಗಳೂರು ಉತ್ತರದಿಂದ ಜನತಾದಳದ ನಾರಾಯಣಸ್ವಾಮಿ ಅವರು ಶೇ. ೪೮.೬೫ ಅಂದರೆ ೩,೯೮,೬೫೦ ಮತ ಪಡೆದು ಆಯ್ಕೆ ಆಗಿದ್ದರೆ ಸಮೀಪದ ಸ್ಪರ್ಧಿ ಕಾಂಗ್ರೆಸ್‌ನ ಮಹಮ್ಮದ್ ಒಬೇದುಲ್ಲಾ ಷರೀಫರು ಶೇ. ೩೩.೩೭ ಅಂದರೆ ೨,೬೫,೩೪೮ ಮತ ಗಳಿಸಿ ತೃಪ್ತರಾದರು. ಬಿ.ಜೆ.ಪಿ.ಯ ವೈ. ರಾಮಕೃಷ್ಣ ಅವರು ೧,೨೪,೪೧೬ ಮತಗಳನ್ನು ಮಾತ್ರಪಡೆದಿದ್ದರು. ಮಂಡ್ಯ ಲೋಕಸಭಾ ಕ್ಷೇತ್ರದಿಂದ ಕೃಷ್ಣ ಅವರು ಶೇ. ೪೫.೯೭ ಅಂದರೆ ೩,೩೫,೮೫೨ ಮತಗಳನ್ನು ಪಡೆದರೆ, ಸಮೀಪದ ಸ್ಪರ್ಧಿ ಕಾಂಗ್ರೆಸ್‌ನ ಜಿ. ಮಾದೇಗೌಡ ಅವರು ಶೇ. ೪೧.೪ ಅಂದರೆ ೩,೦೨,೪೬೪ ಮತ ಪಡೆದಿದ್ದರು. ಚಾಮರಾಜನಗರದಿಂದ ಸಿದ್ಧರಾಜು ಅವರು ಶೇ ೩೦.೭೭ ರಷ್ಟು ಅಂದರೆ ೨,೧೪,೭೪೫ ಮತಗಳನ್ನು ಪಡೆದು ಲೋಕಸಭೆ ಪ್ರವೇಶಿಸಿದರೆ ಸಮೀಪದ ಸ್ಪರ್ಧಿ ಕಾಂಗ್ರೆಸ್‌ನ ವಿ. ಶ್ರೀನಿವಾಸ್ ಪ್ರಸಾದ್ ಅವರು ಶೇ ೨೩.೦ ಅಂದರೆ ೧,೬೬,೩೩೯ ಮತಗಳನ್ನು ಮಾತ್ರ ಪಡೆದರು. ಹಾಸನ ಲೋಕಸಭಾ ಕ್ಷೇತ್ರದಿಂದ ವೈ. ಎನ್. ರುದ್ರೇಶ ಗೌಡ ಅವರು ಶೇ. ೪೧.೩೫ ರಷ್ಟು ಅಂದರೆ ೩,೧೩,೨೪೧ ಮತಗಳಿಸಿ ಆಯ್ಕೆ ಆದರೆ ಪ್ರತಿಸ್ಪರ್ಧಿ ಕಾಂಗ್ರೆಸ್ ಎಸ್. ಎಂ. ಆನಂದ್ ಅವರು ಶೇ. ೩೫.೬೮ ಅಂದರೆ ೨,೩೨,೪೩೨ ಮತಗಳಿಸಿದ್ದರು. ಚಿಕ್ಕಮಗಳೂರು ಕ್ಷೇತ್ರದಿಂದ ಬಿ. ಎಲ್. ಶಂಕರ್ ಅವರು ಶೇ ೩೦.೮೫ ರಷ್ಟು ಅಂದರೆ ೧,೯೫,೮೫೭ ಮತಗಳಿಸಿ ಲೋಕಸಭೆಗೆ ಆಯ್ಕೆ ಆದರೆ ಅವರ ಸಮೀಪ ಸ್ಪರ್ಧಿ ಕಾಂಗ್ರೆಸ್‌ನ ಡಿ. ಕೆ. ತಾರಾದೇವಿ ಸಿದ್ಧಾರ್ಥ ಅವರು ಶೇ. ೩೦.೩೦ರಷ್ಟು ಅಂದರೆ ೧,೯೧,೭೯೮ ಮತಗಳನ್ನು ಗಳಿಸಿದ್ದರು. ಬೆಳಗಾಂ ಲೋಕಸಭಾ ಕ್ಷೇತ್ರದಿಂದ ಎಸ್. ಎಚ್. ಕೌಜಲಗಿ ಅವರು ಶೇ. ೩೫.೦೩ ಅಂದರೆ ೨,೨೬,೪೭೦ ಮತಗಳಿಸಿ ಲೋಕಸಭೆ ಪ್ರವೇಶಿಸಿದರು. ಒಟ್ಟು ೪೫೬ ಅಭ್ಯರ್ಥಿಗಳಿದ್ದ ಈ ಚುನಾವಣಾ ಕಣದಲ್ಲಿ ಬಿ.ಜೆ.ಪಿ.ಯ ಬಾಬನಗೌಡ ಪಾಟೀಲ್ ಅವರು ಶೇ. ೨೪.೦೦ ಅಂದರೆ, ೧,೫೩,೮೪೨ ಮತಗಳನ್ನು ಗಳಿಸಿ ಗೆಲುವಿನ ಅಭ್ಯರ್ಥಿಯ ಸಮೀಪಕ್ಕೆ ಬಂದಿದ್ದರು. ಕಾಂಗ್ರೆಸ್‌ನ ಪ್ರಭಾಕರ ಕೋರೆ ಅವರು ಶೇ ೧೪.೮೦೧ ಅಂದರೆ ೯೪,೯೨೦ ಮತ ಪಡೆದು ಮೂರನೆಯ ಸ್ಥಾನ ಪಡೆದರು. ಚಿಕ್ಕೋಡಿ ಕ್ಷೇತ್ರದಿಂದ ಶ್ರೀಮತಿ ರತ್ನಮಾಲಾ ಧಾರೇಶ್ವರ ಸವಣೂರು ಅವರು ಶೇ. ೫೭.೧೬ ಅಂದರೆ ೩,೦೯,೪೩೫ ಮತಗಳಿಸಿ ಗೆದ್ದರೆ ಸಮೀಪದ ಸ್ಪರ್ಧಿ ಕಾಂಗ್ರೆಸ್ ಪಕ್ಷದ ಸಚಿವರೂ ಆಗಿದ್ದ ಬಿ. ಶಂಕರಾನಂದ ಅವರು ಶೇ. ೩೪.೩೫ ಅಂದರೆ ೧,೯೬,೬೭೬ ಮತಗಳನ್ನು ಮಾತ್ರ ಪಡೆಯುವಲ್ಲಿ ಯಶಸ್ವಿ ಆದರು. ಬಾಗಲಕೋಟೆ ಕ್ಷೇತ್ರದಿಂದ ಎಂ. ವೈ. ಮೇಟಿ ಅವರು ಶೇ. ೩೫.೦೪ ಅಂದರೆ ೨,೫೦,೬೮೩ ಮತ ಪಡೆದು ಆಯ್ಕೆ ಆದರೆ ಅವರ ಸಮೀಪದ ಸ್ಪರ್ಧಿ ಕಾಂಗ್ರೆಸ್‌ನ ಸಿದ್ದೂ ನ್ಯಾಮನಗೌಡ ಅವರು ೩೪.೮೦ ಅಂದರೆ ೨,೨೯,೩೫೧ ಮತಗಳನ್ನು ಪಡೆದರು. ಬಿ.ಜೆ.ಪಿ.ಯ ವೀರಣ್ಣ ಚರಂತಿಮಠ್ ಅವರು ೧,೫೪,೧೬೧ ಮತ ಪಡೆದಿದ್ದರು. ಬಿಜಾಪುರ ಕ್ಷೇತ್ರದಿಂದ ಪಾಟೀಲ್ ಬಸವನಗೌಡ ರುದ್ರನಗೌಡ ಅವರು ೩೬.೬೨ ಅಂದರೆ ೧,೮೫,೫೦೪ ಮತಗಳನ್ನು ಪಡೆದು ಆಯ್ಕೆ ಆದರೆ ಅವರ ಸಮೀಪದ ಸ್ಪರ್ಧಿ ಬಿ.ಜೆ.ಪಿ.ಯ ಬಸವನಗೌಡ ಪಾಟೀಲ್ ಯತ್ನಾಳ್ ಅವರು ೧,೫೪,೯೧೧ ಮತಗಳಿಸಿ ಎರಡನೇ ಸ್ಥಾನ ಪಡೆದಿದ್ದರು. ಕಾಂಗ್ರೆಸ್‌ನ ಬಸರಾಜ್ ಹನುಮಂತ ಬಡಿಗೇರ ಅವರು ೧,೩೩,೯೯೩ ಮತ ಗಳಿಸಿದ್ದರು.

ಈ ಚುನಾವಣೆ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಒಂದು ಮೈಲುಗಲ್ಲು ಆಯಿತು. ೧೬ ಲೋಕಸಭಾ ಸ್ಥಾನ ಗೆಲ್ಲಿಸಿದ ಮುಖ್ಯಮಂತ್ರಿ, ಎಚ್. ಡಿ. ದೇವೇಗೌಡ ಅವರನ್ನು ಜನತಾದಳ ತನ್ನ ಅಭ್ಯರ್ಥಿಯನ್ನಾಗಿ ಪ್ರಧಾನಮಂತ್ರಿ ಸ್ಥಾನಕ್ಕೆ ಸೂಚಿಸಿತು. ವಿವಿಧ

ರಾಜಕೀಯ ಪಕ್ಷಗಳ ನೆರವಿನಿಂದ ಎಚ್. ಡಿ. ದೇವೇಗೌಡ ಅವರು ೧.೬.೯೬ರಂದು ಭಾರತದ ಪ್ರಧಾನಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು. ಜೂನ್, ೯೬ರಲ್ಲಿ ರಾಮಕೃಷ್ಣ ಹೆಗಡೆ ಅವರನ್ನು ಜನತಾದಳದಿಂದ ಅಮಾನತುಗೊಳಿಸಲಾಯಿತು. ಇದು ಜನತಾದಳದ ಒಡಕಿಗೆ ಕಾರಣವಾಗಿ ಜನತಾದಳ ರಾಜ್ಯದಲ್ಲಿ ಅವನತಿಯ ಹಾದಿಯನ್ನು ಹಿಡಿದುದನ್ನು ಇತಿಹಾಸ ದಾಖಲು ಮಾಡುತ್ತದೆ.

## ೧೯೯೮ರ ಜನತಾದಳದ ಚುನಾವಣಾ ಪ್ರಣಾಳಿಕೆ

### ೧. ದೂರದೃಷ್ಟಿ

ಸ್ವಾತಂತ್ರ್ಯ, ಸಾರ್ವಭೌಮತ್ವ, ಸಮಾನತೆ, ಸಾಮಾಜಿಕ ನ್ಯಾಯ ಮತ್ತು ಐಕ್ಯತೆ- ಇವುಗಳ ತಳಹದಿಯಲ್ಲಿ ಕಟ್ಟಲ್ಪಟ್ಟ ಗಣತಾಂತ್ರಿಕ ಸಮಾಜವಾದಕ್ಕೆ ಬದ್ಧವಾಗಿರುವುದು ಜನತಾದಳದ ದೂರದೃಷ್ಟಿ.

೧. ೧೯೮೯-೯೦ರ ರಾಷ್ಟ್ರೀಯ ರಂಗ ಸರ್ಕಾರ, ೯೬-೯೭ರ ಸಂಯುಕ್ತರಂಗ ಸರ್ಕಾರ ದೇಶದ ಉತ್ಕಟ ಸಮಸ್ಯೆಗಳಿಗೆ ಪರಿಹಾರ ಹುಡುಕುವಲ್ಲಿ ಹೆಚ್ಚು ಪ್ರಯತ್ನ ನಡೆಸಿದವು. ಕೃಷಿಗೆ ಒತ್ತು ನೀಡಿ ಸಮಾಜದಲ್ಲಿ ಕೆಳವರ್ಗದವರಿಗೆ ಪ್ರೋತ್ಸಾಹ ನೀಡಿ, ಅಲ್ಪಸಂಖ್ಯಾತರು ಹಾಗೂ ಅಸಹಾಯಕರಿಗೆ ಸಹಾಯ ಮಾಡುವುದರ ಜೊತೆಗೆ ಸಣ್ಣ ಕೈಗಾರಿಕೆ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ವ್ಯವಸ್ಥೆಗೆ ಹೆಚ್ಚು ಒತ್ತು ನೀಡಿ, ರಾಜ್ಯ ಮತ್ತು ಕೇಂದ್ರದ ಸಂಬಂಧ ಉತ್ತಮಗೊಳ್ಳುವುದರ ಜೊತೆಗೆ ನೆರೆಹೊರೆ ರಾಜ್ಯಗಳಲ್ಲೂ ಕೂಡ ಸಂಬಂಧ ವೃದ್ಧಿಸುವಂತೆ ಕಾರ್ಯಕ್ರಮ ಹಾಕಿಕೊಂಡಿತ್ತು. ಹೆಚ್.ಡಿ. ದೇವೇಗೌಡ ಹಾಗೂ ಐ. ಕೆ. ಗುಜ್ರಾಲರ ಸರ್ಕಾರಗಳು ಅತ್ಯಲ್ಪ ಕಾಲದಲ್ಲಿಯೇ ಗಣನೀಯ ಸಾಧನೆ ಸಾಧಿಸಿದ್ದವು.

### ೨. ಸಾಧನೆ

೧. ಜನತಾದಳ ಸರ್ಕಾರ ೧೯೯೬ರಲ್ಲಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ ಆಯವ್ಯಯದಲ್ಲಿ ಹೆಚ್ಚು ಹಣ ಒದಗಿಸಿತ್ತು.

೨. ೯೭-೯೮ರಲ್ಲಿ ಉದ್ಯೋಗ ಸೃಷ್ಟಿಗಾಗಿ ಮತ್ತು ಬಡತನ ನಿವಾರಣೆಗಾಗಿ ಆಯವ್ಯಯದಲ್ಲಿ ೩೫೦೦ ಕೋಟಿ ರೂಪಾಯಿಗಳನ್ನು ಮೀಸಲಾಗಿಟ್ಟು ಗ್ರಾಮೀಣ ಜನರ ಆರೋಗ್ಯ ಮತ್ತು ಶಿಕ್ಷಣಕ್ಕೆ ಒತ್ತು ನೀಡಲಾಗಿತ್ತು.

೩. ಜಮ್ಮು-ಕಾಶ್ಮೀರ ಅಭಿವೃದ್ಧಿಗೆ ೨೫೦೦ ಕೋಟಿ ರೂಪಾಯಿಗಳು ಹಾಗೂ ಈಶಾನ್ಯ ರಾಜ್ಯಗಳ ಅಭಿವೃದ್ಧಿಗೆ ೬೧೦೦ ಕೋಟಿ ರೂಪಾಯಿಗಳನ್ನು ನೀಡುವುದರ ಮೂಲಕ ಈ ಪ್ರದೇಶದ ಅಭಿವೃದ್ಧಿಗೆ ವಿಶೇಷ ಒತ್ತು ನೀಡಲಾಗಿತ್ತು.

೪. ಪ್ರಸಾರ ಭಾರತಿಗೆ ಸ್ವಾಯತ್ತತೆ ನೀಡಲಾಗಿತ್ತು.

೫. ಕೃಷಿ ಕಾರ್ಮಿಕರಿಗೆ ಮನೆ ಕಟ್ಟಲು ಸಹಾಯಧನ ನೀಡಲಾಯಿತು.

೬. ಬಡತನದ ರೇಖೆಯ ಕೆಳಗಿದ್ದವರಿಗೆ ೧೧.೨೩ ಲಕ್ಷ ಮನೆಗಳನ್ನು ಕಟ್ಟಲು ೧೧೮೦ ಕೋಟಿ ರೂಪಾಯಿಗಳನ್ನು ನೀಡಲಾಯಿತು. ರಾಷ್ಟ್ರೀಯ ವೃದ್ಧಾಪ್ಯ ವೇತನ ಯೋಜನೆಯಡಿಯಲ್ಲಿ ೪ ಮಿಲಿಯನ್ ನಿರ್ಗತಿಕರಿಗೆ ಸಹಾಯ ಮಾಡಲಾಯಿತು.

೭. ನೆರೆಹೊರೆ ರಾಷ್ಟ್ರಗಳ ಸಂಬಂಧ ಉತ್ತಮಗೊಳಿಸುವುದರ ಜೊತೆಗೆ ಸಾರ್ಕ್ ಚಟುವಟಿಕೆಗಳಿಗೆ ಹೆಚ್ಚು ಒತ್ತು ನೀಡಲಾಗಿತ್ತು.

೮. ಮುಂದುವರಿದ ರಾಷ್ಟ್ರಗಳಾದ ಅಮೆರಿಕಾ, ಬ್ರಿಟನ್, ರಷ್ಯ ಹಾಗೂ ಐರೋಪ್ಯ ಒಕ್ಕೂಟಗಳ ಜೊತೆಗೆ ಭಾರತದ ಸಂಬಂಧ ಹೆಚ್ಚು ಉತ್ತಮವಾಗಿತ್ತು. ಸಿಟಿಬಿಟಿ ಮತ್ತು ಎನ್‌ಪಿಟಿಗಳನ್ನು ವಿರೋಧಿಸುವಲ್ಲಿ ಸರ್ಕಾರ ಸಫಲವಾಗಿತ್ತು.

೯. ರಾಜ್ಯಗಳಿಗೆ ಹೆಚ್ಚು ಸ್ವಾಯತ್ತತೆ ನೀಡಿ, ಒಂದೇ ರೀತಿಯ ಸಹಕಾರ ಒಕ್ಕೂಟದ ನೀತಿಯನ್ನು ಜಾರಿಗೆ ತಂದಿತು.

೧೦. ಕಳೆದ ೧೧ ವರ್ಷಗಳಲ್ಲಿ ಹಣದುಬ್ಬರ ಇಷ್ಟು ಕಡಿಮೆ ಪ್ರಮಾಣದಲ್ಲಿ ಯಾವಾಗಲೂ ಇರಲಿಲ್ಲ.

### ೩. ಮುಂದಿನ ಕಾರ್ಯಕ್ರಮಗಳು : ಕೃಷಿಗೆ ವಿಶೇಷ ಪ್ರಾಧಾನ್ಯತೆ

೧. ದೇಶದ ಶೇಕಡ ೬೫ರಷ್ಟು ಉದ್ಯೋಗ ನೀಡುವ ಕೃಷಿಗೆ ಹೆಚ್ಚು ಪ್ರಾಧಾನ್ಯ ನೀಡುವುದು.

೨. ೧೯೯೦-೯೧ರಲ್ಲಿ ರಾಷ್ಟ್ರೀಯ ಮೋರ್ಚಾ ಸರ್ಕಾರ ಶೇ. ೪೯ರಷ್ಟನ್ನು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ ಮೀಸಲಾಗಿಟ್ಟಿತ್ತು. ಸಂಯುಕ್ತರಂಗ ಸರ್ಕಾರ ಇದನ್ನು ಮುಂದುವರೆಸಿತು. ರಾಜ್ಯ ಸರ್ಕಾರಗಳಿಗೆ ಶೇ. ೫೦ರ ರಿಯಾಯಿತಿ ಸಾಲ ನೀಡುವುದರ ಮೂಲಕ ಕೃಷಿ, ನೀರಾವರಿ, ಕುಡಿಯುವ ನೀರು ಮುಂತಾಗಿ ಗ್ರಾಮೀಣಾಭಿವೃದ್ಧಿಗೆ ಹೆಚ್ಚು ಒತ್ತು ನೀಡಲಾಗುವುದು.

೩. ಕೃಷಿ ಮತ್ತು ಕೈಗಾರಿಕಾ ಉತ್ಪನ್ನಗಳ ಬೆಳೆಗಳಲ್ಲಿ ಸಮತೋಲನವನ್ನು ಜಾರಿಗೊಳಿಸುವುದು.

೪. ಕೃಷಿ ಕೆಲಸಗಳಲ್ಲಿ ತೊಡಗಿದಾಗ ಮರಣ ಹೊಂದಿದ ರೈತರ ಕುಟುಂಬಕ್ಕೆ ೫೦ ಸಾವಿರ ರೂಪಾಯಿಗಳ ಸಹಾಯಧನ ನೀಡಲಾಗುವುದು.

೫. ''ಗಾಲಿಗಳ ಮೇಲೆ ಕಾರ್ಖಾನೆ'' ಯೋಜನೆಯಡಿಯಲ್ಲಿ ರೈತರಿಗೆ ರೈತರ ಕೃಷಿ ಉತ್ಪನ್ನಗಳಿಗೆ ಯೋಗ್ಯಬೆಲೆ ದೊರಕುವಂತೆ ನೋಡಿಕೊಳ್ಳುವುದು.

೬. ರಸಗೊಬ್ಬರಗಳಿಗೆ ರಿಯಾಯಿತಿ, ಕಡಿಮೆ ಬೆಲೆಯಲ್ಲಿ ಆಗತ್ಯ ವಿದ್ಯುತ್ ಪೂರೈಕೆ, ಬ್ಯಾಂಕುಗಳಿಂದ ಸುಲಭ ಸಾಲಗಳು, ಕೃಷಿ ಉತ್ಪನ್ನಗಳ ಸುಲಭ ಸಾಗಾಣಿಕೆಗೆ ಬೇಕಾದ ಸೌಕರ್ಯ, ಬೇಗ ಸಾಲ ಮರುಪಾವತಿ ಮಾಡಿದಲ್ಲಿ ಬಡ್ಡಿಯಲ್ಲಿ ಶೇ. ೫ ರ ರಿಯಾಯಿತಿ ಜಾರಿಗೊಳಿಸಲಾಗುವುದು.

೭. ೫೦೦ ಕೋಟಿ ರೂಪಾಯಿಗಳ ಕೃಷಿ ಬೆಲೆ ಸ್ಥಿರತೆ ನೀತಿಗಾಗಿ ಹಣವನ್ನು ಮೀಸಲಿಡಲಾಗುವುದು. ಬೆಳೆ ವಿಮೆ ಯೋಜನೆಯನ್ನು ಜಾರಿಗೊಳಿಸಲಾಗುವುದು, ಭಾರತೀಯ ಕೃಷಿ ಪರಿಶೋಧನಾ ಪರಿಷತ್ತು ಮತ್ತು ಕೃಷಿ ವಿಶ್ವವಿದ್ಯಾನಿಲಯಗಳ ಚಟುವಟಿಕೆಗಳನ್ನು ಚುರುಕುಗೊಳಿಸುವುದು, ದೂರದರ್ಶನದಲ್ಲಿ ಕೃಷಿ ಮಾಹಿತಿಗೆ ಹೆಚ್ಚು ಆದ್ಯತೆ ನೀಡುವುದು, ಶೈತ್ಯಾಗಾರ ಪ್ರಾರಂಭಿಸುವುದು ಹಾಗೂ ಗ್ರಾಮೀಣ ಯುವ ಜನರು ಕೃಷಿ ಆಧಾರಿತ ಸ್ವಯಂ ಉದ್ಯೋಗ ಯೋಜನೆಯನ್ನು ಅಳವಡಿಸಿಕೊಳ್ಳಲು ಸಹಾಯಧನ ನೀಡುವುದು ಇವು ಜನತಾದಳದ ಆದ್ಯತೆಗಳು.

### ೪. ಗ್ರಾಮಸಭೆಗಳ ಪಾತ್ರವನ್ನು ಹೆಚ್ಚಿಸುವುದು

ಗ್ರಾಮಸಭೆಗಳು ಮತ್ತು ನಗರಗಳ ವಾರ್ಡ್ ಅಸೆಂಬ್ಲಿಗಳಿಗೆ ಹೆಚ್ಚು ಅಧಿಕಾರ ನೀಡಿ ಅವುಗಳ ಅನಿಸಿಕೆಗಳನ್ನು ಯೋಜನಾ ಪ್ರಕ್ರಿಯೆಯಲ್ಲಿ ಅಳವಡಿಸಿ ಕಾರ್ಯಕ್ರಮಗಳು ಜಾರಿಯಾಗುವಂತೆ ನೋಡಿಕೊಳ್ಳಲಾಗುವುದು.

### ೫. ಕೈಗಾರಿಕಾ ನೀತಿ

ಗ್ರಾಮೋದ್ಯೋಗಕ್ಕೆ, ಗುಡಿ ಕೈಗಾರಿಕೆಗೆ ಹಾಗೂ ಕೃಷಿ ಆಧಾರಿತ ಕೈಗಾರಿಕೆಗಳಿಗೆ ಹೆಚ್ಚು ಒತ್ತು ನೀಡಲಾಗುವುದಲ್ಲದೆ, ಕೈಗಾರಿಕೆಗಳನ್ನು ಆಧುನೀಕರಣಗೊಳಿಸುವುದಕ್ಕೆ ಹಾಗೂ ಬಹುರಾಷ್ಟ್ರೀಯ ಕಂಪನಿಗಳ ಒತ್ತಡವನ್ನು ತಡೆಯಲು ಅಗತ್ಯ ಕ್ರಮ ತೆಗೆದುಕೊಳ್ಳಲಾಗುವುದು.

### ೬. ಉದ್ಯೋಗ

ಕೃಷಿ ಮತ್ತು ಕೃಷಿ ಆಧಾರಿತ ಸಣ್ಣ ಕೈಗಾರಿಕೆಗಳನ್ನು ಹೆಚ್ಚಿಸಲು ಬೇಕಾದ ವಾತಾವರಣವನ್ನು ಸೃಷ್ಟಿಸಿ ತನ್ಮೂಲಕ ಜನರಿಗೆ ಉದ್ಯೋಗಾವಕಾಶ ಕಲ್ಪಿಸುವುದು.

### ೭. ಜಾಗತೀಕರಣ ಮತ್ತು ಉದಾರೀಕರಣ

ಭಾರತದ ಸ್ವಾಯತ್ತತೆಯನ್ನು ದೃಷ್ಟಿಯಲ್ಲಿಟ್ಟುಕೊಂಡ ಜಾಗತೀಕರಣ ಮತ್ತು ಉದಾರೀಕರಣಕ್ಕೆ ಎಷ್ಟು ಬೇಕೋ ಅಷ್ಟು ಮಾತ್ರ ಅವಕಾಶ ನೀಡಲಾಗುವುದು. ಉದಾರೀಕರಣದಲ್ಲಿ ಜನರಿಗಾಗಿ ಮಾರುಕಟ್ಟೆಯೇ ಹೊರತು ಮಾರುಕಟ್ಟೆಗಾಗಿ ಜನರಲ್ಲ ಎಂಬ ನೀತಿಯನ್ನು ಅನುಸರಿಸಲಾಗುವುದು. ಮೂಲಭೂತ ಸೌಲಭ್ಯಗಳ ಅಭಿವೃದ್ಧಿಗೆ ವಿದೇಶಿ ಬಂಡವಾಳವನ್ನು ವಿನಿಯೋಗಿಸಲು ಅವಕಾಶ ಮಾಡಲಾಗುವುದು. ಭಾರತದಲ್ಲಿ ಕೈಗಾರಿಕೆ ಹೇಗೆ ಆರಂಭಿಸಬೇಕೆಂಬುದನ್ನು ವಿದೇಶಿ ಹೂಡಿಕೆದಾರರು ತೀರ್ಮಾನಿಸಲು ಅವಕಾಶ ನೀಡುವುದಿಲ್ಲ ಹಾಗೂ ವಿಮಾ ಕ್ಷೇತ್ರವನ್ನು ವಿದೇಶಿ ಕಂಪನಿಗಳಿಗೆ ನೀಡಲಾಗಿರುವುದಿಲ್ಲ. ತಾರಾಪುರವಾಲಾ ಸಮಿತಿಯ ವರದಿಯನ್ನು ಜಾರಿಗೊಳಿಸಲಾಗುವುದು.

### ೮. ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳ ಸುಧಾರಣೆ

ಆಡಳಿತದಲ್ಲಿ ನೌಕರರಿಗೆ ಹೆಚ್ಚು ಅವಕಾಶ ನೀಡುವುದರ ಜೊತೆಗೆ ಕೆಲಸದಲ್ಲಿ ಸ್ವಾಯತ್ತತೆ ನೀಡಿ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಹೆಚ್ಚು ಲಾಭ ಗಳಿಸುವಂತೆ ನೋಡಿಕೊಳ್ಳಲಾಗುವುದು. ಇವುಗಳ ಉತ್ಪನ್ನಗಳಿಗೆ ಅಗತ್ಯ ಮಾರುಕಟ್ಟೆ ವ್ಯವಸ್ಥೆ ಕೂಡ ಮಾಡಲಾಗುವುದು.

## ೯. ಸ್ವಾವಲಂಬನೆ ನೀತಿ

ಆರ್ಥಿಕ ಸುಧಾರಣಾ ನೀತಿಯನ್ನು ಭಾರತ ಒಪ್ಪಿಕೊಂಡಾಗ ಜಾಗತೀಕರಣವನ್ನು ಒಪ್ಪಿಕೊಂಡಿತು. ಹೀಗೆ ಜಾಗತೀಕರಣ ಗೊಳಿಸುವಾಗ ಸ್ವಾವಲಂಬನೆ ನೀತಿಗೆ ಹೆಚ್ಚು ಒತ್ತು ನೀಡುವುದು ಅವಶ್ಯಕ. ಆಹಾರ ಸಮೃದ್ಧಿ, ನಮ್ಮದೇ ಸಂಶೋಧನೆ ಆಧಾರಿತ ವಿಜ್ಞಾನ ಮತ್ತು ತಂತ್ರಜ್ಞಾನ, ನಮ್ಮ ಶಕ್ತಿಯ ಆಧಾರಿತ ರಕ್ಷಣಾ ವ್ಯವಸ್ಥೆ - ಇವು ನಮ್ಮ ಸ್ವಾವಲಂಬನೆ ನೀತಿ. ನಮ್ಮತನಕ್ಕೆ ದಕ್ಕೆ ಬಾರದೆ ಇದ್ದ ಕ್ಷೇತ್ರಗಳಲ್ಲಿ ಜಾಗತೀಕರಣಕ್ಕೆ ಅವಕಾಶ ನೀಡಲಾಗುವುದು.

## ೧೦. ನಗರಾಭಿವೃದ್ಧಿ

ನಗರಾಭಿವೃದ್ಧಿಗಾಗಿ ಒಳ್ಳೆಯ ಯೋಜನೆಗಳನ್ನು ಜಾರಿಗೊಳಿಸಿ ನಗರ ಪ್ರದೇಶದ ಜಾಗವನ್ನು ಭೂಗಳ್ಳರ ಹಿಡಿತದಿಂದ ತಪ್ಪಿಸಲು ಕ್ರಮ ಕೈಗೊಳ್ಳಲಾಗುವುದು. ರಾಷ್ಟ್ರೀಯ ನಗರಾಭಿವೃದ್ಧಿ ಯೋಜನೆಯನ್ನು ಜಾರಿಗೆ ತಂದು ಕುಡಿಯುವ ನೀರು, ಒಳಚರಂಡಿ ವ್ಯವಸ್ಥೆ, ಉತ್ತಮ ರಸ್ತೆಗಳು, ವಿದ್ಯುತ್ ದೀಪ, ಕೊಳಚೆ ನಿರ್ಮೂಲನೆಯನ್ನು ಜಾರಿಗೊಳಿಸಲಾಗುವುದು.

## ೧೧. ವಸತಿಹೀನರಿಗೆ ಮನೆ

ವಸತಿಯನ್ನು ಒಂದು ಕೈಗಾರಿಕೆ ಎಂದು ಪರಿಗಣಿಸಿ ಇದಕ್ಕಾಗಿ ಧನಸಹಾಯ ಹಾಗೂ ಸಹಕಾರ ವಸತಿಯೋಜನೆಯನ್ನು ಜಾರಿಗೊಳಿಸುವುದಲ್ಲದೆ, ಎಲ್ಲಾ ವರ್ಗಗಳಿಗೆ ವಸತಿ ಕಲ್ಪಿಸಲು ವಿಶೇಷ ಕಾರ್ಯಕ್ರಮ ರೂಪಿಸಲಾಗುವುದು.

## ೧೨. ಶಿಕ್ಷಣ ನೀತಿ

ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಿ ಹಿಂದುಳಿದ ವರ್ಗ, ಅಲ್ಪಸಂಖ್ಯಾತರು ಹಾಗೂ ಮಹಿಳೆಯರ ಶಿಕ್ಷಣಕ್ಕೆ ವಿಶೇಷ ಒತ್ತು ನೀಡಲಾಗುವುದು. ೨೦೧೦ರೊಳಗೆ ಸಂಪೂರ್ಣ ಸಾಕ್ಷರತೆ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುವುದು. ಒಟ್ಟು ಆದಾಯದ ಶೇಕಡ ೬ ರಷ್ಟನ್ನು ಶಿಕ್ಷಣಕ್ಕೆ ಮೀಸಲಿಟ್ಟು ಅದರಲ್ಲಿ ಶೇಕಡ ೫೦ರಷ್ಟನ್ನು ಪ್ರಾಥಮಿಕ ಶಿಕ್ಷಣಕ್ಕೆ ಮೀಸಲಿಡಲಾಗುವುದು.

## ೧೩. ಅಲ್ಪಸಂಖ್ಯಾತರೆಡೆ ವಿಶೇಷ ಗಮನ

ಅಲ್ಪಸಂಖ್ಯಾತರಿಗಾಗಿ ವಿಶೇಷ ಸಚಿವಾಲಯ ಸೃಷ್ಟಿಸುವುದರ ಜೊತೆಗೆ ಇದರಡಿಯಲ್ಲಿ ಹಜ್ ಯಾತ್ರೆಯನ್ನು ತರಲಾಗುವುದು. ಉರ್ದು ಭಾಷಿಕರು ಹೆಚ್ಚಾಗಿರುವ ಸ್ಥಳಗಳಲ್ಲಿ ಉರ್ದು ಪ್ರಾಥಮಿಕ ಶಾಲೆಗಳನ್ನು ತೆರೆಯಲು ಕೇಂದ್ರ ಸರ್ಕಾರದಿಂದ ಧನಸಹಾಯ ನೀಡಲಾಗುವುದು. ಅಲ್ಪಸಂಖ್ಯಾತರಿಗೆ ಶಿಕ್ಷಣ ಸಂಸ್ಥೆಗಳನ್ನು ತೆರೆಯಲು ಮುಂದೆ ಬರುವ ಸರ್ಕಾರೇತರ ಸಂಸ್ಥೆಗಳಿಗೆ ಸಹಾಯಧನ ನೀಡಲಾಗುವುದು. ಅಲ್ಪಸಂಖ್ಯಾತರ ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಿ, ಗ್ರಾಮೀಣ ಕುಶಲಕರ್ಮಿಗಳ ಹಾಗೂ ನಿರುದ್ಯೋಗಿ ಯುವಕರ ಅಭ್ಯುದಯಕ್ಕೆ ಧನಸಹಾಯ ನೀಡಲಾಗುವುದು. ಸರ್ಕಾರದ ನೌಕರಿಯಲ್ಲಿ ಅಲ್ಪಸಂಖ್ಯಾತರಿಗೆ ಹೆಚ್ಚು ಅವಕಾಶ ನೀಡಲು ಕ್ರಮ ಕೈಗೊಳ್ಳಲಾಗುವುದು. ಮೌಲಾನಾ ಆಜಾದ್ ಎಜುಕೇಶನ್ ಫೌಂಡೇಶನ್ನಿಗೆ ರೂ. ೭೦ ಕೋಟಿ ನೀಡಿದ್ದು, ಇದನ್ನು ೧೫೦ ಕೋಟಿ ರೂಪಾಯಿಗಳಿಗೆ ಹೆಚ್ಚಿಸಲಾಗುವುದು.

## ೧೪. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ವಿಶೇಷ ಗಮನ

ಅಸ್ಪೃಶ್ಯತೆ ನಿವಾರಣೆಗೆ ಜನತಾದಳ ಆದ್ಯತೆ ನೀಡುತ್ತದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ರಿಕ್ತಸ್ಥಾನಗಳನ್ನು ತುಂಬಲು ೧೯೯೬ರಲ್ಲಿ ಕ್ರಮ ಕೈಗೊಳ್ಳಲಾಗಿದ್ದು ಇದರಿಂದಾಗಿ ೧೫ ಸಾವಿರ ಖಾಲಿ ಹುದ್ದೆಗಳು ಭರ್ತಿಯಾಗಿದ್ದು, ಈ ಪ್ರಯತ್ನವನ್ನು ಮುಂದುವರಿಸಲಾಗುವುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ವಸತಿಶಾಲೆಗಳನ್ನು ತೆರೆಯಲು ಕ್ರಮ ತೆಗೆದುಕೊಳ್ಳಲಾಗುವುದು. ಹೆಣ್ಣು ಮಕ್ಕಳಿಗಾಗಿ ವಿಶೇಷ ವಸತಿ ಶಾಲೆಗಳನ್ನು ತೆರೆಯಲಾಗುವುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭಿವೃದ್ಧಿ ಪ್ರಾಧಿಕಾರವನ್ನು ಸ್ಥಾಪಿಸಲಾಗುವುದು. ಪರಿಶಿಷ್ಟ ಜಾತಿ ಮತ್ತು ಪಂಗಡದವರ ಉತ್ಪನ್ನಗಳ ಮಾರಾಟಕ್ಕೆ ಸಹಕಾರ ಸಂಘಗಳನ್ನು ತೆರೆಯಲಾಗುವುದು. ಪರಿಶಿಷ್ಟ ಪಂಗಡದ ಬಗ್ಗೆ 'ಭುರಿಯಾ ಸಮಿತಿ'ಯ ಶಿಫಾರಸ್ಸುಗಳನ್ನು ಜಾರಿಗೊಳಿಸಲಾಗುವುದು.

## ೧೫. ಎಲ್ಲರಿಗೂ ಆರೋಗ್ಯ

ರಾಷ್ಟ್ರೀಯ ಆರೋಗ್ಯ ಯೋಜನೆಯನ್ನು ಜಾರಿಗೊಳಿಸಿ ಅದಕ್ಕೆ ಕೇಂದ್ರ ಸರ್ಕಾರದ ಅನುದಾನ ಪಡೆಯುವುದಲ್ಲದೆ, ಆಸ್ಪತ್ರೆಗಳಲ್ಲಿ ಉಪಕರಣಗಳು, ವೈದ್ಯರು ಹಾಗೂ ಅರೆವೈದ್ಯಕೀಯ ಸಿಬ್ಬಂದಿಯನ್ನು ನೇಮಿಸಲು ಕ್ರಮ ಕೈಗೊಳ್ಳಲಾಗುವುದು.

## ೧೬. ಬಡವರ ವೈದ್ಯಕೀಯ ಚಿಕಿತ್ಸೆಗೆ ನಿಧಿ ಸ್ಥಾಪನೆ

ಕ್ಯಾನ್ಸರ್, ಏಡ್ಸ್, ಮೆದುಳು ಜ್ವರ, ಹೃದಯ ಮತ್ತು ಮೂತ್ರಪಿಂಡಗಳಿಗೆ ಸಂಬಂಧಪಟ್ಟ ಖಾಯಿಲೆಗಳಿಂದ ಬಳಲುವ ಬಡವರಿಗಾಗಿ ಧನಸಹಾಯ ಮಾಡಲು ೫ ಕೋಟಿ ರೂಪಾಯಿಗಳ ನಿಧಿಯನ್ನು ಸ್ಥಾಪಿಸಲಾಗುವುದು.

## ೧೭. ಜನಸಂಖ್ಯೆ

ಜನಸಂಖ್ಯೆಯ ಏರಿಕೆಯನ್ನು ತಡೆಯಲು ಸೂಕ್ತಕ್ರಮ ಕೈಗೊಳ್ಳಲಾಗುವುದು.

## ೧೮. ಪರಿಸರ

ಹಳ್ಳಿಗಾಡಿನ ಬಡವರಿಗೆ ಗ್ರಾಹಕ ಹಕ್ಕುಗಳಿಗೆ ಇರುವ ಅಡೆತಡೆಗಳನ್ನು ನಿವಾರಿಸಲು ಕ್ರಮ ಕೈಗೊಳ್ಳಲಾಗುವುದು. ಅಭಿವೃದ್ಧಿ ಕಾರ್ಯಕ್ರಮಗಳು ಪರಿಸರಕ್ಕೆ ಯಾವುದೇ ರೀತಿಯ ಧಕ್ಕೆ ತರದಂತೆ ನೋಡಿಕೊಳ್ಳಲಾಗುವುದು.

## ೧೯. ಕೈಗಾರಿಕಾ ನೀತಿ

ಮಹಿಳಾ ಮತ್ತು ಅಸಂಘಟಿತ ಕಾರ್ಮಿಕರಿಗೆ ವಿಮಾ ಯೋಜನೆಯನ್ನು ಜಾರಿಗೊಳಿಸಲಾಗುವುದು. ಹಾಗೆಯೇ ಲಾರಿ ಚಾಲಕರಿಗೆ ಕೂಡ ೧ ಕೋಟಿ ರೂಪಾಯಿಗಳ ವಿಮಾ ಯೋಜನೆಯನ್ನು ಜಾರಿಗೊಳಿಸಲಾಗುವುದು. ಕಾರ್ಮಿಕ ಕಾನೂನುಗಳಿಗೆ ತಿದ್ದುಪಡಿ ತಂದು ಕಾರ್ಮಿಕರು ಮತ್ತು ಮಾಲೀಕರ ಸಂಬಂಧವನ್ನು ಉತ್ತಮಗೊಳಿಸಲಾಗುವುದು. ಕಾರ್ಮಿಕ - ಮಾಲೀಕರ ಸಂಬಂಧದ ಬಗ್ಗೆ ಒಂದು ಯೋಜನೆಯನ್ನು ಜಾರಿಗೆ ತಂದು ಸರ್ಕಾರದ ಮಧ್ಯಪ್ರವೇಶವನ್ನು ತಡೆಗಟ್ಟಿ ಅವರಲ್ಲಿ ಸೌಹಾರ್ದಯುತವಾದ ಸಂಬಂಧ ಅಭಿವೃದ್ಧಿಗೊಳ್ಳುವಂತೆ ನೋಡಿಕೊಳ್ಳಲಾಗುವುದು. ಕನಿಷ್ಠ ವೇತನವನ್ನು ಜಾರಿಗೊಳಿಸಲಾಗುವುದು.

## ೨೦. ಸಹಕಾರ ಒಕ್ಕೂಟ ವ್ಯವಸ್ಥೆ

ರಾಜ್ಯ ಸರ್ಕಾರವನ್ನು ಒಳಗೊಂಡಂತೆ ಸಹಕಾರ ಒಕ್ಕೂಟ ವ್ಯವಸ್ಥೆಯನ್ನು ಬಲಪಡಿಸಲಾಗುವುದು. ಯೋಜನಾ ಆಯೋಗ ಮತ್ತು ಹಣಕಾಸು ಆಯೋಗಗಳು ಈ ದಿಸೆಯಲ್ಲಿ ಸೂಕ್ತ ಕ್ರಮ ಕೈಗೊಳ್ಳುವುವು. ಕೇಂದ್ರ ಪ್ರಾಯೋಜಿತ ಕಾರ್ಯಕ್ರಮಗಳನ್ನು ಕಡಿಮೆ ಮಾಡಿ ರಾಜ್ಯಗಳಿಗೆ ಮತ್ತು ಪಂಚಾಯತ್‌ಗಳಿಗೆ ಹಣವನ್ನು ಹಸ್ತಾಂತರಿಸಲಾಗುವುದು. ಗಾಡ್ಗೀಳ್ ಸಿದ್ಧಾಂತದಂತೆ ಕೇಂದ್ರ ಸರ್ಕಾರ ನೀಡುವ ಹಣವು ರಾಜ್ಯಗಳ ಬಡವರಿಗೆ ಮತ್ತು ಹಿಂದುಳಿದ ವರ್ಗದವರಿಗೆ ಸರಿಯಾಗಿ ಮುಟ್ಟುವಂತೆ ನೋಡಿಕೊಳ್ಳಲಾಗುವುದು. ರಾಜ್ಯ ಸರ್ಕಾರಗಳಿಗೆ ಮಾರಾಟ ತೆರಿಗೆಯನ್ನು ವಿಧಿಸಲು ಅಧಿಕಾರ ನೀಡಲಾಗುವುದು. ಸಂವಿಧಾನದ ೨೬೮ನೆಯ ವಿಧಿಯಲ್ಲಿ ಸೂಚಿಸಿದ ಆದಾಯದ ಮೂಲಗಳನ್ನು ರಾಜ್ಯ ಸರ್ಕಾರಗಳಿಗೆ ತಲುಪುವಂತೆ ನೋಡಿಕೊಳ್ಳಲಾಗುವುದು. ಮಾರಾಟ ತೆರಿಗೆ ಮತ್ತು ಮೌಲ್ಯವರ್ಧಿತ ತೆರಿಗೆಗಳಿಂದ ಪಂಚಾಯತಿಗಳು ಸ್ಥಳೀಯವಾಗಿ ಸಂಪನ್ಮೂಲವನ್ನು ಕ್ರೋಡೀಕರಿಸಲು ಅವಕಾಶ ನೀಡಲಾಗುವುದು.

## ೨೧. ಉದ್ಯೋಗಾವಕಾಶ ವಿಸ್ತರಣೆ

ಕೆಲಸದ ಹಕ್ಕನ್ನು ಮೂಲಭೂತ ಹಕ್ಕನ್ನಾಗಿಸಿ ಉದ್ಯೋಗ ಭರವಸೆ ಯೋಜನೆಗಳನ್ನು ಜಾರಿಗೊಳಿಸಲಾಗುವುದು. ಖಾಸಗಿ ವಲಯದವರು ಸರ್ಕಾರದ ಸಹಾಯವನ್ನು ಕೇಳಲು ಬಂದಾಗ ನಿರುದ್ಯೋಗಿ ಯುವಕರಿಗೆ ಹೆಚ್ಚು ಉದ್ಯೋಗ ವಹಿಸಿಕೊಡುವಂತೆ ಅವರ ಮೇಲೆ ಷರತ್ತು ವಿಧಿಸುವುದು. ಸ್ವಯಂ ಉದ್ಯೋಗ ಯೋಜನೆಯಲ್ಲಿ ಹೆಚ್ಚು ಜನ ಯುವಕರನ್ನು ತೊಡಗಿಸಲಾಗುವುದು. ೧೦ನೆಯ ತರಗತಿಯ ಮೇಲೆ ಓದುವ ವಿದ್ಯಾರ್ಥಿಗಳು ಸರ್ಕಾರಿ ಉದ್ಯೋಗಕ್ಕಾಗಿ ಅರ್ಜಿ ಸಲ್ಲಿಸುವಾಗ ನೀಡಬೇಕಾದ ಅರ್ಜಿ ಶುಲ್ಕದಲ್ಲಿ ರಿಯಾಯಿತಿ ನೀಡಲಾಗುವುದು.

## ೨೨. ಹಿಂದುಳಿದ ವರ್ಗ ಹಾಗೂ ಮುಂದುವರಿದ ಜಾತಿಗಳ ಬಡವರಿಗೆ ಮೀಸಲಾತಿ.

ಸಂವಿಧಾನದ ೧೫(೪) ನೇ ವಿಧಿಯಂತೆ ಹಿಂದುಳಿದ ವರ್ಗದವರಿಗೆ ನೀಡುವ ಮೀಸಲಾತಿಯನ್ನು ಮುಂದುವರಿಸಿ, ಮುಂದುವರಿದ ಜಾತಿಯಲ್ಲಿರುವ ಬಡವರಿಗೆ ಸಹ ಈ ಅನುಕೂಲ ದೊರೆಯುವಂತೆ ನೋಡಿಕೊಳ್ಳಲಾಗುವುದು. ಹಿಂದುಳಿದ ವರ್ಗಗಳ ಆರ್ಥಿಕ ಅಭಿವೃದ್ಧಿ

ನಿಗಮವನ್ನು ಸ್ಥಾಪಿಸಲಾಗುವುದು. ಮುಸ್ಲಿಂ ಮತ್ತು ಇತರ ಧಾರ್ಮಿಕ ಅಲ್ಪಸಂಖ್ಯಾತರಿಗೆ, ಹಿಂದುಳಿದ ವರ್ಗದವರಿಗೆ ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿ ದೊರಕುವಂತೆ ನೋಡಿಕೊಳ್ಳಲಾಗುವುದು.

### ೨೩. ಲಿಂಗ ಸಮಾನತ್ವ

ಸ್ತ್ರೀಯರಿಗೆ ಶೇಕಡ ೩೩ ಭಾಗವನ್ನು ಸಂಸತ್ ಮತ್ತು ರಾಜ್ಯ ಶಾಸನಸಭೆಗಳಲ್ಲಿ ನೀಡಲು ಹಾಗೂ ಶೇಕಡ ೩೦ ರಷ್ಟು ಸರ್ಕಾರಿ ನೌಕರಿಯಲ್ಲಿ ಹಾಗೂ ಸಾರ್ವಜನಿಕ ಮತ್ತು ಖಾಸಗಿ ವಲಯಗಳಲ್ಲಿನ ಉದ್ಯೋಗಗಳಲ್ಲಿ ಮೀಸಲಾತಿ ನೀಡಲು ವ್ಯವಸ್ಥೆ ಮಾಡಲಾಗುವುದು. ವಿಚ್ಛೇದನಗೊಂಡ ಹಾಗೂ ಕೈಬಿಟ್ಟ ಹೆಂಗಸರ ಜೀವನ ನಿರ್ವಹಣೆಗೆ ನೀಡುವ ಹಣವನ್ನು ಹೆಚ್ಚಿಸಲಾಗುವುದು. ಹೆಣ್ಣು ಮಕ್ಕಳಿಗಾಗಿ ದೂರಶಿಕ್ಷಣ ಕಾರ್ಯಕ್ರಮ ಹಾಗೂ ಹೆಣ್ಣು ಮಗು ಹುಟ್ಟಿದ ಕೂಡಲೇ ೧ ಸಾವಿರ ರೂಪಾಯಿಗಳನ್ನು ಠೇವಣಿ ಇಟ್ಟು ೧೮ ವರ್ಷಗಳ ನಂತರ ಅದನ್ನು ಅವರ ಅನುಕೂಲಕ್ಕೆ ನೀಡಲಾಗುವುದು. ಮಹಿಳೆಯರಿಗೆ ಕುಡಿಯುವ ನೀರಿನ ವ್ಯವಸ್ಥೆ, ಹೊಗೆರಹಿತ ಒಲೆ ನೀಡಲಾಗುವುದು. ಸ್ವಯಂ ಉದ್ಯೋಗ ಯೋಜನೆಯಲ್ಲಿನ ಮಹಿಳೆಯರಿಗಾಗಿ ಆರ್ಥಿಕ ಅನುಕೂಲತೆಗಳನ್ನು ನೀಡಲಾಗುವುದು. ಪೊಲೀಸ್ ಸೇವೆಯಲ್ಲಿ ಮಹಿಳೆಯರಿಗೆ ಹೆಚ್ಚಿನ ಅವಕಾಶ ನೀಡಲಾಗುವುದು.

### ೨೪. ಅಂಗವಿಕಲರಿಗೆ ಸ್ವಯಂ ಉದ್ಯೋಗ ಯೋಜನೆ

ಅಂಗವಿಕಲರಿಗೆ ೨೦ ಸಾವಿರ ರೂಪಾಯಿಗಳ ಧನಸಹಾಯವನ್ನು ನೀಡಿ ಅವರು ಸ್ವಯಂ ಉದ್ಯೋಗವನ್ನು ಕೈಗೊಳ್ಳುವಂತೆ ಉತ್ತೇಜನ ನೀಡಲಾಗುವುದು. ಈ ಉದ್ದೇಶಕ್ಕೆ ವರ್ಷಕ್ಕೆ ೨೦೦ ಕೋಟಿ ರೂಪಾಯಿಗಳ ಹಣ ಮೀಸಲಿಡಲಾಗುವುದು.

### ೨೫. ವಿಜ್ಞಾನ ಮತ್ತು ತಂತ್ರಜ್ಞಾನ

ವಿಜ್ಞಾನ ಮತ್ತು ತಂತ್ರಜ್ಞಾನದ ಅಭಿವೃದ್ಧಿಗೆ ಒಂದು ಸಲಹಾ ಮಂಡಳಿಯನ್ನು ಸ್ಥಾಪಿಸಿ ಒಂದು ವಿಶೇಷ ಯೋಜನೆಯನ್ನು ತಯಾರಿಸಲಾಗುವುದು. ಶಿಕ್ಷಣದ ಎಲ್ಲಾ ಹಂತಗಳಲ್ಲೂ ವೈಜ್ಞಾನಿಕ ಮನೋಭಾವವನ್ನು ಬೆಳೆಸಲಾಗುವುದು.

### ೨೬. ಮಾಧ್ಯಮ ನೀತಿ

ಮಾಧ್ಯಮ ಆಯೋಗವನ್ನು ರಚಿಸಿ ಸ್ವಾತಂತ್ರ್ಯದ ನಿಜವಾದ ಅರ್ಥದಲ್ಲಿ ಮಾಧ್ಯಮಗಳು ಕೆಲಸ ಮಾಡಲು ಅನುಕೂಲತೆ ಕಲ್ಪಿಸಲಾಗುವುದು.

### ೨೭. ಮಾಹಿತಿ ಹಕ್ಕು

ಮಾಹಿತಿ ಹಕ್ಕಿನ ಕಾಯಿದೆಯನ್ನು ಜಾರಿಗೊಳಿಸಿ ರಾಷ್ಟ್ರೀಯ ಭದ್ರತೆಗೆ ಹೊರತುಪಡಿಸಿ, ಉಳಿದ ಎಲ್ಲಾ ಮಾಹಿತಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಸೋಡಿಕೊಳ್ಳಲಾಗುವುದು.

### ೨೮. ವಿದೇಶಾಂಗ ನೀತಿ

'ಗುಜ್ರಾಲ್ ಡಾಕ್ಟ್ರಿನ್'ನ್ನು ದೃಷ್ಟಿಯಲ್ಲಿಟ್ಟುಕೊಂಡು ವಿದೇಶಿ ನೀತಿಯನ್ನು ರೂಪಿಸಲಾಗುವುದು. ದಕ್ಷಿಣ ಏಷ್ಯ ದೇಶಗಳ ಸಂಬಂಧ ಉತ್ತಮಗೊಳ್ಳುವಂತೆ ನೋಡಿಕೊಳ್ಳಲಾಗುವುದು. ಸಾರ್ಕ್ ದೇಶಗಳ ಮಧ್ಯೆ ವ್ಯಾಪಾರ, ವ್ಯವಹಾರ ಹಾಗೂ ಸಹಕಾರ ಬೆಳೆಯುವಂತೆ ನೋಡಿಕೊಳ್ಳಲಾಗುವುದು. ಬಲಿಷ್ಠ ರಾಷ್ಟ್ರಗಳ ಜೊತೆಗೆ ಮಾತ್ರವಲ್ಲದೆ ಅಮೆರಿಕಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕ ಮತ್ತು ಇತರ ರಾಷ್ಟ್ರಗಳ ಸಂಬಂಧ ವೃದ್ಧಿಸಲು ಪ್ರಯತ್ನಿಸಲಾಗುವುದು. ಎನ್.ಪಿ.ಟಿ. ಮತ್ತು ಸಿ.ಟಿ.ಬಿ.ಟಿ.ಯನ್ನು ವಿರೋಧಿಸುವುದಲ್ಲದೆ, ಪ್ರಪಂಚದಿಂದಲೇ ಎ.ಬಿ.ಸಿ. ಅಣ್ವಸ್ತ್ರಗಳನ್ನು ನಿರ್ಮೂಲನೆ ಮಾಡಲು ಪ್ರಯತ್ನಿಸಲಾಗುವುದು. ವಿಶ್ವಸಂಸ್ಥೆ ಹಾಗೂ ಕಾಮನ್‌ವೆಲ್ತ್‌ಗಳನ್ನು ಬಲಪಡಿಸಲು ಹೆಚ್ಚಿನ ಆಸಕ್ತಿಯನ್ನು ತೆಗೆದುಕೊಳ್ಳಲಾಗುವುದು. ವಿದೇಶೀ ನೀತಿ ಸಲಹಾ ಸಮಿತಿಯನ್ನು ರಚಿಸಲಾಗುವುದು. ಭಾರತಕ್ಕೆ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ಖಾಯಂ ಸದಸ್ಯತ್ವ ಪಡೆಯಲು ಪ್ರಯತ್ನಿಸಲಾಗುವುದು.

### ೨೯. ಯೋಜನಾ ಪ್ರಕ್ರಿಯೆ ಬಲಪಡಿಸುವುದು

ಯೋಜನಾ ಆಯೋಗವನ್ನು ಬಲಪಡಿಸಿ ಆಯೋಗ ಪ್ರಕ್ರಿಯೆಗೆ ಹೆಚ್ಚು ಶಕ್ತಿಯನ್ನು ತುಂಬಲಾಗುವುದು.

### ೩೦. ಜಮ್ಮು ಮತ್ತು ಕಾಶ್ಮೀರ

ಜಮ್ಮು ಮತ್ತು ಕಾಶ್ಮೀರ ಹಾಗೂ ಈಶಾನ್ಯ ರಾಜ್ಯಗಳ ಅಭಿವೃದ್ಧಿಗೆ ವಿಶೇಷ ಯೋಜನೆಗಳನ್ನು ಹಮ್ಮಿಕೊಳ್ಳಲಾಗುವುದು. ಭಯೋತ್ಪಾದನೆ ನಿಗ್ರಹಕ್ಕೆ ಜಮ್ಮು ಮತ್ತು ಕಾಶ್ಮೀರಕ್ಕೆ ನೀಡಲಾದ ೧೫೦೦ ಕೋಟಿ ರೂಪಾಯಿಗಳ ಸಾಲವನ್ನು ಮನ್ನಾ ಮಾಡಲಾಗುವುದು. ಹಿಂದುಳಿದ ಇತರ ರಾಜ್ಯಗಳಿಗೆ ವಿಶೇಷ ಧನಸಹಾಯ ನೀಡಲು ಕ್ರಮ ತೆಗೆದುಕೊಳ್ಳಲಾಗುವುದು.

### ೩೧. ರಾಷ್ಟ್ರೀಯ ಆಹಾರ ಭದ್ರತೆ

ರಾಷ್ಟ್ರೀಯ ಆಹಾರ ಭದ್ರತೆ ಆಯೋಗವನ್ನು ಸ್ಥಾಪಿಸುವ ಮೂಲಕ ಆಹಾರ ಭದ್ರತೆಗೆ ವ್ಯವಸ್ಥೆ ಮಾಡಲಾಗುವುದು.

### ೩೨. ಭ್ರಷ್ಟಾಚಾರದ ವಿರುದ್ಧ ಹೋರಾಟ

ಲೋಕಪಾಲ ಮತ್ತು ಲೋಕಾಯುಕ್ತವನ್ನು ಜಾರಿಗೊಳಿಸಲು ಮಸೂದೆಯನ್ನು ತರಲಾಗುವುದು. ಲೋಕಪಾಲ ಮಸೂದೆಯ ವ್ಯಾಪ್ತಿಗೆ ಪ್ರಧಾನಮಂತ್ರಿಗಳು ಮತ್ತು ಇತರ ಮಂತ್ರಿಗಳನ್ನು ಕೂಡ ತರಲಾಗುವುದು. ಕೇಂದ್ರೀಯ ಜಾಗೃತ ಆಯೋಗಕ್ಕೆ ಹೆಚ್ಚು ಶಕ್ತಿಯನ್ನು ತುಂಬಲಾಗುವುದು.

### ೩೩. ಸಣ್ಣ ರಾಜ್ಯಗಳ ಸೃಷ್ಟಿ

ಕೆಲವೊಂದು ರಾಜ್ಯಗಳು ಹೆಚ್ಚು ದೊಡ್ಡದಾಗಿದ್ದು, ಆಡಳಿತ ದೃಷ್ಟಿಯಿಂದ ಇವುಗಳನ್ನು ವಿಭಜಿಸುವುದು ಅಗತ್ಯವಾಗಿದೆ.

### ೩೪. ಮತ ಯಾಚನೆ

ಜನತಾ ದಳವು ಹಿಂದೆ ಮಾಡಿದ ಉತ್ತಮ ಕೆಲಸಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮುಂದೆ ಹಾಕಿಕೊಂಡ ಹೊಸ ಯೋಜನೆಗಳನ್ನು ಜಾರಿಗೊಳಿಸುವ ದೃಷ್ಟಿಯಿಂದ ಹಾಗೂ ಪ್ರಜಾಪ್ರಭುತ್ವವನ್ನು ಬಲಗೊಳಿಸುವ ದೃಷ್ಟಿಯಿಂದ ಜನರು ಜನತಾದಳವನ್ನು ಹೆಚ್ಚಿನ ಮತ ನೀಡುವುದರ ಮೂಲಕ ಬೆಂಬಲಿಸಲು ಕೋರಿದೆ.

### ಚುನಾವಣಾ ಫಲಿತಾಂಶಗಳು

೧೯೯೮ರ ಲೋಕಸಭಾ ಚುನಾವಣೆ ಎರಡು ಹಂತಗಳಲ್ಲಿ ನಡೆಯಿತು. ೧೮ ಲೋಕಸಭಾ ಕ್ಷೇತ್ರಗಳಿಗೆ ೧೬.೨.೧೯೯೮ರಂದು ಮತ್ತು ಉಳಿದ ೧೦ ಲೋಕಸಭಾ ಕ್ಷೇತ್ರಗಳಿಗೆ ೨೬.೨.೯೮ರಂದು ಚುನಾವಣೆ ನಡೆಯಿತು. ಮತಗಳ ಎಣಿಕೆ ನಡೆದದ್ದು ೨.೩.೯೮. ಈ ಚುನಾವಣೆಯಲ್ಲಿ ಜನತಾದಳ ರಾಜ್ಯದ ೨೮ ಲೋಕಸಭಾ ಕ್ಷೇತ್ರಗಳಲ್ಲಿ ಸ್ಪರ್ಧಿಸಿದ್ದರೂ ಕೇವಲ ೩ ಲೋಕಸಭಾ ಕ್ಷೇತ್ರಗಳನ್ನು ಮಾತ್ರ ಗೆಲ್ಲಲು ಸಾಧ್ಯವಾಯಿತು. ಶೇ. ೨೧.೯೯ರಷ್ಟು ಬೆಂಬಲ ಗಳಿಸಿದ ಈ ಪಕ್ಷ ಪಡೆದ ಒಟ್ಟು ಮತಗಳು ೪,೭೬,೨೪೪. ಇದರಲ್ಲಿ ಆಯ್ಕೆ ಆದ ಅಭ್ಯರ್ಥಿಗಳೆಂದರೆ ಮಂಡ್ಯ ಕ್ಷೇತ್ರದಿಂದ ಅಂಬರೀಶ್, ಚಾಮರಾಜನಗರದಿಂದ ಎ. ಸಿದ್ಧರಾಜು ಹಾಗೂ ಹಾಸನದಿಂದ ಮಾಜಿ ಪ್ರಧಾನಿ ಎಚ್. ಡಿ. ದೇವೇಗೌಡ ಅವರು.

ಈ ಲೋಕಸಭಾ ಚುನಾವಣೆಯಲ್ಲಿ ಮಂಡ್ಯ ಕ್ಷೇತ್ರದಿಂದ ಒಟ್ಟು ಮೂವರು ಸ್ಪರ್ಧಿಸಿದ್ದರು. ಜನತಾದಳದ ಅಂಬರೀಶ್ ಅವರು ಶೇ. ೪,೩೬,೪೩೯ ಮತಗಳನ್ನು ಗಳಿಸಿದರೆ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಜಿ. ಮಾದೇಗೌಡರು ೨,೫೦,೯೧೬ ಮತಗಳಿಸಿ ಎರಡನೇ ಸ್ಥಾನವನ್ನೂ, ಬಿ.ಜೆ.ಪಿ.ಯ ಹೆಚ್. ಶ್ರೀನಿವಾಸ್ ಅವರು ೧,೦೨,೪೫೯ ಮತಗಳಿಂದ ೩ನೇ ಸ್ಥಾನವನ್ನೂ ಪಡೆದರು. ಮಂಡ್ಯ ಲೋಕಸಭಾ ಕ್ಷೇತ್ರದಲ್ಲಿ ಶೇ. ೭೪.೫೨ ರಷ್ಟು ಮತ ಚಲಾವಣೆ ಆಗಿದ್ದು, ಅದರಲ್ಲಿ ಅಂಬರೀಶ್ ಅವರು ಶೇ. ೫೪.೯೭ ಬೆಂಬಲ ಗಳಿಸಿದ್ದು ದಾಖಲಾರ್ಹ ವಿಚಾರ. ಚಾಮರಾಜನಗರ ಲೋಕಸಭಾ ಕ್ಷೇತ್ರದಿಂದ ೬೯.೦೩ ರಷ್ಟು ಮತ ಚಲಾವಣೆಯಾಗಿ ಗೆಲುವು ಸಾಧಿಸಿದ ಸಿದ್ಧರಾಜು ಅವರು ಪಡೆದ ಬೆಂಬಲ ಶೇ. ೪೬.೪೯. ಅಂದರೆ ಅವರು ಪಡೆದ ಮತಗಳು ೩,೪೦,೪೯೦. ಈ ಲೋಕಸಭಾ ಕ್ಷೇತ್ರದಲ್ಲಿ ೮ ಅಭ್ಯರ್ಥಿಗಳು ಸ್ಪರ್ಧೆಯಲ್ಲಿದ್ದರು. ಕಾಂಗ್ರೆಸ್‌ನ ವಿ. ಶ್ರೀನಿವಾಸ ಪ್ರಸಾದ್ ಅವರು ೨,೭೦,೧೭೫ ಮತ ಗಳಿಸಿದರು. ಲೋಕಶಕ್ತಿಯ ಶ್ರೀಮತಿ ಸುಶೀಲ ಕೇಶವಮೂರ್ತಿ ಅವರು ಕೇವಲ ೭೫,೧೬೫ ಮತ ಗಳಿಸಲು ಸಾಧ್ಯವಾಯಿತು.

ಹಾಸನ ಲೋಕಸಭಾ ಕ್ಷೇತ್ರದಲ್ಲಿ ಒಟ್ಟು ೭೩.೭೪ರಷ್ಟು ಮತ ಚಲಾವಣೆ ಆಗಿತ್ತು. ಒಟ್ಟು ಐದು ಅಭ್ಯರ್ಥಿಗಳು ಇಲ್ಲಿ ಸ್ಪರ್ಧಿಸಿದ್ದರು. ಜನತಾದಳದ ಎಚ್.ಡಿ. ದೇವೇಗೌಡ ಅವರು ಶೇ. ೩೭.೪೯ ಅಂದರೆ ೩,೩೬,೪೦೭ ಮತ ಪಡೆದು ಗೆಲುವು ಸಾಧಿಸಿದರೆ, ಸಮೀಪ

ಸ್ಪರ್ಧಿ ಕಾಂಗ್ರೆಸ್‌ನ ಹೆಚ್. ಸಿ. ಶ್ರೀಕಂಠಯ್ಯ ಅವರು ೩೫ ಅಂದರೆ ೩,೦೪,೭೫೩ ಮತಗಳನ್ನು ಪಡೆದರು. ಬಿ.ಜೆ.ಪಿ.ಯ ಸುಶೀಲಾ ಶಿವಪ್ಪ ಅವರು ಶೇ. ೨೪.೦೯ ಅಂದರೆ ೨,೦೫,೬೨೮ ಮತ ಗಳಿಸಿ ಮೂರನೆಯ ಸ್ಥಾನ ಪಡೆದರು.

೧೯೯೬ರ ಲೋಕಸಭಾ ಚುನಾವಣೆಯಲ್ಲಿ ೧೬ ಸ್ಥಾನ ಪಡೆದಿದ್ದ ಜನತಾದಳ ಕೇವಲ ಒಂದೂವರೆ ವರ್ಷದ ಅಂತರದ ಚುನಾವಣೆಯಲ್ಲೇ ಮೂರು ಸ್ಥಾನಗಳಿಗೆ ಇಳಿದದ್ದು ನಿಜಕ್ಕೂ ಆಶ್ಚರ್ಯಕರ. ಇದಕ್ಕೆ ಅನೇಕ ಕಾರಣಗಳನ್ನು ರಾಜಕೀಯ ವಿಶ್ಲೇಷಣಕಾರರು ನೀಡುತ್ತಾರೆ. ಮೂಲಭೂತವಾಗಿ ಜನತಾದಳ ಕಾಂಗ್ರೆಸ್ಸನ್ನು ವಿರೋಧಿಸಿ ರಾಜ್ಯದಲ್ಲಿ ಅಧಿಕಾರ ಸೂತ್ರ ಹಿಡಿದಿತ್ತು. ಈ ಚುನಾವಣೆಯ ನಂತರ ಜನತಾದಳ ಕೇಂದ್ರದಲ್ಲಿ ಸರ್ಕಾರ ರಚಿಸಲು ಕಾಂಗ್ರೆಸಿನ ಬೆಂಬಲ ಪಡೆದುದನ್ನು ಜನತಾದಳ ಅಭಿಮಾನಿಗಳು ಒಪ್ಪಿಕೊಳ್ಳಲು ಸಿದ್ಧರಾಗಲಿಲ್ಲ. ಕಾಂಗ್ರೆಸ್‌ನ ಅಧ್ಯಕ್ಷ ಸೀತಾರಾಮ ಕೇಸರಿ ಹಾಗೂ ಪ್ರಧಾನಿ ದೇವೇಗೌಡರ ನಡುವೆ ಇದ್ದ ಬಾಂಧವ್ಯ ಬಹುಕಾಲ ನಿಲ್ಲಲಿಲ್ಲ. ಜನತಾದಳದಿಂದ ಇಬ್ಬರು ಪ್ರಧಾನಮಂತ್ರಿಗಳು ಅಲ್ಪಕಾಲದಲ್ಲಿ ಆಗಿಹೋದರು. ಸಹಜವಾಗಿ ರಾಜ್ಯದ ಜನತೆ ಈ ಲೋಕಸಭಾ ಚುನಾವಣೆಯ ಬಗೆಗೆ ನಿರಾಸಕ್ತರಾದರು. ದೇವೇಗೌಡರು ಪ್ರಧಾನಮಂತ್ರಿ ಆದ ನಂತರ ರಾಮಕೃಷ್ಣ ಹೆಗಡೆ ಅವರನ್ನು ಜನತಾದಳದಿಂದ ಉಚ್ಚಾಟಿಸಿದರೆಂಬ ವಿಚಾರ ಎಲ್ಲೆಡೆ ಪ್ರಚಾರವಾಯಿತು. ರಾಮಕೃಷ್ಣ ಹೆಗಡೆ ಅವರು ಲೋಕಶಕ್ತಿ ಎಂಬ ಪಕ್ಷವನ್ನು ಕಟ್ಟಿ ಈ ಚುನಾವಣೆಯಲ್ಲಿ ಬಿ.ಜೆ.ಪಿ.ಯೊಂದಿಗೆ ಮೈತ್ರಿ ಮಾಡಿಕೊಂಡರು. ಈ ಮೈತ್ರಿಯ ಲಾಭ ಬಿ.ಜೆ.ಪಿ.ಗೆ ದೊರೆತುದನ್ನು ಮರೆಯುವಂತಿಲ್ಲ. ಈ ಚುನಾವಣೆಯಲ್ಲಿ ೧೩ ಸ್ಥಾನಗಳನ್ನು ಬಿ.ಜೆ.ಪಿ. ಪಡೆದುದನ್ನು ಗಮನಿಸಿದರೆ ಮೈತ್ರಿಯ ಮಹತ್ವ ಸುವ್ಯಕ್ತ. ಅಷ್ಟೇ ಅಲ್ಲ, ಮೂವರು ಲೋಕಶಕ್ತಿಯ ಅಭ್ಯರ್ಥಿಗಳು ಕೂಡ ಈ ಸಂದರ್ಭದಲ್ಲಿ ಲೋಕಸಭೆಯನ್ನು ಪ್ರವೇಶಿಸಿದರು. ರಾಜ್ಯದಲ್ಲಿ ರಾಮಕೃಷ್ಣ ಹೆಗಡೆಯವರು ಒಂದು ಶಕ್ತಿ ಎಂಬುದು ಈ ಫಲಿತಾಂಶಗಳಿಂದ ವ್ಯಕ್ತವಾಯಿತು. ತುಮಕೂರು, ಕನಕಪುರ, ಮೈಸೂರು, ಉಡುಪಿ, ಚಿಕ್ಕಮಗಳೂರು, ಶಿವಮೊಗ್ಗ, ಉತ್ತರ ಕನ್ನಡ, ಬೆಳಗಾಂ ಮೊದಲಾದೆಡೆ ಮೊದಲ ಬಾರಿಗೆ ಬಿ.ಜೆ.ಪಿ. ಅಭ್ಯರ್ಥಿಗಳು ಲೋಕಸಭೆಯನ್ನು ಪ್ರವೇಶಿಸಿದ್ದರ ಹಿನ್ನೆಲೆಯಲ್ಲಿ ಜನತಾದಳದ ಮತಗಳ ಧ್ರುವೀಕರಣವಾಗಿರುವುದನ್ನು ಗಮನಿಸಬಹುದು. ಜನತಾದಳದ ಪ್ರಮುಖ ನಾಯಕರಾಗಿದ್ದ ಆರ್. ಎಲ್. ಜಾಲಪ್ಪ ಅವರು ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಸೇರಿ ಚಿಕ್ಕಬಳ್ಳಾಪುರ ಕ್ಷೇತ್ರದಿಂದಲೇ ಲೋಕಸಭೆಗೆ ಆಯ್ಕೆ ಆದರು. ಅವರ ಜತೆ ಅನೇಕ ಮಿತ್ರರು ಜನತಾದಳವನ್ನು ತೊರೆದರು. ಈ ಚುನಾವಣೆ ಜನತಾದಳದ ಆಂತರಿಕ ಕಲಹವನ್ನು ಪ್ರತಿಬಿಂಬಿಸಿತು. ಬಿ.ಜೆ.ಪಿ.ಗೆ ಅತಿಯಾದ ಆತ್ಮವಿಶ್ವಾಸವನ್ನು ತಂದುಕೊಟ್ಟ ಚುನಾವಣೆಯೂ ಇದಾಗಿದೆ. ಕಾಂಗ್ರೆಸ್ ಪಕ್ಷ ಕಳೆದ ಚುನಾವಣೆಗಿಂತ ಇಲ್ಲಿ ಕೊಂಚ ಉತ್ತಮ ಸಾಧನೆಯನ್ನು ಮಾಡಿತು. ಅದರ ೯ ಅಭ್ಯರ್ಥಿಗಳು ಲೋಕಸಭೆಗೆ ಆಯ್ಕೆ ಆಗಿದ್ದರು. ರಾಜ್ಯದಲ್ಲಿ ಜೆ.ಹೆಚ್. ಪಟೇಲ್ ನೇತೃತ್ವದ ಜನತಾದಳ ಸರ್ಕಾರ ಇದ್ದರೂ ಮತದಾರರನ್ನು ಒಲಿಸಿಕೊಳ್ಳುವಲ್ಲಿ ಅದು ಸಂಪೂರ್ಣವಾಗಿ ವಿಫಲ ಆಯಿತು.

ಕೇಂದ್ರದಲ್ಲಿ ವಾಜಪೇಯಿ ಅವರ ನೇತೃತ್ವದ ಎನ್.ಡಿ.ಎ. ಸರ್ಕಾರಕ್ಕೆ ಸಾರ್ವತ್ರಿಕ ಸಹಾನುಭೂತಿಯನ್ನು ಈ ಚುನಾವಣೆ ಗಳಿಸಿಕೊಟ್ಟಿತು. ಕಾರ್ಗಿಲ್ ಯುದ್ಧ ಕೂಡ ಈ ಚುನಾವಣೆಯಲ್ಲಿ ಪ್ರಭಾವ ಬೀರಿದ ಪ್ರಮುಖ ಅಂಶವಾಗಿದೆ. ವಾಜಪೇಯಿ ಅವರ ವ್ಯಕ್ತಿತ್ವ ಕೂಡ ಭಾರತದ ಮತದಾರರನ್ನು ಇತರೆಡೆಗಳಂತೆ ಕರ್ನಾಟಕದ ಮತದಾರರನ್ನು ರಾಜ್ಯದಲ್ಲಿನ ಆಡಳಿತ ಪಕ್ಷದ ವಿರೋಧವಾಗಿ ಸೆಳೆಯುವಲ್ಲಿ ಯಶಸ್ವಿ ಆಯಿತು.

## ೧೯೯೯ರ ಲೋಕಸಭಾ ಹಾಗೂ ವಿಧಾನಸಭಾ ಚುನಾವಣೆಗಳು

೧೯೯೯ರ ಚುನಾವಣೆಗಳು ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ವಿಶಿಷ್ಟವಾದ ಪ್ರಭಾವವನ್ನು ಬೀರಿವೆ. ಜನತಾದಳ ವಿಘಟನೆಯತ್ತ ಹೆಜ್ಜೆ ಹಾಕಿದರೆ, ಕಾಂಗ್ರೆಸ್ ತನ್ನ ಬಿರುಕುಗಳನ್ನು ಮುಚ್ಚಿಕೊಂಡು ಸಂಘಟನೆಯತ್ತ ನಡೆದುದನ್ನು ವಿಶೇಷವಾಗಿ ದಾಖಲಿಸಬೇಕಾಗುತ್ತದೆ. ರಾಜಕೀಯ ಪಕ್ಷಗಳು ಆಯಾ ಕಾಲಕ್ಕೆ, ಪರಿಸ್ಥಿತಿಗಳಿಗೆ ತಕ್ಕಹಾಗೆ ಪ್ರಭಾವಗಳನ್ನು ಸ್ವೀಕರಿಸಿ ಪ್ರತಿಫಲ ನೀಡುತ್ತವೆ ಎಂಬುದಕ್ಕೆ ಇದೊಂದು ಜ್ವಲಂತ ನಿದರ್ಶನ. ರಾಜ್ಯಶಾಸ್ತ್ರದ ಮೂಲಭೂತ ತತ್ತ್ವವಾದ ಪ್ರಯೋಗಶೀಲತೆ ಇಲ್ಲಿ ತನ್ನ ಪ್ರಭಾವ ಬೀರಿರುವುದನ್ನು ಗುರುತಿಸಬಹುದು. ೧೯೯೪ರ ಚುನಾವಣೆಯ ಫಲಿತಾಂಶಗಳನ್ನು ವಿಶ್ಲೇಷಿಸಿದವರಿಗೆ ಜನತಾದಳ ಕರ್ನಾಟಕದಲ್ಲಿ ಏಕೈಕ ಪ್ರಬಲ ಶಕ್ತಿಯಾಗಿ ಬಹಳ ಕಾಲ ಇರುತ್ತದೆಂಬ ಭಾವನೆ ಇದ್ದಿತು. ಬಹುಸಂಖ್ಯಾತರ ಮತ್ತು ಅಲ್ಪಸಂಖ್ಯಾತರ ವಿಶ್ವಾಸವನ್ನು ಕಳೆದುಕೊಂಡಿದ್ದ ಕಾಂಗ್ರೆಸ್ ಸರ್ಕಾರ ಮೇಲೇಳುವುದು ಅಷ್ಟು ಸುಲಭವಾದ ಸಂಗತಿ ಅಲ್ಲವೆಂದು ಆಗಿನ ರಾಜಕೀಯ ಪಂಡಿತರ ನಿಲುವಾಗಿತ್ತು. ಕಾಂಗ್ರೆಸ್ ಸರ್ಕಾರದ ಉಪಮುಖ್ಯಮಂತ್ರಿಯೂ ಸೇರಿದಂತೆ ಅನೇಕ ಮಂತ್ರಿಗಳು ಆ ಚುನಾವಣೆಯಲ್ಲಿ ಸೋಲೊಪ್ಪಿದ್ದರು. ದಕ್ಷಿಣ ಕರ್ನಾಟಕದ

ಪ್ರಬಲ ಸಮುದಾಯದ ಬೆಂಬಲದ ಜತೆಗೆ ಉತ್ತರ ಕರ್ನಾಟಕದಲ್ಲೂ ಜನತಾದಳಕ್ಕೆ ಆಳವಾದ ಬೇರುಗಳಿವೆ ಎಂದು ಹೇಳಲಾಗಿತ್ತು. ೧೯೯೬ರ ಲೋಕಸಭಾ ಚುನಾವಣೆಯ ನಂತರ ಜನತಾದಳದಲ್ಲಿ ತಳಮಟ್ಟದಲ್ಲಿದ್ದ ಆಂತರಿಕ ಭಿನ್ನಾಭಿಪ್ರಾಯ ಸ್ಫೋಟಗೊಂಡಿತ್ತು. ಚುನಾವಣಾ ಆಯೋಗ ಜನತಾದಳದ ಚಕ್ರದ ಗುರುತನ್ನು ಸ್ಥಗಿತಗೊಳಿಸಿ, ಸಂಯುಕ್ತದಳಕ್ಕೆ ಬಾಣ, ಜಾತ್ಯತೀತ ಜನತಾ ದಳಕ್ಕೆ ಟ್ರ್ಯಾಕ್ಟರ್ ನಡೆಸುವ ರೈತನ ಚಿಹ್ನೆ ನೀಡಿತು. ಜನತಾದಳದಿಂದ ರಾಮಕೃಷ್ಣ ಹೆಗಡೆ ಅವರ ನಿರ್ಗಮನ ಈ ಪಕ್ಷಕ್ಕೆ ಭಾರಿ ಪೆಟ್ಟನ್ನೇ ನೀಡಿತ್ತು. ಅವರ ಅನುಯಾಯಿಗಳೂ ಕೂಡ ಅವರನ್ನು ಅನುಸರಿಸಿದ್ದು ಪಕ್ಷದ ಕಾರ್ಯಕರ್ತರಲ್ಲಿ ಗೊಂದಲ ಉಂಟುಮಾಡಿತ್ತು. ಜೆ.ಹೆಚ್. ಪಟೇಲರ ಸರ್ಕಾರ ಅನೇಕ ಕ್ಷೇತ್ರಗಳಲ್ಲಿ ಸಾಕಷ್ಟು ಗಣನೀಯವಾದ ಪ್ರಗತಿ ಸಾಧಿಸಿದ್ದರೂ ಅವುಗಳು ಮತದಾರರನ್ನು ಮುಟ್ಟಲೇ ಇಲ್ಲ. ಶಿಕ್ಷಣ, ಸಂಸ್ಕೃತಿ, ಗ್ರಾಮೀಣ ಅಭಿವೃದ್ಧಿ, ಕೈಗಾರಿಕೆ, ಕಾನೂನು ವ್ಯವಸ್ಥೆ, ಹೊಸ ಜಿಲ್ಲೆಗಳ ನಿರ್ಮಾಣ, ಸಣ್ಣ ನೀರಾವರಿ, ವಿದ್ಯುಚ್ಛಕ್ತಿ ಮೊದಲಾದ ಕ್ಷೇತ್ರಗಳಲ್ಲಿ ಜೆ. ಹೆಚ್. ಪಟೇಲರ ಜನತಾದಳ ಸರ್ಕಾರ ರಾಷ್ಟ್ರದಲ್ಲೇ ಮೆಚ್ಚುಗೆ ಗಳಿಸುವ ಸಾಧನೆ ಮಾಡಿತ್ತು. ಶಿಸ್ತುಬದ್ಧ ಹಣಕಾಸು ನಿರ್ವಹಣೆ ರಾಜ್ಯಕ್ಕೆ ಕೀರ್ತಿ ತಂದಿತ್ತು. ವಿದೇಶೀ ಬಂಡವಾಳ ಗಮನಾರ್ಹ ರೀತಿಯಲ್ಲಿ ಹರಿದು ಬಂದಿತ್ತು. ಇಷ್ಟಾದರೂ ಜನತಾದಳ ಈ ಚುನಾವಣೆಯಲ್ಲಿ ನಿರೀಕ್ಷಿತ ಮಟ್ಟದಲ್ಲಿ ಸಾಧನೆ ಮಾಡಲಾಗಲಿಲ್ಲ. ಇದಕ್ಕೆ ಮೂಲಭೂತವಾದ ಪ್ರಮುಖ ಕಾರಣ ಜನತಾದಳ ಮತ್ತೊಮ್ಮೆ ಒಡೆದು ಸಂಯುಕ್ತ ಜನತಾದಳ ಹಾಗೂ ಜಾತ್ಯತೀತ ಜನತಾದಳವೆಂಬ ಪ್ರಭೇದಗಳನ್ನು ಹುಟ್ಟುಹಾಕಿಕೊಂಡದ್ದು. ೧೯೯೬ರಲ್ಲಿ ಜನತಾದಳದಿಂದ ನಿರ್ಗಮಿಸಿದ ರಾಮಕೃಷ್ಣ ಹೆಗಡೆ ಅವರು ಲೋಕಶಕ್ತಿ ಪಕ್ಷವನ್ನು ೨೧.೭.೯೯ರಂದು ಜನತಾದಳದಲ್ಲಿ ವಿಲೀನಗೊಳಿಸಿದರು. ಚುನಾವಣೆ ದಿನಾಂಕ ಪ್ರಕಟಣೆ ಆದ ಮೇಲೆ ಈ ವಿಲೀನ ಪ್ರಕ್ರಿಯೆ ನಡೆಯಿತು. ಇದನ್ನು ಪ್ರತಿಭಟಿಸಿ ಜನತಾದಳದ ಒಂದು ಗುಂಪು ಮಾಜಿ ಪ್ರಧಾನಿ ದೇವೇಗೌಡ ಹಾಗೂ ಉಪಮುಖ್ಯಮಂತ್ರಿ ಸಿದ್ಧರಾಮಯ್ಯ ಅವರ ನೇತೃತ್ವದಲ್ಲಿ ಮತ್ತೊಂದು ಪಕ್ಷ ರಚಿಸಲು ಮುಂದಾಯಿತು. ಲೋಕಶಕ್ತಿ, ಜನತಾದಳ ಹಾಗೂ ಬಿ.ಜೆ.ಪಿ. ಸಂಯುಕ್ತವಾಗಿ ಚುನಾವಣೆ ಎದುರಿಸುತ್ತವೆ ಎಂಬುದಾಗಿ ನಿರ್ಧಾರ ಮಾಡಿಕೊಂಡರು. ವಿಶೇಷವಾಗಿ ಜಾರ್ಜ್ ಫರ್ನಾಂಡೀಸ್ ಅವರ ಬಗ್ಗೆ ಮಧುರ ಭಾವನೆಗಳನ್ನು ಹೊಂದಿದ್ದ ಮುಖ್ಯಮಂತ್ರಿ ಜೆ.ಹೆಚ್. ಪಟೇಲರು ಈ ನಿರ್ಧಾರಕ್ಕೆ ಸಮ್ಮತಿ ಕೊಟ್ಟರು. ಸಂಯುಕ್ತ ಜನತಾದಳ ಬೈರೇಗೌಡರ ಅಧ್ಯಕ್ಷತೆಯಲ್ಲಿ ರೂಪು ತಳೆದು ಚುನಾವಣಾ ಆಯೋಗದಿಂದ ಮಾನ್ಯತೆ ಪಡೆದು ಬಾಣದ ಗುರುತನ್ನು ಪಡೆಯಿತು. ಬಿ.ಜೆ.ಪಿ. ಕಾರ್ಯಕರ್ತರಿಗಾಗಲಿ, ಸಂಯುಕ್ತ ಜನತಾದಳದ ಕಾರ್ಯಕರ್ತರಿಗಾಗಲಿ ನಾಯಕರು ಮಾಡಿಕೊಂಡ ಈ ಮೈತ್ರಿಯ ಬಗೆಗೆ ಎಳ್ಳಷ್ಟೂ ವಿಶ್ವಾಸ ಮೂಡಲಿಲ್ಲ. ಅದರಲ್ಲೂ ಬಿ.ಜೆ.ಪಿ.ಯ ಒಂದು ಪ್ರಭಾವಶಾಲಿ ನಾಯಕತ್ವವಂತೂ ಈ ಮೈತ್ರಿಯನ್ನು ವಿರೋಧಿಸಲು ಟೊಂಕ ಕಟ್ಟಿ ನಿಂತಿತು. ಪರಸ್ಪರ ಅಪನಂಬಿಕೆಗಳಿಂದಾಗಿ ಸಂಯುಕ್ತ ಜನತಾದಳ ಹಾಗೂ ಬಿ.ಜೆ.ಪಿ. ಸಾಕಷ್ಟು ನೋವನ್ನು ಈ ಚುನಾವಣೆಯಿಂದ ಅನುಭವಿಸಬೇಕಾಯಿತು.

ಹಿರಿಯ ಅಣ್ಣ ಮುನಿಸಿಕೊಂಡು ಬೇರೆಡೆ ಹೋಗಿ ಮತ್ತೆ ಮನೆ ಸೇರಿದನಾದರೂ ಮತ್ತೊಬ್ಬ ಅಣ್ಣ ಸಂಕಷ್ಟ ಕಾಲದಲ್ಲಿ ಮನೆ ತೊರೆದು ಹೋದಂತೆ ಜನತಾದಳಕ್ಕೆ ರಾಮಕೃಷ್ಣ ಹೆಗಡೆ ಅವರ ಆಗಮನ ಹಾಗೂ ದೇವೇಗೌಡರ ನಿರ್ಗಮನ. ಸಂಯುಕ್ತ ಜನತಾದಳ ಹಾಗೂ ಜಾತ್ಯತೀತ ಜನತಾದಳ ಪಕ್ಷಗಳು ಮೂಲಭೂತವಾಗಿ ಒಂದೇ ಪಕ್ಷದ ಎರಡು ಗುಂಪು ಅಥವಾ ಒಂದು ಮರದ ಎರಡು ಟೊಂಗೆಗಳು.

೧೯೯೯ರಲ್ಲಿ ಜನತಾದಳವು ವಿಭಜನೆಯಾದಾಗ ಎರಡು ಗುಂಪುಗಳ ಜೊತೆಗೆ ಗುರುತಿಸಲ್ಪಟ್ಟುಕೊಳ್ಳದೆ ತಟಸ್ಥ ಜನತಾದಳದ ಗುಂಪೊಂದು ಹಾಗೆಯೇ ಉಳಿದುಕೊಂಡಿತು. ಅದರಲ್ಲಿ ರಮೇಶ್‌ಕುಮಾರ್, ಎಂ. ಸಿ. ನಾಣಯ್ಯ, ಕೆ. ಜಯಪ್ರಕಾಶ್ ಹೆಗಡೆ, ಬಿ.ಎ. ಮೊಹಿದ್ದೀನ್, ಬಿ.ಎಲ್. ಶಂಕರ್ ಹಾಗೂ ಎಸ್. ವಿ. ಮಂಜುನಾಥ್ ಪ್ರಮುಖರು. ಈ ತಟಸ್ಥ ಗುಂಪು ಕರ್ನಾಟಕ ರಾಜ್ಯಕ್ಕೆ ಮಾತ್ರ ಸೀಮಿತವಾಗಿತ್ತು. ರಮೇಶ್‌ಕುಮಾರ್ ಹಾಗೂ ಕೆ. ಜಯಪ್ರಕಾಶ್ ಹೆಗಡೆಯವರು ತಟಸ್ಥ ಗುಂಪಿನಿಂದ ೧೯೯೯ರ ವಿಧಾನಸಭಾ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ರಮೇಶ್‌ಕುಮಾರ್ ಅಲ್ಪ ಮತಗಳ ಅಂತರದಿಂದ ಸೋಲನ್ನೊಪ್ಪಿಕೊಂಡರು. ಕೆ. ಜಯಪ್ರಕಾಶ್ ಹೆಗಡೆ ಬ್ರಹ್ಮಾವರ ಕ್ಷೇತ್ರದಿಂದ ವಿಜಯ ಗಳಿಸಿದರು. ಬಿ.ಎಲ್. ಶಂಕರ್ ಪ್ರಸ್ತುತ ವಿಧಾನ ಪರಿಷತ್ತಿನ ಸಭಾಪತಿಗಳಾಗಿದ್ದಾರೆ. ಇದೀಗ ಜಾತ್ಯತೀತ ಜನತಾದಳ ಹಾಗೂ ಸಂಯುಕ್ತ ಜನತಾದಳದ ಪಕ್ಷಗಳ ಚುನಾವಣಾ ಸಾಧನೆಯನ್ನು ಒಟ್ಟಾರೆಯಾಗಿ ಪರಿಶೀಲಿಸೋಣ.





# ಜಾತ್ಯತೀತ ಜನತಾದಳ

೨೭.೮.೧೯೯೯ ರಂದು ಕರ್ನಾಟಕ ಜನತಾದಳ(ಜಾ)ದ ಅಧ್ಯಕ್ಷರಾದ ಸಿದ್ಧರಾಮಯ್ಯ ಅವರು ತಮ್ಮ ಪಕ್ಷದ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಿದರು. ಅದರ ಮೊದಲ ವಾಕ್ಯವೇ 'ಜಾತ್ಯತೀತ ಜನತಾದಳ ಎಂದೆಂದೂ ಜನಪರ'. ಮುಂದಿನ ವಾಕ್ಯಗಳು ''ನಾವು ರೈತರ ಪರ, ಬಡಜನರ ಪರ ಹಾಗೂ ಸಾಮಾಜಿಕ ನ್ಯಾಯದ ಪರ.''

ಕರ್ನಾಟಕ ಜನತಾದಳ (ಜಾ) ಜನಿಸಿದ ಬಗೆಗೆ ಅದರ ಪ್ರಣಾಳಿಕೆಯಲ್ಲಿ ಒಂದು ಸಣ್ಣ ಸುಳಿವು ದೊರೆಯುತ್ತದೆ. ''ಒಂದೆಡೆ ರಾಷ್ಟ್ರೀಯ ರಂಗದಲ್ಲಿ ಪ್ರತಿಗಾಮಿ ಕೋಮುವಾದಿ ಪಕ್ಷಗಳು ಉದಯಿಸಿ ಅನೈತಿಕ ಹಾಗೂ ತತ್ವರಹಿತ ಮೈತ್ರಿಕೂಟಗಳ ಮೂಲಕ ಜನಮನ್ನಣೆ ಪಡೆದುಕೊಳ್ಳಲು ಪ್ರಯತ್ನಿಸುತ್ತಿವೆ. ಇನ್ನೊಂದೆಡೆ ಕಾಂಗ್ರೆಸ್ ಪಕ್ಷವು ತನ್ನ ಪುನಶ್ಚೇತನದ ಕಿರುಪ್ರಯತ್ನದ ನಂತರ ಆಂತರಿಕ ಕಲಹ, ಸಂಘರ್ಷ ಮತ್ತು ವಿಘಟನೆಗಳ ಹಾದಿಯತ್ತ ನಡೆದಿದೆ. ಈ ಹಿನ್ನೆಲೆಯಲ್ಲಿ ಗಾಂಧೀಜಿ, ಅಂಬೇಡ್ಕರ್, ಲೋಹಿಯಾ ಮತ್ತು ಜಯಪ್ರಕಾಶರ ಸೈದ್ಧಾಂತಿಕ ಪರಂಪರೆ ಹಾಗೂ ರಾಜಕೀಯ ತತ್ವಗಳ ಮೇಲೆ ರೂಪುಗೊಂಡ ಜನತಾದಳ (ಜಾ) ಪಕ್ಷವು ಐತಿಹಾಸಿಕ ಹೊಣೆಗಾರಿಕೆಯನ್ನು ನಿರ್ವಹಿಸಲು ಕಂಕಣಬದ್ಧವಾಗಿದೆ.''

ಜನತಾದಳದ ಚಿಹ್ನೆ 'ಚಕ್ರ' ವಿಶೇಷ ಮಹತ್ವ ಪಡೆದ ಕಾರಣ ಅದನ್ನು ತೊರೆದರೂ ಸಹ ಜನತಾ ದಳ (ಜಾ) ಅದರ ಬಗ್ಗೆ ತನ್ನ ಪ್ರಣಾಳಿಕೆಯಲ್ಲಿ ಈ ಒಂದು ವಿಚಾರವನ್ನು ದಾಖಲಿಸುತ್ತದೆ. ''ಚಕ್ರ ಮರೆಯಾಗಿಲ್ಲ. 'ಹಿಂದಿಗಿಂತ ಬಲವಾಗಿದೆ.' ವಿವಿಧತೆಯಲ್ಲಿ ಏಕತೆಯನ್ನು ಮೆರೆಸಿ ಸಾಂಸ್ಕೃತಿಕ ಸಾಮರಸ್ಯಕ್ಕೆ ಸಂಕೇತವಾಗಿ ಆರ್ಥಿಕ ಸಂಕೀರ್ಣತೆಯನ್ನು ಅನುರೂಪಗೊಳಿಸುವತ್ತ 'ಚಕ್ರ' ಸುತ್ತುತ್ತಲೇ ಇರುತ್ತದೆ. ಅದು ಜನಪರವಾದ 'ಸರ್ವಧರ್ಮ ಸಮಭಾವ' ತತ್ವವನ್ನು ನಿಜವಾದ ಅರ್ಥದಲ್ಲಿ ಪ್ರತಿನಿಧಿಸುವ ಜನತಾದಳ (ಜಾ) ಪಕ್ಷದ ಬಹುಮುಖ ಆದರ್ಶದ ಸಂಕೇತಿಕವಾಗಿ 'ಟ್ರ್ಯಾಕ್ಟರ್' ಚಿಹ್ನೆಯಲ್ಲಿ ಇದು ಸೇರಿದೆ.''

**ಜನತಾದಳ(ಜಾ)ದ ಪ್ರಣಾಳಿಕೆಯ ಪ್ರಮುಖ ಅಂಶಗಳನ್ನು ಹೀಗೆ ಗುರುತಿಸಬಹುದು.**

೧. ಶಿಕ್ಷಣವನ್ನು ಉದ್ಯೋಗದೊಂದಿಗೆ ಹೊಂದಿಸುವುದು. ಶಿಕ್ಷಣ ಅಂಗರಚನೆಯಲ್ಲಿ ಉದ್ಯೋಗಾವಕಾಶಗಳನ್ನು ಗಮನದಲ್ಲಿರಿಸುವುದು.

೨. ರಾಜ್ಯದ ಸರ್ಕಾರಿ ಉದ್ದಿಮೆಗಳ ಕಾರ್ಯನಿರ್ವಹಣೆಯನ್ನು ಗಮನಿಸುತ್ತಿರುವುದು. ದುರ್ಬಲ ಘಟಕಗಳನ್ನು ಬಲಪಡಿಸಿ ಉದ್ಯೋಗಾವಕಾಶವನ್ನು ಹೆಚ್ಚಿಸುವುದು. ಕೇವಲ ಪದವಿಯನ್ನಲ್ಲದೆ ವ್ಯಕ್ತಿ ಕೌಶಲ್ಯವನ್ನು ಅವಲಂಬಿಸಿರುವ ಪೀಠೋಪಕರಣ ತಯಾರಿಕೆ, ಬೆಸುಗೆ, ಕುಂಬಾರಿಕೆ, ಪಿಂಗಾಣಿ ಮೊದಲಾದ ಉದ್ಯೋಗಗಳಿಗೆ ಉತ್ತೇಜನ ನೀಡುವುದು.

೩. ಬ್ಯಾಂಕ್ ಮುಂತಾದ ಮುಖ್ಯ ವಲಯಗಳಿಗೆ ಉತ್ತಮ ಆರ್ಥಿಕ ಮತ್ತು ವೃತ್ತಿ ಸಂಬಂಧದ ವಾತಾವರಣ ಕಲ್ಪಿಸುವುದು. ದುರ್ಬಲ ಕೈಗಾರಿಕೆಗಳ ಚೈತನ್ಯಕ್ಕೆ ಬ್ಯಾಂಕ್ ಮತ್ತಿತರ ಆರ್ಥಿಕ ಸಂಸ್ಥೆಗಳ ಸಂಪನ್ಮೂಲಗಳ ನೆರವು ಪಡೆಯುವುದು.

೪. ಮಾರಾಟ ತೆರಿಗೆಗೆ ಸರ್ಕಾರವು ವಿ.ಎ.ಟಿ. (ಮೌಲ್ಯಾಧಾರಿತ ತೆರಿಗೆ) ವ್ಯವಸ್ಥೆಯನ್ನು ಅವಲಂಬಿಸುವುದು. ಮೌಲ್ಯಾಧಾರಿತ ತೆರಿಗೆ ವ್ಯವಸ್ಥೆ ಹೊಂದುವಂತೆ ಮಾರಾಟ ತೆರಿಗೆಯನ್ನು ಕ್ರಮಬದ್ಧಗೊಳಿಸುವುದು.

೫. ವಿದ್ಯುತ್ ಉತ್ಪಾದನೆಯನ್ನು ಹೆಚ್ಚಿಸಿ ಅದರ ಉತ್ತಮ ವಿತರಣೆಗೆ ಸರ್ಕಾರವು ಎಲ್ಲ ನಿರ್ದಿಷ್ಟ ಕ್ರಮಗಳನ್ನು ಕೈಗೊಳ್ಳುವುದು. ಸಂವಹನೆ ಮತ್ತು ಉತ್ಪಾದನೆಯೂ ಸೇರಿದಂತೆ ಆಸಕ್ತಿ ಕಂಡು ಬಂದೆಡೆಯೆಲ್ಲಾ ಬಿ.ಒ.ಟಿ.ಯನ್ನು ಕಾರ್ಯಗತಗೊಳಿಸುವುದು.

೬. ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಹೈಟೆಕ್ ಸಂಪರ್ಕ ವ್ಯವಸ್ಥೆಯನ್ನು ಏಕೀಕರಿಸುವುದು. ಇಲ್ಲಿ ಕ್ರಮಬದ್ಧ ಅಭಿವೃದ್ಧಿಗೆ ಆದ್ಯತೆ ಕೊಡಲಾಗುವುದು.

೭. ನಗರ ಹಾಗೂ ಗ್ರಾಮೀಣ ಪ್ರದೇಶಗಳೆರಡರಲ್ಲೂ ಬಸ್ ಮುಂತಾದ ಕಮರ್ಷಿಯಲ್ ವಾಹನಗಳನ್ನು ಚಾಲನೆಗೆ ತರುವುದರ ಮೂಲಕ ಸಾರ್ವಜನಿಕ ಸಾರಿಗೆ ವ್ಯವಸ್ಥೆಯನ್ನು ತೀವ್ರತರವಾಗಿ ಸುಧಾರಿಸುವುದು.

೮. ಸರ್ಕಾರಿ ಮತ್ತು ಸಾರ್ವಜನಿಕ ವಲಯದ ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿ, ವರ್ಗ ಹಾಗೂ ಇತರೇ ಹಿಂದುಳಿದ ವರ್ಗಗಳಲ್ಲಿನ ಭರ್ತಿಯಲ್ಲಿನ ಉಳಿಕೆಯನ್ನು ತುಂಬುವುದಕ್ಕೆ ಪಕ್ಷ ಬದ್ಧವಾಗಿದೆ.

೯. 'ಎಲ್ಲರಿಗೂ ವಸತಿ' ಎಂಬುದು ಕೇವಲ ಘೋಷಣಾವಾಕ್ಯ ಆಗದೆ ರಾಜ್ಯದ ಕನಿಷ್ಟ ವರ್ಗದವರಿಗೂ ಅಲ್ಪವೆಚ್ಚದ ಮನೆ ಸಿಗುವಂತೆ ಮಾಡಲು ಸಹಕಾರಿ ಚಳುವಳಿಯನ್ನು ಹಮ್ಮಿಕೊಳ್ಳಲಾಗುವುದು. ಉತ್ತಮ ರಸ್ತೆಗಳು ಹಾಗೂ ಇತರೇ ಸೌಲಭ್ಯಗಳಿಂದ ಸುಖೀಯಾತ್ರೆ ಪರಿಸರ ನಿರ್ಮಾಣ, ಹೋಟೆಲ್, ಸಾರಿಗೆ ಮತ್ತು ಮನರಂಜನೆ ಸೇರಿದಂತೆ ಎಲ್ಲ ಸ್ತರಗಳಲ್ಲೂ ವಾಣಿಜ್ಯ ಅಭಿವೃದ್ಧಿಗೆ ಒತ್ತು.

೧೦. ಜಲ, ಗಣಿಗಾರಿಕೆ ಮತ್ತು ಪರಿಸರಕ್ಕೆ ಸಂಬಂಧಿಸಿದಂತೆ ವಿವೇಚನಾಶೀಲ, ಅನ್ವಯಾರ್ಹ ಮತ್ತು ನಿಗದಿತ ಕಾಲದ ಧೋರಣೆಗಳು.

೧೧. ರಾಜ್ಯದಾದ್ಯಂತ ಬಾಲಕಾರ್ಮಿಕರ ಪದ್ಧತಿಗೆ ತಕ್ಷಣವೇ ನಿಷೇಧ.

೧೨. ಬೆಂಗಳೂರು, ಮೈಸೂರು ಮತ್ತು ಮಂಗಳೂರುಗಳ ಸುತ್ತ ಉಪನಗರಗಳ ಅಭಿವೃದ್ಧಿ.

೧೩. ಕರ್ನಾಟಕದಲ್ಲಿ ಜಾಹೀರುಪಡಿಸಿದ ಸರ್ಕಾರಿ ಮತ್ತು ಖಾಸಗಿ ನೌಕರಿಗಾಗಿ ರಾಜ್ಯ ಉದ್ಯೋಗ ವಿನಿಮಯ ವ್ಯವಸ್ಥೆಗೆ ಪುನಶ್ಚೇತನ.

೧೪. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಪುನಶ್ಚೇತನಗೊಳಿಸಲು ತೀವ್ರತರವಾದ ಯೋಜನೆಗಳು. ಅವಶ್ಯಕ ಸಾಮಗ್ರಿಗಳಿಗೆ ವಿಶಾಲ ತಳಹದಿ. ಸಣ್ಣ ಕೈಗಾರಿಕೆಗಳ ಉತ್ಪನ್ನಗಳ ಮಾರಾಟವೇ ಮುಂತಾದ ಕ್ರಮಗಳಿಂದ ರಾಜ್ಯದ ಕೃಷಿ ಪ್ರದೇಶಗಳಲ್ಲಿ ಉದ್ಯೋಗ ಮತ್ತು ಸಂಪರ್ಕ ವ್ಯವಸ್ಥೆಯ ಸುಧಾರಣೆ.

೧೫. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಕರ್ನಾಟಕ ಒಂದು ಬಂಡವಾಳ ಕೇಂದ್ರವೆಂಬ ಮಾನ್ಯತೆ ಗಳಿಸಿಕೊಡುವುದು.

೧೬. ದೇಶದ ಹೈಟೆಕ್ ಕೇಂದ್ರವಾಗಿ ರಾಜ್ಯವು ಹೊಸ ಮತ್ತು ಪುನರ್ ನವೀಕರಿಸಬಹುದಾದ ಶಕ್ತಿ ಉತ್ಪಾದನ ಪ್ರದೇಶವಾಗಬೇಕಾಗಿದೆ. ನಮ್ಮ ತಂತ್ರಜ್ಞರಿಗೆ ಸೂಕ್ತ ಜ್ಞಾನವಿದೆ. ಆದರೆ ಅವರಿಗೆ ಸಂಪನ್ಮೂಲಗಳಿಲ್ಲ. ಜನತಾದಳ (ಜಾ) ಪಕ್ಷವು ಈ ವಲಯಗಳಲ್ಲಿ ಪೂರ್ಣ ಪ್ರಮಾಣದ ಬೆಳವಣಿಗೆಗೆ ಬದ್ಧವಾಗಿದೆ.

೧೭. ಅವಶ್ಯಕ ಸಾಮಗ್ರಿಗಳ ವಿತರಣಾ ವ್ಯವಸ್ಥೆಯನ್ನು ಉತ್ತಮಪಡಿಸುವ ದೃಷ್ಟಿಯಿಂದ ಪಕ್ಷವು ಗ್ರಾಮೀಣ ಮಟ್ಟದಲ್ಲಿ ತಿಳಿವಳಿಕೆ, ಸಂವಹನ ಮತ್ತು ಮಾರುಕಟ್ಟೆ ಸಂಪನ್ಮೂಲಗಳನ್ನು ಉತ್ತಮಪಡಿಸುವ ಗುರಿ ಹೊಂದಿದೆ.

೧೮. ರಾಜ್ಯದ ಸಂಪನ್ಮೂಲಗಳನ್ನು ಪರಸ್ಪರ ಸೇರಿಸಲು ಹಾಗೂ ಜಲಾನಯನ ಪ್ರದೇಶಗಳಲ್ಲಿ ನೀರನ್ನು ಶೇಖರಿಸಲು ಒಂದು ಜಲವ್ಯವಸ್ಥೆಗೆ ನಮ್ಮ ಪಕ್ಷವು ಬದ್ಧವಾಗಿದೆ.

೧೯. ಬೆಂಗಳೂರನ್ನು ಅಂತರರಾಷ್ಟ್ರೀಯ ವಿಮಾನ ನಿಲ್ದಾಣವಾಗಿ ಬಲಪಡಿಸಲು ಪಕ್ಷ ಬದ್ಧವಾಗಿದೆ, ಮಂಗಳೂರನ್ನು ಅಂತರರಾಷ್ಟ್ರೀಯ ರೇವು ಪಟ್ಟಣ ಹಾಗೂ ವಾಣಿಜ್ಯ ಕೇಂದ್ರವನ್ನಾಗಿ ಅಭಿವೃದ್ಧಿ ಪಡಿಸಬೇಕೆಂದು ಕೇಂದ್ರಕ್ಕೆ ಸಲಹೆ ಮಾಡುತ್ತಿದೆ.

೨೦. ಗುಜರಾತ್ ಹಾಗೂ ಮಹಾರಾಷ್ಟ್ರಗಳಲ್ಲಿ ಅಭಿವೃದ್ಧಿ ಆದಂತೆ ಕರ್ನಾಟಕದಲ್ಲೂ ಹೈನುಗಾರಿಕೆ ಅಭಿವೃದ್ಧಿಯ ದೊಡ್ಡ ಆಶಯ ಈ ಪಕ್ಷದ್ದು.

೨೧. ಪಕ್ಷವು ಕೇಂದ್ರ ಹಾಗೂ ರಾಜ್ಯಗಳೊಂದಿಗಿನ ಸಂಬಂಧಕ್ಕೆ ಸಂಬಂಧಿಸಿದಂತೆ ಇರುವ ಸಹಕಾರಿ ಆಯೋಗದ ಶಿಫಾರಸ್ಸನ್ನು ಅಂಗೀಕರಿಸುತ್ತದೆ. ಒಟ್ಟು ಆದಾಯದ ಗಳಿಕೆಯಲ್ಲಿ ರಾಜ್ಯದ ಪಾಲು ಶೇ. ೨೭ ರಿಂದ ಶೇ. ೪೦ಕ್ಕೆ ಏರಬೇಕೆಂದು ಈ ಪಕ್ಷದ ಒತ್ತಾಯ.

೨೨. ಪಕ್ಷವು ಸಣ್ಣ ಕೃಷಿಕರನ್ನು ಒಳಗೊಂಡ ಗ್ರಾಮೀಣ ಸಹಕಾರಿ ಸಂಸ್ಥೆಗಳನ್ನು ಉತ್ತೇಜಿಸಿ ಅವುಗಳಿಗೆ ಟ್ರ್ಯಾಕ್ಟರ್ ನೀಡುವ ಭರವಸೆ ಕೊಡುತ್ತದೆ.

೨೩. ಗ್ರಾಮೀಣಾಭಿವೃದ್ಧಿ ಜನತಾದಳ (ಜಾ) ಪಕ್ಷದ ಮೊದಲ ಆದ್ಯತೆ. ಆ ಕ್ಷೇತ್ರದಲ್ಲಿ ಅದರ ಗುರಿ ಹೀಗಿದೆ:

೧. ಸಾರ್ವಜನಿಕ ವಿತರಣೆ, ಮಾರಾಟ, ಸಾಮಾಜಿಕ ಪ್ರಕ್ರಿಯೆ, ಶ್ರೀಸಾಮಾನ್ಯನ ಮಟ್ಟದಲ್ಲಿ ಅಧಿಕಾರ ಇವೆಲ್ಲ ಉದ್ದೇಶಗಳಿಗಾಗಿ ಪ್ರತಿ ತಾಲ್ಲೂಕಿನಲ್ಲೂ ಕಂಪ್ಯೂಟರೀಕೃತ ವಾರ್ತಾ ಕೇಂದ್ರಗಳ ಸ್ಥಾಪನೆ.

೨. ಐದು ವರ್ಷಗಳಲ್ಲಿ ಅನಕ್ಷರತೆಯ ನಿರ್ಮೂಲನೆ.

೩. ಪ್ರತಿ ರೈತ ಕುಟುಂಬದಲ್ಲೂ ಕನಿಷ್ಠ ಒಬ್ಬರಿಗಾದರೂ ಉದ್ಯೋಗ (ಸರ್ಕಾರಿ, ಅರೆ ಸರ್ಕಾರಿ ಅಥವಾ ಖಾಸಗಿ)

೪. ಎಲ್ಲ ಆವಶ್ಯಕ ವಸ್ತುಗಳ ಬೆಲೆ ದೃಢೀಕರಣ.

೫. ಕನಿಷ್ಠ ೫೦೦೦ ಜನಸಂಖ್ಯೆಗೆ ಒಂದರಂತೆ ಉಪ ಆರೋಗ್ಯ ಕೇಂದ್ರಗಳು. ಪ್ರತಿ ೨೦೦೦ ಜನಸಂಖ್ಯೆಗೆ ಒಬ್ಬರು ಎ.ಎನ್.ಎಂ. ಪ್ರತಿ ೧೦೦೦ ಜನಸಂಖ್ಯೆಗೆ ಒಬ್ಬ ಆರೋಗ್ಯ ಕಾರ್ಯಕರ್ತ.

೬. ಕರ್ನಾಟಕದ ಎಲ್ಲ ಗ್ರಾಮಗಳಿಗೂ ರಸ್ತೆ ಹಾಗೂ ಸಂಪರ್ಕ ಸೌಲಭ್ಯ.

೭. ಜಲಸಂಪನ್ಮೂಲ ಸಂರಕ್ಷಣೆಗೆ ಜಲಾಶಯಗಳು, ಕೆರೆಕಟ್ಟೆಗಳ ಹೂಳೆತ್ತುವಿಕೆ ಮತ್ತು ಸಂರಕ್ಷಣೆ, ಬರಡುಭೂಮಿ ಅಭಿವೃದ್ಧಿ.

೮. ಎಲ್ಲ ಗ್ರಾಮಗಳಿಗೂ ಕುಡಿಯುವ ನೀರಿನ ಸೌಲಭ್ಯ.

೯. ಜನಸಂಖ್ಯಾ ನಿಯಂತ್ರಣದ ಅಂಗವಾಗಿ ಒಂದು ಮಗು ಇರುವ ಕುಟುಂಬಕ್ಕೆ ವಿಶೇಷ ಉತ್ತೇಜನ.

೧೦. ವೃದ್ಧರ ಮತ್ತು ವಿಧವೆಯರ ಮಾಸಾಶನ ರೂ. ೫೦೦ ಗಳಿಗೆ ಏರಿಕೆ, ಅಂಗವಿಕಲರಿಗೆ ವಿಶೇಷ ಸೌಲಭ್ಯ.

೧೧. ಎಲ್ಲ ಕೃಷಿ ಕಾರ್ಮಿಕರಿಗೂ ವಿಶ್ರಾಂತಿ ವೇತನ.

೧೨. ಬೆಲೆಸೂಚಿ ಆಧಾರದ ಮೇಲೆ ಕೃಷಿ ಕಾರ್ಮಿಕರಿಗೆ ಕನಿಷ್ಠ ವೇತನ.

೧೩. ಯಾವುದೇ ಗ್ರಾಮವು ಆಯಾ ಪ್ರದೇಶದ ಸಾಮಾಜಿಕ ಆರ್ಥಿಕ ಕೇಂದ್ರದಿಂದ ಕನಿಷ್ಠ ೨೦ ಕಿ.ಮೀ. ಒಳಗಿರಬೇಕು.

೧೪. ಎಲ್ಲರಿಗೂ ಆರೋಗ್ಯ, ಆಹಾರ, ವಸತಿ, ಉದ್ಯೋಗ ಎಂಬುದು ಕೇವಲ ಭ್ರಮೆ ಆಗಿರದೆ ಅದನ್ನು ವಾಸ್ತವವಾಗಿಸಲು ವಿಶೇಷವಾದ ಸಾಮಾಜಿಕ ಮತ್ತು ಆರ್ಥಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

## ಹುಬ್ಬಳ್ಳಿ ರೈಲ್ವೆ ವಲಯ

ಜನತಾದಳ (ಜಾ)ವು ಹುಬ್ಬಳ್ಳಿ ಪ್ರಾಂತ್ಯಕ್ಕೆ ಪ್ರತ್ಯೇಕ ವಲಯ ಇರಬೇಕೆಂಬುದನ್ನು ವಿಶೇಷವಾಗಿ ಪ್ರಸ್ತಾಪಿಸುತ್ತದೆ. ಆದರೆ, ಹೆಚ್. ಡಿ. ದೇವೇಗೌಡರು ಕೇಂದ್ರದಲ್ಲಿ ಪ್ರಧಾನಮಂತ್ರಿ ಆಗಿದ್ದಾಗ ನೈಋತ್ಯ ವಲಯವನ್ನು ತಾಂತ್ರಿಕ ಪರಿಣತರ ವರದಿಯ ಆಧಾರದ ಮೇಲೆ ಬೆಂಗಳೂರಿನಲ್ಲಿ ಸ್ಥಾಪನೆ ಮಾಡುವ ನಿರ್ಧಾರ ಕೈಗೊಂಡರು. ಇದಕ್ಕೆ ವ್ಯಾಪಕ ಪ್ರತಿಭಟನೆ ಕಂಡುಬಂದಿತು. ಹುಬ್ಬಳ್ಳಿ ವಲಯದ ಪ್ರಾಮುಖ್ಯತೆ ಅರಿತ ಕೇಂದ್ರ ಸರ್ಕಾರವು ಹುಬ್ಬಳ್ಳಿಯ ರೈಲ್ವೇ ಕಾರ್ಯಾಗಾರಕ್ಕೆ ಹೊಸ ರೂಪು ಕೊಡಲು ನಿರ್ಧಾರ ಮಾಡಿತು. ಮುಂಬೈ ಕರ್ನಾಟಕ ಪ್ರಾಂತ್ಯದ ಮತದಾರರ ವಿಶ್ವಾಸ ಗಳಿಸಲು ಜನತಾದಳ (ಜಾ)ವು ಹುಬ್ಬಳ್ಳಿಯಲ್ಲಿ ಮತ್ತೊಂದು ರೈಲ್ವೇ ವಲಯ ಮಾಡುವುದಾಗಿ ಈ ಚುನಾವಣೆಯಲ್ಲಿ ಪ್ರತ್ಯೇಕ ಭರವಸೆ ಕೊಟ್ಟಿತು.

## ಚುನಾವಣಾ ಫಲಿತಾಂಶ

ಜನತಾದಳವು (ಜಾ) ೧೯೯೯ರ ಲೋಕಸಭಾ ಚುನಾವಣೆಯಲ್ಲಿ ೨೭ ಕ್ಷೇತ್ರಗಳಲ್ಲಿ ಸ್ಪರ್ಧಿಸಿತ್ತು. ಅದು ಶೇ. ೧೦.೮೫ ಬೆಂಬಲ ಗಳಿಸಿ ಪಡೆದ ಒಟ್ಟು ಮತಗಳು ೨೪,೨೫,೪೩೮. ಈ ಪಕ್ಷದಿಂದ ಯಾವ ಅಭ್ಯರ್ಥಿಯೂ ಲೋಕಸಭೆ ಪ್ರವೇಶಿಸಲಿಲ್ಲ. ಈ ಪಕ್ಷದ ರಾಷ್ಟ್ರೀಯ ಅಧ್ಯಕ್ಷರು ಹಾಗೂ ಮಾಜಿ ಪ್ರಧಾನಿಗಳೂ ಆದ ಹೆಚ್.ಡಿ. ದೇವೇಗೌಡ ಅವರೇ ಹಾಸನ ಲೋಕಸಭಾ ಕ್ಷೇತ್ರದಿಂದ

ಸೋಲು ಅನುಭವಿಸಬೇಕಾಯಿತು. ಅವರು ಪಡೆದ ಮತಗಳು ೨,೫೬,೫೮೭. ಗೆಲುವು ಸಾಧಿಸಿದ ಕಾಂಗ್ರೆಸ್‌ನ ಜಿ. ಪುಟ್ಟಸ್ವಾಮಿಗೌಡರು, ಪಡೆದ ಮತಗಳು ૩,೯೮,૩૩೪.

ಈ ಪಕ್ಷದಿಂದ ಸ್ಪರ್ಧಿಸಿದ್ದ ಅಭ್ಯರ್ಥಿಗಳೆಂದರೆ ಬೀದರ್‌ನಿಂದ ದೊಡ್ಡಿ ಶಂಕರರಾವ್, ಗುಲ್ಬರ್ಗಾದಿಂದ ಮಲ್ಲೇಶಪ್ಪ ಯೇವೂರ್ ರಾಯಚೂರಿನಿಂದ ಮಹಂತೇಶ್ ಪಾಟೀಲ್ ಅತ್ನೂರ್, ಕೊಪ್ಪಳದಿಂದ ಮಲ್ಲಿಕಾರ್ಜುನ್ ಬಸಪ್ಪ ದಿವಟರ್, ದಾವಣಗೆರೆಯಿಂದ ಕೆ. ಮಲ್ಲಪ್ಪ, ಚಿತ್ರದುರ್ಗದಿಂದ ಟಿ. ಜೆ. ಮರಿಯಪ್ಪ, ತುಮಕೂರಿನಿಂದ ಸಿ. ಎನ್. ಭಾಸ್ಕರಪ್ಪ, ಚಿಕ್ಕಬಳ್ಳಾಪುರದಿಂದ ಜಿ. ವೆಂಕಟಾಚಲಯ್ಯ, ಕೋಲಾರದಿಂದ ಎಂ. ಜಿ. ರಾಮಣ್ಣ ಕನಕಪುರದಿಂದ ಹೆಚ್. ಡಿ. ಕುಮಾರಸ್ವಾಮಿ, ಬೆಂಗಳೂರು ಉತ್ತರದಿಂದ ಸಿ. ನಾರಾಯಣಸ್ವಾಮಿ, ಬೆಂಗಳೂರು ದಕ್ಷಿಣದಿಂದ ಬಿ. ಟಿ. ಪಾರ್ಥಸಾರಥಿ, ಮಂಡ್ಯದಿಂದ ಕೃಷ್ಣ, ಚಾಮರಾಜನಗರದಿಂದ ಎಸ್. ಗೋವಿಂದಯ್ಯ, ಮೈಸೂರಿನಿಂದ ಬಿ. ಎಸ್. ಮರಿಲಿಂಗಯ್ಯ, ಮಂಗಳೂರಿನಿಂದ ಲೋಕೇಶ್ವರಿ ವಿನಯಚಂದ್ರ, ಉಡುಪಿಯಿಂದ ಶ್ರೀನಿವಾಸ್, ಚಿಕ್ಕಮಗಳೂರಿನಿಂದ ಡಿ. ಎಲ್. ವಸಂತಕುಮಾರಿ, ಶಿವಮೊಗ್ಗದಿಂದ ಕೆ. ಹೆಚ್. ಶ್ರೀನಿವಾಸ್, ಉತ್ತರ ಕನ್ನಡದಿಂದ ಜಿ. ಡಿ. ನಾರಾಯಣ್, ಧಾರವಾಡ ದಕ್ಷಿಣದಿಂದ ಎನ್. ಬಸವರಾಜ್, ಧಾರವಾಡ ಉತ್ತರದಿಂದ ಕಾಲೇಬುಡೆ ಇಸ್ಲಾಂಸಾಬ್ ಅಬ್ದುಲ್ ಗಫಾರ್, ಚಿಕ್ಕೋಡಿಯಿಂದ ಅಣ್ಣಾ ಕಾಂಬ್ಳೆ ಸುನೀತ್ ಉಮೇಶ್, ಬಾಗಲಕೋಟೆಯಿಂದ ಅಶೋಕ್ ವಿರೂಪಾಕ್ಷಪ್ಪ ಗಾಣಿಗೇರ್ ಹಾಗೂ ಬಿಜಾಪುರದಿಂದ ಲೋಣಿ ಮಲ್ಲಿಕಾರ್ಜುನ ಶಿವಲಿಂಗಪ್ಪ.

### ವಿಧಾನಸಭಾ ಚುನಾವಣೆ

೧೯೯೯ರ ವಿಧಾನಸಭಾ ಚುನಾವಣೆಯಲ್ಲಿ ಜಾತ್ಯತೀತ ಜನತಾದಳವು ಒಟ್ಟು ೨೦૩ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದರಲ್ಲಿ ೧೯૩ ಪುರುಷರು ಹಾಗೂ ೧೦ ಮಹಿಳಾ ಅಭ್ಯರ್ಥಿಗಳು. ಚಲಾವಣೆಯಾದ ಮತದಲ್ಲಿ ಶೇ. ೧೦.೪೨ರಷ್ಟನ್ನು ಇದು ಪಡೆದಿತ್ತು. ಅದು ಈ ಚಲಾವಣೆಯಲ್ಲಿ ಗಳಿಸಿದ ಒಟ್ಟು ಮತವೆಂದರೆ ೨૩,೧೬,೮೮೪. ಈ ಪಕ್ಷದಿಂದ ಕೇವಲ ೧೦ ಅಭ್ಯರ್ಥಿಗಳು ವಿಜಯಶಾಲಿಯಾದರು. ಸುಮಾರು ೧೫೧ ಜನ ಅಭ್ಯರ್ಥಿಗಳು ಠೇವಣಿಯನ್ನು ಕಳೆದುಕೊಂಡರು. ಜಾ. ಜನತಾದಳದಿಂದ ಆಯ್ಕೆಯಾದ ಅಭ್ಯರ್ಥಿಗಳೆಂದರೆ ಬೀದರ್ ಜಿಲ್ಲೆ ಬಸವಕಲ್ಯಾಣ ಕ್ಷೇತ್ರದಿಂದ ಎಂ. ಜಿ. ಮೂಳೆ, ಗುಲ್ಬರ್ಗಾದ ಅಳಂದ ಕ್ಷೇತ್ರದಿಂದ ಸುಭಾಷ್ ಗುತ್ತೇದಾರ್ ಹಾಗೂ ಅಫಜಲಪುರ ಕ್ಷೇತ್ರದಿಂದ ಮಾಲೀಕಯ್ಯ ಗುತ್ತೇದಾರ್, ತುಮಕೂರು ಜಿಲ್ಲೆ ಕೊರಟಗೆರೆಯಿಂದ ಸಿ. ಚೆನ್ನಿಗಪ್ಪ, ಗುಬ್ಬಿಯಿಂದ ಎನ್. ವೀರಣ್ಣಗೌಡ, ಚಿಕ್ಕನಾಯಕನಹಳ್ಳಿಯಿಂದ ಸಿ. ಬಿ. ಸುರೇಶ್‌ಬಾಬು, ಮಂಡ್ಯ ಜಿಲ್ಲೆ ನಾಗಮಂಗಲದಿಂದ ಎನ್. ಚೆಲುವರಾಯ ಸ್ವಾಮಿ, ಚಿಕ್ಕಮಗಳೂರು ಜಿಲ್ಲೆ ಕಡೂರು ಕ್ಷೇತ್ರದಿಂದ ಕೆ. ಎಂ. ಕೃಷ್ಣಮೂರ್ತಿ, ಶಿಗ್ಗಾಂವ್ ಕ್ಷೇತ್ರದಿಂದ ಖಾದ್ರಿ ಸಯ್ಯದ್ ಹಾಜಿಮ್ ಪೀರ್ ಸಯ್ಯದ್ ಪಾಷಾ ಹಾಗೂ ಹಾವೇರಿಯಿಂದ ಶಿವಣ್ಣನವರ್ ಬಸವರಾಜ್ ನೀಲಪ್ಪ.

ಜನತಾದಳ ಜಾತ್ಯತೀತ ಪಕ್ಷವು ೯೯ರ ಚುನಾವಣೆಯಲ್ಲಿ ದಯನೀಯ ಸೋಲನ್ನು ಅನುಭವಿಸಿದರೂ ಅದರ ನಾಯಕರು ಪಕ್ಷವನ್ನು ಸಂಘಟಿಸುವಲ್ಲಿ ಆಸಕ್ತಿ ಕಳೆದುಕೊಳ್ಳಲಿಲ್ಲ. ಕನಕಪುರ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿಯಾಗಿದ್ದ ಎಂ.ವಿ. ಚಂದ್ರಶೇಖರ ಮೂರ್ತಿಯವರು ಹಠಾತ್ತನೆ ನಿಧನರಾದರು. ಅವರ ಸಾವಿನಿಂದ ತೆರವಾದ ಲೋಕಸಭಾ ಉಪಚುನಾವಣೆಗೆ ಜಾತ್ಯತೀತ ಜನತಾದಳದ ರಾಷ್ಟ್ರೀಯ ಅಧ್ಯಕ್ಷರಾದ ಹೆಚ್.ಡಿ. ದೇವೇಗೌಡ ಅವರು ಸ್ಪರ್ಧಿಸಿದ್ದರು. ಮೇ ೨೦೦೨ರಲ್ಲಿ ನಡೆದ ಈ ಚುನಾವಣೆಯಲ್ಲಿ ಹೆಚ್.ಡಿ. ದೇವೇಗೌಡ ಅವರು ಕಾಂಗ್ರೆಸ್ ಅಭ್ಯರ್ಥಿ ಡಿ. ಕೆ. ಶಿವಕುಮಾರ್‌ರವರನ್ನು ಐವತ್ತು ಸಾವಿರಕ್ಕೂ ಅಧಿಕ ಮತಗಳಿಂದ ಸೋಲಿಸಿ ಲೋಕಸಭೆಯನ್ನು ಪ್ರವೇಶಿಸಿದ್ದಾರೆ. ಸಂಯುಕ್ತ ಜನತಾದಳ ಈ ಚುನಾವಣೆಯಲ್ಲಿ ಜನತಾದಳಕ್ಕೆ ಸಂಪೂರ್ಣ ಬೆಂಬಲವನ್ನು ಕೊಟ್ಟಿತು. ಅನೇಕ ಕಾರ್ಯಕರ್ತರ ಹಂಬಲವಾದ ಈ ಎರಡು ಪಕ್ಷಗಳ ಪುನರ್ ಮಿಲನಕ್ಕೆ ಈ ಲೋಕಸಭಾ ಚುನಾವಣೆ ಸೇತು ಬಂಧನವಾಗಲೇಬೇಕೆಂದು ಅವರುಗಳ ಆಶಯವಾಗಿದೆ.

# ಸಂಯುಕ್ತ ಜನತಾದಳ

ಜನತಾದಳವು ವಿಭಜನೆಯಾದ ನಂತರ ಲೋಕಶಕ್ತಿ, ಸಮತಾ ಪಕ್ಷ ಹಾಗೂ ಜನತಾದಳ ಒಂದುಗೂಡಿ 'ಸಂಯುಕ್ತ ಜನತಾದಳ' ಎಂಬ ಮತ್ತೊಂದು ರಾಜಕೀಯ ಪಕ್ಷ ರೂಪುಗೊಂಡಿತು. ೧೯೯೯ರ ಮಹಾಚುನಾವಣೆ ಇಪ್ಪತ್ತು ದಿನಗಳಿರುವಾಗ ಈ ಪಕ್ಷ ಜನ್ಮ ತಾಳಿತು. ಐದು ವರ್ಷಗಳ ಕಾಲ 'ಜನತಾದಳ' ಎಂಬ ಹೆಸರಿನೊಂದಿಗೆ 'ಚಕ್ರ' ಚಿಹ್ನೆಯೊಂದಿಗೆ ಕೆಲಸ ಮಾಡಿದ ಜನತಾದಳವು ಐತಿಹಾಸಿಕ ಅನಿವಾರ್ಯದೊಂದಿಗೆ ಈ ವಿಭಜನೆಯನ್ನು ಒಪ್ಪಿಕೊಂಡಿತು. ೧೯೮೩ ರಿಂದ ೮೮ರ ವರೆಗೆ ನೇತೃತ್ವ ವಹಿಸಿದ್ದ ರಾಮಕೃಷ್ಣ ಹೆಗಡೆ, ೧೯೯೬ ರಿಂದ ೯೯ ರವರೆಗೆ ಸರ್ಕಾರದ ನೇತೃತ್ವ ವಹಿಸಿದ್ದ ಜೆ.ಹೆಚ್. ಪಟೇಲ್‌ರ ಹೆಸರುಗಳೇನೋ ಈ ಪಕ್ಷದ ಶ್ರೀರಕ್ಷೆಯಾಗಿತ್ತು. ಕೇಂದ್ರ ಬಿ.ಜೆ.ಪಿ.ಯ ನಾಯಕರೊಂದಿಗೆ ಬಲವಂತದ ಮೈತ್ರಿ ಮಾಡಿಕೊಂಡ ಕಾರಣ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರ ಹೆಸರನ್ನು ಆಗಾಗ್ಗೆ ಉಚ್ಚರಿಸುವುದೂ ಉಂಟು.

ಎಂ. ವಿ. ಗಣೇಶ್ ಕಾರ್ಯದರ್ಶಿ ಹಾಗೂ ಅಧಿಕೃತ ವಕ್ತಾರರು ಸಮನ್ವಯ ಸಮಿತಿ ಇವರು ಪ್ರಕಟಿಸಿರುವ ಚುನಾವಣಾ ಪ್ರಣಾಳಿಕೆ, ''ಸಮೃದ್ಧ ಕರ್ನಾಟಕದತ್ತ ಜನಶಕ್ತಿಯ ಸದೃಢ ಹೆಜ್ಜೆ'' ಎಂಬ ಘೋಷಣಾ ವಾಕ್ಯವನ್ನು ಪ್ರಾರಂಭದಿಂದಲೇ ಹೊಂದಿದೆ. ಜನಪರ ಆಡಳಿತಕ್ಕಾಗಿ ಹತ್ತು ಅಂಶಗಳ ಕಾರ್ಯಸೂಚಿ ಆ ಪ್ರಣಾಳಿಕೆಯ ಮುಖ್ಯ ಪೀಠಿಕೆ. ಸಂಯುಕ್ತ ಜನತಾದಳ ಪಕ್ಷವು ತಾನು ಕೇಂದ್ರದ ಎನ್‌ಡಿಎ ಜೊತೆ ಮೈತ್ರಿ ಮಾಡಿಕೊಂಡ ಬಗ್ಗೆ ಪ್ರಣಾಳಿಕೆಯಲ್ಲಿ ಹೀಗೆ ಹೇಳುತ್ತದೆ. ''ಪ್ರಸ್ತುತ ಬಹುಪಕ್ಷೀಯ ಆಡಳಿತದ ಅನಿವಾರ್ಯತೆ ಕೇಂದ್ರದಲ್ಲಿ ಕಂಡುಬರುತ್ತದೆ. ಸಾಧ್ಯವಾದಷ್ಟು ಸಮಾನ ಗುರಿ ಹೊಂದಿ, ಕೊಟ್ಟು ತೆಗೆದುಕೊಳ್ಳುವ ಮನೋ ಭೂಮಿಕೆಯ ಅನಿವಾರ್ಯತೆಯನ್ನು ರೂಢಿಸಿಕೊಂಡು ಕೇಂದ್ರ ಮತ್ತು ರಾಜ್ಯಗಳಲ್ಲಿ ಕೆಲಸ ಮಾಡುವ ಸನ್ನಿವೇಶ ಒದಗಿದೆ. ಮೈತ್ರಿಕೂಟ ಸಂಸ್ಕೃತಿಯೊಂದು ಮೈದಳೆಯುತ್ತಿದೆ. ನಮ್ಮ ಪಕ್ಷವೂ ಇದಕ್ಕೆ ಹೊರತಲ್ಲ.''

೧೯೮೩ರಲ್ಲಿ ರಾಮಕೃಷ್ಣ ಹೆಗಡೆ ಅವರ ಕಾಲದಲ್ಲಿ ರೂಪಿಸಿದ ಅಧಿಕಾರ ವಿಕೇಂದ್ರೀಕರಣ, ಸಹಕಾರಿ ಸಾಲಗಳ ಬಡ್ಡಿಮನ್ನಾ, ಗ್ರಾಮಗಳಿಗೆ ಕುಡಿಯುವ ನೀರು, ಅನೇಕ ಸಾಮಾಜಿಕ ಯೋಜನೆಗಳು ಅಂದರೆ ತಾಳಿಭಾಗ್ಯ, ಗರ್ಭಿಣಿ ಸ್ತ್ರೀಯರಿಗೆ ಭತ್ಯೆ, ಹಿಂದುಳಿದ ಹಾಗೂ ಅಲ್ಪಸಂಖ್ಯಾತ ಸಮುದಾಯಕ್ಕೆ ವಿಶೇಷ ಯೋಜನೆಗಳ ಅನುಷ್ಠಾನ ಮುಂತಾದವುಗಳನ್ನು ಪ್ರಣಾಳಿಕೆ ಮತದಾರರಿಗೆ ಜ್ಞಾಪಿಸುತ್ತದೆ. ಜೆ.ಹೆಚ್. ಪಟೇಲರ ನೇತೃತ್ವದಲ್ಲಿ ಜನತಾದಳ ಸರ್ಕಾರವು ಜಾರಿಗೆ ತಂದ ನೀರಾವರಿ ಹಾಗೂ ವಿದ್ಯುತ್ ಯೋಜನೆ, ಗ್ರಾಮೀಣಾಭಿವೃದ್ಧಿ, ಸಹಕಾರ, ಶಿಕ್ಷಣ, ವಸತಿ, ಸಾರಿಗೆ, ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲಿ ಪ್ರಗತಿಯ ಬಗ್ಗೆ ಮತದಾರರಿಗೆ ಮಾಹಿತಿ ನೀಡುತ್ತದೆ. ಪ್ರಣಾಳಿಕೆಯಲ್ಲಿನ ಹತ್ತು ಅಂಶಗಳ ಕಾರ್ಯಕ್ರಮಗಳು ಹೀಗಿವೆ.

೧. ಗ್ರಾಮ ಸ್ವರಾಜ್ಯ : ಗ್ರಾಮ ಪಂಚಾಯತ್ ವ್ಯವಸ್ಥೆಯಲ್ಲಿ ಜನತೆಯ ಪ್ರತಿನಿಧಿಗಳ ಪರಮಾಧಿಕಾರವನ್ನು ತರಲಾಗುವುದು.

೨. ಕೃಷಿ : ರಾಜ್ಯದ ಶೇಕಡ ಎಪ್ಪತ್ತರಷ್ಟು ಜನರ ಬಾಳು ಹಸನಾಗಲು ಪಕ್ಷದ ಕಾರ್ಯಕ್ರಮಗಳು ಹೀಗಿವೆ:

೧. ಕೃಷಿ ಚಾನಲ್ ಪ್ರಾರಂಭ, ೨. ರೈತರ ಸಾಲದ ಸಮಸ್ಯೆ ಬಗೆಹರಿಸಲು 'ನ್ಯಾಯ ಪಂಚಾಯತ್' ಸ್ಥಾಪನೆ ೩. ಧಾನ್ಯ ಹಾಗೂ ಮೇವುಗಳ ಬ್ಯಾಂಕ್ ಸ್ಥಾಪನೆ ೪. ರೈತರ ಕೃಷಿ ಚಟು

ವಟಿಕೆಗೆ ಬೇಕಾದ ಸಾಮಗ್ರಿಗಳು ಸಿಗಲು ಅನುಕೂಲವಾಗುವಂತೆ ಗ್ರಾಮ ಭಂಡಾರ ಸ್ಥಾಪನೆ ೫. ಸರ್ಕಾರಿ ಹಾಗೂ ಅರೆ ಸರ್ಕಾರಿ ಸಂಸ್ಥೆಗಳು ತಮ್ಮ ಅವಶ್ಯಕತೆಯಲ್ಲಿ ಶೇ. ೫೦ರಷ್ಟು ಉತ್ಪನ್ನವನ್ನು ಖಾದಿ ಗ್ರಾಮೋದ್ಯೋಗ ಹಾಗೂ ಕೈಮಗ್ಗದ ಉತ್ಪನ್ನಗಳಿಂದ ಕೊಳ್ಳಲು ಕಡ್ಡಾಯ ನಿಯಮ.

೩. ವಿದ್ಯುಚ್ಛಕ್ತಿ : ಐದು ವರ್ಷಗಳಲ್ಲಿ ರಾಜ್ಯದ ಎಲ್ಲಾ ಮೂಲೆಗಳಿಂದ ಹದಿನೈದು ಸಾವಿರ ಮೆ.ವ್ಯಾ. ವಿದ್ಯುತ್ ಉತ್ಪಾದನೆ, ವಿದ್ಯುತ್ ದರ ನಿಯಂತ್ರಣ ಪ್ರಾಧಿಕಾರ ಅಸ್ತಿತ್ವಕ್ಕೆ ಬಂದ ನಂತರ ಗ್ರಾಮೀಣ ಪ್ರದೇಶಗಳಲ್ಲಿ ದಿನಕ್ಕೆ ಕನಿಷ್ಟ ಸರಾಸರಿ ೧೨ ಘಂಟೆಗಳ ವಿದ್ಯುತ್ ಪೂರೈಕೆ. ಅಸಾಂಪ್ರದಾಯಿಕ ವಿದ್ಯುತ್ ಉತ್ಪಾದನೆಗೆ ಒತ್ತು-ಒಲವು.

೪. ಎಂಎಸ್‌ಐಎಲ್ ಕಾರ್ಯಕ್ಷೇತ್ರವನ್ನು ವಿಸ್ತೃತಗೊಳಿಸಿ ವಿಶ್ವ ಮಾರುಕಟ್ಟೆಯಲ್ಲಿ ಕರ್ನಾಟಕ ಆಭರಣ, ಕರಕುಶಲ ಹಾಗೂ ಬಿದರಿ ಗುಡಿಕಾರ ಉತ್ಪನ್ನಗಳನ್ನು ರಫ್ತು ಮಾಡುವಂತೆ ಮಾಡುವುದು.

೧. ರಾಜ್ಯದ ಮೂವತ್ತು ಸಾವಿರ ಕೆರೆಗಳ ಹೂಳೆತ್ತಲು ಕೆರೆ ರಕ್ಷಣಾ ಪ್ರಾಧಿಕಾರ ರಚನೆ.

೨. ಅತ್ಯಾಧುನಿಕ ತಂತ್ರಜ್ಞಾನ ಸಹಾಯದಿಂದ ಕೃಷ್ಣ-ತುಂಗಭದ್ರಾ ಮತ್ತು ದಕ್ಷಿಣ ಕರ್ನಾಟಕ ಒಳಪ್ರದೇಶಗಳ ಜಲಶೇಖರಣಾ ವ್ಯವಸ್ಥೆಗಳಿಗೆ ನೀರೊದಗಿಸುವ ಕಾವೇರಿ-ಗಂಗಾ ಯೋಜನೆ ಪ್ರಾರಂಭ.

೫. ಸಹಕಾರ : ಪ್ರತ್ಯೇಕ ಶಾಸನದಡಿ ರೋಗಗ್ರಸ್ತ ಸಹಕಾರಿ ನೂಲು ಹಾಗೂ ಸಕ್ಕರೆ ಕಾರ್ಖಾನೆಗಳ ಪುನರುಜ್ಜೀವನಕ್ಕೆ ಕ್ರಮ.

೬. ನಗರಾಭಿವೃದ್ಧಿ : ನಗರಗಳಲ್ಲಿನ ಪರಿಸರ ಮಾಲಿನ್ಯ ನಿವಾರಣೆ, ನಗರ ಸಾರಿಗೆ ಕೊಳಚೆ ಪ್ರದೇಶಗಳ ನಿರ್ಮೂಲನೆ, ನೀರು, ವಿದ್ಯುತ್ ಸರಬರಾಜು ಮತ್ತು ನೈರ್ಮಲ್ಯದ ಕಡೆಗೆ ವಿಶೇಷ ಗಮನ. ತೆರಿಗೆ ವಿಧಾನದ ಅಧ್ಯಯನಕ್ಕೆ ವಿಶೇಷವಾದ ತಜ್ಞರ ಸಮಿತಿ.

೭. ಶಿಕ್ಷಣ : ನರ್ಸರಿ ಶಾಲೆಗಳ ನಿಯಂತ್ರಣಕ್ಕೆ ಪ್ರತ್ಯೇಕ ಶಾಸನ, ಖಾಸಗಿ ಶಿಕ್ಷಣ ವಲಯದಲ್ಲಿ ನಡೆಯುತ್ತಿರುವ ಶೋಷಣೆ ತಪ್ಪಿಸಲು ಪ್ರತ್ಯೇಕ ಶಾಸನ. ಅಲ್ಪಸಂಖ್ಯಾತ ಹಾಗೂ ಪರಿಶಿಷ್ಟ ಜಾತಿ ಮತ್ತು ವರ್ಗಗಳ ವಿದ್ಯಾರ್ಥಿನಿಯರಿಗೆ ತಾಂತ್ರಿಕ ಶಿಕ್ಷಣ ಒಳಗೊಂಡಂತೆ ಎಲ್ಲಾ ಹಂತದಲ್ಲೂ ಉಚಿತ ಶಿಕ್ಷಣ.

೮. ಸಾಮಾಜಿಕ ನ್ಯಾಯ : ೧. ವಿವಿಧ ಸವಲತ್ತುಗಳನ್ನು ಒಳಗೊಂಡಂತೆ ಮಹಿಳೆಯರಿಗೆ ರಾಜಕೀಯ ಹಾಗೂ ಕೈಗಾರಿಕಾ ಕ್ಷೇತ್ರಗಳಲ್ಲಿ ಆದ್ಯತೆ. ೨. ಹಿಂದುಳಿದ ವರ್ಗಗಳಿಗೆ ಮೀಸಲಾತಿಯ ಜೊತೆ ರಾಜಕೀಯ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಪ್ರಾತಿನಿಧ್ಯ ಕಾಯ್ದುಕೊಳ್ಳಲಾಗುವುದು. ೩. ಶಿಕ್ಷಣ, ರಾಜಕೀಯ, ಆಡಳಿತ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ನ್ಯಾಯಯುತವಾಗಿ ದೊರೆಯಬೇಕಾದ ಸೌಲಭ್ಯಗಳ ಬಗೆಗೆ ವಿಶೇಷ ಗಮನ, ವಿಶೇಷ ಘಟಕ ಯೋಜನೆಗೆ ಕಾಯಕಲ್ಪ. ೪. ಅಲ್ಪಸಂಖ್ಯಾತರಿಗೆ ರಾಜಕೀಯ ಶೈಕ್ಷಣಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿಯ ಉದಾರ ಧೋರಣೆ ಮುಂದುವರಿಕೆ. 'ಶಾದಿ ಮಹಲ್' ನಿರ್ಮಾಣಕ್ಕೆ ವಕ್ಫ್ ಮಂಡಳಿಯ ಮೂಲಕ ವಿಶೇಷ ನೆರವು.

೯. ಯುವಶಕ್ತಿ : ಗ್ರಾಮೀಣ ಹಾಗೂ ನಗರ ಪ್ರದೇಶದ ಯುವಶಕ್ತಿಯನ್ನು ಉತ್ಪಾದನೆಯಲ್ಲಿ ತೊಡಗಿಸುವಿಕೆ. ಆಡಳಿತ ವೆಚ್ಚವನ್ನು ಶೇ. ೫೦ಕ್ಕೆ ಮಿತಿಗೊಳಿಸುವುದು. ಆಡಳಿತದಲ್ಲಿ ಸರಳೀಕರಣ ಹಾಗೂ ಗಣಕೀಕರಣಕ್ಕೆ ಮಹತ್ವ ಕೊಡಲಾಗುವುದು. ಚುನಾವಣಾ ಪ್ರಣಾಳಿಕೆಯ ಕೊನೆಯ ಮಾತುಗಳಿವು-

**''ಭೀತಿಯಿಲ್ಲದ ಜೀವನಾವಕಾಶ**
**ಚೈತನ್ಯಶೀಲ ಅಭಿವೃದ್ಧಿ**
**ಸಂವೇದನಾಶೀಲ ಸಾಮಾಜಿಕ ನ್ಯಾಯ**
**ಸರ್ವಮತ ಸಮತಾಭಾವ**
**ಉತ್ತರದಾಯ ಮಿತವ್ಯಯಿ ಭ್ರಷ್ಟ ಮುಕ್ತ**
**ಪಾರದರ್ಶಕ ಸರಕಾರ''**

## ಚುನಾವಣಾ ಫಲಿತಾಂಶ

ಲೋಕಸಭೆ ೧೯೯೯ ಚುನಾವಣೆಯಲ್ಲಿ ಸಂಯುಕ್ತ ಜನತಾದಳವು ಹತ್ತು ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದು ಶೇ. ೭೩.೨೫ರಷ್ಟು ಅಂದರೆ ೨೯,೬೭,೫೭೬ ಮತ ಗಳಿಸಿತು. ಆ ಪಕ್ಷದಿಂದ ಮೂವರು ಮಾತ್ರ ಆಯ್ಕೆಯಾಗಿದ್ದರು.

ಚಿತ್ರದುರ್ಗ ಲೋಕಸಭಾ ಕ್ಷೇತ್ರದಿಂದ ಸಂಯುಕ್ತ ಜನತಾದಳದ ಶಶಿಕುಮಾರ್ ಅವರು ೩,೭೦,೭೯೩ ಮತಗಳನ್ನು ಪಡೆದು ಜಯಶೀಲರಾದರು. ಅಂದರೆ ಚಲಾವಣೆಯಾದ ಮತಗಳಲ್ಲಿ ಅವರು ಶೇ. ೪೫ರಷ್ಟು ಮತ ಪಡೆದಿದ್ದರು. ಕಾಂಗ್ರೆಸ್ ಅಭ್ಯರ್ಥಿ ಸಿ.ಪಿ. ಮೂಡಲಗಿರಿಯಪ್ಪ ಅವರು ಶೇ. ೪೩ರಷ್ಟು ಅಂದರೆ ೩,೫೯,೬೧೫ರಷ್ಟು ಮತಗಳನ್ನು ಪಡೆದರು. ಚಾಮರಾಜ ಲೋಕಸಭಾ ಕ್ಷೇತ್ರದಿಂದ ವಿ. ಶ್ರೀನಿವಾಸ ಪ್ರಸಾದ್ ಶೇ. ೪೧ರಷ್ಟು ಅಂದರೆ ೩,೧೧,೫೪೭ ಮತ ಪಡೆದು ಸಂಯುಕ್ತ ಜನತಾದಳದ ಮೂಲಕ ಆಯ್ಕೆಯಾದರು. ಅವರ ಸಮೀಪ ಸ್ಪರ್ಧಿ ಕಾಂಗ್ರೆಸ್ ಎ. ಸಿದ್ದರಾಜು ಅವರು ಶೇ. ೩೮ರಷ್ಟು ಅಂದರೆ ೨೯,೫೦೭ ಮತಗಳನ್ನು ಪಡೆದು ಸೋಲನ್ನು ಅಪ್ಪಿದರು.

ಚಿಕ್ಕೋಡಿ ಮೀಸಲು ಕ್ಷೇತ್ರದಿಂದ ಸಂಯುಕ್ತ ಜನತಾದಳದ ರಮೇಶ್ ಜಿಗಜಿಣಗಿ ಅವರು ಶೇ. ೫೩ರಷ್ಟು ಅಂದರೆ ೩,೯೨,೪೫೦ ಮತಗಳಿಸಿ ಜಯಶೀಲರಾದರು. ಅವರ ಸಮೀಪ ಸ್ಪರ್ಧಿ ಬಿ. ಶಂಕರಾನಂದ ಅವರು ಶೇ. ೩೮ರಷ್ಟು ಅಂದರೆ ೩,೦೭,೮೬೦ ಮತ ಗಳಿಸಿ ಸೋಲು ಒಪ್ಪಿಕೊಂಡರು. ಸಂಯುಕ್ತ ಜನತಾದಳದಿಂದ ಸ್ಪರ್ಧಿಸಿ ಸೋತ ಲೋಕಸಭಾ ಅಭ್ಯರ್ಥಿಗಳೆಂದರೆ ರಾಯಚೂರಿನಿಂದ ಅಬ್ದುಲ್ ಸಮದ್ ಸಿದ್ಧಿಕಿ, ಕೊಪ್ಪಳದಿಂದ ಬಸವರಾಜ ರಾಯರೆಡ್ಡಿ, ಚಿಕ್ಕಮಗಳೂರು ಕ್ಷೇತ್ರದಿಂದ ಎನ್. ರಮೇಶ್, ಕೋಲಾರದಿಂದ ಬಾಲಾಜಿ ಚನ್ನಯ್ಯ, ಬೆಂಗಳೂರು ಉತ್ತರದಿಂದ ಮೈಕೆಲ್ ಫರ್ನಾಂಡೀಸ್, ಧಾರವಾಡ ದಕ್ಷಿಣದಿಂದ ಬಿ.ಎಂ. ಮೆಣಸಿನಕಾಯಿ ಹಾಗೂ ಬಾಗಲಕೋಟೆಯಿಂದ ಅಜಯಕುಮಾರ ಸರ್‌ನಾಯಕ್.

## ವಿಧಾನಸಭಾ ಫಲಿತಾಂಶ

ಸಂಯುಕ್ತ ಜನತಾದಳವು ೧೯೯೯ರ ವಿಧಾನಸಭಾ ಚುನಾವಣೆಯಲ್ಲಿ ಒಟ್ಟು ೧೧೨ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅವರಲ್ಲಿ ನಲವತ್ತೇಳು ಜನ ಮಹಿಳೆಯರು. ಚಲಾವಣೆಯಾದ ಮತಗಳಲ್ಲಿ ಶೇ. ೧೩.೫೨ ರಷ್ಟು ಅಂದರೆ ೩೦,೦೬,೨೫೧ ಮತಗಳನ್ನು ಪಡೆಯಿತು. ಅದರಲ್ಲಿ ೧೯ ಅಭ್ಯರ್ಥಿಗಳು ವಿಜಯಶಾಲಿಯಾದರು. ೩೮ ಅಭ್ಯರ್ಥಿಗಳಿಗೆ ಠೇವಣಿ ನಷ್ಟವಾಯಿತು. ರಾಯಚೂರು-೧, ಕೊಪ್ಪಳ-೩, ದಾವಣಗೆರೆ-೧, ಚಿಕ್ಕಮಗಳೂರು-೧, ಕೋಲಾರ-೨, ಕನಕಪುರ-೨, ಬೆಂಗಳೂರು ಉತ್ತರ-೧, ಮಂಡ್ಯ-೧, ಚಾಮರಾಜನಗರ-೨, ಚಿಕ್ಕಮಗಳೂರು-೧, ಬೆಳಗಾಂ-೨ ಹಾಗೂ ಚಿಕ್ಕೋಡಿ ಲೋಕಸಭಾ ಕ್ಷೇತ್ರದಿಂದ ಮೂರು ಜನ ಆಯ್ಕೆಯಾಗಿದ್ದರು.

ಸಂಯುಕ್ತ ಜನತಾದಳದಿಂದ ಆಯ್ಕೆಯಾದ ಅಭ್ಯರ್ಥಿಗಳೆಂದರೆ ರಾಯಚೂರು ಜಿಲ್ಲೆಯ ಸೂಗೂರಿನಿಂದ ಅಮರೇಗೌಡ ಬಯ್ಯಾಪುರ, ಸಿಂಧನೂರಿನಿಂದ ಹಂಪನಗೌಡ ಬದರ್ಲಿ, ಕೊಪ್ಪಳದಿಂದ ಕರಡಿಸಂಗಣ್ಣ, ದಾವಣಗೆರೆ ಜಿಲ್ಲೆ ಭರಮಸಾಗರದಿಂದ ಎಂ. ಚಂದ್ರಪ್ಪ, ಕೋಲಾರದಿಂದ ಶ್ರೀನಿವಾಸಗೌಡ, ಕೋಲಾರ ಜಿಲ್ಲೆ ಬೇತಮಂಗಲದಿಂದ ಸಿ. ವೆಂಕಟೇಶಪ್ಪ, ವೇಮಗಲ್ಲಿನಿಂದ ಸಿ. ಬೈರೇಗೌಡ, ಬೆಂಗಳೂರು ಉತ್ತರ ಜಿಲ್ಲೆ ಆನೇಕಲ್‌ನಿಂದ ಎ. ನಾರಾಯಣಸ್ವಾಮಿ, ಕನಕಪುರದಿಂದ ಪಿ.ಜಿ.ಆರ್. ಸಿಂಧ್ಯ, ಹೊಸಕೋಟೆಯಿಂದ ಬಿ.ಎನ್. ಬಚ್ಚೇಗೌಡ, ಮಂಡ್ಯ ಜಿಲ್ಲೆ ಮಳವಳ್ಳಿಯಿಂದ ಬಿ. ಸೋಮಶೇಖರ್, ಚಾಮರಾಜನಗರ ಜಿಲ್ಲೆ ಸಂತೇಮರಳ್ಳಿ ಕ್ಷೇತ್ರದಿಂದ ಎ. ಆರ್. ಕೃಷ್ಣಮೂರ್ತಿ, ಗುಂಡ್ಲುಪೇಟೆ ಕ್ಷೇತ್ರದಿಂದ ಹೆಚ್.ಎನ್. ಮಹದೇವಪ್ರಸಾದ್, ಚಿಕ್ಕಮಗಳೂರು ಜಿಲ್ಲೆ ಬೀರೂರಿನಿಂದ ಕೆ. ಎಂ. ಮಲ್ಲಿಕಾರ್ಜುನ, ಧಾರವಾಡ ಜಿಲ್ಲೆ ಮುಂಡರಗಿ ಕ್ಷೇತ್ರದಿಂದ ಎಸ್.ಎಸ್. ಪಾಟೀಲ್, ಬೆಳಗಾಂ ಜಿಲ್ಲೆ ಬೇತಮಂಗಲದಿಂದ ಎಸ್. ಎಸ್. ಕೌಜಲಗಿ, ಬಾಗೇವಾಡಿಯಿಂದ ಎಸ್.ಸಿ. ಮಾಳಗಿ, ಹುಕ್ಕೇರಿಯಿಂದ ಉಮೇಶ್‌ಕತ್ತಿ ಹಾಗೂ ಸಂಕೇಶ್ವರದಿಂದ ಎ.ಬಿ. ಪಾಟೀಲ್. ಈ ಚುನಾವಣೆಗಳಲ್ಲಿ ಜಾತ್ಯತೀತ ಜನತಾದಳಕ್ಕಿಂತ ಸಂಯುಕ್ತ ಜನತಾದಳವು ಉತ್ತಮ ಸಾಧನೆಯನ್ನೇ ಮಾಡಿತೆಂದು ಹೇಳಬಹುದು.

೧೯೯೯ರ ವಿಧಾನಸಭಾ ಚುನಾವಣೆಯಲ್ಲಿ ಸಂಯುಕ್ತ ಜನತಾದಳ ಇಷ್ಟೊಂದು ಹೀನಾಯ ಸ್ಥಿತಿ ತಲುಪಲು ಅನೇಕ ಕಾರಣಗಳನ್ನು ರಾಜಕೀಯ ವಿಶ್ಲೇಷಣಾಕಾರರು ಕೊಡುತ್ತಾರೆ. ಮೊದಲನೆಯದು ಲೋಕಸಭಾ ಹಾಗೂ ವಿಧಾನಸಭಾ ಚುನಾವಣೆಗಳು ಒಮ್ಮೆಲೆ ನಡೆದ ಕಾರಣ ಸ್ಥಳೀಯ ವಿಷಯಗಳು ಮಹತ್ವಕ್ಕೆ ಬರಲಿಲ್ಲ. ಎರಡನೆಯದು ೧೯೯೬ರಲ್ಲಿ ರಾಮಕೃಷ್ಣ ಹೆಗಡೆ ಅವರನ್ನು ಪಕ್ಷದಿಂದ ಉಚ್ಚಾಟಿಸಿದ ನಂತರ ಪಕ್ಷದ ಸಂಘಟನೆಯಲ್ಲಿ ಆದ ಆಘಾತ. ಮೂರನೆಯದು ಮುಖ್ಯಮಂತ್ರಿ ಜೆ.ಹೆಚ್. ಪಟೇಲ್‌ರವರು ನಿರಂತರವಾಗಿ ಭಿನ್ನಮತೀಯರ ಕಾಟ ಎದುರಿಸಿದ್ದು. ನಾಲ್ಕನೆಯದು ಚುನಾವಣಾ ಘೋಷಣೆಯಾದ ಮೇಲೆ ಲೋಕಸಭೆ ಹಾಗೂ ಸಮತಾ ಪಕ್ಷಗಳು ಜನತಾದಳಕ್ಕೆ ಸೇರ್ಪಡೆಯಾದದ್ದು ಹಾಗೂ ಅನಂತರದ ಗೊಂದಲ. ಐದನೆಯದು ಕೇಂದ್ರದ ಬಿಜೆಪಿ ನಾಯಕರು ಮೈತ್ರಿಗೆ ಒಪ್ಪಿಗೆ ನೀಡಿದರೂ ಸ್ಥಳೀಯ ನಾಯಕರು ಮನಃಪೂರ್ವಕವಾಗಿ ಈ 'ಮೈತ್ರಿ'ಗೆ ಅಂಗೀಕಾರ ಕೊಡದಿದ್ದುದು. ಆರನೆಯದು ಬಿ.ಜೆ.ಪಿ. ಹಾಗೂ ಸಂಯುಕ್ತ ಜನತಾದಳ ಕಾರ್ಯಕರ್ತರು ಒಂದಾಗಿ ಕೆಲಸ ಮಾಡದಿದ್ದುದು, ಅಷ್ಟೇ ಅಲ್ಲ ಪರಸ್ಪರ ಕಾಲೆಳೆಯುವ ಕೆಲಸದಲ್ಲಿ ತೊಡಗಿದ್ದುದು. ಏಳನೆಯದು ಅಲ್ಪಸಂಖ್ಯಾತರ ವಿಶ್ವಾಸಗಳಿಸಲು ವಿಫಲವಾದದ್ದು. ಇವೆಲ್ಲದರ ಎದುರು ಕಾಂಗ್ರೆಸ್ ಸಾಮೂಹಿಕ ನಾಯಕತ್ವದಲ್ಲಿ ಚುನಾವಣೆ ಎದುರಿಸಲು ಬಹುಕಾಲದ ಹಿಂದೆ ಸಿದ್ಧತೆ ಮಾಡಿಕೊಂಡಿತ್ತು. ಜೊತೆಗೆ ಐದು ವರ್ಷದ ಆಳ್ವಿಕೆ ಮಾಡಿದ ಕಾರಣ ಸಂಯುಕ್ತ ಜನತಾದಳ ವ್ಯವಸ್ಥೆಯ ಆಕ್ರೋಶಕ್ಕೆ ತುತ್ತಾಯಿತು. ಹೀಗೆ ಚುನಾವಣೆಯಲ್ಲಿ ಸಂಯುಕ್ತ ಜನತಾದಳ ಹಲವಾರು ಕಾರಣದಿಂದ ಹೀನಾಯ ಸೋಲು ಅನುಭವಿಸಿದೆ. ಜಾತ್ಯಾತೀತ ಜನತಾದಳ ಹಾಗೂ ಸಂಯುಕ್ತ ಜನತಾದಳಗಳು ಒಂದುಗೂಡಿ ಮುಂದಿನ ಚುನಾವಣೆಗಳನ್ನು ಎದುರಿಸಬೇಕೆಂದು ಆ ಪಕ್ಷಗಳ ಕಾರ್ಯಕರ್ತರು ಬಯಸಿದ್ದರು. ಈ ಬಗ್ಗೆ ಎಸ್. ಆರ್. ಬೊಮ್ಮಾಯಿ ಅವರ ಅಧ್ಯಕ್ಷತೆಯಲ್ಲಿ ಸಮಿತಿ ರೂಪಗೊಂಡಿತು. ಅದರ ಶಿಫಾರಸ್ಸಿನ ಅನ್ವಯ 'ಅಖಿಲ ಭಾರತ ಜನತಾದಳ' ಇದೀಗ ಅಸ್ತಿತ್ವಕ್ಕೆ ಬಂದಿದೆ. ಈ ಪಕ್ಷದ ರಾಷ್ಟ್ರೀಯ ಅಧ್ಯಕ್ಷರಾಗಿ ಎಸ್. ಆರ್. ಬೊಮ್ಮಾಯಿಯವರು ಕಾರ್ಯ ನಿರ್ವಹಿಸುತ್ತಿದ್ದಾರೆ. ಇದರಲ್ಲಿ ಸಂಯುಕ್ತ ಜನತಾದಳ ಪಕ್ಷ ಹಾಗೂ ತಟಸ್ಥ ಜನತಾದಳ ಗುಂಪು ವಿಲೀನಗೊಂಡಿದೆ. ಮುಂದಿನ ದಿನಗಳಲ್ಲಿ ಜನತಾದಳ ಪರಿವಾರವು ಇದರಲ್ಲಿ ವಿಲೀನಗೊಳ್ಳುವ ಆಶಾವಾದವನ್ನು ಕಾರ್ಯಕರ್ತರು ಹೊಂದಿದ್ದಾರೆ.

ನಿರೂಪಣೆ : **ಕೆ. ಆರ್. ಕಮಲೇಶ್**

ಸಂಶೋಧನ ಸಹಾಯ : **ಎಸ್. ನಂಜುಂಡಸ್ವಾಮಿ, ಮೋಹನ್ ವರ್ಣೇಕರ್, ರಘು ಎಸ್. ಶೆಟ್ಟಿಗಾರ್**



# ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ (ಸಿ.ಪಿ.ಐ.)

ಬಿ. ವಿ. ಕಕ್ಕಿಲಾಯ

ಭಾರತದ ಸ್ವಾತಂತ್ರ್ಯ ಚಳವಳಿಯು ಇಪ್ಪತ್ತನೇ ಶತಮಾನದ ಎರಡನೆಯ ದಶಕದಲ್ಲಿ ಜನಸಾಮಾನ್ಯರ ಸೇರ್ಪಡೆಯಿಂದ ಹೊಸ ಸ್ವರೂಪವನ್ನು ಪಡೆಯಿತು. ದೇಶದ ಬೇರೆ ಬೇರೆ ಭಾಗಗಳಲ್ಲಿ ಸ್ಥಳೀಯ ನಾಯಕತ್ವಗಳಲ್ಲಿ ಸಂಘಟಿಸಲು ಆರಂಭಿಸಿದ್ದ ಕಾರ್ಮಿಕರು ಮತ್ತು ರೈತರು ರಾಷ್ಟ್ರೀಯ ಚಳವಳಿಯತ್ತ ಆಕರ್ಷಿತರಾಗಲು ಆರಂಭಿಸಿದ್ದರು. ಅದೇ ಸಮಯದಲ್ಲಿ ಇಂಡಿಯನ್ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವು ಸರಕಾರಕ್ಕೆ ಮನವಿ ಅರ್ಪಿಸುವ ಕ್ರಮವನ್ನು ಬಿಟ್ಟು ಪ್ರತಿಭಟನೆ ಮಾರ್ಗವನ್ನು ಹಿಡಿದಿತ್ತು. ಲೋಕಮಾನ್ಯ ತಿಲಕರು ಸ್ವರಾಜ್ಯವು ಭಾರತೀಯರ ಜನ್ಮಸಿದ್ಧ ಹಕ್ಕೆಂದು ಘೋಷಿಸಿದ್ದರು. ಪತ್ರಿಕಾ ಸ್ವಾತಂತ್ರ್ಯವನ್ನು ನಿಷೇಧಿಸುವ ಕಾನೂನಿನ ವಿರುದ್ಧ ಪ್ರತಿಭಟನೆ ಸಲ್ಲಿಸಿ ಲೋಕಮಾನ್ಯ ತಿಲಕರು ಜೈಲುವಾಸ ಅನುಭವಿಸಿದ್ದರು. ಅದರ ವಿರುದ್ಧ ಮುಂಬಯಿಯಲ್ಲಿ ಕಾರ್ಮಿಕರು ಆರು ದಿನಗಳ ಮುಷ್ಕರ ಹೂಡಿದ್ದರು ಹಾಗೂ ಅದು ಭಾರತದ ಶ್ರಮಜೀವಿಗಳು ಸಾಮ್ರಾಜ್ಯವಾದದ ವಿರುದ್ಧ ಹೋರಾಡಲು ಸನ್ನದ್ಧರಾದುದನ್ನು ಸೂಚಿಸುತ್ತದೆಯೆಂದು ಆಗ ಲಂಡನಿನ್ನಲ್ಲಿದ್ದ ಲೆನಿನ್ ಘೋಷಿಸಿದ್ದರು. ರೈತರು ಅಲ್ಲಲ್ಲಿ ಭೂಮಿಗಾಗಿ ಮತ್ತು ಗೇಣಿದಾರಿಕೆಯ ವಿರುದ್ಧವಾಗಿ ಹೋರಾಡಲು ಆರಂಭಿಸಿದ್ದರು. ಇವೆಲ್ಲವುಗಳ ಜೊತೆಗೆ ಗಾಂಧೀಜಿಯವರು ದಕ್ಷಿಣ ಆಫ್ರಿಕಾದಿಂದ ಸ್ವದೇಶಕ್ಕೆ ಮರಳಿ ರಾಷ್ಟ್ರೀಯ ಚಳವಳಿಯ ನಾಯಕತ್ವ ವಹಿಸಲು ಸನ್ನದ್ಧರಾಗಿದ್ದರು. ಸುಭಾಷ್‌ಚಂದ್ರ ಬೋಸ್, ಜವಹರಲಾಲ್ ನೆಹರೂ, ಲಾಲಾ ಲಜಪತ್‌ರಾಯ್ ಮೊದಲಾದವರು ಪ್ರತ್ಯಕ್ಷ ಹೋರಾಟಕ್ಕೆ ಜನರನ್ನು ತಯಾರು ಮಾಡುತ್ತಿದ್ದರು.

ಈ ಸಂದರ್ಭದಲ್ಲಿ ಮೂರು ಮುಖ್ಯ ಘಟನೆಗಳು ನಡೆದವು. ಒಂದನೆಯದಾಗಿ ೧೯೧೪ರಲ್ಲಿ ಪ್ರಥಮ ಜಾಗತಿಕ ಯುದ್ಧವು ಸ್ಫೋಟವಾಗಿ ಅದರಲ್ಲಿ ಭಾರತವನ್ನು ಒಂದು ಪಕ್ಷವನ್ನಾಗಿ ಬ್ರಿಟಿಷ್ ಆಧಿಪತ್ಯವು ಘೋಷಿಸಿತ್ತು. ಭಾರತದ ಸಂಪತ್ಸಾಧನಗಳು, ದವಸ ಧಾನ್ಯಗಳು, ಜನರು ಸಹ ಯುದ್ಧದ ಸಲುವಾಗಿ ಬಳಕೆಯಾಗಿ ಜನರು ತೀವ್ರ ಸಂಕಷ್ಟಗಳಿಗೆ ಗುರಿಯಾಗಿದ್ದರು. ಅವಶ್ಯ ವಸ್ತುಗಳ ಅಭಾವ, ಬೆಲೆಗಳ ಏರಿಕೆ ಇತ್ಯಾದಿಗಳಿಗೆ ಬಲಿಯಾಗಿದ್ದರು. ಮಿಸುಕಾಡಿದರೆ ಬಂಧನ, ಗಡೀಪಾರುಗಳಿಗೆ ಬಲಿಯಾಗಿದ್ದರು.

ಯುದ್ಧವಿನ್ನೂ ನಡೆಯುತ್ತಿದ್ದಾಗಲೇ ಅದರಲ್ಲಿ ಭಾಗಿಯಾಗಿದ್ದ ರಷ್ಯಾದಲ್ಲಿ ಮೊದಲು ೧೯೧೭ರ ಫೆಬ್ರವರಿಯಲ್ಲಿ ಝಾರ್‌ಶಾಹಿ ವಿರುದ್ಧ ಕ್ರಾಂತಿಯೂ ಅನಂತರ ೧೯೧೭ರ ನವೆಂಬರ್‌ನಲ್ಲಿ ಬಂಡವಾಳಶಾಹಿ ಪ್ರಭುತ್ವದ ವಿರುದ್ಧ ಸಮಾಜವಾದೀ ಕ್ರಾಂತಿಯೂ ನಡೆದು ಕಮ್ಯುನಿಸ್ಟ್ ಪಕ್ಷದ ನಾಯಕತ್ವದಲ್ಲಿ ಕಾರ್ಮಿಕ ವರ್ಗದ ಪ್ರಭುತ್ವದ ಸ್ಥಾಪನೆಯೂ ಆಗಿತ್ತು. ಇದು ಭಾರತದ ಸಹಿತ ಪ್ರಪಂಚ ಎಲ್ಲ ಕಡೆಗಳಲ್ಲಿಯೂ ಕ್ರಾಂತಿಕಾರಿ ಮನೋಭಾವನೆಯು ಉಕ್ಕೇರುವುದಕ್ಕೆ ಕಾರಣವಾಗಿತ್ತು. ಮುಂದಿನ ವರ್ಷ ಯುದ್ಧವು ಮುಕ್ತಾಯವಾದ ಬಳಿಕ ಅದರಿಂದ ಬ್ರಿಟಿಷ್ ಪ್ರಭುತ್ವಕ್ಕೆ ಆಗಿದ್ದ ವೆಚ್ಚವನ್ನೆಲ್ಲ ಭಾರತದಂತಹ ವಸಾಹತುಗಳ ಮೇಲೆ ಹೊರಿಸುವ ಪ್ರಯತ್ನ ನಡೆದು ಅದರ ವಿರುದ್ಧ ಹೋರಾಟಗಳ ಅಲೆ ಎದ್ದಿತ್ತು.

ಈ ಹಿನ್ನೆಲೆಯಲ್ಲಿ ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟಕ್ಕೆ ಸಾಮೂಹಿಕ ಹೋರಾಟದ ರೂಪ ನೀಡಲಾರಂಭಿಸಿದ್ದರು. ಉಪ್ಪಿನ ಸತ್ಯಾಗ್ರಹಕ್ಕೆ ಸಿದ್ಧತೆ ಆರಂಭವಾಗಿತ್ತು. ಇಂತಹ ಹೋರಾಟದ ಹಿನ್ನೆಲೆಯಲ್ಲಿ ೧೯೨೦ರಲ್ಲಿ ಲಾಲಾ ಲಜಪತರಾಯ್ ಅವರ ಅಧ್ಯಕ್ಷತೆಯಲ್ಲಿ ಕಮ್ಯುನಿಸ್ಟರ ಸೇರ್ಪಡೆಯೊಂದಿಗೆ ಅಖಿಲ ಭಾರತ ಟ್ರೇಡ್‌ಯೂನಿಯನ್ ಕಾಂಗ್ರೆಸ್ ಸ್ಥಾಪನೆಯಾಯಿತು. ಕಾರ್ಮಿಕ ವರ್ಗವು ರಾಷ್ಟ್ರೀಯ ಸ್ವಾತಂತ್ರ್ಯದ ಪರಿಣಾಮವನ್ನು ರಾಷ್ಟ್ರ ಮಟ್ಟದಲ್ಲಿ ಸಂಘಟನಾತ್ಮಕವಾಗಿ ಪ್ರವೇಶಿಸಿದಂತಾಯಿತು. ಅನಂತರದ ವರ್ಷಗಳಲ್ಲಿ ಬ್ರಿಟಿಷ್ ಆಧಿಪತ್ಯದ ಭಾರತ ಸರಕಾರವು ಕಮ್ಯುನಿಸ್ಟರನ್ನು ನಿರ್ಮೂಲನ ಮಾಡುವುದಕ್ಕೆ ಪೇಷಾವರ, ಲಾಹೋರ್, ಕಾನ್ಪುರ ಮತ್ತು ಮೀರತ್ ಪಿತೂರಿ ಖಟ್ಲೆಗಳನ್ನು ಹೂಡಿ ಬಂಧನ, ಕಠಿಣ ಸಜೆ, ಫಾಶಿ ಶಿಕ್ಷೆ ಮೊದಲಾದವುಗಳಿಂದ ಕಮ್ಯುನಿಸ್ಟರ ಹುಟ್ಟಡಗಿಸುವ ಕ್ರಮವನ್ನು ಕೈಗೊಂಡಿತು. ದಬ್ಬಾಳಿಕೆಯ ವಿರುದ್ಧ ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಯ ಯುವ ನಾಯಕತ್ವ, ಸಮಾಜವಾದೀ ಮನೋಭಾವವನ್ನು ಅಂಗೀಕರಿಸಿದ್ದ ವಿಭಾಗ ಕಮ್ಯುನಿಸ್ಟರಿಗೆ ಸಹಾಯ ಹಸ್ತ ನೀಡಿತು. ಕ್ರಾಂತಿಕಾರಿ ಅಲೆಯೊಂದು ಎದ್ದಿತು.

ಅದರ ಹಿನ್ನೆಲೆಯಲ್ಲಿ ೧೯೩೪ರ ಕೊನೆಗೆ ಕಾಂಗ್ರೆಸ್ ಸೋಷಿಯಲಿಸ್ಟ್ ಪಕ್ಷವು ಕಾಂಗ್ರೆಸಿನೊಳಗೆ ಹುಟ್ಟಿತು. ಅದೇ ಸಮಯದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷವು ಕಾಂಗ್ರೆಸಿನಿಂದ ಸ್ವತಂತ್ರವಾಗಿ ಸ್ವಂತ ಕಾರ್ಯಕ್ರಮ ಮತ್ತು ಸಂವಿಧಾನಗಳೊಂದಿಗೆ ೧೯೩೪ ಡಿಸೆಂಬರ್ ೩೪ರಂದು ಸ್ಥಾಪನೆಯಾಯಿತು. ಭಾರತದಲ್ಲಿ ಬ್ರಿಟಿಷ್ ಪ್ರಭುತ್ವವನ್ನು ಕೊನೆಗಾಣಿಸುವ ಹಾಗೂ ಅನಂತರದಲ್ಲಿ ಸಮಾಜವಾದೀ ಕ್ರಾಂತಿಯ ಮೂಲಕ ಸಮಾಜವಾದೀ ವ್ಯವಸ್ಥೆಯನ್ನು ಸ್ಥಾಪಿಸುವ ಉದ್ದೇಶದೊಂದಿಗೆ ಭೂಗತವಾಗಿ ಕಮ್ಯುನಿಸ್ಟ್ ಪಕ್ಷವು ಜನ್ಮ ತಳೆಯಿತು. ಬಹಳ ಬೇಗನೆ ಬ್ರಿಟಿಷ್ ಆಧಿಪತ್ಯದ ಭಾರತದಲ್ಲೂ ಆಶ್ರಿತ ರಾಜ್ಯಗಳಿಗೆ ಒಳಪಟ್ಟಿದ್ದ ಭಾರತದಲ್ಲಿಯೂ ಕಮ್ಯುನಿಸ್ಟ್ ಪಕ್ಷವು ರಾಷ್ಟ್ರೀಯ ಕಾಂಗ್ರೆಸ್ಸಿನೊಂದಿಗೆ ಸಹಕರಿಸುವ ನಿಲುವು ತಳೆದು ಚಟುವಟಿಕೆಗಳನ್ನು ವಿಸ್ತರಿಸಿತು. ಪ್ರಮುಖ ಆಶ್ರಿತ ರಾಜ್ಯಗಳಲ್ಲಿ ಪಕ್ಷದ ಘಟಕಗಳು ಸ್ಥಾಪನೆಯಾದವು. ಮೈಸೂರು ರಾಜ್ಯದಲ್ಲಿಯೂ ಕೊಡಗಿನಲ್ಲಿಯೂ ಕಾರ್ಮಿಕ ಸಂಘಗಳು ಮತ್ತು ಭೂಗತ ಕಮ್ಯುನಿಸ್ಟ್ ಪಕ್ಷ ರೂಪತಳೆದವು. ಹೈದರಾಬಾದ್ ಸಂಸ್ಥಾನದಲ್ಲಿ ಮತ್ತು ಕೇರಳದ ತಿರುವಾಂಕೂರು ಕೊಚ್ಚಿ ರಾಜ್ಯಗಳಲ್ಲಿ ಕಮ್ಯುನಿಸ್ಟ್ ಪಕ್ಷ ಬಹಳ ಬೇಗನೆ ಬಲ ಹೊಂದಿದವು. ಕಾಶ್ಮೀರ, ಭೂಪಾಲಗಳಲ್ಲಿ ಪ್ರಬಲವಾದವು. ಬ್ರಿಟಿಷ್ ಇಂಡಿಯಾ ಎನಿಸಿದ್ದ ದಕ್ಷಿಣ ಕನ್ನಡ, ಉತ್ತರ ಕನ್ನಡ, ಧಾರವಾಡ, ಬಿಜಾಪುರ ಜಿಲ್ಲೆಗಳಲ್ಲಿ ಕಾರ್ಮಿಕ ಸಂಘಗಳು ಮತ್ತು ಕಮ್ಯುನಿಸ್ಟ್ ಘಟಕಗಳು ಸ್ಥಾಪನೆಯಾದವು.

ಇವೆಲ್ಲವುಗಳ ಜೊತೆಗೆ ಇಂದುಲಾಲ್ ಯಾಜ್ಞಿಕ್, ಎನ್. ಜಿ. ರಂಗ, ಸ್ವಾಮಿ ಸಹಜಾನಂದ ಸರಸ್ವತಿ, ಬಲರಾಂ ಮುಖರ್ಜಿ ಮೊದಲಾದ ನಾಯಕರ ಸೇರ್ಪಡೆಯಿಂದ ಅಖಿಲ ಭಾರತ ಕಿಸಾನ್ ಸಭೆ ಹುಟ್ಟಿ ದೇಶಾದ್ಯಂತ ವ್ಯಾಪಿಸಿತು. ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್ ಪ್ರಮುಖ ಶಿಕ್ಷಣ ಕೇಂದ್ರಗಳಲ್ಲಿ ರೂಪ ತಳೆಯಿತು. ಇವುಗಳೊಳಗೆ ಭೂಗತ ಕಮ್ಯುನಿಸ್ಟ್ ಪಕ್ಷದ ಸದಸ್ಯರು ಮುಖ್ಯ ಚೈತನ್ಯವಾಗಿ ವರ್ತಿಸಿದರು. ಒಂದು ಮಗ್ಗುಲಲ್ಲಿ ಗಾಂಧೀಜಿಯವರ ನಾಯಕತ್ವದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಚಳುವಳಿ ಮತ್ತು ರಚನಾತ್ಮಕ ಕಾರ್ಯಕ್ರಮಗಳು ದೇಶಾದ್ಯಂತ ವ್ಯಾಪಿಸಿದವು. ಸ್ವಾತಂತ್ರ್ಯ ಚಳವಳಿಯ ಮುಖ್ಯವಾಹಿನಿಯಾಗಿ ಬೆಳೆಯಿತು. ಇನ್ನೊಂದು ಮಗ್ಗುಲಲ್ಲಿ ಕಾರ್ಮಿಕರು, ರೈತರು, ವಿದ್ಯಾರ್ಥಿಗಳು, ಆಶ್ರಿತ ರಾಜ್ಯಗಳ ಜನರ ಆಂದೋಲನಗಳು ನಡೆದವು. ಎರಡು ಸಮಾನಾಂತರ ಚಳವಳಿಗಳಾಗಿ, ಪ್ರತ್ಯೇಕ ಪ್ರತ್ಯೇಕವಾಗಿ ನಡೆದರೂ ಸಹ ಸಾಮ್ರಾಜ್ಯಶಾಹಿತ್ವದ ವಿರುದ್ಧ ಒಟ್ಟಿಗೆ ಹೊಡೆಯುವ ಚಳವಳಿಗಳಾಗಿ ಈ ಚಳವಳಿಗಳು ನಡೆದವು. ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯ ವಿರುದ್ಧ ಅದಮ್ಯ ಶಕ್ತಿಯೊಂದು ಬೆಳೆಯಿತು.

ಸಂಪೂರ್ಣ ಸ್ವಾತಂತ್ರ್ಯವು ರಾಷ್ಟ್ರೀಯ ಚಳವಳಿಯ ನುಡಿಯೆಂದು ಘೋಷಿಸುವುದು, ಉಳುವವರು ಹೊಲಗಳ ಒಡೆಯರೆಂದು ಸ್ಥಾಪಿಸುವ ಶಾಸನ ಜಾರಿಗೊಳಿಸುವುದು, ಕಾರ್ಮಿಕರಿಗೆ ಔದ್ಯಮಿಕ ಆಡಳಿತದಲ್ಲಿ ಭಾಗಿದಾರಿಕೆ ಮತ್ತು ಕಾರ್ಮಿಕರ ಕೆಲಸದ ಸಮಯ, ವೇತನ, ನಿವೃತ್ತಿ ಸೌಲಭ್ಯ ಇತ್ಯಾದಿಗಳಿಗೆ ಸಂಬಂಧಿಸಿದ ಕಾನೂನುಗಳ ರಚನೆ ಇವೇ ಮೊದಲಾದ ಹಲವು ಕಮ್ಯುನಿಸ್ಟರ ಪ್ರತಿಪಾದನೆಗಳನ್ನು ಕರಾಚಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ ಅಂಗೀಕರಿಸಿದಾಗ ಸಾಮ್ರಾಜ್ಯಶಾಹಿ ವಿರುದ್ಧ ಹಾಗೂ ಸಮಾಜವಾದಿ ಏಕ ರಾಷ್ಟ್ರೀಯ ಸಂಯುಕ್ತ ಚಳವಳಿಗೆ ತಳಹದಿ ನಿರ್ಮಾಣವಾಯಿತು. ಆದರೆ ಕಾರಣಾಂತರಗಳಿಂದ ಅಂತಹ ಸಂಯುಕ್ತ ಚಳವಳಿ ರೂಪ ತಳೆಯಲಿಲ್ಲವೆನ್ನುವುದು ಭಾರತದ ರಾಜಕೀಯ ಪ್ರಕ್ರಿಯೆಯ ದೌರ್ಬಲ್ಯವಾಗಿ ಪರಿಣಮಿಸಿತು. ಆದರೆ ಈ ಸಮಾನಾಂತರ ಕಾರ್ಯಾಚರಣೆಯ ಕಾಲದಲ್ಲಿ ಕಾಂಗ್ರೆಸ್ ಮತ್ತು ಕಮ್ಯುನಿಸ್ಟ್ ಕಾರ್ಯಕರ್ತರು ಜೈಲುಗಳಲ್ಲಿ ಜೊತೆಜೊತೆಗೆ ಇದ್ದುದರ ಪರಿಣಾಮವಾಗಿ ರಾಷ್ಟ್ರೀಯ ಚಳವಳಿಯ ಮತ್ತು ಕಮ್ಯುನಿಸ್ಟ್ ಚಳವಳಿಯ ನಡುವೆ ಒಂದು ತರದ ಸ್ನೇಹ ಸಂಬಂಧ ಉಳಿದುಬಂದುದು ಅನೈಕ್ಯವು ದುರಂತವಾಗದಂತೆ ತಡೆಯಿತೆಂದು ಹೇಳಲು ಅಡ್ಡಿಯಿಲ್ಲ.

ಪರಿಸ್ಥಿತಿ ಹೀಗಿದ್ದಾಗ ೧೯೩೫ರಲ್ಲಿ ಜಾರಿಗೆ ಬಂದ ಹೊಸ ಇಂಡಿಯಾ ಶಾಸನದ ಪ್ರಕಾರ ಚುನಾವಣೆಗಳು ನಡೆದಾಗ ಕಾಂಗ್ರೆಸ್ ಪಕ್ಷವು (ಕಮ್ಯುನಿಸ್ಟರ ಬೆಂಬಲದೊಂದಿಗೆ) ಪ್ರಚಂಡ ಬಹುಮತ ಪಡೆದು ಬಹುತೇಕ ರಾಜ್ಯಗಳಲ್ಲಿ ೧೯೩೭ರಲ್ಲಿ ಸರಕಾರಗಳನ್ನು ರಚಿಸಿತು. ಇದು ರಾಷ್ಟ್ರೀಯ ಚಳವಳಿಯ ಜನಪ್ರಿಯತೆ ಮತ್ತು ರಾಷ್ಟ್ರೀಯ ಐಕ್ಯದ ಸಾಧ್ಯತೆಗಳನ್ನು ಎತ್ತಿ ತೋರಿಸಿತು. ಆದರೆ ೧೯೩೯ರಲ್ಲಿ ದ್ವಿತೀಯ ಜಾಗತಿಕ ಯುದ್ಧ ಆರಂಭವಾಗಿ, ಭಾರತದ ಪ್ರತಿನಿಧಿಗಳನ್ನು ಕೇಳದೆಯೇ ಬ್ರಿಟಿಷ್ ಸರಕಾರ ಭಾರತವನ್ನೂ ಸಹ ಯುದ್ಧದಲ್ಲಿ ಭಾಗಿದಾರನನ್ನಾಗಿ ಮಾಡಿದಾಗ ಎಲ್ಲ ಕಾಂಗ್ರೆಸ್ ಸರಕಾರಗಳು ರಾಜೀನಾಮೆ ನೀಡಿದವು. ಆರಂಭವಾಗಿದ್ದ ಐಕ್ಯದ ಪ್ರಕ್ರಿಯೆ ಮುಂದುವರಿಯುವ ಸದವಕಾಶ ಕಳೆದುಹೋಯಿತು.

ಮುಂದೆ ೧೯೪೧ರ ಕೊನೆಗೆ ಹಿಟ್ಲರ್‌ನ ನಾಝಿ ಏಕತೆಗಳು ಸೋವಿಯತ್ ಒಕ್ಕೂಟದೊಳಗೆ ಕ್ಷೇತ್ರದಾಳಿ ನಡೆಸಿದವು. ಸೋವಿಯತ್ ಒಕ್ಕೂಟದ ರಕ್ಷಣೆ ಮತ್ತು ಹಿಟ್ಲರ್ ಸರ್ವಾಧಿಕಾರಶಾಹಿಯ ಸೋಲು ಸರ್ವ ಪ್ರಧಾನವಾದುದರಿಂದ ಕಮ್ಯುನಿಸ್ಟ್ ಪಕ್ಷವು ಯುದ್ಧ ಸ್ವಭಾವ ಬದಲಾಗಿದೆಯೆಂದು ಪರಿಗಣಿಸಿ ಸೋವಿಯತ್ ಒಕ್ಕೂಟಕ್ಕೆ ಬೆಂಬಲ ನೀಡುವ ಧೋರಣೆಯನ್ನು ಅಂಗೀಕರಿಸಿತು. ಕಾಂಗ್ರೆಸ್ ಪಕ್ಷವು ೧೯೪೨ ಆಗಸ್ಟ್ ೯ ರಂದು ಬಾಂಬೆ (ಈಗ ಮುಂಬಯಿ) ಯಲ್ಲಿ "ಕ್ವಿಟ್ ಇಂಡಿಯಾ" ಚಳವಳಿಗೆ ಕರೆಕೊಟ್ಟಿತು.

ಕಾಂಗ್ರೆಸ್ ನಾಯಕರ ಬಂಧನವಾಯಿತು. ಕಮ್ಯುನಿಸ್ಟ್ ಪಕ್ಷದ ಮೇಲೆ ಅನೇಕ ವರ್ಷಗಳಿಂದ ಇದ್ದ ನಿಷೇಧ ರದ್ದಾಯಿತು. ಕಮ್ಯುನಿಸ್ಟ್ ಪಕ್ಷವು ರಾಷ್ಟ್ರೀಯ ನಾಯಕರ ಬಿಡುಗಡೆ, ರಾಷ್ಟ್ರೀಯ ಸರಕಾರದ ರಚನೆ ಆಗಬೇಕೆಂದು ತನಗಿದ್ದ ಅವಕಾಶವನ್ನು ಉಪಯೋಗಿಸಿ ಚಳವಳಿ ನಡೆಸಿತು. ಬ್ರಿಟಿಷ್ ಸರಕಾರದ ಯುದ್ಧದ ಪರಿಣಾಮವಾಗಿ ಬಂಗಾಳದಲ್ಲಿ ಬರಗಾಲ ಮತ್ತು ದೇಶಾದ್ಯಂತ ಜನರ ಮೇಲೆ ಆರ್ಥಿಕ ಭಾರಗಳ ಹೇರಿಕೆಯ ವಿರುದ್ಧ ಕಮ್ಯುನಿಸ್ಟ್ ಪಕ್ಷ ಕಾರ್ಯಕ್ರಮ ಕೈಗೊಂಡಿತು. ಯುದ್ಧ ಕೊನೆಗೊಂಡು ರಾಯಲ್ ಇಂಡಿಯನ್ ನೇವಿಯ ಯೋಧರು ಬಂಡಾಯ ಹೂಡಿದಾಗ ಕಮ್ಯುನಿಸ್ಟ್ ಪಕ್ಷವು ಅವರ ಸಹಾಯಕ್ಕೆ ಧಾವಿಸಿತು. ನೇತಾಜಿ ಬೋಸ್ ಅವರ ಬಿಡುಗಡೆಗೆ ರಾಷ್ಟ್ರವ್ಯಾಪಿ ಚಳವಳಿ ನಡೆಸಿತು. ೧೯೪೭ರಲ್ಲಿ ಭಾರತ ಸ್ವತಂತ್ರವಾದಾಗ ತಿರುವಾಂಕೂರು ಕೊಚ್ಚಿ ರಾಜ್ಯಗಳನ್ನು ಭಾರತದಿಂದ ಸ್ವತಂತ್ರ ಎಂದು ಸಾರುವ ಪಿತೂರಿ ನಡೆದಾಗ ಕಮ್ಯುನಿಸ್ಟ್ ಪಕ್ಷವು ವಯಲಾರ್ ಸಶಸ್ತ್ರ ಹೋರಾಟವನ್ನು ನಡೆಸಿತು. ಹೈದರಾಬಾದನ್ನು ಸ್ವತಂತ್ರವೆಂದು ಘೋಷಿಸುವ ರಝಾಕಾರ್ ಧಾಳಿಗಳು ನಡೆದಾಗ ಕಮ್ಯುನಿಸ್ಟ್ ಪಕ್ಷವು ತೆಲಂಗಾಣದ ರೈತ ಚಳವಳಿಯನ್ನು ರಝಾಕಾರ್ ವಿರುದ್ಧ ತಿರುಗಿಸಿತು.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಗೋವಾ ವಿಮೋಚನೆ, ಭಾಷಾವಾರು ಪ್ರಾಂತ್ಯಗಳ ರಚನೆ, ಉಳುವವನನ್ನು ಹೊಲದ ಒಡೆಯನಾಗಿಸುವ ಭೂಸುಧಾರಣೆ, ಶಿಕ್ಷಣವನ್ನು ಖಾಸಗಿಯವರ ಮುಷ್ಟಿಯಿಂದ ಬಿಡಿಸುವ ಶಾಸನ ರಚನೆ ಇತ್ಯಾದಿಗಳ ಸಲುವಾಗಿ ಕಮ್ಯುನಿಸ್ಟ್ ಪಕ್ಷ ಹೋರಾಟ ಮುಂದುವರಿಸಿತು. ೧೯೫೭ರಲ್ಲಿ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ಮೊತ್ತ ಮೊದಲ ಬಾರಿಗೆ ಚುನಾವಣೆಯಲ್ಲಿ ಅಧಿಕಾರ ವಹಿಸಿಕೊಂಡಾಗ ಭೂಸುಧಾರಣೆ, ಶಿಕ್ಷಣ ಸುಧಾರಣೆ, ಹೊಸ ಔದ್ಯಮಿಕ ವಿವಾದಗಳ ಬಿಹಾರ ನೀತಿ ಇತ್ಯಾದಿಗಳನ್ನು ದೇಶಕ್ಕೆ ಮಾದರಿಯಾಗಿ ಅಂಗೀಕರಿಸಿತು. ಪಾರ್ಲಿಮೆಂಟ್‌ನಲ್ಲಿ ಮುಖ್ಯ ವಿರೋಧಪಕ್ಷವಾಗಿ ಆಯ್ಕೆಗೊಂಡು ದೇಶದ ಯೋಜನಾ ಬದ್ಧ ಆರ್ಥಿಕ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವದ ವಿಸ್ತರಣೆ, ಪ್ರಾಮಾಣಿಕ ಹಾಗೂ ಪಾರದರ್ಶಕ ಆದ್ಯತೆಗೆ ಮಾದರಿಯಾಗಿ ಕಮ್ಯುನಿಸ್ಟ್ ಪಕ್ಷ ವರ್ತಿಸಿತು. ಕೇರಳ, ಪಶ್ಚಿಮ ಬಂಗಾಳ, ತ್ರಿಪುರಗಳಲ್ಲಿ ಹಲವಾರು ಸಲ ಅಧಿಕಾರ ವಹಿಸಿಕೊಂಡು ಯಶಸ್ವಿಯಾಗಿ ಆಡಳಿತ ನಡೆಸಿತು. (ಪಕ್ಷವು ೧೯೬೪ರಲ್ಲಿ ಎರಡಾಗಿ ಹೋಳಾದರೂ ಸಹ ಸಂಯುಕ್ತವಾಗಿ ಆಡಳಿತ ನಡೆಸುವಲ್ಲಿ ಯಶಸ್ವಿಯಾಯಿತು.)

ಈ ಲೇಖನದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ವಕ್ತಾರನೊಬ್ಬನ ದೃಷ್ಟಿ ಕೋನವನ್ನು ಕಾಣುತ್ತೀರಿ. ಕುಡುಗೋಲ ತೆನೆ ಚಿಹ್ನೆಯಾಗಿರುವ ಕಮ್ಯುನಿಸ್ಟ್ ಪಕ್ಷದ ನಿಲುವುಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳಲಾಗಿದೆ. ಎರಡು ಕಮ್ಯುನಿಸ್ಟ್ ಪಕ್ಷಗಳಲ್ಲಿ ಯಾವುದು ಸರಿ? ಯಾವುದು ತಪ್ಪು? ಅದು ಇಲ್ಲಿ ಪ್ರಸ್ತುತವಲ್ಲ. ಲೋಕಸಭೆಗೆ ಚುನಾವಣೆ ನಡೆದಾಗ ಎಡ, ಪ್ರಜಾಪ್ರಭುತ್ವವಾದಿ, ಜಾತ್ಯತೀತ ಶಕ್ತಿಗಳು ಸರಕಾರ ರಚಿಸುವ ಸಾಧ್ಯತೆ ಬಂದಾಗ, ಹೆಚ್. ಡಿ. ದೇವೇಗೌಡರು ಮತ್ತು ಗುಜ್ರಾಲ್ ಅವರು ಪದಚ್ಯುತಿ ಹೊಂದಿದಾಗ ಜ್ಯೋತಿಬಸು ಅವರನ್ನು ಅವರ ಪಕ್ಷ ತಡೆಯದಿರುತ್ತಿದ್ದರೆ ಭಾರತದ ಪ್ರಧಾನಿಯಾಗಿ ಒಬ್ಬ ಕಮ್ಯುನಿಸ್ಟ್ ಹೇಗೆ ತನ್ನ ಜವಾಬ್ದಾರಿಯನ್ನು ನಿರ್ವಹಿಸುತ್ತಾನೆಂಬುದನ್ನು ಈ ದೇಶ ಮಾತ್ರವಲ್ಲ ಇಡೀ ಪ್ರಪಂಚವೇ ನೋಡಬಹುದಾಗಿತ್ತು. ಭಾರತದ ಗೃಹಮಂತ್ರಿಯಾಗಿ, ಕೃಷಿ ಮಂತ್ರಿಯಾಗಿ ಭಾರತ ಕಮ್ಯುನಿಸ್ಟ್ ಪಕ್ಷದ ಇಂದ್ರಜಿತ್ ಗುಪ್ತ ಮತ್ತು ಚತುರಾನನ ಮಿಶ್ರ ದೇಶದ ಪ್ರಶಂಸೆಗೆ ಪಾತ್ರರಾದ ಹಿನ್ನೆಲೆಯಲ್ಲಿ ಜ್ಯೋತಿ ಬಸುರವರು ಭಾರತ ಪ್ರಧಾನಿಯಾಗಿ ಕಾರ್ಯ ನಿರ್ವಹಿಸುವುದನ್ನು ಕಾಣುವ ಸದವಕಾಶ ಇಲ್ಲದಂತಾದುದು ನಿಜಕ್ಕೂ ಇವರೇ ಹೇಳಿರುವ ಹಾಗೆ "ಐತಿಹಾಸಿಕ ತಪ್ಪು" ಎನ್ನುವಂತಾದುದು ದುಃಖದ ಸಂಗತಿಯಾಗಿದೆ.

ಈ ಕಾಲಾವಧಿಯಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷವು ಸ್ವಾತಂತ್ರ್ಯ ಬಂದಾಗಿನಿಂದ ಇತ್ತೀಚಿಗಿನವರೆಗೆ ಕರ್ನಾಟಕ ವಿಧಾನಸಭೆಯಲ್ಲಿ ಒಬ್ಬರಿಂದ ತೊಡಗಿ ಐದು ಮಂದಿ ಶಾಸಕರನ್ನು ಹೊಂದುವಂತಾಗಿತ್ತು. ಪ್ರಬಲವಾದ ಕಾರ್ಮಿಕ ಚಳವಳಿಯನ್ನು ಬೆಳೆಸಿ ಅನೇಕ ಹೋರಾಟಗಳನ್ನದು ನಡೆಸಿತ್ತು. ರೈತ ಚಳವಳಿಯನ್ನು ಬೆಳೆಸಿ ದೇಶದಲ್ಲೇ ಅತ್ಯಂತ ಪುರೋಗಾಮಿಯಾದ ಭೂಸುಧಾರಣೆಗಳ ಶಾಸನವಾಗುವಂತಾದುದರಲ್ಲಿ ಅದರ ಪಾತ್ರ ಮಹತ್ವದ್ದಾಗಿತ್ತು. ಆ ಸಾಧನೆಗಳ ಪರಿಣಾಮವಾಗಿ ಪುರೋಗಾಮಿ ಚಳವಳಿಯೊಂದು ಕರ್ನಾಟಕದಲ್ಲಿ ರೂಪ ತಳೆದಿದೆಯೆನ್ನುವುದೇ ಕಮ್ಯುನಿಸ್ಟರ ಸಾಧನೆಯಾಗಿದೆ.

ಕೋಮು, ಜಾತಿ, ಸಂದರ್ಭಸಾಧಕತನಗಳು ಕಮ್ಯುನಿಸ್ಟ್ ಆದರ್ಶಗಳಿಗಿಂತ ತೀರ ಭಿನ್ನವಾಗಿರುವಾಗ ಇನ್ನು ಬಾಲ್ಯಾವಸ್ಥೆಯನ್ನು ದಾಟಿ ಪ್ರೌಢಾವಸ್ಥೆಗೆ ತಲುಪುವಲ್ಲಿ ಅಗತ್ಯಕ್ಕಿಂತ ಹೆಚ್ಚು ಸಮಯ ತೆಗೆದುಕೊಂಡಿರುವ ಹಿನ್ನೆಲೆಯಲ್ಲಿ ಪಕ್ಷಾಂತರದ ಪೀಡೆ ಇದ್ದೇ ಇರುತ್ತದೆ. ಅದನ್ನು ಹಿಂದಿದ್ದ ಪಕ್ಷ ಮುಂದೊತ್ತುತ್ತದೆ.

ಮಾನ್ಯ ನಿಜಲಿಂಗಪ್ಪನವರು ಮೈಸೂರು ಸಂಸ್ಥಾನದಲ್ಲೂ ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಆರಂಭ ಕಾಲದಲ್ಲೂ ನಾಯಕರಲ್ಲಿ ಒಬ್ಬರಾಗಿದ್ದರು. ರಾಷ್ಟ್ರೀಯ ರಾಜಕಾರಣದಲ್ಲಿ ಕಾಂಗ್ರೆಸ್‌ನ ಅಧ್ಯಕ್ಷರಾಗುವ ಮಟ್ಟಕ್ಕೆ ಅವರ ವ್ಯಕ್ತಿತ್ವ ಬೆಳೆದಿತ್ತು. ಅವರು ಕಾಂಗ್ರೆಸಿಗರಾಗಿ ಕರ್ನಾಟಕ ಏಕೀಕರಣದ ಸಲುವಾಗಿ ದುಡಿದವರು. ಮಹಾಜನ ಆಯೋಗ ನೇಮಕವಾದಾಗ ಕಾಸರಗೋಡಿನ ಪ್ರಶ್ನೆ ಆಯೋಗದ ವ್ಯಾಪ್ತಿಗೆ ಒಳಪಡುವಂತಾದುದಕ್ಕೆ ಅವರ ಮುತ್ಸದ್ದಿತನವು ಮುಖ್ಯ ಕಾರಣವಾಗಿತ್ತು. ಅವರು ಕರ್ನಾಟಕದ ಮುಖ್ಯ ಮಂತ್ರಿಯಾಗಿ ೧೯೬೮ರ ಭೂಸುಧಾರಣೆಗಳ ಶಾಸನವನ್ನು ಅಂಗೀಕರಿಸುವಂತೆ ಮಾಡಿದ್ದು. ಅವರ ಜನಪರ ಕಾಳಜಿಯ ದ್ಯೋತಕವಾಗಿದೆ. ಅವರೊಬ್ಬ ಪ್ರಾಮಾಣಿಕ, ದಕ್ಷ, ಜನಪ್ರಿಯ ಆಡಳಿತಗಾರರಾಗಿದ್ದರೆಂದು ಪ್ರಸಿದ್ಧರಾಗಿದ್ದಾರೆ. ಅವರಿಗೆ ನಮನ ಅರ್ಪಿಸುವ ಈ ಸಂಕಲನದ ಪ್ರಕಟನೆಯಲ್ಲಿ ಭಾಗಿಯಾಗುವ ಅವಕಾಶ ದೊರೆತುದಕ್ಕೆ ಕೃತಜ್ಞನಾಗಿದ್ದೇನೆ.

# ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ ಮಾರ್ಕ್ಸಿಸ್ಟ್ (ಸಿ.ಪಿ.ಐ.ಎಂ.)

ರಘು ಎಸ್. ಶೆಟ್ಟಿಗಾರ್



## ಹಿನ್ನೆಲೆ

ಭಾರತ ಕಮ್ಯುನಿಸ್ಟ್ ಪಕ್ಷದ ಸ್ಥಾಪನೆಯನ್ನು ೧೯೨೦ರಲ್ಲಿ ಲಾಲಾ ಲಜಪತರಾಯ್ ಅವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಲ್ಪಟ್ಟ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ ಪಕ್ಷದ ಸ್ಥಾಪನೆಯೊಡನೆ ಸಮೀಕರಿಸಲಾಗುತ್ತದೆ.

ಡಿಸೆಂಬರ್ ೨೫, ೧೯೨೫ ರಂದು ದೇಶದ ನಾನಾ ಭಾಗದ ಕಮ್ಯುನಿಸ್ಟರು ಕಾನ್ಪುರದಲ್ಲಿ ಸಭೆ ಸೇರಿ ಭಾರತ ಕಮ್ಯುನಿಸ್ಟ್ ಪಕ್ಷವನ್ನು ಸ್ಥಾಪಿಸಿದರು. ಸಿಂಗಾರವೇಲು ಚೆಟ್ಟಿಯಾರ್ ಎಂಬುವವರು ಈ ಸಮಾವೇಶದ ಅಧ್ಯಕ್ಷತೆ ವಹಿಸಿದ್ದರು. ಎಸ್. ಎ. ಡಾಂಗೆ ಅವರೂ ಕೂಡಾ ಇದರಲ್ಲಿ ಪ್ರಧಾನ ಪಾತ್ರ ವಹಿಸಿದ್ದರು. ಎಸ್. ವಿ. ಘಾಟೆ ಎಂಬುವವರು ಪ್ರಧಾನ ಕಾರ್ಯದರ್ಶಿಗಳಾಗಿ ಆಯ್ಕೆ ಆದರು. ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ಸನ್ನು ಬಲಪಡಿಸುವುದರಲ್ಲಿ ಕಮ್ಯುನಿಸ್ಟರು ಮುಖ್ಯ ಪಾತ್ರ ವಹಿಸುತ್ತಿದ್ದರು. ಕಾರ್ಮಿಕರು, ರೈತರು, ವಿದ್ಯಾರ್ಥಿಗಳನ್ನು ಸಂಘಟಿಸಿ ಅವರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿದುದು ಕಮ್ಯುನಿಸ್ಟ್ ಪಕ್ಷದ ಸಾಧನೆಯಾಗಿತ್ತು.

ಈ ಹೊಸ ಸಂಘಟನೆಯಿಂದ ತನಗೆ ಆಗಬಹುದಾದ ಅಪಾಯವನ್ನು ಮನಗಂಡ ಬ್ರಿಟಿಷ್ ಸರ್ಕಾರ ೧೯೨೪ ರಲ್ಲಿ ಕಾನ್ಪುರ ಪಿತೂರಿ ಮೊಕದ್ದಮೆಯನ್ನು ಹೂಡಿ ಕಮ್ಯುನಿಸ್ಟ್ ಪರವಾಗಿದ್ದ ನಾಯಕರನ್ನು ಬಂಧಿಸತೊಡಗಿತು. ಮೀರತ್‌ನಲ್ಲಿ ಇವರನ್ನು ವಿಚಾರಣೆಗೆ ಒಳಪಡಿಸಲಾಯಿತು. 'ಮೀರತ್ ಪಿತೂರಿ ಮೊಕದ್ದಮೆ' ಎಂದು ಹೆಸರಾದ ಈ ಮೊಕದ್ದಮೆಯ ವಿಚಾರಣೆ ನಡೆದು ೧೯೨೯ರಲ್ಲಿ ಎಸ್. ಎ. ಡಾಂಗೆ ಸೇರಿದಂತೆ ಅನೇಕರನ್ನು ಸೆರೆಮನೆಗೆ ದೂಡಲಾಯಿತು.

೧೯೩೪ರಲ್ಲಿ ಬ್ರಿಟಿಷ್ ಸರ್ಕಾರ ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸಿತು. ಅನಂತರ ಕಮ್ಯುನಿಸ್ಟರು ಕಾಂಗ್ರೆಸ್, ಸಮಾಜವಾದಿ ಕಾಂಗ್ರೆಸ್, ಅಖಿಲಭಾರತ ಕಾರ್ಮಿಕರು ಮತ್ತು ರೈತರ ಪಕ್ಷ (೧೯೩೬), ಅಖಿಲ ಭಾರತ ಕಿಸಾನ್ ಸಭಾ ಮುಂತಾದವುಗಳಲ್ಲಿ ಸೇರಿ ಹೋರಾಟದಲ್ಲಿ ತೊಡಗಿದ್ದರು.

೧೯೩೯-೪೨ರಲ್ಲಿ ನಡೆದ ಎರಡನೇ ಮಹಾಯುದ್ಧದಲ್ಲಿ ಜರ್ಮನಿ ರಷ್ಯಾದ ಮೇಲೆ ಧಾಳಿ ಮಾಡಿದಾಗ, ಬ್ರಿಟನ್ ರಷ್ಯಾ ಪರ ವಹಿಸಿತು. ಆಗ ಭಾರತದ ಕಮ್ಯುನಿಸ್ಟರು ಬ್ರಿಟಿಷರ ಪರವಾದರು. ೧೯೪೨ರಲ್ಲಿ ನಡೆದ ಕ್ವಿಟ್ ಇಂಡಿಯಾ ಚಳವಳಿಗೆ ಭಾರತದ ಕಮ್ಯುನಿಸ್ಟರು ಅಧಿಕೃತವಾಗಿ ತಮ್ಮ ಬೆಂಬಲವನ್ನು ಘೋಷಿಸಲಿಲ್ಲ. ೧೯೪೩ರಲ್ಲಿ ಬ್ರಿಟಿಷ್ ಸರ್ಕಾರ ಭಾರತ ಕಮ್ಯುನಿಸ್ಟ್ ಪಕ್ಷದ ಮೇಲಿದ್ದ ನಿಷೇಧವನ್ನು ರದ್ದುಗೊಳಿಸಿತು.

ಸ್ವಾತಂತ್ರ್ಯಾನಂತರ ಭಾರತ ಕಮ್ಯುನಿಸ್ಟ್ ಪಕ್ಷದಲ್ಲಿ ಎರಡು ವಿಚಾರಧಾರೆಗಳು ಉಂಟಾಗಿ, ಅದಕ್ಕೆ ತಕ್ಕಂತೆ ಎರಡು ಗುಂಪುಗಳು ತಲೆ ಎತ್ತಿದವು. ಸ್ವತಂತ್ರ ಭಾರತದ ರಾಜಕೀಯ ವ್ಯವಸ್ಥೆ ಹಾಗೂ ರಚನೆಯನ್ನು ಅಂದಾಜು ಮಾಡುವುದರಲ್ಲಿ ವ್ಯತ್ಯಾಸ ಕಂಡುಬಂದಿತು. ಇದು ಸೈದ್ಧಾಂತಿಕ ಭಿನ್ನಾಭಿಪ್ರಾಯಕ್ಕೆ ಎಡೆಮಾಡಿಕೊಟ್ಟಿತು. ಭಾರತ ದೇಶ ನಿಜವಾಗಿಯೂ ಸ್ವತಂತ್ರವಾಗಿದೆಯೇ?

ಇಲ್ಲವೇ? ಅಧಿಕಾರದ ಹಸ್ತಾಂತರ ನಿಜವೇ ಅಥವಾ ನಾಮಮಾತ್ರವೇ? ಇದು ನಿಜವಾದ ಅರ್ಥದಲ್ಲಿ ಸ್ವಾತಂತ್ರ್ಯವೇ ಎಂಬುದರ ಬಗ್ಗೆ ಚಿಂತನ ಮಂಥನಗಳು ಆರಂಭವಾದವು.

ಭಾರತ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿ ಪಿ. ಸಿ. ಜೋಷಿ ಅವರು ಸ್ವಾತಂತ್ರ್ಯ ಹಾಗೂ ಅಧಿಕಾರದ ಹಸ್ತಾಂತರ ನಿಜವಾದುದು, ನಮ್ಮ ಪಕ್ಷ ನೆಹರೂ ಸರ್ಕಾರಕ್ಕೆ ಬೆಂಬಲ ನೀಡಬೇಕು ಎಂಬ ನಿಲುವನ್ನು ತಳೆದರು. ಬಿ. ಟಿ. ರಣದಿವೆ, ಡಾ. ಅಧಿಕಾರಿ ಮುಂತಾದವರು ಭಾರತ ದೇಶಕ್ಕೆ ನಿಜವಾದ ಸ್ವಾತಂತ್ರ್ಯ ಕಮ್ಯುನಿಸ್ಟ್ ಪಕ್ಷದ ನಾಯಕತ್ವದಿಂದ ಮಾತ್ರ ಸಾಧ್ಯ. ದೇಶದ ಆರ್ಥಿಕ ಸಾಮಾಜಿಕ ಸಮಸ್ಯೆಗಳನ್ನು ಸಿ. ಪಿ. ಐ. ನಾಯಕತ್ವದಲ್ಲಿ ಬಗೆ ಹರಿಸಬೇಕು ಎಂಬ ನಿಲುವನ್ನು ತಳೆದರು. ಕಾಂಗ್ರೆಸ್ ಪಕ್ಷದ ವಿರುದ್ಧ ಸಿ. ಪಿ. ಐ. ಹೋರಾಟ ನಡೆಸಬೇಕು, ರೂಪಾಂತರವಾದ ಸಾಮ್ರಾಜ್ಯಶಾಹಿ ವ್ಯವಸ್ಥೆಯ ಪ್ರಕಾರ ಭಾರತ ಸ್ವತಂತ್ರವಾಗಿದೆ ಎಂಬ ಅಭಿಪ್ರಾಯಪಟ್ಟರು. ಸೋವಿಯತ್ ಕಮ್ಯುನಿಸ್ಟ್ ಪಕ್ಷದ ಕಾರ್ಯಕ್ರಮ ಹಾಗೂ ಸಾಧನಗಳ ಪ್ರಕಾರ ಭಾರತದಲ್ಲಿ ಬದಲಾವಣೆಗಳಾಗಬೇಕೆಂದು ಅವರು ಅಭಿಪ್ರಾಯಪಟ್ಟರು. ಸಿ. ರಾಜೇಶ್ವರರಾವ್ ಅವರು ಮಾವೋ ವಿಚಾರವಾದಗಳ ಕಡೆ ತಮ್ಮ ಒಲವನ್ನು ವ್ಯಕ್ತಪಡಿಸಿ, ಗೆರಿಲ್ಲಾ ಮಾದರಿಯ ರೈತ ಹೋರಾಟ ನಡೆಯಬೇಕೆಂಬ ಅಭಿಪ್ರಾಯ ಹೊಂದಿದ್ದರು. ಅಜಯಘೋಷ್ ಮುಂತಾದವರು ಇವೆಲ್ಲಕ್ಕೂ ಮಧ್ಯಮವಾದ ಮಾರ್ಗವನ್ನು ಹಿಡಿಯಬೇಕೆಂಬ ಇಚ್ಛೆ ಉಳ್ಳವರಾಗಿದ್ದರು. ೧೯೪೮ ರಲ್ಲಿ ಕಲ್ಕತ್ತಾದಲ್ಲಿ ನಡೆದ ಪಕ್ಷದ ಎರಡನೇ ಅಧಿವೇಶನದಲ್ಲಿ ಸ್ಟಾಲಿನ್ ದೃಷ್ಟಿ ಕೋನಗಳನ್ನು ಅಂಗೀಕರಿಸಲಾಯಿತು. ಸಾಮ್ರಾಜ್ಯಶಾಹಿ, ವಸಾಹತುಶಾಹಿ, ಊಳಿಗಮಾನ್ಯ ಪದ್ಧತಿ, ಸಾಂಪ್ರದಾಯಿಕತೆ ಅಥವಾ ಬೂರ್ಷ್ವಾತನಗಳನ್ನು ಖಂಡಿಸಿ ನಿರ್ಣಯ ಅಂಗೀಕರಿಸಿತು.

ಬಿ. ಟಿ. ರಣದಿವೆ ಅವರು ಪಕ್ಷದ ಪ್ರಧಾನ ಕಾರ್ಯದರ್ಶಿಯಾದರು. ಅವರು ಹಿಂಸಾತ್ಮಕ ಹೋರಾಟಗಳ ಪರವಾಗಿದ್ದರು. ಆಂಧ್ರದ ತೆಲಂಗಾಣದಲ್ಲಿ ಈ ರೀತಿಯ ರೈತ ಚಳವಳಿಗಳನ್ನು ಸಂಘಟಿಸಿದರು. ಗೆರಿಲ್ಲಾ ಮಾದರಿ ಹೋರಾಟವನ್ನು ರೂಪಿಸಲಾಯಿತು. ಆದರೆ ಶ್ರಮಿಕವರ್ಗಗಳ ಬಂಡಾಯವು ನಿರೀಕ್ಷಿತ ಮಟ್ಟದಲ್ಲಿ ನಡೆಯಲಿಲ್ಲ. ಇದು ರಷ್ಯಾ ಮಾದರಿಯ ಭಾವಾವೇಶವಾಗಿತ್ತು. ಈ ಮಧ್ಯೆ ಚೈನಾದಲ್ಲಿ ಮಾವೋ ಚಳವಳಿ ಪ್ರಬಲವಾಗಿತ್ತು. ರಣದಿವೆ ಮಾವೋ ಚಳವಳಿಯನ್ನು ಪ್ರಬಲವಾಗಿ ಖಂಡಿಸಿ ರಷ್ಯಾದ ಅಸಂತುಷ್ಟಿಗೆ ಕಾರಣರಾದರು. ಮಾವೋ ಕ್ರಾಂತಿ ಕೂಡಾ ಭಾರತ ಕಮ್ಯುನಿಸ್ಟ್ ಪಕ್ಷಕ್ಕೆ ಅನುಕರಣೀಯ ಎಂದು ರಷ್ಯಾ ಹೇಳಿತು. ಕಾರಣ ರಷ್ಯಾ-ಚೈನಾ ಸಂಬಂಧ ಸುಮಧುರವಾಗಿತ್ತು. ಮಾವೋ ಕ್ರಾಂತಿಗೆ ರಷ್ಯಾದ ಪೂರ್ಣ ಬೆಂಬಲ ಇತ್ತು. ಚೈನಾ ವಿರೋಧಿ ನಿಲುವಿಗಾಗಿ ರಣದಿವೆ ರಾಜೀನಾಮೆ ನೀಡಬೇಕಾಗಿ ಬಂದಿತು. ಅಂದರೆ ಭಾರತದಲ್ಲಿ ರಷ್ಯಾ ಕಮ್ಯುನಿಸ್ಟ್ ಪಾರ್ಟಿಯ (ಸಿ.ಪಿ.ಎಸ್.ಯು.) ತಾಳಕ್ಕೆ ತಕ್ಕಂತೆ ಭಾರತ ಕಮ್ಯುನಿಸ್ಟ್ ಪಾರ್ಟಿ ಕುಣಿಯಬೇಕಾಗಿತ್ತು. ರಣದಿವೆ ಹಾಗೂ ಅವರ ಅನುಯಾಯಿಗಳು ಸಿ.ಪಿ. ಎಸ್. ಯು.ನಲ್ಲಿ ತಮ್ಮ ನಂಬಿಕೆ ಕಳೆದುಕೊಳ್ಳತೊಡಗಿದರು.

೧೯೫೦ರ ನಂತರ ಪರಿಸ್ಥಿತಿ ಬದಲಾಗತೊಡಗಿತು. ಭಾರತ ಕಮ್ಯುನಿಸ್ಟ್ ಪಕ್ಷದಲ್ಲಿ ವರ್ಗ ಸಂಘರ್ಷದ ವಿಚಾರದಲ್ಲಿ ಬದಲಾವಣೆಗಳಾಗತೊಡಗಿದವು. ಸಿ.ಪಿ.ಎಸ್.ಯು. ಪ್ರಕಾರ ಹೊಸ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ಸಿ.ಪಿ.ಐ.ನ್ನು ಎಡಪಂಥೀಯ ಧೋರಣೆಗಳಿಂದ ಸ್ವಲ್ಪ ಮಟ್ಟಿಗೆ ವಿಮುಖಗೊಳಿಸುವ ಪ್ರಯತ್ನ ಆರಂಭವಾಯಿತು. ೧೯೫೭ರ ಸಾರ್ವತ್ರಿಕ ಮಹಾ ಚುನಾವಣೆಗಳಲ್ಲಿ ಸಿ.ಪಿ.ಐ. ಯಾವ ರೀತಿ ಸಾಧನೆ ಮಾಡುತ್ತದೆ, ಜನತೆ ಅದಕ್ಕೆ ಯಾವ ರೀತಿ ಸ್ಪಂದಿಸುತ್ತದೆ ಎಂಬುದನ್ನು ತಿಳಿದುಕೊಳ್ಳುವ ಬಗ್ಗೆ ಸಿ.ಪಿ.ಎಸ್.ಯು ಆಸಕ್ತಿ ಹೊಂದಿತ್ತು. ಸಂವಿಧಾನಾತ್ಮಕ ಸಮತಾವಾದದ ಬಗ್ಗೆ ಭಾರತವನ್ನು ಒಂದು ಮಾದರಿ ಪರೀಕ್ಷಾ ಪ್ರಕರಣವಾಗಿ ಪರಿಗಣಿಸಿತ್ತು. ಚುನಾವಣೆಗಳು ನಡೆದವು. ಕಮ್ಯುನಿಸ್ಟ್ ಪಕ್ಷವು ಕಾಂಗ್ರೆಸ್ಸೇತರ ಪಕ್ಷಗಳಿಗಿಂತ ಉತ್ತಮ ಸಾಧನೆಯನ್ನು ಮಾಡಿತು. ಸಂವಿಧಾನಾತ್ಮಕ ವಿಧಾನಗಳ ಮೂಲಕವೂ ಕಮ್ಯುನಿಸ್ಟ್ ಪಕ್ಷವನ್ನು ಬೆಳೆಸಬಹುದೆಂಬ ನಿರ್ಧಾರಕ್ಕೆ ಬರಲಾಯಿತು. ೧೯೫೨, ೧೯೫೭ರ ಚುನಾವಣೆಗಳಲ್ಲಿ ಉತ್ತಮ ಸಾಧನೆ ಕಂಡುಬಂದಿತು. ೧೯೫೭ರಲ್ಲಿ ಕೇರಳದಲ್ಲಿ ಕೇವಲ ಎರಡು ಬಹುಮತದಿಂದ ಕಮ್ಯುನಿಸ್ಟ್ ಸರ್ಕಾರವೂ ಅಸ್ತಿತ್ವಕ್ಕೆ ಬಂದಿತು. ಪ್ರಜಾಸತ್ತಾತ್ಮಕ ವಿಧಾನಗಳಿಂದಲೂ ಕಮ್ಯುನಿಸ್ಟ್ ಪಕ್ಷವು ಚಳವಳಿಯನ್ನು ಬೆಳೆಸಬಹುದೆಂಬುದು ಕಂಡುಬಂದಿತ್ತು.

೧೯೫೬ರಲ್ಲಿ ಪಾಲ್ಘಾಟ್‌ನಲ್ಲಿ ಪಕ್ಷದ ನಾಲ್ಕನೇ ಅಧಿವೇಶನ ನಡೆಯಿತು. ರಷ್ಯಾದಲ್ಲಿ ನಿಕಿಟಾ ಕ್ರುಶ್ಚೇವ್ ಅಧಿಕಾರಕ್ಕೆ ಬಂದಿದ್ದರು. ಸ್ಟಾಲಿನ್ ನೀತಿಯನ್ನು ಮೂಲೆಗುಂಪು ಮಾಡಲಾಗಿತ್ತು. ಬಾಂಡುಂಗ್ ಮತ್ತು ಜೆನಿವಾ ಒಪ್ಪಂದ (೧೯೫೫) ಗಳಿಗೆ ರಷ್ಯಾ ಭಾರತ ಮಾನ್ಯತೆ ನೀಡಿದ್ದವು. ಕ್ರುಶ್ಚೇವ್, ಬುಲ್ಗಾನಿನ್ ಭಾರತಕ್ಕೆ ಭೇಟಿ ನೀಡಿದ್ದರು. ಹೀಗಾಗಿ ನೆಹರೂ ಅವರ ವಿದೇಶಾಂಗ ನೀತಿಗೆ ಕಮ್ಯುನಿಸ್ಟ್ ಪಕ್ಷ ಬೆಂಬಲ ನೀಡಿತು. ೧೯೫೮ರಲ್ಲಿ ಅಮೃತ್‌ಸರದಲ್ಲಿ ನಡೆದ ಪಕ್ಷದ ವಿಶೇಷ ಅಧಿವೇಶನದಲ್ಲಿ ಇ.ಎಂ.ಎಸ್. ನಂಬೂದರಿಪಾದ್ ಅವರು ಪಕ್ಷದ ಹೊಸ ಸಂವಿಧಾನವನ್ನು ತಯಾರಿಸಿ ಮಂಡಿಸಿದರು. ಅದರ ಪ್ರಕಾರ ಕಮ್ಯುನಿಸ್ಟ್ ಪಕ್ಷ ಸಣ್ಣ ಚೌಕಟ್ಟಿನಿಂದ ವಿಸ್ತಾರವಾದ ಪಕ್ಷದ ಸ್ವರೂಪ ಪಡೆಯಿತು. ಅದೇ ರೀತಿ ಪಾರ್ಟಿಯ ಸೆಲ್‌ಗಳನ್ನು ರದ್ದು ಮಾಡಿ ಪಕ್ಷದ ಸ್ಥಳೀಯ ಶಾಖೆಗಳನ್ನು ಏರ್ಪಡಿಸಲಾಯಿತು. ಈ

ಹೊಸ ಸಂವಿಧಾನದಿಂದ ಕಮ್ಯುನಿಸ್ಟ್ ಪಕ್ಷ ಕೇವಲ ಶ್ರಮಿಕ ವರ್ಗದ ಮುಖವಾಣಿಯಾದ ಸಂಸ್ಥೆಯಾಗಿ ಉಳಿಯದೆ ಜನಸಾಮಾನ್ಯರ ಪಕ್ಷವಾಗಿಯೂ ಪರಿವರ್ತನೆ ಆಯಿತು. ಆದರೂ ಮಾರ್ಕ್ಸಿಸಂ ಮತ್ತು ಲೆನಿನಿಸಂಗಳಿಗೆ ತನ್ನ ನಿಷ್ಠೆ ವ್ಯಕ್ತಪಡಿಸಿತು. ಹಾಗೂ ಭಾರತೀಯ ಸಮಾಜದ ವ್ಯವಸ್ಥೆಗೆ ಹೊಂದಿಕೊಂಡು, ಇಲ್ಲಿನ ಪರಿಸ್ಥಿತಿಗೆ ಅನುಗುಣವಾಗಿ, ಇಲ್ಲಿನ ರಾಜಕೀಯ ಪರಿಸ್ಥಿತಿಗಳಿಗೆ ತಕ್ಕಂತೆ ಕೆಲಸ ಮಾಡಲು ನಿರ್ಧರಿಸಲಾಯಿತು. ಪ್ರಪಂಚದಲ್ಲಿಯೇ ಪ್ರಪ್ರಥಮ ಬಾರಿಗೆ ೧೯೫೭ರ ಚುನಾವಣೆಗಳಲ್ಲಿ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷ ಜಯಗಳಿಸಿ ಅಧಿಕಾರಕ್ಕೆ ಬಂದಿತ್ತಷ್ಟೆ. ಆಗ ಇ.ಎಂ.ಎಸ್. ನಂಬೂದರಿಪಾದ್ ಮುಖ್ಯಮಂತ್ರಿಗಳಾಗಿದ್ದರು. ಭೂ ಸುಧಾರಣೆ ಹಾಗೂ ಶಿಕ್ಷಣ ಮಸೂದೆಗಳನ್ನು ರಾಜ್ಯ ಸರ್ಕಾರ ಅಂಗೀಕರಿಸಿ ಕೇಂದ್ರದ ಒಪ್ಪಿಗೆಗಾಗಿ ಅದನ್ನು ಕಳುಹಿಸಿತು. ಈ ಮಸೂದೆಗಳ ವಿರುದ್ಧ ರಾಜ್ಯದಲ್ಲಿ ಭಾರೀ ಚಳವಳಿ ನಡೆಯಿತು. ಕಾಂಗ್ರೆಸ್ ಪಕ್ಷ ಈ ಚಳವಳಿಗಳ ಮುಂಚೂಣಿಯಲ್ಲಿತ್ತು. ಆಗ ಇಂದಿರಾ ಗಾಂಧಿಯವರು ಅಖಿಲಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದರು. ೧೯೫೯ ಜುಲೈ ೩೧ ರಂದು ಕೇರಳದ ಕಮ್ಯುನಿಸ್ಟ್ ಸರ್ಕಾರವನ್ನು ವಜಾ ಮಾಡಿ ರಾಷ್ಟ್ರಪತಿ ಆಡಳಿತ ಜಾರಿಗೊಳಿಸಲಾಯಿತು. ಪಕ್ಷದಲ್ಲಿದ್ದ ಮೂಲಭೂತವಾದಿಗಳು ಪಕ್ಷವು ಅಂಗೀಕರಿಸಿರುವ ಸಂವಿಧಾನ ವಿಫಲವಾದುದೇ ಇದಕ್ಕೆ ಕಾರಣ ಎಂದು ಹೇಳಿದರು.

೧೯೬೦ರಲ್ಲಿ ಮಾಸ್ಕೋ ಒಂದು ಹೇಳಿಕೆ ಹೊರಡಿಸಿತು. ಅಭಿವೃದ್ಧಿಶೀಲ ದೇಶಗಳಲ್ಲಿ ಅದರಲ್ಲೂ ಮುಖ್ಯವಾಗಿ ಅಲಿಪ್ತ ರಾಷ್ಟ್ರಗಳಲ್ಲಿ ರಾಷ್ಟ್ರೀಯ ಸಮಾಜವಾದಿ ಸಮಾಜ ರಾಷ್ಟ್ರ ನಿರ್ಮಾಣವಾಗಬೇಕು, ಸಮಾಜವಾದಿ ಸಮಾಜ ನಿರ್ಮಾಣದಲ್ಲಿ ರಾಷ್ಟ್ರೀಯ ಬೂರ್ಶ್ವಾವಾದಿಗಳು (ಯಥಾಸ್ಥಿತಿ ವಾದಿಗಳು) ಪ್ರಗತಿಪರ ದೃಷ್ಟಿಕೋನ ಹೊಂದಿದ್ದಲ್ಲಿ ಅವರಿಗೆ ಅಗತ್ಯವಾದ ರಾಜಕೀಯ, ಆರ್ಥಿಕ ನೆರವನ್ನು ನೀಡಬೇಕೆಂಬುದೇ ಈ ಹೇಳಿಕೆಯಾಗಿತ್ತು. ೧೯೫೯ರಲ್ಲಿ ಟಿಬೆಟನ್ನು ಆಕ್ರಮಿಸಿದ್ದ ಚೈನಾ ಭಾರತದ ಜೊತೆ ಗಡಿ ಜಗಳವನ್ನು ಆರಂಭಿಸಿತ್ತು. ಮೆಕ್‌ಮೋಹನ್ ರೇಖೆಯ ಬಗ್ಗೆ ತಕರಾರು ಎದ್ದಿತ್ತು. ಈ ಸಂದರ್ಭದಲ್ಲಿ ಎಸ್. ಎ. ಡಾಂಗೆ ಮುಂತಾದವರು ಸೋವಿಯತ್ ಪರವಾಗಿದ್ದರು. ಬಿ. ಟಿ. ರಣದಿವೆ ಚೈನಾ ಪರವಾಗಿದ್ದರು. ಅಜಯಘೋಷ್ ಮತ್ತು ಇ.ಎಂ.ಎಸ್. ನಂಬೂದರಿಪಾದ್ ಮಧ್ಯಮ ಮಾರ್ಗವಾದಿಗಳಾಗಿದ್ದರು. ಇಡೀ ಪಶ್ಚಿಮ ಬಂಗಾಳ ರಾಜ್ಯ ಘಟಕ ಚೈನಾ ಪರವಾಗಿತ್ತು. ಈ ಸಂದರ್ಭದಲ್ಲಿ ೧೯೬೧ ಏಪ್ರಿಲ್ ತಿಂಗಳಿನಲ್ಲಿ ವಿಜಯವಾಡ ಅಧಿವೇಶನ ಆರಂಭವಾಯಿತು. ಭಾರತ ಕಮ್ಯುನಿಸ್ಟ್ ಪಕ್ಷದಲ್ಲಿ ಒಡಕನ್ನು ತಪ್ಪಿಸಲು ಸಿ.ಪಿ.ಎಸ್.ಯು. ಮೈಕೇಲ್ ಸುಸ್ಲೋವ್ ಎಂಬುವವರನ್ನು ಕಳುಹಿಸಿತ್ತು.

ಪ್ರಧಾನ ಕಾರ್ಯದರ್ಶಿ ಅಜಯಘೋಷ್ ಅವರು ಮಂಡಿಸಿದ್ದ ರಷ್ಯಾ ಪರವಾದ ನಿರ್ಣಯವನ್ನು ಡಾಂಗೆ ಗುಂಪಿನ ಬೆಂಬಲದೊಂದಿಗೆ ಅಂಗೀಕರಿಸಲಾಯಿತು. ಎಡಗುಂಪು ಸಂಖ್ಯಾಬಲದಿಂದ ಕಡಿಮೆ ಇತ್ತು. ರಣದಿವೆ ಅವರು ಸಿದ್ಧಪಡಿಸಿದ ಕರಡು ನಿರ್ಣಯಕ್ಕೆ ೨೧ ಸದಸ್ಯರು ಬೆಂಬಲ ನೀಡಿ, ಅದನ್ನು ನ್ಯಾಷನಲ್ ಪಾರ್ಟಿ ಕಾಂಗ್ರೆಸ್ ಮುಂದೆ ತರಬೇಕೆಂದು ಒತ್ತಾಯ ಮಾಡಿದರು. ಇ.ಎಂ.ಎಸ್. ನಂಬೂದರಿಪಾದ್‌ರವರೂ ಒಂದು ಕರಡು ನಿರ್ಣಯವನ್ನು ತಂದಿದ್ದರು. ಕಾಂಗ್ರೆಸ್ ಸರ್ಕಾರದ ಜೊತೆ ಪಕ್ಷ ಯಾವ ರೀತಿ ವರ್ತಿಸಬೇಕು ಎಂಬುದೇ ಈ ಕರಡಿನಲ್ಲಿದ್ದ ಮುಖ್ಯ ವಿವಾದಾಸ್ಪದ ವಿಷಯವಾಗಿತ್ತು. ಘೋಷ್ ಮುಂತಾದ ಬಲಪಂಥೀಯರು ಕಾಂಗ್ರೆಸ್ ಪಕ್ಷದ ಪ್ರಗತಿಪರ ಶಕ್ತಿಗಳನ್ನು ಬೆಂಬಲಿಸಬೇಕೆಂದರೆ, ಎಡಪಂಥೀಯರು ಕಾಂಗ್ರೆಸ್ಸನ್ನು ತೀವ್ರವಾಗಿ ವಿರೋಧಿಸಬೇಕೆಂದಿದ್ದರು. ನಂಬೂದರಿಪಾದ್‌ರಂತಹ ಮಧ್ಯಮಮಾರ್ಗಿಗಳು ಕಾಂಗ್ರೆಸ್‌ನಲ್ಲಿರುವ ಸಾಮ್ರಾಜ್ಯಶಾಹಿ ಶಕ್ತಿ ವಿರೋಧಿಗಳನ್ನು, ಊಳಿಗ ಮಾನ್ಯಪದ್ಧತಿ ವಿರೋಧಿಗಳನ್ನು ಗುರುತಿಸಿ ಅವರಿಗೆ ಬೆಂಬಲ ನೀಡಬೇಕೆಂದರು. ಆದರೂ ಸೋವಿಯತ್ ಪರವಾದ ನಿರ್ಣಯ ಅಂಗೀಕಾರವಾದ ಕಾರಣ ೨೨ ಎಡಪಂಥೀಯರು ಸಭಾತ್ಯಾಗ ಮಾಡಿದರು. ಇವರಲ್ಲಿ ಪಶ್ಚಿಮ ಬಂಗಾಳ, ಆಂಧ್ರ, ಪಂಜಾಬ್‌ಗೆ ಸೇರಿದವರೇ ಜಾಸ್ತಿ ಇದ್ದರು. ಹಾಗೂ ಹೀಗೂ ಅಜಯ್‌ಘೋಷ್ ಹತ್ತು ವರ್ಷಗಳ ಕಾಲ ಪಕ್ಷದ ಭಿನ್ನವಾದಿಗಳನ್ನು ಒಂದಾಗಿ ಹಿಡಿದಿಡುವಲ್ಲಿ ಯಶಸ್ವಿ ಆಗಿದ್ದರು. ಅವರು ಜನವರಿ ೧೯೬೨ರಲ್ಲಿ ನಿಧನರಾದರು. ಏಪ್ರಿಲ್‌ನಲ್ಲಿ ನಡೆದ ನ್ಯಾಷನಲ್ ಕೌನ್ಸಿಲ್ ಸಭೆಯಲ್ಲಿ ಹೊಸದಾಗಿ ಅಧ್ಯಕ್ಷ ಹುದ್ದೆ ಸೃಷ್ಟಿಸಲಾಯಿತು. ಎಸ್. ಎ. ಡಾಂಗೆ ಅಧ್ಯಕ್ಷರಾಗಿ ಆಯ್ಕೆಯಾದರು. ನಂಬೂದರಿಪಾದ್ ಪ್ರಧಾನ ಕಾರ್ಯದರ್ಶಿಯಾದರು. ಡಾಂಗೆ ಬಲಪಂಥೀಯರೆಂಬುದು ಪ್ರಮುಖ ಅಂಶ. ಈ ಸಂದರ್ಭದಲ್ಲಿ ಭಾರತದ ಮೇಲೆ ಚೈನಾ ಆಕ್ರಮಣ ನಡೆಸಿತು.

### ಭಾರತ - ಚೀನಾ ಗಡಿ ಸಮಸ್ಯೆ : ಭಾರತ ಕಮ್ಯುನಿಸ್ಟ್ ಪಕ್ಷದ ವಿಭಜನೆ - ಸಿ.ಪಿ.ಎಂ. ರಚನೆ

ಚೀನಾ ದೇಶದಲ್ಲಿ ೧೯೩೫ರಿಂದ ೧೯೫೪ರ ಅವಧಿಯಲ್ಲಿ ಮಾವೋ ತ್ಸೆ ತುಂಗ್ ಅವರ ನೇತೃತ್ವದಲ್ಲಿ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಕ್ರಾಂತಿ ನಡೆಯಿತು. ೧೯೪೯ ಅಕ್ಟೋಬರ್ ೧ ರಂದು ಚೀನೀ ಜನತಾ ಗಣರಾಜ್ಯ ಸ್ಥಾಪನೆಯಾಗಿ ಮಾವೋ ಅದರ ಅಧ್ಯಕ್ಷರಾದರು. ಮಾವೋ ಕ್ರಾಂತಿಗೆ ರಷ್ಯದ ಕಮ್ಯುನಿಸ್ಟ್ ಪಕ್ಷ ಪೂರ್ಣ ಬೆಂಬಲ ನೀಡುತ್ತಿತ್ತು. ಮಾವೋ ೧೯೫೬ರಲ್ಲಿ ನೂರು

ಹೂವುಗಳ ಚಳವಳಿ ಆರಂಭಿಸಿದರು. ಆದರೆ ಅದು ವಿಫಲವಾಯಿತು. ೧೯೫೮ರಿಂದ ೬೦ರ ವರೆಗೆ "ಕ್ಷಿಪ್ರ ಮುನ್ನಡೆ" ಚಳವಳಿ ಆರಂಭಿಸಿದರು. ೧೯೬೦ ರ ನಂತರ ರಷ್ಯಾವನ್ನು ಬದಿಗೊತ್ತಿ ತಾವೇ ವಿಶ್ವ ಕಮ್ಯುನಿಸ್ಟ್ ಚಳವಳಿಯ ನಾಯಕರಾಗಲು ಹೊರಟರು. ಜೊತೆಗೆ ಮಾವೋ ವಿಸ್ತರಣಾ ನೀತಿಯನ್ನು ಆರಂಭಿಸಿದರು. ೧೯೫೯ ಮಾರ್ಚ್ ೨೧ ರಂದು ಟಿಬೆಟ್ಟನ್ನು ಪೂರ್ಣವಾಗಿ ಆಕ್ರಮಿಸಿಕೊಂಡರು. ದಲಾಯಿ ಲಾಮಾ ಭಾರತಕ್ಕೆ ಓಡಿ ಬಂದರು. ಭಾರತ ಅವರಿಗೆ ಹಾಗೂ ಲಕ್ಷಾಂತರ ಟಿಬೆಟಿಯನ್ನರಿಗೆ ರಾಜಕೀಯ ಆಶ್ರಯ ನೀಡಿತು. ಅದುವರೆಗೆ ಹಿಂದಿ-ಚೀನಿ ಭಾಯಿಭಾಯಿ ಆಗಿದ್ದ ಭಾರತ ಚೀನಾ ಸಂಬಂಧ ಹದಗೆಟ್ಟಿತು. ಮಾವೋ ವಕ್ರದೃಷ್ಟಿ ಭಾರತದ ಮೇಲೆ ಬಿತ್ತು. ನೆಹರೂ ಪಂಚಶೀಲ ಅಲಿಪ್ತ ನೀತಿ ಮಂತ್ರಗಳನ್ನು ಜಪಿಸುತ್ತಾ, ಮೆಕ್‌ಮೋಹನ್ ರೇಖೆಯನ್ನು ಗುರುತಿಸುತ್ತ ಚೀನಾ ಪ್ರಧಾನಿ ಚೌ ಎನ್ ಲಾಯ್ ಅವರೊಡನೆ ಮಾತುಕತೆ ನಡೆಸುತ್ತಿದ್ದರು.

ಇದ್ದಕ್ಕಿದ್ದ ಹಾಗೆ ೧೯೬೨ ಅಕ್ಟೋಬರ್ ೨೦ ರಂದು ಚೀನಾ ಭಾರತದ ಮೇಲೆ ಆಕ್ರಮಣ ಮಾಡಿತು. ಭಾರತದ ವಾಯುವ್ಯ ಭಾಗದಲ್ಲಿ ೨೦,೦೦೦ ಚದರ ಮೈಲಿ ಹಾಗೂ ಈಶಾನ್ಯ ಭಾಗದಲ್ಲಿ ೧೫,೦೦೦ ಚದರ ಮೈಲಿ ಭಾರತದ ಭೂ ಪ್ರದೇಶವನ್ನು ಆಕ್ರಮಿಸಿಕೊಂಡಿತು. ಯುದ್ಧಕ್ಕೆ ಸಿದ್ಧವಿಲ್ಲದ ಭಾರತದ ೨೫೦೦ ಮಂದಿ ಸೈನಿಕರು ಹತರಾದರು. ನವೆಂಬರ್ ೨೨, ೧೯೬೨ರಂದು ಚೀನಾ ಏಕಪಕ್ಷೀಯವಾಗಿ ಕದನ ವಿರಾಮ ಘೋಷಿಸಿತು. ಭಾರತ ಕಮ್ಯುನಿಸ್ಟ್ ಪಕ್ಷದಲ್ಲಿ ಕೆಲವು ನಾಯಕರು ಚೈನಾದ ಮಾವೋ ಕ್ರಾಂತಿಯ ಪರವಾದ ಮನೋಭಾವ ಉಳ್ಳವರಾಗಿದ್ದರೆ, ಇನ್ನು ಕೆಲವರು ರಷ್ಯನ್ ಕ್ರಾಂತಿಯ ಪರವಾದ ಮನೋಭಾವ ಉಳ್ಳವರಾಗಿದ್ದರು. ರಷ್ಯಾ ಪರ ಇರುವವರನ್ನು ಬಲ ಕಮ್ಯುನಿಸ್ಟರೆಂದೂ. ಚೈನಾ ಪರ ಇರುವವರನ್ನು ಎಡ ಕಮ್ಯುನಿಸ್ಟರೆಂದೂ ಕರೆಯಲಾಗುತ್ತಿತ್ತು. ಭಾರತ ಚೀನಾ ಸಂಬಂಧದ ಬಗ್ಗೆ ಭಾರತ ಕಮ್ಯುನಿಸ್ಟ್ ಪಕ್ಷ ತನ್ನ ಸ್ಪಷ್ಟ ನಿಲುವನ್ನು ಪ್ರಕಟಿಸಬೇಕಾಗಿ ಬಂತು.

೧೯೬೨ ಅಕ್ಟೋಬರ್ ತಿಂಗಳಲ್ಲಿ ಪಕ್ಷದ ನ್ಯಾಷನಲ್ ಕೌನ್ಸಿಲ್ ಸಭೆ ದೆಹಲಿಯಲ್ಲಿ ನಡೆಯಿತು. ಚೀನಾ ಅತಿಕ್ರಮಣಕಾರಿ ಎಂದು ಕೌನ್ಸಿಲ್ ಸದಸ್ಯ ಅಹಮದ್ ಪತ್ರಿಕಾ ಹೇಳಿಕೆ ನೀಡಿದ್ದರು. ಅವರ ಮೇಲೆ ಕ್ರಮ ತೆಗೆದುಕೊಳ್ಳಬೇಕು ಎಂದು ಜ್ಯೋತಿ ಬಸು ಮುಂತಾದ ಸದಸ್ಯರು ಒತ್ತಾಯಿಸಿದರು. ಜ್ಯೋತಿ ಬಸು, ಭೂಪೇಶಗುಪ್ತಾ, ಸುಂದರಯ್ಯ, ಹರಕಿಶನ್ ಸಿಂಗ್, ಸುರ್ಜಿತ್ ಚೀನಾ ಮೆಕ್‌ಮೋಹನ್ ರೇಖೆಯನ್ನು ದಾಟಿ ಅತಿಕ್ರಮಣ ನಡೆಸಿರುವ ಸಾಧ್ಯತೆ ಇಲ್ಲ ಎಂದರು. ಆದರೆ ಡಾಂಗೆ, ಯೋಗೀಂದ್ರ ಶರ್ಮಾ, ಎಂ. ಎನ್. ಗೋವಿಂದನ್ ನಾಯರ್, ಅಹಮದ್ ಇದನ್ನು ವಿರೋಧಿಸಿದರು. ಮುಂದೆ ೧೯೬೨ ನವೆಂಬರ್ ೧ ರಂದು ಮತ್ತೆ ದೆಹಲಿಯಲ್ಲಿ ಸಭೆ ಸೇರಿದ ನ್ಯಾಷನಲ್ ಕೌನ್ಸಿಲ್ ಚೀನಾ ಆಕ್ರಮಣಕಾರಿ ದೇಶ, ಚೀನಾದ ಅತಿಕ್ರಮಣದಿಂದ ದೇಶವನ್ನು ರಕ್ಷಿಸಬೇಕು, ಅದು ೯ ಸೆಪ್ಟೆಂಬರ್ ೬೨ರ ಸ್ಥಾನಕ್ಕೆ ಹಿಂದಿರುಗಿ ಮಾತುಕತೆಗೆ ಬರಬೇಕು ಎಂದು ನಿರ್ಣಯ ಅಂಗೀಕರಿಸಿ, ನೆಹರುರವರ ವಾದವನ್ನು ಎತ್ತಿ ಹಿಡಿಯಿತು. ಮತ್ತೆ ೧೯೬೩ರ ಫೆಬ್ರವರಿಯಲ್ಲಿ ನ್ಯಾಷನಲ್ ಕೌನ್ಸಿಲ್ ಸಭೆ ಸೇರಿ ಸೋವಿಯತ್ - ಚೀನಾ ವಿವಾದಗಳಲ್ಲಿ ಸೋವಿಯತ್ತನ್ನು ಬೆಂಬಲಿಸಿತು. ಈ ಸನ್ನಿವೇಶದಲ್ಲಿ ನಡೆದ ಮೂರು ಲೋಕಸಭಾ ಉಪಚುನಾವಣೆಗಳಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಕಾಂಗ್ರೆಸ್ ಅಭ್ಯರ್ಥಿಗಳಿಗೆ ಬೆಂಬಲ ನೀಡಿತು. ರಷ್ಯಾ ಭಾರತಕ್ಕೆ ನೆರವು ನೀಡಲು ಆರಂಭಿಸಿತು. ಇದು ಅಮೆರಿಕಾ ಸಾಮ್ರಾಜ್ಯಶಾಹಿಗೆ ನೀಡುವ ನೆರವು ಎಂದು ಚೀನಾ ಅದನ್ನು ಖಂಡಿಸಿತು. ಸೆಪ್ಟೆಂಬರ್ ೧೯೬೩ ರ ಹೊತ್ತಿಗೆ ಚೈನಾ - ರಷ್ಯಾ ಸಂಬಂಧ ಹಿಂದಿರುಗಲಾರದ ಮಟ್ಟಕ್ಕೆ ಹೋಗಿ ಪೂರ್ಣವಾಗಿ ಹದಗೆಟ್ಟುಹೋಯಿತು.

ಈ ಸನ್ನಿವೇಶದಲ್ಲಿ ಏಪ್ರಿಲ್ ೯, ೧೯೬೪ರಂದು ದೆಹಲಿಯಲ್ಲಿ ನ್ಯಾಷನಲ್ ಕೌನ್ಸಿಲ್ ಸಭೆ ಸೇರಿತು. ಅಜೆಂಡಾ ಬಗ್ಗೆ ವಾದವಿವಾದ ಉಂಟಾಗಿ ನಂಬೂದರಿಪಾದ್, ಗೋಪಾಲನ್, ರಾಮಮೂರ್ತಿ, ವೆಂಕಟರಾಮನ್, ಸುಂದರಯ್ಯ, ಬಸವಪುನ್ನಯ್ಯ, ಜ್ಯೋತಿಬಸು, ಹರಕಿಷನ್ ಸಿಂಗ್ ಸುರ್ಜಿತ್, ಹರೇಕೃಷ್ಣ ಕೋನಾರ್, ಪ್ರಮೋದ್ ದಾಸ್‌ಗುಪ್ತಾ, ಭೂಪೇಶ್ ಗುಪ್ತಾ, ಜಗಜಿತ್‌ಸಿಂಗ್, ಲ್ಯಾಲ್‌ಪುರಿ ಈ ಹನ್ನೆರಡು ಜನ ಸಭಾತ್ಯಾಗ ಮಾಡಿದರು. ಮಾರನೇ ದಿನ ಸಭೆ ಸೇರಿದ ನ್ಯಾಷನಲ್ ಕೌನ್ಸಿಲ್ ಈ ೧೨ ಜನರಲ್ಲಿ ಏಳು ಜನರನ್ನು ಹೊರಹಾಕಲು ನಿರ್ಧರಿಸಿತು. ಏಪ್ರಿಲ್ ೧೧, ೧೯೬೪ ರಂದು ಮತ್ತೆ ಸಭೆ ಸೇರಿದ ನ್ಯಾಷನಲ್ ಕೌನ್ಸಿಲ್ ಸಭೆಯಲ್ಲಿ ವಾದ ವಿವಾದಗಳು ನಡೆದು ೩೨ ಜನ ಸದಸ್ಯರು ಮತ್ತೆ ಸಭಾತ್ಯಾಗ ಮಾಡಿ ಸಭೆಯ ನಡವಳಿಕೆಗಳಿಗೂ ತಮಗೂ ಸಂಬಂಧ ಇಲ್ಲ ಎಂದರು.

ಪಿ. ಸುಂದರಯ್ಯ, ಎಂ. ಬಸವಪುನ್ನಯ್ಯ, ಟಿ. ನಾಗಿರೆಡ್ಡಿ, ಎಂ. ಹನುಮಂತರಾವ್, ಡಿ. ವೆಂಕಟೇಶ್ವರರಾವ್, ಎನ್. ಪ್ರಸಾದರಾವ್, ಜಿ. ಬಾಪನಯ್ಯ, ಇ.ಎಂ. ಎಸ್. ನಂಬೂದರಿಪಾದ್, ಎ. ಕೆ. ಗೋಪಾಲನ್, ಎಂ. ವಿ. ಕುನ್ಹಾಂಬು, ಸಿ. ಎಚ್. ಕನರಾನ್, ಇ.ಕೆ. ನಾಯನಾರ್, ವಿ. ಎಸ್. ಅಚ್ಯುತಾನಂದನ್, ಇ.ಕೆ. ಇಂಬಿಚ್ಚಿಬಾವಾ, ಪ್ರಮೋದ್ ದಾಸ್ ಗುಪ್ತಾ, ಮುಜಾಫರ್ ಅಹಮದ್, ಜ್ಯೋತಿಬಸು, ಅಬ್ದುಲ್ ಅಲೀಂ, ಹರೇಕೃಷ್ಣ ಕೋನಾರ್, ಸರೋಜ್ ಮುಖರ್ಜಿ, ಪಿ. ರಾಮಮೂರ್ತಿ

ಎಂ. ಆರ್. ವೆಂಕಟರಾಮನ್, ಎನ್. ಶಂಕರಯ್ಯ, ಕೆ. ರಮಣಿ, ಹರಿಕಿಶನ್ ಸಿಂಗ್ ಸುರ್ಜಿತ್, ಜಗಜಿತ್‌ಸಿಂಗ್ ಲ್ಯಾಲ್‌ಪುರಿ, ಡಿ. ಎಸ್. ಟಪಾಲಿಯಾ, ಡಾ। ಭಾಗ್‌ಸಿಂಗ್, ಶಿವಕುಮಾರ್ ಮಿಶ್ರಾ, ಎಲ್. ಎನ್. ಉಪಾಧ್ಯಾಯ, ಮೋಹನ್ ಪುನಮಿಯ, ಆರ್. ಪಿ. ಸರಾಫ್ ಇವರೇ ಆ ೩೨ ಜನ ಸದಸ್ಯರಾಗಿದ್ದರು. ರಷ್ಯಾ ಕಮ್ಯುನಿಸ್ಟ್ ಪಾರ್ಟಿಯು (ಸಿ.ಪಿ.ಎಸ್.ಯು.) ಬಲಪಂಥೀಯರಿಗೆ ತನ್ನ ಬೆಂಬಲ ನೀಡಿತು. ಅವರು ಕೈಗೊಂಡ ಕ್ರಮವನ್ನು ಎತ್ತಿ ಹಿಡಿಯಿತು. ೧೯೬೪ ಮೇ ೨೭ ರಂದು ನೆಹರೂ ನಿಧನರಾದರು. ಅನಂತರ ಡಾಂಗೆಯವರು ಈ ೩೨ ಜನ ಸದಸ್ಯರಿಗೂ ಪತ್ರ ಬರೆದು ಪಕ್ಷಕ್ಕೆ ಹಿಂದಿರುಗುವಂತೆ ವಿನಂತಿಸಿದರು. ಆದರೆ ಈ ಪ್ರಯತ್ನಗಳು ಫಲಕೊಡಲಿಲ್ಲ. ರಾಜ್ಯಗಳಲ್ಲಿದ್ದ ಸಮಿತಿಗಳನ್ನು ಸಿ.ಪಿ.ಐ. ವಿಸರ್ಜಿಸಿ ಹೊಸ ಸಮಿತಿಗಳನ್ನು ನೇಮಿಸಿತು. ಲೋಕಸಭಾಧ್ಯಕ್ಷರಿಗೆ ಪತ್ರ ಬರೆದು ಎ.ಕೆ. ಗೋಪಾಲನ್ ತನ್ನ ಪಕ್ಷದ ನಾಯಕರಲ್ಲ ಎಂದು ಹೇಳಿತು. ಡಾಂಗೆಯವರ ನಾಯಕತ್ವ ರದ್ದಾದರೆ ತಾವು ಮಾತುಕತೆಗೆ ಸಿದ್ಧವೆಂದು ಎಡಪಂಥದವರು ಹೇಳಿದರು. ಆದರೆ ಯಾವುದೂ ಆಗಲಿಲ್ಲ.

### ತೆನಾಲಿ ಅಧಿವೇಶನ - ಸಿ. ಪಿ. ಎಂ. ಉದಯ

೧೯೬೪ ಜುಲೈ ೧೦ ಮತ್ತು ೧೧ ರಂದು ಆಂಧ್ರ ಪ್ರದೇಶದ ತೆನಾಲಿಯಲ್ಲಿ ಕಮ್ಯುನಿಸ್ಟರೆಲ್ಲಾ ಸಭೆ ಸೇರಿದರು. ತಮ್ಮದೇ ನಿಜವಾದ ಭಾರತ ಕಮ್ಯುನಿಸ್ಟ್ ಪಕ್ಷ ಎಂದು ಅವರು ಹೇಳಿದರು. ಆದರೆ ಪಾರ್ಲಿಮೆಂಟಿನಲ್ಲಿ ಈ ಗುಂಪಿನ ಸದಸ್ಯತ್ವದ ಸಂಖ್ಯೆ ಕಡಿಮೆ ಇದ್ದುದರಿಂದ ಅದನ್ನು ಮುಂದೆ ಭಾರತ ಚುನಾವಣಾ ಆಯೋಗ ಒಪ್ಪಲಿಲ್ಲ. ಅದಕ್ಕೆ 'ಕಮ್ಯುನಿಸ್ಟ್ ಪಾರ್ಟಿ - ಮಾರ್ಕ್ಸಿಸ್ಟ್' ಎಂಬ ಹೆಸರನ್ನೂ ಸುತ್ತಿಗೆ ಹಾಗೂ ಕುಡುಗೋಲು ಚಿಹ್ನೆಯನ್ನೂ ಚುನಾವಣಾ ಆಯೋಗ ನೀಡಿತು. ಇದೇ ಸಿ.ಪಿ.ಎಂ. ಎಂದು ಪ್ರಖ್ಯಾತವಾಯಿತು. ಈ ತೆನಾಲಿ ಅಧಿವೇಶನದಲ್ಲಿ ಕರ್ನಾಟಕದಿಂದ ಎಸ್. ಸೂರ್ಯನಾರಾಯಣರಾವ್, ಎನ್. ಎಲ್. ಉಪಾಧ್ಯಾಯ ಮುಂತಾದವರು ಪಾಲ್ಗೊಂಡಿದ್ದರು. ನಮ್ಮದು ಸಾರ್ವಭೌಮ ಸ್ವತಂತ್ರ ಪಕ್ಷ. ನಾವು ಚೀನಾ ಪರವೂ ಇಲ್ಲ ರಷ್ಯಾ ಪರವೂ ಇಲ್ಲ. ನಾವು ಸಿ.ಪಿ.ಎಸ್.ಯು. ಅಥವಾ ಸಿ.ಪಿ.ಸಿ. ಪರವಾಗಿ ವಿರೋಧವಾಗಿ ಯಾವುದೇ ರೀತಿಯ ಹೇಳಿಕೆ ನೀಡುವುದಿಲ್ಲ, ಯಾವುದೇ ರೀತಿ ಟೀಕೆ ಮಾಡುವುದಿಲ್ಲ, ನಾವು ಪಕ್ಷದೊಳಗೆ ಚರ್ಚಿಸಿ ನಮ್ಮದೇ ಆದ ನಿರ್ಣಯಕ್ಕೆ ಬರುತ್ತೇವೆಂದು ಈ ಅಧಿವೇಶನದ ಅಧಿಕೃತ ವರದಿಯಲ್ಲಿ ಹೇಳಲಾಗಿದ್ದು ಇದು ಸಿಪಿಎಂ ಪಕ್ಷದ ನಿಲುವೇನು ಎಂಬುದನ್ನು ವಿವರಿಸುತ್ತದೆ.

ಬಸವಪುನ್ನಯ್ಯನವರು ತಯಾರಿಸಿದ ಕರಡು ನಿರ್ಣಯದ ಮೇಲೆ ಏಪ್ರಿಲ್ ೬೪ ರಲ್ಲಿಯೇ ದೆಹಲಿ ಸಭೆಯಲ್ಲಿ ಚರ್ಚೆ ನಡೆದಿತ್ತು. ನಂಬೂದರಿಪಾದ್‌ರವರೂ ಒಂದು ಕರಡು ನಿರ್ಣಯ ತಯಾರಿಸಿದ್ದರು. ಜನವರಿ ೬೪ರಲ್ಲಿ ಕಲ್ಕತ್ತಾದಲ್ಲಿ ನಡೆದಿದ್ದ ಸಭೆಯಲ್ಲಿ ಇದನ್ನು ಹಂಚಲಾಗಿತ್ತು. ಆದರೆ ಎರಡೂ ಅಂಗೀಕಾರ ಆಗಿರಲಿಲ್ಲ. ಡಾಂಗೆಯವರು ಮಂಡಿಸಿದ್ದ ಕರಡು ನಿರ್ಣಯ ೧೯೬೪ರ ಜೂನ್‌ನಲ್ಲಿ ಮುಂಬಯಿಯಲ್ಲಿ ನಡೆದ ಪಕ್ಷದ ಸಭೆಯಲ್ಲಿ ಅಂಗೀಕಾರವಾಗಿತ್ತು. ಕಮ್ಯೂನಿಸ್ಟ್ ಮಾರ್ಕ್ಸಿಸ್ಟ್ ಪಕ್ಷವು ಬಸವಪುನ್ನಯ್ಯ ಹಾಗೂ ನಂಬೂದರಿಪಾದ್‌ರವರು ತಯಾರಿಸಿದ್ದ ಕರಡನ್ನು ಪರಿಶೀಲಿಸಿ ಹೊಸ ಕರಡನ್ನು ಅದರ ಆಧಾರದ ಮೇಲೆ ಚರ್ಚಿಸಿ ಸಿದ್ಧಪಡಿಸಿತು. ತೆನಾಲಿ ಅಧಿವೇಶನದ ನಂತರ ಸಿ. ಪಿ. ಎಂ. ಪಕ್ಷವು ಅಕ್ಟೋಬರ್ - ನವೆಂಬರ್ ೧೯೬೪ರಲ್ಲಿ ಕಲ್ಕತ್ತಾದಲ್ಲಿ ಪಕ್ಷದ ೭ನೇ ಕಾಂಗ್ರೆಸ್ಸನ್ನು ಸಮಾವೇಶಗೊಳಿಸಿತು. ಹಾಗೂ ನಿಜವಾದ ಕಮ್ಯುನಿಸ್ಟ್ ಪಕ್ಷ ತನ್ನದೇ ಎಂದು ಹೇಳಿಕೊಂಡಿತು. ಆದರೆ ಪಕ್ಷದ ರಚನೆಯಲ್ಲಿ ಅದು ಸ್ಟಾಲಿನ್ ಕಾಲದ ನೀತಿಯನ್ನು ಅನುಸರಿಸಿತು. ಪಾಲಿಟ್‌ಬ್ಯೂರೋ ಪ್ರಧಾನ ಅಂಗವಾಯಿತು. ಇ. ಎಂ. ಎಸ್. ನಂಬೂದರಿಪಾದ್‌ರವರು ತಮ್ಮ ಕರಡಿನ ಬಗ್ಗೆ ರಿವಿಜನಿಸಂ ಅಂಡ್ ಡಾಗ್ಮ್ಯಾಟಿಸಂ ಎಂಬ ಪುಸ್ತಕವನ್ನೆ ರಚಿಸಿದ್ದರು. ಅದರಲ್ಲಿ ಅವರು ರಾಷ್ಟ್ರೀಯ ಪ್ರಜಾಸತ್ತೆ (National Democracy) ಹಾಗೂ ಬಂಡವಾಳಶಾಹಿ ವಿರೋಧಿ ದಾರಿಯನ್ನು ಎತ್ತಿ ಹಿಡಿದಿದ್ದಾರೆ ಹಾಗೂ ೧೯೬೦ರ ಮಾಸ್ಕೋ ಘೋಷಣೆಯನ್ನು ಬೆಂಬಲಿಸಿದ್ದಾರೆ.

ಬಸವಪುನ್ನಯ್ಯ ಶ್ರಮಿಕ ವರ್ಗದ ನಾಯಕತ್ವದಲ್ಲಿ ಜನತೆಯ ಪ್ರಜಾಸತ್ತೆಯನ್ನು (Peoples Democracy) ಸ್ಥಾಪಿಸಬೇಕೆಂಬುದನ್ನು ಬಲವಾಗಿ ಪ್ರಸ್ತಾಪ ಮಾಡಿದ್ದಾರೆ. ಆದರೆ ಶಾಂತಿಯುತ ಮಾರ್ಗಗಳಿಂದ ಶ್ರಮಿಕ ವರ್ಗದ ವಿಜಯಕ್ಕೆ ಸಿ.ಪಿ.ಎಂ. ಯಾವರೀತಿ ಶ್ರಮಿಸುತ್ತದೆ ಎಂಬುದು ಸ್ಪಷ್ಟವಾಗಿಲ್ಲ. ಕಲ್ಕತ್ತ ಕಾಂಗ್ರೆಸ್‌ನಲ್ಲಿ ಬಸವಪುನ್ನಯ್ಯನವರ ಕರಡನ್ನು ಅಂಗೀಕರಿಸಲಾಯಿತು. ಅದರಲ್ಲಿ ಇ.ಎಂ.ಎಸ್. ನಂಬೂದರಿಪಾದರ ಕೆಲವು ಅಂಶಗಳನ್ನು ಅಳವಡಿಸಲಾಯಿತು.

ಜನತೆಯ ಪ್ರಜಾಸತ್ತೆ (Peoples Democracy) ಹಾಗೂ ಕಾಂಗ್ರೆಸ್ ಪಕ್ಷದ ವಿರುದ್ಧ ವಿಶಾಲವಾದ ಭೂಮಿಕೆಯ ಮೇಲೆ ಇತರ ಪಕ್ಷಗಳೊಡನೆ ಹೊಂದಾಣಿಕೆ, ರೈತರ ಸಮಸ್ಯೆಗಳಿಗೆ ಪ್ರಾಮಾಣಿಕ ಗಮನ ನೀಡಿ ಅವುಗಳ ಪರಿಹಾರಕ್ಕೆ ಪ್ರಯತ್ನಿಸುವುದು ಸಿ.ಪಿ.ಎಂ.ನ. ಮುಖ್ಯ ಧೋರಣೆಗಳಾಗಿವೆ. ಇದು ೧೯೬೭ರ ಚುನಾವಣೆಗಳ ಪ್ರಣಾಳಿಕೆಯಲ್ಲಿ ಸ್ಥಾನ ಪಡೆದಿದೆ. ತೀವ್ರ

ಕೈಗಾರಿಕೀಕರಣದಿಂದ ಸಾಮಾಜಿಕ ರಚನೆಯಲ್ಲಿ ತನ್ನಷ್ಟಕ್ಕೆ ತಾನೇ ಬದಲಾವಣೆ ಆಗುತ್ತದೆ ಎನ್ನುವುದು ಕಮ್ಯುನಿಸ್ಟ್ ಪಕ್ಷಗಳ ಸಿದ್ಧಾಂತ. ಆದರೆ ಸಿ.ಪಿ.ಎಂ. ಪಕ್ಷ ರೈತರ ಸಮಸ್ಯೆಗಳಿಗೆ ಪ್ರಾಧಾನ್ಯತೆ ನೀಡಿ ಅದರ ಪರಿಹಾರಕ್ಕೆ ಆದ್ಯ ಗಮನ ನೀಡಿದೆ. ಕಲ್ಕತ್ತಾ ಕಾಂಗ್ರೆಸ್‌ನಲ್ಲಿ ರೈತರ ಸಮಸ್ಯೆಗಳು ಹಾಗೂ ಅವುಗಳ ಪರಿಹಾರದ ಬಗ್ಗೆ ಸಿ.ಪಿ.ಎಂ. ವಿವರವಾಗಿ ಚರ್ಚಿಸಿದೆ. ಸಿ.ಪಿ.ಐ. ನೆಹರೂರವರ ವಿದೇಶಾಂಗ ನೀತಿಯನ್ನು ಒಪ್ಪುತ್ತದೆ. ಆದರೆ ಸಿಪಿಎಂ ಸ್ವತಂತ್ರ ವಿದೇಶಾಂಗ ನೀತಿಯನ್ನು ಪ್ರತಿಪಾದಿಸುತ್ತದೆ. ಶಾಂತಿ, ಸಮಾಜವಾದ ಹಾಗೂ ಸ್ವಾತಂತ್ರ್ಯವನ್ನು ಪ್ರೀತಿಸುವ ಸಾಮ್ರಾಜ್ಯಶಾಹಿ ವಿರೋಧಿಗಳ ಒಗ್ಗೂಡುವಿಕೆಯಿಂದ, ಸಹಕಾರದಿಂದ ಸ್ವತಂತ್ರ ವಿದೇಶ ನೀತಿಯನ್ನು ರೂಪಿಸಿ ಅನುಸರಿಸಲು ಇಷ್ಟಪಡುತ್ತದೆ. ಅಲಿಪ್ತ ನೀತಿಗೆ ಸಿ.ಪಿ.ಎಂ. ವಿರೋಧವಾಗಿದೆ. ಸಮಾಜವಾದಿಗಳು, ಪ್ರಗತಿಪರ ಸಮಾಜವಾದಿ ಶಕ್ತಿಗಳ ಜೊತೆಗೆ ಸಂಬಂಧವನ್ನು ಸಿಪಿಎಂ ಬಯಸುತ್ತದೆ. ಸಿಪಿಎಂ ಪಾಕ್ ವಿರೋಧಿ ನೀತಿಯನ್ನು ಅನುಸರಿಸುತ್ತದೆ. ಆದರೆ ನೆರೆಹೊರೆಯ ರಾಷ್ಟ್ರಗಳೊಡನೆ ಶಾಂತಿ ಸಮಾಧಾನಕರವಾದ ರೀತಿಯಲ್ಲಿ ವಿವಾದಗಳ ಇತ್ಯರ್ಥವನ್ನು ಬಯಸುತ್ತದೆ. ಸಿ.ಪಿ.ಐ. (ಎಂ) ಕೇಡರ್ ಪಾರ್ಟಿ ಪದ್ಧತಿಯನ್ನು ಅನುಸರಿಸುತ್ತದೆ. ಪ್ರಧಾನ ಕಾರ್ಯದರ್ಶಿ, ಪಾಲಿಟ್ ಬ್ಯೂರೋ, ಸೆಂಟ್ರಲ್ ಕಮಿಟಿಗಳು ಪಕ್ಷದ ಪ್ರಮುಖ ಅಂಗಗಳಾಗಿವೆ.

### ೧೯೬೮ ರಲ್ಲಿ ಸಿ.ಪಿ.ಎಂ. ಸದಸ್ಯತ್ವದ ಬಲ ಈ ರೀತಿ ಇತ್ತು

| | | | |
|---|---|---|---|
| ಆಂಧ್ರ ಪ್ರದೇಶ | ೯,೪೨೮ | ಬಿಹಾರ | ೨,೮೮೨ |
| ಕೇರಳ | ೨೦,೯೧೨ | ಮಹಾರಾಷ್ಟ್ರ | ೨,೩೧೬ |
| ಪಂಜಾಬ್ | ೪,೧೪೦ | ತಮಿಳುನಾಡು | ೧೦,೦೧೧ |
| ಪಶ್ಚಿಮ ಬಂಗಾಳ | ೧೬,೦೬೬ | ಕರ್ನಾಟಕ | ೧,೧೯೪ |
| | | ಒಟ್ಟು | ೭೪, ೪೧೯ |

(೧೯೯೮ರಲ್ಲಿ ಸಿ.ಪಿ.ಐ. ಸದಸ್ಯತ್ವ ಬಲ ೨,೪೫,೨೩೮ ಆಗಿತ್ತು.) ಈಗ ಸಿ.ಪಿ.ಎಂ. ಸದಸ್ಯತ್ವ ಬಲ ೭೦೩,೨೬೩ಕ್ಕೆ ಏರಿದೆ ಎಂದು ತಿಳಿದುಬರುತ್ತದೆ.

**ನಾಲ್ಕನೆಯ ಮಹಾ ಚುನಾವಣೆಗಳಿಗೆ ಸಿ.ಪಿ.ಎಂ. ಪಕ್ಷ ಮೊದಲಬಾರಿಗೆ ಬಿಡುಗಡೆ ಮಾಡಿದ ಪ್ರಣಾಳಿಕೆಯ ಮುಖ್ಯಾಂಶಗಳು**

೧. ಮೂಲಭೂತ ಹಕ್ಕುಗಳಿಗೆ ತಿದ್ದುಪಡಿ. ಆಸ್ತಿ ಹಕ್ಕಿನ ವಿರುದ್ಧ ಶಾಸನ.
೨. ಇಡೀ ಸಂವಿಧಾನವನ್ನು ಕೂಲಂಕಷವಾಗಿ ಬದಲಾವಣೆ ಮಾಡುವುದು.
೩. ಯಾವುದೇ ಪರಿಹಾರವಿಲ್ಲದೆ ರಾಜಧನ ರದ್ದು.
೪. ದಬ್ಬಾಳಿಕೆ, ದಮನಕಾರಿ ಶಾಸನಗಳ ರದ್ದು.
೫. ಬದ್ಧವಾದ ನ್ಯಾಯಾಂಗ.
೬. ಜನತೆಯ ಸಂಕಲ್ಪಕ್ಕೆ ಸಾಧನವಾದ ರೀತಿಯಲ್ಲಿ ಕ್ರಿಯಾಶೀಲವಾಗಿರುವ ನ್ಯಾಯಾಂಗ.
೭. ಜಮೀನುದಾರಿ ಹಾಗೂ ಉಳಿಗಮಾನ್ಯ ಪದ್ಧತಿಗಳನ್ನು ಯಾವುದೇ ಪರಿಹಾರವಿಲ್ಲದೆ ರದ್ದುಗೊಳಿಸುವುದು.
೮. ಕೃಷಿ ಕಾರ್ಮಿಕರ ವೇತನಗಳಲ್ಲಿ ಹೆಚ್ಚಳ.
೯. ಸಹಕಾರ ಹಾಗೂ ಸಾಲ ನೀಡಿಕೆ ಸಂಸ್ಥೆಗಳನ್ನು ಸಣ್ಣ ರೈತರಿಗೆ ಅನುಕೂಲಕರವಾದ ರೀತಿಯಲ್ಲಿ ಬದಲಾಯಿಸುವುದು.
೧೦. ಸಣ್ಣ ರೈತರಿಗೆ ಅಗತ್ಯವಾದ ಕೃಷಿ ಸಾಮಗ್ರಿಗಳನ್ನು ಒದಗಿಸುವುದು.
೧೧. ಎಲ್ಲಾ ದೇಶಿ ಹಾಗೂ ವಿದೇಶಿ ಬಂಡವಾಳ ಹೂಡಿಕೆಗಳನ್ನು, ಪ್ರಮುಖ ಕೈಗಾರಿಕೆಗಳನ್ನು ರಾಷ್ಟ್ರೀಕರಣಗೊಳಿಸುವುದು.
೧೨. ಬಂಡವಾಳಷಾಹಿ ಪಥದ ವಿರುದ್ಧ ಹೋರಾಟ.
೧೩. ಆಡಳಿತ ಮಂಡಲಿಗಳಲ್ಲಿ ಕಾರ್ಮಿಕರ ಸಹಭಾಗಿತ್ವ.
೧೪. ಸಾಮ್ರಾಜ್ಯಷಾಹಿಗಳ ವಿರುದ್ಧ ಹೋರಾಟ.
೧೫. ಉತ್ತರ ಕೊರಿಯಾ, ಪಿ.ಆರ್.ಜಿ.ಡಿ.ಆರ್.ವಿ.ಎನ್. ಗಳಿಗೆ ಮಾನ್ಯತೆ.

## ಲೋಕಸಭೆಯಲ್ಲಿ ವಿಭಜನಾ ಪೂರ್ವ ಭಾರತ ಕಮ್ಯುನಿಸ್ಟ್ ಪಕ್ಷದ ಪ್ರಾತಿನಿಧ್ಯ

| | ೧೯೫೨ | ೧೯೫೭ | ೧೯೬೨ |
|---|---|---|---|
| ಆಂಧ್ರ | - | ೨ | ೭ |
| ಬಿಹಾರ | - | - | - |
| ಕೇರಳ | - | ೯ | ೬ |
| ಮಹಾರಾಷ್ಟ್ರ | - | ೪ | - |
| ಒರಿಸ್ಸಾ | ೧ | ೧ | - |
| ಪಂಜಾಬ್ | - | ೧ | - |
| ರಾಜಾಸ್ಥಾನ | - | - | - |
| ತಮಿಳುನಾಡು | - | ೨ | ೨ |
| ತ್ರಿಪುರಾ | ೨ | ೨ | ೨ |
| ಉತ್ತರ ಪ್ರದೇಶ | - | ೨ | ೨ |
| ಪಶ್ಚಿಮ ಬಂಗಾಳ | ೫ | ೯ | ೯ |

## ಲೋಕಸಭೆಯಲ್ಲಿ ಸಿ.ಪಿ.ಎಂ. ಪಕ್ಷದ ಪ್ರಾತಿನಿಧ್ಯ

| | ೧೯೬೭ | ೭೧ | ೭೭ | ೭೯ | ೮೪ | ೮೯ | ೯೧ | ೯೬ | ೯೮ |
|---|---|---|---|---|---|---|---|---|---|
| ಆಂಧ್ರ | - | ೧ | - | - | - | - | ೧ | ೧ | |
| ಬಿಹಾರ | - | - | - | - | - | ೧ | ೧ | ೧ | - |
| ಕೇರಳ | ೯ | ೨ | - | ೬ | ೧ | ೨ | ೩ | ೫ | ೬ |
| ಮಹಾರಾಷ್ಟ್ರ | - | - | - | - | - | - | ೧ | - | - |
| ಒರಿಸ್ಸಾ | - | - | ೧ | - | - | ೧ | ೧ | - | - |
| ಪಂಜಾಬ್ | - | - | ೪ | - | - | - | - | - | - |
| ರಾಜಾಸ್ಥಾನ್ | - | - | - | - | - | - | ೧ | - | - |
| ತಮಿಳುನಾಡು | - | - | - | - | - | - | - | - | - |
| ತ್ರಿಪುರಾ | - | ೨ | - | ೨ | ೨ | - | - | ೨ | ೨ |
| ಉತ್ತರಪ್ರದೇಶ | ೧ | - | - | - | - | - | ೧ | - | - |
| ಪ.ಬಂಗಾಳ | ೫ | ೨೦ | ೧೭ | ೨೮ | ೧೮ | ೨೭ | ೨೭ | ೨೩ | ೨೪ |

## ಕರ್ನಾಟಕದಲ್ಲಿ ಸಿ.ಪಿ.ಐ.ಎಂ. ಪಕ್ಷದ ಚುನಾವಣಾ ಸಾಧನೆ

೧೯೬೭ರ ಲೋಕಸಭೆ ಹಾಗೂ ರಾಜ್ಯ ವಿಧಾನಸಭಾ ಚುನಾವಣೆಗಳಿಗೆ ಸಿಪಿಐಎಂ ಪಕ್ಷದಿಂದ ಸ್ಪರ್ಧಿಸಿದ ಅಭ್ಯರ್ಥಿಗಳು ಹಾಗೂ ಅವರು ಪಡೆದ ಶೇಕಡಾವಾರು ಮತಗಳು ಹೀಗಿವೆ:

ಕೋಲಾರ ಮೀಸಲು ಕ್ಷೇತ್ರ : ಜಿ. ನಾರಾಯಣಸ್ವಾಮಿ ಶೇ. ೨೩.೭೨ ಮತ. ೬೫, ೫೯೩ ಪಡೆದ ಮತ.

ಮಂಗಳೂರು, ಬಿ. ಎನ್. ಕೃಷ್ಣಪ್ಪ ಶೇ. ೧೮.೯೬ ಮತ, ೫೭.೭೬ ಪಡೆದ ಮತ.

## ೧೯೭೭

ಕೋಲಾರ ಮೀಸಲು ಕ್ಷೇತ್ರದಿಂದ ಜಿ. ನಾರಾಯಣಸ್ವಾಮಿ ಅವರು ಶೇ. ೮.೪೪. ಅಂದರೆ ೨೨,೫೧೮ ಮತಗಳನ್ನು ಪಡೆದಿದ್ದರು.

## ೧೯೬೭ರ ವಿಧಾನಸಭಾ ಚುನಾವಣೆ

ಕಳ್ಳಂಬೆಳ್ಳ-ಹೆಚ್. ಸಿ. ಚನ್ನಪ್ಪ ಶೇ. ೧೦.೯೪ ಮತ. ೩,೫೬೭, ಬಾಗೇಪಲ್ಲಿ - ಎನ್. ಆದಿನಾರಾಯಣ ಶೇ. ೨೯.೪೦ ಮತ. ೯,೪೦೮. ಗಾಂಧಿನಗರ. ಕೆ. ವಜ್ರವೇಲು ಶೇ. ೯.೪೩ ಮತ. ೩,೧೬೧. ಮಂಗಳೂರು. ೨. ಎ.ಕೃಷ್ಣಶೆಟ್ಟಿ ಶೇ. ೩೩.೩೭ ಮತ ೧೪.೦೫೧. ಹಳಿಯಾಳ. ಎಂ. ಎಸ್. ಧಾರೇಶ್ವರ ಶೇ. ೩.೯೬ ಮತ. ೧,೩೭೪, ಹಾವೇರಿ. ಪಿ. ಆರ್. ವಲ್ಲಾಸಂಗ್ (Vallasang) ಶೇ. ೩೪.೪೯ ಮತ. ೧೧,೯೦೫.

## ೧೯೭೨ ವಿಧಾನಸಭಾ ಚುನಾವಣೆ

| | | | | | |
|---|---|---|---|---|---|
| ಗುಲ್ಬರ್ಗಾ | - | ಗಂಗಾಧರ ನಮೋಶಿ | ಶಿಡ್ಲಘಟ್ಟ | - | ಜಿ. ಪಾಪಣ್ಣ |
| ಚಿಂತಾಮಣಿ | - | ಜಿ.ವಿ. ಅಶ್ವತ್ಥ ನಾರಾಯಣರೆಡ್ಡಿ | ಕೆಜಿಎಫ್ | - | ಎ. ಮುನಿಸ್ವಾಮಿ |
| ಗಾಂಧಿನಗರ | - | ಎ. ನಾಗೇಶರಾವ್ | ಕೃಷ್ಣ ರಾಜ | - | ಬಿ.ಎ. ಬೆಳ್ಳಿಯಪ್ಪ |
| ಮಂಗಳೂರು | - | ಪಿ. ರಾಮಚಂದ್ರರಾವ್ | ಮಂಗಳೂರು-೨ | - | ಎಂ.ಕೃಷ್ಣ ಶೆಟ್ಟಿ |
| ಕುಂದಾಪುರ | - | ಅಬ್ರಾಹಿಂ ಕಾರ್ಕಳ | ಕಾರವಾರ | - | ಜಿ. ವಿ. ಪವಾರ್ |
| ಹಳಿಯಾಳ | - | ಆರ್. ಜಿ. ಶೆಟ್ಲರ್ | ಹಾವೇರಿ | - | ಪಿ. ಆರ್. ವಲ್ಲಾಸಿಂಗ್ |
| ಬಾಗಲಕೋಟೆ | - | ಎಸ್. ಕೆ. ಉಪಾಧ್ಯ | | | |

## ೧೯೭೮ ರ ಚುನಾವಣೆ

ಸಿ.ಪಿ.ಎಂ. ಪಕ್ಷದಿಂದ ಒಟ್ಟು ಹತ್ತು ಅಭ್ಯರ್ಥಿಗಳು ಸ್ಪರ್ಧಿಸಿದ್ದು ಒಂಬತ್ತು ಜನ ಠೇವಣಿ ಕಳೆದು ಕೊಂಡರು. ಒಬ್ಬರು ಠೇವಣಿ ಹಿಂದಕ್ಕೆ ಪಡೆದರು. ಆದರೆ ಯಾರೂ ಗೆಲ್ಲಲಿಲ್ಲ.

| | | | | | |
|---|---|---|---|---|---|
| ಗುಲ್ಬರ್ಗಾ | - | ಗಂಗಾಧರ ನಮೋಶಿ, | ಶಿಡ್ಲಘಟ್ಟ | - | ಜಿ. ಪಾಪಣ್ಣ, |
| ಬಾಗೇಪಲ್ಲಿ | - | ಎಂ.ವಿ. ಅಪ್ಪಯ್ಯಸ್ವಾಮಿರೆಡ್ಡಿ, | ಕೆ.ಜಿ.ಎಫ್ . | - | ಬಿ. ಎಸ್. ಮಣಿ, |
| ವರ್ತೂರು | - | ಎಸ್. ಸೂರ್ಯನಾರಾಯಣರಾವ್, | ಸುಳ್ಯ | - | ಬಿ. ರಾಮಕೃಷ್ಣ |
| ವಿಟ್ಲ | - | ಎಂ. ಎಚ್. ಕೃಷ್ಣಪ್ಪ, | | | |
| ಉಳ್ಳಾಲ | - | ಪಿ. ರಾಮಚಂದ್ರರಾವ್ ಶೇ. ೨೩.೦೪, ಮತ. ೧೨,೪೪೫ ಇವರು ಠೇವಣಿ ಹಿಂದಕ್ಕೆ ಪಡೆದವರು. ಸ್ವಾನ್‌ಲೆಕರ್ ರಮೇಶ್ ಗಣಪತಿ ಶೇ. ೧೦.೪೨ ಮತಗಳು. | | | |

ಸಿಪಿಐಎಂಯಲ್ಲಿ ಚುನಾವಣೆ ಸ್ಪರ್ಧಿಸಿದವರು ೪ ಜನ. ಅದರಲ್ಲಿ ಗೆದ್ದವರು ೩ ಜನ. ಪಡೆದ ಮತ ೧,೧೬,೭೬೮ - ಶೇ. ೦.೯೦

## ಗೆದ್ದ ಅಭ್ಯರ್ಥಿಗಳು

ಕರ್ನಾಟಕ ರಾಜ್ಯದಲ್ಲಿ ಮೊದಲ ಬಾರಿಗೆ ಸಿಪಿಐಎಂ ಸದಸ್ಯರು ರಾಜ್ಯ ವಿಧಾನಸಭೆಗೆ ಆಯ್ಕೆಯಾದರು. ಅವರುಗಳೆಂದರೆ ಬಾಗೇಪಲ್ಲಿಯಿಂದ ಎ. ವಿ. ಅಪ್ಪಸ್ವಾಮಿ ರೆಡ್ಡಿ, ವರ್ತೂರಿನಿಂದ ಎಸ್. ಸೂರ್ಯನಾರಾಯಣರಾವ್, ಉಳ್ಳಾಲದಿಂದ ಪಿ. ರಾಮಚಂದ್ರರಾವ್ ಇವರುಗಳು ಪಡೆದ ಮತಗಳು ಇಂತಿವೆ. ಬಾಗೇಪಲ್ಲಿಯಿಂದ ಶೇ. ೫೮.೭೫; ೩೫.೬೯೯ ಮತಗಳು, ವರ್ತೂರಿನಿಂದ ಶೇ. ೫೯.೦೮ : ೪೮,೩೪೪ ಮತಗಳು. ಉಳ್ಳಾಲದಿಂದ ಶೇ. ೩೨.೪೪; ೧೬.೪೨೩ ಮತಗಳು.

### ೧೯೮೫ರ ವಿಧಾನಸಭಾ ಚುನಾವಣೆ

ಈ ಚುನಾವಣೆಯಲ್ಲಿ ಏಳು ಸ್ಥಾನಗಳಿಗೆ ಸಿಪಿಐಎಂ ಪಕ್ಷ ಸ್ಪರ್ಧಿಸಿತ್ತು. ಅದರಲ್ಲಿ ಎರಡು ಸ್ಥಾನಗಳನ್ನು ಈ ಪಕ್ಷ ಪಡೆಯಿತು. ಅದು ಶೇ. ೦೩.೮೬ ಮತ ಪಡೆಯಿತು. ಅದರ ಗಳಿಕೆ ೧೨,೭೩೩.

### ಗೆದ್ದ ಅಭ್ಯರ್ಥಿಗಳು

ಮುಳಬಾಗಿಲು ಕ್ಷೇತ್ರದಿಂದ ಆರ್. ವೆಂಕಟರಾಮಯ್ಯ ಶೇ. ೬೩.೦೩, ೪೨.೭೧೨ ಮತಗಳು. ಕೆ.ಜಿ.ಎಫ್.ನಿಂದ ಟಿ. ಎಸ್. ಮಣಿ : ಶೇ. ೫೧.೦೨, ೨೮,೩೨೫ ಮತಗಳು.

### ೧೯೮೯ ವಿಧಾನಸಭಾ ಚುನಾವಣೆ

ಈ ಚುನಾವಣೆಗೆ ಏಳು ಜನ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಶೇ. ೦.೫೪ ಅಂದರೆ ೯೭,೯೦೦ ಮತ ಪಡೆದರು. ಆದರೆ ಯಾರೂ ಜಯಶೀಲರಾಗಲಿಲ್ಲ.

### ೧೯೯೪ರ ವಿಧಾನಸಭಾ ಚುನಾವಣೆ

ಹದಿಮೂರು ಜನ ಅಭ್ಯರ್ಥಿಗಳು ಈ ಪಕ್ಷದಿಂದ ಸ್ಪರ್ಧಿಸಿದ್ದರು. ಆ ಪಕ್ಷ ಶೇ. ೦.೪೯ ರಷ್ಟು ಮತ ಪಡೆಯಿತು. ೧,೦೧,೯೮೨ ರಷ್ಟು ಮತ ಗಳಿಸಿತು. ಕೇವಲ ಒಬ್ಬರು ಅಭ್ಯರ್ಥಿ ಮಾತ್ರ ಜಯಶೀಲರಾದರು. ಅವರೆಂದರೆ ಬಾಗೇಪಲ್ಲಿಯಿಂದ ಜಿ. ವಿ. ಶ್ರೀರಾಮರೆಡ್ಡಿ. ಶೇ. ೪೦.೩೨ರಂತೆ ಮತಗಳಿಕೆ ೩೫,೮೫೧.

### ೧೯೯೯ರ ಚುನಾವಣೆ

೮ ಜನ ಅಭ್ಯರ್ಥಿಗಳು ಈ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಶೇ. ೦.೩೯ ಮತ ಈ ಪಕ್ಷಕ್ಕೆ ದೊರೆಯಿತು. ಏಳು ಅಭ್ಯರ್ಥಿಗಳು ಠೇವಣಿ ಕಳೆದುಕೊಂಡರು. ಬಾಗೇಪಲ್ಲಿಯಿಂದ ಸ್ಪರ್ಧಿಸಿದ್ದ ಶ್ರೀರಾಮರೆಡ್ಡಿ ಶೇ. ೩೫ ಅಂದರೆ ೩೬,೮೮೫ ಮತ ಪಡೆದು ಅವರು ೩,೭೯೮ ಮತಗಳಿಂದ ಸೋಲು ಒಪ್ಪಿಕೊಂಡರು. ಆದರೆ ಕಳೆದ ವಿಧಾನಸಭೆಯಲ್ಲಿ ತಮ್ಮ ತೀಕ್ಷ್ಣ ವಿಚಾರ ಶಕ್ತಿಯಿಂದಾಗಿ ರಾಜ್ಯದ ಪ್ರಬುದ್ಧ ಜನತೆಯ ಮನ ಸೆಳೆಯುವಲ್ಲಿ ಅವರು ಯಶಸ್ವಿಯಾದರು.

*ನಿರೂಪಣೆ ಹಾಗೂ ಸಂಶೋಧನ ಸಹಾಯ :*

**ಕೆ. ಆರ್. ಕಮಲೇಶ್, ಎಸ್. ನಂಜುಂಡಸ್ವಾಮಿ**



# ಲೋಕಶಕ್ತಿ

**ಪ್ರಮೋದ್ ಹೆಗಡೆ**

ರಾಮಕೃಷ್ಣ ಹೆಗಡೆ ಅವರನ್ನು ೧೯೯೬ರಲ್ಲಿ ಸಾರ್ವತ್ರಿಕ ಲೋಕಸಭಾ ಚುನಾವಣೆಯ ನಂತರ ಪ್ರಧಾನಿಯಾದ ಹೆಚ್. ಡಿ. ದೇವೇಗೌಡ ಅವರು ಜನತಾದಳದಿಂದ ಸಸ್ಪೆಂಡ್ ಮಾಡಿಸಿದರು. ಸ್ವತಃ ಹೆಗಡೆ ಅವರಿಗೇ ಇದೊಂದು ಸಹಿಸಲಾಗದ ಆಘಾತವಾಗಿತ್ತು. ಪ್ರಾರಂಭದಲ್ಲಿ ಅವರು. 'ನವ ನಿರ್ಮಾಣ ವೇದಿಕೆ' ಎಂಬ ರಾಜಕೀಯೇತರ ಸಂಘಟನೆ ಸ್ಥಾಪಿಸಿ ಜನರ ನಾಡಿ ಮಿಡಿತವನ್ನು ಅಧ್ಯಯನ ಮಾಡಿದರು. ೧೬.೨.೧೯೯೭ರಂದು ಲೋಕಶಕ್ತಿ ಎಂಬ ರಾಜಕೀಯ ಪಕ್ಷ ಉದಯವಾಯಿತು. ೧೯೯೮ರ ಲೋಕಸಭಾ ಚುನಾವಣಾ ಪೂರ್ವದಲ್ಲಿ ಅಕ್ಟೋಬರ್ ೭ ರಿಂದ ೯, ೧೯೯೭ರಂದು ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರದಲ್ಲಿ ನಡೆದ ಕಾರ್ಯಕರ್ತರ ತರಬೇತಿ ಶಿಬಿರದಲ್ಲಿ ಭಾಗವಹಿಸಿ ಲೋಕಶಕ್ತಿಯ ಧ್ಯೇಯೋದ್ದೇಶಗಳನ್ನು ಸ್ಪಷ್ಟವಾಗಿ ಹೇಳಿದರು.

ದೇಶಕ್ಕೆ ಸ್ವಾತಂತ್ರ್ಯ ಬಂದು ೫೦ ವರ್ಷಗಳು ಕಳೆದಿವೆ. ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಮಹಾನ್ ದೇಶಭಕ್ತರುಗಳ ಆದರ್ಶ, ತ್ಯಾಗ-ಬಲಿದಾನ ಮತ್ತು ತತ್ವಗಳು ಇಂದು ಗಾಳಿಗೆ ತೂರಲ್ಪಡುತ್ತಿವೆ. ಸ್ವತಂತ್ರ ಭಾರತದ ಆರಂಭದ ದಿನಗಳಲ್ಲಿ ರಾಜಕೀಯ ಪಕ್ಷಗಳಿಗೆ ತಮ್ಮದೇ ಆದ ಸ್ಪಷ್ಟವಾದ ತತ್ವಗಳು, ನಿಷ್ಠೆ ಮತ್ತು ಉತ್ಸಾಹಗಳಿದ್ದವು. ಈಗ ಪರಿಸ್ಥಿತಿ ಸಂಪೂರ್ಣ ಬದಲಾಗಿದೆ. ರಾಜಕೀಯ ಪಕ್ಷಗಳು ತಾವಾಗಿಯೇ ಸ್ವಯಂಸ್ಫೂರ್ತಿಯಿಂದ ಜನಪರ ಜವಾಬ್ದಾರಿಗಳನ್ನು ಹೊತ್ತುಕೊಳ್ಳುವ ಅಭ್ಯಾಸ ಕಡಿಮೆಯಾಗುತ್ತಿದೆ. ಎಲ್ಲ ಕಡೆಯೂ ಸ್ವಹಿತಾಸಕ್ತಿಯು ತಾಂಡವವಾಡುತ್ತಿದೆ. ಹಣ ಮತ್ತು ಜಾತಿ ರಾಜಕಾರಣದ ಪ್ರಮುಖ ಮಾನದಂಡಗಳಾಗಿವೆ. ಸ್ವಹಿತಾಸಕ್ತಿಗಾಗಿ ಪಕ್ಷಾಂತರ ವಾಗುವುದು ಸರ್ವೇಸಾಮಾನ್ಯ. ಚುನಾವಣೆ ಸಮಯದಲ್ಲಿ ಮತದಾರರನ್ನು ವಿವಿಧ ರೀತಿಗಳಿಂದ ಓಲೈಸುವುದು, ಗೆದ್ದ ನಂತರ ಅವರನ್ನು ಸಂಪೂರ್ಣವಾಗಿ ಮರೆಯುವುದು ರಾಜಕೀಯ ಪಕ್ಷಗಳ ಪರಿ ಪಾಠವಾಗಿದೆ. ಗೆದ್ದ ವ್ಯಕ್ತಿ ತನ್ನ ಸಮಯ ಮತ್ತು ಅಧಿಕಾರವನ್ನು ಸ್ವಾರ್ಥಕ್ಕಾಗಿ ಎಷ್ಟು ಬಳಸಿ ಕೊಂಡಿದ್ದಾನೆ ಎಂಬುದನ್ನು ತಿಳಿದರೆ ಮನಸ್ಸಿಗೆ ಖೇದವಾಗುತ್ತದೆ.

ಇಂದಿರಾ ಗಾಂಧಿಯವರ ಕಾಲದಲ್ಲಿ ರಾಜಕೀಯ ಅಧಃಪತನ ಪ್ರಾರಂಭವಾಗಿ ಪ್ರಜಾಪ್ರ ಭುತ್ವಕ್ಕೆ ವಿಶ್ವಾಸದ್ರೋಹವೆಸಗುವಂಥ ಪರಂಪರೆ ಆರಂಭವಾಯಿತು. ಚುನಾವಣೆಯ ವೇಳೆಯಲ್ಲಿ ನಡೆಯುವ ಅಕ್ರಮಗಳಿಗೆ ಮಿತಿಯಿಲ್ಲವಾಗಿದೆ. ಇಂಥ ಅಕ್ರಮಗಳನ್ನು ತಡೆಯಲು ಸರ್ಕಾರವೇ ಚುನಾ ವಣಾ ಅಭ್ಯರ್ಥಿಯ ಪರವಾಗಿ ಹಣವನ್ನು ಖರ್ಚು ಮಾಡುವಂತೆ, ತನ್ಮೂಲಕ ಭ್ರಷ್ಟಾಚಾರವನ್ನು ತಡೆಯುವುದು ಇಂದಿನ ಅಗತ್ಯಗಳಲ್ಲಿ ಒಂದಾಗಿದೆ. ಇಂಥ ಒಂದು ಸಂದರ್ಭದಲ್ಲಿ ಯುವಕರಿಗೆ ಜವಾಬ್ದಾರಿಯನ್ನು ಹಂಚುವುದು ಅತಿ ಅವಶ್ಯ.

ಭಾರತದ ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ನಾವು ಯಾವುದೊಂದು ಆದರ್ಶ ಮತ್ತು ನಡತೆಯನ್ನು ಜೀವನದಲ್ಲಿ ಇಟ್ಟುಕೊಂಡಿದ್ದೇವೆಯೋ ಅವುಗಳನ್ನು ಜೀವನದಲ್ಲಿ ಮರುಸ್ಥಾಪನೆ ಮಾಡುವುದು ಪಕ್ಷದ ಉದ್ದೇಶ. ಈ ಬಗ್ಗೆ ಅಗತ್ಯ ಕಾನೂನುಗಳನ್ನು ಜಾರಿಗೆ ತರುವುದು ಅಗತ್ಯ ಲೋಕಶಕ್ತಿ ವಿಭಿನ್ನವಾದ ಪಕ್ಷ. ರಾಜಕೀಯದಲ್ಲಿ ಹೊಸ ಆಸೆ, ವಿಶ್ವಾಸ ಹುಟ್ಟಿಸುವ ಜವಾಬ್ದಾರಿ

ಲೋಕಶಕ್ತಿಗಿದೆ. ಜನರು ನಮಗೆ ನೀಡುವ ಅಧಿಕಾರವನ್ನು ವಿಶ್ವಸ್ಥ ನಿಧಿಯಂತೆ ನಾವು ಉಪಯೋಗಿಸಬೇಕು. ಆಗ ಮಾತ್ರ ಪ್ರಜಾಪ್ರಭುತ್ವದ ಸಂಪೂರ್ಣ ಸದುಪಯೋಗವಾಗುತ್ತದೆ.

## ೧೯೯೮ರ ಚುನಾವಣಾ ಪ್ರಣಾಳಿಕೆ

ಸ್ವತಂತ್ರ ಭಾರತ ಹಿಂದೆಂದೂ ಕಾಣದ ಒಂದು ಕಠಿಣ ಪರಿಸ್ಥಿತಿಯಲ್ಲಿ ದೇಶ ಇಂದು ಸಾಗುತ್ತಿದೆ. ರಾಜಕೀಯ ವ್ಯವಸ್ಥೆ ಬಗ್ಗೆ ಜನರಿಗೆ ಜಿಗುಪ್ಸೆ ಮೂಡಿದೆ. ಕಳೆದ ೧೪ ವರ್ಷಗಳಲ್ಲಿ ಕೇಂದ್ರದಲ್ಲಿ ಯಾವ ಒಂದು ಪಕ್ಷವೂ ಬಹುಮತ ಪಡೆಯಲು ಸಾಧ್ಯವಾಗಿಲ್ಲ. ಚುನಾವಣೆಗಳು ನೀತಿ ಮತ್ತು ಕಾರ್ಯಕ್ರಮಗಳು ಹಾಗೂ ಸಾಧನೆ ಆಧಾರದಲ್ಲಿ ನಡೆಯುತ್ತಿಲ್ಲ. ಹಣ ಮತ್ತು ಶಕ್ತಿಯ ಆಧಾರದ ಮೇಲೆ ನಡೆಯುತ್ತಿದೆ. ಪ್ರಜಾಪ್ರಭುತ್ವ ಆತಂಕದಲ್ಲಿದೆ.

ಸ್ವತಂತ್ರ ಭಾರತ ಸ್ವಾತಂತ್ರ್ಯದ ೫೦ ವರ್ಷವನ್ನು ಆಚರಿಸುತ್ತಿರುವ ಸಂದರ್ಭದಲ್ಲಿ ದೇಶ ಒಂದೂವರೆ ವರ್ಷದಲ್ಲಿ ಮತ್ತೊಮ್ಮೆ ಸಾರ್ವತ್ರಿಕ ಚುನಾವಣೆಯನ್ನು ಎದುರಿಸಬೇಕಾಗಿ ಬಂದಿರುವುದು ವಿಪರ್ಯಾಸ. ೧೯೯೬ರಲ್ಲಿ ಸಂಯುಕ್ತ ರಂಗ ಸರ್ಕಾರ ಎರಡು ದೊಡ್ಡ ರಾಜಕೀಯ ಪಕ್ಷಗಳ ಹೊರಗಿನ ಬೆಂಬಲದಿಂದ ಆಡಳಿತ ನಡೆಸುವಂತಾದುದೇ ಇದಕ್ಕೆ ಕಾರಣ. ಸ್ವತಂತ್ರ ಭಾರತ ಅನೇಕ ಕ್ಷೇತ್ರಗಳಲ್ಲಿ ಮುನ್ನಡೆ ಸಾಧಿಸಿದರೂ ಮೂಲಭೂತ ವಿಚಾರಗಳಾದ ಅನಕ್ಷರತೆ, ನಿರುದ್ಯೋಗ, ಅನಾರೋಗ್ಯ ಮತ್ತು ಬಡತನವನ್ನು ಹೋಗಲಾಡಿಸುವಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದ ಎಲ್ಲ ಪಕ್ಷಗಳೂ ವಿಫಲವಾಗಿವೆ. ಅಧಿಕಾವ ವಿಕೇಂದ್ರೀಕರಣ ಕೇವಲ ಕಾಗದದ ಮೇಲೆ ಮಾತ್ರ ಉಳಿದಿದೆ. ಭ್ರಷ್ಟಾಚಾರ ಕ್ಯಾನ್ಸರ್‌ನಂತೆ ಎಲ್ಲಾ ಕಡೆಗೆ ಹಬ್ಬಿದೆ.

ಲೋಕಶಕ್ತಿ ಒಂದು ವರ್ಷದ ಹಿಂದೆ ಪ್ರಾರಂಭವಾಗಿದ್ದು, ಅದು ತತ್ವ ಮತ್ತು ಗುರಿಯ ಹಿನ್ನೆಲೆಯಲ್ಲಿ ಇತರೆ ಪಕ್ಷಗಳಿಗಿಂತ ಬೇರೆಯಾಗಿದೆ. ಒಕ್ಕೂಟ ವ್ಯವಸ್ಥೆಯಲ್ಲಿ ನಂಬಿಕೆ ಇಟ್ಟಿರುವ ಈ ಪಕ್ಷ ಅಧಿಕಾವ ವಿಕೇಂದ್ರೀಕರಣ, ಸ್ವಾವಲಂಬನೆಗೆ ಒತ್ತು ನೀಡಿ ಜಾಗತೀಕರಣಕ್ಕೆ ಕೆಲವೊಂದು ಕ್ಷೇತ್ರವನ್ನು ಮಾತ್ರ ಬಿಟ್ಟುಕೊಟ್ಟು ನಮ್ಮ ಸ್ವದೇಶಿ ಕೌಶಲ್ಯವನ್ನು ಬೆಳೆಸಲು ಉತ್ತೇಜನ ನೀಡುತ್ತದೆ. ಸಾಮಾಜಿಕ ನ್ಯಾಯ, ಜಾತ್ಯತೀತತೆಗೆ ಹೆಚ್ಚು ಒತ್ತು ನೀಡುವ ಈ ಪಕ್ಷ ಜನರಲ್ಲಿ ಸೌಹಾರ್ದತೆ ಮೂಡಿಸಲು ಶ್ರಮಿಸುತ್ತದೆ. ಜೊತೆಗೆ ಎಲ್ಲಾ ಕ್ಷೇತ್ರದಲ್ಲಿಯೂ ಸ್ಥಿರತೆಯನ್ನು ತರುವುದು, ದೇಶವನ್ನು ಆರ್ಥಿಕವಾಗಿ ಬಲಾಢ್ಯ ರಾಷ್ಟ್ರವನ್ನಾಗಿಸುವುದು. ರಫ್ತಿಗೆ ಹೆಚ್ಚು ಉತ್ತೇಜನ, ನಿರಕ್ಷರತೆಯ ನಿವಾರಣೆ, ಪಂಚಾಯತ್ ರಾಜ್ ವ್ಯವಸ್ಥೆಯನ್ನು ಬಲಪಡಿಸುವುದು ಪಕ್ಷದ ಉದ್ದೇಶ.

ಕೇಂದ್ರ ಸರ್ಕಾರ ರಾಷ್ಟ್ರದ ರಕ್ಷಣೆ, ಭದ್ರತೆ, ನಾಣ್ಯವ್ಯವಸ್ಥೆ, ವ್ಯಾಪಾರ ಮತ್ತು ವಿದೇಶಾಂಗ ನೀತಿಗೆ ಮಾತ್ರ ಸೀಮಿತವಾಗಿಟ್ಟುಕೊಂಡು ಉಳಿದೆಲ್ಲ ಅಧಿಕಾರಗಳನ್ನು ರಾಜ್ಯ ಪಂಚಾಯತ್‌ಗಳಿಗೆ ನೀಡುವುದು ಉಚಿತವೆಂದು ಲೋಕಶಕ್ತಿ ಭಾವಿಸುತ್ತದೆ. ಆಡಳಿತ ಸುಧಾರಣೆ, ಪ್ರಜೆಗಳಿಗೆ ಗುರುತಿನ ಚೀಟಿ ಹಂಚುವುದು, ೧೨ ವರ್ಷ ಶಿಕ್ಷಣ ಮುಗಿಸಿದ ೧೮ ವರ್ಷ ವಯಸ್ಸಿನ ಎಲ್ಲಾ ಪ್ರಜೆಗಳಿಗೆ ಮಿಲಿಟರಿ ತರಬೇತಿಗಳನ್ನು ನೀಡುವುದನ್ನು ಲೋಕಶಕ್ತಿ ಬೆಂಬಲಿಸುತ್ತದೆ.

## ಲೋಕಶಕ್ತಿಯ ಕಾರ್ಯಕ್ರಮಗಳು

೧. ನಮ್ಮ ಅಗತ್ಯತೆಗೆ ಅನುಕೂಲವಾಗುವಂತಹ ಶಿಕ್ಷಣ ನೀತಿಯನ್ನು ಜಾರಿಗೊಳಿಸಿ ಹೆಣ್ಣು ಮಕ್ಕಳನ್ನು ಕೇಂದ್ರೀಕರಿಸಿಕೊಂಡು ಕಡ್ಡಾಯ ಶಿಕ್ಷಣವನ್ನು ನಿಗದಿತ ಅವಧಿಯಲ್ಲಿ ಜಾರಿಗೊಳಿಸುವುದು ಹಾಗೂ ಅನಕ್ಷರತೆಯನ್ನು ತೊಡೆದುಹಾಕುವುದು.

೨. ಎಲ್ಲಾ ಹಳ್ಳಿಗಳಿಗೆ ಕುಡಿಯುವ ನೀರು, ಶೌಚಾಲಯ ವ್ಯವಸ್ಥೆಯನ್ನು ಮಾಡುವುದು.

೩. ಸಂಪರ್ಕ, ಸಾರಿಗೆ, ವಿದ್ಯುಚ್ಛಕ್ತಿ, ರೈಲ್ವೆ, ರಸ್ತೆ, ಕಾಲುವೆಗಳು, ನೀರಾವರಿ ಮತ್ತು ಪ್ರವಾಸೋದ್ಯಮ ಇವುಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಹಾಗೂ ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ವ್ಯವಸ್ಥೆಯನ್ನು ಮಾಡುವುದು.

೪. ಕೃಷಿ ಕ್ಷೇತ್ರಕ್ಕೆ ಬೇಕಾದ ಆರ್ಥಿಕ ಸಹಾಯವನ್ನು ಸಾಲದ ರೂಪದಲ್ಲಿ ಒದಗಿಸುವುದು.

೫. ಲೋಕಪಾಲ್ ಮಸೂದೆಯನ್ನು ಜಾರಿಗೊಳಿಸಿ ಭ್ರಷ್ಟಾಚಾರವನ್ನು ಹೋಗಲಾಡಿಸುವುದು.

೬. ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿ ಇವು ಹೆಚ್ಚು ಲಾಭ ಗಳಿಸುವಂತೆ ನೋಡಿಕೊಳ್ಳುವುದು.

೭. ಮಹಿಳೆಯರಿಗೆ ಹಾಗೂ ಕರಕುಶಲ ಕೆಲಸಗಾರರಿಗೆ ಹೆಚ್ಚು ಉತ್ತೇಜನ ನೀಡಿ ಅವರು ಸಹಕಾರ ಸಂಘಗಳನ್ನು ಕಟ್ಟಿಕೊಳ್ಳುವಂತೆ ನೋಡಿಕೊಳ್ಳುವುದು.

೮. ಎಲ್ಲಾ ಹಂತಗಳಲ್ಲಿಯೂ ಮಹಿಳೆಯರಿಗೆ ಮೀಸಲಾತಿ.

೯. ಭಾರತೀಯ ಹಾಗೂ ವಿದೇಶಿ ಕಂಪನಿಗಳು ಮಾನವಶಕ್ತಿ ಬಂಡವಾಳವನ್ನು ಹೆಚ್ಚಿಸುವ ಕುರಿತು ಒಂದು ಸಾಮಾಜಿಕ ನೀತಿಯನ್ನು ರೂಪಿಸುವುದು.

೧೦. ರಾಷ್ಟ್ರೀಯ ಅರಣ್ಯ ಮತ್ತು ಪರಿಸರ ನೀತಿಯನ್ನು ಜಾರಿಗೆ ತಂದು ಅದರ ಮೂಲಕ ಹಿಮಾಲಯ, ಪಶ್ಚಿಮ ಘಟ್ಟಗಳಲ್ಲಿ ಜೀವ ವೈವಿಧ್ಯತೆ ಮತ್ತು ಅರಣ್ಯ ಸಂರಕ್ಷಣೆ ಬಗ್ಗೆ ಹಾಗೂ ಬಂಜರು ಭೂಮಿಗಳಲ್ಲಿ ಬೃಹತ್ ನೆಡುತೋಪುಗಳನ್ನು ಬೆಳೆಸುವುದು.

೧೧. ಕೇಂದ್ರ, ರಾಜ್ಯಗಳು ಹಾಗೂ ಸ್ಥಳೀಯ ಸರ್ಕಾರಗಳ ಸಂಬಂಧವನ್ನು ಹೊಸದಾಗಿ ರೂಪಿಸಿ ಪ್ರತಿಯೊಂದು ಹಂತದಲ್ಲಿಯೂ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಕೈಗೆತ್ತಿಕೊಳ್ಳುವಂತೆ ನೋಡಿಕೊಳ್ಳುವುದು.

೧೨. ಗ್ರಾಮ ಸ್ವರಾಜ್ಯವನ್ನು ಉತ್ತೇಜಿಸಿ ಖಾದಿ, ಕೈಮಗ್ಗ, ಗುಡಿ ಕೈಗಾರಿಕೆಗಳಿಗೆ ಒತ್ತು ನೀಡಿ ಅದರ ಮೂಲಕ ಉದ್ಯೋಗಾವಕಾಶವನ್ನು ಹೆಚ್ಚಿಸುವುದು.

೧೩. ಹಿರಿಯ ನಾಗರಿಕರಿಗೆ ವೃದ್ಧಾಪ್ಯ ವೇತನ ಹಾಗೂ ಪ್ರಯಾಣ ರಿಯಾಯಿತಿ ಮತ್ತು ಇತರೆ ಅನುಕೂಲತೆಗಳನ್ನು ಕಲ್ಪಿಸುವುದು.

೧೪. ಅನಾರೋಗ್ಯವನ್ನು ತಡೆಯಲು ಹೆಚ್ಚು ಒತ್ತು ನೀಡಿ ಸಮಾಜದ ಆರೋಗ್ಯ ಅದರಲ್ಲೂ ಮುಖ್ಯವಾಗಿ ಹೆಣ್ಣುಮಗುವಿನ ಆರೋಗ್ಯಕ್ಕೆ ಹೆಚ್ಚು ಗಮನ ಹರಿಸುವುದು.

೧೫. ವಿದ್ಯುಚ್ಛಕ್ತಿ ಉಳಿತಾಯ ಯೋಜನೆಗಳನ್ನು ಹಾಗೂ ಕಾರ್ಮಿಕರಿಗೆ ಮತ್ತು ಕೃಷಿ ಕ್ಷೇತ್ರದ ಜನರಿಗೆ ಅನುಕೂಲವಾಗುವಂಥ ಯೋಜನೆಗಳಿಗೆ ಒತ್ತು ನೀಡುವುದು.

೧೬. ಗ್ರಾಮೀಣ ಹಾಗೂ ಪಟ್ಟಣ ಪ್ರದೇಶದ ಬಡವರಿಗೆ ವಸತಿ ಮತ್ತು ಇನ್ನಿತರ ಅಗತ್ಯ ಸೌಲಭ್ಯಗಳನ್ನು ನೀಡುವುದು.

೧೭. ನಿರುದ್ಯೋಗಿಗಳಿಗೆ ಪರಿಹಾರ ಹಾಗೂ ಸಮಾಜಕಲ್ಯಾಣ ವ್ಯವಸ್ಥೆಯಲ್ಲಿ ಅಂಗವಿಕಲರಿಗೆ ಒತ್ತು ನೀಡುವುದು.

೧೮. ಕರಾವಳಿ ಪ್ರದೇಶಗಳಲ್ಲಿ ಮುಕ್ತ ವ್ಯಾಪಾರಕ್ಕೆ ಅವಕಾಶ ಮಾಡಿಕೊಡುವುದು.

೧೯. ರಸಗೊಬ್ಬರ ರಿಯಾಯಿತಿ ನೀಡಿ ರೈತರು ಹೆಚ್ಚು ಬೆಳೆ ಬೆಳೆಯುವಂತೆ ನೋಡಿಕೊಳ್ಳುವುದು.

೨೦. ಜಾಗತೀಕರಣ ಮತ್ತು ಉದಾರೀಕರಣದ ಹಿನ್ನೆಲೆಯಲ್ಲಿ ನಮ್ಮ ಕೈಗಾರಿಕೆಗಳು ಸ್ವಾವಲಂಬಿಗಳಾಗುವಂತೆ ಮತ್ತು ಸ್ಪರ್ಧಾಯುತವಾಗಿ ಕಾರ್ಯ ನಿರ್ವಹಿಸುವಂತೆ ಬೇಕಾದ ನೀತಿಯನ್ನು ರೂಪಿಸುವುದು.

**ಫಲಿತಾಂಶ**

೧೬. ೨.೧೯೯೮ ಹಾಗೂ ೨೨.೨.೧೯೯೮ರಂದು ಲೋಕಸಭೆಗೆ ಎರಡು ಹಂತಗಳಲ್ಲಿ ಚುನಾವಣೆಗಳು ನಡೆದವು. ಲೋಕಶಕ್ತಿಯಿಂದ ಮೂವರು ಅಭ್ಯರ್ಥಿಗಳು ಈ ಸಂದರ್ಭದಲ್ಲಿ ಲೋಕಸಭೆಗೆ ಆಯ್ಕೆಯಾದರು. ಅವರುಗಳೆಂದರೆ ಧಾರವಾಡ ದಕ್ಷಿಣದಿಂದ ಶೇ. ೪೬.೫೪ ಅಂದರೆ ೩,೨೮,೫೩೩ ಮತಗಳನ್ನು ಪಡೆದ ಬಿ. ಎಂ. ಮೆಣಸಿನಕಾಯಿ, ಬೆಳಗಾಂ ಜಿಲ್ಲೆ ಚಿಕ್ಕೋಡಿ ಮೀಸಲು ಕ್ಷೇತ್ರದಿಂದ ಶೇ. ೫೩.೦೦ ಅಂದರೆ ೩,೫೯,೭೬೦ ಮತ ಪಡೆದ ರಮೇಶ್ ಜಿಗಜಿಣಗಿ ಹಾಗೂ ಬಾಗಲಕೋಟೆಯಿಂದ ಶೇ. ೪೯.೭೩ ಅಂದರೆ ೩,೫೨,೭೯೫ ಮತ ಪಡೆದ ಅಜಯಕುಮಾರ್ ಸರ್‌ನಾಯಕ. ಕೇಂದ್ರದಲ್ಲಿ ರಾಮಕೃಷ್ಣ ಹೆಗಡೆ ಅವರು ವಾಜಪೇಯಿ ಸಚಿವ ಸಂಪುಟದಲ್ಲಿ ಕೇಂದ್ರ ವಾಣಿಜ್ಯ ಸಚಿವರಾಗಲು ಈ ಚುನಾವಣೆ ಮುಖ್ಯ ಕಾರಣವಾಗಿದೆ. ಲೋಕಶಕ್ತಿ ಪಕ್ಷ ಇಷ್ಟು ಅಲ್ಪಕಾಲದಲ್ಲಿ ಗಣನೀಯ ಸಾಧನೆ ಮಾಡಿದ ಕೀರ್ತಿಗೆ ಪಾತ್ರವಾಯಿತು. ಈ ಚುನಾವಣೆಯಲ್ಲಿ ಸೋತರೂ ಗಣನೀಯ ಸಾಧನೆ ಮಾಡಿದವರೆಂದರೆ, ಅಗಡಿ ವಿರೂಪಾಕ್ಷಪ್ಪ ಸಂಗಣ್ಣ (ಪಡೆದ ಮತ ೭೫,೪೭೩), ಎನ್. ತಿಪ್ಪಣ್ಣ (ಪಡೆದ ಮತ ೨,೨೧,೧೭೧). ಪಿ. ಕೋದಂಡರಾಮಯ್ಯ (ಪಡೆದ ಮತ ೨,೬೩,೬೦೯) ಹಾಗೂ ಚಲನಚಿತ್ರ ನಟಿ ಜಯಂತಿ (ಪಡೆದ ಮತ ೨,೦೪,೩೫೯). ರಾಮಕೃಷ್ಣ ಹೆಗಡೆಯವರು ರಾಜ್ಯದ ರಾಜಕೀಯ ರಂಗದಲ್ಲಿ ಪ್ರಬಲ ಶಕ್ತಿ ಹಾಗೂ ಆಕರ್ಷಣೆಯ ಬಿಂದುವಾಗಿದ್ದಾರೆ ಎಂಬುದನ್ನು ಲೋಕಶಕ್ತಿಯು ಪಡೆದ ಮತಗಳ ಪ್ರಮಾಣ ಸಾಬೀತುಪಡಿಸಿತು.

೭.೮.೧೯೯೯ರಂದು ಸಾರ್ವತ್ರಿಕ ಚುನಾವಣೆಯ ವೇಳೆಗೆ 'ಲೋಕಶಕ್ತಿ' ಜನತಾದಳಕ್ಕೆ ಸೇರಲು ನಿರ್ಧರಿಸಿತು. ಲೋಕಶಕ್ತಿಯ ಈ ವಿಲೀನವನ್ನು ವಿರೋಧಿಸಿ ಹೆಚ್.ಡಿ. ದೇವೇಗೌಡ ಅವರು ಹೊರನಡೆದು 'ಜಾತ್ಯತೀತ ಜನತಾದಳ' ಸ್ಥಾಪಿಸಿದರು. ಆಗ ಸಂಯುಕ್ತ ಜನತಾದಳದಲ್ಲಿ 'ಲೋಕಶಕ್ತಿ' ಪಕ್ಷ ವಿಲೀನವಾಯಿತು.

# ಸುರಾಜ್ಯ ಪಕ್ಷ

ಕೆ. ಎಂ. ವಿಜಯಲಕ್ಷ್ಮಿ

**ಹಿನ್ನೆಲೆ :** ಭಾರತವನ್ನು ಸ್ವಾತಂತ್ರಗೊಳಿಸಲು ಹೋರಾಡಿದ ವ್ಯಕ್ತಿಗಳೆಷ್ಟೋ, ಛಿದ್ರಗೊಂಡ ಮನೆಗಳೆಷ್ಟೋ, ಆದ ಆತ್ಮ ಬಲಿದಾನಗಳೆಷ್ಟೋ. ಆದರೆ ಸ್ವಾತಂತ್ರ್ಯಾನಂತರ ಆದದ್ದೇನು? ಹೋರಾಡಿದ ದೇಶಪ್ರೇಮಿಗಳೇ ನಿರಾಶರಾಗುವಂತಹ ಪರಿಸ್ಥಿತಿ. ಸ್ವಾರ್ಥ ಸಾಧನೆ, ಗುಂಪುಗಾರಿಕೆ, ಅಧಿಕಾರ ಲಾಲಸೆ, ಬೇಜವಾಬ್ದಾರಿತನ, ಸಂಕುಚಿತ ಪ್ರಾದೇಶಿಕ ಭಾವನೆ- ಇವೇ ಮುಂತಾದುವು ಅಲ್ಲಲ್ಲಿ ಕಂಡುಬರತೊಡಗಿದ ಅಂಶಗಳು. ಇವುಗಳಿಂದಾಗಿ ವಿಚ್ಛಿದ್ರ ಶಕ್ತಿಗಳ ಉಗಮ. ಹೆಚ್ಚತೊಡಗಿದ ಕೋಮು ದ್ವೇಷ, ವರ್ಗ ದ್ವೇಷ ಮತ್ತು ಉಗ್ರಗಾಮಿ ಚಟುವಟಿಕೆಗಳು. ದೇಶದ ರಾಜಕೀಯದಲ್ಲಿ ಅಯೋಗ್ಯರು, ತತ್ವನಿಷ್ಠರಲ್ಲದವರು, ಸೇವಾಮನೋಭಾವವಿಲ್ಲದವರು ರಾಜಕೀಯ ಪ್ರವೇಶ ಮಾಡಿದರು.

ಸಾಮಾಜಿಕ ಇರಲಿ, ರಾಜಕೀಯ ಕ್ಷೇತ್ರವೇ ಇರಲಿ ಸತ್ಯ, ನಿಷ್ಠೆ, ಪ್ರಾಮಾಣಿಕತೆಯನ್ನೇ ಜೀವನವಾಗಿಸಿಕೊಂಡಿದ್ದ ಮತ್ತು ಆ ಸಮಯಕ್ಕೆ ಮುಖ್ಯಮಂತ್ರಿ ಪದವಿಯಿಂದ ವಿಶ್ರಾಂತರಾಗಿದ್ದ ಕೆಂಗಲ್ ಹನುಮಂತಯ್ಯನವರಿಗೆ ಇಂಥ ಪರಿಸ್ಥಿತಿ ರಾಜ್ಯದಲ್ಲಿಯೂ ಹೆಚ್ಚುತ್ತಿರುವುದನ್ನು ಕಂಡು ಅದನ್ನು ಶುಚಿಗೊಳಿಸುವ ಆಶಯ. ಅವರಿಗೆ ಜಾತಿ, ಹಣ, ಕುಡಿತ ಇತ್ಯಾದಿಗಳ ವಿಷವರ್ತುಲದಿಂದ ಹೊರತಾದ ಚುನಾವಣೆ ಬೇಕಿತ್ತು. ಜನಸಾಮಾನ್ಯನ ಬದುಕಿನ ತಲ್ಲಣಗಳನ್ನು ಅಳಿಸಿ ನೆಮ್ಮದಿ, ಸಮಾಧಾನಗಳನ್ನು ತುಂಬಬೇಕಾಗಿತ್ತು. ಸ್ವರಾಜ್ಯದ ರಾಷ್ಟ್ರದಲ್ಲಿ ಸರಿಯಾದ ನಿಟ್ಟಿನಲ್ಲಿ ರೂಪದಲ್ಲಿ ರೂಪುಗೊಳ್ಳದೇ ಹೋದ ರಾಷ್ಟ್ರೀಯ ಪಕ್ಷವನ್ನು, ರಾಷ್ಟ್ರೀಯ ನಾಯಕತ್ವವನ್ನು ರೂಪಿಸಬೇಕೆಂಬ ಮಹದಾಸೆ ಇತ್ತು. ದೂರದೃಷ್ಟಿಯ ಕೊರತೆ, ಅದಕ್ಷ ಆಡಳಿತಗಳಿಂದಾದ ರಾಜಕೀಯ ಕ್ಷೋಭೆ, ಆರ್ಥಿಕ ಮುಗ್ಗಟ್ಟು, ಸಂವಿಧಾನದ ತಾಕಲಾಟ ಮುಂತಾದವು ಹನುಮಂತಯ್ಯನವರ ವ್ಯಥೆಯಾದವು. ಕಾಂಗ್ರೆಸ್ ಪಕ್ಷದಲ್ಲಿದ್ದಾಗಲೇ ಅವರು ''ಶುದ್ಧೀಕರಣ'' ಎಂಬ ಒಂದು ಆಂದೋಲನವನ್ನು ಪ್ರಾರಂಭಿಸಿದ್ದರು. ಆನಂತರ ಇದರಲ್ಲಿ ಯಶಸ್ಸು ಕಾಣದೆ ಕಾಂಗ್ರೆಸ್ ಪಕ್ಷವನ್ನು ತ್ಯಜಿಸಿದರು. ಈ ಸಮಸ್ಯೆಗಳ ಹಿನ್ನೆಲೆಯಲ್ಲಿ, ತಮ್ಮದೇ ಆದ ಒಂದು ಪಕ್ಷವನ್ನು ಸ್ಥಾಪಿಸಲು ಅವರು ನಿರ್ಧರಿಸಿದರು.

ಸುರಾಜ್ಯ ಪಕ್ಷದ ಸ್ಥಾಪನೆ : ನಿಜವಾದ ದೇಶಭಕ್ತಿ, ಸ್ವಚ್ಛ ನೈತಿಕ ಕಾಳಜಿ ಹೊಂದಿದ ನಾಯಕತ್ವದ ಸಾಧನೆಗಾಗಿ, ಕೆಂಗಲ್‌ರವರಿಂದ ೮.೯.೧೯೭೭ರಂದು ಸ್ಥಾಪನೆಗೊಂಡದ್ದು, ಅವರದೇ ನೇತೃತ್ವದ 'ಸುರಾಜ್ಯ ಪಕ್ಷ'. ಮದರಾಸಿನಿಂದ ಕರೆಸಿದ ಒಬ್ಬ ಖ್ಯಾತ ಸಿನಿಮಾ ನಟ ಈ ಪಕ್ಷವನ್ನು ಉದ್ಘಾಟಿಸಿದ ವ್ಯಕ್ತಿ. ಹಿರಿಯ ಕಾಂಗ್ರೆಸ್ ಅಧ್ಯಕ್ಷ ಟಿ. ಸಿದ್ದಲಿಂಗಯ್ಯನವರು, ಈಗ ಮಾಜಿ ಮೇಯರ್ ಆಗಿರುವ ಜೆ. ಲಿಂಗಯ್ಯನವರು, ರಾಮಣ್ಣಗೌಡರು ಮುಂತಾಗಿ ಸುಮಾರು ಇಪ್ಪತ್ತು ಜನರ ಉಪಸ್ಥಿತಿಯಲ್ಲಿ ನಡೆಯಿತು ಈ ಉದ್ಘಾಟನೆ, ನಾಲ್ಕುನೂರು ಜನರು ಇದಕ್ಕೆ ಸದಸ್ಯರಾಗಿದ್ದರು. ರಾಜಕೀಯದಲ್ಲಿ ಕಳೆದುಕೊಂಡ ಸ್ಥಾನವನ್ನು ಗಳಿಸಲು ಇದು ಅವರು ಮಾಡಿದ ಅಂತಿಮ ಪ್ರಯತ್ನದ ರೂಪವೂ ಹೌದು. ಜೆ. ಲಿಂಗಯ್ಯನವರು, ಈ ಪಕ್ಷದ ಕಾರ್ಯದರ್ಶಿ

ಯಾಗಿದ್ದರು. ಕೆಂಗಲ್ ಹನುಮಂತಯ್ಯನವರ ಮನೆಯ ಒಂದು ಭಾಗದಲ್ಲೇ ಪಕ್ಷದ ಕಛೇರಿ. ಅಲ್ಲಿಯೇ ಇದರ ನಾಮಫಲಕ. ಅಗತ್ಯ ಖರ್ಚುಗಳಿಗೆ ಅವರದ್ದೇ ಹಣ.

**ಧ್ಯೇಯಗಳು** : ಸ್ವರಾಜ್ಯ ಬಂದರೂ ಸುರಾಜ್ಯ ಬರಲಿಲ್ಲ ಎನಿಸಿದ್ದರಿಂದ ಸುರಾಜ್ಯವೊಂದನ್ನು ಸ್ಥಾಪಿಸಬೇಕು; ದೇಶಕ್ಕಾಗಿ ತ್ಯಾಗ ಮಾಡಲು ಸಿದ್ಧರಿರುವ ನಿಜವಾದ ದೇಶಪ್ರೇಮಿಗಳನ್ನು ಅಗತ್ಯ ಬಿದ್ದಾಗ ಹೋರಾಟಕ್ಕೆ ನಿಲ್ಲಬಹುದಾದ ಹೋರಾಟದ ಕಲಿಗಳನ್ನು, ಉತ್ತಮ ಸಮಾಜ ಸೇವಕರನ್ನು, ದೇಶದ ಹಿತ, ಜನತೆಯ ಕಲ್ಯಾಣಕ್ಕಾಗಿ ದುಡಿವ ಶ್ರಮಜೀವಿಗಳನ್ನು, ಸತ್ಯ ತತ್ವನಿಷ್ಠರನ್ನು, ರಾಷ್ಟ್ರದ ಉನ್ನತಿಗೆ ಶ್ರಮಿಸುವ ಅರ್ಹರನ್ನು, ದಕ್ಷ ಆಡಳಿತಗಾರರು ಮುಂತಾದವರನ್ನು ಸಂಘಟಿಸಿ ಅಥವಾ ರೂಪಿಸಿ ಉತ್ತಮ ರಾಜಕೀಯ ಧುರೀಣರನ್ನು ಹೊರತರುವುದು ಈ ಪಕ್ಷದ ಮುಖ್ಯ ರಾಜಕೀಯ ಗುರಿಯಾಗಿತ್ತು. ಈ ಆದರ್ಶಗಳ ಸಾಧನೆಯ ಮೂಲಕ ಸ್ವಚ್ಛ ರಾಜಕಾರಣವೊಂದನ್ನು ಅಸ್ತಿತ್ವಕ್ಕೆ ತರಬೇಕೆಂಬುದೂ ಸುರಾಜ್ಯ ಪಕ್ಷದ ಮೂಲ ಧ್ಯೇಯಗಳಲ್ಲೊಂದು.

ಸತ್ಯವಂತರಾಗಿರಬೇಕು, ಯಾರಿಗೂ ಮೋಸ ಮಾಡಬಾರದು. ದೇಶಪ್ರೇಮ ಬೆಳೆಸಬೇಕು, ನಿಸ್ಪೃಹ ಸೇವೆ ಸಲ್ಲಿಸಬೇಕು ಮತ್ತು ಈ ನಡವಳಿಕೆಯನ್ನು ಪಕ್ಷದ ಸದಸ್ಯರು ತಮ್ಮದಾಗಿಸಿಕೊಂಡು ಉದಾಹರಣೆಗಳಾದರೆ ರಾಜಕೀಯ ಕ್ಷೇತ್ರದಲ್ಲಿ ತಾನಾಗಿಯೇ ನಿರ್ಮಲ ವಾತಾವರಣ ಸೃಷ್ಟಿಗೊಳ್ಳುತ್ತದೆ ಎಂಬುದು ಈ ಪಕ್ಷದವರು ನಂಬಿ, ಕಾರ್ಯರೂಪಕ್ಕೆ ತರಲೆತ್ನಿಸಿದ ಪ್ರಮುಖ ಸಿದ್ಧಾಂತ.

**ಪಕ್ಷದ ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಕೋನ** : ಹನುಮಂತಯ್ಯನವರು ಯಾರನ್ನೂ ನಂಬುತ್ತಿರಲಿಲ್ಲ. ಯಾರ ಮಾತೂ ಕೇಳುತ್ತಿರಲಿಲ್ಲ. ಎಲ್ಲ ಕೆಲಸಗಳೂ ಅವರ ನಿರ್ಧಾರದಂತೆ, ಅವರ ಮನಸ್ಸಿಗೆ ಸರಿ ಎನಿಸಿದಂತೆ. ಬಾವುಟ, ಪಾಂಪ್ಲೆಟ್, ಪೆಟ್ರೋಲ್, ಇತ್ಯಾದಿ ಪ್ರಚಾರಕ್ಕೆ ಅಗತ್ಯವಾದ ಖರ್ಚುಗಳಿಗೆ ಸ್ವತಃ ಸ್ಪರ್ಧಿಯೇ ಹಣ ತೊಡಗಿಸಬೇಕು. ಚುನಾವಣೆಯ ಪ್ರಚಾರಕ್ಕಾಗಿ ಯಾವ ಅಭ್ಯರ್ಥಿಯೂ ದುಂದುವೆಚ್ಚ ಮಾಡುವಂತಿರಲಿಲ್ಲ. ಸಾಧ್ಯವಾದಷ್ಟೂ ಕಾಲುನಡಿಗೆಯಲ್ಲೇ ಜನರ ತನಕ ಹೋಗಬೇಕು, ತಮ್ಮ ಕೋರಿಕೆ ಸಲ್ಲಿಸಬೇಕು. 'ನೀರು ಕುಡಿಯಿರಿ, ಗಾಳಿ ಸೇವಿಸಿ ಪ್ರಚಾರ ಮಾಡಿ, ಜನರ ಮನಸ್ಸು ಗೆದ್ದು ಮತ ಪಡೆಯಿರಿ', ಎಂದೂ ಹೇಳುತ್ತಿದ್ದರಂತೆ. ಪಕ್ಷಕ್ಕೆ ಹಣ ನೀಡಿದ ದಾನಿಗಳು ಮುಂದೆ ತಮ್ಮ ಸ್ವಂತದ ಕೆಲಸಕ್ಕಾಗಿ ಯಾವುದೇ ಶಿಫಾರಸ್ಸು ಕೇಳಿಕೊಂಡು ಬರಬಾರದು. ಹಾಗೆ ಬಂದರೆ ಸತ್ಯ, ನೀತಿ-ನಿಯಮಗಳನ್ನು ಕೈಬಿಡುವ ಸಂದರ್ಭ ಬರಬಹುದಾದ್ದರಿಂದ ಅಂಥ ಹಣವೇ ಬೇಡ ಎಂಬ ಷರತ್ತಿನ ಮೇಲೆಯೇ ಹಣ ಸಂಗ್ರಹಣೆ. ಈ ಶಿಸ್ತು ಮತ್ತು ಇಂಥ ಕಟ್ಟುನಿಟ್ಟಾದ ನಿಯಮಗಳಿಂದಾಗಿ ಪಕ್ಷಕ್ಕೆ ಹೆಚ್ಚು ಹಣ ಸಂಗ್ರಹಗೊಳ್ಳಲಿಲ್ಲ. ಅದು ದೊಡ್ಡದಾಗಿ ಅಥವಾ ಗಟ್ಟಿಯಾಗಿ ಬೆಳೆಯಲೇ ಇಲ್ಲ.

೧೯೭೭ರಲ್ಲಿ, ಸುರಾಜ್ಯ ಪಕ್ಷದಿಂದ ಒಟ್ಟು ಇಪ್ಪತ್ತೇಳು ಅಭ್ಯರ್ಥಿಗಳು ಚುನಾವಣೆಗೆ ಸ್ಪರ್ಧಿಸಿದರು. ಅವರಲ್ಲಿ ಮಾಜಿ ಮೇಯರ್ ಜೆ. ಲಿಂಗಯ್ಯನವರೂ ಒಬ್ಬರು. ಇವರನ್ನು ಸೋಲಿಸಿದ ಪ್ರತಿಸ್ಪರ್ಧಿಯೂ ಒಬ್ಬ ಪ್ರಾಮಾಣಿಕ ವ್ಯಕ್ತಿಯೇ ಆದ ಪಿ. ರಾಂದೇವ್ ಎಂದು ಲಿಂಗಯ್ಯನವರೇ ಹೇಳುತ್ತಾರೆ. ಈ ಪಕ್ಷದಿಂದ ಸ್ಪರ್ಧಿಸಿದ ಒಬ್ಬರಿಗೂ ಗೆಲುವು ಸಿಗಲಿಲ್ಲ. ಅಷ್ಟೇ ಅಲ್ಲ ಕಟ್ಟಿದ ಠೇವಣಿಯ ಹಣ ಹಿಂತಿರುಗಿ ಬರುವಷ್ಟು ಮತಗಳೂ ಸಹ ಇವರ್‍ಯಾರಿಗೂ ಸಿಗಲಿಲ್ಲ. **ಪಕ್ಷದ ಸೋಲಿಗೆ ಕಾರಣಗಳು** : ಯಾವುದೇ ಸಮಾಜದಲ್ಲಿ ಸ್ವಚ್ಛಂದ ನಡವಳಿಕೆ, ಹೆಚ್ಚಿನ ಲಾಭ, ಹಣ ಮತ್ತು ಅಧಿಕಾರಗಳ ಪ್ರಭಾವದ ಬಳಕೆ ಹಾಗೂ ಸ್ವಾತಂತ್ರ್ಯ ಬಯಸುವ ಜನರೇ ಹೆಚ್ಚು ಇರುವುದರಿಂದ ಕೆಂಗಲ್ ಹನುಮಂತಯ್ಯನವರ ಕೆಲವು ಕಟ್ಟುನಿಟ್ಟು, ನಿಯಮಗಳು ಅನೇಕ ರಾಜಕೀಯಾಸಕ್ತರಿಗೆ ಹಿಡಿಸಲಿಲ್ಲ. ಅವರಂತೆಯೇ ಈ ಮೌಲ್ಯಗಳನ್ನು ನಂಬಿದವರು ಮತ್ತು ಕೆಂಗಲ್‌ರವರಲ್ಲಿ ನಿಜವಾದ ನಂಬಿಕೆ-ನಿಷ್ಠೆ ಇದ್ದವರು, ಮಾತ್ರ ಈ ಪಕ್ಷಕ್ಕೆ ಸೇರಿದರು ಅದರಿಂದ ಇದು ಪ್ರಬಲ ರಾಜಕೀಯ ಪಕ್ಷವಾಗಲು ಸಾಧ್ಯವಾಗದೆ ಕೇವಲ ಅವರ ಹಿತೈಷಿಗಳ, ಬೆಂಬಲಿಗರ ಮತ್ತು ಹಿಂಬಾಲಕರ ಒಂದು ಚಿಕ್ಕಕೂಟ ಮಾತ್ರವಾಗಿ ಪರಿಣಮಿಸಿತ್ತು. ಜನತೆಯ ಹಾಗೂ ಇತರ ರಾಜಕೀಯ ಅಭ್ಯರ್ಥಿಗಳ ಆಧಾರವಿಲ್ಲದೆ ಪಕ್ಷ ಆರಂಭದಲ್ಲೇ ವಿಫಲಗೊಂಡಿತು.

ಪಕ್ಷದ ಸೋಲಿಗೆ ಇನ್ನೊಂದು ಕಾರಣವೆಂದರೆ, ಕೆಂಗಲ್‌ರವರ ದುರ್ಬಲ ಮನಸ್ಸು. ನೆಹರೂರವರಂತಹ ಘನವಾದ, ಪ್ರಬಲವಾದ ವ್ಯಕ್ತಿಯ ವಿರುದ್ಧ ಹೋರಾಡಿದ್ದ ಅವರು, ಇಂದಿರಾ ಗಾಂಧಿಯ ಪರ ವಹಿಸಿದರು. ಒಮ್ಮೆ ಸ್ಥಾನಮಾನವನ್ನು ಬಿಟ್ಟು ಹೊರಬಂದ ಇವರು, ಪುನಃ ಅದೇ ಪಕ್ಷವನ್ನು ಸೇರಿದ್ದು, ಜನರಿಗೆ ಅವರ ಬಗ್ಗೆ ಇದ್ದ ಎಲ್ಲ ಉತ್ತಮ ಭಾವನೆಗಳನ್ನೂ ಅಳಿಸಿಹಾಕಿತು. ಇವರೂ ಅಧಿಕಾರಕ್ಕೇ ಆಸೆಪಡುವ ಇತರ ಕೆಲವು ರಾಜಕೀಯ ವ್ಯಕ್ತಿಗಳಿಗೇ ಸಮ ಎಂಬ ಭಾವನೆ ಬಂದು, ಇವರ ಬಗೆಗಿನ ಭರವಸೆ ಕಳೆದುಹೋಯಿತು.

ಅದು ಆದದ್ದು ಹೀಗೆ: ಇಂದಿರಾ ಗಾಂಧಿಯವರು ತಮ್ಮ ಕಾಂಗ್ರೆಸ್ ಪಕ್ಷದೊಂದಿಗೆ ಶಾಮೀಲಾಗಿ, ಪ್ರಚಾರ ಮಾಡುವಂತೆ ಕೋರಿ ಹನುಮಂತಯ್ಯನವರಿಗೆ ಒಂದು ಪತ್ರ ಬರೆಯಿಸಿದ್ದರು. ಅಲ್ಲದೆ ರಾಷ್ಟ್ರೀಯ ಕಾಂಗ್ರೆಸ್ಸಿನ ಒಂದು ಬಣಕ್ಕೆ ಅಧ್ಯಕ್ಷರಾದ (ಸಿ.ಎಸ್.ಡಿ.) ಜಗಜೀವನರಾಂರವರು ಖುದ್ದಾಗಿ ಕೆಂಗಲ್‌ರವರನ್ನು ಭೇಟಿ ಮಾಡಿ, ಸುರಾಜ್ಯವನ್ನು ಜನತಾ ಪಕ್ಷದೊಂದಿಗೆ ವಿಲೀನಗೊಳಿಸುವ ಬಗ್ಗೆ

ಕೋರಿ ಚರ್ಚೆ ನಡೆಸಿದರು. ಇದರಿಂದ ತಮಗಾಗುವ ಲಾಭ ಏನು ಎಂಬ ಬಗ್ಗೆ ಹನುಮಂತಯ್ಯನವರು ಸ್ಪಷ್ಟಪಡಿಸಲು ಕೇಳಿಕೊಂಡು, ಒಂದು ಉತ್ತಮ ಸ್ಥಾನ ಸಿಗುತ್ತದೆಂಬುದನ್ನೂ ಅವರಿಂದ ಮನವರಿಕೆ ಮಾಡಿಕೊಂಡರು. ಪ್ರಮುಖ ಅಧಿಕಾರದ ಪಟ್ಟವೊಂದು ತಮಗೆ ಸಿಗುತ್ತದೆಂಬ ಭರವಸೆಯಲ್ಲಿ, ಚುನಾವಣಾ ಪ್ರಚಾರಕ್ಕಾಗಿ ಹಾಸನಕ್ಕೆ ಹೋಗಿದ್ದ ತಮ್ಮ ಕಾರ್ಯದರ್ಶಿಗಳಿಗೆ ತಂತಿ ಕಳಿಸಿ, ವಾಪಸ್ ಕರೆಸಿಕೊಂಡು, ಸುರಾಜ್ಯ ಪಕ್ಷವನ್ನು ಕೂಡಲೇ 'ಡಿಸಾಲ್ವ್' ಮಾಡಲಾಗಿದೆ ಎಂದೂ, ಕಾಂಗ್ರೆಸ್ ಪಕ್ಷಕ್ಕಾಗಿಯೇ ಪ್ರಚಾರ ಮಾಡಬೇಕೆಂದೂ ಆದೇಶಿಸಿದರು. ಕಾರಣ ಕೇಳಿದ ಕಾರ್ಯದರ್ಶಿಗೆ, 'ಕಾಂಗ್ರೆಸ್ ಪಕ್ಷದೊಂದಿಗೆ ನಮ್ಮ ಸುರಾಜ್ಯ ಪಕ್ಷವನ್ನು ವಿಲೀನಗೊಳಿಸಿ, 'ನಾವೆಲ್ಲ ಒಟ್ಟಾಗಿ ಕೆಲಸ ಮಾಡೋಣ' ಎಂದು ಇಂದಿರಾ ಗಾಂಧಿಯವರು, ಮನವಿ ಮಾಡಿಕೊಂಡಿದ್ದಾರೆ. ಅವರ ಕೋರಿಕೆಯಂತೆ ಮಾಡಿದರೆ ನಮಗೆ ಒಳ್ಳೆಯದು', ಎಂದೂ ಹೇಳಿದರು. ಅದರಂತೆ ೧೯೭೭ರ ಸೆಪ್ಟೆಂಬರ್‌ನಲ್ಲಿ ಆರಂಭಗೊಂಡ ಈ ಪಕ್ಷ ಒಂದೇ ವರ್ಷದೊಳಗೆ ರಾಷ್ಟ್ರೀಯ ಕಾಂಗ್ರೆಸ್‌ನ ಇನ್ನೊಂದ ಬಣವಾದ ಇಂದಿರಾ ಕಾಂಗ್ರೆಸ್‌ನಲ್ಲಿ ವಿಲೀನಗೊಂಡು, ಮುಳುಗಿ ಹೋಯಿತು. ಈ ಪಕ್ಷದ ಸದಸ್ಯರು ಚಿಕ್ಕಮಗಳೂರಿನ ಚುನಾವಣೆಯಲ್ಲಿ ಇಂದಿರಾ ಗಾಂಧಿಯವರ ಪರ ಪ್ರಚಾರ ನಡೆಸಿದರು. ಆದರೆ ಹಾಗೆ ಮಾಡಿದ್ದರಿಂದ ಕೆಂಗಲ್‌ರವರಿಗೆ ಯಾವ ಲಾಭವೂ ಆಗಲಿಲ್ಲ. ಯಾವ ಸ್ಥಾನಮಾನವೂ ಸಿಗಲಿಲ್ಲ.

ಆನಂತರ, ಪ್ರಧಾನಿ ಮೊರಾರ್ಜಿ ದೇಸಾಯಿಯವರನ್ನು ಕಾಣಲು ಹೋದ ಕೆಂಗಲ್‌ರವರಿಗೆ ಸಿಕ್ಕ ಉತ್ತರ ಬಹಳ ನಿರಾಶೆಯದಾಗಿತ್ತು. ''ಕರ್ನಾಟಕಕ್ಕೆ ಈಗಾಗಲೇ ಆಯ್ಕೆ ಮಾಡಿದ್ದಾಗಿದೆ. ಏನು ಮಾಡುವುದು, ಸೀಟ್ ಇಲ್ಲ'', ಎಂಬುದೇ ಮುರಾರ್ಜಿಯವರು ನೀಡಿದ ಉತ್ತರವಾಗಿತ್ತು.

ಆನಂತರ ಪುನಃ ಪಕ್ಷ ಕಟ್ಟಲು ಕೆಂಗಲ್‌ರವರು ಹೆಚ್ಚು ಕಾಲ ಬದುಕಿರಲಿಲ್ಲ. ೧.೧೨.೧೯೮೦ರಂದು ಅವರು ಹೃದಯಾಘಾತಕ್ಕೆ ತುತ್ತಾಗಿ ನಿಧನರಾದರು. ತಮ್ಮ ಮಗನಂತೆ ನಡೆದುಕೊಳ್ಳುತ್ತಿದ್ದ ಸುಂದರೇಶ್‌ರವರಿಗೆ ಅವರು ಹೇಳಿದ ಒಂದು ತಿಳಿವಳಿಕೆಯ ಮಾತು ರಾಜಕೀಯ ಕ್ಷೇತ್ರದಲ್ಲಿ ಅವರಿಗಾದ ನಿರಾಶೆಯನ್ನು ತೋರಿಸುತ್ತದೆ. ''ರಾಜಕೀಯ ಪ್ರವೇಶ ಮಾಡಬೇಡ. ನಾನು ಜನಸೇವೆ ಮಾಡಿದ್ದೇ ಸಾಕು. ಅದು ಕೃತಜ್ಞತೆಯಿಲ್ಲದ ಕ್ಷೇತ್ರ. ನಿನ್ನ ಮಟ್ಟಿಗೆ ದುಡಿದು ಮರ್ಯಾದೆಯಿಂದ ಬಾಳು. ನಾನು ಕೆಂಗಲ್‌ನಲ್ಲಿ ಹೊತ್ತಿಸಿದ ಧರ್ಮಜ್ಯೋತಿಗೆ ನಿರಂತರವಾಗಿ ಅಗತ್ಯ ವಸ್ತುಗಳನ್ನು ಪೂರೈಸುವ ಏರ್ಪಾಟು ಮಾಡು'' ಎಂದು. ಈ ಮಾತನ್ನು ಅವರು ಸುರಾಜ್ಯ ಪಕ್ಷದ ಕಾರ್ಯದರ್ಶಿಗಳಿಗೆ ಹೇಳಲಿಲ್ಲವಾದರೂ, ಒಂದು ಪಕ್ಷದ ನೇತಾರನಿಗೆ ನಿಷ್ಠೆ ತೋರಿಸಿದ ಮೇಲೆ, ಅವರ ನಿವೃತ್ತಿಯ ನಂತರ ತಾವು ಮುಂದುವರಿಯುವುದು ಸರಿಯಲ್ಲ ಎಂಬ ನಿಯತ್ತಿನಲ್ಲಿ, ಅವರೂ ಆ ಕ್ಷೇತ್ರದಿಂದ ದೂರವಾಗಿಯೇ ಉಳಿದರು.

ಕೆಂಗಲ್‌ರವರು ರಾಜಕೀಯ ಕ್ಷೇತ್ರದಲ್ಲಿ, ಮತ್ತೊಮ್ಮೆ ತರಬೇಕೆಂದಿದ್ದ ನಿರ್ಮಲ ವಾತಾವರಣವನ್ನು ತರಲು ಇನ್ನೊಂದು ಅವಕಾಶ ಅವರಿಗೆ ದೊರೆಯಲೇ ಇಲ್ಲ. ಅವರು ಕಂಡ ಅಧಿಕಾರ ಲಾಲಸೆ, ಲಾಭದಾಸೆ, ಪಕ್ಷಪಾತ ಮುಂತಾದವುಗಳ ಜೊತೆಗೆ ಭ್ರಷ್ಟಾಚಾರ, ಹೊಣೆಗೇಡಿತನ ಇತ್ಯಾದಿಗಳೂ ಸೇರಿರುವುದಲ್ಲದೆ, ಉಗ್ರಗಾಮಿ ಚಟುವಟಿಕೆಗಳೂ ದೇಶದಲ್ಲಿ ಉಲ್ಬಣಗೊಳ್ಳುತ್ತಿವೆ. ಏನೇ ಇರಲಿ. ಅವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ, ತುತ್ತತುದಿಯಲ್ಲಿ ನಾಲ್ಕು ಮುಖಗಳ ಸಿಂಹ ಪ್ರತಿಮೆಯನ್ನೂ; ಸ್ವಾತಂತ್ರ್ಯ, ಏಕತೆ, ಜಾತ್ಯತೀತತೆ ಮತ್ತು ರಾಷ್ಟ್ರೀಯತೆಯ ಸಂಕೇತದ ರಾಷ್ಟ್ರೀಯ ಲಾಂಛನವಾದ ಧರ್ಮಚಕ್ರವನ್ನೂ ಹೊಂದಿರುವ ಅನುಪಮ ಭವನವೆನಿಸುವ ವಿಧಾನಸೌಧವನ್ನು ಹಲವಾರು ವಿರೋಧಗಳ ನಡುವೆಯೂ ಕಟ್ಟಿಸಿದ್ದು ಅವರ ಹೆಸರನ್ನು ಚಿರಸ್ಮರಣೀಯವನ್ನಾಗಿಸಿದೆ.

# ಕನ್ನಡ ಚಳವಳಿ ಆಧಾರಿತ ರಾಜಕೀಯ ಸಿದ್ಧಾಂತ

ಕೆ. ಆರ್. ಕಮಲೇಶ್

೧೮೨೯ರಲ್ಲಿ ಮೈಸೂರು, ೧೮೧೮ರಲ್ಲಿ ಉತ್ತರ ಕರ್ನಾಟಕ ಹಾಗೂ ೧೮೩೪ರಲ್ಲಿ ಕೊಡಗಿನ ಪ್ರಾಂತ್ಯಗಳನ್ನು ಗೆದ್ದ ಬ್ರಿಟಿಷರು ತಮ್ಮ ಆಡಳಿತ ಸೌಲಭ್ಯ ಹಾಗೂ ಸ್ವಹಿತಕ್ಕಾಗಿ ಕನ್ನಡ ನಾಡನ್ನು ೨೦ ಭಾಗಗಳಾಗುವಂತೆ ವಿಂಗಡಿಸಿದರು. ಇವುಗಳಲ್ಲಿ ಸವಣೂರು, ಸಂಡೂರು, ಜಮಖಂಡಿ, ಮುಧೋಳ - ಅಂತಹ ಕಿರು ಸಂಸ್ಥಾನಗಳೂ ಇದ್ದುವು.

ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ ಹಾಗೂ ಏಕೀಕರಣ ಚಳವಳಿ ಜೊತೆ ಜೊತೆಯಾಗಿ ಸಾಗಿದವು. ೧೯೨೪ರಲ್ಲಿ ಬೆಳಗಾವಿಯಲ್ಲಿ ಮಹಾತ್ಮ ಗಾಂಧೀಜಿಯವರ ಅಧ್ಯಕತೆಯಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಸಮಾವೇಶವು ಕರ್ನಾಟಕದ ಏಕೀಕರಣದ ಅಗತ್ಯವನ್ನು ಒತ್ತಿ ಹೇಳಿತು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಪಾಶ್ಚಾತ್ಯ ಶಿಕ್ಷಣ ಮಾದರಿ ಪ್ರೇರಣೆ ಕೊಟ್ಟಿದ್ದಲ್ಲದೆ ಅದು ಕನ್ನಡದ ಪುನರುತ್ಥಾನಕ್ಕೂ ಸಹಾಯಕವಾಗಿತ್ತು. ಲಂಡನ್ ಮಿಶಿನ್‌ನವರು ಕನ್ನಡದಲ್ಲಿ ಮುದ್ರಣಾಲಯವನ್ನು ಪ್ರಾರಂಭಿಸಿದರು. ಡೆಪ್ಯುಟಿ ಚೆನ್ನಬಸಪ್ಪ, ವೆಂಕಟರಂಗೋಕಟ್ಟಿ, ಹೊಸ್ನಾಪುರಮಠ - ಇವರೆಲ್ಲ ಉತ್ತರ ಕರ್ನಾಟದಲ್ಲಿ ಕನ್ನಡದ ಪುನರುತ್ಥಾನಕ್ಕೆ ದುಡಿದವರು. ಆಲೂರು ವೆಂಕಟರಾಯರು ಏಕೀಕರಣಕ್ಕಾಗಿ ವಹಿಸಿದ ಆಸಕ್ತಿಯಿಂದಾಗಿ ಕನ್ನಡ ಕುಲಪುರೋಹಿತರು ಎನಿಸಿಕೊಂಡರು. ಫ.ಗು. ಹಳಕಟ್ಟಿ, ಬಸವನಾಳ, ಸಿದ್ಧಪ್ಪ ಕಂಬಳಿ, ತಮ್ಮಣ್ಣಪ್ಪ ಚಿಕ್ಕೋಡಿ, ಬಿ. ಶಿವಮೂರ್ತಿಶಾಸ್ತ್ರಿ ತಿ.ತಾ.ಶರ್ಮ, ಮೊಹರೆ ಹನುಮಂತರಾಯರು, ವೀರಕೇಸರಿ ಸೀತಾರಾಮ ಶಾಸ್ತ್ರಿ ಡಾ। ಶಿವರಾಮ ಕಾರಂತ, ಡಾ। ಕುವೆಂಪು, ಡಾ। ಗೊರೂರು ರಾಮಸ್ವಾಮಿ ಅಯ್ಯಂಗಾರ್, ಡಾ। ಪಾಟೀಲ ಪುಟ್ಟಪ್ಪ, ಅನಕೃ, ಕೋ. ಚೆನ್ನಬಸಪ್ಪ, ಬೀಚಿ, ಶ್ರೀರಂಗ - ಹೀಗೆ ಕನ್ನಡದ ಅನೇಕ ಸಾಹಿತಿಗಳು ಏಕೀಕರಣಕ್ಕಾಗಿ ಹಗಲಿರುಳು ಶ್ರಮಿಸಿದರು. ಸಾಹಿತ್ಯ ಪುರುಷರ ಈ ಕೆಲಸವು ಕನ್ನಡ ಚಳವಳಿಯ ಇತಿಹಾಸದಲ್ಲಿ 'ಮೌನಕ್ರಾಂತಿ' ಎಂದೇ ಹೇಳಬೇಕು. ಇವರೆಲ್ಲರ ಒತ್ತಾಸೆಯನ್ನು ಸಮರ್ಪಕವಾಗಿ ಬಳಸಿಕೊಂಡು ೧೯೫೬, ನವೆಂಬರ್‌ನಲ್ಲಿ ಎಸ್. ನಿಜಲಿಂಗಪ್ಪನವರು ಹರಿದು ಹಂಚಿಹೋಗಿದ್ದ ಕನ್ನಡನಾಡನ್ನು ಒಂದುಗೂಡಿಸಿದರು. 'ಕನ್ನಡದ ಪ್ರದೇಶಗಳು ಏನೋ ಒಂದಾದವು. ಆದರೆ, ಕನ್ನಡಿಗರ ಮನಸ್ಸು ಒಂದಾಗಲಿಲ್ಲ. ಕನ್ನಡದ ಸಮಸ್ಯೆಗಳಿಗೆ ಕೊನೆ ಮೊದಲಿಲ್ಲದಂತಾಯಿತು. ಇದಕ್ಕಾಗಿ ಕನ್ನಡನಾಡಿನಲ್ಲಿ ಕನ್ನಡದ ಉಳಿವಿಗಾಗಿ ಕನ್ನಡ ಚಳವಳಿ ಪ್ರಾರಂಭವಾಯಿತು. ಹಾಗಾದರೆ ಅಂತಹ ಕನ್ನಡದ ಸಮಸ್ಯೆಗಳು ಯಾವುವು?'

### ಗಡಿ

ಪ್ರಾಚೀನ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಕಾವೇರಿಯಿಂದ ಗೋದಾವರಿಯವರೆಗಿದ್ದ ವಿಶಾಲ ಸಾಮ್ರಾಜ್ಯ ಹೊಂದಿದ್ದವರು ಕನ್ನಡಿಗರು. ಇವರ ಸಾಮ್ರಾಜ್ಯ ಮಹಾರಾಷ್ಟ್ರ, ಆಂಧ್ರ ಪ್ರದೇಶ, ಕೇರಳ ಹಾಗೂ ತಮಿಳುನಾಡುವರೆಗೂ ಹಬ್ಬಿತ್ತು. ಏಕೀಕರಣದ ಕನಸು ಕಂಡವರು ಅಚ್ಚ ಕನ್ನಡ ಪ್ರದೇಶಗಳು ಕನ್ನಡನಾಡಿನಲ್ಲಿಯೇ ಇರಬೇಕೆಂದು ಬಯಸಿದ್ದರು. ಏಕೀಕರಣದ ನಂತರವೂ ಅನೇಕ ಪ್ರದೇಶಗಳು ಹೊರರಾಜ್ಯದಲ್ಲಿ ಉಳಿದುಕೊಂಡವು. ಇದರ ಜೊತೆಗೆ ಕರ್ನಾಟಕಕ್ಕೆ ಸೇರಿದ ಅನೇಕ

ಪ್ರಾಂತ್ಯಗಳನ್ನು ಬಿಟ್ಟುಕೊಡುವಂತೆ ನೆರೆಹೊರೆ ರಾಜ್ಯಗಳು ಸದಾ ತಕರಾರು ಮಾಡುತ್ತಿದ್ದವು. ಆಂಧ್ರ ಪ್ರದೇಶಕ್ಕೆ ಸೇರಿದ ಆದವಾನಿ, ಮಡಕಶಿರಾ, ಹಿಂದೂಪುರ, ಮಹಾರಾಷ್ಟ್ರದ ಸೊಲ್ಲಾಪುರ, ತಮಿಳುನಾಡಿನ ನೀಲಗಿರಿ ಜಿಲ್ಲೆ, ಕೇರಳದ ಕಾಸರಗೋಡು ಕರ್ನಾಟಕದ ಕನ್ನಡ ಪ್ರದೇಶಗಳಾದರೂ ಹೊರರಾಜ್ಯಗಳಲ್ಲಿ ಉಳಿದವು. ಮಹಾರಾಷ್ಟ್ರ ಸರಕಾರವಂತೂ ಬೆಳಗಾವಿ ನಮಗೇ ಸೇರಬೇಕೆಂದು ದೊಡ್ಡ ಹೋರಾಟ ಮಾಡತೊಡಗಿತು. ಮಹಾರಾಷ್ಟ್ರದ ಒತ್ತಾಯಕ್ಕೆ ಮಣಿದು ಕೇಂದ್ರ ಸರಕಾರ ೨೫-೧೦-೧೯೬೬ರಲ್ಲಿ ಮಹಾಜನ್ ಆಯೋಗವನ್ನು ನೇಮಿಸಿತು. ಈ ಮಹಾಜನ್ ಆಯೋಗವೂ ಸಹ ಬೆಳಗಾವಿಯನ್ನು ಕರ್ನಾಟಕದ ಅವಿಭಾಜ್ಯ ಅಂಗವೆಂದು ತೀರ್ಮಾನಿಸಿತು. ಮಹಾಜನ್ ಆಯೋಗ ನೇಮಕವಾದ ಸಂದರ್ಭದಲ್ಲಿ ರಾಜ್ಯದಲ್ಲಿ ವ್ಯಾಪಕವಾದ ಪ್ರತಿಭಟನೆ ನಡೆಯಿತು.

## ಉದ್ಯೋಗ

ಕರ್ನಾಟಕದ ಯಾವ ಭಾಗದಲ್ಲೂ ಉದ್ಯೋಗ ಕ್ಷೇತ್ರದಲ್ಲಿ ಕನ್ನಡಿಗರಿಗೆ ಈ ತನಕ ನ್ಯಾಯ ದೊರೆತಿಲ್ಲ. ಕೇಂದ್ರ ಸರಕಾರದ ಬಿಇಎಲ್, ಬಿಇಎಂಎಲ್, ಹೆಚ್‌ಎಎಲ್ - ಮೊದಲಾದ ಉದ್ಯಮಗಳಲ್ಲಿ ಕನ್ನಡಿಗರು ಶೇಕಡ ೨ ರಷ್ಟು ಮಾತ್ರ ಇದ್ದಾರೆ. ಮೈಕೋ, ಕಿರ್ಲೋಸ್ಕರ್ ಮೊದಲಾದ ಖಾಸಗಿ ಕಂಪನಿಗಳೂ ಸಹ ಕನ್ನಡಿಗರಿಗೆ ಉದ್ಯೋಗವನ್ನು ಕೊಡುವಲ್ಲಿ ಆಸಕ್ತಿಯನ್ನು ತೋರಲಿಲ್ಲ. ರೈಲ್ವೇ, ಅಂಚೆ ಕಚೇರಿ, ದೂರವಾಣಿ, ಬ್ಯಾಂಕ್ - ಮೊದಲಾದ ಕೇಂದ್ರ ಸರಕಾರದ ವ್ಯಾಪ್ತಿಯ ಇಲಾಖೆಗಳಲ್ಲಿ ಕನ್ನಡಿಗರಿಗಿಂತ ಇತರ ರಾಜ್ಯದವರಿಗೇ ಆದ್ಯತೆ ದೊರೆತು ಇದು ಒಂದು ಗಂಭೀರ ಸಮಸ್ಯೆ ಎಂದು ೧೯೮೩ರವರೆಗೆ ಹಿಂದಿನ ಯಾವ ಸರಕಾರವೂ ಯೋಚಿಸಿರಲಿಲ್ಲ. ಕನ್ನಡಿಗರಿಗೆ ಉದ್ಯೋಗ ದೊರಕಿಸಿಕೊಡಲು ೧೯೮೩ರಲ್ಲಿ ಜನತಾ ಪಕ್ಷದ ಸರಕಾರ ಡಾ। ಸರೋಜಿನಿ ಮಹಿಷಿ ಸಮಿತಿಯನ್ನು ನೇಮಿಸಿತು. ಅಂದರೆ ರಾಜ್ಯದಲ್ಲಿ ಸ್ಥಳೀಯರಿಗೆ ಉದ್ಯೋಗ ದೊರಕಿಸಿಕೊಡಲು ಅಧ್ಯಯನ ಸಮಿತಿಯೊಂದನ್ನು ನೇಮಿಸಬೇಕಾದರೆ ಆ ಸಮಸ್ಯೆಯು ಎಷ್ಟು ತೀವ್ರವಾಗಿತ್ತು ಎಂದು ಯೋಚಿಸಬೇಕು. ಬೆಂಗಳೂರಿನಲ್ಲಿ ಕನ್ನಡಿಗರ ಸಂಖ್ಯೆ ಶೇಕಡ ೩೭.೨ರಷ್ಟು ಮಾತ್ರ ಇದೆ. ವಿಶೇಷವಾಗಿ ವಲಸೆ ಸಮಸ್ಯೆಯಿಂದ ಬೆಂಗಳೂರು ತನ್ನ ಸಾಂಸ್ಕೃತಿಕ ಘನತೆಯನ್ನು ಕಳೆದುಕೊಂಡಿದೆ. ಬೇರೆ ಬೇರೆ ರಾಜ್ಯಗಳಿಂದ ಬಂದ ಜನರು ತಮ್ಮ ಭಾಷೆ, ಸಾಹಿತ್ಯ ಇವುಗಳಿಗೆ ಸಂಬಂಧಪಟ್ಟಂತೆ ತಮ್ಮ ನಾಯಕರನ್ನು ಆರಾಧಿಸತೊಡಗಿದರು. ಬೆಂಗಳೂರಿನ ಕೆಲವೊಂದು ಪ್ರದೇಶಗಳಲ್ಲಿ ಹೊರರಾಜ್ಯಗಳ ಪ್ರಾದೇಶಿಕ ಪಕ್ಷದ ಧ್ವಜವೂ ಹಾರಾಡಲು ಮುಂದಾಯಿತು. ಈ ವಿಚಾರಗಳು ಕೂಡ ಕನ್ನಡ ಚಳವಳಿ ತೀವ್ರವಾಗಲು ಕಾರಣವಾಯಿತು.

## ಆಡಳಿತ ಭಾಷೆ

ಏಕೀಕರಣದ ನಂತರ ಕರ್ನಾಟಕದ ವಿವಿಧ ಭಾಗಗಳು ರಾಜಕೀಯವಾಗಿ ಒಂದಾದರೂ ಆಡಳಿತ ಭಾಷೆ ಕನ್ನಡವಾಗಿರಲಿಲ್ಲ. ಕನ್ನಡೇತರ ಐಎಎಸ್, ಐಪಿಎಸ್ ಅಧಿಕಾರಿಗಳು ಮತ್ತು ಇತರ ಹಿರಿಯ ಅಧಿಕಾರಿಗಳು ಇಂಗ್ಲಿಷ್ ಭಾಷೆಗೆ ಮೊರೆಹೋಗಿದ್ದರು. ರಾಜ್ಯದ ಸಚಿವಾಲಯಕ್ಕೆ ಕರ್ನಾಟಕದ ಯಾವುದೇ ಭಾಗದ ರೈತರು ತನ್ನ ಮಾತೃಭಾಷೆಯಲ್ಲಿ ಮನವಿ ಸಲ್ಲಿಸಿದರೆ ಅವರಿಗೆ ಇಂಗ್ಲಿಷ್‌ನಲ್ಲಿ ಉತ್ತರ ಹೋಗುತ್ತಿತ್ತು. ಕರ್ನಾಟಕದ ಬಹುಮಟ್ಟಿನ ಸಚಿವರು ಕನ್ನಡದಲ್ಲಿ ವ್ಯವಹರಿಸುವುದು ತಮ್ಮ ಪ್ರತಿಷ್ಠೆಗೆ ಕುಂದು ಎಂದು ಭಾವಿಸಿದ್ದರು. ದಕ್ಷತೆ ಹೆಸರಿನಲ್ಲಿ ರಾಜ್ಯದ ಮುಖ್ಯಕಾರ್ಯದರ್ಶಿ, ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಹಾಗೂ ವಿಶ್ವವಿದ್ಯಾನಿಲಯದ ಉಪ-ಕುಲಪತಿಗಳನ್ನು ಹೊರ ರಾಜ್ಯದಿಂದ ಆಮದು ಮಾಡಿಕೊಳ್ಳುವ ಪರಂಪರೆ ಮೊದಲಾಯಿತು. ಏಕೀಕರಣದ ಆಶಯ ಕೇವಲ ರಾಜಕೀಯ ಅಧಿಕಾರ ಪಡೆಯುವುದಕ್ಕೆ ಮಾತ್ರ ಸೀಮಿತವಾಯಿತು. ಅಂತಹ ಸಂದರ್ಭದಲ್ಲಿ ಅನೇಕ ಕನ್ನಡ ಚಳವಳಿಗಾರರು ರಾಜ್ಯ ಸರಕಾರದ ಹಾಗೂ ವ್ಯವಸ್ಥೆಯ ವಿರುದ್ಧ ದೊಡ್ಡ ಧ್ವನಿಯಲ್ಲಿ ತಮ್ಮ ಅಸಮಾಧಾನವನ್ನು ಹೇಳತೊಡಗಿದರು.

## ನದಿ ನೀರಿನ ಸಮಸ್ಯೆ

ಐದು ನದಿಗಳು ಹರಿಯುವ ವಿಜಾಪುರ ಜಿಲ್ಲೆಯು ಶಾಶ್ವತ ಬರಗಾಲಕ್ಕೆ ತುತ್ತಾದ ಜಿಲ್ಲೆ ಆಯಿತು. ಸಮೃದ್ಧ ಪ್ರಾಕೃತಿಕ ಸಂಪತ್ತು ಇದ್ದರೂ ಉತ್ತರ ಕರ್ನಾಟಕದಲ್ಲಿ ವಿದ್ಯುತ್ ಬರ ನಿರಂತರವಾಗಿ ಇತ್ತು. ಕೃಷ್ಣ ನದಿ ನೀರಿನ ಹಂಚಿಕೆಯಲ್ಲಿ ಕರ್ನಾಟಕಕ್ಕೆ ತುಂಬಾ ಅನ್ಯಾಯ ಆಯಿತು. ಕಾವೇರಿ ನದಿ ನೀರಿನ ವಿಷಯದಲ್ಲಿ ಮೊದಲಿನಿಂದಲೂ ತಮಿಳುನಾಡು ಕರ್ನಾಟಕದ ಮೇಲೆ ಸವಾರಿ ಮಾಡುತ್ತಲೇ ಬಂದಿದೆ. ಬೆಂಗಳೂರಿನಲ್ಲಿ ಕಾವೇರಿ ಕುಡಿಯುವ ನೀರಿನ ಯೋಜನೆಯನ್ನು ಅನುಷ್ಠಾನಗೊಳಿಸಲು ವಿಶ್ವಬ್ಯಾಂಕ್ ಸಹಾಯ ಮಾಡಲು ಮುಂದಾಯಿತು. ಇದರ ಬಗ್ಗೆ ತಮಿಳುನಾಡು ತನ್ನ ಆಕ್ಷೇಪಣಾ ಅರ್ಜಿಯನ್ನು ಸಲ್ಲಿಸಿತು. ಇದನ್ನು ಕಂಡು ಕನ್ನಡಿಗರು ಸಹಜವಾಗಿ ಕೆರಳಿದರು. ಕನ್ನಡಿಗರ ಈ ಭಾವನಾತ್ಮಕ ಆಶಯಗಳನ್ನು ಉಪಯೋಗಿಸಿಕೊಳ್ಳಲು ಕನ್ನಡ ಚಳವಳಿಗಾರರು ತುದಿಗಾಲ ಮೇಲೆ ನಿಂತಿದ್ದರು.

## ರೈಲ್ವೆ

ಸ್ವಾತಂತ್ರ್ಯದ ನಂತರ ಕರ್ನಾಟಕದ ಅನೇಕರು ರೈಲ್ವೆ ಮಂತ್ರಿಗಳಾಗಿದ್ದ ಸಿ.ಕೆ. ಜಾಫರ್ ಷರೀಫ್ ಹೊರತುಪಡಿಸಿ ಯಾವ ಕರ್ನಾಟಕದ ರೈಲ್ವೇ ಸಚಿವರೂ ರಾಜ್ಯದ ರೈಲ್ವೇ ಯೋಜನೆಗಳ ಕುರಿತು ಚಿಂತಿಸಲಿಲ್ಲ. ಸ್ವಲ್ಪ ಕಾಲ ರೈಲ್ವೇ ಸಚಿವರಾಗಿದ್ದ ಕೆಂಗಲ್ ಹನುಮಂತಯ್ಯನವರು ಕರ್ನಾಟಕದ ರೈಲ್ವೇ ಯೋಜನೆಯ ಬಗ್ಗೆ ಒಲವು ತೋರಿದರು. ಕರ್ನಾಟಕದ ಬಗೆಗಿನ ತಮ್ಮ ಅಧಿಕಾರ ಕಳೆದುಕೊಂಡರು ಎಂಬ ಸುದ್ದಿ ರಾಜ್ಯದ ಎಲ್ಲೆಡೆ ಹರಡಿತು. ಗೇಜ್ ಪರಿವರ್ತನೆಯಲ್ಲಿ ಕರ್ನಾಟಕಕ್ಕೆ ತುಂಬ ಅನ್ಯಾಯ ಆಗಿತ್ತು. ಕೊಂಕಣ ರೈಲ್ವೆ ಯೋಜನೆಯು ನೆನೆಗುದಿಗೆ ಬಿದ್ದಿತ್ತು. ಕರ್ನಾಟಕಕ್ಕೆ ಪ್ರತ್ಯೇಕ ರೈಲ್ವೇ ವಲಯವನ್ನು ಕೊಡಬೇಕು ಎಂಬ ಸ್ಥಳೀಯರ ಬೇಡಿಕೆ ದೆಹಲಿಯ ಆಳರಸರ ಕಿವಿಯನ್ನು ಮುಟ್ಟಲೇ ಇಲ್ಲ. ಉದ್ಯೋಗದಲ್ಲಿ ಕೂಡ ಕನ್ನಡಿಗರಿಗೆ ಕೊನೆಯ ಸ್ಥಾನ ಸಿಕ್ಕಿತ್ತು. ಇದನ್ನೆಲ್ಲಾ ರಾಜ್ಯದ ಜನತೆಗೆ ಮನವರಿಕೆ ಮಾಡಿಕೊಡಲು ಕನ್ನಡ ಚಳುವಳಿಗಾರರು ಪ್ರಯತ್ನಿಸಿದರು.

## ಹಿಂದಿ ಹೇರಿಕೆ

ಕೇಂದ್ರ ಸರಕಾರ ತಮಿಳರಿಗೆ ಹೆದರಿ ಅಲ್ಲಿ ಹಿಂದಿ ಅನುಷ್ಠಾನದ ಯೋಜನೆಯನ್ನು ಕೈಬಿಟ್ಟಿತು. ಆದರೆ ಕರ್ನಾಟಕದಲ್ಲಿ ಹಿಂದಿ ಹೇರಿಕೆಯನ್ನು ವ್ಯವಸ್ಥಿತವಾಗಿ ಮುಂದುವರೆಸಲಾಯಿತು.

## ಆಕಾಶವಾಣಿ ಮತ್ತು ದೂರದರ್ಶನ

ಕೇಂದ್ರ ಸರಕಾರದ ಒಡೆತನದ ಈ ಮಾಧ್ಯಮಗಳು ಸ್ಥಳೀಯ ಜನತೆಯ ಸಾಂಸ್ಕೃತಿಕ ವಿಚಾರಗಳಲ್ಲಿ ಆಸಕ್ತಿ ತೋರಲೇ ಇಲ್ಲ. ಅನೇಕ ಹೋರಾಟಗಳ ನಂತರ ಆಕಾಶವಾಣಿ ಹಾಗೂ ದೂರದರ್ಶನಗಳು ಸ್ಥಳೀಯ ವಿಚಾರಗಳತ್ತ ಗಮನ ಹರಿಸಲು ಮುಂದಾದವು.

## ವಿಜಯನಗರ ಉಕ್ಕಿನ ಕಾರ್ಖಾನೆ

ಅರವತ್ತರ ದಶಕದಲ್ಲಿ ಹೊಸಪೇಟೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಉತ್ಪನ್ನವಾಗಿದೆಯೆಂದೂ ಅಲ್ಲಿ ಬೃಹತ್ ಉಕ್ಕಿನ ಕಾರ್ಖಾನೆಯನ್ನು ಸ್ಥಾಪನೆ ಮಾಡುವುದಾಗಿಯೂ ಕೇಂದ್ರ ಸರಕಾರ ಹೇಳಿತು. ೧೯೭೦ರಲ್ಲಿ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರು ವಿಜಯನಗರ ಉಕ್ಕಿನ ಕಾರ್ಖಾನೆಗೆ ಶಂಕುಸ್ಥಾಪನೆ ಮಾಡಿದರು. ಆದರೆ ದೇಶದ ಬೇರೆಬೇರೆ ಭಾಗಗಳಲ್ಲಿ ಉಕ್ಕಿನ ಕಾರ್ಖಾನೆ ಪ್ರಾರಂಭವಾದರೂ ಕರ್ನಾಟಕದಲ್ಲಿ ಕೇಂದ್ರ ಸರಕಾರವು ವಚನ ಕೊಟ್ಟಂತೆ ಉಕ್ಕಿನ ಕಾರ್ಖಾನೆ ಪ್ರಾರಂಭವಾಗಲೇ ಇಲ್ಲ. 'ವಿಜಯನಗರದ ಉಕ್ಕು, ಕನ್ನಡಿಗರ ಹಕ್ಕು;' - ಎಂಬುದು ಚಳವಳಿಗಾರರ ಪ್ರಮುಖ ಘೋಷಣೆಯಾಯಿತು.

## ಶಿಕ್ಷಣದಲ್ಲಿ ಕನ್ನಡ ಭಾಷೆ

ಮಗುವಿಗೆ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವು ಅದರ ಮಾತೃಭಾಷೆಯಲ್ಲಿಯೇ ನಡೆಯಬೇಕೆಂದು ಶಿಕ್ಷಣ ತಜ್ಞರು ಹೇಳಿದ್ದರು. ಆದರೆ ಡೊನೇಶನ್ ಆಧಾರಿತ ಕಾನ್ವೆಂಟ್ ಶಾಲೆಗಳು ರಾಜ್ಯದ ಎಲ್ಲಾ ಕಡೆಗಳಲ್ಲಿ ನಾಯಿಕೊಡೆಗಳಂತೆ ತಲೆ ಎತ್ತಿದವು. ಕನ್ನಡದಲ್ಲೇ ಮಗುವಿಗೆ ಶಿಕ್ಷಣ ದೊರೆಯಬೇಕೆಂದು ಪ್ರತಿಪಾದಿಸಿದ ಅನೇಕ ಸಾಹಿತಿಗಳು ಈ ರಾಜ್ಯದಲ್ಲಿ ಇದ್ದಾರೆ. ಕನ್ನಡ ಅನುಷ್ಠಾನವನ್ನು ವ್ರತದಂತೆ ನಂಬಿದ ಹಿರಿಯ ಸಾಹಿತ್ಯ ಪುರುಷರು ಇಲ್ಲಿ ಇದ್ದಾರೆ. ಕನ್ನಡದ ಅನುಷ್ಠಾನಕ್ಕಾಗಿ ಅನೇಕ ಬರಹಗಾರರು ನಮ್ಮ ವೈಯಕ್ತಿಕ ಸಾಧನೆಯನ್ನು ಬದಿಗೊತ್ತಿ ಕನ್ನಡದ ಕೆಲಸಕ್ಕೆ ಮುಂದಾಗಿದ್ದಾರೆ. ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಕಡ್ಡಾಯಗೊಳಿಸಬೇಕು ಎಂದು ಸಾಹಿತಿಗಳು ಹೋರಾಟ ಮಾಡಿದ್ದೂ ಉಂಟು. ಡಾ। ಕುವೆಂಪು, ಡಾ। ದೇಜಗೌರವರು ಶೈಕ್ಷಣಿಕ ಕ್ಷೇತ್ರದಲ್ಲಿ ಕನ್ನಡ ಭಾಷೆಗೆ ಸೂಕ್ತ ಸ್ಥಾನ-ಮಾನ ಕೊಡಲು ತಮ್ಮ ಅಧಿಕಾರಾವಧಿಯಲ್ಲಿ ಪ್ರಯತ್ನಿಸಿದ್ದರು.

ಪದವಿ ಹಾಗೂ ಸ್ನಾತಕೋತ್ತರ ಪದವಿಗಳಲ್ಲಿ ಕನ್ನಡ ಮಾಧ್ಯಮಕ್ಕೆ ಅವಕಾಶವೇ ಇರಲಿಲ್ಲ. ಸಂಶೋಧನಾ ಕ್ಷೇತ್ರದಲ್ಲಂತೂ ಕನ್ನಡ ಅಸ್ಪೃಶ್ಯ ವಿಷಯವಾಗಿತ್ತು. ತಾಂತ್ರಿಕ ವಿಷಯಗಳನ್ನು ಅಧ್ಯಯನ ಮಾಡುವವರು ತಮಗೆ ಕನ್ನಡದ ಹಂಗಿಲ್ಲವೆಂದು ಭಾವಿಸಿದ್ದರು. ಮೊಟ್ಟಮೊದಲ ಬಾರಿಗೆ ಕುವೆಂಪುರವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪದವಿಯಲ್ಲಿ ಕನ್ನಡ ಮಾಧ್ಯಮವನ್ನು ಜಾರಿಗೆ ತಂದರು. ಈ ಪರಂಪರೆಯನ್ನು ಡಾ। ದೇಜಗೌರವರು ಮುಂದುವರಿಸಿ ಸ್ನಾತಕೋತ್ತರ ವಿಭಾಗದಲ್ಲೂ ಕನ್ನಡದಲ್ಲಿ ಉತ್ತರಿಸುವ ಅವಕಾಶವನ್ನು ದೊರಕಿಸಿಕೊಟ್ಟರು. ಕಾನೂನು, ಬಿ.ಎಡ್. ಮೊದಲಾದ ವಿಷಯಗಳಲ್ಲೂ ಕನ್ನಡ ಮಾಧ್ಯಮದಲ್ಲಿ ಉತ್ತರಿಸುವ ಅವಕಾಶವನ್ನು ಮೈಸೂರು

ವಿಶ್ವವಿದ್ಯಾನಿಲಯ ಒದಗಿಸಿಕೊಟ್ಟಿತು. ಇದನ್ನು ಎಲ್ಲಾ ವಿಶ್ವವಿದ್ಯಾನಿಲಯಗಳು ಅನುಸರಿಸುವಂತೆ ಕನ್ನಡದ ಸಾಹಿತಿಗಳು ಸಾಕಷ್ಟು ಹೋರಾಟವನ್ನು ಮಾಡಿದ್ದರು.

ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ಪಡೆದವರಿಗೆ ಕರ್ನಾಟಕ ರಾಜ್ಯ ಲೋಕಸೇವಾ ಆಯೋಗದ ಮೂಲಕ ಉದ್ಯೋಗ ದೊರೆಯುವುದು ದುರ್ಲಭವಾಗಿತ್ತು. ದ್ವಿತೀಯ ದರ್ಜೆಯ ಗುಮಾಸ್ತ ಹುದ್ದೆಗೂ ಇಂಗ್ಲಿಷ್‌ನಲ್ಲಿ ಪರೀಕ್ಷೆ ಬರೆಯಬೇಕಾಗಿತ್ತು. ಇದನ್ನು ಪ್ರತಿಭಟಿಸಿ ೧೯೭೭ರಲ್ಲಿ ಡಾ। ದೇಜಗೌ ಹಾಗೂ ಡಾ। ಸಿದ್ಧಯ್ಯ ಪುರಾಣಿಕರು ಲೋಕಸೇವಾ ಆಯೋಗದ ಕಛೇರಿ ಎದುರು ಉಪವಾಸ ಸತ್ಯಾಗ್ರಹ ಕುಳಿತರು. ಆಗ ಡಿ. ದೇವರಾಜ ಅರಸುರವರು ಕನ್ನಡದಲ್ಲಿ ಉತ್ತರ ಬರೆಯುವ ಅವಕಾಶ ಕಲ್ಪಿಸಿದರು. ಇಷ್ಟೇ ಅಲ್ಲ, ಎ ಮತ್ತು ಬಿ ದರ್ಜೆಯ ಹುದ್ದೆಗಳಿಗೂ ಕನ್ನಡ ಮಾಧ್ಯಮದಲ್ಲೇ ಉತ್ತರ ಬರೆಯುವ ಅವಕಾಶ ದೊರೆಯಿತು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ। ಬರಗೂರು ರಾಮಚಂದ್ರಪ್ಪರವರು ಇತ್ತೀಚೆಗೆ ತಾಂತ್ರಿಕ ವಿಷಯಗಳಲ್ಲೂ ಕನ್ನಡದ ಅಧ್ಯಯನವನ್ನು ಕಡ್ಡಾಯ ಮಾಡಿರುವುದನ್ನು ವಿಶೇಷವಾಗಿ ಸ್ಮರಿಸಬೇಕು.

ಕರ್ನಾಟಕದಲ್ಲಿ ಕನ್ನಡವನ್ನು ವ್ಯಾಸಂಗ ಮಾಡದೇ ಶಿಕ್ಷಣ ಮುಗಿಸಬಹುದು ಎಂಬ ವ್ಯವಸ್ಥೆ ಜಾರಿಯಲ್ಲಿತ್ತು. ಪ್ರೌಢಶಾಲಾ ವ್ಯಾಸಂಗದಲ್ಲಿ ಸಂಸ್ಕೃತದ ಸ್ಥಾನಮಾನ ಕುರಿತು ಅಧ್ಯಯನ ಮಾಡಲು ಅಂದಿನ ರಾಜ್ಯ ಸರಕಾರ ೧೯೮೦ರಲ್ಲಿ ಡಾ। ವಿ.ಕೃ. ಗೋಕಾಕ ಅವರ ನೇತೃತ್ವದಲ್ಲಿ ಸಮಿತಿಯನ್ನು ನೇಮಿಸಿತು. ಡಾ। ಗೋಕಾಕ್ ಆಯೋಗದ ವರದಿಯನ್ನು ಸಂಪೂರ್ಣವಾಗಿ ಅನುಷ್ಠಾನ ಮಾಡುವುದಾಗಿ ಒಪ್ಪಿಕೊಂಡು ಸರಕಾರ ಅನಂತರ ಹಿಂದೇಟು ಹಾಕಿತು. ೧೯೮೨ರ ಏಪ್ರಿಲ್ ತಿಂಗಳಲ್ಲಿ ಗೋಕಾಕ್ ವರದಿಯ ಅನುಷ್ಠಾನಕ್ಕಾಗಿ ವ್ಯಾಪಕವಾದ ಚಳವಳಿ ರಾಜ್ಯಾದ್ಯಂತ ಪ್ರಾರಂಭವಾಯಿತು. ಇದು ಕನ್ನಡ ಚಳವಳಿಯ ಅತ್ಯಂತ ಪ್ರಮುಖ ಘಟ್ಟವಾಗಿದೆ.

### ಕನ್ನಡ ಪತ್ರಿಕೆಗಳು ಹಾಗೂ ಪ್ರಕಾಶನ

ತಮಿಳುನಾಡು ಹಾಗೂ ಕೇರಳ ರಾಜ್ಯಗಳೊಡನೆ ಹೋಲಿಸಿದರೆ ಕರ್ನಾಟಕದಲ್ಲಿ ಪತ್ರಿಕೆಗಳು ಹಾಗೂ ಸಾಹಿತ್ಯ ಕೃತಿಗಳನ್ನು ಕೊಂಡು ಓದುವವರ ಸಂಖ್ಯೆ ಅತ್ಯಂತ ಕಡಿಮೆ ಇದೆ. ಇಂಗ್ಲಿಷ್ ಪತ್ರಿಕೆಗಳನ್ನು ಓದುತ್ತೇವೆ ಎಂದು ತೋರಿಸಿಕೊಳ್ಳುವ ಹುಮ್ಮಸ್ಸು ಬಹುಮಟ್ಟಿನ ಕನ್ನಡಿಗರಲ್ಲಿ ಮನೆ ಮಾಡಿದೆ. ಕನ್ನಡ ಪತ್ರಿಕೆಗಳನ್ನು ಓದಲೇಬೇಕೆಂಬ ಆಂದೋಳನವನ್ನು ಪ್ರಾರಂಭಿಸಿದ ಕೀರ್ತಿ ಸಹ ಈ ಕನ್ನಡ ಚಳವಳಿಗಾರರದ್ದು. ರಾಜ್ಯದಲ್ಲಿ ಪ್ರಕಾಶನ ಉದ್ಯಮ ಪ್ರಾರಂಭದಿಂದಲೂ ವೈಯಕ್ತಿಕ ಮಟ್ಟದಲ್ಲಿ ನಡೆಯುತ್ತ ಬಂದಿದೆ. ಕೇರಳ ರಾಜ್ಯದಂತೆ ಇಲ್ಲಿ ಪ್ರಕಾಶನ ಉದ್ಯಮ ಜನಾಂದೋಳನವಾಗಿ ನಡೆದಿಲ್ಲ. ಇದನ್ನು ಜನಾಂದೋಳನವನ್ನಾಗಿ ಮಾಡಬೇಕು ಎಂದು ಅನೇಕ ಚಳವಳಿಗಾರರು ಹೋರಾಟ ನಡೆಸಿದರು. ಕನ್ನಡ ಭಾಷೆಯಲ್ಲಿ ರಚಿತವಾದ ಉತ್ಕೃಷ್ಟ ಗ್ರಂಥದ ಒಂದು ಸಾವಿರ ಪ್ರತಿಗಳು ಖರ್ಚು ಆಗಬೇಕಾದರೆ ಹತ್ತಾರು ವರ್ಷಗಳು ಬೇಕಾಗುತ್ತವೆ. ಗ್ರಂಥಾಲಯ ಹಾಗೂ ಇತರ ಕಡೆ ಕನ್ನಡ ಪುಸ್ತಕಗಳನ್ನು ಕೊಳ್ಳಬೇಕು ಎಂಬ ಬೇಡಿಕೆ ಹೆಚ್ಚಾಯಿತು. ಕನ್ನಡ ಪುಸ್ತಕ ಪ್ರಕಾಶನ ಮತ್ತು ಮಾರಾಟ ಸಮಸ್ಯೆಗಳ ನಿವಾರಣೆಗಾಗಿ ಸರಕಾರ ಕನ್ನಡ ಪುಸ್ತಕ ಪ್ರಾಧಿಕಾರವನ್ನು ಸ್ಥಾಪಿಸುವಂತೆ ಚಳವಳಿಗಾರರು ಒತ್ತಾಯ ಹೇರಿದ್ದೂ ಉಂಟು.

### ಚಲನಚಿತ್ರ

ಕನ್ನಡ ಚಲನಚಿತ್ರರಂಗ ಸ್ವಾತಂತ್ರ್ಯಪೂರ್ವದಿಂದಲೂ ಮದರಾಸಿನಲ್ಲಿ ಠಿಕಾಣಿ ಹೂಡಿತ್ತು. ಡಬ್ಬಿಂಗ್ ಚಿತ್ರಗಳಿಂದಾಗಿ ಕನ್ನಡದ ಹೊಸ ಚಿತ್ರಗಳ ನಿರ್ಮಾಣಕ್ಕೆ ಬಾರಿ ಧಕ್ಕೆ ಆಯಿತು. ರೀ-ಮೇಕ್ ಚಿತ್ರಗಳು ಕನ್ನಡದ ಸೃಜನಶೀಲ ಪ್ರತಿಭೆಯನ್ನು ಹಾಳುಮಾಡಲು ಮುಂದಾದವು. ನಾಯಕ ನಟರಿಂದ ಹಿಡಿದು ಎಲ್ಲಾ ನಟ ನಟಿಯನ್ನು ಬೇರೆ ಭಾಷೆಗಳಿಂದ ತರಿಸುವ ಕೆಟ್ಟ ಪರಂಪರೆ ಚಲನಚಿತ್ರೋದ್ಯಮದಲ್ಲಿ ಬೆಳೆಯಲು ಆರಂಭಿಸಿತು. ಬೆಂಗಳೂರಿನಲ್ಲಿ ಕೆಲವು ಚಿತ್ರಮಂದಿರಗಳು ಕನ್ನಡ - ಚಲನಚಿತ್ರಗಳನ್ನು ಪ್ರದರ್ಶಿಸುವುದು ಅವಮಾನವೆಂದು ಭಾವಿಸಿದವು. ಹೊರ ರಾಜ್ಯದ ಕೃಪಾಶೀರ್ವಾದದ ಅಡಿಯಲ್ಲಿ ಕನ್ನಡ ಚಲನಚಿತ್ರ ಹೆಜ್ಜೆ ಇಡ ಬೇಕಾಯಿತು. ಅನೇಕ ಕಲಾವಿದರು ಇಂಥ ಮೂಗುಬ್ಬಸದ ವಾತಾವರಣದಲ್ಲಿ ತಮ್ಮ ಸಂಕಷ್ಟಗಳನ್ನು ಹೇಳಿಕೊಳ್ಳಲಾಗದೆ ಚಡಪಡಿಸುತ್ತಿದ್ದರು. ಕನ್ನಡ ಭಾಷೆಯನ್ನು ಬಿಟ್ಟು ಬೇರೆ ಭಾಷೆಯಲ್ಲಿ ನಟಿಸುವುದಿಲ್ಲ ಎಂದು ಪಣತೊಟ್ಟಿದ್ದ ಡಾ। ರಾಜ್‌ಕುಮಾರ್‌ರವರು ತಮ್ಮ ಚಲನಚಿತ್ರಗಳಲ್ಲಿ ಕನ್ನಡಿಗರ ಸ್ವಾಭಿಮಾನವನ್ನು ಕೆರಳಿಸತೊಡಗಿದರು. ಅಷ್ಟೇ ಅಲ್ಲ, ಗೋಕಾಕ್ ವರದಿ-ಅನುಷ್ಠಾನದ ಚಳವಳಿ ಸಂದರ್ಭದಲ್ಲಿ ತಾವೇ ನೇರವಾಗಿ ಚಳವಳಿಯಲ್ಲಿ ಭಾಗವಹಿಸಿದರು. ಇದರಿಂದಾಗಿ ಕನ್ನಡದ ಚಳವಳಿಗೆ ನೂರಾನೆ ಬಲ ಬಂದಿತು.

ಕನ್ನಡ ಚಳವಳಿಯಲ್ಲಿ ತಾತ್ವಿಕ ವಿಚಾರಗಳನ್ನು ಸಮರ್ಪಕವಾಗಿ ಪ್ರತಿಬಿಂಬಿಸಿದ ಕೀರ್ತಿ ನಾಡಿನ ಸಾಹಿತ್ಯ ಪುರುಷರಿಗೆ ಸಲ್ಲುತ್ತದೆ. ಕನ್ನಡನಾಡಿನ ಹಿರಿಯ ವಿದ್ವಾಂಸರು ಹಾಗೂ ಸೃಜನಶೀಲ ಸಾಹಿತಿಗಳು ಏಕೀಕರಣದ ನಂತರ ಕನ್ನಡ ಅನುಷ್ಠಾನದ ಅಗತ್ಯತೆಯನ್ನು ಅತ್ಯಂತ ಸಮರ್ಪಕವಾಗಿ ಪ್ರತಿಬಿಂಬಿಸಿದರು. ಕನ್ನಡದ ಹಿರಿಯ ಸಾಹಿತಿಗಳಾದ ಡಾ। ಎ.ಆರ್. ಕೃಷ್ಣಶಾಸ್ತ್ರಿ ಪ್ರೊ। ಬಿ. ಎಂ. ಶ್ರೀಕಂಠಯ್ಯ, ಡಾ। ಮಾಸ್ತಿ ವೆಂಕಟೇಶ ಅಯ್ಯಂಗಾರ್ - ಮೊದಲಾದವರು ಕನ್ನಡ ಭಾಷೆ ಎದುರಿಸುತ್ತಿದ್ದ ಆತಂಕಗಳನ್ನು ಜನತೆಗೆ ತಿಳಿಸಿ ಹೇಳತೊಡಗಿದರು. ಡಾ। ಕುವೆಂಪು ಹಾಗೂ ಡಾ. ದೇಜಗೌರವರು ಶೈಕ್ಷಣಿಕ ಕ್ಷೇತ್ರದಲ್ಲಿ ಕನ್ನಡದ ಅನುಷ್ಠಾನವನ್ನು ತಮ್ಮ ಬದುಕಿನ ಧ್ಯೇಯವಾಗಿ ಸ್ವೀಕರಿಸಿದರು. ಕನ್ನಡ ಭಾಷೆಗೆ ಅಪಾಯ ಆದಾಗಲೆಲ್ಲ ತಮ್ಮ ಸ್ಥಾನಮಾನ ತೊರೆದು ಅವರು ಹೋರಾಟಕ್ಕೆ ಮುಂದಾದರು. ಇದೇ ಪರಂಪರೆಗೆ ಸೇರಿದವರು ಡಾ। ಹಾ. ಮಾ. ನಾಯಕರವರು.

ಬೆಂಗಳೂರಿನಲ್ಲಿ ಕನ್ನಡದ ಹಿತವನ್ನು ಕಾಪಾಡಿದವರಲ್ಲಿ ಪ್ರಮುಖರು ಡಾ। ಎಂ. ಚಿದಾನಂದಮೂರ್ತಿಯವರು. ಅವರ ಕನ್ನಡ ಶಕ್ತಿ ಕೇಂದ್ರ ವಿನೂತನ ಸಂಸ್ಥೆಯಾಗಿದ್ದು ಕನ್ನಡಿಗರ ಹಿತಾಸಕ್ತಿ ವಿಚಾರ ಬಂದಾಗ ಅದು ಉಗ್ರರೂಪದ ಹೋರಾಟಕ್ಕೆ ಮುಂದಾಯಿತು. ಈ ಸಂಸ್ಥೆಯೊಡನೆ ಪ್ರೊ। ಎಲ್. ಎಸ್. ಶೇಷಗಿರಿರಾವ್, ಜಿ. ನಾರಾಯಣ, ರಾ. ನಂ. ಚಂದ್ರಶೇಖರ, ಡಾ. ಪಿ. ವಿ. ನಾರಾಯಣ, ಡಾ. ವಿಜಯಾ ಮೊದಲಾದವರು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಬೆಂಗಳೂರಿನಲ್ಲಿ ಕನ್ನಡ ಚಳವಳಿಯನ್ನು ಜನಸಾಮಾನ್ಯರ ಬಳಿಗೆ ಕೊಂಡೊಯ್ದವರು ಮ. ರಾಮಮೂರ್ತಿ, ಅನಕೃ, ಬೀಚಿ ಹಾಗೂ ನಾಡಿಗೇರ ಕೃಷ್ಣರಾಯ - ಮೊದಲಾದವರು. ಉತ್ತರ ಕರ್ನಾಟಕದಲ್ಲಿ ಪಾಟೀಲ ಪುಟ್ಟಪ್ಪ, ಕೋ. ಚೆನ್ನಬಸಪ್ಪ, ಪ್ರೊ। ಚಂದ್ರಶೇಖರ ಪಾಟೀಲ ಮೊದಲಾದವರು ಕನ್ನಡದ ಅನುಷ್ಠಾನದ ಬಗ್ಗೆ ತಮ್ಮ ನಿಷ್ಠೆಯನ್ನು ಸದಾಕಾಲ ತೋರಿಸಿದ್ದಾರೆ. ಲಂಕೇಶ್ ಪತ್ರಿಕೆ ಮೂಲಕ ಪಿ. ಲಂಕೇಶ್‌ರವರು ಕನ್ನಡ ವಿಚಾರಗಳಿಗೆ ಸಾಕಷ್ಟು ಮಹತ್ವ ಕೊಟ್ಟಿದ್ದಾರೆ. ಸಮಾಜವಾದಿ ಪಕ್ಷದಿಂದ ಬಂದ ಶಾಂತವೇರಿ ಗೋಪಾಲಗೌಡರು ಕನ್ನಡದ ಸಮಸ್ಯೆಗಳನ್ನು ಸದನದ ಒಳಗೂ ಮತ್ತು ಹೊರಗೂ ಪ್ರಸ್ತಾಪಿಸಿದ್ದಾರೆ.

ಪ್ರಜಾವಾಣಿಯ ಟೀಎಸ್ಸಾರ್, ಕನ್ನಡಪ್ರಭದ ಖಾದ್ರಿ ಶಾಮಣ್ಣ ಮೊದಲಾದ ಹಿರಿಯ ಪತ್ರಕರ್ತರು ಕನ್ನಡಿಗರ ಜಾಗೃತಿಗಾಗಿ ಸದಾಕಾಲ ಕೆಲಸ ಮಾಡಿದ್ದಾರೆ. ಮೇಲಿನ ಸಾಂಸ್ಕೃತಿಕ ಕ್ಷೇತ್ರದ ವ್ಯಕ್ತಿಗಳು ಅಲ್ಲದೆ ಕನ್ನಡಕ್ಕಾಗಿ ಬೀದಿಗಿಳಿದು ಹೋರಾಟ ಮಾಡಿದ ಅನೇಕ ಚಳವಳಿಗಾರರು ನಮ್ಮಲ್ಲಿದ್ದಾರೆ. ಅವರಲ್ಲಿ ಮ. ರಾಮಮೂರ್ತಿ, ಅನಕೃ, ತರಾಸು, ವಾಟಾಳ್ ನಾಗರಾಜ್, ಕೆ. ಪ್ರಭಾಕರರೆಡ್ಡಿ, ಜಿ. ನಾರಾಯಣಕುಮಾರ್, ಕನ್ನಡಪಕ್ಷದ ಪುರುಷೋತ್ತಮ, ಇದೇ ಪಕ್ಷದ ಮೈಸೂರಿನ ವಿಠ್ಠಲರಾವ್, ಅಲ್ಲಿಯವರೇ ಆದ ತಾಯೂರು ವಿಠಲಮೂರ್ತಿ, ಸಾ. ನಾಗಲಿಂಗಸ್ವಾಮಿ, ಸ. ರ. ಸುದರ್ಶನ್-ಹಾಗೂ ಪತ್ರಕರ್ತ ಜಾಣಗೆರೆ ವೆಂಕಟರಾಮಯ್ಯ, ಕೋಡಿಹೊಸಹಳ್ಳಿ ರಾಮಣ್ಣ, ಚಲನಚಿತ್ರ ನಟ ಅಶೋಕ, ಲೋಕೇಶ್ ಮೊದಲಾದವರನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬೇಕು. ಬೇರೆ ಬೇರೆ ಸಂದರ್ಭಗಳಲ್ಲಿ ಕನ್ನಡ ಭಾಷೆಗೆ ಒದಗಿದ ಸಂಕಷ್ಟಗಳಿಗೆ ಈ ಮಹನೀಯರುಗಳು ನಡೆಸಿದ ಹೋರಾಟದಿಂದ ಸಾಕಷ್ಟು ಪರಿಹಾರ ದೊರಕಿದೆ. ಇವರ ಜೊತೆ ಕನ್ನಡನಾಡಿನಾದ್ಯಂತ ಸಾವಿರಾರು ಕಾರ್ಯಕರ್ತರು ಕನ್ನಡ ಭಾಷೆಗೆ ಒದಗಿದ ಸಂಕಷ್ಟಗಳಿಗಾಗಿ ಹೋರಾಟ ಮಾಡಿದ್ದಾರೆ. ಪ್ರಾದೇಶಿಕ ಪಕ್ಷವನ್ನು ಸ್ಥಾಪಿಸಿ ಅದರಿಂದ ಅಧಿಕಾರ ಪಡೆದು ಕನ್ನಡದ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಬೇಕೆಂಬ ಅವರ ಆಶಯ ಈಡೇರದೆ ಹೋಗಿರಬಹುದು, ಆದರೆ ಕನ್ನಡ ಸಮಸ್ಯೆಗಳ ಬಗ್ಗೆ ಜನಜಾಗೃತಿ ಮಾಡುವಲ್ಲಿ ಹಾಗೂ ಸರಕಾರದ ಗಮನ ಸೆಳೆಯುವಲ್ಲಿ ಅವರು ಯಶಸ್ವಿಯಾಗಿದ್ದಾರೆ. ಇವರುಗಳ ಪ್ರಯತ್ನದಿಂದಾಗಿ ಅನೇಕ ಸಮಸ್ಯೆಗಳು ಪರಿಹಾರವನ್ನು ಕಂಡಿವೆ. ಅವರು ಚಳವಳಿಯ ಪ್ರಾರಂಭದಲ್ಲಿ ಇಟ್ಟುಕೊಂಡಿದ್ದ ಧ್ಯೇಯೋದ್ದೇಶಗಳು ಇಂದು ಬಹುಮಟ್ಟಿಗೆ ಈಡೇರಿವೆ. ಕನ್ನಡಕ್ಕೆ ಇಂದಿಗೂ ಅಗ್ರಪಟ್ಟ ದೊರೆಯದೇ ಇದ್ದರೂ ಸರಕಾರದಲ್ಲಿ ಹಾಗೂ ಜನಸಾಮಾನ್ಯರಲ್ಲಿ ಕನ್ನಡ ಭಾಷೆಗೆ ಗೌರವಯುತ ಸ್ಥಾನ ದೊರಕಿದೆ. ಇಂತಹ ಸ್ಮರಣೀಯ ಕಾಣಿಕೆಯನ್ನು ಕೊಟ್ಟ ರಾಜ್ಯದ ಎಲ್ಲಾ ಕನ್ನಡ ಚಳುವಳಿಗಾರರು ಈ ಸಂದರ್ಭದಲ್ಲಿ ಅಭಿನಂದನಾರ್ಹರು. ರಾಜ್ಯದ ಚುನಾವಣಾ ಕಣದಲ್ಲಿ ಈ ಕನ್ನಡ ಚಳವಳಿಗಾರರ ಹೋರಾಟವನ್ನು ಈಗ ಗಮನಿಸೋಣ.

## ಕನ್ನಡ ಚಳವಳಿಗಾರರು

೧೯೬೭ರಿಂದಲೂ ಕನ್ನಡ ಚಳವಳಿಗಾರರು ರಾಜ್ಯ ವಿಧಾನಸಭೆ ಚುನಾವಣೆಯಲ್ಲಿ ಸಕ್ರಿಯ ಪಾತ್ರ ವಹಿಸಿರುವುದನ್ನು ಗಮನಿಸಬಹುದು. ೧೯೬೭ರ ವಿಧಾನಸಭೆ ಚುನಾವಣೆಯಲ್ಲಿ ವಾಟಾಳ್ ನಾಗರಾಜ್‌ರವರು ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಅವರು ಮೂಲತಃ ಕನ್ನಡ ಚಳವಳಿಯಿಂದ ಬಂದವರು. ಅವರು ಈ ಚುನಾವಣೆಯಲ್ಲಿ ಶೇಕಡ ೩೯.೯೮ ಅಂದರೆ ೧೩,೮೮೪ ಮತಗಳನ್ನು ಗಳಿಸಿ ಕಾಂಗ್ರೆಸ್ಸಿನ ಪ್ರಬಲ ಅಭ್ಯರ್ಥಿಯಾದ ವೈ. ರಾಮಚಂದ್ರ ಅವರನ್ನು ಸೋಲಿಸಿ ವಿಧಾನಸಭೆಯನ್ನು ಪ್ರವೇಶಿಸಿದರು.

## ೧೯೭೨ರ ಚುನಾವಣೆ

೧೯೭೨ರ ಚುನಾವಣೆಯಲ್ಲಿ ವಾಟಾಳ್ ನಾಗರಾಜ್‌ರವರು ಚಾಮರಾಜಪೇಟೆ ಕ್ಷೇತ್ರದಿಂದ ಸ್ಪರ್ಧಿಸಿ ಶೇಕಡ ೨೯.೩೨ ಅಂದರೆ, ೧೫,೪೫೬ ಮತಗಳನ್ನು ಗಳಿಸಿ ರಾಜ್ಯ ವಿಧಾನಸಭೆಗೆ ಆಯ್ಕೆಯಾದರು ಆದರೆ, ಚಿಕ್ಕಪೇಟೆಯಿಂದ ಸ್ಪರ್ಧಿಸಿದ್ದ ವಾಟಾಳ್ ನಾಗರಾಜ್‌ರವರು ಸೋಲನ್ನು ಒಪ್ಪಿಕೊಂಡರು. ೧೯೭೫ ಏಪ್ರಿಲ್ ೨೭ರಂದು ಸುಪ್ರೀಂಕೋರ್ಟ್ ವಾಟಾಳ್ ನಾಗರಾಜ್‌ರವರ ಚುನಾವಣೆಯನ್ನು ರದ್ದು ಮಾಡಿದ ಕಾರಣ ಮತ್ತೊಬ್ಬ ಕನ್ನಡ ಚಳವಳಿ ಮೂಲದಿಂದ ಬಂದ ಕೆ. ಪ್ರಭಾಕರ ರೆಡ್ಡಿ ಅವರು ಚಾಮರಾಜಪೇಟೆಯಿಂದ ವಿಧಾನಸಭೆಗೆ ಸ್ಪರ್ಧಿಸಿ ಶೇಕಡ ೩೫.೭೫ ಅಂದರೆ ೨೩,೪೬೪ ಮತಗಳಿಸಿ ಜಯಶೀಲರಾದರು.

## ೧೯೭೮ರ ವಿಧಾನಸಭೆ ಚುನಾವಣೆ

ವಾಟಾಳ್ ನಾಗರಾಜ್‌ರವರ ಪತ್ನಿ ಶ್ರೀಮತಿ ಜ್ಞಾನಾಂಬ ವಾಟಾಳ್ ನಾಗರಾಜ್‌ರವರು ಚಿಕ್ಕಪೇಟೆ ಕ್ಷೇತ್ರದಿಂದ ಸ್ಪರ್ಧಿಸಿ ಶೇಕಡ ೬.೧೬ರಷ್ಟು ಮತಗಳಿಸಿ ಸೋಲನ್ನು ಒಪ್ಪಿಕೊಂಡರು. ಅವರು ಬಿನ್ನಿಪೇಟೆಯಿಂದ ಕೂಡ ಸ್ಪರ್ಧಿಸಿದ್ದರು. ಕಳೆದ ವಿಧಾನಸಭಾ ಚುನಾವಣೆ ಸಂದರ್ಭದಲ್ಲಿ ಕನ್ನಡ ಚಳವಳಿಗಾರರ ಪಕ್ಷದಿಂದ ಸ್ಪರ್ಧಿಸಿದ್ದ ಇವರು ಸೋಲನ್ನು ಒಪ್ಪಿಕೊಂಡಿದ್ದರು.

## ೧೯೮೩ರ ವಿಧಾನಸಭೆ ಚುನಾವಣೆ

ಕನ್ನಡ ಚಳವಳಿ ಮೂಲಕ ರಾಜಕೀಯಕ್ಕೆ ಬಂದ ಜಿ. ನಾರಾಯಣಕುಮಾರ್‌ರವರು ಬಿನ್ನಿಪೇಟೆ ಕ್ಷೇತ್ರದಿಂದ ಸ್ಪರ್ಧಿಸಿ ಶೇಕಡ ೪೫.೩೩ ಅಂದರೆ, ೪೧,೨೯೧ ಮತಗಳನ್ನು ಗಳಿಸಿ ರಾಜ್ಯ ವಿಧಾನಸಭೆಗೆ ಆಯ್ಕೆಯಾದರು. ಆದರೆ ಇವರ ಸ್ಪರ್ಧೆ ಜನತಾ ಪಕ್ಷದ ಮೂಲಕ ನಡೆದಿತ್ತು. ಇದೇ ಚುನಾವಣೆಯಲ್ಲಿ ಚಾಮರಾಜಪೇಟೆಯಿಂದ ಸ್ಪರ್ಧಿಸಿದ ಪ್ರಭಾಕರರೆಡ್ಡಿ ಕೇವಲ ಶೇ. ೧.೨ರಷ್ಟು ಮತಗಳನ್ನು ಮಾತ್ರ ಗಳಿಸಿದರು. ಕನ್ನಡ ಚಳವಳಿ ನಾಯಕರಾದ ವಾಟಾಳ್ ನಾಗರಾಜ್‌ರವರು ಮೊದಲ ಬಾರಿಗೆ ಮೈಸೂರು ಜಿಲ್ಲೆಯ ಚಾಮರಾಜನಗರದಿಂದ ಸ್ಪರ್ಧಿಸಿ ಶೇಕಡಾ ೩೯.೩೯ ಅಂದರೆ ೨೮,೬೯೦ ಮತ ಪಡೆದು ಸೋಲನ್ನು ಒಪ್ಪಿಕೊಂಡರು.

## ೧೯೮೫ರ ವಿಧಾನಸಭೆ ಚುನಾವಣೆ

೧೯೮೫ರ ವಿಧಾನಸಭೆ ಚುನಾವಣೆಯಲ್ಲಿ ಡಾ। ರಾಜಕುಮಾರ್ ಅಭಿಮಾನಿಗಳ ಸಂಘದ ಪರವಾಗಿ ಟಿ. ವೆಂಕಟೇಶ್‌ರವರು ಬೆಂಗಳೂರು ಮಲ್ಲೇಶ್ವರಂ ಕ್ಷೇತ್ರದಿಂದ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಶೇಕಡ ೬.೨೪ ಅಂದರೆ ೧,೯೯೨ ಮತ ಪಡೆದರು. ಅವರ ಸ್ಪರ್ಧೆ ರಾಜಕೀಯ ವಲಯದಲ್ಲಿ ತುಂಬ ಕುತೂಹಲಕಾರಿಯಾಗಿತ್ತು. ಡಾ। ರಾಜಕುಮಾರ್‌ರವರು ನೇರವಾಗಿ ಇವರನ್ನು ಬೆಂಬಲಿಸದೇ ಇದ್ದರೂ ಅನೇಕ ಸಾಹಿತಿಗಳು ಚಳವಳಿಗಾರರು, ಹಾಗೂ ಕನ್ನಡ ಪರ ಸಂಘಟನೆಗಳು ಇವರ ಪರವಾಗಿ ಈ ಚುನಾವಣೆಯಲ್ಲಿ ಕೆಲಸ ಮಾಡಿದರು. ಬಿನ್ನಿಪೇಟೆಯಿಂದ ಜನತಾ ಪಕ್ಷದ ಪರವಾಗಿ ಸ್ಪರ್ಧಿಸಿದ ಜಿ. ನಾರಾಯಣಕುಮಾರ್‌ರವರು ಶೇಕಡ ೪೨.೧೨ ಅಂದರೆ, ೩೭,೯೯೯ ಮತ ಪಡೆದು ಪುನರಾಯ್ಕೆಯಾದರು. ವಾಟಾಳ್ ನಾಗರಾಜ್‌ರವರು ಮೈಸೂರು ಜಿಲ್ಲೆಯ ಚಾಮರಾಜನಗರದಿಂದ ಮತ್ತೆ ಸ್ಪರ್ಧಿಸಿ ಶೇಕಡ ೨೬.೫೭ ಅಂದರೆ ೨೧,೭೫೮ ಮತ ಪಡೆದು ಸೋಲನ್ನು ಒಪ್ಪಿಕೊಂಡರು.

## ೧೯೮೯ರ ವಿಧಾನಸಭೆ ಚುನಾವಣೆ

ಬಿನ್ನಿಪೇಟೆ ಕ್ಷೇತ್ರದಿಂದ ಜನತಾದಳದ ಅಭ್ಯರ್ಥಿಯಾಗಿ ಸ್ಪರ್ಧಿಸಿದ ಜಿ. ನಾರಾಯಣಕುಮಾರ್‌ರವರು ೧೪.೪೩ ಮತಗಳಿಸಿ ಸೋಲನ್ನು ಒಪ್ಪಿಕೊಂಡರು. ಮೈಸೂರಿನ ಚಾಮರಾಜನಗರದಿಂದ ಸ್ಪರ್ಧಿಸಿದ ವಾಟಾಳ್ ನಾಗರಾಜ್‌ರವರು ಶೇಕಡ ೩೮.೭೭ರಷ್ಟು ಅಂದರೆ ೩೫,೫೬೪ ಮತಗಳಿಸಿ ರಾಜ್ಯ ವಿಧಾನಸಭೆಗೆ ಆಯ್ಕೆಯಾದರು. ಗ್ರಾಮಾಂತರ ಪ್ರದೇಶದಿಂದ ರಾಜ್ಯ ವಿಧಾನಸಭೆಗೆ ಆರಿಸಿ ಬಂದ ವಾಟಾಳ್ ನಾಗರಾಜ್ ಕನ್ನಡಪರ ಸಂಘಟನೆಗಳ ನಾಯಕರಾಗಿದ್ದರು.

## ೧೯೯೪ರ ವಿಧಾನಸಭೆ ಚುನಾವಣೆ

ಕನ್ನಡ ಚಳವಳಿಯ ವಾಟಾಳ್ ಪಕ್ಷದಿಂದ ಈ ಸಲದ ಚುನಾವಣೆಗೆ ೪೪ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಶೇಕಡ ೦.೧೮ ಅಂದರೆ, ೩೬,೨೫೧ ಮತಗಳು ವಾಟಾಳ್ ಪಕ್ಷಕ್ಕೆ ದೊರಕಿದವು. ಅವರಲ್ಲಿ ಒಬ್ಬರು ಮಾತ್ರ ರಾಜ್ಯ ವಿಧಾನಸಭೆಯನ್ನು ಪ್ರವೇಶಿಸಿದರು. ಅವರೆಂದರೆ, ಚಾಮರಾಜನಗರದಿಂದ ಸ್ಪರ್ಧಿಸಿದ್ದ ಪಕ್ಷದ ಅಧ್ಯಕ್ಷರಾದ ವಾಟಾಳ್ ನಾಗರಾಜ್‌ರವರು. ಅವರು ಅಲ್ಲಿ ಶೇಕಡ ೨೬.೭೦ ರಷ್ಟು ಅಂದರೆ ೨೮,೩೩೪ ಮತಗಳನ್ನು ಪಡೆದರು. ಈ ಕ್ಷೇತ್ರದಿಂದ ಇವರದ್ದು ಎರಡನೇ ಬಾರಿಯ ವಿಜಯ ಇದಾಗಿತ್ತು.

ಕನ್ನಡ ಪಕ್ಷ ಈ ಚುನಾವಣೆಯಲ್ಲಿ ಸ್ಪರ್ಧಿಸಿ ಕೇವಲ ೨೭೬೬ ಮತಗಳನ್ನು ಮಾತ್ರ ಪಡೆಯಿತು. ಕನ್ನಡ ರಾಜ್ಯೋತ್ಸವ ಸಂಘ ಎಂಬ ಮತ್ತೊಂದು ಕನ್ನಡ ಪರ ಸಂಘಟನೆ ಈ ಚುನಾವಣೆಯಲ್ಲಿ ೧೧೨ ಅಭ್ಯರ್ಥಿಗಳನ್ನು ಕಣಕ್ಕೆ ಇಳಿಸಿತ್ತು. ಅದು ಶೇಕಡ ೨.೭೩ ಅಂದರೆ ೫,೬೪,೨೪೬ ಮತಗಳನ್ನು ಪಡೆಯಿತು.

## ೧೯೯೯ರ ವಿಧಾನಸಭೆ ಚುನಾವಣೆ

ಕನ್ನಡ ಚಳುವಳಿಗಾರರು ಒಂಬತ್ತು ಸ್ಥಾನಗಳಿಗೆ ಈ ಚುನಾವಣೆಯಲ್ಲಿ ಸ್ಪರ್ಧೆಗೆ ಇಳಿದರು. ಅವರಲ್ಲಿ ಎಂಟು ಜನ ಠೇವಣಿ ಕಳೆದುಕೊಂಡರು. ಒಟ್ಟು ಅದು ಗಳಿಸಿದ ಮತ ೩೭,೧೮೯. ಚಾಮರಾಜನಗರದಿಂದ ಮೂರನೇ ಬಾರಿಗೆ ಸ್ಪರ್ಧಿಸಿದ್ದ ವಾಟಾಳ್ ನಾಗರಾಜ್‌ರವರು ಶೇಕಡ ೨೭.೭ ಅಂದರೆ, ೨೮, ೭೮೭ ಮತ ಪಡೆದು ಸೋಲು ಒಪ್ಪಿಕೊಂಡರು. ೧೯೭೦ರ ದಶಕದಲ್ಲಿ ಕನ್ನಡ ಚಳವಳಿ ಸಾಕಷ್ಟು ಕ್ರಿಯಾಶೀಲವಾಗಿತ್ತು. ೧೯೮೩ಕ್ಕೆ ಅಧಿಕಾರಕ್ಕೆ ಬಂದ ಜನತಾ ಪಕ್ಷ ಕನ್ನಡ ವಿಚಾರವನ್ನು ತನ್ನ ಆದ್ಯ ವಿಷಯವನ್ನಾಗಿ ಪರಿಗಣಿಸಿತು. ಜನತಾ ಪಕ್ಷವು ಕನ್ನಡ ಕಾವಲು ಸಮಿತಿಯನ್ನು ನೇಮಿಸಿ ಚಾಮುಂಡೇಶ್ವರಿ ಕ್ಷೇತ್ರದ ಶಾಸಕರಾಗಿದ್ದ ಸಿದ್ಧರಾಮಯ್ಯರವರನ್ನು ಅದರ ಅಧ್ಯಕ್ಷರನ್ನಾಗಿ ನೇಮಿಸಿತು. ಅನಂತರ ಡಾ. ಪಾಟೀಲ ಪುಟ್ಟಪ್ಪ, ಡಾ। ಹೆಚ್. ನರಸಿಂಹಯ್ಯ, ಜಿ. ನಾರಾಯಣ, ಪ್ರೊ। ಚಂದ್ರಶೇಖರ ಪಾಟೀಲ, ಪ್ರೊ। ಬರಗೂರು ರಾಮಚಂದ್ರಪ್ಪ, ಬಿ. ಎ. ಇದಿನಬ್ಬ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಸೇವೆಸಲ್ಲಿಸಿ, ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಮೊದಲಾದವರು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

ಕನ್ನಡ ಚಳವಳಿಗಾರರು ಅನೇಕ ವಿಚಾರಗಳನ್ನು ಸರಕಾರದ ಗಮನಕ್ಕೆ ತಂದು ಅದನ್ನು ಅನುಷ್ಠಾನಗೊಳಿಸುವಲ್ಲಿ ಯಶಸ್ವಿಯಾಗಿದ್ದಾರೆ. ಆದರೆ ಜನತೆಯನ್ನು ತೀವ್ರವಾಗಿ ಬಡಿದೆಬ್ಬಿಸುವಲ್ಲಿ ಹಿಂದೆ ಸರಿದಿರುವುದನ್ನು ಗಮನಿಸಬಹುದು. ವೈಯಕ್ತಿಕ ಮಟ್ಟದಲ್ಲಿ ಅವರು ಏನಾದರೂ ಪ್ರಭಾವ ಬೀರಿ ಚುನಾವಣೆಯಲ್ಲಿ ಆರಿಸಿ ಬರಬಹುದೇ ಹೊರತು ಕನ್ನಡ ಚಳವಳಿಯ ಹೆಸರಿನಲ್ಲಿ ಅವರು ರಾಜ್ಯ ವಿಧಾನಸಭೆಗೆ ಆಯ್ಕೆಯಾಗುವುದು ತುಂಬ ಕಷ್ಟದ ವಿಚಾರವಾಗಿದೆ.



# ಮರಾಠಿ ಪ್ರಾದೇಶಿಕ ಪಕ್ಷಗಳು

ಡಾ। ಸರಜೂ ಕಾಟ್ಕರ್

೧೯೫೬ ಜನವರಿ ೧೭ ರಂದು ಭಾಷಾವಾರು ರಾಜ್ಯಗಳ ನಿರ್ಮಾಣದ ಘೋಷಣೆಯಾಗುತ್ತಿದ್ದಂತೆ ಮಹಾರಾಷ್ಟ್ರಕ್ಕೆ ಹೊಂದಿಕೊಂಡಂತಹ ಕರ್ನಾಟಕದ ಗಡಿಭಾಗಗಳಲ್ಲಿ ಉದ್ವಿಗ್ನತೆ ಉಂಟಾಗತೊಡಗಿತು. ಈ ಭಾಗಗಳಲ್ಲಿ ವಾಸಿಸುವ, ಮರಾಠಿ ಮಾತನಾಡುವ ಜನರಿಗೆ ತಮ್ಮನ್ನು ಅನ್ಯಾಯವಾಗಿ ಕರ್ನಾಟಕದಲ್ಲಿ ತುರುಕಲಾಗಿದೆಯೆಂಬ ಭಾವನೆಯುಂಟಾಗಿ ಅಲ್ಲಲ್ಲಿ ಹಿಂಸಾತ್ಮಕ ಪ್ರತಿಕ್ರಿಯೆಗಳು ಆರಂಭವಾದವು. ದೊಂಬಿ, ಬೆಂಕಿ ಹಚ್ಚುವುದು ಮುಂತಾದ ಹಿಂಸಾತ್ಮಕ ಪ್ರತಿಕ್ರಿಯೆಗಳು ಆರಂಭವಾದವು. ಲೂಟಿ ಪ್ರಕರಣಗಳು ನಡೆದವು. ಶಾಂತಿಯತ್ನ ಕಾಪಾಡಲೆಂದು ಪೋಲೀಸರು ಮಾಡಿದ ಗೋಲಿಬಾರಿನಲ್ಲಿ ಬೆಳಗಾವಿಯಲ್ಲಿ ಐದು, ನಿಪ್ಪಾಣಿಯಲ್ಲಿ ಇಬ್ಬರು ಅಸು ನೀಗಿದರು. ಗಡಿಭಾಗದಲ್ಲಿರುವ ಮರಾಠಿ ಮಾತನಾಡುವ ಜನ ಆ ಕ್ಷಣದವರೆಗೆ, ತಾವು ಮಹಾರಾಷ್ಟ್ರದಲ್ಲಿ ಸೇರ್ಪಡೆಯಾಗುತ್ತೇವೆಂದು ನಂಬಿದ್ದರು. ತಮ್ಮ ನಂಬಿಕೆ ಹುಸಿ ಹೋದಾಗ, ಈ ರೀತಿಯ ಹಿಂಸಾತ್ಮಕ ಪ್ರತಿಕ್ರಿಯೆಯನ್ನು ಅವರು ನೀಡಿದ್ದರು.

ಈ ಜನರ ಒಟ್ಟು ಅಸಮಾಧಾನ ಒಂದು ಚಳವಳಿಯಲ್ಲಿ ಒಡಮೂಡಿ ''ಮಹಾರಾಷ್ಟ್ರ ಏಕೀಕರಣ ಸಮಿತಿ'' (ಎಂ.ಇ.ಎಸ್.) ಎಂಬ ಒಂದು ರಾಜಕೀಯ ಪಕ್ಷದಲ್ಲಿ ರೂಪಾಂತರಗೊಳ್ಳುತ್ತಿತ್ತು. ಆರಂಭದಲ್ಲಿ ಒಂದು ಪ್ರತಿಭಟನೆಯಾಗಿ ಬಂದ ಚಳವಳಿ ಮುಂದೆ ರಾಜಕೀಯ ಪಕ್ಷವಾಗಿ ಬೆಳೆದು ಬೆಳಗಾವಿ, ಖಾನಾಪುರ, ನಿಪ್ಪಾಣಿ, ಕಾಗನೂರ, ಉತ್ತರ ಕನ್ನಡ, ಹಳಿಯಾಳ, ಬೀದರ, ಭಾಲ್ಕಿ - ಈ ಪ್ರದೇಶಗಳಲ್ಲಿ ವಾಸಿಸುತ್ತಿರುವ ಮಹಾರಾಷ್ಟ್ರ ಪರ ಮರಾಠಿಗರ ಧ್ವನಿಯಾಗಿ ಎಂ.ಇ.ಎಸ್. ಬೆಳೆದು ನಿಂತಿತು. ಅದರ ಮಹಾರಾಷ್ಟ್ರ ಪರ ನಿಲುವಿನಿಂದಾಗಿ, ಅದು ಕನ್ನಡಿಗರಿಗೆ ಮತ್ತು ಕರ್ನಾಟಕ ನಾಡು ನುಡಿ ಸಂಸ್ಕೃತಿಗೆ ವಿರೋಧಿಯಾಗಿ, ವೈರಿಯಾಗಿ ಕಂಡಿದ್ದರಲ್ಲಿ ಯಾವ ಅಚ್ಚರಿಯೂ ಇರಲಿಲ್ಲ. ಶತಶತಮಾನಗಳಿಂದ ಅಣ್ಣತಮ್ಮಂದಿರಾಗಿ, ಒಂದೇ ಸೂರಿನಡಿ ಬದುಕಿದ ಕನ್ನಡಿಗರು ಮತ್ತು ಮರಾಠಿಗರು ವಿನಾಕಾರಣವಾಗಿ ವೈರಿಗಳಾಗುವಂತಹ ಮತ್ತು ಪರಸ್ಪರ ದ್ವೇಷಿಸುವಂತಹ ವಾತಾವರಣ ಈ ಸಂಘಟನೆಯಿಂದ ಉಂಟಾಯಿತು.

೧೯೫೬ರಲ್ಲಿಯೇ ಎಂ.ಇ.ಎಸ್. ಬೆಳಗಾವಿ ಗಡಿಭಾಗದಲ್ಲಿ ಮತ್ತೆ ಅಸ್ತಿತ್ವಕ್ಕೆ ಬಂದಿತು. ಹಳ್ಳಿಗಾಡಿನ ಮುಗ್ಧ ಮರಾಠಿ ಜನರನ್ನು ಅದು ತನ್ನ ಏಕೈಕ ಧ್ಯೇಯೋದ್ದೇಶವಾದ 'ಮಹಾರಾಷ್ಟ್ರಕ್ಕೆ ಸೇರ್ಪಡೆ'ಯ ಸಿದ್ಧಾಂತದಿಂದ ಬಹು ಸುಲಭವಾಗಿ ತನ್ನೆಡೆಗೆ ಸೆಳೆದುಕೊಳ್ಳಲು ಶಕ್ತವಾಯಿತು- ಜನ ಮರುಳೋ ಜಾತ್ರೆ ಮರುಳೋ- ಎಂಬಂತೆ ಮರಾಠಿ ಜನರು ಈ ಸಂಘಟನೆಯತ್ತ ವಾಲಿದ್ದು ಸುಳ್ಳಲ್ಲ. ಮೊದಲ ಚುನಾವಣೆಗಳು ಬಂದಾಗ ಎಂ.ಇ.ಎಸ್. ಚುನಾವಣೆಯಲ್ಲಿ ಸ್ಪರ್ಧಿಸಲು ನಿರ್ಧರಿಸಿತು. ಅದಕ್ಕೆ ಕಾರಣವೂ ಇಲ್ಲದಿರಲಿಲ್ಲ. ಚುನಾವಣೆಯಲ್ಲಿ ಬಹುಮತವನ್ನು ಸ್ಥಾಪಿಸಿದರೆ, ಆ ಕಾರಣವಾಗಿಯೇ, ಮರಾಠಿ ಮಾತನಾಡುವ ಪ್ರದೇಶಗಳು ಮಹಾರಾಷ್ಟ್ರದಲ್ಲಿ ವಿಲೀನಗೊಳ್ಳಬಹುದೆಂಬ ಆಶೆ ಎಂ.ಇ.ಎಸ್.ಗೆ ಇತ್ತು. ಮೊದಲ ಸಾರ್ವತ್ರಿಕ ಚುನಾವಣೆಗಳಲ್ಲಿ ಎಂ.ಇ.ಎಸ್. ಬೆಳಗಾವಿ, ಖಾನಾಪುರ, ಉಪಗಾಂವ, ಬಾಗೇವಾಡಿ, ನಿಪ್ಪಾಣಿ (ಬೆಳಗಾವಿ ಜಿಲ್ಲೆಯಲ್ಲಿ) ಹಳಿಯಾಳ,

ಕಾರವಾರ (ಉತ್ತರ ಕನ್ನಡ ಜಿಲ್ಲೆಯಲ್ಲಿ), ಬೀದರ, ಭಾಲ್ಕಿ (ಬೀದರ ಜಿಲ್ಲೆಯಲ್ಲಿ) ಹಿಗೆ ಅಭ್ಯರ್ಥಿಗಳನ್ನು ನಿಲ್ಲಿಸಿತು. ಈ ಚುನಾವಣೆಯಲ್ಲಿ ಬೆಳಗಾವಿ, ಖಾನಾಪುರ, ನಿಪ್ಪಾಣಿ, ಉಳಗಾಂವ ಹಾಗೂ ಭಾಲ್ಕಿಗಳಲ್ಲಿ ಎಂ.ಇ.ಎಸ್. ಅಭ್ಯರ್ಥಿಗಳು ವಿಜಯಿಗಳಾಗಿ ರಾಜ್ಯದಲ್ಲಿ ಒಂದು ವಿಭಿನ್ನ ರಾಜಕೀಯ ಪಕ್ಷದ ಹುಟ್ಟಿಗೆ ಕಾರಣರಾದರು.

ಚುನಾವಣೆಗೆ ಸ್ಪರ್ಧಿಸುವಾಗ ಎಂ.ಇ.ಎಸ್. ಆರಂಭದಲ್ಲಿ ಸಾಮಾನ್ಯವಾಗಿ 'ಸಿಂಹ' ಚಿಹ್ನೆಯನ್ನು ಪಡೆದಿರುತ್ತಿತ್ತು. ಆದರೆ ಎಂ.ಇ.ಎಸ್ ರಿಜಿಸ್ಟರ್ಡ್ ರಾಜಕೀಯ ಪಕ್ಷವಾಗದಿರುವುದರಿಂದ ಅದರ ಚಿಹ್ನೆಯಲ್ಲಿ ಬದಲಾವಣೆ ಆಗುತ್ತಿರುತ್ತಿತ್ತು. ಒಂದೇ ಕಾಲದ ಚುನಾವಣೆಯಲ್ಲಿ ಒಂದು ಕ್ಷೇತ್ರದ ಅದರ ಅಭ್ಯರ್ಥಿ 'ತಕ್ಕಡಿ'ಯನ್ನು ಚಿಹ್ನೆಯಾಗಿ ಪಡೆದ ಉದಾಹರಣೆಯೂ ಇದೆ. ಆದರೆ ಸಾಮಾನ್ಯವಾಗಿ ಅಭ್ಯರ್ಥಿಗಳು ಸಿಂಹವನ್ನೇ ಚಿಹ್ನೆಯಾಗಿ ಪಡೆದಿದ್ದಾರೆ. ಮರಾಠಿ ಮನಸ್ಸಿನಲ್ಲಿ ಸಿಂಹ ಎಷ್ಟು ಪ್ರಭಾವ ಬೀರಿತ್ತೆಂದರೆ, ೧೯೭೭ರಲ್ಲಿ ನಡೆದ ಚುನಾವಣೆಯಲ್ಲಿ 'ಸಿಂಹ' ಚಿಹ್ನೆಯನ್ನು ಪಡೆದ ಪಕ್ಷೇತರ ಅನಾಮಧೇಯ ವ್ಯಕ್ತಿಯೊಬ್ಬ ಖಾನಾಪುರದಲ್ಲಿ ಗಮನಾರ್ಹ ಮತಗಳನ್ನು ಪಡೆದಿದ್ದ. ಆ ಕಾಲದಲ್ಲಿ ಎಂ.ಇ.ಎಸ್. 'ಸಿಂಹ' ತನ್ನ ಚಿಹ್ನೆಯಲ್ಲಿ ತಮ್ಮ ಪ್ರಚಾರ ಮಾಡಲು ಸಾಕಷ್ಟು ಹೆಣಗಾಡಬೇಕಾಗಿತ್ತು. ಗಡಿ ಭಾಗಗಳನ್ನು ಮಹಾರಾಷ್ಟ್ರದಲ್ಲಿ ವಿಲೀನಗೊಳಿಸಬೇಕೆಂಬ ಏಕೈಕ ಸಿದ್ಧಾಂತ ಎಂ.ಇ.ಎಸ್‌ನದ್ದು. ಅದೆಂದೂ ತನ್ನ ಮತದಾರರಿಗೆ ನಾಗರಿಕ ಮೂಲ ಸೌಲಭ್ಯಗಳನ್ನು ನೀಡುತ್ತೇನೆಂದು ಹೇಳಲಿಲ್ಲ. ಕುಡಿಯುವ ನೀರು, ರಸ್ತೆ ನವೀಕರಣ, ಶಾಲೆ ಆಸ್ಪತ್ರೆಗಳ ಆರಂಭ ಅಥವಾ ಯಾವುದೇ ಸೌಲಭ್ಯದ ಬಗ್ಗೆ ಅದೆಂದೂ ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ಚರ್ಚಿಸಲಿಲ್ಲ. ಅದರ ಪ್ರಣಾಳಿಕೆ ಏನಿದ್ದರೂ - One Point Programme ''ನೀವು ನಮ್ಮನ್ನು ಆರಿಸಿ; ನಾವು ನಿಮ್ಮನ್ನು ಮಹಾರಾಷ್ಟ್ರಕ್ಕೆ ಕರೆದುಕೊಂಡು ಹೋಗುತ್ತೇವೆ'' - ಇದು ಅದರ ಏಕೈಕ ಚುನಾವಣಾ ಕಾರ್ಯಕ್ರಮ.

ಕ್ಷೇತ್ರಗಳ ಸುಧಾರಣೆಯ ವಿಷಯ ಬಂದಾಗ ಈ ಪಕ್ಷ ಅದನ್ನು ಆಗಾಗ ವಿರೋಧಿಸಿದ್ದಿದೆ. ಹೈಕೋರ್ಟ್ ಪೀಠ ಸ್ಥಾಪಿಸಲು ಸಾಧ್ಯಾಸಾಧ್ಯತೆಗಳ ಬಗ್ಗೆ ವಿಚಾರಿಸಲು ನೇಮಿಸಲ್ಪಟ್ಟ ಜಸ್ವಂತಸಿಂಗ್ ಆಯೋಗ ಬೆಳಗಾವಿಗೆ ಬಂದಾಗ ಎಂ.ಇ.ಎಸ್. ಶಾಸಕರ ಒಂದು ನಿಯೋಗ ಜಸ್ವಂತಸಿಂಗರನ್ನು ಭೇಟಿಯಾಗಿ, ಬೆಂಚ್ ಬೆಳಗಾವಿಯಲ್ಲಿ ಸ್ಥಾಪಿಸಬಾರದೆಂದು ಮನವಿ ಮಾಡಿತು. ಅದಕ್ಕೆ ಅದು ಕೊಟ್ಟ ಕಾರಣವೂ ವಿಚಿತ್ರವಾಗಿತ್ತು. 'ಹೈಕೋರ್ಟ್ ಬೆಳಗಾವಿಯಲ್ಲಿ ಸ್ಥಾಪಿಸಲ್ಪಟ್ಟರೆ, ನ್ಯಾಯಧೀಶರುಗಳು, ಅವರ ಸಿಬ್ಬಂದಿಗಳು, ಹಾಗೇ ನ್ಯಾಯಾಲಯಕ್ಕೆ ಸಂಬಂಧಪಟ್ಟ ಅನೇಕ ವಿಭಾಗಗಳು ಬೆಳಗಾವಿಗೆ ಬರುತ್ತವೆ. ಈ ಸಿಬ್ಬಂದಿಗಳೆಲ್ಲ ಕನ್ನಡಿಗರಾಗಿರುವುದರಿಂದ ಬೆಳಗಾವಿಯ ವಾತಾವರಣ ಕೆಡುವ ಸಂಭವವಿರುವುದರಿಂದ ಹೈಕೋರ್ಟ್‌ನ ಪೀಠ ಸ್ಥಾಪನೆ ಇಲ್ಲಿ ಆವಶ್ಯಕವಾಗಿಲ್ಲ' ವೆನ್ನುವುದು ಎಂ.ಇ.ಎಸ್. ನಿಲುವಾಗಿತ್ತು. ಅವರ ಈ ವಾಗ್‌ವೈಖರಿಯನ್ನು ನೋಡಿ ನ್ಯಾಯಾಧೀಶ ಜಸ್ವಂತಸಿಂಗರೂ ಅಚ್ಚರಿಗೊಂಡಿದ್ದರು.

ಎಂ.ಇ.ಎಸ್.ದ ಈ ರಾಜಕೀಯ ನಿಲುವುಗಳಿಂದ ಅಭಿವೃದ್ಧಿಯಲ್ಲಿ ಬೆಳಗಾವಿ ಗಡಿ ಭಾಗ ಸಂಪೂರ್ಣವಾಗಿ ನಿರ್ಲಕ್ಷಿಸಲ್ಪಟ್ಟಿತು. ಸರ್ಕಾರವು ತಾನಾಗಿ ಮುಂದೆ ಬಂದು ಅಭಿವೃದ್ಧಿ ಯೋಜನೆಗಳನ್ನು ಆರಂಭಿಸಲಿಲ್ಲ. ಔದ್ಯೋಗಿಕವಾಗಿ ಮುಂದೆ ಬರಬೇಕಾಗಿದ್ದ ಬೆಳಗಾವಿ ರಾಜಕೀಯ ಕಾರಣಗಳಿಂದ ಹಿಂದೆ ಬಿದ್ದು ಆ ಯೋಜನೆಗಳೆಲ್ಲ ಹುಬ್ಬಳ್ಳಿ, ಧಾರವಾಡಕ್ಕೆ ಹೋದವು. ಎಂ.ಇ.ಎಸ್. ಶಾಸಕರು ಅಭಿವೃದ್ಧಿ ಪರವಾಗಿ ಮಾತನಾಡದೇ ಇರುವುದರಿಂದ ಸರ್ಕಾರವೂ ಈ ಭಾಗಗಳತ್ತ ಅಲಕ್ಷ್ಯ ತೋರಿಸಲಾರಂಭಿಸಿತು. ಬರಬರುತ್ತ ಎಂ.ಇ.ಎಸ್., ಬೆಳಗಾವಿ ಜಿಲ್ಲೆಯ ಬೆಳಗಾವಿ, ಖಾನಾಪುರ, ಉಚಗಾಂವ್, ಬಾಗೇವಾಡಿ ಮತ್ತು ನಿಪ್ಪಾಣಿ ಕ್ಷೇತ್ರಗಳನ್ನು ಮಾತ್ರ ತನ್ನ ಆಸಕ್ತಿಯ ಕೇಂದ್ರಗಳನ್ನಾಗಿ ಆರಿಸಿಕೊಂಡಿತು. ಕಾರವಾರ, ಬೀದರ ಮತ್ತು ಭಾಲ್ಕಿಯ ಮೇಲಿನ ಎಂ.ಇ.ಎಸ್. ಹಿಡಿತ ಕ್ರಮೇಣ ಸಡಿಲಗೊಂಡಿತು. ಬಾಗೇವಾಡಿ ಮತ್ತು ನಿಪ್ಪಾಣಿ ಮತಕ್ಷೇತ್ರಗಳು ಎಂ.ಇ.ಎಸ್. ಕೈಬಿಟ್ಟವು. ಚುನಾವಣೆಗಳಲ್ಲಿ ಒಂದೆಡೆ ಕೇವಲ ಒಬ್ಬ ಎಂ.ಇ.ಎಸ್. ಅಭ್ಯರ್ಥಿ ಇನ್ನೊಂದೆಡೆ ವಿವಿಧ ಪಕ್ಷಗಳ ಬೇರೆಬೇರೆ ಅಭ್ಯರ್ಥಿಗಳು ಸ್ಪರ್ಧಿಸಿದರೆ ಏನಾಗಬೇಕು? ಎಂ.ಇ.ಎಸ್. ಅಭ್ಯರ್ಥಿ ಸುಲಭವಾಗಿ ಆರಿಸಿ ಬರುತ್ತಿದ್ದ. ಏಕೈಕ ಕನ್ನಡ ಮಾತನಾಡುವ ಅಭ್ಯರ್ಥಿಯನ್ನು ಎಂ.ಇ.ಎಸ್. ವಿರುದ್ಧವಾಗಿ ನಿಲ್ಲಿಸಬೇಕೆಂಬ ಅನೇಕ ಪ್ರಯೋಗಗಳು ನಡೆದರೂ ಅದು ಅಷ್ಟು ಹೆಚ್ಚು ಯಶಸ್ವಿಯಾಗಲಿಲ್ಲ, ಇತ್ತೀಚಿನ ದಿನಗಳಲ್ಲಿ ಎಂ.ಇ.ಎಸ್. ಕೇವಲ ಬೆಳಗಾವಿ, ಉಚಗಾಂವ್ ಮತ್ತು ಖಾನಾಪುರ ಮತಕ್ಷೇತ್ರಗಳನ್ನು ಮಾತ್ರ ಗೆಲ್ಲುತ್ತಿತ್ತು.

ಎಂ.ಇ.ಎಸ್.ದಲ್ಲಿ ಆಗೀಗ ಪಕ್ಷಾಂತರಗಳೂ ನಡೆದ ಉದಾಹರಣೆಗಳಿವೆ. ಆಂತರಿಕ ಬಂಡಾಯಗಳೂ ನಡೆದಿವೆ. ಬ್ರಾಹ್ಮಣ ಮರಾಠಾ ನಾಯಕತ್ವದ ಜಗಳದ ವಿಚಾರದಲ್ಲಿ ಪಕ್ಷದಲ್ಲಿ ಬಿರುಕುಗಳೂ ಉಂಟಾಗಿವೆ. ಚುನಾವಣೆಯಲ್ಲಿ, ಬಂಡಾಯ ಎಂ.ಇ.ಇಸ್. ಅಭ್ಯರ್ಥಿಗಳೂ ಸ್ಪರ್ಧಿಸಿದ್ದಾರೆ. ಕೆಲವು ನಾಯಕರುಗಳು ಮತ್ತು ಕಾರ್ಯಕರ್ತರು ಪಕ್ಷ ಬಿಟ್ಟು ಬೇರೆ ಪಕ್ಷಗಳಿಗೂ ವಲಸೆ ಹೋಗಿದ್ದುಂಟು. ಬೆಳಗಾವಿ, ಖಾನಾಪುರ, ನಿಪ್ಪಾಣಿ, ಬೀದರ್, ಭಾಲ್ಕಿ ಸಹಿತವಾಗಿ ಸಂಯುಕ್ತ ಮಹಾರಾಷ್ಟ್ರ ಆಗಲೇ ಬೇಕು, ಇದು ಎಂ.ಇ.ಎಸ್.ದ ಘೋಷಣೆ ಯಾವುದೇ ಸಮಾರಂಭದಲ್ಲಿ ಈ ಘೋಷಣೆ ಮೊಳಗಲೇ ಬೇಕು; 'ಝಾಲಾಚ್ ಪಾಹಿಜೆ' - ಎಂದು ಆಕಾಶ ಹರಿದು

ಹೋಗುವಂತೆ ಘೋಷಿಸಲಾಗುತ್ತಿತ್ತು. ಹೀಗಾಗಿ ಈ ಜನರನ್ನು ವ್ಯಂಗ್ಯವಾಗಿ 'ರಭಾತಾ'ಗಳೆಂದೂ ಕರೆಯಲಾಗುತ್ತದೆ. ಕೇಸರಿ ಪಟಗಾ (ರುಮಾಲು) ಇದು 'ಝೂತಾ'ಗಳ ಗೌರವದ ಸಂಕೇತ. ಅವರ ಸಮಾರಂಭಗಳಲ್ಲಿ ಕೇಸರಿ ಪಟಗಾ ಇಲ್ಲದೆ ನಾಯಕರುಗಳು ವೇದಿಕೆ ಹತ್ತುವಂತಿಲ್ಲ. ಎಂ.ಇ.ಎಸ್. ಮೇಯರ್ ಸ್ಥಾನದಲ್ಲಿದ್ದಾಗಲೂ ಈ ಪದ್ಧತಿಯನ್ನು ಪಾಲಿಸಿದೆ.

ಬೆಳಗಾವಿ ಕಾರ್ಪೋರೇಶನ್‌ನಲ್ಲಿ, ಎ.ಪಿ.ಎಂ.ಸಿ.ಯಲ್ಲಿ, ತಾಲ್ಲೂಕು ಪಂಚಾಯತಿಯಲ್ಲೂ ಎಂ.ಇ.ಎಸ್. ಬಹುಮತವನ್ನು ಹೊಂದಿತ್ತು. ಜಿಲ್ಲಾ ಪಂಚಾಯತಿಯಲ್ಲಿಯೂ ಪಕ್ಷದ ಹತ್ತು ಜನ ಅಭ್ಯರ್ಥಿಗಳು ಗೆದ್ದಿದ್ದಾರೆ. ಕೆಲವು ಸಲ ಮರಾಠಿ ಅಭ್ಯರ್ಥಿಗಳಲ್ಲಿಯೇ ಸ್ಪರ್ಧೆ ಏರ್ಪಟ್ಟಾಗ ಎಂ.ಇ.ಎಸ್. ಯಾರಿಗೂ ತನ್ನ ಬೆಂಬಲವನ್ನು ವ್ಯಕ್ತಪಡಿಸದೇ, ಗೆದ್ದ ಅಭ್ಯರ್ಥಿಯನ್ನು 'ಎಂ.ಇ.ಎಸ್.' ಎಂದು ಸ್ವೀಕರಿಸುತ್ತಿತ್ತು. ಕಾರ್ಪೋರೇಶನ್ನಿನಲ್ಲಿ ತಾನು ಮರಾಠಿ ಮಾತನಾಡುವ ಕಾರ್ಪೋರೇಟರುಗಳ ಗುಂಪು ಎಂದೂ ಹಲವಾರು ಸಲ ಅದು ಹೇಳಿಕೊಂಡಿದೆ. ಈ ಗುಂಪಿನಲ್ಲಿ, ಎಂ.ಇ.ಎಸ್. ವಿರುದ್ಧವೇ ಹೋರಾಡಿ ಗೆದ್ದ ಅಭ್ಯರ್ಥಿಗಳೂ ಸಹಾ ನಿಷ್ಠರಾಗಿರುತ್ತಿದ್ದರು. ಇತ್ತೀಚೆಗೆ ನಡೆದ ಎಲ್ಲ ಚುನಾವಣೆಗಳಲ್ಲಿ, ಎಂ.ಇ.ಎಸ್ ದಾರುಣವಾಗಿ ಸೋಲನ್ನು ಕಂಡಿತು. ಅದು ಬೆಳಗಾವಿ, ಖಾನಾಪೂರ, ಉಚಗಾಂವ್ ಮತಕ್ಷೇತ್ರಗಳನ್ನು ಕಳೆದುಕೊಂಡಿತು. ಎಂ.ಇ.ಎಸ್. ಕೈಯಲ್ಲಿದ್ದ ಎಪಿಎಂಸಿ ಕೂಡ ಕೈಬಿಟ್ಟಿತು. ಕಾರ್ಪೋರೇಶನ್ನಿನಲ್ಲಿ ಮರಾಠಿ ಮಾತನಾಡುವ ಕಾರ್ಪೋರೇಟರುಗಳು ಕನ್ನಡ ಮತ್ತು ಉರ್ದು ಕಾರ್ಪೋರೇಟರುಗಳ ಜೊತೆ 'ರಾಜಿ' ಮಾಡಿಕೊಂಡು ಅಧಿಕಾರವನ್ನು ಹಂಚಿಕೊಂಡರು. ಈ ರೀತಿಯ ಸೋಲು ಎಂ.ಇ.ಎಸ್. ಇತಿಹಾಸದಲ್ಲಿಯೇ ಎಂದೂ ಸಂಭವಿಸಿರಲಿಲ್ಲ.

ಈ ಹಿಂದೆ ಎಂ.ಇ.ಎಸ್. ಕನ್ನಡ ಭಾಷೆಯ ವಿರುದ್ಧ ಮತ್ತು ಮರಾಠಿ ಮಾತನಾಡುವ ಪ್ರದೇಶಗಳು ಮಹಾರಾಷ್ಟ್ರಕ್ಕೆ ಸೇರಿಸಲ್ಪಡಬೇಕೆಂದು ಬೇಡಿಕೆಯನ್ನು ಮುಂದಿಟ್ಟುಕೊಂಡು ಅನೇಕ ಚಳವಳಿಗಳನ್ನು ಆಯೋಜಿಸಿತ್ತು. ಇದರಲ್ಲಿ ಬಹಳಷ್ಟು ಚಳವಳಿಗಳು ಹಿಂಸಾತ್ಮಕ ರೂಪಕ್ಕೆ ತಿರುಗಿದ್ದವು. ಅನೇಕ ಹೆಣಗಳು ಬಿದ್ದವು. ಪೋಲೀಸರ ಗುಂಡಿಗೆ ಬಲಿಯಾದ ಈ ಜನರ ಭಾವಚಿತ್ರಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿ ಮುಗ್ಧ ಜನರ ಭಾವನೆಗಳನ್ನು ಕೆರಳಿಸುವ ಪ್ರಯತ್ನಗಳು ಆಗೀಗ ನಡೆದಿವೆ. ಈ ಚಳವಳಿಯಲ್ಲಿ ಮರಾಠಿ ಭಾಷೆಯ ಪತ್ರಿಕೆಗಳು ಪ್ರಮುಖ ಪಾತ್ರವನ್ನು ವಹಿಸಿವೆ. ಬೆಳಗಾವಿಯಿಂದ ಪ್ರಕಟವಾಗುವ 'ತರುಣ ಭಾರತ' 'ರಣ ಝುಂಝಾರ್' 'ಬೆಳಗಾಂವ ವಾರ್ತಾ' 'ಸ್ವತಂತ್ರ ಪ್ರಗತಿ' ಇವು ದಿನಪತ್ರಿಕೆಗಳು. ಮಹಾರಾಷ್ಟ್ರದ ಕೊಲ್ಲಾಪುರದಿಂದ ಪ್ರಕಟವಾಗುವ 'ಪುಢಾರಿ', 'ಸಕಾಳ' ಪತ್ರಿಕೆಗಳು ಎಂ.ಇ.ಎಸ್. ನಾಯಕತ್ವವನ್ನು ಕಟುವಾಗಿ ಟೀಕಿಸಿದ ಉದಾಹರಣೆಗಳೂ ಇವೆ.

ಈ ಸಲದ ಎಂ.ಇ.ಎಸ್. ಸೋಲು 'ಶಿವಸೇನೆ' ಬೆಳಗಾವಿಗೆ ಬರಲು ಆಮಂತ್ರಣ ನೀಡಿದಂತಾಯಿತು. ಇಲ್ಲಿಯವರೆಗೆ ಬೆಳಗಾವಿಗೆ ಕಾಲು ಹಾಕಿರದಿದ್ದ 'ಶಿವಸೇನೆ' ೨೦೦೧ ರಿಂದ ಬೆಳಗಾವಿಯಲ್ಲಿ ತನ್ನ ಶಾಖೆಗಳನ್ನು ಆರಂಭಿಸಿದೆ. ಎಂ.ಇ.ಎಸ್.ದ ಸೋಲು ಮತ್ತು ಅದರ ನಿಷ್ಕ್ರಿಯತೆಯಿಂದ ತಾವು ಬೆಳಗಾವಿಯಲ್ಲಿ ಶಿವಸೇನೆಯ ಶಾಖೆಯನ್ನು ಅನಿವಾರ್ಯವಾಗಿ ಆರಂಭಿಸಬೇಕಾಗಿದೆಯೆಂದು ಶಿವಸೇನೆ ಹೇಳಿಕೊಂಡಿದೆ. 'ಎಂ.ಇ.ಎಸ್. ಬಿಟ್ಟ ಕೆಲಸವನ್ನು ತಾವು ಆರಂಭಿಸುತ್ತಿದ್ದೇವೆಂದು' ಅದು ಪತ್ರಿಕಾ ಹೇಳಿಕೆ ನೀಡಿದೆ. ಅಲ್ಪ ಅವಧಿಯಲ್ಲಿಯೇ 'ಶಿವಸೇನೆ' ಯುವಕರನ್ನು, ತನ್ನೆಡೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯಾಗಿದೆ. ಇತ್ತೀಚೆಗೆ ನಡೆದ ಕಾರ್ಪೋರೇಶನ್ ಚುನಾವಣೆಗೆ ಸ್ಪರ್ಧಿಸಿ, ೪ ಜನ ಕಾರ್ಪೋರೇಟರ್‌ಗಳನ್ನು ಹೊಂದಿದೆ.

ಮುಂಬರುವ ದಿನಗಳಲ್ಲಿ ಶಿವಸೇನೆ ಮತ್ತು ಎಂ.ಇ.ಎಸ್. ನಡುವೆಯೇ ಸ್ಪರ್ಧೆ ಏರ್ಪಡುವ ಸಂಭವವೂ ಇದೆ. ತಜ್ಞ ಮತದಾರರನ್ನು ತನ್ನಲ್ಲಿಯೇ ಉಳಿಸಿಕೊಳ್ಳಲು ಎಂ.ಇ.ಎಸ್. ಹೆಣಗುತ್ತಿದೆ. ಅವರನ್ನು ಹೇಗಾದರೂ ಮಾಡಿ ತನ್ನೆಡೆಗೆ ಸೆಳೆದುಕೊಳ್ಳಲು ಶಿವಸೇನೆ ಪ್ರಯತ್ನಿಸುವುದು ನಿಶ್ಚಿತ. ಇವರಿಬ್ಬರಲ್ಲಿ ಯಾರು ಗೆಲ್ಲುತ್ತಾರೋ, ಮುಂಬರುವ ದಿನಗಳೇ ಹೇಳಬಲ್ಲವು.



# ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ

ಮೋಹನ್ ವೆರ್ಣೇಕರ್

ಆಧುನಿಕ ಮನು, ಸಂವಿಧಾನ ಸೃಷ್ಟಿಕರ್ತ ಡಾ। ಬಿ. ಆರ್. ಅಂಬೇಡ್ಕರ್‌ರವರು ೧೯೪೨ ನೆಯ ಇಸವಿ ಏಪ್ರಿಲ್ ತಿಂಗಳಲ್ಲಿ ಅಖಿಲ ಭಾರತ ಪರಿಶಿಷ್ಟ ಜಾತಿಗಳ ಮಹಾಸಂಸ್ಥೆಯನ್ನು ನಾಗಪುರದಲ್ಲಿ ಸ್ಥಾಪನೆ ಮಾಡಿದರು (All India Scheduled Castes Federation).

ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ಇವುಗಳನ್ನು ನಿರ್ಣಾಯಕವಾಗಿ ಘೋಷಿಸುವುದು, ಆಚರಣೆಗೆ ತರಲು ಶ್ರಮಿಸುವುದು, ಮನುಷ್ಯನಿಂದ ಮನುಷ್ಯನ, ವರ್ಗದಿಂದ ವರ್ಗದ ದಬ್ಬಾಳಿಕೆಯನ್ನು ಶೋಷಣೆಯನ್ನು ವಿಮೋಚನೆಗೊಳಿಸುವುದೇ ಈ ಸಂಘಟನೆಯ ಗುರಿಯಾಗಿತ್ತು.

ಅಂಬೇಡ್ಕರ್ ಅನುಯಾಯಿಗಳಾಗಿದ್ದ ಬಿ. ಕೆ. ಗಾಯಕವಾಡ್, ಬಿ. ಡಿ. ಖೋಬ್ರಾಗಡೆ, ಎಸ್. ಎಸ್. ರೀಗೆ ಮುಂತಾದವರು ಈ ಸಂಘಟನೆಯ ಸ್ಥಾಪನೆ ಹಾಗೂ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರವಹಿಸಿದ್ದರು. ಖೋಬ್ರಾಗಡೆಯವರು ಅಖಿಲ ಭಾರತ ಪರಿಶಿಷ್ಟ ಜಾತಿಗಳ ಫೆಡರೇಷನ್‌ನ ಪ್ರಧಾನ ಕಾರ್ಯದರ್ಶಿಗಳಾಗಿದ್ದರು ಹಾಗೂ ನಾಗಪುರ ಪ್ರದೇಶದ ಪರಿಶಿಷ್ಟ ಜಾತಿಗಳ ಫೆಡರೇಷನ್ ಅಧ್ಯಕ್ಷರಾಗಿದ್ದರು.

ಪ್ರಮುಖವಾಗಿ ಮಹಾರಾಷ್ಟ್ರದ ಮಹಾರ್ ಜನಾಂಗ ಹಾಗೂ ಇತರ ಪರಿಶಿಷ್ಟ ವರ್ಗಗಳ ಸಂಘಟನೆಯೇ ಇದರ ಮುಖ್ಯ ಗುರಿ ಆಗಿತ್ತು. ಈ ಸಂಘಟನೆಗೆ ಅಂಬೇಡ್ಕರ್‌ರವರೇ ಜುಲೈ ೨೦, ೧೯೨೪ರಲ್ಲಿ ಸ್ಥಾಪಿಸಿದ್ದ 'ಹಿತಕಾರಿಣಿ ಸಭಾ' ಅಥವಾ ದಲಿತ ವರ್ಗಗಳ ಯೋಗಕ್ಷೇಮ ಒಕ್ಕೂಟವೇ ಮೂಲವೆಂದೂ ಹೇಳಬಹುದು.

ದಲಿತ ವರ್ಗದಲ್ಲಿ ಶಿಕ್ಷಣ ಪ್ರಸಾರ, ಅವರ ಆರ್ಥಿಕ ಸ್ಥಿತಿಗತಿ ಉತ್ತಮಪಡಿಸುವುದು, ಸರ್ಕಾರಕ್ಕೆ ದಲಿತವರ್ಗದ ಸಮಸ್ಯೆಗಳನ್ನು ಪ್ರತಿನಿಧಿಸುವುದು ಇದೇ ಅಂಬೇಡ್ಕರ್ ಸ್ಥಾಪಿಸಿದ್ದ ಹಿತಕಾರಿಣಿ ಸಭಾದ ಮೂಲ ಉದ್ದೇಶಗಳಾಗಿದ್ದವು. ಇವು ಇನ್ನೂ ವಿಸ್ತೃತ ರೂಪದಲ್ಲಿ ಫೆಡರೇಷನ್ ಧ್ಯೇಯೋದ್ದೇಶಗಳಲ್ಲಿ ಪ್ರತಿಪಾದಿತವಾಗಿವೆ ಎಂದು ಹೇಳಬಹುದು.

ಮಹಾರಾಷ್ಟ್ರ ರಾಜ್ಯದಲ್ಲಿ ಅದರಲ್ಲೂ ಪ್ರಮುಖವಾಗಿ ನಾಗಪುರ ಡಿವಿಜನ್‌ನಲ್ಲಿ ಈ ಫೆಡರೇಷನ್ ಪ್ರಭಾವ ಗಣನೀಯವಾಗಿತ್ತು. ಹರ್‍ಯಾಣ, ಉತ್ತರ ಪ್ರದೇಶ, ಆಂಧ್ರ ಪ್ರದೇಶ ಹಾಗೂ ಕರ್ನಾಟಕದ ಬೆಳಗಾವಿ, ಬೀದರ್, ಗುಲಬರ್ಗಾ, ವಿಜಾಪುರ ಜಿಲ್ಲೆಗಳಲ್ಲಿ ಕೂಡಾ ಇದು ತಕ್ಕ ಮಟ್ಟಿಗೆ ಪ್ರಭಾವ ಗಳಿಸಿಕೊಂಡಿತ್ತು. ಮುಖ್ಯವಾಗಿ ಪರಿಶಿಷ್ಟವರ್ಗಗಳ ಹಿತಚಿಂತನೆಯನ್ನೇ ಇದು ಇರಿಸಿಕೊಂಡಿದ್ದರೂ, ಈ ಪಕ್ಷದ ನಾಯಕರು ಸಂಘಟನೆಗೆ ಸ್ವಲ್ಪ ವಿಶಾಲವಾದ ಧ್ಯೇಯೋದ್ದೇಶಗಳನ್ನು ನೀಡಿ ಎಲ್ಲ ವರ್ಗಗಳ ಬಡವರನ್ನೂ ಸಂಘಟನೆಯತ್ತ ಆಕರ್ಷಿಸಲು ಪ್ರಯತ್ನಿಸಿದರು. ೧೯೪೬ರ ಚುನಾವಣೆಗಳಲ್ಲಿ ಈ ಸಂಘಟನೆಗೆ ಅಂತಹ ಯಶಸ್ಸು ಸಿಗಲಿಲ್ಲ. ೧೯೫೨ರ ಚುನಾವಣೆಗಳಲ್ಲಿ ಅಖಿಲ ಭಾರತ ಪರಿಶಿಷ್ಟ ವರ್ಗಗಳ ಫೆಡರೇಷನ್ ಭಾಗವಹಿಸಿತು. ಮಹಾರಾಷ್ಟ್ರದಲ್ಲಿ ಶೇಕಡಾ ೬, ಹರ್‍ಯಾಣದಲ್ಲಿ ೫.೩, ಆಂಧ್ರ ಪ್ರದೇಶದಲ್ಲಿ ೨.೯, ಉತ್ತರ ಪ್ರದೇಶದಲ್ಲಿ ೧.೫, ಕರ್ನಾಟಕದಲ್ಲಿ ೧.೦

ಪ್ರಮಾಣದಲ್ಲಿ ಮತಗಳನ್ನು ಪಡೆಯಿತು. ಆದರೂ ಲೋಕಸಭೆಯಲ್ಲಿ ಇದು ಗಳಿಸಿದ ಸ್ಥಾನ ಕೇವಲ ೨ ಕ್ಕೆ ಸೀಮಿತವಾಯಿತು. ಕಾಂಗ್ರೆಸ್ ಪಕ್ಷದ ಯಶಸ್ಸು ಎಸ್.ಸಿ.ಎಫ್. ಗೆ ಮುಳುವಾಯಿತು. ಅದೂ ಅಲ್ಲದೆ ಕಾಂಗ್ರೆಸ್‌ನ ಪ್ರಬಲ ಸಂಘಟನೆಯ ಕೆಳಗೆ ಎಸ್.ಸಿ.ಎಫ್. ಹೋರಾಟ ಮಾಡಬೇಕಾಗಿತ್ತು.

೧೯೫೪ರ ಏಪ್ರಿಲ್ ತಿಂಗಳಲ್ಲಿ ಭಂಡಾರ ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿದ್ದ ಅಂಬೇಡ್ಕರ್ ಕಾಂಗ್ರೆಸ್ ಅಭ್ಯರ್ಥಿಯಿಂದ ಸೋಲಿಸಲ್ಪಟ್ಟರು. ಆನಂತರ ಅವರು ಎಸ್.ಸಿ.ಎಫ್.ನ್ನು ವಿಶಾಲ ತಳಹದಿಯ ಮೇಲೆ ಒಂದು ರಾಜಕೀಯ ಪಕ್ಷವನ್ನಾಗಿ ಪರಿವರ್ತಿಸಲು ಉದ್ದೇಶಿಸಿದರು. ಅದೇ ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ. ಇದನ್ನು ಒಂದು ಆದರ್ಶವಾದಿ ಹಿನ್ನೆಲೆಯಲ್ಲಿ ಕಟ್ಟಲು ಅವರು ಯೋಚಿಸಿದ್ದರು. ಇದಕ್ಕಾಗಿ ಒಂದು ತರಬೇತಿ ಶಾಲೆಯನ್ನು ಜುಲೈ ೧, ೧೯೫೬ರಲ್ಲಿ ಮುಂಬಯಿನಲ್ಲಿ ಪ್ರಾರಂಭಿಸಿದರು. ಎಸ್. ಎಸ್. ರೇಗೆ ಅವರು ಇದರ ರಿಜಿಸ್ಟ್ರಾರ್ ಆಗಿದ್ದರು. ರಾಜಕೀಯ ಪ್ರವೇಶ ಮಾಡುವವರಿಗೆ ಒಂದು ಉತ್ತಮ ತರಬೇತಿ ಅಗತ್ಯ ಎಂಬುದು ಅವರ ಉದಾತ್ತವಾದ ಚಿಂತನೆಗಳಲ್ಲಿ ಒಂದಾಗಿತ್ತು. ಈ ಶಾಲೆಗಾಗಿ ಒಬ್ಬ ಸೂಕ್ತವಾದ ಪ್ರಾಚಾರ್ಯರನ್ನು ಅಂಬೇಡ್ಕರ್ ತಲಾಷ್ ಮಾಡುತ್ತಿದ್ದರು. ಈ ಶಾಲೆ ೧೯೫೭ ಮಾರ್ಚ್‌ವರೆಗೆ ನಡೆದು ಆನಂತರ ಬರಖಾಸ್ತಾಯಿತು ಎಂದು ತೋರುತ್ತದೆ. ೧೯೫೬ ಅಕ್ಟೋಬರ್ ೧೪ ರಂದು ಅಂಬೇಡ್ಕರ್ ತಮ್ಮ ಲಕ್ಷಾಂತರ ಅನುಯಾಯಿಗಳೊಡನೆ ಬೌದ್ಧ ದೀಕ್ಷೆ ಪಡೆದರು. ೧೯೫೬ ಅಕ್ಟೋಬರ್ ೧೫ ರಂದು ಅಖಿಲ ಭಾರತ ಷೆಡ್ಯೂಲ್ಡ್ ಕ್ಯಾಸ್ಟ್ ಫೆಡರೇಷನ್‌ನ್ನು ವಿಸರ್ಜಿಸಿ ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ ಪಕ್ಷವನ್ನು ಸ್ಥಾಪಿಸಿದರು. ಪಕ್ಷವನ್ನು ಕಟ್ಟುವ ಕೆಲಸದಲ್ಲಿ ಇದ್ದಾಗಲೇ ಅಂಬೇಡ್ಕರ್ ೧೯೫೬ ಡಿಸೆಂಬರ್ ೬ ರಂದು ಮಹಾ ಪರಿನಿರ್ವಾಣವನ್ನು ಹೊಂದಿದರು.

೧೯೫೭ರ ಚುನಾವಣೆಗಳಲ್ಲಿ ಎಸ್. ಸಿ.ಎಫ್. ಹೆಸರಿನಲ್ಲೇ ಚುನಾವಣೆಗಳನ್ನು ಎದುರಿಸಲಾಯಿತು. ಮಹಾರಾಷ್ಟ್ರದಲ್ಲಿ ತಾನು ಸ್ಪರ್ಧಿಸಿದ್ದ ೯ ಸ್ಥಾನಗಳ ಪೈಕಿ ೫ ನ್ನು, ಮೈಸೂರು ರಾಜ್ಯದಲ್ಲಿ ಸ್ಪರ್ಧಿಸಿದ್ದ ೧ ಸ್ಥಾನದಲ್ಲೂ ಪಕ್ಷ ಜಯಶಾಲಿ ಆಯಿತು.

**ಲೋಕಸಭಾ ಚುನಾವಣೆಗಳಲ್ಲಿ ಎಸ್.ಸಿ.ಎಫ್. ಸಾಧನೆ (ಪಡೆದ ಮತಗಳ ಪ್ರಮಾಣ)**

| | ೧೯೫೨ | ೧೯೫೭ |
|---|---|---|
| ಉತ್ತರ ಪ್ರದೇಶ | ೧.೫ | ೩.೭ |
| | ೯(೦) | - |
| ಆಂಧ್ರಪ್ರದೇಶ | ೨.೯ | ೧.೦ |
| | ೬(೧) | ೧(೦) |
| ಹರ್ಯಾಣ | ೫.೩ | ೧.೧ |
| | - | ೨(೦) |
| ಮಹಾರಾಷ್ಟ್ರ | ೬.೦ | ೮.೯ |
| | ೬(೧) | ೯(೫) |
| ಮೈಸೂರು | - | ೧(೧) |

(ಸ್ಪರ್ಧಿಸಿದ್ದ ಸ್ಥಾನಗಳನ್ನೂ ಅದರ ಮುಂದೆ ಆವರಣದಲ್ಲಿ ಗೆದ್ದ ಸ್ಥಾನಗಳನ್ನೂ ನೀಡಿದೆ).

೧೯೬೨ ರಿಂದ ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ ಹೆಸರಿನಲ್ಲಿ ಭಾರೀ ಪ್ರಮಾಣದಲ್ಲಿ ಚುನಾವಣೆಗೆ ಸ್ಪರ್ಧಿಸಲಾಯಿತು. ಹೊಸದಾಗಿ ಚುನಾವಣಾ ಪ್ರಣಾಳಿಕೆಯನ್ನು ಹೊರಡಿಸಿ ಪಕ್ಷದ ಧ್ಯೇಯ ಧೋರಣೆ ಹಾಗೂ ಭರವಸೆಗಳನ್ನು ಸ್ಪಷ್ಟಪಡಿಸಲಾಯಿತು. ೧೯೬೨, ೧೯೬೭ರ ಲೋಕಸಭೆ ಚತುನವಾಣೆಗಳಲ್ಲಿ ಆರ್. ಪಿ. ಐ. ಸಾಧನೆಯನ್ನು ಈ ಕೆಳಗಿನಂತೆ ನೀಡಲಾಗಿದೆ.

| | ೧೯೬೨ | ೧೯೬೭ |
|---|---|---|
| ಹರ್ಯಾಣ | ೪(೦) | ೨(೦) |
| ಉತ್ತರ ಪ್ರದೇಶ | ೨೨(೩) | ೨೪(೧) |

| | | |
|---|---|---|
| ಆಂಧ್ರಪ್ರದೇಶ | ೩(೦) | ೨(೦) |
| ಗುಜರಾತ್ | ೧(೦) | ೨(೦) |
| ಕೇರಳ | - | ೧(೦) |
| ಮಧ್ಯ ಪ್ರದೇಶ | ೭(೦) | ೭(೦) |
| ಮದ್ರಾಸ್ | ೨(೦) | ೨(೦) |
| ಮಹಾರಾಷ್ಟ್ರ | ೨೦(೦) | ೧೭(೦) |
| ಮೈಸೂರು | ೪(೦) | ೩(೦) |
| ಪಶ್ಚಿಮ ಬಂಗಾಳ | - | ೧(೦) |

ಹೀಗಾಗಿ ೧೯೬೨ ರಲ್ಲಿ ಮೂರು ಹಾಗೂ ೧೯೬೭ರಲ್ಲಿ ಕೇವಲ ಒಂದು ಸ್ಥಾನಗಳಿಗೆ ಮಾತ್ರ ಆರ್.ಪಿ.ಐ. ತೃಪ್ತಿಪಟ್ಟುಕೊಳ್ಳ ಬೇಕಾಯಿತು. ಮುಂದೆ ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ ಸಿದ್ಧಾಂತದ ಆಧಾರದ ಮೇಲೆ ಎರಡಾಗಿ ಒಡೆಯಿತು. ಒಂದು ಗುಂಪು ಸಂಯುಕ್ತ ಮಹಾರಾಷ್ಟ್ರ ಸಮಿತಿಗೆ ಸಹಕಾರ ನೀಡಿತು ಹಾಗೂ ಎಡಪಕ್ಷಗಳತ್ತ ಒಲವನ್ನು ಹೊಂದಿತ್ತು. ಇನ್ನೊಂದು ಗುಂಪು ಅಂಬೇಡ್ಕರ್‌ರವರ ಒಲವಿನಂತೆ ಹಾಗೂ ಅವರು ಸಹಕರಿಸುತ್ತಿದ್ದಂತೆ ಪ್ರಜಾ ಸೋಷಲಿಸ್ಟ್ ಪಕ್ಷದ ಸಹಕಾರದಲ್ಲಿ ಮುಂದುವರಿಯಿತು. ಆರ್.ಪಿ.ಐ. ಖೋಬ್ರಾಗಡೆ ಹಾಗೂ ಆರ್.ಪಿ.ಐ. ಗವಾಯ್ ಇವೇ ಆ ಎರಡು ಘಟಕಗಳು.

## ಚುನಾವಣಾ ಪ್ರಣಾಳಿಕೆಯ ಮುಖ್ಯಾಂಶಗಳು

ರಿಪಬ್ಲಿಕನ್ ಪಕ್ಷವು ಒಂದು ಅಖಿಲ ಭಾರತ ಮಟ್ಟದ ಪಕ್ಷವಾಗಿದ್ದು, ಮಹಾನ್ ರಾಜಕೀಯ ಚಿಂತಕ, ಪ್ರಖ್ಯಾತ ಸಾಮಾಜಿಕ ಕ್ರಾಂತಿಕಾರಿ, ಸಂವಿಧಾನ ತಜ್ಞ ದಿವಂಗತ ಬಾಬಾ ಸಾಹೇಬ್ ಅಂಬೇಡ್ಕರ್‌ರವರಿಂದ ಸ್ಥಾಪಿಸಲ್ಪಟ್ಟ ಪಕ್ಷವಾಯಿತು. ಸ್ವಾತಂತ್ರ್ಯ ಸಮಾನತೆ ಭ್ರಾತೃತ್ವಗಳೇ ಈ ಪಕ್ಷದ ಉನ್ನತ ಧ್ಯೇಯಗಳು. ವ್ಯಕ್ತಿ ಹಾಗೂ ಸಮಾಜದ ಒಳಿತನ್ನು ಸಾಧಿಸುವ ಪ್ರಜಾಸತ್ತಾತ್ಮಕ ಸರ್ಕಾರ ಹಾಗೂ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಪಕ್ಷ ನಂಬಿಕೆ ಇರಿಸಿದೆ. ಜಾತ್ಯತೀತ ಸ್ವರೂಪವನ್ನು ಪಕ್ಷ ಎತ್ತಿ ಹಿಡಿಯುತ್ತದೆ.

## ಪಕ್ಷದ ತತ್ವಗಳು

ಪ್ರತಿಯೊಬ್ಬ ಭಾರತೀಯ ವ್ಯಕ್ತಿ ತನ್ನ ಸರ್ವತೋಮುಖ ಅಭಿವೃದ್ಧಿಗೆ ತನ್ನದೇ ಆದ ಮಾರ್ಗವನ್ನು ಸ್ವತಂತ್ರವಾಗಿ ಅನುಸರಿಸಲು ಹಕ್ಕುದಾರನಾಗಿರುತ್ತಾನೆ. ವ್ಯಕ್ತಿಯ ಅಭಿವೃದ್ಧಿಯೇ ಅಂತಿಮ ಗುರಿ, ಅದಕ್ಕೆ ರಾಜ್ಯ ಒಂದು ಸಾಧನ. ಪ್ರತಿಯೊಬ್ಬ ಭಾರತೀಯನೂ ಕಾನೂನಿನ ಮುಂದೆ ಸರಿಸಮಾನ. ಸರಿಸಮಾನತೆಗೆ ಅರ್ಹ. ಎಲ್ಲಿ ಈ ಸರಿಸಮಾನತೆ ಇಲ್ಲವೋ ಅಲ್ಲಿ ಪಕ್ಷ ಅದನ್ನು ಬೆಳೆಸುತ್ತದೆ. ಸರಿಸಮಾನತೆ ಎಲ್ಲಿ ನಿರಾಕರಿಸಲ್ಪಟ್ಟಿದೆಯೋ ಅಲ್ಲಿ ಅದನ್ನು ಎತ್ತಿ ಹಿಡಿಯುತ್ತದೆ. ಸ್ವಾತಂತ್ರ್ಯ, ಸಮಾನತೆ ಹಾಗೂ ಭ್ರಾತೃತ್ವ ಭಾವನೆಗಳನ್ನು ಉಳಿಸಿ ಬೆಳೆಸಿಕೊಂಡು ಬರಲು ಒತ್ತಾಯಿಸುತ್ತದೆ. ಮನುಷ್ಯನಿಂದ ಮನುಷ್ಯನ, ವರ್ಗದಿಂದ ವರ್ಗದ,ರಾಷ್ಟ್ರದಿಂದ ರಾಷ್ಟ್ರದ ಶೋಷಣೆಯ ವಿಮೋಚನೆಗೆ ಶ್ರಮಿಸುತ್ತದೆ.

ಸಮಾಜದ ಪ್ರತಿಯೊಬ್ಬ ವ್ಯಕ್ತಿಗೂ ಸಮಾನ ಅವಕಾಶಗಳನ್ನು ಪಕ್ಷ ಎತ್ತಿ ಹಿಡಿಯುತ್ತದೆ. ಆದರೆ ಇದುವರೆಗೆ ಅವಕಾಶ ವಂಚಿತರಾಗಿದ್ದ, ಸಮಾನ ಅವಕಾಶ ಹೊಂದದೇ ಇದ್ದ ವ್ಯಕ್ತಿಗಳಿಗೆ, ಅದನ್ನು ಹೊಂದಿದ್ದ ವ್ಯಕ್ತಿಗಳಿಗಿಂತ ಆದ್ಯತೆಯ ಮೇಲೆ ಒದಗಿಸುವುದಕ್ಕೆ ಅದು ಬದ್ಧವಾಗಿದೆ. ಪ್ರತಿಯೊಬ್ಬ ಭಾರತೀಯನ ಧಾರ್ಮಿಕ, ಆರ್ಥಿಕ ಹಾಗೂ ರಾಜಕೀಯ ಹಕ್ಕುಗಳಿಗೆ ಪಕ್ಷ ಮನ್ನಣೆ ಕೊಡುತ್ತದೆ. ಆದರೆ ಅದು ಇತರ ಭಾರತೀಯರ ಇದೇ ಹಕ್ಕುಗಳ ರಕ್ಷಣೆಯ ಅವಶ್ಯಕತೆಗಳಿಗೆ ಬದ್ಧವಾಗಿರುತ್ತದೆ. ಪ್ರತಿಯೊಬ್ಬ ಭಾರತೀಯನೂ ಕೊರತೆ ಮುಕ್ತನೂ, ಭಯ ಮುಕ್ತನೂ ಆಗಿರುವಂತೆ, ರಾಷ್ಟ್ರವನ್ನು ಸದಾ ಸನ್ನದ್ಧವಾದ ಸ್ಥಿತಿಯಲ್ಲಿ ಇಟ್ಟಿರುವುದು ಅವಶ್ಯಕ ಕರ್ತವ್ಯವೆಂದೂ ಪಕ್ಷ ಭಾವಿಸುತ್ತದೆ. ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ ಈ ಮೇಲ್ಕಂಡ ತತ್ವಗಳನ್ನು ರಾಜಕೀಯ ಮಾನ್ಯತೆಗೋಸ್ಕರ ಅಥವಾ ಮತದಾರರನ್ನು ಸಮಾಧಾನ ಮಾಡುವುದಕ್ಕಾಗಿ ಅಳವಡಿಸಿಕೊಂಡಿಲ್ಲ. ಪಕ್ಷದ ಬೆನ್ನೆಲುಬಾಗಿರತಕ್ಕಂಥ ಲಕ್ಷಾಂತರ ಹಿಂದುಳಿದ ವರ್ಗಗಳ ಜನತೆಯಿಂದ ಈ ತತ್ವಗಳು ಹೊರಹೊಮ್ಮಿರುತ್ತವೆ. ಆದುದರಿಂದ ಭಾರತೀಯ ರಿಪಬ್ಲಿಕನ್ ಪಕ್ಷ ಈ ತತ್ವಗಳನ್ನು ಅಂಗೀಕರಿಸದೆ, ಅವುಗಳನ್ನು ಎತ್ತಿ ಹಿಡಿಯದೇ, ಅವುಗಳಿಗಾಗಿ ಹೋರಾಡದೇ ಇರಲು ಅಸಾಧ್ಯ. ಅವುಗಳು ರಾಜಕೀಯ ನಂಬಿಕೆಯ

ಹೊರಗಿನ ಗುರುತುಗಳಲ್ಲ. ಅವು ಅಂತರಂಗ ತುಡಿತದಿಂದ ಹೊಮ್ಮಿದ ಬಹಿರಂಗ ದಾಖಲೆಗಳು. ಈ ತತ್ವಗಳು ಪಕ್ಷದ ಜೀವಂತ ಹೊತ್ತಿಗೆ ಇದ್ದಂತೆ. ಇದೇ ತತ್ವಗಳನ್ನು ಬೇರೆ ಬೇರೆ ಪಕ್ಷಗಳು ಅಂಗೀಕರಿಸಬಹುದು, ಆದರೆ ರಿಪಬ್ಲಿಕನ್ ಪಕ್ಷದಷ್ಟು ನೈಜತೆಯಿಂದ ಅವು ಇರಲಾರವು.

ಕಾಂಗ್ರೆಸ್ ಪಕ್ಷ ಉನ್ನತವಾದ ಹಾಗೂ ಶ್ರೇಷ್ಠವಾದ ತತ್ವಗಳನ್ನು ಅಳವಡಿಸಿಕೊಂಡಿರಬಹುದು. ಆದರೆ ಅದು ತನ್ನ ತತ್ವಗಳಿಗನು ಗುಣವಾಗಿ ಎಂದೂ ನಡೆದುಕೊಂಡಿಲ್ಲ. ಅದು ಮತದಾರರನ್ನು ವಂಚಿಸಲು ಮಾತ್ರ ಉನ್ನತ ಧ್ಯೇಯದ್ದೇಶಗಳನ್ನು ಅಳವಡಿಸಿಕೊಂಡಿದೆ. ಆದುದರಿಂದ ಜನತೆ ಉನ್ನತ ಧ್ಯೇಯ ಆದರ್ಶಗಳನ್ನು ನೈಜವಾದ ರೀತಿಯಲ್ಲಿ ಅಂಗೀಕರಿಸಿರುವ ರಿಪಬ್ಲಿಕನ್ ಪಕ್ಷವನ್ನು ಗಮನದಲ್ಲಿ ಇಡಬೇಕೆಂದು ಕೋರುತ್ತದೆ.

## ಪಕ್ಷದ ಧ್ಯೇಯ ಧೋರಣೆ

ರಿಪಬ್ಲಿಕನ್ ಪಕ್ಷದ ಧ್ಯೇಯ ಧೋರಣೆಗಳು ಮೇಲ್ಕಂಡ ತತ್ವಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವುದೇ ಆಗಿದೆ. ಪಕ್ಷವು ಯಾವುದೇ ಒಂದು ತತ್ವ ಸಿದ್ಧಾಂತ ವಿಚಾರಣೆಗೆ ತನ್ನನ್ನು ಕಟ್ಟಿಹಾಕಿಕೊಂಡಿಲ್ಲ. ಜನತೆಯ ಆರ್ಥಿಕ, ಸಾಮಾಜಿಕ ಸ್ಥಿತಿಯನ್ನು ಉತ್ತಮ ಪಡಿಸುವ ಧ್ಯೇಯ, ಸಿದ್ಧಾಂತ, ವಿಚಾರಧಾರೆಗಳು ಎಲ್ಲಿಂದಲೇ ಬರಲಿ ಅದು ಪಕ್ಷದ ತತ್ವಗಳಿಗೆ ಅನುಗುಣವಾಗಿದ್ದಲ್ಲಿ ಅದನ್ನು ಸ್ವೀಕರಿಸಲು ಸಿದ್ಧವಾಗಿದೆ. ಸಾಮಾಜಿಕ ಜೀವನದ ವಿಚಾರದಲ್ಲಿ ಪಕ್ಷ ಆಧುನಿಕ ವಿಚಾರವಾದಿ ಧೋರಣೆಯನ್ನು ಹೊಂದಿದೆ.

## ಪಕ್ಷದ ಕಾರ್ಯಕ್ರಮಗಳು

ಕೃಷಿ ಭಾರತದ ಗ್ರಾಮೀಣ ಆರ್ಥಿಕ ರಚನೆ ಸಾಮಾಜಿಕ ನ್ಯಾಯವನ್ನು ನಿರಾಕರಿಸುತ್ತದೆ. ಶೋಷಣೆಗೆ ಸಹಕಾರಿಯಾಗಿದೆ. ಕಣ್ಣು ಕುಕ್ಕುವಂತಿರುವ ಸಾಮಾಜಿಕ ಆರ್ಥಿಕ ಅಸಮಾನತೆಯನ್ನು ಪೋಷಿಸುವಂತಹದು, ಉತ್ಪಾದನೆಯನ್ನು ಕಡಿತಗೊಳಿಸುವಂತಹದೂ ಆಗಿದೆ. ಭೂ ಒಡೆತನ ಕೆಲವೇ ವ್ಯಕ್ತಿಗಳ ಕೈಯಲ್ಲಿದ್ದು ಕೋಟ್ಯಂತರ ಭೂಹೀನರು ಮತ್ತೊಬ್ಬರ ಭೂಮಿಯಲ್ಲಿ ದುಡಿಮೆ ಮಾಡಬೇಕಾಗಿದೆ. ಆದಕಾರಣ ಕೃಷಿ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸಲು ಭೂಮಿಯನ್ನು ರಾಷ್ಟ್ರೀಕರಣಗೊಳಿಸಿ ಸಹಕಾರಿ ತತ್ವದ ಆಧಾರದ ಮೇಲೆ ಸಹಕಾರಿ ಕೃಷಿ ಸಂಸ್ಥೆಗಳ ಮೂಲಕ ಭೂಮಿಯನ್ನು ಬೇಸಾಯಕ್ಕೆ ಒಳಪಡಿಸಲಾಗುವುದು. ಈ ಕೃಷಿ ಸಹಕಾರ ಸಂಸ್ಥೆಗಳು ಪ್ರಾಯೋಗಿಕವಾಗಿ ಹಾಗೂ ಕ್ರಿಯಾಶೀಲವಾಗಿರುವಂತೆ ನೋಡಿಕೊಳ್ಳಲಾಗುವುದು. ಪ್ರತಿಯೊಬ್ಬ ರೈತನೂ ಸುಧಾರಿತ ಆಧುನಿಕ ಮಾದರಿಯ ಕೃಷಿ ವಿಧಾನವನ್ನು ಅನುಸರಿಸುವಂತೆ ಪ್ರೋತ್ಸಾಹಿಸುವುದು. ಇದಕ್ಕಾಗಿ ರೈತರು ತಮಗೆ ಅಗತ್ಯವಾದ ಸುಧಾರಿತ ಬೀಜ, ರಸಗೊಬ್ಬರ, ಕೀಟನಾಶಕ ಇವುಗಳನ್ನು ಸುಲಭವಾಗಿ ಪಡೆದುಕೊಳ್ಳುವಂತಹ ವ್ಯವಸ್ಥೆಯನ್ನು ಕಲ್ಪಿಸಲಾಗುತ್ತದೆ.

## ನೀರಾವರಿ

ಸಣ್ಣ ಮತ್ತು ಮಧ್ಯಮ ಪ್ರಮಾಣದ ನೀರಾವರಿ ಯೋಜನೆಗಳಿಗೆ ಆದ್ಯತೆ ನೀಡಿ, ಸಾಧ್ಯವಾದಷ್ಟು ಬೇಗ ನೀರಾವರಿ ಸೌಲಭ್ಯ ವಿಸ್ತರಣೆಗೆ ಕ್ರಮ ತೆಗೆದುಕೊಳ್ಳಲಾಗುವುದು.

## ಬಂಜರು ಭೂಮಿ ಅಭಿವೃದ್ಧಿ

ಕೃಷಿ ಯೋಗ್ಯ ಬಂಜರು ಭೂಮಿಯನ್ನು ಭೂಹೀನ ಕೃಷಿ ಕಾರ್ಮಿಕರಿಗೆ ಹಂಚಿಕೆ ಮಾಡಿ ಅಲ್ಲಿ ವ್ಯವಸಾಯ ಚಟುವಟಿಕೆ ಕೈಗೊಳ್ಳಲು ಪ್ರೋತ್ಸಾಹ ನೀಡುವುದು. ಕೃಷಿ ಯೋಗ್ಯವಲ್ಲದ ಬೀಳು ಭೂಮಿಯಲ್ಲಿ ಅರಣ್ಯ ಅಭಿವೃದ್ಧಿಗೆ ಕ್ರಮ.

## ಆಹಾರ ಸಮಸ್ಯೆ ನಿವಾರಣೆ

ಆಹಾರ ಧಾನ್ಯಗಳಿಗೆ ಸೂಕ್ತವಾದ ಬೆಲೆ ನಿಗದಿ, ಅದರ ಸಂಗ್ರಹಣೆ - ವಿತರಣೆಗೆ ಸೂಕ್ತ ಕಾರ್ಯಕ್ರಮ, ಜನತೆಗೆ ನ್ಯಾಯವಾದ ಬೆಲೆಗೆ ಆಹಾರ ಧಾನ್ಯ ಸಿಗುವಂತೆ ಮಾಡುವುದು. ಆಹಾರ ವಲಯಗಳ ರದ್ದು, ಆಹಾರ ಧಾನ್ಯಗಳು ಹೆಚ್ಚುವರಿ ರಾಜ್ಯಗಳಿಂದ ಕೊರತೆ ರಾಜ್ಯಗಳಿಗೆ ಸಲೀಸಾಗಿ ಸಾಗಾಣಿಕೆಯಾಗುವಂತೆ ಮಾಡಲು ಇರತಕ್ಕ ಎಲ್ಲಾ ಅಡೆತಡೆಗಳ ರದ್ದು. ಕೊರತೆ ರಾಜ್ಯಗಳಲ್ಲಿ ಆಹಾರದ ಕಾಪುದಾಸ್ತಾನು. ಬರಗಾಲ, ಬೆಲೆ ಏರಿಕೆ ಮುಂತಾದ ಸಮಯದಲ್ಲಿ ಈ ಕಾಪುದಾಸ್ತಾನನ್ನು ಬಳಕೆ ಮಾಡಿ ಬೆಲೆ ನಿಯಂತ್ರಣ ಮಾಡುವುದು. ಆಹಾರ ಧಾನ್ಯಗಳ ಸಂಗ್ರಹಣೆ, ಸಗಟು ವ್ಯಾಪಾರ ಸರ್ಕಾರದ ನಿಯಂತ್ರಣಕ್ಕೆ. ರೈತರು ಬೆಳೆದ ಹೆಚ್ಚುವರಿ ಆಹಾರ ಧಾನ್ಯಗಳನ್ನು ಪ್ರೋತ್ಸಾಹಕ ಬೆಲೆಯ ಮೇಲೆ ಸರ್ಕಾರವೇ ನೇರವಾಗಿ ಖರೀದಿಸುವುದು. ಸಣ್ಣ ಹಾಗೂ ಬಡ ರೈತರಿಗೆ ಸುಲಭ ಕೃಷಿ ಸಾಲ

ಒದಗಿಸುವುದು. ಅವರು ಆರ್ಥಿಕವಾಗಿ, ಸಾಮಾಜಿಕವಾಗಿ ಮುನ್ನಡೆಯಲು ಪ್ರೋತ್ಸಾಹ ನೀಡುವುದು. ಬೆಳೆ ವಿಮೆ ಯೋಜನೆ ಜಾರಿಗೆ ತರಲಾಗುವುದು. ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚಾಗಿ ನ್ಯಾಯಬೆಲೆ ಅಂಗಡಿಗಳ ಪ್ರಾರಂಭ. ಶ್ರೀಮಂತರಿಗೆ ನ್ಯಾಯಬೆಲೆ ಅಂಗಡಿ ಸೌಲಭ್ಯ ರದ್ದು.

## ಸಾರ್ವಜನಿಕ ವಲಯ - ಖಾಸಗಿ ವಲಯ

ಮೂಲಭೂತವಾದ ಹಾಗೂ ಅತ್ಯಂತ ಪ್ರಾಮುಖ್ಯವಾದ ಕಬ್ಬಿಣ, ಉಕ್ಕು, ವಿದ್ಯುತ್ ಉತ್ಪಾದನೆ, ರಾಸಾಯನಿಕ ಮುಂತಾದ ಕೈಗಾರಿಕೆಗಳ ರಾಷ್ಟ್ರೀಕರಣ. ಉಳಿದಂತೆ ಖಾಸಗಿ ವಲಯಕ್ಕೆ ಪ್ರೋತ್ಸಾಹ. ಉತ್ಪಾದನೆಗೆ ತೊಂದರೆಯಾಗಿರುವ ಅನಾವಶ್ಯಕ ನಿರ್ಬಂಧಗಳ ರದ್ದತಿ. ಸರ್ಕಾರಿ ವಲಯ ಹಾಗೂ ಖಾಸಗಿ ವಲಯಕ್ಕೆ ಅವಕಾಶವಿರುವ ಮಿಶ್ರ ಆರ್ಥಿಕ ಪದ್ಧತಿ. ಕೈಗಾರಿಕಾ ಕ್ಷೇತ್ರದಲ್ಲಿ ವಿದೇಶಿ ಬಂಡವಾಳ ಹೂಡಿಕೆಗೆ ಅವಕಾಶ. ಆದರೆ ನಿಯಂತ್ರಣ ಸರ್ಕಾರದ ಕೈಯಲ್ಲಿ. ಗ್ರಾಮಾಂತರ ಪ್ರದೇಶದಲ್ಲಿ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಪ್ರೋತ್ಸಾಹ.

## ಜನಸಂಖ್ಯಾ ನಿಯಂತ್ರಣ

ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳಿಗೆ ಆದ್ಯ ಗಮನ. ಮುಂದಿನ ಹತ್ತು ವರ್ಷಗಳಲ್ಲಿ ಜನಸಂಖ್ಯಾ ಬೆಳವಣಿಗೆ ಪ್ರಮಾಣವನ್ನು ಅರ್ಧದಷ್ಟು ಕಡಿಮೆ ಮಾಡಲು ಕಾರ್ಯಕ್ರಮ. ಹತ್ತು ಸಾವಿರ ಜನಸಂಖ್ಯೆಗೆ ಒಂದರಂತೆ ಕುಟುಂಬ ಕಲ್ಯಾಣ ಹಾಗೂ ಜನಸಂಖ್ಯಾ ನಿಯಂತ್ರಣ ಕೇಂದ್ರ. ಅರ್ಹತೆ ಹೊಂದಿದ ತರಬೇತಾದ ಆರೋಗ್ಯಕಾರ್ಯಕರ್ತರ ಪಡೆಯ ನೇಮಕ. ಕುಟುಂಬ ನಿಯಂತ್ರಣ ಶಸ್ತ್ರ ಚಿಕಿತ್ಸೆಗಳಿಗೆ ಒಳಗಾದವರಿಗೆ ನಗದು ಪ್ರೋತ್ಸಾಹ ಧನ ಹಾಗೂ ನಂತರದ ಆರೋಗ್ಯ - ವೈದ್ಯಕೀಯ ಸೌಲಭ್ಯ ಒದಗಿಸುವುದು. ಲೂಪ್ಸ್-ಕಾಂಟ್ರಾಸೆಪ್ಟೀವ್ ಮುಂತಾದ ಗರ್ಭ ನಿರೋಧಕ ಸಾಧನಗಳ ಉಚಿತ ಹಂಚಿಕೆ. ಈ ಎಲ್ಲಾ ಕಾರ್ಯಕ್ರಮಗಳೂ ವಿಫಲವಾದಲ್ಲಿ ಜನಸಂಖ್ಯೆ ನಿಯಂತ್ರಣಕ್ಕೆ ಪರಿಣಾಮಕಾರಿಯಾದ ತೀಕ್ಷ್ಣ ಕ್ರಮ.

## ದುರ್ಬಲ ವರ್ಗಗಳ ಏಳಿಗೆ

ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ದುರ್ಬಲ ವರ್ಗಗಳು ಹಾಗೂ ಬೌದ್ಧರ ಆರ್ಥಿಕ ಸಾಮಾಜಿಕ ಶೈಕ್ಷಣಿಕ ಉನ್ನತಿಗೆ ವಿಶೇಷ ಯೋಜನೆಗಳು. ವಿಳಂಬವಿಲ್ಲದೆ ಅವುಗಳ ಅನುಷ್ಠಾನಕ್ಕೆ ಕ್ರಮ. ಸರ್ಕಾರಿ ಸೇವೆಗಳಲ್ಲಿ ಇವರಿಗೆ ಪೂರ್ಣ ಅವಕಾಶ ಕಲ್ಪಿಸಲು ಕ್ರಮ. ಆಡಳಿತಾತ್ಮಕ ಹಿಡಿತವನ್ನು ಹೊಂದಲು ಅವಶ್ಯಕವಾದ ಉನ್ನತ ಮಟ್ಟದ ಶಿಕ್ಷಣವನ್ನು ಈ ವರ್ಗದ ಜನತೆಗೆ ಒದಗಿಸಲು ಕ್ರಮ. ರಕ್ಷಣೆ ಹಾಗೂ ನಾಗರಿಕ ಸೇವೆಗಳಲ್ಲಿ ಈ ವರ್ಗಗಳು ತಮಗೆ ಸಲ್ಲಬೇಕಾದ ನ್ಯಾಯವಾದ ಪಾಲನ್ನು ಪಡೆಯುವವರೆಗೂ ಕನಿಷ್ಠ ವಿದ್ಯಾರ್ಹತೆಗಳಿಗೆ ಅನುಗುಣವಾಗಿ ಮೀಸಲಾತಿಯನ್ನು ಒದಗಿಸಲು ಕ್ರಮ.

## ಅಲ್ಪಸಂಖ್ಯಾತರ ರಕ್ಷಣೆ

ಅಲ್ಪಸಂಖ್ಯಾತರಿಗೆ ರಕ್ಷಣೆ ಹಾಗೂ ಸಾಮಾಜಿಕ ನ್ಯಾಯ. ಈ ವರ್ಗದ ಧಾರ್ಮಿಕ ನಂಬಿಕೆಯನ್ನು ಶೋಷಣೆಗೆ ಒಳಪಡಿಸದಂತೆ ಕ್ರಮ. ಸಮಾಜದ ಎಲ್ಲ ವರ್ಗಗಳಲ್ಲಿ ಸುಮಧುರ ಬಾಂಧವ್ಯ ಬಲಪಡಿಸಲು ಕ್ರಮ.

## ಸಾಮಾಜಿಕ ಪುನರ್ ನಿರ್ಮಾಣ

ಜಾತೀಯ ವ್ಯವಸ್ಥೆಯನ್ನು ನಿರ್ನಾಮ ಮಾಡುವ ಮೂಲಕ ಭೇದ ಭಾವಗಳನ್ನು ತೊಡೆದುಹಾಕಿ ಹೊಸ ಸಮಾಜವನ್ನು ನಿರ್ಮಿಸಬೇಕಾಗಿದೆ. ಅದು ಸಾಧ್ಯವಾಗುವವರೆಗೆ ಹಿಂದುಳಿದ ವರ್ಗಗಳನ್ನು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಇತರ ಮುಂದುವರಿದ ವರ್ಗಗಳ ಮಟ್ಟಕ್ಕೆ ತರುವ ಮೂಲಕ ಸಮಾಜದ ಪುನರ್‌ರಚನೆಯ ಉದ್ದೇಶ ಸಾಧನೆಗೆ ಪಕ್ಷ ಬದ್ಧವಾಗಿದೆ.

## ಭಾಷಾ ಸಮಸ್ಯೆ

ಭಾಷೆ ಹಾಗೂ ಜನರ ಅಭೀಪ್ಸೆಗೆ ತಕ್ಕಂತೆ ಗಡಿ ಸಮಸ್ಯೆಯನ್ನು ಬಗೆ ಹರಿಸುವುದು. ಹಿಂದಿಯನ್ನು ಸಂಪರ್ಕ ಭಾಷೆಯನ್ನಾಗಿ ಜಾರಿಗೆ ತರುವುದು. ಅಲ್ಲಿಯವರೆಗೆ ಇಂಗ್ಲಿಷನ್ನು ಅಧಿಕೃತ ಭಾಷೆಯನ್ನಾಗಿ ಉಳಿಸಿಕೊಳ್ಳುವುದು. ಹಿಂದಿ ಭಾಷೆಯ ಜೊತೆಗೆ ಇತರ ಪ್ರಾದೇಶಿಕ ಭಾಷೆಗಳ ಅಭಿವೃದ್ಧಿಗೆ ಗಮನ ಹಾಗೂ ಸಹಕಾರ ನೀಡುವುದು. ಉರ್ದು ಭಾಷೆಯ ಅಭಿವೃದ್ಧಿಗೆ ಕ್ರಮ. ಉತ್ತರ ಪ್ರದೇಶ ಬಿಹಾರಗಳಲ್ಲಿ ಉರ್ದು ಭಾಷೆಯನ್ನು ಪ್ರಾದೇಶಿಕ ಭಾಷೆ ಎಂದು ಮಾನ್ಯ ಮಾಡಲಾಗುವುದು.

**ಉತ್ತರ ಪ್ರದೇಶ**

ಉತ್ತರ ಪ್ರದೇಶವನ್ನು ಪೂರ್ವ, ಪಶ್ಚಿಮ ಮತ್ತು ಕೇಂದ್ರೀಯ, ಉತ್ತರ ಪ್ರದೇಶಗಳೆಂದು ವಿಂಗಡಿಸುವುದು. ಹರಿಯಾಣ ಮತ್ತು ದೆಹಲಿಯನ್ನು ಒಟ್ಟುಗೂಡಿಸಿ ಒಂದೇ ರಾಜ್ಯ ಮಾಡುವುದು.

**ಆಡಳಿತ ಸುಧಾರಣೆ**

ಭ್ರಷ್ಟಾಚಾರದ ವಿರುದ್ಧ ಕಠಿಣ ಕ್ರಮ. ಅನಪೇಕ್ಷಿತ ಕಾನೂನುಗಳು ಹಾಗೂ ನಿರ್ಬಂಧಗಳನ್ನು ರದ್ದುಪಡಿಸುವುದು. ಶಾಸನಾತ್ಮಕ ಕೇಂದ್ರೀಯ ಆಡಳಿತ ಸುಧಾರಣಾ ಆಯೋಗದ ರಚನೆ. ಅದರ ವರದಿಯ ಆಧಾರದ ಮೇಲೆ ತಪ್ಪಿತಸ್ಥರ ವಿರುದ್ಧ ಕ್ರಮ ತೆಗೆದುಕೊಳ್ಳುವ ವ್ಯವಸ್ಥೆ.

**ಶಿಕ್ಷಣ ಸುಧಾರಣೆ**

ಹದಿನಾಲ್ಕು ವರ್ಷದವರೆಗೆ ಪ್ರತಿಯೊಬ್ಬರಿಗೂ ಉಚಿತ ಕಡ್ಡಾಯ ಶಿಕ್ಷಣ. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಬೌದ್ಧರು ಹಾಗೂ ದುರ್ಬಲ ವರ್ಗಗಳಿಗೆ ವಿದ್ಯಾರ್ಥಿ ವೇತನ ಸಹಿತ ಉಚಿತ ಉನ್ನತ ಶಿಕ್ಷಣ - ಪ್ರತಿಭಾವಂತರನ್ನು ಶಿಕ್ಷಣರಂಗದತ್ತ ಸೆಳೆಯಲು ವಿಶ್ವವಿದ್ಯಾನಿಲಯ ಬೋಧಕ ವರ್ಗದವರಿಗೆ ಉತ್ತಮ ವೇತನ ಶ್ರೇಣಿ. ದೇಶದಾದ್ಯಂತ ಬೋಧಕರಿಗೆ ಏಕರೂಪದ ವೇತನ ಶ್ರೇಣಿ ನಿಗದಿ. ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ. ಹಿಂದಿ ಹಾಗೂ ಇಂಗ್ಲಿಷ್ ಕಡ್ಡಾಯ.

**ಪಾನ ನಿರೋಧ ರದ್ದು**

ಪಾನ ನಿರೋಧದಿಂದ ಅಪರಾಧ ಹಾಗೂ ನೈತಿಕ ಅಧಃಪತನ ಉಂಟಾಗಿದೆ. ಕಳ್ಳಭಟ್ಟಿ ಗೃಹ ಕೈಗಾರಿಕೆಯಾಗಿ ಬೆಳೆದಿದೆ. ಭ್ರಷ್ಟಾಚಾರ ತಾಂಡವವಾಡುತ್ತಿದೆ. ಆದುದರಿಂದ ಪಾನ ನಿರೋಧ ರದ್ದು. ಈ ಸಂಪನ್ಮೂಲವನ್ನು ಸಮಾಜ ಕಲ್ಯಾಣ ಕಾರ್ಯಗಳಿಗೆ ಬಳಸಿಕೊಳ್ಳಲಾಗುವುದು.

**ಆರ್ಥಿಕ ಸುಧಾರಣೆಗಳು**

ಬ್ಯಾಂಕುಗಳ ರಾಷ್ಟ್ರೀಕರಣ, ಬಡವರಿಗೆ ಸಾಲ ಸೌಲಭ್ಯ ವಿಸ್ತರಣೆ. ಭಾರೀ ಪ್ರಮಾಣದ ಅಪ್ರತ್ಯಕ್ಷ ತೆರಿಗೆಗೆ ವಿರೋಧ. ಜೀವಾನವಶ್ಯಕ ವಸ್ತುಗಳ ಮೇಲಿನ ತೆರಿಗೆ ಇಳಿಕೆ. ಅವಶ್ಯಕ ಹಾಗೂ ಉತ್ಪಾದಕ ಯೋಜನೆಗಳಿಗೆ ಮಾತ್ರ ಆದ್ಯತೆ. ಖೋತಾ ಹಣಕಾಸು ವ್ಯವಸ್ಥೆಗೆ ಅವಕಾಶ ಇಲ್ಲ. ಹಣದುಬ್ಬರ ಇಳಿಕೆಗೆ ಕ್ರಮ.

**ವಿದೇಶಾಂಗ ನೀತಿ**

ಚೀಣಾ ಆಕ್ರಮಿತ ಪ್ರದೇಶಗಳ ತೆರವಿಗೆ ಒತ್ತಾಯ. ಅದನ್ನು ಮರಳಿ ಪಡೆಯಲು ನಿರ್ದಾಕ್ಷಿಣ್ಯ ಕ್ರಮ. ಪರಮಾಣು ಅಸ್ತ್ರ ಅಭಿವೃದ್ಧಿಗೆ ಪರಿಶೀಲನೆ. ನೆರೆಹೊರೆಯ ರಾಷ್ಟ್ರಗಳೊಡನೆ ಬಾಂಧವ್ಯ ವೃದ್ಧಿ. ಚೀಣಾ ವಿರುದ್ಧ ಶಕ್ತಿ ಸಂಚಯ, ಪಾಕಿಸ್ತಾನದ ಜೊತೆ ವ್ಯಾಪಾರ ವ್ಯವಹಾರ ವೃದ್ಧಿಯ ಮೂಲಕ ಸಂಬಂಧ ಸುಧಾರಣೆ.

**ಕಾರ್ಮಿಕ ನೀತಿ**

ರಾಷ್ಟ್ರೀಯ ಕಾರ್ಮಿಕ ನೀತಿಯನ್ನು ರೂಪಿಸುವುದು. ಕಾರ್ಮಿಕರು ಹಾಗೂ ನಿರ್ವಾಹಕ ಸಿಬ್ಬಂದಿಯ ನಡುವೆ ಇರುವ ವೇತನ ತಾರತಮ್ಯ ನಿವಾರಣೆಗೆ ಕ್ರಮ. ಕಾರ್ಮಿಕ ಕಾನೂನುಗಳ ಉಲ್ಲಂಘನೆ ದಂಡನಾರ್ಹ ಅಪರಾಧ. ಕಾರ್ಮಿಕ ಕಾನೂನುಗಳ ಕಟ್ಟುನಿಟ್ಟಾದ ಜಾರಿ, ಕಡ್ಡಾಯ ಕಾರ್ಮಿಕ ಪಂಚಾಯತ್ ವ್ಯವಸ್ಥೆ ಜಾರಿಗೆ. ಆಡಳಿತ ಮಂಡಲಿಯಲ್ಲಿ ಕಾರ್ಮಿಕರ ಕಡ್ಡಾಯ ಪ್ರಾತಿನಿಧ್ಯಕ್ಕೆ ಶಾಸನ. ಕಾರ್ಮಿಕರಿಗೆ ಸರ್ಕಾರ ಹಾಗೂ ಮಾಲೀಕರ ಸಹಯೋಗದಿಂದ ವಸತಿ ಸೌಲಭ್ಯ. ಕಾರ್ಮಿಕ ಕಲ್ಯಾಣ ನಿಧಿ ಸ್ಥಾಪನೆ ಕಡ್ಡಾಯ. ಕಾರ್ಮಿಕ ಪ್ರತಿನಿಧಿಗಳಿಂದ ಈ ನಿಧಿಯ ನಿರ್ವಹಣೆ.

**ರಾಜಕೀಯ ಸಹಕಾರ**

ದ್ವಿಪಕ್ಷ ಪದ್ಧತಿಗೆ ಒಲವು. ಪ್ರಬಲ ವಿರೋಧ ಪಕ್ಷ ನಿರ್ಮಾಣಕ್ಕೆ ಸಹಕಾರ. ರಿಪಬ್ಲಿಕನ್ ಪಕ್ಷದ ಆರ್ಥಿಕ ಸಾಮಾಜಿಕ ತತ್ವಗಳಿಗೆ ಬದ್ಧವಾಗಿರುವ ಇತರ ಪಕ್ಷಗಳೊಡನೆ ಸಹಕಾರಕ್ಕೆ ಸಿದ್ಧ. ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಹಾಗೂ ಇತರ ಹಿಂದುಳಿದ ವರ್ಗಗಳಲ್ಲಿ ರಾಜಕೀಯ ಪ್ರಜ್ಞೆ ಮೂಡಿಸಲು ಕ್ರಮ.

## ಚುನಾವಣಾ ಸಾಧನೆ

ಕರ್ನಾಟಕದಲ್ಲಿ ಆಲ್ ಇಂಡಿಯ ಶೆಡ್ಯೂಲ್ಡ್ ಕಾಸ್ಟ್ ಫೆಡರೇಶನ್ ೧೯೫೨ ರಿಂದಲೂ ಚುನಾವಣೆಯಲ್ಲಿ ಸ್ಪರ್ಧಿಸಿತು. ೧೯೬೨ರ ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿದ ಅಭ್ಯರ್ಥಿಗಳು ಎಂದರೆ - ಬಂಡೋಪಂತ್ ಧಾಂಡಿರಾವ್ ಇಕ್‌ಪುಳೆ ಬೀದರ್‌ನಿಂದ ಸ್ಪರ್ಧಿಸಿ ಶೇಕಡ ೧೮.೩ ರಷ್ಟು ಮತಗಳಿಸಿದರು. ಬಿಜಾಪುರ ಉತ್ತರದಿಂದ ಧಾಗಡೂಪಂತ್ ಮೊಗನಿಕುಂಬ್ ಅವರು ಶೇಕಡ ೬.೭೩ರಷ್ಟು ಮತಗಳಿಸಿದರು. ಚಿಕ್ಕೋಡಿಯಿಂದ ಬಲವಂತ ಹನುಮಂತ ವಾಗ್ಲೆ ಶೇಕಡ ೩.೨ ರಷ್ಟು ಮತ ಪಡೆದಿದ್ದರು. ಧತ್ತಾ ಅಪ್ಪಾ ಕಟ್ಟಿ ಅವರು ಶೇಕಡ ೪೬.೫೪ ಮತಗಳನ್ನು ಗಳಿಸಿದರು. ಈ ನಾಲ್ವರು ಅಭ್ಯರ್ಥಿಗಳು ಆರ್‌ಪಿಐ ಮೂಲಕ ಚುನಾವಣೆಯಲ್ಲಿ ಸ್ಪರ್ಧಿಸಿ ಸೋಲನ್ನು ಒಪ್ಪಿಕೊಂಡರೂ ಪರಿಶಿಷ್ಟ ಜಾತಿಯಲ್ಲಿ ಜಾಗೃತಿಯನ್ನು ಉಂಟುಮಾಡುವಲ್ಲಿ ಯಶಸ್ವಿಯಾದರು.

## ೧೯೬೭ರ ಲೋಕಸಭಾ ಚುನಾವಣೆ

ಪಿ. ಥುಸಾಜಿಯವರು ಶೇಕಡ ೨೭.೮ ಮತಗಳನ್ನು ಗಳಿಸಿ ಸ್ಪರ್ಧಿಸಿದ ಏಕೈಕ ಅಭ್ಯರ್ಥಿ.

## ೧೯೭೭ರ ಲೋಕಸಭಾ ಚುನಾವಣೆ

ಬೀದರ್‌ನಿಂದ ಆರ್‌ಪಿಐ (ಕೋಬ್ರಗಡೆ) ಮೂಲಕ ಶಿವರಾಮ ಮೊಗಾ ಅವರು ಸ್ಪರ್ಧಿಸಿ ಶೇಕಡ ೪.೦೪ ಮತಗಳನ್ನು ಪಡೆದರು. ಚಿಕ್ಕೋಡಿ ಮೀಸಲು ಕ್ಷೇತ್ರದಿಂದ ಬಿ.ಡಿ. ತಿಕ್‌ಪುರ್ಲೆ ಸ್ಪರ್ಧಿಸಿ ಶೇಕಡ ೬.೬೪ ಮತ ಪಡೆದರು. ಅನಂತರ ಯಾವುದೇ ಆರ್‌ಪಿಐ ಅಭ್ಯರ್ಥಿ ಲೋಕಸಭೆಗೆ ಸ್ಪರ್ಧಿಸಿದ ವಿವರಗಳು ಕಾಣಬರುವುದಿಲ್ಲ.

## ೧೯೫೭ರ ವಿಧಾನಸಭಾ ಚುನಾವಣೆ

೧೯೫೭ರ ವಿಧಾನಸಭೆ ಚುನಾವಣೆಯಲ್ಲಿ ಮೈಸೂರು ಸಂಸ್ಥಾನದಿಂದ ಆರು ಅಭ್ಯರ್ಥಿಗಳು ಎಸ್‌ಸಿಎಫ್ - ಮೂಲಕ ಸ್ಪರ್ಧಿಸಿದ್ದರು. ಅವರೆಂದರೆ ಮಳವಳ್ಳಿ ದ್ವಿಕ್ಷೇತ್ರದಿಂದ ಎನ್. ಚಿಕ್ಕಲಿಂಗಯ್ಯ (ಶೇಕಡ. ೧೮,೨೪) ಬೆಂಗಳೂರು ಉತ್ತರದಿಂದ ಪಿ. ಪಾರ್ಥಸಾರಥಿ (ಶೇ ೩.೯೯). ಮೈಸೂರು ನಗರದಿಂದ ಜಿ. ಎಸ್. ರಾಮಕೃಷ್ಣಯ್ಯ (ಶೇಕಡ, ೧೨. ೪೯) ನಂಜನಗೂಡಿನಿಂದ ಎಂ. ಸಿ. ಬಿಳಿಗಿರಿರಂಗಯ್ಯ (ಶೇಕಡ. ೧೧.೮೨). ಹೊಸದುರ್ಗದಿಂದ ರಾಯಪ್ಪ (ಶೇಕಡ, ೫.೮೮) ಹಾಗೂ ಹೊಳಲ್ಕೆರೆಯಿಂದ ಕೆಂಚಪ್ಪ (ಶೇಕಡ. ೨.೩೪). ಆದರೆ ಇವರು ಯಾರೂ ಚುನಾವಣೆಯಲ್ಲಿ ಗೆಲ್ಲಲಿಲ್ಲ.

## ೧೯೫೭ರ ವಿಧಾನಸಭಾ ಚುನಾವಣೆ

ರಾಯಭಾಗದಿಂದ ಎಸ್. ಪಿ ತಲವಲ್‌ಕರ್ (ಶೇಕಡ : ೨೮.೬೪). ಹುಕ್ಕೇರಿಯಿಂದ ಬಿ.ಡಿ. ತಿಕ್‌ಪುರ್ಲೆ (ಶೇಕಡ, ೧೮.೩೩), ಇಂಡಿ ದ್ವಿಮತ ಕ್ಷೇತ್ರದಿಂದ ಎಲ್. ಕೆ. ನಂದಿಮನಿ (ಶೇಕಡ : ೯.೪೬) ಹಾಗೂ ಮಲ್ಲೇಶ್ವರದಿಂದ ಬಾಲಸುಂದರಂ (ಶೇಕಡ ೫.೩೯) ಇವರುಗಳು ಈ ಚುನಾವಣೆಯಲ್ಲಿ ಸ್ಪರ್ಧಿಸಿದ ಪ್ರಮುಖ ಅಭ್ಯರ್ಥಿಗಳು. ಏಕೀಕರಣವಾದ ನಂತರ ನಡೆದ ಈ ಚುನಾವಣೆಯಲ್ಲಿ ರಾಜ್ಯದ ಎಲ್ಲಾ ದಲಿತ ವರ್ಗಗಳನ್ನು ಒಂದುಗೂಡಿಸಲು ಆರ್‌ಪಿಐ ಪಕ್ಷ ಪ್ರಯತ್ನಿಸಿದ್ದನ್ನು ಇಲ್ಲಿ ಗಮನಿಸಬಹುದು.

## ೧೯೬೨ರ ವಿಧಾನಸಭಾ ಚುನಾವಣೆ

೧೯೬೨ರ ವಿಧಾನಸಭಾ ಚುನಾವಣೆಯಲ್ಲಿ ಆರ್‌ಪಿಐ ರಾಜ್ಯದ ೧೭ ಕ್ಷೇತ್ರಗಳಲ್ಲಿ ತನ್ನ ಅಭ್ಯರ್ಥಿಗಳನ್ನು ಚುನಾವಣಾ ಕಣಕ್ಕೆ ಇಳಿಸಿತ್ತು. ಈ ಚುನಾವಣೆಯಲ್ಲಿ ಆರ್‌ಪಿಐನ ವಿಶ್ವಾಸ ಕೂಡ ತುಂಬ ದೊಡ್ಡದಾಗಿತ್ತು. ಅವರುಗಳು ಸ್ಪರ್ಧಿಸಿದ್ದ ಪ್ರಮುಖ ಕ್ಷೇತ್ರಗಳು ಎಂದರೆ ಸುರಪುರದಿಂದ ಜಿ. ವಿಠಲರಾವ್ ಕಾಂಬ್ಳೆ (ಶೇಕಡ ೪೮. ೪೯), ಬೀದರ್‌ನಿಂದ ಶಿವರಾಮ ಮಾರುತಿ (ಶೇಕಡ ೨.೮೭), ಆಳಂದದಿಂದ ಶಿವರಾಮ ಶುಂಭು (ಶೇಕಡ ೧೧. ೭೧). ಅಫ್‌ಜಲ್‌ಪುರದಿಂದ ಶರಣಪ್ಪ ದುಕ್ಕಪ್ಪ (ಶೇಕಡ. ೮.೬೭), ಬಿಜಾಪುರದಿಂದ ಎಲ್. ಎಲ್. ಪೋಳೆ (ಶೇಕಡ ೧.೮೮), ಬಾಗೇವಾಡಿಯಿಂದ ಎಸ್.ಜಿ.ಜಿನಕರ್ (ಶೇಕಡ ೪.೭೯), ಇಂಡಿಯಿಂದ ಎಲ್.ಕೆ. ನಂದಿಮನಿ (ಶೇಕಡ ೧.೯), ಬಾರ್ಡೋಲ್‌ನಿಂದ ಎಸ್.ಬಿ. ಕಾಂಬ್ಳೆ (ಶೇಕಡ ೧೭.೭೫), ಕಾಗವಾಡದಿಂದ ಎಸ್.ಪಿ. ತಲವಾಲ್‌ಕರ್ (ಶೇಕಡ ೭.೭೩), ರಾಯಭಾಗದಿಂದ ಎ.ಜಿ. ಪಠಾಣ್ (ಶೇಕಡ ೧೦.೭೧), ಸಂಕೇಶ್ವರದಿಂದ ಬಿ. ತಂಕರಾನಂದ (ಶೇಕಡ ೩೯. ೯೧), ಮುಳಬಾಗಿಲಿನಿಂದ ಬಿ. ಹೆಚ್. ಹನುಮಂತಪ್ಪ (ಶೇಕಡ ೨.೩.೩), ಕೋಲಾರದ ಗೋಲ್ಡ್‌ಫೀಲ್ಡ್‌ನಿಂದ ಸಿ.ಎಂ. ಆರ್ಮುಗಂ (ಶೇಕಡಾ ೨೬.೨೦), (ಆರ್ಮುಗಂ ಅವರ ಮೇಲೆ ಗೆಲುವು ಸಾಧಿಸಿದ ಕಾಂಗ್ರೆಸ್ ಅಭ್ಯರ್ಥಿ ಕೇವಲ ೧೨೪ ಮತಗಳಿಂದ ಈ

ಚುನಾವಣೆಯಲ್ಲಿ ಗೆದ್ದರು.) - ಬಂಗಾರಪೇಟೆಯಿಂದ ಚಾಮುಂಡಿ (ಶೇಕಡ ೪.೩೮), ಮಾಲೂರಿನಿಂದ ಆರ್. ವಿನೋದದಾಸ್ (ಶೇಕಡ ೧.೯೧), ಮಲ್ಲೇಶ್ವರದಿಂದ ಜಯರಾಮ್ (ಶೇಕಡ ೨.೧೯) ಹಾಗೂ ಯಲಹಂಕದಿಂದ ಸಿ. ಬಾಲಸುಂದರ (ಶೇಕಡ ೧೯.೭೧)

## ೧೯೬೭ರ ವಿಧಾನಸಭಾ ಚುನಾವಣೆ

ಪ್ರಸ್ತುತ ಚುನಾವಣೆಯಲ್ಲಿ ೧೯ ಕ್ಷೇತ್ರಗಳಲ್ಲಿ ಆರ್. ಪಿ. ಐ. ಪಕ್ಷ ಸ್ಪರ್ಧಿಸಿತ್ತು. ಒಂದು ಕ್ಷೇತ್ರದಲ್ಲಿ ಮಾತ್ರ ಅದಕ್ಕೆ ವಿಜಯ ದೊರೆಯಿತು. ಅದು ಎಂದರೆ ಬಿಜಾಪುರ ಜಿಲ್ಲೆಯ ಬಳ್ಳೊಳ್ಳಿ ಕ್ಷೇತ್ರದ ಆರ್.ಪಿ.ಐ. ಅಭ್ಯರ್ಥಿ ಎಸ್.ಎಸ್. ಅರಕೇರಿಯವರು ಶೇಕಡ ೫೭.೭೧ ರಷ್ಟು ಅಂದರೆ ೧೪, ೬೫೩ ಮತಗಳನ್ನು ಗಳಿಸಿ ಜಯಶೀಲರಾದರು. ಕರ್ನಾಟಕ ರಾಜ್ಯದ ವಿಧಾನಸಭೆಗೆ ಆಯ್ಕೆಯಾದ ಮೊದಲ ಆರ್.ಪಿ.ಐ. ಅಭ್ಯರ್ಥಿ - ಅವರು ಆಗಿದ್ದಾರೆ. ಕೆ.ಜಿ.ಎಫ್. ನಲ್ಲಿ ನಡೆದ ಉಪ-ಚುನಾವಣೆಯೊಂದರಲ್ಲಿ ಸಿ.ಎಂ. ಆರ್ಮುಗಂರವರು ಶೇಕಡ ೩೭.೬೦ ರಷ್ಟು ಮತಗಳಿಸಿದ್ದರೂ ಜಯಶೀಲರಾಗಲಿಲ್ಲ. ಆರ್. ಪಿ. ಐ. ಸ್ಪರ್ಧಿಸಿದ್ದ ಇತರ ಕ್ಷೇತ್ರಗಳು ಎಂದರೆ ಹುಲಸೂರಿನಿಂದ ಬಿ.ಡಿ. ತಿಕ್‌ಪುರ್ಲೆ (ಶೇಕಡ ೪೩.೬೦), ಸೇಡಂನಿಂದ ಎರ್ಲಾ ಲಕ್ಕಪ್ಪ, (ಶೇಕಡ ೩.೯೯), ಹಿರಿಯೂರಿನಿಂದ ಕೆ. ಸಿ. ಕೇಶನವ್, (ಶೇಕಡ ೩. ೧೯), ಗಾಂಧಿನಗರದಿಂದ ಸಿ. ಸುಬ್ರಮಣ್ಯಂ, (ಶೇಕಡ ೨), ಮಳವಳ್ಳಿಯಿಂದ ಎಸ್. ಎಂ. ಕೆಂಪಯ್ಯ (ಶೇಕಡ ೩. ೯೬), ಸಂಕೇಶ್ವರದಿಂದ ಸಿ. ಎಸ್. ವಾಲಿ (ಶೇಕಡ ೯.೬೯), ಚಿಕ್ಕೋಡಿಯಿಂದ ಎ.ಡಿ. ಮಾದಾಲೆ (ಶೇಕಡಾ ೧೫.೬೪).

## ೧೯೭೨ನೇ ವಿಧಾನಸಭಾ ಚುನಾವಣೆ

ಈ ಚುನಾವಣೆಯಲ್ಲಿ ಎರಡು ಕ್ಷೇತ್ರಗಳಲ್ಲಿ ಮಾತ್ರ ಆರ್. ಪಿ. ಐ. ಅಭ್ಯರ್ಥಿಗಳು ಸ್ಪರ್ಧಿಸಿದರು. ಕೆ.ಜಿ.ಎಫ್.ನಿಂದ ಸಿ. ಎಂ. ಆರ್ಮುಗಂ ಅವರು ಕ್ಷೇತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಿ ಶೇಕಡ - ೪೩.೦೬ ಅಂದರೆ ೧೬, ೦೭೭ ಮತಗಳಿಸಿ ರಾಜ್ಯ ವಿಧಾನಸಭೆಗೆ ಆಯ್ಕೆಯಾದರು.

## ೧೯೭೮ರ ವಿಧಾನಸಭಾ ಚುನಾವಣೆ

೧೯೭೮ರ ಚುನಾವಣೆಯ ಹೊತ್ತಿಗೆ ರಾಜ್ಯದಲ್ಲಿ ಆರ್.ಪಿ.ಐ. ಎರಡು ಪಂಗಡಗಳಾಗಿ ವಿಭಜನೆಯಾಗಿತ್ತು. ಎರಡೂ ಗುಂಪುಗಳು ಚುನಾವಣೆಯಲ್ಲಿ ಸ್ಪರ್ಧಿಸಿದರು. ಆರ್. ಪಿ. ಐ(ಕೆ) ಇಂದ ಏಳು ಜನರು ಸ್ಪರ್ಧಿಸಿದ್ದರು. ಆದರೆ ಅಷ್ಟು ಜನರು ತಮ್ಮ ಠೇವಣಿಯನ್ನು ಕಳೆದುಕೊಂಡರು. ಆರ್.ಪಿ.ಐ. ನಿಂದ ಸ್ಪರ್ಧಿಸಿದ್ದ ಸಿ. ಎಂ. ಆರ್ಮುಗಂರವರು ಕೆ. ಜಿ. ಎಫ್. ನಿಂದ ಶೇಕಡ ೪೫.೫೧ ಅಂದರೆ ೨೧,೯೨೦ ಮತಗಳಿಸಿ ಆಯ್ಕೆಯಾದರು. ಇವರ ಚುನಾವಣೆ ಚಿಹ್ನೆ ಆನೆ ಆಗಿತ್ತು. ಅದೇ ಮುಂದೆ ಬಹುಜನ ಸಮಾಜವಾದಿ ಪಕ್ಷದ ಚಿಹ್ನೆ ಆಗಿರುವುದನ್ನೂ ಸಹ ಗಮನಿಸಬಹುದು. ಕರ್ನಾಟಕದಲ್ಲಿ ಆರ್. ಪಿ. ಐ. ಪಕ್ಷ ಎಲ್ಲ ದಲಿತರ ಹಿತಕಾಯುವಲ್ಲಿ ಗಣನೀಯ ಪಾತ್ರ ವಹಿಸಿದೆ. ಡಾ। ಅಂಬೇಡ್ಕರ್ ಇಂಜಿನಿಯರಿಂಗ್ ಕಾಲೇಜು ಹಾಗೂ ಮೆಡಿಕಲ್ ಕಾಲೇಜು ಪ್ರಾರಂಭವಾಗಲು ಮತ್ತು ದಲಿತರು ಶಿಕ್ಷಣ ಕ್ಷೇತ್ರದಲ್ಲಿ ಗಣನೀಯ ಸಾಧನೆ ಮಾಡಲು ಸರ್ಕಾರದ ಮೇಲೆ ಇದು ಒತ್ತಡ ಹೇರಿದ್ದು ಕಾರಣವಾಗಿದೆ. ಬೆಂಗಳೂರಿನ ವಿಧಾನಸೌಧದ ಎದುರು ಡಾ। ಅಂಬೇಡ್ಕರ್ ಪ್ರತಿಮೆ ಸ್ಥಾಪಿತವಾಗಲು ಈ ಪಕ್ಷದ ಸದಸ್ಯರ ಆಗ್ರಹ ಕಾರಣವಾಗಿದೆ. ಹೀಗೆ ಎಲ್ಲಾ ದಲಿತರ ಹಿತಾಸಕ್ತಿಯನ್ನು ಹೊಂದಿದ ಆರ್. ಪಿ. ಐ. ಪಕ್ಷ ಇತರ ಪಕ್ಷಗಳೊಡನೆ ತನ್ನ ಧ್ಯೇಯೋದ್ದೇಶಗಳನ್ನು ಹಂಚಿಕೊಂಡು ಕರ್ನಾಟಕದಲ್ಲಿ ಬೇರೆಬೇರೆ ಪಕ್ಷಗಳಲ್ಲಿ ವಿಲೀನವಾಯಿತು.



# ಕಾಂಗ್ರೆಸ್ಸಿನಿಂದ ಸಿಡಿದುಹೋದ ಪಕ್ಷಗಳು

ಎಸ್. ನಂಜುಂಡಸ್ವಾಮಿ

ತತ್ವ ಹಾಗೂ ಸಿದ್ಧಾಂತಗಳ ಆಧಾರದ ಮೇಲೆ ಕಾಂಗ್ರೆಸ್ ಸಂಸ್ಥೆಯಿಂದ ಸಿಡಿದು ಹೋಗಿ ಬೇರೆ ಪಕ್ಷಗಳನ್ನು ರಚಿಸಿರುವುದು ಸ್ವಾತಂತ್ರ್ಯ ಪೂರ್ವದಿಂದಲೂ ನಡೆದುಬಂದ ಸಂಪ್ರದಾಯವಾಗಿ ಹೋಗಿದೆ. ಈ ರೀತಿ ಸಿಡಿದುಬಂದ ಪಕ್ಷಗಳು ಅಂತರ್ಧಾನವಾಗಿ ಹೋದ ಉದಾಹರಣೆಗಳೂ ಇವೆ. ಮೊದಮೊದಲು ತತ್ವ ಸಿದ್ಧಾಂತಗಳಿಗಾಗಿ ಕಾಂಗ್ರೆಸ್‌ನಿಂದ ಸಿಡಿದುಬಂದು ಬೇರೆ ಪಕ್ಷಗಳನ್ನು ರಚಿಸಿಕೊಳ್ಳಲಾಗುತ್ತಿತ್ತು. ಆಮೇಲೆ ಸ್ವಾತಂತ್ರ್ಯಾನಂತರ ವ್ಯಕ್ತಿ ಪ್ರತಿಷ್ಠೆಯೇ ಮುಂದಾಗಿ, ತತ್ವ ಸಿದ್ಧಾಂತಗಳು ಹಿನ್ನೆಲೆಗೆ ಸರಿದು ಪಕ್ಷಗಳನ್ನು ಕಟ್ಟುವ ಕೆಲಸ ನಡೆದು, ಯಾವುದು ಮೂಲ ಪಕ್ಷ ಯಾವುದು ಸಿಡಿದುಬಂದ ಪಕ್ಷ ಎಂಬುದೇ ತಿಳಿಯದಂತಾಯಿತು. ಚುನಾವಣೆಗಳಲ್ಲಿ ಗೆದ್ದು ಅಧಿಕಾರ ಹಿಡಿದ ಪಕ್ಷವೆ! ಮೂಲಪಕ್ಷ, ಈ ಪ್ರಕ್ರಿಯೆಯಲ್ಲಿ ಸೋತು ಅಸ್ತಮಾನವಾದ ಪಕ್ಷವೇ ಸಿಡಿದುಬಂದ ಪಕ್ಷ ಎಂಬ ನಿರ್ಣಯಕ್ಕೆ ಸಾರ್ವಜನಿಕರು ಬರಬೇಕಾಯಿತು. ಕಾರಣ ಅವರಿಗೂ, ತತ್ವಸಿದ್ಧಾಂತಗಳ ಜಿಜ್ಞಾಸೆಗೂ ಅಂತರ ಅಗಾಧವಾಗಿದ್ದುದೇ ಎಂದು ಹೇಳಬಹುದು.

ಮೊದಲ ಬಾರಿಗೆ ೧೯೨೨ರ ಕಾಂಗ್ರೆಸ್ ಅಧಿವೇಶನದ ನಂತರ, ಕಾಂಗ್ರೆಸ್‌ನ ಅಂಗ ಸಂಸ್ಥೆಯಾಗಿ ಸ್ವರಾಜ್ಯ ಪಕ್ಷ ರೂಪುಗೊಂಡಿತು. ಚಿತ್ತರಂಜನ್‌ದಾಸ್, ಮೋತಿಲಾಲ್ ನೆಹರೂ ಇದರಲ್ಲಿ ಪ್ರಮುಖರು. ಅಸಹಕಾರ ಚಳವಳಿಯಲ್ಲಿ ಕಾಂಗ್ರೆಸ್ ಜಾಡನ್ನು ಹಿಡಿದು ಸ್ವತಂತ್ರ ಪಕ್ಷ, ಕೌನ್ಸಿಲ್ ಪ್ರವೇಶದಲ್ಲಿ (ಪ್ರಾದೇಶಿಕ ಸರಕಾರಿ ಆಡಳಿತ ಸಂಸ್ಥೆ) ತನ್ನದೇ ಆದ ಹಾದಿ ಹಿಡಿಯಿತು. ಚುನಾವಣೆಗಳಲ್ಲಿ ಸ್ಪರ್ಧಿಸಿ, ಕೌನ್ಸಿಲ್ ಪ್ರವೇಶಿಸುವುದು ಬೇಡ ಎಂದು ಕಾಂಗ್ರೆಸ್ ಸಂಸ್ಥೆ ನಿರ್ಧಾರ ತಳೆದರೆ, ಚುನಾವಣೆಗಳಲ್ಲಿ ಭಾಗವಹಿಸಿ, ಕೌನ್ಸಿಲ್‌ಗಳನ್ನು ಹೊಕ್ಕು ಸರ್ಕಾರದೊಡನೆ ಹೋರಾಡಬೇಕು ಎಂಬುದು ಸ್ವರಾಜ್ಯ ಪಕ್ಷದ ನಿರ್ಧಾರವಾಯಿತು. ೧೯೨೩ರ ಚುನಾವಣೆಗಳಲ್ಲಿ ಸ್ಪರ್ಧಿಸಿ ಭಾರೀ ಬಹುಮತದಿಂದ ಕೌನ್ಸಿಲ್ ಪ್ರವೇಶಿಸಿ ಬ್ರಿಟಿಷ್ ಇಂಡಿಯಾ ಸರ್ಕಾರದೊಡನೆ ಹೋರಾಡಿತು. ೧೯೨೬ರ ಹೊತ್ತಿಗೆ ಕಾಂಗ್ರೆಸ್ ಒಡೆಯುವ ಸ್ಥಿತಿ ಬಂದಾಗ ಮಹಾತ್ಮ ಗಾಂಧೀಜಿಯವರು ಅದನ್ನು ತಪ್ಪಿಸಿದರು. ಸ್ವರಾಜ್ಯ ಪಕ್ಷದ ಅನೇಕರನ್ನು ಕಾಂಗ್ರೆಸ್ ಕಾರ್ಯಕಾರಿ ಸಮಿತಿಗೆ ತೆಗೆದುಕೊಳ್ಳಲಾಯಿತು. ೧೯೨೬ರಲ್ಲಿ ನಡೆದ ಚುನಾವಣೆಯಲ್ಲಿ ಸ್ವರಾಜ್ಯ ಪಕ್ಷ ಹೆಚ್ಚು ಸ್ಥಾನಗಳನ್ನು ಗಳಿಸಿದರೂ ಕೌನ್ಸಿಲ್‌ನಲ್ಲಿ ಬಹುಮತ ಪಡೆಯಲಿಲ್ಲ. ಮುಂದೆ ಸ್ವಾತಂತ್ರ್ಯ ಸಮರ ತೀಕ್ಷ್ಣವಾದಂತೆ ಸ್ವರಾಜ್ಯ ಪಕ್ಷ ಬಲಹೀನವಾಗಿ ಅಸ್ತಂಗತವಾಯಿತು.

ಭಾರತ ಸ್ವಾತಂತ್ರ್ಯಕ್ಕಾಗಿ ಗಾಂಧೀಜಿ ಪ್ರತಿಪಾದಿಸಿದ್ದು ಅಹಿಂಸಾತ್ಮಕ ಹೋರಾಟ ಮಾರ್ಗ. ಅದು ಸುಭಾಷ್ ಚಂದ್ರ ಬೋಸ್‌ರವರಿಗೆ ಒಪ್ಪಿಗೆಯಾಗಲಿಲ್ಲ. ಬ್ರಿಟಿಷರ ಮೇಲೆ ಯುದ್ಧ ಹೂಡಿ ಸ್ವಾತಂತ್ರ್ಯವನ್ನು ಪಡೆಯಬೇಕೆಂಬುದು ಸುಭಾಷರ ದೃಷ್ಟಿ. ಇದು ದೇಶದ ಹಿತದೃಷ್ಟಿಯಿಂದ ಒಳ್ಳೆಯದಲ್ಲವೆಂದು ಕಾಂಗ್ರೆಸ್ಸಿಗರು ಅವರನ್ನು ಬದಲಾಯಿಸಲು ಪ್ರಯತ್ನಿಸಿದರು. ೧೯೩೮ರ ಹರಿಪುರ ಕಾಂಗ್ರೆಸ್ ಅಧಿವೇಶನಕ್ಕೆ ಅವರನ್ನು ಅಧ್ಯಕ್ಷರನ್ನಾಗಿ ಮಾಡಿದರು. ೧೯೩೯ರ ತ್ರಿಪುರ ಕಾಂಗ್ರೆಸ್ ಅಧಿವೇಶನಕ್ಕೆ ಅಧ್ಯಕ್ಷತೆಗೆ ಮಹಾತ್ಮ ಗಾಂಧೀಜಿ ಪಟ್ಟಾಭಿ ಸೀತಾರಾಮಯ್ಯನವರನ್ನು

ಸೂಚಿಸಿದರು. ಸುಭಾಷರೂ ಸ್ಪರ್ಧಿಸಿದರು. ಮಹಾತ್ಮ ಗಾಂಧಿಯವರು ಸೂಚಿಸಿದ್ದ ಅಭ್ಯರ್ಥಿಯನ್ನು ಪರಾಭವಗೊಳಿಸಿ ಅಧ್ಯಕ್ಷ ಪಟ್ಟಕ್ಕೆ ಆಯ್ಕೆಯಾದರು. ಆದರೆ ೧೯೩೯ರ ಏಪ್ರಿಲ್‌ನಲ್ಲಿ ಅವರು ತೀವ್ರ ಭಿನ್ನಾಭಿಪ್ರಾಯಗಳ ಕಾರಣ ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿದರು. ಕಾಂಗ್ರೆಸ್ ಪಕ್ಷದಲ್ಲಿದ್ದ ವಾಮಪಂಥೀಯರು ಹಾಗೂ ತೀವ್ರಗಾಮಿಗಳನ್ನು ಸಂಘಟಿಸಿ ೧೯೩೯ ಮೇ ತಿಂಗಳಲ್ಲಿ ಫಾರ್‌ವರ್ಡ್ ಬ್ಲಾಕ್ ಎಂಬ ಪಕ್ಷ ರಚಿಸಿದರು. ೧೯೩೯ ಜೂನ್ ೨೨ ರಂದು ಮುಂಬಯಿನಲ್ಲಿ ಫಾರ್ವರ್ಡ್ ಬ್ಲಾಕ್‌ನ ಮೊದಲ ಅಧಿವೇಶನ ನಡೆಯಿತು. ಕಾಂಗ್ರೆಸ್ ಪಕ್ಷದ ಚೌಕಟ್ಟಿನ ಒಳಗೇ ಈ ಪಕ್ಷ ಕಾರ್ಯಪ್ರವೃತ್ತವಾಗಿರಬೇಕೆಂಬುದು ಸುಭಾಷರ ಬಯಕೆಯಾಗಿತ್ತು. ಆದರೆ ಸುಭಾಷರನ್ನು ಕಾಂಗ್ರೆಸ್ ಪಕ್ಷದಿಂದ ಮೂರು ವರ್ಷಗಳ ಕಾಲ ಉಚ್ಚಾಟಿಸಲಾಯಿತು. ಪಕ್ಷದ ಸಂಘಟನೆಯಲ್ಲಿ ತೊಡಗಿದ್ದಾಗಲೇ, ಈ ಹೊಸ ಪಕ್ಷದಿಂದ ತನಗೆ ಒದಗಬಹುದಾಗಿದ್ದ ಅಪಾಯವನ್ನು ಮನಗಂಡ ಬ್ರಿಟಿಷ್ ಸರ್ಕಾರ ೧೯೪೦ ಜುಲೈ ತಿಂಗಳಲ್ಲಿ ಸುಭಾಷ್ ಹಾಗೂ ಫಾರ್ವರ್ಡ್ ಬ್ಲಾಕ್ ಪಕ್ಷದ ನಾಯಕರನ್ನು ಬಂಧಿಸಿತು. ಜನವರಿ ೧೬, ೧೯೪೧ರಂದು ಸುಭಾಷರು ವೇಷಾಂತರದಿಂದ ಭಾರತವನ್ನು ತೊರೆದರು. ಅಲ್ಲಿಗೆ ಈ ಪಕ್ಷದ ಚಟುವಟಿಕೆ ನಿಂತುಹೋಯಿತು. ಈಗ ಪಶ್ಚಿಮ ಬಂಗಾಳದ ಸಿ.ಪಿ.ಎಂ. ಸರ್ಕಾರದಲ್ಲಿ ಪಾರ್ವರ್ಡ ಬ್ಲಾಕ್ ಒಂದು ಪ್ರಮುಖ ಪಕ್ಷವಾಗಿದೆ.

೧೯೩೪ರಲ್ಲಿ ಆಚಾರ್ಯ ನರೇಂದ್ರ ದೇವ್, ಅಚ್ಯುತ ಪಟವರ್ಧನ್, ಜಯಪ್ರಕಾಶ್ ನಾರಾಯಣ್, ಅಶೋಕ್ ಮೆಹ್ತಾ, ಇ.ಎಂ.ಎಸ್. ನಂಬೂದರಿಪಾದ್ ಮೊದಲಾದವರು ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಒಳಗುಂಪಾಗಿ ಸೋಷಲಿಸ್ಟ್ ಪಾರ್ಟಿ ಅಥವಾ ಸಮಾದವಾದಿ ಪಕ್ಷವನ್ನು ಸ್ಥಾಪಿಸಿದರು. ಆರಂಭದಲ್ಲಿ ಕಾಂಗ್ರೆಸ್ ಇದರ ಮಾತೃಸಂಸ್ಥೆಯಾಗಿತ್ತು. ಕಾಂಗ್ರೆಸ್ ಸದಸ್ಯರಾದವರು ಮಾತ್ರ ಸಮಾಜವಾದಿ ಪಕ್ಷದ ಸದಸ್ಯರಾಗಬಹುದಾಗಿತ್ತು. ಕಾಂಗ್ರೆಸ್ ಪಕ್ಷದಲ್ಲಿ ಬಲಪಂಥೀಯರ ಪ್ರಭಾವ ಜಾಸ್ತಿಯಾದಾಗ, ಅದನ್ನು ಪ್ರತಿಭಟಿಸಿ ಕ್ರಾಂತಿಕಾರಿ ಮನೋಭಾವವುಳ್ಳ ತರುಣರು ಇದನ್ನು ಸ್ಥಾಪಿಸಿದರು. ರಾಷ್ಟ್ರೀಯ ವಿಚಾರಗಳಲ್ಲಿ ಸಮಾಜವಾದಿ ಪಕ್ಷ ಕಾಂಗ್ರೆಸ್‌ಗೆ ಸಂಪೂರ್ಣವಾಗಿ ಸಹಕರಿಸುತ್ತಿತ್ತು. ಆದರೆ ಬೇರೆ ವಿಚಾರಗಳಲ್ಲಿ ಭಿನ್ನಾಭಿಪ್ರಾಯವಿತ್ತು. ಚಲೇಜಾವ್ ಚಳವಳಿ ಕಾಲದಲ್ಲಿ ಸೋಷಲಿಸ್ಟ್ ಪಕ್ಷ ಕಾಂಗ್ರೆಸ್ ಪಕ್ಷಕ್ಕೆ ಪೂರ್ಣ ಸಹಕಾರ ನೀಡಿತ್ತು. ಆನಂತರ ಸಮಾಜವಾದಿ ಪಕ್ಷ ಬೇರೆಯೇ ಆಯಿತು. ೧೯೬೪ರಲ್ಲಿ ಅಶೋಕ್ ಮೆಹ್ತಾರವರ ಗುಂಪು ಮತ್ತೆ ಕಾಂಗ್ರೆಸ್‌ಗೆ ಸೇರಿತು.

ಸ್ವತಂತ್ರ ಪಕ್ಷವೂ ಕಾಂಗ್ರೆಸ್‌ನಿಂದ ಸಿಡಿದುಹೋದ ಪಕ್ಷವೇ. ೧೯೫೯ರ ಜನವರಿ ತಿಂಗಳಲ್ಲಿ ನಾಗಪುರದಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ, ಕಾಂಗ್ರೆಸ್ ಪಕ್ಷ ಸಮಾಜವಾದಿ ಸಮಾಜ ನಿರ್ಮಾಣ, ಭೂ ಹಿಡುವಳಿಯ ಮಿತಿ, ಭೂ ಸುಧಾರಣೆ, ಸಹಕಾರಿ ಬೇಸಾಯ ಪದ್ಧತಿ, ಸರ್ಕಾರಿ ಉದ್ಯಮಗಳ ವಿಸ್ತರಣೆ ಮುಂತಾದ ನಿರ್ಣಯಗಳನ್ನು ಅಂಗೀಕರಿಸಿತು. ಕಾಂಗ್ರೆಸ್‌ನ ಹಿರಿಯ ನಾಯಕರಾದ ರಾಜಾಜಿ, ಎನ್.ಜಿ. ರಂಗಾ ಮೊದಲಾದವರು ನೆಹರೂರವರ ಕಮ್ಯುನಿಸ್ಟ್ ಪ್ರೀತಿಯೇ ಇದಕ್ಕೆ ಕಾರಣ, ಕಾಂಗ್ರೆಸ್‌ನ ನಿರ್ಣಯಗಳು ಸಂವಿಧಾನದ ಮೂಲಭೂತ ಹಕ್ಕುಗಳಿಗೆ, ವ್ಯಕ್ತಿ ಸ್ವಾತಂತ್ರ್ಯ ಧಕ್ಕೆಯನ್ನು ಉಂಟುಮಾಡುವ ರೀತಿಯಲ್ಲಿವೆ ಎಂದು ವಿರೋಧಿಸಿದರು. ಕಾಂಗ್ರೆಸ್‌ನ ಈ ನಿಲುವನ್ನು ವಿರೋಧಿಸುವವರು ಪಕ್ಷ ಬಿಟ್ಟು ಹೋಗಬಹುದೆಂದು ಜವಹರಲಾಲ ನೆಹರೂರವರು ಖಂಡತುಂಡವಾಗಿ ಹೇಳಿದರು. ಆಗ ರಾಜಾಜಿ, ಎನ್.ಜಿ. ರಂಗಾ, ಮಿನೂಮಸಾನಿ, ಪಿಲೂಮೋದಿ, ಕೆ.ಎಂ. ಮುನ್ಷಿ, ಗಾಯತ್ರಿದೇವಿ, ಆರ್.ಎನ್.ಸಿಂಗ್‌ದೇವ್, ಎನ್. ದಾಂಡೇಕರ್ ಮೊದಲಾದವರೆಲ್ಲ ಸೇರಿ ೧೯೫೯ರ ಜೂನ್ ತಿಂಗಳಲ್ಲಿ ಸ್ವತಂತ್ರ ಪಕ್ಷವನ್ನು ರಚಿಸಿದರು. ರಾಜಕೀಯ ಆಸಕ್ತಿಗಳೆಂಬ ಭೇದಭಾವವಿಲ್ಲದೆ ಎಲ್ಲರಿಗೂ ಸಮಾನ ಅವಕಾಶ ನೀಡಬೇಕೆಂಬುದು ಹಾಗೂ ಜನರೆಲ್ಲರಿಗೂ ಲಾಭಕರವಾದ ಉದ್ಯೋಗವನ್ನು ಒದಗಿಸುವ ಮೂಲಕ ಅವರು ಉತ್ತಮ ಜೀವನ ಸೌಕರ್ಯಗಳನ್ನು ಸಾಧಿಸಿಕೊಳ್ಳುವಂತೆ ಮಾಡುವುದು ಸರ್ಕಾರದ ಪ್ರಧಾನ ಲಕ್ಷಣವಾಗಿರಬೇಕೆಂಬುದು ಸ್ವತಂತ್ರಪಕ್ಷದ ಖಚಿತ ಅಭಿಪ್ರಾಯ. ೧೯೬೭ರ ಸಾರ್ವತ್ರಿಕ ಚುನಾವಣೆಗಳಲ್ಲಿ ಸ್ವತಂತ್ರ ಪಕ್ಷ ದೇಶದ ವಿಧಾನ ಮಂಡಲಗಳಿಗೆ ಹಾಗೂ ಲೋಕಸಭೆಗೆ ಗಣನೀಯ ಸ್ಥಾನಗಳನ್ನು ಗಳಿಸಿತು. ಒರಿಸ್ಸಾ ರಾಜ್ಯದಲ್ಲಿ ಮಂತ್ರಿಮಂಡಲವನ್ನೂ ರಚಿಸಿತು. ೭೭ರ ಸಾರ್ವತ್ರಿಕ ಚುನಾವಣೆಯ ಹೊತ್ತಿಗೆ ಅದರ ಪ್ರಭಾವ ಇಳಿಮುಖವಾಯಿತು.

ಹೀಗೆ ಕಾಂಗ್ರೆಸ್ ಪಕ್ಷದಿಂದ ಬಹಳ ಹಿಂದಿನಿಂದಲೂ ಅನೇಕ ಪಕ್ಷಗಳು ಸಿಡಿದುಹೋಗಿವೆ. ವಿಜೃಂಭಿಸಿ ಅಸ್ತಂಗತವಾಗಿವೆ. ಅವುಗಳ ಪೈಕಿ ಬ್ರಹ್ಮಾನಂದ ರೆಡ್ಡಿ ಕಾಂಗ್ರೆಸ್ ಹಾಗೂ ದೇವರಾಜ ಅರಸ್ ಕಾಂಗ್ರೆಸ್‌ಗಳ ಬಗ್ಗೆ ಸ್ಥೂಲವಾದ ವಿವೇಚನೆಯನ್ನು ಈ ಲೇಖನದಲ್ಲಿ ಮಾಡಲಾಗಿದೆ. ತುರ್ತು ಪರಿಸ್ಥಿತಿಯ ಕಾಲದಲ್ಲಿ ದೇವಕಾಂತ ಬರೂವಾ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಅವರು ರಾಜೀನಾಮೆ ನೀಡಿದ ನಂತರ ಏಪ್ರಿಲ್ ೧೪, ೧೯೭೭ರಂದು ಸ್ವರ್ಣಸಿಂಗ್ ಹಂಗಾಮಿ ಅಧ್ಯಕ್ಷರಾದರು. ೬ ಮೇ ೧೯೭೭ ರಂದು ದೆಹಲಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಪೂರ್ಣಾವಧಿ ಅಧ್ಯಕ್ಷರಾದರು.

ಆನಂತರ ಇಂದಿರಾ ಗಾಂಧಿಯವರಿಗೂ ಮತ್ತು ಬ್ರಹ್ಮಾನಂದ ರೆಡ್ಡಿ, ವೈ.ಬಿ. ಚವಾಣ್‌ರವರಿಗೂ ಭಿನ್ನಾಭಿಪ್ರಾಯಗಳು ಉಂಟಾದವು. ಜನವರಿ ೨, ೧೯೭೮ರಂದು ದೆಹಲಿಯಲ್ಲಿ ನಡೆದ ವಿಶೇಷ ಅಧಿವೇಶನದಲ್ಲಿ ಇಂದಿರಾ ಕಾಂಗ್ರೆಸ್ ಪಕ್ಷ ಅಥವಾ ಕಾಂಗ್ರೆಸ್ (ಐ) ಉದಯವಾಯಿತು. ಬ್ರಹ್ಮಾನಂದ ರೆಡ್ಡಿ ನೇತೃತ್ವದ ಕಾಂಗ್ರೆಸ್ ಬೇರೆಯಾಗಿ ಉಳಿದುಕೊಂಡು ರೆಡ್ಡಿ ಕಾಂಗ್ರೆಸ್ ಎಂಬ ಹೆಸರನ್ನು ಪಡೆಯಿತು. ೨೬.೭.೭೭ ರಂದು ಕರ್ನಾಟಕ ಪ್ರದೇಶ (ಆರ್) ಸಮಿತಿ ಅಧ್ಯಕ್ಷರಾಗಿದ್ದ ಕೆ.ಎಚ್. ಪಾಟೀಲ್‌ರವರು ಬ್ರಹ್ಮಾನಂದ ರೆಡ್ಡಿಯವರನ್ನು ಬೆಂಬಲಿಸಿ ಕರ್ನಾಟಕ ಪ್ರದೇಶ ರೆಡ್ಡಿ ಕಾಂಗ್ರೆಸ್ ಅಧ್ಯಕ್ಷರಾದರು. ದೇವರಾಜ ಅರಸರು ಇಂದಿರಾ ಗಾಂಧಿಯವರನ್ನು ಬೆಂಬಲಿಸಿ ೧೨.೧.೭೮ರಂದು ಕರ್ನಾಟಕ ಪ್ರದೇಶ ಕಾಂಗ್ರೆಸ್ (ಐ) ಅಧ್ಯಕ್ಷರಾದರು.

ಇಂದಿರಾ ಗಾಂಧಿ ಹಾಗೂ ದೇವರಾಜ ಅರಸರಿಗೆ ಭಿನ್ನಾಭಿಪ್ರಾಯಗಳು ಉಂಟಾದವು. ಆ ಸಂದರ್ಭದಲ್ಲಿ ಅಖಿಲ ಭಾರತ ರೆಡ್ಡಿ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಬ್ರಹ್ಮಾನಂದ ರೆಡ್ಡಿಯವರು ೨೭.೧೧.೭೯ರಂದು ತಮ್ಮ ಹುದ್ದೆಗೆ ರಾಜೀನಾಮೆ ನೀಡಿ ಇಂದಿರಾ ಕಾಂಗ್ರೆಸ್ ಸೇರಿದರು.

ಬ್ರಹ್ಮಾನಂದ ರೆಡ್ಡಿ ನೇತೃತ್ವದಲ್ಲಿದ್ದ ಕಾಂಗ್ರೆಸ್‌ಗೆ ದಿನಾಂಕ ೧.೩.೭೮ರಂದು ಸರ್ದಾರ್ ಸ್ವರ್ಣಸಿಂಗ್ ಮತ್ತೆ ಅಧ್ಯಕ್ಷರಾದರು. ಸೆಪ್ಟೆಂಬರ್ ೧೩.೧೯೭೯ರಂದು ಬೆಂಗಳೂರಿನಲ್ಲಿ ಅಖಿಲ ಭಾರತ ಕಾಂಗ್ರೆಸ್ (ಎಸ್) ಅಧಿವೇಶನದಲ್ಲಿ ದೇವರಾಜ ಅರಸರು ಅದರ ಅಧ್ಯಕ್ಷರಾದರು. ಅಂದಿನಿಂದ ಅಖಿಲಭಾರತ ಕಾಂಗ್ರೆಸ್ (ಯು) ಅಸ್ತಿತ್ವಕ್ಕೆ ಬಂದಿತು. ೫.೮.೮೧ ರಂದು ಕಾಂಗ್ರೆಸ್ (ಯು) ಮತ್ತೆ ಒಡೆಯಿತು. ಜಗಜೀವನರಾಂ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಎಂಬ ಪಕ್ಷ ಕಟ್ಟಿದರು. ಅನಂತರ ದೇವರಾಜ ಅರಸರು ಕರ್ನಾಟಕ ಕ್ರಾಂತಿರಂಗ ಎಂಬ ಪಕ್ಷ ಕಟ್ಟಿದರು. ಕಾಂಗ್ರೆಸ್(ಯು) ಅಸ್ತಮಾನವಾಯಿತು.

## ಬ್ರಹ್ಮಾನಂದ ರೆಡ್ಡಿ ಕಾಂಗ್ರೆಸ್

ಬೆಂಗಳೂರಿನಲ್ಲಿ ೧ ಮತ್ತು ೨ ಜನವರಿ ೭೮ರಂದು ಇಂದಿರಾ ಕಾಂಗ್ರೆಸ್ ಅಧಿವೇಶನಕ್ಕೆ ಮುನ್ನವೇ ೩೦-೧೧-೭೭ರಂದು ಮಂಡ್ಯದಲ್ಲಿ ಪ್ರದೇಶ ಕಾಂಗ್ರೆಸ್ ಸಮ್ಮೇಳನ ನಡೆಯಿತು. ಇದೇ ರಾಜ್ಯದಲ್ಲಿ ನಡೆದ ರೆಡ್ಡಿ ಕಾಂಗ್ರೆಸ್‌ನ ಪ್ರಥಮ ಅಧಿವೇಶನ ಎಂದು ಹೇಳಬಹುದು . ಕೇಂದ್ರಕ್ಕಿಂತ ಮೊದಲೇ ರಾಜ್ಯದಲ್ಲಿ ಕಾಂಗ್ರೆಸ್ ವಿಭಜನೆಯಾಗಿತ್ತು. ೨೦೭ ಕೆ.ಪಿ.ಸಿ.ಸಿ. ಸದಸ್ಯರಲ್ಲಿ ೧೫೫ ಜನ ಸದಸ್ಯರು ಹಾಜರಿದ್ದರು ಎಂದು ತಿಳಿದುಬಂದಿತ್ತು. ಮಂಡ್ಯ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಕೆ.ಎನ್. ನಾಗೇಗೌಡ ಅಧಿವೇಶನದ ಹೊರೆ ಹೊತ್ತಿದ್ದರು. ಇದನ್ನು ಕೆ.ಪಿ.ಸಿ.ಸಿ. ಸರ್ವಸದಸ್ಯರ ಸಭೆ ಎಂದು ಕರೆಯಲಾಯಿತು. ಡಿ. ದೇವರಾಜ ಅರಸು ರಾಜೀನಾಮೆಗೆ ಒತ್ತಾಯಿಸಿ ನಿರ್ಣಯ ಸ್ವೀಕರಿಸಲಾಯಿತು.

೩-೧-೭೮ ರಂದು ದೆಹಲಿಯಲ್ಲಿ ಎ.ಐ.ಸಿ.ಸಿ. ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ಇಂದಿರಾ ಗಾಂಧಿಯವರನ್ನು ಕಾಂಗ್ರೆಸ್ ಪಕ್ಷದಿಂದ ಉಚ್ಚಾಟಿಸಲಾಯಿತು. ಇಂದಿರಾ ಗಾಂಧಿ ಅಧ್ಯಕ್ಷತೆಯ ಪಕ್ಷ ಸೇರಿದವರೆಲ್ಲರೂ ಕೂಡಾ ಕಾಂಗ್ರೆಸ್‌ನಿಂದ ಉಚ್ಚಾಟಿತರಾದಂತೆಯೇ ಎಂದು ಪಕ್ಷದ ಪ್ರಧಾನ ಕಾರ್ಯದರ್ಶಿ ವಿ.ಬಿ.ರಾಜು ತಿಳಿಸಿದರು. ಪಶ್ಚಿಮ ಬಂಗಾಳ ಕಾಂಗ್ರೆಸ್ ಸಮಿತಿ ಅಧ್ಯಕ್ಷ ಪ್ರಣವ್ ಮುಖರ್ಜಿ, ಕಾರ್ಯದರ್ಶಿ ಸಿದ್ಧಾರ್ಥ ಶಂಕರ ರೇ ವಿಭಜನೆ ದುರದೃಷ್ಟಕರ ಎಂದರು. ಕಾಂಗ್ರೆಸ್ ರೋಗ ವಿಮುಕ್ತವಾಯಿತು, ಪೀಡೆ ಕಳೆಯಿತು, ಇಂದಿರಾ ಕಾಂಗ್ರೆಸ್‌ನಲ್ಲಿ ಅಹಂಕಾರಿಗಳಿಗೆ ಮನ್ನಣೆ ಸಿಕ್ಕಿದೆ ಎಂದು ಪ್ರಿಯರಂಜನದಾಸ್ ಮುನ್ಷಿ ಕಾಂಗ್ರೆಸ್ ಸಮಿತಿ ಅಧ್ಯಕ್ಷರುಗಳು ಬ್ರಹ್ಮಾನಂದ ರೆಡ್ಡಿ ಕಾಂಗ್ರೆಸ್‌ಗೆ ಬೆಂಬಲ ಘೋಷಿಸಿದರು. ಅದೇ ರೀತಿ ಮಹಾರಾಷ್ಟ್ರ ಮುಖ್ಯಮಂತ್ರಿ ವಸಂತದಾದಾ ಪಾಟೀಲ್, ಗುಜರಾತ್ ಮಾಜಿ ಮುಖ್ಯಮಂತ್ರಿ ಹಿತೇಂದ್ರ ದೇಸಾಯಿ, ಅಸ್ಸಾಂ ಮುಖ್ಯಮಂತ್ರಿ ಸಿನ್ಹಾ, ಹರಿಯಾಣ ಮಾಜಿ ಮುಖ್ಯಮಂತ್ರಿ ಬನಾರಸಿದಾಸ್ ಗುಪ್ತಾ, ತಮಿಳುನಾಡು ಮಾಜಿ ಮುಖ್ಯಮಂತ್ರಿ ಭಕ್ತವತ್ಸಲಂ, ಕೆ.ಡಿ. ಮಾಳವೀಯ, ವೈಯಲಾರ್ ರವಿ ಇವರು ಬ್ರಹ್ಮಾನಂದ ರೆಡ್ಡಿ ಕಾಂಗ್ರೆಸ್‌ಗೆ ತಮ್ಮ ಬೆಂಬಲ ವ್ಯಕ್ತಪಡಿಸಿದರು.

ಗುಲಬರ್ಗ, ಹಾಸನ ಜಿಲ್ಲಾ ಕಾಂಗ್ರೆಸ್ ಸಮಿತಿಗಳನ್ನು ಕೆ.ಪಿ.ಸಿ.ಸಿ. ಅಧ್ಯಕ್ಷ ಪಾಟೀಲ ರದ್ದುಪಡಿಸಿ ಹೀರಾಸಿಂಗ್ ರಾಥೋಡ್ ಮತ್ತು ಎನ್. ಶಿವಪ್ಪ ಅಧ್ಯಕ್ಷತೆಯ ಹೊಸ ಸಮಿತಿಗಳನ್ನು ರಚಿಸಿದರು. ಅಧಿಕಾರ ಅಂತಸ್ತಿಗಾಗಿ ಕಾಂಗ್ರೆಸ್ ವಿಭಜನೆಯಾಗಿದೆ ಎಂದು ಮಹಮದ್ ಅಲಿ ಟೀಕಿಸಿದರು. ಇಡೀ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಕಾಂಗ್ರೆಸ್ ಜಿಲ್ಲೆಗಳಲ್ಲಿ ಕಾಂಗ್ರೆಸ್ ಸಮಿತಿಗಳು ರೆಡ್ಡಿ, ಇಂದಿರಾ ಕಡೆ ವಿಭಜಿತವಾದವು. ರೆಡ್ಡಿ ಹಾಗೂ ಇಂದಿರಾ ಕಾಂಗ್ರೆಸ್ ಪಕ್ಷಗಳಲ್ಲಿ ಪ್ರತಿನಿತ್ಯ ಸಸ್ಪೆಂಡ್‌ಗಳು, ಷೋಕಾಸ್ ನೋಟೀಸ್‌ಗಳು, ಹೊಸ ನೇಮಕಾತಿಗಳು, ವಿಸ್ತರಣೆಗಳು ಸಾಮಾನ್ಯವಾಗಿ ನಡೆಯತೊಡಗಿದವು. ಇಡೀ ದೇಶದಲ್ಲಿ ಪಕ್ಷದ ಆಸ್ತಿಗಾಗಿ ಆಕ್ರಮಣ, ಕಚ್ಚಾಟಗಳು ನಡೆಯುತೊಡಗಿದವು. ಕಾಂಗ್ರೆಸ್ ಕಾರ್ಯಾಲಯಗಳನ್ನು ವಶಪಡಿಸಿಕೊಳ್ಳುವುದು ನಡೆಯಿತು. ಆದರೆ ಬೆಂಗಳೂರಿನಲ್ಲಿ ಕಾಂಗ್ರೆಸ್

ಭವನದ ಬಗ್ಗೆ ತಕರಾರು ಬರಲಿಲ್ಲ. ಈ ಬಗ್ಗೆ ತಾವು ತಕರಾರು ತೆಗೆಯುವುದಿಲ್ಲವೆಂದು ಅರಸು ಪ್ರಕಟಿಸಿದರು. ಬೆಂಗಳೂರಿನ ಪ್ರದೇಶ ಕಾಂಗ್ರೆಸ್ ಸಮಿತಿ ಭವನ ರೆಡ್ಡಿ ಕಾಂಗ್ರೆಸ್‌ಗೆ ದೊರೆಯಿತು.

ಆದರೆ ೧೯೭೭ರ ಫೆಬ್ರವರಿ ಮಾರ್ಚ್ ತಿಂಗಳಲ್ಲಿ ಪಕ್ಷಕ್ಕೆ ಬಂದಿದ್ದ ೪೦ ಲಕ್ಷ ರೂಪಾಯಿಗಳ ಹಣ ದುರುಪಯೋಗವಾಗಿದೆ ಎಂದು ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿ ಪುಟ್ಟದಾಸ್‌ರವರು ೧೮-೧-೭೮ರಂದು ಅರಸು ಬೆಂಬಲಿಗರಾದ ಎಸ್.ಬಿ. ನಾಗರಾಳ್, ಆರ್.ಎಂ.ದೇಸಾಯಿ ಮತ್ತು ನಾಗಮ್ಮ ಕೇಶವಮೂರ್ತಿ ಇವರ ವಿರುದ್ಧ ಪೋಲೀಸರಿಗೆ ದೂರು ನೀಡಿದರು. ೫-೧-೭೮ರಂದು ಬ್ರಹ್ಮಾನಂದರೆಡ್ಡಿಯವರು ದೆಹಲಿಯಲ್ಲಿ ಪಕ್ಷದ ಸಂಸದರ ಸಭೆ ನಡೆಸಿದರು. ೧೦೭ ಲೋಕಸಭಾ ಸದಸ್ಯರು, ೧೧೫ ರಾಜ್ಯಸಭಾ ಸದಸ್ಯರು ಈ ಸಭೆಯಲ್ಲಿ ಹಾಜರಿದ್ದರೆಂದು ಲೋಕಸಭೆಯ ಮುಖ್ಯ ಸಚೇತಕರಾದ ಎಂ.ವಿ. ಕೃಷ್ಣಪ್ಪ ತಿಳಿಸಿದರು. ೭೫೦ ಎ.ಐ.ಸಿ.ಸಿ. ಸದಸ್ಯರಲ್ಲಿ ಕೇವಲ ೧೪೫ ಜನ ಇಂದಿರಾ ಮೇಳಕ್ಕೆ ಹೋಗಿದ್ದರು, ನಮಗೇ ಬಹುಮತ ಇದೆ ಎಂದು ಅವರು ತಿಳಿಸಿದರು, ೮-೧-೭೮ ರಂದು ದೆಹಲಿಯಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ದೇಶದ ಕಾರ್ಯಕಾರಿ ಸಮಿತಿ ಸಭೆ ನಡೆಯಿತು. ದೇಶದ ೨೪ ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರುಗಳ ಪೈಕಿ ೨೦ ಮಂದಿ ಹಾಜರಿದ್ದರೆಂದು ತಿಳಿದುಬಂದಿತು. ಇಂದಿರಾ ಗಾಂಧಿ ತಂತ್ರ ಬಯಲಿಗೆಳೆಯಲು ವೈ.ಬಿ. ಚವಾಣ್ ಮನವಿ ಮಾಡಿದರು. ೬-೨-೭೮ರಂದು ಬೆಂಗಳೂರಿನಲ್ಲಿ ಲಾಲ್‌ಬಾಗ್ ಗಾಜಿನಮನೆಯಲ್ಲಿ ರೆಡ್ಡಿ ಕಾಂಗ್ರೆಸ್‌ನ ಪ್ರದೇಶ ಸಮಿತಿ ಅಧಿವೇಶನ ನಡೆಯಿತು. ಬ್ರಹ್ಮಾನಂದ ರೆಡ್ಡಿ, ವೈ.ಬಿ. ಚವಾಣ್ ಭಾಗವಹಿಸಿದ್ದರು. ಎಂ.ವಿ. ಕೃಷ್ಣಪ್ಪ, ಟಿ.ಎ.ಪೈ, ಕೆ. ಹೆಚ್. ಪಾಟೀಲ್, ವಿ.ಬಿ.ರಾಜು ಮುಂತಾದವರು ಮಾತನಾಡಿದರು. ಇಂದಿರಾ ಗಾಂಧಿ ಮತ್ತೆ ಅಧಿಕಾರಕ್ಕೆ ಬರಲು ಸಾಧ್ಯವಿಲ್ಲ ಎಂದು ಚವಾಣ್ ಹೇಳಿದರು.

೧೩-೧-೭೮ರಂದು ಕೆ.ಪಿ.ಸಿ.ಸಿ ಅಧ್ಯಕ್ಷ ಕೆ.ಎಚ್. ಪಾಟೀಲರು ಕಾಂಗ್ರೆಸ್‌ನ ರಾಜ್ಯ ಕಾರ್ಯಕಾರಿ ಸಮಿತಿಯನ್ನು ಪುನರ್ರಚಿಸಿದರು. ಅವರೇ ಅಧ್ಯಕ್ಷರಾಗಿದ್ದ ಈ ಸಮಿತಿಯಲ್ಲಿ ಎಂ.ಮಲ್ಲಿಕಾರ್ಜುನಸ್ವಾಮಿ, ಮಹಮದ್ ಅಲಿ, ಎಸ್.ಎಂ.ಕೃಷ್ಣ , ಎಚ್.ಟಿ.ರೆಡ್ಡಿ, ಎಚ್.ಎನ್. ನಂಜೇಗೌಡ, ಪುಟ್ಟದಾಸ್, ಅಬ್ದುಲ್ ನಜೀರ್‌ಸಾಬ್, ಎನ್.ಚಿಕ್ಕೇಗೌಡ, ಗೋಪಿನಾಥ ಸಾಂಡ್ರಾ, ಎಂ.ವಿ.ಕೃಷ್ಣಪ್ಪ, ಎಚ್.ಬಿ. ಪಾಟೀಲ್, ತುಳಸೀದಾಸ್ ದಾಸಪ್ಪ, ಎಚ್.ಸಿದ್ದವೀರಪ್ಪ, ಟಿ.ವಿ. ಚಂದ್ರಶೇಖರಪ್ಪ, ರಘುಪತಿ, ವಿ.ಎಲ್. ಪಾಟೀಲ, ಎಸ್. ಹುಚ್ಚಮಾಸ್ತಿಗೌಡ, ಜಾಗೀರ್‌ದಾರ್, ಕೆ.ಎಫ್. ಪಾಟೀಲ್, ಕೆ. ಲಕ್ಕಪ್ಪ, ಎಂ. ಎಚ್. ಜಯಪ್ರಕಾಶ ನಾರಾಯಣ, ಎಫ್. ಎಚ್. ಮೊಹಿಸೀನ್, ಕೊಲ್ಲೂರು ಮಲ್ಲಪ್ಪ, ಎಸ್. ಶಿವಪ್ಪ, ಎಲ್. ಆರ್. ನಾಯಕ್- ಇವರುಗಳು ಸದಸ್ಯರಾಗಿದ್ದರು. ೨೨ ಜಿಲ್ಲಾ ಕಾಂಗ್ರೆಸ್ ಸಮಿತಿಗಳಲ್ಲಿ ೯ನ್ನು ಈಗಾಗಲೇ ಪುನರ್ರಚಿಸಲಾಗಿದೆ, ಜನವರಿ ೨೩ರಿಂದ ೩೧ರವರೆಗೆ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾ ಸಮ್ಮೇಳನಗಳನ್ನು ನಡೆಸಲಾಗುವುದು, ಫೆಬ್ರವರಿ ೧ ಮತ್ತು ೨ ರಂದು ರಾಜ್ಯಮಟ್ಟದ ಸಮ್ಮೇಳನ ನಡೆಸಲಾಗುವುದೆಂದು ಕೆ.ಎಚ್. ಪಾಟೀಲ್ ಪ್ರಕಟಿಸಿದರು. ೨೩.೧.೧೯೭೮ ರಂದು ಚನಾವಣಾ ಆಯೋಗ ರೆಡ್ಡಿ ಕಾಂಗ್ರೆಸ್‌ಗೆ ಹಸು-ಕರು ಗುರುತನ್ನು ನೀಡಿತು. ಈ ಬಗ್ಗೆ ಇಂದಿರಾ ಗಾಂಧಿ ಕಾಂಗ್ರೆಸ್ ಸುಪ್ರೀಂ ಕೋರ್ಟಿಗೆ ಅಪೀಲು ಸಲ್ಲಿಸಿತು. ದಿನಾಂಕ ೩೧-೧-೭೮ರಂದು ಸುಪ್ರೀಂ ಕೋರ್ಟ್ ರೆಡ್ಡಿ ಕಾಂಗ್ರೆಸ್‌ಗೆ ಹಸು-ಕರು ಚುನಾವಣಾ ಚಿಹ್ನೆ ನೀಡಿಕೆ ಕ್ರಮಬದ್ಧ ಎಂದು ತೀರ್ಪು ನೀಡಿತು.

## ೧೯೭೮ರ ವಿಧಾನಸಭಾ ಚುನಾವಣೆಗಳು ಮತ್ತು ರೆಡ್ಡಿ ಕಾಂಗ್ರೆಸ್

೧೯೭೮ರ ಮಾರ್ಚ್ ನಡೆದ ವಿಧಾನಸಭಾ ಚುನಾವಣೆಗಳಲ್ಲಿ ಆಡಳಿತ ಕಾಂಗ್ರೆಸ್ ಜಯಭೇರಿ ಬಾರಿಸಿ ೧೬೫ ಸ್ಥಾನಗಳನ್ನು ಪಡೆದು ಅಧಿಕಾರಕ್ಕೆ ಬಂದಿತ್ತು. ೨೩ ಮಾರ್ಚ್ ೧೯೭೨ರಂದು ದೇವರಾಜ ಅರಸ್ ಮುಖ್ಯಮಂತ್ರಿಗಳಾಗಿ ಅಧಿಕಾರ ಸ್ವೀಕರಿಸಿದ್ದರು. ಸರ್ಕಾರದ ಅಧಿಕಾರಾವಧಿ ೧೯೭೮ರ ಮಾರ್ಚ್‌ವರೆಗೆ ಇತ್ತು. ಆದರೆ ಕಾಂಗ್ರೆಸ್ ಪಕ್ಷ ರೆಡ್ಡಿ ಕಾಂಗ್ರೆಸ್ - ಇಂದಿರಾ ಕಾಂಗ್ರೆಸ್ ಎಂದು ೧೯೭೮ರ ಜನವರಿಯಲ್ಲಿ ವಿಭಜನೆಗೊಂಡ ಪರಿಣಾಮವಾಗಿ ಅರಸರು ಬಹುಮತ ಕಳೆದುಕೊಂಡರು. ೧೯೭೭ರ ಡಿಸೆಂಬರ ೩೧ ರಂದು ಕೇಂದ್ರ, ಸರ್ಕಾರ ಅರಸು ಸರ್ಕಾರವನ್ನು ವಜಾಮಾಡಿ, ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತವನ್ನು ಜಾರಿಗೆ ತಂದಿತು. ಫೆಬ್ರವರಿ ೭೮ರಲ್ಲಿ ರಾಜ್ಯ ವಿಧಾನಸಭೆಗೆ ಚುನಾವಣೆ ನಡೆಸಲು ನಿರ್ಧರಿಸಲಾಯಿತು. ಆದರೂ ಕೂಡಾ ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದ ಕೆ.ಎಚ್.ಪಾಟೀಲರು, ಎ.ಐ.ಸಿ.ಸಿ. ಆದೇಶದ ಮೇರೆಗೆ ಚುನಾವಣಾ ಸಿದ್ಧತೆಗಳನ್ನು ೧೯೭೭ರ ನವೆಂಬರ್ ತಿಂಗಳಿನಿಂದಲೇ ಆರಂಭಿಸಿದ್ದರು. ೧೯೭೭ರ ನವೆಂಬರ್ ೧೭ ರಂದೇ ಅವರು ಎಸ್.ಎಂ.ಕೃಷ್ಣ ನೈತೃತ್ವದಲ್ಲಿ ಪ್ರದೇಶ ಕಾಂಗ್ರೆಸ್ ಸಮಿತಿಯ ಚುನಾವಣಾ ಪ್ರಣಾಳಿಕೆ ಸಮಿತಿಯನ್ನು ರಚಿಸಿದ್ದರು. ೨೬-೧೧-೭೭ ರಂದು ವಿಧಾನಸಭಾ ಚುನಾವಣೆಗಳಿಗೆ ಸ್ಪರ್ಧಿಸಲು ಅಭ್ಯರ್ಥಿಗಳಿಂದ ಅರ್ಜಿ ಸ್ವೀಕರಿಸಲು ನಿರ್ಧರಿಸಿದರು. ಡಿಸೆಂಬರ್ ೧ ರಂದು ಚುನಾವಣಾ ಪ್ರಣಾಳಿಕೆಯನ್ನು ಕೆ.ಪಿ.ಸಿ.ಸಿ. ಪರಿಶೀಲಿಸುವುದೆಂದೂ ಸದಸ್ಯತ್ವದ ನವೀಕರಣಕ್ಕೆ ಡಿಸೆಂಬರ್ ೩೧ ಕೊನೇದಿನ ಎಂದೂ ಪ್ರಕಟಿಸಿದರು. ಜನವರಿ ೨೦ ರೊಳಗೆ ಅಭ್ಯರ್ಥಿಗಳ ಯಾದಿಯನ್ನು ಸಿದ್ಧಪಡಿಸುವುದಾಗಿಯೂ, ಈಗಾಗಲೇ ೧೨೪

ಜನ ಅರ್ಜಿ ಸಲ್ಲಿಸಿದ್ದಾರೆಂದೂ ದಿನಾಂಕ ೪-೧-೭೭ರಂದು ಪ್ರಕಟಿಸಿದರು. ದಿನಾಂಕ ೧೫-೧-೭೭ರ ಒಳಗಾಗಿ ಜಿಲ್ಲಾ ಕಾಂಗ್ರೆಸ್ ಸಮಿತಿಗಳು ಅಭ್ಯರ್ಥಿಗಳ ಅರ್ಜಿಗಳನ್ನು ಪ್ರದೇಶ ಕಾಂಗ್ರೆಸ್ ಸಮಿತಿಗೆ ಕಳುಹಿಸಿಕೊಂಡುವಂತೆಯೂ, ೧೫ರಿಂದ ೧೯ರವರೆಗ ಅರ್ಜಿಗಳನ್ನು ಪರಿಶೀಲಿಸಲಾಗುವುದೆಂದೂ, ೨೦ ರಂದು ಅಭ್ಯರ್ಥಿಗಳ ಅಂತಿಮ ಪಟ್ಟಿ ಪ್ರಕಟಿಸಲಾಗುವುದೆಂದೂ ಪಾಟೀಲರು ಪ್ರಕಟಿಸಿದರು ಹಾಗೂ ಪ್ರದೇಶ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯೇ ಚುನಾವಣಾ ಸಮಿತಿಯಾಗಿ ಕಾರ್ಯನಿರ್ವಹಿಸಲು ಅನುಮತಿ ನೀಡಬೇಕೆಂದು ಎ.ಐ.ಸಿ.ಸಿ.ಗೆ ವಿನಂತಿ ಮಾಡಿಕೊಂಡಿರುವುದಾಗಿಯೂ ಹೇಳಿದರು. ಫೆಬ್ರವರಿ ೨೫ರಂದು ರಾಜ್ಯ ವಿಧಾನಸಭೆಗೆ ಚುನಾವಣೆ ನಡೆಸುವ ಅಧಿಕೃತ ಪ್ರಕಟಣೆ ೧೯-೧-೭೮ರಂದು ಹೊರಬಿತ್ತು.

ಈ ಮಧ್ಯೆ ಎಸ್.ಬಿ. ನಾಗರಾಳ ದಿನಾಂಕ ೨೧-೧-೭೮ರಂದು ಅರಸು ಗುಂಪಿನಿಂದ ಹೊರಬಿದ್ದರೆ, ರೆಡ್ಡಿ ಕಾಂಗ್ರೆಸ್‌ನ ಎಂ.ಮಲ್ಲಿಕಾರ್ಜುನಸ್ವಾಮಿ, ಎನ್. ಚಿಕ್ಕೇಗೌಡ ಅರಸು ಗುಂಪನ್ನು ಸೇರಿದರು. ೨೦-೧-೭೮ಕ್ಕೆ ಅಭ್ಯರ್ಥಿಗಳ ಪಟ್ಟಿಯನ್ನು ಸಿದ್ದಪಡಿಸಿಕೊಂಡು, ೨೫ರಂದು ಪಾಟೀಲರು ದೆಹಲಿಗೆ ತೆರಳಿದರು. ರಾಜ್ಯ ವಿಧಾನಸಭಾ ಕಾಂಗ್ರೆಸ್ ಪಟ್ಟಿಯನ್ನು ದಿನಾಂಕ ೩೦-೧-೨೮ರಂದು ದೆಹಲಿಯಲ್ಲಿ ಪಕ್ಷದ ಪ್ರಧಾನ ಕಾರ್ಯದರ್ಶಿ ವಿ.ಬಿ.ರಾಜು ಬಿಡುಗಡೆ ಮಾಡಿದರು. ಬೆಂಗಳೂರಿನಲ್ಲಿ ಹೆಚ್.ಟಿ.ರೆಡ್ಡಿ ಪಟ್ಟಿ ಬಿಡುಗಡೆ ಮಾಡಿದರು.

೧೪೨ ಜನ ಅಭ್ಯರ್ಥಿಗಳ ಮೊದಲ ಪಟ್ಟಿ ಬಿಡುಗಡೆ ಆಗಿತ್ತು. ಅದರಲ್ಲಿ ಅತಿರಥ ಮಹಾರಥರುಗಳು ಇದ್ದಾರೆಂದೂ ಹೇಳಲಾಯಿತು. ೧೪೨ ರಲ್ಲಿ ಒಕ್ಕಲಿಗರಿಗೆ ೨೨, ಲಿಂಗಾಯಿತರಿಗೆ ೨೬, ಹರಿಜನರಿಗೆ ೨೦, ಮುಸ್ಲಿಮರಿಗೆ ೧೧ ಸ್ಥಾನಗಳನ್ನು ನೀಡಲಾಗಿದೆ ಎಂದು ಪತ್ರಿಕೆಗಳು ವಿಶ್ಲೇಷಣೆ ನಡೆಸಿದವು. ೩೧-೧-೭೮ ರಂದು ೪೩ ಅಭ್ಯರ್ಥಿಗಳ ಎರಡನೇ ಪಟ್ಟಿ ಬಿಡುಗಡೆ ಆಯಿತು. ದಿನಾಂಕ ೧-೨-೨೮ರಂದು ಎಸ್.ಎಂ.ಕೃಷ್ಣ ಅಧ್ಯಕ್ಷತೆಯಲ್ಲಿ ಪ್ರಚಾರ ಸಮಿತಿಯನ್ನು ರಚಿಸಲಾಯಿತು. ಇದರಿಂದಾಗಿ ಎಸ್.ಎಂ. ಕೃಷ್ಣರವರು ಮದ್ದೂರಿನಿಂದ ಸ್ಪರ್ಧಿಸುವುದಿಲ್ಲ ಎಂದು ತಿಳಿಯಲಾಯಿತು. ಬ್ರಹ್ಮಾನಂದ ರೆಡ್ಡಿ, ವೈ.ಬಿ.ಚವಾಣ್, ಸಿ.ಎಂ. ಸ್ಟೀಫನ್, ವಸಂತದಾದಾ ಪಾಟೀಲ್, ಸಿ.ಸುಬ್ರಹ್ಮಣ್ಯಂ, ಸಿದ್ಧಾರ್ಥ ಶಂಕರ ರೇ, ಪ್ರಿಯರಂಜನ್‌ದಾಸ್ ಮುನ್ಷಿ, ವಿ.ಬಿ.ರಾಜು, ಶ್ರೀಮತಿ ಅಂಬಿಕಾಸೋನಿ ಮುಂತಾದವರು ರಾಜ್ಯದಲ್ಲಿ ಚುನಾವಣಾ ಪ್ರಚಾರ ಕೈಗೊಳ್ಳಲಿದ್ದಾರೆ ಎಂದು ಕೆ.ಎಚ್. ಪಾಟೀಲರು ಪ್ರಕಟಿಸಿದರು. ಒಟ್ಟು ೨೧೨ ಸ್ಥಾನಗಳಿಗೆ ರೆಡ್ಡಿ ಕಾಂಗ್ರೆಸ್ ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿತು. ಯಾವುದೇ ಪಕ್ಷದೊಡನೆ ಹೊಂದಾಣಿಕೆ ಮೈತ್ರಿ ಮಾಡಿಕೊಳ್ಳಲಿಲ್ಲ. ಎಸ್.ಎಂ. ಕೃಷ್ಣ. ತುಳಸೀದಾಸಪ್ಪ, ಕೆ.ಎಚ್. ಪಾಟೀಲ್, ಎಚ್.ಎಸ್. ನಂಜೇಗೌಡ, ಮಹಮದ್ ಅಲಿ ಮೊದಲಾದ ಮುಖಂಡರು ರಾಜ್ಯದಾದ್ಯಂತ ಸಂಚರಿಸಿ ಪ್ರಚಾರ ಮಾಡಿದರು. ರೆಡ್ಡಿ ಕಾಂಗ್ರೆಸ್‌ನ ಚುನಾವಣಾ ಪ್ರಚಾರ ಅಷ್ಟು ಪರಿಣಾಮಕಾರಿಯಾಗಿ ಇರಲಿಲ್ಲ.

## ರೆಡ್ಡಿ-ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆ

ದಿನಾಂಕ ೫-೨-೭೮ರಂದು ಕಾಂಗ್ರೆಸ್ ರಾಜ್ಯ ಚುನಾವಣಾ ಪ್ರಣಾಳಿಕೆಯನ್ನು ಬಿಡುಗಡೆ ಮಾಡಲಾಯಿತು. ಅದರ ಮುಖ್ಯಾಂಶಗಳು ಕೆಳಗಿನಂತಿವೆ: ವ್ಯಕ್ತಿಗತ ಸ್ವೇಚ್ಛಾಚಾರಕ್ಕೆ ಧಿಕ್ಕಾರ. ಜನತಾಂತ್ರಿಕ ಸಮಾಜವಾದಿ ಕಾರ್ಯಕ್ರಮವನ್ನು ನಿಷ್ಠೆಯಿಂದ ಪ್ರಾಮಾಣಿಕತೆಯಿಂದ ಅನುಷ್ಠಾನಕ್ಕೆ ತರಲು ಭರವಸೆ. ಸ್ವಚ್ಛ ಸಾರ್ವಜನಿಕ ಜೀವನಕ್ಕೆ ಬದ್ಧ. ಆರ್ಥಿಕ ರಾಜಕೀಯ ಶೋಷಣೆಯ ನಿರ್ಮೂಲನೆ. ಹರಿಜನ ಗಿರಿಜನ ಅಲ್ಪಸಂಖ್ಯಾತರ ರಕ್ಷಣೆ. ರೆಡ್ಡಿ ಕಾಂಗ್ರೆಸ್ ಜನತೆಯ ಪಕ್ಷ. ಸಿಡಿದುಹೋದ ಕಾಂಗ್ರೆಸ್ ಪಕ್ಷಕ್ಕೆ ಸಾಕಷ್ಟು ಸಂಪನ್ಮೂಲ ಇದೆ. ನಮ್ಮದು ಬಡವರ ಪಕ್ಷ. ನಮ್ಮ ಪಕ್ಷಕ್ಕೆ ಬೇಕಾಗಿರುವುದು ಜನಶಕ್ತಿ, ಧನಶಕ್ತಿ ಅಲ್ಲ. ೧೯೭೭ರ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷವನ್ನು ಉತ್ತರ ಭಾರತದ ಜನತೆ ತಿರಸ್ಕರಿಸಿದರೂ ದಕ್ಷಿಣ ಭಾರತದ ಜನತೆ ಪುರಸ್ಕರಿಸಿತು. ಆದರೆ ವ್ಯಕ್ತಿ ಪೂಜೆ ಹೆಚ್ಚಾಗಿ ಅದರ ಕರಿನೆರಳು ಪಕ್ಷದ ಮೇಲೆ ಬಿತ್ತು. ಅದರ ಪರಿಣಾಮ ಜನತೆಯ ಆಶೋತ್ತರಗಳನ್ನು ಸಾಧಿಸುವಲ್ಲಿ ಹಿನ್ನಡೆ ಆಯಿತು. ಮಾಡಿದ ತಪ್ಪನ್ನ ಮರೆಮಾಚುವುದರಲ್ಲಿ ನಮ್ಮ ಪಕ್ಷಕ್ಕೆ ನಂಬಿಕೆ ಇಲ್ಲ. ಆಗಿರುವ ತಪ್ಪನ್ನು ತಿದ್ದಿಕೊಳ್ಳುವಲ್ಲಿ ಧುರೀಣತ್ವಕ್ಕೆ ಅಚಲ ವಿಶ್ವಾಸ ಇದೆ. ಸಾಮೂಹಿಕ ಧುರೀಣತ್ವಕ್ಕೆ ನಂಬಿಕೆ ಇಲ್ಲದವರು ಪಕ್ಷ ತೊರೆದು ಹೋಗಿದ್ದಾರೆ. ವ್ಯಕ್ತಿ ಸ್ವೇಚ್ಛಾಚಾರದ ಆಡಳಿತ ನಡೆಯುತ್ತಿತ್ತು. ಇಂತಹ ಪರಿಸ್ಥಿತಿಯಲ್ಲಿ ತಿಳುವಳಿಕೆ ಉಳ್ಳವರು ಬಂಡೆದ್ದರು. ದೇಶದ ಸಾರ್ವಜನಿಕ ಜೀವನ ದಿನೇದಿನೇ ಕಠಿಣವಾಗತೊಡಗಿತ್ತು. ಸಾರ್ವಜನಿಕ ನಡವಳಿಕೆ ವಿಚಾರದಲ್ಲಿ ಉನ್ನತ ನೀತಿ ನಿಯಮಗಳನ್ನು ಅನುಸರಿಸುವುದು ಒಳ್ಳೆಯದು ಎಂದು ಪಕ್ಷ ಭಾವಿಸಿದೆ.

ಆರ್ಥಿಕವಾಗಿ ಹಿಂದುಳಿದ ಎಲ್ಲಾ ಜನತೆಯ ಸ್ಥಿತಿಗತಿಯನ್ನು ಉತ್ತಮಪಡಿಸುವುದು. ಪ್ರಜಾಸತ್ತಾತ್ಮಕ ಸಮಾಜವಾದಿ ಸಮಾಜದಲ್ಲಿ ನಂಬಿಕೆ. ಆದರೆ ಇದನ್ನು ಕೃತಿಗಿಳಿಸಲು ಪಕ್ಷ ಸಮರ್ಥವಾಗಿರಬೇಕು. ಪ್ರಜಾಸತ್ತಾತ್ಮಕ ಜಾತ್ಯತೀತ ಸಮಾಜವಾದಿ ಸಮಾಜದಲ್ಲಿ ವಿಶ್ವಾಸ

ಇರುವವರೆಲ್ಲ ಹೊರಗಡೆ ಬಂದಿದ್ದೇವೆ. ಈ ದಿಸೆಯಲ್ಲಿ ಪ್ರಥಮ ಹೆಜ್ಜೆಯಾಗಿ ಕರ್ನಾಟಕದ ಜನತೆಯ ಮುಂದೆ ಈ ಚುನಾವಣಾ ಪ್ರಣಾಳಿಕೆಯನ್ನು ಇಡಲಾಗಿದೆ.

೧. ರಕ್ಷಣೆ ಅವಶ್ಯಕತೆ ಉಳ್ಳ ಜಾತೀಯ ಅಲ್ಪಸಂಖ್ಯಾತರ ಯೋಗಕ್ಷೇಮ. ಜಾತ್ಯತೀತ ತತ್ವಗಳನ್ನು ಅನುಸರಿಸುವುದರಿಂದ ಇದು ಸಾಧ್ಯ. ಭಾಷಾ ಅಲ್ಪಸಂಖ್ಯಾತರ ಅಭಿವೃದ್ದಿಗೆ ಕ್ರಮ. ಕೃಷಿಪ್ರಧಾನ ಉದ್ಯಮಗಳಲ್ಲಿ ಸರ್ಕಾರದ ಸಹಕಾರ. ಗ್ರಾಮೀಣ ಭಾಗಗಳಲ್ಲಿ ಉದ್ಯೋಗಾವಕಾಶಗಳ ವಿಸ್ತರಣೆ.

೨. ಎಲ್ಲರಿಗೂ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣ. ದೀನದಲಿತರು ದುರ್ಬಲವರ್ಗದವರು ವಾಸಿಸುವ ಪ್ರದೇಶದಲ್ಲಿ ಶಿಕ್ಷಣ ಕಾರ್ಯಕ್ರಮ ತೀವ್ರ ಜಾರಿಗೆ. ಈ ವರ್ಗದ ಮಕ್ಕಳಿಗೆ ಹೆಚ್ಚು ಹೆಚ್ಚಾಗಿ ವಸತಿ ಶಾಲೆಗಳ ಸ್ಥಾಪನೆ.

೩. ವಿದ್ಯಾವಂತ ನಿರುದ್ಯೋಗಿಗಳಿಗೆ ನೆರವು. ಸೇವಾ ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ವಿಶೇಷ ಗಮನ. ವೃತ್ತಿ ಶಿಕ್ಷಣಕ್ಕೆ ತರಬೇತಿಗೆ ಪ್ರಾಧಾನ್ಯತೆ. ನಿರುದ್ಯೋಗ ಸಮಸ್ಯೆ ನಿವಾರಣೆಗೆ ಕ್ರಮ. ಹರಿಜನ ಗಿರಿಜನ ಹಾಗೂ ಸಮಾಜದ ದುರ್ಬಲ ವರ್ಗದವರಿಗೆ ಭೂಮಿಯ ಹಂಚಿಕೆ ನಿವೇಶನಗಳ ಹಂಚಿಕೆ ಅಗತ್ಯ ಇರುವ ಕಡೆಗಳಲ್ಲಿ ಮನೆಗಳನ್ನು ಕಟ್ಟಿಕೊಳ್ಳಲು ನೆರವು ನೀಡುವುದು.

೪. ಭೂ ಸುಧಾರಣಾ ಕಾರ್ಯ ಜಟಿಲವಾಗಿದ್ದು ಅನಿಶ್ಚಿತ ಅಂಶಗಳಿಂದ ಕೂಡಿದೆ. ಇದರಿಂದ ಜನಗಳಿಗೆ ತೊಂದರೆ ಆಗಿದೆ. ಭೂಮಾಲೀಕರಿಗೆ ಸರ್ಕಾರದಿಂದ ನೇರವಾಗಿ ಪರಿಹಾರ.

೫. ಭೂ ನ್ಯಾಯಮಂಡಲಿಗಳಿಗೆ ಲಂಚದ ದೋಷ ತಗುಲಿದೆ. ಇವುಗಳನ್ನು ಪುನರ್ರಚಿಸಲಾಗುವುದು. ಗೇಣಿದಾರರಿಗೆ ಪರಿಹಾರ ಒದಗಿಸುವ ಬದಲು ಅವು ರಾಜಕೀಯದಲ್ಲಿ ತೊಡಗಿವೆ. ಹಿಂದುಳಿದ ವರ್ಗದವರು ಪರಿಶಿಷ್ಟ ಜಾತಿ ವರ್ಗದವರ ಅಭಿವೃದ್ಧಿಗೆ ವಿಶೇಷ ಗಮನ. ಅವರ ಆರ್ಥಿಕ ಸಾಮಾಜಿಕ ಸ್ಥಿತಿಯ ಉನ್ನತಿಗೆ ಪರಿಣಾಕಾರಿ ಕ್ರಮ. ಇದಕ್ಕಾಗಿ ಹಾಕಿಕೊಂಡ ಕಾರ್ಯಕ್ರಮಗಳು ನಿಗದಿತ ಅವಧಿಯೊಳಗೆ ಕೈಗೂಡುವಂತೆ ಮಾಡಲು ಆಡಳಿತ ಯಂತ್ರವನ್ನು ಸಜ್ಜುಗೊಳಿಸುವುದು.

೬. ದುಂದುವೆಚ್ಚಕ್ಕೆ ಕಡಿವಾಣ. ಮಂತ್ರಿ ಮಾನ್ಯರ ಆಡಂಬರದ ಜೀವನಕ್ಕೆ ಆಗುತ್ತಿರುವ ಹಣದ ಪೋಲನ್ನು ನಿಲ್ಲಿಸುವುದು.

೭. ಸಾರ್ವಜನಿಕರ ಕುಂದು ಕೊರತೆಗಳ ನಿವಾರಣೆಗೆ ಜಿಲ್ಲಾ ಮಟ್ಟದಲ್ಲಿ ಸಾರ್ವಜನಿಕರ ಸಂಪರ್ಕ ಕೇಂದ್ರಗಳ ಸ್ಥಾಪನೆ.

೮. ಕಾಫೀ ಮಂಡಲಿಯ ರೀತಿಯಲ್ಲಿ ಇತರ ಕೆಲವು ವಿಶಿಷ್ಟ ಬೆಳೆಗಳ ಹಿತ ರಕ್ಷಣೆಗೆ ಮಂಡಲಿ ರಚನೆ. ಉತ್ಪನ್ನಗಳಿಗೆ ಯೋಗ್ಯ ಬೆಲೆ. ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿ ಮಹತ್ವದ ಬದಲಾವಣೆ. ಬೆಳೆ ವಿಮೆ ಜಾನುವಾರು ವಿಮೆ ಜಾರಿಗೆ ಕ್ರಮ. ಸಾಧ್ಯವಾದ ಕಡೆಗಳಲ್ಲಿ ಕೃಷಿ ವಿಶ್ವವಿದ್ಯಾಲಯ ಸ್ಥಾಪನೆ.

೯. ಕೃಷಿ ಸಂಸ್ಕರಣ ಉದ್ಯಮಗಳ ಮೇಲೆ ಇರತಕ್ಕಂಥ ನಿರ್ಬಂಧ ರದ್ದು. ನೂತನವಾಗಿ ರಚಿಸುವ ಭೂ ನ್ಯಾಯಮಂಡಲಿಗಳು ಉಳುವವನಿಗೇ ಭೂಮಿ ಎಂಬುದನ್ನು ನೇರವಾಗಿ ಅನುಸರಿಸುತ್ತವೆ.

೧೦. ಭೂಮಿಯ ಹಕ್ಕುಪತ್ರಗಳನ್ನು ಉಳುವವನಿಗೇ ನೀಡುವುದು. ಆ ಭೂಮಿಯ ಮೌಲ್ಯವನ್ನು ೨೦ ವರ್ಷಗಳ ಸುಲಭ ಕಂತುಗಳಲ್ಲಿ ಶೇಕಡ ನಾಲ್ಕೂವರೆ ಬಡ್ಡಿಯಲ್ಲಿ ಮರಳಿ ಪಡೆಯುವುದು.

೧೧. ಲೋಕಾಯುಕ್ತ ನೇಮಿಸುವುದು. ಲಂಚಗುಳಿತನ ನಿರ್ಮೂಲನೆ. ಸ್ವಚ್ಛವಾದ ಸರ್ಕಾರ. ಎಲ್ಲಾ ಹಂತಗಳಲ್ಲಿ ಕನ್ನಡ ಆಡಳಿತ ಭಾಷೆ. ನಗರ ಭೂಮಿತಿ ಶಾಸನದ ತೊಂದರೆಗಳನ್ನು ನಿವಾರಿಸಿ ಮನೆ ಕಟ್ಟುವ ಚಟುವಟಿಕೆ ಮತ್ತೆ ಪ್ರಾರಂಭವಾಗುವಂತೆ ಮಾಡುವುದು ಬಾಡಿಗೆಗೆ ಮನೆಗಳು ಸುಲಭವಾಗಿ ದೊರೆಯುವಂತೆ ಮಾಡುವುದು.

೧೨. ಭೂ ರಹಿತರು, ಕೃಷಿ ಕಾರ್ಮಿಕರು ಅಕ್ರಮವಾಗಿ ಸಾಗುವಳಿ ಮಾಡಿರುವ ಭೂಮಿಯನ್ನು ಪರಿಶೀಲಿಸಿ ಅಧಿಕೃತಗೊಳಿಸುವುದು. ಸರ್ಕಾರ ನೀಡಿರತಕ್ಕಂತಹ ಗೃಹ ನಿವೇಶನಗಳನ್ನು ಗುರುತಿಸಿ ಅದನ್ನು ಮಾಲೀಕರಿಗೆ ಕೊಡುವುದು. ಗೃಹ ನಿರ್ಮಾಣಕ್ಕೆ ಉತ್ತೇಜನ. ಮನೆ ಕಟ್ಟಿಕೊಳ್ಳಲು ಮುಂದೆ ಬರುವವರಿಗೆ ಗೃಹ ನಿರ್ಮಾಣ ಮಂಡಲಿ ಮೂಲಕ ಮೂರು ಸಾವಿರ ರೂಪಾಯಿ ಸಾಲ.

೧೩. ಉರುವಲು ಹಾಗೂ ನಿರ್ಮಾಣ ಕಾರ್ಯಗಳಿಗೆ ಬೇಕಾಗುವ ಕೃಷಿ ಸಲಕರಣೆಗಳಿಗೆ ಮರಮುಟ್ಟುಗಳನ್ನು ಸುಲಭವಾಗಿ ದೊರೆಯುವಂತೆ ಮಾಡುವುದು, ರಾಜ್ಯದ ಅರಣ್ಯ ಇಲಾಖೆ ನಿಯಮಗಳಲ್ಲಿ ಮಾರ್ಪಾಡು ಮಾಡುವುದು.

೧೪. ವಿದ್ಯುತ್ ಇಲಾಖೆ ವಸೂಲಿ ಮಾಡುತ್ತಿರುವ ಡಿಮ್ಯಾಂಡ್ ಚಾರ್ಜನ್ನು ರದ್ದು ಮಾಡುವುದು.

೧೫. ಕೃಷಿ ಉತ್ಪನ್ನಗಳ ಮೇಲೆ ಮಾರುಕಟ್ಟೆ ಸಂಸ್ಥೆಗಳು ವಿಧಿಸುತ್ತಿರುವ ಬಹುವಿಧ ತೆರಿಗೆಗಳನ್ನು ರದ್ದುಗೊಳಿಸುವುದು.

೧೬. ಕೃಷಿ ಉತ್ಪನ್ನಗಳಿಗೆ ಬೆಲೆ ನಿಗದಿಗೊಳಿಸುವುದು. ನಿಗದಿ ಪಡಿಸಿರುವ ಕನಿಷ್ಠ ದರ ಹೆಚ್ಚಿಸುವುದು. ಚಿಕ್ಕ ಪುಟ್ಟ ಕೈಗಾರಿಕೆಗಳನ್ನು ಮಾರಾಟ ತೆರಿಗೆ ಆಕ್ಟ್ರಾಯ್ ಮತ್ತಿತರ ಆತಂಕಕಾರಿ ಶಾಸನಗಳಿಂದ ಮುಕ್ತಿಗೊಳಿಸುವುದು.

೧೭. ಅಲ್ಪಸಂಖ್ಯಾತರು ನಡೆಸುವ ಶಿಕ್ಷಣ ಸಂಸ್ಥೆಗಳ ಆಡಳಿತದಲ್ಲಿ ಹಸ್ತಕ್ಷೇಪ ಮಾಡದೇ ಇರುವುದು, ಉರ್ದು ಶಾಲೆಗಳನ್ನು ಸ್ಥಾಪಿಸುವುದು, ಸ್ಥಾಪಿಸಲು ಮುಂದೆ ಬರುವವರಿಗೆ ನೆರವು ನೀಡುವುದು. ನಿರುದ್ಯೋಗ ಪರಿಹಾರವನ್ನು ದೊಡ್ಡ ಪ್ರಮಾಣದಲ್ಲಿ ಕೈಗೊಳ್ಳುವುದು. ಉದ್ಯೋಗಕ್ಕೆ ಸೂಕ್ತ ತರಬೇತಿ ಕೊಡಲು ಅವಕಾಶ ಕಲ್ಪಿಸುವುದು.

೧೮. ಆಟೋರಿಕ್ಷಾ, ಟ್ಯಾಕ್ಸಿ, ಟ್ರಕ್ ಚಾಲಕರು ತಮ್ಮ ಸ್ವಂತವಾಹನ ಹೊಂದಲು ನೆರವು.

೧೯. ಮೀನುಗಾರಿಕೆ ಅಭಿವೃದ್ಧಿಗೆ ವಿಶೇಷ ಗಮನ, ಮೀನು ನಿರ್ಯಾತದ ಮೇಲಿನ ತೆರಿಗೆ ರದ್ದು. ನಿವೃತ್ತ ಶಿಕ್ಷಕರು, ಎಂಜಿನಿಯರ್ ಡಾಕ್ಟರ್ ಇವರುಗಳ ಅಮೂಲ್ಯ ಸೇವೆಯನ್ನು ಬಳಸಿಕೊಳ್ಳಲು ಕ್ರಮ.

೨೦. ಜನತಾ ಗೃಹ ನಿರ್ಮಾಣ ಯೋಜನೆ ಅಡಿಯಲ್ಲಿ ಪ್ರತಿ ವಿಧಾನಸಭಾ ಕ್ಷೇತ್ರದಲ್ಲಿ ೫೦೦೦ ಮನೆಗಳ ನಿರ್ಮಾಣ.

೨೧. ರಾಷ್ಟ್ರೀಕೃತವಾದ ಬಸ್‌ಗಳ ಮಾಲೀಕರಿಗೆ ಆಗಿರುವ ಅನ್ಯಾಯವನ್ನು ಸರಿಪಡಿಸುವುದು. ನಿವೃತ್ತಿ ವಯಸ್ಸನ್ನು ೫೮ಕ್ಕೆ ಹೆಚ್ಚಿಸುವುದು. ಕೇಂದ್ರ ಸರ್ಕಾರಿ ನೌಕರರಿಗೆ ಸಮಾನವಾದ ರೀತಿಯಲ್ಲಿ ತುಟ್ಟಿಭತ್ಯ ನೀಡಿಕೆ.

೨೨. ಶಿಕ್ಷಕರು ಅವರವರ ಜಿಲ್ಲೆಯ ವ್ಯಾಪ್ತಿಯಲ್ಲಿ ಕೆಲಸ ಮಾಡುವಂತೆ ವರ್ಗಾವಣೆ ನಿ!ತಿ

**ಫಲಿತಾಂಶ**

ರಾಜ್ಯದಲ್ಲಿ ಶೇಕಡ ೬೦ ರಷ್ಟು ಮತದಾನವಾಯಿತು. ರೆಡ್ಡಿ ಕಾಂಗ್ರೆಸ್ ಭಾರಿ ಪರಾಭವ ಅನುಭವಿಸಿತು. ಸ್ವತಃ ಕೆ.ಎಚ್. ಪಾಟೀಲರು ಸೇರಿದಂತೆ ಅನೇಕ ಮಾಜಿ ಸಚಿವರು, ಹಿರಿಯ ನಾಯಕರು, ಘಟಾನುಘಟಿಗಳು ಈ ಚುನಾವಣೆಯಲ್ಲಿ ಸೋತು ಹೋದರು. ಕೇವಲ ಎರಡು ಸ್ಥಾನಗಳಲ್ಲಿ ಮಾತ್ರ ರೆಡ್ಡಿ ಕಾಂಗ್ರೆಸ್ ಜಯಗಳಿಸಿತು. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಅರ್ಥಾತ್ ರೆಡ್ಡಿ ಕಾಂಗ್ರೆಸ್ ಈ ಚುನಾವಣೆಯಲ್ಲಿ ಒಟ್ಟು ೨೧೨ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದು ಶೇ. ೭.೯ ಅಂದರೆ ೧,೦೦,೦೧,೫೫೩ ಮತಗಳನ್ನು ಪಡೆಯಿತು. ಇದರ ಇಬ್ಬರು ಅಭ್ಯರ್ಥಿಗಳು ಮಾತ್ರ ಈ ಚುನಾವಣೆಯಲ್ಲಿ ಜಯಶೀಲರಾದರು. ಅವರುಗಳೆಂದರೆ ಭಾಲ್ಕಿಯಿಂದ ಭೀಮಣ್ಣ ಖಂಡ್ರೆ, ಬೈಲಹೊಂಗಲದಿಂದ ಬಾಳಕುಂದ್ರಿ ರಾಮಲಿಂಗಪ್ಪ ಚನ್ನಬಸಪ್ಪ. ರೆಡ್ಡಿ ಕಾಂಗ್ರೆಸ್‌ನ ೧೭೬ ಅಭ್ಯರ್ಥಿಗಳು ಈ ಚುನಾವಣೆಯಲ್ಲಿ ಠೇವಣಿ ಕಳೆದುಕೊಂಡರು. ಈ ಚುನಾವಣೆಯಿಂದ ಸ್ಪರ್ಧಿಸಿ ಸೋತ ಪ್ರಮುಖ ಅಭ್ಯರ್ಥಿಗಳೆಂದರೆ ಗುಂಡಪ್ಪ ಕೋವೂರ್, ಕೆ.ಹೆಚ್. ಪಾಟೀಲ್, ಎನ್.ಹುಚ್ಚ ಮಾಸ್ತಿಗೌಡ, ಎಂ.ವಿ. ವೆಂಕಟಪ್ಪ, ಎಚ್. ಕೆ. ಅನಂತಕೃಷ್ಣ, ಸಿ. ಎಂ. ಲಿಂಗಪ್ಪ, ಎಂ. ಮಲ್ಲಿಕಾರ್ಜುನಸ್ವಾಮಿ, ಹೆಚ್.ಎನ್. ನಂಜೇಗೌಡ, ಶ್ರೀಮತಿ ವಿನ್ನೀಸ್ ಫರ್ನಾಂಡೀಸ್, ಕೆ.ಎನ್, ವೀರಪ್ಪಗೌಡ, ಗೋಪಿನಾಥ್ ಸಾಂಡ್ರಾ, ಕೆ.ಬಿ.ಕೋಳಿವಾಡ, ಬಿ.ಹೆಚ್.ಬನ್ನಿಕೋಡ್ ಮುಂತಾದವರು. ೨೭-೨-೮೯ರಂದು ಕೆ. ಬ್ರಹ್ಮಾನಂದ ರೆಡ್ಡಿ ಮತ್ತು ಕೆ.ಎಚ್. ಪಾಟೀಲ್ ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಿದರು. ಭ್ರಷ್ಟಾಚಾರವನ್ನು ಕೊನೆಗಾಣಿಸಲು ನಾವು ಪ್ರಯತ್ನಿಸಿದೆವು. ಆದರೆ ಈ ವಿಷಯದಲ್ಲಿ ಜನರನ್ನು ಒಲಿಸಿಕೊಳ್ಳುವಲ್ಲಿ ವಿಫಲರಾದೆವು ಎಂದು ಕೆ.ಎಚ್. ಪಾಟೀಲರು ಹೇಳಿದರು.

೧೯೮೦ರ ಲೋಕಸಭಾ ಚುನಾವಣೆಯ ವೇಳೆಗೆ ರೆಡ್ಡಿ ಕಾಂಗ್ರೆಸ್‌ನ ಅನೇಕ ನಾಯಕರು ಕೆ.ಹೆಚ್.ಪಾಟೀಲ್ ನೈತೃತ್ವದಲ್ಲಿ ಕಾಂಗ್ರೆ ಸೇರಿದ್ದರು. ಇಷ್ಟು ಹೊತ್ತಿಗೆ ಡಿ.ದೇವರಾಜ ಅರಸು ಅವರು ಕಾಂಗ್ರೆ ಪಕ್ಷವನ್ನು ಬಿಟ್ಟು ಬೇರೆ ಪಕ್ಷವನ್ನು ಸ್ಥಾಪಿಸಿದ್ದರು. ಈ ಪಕ್ಷದ ಬಹುಮಟ್ಟಿಗೆ ನಾಯಕರಿಗೆ ದೇವರಾಜ ಅರಸು ಅವರ ಬಗ್ಗೆ ಅತೃಪ್ತಿ ಇದ್ದುದನ್ನು ಗಮನಿಸಬಹುದು. ೧೯೮೦ರ ಲೋಕಸಭಾ ಚುನಾವಣೆಯಲ್ಲಿ ದೇಶದೆಲ್ಲೆಡೆಯಂತೆ ಕರ್ನಾಟಕದಲ್ಲೂ ಕಾಂಗ್ರೆಸ್ (ಐ) ಪಕ್ಷ ಅದ್ಭುತ ವಿಜಯಗಳಿಸಿತು. ಆಗ ಲೋಕಸಭೆಗೆ ಚುನಾಯಿತರಾದ ಹೆಚ್.ಎನ್.ನಂಜೇಗೌಡ ಹಾಗೂ ಎಸ್.ಎಂ. ಕೃಷ್ಣ ಅವರು ರೆಡ್ಡಿ ಕಾಂಗ್ರೆಸ್‌ನಿಂದ ಬಂದಿದ್ದು ದಾಖಲಾರ್ಹವಾದ ವಿಚಾರ. ೧೯೮೦ರ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ರೆಡ್ಡಿ ಕಾಂಗ್ರೆಸ್ ಹೆಚ್ಚು ಕಡಿಮೆ ರಾಜ್ಯದಲ್ಲಿ ಕಾಂಗ್ರೆನೊಡನೆ ತನ್ನನ್ನು ಗುರುತಿಸಿಕೊಂಡಿತ್ತು.



# ಕಾಂಗ್ರೆಸ್ (ತಿವಾರಿ) ಪಕ್ಷ

**ಉಮೇಶ್‌ಬಾಬು ಪಟೇಲ್**

೧೯೯೬ರಲ್ಲಿ ಪಿ. ವಿ. ನರಸಿಂಹರಾವ್ ಅವರು ಪ್ರಧಾನಮಂತ್ರಿಗಳಾಗಿದ್ದ ಅವಧಿಯಲ್ಲಿ ರಾಷ್ಟ್ರಮಟ್ಟದಲ್ಲಿ ಅರ್ಜುನ್ ಸಿಂಗ್ ಅವರನ್ನು ಬಿಟ್ಟರೆ ಹಿರಿಯ ನಾಯಕರಲ್ಲಿ ಸಂಪೂರ್ಣವಾದ ನಿಷ್ಠೆಯುಳ್ಳವರು ಬೇರೆ ಯಾರೂ ಇರಲಿಲ್ಲ. ಅರ್ಜುನ್ ಸಿಂಗ್ ಅವರನ್ನೇ ರಾಷ್ಟ್ರದ ಪ್ರಧಾನ ಮಂತ್ರಿಯಾಗಿ ಶ್ರೀಮತಿ ಸೋನಿಯಾ ಗಾಂಧಿಯವರು ನೇಮಕ ಮಾಡಬೇಕಾಗಿತ್ತು. ಆದರೆ ಕಾರಣಾಂತರಗಳಿಂದಾಗಿ ಹಾಗೆ ಮಾಡದೆ ನರಸಿಂಹರಾವ್ ಅವರನ್ನು ಶಾಸಕಾಂಗ ಪಕ್ಷದ ನಾಯಕರನ್ನಾಗಿ ಆಯ್ಕೆ ಮಾಡಲಾಯಿತು. ಆದರೆ ಪಿ. ವಿ. ನರಸಿಂಹರಾವ್ ಅವರು ಲೋಕಸಭಾ ಸದಸ್ಯರೂ ಆಗಿರಲಿಲ್ಲ ಮತ್ತು ರಾಜ್ಯಸಭೆಯ ಸದಸ್ಯರೂ ಆಗಿರಲಿಲ್ಲ. ಸೋನಿಯಾ ಗಾಂಧಿಯವರು ಅವರ ಹೆಸರನ್ನು ಹೇಳದೆ ಇದ್ದರೆ ಅವರು ರಾಷ್ಟ್ರದ ಪ್ರಧಾನಮಂತ್ರಿಯಾಗುತ್ತಿರಲಿಲ್ಲ. ಆಗ ಅರ್ಜುನ್ ಸಿಂಗ್ ಅವರು ಕ್ಯಾಬಿನೆಟ್‌ನಲ್ಲಿ ಎರಡನೇ ಸ್ಥಾನದಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ (ಹೆಚ್.ಆರ್.ಡಿ) ಮಂತ್ರಿಯಾಗಿದ್ದರು. ವಿಧಿಯಿಲ್ಲದೆ ನರಸಿ.ಹರಾವ್ ಅವರ ನಾಯಕತ್ವವನ್ನು ಅವರು ಒಪ್ಪಿಕೊಳ್ಳಬೇಕಾಯಿತು. ಸಮಯ ಮುಂದುವರೆಯುತ್ತ ಬಂದಹಾಗೆ ನರಸಿಂಹರಾವ್ ಅವರು ಮನಮೋಹನಸಿಂಗ್ ಅವರನ್ನು ಅರ್ಥಮಂತ್ರಿಯಾಗಿ ನೇಮಕಮಾಡಿಕೊಂಡರು. ಖ್ಯಾತ ಆರ್ಥಿಕ ತಜ್ಞರಾದ ಮನಮೋಹನಸಿಂಗ್ ಅವರು ರಾಜಕೀಯದಲ್ಲಿ ಅಷ್ಟೇನೂ ಪಳಗಿದವರು ಆಗಿರಲಿಲ್ಲ. ಅವರ ಆರ್ಥಿಕ ನೀತಿ-ಧೋರಣೆಗಳು ಕಾಂಗ್ರೆಸ್ ಪಕ್ಷದ ನಿಷ್ಠಾವಂತರೂ ಹಾಗೂ ಪ್ರಗತಿ ಶೀಲ ಮನೋಭಾವನೆಯ ಕೆಲವು ಹಿರಿಯ ನಾಯಕರುಗಳಾದ ಅರ್ಜುನ್ ಸಿಂಗ್, ಎನ್.ಡಿ. ತಿವಾರಿ ಮುಂತಾದವರಿಗೆ ಅಷ್ಟೇನೂ ಹಿಡಿಸಲಿಲ್ಲ. ಸೋನಿಯಾ ಗಾಂಧಿಯವರೇ ಕಾಂಗ್ರೆಸ್ ಪಕ್ಷದ ನಾಯಕರಾಗಬೇಕೆಂದು ಅರ್ಜುನ್ ಸಿಂಗ್ ಬಣದವರು ಬಹಳ ಪ್ರಯತ್ನ ಮಾಡಿದರು. ಅವರು ಅಧ್ಯಕ್ಷರಾದರೆ ಕಾಂಗ್ರೆಸ್ ಪಕ್ಷದಲ್ಲಿ ಮತ್ತಷ್ಟು ಒಗ್ಗಟ್ಟು ಮೂಡುತ್ತದೆ ಮತ್ತು ಇಂದಿರಾ ಗಾಂಧಿಯವರ ಕುಟುಂಬದ ಬಗ್ಗೆ ದೇಶವಾಸಿಗಳಲ್ಲಿನ ಗೌರವಾದರಗಳ ಮೂಲಕ ಪಕ್ಷವು ಮತ್ತಷ್ಟು ಬಲಯುತವಾಗುತ್ತದೆ ಎಂಬುದು ಇವರುಗಳ ಅಪೇಕ್ಷೆಯಾಗಿತ್ತು. ದೆಹಲಿಯಲ್ಲಿ ನಡೆದ ವಿದ್ಯಮಾನದಂತೆ ಕರ್ನಾಟಕದಲ್ಲೂ ಈ ಬಗ್ಗೆ ಚಿಂತನೆಗೆ ಚಾಲನೆ ದೊರೆಯಿತು. ೧೯೮೩ರಿಂದಲೂ ನನಗೆ ಅರ್ಜುನ್ ಸಿಂಗ್ ಅವರೊಡನೆ ಸಂಪರ್ಕ ಉಂಟಾಗಿತ್ತು. ನಾನು ಅರ್ಜುನ್ ಸಿಂಗ್ ಅವರ ಒಬ್ಬ ನಿಷ್ಠಾವಂತ ಬೆಂಬಲಿಗನಾಗಿದ್ದೆ. ಈ ಸಂದರ್ಭದಲ್ಲಿ ದೆಹಲಿಯಲ್ಲಿ ರಾಜಕೀಯ ವಿದ್ಯಾಮಾನಗಳು ಬದಲಾದವು. ಇಂದಿರಾ ಗಾಂಧಿಯವರ ಕುಟುಂಬದ ಬಗ್ಗೆ ಪಕ್ಷದ ನಾಯಕತ್ವದಲ್ಲಿದ್ದ ನಿಷ್ಠೆ ಮತ್ತು ಗೌರವಗಳು ಕಡಿಮೆಯಾಗುತ್ತಿರುವುದು ಕಂಡುಬಂದಿತು. ರಾಜೀವಗಾಂಧಿಯವರ ಬರ್ಬರ ಹತ್ಯೆಯ ನಂತರ ಇದರ ವಿಚಾರಣೆಗೆ ನೇಮಕವಾಗಿದ್ದ ಜೈನ್ ಆಯೋಗದ ವಿಚಾರಣೆ ಅವಧಿಯಲ್ಲಿ ಸ್ವತಃ ನರಸಿಂಹರಾವ್ ಅವರು ಸಕಾಲಿಕ ಮಾಹಿತಿಗಳು ಮತ್ತು ಸಹಕಾರ ನೀಡದಿದ್ದುದು ಪಕ್ಷದಲ್ಲಿನ ನಿಷ್ಠಾವಂತರಿಗೆ ಅಸಮಾಧಾನವನ್ನು ಉಂಟುಮಾಡಿತ್ತು. ಇದೂ ಅಲ್ಲದೆ ಸೋನಿಯಾ ಗಾಂಧಿ ಅವರ ಕುಟುಂಬಕ್ಕೆ ವಿವಿಧ ರೀತಿಯಲ್ಲಿ ರಾಜಕೀಯ ಪ್ರೇರಿತ

ಕಿರುಕುಳಗಳು ಪ್ರಾರಂಭವಾದವು. ಇದರ ಬಗ್ಗೆ ಸೋನಿಯಾ ಗಾಂಧಿಯವರು ಬಹಳವಾಗಿ ನೊಂದುಕೊಂಡರು. ಇದು ನಿಷ್ಠಾವಂತರಿಗೆ ಸಹನೆಯಾಗಲಿಲ್ಲ. ಇದೇ ವೇಳಗೆ ದೇಶದ ಅರ್ಥಮಂತ್ರಿಯಾಗಿದ್ದ ಮನಮೋಹನಸಿಂಗ್ ಅವರ ಕೃಷಿಕರ ಕುರಿತಾದ ಆರ್ಥಿಕ ಧೋರಣೆ ಅರ್ಜುನ್ ಸಿಂಗ್ ಮುಂತಾದವರಿಗೆ ಬಹಳಷ್ಟು ಅಸಮಾಧಾನವನ್ನು ವಿಶೇಷತಃ ಉಂಟುಮಾಡಿತು. ಉದಾಹರಣೆಗೆ ರಸಗೊಬ್ಬರಗಳ ಮೇಲಿನ ಸಬ್ಸಿಡಿಯನ್ನು ಅವರು ರದ್ದುಗೊಳಿಸಿದ್ದರ ಬಗ್ಗೆ. ಇಂದಿರಾ ಗಾಂಧಿಯವರು ಹಿಂದೆ ಎಷ್ಟೇ ಒತ್ತಡಗಳು ಬಂದಿದ್ದರೂ ಕೂಡ ಈ ಸಬ್ಸಿಡಿಯನ್ನು ರೈತರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ರದ್ದು ಮಾಡಲು ಒಪ್ಪಿರಲಿಲ್ಲ. ಜವಾಹರ್ ರೋಜಗಾರ್ ಯೋಜನೆಗೆ ಸಹಸ್ರಾರು ಕೋಟಿ ರೂಪಾಯಿಗಳ ಹಣವನ್ನು ಮೀಸಲಿಟ್ಟು, ಬಡರೈತಾಪಿ ವರ್ಗದವರಿಗೆ ಅತ್ಯಂತ ಸಹಕಾರಿಯಾಗಿದ್ದ ರಸಗೊಬ್ಬರದ ಮೇಲಿನ ಸಬ್ಸಿಡಿಯನ್ನು ರದ್ದುಗೊಳಿಸಿದ್ದು ಅರ್ಜುನ್ ಸಿಂಗ್ ಬಣದವರಿಗೆ ಸ್ವಲ್ಪವೂ ಇಷ್ಟವಾಗಿರಲಿಲ್ಲ. ಅದೂ ಅಲ್ಲದೆ ಮನಮೋಹನಸಿಂಗ್ ಅವರ ಉದಾರೀಕರಣ ನೀತಿಯ ಪರಿಣಾಮವಾಗಿ ಬಹುರಾಷ್ಟ್ರೀಯ ಕಂಪನಿಗಳು ಬಂದು ಆಧುನಿಕ ತಂತ್ರಜ್ಞಾನ ಹೆಚ್ಚು ಬಳಕೆಯಾದರೆ ಬಡಬಗ್ಗರು ಮತ್ತು ದೀನದಲಿತರು ಉದ್ಯೋಗಾವಕಾಶಗಳಿಂದ ವಂಚಿರಾಗುತ್ತಾರೆ ಮತ್ತು ಅವರು ದುಡಿಯುವ ಶಕ್ತಿಯನ್ನು ಕಳೆದುಕೊಳ್ಳುತ್ತಾರೆ ಎಂಬುದನ್ನು ಅರಿತ ಅರ್ಜುನ್ ಸಿಂಗ್ ಬಣದವರು ಇದನ್ನು ಬಹಿರಂಗವಾಗಿ ವಿರೋಧಮಾಡ ತೊಡಗಿದರು. ನರಸಿಂಹರಾವ್ ನಾಯಕತ್ವದ ಈ ಎಲ್ಲ ಧೋರಣೆಗಳನ್ನು ಪಕ್ಷದಲ್ಲಿನ ಹಿರಿಯ ನಾಯಕರುಗಳಾದ ಅರ್ಜುನ್ ಸಿಂಗ್, ಎನ್. ಡಿ. ತಿವಾರಿ, ಎಂ. ಎಲ್. ಫೋತದಾರ, ಶೀಲಾ ದೀಕ್ಷಿತ್ ಮುಂತಾದವರೆಲ್ಲ ರಾಷ್ಟ್ರಮಟ್ಟದಲ್ಲಿ ಸಭೆ ಸೇರಿ ಸೋನಿಯಾ ಗಾಂಧಿ ಕುಟುಂಬಕ್ಕೆ ನೀಡಲಾಗುತ್ತಿದ್ದ ಕಿರುಕುಳಗಳ ವಿರುದ್ಧ ಬಲವಾದ ಪ್ರತಿರೋಧ ವ್ಯಕ್ತಪಡಿಸುವುದಕ್ಕೆ ಪ್ರಯತ್ನಮಾಡಿದರು. ನರಸಿಂಹರಾವ್ ಅವರು ತಮ್ಮ ಪ್ರವೃತ್ತಿಯನ್ನು ತಿದ್ದಿಕೊಳ್ಳಬೇಕು ಎಂದು ಕಟುವಾಗಿ ಹೇಳಿದ ಅರ್ಜುನ್ ಸಿಂಗ್ ಅವರು ಹಾಗೆ ತಿದ್ದಿಕೊಳ್ಳದೇ ಇದ್ದರೆ ಇದನ್ನೇ ತಮ್ಮ ರಾಜೀನಾಮೆ ಪತ್ರವೆಂದು ಪರಿಗಣಿಸಬೇಕೆಂದು ಲಿಖಿತ ಹೇಳಿಕೆ ನೀಡಿದರು. ಪ್ರಧಾನಮಂತ್ರಿಗಳು ಅದನ್ನು ಒಪ್ಪಿಕೊಂಡಿದ್ದರಿಂದ ಅರ್ಜುನ್ ಸಿಂಗ್ ಅವರು ಮಂತ್ರಿಪದವಿಯಿಂದ ಹೊರಬಂದರು.

ಸೋನಿಯಾ ಗಾ೦ಘ ಪರ ಸಹಾನುಭೂತಿ ಹೊಂದಿದ್ದ ಅರ್ಜುನ್ ಸಿಂಗ್, ಎನ್. ಡಿ. ತಿವಾರಿ ಮುಂತಾದ ನಿಷ್ಠಾವಂತರ ಗುಂಪು ಸಮಾನ ಮನಸ್ಕರನ್ನು ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಸಂಘಟಿಸಲು ಮುಂದಾದರು. ಈ ಸಂಘಟನೆಯ ನೇತೃತ್ವವನ್ನು ಅರ್ಜುನ್ ಸಿಂಗ್ ಅವರು ವಹಿಸಿಕೊಂಡರು. ೨೫ನೇ ಜನವರಿ ೧೯೯೫ರಂದು ಅರ್ಜುನ್ ಸಿಂಗ್ ಅವರು ಬೆಂಗಳೂರಿಗೆ ಆಗಮಿಸಿದರು. ಇದಕ್ಕೆ ಮುನ್ನ ಅವರು ಮದರಾಸಿಗೂ ಹೋಗಿದ್ದರು. ವಾಸ್ತವವಾಗಿ ತಿವಾರಿ ಕಾಂಗ್ರೆಸ್ ಬಣದ ಅಸ್ತಿತ್ವಕ್ಕೆ ಹೆಚ್ಚಿನ ಮಟ್ಟದ ಬೆಂಬಲ ನೀಡಿದ್ದು ತಮಿಳುನಾಡು ಮತ್ತು ಕರ್ನಾಟಕ. ೨೫.೧.೧೯೯೫ರಂದು ಬೆಂಗಳೂರಿನ ಮಲ್ಲೇಶ್ವರಂ ಮೈದಾನದಲ್ಲಿ ಬೃಹತ್ ಸಭೆಯನ್ನು ನನ್ನ ನೇತೃತ್ವದಲ್ಲಿ ಏರ್ಪಡಿಸಿದ್ದೆವು. ಎಂ. ವಿ. ರಾಜಶೇಖರನ್, ಹಾರ್ನಳ್ಳಿ ರಾಮಸ್ವಾಮಿ, ಎಸ್. ಎಂ. ಯಾಹ್ಯಾ ಮುಂತಾದವರು ನಮ್ಮ ಜತೆಯಲ್ಲಿ ಇದ್ದರು. ತುಮಕೂರಿನ ಲೋಕಸಭಾ ಸದಸ್ಯರಾದ ಬಸವರಾಜ್ ಅವರೂ ಕೂಡ ಸಭೆಯಲ್ಲಿ ಭಾಗವಹಿಸಿದ್ದರು. ನಂತರ ದೆಹಲಿಯ ಕಾಲಕೋಟ್ಲಾ ಸ್ಟೇಡಿಯಮ್‌ನಲ್ಲಿ ಕೂಡ ರಾಷ್ಟ್ರಮಟ್ಟದಲ್ಲಿ ತಿವಾರಿ ಗುಂಪಿನ ಬೃಹತ್ ರ್‍ಯಾಲಿಯನ್ನು ಯಶಸ್ವಿಯಾಗಿ ಏರ್ಪಡಿಸಲಾಯಿತು. ಈ ಬಣದ ಚಟುವಟಿಕೆಗಳ ಮೂಲ ಉದ್ದೇಶ ಸೋನಿಯಾ ಗಾಂಧಿ ಕುಟುಂಬದ ಬಗ್ಗೆ ಅನುಕಂಪ ಮತ್ತು ಅವರನ್ನು ಕಾಂಗ್ರೆ ಪಕ್ಷದ ರಾಷ್ಟ್ರಮಟ್ಟದ ಅಧ್ಯಕ್ಷೆಯನ್ನಾಗಿ ಮಾಡುವುದು ಆಗಿತ್ತು. ಆದರೆ ಸದರಿ ರ್‍ಯಾಲಿಯಲ್ಲಿ ಭಾಗವಹಿಸದೆ ಹೊರಗುಳಿದಿದ್ದ ಸೋನಿಯಾ ಗಾಂಧಿಯವರು ತಿವಾರಿ ಬಣದ ಚಟುವಟಿಕೆಗಳಿಗೆ ಅಡ್ಡಿಪಡಿಸದೆ 'ನೀವು ಮುಂದುವರೆಯಿರಿ' ಎಂದು ಸೂಚಿಸಿದರು. ಈ ನಿಷ್ಠಾವಂತರ ಬಣಕ್ಕೆ ಅರ್ಜುನ್ ಸಿಂಗ್ ಅವರನ್ನು ಅಧ್ಯಕ್ಷರನ್ನಾಗಿ ಮಾಡಬೇಕೆಂಬುದು ಬಹುತೇಕ ಮಂದಿಯ ಅಪೇಕ್ಷೆಯಾಗಿತ್ತು. ಆದರೆ ಬೇರೆ ಇನ್ನಿತರ ಕಾರಣಗಳಿಂದಾಗಿ ಎನ್. ಡಿ. ತಿವಾರಿ ಅವರನ್ನು ಅಧ್ಯಕ್ಷರನ್ನಾಗಿ ಸರ್ವಾನುಮತದಿಂದ ಆಯ್ಕೆಮಾಡಲಾಯಿತು ಮತ್ತು ಇದು 'ಕಾಂಗ್ರೆಸ್ (ತಿವಾರಿ) ಪಕ್ಷ' ಎಂದು ಅಸ್ತಿತ್ವಕ್ಕೆ ಬಂದಿತು. ಅರ್ಜುನ್ ಸಿಂಗ್ ಅವರು ಈ ಪಕ್ಷದ ಕಾರ್ಯಾಧ್ಯಕ್ಷರಾದರು. ಈ ಪಕ್ಷವು ರಾಷ್ಟ್ರೀಯ ಪಕ್ಷವೆಂದು ಚುನಾವಣಾ ಆಯೋಗದಿಂದ ಮನ್ನಣೆಯನ್ನು ಪಡೆಯಿತು ಮತ್ತು ಈ ಪಕ್ಷಕ್ಕೆ 'ಕೈಗಳಲ್ಲಿ ಹೂವುಗಳನ್ನು ಹಿಡಿದಿರುವ ಮಹಿಳೆ' ಚಿಹ್ನೆಯನ್ನು ನೀಡಲಾಯಿತು. ಮುಂದೆ ನಡೆದ ಚುನಾವಣೆಗಳಲ್ಲಿ ಉತ್ತರ ಭಾರತದಲ್ಲಿ ಮಾತ್ರ ಕೆಲವು ಕಡೆಗಳಲ್ಲಿ ಲೋಕಸಭೆ ಮತ್ತು ವಿಧಾನಸಭೆ ಚುನಾವಣೆಗಳಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ಅಭ್ಯರ್ಥಿಗಳು ಆಯ್ಕೆಯಾದರು. ಮುಂದೆ ಹೆಚ್. ಡಿ. ದೇವೇಗೌಡರ ನೇತೃತ್ವದ ಕೇಂದ್ರ ಮಂತ್ರಿಮಂಡಲದಲ್ಲಿ ಈ ಬಣಕ್ಕೆ ಸೇರಿದ ಸತ್ಪಾಲ್ ಮಹಾರಾಜ್ ಮತ್ತು ಇನ್ನೊಬ್ಬ ಲೋಕಸಭಾ ಸದಸ್ಯರು ಸಚಿವ ಸ್ಥಾನಗಳನ್ನು ಅಲಂಕರಿಸಿದ್ದರು.

ಕರ್ನಾಟಕ ರಾಜ್ಯದಲ್ಲೂ ಕೂಡ ೧೯೯೫ರಲ್ಲಿ ತಿವಾರಿ ಕಾಂಗ್ರೆಸ್ ಪಕ್ಷದ ರಾಜ್ಯಘಟಕ ಅಸ್ತಿತ್ವಕ್ಕೆ ಬಂದಿತು. ಬದಲಾದ ರಾಜಕೀಯ ಪರಿಸ್ಥಿತಿಯಲ್ಲಿ ಮುಖಂಡತ್ವವನ್ನು ವಹಿಸಲು ಸಾಕಷ್ಟು ತೆರೆಮರೆಯ ಯತ್ನಗಳು ಅವ್ಯಾಹತವಾಗಿ ನಡೆದವು. ಅಧಿಕಾರ ಲಾಲಸೆಯ

ಪ್ರವೃತ್ತಿಯ ಈ ಜನರ ಈ ಯತ್ನಗಳಿಂದಾಗಿ ಕರ್ನಾಟಕದಲ್ಲಿ ಈ ಪಕ್ಷ ಉದಿಸಲು ಕಾರಣಕರ್ತನಾದ ನಾನು ಮತ್ತು ಕೆಲವು ಸಮಾನ ಮನಸ್ಕರು ಮೂಲೆಗುಂಪಾಗಬೇಕಾದದ್ದು ದುರದೃಷ್ಟಕರ. ಈ ವೇಳೆಗೆ ಕಾರವಾರದ ಕೆನರಾ ಕ್ಷೇತ್ರದಿಂದ ಲೋಕಸಭಾ ಸದಸ್ಯರಾಗಿ ಆಯ್ಕೆಯಾಗಿದ್ದ ದೇವರಾಯ ನಾಯ್ಕ ಅವರು ಈ ಪಕ್ಷಕ್ಕೆ ಬಂದು ಸೇರಿಕೊಂಡರು. ಒಬ್ಬ ಲೋಕಸಭಾ ಸದಸ್ಯರು ಪಕ್ಷಕ್ಕೆ ಸೇರ್ಪಡೆಯಾಗಿದ್ದರಿಂದ ಅಧ್ಯಕ್ಷ ಸ್ಥಾನಕ್ಕೂ ಪೈಪೋಟಿ ನಡೆಯಿತು. ಆಗ ಮೂಲ ಕಾರ್ಯಕರ್ತರುಗಳಾದ ನಾವು ದೇವರಾಯ ನಾಯ್ಕ ಅವರನ್ನೇ ಪಕ್ಷದ ಅಧ್ಯಕ್ಷರನ್ನಾಗಿ ಮಾಡಬೇಕೆಂದು ಪ್ರತಿಪಾದಿಸಿ, ನಾನೇ ಅವರ ಹೆಸರನ್ನು ಸೂಚಿಸಿದೆ. ಈ ಸೂಚನೆ ಅಂಗೀಕೃತವಾಗಿ ದೇವರಾಯ ನಾಯ್ಕ ಅವರು ಅಧ್ಯಕ್ಷರಾದರು. ಎಂ. ವಿ. ರಾಜಶೇಖರನ್ ಅವರು ಉಪಾಧ್ಯಕ್ಷರಾದರು. ನಾನು ಕಾರ್ಯಕಾರಿ ಸಮಿತಿಯಲ್ಲಿ ಒಬ್ಬ ಸದಸ್ಯನಾಗಿ ಉಳಿದುಕೊಂಡೆ. ಆದರೆ ಕರ್ನಾಟಕದಲ್ಲಿ ಪಕ್ಷ ಬಲಯುತವಾಗಿ ಬೆಳೆಯಲು ಸಾಧ್ಯವಾಗಲಿಲ್ಲ. ಜಾತೀಯತೆ ಮತ್ತು ಅಧಿಕಾರ ಸ್ಥಾನದಲ್ಲಿದ್ದವರ ನಿರುತ್ಸಾಹ ಇದಕ್ಕೆ ಮುಖ್ಯ ಕಾರಣ. ನಾನು ಕೂಡ ಅನಿವಾರ್ಯವಾಗಿ ಹಿಂದುಳಿಯ ಬೇಕಾಯಿತು. ಆದರೂ ಮುಂದೆ ನಡೆದ ವಿಧಾನಸಭೆ ಚುನಾವಣೆಯಲ್ಲಿ ರಾಜ್ಯದ ಕೆಲವು ಕಡೆಯಿಂದ ನಮ್ಮ ಪಕ್ಷದ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ನಾನು ಬೆಂಗಳೂರು ಉತ್ತರ ಕ್ಷೇತ್ರದಿಂದ ಸ್ಪರ್ಧಿಸಿದ್ದೆ. ಆದರೆ ಎಲ್ಲಿಯೂ ನಮ್ಮವರು ಜಯಗಳಿಸಲಿಲ್ಲ ಮತ್ತು ಗಳಿಸಿದ್ದ ಮತಗಳ ಸಂಖ್ಯೆಯೂ ಕಡಿಮೆ ಪ್ರಮಾಣದ್ದಾಗಿತ್ತು. ಇದರಿಂದಾಗಿ ತಿವಾರಿ ಕಾಂಗ್ರೆಸ್ ಪಕ್ಷದ ಕಾರ್ಯಕರ್ತರಲ್ಲಿ ನಿರುತ್ಸಾಹ ಉಂಟಾಗಿ ಪಕ್ಷದ ಬೆಳವಣಿಗೆ ಕುಂಠಿತಗೊಂಡಿತು.

೧೯೯೬ರಲ್ಲಿ ಧರ್ಮಸಿಂಗ್ ಅವರು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ಅವರು ಪಕ್ಷವನ್ನು ಸಂಘಟಿಸುವ ರೀತಿನೀತಿಗಳನ್ನು ನೋಡಿ, ಅವರ ಪ್ರಾಮಾಣಿಕ ಪ್ರಯತ್ನವನ್ನು ಗಮನಿಸಿ ರಾಷ್ಟ್ರಮಟ್ಟದಲ್ಲಿ ನಡೆದ ವಿದ್ಯಮಾನದಂತೆ ಇಲ್ಲಿಯೂ ತಿವಾರಿ ಕಾಂಗ್ರೆಸ್ ಪಕ್ಷ ಘಟಕವನ್ನು ಕಾಂಗ್ರೆ ಪಕ್ಷದೊಂದಿಗೆ ವಿಲೀನಗೊಳಿಸುವ ಪ್ರಕ್ರಿಯೆ ನಡೆಯಿತು. ಬೆಂಗಳೂರಿನ ಪುರಭವನದಲ್ಲಿ ಕಿಕ್ಕಿರಿದು ತುಂಬಿದ್ದ ಸಭೆಯಲ್ಲಿ ಈ ಮಹತ್ವದ ವಿಲೀನಕಾರ್ಯವನ್ನು ನೆರವೇರಿಸಲಾಯಿತು. ಆ ಸಭೆಯಲ್ಲಿ ಶ್ರೀಯುತರುಗಳಾದ ಕೆ. ರೆಹಮಾನಖಾನ್, ಎಂ. ವಿ. ರಾಜಶೇಖರನ್, ಮಲ್ಲಿಕಾರ್ಜುನ ಖರ್ಗೆ, ಹೆಚ್. ಕೆ. ಪಾಟೀಲ್, ಚಂದ್ರಪ್ರಭಾ ಅರಸ್ ಮುಂತಾದವರು ಹಾಜರಿದ್ದರು.

ಕರ್ನಾಟಕದಲ್ಲಿ ತಿವಾರಿ ಕಾಂಗ್ರೆಸ್ ಪಕ್ಷ ಘಟಕದ ಕಚೇರಿಯು ಪ್ರಾರಂಭದಲ್ಲಿ ಬೆಂಗಳೂರಿನ ಸ್ಯಾಂಕಿ ರಸ್ತೆ ಪ್ರದೇಶದಲ್ಲಿರುವ ಎಂ. ಎಸ್. ನಾಗನೂರ್ ಅವರ ನಿವಾಸದಲ್ಲಿ ಇತ್ತು. ತದನಂತರ ಅದನ್ನು ನಾನು ವಾಸವಾಗಿರುವ ಶೇಷಾದ್ರಿಪುರಂ ಮನೆಗೆ ವರ್ಗಾಯಿಸಲಾಯಿತು. ನಾಗನೂರ್ ಅವರು ಕೂಡ ಈ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ಸೇವೆ ಸಲ್ಲಿಸಿದ್ದರು.

ಕಾಂಗ್ರೆಸ್ (ತಿವಾರಿ) ಪಕ್ಷ ಚುನಾವಣೆಗೆ ಸ್ಪರ್ಧಿಸುವಾಗ ಯಾವುದೇ ಪ್ರತ್ಯೇಕವಾದ ಪ್ರಣಾಳಿಕೆಯಿಲ್ಲದೆ ಅದು ಕಾಂಗ್ರೆಸ್ (ಐ) ಪಕ್ಷದ ಚುನಾವಣಾ ಪ್ರಣಾಳಿಕೆಯನ್ನೇ ಸರಿಹೋಲುತ್ತಿತ್ತು. ವಾಸ್ತವವಾಗಿ ಇದು ಕಾಂಗ್ರೆಸ್ (ಐ) ಪಕ್ಷಕ್ಕೆ ಹೊರತಾಗಿ ಕಾರ್ಯ ನಿರ್ವಹಿಸುತ್ತಿರಲಿಲ್ಲ. ಸೋನಿಯಾ ಗಾಂಧಿಯವರ ಬಗ್ಗೆ ಸಹಾನುಭೂತಿ ಮತ್ತು ಇಂದಿರಾ ಗಾಂಧಿ ಕುಟುಂಬದ ಬಗ್ಗೆ ಅತೀವ ನಿಷ್ಠೆ ಮತ್ತು ಗೌರವವನ್ನು ಹೊಂದಿತ್ತು. ನರಸಿಂಹರಾವ್ ನಂತರ ಸೀತಾರಾಂ ಕೇಸರಿಯವರು ಅಖಿಲ ಭಾರತ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದರು. ಈ ಅವಧಿಯಲ್ಲಿ ತಿವಾರಿ ಕಾಂಗ್ರೆಸ್ ಪಕ್ಷವು ಕಾಂಗ್ರೆ ಪಕ್ಷದೊಂದಿಗೆ ವಿಲೀನಗೊಂಡಿತು. ಕರ್ನಾಟಕದಲ್ಲಿಯೂ ಇದು ಇದೇ ಕ್ರಮವನ್ನು ಅನುಸರಿಸಿತು.

ಒಟ್ಟಾರೆ ಕಾಂಗ್ರೆಸ್ (ತಿವಾರಿ) ಪಕ್ಷವು ರಾಷ್ಟ್ರಮಟ್ಟದಲ್ಲಿ ಅಂತಹ ಗಣನೀಯ ಸಾಧನೆಯನ್ನೇನೂ ಮಾಡದಿದ್ದರೂ ಕಾಂಗ್ರೆ ಪಕ್ಷದ ಮೂಲ ಧ್ಯೇಯೋದ್ದೇಶಗಳ ಆಚರಣೆಯಲ್ಲಿ ವ್ಯತ್ಯಾಸಗಳು ಕಂಡುಬಂದಿದ್ದರಿಂದ ಅಸಮಾಧಾನ ಹೊಂದಿ ಪ್ರತ್ಯೇಕವಾಗಿ ಅಲ್ಪಕಾಲ ವಿಭಜಿಸಲ್ಪಟ್ಟ ಒಂದು ಘಟಕವಾಗಿ ಕಾರ್ಯನಿರ್ವಹಿಸಿದ್ದರೂ ಮುಂದೆ ಭಿನ್ನಾಭಿಪ್ರಾಯಗಳು ಪರಿಹರಿಸಲ್ಪಟ್ಟು ಕಾಂಗ್ರೆಸ್ (ಐ) ಪಕ್ಷದ ಮೂಲವಾಹಿನಿಯನ್ನು ಸೇರಿಕೊಂಡಿತು.

# ಕರ್ನಾಟಕ ರಾಜ್ಯ ರೈತ ಸಂಘ

ಡಾ। ಚನ್ನಗಿರಿ ಸುಧೀಂದ್ರ

## ರೈತ ಚಳವಳಿಯ ಹಿನ್ನೆಲೆಗಳು

ನಮ್ಮದು ಕೃಷಿಪ್ರಧಾನವಾದ ದೇಶ. ರೈತ ದೇಶದ ಬೆನ್ನೆಲುಬು. ಆದರೆ ನಮ್ಮಲ್ಲಿ ಮೊದಲಿನಿಂದಲೂ ವಂಶ ಪಾರಂಪರ್ಯವಾದ ಆಡಳಿತ. ಅದಕ್ಕೆ ತಕ್ಕಂತೆ ಜಮೀನ್ದಾರಿ ಪದ್ಧತಿ ಬೇರೂರಿಕೊಂಡು ಬಂದಿತ್ತು. ಹೊಲದಲ್ಲಿ ನಿಜವಾಗಿ ದುಡಿಯುವ ರೈತನಿಗೆ ಎಷ್ಟು ಮಹತ್ವ ಸಿಗಬೇಕೋ ಅಷ್ಟು ಸಿಗಲಿಲ್ಲ. ಸಣ್ಣ ಹಿಡುವಳಿದಾರರು, ಕೃಷಿ ಕಾರ್ಮಿಕರು, ಕೂಲಿಕಾರರು ಈ ರೈತರ ವ್ಯಾಪ್ತಿಯಲ್ಲಿಯೇ ಬರುತ್ತಾರೆ ಎಂದು ಸ್ಥೂಲವಾಗಿ ಊಹಿಸಬಹುದು.

ಬ್ರಿಟಿಷರು ಕಮ್ಯುನಿಸ್ಟ್ ಪಕ್ಷವನ್ನು ನಿಷೇಧಿಸಿದ ಮೇಲೆ ಕಮ್ಯುನಿಸ್ಟರು ಕಿಸಾನ್ ಸಭಾ, ರೈತ ಕಾರ್ಮಿಕ ಪಕ್ಷ, ಸೋಷಿಯಲಿಸ್ಟ್ ಕಾಂಗ್ರೆಸ್ ಮುಂತಾದವುಗಳ ಮೂಲಕ ರೈತರ ಹಾಗೂ ಕಾರ್ಮಿಕರ ಹೋರಾಟವನ್ನು ಆರಂಭಿಸಿ ಅವರು ಸಕ್ರಿಯವಾಗಿ ಬ್ರಿಟಿಷರ ವಿರುದ್ಧ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಮಾಡಿದರು. ಇವು ಭೂಮಾಲೀಕರ ವಿರುದ್ಧ ಕೃಷಿ ಕಾರ್ಮಿಕರು ಬಡ ರೈತರನ್ನು ಸಂಘಟಿಸುವ ಹೋರಾಟಗಳಾಗಿದ್ದವು. ೧೯೩೬ರಲ್ಲಿ ಅಖಿಲಭಾರತ ಕಿಸಾನ್ ಸಭಾ ಆರಂಭವಾಯಿತು. ಇದಕ್ಕಿಂತ ಪೂರ್ವದಲ್ಲಿ ೧೯೧೮ ರಲ್ಲಿ ಖೇಡಾದಲ್ಲಿ ನಡೆದ ರೈತ ಚಳವಳಿಯ ನಾಯಕತ್ವವನ್ನು ಮಹಾತ್ಮ ಗಾಂಧೀಜಿಯವರ ಆದೇಶದಂತೆ ಸರ್ದಾರ್ ಪಟೇಲ್ ವಹಿಸಿಕೊಂಡಿದ್ದರು. ಇದು ಕಾಂಗ್ರೆಸ್ ಬ್ರಿಟಿಷರ ವಿರುದ್ಧ ಹಾಗೂ ರೈತರ ಪರ ನಡೆಸಿದ ಮೊದಲ ಚಳವಳಿ ಎನ್ನಬಹುದು. ೧೯೧೮ರಲ್ಲಿ ಭಾರೀ ಮಳೆಯಿಂದ ಖೇಡಾ ಜಿಲ್ಲೆಯಲ್ಲಿ ರೈತರ ಬೆಳೆ ಹಾನಿಯಾಗಿತ್ತು. ರೈತರು ಸಂಕಷ್ಟದಲ್ಲಿದ್ದರು. ಸರ್ಕಾರ ಇದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ರೈತರಿಂದ ಕಂದಾಯ ವಸೂಲು ಮಾಡಲು ಮುಂದಾಯಿತು. ವಲ್ಲಭಭಾಯಿ ಪಟೇಲರು ರೈತರನ್ನು ಸಂಘಟಿಸಿ ಅವರ ಪರವಾಗಿ ನಿಂತರು, ರೈತರು ಯಾವುದೇ ಕಂದಾಯವನ್ನೂ ಕಟ್ಟಬಾರದೆಂದು ತಾಕೀತು ಮಾಡಿದರು. ಕೊನೆಗೆ ಸರ್ಕಾರ ರೈತರ ಚಳವಳಿಗೆ ಮಣಿದು ಕಂದಾಯವನ್ನು ರದ್ದುಮಾಡಿತು.

ಮತ್ತೆ ೧೯೨೮ರಲ್ಲಿ ಗುಜರಾತ್‌ನ ಬಾರ್ಡೋಲಿ ಜಿಲ್ಲೆಯಲ್ಲಿ ಅತಿವೃಷ್ಟಿ ಅನಾವೃಷ್ಟಿಗಳಿಂದ ತೀವ್ರ ಬರಗಾಲ ಉಂಟಾಯಿತು. ಇಂತಹ ಸನ್ನಿವೇಶದಲ್ಲಿ ಸರ್ಕಾರ ಶೇಕಡಾ ೩೦ ರಷ್ಟು ಕಂದಾಯವನ್ನು ಜಾಸ್ತಿ ಮಾಡಿತು. ಮತ್ತೆ ಸರ್ದಾರ್ ಪಟೇಲರು ರೈತರ ಮುಖಂಡತ್ವ ವಹಿಸಿದರು. ತಾಲ್ಲೂಕಿನ ೮೦,೦೦೦ ರೈತ ಹೋರಾಟಗಾರರನ್ನು ಸರ್ಕಾರದ ವಿರುದ್ಧ ಸಂಘಟಿಸಿದರು. ಬಾರ್ಡೋಲಿ ಜಿಲ್ಲೆಯನ್ನು ಏಳು ವಲಯಗಳಾಗಿ ವಿಂಗಡಿಸಿದರು. ಏಳು ವಲಯದಲ್ಲೂ ರೈತರನ್ನು ಸಂಘಟಿಸಿ ಅದಕ್ಕೆ ನಾಯಕರನ್ನು, ಸ್ವಯಂ ಸೇವಕರನ್ನೂ ನೇಮಿಸಿದರು. ಒಂದು ಕೇಂದ್ರದಿಂದ ಮತ್ತೊಂದು ಕೇಂದ್ರಕ್ಕೆ ಸುದ್ದಿಯನ್ನು ಸಾಗಿಸಲು ವಾರ್ತಾವಾಹಕರನ್ನು ನೇಮಿಸಿದರು. ಸರ್ಕಾರಿ ಅಧಿಕಾರಿಗಳ, ಪೊಲೀಸರ ಚಲನವಲನ ತಿಳಿದುಕೊಳ್ಳಲು ಗೂಢಚಾರರನ್ನು ವ್ಯವಸ್ಥೆ ಮಾಡಿದರು. ನಮ್ಮ ಎಲ್ಲಾ ಶಕ್ತಿಯನ್ನು ಪ್ರಯೋಗಿಸಿ ಈ ಚಳವಳಿಯನ್ನು ಹತ್ತಿಕ್ಕುತ್ತೇವೆ ಎಂದು ಮುಂಬಯಿ ಗರ್ವನರ್ ಗುಡುಗಿದನು. ಅತ್ಯಂತ ಕ್ರೂರಿಗಳಾದ ಪೋಲೀಸರು ಹಾಗೂ ಗೂಂಡಾಗಳನ್ನು ಸರ್ಕಾರ

ಕಳುಹಿಸಿತು. ಅವರು ಹಳ್ಳಿ ಹಳ್ಳಿಗಳಿಗೆ ನುಗ್ಗಿ ರೈತರನ್ನು ಹೆದರಿಸಿದರು, ಬೆದರಿಸಿದರು, ಹೊಡೆದು ಬಡಿದು ಮಾಡಿದರು. ಹೆಂಗಸರನ್ನು ಅವಮಾನ ಮಾಡಿದರು, ಮನೆಗಳನ್ನು ಲೂಟಿ ಮಾಡಿದರು. ರೈತರು ಅವರನ್ನು ಎದುರಿಸಿದರು. ಆದರೆ ಒಂದೇ ಒಂದು ನಯಾಪೈಸೆ ಕಂದಾಯವನ್ನೂ ಕೊಡಲಿಲ್ಲ. ಸರ್ಕಾರ ರೈತರ ಜಮೀನುಗಳನ್ನು ಹರಾಜು ಹಾಕತೊಡಗಿತು. ಆದರೆ ಅದನ್ನು ಖರೀದಿಸಲು ಒಬ್ಬರೂ ಮುಂದೆ ಬರಲಿಲ್ಲ. ಅಧಿಕಾರಿಗಳು ಹಾಗೂ ಗೂಂಡಾಗಳು ಬಂದಾಗ ಕಹಳೆಯನ್ನು ಊದುವ ಮೂಲಕ ಎಚ್ಚರಿಕೆ ನೀಡುವ ವ್ಯವಸ್ಥೆಯನ್ನು ರೈತರು ಮಾಡಿಕೊಂಡಿದ್ದರು. ರೈತ ಮುಖಂಡರು, ರೈತರು ಓಡಿಹೋಗಿ ಅಕ್ಕಪಕ್ಕದ ಕಾಡಿನಲ್ಲಿ ಅವಿತುಕೊಳ್ಳುತ್ತಿದ್ದರು. ಇಡೀ ಹಳ್ಳಿಗೆ ಹಳ್ಳಿಯೇ ಖಾಲಿಯಾಗಿರುತ್ತಿತ್ತು. ಯಾರ ಮನೆ, ಯಾರ ಜಮೀನು ಎಂಬುದೂ ತಿಳಿಯುತ್ತಿರಲಿಲ್ಲ. ಹರಾಜು ಹಾಕಲೂ ಖರೀದಿಸಲೂ ಒಬ್ಬರೂ ಇರುತ್ತಿರಲಿಲ್ಲ. ವಲ್ಲಭಬಾಯಿ ಪಟೇಲರು ಹಗಲೂ ರಾತ್ರಿ ಜನಗಳ ಜೊತೆ ರೈತರ ಜೊತೆಗೆ ಇರುತ್ತಿದ್ದರು. ಅವರಲ್ಲಿ ಧೈರ್ಯ ತುಂಬುತ್ತಿದ್ದರು. ಅನೇಕ ಶ್ರೀಮಂತರು ಪಟ್ಟಣಗಳಿಂದ ಬಂದು ಭೂಮಿಯನ್ನು ಖರೀದಿಸಲು ನೋಡಿದರು. ಆದರೆ ಪಟೇಲರು ಅವರ ವಿರುದ್ಧ ಗುಡುಗಿದರು. ಅಂತಹವರಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಯಿತು. ಹೊರಗಿನಿಂದ ಬಂದವರಿಗೆ ನೀರೂ ಕೂಡಾ ಸಿಗದಂತೆ ಮಾಡಿದರು. ಮುಂಬಯಿ ವಿಧಾನಸಭೆಯಲ್ಲಿ ರೈತ ಚಳವಳಿ ವಿಚಾರ ಪ್ರಸ್ತಾಪವಾಯಿತು. ಕಡೆಗೆ ಸರ್ಕಾರ ತಲೆಬಾಗಿತು. ಕಂದಾಯವನ್ನು ಮನ್ನಾ ಮಾಡಿತು. ಸರ್ದಾರ್ ಪಟೇಲರು ಸಂಘಟಿಸಿದ ಈ ರೈತ ಚಳವಳಿ ಮಾದರಿಯಾದ ಅಹಿಂಸಾತ್ಮಕ ಚಳವಳಿಯಾಗಿತ್ತು.

ಮಹಾತ್ಮ ಗಾಂಧಿಯವರೇ ನೇರವಾಗಿ ಸಂಘಟಿಸಿ ನೇತೃತ್ವ ವಹಿಸಿದ್ದ ರೈತ ಚಳವಳಿ ಎಂದರೆ ಚಂಪಾರಣ್ಯ ಸತ್ಯಾಗ್ರಹ. ಬಿಹಾರ ರಾಜ್ಯದ ಚಂಪಾರಣ್ ಜಿಲ್ಲೆ ನೀಲಿ ಬೆಳೆಗೆ ಪ್ರಸಿದ್ಧ. ಇಲ್ಲಿ ಕೆಲವು ಬ್ರಿಟಿಷ್ ಉದ್ದಿಮೆದಾರರು ನೀಲಿ ಕಾರ್ಖಾನೆಗಳನ್ನು ಸ್ಥಾಪಿಸಿದರು. ಈ ಜಿಲ್ಲೆಯ ಜಮೀನುಗಳು ಬೇತಿಯಾ ರಾಜ್ಯದ ಜಮೀನುದಾರರು ಅಥವಾ ರಾಜರಿಗೆ ಸೇರಿತ್ತು. ನೀಲಿಗಾರರು ಜಮೀನುದಾರರಿಂದ ಈ ಜಮೀನುಗಳ ಕಂದಾಯ ವಸೂಲಿ ಗುತ್ತಿಗೆ ಪಡೆದಿದ್ದರು. ಈ ರೀತಿಯಾಗಿ ನೂರಾರು ಹಳ್ಳಿಗಳ ಮೇಲೆ ಮಾಲೀಕತ್ವ ಪಡೆದಿದ್ದರು. ತಮ್ಮ ಕಾರ್ಖಾನೆಗಾಗಿ ರೈತರು ಪ್ರತಿ ಭಿಗಾ ಜಮೀನಿನಲ್ಲಿ ಮೂರು ಕತ್ತಾ ನೀಲಿ ಬೆಳೆ ಬೆಳೆಯಬೇಕೆಂದು ಕಡ್ಡಾಯ ಮಾಡಿದರು. ಇದು ತೀನ್ ಕಠಿಯಾ ಪದ್ಧತಿ ಎಂದು ಹೆಸರಾಗಿತ್ತು. ನೀಲಿ ಬೆಳೆ ಬೆಳೆಯದ ರೈತರ ಮೇಲೆ ದೌರ್ಜನ್ಯ ನಡೆಸುತ್ತಿದ್ದರು. ನೀಲಿ ಬಿಟ್ಟು ಬೇರೆ ಬೆಳೆ ಬೆಳೆದರೆ ಅದನ್ನು ಹಾಳುಗೆಡವುತ್ತಿದ್ದರು. ಲೂಟಿ ಮಾಡುತ್ತಿದ್ದರು. ಕೊನೆಗೆ ಗೇಣಿ ನಿಯಮಗಳಲ್ಲಿ ನೀಲಿ ಬೆಳೆ ಬೆಳೆಯುವುದನ್ನು ಕಡ್ಡಾಯ ಮಾಡಿಸಿದರು. ನಿಯಮ ಮೀರಿದರೆ ಶಿಕ್ಷೆ ಹಾಗೂ ಮನಬಂದಷ್ಟು ಕಂದಾಯವನ್ನು ರೈತರ ಮೇಲೆ ಹಾಕುತ್ತಿದ್ದರು. ಈ ಮಧ್ಯೆ ಬೇತಿಯಾ ಮಹಾರಾಜರು ನಿಧನರಾದರು. ಮಹಾರಾಣಿಯನ್ನು ಹುಚ್ಚಿ ಎಂದು ತೀರ್ಮಾನಿಸಿ ರಾಜ್ಯವನ್ನು ಬ್ರಿಟಿಷರು ತಮ್ಮ ವಶಕ್ಕೆ ತೆಗೆದುಕೊಂಡರು. ನೀಲಿ ಬೆಳೆಗೆ ಒಬ್ಬ ವ್ಯವಸ್ಥಾಪಕನನ್ನು ನೇಮಿಸಿದರು. ನೀಲಿ ಕಾರ್ಖಾನೆಗಳ ಸಹಾಯದಿಂದ ಬೇತಿಯಾ ಮಹಾರಾಜರು ಇಂಗ್ಲೆಂಡಿನಲ್ಲಿ ಸಾಲ ಮಾಡಿ, ಸಾಲದ ಅಸಲು ಬಡ್ಡಿ ತೀರಿಸಲು ಹಳ್ಳಿಗಳನ್ನೇ ನೀಲಿಗಾರರ ಸ್ವಾಧೀನ ಮಾಡಿದ್ದರು. ರೈತರ ಗೋಳನ್ನು ಕೇಳುವವರೇ ಇಲ್ಲದಂತಾಯಿತು. ಇಷ್ಟರಲ್ಲಿ ಜರ್ಮನಿಯಲ್ಲಿ ಕೃತಕ ನೀಲಿ ತಯಾರಿಕೆಯನ್ನು ಕಂಡುಹಿಡಿಯಲಾಯಿತು. ಚಂಪಾರಣ್ಯದ ನೀಲಿಗೆ ಬೇಡಿಕೆ ನಿಂತು ಹೋಯಿತು. ನೀಲಿ ಬೆಳೆ ವ್ಯವಸ್ಥಾಪಕರು ನೀಲಿ ಬೆಳೆ ಬೆಳೆಯುವುದು ತಪ್ಪಿಸಿ ರೈತರ ಮೇಲೆ ಮನಸ್ಸಿಗೆ ಬಂದಷ್ಟು ಕಂದಾಯ ಹಾಕಿದರು. ಇದರಿಂದ ೨೦-೨೫ ಲಕ್ಷ ರೂಪಾಯಿಗಳನ್ನು ವಸೂಲಿಮಾಡಿದರು. ಇಲ್ಲದ ಹೊಲಕ್ಕೆ ಸುಳ್ಳು ಪಟ್ಟಿ ಕೊಟ್ಟು ಕಂದಾಯ ಹಾಕಿದರು. ಜಮೀನುಗಳನ್ನು ಸುಮ್ಮನೆ ಹೊಸದಾಗಿ ಅಳತೆ ಮಾಡಿಸಿ ಹೊಸದಾಗಿ ಭೂಮಿಯನ್ನು ಕೊಟ್ಟಂತೆ ಮಾಡಿ ಕಂದಾಯ ಹೆಚ್ಚು ಮಾಡಿದರು. ಕಂದಾಯ ವಸೂಲಿಗೆ ರಿಜಿಸ್ಟ್ರಾರ್‌ರನ್ನು ನೇಮಕ ಮಾಡಲಾಯಿತು. ೧೯೧೪-೧೮ ರಲ್ಲಿ ಜರ್ಮನಿಯಲ್ಲಿ ಯುದ್ಧ ಆರಂಭವಾಯಿತು. ಅಲ್ಲಿ ನೀಲಿ ತಯಾರಿಕೆ ನಿಂತು ಹೋಯಿತು. ಚಂಪಾರನ್‌ನಲ್ಲಿ ಮತ್ತೆ ನೀಲಿ ಬೆಳೆಯಲು ರೈತರ ಮೇಲೆ ಒತ್ತಾಯ ಹೇರಲಾಯಿತು. ರೀ ಸರ್ವೆ ಮಾಡಿಸಲಾಯಿತು. ಅಧಿಕಾರಿಗಳು, ಪೊಲೀಸರು ಎಲ್ಲಾ ನೀಲಿಗಾರರ ಪರವಾಗಿದ್ದರು. ರೈತರಿಗೆ ಶಿಕ್ಷೆ, ಕಂದಾಯ, ನೀಲಿ ಬೆಳೆಯಲು ಒತ್ತಾಯ ಅಧಿಕವಾಯಿತು. ಈ ಸಮಯದಲ್ಲಿ ವಿಷಯ ತಿಳಿದ ಮಹಾತ್ಮ ಗಾಂಧೀಜಿ ಚಂಪಾರಣ್ಯಕ್ಕೆ ಬಂದರು. ರೈತರ ದೂರನ್ನು ಸರ್ಕಾರ ವಿಚಾರಿಸುತ್ತದೆ, ಆದುದರಿಂದ ಗಾಂಧಿ ಚಂಪಾರನ್‌ಗೆ ಹೋಗಬಾರದೆಂದು ಸರ್ಕಾರ ತಡೆ ಒಡ್ಡಿತು. ಆದರೂ ಗಾಂಧಿ ಅಲ್ಲಿಗೆ ಹೋದರು. ಡಾ। ಬಾಬು ರಾಜೇಂದ್ರ ಪ್ರಸಾದ್ ಅವರಿಗೆ ಜೊತೆಯಾದರು. ಸಾವಿರಾರು ರೈತರು ಗಾಂಧೀಜಿಯ ಬಳಿಗೆ ಬಂದರು, ನಿರ್ಭಯವಾಗಿ ತಮ್ಮ ಸಂಕಷ್ಟಗಳನ್ನು ಹೇಳಿಕೊಂಡರು. ಡಾ। ಬಾಬು ರಾಜೇಂದ್ರಪ್ರಸಾದರು ರೈತರನ್ನು ಕರೆತಂದು ತಮ್ಮ ಮಿತ್ರರ ಸಹಾಯದಿಂದ ರೈತರ ಸಂಕಷ್ಟಗಳ ಬಗ್ಗೆ ಸರ್ಕಾರಕ್ಕೆ ಸಾಕ್ಷ್ಯಾಧಾರ ಸಹಿತವಾದ ಮನವಿಗಳನು ಪ್ರತ್ಯೇಕವಾಗಿ ತಯಾರಿಸಿದರು. ಸುಮಾರು ೭೦೦೦ ಕ್ಕೂ ಹೆಚ್ಚು ಮನವಿ ಪತ್ರಗಳು ತಯಾರಾದವು. ಸರ್ಕಾರ ರೈತರ ಅಹವಾಲು ಕೇಳಲು ಒಬ್ಬ ಪ್ರತಿನಿಧಿಯನ್ನು ಕಳುಹಿಸಿತು. ಡಾ। ಬಾಬು ರಾಜೇಂದ್ರಪ್ರಸಾದರು ಈ ಮನವಿಗಳನ್ನು ವಿಂಗಡಿಸಿ ಅವರಿಗೆ ನೀಡಿದರು. ದೀನಬಂಧು ಆಂಡ್ರೂಸ್ ಎಂಬುವವರೂ ಚಂಪಾರಣ್‌ಗೆ ಬಂದರು. ಕೊನೆಗೆ ಬಿಹಾರದ ಗರ್ವನರನು ಗಾಂಧೀಜಿಯುವರನ್ನು ಕರೆಸಿ ಮಾತುಕತೆ

ಆಡಿದನು. ಒಂದು ಕಮೀಷನ್ ನೇಮಿಸಲಾಯಿತು. ಅದಕ್ಕೆ ಗಾಂಧೀಜಿ ಕೂಡಾ ಸದಸ್ಯರಾಗಿದ್ದರು. ರಾಜೇಂದ್ರ ಪ್ರಸಾದರೂ ಸೇರಿ ಶ್ರಮವಹಿಸಿ ಮಾತುಕತೆಗಳ ಮೂಲಕ ಸಮಸ್ಯೆ ಬಗೆಹರಿಸಿದರು. ತೀನ್ ಕಠಿಯಾ ಪದ್ಧತಿ ರದ್ದಾಯಿತು. ಹೆಚ್ಚುವರಿ ಕಂದಾಯವನ್ನು ಕಡಿಮೆ ಮಾಡಲಾಯಿತು. ವಸೂಲು ಮಾಡಿದ್ದ ಹೆಚ್ಚುವರಿ ಕಂದಾಯದ ಹಣವನ್ನು ರೈತರಿಗೆ ನಗದಾಗಿ ನೀಡಲಾಯಿತು. ನೀಲಿಗಾರರ ದಬ್ಬಾಳಿಕೆ, ಶಕ್ತಿ ಗಾಂಧೀಜಿ ಹಾಗೂ ರೈತರ ಸಂಘಟನೆಯಿಂದ ಅಳಿದು ಹೋಯಿತು. ರೈತರಿಗೆ ಧೈರ್ಯ ಬಂದಿತ್ತು. ಇದು ಆಗಲು ಒಂದು ವರ್ಷ ಕಾಲ ಹಿಡಿಯಿತು.

೧೯೪೦ರಿಂದ ೧೯೫೦ ರ ಸುಮಾರಿಗೆ ನಡೆದ ತೆಲಂಗಾಣಾ ರೈತರ ಹೋರಾಟ ಜಮೀನುದಾರಿ ಪದ್ಧತಿಯನ್ನು ವಿರೋಧಿಸಿ ನಡೆದ ಪ್ರಮುಖ ಹೋರಾಟವಾಗಿದೆ. ಸಿ. ರಾಜೇಶ್ವರರಾವ್, ಬಸವಪುನ್ನಯ್ಯ ಮೊದಲಾದವರು ಈ ಹೋರಾಟದ ಪ್ರಮುಖ ಪಾತ್ರ ವಹಿಸಿದ್ದರು. ಇದನ್ನು ಹಿಂಸಾತ್ಮಕ ಹೋರಾಟ ಹಾಗೂ ಮಾವೋ ಚಳವಳಿಯಿಂದ ಪ್ರಭಾವಿತ ಎಂದು ಕರೆಯಲಾಗಿದೆ. ಈ ಹೋರಾಟದ ದೆಸೆಯಿಂದ ಅನೇಕ ರಾಜ್ಯಗಳು ಭೂ ಸುಧಾರಣಾ ಶಾಸನಗಳನ್ನು ತರಲು ಸಮ್ಮತಿಸಿದವು. ಡಾ। ಅಂಬೇಡ್ಕರ್‌ರವರೂ ಕೂಡಾ ಸ್ವಾತಂತ್ರ್ಯ ಪೂರ್ವದಲ್ಲಿ ರೈತ ಆಂದೋಲನದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಮಹಾರಾಷ್ಟ್ರದಲ್ಲಿ ಜಾರಿಯಲ್ಲಿದ್ದ ಕೋಠಿಪದ್ಧತಿ ಅಂದರೆ ಜಮೀನುದಾರಿ ಪದ್ಧತಿಯನ್ನು ರದ್ದುಗೊಳಿಸಿ ಗೇಣೀದಾರರಿಗೆ ಭೂಮಿಯ ಮೇಲಿನ ಹಕ್ಕನ್ನು ನೀಡಬೇಕೆಂದು ಅಂದಿನ ಮುಂಬಯಿ ಪ್ರಾಂತ್ಯ ಶಾಸನಸಭೆಯಲ್ಲಿ ಪ್ರಸ್ತಾಪಿಸಿದ್ದರು ಈ ಬಗ್ಗೆ ವಿಧೇಯಕ ಒಂದನ್ನು ರೂಪಿಸಿ ಮುಂಬಯಿ ವಿಧಾನಸಭೆಯಲ್ಲಿ ಮಂಡಿಸಿದ್ದರು. ರೈತ ಕಾರ್ಮಿಕ ಪಕ್ಷವನ್ನು ಬೆಂಬಲಿಸಲು ರೈತರಿಗೆ ಕರೆ ನೀಡಿದರು.

ಅಂಬೇಡ್ಕರ್, ಅನಂತರಾವ್ ಚಿತ್ರೆ, ಡಿ.ಡಬ್ಲ್ಯೂ ರಾವತ್, ಇಂದೂಲಾಲ್ ಯಾಜ್ಞಿಕ್, ಎಸ್. ಜಿ. ಜೋಷಿ ಮತ್ತು ಶಾಮರಾವ್ ಪರುಲೇಕರ್ ಇವರುಗಳು ಮಹಾರಾಷ್ಟ್ರದ ಥಾಣಾ, ಕೊಲಾಬಾ, ರತ್ನಗಿರಿ, ಸತಾರಾ, ನಾಸಿಕ್ ಜಿಲ್ಲೆಗಳಲ್ಲಿ ಸಂಚರಿಸಿ ರೈತರನ್ನು ಸಂಘಟಿಸಿದರು. ರೈತಮೋರ್ಚಾ ಒಂದನ್ನು ಸಂಘಟಿಸಿದರು. ರೈತರ ಪರವಾಗಿ ಅಂದಿನ ಮುಂಬಯಿ ಪ್ರಾಂತದ ಮುಖ್ಯಮಂತ್ರಿ ಬಿ. ಜಿ. ಖೇರ್ ಅವರಿಗೆ ಒಂದು ಮನವಿಪತ್ರ ಅರ್ಪಿಸಿದರು. ಕೃಷಿ ಕಾರ್ಮಿಕರಿಗೆ ಕನಿಷ್ಠ ದಿನಗೂಲಿ ನಿಗದಿಪಡಿಸಲು ಶಾಸನ ತರುವುದು, ಕೋಠಿ ಹಾಗೂ ಇನಾಂದಾರಿ ಪದ್ಧತಿ ರದ್ದುಪಡಿಸುವುದು, ಭೂ ಸುಧಾರಣಾ ಕಾನೂನನ್ನು ಜಾರಿಗೆ ತರುವುದು ಸಣ್ಣ ರೈತರಿಗೆ ನೀರಾವರಿ ದರಗಳನ್ನು ಕಡಿಮೆ ಮಾಡುವುದು ಇತ್ಯಾದಿ ಬೇಡಿಕೆಗಳನ್ನು ಈ ಮನವಿ ಒಳಗೊಂಡಿತ್ತು.

೧೯೪೬ರಲ್ಲಿ ಕಾಸರಗೋಡು ತಾಲ್ಲೂಕಿನ ಕಯ್ಯೂರಿನಲ್ಲಿ ಭೂಮಾಲೀಕರ ಸುಲಿಗೆ ಹಾಗೂ ಅಧಿಕಾರಿಗಳ ದಬ್ಬಾಳಿಕೆಯ ವಿರುದ್ಧ ಹೋರಾಟ ನಡೆಯಿತು. ಕಯ್ಯೂರಿನಲ್ಲಿ ರೈತ ಮೆರವಣಿಗೆ ನಡೆಯುತ್ತಿದ್ದಾಗ ಒಬ್ಬ ಪೋಲೀಸ್ ಪೇದೆ ಆಕಸ್ಮಿಕವಾಗಿ ಮೃತಪಟ್ಟನು. ರೈತರೇ ಆತನನ್ನು ಹೊಳೆಗೆ ಎಸೆದು ಸಾಯಿಸಿದರು ಎಂದು ನೂರಾರು ರೈತರನ್ನು ಬಂಧಿಸಲಾಯಿತು. ಮೂವರು ಯುವಕರಿಗೆ ಮರಣದಂಡನೆ ಆಯಿತು. ಇದೇ ಕಾಲದಲ್ಲಿ ಬಂಗಾಳದಲ್ಲಿ ತೇಭಾಗ ಚಳವಳಿ ಎಂಬ ರೈತರ ಹೋರಾಟ ನಡೆಯಿತು. ಭೂಮಾಲೀಕರು ರೈತರಿಂದ ಮುಕ್ಕಾಲು ಭಾಗ ಗೇಣಿ ವಸೂಲು ಮಾಡಲು ಹೊರಟರು ಆದರೆ ರೈತರು ಮೂರನೇ ಒಂದು ಭಾಗ ಗೇಣಿ ಕೊಡುವುದಾಗಿಯೂ, ಫಸಲನ್ನು ಭೂಮಾಲೀಕರ ಕಣಜಗಳಿಗೆ ಒಯ್ಯದೆ ರೈತರ ಕಣಜಗಳಿಗೆ ಒಯ್ದು ಅಲ್ಲಿಂದ ಭೂಮಾಲೀಕರ ಭಾಗವನ್ನು ಕೊಡುವುದಾಗಿಯೂ ಚಳವಳಿ ಪ್ರಾರಂಭಿಸಿದರು. ಹತ್ತು ಜಿಲ್ಲೆಗಳಲ್ಲಿ ನಡೆದ ಈ ಹೋರಾಟದಲ್ಲಿ ಸಹಸ್ರಾರು ಜನರನ್ನು ಬಂಧಿಸಲಾಯಿತು. ಆದರೆ ಸ್ವಾತಂತ್ರ್ಯಾನಂತರ ಈ ತೇಭಾಗ ಚಳವಳಿ ಬೇಡಿಕೆಗಳು ಕಾನೂನು ಮೂಲಕ ಈಡೇರಿಸಲ್ಪಟ್ಟವು.

## ಕರ್ನಾಟಕದಲ್ಲಿ ರೈತ ಹೋರಾಟಗಳು

೧೮೩೭ರಲ್ಲಿ ಇಂದಿನ ಸುಳ್ಯ ಹಾಗೂ ಕೊಡಗು ರಾಜ್ಯದಲ್ಲಿ ನಡೆದ ಅಮರಸುಳ್ಯದ ಬಂಡಾಯವೇ ಕರ್ನಾಟಕದ ಅತ್ಯಂತ ಪ್ರಾಚೀನ ರೈತರ ಹೋರಾಟವೆಂದು ಹೇಳುತ್ತಾರೆ. ಇದನ್ನು ಬ್ರಿಟಿಷರ ವಿರುದ್ಧ ಸಿಪಾಯಿ ದಂಗೆಗಿಂತ ಮೊದಲೇ ನಡೆದ ಹೋರಾಟ ಎನ್ನುತ್ತಾರೆ. ಅತಿಯಾದ ಕಂದಾಯ ಹಾಗೂ ಜಮೀನುದಾರಿ ಪದ್ಧತಿ ವಿರುದ್ಧ ನಡೆದ ಹೋರಾಟ ಇದಾಗಿತ್ತು ಎಂದು ಅಂದಿನ ಅಧಿಕೃತ ವರದಿಗಳಿಂದ ತಿಳಿದುಬರುತ್ತದೆ. ರಾಜಕೀಯ ಸ್ವಿತ್ಯಂತರದ ಹೋರಾಟವೂ ಇದರ ಜೊತೆಗೆ ಸೇರಿತ್ತು.

ಮುಮ್ಮಡಿ ಕೃಷ್ಣರಾಜ ಒಡೆಯರ ಪದಚ್ಯುತಿಗೆ ಕಾರಣವಾದ ೧೮೩೦ರ ನಗರ ವಿಪ್ಲವ (ಬಿದನೂರು) ಅಥವಾ ಬೂದಿ ಬಸವನಾಯಕನ ಬಂಡಾಯವೂ ಮುಖ್ಯವಾದುದು. ಟಿಪ್ಪುವಿನ ಪತನಾನಂತರ ಮೈಸೂರು ಸಂಸ್ಥಾನ ಮುಮ್ಮಡಿ ಕೃಷ್ಣರಾಜ ಒಡೆಯರ್ ವಶಕ್ಕೆ ನೀಡಲ್ಪಟ್ಟಿತು. ಅವರು ಬಾಲಕರಾಗಿದ್ದ ಕಾರಣ ದಿವಾನ್ ಪೂರ್ಣಯ್ಯನವರು ಆಡಳಿತ ನೋಡಿಕೊಳ್ಳುತ್ತಿದ್ದರು. ೧೮೨೧ರಲ್ಲಿ ಪ್ರಾಪ್ತವಯಸ್ಕರಾದ ಮಹಾರಾಜರು ಅಧಿಕಾರಕ್ಕೆ ಬಂದರು. ೧೮೧೬-೧೭ ಹಾಗೂ ೧೮೨೩-೨೪ರಲ್ಲಿ ಸಂಸ್ಥಾನದಲ್ಲಿ ಭಾರೀ ಕ್ಷಾಮ

ತಲೆದೋರಿತ್ತು. ಸಹಾಯಕ ಸೈನ್ಯ ಪದ್ಧತಿಯಿಂದಾಗಿ ಬ್ರಿಟಿಷರ ಯುದ್ಧದ ವೆಚ್ಚವನ್ನು ಸಂಸ್ಥಾನ ಭರಿಸಬೇಕಾಗಿತ್ತು. ಪ್ರಜೆಗಳು, ರೈತರು ಸಕಾಲದಲ್ಲಿ ಕಂದಾಯ ಪಾವತಿ ಮಾಡದೇ ಹೋದಕಾರಣ ಬಾಕಿ ಹದಿಮೂರು ಲಕ್ಷ ರೂಪಾಯಿಗಳಿಗೆ ಏರಿತ್ತು. ೧೮೨೮ರಲ್ಲಿ ಅಲ್ಲಿದ್ದ ಫೌಜುದಾರನು ತನಗೆ ಬೇಕಾದವರಿಗೆ ಏಳೂವರೆ ಲಕ್ಷ ಕಂದಾಯ ಮಾಫಿ ಮಾಡಿದ್ದನು. ಮಹಾರಾಜರು ಇದಕ್ಕೆ ಅನುಮತಿ ನೀಡದೆ ಬೇರೊಬ್ಬನನ್ನು ಫೌಜುದಾರನಾಗಿ ನೇಮಕ ಮಾಡಿದರು. ಮಾಫಿಯಲ್ಲಿ ಹಾಗೂ ಕಂದಾಯ ವಸೂಲಿಯಲ್ಲಿ ಭ್ರಷ್ಟಾಚಾರ ನಡೆದಿರುವುದು ಕಂಡುಬಂದಿತು. ಮಾಫಿಯನ್ನು ರದ್ದು ಮಾಡಲಾಯಿತು. ಇದರಿಂದ ಅನೇಕರಿಗೆ ಅಸಮಾಧಾನ ಉಂಟಾಯಿತು. ಈ ಸಮಯಕ್ಕೆ ಸದರಮಲ್ಲನೆಂಬುವವನು ತಾನು ಬಿದನೂರಿನ ಅರಸರ ಉತ್ತರಾಧಿಕಾರಿಯೆಂದೂ, ರೈತರ ಕಂದಾಯವನ್ನು ಮಾಫಿ ಮಾಡಿರುವುದಾಗಿಯೂ ಹೇಳಿಕೊಂಡು, ಪದಚ್ಯುತ ಫೌಜುದಾರನ ಜೊತೆ ದಂಗೆ ಎದ್ದನು. ಅನೇಕ ಪಟೇಲರುಗಳು, ರೈತರುಗಳು ಇವನಿಗೆ ಬೆಂಬಲ ನೀಡಿದರು. ಪದಚ್ಯುತ ಫೌಜುದಾರನನ್ನೆ ಮತ್ತೆ ನೇಮಕಮಾಡಲಾಯಿತು. ಅವನು ಈ ಬೂದಿ ಬಸವಪ್ಪ ನಾಯಕನ ಸೈನ್ಯವನ್ನು ಎದುರಿಸಿದನು. ಅನೇಕ ರೈತರು ಕೂಟ ಕಟ್ಟಿಕೊಂಡು ಸರ್ಕಾರದ ವಿರುದ್ಧ ಹೋರಾಡಿದರು. ೧೮೩೦ ಡಿಸೆಂಬರ್ ೭ರಂದು ಫೌಜುದಾರನು ರೈತರ ಕೂಟವನ್ನು ಮುರಿದನು. ಅನೇಕ ರೈತರು ಸಾವಿಗೀಡಾದರು. ೧೮೩೦ ಡಿಸೆಂಬರ್ ೧೩ ರಂದು ಮಹಾರಾಜರು ರೈತರ ಕಷ್ಟನಷ್ಟಗಳ ಬಗ್ಗೆ ವಿಚಾರಣೆ ನಡೆಸಲಾಗುವುದೆಂದು ಚನ್ನರಾಯ ಪಟ್ಟಣದಲ್ಲಿ ಘೋಷಿಸಿದರು. ವಿಚಾರಣೆ ನಡೆದು ಕೆಲವರಿಗೆ ಮರಣದಂಡನೆ ಶಿಕ್ಷೆ ನೀಡಲಾಯಿತು. ಆದರೂ ಈ ವೇಳೆಗೆ ಕ್ರಾಂತಿಯು ಬಹಳ ದೊಡ್ಡದಾಗಿ ಬೆಳೆದು ಕಡೆಗೆ ರಾಚ್ ಪೋರ್ಟ್ ಎಂಬ ಬ್ರಿಟಿಷ್ ಅಧಿಕಾರಿ ಸೈನ್ಯ ಸಮೇತವಾಗಿ ಬಂದು ದಂಗೆಯನ್ನು ಅಡಗಿಸಿದನು. ಆದರೆ ಮಹಾರಾಜರು ಆಡಳಿತ ನಡೆಸಲು ಅಸಮರ್ಥರೆಂದು ತೀರ್ಮಾನಿಸಿ ಲಾರ್ಡ್ ವಿಲಿಯಂ ಬೆಂಟಿಂಕನು ೧೮೩೧ರಲ್ಲಿ ರಾಜ್ಯವನ್ನು ವಹಿಸಿಕೊಂಡು ಕಮೀಷನರುಗಳ ಆಡಳಿತಕ್ಕೆ ಕಾರಣನಾದನು. ಈ ರೀತಿ ರೈತರ ದಂಗೆ ಆಡಳಿತಗಾರರ ಅಸಮರ್ಥ ನಿರ್ವಹಣೆಯಿಂದ ರಾಜತ್ವಕ್ಕೆ ಎರವಾಯಿತು.

ವಿಶಾಲ ಮೈಸೂರು ರಾಜ್ಯ ಸ್ಥಾಪನೆ ಆದ ಮೇಲೆ ಅಂದಿನ ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳು ಕರ್ನಾಟಕದಲ್ಲಿ ವಿಲೀನವಾದವು. ಅದಕ್ಕೆ ಮುನ್ನ ೧೯೫೬ ಆಗಸ್ಟ್ ೭ ರಂದು ಮುಂಬಯಿ ಶಾಸನಸಭೆ ಭೂ ಸುಧಾರಣಾ ಕಾಯಿದೆಗೆ ತಿದ್ದುಪಡಿ ತಂದು ಉಳುವವನೇ ಹೊಲದ ಒಡೆಯ ಎಂದು ಹೇಳಿತ್ತು. ಆದರೆ ನೂತನ ಮೈಸೂರು ರಾಜ್ಯ ಸ್ಥಾಪನೆ ಆದ ನಂತರ ಈ ಕಾಯಿದೆ ರದ್ದಾಯಿತು. ಇದರಿಂದ ಈ ಭೂ ಸುಧಾರಣಾ ಕಾಯಿದೆ ಜಾರಿಗೆ ಬರಲಿಲ್ಲ. ಸೋಷಲಿಸ್ಟ್ ಪಕ್ಷದ ಆಶ್ರಯದಲ್ಲಿ ೧೯೫೯ರ ಆಗಸ್ಟ್ ತಿಂಗಳಲ್ಲಿ ನಡೆದ ಕಾಗೋಡು ರೈತ ಸತ್ಯಾಗ್ರಹ ಬಹಳ ವಿಶಿಷ್ಟವಾದುದು. ಶಿಕಾರಿಪುರ, ಸೊರಬ, ಸಾಗರ, ಶಿವಮೊಗ್ಗ ತಾಲ್ಲೂಕುಗಳಲ್ಲಿ ಅರಣ್ಯ ಭೂಮಿ ಜಾಸ್ತಿ ಇದ್ದು ಭೂಹೀನ ರೈತರು, ಕೃಷಿ ಕಾರ್ಮಿಕರ ಸಂಖ್ಯೆಯೂ ಜಾಸ್ತಿ ಇತ್ತು. ಹೀಗಾಗಿ ರೈತರು ಸುಮಾರು ಹತ್ತು ಸಾವಿರ ಎಕರೆ ಅರಣ್ಯ ಭೂಮಿಯನ್ನು ಅತಿಕ್ರಮಿಸಿ ಸಾಗುವಳಿಗೆ ಒಳಪಡಿಸತೊಡಗಿದರು. ಆ ನಂತರ ಸರ್ಕಾರ ಈ ಭಾಗದಲ್ಲಿ ರೈತರಿಗೆ ಭೂಮಿಯನ್ನು ಹಂಚಿಕೆ ಮಾಡಿತು. ಹಾಗೂ ಈ ಕಾಗೋಡು ಸತ್ಯಾಗ್ರಹವು ಭೂ ಸುಧಾರಣಾ ಕಾಯಿದೆ ಜಾರಿಗೆ ಬೀಜರೂಪವಾಯಿತು. ಇದೊಂದು ಯಶಸ್ವಿ ಅಹಿಂಸಾತ್ಮಕ ರೈತ ಹೋರಾಟ ಎನಿಸಿತು. ೧೯೭೭ರ ನವೆಂಬರ್ ತಿಂಗಳಲ್ಲಿ ನಡೆದ ವರುಣಾ ನಾಲೆ ಚಳವಳಿ ರೈತರ ಅಹಿಂಸಾತ್ಮಕ, ಪಕ್ಷಾತೀತ ಬೃಹತ್ ಹೋರಾಟಕ್ಕೆ ಮಾದರಿಯಾದ ಚಳವಳಿ. ಕೃಷ್ಣರಾಜಸಾಗರ ದಕ್ಷಿಣ ದಂಡೆಯಲ್ಲಿ ವರುಣಾ ನಾಲೆಯನ್ನು ತೆಗೆದು ಅದರಿಂದ ಮೈಸೂರು ಜಿಲ್ಲೆಯ ಒಣ ಪ್ರದೇಶಗಳಿಗೆ ವರ್ಷಕ್ಕೆ ಒಂದು ಬೆಳೆಗೆ ನೀರನ್ನು ನೀಡಲು ದೇವರಾಜ ಅರಸ್ ಸರ್ಕಾರ ತೀರ್ಮಾನಿಸಿತ್ತು.

ಇದರಿಂದ ವಿಶ್ವೇಶ್ವರಯ್ಯ ನಾಲೆಗೆ ನೀರಿನ ಹರಿವು ಕಡಿಮೆಯಾಗಿ ಆ ಬಯಲಿನಲ್ಲಿ ಬೆಳೆ ತೆಗೆಯಲು ತೊಂದರೆ ಆಗುತ್ತದೆಂದು ರೈತರು ಮಂಡ್ಯ ಜಿಲ್ಲೆಯಲ್ಲಿ ಚಳವಳಿ ಪ್ರಾರಂಭಮಾಡಿದರು. ೮.೧೧.೭೭ ರಂದು ಕೆ. ವಿ. ಶಂಕರಗೌಡ, ಕೆ. ಸಿಂಗಾರಿಗೌಡ, ಜಿ. ಮಾದೇಗೌಡ, ರಾಮಲಿಂಗೇಗೌಡ, ಕೆ. ಎನ್. ನಾಗೇಗೌಡ ಇದರ ನೇತೃತ್ವದಲ್ಲಿ ವರುಣಾ ನಿಯೋಗ ದೆಹಲಿಗೆ ಹೋಗಿ ಪ್ರಧಾನಿ ಮುರಾರ್ಜಿ ದೇಸಾಯಿಯವರನ್ನು ಭೇಟಿಯಾಗಿ ವರುಣಾ ನಾಲೆ ಕೆಲಸ ನಿಲ್ಲಿಸುವಂತೆ ರಾಜ್ಯ ಸರ್ಕಾರಕ್ಕೆ ಆದೇಶ ನೀಡಬೇಕೆಂದು ಮನವಿ ಸಲ್ಲಿಸಿತು. ಆ ನಂತರ ೨೩-೧೧-೭೭ರಂದು ಮಂಡ್ಯದಿಂದ ಸುಮಾರು ೫೦ ಸಾವಿರ ರೈತರು ಚಡ್ಡಿ ಧರಿಸಿ ಬೆಂಗಳೂರಿಗೆ ಜಾಥಾ ಹೊರಟರು. ಇದೇ ಚಡ್ಡಿ ಚಳವಳಿ ಎಂದು ಪ್ರಖ್ಯಾತವಾಗಿದೆ. ೨೪.೧೧.೭೭ರಂದು ಈ ಜಾಥಾ ಬೆಂಗಳೂರನ್ನು ತಲುಪಿತು. ಮುಖ್ಯ ಮಂತ್ರಿ ದೇವರಾಜ ಅರಸು ಹಾಗೂ ಚಳವಳಿಯ ನಾಯಕ ಕೆ. ವಿ. ಶಂಕರಗೌಡರು ಮಾತುಕತೆ ನಡೆಸಿದರು. ಮುಖ್ಯಮಂತ್ರಿಗಳು ರೈತ ಜಾಥಾವನ್ನು ಉದ್ದೇಶಿಸಿ ಮಾತನಾಡಲು ಪ್ರಾರಂಭಿಸಿದರು. ಸ್ವಲ್ಪ ಹೊತ್ತಿನಲ್ಲಿ ಗೊಂದಲವಾಗಿ ಅರಸು ಅವರ ಭಾಷಣ ನಿಂತು ಹೋಯಿತು. ಮುಂದೆ ಈ ಚಳವಳಿಯ ನಾಯಕರಿಗೂ ಸರ್ಕಾರಕ್ಕೂ ಒಪ್ಪಂದವಾಯಿತು. ಅದೇ ವಿಶ್ವೇಶ್ವರಯ್ಯ ನಾಲಾ ಆಧುನೀಕರಣ ಯೋಜನೆಯ ಒಪ್ಪಂದ. ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣದಿಂದ ವ್ಯರ್ಥವಾಗುವ ನೀರು ಉಳಿತಾಯವಾಗುತ್ತದೆ ಎಂದೂ,

ವರುಣಾ ನಾಲೆಗೆ ಒಂದು ಬೆಳೆಗೆ ನೀರು ಬಿಡಲು ತಕರಾರು ಇಲ್ಲವೆಂಬುದೂ ಈ ಒಪ್ಪಂದದ ಸಾರಾಂಶವಾಗಿತ್ತು. ಅಷ್ಟರ ಮಟ್ಟಿಗೆ ಈ ಚಳವಳಿ ಯಶಸ್ವಿಯಾಯಿತು.

## ಕರ್ನಾಟಕ ರಾಜ್ಯ ರೈತ ಸಂಘದ ಉದಯ

೧೯೭೯-೮೦ ರ ಹೊತ್ತಿಗೆ ಮಲಪ್ರಭಾ ಬಯಲು ಪ್ರದೇಶಗಳಾದ ನರಗುಂದ, ನವಲಗುಂದ, ರೋಣ, ಹುಬ್ಬಳ್ಳಿ, ಸವದತ್ತಿ, ಬೈಲಹೊಂಗಲ ತಾಲ್ಲೂಕುಗಳಲ್ಲಿ ಸರ್ಕಾರ ನಾಲೆಯನ್ನು ನಿರ್ಮಿಸಿ ರೈತರ ಮೇಲೆ ಅಭಿವೃದ್ಧಿಕರ ಅಥವಾ ಬೆಟರ್‌ಮೆಂಟ್ ಲೆವಿಯನ್ನು ಹಾಕಿತು. ನಾಲೆ ಕೆಲಸ ೧೯೭೩-೭೪ ರಿಂದಲೇ ನಡೆಯುತ್ತಿತ್ತು. ಸರ್ಕಾರ ಹಿಂದಿನಿಂದಲೇ ಈ ಬೆಟರ್‌ಮೆಂಟ್ ಲೆವಿ ವಿಧಿಸಿತು. ನಾಲೆಯನ್ನು ಸರಿಯಾಗಿ ನಿರ್ಮಿಸಿಲ್ಲ, ನಾಲೆಯಲ್ಲಿ ನೀರು ಬಂದಿಲ್ಲ, ನಾಲೆ ಆಗದೇ ಇರುವ ಕಡೆ ಇರತಕ್ಕ ಜಮೀನುಗಳಿಗೂ ಬೆಟರ್‌ಮೆಂಟ್ ಲೆವಿ ವಿಧಿಸಲಾಗಿದೆ, ಹಿಂದಿನಿಂದ ಇದನ್ನು ವಿಧಿಸಿದ್ದು ಇದರ ಮೊತ್ತ ಅಪಾರವಾಗಿದೆ. ಇದನ್ನು ಕೊಡಲು ಸಾಧ್ಯವಿಲ್ಲ ಎಂದು ರೈತರು ಚಳವಳಿ ಆರಂಭಿಸಿದರು. ಅನೇಕ ಬಾರಿ ಅಧಿಕಾರಿಗಳಿಗೆ, ಸಚಿವರಿಗೆ ಮನವಿ ನೀಡಿದರು. ಈ ವೇಳೆಗೆ ಆ ಬಯಲು ಪ್ರದೇಶಗಳಲ್ಲಿ ಬೆಳೆಯುತ್ತಿದ್ದ ವರಲಕ್ಷ್ಮಿ ಹತ್ತಿಯ ಬೆಲೆ ಕುಸಿಯಿತು. ಇದರಿಂದ ರೈತರು ಕಂಗಾಲಾದರು. ಚಳವಳಿ ಸಂಘಟಿತ ಸ್ವರೂಪ ಪಡೆಯತೊಡಗಿತು.

೧೯೮೦ ಜುಲೈ ೨೧ ರಂದು ಸಹಸ್ರಾರು ರೈತರು ನರಗುಂದದ ತಹಸೀಲ್ದಾರ್ ಕಛೇರಿ ಮುಂದೆ ಸೇರಿ, ತಹಸೀಲ್ದಾರ್ ಕಛೇರಿ ಹಾಗೂ ಬೆಟರ್ ಮೆಂಟ್ ಲೆವಿ ಕಛೇರಿಗಳನ್ನು ಮುತ್ತಲು ಒತ್ತಾಯಿಸಿತು. ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಪರಿಸ್ಥಿತಿಯನ್ನು ನಿಭಾಯಿಸಲು ಸ್ಥಳೀಯ ಅಧಿಕಾರಿಗಳು, ಅಸಮರ್ಥರಾದ ಪೋಲೀಸ್ ಅಧಿಕಾರಿಗಳು ರೈತರ ಮೇಲೆ ಗುಂಡು ಹಾರಿಸಿದಾಗ ಒಬ್ಬ ಯುವ ರೈತ ಸ್ಥಳದಲ್ಲೇ ಮೃತಪಟ್ಟ. ರೊಚ್ಚಿಗೆದ್ದ ರೈತರು ಪೋಲೀಸ್ ಅಧಿಕಾರಿಯನ್ನು ಸ್ಥಳದಲ್ಲೇ ಕೊಂದರು ಹಾಗೂ ಕಛೇರಿಯನ್ನು ಸುಟ್ಟರು. ದಿನಾಂಕ ೨೧ ರಿಂದ ೨೯ ರವರೆಗೆ ನರಗುಂದ, ನವಲಗುಂದ ಪ್ರದೇಶದಲ್ಲಿ ಭಾರೀ ಗಲಭೆಗಳು ನಡೆದವು. ಪೋಲೀಸರ ಗೋಲೀಬಾರ್‌ನಲ್ಲಿ ಸುಮಾರು ೨೦ ಜನ ಸತ್ತರು. ಕರ್ಫ್ಯೂ ವಿಧಿಸಲಾಯಿತು. ಚಳವಳಿ ರಾಯಚೂರು, ಬಿಜಾಪುರ, ಚಿತ್ರದುರ್ಗ, ಉತ್ತರ ಕನ್ನಡ ಜಿಲ್ಲೆಗಳಿಗೂ ಹಬ್ಬಿತು. ಬೆಲೆ ಏರಿಕೆ ತಡೆ, ರೈತರ ಉತ್ಪನ್ನಗಳಿಗೆ ಸೂಕ್ತ ಬೆಲೆ ನಿಗದಿ, ಬೆಟರ್‌ಮೆಂಟ್ ಲೆವಿ ರದ್ದು ಈ ಬೇಡಿಕೆಗಳು ಪ್ರಮುಖವಾದವು. ಜನರ ಬೆಂಬಲವೂ ಈ ಚಳವಳಿಗೆ ಸಿಕ್ಕಿತು.

ಕೊನೆಗೆ ಸರ್ಕಾರ ರೈತರೊಂದಿಗೆ ಮಾತುಕತೆ ನಡೆಸಿ ೮೫ ಕೋಟಿ ರೂಪಾಯಿಗಳ ಪರಿಹಾರ ನೀಡಲು ಒಪ್ಪಿತು. ಬೆಟರ್‌ಮೆಂಟ್ ಲೆವಿಯನ್ನು ತಾತ್ಕಾಲಿಕವಾಗಿ ರದ್ದುಪಡಿಸಿತು. ರೈತರ ಸಮಸ್ಯೆಗಳ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಮೊದಲು ಕೃಷಿ ಸಚಿವ ಎಸ್. ಬಂಗಾರಪ್ಪ ಹಾಗೂ ಆನಂತರ ವಿರೋಧ ಪಕ್ಷದ ನಾಯಕ ಎಸ್. ಆರ್. ಬೊಮ್ಮಾಯಿ ಅವರ ಅಧ್ಯಕ್ಷತೆಯಲ್ಲಿ ಸಮಿತಿಗಳನ್ನು ನೇಮಿಸಲಾಯಿತು. ಚಳವಳಿ ಹಾಗೆಯೇ ಮುಂದುವರಿಯಿತು. ಶಿವಮೊಗ್ಗ ಜಿಲ್ಲೆಯಲ್ಲಿ ಭದ್ರಾ ಸಹಕಾರ ಸಕ್ಕರೆ ಕಾರ್ಖಾನೆಯ ಸಮಸ್ಯೆ ಉಲ್ಬಣಿಸಿತ್ತು. ಇವೆಲ್ಲಾ ಸೇರಿಕೊಂಡು ರೈತ ಚಳವಳಿಗೆ ಹೊಸ ಆಯಾಮ ದೊರೆಯಿತು.

೧೯೮೦ ಸೆಪ್ಟೆಂಬರ್ ೧ ರಂದು ಶಿವಮೊಗ್ಗದಲ್ಲಿ ಬೃಹತ್ ಜಿಲ್ಲಾ ರೈತ ಸಮಾವೇಶ ನಡೆಯಿತು. ರೈತರ ಸಮಸ್ಯೆಗಳ ಬಗ್ಗೆ ಚರ್ಚಿಸಿತು. ಕರ್ನಾಟಕ ರಾಜ್ಯ ರೈತ ಸಂಘದ ಹೆಸರಿನಲ್ಲಿ ೧೯ ಬೇಡಿಕೆಗಳನ್ನು ಸರ್ಕಾರಕ್ಕೆ ಸಲ್ಲಿಸಲು ತೀರ್ಮಾನಿಸಿತು. ಅಂದೇ ಕರ್ನಾಟಕ ರಾಜ್ಯ ರೈತ ಸಂಘ ಸ್ಥಾಪನೆ ಆಯಿತೆಂದು ಹೇಳಬಹುದು. ರೈತರಿಗೆ ಹಸಿರು ಶಾಲು ಹಾಗೂ ಟೋಪಿ ಧರಿಸುವಂತೆ ಕರೆ ನೀಡಲಾಯಿತು. ಕಾನೂನು ಪ್ರಾಧ್ಯಾಪಕ ಎಂ. ಡಿ. ನಂಜುಂಡಸ್ವಾಮಿ, ಪ್ರಗತಿ ಪರ ರೈತ ಎನ್. ಡಿ. ಸುಂದರೇಶ್, ಮಾಜಿ ಸಚಿವ ಹಾಗೂ ಸ್ಪೀಕರ್ ಎಚ್. ಎಸ್. ರುದ್ರಪ್ಪ, ರೇವಣ್ಣ ಸಿದ್ದಯ್ಯ ಮುಂತಾದ ಅನೇಕರು ಇದರ ನೇತೃತ್ವ ವಹಿಸಿದ್ದರು. ಬಂಧಿತ ರೈತರ ಬಿಡುಗಡೆ, ಬ್ಯಾಂಕ್ ಸಾಲ ಮನ್ನಾ, ಶೇಕಡ ೪ ರ ಬಡ್ಡಿ ದರದಲ್ಲಿ ಕೃಷಿ ಸಾಲ, ಬೆಟರ್‌ಮೆಂಟ್ ಲೆವಿ ಪೂರ್ಣ ರದ್ದು, ವೈಜ್ಞಾನಿಕವಾಗಿ ಕೃಷಿ ಕಾರ್ಮಿಕರ ವೇತನ ನಿಗದಿ ಹಾಗೂ ರೈತರ ಉತ್ಪನ್ನಗಳಿಗೆ ಬೆಲೆ ನಿಗದಿ, ಬೆಳೆ ವಿಮೆ ಜಾರಿ, ಗ್ರಾಮೀಣ ಅಭಿವೃದ್ಧಿಗೆ ಬಜೆಟ್‌ನ ಶೇಕಡ ೮೦ ಹಣ ಮೀಸಲು ಇವೇ ಮುಂತಾದವು ಪ್ರಮುಖ ಬೇಡಿಕೆಗಳಾಗಿದ್ದವು. ಸರ್ಕಾರ ೧೨ ಬೇಡಿಕೆಗಳ ಈಡೇರಿಕೆಗೆ ಒಪ್ಪಿತು. ಉಳಿದ ಬೇಡಿಕೆಗಳ ಪರಿಶೀಲನೆಗೆ ಒಪ್ಪಿತು.

ಈ ಮಧ್ಯೆ ಅಧಿಕಾರ ವಂಚಿತರಾಗಿದ್ದ ದೇವರಾಜ ಅರಸು ಅವರ ಅಧ್ಯಕ್ಷತೆಯ ಕಾಂಗ್ರೆಸ್ (ಯು), ಸಿ.ಪಿ.ಐ., ಸಿ.ಪಿ.ಎಂ, ಪಕ್ಷಗಳು ಸೇರಿ, ಪ್ರಗತಿ ಪರ ರೈತರ ವೇದಿಕೆಯನ್ನು ರಚಿಸಿಕೊಂಡು, ೧೨ ಬೇಡಿಕೆಗಳನ್ನು ಮುಂದಿಟ್ಟುಕೊಂಡು, ೧೯೮೦ ಡಿಸೆಂಬರ್ ತಿಂಗಳಿನಿಂದ ನರಗುಂದದಿಂದ ಬೆಂಗಳೂರಿಗೆ ರೈತ ಜಾಥಾ ಏರ್ಪಡಿಸಿದವು. ಇದು ರಾಜಕೀಯ ಸಂಸ್ಥೆಯಾದ್ದರಿಂದ ಇದಕ್ಕೆ ತನ್ನ ಬೆಂಬಲ

ಇಲ್ಲವೆಂದು ರಾಜ್ಯ ರೈತ ಸಂಘ ಹೇಳಿತು. ಈ ಜಾಥಾ ಫೆಬ್ರವರಿ ೫, ೧೯೮೧ರಂದು ಬೆಂಗಳೂರಿಗೆ ಬಂತು. ಸರ್ಕಾರ ಈ ಜಾಥಾವನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಉದಾಸೀನ ಮಾಡಿತು. ಮುಂದೆ ೧೯೮೨ರ ನವೆಂಬರ್ ತಿಂಗಳಲ್ಲಿ ಜನತಾ ಪಕ್ಷ, ಕ್ರಾಂತಿರಂಗ, ಸಿಪಿಐ, ಸಿಪಿಎಂ ಗಳೆಲ್ಲಾ ಸೇರಿ ವಿಧಾನ ಸೌಧದ ಎದುರು ಧರಣಿ ನಡೆಸಿದವು. ೧೯೮೨ರಲ್ಲಿ ನಡೆದ ಗೋಕಾಕ್ ಚಳವಳಿಗೆ ಕರ್ನಾಟಕ ರಾಜ್ಯ ರೈತಸಂಘ (ಕ.ರಾ.ರೈ.ಸಂ.) ತನ್ನ ಬೆಂಬಲ ಘೋಷಿಸಿತು.

೧೯೮೦ರ ಅಕ್ಟೋಬರ್‌ನಲ್ಲಿ ನೀಡಿದ ಭರವಸೆಗಳನ್ನು ಈಡೇರಿಸುವಂತೆ ರೈತಸಂಘ ಸರ್ಕಾರಕ್ಕೆ ಒತ್ತಾಯಿಸಿತು. ಸುಮಾರು ಆರು ಸಾವಿರ ರೈತರು ಬಂಧನಕ್ಕೆ ಒಳಗಾದರು. ನಿಸರ್ಗ ಸಂಪತ್ತಿನ ಲೂಟಿಯ ವಿರುದ್ಧವೂ ರೈತಸಂಘ ದನಿ ಎತ್ತಿತು. ಜೊತೆಗೆ ಮಧ್ಯಪಾನ ನಿಷೇಧ, ಸಾರಾಯಿ ಅಂಗಡಿಗಳನ್ನು ಮುಚ್ಚಿಸುವುದು ಮುಂತಾದ ಅನೇಕ ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು ಚಳವಳಿ ಆರಂಭಿಸಿತು. ಹಳ್ಳಿ ಹಳ್ಳಿಗಳಲ್ಲಿ ಕರ್ನಾಟಕ ರಾಜ್ಯ ರೈತಸಂಘದ ನಾಮಫಲಕಗಳು, ಕೆಲವು ನಿಬಂಧನೆಗಳು ಕಾಣಿಸಿಕೊಂಡವು. ೨-೧೦-೧೯೮೨ರಂದು ಕರ್ನಾಟಕ ರಾಜ್ಯ ರೈತಸಂಘವು ಬೆಂಗಳೂರಿನ ಕಬ್ಬನ್‌ಪಾರ್ಕ್‌ನಲ್ಲಿ ಹಿಂದೆಂದೂ ಕಂಡರಿಯದ ಬೃಹತ್ ರೈತ ಸಮಾವೇಶವನ್ನು ಏರ್ಪಡಿಸಿತು. ಕನಿಷ್ಟ ಎರಡು-ಮೂರು ಲಕ್ಷ ರೈತರು ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಆಗಮಿಸಿ ಸಮಾವೇಶದಲ್ಲಿ ಭಾಗವಹಿಸಿದ್ದರು. ಸರ್ಕಾರ ನೀಡಿದ್ದ ಭರವಸೆ ಹಾಗೂ ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸಿತು. ಬೇಡಿಕೆ ಈಡೇರುವವರೆಗೆ ಲೆವಿ ಇಲ್ಲ, ಕಂದಾಯ ಇಲ್ಲ ಎಂಬ ಘೋಷಣೆ ಹೊರಡಿಸಿತು. ರಾಜ್ಯದ ೨೬,೮೨೬ ಹಳ್ಳಿಗಳಲ್ಲಿ ಚಳವಳಿಯನ್ನು ತೀವ್ರಗೊಳಿಸುವುದಾಗಿ ಹೇಳಿತು. ನರಗುಂದ, ನವಲಗುಂದ, ನಾಗಸಮುದ್ರ, ದೊಡ್ಡಹಳ್ಳಿ ಗೋಲೀಬಾರ್‌ಗಳ ಬಗ್ಗೆ ನ್ಯಾಯಾಂಗ ತನಿಖೆಗೆ ಒತ್ತಾಯಿಸಿತು. ಲಂಚಕೋರ ಅಧಿಕಾರಿಗಳ ಮನೆಯನ್ನು ತನಿಖೆ ಮಾಡಿ ಆಸ್ತಿ ಪಾಸ್ತಿಗಳನ್ನು ವಶಪಡಿಸಿಕೊಳ್ಳುವುದಾಗಿಯೂ ಘೋಷಿಸಿತು.

ಚಳವಳಿ ಹಾಗೇ ಮುಂದುವರಿಯಿತು. ನವೆಂಬರ್ ೧, ೧೯೮೨ರಂದು ಕರ್ನಾಟಕ ರಾಜ್ಯ ರೈತ ಸಂಘ ಶಿವಮೊಗ್ಗದಲ್ಲಿ ಸಭೆ ಸೇರಿತು. ಬೆಟರ್‌ಮೆಂಟ್ ಲೆವಿ. ಹಾಗೂ ಲೆವಿ ಭತ್ತ ಸಂಗ್ರಹಣೆ ಕೈಬಿಡದಿದ್ದರೆ ನವೆಂಬರ್ ೨ ರಿಂದ ಚಳವಳಿ ಹಾಗೂ ಜಾಥಾ ಏರ್ಪಡಿಸುವುದಾಗಿ ಘೋಷಿಸಿತು. ಶಿವಮೊಗ್ಗದಿಂದ ನವೆಂಬರ್ ೨ ರಂದು ರೈತರ ಕಾಲ್ನಡಿಗೆ ಜಾಥಾ ಬೆಂಗಳೂರಿನತ್ತ ಹೊರಟಿತು. ರಾಜ್ಯ ವಿಧಾನಸಭೆಗೆ ೧೯೮೩ ಜನವರಿಯಲ್ಲಿ ಚುನಾವಣೆಗಳು ನಡೆಯುವುದಾಗಿ ತಿಳಿದುಬಂದಿತ್ತು. ಏತನ್ಮಧ್ಯೆ ಕಾಂಗ್ರೆಸ್ ಪಕ್ಷವೂ ರೈತರ ರ‍್ಯಾಲಿಗಳನ್ನು ಏರ್ಪಡಿಸಿತ್ತು. ೨೫-೧೦-೮೨ರಂದು ಅಥಣಿಯಲ್ಲಿ ಏರ್ಪಡಿಸಿದ್ದ ಬೃಹತ್ ರೈತ ರ‍್ಯಾಲಿಯನ್ನು ಉದ್ದೇಶಿಸಿ ಮುಖ್ಯ ಮಂತ್ರಿ ಗುಂಡೂರಾವ್ ಮಾತನಾಡಿದರು. ರೈತರಿಗೆ ನಮ್ಮ ಸರ್ಕಾರ ಮಾಡಿರುವಷ್ಟು ಸಹಾಯ, ತೋರಿಸಿದಷ್ಟು ರಿಯಾಯಿತಿಯನ್ನು ಯಾವ ಸರ್ಕಾರವೂ ಇದುವರೆಗೆ ತೋರಿಸಿಲ್ಲ ಎಂದು ಹೇಳಿದರು.

ಅದೇ ರೀತಿ ೮-೧೧-೮೨ರಂದು ಬೀದರ್ ಜಿಲ್ಲೆ ಭಾಲ್ಕಿಯಲ್ಲಿ ಬೃಹತ್ ರೈತರ ರ‍್ಯಾಲಿಯನ್ನು ಸಂಘಟಿಸಲಾಗಿತ್ತು. ರಾಜೀವ್ ಗಾಂಧಿ, ಗುಂಡೂರಾವ್, ಭೀಮಣ್ಣ ಖಂಡ್ರೆ ಈ ರ‍್ಯಾಲಿಯನ್ನುದ್ದೇಶಿಸಿ ಮಾತನಾಡಿದರು. ರೈತರ ಅಭಿವೃದ್ಧಿಗೆ ನೆರವಾಗುವ ಕಾರ್ಯಕ್ರಮಗಳನ್ನು ಕೈಗೊಳ್ಳಲು ಕಾಂಗ್ರೆಸ್ ಪಕ್ಷ ಸಿದ್ಧವಾಗಿದೆ ಎಂದು ಘೋಷಿಸಿದರು. ಶಿವಮೊಗ್ಗದಿಂದ ಹೊರಟ ರೈತ ಜಾಥಾ ೧೦-೧೧-೮೨ ರಂದು ಬೆಂಗಳೂರಿಗೆ ಬಂದು ಮುಖ್ಯಮಂತ್ರಿಗಳ ಮನೆಯ ಮುಂದೆ ಧರಣಿ ನಡೆಸಿತು. ಬೇಡಿಕೆ ಈಡೇರಿಕೆಗೆ ಹಾಗೂ ನಿಸರ್ಗ ಸಂಪತ್ತಿನ ಲೂಟಿ ತಡೆಗೆ ಒತ್ತಾಯಿಸಿತು. ೧೨ ರಿಂದ ೨೦ರವರೆಗೆ ಕನಕಪುರ, ನಂಜನಗೂಡು, ಕೊಳ್ಳೇಗಾಲ ಮುಂತಾದ ಕಡೆ ರೈತರು ಗ್ರಾನೈಟ್ ಸಾಗಾಣಿಕೆಗಳನ್ನು ತಡೆದರು. ಸುಮಾರು ೫೦೦ ರೈತರು ಬಂಧನಕ್ಕೆ ಒಳಗಾದರು.

೨೧-೧೧-೮೨ರಂದು ಮಂಡ್ಯ ಜಿಲ್ಲೆ ಕಾಳಮುದ್ದನದೊಡ್ಡಿ ಸಕ್ಕರೆ ಕಾರ್ಖಾನೆಯ ಬಳಿ ರೈತರು ಕಬ್ಬಿಗೆ ನ್ಯಾಯವಾದ ಬೆಲೆ ನಿಗದಿ ಪಡಿಸುವಂತೆ ಹಾಗೂ ಬಾಕಿ ಪಾವತಿ ಮಾಡುವಂತೆ ಒತ್ತಾಯಪಡಿಸಿ ಧರಣಿ ನಡೆಸಿದರು. ರೈತರ ಮೇಲೆ ಲಾಠಿ ಚಾರ್ಜ್ ಮಾಡಲಾಯಿತು. ಇದೇ ರೀತಿ ಶಿವಮೊಗ್ಗ ಜಿಲ್ಲೆ ಭದ್ರಾ ಸಹಕಾರಿ ಸಕ್ಕರೆ ಕಾರ್ಖಾನೆಯ ಬಳಿಯೂ ಚಳವಳಿ ನಡೆಯುತ್ತಿತ್ತು. ಮಂಡ್ಯ ಜಿಲ್ಲೆಯ ಚಳವಳಿ ಉಗ್ರ ಸ್ವರೂಪ ತಾಳಿತು. ರಸ್ತೆ ತಡೆ ನಡೆಯತೊಡಗಿತು. ೨೩-೧೧-೮೨ರಂದು ಮದ್ದೂರು ತಾಲ್ಲೂಕು ಗೆಜ್ಜಲಗೆರೆ ಬಳಿ ಉದ್ರಿಕ್ತ ರೈತರ ಮೇಲೆ ಗೋಲೀಬಾರ್ ಮಾಡಲಾಯಿತು. ಸ್ಥಳದಲ್ಲೇ ಇಬ್ಬರು ರೈತರು ಮೃತಪಟ್ಟರು. ಈ ಘಟನೆ ಆಗ ವಿಧಾನಸಭೆಯಲ್ಲಿ ಪ್ರಸ್ತಾಪವಾಯಿತು. ವಿರೋಧ ಪಕ್ಷಗಳು ಭಾರೀ ಪ್ರತಿಭಟನೆ ನಡೆಸಿದವು. ವಿಧಾನಸಭೆಯಿಂದ ೧೬ ಶಾಸಕರನ್ನು ಉಚ್ಚಾಟಿಸಲಾಯಿತು.

ಈ ಮಧ್ಯೆ ಸರ್ಕಾರ ರೈತರು, ಕೃಷಿ ಕಾರ್ಮಿಕರ ಪರವಾದ ಅನೇಕ ಕಾರ್ಯಕ್ರಮಗಳನ್ನು ಪ್ರಕಟಿಸಿತು. ೨೦-೧೧-೮೨ರಂದು ರೈತರಿಂದ ಲೆವಿ ಸಂಗ್ರಹವನ್ನು ರದ್ದು ಮಾಡಲಾಗಿದೆ ಎಂದು ಸರ್ಕಾರ ಪ್ರಕಟಿಸಿತು. ೧೯೫೬ರಲ್ಲಿ ಧಾರವಾಡ, ಬಿಜಾಪುರ ಜಿಲ್ಲೆಗಳಲ್ಲಿ

ಟೆನೆನ್ಸಿ ಕಾಯಿದೆ ಜಾರಿಗೆ ಚಳವಳಿ ನಡೆಯಿತು. ಈ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಸರ್ಕಾರ ಬಿ.ಡಿ. ಜತ್ತಿ ಯವರ ಸಮಿತಿಯನ್ನು ನೇಮಿಸಿತು. ಮುಂದೆ ಕಡಿದಾಳ್ ಮಂಜಪ್ಪನವರು ರೆವಿನ್ಯೂ ಸಚಿವರಾಗಿದ್ದ ಕಾಲದಲ್ಲಿ ಗೇಣಿದಾರರನ್ನು ಒಕ್ಕಲೆಬ್ಬಿಸದ ಶಾಸನ ಜಾರಿಗೆ ಬಂತು ಹಾಗೂ ಭೂ ಸುಧಾರಣಾ ಕಾಯಿದೆಯನ್ನೂ ಇವರು ಸಿದ್ಧಪಡಿಸಿ ವಿಧಾನಸಭೆಯಲ್ಲಿ ಮಂಡಿಸಿದರು. ಆದರೆ ಅದು ಚರ್ಚೆಗೆ ಬಂದು ಅಂಗೀಕೃತವಾಗಲಿಲ್ಲ. ಮುಂದೆ ದೇವರಾಜ ಅರಸರ ಕಾಲದಲ್ಲಿ ಇದನ್ನು ಪುನರ್ ಪರಿಶೀಲಿಸಿ ಭೂ ಸುಧಾರಣಾ ಕಾಯಿದೆಯನ್ನು ಜಾರಿಗೆ ತರಲಾಯಿತು.

೧೯೫೭ರಿಂದ ೧೯೮೪ರವರೆಗೆ ಕರ್ನಾಟಕ ಪ್ರಾಂತ ರೈತ ಸಂಘವು ದಕ್ಷಿಣ ಕನ್ನಡ ಜಿಲ್ಲೆ, ಮೈಸೂರು ಜಿಲ್ಲೆ, ಕೋಲಾರ ಜಿಲ್ಲೆ, ಕೊಡಗು ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ನಡೆಸಿದ ರೈತಪರ ಹಾಗೂ ಕೃಷಿ ಕಾರ್ಮಿಕರ ಪರವಾದ ಹೋರಾಟಗಳೂ ಕೂಡಾ ಉಲ್ಲೇಖನೀಯವಾದವು. ಇವು ರೈತರಲ್ಲಿ ಜಾಗೃತಿಯನ್ನು ಮೂಡಿಸುವಲ್ಲಿ ಸಹಕಾರಿಯಾದವು. ವಿಧಾನಸಭಾ ಚುನಾವಣೆಗಳಲ್ಲಿ ತಟಸ್ಥವಾಗಿ ಉಳಿಯಲು ಕರ್ನಾಟಕ ರಾಜ್ಯ ರೈತ ಸಂಘ ನಿರ್ಧರಿಸಿತ್ತು. ಈ ನಿರ್ಧಾರದ ವಿರುದ್ಧ ಬಳ್ಳಾರಿಯ ರೇವಣ್ಣ ಸಿದ್ಧಯ್ಯ ಎಂಬ ರೈತಸಂಘದ ಮುಖಂಡರು ಪ್ರತಿಭಟಿಸಿ, ಕರ್ನಾಟಕ ರಾಜ್ಯ ರೈತ ಸಂಘದಿಂದ ಹೊರಬಂದು, ಕರ್ನಾಟಕ ರೈತರು ಹಾಗೂ ರೈತ ಕೂಲಿಗಾರರ ಸಂಘವನ್ನು ಸ್ಥಾಪಿಸಿದರು. ಚುನಾವಣೆಗಳಲ್ಲಿ ಕಾಂಗ್ರೆಸ್ (ಐ) ವಿರುದ್ಧ ವಿರೋಧ ಪಕ್ಷಗಳಿಗೆ ಸಹಕಾರ ನೀಡಲು ತೀರ್ಮಾನಿಸಿದರು. ೧೯೮೩ರ ಜನವರಿ ತಿಂಗಳಲ್ಲಿ ನಡೆದ ವಿಧಾನಸಭಾ ಚುನಾವಣೆಗಳಲ್ಲಿ ಇವರು ಸಿರಗುಪ್ಪ ಕ್ಷೇತ್ರದಿಂದ ಸ್ಪರ್ಧಿಸಿ ಗೆದ್ದು ಬಂದರು. ೧೯೮೨ರ ಡಿಸೆಂಬರ್ ೨೭ ರಂದು ಕರ್ನಾಟಕ ರಾಜ್ಯ ರೈತಸಂಘ ಮಂಡ್ಯದಲ್ಲಿ ಬೃಹತ್ ರೈತ ಸಮಾವೇಶ ನಡೆಸಿತು. ಸುಮಾರು ೫೦-೬೦ ಸಾವಿರ ರೈತರು ಇದರಲ್ಲಿ ಭಾಗವಹಿಸಿದ್ದರು. ವಿಧಾನಸಭಾ ಚುನಾವಣೆಗಳಲ್ಲಿ ವಿರೋಧ ಪಕ್ಷಗಳಿಗೆ ಬೆಂಬಲ ನೀಡಿ ರಾಜ್ಯದ ಕಾಂಗ್ರೆಸ್ (ಐ) ಸರ್ಕಾರ ಉರುಳಿಸುವಂತೆ ರೈತರಿಗೆ ಕರೆ ನೀಡಿ ಸಮಾವೇಶ ನಿರ್ಣಯ ಅಂಗೀಕರಿಸಿತು. ಈ ರೀತಿ ಕರ್ನಾಟಕ ರಾಜ್ಯ ರೈತಸಂಘ ಸಕ್ರಿಯ ರಾಜಕೀಯ ಪ್ರವೇಶ ಮಾಡಿತು. ಆದರೆ ೧೯೮೩ ರ ವಿಧಾನಸಭಾ ಚುನಾವಣೆಗಳಲ್ಲಿ ಅದು ನೇರವಾಗಿ ಸ್ಪರ್ಧಿಸಲಿಲ್ಲ. ಮುಂದೆ ೧೯೮೫ರ ಚುನಾವಣೆಗಳಲ್ಲಿ ಸ್ಪರ್ಧೆಗೆ ಇಳಿಯಿತು.

## ಚುನಾವಣೆ ಸಾಧನೆ

ಮಂಡ್ಯದಲ್ಲಿ ೧೯೭೮ರಲ್ಲಿ ನಡೆದ ವರುಣಾ ನಾಲೆ ಚಳುವಳಿಯಿಂದಾಗಿ ರೈತ ಸಂಘ ರಾಜಕೀಯ ಧ್ಯೇಯೋದ್ದೇಶಗಳನ್ನು ತನ್ನ ಪ್ರಣಾಳಿಕೆಯಲ್ಲಿ ಅಳವಡಿಸಿಕೊಂಡಿತು. ಕೆ. ವಿ. ಶಂಕರಗೌಡರ ನೇತೃತ್ವದಲ್ಲಿ ಜರುಗಿದ ವರುಣಾ ನಾಲೆ ಚಳುವಳಿ ಅಂದಿನ ಆಡಳಿತ ಕಾಂಗ್ರೆಸ್ ಸರಕಾರದ ಮುಖ್ಯಮಂತ್ರಿಗಳಾದ ದೇವರಾಜ್ ಅರಸ್‌ರವರ ವಿರುದ್ಧದ ಚಳುವಳಿಯಾಗಿತ್ತು. ಈ ಚಳುವಳಿಯಿಂದಾಗಿ ಮಂಡ್ಯದ ರೈತರು ಕಾಂಗ್ರೆಸ್ ಹಾಗೂ ದೇವರಾಜ್ ಅರಸುರವರ ವಿರುದ್ಧ ಮತ ಚಲಾವಣೆ ಮಾಡಿದರು. ಮಂಡ್ಯ ಜಿಲ್ಲೆಯ ಎಂಟು ವಿಧಾನಸಭಾ ಕ್ಷೇತ್ರಗಳಲ್ಲಿ ನಾಗಮಂಗಲ ಹೊರತಾಗಿ ಉಳಿದೆಲ್ಲಾ ಪ್ರದೇಶಗಳು ಅಂದು ವಿರೋಧ ಪಕ್ಷವಾಗಿದ್ದ ಜನತಾ ಪಕ್ಷದ ಪಾಲಾಯಿತು. ಕಾಂಗ್ರೆಸ್ (ಐ) ಅಧಿಕಾರಕ್ಕೆ ಬಂದರೂ ಮಂಡ್ಯ ಜಿಲ್ಲೆ ಮಾತ್ರ ಈ ವಿಧಾನಸಭೆ ಚುನಾವಣೆಯಲ್ಲಿ ತೀವ್ರ ಪ್ರತಿಭಟನೆಯನ್ನು ವ್ಯಕ್ತಪಡಿಸಿತು. ರಾಜಕೀಯವಾಗಿ ಕೂಡ ರೈತರನ್ನು ಜಾಗೃತರನ್ನಾಗಿ ಮಾಡಬಹುದು ಎಂದು ವರುಣಾ ನಾಲಾ ಚಳುವಳಿ ರೈತ ನಾಯಕರಿಗೆ ತಿಳಿಸಿತು. ಶಿವಮೊಗ್ಗ, ತುಮಕೂರು, ಧಾರವಾಡ, ಬಳ್ಳಾರಿ ಮೊದಲಾದ ಕಡೆ ರೈತರನ್ನು ರಾಜಕೀಯವಾಗಿ ಜಾಗೃತರನ್ನಾಗಿ ಮಾಡಲು ಎಲ್ಲಾ ಪಕ್ಷಗಳು ಮುಂದಾದವು. ೧೯೮೩ರಲ್ಲಿ ಕರ್ನಾಟಕದಲ್ಲಿ ಜನತಾ ಪಕ್ಷ ಸರಕಾರ ರಚಿಸಲು ಆಗ ನಡೆದ ರೈತ ಹೋರಾಟ ಕೂಡ ಕಾರಣ ಎಂಬುದನ್ನು ಅನೇಕ ರಾಜಕೀಯ ವಿಶ್ಲೇಷಣಕಾರರು ಈಗಾಗಲೇ ತಿಳಿಸಿದ್ದಾರೆ. ಆ ತನಕ ರೈತರ ಬೇಡಿಕೆಗಳಿಗೆ ಸತ್ಯಾಗ್ರಹ, ಹೋರಾಟ ಹಾಗೂ ಪ್ರತಿಭಟನೆಗಳನ್ನು ನಡೆಸುತ್ತಿದ್ದ ರೈತ ಸಂಘ ತಾನು ಅಧಿಕಾರಕ್ಕೆ ಬಂದರೆ ಇವೆಲ್ಲವನ್ನು ಸುಲಭವಾಗಿ ಬಗೆಹರಿಸುತ್ತೇವೆಂದೂ ರೈತ ಸಮುದಾಯಕ್ಕೆ ಹೇಳತೊಡಗಿತು. ಆ ಹಿನ್ನೆಲೆಯಲ್ಲಿ ಸ್ವತಃ ರೈತ ಸಂಘವೇ ಚುನಾವಣೆ ಕಣಕ್ಕೆ ಇಳಿಯಿತು.

## ೧೯೮೯ರ ವಿಧಾನಸಭಾ ಚುನಾವಣೆ

೧೯೮೫ರ ನಂತರ ಕರ್ನಾಟಕ ರಾಜ್ಯದ ರೈತ ಸಂಘವು ಆಡಳಿತದಲ್ಲಿದ್ದ ಜನತಾ ಪಕ್ಷದ ಧ್ಯೇಯಧೋರಣೆಗಳಿಗೆ ಬೇಸತ್ತು ಮುಂದಿನ ಚುನಾವಣೆಯಲ್ಲಿ ಸ್ಪರ್ಧಿಸುವುದಾಗಿ ಸ್ಪಷ್ಟಪಡಿಸಿತು. ೧೯೮೯ರ ಚುನಾವಣೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘ ೧೧೧ ಸ್ಥಾನಗಳಿಗೆ ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿತ್ತು. ಅದು ಶೇಕಡ ೩.೬ ರಷ್ಟು ಅಂದರೆ ೬೫,೮೮೭ ಮತಗಳನ್ನು ಗಳಿಸುವಲ್ಲಿ ಯಶಸ್ವಿಯಾಯಿತು. ಅದರ

೮೯ ಜನ ಅಭ್ಯರ್ಥಿಗಳು ಠೇವಣಿಯನ್ನು ಕಳೆದುಕೊಂಡರು. ಬೆಳಗಾವಿ ಹಾಗೂ ಧಾರವಾಡ ಜಿಲ್ಲೆಗಳು ಮಾತ್ರ ರೈತ ಸಂಘದ ಅಭ್ಯರ್ಥಿಗಳನ್ನು ಗೆಲ್ಲಿಸಿ ವಿಧಾನ ಸಭೆಗೆ ಕಳುಹಿಸಿದ ಕೀರ್ತಿಗೆ ಪಾತ್ರವಾದವು.

ಧಾರವಾಡ ದಕ್ಷಿಣದಿಂದ ಪಾಟೀಲ್ ಬಾಬಾಗೌಡ ರುದ್ರಗೌಡರವರು ಸ್ಪರ್ಧಿಸಿ ಶೇಕಡ ೪೫.೭ ಅಂದರೆ ೩೫, ೮೯೭ ಮತಗಳನ್ನು ಗಳಿಸಿ ಆಯ್ಕೆಯಾದರು. ಬೆಳಗಾವಿ ಜಿಲ್ಲೆಯ ಕಿತ್ತೂರು ವಿಧಾನಸಭಾ ಕ್ಷೇತ್ರದಿಂದ ಅದೇ ಬಾಬಾಗೌಡ ರುದ್ರಗೌಡರು ಶೇಕಡ ೪೬.೨೯ ಅಂದರೆ ೪೦,೦೭೧ ಮತಗಳನ್ನು ಗಳಿಸಿ ಆಯ್ಕೆಯಾದರು. ಎರಡೂ ಕ್ಷೇತ್ರಗಳಲ್ಲಿ ಗೆದ್ದ ಕೀರ್ತಿ ಶ್ರೀ ಬಾಬಾಗೌಡರವರದ್ದು. ಚುನಾವಣೆಯ ನಂತರ ಅವರು ಧಾರವಾಡ ಗ್ರಾಮಾಂತರ ಕ್ಷೇತ್ರಕ್ಕೆ ರಾಜೀನಾಮೆ ಕೊಟ್ಟರು. ಅನಂತರ ನಡೆದ ಉಪ-ಚುನಾವಣೆಯಲ್ಲಿ ರೈತ ಸಂಘದ ಅಭ್ಯರ್ಥಿಯಾಗಿದ್ದ ಪ್ರೊ। ಎಂ.ಡಿ. ನಂಜುಂಡಸ್ವಾಮಿಯವರು ಕರ್ನಾಟಕ ರಾಜ್ಯ ವಿಧಾನಸಭೆಗೆ ಆಯ್ಕೆಯಾದರು.

## ೧೯೯೪ರ ವಿಧಾನಸಭಾ ಚುನಾವಣೆ

ಈ ಚುನಾವಣೆಯಲ್ಲಿ ಕರ್ನಾಟಕ ರಾಜ್ಯದ ರೈತ ಸಂಘವು ೧೧೨ ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅದು ಶೇಕಡ ೨.೭೩ ಅಂದರೆ ೫,೬೪,೨೪೬ ಮತಗಳನ್ನು ಪಡೆದುಕೊಂಡಿತು. ಅದರ ೧೦೧ ಅಭ್ಯರ್ಥಿಗಳು ಠೇವಣಿಯನ್ನು ಕಳೆದುಕೊಂಡರು. ಈ ಚುನಾವಣೆಯಲ್ಲಿ ಕೇವಲ ಒಬ್ಬರು ಮಾತ್ರ ರೈತಸಂಘದ ಮೂಲಕ ವಿಧಾನಸಭೆಯನ್ನು ಪ್ರವೇಶಿಸಿದರು. ಅವರೆಂದರೆ ಪಾಂಡವಪುರದಿಂದ ಕೆ. ಎಸ್. ಪುಟ್ಟಣ್ಣಯ್ಯನವರು. ಪಾಂಡವಪುರ ವಿಧಾನಸಭಾ ಕ್ಷೇತ್ರದಲ್ಲಿ ೧೩ ಜನ ಅಭ್ಯರ್ಥಿಗಳು ಈ ಸಾಲಿನ ಚುನಾವಣಾ ಕಣದಲ್ಲಿದ್ದರು. ಕಾಂಗ್ರೆಸ್, ಜನತಾದಳ ಹಾಗೂ ಪಕ್ಷೇತರ ಅಭ್ಯರ್ಥಿಯೊಬ್ಬರ ತೀವ್ರ ಸ್ಪರ್ಧೆಯ ನಡುವೆಯೂ ರೈತ ಸಂಘದ ಕೆ.ಎಸ್. ಪುಟ್ಟಣ್ಣಯ್ಯನವರು ಶೇಕಡ ೪೦.೭೧ ಅಂದರೆ ೪೩,೩೨೩ ಮತಗಳಿಸಿ ಆಯ್ಕೆ ಆದರು. ಹೀಗೆ ಆಯ್ಕೆಯಾದ ಕೆ. ಎಸ್. ಪುಟ್ಟಣ್ಣಯ್ಯರವರು ರಾಜ್ಯ ವಿಧಾನಸಭೆಯಲ್ಲಿ ತಮ್ಮ ಜಾಗೃತ ಪ್ರಜ್ಞೆ ಹಾಗೂ ಹೋರಾಟದ ಮನೋಭಾವನೆಯಿಂದಾಗಿ ರಾಜ್ಯದ ಪ್ರಜ್ಞಾವಂತ ಜನರ ಗಮನ ಸೆಳೆದರು.

## ೧೯೯೯ರ ವಿಧಾನಸಭಾ ಚುನಾವಣೆ

ಈ ಚುನಾವಣೆಯಲ್ಲಿ ಕರ್ನಾಟಕ ರಾಜ್ಯ ರೈತ ಸಂಘದಿಂದ ಒಂಬತ್ತು ಜನ ಅಭ್ಯರ್ಥಿಗಳು ಸ್ಪರ್ಧಿಸಿದ್ದರು. ಅವರಲ್ಲಿ ಏಳು ಜನ ಅಭ್ಯರ್ಥಿಗಳು ಠೇವಣಿಯನ್ನು ಕಳೆದುಕೊಂಡರು. ಅದು ಗಳಿಸಿದ ಮತ ಶೇಕಡ ೦.೧೪ ಅಂದರೆ ೮೯,೫೯೪ರಷ್ಟು. ಶ್ರೀರಂಗಪಟ್ಟಣದಿಂದ ಸ್ಪರ್ಧಿಸಿದ್ದ ಕೆ. ಎಸ್. ನಂಜುಂಡೇಗೌಡರು ೨೫, ೨೭೫ ಮತಗಳಿಸಿ ಸೋಲು ಒಪ್ಪಿಕೊಂಡರು. ೧೯೯೪ರಲ್ಲಿ ಪಾಂಡವಪುರದಿಂದ ವಿಧಾನಸಭೆಗೆ ಆಯ್ಕೆಯಾಗಿದ್ದೂ ಕೆ. ಎಸ್. ಪುಟ್ಟಣ್ಣಯ್ಯನವರು ಈ ಚುನಾವಣೆಯಲ್ಲಿ ಶೇಕಡ ೩೧ರಷ್ಟು ಅಂದರೆ ೩೩,೮೦೦ ಮತಗಳ ಸೋಲು ಒಪ್ಪಿಕೊಂಡರು. ಪ್ರಸ್ತುತ ವಿಧಾನಸಭೆಯಲ್ಲಿ ರೈತ ಸಂಘದ ಯಾವ ಅಭ್ಯರ್ಥಿಯೂ ಶಾಸಕರಾಗಿಲ್ಲ

ರೈತ ನಾಯಕರಾದ ಪಾಟೀಲ್ ಬಾಬಾಗೌಡ ರುದ್ರಗೌಡರು ಬಿಜೆಪಿ ಪಕ್ಷಕ್ಕೆ ಸೇರಿದ ನಂತರ ಮುಂಬಯಿ ಕರ್ನಾಟಕದಲ್ಲಿ ರೈತ ಚಳುವಳಿ ಕ್ಷೀಣಿಸಿತು. ತಾತ್ವಿಕ ಭಿನ್ನಭಿಪ್ರಾಯಗಳಿಂದಾಗಿ ರೈತ ಸಂಘ ಪ್ರೊ। ಎಂ. ಡಿ. ನಂಜುಂಡಸ್ವಾಮಿ ಹಾಗೂ ಕೆ. ಎಸ್. ಪುಟ್ಟಣ್ಣಯ್ಯನವರ ಗುಂಪುಗಳಾಗಿ ಒಡೆಯಿತು. ಈ ನಡುವೆ ಎಲ್ಲಾ ರಾಜಕೀಯ ಪಕ್ಷಗಳೂ ಕೂಡ ರೈತರ ಹಿತ ಕಾಯಲು ಮುಂದಾಗುವುದಾಗಿ, ರೈತ ಸಮುದಾಯದ ಹಿತಾಸಕ್ತಿಗಳ ವಿಚಾರದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವುದಾಗಿ ರಾಜ್ಯದ ಗ್ರಾಮೀಣ ಜನತೆ ತುಂಬ ಆಸಕ್ತಿಯಿಂದ ನೋಡುತ್ತಿತ್ತು. ಆದರೆ ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ರೈತ ಸಂಘದ ಹೋರಾಟ ದುರ್ಬಲವಾಗುತ್ತ ಹೋಯಿತು.



# ಬಹುಜನ ಸಮಾಜ ಪಕ್ಷ

ಸಮತಾ. ಬಿ. ದೇಶಮಾನೆ

ಹಿಂದೂ ಸಮಾಜ ರಚನೆಯ ತಳಹದಿಯೇ ಜಾತಿ. ಜಾತಿ ಬರೀ ಸಾಮಾಜಿಕಜೀವನದ ಮುಖ್ಯ ವಿಭಜನೆಯಲ್ಲ, ಜೀವನದಲ್ಲಿನ ಊಟ, ಉಪಚಾರ, ಮದುವೆ, ಶಿಕ್ಷಣ, ಒಡನಾಟ, ಪ್ರಾರ್ಥನೆಗಳನ್ನೊಳಗೊಂಡ ಒಂದು ವ್ಯವಸ್ಥೆ. ಜಾತಿಯ ನಿರೂಪಣೆಯೆಂದರೆ ವಂಶಾನುಗತ ಸ್ವಗೋತ್ರ ವಿವಾಹದ ಕೆಲವೇ ಗುಂಪುಗಳ ಸಂಪ್ರದಾಯ. ಜಾತಿ ಜಾತಿಗಳ ಸಂಬಂಧ ಬೇರೆ ವಿಷಯಗಳಲ್ಲದೆ ಮಲಿನ ಮತ್ತು ಬಾಳ್ವೆ ಜ್ವಾಲೆಯೊಳಗೆ ಅಡಕವಾಗಿದೆ ಎಂದು ಹೇಳಬಹುದು.

ಅನೂಚಾನವಾಗಿ ಬಂದ ಜಾತಿ ಸಿದ್ಧಾಂತವಾದವೇ ಅಸ್ಪೃಶ್ಯತೆ, ಅದು ಬೇರೆ ಧರ್ಮದ ಸಂಪ್ರದಾಯವಲ್ಲ; ಹಿಂದೂ ಸಮಾಜದಲ್ಲಿ ಅಸ್ಪೃಶ್ಯನೇ ಅತ್ಯಂತ ಕೀಳುದರ್ಜೆಗೆ ಸೇರಿದವನು. ಅವರು ಆ ದರ್ಜೆಯಲ್ಲಿ ಶತಶತಮಾನಗಳಿಂದ ಬ್ರಾಹ್ಮಣರು ಒತ್ತಾಯದಿಂದ ನೀತಿ ನಿಯಮ ಕಾನೂನು ಕಟ್ಟಳೆಗಳಿಂದ ಅವರನ್ನು ಸರಪಳಿಯಿಂದ ಬಿಗಿದು ಚಲನೆ ಶಕ್ತಿಗೆ ಕಡಿವಾಣ ಹಾಕಿದ್ದಾರೆ. ಸ್ಪರ್ಶ, ನೆರಳು ಸೋಕುವುದು ಅಥವ ಅಸ್ಪೃಶ್ಯನ ಧ್ವನಿಕೂಡ ಕಲ್ಮಶವೆಂದು ಸವರ್ಣೀಯರು ಇಂದಿಗೂ ಪರಿಗಣಿಸುತ್ತಾರೆ. ಕೆಲವು ಪ್ರಾಣಿಗಳನ್ನು ಕೂಡ ಸಾಕುವುದಕ್ಕೂ ಲೋಹಗಳ ಒಡವೆಗಳನ್ನು ಹಾಕಿಕೊಳ್ಳುವುದಕ್ಕೂ ನಿಷೇಧವಿತ್ತು. ಊರ ಹೊರಗಿನ ಕೊಳಗೇರಿಗಳಲ್ಲಿ ವಾಸ ಮಾಡಬೇಕಾಗಿತ್ತು. ಈಗಲೂ ಅಸ್ಪೃಶ್ಯರ ಹೆಚ್ಚಿನ ಜನರು ಕೊಳಚೆ ಪ್ರದೇಶಗಳಲ್ಲೇ ಬದುಕಿಗೆ ಅರ್ಥವಿಲ್ಲದೆ ಬದುಕುತ್ತಿರುವುದು ಕಾಣಬಹುದು. ಸಾರ್ವಜನಿಕ ಬಾವಿಗಳಿಗೆ ಪ್ರವೇಶವಿರಲಿಲ್ಲ. ಸವರ್ಣೀಯರ ಮಕ್ಕಳು ಓದುವ ಶಾಲೆಗೆ ಇವರನ್ನು ಸೇರಿಸುವಂತಿರಲಿಲ್ಲ. ಎಲ್ಲಾ ದೇವಸ್ಥಾನಗಳನ್ನೂ ಇವರೇ ಕಲ್ಲು ಇಟ್ಟಿಗೆಗಳಿಂದ ಬೆವರು ಬೆರೆಸಿ ಕಟ್ಟುವರು. ಇವರಿಗೆ ಪ್ರವೇಶವಿರುತ್ತಿರಲಿಲ್ಲ. ಕ್ಷೌರಿಕರಿಂದ, ಅಗಸರಿಂದ ಇವರಿಗೆ ಸೇವೆ ದೊರಕುತ್ತಿರಲಿಲ್ಲ. ಸವರ್ಣೀಯ ಹಿಂದೂಗಳು ಇವರನ್ನು ಕೀಳು ಮಾನವರೆಂದು ಪರಿಗಣಿಸಿದ್ದರು. ಲೋಕಸೇವಾ ನೌಕರಿಗಳಲ್ಲಿ ಪೋಲೀಸ್ ಕೂಡ ಸೇರಿದಂತೆ, ಸೈನ್ಯ ಸೇವಾ ನೌಕರಿಯಲ್ಲೂ ಇವರಿಗೆ ಬಾಗಿಲು ಎಂದೂ ತೆರೆದಿರಲಿಲ್ಲ ಎಂದರೆ ಆಶ್ಚರ್ಯ ಪಡಬೇಕಾಗಿಲ್ಲ. ಆದ್ದರಿಂದ ಸಹಜವಾಗಿ ಅಸ್ಪೃಶ್ಯರು ವಂಶಗತವಾಗಿ ಬಂದ ಕೀಳು ದರ್ಜೆಯ ಉದ್ಯಮಗಳನ್ನು ಅವಲಂಬಿಸಲೇಬೇಕಾಯಿತು. ಜೀವನ ಪರ್ಯಂತ ಈ ಸಾಮಾಜಿಕ ಬೇರ್ಪಡೆಯಿಂದಾಗಿ ಅಸ್ಪೃಶ್ಯರಾಗಿ ಉಳಿದರು. ಸಾರ್ವಜನಿಕ ಅವನತಿಯಲ್ಲಿದ್ದರೂ ಆರ್ಥಿಕವಾಗಿ ಶಕ್ತಿ ಹೀನರಾಗಿದ್ದರು. ರಾಜಕೀಯವಾಗಿ ಉತ್ತಮ ಜಾತಿಗಳ ಸೇವಕರಾಗಿ ಉಳಿದರು ; ಶಾಶ್ವತವಾಗಿ ವಿದ್ಯಾಭ್ಯಾಸದಿಂದ ಸಾಂಸ್ಕೃತಿಕವಾಗಿ ಸದವಕಾಶಗಳಿಂದ ವಂಚಿತರಾಗಿದ್ದರು. ಆಜನ್ಮ ಅಸ್ಪೃಶ್ಯರಾಗಿ ಉಳಿದರು, ಅಸ್ಪೃಶ್ಯರಾಗಿಯೇ ಬಾಳಿದರು, ಸಾವನಪ್ಪಿದರು. ಅಕ್ಷರಲೋಕದಿಂದ ಈ ಜನರಿಂದ ಬಲು ದೂರ ಇರುವ. ಸವರ್ಣೀಯರು ಇವರನ್ನು ಮನುಷ್ಯರೆಂದು ಎಂದೂ ಮನಃ ಪೂರ್ವಕವಾಗಿ ಭಾವಿಸಲೇ ಇಲ್ಲ.

ಸಮಾಜದಲ್ಲಿ ಅಭಿವೃದ್ಧಿ ಪ್ರಗತಿಯಾಗಬೇಕಾದರೆ ರಾಜಕೀಯದ ಹಸ್ತ ಅಗತ್ಯವಿದೆ. ಆಳುವ ಜನರಿಂದ ಪರಿವರ್ತನೆಯು ಖಂಡಿತವಾಗಿ ಸಾಧ್ಯವಿದೆ ಎಂದು ಮನಗಂಡ ಅಸ್ಪೃಶ್ಯ ಜನನಾಯಕ

ಬಾಬಸಾಹೇಬರು ರಾಜಕೀಯ ರಂಗದಲ್ಲಿ ದಿಟ್ಟ ನಿಲುವುಗಳಿಂದ ಹೆಜ್ಜೆಯನ್ನಿಟ್ಟರು. ಅಲ್ಲಿ ಪ್ರತಿ ಘಟ್ಟದಲ್ಲಿ ಸವರ್ಣೀಯರಿಂದ ವಿರೋಧಗಳನ್ನು ಎದುರಿಸಿದರು. ಯಾವುದಕ್ಕೂ ಹೆದರದೆ ಹಿಂಜರಿಯದೆ ಇಂಡಿಯಾದ ಅಸಮಾನತೆಯ ವಿರುದ್ಧವಾಗಿ ಸಂಘರ್ಷ ಪ್ರಾರಂಭಿಸಿದರು.

ವ್ಯವಸ್ಥೆಯನ್ನು ವಿರೂಧಿಸುತ್ತಾ ಬಾಬಾಸಾಹೇಬರು ಎಲ್ಲರು ಈ ನಾಡಿನ ಸಂಪತ್ತು ಸಮನಾಗಿ ಪಡೆಯಲು ಅರ್ಹತೆ ಹೊಂದಿದ್ದಾರೆ ಎಂದು ಹೋರಾಟ ಆರಂಭಿಸಿದರು. ಸಾಮಾಜಿಕವಾಗಿ ನೋವು ಅನುಭವಿಸುತ್ತಲೇ ಇರುವ, ಶೋಷಣೆಗೆ ಒಳ ಪಟ್ಟ ಜನತೆಯ ಪರವಾಗಿ ಜ್ಯೋತಿಷಾ ಫ್ಯೂಲೆ, ಬುದ್ಧ, ಕಬೀರ, ಪೆರಿಯಾರ, ನಾರಾಯಣಗುರು, ಗಾಯಕವಾಡ, ಶಿವಾಜಿಯವರಂತೆ ಬಾಬಾ ಸಾಹೇಬರು ಧ್ವನಿ ಎತ್ತಿದರು. ಈ ತತ್ತ್ವಗಳನ್ನೇ ಅನುಷ್ಠಾನಗೊಳಿಸಲು ಬಹುಜನ ಸಮಾಜ ಪಕ್ಷವು ಜನ್ಮ ಪಡೆಯಿತು. ಅಂಬೇಡ್ಕರ್ ಅವರು ಕಂಡ ಕನಸು ಸಾಕಾರಗೊಳಿಸುವ ನೆರವಿನಿಂದ ಸಮಾಜದಿಂದ ಬಹಿಷ್ಕೃತಗೊಂಡ ಕೆಳವರ್ಗದವರನ್ನು ಆತ್ಮಾಭಿಮಾನ ಸ್ವಾಭಿಮಾನದಿಂದ ಬದುಕಲು ಹೆಮ್ಮೆ ಮೂಡಿಸಿವುದರತ್ತ ಹೊರ ಬಂದಿತು. ಬಲಿಷ್ಠತೆಯ ಕುರುಹಾಗಿ ಆನೆಯನ್ನು ಚುನಾವಣಾ ಚಿಹ್ನೆಯಾಗಿ ಆರಿಸಲಾಗಿದೆ.

**ಬಹುಜನ ಸಮಾಜ ಪಕ್ಷ**

ರಾಷ್ಟ್ರೀಯ ಮಟ್ಟದ ಆರು ರಾಜಕೀಯ ಪಕ್ಷಗಳನ್ನೊಳಗೊಂಡಂತೆ ಹಲವಾರು ರಾಜಕೀಯ ಪಕ್ಷಗಳು ದೇಶದಲ್ಲಿರುವುದು ತಿಳಿದ ವಿಷಯವೇ ಸರಿ. ಆದರೆ ಇವುಗಳೆಲ್ಲವೂ ಕೂಡಾ ಬ್ರಾಹ್ಮಣಶಾಹಿ ವಿಚಾರಗಳಿಂದ ತುಂಬಿ ಹೊಲಸು ಕೊಳಕು ಅಸಮಾನತೆಯೇ ನಿರಂತರವಾಗಿ ಮುಂದುವರೆದು ಕೊಂಡು ಹೋಗುವ ಜಮೀನ್ದಾರಿ ವ್ಯವಸ್ಥೆಯನ್ನೇ ಬಯಸುವಂಥವುಗಳಾಗಿವೆ. ದಲಿತ, ಶೋಷಿತ ಸಮಾಜವನ್ನು ನಯ ನಾಜೂಕಿನಿಂದ ಬಳಸಿಕೊಂಡು ಬ್ರಾಹ್ಮಣ ವ್ಯವಸ್ಥೆಯನ್ನು ರಕ್ಷಿಸುವುದು ಈ ಪಕ್ಷಗಳ ಪರಮಗುರಿಯಾಗಿದೆ. ತಮ್ಮ ಸ್ವಂತ ಅಸ್ತಿತ್ವವನ್ನು ಮಾರಿಕೊಂಡು ಇತರರ ಬೆಂಬಲದಿಂದ 'ಸ್ವಾಮಿನಿಷ್ಠೆ'ಯಿಂದ ಸರಕಾರ ನಡೆಸುತ್ತಿವೆ. ಇವೆಲ್ಲಾ ಪಕ್ಷಗಳು ಮೇಲು ಜಾತಿ ಜನರಿಂದ ನಿಯಂತ್ರಿಸಲ್ಪಟ್ಟದ್ದು. ಆ ಜನರು ಈ ಪಕ್ಷಗಳನ್ನು ಮೇಲು ಜಾತಿಗಳ ಉನ್ನತಿಗಾಗಿ ಮಾತ್ರ ಬಳಸಿಕೊಳ್ಳುತ್ತಿದ್ದಾರೆ. ಇದರಿಂದ ಮನನೊಂದ ಹಿಂದುಳಿದ ವರ್ಗದವರೇ ಹೆಚ್ಚಿರುವ ಬಹುಜನ ಸಮಾಜವು ತನ್ನದೇ ಆದಂತಹ ಪಕ್ಷವೊಂದನ್ನು ಸ್ಥಾಪಿಸಲೇಬೇಕೆಂದು ಆಲೋಚಿಸಿ ಅದರಂತೆ ೧೪.೪.೧೯೮೪ರಂದು ಬಹುಜನ ಸಮಾಜ ಪಕ್ಷವನ್ನು ದೆಹಲಿಯಲ್ಲಿ ಪ್ರಾರಂಭಿಸಿತು. ಕೇವಲ ಎರಡು ತಿಂಗಳಲ್ಲಿ ದೆಹಲಿಯ ಕೆಂಪುಕೋಟೆಯ ಮೈದಾನದಲ್ಲಿ ೨೨.೬,.೧೯೮೪ರಿಂದ ಸುಮಾರು ಮೂರು ದಿನಗಳ ರಾಷ್ಟ್ರೀಯ ಸಮಾವೇಶವನ್ನು ಸಂಘಟಿಸಲಾಗಿತ್ತು. ಈ ಸಮಾವೇಶದಲ್ಲಿ ಬಹುಜನರಲ್ಲಿ ಹೊಸದೊಂದು ಬೆಳಕಿನಂತೆ, ದಲಿತರ ಹೃದಯದಲ್ಲಿ ಪಕ್ಷ ಸೇರಿತು. ಬೌದ್ಧಧರ್ಮ ಸಂಸ್ಕೃತಿಯ ಧರ್ಮ ಬಹುಜನ ಸಮಾಜಪಕ್ಷ ಸಮಸ್ತರ ಕೈಗೆ ರಾಜಕೀಯ ಅಧಿಕಾರ ಕೊಡುವ ಪಕ್ಷ, 'ತುಮ್ಹಾರಾ ರಾಜ್ ತುಮ್ಹಾರ ಅಧಿಕಾರ' ಎಂಬ ಉದ್‌ಘೋಷಣೆಯೊಂದಿಗೆ ಪರಿಚಿತವಾಯಿತು. 'ದೇಶ ತುಮ್ಹಾರಾ ರಾಜ್ ತುಮ್ಹಾರ್ ತುಮ್ಹಾರಾ ರಾಜ್ ತುಮ್ಹಾರಾ ಓಟ್' ಎಂಬ ಹೊಸ ಭರವಸೆಯ ನುಡಿಗಳಿಂದ ಯಾರೂ ನಿರೀಕ್ಷಿಸದ ಅತ್ಯಂತ ಕಡಿಮೆ ಸಮಯದಲ್ಲಿ ಇಂಡಿಯಾ ದೇಶದಲ್ಲೇ ಅತೀ ದೊಡ್ಡ ರಾಜ್ಯವಾದ ಉತ್ತರ ಪ್ರದೇಶದಲ್ಲಿ ತನ್ನದೇ ಆದ ಛಾಪು ಒತ್ತಿ ಜಗತ್ತಿನ ಗಮನ ಸೆಳೆದ ಏಕೈಕ ಪಕ್ಷ ಇದಾಗಿದೆ. ಇದರ ಶ್ರೇಯಸ್ಸು ರಾಷ್ಟ್ರೀಯ ಅಧ್ಯಕ್ಷರಾದ ಕಾನ್ಷೀರಾಂ ಅವರಿಗೆ ಸಲ್ಲುತ್ತದೆ. ಇವರನ್ನು ದೇಶಾಭಿಮಾನಿಗಳು 'ಬಾಬಾ ತೇರಾ ದುಸರಾ ನಾಮ ದಾದ ಸಾಹೇಬ ಕಾನ್ಷೀ ರಾಂ' ಎಂದು ಹೆಮ್ಮೆಯಿಂದ ಕೊಂಡಾಡುತ್ತಾರೆ.

ಈ ಪಕ್ಷದಲ್ಲಿರುವವರು ಮುಖ್ಯವಾಗಿ; ಪರಿಶಿಷ್ಟ ವರ್ಗಗಳು, ಇತರ ಹಿಂದುಳಿದ ವರ್ಗಗಳು ಹಾಗೂ ಮತಾಂತರ ಹೊಂದಿರುವಂತಹ ಧಾರ್ಮಿಕ ಅಲ್ಪಸಂಖ್ಯಾತರನ್ನು, ಆದರೆ, ಅವರ ಜನಸಂಖ್ಯೆಯು ಒಟ್ಟು ಜನಸಂಖ್ಯೆಯ ಶೇಕಡ ೮೫-೯೦ ರಷ್ಟಾಗುತ್ತದೆ. ಹೀಗೆ ಅವರ ಜನಸಂಖ್ಯೆಯ ಹೆಚ್ಚಾಗಿರುವುದರಿಂದ ಅವರನ್ನು ಬಹುಜನ ಸಮಾಜವೆಂದು ಕರೆಯಲಾಗುತ್ತದೆ. ಬಹುಜನ ಸಮಾಜವನ್ನು ನಿರಂತರವಾಗಿ ಅವಮಾನಿಸಿ ಮೋಸಗೊಳಿಸಲಾಗಿದೆ. ಬಹುಜನ ಸಮಾಜವು ಸುಮಾರು ಆರು ಸಾವಿರ ಜಾತಿಗಳಾಗಿ ಹೋಳಾಗಿವೆ. ಹಾಗೂ ಅದಕ್ಕಾಗಿ ರಾಜಕೀಯ ಪಕ್ಷಗಳನ್ನು ರಚಿಸಿಕೊಂಡು ಯಥಾಸ್ಥಿತಿ ವ್ಯವಸ್ಥೆಯನ್ನು ಮುಂದುವರೆಸಲು ಹಲವಾರು ವಿಧಾನಗಳನ್ನು ಮುಂದುವರೆಸಲು ಹಲವಾರು ವಿಧಾನಗಳನ್ನು ಬಳಸುತ್ತಾರೆ. ಆದರೆ ಜಾತಿ ಪದ್ಧತಿಯಿಂದ ನಷ್ಟವನ್ನು ಅನುಭವಿಸಿದ ಬಹುಜನ ಸಮಾಜಕ್ಕೆ ಸೇರಿದ ಜನತೆಯು ಆ ಪದ್ಧತಿಯನ್ನು ನಾಶಗೊಳಿಸಲು ಬಂದಿಸುತ್ತಾರೆ ಎಂಬುದು ಪಕ್ಷದ ಅನಿಸಿಕೆ.

ಬಹುಜನ ಸಮಾಜ ಪಕ್ಷದ ಉಗಮಕ್ಕೆ ಶೋಷಣೆಗೆ ಮತ್ತು ತುಳಿತಕ್ಕೊಳಗಾದ ಜನತೆಯು ಅವರದೇ ಆದ ಅವರಿಂದಲೇ ರಚಿತವಾದ ಬಹುಜನ ಸಮಾಜ ಪಕ್ಷವನ್ನು ಹೊಂದುವುದು ಐತಿಹಾಸಿಕ ಅಗತ್ಯವೆಂದು ಬಹುಜನರಲ್ಲಿದೆ. ಮೊದಲ ಗುಂಪು ಅಂದರೆ ಅತಿ ಹೆಚ್ಚು ತುಳಿತ ಮತ್ತು ಶೋಷಣೆಗೆ ಒಳಗಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳು, ಇವರು ಬಹುತೇಕ ಎಲ್ಲ

ಪ್ರದೇಶಗಳಲ್ಲಿದ್ದಾರೆ. ಈ ಜಾತಿಗಳಿಗೆ ಸಂವಿಧಾನಾತ್ಮಕ ರಕ್ಷಣೆ ಮತ್ತು ಕಾನೂನುಗಳಿದ್ದು, ಅವುಗಳನ್ನು ಅವರ ಏಳಿಗಾಗಿ ಬಳಸಿಕೊಳ್ಳುವ ಪ್ರಯತ್ನ ಸಾಗಿದೆ. ಇದು ಯಾಂತ್ರಿಕವಾಗಿ ಆದ ಬದಲಾವಣೆಯಲ್ಲ, ಬಹು ಕಾಲದಿಂದಲೂ ನಮ್ಮ ನಾಯಕರು ಅದರಲ್ಲಿ ವಿಶೇಷವಾಗಿ ಡಾ। ಬಾಬಾ ಸಾಹೇಬ ಅಂಬೇಡ್ಕರ್‌ರವರ ದೃಢ ಹೋರಾಟದಿಂದಾಗಿ ಈ ಬದಲಾವಣೆಯು ಸಾಧ್ಯವಾಯಿತು. ಆದರೆ ಸುಧಾರಿಸಲ್ಪಟ್ಟ ಮತ್ತು ಮಾರ್ಪಾಡು ಮಾಡಲ್ಪಟ್ಟ ಈ ಕಾನೂನುಗಳನ್ನು ಪ್ರಾಮಾಣಿಕವಾಗಿ ಹಾಗೂ ಯಥಾವತ್ತಾಗಿ ಜಾರಿಗೊಳಿಸಲ್ಪಟ್ಟಿಲ್ಲ. ಆದುದರಿಂದ ಈ ಕಾನೂನುಗಳನ್ನು ಕಾರ್ಯಗತಗೊಳಿಸಲು ಮತ್ತು ಅನ್ಯಾಯ ದೌರ್ಜನ್ಯಗಳಿಂದ ಬಹುಜನರನ್ನು ರಕ್ಷಿಸಲು ಅಥವಾ ಈ ಅಮಾನವೀಯ ಅನ್ಯಾಯಗಳ ವಿರುದ್ಧ ಹೋರಾಡಲು ಒಂದು ರಾಜಕೀಯ ಸಂಘಟನೆಯನ್ನು ಹೊಂದುವುದು ಅನಿವಾರ್ಯವಾಗಿದೆ.

ಬಹುಜನ ಸಮಾಜದ ಎರಡನೆ ಮತ್ತು ಅತಿ ದೊಡ್ಡ ಗುಂಪಾದ ಇತರ ಹಿಂದುಳಿದ ವರ್ಗಗಳಿಗೂ ಕೂಡ ಈ ಪಕ್ಷದ ಅಗತ್ಯವಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದು ಐವತ್ತೈದು ವರ್ಷಗಳ ನಂತರವು ಈ ವರ್ಗಗಳಿಗೆ ಹಕ್ಕುಗಳನ್ನು ಸಂಪೂರ್ಣವಾಗಿ ನೀಡಿಲ್ಲ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಅನ್ವಯಿಸುವ ವಿಶೇಷ ಕಾನೂನುಗಳು ಮತ್ತು ಹಕ್ಕುಗಳು ಹಿಂದುಳಿದ ವರ್ಗಗಳಿಗೆ ಲಭ್ಯವಾಗಿಲ್ಲ. ಆದರೆ ಸರ್ಕಾರ ಮುಖ್ಯವಾಗಿ ಕೇಂದ್ರ ಸರ್ಕಾರವು ಕೂಡ ಈ ವರ್ಗಗಳ ಅಭಿವೃದ್ಧಿಯನ್ನು ಪರಿಗಣಿಸಿಲ್ಲ.

ಸಿಖ್ ಅಲ್ಪಸಂಖ್ಯಾತರ ಮೇಲೆ, ಕ್ರಿಶ್ಚಿಯನ್ ಅಲ್ಪ ಸಂಖ್ಯಾತರ ಮೇಲೆ ಕೂಡ ಹಲವಾರು ಕಡೆ ದೌರ್ಜನ್ಯಗಳು ಜರುಗುತ್ತಿವೆ. ಹೀಗಾಗಿ ಮುಸ್ಲಿಂ, ಸಿಖ್, ಕ್ರಿಶ್ಚಿಯನ್, ಬೌದ್ಧ ಇತ್ಯಾದಿ ಧಾರ್ಮಿಕ ಅಲ್ಪ ಸಂಖ್ಯಾತರ ರಕ್ಷಣೆಗಾಗಿ, ಜೀವನ ಭದ್ರತೆಗಾಗಿ ಬಹುಜನ ಸಮಾಜ ಪಕ್ಷದಂತಹ ಒಂದು ರಾಜಕೀಯ ಪಕ್ಷದ ತುರ್ತು ಅಗತ್ಯವಿದೆ.

## ಬಹುಜನ ಸಮಾಜ ಪಕ್ಷದ ಗುರಿಗಳು

ಸಂವಿಧಾನವು ಜಾರಿಗೊಂಡ ಬಳಿಕ ದೇಶದಲ್ಲಿ ನೀಡಲಾದ ರಾಜಕೀಯ ಸಮಾನತೆಯೊಂದಿಗೆ ಈಗ ಇಲ್ಲದಿರುವ ಸಾಮಾಜಿಕ ಮತ್ತು ಆರ್ಥಿಕ ಸಮಾನತೆಯನ್ನು ಸ್ಥಾಪಿಸುವುದು ಪಕ್ಷದ ಪ್ರಧಾನ ಗುರಿಯಾಗಿದೆ. ದೇಶದಲ್ಲಿ ವಿಪರೀತ ಬೆಳೆದಿರುವ ಭ್ರಷ್ಟಾಚಾರವನ್ನು ತೊಡೆದು ಹಾಕುವುದು ಬಹುಜನ ಸಮಾಜದ ಕರ್ತವ್ಯವಾಗಿದೆ. ಸಮಾಜದಲ್ಲಿನ ಭ್ರಷ್ಟಾಚಾರವನ್ನು ನಿವಾರಿಸಲು ಪ್ರಪ್ರಥಮವಾಗಿ ರಾಜಕೀಯ ಭ್ರಷ್ಟಾಚಾರವನ್ನು ಸಂಪೂರ್ಣವಾಗಿ ತಡೆಯುವ ಅಗತ್ಯವಿದೆ.

## ಪಕ್ಷದ ಮುಖ್ಯ ಗುರಿಗಳು

೧. ಬಹುಜನ ಸಮಾಜ ಪಕ್ಷದ ಬಗ್ಗೆ ಬಹುಜನ ಸಮಾಜ ಬದ್ಧತೆ ಮತ್ತು ಕಾಳಜಿಯನ್ನು ಬೆಳೆಸುವುದು.
೨. ರಾಷ್ಟ್ರೀಯ ಪ್ರಥಮ ರಾಜಕೀಯ ಪಕ್ಷವಾಗಿ ಗುರುತಿಸಿಕೊಂಡು ಬಹುಜನರ ಪರವಾಗಿ ಕಾರ್ಯವನ್ನು ಮಾಡುವುದು.
೩. ಕರ್ನಾಟಕದ ವಿಧಾನಸಭೆಗೆ ಹೆಚ್ಚಿನ ಸಂಖ್ಯೆಯಲ್ಲಿ ಅಭ್ಯರ್ಥಿಗಳು ಸ್ವತಂತ್ರವಾಗಿ ಚುನಾಯಿತರಾಗಿ, ಶಾಸನಸಭೆಗಳಲ್ಲಿ ಬಹುಜನ ಸಮಾಜದ ಸಮಸ್ಯೆಗಳ ಬಗ್ಗೆ ಧೈರ್ಯವಾಗಿ, ಮುಕ್ತವಾಗಿ ಗಟ್ಟಿ ದನಿಯಲ್ಲಿ ಮಾತಾಡುವಂತೆ ವ್ಯವಸ್ಥೆ ಕಲ್ಪಿಸುವುದು.
೪. ೬೦೦೦ ಉಪಜಾತಿಗಳು ಒಂದೇ ಭಾವಣೆಯ ಕೆಳಗೆ ಬಂದು ಬಹುಜನರೆಂದು ಹೆಮ್ಮೆಯಿಂದ ಬದುಕಲು ಭರವಸೆ ಕೊಡುತ್ತಾ ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಿತಿಗತಿಯನ್ನು ಉತ್ತಮ ಪಡಿಸುವುದು.
೫. ಮಹಿಳೆಯರ ಸರ್ವತೋಮುಖ ಕಲ್ಯಾಣಕ್ಕಾಗಿ ಈ ಪಕ್ಷ ಸದಾ ನೆರಳಾಗಿ ರಕ್ಷಿಸಿಕೊಳ್ಳುವಂತೆ ವ್ಯವಸ್ಥೆ ಮಾಡುತ್ತದೆ.
೬. ಎಲ್ಲ ಶೋಷಿತ ಒಳಪಂಗಡಗಳಿಗೂ ರಾಜಕೀಯ ಅಧಿಕಾರದ ಚುಕ್ಕಾಣಿ ಕೊಡುತ್ತಾ ಅಧರ್ಮದ ಚಕ್ರಕ್ಕೆ ತಿಲಾಂಜಲಿಯನ್ನಿಡುವುದು.
೭. ಸಾರ್ವಜನಿಕರಿಗೂ ಸಾಮಾಜಿಕ ನ್ಯಾಯ ಕಡ್ಡಾಯವಾಗಿ ದೊರಕಬೇಕು.
೮. ಬಾಬಾಸಾಹೇಬರು ಕಂಡ ನಿಮ್ಮ ವರ್ಗದವರೊಬ್ಬರು ಈ ದೇಶವನ್ನಾಳುವ ಸಮರ್ಥ ನಾಯಕರನ್ನಾಗಿ ಮಾಡುವುದು.

## ಕರ್ನಾಟಕದಲ್ಲಿ ಬಹುಜನ ಸಮಾಜ ಪಕ್ಷದ ಪ್ರಭಾವ

ಕರ್ನಾಟಕದಲ್ಲಿ ಬಹುಜನ ಸಮಾಜ ಪಕ್ಷವು ಮಂದಗತಿಯಲ್ಲಿ ಸಾಗುತ್ತಿದೆ. ಪ್ರೊ. ಬಿ. ಕೃಷ್ಣಪ್ಪನವರು ಈ ಪಕ್ಷವನ್ನು ಬೆಳೆಸಿ ಉಳಿಸಲು ಹಗಲಿರುಳು ಕಷ್ಟ ಪಟ್ಟರು. ಹೆಚ್ಚು ಕಡಿಮೆ ರಾಜ್ಯದ ಪ್ರತಿಗ್ರಾಮಕ್ಕೂ ಭೇಟಿಕೊಟ್ಟು ಪ್ರೊ. ಬಿ. ಕೆ. ಖುದ್ದಾಗಿ ಮನೆ ಮನೆಗೆ ಹೋಗಿ ಬಿ. ಎಸ್. ಪಿ.ಯ ದೀಪ ಹಚ್ಚಲು ಯತ್ನಿಸಿದ್ದಾರೆ. ರಾಜಕೀಯ ಅಧಿಕಾರ ಮಹತ್ವ ಕುರಿತು ಜ್ಞಾನದ ಸಂಸ್ಕಾರ ನೀಡಿದ್ದಾರೆ. ಪ್ರತಿಯೊಬ್ಬರ ಹೃದಯದಲ್ಲಿ 'ಸ್ವಾಭಿಮಾನದ' ಕಿಚ್ಚು ಮೂಡಿಸಲು ಪ್ರಯತ್ನಿಸಿದ್ದಾರೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಬಹುಜನ ಸಮಾಜ ಪಕ್ಷದ ತತ್ವ-ಗುರಿ, ಉದ್ದೇಶಗಳನ್ನು ಸಂಪೂರ್ಣವಾಗಿ ಒಪ್ಪಿಕೊಂಡಿತು. ಯಾಕೆಂದರೆ ದಲಿತ ಸಂಘರ್ಷ ಸಮಿತಿಯ ನಿಲುವು ಕೂಡಾ ಬಾಬಾ ಸಾಹೇಬರು ಕಂಡ ಕನಸು ನನಸು ಮಾಡಬೇಕೆಂಬುದೇ ಆಗಿತ್ತು. ಅವರ ತತ್ವಗಳನ್ನು ಈಡೇರಿಸುವುದೇ ಇದರ ಮುಖ್ಯ ಕರ್ತವ್ಯವಾಗಿತ್ತು.

ಸಮಾನತೆಗಾಗಿ ಸದಾ ಹೋರಾಡುತ್ತಿದ್ದ ಪ್ರೊ। ಬಿ.ಕೆ. ಅವರಿಂದ ಕರ್ನಾಟಕದಲ್ಲಿ ಬಿ. ಎಸ್. ಪಿ. ತನ್ನದೇ ಆದ ಅಸ್ತಿತ್ವ ಪಡೆದುಕೊಳ್ಳಲು ಸಹಾಯವಾಯಿತು. ಆದರೆ ಪಕ್ಷದಲ್ಲಿ ಭಿನ್ನಾಭಿಪ್ರಾಯಗಳು ಹೆಚ್ಚಿದಂತೆ ಇದರ ಪರಿಹಾರಕ್ಕಾಗಿ ೨೦.೨.೧೯೯೭ರಂದು ಬೆಂಗಳೂರಿನಲ್ಲಿ ಪುನಃಶ್ಚೇತನ ಸಂಘರ್ಷ ರ್‍ಯಾಲಿ ಏರ್ಪಡಿಸಲಾಯಿತು. ಆ ರ್‍ಯಾಲಿಯಲ್ಲಿ ಅನೇಕ ಪ್ರಮುಖರು ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ಹೇಳಿಕೊಂಡಾಗ ಮತ್ತೆ ಸಂಘರ್ಷಕರೆಲ್ಲಾ ಒಂದಾಗಿ ಕ್ರಿಯಾತ್ಮಕವಾದ ಕಾರ್ಯಗಳನ್ನು ಮಾಡಲು ಹರ್ಷದಿಂದ ಮುಂದಾದರು. ಆ ರ್‍ಯಾಲಿಯಲ್ಲಿ ಹಂತ ಹಂತವಾಗಿ ಚರ್ಚಿಸಿದ ನಂತರವೇ ಬಹುಜನ ಸಮಾಜ ಪಕ್ಷಕ್ಕೆ ಬೆಂಬಲ ಕೊಡುವುದಾಗಿ ಅಂತಿಮ ತೀರ್ಮಾನ ಪಡೆಯಲಾಯಿತು.

ಸ್ವಾಧೀನವನ್ನು ಹೊಂದಿರುವ ವ್ಯಕ್ತಿಯು ಸ್ವಾಧೀನತೆ ಇಲ್ಲದ ವ್ಯಕ್ತಿಗಿಂತ ಹೆಚ್ಚು ಶಕ್ತಿಶಾಲಿಯಾಗಿರುತ್ತಾನೆ ಎಂಬುದು ನಮಗೆ ತಿಳಿದಿರುವ ಸಂಗತಿಯೆ. ಯಾರ ಸ್ವಾಧೀನದಲ್ಲಿ ಅಧಿಕಾರವಿರುತ್ತದೆಯೋ ಅಂಥ ವ್ಯಕ್ತಿಯು, ಅಧಿಕಾರದಿಂದ ಹೊರಗಿರುವವರ ಪರವಾಗಿ ತನ್ನ ಅಧಿಕಾರವನ್ನು ಯಾವತ್ತೂ ತ್ಯಜಿಸುವುದಿಲ್ಲ ಎಂಬುದು ಕೂಡ ಎಲ್ಲರಿಗೂ ಗೊತ್ತಿರುವ ವಿಷಯ.

ಬಾಬಾಸಾಹೇಬರು ಕಂಡ ಕನಸಿನಂತೆ ಇಂಡಿಯಾ ದೇಶದಲ್ಲಿಯೋ ಅತ್ಯಂತ ದೊಡ್ಡ ರಾಜ್ಯವಾದ ಉತ್ತರ ಪ್ರದೇಶದಲ್ಲಿ ಅತ್ಯಂತ ಕಡಿಮೆ ವಯಸ್ಸಿನ ನ್ಯಾಯವಾದಿಗಳಾದ ಪ್ರಥಮ ದಲಿತ ಮಹಿಳೆ ಕುಮಾರಿ ಮಾಯಾವತಿ ಜೂನ್ ೩, ೧೯೯೫ರಂದು ಮಂತ್ರಿಯಾಗಿ ಅಧಿಕಾರ ವಹಿಸಿ ಕನಸು ನನಸುಗೊಳಿಸಿದರೆಂದು ಹೇಳಬಹುದು. ಮತ್ತು ೧೯೯೬ ವಿಧಾನ ಸಭೆಯ ಚುನಾವಣೆ ಸಹರನಾಪೂರ ಹರೋಡ ಜಿಲ್ಲೆಗಳಿಂದ ವಿಜಯಿಯಾದ ಬಳಿಕ ೧೯೯೭ರ ಮಾರ್ಚ ೨೧ರಂದು ಎರಡನೇಯ ಬಾರಿಗೆ, ಮೇ ೪ ೨೦೦೨ ರಂದು ಮೂರನೇ ಬಾರಿಗೆ ಉತ್ತರ ಪ್ರದೇಶದ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡರು.

ಕರ್ನಾಟಕದಲ್ಲಿ ಬಹುಜನ ಸಮಾಜ ಪಕ್ಷ ಗಟ್ಟಿಯಾಗಿ ನೆಲೆ ನಿಲ್ಲಬೇಕಾದರೆ ಒಳ ಪಂಗಡಗಳ ತಾರತಮ್ಯತೆ ಬಿಡಬೇಕು. ದಲಿತರಿಗೆ ದಲಿತರಿಂದ ಅನೇಕ ಮಾನಸಿಕ ಹಾಗೂ ದೈಹಿಕ ಹೊಡೆತಗಳು ಬೀಳುತ್ತಿವೆ. ಇಂಥವರು ಬಾಬಾಸಾಹೇಬರ ಸಿದ್ಧಾಂತ ಮತ್ತು ಬಾಬಾ ಸಾಹೇಬರನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳುವುದು ಅಗತ್ಯವಿದೆ.

ಉತ್ತರ ಕರ್ನಾಟಕದಲ್ಲಿ ಡಾ. ಬಾಬಾಸಾಹೇಬರ ಚಿಂತನೆ ತತ್ವಗಳ ಪರಿಪಾಲಕರಿದ್ದಾರೆಂಬುದಕ್ಕೆ ಬೀದರ್ ಜಿಲ್ಲೆಯಿಂದ ಅಲ್ಪ ಸಂಖ್ಯಾತರ ಕೋಮಿನಿಂದ ಜುಲ್‌ಫಿಕರ್ ಆಸ್ಮಮಿಸಾಬ್ ಎಂಬುವವರು ಬಿ.ಎಸ್.ಪಿ. ಪಕ್ಷದಿಂದ ೧೯೯೪ರಲ್ಲಿ ಶಾಸಕರಾಗಿ ಆಯ್ಕೆಯಾಗಿದ್ದು ನೋಡಬಹುದು. ಬೀದರ್, ಗುಲ್ಬರ್ಗಾ, ರಾಯಚೂರು, ಬೆಳಗಾಂ, ಹುಬ್ಬಳ್ಳಿ-ಧಾರವಾಡಗಳಲ್ಲಿ ಈಗ ಮತ್ತಷ್ಟು ಈ ಪಕ್ಷ ತನ್ನ ಅಸ್ತಿತ್ವ ಉಳಿಯುವಂತೆ ಕೆಲವು ಕಾರ್ಯಕರ್ತರು ಅದೇ ಜಿಲ್ಲೆಗಳಲ್ಲಿಯೇ ಇದ್ದು ನಿಸ್ವಾರ್ಥತೆಯಿಂದ ಕೆಲಸ ಮಾಡುತ್ತಿದ್ದಾರೆ.

ಉಪಪಂಗಡಗಳನ್ನು ಲೆಕ್ಕಿಸದೆ ನಿಸ್ವಾರ್ಥತೆಯಿಂದ ಸಂಘಟನೆಯನ್ನು ಗೆಲುವುಗೊಳಿಸುವವರಿಗೆ ಉತ್ತಮವಾದ ಹುದ್ದೆಗಳನ್ನು ಹಂಚುವುದರ ಮೂಲಕ ಪಕ್ಷ ಬೆಳೆಯುವಂತೆ ಮಾಡಬೇಕಾಗಿದೆ. ಮಹಿಳೆಯರಿಗೆ ಪ್ರತ್ಯೇಕ wing ಮಾಡಬೇಕು.

ಕರ್ನಾಟಕದಲ್ಲಿ ಬಹುಜನ ಸಮಾಜ ಪಕ್ಷಕ್ಕಾಗಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಶ್ರಮಿಸುತ್ತಿರುವವರೆಂದರೆ ಓ. ಶ್ರೀಧರನ್, ಪ್ರೊ. ಶ್ರೀಧರಕಲಿವೀರ, ಬಿ. ಗೋಪಾಲ, ಮೋಹನ್, ಗೋಪಿನಾಥ್, ಮಹೇಶ್, ರಾಜಣ್ಣ, ಪ್ರೊ. ಜಗಜೀವನರಾಂ ವರ್ಮಾ ಬಾಬುರಾವ್ ದೇಶಮಾನ್ಯೆ, ಡಾ. ಹೆಚ್. ಎಸ್. ಕಟ್ಟಿ, ಶ್ರೀ ವಿಠಲ ದೊಡ್ಡಮನಿ. ಸ್ವಾಭಿಮಾನಿ ಬಾಬಾ ಸಾಹೇಬರ್ ಚಿಂತನೆಯ ಪ್ರತಿಪಾದಕ ಜೋಸ್ಲೆ ಕಾಂಬ್ಳೇ, ಮಾವಳ್ಳಿ ಶಂಕರ್, ಎಸ್. ಎ. ಆಂಜನಪ್ಪ ಗಂಗನಬೀಡು ಮುನಿಸ್ವಾಮಿ, ಆ ಸಾರಾಂ ಜಯಣ್ಣ ಮತ್ತು ಹಲವಾರು ಎಲ್ಲ ಸಂಘಟಕರು ಪಕ್ಷದ ಹಿತದೃಷ್ಟಿಯಿಂದ ಇತ್ತೀಚಿನ ದಿನಗಳಲ್ಲಿ ಕಮ್ಮಟ ಶಿಬಿರ, ವಿಚಾರ ಸಂಕೀರ್ಣ, ಬಿ. ಎಸ್. ಪಿ. ಕೇಡರ್‌ಗಳನ್ನು ಸಿದ್ಧಗೊಳಿಸುತ್ತಿದೆ. ಕಲಾವಿದರಾದ ಶ್ರೀನಿವಾಸ್ ಮತ್ತು ಗಣೇಶ್ ಹೊಸಕೋಟೆ ಮಂಜು ಶ್ರಮವಹಿಸಿ ಮುಂದಾಗಿ ನೇತೃತ್ವ ವಹಿಸಿ ಕೆಲಸಮಾಡುತ್ತಿದ್ದಾರೆ. ಮುಂಬರುವ ಕೆಲವೇ ವರ್ಷಗಳಲ್ಲಿ ಕರ್ನಾಟಕದಲ್ಲಿಯೂ ಬಹುಜನ ಸಮಾಜ ಪಕ್ಷದ ಪರವಾಗಿ 'ಕರ್ನಾಟಕದಲ್ಲಿಯೂ ಮಾಯಾವತಿ'ಯನ್ನು ನಿರೀಕ್ಷಿಸಬಹುದಾದಂತಹ ದಿನಗಳು ಬರುವುದು ಬಲು ದೂರವಿಲ್ಲದ ಅಂದಾಜಾಗಿದೆ. ಅಂತಹ ದಿನಗಳು ಬೇಗ ಬರಲಿ ಎಂದು ಆಶಿಸೋಣ.





# ತಮಿಳುನಾಡು ಮೂಲದ ಪಕ್ಷಗಳು

ಎ. ಜಿ. ನರಸಿಂಹರಾವ್

ಸ್ವಾತಂತ್ರ್ಯ ಪೂರ್ವದಿಂದಲೂ ತಮಿಳುನಾಡಿನಲ್ಲಿ ಪ್ರಾದೇಶಿಕ ಪಕ್ಷಗಳು ತಮ್ಮ ಪ್ರಭಾವವನ್ನು ಬೀರುತ್ತಾ ಬಂದಿರುವುದನ್ನು ಗಮನಿಸಬಹುದು. ಜಸ್ಟೀಸ್ ಪಕ್ಷ ಹಾಗೂ ಡಿ. ಕೆ. ಪಕ್ಷದ ಪ್ರಭಾವದಿಂದ ಕರ್ನಾಟಕದಲ್ಲಿ ಬ್ರಾಹ್ಮಣೇತರ ಚಳವಳಿ ಬಿರುಸಾಯಿತು. ಸ್ವಾತಂತ್ರ್ಯಾನಂತರ ಡಿಎಂಕೆ ಪಕ್ಷ ಸ್ಥಳೀಯ ವಿಚಾರಗಳಿಗೆ ಆದ್ಯತೆ ಕೊಟ್ಟು ರಾಷ್ಟ್ರೀಯಪಕ್ಷವಾಗಿ ಕಾಂಗ್ರೆಸ್ಸನ್ನು ಸೋಲಿಸಿ ತಮಿಳುನಾಡಿನಲ್ಲಿ ಅಧಿಕಾರಕ್ಕೆ ಬಂದಿತ್ತು. ಕರ್ನಾಟಕದಲ್ಲಿ ತಮಿಳರು ಹೆಚ್ಚು ಇರುವ ಪ್ರದೇಶಗಳಲ್ಲಿ ಡಿಎಂಕೆ ಹಾಗೂ ಅಣ್ಣಾ ಡಿಎಂಕೆ ಪಕ್ಷಗಳು ಒಂದಷ್ಟು ಪ್ರಭಾವ ಹೊಂದಿರುವುದನ್ನು ಗಮನಿಸಬಹುದು. ೧೯೬೭ ರಿಂದಲೂ ಈ ಪಕ್ಷಗಳು ಕರ್ನಾಟಕದಲ್ಲಿ ಚುನಾವಣೆಗಳಲ್ಲಿ ಸ್ಪರ್ಧಿಸಿ ತಮ್ಮ ಇರುವಿಕೆಯನ್ನು ಪ್ರದರ್ಶಿಸುತ್ತಾ ಬಂದಿವೆ. ವಿಶೇಷವಾಗಿ ಕೆಜಿಎಫ್ ಹಾಗೂ ಬೆಂಗಳೂರಿನ ಕಂಟೋನ್ಮೆಂಟ್ ಪ್ರದೇಶ ಈ ಪಕ್ಷಗಳ ಆಶ್ರಯ ತಾಣವಾಗಿದೆ. ೧೯೬೭ರಲ್ಲಿ ಈ ಪಕ್ಷದ ನಾಲ್ಕು ಜನ ಅಭ್ಯರ್ಥಿಗಳು ಕರ್ನಾಟಕ ರಾಜ್ಯ ವಿಧಾನ ಸಭೆಗೆ ಸ್ಪರ್ಧಿಸಿದ್ದರು. ಅವರುಗಳೆಂದರೆ ಕೆಜಿಎಫ್ ನಿಂದ ಕೆ. ಎಸ್. ಗೋಪಾಲಕೃಷ್ಣ (ಶೇಕಡ ಮತ ೪.೭೦), ಮಲ್ಲೇಶ್ವರಂನಿಂದ ಅಣಿಯಪ್ಪನ್ (ಶೇಕಡ ೭.೩೩), ಗಾಂಧಿನಗರದಿಂದ ನಟೇಶನ್ (ಶೇಕಡ ೧೦.೪೭) ಹಾಗೂ ಬ್ರಾಡ್‌ವೇ ಇಂದ ಎಸ್.ವಿ. ಪಾಥಿ (ಶೇಕಡ ೧೦.೧೧)

## ೧೯೭೮ರ ವಿಧಾನಸಭಾ ಚುನಾವಣೆ

೧೯೬೭ರಿಂದ ೧೯೭೮ರ ವಿಧಾನ ಸಭೆ ಚುನಾವಣೆಯ ತನಕ ಯಾವ ಅಭ್ಯರ್ಥಿಗಳೂ ಈ ಪಕ್ಷಗಳಿಂದ ಸ್ಪರ್ಧಿಸಿರಲಿಲ್ಲ. ೧೯೭೮ರ ಚುನಾವಣೆಯಲ್ಲಿ ಡಿಎಂಕೆ ಪಕ್ಷ ಮೂರು ಸ್ಥಾನಗಳಿಗೂ ಹಾಗೂ ಅಣ್ಣ ಡಿಎಂಕೆ ಪಕ್ಷ ನಾಲ್ಕು ಸ್ಥಾನಗಳಿಗೂ ಸ್ಪರ್ಧಿಸಿತ್ತು. ಡಿಎಂಕೆ ಪಕ್ಷದ ಒಬ್ಬರು ಸದಸ್ಯರು ಮಾತ್ರ ಠೇವಣಿ ಪಡೆಯುವಲ್ಲಿ ಯಶಸ್ವಿಯಾದರು. ಉಳಿದ ಎಲ್ಲರೂ ಠೇವಣಿ ಕಳೆದುಕೊಂಡರು. ಈ ಚುನಾವಣೆಯಲ್ಲಿ ಯಾವ ಅಭ್ಯರ್ಥಿಯೂ ಗೆಲ್ಲಲಿಲ್ಲ. ಡಿಎಂಕೆ ಪಕ್ಷ ಶೇಕಡ ೦.೧೩ರಷ್ಟು ಮತ ಪಡೆದಿತ್ತು. ಅಂದರೆ ೧೬, ೪೪೩ ಆದರ ಮತಗಳಿಕೆ. ಅಣ್ಣಾ ಡಿಎಂಕೆ ಶೇಕಡ ೦.೧೬ ಅಂದರೆ ೧೯,೪೪೮ ಮತಗಳನ್ನು ಪಡೆಯಿತು. ಚಾಮರಾಜಪೇಟೆ ಕ್ಷೇತ್ರದಿಂದ ಅಣ್ಣಾ ಡಿಎಂಕೆ ಇಂದ ಕೃಷ್ಣ ರಾವ್, ಶಾಂತಿನಗರದಿಂದ ಎಂ. ಪಾಂಡ್ಯನ್ ಹಾಗೂ ಡಿಎಂಕೆ ಇಂದ ಎಂ. ಕೆ. ಪುಷ್ಪರಾಜ್, ಶಿವಾಜಿನಗರದಿಂದ ಕೆ. ಚೋಳನ್ ಶಾಂತಿನಗರ ಡಿಎಂಕೆ ಇಂದ ಡಿ. ಪೂಸಲಿಂಗಂ, ಅಣ್ಣಾ ಡಿಎಂಕೆ ಇಂದ ಆರ್. ಪದ್ಮನಾಭನ್ ಸ್ಪರ್ಧಿಸಿದ್ದರು. ಡಿ. ಪೂಸಲಿಂಗರು ಮಾತ್ರ ಠೇವಣಿಯನ್ನು ಪಡೆಯುವಲ್ಲಿ ಯಶಸ್ವಿ ಆದರು.

## ೧೯೮೩ರ ವಿಧಾನಸಭಾ ಚುನಾವಣೆ

ಈ ಚುನಾವಣೆಯಲ್ಲಿ ಅಣ್ಣಾ ಡಿಎಂಕೆ ಮತ್ತು ಡಿಎಂಕೆ ತಲಾ ಒಂದು ಸ್ಥಾನಗಳಿಗೆ ಸ್ಪರ್ಧಿಸಿದ್ದವು. ಅಣ್ಣಾ ಡಿಎಂಕೆ ೦.೧೩ ಅಂದರೆ ೧೯,೨೩೪ ಮತಗಳನ್ನು ಗಳಿಸಿತು. ಡಿಎಂಕೆ. ೦.೦೯

ಅಂದರೆ ೧೬,೩೨೪ ಮತಗಳನ್ನು ಗಳಿಸಿತು. ಅಣ್ಣಾ ಡಿಎಂಕೆಯ ಒಬ್ಬ ಅಭ್ಯರ್ಥಿ ಮಾತ್ರ ಈ ಚುನಾವಣೆಯಲ್ಲಿ ಜಯಗಳಿಸಲು ಶಕ್ತರಾದರು. ಅವರೆಂದರೆ ಕೆಜಿಎಫ್ ನಿಂದ ಸ್ಪರ್ಧಿಸಿದ್ದ ಶ್ರೀ ಭಕ್ತವತ್ಸಲಂ ಇವರು ಶೇಕಡ ೩೫.೮೫ ಅಂದರೆ ೧೬,೨೩೪ ಮತಗಳನ್ನು ಗಳಿಸಿ, ಆರ್‌ಪಿಐನ ಅಭ್ಯರ್ಥಿ ಆರ್ಮುಗಂರವರನ್ನು ೪೦೦ ಮತಗಳ ಅಂತರದಿಂದ ಸೋಲಿಸಿದರು. ತಮಿಳುಮೂಲ ಪಕ್ಷದಿಂದ ರಾಜ್ಯ ವಿಧಾನಸಭೆಗೆ ಆಯ್ಕೆಯಾದ ಮೊದಲ ಅಭ್ಯರ್ಥಿ ಇವರು ಆಗಿದ್ದಾರೆ. ಭಾರತೀ ನಗರದಿಂದ ಸ್ಪರ್ಧಿಸಿದ್ದ ಡಿ. ಪೂಸಲಿಂಗಮ್ ಶೇಕಡ ೨೩.೪೭ ರಷ್ಟು ಮತಗಳಿಸಿ ಸೋಲನ್ನು ಒಪ್ಪಿಕೊಂಡರು.

## ೧೯೮೫ರ ವಿಧಾನಸಭಾ ಚುನಾವಣೆ

ಅಣ್ಣಾ ಡಿಎಂಕೆ ಇಂದ ಈ ಚುನಾವಣೆಯಲ್ಲಿ ಎರಡು ಸ್ಥಾನಗಳಿಗೆ ಸ್ಪರ್ಧಿಸಲಾಗಿತ್ತು. ಅದು ಶೇಕಡ ೦.೧೮ರಷ್ಟು ಅಂದರೆ, ೨೬,೯೨೭ ಮತಗಳನ್ನು ಪಡೆಯಿತು. ಯಾವ ಅಭ್ಯರ್ಥಿಯೂ ಈ ಪಕ್ಷದಿಂದ ಆಯ್ಕೆಯಾಗಿಲ್ಲ. ಕೆಜಿಎಫ್ ನಿಂದ ಎಂ. ಭಕ್ತ ವತ್ಸಲಂ ಹಾಗೂ ಗಾಂಧೀನಗರದಿಂದ ಬಿ. ಮುನಿಯಪ್ಪ ಪಕ್ಷದ ಅಭ್ಯರ್ಥಿಗಳಾಗಿದ್ದರು.

## ೧೯೮೯ರ ವಿಧಾನಸಭಾ ಚುನಾವಣೆ

ಅಣ್ಣಾ ಡಿಎಂಕೆ ಈ ಚುನಾವಣೆಯಲ್ಲಿ ಒಂದೇ ಒಂದು ಸ್ಥಾನಕ್ಕೆ ಸ್ಪರ್ಧಿಸಿ ಆ ಸ್ಥಾನವನ್ನು ಪಡೆಯುವಲ್ಲಿ ಯಶಸ್ವಿಯಾಯಿತು. ಅದು ಶೇಕಡ ೦.೧೮ ಅಂದರೆ ೩೨,೯೨೮ ಮತ ಪಡೆದು ಕೆಜಿಎಫ್ ನಿಂದ ಎಂ. ಭಕ್ತ ವತ್ಸಲಂ ಆಯ್ಕೆಯಾದರು. ಇವರು ಎರಡನೆ ಬಾರಿಗೆ ರಾಜ್ಯ ವಿಧಾನಸಭೆಗೆ ಆಯ್ಕೆಯಾಗಿದ್ದರು.

## ೧೯೯೪ರ ವಿಧಾನಸಭಾ ಚುನಾವಣೆ

ಈ ಚುನಾವಣೆಯಲ್ಲಿ ಅಣ್ಣಾ ಡಿಎಂಕೆ ಒಟ್ಟು ನಾಲ್ಕು ಸ್ಥಾನಗಳಿಗೆ ಸ್ಪರ್ಧಿಸಿತ್ತು. ಅವರಲ್ಲಿ ಇಬ್ಬರು ಮಾತ್ರ ಠೇವಣಿ ಪಡೆದರು. ಕೋಲಾರದ ಕೆಜಿಎಫ್ ನಿಂದ ಸ್ಪರ್ಧಿಸಿದ್ದ ಎಂ. ಭಕ್ತ ವತ್ಸಲಂ ರವರು ಮತ್ತೆ ಈ ಸಾರಿ ಸೋಲನ್ನು ಒಪ್ಪಿಕೊಂಡರು. ಬೆಂಗಳೂರಿನ ಗಾಂಧಿನಗರದಿಂದ ಸ್ಪರ್ಧಿಸಿದ್ದ ಅಣ್ಣಾ ಡಿಎಂಕೆಯ ಬಿ. ಮುನಿಯಪ್ಪ ಶೇಕಡ ೨೭.೨೬ ಅಂದರೆ ೧೬,೮೯೩ ಮತಗಳನ್ನು ಪಡೆದು ಆಯ್ಕೆಯಾದರು.

## ೧೯೯೯ರ ವಿಧಾನಸಭಾ ಚುನಾವಣೆ

ಈ ಚುನಾವಣೆಯಲ್ಲಿ ಅಣ್ಣಾ ಡಿಎಂಕೆ ಇಂದ ೧೩ ಸ್ಥಾನಗಳಿಗೆ ಸ್ಪರ್ಧೆ ನಡೆದಿತ್ತು. ಅವರಲ್ಲಿ ೧೨ ಜನರು ಠೇವಣಿ ಕಳೆದುಕೊಂಡರು. ಈ ಪಕ್ಷಕ್ಕೆ ಶೇಕಡ ೦.೧೧ ಅಂದರೆ ೩೯.೮೬೫ ಮತಗಳನ್ನು ಬಂದುವು. ಅದರ ಒಬ್ಬ ಅಭ್ಯರ್ಥಿ ಮಾತ್ರ ಜಯಶೀಲರಾದರು. ಅವರೆಂದರೆ ಕೆಜಿಎಫ್ ನಿಂದ ಎಂ. ಭಕ್ತ ವತ್ಸಲಂ ಅವರು ಶೇಕಡ ೩೭ ಅಂದರೆ ೨೨.೨೫೫ ಮತ ಪಡೆದು ಕರ್ನಾಟಕ ರಾಜ್ಯದಲ್ಲಿ ಅಣ್ಣಾ ಡಿಎಂಕೆ ಪಕ್ಷ ತನ್ನ ನೆಲೆಯನ್ನು ಕಂಡುಕೊಂಡಿತು.

# ರಾಜ್ಯ ರಾಜಕಾರಣ ನಡೆದುಬಂದ ದಾರಿ

ಶ್ರೀವತ್ಸ

## ಮೊದಲ ಮಾತು

ಯಾವುದೇ ಜನಾಂಗ ಅಥವಾ ದೇಶದ ಅಧ್ಯಯನ ಕೈಗೊಂಡಾಗ ಅಲ್ಲಿನ ರಾಜಕೀಯ ವ್ಯವಸ್ಥೆಗೆ ಮೊದಲ ಆದ್ಯತೆ. ಪ್ರಾರಂಭದಲ್ಲಿ ರಾಜಕೀಯ ವಿಚಾರಗಳೇ ಇತಿಹಾಸ ಎನ್ನುವಷ್ಟು ರಾಜಕೀಯ ತನ್ನ ಪ್ರಾಬಲ್ಯವನ್ನು ಸ್ಥಾಪಿಸಿತ್ತು. ಅದಕ್ಕಾಗಿಯೇ ರಾಜ್ಯಶಾಸ್ತ್ರದ ಪಿತಾಮಹನಾದ ಅರಿಸ್ಟಾಟಲ್ ''ಮನುಷ್ಯ ಮೂಲತಃ ರಾಜಕೀಯ ಪ್ರಾಣಿ'' ಎಂದೇ ವ್ಯಾಖ್ಯಾನಿಸಿದ್ದಾನೆ. ರಾಜಕೀಯ ಶಾಸ್ತ್ರದ ಅಭ್ಯಾಸದಲ್ಲಿ ಮನುಷ್ಯನ ಅಧ್ಯಯನವೂ ನಡೆಯುತ್ತದೆ. ಅದನ್ನು ರಾಜ್ಯಶಾಸ್ತ್ರಜ್ಞ ಎಚ್. ಬಿ. ಆಂಡಸ್ ಹೀಗೆ ಹೇಳುತ್ತಾರೆ. ''ರಾಜಕೀಯ ಅಭ್ಯಾಸದ ಆರಂಭ ಹಾಗೂ ಗುರಿ ಮನುಷ್ಯನ ಸ್ವಭಾವದ ಅಧ್ಯಯನವಾಗಿವೆ''. ರಾಜಕೀಯ ಅಂದಾಕ್ಷಣ ಅದೇನೂ ಕಡಿಮೆಯಾದುದಲ್ಲ. ಆದರ್ಶ ಹಾಗೂ ನೂರಾರು ಕನಸುಗಳಿರುವ ಕ್ಷೇತ್ರವದು. ಮಹಾತ್ಮ ಗಾಂಧೀಜಿ ಅವರು ಹೇಳುವಂತೆ ''ರಾಜಕೀಯದಲ್ಲಿ ಸಹ ಭಗವಂತನ ರಾಜ್ಯ ಸ್ಥಾಪಿತವಾಗಬೇಕಾಗಿದೆ.''

## ಭಾರತದ ರಾಜಕೀಯ ಪರಿಸ್ಥಿತಿ

ಭಾರತದ ಮೊದಲ ನಾಗರಿಕತೆ ಸಿಂಧೂ ಕಣಿವೆಯ ನಾಗರಿಕತೆ (ಕ್ರಿ.ಪೂ. ೩೦೦-೨೫೦೦) ನಗರ ಪ್ರಾಮುಖ್ಯತೆ ಹೊಂದಿದ್ದ ನಾಗರಿಕತೆ. ಈ ಜನ ಸ್ಥಾಪಿಸಿದ ಬೌದ್ಧಿಕ ಸೌಕರ್ಯಗಳನ್ನು ಗಮನಿಸಿದರೆ ಅತ್ಯುತ್ತಮ ರೀತಿಯ 'ನಗರಾಡಳಿತ' ಅಲ್ಲಿತ್ತೆಂದು ಹೇಳಬಹುದು. ಸಿಂಧೂ ಕಣಿವೆಯ ನಾಗರಿಕತೆಯ ಉತ್ತರಾಧಿಕಾರಿಗಳಾಗಿದ್ದ ಆರ್ಯರು (ಕ್ರಿ. ಪೂ. ೨೦೦೦ದಿಂದ ೧೫೦೦) ಮೂಲತಃ ಹೋರಾಟಗಾರರಾಗಿದ್ದರು. ಆರ್ಯರ ನಾಗರಿಕತೆ ತಿಳಿಯಲು ಸಹಾಯಕವಾದ 'ಋಗ್ವೇದ' ಆ ಕಾಲದ ರಾಜಕೀಯ ಪರಿಸ್ಥಿತಿಯ ಮೇಲೆ ಬೆಳಕು ಚೆಲ್ಲುತ್ತದೆ. ಸಿಂಧೂಕಣಿವೆಯ ನಾಗರಿಕತೆಯು ನಗರಾಡಳಿತವಾದರೆ ಆರ್ಯರದು ಗ್ರಾಮಾಡಳಿತ. ನಮ್ಮ ರಾಜಕೀಯ ವ್ಯವಸ್ಥೆ ಈ ಎರಡೂ ಅಂಶಗಳನ್ನು ಮೈಗೂಡಿಸಿಕೊಂಡಿದೆ. ಆರ್ಯರು ಪಿತೃ ಪ್ರಧಾನ ಕುಟುಂಬದ ವ್ಯವಸ್ಥೆ ರೂಪಿಸಿದ್ದರು. ಅವರ ದೊರೆ 'ಸುದಾಸ' ಭವ್ಯ ಸಾಮ್ರಾಜ್ಯದ ನಿರ್ಮಾಣಕ್ಕೆ ಕಾರಣಕರ್ತನಾದ. ಆರ್ಯರು ರೂಢಿಸಿದ ಕೃಷಿ ಹಾಗೂ ಗ್ರಾಮಾಡಳಿತ ವ್ಯವಸ್ಥೆ ನಮ್ಮ ಸಂಸ್ಕೃತಿಯ ವೈಶಿಷ್ಟ್ಯಗಳಾಗಿವೆ. ಅವು ಇಂದಿಗೂ ಉಳಿದುಕೊಂಡು ಬಂದಿವೆ. ವೃತ್ತಿಯ ಮೇಲೆ ವಿಭಜಿತವಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ಪಂಗಡಗಳು ಅನಂತರ ಜಾತಿಗಳಾಗಿ ಭಾರತೀಯ ಸಮಾಜದ ಅಭಿಶಾಪಗಳಾಗಿದ್ದನ್ನು ಯಾರೂ ಮರೆಯುವಂತಿಲ್ಲ.

ವೈದಿಕ ಧರ್ಮದ ಹಿಡಿತದಿಂದ ಪಾರುಮಾಡಲು ಹಾಗೂ ಜಾತಿಯ ಕಪಿಮುಷ್ಟಿಯಿಂದ ಶ್ರೀ ಸಾಮಾನ್ಯರನ್ನು ಬಿಡುಗಡೆ ಮಾಡಲು ಬೌದ್ಧ ಹಾಗೂ ಜೈನಧರ್ಮಗಳು ಪ್ರಯತ್ನಿಸಿದವು. ಭಗವಾನ್ ಬುದ್ಧ (ಕ್ರಿ.ಪೂ. ೫೬೭ರಿಂದ ೪೮೭) ಮತ್ತು ಭಗವಾನ್ ಮಹಾವೀರರು (ಕ್ರಿ.ಪೂ.

೫೪೦ ರಿಂದ ೪೬೮) ಶ್ರೀಸಾಮಾನ್ಯರ ಮೇಲೆ ಅತ್ಯದ್ಭುತ ಪ್ರಭಾವ ಬೀರಿದರು. ಬಹುಸಂಖ್ಯಾತ ಜನ ಈ ಮತದ ಬಗ್ಗೆ ಒಲವು ತೋರಿದ ಕಾರಣ ಮುಂದಿನ ರಾಜರು ಅನಿವಾರ್ಯವಾಗಿ ಈ ಎರಡೂ ಮತಗಳಿಗೆ ಬೆಂಬಲ ಕೊಟ್ಟರು.

ವೈಶಾಲಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಲಿಚ್ಛವಿ ಗಣರಾಜ್ಯ ವ್ಯವಸ್ಥೆ ಕ್ರಿ.ಪೂ. ೫ನೇ ಶತಮಾನದಿಂದ ಒಂದು ಸಾವಿರ ವರ್ಷಗಳ ಕಾಲ ಅಸ್ತಿತ್ವದಲ್ಲಿತ್ತು. ಈ ಗಣರಾಜ್ಯ ವ್ಯವಸ್ಥೆಯ ಲಿಚ್ಛವಿಯ ಬುಡಕಟ್ಟಿನ ರಾಜಕುಮಾರಿಯೇ ಬುದ್ಧನ ತಾಯಿ ಮಾಯಾ ದೇವಿ.

ಭಾರತದಲ್ಲಿ ಮೊದಲ ಸಾಮ್ರಾಜ್ಯ ನಿರ್ಮಿಸಿದ ಕೀರ್ತಿ ಮೌರ್ಯ ದೊರೆ ಚಂದ್ರಗುಪ್ತಮೌರ್ಯ (ಕ್ರಿ.ಪೂ. ೩೨೪-೨೯೯) ನಿಗೆ ಸಲ್ಲುತ್ತದೆ. ಆತನ ಮಹಾಮಾತ್ಯ ಚಾಣಕ್ಯ ಅಥವಾ ಕೌಟಿಲ್ಯ ರಚಿಸಿದ 'ಅರ್ಥಶಾಸ್ತ್ರ' ಎಲ್ಲ ರಾಜ್ಯಶಾಸ್ತ್ರಜ್ಞರಿಗೂ ಮೂಲ ಆಕರ ಗ್ರಂಥ. ರಾಜಕೀಯದ ಎಲ್ಲಾ ಒಳತಿಳುವಿಗೆ ಈ ಗ್ರಂಥ ಇಂದಿಗೂ ಸಹಾಯಕವಾಗಿದೆ. ವೈದಿಕ ಸಂಸ್ಕೃತಿಯ ಮಹಾಕಾವ್ಯಗಳಾದ 'ರಾಮಾಯಣ' ಹಾಗೂ 'ಮಹಾಭಾರತ'ಗಳು ಸಾಮ್ರಾಜ್ಯ ವ್ಯವಸ್ಥೆಯನ್ನು ಪ್ರಚುರಪಡಿಸಿದವು. ಚಂದ್ರಗುಪ್ತ ಮೌರ್ಯನ ಮೊಮ್ಮಗ ಅಶೋಕ (ಕ್ರಿ. ಪೂ. ೨೭೨ರಿಂದ ೨೩೨) ಬೌದ್ಧಮತಾವಲಂಬಿಯಾಗಿದ್ದರೂ ವಿಶ್ವದ ಆಡಳಿತಗಾರರಿಗೆಲ್ಲಾ ಶ್ರೇಷ್ಠ ಆದರ್ಶವಾಗಿದ್ದಾನೆ. ಅಶೋಕನ ಶಿಲಾಶಾಸನಗಳು ಕರ್ನಾಟಕದ ರಾಯಚೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ದೊರಕಿರುವುದರಿಂದ ಕರ್ನಾಟಕ ಪ್ರಾಚೀನತೆಯನ್ನು ಗಮನಿಸಬಹುದು. ಗುಪ್ತ ಸಾಮ್ರಾಜ್ಯದ ಸಮುದ್ರಗುಪ್ತನ ಕಾಲದಲ್ಲಿ ಹಿಂದೂ ಧರ್ಮದ ಪುನರುಜ್ಜೀವನ ನಡೆಯಿತು. ವರ್ಧನ ಸಂತತಿಯ ಹರ್ಷವರ್ಧನ (ಕ್ರಿ.ಶ. ೬೦೦-೪೭)ನ ಕಾಲಕ್ಕೆ ರಾಜಕೀಯದಲ್ಲಿ ಧರ್ಮಗಳು ತೀವ್ರವಾಗಿ ತಮ್ಮ ಪೈಪೋಟಿ ಸ್ಥಾಪಿಸಲು ಮುಂದಾದವು. ಕ್ರಿ.ಶ. ೬೪೩ರಲ್ಲಿ ಕನ್ಯಾಕುಬ್ಜದಲ್ಲಿ ಬೌದ್ಧಮತದ ತಾತ್ವಿಕ ವಿಚಾರಗಳನ್ನು ಚರ್ಚಿಸಲು ಒಂದು ಮಹಾಸಭೆಯನ್ನು ಹರ್ಷವರ್ಧನ ಏರ್ಪಡಿಸಿದನು. ಅದರಲ್ಲಿ ಚೀನೀ ಪ್ರವಾಸಿ ಹ್ಯೂಯನ್‌ತ್ಸಾಂಗ್ ಭಾಗವಹಿಸಿದ್ದನು. ಆ ಸಭೆಯ ಚಪ್ಪರ ಮೂಲಭೂತವಾದಿಗಳ ಆಕ್ರೋಶಕ್ಕೆ ಸಿಲುಕಿ ಅಗ್ನಿಗಾಹುತಿಯಾಯಿತು. ಧಾರ್ಮಿಕ ಭಿನ್ನಾಭಿಪ್ರಾಯ ರಾಜಕೀಯ ಕ್ಷೇತ್ರ ಪ್ರವೇಶಿಸಿ ಸಾಮ್ರಾಜ್ಯದ ಶಿಥಿಲತೆಗೆ ಕಾರಣವಾದುದನ್ನು ಮರೆಯುವಂತಿಲ್ಲ.

## ರಾಜಕೀಯ ಕ್ಷೇತ್ರಕ್ಕೆ ಮುಸ್ಲಿಮರ ಪ್ರವೇಶ

ಕ್ರಿ.ಶ. ೬೩೬ರಲ್ಲಿ ಮೊಟ್ಟಮೊದಲು ಅರಬ್ಬರು ಭಾರತದಲ್ಲಿ ತೀರ ಪ್ರದೇಶವನ್ನು ಆಕ್ರಮಿಸಿದರು. ಇರಾಕ್‌ನಿಂದ ಆಯ್ದ ಆರು ಸಾವಿರ ಸೈನಿಕರೊಡನೆ ಮಹಮ್ಮದ್ ಬಿನ್ ಖಾಸಿಂ ಭಾರತದ 'ಸಿಂಧ್' ಪ್ರಾಂತ್ಯಕ್ಕೆ ಬಂದಿಳಿದನು. ಎಂಟನೆಯ ಶತಮಾನದ ಹೊತ್ತಿಗೆ 'ಸಿಂಧ್' ಪ್ರಾಂತ್ಯದಲ್ಲಿ ಅರಬ್ಬರ ಕಾಲುಗಳು ಭದ್ರವಾಗಿ ಊರಿದ್ದವು. ಕ್ರಿ.ಶ. ೧೦೦೦ದ ವೇಳೆಗೆ ಘಜ್ನಿ ಮಹಮ್ಮದ್ ಭಾರತದ ಮೇಲೆ ತೀವ್ರತರವಾದ ಆಕ್ರಮಣಕ್ಕೆ ಮುಂದಾದನು. ಐಶ್ವರ್ಯ ದೋಚುವುದರ ಜೊತೆಗೆ ಸ್ಥಳೀಯ ರಾಜರ ಅನೈಕ್ಯತೆ ಬಳಸಿಕೊಂಡು ಭಾರತ ದಲ್ಲಿ ಅರಾಜಕತೆ ಸೃಷ್ಟಿಸುವುದು ಅವನ ಉದ್ದೇಶವಾಗಿತ್ತು. ಜಾತಿಪದ್ಧತಿ ಹಾಗೂ ಧಾರ್ಮಿಕ ಕ್ಷೇತ್ರದ ಅನೈಕ್ಯತೆಯಿಂದ ಗೊಂದಲದ ಬೀಡಾಗಿದ್ದ ಭಾರತದ ರಾಜಕೀಯದಲ್ಲಿ ಸುಲಭವಾಗಿ ತಮ್ಮ ಹಿಡಿತ ಸ್ಥಾಪಿಸುವುದು ಮುಸ್ಲಿಮರ ಗುರಿಯಾಗಿತ್ತು. ಕ್ರಿ.ಶ. ೧೧೭೫ರಿಂದ ೧೨೦೬ರ ವರೆಗೆ ಘೋರಿ ಮಹಮ್ಮದ್ ಹಲವು ಬಾರಿ ದಂಡಯಾತ್ರೆಯನ್ನು ಭಾರತದ ಮೇಲೆ ಕೈಗೊಂಡನು. ಅನಂತರ ಹೆಚ್ಚುಕಡಿಮೆ ಉತ್ತರ ಭಾರತ ಮುಸ್ಲಿಂ ಆಳ್ವಿಕೆಗೆ ವಶವಾಯಿತು. ಮುಸ್ಲಿಮರ ಆಳ್ವಿಕೆದಾರರಲ್ಲಿ ಅಲ್ಲಾವುದ್ದೀನ್ ಖಿಲ್ಜಿ (ಕ್ರಿ.ಶ. ೧೨೯೦-೧೩೧೬) ತಂದ 'ನಿಯಂತ್ರಿತ ಮಾರುಕಟ್ಟೆ' ವ್ಯವಸ್ಥೆ ಆ ಕಾಲದ ಅದ್ಭುತ ಕಲ್ಪನೆಗಳಲ್ಲಿ ಒಂದಾಗಿದೆ. ಮಹಮ್ಮದ್ ಬಿನ್ ತೊಗಲಕ್ (ಕ್ರಿ.ಶ. ೧೩೨೫-೧೩೫೧) ಪರಿವರ್ತನೆಯ ಬಗ್ಗೆ ಆಶಯವುಳ್ಳವನಾಗಿದ್ದನು. ಮುಸ್ಲಿಮ್ ಆಡಳಿತಗಾರರಲ್ಲಿ ಮೊಘಲ್ ಸಂತತಿಯ ಅಕ್ಬರ್ (ಕ್ರಿ.ಶ. ೧೫೫೬-೧೬೦೫)ನದು ಆಕರ್ಷಕ ವ್ಯಕ್ತಿತ್ವ. ಇಷ್ಟು ಹೊತ್ತಿಗೆ ಭಾರತದಲ್ಲಿ ಹಲವಾರು ಇಸ್ಲಾಮೇತರ ಧರ್ಮಗಳು ಇಸ್ಲಾಂ ಧರ್ಮದಲ್ಲಿ ನಂಬಿಕೆಯುಳ್ಳ ರಾಜರ ಕೈ ಕೆಳಗೆ ಜೀವನ ಮಾಡುವ ನಿರ್ಧಾರವನ್ನು ಕಂಡುಕೊಂಡಿದ್ದವು. ಮೊಘಲರ ಕೊನೆಯ ಪ್ರಖ್ಯಾತ ದೊರೆ ಔರಂಗಜೇಬ್ (ಕ್ರಿ.ಶ. ೧೬೫೮-೧೭೦೭) ಆತ ವೈಯಕ್ತಿಕ ಜೀವನದಲ್ಲಿ ಸರಳತೆ, ಆಡಳಿತದಲ್ಲಿ ಕಠೋರತೆ ಹಾಗೂ ಆಕ್ರಮಣಶೀಲ ಪ್ರವೃತ್ತಿಯನ್ನು ರೂಢಿಸಿಕೊಂಡಿದ್ದನು. ಈ ವಂಶದ ಕೊನೆಯ ದೊರೆ ಎರಡನೆಯ ಬಹದ್ದೂರ್‌ಷಾ ೧೮೫೭ರ ಸಿಪಾಯಿದಂಗೆ ನಾಯಕತ್ವವನ್ನು ವಹಿಸಿ ಸೋತು ಬ್ರಿಟಿಷರಿಗೆ ಸೆರೆಸಿಕ್ಕಿ ರಂಗೂನಿಗೆ ಗಡೀಪಾರು ಆಗಿ ೧೮೬೨ರಲ್ಲಿ ಮರಣ ಹೊಂದಿದನು.

ಮೂಲತಃ ದಾಳಿಕಾರರಾಗಿ ಬಂದ ಮುಸ್ಲಿಂ ನಾಯಕರು ಭಾರತದ ಸಂಸ್ಕೃತಿಯೊಡನೆ ಬೆರೆತುಹೋದರು. ವಿಶೇಷವಾಗಿ ಆ ಕಾಲದಲ್ಲಿ ಭಾರತದಲ್ಲಿದ್ದ ಜಾತಿ ವೈಷಮ್ಯ, ಧರ್ಮ-ಧರ್ಮಗಳ ನಡುವಣ ಕಿತ್ತಾಟ ಹಾಗೂ ಸ್ಥಳೀಯ ರಾಜರು ಅಲಕ್ಷಿಸಿದ್ದ ಸುವ್ಯವಸ್ಥಿತ

ಸೈನ್ಯ ಪದ್ಧತಿಯಿಂದಾದ ಸನ್ನಿವೇಶವನ್ನು ಅವರು ಸದುಪಯೋಗಪಡಿಸಿಕೊಂಡರು. ಅನಂತರ ಅವರು ಸಹ ಅದೇ ತಪ್ಪುಗಳನ್ನು ಮಾಡಿದರು. ಮುಸ್ಲಿಂ ಆಕ್ರಮಣದಿಂದ ಭಾರತದ ಸಾಮಾಜಿಕ ವ್ಯವಸ್ಥೆ ದೊಡ್ಡ ಸವಾಲು ಎದುರಿಸಬೇಕಾಯಿತು. ಬೇರೆ ಬೇರೆ ಕಾರಣಗಳಿಗ 'ಮತಾಂತರ' ವ್ಯಾಪಕ ಪ್ರಮಾಣದಲ್ಲಿ ನಡೆಯಿತು. ಮುಸ್ಲಿಮರು ಭಾರತದ ಆರ್ಥಿಕ ವ್ಯವಸ್ಥೆಯನ್ನು ಯಥಾ ರೀತಿ ಮುಂದುವರೆಸಿಕೊಂಡು ಹೋದರು.

## ರಾಜಕೀಯ ಕ್ಷೇತ್ರಕ್ಕೆ ಬ್ರಿಟಿಷರ ಆಗಮನ

ಭಾರತದ ಮುಸ್ಲಿಂ ದೊರೆಗಳು ಸುಭದ್ರ ಆಡಳಿತ ಕೊಡುವಲ್ಲಿ ಬಹಳ ಯಶಸ್ವಿಯಾಗಲಿಲ್ಲ. ಸ್ಥಳೀಯರ ಅಸಮಾಧಾನ ತಲೆಯಿಂದ ತಲೆಗೆ ಬೆಳೆದು ಬಂತು. ಕ್ರಿ.ಶ. ೧೬೧೫ರಲ್ಲಿ ಮೊಗಲ್ ಸಾಮ್ರಾಟ ಜಹಂಗೀರ್‌ನ ಸ್ನೇಹ ಸಂಪಾದನೆಗೆ ಬಂದ ಬ್ರಿಟಿಷರು ೧೮೫೭ರ ಹೊತ್ತಿಗೆ ಬಹುಮಟ್ಟಿನ ಹಿಂದೂಸ್ಥಾನವೆಲ್ಲಾ ತಮ್ಮ ವಶಕ್ಕೆ ತೆಗೆದುಕೊಂಡಿದ್ದರು.

ಬ್ರಿಟಿಷರಿಗೆ ತಮ್ಮ ಸಾಮ್ರಾಜ್ಯ ಸ್ಥಾಪಿಸಲು ಹೆಚ್ಚು ಕಷ್ಟಪಡಬೇಕಾಗಿರಲಿಲ್ಲ. ಈಗಾಗಲೇ ಹಿಂದೂ ಸಮಾಜ ಒಡೆದು, ಛಿದ್ರವಾಗಿ ಹೋಗಿತ್ತು. ಮುಸ್ಲಿಂ ಸಮಾಜದಲ್ಲೂ ಐಕ್ಯತೆಯಿರಲಿಲ್ಲ. ಹಿಂದೂ-ಮುಸ್ಲಿಮರ ಭಿನ್ನಾಭಿಪ್ರಾಯ ಬಹುದೊಡ್ಡ ಪ್ರಮಾಣದಲ್ಲಿತ್ತು. ರಾಬರ್ಟ್‌ಕ್ಲೈವ್. ವಾರನ್‌ಹೇಸ್ಟಿಂಗ್ಸ್ (೧೭೭೨-೧೭೮೫), ಲಾರ್ಡ್ ಕಾರ್ನ್‌ವಾಲೀಸ್ (೧೭೮೬-೧೭೯೩), ಲಾರ್ಡ್ ವೆಲ್ಲೆಸ್ಲಿ (೧೭೯೮-೧೮೦೫), ಲಾರ್ಡ್ ವಿಲಿಯಂ ಬೆಂಟಿಂಕ್ (೧೮೨೮-೧೮೩೫), ಡಾಲ್ ಹೌಸಿ (೧೮೪೮-೧೮೫೬), ಲಾರ್ಡ್ ಕ್ಯಾನಿಂಗ್ ಮೊದಲಾದ ಗವರ್ನರ್ ಜನರಲ್‌ಗಳು ಭಾರತದಲ್ಲಿ ಬ್ರಿಟಿಷರ ಸಾಮ್ರಾಜ್ಯವನ್ನು ಭದ್ರವಾಗಿ ನೆಲೆಯೂರಿಸಿದ್ದರು. ಈ ಗವರ್ನರ್ ಜನರಲ್‌ಗಳು ಕೆಲವೊಂದು ಸುಧಾರಣೆಗಳನ್ನು ಜಾರಿಗೆ ತಂದಿರಬಹುದು. ಆದರೆ ಎಲ್ಲಾ ಗವರ್ನರ್ ಜನರಲ್‌ರ ಧ್ಯೇಯ ಈಸ್ಟ್ ಇಂಡಿಯಾ ಕಂಪನಿಗೆ ಲಾಭ ಮಾಡಿಕೊಡುವುದೇ ಆಗಿತ್ತು. ಭಾರತದಲ್ಲಿದ್ದ ಅಸಮಾಧಾನ, ಅನೈಕ್ಯತೆ ಹಾಗೂ ಸಾಮಾಜಿಕ ದೌರ್ಬಲ್ಯಗಳು ಅವರಿಗೆ ವರದಾನವಾಗಿದ್ದವು. ೧೮೫೮ರ ದಂಗೆಯಿಂದ ಬ್ರಿಟಿಷರು ಭಾರತದ 'ಒಡೆದು ಆಳುವ ನೀತಿ'ಯನ್ನು ಚೆನ್ನಾಗಿ ಮನಗಂಡರು. ೧೮೫೮ರ ನವೆಂಬರ್ ಒಂದರಂದು ವಿಕ್ಟೋರಿಯಾ ರಾಣಿ 'ಈಸ್ಟ್ ಇಂಡಿಯಾ ಕಂಪನಿ'ಯ ಆಡಳಿತವನ್ನು ರದ್ದು ಮಾಡಿ ಭಾರತವನ್ನು ಬ್ರಿಟಿಷ್ ಸರ್ಕಾರದ ಆಳ್ವಿಕೆಗೆ ಸೇರಿಸಿಕೊಂಡರು. ಭಾರತವನ್ನು ನೋಡಿಕೊಳ್ಳುತ್ತಿದ್ದ ಗವರ್ನರ್ ಜನರಲ್‌ಗೆ 'ವೈಸರಾಯ್' ಎಂದು ಹೊಸ ಅಭಿದಾನ ಮಾಡಲಾಯಿತು.

## ಕಾಂಗ್ರೆಸ್ ಪಕ್ಷ ಹಾಗೂ ಅದರ ನಾಯಕರಾದ ಮಹಾತ್ಮ ಗಾಂಧೀಜಿ

೧೮೮೫ರ ಡಿಸೆಂಬರ್ ೨೮ರಂದು ಕಾಂಗ್ರೆಸ್ ಪಕ್ಷ ಸ್ಥಾಪನೆ ಆಧುನಿಕ ಭಾರತದ ಇತಿಹಾಸದಲ್ಲಿ ಅತ್ಯಂತ ಪ್ರಮುಖ ಘಟನೆಯಾಗಿದೆ. ತಮ್ಮ ಆಳ್ವಿಕೆಗೆ ಪ್ರಜ್ಞಾವಂತ ಜನರ ಬೆಂಬಲ ಪಡೆಯುವುದು ಕಾಂಗ್ರೆಸ್ ಸ್ಥಾಪನೆಯ ಉದ್ದೇಶವಾಗಿತ್ತು. ೧೯೧೪ರಲ್ಲಿ ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಬಂದ ಮಹಾತ್ಮ ಗಾಂಧೀಜಿ ೧೯೧೯ರಲ್ಲಿ ಕಾಂಗ್ರೆಸ್ ಮೂಲಕ ಬ್ರಿಟಿಷರ ವಿರುದ್ಧ ದನಿಯೆತ್ತಿದರು. ೧೯೨೦ ಮಾರ್ಚ್ ೩೦ ರಂದು ಅಸಹಕಾರ ನೀತಿಯನ್ನು ಪ್ರಕಟಿಸಿದರು. ೧೯೩೦ ಮಾರ್ಚ್ ೨ ಉಪ್ಪಿನ ಸತ್ಯಾಗ್ರಹ, '೧೯೪೨ರ ಆಗಸ್ಟ್ ೯ರಂದು ನಡೆದ ಕ್ವಿಟ್ ಇಂಡಿಯಾ ಚಳವಳಿ' ಮೊದಲಾದ ಐತಿಹಾಸಿಕ ಘಟನೆಗಳು ಮಹಾತ್ಮ ಗಾಂಧೀಜಿ ಅವರ ನಾಯಕತ್ವದಲ್ಲಿ ನಡೆದವು. ಮಹಾತ್ಮ ಗಾಂಧೀಜಿ ಅವರ ಚಿಂತನೆ ಹಾಗೂ ಕಾರ್ಯಗಳನ್ನು ನೋಡಿದ ಪ್ರತಿಯೊಬ್ಬರೂ ಅವರಿಗೆ ಭಾರತದ ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರ ಚಿರಪರಿಚಿತವಾಗಿತ್ತೆಂಬುದನ್ನು ತಿಳಿಯಬಹುದು. ೮ನೆಯ ಶತಮಾನದಿಂದಲೇ ಶಸ್ತ್ರಾಸ್ತ್ರ ಹೋರಾಟವನ್ನು ಮರೆತಿದ್ದ ಭಾರತೀಯರು ಸೈನ್ಯಕಟ್ಟಿ ಹೋರಾಡಿ ಬ್ರಿಟಿಷರ ವಿರುದ್ಧ ಗೆಲ್ಲಲು ಸಾಧ್ಯವಿತ್ತೆ? ಭಾರತದಲ್ಲಿ ಅಧಿಕಾರ ಗಳಿಸಿದ ನಂತರ ಮುಸ್ಲಿಂ ಆಳ್ವಿಕೆದಾರರು ಸಿಂಹಾಸನಕ್ಕಾಗಿ ಪಿತೂರಿಗಳನ್ನು ನಡೆಸಿದ್ದರೆ ವಿನಾ ಸೈನ್ಯ ಕಟ್ಟಿರಲಿಲ್ಲ. ಹಿಂದೂ ಹಾಗೂ ಮುಸ್ಲಿಂ ಸಮಾಜಗಳೆರಡೂ ಅಜ್ಞಾನ ಕೂಪದಲ್ಲಿದ್ದವು. ರಾಜಾರಾಂ ಮೋಹನ್‌ರಾಯ್, ಸ್ವಾಮಿ ವಿವೇಕಾನಂದರು ಮಾಡಿದ 'ಜ್ಞಾನದೀವಿಗೆ' ಬೆಳಗುವ ಕಾರ್ಯ ಆಗಿನ್ನೂ ಪ್ರಾರಂಭವಾಗಿತ್ತು. ಸುಮಾರು ೧೨೦೦ ವರ್ಷಗಳ ಆಕ್ರಮಣಶೀಲತೆಗೆ ಸಿಲುಕಿದ್ದ ಭಾರತದ ಆರ್ಥಿಕ ಕ್ಷೇತ್ರ ಅತ್ಯಂತ ದುಃಸ್ಥಿತಿಯಲ್ಲಿತ್ತು. ಜೊತೆಗೆ ಬ್ರಿಟಿಷರು ಭಾರತವನ್ನು ಮಾರುಕಟ್ಟೆ ರಾಷ್ಟ್ರವನ್ನಾಗಿ ಮಾಡಿಕೊಂಡಿದ್ದರು. ಇಂತಹ ಪರಿಸ್ಥಿತಿಯಲ್ಲಿ ಮಹಾತ್ಮ ಗಾಂಧೀಜಿ ಸ್ವಾತಂತ್ರ್ಯ ಸಂಪಾದನೆಯಂತಹ ಮಹತ್ವದ ಕೆಲಸ ಮಾಡಬೇಕಾಗಿತ್ತು. ಐತಿಹಾಸಿಕ ಸತ್ಯಗಳು ಸ್ಪಷ್ಟವಾಗಿ ಅವರ ಮುಂದೆ ನಿಂತಿದ್ದವು. ಅದಕ್ಕಾಗಿ ಅವರು ಭಾರತೀಯ ಸಮಾಜದ ಜಾಗೃತಿಗೆ ಮುಂದಾದರು. ಹಿಂದೂ-ಮುಸ್ಲಿಂ ಐಕ್ಯತೆ, ಜಾತಿ-ಜಾತಿ ನಡುವಣ ಸಾಮರಸ್ಯ, ಆರ್ಥಿಕ ಕ್ಷೇತ್ರದಲ್ಲಿ ಆಗಬೇಕಾದ ಸುಧಾರಣೆ ಇವುಗಳನ್ನು ಅವರು ಸಮರ್ಥವಾಗಿ ಚಿಂತಿಸುತ್ತಾ ಬ್ರಿಟಿಷರ ವಿರುದ್ಧ ಬಹುಜನ ಶಕ್ತಿಯನ್ನು ಎತ್ತಿಕಟ್ಟಿದರು. ರಾಜಕೀಯ ಕ್ಷೇತ್ರದ ಹೋರಾಟ ಅಧಿಕಾರ ಗಳಿಸುವುದಕ್ಕೆ ಸೀಮಿತವಾಗದೆ ಅದು ಜನತೆಯಲ್ಲಿ ಅರಿವಿನ

ಕ್ಷೇತ್ರವನ್ನು ವಿಸ್ತರಿಸುವ ಕಾರ್ಯವಾಗಬೇಕೆಂಬ ಗಾಂಧೀಜಿಯ ಆಶಯ ಎಲ್ಲಾ ಕಾಲಕ್ಕೂ ಆದರ್ಶವಾದುದು. ಮಹಾತ್ಮ ಗಾಂಧೀಜಿ ಅವರ ಹೋರಾಟದ ಮಾರ್ಗ ಜಗತ್ತಿನ ಎಲ್ಲಾ ರಾಜಕಾರಣಿಗಳಿಗೂ ಹೊಸ ದಿಕ್ಸೂಚಿಯಾಯಿತು. ಮಹಾತ್ಮ ಗಾಂಧೀಜಿ ಅವರು ದೇಶದ ಎಲ್ಲೆಡೆಯಂತೆ ಕರ್ನಾಟಕದಲ್ಲೂ ಆದರ್ಶದ ಕಣ್ಮಣಿಯೇ ಆಗಿದ್ದಾರೆ.

## ಕರ್ನಾಟಕದ ರಾಜಕೀಯ

ಖ್ಯಾತ ಇತಿಹಾಸಜ್ಞ, ಪ್ರೊ. ಎಂ. ಹೆಚ್. ಕೃಷ್ಣ ಅವರು ''ದಕ್ಷಿಣ ಭಾರತದ ಇತಿಹಾಸವೆಂದರೆ ಕರ್ನಾಟಕದ ಇತಿಹಾಸವೇ ಆಗಿದೆ.'' ಎನ್ನುತ್ತಾರೆ. ಕನ್ನಡದ ಕವಿರಾಜಮಾರ್ಗಕಾರ ನೃಪತುಂಗ ''ಕಾವೇರಿಯಿಂದ ಗೋದಾವರಿಯವರೆವಿಗಿದ್ದ ನಾಡು ಕನ್ನಡ ನಾಡು'' ಎನ್ನುತ್ತಾನೆ. ಸಿಂಧೂಕಣಿವೆಯ ನಾಗರಿಕತೆಯ ಜನ ದ್ರಾವಿಡರೆಂದೂ, ಅವರು ದಕ್ಷಿಣ ಭಾರತದವರೆಂದೂ ಹೇಳಿದಾಗ ಕರ್ನಾಟಕದ ಪ್ರಾಚೀನತೆ ಮತ್ತಷ್ಟು ಹಿಂದಕ್ಕೆ ಹೋಗುತ್ತದೆ. ಅಶೋಕನ ಶಾಸನಗಳಿಂದ ಇಲ್ಲಿನ ಸಮರ್ಪಕವಾದ ರಾಜಕೀಯ ವ್ಯವಸ್ಥೆಯನ್ನು ಗುರುತಿಸಲಾಗಿದೆ. ಕದಂಬರ ಮಯೂರವರ್ಮ (ಕ್ರಿ.ಶ. ೩೪೦) ಕಂಚಿಯ ಪಲ್ಲವರ ವಿರುದ್ಧ ಸಿಡಿದೆದ್ದನು. ಹೊಸ ರಾಜ್ಯ ನಿರ್ಮಿಸಿ ಕರ್ನಾಟಕದ ರಾಜಕೀಯ ವ್ಯವಸ್ಥೆಗೆ ಬುನಾದಿ ಹಾಕಿದನು. ಎಂದೂ ಸಾಮ್ರಾಟರೆಂದು ಬೀಗದೆ ಒಂಬೈನೂರು ವರ್ಷಗಳ ಕಾಲ ಆಳ್ವಿಕೆ ಮಾಡಿದ ತಲಕಾಡಿನ ಗಂಗರು ತಂದ ಆಡಳಿತ ವ್ಯವಸ್ಥೆ ಈ ನೆಲದ ವೈಶಿಷ್ಟ್ಯಕ್ಕೆ ಅನುಗುಣವಾಗಿತ್ತು. ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯರು, ಸೇವುಣರು, ಹೊಯ್ಸಳರು ವಿಶಾಲ ಸಾಮ್ರಾಜ್ಯ ನಿರ್ಮಿಸಿ ಕರ್ನಾಟಕದ ಕೀರ್ತಿಯನ್ನು ಬೆಳೆಸಿದರು. ಚೋಳರ ೨ನೆಯ ಪರಾಂತಕನ ಉತ್ತರ ಮೇರೂರು ಶಾಸನದಿಂದ ಗ್ರಾಮಾಡಳಿತವನ್ನು ಅಯ್ಯಾಹೊಳೆಯ ಅಯ್ನಾರ್ವರ್ ಕಾರ್ಯಚಟುವಟಿಕೆಯನ್ನು ಗಮನಿಸಿದಾಗ ದಕ್ಷಿಣ ಭಾರತದಲ್ಲಿ ಸುವ್ಯವಸ್ಥಿತವಾದ ಸ್ಥಳೀಯ ಸಂಸ್ಥೆ ಹಾಗೂ ಆಧುನಿಕ ಆರ್ಥಿಕ ಪದ್ಧತಿಯನ್ನು ಹೋಲುವ ಹಣಕಾಸು ಸಂಸ್ಥೆ ಇತ್ತೆಂದು ಹೇಳಬಹುದು.

## ರಾಜ್ಯದ ರಾಜಕೀಯಕ್ಕೆ ಹೊರಗಿನವರ ಆಗಮನ

೧೩ನೆಯ ಶತಮಾನದಲ್ಲಿ ಪ್ರಾರಂಭದ ಮುಸ್ಲಿಮರ ಆಗಮನ ಸಾಮ್ರಾಜ್ಯದ ಸ್ಥಾಪನೆಗೆ ಕಾರಣವಾಯಿತು. ಉತ್ತರ ಕರ್ನಾಟಕದಲ್ಲಿ ಆದಿಲ್‌ಶಾಹಿ ಆಳ್ವಿಕೆ ಪ್ರಾರಂಭವಾಯಿತು. ೧೫೬೫ರ ವಿಜಯನಗರ ಪತನ ಇಡೀ ದಕ್ಷಿಣ ಭಾರತದ ವಿಘಟನೆಗೆ ಕಾರಣವಾಯಿತು. ಮೈಸೂರು, ಚಿತ್ರದುರ್ಗ, ಕೆಳದಿ, ಯಲಹಂಕ ಮುಂತಾದ ಪಾಳೇಗಾರರು ಒಂದಿಷ್ಟು ಕಾಲ ಆಳ್ವಿಕೆ ನಡೆಸಿದ್ದುಂಟು. ಸಣ್ಣ ಪುಟ್ಟ ಪಾಳೇಗಾರರನ್ನ ಸದೆಬಡಿದು ಹೈದರ್-ಟಿಪ್ಪು ಮೈಸೂರು ಸಂಸ್ಥಾನದ ವಿಶಾಲ ಸಾಮ್ರಾಜ್ಯಕ್ಕೆ ಕಾರಣರಾದರು. ೧೭೯೯ರಲ್ಲಿ ಬ್ರಿಟಿಷರು ಮೈಸೂರು ಸಂಸ್ಥಾನವನ್ನು ಹಾಗೂ ೧೮೨೪ರಲ್ಲಿ ಕಿತ್ತೂರು, ೧೮೩೪ರಲ್ಲಿ ಕೊಡಗು ಪ್ರಾಂತ್ಯಗಳನ್ನು ವಶಪಡಿಸಿಕೊಂಡರು. ಟಿಪ್ಪು ಪತನಾನಂತರ ಕರ್ನಾಟಕ ೧೯ ಭಾಗಗಳಾಗಿ ವಿಭಜನೆಯಾಯಿತು. ಸುರಪುರದ ವೆಂಕಟಪ್ಪನಾಯಕ (೧೮೦೧), ನರಗುಂದದ ಬಾಬಾ ಸಾಹೇಬ (೧೮೫೮), ಮುಂಡರಗಿ ಭೀಮರಾಯ (೧೮೫೮) ಮೊದಲಾದವರು ಬ್ರಿಟಿಷರ ವಿರುದ್ಧ ಪ್ರತಿಭಟನೆ ಮಾಡಿದ್ದು ಬೆಟ್ಟಕ್ಕೆ ಕಲ್ಲು ಹೊತ್ತಂತೆ ಆಗಿತ್ತು.

ಮೈಸೂರು ಸಂಸ್ಥಾನದಲ್ಲಿ ಮಾರ್ಕ್ ಕಬ್ಬನ್ (೧೮೩೪), ಲಾರ್ಡ್‌ಬೌರಿಂಗ್ (೧೮೬೨) ಮುಂತಾದ ಕಮಿಷನರ್‌ಗಳು ತಂದ ಸುಧಾರಣೆಗಳು ಜನತೆಗೆ ಹಿತವಾಗಿದ್ದವು. ಅನಂತರ ಬಂದ ದಿವಾನರುಗಳು ಮೈಸೂರು ಸಂಸ್ಥಾನವನ್ನು ಪ್ರಗತಿಯತ್ತ ಕೊಂಡೊಯ್ದರು. ಅದರಲ್ಲೂ ವಿಶೇಷವಾಗಿ ದಿವಾನ್ ರಂಗಾಚಾರ್ಲು (೧೮೮೭) 'ಪ್ರಜಾಪ್ರತಿನಿಧಿ ಸಭೆ' ಸ್ಥಾಪಿಸಿದರು. ಇದೊಂದು ಉದಾರ ಕಲ್ಪನೆಯಾಗಿದ್ದು ಸಂಸ್ಥಾನದ ರಾಜಕೀಯ ಬೆಳವಣಿಗೆಯಲ್ಲಿ ಮೈಲುಗಲ್ಲಾಗಿದೆ. ೧೯೦೭ರಲ್ಲಿ ದಿವಾನ್ ಪಿ. ಮಾಧವರಾಯರು 'ನ್ಯಾಯ ವಿಧಾಯಕ ಸಭೆ' ಪ್ರಾರಂಭಿಸಿದರು. ಇದು ಈಗಿನ ವಿಧಾನಸಭೆ (ಪ್ರಜಾಪ್ರತಿನಿಧಿ ಸಭೆ) ಮತ್ತು ವಿಧಾನ ಪರಿಷತ್ತು (ನ್ಯಾಯ ವಿಧಾಯಕ ಸಭೆ)ಗಳನ್ನು ಹೋಲುತ್ತದೆ. ಮಹಾತ್ಮ ಗಾಂಧೀಜಿ ಅವರೇ ರಾಜಕೀಯದಲ್ಲಿ ನಾಯಕತ್ವ ಬೆಳೆಸುತ್ತಿರುವ 'ಪ್ರಜಾಪ್ರತಿನಿಧಿ ಸಭೆ'ಯ ಕಾರ್ಯವಿಧಾನವನ್ನು ಪ್ರಶಂಸಿಸಿದ್ದರು. ಬೇರೆ ರೂಪದಲ್ಲಿ ಹೇಳುವುದಾದರೆ ಇದರಿಂದ ಸಾರ್ವಜನಿಕರಲ್ಲಿ ಅರಿವು ಮೂಡತೊಡಗಿತ್ತು. ನಾಯಕತ್ವ ಎಲ್ಲೆಡೆ ಅರಳಲಾರಂಭಿಸಿತು. ಕಾಂಗ್ರೆಸ್ ಪಕ್ಷವೇ ಹೊಸ ನಾಯಕತ್ವವನ್ನು ದೇಶಕ್ಕೆ ಕೊಟ್ಟ ಕೀರ್ತಿ ಪಡೆಯಿತು.

## ರಾಜಕೀಯಕ್ಕೆ ಪೂರಕವಾದ ಸಾಮಾಜಿಕ ವ್ಯವಸ್ಥೆ

ಭಾರತ ದೇಶದ ಇತಿಹಾಸದಂತೆ ಕರ್ನಾಟಕದ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳು ಸಹ ಈ ರಾಜ್ಯದ ಇತಿಹಾಸ ರೂಪಿಸಿವೆ. ಪ್ರಾರಂಭದಲ್ಲಿ ವೈದಿಕ ಹಾಗೂ ಜೈನಮತಗಳು ಒಟ್ಟೊಟ್ಟಿಗೇ ಬಾಳಿದವು. ಒಂದೇ ಮನೆಯಲ್ಲಿ ಜೈನ, ವೈದಿಕ ಹಾಗೂ ವೀರಶೈವ ಧರ್ಮದ ಅನುಯಾಯಿಗಳಿದ್ದ ಐತಿಹಾಸಿಕ ಘಟನೆಗಳಿವೆ.

ಕಳಚೂರ್‍ಯರ ದೊರೆ ಬಿಜ್ಜಳನ ಮಹಾಮಾತ್ಯ ಬಸವಣ್ಣ ತಂದ ಸಾಮಾಜಿಕ ಕ್ರಾಂತಿ ಈ ರಾಜ್ಯದ ಮೇಲೆ ಬೀರಿದ ಪ್ರಭಾವ ಅಗಣಿತವಾದುದು. ಸಾಹಿತ್ಯದ ಮೂಲಕ ವೈಚಾರಿಕ ನೆಲೆಯಲ್ಲಿ ಜನರ ಮನಃಪರಿವರ್ತನೆ ಮಾಡಿದ ಕೀರ್ತಿ ಶಿವಶರಣರಿಗೆ ಸೇರುತ್ತದೆ. ವೀರಶೈವ ಧರ್ಮದ ಪುನರುತ್ಥಾನ ಕರ್ನಾಟಕದ ರಾಜಕೀಯ ಕ್ಷೇತ್ರದಲ್ಲಿ ಅತ್ಯಂತ ಪ್ರಮುಖವಾದ ಘಟನೆಯಾಗಿದೆ. ವಿಜಯನಗರ ಸಾಮ್ರಾಜ್ಯದ ಅವನತಿಗೆ ಶೈವ-ವೈಷ್ಣವ ವೈಮನಸ್ಸು ಕಾರಣವೆಂಬುದನ್ನು ಕೆಲವು ಇತಿಹಾಸಕಾರರು ಗುರುತಿಸಿದ್ದಾರೆ. ಸಂಗಮ ವಂಶದ ದೊರೆಗಳು ಶೈವಪಂಥದ ಬಗ್ಗೆ ಆಸಕ್ತಿಯುಳ್ಳವರು. ತುಳುವಂಶದ ಅರಸರಿಗೆ ವೈಷ್ಣವ ಪಂಥದಲ್ಲಿ ಒಲವಿತ್ತು. ತಾಳೀಕೋಟೆ ಕದನದ ನಂತರ ಅನೇಕ ಘಟನೆಗಳಿಗೆ ಇಂತಹ ಹೊಯ್ದಾಟ ಕಾರಣವಾಗಿದೆ. ವಿಜಯನಗರದ ಪತನಾನಂತರ ಕೆಳದಿ ಮನೆತನ ವೀರಶೈವ ಧರ್ಮದ ಪುನರುತ್ಥಾನಕ್ಕೆ ಕೆಲಸ ಮಾಡಿತು. ೧೫ನೆಯ ಶತಮಾನದ ಶ್ರೇಷ್ಠ ಶರಣ, ಸಂಘಟನಾಶಕ್ತಿಯ ಧೀಮಂತ ಚನ್ನಬಸವಣ್ಣ ನಾಡಿನಾದ್ಯಂತ ವೀರಶೈವ ಮಠಗಳ ಸ್ಥಾಪನೆಗೆ ಪ್ರೇರಕನಾದ. ೧೬ನೆಯ ಶತಮಾನದ ಯಡಿಯೂರು ಸಿದ್ಧಲಿಂಗ ಯತಿಗಳಂತಹ ಅನೇಕ ವೀರಶೈವ ಧರ್ಮದ ಧಾರ್ಮಿಕ ಮುಖಂಡರು ಜ್ಞಾನ ಹಾಗೂ ಅನ್ನ ದಾಸೋಹದ ಮೂಲಕ ಜನಮನವನ್ನು ಗೆದ್ದರು. ವೀರಶೈವ ಧರ್ಮದ ಯತಿಗಳು ಎಲ್ಲಾ ಜಾತಿಯವರಿಗೆ ಅಕ್ಷರಜ್ಞಾನ ಸಿಗುವಂತೆ ನೋಡಿಕೊಂಡರು. ಸ್ವಾತಂತ್ರ್ಯ ಪೂರ್ವದಿಂದಲೂ ವೀರಶೈವ ಮಠಗಳು ಉತ್ತಮ ಶೈಕ್ಷಣಿಕ ಕಾರ್ಯ ಮಾಡುತ್ತಾ ಬಂದಿವೆ.

ಹೋರಾಟದಿಂದಲೇ ಹುಟ್ಟಿದ ವೀರಶೈವ ಧರ್ಮ ಸಾಮಾಜಿಕ ಅಸಮಾನತೆ ವಿರುದ್ಧ ಸಮರ ನಡೆಸಿದೆ. ೧೯೩೦ರಲ್ಲಿ ಹೊಸಮನಿ ಸಿದ್ಧಪ್ಪನವರ ಅಧ್ಯಕ್ಷತೆಯಲ್ಲಿ ಬ್ರಾಹ್ಮಣೇತರ ಪರಿಷತ್ತು ಸಭೆ ಸೇರಿ, ಕಾಂಗ್ರೆಸ್ ಪಕ್ಷವನ್ನು ಸೇರಿ ಅಲ್ಲಿರುವ ಬ್ರಾಹ್ಮಣರ ಪ್ರಾಬಲ್ಯ ಕಡಿಮೆ ಮಾಡಲು ತೀರ್ಮಾನಿಸಿತು.

ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣರಿಗೆ ಸರ್ಕಾರದ ಉದ್ಯೋಗದಲ್ಲಿ ವಿಶೇಷ ಆದ್ಯತೆ ದೊರೆಯುತ್ತಿದ್ದಾಗ ೧೯೪೦ರಲ್ಲಿ ಅದನ್ನು ಪ್ರತಿಭಟಿಸಿದವರು ಸಿರಿಗೆರೆ ಮಠದ ಬಿ. ಬಸವಯ್ಯ. ಇದೇ ಭಾವನೆ ಹೊಂದಿದ್ದವರು ಒಕ್ಕಲಿಗ ಮುಖಂಡ ಕೆ. ಎಚ್. ರಾಮಯ್ಯ. ಬ್ರಾಹ್ಮಣೇತರ ಚಳವಳಿ ತಮಿಳುನಾಡಿನಿಂದ ಪ್ರೇರಣೆ ಪಡೆದಿದ್ದರೂ ಇದಕ್ಕೆ ಮೈಸೂರು ಸಂಸ್ಥಾನದ ರಾಜಮನೆತನದ ಆಶೀರ್ವಾದವಿತ್ತೆಂಬುದು ಆಶ್ಚರ್ಯದ ವಿಷಯವೇನೂ ಅಲ್ಲ. ಬ್ರಾಹ್ಮಣ ಸಮುದಾಯದ ದಿವಾನರುಗಳು ಅರಸರನ್ನು ನಿಯಂತ್ರಿಸಲು ಹೊರಟಾಗ ಅವರಿಗೆ ಮುಸುಕಿನ ಗುದ್ದು ಕೊಡಲು ಆಳರಸರೇ ಈ ಚಳವಳಿಯ ಪೋಷಕರಾಗಿದ್ದರೆಂಬುದು ಗುಟ್ಟಿನ ವಿಚಾರವಲ್ಲ. ಇದು ಬ್ರಾಹ್ಮಣೇತರರಿಗೆ ಅದರಲ್ಲೂ ವೀರಶೈವ ಹಾಗೂ ಒಕ್ಕಲಿಗರಿಗೆ ಸರ್ಕಾರದ ಉದ್ಯೋಗದಲ್ಲಿ ಆದ್ಯತೆ ದೊರಕಿ ಅವರ ಸಾಮಾಜಿಕ ಅಂತಸ್ತು ಹೆಚ್ಚಿತು. ಜೊತೆಗೆ ಈ ಸಮುದಾಯಗಳಲ್ಲಿ 'ಜಾಗೃತಿ' ಮೂಡಲು ಇದು ಕಾರಣವಾಯಿತು. ವ್ಯವಸ್ಥೆಯ ವಿರುದ್ಧ ಹೋರಾಟ ಮಾಡಿದರೆ ಸತ್ಫಲಗಳನ್ನು ಪಡೆಯಲು ಸಾಧ್ಯವೆಂಬುದನ್ನು ಸ್ವಾತಂತ್ರ್ಯ ಪೂರ್ವದಲ್ಲಿ ಈ ಎರಡು ಸಮುದಾಯಗಳು ಕಂಡುಕೊಂಡವು. ಅವುಗಳ ಇಂದಿನ ರಾಜಕೀಯ ಉನ್ನತಿಗೆ ಈ ಅಂಶವೂ ಕಾರಣವಾಗಿದೆ.

ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಪ್ರಜಾಪಕ್ಷ ಹಾಗೂ ಪ್ರಜಾಮಿತ್ರ ಪಕ್ಷಗಳು ಸ್ವಾತಂತ್ರ್ಯ ಪಡೆಯುವುದಕ್ಕೆ ಹೆಚ್ಚು ಕಾತರರಾಗಿರಲಿಲ್ಲ. ಸಂಸ್ಥಾನದ ಆಳ್ವಿಕೆಯಲ್ಲಿ ಪ್ರಾಬಲ್ಯ ಹೊಂದಿದ್ದ ಬ್ರಾಹ್ಮಣರ ಪ್ರಾಬಲ್ಯ ಕಡಿಮೆ ಮಾಡುವುದು ಅವರ ಪ್ರಮುಖ ಗುರಿಯಾಗಿತ್ತು. ಬ್ರಾಹ್ಮಣರೇ ಅಧಿಕ ಸಂಖ್ಯೆಯಲ್ಲಿದ್ದ ಕಾಂಗ್ರೆಸ್ ಪಕ್ಷಕ್ಕಿಂತ ಟಿ. ಸಿದ್ದಲಿಂಗಯ್ಯ, ವೆಂಕಟಪ್ಪ ಅವರ ನೇತೃತ್ವದಲ್ಲಿದ್ದ 'ಮೈಸೂರು ಕಾಂಗ್ರೆಸ್' ಅನೇಕರಿಗೆ ಪ್ರಿಯವಾಗಿತ್ತು. ನಲವತ್ತರ ದಶಕದಲ್ಲಿ ಮುಂದೆ ಸ್ವಾತಂತ್ರ್ಯ ಬಂದರೆ ಅಧಿಕಾರ ಪಡೆಯುವುದು ಹೇಗೆಂಬ ಚಿಂತನೆ ನಡೆದಿತ್ತು. ಅದರಲ್ಲೂ ತಮ್ಮ ತಮ್ಮ ಜಾತಿಗಳನ್ನು ಸಂಘಟನೆ ಮಾಡಿಕೊಳ್ಳದಿದ್ದರೆ ಮುಂದಿನ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ತಮಗೆ ಉಳಿಗಾಲವಿಲ್ಲವೆಂದು ಆಯಾಯ ಜಾತಿಯ ಮುಖಂಡರು ಭಾವಿಸಿದ್ದರು. ಸ್ವಾತಂತ್ರ್ಯಪೂರ್ವದಿಂದಲೂ ಜಾತಿಯೇ ರಾಜಕೀಯದಲ್ಲಿ ಪ್ರಮುಖ ಅರ್ಹತೆಯಾಗತೊಡಗಿತು.

## ರಾಜಕೀಯ ಪಕ್ಷಗಳು

### ಚುನಾವಣೆ ಹಾಗೂ ಅಖಿಲ ಭಾರತ ಕಾಂಗ್ರೆಸ್

ಕರ್ನಾಟಕದಲ್ಲಿ ಕಾಂಗ್ರೆಸ್ ಪಕ್ಷದ ಬೇರುಗಳನ್ನು ಬಹು ಹಿಂದಿನಿಂದಲೂ ಗುರುತಿಸಬಹುದು. ೧೮೮೫ರಲ್ಲಿ ಕಾಂಗ್ರೆಸ್‌ನ ಮೊದಲ ಅಧಿವೇಶನ ಮುಂಬೈನಲ್ಲಿ ಜರುಗಿದಾಗ ಬೆಳಗಾವಿಯ ಬಾವುಸಾಹೇಬ ಭಾವೆ ಹಾಗೂ ಬಳ್ಳಾರಿಯ ಕೋಲಚಲ ವೆಂಕಟರಾವ್ ಕರ್ನಾಟಕದ ಪ್ರತಿನಿಧಿಗಳಾಗಿದ್ದರು. ಬಾಲಗಂಗಾಧರ ತಿಲಕ್ ಅವರ ಪ್ರಭಾವ ಮುಂಬೈ ಕರ್ನಾಟಕದಲ್ಲಿ ತುಸು ಹೆಚ್ಚು. ಕಾಂಗ್ರೆಸ್

ಪಕ್ಷವನ್ನು ಗಮನಿಸುವಾಗ ಮೂರು ಹಂತಗಳನ್ನು ಗುರುತಿಸಬಹುದು. ಮೊದಲನೆಯದು ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣ ಚಳವಳಿ ಮೊದಲ್ಗೊಂಡು ೧೯೬೯ರ ತನಕ ಅವಿಭಾಜ್ಯ ಕಾಂಗ್ರೆಸ್ ; ಎರಡನೆಯದು ಶ್ರೀಮತಿ ಇಂದಿರಾಗಾಂಧಿ ಅವರ ಆಡಳಿತ ಕಾಂಗ್ರೆಸ್ ಹಾಗೂ ಎಸ್. ನಿಜಲಿಂಗಪ್ಪ ಅವರ ನೇತೃತ್ವದ ಸಂಸ್ಥಾ ಕಾಂಗ್ರೆಸ್. ಕೊನೆಯದು ಶ್ರೀಮತಿ ಗಾಂಧಿ ಅವರ ಕಾಂಗ್ರೆ ಹಾಗೂ ಅವರಿಂದ ವಿಭಜನೆಗೊಂಡ ಕಾಂಗ್ರೆ ಗುಂಪುಗಳು.

೧೯೨೦ರಲ್ಲಿ ನಾಗಪುರ ಅಧಿವೇಶನದಲ್ಲಿ ಭಾಗವಹಿಸಿದ್ದ ನಿವೃತ್ತ ನ್ಯಾಯಾಧೀಶ ಎಸ್. ಎಸ್. ಸೆಟ್ಲರ್ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಪಕ್ಷವನ್ನು ಕಟ್ಟಲು ಮುಂದಾದರು. ೧೯೨೪ರಲ್ಲಿ ಮಹಾತ್ಮ ಗಾಂಧೀಜಿ ಅವರ ಅಧ್ಯಕ್ಷತೆಯಲ್ಲಿ ಬೆಳಗಾವಿ ಕಾಂಗ್ರೆಸ್ ಅಧಿವೇಶನ ಜರುಗಿತಷ್ಟೆ. ಅಲ್ಲಿಂದ ಕಾಂಗ್ರೆಸ್ ಸಂಘಟನೆ ಮತ್ತಷ್ಟು ಕಸುವು ಪಡೆಯಿತು. ಮಹಾತ್ಮ ಗಾಂಧೀಜಿ ೧೯೧೫ರಿಂದ ೧೯೩೭ರ ವರೆಗೆ ಏಳು ಸಲ ಕರ್ನಾಟಕ ಪ್ರವಾಸ ಕೈಗೊಂಡಿದ್ದಾರೆ. ೧೯೨೩ರಲ್ಲಿ ಕರ್ನಾಟಕದವರೇ ಆದ ಎನ್. ಎಸ್. ಹರ್ಡೀಕರ್ ಅವರು ಸ್ಥಾಪಿಸಿದ ಹಿಂದೂಸ್ತಾನಿ ಸೇವಾದಳ ಉತ್ತಮ ಸೇವಾಕಾರ್ಯಕ್ಕೆ ಪ್ರಸಿದ್ಧವಾಯಿತು. ೧೯೩೮ರಲ್ಲಿ ಜರುಗಿದ ಶಿವಪುರ ಧ್ವಜ ಸತ್ಯಾಗ್ರಹ, ಅದೇ ವರ್ಷ ನಡೆದ ವಿದುರಾಶ್ವತ್ಥ ದುರ್ಘಟನೆ, ೧೯೪೨ ಕ್ವಿಟ್ ಚಳವಳಿ ಹಾಗೂ ೧೯೪೭ರಲ್ಲಿ ನಡೆದ ಮೈಸೂರು ಚಲೋ ಚಳವಳಿಗಳು ಕಾಂಗ್ರೆಸ್ ಶ್ರೀಸಾಮಾನ್ಯರನ್ನು ಸೆಳೆಯಲು ಸಹಾಯಕವಾಯಿತು. ೧೯೩೭ರಲ್ಲಿ ವಿ. ವೆಂಕಟಪ್ಪ ಅಧ್ಯಕ್ಷತೆಯಲ್ಲಿದ್ದ ಸಂಯುಕ್ತ ಪ್ರಜಾಪಕ್ಷವು ಕಾಂಗ್ರೆಸ್‌ನಲ್ಲಿ ವಿಲೀನವಾಯಿತು. ಟಿ. ಸಿದ್ಧಲಿಂಗಯ್ಯ ಅವರ ಅಧ್ಯಕ್ಷತೆಯಲ್ಲಿದ್ದ ಮೈಸೂರು ಕಾಂಗ್ರೆಸ್ ಸಹ ಕಾಂಗ್ರೆಸ್ ಪಕ್ಷದಲ್ಲಿ ವಿಲೀನವಾಯಿತು. ಮಹಾತ್ಮ ಗಾಂಧೀಜಿ ಅವರ ಆಶಯವಾದ ಹರಿಜನೋದ್ಧಾರ ಹಾಗೂ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹವನ್ನು ದಿವಾನರಾದ ದಿವಾನ್ ಮಿರ್ಜಾ ಇಸ್ಮಾಯಿಲ್ ಅವರೇ ನೀಡಲು ಮುಂದಾಗಿದ್ದರು. ಮಹಾತ್ಮ ಗಾಂಧೀಜಿ ಅವರು ಮೈಸೂರು ಅರಸರ ಬಗ್ಗೆ ಸದಭಿಪ್ರಾಯ ಹೊಂದಿದ್ದರು. ಸ್ಥಳೀಯ ಮೈಸೂರು ಅರಸರ ಮೂಲಕ ಆಳ್ವಿಕೆ ನಡೆಸುತ್ತಿದ್ದ ಬ್ರಿಟಿಷರ ವಿರುದ್ಧ ಕಾಂಗ್ರೆಸ್ ಹೋರಾಟ ಮಾಡಬೇಕಾಗಿತ್ತು. ಹೈದ್ರಾಬಾದ್ ಕರ್ನಾಟಕಕ್ಕಿಂತ ಮುಂಬೈ ಕರ್ನಾಟಕದಲ್ಲಿ ಬ್ರಿಟಿಷರ ವಿರುದ್ಧ ತೀವ್ರ ಪ್ರತಿಭಟನೆಯಿತ್ತು. ಮೈಸೂರು ದೊರೆಗಳ ಮರೆಯಲ್ಲಿದ್ದ ಬ್ರಿಟಿಷರ ವಿರುದ್ಧ ಜನಾಭಿಪ್ರಾಯ ಮೂಡಿಸಲು ಕಾಂಗ್ರೆಸ್ ನಾಯಕರು ವಿನೂತನ ಹೋರಾಟಗಳನ್ನು ಹಮ್ಮಿಕೊಂಡಿದ್ದರು. 'ಪ್ರಜಾಪ್ರತಿನಿಧಿ ಸಭೆ', 'ನ್ಯಾಯ ವಿಧೇಯಕ ಸಭೆ' ಮೈಸೂರು ಸಂಸ್ಥಾನದಲ್ಲಿ ಅಸ್ತಿತ್ವದಲ್ಲಿದ್ದ ಕಾರಣ ಜನತೆಗೆ ಚುನಾವಣಾ ಪ್ರಕ್ರಿಯೆ ಚನ್ನಾಗಿ ತಿಳಿದಿತ್ತು. ಕಾಂಗ್ರೆಸ್ ಪಕ್ಷದ ಹೋರಾಟದಿಂದಾಗಿ ಅನೇಕ ನಾಯಕರು ಉದ್ಭವವಾದರು. ೧೯೫೨ರ ಮೊದಲ ಚುನಾವಣೆಯಲ್ಲಿ ಕಾಂಗ್ರೆಸ್ ಅದ್ಭುತ ಸಾಧನೆ ಮಾಡಿತ್ತು. ೧೦೦ ವಿಧಾನಸಭಾ ಸ್ಥಾನಗಳ ಪೈಕಿ ಕಾಂಗ್ರೆಸ್ ಪಕ್ಷ ೮೦ ಸಾಮಾನ್ಯ ಸ್ಥಾನಗಳಿಗೆ ಹಾಗೂ ೧೪ ಮೀಸಲು ಸ್ಥಾನಗಳಿಗೆ ತನ್ನ ಅಭ್ಯರ್ಥಿಗಳನ್ನು ನಿಲ್ಲಿಸಿತು. ಕಾಂಗ್ರೆಸ್ ಪಕ್ಷ ಏಕಸದಸ್ಯ ಕ್ಷೇತ್ರದಲ್ಲಿ ಶೇ. ೪೭.೯ ಹಾಗೂ ದ್ವಿಮತಕ್ಷೇತ್ರದಲ್ಲಿ ಶೇ. ೪೭.೭ ಮತಗಳನ್ನು ಗಳಿಸಿತು. ಕಾಂಗ್ರೆಸ್ ಪಕ್ಷದ ಎಲ್ಲಾ ನಾಯಕರು ಆಯ್ಕೆಯಾಗಿದ್ದರು. 'ಕಾಂಗ್ರೆಸ್ ಟಿಕೇಟು ಹಂಚಿಕೆಯ ಸಂದರ್ಭದಲ್ಲಿ ಅನ್ಯಾಯ ನಡೆದಿದೆ' ಎಂದು ಆಗಲೇ ಭಿನ್ನಮತೀಯ ನಾಯಕರಾದ ಕೆ. ಹನುಮಂತಯ್ಯ ಹಾಗೂ ಟಿ. ಸಿದ್ಧಲಿಂಗಯ್ಯ ಹೇಳಿದ್ದುಂಟು.

ಮೈಸೂರು ಸಂಸ್ಥಾನದ ಹತ್ತು ಲೋಕಸಭಾ ಸ್ಥಾನಗಳ ಪೈಕಿ ಕಾಂಗ್ರೆಸ್ ಮೈಸೂರಿನ ಸಾಮಾನ್ಯ ಕ್ಷೇತ್ರ ಬಿಟ್ಟು ಉಳಿದೆಲ್ಲಾ ಸ್ಥಾನ ಗೆದ್ದುಕೊಂಡಿತು. ಉತ್ತರ ಕರ್ನಾಟಕದಲ್ಲಿ ೧೧ ಲೋಕಸಭಾ ಸ್ಥಾನಗಳಿದ್ದು ಒಂದು ಬಿಟ್ಟು ಉಳಿದೆಲ್ಲಾ ಸ್ಥಾನಗಳಿಗೂ ಕಾಂಗ್ರೆಸ್ ಅಭ್ಯರ್ಥಿಗಳೇ ಆಯ್ಕೆಯಾಗಿದ್ದರು. ಸ್ವಾತಂತ್ರ್ಯ ತಂದುಕೊಟ್ಟ ಕಾಂಗ್ರೆಸ್ ಪಕ್ಷದ ನೇತಾರ ಮಹಾತ್ಮ ಗಾಂಧೀಜಿ ಹಂತಕರ ಗುಂಡಿಗೆ ಬಲಿಯಾಗಿದ್ದರು. ಹೀಗಾಗಿ ಜನರ ಅನುಕಂಪ ಕಾಂಗ್ರೆಸ್ ಪಕ್ಷಕ್ಕೆ ಇದ್ದುದು ಸಹಜ. ಆಗ ಲೋಕಸಭೆ ಪ್ರವೇಶಿಸಿದ ಮೈಸೂರಿನ ಎಂ. ಎಸ್. ಗುರುಪಾದಸ್ವಾಮಿ ಹಾಗೂ ಹೈದ್ರಾಬಾದ್ ಕರ್ನಾಟಕದ ಅಳವಂಡಿ ಶಿವಮೂರ್ತಿಸ್ವಾಮಿ ವೈಯಕ್ತಿಕ ಪ್ರಭಾವದಿಂದ ಕಾಂಗ್ರೆಸ್ಸೇತರ ಪಕ್ಷಗಳಿಂದ ಲೋಕಸಭೆ ಪ್ರವೇಶಿಸಿದರು. ಜೊತೆಗೆ ಅವರ ಆಯ್ಕೆಯಲ್ಲಿ ಜಾತಿ ಪ್ರಭಾವ ಬೀರಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು.

೧೯೫೨ರಲ್ಲಿ ಕೆಂಗಲ್ ಹನುಮಂತಯ್ಯ ಮುಖ್ಯಮಂತ್ರಿಗಳಾದರು. ಏಕೀಕರಣದ ಕಾವು ಎಲ್ಲೆಡೆ ಪಸರಿಸಿತು. ವಿಶೇಷವಾಗಿ ಮುಂಬೈ ಕರ್ನಾಟಕದಲ್ಲಿ ಏಕೀಕರಣದ ಹೋರಾಟ ಬಿರುಸಾಗಿತ್ತು. ಎಸ್. ನಿಜಲಿಂಗಪ್ಪ ಅವರಿಗೆ ಮೈಸೂರು ಸಂಸ್ಥಾನ ಸೇರಿದಂತೆ ಮುಂಬೈ ಕರ್ನಾಟಕ, ಹೈದ್ರಾಬಾದ್ ಕರ್ನಾಟಕದ ಬಹುಮಟ್ಟಿನ ವೀರಶೈವ ಸಮುದಾಯದ ಅಖಂಡ ಬೆಂಬಲವಿತ್ತು. ಜೊತೆಗೆ ಶ್ರೀಸಾಮಾನ್ಯರು ಏಕೀಕರಣದ ಪರವಾಗಿದ್ದರು. ಕೆಂಗಲ್ ಹನುಮಂತಯ್ಯ ಅವರು ಜನಾಭಿಪ್ರಾಯಕ್ಕೆ ಪೂರಕವಾಗಿ ಸ್ಪಂದಿಸಿದರು. ತಮಿಳುನಾಡಿನ ರಾಜಕೀಯ ಮುತ್ಸದ್ದಿ ರಾಜಾಜಿ ಅವರ ಪ್ರವೇಶದಿಂದಾಗಿ ಕೊನೆಯ ಹಂತದಲ್ಲಿ ಮೈಸೂರು ಸಂಸ್ಥಾನದ ಕೆಲವು ಒಕ್ಕಲಿಗ ನಾಯಕರು ಏಕೀಕರಣದ ವಿರುದ್ಧ ಅಪಸ್ವರ ಎತ್ತಿದರೇ ಹೊರತು ಏಕೀಕರಣದ ವಿಚಾರದಲ್ಲಿ ಅವರಿಗೆ ಬಲವಾದ ಅಭಿಪ್ರಾಯ ಭೇದವಿರಲಿಲ್ಲ.

ರಾಷ್ಟ್ರ ರಾಜಕಾರಣ ಹಾಗೂ ತಮ್ಮ ವೈಯಕ್ತಿಕ ಪ್ರಭಾವ ಉಪಯೋಗಿಸಿ ನಿಜಲಿಂಗಪ್ಪ ಅವರು ೧೯೫೬ರಲ್ಲಿ ಏಕೀಕರಣ ಸಾಧಿಸಿ ವಿಶಾಲ ಮೈಸೂರಿನ ಪ್ರಪಥಮ ಮುಖ್ಯಮಂತ್ರಿಗಳಾದರು. ಮುಂಬೈ ಕರ್ನಾಟಕದ ಕೆಲವು ಬ್ರಾಹ್ಮಣ ನಾಯಕರಾದ ಆರ್. ಆರ್. ದಿವಾಕರ್, ಡಿ.ಬಿ. ಕರಮಕರ್, ಬಿ. ಎನ್. ದಾತಾರ್ ಅವರಿಗೆ ನಿಜಲಿಂಗಪ್ಪ ಅವರ ವಿಚಾರದಲ್ಲಿ ಅಷ್ಟೇನೂ ಸಮಾಧಾನವಿರಲಿಲ್ಲ. ಮೈಸೂರು ಸಂಸ್ಥಾನದ ಸಾಹುಕಾರ್ ಚನ್ನಯ್ಯ, ಕೆಂಗಲ್ ಹನುಮಂತಯ್ಯ, ಕೆ. ಸಿ. ರೆಡ್ಡಿ, ಹೆಚ್. ಕೆ. ವೀರಣ್ಣಗೌಡ, ಟಿ. ಸಿದ್ಧಲಿಂಗಯ್ಯ, ಎಚ್. ಎಂ. ಚನ್ನಬಸಪ್ಪ, ಎಚ್. ಸಿದ್ಧವೀರಪ್ಪ ಮೊದಲಾದವರು ನಿಜಲಿಂಗಪ್ಪ ಅವರನ್ನು ತುಂಬು ಹೃದಯದಿಂದ ಸ್ವಾಗತಿಸಿದವರಲ್ಲ. ಇಷ್ಟಾದರೂ ೧೯೫೭ರ ಚುನಾವಣೆಯ ಸಂದರ್ಭದಲ್ಲಿ ಕಾಂಗ್ರೆಸ್ ಪಕ್ಷವೇ ಪ್ರಧಾನವಾಗಿತ್ತು. ನಿಜಲಿಂಗಪ್ಪ ಅವರು ರಾಜ್ಯದ ಇತರ ಎಲ್ಲಾ ನಾಯಕರಿಗಿಂತ ಮುಂದಿದ್ದರು. ಏಕೀಕರಣದ ಹೋರಾಟದಿಂದ ಹೊಸ ಪ್ರಾಂತ್ಯಗಳಲ್ಲೂ ಅವರಿಗೆ ಬೆಂಬಲಿಗರಿದ್ದರು. ಚುನಾವಣೆಯ ಪ್ರಣಾಳಿಕೆಯಲ್ಲಿ ವೈಶಿಷ್ಟ್ಯವಿರಲಿಲ್ಲ. ಪ್ರಧಾನಿ ನೆಹರೂ ರಷ್ಯಾವನ್ನು ತಮ್ಮ ಮಾದರಿಯನ್ನಾಗಿಟ್ಟುಕೊಂಡಿದ್ದರು. ಸಮಾಜವಾದಕ್ಕೆ ಅವರು ಮನಸೋತಿದ್ದರು. ಕಾಂಗ್ರೆಸ್ ತನ್ನ ಪ್ರಣಾಳಿಕೆಯಲ್ಲಿ ಸಮಾಜವಾದದ ಬಗ್ಗೆ ಹೆಚ್ಚಿಗೆ ಹೇಳಿತು. ವಿಧಾನಸಭೆಯ ೨೦೮ ಸ್ಥಾನಗಳಲ್ಲಿ ಕಾಂಗ್ರೆಸ್‌ನ ಅಭ್ಯರ್ಥಿಗಳು ೧೭೮ ಸ್ಥಾನ ಪಡೆದಿದ್ದರು. ಅದೇ ರೀತಿ ೨೬ ಲೋಕಸಭಾ ಸ್ಥಾನಗಳಲ್ಲಿ ೨೩ ಕಾಂಗ್ರೆಸ್ ಪಕ್ಷದ ಪಾಲಾಗಿತ್ತು. ೩೦ ಬಂಡಾಯ ಕಾಂಗ್ರೆಸ್ ಅಭ್ಯರ್ಥಿಗಳು ಗೆದ್ದು ಬಂದಿದ್ದರು. ಪಿಎಸ್‌ಪಿ ೨೯ ಸ್ಥಾನ ಪಡೆದು ಪ್ರಮುಖ ವಿರೋಧ ಪಕ್ಷವಾಗಿತ್ತು. ನಿಜಲಿಂಗಪ್ಪ ಅವರ ಮೇಲೆ ಇದ್ದ ಅಸಮಾಧಾನವೇ ಇದಕ್ಕೆ ಕಾರಣ. ೧೯೫೭ರ ಚುನಾವಣೆಯಲ್ಲಿ ಸೋತಿದ್ದ ತಮ್ಮ ಮಿತ್ರ ಎಂ. ವಿ. ರಾಮರಾವ್ ಅವರನ್ನು ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಅಧ್ಯಕ್ಷರನ್ನಾಗಿ ಮಾಡಬೇಕೆಂಬುದು ಮುಖ್ಯಮಂತ್ರಿ ನಿಜಲಿಂಗಪ್ಪ ಅಭೀಪ್ಸೆ. ಅಧ್ಯಕ್ಷ ಸ್ಥಾನಕ್ಕೆ ಚುನಾವಣೆ ನಡೆದು (೧೦.೬.೧೯೫೭) ಮುಖ್ಯಮಂತ್ರಿ ಅವರ ವಿರೋಧಿ ಗುಂಪಿನ ಸಾಹುಕಾರ್ ಚನ್ನಯ್ಯ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ಭಿನ್ನಮತೀಯ ಚಟುವಟಿಕೆ ಮುಖ್ಯಮಂತ್ರಿ ಸ್ಥಾನದಿಂದ ನಿಜಲಿಂಗಪ್ಪ ಅವರನ್ನು ಇಳಿಸುವ ತನಕ ನಿಲ್ಲಲಿಲ್ಲ. ೫.೭.೫೮ರಲ್ಲಿ ಎಐಸಿಸಿ ಕಾರ್ಯದರ್ಶಿ ಶ್ರೀಮನ್ನಾರಾಯಣ ಅವರು ಬಂದು ನಿಜಲಿಂಗಪ್ಪ ಅವರಿಗೆ ಶಾಸಕರ ಬೆಂಬಲವಿಲ್ಲವೆಂದು ಘೋಷಿಸಿದರು. ತಾಳಿಕೆರೆ ಸುಬ್ರಹ್ಮಣ್ಯಂ ಶಾಸಕಾಂಗ ಪಕ್ಷದ ಸ್ಥಾನಕ್ಕೆ ಆಯ್ಕೆಯಾಗಲು ಇಚ್ಛೆಸಿದ್ದರೂ ಉತ್ತರ ಕರ್ನಾಟಕದ ವೀರಶೈವ ಧರ್ಮದವರು ಪಟ್ಟು ಹಿಡಿದ ಕಾರಣ ಅನಿರೀಕ್ಷಿತವಾಗಿ ಬಿ.ಡಿ. ಜತ್ತಿ ಮುಖ್ಯಮಂತ್ರಿಗಳಾದರು. ಎಸ್. ನಿಜಲಿಂಗಪ್ಪ ಗುಂಪು ಮತ್ತಷ್ಟು ಕ್ರಿಯಾಶೀಲವಾಗಿ ಭಿನ್ನಮತೀಯರಿಂದ ೬.೫.೧೯೬೦ರಲ್ಲಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಸ್ಥಾನವನ್ನು ಕಿತ್ತುಕೊಂಡಿತು.. ಸ್ವತಃ ನಿಜಲಿಂಗಪ್ಪ ಅವರೇ ಪಕ್ಷದ ಅಧ್ಯಕ್ಷರಾದರು. ಇಲ್ಲಿ ಗಮನಿಸಬೇಕಾದ ಅಂಶ. ಆಗ ಕಾಂಗ್ರೆಸ್ ಪಕ್ಷದಲ್ಲಿದ್ದ ಆಂತರಿಕ ಪ್ರಜಾಪ್ರಭುತ್ವ. ಹೈಕಮಾಂಡ್‌ಗೆ ತಾಳಕೆರೆ ಸುಬ್ರಹ್ಮಣ್ಯಂ ಅವರನ್ನು ಮುಖ್ಯಮಂತ್ರಿ ಮಾಡಬೇಕೆಂಬ ಇಚ್ಛೆಯಿದ್ದರೂ ಅಂತಿಮವಾಗಿ ಶಾಸಕರ ಮಾತಿಗೆ ಬೆಲೆಕೊಟ್ಟು ಜತ್ತಿ ಅವರನ್ನು ಆಯ್ಕೆ ಮಾಡಲಾಯಿತು. ಆಗ ನಿಜಲಿಂಗಪ್ಪ ಗುಂಪು, ಜತ್ತಿ ಗುಂಪು, ಕೆಂಗಲ್ ಹನುಮಂತಯ್ಯ ಗುಂಪು ಹಾಗೂ ಸಾಹುಕಾರ್ ಚನ್ನಯ್ಯ ಗುಂಪು ಎಂದು ಕಾಂಗ್ರೆಸ್ ಒಡೆದಿತ್ತು. ಕೇಂದ್ರ ನಾಯಕರಿಗೂ ರಾಜ್ಯ ನಾಯಕರು ಒಗ್ಗಟ್ಟಾಗಿರುವುದು ಬೇಕಾಗಿರಲಿಲ್ಲ. ಪ್ರಧಾನಿ ನೆಹರು ಅವರು ತಮ್ಮ ಮಗಳು ಇಂದಿರಾಗಾಂಧಿ ಅವರನ್ನು ಪಕ್ಷದ ಅಧ್ಯಕ್ಷರನ್ನಾಗಿ ಮಾಡಿದರು. ಹೇಗಾದರೂ ಮಾಡಿ ತಮ್ಮ ಮಗಳನ್ನು ಪ್ರಧಾನಿ ಪೀಠಕ್ಕೆ ಏರಿಸಬೇಕೆಂಬ ಮಹತ್ವಾಕಾಂಕ್ಷೆ ಅವರದು. ಮೈಸೂರು ರಾಜ್ಯ ಕಾಂಗ್ರೆಸ್‌ನಲ್ಲಿ ಅವರಿಗೆ ಸಮರ್ಥವಾಗಿ ಕಂಡವರು ಪ್ರಾಯಶಃ ನಿಜಲಿಂಗಪ್ಪನವರೊಬ್ಬರೇ ಎನ್ನಬಹುದು.

೧೯೬೨ರ ಮಹಾಚುನಾವಣೆಯ ಹೊತ್ತಿಗೆ ನಿಜಲಿಂಗಪ್ಪ ಕಾಂಗ್ರೆಸ್‌ನಲ್ಲಿ ಮೈಲುಗೈ ಸಾಧಿಸಿದರು. ೨೦೮ ವಿಧಾನಸಭಾ ಸ್ಥಾನಗಳ ಪೈಕಿ ಈ ಸಲ ೯೧ ಲಿಂಗಾಯಿತರಿಗೆ ಟಿಕೇಟು ಕೊಡಲಾಯಿತು. ಕೆಂಗಲ್ ಹನುಮಂತಯ್ಯ ಅವರಿಗೆ ಲೋಕಸಭೆಗೆ ಟಿಕೇಟು ಕೊಟ್ಟು ಅವರನ್ನು ರಾಜ್ಯ ರಾಜಕಾರಣದಿಂದ ದೂರ ಸರಿಸಲಾಯಿತು. ಚುನಾವಣಾ ಪ್ರಣಾಳಿಕೆಯಲ್ಲಿ ರಾಜ್ಯ ವಿಚಾರಗಳಿಗೆ ಯಾವುದೇ ಮಹತ್ವ ಕೊಟ್ಟಿರಲಿಲ್ಲ. ಬೆಂಗಳೂರಿನಲ್ಲಿ ಸ್ಥಾಪಿತವಾದ ಹೆಚ್‌ಎಂಟಿ ಗಡಿಯಾರ ಕಾರ್ಖಾನೆಯ ಬಗ್ಗೆ ಪ್ರಸ್ತಾಪಿಸಲಾಗಿತ್ತು. ಭಾರತ ಸರ್ಕಾರದ ನೀತಿಯಂತೆ ವಿಶೇಷವಾಗಿ ಆಹಾರೋತ್ಪಾದನೆ ಮತ್ತು ಕೃಷಿ ಚಟುವಟಿಕೆಗೆ ಒತ್ತು ಕೊಡಲಾಯಿತು.

ಕಾಂಗ್ರೆಸ್ ಪಕ್ಷ ಶೇ. ೫೦. ೨೨ ರಷ್ಟು ಮತ ಪಡೆದು ೧೩೮ ಸ್ಥಾನಗಳನ್ನು ಗಳಿಸಿತು. ಕಳೆದ ಚುನಾವಣೆಗಿಂತ ೧೦ ಕಡಿಮೆ ಸ್ಥಾನಗಳನ್ನು ಕಾಂಗ್ರೆಸ್ ಪಕ್ಷ ಪಡೆದಿತ್ತು. ಲೋಕಸಭೆಯ ೨೬ ಸ್ಥಾನಗಳ ಪೈಕಿ ಕೊಪ್ಪಳದಿಂದ ಲೋಕಸೇವಕ ಸಂಘದ ಅಳವಂಡಿ ಶಿವಮೂರ್ತಿ ಸ್ವಾಮಿಯನ್ನುಳಿದು ಎಲ್ಲರೂ ಕಾಂಗ್ರೆಸ್ ಪಕ್ಷದವರೇ ಆಗಿದ್ದರು. ಎಚ್. ಕೆ. ವೀರಣ್ಣಗೌಡ, ಎಚ್. ಎಂ. ಚನ್ನಬಸಪ್ಪ, ಎಚ್. ಎಸ್. ರುದ್ರಪ್ಪ, ಟಿ. ಸುಬ್ರಹ್ಮಣ್ಯಂ, ಎನ್. ರಾಚಯ್ಯ ಮೊದಲಾದ ಭಿನ್ನಮತೀಯ ಕಾಂಗ್ರೆಸ್ ಧುರೀಣರು ಸೋತಿದ್ದರು. ಮತ್ತೊಂದು ಆಶ್ಚರ್ಯದ ವಿಚಾರ-ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾದ ನಿಜಲಿಂಗಪ್ಪನವರು ಹೊಸದುರ್ಗದಿಂದ ೮೦೦೦ಕ್ಕಿಂತ ಹೆಚ್ಚಿನ ಮತಗಳಿಂದ ಪರಾಭವಗೊಂಡಿದ್ದರು. ಆದರೂ ನಿಜಲಿಂಗಪ್ಪ ಶಾಸಕಾಂಗ ಪಕ್ಷದ ನಾಯಕನ ಸ್ಥಾನಕ್ಕೆ ಸ್ಪರ್ಧಿಸುವುದಾಗಿ ಹೇಳಿದ್ದರು. ಆದರೆ ಹೈಕಮಾಂಡ್

ವೀಕ್ಷಕರಾಗಿ ಆಗಮಿಸಿದ್ದ ಲಾಲ್‌ಬಹದ್ದೂರ್ ಶಾಸ್ತ್ರಿ ಅವರು ತಾತ್ಕಾಲಿಕ ಮುಖ್ಯಮಂತ್ರಿಯಾಗಿ ಎಸ್. ಆರ್. ಕಂಠಿ ಅವರನ್ನು ಶಾಸಕರ ಅಭಿಮತದಂತೆ ಘೋಷಣೆ ಮಾಡಿದರು. ೧೯೬೨ ಮೇ ತಿಂಗಳಲ್ಲಿ ಬಾಗಲಕೋಟೆಯಿಂದ ಉಪಚುನಾವಣೆಯಲ್ಲಿ ಆಯ್ಕೆಯಾಗಿ ಬಂದ ನಿಜಲಿಂಗಪ್ಪ ಅವರು ಮತ್ತೆ ಮುಖ್ಯಮಂತ್ರಿಗಳಾದರು. ಸಾರ್ವತ್ರಿಕ ಚುನಾವಣೆಯಲ್ಲಿ ಜನಮನ್ನಣೆ ಗಳಿಸಲು ವಿಫಲರಾದ ನಿಜಲಿಂಗಪ್ಪ ಹಿಂಬಾಗಿಲು ಮೂಲಕ ವಿಧಾನಸಭೆ ಪ್ರವೇಶಿಸಿ ಮುಖ್ಯಮಂತ್ರಿ ಸ್ಥಾನದಲ್ಲಿ ಕುಳಿತಿದ್ದರೆಂಬುದು ಅವರ ವಿರೋಧಿಗಳಿಗೆ ನುಂಗಲಾರದ ತುತ್ತಾಯಿತು. ಅದರಲ್ಲೂ ಎಚ್. ಕೆ. ವೀರಣ್ಣಗೌಡ, ಎಚ್. ಎಂ. ಚನ್ನಬಸಪ್ಪ, ಟಿ. ಸುಬ್ರಹ್ಮಣ್ಯಂ, ಮಾಲಿ ಮರಿಯಪ್ಪ ಮೊದಲಾದವರು ಸೋಲುವುದಕ್ಕೆ ನಿಜಲಿಂಗಪ್ಪ ಗುಂಪು ಕಾರಣವೆಂದು ಭಿನ್ನಮತೀಯರು ಹೇಳುತ್ತಿದ್ದರು. ಮುಖ್ಯಮಂತ್ರಿ ಅಭ್ಯರ್ಥಿ ಎಸ್. ನಿಜಲಿಂಗಪ್ಪ ಹೊಸದುರ್ಗದಲ್ಲಿ ಸೋಲಲು ರಾಜ ಪ್ರಮುಖರು, ಚಿತ್ರದುರ್ಗದ ವೀರಶೈವ ಸಮುದಾಯದ ಧಾರ್ಮಿಕ ಮಠದ ಎಚ್. ಸಿದ್ಧವೀರಪ್ಪ ಹಾಗೂ ಹಿಂದುಳಿದ ಕುರುಬ ಜನಾಂಗದ ಸಂಘಟನೆ ಕಾರಣವೆಂದು ನಿಜಲಿಂಗಪ್ಪ ಅವರ ಅಭಿಮಾನಿಗಳು ಹೇಳುತ್ತಿದ್ದರು. ಈ ಮಧ್ಯೆ ನಿಜಲಿಂಗಪ್ಪ ಅವರ ಹಿಂದೆ ಅವರನ್ನು ಯದ್ವಾ-ತದ್ವಾ ಹೊಗಳುವ ಪ್ರಬಲವಾದ ಎಸ್. ಎನ್. ಅಭಿಮಾನಿ ಗುಂಪು ಉದಯಿಸಿತು. ಉತ್ತರ ಕರ್ನಾಟಕದ ಬ್ರಾಹ್ಮಣ ನಾಯಕರ ವಿರುದ್ಧ ರಾಮಕೃಷ್ಣ ಹೆಗಡೆ, ಹೈದ್ರಾಬಾದ್ ಕರ್ನಾಟಕದ ಪ್ರಭಾವಿ ಕುರುಬ ಸಮುದಾಯದ ನಾಯಕರಾದ ಕೊಲ್ಲೂರು ಮಲ್ಲಪ್ಪ ವಿರುದ್ಧ ವೀರೇಂದ್ರ ಪಾಟೀಲ್ ಸಾಹುಕಾರ್ ಚನ್ನಯ್ಯ, ಎಚ್. ಕೆ. ವೀರಣ್ಣಗೌಡ ಅವರಿಗೆ ಸರಿಸಾಟಿಯೆಂಬಂತೆ ಮಂಡ್ಯದ ಕೆ.ವಿ. ಶಂಕರಗೌಡ ಅವರುಗಳನ್ನು ನಿಜಲಿಂಗಪ್ಪ ಆಸಕ್ತಿಪೂರ್ಣವಾಗಿ ರಾಜಕೀಯದಲ್ಲಿ ಬೆಳೆಸತೊಡಗಿದರು.

ಚೀಣಾ ದಾಳಿ, ನೆಹರೂ ಅವರ ಸಾವು, ಲಾಲ್‌ಬಹದ್ದೂರ್ ಶಾಸ್ತ್ರಿ ಅವರ ಅನಿರೀಕ್ಷಿತ ಸಾವು, ಅಖಿಲ ಭಾರತ ಕಾಂಗ್ರೆಸ್‌ನ ಕೆಲವು ಘಟನಾವಳಿಗಳು ರಾಜ್ಯದಲ್ಲಿ ನಿಜಲಿಂಗಪ್ಪ ಗುಂಪು ಬಲಗೊಳ್ಳಲು ಕಾರಣವಾದವು. ೨೩.೬.೬೩ರಂದು ಮುಖ್ಯಮಂತ್ರಿ ನಿಜಲಿಂಗಪ್ಪ ಅವರ ಬೆಂಬಲಿತ ಮಹಮ್ಮದ್ ಆಲಿ, ಎಚ್. ಎಂ. ಚನ್ನಬಸಪ್ಪ ಅವರನ್ನು ಸೋಲಿಸಿ ಪ್ರದೇಶದ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದರು. ಪಕ್ಷ ಹಾಗೂ ಸರ್ಕಾರಗಳೆರಡರಲ್ಲೂ ಸೋಲನಪ್ಪಿಕೊಂಡಿದ್ದ ಭಿನ್ನಮತೀಯರು ಸುಮ್ಮನೆ ಕೂಡಲಿಲ್ಲ. 'ಶರಾವತಿ ಕರ್ಮಕಾಂಡ'ದ ಬಗ್ಗೆ ೨೪ ಆರೋಪಗಳ ಪಟ್ಟಿಯನ್ನು ಭಿನ್ನಮತೀಯ ಶಾಸಕರು ಪ್ರಧಾನಿ ಶಾಸ್ತ್ರಿ ಹಾಗೂ ಗುಲ್ಜಾರಿಲಾಲ್ ನಂದ ಅವರಿಗೆ ತಲುಪಿಸಿದರು. ಸದನದ ಒಳಗೆ ಹಾಗೂ ಹೊರಗೆ ಶರಾವತಿ ವಿಚಾರವನ್ನು ಭಿನ್ನಮತೀಯರು ಪ್ರಸ್ತಾಪಿಸತೊಡಗಿದರು. ೧೯೬೭ರಲ್ಲಿ ದಾವಣಗೆರೆಯಲ್ಲಿ ಪ್ರದೇಶ ಕಾಂಗ್ರೆಸ್ ಸಮಿತಿಗೆ ನಡೆದ ಚುನಾವಣೆ ಅಕ್ರಮದಿಂದ ಕೂಡಿತ್ತೆಂದು ಎಚ್. ಕೆ. ವೀರಣ್ಣಗೌಡ ಹೇಳತೊಡಗಿದರು. ಎರಡು ಸಾರಿ ನಿಜಲಿಂಗಪ್ಪ ಅವರ ಮೇಲೆ ಅವಿಶ್ವಾಸ ನಿರ್ಣಯ ತರಲಾಯಿತು. ಭಿನ್ನಮತೀಯರ ಚಟುವಟಿಕೆ ನಿಯಂತ್ರಿಸಲು ನಿಜಲಿಂಗಪ್ಪ 'ಐದು ಸಾರಿ' ಸಚಿವ ಸಂಪುಟ ಪುನರ್ ರಚಿಸಿದರು. ಮಹಾರಾಷ್ಟ್ರ ಕರ್ನಾಟಕ ಗಡಿ ವಿವಾದದ ಬಗ್ಗೆ ಅಧ್ಯಯನ ಮಾಡಲು ಕೇಂದ್ರ ಸರ್ಕಾರ ಕರ್ನಾಟಕದ ಕೋರಿಕೆಯ ವಿರುದ್ಧವಾಗಿ 'ಮಹಾಜನ ಆಯೋಗ' ರಚಿಸಿತು. ಕೊನೆಗೆ ಸಾಹುಕಾರ್ ಚನ್ನಯ್ಯ, ಕೆಲವು ಭಿನ್ನಮತೀಯರು ೨೮.೭.೬೫ರಂದು ಕಾಂಗ್ರೆಸ್ ಪಕ್ಷ ತ್ಯಜಿಸಿ 'ಜನತಾ ಪಕ್ಷ' ರಚಿಸಿಕೊಂಡರು. ಹೊಸದುರ್ಗ ಚುನಾವಣೆಯಲ್ಲಿ ಸೋತ ನಂತರ ನಿಜಲಿಂಗಪ್ಪ ಮೈಸೂರು ಮುಖ್ಯಮಂತ್ರಿಗಳೇನೋ ಆದರು. ಆದರೆ ಅವರು ನೆಮ್ಮದಿಯಾಗಿ ಒಂದು ದಿನ ಆಳ್ವಿಕೆ ಮಾಡಲು ಭಿನ್ನಮತೀಯರು ಬಿಡಲಿಲ್ಲ. ನೆಹರೂ ನಂತರ ನಿಜಲಿಂಗಪ್ಪ ಅವರು ರಾಷ್ಟ್ರ ರಾಜಕಾರಣಕ್ಕೆ ಹೆಚ್ಚಿನ ಒಲವು ತೋರಿಸತೊಡಗಿದರು. ಅವರ ಶಿಷ್ಯಂದಿರು ಮೈಸೂರು ರಾಜ್ಯದ ವ್ಯವಹಾರ ನೋಡಿಕೊಳ್ಳತೊಡಗಿದರು. ಜಾತೀಯತೆ ಹಾಗೂ ಶರಾವತಿಯ ಕರ್ಮಕಾಂಡವನ್ನು ವಿರೋಧಪಕ್ಷದವರಿಗಿಂತ ಕಾಂಗ್ರೆಸ್‌ನ ಭಿನ್ನಮತೀಯರೆ ಹೆಚ್ಚಾಗಿ ಬಳಸತೊಡಗಿದರು. ಇದರಿಂದ ರಾಷ್ಟ್ರಮಟ್ಟದಲ್ಲಿ ನಿಜಲಿಂಗಪ್ಪ ವ್ಯಕ್ತಿತ್ವಕ್ಕೆ ಭಾರಿ ಧಕ್ಕೆಯಾಯಿತು. ಕಾಂಗ್ರೆಸ್ ಪಕ್ಷವಂತೂ ತುಂಬಾ ಶಿಥಿಲವಾಗಿತ್ತು. ರಾಜ್ಯದ ಬೇಡಿಕೆಗಳ ಬಗ್ಗೆ ಕೇಂದ್ರ ಸಕಾರಾತ್ಮಕವಾಗಿಯೇನೂ ಇರಲಿಲ್ಲ. ರಾಜ್ಯದಲ್ಲಿ ನಿಜಲಿಂಗಪ್ಪ ಅವರಿಗೆ 'ಸಮಸ್ಯೆ'ಗಳಿರಬೇಕೆಂಬ ಬಯಕೆ ಹೈಕಮಾಂಡ್‌ಗೆ ಗುಪ್ತವಾಗಿದ್ದು ಆಶ್ಚರ್ಯದ ವಿಚಾರವೇನೂ ಆಗಿರಲಿಲ್ಲ. ನಿಜಲಿಂಗಪ್ಪ ಅವರ ಪ್ರಗತಿ ಕಾರ್ಯಗಳು ಈ ಕಾಲದಲ್ಲಿ ಗಣನೆಗೆ ಬರಲಿಲ್ಲ. ಅವರ ಔದಾರ್ಯ ಹಾಗೂ ದೂರದೃಷ್ಟಿಯನ್ನು ಸಹ ಯಾರೂ ಗುರುತಿಸಲಿಲ್ಲ. ಏಕೀಕರಣದ ಪೂರ್ವದಲ್ಲಿ ರಾಜ್ಯದ ಉದ್ದಗಲಕ್ಕೂ ವ್ಯಾಪಕ ಬೆಂಬಲ ಹೊಂದಿದ್ದ ನಿಜಲಿಂಗಪ್ಪ ಅವರು ೧೯೬೭ರ ಹೊತ್ತಿಗೆ ತಮ್ಮೆಲ್ಲಾ ರಾಜಕೀಯ ಶಕ್ತಿಯನ್ನು ಕಳೆದುಕೊಂಡು ನಿಸ್ತೇಜಿತರಾಗಿದ್ದರು. ಅವರ ಹತ್ತಿರವಿದ್ದ ಹೊಗಳುಭಟ್ಟರಿಂದಾಗಿ ಅವರಿಗೆ ವಾಸ್ತವಿಕ ಸ್ಥಿತಿ ತಿಳಿದೇ ಇರಲಿಲ್ಲ. ಅಷ್ಟು ಹೊತ್ತಿಗೆ ೧೯೬೭ರ ಸಾರ್ವತ್ರಿಕ ಚುನಾವಣೆ ತಪ್ಪಿಕೊಂಡು ಬಂದಿತು. ಈ ಚುನಾವಣೆ ಕರ್ನಾಟಕಕ್ಕೆ ಮಾತ್ರವಲ್ಲ ಭಾರತಕ್ಕೆ ಹೊಸ ತಿರುವು ಕೊಟ್ಟ ಮಹಾ ಚುನಾವಣೆಯಾಗಿದೆ.

೧೯೬೭ರ ಚುನಾವಣೆ ಹಿಂದಿನ ಅತ್ಯಂತ ಪ್ರಮುಖ ಘಟನೆಯೆಂದರೆ ೧೯೬೬ರ ಜನವರಿ ೨೬ರಂದು ಇಂದಿರಾಗಾಂಧಿ ಅವರು ಭಾರತದ ಪ್ರಧಾನಮಂತ್ರಿಯಾಗಿ ಆಯ್ಕೆಯಾದುದು. ಮೊರಾರ್ಜಿ, ಶ್ರೀಮತಿ ಇಂದಿರಾಗಾಂಧಿ ಅವರ ನಡುವೆ ಪ್ರಧಾನಿ ಹುದ್ದೆಗೆ ಸ್ಪರ್ಧೆ ನಡೆದಾಗ ನಿಜಲಿಂಗಪ್ಪ, ಕಾಮರಾಜ್ ಮುಂತಾದ ಹಿರಿಯ ನಾಯಕರು ಇಂದಿರಾಗಾಂಧಿ ಅವರನ್ನು ಬೆಂಬಲಿಸಿದರು. ಕೆಂಗಲ್ ಹನುಮಂತಯ್ಯನವರು ಮಾತ್ರ ಮೊರಾರ್ಜಿಗೆ ಬೆಂಬಲ ಕೊಟ್ಟಿದ್ದರು. ಸುಮಾರು ೨೮೭ ಭಾರಿ ಬಹುಮತದೊಂದಿಗೆ ಶ್ರೀಮತಿ ಗಾಂಧಿ ಆಯ್ಕೆಯಾಗಿದ್ದರು. ನಿಜಲಿಂಗಪ್ಪ ಅವರಿಗೂ ಮೊರಾರ್ಜಿ ಅವರಿಗೂ ಪ್ರಾರಂಭದಿಂದಲೂ ಉತ್ತಮ ಸಂಬಂಧವಿರಲಿಲ್ಲ. ಮೊರಾರ್ಜಿ ಅವರ ಜಿಗುಟು ಸ್ವಭಾವ ಹಾಗೂ ಅವರ ಮುಕ್ತ ಆರ್ಥಿಕ ನೀತಿಯ ಬಗ್ಗೆ ನಿಜಲಿಂಗಪ್ಪ ಅವರಲ್ಲಿ ಸದಭಿಪ್ರಾಯವಿರಲಿಲ್ಲ. ಮೈಸೂರು ರಾಜ್ಯದಲ್ಲಿ ತಮ್ಮ ವಿರುದ್ಧ ನಡೆದ ಭಿನ್ನಮತೀಯ ಚಟುವಟಿಕೆಗೆ ಮೊರಾರ್ಜಿ ಅವರ ಆಶೀರ್ವಾದವಿತ್ತೆಂಬುದು ನಿಜಲಿಂಗಪ್ಪ ಅವರ ಪ್ರಬಲ ನಂಬಿಕೆಯಾಗಿತ್ತು. ಬಿ.ಡಿ. ಜತ್ತಿ ಹಾಗೂ ಕೆಂಗಲ್ ಹನುಮಂತಯ್ಯ ಅವರು ಮೊದಲಿನಿಂದಲೂ ಮೊರಾರ್ಜಿ ಅವರಿಗೆ ಆಪ್ತರಾಗಿದ್ದರು.

ಶ್ರೀಮತಿ ಗಾಂಧಿ ಅವರ ಬದಲು ಮೊರಾರ್ಜಿ ಅವರು ಪ್ರಧಾನಿಯಾಗಿದ್ದರೆ ಭಾರತ ರಾಜಕೀಯ ಇತಿಹಾಸವೇ ಬೇರೆಯಾಗಿರುತ್ತಿತ್ತು. ಕಾಂಗ್ರೆಸ್ ಸಂಸ್ಥೆ ವ್ಯಕ್ತಿ ಪ್ರತಿಷ್ಠೆಗಾಗಿ ಒಡೆಯುತ್ತಿರಲಿಲ್ಲ, ಬೇರೆಯಾಗುತ್ತಿತ್ತೆಂದು ಅನೇಕ ಚಿಂತಕರು ಅಭಿಪ್ರಾಯ ಪಟ್ಟಿದ್ದಾರೆ. ಸ್ವತಃ ನಿಜಲಿಂಗಪ್ಪ ಅವರು ಕಾಂಗ್ರೆಸ್ ಪಕ್ಷ ಬಿಡುವ ಸಂಭವ ಬರುತ್ತಿರಲಿಲ್ಲ. ಶನಿಯಂತೆ ನೆಹರು-ಗಾಂಧಿ ಕುಟುಂಬ ಭಾರತದ ರಾಜಕಾರಣವನ್ನು ಕಾಡುತ್ತಿರಲಿಲ್ಲ.

೧೯೬೭ರ ಚುನಾವಣೆಯ ಹೊತ್ತಿಗೆ ರಾಷ್ಟ್ರ ಹಾಗೂ ರಾಜ್ಯ ರಾಜಕಾರಣದಲ್ಲಿ ಕಾಂಗ್ರೆಸ್‌ಗೆ ಸಾಕಷ್ಟು ಪ್ರತಿವಿರೋಧವಿತ್ತು. ಎಚ್. ಕೆ. ವೀರಣ್ಣಗೌಡ ಅವರು ಏಕೀಕರಣದಿಂದಾಗಿ ಹಳೆಯ ಮೈಸೂರು ಪ್ರಾಂತ್ಯದವರಿಗೆ ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರದಲ್ಲಿ ಬಹಳ ಅನ್ಯಾಯವಾಗಿದೆಯೆಂದು ೪.೧.೬೭ರಂದು ಹೇಳಿಕೆ ನೀಡಿದರು. ಬೇರೆ ಮಾತಿನಲ್ಲಿ ಹೇಳುವುದಾದರೆ ಏಕೀಕರಣದ ನಂತರ ಒಕ್ಕಲಿಗರನ್ನು ವ್ಯವಸ್ಥಿತವಾಗಿ ಮೂಲೆಗುಂಪು ಮಾಡಲಾಯಿತೆಂಬುದು ಅವರ ಅಭಿಪ್ರಾಯವಾಗಿತ್ತು. ಎಚ್. ಕೆ. ವೀರಣ್ಣಗೌಡ, ಟಿ.ಪಿ. ಬೋರಯ್ಯ, ಜಿ. ದುಗ್ಗಪ್ಪ, ಎನ್. ಹುಚ್ಚಮಾಸ್ತಿಗೌಡ, ಎಂ. ಮಂಜೇಗೌಡ, ಎಚ್. ಎಂ. ಚನ್ನಬಸಪ್ಪ ಮೊದಲಾದವರನ್ನು ಕಾಂಗ್ರೆಸ್‌ನಿಂದ ಉಚ್ಚಾಟಿಸಲಾಯಿತು. ಮೈಸೂರಿನಲ್ಲಿ ೬೪ ಹಾಲಿ ಸದಸ್ಯರಿಗೆ ಟಿಕೆಟ್ಟು ನಿರಾಕರಿಸಲಾಗಿತ್ತು. ಈ ಚುನಾವಣೆಯಲ್ಲಿ ೯೦ ಲಿಂಗಾಯಿತರಿಗೆ, ೬೩ ಜನ ಒಕ್ಕಲಿಗರಿಗೆ ಕಾಂಗ್ರೆಸ್ ಟಿಕೇಟು ನೀಡಲಾಗಿತ್ತು. ೭೨ ಜನ ಹೊಸಬರಿಗೆ ಟಿಕೇಟು ನೀಡಲಾಗಿತ್ತು. ನಿಜಲಿಂಗಪ್ಪ ಅವರ ವಿರೋಧಿ ಶಾಸಕರಿಗೆ ಟಿಕೆಟ್ಟು ನಿರಾಕರಿಸಲಾಗಿದೆಯೆಂದು ಭಿನ್ನಮತೀಯರು ಹೇಳತೊಡಗಿದರು. ಕಾಂಗ್ರೆಸ್ ೨೧೬ ಸ್ಥಾನಗಳಿಗೆ ಸ್ಪರ್ಧಿಸಿತು. ಅದು ಕೇವಲ ೧೨೬ ಸ್ಥಾನಗಳನ್ನು ಪಡೆಯುವಲ್ಲಿ ಮಾತ್ರ ಯಶಸ್ವಿಯಾಯಿತು. ಹಾಸನ, ಚಿಕ್ಕಮಗಳೂರು, ಶಿವಮೊಗ್ಗ, ದಕ್ಷಿಣ ಕನ್ನಡ, ಉತ್ತರ ಕನ್ನಡದಲ್ಲಿ ಅದರ ಸಾಧನೆ ತೃಪ್ತಿಕರವಾಗಿರಲಿಲ್ಲ. ಶಿಗ್ಗಾಂವಿಯಿಂದ ನಿಜಲಿಂಗಪ್ಪ ಅವರು ಅವಿರೋಧವಾಗಿ ಆಯ್ಕೆಯಾಗಿದ್ದರು. ಲೋಕಸಭೆಗೆ ಕರ್ನಾಟಕದಿಂದ ಸ್ವತಂತ್ರ ಪಕ್ಷ ಹಾಗೂ ಸಮಾಜವಾದಿ ಪಕ್ಷಗಳು ಒಟ್ಟು ೯ ಅಭ್ಯರ್ಥಿಗಳನ್ನು ಕಳುಹಿಸಿದ್ದವು. ಹದಿನೈದು ಜನ ಸದಸ್ಯರು ಮಾತ್ರ ಕಾಂಗ್ರೆಸ್‌ನಿಂದ ಲೋಕಸಭೆಗೆ ಆಯ್ಕೆಯಾಗಿದ್ದರು. ಇದೇ ಫಲಿತಾಂಶ ರಾಷ್ಟ್ರದೆಲ್ಲೆಡೆ ಪುನರಾವರ್ತನೆಯಾಗಿತ್ತು. ಜನ ರಾಜಕೀಯ ಕ್ಷೇತ್ರದಲ್ಲಿ ತೀವ್ರ ಬದಲಾವಣೆ ಬಯಸುತ್ತಿದ್ದರು. ಅದರಲ್ಲೂ ಮಧ್ಯಮ ಹಾಗೂ ಕೆಳವರ್ಗದ ಜನ ಕಾಂಗ್ರೆಸ್ 'ಹಾವೂ ಸಾಯಬಾರದು ಕೋಲು ಮುರಿಯಬಾರದು' ನೀತಿಯ ಬಗ್ಗೆ ಜುಗುಪ್ಸೆ ಹೊಂದಿದ್ದರು. ಕರ್ನಾಟಕದಲ್ಲಂತೂ ಕಾಂಗ್ರೆಸ್ ಪಕ್ಷ ಭಿನ್ನಾಭಿಪ್ರಾಯಗಳ ನೆಲೆಯಾಗಿತ್ತು. ಸಿಡಿಮದ್ದಿನ ಗುಡಾಣವಾಗಿತ್ತು. ಡಿ. ದೇವರಾಜ ಅರಸು ಅವರಿಗೆ ಈ ಚುನಾವಣೆಯಲ್ಲಿ ಟಿಕೇಟು ತಪ್ಪಿಸುವ ಕುತಂತ್ರ ನಡೆದಿತ್ತೆಂದೂ ಹೇಳಲಾಗಿದೆ. ತಮಿಳುನಾಡು ೧೯೬೭ರ ಚುನಾವಣೆಯಲ್ಲಿ ಡಿಎಂಕೆ ಪಕ್ಷಕ್ಕೆ ಒಲಿಯಿತು. ವಿದ್ಯಾರ್ಥಿ ನಾಯಕನೊಬ್ಬ ಕಾಂಗ್ರೆಸ್ ಅಧ್ಯಕ್ಷರಾದ ಕಾಮರಾಜ್‌ರನ್ನು ಸೋಲಿಸಿದ್ದ. ಭಾರತದ ರಾಜಕಾರಣ ಭಾರಿ ಬದಲಾವಣೆಗೆ ಸಜ್ಜು ಹೊಂದಿದೆಯೆಂಬುದರ ಸೂಚನೆಯಾಗಿತ್ತು.

## ಕಾಂಗ್ರೆಸ್‌ಗೆ ಪುನಶ್ಚೇತನ

ಇಂದಿರಾಗಾಂಧಿ ಅವರ ಅಪೇಕ್ಷೆಯಂತೆ ನಿಜಲಿಂಗಪ್ಪ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾದರು. ಮೂಲತಃ ನಿಜಲಿಂಗಪ್ಪ ಅವರು ಕಾಮರಾಜ್, ಅತುಲ್ಯ ಘೋಷ್ ಹಾಗೂ ಎಸ್. ಕೆ. ಪಾಟೀಲ ಮೊದಲಾದ ಅವರ ಮಿತ್ರರು ಎತ್ತಿದ ಆಡಿಸಿದ ಕೈಗೂಸು ಆಗಿದ್ದರು. ಮೂಲತಃ ಹೊಂದಾಣಿಕೆಯುಳ್ಳ ನಿಜಲಿಂಗಪ್ಪ ಅವರನ್ನು ಬಯಸಿಯೇ ಇಂದಿರಾಗಾಂಧಿ ಕಾಂಗ್ರೆಸ್ ಅಧ್ಯಕ್ಷರನ್ನಾಗಿಸಿದ್ದರು. ೧೯೬೯ರ ಮೇನಲ್ಲಿ ರಾಷ್ಟ್ರಪತಿ ಜಾಕೀರ್ ಹುಸೇನ್ ನಿಧನರಾದರು. ಜುಲೈ ೧೦.೧೯೬೯ರಲ್ಲಿ ಬೆಂಗಳೂರಿನಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನದಲ್ಲಿ ಪ್ರಧಾನಿ ಶ್ರೀಮತಿ ಗಾಂಧಿ ಅವರ ಅಭಿಪ್ರಾಯ ಕಡೆಗಣಿಸಿ, ಕಾಂಗ್ರೆಸ್ ಅಧ್ಯಕ್ಷರಾದ ನಿಜಲಿಂಗಪ್ಪನವರು ರಾಷ್ಟ್ರಪತಿ

ಸ್ಥಾನಕ್ಕೆ ನೀಲಂ ಸಂಜೀವರೆಡ್ಡಿ ಅವರನ್ನು ಪಕ್ಷದ ಅಭ್ಯರ್ಥಿಯಾಗಿ ಘೋಷಿಸಿದರು. ಮೂಲತಃ ಹಟವಾದಿ ಹಾಗೂ ಶೀಘ್ರ ತೀರ್ಮಾನದ ಪ್ರಧಾನಿ ಶ್ರೀಮತಿ ಗಾಂಧಿ ಸ್ವತಂತ್ರ ಅಭ್ಯರ್ಥಿ ವಿ.ವಿ. ಗಿರಿಯನ್ನು ರಾಷ್ಟ್ರಪತಿಗಳನ್ನಾಗಿಸಿದರು. ಪಿಎಸ್‌ಪಿ, ಕಮ್ಯುನಿಸ್ಟ್ ಪಕ್ಷಗಳು ಇವರಿಗೆ ನೆರವು ನೀಡಿದರು. ಅನಂತರ ಶ್ರೀಮತಿ ಗಾಂಧಿ ೧೯೭೧ರಲ್ಲಿ ಲೋಕಸಭೆಗೆ ಮಧ್ಯಂತರ ಚುನಾವಣೆ ನಡೆಸಲು ನಿರ್ಧರಿಸಿದರು. ಆಕೆಯ ಕ್ಷಿಪ್ರ ಕಾರ್ಯಾಚರಣೆ ನಿರೀಕ್ಷಿಸದಿದ್ದ ನಿಜಲಿಂಗಪ್ಪ ನೇತೃತ್ವದ 'ಸಂಸ್ಥಾಕಾಂಗ್ರೆಸ್' ರಾಜ್ಯದಲ್ಲಿ ಭಾರಿ ಹಿನ್ನೆಡೆ ಅನುಭವಿಸಿತು. ರಾಜ್ಯದ ಎಲ್ಲಾ ೨೭ ಲೋಕಸಭಾ ಸ್ಥಾನಗಳು ಶ್ರೀಮತಿ ಗಾಂಧಿ ಅವರ ಆಡಳಿತ ಕಾಂಗ್ರೆಸ್‌ನ ಪಾಲಾದವು. ಈ ಲೋಕಸಭಾ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ ಶೇ. ೭೧ರಷ್ಟು ಮತ ಗಳಿಸಿದ್ದು, ತಮ್ಮ ಸ್ವಂತ ರಾಜ್ಯದಲ್ಲೇ ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷರಾದ ನಿಜಲಿಂಗಪ್ಪ ಅವರು ಅತಂತ್ರರಾದರು. ೧೯೬೭ರಿಂದಲೂ ನಿಜಲಿಂಗಪ್ಪ ಅವರ ವಿರೋಧಿಗಳಾಗಿದ್ದವರು, ಈ ಚುನಾವಣೆಯನ್ನು ಸಮರ್ಥವಾಗಿ ಬಳಸಿಕೊಂಡರು. ಶ್ರೀಮತಿ ಗಾಂಧಿ ಅವರ ಆಕರ್ಷಕ, ಬಡವರ ಪರವಾದ ಘೋಷಣೆ ಹಾಗೂ ದೇವರಾಜ ಅರಸು ಅವರ ಹೊಸ ರಾಜಕೀಯ ತಂತ್ರ ಆಡಳಿತ ಕಾಂಗ್ರೆಸ್‌ಗೆ ಅದ್ಭುತ ಜಯ ತಂದುಕೊಟ್ಟಿತು. ಸುಮಾರು ನಾಲ್ಕು ದಶಕಗಳಿಗೂ ಹೆಚ್ಚು ಕಾಲ ರಾಜ್ಯ ರಾಜಕಾರಣದ ಕೇಂದ್ರ ಬಿಂದುವಾಗಿದ್ದ ನಿಜಲಿಂಗಪ್ಪ ಹೀಗೆ ಅತಂತ್ರವಾದದ್ದಕ್ಕೆ ಅನೇಕ ಕಾರಣಗಳಿವೆ. ಕಾಂಗ್ರೆಸ್ ಪಕ್ಷದ ಧ್ಯೇಯೋದ್ದೇಶಗಳನ್ನು ನಿಜಲಿಂಗಪ್ಪ ಅವರು ಹೇಳುತ್ತಿದ್ದರೆ ಹೊರತು ತಮ್ಮ ಸ್ವಂತ ಸಾಧನೆಗಳನ್ನಲ್ಲ. ಮೇಲಾಗಿ ನಿಜಲಿಂಗಪ್ಪ ತಮ್ಮ ಕಾಲದ ಎಲ್ಲ ವರ್ಗದ ಜನರ ಭಾವನೆಗಳನ್ನು ಅರ್ಥಮಾಡಿಕೊಳ್ಳುವಲ್ಲಿ ವಿಫಲರಾಗಿದ್ದರು. ಆಡಳಿತ ಕಾಂಗ್ರೆಸ್‌ನ ಈ ವಿಜಯ ೧೯೭೨ರ ವಿಧಾನಸಭಾ ಚುನಾವಣೆಯಲ್ಲೂ ಏಕಪ್ರಕಾರ ಮುಂದುವರೆಯಿತು. ಆಡಳಿತ ಕಾಂಗ್ರೆಸ್ ೨೧೨ ಸ್ಥಾನಗಳಿಗೆ ಸ್ಪರ್ಧಿಸಿತು. ಇದರಲ್ಲಿ ೧೬೩ ಹೊಸ ಮುಖಗಳಿಗೆ ಅವಕಾಶ ಕೊಟ್ಟಿತು. ಲಿಂಗಾಯಿತ ಹಾಗೂ ಒಕ್ಕಲಿಗರಿಗೆ ಸಮಾನವಾಗಿ ೬೦ ಸ್ಥಾನಗಳನ್ನು ಮಾತ್ರ ಕೊಡಲಾಗಿತ್ತು. ಹಿಂದುಳಿದ ಹಾಗೂ ಅಲ್ಪಸಂಖ್ಯಾತರಿಗೆ ೧೦೦ ಸ್ಥಾನಗಳನ್ನು ಕೊಡಲಾಗಿತ್ತು. ಈ ಚುನಾವಣೆಯ ಮೂಲಕ ಇಂದಿರಾಗಾಂಧಿ ಹಾಗೂ ದೇವರಾಜ ಅರಸು ಅವರು ಆಡಳಿತ ಕಾಂಗ್ರೆಸ್ ಪಕ್ಷಕ್ಕೆ ಭದ್ರಕೋಟೆಯನ್ನು ಒದಗಿಸಿಕೊಟ್ಟರು. ೧೬೫ ಸ್ಥಾನಗಳನ್ನು ಗೆಲ್ಲುವುದರ ಮೂಲಕ ಆಡಳಿತ ಕಾಂಗ್ರೆಸ್ ರಾಜ್ಯದಲ್ಲಿ ಹೊಸ ವಿಕ್ರಮ ಮೂಡಿಸಿತು. ಅದರ ಚುನಾವಣಾ ಪ್ರಣಾಳಿಕೆ ಕಂಡಾಗ 'ಸಾಮಾಜಿಕ ನ್ಯಾಯ'ದ ಹೊಸ ಕಲ್ಪನೆ ಬಿಟ್ಟರೆ, ಉಳಿದೆಲ್ಲವು ಘೋಷಣಾ ವಾಕ್ಯಗಳಾಗಿವೆ. ವಿಜಯನಗರ ಉಕ್ಕಿನ ಕಾರ್ಖಾನೆಗೆ ಪ್ರಧಾನಿಯಿಂದ ಶಂಕುಸ್ಥಾಪನೆ ಮಾಡಿಸಲಾಗಿತ್ತು. ಆಡಳಿತ ಕಾಂಗ್ರೆಸ್ ರೂಪಿಸಿದ ಚುನಾವಣಾ ಪ್ರಚಾರದ ತಂತ್ರ ರಾಜ್ಯದ ರಾಜಕಾರಣದಲ್ಲಿ ಹೊಸ ಶಕೆ ಪ್ರಾರಂಭಿಸಿತು. ಜನರನ್ನು ಸಾರ್ವಜನಿಕ ಸಭೆಗಳಿಗೆ ಕರೆತರುವುದು, ಮುಗಿಲೆತ್ತರ ಕಟೌಟು, ಎಲ್ಲೆಲ್ಲೂ ಬ್ಯಾನರ್, ನಾಲ್ಕು ದಿಕ್ಕುಗಳಿಂದಲೂ ಮೊಳಗಿದ ಮೈಕಾಸುರ-ಇವು ಎದುರಾಳಿಗಳ ಎದೆಯಲ್ಲಿ ನಡುಕ ಹುಟ್ಟಿಸಬೇಕು. ಆಡಳಿತ ಕಾಂಗ್ರೆಸ್ ಅಭ್ಯರ್ಥಿಗಳದೇ ಗೆಲುವು ಎಂಬ ಭ್ರಮೆ ಹುಟ್ಟಿಸುವ ಹೊಸ ಚುನಾವಣಾ ತಂತ್ರ ರಾಜ್ಯದಲ್ಲಿ ಆಗ ಜಾರಿಗೆ ಬಂತು.

ಇದಕ್ಕೆ ವಿರುದ್ಧವಾಗಿ 'ಸಂಸ್ಥಾಕಾಂಗ್ರೆಸ್' ತನ್ನ ಸಾಧನೆಯನ್ನು ಕುರಿತು ಮಾತನಾಡತೊಡಗಿತು. ಮೈಸೂರಿನ ಮುಖ್ಯಮಂತ್ರಿಯಾಗಿದ್ದ ವೀರೇಂದ್ರ ಪಾಟೀಲ ಅವರಿಗೆ ಪ್ರಜ್ಞಾವಂತ ಜನರ ಮೆಚ್ಚುಗೆಯಿತ್ತು.. ೧೯೭೧ರಲ್ಲಿ ಮೈಸೂರು ರಾಜ್ಯದಲ್ಲಿ ಪ್ರಜಾಸತ್ತಾ ಮೈತ್ರಿಕೂಟ ಅಸ್ತಿತ್ವಕ್ಕೆ ಬಂತು. ಜನಸಂಘದ ಜೊತೆ ಕೈಗೂಡಿಸಿದ ಕಾರಣ ಸಂಸ್ಥಾ ಕಾಂಗ್ರೆಸ್‌ಗೆ ಒಂದು ವರ್ಗದ ಬೆಂಬಲ ದೊರೆಯಲು ಸಾಧ್ಯವಿರಲಿಲ್ಲ. ಪ್ರಧಾನಿ ಇಂದಿರಾಗಾಂಧಿ ಅವರ ಸರ್ವಾಧಿಕಾರದ ವಿರುದ್ಧ ಎಷ್ಟೇ ಹೇಳಿದರೂ ಸಾಮಾನ್ಯ ಜನರಿಗೆ ಇದು ಮನವರಿಕೆ ಆಗಿರಲಿಲ್ಲ. ಲೋಕಸಭೆಯ ಮಧ್ಯಂತರ ಚುನಾವಣೆಯಲ್ಲಿ ಸಂಸ್ಥಾ ಕಾಂಗ್ರೆಸ್ ಕೇವಲ ಶೇ. ೧೬.೪೦ರಷ್ಟು ಮತ ಪಡೆಯಿತು.

ವಿಧಾನಸಭಾ ಚುನಾವಣೆಯಲ್ಲೂ ಸಂಸ್ಥಾ ಕಾಂಗ್ರೆಸ್ ೧೭೬ ಅಭ್ಯರ್ಥಿಗಳನ್ನು ಕಣಕ್ಕಿಳಿಸಿತು. ಅದರಲ್ಲಿ ೨೪ ಅಭ್ಯರ್ಥಿಗಳು ಜಯಗಳಿಸಿದ್ದರು. ಅದು ಶೇ. ೨೬. ೨೨ರಷ್ಟು ಮತ ಪಡೆಯಲು ಸಾಧ್ಯವಾಗಿತ್ತು. ಈ ಚುನಾವಣೆಯಲ್ಲಿ ಸಂಸ್ಥಾ ಕಾಂಗ್ರೆಸ್‌ನ ನಾಯಕರಾದ ವೀರೇಂದ್ರ ಪಾಟೀಲ್ ಹಾಗೂ ರಾಮಕೃಷ್ಣ ಹೆಗಡೆ ಸ್ಪರ್ಧಿಸಿರಲಿಲ್ಲ. ೧೯೭೨ರ ವಿಧಾನಸಭಾ ಚುನಾವಣೆ ಸಂಸ್ಥಾ ಕಾಂಗ್ರೆಸ್ ಸಿದ್ಧ ಪಡಿಸಿದ್ದ ಚುನಾವಣಾ ಪ್ರಣಾಳಿಕೆ ಅತ್ಯಂತ ಮಹತ್ವದ್ದು. ೧೮ ವರ್ಷಕ್ಕೆ ಮತದಾನ, ವೃದ್ಧಾಪ್ಯವೇತನ, ವಿಧವಾವೇತನ, ಡೊನೇಷನ್ ಇಲ್ಲದೆ ವೃತ್ತಿ ಶಿಕ್ಷಣಕ್ಕೆ ಅವಕಾಶ, ಎಲ್ಲಾ ನೀರಾವರಿ ಯೋಜನೆಗಳ ಪೂರೈಕೆಗೆ ಕಾಲಮಿತಿ ಕಾರ್ಯಕ್ರಮ, ನೆಲ ಜಲದ ರಕ್ಷಣೆ, ಅಧಿಕಾರ ವಿಕೇಂದ್ರೀಕರಣ ಇತ್ಯಾದಿ ವಾಸ್ತವವಾದಿ ಉತ್ತಮಾಂಶಗಳು ಸಂಸ್ಥಾ ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆಯಲ್ಲಿ ಪ್ರತ್ಯಕ್ಷವಾಗಿತ್ತು. ಸಂಸ್ಥಾ ಕಾಂಗ್ರೆಸ್ ಕಾಲಾನಂತರ ಜನತಾ ಪಕ್ಷದಲ್ಲಿ ವಿಲೀನವಾದರೂ ಅದರ ಅಭಿಮಾನಿಗಳು ಅದರ ಹಿಂದೆಯೇ ಹೋದರು. ನಿಜಲಿಂಗಪ್ಪ ಅವರನ್ನು ಪ್ರೀತಿಸುತ್ತಿದ್ದ ಬಹುದೊಡ್ಡ ಸಮುದಾಯವೊಂದು ಸಂಸ್ಥಾ ಕಾಂಗ್ರೆಸ್‌ನ ರಕ್ಷಕವಾಗಿತ್ತು.. ಅವರ ಅಖಂಡ ಬೆಂಬಲ ಸಂಸ್ಥಾ ಕಾಂಗ್ರೆಸ್ ಮೂಲಕ ಜನತಾ ಪಕ್ಷಕ್ಕೆ ಹರಿದುಬಂತು.

## ಕಾಂಗ್ರೆಸ್ ಭದ್ರ ನೆಲೆ

೧೯೭೭ರಲ್ಲಿ ಆಡಳಿತ ಕಾಂಗ್ರೆಸ್ ಕೇಂದ್ರದಲ್ಲಿ ಅಧಿಕಾರ ಕಳೆದುಕೊಂಡ ಮೇಲೆ ಉತ್ತರ ಭಾರತ ಹಾಗೂ ಇತರ ಕಡೆ ಶ್ರೀಮತಿ ಗಾಂಧಿ ಪ್ರಭಾವ ಕಡಿಮೆಯಾಯಿತೆಂದು ಕೆಲವರು ಭಾವಿಸಿದ್ದರು. ಕರ್ನಾಟಕದ ಮುಖ್ಯಮಂತ್ರಿ ಡಿ. ದೇವರಾಜ ಅರಸು ಶ್ರೀಮತಿ ಗಾಂಧಿ ಅವರ ಕಾಂಗ್ರೆಸ್ ೧೯೭೭ರ ಹೊತ್ತಿಗೆ ವಿಭಜನೆಯಾಗತೊಡಗಿತು. ಅವರು ೧೯೭೮ ಜನವರಿ ೩ ರಂದು ದೆಹಲಿಯಲ್ಲಿ ವಿಶೇಷ ಎ.ಐ.ಸಿ..ಸಿ.. ಅಧಿವೇಶನ ನಡೆಸಿ ಪ್ರತ್ಯೇಕ ಪಕ್ಷ ಸ್ಥಾಪಿಸಿದ್ದರು. ಶ್ರೀಮತಿ ಗಾಂಧಿ ಅವರೇ ತಮ್ಮ ಹೆಸರಿನ ಜೊತೆ ತಮ್ಮನ್ನು ಗುರುತಿಸಿಕೊಂಡರು. ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಜನತಾಪಕ್ಷ ಷಾ ಹಾಗೂ ಗ್ರೋವರ್ ಆಯೋಗದ ಮೂಲಕ ತಮಗೆ ಕಿರುಕುಳ ಕೊಡುತ್ತಿತ್ತೆಂದು ಅವರು ಹೇಳುತ್ತಿದ್ದರು. ೧೯೭೮ರ ವಿಧಾನಸಭಾ ಚುನಾವಣಾ ಸಂದರ್ಭದಲ್ಲಿ ದೇವರಾಜ ಅರಸು ಅವರು ಮುಖ್ಯಮಂತ್ರಿಗಳಾಗಿರಲಿಲ್ಲ. ಕೇಂದ್ರದ ಜನತಾಪಕ್ಷ ಸರ್ಕಾರ ಅವರ ಸರ್ಕಾರವನ್ನು ವಜಾ ಮಾಡಿ ರಾಜ್ಯದಲ್ಲಿ ರಾಷ್ಟ್ರಪತಿ ಆಳ್ವಿಕೆ ತಂದಿತು. ದೇವರಾಜ ಅರಸು ಜೊತೆ ಇಂದಿರಾಗಾಂಧಿ ಅವರಿಗೂ ಅಧಿಕಾರವಿರಲಿಲ್ಲ. ಪ್ರಾಯಶಃ ಶ್ರೀಮತಿ ಗಾಂಧಿ ಅವರ ಆಕರ್ಷಕ ವ್ಯಕ್ತಿತ್ವ ಹಾಗೂ ದೇವರಾಜ ಅರಸರ ಜನೋಪಯೋಗಿ ಕಾರ್ಯಕ್ರಮಗಳು ವಿಧಾನಸಭಾ ಚುನಾವಣೆಯಲ್ಲಿ ಅವರಿಗೆ ಅದ್ಭುತ ವಿಜಯ ತಂದುಕೊಟ್ಟವು. ತಾನು ಸ್ಪರ್ಧಿಸಿದ್ದ ೨೧೪ ಸ್ಥಾನಗಳ ಪೈಕಿ ಕಾಂಗ್ರೆಸ್ ೧೫೦ ಸ್ಥಾನಗಳಲ್ಲಿ ಜಯಗಳಿಸಿತು. ಶೇ.. ೪೪.೫ರಷ್ಟು ಮತ ಪಡೆಯಿತು. ರಾಜ್ಯದ ಎರಡು ದೊಡ್ಡ ಸಮುದಾಯವನ್ನು ಬಿಟ್ಟು ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ದಲಿತರ ಮತದಿಂದಲೇ ಅಧಿಕಾರ ಸೂತ್ರ ಹಿಡಿದು ರಾಜ್ಯದ ರಾಜಕಾರಣಕ್ಕೆ ಹೊಸಪಾಠವೊಂದನ್ನು ಕಾಂಗ್ರೆ ಪಕ್ಷ ಎಲ್ಲರಿಗೂ ಬೋಧಿಸಿತು.

ಮುಂದೆ ಇಂದಿರಾಗಾಂಧಿಯವರು ಲೋಕಸಭಾ ಚುನಾವಣೆಗಳಲ್ಲಿ ಸೋತು ನಿರ್ವಿಣ್ಣರಾಗಿದ್ದಾಗ, ದೇವರಾಜ ಅರಸರು ಅವರನ್ನು ಕರ್ನಾಟಕಕ್ಕೆ ಕರೆತಂದು ನವೆಂಬರ್ ೧೯೭೮ರಲ್ಲಿ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಿ ಜಯಗಳಿಸುವಂತೆ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಇಂದಿರಾ ಕರ್ನಾಟಕದ ಚಿಕ್ಕಮಗಳಾದರು. ಇದು ಇಂದಿರಾಗಾಂಧಿಯವರ ಪುನರುತ್ಥಾನಕ್ಕೆ ಮೊದಲ ಮೆಟ್ಟಿಲಾಯಿತು ಎಂಬುದರಲ್ಲಿ ಸಂದೇಹವಿಲ್ಲ. ಸಂಜಯಗಾಂಧಿಯನ್ನು ವಿರೋಧಿಸಿದ ಕಾರಣಕ್ಕಾಗಿ ದೇವರಾಜ ಅರಸರಿಗೂ ಇಂದಿರಾ ಗಾಂಧಿಯವರಿಗೂ ಏಪ್ರಿಲ್ ೭೯ರಲ್ಲೇ ಭಿನ್ನಾಭಿಪ್ರಾಯ ಶುರುವಾಯಿತು. ೨೪ ಜೂನ್ ೭೯ರಂದು ಕಾಂಗ್ರೆಸ್ ಐ ಕಾರ್ಯಕಾರಿ ಸಮಿತಿ ದೇವರಾಜ ಅರಸರನ್ನು ಪಕ್ಷದಿಂದ ಉಚ್ಛಾಟಿಸಿತು. ಆದರೆ ದೇವರಾಜ ಅರಸರ ಹಿಂದೆ ಮಂತ್ರಿಗಳು ಶಾಸಕರು ಬಲವಾಗಿ ನಿಂತರು. ರಾಜ್ಯದಲ್ಲಿ ಅರಸು ಸರ್ಕಾರ ಮುಂದುವರಿಯಿತು. ಸೆಪ್ಟೆಂಬರ್ ೭೯ರಲ್ಲಿ ದೇವರಾಜ ಅರಸುರವರು ಅಖಿಲ ಭಾರತ ಕಾಂಗ್ರೆಸ್ (ಯು) ಅಥವಾ ಅರಸು ಕಾಂಗ್ರೆಸ್ ಅಧ್ಯಕ್ಷರಾದರು. ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ಜನತಾ ಸರ್ಕಾರದ ಪತನದಿಂದಾಗಿ ಜನವರಿ ೧೯೮೦ರಲ್ಲಿ ಲೋಕಸಭಾ ಚುನಾವಣೆಗಳು ನಡೆದವು. ದೇವರಾಜ ಅರಸರ ಕಾಂಗ್ರೆಸ್ ಇಂದಿರಾ ಕಾಂಗ್ರೆಸ್‌ಗೆ ಎದುರಾಗಿ ಸ್ಪರ್ಧಿಸಿ ಭಾರೀ ಪರಾಭವವನ್ನು ಅನುಭವಿಸಿತು. ನೈತಿಕ ಹೊಣೆಹೊತ್ತು ಅರಸು ಮುಖ್ಯಮಂತ್ರಿ ಸ್ಥಾನಕ್ಕೆ ಜನವರಿ ೭, ೧೯೮೦ರಂದು ರಾಜೀನಾಮೆ ನೀಡಿದರು. ತಕ್ಷಣವೇ ಅರಸರ ಬೆಂಬಲಕ್ಕೆ ನಿಂತಿದ್ದ ಶಾಸಕರು ಸಚಿವರು ಇಂದಿರಾ ಕಾಂಗ್ರೆಸ್‌ಗೆ ಸೇರಿದರು, ಗುಂಡೂರಾವ್ ಮುಖ್ಯಮಂತ್ರಿಯಾಗಿ ಅಧಿಕಾರಕ್ಕೆ ಬಂದರು.

ದೇವರಾಜ ಅರಸರು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಹಾಗೂ ಹಿಂದುಳಿದ ವರ್ಗದವರನ್ನು ನಂಬಿಕೊಂಡು ಕಟ್ಟಿದ್ದ ಕೋಟೆ ಕುಸಿದು ಬಿದ್ದಿತ್ತು. ದೇಶದ ಬೇರಾವ ರಾಜ್ಯಗಳೂ ಜಾರಿಗೆ ತರದಿದ್ದ ಭೂ ಸುಧಾರಣೆ, ಜೀತಪದ್ಧತಿ ನಿರ್ಮೂಲನೆ, ಜನತಾವಸತಿ ಯೋಜನೆ ಮುಂತಾದ ೨೦ ಅಂಶಗಳ ಕಾರ್ಯಕ್ರಮಗಳನ್ನು ನಿಜವಾದ ಅರ್ಥದಲ್ಲಿ ಜಾರಿಗೆ ತಂದಿದ್ದ ದೇವರಾಜ ಅರಸರನ್ನು ಜನತೆಯಾಗಲೀ, ಶಾಸಕರಾಗಲೀ ಬೆಂಗಲಿಸದೇ ಹೋದುದು ಒಂದು ವಿಪರ್ಯಾಸ. ವರ್ಣರಂಜಿತ ಅರಸು ಪರ್ವ ಅಂತ್ಯಗೊಂಡಿತ್ತು. ಜರ್ಝರಿತರಾದ ಅರಸು ಕಾಂಗ್ರೆಸ್ ಸಹವಾಸವನ್ನು ಬಿಟ್ಟು ತಮ್ಮ ನಿಷ್ಠಾವಂತ ಬೆಂಬಲಿಗರು, ಅಭಿಮಾನಿಗಳ ಜೊತೆ ಸೇರಿ ಕರ್ನಾಟಕ ಕ್ರಾಂತಿರಂಗವನ್ನು ಕಟ್ಟಿದರು. ಇದು ರಾಜ್ಯದಲ್ಲಿ ಕಾಂಗ್ರೆಸ್ ಪಕ್ಷದ ಅವನತಿಗೆ ನಾಂದಿ ಹಾಡಿತು. ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಇದೊಂದು ಮರೆಯಲಾಗದ ಅಧ್ಯಾಯ. ಜನಕಲ್ಯಾಣ ಕಾರ್ಯಕ್ರಮಗಳನ್ನು ನಿಷ್ಠೆಯಿಂದ ಯಶಸ್ವಿಯಾಗಿ ಜಾರಿಗೆ ತಂದರೂ ಅದು ಮತ ಗಳಿಸಿ ಕೊಡುತ್ತದೆ ಎಂಬುದು ಹುಸಿಯಾಗಿ ಪರಿಣಮಿಸಿತು. ಪಕ್ಷಾಂತರ ತನ್ನ ಪ್ರಚ್ಛನ್ನ ರೂಪವನ್ನು ತೋರಿಸಿತ್ತು.

ಸಂಜಯ ಗಾಂಧಿ ಅವರ ಕೃಪಾಶೀರ್ವಾದ ಹಾಗೂ ಜಾತಿ ಬೆಂಬಲದಿಂದ ಆರ್. ಗುಂಡೂರಾವ್ ಮುಖ್ಯಮಂತ್ರಿಗಳಾಗಿದ್ದನ್ನು ಕರ್ನಾಟಕ ಹಿಂದುಳಿದ ವರ್ಗದ ಜನ ಸಹಿಸಲಿಲ್ಲ. ಅಷ್ಟೇ ಅಲ್ಲ ಮುಖ್ಯಮಂತ್ರಿಯಾದ ಆರ್. ಗುಂಡೂರಾವ್ ವಾಸ್ತವಿಕ ಪರಿಸ್ಥಿತಿಯ ಅಧ್ಯಯನ ಮಾಡಿರಲಿಲ್ಲ. ಒಳ್ಳೆಯ ಆಡಳಿತ ಕೊಡುವ ಮನಸ್ಸು ಅವರಿಗಿದ್ದರೂ ಅವರ ಮಾತು ಹಾಗೂ ಕಾರ್ಯ ಅವರ ರಾಜಕೀಯ

ಪ್ರಬುದ್ಧತೆಯ ಅಭಾವವನ್ನು ಎತ್ತಿತೋರಿಸುತ್ತಿತ್ತು. ೧೯೭೨ರ ವಿಧಾನಸಭಾ ಚುನಾವಣಾ ಸಂದರ್ಭದಲ್ಲಿ ದೇವರಾಜ ಅರಸು ಪ್ರದರ್ಶಿಸಿದ ಮುತ್ಸದ್ದಿತನ ಜ್ಞಾಪಿಸಿಕೊಳ್ಳಬೇಕು. ೧೯೭೧ರಲ್ಲಿ ವೀರೇಂದ್ರ ಪಾಟೀಲ್ ಸರ್ಕಾರ ಬಹುಮತ ಕಳೆದುಕೊಂಡ ಮೇಲೆ ಸಿದ್ದವೀರಪ್ಪ ಪಕ್ಷಾಂತರಗಳ ಸಹಾಯದಿಂದ ಸರ್ಕಾರ ರಚಿಸಲು ಮುಂದಾದರು. ಆದರೆ ದೇವರಾಜ ಅರಸು ೧೯೭೨ರ ವಿಧಾನಸಭಾ ಚುನಾವಣೆಯಲ್ಲಿ ತಮಗೆ ಬೇಕಾದವರಿಗೆ ಟಿಕೇಟ್ ನೀಡಿ ಅವರುಗಳನ್ನು ಗೆಲ್ಲಿಸಿ ನಿರಾಯಾಸವಾಗಿ ಮುಖ್ಯಮಂತ್ರಿಗಳಾದರು. ರಾಜಕಾರಣಿಗೆ ಕೇವಲ ಧನಬಲ ಹಾಗೂ ಮೇಲಿನವರ ಕೃಪಾಶೀರ್ವಾದವಿದ್ದರೆ ಸಾಲದು. ತಾಳ್ಮೆ, ದೂರದೃಷ್ಟಿ ಹಾಗೂ ವಾಸ್ತವಿಕ ಪರಿಸ್ಥಿತಿಯ ಜ್ಞಾನ ಅವಶ್ಯಕ. ಗುಂಡೂರಾವ್ ಪಕ್ಷಾಂತರಿಗಳ ನೆರವನ್ನು ಕೋರದೆ ಮಧ್ಯಂತರ ವಿಧಾನಸಭಾ ಚುನಾವಣೆ ಎದುರಿಸಿ ಸರ್ಕಾರ ರಚಿಸಿದ್ದರೆ ರಾಜ್ಯದ ರಾಜಕಾರಣದ ದಿಕ್ಕು ಬೇರೆಯಾಗಿರುತ್ತಿತ್ತು. ರಾಜಕಾರಣ ಕೌಟಿಲ್ಯ ಹೇಳುವಂತೆ ಮೇಧಾವಿಗಳ ಆಡೊಂಬಲ. ೧೯೮೩ರ ವಿಧಾನಸಭಾ ಚುನಾವಣೆಯ ವೇಳೆಗೆ ದೇವರಾಜ ಅರಸು ಗೈರುಹಾಜರಿಯಲ್ಲಿ ಅವರು ರೂಪಿಸಿದ ಶಕ್ತಿಗಳು ಸಂಘಟಿತವಾದವು. ಕಾಂಗ್ರೆ ಶೇ. ೪೦.೮೨ ಮತಗಳಿಸಿ ಕೇವಲ ೮೨ ಸ್ಥಾನಗಳನ್ನು ಪಡೆಯಿತು. ಸ್ವತಃ ಮುಖ್ಯಮಂತ್ರಿ ಆರ್. ಗುಂಡೂರಾವ್ ಅವರೇ ಸೋಲನ್ನೊಪ್ಪಿಕೊಂಡರು.

೧೯೮೩ರಿಂದ ೧೯೮೯ರ ವರೆಗೆ ಕರ್ನಾಟಕದಲ್ಲಿ ಕಾಂಗ್ರೆಸ್ (ಐ) ಅತ್ಯಂತ ದುಃಸ್ಥಿತಿಯಲ್ಲಿತ್ತು. ೧೯೮೪ರಲ್ಲಿ ಶ್ರೀಮತಿ ಇಂದಿರಾಗಾಂಧಿಯವರ ಸಾವಿನ ಅನುಕಂಪದ ಅಲೆಯಲ್ಲಿ ೨೮ ಲೋಕಸಭಾ ಸ್ಥಾನಗಳಲ್ಲಿ ೨೪ ಸ್ಥಾನಗಳನ್ನು ಮಾತ್ರ ಪಡೆಯಿತು.

೧೯೮೫ರ ವಿಧಾನಸಭಾ ಚುನಾವಣಾ ಸಂದರ್ಭದಲ್ಲಿ ಕಾಂಗ್ರೆಸ್ ಅತಿಯಾದ ಆತ್ಮವಿಶ್ವಾಸವನ್ನು ಪ್ರದರ್ಶಿಸುತ್ತಿತ್ತು. ಕೆ.ಎಚ್. ಪಾಟೀಲ್, ಎಂ. ವೀರಪ್ಪ ಮೊಯಿಲಿ, ಆರ್. ಗುಂಡೂರಾವ್, ಎಸ್. ಬಂಗಾರಪ್ಪ, ಕೇಂದ್ರ ಸಚಿವರಾದ ವೀರೇಂದ್ರ ಪಾಟೀಲ್ ಮೊದಲಾದವರ ಗುಂಪು ಕಾಂಗ್ರೆಸನಲ್ಲಿತ್ತು. ೨೨೪ ಸ್ಥಾನಗಳಿಗೆ ಸ್ಪರ್ಧಿಸಿದ್ದ ಕಾಂಗ್ರೆ ೬೬ ಸ್ಥಾನಗಳಲ್ಲಿ ಜಯ ಪಡೆಯಿತು. ಶೇ. ೪೧.೧೦ ಅದರ ಮತಗಳಿಕೆ. ೧೯೮೩ರ ವಿಧಾನಸಭಾ ಚುನಾವಣೆಗಿಂತ ಶೇ. ೧.೩೨ ಹೆಚ್ಚಿನ ಮತ ಪಡೆದಿದ್ದರೂ ಹದಿನಾರು ಸ್ಥಾನಗಳನ್ನು ಅದು ಕಳೆದುಕೊಂಡಿತು. ಮತದಾರರನ್ನು ಲಘುವಾಗಿ ಪರಿಗಣಿಸುವ ಎಲ್ಲಾ ರಾಜಕೀಯ ಪಕ್ಷಗಳಿಗೆ ಈ ಚುನಾವಣೆ ಒಳ್ಳೆಯ ಪಾಠವಾಗಿತ್ತು. ಮತದಾರರು ಜಾಗೃತರಾಗಿದ್ದರು, ಬಹುಮತ ಇಲ್ಲದಿದ್ದರೂ ಜನಪರ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ಪ್ರಯತ್ನಿಸಿದ ಜನತಾಪಕ್ಷವನ್ನು ಅವರು ಬೆಂಬಲಿಸಿದರು. ರಾಮಕೃಷ್ಣ ಹೆಗಡೆಯವರ ಮೌಲ್ಯಾಧಾರಿತ ರಾಜಕಾರಣ ಯಶಸ್ಸು ಕಂಡಿತ್ತು.

೧೯೮೯ರ ವಿಧಾನಸಭಾ ಚುನಾವಣೆ ವೇಳೆಗೆ ಕಾಂಗ್ರೆ ಸಾಕಷ್ಟು ರಾಜಕೀಯ ಪಾಠ ಕಲಿತಿತ್ತು. ಜನತಾದಳದ ಮುಖ್ಯಶಕ್ತಿಯಾದ 'ವೀರಶೈವ'ರನ್ನು ಒಲಿಸಿಕೊಳ್ಳಲು ಕೇಂದ್ರ ಸಚಿವರಾದ ವೀರೇಂದ್ರ ಪಾಟೀಲರನ್ನೇ ಕಾಂಗ್ರೆಸ ಅಧ್ಯಕ್ಷರನ್ನಾಗಿಸಿತು. ಎಲ್ಲ ನಾಯಕರಲ್ಲೂ ಒಮ್ಮತ ಮೂಡಿಸಲು ಹೈಕಮಾಂಡ್ ಪ್ರಯತ್ನಿಸಿ ಯಶಸ್ವಿಯಾದ ಕಾರಣ ಕಾಂಗ್ರೆ ಸ್ಪರ್ಧಿಸಿದ್ದ ೨೧೯ ಸ್ಥಾನಗಳ ಪೈಕಿ ೧೭೬ ಸ್ಥಾನಗಳು ಅದಕ್ಕೆ ದೊರೆಯಿತು. ಶೇ. ೪೩.೭೭ ಮತವನ್ನು ಅದು ಪಡೆಯಿತು. ೨೮ ಲೋಕಸಭಾ ಸ್ಥಾನಗಳ ಪೈಕಿ ೨೭ ಸ್ಥಾನಗಳು ಕಾಂಗ್ರೆಗೆ ದೊರೆಕಿತು. ಶೇ. ೫೭.೩೯ ಮತಗಳನ್ನು ಅದು ಲೋಕಸಭಾ ಚುನಾವಣೆಯಲ್ಲಿ ಪಡೆಯಿತು. ಅಂದರೆ ಕಾಂಗ್ರೆ ಕಳೆದುಕೊಂಡಿದ್ದ ಘನತೆಯನ್ನು ಮತ್ತೆ ಪ್ರತಿಷ್ಠಾಪಿಸಿಕೊಂಡಿತು. ೧೯೯೧ರಲ್ಲಿ ನಡೆದ ಲೋಕಸಭೆಯ ಮಧ್ಯಂತರ ಚುನಾವಣೆಯಲ್ಲಿ ೨೭ ಸ್ಥಾನಗಳ ಪೈಕಿ ೨೨ ಸ್ಥಾನ ಗಳಿಸುವಲ್ಲಿ ಮಾತ್ರ ಸಫಲವಾಯಿತು. ರಾಜೀವ್ ಗಾಂಧಿ ಅವರ ಹತ್ಯೆಯ ನಂತರ ನಡೆದ ಈ ಚುನಾವಣೆಯಲ್ಲಿ ಕಾಂಗ್ರೆಸ ಮತ ಪ್ರಮಾಣ ಕುಸಿದಿರುವುದನ್ನು ಗಮನಿಸಬಹುದು. ೮೯ರ ಲೋಕಸಭಾ ಚುನಾವಣೆಯಲ್ಲಿ ಶೇ. ೫೭.೩೯ರಷ್ಟು ಮತ ಗಳಿಸಿದ್ದ ಕಾಂಗ್ರೆ ಇದೀಗ ಶೇ. ೪೧.೯೮ ಮತಗಳನ್ನು ಮಾತ್ರ ಗಳಿಸಿತ್ತು. ಅಂದರೆ ವೀರೇಂದ್ರ ಪಾಟೀಲರ ಪ್ರಕರಣದಿಂದಾಗಿ ಕಾಂಗ್ರೆ ಬಹುದೊಡ್ಡ ಸಮುದಾಯದ ಸಹಾನುಭೂತಿಯನ್ನು ಮತ್ತೆ ಕಳೆದುಕೊಂಡಿತ್ತೆಂದು ಧಾರಾಳವಾಗಿ ಹೇಳಬಹುದು.

ಕಾಂಗ್ರೆ ದೃಷ್ಟಿಯಿಂದ ೧೯೯೪ ವಿಧಾನಸಭಾ ಚುನಾವಣೆ ಅತ್ಯಂತ ಪ್ರಮುಖ ಘಟ್ಟವಾಗಿದೆ. ೨೨೩ ವಿಧಾನಸಭಾ ಸ್ಥಾನಗಳಿಗೆ ಸ್ಪರ್ಧಿಸಿ ಕಾಂಗ್ರೆಸ್ (ಐ) ಕೇವಲ ೩೬ ಸ್ಥಾನಗಳನ್ನು ಪಡೆಯಿತು. ಶೇ. ೨೭. ೪೦ ರಷ್ಟು ಮತ ಮಾತ್ರ ಅದಕ್ಕೆ ದೊರಕಿತು. ವೀರೇಂದ್ರ ಪಾಟೀಲ್ ಪ್ರಕರಣ, ಬಂಗಾರಪ್ಪ ನಿರ್ಗಮನ, ಪಿ.ವಿ. ನರಸಿಂಹರಾವ್ ತಾಟಸ್ಥ್ಯ ಧೋರಣೆ, ಅಯೋಧ್ಯೆ ಪ್ರಕರಣ, ಉಪಮುಖ್ಯಮಂತ್ರಿ ಸೇರಿದಂತೆ ಅನೇಕ ಸಚಿವರು ಬಹಿರಂಗವಾಗಿ ನಡೆಸಿದ ಭಿನ್ನಮತೀಯ ಚಟುವಟಿಕೆಗಳನ್ನು ಗಮನಿಸಿ ಹೇಳುವುದಾದರೆ ಅಂದು ಕಾಂಗ್ರೆ ಅಶಿಸ್ತಿನ ಮನೆಯಾಗಿತ್ತು. ಯಾವುದೇ ಸಂಘಟನೆಗೆ ಅತ್ಯಗತ್ಯವಾದ ಕೊಂಚ ಪ್ರಮಾಣದ ಆತ್ಮಾವಲೋಕನ ಆ ಪಕ್ಷಕ್ಕೆ ಇರಲಿಲ್ಲ. ೧೯೭೨ರಲ್ಲಿ ಸಂಸ್ಥಾ ಕಾಂಗ್ರೆಸ್ ರೂಪಿಸಿದ ಉತ್ಕೃಷ್ಟ ಚುನಾವಣಾ ಪ್ರಣಾಳಿಕೆಯಂತೆ, ೧೯೯೪ರ ಚುನಾವಣಾ ಪ್ರಣಾಳಿಕೆ ಸಹ ಆಕರ್ಷಣೀಯವಾಗಿತ್ತು. ರಾಜಕಾರಣದಲ್ಲಿ ಮಾತು, ಬರಹಗಳೇ ಜನರ ಬೆಂಬಲ ಗಳಿಸಿಕೊಡುವುದಿಲ್ಲ. ಅದಕ್ಕೆ ಬದಲಾಗಿ ಸಂಯಮವುಳ್ಳ ನೇರ ನಡೆ-ನುಡಿ ಅತ್ಯಗತ್ಯವಾದ ಲಕ್ಷಣಗಳಾಗಿದೆ.

೧೯೯೪ರ ವಿಧಾನಸಭಾ ಚುನಾವಣೆಯಲ್ಲಿ ಶ್ರೀ ವೀರಪ್ಪ ಮೊಯಿಲಿಯವರ ನೇತೃತ್ವದಲ್ಲಿ ಕಾಂಗ್ರೆಸ್ ಜಯಭೇರಿ ಗಳಿಸುವ ಸನ್ನಾಹದಲ್ಲಿ ಇತ್ತು. ಮಾರ್ಗ್ ಸಂಸ್ಥೆ, ಡೆಕ್ಕನ್ ಹೆರಾಲ್ಡ್, ಇಂಡಿಯಾ ಟುಡೆ, ಚುನಾವಣೆಯ ಹಿಂದೆ, ಚುನಾವಣೆಯ ಸಂದರ್ಭದಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಶ್ರೀ ವೀರಪ್ಪ ಮೊಯಿಲಿಯವರ ನಾಯಕತ್ವ ಉನ್ನತ ಮಟ್ಟದಲ್ಲಿದ್ದು, ಕಾಂಗ್ರೆಸ್‌ಗೆ ಜಯ ಸಿದ್ಧವೆಂದು ಸಾಬೀತಾಗಿತ್ತು. ಆದರೆ ಚುನಾವಣೆಗೆ ಒಂದು ವಾರ ಇರುವಾಗ ಲಕ್ನೋದಲ್ಲಿರುವ ಮುಸ್ಲಿಂ ಹಾಸ್ಟೆಲ್ ಒಂದರ ಮೇಲೆ ಕೇಂದ್ರ ಸರ್ಕಾರದ ಬೇಹುಪಡೆ (IB) ದಾಳಿಯನ್ನು ನಡೆಸಿದ ಕಾರಣ ದೇಶದ ಮುಸ್ಲಿಂ ಸಮುದಾಯ ಕಾಂಗ್ರೆಸ್‌ನ ಮೇಲೆ ಅದರಲ್ಲೂ ಶ್ರೀ ಪಿ.ವಿ. ನರಸಿಂಹರಾವ್ ರವರ ಮೇಲಿನ ದ್ವೇಷದಿಂದ ಕಾಂಗ್ರೆಸ್‌ಗೆ ವಿರುದ್ಧ ಮತ ಚಲಾಯಿಸಿತು. ಕರ್ನಾಟಕದ ೧೦೬ ಕ್ಷೇತ್ರಗಳಲ್ಲಿ ಶೇಕಡ ೧೦ ಮುಸ್ಲಿಂ ಜನಸಂಖ್ಯೆಯಿರುವ ಎಲ್ಲಾ ವಿಧಾನಸಭಾ ಕ್ಷೇತ್ರಗಳು ಮುಸ್ಲಿಂ ಬೆಂಬಲ ಕಳೆದುಕೊಂಡು ಕಾಂಗ್ರೆಸ್ ಪಕ್ಷ ಸೋಲನ್ನೊಪ್ಪಿತು. ಕರ್ನಾಟಕದಲ್ಲಿ ಮುಖ್ಯಮಂತ್ರಿಯಾಗಿ ಶ್ರೀ ವೀರಪ್ಪ ಮೊಯಿಲಿಯವರು ಮಾಡಿದ ಕಾರ್ಯಕ್ರಮಗಳಿಂದ ಮುಸ್ಲಿಂ ಸಮಾಜ ಕಾಂಗ್ರೆಸ್ಸಿನ ಬೆಂಬಲವಾಗಿದ್ದರೂ, ಅಲ್ಪಸಂಖ್ಯಾತರಿಗೆ ಇಡೀ ದೇಶದಲ್ಲಿ ಪ್ರಪ್ರಥಮವಾಗಿ ಶೇಕಡ ೪ ಮೀಸಲಾತಿಯನ್ನು ವೀರಪ್ಪ ಮೊಯಿಲಿಯವರು ನೀಡಿದ್ದರೂ ಕೇಂದ್ರ ಸರ್ಕಾರದ ಲೋಪದಿಂದಾಗಿ ಕರ್ನಾಟಕದಲ್ಲಿ ಕಾಂಗ್ರೆಸ್ ಸರ್ಕಾರ ಪತನಗೊಂಡಿತು.

೧೯೯೬ರ ಲೋಕಸಭಾ ಚುನಾವಣೆ ಕರ್ನಾಟಕದಲ್ಲಿ ಕಾಂಗ್ರೆ ಪಾಲಿಗೆ ಮತ್ತೊಂದು ದುಃಸ್ವಪ್ನವಾಯಿತು. ೨೮ ಲೋಕಸಭಾ ಸ್ಥಾನಗಳಲ್ಲಿ ಕಾಂಗ್ರೆಸ್ ಐದು ಕ್ಷೇತ್ರಗಳಲ್ಲಿ ಗೆಲುವು ಪಡೆಯಿತು.. ೧೯೯೧ ರಿಂದ ಕೇಂದ್ರದಲ್ಲಿ ಕಾಂಗ್ರೆ ಸರ್ಕಾರದ ನೇತೃತ್ವ ವಹಿಸಿದ್ದ ಪಿ.ವಿ. ನರಸಿಂಹರಾವ್ ಅವರಿಗೆ ಕಾಂಗ್ರೆ ಪಕ್ಷದ ನೈಜ ಬೆಂಬಲಿಗರು ಯಾರೆಂಬುದೇ ಗೊತ್ತಾಗಿರಲಿಲ್ಲ. ಅಲ್ಪ ಸಂಖ್ಯಾತರು, ಹಿಂದುಳಿದವರು ಹಾಗೂ ದಲಿತರನ್ನು ಪಕ್ಷದಿಂದ 'ವ್ಯವಸ್ಥಿತ'ವಾಗಿ ದೂರ ಮಾಡುವ ಕಾರ್ಯವನ್ನು ಅವರು ಕೈಗೊಂಡರು. ಅವರ ವಿವೇಚನಾರಹಿತ ಆರ್ಥಿಕ ನೀತಿ, ೧೯೬೯ರ ಪೂರ್ವದ ಕಾಂಗ್ರೆಸ್ ನಾಯಕರಂತೆ ತಾಟಸ್ಥ್ಯ ನೀತಿ ಹಾಗೂ ವ್ಯಕ್ತಿಗತ ಅನುಮಾನಾಸ್ಪದ ಧೋರಣೆ, ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್‌ಗೆ ಭಾರಿ ಹಿನ್ನಡೆ ತಂದುಕೊಟ್ಟಿದೆ. ಕರ್ನಾಟಕದಲ್ಲಿ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಇಂತಹ ಕಳಪೆ ಸಾಧನೆಯನ್ನು ಎಂದೆಂದೂ ಮಾಡಿರಲಿಲ್ಲ.

೧೯೯೮ರ ಲೋಕಸಭಾ ಚುನಾವಣೆಯ ವೇಳೆಗೆ ಕಾಂಗ್ರೆಸ್ ಪಕ್ಷ ಚೇತರಿಸಿಕೊಂಡಿತು. ೧೯೯೭ರಲ್ಲಿ ರಾಜಕೀಯ ಪ್ರವೇಶಿಸಿದ ಶ್ರೀಮತಿ ಸೋನಿಯಾಗಾಂಧಿ ೧೯೯೮ರಲ್ಲಿ ಕಾಂಗ್ರೆ ಅಧ್ಯಕ್ಷರಾದರು. ೨೮ ಸ್ಥಾನಗಳಿಗೆ ಸ್ಪರ್ಧಿಸಿದ್ದ ಕಾಂಗ್ರೆ. ಶೇ. ೩೬. ೨೨ ಮತಗಳಿಸಿ ೯ ಲೋಕಸಭಾ ಸ್ಥಾನ ಪಡೆಯುವಲ್ಲಿ ಯಶಸ್ವಿಯಾಯಿತು. ಈ ಚುನಾವಣೆಯಲ್ಲಿ ಕಾಂಗ್ರೆ ಶೇ. ೪ ರಷ್ಟು ಹೆಚ್ಚಿನ ಮತ ಪಡೆಯಿತು.

೧೯೯೯ರಲ್ಲಿ ಲೋಕಸಭೆಗೆ ಮಧ್ಯಂತರ ಚುನಾವಣೆ ಹಾಗೂ ರಾಜ್ಯ ವಿಧಾನಸಭೆಗೆ ಸಹಜ ಚುನಾವಣೆ ನಡೆಯಿತು. ರಾಜ್ಯದ ೨೮ ಸ್ಥಾನಗಳಿಗೆ ಸ್ಪರ್ಧಿಸಿದ್ದ ಕಾಂಗ್ರೆ ಶೇ. ೪೫.೪೧ರಷ್ಟು ಮತಗಳಿಸಿ ೧೮ ಸ್ಥಾನಗಳನ್ನು ಪಡೆಯಿತು. ಅದೇ ರೀತಿ ೨೨೩ ಸ್ಥಾನಗಳಿಗೆ ಸ್ಪರ್ಧಿಸಿ ೧೩೨ ಸ್ಥಾನಗಳ ವಿಜಯ ಪಡೆಯಿತು. ಶೇ. ೪೧.೧೬ ಅದರ ಮತಗಳಿಕೆಯಾಗಿದೆ. ಕಾಂಗ್ರೆಗೆ ರಾಜ್ಯದಲ್ಲಿ ಆಳವಾದ ಬೇರುಗಳಿವೆ ಎಂಬುದನ್ನು ಈ ಚುನಾವಣೆ ಸಾಬೀತುಪಡಿಸಿತು. ೧೯೬೭ರಲ್ಲಿ ಅವಿಭಾಜ್ಯ ಕಾಂಗ್ರೆಸ್ ಸ್ವಲ್ಪ ಸೊರಗಿದರೂ ಅನಂತರ ಹೊಸ ವೇಷದಲ್ಲಿ ಅದು ಮತ್ತಷ್ಟು ಪ್ರಜ್ವಲಿಸಿತು. ೧೯೮೩, ೧೯೮೫, ೧೯೯೪ರ ವಿಧಾನಸಭಾ ಚುನಾವಣೆಗಳಲ್ಲಿ ಕಾಂಗ್ರೆ ಹೀನಾಯ ಸಾಧನೆ ಮಾಡಲು ಆ ಪಕ್ಷದ ಆಂತರಿಕ ವಿಚಾರಗಳೇ ಕಾರಣವಾಗಿದೆ. ೧೯೯೬ರ ಲೋಕಸಭಾ ಚುನಾವಣೆ ಕಾಂಗ್ರೆನ ಆತ್ಮಾವಲೋಕನಕ್ಕೆ ಬಹುದೊಡ್ಡ ನಿದರ್ಶನವಾಗಿದೆ. ವೀರಶೈವರನ್ನು ಬಿಟ್ಟು ಒಕ್ಕಲಿಗರ ಸಮುದಾಯವನ್ನು ಚುನಾವಣಾ ಸಂದರ್ಭದಲ್ಲಿ ಹಿಡಿದಿಟ್ಟುಕೊಳ್ಳುವ ಕಲೆ ಕಾಂಗ್ರೆಸ್ ಪಕ್ಷಕ್ಕಿದೆ. ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ದಲಿತ ಸಮುದಾಯಗಳು ಕಾಂಗ್ರೆಸ್ ಪಕ್ಷದ ಕಡೆಗಿದ್ದರೂ ಅವರನ್ನು ಸರಿಯಾಗಿ ಬಳಸಿಕೊಳ್ಳುವಲ್ಲಿ ಈ ಪಕ್ಷ ಆಗಾಗ್ಗೆ ಎಡವಿದೆ. ಇಂತಹ ತಪ್ಪುಗಳ ನಡುವೆ ಕೂಡಾ ಆ ಸಮುದಾಯಗಳು ಕಾಂಗ್ರೆ ಪಕ್ಷವನ್ನು ಶಾಶ್ವತವಾಗಿ ದೂರ ಸರಿಸದಿರುವುದೇ ಕಾಂಗ್ರೆಸ್ ಪಕ್ಷದ ಅದೃಷ್ಟ.

### ಕಾಂಗ್ರೆಸ್‌ನ ಅಂಗ ಪಕ್ಷಗಳು

ತತ್ವ ಹಾಗೂ ಸಿದ್ಧಾಂತದ ಮೇಲೆ ಕಾಂಗ್ರೆಸ್ ಪಕ್ಷ ಸ್ವಾತಂತ್ರ್ಯ ಪೂರ್ವದಿಂದಲೂ ಒಡೆಯುತ್ತಾ ಬಂದಿದೆ. ೧೯೨೨ರಲ್ಲಿ ಕಾಂಗ್ರೆಸ್ ಅಂಗ ಪಕ್ಷವಾಗಿ 'ಸ್ವರಾಜ್ಯ ಪಕ್ಷ' ಹುಟ್ಟಿತು. ಚಿತ್ತರಂಜನ್‌ದಾಸ್ ಹಾಗೂ ಮೋತಿಲಾಲ್ ನೆಹರೂ ಅವರ ಈ ಪಕ್ಷದ ಧುರೀಣರು. ೧೯೩೪ರಲ್ಲಿ ಆಚಾರ್ಯ ನರೇಂದ್ರದೇವ ಮೊದಲಾದವರು ಕಾಂಗ್ರೆಸ್‌ನಲ್ಲಿ ಸೋಷಲಿಸ್ಟ್ ಗುಂಪನ್ನು ಜೀವಂತವಾಗಿಟ್ಟುಕೊಂಡಿದ್ದರು. ೧೯೩೯ರಲ್ಲಿ ಕಾಂಗ್ರೆಸ್‌ನಿಂದ ಹೊರಬಂದು 'ಫಾರ್‌ವರ್ಡ್‌ಬ್ಲಾಕ್' ಪಕ್ಷದ ರಚನೆಯಾಯಿತು. ಸುಭಾಷ್‌ಚಂದ್ರ ಬೋಸ್ ಇದರ ನೇತೃತ್ವ ವಹಿಸಿದ್ದರು. ೧೯೫೧ರಲ್ಲಿ ಆಚಾರ್ಯ ಕೃಪಲಾನಿ ಮೊದಲಾದವರು 'ಕಿಸಾನ್ ಮಜ್ದೂರ್ ಪಾರ್ಟಿ' ರೂಪಿಸಿದರು. ೧೯೫೯ರಲ್ಲಿ 'ಸ್ವತಂತ್ರ ಪಕ್ಷ' ರಾಜಾಜಿ ಹಾಗೂ ಅವರ ಮಿತ್ರರಿಂದ ರೂಪುಗೊಂಡಿತು.

ಈ ದೃಷ್ಟಿಯಲ್ಲಿ ೧೯೬೯ರಲ್ಲಿ ಅಖಿಲಭಾರತ ಕಾಂಗ್ರೆಸ್ ವಿಭಜನೆ ಮಹತ್ವದ ಘಟನೆಯಾಗಿದೆ. ಇಂದಿರಾಗಾಂಧಿ ನೇತೃತ್ವದ ಕಾಂಗ್ರೆಸ್‌ಗೆ 'ಆಡಳಿತ ಕಾಂಗ್ರೆಸ್', ನಿಜಲಿಂಗಪ್ಪ ಅವರ ಪಕ್ಷಕ್ಕೆ 'ಸಂಸ್ಥಾ ಕಾಂಗ್ರೆಸ್' ಎಂಬ ಹೆಸರು ಬಂತು. ಕಾಂಗ್ರೆಸ್‌ನ ಮೂಲ ಸತ್ವವನ್ನು ಉಳಿಸಿಕೊಳ್ಳುವಲ್ಲಿ ಸಂಸ್ಥಾ ಕಾಂಗ್ರೆಸ್ ಸಾಕಷ್ಟು ಹೋರಾಟ ಮಾಡಿತು. ೧೯೭೭ರಲ್ಲಿ ಜನತಾಪಕ್ಷದೊಡನೆ ವಿಲೀನವಾಗುವ ತನಕ ನೈಜ ಕಾಂಗ್ರೆಸ್ ಎಂದರೆ ನಿಜಲಿಂಗಪ್ಪ ಅವರ ಸಂಸ್ಥಾ ಕಾಂಗ್ರೆಸ್ ಎಂದೇ ಜನಾಭಿಪ್ರಾಯವಾಗಿತ್ತು.

ಅನಂತರದ ಶ್ರೀಮತಿ ಗಾಂಧಿ ಅವರ ನೇತೃತ್ವದ ಕಾಂಗ್ರೆಸ್ ಸಾಕಷ್ಟು ಸಲ ವಿಭಜನೆಯಾಯಿತು. ಈ ವಿಭಜನೆ ಕರ್ನಾಟಕ ರಾಜಕೀಯ ದೃಷ್ಟಿಯಿಂದಲೂ ಪ್ರಮುಖವಾದದ್ದು. ಮೊದಲಿಗೆ ಬ್ರಹ್ಮಾನಂದ ರೆಡ್ಡಿ ಕಾಂಗ್ರೆಸ್ ವಿಚಾರ ನೋಡಬಹುದು. ೨೩.೧.೧೯೭೮ ಚುನಾವಣಾ ಆಯೋಗ ಇದಕ್ಕೆ ಆಡಳಿತ ಕಾಂಗ್ರೆಸ್ ಹಸು-ಕರು ಚಿಹ್ನೆ ಕೊಟ್ಟು ಮಾನ್ಯತೆ ನೀಡಿತು. ದೇವರಾಜ ಅರಸು ಅವರ ಜೊತೆ ತೀವ್ರ ಭಿನ್ನಾಭಿಪ್ರಾಯ ಹೊಂದಿದ್ದ ಕೆ. ಎಚ್. ಪಾಟೀಲ್ ರಾಜ್ಯದಲ್ಲಿ ಇದರ ಅಧ್ಯಕ್ಷರಾದರು. ಎಚ್. ಸಿದ್ಧವೀರಪ್ಪ, ಮಹಮ್ಮದ್ ಆಲಿ, ಎಸ್. ಎಂ. ಕೃಷ್ಣ, ಎನ್. ಹುಚ್ಚಮಾಸ್ತಿಗೌಡ, ಎಚ್. ಎನ್. ನಂಜೇಗೌಡ ಅವರುಗಳು ತಮ್ಮನ್ನು ರೆಡ್ಡಿ ಕಾಂಗ್ರೆಸ್‌ನಲ್ಲಿ ಗುರುತಿಸಿಕೊಂಡರು. ಮಾಧ್ಯಮಗಳೂ ಸಹ ರೆಡ್ಡಿ ಕಾಂಗ್ರೆಸ್‌ಗೆ ಹೆಚ್ಚಿನ ಪ್ರಚಾರ ನೀಡಿದವು. ಈ ಮಾತನ್ನು ಅಂದಿನ ಮುಖ್ಯಮಂತ್ರಿ ದೇವರಾಜ ಅರಸು ಅವರು ಪತ್ರಿಕಾಗೋಷ್ಠಿಯಲ್ಲಿ ಹೇಳಿದರು. ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ೨೧೨ ವಿಧಾನಸಭಾ ಸ್ಥಾನಗಳಿಗೆ ಸ್ಪರ್ಧಿಸಿದ್ದ ರೆಡ್ಡಿ ಕಾಂಗ್ರೆಸ್ ಶೇ. ೭.೯ ಮತಗಳಿಸಿ ಎರಡು ಸ್ಥಾನಗಳಲ್ಲಿ ಮಾತ್ರ ಜಯಗಳಿಸಿತು. ಅದರ ಅಧ್ಯಕ್ಷರಾದ ಕೆ. ಎಚ್. ಪಾಟೀಲರೇ ಸೋತಿದ್ದರು. ಕೆ. ಎಚ್. ಪಾಟೀಲ್ ಮುಂತಾದವರಿಗೆ ಇಂದಿರಾಗಾಂಧಿ ಅವರ ಮೇಲೆ ಅಸಮಾಧಾನವಿರಲಿಲ್ಲ. ಅರಸು ಅವರು ಇಂದಿರಾಗಾಂಧಿ ಅವರನ್ನು ಆಶ್ರಯಿಸಿದ ಮೇಲೆ ಅನಿವಾರ್ಯವಾಗಿ ಬೇರೆ ಕಡೆ ಹೋದರು. ಫಲಿತಾಂಶದ ನಂತರ ಜನಬೆಂಬಲ ಗಳಿಸಲು ಇಂದಿರಾಗಾಂಧಿ ಅವರನ್ನು ಬಿಟ್ಟರೆ ತಮಗೆ ಗತ್ಯಂತರವಿಲ್ಲವೆಂದೂ ಅವರು ಭಾವಿಸಿದ್ದರು. ಅಂದರೆ ರಾಜ್ಯದ ಮತದಾರರ ಮೇಲೆ ಶ್ರೀಮತಿ ಗಾಂಧಿ ಅವರಿಗಿದ್ದ ಅಸಾಧಾರಣ ಹಿಡಿತವನ್ನು ಇಲ್ಲಿ ಗಮನಿಸಬಹುದು.

೧೯೭೮ರ ವಿಧಾನಸಭಾ ಚುನಾವಣೆ ಹಾಗೂ ಚಿಕ್ಕಮಗಳೂರು ಲೋಕಸಭಾ ಉಪಚುನಾವಣೆಯ ನಂತರ ಮುಖ್ಯಮಂತ್ರಿ ದೇವರಾಜ ಅರಸು ರಾಷ್ಟ್ರ ನಾಯಕರಾಗುವ ಕನಸು ಕಂಡರು. ತಮ್ಮ ಆಡಳಿತಾವಸ್ಥೆಯಲ್ಲಿ ತಂದ ಸಾಮಾಜಿಕ ಪರಿವರ್ತನಾ ಕಾರ್ಯಗಳು ತಮಗೆ ನಿರಂತರವಾಗಿ ಜನಬೆಂಬಲ ದೊರಕಿಸಿಕೊಡುತ್ತದೆಂದು ಅವರು ಭಾವಿಸಿದ್ದರು. ಇದಕ್ಕೆ ಪೂರಕವಾಗಿ ಆಗಿನ ಕೇಂದ್ರ ಜನತಾಪಕ್ಷದ ನಾಯಕರಾದ ಚರಣಸಿಂಗ್, ಜಾರ್ಜ್ ಫರ್ನಾಂಡೀಸ್ ಮೊದಲಾದವರು ದೇವರಾಜ ಅರಸು ಅವರನ್ನು ತೆರೆಮರೆಯಲ್ಲಿ ಹೊಗಳಿ ಅಟ್ಟಕ್ಕೇರಿಸಿದರು. ೨೨.೧೧.೧೯೭೯ರಲ್ಲಿ ಅರಸು ಕಾಂಗ್ರೆಸ್ ಅಧಿಕೃತವಾಗಿ ಜನ್ಮ ತಾಳಿತು. ೧೯೮೦ರಲ್ಲಿ ನಡೆದ ಲೋಕಸಭೆಯ ಮಧ್ಯಂತರ ಚುನಾವಣೆಯಲ್ಲಿ ಅರಸು ಕಾಂಗ್ರೆಸ್ ೨೭ ಸ್ಥಾನಗಳಿಗೆ ಸ್ಪರ್ಧಿಸಿತು. ಶೇ. ೧೬.೯೬ರಷ್ಟು ಮತಗಳಿಸಿದ್ದ ಅರಸು ಕಾಂಗ್ರೆಸ್‌ನಿಂದ ಲೋಕಸಭೆಗೆ ಯಾವ ಅಭ್ಯರ್ಥಿಯೂ ಆಯ್ಕೆಯಾಗಲಿಲ್ಲ. ಅರಸು ಅವರಿಗೆ ಭ್ರಮನಿರಸನವಾಯಿತು. ರಾಜ್ಯದಲ್ಲಿ ತಾವು ತಂದ ಸುಧಾರಣಾ ಕಾರ್ಯಗಳು ರಾಷ್ಟ್ರನಾಯಕಿ ಶ್ರೀಮತಿ ಗಾಂಧಿ ಅವರಿಗೆ ಹೆಸರಿಗೆ ಪರಿವರ್ತನೆಯಾಗಿರುವುದು ಅವರಿಗೆ ತಡವಾಗಿ ತಿಳಿಯಿತು. ಅಖಿಲಭಾರತ ರಾಜಕಾರಣದ ಹುಚ್ಚು ಬಿಟ್ಟು ರಾಜ್ಯ ರಾಜಕೀಯಕ್ಕೆ ಅಗತ್ಯವಾದ 'ಕರ್ನಾಟಕ ಕ್ರಾಂತಿರಂಗ' ಎಂಬ ರಾಜಕೀಯ ಪಕ್ಷವನ್ನು ಅವರೇ ಹುಟ್ಟು ಹಾಕಿದರು. ಅದು ಸತ್ಫಲ ನೀಡುವುದರೊಳಗಾಗಿ ಅಂದರೆ ೧೯೮೨ರಲ್ಲಿ ಅರಸು ನಿಧನರಾದರು. ಅವರ ಕರ್ನಾಟಕ ಕ್ರಾಂತಿರಂಗ ೧೯೮೩ರ ಚುನಾವಣೆಯ ವೇಳೆಗೆ ಜನತಾಪಕ್ಷದೊಡನೆ ವಿಲೀನವಾಯಿತು. ಪ್ರಾಯಶಃ ದೇವರಾಜ ಅರಸು ೮೩ರ ಚುನಾವಣೆಯಲ್ಲಿ ಬದುಕಿದ್ದರೆ ಕರ್ನಾಟಕದ ರಾಜಕೀಯವೇ ಬೇರೆಯಾಗುತ್ತಿತ್ತು.

೧೯೮೮ ಆಗಸ್ಟ್ ೨ರಂದು ಬೆಂಗಳೂರಿನ ಗಾಜಿನಮನೆಯಲ್ಲಿ ಪ್ರಣವ ಮುಖರ್ಜಿ ಅವರು ಅಖಿಲ ಭಾರತ ಇಂದಿರಾ ಕಾಂಗ್ರೆಸ್ ಸ್ಥಾಪಿಸಿದರು. ಮಾಜಿ ಮುಖ್ಯಮಂತ್ರಿ ಆರ್. ಗುಂಡೂರಾವ್ ರಾಜ್ಯದಲ್ಲಿ ಇದರ ನೇತೃತ್ವ ವಹಿಸಿದ್ದರು. ೧೯೮೯ರ ವೇಳೆಗೆ ಆರ್. ಗುಂಡೂರಾವ್ ಇದನ್ನು ಕಾಂಗ್ರೆಸ್(ಐ)ನಲ್ಲಿ ವಿಲೀನಗೊಳಿಸಿದರು. ತಾತ್ಕಾಲಿಕವಾಗಿ ರಾಜೀವಗಾಂಧಿ ಅವರೊಡನೆ ಭಿನ್ನಾಭಿಪ್ರಾಯಗೊಂಡಿದ್ದ ಗುಂಡೂರಾವ್‌ರವರು ಈ ಪಕ್ಷವನ್ನು ಹುಟ್ಟುಹಾಕಿದ್ದರು.

೧೯೯೨ರಲ್ಲಿ ತಮ್ಮನ್ನು ಅನಗತ್ಯವಾಗಿ ತೆಗೆದುಹಾಕಿ ವೀರಪ್ಪಮೊಯಿಲಿ ಅವರನ್ನು ಮುಖ್ಯಮಂತ್ರಿಯನ್ನಾಗಿ ಮಾಡಿದ್ದಕ್ಕಾಗಿ ಅಸಮಾಧಾನಗೊಂಡ ಎಸ್. ಬಂಗಾರಪ್ಪ ೧೯೯೪ರಲ್ಲಿ ಕರ್ನಾಟಕ ಕಾಂಗ್ರೆಸ್ಸನ್ನು (ಕೆಪಿಸಿ) ಹುಟ್ಟುಹಾಕಿದರು. ೧೯೯೪ರ ವಿಧಾನಸಭಾ

ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷವನ್ನು ಅಧಿಕಾರದಿಂದ ದೂರವಿಟ್ಟ ಕೀರ್ತಿ ಇದರದು. ೨೧೮ ಸ್ಥಾನಗಳಿಗೆ ಸ್ಪರ್ಧಿಸಿದ್ದ ಕೆಪಿಸಿ ೧೦ ಸ್ಥಾನಗಳಲ್ಲಿ ಜಯಗಳಿಸಿತು. ಸುಮಾರು ೬೦ ಸ್ಥಾನಗಳಲ್ಲಿ ಕಾಂಗ್ರೆಸ್ ಐ ಅಭ್ಯರ್ಥಿಗಳು ಸೋಲಲು ಇದು ಮುಖ್ಯ ಕಾರಣವಾಯಿತು. ೧೯೯೬ರ ಲೋಕಸಭಾ ಚುನಾವಣೆಯಲ್ಲಿ ಇದರ ಅಧ್ಯಕ್ಷರಾದ ಎಸ್. ಬಂಗಾರಪ್ಪ ಶಿವಮೊಗ್ಗದಿಂದ ಆಯ್ಕೆಯಾದರು. ೧೯೯೮ರ ವೇಳೆಗೆ ಕೆಪಿಸಿ ಕಾಂಗ್ರೆಸ್ ಪಕ್ಷಗಳು ಮರಳಿ ವಿಲೀನಗೊಂಡಿತು. ಅಖಿಲ ಭಾರತ ಮಟ್ಟದಲ್ಲಿ ಪಿ.ವಿ. ನರಸಿಂಹರಾವ್‌ರವರನ್ನು ವಿರೋಧಿಸಿ ಅರ್ಜುನಸಿಂಗ್ ಹಾಗೂ ಎನ್. ಡಿ. ತಿವಾರಿ ಅವರುಗಳು ೧೯೯೬ರಲ್ಲಿ ಪ್ರತ್ಯೇಕ ಕಾಂಗ್ರೆಸ್‌ನ್ನು ರಚಿಸಿಕೊಂಡರು. ಕರ್ನಾಟಕದಲ್ಲಿ ಕೆನರಾ ಲೋಕಸಭಾ ಸದಸ್ಯರಾಗಿದ್ದ ದೇವರಾಯ ನಾಯಕ್, ಎಂ. ವಿ. ರಾಜಶೇಖರನ್ ಮೊದಲಾದವರು ಇದರ ನೇತೃತ್ವ ವಹಿಸಿದ್ದರು. ಆದರೆ ಆ ಪಕ್ಷ ಚುನಾವಣೆಯಲ್ಲಿ ಅಂತಹ ಸಾಧನೆಯನ್ನೇನೂ ಮಾಡಿರಲಿಲ್ಲ.

ಈ ರೀತಿ ಅಧಿಕಾರದಲ್ಲಿದ್ದ ಪಕ್ಷಗಳಿಗೆ ಜನತೆ ಮಾನ್ಯತೆ ನೀಡಿದರೇ ಹೊರತು, ಅಧಿಕಾರ ಕಳೆದುಕೊಂಡಾಗ ಹೊರಬಂದು ಬೇರೆ ಪಕ್ಷ ರಚಿಸಿ, ಅಧಿಕಾರವನ್ನರಸಿ ಹೊರಟ ಕಾಂಗ್ರೆಸ್‌ನ ಅಂಗ ಪಕ್ಷಗಳಾವುವೂ ಕರ್ನಾಟಕದಲ್ಲಿ ತಲೆ ಎತ್ತಲು ಸಾಧ್ಯವಾಗಲಿಲ್ಲ. ಒಂದು ಹೊಸ ಪಕ್ಷವನ್ನು ಕಟ್ಟಿ ಬೆಳೆಸುವ ಛಾತಿ, ವ್ಯಕ್ತಿತ್ವ ಈ ನಾಯಕರಿಗೆ ಇಲ್ಲದ್ದೂ ಇದಕ್ಕೆ ಒಂದು ಕಾರಣ.

## ವಿರೋಧ ಪಕ್ಷಗಳು

ಇ.ಎಂ. ಫಾರ್‌ಸ್ಟರ್ ಎಂಬ ರಾಜ್ಯಶಾಸ್ತ್ರನೀತಿಜ್ಞನು ''ಪ್ರಜಾಪ್ರಭುತ್ವದಲ್ಲಿ ವೈವಿಧ್ಯತೆಗೆ ಅವಕಾಶವುಂಟು. ಅದೇ ರೀತಿ ವಿರೋಧ ಪಕ್ಷಗಳು ಮಾಡುವ ವಿಮರ್ಶೆಗೂ ಅವಕಾಶವುಂಟು'' ಎಂದಿದ್ದಾನೆ. ಎಡ್ಮಂಡ್ ಬರ್ಕ್ ಎಂಬಾತ ''ಜನ ಪ್ರತಿನಿಧಿಗಳು ಕೇವಲ ಹೌದಪ್ಪಗಳಾಗದೆ ವಿವೇಚನೆ ಉಪಯೋಗಿಸಿ ಕೆಲಸ ಮಾಡಬೇಕು'' ಎಂದಿದ್ದಾನೆ. 'ರಾಜಕೀಯ ವ್ಯಕ್ತಿಗಳ ಪಕ್ಷ ಸಿದ್ಧಾಂತ ಏನೇ ಇರಲಿ ಅವರೆಲ್ಲಾ ಒಂದೇ ಜಾತಿಯವರು' ಎಂದು ಕೆ.ಎಂ. ಮುನ್ಷಿ ಅವರು ಅಭಿಪ್ರಾಯಪಡುತ್ತಾರೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಆಡಳಿತ ಪಕ್ಷದಷ್ಟೇ ವಿರೋಧ ಪಕ್ಷಗಳಿಗೂ ಹೊಣೆಗಾರಿಕೆಯಿರುತ್ತದೆ. ವಿರೋಧ ಪಕ್ಷಗಳು ಜನರನ್ನು ಜಾಗೃತಿ ಮಾಡುವ ಕಾರ್ಯದಲ್ಲಿ ಆಡಳಿತ ಪಕ್ಷದವರಿಗಿಂತ ಮುಂಚೂಣಿಯಲ್ಲಿರುತ್ತಾರೆ. ಮೈಸೂರು ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿ ಸಭೆ ೧೮೮೧ರಲ್ಲೇ ಪ್ರಾರಂಭವಾದ ಕಾರಣ ಇಲ್ಲಿನ ಜನತೆಗೆ ಪ್ರಜಾಪ್ರಭುತ್ವ ವ್ಯವಸ್ಥೆ ಬಹುಬೇಗ ಅನುಭವಕ್ಕೆ ಬರತೊಡಗಿತ್ತು. ಪ್ರಜಾಪಕ್ಷ ಪ್ರಜಾಮಿತ್ರ ಮಂಡಳಿ ಸಂಯುಕ್ತ ಪ್ರಜಾಪಕ್ಷ ಹಾಗೂ ಕಾಂಗ್ರೆಸ್ ಸಂಸ್ಥಾನದ ವಿರೋಧ ಪಕ್ಷಗಳಾಗಿ ಕೆಲಸ ಮಾಡಿದ್ದನ್ನು ಮರೆಯುವಂತಿಲ್ಲ. ಆಗಿನ ದಿವಾನರುಗಳನ್ನು ಟೀಕಿಸುವ ಜವಾಬ್ದಾರಿಯನ್ನು ಕೂಡ ಈ ಪಕ್ಷಗಳು ಹೊತ್ತುಕೊಂಡಿದ್ದವು. ಕೆ.ಸಿ. ರೆಡ್ಡಿ, ವಿ. ವೆಂಕಟಪ್ಪ ಮೊದಲಾದವರು ಪ್ರಜಾಪಕ್ಷದಿಂದ ಬಂದವರು. ಟಿ. ಸಿದ್ಧಲಿಂಗಯ್ಯ ಅವರ ನೇತೃತ್ವದ ಮೈಸೂರು ಕಾಂಗ್ರೆಸ್ ಕೂಡಾ ಆಗ ಕಾಂಗ್ರೆಸ್ ಪಕ್ಷದಲ್ಲಿದ್ದ ಬ್ರಾಹ್ಮಣ ಜನಾಂಗದ ಯಜಮಾನಿಕೆಯನ್ನು ನಿರಂತರವಾದ ಹತೋಟಿಯಲ್ಲಿಟ್ಟಿತ್ತು. ೧೯೪೭ರಲ್ಲಿ ಕೆ.ಸಿ. ರೆಡ್ಡಿ ಅವರು ಮೈಸೂರು ಸಂಸ್ಥಾನದ ಮುಖ್ಯಮಂತ್ರಿಯಾಗಲು ಆ ಕಾಲದ ಬ್ರಾಹ್ಮಣೇತರ ಚಳವಳಿ ಸಹಾಯಕವಾಯಿತು. ಕಾಂಗ್ರೆಸ್ ಅಧಿಕಾರ ಪಡೆಯುವ ಸಂದರ್ಭದಲ್ಲಿ ಸಾಮಾಜಿಕ ನ್ಯಾಯಕ್ಕೆ ಆದ್ಯತೆ ಕೊಡಬೇಕೆಂದು ಬಹು ಹಿಂದೆಯೇ ಪ್ರಜಾಪಕ್ಷ ಹಾಗೂ ಪ್ರಜಾ ಸಂಯುಕ್ತಪಕ್ಷಗಳು ಸ್ಪಷ್ಟಪಡಿಸಿದ್ದವು.

ಹೈದ್ರಾಬಾದ್-ಕರ್ನಾಟಕದಲ್ಲಿ ಅಳವಂಡಿ ಶಿವಮೂರ್ತಿಸ್ವಾಮಿ ಅವರು ಸ್ಥಾಪಿಸಿದ 'ಲೋಕಸೇವಕ ಸಂಘ' ಕಾಂಗ್ರೆಸ್‌ನಲ್ಲಿದ್ದ ಬ್ರಾಹ್ಮಣರ ಪ್ರಾಬಲ್ಯವನ್ನು ಹತೋಟಿಯಲ್ಲಿಡಬೇಕೆಂಬ ಉದ್ದೇಶ ಹೊಂದಿತ್ತು. ಕೊಪ್ಪಳ ಲೋಕಸಭಾ ಕ್ಷೇತ್ರದಿಂದ ೧೯೫೨ರ ಚುನಾವಣೆಯಲ್ಲೇ ಅಳವಂಡಿ ಶಿವಮೂರ್ತಿಸ್ವಾಮಿ ಆಯ್ಕೆಯಾಗಿದ್ದರು. ಅಷ್ಟೇ ಅಲ್ಲ ದೇವದುರ್ಗ, ಮಾನ್ವಿ, ಲಿಂಗಸುಗೂರು, ಸಿಂಧನೂರು, ಗಂಗಾವತಿ, ಕುಷ್ಟಗಿ, ಕೊಪ್ಪಳ, ಯಲಬುರ್ಗ ಮೊದಲಾದ ವಿಧಾನಸಭಾ ಕ್ಷೇತ್ರಗಳೂ ಸಹ ಈ ಪಕ್ಷದ ಪಾಲಾಯಿತು. ೫೭ರಲ್ಲಿ ಬಿಜಾಪುರ ಲೋಕಸಭಾ ಕ್ಷೇತ್ರದಿಂದ ಮುರಿಗೆಪ್ಪ ಸುಗಂಧಿ ಆಯ್ಕೆಯಾಗಿದ್ದರು. ೬೭ರ ತನಕ ಲೋಕಸೇವಕ ಸಂಘ ಹೈದ್ರಾಬಾದ್ ಕರ್ನಾಟಕದಲ್ಲಿ ತನ್ನ ಪ್ರಾಬಲ್ಯವನ್ನು ಉಳಿಸಿಕೊಂಡಿದ್ದನ್ನು ಗಮನಿಸಬಹುದು. ಆ ಪಕ್ಷ ಅನಂತರ ಸಂಸ್ಥಾ ಕಾಂಗ್ರೆಸ್‌ನೊಡನೆ ವಿಲೀನವಾಯಿತು.

## ಸಮಾಜವಾದಿ ಪಕ್ಷಗಳು

ಕರ್ನಾಟಕದಲ್ಲಿ ನೈಜವಾದ ವಿರೋಧ ಪಕ್ಷಗಳೆಂದರೆ ಸಮಾಜವಾದಿ ಪಕ್ಷಗಳೆಂದೇ ಹೇಳಬೇಕು. ಕರ್ನಾಟಕದ ಅನೇಕ ಹಿರಿಯ ನಾಯಕರು ಈ ಪಕ್ಷಗಳ ಮೂಲದಿಂದ ಬಂದಿದ್ದಾರೆ. ೧೯೫೨ರ ಮೊದಲ ಸಾರ್ವತ್ರಿಕ ಚುನಾವಣೆಯಲ್ಲೇ ಕರ್ನಾಟಕ ಕಿಸಾನ್

ಮಜ್ದೂರ್ ಪಕ್ಷ ಆರು ಅಭ್ಯರ್ಥಿಗಳನ್ನು ವಿಧಾನಸಭೆಗೆ ಕಳಿಸಿತ್ತು. ಎಂ. ಎಸ್. ಗುರುಪಾದಸ್ವಾಮಿ ಅವರು ಈ ಪಕ್ಷದ ಮೂಲಕ ಸ್ಪರ್ಧಿಸಿ, ಲೋಕಸಭೆಗೆ ಆಯ್ಕೆಯಾಗಿದ್ದರು. ೧೯೫೭ರ ಚುನಾವಣೆಯ ಹೊತ್ತಿಗೆ ಪಿಎಸ್‌ಪಿ ರಾಜ್ಯದಲ್ಲಿ ಭದ್ರವಾದ ಬೇರುಗಳನ್ನೂರಿತ್ತು. ಜೆ.ಎಂ. ಇಮಾಂ ಅಂತಹ ನಾಯಕರು ಲೋಕಸಭೆಯನ್ನು ಈ ಪಕ್ಷದ ಮೂಲಕ ಪ್ರವೇಶಿಸಿದ್ದರು. ೧೯ ಜನ ವಿಧಾನಸಭಾ ಸದಸ್ಯರು ಪಿಎಸ್‌ಪಿ ಪಕ್ಷಕ್ಕೆ ಸೇರಿದವರಾಗಿದ್ದರು. ೧೯೬೨ರ ವಿಧಾನಸಭಾ ಚುನಾವಣೆಯಲ್ಲಿ ಪಿಎಸ್‌ಪಿ ಪಕ್ಷ ಅತ್ಯುತ್ತಮ ಸಾಧನೆ ಮಾಡಿದ ಹೆಗ್ಗಳಿಕೆ ಪಡೆಯಿತು. ಇದರ ೨೨ ಜನ ಸದಸ್ಯರು ವಿಧಾನಸಭೆಯಲ್ಲಿದ್ದರು. ಮುಖ್ಯಮಂತ್ರಿ ನಿಜಲಿಂಗಪ್ಪ ಅವರನ್ನು ಹೊಸದುರ್ಗದಲ್ಲಿ ಸೋಲಿಸಿದ ಕೀರ್ತಿ ಇದರದಾಗಿತ್ತು. ೧೯೬೭ರ ಹೊತ್ತಿಗೆ ಪಿಎಸ್‌ಪಿ ಪಕ್ಷ ಮೂವರು ಲೋಕಸಭಾ ಸದಸ್ಯರನ್ನು ಪಡೆದಿತ್ತು. ಶಿವಮೊಗ್ಗ ಲೋಕಸಭಾ ಕ್ಷೇತ್ರದಿಂದ ಸೋಷಲಿಸ್ಟ್ ಪಾರ್ಟಿಯ ಜೆ.ಎಚ್. ಪಟೇಲ್ ಆಯ್ಕೆಯಾಗಿದ್ದರು. ಅದೇ ರೀತಿ ವಿಧಾನಸಭೆಯಲ್ಲಿ ಪಿಎಸ್‌ಪಿಯ ೨೧ ಹಾಗೂ ಎಸ್‌ಎಸ್‌ಪಿಯ ಮೂವರು ಸದಸ್ಯರಿದ್ದರು. ೧೯೫೪ರಿಂದಲೂ ಸಮಾಜವಾದಿ ಪಕ್ಷವನ್ನು ಶಿಥಿಲಗೊಳಿಸಲು ಕಾಂಗ್ರೆಸ್ ಪಕ್ಷ ಪ್ರಯತ್ನಿಸುತ್ತಲೇ ಇತ್ತು. ನೆಹರು ಅವರ ಕರೆಗೆ ಓಗೊಟ್ಟು ಸಮಾಜವಾದಿ ಪಕ್ಷದ ಅಶೋಕ್ ಮೆಹ್ತಾ ಅವರು ಕಾಂಗ್ರೆಸ್‌ಗೆ ಸೇರಿದರು. ಇದರ ಪ್ರಭಾವ ರಾಜ್ಯದ ಮೇಲೂ ಆಯಿತು. ಇದನ್ನು ಮಾದರಿಯನ್ನಾಗಿಟ್ಟುಕೊಂಡಿತು. ನಿಜಲಿಂಗಪ್ಪನವರು ಎಂ.ಎಸ್. ಗುರುಪಾದಸ್ವಾಮಿ, ಎಂ.ಪಿ. ಈಶ್ವರಪ್ಪ, ಬಿ. ರಾಚಯ್ಯ, ಆರ್. ದಯಾನಂದ ಸಾಗರ್ ಮೊದಲಾದವರನ್ನು ಕಾಂಗ್ರೆಸ್‌ಗೆ ಸೇರಿಸಿಕೊಂಡರು. ಇಂದಿರಾಗಾಧಿ ಅವರು ೧೯೬೯ರಲ್ಲಿ ಕಾಂಗ್ರೆಸ್ ಒಡೆದಾಗ ಪಿಎಸ್‌ಪಿಯ ಅನೇಕ ಧುರೀಣರು ಆಕೆಯ ಆಕರ್ಷಕ ಘೋಷಣೆಗೆ ಮರುಳಾಗಿ ಆಡಳಿತ ಕಾಂಗ್ರೆಸ್ ಸೇರಿದರು. ಸಾಮಾನ್ಯ ಜನತೆಗೆ ಅರ್ಥವಾಗದ ಚರ್ಚೆ, ಸಿದ್ಧಾಂತಗಳಲ್ಲಿ ತೊಡಗಿದ್ದು, ಪಿ.ಎಸ್.ಪಿ. ಹಾಗೂ ಎಸ್.ಎಸ್.ಪಿ. ಎಂಬ ಎರಡು ಪಕ್ಷಗಳಾಗಿದ್ದು, ಇವುಗಳಿಗಿರುವ ವ್ಯತ್ಯಾಸ ಜನತೆಗೆ ತಿಳಿಯದೇ ಹೋದದು, ಜನ ಸಾಮಾನ್ಯರನ್ನು ತಲುಪದ ನಾಯಕತ್ವ ಈ ಪಕ್ಷದ ಅವನತಿಗೆ ಮುಖ್ಯ ಕಾರಣವಾಯಿತು. ೧೯೭೭ರ ತನಕ ಅರೆಜೀವವಾಗಿದ್ದ ಸಮಾಜವಾದಿ ಪಕ್ಷ ಜನತಾಪಕ್ಷದಲ್ಲಿ ವಿಲೀನವಾಯಿತು.

## ಜನತಾಪಕ್ಷ

೧೯೭೦ರಿಂದ ೭೭ರ ವರೆಗೆ ರಾಜ್ಯದ ಅಧಿಕೃತ ವಿರೋಧ ಪಕ್ಷವಾಗಿದ್ದ ಸಂಸ್ಥಾ ಕಾಂಗ್ರೆಸ್ ಭದ್ರನೆಲೆ ಹೊಂದಿದ್ದು ಅದು ಜನತಾಪಕ್ಷದಲ್ಲಿ ವಿಲೀನವಾಯಿತು. ಭಾರತದ ರಾಜಕಾರಣದ ಮೇಲಷ್ಟೇ ಅಲ್ಲದೆ ಕರ್ನಾಟಕದ ರಾಜಕಾರಣದ ಮೇಲೂ ಜನತಾ ಪಕ್ಷ ಅಗಣಿತ ಪ್ರಭಾವವನ್ನು ಬೀರಿದೆ. ೧೯೭೫ ಜೂನ್ ೨೫ರಂದು ಶ್ರೀಮತಿ ಇಂದಿರಾಗಾಂಧಿ ಅವರು ದೇಶದಲ್ಲಿ ತುರ್ತು ಪರಿಸ್ಥಿತಿಯನ್ನು ಜಾರಿಗೆ ತಂದ ಮೇಲೆ ವಿರೋಧ ಪಕ್ಷದವರಿಗೆ ತಮ್ಮ ಸಂಘಟನೆ ಅನಿವಾರ್ಯವಾಯಿತು. ೧೯೭೭ ಡಿಸೆಂಬರ್ ೪ ರಂದು ಸಂಸ್ಥಾ ಕಾಂಗ್ರೆಸ್ ಜನತಾ ಪಕ್ಷದೊಡನೆ ವಿಲೀನವಾಯಿತು. ಲೋಕದಳ, ಜನಸಂಘ ಹಾಗೂ ಜಗಜೀವನರಾಂ ನೇತೃತ್ವದ 'ಕಾಂಗ್ರೆಸ್ ಫಾರ್ ಡೆಮಾಕ್ರಸಿ' ಎಂಬ ಗುಂಪು ಜನತಾ ಪಕ್ಷದೊಡನೆ ವಿಲೀನವಾಯಿತು. ೧೯೭೭ರ ಲೋಕಸಭಾ ಚುನಾವಣೆ ಕರ್ನಾಟಕದಲ್ಲಿ ವಿರೋಧ ಪಕ್ಷಗಳ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಪ್ರಮುಖವಾದುದು. ಇದು ಕರ್ನಾಟಕದಲ್ಲೂ ವಿರೋಧ ಪಕ್ಷ ಆಳ್ವಿಕೆಗೆ ಬರಬಹುದೆಂಬ ಆಸೆಯನ್ನು ಮೂಡಿಸಿದ ಕೀರ್ತಿ ಜನತಾಪಕ್ಷಕ್ಕೆ ಸೇರುತ್ತದೆ. ಭಾರತದ ರಾಜಕಾರಣಕ್ಕೆ ಹೊಸ ಆಯಾಮ ಕೊಡುವ ಆಶಯ ಆ ಪಕ್ಷದ ಪ್ರಣಾಳಿಕೆಯಲ್ಲಿತ್ತು. ಕೇವಲ ಎರಡು ಲೋಕಸಭಾ ಸ್ಥಾನಗಳನ್ನು ಮಾತ್ರ ಈ ಚುನಾವಣೆಯಲ್ಲಿ ಜನತಾ ಪಕ್ಷ ಪಡೆದಿದ್ದರೂ ಜನತೆಯಲ್ಲಿ ಹೊಸ ಭರವಸೆ ಹುಟ್ಟಿಸುವಲ್ಲಿ ಯಶಸ್ವಿಯಾಯಿತು. ರಾಜ್ಯದ ಕಾಂಗ್ರೆಸ್ ಭದ್ರ ಕೋಟೆಯನ್ನು ಭೇದಿಸುವಲ್ಲಿ ಯಶಸ್ವಿಯಾದ ಪಕ್ಷವೆಂದರೆ ಜನತಾ ಪಕ್ಷವೇ. ರಾಜ್ಯದಲ್ಲಿ ವಿರೋಧ ಪಕ್ಷದ ಸರ್ಕಾರ ರಚಿಸಿದ ಕೀರ್ತಿ ಈ ಪಕ್ಷಕ್ಕೆ ಸಂದಿತು.

೧೯೭೮ರ ವಿಧಾನಸಭಾ ಚುನಾವಣೆ ವಿರೋಧ ಪಕ್ಷವಾದ ಜನತಾಪಕ್ಷದ ದೃಷ್ಟಿಯಿಂದ ಅತ್ಯಂತ ಪ್ರಮುಖವಾದ ಘಟನೆಯಾಗಿದೆ. ಜನತಾಪಕ್ಷ ೨೨೨ ಸ್ಥಾನಗಳಿಗೆ ಸ್ಪರ್ಧಿಸಿ ಶೇ. ೩೭.೯೫ ಮತಗಳನ್ನು ಗಳಿಸಿ ಕೇವಲ ೫೯ ಸ್ಥಾನಗಳನ್ನು ಪಡೆಯಿತು. ಇದಕ್ಕೆ ಅನೇಕ ಕಾರಣಗಳನ್ನು ಕೊಡಬಹುದು. ಮುಖ್ಯವಾಗಿ ಜನತಾಪಕ್ಷದ ನಾಯಕರುಗಳ ದೂರದೃಷ್ಟಿಯ ಕೊರತೆ ಹಾಗೂ ಅಧಿಕಾರ ಪಡೆದೇ ತೀರುತ್ತೇವೆಂಬ ಅತಿಯಾದ ಆತ್ಮವಿಶ್ವಾಸ ಈ ಪಕ್ಷದ ಸೋಲಿಗೆ ಪ್ರಮುಖ ಕಾರಣವಾಗಿತ್ತು. ೧೯೮೦ರ ಲೋಕಸಭಾ ಚುನಾವಣೆಯಲ್ಲಿ ಕೇವಲ ಒಂದು ಸ್ಥಾನ ಪಡೆಯುವಲ್ಲಿ ಮಾತ್ರ ಯಶಸ್ವಿಯಾಯಿತು. ಇದಕ್ಕೆ ರಾಜ್ಯದ ರಾಜಕಾರಣಕ್ಕಿಂತ ರಾಷ್ಟ್ರರಾಜಕಾರಣದ ಸಂಗತಿಗಳೇ ಹೆಚ್ಚಾಗಿ ಕಾರಣವಾಗಿದೆ. ೧೯೮೩ರಲ್ಲಿ ನಡೆದ ರಾಜ್ಯ ವಿಧಾನಸಭೆ ಚುನಾವಣೆಯಲ್ಲಿ ಜನತಾಪಕ್ಷ ೧೯೪ ಸ್ಥಾನಗಳಿಗೆ ಸ್ಪರ್ಧಿಸಿ ೯೫ ಕ್ಷೇತ್ರಗಳಲ್ಲಿ ಜಯಗಳಿಸಿತು. ಶೇ. ೩೩.೦೯ ಮತವನ್ನು ಅದು ಪಡೆಯಿತು. ಇದಕ್ಕೆ ಕಾರಣ ದೇವರಾಜ ಅರಸು ಅವರು ಸ್ಥಾಪಿಸಿದ ಕರ್ನಾಟಕ ಕ್ರಾಂತಿರಂಗ ಜನತಾ ಪಕ್ಷದ ಚುನಾವಣೆಯ ಚಿಹ್ನೆಯ ಮೇಲೆ ಸ್ಪರ್ಧಿಸಿತ್ತು. ಕ್ರಾಂತಿರಂಗದ ಮೂಲಕ ಹಿಂದುಳಿದ ವರ್ಗದ

ಬಹುದೊಡ್ಡ ಸಂಖ್ಯೆಯ ಮತದಾರರು ಜನತಾ ಪಕ್ಷಕ್ಕೆ ಒಲಿದಿದ್ದರು. ಗುಂಡೂರಾವ್ ನೇತೃತ್ವದ ಕಾಂಗ್ರೆ ಸರ್ಕಾರದ ವಿವೇಚನಾರಹಿತ ಆಡಳಿತ ಕೂಡಾ ಜನತಾ ಪಕ್ಷಕ್ಕೆ ವರದಾನವಾಗಿತ್ತು. ಜನತಾ ಪಕ್ಷದ ಹಿರಿಯ ನಾಯಕರು ಸದನದ ಒಳಗೆ ಅಥವಾ ಹೊರಗೆ ಆಡಳಿತ ಪಕ್ಷದ ವಿರುದ್ಧ ಹೋರಾಟ ಮಾಡದಿದ್ದರೂ ಕರ್ನಾಟಕದ ಜನ ಅವರಿಗೆ ಅಧಿಕಾರ ಸೂತ್ರ ಹಿಡಿಯಲು ಅವಕಾಶ ಕೊಟ್ಟರು. ೧೯೮೪ರಲ್ಲಿ ಇಂದಿರಾಗಾಂಧಿ ಅವರ ಹತ್ಯೆಯಿಂದಾಗಿ ಲೋಕಸಭಾ ಚುನಾವಣೆ ನಡೆಯಿತಷ್ಟೆ. ಅಂತಹ ಸಂದರ್ಭದಲ್ಲಿ ಜನತಾ ಪಕ್ಷ ನಾಲ್ಕು ಲೋಕಸಭಾ ಸ್ಥಾನಗಳನ್ನು ಪಡೆಯಿತು. ೧೯೮೫ರ ವಿಧಾನಸಭಾ ಚುನಾವಣೆಯಲ್ಲಿ ಜನತಾ ಪಕ್ಷ ಸಾಧಿಸಿದ ಅದ್ಭುತ ವಿಜಯ ರಾಜ್ಯದಲ್ಲಿ ವಿರೋಧ ಪಕ್ಷಕ್ಕೊಂದು ದೊಡ್ಡ ಅವಕಾಶವನ್ನು ಸೃಷ್ಟಿಸಿತು. ೧೩೯ ಸ್ಥಾನಗಳನ್ನು ಗಳಿಸಿದ ಜನತಾಪಕ್ಷ ಶೇ. ೪೩..೮೪ ಮತಗಳನ್ನು ಗಳಿಸಿತ್ತು. ಜನರನ್ನು ಜಾಗೃತಿ ಮಾಡುವುದು ಹಾಗೂ ಆಡಳಿತ ಪಕ್ಷದಿಂದ ಅಧಿಕಾರ ಸೂತ್ರ ಹಿಡಿಯುವುದು ವಿರೋಧ ಪಕ್ಷದ ಸಾಧನೆಯಾದರೆ ಜನತಾ ಪಕ್ಷ ಸಂಪೂರ್ಣ ಅಂಕಗಳನ್ನು ಪಡೆಯುತ್ತದೆ. ೧೯೮೯ರ ಲೋಕಸಭೆ ಹಾಗೂ ವಿಧಾನಸಭೆ ಚುನಾವಣೆ ವೇಳೆಗೆ ಜನತಾ ಪಕ್ಷ ವಿಭಜನೆಗೊಂಡು ಹೆಗಡೆ ನೇತೃತ್ವದ ಜನತಾದಳ ಹಾಗೂ ದೇವೇಗೌಡ ನೇತೃತ್ವದ ಜನತಾಪಕ್ಷವಾಗಿ ವಿಭಜನೆಗೊಂಡಿತ್ತು. ದೇವೇಗೌಡ ನೇತೃತ್ವದ ಜನತಾಪಕ್ಷ ವಿಧಾನಸಭೆಯಲ್ಲಿ ಕೇವಲ ಎರಡು ಸ್ಥಾನ ಗಳಿಸಿತ್ತು. ಲೋಕಸಭೆಯಲ್ಲಿ ಯಾವುದೇ ಸ್ಥಾನ ಗಳಿಸಲು ವಿಫಲವಾಯಿತು. ಜನತಾದಳ ಒಂದು ಲೋಕಸಭಾ ಸ್ಥಾನವನ್ನು, ೨೪ ವಿಧಾನಸಭಾ ಸ್ಥಾನಗಳನ್ನು ಮಾತ್ರ ಪಡೆಯಿತು. ೧೯೯೧ರ ಲೋಕಸಭಾ ಚುನಾವಣೆಯಲ್ಲಿ ಜನತಾದಳ ಗಣನೀಯ ಸಾಧನೆಯನ್ನೇನೂ ಮಾಡಲಿಲ್ಲ. ದೇವೇಗೌಡ ಅವರು ಮಾತ್ರ ಜನತಾದಳ ಬೆಂಬಲ ಪಡೆದ ಕಾರಣ ಹಾಸನದಿಂದ ಲೋಕಸಭೆಗೆ ಆಯ್ಕೆಯಾಗಿದ್ದರು. ಈ ಮೈತ್ರಿ ೧೯೯೪ರ ವಿಧಾನಸಭಾ ಚುನಾವಣೆಯಲ್ಲಿ ಅದ್ಭುತ ಪ್ರಭಾವ ಬೀರಿತು. ಜನತಾದಳ ಶೇ. ೩೩.೫೬ ಮತಗಳಿಸಿ ೧೧೫ ಸ್ಥಾನಗಳನ್ನು ಪಡೆಯಿತು. ಜನತಾಪಕ್ಷ ಹಾಕಿಕೊಟ್ಟಿದ್ದ ದಾರಿಯಲ್ಲೇ ಸಾಗಿದ ಜನತಾದಳ ಅಧಿಕಾರ ಪಡೆಯುವಲ್ಲಿ ಯಶಸ್ವಿಯಾಯಿತು.

೧೯೯೬ರ ಲೋಕಸಭಾ ಚುನಾವಣೆ ಜನತಾದಳದ ದೃಷ್ಟಿಯಿಂದ ಅತ್ಯಂತ ಪ್ರಮುಖ ಘಟ್ಟವಾಗಿದೆ. ೨೮ ಲೋಕಸಭಾ ಸ್ಥಾನಗಳ ಪೈಕಿ ೧೬ ಸ್ಥಾನಗಳನ್ನು ಗೆದ್ದ ಜನತಾದಳ ಶೇಕಡ ೩೧.೯೪ ಮತ ಪಡೆಯುವಲ್ಲಿ ಯಶಸ್ವಿಯಾಯಿತು. ಇದರಿಂದಾಗಿ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಎಚ್. ಡಿ. ದೇವೇಗೌಡ ಅವರು ದೇಶದ ಪ್ರಧಾನಿಯಾದರು. ಈ ಲೋಕಸಭಾ ಚುನಾವಣೆ ಸಹ ಹಿಂದೆ ಚಿಕ್ಕಮಗಳೂರಿನಲ್ಲಿ ಶ್ರೀಮತಿ ಗಾಂಧಿ ಸ್ಪರ್ಧಿಸಿದ್ದ ಚುನಾವಣೆಯಂತೆ ಹಣದ ಹೊಳೆ ಹರಿಸಿತು. ಅಭ್ಯರ್ಥಿಗಳು ಹಿಂದೆಂದೂ ಕಾಣದಷ್ಟು ಸಂಪನ್ಮೂಲಗಳನ್ನು ಪಡೆದರು. ಕಾಂಗ್ರೆಸ್‌ಗೆ ಭಿನ್ನಮತ ದೋಷವಾದರೆ, ವಿರೋಧ ಪಕ್ಷಗಳಿಗೆ ವ್ಯಕ್ತಿ ಪ್ರತಿಷ್ಠೆ ಅವನತಿಗೆ ಕಾರಣವಾಗಿದೆ. ರಾಮಕೃಷ್ಣ ಹೆಗಡೆ ಅವರನ್ನು ಜನತಾದಳದಿಂದ ಉಚ್ಚಾಟನೆ ಮಾಡಲಾಯಿತು. ಇದು ರಾಜ್ಯದಲ್ಲಿ ಜನತಾದಳದ ಬಲ ಕ್ಷೀಣಿಸಲು ಕಾರಣವಾಯಿತು. ೧೯೯೬ರ ಲೋಕಸಭಾ ಚುನಾವಣೆ ವೇಳೆಗೆ ೨೮ ಸ್ಥಾನಗಳಲ್ಲಿ ಕೇವಲ ೩ ಸ್ಥಾನಗಳು ಮಾತ್ರ ಅದಕ್ಕೆ ದೊರೆಯಿತು. ಶೇ. ೨೧.೬೯ ಮತ ಪಡೆಯಿತು. ಹಿಂದಿನ ಚುನಾವಣೆಯಲ್ಲಿ ೧೬ ಸ್ಥಾನಗಳನ್ನು ಗಳಿಸಿದ್ದ ಜನತಾದಳ ಕೇವಲ ಮೂರು ಸ್ಥಾನ ಪಡೆಯಬೇಕಾಯಿತು.

೧೯೯೯ರ ಚುನಾವಣಾ ವೇಳೆಗೆ ಜನತಾದಳ ಕಟ್ಟುಕಿತ್ತ ಪಂಜಿನಂತಾಗಿತ್ತು. ಜಾತ್ಯತೀತ ಜನತಾದಳ, ಸಂಯುಕ್ತ ಜನತಾದಳ ಎಂಬ ಪಕ್ಷಗಳ ಉದಯವಾದವು. ಲೋಕಸಭಾ ಚುನಾವಣೆಯಲ್ಲಿ ಶೇ. ೧೦.೮೫ ಮತ ಪಡೆದ ಜಾತ್ಯತೀತ ಜನತಾದಳ ಅತ್ಯಂತ ದುಃಸ್ಥಿತಿ ತಲುಪಿತು. ಜಾತ್ಯತೀತ ಜನತಾದಳ ಲೋಕಸಭೆಗೆ ಒಂದೂ ಸ್ಥಾನವನ್ನೂ ಪಡೆಯಲಿಲ್ಲ. ವಿಧಾನಸಭಾ ಚುನಾವಣೆಯಲ್ಲಿ ಶೇ. ೧೦.೪೨ ಮತಗಳಿಸಿ ೧೦ ಸ್ಥಾನಗಳಲ್ಲಿ ವಿಜಯಶಾಲಿಯಾಯಿತು. ಇದರ ಪ್ರತಿಸ್ಪರ್ಧಿ ಅಂದರೆ ಸಂಯುಕ್ತ ಜನತಾದಳ ಶೇ. ೨೩. ೨೫ರಷ್ಟು ಮತಗಳಿಸಿ ೩ ಅಭ್ಯರ್ಥಿಗಳನ್ನು ಲೋಕಸಭೆಗೆ ಕಳುಹಿಸಿತು. ವಿಧಾನಸಭಾ ಚುನಾವಣೆಯಲ್ಲಿ ಶೇ. ೧೫..೫೨ರಲ್ಲಿ ಮತಗಳಿಸಿ ೧೯ ಸ್ಥಾನಗಳನ್ನು ಪಡೆಯಿತು. ಈ ಚುನಾವಣೆಯಲ್ಲಿ ಜನತಾದಳ ಒಟ್ಟಿಗೆ ಸ್ಪರ್ಧಿಸಿದ್ದರೆ ಕಾಂಗ್ರೆಸ್‌ಗೆ ಜಯ ಸುಲಭವಾಗುತ್ತಿರಲಿಲ್ಲ ಎಂಬುದು ರಾಜಕೀಯ ವಿಶ್ಲೇಷಣಕಾರರ ಅಭಿಪ್ರಾಯ. ಕನಕಪುರ ಲೋಕಸಭೆಗೆ ನಡೆದ ಚುನಾವಣೆಯಲ್ಲಿ ಎರಡೂ ಪಕ್ಷಗಳ ಒಮ್ಮತ ಅಭ್ಯರ್ಥಿಯಾಗಿ ಸ್ಪರ್ಧಿಸಿದ ಎಚ್. ಡಿ. ದೇವೇಗೌಡ ಅವರು ಜಯಶೀಲರಾದರು. ಅಂದರೆ ಜನತಾದಳ ಒಟ್ಟುಗೂಡಿದರೆ ಅದು ರಾಜ್ಯದ ರಾಜಕೀಯವನ್ನು ಮುನ್ನಡೆಸುವ ಶಕ್ತಿ ಪಡೆಯುತ್ತದೆಂದು ಯಾರು ಬೇಕಾದರೂ ಊಹಿಸಬಹುದು.

## ಸ್ವತಂತ್ರ ಪಕ್ಷ

ದಕ್ಷಿಣ ಭಾರತ ರಾಜಕೀಯ ಮುತ್ಸದ್ದಿಗಳಲ್ಲಿ ರಾಜಾಜಿ ಅತ್ಯಂತ ಪ್ರಮುಖರು. ನೆಹರು ಅವರ ಸಮಾಜವಾದವನ್ನು ವಿರೋಧಿಸಿದವರಲ್ಲಿ ರಾಜಾಜಿ ಪ್ರಮುಖರು. ರಾಜಾಜಿ ಮುಕ್ತ ಆರ್ಥಿಕ ವ್ಯವಸ್ಥೆ ಇರಬೇಕೆನ್ನುವವರು. ಲೋಕೋಪಯೋಗಿ ಇಲಾಖೆ

ದೇಶದ ಮೊದಲ ಶತ್ರು ಎಂದು ಕರೆದ ರಾಜಾಜಿ ಎಲ್ಲಾ ಕೆಲಸಗಳಲ್ಲೂ ಸರ್ಕಾರದ ನಿಯಂತ್ರಣ ಕಡಿಮೆಯಿರಬೇಕೆಂದು ಹೇಳಿದವರು. ೧೯೫೯ ಜೂನ್ ೧೪ ರಂದು ಬೆಂಗಳೂರಿನಲ್ಲಿ ರಾಜಾಜಿ ಅವರು ತಾವು ಸ್ವತಂತ್ರ ಪಕ್ಷ ಸ್ಥಾಪಿಸುವುದಾಗಿ ಹೇಳಿದರು. ಎನ್. ಜಿ. ರಂಗ ಅದರ ಅಧ್ಯಕ್ಷರಾಗಿದ್ದರು. ಮಿನೂ ಮಸಾನಿ ಅದರ ಪ್ರಧಾನ ಕಾರ್ಯದರ್ಶಿಯಾಗಿದ್ದರು. ೧೯೬೨ರ ಚುನಾವಣೆಯಲ್ಲಿ ಮೈಸೂರು ರಾಜ್ಯ ವಿಧಾನಸಭೆಗೆ ಈ ಪಕ್ಷದಿಂದ ಎಂಟು ಜನ ಶಾಸಕರು ಆಯ್ಕೆಯಾಗಿದ್ದರು. ಹೆಗ್ಗಡದೇವನಕೋಟೆ ಆರ್. ವೀರಣ್ಣ ಇದರಲ್ಲಿ ಒಬ್ಬರು. ೧೯೬೭ರ ಲೋಕಸಭಾ ಚುನಾವಣೆಯಲ್ಲಿ ನಾಲ್ವರು ಲೋಕಸಭೆಗೆ ಆಯ್ಕೆಯಾದರು. ಜೆ. ಎಂ. ಇಮಾಂ ಚಿತ್ರದುರ್ಗದಿಂದ, ಜೆ. ಎಂ. ಎಲ್. ಪ್ರಭು ಉಡುಪಿ ಕ್ಷೇತ್ರದಿಂದ ಆಯ್ಕೆಯಾಗಿದ್ದರು. ೧೯೬೭ರ ವಿಧಾನಸಭಾ ಚುನಾವಣೆಯ ವೇಳೆಗೆ ಈ ಪಕ್ಷದಿಂದ ೧೪ ಶಾಸಕರು ಮೈಸೂರು ವಿಧಾನಸಭೆಗೆ ಪ್ರವೇಶಿಸಿದರು. ೧೯೭೦ರ ಹೊತ್ತಿಗೆ ಈ ಪಕ್ಷ ಕರ್ನಾಟಕದ ರಾಜಕಾರಣದಿಂದ ಕಣ್ಮರೆಯಾಯಿತು. ಈ ಪಕ್ಷದ ಎಚ್. ಎನ್. ನಂಜೇಗೌಡ, ಜಿ. ಎಂ. ಮಂಜುನಾಥ, ಎಚ್. ಎಸ್. ಪುಟ್ಟರಂಗನಾಥ ಮೊದಲಾದವರು ಆಡಳಿತ ಕಾಂಗ್ರೆಸ್‌ಗೆ ಸೇರ್ಪಡೆಯಾದರು.

## ಆರ್. ಎಸ್. ಎಸ್. ಮೂಲಮೂರ್ತಿ; ಜನಸಂಘ-ಬಿಜೆಪಿ ಉತ್ಸವಮೂರ್ತಿ

ಕರ್ನಾಟಕ ರಾಜಕಾರಣದಲ್ಲಿ ಜನಸಂಘ ಹಾಗೂ ಬಿಜೆಪಿ ಪ್ರಮುಖವಾದ ಸ್ಥಾನಗಳಿಸಿವೆ. ರಾಷ್ಟ್ರೀಯ ಸ್ವಯಂ ಸೇವಕ ಸಂಘ (ಆರ್. ಎಸ್. ಎಸ್.) ಮೂಲದೇವರಾದರೆ ಉತ್ಸವ ಮೂರ್ತಿಗಳು ಜನಸಂಘ ಹಾಗೂ ಬಿಜೆಪಿ. ಮಂಗಳೂರು, ಹುಬ್ಬಳ್ಳಿ, ತುಮಕೂರು ಹಾಗೂ ಬೆಂಗಳೂರಿನಲ್ಲಿ ಆರ್‌ಎಸ್‌ಎಸ್ ಮೊದಲಿನಿಂದಲೂ ಕ್ರಿಯಾಶೀಲವಾಗಿತ್ತು. ಪ್ರಾರಂಭದಲ್ಲಿ ಬ್ರಾಹ್ಮಣ ಸಮುದಾಯದಲ್ಲಿ ಮಾತ್ರ ಜನಪ್ರಿಯವಾಗಿದ್ದ ಈ ಸಂಘಟನೆ ಕಾಲಕ್ರಮೇಣದಲ್ಲಿ ಮಧ್ಯಮವರ್ಗದಲ್ಲೆಲ್ಲಾ ಜನಪ್ರಿಯವಾಗತೊಡಗಿತು. ಬೆಂಗಳೂರಿನ ಕೇಶವ ಶಿಲ್ಪದಲ್ಲಿ ಬೃಹತ್ ಕೇಂದ್ರ ಸ್ಥಾನ ಹೊಂದಿರುವ ಆರ್‌ಎಸ್‌ಎಸ್ 'ಉತ್ಥಾನ' ಎಂಬ ಮಾಸಪತ್ರಿಕೆಯನ್ನು ಪ್ರಕಟಿಸುತ್ತಿದೆ. ಹಿಂದೂ ಸಂಸ್ಕೃತಿಯ ಮಹತ್ವ ಸಾರುವ ಅತ್ಯುತ್ತಮ ಪ್ರಕಟಣೆಗಳನ್ನು ಅದು ಹೊರತಂದಿದೆ.

೧೯೫೭ರಿಂದ ೧೯೯೯ರ ವರೆಗೆ ನಡೆದ ೧೩ ಲೋಕಸಭಾ ಚುನಾವಣೆಗಳಲ್ಲಿ ಜನಸಂಘ -ಬಿಜೆಪಿ ಗಣನೀಯ ಸಾಧನೆ ಮಾಡುತ್ತಾ ಬಂದಿದೆ. ೧೯೫೭ರಲ್ಲಿ ಜನಸಂಘ ಕರ್ನಾಟಕದಲ್ಲಿ ಕೇವಲ ಶೇ. ೪.೦೦ ಮತ ಪಡೆಯಿತು. ಒಂದು ಸ್ಥಾನ ಸಹ ಅದಕ್ಕೆ ದೊರಕಿರಲಿಲ್ಲ. ೧೯೯೧ರಲ್ಲಿ ಬಿಜೆಪಿಗೆ ಶೇ. ೨೮.೮ರಷ್ಟು ಮತ ದೊರೆಯಿತು. ಅದರ ನಾಲ್ಕು ಅಭ್ಯರ್ಥಿಗಳು ಲೋಕಸಭೆಗೆ ಪ್ರವೇಶಿಸಿದರು. ೧೯೯೮ರ ಲೋಕಸಭಾ ಚುನಾವಣೆಯಲ್ಲಿ ಶೇ. ೨೬. ೩೪ರಷ್ಟು ಮತ ದೊರಕಿತ್ತು. ೧೩ ಅಭ್ಯರ್ಥಿಗಳು ಲೋಕಸಭೆಗೆ ಪ್ರವೇಶಿಸಿದರು. ೧೯೯೯ರ ಚುನಾವಣೆಯಲ್ಲಿ ಶೇ. ೨೭.೧೮ರಷ್ಟು ಮತ ದೊರಕಿದ್ದು ಏಳು ಅಭ್ಯರ್ಥಿಗಳು ಲೋಕಸಭೆಯಲ್ಲಿದ್ದಾರೆ.

೧೯೫೭ರ ವಿಧಾನಸಭಾ ಚುನಾವಣೆಯಲ್ಲಿ ಜನಸಂಘ ಶೇ. ೨.೩೦ರಷ್ಟು ಮತ ಪಡೆಯಿತು. ೧೯೮೩ರಲ್ಲಿ ಶೇ. ೭.೮೦ರಷ್ಟು ಮತ ಪಡೆದ ಬಿಜೆಪಿ ಮೊದಲ ಬಾರಿಗೆ ೧೮ ಜನ ಶಾಸಕರನ್ನು ರಾಜ್ಯ ವಿಧಾನಸಭೆಯಲ್ಲಿ ಹೊಂದಿತು. ೧೯೯೪ರ ಚುನಾವಣೆಯಲ್ಲಿ ಬಿಜೆಪಿಗೆ ಶೇ. ೧೭.೦೦ರಷ್ಟು ಮತ ಬಂದಿದ್ದು ಅದರ ೪೦ ಅಭ್ಯರ್ಥಿಗಳು ಶಾಸಕರಾದರು. ೧೯೯೯ರ ವಿಧಾನಸಭಾ ಚುನಾವಣೆಯಲ್ಲಿ ಬಿಜೆಪಿ ಅತಿಯಾದ ಆತ್ಮವಿಶ್ವಾಸ ಪ್ರದರ್ಶಿಸಿತು. ಕೇಂದ್ರ ಬಿಜೆಪಿ ನಾಯಕರು ಸಂಯುಕ್ತ ಜನತಾದಳದೊಡನೆ ಒಪ್ಪಂದ ಮಾಡಿಕೊಳ್ಳುವಂತೆ ಸ್ಥಳೀಯ ಘಟಕಕ್ಕೆ ನಿರ್ದೇಶನ ನೀಡಿದರು. ಇದರ ಫಲವಾಗಿ ಶೇ. ೨೦.೬೯ ಮತಗಳಿಸಿದ ಬಿಜೆಪಿ ೪೪ ಸ್ಥಾನಗಳಲ್ಲಿ ಜಯ ಪಡೆಯಿತು. ಬಿ. ಬಿ. ಶಿವಪ್ಪ ಹಾಗೂ ಜಗದೀಶ ಶೆಟ್ಟರ್ ನಡುವೆ ವಿರೋಧ ಪಕ್ಷದ ನಾಯಕನ ಸ್ಥಾನಕ್ಕೆ ನಡೆದ ಕಿತ್ತಾಟದಲ್ಲಿ ಬಿಜೆಪಿ ಸಾಕಷ್ಟು ನಷ್ಟ ಅನುಭವಿಸಿತು. ಸುಶಿಕ್ಷಿತ ಹಾಗೂ ಮಧ್ಯಮ ವರ್ಗದಲ್ಲಿ ಉತ್ತಮ ಭಾವನೆ ಹೊಂದಿದ ಬಿಜೆಪಿ ಆಂತರಿಕ ಕಿತ್ತಾಟದಿಂದಾಗಿ ನೆಲೆ ಕಳೆದುಕೊಂಡಿದೆ. ಕೇಂದ್ರದಲ್ಲಿ ಬಿಜೆಪಿ ನೇತೃತ್ವದ ಎನ್‌ಡಿಎ ಸರ್ಕಾರವಿದ್ದರೂ ಅದರ ಪ್ರಮುಖ ನಾಯಕರಾದ ಬಿ. ಎಸ್. ಯಡಿಯೂರಪ್ಪ, ಕೆ. ಎಸ್. ಈಶ್ವರಪ್ಪ ಅವರುಗಳ ಗೈರು ಹಾಜರಿಯಿಂದಾಗಿ ಅದು ಕರ್ನಾಟಕದ ಸದನಗಳಲ್ಲಿ ತನ್ನ ಅಸ್ತಿತ್ವ ಸ್ಥಾಪಿಸುವುದರಲ್ಲಿ ಸೋತಿದೆ. ಬೇರೆ ಬೇರೆ ಪಕ್ಷಗಳಿಂದ ಬಿಜೆಪಿಗೆ ವಲಸೆಹೋದ ನಾಯಕರು ಅಲ್ಲಿನ ವಾತಾವರಣಕ್ಕೆ ಹೊಂದಿಕೊಳ್ಳಲಾಗದೆ ವಾಪಸ್ಸು ಬರುತ್ತಿದ್ದಾರೆ. ಪ್ರೊ। ಎಲ್. ಜಿ. ಹಾವನೂರು, ಎಚ್. ಎನ್. ನಂಜೇಗೌಡ, ಎಂ. ಶ್ರೀನಿವಾಸ್, ಪ್ರಭಾಕರ ರಾಣೆ, ಶ್ರೀಕಂಠದತ್ತ ನರಸಿಂಹರಾಜ ಒಡೆಯರ್, ಕೆ. ಎಚ್. ಹನುಮೇಗೌಡ ಮೊದಲಾದವರು ಬಿಜೆಪಿ ಬಗ್ಗೆ ತಮಗೆ ಆದ ನಿರಾಸೆಯನ್ನು ಬಹಿರಂಗವಾಗಿಯೇ ಹೇಳತೊಡಗಿದ್ದಾರೆ. ಈಗ ಬಿಜೆಪಿಯಲ್ಲಿರುವ ಎಂ. ರಾಜಶೇಖರಮೂರ್ತಿ ಸಹ ಇಂತಹುದೇ ಅಸಮಾಧಾನವನ್ನು ವ್ಯಕ್ತಪಡಿಸುತ್ತಿದ್ದಾರೆ. ಬಿಜೆಪಿಯ ಕೇಂದ್ರ ಹಾಗೂ ರಾಜ್ಯನಾಯಕರು ಆತ್ಮಶೋಧನೆ ಮಾಡಿಕೊಳ್ಳಬೇಕಾದ ಅಗತ್ಯವಿದೆ. ಪಕ್ಷಕ್ಕೆ ಬೇರೆ ಬೇರೆ ವರ್ಗದ ನಾಯಕರನ್ನು ಸೇರಿಸಿಕೊಳ್ಳುವುದು ಎಷ್ಟು ಮುಖ್ಯವೋ ಅವರನ್ನು ಉಳಿಸಿಕೊಳ್ಳುವುದೂ ಅಷ್ಟೇ ಮುಖ್ಯ. ಪ್ರತಿಯೊಬ್ಬ ನಾಯಕರು ಪಕ್ಷ ತೊರೆದು ಹೋಗುವಾಗ ಮಾಡುವ ಆಘಾತವನ್ನು ಆ ಪಕ್ಷದ ಮುಖಂಡರು ಅರಿಯಬೇಕಾಗಿದೆ.

## ಲೋಕಶಕ್ತಿ

೧೯೯೮ರಲ್ಲಿ ರಾಮಕೃಷ್ಣ ಹೆಗಡೆ ತಮ್ಮ ಲೋಕಶಕ್ತಿ ಪಕ್ಷದೊಂದಿಗೆ ಬಿಜೆಪಿಯೊಡನೆ ಒಪ್ಪಂದ ಮಾಡಿಕೊಂಡು ಮೂರು ಲೋಕಸಭಾ ಸ್ಥಾನಗಳನ್ನು ಪಡೆದಿದ್ದರು. ಅಷ್ಟೇ ಅಲ್ಲ ಲೋಕಶಕ್ತಿ ಬಿ.ಜೆ.ಪಿ.ಗೆ ಸಾಕಷ್ಟು ಜನ ಬೆಂಬಲವನ್ನು ಗಳಿಸಿ ಕೊಟ್ಟಿತ್ತು. ಇದಕ್ಕೆ ಪೂರ್ವದಲ್ಲಿ ಅಂದರೆ ೧೯೯೬ರಲ್ಲಿ ತಮ್ಮನ್ನು ಜನತಾದಳದಿಂದ ಉಚ್ಚಾಟನೆ ಮಾಡಿದ ಮೇಲೆ ಹೆಗಡೆ ಅವರು 'ನವ ನಿರ್ಮಾಣ ವೇದಿಕೆ'ಯನ್ನು ನಿರ್ಮಿಸಿಕೊಂಡು ಆ ಮೂಲಕ ಜನ ಸಂಘಟನೆಯನ್ನು ಮಾಡಿದ್ದರು.

## ಗ್ರಾಮವನ್ನು ತಲುಪದ ಕಮ್ಯುನಿಸ್ಟರು

ಕರ್ನಾಟಕದಲ್ಲಿ ಕಮ್ಯೂನಿಸ್ಟ್ ಪಕ್ಷಗಳ ಪ್ರಭಾವ ಅತ್ಯಂತ ಸೀಮಿತವಾದುದು. ಸಿಪಿಐನ ಎಂ. ಎಸ್. ಕೃಷ್ಣನ್ ಆಡಳಿತ ಕಾಂಗ್ರೆಸ್ ನೊಡನೆ ಒಪ್ಪಂದ ಮಾಡಿಕೊಂಡ ಕಾರಣ ವಿಧಾನಸಭೆ ಪ್ರವೇಶಿಸಿದರು. ೧೯೮೩ರಲ್ಲಿ ಸಿಪಿಐಎಂನ ಮೂವರು ಸದಸ್ಯರು ವಿಧಾನಸಭೆಗೆ ಆಯ್ಕೆಯಾಗಿದ್ದರು. ೮೫ರಲ್ಲಿ ಸಿ.ಪಿ.ಐ.ನ ಪಂಪಾಪತಿ ಹಾಗೂ ಸಿ.ಪಿ.ಐ.ಎಂ.ನ ಎಸ್. ಸೂರ್ಯನಾರಾಯಣರಾವ್, ಆರ್. ವೆಂಕಟರಾಮಯ್ಯ ವಿಧಾನಸಭೆಗೆ ಚುನಾಯಿತರಾದರು. ೯೪ರಲ್ಲಿ ವಿಧಾನಸಭೆಗೆ ಚುನಾಯಿತರಾದ ಜಿ. ವಿ. ಶ್ರೀರಾಮರೆಡ್ಡಿ ಕಮ್ಯೂನಿಸ್ಟ್ ಪಕ್ಷದ ನಾಯಕರು.

ಕಮ್ಯುನಿಸ್ಟ್ ಚಳವಳಿಯ ಒಳ ಹೊರಗುಗಳು ಸಾಮಾನ್ಯ ಜನತೆಗಿರಲಿ, ಈ ಚಳವಳಿಯ ಬೆಂಬಲಿಗರಾದ ಕಾರ್ಮಿಕರಿಗೇ ಅರ್ಥ ವಾಗಿಲ್ಲ. ದೇಶದ ಇತರ ಭಾಗಗಳಲ್ಲಿರುವಷ್ಟು ಕಾರ್ಮಿಕ ಅಶಾಂತಿ ನಮ್ಮ ರಾಜ್ಯದಲ್ಲಿಲ್ಲ. ನಮ್ಮ ಕಾರ್ಮಿಕ ಸಮುದಾಯ ಸೌಮ್ಯಭಾವದ್ದು. ಸ್ವಲ್ಪ ಸುಧಾರಿತ ಊಳಿಗಮಾನ್ಯ ಪದ್ಧತಿಗೆ ಅವರು ಹೊಂದಿಕೊಂಡಿದ್ದಾರೆ ಎಂದು ಹೇಳಬಹುದು.

## ಕನ್ನಡ ಪರ ಹೋರಾಟಗಾರರು

೧೯೬೦ರಿಂದಲೂ ಕನ್ನಡ ಚಳವಳಿಗಾರರು ರಾಜ್ಯ ವಿಧಾನಸಭೆಯನ್ನು ಪ್ರವೇಶಿಸುತ್ತಿದ್ದಾರೆ. ವಾಟಾಳ್ ನಾಗರಾಜ್, ಕೆ. ಪ್ರಭಾಕರ ರೆಡ್ಡಿ ಹಾಗೂ ಜಿ. ನಾರಾಯಣಕುಮಾರ್ ಅವರುಗಳು ಈ ಚಳವಳಿಯಿಂದ ಬಂದವರು. ಅವರಲ್ಲಿ ಜಿ. ನಾರಾಯಣ ಕುಮಾರ್ ಜನತಾ ಪಕ್ಷದ ಚಿಹ್ನೆಯ ಮೇಲೆ ಸ್ಪರ್ಧಿಸಿದ್ದರು.

## ಕರ್ನಾಟಕ ರಾಜ್ಯ ರೈತಸಂಘ

೧೯೮೩ರ ನಂತರ ಕರ್ನಾಟಕ ರಾಜ್ಯ ರೈತಸಂಘ ತನ್ನ ರಾಜಕೀಯ ಆಕಾಂಕ್ಷೆಯನ್ನು ವ್ಯಕ್ತಪಡಿಸಿತು. ೧೯೮೯ರ ವಿಧಾನಸಭಾ ಚುನಾವಣೆಯಲ್ಲಿ ಬಾಬಾಗೌಡ ಪಾಟೀಲ್ ವಿಧಾನಸಭೆಗೆ ಆಯ್ಕೆಯಾಗಿದ್ದರು. ಪ್ರೊ। ಎಂ.ಡಿ. ನಂಜುಂಡಸ್ವಾಮಿ ಸಹ ರೈತ ಸಂಘದ ಮೂಲಕ ರಾಜ್ಯ ವಿಧಾನಸಭೆಗೆ ಪ್ರವೇಶಿಸಿದರು. ಕೆ. ಎಸ್. ಪುಟ್ಟಣ್ಣಯ್ಯ ಅವರು ೯೪ರ ಚುನಾವಣೆಯಲ್ಲಿ ಕರ್ನಾಟಕ ರೈತ ಸಂಘವನ್ನು ವಿಧಾನಸಭೆಯಲ್ಲಿ ಪ್ರತಿನಿಧಿಸಿದ್ದರು. ರಾಜಕೀಯೇತರ ಶಕ್ತಿಯಾಗಿ ರಾಜ್ಯದಲ್ಲಿ ರೂಪುತಳೆದ ರಾಜ್ಯ ರೈತಸಂಘ ಇಂತಹ ಸಂಘಟನೆಗಳೆಲ್ಲ ಕೊನೆಗೆ ತಲುಪುವಂತೆ, ರಾಜಕೀಯ ಪಕ್ಷವಾಗಿ ಪರಿವರ್ತನೆಯಾಯಿತು. ರಾಜಕೀಯ ಪಕ್ಷವಾದೊಡನೆ ಅದರ ಗುಣಗಳಾದ ವ್ಯಕ್ತಿ ಪ್ರತಿಷ್ಠೆ ಪಕ್ಷ ಹೋಳಾಗುವಿಕೆ ಇದಕ್ಕೂ ತಗುಲಿಕೊಂಡಿತು. ಅದರ ಜೊತೆಗೆ ರಾಜ್ಯ ರೈತಸಂಘದ ಅವಾಸ್ತವಿಕ ಬೇಡಿಕೆಗಳು, ಯಾವುದೇ ರಾಜ ಕೀಯ ಪಕ್ಷದೊಡನೆ ಹೊಂದಾಣಿಕೆ ಮಾಡಿಕೊಂಡು ಒಂದು ರಾಜಕೀಯ ಶಕ್ತಿಯಾಗಿ ಬೆಳೆಯುವಲ್ಲಿ ವಿಫಲತೆ, ರಾಜಕೀಯ ಪಕ್ಷವಾಗಿ ರಾಜ್ಯ ರೈತಸಂಘದ ಅವನತಿಗೆ ಕಾರಣವಾದವು.

## ತಮಿಳರ ಸ್ವಾಂತಿಕೆ

ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾದ ಸಿ.ಎಂ. ಆರ್ಮುಗಂ ಕರ್ನಾಟಕದಲ್ಲಿ ತಮ್ಮದೇ ಆದ ಸ್ಥಾನ ಪಡೆದಿದ್ದಾರೆ. ಕೆ.ಜಿ.ಎಫ್ ಹಾಗೂ ಬೆಂಗಳೂರಿನ ಕಂಟೋನ್ಮೆಂಟ್ ಪ್ರಾಂತ್ಯದಲ್ಲಿ ತಮಿಳರ ಜನಸಂಖ್ಯೆ ಸಾಕಷ್ಟಿದೆ. ಡಿ.ಎಂ.ಕೆ. ಮತ್ತು ಅಣ್ಣಾ ಡಿಎಂಕೆಯ ಪ್ರತಿನಿಧಿಗಳು ಆಗಾಗ್ಗೆ ಇದರಿಂದ ಚುನಾಯಿತರಾಗುತ್ತಿದ್ದಾರೆ. ೮೩ರ ವಿಧಾನಸಭಾ ಚುನಾವಣೆಯಲ್ಲಿ ಅಣ್ಣಾ ಡಿ.ಎಂ.ಕೆ.ಯ ಭಕ್ತವತ್ಸಲಂ ರಾಜ್ಯ ವಿಧಾನಸಭೆಗೆ ಆಯ್ಕೆಯಾಗಿದ್ದರು. ೯೪ರ ವಿಧಾನಸಭಾ ಚುನಾವಣೆಯಲ್ಲಿ ಗಾಂಧಿನಗರದಿಂದ ಬಿ. ಮುನಿಯಪ್ಪ ಅಣ್ಣಾ ಡಿಎಂಕೆಯ ಅಭ್ಯರ್ಥಿಯಾಗಿ ಜಯಶೀಲರಾಗಿದ್ದರು. ಈಗ ೧೯೯೯ರ ವಿಧಾನಸಭಾ ಚುನಾವಣೆಯಲ್ಲಿ ಕೆಜಿಎಫ್‌ನಿಂದ ಭಕ್ತವತ್ಸಲಂ

ಅವರೇ ಆಯ್ಕೆಯಾಗಿದ್ದಾರೆ. ಮಹಾರಾಷ್ಟ್ರ ಏಕೀಕರಣ ಸಮಿತಿ ಸದಸ್ಯರು ಸತತವಾಗಿ ಬೆಳಗಾವಿಯಿಂದ ಆಯ್ಕೆಯಾಗಿ ಬರುತ್ತಿದ್ದರೂ ಪಕ್ಷದ ಸದಸ್ಯರಾಗಿ ಅವರು ಮಾಡಿದ ಸಾಧನೆ ಶೂನ್ಯ.

ಕರ್ನಾಟಕದ ವಿರೋಧ ಪಕ್ಷಗಳ ಇತಿಹಾಸವನ್ನು ಗಮನಿಸಿದಾಗ ಇಲ್ಲಿ ಯಾವುದಾದರೂ ಎರಡು ಪಕ್ಷಗಳ ನಡುವೆ ಹೊಯ್ದಾಟ ಇರುವುದನ್ನು ಗಮನಿಸಬಹುದು. ೧೯೮೩ರಲ್ಲಿ ಎಲ್ಲ ವಿರೋಧ ಪಕ್ಷಗಳು ಸಂಘಟನಾತ್ಮಕ ಹೋರಾಟ ನಡೆಸಿದ ಕಾರಣ ಆಡಳಿತ ಪಕ್ಷವಾಗಿದ್ದ ಕಾಂಗ್ರೆಸ್ ಸೋಲನ್ನನುಭವಿಸಿತು. ವಿರೋಧ ಪಕ್ಷಗಳಲ್ಲಿ ಅನೈಕ್ಯತೆಯಿದ್ದಷ್ಟೂ ಕಾಂಗ್ರೆಸ್ (ಐ) ಗೆ ಲಾಭವಾಗಿರುವುದನ್ನು ಗಮನಿಸಬಹುದು.

## ಪ್ರಮುಖ ಮುಖ್ಯಮಂತ್ರಿಗಳು

೧೯೫೭ರಿಂದ ೧೯೯೯ರವರೆಗೆ ಹದಿನಾರು ಜನ ಮುಖ್ಯಮಂತ್ರಿಗಳು ರಾಜ್ಯವನ್ನಾಳಿದ್ದಾರೆ. ಡಾ। ಯು. ಆರ್. ಅನಂತಮೂರ್ತಿ ಅವರು ಹೇಳುವಂತೆ 'ಕರ್ನಾಟಕವನ್ನಾಳಿದ ಎಲ್ಲಾ ಮುಖ್ಯಮಂತ್ರಿಗಳೂ ಜನಪರ ಕಾರ್ಯಗಳನ್ನು ಮಾಡಿದ್ದಾರೆ' ಎಂಬುದು ಸಮಂಜಸವಾದ ಅಭಿಪ್ರಾಯವಾಗಿದೆ. ಜೊತೆಗೆ ಸೂಕ್ಷ್ಮವಾಗಿ ಅವರ ಕೊಡುಗೆಯನ್ನು ಅಧ್ಯಯನ ಮಾಡುವ ಅವಶ್ಯಕತೆ ಇದೆ. ಅಲ್ಪ ಅವಧಿಗೆ ಮುಖ್ಯಮಂತ್ರಿಗಳಾಗಿದ್ದ ಕಡಿದಾಳು ಮಂಜಪ್ಪ ಹಾಗೂ ಎಸ್. ಆರ್. ಕಂಠಿ ಅವರನ್ನೂ ಮರೆಯುವಂತಿಲ್ಲ. ಕರ್ನಾಟಕ ರಾಜಕೀಯ ವಿಶ್ಲೇಷಣೆಯ ದೃಷ್ಟಿಯಿಂದ ಮೂವರು ಮುಖ್ಯಮಂತ್ರಿಗಳು ನಮಗೆ ಮುಖ್ಯರಾಗುತ್ತಾರೆ. ಅವರುಗಳೆಂದರೆ ಸಿದ್ದವನಹಳ್ಳಿ ನಿಜಲಿಂಗಪ್ಪ, ಡಿ. ದೇವರಾಜ ಅರಸು ಹಾಗೂ ರಾಮಕೃಷ್ಣ ಹೆಗಡೆ.

## ತತ್ವ ನಿಷ್ಠುರು

ಸಿದ್ದವನಹಳ್ಳಿ ನಿಜಲಿಂಗಪ್ಪ ಅವಿಭಾಜ್ಯ ಕಾಂಗ್ರೆಸ್‌ನಿಂದ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದರು. ಡಿ. ದೇವರಾಜ ಅರಸು ಇಂದಿರಾಗಾಂಧಿ ಅವರು ಸ್ಥಾಪಿಸಿದ ಆಡಳಿತ ಕಾಂಗ್ರೆಸ್ ಹಾಗೂ ಕಾಂಗ್ರೆನಿಂದ ಮುಖ್ಯಮಂತ್ರಿಗಳಾಗಿದ್ದರು. ರಾಮಕೃಷ್ಣ ಹೆಗಡೆ ವಿರೋಧ ಪಕ್ಷವಾದ ಜನತಾಪಕ್ಷದಿಂದ ಮುಖ್ಯಮಂತ್ರಿಯಾಗಿದ್ದರು. ಈ ಮೂವರೂ ಸಾಕಷ್ಟು ದೀರ್ಘಕಾಲ ಮುಖ್ಯಮಂತ್ರಿಯಾಗಿದ್ದವರು. ರಾಜ್ಯದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳಿಗೆ ಇವರು ಗಣನೀಯ ಕೊಡುಗೆ ಕೊಟ್ಟಿದ್ದಾರೆ.

ಚಿತ್ರದುರ್ಗದಲ್ಲಿ ವಕೀಲರಾಗಿದ್ದ ಎಸ್. ನಿಜಲಿಂಗಪ್ಪ ಅವರು ೧೯೩೬ರಲ್ಲಿ ಡಾ। ಎನ್. ಎಸ್. ಹರ್ಡೀಕರ್ ಪ್ರಭಾವದಿಂದ ಕಾಂಗ್ರೆಸ್ ಪಕ್ಷ ಸೇರಿದರು. ಅಲ್ಲಿಂದ ಕಾಂಗ್ರೆಸ್ ಪಕ್ಷವೇ ಅವರಿಗೆ ಸರ್ವಸ್ವವಾಯಿತು. ೧೯೪೧ರಲ್ಲಿ ಹರಿಹರದಲ್ಲಿ ಜರುಗಿದ ಮೈಸೂರು ಕಾಂಗ್ರೆಸ್‌ನ ನಾಲ್ಕನೆಯ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ ನಿಜಲಿಂಗಪ್ಪ ದುಡಿದಿದ್ದರು. ಈ ಸಮ್ಮೇಳನಕ್ಕೆ ಡಾ। ಬಾಬು ರಾಜೇಂದ್ರ ಪ್ರಸಾದ್ ಆಗಮಿಸಿದ್ದರು. ೧೯೪೬ರಲ್ಲಿ ನಿಜಲಿಂಗಪ್ಪ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಆಯ್ಕೆಗೊಂಡರು. ಏಕೀಕರಣದ ಚಳವಳಿ ಮುಂಬೈ ಕರ್ನಾಟಕದಲ್ಲಿ ತೀವ್ರವಾಗಿತ್ತು. ಮೈಸೂರು ಸಂಸ್ಥಾನದಿಂದ ಹೊರಹೊಮ್ಮುವ ನಾಯಕ ಈ ಚಳವಳಿಯ ನೇತೃತ್ವ ವಹಿಸಬೇಕಾಗಿತ್ತು. ಬರಹಗಾರರು ಹಾಗೂ ಇತರರು ಏಕೀಕರಣ ಚಳವಳಿಯ ಬಗ್ಗೆ ಜನಜಾಗೃತಿ ಮಾಡಬಹುದಾಗಿತ್ತೇ ಹೊರತು ಅದನ್ನು ರಾಷ್ಟ್ರಮಟ್ಟದಲ್ಲಿ ಮುನ್ನಡೆಸಲು ಸಾಧ್ಯವಿರಲಿಲ್ಲ. ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲುಗೊಂಡಿದ್ದ ಕಾಂಗ್ರೆಸ್ ಪಕ್ಷವೇ ಕೇಂದ್ರ ಹಾಗೂ ರಾಜ್ಯದಲ್ಲಿ ಬ್ರಿಟಿಷರ ನಿರ್ಗಮನದ ಅಧಿಕಾರ ಪಡೆಯುತ್ತದೆಂಬುದು ಸೂರ್ಯನ ಬೆಳಕಿನಷ್ಟೇ ಸತ್ಯವಾದ ಸಂಗತಿಯಾಗಿತ್ತು. ಕಾಂಗ್ರೆಸ್‌ನಲ್ಲಿ ಪ್ರಭಾವಶಾಲಿಗಳಾಗಿದ್ದ ಇತರ ನಾಯಕರು ಏಕೀಕರಣದ ಕಡೆ ತಲೆಕೆಡಿಸಿಕೊಂಡಿರಲಿಲ್ಲ. ಮೈಸೂರು ಸಂಸ್ಥಾನದ ಕಾಂಗ್ರೆಸ್ ನಾಯಕರಿಗೆ ಏಕೀಕರಣ ಅಧಿಕಾರ ತಂದುಕೊಡುವ ಸಾಧನವಾಗಿರಲಿಲ್ಲ. ಏಕೀಕರಣದ ನಂತರ ಸೇರ್ಪಡೆಯಾಗುವ ಸಮುದಾಯದಿಂದ ಅವರಿಗೇನೂ ಪ್ರಯೋಜನವಾಗುತ್ತಿರಲಿಲ್ಲ. ಅಷ್ಟೇ ಅಲ್ಲ, ವೀರಶೈವ ಸಮುದಾಯ ಜನಸಂಖ್ಯಾ ಹೆಚ್ಚಳದಿಂದ ಅವರ ಅಧಿಕಾರಕ್ಕೆ ಚ್ಯುತಿ ಬರಬಹುದಾದಿತ್ತು. ಅದಕ್ಕಾಗಿ ಕಡಿದಾಳು ಮಂಜಪ್ಪ, ಎಚ್. ಕೆ. ವೀರಣ್ಣಗೌಡ, ಕೆ. ವಿ. ಶಂಕರಗೌಡ ಮೊದಲಾದ ಮೈಸೂರು ಸಂಸ್ಥಾನದ ನಾಯಕರು ಏಕೀಕರಣದ ಪರವಾಗಿರಲಿಲ್ಲ. ನಿಜಲಿಂಗಪ್ಪ ದೂರದೃಷ್ಟಿಯುಳ್ಳ ಮಹಾನಾಯಕರು. ಏಕೀಕರಣದ ನಂತರದ ಪ್ರಯೋಜನವನ್ನು ಪಡೆದುಕೊಳ್ಳಲು ಅವರು ನಿರ್ಧರಿಸಿದರು. ಸ್ವಾತಂತ್ರ್ಯ ಹೋರಾಟದಷ್ಟೇ ಏಕೀಕರಣವೂ ಕೂಡಾ ಪ್ರಮುಖವಾದುವೆಂದೂ ಅವರು ಭಾವಿಸಿದ್ದರು. ೧೯೫೨ರಲ್ಲಿ ಚಿತ್ರದುರ್ಗದಿಂದ ಲೋಕಸಭೆಗೆ ಆಯ್ಕೆಯಾದ ಮೇಲೆ ನಿಜಲಿಂಗಪ್ಪ ಅವರು ಲೋಕಸಭೆಯ ಒಳಗೆ ಮಾತನಾಡುವುದಕ್ಕಿಂತ ಹೊರಗೆ ಏಕೀಕರಣಕ್ಕೆ ಮಾಡಿದ ಲಾಬಿ ಬಹುದೊಡ್ಡದು. ೧೯೫೩ರಲ್ಲಿ ಹುಬ್ಬಳ್ಳಿಯ ಕೆಪಿಸಿಸಿ ಸಭೆ ನಡೆದಾಗ ಗಲಭೆಯಾಗಿ ಅವರ ತಲೆಗೆ ಕಲ್ಲೇಟು ಬಿತ್ತು. ಬ್ಯಾಂಡೇಜು ಕಟ್ಟಿಕೊಂಡೇ ನಿಜಲಿಂಗಪ್ಪನವರು ದೆಹಲಿಗೆ ಹೋದರು. ವಲ್ಲಭಭಾಯಿ ಪಟೇಲರೊಂದಿಗೆ ಚೆನ್ನಾಗಿದ್ದ ನಿಜಲಿಂಗಪ್ಪ ಅವರ ನಂತರ ಗೃಹಸಚಿವರಾದ ಗೋವಿಂದ ವಲ್ಲಭಪಂತ್ ಜೊತೆ ಉತ್ತಮ ಸಂಬಂಧ ಇಟ್ಟುಕೊಂಡಿದ್ದರು. ಪ್ರಧಾನಿ ನೆಹರೂ ಏಕೀಕರಣಕ್ಕೆ ವಿರೋಧವಾಗಿದ್ದರು.

ನಿಜಲಿಂಗಪ್ಪ ಅವರು ನಡೆಸಿದ ಲಾಬಿ ಕಾರಣ ಹರಿದು ಹಂಚಿ ೧೯ ಭಾಗಗಳಾಗಿದ್ದ ಕರ್ನಾಟಕ ನಿಜಕ್ಕೂ ಒಂದಾಯಿತು. ನಿಜಲಿಂಗಪ್ಪ ಮೂಲತಃ ರಾಷ್ಟ್ರೀಯವಾದಿಗಳು, ಮಹಾತ್ಮ ಗಾಂಧೀಜಿ ಅವರ ಆದರ್ಶದ ಬೆಳಕಿನಲ್ಲಿ ಸಾರ್ವಜನಿಕ ಸೇವೆ ಆರಂಭಿಸಿದ ಅವರಲ್ಲಿ ಪ್ರಾದೇಶಿಕ ಸಂಕುಚಿತ ಮನೋಭಾವನೆ ಬೆಳೆಯಲು ಸಾಧ್ಯವೇ ಇಲ್ಲ. ಸಾಹಿತಿಗಳು ಹಾಗೂ ಸೃಜನಶೀಲ ಪ್ರತಿಭಾವಂತರು ಕರ್ನಾಟಕದ ಏಕೀಕರಣವನ್ನು ಬಯಸಿದ್ದರು. ಸಾಂಸ್ಕೃತಿಕ ಮಹೋನ್ನತಿ ಸ್ಥಾಪಿಸಿ ಅದರ ಪ್ರಭಾವ ಎಲ್ಲಾ ಕ್ಷೇತ್ರಗಳಲ್ಲೂ ಹರಡಿ 'ಸ್ವಾಭಿಮಾನಿ ನಾಡು' ಕರ್ನಾಟಕವಾಗಬೇಕೆಂಬ ಆಶಯ ಅವರದು. ನಿಜಲಿಂಗಪ್ಪನವರು ಕರ್ನಾಟಕದ ಏಕೀಕರಣವನ್ನು ರಾಜಕೀಯ ಕಾರಣಕ್ಕಾಗಿ ಅಗತ್ಯವೆಂದು ಭಾವಿಸಿದ್ದರು. ಇಡೀ ಭಾರತದ ಸರ್ವಾಂಗೀಣ ಪ್ರಗತಿ ಅವರ ಗುರಿಯಾಗಿತ್ತೇ ಹೊರತು ಮೈಸೂರು ರಾಜ್ಯವೊಂದೇ ಅಲ್ಲ. ಅವರು ಮುಖ್ಯಮಂತ್ರಿಯಾಗಿದ್ದಾಗ ಈಗಿನ ಶಾಸಕರಂತೆ ತಮ್ಮ ಕ್ಷೇತ್ರದ ಕೆಲಸ ಮಾಡಲು ಹಾತೊರೆಯಲಿಲ್ಲ. ಶರಾವತಿ, ಕೃಷ್ಣ ಮಲಪ್ರಭಾ ಮೊದಲಾದ ಬೃಹತ್ ನೀರಾವರಿ ಯೋಜನೆಗಳು ಅವರ ಕಾಲದಲ್ಲೇ ಪ್ರಾರಂಭವಾದವು. ಆದರೆ ಚಿತ್ರದುರ್ಗ ಜಿಲ್ಲೆಗೆ ನೀರುಣಿಸುವ ಭದ್ರಾ ಮೇಲ್ದಂಡೆ ಕಾಮಗಾರಿ ಪ್ರಾರಂಭವಾಗಲೇ ಇಲ್ಲ. ನಿಜಲಿಂಗಪ್ಪ ಅವರ ಇಷ್ಟಕ್ಕೆ ವಿರುದ್ಧವಾಗಿಯೇ ಮಹಾರಾಷ್ಟ್ರದ ಕರ್ನಾಟಕ ಗಡಿವಿವಾದ ಅಧ್ಯಯನಕ್ಕೆ ಮಹಾಜನ ಆಯೋಗ ನೇಮಿಸಲಾಯಿತು. ಫಜಲ ಆಲಿ ಆಯೋಗದಲ್ಲಿ ಸದಸ್ಯರಾಗಿದ್ದ ಕೆ. ಎಂ. ಪಣಿಕ್ಕರ್ ಅಚ್ಚ ಕನ್ನಡ ಪ್ರದೇಶ ಕಾಸರಗೋಡನ್ನು ಕೇರಳದಲ್ಲಿ ಉಳಿಸಿಕೊಂಡರು. ನಿಜಲಿಂಗಪ್ಪ ಇದಕ್ಕಾಗಿ ತೀವ್ರ ಪ್ರತಿಭಟನೆ ವ್ಯಕ್ತಪಡಿಸಲಿಲ್ಲ. ಉತ್ತರ ಕರ್ನಾಟಕದ ಬಹುದೊಡ್ಡ ಸಮುದಾಯ ಮೈಸೂರು ಸಂಸ್ಥಾನಕ್ಕೆ ಬಂದ ಮೇಲೆ ಆಗುವ ರಾಜಕೀಯ ಪರಿಣಾಮದ ಬಗ್ಗೆ ಅವರಲ್ಲಿ ಆಸಕ್ತಿ. ಇದಕ್ಕೆ ಹೆದರಿಯೇ ಹಳೆಯ ಮೈಸೂರು ಪ್ರಾಂತ್ಯದ ನಾಯಕರು ಏಕೀಕರಣವನ್ನು ವಿರೋಧಿಸಿದ್ದರು. ಈ ಭಯ ಕೇವಲ ಒಕ್ಕಲಿಗರಲ್ಲಿ ಮಾತ್ರವಲ್ಲ ಎಚ್. ಎಂ. ಚನ್ನಬಸಪ್ಪನವರಂತಹ ಲಿಂಗಾಯಿತ ನಾಯಕರಲ್ಲೂ ಇತ್ತು.

೧೯೫೬ರಲ್ಲಿ ನಿಜಲಿಂಗಪ್ಪ ಮುಖ್ಯಮಂತ್ರಿಯಾದ ಮೇಲೆ ಮೈಸೂರು ಪ್ರಾಂತ್ಯದ ಕೆಂಗಲ್ ಹನುಮಂತಯ್ಯ, ಸಾಹುಕಾರ್ ಚನ್ನಯ್ಯ, ಎ.ಜಿ. ರಾಮಚಂದ್ರರಾಯರು, ಟಿ. ಸುಬ್ರಹ್ಮಣ್ಯಂ, ಎಚ್. ಕೆ. ವೀರಣ್ಣಗೌಡ, ಎಚ್. ಸಿದ್ದವೀರಪ್ಪ, ಎಚ್. ಎಂ. ಚನ್ನಬಸಪ್ಪ, ಟಿ ಸಿದ್ಧಲಿಂಗಯ್ಯ, ಆರ್. ಚನ್ನಿಗರಾಮಯ್ಯ, ಎಚ್. ಸಿ. ದಾಸಪ್ಪ ಮೊದಲಾದವರು ಮೂಲೆಗುಂಪಾದರು. ಈ ಅಸಮಾಧಾನವೇ ೧೯೫೮ರಲ್ಲಿ ಬಿ. ಡಿ. ಜತ್ತಿ ಮುಖ್ಯಮಂತ್ರಿಗಳಾಗಲು ಕಾರಣವಾಯಿತು. ೧೯೬೨ರಲ್ಲಿ ನಿಜಲಿಂಗಪ್ಪನವರು ಸಾರ್ವತ್ರಿಕ ಚುನಾವಣೆಯಲ್ಲಿ ಸೋತರೂ ಮುಖ್ಯಮಂತ್ರಿಗಳಾದರು. ನೆಹರೂ ನಂತರ ನಿಜಲಿಂಗಪ್ಪ ಅವರು ಕಾಂಗ್ರೆಸ್ ನೀತಿ ನಿರೂಪಕರಲ್ಲಿ ಒಬ್ಬರಾದರು. ಇಂದಿರಾಗಾಂಧಿ ಅವರನ್ನ ಪ್ರಧಾನಮಂತ್ರಿಯನ್ನಾಗಿ ಮಾಡುವಲ್ಲಿ ಅವರದು ಹಿರಿದಾದ ಪಾತ್ರ. ಸ್ನೇಹಿತರ ಮಾತಿಗೆ ಬೆಲೆ ಕೊಟ್ಟು ತಾವು ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದಾಗ ಶ್ರೀಮತಿ ಇಂದಿರಾಗಾಂಧಿ ಸೂಚಿಸಿದ ಅವರ ಗೆಳೆಯ ದಿನೇಶ್ ಸಿಂಗ್ ಅವರನ್ನು ಕಾರ್ಯಕಾರಿ ಸಮಿತಿಗೆ ತೆಗೆದುಕೊಳ್ಳಲಿಲ್ಲ. ಇದರಿಂದಾಗಿ ನಿಜಲಿಂಗಪ್ಪ ಅವರಿಗೆ ರಾಜಕೀಯ ಭವಿಷ್ಯವೇ ಮಸುಕಾಯಿತು. ಆದರೂ ಅವರು ಚಿಂತಿಸಲಿಲ್ಲ. ರಾಮಕೃಷ್ಣ ಹೆಗಡೆ ಹಾಗೂ ವೀರೇಂದ್ರ ಪಾಟೀಲ್ ಅವರುಗಳು ನಿಜಲಿಂಗಪ್ಪನವರಿಗೆ ಲವಕುಶರಂತಿದ್ದರು. ಅವರಿಗೆ ಕೊಟ್ಟ ಅನಗತ್ಯ ಪ್ರಾಮುಖ್ಯತೆಯೇ ನಿಜಲಿಂಗಪ್ಪ ಅವರಿಗೆ ತೊಂದರೆ ಕೊಟ್ಟಿತು. ಕರ್ನಾಟಕ ರಾಜಕೀಯದಲ್ಲಿದ್ದ ಭಿನ್ನಾಭಿಪ್ರಾಯವನ್ನು ತೊಡೆದುಹಾಕಲು ಅವರು ಪ್ರಯತ್ನಿಸಲಿಲ್ಲ. ಅಷ್ಟೇ ಅಲ್ಲ, ನಿಜಲಿಂಗಪ್ಪ ಅವರಿಗೆ ಹತ್ತಿರವಿದ್ದವರು ಹೇಳುತ್ತಿದ್ದ ಮಾತುಗಳು ಮತ್ತು ಹೊಗಳಿಕೆ ಪ್ರಿಯವಾಗಿರುತ್ತಿತ್ತು. ಅವರಿಗೆ ಮತದಾರರ ಮೂಲ ಸಮಸ್ಯೆಗಳು ತಿಳಿಯುತ್ತಿರಲಿಲ್ಲ. ಜೊತೆಗೆ ನಾಯಕರ ಮಟ್ಟದಲ್ಲಿ ವ್ಯವಹರಿಸಿ ಗೊತ್ತಿತ್ತೇ ಹೊರತು ಈಗಿನವರ ತರಹ ಪಂಚಾಯ್ತಿ ಸದಸ್ಯರ ಮಟ್ಟಕ್ಕೆ ಹೋಗುತ್ತಿರಲಿಲ್ಲ.

೧೯೬೯ರಲ್ಲಿ ಕಾಂಗ್ರೆಸ್ ವಿಭಜನೆಯಾಗಿ ಶ್ರೀಮತಿ ಗಾಂಧಿ ಅವರ ನೇತೃತ್ವದ ಆಡಳಿತ ಕಾಂಗ್ರೆಸ್ ರಾಜ್ಯ ಹಾಗೂ ಕೇಂದ್ರದಲ್ಲಿ ಅಧಿಕಾರ ಸೂತ್ರ ಹಿಡಿದಾಗ ನಿಜಲಿಂಗಪ್ಪ ಅವರು ಚಿಂತಾಕ್ರಾಂತರಾದರು. ತಾವು ತುಳಿದ ಹಾದಿಯಲ್ಲಿ ಎಲ್ಲಿ ಎಡವಿದೆವೆಂದು ಆತ್ಮಾವಲೋಕನ ಮಾಡಿಕೊಂಡರು. ಅಧಿಕಾರ ತೊರೆದು ಮೂರು ದಶಕಗಳ ಕಾಲ ನಿಜಲಿಂಗಪ್ಪ ಅವರು ಈ ರಾಜ್ಯದ ಹಾಗೂ ರಾಷ್ಟ್ರದ ಜನತೆಗೆ ಸಲ್ಲಿಸಿದ ಸೇವೆ ಸುವರ್ಣಾಕ್ಷರದಲ್ಲಿ ಬರೆದಿಡುವಂತಹದು. ತಾವು ನಂಬಿದ ಮೌಲ್ಯಗಳಿಗೆ ಎಂದೂ ರಾಜಿ ಮಾಡಿಕೊಳ್ಳದ ನಿಜಲಿಂಗಪ್ಪ, ಎಸ್. ಕೆ. ಪಾಟೀಲ್, ಕೆ. ಕಾಮರಾಜ್ ಮೊದಲಾದವರು ಇಂದಿರಾಗಾಂಧಿ ಅವರತ್ತ ಕಣ್ಣು ಹಾಯಿಸಿದರೂ, ತಾವು ಮಾತ್ರ ತಾತ್ವಿಕ ವಿಚಾರದಲ್ಲಿ ಅಚಲ ಎಂಬುದನ್ನು ತೋರಿಸಿಕೊಟ್ಟರು. ನಿಜಲಿಂಗಪ್ಪ ಅವರು ಇಂದಿರಾಗಾಂಧಿ ಅವರ ಸರ್ವಾಧಿಕಾರ ಪ್ರವೃತ್ತಿ ಹಾಗೂ ಮುಖ್ಯಮಂತ್ರಿ ಅರಸು ಅವರ ಭ್ರಷ್ಟಾಚಾರಗಳನ್ನು ಸದಾ ಖಂಡಿಸಿ ಜನಜಾಗೃತಿ ಮಾಡುತ್ತಿದ್ದರು. ನಿಜಲಿಂಗಪ್ಪ ಅವರು ರಾಜಕೀಯ ಸ್ಥಾನಮಾನ ತೊರೆದ ನಂತರ ದೇಶದ ಸಾಕ್ಷಿಪ್ರಜ್ಞೆಯಾಗಿದ್ದರು. ೧೯೭೭ರಲ್ಲಿ ಕೇಂದ್ರದಲ್ಲಿ ಜನತಾಪಕ್ಷ ಸರ್ಕಾರ ಹಾಗೂ ೧೯೮೩ರಲ್ಲಿ ರಾಜ್ಯದಲ್ಲಿ ಜನತಾಪಕ್ಷ ಸರ್ಕಾರ ಬರಲು ಅವರೇ ಪ್ರೇರಕಶಕ್ತಿಯಾಗಿದ್ದರು. ೧೯೭೭ರಲ್ಲಿ ಸುಲಭವಾಗಿ ರಾಷ್ಟ್ರಪತಿಯಾಗಬಹುದಾಗಿದ್ದ ನಿಜಲಿಂಗಪ್ಪ ಅವರು ೧೯೬೯ರಲ್ಲಿ ತಾವು ರಾಷ್ಟ್ರಪತಿ ಮಾಡಲಾಗದಿದ್ದ ನೀಲಂ ಸಂಜೀವರೆಡ್ಡಿ ಅವರನ್ನು

ರಾಷ್ಟ್ರಪತಿಗಳನ್ನಾಗಿಸಿದರು. ನಿಜಲಿಂಗಪ್ಪ ಅವರು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗುವ ತನಕ ಉತ್ತರ ಭಾರತದವರಿಗೆ ದಕ್ಷಿಣ ಭಾರತವೆಂದರೆ ಮದ್ರಾಸ್ ಮಾತ್ರವಾಗಿತ್ತು. ನಿಜಲಿಂಗಪ್ಪ ಅವರು ತಮ್ಮ ಪ್ರಾಮಾಣಿಕ ಹಾಗೂ ತತ್ತ್ವನಿಷ್ಠ ವ್ಯಕ್ತಿತ್ವದಿಂದಾಗಿ ಕರ್ನಾಟಕದ ಕೀರ್ತಿಯನ್ನು ಬೆಳಗಿಸಿದ್ದಾರೆ. ಅಧಿಕಾರದಲ್ಲಿ ಇಲ್ಲದಿದ್ದಾಗಲೂ ಪ್ರಜ್ಞಾವಂತ ಜನರ ವಿಶ್ವಾಸ ಗಳಿಸಿದ ಕೆಲವೇ ನಾಯಕರಲ್ಲಿ ನಿಜಲಿಂಗಪ್ಪ ಪ್ರಮುಖರು. ಅಧಿಕಾರ ತೊರೆದ ನಂತರ ನಿಜಲಿಂಗಪ್ಪ ಅವರು ತಮ್ಮ ಹಿಂದಿನ ಎಲ್ಲಾ ಸಾಧನೆ ಸಿದ್ಧಿಗಳಿಗೆ ಅರ್ಥಮಾಡಿಕೊಡುವಂತೆ ಬದುಕಿದರು. ಅವರ ತಾತ್ವಿಕ ನಿಷ್ಠೆ ಹಾಗೂ ಉತ್ತಮ ಸಮಾಜ ನಿರ್ಮಾಣ ಮಾಡಬೇಕೆಂಬ ಹಂಬಲ ಅವರನ್ನು ಇತರ ಎಲ್ಲಾ ನಾಯಕರಿಗಿಂತ ಬಹು ಎತ್ತರಕ್ಕೆ ಕೊಂಡೊಯ್ದಿತ್ತು. ಅವರ ವ್ಯಾಸಂಗಾಭಿರುಚಿ ಹಾಗೂ ವಿಚಾರಶೀಲತೆ ಎಲ್ಲಾ ರಾಜಕಾರಣಿಗಳಿಗೂ ಆದರ್ಶ ಪ್ರಾಯವಾದುದು. ಕರ್ನಾಟಕ ರಾಜಕಾರಣದಲ್ಲಿ ಅವರು ಮೂಡಿಸಿದ ಹೆಜ್ಜೆ ಸದಾ ಉಳಿಯುವಂತಹದು.

**ರಾಜಕೀಯದಲ್ಲಿ ಶಕ್ತಿವಲಯ ಕಂಡುಕೊಂಡವರು**

ಕರ್ನಾಟಕ ಹಾಗೂ ಭಾರತದ ರಾಜಕಾರಣದಲ್ಲಿ ಡಿ. ದೇವರಾಜ ಅರಸು ಅವರಿಗೆ ವಿಶಿಷ್ಟವಾದ ಸ್ಥಾನವಿದೆ. ಡಾ। ರಾಮ ಮನೋಹರ ಲೋಹಿಯಾ, ಡಾ। ಬಿ. ಆರ್. ಅಂಬೇಡ್ಕರ್ ಮೊದಲಾದವರು ಕಂಡಿದ್ದ ಕನಸನ್ನು ನನಸು ಮಾಡಿದ ಕೀರ್ತಿ ದೇವರಾಜ ಅರಸು ಅವರಿಗೆ ಸಲ್ಲುತ್ತದೆ. ದಲಿತರು, ಹಿಂದುಳಿದವರು ಹಾಗೂ ಬಡವರ ಪರವಾದ ಚಿಂತನೆಯುಳ್ಳ ದೇವರಾಜ ಅರಸು, ಅವರುಗಳನ್ನು ರಾಜಕೀಯದಲ್ಲಿ ಶಕ್ತಿವಲಯವನ್ನಾಗಿಸಿದ್ದು ಸಾಮಾನ್ಯ ಘಟನೆಯಲ್ಲ. ೧೯೫೨ರಿಂದಲೂ ಕರ್ನಾಟಕದ ರಾಜಕಾರಣದಲ್ಲಿದ್ದ ದೇವರಾಜ ಅರಸು ಮುಖ್ಯಮಂತ್ರಿಯಾದ ನಂತರ ತಮ್ಮ ಅನುಭವವನ್ನು ಸಮರ್ಪಕವಾಗಿ ಬಳಸಿಕೊಂಡರು. ಏಕೀಕರಣದ ನಂತರ ಕರ್ನಾಟಕದ ರಾಜಕಾರಣದಲ್ಲಿ ಏಕಸ್ವಾಮತೆಯನ್ನು ಸ್ಥಾಪಿಸಿಕೊಂಡಿದ್ದ ದೊಡ್ಡ ಜನಾಂಗವನ್ನು ದೂರವಿಟ್ಟು ರಾಜಕೀಯ ಮಾಡಿದ ಕೀರ್ತಿ ಅರಸು ಅವರದು. ಹಿಂದುಳಿದ, ಪರಿಶಿಷ್ಟ ಜಾತಿ ಹಾಗೂ ವರ್ಗದ ಜೊತೆ ಅಲ್ಪ ಸಂಖ್ಯಾತ ಹಾಗೂ ಎಲ್ಲ ಜನಾಂಗದ ಬಡವರನ್ನು ಒಂದುಗೂಡಿಸಿ ರಾಜಕೀಯದಲ್ಲಿ ಅವರಿಗೆ ಸೂಕ್ತ ಸ್ಥಾನ ಕೊಡಿಸಿದ ಕೀರ್ತಿ ಇವರದು.

ಮೈಸೂರು ಜಿಲ್ಲೆ ಹುಣಸೂರು ತಾಲ್ಲೂಕು ಕಲ್ಲಳ್ಳಿಯಲ್ಲಿ ೨೦.೫.೧೯೧೫ರಲ್ಲಿ ಜನಿಸಿದ ಅರಸು ಹಟದಿಂದ ವ್ಯಾಯಾಮ ಮಾಡಿ 'ಫೈಲ್ವಾನ್' ಎನಿಸಿಕೊಂಡವರು. ಈ ಹೋರಾಟದ ಮನೋಭಾವವೇ ಅವರಿಗೆ ಎಲ್ಲಾ ರೀತಿಯ ಸತ್ವಲಗಳನ್ನು ತಂದುಕೊಟ್ಟಿತು. ಖ್ಯಾತ ಸಾಹಿತಿ ಚದುರಂಗ ಅವರ ಒಡನಾಡಿಯಾದ ದೇವರಾಜ ಅರಸು ಅವರಿಗೆ ಸಾಹಿತ್ಯ, ಕಲೆ ಹಾಗೂ ಸಂಸ್ಕೃತಿಗಳಲ್ಲಿ ಸಾಕಷ್ಟು ಆಸಕ್ತಿಯಿತ್ತು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್.ಸಿ. ಮುಗಿಸಿದ ಅರಸು ಅವರು ಕೃಷಿಕರಾಗಿಯೇ ಬದುಕು ನಡೆಸಿದವರು. ಹೈನುಗಾರಿಕೆಯಲ್ಲೂ ಅವರಿಗೆ ಸಾಕಷ್ಟು ಆಸಕ್ತಿಯಿತ್ತು. ೧೯೪೧ರಲ್ಲಿ ಸಾಹುಕಾರ ಚನ್ನಯ್ಯ ಅವರ ಪ್ರೋತ್ಸಾಹದಿಂದ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಕಾಂಗ್ರೆಸ್‌ನಿಂದ ಆಯ್ಕೆ, ೧೯೪೫ರಲ್ಲೂ ಮತ್ತೆ ಪ್ರಜಾಪ್ರತಿನಿಧಿ ಸಭೆಗೆ ಪುನರ್‌ಆಯ್ಕೆ; ೧೯೫೨ರಲ್ಲಿ ದೇಶದಲ್ಲಿ ಸ್ವಾತಂತ್ರ್ಯಾ ನಂತರ ನಡೆದ ಮೊದಲ ಸಾರ್ವತ್ರಿಕ ಚುನಾವಣೆಯಲ್ಲಿ ಹುಣಸೂರು ವಿಧಾನಸಭಾ ಕ್ಷೇತ್ರದಿಂದ ಆಯ್ಕೆ; ೧೯೫೭ರಲ್ಲಿ ಪುನರ್ ಆಯ್ಕೆ. ೧೯೬೨ರಲ್ಲಿ ಅದೇ ಕ್ಷೇತ್ರದಿಂದ ಅವಿರೋಧ ಆಯ್ಕೆ, ನಿಜಲಿಂಗಪ್ಪ ಮಂತ್ರಿಮಂಡಲದಲ್ಲಿ ಸಾರಿಗೆ, ಪಶುಸಂಗೋಪನೆ, ವಾರ್ತಾ, ರೇಷ್ಮೆ ಖಾತೆಗಳ ಸಚಿವರಾಗಿ ಕಾರ್ಯ ನಿರ್ವಹಣೆ. ೧೯೬೭ರಲ್ಲಿ ಕಾಂಗ್ರೆಸ್ ಟಿಕೆಟ್ ತಪ್ಪಿಸಲು ಸಂಚು. ಕಾಮರಾಜ್ ಅವರಿಂದಲೇ ಟಿಕೆಟ್ ಪಡೆದು ಮತ್ತೆ ಹುಣಸೂರು ಕ್ಷೇತ್ರದಿಂದ ಶಾಸಕರಾಗಿ ಆಯ್ಕೆ. ನಿಜಲಿಂಗಪ್ಪ ಅವರು ಅಖಿಲಭಾರತದ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾದ ಮೇಲೆ ವೀರೇಂದ್ರ ಪಾಟೀಲ್ ಮುಖ್ಯಮಂತ್ರಿಯಾದರಷ್ಟೆ. ಆಗ ಅರಸು ಅವರನ್ನು ಬೇಕೆಂದೇ ಮೂಲೆಗುಂಪು ಮಾಡಲಾಯಿತು. ಪ್ರಧಾನಿ ಇಂದಿರಾಗಾಂಧಿ-ನಿಜಲಿಂಗಪ್ಪ ಅವರ ಭಿನ್ನಾಭಿಪ್ರಾಯವನ್ನು ಸಮರ್ಪಕವಾಗಿ ಬಳಸಿಕೊಂಡು ಕರ್ನಾಟಕದಲ್ಲಿ ಆಡಳಿತ ಕಾಂಗ್ರೆಸ್ ಪಕ್ಷ ಕಟ್ಟಿದ ಕೀರ್ತಿಗೆ ಭಾಜನರಾದರು. ೧೯೭೧ರಲ್ಲಿ ನಡೆದ ಮಧ್ಯಂತರ ಲೋಕಸಭಾ ಚುನಾವಣೆಯಲ್ಲಿ ರಾಜ್ಯದ ೨೭ ಸ್ಥಾನಗಳು ಆಡಳಿತ ಕಾಂಗ್ರೆಸ್‌ಗೆ ದೊರಕಲು ದೇವರಾಜ ಅರಸು ರೂಪಿಸಿದ ರಾಜಕೀಯ ಕಾರಣವಾಯಿತು. ಬ್ರಾಹ್ಮಣ, ಒಕ್ಕಲಿಗ ಹಾಗೂ ಲಿಂಗಾಯಿತ ಜನಾಂಗವಲ್ಲದೆ ಹಿಂದುಳಿದ ಹಾಗೂ ಅಲ್ಪಸಂಖ್ಯಾತರನ್ನು ರಾಜಕೀಯವಾಗಿ ಯಾರೂ ಆ ತನಕ ಸಂಘಟನೆ ಮಾಡಿರಲಿಲ್ಲ. ಆ ಸಮುದಾಯದಲ್ಲಿದ್ದ ಅರ್ಹ ತರುಣರನ್ನು ಹುಡುಕಿ ರಾಜಕೀಯಕ್ಕೆ ತಂದ ಕೀರ್ತಿ ಅರಸು ಅವರದು. ಕರ್ನಾಟಕದ ಇಂದಿನ ರಾಜಕಾರಣದಲ್ಲಿ ಹೊಸ ನಾಯಕತ್ವ ಎಲ್ಲಾ ಸಮುದಾಯಗಳಲ್ಲೂ ಮೂಡಿ ಬರುತ್ತಿದ್ದರೆ ಅದಕ್ಕೆ ಅಂದಿನ ದೇವರಾಜ ಅರಸು ಅವರ ದೂರದೃಷ್ಟಿಯ ಕಾರ್ಯಗಳು ಕಾರಣವಾಗಿವೆ. ಎಚ್. ಸಿದ್ದವೀರಪ್ಪ, ಕೊಲ್ಲೂರು ಮಲ್ಲಪ್ಪ, ಸಾಹುಕಾರ್ ಚನ್ನಯ್ಯ, ಎಚ್. ಎಂ. ಚನ್ನಬಸಪ್ಪ, ಕೆಂಗಲ್ ಹನುಮಂತಯ್ಯ, ಎಚ್. ಕೆ. ವೀರಣ್ಣಗೌಡ ಮೊದಲಾದ

ಕಾಂಗ್ರೆಸ್‌ನ ಹಿರಿಯ ನಾಯಕರು ನಿಜಲಿಂಗಪ್ಪ ಅವರ ಬಗೆಗೆ ಬೆಳೆಸಿಕೊಂಡಿದ್ದ ಅಸಮಾಧಾನವನ್ನು ಸರಿಯಾಗಿ ಬಳಸಿಕೊಂಡು ಆಡಳಿತ ಕಾಂಗ್ರೆಸ್ ಪಕ್ಷವನ್ನು ಕಟ್ಟಿದ ಶ್ರೇಯಸ್ಸು ಅರಸು ಅವರಿಗೆ ಸಲ್ಲುತ್ತದೆ.

೨೦.೩.೧೯೭೨ರಲ್ಲಿ ದೇವರಾಜ ಅರಸು ಅವರು ಮುಖ್ಯಮಂತ್ರಿಗಳಾದಾಗ ಕರ್ನಾಟಕದ ರಾಜಕೀಯದಲ್ಲಿ ಅತ್ಯಾಶ್ಚರ್ಯವಾದ ಘಟನೆ ನಡೆಯಿತು. ಕರ್ನಾಟಕದಲ್ಲಿ ಒಕ್ಕಲಿಗ ಹಾಗೂ ಲಿಂಗಾಯಿತರನ್ನು ಹೊರತುಪಡಿಸಿ ಅಲ್ಪಸಂಖ್ಯಾತ ವರ್ಗದ ಅರಸು ಮುಖ್ಯಮಂತ್ರಿಯಾದುದು ಐತಿಹಾಸಿಕವಾಗಿ ಮಹತ್ವದ ಘಟನೆಯೆಂದು ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ ಬರೆಯಿತು. ೧೯೬೭ರ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಟಿಕೇಟ್ ಹಂಚಿದ ರೀತಿಯಿದು : ೨೧೨ ಸ್ಥಾನಗಳಲ್ಲಿ ಲಿಂಗಾಯಿತರಿಗೆ ೯೧, ಒಕ್ಕಲಿಗರಿಗೆ ೬೫ ಹಾಗೂ ಸಂವಿಧಾನಬದ್ಧ ಪರಿಶಿಷ್ಟ ವರ್ಗದವರಿಗೆ ೩೮. ಉಳಿಕೆ ೩೬-೩೭ ಸ್ಥಾನಗಳನ್ನು ಜನಸಂಖ್ಯೆಯಲ್ಲಿ ೬೫ಕ್ಕಿಂತಾ ಹೆಚ್ಚಿದ್ದ ಹಿಂದುಳಿದವರಿಗೆ ಕೊಡಬೇಕಾಗಿತ್ತು.

ದೇವರಾಜ ಅರಸು ಅವರು ೧೯೭೨ರಲ್ಲಿ ಲಿಂಗಾಯಿತರಿಗೆ ೪೫, ಒಕ್ಕಲಿಗರಿಗೆ ೪೩ ಸ್ಥಾನಗಳನ್ನು ಕೊಟ್ಟು ಉಳಿಕೆ ಸ್ಥಾನಗಳನ್ನು ಅವಗಣನೆಗೆ ಒಳಗಾಗಿದ್ದ ಸಮುದಾಯಗಳಿಗೆ ಕೊಟ್ಟರು. ಸುಮಾರು ೧೦೦ ಹೊಸ ಮುಖಗಳು ಈ ಕಾಲದಲ್ಲಿ ವಿಧಾನಸಭೆ ಪ್ರವೇಶಿಸಿದವು. ಬೆಂಗಳೂರಿನ ಬಸವನಗುಡಿ ಕ್ಷೇತ್ರದಲ್ಲಿ ಅಲ್ಪಸಂಖ್ಯಾತ ಮುಸ್ಲಿಂ, ಬೆಂಗಳೂರು ಗ್ರಾಮಾಂತರ ಚನ್ನಪಟ್ಟಣದಲ್ಲಿ ಹಿಂದುಳಿದ ಪರಿವಾರ, ಕೊಡಗಿನ ಸೋಮವಾರಪೇಟೆ ಕ್ಷೇತ್ರದಿಂದ ಬ್ರಾಹ್ಮಣ, ತುಮಕೂರಿನ ಕಳ್ಳಂಬೆಳ್ಳ ಕ್ಷೇತ್ರದಲ್ಲಿ ನಾಯಕ, ಕಾರ್ಕಳದಲ್ಲಿ ದೇವಾಡಿಗ, ಹೊಸಪೇಟೆಯಲ್ಲಿ ಮುಸ್ಲಿಂ ಹಾಗೂ ಜೇವರ್ಗಿಯಲ್ಲಿ ರಜಪೂತರಂತಹ ಮೈಕ್ರೋಸ್ಕೋಪ್ ಬ್ಯಾಕ್‌ವರ್ಡ್ ಅಭ್ಯರ್ಥಿಗಳಿಗೆ ರಾಷ್ಟ್ರೀಯ ಪಕ್ಷವೊಂದರಿಂದ ಟಿಕೇಟ್ ಕೊಡಲು ಎಂಟೆದೆ ಬೇಕು. ಅವರುಗಳಿಗೆ ಟಿಕೇಟ್ ಕೊಟ್ಟದ್ದಲ್ಲದೆ ಅವರನ್ನು ಗೆಲ್ಲಿಸಿಕೊಂಡು ಬಂದ ಹೆಗ್ಗಳಿಕೆ ಅರಸು ಅವರಿಗೆ ಸಲ್ಲುತ್ತದೆ.

ದೇವರಾಜ ಅರಸು ಹಾಗೂ ಇತರೆ ಮೈಸೂರು ನಾಯಕರಿಗೆ ಏಕೀಕರಣದ ರಾಜಕೀಯ ಉದ್ದೇಶ ಮೊದಲೇ ಅರ್ಥವಾಗಿತ್ತು. ಹೊಸದಾಗಿ ಸೇರ್ಪಡೆಯಾಗುವ ಸರ್ಕಾರಿ ನೌಕರರಿಗೂ ಇಲ್ಲಿನ ಸರ್ಕಾರಿ ನೌಕರರಿಗೂ ಸೇವಾ ವಿಚಾರದಲ್ಲಿ ಘರ್ಷಣೆಯಾಗುವ ಸಂಭವವಿದೆಯೆಂದು ಅದಕ್ಕಾಗಿ ಹೊರಗಿನಿಂದ ಬಂದ ನೌಕರರ ಸೇವಾ ವಿವರವನ್ನು ಪರಿಶೀಲಿಸಲು ಸ್ಕ್ರೀನಿಂಗ್ ಕಮಿಟಿ ಮಾಡಿ ಎಂದು ಅರಸು ಅವರು ೧೯೫೫ರಲ್ಲೇ ಹೇಳಿದ್ದರು. ಆದರೆ ಆ ಬಗ್ಗೆ ಯಾರೂ ತಲೆ ಕೆಡಿಸಿಕೊಂಡಿರಲಿಲ್ಲ. ಅಲ್ಲಿಂದ ಬಂದ 'ಸಿ' ದರ್ಜೆ ನೌಕರ ಸಂಸ್ಥಾನದ ನೌಕರರಿಗಿಂತ ಮೇಲೆ ಹೋಗಿ ಇಲಾಖೆಯ ಕಾರ್ಯದರ್ಶಿಯಾಗಿ ನಿವೃತ್ತರಾದ ಉದಾಹರಣೆಯಿದೆ. ಏಕೀಕರಣದ ನಂತರ ರಾಜಕೀಯ ಪರಿಸ್ಥಿತಿಯನ್ನು ಗಮನಿಸಿದ ಮೈಸೂರು ಸಂಸ್ಥಾನದ ನಾಯಕರು ರಾಜ್ಯದ ಹೆಸರನ್ನು ಬದಲಾವಣೆ ಮಾಡಲು ಒಪ್ಪಿರಲಿಲ್ಲ. ಹಳೆಯ ಮೈಸೂರು ಸಂಸ್ಥಾನದ ಬಗ್ಗೆ ಆದರಾಭಿಮಾನವುಳ್ಳವರಿಗೆ ಉತ್ತರ ಕರ್ನಾಟಕದವರ ಬಗ್ಗೆ ಮನದಲ್ಲಿ ಭೀತಿಯಿತ್ತು. ೧೯೭೩ ನವೆಂಬರ್ ೧ ರಂದು ಅರಸು ಅವರೇ ರಾಜ್ಯದ ಹೆಸರನ್ನು 'ಕರ್ನಾಟಕ' ಎಂದು ಶಾಸನ ಮಾಡಿಸಿದರು. ಈ ಮಹತ್ವದ ಕಾರ್ಯ ಅರಸು ಅವರಿಗೆ ಅಪಾರವಾದ ಜನಪ್ರಿಯತೆ ತಂದುಕೊಟ್ಟಿತು. ಅಷ್ಟೇ ಅಲ್ಲ, ತಾವು ಏಕೀಕರಣದ ವಿರೋಧಿಯಲ್ಲ ಎಂಬುದನ್ನು ಅರಸು ನಿರೂಪಿಸಿದರು.

ಅನಂತರ ಅವರು ಕೈಗೊಂಡ ಹಲವಾರು ಸಾಮಾಜಿಕ ಕಾರ್ಯಗಳು ಅರಸು ಅವರ ಆಡಳಿತದ ದಕ್ಷತೆಗೆ ನಿದರ್ಶನಗಳಾಗಿವೆ. ೧೯೭೩ರಲ್ಲಿ ಮಲಹೊರುವ ಅಮಾನವೀಯ ಪದ್ಧತಿ ರದ್ದು, ನಿಜಲಿಂಗಪ್ಪ ಅವರ ಕಾಲದಿಂದಲೂ ನೆನೆಗುದಿಗೆ ಬಿದ್ದಿದ್ದ 'ಭೂ ಸುಧಾರಣೆ' ಶಾಸನವಾಗಿ ತಾಲ್ಲೂಕುಗಳಲ್ಲಿ ಭೂಮಂಡಳಿ ರಚನೆಯಾದವು. ಇದರಿಂದ ೨೦.೯೮ ಲಕ್ಷ ಗೇಣಿದಾರರಿಗೆ ಭೂಮಿ ದೊರೆಯುವಂತಾಯಿತು. ಜೀತ ಪದ್ಧತಿ ವಿಮುಕ್ತಿ ಅವರ ಮತ್ತೊಂದು ಸಾಧನೆ. ಗ್ರಾಮೀಣ ಪ್ರದೇಶದ ಪರಿಶಿಷ್ಟ ಜಾತಿ ಮತ್ತು ವರ್ಗದವರಿಗೆ ಜನತಾಮನೆ, ಭಾಗ್ಯಜ್ಯೋತಿ ಮೊದಲಾದ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ನಿರುದ್ಯೋಗಿ ಯುವಕರಿಗೆ ಸ್ಟೈಫಂಡ್ ಕೊಡಲು ಯೋಜನೆ ರೂಪಿಸಿದರು. ೧೯೬೦ರಲ್ಲಿ ಹಿಂದುಳಿದವರ ಸ್ಥಿತಿ ಅಧ್ಯಯನ ಮಾಡಲು ಡಾ। ಆರ್. ನಾಗನಗೌಡ ಹಿಂದುಳಿದ ಆಯೋಗವನ್ನು ಜತ್ತಿ ಸರ್ಕಾರ ನೇಮಿಸಿತು. ಡಾ। ಆರ್. ನಾಗನಗೌಡ ಸಮಿತಿ ಲಿಂಗಾಯಿತರನ್ನು ಮುಂದುವರಿದ ಪಂಗಡಕ್ಕೆ ಸೇರಿಸಿತು. ೧೯೬೭ರಲ್ಲಿ ಮುಖ್ಯಮಂತ್ರಿ, ನಿಜಲಿಂಗಪ್ಪ ಅವರು ಡಾ। ಆರ್. ನಾಗನಗೌಡ ವರದಿಯನ್ನು ವಿರೂಪಗೊಳಿಸಿ ತಾತ್ಕಾಲಿಕ ಆದೇಶವೊಂದನ್ನು ಹೊರಡಿಸಿದರು. ಈ ಅಸಮಾಧಾನ ಹಿಂದುಳಿದವರಲ್ಲಿ ಮನೆ ಮಾಡಿಕೊಂಡಿತು. ಇದನ್ನು ಅಧ್ಯಯನ ಮಾಡಲು ೧೯೭೨ರಲ್ಲಿ ಅರಸು ಹಾವನೂರು ಹಿಂದುಳಿದ ಆಯೋಗವನ್ನು ನೇಮಿಸಿದರು. ಅದು ಕೊಟ್ಟ ವರದಿಯನ್ನು ೨೨.೨.೧೯೭೭ರಂದು ಅನುಷ್ಠಾನಗೊಳಿಸಿದರು. ಈ ಮೀಸಲಾತಿ ಸೌಲಭ್ಯವನ್ನು ಸರ್ಕಾರಿ ನೌಕರಿ ಅಲ್ಲದೆ ಸರ್ಕಾರದ ಕೈಗಾರಿಕೆ, ನಿಗಮ, ಮಂಡಳಿ ಹಾಗೂ ಅನುದಾನಿತ ಸಂಸ್ಥೆಗಳಿಗೆ ವಿಸ್ತರಿಸಿತು. ಬ್ರಾಹ್ಮಣ, ಲಿಂಗಾಯಿತ ಹಾಗೂ ಇತರೆ ಮೇಲ್ವರ್ಗದವರು ಅರಸು ವಿರುದ್ಧ ಭಾರೀ ಪ್ರತಿಭಟನೆ

ಮಾಡಿದರು. ಆಗ ಅರಸು ತೋರಿಸಿದ ಧೈರ್ಯ ಪ್ರಶಂಸಾರ್ಹವಾದುದು. ಹಿಂದುಳಿದವರ ಕಲ್ಯಾಣ ನೋಡಿಕೊಳ್ಳಲು ಪ್ರತ್ಯೇಕ ಇಲಾಖೆ ಸ್ಥಾಪಿಸಿ ಅದಕ್ಕೆ ಐಎಎಸ್ ಅಧಿಕಾರಿಯೊಬ್ಬರನ್ನು ನಿರ್ದೇಶಕರನ್ನಾಗಿ ಮಾಡಲಾಯಿತು. ಸರ್ಕಾರ ಯಾವುದೇ ಕೆಲಸ ಅಥವಾ ನೇಮಕಾತಿ ಮಾಡುವಾಗ ಸಾಮಾಜಿಕ ನ್ಯಾಯ ದೊರಕಿದೆಯೇ ಎಂದು ಚಿಂತಿಸುವಂತೆ ಅಧಿಕಾರಿ ಹಾಗೂ ಅಧಿಕಾರೇತರ ಮನಃಪರಿವರ್ತನೆ ಮಾಡಿದ ದೇವರಾಜ ಅರಸು ಅವರ ಸಾಧನೆ ಕಡಿಮೆಯಾದುದಲ್ಲ

೧೯೭೫ರಲ್ಲಿ ಶ್ರೀಮತಿ ಇಂದಿರಾಗಾಂಧಿ ದೇಶದಲ್ಲಿ ತುರ್ತುಪರಿಸ್ಥಿತಿ ಹೇರಿದರು. ೨೦ ಅಂಶಗಳ ಕಾರ್ಯಕ್ರಮಗಳನ್ನು ಜಾರಿಗೆ ತಂದರು. ತುರ್ತು ಪರಿಸ್ಥಿತಿಯ ಅತಿರೇಕದಿಂದಾಗಿ ಉತ್ತರ ಭಾರತದಲ್ಲಿ ಕಾಂಗ್ರೆಸ್ ಸಂಪೂರ್ಣವಾಗಿ ನೆಲ ಕಚ್ಚಿತು. ಅರಸು ಅವರು ತುರ್ತು ಪರಿಸ್ಥಿತಿಯನ್ನು ಅಭಿವೃದ್ಧಿ ಕೆಲಸಗಳಿಗೆ ಬಳಸಿಕೊಂಡರು. ತುರ್ತು ಪರಿಸ್ಥಿತಿ ಉಪಯೋಗಿಸಿಕೊಂಡು ತಮ್ಮ ವಿರೋಧಿಗಳನ್ನು ಅವರು ಸುಲಭವಾಗಿ ಸದೆಬಡಿಯಬಹುದಾಗಿತ್ತು. ನಿಜಲಿಂಗಪ್ಪ ಅವರನ್ನು ಬಂಧಿಸಲು ಅರಸು ಎಂದೂ ಯೋಚನೆ ಮಾಡಲಿಲ್ಲ. ಜೊತೆಗೆ ಕರ್ನಾಟಕದಲ್ಲಿ ಸೆರೆಯಲ್ಲಿದ್ದ ರಾಷ್ಟ್ರೀಯ ನಾಯಕರನ್ನು ಚೆನ್ನಾಗಿ ನೋಡಿಕೊಂಡರೆಂಬ ಮೆಚ್ಚುಗೆ ಅರಸು ಅವರಿಗೆ ದೊರೆಯಿತು.

೧೯೭೭ರಲ್ಲಿ ಶ್ರೀಮತಿ ಇಂದಿರಾಗಾಂಧಿ ಅವರ ಅಕ್ರಮದಿಂದ ಉತ್ತರ ಭಾರತದಲ್ಲಿ ಆಡಳಿತ ಕಾಂಗ್ರೆಸ್ ಧೂಳೀಪಟವಾದುದು ಸರಿಯಷ್ಟೆ. ಆಗ ಅರಸು ಅವರು ೧೯೭೮ರ ಚಿಕ್ಕಮಗಳೂರು ಲೋಕಸಭಾ ಉಪಚುನಾವಣೆಗೆ ಇಂದಿರಾಗಾಂಧಿಯವರನ್ನು ಕರೆತಂದು ನಿಲ್ಲಿಸಿ ಅವರನ್ನು ಗೆಲ್ಲಿಸಿದರು. ಇದು ಅರಸು ಅವರಿಗೆ ರಾಷ್ಟ್ರೀಯ ಖ್ಯಾತಿ ತಂದುಕೊಟ್ಟಿತು. ೧೯೭೮ರಲ್ಲಿ ಆಡಳಿತ ಕಾಂಗ್ರೆಸ್ ವಿಭಜನೆಯಾಗಿ ಬ್ರಹ್ಮಾನಂದರೆಡ್ಡಿ ಕಾಂಗ್ರೆಸ್ ಹಾಗೂ ಕಾಂಗೈ ಎಂಬ ಪ್ರಭೇದವಾಯಿತು.

ಆಗ ಅರಸು ಅವರು ಶ್ರೀಮತಿ ಗಾಂಧಿ ಅವರ ಜೊತೆ ಗುರುತಿಸಿಕೊಂಡು ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ಕಾಂಗೈ ಪಕ್ಷಕ್ಕೆ ಅದ್ಭುತ ವಿಜಯ ತಂದುಕೊಟ್ಟರು. ಅನಂತರ ಅರಸು ರಾಜಕೀಯದಲ್ಲಿ ಒಂದೊಂದಾಗಿ ತಪ್ಪು ಮಾಡತೊಡಗಿದರು. ಅವರಲ್ಲಿದ್ದ ಅತಿಯಾದ ಆತ್ಮವಿಶ್ವಾಸ ಅವರನ್ನು ತಪ್ಪು ದಾರಿ ತುಳಿಯುವಂತೆ ಮಾಡಿತು. ಜನತಾಪಕ್ಷದ ರಾಷ್ಟ್ರೀಯ ನಾಯಕರ ಹೊಗಳಿಕೆಯನ್ನು ಯಥಾವತ್ತಾಗಿ ಸ್ವೀಕರಿಸಿದರು. ತಮ್ಮ ಸಾಮಾಜಿಕ ಸುಧಾರಣೆಗಳನ್ನು ಶ್ರೀಮತಿ ಗಾಂಧಿ ಅವರಿಗೆ ಧಾರೆ ಎರೆದಿದ್ದನ್ನು ಮರೆತು ರಾಜ್ಯದಲ್ಲಿ ತಮ್ಮದೇ ಆದ ಪ್ರಭಾವ ವಲಯವಿದೆ ಎಂದು ಭ್ರಮಿಸಿದರು. ಹಿಂದುಳಿದ ವರ್ಗ ಎಂಬುದು ಅನೇಕ ಜಾತಿಗಳ ಮಿಶ್ರಣ. ಅವುಗಳ ಸಂಘಟನೆ ಮಾಡಬೇಕಾದುದು ಅಂದಿನ ಅತ್ಯಗತ್ಯವಾದ ಕೆಲಸವಾಗಿತ್ತು. ಆದರೆ ಅವರನ್ನು ತಮ್ಮ ಪರವಾದ ಮತದಾರರನ್ನಾಗಿ ಉಳಿಸಿಕೊಳ್ಳುವುದು ಕಷ್ಟದ ಕೆಲಸವಾಗಿತ್ತು. ರಾಜಕೀಯದಲ್ಲಿ ಒಂದೆರಡು ಹಿಂದುಳಿದ ಜಾತಿಗಳಿಗೆ ಪ್ರಾತಿನಿಧ್ಯವೇನೋ ದೊರಕಿತು. ಆದರೆ ಹತ್ತಾರು ಹಿಂದುಳಿದ ಜಾತಿಗಳು ನೇಪಥ್ಯದಲ್ಲಿದ್ದವು. ಅವರಿಗೆ ರಾಜಕೀಯದ ಅರಿವೇ ಇರಲಿಲ್ಲ. ಅಂತಹವರನ್ನು ಕಟ್ಟಿಕೊಂಡ ಶ್ರೀಮತಿ ಗಾಂಧಿ ವಿರುದ್ಧ ರಾಜಕೀಯ ಸಮರ ಹೂಡುವುದು ಎಷ್ಟೊಂದು ಸೂಕ್ತ !

ಅರಸು ಅವರಿಗೆ ಶ್ರೀಮತಿ ಗಾಂಧಿ ಅವರ ಕಾರ್ಯವಿಧಾನಗಳ ಬಗ್ಗೆ ಎಷ್ಟೇ ಅಸಮಾಧಾನವಿದ್ದರೂ ಅದನ್ನು ತೋರಿಸಿಕೊಂಡಿರಲಿಲ್ಲ. ಅವರು ಹೇಳಿದ್ದಕ್ಕೆಲ್ಲಾ ಹೂಂಗುಟ್ಟಿದ್ದರು. ೧೯೭೬ರಲ್ಲಿ ಬೆಂಗಳೂರಿಗೆ ಸಂಜಯಗಾಂಧಿ ಬಂದಾಗ ಮುಖ್ಯಮಂತ್ರಿ ಅರಸು ವಿಮಾನ ನಿಲ್ದಾಣಕ್ಕೆ ಹೋಗಿ ಸರ್ಕಾರದಲ್ಲಿ ಏನೂ ಅಲ್ಲದ ಸಂಜಯಗಾಂಧಿ ಹಾಗೂ ಮೇನಕಾ ಗಾಂಧಿ ಅವರನ್ನು ಸ್ವಾಗತಿಸಿ ಅವರಿಗೆ ಮೈಸೂರು ಪೇಟಾ ತೊಡಿಸಿ ಹಾಡಿ ಹೊಗಳಿದ್ದರು. ರಾಜ್ಯದ ವಿವಿಧ ಪಕ್ಷಗಳಲ್ಲಿದ್ದ ವಿರೋಧಿ ನಾಯಕರನ್ನು ಎಂದೂ ರಾಜಕೀಯವಾಗಿ ಪರಿಗಣನೆಗೆ ತೆಗೆದುಕೊಂಡಿರಲಿಲ್ಲ. ಅಷ್ಟೇ ಅಲ್ಲ, ಸಮಯ ಸಿಕ್ಕಾಗಲೆಲ್ಲ ಅವರನ್ನು ಛೇಡಿಸುವ ಹವ್ಯಾಸ ಅವರಲ್ಲಿತ್ತು. ರಾಜಕಾರಣದಲ್ಲಿ 'ಅದೃಶ್ಯ ಮತದಾರರು' ಎಂಬ ನುಡಿಗಟ್ಟನ್ನು ಜಾರಿಗೆ ತಂದವರೇ ಅವರು. ವಿದ್ಯಾವಂತರು ಹಾಗೂ ಪತ್ರಿಕೆ ಓದುವವರ ಓಟು ಬೇಡವೆಂದು ಬಹಿರಂಗವಾಗಿ ಅರಸು ಅವರು ಅನೇಕ ಸಾರಿ ಹೇಳಿದ್ದಾರೆ. ಅರಸು ಅವರಿಗೆ ಸ್ವಾಭಿಮಾನ ತುಸು ಜಾಸ್ತಿ. ಕೆಂಗಲ್ ಹನುಮಂತಯ್ಯ, ಕೆ.ಎಚ್. ಪಾಟೀಲ್, ಕೆ. ಎಚ್. ರಂಗನಾಥ್, ಎಚ್. ಸಿದ್ಧವೀರಪ್ಪ, ಎಚ್. ಎಂ. ಚನ್ನಬಸಪ್ಪ , ಬಸವಲಿಂಗಪ್ಪ, ಎಸ್. ಎಂ. ಕೃಷ್ಣ ಮೊದಲಾದವರು ಅರಸು ಅವರ ಮೇಲೆ ಮೊದಲಿನಿಂದಲೂ ಅಸಮಾಧಾನ ಹೊಂದಿದ್ದರು. ಅರಸು ಅವರು ತಮ್ಮ ಅಧಿಕಾರಾವಧಿಯಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಸಮರ್ಪಕವಾಗಿ ಚುನಾವಣೆ ನಡೆಸಲೇ ಇಲ್ಲ. ಅಲ್ಲೆಲ್ಲಾ ಅಧಿಕಾರಿಗಳೇ ಆಡಳಿತಾಧಿಕಾರಿಗಳಾಗಿದ್ದರು. ಇದರಿಂದ ಪಕ್ಷದ ಎಲ್ಲಾ ಹಂತದ ಕಾರ್ಯಕರ್ತರಲ್ಲೂ ಅಸಮಾಧಾನವಿತ್ತು. ಅರಸು ಅವರಿಗೆ ಅಧಿಕಾರಿಗಳ ಬಗೆಗಿದ್ದ ಒಲವು ವೃತ್ತಿನಿರತ ರಾಜಕಾರಣಿಗಳ ಮೇಲಿರಲಿಲ್ಲ. ರಾಜಕೀಯ ಪುಢಾರಿಗಳು ಸ್ಥಳೀಯ ಸಂಸ್ಥೆಗಳಿಗೆ ಆಯ್ಕೆಯಾದರೆ ದುಡ್ಡು ಮಾಡುತ್ತಾರೆಂಬ ಭಯ ಅವರದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಧಿಕಾರ ಹಂಚಿಕೆ ಸಹ ಅಗತ್ಯದ ಲಕ್ಷಣವಲ್ಲವೆ!

ರಾಜಕಾರಣದಲ್ಲಿ ಈ ಹಿಂದೆ ಗೊತ್ತಿದ್ದೂ ಗೊತ್ತಿಲ್ಲದಂತಿದ್ದ 'ಗೂಂಡಾ ಸಂಸ್ಕೃತಿ'ಯನ್ನು ಅರಸು ಅಧಿಕೃತವಾಗಿಸಿದರು. ಅವರಳಿಯ ಡಾ। ಎಂ. ಡಿ. ನಟರಾಜ್ ಕಟ್ಟಿದ 'ಇಂದಿರಾ ಬ್ರಿಗೇಡ್' ಅರಸು ಅವರ ವ್ಯಕ್ತಿತ್ವಕ್ಕೆ ದೊಡ್ಡ ಆಘಾತ ತಂದಿತು. ಯುವ ಕಾಂಗ್ರೆಸ್

ಗೂಂಡಾಗಿರಿಯನ್ನೇ ಧ್ಯೇಯ ಸಾಧನೆಯ ಮಾರ್ಗವನ್ನಾಗಿಟ್ಟುಕೊಂಡಿತು. ಪ್ರಾರಂಭದಲ್ಲೇ ಹೊಸ ಪರಿವರ್ತನೆಗೆ ಪ್ರೋತ್ಸಾಹ ಕೊಡಬೇಕಾದವರು ಪತ್ರಿಕೆಯವರು, ವಿದ್ಯಾರ್ಥಿಗಳು, ಅಧ್ಯಾಪಕರು, ವಕೀಲರು ಹಾಗೂ ಸುಶಿಕ್ಷಿತರು. ಆದರೆ ಇವರಿಗೆಲ್ಲಾ ಅರಸು ಅವರ ಒರಟುತನದ ಪರಿಚಯವಿತ್ತೇ ಹೊರತು ಅವರ ಸುಧಾರಣೆ ಪ್ರಕ್ರಿಯೆ ಅಪರಿಚಿತವಾಗಿತ್ತು. ಯಾವ ರಾಜಕಾರಣಿಯೂ ಹೇಳಿಕೊಳ್ಳಲು ಹಿಂಜರಿಯುವ ಭ್ರಷ್ಟಾಚಾರದ ಬಗ್ಗೆ ಅರಸು ಮುಕ್ತವಾಗಿ ಮಾತನಾಡುತ್ತಿದ್ದರು. ರಾಜಕಾರಣದಲ್ಲಿ ಹಣ ಮಾಡಬೇಕಾದ ಅಗತ್ಯದ ಬಗ್ಗೆ ಅವರು ಎಷ್ಟೇ ಹೇಳಿದರೂ ಅದರ ಹಿಂದಿರುವ ಕಟು ಸತ್ಯವನ್ನು ಪ್ರಜ್ಞಾವಂತ ಜನ ತಿಳಿಯಲಿಲ್ಲ. ಅರಸು ಅವರನ್ನು 'ಭ್ರಷ್ಟಾಚಾರಿ' ಎಂದು ಭಾವಿಸಿದರು.

೧೯೭೯ರಲ್ಲಿ ಅರಸು ಅವರನ್ನು ಇಂದಿರಾ ಕಾಂಗ್ರೆಸ್‌ನಿಂದ ಉಚ್ಚಾಟನೆ ಮಾಡಲಾಯಿತು. ೧೯೮೦ರ ಲೋಕಸಭೆಯಲ್ಲಿ ಅರಸು ಕಾಂಗ್ರೆಸ್ ರಾಜ್ಯದ ೨೭ ಸ್ಥಾನಗಳಲ್ಲಿ ಒಂದನ್ನೂ ಪಡೆಯಲಿಲ್ಲ. ಫಲಿತಾಂಶ ಪ್ರಕಟವಾದ ಕೆಲವೇ ಗಂಟೆಗಳಲ್ಲಿ ಸಚಿವ ಎಚ್. ಸಿ. ಶ್ರೀಕಂಠಯ್ಯ ಅವರು ೭೦ ಜನ ಶಾಸಕರೊಂದಿಗೆ ಇಂದಿರಾ ಕಾಂಗ್ರೆಸ್‌ಗೆ ದೌಡಾಯಿಸಿ ನಾಪತ್ತೆಯಾದರು. ಪೂರ್ಣವಾಗಿ ಭ್ರಮೆ ಇಳಿದನಂತರ ಅರಸು 'ಕರ್ನಾಟಕ ಕ್ರಾಂತಿರಂಗ' ಎಂಬ ಪ್ರಾದೇಶಿಕ ಪಕ್ಷ ಕಟ್ಟಿದರು. ೧೯೮೨ ಜೂನ್ ೬ ರಂದು ಬೆಂಗಳೂರಿನ ಜ್ಯೋತಿಷಿ ಮನೆಯಲ್ಲಿ ಹೃದಯಾಘಾತಕ್ಕೊಳಗಾದ ಅರಸು ೧೯೮೩ರ ಜನವರಿಯಲ್ಲಿ ನಡೆದ ವಿಧಾನಸಭಾ ಚುನಾವಣೆಯ ತನಕ ಬದುಕಿದ್ದರೆ ಕರ್ನಾಟಕ ರಾಜಕೀಯ ಚಿತ್ರವೇ ಬದಲಾಗುತ್ತಿತ್ತು. ಅರಸು ಅವರ ಸಂಪೂರ್ಣ ದುಡಿಮೆ ಕರ್ನಾಟಕ ಕ್ರಾಂತಿರಂಗದ ಮೂಲಕ ಜನತಾ ಪಕ್ಷಕ್ಕೆ ದೊರಕಿತು.

ಅರಸು ರೂಪಿಸಿದ ರಾಜಕೀಯ ಶಕ್ತಿವಲಯ ಉತ್ತರ ಭಾರತದ ಕರ್ಪೂರಿ ಠಾಕೂರ್, ಚಂದ್ರಜಿತ್ ಯಾದವ್ ಮೊದಲಾದವರಿಗೆ ಪ್ರೇರಣೆ ನೀಡಿತು. ಭಾರತದ ರಾಜಕಾರಣ ಹಿಂದುಳಿದ, ಅಲ್ಪ ಸಂಖ್ಯಾತ ಹಾಗೂ ದಲಿತರ ಮೇಲೆ ಅವಲಂಬಿತವಾಗಿರಬೇಕೆಂದು ಅರಸು ಅಲಿಖಿತ ಶಾಸನ ಮಾಡಿಸಿದ್ದಾರೆ. ಇಂದು ರಾಜ್ಯ ರಾಜಕೀಯ ಕ್ಷೇತ್ರದಲ್ಲಿ ಈ ಸಮುದಾಯಗಳಿಗೆ ಮಹತ್ವ ದೊರಕಿದ್ದರೆ ಅದಕ್ಕೆ ಅರಸು ಪರಿಶ್ರಮ ಕಾರಣ. ಅರಸು ಅವರು ಸ್ವಾತಂತ್ರ್ಯಾನಂತರ ಕರ್ನಾಟಕದ ಮೂರು ದಶಕದ ಏಕತಾನತೆಯ ರಾಜಕೀಯ ಸಂಪ್ರದಾಯವನ್ನು ಕೊಚ್ಚಿಹಾಕಿ ಅಲ್ಲಿ ಚೈತನ್ಯದ ಬೀಜ ಬಿತ್ತಿದ್ದಾರೆ. ಜ್ಯೋತಿಷ್ಯ, ಮಾಟ-ಮಂತ್ರ ಮುಂತಾದ ಮೌಢ್ಯಗಳನ್ನು ಹೊಂದಿದ್ದರೂ ದೇವರಾಜ ಅರಸು ಉತ್ತಮ ಚಿಂತಕರು. ಬರ್ಟ್ರೆಂಡ್ ರಸಲ್, ಲೆನಿನ್, ಮಾವೋ, ಗಾಂಧಿ ಮೊದಲಾದವರ ಬರಹಗಳನ್ನು ಆಳವಾಗಿ ಅಧ್ಯಯನ ಮಾಡಿದ್ದ ಅರಸು ಅವರು ವಾಸ್ತವಿಕ ಪ್ರಜ್ಞೆಯ ದೂರದೃಷ್ಟಿಯುಳ್ಳ ರಾಜಕೀಯ ಮುತ್ಸದ್ದಿ.

## ಗ್ರಾಮಗಳಿಗೆ ರಾಜಕೀಯದ ತೇರು

ಕರ್ನಾಟಕದ ವರ್ಣರಂಜಿತ ರಾಜಕಾರಣಿಗಳಲ್ಲಿ ರಾಮಕೃಷ್ಣ ಹೆಗಡೆ ಅವರಿಗೆ ಮೊದಲ ಸ್ಥಾನವಿದೆ. ಸುಮಾರು ಐದು ದಶಕಗಳಿಗೂ ಹೆಚ್ಚು ಕಾಲ ಸಕ್ರಿಯ ರಾಜಕೀಯದಲ್ಲಿರುವ ಹೆಗಡೆ ಅನೇಕ ಏಳುಬೀಳುಗಳನ್ನು ಕಂಡಿದ್ದಾರೆ. ನಿಜಲಿಂಗಪ್ಪ ಅವರ ಸಂಸ್ಥಾ ಕಾಂಗ್ರೆಸ್‌ನ ವೈಶಿಷ್ಟ್ಯಗಳ ಜೊತೆ ಅರಸು ಅವರ ಸಾಮಾಜಿಕ ನ್ಯಾಯದ ರಾಜಕೀಯ ಆದರ್ಶವನ್ನು ತಮ್ಮೊಡನೆ ಸೇರಿಸಿಕೊಂಡಿರುವ ಹೆಗಡೆ ರಾಷ್ಟ್ರ ಕಂಡ ರಾಜಕೀಯ ಮುತ್ಸದ್ದಿಗಳಲ್ಲಿ ಒಬ್ಬರು. ಉತ್ತಮ ಆಡಳಿತಗಾರರೆಂಬ ಹೆಗ್ಗಳಿಕೆಯ ಜೊತೆ ತಾತ್ವಿಕ ಚಿಂತನೆಯುಳ್ಳವರೆಂದೂ ಪಕ್ಷದ ಸಂಘಟನಾ ಚತುರರೆಂದೂ ಸಹ ಅವರನ್ನು ಪರಿಗಣಿಸಲಾಗುತ್ತಿದೆ. ಕರ್ನಾಟಕ ರಾಜಕೀಯದಲ್ಲಿ 'ಮೌಲ್ಯಾಧಾರಿತ ರಾಜಕಾರಣ' ಎಂಬ ನುಡಿಗಟ್ಟನ್ನು ಚಾಲ್ತಿಗೆ ತಂದವರು ಹೆಗಡೆ.

ಉತ್ತರಕನ್ನಡ ಜಿಲ್ಲೆ ಸಿದ್ದಾಪುರ ತಾಲ್ಲೂಕಿನ ದೊಡ್ಮನೆ ರಾಮಕೃಷ್ಣ ಹೆಗಡೆ ಅವರ ಜನ್ಮಸ್ಥಳ. ೧೯೨೭ರಲ್ಲಿ ಕೃಷ್ಣಾಷ್ಟಮಿ ದಿನ ಹೆಗಡೆ ಹುಟ್ಟಿದರು. ಹೆಗಡೆ ಕುಟುಂಬ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲುಗೊಂಡ ಮನೆತನ. ಶಿರಸಿ ಮಾರಿಕಾಂಬಾ ಪ್ರೌಢಶಾಲೆಯಲ್ಲಿ ವಿದ್ಯಾಭ್ಯಾಸ ಮುಗಿಸಿದ ಹೆಗಡೆ ಸರ್ವೋದಯ ಕಾರ್ಯಕರ್ತೆ ತಮ್ಮ ಅಕ್ಕ ಮಹಾದೇವಿ ಅವರೊಡನೆ ವಿನೋಬಾ ಭಾವೆ ಅವರ ವಾರ್ಧಾ ಆಶ್ರಮಕ್ಕೆ ಹೋದರು. ಲೋಕಜ್ಞಾನ, ವಿವಿಧ ಭಾಷೆಗಳ ಪರಿಚಯ, ಅಪೂರ್ವ ಪಾಂಡಿತ್ಯ ಹಾಗೂ ಗಾಂಧೀಜಿ ಅವರ ಬಗ್ಗೆ ಶ್ರದ್ಧೆ ಬೆಳೆಯಲು ಹೆಗಡೆ ಅವರಿಗೆ ವಿನೋಬಾ ಭಾವೆ ಅವರ ಆಶ್ರಮ ಪ್ರೇರಕ ಸ್ಥಳವಾಯಿತು.

೧೯೫೩ರ ಹೊತ್ತಿಗೆ ಶಿರಸಿಗೆ ಆಗಮಿಸಿದ ಹೆಗಡೆ ವಕೀಲ ವೃತ್ತಿ ಕೈಗೊಂಡರು. ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾದರು. ಮಲೆನಾಡ ರೈತರ ಸಮ್ಮೇಳನ ನಡೆಸಿದರು. 'ಸಿರಸಿ ಸಮಾಚಾರ್' ಎಂಬ ಜಿಲ್ಲಾ ಪತ್ರಿಕೆ ಪ್ರಾರಂಭಿಸಿದರು. ೧೯೫೬ರ ನವೆಂಬರ್ ೧ರ ಏಕೀಕರಣದ ಸಮಾರಂಭ ಬೆಂಗಳೂರು ಸೆಂಟ್ರಲ್ ಕಾಲೇಜ್ ಮೈದಾನದಲ್ಲಿ ವ್ಯವಸ್ಥೆಯಾಗಿತ್ತು. ನಿಜಲಿಂಗಪ್ಪ ಅವರ ಹಿಂದೆ-ಮುಂದೆ ಕಾಣಿಸಿಕೊಳ್ಳುತ್ತಿದ್ದ

ತರುಣ ಹೆಗಡೆ ಅವರ ವ್ಯಕ್ತಿತ್ವವನ್ನು ಸಿ. ಕೆ. ಜಾಫರ್ ಷರೀಫ್‌ರವರು ಇಂದಿಗೂ ನೆನೆಸಿಕೊಳ್ಳುತ್ತಾರೆ. ೧೯೫೭ರ ಸಾರ್ವತ್ರಿಕ ಚುನಾವಣೆಯಲ್ಲಿ ಸಿರಸಿ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾದ ಹೆಗಡೆ ನಿಜಲಿಂಗಪ್ಪ ಸಚಿವ ಸಂಪುಟದಲ್ಲಿ ಯೋಜನಾಖಾತೆಯ ಉಪ ಸಚಿವರಾದರು. ಕೃಷಿ ವಿಸ್ತರಣಾ ಯೋಜನೆ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೆ ತಂದ ಕೀರ್ತಿ ಹೆಗಡೆ ಅವರದು.

ಕೇವಲ ಒಂದು ವರ್ಷದಲ್ಲಿ ಭಿನ್ನಮತೀಯ ಚಟುವಟಿಕೆಯಿಂದ ನಿಜಲಿಂಗಪ್ಪನವರು ಮುಖ್ಯಮಂತ್ರಿ ಪದವಿ ಕಳೆದುಕೊಂಡರು. ಜತ್ತಿ ಸಚಿವ ಸಂಪುಟಕ್ಕೆ ಸೇರುವ ಬಗ್ಗೆ ಹೆಗಡೆ ಯೋಚಿಸಲೇ ಇಲ್ಲ. ತಮ್ಮ ನಾಯಕರು ನಿಜಲಿಂಗಪ್ಪ ಎಂದು ಭಾವಿಸಿದ ಹೆಗಡೆ ಪಕ್ಷ ಸಂಘಟನೆಗೆ ಮುಂದಾದರು. ೧೯೬೨ರಲ್ಲಿ ಚುನಾವಣೆಯ ಹೊತ್ತಿಗೆ ಕಾಂಗ್ರೆಸ್ ಪಕ್ಷದಲ್ಲಿ ನಿಜಲಿಂಗಪ್ಪ ಅವರ ಗುಂಪು ಅತ್ಯಂತ ಪ್ರಬಲವಾದ ಗುಂಪಾಯಿತು. ಇದಕ್ಕೆ ಹೆಗಡೆ ಅವರ ಸಂಘಟನಾಶಕ್ತಿ ಕಾರಣವಾಗಿತ್ತು. ೧೯೬೨ರ ಚುನಾವಣೆಯಲ್ಲಿ ಹೆಗಡೆ ಸುಲಭವಾಗಿ ಆರಿಸಿ ಬಂದರು. ನಿಜಲಿಂಗಪ್ಪ ಅವರು ಹೆಗಡೆ ಅವರಿಗೆ ಪ್ರಾರಂಭದಲ್ಲಿ ಸಹಕಾರ ಹಾಗೂ ಗ್ರಾಮೀಣಾಭಿವೃದ್ಧಿ ಖಾತೆ ಕೊಟ್ಟಿದ್ದರು. ಸಹಕಾರ ಸಂಘಗಳಲ್ಲಿ ಚುನಾವಣೆ ಮೂಲಕ ಸದಸ್ಯರು ಆಯ್ಕೆಯಾಗಬೇಕೆಂದು ಸದಸ್ಯರ ನಾಮನಿರ್ದೇಶನ ಬೇಡವೆಂಬ ಕಾನೂನು ಜಾರಿಗೆ ತಂದರು. ಸ್ಥಳೀಯ ಸಂಸ್ಥೆಗಳಲ್ಲಿ ಮೂರು ಹಂತದ ವ್ಯವಸ್ಥೆ ಜಾರಿಗೆ ತಂದರು. ಎಸ್.ಕೆ.ಡೇ ಹಾಗೂ ಅಶೋಕ ಮೆಹ್ತಾ ಅವರುಗಳು ಹೆಗಡೆ ಮೆಚ್ಚಿಗೆ ಗಳಿಸಿದ ಚಿಂತಕರಾಗಿದ್ದರು. ಬಲವಂತರಾಯ್ ಸಮಿತಿ ಆಧಾರದ ಮೇಲೆ ರೂಪಿತವಾದ ಪಂಚಾಯತ್ ರಾಜ್ ಮಸೂದೆ ಹಾಗೂ ಸಹಕಾರ ಮಸೂದೆಯನ್ನು ಮಂಡಿಸಿ ದೇಶದ ವಿಚಾರವಂತರ ಗಮನ ಸೆಳೆದರು. ಮೂಲತಃ ಅರ್ಥಶಾಸ್ತ್ರದ ವಿದ್ಯಾರ್ಥಿಯಾದ ಹೆಗಡೆ ಹಣಕಾಸು ನಿರ್ವಹಣೆಯಲ್ಲಿ ತುಂಬಾ ಆಸಕ್ತರಾಗಿದ್ದರು. ಬಿ. ಡಿ. ಜತ್ತಿ ಅವರಿಂದ ಹಣಕಾಸು ಖಾತೆ ವಾಪಸ್ಸು ಪಡೆದ ಮುಖ್ಯಮಂತ್ರಿ ನಿಜಲಿಂಗಪ್ಪ ಅದನ್ನು ಹೆಗಡೆ ಅವರಿಗೆ ಕೊಟ್ಟರು. ಜತ್ತಿ - ನಿಜಲಿಂಗಪ್ಪ ಅವರ ಭಿನ್ನಾಭಿಪ್ರಾಯಕ್ಕೆ ಹೆಗಡೆ ಅವರ ಶಿರ್ಸಿ ಕ್ಷೇತ್ರ ಬಲಿಯಾಯಿತು. ಅದು ೧೯೭೨ರಿಂದಲೂ ಶಿರಸಿ ಮೀಸಲು ಕ್ಷೇತ್ರವಾದ ಕಾರಣ ಹೆಗಡೆ ಅವರ ರಾಜಕೀಯ ನೆಲೆ ತಪ್ಪಿತು. ಆ ಕಾಲದಲ್ಲಿ ಬೆಂಗಳೂರಿನಲ್ಲಿ ಹೆಗಡೆ ಕಟ್ಟಿಸಿದ ಭವ್ಯ ಬಂಗಲೆ ಸಾಕಷ್ಟು ಚರ್ಚಾಸ್ಪದ ವಿಷಯವಾಗಿತ್ತು.

ವಿದ್ಯಾರ್ಥಿ ದೆಸೆಯಿಂದಲೂ ಉತ್ತರ ಭಾರತದ ರಾಜಕಾರಣ ಬಲ್ಲವರಾಗಿದ್ದ ಹೆಗಡೆ ಅವರಿಗೆ ನಿಜಲಿಂಗಪ್ಪ ಅವರು ಶ್ರೀಮತಿ ಗಾಂಧಿ ಅವರ ಅಪೇಕ್ಷೆಯಂತೆ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗುವುದಕ್ಕೆ ಸಹಮತ ಹೊಂದಿರಲಿಲ್ಲ. ಆದರೂ ೧೯೬೮ರಲ್ಲಿ ನಿಜಲಿಂಗಪ್ಪ ಅವರು ಕಾಂಗ್ರೆಸ್ ಅಧ್ಯಕ್ಷರಾದ ಮೇಲೆ ಮಾತು ಕೊಟ್ಟಂತೆ ತಮ್ಮ ಮಿತ್ರರಾದ ವೀರೇಂದ್ರ ಪಾಟೀಲರನ್ನು ಮೈಸೂರು ರಾಜ್ಯದ ಮುಖ್ಯಮಂತ್ರಿಗಳನ್ನಾಗಿಸಿದರು. ೧೯೭೧ರ ಲೋಕಸಭಾ ಚುನಾವಣೆಯಲ್ಲಿ ನಿಜಲಿಂಗಪ್ಪ ನೇತೃತ್ವದ ಸಂಸ್ಥಾ ಕಾಂಗ್ರೆಸ್ ದಯನೀಯ ರೀತಿಯಲ್ಲಿ ಸೋಲೊಪ್ಪಿಕೊಂಡಾಗ ಮುಖ್ಯಮಂತ್ರಿ ವೀರೇಂದ್ರ ಪಾಟೀಲ್ ಮನ ಒಲಿಸಿ ರಾಜೀನಾಮೆ ಕೊಡಿಸಿದರು. ಮೊದಲಿನಿಂದಲೂ ಪ್ರಧಾನಿ ಇಂದಿರಾಗಾಂಧಿ ಅವರ ಜೊತೆ ಉತ್ತಮ ಸಂಬಂಧವಿಟ್ಟುಕೊಂಡಿದ್ದ ಹೆಗಡೆ ಯಾವುದೇ ಆಮಿಷಕ್ಕೆ ಬಲಿಯಾಗದೆ ನಿಜಲಿಂಗಪ್ಪ ಅವರ ಜೊತೆಯಲ್ಲೇ ಉಳಿದರು. ೧೯೭೨ರಲ್ಲಿ ನಡೆದ ರಾಜ್ಯ ವಿಧಾನಸಭೆಯ ಚುನಾವಣೆಯಲ್ಲಿ ಸಂಸ್ಥಾಕಾಂಗ್ರೆಸ್ ಕೇವಲ ೨೪ ಸ್ಥಾನಗಳನ್ನು ಗಳಿಸಿರಬಹುದು. ಆದರೆ ಸಂಸ್ಥಾ ಕಾಂಗ್ರೆಸ್ ಅರ್ಥಾತ್ ಹೆಗಡೆ ರೂಪಿಸಿದ ಪ್ರಣಾಳಿಕೆ ಆಸಕ್ತಪೂರ್ಣವಾದುದು. ಹದಿನೆಂಟು ವರ್ಷಕ್ಕೆ ಮತದಾನದ ಹಕ್ಕು, ಜಿಲ್ಲಾ ಪಂಚಾಯತ್, ಗ್ರಾಮಗಳಿಗೆ ಶುದ್ಧ ಕುಡಿಯುವ ನೀರು, ಉದ್ಯೋಗ ದೃಢೀಕರಣ, ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಸ್ವಾಯತ್ತ ಮಂಡಳಿ ರಚನೆ ಮುಂತಾದ ಮಹತ್ವದ ವಿಚಾರಗಳನ್ನು ಆಗಲೇ ಪ್ರಸ್ತಾಪಿಸಲಾಗಿದೆ.

ನಿಜಲಿಂಗಪ್ಪನವರ ಸರ್ಕಾರದಲ್ಲಿ ಅರ್ಥ ಸಚಿವರಾಗಿದ್ದ ಹೆಗಡೆ ಅವರು ತಮ್ಮ ಆಯವ್ಯಯದಲ್ಲಿ ಅನೇಕ ಜನೋಪಯೋಗಿ ಕಾರ್ಯಕ್ರಮಗಳನ್ನು ಈ ಹಿಂದೆಯೇ ಪ್ರಕಟಿಸಿದ್ದರು. ಗ್ರಾಮಾಂತರ ಪ್ರದೇಶದಲ್ಲಿ ಎಪ್ಪತ್ತು ವರ್ಷ ದಾಟಿದ ಅನಾಥ ವೃದ್ಧರಿಗೆ ಮಾಸಾಶನ ಕೊಡುವ ಯೋಜನೆಯನ್ನು ೧೯೬೮-೬೯ರಲ್ಲೇ ಮೈಸೂರು ಸರ್ಕಾರ ಜಾರಿಗೆ ತಂದಿತು. ಇದನ್ನು ಈಗ ಎನ್‌ಡಿಎ ಕೇಂದ್ರ ಸರ್ಕಾರ ದೇಶಕ್ಕೆಲ್ಲಾ ವಿಸ್ತರಿಸಿದೆ. ಕನ್ನಡ ಚಲನಚಿತ್ರಗಳಿಗೆ ಸಹಾಯಧನ ಆ ಕಾಲದಲ್ಲೇ ಪ್ರಾರಂಭವಾಯಿತು. ಅಕಾಡೆಮಿಗಳ ಪ್ರಾರಂಭ, ಕನ್ನಡ ಸಾಹಿತ್ಯ ಹಾಗೂ ಕನ್ನಡ ಅಭಿವೃದ್ಧಿ ಯೋಜನೆಗಳಿಗೆ ಸಮರ್ಪಕವಾದ ಹಣಕಾಸು ನೆರವು, ಸಾಹಿತಿ ಹಾಗೂ ಕಲಾವಿದರಿಗೆ ಮಾಸಾಶನ ಕೊಡುವ ಯೋಜನೆ ಆಗಲೇ ಪ್ರಾರಂಭವಾದುದು. ರೇಷ್ಮೆ, ಸಣ್ಣ ಕೈಗಾರಿಕೆ, ನೀರಾವರಿ, ಕೃಷಿ, ಪ್ರಾಥಮಿಕ ಶಿಕ್ಷಣಕ್ಕೆ ಸೂಕ್ತ ಹಣಕಾಸು ಒದಗಿಸಿದ ಹಣಕಾಸು ಮಂತ್ರಿಯೆಂದು ಹೆಗಡೆ ಆ ಕಾಲದಲ್ಲೇ ಖ್ಯಾತಿ ಪಡೆದರು. ೧೯೭೨ರಲ್ಲಿ ಹೆಗಡೆ ಅವರು ವಿಧಾನಪರಿಷತ್ತಿನ ಸದಸ್ಯರಾಗಿ ವಿರೋಧಪಕ್ಷದ ನಾಯಕರಾದರು. ಉತ್ತಮ ವಿರೋಧಪಕ್ಷದ ನಾಯಕ ಹೇಗಿರಬಹುದು ಎಂಬುದನ್ನು ಅವರು ಆ ಕಾಲದಲ್ಲಿ ಸಾಧಿಸಿ ತೋರಿಸಿದರು. ೧೯೭೫ರಲ್ಲಿ ದೇಶ ತುರ್ತು ಪರಿಸ್ಥಿತಿಯ ಕಪಿಮುಷ್ಠಿಯಲ್ಲಿ ಸಿಲುಕಿದಾಗ ಹೆಗಡೆ ಇತರ ನಾಯಕರಂತೆ

ಇಂದಿರಾಗಾಂಧಿ ಅವರಿಗೂ ಅಥವಾ ಮುಖ್ಯಮಂತ್ರಿ ಅರಸು ಅವರಿಗೋ ಶರಣಾಗಲಿಲ್ಲ. ಅದಕ್ಕೆ ಬದಲಾಗಿ ಸೆರೆಮನೆಗೆ ಹೋದರು. ಸೆರೆವಾಸದಲ್ಲಿ ಹೆಗಡೆ ಮೌಲ್ಯಗಳ ಪುನರ್ ಚಿಂತನೆ ನಡೆಸಿದರು. ವಿರೋಧ ಪಕ್ಷಗಳ ಒಗ್ಗಟ್ಟು ಆಗದೇ ಕಾಂಗ್ರೆಸ್ಸನ್ನು ಸೋಲಿಸುವುದು ಕಷ್ಟವೆಂದು ಭಾವಿಸಿದರು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕೆನರಾ ಲೋಕಸಭಾ ಕ್ಷೇತ್ರದಿಂದ ಸೋತ ಹೆಗಡೆ ರಾಷ್ಟ್ರಮಟ್ಟದಲ್ಲಿ ಪಕ್ಷ ಸಂಘಟನೆಗೆ ತಮ್ಮನ್ನು ತೊಡಗಿಸಿಕೊಂಡರು. ಜನತಾಪಕ್ಷದ ರಾಷ್ಟ್ರೀಯ ಕಾರ್ಯದರ್ಶಿಯಾದರು. ೧೯೭೮ರ ರಾಜ್ಯ ವಿಧಾನಸಭಾ ಚುನಾವಣೆಯಲ್ಲಿ ಅಸಮರ್ಪಕ ಟಿಕೇಟ್ ಹಂಚಿಕೆಯಿಂದ ಜನತಾಪಕ್ಷ ಸೋತುಹೋಯಿತು. ಹೆಗಡೆ-ಚಂದ್ರಶೇಖರ್ ರಾಷ್ಟ್ರಮಟ್ಟದಲ್ಲಿ ಜನತಾ ಪಕ್ಷವನ್ನು ಉಳಿಸಿಕೊಳ್ಳಲು ಹೆಣಗುತ್ತಿದ್ದರು.

೧೯೮೩ರ ವಿಧಾನಸಭಾ ಚುನಾವಣೆಯಲ್ಲಿ ಕ್ರಾಂತಿರಂಗದ ಜೊತೆಗೂಡಿದ ಜನತಾಪಕ್ಷ ೯೫ ಸ್ಥಾನಗಳನ್ನು ಪಡೆಯಿತು. ಕಾಂಗ್ರೆಸ್ ೮೨ ಸ್ಥಾನಗಳನ್ನು ಪಡೆದಿತ್ತು. ಬಿಜೆಪಿ ೧೮, ಪಕ್ಷೇತರರು ೨೨ ಸ್ಥಾನಗಳನ್ನು ಪಡೆದಿದ್ದರು. ಜನತಾ ಪಕ್ಷದ ನಾಯಕತ್ವ ವಹಿಸಲು ಕ್ರಾಂತಿರಂಗದ ಎಸ್. ಬಂಗಾರಪ್ಪ ತುದಿಗಾಲ ಮೇಲೆ ನಿಂತಿದ್ದರು. ಬಂಗಾರಪ್ಪ ಮುಖ್ಯಮಂತ್ರಿಯಾದರೆ ಕಾಂಗ್ರೆಸ್ ಆಡಳಿತವೇ ಆಗುತ್ತದೆಂಬ ಭೀತಿ ಎಲ್ಲರದು. ಇಂತಹ ಸಂದರ್ಭದಲ್ಲಿ ಜನತಾಪಕ್ಷದ ರಾಷ್ಟ್ರೀಯ ಅಧ್ಯಕ್ಷರಾದ ಚಂದ್ರಶೇಖರ್ ಹಾಗೂ ಕರ್ನಾಟಕದ ಹಿರಿಯ ರಾಜಕಾರಣಿ ಎಸ್. ನಿಜಲಿಂಗಪ್ಪ ಅವರು ಶಾಸಕರೂ ಅಲ್ಲದ ರಾಮಕೃಷ್ಣ ಹೆಗಡೆ ಅವರನ್ನು ಮುಖ್ಯಮಂತ್ರಿಯನ್ನಾಗಿಸಿದರು. ಜನತಾಪಕ್ಷ ಸರ್ಕಾರ ಇಂದು ಬೀಳಬಹುದು ನಾಳೆ ಬೀಳಬಹುದು ಎಂಬ ವದಂತಿ ನಡುವೆ ಹೆಗಡೆ ಮುಖ್ಯಮಂತ್ರಿಯಾಗಿ ಕಾರ್ಯ ನಿರ್ವಹಿಸಬೇಕಾಗಿತ್ತು. ಕ್ರಾಂತಿರಂಗದಿಂದ ಬಂದಿದ್ದ ೩೨ ಜನರನ್ನು ಒಲಿಸಿಕೊಂಡು ಹೆಗಡೆ ಆಡಳಿತ ಮಾಡಬೇಕಾಗಿತ್ತು. ಆರ್.ಎಲ್. ಜಾಲಪ್ಪ, ಅಬ್ದುಲ್ ನಜೀರ್ ಸಾಬ್, ಡಿ.ಬಿ. ಚಂದ್ರೇಗೌಡ, ಎಂ. ರಘುಪತಿ, ಡಾ। ಜೀವರಾಜ ಆಳ್ವ ಮುಂತಾದ ನಾಯಕರು ಕ್ರಾಂತಿ ರಂಗಕ್ಕೆ ಸೇರಿದ್ದರು. ಇಂದಿರಾಗಾಂಧಿ ಮುಂದಿನ ವರ್ಷ ಲೋಕಸಭೆಗೆ ನಡೆಯುವ ಸಾರ್ವತ್ರಿಕ ಚುನಾವಣೆಯ ಒಳಗೆ ಕರ್ನಾಟಕದಲ್ಲಿರುವ ಅಲ್ಪಮಟ್ಟದ ಹೆಗಡೆ ಸರ್ಕಾರ ಉರುಳಬೇಕೆಂದು ಬಯಸಿದ್ದರು. ೧೯೮೩ ರಿಂದ ೧೯೮೪ ಅಕ್ಟೋಬರ್‌ವರೆಗೆ ಹೆಗಡೆ ಎದುರಿಸಿದ ರಾಜಕೀಯ ಸವಾಲು ಹತ್ತಾರು. ಕೈಸಿಸ್ಸನ್ನು ಮ್ಯಾನೇಜ್ ಮಾಡುವಲ್ಲಿ ಹೆಗಡೆ ಅವರಿಗೆ ಅಸಾಧಾರಣ ಜಾಣ್ಮೆಯಿದೆ. ಕಾಂಗ್ರೆಸ್ ತಂತ್ರಗಳಿಗೆ ಒಂದೊಂದೇ ಪ್ರತಿತಂತ್ರ ಹೂಡಿ ಜನತಾಪಕ್ಷ ಸರ್ಕಾರ ಉಳಿಸಿಕೊಂಡರು. ಅಷ್ಟೇ ಅಲ್ಲ ಆಂಧ್ರಪ್ರದೇಶದ ತೆಲುಗು ದೇಶಂ ಸರ್ಕಾರವನ್ನು ಉಳಿಸಿದರು. ಕಗ್ಗೊಲೆಯ ಮಾರನೆಯ ದಿನವೇ ಲೋಕಸಭೆಯ ಸದಸ್ಯರೂ ಆಗಿರದಿದ್ದ ರಾಜೀವಗಾಂಧಿ ದೇಶದ ಪ್ರಧಾನಿಯಾದರು. ೧೯೮೪ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಹೆಗಡೆ ಅವರು ರಾಜ್ಯದಲ್ಲಿ ಎಷ್ಟೇ ಜನಪ್ರಿಯವಾಗಿದ್ದರೂ ಇಂದಿರಾಗಾಂಧಿ ಅವರ ಸಾವಿನ ಅನುಕಂಪದ ಅಲೆ ಎದುರು ನಿಲ್ಲಲಾಗಲಿಲ್ಲ. ಕರ್ನಾಟಕದಲ್ಲಿ ಜನತಾ ಪಕ್ಷಕ್ಕೆ ಕೇವಲ ನಾಲ್ಕು ಸ್ಥಾನಗಳು ಬಂದವು. ಲೋಕಸಭಾ ಚುನಾವಣಾ ಫಲಿತಾಂಶ ನೋಡಿದ ಹೆಗಡೆ ಸೋಲಿನ ನೈತಿಕ ಹೊಣೆ ಹೊತ್ತು ತಮ್ಮ ಸರ್ಕಾರದ ರಾಜೀನಾಮೆ ಕೊಟ್ಟರು. ೧೯೮೫ರ ವಿಧಾನಸಭಾ ಚುನಾವಣೆಯಲ್ಲಿ ಯಾರೂ ಹೆಗಡೆ ಅವರ ಜನತಾ ಪಕ್ಷಕ್ಕೆ ಬಹುಮತ ಬರುತ್ತದೆಂದು ಭಾವಿಸಿರಲಿಲ್ಲ. ಕಾಂಗ್ರೆಸ್ ಪಕ್ಷದಲ್ಲಿ ಅಧಿಕಾರಕ್ಕೆ ಬರುವ ಉತ್ಸಾಹದ ಅಲೆ ಎಲ್ಲೆಡೆ ಹರಡಿತ್ತು. ಹೆಗಡೆ ಅವರ ಜನತಾ ಪಕ್ಷದ ಒಂದು ಚುನಾವಣಾ ಘೋಷಣೆ ಹೀಗಿದೆ. ''ಕರ್ನಾಟಕದ ಆಡಳಿತ ದೆಹಲಿಯಿಂದಲ್ಲ ಇಲ್ಲಿಂದಲೇ''.

ಕರ್ನಾಟಕದ ಜನ ಮೊದಲಬಾರಿಗೆ ರಾಜಕೀಯವಾಗಿ ಸ್ವಾಭಿಮಾನ ನೆಲೆಯಿಂದ ಚಿಂತಿಸಿದರು. ಜನತಾಪಕ್ಷ ೧೩೯ ಸ್ಥಾನಗಳಲ್ಲಿ ಜಯಶಾಲಿಯಾಯಿತು. ಕಾಂಗ್ರೆಸ್ ಕೇವಲ ೬೬ ಸ್ಥಾನಗಳಿಗೆ ತೃಪ್ತಿ ಪಟ್ಟುಕೊಳ್ಳಬೇಕಾಯಿತು. ಒತ್ತಡ, ರಾಜಕೀಯ ತಂತ್ರ ಅನುಸರಿಸುತ್ತಿದ್ದ ಬಿಜೆಪಿ ಕೇವಲ ನಾಲ್ಕು ಸ್ಥಾನ ಪಡೆಯುವಂತಾಯಿತು. ಈ ಚುನಾವಣೆ ಕರ್ನಾಟಕ ರಾಜಕೀಯ ಅಧ್ಯಯನದಿಂದ ತುಂಬಾ ಪ್ರಮುಖವಾದುದು. ನೆಹರು, ಗಾಂಧಿ ಮನೆತನದ ಪ್ರಭಾವದ ಎದುರು ಜನರನ್ನು ಪ್ರಬುದ್ಧರನ್ನಾಗಿಸಿ ಮತ ಪಡೆಯುವುದು ಸಾಮಾನ್ಯದ ಸಂಗತಿಯಾಗಿರಲಿಲ್ಲ. ಅವರಿಗೆ ಈ ಕಾಲದಲ್ಲಿ ದೊರಕಿದ ರಾಜಕೀಯ ಶಿಕ್ಷಣ ಹಾಗೂ ಅರಿವು ರಾಜ್ಯದಲ್ಲಿ ಕಾಂಗ್ರೆಸ ಏಕಸಾಮ್ಯತೆಯನ್ನು ಮುರಿಯುವಲ್ಲಿ ಯಶಸ್ವಿಯಾಯಿತು. ಸಿನಿಮಾ, ಜಾತಿ ಹಾಗೂ ಧರ್ಮದ ಭಾವೋದ್ವೇಗವಿಲ್ಲದೆ ಕೇವಲ ವಿಚಾರಶೀಲತೆಯಿಂದ ಮತದಾರರ ಮನಃಪರಿವರ್ತನೆ ಮಾಡಿದ ಈ ಘಟನೆ ಸಾಮಾನ್ಯವಾದುದಲ್ಲ.

ಹೆಗಡೆ ಅವರ ಗುರಿ ದೆಹಲಿಯ ಗದ್ದುಗೆಯಿಂದ ಕಾಂಗ್ರೆಸ್ ಪಕ್ಷವನ್ನು ಇಳಿಸುವುದೇ ಆಗಿತ್ತು. ೧೯೮೮ರಲ್ಲಿ ಜನತಾಪಕ್ಷ, ಲೋಕದಳ ಹಾಗೂ ಜನತಾ ಮೋರ್ಚಾಗಳನ್ನು ಒಂದುಗೂಡಿಸಿ ಜನತಾದಳ ಎಂಬ ರಾಷ್ಟ್ರೀಯ ಪಕ್ಷ ಕಟ್ಟಿದರು. ಅದಕ್ಕೆ ಪೂರ್ವದಲ್ಲಿ ಅಮಿತಾಬ್ ಬಚ್ಚನ್‌ನಿಂದ ತೆರವಾದ ಅಲಹಾಬಾದ್ ಲೋಕಸಭಾ ಸ್ಥಾನಕ್ಕೆ ವಿ.ಪಿ. ಸಿಂಗ್ ನಿಲ್ಲಿಸಿ ಗೆಲ್ಲಿಸಿದ ಹೆಗಡೆ ವಿರೋಧ ಪಕ್ಷಗಳಲ್ಲಿ ಭವಿಷ್ಯದ ಬಗ್ಗೆ ನಂಬಿಕೆ ಹುಟ್ಟಿಸಿದರು. ೧೯೮೯ರಲ್ಲಿ ನಡೆದ ಲೋಕಸಭಾ ಹಾಗೂ ವಿಧಾನಸಭಾ ಚುನಾವಣೆಗಳಲ್ಲಿ ಹೆಗಡೆ ಅವರ ಜನತಾದಳ ಕೇಂದ್ರದಲ್ಲಿ ಸರ್ಕಾರ ರಚಿಸಿತು. ಆದರೆ ರಾಜ್ಯದಲ್ಲಿ ಅದು ಕೇವಲ ೨೪ ಸ್ಥಾನಗಳನ್ನು ಪಡೆಯಿತು. ಯೋಜನಾ ಆಯೋಗದ

ಉಪಾಧ್ಯಕ್ಷರಾದ ಹೆಗಡೆ ೧೯೯೧ರಲ್ಲಿ ಲೋಕಸಭಾ ಚುನಾವಣೆಯಲ್ಲಿ ಬಾಗಲಕೋಟೆ ಕ್ಷೇತ್ರದಿಂದ ಸ್ಪರ್ಧಿಸಿ ಪರಾಭವಗೊಂಡರು. ಹಳೆಯ ಕಹಿ ಘಟನೆಗಳನ್ನು ಮರೆತು ಅದೇ ಚುನಾವಣೆಯಲ್ಲಿ ದೇವೇಗೌಡ ಅವರು ಹಾಸನದಿಂದ ಲೋಕಸಭೆಗೆ ಆಯ್ಕೆಯಾಗುವಂತೆ ಹೆಗಡೆ ಸಹಕರಿಸಿದರು.

೧೯೯೪ರ ಚುನಾವಣಾ ವೇಳೆಯ ಹೊತ್ತಿಗೆ ಹೆಗಡೆ-ದೇವೇಗೌಡ ಅವರು ಸ್ನೇಹ ಮತ್ತಷ್ಟು ಬಿಗಿಯಾಯಿತು. ಕೆಂಗಲ್ ಹನುಮಂತಯ್ಯ ನಂತರ ಒಕ್ಕಲಿಗರೊಬ್ಬರು ಮುಖ್ಯಮಂತ್ರಿಗಳಾಗುತ್ತಾರೆಂದು ಮೈಸೂರು ಸಂಸ್ಥಾನದಲ್ಲಿ ಜನತಾದಳ ತೆರೆಮರೆಯಲ್ಲಿ ಪ್ರಚಾರ ಮಾಡಿತು. ಉತ್ತರ ಕರ್ನಾಟಕದಲ್ಲಿ ರಾಮಕೃಷ್ಣ ಹೆಗಡೆ ಅವರನ್ನು ಮುಂಚೂಣಿಗೆ ತಂದು ಲಿಂಗಾಯಿತೇತರ ಮನ ಒಲಿಸುವ ಕೆಲಸ ಮಾಡಲಾಯಿತು. ಕಾಂಗ್ರೆಸ್‌ನ ಆಂತರಿಕ ಸಮಸ್ಯೆ ಹಾಗೂ ರಾಷ್ಟ್ರೀಯ ವಿಚಾರಗಳಿಂದಾಗಿ ಮೊದಲ ಬಾರಿಗೆ ಕಾಂಗ್ರೆಸ್ ಅತ್ಯಂತ ಕಡಿಮೆ ಮತ ಪಡೆಯಿತು. ದೇವೇಗೌಡ ಮುಖ್ಯಮಂತ್ರಿಯಾದರು. ಶಾಸಕಾಂಗ ಪಕ್ಷ ನಾಯಕನ ಆಯ್ಕೆ ದಿನವೇ ಜನತಾದಳ ಭಿನ್ನಮತ ಸ್ಫೋಟಗೊಂಡಿತು. ೧೯೯೬ರ ತನಕ ಮುಸುಕಿನೊಳಗೇ ನಡೆದ ಕಾದಾಟ ಒಮ್ಮೆಲೇ ಬೀದಿಗೆ ಬಂತು. ೧೯೯೬ರ ಲೋಕಸಭಾ ಚುನಾವಣೆಯಲ್ಲಿ ೧೬ ಸ್ಥಾನಗಳನ್ನು ಜನತಾದಳ ಪಡೆಯಿತು. ಎಚ್.ಡಿ. ದೇವೇಗೌಡ ಅವರು ಪ್ರಧಾನಮಂತ್ರಿಗಳಾದರು. ಹೆಗಡೆ ಅವರನ್ನು ಪಕ್ಷದಿಂದ ಸಸ್ಪೆಂಡ್ ಮಾಡಿದಾಗ ಅವರು ನವ ನಿರ್ಮಾಣ ವೇದಿಕೆ ಪ್ರಾರಂಭಿಸಿದರು. ೧೯೯೮ರಲ್ಲಿ ಲೋಕಸಭಾ ಚುನಾವಣೆಯ ಸಂದರ್ಭದಲ್ಲಿ ಹೆಗಡೆ ಲೋಕಶಕ್ತಿ ಮಧ್ಯಂತರ ಚುನಾವಣೆ ಹಾಗೂ ರಾಜ್ಯ ವಿಧಾನಸಭೆಗೆ ಸಹಜ ಚುನಾವಣೆ ನಡೆಯಿತು. ಜಾರ್ಜ್ ಫರ್ನಾಂಡಿಸ್‌ರ ಮೂಲಕ ಹೆಗಡೆ, ಜೆ.ಎಚ್. ಪಟೇಲರನ್ನು ಒಲಿಸಿಕೊಂಡರು. ಲೋಕಶಕ್ತಿಯನ್ನು ಜನತಾದಳದಲ್ಲಿ ವಿಲೀನಗೊಳಿಸಿದರು. ಆಗ ಜನತಾದಳ ಒಡೆದು ಜಾತ್ಯತೀತ ಜನತಾದಳ ಹಾಗೂ ಸಂಯುಕ್ತ ಜನತಾದಳ ಎಂಬ ಗುಂಪುಗಳಾಯಿತು. ಹೆಗಡೆ ಅವರು ತೆಗೆದುಕೊಂಡ ತಪ್ಪು ನಿರ್ಧಾರದಿಂದ ಸಂಯುಕ್ತ ಜನತಾದಳ ಸೋಲನ್ನನುಭವಿಸಿತು. ಎನ್‌ಡಿಎ ಸರ್ಕಾರ ಕೇಂದ್ರದಲ್ಲಿ ಅಸ್ತಿತ್ವಕ್ಕೆ ಬಂದರೂ ಜಾರ್ಜ್ ಫರ್ನಾಂಡಿಸ್ ಮತ್ತಿತರರ ಕುತಂತ್ರದಿಂದಾಗಿ ಹೆಗಡೆ ವಾಜಪೇಯಿ ಸಚಿವ ಸಂಪುಟದಲ್ಲಿ ಮತ್ತೆ ಸಚಿವರಾಗಲಿಲ್ಲ.

ಹೆಗಡೆ ಅವರು ಸುದೀರ್ಘ ರಾಜಕೀಯ ಬದುಕಿನ ಅವಲೋಕನ ಮಾಡಿದಾಗ ಅವರ ಸೂಕ್ಷ್ಮಮತಿ ಹಾಗೂ ತಂತ್ರಗಾರಿಕೆಯನ್ನು ಗಮನಿಸಬಹುದು. ಹೆಗಡೆ ಅವರಲ್ಲಿ ರಾಜಕೀಯ ತಂತ್ರಗಾರಿಕೆ ಹಾಗೂ ಪ್ರಗತಿಯ ಬಗ್ಗೆ ನಿಶ್ಚಿತ ಧೋರಣೆಯಿರುವುದನ್ನು ಗಮನಿಸಬಹುದು.

೧೯೫೭ರಲ್ಲಿ ಯೋಜನಾ ಖಾತೆಯ ಉಪ ಸಚಿವರಾಗಿದ್ದ ಅವರ ಕೃಷಿ ವಿಸ್ತರಣೆ ಹಾಗೂ ಸಮುದಾಯದ ಅಭಿವೃದ್ಧಿಗೆ ಆದ್ಯತೆ ಕೊಟ್ಟರು. ೧೯೬೨ರಲ್ಲಿ ಸಹಕಾರ ಹಾಗೂ ಪಂಚಾಯತ್ ರಾಜ್ಯ ಸಚಿವರಾಗಿದ್ದಾಗ ಎರಡು ಪ್ರಮುಖ ಮಸೂದೆಗಳನ್ನು ಮಂಡಿಸಿದರು. ೧೯೬೮ರಿಂದ ೧೯೭೧ರ ವರೆಗೆ ಅರ್ಥ ಸಚಿವರಾಗಿದ್ದ ಹೆಗಡೆ ಅವರು ಅಭಿವೃದ್ಧಿ ಕಾರ್ಯಗಳಿಗೆ ಸಾಕಷ್ಟು ಹಣಕಾಸು ಸೌಲಭ್ಯ ಕಲ್ಪಿಸಿದರು.

೧೯೮೩ರಿಂದ ೧೯೮೮ರ ವರೆಗೆ ಮುಖ್ಯಮಂತ್ರಿಯಾಗಿದ್ದ ಹೆಗಡೆ ರಾಜ್ಯದ ಅಭಿವೃದ್ಧಿಗೆ ಹೊಸ ದಿಕ್ಸೂಚಿ ತೋರಿಸಿದರು. ಆ ತನಕ ಗ್ರಾಮೀಣಾಭಿವೃದ್ಧಿ ಖಾತೆ ಅಷ್ಟೊಂದು ಮಹತ್ವ ಪಡೆದ ಖಾತೆಯಾಗಿರಲಿಲ್ಲ. ಅದಕ್ಕೆ ಪುನಶ್ಚೇತನ ಕೊಟ್ಟ ಕೀರ್ತಿ ಹೆಗಡೆ ಅವರದು. ಕುಡಿಯುವ ನೀರು ಒದಗಿಸುವ ಕಾರ್ಯವನ್ನು ಆಂದೋಲನವನ್ನಾಗಿ ಕೈಗೊಂಡ ಹೆಗಡೆ ಗ್ರಾಮೀಣಾಭಿವೃದ್ಧಿ ಖಾತೆ ಸಚಿವ ಅಬ್ದುಲ್ ನಜೀರ್ ಸಾಬ್ ಅವರಿಗೆ ಗರಿಷ್ಠ ಪ್ರಮಾಣದ ಸ್ವಾತಂತ್ರ್ಯ ಕೊಟ್ಟರು. ಆ ಕಾಲದಲ್ಲಿ ಅಧಿಕಾರ ವಿಕೇಂದ್ರೀಕರಣದ ಅಂಗವಾಗಿ ತಂದ ಜಿಲ್ಲಾ ಪಂಚಾಯತ್ ಹಾಗೂ ಮಂಡಲ್ ಪಂಚಾಯತ್ ಮಸೂದೆ ರಾಷ್ಟ್ರಮಟ್ಟದಲ್ಲಿ ಅವರಿಗೆ ದೊಡ್ಡ ಕೀರ್ತಿಯನ್ನು ತಂದುಕೊಟ್ಟಿತು. ಇದರಿಂದ ಪ್ರೇರಣೆ ಪಡೆದ ಪ್ರಧಾನಿ ರಾಜೀವಗಾಂಧಿ ಸಂವಿಧಾನಕ್ಕೆ ೭೪ ತಿದ್ದುಪಡಿ ತಂದರು. ಸಮಗ್ರ ಶಿಕ್ಷಣ ಮಸೂದೆ ೧೯೮೩, ತಾಂತ್ರಿಕ ವಿಶ್ವವಿದ್ಯಾನಿಲಯ ಹಾಗೂ ಕನ್ನಡ ವಿಶ್ವವಿದ್ಯಾನಿಲಯದ ಮಸೂದೆ ಹಾಗೂ ೧೮ ವರ್ಷಕ್ಕೆ ಸ್ಥಳೀಯ ಸಂಸ್ಥೆಗಳಲ್ಲಿ ಅವಕಾಶ, ಪ್ರದೇಶಾಭಿವೃದ್ಧಿ ಮಂಡಳಿ, ಚುನಾವಣಾ ಸುಧಾರಣೆಯ ಬಗ್ಗೆ ಚರ್ಚೆ, ಕೇಂದ್ರ ರಾಜ್ಯಗಳ ಸಂಬಂಧ ಅಧ್ಯಯನ ಮಾಡಲು ಸರ್ಕಾರಿ ಆಯೋಗ ರಚನೆ ಇವು ಹೆಗಡೆ ಅನುಷ್ಠಾನ ಮಾಡಿದ ಕಾರ್ಯಗಳು.

ಪಂಪ ಪ್ರಶಸ್ತಿ-ಸಾಹಿತ್ಯ ಕ್ಷೇತ್ರ, ವೆಂಕಟಪ್ಪ ಪ್ರಶಸ್ತಿ - ಚಿತ್ರಕಲೆ, ಗುಬ್ಬಿ ವೀರಣ್ಣ ಪ್ರಶಸ್ತಿ-ನಾಟಕ ಕ್ಷೇತ್ರ, ಶಾಂತಲಾ ಪ್ರಶಸ್ತಿ-ನಾಟ್ಯಕ್ಷೇತ್ರ, ಕನಕ ಪುರಂದರ ಪ್ರಶಸ್ತಿ-ಸಂಗೀತಕ್ಷೇತ್ರ-ಇವು ಆ ಕಾಲದಲ್ಲಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಹೆಗಡೆ ಅವರು ಕೊಟ್ಟ ಕೊಡುಗೆಗಳಾಗಿವೆ. ವಿಶ್ವ ಕನ್ನಡ ಸಮ್ಮೇಳನ ಹಿಂದಿನ ಸರ್ಕಾರದ ನಿರ್ಧಾರವಾಗಿದ್ದರೂ ಅದನ್ನು ಯಶಸ್ವಿಯಾಗಿ ನೆರವೇರಿಸಿದವರು ಹೆಗಡೆ. ಕನ್ನಡ ಭಾಷೆ

ಆಡಳಿತದಲ್ಲಿ ಅನುಷ್ಠಾನ ಮಾಡಲು ಕನ್ನಡ ಕಾವಲು ಸಮಿತಿ ರಚಿಸಿದರು. ಬದುಕಿನಲ್ಲಿ ಭಾಷೆಯ ಮಹತ್ವವನ್ನು ಅರ್ಥ ಮಾಡಿಕೊಂಡ ಕೆಲವೇ ರಾಜಕಾರಣಿಗಳಲ್ಲಿ ರಾಮಕೃಷ್ಣ ಹೆಗಡೆ ಪ್ರಮುಖರು.

೧೯೫೭ರಿಂದ ೧೯೯೯ರ ವರೆಗೆ ಹೆಗಡೆ ಅವರ ಪ್ರತಿಯೊಂದು ಕಾರ್ಯದಲ್ಲೂ ರಾಜಕೀಯದ ವಾಸನೆಯಿರುವುದನ್ನು ತಿಳಿಯಬಹುದು. ೧೯೫೮ರಲ್ಲಿ ಮುಖ್ಯಮಂತ್ರಿ ನಿಜಲಿಂಗಪ್ಪ ಅವರು ಭಿನ್ನಮತೀಯ ಚಟುವಟಿಕೆಯಿಂದ ಅಧಿಕಾರ ಕಳೆದುಕೊಂಡಾಗ ಹೆಗಡೆ ಕಾಂಗ್ರೆಸ್ ಪಕ್ಷವನ್ನು ನಿಜಲಿಂಗಪ್ಪ ಅವರ ಗುಂಪಿಗೆ ತೆಗೆದುಕೊಳ್ಳಲು ಮುಂದಾದರು. ಹೆಗಡೆ ಅವರ ಸಂಘಟನಾತ್ಮಕ ಕಾರ್ಯದಿಂದಾಗಿ ೧೯೬೨ರ ಚುನಾವಣೆಯ ಹೊತ್ತಿಗೆ ಕಾಂಗ್ರೆಸ್ ಪಕ್ಷ ನಿಜಲಿಂಗಪ್ಪನವರ ಹಿಡಿತದಲ್ಲಿತ್ತು. ೧೯೬೨ರ ನಂತರ ಹೆಗಡೆ ಅವರು ಪಕ್ಷದಲ್ಲಿ ಅತ್ಯಂತ ಗಣನೀಯ ವ್ಯಕ್ತಿಯಾದರು. ೧೯೬೭ರ ಚುನಾವಣೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಆರು ವಿಧಾನಸಭಾ ಕ್ಷೇತ್ರದಲ್ಲಿ ಐದು ವಿಧಾನಸಭಾ ಕ್ಷೇತ್ರ ವಿರೋಧ ಪಕ್ಷದ ಪಾಲಾಯಿತು. ಆಗ ಕಾಂಗ್ರೆಸ್ ಮೂಲಕ ಹೆಗಡೆ ಒಬ್ಬರೇ ಆಯ್ಕೆಯಾಗಿದ್ದರು. ೧೯೬೬ರಲ್ಲಿ ನಿಜಲಿಂಗಪ್ಪ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗಿ ಹೋಗುವುದನ್ನು ಹೆಗಡೆ ಅವರು ಒಪ್ಪಿರಲಿಲ್ಲ. ಇಂದಿರಾಗಾಂಧಿ ಅದಕ್ಕೆ ಜೊತೆ ವಿದ್ಯಾರ್ಥಿ ದೆಸೆಯಿಂದಲೂ ಆತ್ಮೀಯತೆಯಿಟ್ಟುಕೊಂಡಿದ್ದರು. ಒಮ್ಮೆ ನಿಜಲಿಂಗಪ್ಪ ಜೊತೆಯಿರುವ ತೀರ್ಮಾನ ತೆಗೆದುಕೊಂಡ ಮೇಲೆ ಹೆಗಡೆ ಅವರು ಹಿಂದು-ಮುಂದು ನೋಡದೆ ಕೊನೆಯ ತನಕ ಅದರ ಜೊತೆಯಲ್ಲೇ ಉಳಿದುಕೊಂಡರು. ೧೯೭೧ರ ಲೋಕಸಭಾ ಹಾಗೂ ೧೯೭೨ ವಿಧಾನಸಭಾ ಚುನಾವಣೆಯಲ್ಲಿ ಸಂಸ್ಥಾ ಕಾಂಗ್ರೆಸ್ ಸೋತಿದ್ದರೂ ರಾಜ್ಯದಲ್ಲಿ ಅವರ ಬೇರುಗಳು ಆಳವಾಗಿದ್ದವು. ಇದಕ್ಕೆ ಹೆಗಡೆ ಅವರ ಸಂಘಟನಾ ಶಕ್ತಿ ಸಹಾಯಕವಾಗಿತ್ತು.

೧೯೭೫ರಲ್ಲಿ ತುರ್ತು ಪರಿಸ್ಥಿತಿ ಘೋಷಣೆಯಾದಾಗ ಹೆಗಡೆ ಸೆರೆಮನೆಗೆ ಹೋದರು. ಅಲ್ಲಿ ಜೆ.ಪಿ. ಅವರ ಸಂಪೂರ್ಣ ಕ್ರಾಂತಿಗೆ ತಮ್ಮನ್ನು ತೆತ್ತುಕೊಂಡರು. ೧೯೮೦ರ ಲೋಕಸಭಾ ಚುನಾವಣೆಯ ವೇಳೆಗೆ ಇಂದಿರಾಗಾಂಧಿ ಅವರ ವಿರುದ್ಧ ೧೯೭೭ರ ಚಿಕ್ಕಮಗಳೂರು ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿದ್ದ ವೀರೇಂದ್ರ ಪಾಟೀಲ್ ಅನಂತರ ಕಾಂಗ್ರೆಗೆ ಪಕ್ಷಾಂತರ ಮಾಡಿ ಬಾಗಲಕೋಟೆ ಕ್ಷೇತ್ರದಿಂದ ಗೆದ್ದು ಕೇಂದ್ರ ಸಚಿವರಾದರು. ಇದಕ್ಕೆ ವಿರುದ್ಧವಾಗಿ ಹೆಗಡೆ ಅವರು ರಾಷ್ಟ್ರಮಟ್ಟದಲ್ಲಿ ಜನತಾಪಕ್ಷ ಒಡೆದರೂ ಚಿಂತಿಸದೆ ತಮ್ಮ ನಾಯಕರಾದ ನಿಜಲಿಂಗಪ್ಪ ಅವರ ಜೊತೆಯಲ್ಲೇ ಉಳಿದರು. ಇದು ಹೆಗಡೆ ಅವರಿಗೆ ಅಪಾರವಾದ ರಾಜಕೀಯ ಗೌರವವನ್ನು ತಂದುಕೊಟ್ಟಿತು. ೧೯೮೫ರಲ್ಲಿ ಹೆಗಡೆ ಮುಖ್ಯಮಂತ್ರಿಯಾದ ಮೇಲೆ ಪ್ರಬಲ ಸಮುದಾಯದ ನಾಯಕರೊಬ್ಬರ ಭಿನ್ನಮತದ ಕಿರಿಕಿರಿ ನಡೆದ ಮೇಲೆ ವೀರಶೈವ ಸಮುದಾಯದ ಅಖಂಡ ಬೆಂಬಲ ಹೆಗಡೆ ಅವರಿಗೆ ದೊರಕಿತು. ೧೯೮೫ ವಿಧಾನಸಭಾ ಚುನಾವಣೆ ಗೆಲ್ಲಲು ಇವು ಸಹಾಯಕವಾಗಿದ್ದಲ್ಲದೆ ಅವರ ರಾಜಕೀಯ ಉನ್ನತಿಗೂ ಕಾರಣವಾಯಿತು. ೧೯೮೩ರ ನಂತರ ಹೆಗಡೆ ಅವರು ರಾಜ್ಯ ರಾಜಕೀಯದಲ್ಲಿ ಮಾಡಿದ ಪ್ರಯೋಗ ಹಲವಾರು. ಅಬ್ದುಲ್ ನಜೀರ್‌ಸಾಬ್, ಬಿ. ರಾಚಯ್ಯ ಅವರಿಗೆ ಮಾನ್ಯತೆ ಕೊಡುವ ಮೂಲಕ ಆ ಎರಡು ಸಮುದಾಯಗಳಲ್ಲೂ ತಮ್ಮ ಪ್ರಭಾವವನ್ನು ಪ್ರತಿಷ್ಠಾಪಿಸಿದರು. ಆರ್.ಎಲ್. ಜಾಲಪ್ಪ, ಪಿ.ಜಿ.ಆರ್. ಸಿಂಧ್ಯಾ, ಆರ್. ವಿ. ದೇಶಪಾಂಡೆ, ಜಿ. ಬಸವಣ್ಣೆಪ್ಪ, ಗುರುಪಾದಪ್ಪ ನಾಗಮಾರಪಲ್ಲಿ, ಸಿದ್ಧರಾಮಯ್ಯ, ಸಿ. ವೀರಣ್ಣ, ಬಿ. ಸೋಮಶೇಖರ್, ಬಿ.ಟಿ. ಲಲಿತಾನಾಯಕ್, ವಿ.ಆರ್. ಸುದರ್ಶನ್ ಮೊದಲಾದವರು ರಾಜಕಾರಣದಲ್ಲಿ ಹೆಗಡೆ ಮೂಲಕ ನೆಲೆ ಕಂಡುಕೊಂಡರು. ಮಂಡ್ಯ ಜಿಲ್ಲೆಯ ಉಸ್ತುವಾರಿ ಸಚಿವರಾಗಿ ಸೋಮಶೇಖರ್, ತುಮಕೂರು ಜಿಲ್ಲೆಯ ಉಸ್ತುವಾರಿ ಸಚಿವರಾಗಿ ಸಿ. ವೀರಣ್ಣ ಮೊದಲಾದವರನ್ನು ಮಾಡುವ ಮೂಲಕ ಜಾತಿ ಪ್ರಾಬಲ್ಯವನ್ನು ಹದ್ದುಬಸ್ತಿನಲ್ಲಿಡಲು ಅವರು ಪ್ರಯತ್ನಿಸಿದ್ದುಂಟು.

ಹೆಗಡೆ ಅವರು ೧೯೮೩ರಲ್ಲಿ ಮುಖ್ಯಮಂತ್ರಿಯಾದ ತಕ್ಷಣ ಶ್ರೀಮತಿ ಗಾಂಧಿ ಅವರನ್ನು ಅರ್ಥಾತ್ ಕಾಂಗ್ರೆಸ್ಸನ್ನು ಅಧಿಕಾರದಿಂದಿಳಿಸಲು ಬಹುದೊಡ್ಡ ತಂತ್ರ ರೂಪಿಸಿದರು. ದಕ್ಷಿಣ ಭಾರತದ ಅಂದರೆ ತಮಿಳುನಾಡು, ಆಂಧ್ರಪ್ರದೇಶ, ಕೇರಳ ರಾಜ್ಯಗಳ ಮುಖ್ಯಮಂತ್ರಿಗಳನ್ನು ಬೆಂಗಳೂರಿಗೆ ಕರೆಸಿ ಮಾತನಾಡಿದರು. ಕಾಂಗ್ರೆಸ್ಸೇತರ ರಾಜ್ಯ ಸರ್ಕಾರಗಳ ಮುಖ್ಯಮಂತ್ರಿಗಳ ಸಮ್ಮೇಳನ ವ್ಯವಸ್ಥೆ ಮಾಡಿದರು. ರಾಜ್ಯಗಳು ಕೇಂದ್ರದಿಂದ ನ್ಯಾಯೋಚಿತ ಪಾಲು ಪಡೆಯಬೇಕೆಂಬುದು ಮೇಲ್ನೋಟಕ್ಕೆ ಮಾತಾದರೂ ಕಾಂಗ್ರೆ ವಿರುದ್ಧ ವಿರೋಧ ಪಕ್ಷಗಳ ಸಂಘಟನೆ ಅವರಿಗೆ ಮುಖ್ಯವಾಗಿತ್ತು. ಪ್ರಧಾನಿ ರಾಜೀವಗಾಂಧಿ ವಿರುದ್ಧ ಸಹ ಅವರದು ನಿಲ್ಲದ ಹೋರಾಟ. ಬೋಫೋರ್ಸ್ ಹಗರಣವನ್ನು ರಾಂ ಜೇಠ್ಮಲಾನಿ ಮೂಲಕ ಸಾರ್ವಜನಿಕ ಚರ್ಚೆಗೆ ಇಟ್ಟವರೇ ಹೆಗಡೆ.

ರಾಷ್ಟ್ರಮಟ್ಟದಲ್ಲಿ ಹೆಗಡೆ ಅವರು ಕ್ರಿಯಾಶೀಲರಾದದ್ದನ್ನು ಇಂಗ್ಲಿಷ್ ಪತ್ರಿಕೆಗಳು ರಾಜೀವ್‌ಗಾಂಧಿ-ಹೆಗಡೆ ಪ್ರತಿಸ್ಪರ್ಧಿ ಎಂಬಂತೆ ಚಿತ್ರಿಸತೊಡಗಿದವು. ಇಂಗ್ಲಿಷ್ ಮಾಧ್ಯಮಗಳು ಪ್ರಧಾನಿ ರಾಜೀವಗಾಂಧಿ ಅವರನ್ನು ಪಳಗಿಸಲು ಹೆಗಡೆ ಅವರನ್ನು ಬಳಸಿಕೊಂಡಿದ್ದನ್ನು ಯಾರೂ ಗಮನಿಸಿಲ್ಲ. ದಕ್ಷಿಣ ಭಾರತದಿಂದ ಪ್ರಧಾನ ಮಂತ್ರಿಯ ಹುದ್ದೆಗೆ ಯಾರಾದರೂ ಅಪೇಕ್ಷೆ ಪಟ್ಟರೆ ಉತ್ತರದ ಎಲ್ಲಾ

ರಾಜಕಾರಣಿಗಳೂ ಒಂದಾಗಿ ಅವರನ್ನು ಮುಗಿಸಿಬಿಡುತ್ತಾರೆ. ನಿಜಲಿಂಗಪ್ಪ, ದೇವರಾಜ ಅರಸು ಅವರುಗಳು ಇಂತಹ ಸಂಚಿಗೆ ಬಲಿಯಾದರು. ಹೆಗಡೆ ರಾಷ್ಟ್ರಮಟ್ಟದಲ್ಲಿ ಮಿಂಚಲು ಪ್ರಾರಂಭವಾದ ಮೇಲೆ ಜನತಾ ಪಕ್ಷದಲ್ಲೇ ಒಡಕುಗಳು ಪ್ರಾರಂಭವಾಯಿತು. ಪಕ್ಷದ ಅಧ್ಯಕ್ಷರಾದ ಚಂದ್ರಶೇಖರ್ ಹಾಗೂ ರಾಜೀವಗಾಂಧಿ ಅವರುಗಳು ರಾಷ್ಟ್ರಮಟ್ಟದಲ್ಲಿ ಹೆಗಡೆ ಅವರನ್ನು ವಿಚಾರಿಸಿಕೊಳ್ಳಲು ಡಾ। ಸುಬ್ರಹ್ಮಣ್ಯಸ್ವಾಮಿ ಅವರ ನೆರವು ಕೋರಿದರು. ೧೯೯೬ರಲ್ಲೂ ಹೆಗಡೆ ಅವರ ಪ್ರಯತ್ನದಿಂದಾಗಿಯೇ ರಾಜ್ಯದಲ್ಲಿ ಬಿಜೆಪಿ ೧೩ ಸ್ಥಾನಗಳನ್ನು ಪಡೆಯಿತು. ಬಿಜೆಪಿ ಕರ್ನಾಟಕದಲ್ಲಿ ಜನ ಬೆಂಬಲ ಪಡೆಯಲು ಹೆಗಡೆ ಅವರ ಜೊತೆಗಿನ ರಾಜಕೀಯ ಸ್ನೇಹ ಸಹ ಕಾರಣವಾಗಿದೆ. ೧೯೯೯ರಲ್ಲಿ ಎನ್‌ಡಿಎ ಸಂಚಾಲಕರ ಮಾತಿಗೆ ಕಿವಿಗೊಟ್ಟು ಹೆಗಡೆ ಅವರನ್ನು ದೂರವಿರಿಸಲಾಯಿತು.

ಕರ್ನಾಟಕದ ರಾಜಕೀಯದಲ್ಲಿ ಹೆಗಡೆ ಅವರ ಪ್ರಮುಖ ಕೊಡುಗೆ ಜಿಲ್ಲಾ ಹಾಗೂ ಮಂಡಲ್ ಪಂಚಾಯತ್ ವ್ಯವಸ್ಥೆ. ೧೯೮೦ರ ಪೂರ್ವದಲ್ಲಿ ವಿಶೇಷ ಜಿಲ್ಲಾಧಿಕಾರಿಯೊಬ್ಬರು ಉಸ್ತುವಾರಿ ಸಚಿವರ ಮಾರ್ಗದರ್ಶನದಲ್ಲಿ ಪ್ರತಿಯೊಂದು ಜಿಲ್ಲೆಯಲ್ಲೂ ಹತ್ತಾರು ಕೋಟಿ ರೂ.ಗಳನ್ನು ಖರ್ಚು ಮಾಡುತ್ತಿದ್ದರು. ಕ್ಷೇತ್ರಾಭಿವೃದ್ಧಿ ಅಧಿಕಾರಿ ತಾಲ್ಲೂಕು ಮಟ್ಟದಲ್ಲಿ ಲಕ್ಷಾಂತರ ರೂಪಾಯಿಗಳನ್ನು ವೆಚ್ಚ ಮಾಡುತ್ತಿದ್ದ. ಅದನ್ನು ಜನಪ್ರತಿನಿಧಿಗಳಿಗೆ ವಹಿಸಿದ ಕೀರ್ತಿ ಹೆಗಡೆ ಅವರದು. ವಿಧಾನಸೌಧದಲ್ಲಿದ್ದ 'ಪರ್ಸೆಂಟೇಜ್' ವ್ಯವಹಾರ ಗ್ರಾಮ ಪಂಚಾಯತ್‌ಗಳಿಗೆ ಹೆಗಡೆ ಮೂಲಕ ಮುಟ್ಟಿದ್ದೆಂದು ಕೆಲವು ಟೀಕಾಕಾರರು ಈ ಮಸೂದೆ ಕುರಿತು ಹೇಳುತ್ತಾರೆ. ಆದರೆ ಪ್ರಜಾಪ್ರಭುತ್ವ ತತ್ವವೇ ಹಾಗೇ! ವಿವಿಧ ಸಮುದಾಯದ ಜನ ಒಮ್ಮೆಲೆ ಕಾಣಿಸಿಕೊಂಡಾಗ ಸಿನಿಕರು ಈ ರೀತಿ ಹೇಳುವುದು ಸ್ವಾಭಾವಿಕ. ಅಧಿಕಾರ ವಿಕೇಂದ್ರೀಕರಣದಿಂದ ಸಾಕಷ್ಟು ಪ್ರಯೋಜನವಾಗಿದೆ. ಜೊತೆಗೆ ಪಕ್ಷಗಳ ಸಂಘಟನೆ ಗ್ರಾಮಗಳಿಗೆ ಮುಟ್ಟಿದೆ. ಹಿಂದೆ ವಿಧಾನಸಭೆ ಹಾಗೂ ಲೋಕಸಭೆಯ ಕಾಲದಲ್ಲಿ ಮಾತ್ರ ರಾಜಕೀಯ ಪಕ್ಷಗಳು ಕ್ರಿಯಾಶೀಲವಾಗುತ್ತಿದ್ದವು. ಆದರೆ ಈಗ ಹಾಗಿಲ್ಲ. ಪ್ರತಿಯೊಂದು ಹಂತದಲ್ಲೂ ಪಕ್ಷದ ಕಾರ್ಯಕರ್ತರು ಎಚ್ಚರವಾಗಿರುವುದು ಅವಶ್ಯಕವಾಗಿದೆ.

೧೯೮೩ರಲ್ಲಿ ಹೆಗಡೆ ಅವರು ಅಧಿಕಾರಕ್ಕೆ ಬಂದ ಮೇಲೆ ಅನಗತ್ಯವಾಗಿ ಕ್ರಾಂತಿರಂಗದ ಗುಂಪಿಗೆ ಹೆಚ್ಚಿನ ಆದ್ಯತೆ ಕೊಟ್ಟರೆಂಬ ಆರೋಪವಿದೆ. ೧೯೮೫ರ ಚುನಾವಣೆಯ ನಂತರ ರಾಚಯ್ಯ, ಅಬ್ದುಲ್ ನಜೀರ್‌ಸಾಬ್ ಮೊದಲಾದವರಿಗೆ ಕೊಟ್ಟ ಮಹತ್ವ, ದೇವೇಗೌಡ, ಬೊಮ್ಮಾಯಿ ಅವರಿಗೆ ಕೊಡಲಿಲ್ಲ. ಹೆಗಡೆ ಅವರು ದೇವೇಗೌಡ ಹಾಗೂ ಬೊಮ್ಮಾಯಿಯ ವಿಚಾರದಲ್ಲಿ ೧೯೮೫ರ ಭಾವನೆಗಿಂತ ಮೇಲೆ ಹೋಗಿಲ್ಲವೆಂದು ಭಾವಿಸಬೇಕು. ದೇವೇಗೌಡ ಈ ದೇಶದ ಪ್ರಧಾನಿಗಳಾಗಿದ್ದರು. ಬೊಮ್ಮಾಯಿ ಅಖಿಲ ಭಾರತ ಜನತಾದಳದ ಅಧ್ಯಕ್ಷರು ಹಾಗೂ ಕೇಂದ್ರ ಸಚಿವರಾಗಿದ್ದರೆಂಬ ವಾಸ್ತವಿಕ ಸತ್ಯವನ್ನು ಹೆಗಡೆ ಅವರು ಅರಿತಿದ್ದರೆ, ಅನೇಕ ಸಮಸ್ಯೆಗಳು ರಾಜ್ಯ ರಾಜಕಾರಣದಲ್ಲಿ ಉದ್ಭವವಾಗುತ್ತಿರಲಿಲ್ಲ. ಅವರು ಸಾಹಿತ್ಯ ಸಂಸ್ಕೃತಿಯಲ್ಲಿ ಆಸಕ್ತಿಯಿದ್ದರೂ ಗೂಂಡಾಗಿರಿಯ ಲೇಪನದ ಡಾ। ಜೀವರಾಜ ಆಳ್ವ ಅವರಿಗೆ ಕೊಟ್ಟ ಪ್ರೋತ್ಸಾಹ ಅನಗತ್ಯವಾಗಿತ್ತು. ಹೆಗಡೆ, ಲಿಂಗಾಯಿತ-ಒಕ್ಕಲಿಗರನ್ನು ಒಡೆದು ಆಳುತ್ತಾ ತಮ್ಮ ಅಧಿಕಾರ ಉಳಿಸಿಕೊಂಡರೆಂಬ ಮಾತು ಹಲವರು ಹೇಳುವುದುಂಟು. ಅವರ ಬಾಟ್ಲಿಂಗ್, ರೇವಜಿತ್ ಮೊದಲಾದ ಭ್ರಷ್ಟಾಚಾರದ ಹಗರಣಗಳನ್ನು ಕಂಡಾಗ ಗಾಲ್ಸ್‌ವರ್ದಿ ಮಾತು ನೆನಪಿಗೆ ಬರುತ್ತದೆ. 'ಅಧಿಕಾರ ಇಲ್ಲದಿರುವ ರಾಜಕಾರಣಿಗಳು ಶಕ್ತಿ ಹಾಗೂ ತತ್ವದ ಅದ್ಭುತ ಗಣಿಗಳು. ಅಧಿಕಾರ ಬಂದೊಡನೆ ಅಧಿಕಾರ ಯಂತ್ರದ ಹಿಂದೆ ಕೈಕಟ್ಟಿ ಓಡುತ್ತಾರೆ.' ಹೆಗಡೆ ಅವರು ತಮ್ಮ ರಾಜ್ಯದಲ್ಲಿ ಸುಲಭವಾಗಿ ತಾವು ಆಯ್ಕೆಯಾಗಿ ಬರುವಷ್ಟು ರಾಜಕೀಯ ವಾತಾವರಣವನ್ನು ಸೃಷ್ಟಿಸಿಕೊಂಡು ಅನಂತರ ರಾಷ್ಟ್ರರಾಜಕಾರಣಕ್ಕೆ ಹೋಗಬೇಕಾಗಿತ್ತೆಂಬುದು ಹಲವರ ಮಾತು. ನಾಲ್ಕು ದಶಕಗಳಲ್ಲಿ ಹೆಗಡೆ ಅವರ ರಾಜಕೀಯ ಜೀವನ ಕಂಡಾಗ ಅನೇಕ ಕೊರತೆಗಳ ನಡುವೆ ಸಹ ಅವರೊಬ್ಬ ಅಸಾಧಾರಣ ರಾಜಕೀಯ ಮುತ್ಸದ್ದಿ. ರಾಜ್ಯ ಹಾಗೂ ಕೇಂದ್ರಗಳಲ್ಲಿ ಕಾಂಗ್ರೆಸ್ಸೇತರ ಸರ್ಕಾರ ಸ್ಥಾಪನೆಯಾಗುವುದಕ್ಕೆ ದುಡಿದ ಅನೇಕ ವ್ಯಕ್ತಿಗಳಲ್ಲಿ ಇವರೊಬ್ಬರು ಎನ್ನಬಹುದು.

## ಪ್ರಧಾನಿ ಹುದ್ದೆಗೇರಿದ ಕನ್ನಡಿಗ

೧೯೬೨ರಲ್ಲಿ ಹಾಸನ ಜಿಲ್ಲೆ ಹೊಳೆನರಸೀಪುರದಿಂದ ಶಾಸಕರಾದ ಎಚ್.ಡಿ. ದೇವೇಗೌಡ ೧೯೬೭ರ ತನಕ ಕಾಂಗ್ರೆಸ್ ವಿರೋಧಿ ಗುಂಪಿನಲ್ಲೇ ಇದ್ದರು. ೧೯೬೭ರಲ್ಲೂ ಅವರು ಸ್ವತಂತ್ರವಾಗಿ ಆಯ್ಕೆಯಾದರು. ೧೯೬೯ರಲ್ಲಿ ಎಚ್.ಡಿ. ದೇವೇಗೌಡ ಅವರು ಸಂಸ್ಥಾ ಕಾಂಗ್ರೆಸ್‌ನಲ್ಲಿ ತಮ್ಮನ್ನು ಗುರುತಿಸಿಕೊಂಡರು. ಇವರ ರಾಜಕೀಯ ಪ್ರತಿಸ್ಪರ್ಧಿ ಪ್ರಾಯಶಃ ಎಚ್.ಸಿ. ಶ್ರೀಕಂಠಯ್ಯ ಈಗಾಗಲೇ ಆಡಳಿತ ಕಾಂಗ್ರೆಸ್‌ನಲ್ಲಿದ್ದ ಕಾರಣ ದೇವೇಗೌಡ ಅವರಿಗೆ ಸಂಸ್ಥಾ ಕಾಂಗ್ರೆಸ್ ಅನಿವಾರ್ಯವಾಯಿತು. ಒಂದು ಪಕ್ಷ ಅವರು ಆಡಳಿತ ಕಾಂಗ್ರೆಸ್‌ಗೆ ಆಗಲೇ ಹೋಗಿದ್ದರೆ ಅವರ ರಾಜಕೀಯ ಭವಿಷ್ಯ ಬೇರೆಯಾಗುತ್ತಿತ್ತು. ೧೯೭೫ರ ತುರ್ತು ಪರಿಸ್ಥಿತಿಯಲ್ಲಿ ಸೆರೆಮನೆಗೆ ಹೋದ ದೇವೇಗೌಡ ಅವರು ಅರಸು ಅವರ ಕಾಲದಲ್ಲಿ ಕ್ರಿಯಾಶೀಲ ವಿರೋಧ ಪಕ್ಷದ ನಾಯಕರಾಗಿದ್ದರು. ಈ ಅವಧಿಯಲ್ಲಿ ಅವರು ದೇಶದ

ಅತ್ಯುತ್ತಮ ವಿರೋಧ ಪಕ್ಷದ ನಾಯಕರೆಂಬ ಹೆಗ್ಗಳಿಕೆ ಪಡೆದರು. ಅದರಲ್ಲೂ ನೀರಾವರಿ ಹಾಗೂ ರೈತರ ಬಗ್ಗೆ ದೇವೇಗೌಡ ಅವರು ಅಂದು ವಿಧಾನಸಭೆಯಲ್ಲಿ ಮಾಡಿದ ಭಾಷಣ ಇಂದಿಗೂ ಮಹತ್ವದ ದಾಖಲೆಯಾಗಿದೆ. ದೇವರಾಜ ಅರಸು ಆ ಕಾಲದಲ್ಲಿ ದೇವೇಗೌಡ ಅವರಿಗೆ ಉತ್ತಮ ವಿರೋಧ ಪಕ್ಷ ನಾಯಕನೆಂಬ ಕೀರ್ತಿ ದೊರಕಿತು. ರೈತರ ಬಗ್ಗೆ ದೇವೇಗೌಡರ ಕಾಳಜಿ ಅಪಾರವಾದದ್ದು. ೧೯೭೭ರ ಲೋಕಸಭಾ ಚುನಾವಣೆಯಲ್ಲಿ ಕರ್ನಾಟಕ ರಾಜ್ಯ ಎರಡು ಸ್ಥಾನಗಳನ್ನು ಮಾತ್ರ ಪಡೆಯಿತಷ್ಟೆ. ಅದರಲ್ಲಿ ಹಾಸನದ ನಂಜೇಶಗೌಡ ಒಬ್ಬರು. ಈ ಲೋಕಸಭಾ ಕ್ಷೇತ್ರ ದೇವೇಗೌಡ ಅವರ ಸ್ವಂತ ವರ್ಚಸ್ಸಿನಿಂದ ಜನತಾ ಪಕ್ಷಕ್ಕೆ ದೊರೆಯಿತು. ಈ ಕಾರಣಕ್ಕಾಗಿಯೇ ದೇವೇಗೌಡ ಅವರು ಜನತಾ ಪಕ್ಷದ ಅಧ್ಯಕ್ಷರಾದರು. ೧೯೭೮ರ ವಿಧಾನಸಭಾ ಚುನಾವಣೆಯಲ್ಲಿ ದೇವೇಗೌಡರಿಗೆ ಅಮಿತವಾದ ಆತ್ಮ ವಿಶ್ವಾಸವಿತ್ತು. ತಾವು ಪ್ರಸ್ತಾಪಿಸಿದ ಅರಸು ಸರ್ಕಾರದ ಭ್ರಷ್ಟಾಚಾರ, ಸದನದ ಒಳಗೆ ಮತ್ತು ಹೊರಗೆ ನಡೆಸಿದ ಹೋರಾಟ ತಮಗೆ ಸಹಾಯಕವಾಗುತ್ತದೆಂದು ದೇವೇಗೌಡ ಭಾವಿಸಿದ್ದರು. ಟಿಕೇಟ್ ಹಂಚಿಕೆಯಲ್ಲಿ ಪ್ರಮುಖ ಪಾತ್ರವಹಿಸಿದ್ದ ದೇವೇಗೌಡ ಅವರು ಮುಂದೆ ಶಾಸಕಾಂಗದ ನಾಯಕನ ಆಯ್ಕೆ ಸಂದರ್ಭದಲ್ಲಿ ತಮಗೆ ಯಾರೂ ಪ್ರತಿಸ್ಪರ್ಧಿ ಇರದಂತೆ ನೋಡಿಕೊಂಡರೆಂದು ಅವರ ವಿರೋಧಿಗಳು ಹೇಳುತ್ತಾರೆ. ಹೆಗಡೆ-ಪಾಟೀಲ್ ಮೊದಲಾದ ಹಿರಿಯ ನಾಯಕರು ಜನತಾ ಪಕ್ಷದ ಟಿಕೇಟ್ ಹಂಚಿಕೆಯಲ್ಲಿ ಅನಗತ್ಯವಾಗಿ ಮೂಗು ತೂರಿಸಿದರು. ಚುನಾವಣಾ ಸಂದರ್ಭದಲ್ಲಿ ಎಸ್. ನಿಜಲಿಂಗಪ್ಪ ಅವರು ಜನತಾ ಪಕ್ಷಕ್ಕೆ ರಾಜೀನಾಮೆ ಕೊಟ್ಟರು. ಹಿಂದುಳಿದ ವರ್ಗದ ವಿಶ್ವಾಸ ಗಳಿಸುವಲ್ಲಿ ನಾವು ವಿಫಲರಾದೆವು. ಆ ಕಾರಣ ನಮಗೆ ಸತ್ಫಲ ದೊರೆಯುತ್ತಿಲ್ಲ ಎಂದು ದೇವೇಗೌಡರ ಅಭಿಮಾನಿಗಳು ಹೇಳುತ್ತಾರೆ. ದೇವೇಗೌಡ ಅವರ ಒತ್ತಾಯದಿಂದ ಕೇಂದ್ರ ಸರ್ಕಾರ ದೇವರಾಜ ಅರಸು ಅವರ ವಿರುದ್ಧ ಗ್ರೋವರ್ ಆಯೋಗ ನೇಮಿಸಿತು. ಆಯೋಗ ಅರಸು ಸರ್ಕಾರದಿಂದ ಭ್ರಷ್ಟಾಚಾರ ನಡೆದಿದೆಯೆಂದು ಅಭಿಪ್ರಾಯಪಟ್ಟಿತು. ಆದರೆ ೧೯೭೮ರ ಚುನಾವಣೆಯಲ್ಲಿ ಅರಸು ಅವರ ಭ್ರಷ್ಟಾಚಾರ ಮತದಾರರ ಮೇಲೆ ಪ್ರಭಾವ ಬೀರಲೇ ಇಲ್ಲ. ಇದು ದೇವೇಗೌಡ ಅವರಿಗೆ ಆದ ದೊಡ್ಡ ಆಘಾತ. ಅನಂತರ ದೇವೇಗೌಡರ ಚಿಂತನಾ ದೃಷ್ಟಿಯಲ್ಲಿ ತೀವ್ರ ಬದಲಾವಣೆಯಾಯಿತು. ೧೯೮೦ರ ಲೋಕಸಭಾ ಚುನಾವಣೆಯ ನಂತರ ರಾಜ್ಯದ ಕಾಂಗ್ರೆಸ್ ಸರ್ಕಾರದ ನೇತೃತ್ವವನ್ನು ಆರ್. ಗುಂಡೂರಾವ್ ವಹಿಸಿಕೊಂಡರಷ್ಟೆ. ಆಗ ದೇವೇಗೌಡ ಅವರು ಮುಖ್ಯಮಂತ್ರಿ ಆರ್. ಗುಂಡೂರಾವ್ ಅವರನ್ನು ಹೊಳೇನರಸೀಪುರಕ್ಕೆ ಕರೆಸಿ ಮೆರವಣಿಗೆ ಮಾಡಿಸಿದರು. ಈ ಬಗ್ಗೆ ಪ್ರಶ್ನಿಸಿದಾಗ 'ಕಳೆದ ಎರಡೂ ದಶಕಗಳಿಂದ ವಿರೋಧ ಪಕ್ಷದಲ್ಲಿದ್ದು, ನನ್ನ ಮತ ಕ್ಷೇತ್ರದಲ್ಲಿ ಯಾವುದೇ ಅಭಿವೃದ್ಧಿ ಕೆಲಸ ಮಾಡಿರಲಿಲ್ಲ, ಅದಕ್ಕೇ ಒಪ್ಪಂದ ಮಾಡಿಕೊಳ್ಳಬೇಕಾಯಿತು ಎಂದರು. ಆರ್. ಗುಂಡೂರಾವ್ ಒಕ್ಕಲಿಗರ ಸಮುದಾಯಕ್ಕೆ ಮಾಡಿದ ಸಹಾಯಕ್ಕೆ ಸ್ಫೂರ್ತಿ ನೀಡಿದ್ದರು-ದೇವೇಗೌಡರು ೧೯೮೩ರ ಹೊತ್ತಿಗೆ ದೇವೇಗೌಡ ಅವರು ಕಾಂಗ್ರೆ ಮನುಷ್ಯರಾಗಿದ್ದಾರೆಂಬ ಭಾವನೆ ಬಂದಿತು. ಹಾಸನ ಜಿಲ್ಲೆ ದೊಡ್ಡಹಳ್ಳಿಯಲ್ಲಿ ನಡೆದ ಗೋಲಿಬಾರ್ ಪ್ರಕರಣದಿಂದ ಸಹನೆ ಕಳೆದುಕೊಂಡ ದೇವೇಗೌಡ ಅವರು ನ್ಯಾಯಾಂಗ ತನಿಖೆಗೆ ಒತ್ತಾಯಿಸಿ ೧೯೮೨ರಲ್ಲಿ ಬೆಂಗಳೂರಿನಲ್ಲಿ ಉಪವಾಸ ಸತ್ಯಾಗ್ರಹ ಕುಳಿತರು. ೧೯೮೩ರ ಸಾರ್ವತ್ರಿಕ ಚುನಾವಣೆಯ ನಂತರ ರಾಜ್ಯ ರಾಜಕೀಯ ಚಿತ್ರವೇ ಬದಲಾಯಿತು.

ಬಂಗಾರಪ್ಪ ಅವರನ್ನು ನಿಯಂತ್ರಿಸಲು ರಾಮಕೃಷ್ಣ ಹೆಗಡೆ ಮುಖ್ಯಮಂತ್ರಿಯಾಗಬೇಕೆಂದು ಜನತಾ ಪಕ್ಷದ ಅಧ್ಯಕ್ಷ ಚಂದ್ರಶೇಖರ್ ಸೂಚಿಸಿದಾಗ ದೇವೇಗೌಡ ಅವರು ಮರುಮಾತನಾಡದೆ ಒಪ್ಪಿಕೊಂಡರು. ಹೆಗಡೆ ಅವರನ್ನು ಕನಕಪುರ ಕ್ಷೇತ್ರದಿಂದ ಆಯ್ಕೆ ಮಾಡಲು ದೇವೇಗೌಡ ಅವರ ದುಡಿಮೆಯೂ ಕಾರಣವಾಗಿದೆ. ೧೯೮೫ರ ಸಾರ್ವತ್ರಿಕ ಚುನಾವಣೆಯ ನಂತರ ಮುಖ್ಯಮಂತ್ರಿ ಹೆಗಡೆ ತಮ್ಮನ್ನು ಬೇಕೆಂದೇ ಕಡೆಗಣಿಸಿದ್ದಾರೆ. ಸಿಓಡಿ ತನಿಖೆ ಮೂಲಕ ತಮ್ಮ ಕುಟುಂಬಕ್ಕೆ ಅನಗತ್ಯ ತೊಂದರೆ ಕೊಡುತ್ತಿದ್ದಾರೆಂದು ದೇವೇಗೌಡ ಅವರು ಸಾರ್ವತ್ರಿಕ ಸಭೆಗಳಲ್ಲಿ ಹೇಳತೊಡಗಿದರು. ಹೆಗಡೆ ಅವರಿಗೆ ರಾಷ್ಟ್ರರಾಜಕಾರಣದ ಹುಚ್ಚು ತಲೆಗೇರಿದಾಗ ಕಾಂಗ್ರೆನ ಬಂಡಾಯ ನಾಯಕ ವಿ.ಪಿ. ಸಿಂಗ್ ಹೆಗಡೆಗೆ ಹತ್ತಿರವಾದರು. ಅದೇ ರೀತಿ ಜನತಾ ಪಕ್ಷದ ರಾಷ್ಟ್ರೀಯ ಅಧ್ಯಕ್ಷರಾದ ಚಂದ್ರಶೇಖರ್ ದೇವೇಗೌಡ ಅವರಿಗೆ ಪ್ರಿಯರಾದರು. ೧೯೮೮ರಲ್ಲಿ ಹೆಗಡೆ ಜನತಾದಳ ಕಟ್ಟಿದಾಗ ಡಾ। ಸುಬ್ರಹ್ಮಣ್ಯಂಸ್ವಾಮಿ ಜೊತೆಯಲ್ಲಿ ದೇವೇಗೌಡ ಅವರು ಜನತಾ ಪಕ್ಷದಲ್ಲೇ ಉಳಿದರು. ಆಗ ಕಾಂಗ್ರೆಸ್ ಸರ್ಕಾರದ ಗೃಹಮಂತ್ರಿ ಬೂಟಾಸಿಂಗ್ ಅವರಿಗೆ ದೇವೇಗೌಡ ಅವರು ಹತ್ತಿರದವರಾಗಿದ್ದಾರೆಂಬ ಕೂಗು ಕೇಳಿಬಂತು. ಬೊಮ್ಮಾಯಿ ಸರ್ಕಾರವನ್ನು ವಜಾ ಮಾಡಿದ ಕಾಂಗ್ರೆ ಸರ್ಕಾರ ೧೯೮೯ರ ಚುನಾವಣೆಗೆ ನಿರಾಳವಾಗಿ ಮುನ್ನುಗ್ಗಿತು. ಆದರೆ ಬೊಮ್ಮಾಯಿ ಸರ್ಕಾರದ ಪತನದ ಬಿಸಿ ದೇವೇಗೌಡ ಅವರಿಗೆ ಮುಟ್ಟಿತು. ಇಬ್ಬರನ್ನು ಹೊರತುಪಡಿಸಿ ಅವರೂ ಸೇರಿದಂತೆ ಎಲ್ಲಾ ಜನತಾಪಕ್ಷದ ಅಭ್ಯರ್ಥಿಗಳೂ ಆ ಚುನಾವಣೆಯಲ್ಲಿ ಸೋತುಹೋದರು. ೧೯೯೨ರಲ್ಲಿ ಹಾಸನದಿಂದ ಲೋಕಸಭಾ ಸದಸ್ಯರಾದ ದೇವೇಗೌಡ ಸ್ವತಃ ಜನತಾದಳ ಸಂಘಟನೆ ಮಾಡಿ ೧೯೯೪ರಲ್ಲಿ ರಾಜ್ಯದಲ್ಲಿ ಜನತಾದಳವನ್ನು ರಾಜ್ಯದಲ್ಲಿ ಅಧಿಕಾರಕ್ಕೆ ತಂದರು. ಆಗ ದೇವೇಗೌಡರು ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಯಾಗುವಾಗ ಅವರ ಬೆಂಬಲಿಗರು ನಡೆದುಕೊಂಡ ರೀತಿ ಎಂತವರಲ್ಲೂ

ಜುಗುಪ್ಸೆ ತಂದಿತು. ೧೯೯೬ರಲ್ಲಿ ೧೬ ಲೋಕಸಭಾ ಸದಸ್ಯರನ್ನು ಗೆಲ್ಲಿಸಿಕೊಂಡು ಹೋಗಿ ರಾಷ್ಟ್ರ ರಾಜಕಾರಣದ ಲಾಭ ಪಡೆದು ದೇಶದ ಪ್ರಧಾನಮಂತ್ರಿಯಾದರು. ಕೇವಲ ಹತ್ತು ತಿಂಗಳಲ್ಲೇ ಅವರ ನೇತೃತ್ವದ ಸರ್ಕಾರ ಕುಸಿಯಿತು. ದೇವೇಗೌಡರು ಪ್ರಧಾನ ಮಂತ್ರಿಯಾಗಿದ್ದ ಅಲ್ಪಾವಧಿಯಲ್ಲೇ ರಾಜ್ಯದ ಹಿತಕ್ಕಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು. ರಾಜ್ಯದಲ್ಲಿ ನಿಂತುಹೋಗಿದ್ದ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸಲು ಕೇಂದ್ರದಿಂದ ಸಹಾಯ ಧನ ಬಿಡುಗಡೆ ಮಾಡಿದರು. ಬೆಂಗಳೂರು, ಹಾಸನ, ಬೀದರ್, ಗುಲಬರ್ಗಾ, ರೈಲ್ವೆ ಮಾರ್ಗಗಳ ಮಂಜೂರಾತಿ, ಕೃಷಿ ಕ್ಷೇತ್ರಕ್ಕೆ ನೀಡಿದ ಆದ್ಯತೆ ಮುಂತಾದ ಅವರ ಕೆಲಸಗಳು ದಾಖಲಾರ್ಹವಾದ ಸಂಗತಿಯಾಗಿವೆ. ೧೯೯೯ರ ಸಾರ್ವತ್ರಿಕ ಚುನಾವಣೆಯಲ್ಲಿ ಅವರ ಜಾತ್ಯತೀತ ಜನತಾದಳ ಗಣನೀಯ ಸಾಧನೆ ಮಾಡಲಿಲ್ಲ. ೨೦೦೨ರಲ್ಲಿ ನಡೆದ ಕನಕಪುರದ ಲೋಕಸಭಾ ಚುನಾವಣೆಯಲ್ಲಿ ಗೆದ್ದು ಅವರು ಲೋಕಸಭೆಯನ್ನು ಪ್ರವೇಶಿಸಿದ್ದಾರೆ.

ದೇವೇಗೌಡ ಅವರು ಮೂಲತಃ ಶ್ರಮದ ಪರಿವೆಯೇ ಇಲ್ಲದ ರಾಜಕಾರಣಿ. ಇಪ್ಪತ್ತ ನಾಲ್ಕು ಘಂಟೆ ಕೂಡಾ ರಾಜಕೀಯ ಮಾಡಬಲ್ಲ ಮಹಾನ್ ಸಾಹಸಿ. ಹಾಸನದ ಹೊಳೇನರಸೀಪುರದಿಂದ ದೆಹಲಿಯ ಕೆಂಪುಕೋಟೆ ಪ್ರವೇಶಿಸಿದ ದೇವೇಗೌಡ ಅವರು ಕರ್ನಾಟಕದಿಂದ ಪ್ರಧಾನಿ ಹುದ್ದೆಗೆ ಏರಿದ ಮೊದಲಿಗರು. ವಿರೋಧ ಪಕ್ಷದ ನಾಯಕರಾಗಿದ್ದಾಗ ಅವರು ಗಳಿಸಿದ ಜನಪ್ರಿಯತೆ ಆಮೇಲೆ ಉಳಿಯಲಿಲ್ಲ. ದೇವೇಗೌಡ ಅವರು ಮಾಧ್ಯಮದ ಜೊತೆಯಲ್ಲಿ ಎಂದೂ ಉತ್ತಮ ಸಂಬಂಧವಿಟ್ಟುಕೊಂಡವರಲ್ಲ. ಸದಾ ತಮ್ಮ ವಿರುದ್ಧ ಪಿತೂರಿ ನಡೆಯುತ್ತಿದೆಯೆಂಬ ಭಾವನೆಯಲ್ಲಿ ಬೆಂದವರು. ಇತರೆ ಸಮುದಾಯದವರು ಇವರನ್ನು ಒಕ್ಕಲಿಗ ಪಕ್ಷಪಾತಿ ಎಂದು ದೂರಿದರೆ ಒಕ್ಕಲಿಗರು ಇವರು ನಮ್ಮನ್ನು ಬೆಳೆಯಲು ಬಿಡುವುದಿಲ್ಲ ಎಂಬ ಆರೋಪ ಮಾಡುತ್ತಾರೆ. ೧೯೮೬ರಲ್ಲಿ ಅವರ ಮಗ ಎಚ್.ಡಿ. ರೇವಣ್ಣ ಜಿಲ್ಲಾ ಪಂಚಾಯತ್ ಸದಸ್ಯರಾಗಿದ್ದರು. ೧೯೯೪ರಲ್ಲಿ ಹೊಳೆನರಸೀಪುರದಿಂದ ಶಾಸಕರಾಗಿ, ಅನಂತರ ಸಚಿವರಾದರು. ೧೯೯೬ರಲ್ಲಿ ಎರಡನೆಯ ಮಗ ಎಚ್.ಡಿ. ಕುಮಾರಸ್ವಾಮಿ ಕನಕಪುರದಿಂದ ಲೋಕಸಭಾ ಸದಸ್ಯರಾದರು. ಅವರ ಮತ್ತೊಬ್ಬ ಸಂಬಂಧಿ ಹಾಸನದ ಜಿಲ್ಲಾ ಪಂಚಾಯತ್ ಸದಸ್ಯರಾದರು. ಇವು ದೇವೇಗೌಡ ಅವರ ವಿರೋಧಿಗಳಿಗೆ ಮಾತನಾಡಲು ಸಾಕಷ್ಟು ವಿಷಯ ಒದಗಿಸಿದವು. ದೇವೇಗೌಡರು ಹಿಂದುಳಿದ ಅಲ್ಪಸಂಖ್ಯಾತ ಹಾಗೂ ದಲಿತ ಸಮುದಾಯದ ಸಮಗ್ರ ವಿಶ್ವಾಸವನ್ನು ಗಳಿಸಿಕೊಳ್ಳಬೇಕಾಗಿತ್ತೆಂದು ರಾಜಕೀಯ ವಿಶ್ಲೇಷಣಕಾರರು ಹೇಳುತ್ತಾರೆ. ಆ ಸಮುದಾಯಗಳ ಕೆಲವು ನಾಯಕರು ಇವರ ಬಳಿ ಸದಾ ಇರುತ್ತಾರೆ. ಆದರೆ ರಾಜಕೀಯವಾಗಿ ಅದರಿಂದ ಇವರಿಗೆ ಲಾಭವಾಗುತ್ತಿಲ್ಲ. ದೇವೇಗೌಡ ಅವರು ಯಾರೊಡನೆ ಬೇಕಾದರೂ ಸ್ನೇಹ ಮಾಡುತ್ತಾರೆ. ಅನಂತರ ಎಲ್ಲರನ್ನೂ ದೂರಿಡುವಂತೆ ಸ್ನೇಹಿತರನ್ನೂ ದೂರ ಮಾಡುತ್ತಾರೆಂದು ಅವರ ಜೊತೆಯಲ್ಲಿದ್ದ ಕೆಲವರು ಹೇಳುತ್ತಾರೆ. ೧೯೯೪ರಲ್ಲಿ ಮುಖ್ಯಮಂತ್ರಿಯಾದಾಗ ಕೃಷ್ಣಾ ಮೇಲ್ದಂಡೆಯ ತುಂಡು ಗುತ್ತಿಗೆ ಕಾಮಗಾರಿ ವ್ಯವಹಾರದಲ್ಲಿ ಭಾರಿ ಅಕ್ರಮ ನಡೆದಿದೆಯೆಂದು ಅವರ ಸಚಿವ ಸಂಪುಟದ ಸಹೋದ್ಯೋಗಿ ಆರ್.ಎಲ್. ಜಾಲಪ್ಪ ಹೇಳುತ್ತಾರೆ. ರಾಜಕೀಯ ಬಿಟ್ಟು ಬೇರಾವ ವಿಚಾರದಲ್ಲೂ ಆಸಕ್ತಿಯಿಲ್ಲದ ದೇವೇಗೌಡ ಅವರಿಗೆ ವಿವಿಧ ಕ್ಷೇತ್ರದ ಪ್ರತಿಭಾವಂತರ ಸಂಪರ್ಕ ಕಡಿಮೆ. ಅದಕ್ಕಾಗಿ ಅವರ ಆಲೋಚನೆಗಳೆಲ್ಲಾ ಏಕಮುಖವಾಗಿರುತ್ತವೆ. ಸುತ್ತಮುತ್ತ ಇದ್ದವರನ್ನೇ ನಂಬುವ, ಅವರ ಹೊಗಳಿಕೆಗೆ ಸದಾ ಕಿವಿಯೊಡ್ಡುವ ದೇವೇಗೌಡ ಅವರು ರಾಜಕೀಯದಲ್ಲಿ ಅನೇಕ ಸಲ ಎಡವಿದ್ದಾರೆ.

ಮೂಲತಃ ರೈತರ ಬಗ್ಗೆ ಕಾಳಜಿಯುಳ್ಳ ದೇವೇಗೌಡರು ಅಸಾಧಾರಣ ಸಂಘಟನಾ ಶಕ್ತಿ ಚಾತುರ್ಯವುಳ್ಳವರು. ಕರ್ನಾಟಕದ ಎಲ್ಲಾ ಗ್ರಾಮೀಣಪ್ರದೇಶವನ್ನು ಕಾರಿನಲ್ಲಿ ಸುತ್ತುವ ಸಾಮರ್ಥ್ಯವುಳ್ಳವರು. ರೈತರು, ಬಡವರು ಹಾಗೂ ಶ್ರೀಸಾಮಾನ್ಯರನ್ನು ತಮ್ಮ ಸರಳ ನಡವಳಿಕೆಯಿಂದ ಗೆಲ್ಲಬಲ್ಲವರು. ಅದರಲ್ಲೂ ಹಳೆಯ ಮೈಸೂರು ಪ್ರಾಂತ್ಯದಲ್ಲಿ ದೇವೇಗೌಡ ಅವರ ಪ್ರಭಾವವನ್ನು ಸುಲಭವಾಗಿ ತಳ್ಳಿ ಹಾಕುವಂತಿಲ್ಲ. ಒಕ್ಕಲಿಗ ಸಮುದಾಯಕ್ಕಂತೂ ಅವರು ಪ್ರಶ್ನಾತೀತ ನಾಯಕರು. ಅವರ ಮುಗ್ಧತೆ ಸಹ ಅವರ ವ್ಯಕ್ತಿತ್ವದ ದೋಷವೆನಿಸಿದೆ. ಚಂಚಲತೆ, ಗುರಿ ಸಾಧಿಸಲು ತೋರುವ ಆತುರ, ರಾಜಕಾರಣಕ್ಕೆ ಬೇಕಾದ ವಿವಿಧ ಕ್ಷೇತ್ರಗಳ ಜ್ಞಾನದ ಅಭಾವ, ಮಾಧ್ಯಮದೊಡನೆ ನಿರಂತರ ಘರ್ಷಣೆ, ಯಾವುದೇ ಕೆಲಸದಲ್ಲಿ ಸಾಕಷ್ಟು ಸಿದ್ಧತೆ ಮಾಡಿಕೊಳ್ಳದ ಮೂಲ ಪ್ರವೃತ್ತಿಯಿಂದಾಗಿ ದೇವೇಗೌಡ ಅವರು ರಾಜ್ಯದೆಲ್ಲೆಡೆ ಪ್ರಭಾವಶಾಲಿ ನಾಯಕರಾಗಲು ಸಾಧ್ಯವಾಗಿಲ್ಲ. ಆದರೆ ದೇವೇಗೌಡ ಅವರ ಅಸಾಧಾರಣ ದುಡಿಮೆ ಯುವರಾಜಕಾರಣಿಗಳಿಗೆ ಸದಾಕಾಲ ಪ್ರೇರಣೆ ನೀಡುವಂತಹದು.

## ಕೆಲವು ಘಟ್ಟಗಳು

ಮೈಸೂರು ಸಂಸ್ಥಾನದ ಮೊದಲ ಮುಖ್ಯಮಂತ್ರಿ ಚೆಂಗಲರಾಯರೆಡ್ಡಿ ಅವರು ಕೋಲಾರ ಜಿಲ್ಲೆ ಬಂಗಾರಪೇಟೆ ತಾಲ್ಲೂಕಿನ ಕ್ಯಾಸಂಬಳ್ಳಿಯವರು. ತೆಲುಗು ಮಾತೃಭಾಷೆಯ ಇವರು ಶ್ರೀಮಂತ ಕುಟುಂಬದವರು. ೧೯೦೨ಮೇ ೪ ರಂದು ಜನನ. ಅಂದರೆ ಎಸ್.ಎನ್. ಅವರದರಂತೆಯೇ ಕೆ.ಸಿ. ರೆಡ್ಡಿ ಅವರದು ಜನ್ಮಶತಮಾನೋತ್ಸವ ವರ್ಷ. ಮದ್ರಾಸ್‌ನಲ್ಲಿ ವ್ಯಾಸಂಗ ಮಾಡಿದ

ಕೆ.ಸಿ. ರೆಡ್ಡಿ ಜಸ್ಟೀಸ್ ಪಾರ್ಟಿಯಿಂದ ಪ್ರೇರಣೆ ಪಡೆದರು. ಬ್ರಾಹ್ಮಣ ವಿರೋಧಿ 'ಪ್ರಜಾಮಿತ್ರ' ಮಂಡಳಿಯ ಸದಸ್ಯರಾಗಲು ಒಪ್ಪಲಿಲ್ಲ. ಸಾಹಿತಿ ಡಿವಿಜಿ ಹಾಗೂ ವಿ. ವೆಂಕಟಪ್ಪ ಅವರ ಜೊತೆಗೂಡಿ 'ಪ್ರಜಾಪಕ್ಷ' ಸ್ಥಾಪಿಸಿದರು. ೧೯೩೨ರಲ್ಲಿ ಕೋಲಾರ ಜಿಲ್ಲಾ ಬೋರ್ಡಿನ ಅಧ್ಯಕ್ಷರು ಹಾಗೂ ೧೯೩೭ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆ ಸದಸ್ಯರಾದ ಕೆ.ಸಿ. ರೆಡ್ಡಿ ಅವರು ೧೯೩೬ರಲ್ಲಿ ನಂದಿ ಬೆಟ್ಟಕ್ಕೆ ವಿಶ್ರಾಂತಿಗೆ ಬಂದಿದ್ದ ಮಹಾತ್ಮ ಗಾಂಧೀಜಿ ಅವರನ್ನು ಕಂಡು ''ನಾವು ಈಗ ಕಾಂಗ್ರೆಸ್ ಸೇರಿದರೆ ಮಲತಾಯಿ ಮಕ್ಕಳಂತೆ ನಡೆಸಿಕೊಳ್ಳಲಾಗುವುದೇ?'' ಎಂದು ಕೇಳಿದರು. ಗಾಂಧೀಜಿ ''ಖಂಡಿತಾ ಇಲ್ಲ ಸ್ವಂತ ಮಕ್ಕಳಂತೆ ನೋಡಿಕೊಳ್ಳಲಾಗುವುದು'' ಎಂದು ಆಶ್ವಾಸನೆ ನೀಡಿದರು. ೧೬.೧೦.೧೯೩೭ರಲ್ಲಿ ರೆಡ್ಡಿ, ವಿ. ವೆಂಕಟಪ್ಪ ಅವರ ಪ್ರಯತ್ನದಿಂದಾಗಿ ಮೈಸೂರಿನಲ್ಲಿ 'ಪ್ರಜಾಸಂಯುಕ್ತ ಪಕ್ಷ'ವು ಕಾಂಗ್ರೆಸ್‌ನಲ್ಲಿ ವಿಲೀನಗೊಂಡಿತು. ೧೯೩೮ರ ಏಪ್ರಿಲ್‌ನಲ್ಲಿ ದುರ್ಘಟನೆ ನಡೆದಾಗ ಕೆ.ಸಿ. ರೆಡ್ಡಿ ವಾರ್ಧಾಕ್ಕೆ ಹೋಗಿ ಪರಿಸ್ಥಿತಿಯನ್ನು ಮಹಾತ್ಮರಿಗೆ ವಿವರಿಸಿದರು. ೧೯೩೬ರಲ್ಲಿ ಮೈಸೂರು ಕಾಂಗ್ರೆಸ್‌ನ ಅಧ್ಯಕ್ಷರಾದರು. ''ಮೈಸೂರು ಚಲೋ ಚಳವಳಿ''ಯ ನಂತರ ಅಂದರೆ ೨೯.೧೦.೧೯೪೭ರಲ್ಲಿ ಮೈಸೂರು ಸಂಸ್ಥಾನದ ಮುಖ್ಯಮಂತ್ರಿಯಾದರು. ೧೯೫೦ರಲ್ಲಿ ಭಾರತ ಸಂವಿಧಾನ ಜಾರಿಗೆ ಬಂದ ನಂತರ ಮೈಸೂರು 'ಬಿ' ದರ್ಜೆ ರಾಜ್ಯವಾಯಿತು. ೬.೨.೧೯೫೦ರಲ್ಲಿ ಕಾಂಗ್ರೆಸ್ ಸದಸ್ಯರಿರುವ ಮಂತ್ರಿಮಂಡಲವನ್ನು ತಮ್ಮ ನೇತೃತ್ವದಲ್ಲಿ ರಚಿಸಿದರು.

ರೆಡ್ಡಿ ಅವರ ಸರ್ಕಾರ ೧೯೪೭ರಲ್ಲಿ ಚಿತ್ರದುರ್ಗ, ಕೋಲಾರ, ತುಮಕೂರುಗಳಲ್ಲಿ ಪಾನ ನಿರೋಧವನ್ನು ಜಾರಿಗೆ ತಂದಿತು. ೧೯೪೯ರಲ್ಲಿ 'ಬೆಂಗಳೂರು ಕಾರ್ಪೊರೇಷನ್' ರೂಪುಗೊಂಡಿತು. ಸ್ವತಃ ಕಾರ್ಮಿಕ ನಾಯಕರಾಗಿದ್ದ ಕೆ.ಸಿ. ರೆಡ್ಡಿ ಅವರ ಕಾಲದಲ್ಲಿ ೪೦ ಕಾರ್ಮಿಕ ಪರವಾದ ಶಾಸನಗಳಾದವು. ೧೩.೦೭.೧೯೫೭ರಲ್ಲಿ ಭಾರತದ ಪ್ರಧಾನಿ ನೆಹರು ವಿಧಾನಸೌಧ ನಿರ್ಮಾಣಕ್ಕೆ ಶಂಕುಸ್ಥಾಪನೆ ಮಾಡಿದರು. ಅದು ಕೆಂಗಲ್ ಹನುಮಂತಯ್ಯ ಅವರ ಕಾಲದಲ್ಲಿ ಮತ್ತಷ್ಟು ವಿಸ್ತೃತ ರೂಪ ಪಡೆಯಿತು. ೧೯೫೨ರಲ್ಲಿ ವಿಧಾನಸಭಾ ಚುನಾವಣೆಗೆ ಕೆ.ಸಿ. ರೆಡ್ಡಿ ಸ್ಪರ್ಧಿಸಿರಲಿಲ್ಲ. ೧೯೫೭ರಲ್ಲಿ ಲೋಕಸಭೆಗೆ ಆಯ್ಕೆಯಾಗಿ ಕೇಂದ್ರ ಸಚಿವರಾದರು. ೧೯೬೪ರಿಂದ ೧೯೭೧ರ ವರೆಗೆ ಮಧ್ಯಪ್ರದೇಶದ ಗವರ್ನರಾಗಿ ಕಾರ್ಯನಿರ್ವಹಿಸಿದರು. ಮೂಲತಃ ಅರ್ಥಶಾಸ್ತ್ರದ ವಿದ್ಯಾರ್ಥಿಯಾದ ಅವರು ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳಲ್ಲಿ ಆಸಕ್ತಿಯುಳ್ಳವರಾಗಿದ್ದರು. ಏಕೀಕರಣದ ನಂತರ ರಾಜ್ಯದ ರಾಜಕೀಯದಲ್ಲಿ ಅವರಿಗೆ ಅಷ್ಟೊಂದು ಮಹತ್ವವಿರಲಿಲ್ಲ. ಉತ್ತರ ಕರ್ನಾಟಕ ಬಹುಮಟ್ಟಿನ ಶಾಸಕರಿಗೆ ಅವರು ಅಪರಿಚಿತರಾಗಿದ್ದರು.

೧೯೫೨ರಲ್ಲಿ ಮುಖ್ಯಮಂತ್ರಿಯಾಗಿದ್ದ ಕೆಂಗಲ್ ಹನುಮಂತಯ್ಯ ಸಾಹಿತ್ಯ ಸಂಸ್ಕೃತಿಗಳಲ್ಲಿ ಅಪಾರ ಆಸಕ್ತಿಯುಳ್ಳವರು. ಅವರು ಸ್ಥಾಪಿಸಿದ ಸಂಸ್ಕೃತಿ ಇಲಾಖೆ ಇಡೀ ರಾಷ್ಟ್ರಕ್ಕೆ ಪ್ರೇರಣೆ ಕೊಟ್ಟಿತು. ಏಕೀಕರಣದ ಬಗ್ಗೆ ಅಪಾರ ಆಸಕ್ತಿಯಿದ್ದ ಕೆಂಗಲ್ ಹನುಮಂತಯ್ಯ ಅಂದಿನ ರಾಜಪ್ರಭುತ್ವವನ್ನು ವಿರೋಧಿಸುತ್ತಿದ್ದವರು. ವಿಧಾನಸೌಧ ಶಿಲ್ಪಿ ಕೆಂಗಲ್ ಹನುಮಂತಯ್ಯ ದಕ್ಷ ಆಡಳಿತಗಾರರಾಗಿದ್ದನು. ಕೆಂಗಲ್ ಹನುಮಂತಯ್ಯ ಅವರು ಮೊರಾರ್ಜಿ ದೇಸಾಯಿ ಅವರ ಅಭಿಮಾನಿ, ನೆಹರು ಬಗ್ಗೆ ಅಂತಹ ಆದರಾಭಿಮಾನವಿಲ್ಲದ ಕೆಂಗಲ್ ೧೯೬೯ರಲ್ಲಿ ಅನಿವಾರ್ಯವಾಗಿ ಶ್ರೀಮತಿ ಗಾಂಧಿ ಅವರ ಆಡಳಿತ ಕಾಂಗ್ರೆಸ್‌ಗೆ ಸೇರ್ಪಡೆಯಾಗಿ ೧೯೭೧ರಲ್ಲಿ ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರದಿಂದ ಆಯ್ಕೆಯಾಗಿ ಶ್ರೀಮತಿ ಇಂದಿರಾಗಾಂಧಿ ಅವರ ಸಚಿವ ಸಂಪುಟದಲ್ಲಿ ರೈಲ್ವೆ ಸಚಿವರಾಗಿದ್ದರು. ರಾಜ್ಯದ ರೈಲ್ವೆ ಯೋಜನೆಗಳಿಗೆ ನಾಂದಿ ಹಾಡಿದರು. ಶ್ರೀಮತಿ ಇಂದಿರಾ ಗಾಂಧಿ ಅವರ ಜೊತೆ ಹೊಂದಿಕೊಳ್ಳಲಾಗದ ಕೆಂಗಲ್ ದಕ್ಷತೆಯ ಜೊತೆ 'ಅಹಂ' ಬೆಳೆಸಿಕೊಂಡಿದ್ದರು. ಕಾಂಗ್ರೆಸ್‌ನ ಭಿನ್ನಮತೀಯ ರಾಜಕಾರಣಕ್ಕೆ ಬಲಿಯಾದ ವ್ಯಕ್ತಿಗಳಲ್ಲಿ ಕೆಂಗಲ್ ಪ್ರಮುಖರು.

೧೯೫೮ರಲ್ಲಿ ಆಗಿನ ಭಿನ್ನಮತೀಯರ ಪರವಾಗಿ ಬಿ.ಡಿ. ಜತ್ತಿ ರಾಜ್ಯದ ಮುಖ್ಯಮಂತ್ರಿಯಾಗಿದ್ದರು. ತಮ್ಮ ಸಚಿವ ಸಂಪುಟದ ಎಲ್ಲಾ ಸದಸ್ಯರಿಗೆ ಪರಮೋಚ್ಚ ಸ್ವಾತಂತ್ರ್ಯ ಕೊಟ್ಟಿದ್ದ ಬಿ.ಡಿ. ಜತ್ತಿ ಇಂದಿರಾಗಾಂಧಿ ಅವರ ಜೊತೆ ಹೊಂದಿಕೊಂಡ ಕಾರಣ ಉಪರಾಷ್ಟ್ರಪತಿಗಳಾದರು. ವಚನ ಸಾಹಿತ್ಯ ಹಾಗೂ ಶಿವಶರಣರ ಬಗ್ಗೆ ಆದರಾಭಿಮಾನವುಳ್ಳ ಬಿ.ಡಿ. ಜತ್ತಿ ಬಸವ ಸಮಿತಿ ಸ್ಥಾಪಕರು. ರಾಜ್ಯ ಹಾಗೂ ರಾಷ್ಟ್ರ ರಾಜಕೀಯದಲ್ಲಿ ಪಾಲುಗೊಂಡಿದ್ದರೂ ರಾಜ್ಯ ರಾಜಕಾರಣದಲ್ಲಿ ಇದ್ದು ಇಲ್ಲದಂತಿದ್ದರು.

೧೯೬೮ರಲ್ಲಿ ಮುಖ್ಯಮಂತ್ರಿಯಾದ ವೀರೇಂದ್ರ ಪಾಟೀಲ್ ಮಾಧ್ಯಮಗಳು ಹೇಳುವಂತೆ ರಾಜಕಾರಣಿಗಿಂತ ಐ.ಎ.ಎಸ್. ಅಧಿಕಾರಿ ಮನೋಭಾವದವರು. ೧೯೭೨ರ ವಿಧಾನಸಭಾ ಚುನಾವಣೆಯಲ್ಲಿ ನೆಲ ಜಲ ಭಾಷೆಯನ್ನು ಪ್ರಮುಖ ವಿಷಯವನ್ನಾಗಿಸಲು ಪ್ರಯತ್ನಿಸಿ ವಿಫಲರಾದರು. ಇಂದಿರಾಗಾಂಧಿ ಅವರ ಜೊತೆ ೧೯೮೦ರಲ್ಲಿ ಒಪ್ಪಂದ ಮಾಡಿಕೊಂಡು ಕಾಂಗ್ರೆ ಹೋದಮೇಲೆ ವೀರೇಂದ್ರ ಪಾಟೀಲರ ಈ ವ್ಯಕ್ತಿತ್ವಕ್ಕೆ ದೊಡ್ಡ ಆಘಾತವಾಗಿತ್ತು. ೧೯೯೦ರಲ್ಲಿ ಅನಾರೋಗ್ಯ ಪೀಡಿತರಾದ ವೀರೇಂದ್ರ ಪಾಟೀಲರನ್ನು ಕಾಂಗ್ರೆ ಅಧ್ಯಕ್ಷರಾದ ರಾಜೀವಗಾಂಧಿ ಅಮಾನವೀಯವಾಗಿ ತೆಗೆದುಹಾಕಿದರು. ಇದು ಪ್ರಜಾಪ್ರಭುತ್ವಕ್ಕೆ ಅವಹೇಳನಕಾರಿ ಸಂಗತಿಯಾಗಿತ್ತು.

ನಿಜಲಿಂಗಪ್ಪ ಅವರು ಜೊತೆಯಿರುವ ತನಕ ಪಾಟೀಲರು ಮಹತ್ವದ ನಾಯಕರಾಗಿದ್ದರು. ರಾಜಕಾರಣ ಹೊರತುಪಡಿಸಿ ಬೇರೆ ಕ್ಷೇತ್ರದ ಪ್ರತಿಭಾವಂತರ ಸಂಪರ್ಕ ಕಡಿಮೆಯಿದ್ದ ಕಾರಣ ಪಾಟೀಲರ ಪೂರ್ಣವ್ಯಕ್ತಿತ್ವ ಪ್ರಕಾಶನಗೊಳ್ಳಲೇ ಇಲ್ಲ.

ದೇವರಾಜ ಅರಸು ನಂತರ ಮುಖ್ಯಮಂತ್ರಿಯಾದ ಆರ್. ಗುಂಡೂರಾವ್ ರಾಜಕಾರಣದಲ್ಲಿ ಪ್ರಬುದ್ಧತೆಗೆ ಇರುವ ಮಹತ್ವವನ್ನು ತೋರಿಸಿದರು.

೧೯೯೦ರಲ್ಲಿ ವೀರೇಂದ್ರ ಪಾಟೀಲರ ನಂತರ ಮುಖ್ಯಮಂತ್ರಿಯಾದ ಎಸ್. ಬಂಗಾರಪ್ಪ ಹೋರಾಟಗಾರರು. ೧೯೬೭ರಿಂದಲೂ ಸತತವಾಗಿ ಗೆದ್ದು ಬರುತ್ತಿರುವ ಕೆಲವೇ ನಾಯಕರಲ್ಲಿ ಒಬ್ಬರು. ಹಿಂದುಳಿದ ವರ್ಗಗಳ ಮೇಲೆ ಸಾಕಷ್ಟು ಪ್ರಭಾವ ಹೊಂದಿರುವವರು. ೧೯೮೦ರಲ್ಲೇ ಇವರು ಕಾಂಗ್ರೆ ಅಧ್ಯಕ್ಷರಾದ ಅವಧಿಯಲ್ಲಿ ಕರ್ನಾಟಕದಿಂದ ಕಾಂಗ್ರೆ ಲೋಕಸಭೆಗೆ ಇಪ್ಪತ್ತಾರು ಸ್ಥಾನ ಗಳಿಸಿತು. ಆಗ ಇವರು ಸಂಜಯಗಾಂಧಿ ಕಾರಣದಿಂದ ಮುಖ್ಯಮಂತ್ರಿಯಾಗಲಿಲ್ಲ. ೧೯೮೩ರ ಚುನಾವಣೆಯಲ್ಲೂ ಜನತಾ ಪಕ್ಷ ಜಯ ಗಳಿಸಲು ಬಂಗಾರಪ್ಪ ಅವರ ವ್ಯಕ್ತಿತ್ವ ಕಾರಣವಾಗಿತ್ತು. ಬಂಗಾರಪ್ಪ ಅವರ ಅಭಿಮಾನಿಗಳ ಅತಿರೇಕದ ವರ್ತನೆ ಹಾಗೂ ಬಂಗಾರಪ್ಪ ಅವರ ವ್ಯಕ್ತಿತ್ವದ ಸಹಜ ದೌರ್ಬಲ್ಯಗಳು ಇವರಿಗೆ ಅನಾನುಕೂಲ ಪರಿಸ್ಥಿತಿಯನ್ನು ನಿರ್ಮಿಸಿದವು. ೧೯೯೦ರಲ್ಲಿ ಮುಖ್ಯಮಂತ್ರಿಯಾದ ಮೇಲೂ ಬಂಗಾರಪ್ಪ ಆಡಳಿತವನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ಭ್ರಷ್ಟಾಚಾರ ತೀವ್ರವಾಗಿ ಕೇಳಿಬಂತು. ಸಾಮಾಜಿಕ ನ್ಯಾಯದ ತೀವ್ರವಾದ ಬದ್ಧತೆಯುಳ್ಳ ಬಂಗಾರಪ್ಪ ೧೯೯೪ರ ಚುನಾವಣೆಯಲ್ಲಿ ಕಾಂಗ್ರೆ ಸೋಲಿಗೆ ಪ್ರಮುಖ ಕಾರಣರಾದರು. ಅವರು ಸ್ಥಾಪಿಸಿದ ಕೆಪಿಸಿ ಅನಂತರ ಕಾಂಗ್ರೆಸೊಡನೆ ವಿಲೀನವಾಯಿತು. ಯಾವುದೇ ಪಕ್ಷದಲ್ಲಿದ್ದರೂ ಶಾಸಕರಾಗಲು, ಲೋಕಸಭಾ ಸದಸ್ಯರಾಗಲು ಅವರಿಗೆ ತೊಂದರೆಯಿಲ್ಲ. ಪಕ್ಷ ಒಡೆಯುವುದು-ಬೇರೆ ಪಕ್ಷ ಕಟ್ಟುವುದು ಬಂಗಾರಪ್ಪ ಅವರ ರಾಜಕೀಯ ಜೀವನದ ಮುಖ್ಯ ಪ್ರವೃತ್ತಿಯಾಗಿದೆ. ಸಾಹಿತ್ಯ, ಸಂಗೀತ ಹಾಗೂ ಕ್ರೀಡೆಗಳಲ್ಲಿ ಆಸಕ್ತಿಯುಳ್ಳ ಬಂಗಾರಪ್ಪ ಯೋಜನಾಬದ್ಧವಾದ ರಾಜಕಾರಣ ಮಾಡಿದ್ದರೆ ಹಿಂದುಳಿದ ನಾಯಕರಲ್ಲೇ ಪ್ರಭಾವಶಾಲಿ ನಾಯಕರಾಗಬಹುದಾಗಿತ್ತು.

ದಕ್ಷಿಣ ಕನ್ನಡ ಜಿಲ್ಲೆ ಕಾರ್ಕಳ ಕ್ಷೇತ್ರ ಎಂ. ವೀರಪ್ಪ ಮೊಯಿಲಿ ಅವರದು. ಮೊಯಿಲಿ ೧೯೭೨ರಿಂದಲೂ ರಾಜ್ಯದ ರಾಜಕಾರಣದಲ್ಲಿದ್ದಾರೆ. ಸಣ್ಣ ಕೈಗಾರಿಕೆ, ಸಂಸ್ಕೃತಿ, ಹಣಕಾಸು, ಯೋಜನೆ, ಕಾನೂನು, ಶಿಕ್ಷಣ ಖಾತೆಗಳಲ್ಲಿ ಯಶಸ್ವಿಯಾಗಿ ನಿರ್ವಹಿಸಿದ ವೀರಪ್ಪ ಮೊಯಿಲಿ ೧೯೯೨ರಲ್ಲಿ ಮುಖ್ಯಮಂತ್ರಿಗಳಾದರು. ಚಿನ್ನಪ್ಪರೆಡ್ಡಿ ಹಿಂದುಳಿದ ಆಯೋಗ ಅನುಷ್ಠಾನ ಮಾಡಿ ರಾಷ್ಟ್ರದಲ್ಲಿ ಮೊದಲಬಾರಿಗೆ ರಾಜಕೀಯ ಮೀಸಲಾತಿ ತಂದ ಖ್ಯಾತಿ ಇವರದು. ಅಲ್ಪಸಂಖ್ಯಾತರಿಗೆ, ಮುಸ್ಲಿಂರಿಗೆ ಪ್ರತ್ಯೇಕ ಮೀಸಲಾತಿ ಕೊಟ್ಟ ಹೆಗ್ಗಳಿಕೆ ಇವರದು. ಕನ್ನಡ ವಿಶ್ವವಿದ್ಯಾಲಯ, ಕನ್ನಡ ಪುಸ್ತಕ ಪ್ರಾಧಿಕಾರ, ವೃತ್ತಿ ಶಿಕ್ಷಣಕ್ಕೆ ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ ಪ್ರಾರಂಭಿಸಿದ ಮೊಯಿಲಿ ಅವರು ಲಿಕ್ಕರ್ ಲಾಬಿ ಹಾಗೂ ಡೊನೇಷನ್ ಲಾಬಿಗಳ ಹಿಡಿತಕ್ಕೆ ಸಿಲುಕಿ ರಾಜಕೀಯವಾಗಿ ಸೋಲನ್ನು ಒಪ್ಪಿಕೊಂಡರು. ಸ್ವತಃ ಬರಹಗಾರರಾದ ಮೊಯಿಲಿ ಭಾವನಾಜೀವಿಗಳು. ಸಾಮಾಜಿಕ ನ್ಯಾಯವನ್ನು ಕಠೋರವಾಗಿ ಅನುಷ್ಠಾನ ಮಾಡಲು ಹೋದಾಗ, ಮೇಲ್ವರ್ಗ ಹಾಗೂ ಕೆಲವು ಮಾಧ್ಯಮಗಳ ಕೆಂಗಣ್ಣಿಗೆ ಗುರಿಯಾಗಿ ಮೂಲೆಗುಂಪು ಆಗಬೇಕಾಗುತ್ತದೆ. ಸ್ಥಳೀಯ ಸಂಸ್ಥೆಗಳಲ್ಲಿ ತಂದ ರಾಜಕೀಯ ಮೀಸಲಾತಿಯಿಂದಾಗಿ ಇವರಿಗೆ ರಾಜ್ಯದ ರಾಜಕೀಯದಲ್ಲಿ ಪ್ರಮುಖ ಸ್ಥಾನವಿದೆ.

ಅತ್ಯಲ್ಪ ಕಾಲ ಮುಖ್ಯಂತ್ರಿಯಾಗಿದ್ದವರು ಬೊಮ್ಮಾಯಿ. ಸದಾ ಭಿನ್ನಮತೀಯ ಚಟುವಟಿಕೆಯಲ್ಲಿ ಬೆಂದ ಮುಖ್ಯಮಂತ್ರಿ ಜೆ.ಎಚ್. ಪಟೇಲ್‌ರಾಜ್ಯದ ರಾಜಕಾರಣ ಕಂಡಾಗ ನೆನಪಿಗೆ ಬರುತ್ತಾರೆ. ಸಮಾಜವಾದಿ ನೆಲೆಯಿಂದ ಬಂದ ಜೆ.ಎಚ್. ಪಟೇಲ್ ಮುಕ್ತ ಮನಸ್ಸಿನ ಮೇಧಾವಿ. ಲೋಕಸಭೆಯಲ್ಲಿ ಕನ್ನಡದಲ್ಲಿ ಮಾತನಾಡಿ ದಾಖಲೆ ಸ್ಥಾಪಿಸಿದ ಜೆ.ಎಚ್. ಪಟೇಲ್ ತಮ್ಮ ಕೊನೆಗಾಲದಲ್ಲಿ ಈ ರಾಜ್ಯದ ಮುಖ್ಯಮಂತ್ರಿಯಾದರು. ವರ್ಣರಂಜಿತ ವ್ಯಕ್ತಿತ್ವದ ಜೆ.ಎಚ್. ಪಟೇಲ್ ಬಹುದೊಡ್ಡ ಹೋರಾಟಗಾರರು. ಪಟೇಲರಿಗೆ ತಮ್ಮ ದಕ್ಷತೆ ಯನ್ನು ತೋರಿಸುವ ಅವಕಾಶ ದೊರೆತಿದ್ದು ಕಡಿಮೆ. ಆದರೆ ಅಂದುಕೊಂಡಿದ್ದನ್ನು ಮಾಡುವ ಛಲ ಅವರಲ್ಲಿತ್ತು. ಅದಕ್ಕೆ ಉದಾಹರಣೆ ಅವರ ಕಾಲದಲ್ಲಿ ರಚಿತವಾದ ಹೊಸ ಜಿಲ್ಲೆಗಳು. ಜನತಾದಳದ ಆಂತರಿಕ ಸಮಸ್ಯೆಯಿಂದಾಗಿ ಅವರು ನೆಮ್ಮದಿಯಿಂದ ರಾಜ್ಯವಾಳಲಿಲ್ಲ. ಸಾಹಿತ್ಯ, ಸಂಗೀತ, ನಾಟಕ, ಚಲನಚಿತ್ರ ಮುಂತಾದ ಕ್ಷೇತ್ರಗಳಲ್ಲಿ ಅಪಾರ ಆಸಕ್ತಿಯಿದ್ದ ಪಟೇಲ್ ತಮ್ಮ ಕನಸುಗಳನ್ನು ನನಸು ಮಾಡಲಾಗದೆ ಹೋದ ವ್ಯಕ್ತಿ.

೧೯೯೯ರಲ್ಲಿ ಕಾಂಗ್ರೆ ಪಕ್ಷವನ್ನು ರಾಜ್ಯದಲ್ಲಿ ಅಧಿಕಾರಕ್ಕೆ ತಂದು ಮುಖ್ಯಮಂತ್ರಿಯಾಗಿರುವ ಎಸ್.ಎಂ. ಕೃಷ್ಣ ೧೯೬೨ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷದ ಎಚ್.ಕೆ. ವೀರಣ್ಣಗೌಡ ಅವರನ್ನು ಸೋಲಿಸಿ ಶಾಸಕರಾದರು. ಆ ಅವಧಿಯಲ್ಲೇ ನಡೆದ ಉಪಚುನಾವಣೆಯ ಮೂಲಕ ಮಂಡ್ಯ ಕ್ಷೇತ್ರದಿಂದ ಲೋಕಸಭೆಗೆ ಸಮಾಜವಾದಿ ಪಕ್ಷದ ಮೂಲಕ ಆರಿಸಿ ಹೋದರು. ಅನಂತರ ಶ್ರೀಮತಿ ಗಾಂಧಿ ಅವರ ಆಡಳಿತ ಕಾಂಗ್ರೆಸ್ ಸೇರಿದ ಕೃಷ್ಣ ಅರಸು ಸಂಪುಟದಲ್ಲಿ ಕೈಗಾರಿಕಾ ಸಚಿವರಾಗಿದ್ದರು. ೧೯೭೮ರಲ್ಲಿ

ಕೆ.ಎಚ್. ಪಾಟೀಲ್‌ರ ರೆಡ್ಡಿ ಕಾಂಗ್ರೆಸ್ ಸೇರಿ, ಪುನಃ ಕಾಂಗ್ರೆಗೆ ಬಂದು ೧೯೮೦ರಲ್ಲಿ ಮಂಡ್ಯದಿಂದ ಲೋಕಸಭಾ ಸದಸ್ಯರಾದರು. ಇಂದಿರಾಗಾಂಧಿ ಹಾಗೂ ರಾಜೀವಗಾಂಧಿ ಸಚಿವ ಸಂಪುಟದಲ್ಲಿ ರಾಜ್ಯಸಚಿವರಾಗಿದ್ದ ಇವರು ೧೯೮೯ರಲ್ಲಿ ರಾಜ್ಯ ರಾಜಕಾರಣಕ್ಕೆ ಬಂದು ವಿಧಾನಸಭಾಧ್ಯಕ್ಷರಾದರು. ೧೯೯೨ರಲ್ಲಿ ಉಪಮುಖ್ಯಮಂತ್ರಿಗಳಾದರು. ೧೯೯೯ರಲ್ಲಿ ಎಲ್ಲಾ ಕಾಂಗ್ರೆಸ್ ನಾಯಕರನ್ನು ಕರೆದುಕೊಂಡು ಪಾಂಚಜನ್ಯ ಯಾತ್ರೆ ಮಾಡಿ ಮದ್ದೂರಿನಿಂದ ಗೆದ್ದು ಇದೀಗ ಮುಖ್ಯಮಂತ್ರಿಗಳಾಗಿದ್ದಾರೆ. ರಾಜಕೀಯವಾಗಿ ಹೇಳುವುದಾದರೆ ಕೃಷ್ಣ ಅವರು ಅದೃಷ್ಟಶಾಲಿಗಳು, ಬಲವಾದ ಹೈಕಮಾಂಡ್ ಇಲ್ಲದೆ ಭಿನ್ನಮತೀಯ ಚಟುವಟಿಕೆ ಇಲ್ಲದೆ ರಾಜಕಾರಣದಲ್ಲಿ ಧೈರ್ಯದ ನಿರ್ಣಯ ಕೈಗೊಳ್ಳಲು ಅವಕಾಶವಿಟ್ಟುಕೊಂಡವರು. ಮಾಹಿತಿ ತಂತ್ರಜ್ಞಾನವೇ ಸರ್ವಸ್ವವೆಂದು ಭಾವಿಸಿರುವ ಎಸ್.ಎಂ. ಕೃಷ್ಣ ಅವರಿಗೆ ಗ್ರಾಮೀಣ ಸಮಸ್ಯೆಗಳು ಅಪರಿಚಿತ. ಹೋರಾಟ ಮನೋಭಾವವಿಲ್ಲದ ಅವರದು ಸೌಮ್ಯ ಸ್ವಭಾವ. ವ್ಯವಸ್ಥೆ ಮುಂದುವರಿಸಿಕೊಂಡು ಹೋಗಲು ಸಮರ್ಥರು. ಮೌಲ್ಯ ಹಾಗೂ ಸಂಪ್ರದಾಯಗಳಿಗೆ ಬೆಲೆ ಕೊಡುವ ಕೃಷ್ಣ ಇಂಗ್ಲೆಂಡ್ ಮಾದರಿ ಪ್ರಜಾಪ್ರಭುತ್ವವನ್ನೇ ಆದರ್ಶವೆಂದು ಭಾವಿಸಿದವರು.

## ನೆನಪಿನಲ್ಲಿಡಬಹುದಾದ ಸಚಿವರು

೧೯೫೭ರಿಂದ ೧೯೯೯ರ ವರೆಗೆ ಹದಿನಾರು ಮುಖ್ಯಮಂತ್ರಿಗಳ ಆಳ್ವಿಕೆಯಲ್ಲಿ ಅನೇಕ ಸಚಿವರು ತಮ್ಮ ಪ್ರಾಮಾಣಿಕತೆ, ಕ್ರಿಯಾಶೀಲ ಕೆಲಸ ಹಾಗೂ ಜನಪರ ಚಿಂತನೆಗಳಿಂದಾಗಿ ರಾಜ್ಯದ ರಾಜಕೀಯದಲ್ಲಿ ತಮ್ಮದೇ ಆದ ಸ್ಥಾನ ಗಳಿಸಿದ್ದಾರೆ. ಕಾಲ ಉರುಳಿದರೂ ಜನಮನದಲ್ಲಿ ಅವರುಗಳು ಶಾಶ್ವತವಾಗಿ ನಿಂತಿದ್ದಾರೆ. ಇಂತಹವರನ್ನೇ ಕುವೆಂಪು 'ನಿತ್ಯಸಚಿವರು' ಎಂದು ಕರೆದದ್ದು. ವಿಧಾನಸಭೆಯ ಕಾರ್ಯಕಲಾಪಗಳಲ್ಲಿ ಕ್ರಿಯಾತ್ಮಕವಾಗಿ ಪಾಲುಗೊಳ್ಳುವುದರ ಜೊತೆಗೆ ಅನೇಕ ರಚನಾತ್ಮಕ ಯೋಜನೆಗಳನ್ನು ಅನುಷ್ಠಾನ ಮಾಡಿದ ಕೀರ್ತಿಗೆ ಇವರು ಪಾತ್ರರಾಗಿದ್ದಾರೆ. ಬಹುಮಟ್ಟಿನ ಸಚಿವರು ಅಧಿಕಾರದ ಸಮಯದಲ್ಲಿ ತಮ್ಮ ಸಾರ್ವಜನಿಕ ಅನುಭವವನ್ನು ಸಮರ್ಪಕವಾಗಿ ಬೆಳೆಸಿಕೊಂಡಿದ್ದಾರೆ. ಆಯಾಯ ಕ್ಷೇತ್ರಗಳನ್ನು ಅಧ್ಯಯನ ಮಾಡುತ್ತಾ ಹೋದಾಗ ಇವರುಗಳು ಅತ್ಯಗತ್ಯವಾಗಿ ನೆನಪಿಗೆ ಬರುತ್ತಾರೆ. ಪ್ರಾಮಾಣಿಕತೆಯ ಬಗ್ಗೆ ಅಕ್ಕರೆಯುಳ್ಳ ಸ್ವಾತಂತ್ರ್ಯ ಹೋರಾಟಗಾರ ಟಿ. ಸಿದ್ದಲಿಂಗಯ್ಯ, ಶಿಕ್ಷಣ ಕ್ಷೇತ್ರಕ್ಕೆ ಹೊಸ ಆಯಾಮ ತಂದುಕೊಟ್ಟ ಎ.ಜಿ. ರಾಮಚಂದ್ರರಾವ್, ಕಾನೂನು ತಜ್ಞ ಕೆ.ಟಿ. ಭಾಷ್ಯಂ, ಸಂಘಟನಾ ಚತುರರಾದ ತಾಳಿಕೆರೆ ಸುಬ್ರಹ್ಮಣ್ಯಂ, ಕೊಡಗಿನ ಸಿ.ಎಂ. ಪೂಣಚ್ಚ ಪ್ರಾಮಾಣಿಕರಾದ ಅಣ್ಣಾರಾವ್ ಗುಣಮುಖಿ, ಗಾಂಧಿ ಪ್ರಣೀತ ಆರ್ಥಿಕ ನೀತಿ ಪ್ರತಿಪಾದಕರಾದ ಟಿ. ಮರಿಯಪ್ಪ, ಉತ್ತರ ಕರ್ನಾಟಕದ ನಾಯಕರಾದ ಪಿ.ಎಂ. ನಾಡಗೌಡ, ಬೆಳಗಾವಿ ಜಿಲ್ಲೆಯ ಎಚ್. ವಿ. ಕೌಜಲಗಿ, ಭೂ ಸುಧಾರಣೆಗೆ ನಾಂದಿ ಹಾಡಿದ ಕಡಿದಾಳು ಮಂಜಪ್ಪ, ಸರಳತೆಯ ಎಚ್. ಸಿದ್ಧಯ್ಯ, ಎಚ್.ಎಸ್. ರುದ್ರಪ್ಪ, ಕನ್ನಡಾಭಿಮಾನಿ ಎ.ಜೆ. ದೊಡ್ಡಮೇಟಿ, ಪಾನನಿರೋಧದ ಬಗ್ಗೆ ಅಪಾರ ಕಾಳಜಿಯುಳ್ಳ ಶ್ರೀಮತಿ ಯಶೋಧರಮ್ಮ ದಾಸಪ್ಪ, ರೈತರ ಹೋರಾಟಜನಕರಾದ ಎಚ್.ಕೆ. ವೀರಣ್ಣಗೌಡ, ಶಿಕ್ಷಣ ಸಚಿವ ಎಸ್.ಆರ್. ಕಂಠಿ, ಪ್ರಾಮಾಣಿಕರೆನಿಸಿದ್ದ ಕೆ.ಎಫ್. ಪಾಟೀಲ್, ಕನ್ನಡದ ಕೆಲಸದಲ್ಲಿ ಕಾಳಜಿಯಿದ್ದ ಆದರ್ಶ ಶಿಕ್ಷಣ ಸಚಿವ ಕೆ.ವಿ. ಶಂಕರಗೌಡ, ಆಡಳಿತದಲ್ಲಿ ಜಾಣ್ಮೆ ಹೊಂದಿದ ಮಹಮ್ಮದ್ ಅಲಿ, ನೀರಾವರಿ ತಜ್ಞ ಹೆಚ್.ಎಂ. ಚನ್ನಬಸಪ್ಪ, ಸಜ್ಜನ ಮಾಲಿ ಮರಿಯಪ್ಪ, ಸಾಮಾಜಿಕ ನ್ಯಾಯದ ನೇತಾರ ಪ್ರೊ। ಎಲ್.ಜಿ. ಹಾವನೂರು, ದಲಿತರ ಬಗ್ಗೆ ಅಪಾರ ಕಾಳಜಿಯುಳ್ಳ ಬಿ. ಬಸವಲಿಂಗಪ್ಪ, ದಕ್ಷ ಆಡಳಿತಗಾರ ಎಚ್. ಸಿದ್ಧವೀರಪ್ಪ, ಕಾರ್ಮಿಕ ಖಾತೆಗೆ ಹೊಸ ರೂಪ ಕೊಟ್ಟ ಎಸ್. ರಾಮುಲು, ದೀರ್ಘ ಕಾಲದ ರಾಜಕೀಯ 'ಸಾಧನೆ'ಯಿಂದ ದಲಿತರ ಬಗ್ಗೆ ಆಸಕ್ತರಾದ ಬಿ. ರಾಚಯ್ಯ, ಸಂಪನ್ಮೂಲ ಕ್ರೋಢೀಕರಣದಲ್ಲಿ ದಕ್ಷರಾದ ಎಂ. ರಾಜಶೇಖರಮೂರ್ತಿ, ಪಂಚಾಯತ್‌ರಾಜ್ ಬಗ್ಗೆ ನಿಷ್ಠೆಯುಳ್ಳ ಎಂ.ವೈ. ಘೋರ್ಪಡೆ, ಸಾಂಸ್ಕೃತಿಕ ವಿಚಾರಗಳಲ್ಲಿ ಎಂ.ಪಿ. ಪ್ರಕಾಶ್, ಸಾರ್ವಜನಿಕ ಶಿಕ್ಷಣ ಇಲಾಖೆಗೆ ಹೊಸರೂಪ ಕೊಟ್ಟ ಎಚ್. ಜಿ. ಗೋವಿಂದಗೌಡ, ನೀರುಸಾಬ್ ಎಂದೇ ಖ್ಯಾತರಾದ ನಜೀರ್‌ಸಾಬ್, ಕಾನೂನು ಮಂತ್ರಿಗಳಿಗೆ ಸಮರ್ಪಕರಾದ ಪ್ರೊ। ಲಕ್ಷ್ಮೀಸಾಗರ್, ಸಂಸ್ಕೃತಿ ಹಾಗೂ ಯುವಜನಸೇವೆಗೆ ಹೊಸರೂಪ ಕೊಟ್ಟ ಡಾ। ಜೀವರಾಜ ಆಳ್ವ, ತಮ್ಮ ಕ್ಷೇತ್ರದ ಅಭಿವೃದ್ಧಿ ಕೆಲಸಗಳ ಬಗ್ಗೆ ಆಸಕ್ತರಾದ ಪಿ.ಜಿ.ಆರ್. ಸಿಂಧ್ಯಾ ಹಾಗೂ ಆರ್.ವಿ. ದೇಶಪಾಂಡೆ.

## ವಿರೋಧಪಕ್ಷದ ಪಾತ್ರ

'ರಾಜ್ಯದ ವ್ಯವಹಾರಗಳನ್ನು ಕುರಿತು ನನಗೇನು ಎಂದು ಜನತೆ ಹೇಳಲಾರಂಭಿಸಿದರೆ ಆ ರಾಜ್ಯಕ್ಕೆ ಭವಿಷ್ಯ ಇಲ್ಲ' ಎಂದು ರೂಸೋ ಹೇಳುತ್ತಾನೆ. ರಾಜಕಾರಣದಲ್ಲಿ ಜನ ಭಾಗವಹಿಸದಂತೆ ಮಾಡಲು ಅಧಿಕಾರಶಾಹಿ ಹಾಗೂ ಆಡಳಿತ ಪಕ್ಷದವರು ಸಂಚು ಹೂಡುತ್ತಾರೆ. 'ಮುಚ್ಚಿಟ್ಟ' ಆಡಳಿತವೇ ಅವರ ಗುರಿಯಾಗಿರುತ್ತದೆ. ಪ್ರಜಾಪ್ರಭುತ್ವದಲ್ಲಿ ಪತ್ರಿಕೆ ಹಾಗೂ ವಿರೋಧ ಪಕ್ಷಗಳು ಜನರನ್ನು ಪ್ರಚೋದಿಸಬೇಕು. ಅವರು ಆಡಳಿತದಲ್ಲಿ ಪಾಲುಗೊಳ್ಳಲು ಬೇಕಾದ ರಾಜಕೀಯ ಶಿಕ್ಷಣವನ್ನು ಜನತೆಗೆ ವಿರೋಧ ಪಕ್ಷವೇ ನೀಡಬೇಕು.

ವಿರೋಧ ಪಕ್ಷಗಳಿಗೆ ಸಾಕಷ್ಟು ಸಾಮಗ್ರಿ ಒದಗಿಸಲು ಆಡಳಿತ ಪಕ್ಷಗಳು ಸಿದ್ಧವಾಗಿರುತ್ತವೆ. ಅದನ್ನು ಡಿ.ಎಚ್. ಲಾರೆನ್ಸ್ ಹೀಗೆ ಸಮರ್ಥಿಸುತ್ತಾರೆ. 'ವಿಶಾಲ ವ್ಯಾಪ್ತಿಯ ಆರ್ಥಿಕ ಹಗರಣವೇ ರಾಜಕೀಯ'. ಎಲ್ಲಾ ಕಾಲದ ಸರ್ಕಾರಗಳಲ್ಲೂ ಇವು ದೊರಕಿಯೇ ದೊರಕುತ್ತವೆ. ಕೆಂಗಲ್ ಹನುಮಂತಯ್ಯನವರ ಕಾಲದಲ್ಲಿ ಅವರ ತಮ್ಮ ನಂಜಪ್ಪ ಅವರ ಮಟ್ಟೆದೊಡ್ಡಿ ಭೂಹಗರಣ. ಎಸ್. ನಿಜಲಿಂಗಪ್ಪ ಕಾಲದ ಶರಾವತಿ ಕರ್ಮಕಾಂಡ, ಡಿ. ದೇವರಾಜ ಅರಸು ಕಾಲದಲ್ಲಿ ಅಳಿಯ ಎಂ.ಡಿ. ನಟರಾಜ್ ಭೂ ಹಗರಣ, ರಾಮಕೃಷ್ಣ ಹೆಗಡೆ ಅವರ ಬಾಟ್ಲಿಂಗ್ ಅಥವಾ ರೇವಜಿತು ಪ್ರಕರಣ, ಬಂಗಾರಪ್ಪ ಕಾಲದ ಕ್ಲಾಸಿಕ್ ಕಂಪ್ಯೂಟರ್, ಮೊಯಿಲಿ ಕಾಲದ ಜೆ.ಎಂ.ಎಂ. ಪ್ರಕರಣ, ದೇವೇಗೌಡ ಅವರ ಕೃಷ್ಣಾ ಮೇಲ್ದಂಡೆಯ ತುಂಡುಗುತ್ತಿಗೆ ಕಾಮಗಾರಿ ಮೊದಲಾದ ಹತ್ತಾರು ಹಗರಣಗಳು ರಾಜ್ಯದ ಜನತೆಗೆ ಚಿರಪರಿಚಿತವಾಗಿದ್ದರೆ ಅದಕ್ಕೆ ವಿರೋಧ ಪಕ್ಷಗಳ ಕ್ರಿಯಾಶೀಲತೆಯೇ ಕಾರಣವಾಗಿದೆ. ಆ ಆರೋಪಗಳಲ್ಲಿ ಹುರುಳಿಲ್ಲವೆಂದು ಸಾಬೀತಾದರೂ ಅದನ್ನು ರಾಜಕೀಯವಾಗಿ ಬಳಸಿಕೊಳ್ಳಲು ಆಯಾಯ ಕಾಲದ ವಿರೋಧ ಪಕ್ಷಗಳು ಮುಂತಾಗುತ್ತವೆ. ಆಡಳಿತದ ವಿರುದ್ಧ ಜನರನ್ನು ಕೆರಳಿಸುವುದು ವಿರೋಧ ಪಕ್ಷಗಳ ಗುರಿಯಾದರೂ ಇದರಿಂದ ಸಾರ್ವಜನಿಕರಿಗೆ ದೊರೆಯುವ ಶಿಕ್ಷಣ, ಜಾಗೃತಿ ಸಾಮಾನ್ಯ ಸಂಗತಿಯಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಮಹಾತ್ಮ ಗಾಂಧೀಜಿ ಆ ಕಾಲದ ಜನಸಾಮಾನ್ಯರಿಗೆ ನೀಡಿದ ರಾಜಕೀಯ ಶಿಕ್ಷಣ ಸಹ ಇಂತಹುದೇ. ೧೯೭೫ರಲ್ಲಿ ಆಡಳಿತ ಕಾಂಗ್ರೆಸ್ ಪಕ್ಷ ತುರ್ತು ಪರಿಸ್ಥಿತಿ ಹೇರಿದಾಗ ಹಿಂದಿನ ವಿರೋಧ ಪಕ್ಷಗಳು ಜನತೆಗೆ ಪ್ರಜಾಪ್ರಭುತ್ವ ಮೌಲ್ಯದ ರಕ್ಷಣೆಯ ಬಗ್ಗೆ ಅಗತ್ಯ ತಿಳುವಳಿಕೆ ನೀಡಿದವು. ಇಂತಹ ರಾಜಕೀಯ ಶಿಕ್ಷಣ ದೊರೆತ ಕಾರಣಕ್ಕಾಗಿಯೇ ಭಾರತದಲ್ಲಿ ಮತದಾನದ ಮೂಲಕ ರಕ್ತರಹಿತ ಕ್ರಾಂತಿ ನಡೆಯಲು ಸಾಧ್ಯವಾಯಿತು. ಚರ್ಚಿಲ್ ಹೇಳುವಂತೆ 'ವಿರೋಧ ಪಕ್ಷ ಕ್ರಿಯಾಶೀಲವಾಗಿರದಿದ್ದರೆ ಪ್ರಜಾಪ್ರಭುತ್ವ ವ್ಯವಸ್ಥೆಯೇ ಒಮ್ಮೊಮ್ಮೆ ತಟಸ್ಥವಾಗಬಹುದು.'

ಜವಹರಲಾಲ ನೆಹರು ಕಾಲದಲ್ಲಿ ಡಾ। ರಾಮ ಮನೋಹರ ಲೋಹಿಯಾ, ಡಾ। ಶ್ಯಾಮಾನಂದ ಪ್ರಸಾದ್ ಮುಖರ್ಜಿ, ಜೆ.ಬಿ. ಕೃಪಲಾನಿ, ಜಗನ್ನಾಥರಾವ್ ಜೋಷಿ, ಶ್ರೀಮತಿ ಇಂದಿರಾಗಾಂಧಿ ಕಾಲದಲ್ಲಿ ಎ. ಬಿ. ವಾಜಪೇಯಿ, ಎಲ್.ಕೆ. ಆಡ್ವಾನಿ, ಪ್ರೊ। ಮಧು ದಂಡವತೆ, ಪಿಲೂಮೋದಿ, ಚರಣಸಿಂಗ್, ರಾಜನಾರಾಯಣ್, ಸಮರಗುಹಾ, ನಾನಾಜಿ ದೇಶಮುಖ್, ಜಾರ್ಜ್ ಫರ್ನಾಂಡಿಸ್, ಎನ್.ಜಿ. ಗೋರೆ, ಸಿ.ಎನ್. ಅಣ್ಣಾದೊರೈ, ಸೋಮನಾಥ ಚಟರ್ಜಿ ಮುಂತಾದ ಹಿರಿಯ ವಿರೋಧಪಕ್ಷದ ನಾಯಕರು ಭಾರತದ ರಾಜಕಾರಣದಲ್ಲಿ ತಮ್ಮದೇ ಆದ ಪ್ರಭಾವ ಬೀರಿದ್ದಾರೆ.

ಪ್ರಜಾಪ್ರತಿನಿಧಿ ಸಭೆಯ ಪ್ರಭಾವದಿಂದ ರಾಜ್ಯದಲ್ಲಿ ಅನೇಕ ವಿರೋಧ ಪಕ್ಷದ ನಾಯಕರು ಮೂಡಿಬಂದಿದ್ದಾರೆ. ಜಗಳೂರಿನ ಜೆ.ಎಂ. ಇಮಾಂ, ಕೆ. ಕೆಂಚಪ್ಪ, ಮೈಸೂರು ಜಿಲ್ಲೆಯ ಎನ್. ಶ್ರೀನಿವಾಸ ಅಯ್ಯಂಗಾರ್, ಜೆ.ಬಿ. ಮಲ್ಲಾರಾಧ್ಯ, ಶಾಂತವೇರಿ ಗೋಪಾಲಗೌಡ, ಬಹಳ ಹಿಂದೆ ರಾಜ್ಯದಲ್ಲಿ ಜನತಾ ಪಕ್ಷ ಸ್ಥಾಪಿಸಿದ ಸಾಹುಕಾರ್ ಚನ್ನಯ್ಯ, ಮುಲ್ಕಾ ಗೋವಿಂದರೆಡ್ಡಿ, ಬಿ.ಕೆ. ಪುಟ್ಟರಾಮಯ್ಯ, ಎಚ್. ಎನ್. ನಂಜೇಗೌಡ, ಎಸ್. ಶಿವಪ್ಪ, ಸಿ.ಎಂ. ರೇವಣಸಿದ್ಧಯ್ಯ, ಎಂ.ಪಿ. ಈಶ್ವರಪ್ಪ, ಸಿ.ಜೆ. ಮುಕ್ಕಣ್ಣಪ್ಪ ಎಂ. ಎಸ್. ಕೃಷ್ಣನ್, ರಾಮಕೃಷ್ಣ ಹೆಗಡೆ, ಎಚ್.ಡಿ. ದೇವೇಗೌಡ, ಎಸ್.ಆರ್. ಬೊಮ್ಮಾಯಿ, ಎಚ್. ಸಿದ್ದವೀರಪ್ಪ, ಬಿ. ಹುಚ್ಚೇಗೌಡ, ಪ್ರೊ। ಎ. ಲಕ್ಷ್ಮೀಸಾಗರ್, ಕೆ. ಎಚ್. ಪಾಟೀಲ್, ಕಾಗೋಡು ತಿಮ್ಮಪ್ಪ, ಮುಳ್ಳೂರು ಆನಂದರಾವ್, ಪದ್ಮಾವತಿ ವಿಠಲರಾವ್, ಕೋಣಂದೂರು ಲಿಂಗಪ್ಪ, ಎ.ಕೆ. ಸುಬ್ಬಯ್ಯ, ವೀರಪ್ಪ ಮೊಯಿಲಿ, ಎಸ್. ಬಂಗಾರಪ್ಪ, ಕೆ.ಎಸ್. ನಾಗರತ್ನಮ್ಮ, ಟಿ. ಎನ್. ನರಸಿಂಹಮೂರ್ತಿ, ಎಂ. ಸಿ. ನಾಣಯ್ಯ, ಡಿ.ಬಿ. ಚಂದ್ರೇಗೌಡ, ಪಂಪಾಪತಿ, ಮಲ್ಲಿಕಾರ್ಜುನ ಖರ್ಗೆ, ಎಚ್. ಕೆ. ಪಾಟೀಲ್, ಬಿ.ಎಸ್. ಯಡಿಯೂರಪ್ಪ, ಬಾಬಾಗೌಡ ಪಾಟೀಲ, ಕೆ.ಎಚ್. ಶ್ರೀನಿವಾಸ್, ಎಸ್. ಚನ್ನಬಸವಯ್ಯ, ಪ್ರೊ। ಎಂ.ಡಿ. ನಂಜುಂಡಸ್ವಾಮಿ, ಜಗದೀಶ್ ಶೆಟ್ಟರ್, ಡಿ. ಎಚ್. ಶಂಕರಮೂರ್ತಿ, ಪ್ರಮೀಳಾ ನೇಸರ್ಗಿ, ಶ್ರೀರಾಮರೆಡ್ಡಿ, ಜಿ.ಎನ್. ಪುಟ್ಟಣ್ಣಯ್ಯ, ವಾಟಾಳ್ ನಾಗರಾಜ್, ಎಸ್. ಸುರೇಶ್‌ಕುಮಾರ್ ಮೊದಲಾದ ವಿರೋಧಿ ನಾಯಕರು ರಾಜ್ಯ ರಾಜಕಾರಣವನ್ನು ಸಕಾರಾತ್ಮಕವಾಗಿ ಮುನ್ನಡೆಸಿದ್ದಾರೆ.

## ಸದನದ ಸತ್ಪರಂಪರೆ

ದೇಶದ ಸತ್ಪರಂಪರೆಯನ್ನು ಪಾಲಿಸಿದ ವಿಧಾನಸಭೆಯ ಅಧ್ಯಕ್ಷರು ಹಾಗೂ ವಿಧಾನ ಪರಿಷತ್ತಿನ ಸಭಾಪತಿಗಳು ಈ ರಾಜ್ಯದಲ್ಲಿದ್ದಾರೆ. ಎಚ್. ಸಿದ್ಧಯ್ಯ, ಎಚ್.ಎಸ್. ರುದ್ರಪ್ಪ, ಕೆ.ಎಚ್. ರಂಗನಾಥ್, ವೈಕುಂಠ ಬಾಳಿಗ, ಕೆ.ಎಸ್. ನಾಗರತ್ನಮ್ಮ, ಬಿ.ಜಿ. ಬಣಕಾರ್ ಎಸ್.ಎಂ. ಕೃಷ್ಣ ರಮೇಶ್‌ಕುಮಾರ್, ಎಂ. ವಿ. ವೆಂಕಟಪ್ಪ ಮೊದಲಾವದವರು ವಿಧಾನಸಭೆಯ ಕಾರ್ಯಕಲಾಪಗಳನ್ನು ಸನ್ಮಾರ್ಗದಲ್ಲಿ ನಡೆಸಿದ್ದಾರೆ. ಕೆ.ಟಿ. ಭಾಷ್ಯಂ, ಜಿ.ವಿ. ಹಳ್ಳಿಕೇರಿ, ವಿ. ವೆಂಕಟಪ್ಪ ಕೆ.ವಿ. ನರಸಯ್ಯ, ಎಸ್. ಡಿ. ಗಾಂವಕರ್, ರಾಮರಾವು ಪೋತೆದಾರ್ ಕೆ. ರೆಹಮಾನ್‌ಖಾನ್, ಬಸವ ರಾಜೇಶ್ವರಿ, ಎಸ್. ಶಿವಪ್ಪ, ಡಿ. ಮಂಜುನಾಥ್, ಡಿ. ಬಿ. ಕಲ್ಮಣಕರ್, ಬಿ.ಎಲ್. ಶಂಕರ

ಮುಂತಾದವರು ವಿಧಾನಪರಿಷತ್ತಿನ ಸಭಾಪತಿಗಳಾಗಿ ಅತ್ಯುತ್ತಮ ರೀತಿಯಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಈ ಎರಡೂ ಸದನಗಳು ಸಾಮಾನ್ಯವಾಗಿ ಬಹುಜನರ ಹಿತದೃಷ್ಟಿಯಿಂದಲೇ ಕೆಲಸ ಮಾಡಿವೆ ಹಾಗೂ ಪ್ರಜಾಪ್ರಭುತ್ವ ವ್ಯವಸ್ಥೆಗೆ ಪೂರಕವಾಗಿ ದುಡಿದಿವೆ.

**ಸಾಂಸ್ಕೃತಿಕ ಲೋಕದ ಕೊಡುಗೆ**

ಪ್ರಜಾಪ್ರಭುತ್ವದ ನಾಲ್ಕನೆಯ ಅಂಗ ಪತ್ರಿಕೆಗಳೆಂದೇ ಖ್ಯಾತವಾಗಿವೆ. ವಿರೋಧ ಪಕ್ಷಗಳು ನಿದ್ರೆ ಮಾಡಿದಾಗಲೂ ಪತ್ರಿಕೆಗಳು ಮೈಮರೆತಿಲ್ಲ. ''ಆಡಳಿತ ಎಂಬ ರಥದ ಎರಡು ಗಾಲಿಗಳು ಶಾಸಕಾಂಗ ಹಾಗೂ ಕಾರ್ಯಾಂಗ. ಅದು ಹಳಿ ತಪ್ಪಿದಾಗ ಸರಿ ದಾರಿಗೆ ತರುವ ಜವಾಬ್ದಾರಿಯನ್ನು ಪತ್ರಿಕಾರಂಗ ಹೊರಬೇಕೆಂಬ'' ಡಾ। ಬಾಬು ರಾಜೇಂದ್ರ ಪ್ರಸಾದ್ ಅವರ ಮಾತು ಉಲ್ಲೇಖಾರ್ಹವಾಗಿದ್ದು. ಆದರಂತೆ, ಜನಪ್ರತಿನಿಧಿಗಳಿಗೆ ಮಾರ್ಗದರ್ಶನ ನೀಡಿ ಮೌಲ್ಯಗಳ ಅನುಷ್ಠಾನಕ್ಕೆ ಪ್ರಾಮಾಣಿಕ ಪ್ರಯತ್ನ ನಡೆಸಿದ ಹಿರಿಯ ಪತ್ರಕರ್ತರು ಈ ರಾಜ್ಯದಲ್ಲಿದ್ದಾರೆ. ಪತ್ರಿಕೆಯ ಜೊತೆ ಸಾಹಿತ್ಯ, ಸಂಗೀತ, ನೃತ್ಯ, ಜಾನಪದ, ಕಲೆ ಮೊದಲಾದ ಪ್ರಕಾರಗಳಲ್ಲೂ ಕೆಲಸ ಮಾಡಿದ ಅನೇಕ ಮಹನೀಯರು ರಾಜಕೀಯವಾಗಿ ಜನಜಾಗೃತಿ ಮೂಡಿಸಿದ್ದಾರೆ. ಮಹಾನ್ ಕ್ರಾಂತಿಕಾರಿ ಬಸವಣ್ಣ ಹೇಳುವಂತೆ ಸಾಂಸ್ಕೃತಿಕ ಕ್ಷೇತ್ರದ ದಿಗ್ಗಜರುಗಳಾದ ಇವರು ನ್ಯಾಯ ನಿಷ್ಠುರಿಗಳಾದರೂ ದಾಕ್ಷಿಣ್ಯ ಪರರಲ್ಲ. ನಮ್ಮ ಕನ್ನಡದ ಆದಿಕವಿ ಪಂಪನೇ ಅರಿಕೇಸರಿಯ ಆಸ್ಥಾನದಲ್ಲಿ ಕುಳಿತು ರಾಜತ್ವವನ್ನು ವಿಮರ್ಶೆಗೆ ಒಡ್ಡುತ್ತಾನೆ. ವಚನಕಾರರಂತೂ ರಾಜನ ಬಗ್ಗೆ ಸಾಕಷ್ಟು ಕಟುವಾಗಿ ಟೀಕೆ ಮಾಡಿದ್ದಾರೆ. ಹರಿದಾಸರು ಇಂತಹ ಪರಂಪರೆ ಮುಂದುವರೆಸಿದ್ದಾರೆ. ನಮ್ಮ ಜನಪದ ಸಾಹಿತ್ಯದಲ್ಲಂತೂ ವ್ಯವಸ್ಥೆ ಹಾಗೂ ರಾಜಪ್ರಭುತ್ವವನ್ನು ಕಟುವಾಗಿ ವಿಮರ್ಶಿಸಿದ ನಿದರ್ಶನಗಳಿವೆ. 'ಉಂಡು ಪಟ್ಟಿರ್ಪನಣಮೆ ನಿರುದ್ಯೋಗಿಯಂ ಭೂಪನೆಂಬರ್' (ಪಂ.ಭಾ. ೪ನೆಯ ಆಶ್ವಾಸ, ಪದ್ಯ ೧೧) 'ಉಂಡು ಮಲಗಿರುವ ನಿರುದ್ಯೋಗಿಯನ್ನು ರಾಜ ಎನ್ನುತ್ತಾರೆ.' ಎನ್ನುವ ಪಂಪನ ಧೈರ್ಯವನ್ನು ಮೆಚ್ಚದವರಾರು? 'ಅರಸು ರಾಕ್ಷಸ ಮಂತ್ರಿ ಮೊರೆವ ಹುಲಿ' ಎನ್ನುವ ಕುಮಾರವ್ಯಾಸ ಕವಿಗಳು ನಿರಂಕುಶಮತಿಗಳು ಎಂದು ಸಾರಿ ಹೇಳುತ್ತಾನೆ.

**ಸಾಹಿತ್ಯ**

೧೯ನೆಯ ಶತಮಾನದಲ್ಲಿ ದೇಶದ ಸ್ವಾತಂತ್ರ್ಯ ಹಾಗೂ ರಾಜ್ಯದ ಏಕೀಕರಣ ಚಳವಳಿಗಳು ಒಟ್ಟೊಟ್ಟಿಗೆ ಜರುಗಿದವು. ಬ್ರಿಟಿಷರ ದಾಸ್ಯದ ವಿರುದ್ಧ ಬಹುದೊಡ್ಡ ಅಸಮಾಧಾನವನ್ನು ಕಾವ್ಯದಲ್ಲಿ ಸೆರೆ ಹಿಡಿಯಲಾಗಿದೆ. ಬಂಕಿಮ ಚಂದ್ರ ಅವರ - 'ಆನಂದಮಠ' ಕಾದಂಬರಿಯನ್ನು ಬಿ. ವೆಂಕಟಾಚಾರ್ಯ ಅವರು ಅನುವಾದ ಮಾಡಿದರು. ಗಳಗನಾಥ ಕಾದಂಬರಿಗಳೂ ಸಹ ಕರ್ನಾಟಕದ ವೈಭವವನ್ನು ಓದುಗರಿಗೆ ಮುಟ್ಟಿಸಿದವು. ಆಲೂರ ವೆಂಕಟರಾಯರ ಬರಹಗಳು ಬಾಲಗಂಗಾಧರ ತಿಲಕ ಅವರಿಂದ ಪ್ರೇರಣೆ ಪಡೆದಿದ್ದವು. ರಾಷ್ಟ್ರಕವಿ ಕುವೆಂಪು ಅವರು ಸ್ವಾತಂತ್ರ್ಯ ಹೋರಾಟ ಹಾಗೂ ಏಕೀಕರಣಕ್ಕೆ ತಮ್ಮ ಸಾಹಿತ್ಯ ಸೃಷ್ಟಿಯಲ್ಲಿ ಸೂಕ್ತ ಸ್ಥಾನ ನೀಡಿದ್ದರು. ಅವರು ಆಗ ಮಾಡಿದ ಭಾಷಣ ಸ್ವಾತಂತ್ರ್ಯ ಹೋರಾಟಗಾರರಿಗೆ ಮತ್ತು ಆ ಕಾಲದ ಯುವಕ-ಯುವತಿಯರಿಗೆ ಸ್ಫೂರ್ತಿ ನೀಡುತ್ತಿದ್ದವು. 'ಕಷ್ಟವಿದ್ದರೂ ಸರಿಯೆ ಇರಲಿ ಸ್ವಾತಂತ್ರ್ಯ ಸುಖವಿದ್ದರೂ ಹೀನವೈ ಪರತಂತ್ರ' ಎನ್ನುವ ಕುವೆಂಪು ಮಹಾತ್ಮ ಗಾಂಧೀಜಿ ಹಾಗೂ ಸರ್ವೋದಯ ತತ್ವಗಳಿಗೆ ತಮ್ಮನ್ನು ತೆತ್ತುಕೊಂಡಿದ್ದಾರೆ. ೧೯೪೭ರಲ್ಲಿ ಕುವೆಂಪು ಅವರು ಏಕೀಕರಣದ ಅಗತ್ಯವನ್ನು ಹೇಳಿದಾಗ ಸ್ವಾತಂತ್ರ್ಯಾನಂತರ ಬಂದ ಕೆ.ಸಿ. ರೆಡ್ಡಿ ಸರ್ಕಾರ ಅವರಿಗೆ ನೋಟಿಸ್ ಕೊಟ್ಟಿತು. ಕುವೆಂಪು 'ಅಖಂಡ ಕರ್ನಾಟಕ' ಎಂಬ ಕವಿತೆ ಬರೆದು ಅವರಿಗೆ ಉತ್ತರ ಕೊಟ್ಟರು. ಏಕೀಕರಣವಾದ ಮೇಲೂ ಭಾಷೆ, ಶಿಕ್ಷಣ ಹಾಗೂ ಸಂಸ್ಕೃತಿ ವಿಚಾರ ಬಂದಾಗ ಯಾರ ಮುಲಾಜಿಗೂ ಒಳಗಾಗುತ್ತಿರಲಿಲ್ಲ. ದೇಶದ ಎರಡನೆಯ ಸ್ವಾತಂತ್ರ ಸಂಗ್ರಾಮದ ಸಂದರ್ಭದಲ್ಲಿ ಕುವೆಂಪು ಜೈಲಿಗೆ ಹೋಗಿರಲಿಲ್ಲ. ಆದರೆ ಬೆಂಗಳೂರು ವಿಶ್ವವಿದ್ಯಾಲಯದ ಘಟಕೋತ್ಸವ ಸಂದರ್ಭದಲ್ಲಿ ಅವರು ಮಾಡಿದ ಭಾಷಣ, ಲೋಕನಾಯಕ ಜಯಪ್ರಕಾಶ ನಾರಾಯಣರ ಗಮನ ಸೆಳೆಯಿತು. ಜೆ.ಪಿ.ಯಂತೆ ಇತರ ನಾಯಕರನ್ನು ಅವರೆಂದೂ ಒಪ್ಪಲೇ ಇಲ್ಲ.

ಕುವೆಂಪು ಅವರ ಪ್ರಿಯ ಶಿಷ್ಯರಾದ ಡಾ। ದೇಜಗೌ.ನಾಡು ನುಡಿಗಳ ವಿಚಾರ ಬಂದಾಗ ತಮ್ಮೆಲ್ಲಾ ಹಿತಾಸಕ್ತಿ ಮರೆತು ಸ್ಫೋಟಗೊಳ್ಳುತ್ತಾರೆ. ೧೯೭೮ರ ಜೂನ್ ತಿಂಗಳಲ್ಲಿ ಮಾತನಾಡುತ್ತಾ ಡಾ। ದೇಜಗೌ 'ನಮ್ಮ ರಾಜ್ಯದ ನಾಯಕರು ಆಕೆ ಒಂದು ವಾರ ಕಳಚಿದ ಸೀರೆಯನ್ನು ಮಡಿಮಾಡಿ ಬರಲು ಹೋಗ್ತಾರೆ, ಯಾರಿಗೂ ದೆಹಲಿಯ ಪ್ರಭುಗಳನ್ನು ವಿರೋಧಿಸಿ ಮಾತನಾಡೋ ಧೈರ್ಯವಿಲ್ಲ. ಅದಕ್ಕಾಗಿ ಕರ್ನಾಟಕ ದೆಹಲಿ ಸಾಮ್ರಾಟರ ಸಾಮಂತ ರಾಜ್ಯವಾಗಿದೆ.' ಎಂದು ಗುಡುಗಿದ್ದಾರೆ. ಇದೇ ಸಂಪ್ರದಾಯಕ್ಕೆ ಸೇರಿದವರು ಹಾ.ಮಾ. ನಾಯಕ, ಗೋಪಾಲಕೃಷ್ಣ ಅಡಿಗ, ಮ. ರಾಮಮೂರ್ತಿ, ಡಾ। ಅನಕೃ, ದಿನಕರ ದೇಸಾಯಿ, ಪಾಟೀಲ ಪುಟ್ಟಪ್ಪ, ತರಾಸು, ಕಟ್ಟೀಮನಿ ಹಾಗೂ ಎಂ. ಚಿದಾನಂದಮೂರ್ತಿ. ಅವರಲ್ಲಿ ಕೆಲವರು ಯಾವುದೇ ಸರ್ಕಾರಿ ಸೇವೆಯಲ್ಲಿದ್ದರೂ ಯಾವುದಕ್ಕೂ ಹೆದರದೆ ಮುಕ್ತವಾಗಿ ಮಾತನಾಡಿದ್ದಾರೆ.

ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ಕಡಲತಡಿಯ ಭಾರ್ಗವ ಎಂದು ಖ್ಯಾತರಾದ ಡಾ। ಶಿವರಾಮ ಕಾರಂತ ತಮಗೆ ಹಿಂದಿನ ಸರ್ಕಾರ ಕೊಟ್ಟಿದ್ದ ಪದ್ಮಭೂಷಣ ಪ್ರಶಸ್ತಿಯನ್ನು ಹಿಂದಿರುಗಿಸಿ ತುರ್ತು ಪರಿಸ್ಥಿತಿಯನ್ನು ಕಟು ಶಬ್ದಗಳಲ್ಲಿ ಟೀಕಿಸಿದರು. ಡಾ। ಯು.ಆರ್. ಅನಂತಮೂರ್ತಿ ತುರ್ತು ಪರಿಸ್ಥಿತಿಯಲ್ಲಿ ನೊಂದ ಸಮಾಜಸೇವಕಿ ಸ್ನೇಹಲತಾ ರೆಡ್ಡಿ ಅವರಿಗೆ ಆಶ್ರಯ ಕೊಟ್ಟಿದ್ದರು. ಕೆ.ಪಿ. ಪೂರ್ಣಚಂದ್ರ ತೇಜಸ್ವಿ, ಕೆ. ರಾಮದಾಸ್, ಕೆ.ವಿ. ಸುಬ್ಬಣ್ಣ ಬಿ.ವಿ. ವೀರಭದ್ರಪ್ಪ ಅವರನ್ನು ಮರೆಯುವಂತಿಲ್ಲ. ಬಂಡಾಯ ಸಾಹಿತ್ಯದ ಪ್ರವರ್ತಕರಾದ ಪ್ರೊ। ಚಂಪಾ, ಪ್ರೊ। ಬರಗೂರು ರಾಮಚಂದ್ರಪ್ಪ ಮೊದಲಾದವರು ಕಾಂಗ್ರೆಸ್‌ನ ಆಡಳಿತದ ವಿರುದ್ಧ ಮಾತನಾಡಿದ್ದುಂಟು. ದಲಿತರ ಜಾಗೃತಿ ಮೂಡಿಸಲು ಕಾರಣರಾದ ದೇವನೂರು ಮಹಾದೇವ, ಪ್ರೊ। ಬಿ. ಕೃಷ್ಣಪ್ಪ, ದೇವಯ್ಯ ಹರವೆ, ಕವಿ ಸಿದ್ಧಲಿಂಗಯ್ಯನವರ ಪ್ರಭಾವವನ್ನು ಗುರುತಿಸಬೇಕು. ೧೯೮೦-೮೩ರ ವರೆಗೆ ಅಧಿಕಾರದಲ್ಲಿದ್ದ ಆರ್. ಗುಂಡೂರಾವ್ ನೇತೃತ್ವದ ಕಾಂಗ್ರೆಸ್ ಸರ್ಕಾರವನ್ನು ಬರಹಗಾರರು ಚೆನ್ನಾಗಿ ತರಾಟೆ ತೆಗೆದುಕೊಂಡಿದ್ದರು. ಅದರಲ್ಲೂ ಗೋಕಾಕ್ ಚಳವಳಿ ಸಂದರ್ಭದಲ್ಲಿ ಕನ್ನಡ ಸಾಹಿತಿಗಳು ಸಂಘಟನಾತ್ಮಕ ಹೋರಾಟ ನಡೆಸಿದ್ದರು.

## ನಾಟಕ

ನಾಟಕ ಕ್ಷೇತ್ರ ಜನರಿಗೆ ರಾಜಕೀಯ ಅರಿವು ಮೂಡಿಸಲು ಸಾಕಷ್ಟು ಶ್ರಮಿಸಿದೆ. ಪೀರಸಾಬ್‌ರಂತಹ ಮಹಾನ್ ದೇಶಭಕ್ತರು ಕನ್ನಡ ನಾಟಕ ಕ್ಷೇತ್ರದಲ್ಲಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ಪೌರಾಣಿಕ ನಾಟಕಗಳಲ್ಲೂ ಸ್ವಾತಂತ್ರ್ಯದ ಸಂದೇಶ ಸಾರಲಾಗಿತ್ತು. ಸಾಮಾಜಿಕ ನಾಯಕರುಗಳಲ್ಲಂತೂ ಸ್ವಾತಂತ್ರ್ಯ ಸಂದೇಶ ಯಥೇಚ್ಛವಾಗಿತ್ತು. ಸಾಮಾಜಿಕ ನಾಟಕಗಳಲ್ಲಿ ಅದರಲ್ಲೂ ಟಿ.ಪಿ. ಕೈಲಾಸಂ, ಪರ್ವತವಾಣಿ ಮೊದಲಾದ ನಾಟಕದ ಕರ್ತೃಗಳು ಸ್ವಾತಂತ್ರ್ಯದ ಅಗತ್ಯವನ್ನು ಸಮರ್ಥವಾಗಿ ಪ್ರತಿಬಿಂಬಿಸಿದ್ದಾರೆ. ೧೯೭೦ರಲ್ಲಿ ಕನ್ನಡ ನಾಟಕ ಮತ್ತಷ್ಟು ಹೊಸತನ ಪಡೆಯಿತು. ೧೯೮೦ರಲ್ಲಿ ಗುಂಡೂರಾವ್-ಬಂಗಾರಪ್ಪ ಅವರ ಭಿನ್ನಮತ ಕುರಿತಂತೆ ವಿಶುಕುಮಾರ್ 'ಡೊಂಕುಬಾಲದ ನಾಯಕರು' ಎಂಬ ನಾಟಕ ರಚಿಸಿ ಪ್ರದರ್ಶಿಸಿದರು. ಶ್ರೀರಂಗ, ಜಡಭರತ, ಗಿರೀಶ್ ಕಾರ್ನಾಡ್, ಪಿ. ಲಂಕೇಶ್, ಡಾ। ಕಂಬಾರ, ಎಚ್. ಎಸ್. ಶಿವಪ್ರಕಾಶ್ ಮುಂತಾದವರ ನಾಟಕಗಳಲ್ಲಿ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆ ಕಾಣಬಹುದು. ಮಾಸ್ಟರ್ ಹಿರಣ್ಣಯ್ಯ, ಬಿ.ವಿ. ಕಾರಂತ, ಎಂ.ಎಸ್. ಸತ್ಯು, ಪ್ರಸನ್ನ, ಸಿಜಿಕೆ, ಆರ್. ಬಸವಲಿಂಗಯ್ಯ, ಗಂಗಾಧರಸ್ವಾಮಿ, ಕೆ.ವಿ. ಸುಬ್ಬಣ್ಣ ಕೆ.ವಿ. ಅಕ್ಷರ, ಟಿ.ಎನ್. ಸೀತಾರಾಂ, ಆರ್. ನಾಗೇಶ್, ಟಿ. ಎಸ್. ನಾಗಾಭರಣ, ಮುಂತಾದವರು ಹೊಸ ನಾಟಕಗಳು ರಂಗಸ್ಥಳದಲ್ಲಿ ಬರಲು ಕಾರಣರಾಗಿದ್ದಾರೆ. ಬೀದಿನಾಟಕದ ಮೂಲಕ ಜನತೆಯ ಮನಃಪರಿವರ್ತನೆ ಮಾಡಿದ ಎ.ಎಸ್. ಮೂರ್ತಿ, ಎ.ಎಸ್. ರಾಮಕೃಷ್ಣ ಹಾಗೂ ಡಾ। ವಿಜಯಾ ಅವರನ್ನು ಮರೆಯುವಂತಿಲ್ಲ.

ಪಿ. ಕಾಳಿಂಗರಾವ್‌ರಂತಹ ಗಾಯಕರು ಜನತೆಯನ್ನು ಸ್ವಾಭಿಮಾನಿಗಳನ್ನಾಗಿಸುವಲ್ಲಿ ಶ್ರಮಿಸಿದ್ದಾರೆ. ಕನ್ನಡ ಚಲನಚಿತ್ರಗಳು ಜನತೆಯ ಅರಿವು ಹೆಚ್ಚಲು ಕೆಲಸ ಮಾಡಿವೆ. ಗೋಕಾಕ್ ವರದಿ ಅನುಷ್ಠಾನಕ್ಕೆ ಬೀದಿಗಿಳಿದ ಡಾ। ರಾಜ್‌ಕುಮಾರ್ ತಮ್ಮ ಚಿತ್ರಗಳಲ್ಲಿ ಕರ್ನಾಟಕ ಹಾಗೂ ಕನ್ನಡ ಭಾಷೆಯ ಬಗ್ಗೆ ಅಭಿಮಾನ ಬೆಳೆಸಿಕೊಳ್ಳುವಂತೆ ರಾಜ್ಯದ ಜನತೆಯನ್ನು ಎಚ್ಚರಿಸಿದ್ದಾರೆ.

## ಪತ್ರಿಕಾ ರಂಗ

ಕೊನೆಯದಾಗಿ ಪತ್ರಿಕೆಗಳು ಈ ಕ್ಷೇತ್ರದಲ್ಲಿ ಸಲ್ಲಿಸಿರುವ ಸೇವೆಯನ್ನು ಮರೆಯುವಂತಿಲ್ಲ. ಡಾ। ಡಿ.ವಿ.ಜಿ. ಅವರು ಸ್ವಾತಂತ್ರ್ಯ ಪೂರ್ವದಲ್ಲಿ ನಾಲ್ಕು ಪತ್ರಿಕೆಗಳನ್ನು ತರುತ್ತಿದ್ದರು. ಸಮಾಚಾರ ಸಂಗ್ರಹ ಹಾಗೂ ಭಾರತೀ ಮೊದಲಾದ ಪತ್ರಿಕೆಗಳನ್ನು ನಡೆಸಿ ಜನಜಾಗೃತಿ ಮಾಡಿದ್ದಾರೆ. ವೀರಕೇಸರಿ ಸೀತಾರಾಮಶಾಸ್ತ್ರಿ ಅವರ ವಾರ್ತಾ ಹಾಗೂ ವೀರಕೇಸರಿ, ಬಿ. ಪುಟ್ಟಸ್ವಾಮಯ್ಯ ಹಾಗೂ ಟಿ.ಎಸ್.ಆರ್. ರವರ ಪ್ರಜಾವಾಣಿ, ಖಾದ್ರಿ ಶಾಮಣ್ಣ ಅವರ ಕನ್ನಡಪ್ರಭ, ಡಾ। ಪಾಟೀಲ ಪುಟ್ಟಪ್ಪ ಅವರ 'ಪ್ರಪಂಚ', 'ವಿಶ್ವವಾಣಿ', ಆರ್.ಆರ್. ದಿವಾಕರ್ ಅವರ ಸಂಯುಕ್ತ ಕರ್ನಾಟಕ, ಪಿ.ಆರ್. ರಾಮಯ್ಯ ಅವರ ತಾಯಿನಾಡು, ಹೆಚ್.ಕೆ. ವೀರಣ್ಣಗೌಡ ಅವರ ಚಿತ್ರಗುಪ್ತ ಶೇಷಣ್ಣ ಅವರ 'ಕಿಡಿ' ಆಲೂರು ವೆಂಕಟರಾಯರ 'ಜೈ ಕರ್ನಾಟಕ', ಸಿದ್ಧವನಹಳ್ಳಿ ಕೃಷ್ಣಶರ್ಮರ 'ಹರಿಜನ' ವಿಶ್ವಕರ್ನಾಟಕ, ಹುರುಳಿ ಭೀಮರಾಯರ ಕಂಠೀರವ, ಮೈಸೂರು ತಾತಯ್ಯ ಎಂದೇ ಖ್ಯಾತರಾದ ವೆಂಕಟಲಕ್ಷ್ಮಯ್ಯ ಅವರ ಸಾಧ್ವೀ, ಪ್ರೊ। ಆರ್.ಜಿ. ಕುಲಕರ್ಣಿ ಅವರ 'ನವಕರ್ನಾಟಕ', ಸತ್ಯ ಅವರ ಜ್ವಾಲಾಮುಖಿ, ಕೊಡಗಿನ ಗೋಪಾಲಕೃಷ್ಣ ಅವರ 'ಶಕ್ತಿ' ಗುಪ್ತ ಅವರ 'ಪ್ರಜಾಮತ' 'ಜನಪ್ರಗತಿ' ಮುಂತಾದ ಪತ್ರಿಕೆಗಳ ಜನಜಾಗೃತಿ ಕಾರ್ಯ ಸಾಮಾನ್ಯವಾದುದಲ್ಲ.

ಕನ್ನಡ ದಿನಪತ್ರಿಕೆಗಳಾದ ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಕನ್ನಡಪ್ರಭ, ಉದಯವಾಣಿ, ಲೋಕವಾಣಿ, ವಿಶ್ವವಾಣಿ, ಜನವಾಹಿನಿ, ವಿಜಯ ಕರ್ನಾಟಕ ಮೊದಲಾದ ಪತ್ರಿಕೆಗಳು ಜನತೆಯ ಅರಿವಿಗೆ ದುಡಿಯುತ್ತಿವೆ. The Deccan Herald, The

Indian Expess, The Hindu, The Times of India ಆಂಗ್ಲ ಪತ್ರಿಕೆಗಳು ರಾಜ್ಯ ಏಳಿಗೆಯ ಬಗ್ಗೆ ಚಿಂತಿಸಿರುವುದನ್ನು ಕಾಣಬಹುದು.

೧೯೮೦ರ ಪೂರ್ವದಲ್ಲಿ ವಾರಪತ್ರಿಕೆಗಳು ಸಾಹಿತ್ಯ, ಸಂಗೀತ. ಮೊದಲಾದ ಸಾಂಸ್ಕೃತಿಕ ವಿಚಾರಗಳಿಗೆ ಹೆಚ್ಚಿನ ಆಸಕ್ತಿ ಕೊಟ್ಟು ರಾಜಕೀಯವನ್ನು ಗೌಣವಾಗಿರಿಸಿದ್ದವು. ಕನ್ನಡ ಪತ್ರಿಕೋದ್ಯಮದಲ್ಲಿ ಹೊಸ ಅಲೆ ಪ್ರಾರಂಭಿಸಿದ ಕೀರ್ತಿ ಪಿ. ಲಂಕೇಶ್ ಅವರಿಗೆ ಸೇರುತ್ತದೆ. ಗ್ರಾಮೀಣ ಪ್ರದೇಶದ ಯುವಜನಾಂಗ ಹಾಗೂ ಮಧ್ಯಮ ವರ್ಗದ ಪ್ರಜ್ಞಾವಂತರ ಆಶಯಗಳಿಗೆ ಮಾತಿನ ರೂಪಕೊಟ್ಟು ರಾಜಕೀಯವನ್ನು ಪತ್ರಿಕೆಯ ಕೇಂದ್ರವನ್ನಾಗಿ ಮಾಡಿಕೊಂಡವರು ಪಿ. ಲಂಕೇಶ್ ಅವರು. ೧೯೮೩, ೮೮ರ ಚುನಾವಣೆಗಳಲ್ಲಿ ಪರಿಣಾಮಕಾರಿಯಾಗಿ ಪಾತ್ರವಹಿಸಿದ ಕೀರ್ತಿ ಲಂಕೇಶ್‌ಪತ್ರಿಕೆಯದು. ಬಿ.ವಿ. ವೈಕುಂಠರಾಜು ಅವರ ವಾರಪತ್ರಿಕೆ ಹಾಗೂ ಇಂದೂಧರ ಹೊನ್ನಾಪುರ ಅವರ ಸುದ್ದಿ ಸಂಗಾತಿ ಪತ್ರಿಕೆಗಳು ಸಹ ರಾಜಕೀಯವನ್ನೇ ಕೇಂದ್ರವನ್ನಾಗಿಟ್ಟುಕೊಂಡಿದ್ದವು. ರವಿ ಬೆಳಗೆರೆಯ- ಹಾಯ್ ಬೆಂಗಳೂರು ಸಹ ಇದೇ ದಿಕ್ಕಿನಲ್ಲಿ ಸಾಗಿವೆ.

ಕನ್ನಡ ಪತ್ರಿಕೆಗಳು ಮಾಡಿದ ಕೆಲಸವನ್ನು, ಲಘುವಾಗಿ ಪರಿಗಣಿಸುವಂತಿಲ್ಲ. ಪ್ರಜಾವಾಣಿಯ ಬೂಸಾ ಪ್ರಕರಣ, ಕನ್ನಡಪ್ರಭದ ಗೋಕಾಕ್ ಚಳವಳಿ ಹಾಗೂ ಮೊಯ್ಲಿಯ ಟೇಪ್ ಪ್ರಕರಣ ಲಂಕೇಶ್‌ಪತ್ರಿಕೆಯ ರೇವಜಿತ್ ಮತ್ತು ಟೆಲಿಫೋನ್ ಕದ್ದಾಲಿಕೆ ಪ್ರಕರಣವನ್ನು ನಿರ್ವಹಿಸಿದ ರೀತಿಯಿಂದಲೇ ಅವುಗಳ ಪ್ರಭಾವವನ್ನು ತಿಳಿಯಬಹುದು. ನಿಜಲಿಂಗಪ್ಪ ಅವರ ಬಗ್ಗೆ ಜಾತೀಯತೆ ಹಾಗೂ ರಾಜಾಜಿನಗರದಲ್ಲಿದ್ದವೆಂದು ಹೇಳಲಾದ ಅವರ ಮನೆಗಳ ಸಾಲು, ಅರಸು ಅವರು ಹೇಳಿದ ಶಾಸಕರ ನಿರ್ವಹಣೆ ವೆಚ್ಚ, ಶ್ರೀಕಂಠಯ್ಯ ಕಾಂಗ್ರೆ ಪಕ್ಷಾಂತರದ ಕಾಲದಲ್ಲಿ ಅವರ ಅಡುಗೆಯವ ಹೇಳಿದನೆಂದು ಬರೆಯಲಾದ ಮಾತುಗಳು, ಆರ್. ಗುಂಡೂರಾವ್ ಅವರ ವೈಯಕ್ತಿಕ ಚಾರಿತ್ಯ ವಿಚಾರ, ದೇವೇಗೌಡ ಅವರ ಕಾಲದಲ್ಲಿ ಅವನ ಮಗನ ಕುರ್ಚಿ ಪ್ರಕರಣ, ಜೆ.ಎಚ್. ಪಟೇಲ್ ಕಾಲದ ರೋಚಕ ಪ್ರಸಂಗ, ಇತ್ತೀಚೆಗೆ ನಗರಾಭಿವೃದ್ಧಿ ಸಚಿವ ಡಿ.ಕೆ. ಶಿವಕುಮಾರ್ ನಿರ್ದಿಷ್ಟ ಸಮುದಾಯವೊಂದರ ಬಗ್ಗೆ ಆಡಿದರೆನ್ನಲಾರದ ಮಾತು- ಹೀಗೆ ಪತ್ರಿಕೆಗಳು ಜನಮನದಲ್ಲಿ ಬಿಂಬಿಸಿದ ಸುದ್ದಿಗಳನ್ನು ನೆನೆಯುತ್ತಾ ಹೋದರೆ ಅವುಗಳ ಪರಿಣಾಮ ಆತಂಕಕಾರಿ ಎನಿಸದಿರಲಾರರು. ಪತ್ರಕರ್ತರು ದುರುದ್ದೇಶಪೂರ್ವಕವಾಗಿಯೋ ಅಥವಾ ಹಾಸ್ಯಪ್ರಜ್ಞೆಯಿಂದಲೋ ತಮಗೆ ಸರಿ ಕಂಡಿದ್ದೆನ್ನುವ ಸುದ್ದಿಯನ್ನು ಸೃಷ್ಟಿ ಮಾಡುತ್ತಾರೆ. ಈ ರೀತಿ ಸೃಷ್ಟಿಯಾದ ಸುದ್ದಿ ಲಕ್ಷಾಂತರ ಜನತೆ ತಲುಪಿ ದೊಡ್ಡ ಅನಾಹುತವೇ ಆಗಿ ಹೋಗುತ್ತದೆ. ಅದರಲ್ಲೂ ಚುನಾವಣಾ ಸಂದರ್ಭದಲ್ಲಿ ಪತ್ರಿಕೆಗಳು ಮಾಡುವ ಗದ್ದಲದಿಂದ ಫಲಿತಾಂಶವೇ ಏರು-ಪೇರು ಆಗಬಹುದು. ಈ ಸಂದರ್ಭದಲ್ಲಿ ಮಹಾತ್ಮ ಗಾಂಧೀಜಿ ಅವರ ಮಾತನ್ನು ನೆನಪಿಸಿಕೊಳ್ಳಬೇಕು. ''ಪತ್ರಿಕೋದ್ಯಮದ ಒಟ್ಟು ಉದ್ದೇಶವೇ ಸೇವೆ. ಪತ್ರಿಕೆಗಳದ್ದು ಒಂದು ಪ್ರಚಂಡ ಶಕ್ತಿ. ನಿಯಂತ್ರಣವಿಲ್ಲದಿದ್ದರೆ ಅದರಿಂದ ದೇಶಸೇವೆಯಾಗುವುದರ ಬದಲು ವ್ಯವಸ್ಥೆಯ ನಾಶವಾಗುತ್ತದೆ. ಈ ನಿಯಂತ್ರಣ ಹೊರಗಿನಿಂದ ಬರದೆ ಒಳಗಿನಿಂದ ಬಂದದ್ದಾದರೆ ಅದು ಹೆಚ್ಚು ಸಾರ್ಥಕ.''

ಪತ್ರಿಕಾ ಮಾಧ್ಯಮ ಈಗ ರಾಜ್ಯದಿಂದ ಜಿಲ್ಲೆ ಹಾಗೂ ತಾಲ್ಲೂಕುಗಳ ತನಕ ವಿಸ್ತಾರಗೊಂಡಿದೆ. ಅಧಿಕಾರ ವಿಕೇಂದ್ರೀಕರಣ ಆದಂತೆ ಮಾಧ್ಯಮದ ಪ್ರಭಾವ ಕೂಡಾ ವಿಕಸನಗೊಳ್ಳುತ್ತಾ ಸಾಗಿದೆ.

ಪತ್ರಿಕಾಮಾಧ್ಯಮ ಅನೇಕ ಒತ್ತಡಗಳಿಗೆ ಒಲಿಯುತ್ತಿರುವುದು ದುರ್ದೈವದ ವಿಚಾರ. ವಿವಿಧ ಲಾಬಿಗಳೇ ಪತ್ರಿಕೋದ್ಯಮವನ್ನು ನಿಯಂತ್ರಿಸುತ್ತಿವೆ. ೧೯೮೦ರ ಪೂರ್ವದಲ್ಲಿ ಪತ್ರಿಕಾ ಮಾಲೀಕರು ಬೇರೆ ಸಮುದಾಯದವರಾಗಿದ್ದರು. ಆದರೆ ಪತ್ರಕರ್ತರು ಹೆಚ್ಚಾಗಿ ಬ್ರಾಹ್ಮಣ ಜನಾಂಗದವರೇ ಆಗಿದ್ದರು. ಆದರೆ ಈಗ ಪರಿಸ್ಥಿತಿ ಬದಲಾಗಿದೆ. ಪತ್ರಕರ್ತರು ಎಲ್ಲಾ ಸಮುದಾಯದಿಂದಲೂ ಬರತೊಡಗಿದ್ದಾರೆ. ಪತ್ರಕರ್ತರು ಹಿಂದಿನಂತೆ ಈಗ ಸಂಪೂರ್ಣ ಸ್ವತಂತ್ರರಲ್ಲ. ಪತ್ರಿಕೆಯ ಮಾಲೀಕರು ತಮಗೆ ಬೇಕಾದ ಹಾಗೆ ಪತ್ರಿಕೆಯ ನೀತಿ ನಿಯಮ ಬದಲಾಯಿಸುತ್ತಾರೆ. ಹಾಗೆಯೇ ಅವರು ಬೇರೆ ಬೇರೆ ಉದ್ಯೋಗಗಳನ್ನು ಅನ್ವೇಷಿಸುತ್ತಾರೆ.

ಓದುಗರನ್ನು ಆಕರ್ಷಿಸಲು ಪತ್ರಿಕೆಗಳು ಅನೇಕ ತರತರಹ ಗಿಮಿಕ್ಸ್ ಮಾಡುತ್ತವೆ. ಕ್ರೌರ್ಯ, ಹಿಂಸೆ, ಸೆಕ್ಸ್, ಚಾರಿತ್ರ್ಯವಧೆ, ಬ್ಲಾಕ್ ಮೇಲ್ ಮೊದಲಾದ ತಂತ್ರಗಳನ್ನು ಕೆಲವು ಪತ್ರಿಕೆಗಳು ಅನುಸರಿಸುತ್ತಿರುವುದರಿಂದ ಇಡೀ ಪತ್ರಿಕೋದ್ಯಮವೇ ವಿಶ್ವಾಸಾರ್ಹತೆ ಕಳೆದುಕೊಳ್ಳುವ ಅಪಾಯವಿದೆ. ಭಾರತದಲ್ಲಿ ಗ್ರಾಮೀಣ ಜನತೆ ಮೂಲತಃ ಮುಗ್ಧರು. ಸರ್ಕಾರ ಎಷ್ಟೇ ಘೋಷಣೆ ಮಾಡಿದರೂ ಶೇ. ೪೫ ರಷ್ಟು ಜನ ಇನ್ನೂ ಅನಕ್ಷರಸ್ಥರಾಗಿದ್ದಾರೆ. ಈ ಅಕ್ಷರಸ್ಥರಲ್ಲೂ ಎಷ್ಟು ಜನ ಯುಕ್ತಾಯುಕ್ತವಾಗಿ ಪರಿಶೀಲಿಸಿ ನಿರ್ಣಯ ತೆಗೆದುಕೊಳ್ಳಲು ಸಮರ್ಥರಿದ್ದಾರೆ? ಅಂತಹವರ ಪ್ರಮಾಣ ಶೇ. ೧೦ ರಷ್ಟು ದೊರಕಿದರೆ ಅದು ದೊಡ್ಡದು. ಇನ್ನುಳಿಕೆಯವರು ಪತ್ರಿಕೆಯ ಅಭಿಪ್ರಾಯವನ್ನು ಸತ್ಯವೆಂದು ಭಾವಿಸುತ್ತಾರೆ. ಈ ಸಂದರ್ಭದಲ್ಲಿ ಡಾ। ಕುವೆಂಪು ಹೇಳುವ ಮಾತು ಉಲ್ಲೇಖಾರ್ಹ. 'ಪತ್ರಿಕೆಗಳಲ್ಲಿ ಸುದ್ದಿಯನ್ನು ಸಂಪೂರ್ಣವಾಗಿ ನಂಬುವ ಜನರಿರುವ ಸಂದರ್ಭದಲ್ಲಿ ಪತ್ರಿಕೆಗಳ ಸಾಮಾಜಿಕ ಜವಾಬ್ದಾರಿ ದೊಡ್ಡದು.'

ಪತ್ರಿಕೆಗಳು ವಿಶ್ಲೇಷಿಸುವ ಚುನಾವಣಾ ಫಲಿತಾಂಶ ಹೆಚ್ಚೂ ಕಡಿಮೆ ಸಮರ್ಪಕವಾಗಿಯೇ ಇದೆ. ಅಂದಮೇಲೆ ರಾಜ್ಯದ ಪತ್ರಿಕೆಗಳು ಜನನಾಡಿ ಮಿಡಿತವನ್ನು ಅರಿತಿವೆ ಎಂದು ಹೇಳಬಹುದು ಹಾಗೂ ರಾಜ್ಯದ ಜನತೆಯ ಮೇಲೆ ಪ್ರಭಾವ ಬೀರುವ ಸಾಮರ್ಥ್ಯವನ್ನು ಪಡೆದುಕೊಂಡಿವೆಯೆಂದೂ ಧಾರಾಳವಾಗಿ ಹೇಳಬಹುದು.

## ಅಧ್ಯಯನ ಫಲ

ಪೂರ್ವಾಗ್ರಹ ಪೀಡಿತರಾಗದೆ ಕರ್ನಾಟಕದ ರಾಜಕಾರಣದ ಸಿಂಹಾವಲೋಕನ ಮಾಡಿದಾಗ ಇಲ್ಲಿನ ರಾಜ-ಮಹಾರಾಜರು ಸತ್‌ಪರಂಪರೆಯನ್ನು ಹಾಕಿಕೊಟ್ಟಿದ್ದಾರೆ. ಕದಂಬ ವಂಶದ ಮಯೂರವರ್ಮನಿಂದ ಹಿಡಿದು ಕೊನೆಯ ರಾಜಪ್ರಮುಖರಾದ ಜಯಚಾಮರಾಜೇಂದ್ರ ಒಡೆಯರ ತನಕ ಹತ್ತಾರು ದೊರೆಗಳು ಕರ್ನಾಟಕವನ್ನಾಳಿದ್ದಾರೆ. ಮೊದಲ ಮುಖ್ಯಮಂತ್ರಿ ಕೆ.ಸಿ. ರೆಡ್ಡಿಯಿಂದ ಹಿಡಿದು ಈಗಿನ ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ತನಕ ಹದಿನಾರು ಮುಖ್ಯಮಂತ್ರಿಗಳು ಕರ್ನಾಟಕದಲ್ಲಿ ರಾಜ್ಯಭಾರ ನಡೆಸಿದ್ದಾರೆ. ಒಟ್ಟಾರೆ ಹೇಳುವುದಾದರೆ ಬಹುಮಟ್ಟಿನ ಆಡಳಿತಗಾರರು ಜನಹಿತವನ್ನು ಮರೆಯದೆ ಆಡಳಿತ ನಡೆಸಿದ್ದಾರೆ. ಅಶೋಕನಿಗೆ ಸತ್ವದಲ್ಲಿ ಸರಿ ಸಮಾನವಾದ ದೊರೆ ರಾಷ್ಟ್ರಕೂಟದ ನೃಪತುಂಗ ಇಲ್ಲಿ ಕಾಣಬಂದಿದ್ದಾನೆ. ಆದಿಲ್ ಷಾಹಿಯ ದೊರೆ ಎರಡನೆಯ ಇಬ್ರಾಹಿಂ ಸರಸ್ವತಿ ಸ್ತುತಿಯಿಂದ ತನ್ನ ಗ್ರಂಥವನ್ನು ಪ್ರಾರಂಭಿಸುತ್ತಾನೆ. ಹೈದರ್-ಟಿಪ್ಪು ಅವರುಗಳು ಮೈಸೂರು ಸಂಸ್ಥಾನದ ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡಿದ್ದನ್ನು ದೇಶ ಮರೆಯುವಂತಿಲ್ಲ. ಆಕ್ರಮಣಕಾರರಾಗಿ ಬಂದ ಮುಸ್ಲಿಮರು ಈ ಮಣ್ಣಿನಲ್ಲಿ ಬೆರೆತುಹೋದರು. ಬ್ರಿಟಿಷ್ ಕಮಿಷನರ್‌ಗಳಾದ ಲಾರ್ಡ್ ಕಬ್ಬನ್, ಲಾರ್ಡ್ ಬೌರಿಂಗ್ ಸಹ ರಾಜ್ಯದ ಹಿತಕ್ಕನುಗುಣವಾಗಿ ದುಡಿದಿದ್ದಾರೆ.

ಸಾಮಾಜಿಕ ಅಸಮಾನತೆ ಹಾಗೂ ಆರ್ಥಿಕ ರಂಗದ ಕೊರತೆ ಏನೇ ಇರಲಿ ಬಹುಮಟ್ಟಿಗೆ ಆಡಳಿತಗಾರರು ಸಾಮಾನ್ಯ ಜನರ ಹಿತವನ್ನು ಎಂದೂ ಮರೆತಿಲ್ಲ. ಕ್ಷಾಮ, ಪ್ರವಾಹ, ಆಕ್ರಮಣ, ಸಾಂಕ್ರಾಮಿಕ ರೋಗ, ಬಡತನ ಮೊದಲಾದ ಸಮಸ್ಯೆಗಳ ವಿರುದ್ಧ ಜನತೆ ಹೋರಾಡುವಾಗ ಆಡಳಿತಗಾರರು ಜನತೆಗೆ ಬೆಂಬಲವಾಗಿ ನಿಂತಿದ್ದಾರೆ. ಅಷ್ಟೇ ಅಲ್ಲ, ಜನತೆಗೆ ಹಿತಕರವಾದ ಕಾರ್ಯಗಳನ್ನು ಹಾಕಿಕೊಂಡು ಅವರ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆ. ಶ್ರೀಕಂಠದತ್ತ ನರಸಿಂಹರಾಜ ಒಡೆಯರ್ ಇಂದಿಗೂ ಮೈಸೂರು ಲೋಕಸಭೆ ಸದಸ್ಯರಾಗಿ ಆಯ್ಕೆಯಾಗುತ್ತಿದ್ದಾರೆ. ಮೈಸೂರು ಸಂಸ್ಥಾನದ ದೊರೆಗಳು ಅವಿಚ್ಛಿನ್ನ ಜನಪ್ರೀತಿ ಗಳಿಸಿರುವುದೇ ಇವರ ವಿಜಯಕ್ಕೆ ಕಾರಣವಾದ ಅಂಶ.

ಸ್ವಾತಂತ್ರ್ಯಾನಂತರದ ಎಲ್ಲಾ ಮುಖ್ಯಮಂತ್ರಿಗಳು ತಮ್ಮ ಹೆಸರು ಈ ರಾಜ್ಯದ ಅಭಿವೃದ್ಧಿ ಕ್ಷೇತ್ರದಲ್ಲಿ ಶಾಶ್ವತವಾಗಿರಬೇಕೆಂದು ಬಯಸಿದ್ದಾರೆ. ಕೆಂಗಲ್ ಹನುಮಂತಯ್ಯ ಕಟ್ಟಿಸಿದ 'ವಿಧಾನಸೌಧ'ದಂತಹ ಅದ್ಭುತ ಕಟ್ಟಡ ಎಲ್ಲರಿಗೂ ಪ್ರೇರಣೆ ನೀಡಿದೆ. ಚಿರಕಾಲ ಉಳಿಯುವಂತಹ ಕೆಲಸ ಮಾಡಬೇಕೆಂಬ ಆಸೆ ಎಲ್ಲಾ ಮುಖ್ಯಮಂತ್ರಿಗಳಲ್ಲೂ ಇದೆ. ಅನೇಕ ಕೊರತೆಗಳ ನಡುವೆ ಕರ್ನಾಟಕದ ಕೃಷಿ, ಪಶುಸಂಗೋಪನೆ, ನೀರಾವರಿ, ತೋಟಗಾರಿಕೆ, ಶಿಕ್ಷಣ, ಗ್ರಾಮೀಣಾಭಿವೃದ್ಧಿ, ಹಿಂದುಳಿದವರ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ, ದಲಿತರ ಏಳಿಗೆ, ಕೈಗಾರಿಕೆ, ಸಾಹಿತ್ಯ, ಸಂಗೀತ, ನೃತ್ಯ ಒಳಗೊಂಡಂತೆ ಸಾಂಸ್ಕೃತಿಕ ಕ್ಷೇತ್ರ, ಮಹಿಳೆ ಮತ್ತು ಮಕ್ಕಳ ಕಲ್ಯಾಣ, ಮಾಹಿತಿ ತಂತ್ರಜ್ಞಾನ ಮುಂತಾದ ಅನೇಕ ಕ್ಷೇತ್ರಗಳನ್ನು ಕಂಡಾಗ ಕಳೆದ ಐವತ್ತು ವರ್ಷಗಳಲ್ಲಿ ರಾಜ್ಯ ಅದ್ಭುತ ಪ್ರಗತಿ ಸಾಧಿಸಿದೆ. ಏಳು ಜ್ಞಾನಪೀಠ ಪ್ರಶಸ್ತಿ ಗಳಿಸಿರುವ ಕರ್ನಾಟಕ ಭಾರತದಲ್ಲೇ ಗುರುತಿಸಬೇಕಾದ ರಾಜ್ಯವಾಗಿದೆ. ಕರ್ನಾಟಕದಲ್ಲಿ ಬಂಡವಾಳ ಹೂಡಲು ವಿದೇಶಿಯರು ಆಸಕ್ತರಾಗಿದ್ದಾರೆಂದರೆ ಇಲ್ಲಿ ಕಾನೂನು ವ್ಯವಸ್ಥೆ, ಕಚ್ಚಾವಸ್ತು ಹಾಗೂ ಮಾನವ ಸಂಪನ್ಮೂಲ ಯಥೇಚ್ಛವಾಗಿ ದೊರೆಯುತ್ತದೆಂದು ಹೇಳಬಹುದು. ಮುಖ್ಯಮಂತ್ರಿಗಳ ಜೊತೆ ಅವರ ಸಹೋದ್ಯೋಗಿಗಳೂ ಕೂಡ ಉತ್ತಮ ಆಡಳಿತ ಕೊಡಲು ಶ್ರಮಿಸಿದ್ದಾರೆ. ಸರ್. ಎಂ. ವಿಶ್ವೇಶ್ವರಯ್ಯ, ಸರ್. ಮಿರ್ಜಾ ಇಸ್ಮಾಯಿಲ್ಲರಂತಹ ಅತ್ಯುತ್ತಮ ಆಡಳಿತಗಾರರು ನಮ್ಮಲ್ಲಿ ಬಂದಿದ್ದಾರೆ. ಅವರು ಕರ್ನಾಟಕಕ್ಕೆ ಉತ್ತಮ ಆಡಳಿತ ಪರಂಪರೆ ಕೊಟ್ಟಿದ್ದಾರೆ. ದಿವಾನ್ ರಂಗಾಚಾರ್ಯುಲು ತಂದ 'ಪ್ರಜಾಪ್ರತಿನಿಧಿ ಸಭೆ'. ರಾಜ್ಯದ ಪ್ರಜಾಪ್ರಭುತ್ವ ವ್ಯವಸ್ಥೆಗೆ ಭದ್ರ ಬುನಾದಿ ಹಾಕಿದೆ. ಇವುಗಳ ಪ್ರಯೋಜನವನ್ನು ಕರ್ನಾಟಕ ರಾಜ್ಯ ಸಮರ್ಪಕವಾಗಿ ಮುಂದುವರಿಸಿಕೊಂಡು ಹೋಗುವ ಮಹತ್ತರ ಜವಾಬ್ದಾರಿ ಮುಂದಿನ ಆಡಳಿತಗಾರರ ಮೇಲಿದೆ.

☆ ಕರ್ನಾಟಕದ ರಾಜಕೀಯವನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಹೊರಟರೆ ಜಾತಿ ತನ್ನ ಪ್ರಾಮುಖ್ಯತೆಯನ್ನು ಪ್ರತಿಷ್ಠಾಪಿಸಿರುವುದನ್ನು ಕಾಣಬಹುದು. ಸ್ವಾತಂತ್ರ್ಯಪೂರ್ವದಲ್ಲೇ ಕಾಂಗ್ರೆಸ್ ಪಕ್ಷದಲ್ಲಿದ್ದ ಬ್ರಾಹ್ಮಣರ ಪ್ರಾಬಲ್ಯವನ್ನು ಹತ್ತಿಕ್ಕಲು ಪ್ರಜಾಮಿತ್ರ ಮಂಡಲಿ ಸಂಯುಕ್ತ ಪ್ರಜಾಪಕ್ಷ ಹಾಗೂ ಮೈಸೂರು ಕಾಂಗ್ರೆಸ್‌ಗಳು ದುಡಿದಿವೆ. ೧೯೪೭ರಲ್ಲಿ ಮೊದಲ ಮುಖ್ಯಮಂತ್ರಿ ಕೆ.ಸಿ. ರೆಡ್ಡಿಯಾಗದೆ, ಬ್ರಾಹ್ಮಣ ಸಮುದಾಯದವರು ಮುಖ್ಯಮಂತ್ರಿಯಾಗಿದ್ದರೆ ಅಂದೇ ರಾಜ್ಯದಲ್ಲಿ ಕಾಂಗ್ರೆಸ್

ವಿಭಜನೆಯಾಗುತ್ತಿತ್ತು. ೧೯೫೮ರಲ್ಲಿ ಎಸ್. ನಿಜಲಿಂಗಪ್ಪ ಬದಲು ತಾಳಿಕೆರೆ ಸುಬ್ರಹ್ಮಣ್ಯಂ ಅವರು ಮುಖ್ಯಮಂತ್ರಿಗಳಾಗಲು ಜಾತಿಯೇ ಅಡ್ಡಬಂದ ವಿಷಯ ಅಪರಿಚಿತವಾದುದಲ್ಲ. ಅನಿರೀಕ್ಷಿತವಾಗಿ ೧೯೬೭ರಲ್ಲಿ ಹೊಸದುರ್ಗದಲ್ಲಿ ನಿಜಲಿಂಗಪ್ಪ ಅವರು ಸೋತರು. ಆದರೆ ಮೂರು ತಿಂಗಳು ಬೇರೆ ಜಾತಿಯವರು ಮುಖ್ಯಮಂತ್ರಿಗಳಾಗಲು ಸಾಧ್ಯವಾಗಲಿಲ್ಲ. ನಿಜಲಿಂಗಪ್ಪ ಅವರ ನಂತರ ವೀರೇಂದ್ರ ಪಾಟೀಲರು ಮುಖ್ಯಮಂತ್ರಿಯಾಗಲು ಜಾತಿ ಪ್ರಮುಖವಾದ ಪಾತ್ರ ವಹಿಸಿತು. ದೇವರಾಜ ಅರಸು ಮೇಲ್ಭಾಗದ ಜಾತಿಯ ಗರಿಷ್ಠ ಮಟ್ಟದ ಪ್ರಾಮುಖ್ಯತೆಯನ್ನು ಕಡಿಮೆಗೊಳಿಸಿದ್ದುಂಟು. ೧೯೮೯, ೧೯೯೪ ಹಾಗೂ ೧೯೯೯ರ ವಿಧಾನಸಭಾ ಚುನಾವಣೆಗಳ ಗತಿಯನ್ನು ಗಮನಿಸಿದಾಗ ಮತ್ತೊಮ್ಮೆ ಕರ್ನಾಟಕ ಜಾತಿ ಹಿಡಿತದ ರಾಜಕಾರಣಕ್ಕೆ ಸಿಲುಕಿ ನರಳುತ್ತಿದೆ ಎನಿಸುತ್ತದೆ. ಟಿಕೆಟ್ಟು ಹಂಚಿಕೆ ಜಾತಿ ಆಧಾರದ ಮೇಲೆ ನಡೆಯುತ್ತದೆ. ನಮ್ಮ ರಾಜಕೀಯ ಪಕ್ಷಗಳು ಮತದಾರರನ್ನು ಜಾತಿಯ ಆಧಾರದ ಮೇಲೆ ಚಿಂತಿಸುವಂತೆ ಮಾಡಿವೆ. ಈ ಕಾರಣಕ್ಕಾಗಿ ಎಷ್ಟೋ ಅರ್ಹ ಅಭ್ಯರ್ಥಿಗಳ ಚುನಾವಣೆ ಸೋಲಿನಿಂದ ರಾಜ್ಯ ರಾಜಕಾರಣಕ್ಕೆ ದೊಡ್ಡ ನಷ್ಟವಾಗಿದೆ. ನಿಜಲಿಂಗಪ್ಪ, ಗುಂಡೂರಾವ್, ರಾಮಕೃಷ್ಣ ಹೆಗಡೆ, ವೀರಪ್ಪ ಮೊಯಿಲಿ, ಜಾರ್ಜ್ ಫರ್ನಾಂಡಿಸ್ ಮುಂತಾದವರ ರಾಜಕೀಯ ಭವಿಷ್ಯ ಜಾತಿ ರಾಜಕಾರಣದಿಂದ ಮಸುಕುಗೊಂಡಿದೆ. ಭಾರತದ ಬೇರೆ ರಾಜ್ಯಗಳಲ್ಲಿ ಇವು ಮತ್ತಷ್ಟು ತೀವ್ರವಾಗಿರಬಹುದು. ಪ್ರಜ್ಞಾವಂತ ಮತದಾರರು ಹಾಗೂ ಮೌಲ್ಯಗಳ ಬಗ್ಗೆ ಒಂದಿಷ್ಟಾದರೂ ಶ್ರದ್ಧೆಯುಳ್ಳ ರಾಜಕಾರಣಿಗಳಿರುವ ಕರ್ನಾಟಕದ ರಾಜಕೀಯದಲ್ಲಿ ಜಾತಿ ತನ್ನ ಪ್ರಾಮುಖ್ಯತೆ ತೋರಿಸುತ್ತಿರುವುದು ವಿಷಾದನೀಯ ಸಂಗತಿ. ಮುಂದಿನ ದಿನಗಳಲ್ಲಿ ಇದು ಕಡಿಮೆಯಾಗುವ ಸನ್ನಿವೇಶವಿಲ್ಲ.

☆ ಕರ್ನಾಟಕ ರಾಜಕಾರಣದಲ್ಲಿ ಹಿಂದುಳಿದ ವರ್ಗದ ಜಾಗೃತಿಯ ಅಭಾವವನ್ನು ೧೯೭೭ರ ಪೂರ್ವದಲ್ಲಿ ಕಾಣಬಹುದು. ನಲವತ್ತರ ದಶಕದಲ್ಲಿ ಮೈಸೂರು ಸಂಸ್ಥಾನದಲ್ಲಿ ಸರ್ಕಾರಿ ಉದ್ಯೋಗಗಳಲ್ಲಿ ಬ್ರಾಹ್ಮಣರ ಪ್ರಾಬಲ್ಯ ತೊಡೆದುಹಾಕಲು ಕೆ. ಎಚ್. ರಾಮಯ್ಯ, ಕಂಠೀರವ ನರಸಿಂಹರಾಜ ಒಡೆಯರ್, ಬಿ. ಬಸವಯ್ಯ ಮುಂತಾದವರು ಪ್ರಯತ್ನಿಸಿದರು. ಅದರ ಫಲವಾಗಿ ಬ್ರಾಹ್ಮಣೇತರ ಅನೇಕ ಸಮುದಾಯಗಳಿಗೆ ಸರ್ಕಾರಿ ಉದ್ಯೋಗ ದೊರೆಯಿತು. ವಿಶೇಷವಾಗಿ ಲಿಂಗಾಯಿತ, ಒಕ್ಕಲಿಗ ಜನಾಂಗಕ್ಕೆ ಇದರ ಗರಿಷ್ಠ ಪ್ರಯೋಜನ ದೊರೆಯಿತು. ಏಕೀಕರಣ ನಂತರ ಹಿಂದುಳಿದವರಿಗೆ ಅಂತಹ ಸ್ಥಾನಮಾನವೇನೂ ದೊರೆಯಲಿಲ್ಲ. ಟಿ. ಮರಿಯಪ್ಪ, ಕೊಲ್ಲೂರು ಮಲ್ಲಪ್ಪ, ಡಿ. ದೇವರಾಜ ಅರಸು, ಭೀಮಪ್ಪನಾಯಕ ಮುಂತಾದವರಿಗೆ ಯಾವುದೇ ಪ್ರೋತ್ಸಾಹ ದೊರೆತಿರಲಿಲ್ಲ. ಡಿ. ದೇವರಾಜ ಅರಸು ಅವಿಭಾಜಿತ ಕಾಂಗ್ರೆಸ್‌ನ ದೌರ್ಬಲ್ಯವನ್ನು ಸದುಪಯೋಗಪಡಿಸಿಕೊಂಡು ಆಡಳಿತ ಕಾಂಗ್ರೆಸ್‌ಗೆ ಹಿಂದುಳಿದವರು ಅಖಂಡ ಬೆಂಬಲಗಳಿಸಿ ಕೊಟ್ಟರು. ವಿಶೇಷವಾಗಿ ಕೊಲ್ಲೂರು ಮಲ್ಲಪ್ಪ ಅವರ ಮಾರ್ಗದರ್ಶನದಲ್ಲೇ ದೇವರಾಜ ಅರಸು ತಮ್ಮ ರಾಜಕೀಯ ಚದುರಂಗದಾಟವಾಡಿದ್ದರು.

ಹಾವನೂರು ಆಯೋಗದ ಅನುಷ್ಠಾನ ಸಾಮಾನ್ಯವಾದ ವಿಚಾರವಲ್ಲ. ದೇವರಾಜ ಅರಸು ದೃಢವಾಗಿ ಹಿಂದುಳಿದವರ ಪರವಾಗಿ ನಿಂತ ಕಾರಣ ಹಾವನೂರು ಆಯೋಗ ಅನುಷ್ಠಾನವಾಯಿತು. ರಾಮಕೃಷ್ಣ ಹೆಗಡೆ ಅವರು ಒಕ್ಕಲಿಗರ ಪ್ರತಿಭಟನೆ ಎದುರು ನಿಲ್ಲದ ಕಾರಣ ವೆಂಕಟಸ್ವಾಮಿ ಆಯೋಗ ವಿಕೃತ ರೂಪ ಪಡೆಯಿತು. ವೀರಪ್ಪ ಮೊಯಿಲಿ ಚಿನ್ನಪ್ಪರೆಡ್ಡಿ ಆಯೋಗದ ಶಿಫಾರಸ್ಸಿನಂತೆ ಸ್ಥಳೀಯ ಸಂಸ್ಥೆಗಳಲ್ಲಿ ಹಿಂದುಳಿದವರಿಗೆ ಮೀಸಲಾತಿ ಸೌಲಭ್ಯ ಕೊಟ್ಟರು. ಆದರೆ ಅವರಿಗೆ ಮೇಲ್ವರ್ಗದ ವಿರೋಧ ಕಟ್ಟಿಕೊಂಡು ವರದಿಯನ್ನು ನೈಜವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗಲಿಲ್ಲ. ಒಕ್ಕಲಿಗರ ಹಾಗೂ ಲಿಂಗಾಯಿತರ ಆಕ್ರೋಶಕ್ಕೂ ಅವರು ತುತ್ತಾದರು.

ಪ್ರೊ। ಬರಗೂರು ರಾಮಚಂದ್ರಪ್ಪ ಹೇಳುವಂತೆ ''ಹಿಂದುಳಿದ ಸಮುದಾಯ ಎಂಬುದು ಒಂದು ಸುಸಂಘಟಿತ ವರ್ಗವಲ್ಲ. ಅದೊಂದು ನೂರಾರು ಜಾತಿಗಳ ಮಿಶ್ರಣ. ಸೌಲಭ್ಯ ಸಿಗದವರ ಅತೃಪ್ತಿ ಕೆಲವೊಮ್ಮೆ ಇಡೀ ಹಿಂದುಳಿದವರ್ಗಕ್ಕೆ ಮಾರಕವಾಗುತ್ತದೆ'' ಎಂಬ ಮಾತು ಅಕ್ಷರಶಃ ಸತ್ಯ. ಈಡಿಗ, ಕುರುಬ, ಬಲಿಜ, ನಾಯಕ, ನೇಕಾರ, ವಿಶ್ವಕರ್ಮ, ಗೊಲ್ಲ ಮುಂತಾದ ಜಾತಿಗಳಿಗೆ ೧೯೭೦ರ ನಂತರ ರಾಜಕೀಯ ಮನ್ನಣೆ ದೊರಕಿದೆ. ಯಾವುದೇ ಅವಕಾಶ ಸಿಗದ ನೂರಾರು ಜಾತಿಗಳು ಹಿಂದುಳಿದ ಸಮುದಾಯದಲ್ಲಿವೆ. ಅವರುಗಳು ಅಸಮಾಧಾನದಿಂದ ಕುದಿಯುತ್ತಿದ್ದಾರೆ. ಪ್ರತಿಯೊಂದು ಚುನಾವಣೆಯಲ್ಲೂ ಮೇಲ್ವರ್ಗದ ಅಭ್ಯರ್ಥಿಗಳು ತಮ್ಮ ಮತ ಕ್ಷೇತ್ರದ ಇಂತಹ ಹಿಂದುಳಿದ ಜಾತಿಯ ಅಸಮಾಧಾನವನ್ನು ಸಮರ್ಪಕವಾಗಿ ಬಳಸಿಕೊಂಡು ರಾಜಕೀಯ ಲಾಭ ಪಡೆಯುತ್ತಾರೆ, ಹಿಂದುಳಿದ ವರ್ಗಗಳಿಗೆ ಅಮೋಘ ಸೇವೆ ಸಲ್ಲಿಸಿದ ದೇವರಾಜ ಅರಸು ರಾಜಕೀಯ ಸೋಲು ಅನುಭವಿಸಲು ಇದೇ ಕಾರಣವಾಯಿತು. ಬಂಗಾರಪ್ಪ ಹಾಗೂ ವೀರಪ್ಪಮೊಯಿಲಿ ಸಹ ಈ ಕಾರಣದಿಂದಲೇ ರಾಜಕೀಯ ಉನ್ನತಿ ಪಡೆಯಲಿಲ್ಲ. ಈ ರಾಜ್ಯದ ರಾಜಕಾರಣದಲ್ಲಿ ಹಿಂದುಳಿದವರನ್ನು ತಾತ್ವಿಕವಾಗಿ

ಪ್ರಬುದ್ಧರಾಗಿಸಬೇಕು. ಎಲ್ಲಾ ಜಾತಿಗಳಿಗೂ ಸಮಾನ ಅವಕಾಶ ಕೊಟ್ಟು, ಅವರನ್ನು ಜೊತೆಗೆ ಕರೆದುಕೊಂಡು ಹೋಗುವ ಪ್ರಬುದ್ಧ ನಾಯಕತ್ವ ಹಿಂದುಳಿದ ವರ್ಗಗಳಲ್ಲೇ ಮೂಡಬೇಕು. ಹಿಂದುಳಿದವರಲ್ಲಿನ ಆಂತರಿಕ ಘರ್ಷಣೆ ಒಟ್ಟು ಹಿಂದುಳಿದ ಸಮುದಾಯಕ್ಕಾಗುವ ನಷ್ಟವೆಂದು ಎಲ್ಲಾ ಹಿಂದುಳಿದ ಜಾತಿಯ ಜನರಿಗೆ ತಿಳಿಹೇಳಬೇಕು. ಇಲ್ಲದೇ ಹೋದರೆ ಭವಿಷ್ಯದಲ್ಲಿ ಕರ್ನಾಟಕದ ರಾಜಕಾರಣದ ಸೂತ್ರ ಕೆಲವೇ ಮೇಲ್ವರ್ಗಗಳಲ್ಲಿ ಕೇಂದ್ರೀಕೃತವಾಗುತ್ತದೆ.

☆ ರಾಜಕಾರಣಕ್ಕೆ ತಾತ್ವಿಕ ಹಿನ್ನೆಲೆ ಅತ್ಯಗತ್ಯ. ಸಮಾಜವಾದ, ಮಾರ್ಕ್ಸ್‌ವಾದ ಹಾಗೂ ಇತರ ಸಿದ್ಧಾಂತಗಳು ಇಂದೂ ಜನಪ್ರಿಯವಾಗಿದ್ದರೆ ಆ ಶ್ರೇಯಸ್ಸು ಆ ಸಿದ್ಧಾಂತದ ಪ್ರತಿಪಾದಕರಾದ ಅದರ ಚಿಂತಕರಿಗೆ ಸೇರುತ್ತದೆ. ಮಹಾತ್ಮ ಗಾಂಧೀಜಿ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ತಂದ ಅಹಿಂಸೆ, ಸತ್ಯಾಗ್ರಹ, ಅಸಹಕಾರ, ಸ್ವದೇಶಿ ಸೂತ್ರಗಳು ಜನಪ್ರಿಯವಾಗಲು ಆ ಕಾಲದಲ್ಲಿ ಗಾಂಧೀಜಿ ಅವರ ಅನುಯಾಯಿಗಳು, ಆ ಸೂತ್ರಗಳಿಗೆ ವಿವಿಧ ರೀತಿ ವ್ಯಾಖ್ಯಾನ ನೀಡಿ ಅದನ್ನು ಜನತೆಗೆ ಮುಟ್ಟಿಸಿದ್ದು ಕಾರಣವಾಗಿದೆ. ಇಂತಹ ಕೆಲಸ ಡಾ। ಲೋಹಿಯಾ ಮೊದಲಾದವರ ಮೂಲಕ ರಾಷ್ಟ್ರಮಟ್ಟದಲ್ಲಿ ನಡೆದಿದೆ. ಅದು ರಾಜ್ಯಮಟ್ಟದಲ್ಲಿ ಸಮರ್ಪಕವಾಗಿ ನಡೆದಿಲ್ಲ. ನಮ್ಮ ಚಿಂತಕರನ್ನು ರಾಜಕಾರಣಿಗಳು ದೂರೀಕರಿಸುತ್ತಾರೆ. ಅವರಿಂದ ಬೇರೆಯಾಗಿ ತಾವೇ ಶ್ರೇಷ್ಠರೆಂದು ಬೀಗುತ್ತಾರೆ. ಕೆಂಗಲ್ ಹನುಮಂತಯ್ಯ ಅವರ ಸಂಸ್ಕೃತಿಪ್ರೇಮ, ನಿಜಲಿಂಗಪ್ಪ ಅವರ ನೀರಾವರಿ, ದೇವರಾಜ ಅರಸು ಅವರ ಭೂ ಸುಧಾರಣೆ, ಹೆಗಡೆ ಅವರ ಅಧಿಕಾರ ವಿಕೇಂದ್ರೀಕರಣ, ವೀರಪ್ಪ ಮೊಯಿಲಿ ಅವರ ರಾಜಕೀಯ ಮೀಸಲಾತಿ, ಎಸ್. ಎಂ. ಕೃಷ್ಣ ಅವರ ವಿದೇಶಿ ಬಂಡವಾಳ ಆಕರ್ಷಣೆ- ಮೊದಲಾದ ವಿಷಯಗಳಿಗೆ ರಾಜ್ಯದಲ್ಲಿನ ವಿವಿಧ ಕ್ಷೇತ್ರದಲ್ಲಿನ ತಜ್ಞರು ಅಥವಾ ಚಿಂತಕರು ಹೊಸರೂಪ ಕೊಡಬಹುದಾಗಿತ್ತು. ಅದರ ಸಾಧಕ-ಬಾಧಕಗಳ ಬಗ್ಗೆ ಜನತೆಗೆ ತಿಳಿಹೇಳಿದ್ದರೆ, ರಾಜ್ಯದ ರಾಜಕಾರಣದಲ್ಲಿ ಗುಣಾತ್ಮಕ ಬದಲಾವಣೆಯಾಗುತ್ತಿತ್ತು. ಪ್ರಸ್ತುತ ಪರಿಸ್ಥಿತಿ ಗಮನಿಸಿ ಹೇಳುವುದಾದರೆ ಮುಂದೆ ಸಹ ಅಧಿಕಾರಸ್ಥ ರಾಜಕಾರಣಿ ಹಾಗೂ ಪ್ರಬುದ್ಧ ಚಿಂತಕರಲ್ಲಿ ಸಮನ್ವಯ ಸಾಧಿಸುವುದು ಸಾಧ್ಯವಾಗುವುದೇ ಇಲ್ಲ. ಈ ಕಾರಣದಿಂದ ಆಡಳಿತ ಸೂತ್ರ ಹಿಡಿದವರ ಎಷ್ಟೋ ಶ್ರೇಷ್ಠ ವಿಚಾರಗಳು ಚರ್ಚೆಗೆ ಬರದೆ ಗರ್ಭದಲ್ಲೇ ನಾಶವಾಗಬಹುದು.

☆ ಭಾರತದ ರಾಜಕಾರಣದಲ್ಲಿ ಅಲ್ಪಸಂಖ್ಯಾತರೆಂದರೆ ನಮ್ಮ ರಾಜಕಾರಣಿಗಳಿಗೆ ಮುಸ್ಲಿಮರು ಮಾತ್ರ ಗೋಚರಿಸುತ್ತಾರೆ. ಮಿಕ್ಕ ಅಲ್ಪಸಂಖ್ಯಾತರಾದ ಜೈನ, ಕ್ರಿಶ್ಚಿಯನ್, ಸಿಖ್, ಬೌದ್ಧ, ಭಾಷಾ ಅಲ್ಪಸಂಖ್ಯಾತರಾದ ಕೊಂಕಣಿ, ತುಳು, ಕೊಡವ ಮುಂತಾದವರು ಅವರ ಕಣ್ಣಿಗೆ ಕಾಣಬರುವುದೇ ಇಲ್ಲ. ೧೯೭೧ರ ಮಧ್ಯಂತರ ಲೋಕಸಭಾ ಚುನಾವಣೆಯಲ್ಲಿ ನಿಜಲಿಂಗಪ್ಪ ನೇತೃತ್ವದ ಸಂಸ್ಥಾ ಕಾಂಗ್ರೆಸ್ ಜನಸಂಘದೊಡನೆ ಮಹಾಮೈತ್ರಿ ಮಾಡಿಕೊಂಡು ಚುನಾವಣೆಗೆ ಸ್ಪರ್ಧಿಸಿತು. ಅಲ್ಲಿಂದಲೇ ಭಾರತದಲ್ಲಿ ಮುಸ್ಲಿಮರನ್ನು ರಕ್ಷಿಸುವ ಹಕ್ಕನ್ನು ಆಡಳಿತ ಕಾಂಗ್ರೆಸ್ ಅದರ ಮುಂದುವರೆದ ಭಾಗವಾದ ಕಾಂಗೈ ಗುತ್ತಿಗೆ ಪಡೆದುಕೊಂಡಂತೆ ಆ ಪಕ್ಷದ ರಾಜಕಾರಣಿಗಳು ಭಾವಿಸಿದರು. ಅಲ್ಲಿನ ನೀತಿ ನಿರೂಪಕರು, ಮೊದಲು ಅಲ್ಪಸಂಖ್ಯಾತ ಮುಸ್ಲಿಂ ಸಮುದಾಯದ ಕಾರ್ಯಕ್ರಮ ಹೇಳಿ ಅನಂತರ ಉಳಿದ ವಿಚಾರಗಳನ್ನು ಮಾತನಾಡುತ್ತಾರೆ. ಇದು ಬಿಜೆಪಿ ಹೊರತುಪಡಿಸಿದ ಇತರೆಲ್ಲಾ ಜಾತ್ಯತೀತ ಪಕ್ಷಗಳ ನೀತಿಯೂ ಆಗಿದೆ. ಈ ಮುಸ್ಲಿಮರನ್ನು ಈ ಪರಿ ಓಲೈಸುವ ಪದ್ಧತಿಯಿಂದಾಗಿಯೇ ಹಿಂದೂ ಸಮುದಾಯದ ಮಧ್ಯಮ ವರ್ಗದಲ್ಲಿ ಬಿಜೆಪಿ ಸಾಕಷ್ಟು ಜನಪ್ರಿಯವಾಗಿದೆ. ಕರ್ನಾಟಕದಲ್ಲಂತೂ ಅಲ್ಪಸಂಖ್ಯಾತ ಮುಸ್ಲಿಮರು ಯಾವುದೇ ಪಕ್ಷ ಆಡಳಿತದಲ್ಲಿರಲಿ, ತಮಗೆ ಬೇಕಾದುದನ್ನು ಸಾಧಿಸುವ ಕಲೆಗಾರಿಕೆ ಪಡೆದಿದ್ದಾರೆ. ಕೆಲವು ರಾಜಕಾರಣಿಗಳಿಗೂ ಅವರು ಇತರ ಸಮುದಾಯದೊಡನೆ ಬೆರೆತು ಬಾಳ್ವೆ ಮಾಡುವುದು ಬೇಕಾಗಿಲ್ಲ. ದೇವರಾಜ ಅರಸು, ಗುಂಡೂರಾವ್, ಹೆಗಡೆ, ಬಂಗಾರಪ್ಪ, ವೀರಪ್ಪ ಮೊಯಿಲಿ, ದೇವೇಗೌಡ ಮುಖ್ಯಮಂತ್ರಿಗಳಿಗೆ ಅಜೀಜ್ ಸೇಠ್, ಎಫ್.ಎಂ. ಖಾನ್, ಅಬ್ದುಲ್ ನಜೀರ್ ಸಾಬ್, ಎಂ. ಎಲ್. ಉಸ್ತಾದ್, ರೆಹಮಾನ್ ಖಾನ್, ಇಬ್ರಾಹಿಂ ಜೊತೆಯಲ್ಲಿಟ್ಟುಕೊಂಡು ರಾಜಕೀಯ ಮಾಡಬೇಕಾದ ಅನಿವಾರ್ಯತೆ ಉಂಟಾಯಿತು. ಮುಸ್ಲಿಮರು ಮತದಾನದ ಸಂದರ್ಭದಲ್ಲಿ ಸಾಮೂಹಿಕವಾಗಿ ನಿರ್ಧಾರ ತೆಗೆದುಕೊಳ್ಳುವ ಕಾರಣ ಎಲ್ಲಾ ರಾಜಕೀಯ ಪಕ್ಷಗಳು ಅವರನ್ನು ಎದುರು ಹಾಕಿಕೊಳ್ಳಲು ಹೆದರುತ್ತವೆ. ಅಲ್ಪಸಂಖ್ಯಾತ ಮುಸ್ಲಿಂ ಸಮುದಾಯ ಸಹ ಈ ಬೆಂಬಲವನ್ನು ಜನಾಂಗದ ಒಟ್ಟು ಹಿತಕ್ಕೆ ಬಳಸಬೇಕಾದ ಅಗತ್ಯವಿದೆ. ಮುಖ್ಯಮಂತ್ರಿ ವೀರೇಂದ್ರ ಪಾಟೀಲ್ ೧೯೯೦ರಲ್ಲಿ ಅಧಿಕಾರ ಕಳೆದುಕೊಳ್ಳಲು ಹಾಗೂ ಇಂದಿನ ಮುಖ್ಯಮಂತ್ರಿ ಕೃಷ್ಣ ಅಲ್ಪಸಂಖ್ಯಾತ ನಾಯಕರೊಬ್ಬರಿಂದ ಅನುಭವಿಸುತ್ತಿರುವ ಇರುಸು-ಮುರುಸು ಎಲ್ಲರಿಗೂ ಗೊತ್ತಿರುವ ವಿಚಾರ. ಅವರನ್ನು ಓಲೈಸುತ್ತಿರುವ ಜಾತ್ಯತೀತ ರಾಜಕೀಯ ಪಕ್ಷಗಳ ಮನಸ್ಥಿತಿಯನ್ನು ಕಂಡ ಮಧ್ಯಮ ವರ್ಗ ಬಿಜೆಪಿ ಅಥವಾ ಬೇರೆ ಸಂಘಟನೆಯತ್ತ ಕಣ್ಣು ಹಾಯಿಸಿದರೆ ಆಶ್ಚರ್ಯವಿಲ್ಲ.

☆ ೧೯೮೩ರ ನಂತರ ರಾಜ್ಯದಲ್ಲಿ ಅಧಿಕಾರ ವಿಕೇಂದ್ರೀಕರಣವಾಗಿರುವುದು ನಿಜ. ಆದರೆ ಬಹುಮಟ್ಟಿನ ರಾಜಕೀಯ ಪಕ್ಷಗಳು ನಗರ ಪ್ರದೇಶದ ಜನಹಿತವನ್ನು ಮಾತ್ರ ತಮ್ಮ ಗುರಿಯಾಗಿಟ್ಟುಕೊಂಡಿವೆ. ಬಿಜೆಪಿ ಹಾಗೂ ಕಮ್ಯುನಿಸ್ಟ್ ಪಕ್ಷಗಳನ್ನು ಇದಕ್ಕೆ ಉದಾಹರಣೆ ಕೊಡಬಹುದು. ಮಾತಿನಲ್ಲಿ ರೈತ, ಕಾರ್ಮಿಕರ ವಿಚಾರವನ್ನು ಪ್ರಸ್ತಾಪಿಸುತ್ತವೆ. ಆದರೆ ಗ್ರಾಮೀಣ ಸಮುದಾಯ ಕೃಷಿಯೇತರ ಚಟುವಟಿಕೆಗಳ ಬಗ್ಗೆ ಅವುಗಳಲ್ಲಿ ಅಂತಹ ಜ್ಞಾನವೇನೂ ಇಲ್ಲ. ಕರ್ನಾಟಕದ ಯಾವುದೇ ಪ್ರಮುಖ ರಾಜಕೀಯ ಪಕ್ಷ ರಾಜ್ಯದ ೧೭೫ ತಾಲ್ಲೂಕಿನ ಸಮಸ್ಯೆಗಳ ಬಗ್ಗೆ ಅಧ್ಯಯನ ನಡೆಸಿ ಅವುಗಳ ಪರಿಹಾರಕ್ಕೆ ದೀರ್ಘ ಹೋರಾಟ ಹಮ್ಮಿಕೊಂಡ ನಿದರ್ಶನ ಕಡಿಮೆ. ಒಮ್ಮೆ ರಾಜಕೀಯದಲ್ಲಿ ಸ್ಥಾನ ಮಾನ ಪಡೆದು ವಿಧಾನಸಭಾ ಅಥವಾ ಲೋಕಸಭೆಯ ಸದಸ್ಯರಾದರೆ ಯಾರೂ ಸಮಸ್ಯೆಗಳ ಮೂಲಕ್ಕೆ ಹೋಗುವುದಿಲ್ಲ. ಮೇಲ್ನೋಟಕ್ಕೆ ಕಾಣಿಸುವ ವಿಚಾರಗಳನ್ನು ಮಾತ್ರ ಅವರು ಹೇಳುತ್ತಾ ಹೋಗುತ್ತಾರೆ. ಪತ್ರಿಕೆ ಹಾಗೂ ಇತರ ಮಾಧ್ಯಮಗಳು ನಗರ ಕೇಂದ್ರೀಕೃತವಾಗಿರುವ ಕಾರಣ ಸದಾ ಪ್ರಚಾರದ ಮೇಲೆ ಕಣ್ಣು ಇಟ್ಟಿರುವ ರಾಜಕಾರಣಿಗಳು ಮಾಧ್ಯಮದ ಮಾತಿಗೆ ಮಾತ್ರ ಮಹತ್ವ ಕೊಡುತ್ತಾರೆ. ಬೆಂಗಳೂರು, ಹುಬ್ಬಳ್ಳಿ ನಗರದ ಸಣ್ಣ ಸಮಸ್ಯೆಯೇ, ದೂರದೂರದ ತಾಲ್ಲೂಕಿನ ಬದುಕಿನ ಪ್ರಶ್ನೆಗಿಂತ ಹೆಚ್ಚು ಮಹತ್ವದ್ದು ಎನಿಸುತ್ತದೆ. ಇದು ನಗರ ಕೇಂದ್ರೀಕೃತ ರಾಜಕಾರಣದ ಫಲ.

☆ ಕರ್ನಾಟಕ ರಾಜಕಾರಣದಲ್ಲಿ ಗುರುಮನೆಯ ಪ್ರಭಾವ ಪ್ರಾಚೀನ ಕಾಲದಿಂದಲೂ ಕಾಣಬರುತ್ತಿದೆ. ವಿಜಯನಗರ ಸಾಮ್ರಾಜ್ಯದ ಏಳಿಗೆಯಲ್ಲಿ ಯತಿ ವಿದ್ಯಾರಣ್ಯರ ಪ್ರಭಾವವನ್ನು ಗುರುತಿಸಬಹುದು. ಅನೇಕ ಜೈನ ಸನ್ಯಾಸಿಗಳು ರಾಜ ಮಹಾರಾಜರಿಗೆ ಮಾರ್ಗದರ್ಶನ ನೀಡಿದ್ದಾರೆ. ಹೊಯ್ಸಳ ದೊರೆ ವಿಷ್ಣುವರ್ಧನನ ವೈಯಕ್ತಿಕ ಮತವನ್ನು ತಮ್ಮ ಪ್ರಭಾವದಿಂದ ಬದಲಾವಣೆ ಮಾಡಿದ ಕೀರ್ತಿ ವಿಶಿಷ್ಟಾದ್ವೈತ ಮತ ಸ್ಥಾಪಕರಾದ ರಾಮಾನುಜಾಚಾರ್ಯರಿಗೆ ಸೇರುತ್ತದೆ. ಬಿಜ್ಜಳನ ಆಸ್ಥಾನದಲ್ಲಿ ಮಹಾಮಾತ್ಯರಾಗಿದ್ದ ಬಸವಣ್ಣನವರಂತೂ ತಮ್ಮ ಮಹಾರಾಜರ ಮೇಲೆ ಅಪರಿಮಿತ ಪ್ರಭಾವ ಹೊಂದಿದ್ದರು. ಶ್ರೀ ಕೃಷ್ಣದೇವರಾಯನ ರಾಜಗುರುಗಳಾದ ವ್ಯಾಸರಾಯರು ತಮ್ಮ ಪ್ರಭಾವ ಬಳಸಿಕೊಂಡು ದಕ್ಷಿಣ ಭಾರತದಲ್ಲೆಲ್ಲಾ ಹನುಮಂತನ ಗುಡಿಯನ್ನು ಪ್ರಾರಂಭಿಸಿದರು. ಕೆಳದಿ, ಚಿತ್ರದುರ್ಗ, ಯಲಹಂಕ, ಮೈಸೂರಿನ ದೊರೆಗಳು ಮಠ, ದೇವಾಲಯಗಳಲ್ಲಿ ಗೌರವ ಹೊಂದಿದ್ದರು. ಚಿತ್ರದುರ್ಗದ ಪಾಳೇಗಾರ ರಾಜಾ ವೀರಮದಕರಿನಾಯಕ ಬೃಹನ್ಮಠದ ಸ್ವಾಮಿಗಳಿಗೆ 'ತಾವು ಕುಂತಪೀಠದ ದೊರೆಗಳು ನಾವು ನಡೆದಾಡುವ ದೊರೆಗಳು' ಎಂದಿದ್ದರು. ಅಂದರೆ ತಮ್ಮ ಪ್ರಾಂತ್ಯದ ಧಾರ್ಮಿಕ ನಾಯಕರ ಪ್ರತಿನಿಧಿಯಾಗಿ ತಾವು ಅರಸರಾಗಿದ್ದೇವೆಂಬ ಅರ್ಪಣಾ ಮನೋಭಾವ ಅವನಲ್ಲಿ ಎದ್ದು ಕಾಣುತ್ತಿತ್ತು. ಸ್ವಾತಂತ್ರ್ಯಾನಂತರ ಧಾರ್ಮಿಕ ಮಠಗಳು ಹೆಚ್ಚಿನ ರಾಜಕೀಯ ಆಸಕ್ತಿ ತೋರಿಸಿದ್ದುಂಟು. ಪ್ರಾರಂಭದಲ್ಲಿ ವೀರಶೈವ ಮಠಗಳು ಶಿಕ್ಷಣ ಕ್ಷೇತ್ರವನ್ನು ಪ್ರವೇಶಿಸಿದವು. ಸಾವಿರಾರು ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ ಹಾಗೂ ಶಿಕ್ಷಣವನ್ನು ಒದಗಿಸಿದ ವೀರಶೈವ ಮಠಗಳು ಸಮಾಜದ ಎಲ್ಲ ವರ್ಗದ ಪ್ರೀತಿ ವಿಶ್ವಾಸಗಳಿಗೆ ಪಾತ್ರವಾದವು. ಸಿದ್ಧಗಂಗೆ, ಚಿತ್ರದುರ್ಗ, ಸಿರಿಗೆರೆ, ಹುಬ್ಬಳ್ಳಿ, ಗುಲ್ಬರ್ಗಾ ಹಾಗೂ ಸುತ್ತೂರು ಮಠಗಳ ಶೈಕ್ಷಣಿಕ ಕಾರ್ಯದಿಂದ ಪ್ರೇರಣೆ ಪಡೆದವರು ಒಕ್ಕಲಿಗ ಜನಾಂಗದ ಆದಿ ಚುಂಚನಗಿರಿಯ ಬಾಲಗಂಗಾಧರನಾಥ ಸ್ವಾಮೀಜಿ. ಕೇವಲ ೨೫ ವರ್ಷಗಳಲ್ಲಿ ಆದಿಚುಂಚನಗಿರಿ ಮಠ ಶೈಕ್ಷಣಿಕ ಕ್ಷೇತ್ರದಲ್ಲಿ ಯಾರೂ ಮಾಡದ ಸಾಧನೆ ಮಾಡಿದೆ. ೧೯೯೦ರ ನಂತರ ಕುರುಬ ಜನಾಂಗವು ಕಾಗಿನೆಲೆ ಪೀಠ ಸ್ಥಾಪಿಸಿ ಈ ಎರಡೂ ಜನಾಂಗದ ಪರಂಪರೆ ಅನುಸರಿಸಿದೆ. ಶೃಂಗೇರಿ, ಮೇಲುಕೋಟೆ ಹಾಗೂ ಉಡುಪಿ ಬ್ರಾಹ್ಮಣ ಜನಾಂಗದ ಮಠಗಳು ಕೇವಲ ಧಾರ್ಮಿಕ ಕ್ಷೇತ್ರಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಂಡಿವೆ. ಉಡುಪಿ ಪೇಜಾವರ ಮಠಾಧೀಶರಾದ ವಿಶ್ವೇಶ ತೀರ್ಥ ಸ್ವಾಮೀಜಿ ವಿಶ್ವ ಹಿಂದೂ ಪರಿಷತ್‌ನ ಹಿರಿಯ ಉಪಾಧ್ಯಕ್ಷರಾಗಿದ್ದಾರೆ. ಅಯೋಧ್ಯೆಯ ರಾಮಮಂದಿರ ಕಟ್ಟಬೇಕೆಂಬ ಒತ್ತಾಯದಲ್ಲಿ ಪೇಜಾವರರ ಧ್ವನಿಯೂ ಇದೆ. ಧರ್ಮಸ್ಥಳದ ವೀರೇಂದ್ರ ಹೆಗ್ಗಡೆ ಮೇಲ್ನೋಟಕ್ಕೆ ಯಾವುದೇ ರಾಜಕೀಯ ಸಿದ್ಧಾಂತದೊಡನೆ ತಮ್ಮನ್ನು ಗುರುತಿಸಿಕೊಂಡಿಲ್ಲ.

ಮುಸ್ಲಿಮರ ಧಾರ್ಮಿಕ ಗುರುಗಳು ಅಂದರೆ 'ಮುಲ್ಲಾ' ಹಾಗೂ ಕ್ರಿಶ್ಚಿಯನ್ ಧರ್ಮದ ಧಾರ್ಮಿಕ ಮುಖಂಡರಾದ 'ಫಾದರ್' ಅವರುಗಳ ಅಗತ್ಯವಿದ್ದಾಗ ತಮ್ಮ ತಮ್ಮ ಜನಾಂಗಗಳ ಹಿತಕಾಯಲು ಸಂಕೋಚ ಪಡುವವರಲ್ಲ.

೧೯೭೭ರಲ್ಲಿ ಹಾವನೂರು ಹಿಂದುಳಿದ ಆಯೋಗ ಅನುಷ್ಠಾನ ಮಾಡಿದಾಗ ಭೀಮಣ್ಣ ಖಂಡ್ರೆ, ಒಳಗೊಂಡಂತೆ ಅನೇಕ ವೀರಶೈವ ನಾಯಕರು ಅಂದಿನ ಆಡಳಿತ ಕಾಂಗ್ರೆಸ್ ಸರ್ಕಾರ ಹಾಗೂ ದೇವರಾಜ ಅರಸು ಅವರನ್ನು ಉಗ್ರವಾಗಿ ಪ್ರತಿಭಟಿಸಿದರು. ಜನಾಂಗದಲ್ಲಿ ರಾಜಕೀಯ ಜಾಗೃತಿ ಉಂಟು ಮಾಡಲು ವಿವಿಧ ರೀತಿಯ ಹೋರಾಟವನ್ನು ವೀರಶೈವ ಸಂಘಟನೆಗಳು ಹಮ್ಮಿಕೊಂಡವು. ಕೊನೆಗೆ ನ್ಯಾಯಾಲಯದ ಮೆಟ್ಟಿಲು ಹತ್ತಲೂ ಈ ಸಂಘಟನೆ ಹಿಂಜರಿಯಲಿಲ್ಲ. ಅಂತಹ ಸಂದರ್ಭದಲ್ಲಿ ವೀರಶೈವ ಮಠಗಳು ಈ ನಾಯಕರುಗಳಿಗೆ ನೀಡಿದ ನೈತಿಕ ಬೆಂಬಲವನ್ನು ಯಾರೂ ಮರೆಯುವಂತಿಲ್ಲ.

೧೯೯೪ರಲ್ಲಿ ವೀರಪ್ಪ ಮೊಯಿಲಿ ಸರ್ಕಾರ ಚಿನ್ನಪ್ಪ ರೆಡ್ಡಿ ಹಿಂದುಳಿದ ಆಯೋಗವನ್ನು ಅನುಷ್ಠಾನ ಮಾಡಿತಷ್ಟೆ. ಅದರಲ್ಲಿ ಒಕ್ಕಲಿಗ ಸಮುದಾಯವನ್ನು ಹಿಂದುಳಿದ ಪಟ್ಟಿಯಿಂದ ಕೈಬಿಟ್ಟ ಕಾರಣ ದೇವೇಗೌಡ ಅವರ ನಾಯಕತ್ವದಲ್ಲಿ ವ್ಯಾಪಕ ಪ್ರತಿಭಟನೆ ಕಾಣಬಂತು. ಆಗ ಆದಿಚುಂಚನಗಿರಿಯ ಬಾಲಗಂಗಾಧರನಾಥ ಸ್ವಾಮೀಜಿ ಅವರು ಸ್ವತಃ ಈ ಪ್ರತಿಭಟನೆಯಲ್ಲಿ ಪಾಲುಗೊಂಡಿದ್ದರು. ಆ ಚುನಾವಣೆಯಲ್ಲಿ ಕಾಂಗ್ರೆ ಪಕ್ಷ ಹೀನಾಯ ಸೋಲು ಅನುಭವಿಸಿದಾಗ ಮಠಗಳ ಪ್ರಭಾವ ಉದಾಹರಣೆ ಮೂಲಕ ಸ್ಪಷ್ಟಗೊಂಡಿತು.

ಚುನಾವಣೆಯ ಸಂದರ್ಭದಲ್ಲಿ ಅಭ್ಯರ್ಥಿಗಳು ತಮ್ಮ ತಮ್ಮ ಮಠಗಳ ಆಶೀರ್ವಾದವನ್ನು ಬೇಡುತ್ತಾರೆ. ತಮ್ಮ ಜಾತಿಯ ಅಭ್ಯರ್ಥಿಗಳು ಜಯ ಪಡೆಯಲು ಬೇಕಾದ ಎಲ್ಲಾ ನೆರವುಗಳನ್ನು ಆ ಧಾರ್ಮಿಕ ನಾಯಕರು ನೀಡುತ್ತಾರೆ. ಅಭ್ಯರ್ಥಿಗಳ ಅರ್ಹತೆ ಅಥವಾ ಸಾಮಾಜಿಕ ನ್ಯಾಯ ಇಲ್ಲಿ ಪ್ರಾಮುಖ್ಯತೆ ಪಡೆಯುವುದಿಲ್ಲ. ಕೇವಲ ಜಾತಿ ಪ್ರೇಮ ಎದ್ದು ಕಾಣುತ್ತದೆ. ಮುಂದಿನ ರಾಜ್ಯ ರಾಜಕಾರಣದಲ್ಲಿ ಇದು ಮತ್ತಷ್ಟು ಹೆಚ್ಚಾಗುವ ಸನ್ನಿವೇಶ ಗೋಚರವಾಗುತ್ತಿದೆ. ಇದಕ್ಕೆ ಪೂರಕವಾಗಿ ಅನೇಕ ಸಂಘಟನೆಗಳು ಕೆಲಸ ಮಾಡಬಹುದು. ಆರ್.ಎಸ್.ಎಸ್. ಹಾಗೂ ಬ್ರಾಹ್ಮಣ ಮಹಾಸಭಾ, ವೀರಶೈವ ಮಹಾಸಭಾ, ಒಕ್ಕಲಿಗರ ಸಂಘ ಹಾಗೂ ಕುರುಬರ ಸಂಘ ಈ ದೆಸೆಯಲ್ಲಿ ಚುರುಕು ಆಗಬಹುದು. ಜೊತೆಗೆ ಅಧಿಕಾರ ಪಡೆಯಲು ಇಚ್ಛಿಸುವ ಎಲ್ಲ ರಾಜಕೀಯ ಪಕ್ಷಗಳು ಮಠ-ಮಾನ್ಯಗಳ ಕೃಪಾಶೀರ್ವಾದ ಪಡೆಯಲು ಹಾತೊರೆಯುವ ಸಂದರ್ಭ ಉದ್ಭವವಾಗಬಹುದು. ಇನ್ನು ಮುಂದೆ ಎಲ್ಲಾ ಜಾತಿಗಳಲ್ಲೂ ಮಠಗಳು ಹುಟ್ಟಿಕೊಂಡರೆ ಆಶ್ಚರ್ಯವಿಲ್ಲ.

☆ ಕರ್ನಾಟಕದ ರಾಜಕಾರಣದಲ್ಲಿ ಲಿಕ್ಕರ್ ಲಾಬಿಯ ಪ್ರಭಾವವನ್ನು ಆದಿಕಾಲದಿಂದಲೂ ಗುರುತಿಸಲಾಗಿದೆ. ಮೊದಲಿಗೆ ಮತದಾರರಿಗೆ ಕೊಂಚ ಹೆಂಡ ಹಂಚಲಾಗುತ್ತಿದೆಂಬ ಕೂಗು ಎಲ್ಲೆಡೆ ಕೇಳಿಬರುತ್ತಿತ್ತು. ಅದರಲ್ಲೂ ೧೯೭೭ರ ಚುನಾವಣೆಯ ಸಂದರ್ಭದಲ್ಲಿ ವಿರೋಧ ಪಕ್ಷಗಳು ಕಾಂಗ್ರೆಸ್ ವಿರುದ್ಧ ಇದನ್ನು ದೊಡ್ಡ ಆರೋಪವನ್ನಾಗಿ ಮಾಡಿದವು. ಈಗ ಎಲ್ಲಾ ರಾಜಕೀಯ ಪಕ್ಷಗಳು ಇದನ್ನು ಚುನಾವಣಾ ಪ್ರಕ್ರಿಯೆಯಲ್ಲಿ ಅಗತ್ಯ ತಂತ್ರವೆಂದು ಭಾವಿಸಿವೆ. ಲಿಕ್ಕರ್ ಲಾಬಿಗೆ ಬಲಿಯಾದ ಮೊದಲ ವ್ಯಕ್ತಿ ಶ್ರೀಮತಿ ಯಶೋಧರಮ್ಮ ದಾಸಪ್ಪ. ನಿಜಲಿಂಗಪ್ಪ ಸರ್ಕಾರ ಹೆಂಡದ ಮೇಲಿದ್ದ ನಿರ್ಬಂಧವನ್ನು ತೆಗೆದುಹಾಕಿದ್ದನ್ನು ಪ್ರತಿಭಟಿಸಿ ಅಂದಿನ ಸಮಾಜ ಕಲ್ಯಾಣ ಸಚಿವರಾದ ಶ್ರೀಮತಿ ಯಶೋಧರಮ್ಮ ದಾಸಪ್ಪ ಮಂತ್ರಿಮಂಡಲಕ್ಕೆ ರಾಜೀನಾಮೆ ಕೊಟ್ಟದ್ದು ದೊಡ್ಡ ಸಂಗತಿಯಾಗದಂತೆ ನೋಡಿಕೊಂಡವರು ಲಿಕ್ಕರ್ ಲಾಲಿಯ ಅಂದಿನ ದೊಡ್ಡ ಕುಳಗಳು.

ನಿಜಲಿಂಗಪ್ಪ ಅವರ ಸರ್ಕಾರ ಇಂಡಿಯನ್ ಎಕ್ಸ್‌ಪ್ರೆಸ್ ಗ್ರೂಪ್‌ಗೆ ಬೆಂಗಳೂರಿನಲ್ಲಿ ಸ್ಥಳ ಕೊಟ್ಟಾಗ, ಪ್ರಜಾವಾಣಿ ತಂಡ ಸರ್ಕಾರದ ವಿರುದ್ಧ ಅಪರೋಕ್ಷ ಯುದ್ಧ ಸಾರಿತು. ದೇವರಾಜ ಅರಸು ಅವರಿಗೆ ಮತ್ತೊಬ್ಬ ಹೆಂಡದ ದೊರೆ ಎಚ್.ಆರ್. ಬಸವರಾಜು ಆಪ್ತರಾಗಿದ್ದರಲ್ಲದೆ ಅರಸು ಸಲಹೆಯಂತೆ ಸಂಯುಕ್ತ ಕರ್ನಾಟಕ ಪತ್ರಿಕೆಯ ಒಡೆತನ ಪಡೆದರು. ಹೆಗಡೆ ಅವರ ಬಾಟ್ಲಿಂಗ್ ಹಗರಣ ಈ ಬಗ್ಗೆ ಮತ್ತಷ್ಟು ಯೋಚಿಸುವಂತೆ ಮಾಡಿತು. ೧೯೮೯ರಲ್ಲಿ ವೀರೇಂದ್ರ ಪಾಟೀಲರ ಸರ್ಕಾರದಲ್ಲಿ ಹಣಕಾಸು ಸಚಿವರಾಗಿದ್ದ ಎಂ. ರಾಜಶೇಖರಮೂರ್ತಿ ಲಿಕ್ಕರ್ ಲಾಬಿ ವಿರುದ್ಧ ಸಮರ ಸಾರಿ ಹೆಂಡದ ಮಾರಾಟ ರದ್ದುಗೊಳಿಸುವುದಾಗಿ ಹೇಳಿದ್ದರು. ವೀರೇಂದ್ರ ಪಾಟೀಲರ ನಂತರ ಎಸ್. ಬಂಗಾರಪ್ಪ ಮುಖ್ಯಮಂತ್ರಿಯಾಗಲು ಇವೆಲ್ಲಾ ಸಹಾಯಕವಾಯಿತು. ವೀರಪ್ಪ ಮೊಯಿಲಿ ಅವರ ಸರ್ಕಾರ ಮದ್ಯ ಮಾರಾಟಕ್ಕೆ ಸಾಕಷ್ಟು ನಿರ್ಬಂಧ ಹಾಕಿತು. ೧೬ ವಯಸ್ಸಿನ ಕೆಳಗಿನವರಿಗೆ ಮದ್ಯ ಮಾರಾಟ ಮಾಡುವುದು ಶಿಕ್ಷಾರ್ಹವೆಂದೂ, ರಾಷ್ಟ್ರೀಯ ಹೆದ್ದಾರಿಯಲ್ಲಿ ನೂರು ಅಡಿಯೊಳಗೆ ಮದ್ಯ ಮಾರಾಟ ಮಾಡಬಾರದೆಂದೂ ಅದು ಕಾನೂನು ಮಾಡಿತು. ಈ ಎಲ್ಲಾ ಕಾರ್ಯಗಳ ಫಲ ೧೯೯೪ರಲ್ಲಿ ಕಾಂಗ್ರೆಸ್ ಕನಿಷ್ಠ ಸಾಧನೆ ಮಾಡಲು ಕಾರಣವಾಯಿತು.

ಈಗಂತೂ ಲಿಕ್ಕರ್ ಲಾಬಿಯ ಸಾಮ್ರಾಟರಾದ ವಿಜಯ ಮಲ್ಯ ಅವರು ರಾಜ್ಯಸಭಾ ಸದಸ್ಯರಾಗಿದ್ದಾರೆ, ರಾಷ್ಟ್ರೀಯ ಪಕ್ಷವೊಂದರ ಉಪಾಧ್ಯಕ್ಷರಾಗಿದ್ದಾರೆ. ೧೯೯೭ರ ವಿಧಾನಸಭಾ ಚುನಾವಣೆಯಲ್ಲಿ ಲಿಕ್ಕರ್ ಲಾಬಿಯ ಮೇಲುಗೈಯನ್ನು ಸ್ಪಷ್ಟವಾಗಿಯೇ ಗುರುತಿಸಲಾಯಿತು. ಮುಂದಿನ ದಿನಗಳಲ್ಲಿ ಕರ್ನಾಟಕ ರಾಜಕಾರಣವನ್ನು ಯಾರು ನಿಯಂತ್ರಿಸುತ್ತಾರೆಂಬುದಕ್ಕೆ ಪ್ರತ್ಯೇಕ ವ್ಯಾಖ್ಯಾನ ಬೇಡ.

☆ ರಾಜಕಾರಣವನ್ನು ನಿಯಂತ್ರಣ ಮಾಡಬೇಕೆಂದು ಲಿಕ್ಕರ್ ಲಾಬಿಯಂತೆ ಅನೇಕ ಲಾಬಿಗಳು ಹಾತೊರೆಯುತ್ತವೆ. ಅವರಲ್ಲಿ ಪ್ರಮುಖರು ನಗರ ಪ್ರದೇಶದಲ್ಲಿ ಭೂ ಒಡೆತನ ಪಡೆಯುವವರ ಗುಂಪು ಎನ್ನಬಹುದು. ಬೆಂಗಳೂರು, ಮೈಸೂರು, ದಾವಣಗೆರೆ,

ಹುಬ್ಬಳ್ಳಿಗಳಲ್ಲಿ ರೈತರ ಭೂಮಿಯನ್ನು ಕಡಿಮೆ ಬೆಲೆಗೆ ಕೊಂಡು ಕೃಷಿಯೇತರ ಚಟುವಟಿಕೆಗಳೆಂದು ಪರಿವರ್ತಿಸಿ ಅದನ್ನು ಹೆಚ್ಚಿನ ದರಕ್ಕೆ ಮಾರಾಟ ಮಾಡುವ ದೊಡ್ಡ ಜಾಲವಿದೆ. ಬೇರೆ ರಾಜ್ಯದವರು ಸಹ ಇದರಲ್ಲಿ ಹೆಚ್ಚಿನ ಪಾತ್ರ ವಹಿಸುತ್ತಿದ್ದಾರೆ. ಇಂತಹ ಜಾಲಗಳು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ತಲೆಯೆತ್ತಿವೆ. ಅಧಿಕಾರಸ್ಥ ರಾಜಕಾರಣಿಗಳೇ ಇದರಲ್ಲಿ ಪಾಲುಗೊಂಡಿದ್ದರೆ ಆಶ್ಚರ್ಯದ ಸಂಗತಿಯಲ್ಲ. ರಾಜಕೀಯ ಪಕ್ಷಗಳಿಗೆ ಸಂಪನ್ಮೂಲ ಒದಗಿಸುವ ಇಂತಹವರು ಶಾಸಕರಾಗಬಹುದು, ಕೊನೆಗೆ ಸಚಿವರಾಗುವಷ್ಟು ಪ್ರಭಾವಶಾಲಿಗಳಾಗಬಹುದು. ಜನಹಿತಕ್ಕಿಂತ ತಮ್ಮ ವ್ಯಾಪಾರ ವಹಿವಾಟಿಗೆ ಆದ್ಯತೆ ಕೊಡುವ ಇವರಿಂದ ರಾಜ್ಯದ ಅಭಿವೃದ್ಧಿ ಅಥವಾ ರಾಜಕಾರಣಕ್ಕೆ ಯಾವುದೇ ಉಪಯೋಗವಿಲ್ಲ.

☆ ಕಾಲಕಾಲಕ್ಕೆ ತಕ್ಕಂತೆ ಬೇರೆ ಬೇರೆ ಲಾಬಿಗಳು ಹುಟ್ಟಿಕೊಳ್ಳುತ್ತವೆ. ೧೯೯೨ರ ನಂತರ ಜಾಗತೀಕರಣದಿಂದಾಗಿ ಬಹುರಾಷ್ಟ್ರೀಯ ಕಂಪನಿಗಳ ಹಿತ ಕಾಯುವ ಜನ ಎಲ್ಲಾ ರಾಜಕೀಯ ಪಕ್ಷಗಳಲ್ಲೂ ಹುಟ್ಟಿಕೊಳ್ಳುತ್ತಾರೆ. ಬಹುರಾಷ್ಟ್ರೀಯ ಕಂಪನಿಯ ಮಾಲೀಕರು ಮ್ಯಾನೇಜ್‌ಮೆಂಟ್ ಥಿಯರಿ ಓದಿಕೊಂಡವರಲ್ಲವೆ? ಇವರು ಚುನಾವಣೆಗೆ ಸ್ಪರ್ಧಿಸುವ ರಾಜಕೀಯ ಪಕ್ಷಗಳಿಗೆ ದೇಣಿಗೆ ಕೊಡುವುದಿಲ್ಲ ಅಥವಾ ದೊಡ್ಡ ಮೊತ್ತ ಖರ್ಚು ಮಾಡಿ ತಮಗೆ ಬೇಕಾದ ಅಭ್ಯರ್ಥಿಗಳನ್ನು ಗೆಲ್ಲಿಸುವುದಿಲ್ಲ. ನೂತನ ಸಚಿವ ಸಂಪುಟ ರಚನೆಯಾದ ತಕ್ಷಣ ತಮಗೆ ಬೇಕಾದ ಮಿಕವನ್ನು ಬಲೆಗೆ ಹಾಕಿಕೊಳ್ಳುತ್ತಾರೆ. ಆ ಸರ್ಕಾರವಿರುವ ತನಕ ಕಂಪನಿಯ ಹಿತವನ್ನು ರಕ್ಷಿಸುವ ಹೊಣೆ ಆ ಸಚಿವರದ್ದಾಗಿರುತ್ತದೆ. ಬಹುರಾಷ್ಟ್ರೀಯ ಕಂಪನಿಗಳ ವಿರುದ್ಧ ಯಾವುದೇ ಸರ್ಕಾರದ ನಿರ್ಣಯ ಆಗದಂತೆ ನೋಡಿಕೊಳ್ಳುವ ಈ ಲಾಬಿ ಮುಂದಿನ ದಿನಗಳಲ್ಲಿ ಮತ್ತಷ್ಟು ಬಲಿಷ್ಠಗೊಳ್ಳಲಿದೆ.

☆ ಕರ್ನಾಟಕ ಇಡೀ ರಾಷ್ಟ್ರದಲ್ಲೇ ವೃತ್ತಿ ಶಿಕ್ಷಣ ನೀಡುವ ಪ್ರಮುಖ ರಾಜ್ಯಗಳಲ್ಲಿ ಒಂದಾಗಿದೆ. ಪ್ರಾರಂಭದಲ್ಲಿ ವೀರಶೈವ ಮಠಗಳು ಇಂಜನಿಯರಿಂಗ್ ಹಾಗೂ ಮೆಡಿಕಲ್ ಪ್ರಾರಂಭಿಸಿದವು. ಆಗ ಡೊನೇಷನ್ ಎನ್ನುವುದು ತೀರ ಅತ್ಯಲ್ಪವಾಗಿತ್ತು. ೧೯೮೦ರ ನಂತರ ಕಾಲೇಜುಗಳ ಸಂಖ್ಯೆ ಟೈಫಾಯಿಡ್ ಜ್ವರದಂತೆ ಏರತೊಡಗಿತ್ತು. ಆರ್. ಗುಂಡೂರಾವ್ ಒಕ್ಕಲಿಗರಿಗೆ ಹಾಗೂ ಪರಿಶಿಷ್ಟ ಜಾತಿಯವರಿಗೆ ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಕಾಲೇಜು ಕೊಟ್ಟರು. ರಾಮಕೃಷ್ಣ ಹೆಗಡೆ ತಮ್ಮ ಸಚಿವ ಸಂಪುಟ ಸಹೋದ್ಯೋಗಿ ಆರ್.ಎಲ್. ಜಾಲಪ್ಪ ಅವರಿಗೆ ಇಂಜಿನಿಯರಿಂಗ್ ಕಾಲೇಜು ಕೊಟ್ಟು ಇಂದು ೭೬ ದಂತ ವೈದ್ಯಕೀಯ ಕಾಲೇಜು ಹಾಗೂ ೧೭೩ ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಕಾಲೇಜುಗಳಿವೆ. ಅದರಲ್ಲಿ ೪೮೯೧ ವೈದ್ಯಕೀಯ ಹಾಗೂ ೩೫೮೭೮ ಇಂಜಿನಿಯರಿಂಗ್ ವಿದ್ಯಾರ್ಥಿಗಳಿದ್ದಾರೆ.

೧೯೯೨ರಲ್ಲಿ ಶಿಕ್ಷಣ ಸಚಿವರಾಗಿದ್ದ ಮೊಯಿಲಿ ಅವರು ಶಿಕ್ಷಣ ಸಂಸ್ಥೆಗಳ ಲಾಬಿಯನ್ನು ಗಣನೆಗೆ ತೆಗೆದುಕೊಳ್ಳದೆ ಸಾಮಾನ್ಯ ಪ್ರವೇಶ ಘಟಕವನ್ನು ಪ್ರಾರಂಭಿಸಿದರು. ಅನಂತರ ಬಂದ ಜನತಾದಳ ಕಾಲದ ಶಿಕ್ಷಣ ಸಚಿವರಾದ ಎಚ್. ಜಿ. ಗೋವಿಂದಗೌಡ ಅವರೂ ಇದಕ್ಕೆ ಪುಷ್ಟಿ ಕೊಟ್ಟರು. ಇತ್ತೀಚೆಗೆ ದೇಶದ ಸರ್ವೋಚ್ಚ ನ್ಯಾಯಾಲಯ ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕವನ್ನು ರದ್ದು ಮಾಡಬಹುದೆಂಬ ತೀರ್ಪು ಕೊಟ್ಟಿದೆ. ಕ್ಯಾಪಿಟೇಷನ್ ಶುಲ್ಕದ ಹಿನ್ನೆಲೆಯುಳ್ಳ ವೃತ್ತಿಶಿಕ್ಷಣ ಲಾಬಿ ಈಗ ತನ್ನ ಪ್ರಭಾವ ಬೀರತೊಡಗಿದೆ. ಬೆಳಗಾಂ, ಹುಬ್ಬಳ್ಳಿ, ಗುಲ್ಬರ್ಗಾ, ಹೊಸಪೇಟೆ, ದಾವಣಗೆರೆ, ಹಾಸನ, ಮಣಿಪಾಲ, ಮಂಗಳೂರು, ಭಟ್ಕಳ, ವಿಜಾಪುರ, ತುಮಕೂರು, ಕೋಲಾರ, ಮಂಡ್ಯ ಹಾಗೂ ಬೆಂಗಳೂರುಗಳಲ್ಲಿರುವ ಕ್ಯಾಪಿಟೇಷನ್ ಶುಲ್ಕದ ಕಾಲೇಜಿನ ಮಾಲೀಕರು ಸರ್ಕಾರದ ನೀತಿ ನಿರೂಪಣೆಯಲ್ಲಿ ಕೈ ಆಡಿಸುವಷ್ಟು ಪ್ರಬಲರಾಗಿದ್ದಾರೆ. ಚುನಾವಣ ಸಂದರ್ಭದಲ್ಲಿ ಈ ಶಿಕ್ಷಣ ಸಂಸ್ಥೆಗಳು ಎಲ್ಲಾ ಅಭ್ಯರ್ಥಿಗಳಿಗೂ ಹಣಕಾಸು ಸೌಲಭ್ಯ ಕೊಡುತ್ತಾರೆ. ಅಷ್ಟೇ ಅಲ್ಲ, ಅವರೇ ರಾಜಕೀಯ ಪ್ರವೇಶಿಸಿ ಅಧಿಕಾರದ ಗದ್ದುಗೆ ಏರಬಹುದು. ಇಂತಹ ಸಂದರ್ಭವನ್ನು ಕಂಡಾಗ ಕರ್ನಾಟಕದ ಮುಂದಿನ ರಾಜಕಾರಣ ಹೇಗಿರಬಹುದೆಂದು ಸುಲಭವಾಗಿ ಊಹಿಸಬಹುದು.

ವರನಟ ರಾಜಕುಮಾರ್ ಅಪಹರಣ ಹಾಗೂ ಮಾಜಿ ಸಚಿವ ಎಚ್. ನಾಗಪ್ಪ ಹತ್ಯೆಯ ಹಿನ್ನೆಲೆಯನ್ನು ಶೋಧಿಸುತ್ತಾ ಹೋದಾಗ ಕರ್ನಾಟಕದ ರಾಜಕಾರಣದಲ್ಲಿ ಕೈ ಆಡಿಸುವ ಸಮರ್ಥವಾದ ಮತ್ತೊಂದು ಲಾಬಿಯ ಹೆಸರು ಹೊಳೆಯುತ್ತದೆ. ಅದೇ ಗ್ರಾನೈಟ್. ಇಳಕಲ್ಲು, ಸಾತನೂರು, ಕೊಳ್ಳೇಗಾಲ, ಬಿಳಿಗಿರಿರಂಗನಬೆಟ್ಟ, ಹಾಸನ, ಉಡುಪಿ, ತುಮಕೂರು ಮೊದಲಾದ ಕಡೆ ಗ್ರಾನೈಟ್ ಉದ್ಯಮವಿದೆ. ಗ್ರಾನೈಟ್ ಉದ್ಯಮಕ್ಕೆ ಬಂಡವಾಳ ಹೂಡಿರುವವರು ಅತಿ ಶ್ರೀಮಂತರು ಹಾಗೂ ರಾಜಕಾರಣಿಗಳು. ಸ್ಥಳೀಯ ಪ್ರತಿಭಟನೆಯ ವಿರುದ್ಧ ಗ್ರಾನೈಟ್ ಲಾಬಿ ವ್ಯವಸ್ಥಿತವಾಗಿ ತಮ್ಮ ಸ್ವಾರ್ಥದ ಬೇಳೆ ಬೇಯಿಸಿಕೊಳ್ಳುತ್ತವೆ. ಮಡಿಕೇರಿ ಹಾಗೂ ಮೈಸೂರು ಕಾಡುಗಳಲ್ಲಿ ಮರಗಳ್ಳರ ಲಾಬಿ ಸಹ ಇದೆ. ರಾಜಕಾರಣಿ ಹಾಗೂ ಅಧಿಕಾರಶಾಹಿಗಳ ನಡುವೆ ಅಪವಿತ್ರ ಮೈತ್ರಿ

ಉಂಟಾದಾಗ ಲೂಟಿಯ ವಿಚಾರ ಸಾರ್ವಜನಿಕರ ಗಮನಕ್ಕೆ ಬರುವುದೇ ಇಲ್ಲ. ಡಾ। ಯಲ್ಲಪ್ಪರೆಡ್ಡಿಯಂತಹ ಒಂದಿಬ್ಬರು ನಿಷ್ಠಾವಂತ ಅಧಿಕಾರಿಗಳು ಆಯಾಯ ಪರಿಸರದಲ್ಲಿದ್ದರೆ ಅಲ್ಲಿನ ಘಟನೆಗಳು ಚರ್ಚೆಗೆ ಒಳಪಡುತ್ತವೆ. ಈ ಲಾಬಿಗಳು ಸಣ್ಣ ಪ್ರಮಾಣದಲ್ಲಿದ್ದರೂ ಸ್ಥಳೀಯ ರಾಜಕೀಯದಿಂದ ಶಕ್ತಿ ಪಡೆದಿರುತ್ತವೆ.

☆ ಕರ್ನಾಟಕ ರಾಜಕಾರಣದಲ್ಲಿ ವಿರೋಧ ಪಕ್ಷಗಳ ಪಾತ್ರವನ್ನು ಮರೆಯುವಂತಿಲ್ಲ. ೧೯೭೭ರ ಚುನಾವಣೆಯ ತನಕ ವಿರೋಧ ಪಕ್ಷಗಳ ಸಂಖ್ಯೆ ಹೇಳಿಕೊಳ್ಳುವಂತಹದಲ್ಲ. ಜೆ.ಎಂ. ಇಮಾಂ, ಕೆ. ಕೆಂಚಪ್ಪ, ಜೆ.ಬಿ. ಮಲ್ಲಾರಾಧ್ಯ, ಶಾಂತವೇರಿ ಗೋಪಾಲಗೌಡ, ಎಚ್. ಸಿದ್ದವೀರಪ್ಪ, ಎಸ್. ಶಿವಪ್ಪ, ಎಂ. ಪಿ. ಈಶ್ವರಪ್ಪ, ಎಚ್. ಡಿ. ದೇವೇಗೌಡ, ರಾಮಕೃಷ್ಣ ಹೆಗಡೆ, ಎ.ಕೆ. ಸುಬ್ಬಯ್ಯ, ಎಸ್. ಬಂಗಾರಪ್ಪ, ಎಂ. ಸಿ. ನಾಣಯ್ಯ, ಬಿ.ಎಸ್. ಯಡಿಯೂರಪ್ಪ ಮೊದಲಾದವರು ತಮ್ಮ ಸಾಮರ್ಥ್ಯದಿಂದ ಜನಮನ್ನಣೆ ಪಡೆದಿದ್ದರು. ಅನಂತರ ವಿರೋಧ ಪಕ್ಷಗಳು ವಿಧಾನಸಭೆಯಲ್ಲಿ ಸಂಖ್ಯಾ ಬಲವನ್ನೇನೋ ಪಡೆದವು. ನಿಜಲಿಂಗಪ್ಪ, ದೇವರಾಜ ಅರಸು, ಹೆಗಡೆ, ಗುಂಡೂರಾವ್ ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ವಿರೋಧ ಪಕ್ಷಗಳು ಆಡಳಿತ ಪಕ್ಷದ ವಿರುದ್ಧ ತಾತ್ವಿಕ ನೆಲೆಯಲ್ಲೇ ಪ್ರತಿಭಟಿಸುತ್ತಿದ್ದವು, ಪ್ರಸ್ತುತ ಕರ್ನಾಟಕದಲ್ಲಿ ವಿರೋಧಪಕ್ಷಗಳು ತಾತ್ವಿಕವಾಗಿ ವಿರೋಧಿಸುತ್ತಿವೆಯೇ ಅಥವಾ ಮುಖ್ಯ ಮಂತ್ರಿಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಗದ್ದಲ ಮಾಡುತ್ತಿವೆಯೇ ಎಂಬುದು ಗೊತ್ತಾಗುತ್ತಿಲ್ಲ. ವಿರೋಧ ಪಕ್ಷದ ನಾಯಕರು ಪಕ್ಷ ಸಿದ್ಧಾಂತವನ್ನು ಬಿಟ್ಟು ಮುಖ್ಯಮಂತ್ರಿಯ ಜೊತೆ ಗುಪ್ತ ಒಪ್ಪಂದ ಮಾಡಿಕೊಂಡ ನಿದರ್ಶನಗಳಿವೆ. ಇದಕ್ಕಾಗಿ ಜನ ವಿರೋಧ ಪಕ್ಷವನ್ನು ದೂರೀಕರಿಸಿರುವುದುಂಟು. ಮುಂದಿನ ದಿನಗಳಲ್ಲಿ ವಿರೋಧ ಪಕ್ಷಗಳು ಕರ್ನಾಟಕ ರಾಜಕೀಯದಲ್ಲಿ ಮಹತ್ವದ ಪಾತ್ರ ವಹಿಸಬೇಕಾದರೆ ಅವರು ಯಾವುದೇ ಲಾಬಿಯ ಹಿಡಿತಕ್ಕೆ ಸಿಲುಕಿರಬಾರದು. ತಾತ್ವಿಕ ನೆಲೆಗಟ್ಟಿನ ವಿರೋಧಪಕ್ಷ ಕಾರ್ಯಾಚರಣೆ ಮಾಡಬೇಕು.

☆ ಕಳೆದ ಎರಡು ಚುನಾವಣೆಗಳಿಂದ ಕಾಂಗ್ರೆಸ್ ಅಥವಾ ಇತರ ಪಕ್ಷದಲ್ಲಿ ವಿಧಾನಸಭೆಗೆ ಸ್ಪರ್ಧಿಸಲು ಟಿಕೇಟ್ ದೊರೆಯದ ಕೆಲವರು ಬೇರೆ ಪಕ್ಷಗಳಿಂದ ಆಯ್ಕೆಯಾಗಿರುತ್ತಾರೆ. ಪಕ್ಷಾಂತರ ನಿಷೇಧ ಮಸೂದೆಯ ದೌರ್ಬಲ್ಯ ಉಪಯೋಗಿಸಿಕೊಂಡು ಆಡಳಿತ ಪಕ್ಷ ಸೇರಲು ತಾವು ಆಯ್ಕೆಯಾದ ಪಕ್ಷವನ್ನು ವಿಭಜನೆ ಮಾಡಿರುವ ನಿದರ್ಶನವಿದೆ. ಈ ಪ್ರವೃತ್ತಿಯಿಂದಾಗಿ ರಾಜ್ಯದಲ್ಲಿ ಉತ್ತಮ ವಿರೋಧ ಪಕ್ಷದ ಬೆಳವಣಿಗೆಗೆ ತೊಂದರೆಯಾಗಬಹುದು. ಆದರೂ ವಿರೋಧ ಪಕ್ಷಗಳಂತೂ ಕರ್ನಾಟಕದಲ್ಲಿ ಭದ್ರನೆಲೆ ಕಂಡು ಕೊಂಡಿವೆ. ಇದರ ಜೊತೆ ಪಕ್ಷೇತರರು ಸಾಕಷ್ಟು ಸಂಖ್ಯೆಯಲ್ಲಿ ಆಯ್ಕೆಯಾಗುತ್ತಿದ್ದಾರೆ. ವಿರೋಧ ಪಕ್ಷಗಳು ಪ್ರಾಮಾಣಿಕವಾಗಿ ಹಾಗೂ ಕ್ರಿಯಾಶೀಲವಾಗಿ ಕೆಲಸ ಮಾಡಿದಷ್ಟೂ ರಾಜ್ಯದ ರಾಜಕೀಯಕ್ಕೆ ಒಳ್ಳೆಯ ಭವಿಷ್ಯವಿರುತ್ತದೆ. ಅಷ್ಟೇ ಅಲ್ಲ, ರಾಜ್ಯದ ಪ್ರಗತಿ ಸಹ ಉತ್ತಮ ಮಟ್ಟದಲ್ಲಿರುತ್ತದೆ. ರಾಜ್ಯದ ಆಡಳಿತದಲ್ಲಿ ದಕ್ಷತೆ, ಪ್ರಾಮಾಣಿಕತೆ ಹಾಗೂ ಕ್ರಿಯಾಶೀಲತೆಗಳು ವಿರೋಧ ಪಕ್ಷಗಳ ಕಾರ್ಯಾಚರಣೆಯನ್ನು ಅವಲಂಬಿಸಿದೆ.

☆ ಕರ್ನಾಟಕದ ರಾಜಕಾರಣದಲ್ಲಿ ಮಹಿಳೆ ಹಾಗೂ ಯುವಜನಾಂಗಕ್ಕೆ ನ್ಯಾಯೋಚಿತವಾದ ಮನ್ನಣೆ ದೊರಕಿಲ್ಲ. ಕರ್ನಾಟಕದ ರಾಜಕಾರಣವನ್ನು ಗಮನಿಸಿ ಹೇಳುವುದಾದರೆ ಮೂರು-ನಾಲ್ಕು ಜನ ಮಹಿಳಾ ನಾಯಕಿಯರು ದೊರೆಯುತ್ತಾರೆ. ಯಶೋಧರಮ್ಮ ದಾಸಪ್ಪ, ಈವಾ ವಾಜ್, ಕೆ. ಎಸ್. ನಾಗರತ್ನಮ್ಮ, ಬಸವ ರಾಜೇಶ್ವರಿ, ಮನೋರಮಾ ಮಧ್ವರಾಜ್, ನಾಗಮ್ಮ ಕೇಶವಮೂರ್ತಿ, ಡಿ.ಕೆ. ತಾರಾದೇವಿ, ಚಂದ್ರಪ್ರಭಾ ಅರಸು, ಪ್ರಮೀಳಾ ನೇಸರ್ಗಿ, ರಾಣಿ ಸತೀಶ್, ಸುಮಾ ವಸಂತ್, ಲೀಲಾದೇವಿ ಆರ್. ಪ್ರಸಾದ್, ಬಿ.ಟಿ. ಲಲಿತಾ ನಾಯಕ್, ಮೋಟಮ್ಮ ಮುಂತಾದ ಬೆರಳೆಣಿಕೆ ನಾಯಕರನ್ನು ಬಿಟ್ಟರೆ ಬೇರ್‍ಯಾರೂ ಮಹಿಳಾ ರಾಜ ಕಾರಣಿಗಳು ಕಾಣಬರುತ್ತಿಲ್ಲ. ಲೋಕಸಭಾ ಸದಸ್ಯರಾದ ಮಾರ್ಗರೆಟ್ ಆಳ್ವಾ ಅವರನ್ನು ಹೊರತುಪಡಿಸಿದರೆ ಬೇರೆ ಯಾರೂ ರಾಷ್ಟ್ರಮಟ್ಟದ ಮಹಿಳಾ ನಾಯಕರು ಕಾಣುತ್ತಿಲ್ಲ. ಇನ್ನು ಮುಖ್ಯಮಂತ್ರಿಯಾಗುವ ಮಟ್ಟಕ್ಕೆ ಕರ್ನಾಟಕದ ಮಹಿಳಾ ರಾಜಕಾರಣಿಗಳು ಬೆಳೆದಿಲ್ಲ ಎಂದರೆ ಪುರುಷ ಪ್ರಧಾನವಾದ ರಾಜ್ಯರಾಜಕಾರಣವೇ ಅದಕ್ಕೆ ಕಾರಣವಾಗಿದೆ. ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ದೊರಕಿದ್ದು ಅಲ್ಲಿ ನಾಯಕತ್ವ ರೂಪುಗೊಳ್ಳುತ್ತಿದೆ. ಮುಂದೆ ವಿಧಾನಸಭೆ ಹಾಗೂ ಲೋಕಸಭೆಗೆ ಮಹಿಳಾ ಮೀಸಲಾತಿ ದೊರಕಬಹುದು. ಆಗ ಹೊಸನಾಯಕತ್ವ ಮಹಿಳಾ ಸಮುದಾಯದಿಂದ ಬರಬಹುದೆಂಬ ಆಶಯ ತಾಳಬಹುದು.

☆ ಆರ್. ಗುಂಡೂರಾವ್ ಹಾಗೂ ವೀರಪ್ಪ ಮೊಯಿಲಿ ಹೊರತುಪಡಿಸಿ ರಾಜ್ಯದ ಮುಖ್ಯಮಂತ್ರಿಗಳಾದವರ ವಯಸ್ಸು ಸರಾಸರಿ ೫೦ಕ್ಕೆ ಹೋಗುತ್ತದೆ. ಹಾಗೆಯೇ ಶಾಸನಸಭೆಯಲ್ಲಿ ಮೂರು ನಾಲ್ಕು ಜನರನ್ನು ಹೊರತುಪಡಿಸಿದರೆ ಯುವಕರು ಯಾರೂ ಕಾಣುವುದಿಲ್ಲ. ಮಂತ್ರಿಯಾಗಲು ಒಂದು ಸಾರಿ ಶಾಸಕನಾಗಿರಬೇಕೆಂಬ ನಿಯಮ ಜಾರಿಗೆ ಬಂದ ಕಾರಣ ಸಚಿವರಾಗುವವರ ಎಲ್ಲರ ವಯಸ್ಸು ಕಡ್ಡಾಯವಾಗಿ ೫೫ ಆಗುತ್ತದೆ. ರಾಜಕಾರಣದಲ್ಲಿ ಹೊಸ ರಕ್ತ ಹರಿದು ಬರದಿದ್ದರೆ ಬದಲಾವಣೆ ಎಲ್ಲಿ ಸಾಧ್ಯ?

ಶ್ರೀಮತಿ ಗಾಂಧಿ, ರಾಜೀವಗಾಂಧಿ ಮೊದಲಾದವರು ಅಧಿಕಾರ ಹಿಡಿದ ಕಾರಣಕ್ಕಾಗಿಯೇ ರಾಷ್ಟ್ರರಾಜಕೀಯದಲ್ಲಿ ಶೀಘ್ರ ಬದಲಾವಣೆ ಯಾಗಿತ್ತೆಂಬ ಅಭಿಪ್ರಾಯವನ್ನು ಯಾರೂ ಅಲ್ಲಗಳೆಯಲಾರರು. ೧೯೫೭ರಿಂದಲೂ ಶಾಸಕರಾಗಿದ್ದ ವ್ಯಕ್ತಿ ಸಚಿವರಾಗಿ ಎಷ್ಟು ಕ್ರಿಯಾಶೀಲರಾಗಿರಲು ಸಾಧ್ಯ? ರಾಜಕೀಯ ಪಕ್ಷಗಳು ಹಿರಿಯರನ್ನು ಪಕ್ಷದ ಕೆಲಸಕ್ಕೆ ಬಳಸಿಕೊಂಡು, ಯುವಕರಿಗೆ ಅವಕಾಶ ಕೊಡದೇ ಹೋದರೆ ಕರ್ನಾಟಕದ ರಾಜಕೀಯದಲ್ಲಿ ಜಡತ್ವ ಮನೆ ಮಾಡಬಹುದು. ಸ್ಥಳೀಯ ಸಂಸ್ಥೆಗಳಿಂದಾಗಿ ಹೊಸ ನಾಯಕತ್ವ ಸೃಷ್ಟಿ ಮಾಡಲು ಎಲ್ಲಾ ರಾಜಕೀಯ ಪಕ್ಷಗಳೂ ಪ್ರಯತ್ನಿಸಬೇಕು. ಕಮ್ಯೂನಿಸ್ಟ್ ಹಾಗೂ ಬಿಜೆಪಿ ಯುವಜನಾಂಗಕ್ಕೆ ಕೊಡುತ್ತಿರುವ ಪ್ರೋತ್ಸಾಹವನ್ನು ಎಲ್ಲರೂ ಕೊಡಬೇಕಾದ ಅಗತ್ಯವಿದೆ.

☆ ರಾಜಕೀಯದ ಮೇಲೆ ಸಾಂಸ್ಕೃತಿಕ ಕ್ಷೇತ್ರದ ಪ್ರಭಾವ ಅನನ್ಯವಾದುದು. ಹಿಂದೆ ಸಾಹಿತ್ಯ ಹಾಗೂ ನಾಟಕ ಕ್ಷೇತ್ರಗಳು ರಾಜಕೀಯ ಕ್ಷೇತ್ರಕ್ಕೆ ಮಾರ್ಗದರ್ಶನ ಕೊಡುತ್ತಿದ್ದವು. ದುರ್ದೈವದ ಸಂಗತಿ ಎಂದರೆ ಇಂದು ಸಾಹಿತ್ಯ ಕ್ಷೇತ್ರವನ್ನೊಳಗೊಂಡಂತೆ ಇತರ ಸಾಂಸ್ಕೃತಿಕ ಕ್ಷೇತ್ರಗಳೂ ನೈತಿಕತೆ ಕಳೆದುಕೊಳ್ಳುತ್ತಿವೆ. ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಲು ೫೦ ಶಾಸಕರ ಶಿಫಾರಸ್ಸು ಪತ್ರ ತರುವ, ವಿಶ್ವವಿದ್ಯಾನಿಲಯದ ಕುಲಪತಿಗಳಾಗಲು ಸಚಿವರ ಮನೆ ಬಾಗಿಲಿಗೆ ಅಲೆಯುವ, ರಾಜ್ಯೋತ್ಸವ ಪ್ರಶಸ್ತಿಗೆ ಏನೆಲ್ಲಾ ಕಸರತ್ತು ಮಾಡುವ ಇಂದಿನ ಕಾಲದಲ್ಲಿ ಕುವೆಂಪು, ಕಾರಂತ, ಡಿವಿಜಿ ಮುಂತಾದ ಸ್ವಾಭಿಮಾನಿ ಸಾಹಿತ್ಯ ಪುರುಷರನ್ನು ಕಾಣಲು ಸಾಧ್ಯವೇ? ಈಗಲೂ ಸರಸ್ವತಿ ಆರಾಧಕರಿಗೆ ಹಾಗೂ ಕಲೋಪಾಸಕರಿಗೆ ರಾಜ್ಯದಲ್ಲಿ ಮಾನ್ಯತೆಯಿದೆ. ಅವರ ಅಭಿಪ್ರಾಯಗಳನ್ನು ಜನ ಗಂಭೀರವಾಗಿ ತೆಗೆದುಕೊಳ್ಳುತ್ತಾರೆ. ಕೇವಲ ಚುನಾವಣಾ ಸಂದರ್ಭದಲ್ಲಿ ಮಾತ್ರ ಅವರು ಹೇಳಿಕೆ ನೀಡಲು ಮುಂದಾಗಬಾರದು. ಸರ್ಕಾರ ತಪ್ಪು ನಡೆದಾಗ ಕಟು ಮಾತುಗಳಲ್ಲಿ ಖಂಡಿಸಿ ಜನಜಾಗೃತಿಗೆ ಮುಂದಾಗಬೇಕು. ಕೇವಲ ಭಾಷೆಯೊಂದಕ್ಕೇ ಅವರು ಸೀಮಿತವಾಗಬಾರದು. ಶ್ರೀಸಾಮಾನ್ಯರ ಬದುಕಿಗೆ ಬೇಕಾಗುವ ಎಲ್ಲ ವಿಚಾರಗಳತ್ತ ಅವರ ಆಸಕ್ತಿ ಹೊರಳಬೇಕು.

☆ ರಾಜಕೀಯಾಧಿಕಾರ ಪಡೆಯಲು ಚಳವಳಿಗಳು ಸಹಾಯಕವಾದ ಸನ್ನಿವೇಶಗಳು ಹಲವಾರು ಇವೆ. ಸ್ವಾತಂತ್ರ್ಯ ಚಳವಳಿ ಹಾಗೂ ತುರ್ತುಪರಿಸ್ಥಿತಿಯಲ್ಲಿ ನಡೆದ ಹೋರಾಟದ ಫಲವಾಗಿ ಅನೇಕರು ಶಾಸಕರು, ಮಂತ್ರಿಗಳಾದ ಸಂಗತಿ ನಮ್ಮ ರಾಜಕೀಯ ಇತಿಹಾಸದಲ್ಲಿದೆ. ಆದರೆ ಅದೇ ಏಕೀಕರಣದಲ್ಲಿ ಭಾಗವಹಿಸಿದ ಸಾಹಿತಿಗಳು, ಕಲಾವಿದರು ಹಾಗೂ ಇತರ ಸೃಜನಶೀಲ ವ್ಯಕ್ತಿಗಳು ಯಾವುದೇ ರಾಜಕೀಯಾಧಿಕಾರ ಪಡೆಯಲು ಸಾಧ್ಯವಾಗಿಲ್ಲ. ಬೆಂಗಳೂರು ನಗರಸಭೆಗೆ ಸ್ಪರ್ಧಿಸಿದ್ದ ಒಂದಿಬ್ಬರು ಸಾಹಿತಿಗಳು ಆಯ್ಕೆಯಾಗಲಿಲ್ಲ. ಗೋಕಾಕ್ ಚಳವಳಿಯ ನಂತರ ಕನ್ನಡಾಭಿವೃದ್ಧಿಯನ್ನು ಚುನಾವಣೆಯ ಪ್ರಮುಖ ವಿಷಯವನ್ನಾಗಿ ಮಾಡಿದ ಕೀರ್ತಿ ಕನ್ನಡ ಸಾಹಿತಿಗಳಿಗೆ ಸೇರಬೇಕು. ದಲಿತ, ಬಂಡಾಯ ಚಳವಳಿಗಳು ಸಾಕಷ್ಟು ಪ್ರಭಾವಶಾಲಿಯಾಗಿದ್ದುದೇನೋ ನಿಜ! ಆದರೆ ದಲಿತ ಚಳವಳಿ ಸಾಕಷ್ಟು ಪ್ರಭೇದಗಳಾಗಿ ಒಡೆದುಹೋಗಿರುವುದು ದುರ್ದೈವದ ಸಂಗತಿ. ಬಂಡಾಯ ಚಳವಳಿ ಕೇವಲ ಸಾಹಿತ್ಯ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿದೆ. ಇದಕ್ಕೆ ವಿರುದ್ಧವಾಗಿ ಬೆಳಗಾವಿಯಲ್ಲಿ ಮರಾಠಿ ಭಾಷೆಯ ಆಧಾರದಿಂದ ಮೂರು-ನಾಲ್ಕು ಜನ ಶಾಸಕರು ಮಹಾರಾಷ್ಟ್ರ ಏಕೀಕರಣ ಸಮಿತಿಯಿಂದ ಸತತವಾಗಿ ಆರಿಸಿ ಬರುತ್ತಿದ್ದರು. ಈಗ ಮಹಾರಾಷ್ಟ್ರ ಏಕೀಕರಣದ ಸಮಿತಿಯ ಪ್ರಭಾವ ಕಡಿಮೆಯಾಗಿರಬಹುದು. ಅದರ ಸ್ಥಾನಕ್ಕೆ ಶಿವಸೇನೆ ಬಂದು ಕುಳಿತಿದೆ. ಬೆಳಗಾವಿ ನಗರಸಭೆಯಲ್ಲಿ ನಾಲ್ಕು ಜನ ಶಿವಸೇನೆಗೆ ಸೇರಿದ ಸದಸ್ಯರಿದ್ದಾರೆ. ಮುಂದಿನ ದಿನಗಳಲ್ಲಿ ಗಡಿ ವಿವಾದ ರಾಜ್ಯ ರಾಜಕಾರಣದ ಮೇಲೆ ನಿಶ್ಚಿತ ಪ್ರಭಾವ ಬೀರುವ ಸಾಧ್ಯತೆ ಇದೆ.

☆ ನಮ್ಮ ರಾಜ್ಯದ ರಾಜಕಾರಣವನ್ನು ಅವಲೋಕಿಸಹೊರಟಾಗ ಸ್ವಾತಂತ್ರ್ಯಾನಂತರ ಕರ್ನಾಟಕ ರಾಜ್ಯ ಕೇಂದ್ರದಿಂದ ಯಾವುದೇ ತರಹದ ವಿಶೇಷ ಸಹಾಯವನ್ನು ಪಡೆಯದಿರುವುದು ಗೋಚರವಾಗುತ್ತದೆ. ತಮಿಳುನಾಡು, ಆಂಧ್ರಪ್ರದೇಶಗಳಿಗೆ ಹೋಲಿಸಿದರೆ ಕರ್ನಾಟಕಕ್ಕೆ ನ್ಯಾಯ ಸಂದಾಯವಾಗಿಲ್ಲವೆಂಬುಧು ತಕ್ಷಣಕ್ಕೆ ಗೋಚರವಾಗುವ ವಿಚಾರ. ಕೇಂದ್ರ ಸರ್ಕಾರದಲ್ಲಿ ನೌಕರಿಯಾಗಬಹುದು, ರಾಜ್ಯದ ಯೋಜನೆಗಳಿಗೆ ಹಣಕಾಸು ನೆರವಾಗಬಹುದು ಅಥವಾ ನಮ್ಮ ರಾಜಕಾರಣಿಗಳಿಗೆ ಸೂಕ್ತ ಸ್ಥಾನ ಮಾನ ದೊರಕುವುದಾಗಿರಬಹುದು ಎಲ್ಲೂ ರಾಜ್ಯಕ್ಕೆ ನ್ಯಾಯ ದೊರಕಿರುವುದನ್ನು ಕಾಣುವುದಾಗುವುದಿಲ್ಲ. ಬಿ.ಡಿ. ಜತ್ತಿ ಹಾಗೂ ಎಚ್.ಡಿ. ದೇವೇಗೌಡ ಅವರು ಮಾತ್ರ ಹೇಗೋ ಅತ್ಯುನ್ನತ ಸ್ಥಾನಕ್ಕೆ ಏರಿದ್ದುಂಟು. ಆದರೆ ಬಹುತೇಕ ರಾಜಕಾರಣಿಗಳು ಕೇಂದ್ರ ನಾಯಕರ ಮಲತಾಯಿ ಧೋರಣೆಯಿಂದ ಸಾಕಷ್ಟು ಹಿಂಸೆ ಅನುಭವಿಸಿದ್ದಾರೆ. ಇವೆಲ್ಲಕ್ಕೆ ಮೂಲ ಕಾರಣ ನಮ್ಮ ರಾಜ್ಯದಿಂದ ಆಯ್ಕೆಯಾಗಿ ಹೋದ ಲೋಕಸಭೆ ಹಾಗೂ ರಾಜ್ಯಸಭೆ ಸದಸ್ಯರು. ಇವರು ಯಾವುದೇ ವಿಚಾರಕ್ಕಾಗಿ ಒಂದಾಗಿ ಹೋರಾಟ ಮಾಡಿ ಕರ್ನಾಟಕದ ಶಕ್ತಿಯನ್ನು ಕೇಂದ್ರ ನಾಯಕರಿಗೆ ಮನವರಿಕೆ ಮಾಡಿಕೊಟ್ಟವರಲ್ಲ.

೧೯೫೭ರಿಂದ ೯೯ರ ವರೆಗೆ ನಡೆದ ಎಲ್ಲ ಸಾರ್ವತ್ರಿಕ ಚುನಾವಣೆಗಳಲ್ಲೂ ಕರ್ನಾಟಕದ ಮತದಾರ ರಾಷ್ಟ್ರೀಯ ಪಕ್ಷಕ್ಕೆ ಮನ್ನಣೆ ನೀಡಿದ್ದಾನೆ. ೧೯೬೭ ಹಾಗೂ ೯೬ರನ್ನು ಹೊರತುಪಡಿಸಿದರೆ ಎಲ್ಲ ಲೋಕಸಭಾ ಚುನಾವಣೆಗಳಲ್ಲೂ ಕರ್ನಾಟಕ ಕಾಂಗ್ರೆಸ್ ಪಕ್ಷವನ್ನು ಬೆಂಬಲಿಸಿದೆ. ಆದರೆ ಕಾಂಗ್ರೆಸ್ ಪಕ್ಷ ಅಥವಾ ಇತರ ಪಕ್ಷದ ಲೋಕಸಭಾ ಸದಸ್ಯರು ಮತ್ತು ರಾಜ್ಯಸಭಾ ಸದಸ್ಯರುಗಳು ಜನತೆಯ ನಿರೀಕ್ಷೆಯ ಮಟ್ಟಕ್ಕೆ ಕೆಲಸ ಮಾಡಿಲ್ಲ.

ಅರವತ್ತರ ದಶಕದಲ್ಲಿ ಮೈಸೂರು ರಾಜ್ಯದ ನಾಯಕರಾಗಿದ್ದ ಸಾಹುಕಾರ್ ಚೆನ್ನಯ್ಯ ಅವರು ಸಾರ್ವಜನಿಕ ಸಮಾರಂಭಗಳಲ್ಲಿ ಹೇಳುತ್ತಿದ್ದ ಒಂದು ಮಾತು ಉಲ್ಲೇಖಾರ್ಹ... ''ನಮ್ಮ ಎಂ.ಪಿ.ಯವರು ಲೋಕಸಭೆಯಲ್ಲಿ ಒಂದು ಸಾರಿಯೂ ಕೈಯೆತ್ತಿಲ್ಲ. ಒಮ್ಮೆ ಜಲಬಾಧೆ ತಡೆಯಲಾರದೆ ಬೆರಳೆತ್ತಿದರು ನೋಡಿ.'' ಇದು ಹಾಸ್ಯಕ್ಕೆ ಹೇಳಿದ ಮಾತಾದರೂ ಅದರಲ್ಲಿ ಕಟು ಸತ್ಯವಿದೆ. ಕೆಂಗಲ್ ಹನುಮಂತಯ್ಯ ರೈಲ್ವೆ ಸಚಿವರಾಗುವ ತನಕ ರಾಜ್ಯದ ರೈಲ್ವೆ ಸಚಿವರಾಗಿ ಮಾಡಿದ ಕೆಲಸ ಯೋಜನೆಗಳ ಬಗ್ಗೆ ಕರ್ನಾಟಕ ಯೋಚಿಸುವಂತಿರಲಿಲ್ಲ. ಸಿ.ಕೆ. ಜಾಫರ್ ಷರೀಫ್ ಇಂದು ಕರ್ನಾಟಕದ ಮನೆಮಾತಾಗಿದ್ದರೆ ಅದಕ್ಕೆ ಕಾರಣ ಅವರು ರೈಲ್ವೆ ಈ ಹಿಂದೆ ಕೂಡಾ ಒಂದಿಬ್ಬರು ಕರ್ನಾಟಕದವರು ರೈಲ್ವೆ ಸಚಿವರಾಗಿದ್ದರು. ಕರ್ನಾಟಕದಿಂದ ಆಯ್ಕೆಯಾಗದಿದ್ದರೂ ಜಾರ್ಜ್ ಫರ್ನಾಂಡಿಸ್ ರೈಲ್ವೆ ಸಚಿವರಾಗಿ ರೈಲ್ವೆ ಯೋಜನೆಗಳನ್ನು ಕರ್ನಾಟಕಕ್ಕೆ ಕೊಟ್ಟಿದ್ದಾರೆ. ರಾಜೀವ್ ಗಾಂಧಿ ಕಾಲದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಸಚಿವರಾಗಿದ್ದ ಮಾರ್ಗರೆಟ್ ಆಳ್ವಾ ಅವರಿಂದ ಬೆಂಗಳೂರಿನಲ್ಲಿ ಭಾರತ ಕ್ರೀಡಾ ಪ್ರಾಧಿಕಾರದ ಶಾಖೆ ಪ್ರಾರಂಭವಾಯಿತು. ಜನಾರ್ಧನ ಪೂಜಾರಿ ಬ್ಯಾಂಕುಗಳ ಅಧಿಕಾರಿಗಳನ್ನು ಹೆದರಿಸಿದರೆ ಹೊರತು ಯಾವುದೇ ದೃಢ ಯೋಜನೆ ತಂದಿಲ್ಲ. ಕಾಂಗ್ರೆಸ್ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿ ಹೊಸ ಪೇಟೆಯಲ್ಲಿ ಶಂಕುಸ್ಥಾಪನೆ ಮಾಡಿ ವಿಜಯನಗರ ಉಕ್ಕು ಕಾರ್ಖಾನೆ ಕೇಂದ್ರ ಸರ್ಕಾರದಿಂದ ಪ್ರಾರಂಭವಾಗಲೇ ಇಲ್ಲ.

ಸಿ.ಎಂ. ಇಬ್ರಾಹಿಂ ಹಾಗೂ ಅನಂತಕುಮಾರ್ ಇಬ್ಬರೂ ಕೇಂದ್ರ ನಾಗರಿಕ ವಿಮಾನಯಾನ ಖಾತೆ ಸಚಿವರಾಗಿದ್ದರು. ದೇವನಹಳ್ಳಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಬಾಲಗ್ರಹ ಪೀಡೆಯಿಂದ ಮುಕ್ತವಾಗಲಿಲ್ಲ. ೧೯೬೭ರಿಂದ ೧೯೫೭ರವರೆಗೆ ಲೋಕಸಭಾ ಸದಸ್ಯರಾಗಿದ್ದ ಹಾಗೂ ಕೇಂದ್ರ ಸಚಿವರಾಗಿದ್ದ ಬಿ. ಶಂಕರಾನಂದ ಅವರು ರಾಜ್ಯಕ್ಕೆ ಕೊಟ್ಟ ಕೊಡುಗೆ ಬಗ್ಗೆ ನೆನೆದಾಗ ತಟ್ಟನೆ ಉತ್ತರ ದೊರೆಯುವುದಿಲ್ಲ. ೧೯೫೭ರಲ್ಲಿ ಮಾನವ ಸಂಪನ್ಮೂಲ ಸಚಿವರಾಗಿದ್ದ ಎಸ್. ಆರ್. ಬೊಮ್ಮಾಯಿ ರಾಜ್ಯಕ್ಕೆ ರಾಜಕೀಯ ನೆನಪು ಕೊಡಲು ಪ್ರಯತ್ನಿಸಿದರು. ಇದಕ್ಕೆ ಪೂರ್ವದಲ್ಲಿ ಎಸ್. ನಿಜಲಿಂಗಪ್ಪ ಅವರು ಕಾಂಗ್ರೆಸ್ ಪಕ್ಷದ ನೀತಿ ನಿರೂಪಕರಾಗಿದ್ದರು. ಇಂದಿರಾಗಾಂಧಿ ಅವರನ್ನು ಪ್ರಧಾನಿ ಮಾಡಿದ್ದರು. ಅವರ ಸ್ನೇಹಿತರು ಅಂದರೆ ಕಾಮರಾಜ್, ಅತುಲ್ಯಘೋಷ್, ಮೊರಾರ್ಜಿ ಅವರು ತಮ್ಮ ತಮ್ಮ ರಾಜ್ಯಗಳಿಗೆ ಕೇಂದ್ರದಿಂದ ತಂದ ಯೋಜನೆಗಳನ್ನು ಇವರು ತಮ್ಮ ರಾಜ್ಯಕ್ಕೆ ತಂದರೇ ಎಂದರೆ ಆಶಾದಾಯಕ ಉತ್ತರವಿಲ್ಲ. ಲೋಕಸಭೆಯಲ್ಲಿ ಎಂದೂ ವೀರೋಚಿತ ಭಾಷಣ ಮಾಡದಿದ್ದರೂ ಶ್ರೀನಿವಾಸ ಮಲ್ಯ ಕರಾವಳಿ ಪ್ರಾಂತ್ಯದಲ್ಲಿ ಅದ್ಭುತ ಪ್ರಗತಿ ಸ್ಥಾಪಿಸಿದ್ದಾರೆ. ೧೯೨೨ರಲ್ಲಿ ಲೋಕಸಭಾ ಸದಸ್ಯರಾಗಿದ್ದ ಎಚ್.ಡಿ. ದೇವೇಗೌಡ ಅವರು ಕ್ರಿಯಾಶೀಲವಾಗಿ ಸಂಸತ್ತಿನ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾರೆ. ಕೆ. ಲಕ್ಕಪ್ಪ, ಎಸ್. ಎಂ. ಕೃಷ್ಣ. ಎಂ.ಎಸ್. ಗುರುಪಾದಸ್ವಾಮಿ, ಡಾ। ಟಿ.ಎ. ಪೈ, ಮೊದಲಬಾರಿಗೆ ಕನ್ನಡದಲ್ಲಿ ಮಾತನಾಡಿದ ಜೆ.ಎಚ್. ಪಟೇಲ್, ಡಾ। ಕೆ. ವೆಂಕಟಗಿರಿಗೌಡ, ವಿ. ಎಸ್. ಕೃಷ್ಣಯ್ಯರ್, ಎಚ್. ಎನ್. ನಂಜೇಗೌಡ, ಡಾ. ಸರೋಜಿನಿ ಮಹಿಷಿ, ಎಚ್. ಹನುಮಂತಪ್ಪ ಮುಂತಾದ ಬೆರಳೆಣಿಕೆ ಜನಮಾತ್ರ ಲೋಕಸಭೆಯಲ್ಲಿ ಕೆಲವೊಮ್ಮೆ ಮಾತನಾಡಿದ್ದಾರೆ. ಆದರೆ ಬಹುಮಟ್ಟಿನ ಲೋಕಸಭಾ ಸದಸ್ಯರು ರಾಜ್ಯದ ಸಮಸ್ಯೆಗಳನ್ನು ಕೇಂದ್ರದಲ್ಲಿ ಸಮರ್ಥವಾಗಿ ಪ್ರತಿಬಿಂಬಿಸಿದ ನಿದರ್ಶನಗಳಿಲ್ಲ. ಕೇವಲ ಭಾಷೆಯೊಂದೇ ಅವರಿಗೆ ತೊಂದರೆಯಾಗಿಲ್ಲ, ಸಮಗ್ರ ಕರ್ನಾಟಕದ ಪ್ರಗತಿಯ ಕಲ್ಪನೆ ಅವರಿಗೆ ದೊರಕಿಲ್ಲ. ಅಜಿತ್ ಪ್ರಸಾದ್ ಜೈನ್, ಇಂದಿರಾಗಾಂಧಿ, ಸ್ಟೀಫನ್, ರಾಮಜೇಠ್ ಮಲಾನಿ, ವೆಂಕಯ್ಯನಾಯಿಡು ಮೊದಲಾದವರು ಕರ್ನಾಟಕದಿಂದ ಸಂಸತ್ ಪ್ರವೇಶಿಸಿದ್ದಾರೆ. ಸೋನಿಯಾಗಾಂಧಿ ಬಳ್ಳಾರಿ ಲೋಕಸಭೆಯಿಂದ ಆಯ್ಕೆಯಾಗಿದ್ದರು. ಇವರಾರೂ ಕರ್ನಾಟಕವನ್ನು ಪ್ರೀತಿಸಿ ತಮ್ಮದೆಂದು ಭಾವಿಸಿದವರಲ್ಲ.

ಆಂಧ್ರ ಮತ್ತು ತಮಿಳುನಾಡಿನ ಪ್ರಾದೇಶಿಕ ಪಕ್ಷಗಳು ಕೇಂದ್ರ ಸರ್ಕಾರಕ್ಕೆ ತಮ್ಮ ಬೆಂಬಲ ನೀಡಿ ತಮ್ಮ ತಮ್ಮ ರಾಜ್ಯದ ಅಭಿವೃದ್ಧಿ ಕೆಲಸಗಳನ್ನು ಬ್ಲಾಕ್‌ಮೇಲ್ ತಂತ್ರದಿಂದ ಮಾಡಿಸಿಕೊಳ್ಳುತ್ತಿರುವುದನ್ನು ಗಮನಿಸಬಹುದು. ನಮ್ಮ ಕರ್ನಾಟಕದ ಸಂಸದ್ ಸದಸ್ಯರು ವಿರೋಧ ಪಕ್ಷದಲ್ಲಿದ್ದಾಗಲೂ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡು ಕೆಲಸ ಮಾಡಿಸಿಕೊಳ್ಳುವುದಿಲ್ಲ, ಅಧಿಕಾರದಲ್ಲಿದ್ದಾಗಲೂ ಅವರು ತಮ್ಮ ಸಚಿವರಿಂದ ಯಾವುದೇ ಯೋಜನೆಗಳನ್ನು ರಾಜ್ಯಕ್ಕೆ ತರುವುದಿಲ್ಲ. ಒಟ್ಟಾರೆ ನಮ್ಮ ಸಂಸತ್ ಸದಸ್ಯರನ್ನು ಕೇಂದ್ರ ಸರ್ಕಾರ 'ಟೇಕ್ ಇಟ್ ಫಾರ್ ಗ್ರ್ಯಾಂಟೆಡ್' ಎಂಬುವಂತೆ ಪರಿಗಣಿಸಿದೆ.

ಕರ್ನಾಟಕದ ಮತದಾರ ತಾಲ್ಲೂಕು ಪಂಚಾಯಿತಿ ಸದಸ್ಯರಿಗೆ ಮತ ಹಾಕುವಾಗ ಹತ್ತಾರು ಬಾರಿ ಯೋಚಿಸುತ್ತಾನೆ. ಆದರೆ ಸಂಸತ್ ಪ್ರವೇಶಿಸುವ ಸದಸ್ಯರ ಅರ್ಹತೆಯ ಬಗ್ಗೆ ಆತ ತಲೆ ಕೆಡಿಸಿಕೊಳ್ಳುವುದಿಲ್ಲ. ಕನ್ನಡ ಪತ್ರಿಕೆಗಳು ಲೋಕಸಭೆಯಲ್ಲಿ ನಮ್ಮ ಪ್ರತಿನಿಧಿಗಳು ರಾಜ್ಯದ ಪರವಾಗಿ ಮಾತನಾಡಿದ್ದನ್ನು ಸಮರ್ಪಕವಾಗಿ ಜನತೆಗೆ ಮುಟ್ಟಿಸಬೇಕು. ಹಾಗಾದಾಗ ಲೋಕಸಭೆ ಹಾಗೂ ರಾಜ್ಯಸಭೆಯ ಸದಸ್ಯರ ಕಾರ್ಯನಿರ್ವಹಣೆಯನ್ನು ಸೂಕ್ಷ್ಮವಾಗಿ ಕರ್ನಾಟಕದ ಮತದಾರ ಗಮನಿಸುವಂತಾಗುತ್ತದೆ.

☆ ರೈತ ಚಳವಳಿ ೧೯೮೦ರ ದಶಕದಲ್ಲಿ ತುಂಬಾ ಪ್ರಭಾವಶಾಲಿಯಾಗಿತ್ತು. ಮಂಡ್ಯ, ಧಾರವಾಡ, ಶಿವಮೊಗ್ಗ, ಚಿಕ್ಕಮಗಳೂರು, ಬಳ್ಳಾರಿ ಜಿಲ್ಲೆಗಳಲ್ಲಿ ರೈತ ಚಳವಳಿ ಸರ್ಕಾರಕ್ಕೆ ದೊಡ್ಡ ಸವಾಲಾಗಿತ್ತು. ಅದನ್ನು ರಾಜಕೀಯ ಶಕ್ತಿಯನ್ನಾಗಿ ಬಳಸಿಕೊಳ್ಳಲು ರೈತನಾಯಕರು ವಿಫಲರಾದರು. ಸರ್ಕಾರದ ಜೊತೆ ಶಾಮೀಲಾದರೆಂಬ ಆರೋಪ ಕೇಳಿಬಂತು. ರೈತ ನಾಯಕರು ಗ್ರಾಮೀಣ ಪ್ರದೇಶದ ಎಲ್ಲರ ವಿಶ್ವಾಸಗಳಿಸಬೇಕಾಗಿತ್ತು. ಹಾಗೆಯೇ ತಮ್ಮ ಚಳವಳಿಗೆ ನಗರ ಪ್ರದೇಶದ ಜನರ ವಿಶ್ವಾಸ ಪಡೆಯಬೇಕಾಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ರಾಜಕೀಯ ಆಕಾಂಕ್ಷೆಯಿರುವ ನಾಯಕರನ್ನು ರೈತ ಚಳುವಳಿಯಿಂದ ದೂರವಿಡಬೇಕಾಗಿತ್ತು. ಈ ಎಲ್ಲಾ ಚಳವಳಿಗೂ ಒಂದಾಗಿ ರಾಜಕೀಯ ಶಕ್ತಿವಲಯ ಸ್ಥಾಪಿಸುವ ಅಗತ್ಯವಿದೆ. ಹೊಸ ಆರ್ಥಿಕ ನೀತಿಯ ವಿರುದ್ಧ ಅಸಮಧಾನಗೊಂಡಿರುವ ಮಧ್ಯಮವರ್ಗ ಹಾಗೂ ಗ್ರಾಮೀಣ ಪ್ರದೇಶದ ಜನರ ಸಂಘಟನೆಯನ್ನು ಈಗಲೂ ಮಾಡಬಹುದು. ಆಗ ಮಾತ್ರ ಹೊಸ ರಾಜಕೀಯ ಶಕ್ತಿ ಉದಯವಾಗಬಹುದು!

☆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಶ್ರೀಸಾಮಾನ್ಯರಿಗೆ ನಿರಂತರವಾಗಿ ರಾಜಕೀಯ ಶಿಕ್ಷಣ ದೊರೆಯಬೇಕಾದ ಅವಶ್ಯಕತೆಯಿರುತ್ತದೆ. ಪತ್ರಿಕೆಗಳು ಹಾಗೂ ವಿರೋಧ ಪಕ್ಷಗಳು ಈ ಕೆಲಸ ಮಾಡುತ್ತಾ ಬರುತ್ತವೆ. ವಿಶೇಷವಾಗಿ ಜನಾಂದೋಲನಗಳು ಸುಸಂಘಟಿತವಾಗಿ ನಡೆದಷ್ಟೂ ಶ್ರೀಸಾಮಾನ್ಯ ಆ ಬಗ್ಗೆ ತನ್ನ ಗಮನ ಹರಿಸುತ್ತಾನೆ. ಮಹಾತ್ಮ ಗಾಂಧೀಜಿ ಸ್ವಾತಂತ್ರ್ಯ ಹೋರಾಟವನ್ನು ಕೇವಲ ಬ್ರಿಟಿಷರನ್ನು ಭಾರತದಿಂದ ಓಡಿಸಲು ಮಾತ್ರ ಬಳಸಲಿಲ್ಲ. ಜೊತೆಗೆ ಸಮಾಜದ ಅರೆಕೊರೆಗಳನ್ನು ತಿದ್ದಲು ಆ ಹೋರಾಟವನ್ನು ಸಮರ್ಥವಾಗಿ ಬಳಸಿಕೊಂಡರು. ಚೀಣಾದ ಮಹಾನ್ ನಾಯಕ ಮಾವೋತ್ಸೆ ತುಂಗ್ ೧೯೬೬ರಲ್ಲಿ ರೂಪಿಸಿದ ಸಾಂಸ್ಕೃತಿಕ ಕ್ರಾಂತಿ ಕೂಡಾ ಈ ಹಿನ್ನೆಲೆಯಲ್ಲೇ ಇತ್ತು.

೧೯೭೫ರಲ್ಲಿ ತುರ್ತು ಪರಿಸ್ಥಿತಿಯ ದವಡೆಗೆ ದೇಶ ಸಿಲುಕಿದಾಗ ಅಂದಿನ ಎಲ್ಲಾ ರಾಜಕೀಯ ನಾಯಕರು ಲೋಕನಾಯಕ ಜೆ.ಪಿ. ಅವರನ್ನು ಆಶ್ರಯಿಸಿ ಕೇಂದ್ರದಲ್ಲಿ ಕಾಂಗ್ರೆಸ್ಸೇತರ ಸರ್ಕಾರ ಸ್ಥಾಪಿಸಿದರು. ೧೯೮೩ರಲ್ಲಿ ಕರ್ನಾಟಕದಲ್ಲಿ ಕಾಂಗ್ರೆಸ್ಸೇತರ ಸರ್ಕಾರ ಸ್ಥಾಪನೆಯಾಗಲು ಅನೇಕ ಜನಾಂದೋಲನಗಳು ಸಹಾಯ ಮಾಡಿವೆ. ಆ ಕಾಲದಲ್ಲಿ ಶಿವಮೊಗ್ಗ, ನರಗುಂದ, ನವಲಗುಂದ, ಬಳ್ಳಾರಿ ಜಿಲ್ಲೆಗಳಲ್ಲಿ ನಡೆದ ರೈತ ಹೋರಾಟ ಕಾಂಗ್ರೆಸ್ ಸರ್ಕಾರಕ್ಕೆ ಪೆಟ್ಟು ಕೊಟ್ಟಿತು. ಅದೇ ರೀತಿ ಧಾರವಾಡ, ಮೈಸೂರು ಹಾಗೂ ಬೆಂಗಳೂರುಗಳಲ್ಲಿ ನಡೆದ ಗೋಕಾಕ ಚಳವಳಿ ಸಹ ಕಾಂಗ್ರೆಸ್ ಸರ್ಕಾರದ ವಿರುದ್ಧ ಜನಾಭಿಪ್ರಾಯ ಮೂಡಿಸಿತು. ದಲಿತ ಸಂಘರ್ಷ ಸಮಿತಿ ನಡೆಸಿದ ಹತ್ತಾರು ಹೋರಾಟದಿಂದಾಗಿ ಕಾಂಗ್ರೆಸ್ ನಿಶ್ಚಿತ ಮತದಾರರನ್ನು ಯೋಚಿಸುವಂತೆ ಮಾಡಿತು. ಅನಂತರ ಅಧಿಕಾರಕ್ಕೆ ಬಂದ ಜನತಾಪಕ್ಷ ಸರ್ಕಾರ ರಾಜ್ಯದ ಎಲ್ಲಾ ಚಳವಳಿಗಳನ್ನು ಅದಕ್ಕೆ ಅರಿವಿಲ್ಲದೆಯೇ ಚಿವುಟಿ ಹಾಕಿತು. ಈ ಹಿಂದೆ ಚಳವಳಿ ಮಾಡಿದ ನಾಯಕರುಗಳಿಗೆ ಶಾಸಕತ್ವ ಅಥವಾ ಕಾವಲು ಸಮಿತಿಯ ಅಧ್ಯಕ್ಷ ಸ್ಥಾನಗಳು ದೊರಕಿರಬಹುದು. ಚಳವಳಿಯ ಆಶಯಗಳು ಅನುಷ್ಠಾನಗೊಳ್ಳದಿದ್ದರೂ ಆ ಚಳವಳಿ ಸತ್ತಿದೆ ಎಂದರೆ ಅದಕ್ಕೆ ಕಾರಣೀಭೂತವಾದ ರಾಜಕೀಯ ಶಕ್ತಿಯನ್ನು ನೆನೆಯಬೇಕು.

ಕರ್ನಾಟಕದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳನ್ನು ವೀಕ್ಷಿಸಿದಾಗ ಜನಾಂದೋಲನಗಳನ್ನು ರೂಪಿಸಲು ಇಲ್ಲಿ ವಿಚಾರಗಳಿವೆಂಬುದು ತಿಳಿದುಬರುತ್ತದೆ. ಉದಾಹರಣೆ ಹೇಳುವುದಾದರೆ ಮುಕ್ತ ಆರ್ಥಿಕ ನೀತಿಯಿಂದಾಗಿ ಕೃಷಿಕ್ಷೇತ್ರ ಮೇಲೆ ಏಳಲಾಗದ ಸ್ಥಿತಿ ತಲುಪಿದೆ. ಬಹುರಾಷ್ಟ್ರೀಯ ಕಂಪನಿಗಳ ಯಜಮಾನಿಕೆಯಿಂದ ಸಾಮಾಜಿಕ ನ್ಯಾಯ ಎಂಬುದು ಮರೀಚಿಕೆಯಾಗಿದೆ. ಮಾಹಿತಿ ತಂತ್ರಜ್ಞಾನಕ್ಕೆ ದೊರೆತ ಅಸಾಧಾರಣ ಪ್ರೋತ್ಸಾಹದಿಂದಾಗಿ ಸ್ಥಳೀಯ ಭಾಷೆಗಳು ತಮ್ಮತನವನ್ನು ಉಳಿಸಿಕೊಳ್ಳಲು ಹೋರಾಟ ಮಾಡಬೇಕಾಗಿದೆ. ಎಲ್ಲಕ್ಕೂ ಅಮೆರಿಕಾ ಅಥವಾ ವಿಶ್ವಬ್ಯಾಂಕ್ ನೋಡುವುದು ನಮ್ಮ ಆಡಳಿತಗಾರರ ಪರಮ ಗುರಿಯಾಗಿದೆ. ರಥಯಾತ್ರೆ, ರಾಮಮಂದಿರ ನಿರ್ಮಾಣ, ಗೋದ್ರಾ ಮೊದಲಾದ ವಿಚಾರಗಳಿಂದ ಇಡೀ ದೇಶ ಮತೀಯವಾದದತ್ತ ವಾಲುತ್ತಿರುವುದು ಸ್ಪಷ್ಟವಾಗಿದೆ. ಇದನ್ನು ಉಪಯೋಗಿಸಿಕೊಂಡು ಹತ್ತಾರು ಜನಾಂದೋಲನಗಳನ್ನು ರೂಪಿಸಬಹುದು. ಹೀಗೆ ಜನಾಂದೋಲನಗಳು ನಡೆಯುತ್ತಿದ್ದಾಗ ಶ್ರೀಸಾಮಾನ್ಯರ ಹಾಗೂ ಆಡಳಿತದ

ನಡುವೆ ನಿರಂತರ ಸಂವಾದ ಏರ್ಪಟ್ಟಿರುತ್ತದೆ. ಅಂತಹ ಪರಿಸ್ಥಿತಿ ರಾಜ್ಯ ಅಥವಾ ದೇಶದಲ್ಲಿ ಕಾಣಬರುತ್ತಿಲ್ಲ. ಈ ಜನಾಂದೋಲನ ರೂಪಿಸಲು ಬೇಕಾದ ಅಪೂರ್ವ ವ್ಯಕ್ತಿತ್ವಗಳು ದುರ್ಲಭವಾಗಿವೆ. ಮಹಾತ್ಮ ಗಾಂಧೀಜಿ, ಡಾ। ಲೋಹಿಯಾ, ಜೆ. ಪಿ., ಮುಂತಾದ ಮಹಾನ್ ನಾಯಕರನ್ನು ಮರೆತುಬಿಡುವಂಥ ತಾತ್ವಿಕ ಬದ್ಧತೆಯುಳ್ಳ ನಿಜಲಿಂಗಪ್ಪ, ಸಾಮಾಜಿಕನ್ಯಾಯ ರೂವಾರಿ ದೇವರಾಜ ಅರಸು, ರೈತನಾಯಕರಾದ ಕೆ. ವಿ. ಶಂಕರಗೌಡ, ದಲಿತ ಚಿಂತಕ ಬಸವಲಿಂಗಪ್ಪ, ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಅದಮ್ಯ ಕಳಕಳಿಯಿದ್ದ ನಜೀರ್ ಸಾಬ್ ಅಂತಹವರನ್ನು ಕೂಡಾ ಕಾಣಲು ಸಾಧ್ಯವಿಲ್ಲ. ಅಂದಮೇಲೆ ಜನಾಂದೋಲನ ರೂಪುಗೊಳ್ಳುವುದಾದರೂ ಹೇಗೆ?

☆ ಕರ್ನಾಟಕದ ಬಹುಮಟ್ಟಿನ ಪತ್ರಿಕೆಗಳು ಜಾತ್ಯತೀತ ತತ್ವ ಹಾಗೂ ಪ್ರಗತಿಯ ಮೇಲೆ ನಂಬಿಕೆಯಿಟ್ಟಿರುವ ಕಾರಣ ರಾಜ್ಯದ ರಾಜಕಾರಣಕ್ಕೆ ಅವುಗಳಿಂದ ಲಾಭವೇ ಆಗಿದೆ. ೧೯೮೩, ೧೯೮೫, ೧೯೯೪ ಹಾಗೂ ೧೯೯೯ರ ಚುನಾವಣೆಗಳಲ್ಲಿ ಕರ್ನಾಟಕದ ಪತ್ರಿಕೆಗಳೇ ಜನತೆಗೆ ಮಾರ್ಗದರ್ಶನ ನೀಡಿದವು. ಉತ್ತಮ ಅಭ್ಯರ್ಥಿಗಳೇ ಆಯ್ಕೆಯಾಗಬೇಕೆಂದು ಅವು ಅನೇಕ ಸಾರಿ ಹೇಳಿದವು. ಈ ಪರಂಪರೆ ಮುಂದುವರೆದರೆ ರಾಜ್ಯದ ರಾಜಕಾರಣಕ್ಕೆ ಅನುಕೂಲವಿದೆ. ಪತ್ರಿಕಾ ಮಾಲೀಕರ ಹಿಡಿತದ ನಡುವೆ ಸಹ ಅಭಿನಂದನಾರ್ಹ ಕೆಲಸ ಮಾಡುತ್ತಿರುವ ಕರ್ನಾಟಕದ ಪತ್ರಿಕೋದ್ಯಮವನ್ನು ಮುಂದಿನ ಇತಿಹಾಸ ಹೆಮ್ಮೆಯಿಂದ ಸ್ಮರಿಸುತ್ತದೆ.

☆ ೧೯೯೪ರ ವಿಧಾನಸಭಾ ಚುನಾವಣೆಯಲ್ಲಿ ಚಿಂಚೋಳಿ ಮತ ಕ್ಷೇತ್ರದಿಂದ ಮತ ಚಲಾಯಿಸಲು ಸಾಧ್ಯವಾಗದ ಮಾಜಿ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಈ ರೀತಿ ಪತ್ರಿಕಾ ಹೇಳಿಕೆಯೊಂದನ್ನು ಕೊಟ್ಟರು. ''ನಾನು ಪಾರ್ಶ್ವವಾಯು ಪೀಡಿತ ವ್ಯಕ್ತಿ. ನಮ್ಮ ಹಳ್ಳಿಯ ಶಾಲೆಯಲ್ಲಿದ್ದ ಮತಗಟ್ಟೆ ತನಕ ನನ್ನ ಕಾರು ಚಲಿಸುವಂತಿರಲಿಲ್ಲ.'' ೧೯೫೭ರಿಂದಲೂ ಅಧಿಕಾರದಲ್ಲಿದ್ದವರು ವೀರೇಂದ್ರ ಪಾಟೀಲರು. ಜೊತೆಗೆ ಲೋಕೋಪಯೋಗಿ ಸಚಿವರು, ಎರಡು ಬಾರಿ ಮುಖ್ಯಮಂತ್ರಿ ಹಾಗೂ ಕೇಂದ್ರ ಸಚಿವರಾಗಿದ್ದವರು. ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ಕ್ಷೇತ್ರದ ಅಭಿವೃದ್ಧಿಯ ಹೊಣೆಯನ್ನು ಯಾರು ಹೊರಬೇಕಾಗಿತ್ತು? ಕಳೆದ ನವೆಂಬರ್ ತಿಂಗಳಲ್ಲಿ ಗುಲ್ಬರ್ಗಾ ಪ್ರತ್ಯೇಕ ಉತ್ತರ ಕರ್ನಾಟಕದ ಧ್ವಜಾರೋಹಣ ಮಾಡಿದ ಮಾಜಿ ಸಚಿವ ವೈಜನಾಥ ಪಾಟೀಲ್ ಕಳೆದ ಐವತ್ತು ವರ್ಷಗಳಿಂದಲೂ ಹೈದ್ರಾಬಾದ್ ಕರ್ನಾಟಕ ಹಿಂದುಳಿದಿದೆ, ಈ ಬಗ್ಗೆ ಯಾರೂ ಗಮನ ಹರಿಸಿಲ್ಲ ಎಂದಿದ್ದಾರೆ. ಗುಲ್ಬರ್ಗಾದ ಸಮಾರಂಭವೊಂದರಲ್ಲಿ ಪ್ರಸ್ತುತ ಲೋಕೋಪಯೋಗಿ ಸಚಿವರಾದ ಧರ್ಮಸಿಂಗ್, ಹೈದ್ರಾಬಾದ್ ಕರ್ನಾಟಕಕ್ಕೆ ವಿಶೇಷ ಸ್ಥಾನಮಾನ ಕೊಡಬೇಕೆಂದು ಆಗ್ರಹಿಸಿದ್ದಾರೆ. ಈ ರಾಜಕಾರಣಿಗಳ ಮಾತು ಕಂಡಾಗ ನಗಬೇಕೋ ಅಳಬೇಕೋ ಗೊತ್ತಿಲ್ಲ. ಕಳೆದ ಮೂರು ದಶಕಗಳ ಕಾಲ ಮಂತ್ರಿಯಾಗಿದ್ದವರು ಬೇರೆಯವರ ಮೇಲೆ ಆರೋಪ ಹೊರಿಸುವ ಮಾತನ್ನಾಡುವುದು ಸಮಂಜಸವೇ? ತಾವು ಅಧಿಕಾರದಲ್ಲಿದ್ದಾಗ ಪ್ರತಿಯೊಂದು ತಾಲ್ಲೂಕಿಗೂ ಇಷ್ಟಿಷ್ಟು ಎಂದು ಅಭಿವೃದ್ಧಿ ಕೆಲಸ ಮಾಡುತ್ತಾ ಬಂದಿದ್ದರೆ, ಆ ಜಿಲ್ಲೆ ಏಕೆ ಹಿಂದುಳಿಯುತ್ತಿತ್ತು. ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ, ಬೆಳಗಾಂನ ನಿಪ್ಪಾಣಿ, ಬೀದರ್‌ನ ಔರಾದ್, ಗುಲ್ಬರ್ಗಾದ ಚಿಂಚೋಳಿ, ರಾಯಚೂರಿನ ದೇವದುರ್ಗ, ಕೊಪ್ಪಳದ ಕುಷ್ಟಗಿ, ಬಳ್ಳಾರಿಯ ಕೂಡ್ಲಿಗಿ, ದಾವಣಗೆರೆಯ ಚನ್ನಗಿರಿ, ತುಮಕೂರಿನ ಪಾವಗಡ, ಚಿತ್ರದುರ್ಗದ ಮೊಳಕಾಲ್ಮೂರು, ಕೋಲಾರ ಜಿಲ್ಲೆಯ ಬೇತಮಂಗಲ, ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕುಗಳನ್ನು ಕಂಡಾಗ ಕರ್ನಾಟಕದ ಪ್ರಾದೇಶಿಕ ಅಸಮತೋಲನ ಎದ್ದು ಕಾಣುತ್ತದೆ. ಈ ಬಗ್ಗೆ ಡಾ। ಡಿ. ಎಂ. ನಂಜುಡಪ್ಪ ಅವರ ಅಧ್ಯಕ್ಷತೆಯಲ್ಲಿ ನೇಮಿಸಿದ್ದ ಸಮಿತಿ ಕರ್ನಾಟಕದ ೧೭೫ ತಾಲ್ಲೂಕುಗಳನ್ನು ಹಿಂದುಳಿದವು ಎಂದು ಪರಿಗಣಿಸಿದೆ. ವಿಶೇಷ ಸಂಗತಿಯೆಂದರೆ ಹೈದ್ರಾಬಾದ್ ಕರ್ನಾಟಕದಲ್ಲಿ ಎಷ್ಟು ತಾಲ್ಲೂಕುಗಳು ಹಿಂದುಳಿದಿವೆಯೋ ಅಷ್ಟೇ ಹಿಂದುಳಿದ ತಾಲ್ಲೂಕುಗಳು ಮುಂಬೈ ಕರ್ನಾಟಕ ಹಾಗೂ ಹಳೆಯ ಮೈಸೂರು ಸಂಸ್ಥಾನದಲ್ಲಿವೆಯೆಂದು ಆ ವರದಿ ಹೇಳುತ್ತದೆ. ಅದರ ಅಭಿವೃದ್ಧಿಗೆ ೧೬ ಸಾವಿರ ಕೋಟಿ ರೂ.ಗಳ ಯೋಜನೆಯನ್ನು ಡಾ। ಡಿ. ಎಂ. ನಂಜುಂಡಪ್ಪ ಕೊಟ್ಟಿದ್ದಾರೆ. ರಾಜ್ಯ ಸರ್ಕಾರ ತನ್ನ ಆಯವ್ಯಯದಲ್ಲಿ ಪ್ರತಿವರ್ಷ ನಾಲ್ಕು ಸಾವಿರ ಕೋಟಿ ಸಾಲದ ಬಡ್ಡಿ ಹಾಗೂ ನಾಲ್ಕು ಸಾವಿರ ಕೋಟಿ ನೌಕರರ ಸಂಬಳಕ್ಕೆ ವಿನಿಯೋಗಿಸುತ್ತದೆ. ಕೇವಲ ಶೇ. ೨೫ರಷ್ಟು ಹಣ ಸಹ ಅಭಿವೃದ್ಧಿ ಕೆಲಸಕ್ಕೆ ದೊರೆಯುವುದಿಲ್ಲ ಅಂದಮೇಲೆ ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಸರ್ಕಾರದ ಬಳಿ ಸಂಪನ್ಮೂಲವಾದರೂ ಎಲ್ಲಿದೆ? ಅದರಲ್ಲೂ ನಗರಗಳಲ್ಲಿನ ಮೂಲಭೂತ ಸೌಕರ್ಯಕ್ಕೆ ನಮ್ಮ ಸರ್ಕಾರದ ಆದ್ಯತೆ ಹೆಚ್ಚು. ಬಹುರಾಷ್ಟ್ರೀಯ ಕಂಪನಿಗಳ ಬಂಡವಾಳ ಹೂಡಿಕೆಯಿಂದಲೇ ನಮ್ಮೆಲ್ಲಾ ಸಮಸ್ಯೆಗಳೂ ಬಗೆಹರಿಯುತ್ತದೆಂದು ರಾಜ್ಯ ಸರ್ಕಾರ ಭಾವಿಸಿದೆ. ಪ್ರತಿಷ್ಠಿತ ಸಾಫ್ಟ್‌ವೇರ್ ಕಂಪನಿಯ ಇಂಜಿನಿಯರ್‌ಗೆ ಬೆಂಗಳೂರಿನಲ್ಲಿ ತಿಂಗಳಿಗೆ ೩೫ ಸಾವಿರ ಸಂಬಳ ದೊರೆಯುತ್ತದೆ. ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ಅರಣ್ಯಪಾಲಕರಿಗೆ ತಿಂಗಳಿಗೆ ೪೫೦ ರೂ. ಸಂಬಳ ದೊರೆಯುತ್ತದೆ. ಸಂಪತ್ತಿನ ವಿತರಣೆಯಲ್ಲಿ ಇಷ್ಟೊಂದು ಅಸಮಾನತೆಯಿದ್ದರೆ

ಅದರಿಂದಾಗುವ ಪರಿಣಾಮವನ್ನು ಮುಂದೆ ಯಾರೂ ಊಹಿಸಲಾರರು. ಈ ಪ್ರಾದೇಶಿಕ ಅಸಮತೋಲನ ಮುಂದಿನ ದಿನಗಳಲ್ಲಿ ದೊಡ್ಡ ಪ್ರಮಾಣದ ಕಾನೂನು ಸಮಸ್ಯೆಯನ್ನು ಸೃಷ್ಟಿಸಬಹುದು. ಅಥವಾ ಇದಕ್ಕಾಗಿ ಕರ್ನಾಟಕವೇ ವಿಭಜನೆಯಾದರೆ ಆಶ್ಚರ್ಯಪಡಬೇಕಾಗಿಲ್ಲ. ಬರಲಿರುವ ಚುನಾವಣೆಗಳಲ್ಲಿ ಎಲ್ಲಾ ರಾಜಕೀಯ ಪಕ್ಷಗಳು ಇದನ್ನೇ ಮುಖ್ಯ ವಸ್ತುವನ್ನಾಗಿಟ್ಟುಕೊಳ್ಳುವ ಸಾಧ್ಯತೆಯಿದೆ.

☆ ಗುಜರಾತಿನ ಚುನಾವಣೆ ನಡೆದ ಮೇಲೆ ಬಿಜೆಪಿ ಹಾಗೂ ಅದರ ಇತರ ಸಂಘಟನೆಗಳಿಗೆ ದಕ್ಷಿಣ ಭಾರತದಲ್ಲಿ ಕರ್ನಾಟಕವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬಹುದೆಂಬ ಭಾವನೆ ಸ್ಫುರಿಸಿದೆ. ಇದಕ್ಕೆ ಪುಷ್ಟಿ ಕೊಡುವಂತೆ ೧೯೮೩ರ ಚುನಾವಣೆಯ ನಂತರ ಬಿಜೆಪಿ ತನ್ನ ಶಕ್ತಿಯನ್ನು ವೃದ್ಧಿಸಿಕೊಳ್ಳುತ್ತಿದೆ. ಹುಬ್ಬಳ್ಳಿ ಈದ್ಗಾ ಮೈದಾನ, ಚಿಕ್ಕಮಗಳೂರಿನ ಬಾಬಾಬುಡನ್‌ಗಿರಿಯ ದತ್ತಾತ್ರೇಯ ಪೀಠದ ವಿಚಾರಗಳು ಬಿಜೆಪಿಗೆ ಈ ಆಶಯ ತೋರಿಸಿವೆ. ಕರಾವಳಿ ಪ್ರಾಂತ್ಯ, ಬೀದರ್, ಮೈಸೂರು, ತುಮಕೂರು, ಬೆಂಗಳೂರು ದಕ್ಷಿಣ ಬಿಜೆಪಿಗೆ ಆಶ್ರಯ ಕೊಟ್ಟ ಸ್ಥಳಗಳು. ಇವುಗಳ ಹಿನ್ನೆಲೆಯಲ್ಲಿ ಬಿಜೆಪಿ ೧೯೯೪ರಿಂದಲೂ ಕರ್ನಾಟಕದಲ್ಲಿ ಅಧಿಕಾರ ಹಿಡಿದೇ ಬಿಡುತ್ತೇನೆಂಬ ಹುಮ್ಮಸ್ಸಿನಲ್ಲಿದೆ. ೧೫ನೆಯ ಶತಮಾನದಿಂದಲೂ ಮುಸ್ಲಿಂ-ಹಿಂದೂಗಳ ವೈಮನಸ್ಸು ಎದ್ದು ಕಾಣುತ್ತಿತ್ತು. ಕ್ರಿಶ. ೧೭೯೯ರಲ್ಲಿ ಟಿಪ್ಪುಸುಲ್ತಾನ್ ಪತನಾನಂತರ ಮೈಸೂರು ಸಂತತಿಗೆ ರಾಜ್ಯಾಧಿಕಾರ ದೊರೆಯಿತಷ್ಟೆ. ಆಗ ಹಿಂದೂಗಳು ಬ್ರಿಟಿಷರನ್ನು ಈ ಬಗ್ಗೆ ಪ್ರತಿಭಟಿಸತೊಡಗಿದರು. ಹೈದ್ರಾಬಾದ್ ಕರ್ನಾಟಕ ಬಹುಕಾಲ ಮುಸ್ಲಿಂ ಆಳ್ವಿಕೆಗೆ ಒಳಪಟ್ಟದ್ದರೂ ಅಲ್ಲಿ ಧಾರ್ಮಿಕ ಭಾವನೆ, ಹಳೆಯ ಮೈಸೂರು ಸಂಸ್ಥಾನ ಹಾಗೂ ಮುಂಬೈ ಕರ್ನಾಟಕ ಪ್ರಾಂತ್ಯದಷ್ಟು ತೀವ್ರವಾಗಿಲ್ಲ. ಈ ಕಾರಣದಿಂದ ಧರ್ಮವನ್ನು ರಾಜಕೀಯ ಅಧಿಕಾರ ಪಡೆಯಲು ಮೆಟ್ಟಲಾಗಿ ಉಪಯೋಗಿಸಲು ರಾಜ್ಯದ ಜನತೆ ಬಿಡುವುದಿಲ್ಲ. ದಲಿತರು, ಅಲ್ಪಸಂಖ್ಯಾತ ಮುಸ್ಲಿಮರು, ಗ್ರಾಮೀಣ ಪ್ರದೇಶದ ಹಿಂದುಳಿದ ವರ್ಗಗಳು ಧರ್ಮವನ್ನು ರಾಜಕೀಯ ಅಸ್ತ್ರವನ್ನಾಗಿಸಿಕೊಳ್ಳುವ ರಾಜಕೀಯ ಪಕ್ಷಕ್ಕೆ ಸುಲಭವಾಗಿ ಒಲಿಯುತ್ತಾರೆಂದು ಯಾರೂ ಭಾವಿಸಬೇಕಾಗಿಲ್ಲ. ನಗರ ಪ್ರದೇಶದ ಸುಶಿಕ್ಷಿತ ಮಧ್ಯಮ ವರ್ಗ, ಬಹುಮಟ್ಟಿನ ಬ್ರಾಹ್ಮಣ, ಜೈನ, ವೈಶ್ಯ ಹಾಗೂ ಸ್ವಲ್ಪ ಮಟ್ಟಿನ ಲಿಂಗಾಯಿತ ಸಮುದಾಯಗಳು ಬಿಜೆಪಿಯನ್ನು ಬೆಂಬಲಿಸಬಹುದು. ಇಪ್ಪತ್ತೇಳು ಜಿಲ್ಲೆಗಳಲ್ಲಿ ತಳಮಟ್ಟದ ಕಾರ್ಯಕರ್ತರನ್ನು ಹೊಂದಿರದ ಈ ಪಕ್ಷ ರಾಜ್ಯದಲ್ಲಿ ಅಧಿಕಾರ ಪಡೆಯುವುದು ಸುಲಭದ ಮಾತಲ್ಲ. ಎಲ್ಲಾ ವರ್ಗಗಳ ಬೆಂಬಲದಿಂದ ಮಾತ್ರ ಅಧಿಕಾರ ಪಡೆಯಬಹುದೇ ಹೊರತು ಒಂದೆರಡು ಪಂಗಡಗಳ ಸಹಾಯದಿಂದಲ್ಲ.

☆ ೧೯೭೮ರಲ್ಲಿ ನಡೆದ ಚಿಕ್ಕಮಗಳೂರು ಲೋಕಸಭಾ ಚುನಾವಣೆಯ ನಂತರ ಕರ್ನಾಟಕದ ರಾಜಕೀಯವೇ ಬದಲಾಯಿತು. ಆ ತನಕ ಲೋಕಸಭೆ ಹಾಗೂ ವಿಧಾನಸಭೆಗೆ ಸ್ಪರ್ಧಿಸಿದ ಅಭ್ಯರ್ಥಿಗಳು ಚುನಾವಣೆಗಾಗಿ ಕೆಲವೇ ಸಾವಿರಗಳನ್ನು ಖರ್ಚು ಮಾಡುತ್ತಿದ್ದರು. ೧೯೫೭ರಲ್ಲಿ ತಾವು ಕೇವಲ ೨೫೦೦ ರೂ.ಗಳನ್ನು ಮಾತ್ರ ಚುನಾವಣೆಗೆ ವೆಚ್ಚ ಮಾಡಿದ್ದಾಗಿ ಮಲೆನಾಡಿನ ಶಾಸಕರೊಬ್ಬರು ದಾಖಲೆ ಮಾಡುತ್ತಾರೆ. ೧೯೭೮ ಚಿಕ್ಕಮಗಳೂರು ಲೋಕಸಭೆಯ ಉಪಚುನಾವಣೆಗಾಗಿ ಎರಡೂ ರಾಜಕೀಯ ಪಕ್ಷಗಳಿಂದ ಲಕ್ಷಲಕ್ಷ ರೂ.ಗಳು ಖರ್ಚಾಯಿತು. ೧೯೯೬ರಲ್ಲಿ ಮುಖ್ಯಮಂತ್ರಿ ದೇವೇಗೌಡ ಅವರ ನೇತೃತ್ವದಲ್ಲಿ ಜರುಗಿದ ಲೋಕಸಭಾ ಚುನಾವಣೆ ಸಹ ಹಿಂದೆಂದೂ ಕಾಣದಷ್ಟು ಹಣ ಪಡೆಯಿತು. ಅನಂತರ ಎಲ್ಲಾ ಚುನಾವಣೆಗಳೂ ಹಣ ಸುಂಗುವಲ್ಲಿ ಸ್ಪರ್ಧೆಗೆ ನಿಂತವು. ಇಂದು ವಿಧಾನಸಭೆ ಹಾಗೂ ಲೋಕಸಭೆ ಚುನಾವಣಾ ವೆಚ್ಚ ಸಾವಿರ ದಾಟಿ ಲಕ್ಷ, ಕೋಟಿಗಳಿಗೆ ಏರಿದೆ. ಹೀಗಾಗಿ ಸಜ್ಜನ ಅಭ್ಯರ್ಥಿ ಅದರಲ್ಲಿ ಭಾಗವಹಿಸಲು ಹೆದರುತ್ತಾನೆ. ವಿದ್ಯಾವಂತ ಜನರು ಚುನಾವಣೆಗೆ ಸ್ಪರ್ಧಿಸಲು ಹೆದರುತ್ತಾರೆ. ವಿಶೇಷವಾಗಿ ಚುನಾವಣೆಯು ವೇಳೆ ಕಪ್ಪುಹಣ ಎಲ್ಲಾ ಮೂಲದಿಂದ ಹರಿದು ಬರುತ್ತದೆ. ಇದಕ್ಕೆ ಯಾವ ರಾಜಕೀಯ ಪಕ್ಷವೂ ಹೊರತಾಗಿಲ್ಲ. ಬರುವ ದಿನಗಳಲ್ಲಿ ಇದು ಮತ್ತಷ್ಟು ಹೆಚ್ಚುವ ಸಾಧ್ಯತೆಯಿದೆ. ಆ ಕಾರಣ ರೈತರು, ಕಾರ್ಮಿಕರು ಹಾಗೂ ದುರ್ಬಲ ವರ್ಗದವರು ಚುನಾವಣಾ ಪ್ರಕ್ರಿಯೆಯಿಂದ ದೂರವೇ ಉಳಿಯುತ್ತಾರೆ.

ಕರ್ನಾಟಕದ ರಾಜಕೀಯದಲ್ಲಿ ೧೯೭೦ ತೀವ್ರ ಬದಲಾವಣೆ ಕಂಡುಬಂದಿದೆ. ವಿಶೇಷವಾಗಿ ಹಿಂದುಳಿದವರು, ದಲಿತರು ಹಾಗೂ ಅಲ್ಪಸಂಖ್ಯಾತರು ಅಧಿಕಾರ ಸ್ಥಾನದ ಮಹತ್ವ ಅರಿತಿದ್ದಾರೆ. ಮೇಲ್ವರ್ಗದವರು ಮುಖ್ಯಮಂತ್ರಿಗಳಾದರೂ ಹಿಂದುಳಿದ ವರ್ಗಗಳ ಸಹಾಯವಿಲ್ಲದೆ ಅಧಿಕಾರ ನಡೆಸುವುದು ಸುಲಭವಲ್ಲ. ಮನಸ್ಸು ಇರಲಿ ಇಲ್ಲದಿರಲಿ ಸಾಮಾಜಿಕ ನ್ಯಾಯದ ತತ್ವ ಅನುಸರಿಸಿ ಅಧಿಕಾರ ಹಂಚಿಕೊಳ್ಳಲೇಬೇಕು. ರಾಜ್ಯದಲ್ಲಿ ಎಲ್ಲಾ ಹಂತದಲ್ಲೂ ಸ್ಥಳೀಯ ಸಂಸ್ಥೆಗಳು ಅಸ್ತಿತ್ವದಲ್ಲಿರುವ ಕಾರಣ ಹೊಸ ನಾಯಕತ್ವ ಎಲ್ಲೆಡೆ ಮೂಡಿ ಬರುತ್ತಿದೆ. ಅವರು ವಿವಿಧ ಪಕ್ಷದಲ್ಲಿದ್ದರೂ ತಮ್ಮ ವರ್ಗದ ಹಿತಾಸಕ್ತಿ ಕಾಯಲು ಅವರೆಲ್ಲಾ ಮುಂದಾಗುತ್ತಾರೆ. ಇದನ್ನರಿತ ಮುಖ್ಯಮಂತ್ರಿ ಅಥವಾ ಸಚಿವರು ಪ್ರಜಾಪ್ರಭುತ್ವ ಸಿದ್ಧಾಂತಕ್ಕೆ ಅನುಗುಣವಾಗಿ ಕೆಲಸ ಮಾಡಬೇಕಾಗುತ್ತದೆ. ಈ ದೃಷ್ಟಿ

ಯಿಂದ ಸಾಮಾಜಿಕ ನ್ಯಾಯವನ್ನು ಅಂದರೆ ಅಧಿಕಾರ ಹಂಚಿಕೆಯನ್ನು ಸಮರ್ಥವಾಗಿ ಅನುಷ್ಠಾನಕ್ಕೆ ತಂದ ಕೀರ್ತಿ ಕರ್ನಾಟಕ ರಾಜ್ಯಕ್ಕೆ ಸೇರುತ್ತದೆ.

ಇದರ ಜೊತೆ ಮತ್ತೊಂದು ಮುಖವಿದೆ. ಹಿಂದುಳಿದ ನಾಯಕರು ಮುಖ್ಯಮಂತ್ರಿಯಾದಾಗ ಅನೇಕ ರೀತಿಯ ಕಿರುಕುಳ ಅನುಭವಿಸಬೇಕಾಗುತ್ತದೆ. ವೀರಶೈವ ಹಾಗೂ ಒಕ್ಕಲಿಗ ಜನಾಂಗದವರು ತಮ್ಮ ರಾಜಕೀಯ ಅಸಮಾಧಾನ ಮರೆತು, ಇವರನ್ನು ಅಧಿಕಾರದಿಂದ ಇಳಿಸಲು ಒಂದಾಗುತ್ತಾರೆ. ದೇವರಾಜ ಅರಸು, ಬಂಗಾರಪ್ಪ ಹಾಗೂ ವೀರಪ್ಪ ಮೊಯಿಲಿ ಅವರುಗಳು ತಮ್ಮ ಅಧಿಕಾರಾವಧಿಯಲ್ಲಿ ಅನುಭವಿಸಿದ ಕೋಟಲೆಗಳು ಒಂದೇ-ಎರಡೇ. ಇನ್ನು ಪರಿಶಿಷ್ಟ ಜಾತಿ ಹಾಗೂ ಅಲ್ಪ ಸಂಖ್ಯಾತ ಮುಸ್ಲಿಂ ಅಥವಾ ಕ್ರಿಶ್ಚಿಯನ್‌ರು ಈ ರಾಜ್ಯದ ಮುಖ್ಯಮಂತ್ರಿಯಾದಾಗ ಯಾವ ಪರಿಸ್ಥಿತಿ ಇರುತ್ತದೆ? ಇವರುಗಳು ಐದು ವರ್ಷದ ಆಳ್ವಿಕೆ ಮಾಡಬೇಕಾದರೆ ಬಲಿಷ್ಠ ಹೈಕಮಾಂಡ್ ನೆರವು ಬೇಕಾಗಬಹುದು! ರಾಜಕಾರಣಿಗಳಾದವರು 'ಕೊಳು-ಕೊಡುಗೆ' ಮನೋಭಾವ ಹೊಂದಿರಬೇಕು. ಮುಕ್ತ ಮನಸ್ಸಿನಿಂದ ಎಲ್ಲರನ್ನೂ ಕರೆದೊಯ್ಯುವ ಸಂಕಲ್ಪ ನಾಯಕರಾಗುವವರಿಗೆ ಇರಬೇಕು.

☆ ಕರ್ನಾಟಕದ ಸಕ್ರಿಯ ರಾಜಕೀಯದಲ್ಲಿ ವಿದ್ಯಾವಂತರು, ವಿದ್ವಾಂಸರು ಹಾಗೂ ವೃತ್ತಿಯಲ್ಲಿ ಪ್ರಾವೀಣ್ಯತೆ ಉಳ್ಳವರ ಸಂಖ್ಯೆ ತೀರ ಅಲ್ಪ. ವಕೀಲರನ್ನು ಹೊರತುಪಡಿಸಿದರೆ ಕೃಷಿ ಪದವೀಧರರು, ವೈದ್ಯರು, ಇಂಜಿನಿಯರ್, ವಿಜ್ಞಾನಿಗಳು, ಪ್ರಾಧ್ಯಾಪಕರು, ಶಿಕ್ಷಣ ತಜ್ಞರು, ಆಡಳಿತಗಾರರು, ಮ್ಯಾನೇಜ್‌ಮೆಂಟ್ ಪ್ರವೀಣರು ನಮ್ಮ ರಾಜ್ಯದ ರಾಜಕೀಯಕ್ಕೆ ಬಂದೇ ಇಲ್ಲ! ಇಂತಹವರನ್ನು ರಾಜಕೀಯ ಪಕ್ಷಗಳು ಸೂಕ್ತ ಗೌರವ ಕೊಟ್ಟು ಕರೆದುಕೊಳ್ಳುವುದಿಲ್ಲ. ಪ್ರೊ। ಬಿ. ಕೆ. ಚಂದ್ರಶೇಖರ್. ಡಾ। ಕೆ. ವೆಂಕಟಗಿರಿ ಗೌಡ, ಬಸವರಾಜ ಕಟ್ಟೀಮನಿ, ಡಾ। ಸಿದ್ಧಲಿಂಗಯ್ಯ, ಎಚ್.ಎಲ್. ನಾಗೇಗೌಡ, ಡಾ। ಜಿ. ಪರಮೇಶ್ವರ, ಡಾ। ಎಂ.ವಿ. ನಾಡಗೌಡ, ಡಾ। ಎ.ಬಿ. ಮಲ್ಕಾರೆಡ್ಡಿ, ಡಾ। ಮಹದೇವಪ್ಪ, ಡಾ। ಶಂಕರ ನಾಯ್ಕ, ಪ್ರೊ। ಎಂ. ಅಕಬರ ಅಲಿ, ಡಾ। ಎಲ್. ಹನುಮಂತಯ್ಯ, ಮಹಾದೇವ ಬಣಕಾರ್ ಮುಂತಾದವರು ಹೇಗೋ ರಾಜಕೀಯದಲ್ಲಿ ಸ್ಥಾನ ಗಳಿಸಿದ್ದುಂಟು. ಅವರಿಂದ ಭಾಷಣ ಮಾಡಿಸುವುದನ್ನು ಬಿಟ್ಟರೆ, ರಾಜಕೀಯ ಪಕ್ಷಗಳು ಅವರನ್ನು ಸಮರ್ಪಕವಾಗಿ ಉಪಯೋಗಿಸಿಕೊಂಡಿಲ್ಲ. ನಮ್ಮ ರಾಜಕಾರಣಿಗಳಿಗೆ ತಾವೇ ಸರ್ವಜ್ಞರು ಎಂಬ ಭ್ರಮೆ ಇರುವ ಕಾರಣ ಅವರು ಎಂದೂ ತಜ್ಞರನ್ನು ಒಪ್ಪಿಕೊಳ್ಳುವುದಿಲ್ಲ.

☆ ಬಿಹಾರ, ಉತ್ತರ ಪ್ರದೇಶ ಹಾಗೂ ಇತರ ರಾಜ್ಯಗಳ ರಾಜಕೀಯವನ್ನು ಪರಿಶೀಲಿಸಿದಾಗ ನಮ್ಮಲ್ಲಿ ರಾಜಕೀಯ ಅಪರಾಧೀಕರಣ ತುಂಬಾ ಕಡಿಮೆ. ಬಿಜಾಪುರ ಜಿಲ್ಲೆಯ ಶಾಸಕರೊಬ್ಬರನ್ನು ಹೊರತುಪಡಿಸಿ ಬೇರೆ ಯಾವ ಶಾಸಕರೂ ಅಪರಾಧಕ್ಕಾಗಿ ಸೆರೆವಾಸ ಅನುಭವಿಸಿಲ್ಲ. ೧೯೭೮ರಲ್ಲಿ ಶ್ರೀಮತಿ ಇಂದಿರಾಗಾಂಧಿ ಅವರ ಕಾಲದಲ್ಲಿ ಸಂಜಯ್ ಗಾಂಧಿ ನೇತೃತ್ವದ ಯುವ ಕಾಂಗ್ರೆಸ್ ಗೂಂಡಾ ಸಂಸ್ಕೃತಿಯ ಲೇಪನ ಪಡೆದಿತ್ತು. ಮುಖ್ಯಮಂತ್ರಿ ಅರಸು ಅವರ ಅಳಿಯ ಡಾ। ಎಂ. ಡಿ. ನಟರಾಜ್ ಇಂದಿರಾ ಬ್ರಿಗೇಡ್ ಮೂಲಕ ನಾಗರಿಕರಲ್ಲಿ ಭಯ ಹುಟ್ಟಿಸಿದ್ದರು. ಗುಂಡೂರಾವ್ ಕಾಲದಲ್ಲಿ ಯುವಕಾಂಗ್ರೆಸ್‌ನ ಬಿ.ಕೆ. ಹರಿಪ್ರಸಾದ್ ಮತ್ತಿತರರು ಪ್ರಜಾವಾಣಿ, ಕನ್ನಡ ಪ್ರಭ ಪತ್ರಿಕೆಗಳಿಗೆ ಬೀಗಮುದ್ರೆ ಹಾಕಿಸಿದ್ದರು. ಮುಖ್ಯಮಂತ್ರಿ ಹೆಗಡೆ ಗೂಂಡಾಗಿರಿ ಹತ್ತಿಕ್ಕಲು ಉಗ್ರ ಕ್ರಮ ಕೈಗೊಂಡರು. ಆದರೆ, ಅವರ ಸಚಿವ ಸಂಪುಟದ ಡಾ। ಆಳ್ವ ಹಾಗೂ ಅವರ ಅನುಯಾಯಿಗಳು ಗೂಂಡಾಗಿರಿ ಆರೋಪದಿಂದ ಮುಕ್ತರಾಗಲು ಸಾಧ್ಯವಾಗಲಿಲ್ಲ. ಬಂಗಾರಪ್ಪ ಸಚಿವ ಸಂಪುಟದಲ್ಲಿದ್ದ ಎಸ್. ರಮೇಶ್ ಈ ರೀತಿ ಈ ಆರೋಪಕ್ಕೆ ಒಳಗಾಗಿದ್ದುಂಟು.

ಸಮಗ್ರವಾಗಿ ಕರ್ನಾಟಕದ ರಾಜಕಾರಣವನ್ನು ಗಮನಿಸಿದಾಗ ಕರ್ನಾಟಕದ ಜನತೆ ಎಂದೂ ಗೂಂಡಾಗಿರಿಯನ್ನು ಮೆಚ್ಚಿದವರಲ್ಲ. ಅವರುಗಳು ತಾತ್ಕಾಲಿಕವಾಗಿ ಶಾಸಕರು ಅಥವಾ ಸಚಿವರಾಗಬಹುದು. ಆದರೆ ಎಂದೂ ಅವರು ಜನರ ಪೂರ್ಣ ವಿಶ್ವಾಸ ಗಳಿಸಲು ಸಾಧ್ಯವಾಗಿಲ್ಲ. ಮಹಿಳೆಯರು, ಮಧ್ಯಮ ವರ್ಗದ ಹಾಗೂ ಸುಶಿಕ್ಷಿತ ವರ್ಗದ ಜನ ಗೂಂಡಾ ಸಂಸ್ಕೃತಿ ಪೋಷಿಸಿಲ್ಲ. ರಾಜಕೀಯದಲ್ಲಿ ತೋಳುಬಲದಿಂದ ಅಧಿಕಾರ ಪಡೆಯುವುದು; ಅದನ್ನು ಉಳಿಸಿಕೊಳ್ಳಲು ತೋಳುಬಲವನ್ನು ತೋರಿಸುವ ಸಂಸ್ಕೃತಿ ಕರ್ನಾಟಕದ ರಾಜಕಾರಣದಲ್ಲಿ ಸಾಧ್ಯವಾಗುವುದಿಲ್ಲ. ಈ ದೃಷ್ಟಿಯಿಂದ ಕರ್ನಾಟಕದ ಜನ ರಾಷ್ಟ್ರದಲ್ಲಿ ತಮ್ಮದೇ ಆದ ಖ್ಯಾತಿ ಗಳಿಸಿಕೊಂಡಿದ್ದಾರೆ.

☆ ಕರ್ನಾಟಕದ ಮತದಾರರೇ ರಾಷ್ಟ್ರರಾಜಕಾರಣದಲ್ಲೂ ಖ್ಯಾತಿಯನ್ನು ಗಳಿಸಿಕೊಂಡಿದ್ದಾರೆ. ಪ್ರಜಾಪ್ರಭುತ್ವ ವ್ಯವಸ್ಥೆಗೆ ಕರ್ನಾಟಕದ ಮತದಾರರು ಬಹುಬೇಗ ಒಗ್ಗಿಕೊಂಡಿದ್ದಾರೆ. ಅಭ್ಯರ್ಥಿಯ ಯೋಗ್ಯತೆ ನೋಡಿ ಮತಕೊಟ್ಟಿದ್ದಾರೆ. ೧೯೫೭, ೧೯೫೭, ೬೭, ೬೭ರ ಚುನಾವಣೆಗಳಲ್ಲಿ ವಿರೋಧ ಪಕ್ಷಗಳಿಗೆ ಸಾಕಷ್ಟು ಮನ್ನಣೆ ಕೊಟ್ಟ ಕೀರ್ತಿ ಕರ್ನಾಟಕದ್ದು. ೧೯೭೫ರಿಂದೀಚೆಗೆ

ಕರ್ನಾಟಕದಲ್ಲಿ ವಿರೋಧ ಪಕ್ಷಗಳು ಅಧಿಕಾರ ಸೂತ್ರ ಹಿಡಿಯಲು ಸಮರ್ಥವೆಂಬ ಭಾವನೆಯನ್ನು ಕರ್ನಾಟಕದ ಮತದಾರರು ತೋರಿಸಿಕೊಟ್ಟಿದ್ದಾರೆ.

೧೯೭೮ರ ಚಿಕ್ಕಮಗಳೂರು ಲೋಕಸಭೆಯ ಚುನಾವಣಾ ಸಂದರ್ಭದಲ್ಲಿ ಉತ್ತರ ಭಾರತದಲ್ಲಿ ಸೋತಿದ್ದ ಮಾಜಿ ಪ್ರಧಾನಿ ಇಂದಿರಾಗಾಂಧಿ ಅವರಿಗೆ ರಾಜಕೀಯವಾಗಿ ಪುನರ್‌ಜನ್ಮ ನೀಡಿದ ಖ್ಯಾತಿ ಕರ್ನಾಟಕದ ಮತದಾರರದ್ದು. ಅವರ ವಿರುದ್ಧ ಇಡೀ ಕೇಂದ್ರ ಸರ್ಕಾರ, ಸ್ವತಃ ಅಂದಿನ ಕೈಗಾರಿಕಾ ಸಚಿವರಾದ ಜಾರ್ಜ್ ಫರ್ನಾಂಡಿಸ್ ಅವರು ಪ್ರಚಾರ ಮಾಡಿದರು. ಆದರೂ ಕರ್ನಾಟಕದ ಮತದಾರರು ಶ್ರೀಮತಿ ಗಾಂಧಿ ಅವರನ್ನೇ ಗೆಲ್ಲಿಸಿದರು. ೧೯೮೩ರಲ್ಲಿ ಯಾರೂ ನಿರೀಕ್ಷಿಸದ ಕಾಂಗ್ರೆ ಮುಖ್ಯಮಂತ್ರಿ ಆರ್. ಗುಂಡೂರಾವ್‌ರವರನ್ನು ಸೋಲಿಸಿದರು. ಕರ್ನಾಟಕದ ಮತದಾರರ ರಾಜಕೀಯ ಪ್ರಬುದ್ಧತೆ ಈ ಬದಲಾವಣೆಗೆ ಕಾರಣ ವಾಯಿತು. ೧೯೯೯ರ ಲೋಕಸಭಾ ಚುನಾವಣೆಯಲ್ಲಿ ಮಾಜಿ ಪ್ರಧಾನಿ ದೇವೇಗೌಡರು ಸೋಲನ್ನು ಕಂಡಾಗ ಕರ್ನಾಟಕದ ಮತದಾರರ ಬುದ್ಧಿ ಶಕ್ತಿಯನ್ನು ಯಾರೂ ಲಘುವಾಗಿ ಕಾಣುವಂತಿಲ್ಲವೆಂಬುದು ನಿರೂಪಿತವಾಗಿದೆ.

೧೯೯೯ರ ಲೋಕಸಭೆ ಹಾಗೂ ವಿಧಾನಸಭೆ ಚುನಾವಣೆಯ ವೇಳೆಗೆ ರಾಜಕೀಯ ವಿಶ್ಲೇಷಣಕಾರರು ಹೇಳಿದ ಭವಿಷ್ಯವನ್ನು ಸುಳ್ಳಾಗಿಸಿದ ಕೀರ್ತಿ ಕರ್ನಾಟಕದ ಮತದಾರರದ್ದು.

☆ ತಮಿಳುನಾಡು ಹಾಗೂ ಆಂಧ್ರಪ್ರದೇಶದಲ್ಲಿ ಸಿನಿಮಾ ರಾಜಕೀಯ ಕ್ಷೇತ್ರದ ಮೇಲೆ ನಿಚ್ಚಳವಾಗಿ ಪ್ರಭಾವ ಬೀರಿದೆ. ಕೇರಳದಲ್ಲಿ ಎಡಪಂಥೀಯ ತತ್ವದಲ್ಲಿ ಮಾತ್ರ ಒಲವು ಕಾಣಬಹುದು. ಆದರೆ ಕರ್ನಾಟಕದ ರಾಜಕೀಯ ವಿಚಾರ ಹಾಗಲ್ಲ. ಪ್ರತಿಯೊಂದು ಚುನಾವಣಾ ಸಂದರ್ಭದಲ್ಲೂ ಆ ಕಾಲದ ರಾಜಕೀಯ ಪರಿಸ್ಥಿತಿಯನ್ನು ಗಮನಿಸಿ, ಅಧ್ಯಯನ ಮಾಡಿ ತೀರ್ಮಾನ ತೆಗೆದುಕೊಳ್ಳುವ ರಾಜಕೀಯ ಜ್ಞಾನ ಕರ್ನಾಟಕದ ಮತದಾರರಿಗೆ ಇರುವುದರಿಂದಲೇ ಅವರಿಗೆ ವಿಶೇಷ ಮಾನ್ಯತೆ ಇದೆ.

☆ ಕರ್ನಾಟಕದ ರಾಜಕಾರಣವನ್ನು ನೋಡಿದಾಗ ಅನೇಕ ಗುಣಾತ್ಮಕ ಅಂಶಗಳು ಕಾಣಬರುತ್ತವೆ. ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಗೆ ಇವೆಲ್ಲಾ ಪೂರಕವಾಗಿರುತ್ತವೆ.

೧. ರಾಜ್ಯದ ನೆಲ-ಜಲ-ಗಡಿ ಪ್ರಶ್ನೆ ಬಂದಾಗ ರಾಜಕೀಯ ಪಕ್ಷಗಳು ತಮ್ಮ ಭೇದಭಾವ ಮರೆತು ಹೋರಾಟ ಮಾಡಿದ ಸನ್ನಿವೇಶಗಳಿವೆ.

೨. ವಿರೋಧ ಪಕ್ಷ ಹಾಗೂ ಆಡಳಿತ ಪಕ್ಷಗಳು ಸತ್ಸಂಪ್ರದಾಯ ಸಾಧಿಸಿದ ಅನೇಕ ದೃಷ್ಟಾಂತಗಳಿವೆ. ೧೯೯೯ರಲ್ಲಿ ಎಸ್.ಎಂ. ಕೃಷ್ಣ ಅವರು ಅಧಿಕಾರ ಸ್ವೀಕರಿಸುವ ಸಂದರ್ಭದಲ್ಲಿ ಹಾಜರಿದ್ದ ಆ ಹಿಂದಿನ ಮುಖ್ಯಮಂತ್ರಿ ಜೆ.ಎಚ್. ಪಟೇಲ್ ಅವರ ನಡತೆಯನ್ನು ಸ್ಮರಿಸಬೇಕು. ಪ್ರಜಾಪ್ರಭುತ್ವದಲ್ಲಿ ಇಂತಹ ಸತ್‌ಪರಂಪರೆ ಬೆಳೆಯಬೇಕು. ೧೯೬೮ರಲ್ಲಿ ಮುಖ್ಯಮಂತ್ರಿಗಳಾಗಿದ್ದ ಎಸ್. ನಿಜಲಿಂಗಪ್ಪ ಅವರು ಕೆಮ್ಮಣ್ಣುಗುಂಡಿಯ ಅತಿಥಿ ಗೃಹದಲ್ಲಿ ಅನಾರೋಗ್ಯದಿಂದ ಚೇತರಿಸಿಕೊಳ್ಳಲು ವಿಶ್ರಾಂತಿ ಪಡೆಯುತ್ತಿದ್ದ ವಿರೋಧಿ ನಾಯಕ ಶಾಂತವೇರಿ ಗೋಪಾಲಗೌಡ ಅವರನ್ನು ಕಂಡು ತಾವು ಕಷ್ಟದಲ್ಲಿದ್ದೀರ, ಹತ್ತು ಎಕರೆ ಭೂಮಿ ಮಂಜೂರು ಮಾಡುತ್ತೀನಿ ಎಂದು ಹೇಳಿದರು. ಆದರೆ, ಶಾಂತವೇರಿ ಗೋಪಾಲಗೌಡರು ಅದನ್ನು ನಯವಾಗಿ ತಿರಸ್ಕರಿಸಿದರು. ಇಲ್ಲಿ ನಿಜಲಿಂಗಪ್ಪನವರ ಸಹೃದಯತೆ ಪ್ರಮುಖವಾದದ್ದು. ದೇವರಾಜ್ ಅರಸ್‌ರವರಲ್ಲೂ ಇಂತಹ ಸಹೃದಯತೆ ಇತ್ತು.

೩. ೧೯೩೦ರಲ್ಲಿ ದೇವರಾಜ್ ಅರಸು ಅವರ ಕಾಂಗ್ರೆಸ್ (ಯು) ನಿಂದ ೭೦ ಜನ ಶಾಸಕರು ಪಕ್ಷಾಂತರ ಮಾಡಿದ್ದನ್ನು ಹೊರತುಪಡಿಸಿದರೆ, ಹರಿಯಾಣದಂತೆ ಸಾಮೂಹಿಕ ಪಕ್ಷಾಂತರ ಇಲ್ಲಿ ನಡೆದಿಲ್ಲ. ಅಧಿಕಾರದ ಆಸೆಗಾಗಿ ಪಕ್ಷಾಂತರ ಮಾಡಿದ ರಾಜಕಾರಣಿಗಳನ್ನು ಕರ್ನಾಟಕದ ಜನತೆ ಮಾನ್ಯ ಮಾಡಿಲ್ಲ. ಅಪವಿತ್ರ ಮೈತ್ರಿಗೂ ಅವರು ಪ್ರೋತ್ಸಾಹ ಕೊಟ್ಟಿಲ್ಲ. ಜನತೆಯೇ ರಾಜಕಾರಣಿಗಳನ್ನು ಸರಿದಾರಿಗೆ ತೆಗೆದುಕೊಂಡು ಹೋಗುವಷ್ಟು ವಿಚಾರವಂತಿಕೆ ಅವರಲ್ಲಿದೆ. ಯಾವ ರಾಜಕಾರಣಿಗೇ ಆಗಲಿ ಕರ್ನಾಟಕದ ರಾಜಕಾರಣದ ಸೂಕ್ಷ್ಮ ಅರ್ಥವಾಗದೇ ಹೋದರೆ ಅವರು ವಿಫಲರಾಗುವ ಸನ್ನಿವೇಶ ಉಂಟು.

೪. ಕರ್ನಾಟಕದ ಜನತೆ ಸಾಮೂಹಿಕವಾಗಿ ಯೋಚಿಸಿ ತೀರ್ಮಾನ ತೆಗೆದುಕೊಳ್ಳುವ ಸಾಮರ್ಥ್ಯವಿರುವ ಕಾರಣ ತ್ರಿಶಂಕು ವಿಧಾನಸಭೆ ಇನ್ನೂ ಇಲ್ಲಿ ಬಂದಿಲ್ಲ. ೧೯೮೫, ೧೯೯೪, ೧೯೯೯ರಲ್ಲಿ ರಾಜ್ಯದ ತ್ರಿಶಂಕು ವಿಧಾನಸಭೆ ಬರುತ್ತದೆಂದು ರಾಜಕೀಯ ವಿಶ್ಲೇಷಣಕಾರರು ಹೇಳಿದ್ದರು. ಆದರೆ ಜನತೆ ಒಂದು ಪಕ್ಷವನ್ನು ಒಮ್ಮತದಿಂದ ಆಯ್ಕೆ ಮಾಡಿಕೊಂಡಿದ್ದರು. ಇದು ಪ್ರಬುದ್ಧ ರಾಜಕೀಯ ಬೆಳವಣಿಗೆಗೆ ಕಾರಣವಾದ ಅಂಶವಾಗಿದೆ.

೫. ಕರ್ನಾಟಕದ ಜನತೆ ಸದಾ ರಾಷ್ಟ್ರೀಯ ಭಾವನೆಗೆ ತಕ್ಕಂತೆ ಸ್ಪಂದಿಸುವವರು. ಕೆಂಗಲ್ ಹನುಮಂತಯ್ಯ, ಎಸ್. ನಿಜಲಿಂಗಪ್ಪ, ದೇವರಾಜ ಅರಸು, ಆರ್. ಗುಂಡೂರಾವ್, ರಾಮಕೃಷ್ಣ ಹೆಗಡೆ ಮೊದಲಾದವರು. ಕಾಂಗ್ರೆಸ್ ಪಕ್ಷದ ವಿರುದ್ಧ ಪ್ರತಿಭಟಿಸಿ ಬೇರೆ ರಾಜಕೀಯ ಪಕ್ಷ ಕಟ್ಟಿದ್ದಾರೆ. ಆದರೆ ಅವರೆಂದೂ ಪ್ರಾದೇಶಿಕ ಪಕ್ಷ ಕಟ್ಟಲು ಮನಸ್ಸು ಮಾಡಲಿಲ್ಲ. ರಾಷ್ಟ್ರೀಯ ಪಕ್ಷ ನಿರ್ಮಾಣ ಅವರ ಗುರಿಯಾಗಿತ್ತು. ಕರ್ನಾಟಕ ರಾಜಕೀಯ ನಾಯಕರ ರಾಷ್ಟ್ರೀಯ ಪ್ರಜ್ಞೆಗೆ ದಾಖಲಾರ್ಹವಾದ ಸಂಗತಿಯಿದು. ಕರ್ನಾಟಕದ ಜನತೆ ಸಹ ಪ್ರಾದೇಶಿಕ ಸಂಗತಿಗಳಿಗೆ ಮಹತ್ವ ಕೊಟ್ಟ ನಿದರ್ಶನಗಳಿಲ್ಲ. ಹಾಗಾಗಿ ಕರ್ನಾಟಕದ ರಾಜಕೀಯದಲ್ಲಿ ಪ್ರಾದೇಶಿಕ ವಿಷಯಗಳಿಗೆ ಹೆಚ್ಚಿನ ಒತ್ತು ಸಿಗುವ ಸಂಭವ ಕಡಿಮೆ.

☆ ಹಿಂದೆ ಉತ್ತರ ಭಾರತ ರಾಜಕಾರಣಿಗಳಿಗೆ ದಕ್ಷಿಣ ಭಾರತವೆಂದರೆ ಮದ್ರಾಸ್ ಮಾತ್ರ ಆಗಿತ್ತು. ರಾಜಾಜಿ, ಕಾಮರಾಜ್ ಮೊದಲಾದವರೇ ಅವರಿಗೆ ನಾಯಕರಾಗಿದ್ದರು. ಕನ್ನಡಿಗರ ವಿಶೇಷ ಗುಣಗಳಾದ ತಾಳ್ಮೆ, ಸಹನೆ, ಬುದ್ಧಿವಂತಿಕೆ ಹಾಗೂ ಕಷ್ಟಸಹಿಷ್ಣುತೆ ಅವರಿಗೆ ಇಂದು ರಾಷ್ಟ್ರದಲ್ಲಿ ಮಾತ್ರವಲ್ಲ ವಿಶ್ವದಲ್ಲೇ ಖ್ಯಾತಿ ತಂದುಕೊಟ್ಟಿದೆ. ೧೯೬೦ರ ಕಾಂಗ್ರೆಸ್ ಅಧಿವೇಶನ ಬೆಂಗಳೂರಿನ ಲಾಲ್‌ಬಾಗಿನ ಗಾಜಿನಮನೆಯಲ್ಲಿ ಜರುಗಿತಷ್ಟೆ. ನಿಜಲಿಂಗಪ್ಪನವರು ಆಗ ಕಾಂಗ್ರೆಸ್‌ಗೆ ತಾತ್ವಿಕ ಹಿನ್ನೆಲೆ ಒದಗಿಸಿದ್ದರು. ಆಡಳಿತ ಕಾಂಗ್ರೆಸ್‌ನಿಂದ ಇಂದಿರಾಗಾಂಧಿ ಅವರ ಉಚ್ಚಾಟನೆಯಾದಾಗ ಅವರಿಗೆ ಪುನರ್ಜನ್ಮ ನೀಡಿದ ದೇವರಾಜ ಅರಸು ಕರ್ನಾಟಕಕ್ಕೆ ರಾಷ್ಟ್ರೀಯ ಖ್ಯಾತಿ ತಂದುಕೊಟ್ಟರು. ಕರ್ನಾಟಕದಲ್ಲಿ ಹಾಗೂ ಭಾರತದಲ್ಲಿ ವಿರೋಧ ಪಕ್ಷಗಳು ಆಳ್ವಿಕೆ ಮಾಡಲು ರಾಮಕೃಷ್ಣ ಹೆಗಡೆ ಅವರ ಸತತ ಪ್ರಯತ್ನಗಳು ಕಾರಣವಾಯಿತು.

೧೯೯೯ರಲ್ಲಿ ಶ್ರೀಮತಿ ಸೋನಿಯಾ ಗಾಂಧಿ ಅವರನ್ನು ಲೋಕಸಭೆಗೆ ಕಳುಹಿಸಿದ ಕ್ಷೇತ್ರ ಕರ್ನಾಟಕದ ಬಳ್ಳಾರಿ. ಅನೇಕ ರಾಷ್ಟ್ರೀಯ ಘಟನೆಗಳು ಕರ್ನಾಟಕದ ನೆಲೆಯಲ್ಲಿ ನಡೆದಿವೆ. ರಾಷ್ಟ್ರರಾಜಕಾರಣಕ್ಕೆ ಹೊಸ ತಿರುವು ಕೊಡುವ ಚಿಂತನೆಗಳಿಗೆ ಈ ನೆಲ ಸ್ಫೂರ್ತಿ ನೀಡಿದೆ. ಕರ್ನಾಟಕ ರಾಜಕೀಯ ಪ್ರಯೋಗಗಳಿಗೆ ಹದನಾಗಿ ಹಸನು ಮಾಡಿದ ಫಲವತ್ತಾದ ಭೂಮಿಯಾಗಿದೆ. ಯಾವುದೇ ಅತಿರೇಕಕ್ಕೆ ಎಡೆಕೊಡದೆ ಸಮಾಧಾನಕರವಾಗಿ ಚಿಂತನೆ ಮಾಡುವ ಜನತೆ ಇಲ್ಲಿದ್ದಾರೆ. ಬುದ್ಧಿವಂತರು ಹಾಗೂ ಸಾಹಸಶೀಲರಾದ ರಾಜಕೀಯ ವ್ಯಕ್ತಿಗಳಿದ್ದಾರೆ. ಇವುಗಳನ್ನು ಬಳಸಿಕೊಂಡರೆ ಬೇಕಾದ ಬೆಳೆಗಳನ್ನು ಬೆಳೆಯುವ ಸದವಕಾಶ ಎಲ್ಲಾ ರಾಜಕೀಯ ಪಕ್ಷದವರಿಗೂ ಇದೆ. ಇಂತಹ ವೈಶಿಷ್ಟ್ಯಪೂರ್ಣವಾದ ರಾಜ್ಯ ಭಾರತದ ರಾಜಕೀಯ ಕ್ಷೇತ್ರದಲ್ಲೇ ದುರ್ಲಭವೆಂದರೆ ಅತಿಶಯೋಕ್ತಿಯ ಮಾತಲ್ಲ.

# ಎಸ್. ಎನ್. ಜೀವನದ ಪ್ರಮುಖ ಘಟನೆಗಳು

| | |
|---|---|
| ೧೦.೧೨.೧೯೦೨ | ಹಲುವಾಗಲು ಗ್ರಾಮದಲ್ಲಿ ಜನನ |
| ೧೯೧೯ | ಗಾಂಧೀಜಿಯನ್ನು ಮೊದಲು ನೋಡಿದ್ದು |
| ೧೯೨೪ | ಬಿ. ಎ. ಪದವಿ |
| ೧೯೨೬ | ಚಿತ್ರದುರ್ಗದಲ್ಲಿ ವಕೀಲಿ ವೃತ್ತಿ ಪ್ರಾರಂಭ |
| ೨೫.೦೫.೧೯೨೭ | ದಾವಣಗೆರೆಯ ಮುರಿಗಮ್ಮ ಅವರೊಡನೆ ವಿವಾಹ (ಮುರಿಗಮ್ಮನ ಜನನ : ೩೦.೯.೧೯೧೦ ರಲ್ಲಿ) |
| ೧೯೨೮ | ಮೊದಲ ಮಗಳು ಪಾರ್ವತಮ್ಮನ ಜನನ |
| ೧೯೩೬ | ಕಾಂಗ್ರೆಸ್ ದೀಕ್ಷೆ, ಚಿತ್ರದುರ್ಗ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರು |
| ೧೮.೦೯.೧೯೩೯ | ಈಚಲುವನ ಸತ್ಯಾಗ್ರಹ; ಪ್ರಥಮ ಕಾರಾಗೃಹವಾಸ |
| ೧೯೪೦ | ವಕೀಲಿ ಸನ್ನಯ ರದ್ದು |
| ೦೯.೧೦.೧೯೪೨ | ಭಾರತ ಬಿಟ್ಟು ತೊಲಗಿ ಘೋಷಣೆ - ಬಂಧನ |
| ೧೯೪೪ | ಮೈಸೂರು ಕಾಂಗ್ರೆಸ್ ಅಧ್ಯಕ್ಷರು |
| ೧೯೪೬-೧೯೫೪ | ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರು |
| ೧೯೫೨-೧೯೫೬ | ಚಿತ್ರದುರ್ಗದಿಂದ ಲೋಕಸಭೆಗೆ ಆಯ್ಕೆ |
| ೦೧.೧೧.೧೯೫೬ | ಏಕೀಕರಣ ನಂತರ ಮೊದಲ ಮುಖ್ಯಮಂತ್ರಿ |
| ೧೯೫೭ | ಚುನಾವಣೆ, ವಿಜಯ ಮುಖ್ಯಮಂತ್ರಿ ಪದವಿ ಮುಂದುವರಿಕೆ |
| ೧೫.೧೧.೧೯೫೯ | ಭಾರತೀಯ ತೈಲ ಕಂಪೆನಿಯ ಅಧ್ಯಕ್ಷರು |
| ೧೯೬೨ | ಹೊಸದುರ್ಗ ಕ್ಷೇತ್ರದಿಂದ ಚುನಾವಣೆಯಲ್ಲಿ ಸೋಲು ಮತ್ತೆ ಬಾಗಲಕೋಟೆ ಕ್ಷೇತ್ರದಿಂದ ಗೆದ್ದದ್ದು ಪುನಃ ಮುಖ್ಯಮಂತ್ರಿ |
| ೦೨.೦೩.೧೯೬೭ | ಸುವರ್ಣ ತುಲಾಭಾರ ಬಿಜಾಪುರ ಜಿಲ್ಲೆಯಲ್ಲಿ (ಚೀನಾಧಾಲಿ) |
| ೧೯೬೭ | ಶಿಗ್ಗಾಂವಿ ಚುನಾವಣಾ ಕ್ಷೇತ್ರದಿಂದ ಅವಿರೋಧ ಆಯ್ಕೆ. ಮತ್ತೊಮ್ಮೆ ಮುಖ್ಯಮಂತ್ರಿ |
| ೦೭.೧೨.೧೯೬೭ | ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರು (ಕರ್ನಾಟಕದಿಂದ ಪ್ರಪ್ರಥಮ ಅಧ್ಯಕ್ಷರು) |
| ೨೩.೦೭.೧೯೬೮ | ಜಪಾನ್ ಪ್ರವಾಸ |
| ೧೨.೦೫.೧೯೬೯ | ಯೂರೋಪ್ ಪ್ರವಾಸ |

| | |
|---|---|
| ಜುಲೈ ೧೯೬೯ | ಬೆಂಗಳೂರಲ್ಲಿ ಐತಿಹಾಸಿಕ ಕಾಂಗ್ರೆಸ್ ಅಧಿವೇಶನ; ಇಬ್ಭಾಗಕ್ಕೆ ನಾಂದಿ |
| ಡಿಸೆಂಬರ್೧೯೬೯ | ಕಾಂಗ್ರೆಸ್ ಇಬ್ಭಾಗ |
| ೧೯೭೪ | ಸಂಸ್ಥಾ ಕಾಂಗ್ರೆಸ್ ಅಧ್ಯಕ್ಷಸ್ಥಾನಕ್ಕೆ ರಾಜೀನಾಮೆ, ರಾಜಕೀಯದಿಂದ ನಿವೃತ್ತಿ |
| ೦೬.೦೩.೧೯೮೫ | ಜನತಾ ಪಕ್ಷಕ್ಕೆ ರಾಜೀನಾಮೆ |
| ೧೦.೧೦.೧೯೮೮ | ಮುರಿಗಮ್ಮನವರ ಮರಣ |
| ೧೯೯೦ | ಸರ್ದಾರ್ ಪಟೇಲ್ ಕೃತಿ ಪ್ರಕಾಶನ ಸಂಸ್ಥೆಯ ಅಧ್ಯಕ್ಷರು |
| ೦೨.೧೦.೧೯೯೯ | ಕರ್ನಾಟಕ ರತ್ನ ಪ್ರಶಸ್ತಿ |
| ೨೦.೦೬.೨೦೦೦ | ರಾತ್ರಿ ಬಿದ್ದದ್ದು ಕಾಲಿಗೆ ಪೆಟ್ಟು ಬೌರಿಂಗ್ ಆಸ್ಪತ್ರೆಯಲ್ಲಿ ಚಿಕಿತ್ಸೆ |
| ೨೫.೦೬.೨೦೦೦ | ಬೌರಿಂಗ್ ಆಸ್ಪತ್ರೆಯಿಂದ ಚಿತ್ರದುರ್ಗಕ್ಕೆ ಒಯ್ದದ್ದು |
| ೦೪.೦೮.೨೦೦೦ | ಅಂತಿಮ ಯಾತ್ರೆ |

# ಲೇಖಕರ ವಿಳಾಸಗಳು

1. ಶ್ರೀ ಎಂ. ಪಿ. ಈಶ್ವರಪ್ಪ
ಮಾಜಿ ವಿರೋಧ ಪಕ್ಷದ ನಾಯಕರು
ಲೋಯರ್ ಪ್ಯಾಲೇಸ್ ಆರ್ಚರ್ಡ್ಸ್ ರಸ್ತೆ
ಸದಾಶಿವನಗರ
ಬೆಂಗಳೂರು - ೩

೨. ಶ್ರೀ ಉಮೇಶ್‌ಬಾಬು ಪಟೇಲ್
ಶೇಷಾದ್ರಿಪುರಂ ಮುಖ್ಯರಸ್ತೆ
ಬೆಂಗಳೂರು

೩. ಪ್ರೊ। ಎಚ್ಚೆಸ್ಕೆ (ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್)
ನಂ. ೪೧, ೬ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು-೯

೪. ಶ್ರೀ ಬಿ. ವಿ. ಕಕ್ಕಿಲಾಯ
ಜಿ-೪, ಸಂಗೀತಾ ಅಪಾರ್ಟ್‌ಮೆಂಟ್ಸ್
ಸರ್ಕ್ಯೂಟ್ ಹೌಸ್ ಎದುರು, ಕದಿರಿ ಹಿಲ್ಸ್
ಮಂಗಳೂರು - ೪

೫. ಕೆ. ಆರ್. ಕಮಲೇಶ್
ವಿಶೇಷ ಕರ್ತವ್ಯಾಧಿಕಾರಿಗಳು
ಬೃಹತ್ ಹಾಗೂ ಮಧ್ಯಮ ಕೈಗಾರಿಕಾ ಸಚಿವರ ಆಪ್ತಶಾಖೆ
ಬೆಂಗಳೂರು

೬. ಶ್ರೀ ಕಯ್ಯಾರ ಕಿಞ್ಞಣ್ಣ ರೈ
'ಕವಿತಾ', ಪೆರಡಾಲ
ಕಾಸರಗೋಡು

೭. ಶ್ರೀ ವಿ. ಎಸ್. ಕೃಷ್ಣಯ್ಯರ್
ನಂ. ೭, ಶಂಕರಪುರಂ
ಬೆಂಗಳೂರು

8. ಡಾ। ಎಚ್. ಎಸ್. ಗೋಪಾಲರಾವ್
'ಸ್ವಸ್ತಿಶ್ರೀ ಸ್ಕಂದ', ಅರಿಶಿನಕುಂಟೆ
ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

೯. ಡಾ। ಚನ್ನಗಿರಿ ಸುಧೀಂದ್ರ
ಕಾರ್ಯಕ್ರಮ ನಿರ್ಮಾಪಕರು
ಆಕಾಶವಾಣಿ
ಭದ್ರಾವತಿ

೧೦. ಶ್ರೀ ರಾ. ನಂ. ಚಂದ್ರಶೇಖರ್
ನಂ, ೨೩, ೨೩ನೇ ಮುಖ್ಯರಸ್ತೆ
ಗಿರಿನಗರ 'ಟಿ' ಬ್ಲಾಕ್
ಬೆಂಗಳೂರು - ೮೫

೧೧. ಶ್ರೀ ಎಸ್. ಎ. ಜಗನ್ನಾಥ್
ಹಿರಿಯ ಸಂಪಾದಕರು
ಕರ್ನಾಟಕ ಗೆಜೆಟಿಯರ್ ಇಲಾಖೆ
ಕಾವೇರಿ ಭವನ
ಬೆಂಗಳೂರು

೧೨. ಶ್ರೀ ಎ. ಎಸ್. ಜಯಸಿಂಹ
ಕೆ.ಪಿ.ಸಿ.ಸಿ. ಸದಸ್ಯರು
'ಸಿಂಹಾದ್ರಿ'
೬೧೨, ಬನಶಂಕರಿ ೨ನೇ ಫೇಸ್
೨ನೇ ಕ್ರಾಸ್, ೭ನೇ ಬ್ಲಾಕ್
ಬೆಂಗಳೂರು

೧೩. ಪ್ರೊ। ಎಚ್. ಆರ್. ದಾಸೇಗೌಡ
ನಂ. ೬೮೧, ೧೨ನೇ ತಿರುವು
ಎಂ. ಸಿ. ಲೇ ಔಟ್, ವಿಜಯನಗರ
ಬೆಂಗಳೂರು - ೪೦

೧೪. **ಡಾ। ದೇಜಗೌ (ದೇ. ಜವರೇಗೌಡ)**
ವಿಶ್ವಚೇತನ ಕಲಾನಿಲಯ
ಕಾಳಿದಾಸ ರಸ್ತೆ, ಜಯಲಕ್ಷ್ಮೀಪುರಂ
ಮೈಸೂರು - ೧೨

೧೫. **ಶ್ರೀ ಎ. ಜಿ. ನರಸಿಂಗರಾವ್**
ಮಾರಾಟ ವಿಭಾಗ, ಮಾಡ್ರನ್ ಬ್ರೆಡ್ ಲಿ. ಕಂ.
ಯಶವಂತಪುರ
ಬೆಂಗಳೂರು

೧೬. **ಶ್ರೀ ಅ. ಲ. ನರಸಿಂಹನ್**
ಸಂಪಾದಕರು
ಕರ್ನಾಟಕ ಗೆಜೆಟಿಯರ್ ಇಲಾಖೆ
ಕಾವೇರಿ ಭವನ
ಬೆಂಗಳೂರು

೧೭. **ಶ್ರೀ ಎಸ್. ನಂಜುಂಡಸ್ವಾಮಿ**
ಅಭಿಲೇಖನಾಧಿಕಾರಿ, ವರದಿಗಾರರ ಶಾಖೆ
ಕರ್ನಾಟಕ ವಿಧಾನ ಪರಿಷತ್ತು
ವಿಧಾನಸೌಧ, ಡಾ। ಅಂಬೇಡ್ಕರ್ ರಸ್ತೆ
ಬೆಂಗಳೂರು

೧೮. **ಶ್ರೀ ಜ. ಹೊ. ನಾರಾಯಣಸ್ವಾಮಿ**
'ಮಾನವ', ೨೦/೬೪ ಎ
ಉತ್ತರ ಬಡಾವಣೆ
ಹಾಸನ

೧೯. **ಪ್ರೊ। ಎಂ. ಬಿ. ಪದ್ಮ**
೭೧೦, ೨ನೇ ತಿರುವು
ತ್ಯಾಗರಾಜ ರಸ್ತೆ, ಕೆ. ಆರ್. ಮೊಹಲ್ಲಾ
ಮೈಸೂರು - ೪

೨೦. **ಶ್ರೀ ಎಂ. ಪಿ. ಪ್ರಕಾಶ್**
ಮಾಜಿ ಸಚಿವರು, ವಿಧಾನ ಪರಿಷತ್ ಸದಸ್ಯರು
ನಂ. ೪೫೩, ೪ನೇ ಮುಖ್ಯರಸ್ತೆ
೭ನೇ ತಿರುವು, ಡಾಲರ್ಸ್ ಕಾಲೋನಿ
ಆರ್.ಎಂ.ವಿ. ೨ನೇ ಹಂತ
ಬೆಂಗಳೂರು

೨೧. **ಶ್ರೀ ಪ್ರಮೋದ್ ಹೆಗಡೆ**
ಅಧ್ಯಕ್ಷರು, ಸಂಕಲ್ಪ ಟ್ರಸ್ಟ್
ಮಾಜಿ ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು
ಯಲ್ಲಾಪುರ, ಉತ್ತರ ಕನ್ನಡ

೨೨. **ಬಿ. ಆರ್. ಪ್ರಾಣೇಶರಾವ್**
ಸಮೀರ, ೨೨/ಎ, ೧೨ನೇ ಮುಖ್ಯರಸ್ತೆ
ಸರಸ್ವತೀಪುರಂ
ಮೈಸೂರು - ೯

೨೩. **ಡಾ। ಟಿ. ಸಿ. ಪೂರ್ಣಿಮಾ**
ನಂ. ೨೪೪, ೨೩ನೇ ಬ್ಲಾಕ್
ಪಿಡಬ್ಲ್ಯೂಡಿ ಕಾಲೋನಿ
ಕೋರಮಂಗಲ
ಬೆಂಗಳೂರು - ೩೪

೨೪. **ಶ್ರೀಮತಿ ಎನ್. ಭಾರತಿ**
ಸಂಪಾದಕರು, ಭಗೀರಥ ಸಂಕಲ್ಪ
೧೩, ೧೦೦ ಅಡಿ ರಸ್ತೆ
೪ನೇ ಹಂತ, ಜೆ.ಪಿ. ನಗರ
ಬೆಂಗಳೂರು - ೧೮

೨೫. **ಡಾ। ಮಾ. ಮಂಜುಳಾ**
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು - ೨

೨೬. **ಡಾ। ಮಂಜುಳಾ ಹುಲ್ಲಹಳ್ಳಿ**
ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರ ಕಛೇರಿ
ಎರಡನೇ ವೃತ್ತ, ಬಂದೀಗೌಡ ಲೇಔಟ್
ಮಂಡ್ಯ

೨೭. **ಡಾ। ಮಲ್ಲಿಕಾ ಘಂಟಿ**
ಪ್ರವಾಚಕರು
ನಂದೀಹಳ್ಳಿ ಸ್ನಾತಕೋತ್ತರ ಕೇಂದ್ರ
ಸಂಡೂರು
ಬಳ್ಳಾರಿ ಜಿಲ್ಲೆ

